

ಸ್ವಯಂಭು ತೋ ಮಾಝಾ ವಿಟೇವರೀ ಉಭಾ । ಚೈತನ್ಯಾಚಾ ಗಾಭಾ ಪಾಂಡುರಂಗ ॥

ಶ್ರೀ ಕೃಷ್ಣ ಪರಬ್ರಹ್ಮಣೇ ನಮಃ



ಅರ್ಜುನಾ ಸಂಕಟ ಪಡತಾ ಜಡಭಾರೀ । ಗೀತಾ ಸಾಂಗೆ ಹರೀ ಕುರುಕ್ಷೇತ್ರೀ ॥

## ಸಂತ ಶ್ರೇಷ್ಠ ಶ್ರೀ ಜ್ಞಾನೇಶ್ವರ ಮಹಾರಾಜ



ಬ್ರಹ್ಮ ಸಾಮ್ರಾಜ್ಯ ದೀಪಿಕಾ । ವರ್ಣಿಯೆಲೀ ಗಿತೇಚಿ ಟೀಕಾ ।
ವಿಠೋಬಾಚಾ ಪ್ರಾಣಸಖಾ ಜ್ಞಾನೋಬಾ ಮಾಝಾ ॥

ಶ್ರೀ ಸಂತ ಸದ್ಗುರು ಶಂಕರಸ್ವಾಮಿ ಲಾಖೇ ಶಿವೂರಕರ ಮಹಾರಾಜ



ಗುರು ಹಾ ಸಂತ ಕುಳೀಚಾ ರಾಜಾ । ಗುರು ಹಾ ಪ್ರಾಣ ವಿಸಾವಾ ಮಾಝಾ ।
ಗುರುವೀಣ ದೇವ ದುಜಾ । ಪಾಹತಾ ನಾಹೀ ತ್ರಿಲೋಕಿ ॥

ಶ್ರೀ ಚೈತನ್ಯ ಸದ್ಗುರು ಹ.ಭ.ಪ. ತಾತ್ಯಾಸಾಹೇಬ ಬಾಬಾಸಾಹೇಬ ವಾಸಕರ ಮಹಾರಾಜ



ಗುರು ಹಾ ಸುಖಾಚಾ ಸಾಗರು । ಗುರು ಹಾ ಪ್ರೇಮಾಚಾ ಆಗರು ।
ಗುರು ಹಾ ಧೈರ್ಯಾಚಾ ಡೋಂಗರು । ಕದಾಕಾಳೀ ಡಳಮಳೇನಾ ॥

ಶ್ರೀ ಚೈತನ್ಯ ಸದ್ಗುರು ಹ.ಭ.ಪ. ದಾದಾಸಾಹೇಬ ತಾತ್ಯಾಸಾಹೇಬ ವಾಸಕರ ಮಹಾರಾಜ



ಗುರು ಹಾ ಸಾಧಕಾಸೀ ಸಾಹ್ಯ । ಗುರು ಹಾ ಭಕ್ತಾಲಾಗೀ ಮಾಯ ।
ಗುರು ಹಾ ಕಾಮಧೇನು ಗಾಯ । ಭಕ್ತಾ ಘರೀ ಧುಭತಸೇ ।

॥ ಶ್ರೀ ಪಾಂಡುರಂಗ ಪ್ರಸನ್ನ ॥



ಗೀತಾ ಜೇಣೇ ಉಪದೇಶಿಲೀ । ತೇ ಹೀ ವಿಟೇವರೀ ಮಾಉಲೀ ॥

ಜಯ ಜಯ ರಾಮ ಕೃಷ್ಣ ಹರಿ

# ಸಾರ್ಥ ಶ್ರೀಜ್ಞಾನೇಶ್ವರೀ




-: ಅನುವಾದಕರು :-

ಹ.ಭ.ಪ . ಕೃಷ್ಣಾಜೀ ಡೋಂಗ್ರಪ್ಪ ಜ್ಞಾನಮೋರೆ,

ಕೊಪ್ಪಳ

ಪ್ರಕಾಶಕರು : **ಶ್ರೀ ಸಂತ ವಾಙ್ಮಯ ಸೇವಾ ಸಮಿತಿ,**
ಕೊಪ್ಪಳ - ೫೮೩ ೨೩೧, ಕೊಪ್ಪಳ ಜಿಲ್ಲೆ, ಕರ್ನಾಟಕ

ಮುದ್ರಣ : ದ್ವಿತೀಯ

ದಿನಾಂಕ : ಶಾಲಿವಾಹನ ಶಕೆ ೧೯೨೮ ನೇ ವ್ಯಯನಾಮ ಸಂವತ್ಸರದ ಕಾರ್ತಿಕ ಶು.೧೦
ಬುಧವಾರ ತಾ. ೦೧-೧೧-೨೦೦೬

ಪ್ರತಿಗಳು : ೧,೫೦೦

ಬೆಲೆ ರೂ. : ೩೨೦/-

---



---

ಅಕ್ಷರ ಜೋಡಣೆ : ಮಲ್ಲಿಕಾರ್ಜುನ ಎಂ. ಕೊತಬಾಳ, ಡಿ.ಸಿ.ಎಸ್,
ರಮೇಶ ಮಲ್ಲಪ್ಪ ತುಪ್ಪದ, ಆಪರೇಟರ್
ಕಂಪ್ಯೂಟೆಕ್ ಡಾಟಾಫೋರ್ಸ್, ಕೊಪ್ಪಳ - ೫೮೩ ೨೩೧

ಮುದ್ರಕರು : ಫ.ಶಿ. ಭಾಂಡಗೆಯವರ
**ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್,**
ಜವಳಿ ಬಜಾರ, ೧ ನೇ ಕ್ರಾಸ್, ವಿಠ್ಠಲ ಮಂದಿರ ರಸ್ತೆ,
ಕಾಗದಗೇರಿ ಓಣಿ, ಗದಗ - ೫೮೨ ೧೦೧
✆ (08372) 237566, 235509 (O) 236578 (R)

# ಅರ್ಪಣೆ

ನನಗೆ ವಾರಕರೀಯನ್ನಾಗಿ ಅನುಗ್ರಹಿಸಿ ಪಂಢರೀ ವಾರಕರೀ ಸೇವೆಯನ್ನು ದಯ ಪಾಲಿಸಿದ, ಜಗದ್ಗುರು ಸಂತ ತುಕಾರಾಮ ಮಹಾರಾಜರ ವಿದ್ಯಾವಂಶ ಪೀಠಸ್ಥರಾದ, ಚೈತನ್ಯ ಶ್ರೀ ಗುರುವರ್ಯ, ಸಕಲ ವಾರಕರೀ ಆಚಾರ್ಯ, ಶ್ರೀ ಜ್ಞಾನೇಶ್ವರೀ ಗ್ರಂಥದ ಸಾಮುದಾಯಿಕ ಪಾರಾಯಣದ ಪ್ರಚಾರಕರಾದ ಹಾಗೂ ಈ ಗ್ರಂಥವನ್ನು ಅನುವಾದಿಸಲು ಆಶೀರ್ವದಿಸಿದ ಪರಮ ಪೂಜ್ಯ ಹ.ಭ.ಪ.ತಾತ್ಯಾಸಾಹೇಬ ಬಾಬಾಸಾಹೇಬ ವಾಸಕರ ಮಹಾರಾಜ ಪಂಢರಪೂರ ಇವರ ದಿವ್ಯಪಾದ ಪದ್ಮಗಳಲ್ಲಿ ಅನಂತ ಕೃತಜ್ಞತೆಗಳೊಂದಿಗೆ ಅನನ್ಯ ಭಾವದಿಂದ ಈ ಗ್ರಂಥವನ್ನು ಅರ್ಪಿಸಲಾಗಿದೆ.

- ಕೃಷ್ಣಾಜೀ ಜ್ಞಾನಮೋಠೆ.

# ಶ್ರೀ ಜ್ಞಾನೇಶ್ವರೀ ಅಧ್ಯಾಯಗಳ ಅನುಕ್ರಮಣಿಕೆ



## ಶ್ರೀ ಜ್ಞಾನೇಶ್ವರೀ ಪಾರಾಯಣ ಪದ್ಧತಿ

ಶ್ರೀ ಜ್ಞಾನೇಶ್ವರೀ ಗ್ರಂಥದ ಪಾರಾಯಣವನ್ನು ವೈಯಕ್ತಿಕವಾಗಿ, ಅಥವಾ ಸಾಮುದಾಯಿಕವಾಗಿ ೩, ೫, ೭, ೨೧, ೩೦ ಹೀಗೆ ತಮ್ಮ ತಮ್ಮ ಅನುಕೂಲ ದಿನಗಳ ತಕ್ಕಂತೆ ಹಾಗೂ ತಮ್ಮ ತಮ್ಮ ಶ್ರೀಗುರು ಸಾಂಪ್ರದಾಯದಂತೆ ಆಚರಿಸಲ್ಪಡುವುದು.

# ಪ್ರಸ್ತಾವನೆ

## ಸಂತ ಶ್ರೇಷ್ಠ ಶ್ರೀ ಜ್ಞಾನೇಶ್ವರ ಮಹಾರಾಜರ ಸಂಕ್ಷಿಪ್ತ ಚರಿತ್ರೆ

ಜಗತ್ತಿನಲ್ಲಿ ಆಗಾಗ ಧರ್ಮದ ಗ್ಲಾನಿಯಾಗಿ ಜನರು ಸತ್ಯಮಾರ್ಗವನ್ನು ಬಿಟ್ಟು ಅಸತ್ಯವಾದ ದುಷ್ಟ ಮಾರ್ಗಗಳಲ್ಲಿ ನಡೆಯುತ್ತ ಅಧೋಗತಿಗೆ ಪ್ರಾಪ್ತರಾಗುತ್ತಿರುವರು. ಪಾಪಿಗಳ ಅಭಕ್ತರ ಸಂಖ್ಯೆಯು ಬೆಳೆದು ಕಾಮ ಕ್ರೋಧಾದಿ ಅರಿಷಡ್ ವೈರಿಗಳಿಗೆ ತುತ್ತಾಗಿ ಕೇವಲ ವಿಷಯಾಂಧರಾಗಿ ಧರ್ಮಮಾರ್ಗಕ್ಕೆ ಸಂಕಟಗಳನ್ನು ಒಡ್ಡುತ್ತಿರುವರು. ಪಾರಮಾರ್ಥಿಕ ಸಾಧನೆಗಳಾದ ಭಜನ, ಪೂಜನ, ಶ್ರವಣ, ಕೀರ್ತನ ಇತ್ಯಾದಿ ಅನುಷ್ಠಾನಗಳ ಭಕ್ತಿ ಜ್ಞಾನ ವೈರಾಗ್ಯದ ಮಾರ್ಗಗಳು ಲೋಪಗೊಳ್ಳುತ್ತ ನಿಜವಾದ ಸುಖದ ಮಾರ್ಗವು ಯಾರಿಗೂ ತಿಳಿಯದಾಗಿ ಅಜ್ಞಾನಾಂಧಕಾರದಲ್ಲಿ ಜಗತ್ತು ಮುಳುಗಿ ಅತ್ಯಂತ ದುಃಖಪಡುತ್ತಿರುವುದನ್ನು ನೋಡಲಾಗದೇ ಮಹಾತ್ಮರು ಭೂತಲಕ್ಕೆ ಆಗಾಗ ಅವತಾರಕ್ಕೆ ಬಂದು ತಮ್ಮ ತಪಪ್ರಭಾವದಿಂದ ಅನೇಕ ರೀತಿಯಲ್ಲಿ ಕಷ್ಟಪಟ್ಟು ಜಗತ್ತಿನ ಜನರಿಗೆ ನಾನಾ ರೀತಿಯಲ್ಲಿ ಸನ್ಮಾರ್ಗಗಳನ್ನು ತೋರಿಸಿ ನಿಜಸುಖಿಗಳನ್ನಾಗಿ ಮಾಡಿ ತಮ್ಮ ಅವತಾರ ಕಾರ್ಯಗಳನ್ನು ಪೂರ್ಣಗೊಳಿಸುವರು.

ಹನ್ನೆರಡನೆಯ ಶತಮಾನದಲ್ಲಿ ಕಲಿಪ್ರಭಾವವು ಬೆಳೆದು ಯವನ ರಾಜರು ಭ್ರಷ್ಟರಾಗಿ ಅಲ್ಲಲ್ಲಿ ದೋಷಪೂರಿತ ವಾತಾವರಣವು ನಿರ್ಮಾಣವಾಗಿ ಜನರು ದುಃಖಿಗಳಾಗಿರುವಾಗ ಜಗದೋದ್ಧಾರಕ್ಕಾಗಿ ಶ್ರೀ ನಿವೃತ್ತಿನಾಥ, ಜ್ಞಾನದೇವ, ಸೋಪಾನ ಹಾಗೂ ಮುಕ್ತಾಬಾಯಿಯವರ ಅವತಾರವಾಯಿತು.

ರಾಜೇ ಭ್ರಷ್ಟ ಯವನ ಝಾಲೇ। ಠಾಯೀ ಠಾಯೀ ದೋಷ ಜಡಲೇ।
ಮಗ ಇಹಿ ಅವತಾರ ಘೇತಲೇ। ಕಲಿ ದೋಷ ಹರಾವಯಾ ॥ನಾ॥

ಅವತಾರ ತುಮ್ಹಾ ಧರಾಯಾ ಕಾರಣ।
ಉದ್ಧಾರಾಯಾ ಜನ ಮಹಾದೋಷಿ ॥ತು॥

ಮಹಾರಾಷ್ಟ್ರದ ಪೈಠಣದಿಂದ ಏಳು ಮೈಲು ದೂರದ ಗೋದಾವರೀ ತಟದಲ್ಲಿ ಆಪೇಗಾಂವ ಎಂಬ ಚಿಕ್ಕ ಕ್ಷೇತ್ರವಿದೆ. ಅಲ್ಲಿ ಶುಕ್ಲ ಯಜುರ್ವೇದಿ, ಮಧ್ಯಾಂದಿನ ಶಾಖೆಯ, ಪಂಚ ಪ್ರವರದ, ವತ್ಸಗೋತ್ರದ ಬ್ರಾಹ್ಮಣ ಮನೆತನದ ಕುಲಕರ್ಣಿ ವೃತ್ತಿಯಲ್ಲಿ ಹರಿಹರಪಂತರೆಂಬವರು ಸದಾಚಾರ ಸಂಪನ್ನರಾಗಿ ಹರಿಭಕ್ತ ಪರಾಯಣರಾಗಿ ಜೀವನವನ್ನು ಸಾಗಿಸುತ್ತಿದ್ದರು. ಇವರಿಂದ ರಾಮಚಂದ್ರಪಂತರು, ರಾಮಚಂದ್ರಪಂತರಿಂದ ಗೋಪಾಳಪಂತರು, ಗೋಪಾಳಪಂತರಿಂದ ತ್ರ್ಯಂಬಕಪಂತರೆಂದು ಆದರು. ಇವರ ಜೇಷ್ಠ ಪುತ್ರರಾದ ಗೋವಿಂದಪಂತರೇ ನಮ್ಮ ಕಥಾನಾಯಕರ ಅಜ್ಜಂದಿರು.

ಗೋವಿಂದಪಂತರಿಗೆ ಪೈಠಣದ ಕೃಷ್ಣಾಜೀಪಂತನ ತಂಗಿಯಾದ ನೀರಾಬಾಯಿಯೊಂದಿಗೆ ವಿವಾಹವಾಯಿತು. ಇವರಿಗೆ ಬಹುದಿನಗಳಿಂದ ಪುತ್ರಸಂತಾನವಾಗದೇ ಚಿಂತಾಗ್ರಸ್ಥರಾದರು. ಇದಕ್ಕಾಗಿ ಅನೇಕ ತಪ ವ್ರತಗಳ ಆಚರಣೆ ಮಾಡುತ್ತಿರುಲು ನಾಥ ಸಾಂಪ್ರದಾಯದ ಪ್ರಮುಖರಾದ ಶ್ರೀಗಹಿನೀನಾಥರು ಇವರಿಗೆ ದರ್ಶನ ನೀಡಿ ಸಮಾಧಾನ ಪಡಿಸಿ ಆಶೀರ್ವಾದ ಮಾಡಿದರು. ಮುಂದೆ ಇವರ ಅನುಗ್ರಹ ಬಲದಿಂದ ಇಳಿವಯಸ್ಸಿನ ಐವತ್ತೈದನೆಯ ವರ್ಷದಲ್ಲಿ ಗೋವಿಂದಪಂತರಿಗೆ ಪುತ್ರರತ್ನ ಲಾಭವಾಯಿತು. ಇದರಿಂದ ಪತಿಪತ್ನಿಯರ ಆನಂದಕ್ಕೆ ಪಾರವೇ ಇಲ್ಲದಾಯಿತು. ಗೋವಿಂದಪಂತರು ಊರ ಕುಲಕರ್ಣಿ ವೃತ್ತಿಯನ್ನು, ಅತಿ ಉತ್ತಮ ರೀತಿಯಲ್ಲಿ ನಡೆಸುತ್ತ ಬಂದಿರುವುದರಿಂದ ಎಲ್ಲರಿಗೂ ಅತ್ಯಂತ ಪ್ರಿಯರಾಗಿದ್ದರು. ಇದರಿಂದ

ಊರ ಜನರಿಗೆಲ್ಲರಿಗೂ ಬಹು ಸಂತೋಷವಾಗಿ ಸಮಾಧಾನವಾಯಿತು ಊರ ಸುಮಂಗಲೆಯರೊಂದಿಗೆ ಆ ಮಗುವಿಗೆ ''ವಿಠ್ಠಲಪಂತ'' ಎಂದು ನಾಮಕರಣ ಮಾಡಲಾಯಿತು.

ವಿಠ್ಠಲಪಂತರು ಸುಂದರವಾದ ದೇಹಕಾಂತಿಯವರೂ, ತೇಜಸ್ವಿಯೂ, ಅಪಾರ ಬುದ್ಧಿವಂತರೂ, ಗುಣವಂತರೂ ಆಗಿದ್ದರು. ಇವರಿಗಿರುವ ತೀವ್ರ ಸ್ಮರಣಶಕ್ತಿ, ದೈವೀಭಕ್ತಿ, ಮಹಾಭಾರತ ರಾಮಾಯಣಗಳಲ್ಲಿ ತುಂಬಿದ ಆಸಕ್ತಿ ಇವುಗಳನ್ನೆಲ್ಲ ಕಂಡು ಮಾತಾ ಪಿತೃಗಳು ಬಹಳ ಸಂತೋಷಪಡುತ್ತಿದ್ದರು. ಇವರ ಏಳನೆಯ ವಯಸ್ಸಿಗೆ ಮೌಂಜಿ ಬಂಧನ ಕಾರ್ಯವನ್ನು ಮಾಡಿ ವೈದಿಕ ಹಾಗೂ ವೇದಾಧ್ಯಯನ ಅಭ್ಯಾಸಕ್ಕಾಗಿ ಪೈಠಣದಲ್ಲಿರುವ ಅವರ ಅಜ್ಜನ ಮನೆಗೆ ಕಳಿಸಿದರು. ವಿಠ್ಠಲಪಂತರು ತಮ್ಮ ಹದಿನೆಂಟನೆಯ ವಯಸ್ಸಿನಲ್ಲಿ ವೈದಿಕ, ವೇದಾಧ್ಯಯನವನ್ನು ಪೂರ್ಣಗೊಳಿಸಿ ಪಾರಮಾರ್ಥಿಕ ಜ್ಞಾನವನ್ನು ಬೆಳೆಸಿಕೊಂಡು ವಿಶ್ವವೆಲ್ಲವೂ ವಿಶ್ವವ್ಯಾಪಿ ವೇದಪುರುಷ ಪರಮಾತ್ಮನಿಂದ ತುಂಬಿಕೊಂಡಿದೆ ಎಂದು ಅರಿತುಕೊಂಡು ತಾವು ವೇದಮೂರ್ತಿಯೇ ಆದರು. ಆಗ ಉಪಾಧ್ಯಾಯರು ನಿನ್ನ ಅಭ್ಯಾಸವು ಮುಗಿದಿದೆ, ಈಗ ನೀನು ವೇದಪಾರಾಂಗತ ಬ್ರಾಹ್ಮಣನಾಗಿರುವೆ. ಇದರಿಂದ ನಮಗೆ ಬಹಳ ಸಂತೋಷವಾಗಿದೆ. ಈಗ ನೀನು ನಿನ್ನ ಮನೆಗೆ ಹೋಗಬಹುದೆಂದು ಅಪ್ಪಣೆ ನೀಡಿದರು. ಗುರುಗಳ ಆಜ್ಞೆ ಪಡೆದು ವಿಠ್ಠಲಪಂತರು ಸ್ವಸ್ಥಾನಕ್ಕೆ ಬಂದರು. ತಂದೆ ತಾಯಿ ಹಿರಿಯರಿಗೆ ಸಾಷ್ಟಾಂಗ ಪ್ರಣಾಮಗಳನ್ನು ಮಾಡಿದರು. ಇವರ ಅಂತರಂಗದ ಶುದ್ಧತೆಯು ವೇದಾಧ್ಯಯನ ಅಭ್ಯಾಸದಿಂದ ಮುಖದ ಮೇಲೆ ಪ್ರಕಾಶವು ಎದ್ದು ಕಾಣುತ್ತಿತ್ತು. ಇವರನ್ನು ಕಂಡು ಮಾತಾಪಿತೃಗಳು ಹರ್ಷಚಕಿತರಾಗಿ ಪುತ್ರವಾತ್ಸಲ್ಯದಿಂದ ಮೈಮರೆತು ಆನಂದಾಶ್ರುಗಳಿಂದ ಅಪ್ಪಿಕೊಂಡರು.

ವಿಠ್ಠಲಪಂತರಿಗೆ ದಿನಗಳು ಕಳೆದಂತೆ ಅಂತಃಕರಣದಲ್ಲಿ ವೈರಾಗ್ಯಭಾವವು ತೀವ್ರಗೊಳ್ಳುತ್ತ ಸಂಸಾರದತ್ತ ಆಸಕ್ತಿಯೇ ಇರದಾಯಿತು. ಒಂದು ದಿನ ಇವರು ವಿನಮ್ರಭಾವದಿಂದ ತಮ್ಮ ಮಾತಾಪಿತೃಗಳಿಗೆ ತಮಗಾಗಿರುವ ತೀರ್ಥಯಾತ್ರೆಯ ಅಪೇಕ್ಷೆಯನ್ನು ವ್ಯಕ್ತ ಮಾಡಿ ಅಪ್ಪಣೆ ಕೇಳಿದರು. ಆಗ ತಂದೆಯಾದ ಗೋವಿಂದಪಂತರು ಅಭ್ಯಾಸದ ನಂತರ ಪುಣ್ಯಕ್ಷೇತ್ರಗಳ, ಸಾಧು ಸಜ್ಜನರ ದರ್ಶನ ನಿಮಿತ್ತವಾಗಿ ತೀರ್ಥಯಾತ್ರೆ ಮಾಡುವ ರೂಢಿ ಇರುವುದನ್ನು ಅರಿತು, ತನ್ನ ಮಗನು ಇನ್ನಷ್ಟು ಅನುಭವಿ ತೇಜೋವಂತನಾಗಿ ಕೀರ್ತಿಶಾಲಿಯಾಗಲಿ ಎಂದು ಹರಿಸಿ ತೀರ್ಥಯಾತ್ರೆಗೆ ಆಜ್ಞೆಯನ್ನು ಕೊಟ್ಟರು. ಇದರಿಂದ ಬಹಳ ಸಂತಸಗೊಂಡ ವಿಠ್ಠಲಪಂತರು ತೀರ್ಥಯಾತ್ರೆಗೆ ಹೊರಟರು. ದ್ವಾರಕಾ, ಪಿಂಡಾರಿಕಾ, ಪ್ರಭಾಸ, ಸುಧಾಮಪುರಿ, ಸೋಮನಾಥ, ನಾಶಿಕ, ತ್ರ್ಯಂಬಕೇಶ್ವರ, ಭೀಮಾಶಂಕರ ಇತ್ಯಾದಿ ಪುಣ್ಯಕ್ಷೇತ್ರಗಳ ದರ್ಶನ ಪಡೆದುಕೊಳ್ಳುತ್ತ ಅಲಂಕಾಪುರಿ ಕ್ಷೇತ್ರಕ್ಕೆ ( ಆಳಂದಿಗೆ) ಬಂದರು. ಅಲ್ಲಿ ಸಿದ್ಧೇಶ್ವರ ದೇವಸ್ಥಾನದಲ್ಲಿ ವಾಸ್ತವ್ಯ ಮಾಡಿದರು. ಪ್ರಾತಃಕಾಲದಲ್ಲಿ ಇಂದ್ರಾಯಣೀ ನದಿ ಸ್ನಾನಕ್ಕೆ ಹೋಗಿ ಸಂಧ್ಯಾವಂದನೆಯನ್ನು ತೀರಿಸಿ ತಾವಿಳಿದುಕೊಂಡ ಸ್ಥಳಕ್ಕೆ ಬರುವಾಗ್ಗೆ ಹೋಗುಬರುವ ಜನರೆಲ್ಲರೂ ಇವರ ಮುಖದ ಮೇಲಿರುವ ಅನುಷ್ಠಾನದ ಪ್ರಕಾಶವನ್ನು ಕಂಡು ಚಕಿತರಾಗಿ ಇವರೊಬ್ಬರು ತಪಸ್ವಿ ಬಾಲಯೋಗಿ ಇರಬಹುದೆಂದು ಊಹಿಸುತ್ತಿದ್ದರು.

ಆಳಂದಿಯಲ್ಲಿ ಸಿದ್ಧೋಪಂತರೆಂಬ ದೊಡ್ಡ ಕುಲಕರ್ಣಿ ಮನೆತನದ ಬ್ರಾಹ್ಮಣರಿದ್ದು, ಶ್ರೀ ಪಾಂಡುರಂಗನ ಭಕ್ತರಾಗಿ ಸದಾಚಾರ ಸಂಪನ್ನತೆಯಿಂದ ಜೀವನವನ್ನು ನಡೆಸುತ್ತಿದ್ದರು. ಇವರಿಗೆ ಉಮಾಬಾಯಿ ಎಂಬ ಸುಶೀಲಳೂ, ಸದ್ಗುಣಿಯೂ ಆದ ಹೆಂಡತಿಯೂ ರುಕ್ಮಿಣಿ ಎಂಬ ಸುಂದರಳೂ, ಸದಾಚಾರಳೂ ಆದ ಒಬ್ಬಳೇ ಒಬ್ಬ ಮಗಳಿದ್ದಳು. ಮಗಳು ಕೋಮಲಾಂಗಿಯೂ ಗುಣವತಿಯೂ ಆಗಿ ದೈವೀ ಭಕ್ತಿಯಿಂದ ಕೂಡಿದವಳಾಗಿದ್ದಕ್ಕೆ ಇಂಥ ಸುಕನ್ಯೆಗೆ ಯೋಗ್ಯನಾದ ವರವನ್ನು ಆಗಾಗ ಸಿದ್ಧೋಪಂತರು ಹುಡುಕುತ್ತಲೇ ಇದ್ದರು. ಇಲ್ಲಿಯವರೆಗೂ ಯಾರೂ ಅವರ ಮನಸ್ಸಿಗೆ ಸರಿಬೀಳಿದ್ದಿಲ್ಲ. ಹೀಗಿರುವಾಗ್ಗೆ ಕರ್ಣೋಪಕರ್ಣವಾಗಿ ಆಳಂದಿಗೆ ಒಬ್ಬ ತೇಜಸ್ವಿ ತರುಣ ಬ್ರಾಹ್ಮಣನು ಬಂದು ಸಿದ್ಧೇಶ್ವರನ ದೇವಾಲಯದಲ್ಲಿ ವಸತಿ ಮಾಡಿರುವುದು ತಿಳಿದು ಬಂದು,ಕೂಡಲೇ ಅವರನ್ನು ಕಾಣಲು ಬಂದರು. ವಿಠ್ಠಲ ಪಂತರನ್ನು ಕಂಡಾಗ ಅವರ ಮುಖಮುದ್ರೆ, ಗಾಂಭೀರ್ಯ, ತೇಜಸ್ಸು, ಶಾಂತತೆ ಎಲ್ಲವನ್ನು ಪ್ರತ್ಯಕ್ಷವಾಗಿ ಕಂಡು ಮನದಲ್ಲಿ ಆಶ್ಚರ್ಯಾನಂದಗಳಿಂದ ತುಂಬಿ ತುಳುಕಿ ಅವರನ್ನು ಬಹಳ ಗೌರವದಿಂದ ತಮ್ಮ ಮನೆಗೆ ಆದರ ಆತಿಥ್ಯ ಸ್ವೀಕರಿಸಲು ಆಮಂತ್ರಿಸಿದರು. ಆದರ ಆತಿಥ್ಯದ ಯಾವ ಅಪೇಕ್ಷೆಯೂ ಇರದ ವಿಠ್ಠಲ ಪಂತರಿಗೆ

ಸಿದ್ಧೋಪಂತರ ವಿನಮ್ರಭಾವದ ಆಮಂತ್ರಣಕ್ಕೆ ತಿರಸ್ಕರಿಸಲಾಗದೆ ಒಪ್ಪಿಕೊಂಡು ಅವರ ಮನೆಗೆ ನಡೆದರು. ಯೋಗ್ಯ ಉಟೋಪಚಾರಗಳ ನಂತರ ವಿಠ್ಠಲಪಂತರು ಆಪೇಗಾಂವ ಗೋವಿಂದಪಂತ ಕುಲಕರ್ಣಿಯವರ ಜೇಷ್ಠಪುತ್ರನೆಂದು ತಿಳಿದುಕೊಂಡರು. ವಿಠ್ಠಲಪಂತರು ಸತತವಾಗಿ ನಾಮಸ್ಮರಣೆಯನ್ನು ಮಾಡುತ್ತಿರುವುದು ಸದ್ಗ್ರಂಥಾವ ಲೋಕನೆಯಲ್ಲಿ ಕಾಲ ಕಳೆಯುವುದು ಎಲ್ಲವನ್ನೂ ಕಂಡು ಇವರೊಬ್ಬ ಪೂರ್ವಜನ್ಮದ ತಪಸ್ವಿಯಾಗಿರಬೇಕೆಂದು ಊಹಿಸಿದರು.

ಹೀಗೆ ಒಂದೆರಡು ದಿನಗಳು ಕಳೆದ ಮೇಲೆ ಸಿದ್ಧೋಪಂತರಿಗೆ ಸ್ವಪ್ನದಲ್ಲಿ ಶ್ರೀಪಾಂಡುರಂಗನು ಕಾಣಿಸಿಕೊಂಡು ''ನಿನ್ನ ಮನೆಗೆ ಬಂದ ಮಹಾಪುರುಷನು ಸಾಮಾನ್ಯನಾಗಿರದೇ ಪುಣ್ಯಶಾಲಿಯಾಗಿರುವನು. ನಿನ್ನ ಮಗಳಾದ ರುಕ್ಮಿಣಿಯನ್ನು ಈತನಿಗೆ ಕೊಟ್ಟು ವಿವಾಹವನ್ನು ಮಾಡು. ಇವರ ಉದರದಲ್ಲಿ ಜಗದೋದ್ಧಾರಕ್ಕಾಗಿ ಅವತಾರ ಪುರುಷರ ಜನ್ಮವಾಗುವುದು. ನಿನ್ನ ಜನ್ಮವು ಸಾರ್ಥಕವಾಗಿ ನಿಮ್ಮ ಪೂರ್ವಜರೂ ಉದ್ಧಾರರಾಗುವರು'' ಎಂದು ಹೇಳಿ ಅಂತರ್ಧಾನನಾದನು. ಸ್ವಪ್ನದಿಂದ ಎಚ್ಚೆತ್ತ ಕೂಡಲೇ ಸಿದ್ಧೋಪಂತರು ಆತ್ಮಾನಂದ ಪರವಶರಾಗಿ ಪುನಃ ಪುನಃ ಸ್ವಪ್ನವನ್ನುಸ್ಮರಿಸುತ್ತ ಶ್ರೀ ಪಾಂಡುರಂಗನನ್ನು ಧ್ಯಾನಿಸುತ್ತ ಆದ ಸ್ವಪ್ನ ವೃತ್ತಾಂತವನ್ನು ತಮ್ಮ ಧರ್ಮಪತ್ನಿ ಉಮಾಬಾಯಿಗೆ ತಿಳಿಸಿದರು. ಆಕೆಯೂ ಬಹಳ ಹರ್ಷಗೊಂಡು ತನ್ನ ಸಮ್ಮತಿಯನ್ನು ಕೊಟ್ಟಳು. ಇವರಿಬ್ಬರೂ ಕೂಡಿಕೊಂಡು ಆದ ಸ್ವಪ್ನದ ವಿವರವನ್ನು ವಿಠ್ಠಲಪಂತರಿಗೆ ತಿಳಿಸಿ ವಿವಾಹಕ್ಕೆ ಒಪ್ಪಿಕೊಳ್ಳಲು ವಿನಂತಿಸಿದರು. ಆಗ ವೈರಾಗ್ಯ ಮೂರ್ತಿಯಾದ ವಿಠ್ಠಲಪಂತರಿಗೆ ವಿವಾಹದ ವಿಚಾರವೇ ಇರದಿದ್ದರಿಂದ ನಸುನಕ್ಕು ನಿಮಗೇನೋ ಸ್ವಪ್ನವಾಯಿತು ನಿಜ, ಆದರೆ ಇದೇ ವಿಷಯವನ್ನು ಶ್ರೀಪಾಂಡುರಂಗನು ನನಗೇಕೆ ತಿಳಿಸಲಿಲ್ಲ ? ಎಂದು ಮರುಪ್ರಶ್ನೆ ಮಾಡಿದರು. ಆಗ ಸಿದ್ಧೋಪಂತರು ನನಗಾದ ಸ್ವಪ್ನವು ಸತ್ಯವಾಗಿದ್ದರೆ ಅದು ಇಂದು ನಿಮಗೂ ಆದೇಶವಾಗದೇ ಬಿಡದು ಎಂದು ಪರಿಪೂರ್ಣ ವಿಶ್ವಾಸದಿಂದ ನುಡಿದರು. ಮರುದಿನವೇ ವಿಠ್ಠಲಪಂತರಿಗೂ ಸ್ವಪ್ನವಾಗಿ ''ನೀನು ಸಿದ್ಧೋಪಂತನ ಮಗಳಾದ ರುಕ್ಮಿಣಿಯನ್ನು ವಿವಾಹವಾಗು'' ಎಂದು ಶ್ರೀಪಾಂಡುರಂಗನು ಆಜ್ಞಾಪಿಸಿದನು. ಸರಳ ಸ್ವಭಾವದವರಾದ ವಿಠ್ಠಲಪಂತರು ತಮಗಾದ ಸ್ವಪ್ನವನ್ನು ಸಿದ್ಧೋಪಂತರಿಗೆ ತಿಳಿಸಿ ತಮ್ಮ ಸಮ್ಮತಿ ಕೊಟ್ಟಾಗ ಸತಿಪತಿಗಳಿಗೆ ಆನಂದವೇ ಆನಂದವಾಗಿ ಲಗ್ನ ಕುಂಡಲಿ ನೋಡಲು ಮೂವತ್ತಾರು ಗುಣಗಳು ಕೂಡಿಬಂದವು. ವಿವಾಹದ ಶುಭ ಮುಹೂರ್ತವನ್ನು ನಿಶ್ಚಯಿಸಿದರು. ಆಪೇಗಾಂವಕ್ಕೆ ಹೋಗಿ ತಂದೆತಾಯಿಯವರಿಗೆ ತಿಳಿಸಿ ಕರೆದುಕೊಂಡು ಬರಲು ದಿನಗಳು ಇಲ್ಲದ್ದಕ್ಕೆ ಅವರಿಗೆ ತಿಳಿಸದೇ ಅನಿವಾರ್ಯವಾಗಿ ವಿವಾಹವನ್ನು ನೆರವೇರಿಸಬೇಕಾಯಿತು. ಸಿದ್ಧೋಪಂತರು ಬಹು ವಿಜೃಂಭಣೆಯಿಂದ ಈ ವಿವಾಹವನ್ನು ಪೂರೈಸಿ ತಮ್ಮ ಬಂಧು ಬಳಗದವರಿಗೆ ಯೋಗ್ಯತೆ ತಕ್ಕಂತೆ ಮಾನ ಮರ್ಯಾದೆಯನ್ನು ಮಾಡಿ ಎಲ್ಲರನ್ನೂ ಸಂತೋಷಗೊಳಿಸಿದರು.

ವಿವಾಹದ ನಂತರ ಕೆಲವು ದಿನಗಳು ಗತಿಸಿದ ಮೇಲೆ ಶ್ರೀಕ್ಷೇತ್ರ ಪಂಢರಪೂರ ಯಾತ್ರೆಯು ಸಮೀಪಿಸಿತು. ದೇವ, ಭಕ್ತ, ನಾಮದಿಂದ ಕೂಡಿದ ಪಂಢರಪೂರ ಯಾತ್ರೆಯಲ್ಲಿ ಆನಂದ ಭೋಗಿಸಲು ವಿಠ್ಠಲಪಂತರು ತಮಗಾದ ಇಚ್ಛೆಯನ್ನು ಮಾವನವರಾದ ಸಿದ್ಧೋಪಂತರಿಗೆ ತಿಳಿಸಿದರು. ಆಗ ಸಿದ್ಧೋಪಂತರು ವಿವಾಹದ ಶುಭ ವರ್ಷವೇ ಶ್ರೀಕ್ಷೇತ್ರ ಪಂಢರಪೂರ ಯಾತ್ರೆಯು ತಾನಾಗಿಯೇ ಒದಗಿ ಬಂದದ್ದಕ್ಕೆ ಬಹು ಸಂತೋಷದಿಂದ ಒಪ್ಪಿಕೊಂಡು ಪತ್ನಿ, ಕನ್ಯಾ, ಅಳಿಯನೊಂದಿಗೆ ಪಂಢರಪೂರಕ್ಕೆ ಆಗಮಿಸಿದರು.

ಅಲ್ಲಿ ಸಹಸ್ರ ಸಹಸ್ರ ಸಂಖ್ಯೆಗಳಲ್ಲಿ ಭಕ್ತ ಭಾವಿಕರು ಕೂಡಿ ಎಲ್ಲಿ ನೋಡಿದರಲ್ಲಿಯೂ ತಾಳ, ಮೃದಂಗ, ಶ್ರುತಿಗಳ ಸುಸ್ವರದಿಂದ ಗಗನ ಭೇದಿಸುವಂತೆ ಶ್ರೀ ಪಾಂಡುರಂಗನ ಭಜನೆಗಳ ಗರ್ಜನೆಯು ಕಿವಿಗಳಿಗೆ ಇಂಪಾಗಿ ಆನಂದವು ಉಕ್ಕೇರುತ್ತಿತ್ತು. ಮುಖ್ಯ ಮುಖ್ಯ ಸ್ಥಾನಗಳಲ್ಲಿ ಪ್ರವಚನ ಕೀರ್ತನೆಗಳು ಸಾಧಕರಿಗೆ ಮಾರ್ಗದರ್ಶನಗಳನ್ನು ನೀಡುತ್ತಿದ್ದವು. ವೀರ ವೈಷ್ಣವರು ಭಜನೆ ಕೀರ್ತನೆಯಲ್ಲಿ ತನ್ಮಯರಾಗಿ ಆನಂದಸಾಗರದಲ್ಲಿ ಮುಳುಗಿ ಬ್ರಹ್ಮಾದಿಕ ದೇವತೆಗಳಿಗೂ ಲಭಿಸದ ಮಹಾಸುಖವನ್ನು ಪಡೆಯುತ್ತಿದ್ದರು. ಭೂವೈಕುಂಠವಾದ ಶ್ರೀಕ್ಷೇತ್ರ ಪಂಢರಪೂರದಲ್ಲಿ ಪಂಚಮಹಾಪಾತಕಿಗಳು, ವಿಶ್ವಾಸಘಾತಕಿಗಳು ಮೊದಲು ಮಾಡಿ ಎಲ್ಲ ಭಕ್ತ ಭಾವಿಕರು ದೇವ, ಭಕ್ತ, ನಾಮವೆಂಬ ತ್ರಿವೇಣಿ ಸಂಗಮದಲ್ಲಿ ಸ್ನಾನಗೈದು ಪುನೀತರಾಗುತ್ತಿದ್ದರು.

ಇಂಥ ಪವಿತ್ರಕ್ಷೇತ್ರಕ್ಕೆ ಕುಟುಂಬ ಸಮೇತವಾಗಿ ಆಗಮಿಸಿದ ಸಿದ್ಧೋಪಂತ ವಿಠ್ಠಲಪಂತರಿಗೆ ಆದ ಆನಂದವು ಅವರ್ಣನೀಯ. ಇವರು ದರ್ಶನಮಾತ್ರದಿಂದಲೇ ಸಕಲ ಪಾಪಗಳನ್ನು ನಾಶ ಮಾಡುವ ಚಂದ್ರಭಾಗಾದಲ್ಲಿ ಸ್ನಾನಗೈದು ಭಕ್ತಶಿರೋಮಣಿ ಶ್ರೀ ಪುಂಡಲೀಕನ ದರ್ಶನ ಮಾಡಿಕೊಂಡು, ಭಕ್ತಕಾಮ ಕಲ್ಪದ್ರುಮ, ಪತೀತ ಪಾವನ, ಸಾಕ್ಷಾತ ಪರಬ್ರಹ್ಮ ಮೂರ್ತಿಯಾದ ಶ್ರೀಪಾಂಡುರಂಗನ ದಿವ್ಯ ದರ್ಶನ ಪಡೆದು ತೃಪ್ತರಾದರು. ಅಲ್ಲಲ್ಲಿ ನಡೆಯುತ್ತಿರುವ ಭಜನೆ, ಪ್ರವಚನ, ಕೀರ್ತನೆಗಳಲ್ಲಿ ಭಾಗವಹಿಸಿ ಮೈಮರೆತು ಕುಣಿದಾಡಿದರು. ಇದರಂತೆ ಅಲ್ಲಿ ಐದಾರು ದಿನಗಳವರೆಗೆ ಇದ್ದು, ವಿಠ್ಠಲಪಂತರು ತಮ್ಮ ಮಾವಂದಿರ ಅಪ್ಪಣೆಯನ್ನು ಪಡೆದು ಉಳಿದಿರುವ ದಕ್ಷಿಣ ಭಾರತದ ಯಾತ್ರಾಸ್ಥಳಗಳ ದರ್ಶನ ಪಡೆಯಲು ಹೊರಟರು. ಮಲಪ್ರಭಾ, ಕೃಷ್ಣಾ, ತುಂಗಭದ್ರಾ, ಕಾವೇರಿ, ಕಪಿಲಾ ಇತ್ಯಾದಿ ಪುಣ್ಯನದಿ ತೀರ್ಥಗಳಲ್ಲಿ ಸ್ನಾನಗೈಯುತ್ತ ಪುಣ್ಯಕ್ಷೇತ್ರಗಳಾದ ಗೋಕರ್ಣ, ರಾಮೇಶ್ವರ, ತಿರುಪತಿ, ಶ್ರೀಶೈಲ ಇತ್ಯಾದಿ ಅನೇಕ ಕ್ಷೇತ್ರಗಳ ದರ್ಶನ ಪಡೆದು ಎಲ್ಲೆಡೆಯಲ್ಲಿಯೂ ಸತ್ಸಂಗ ಮಾಡುತ್ತ ಸದಾ ಹರಿಧ್ಯಾನದಲ್ಲಿಯೇ ತಲ್ಲೀನರಾಗುತ್ತ ಕೊನೆಗೆ ಆಳಂದಿಯ ತಮ್ಮ ಮಾವನ ಮನೆಗೆ ಬಂದರು. ಸುರಕ್ಷಿತವಾಗಿ ಎಲ್ಲ ಕ್ಷೇತ್ರಯಾತ್ರೆಗಳನ್ನು ಪೂರ್ಣಗೊಳಿಸಿ ಆಗಮಿಸಿದ ಅಳಿಯನನ್ನು ಕಂಡು ಮನೆಯವರೆಲ್ಲರೂ ಹರ್ಷಚಿತ್ತರಾಗಿ ವಿಠ್ಠಲಪಂತರಿಗೆ ಗೌರವದಿಂದ ಸ್ವಾಗತಿಸಿದರು. ಈ ಯಾತ್ರಾ ಪ್ರೀತ್ಯರ್ಥವಾಗಿ ಊರ ಪ್ರಮುಖರೆಲ್ಲರಿಗೂ ಆಮಂತ್ರಿಸಿ ಭೋಜನ ಸಮಾರಂಭವನ್ನು ನೆರವೇರಿಸಿದರು. ಆಗ ನೆರೆದ ಜನಸ್ತೋಮಕ್ಕೆ ವಿಠ್ಠಲಪಂತರು ತಾವು ದರ್ಶನ ಪಡೆದ ಎಲ್ಲ ತೀರ್ಥಕ್ಷೇತ್ರಗಳ ಮಹಿಮೆಗಳನ್ನು ಕೊಂಡಾಡಿ ವಿವರಿಸಿ ಎಲ್ಲರಿಗೂ ಸಂತೋಷಪಡಿಸಿದರು.

ಕೆಲವು ದಿನಗಳ ನಂತರ ವಿಠ್ಠಲಪಂತರು ತಮ್ಮ ಪತ್ನಿಯೊಡನೆ ಆಪೇಗಾಂವಕ್ಕೆ ಹೊರಡುವ ವಿಚಾರವನ್ನು ಸಿದ್ಧೋಪಂತರಿಗೆ ತಿಳಿಸಿದರು. ಅದಕ್ಕೆ ಅವರು ಸಮ್ಮತಿಸಿ ತಾವು ತಮ್ಮ ಪತ್ನಿ ಸಮೇತವಾಗಿ ಅಳಿಯ ಮಗಳೊಂದಿಗೆ ಆಪೇಗಾಂವಕ್ಕೆ ಹೊರಟರು.

ಆಪೇಗಾಂವದಲ್ಲಿ ಗೋವಿಂದಪಂತ, ನೀರಾಬಾಯಿಯವರು ತಮ್ಮ ಮಗನ ದಾರಿ ಕಾಯುತ್ತಿದ್ದರು. ಪತ್ನಿ ಹಾಗೂ ಅತ್ತೆಮಾವರೊಂದಿಗೆ ವಿಠ್ಠಲಪಂತರು ಬಂದು ಮಾತಾಪಿತೃಗಳಿಗೆ ವಂದಿಸಿ ನಡೆದ ಎಲ್ಲ ಘಟನೆಗಳನ್ನು ಸವಿಸ್ತಾರವಾಗಿ ನಿವೇದಿಸಿದರು. ಯೋಗ್ಯರಾದ ಸಿದ್ಧೋಪಂತ, ಉಮಾಬಾಯಿಯನ್ನೂ, ಸುಂದರಳೂ ಗುಣವತಿಯೂ ಆದ ತನ್ನ ಸೊಸೆ ರುಕ್ಮಿಣಿಯನ್ನೂ ನೋಡಿ ಬಹಳ ಆನಂದಪುಲಕಿತರಾದರು. ಸಿದ್ಧೋಪಂತ, ಉಮಾಬಾಯಿಯವರು ನಾಲ್ಕಾರು ದಿನಗಳವರೆಗೆ ಇದ್ದು ಪುನಃ ಆಳಂದಿಗೆ ತೆರಳಿದರು.

ಕೆಲವು ಕಾಲದ ನಂತರ ವಿಠ್ಠಲಪಂತರ ಮಾತಾ ಪಿತೃಗಳು ವೈಕುಂಠವಾಸಿಗಳಾದರು. ಇದರಿಂದ ಸಂಸಾರದ ಎಲ್ಲ ಭಾರವು ವಿಠ್ಠಲಪಂತರ ಮೇಲೆಯೇ ಬಿದ್ದಿತು. ಆದರೆ ಇವರು ಯಾವಾಗಲು ಭಗವನ್ನಾಮ ಚಿಂತನೆಯಲ್ಲಿ ಹಾಗೂ ಗ್ರಂಥಾವಲೋಕನದಲ್ಲಿ ತಲ್ಲೀನರಾಗುತ್ತಿದ್ದಕ್ಕೆ ಸಂಸಾರದಲ್ಲಿ ಯಾವ ಆಸಕ್ತಿ ಇರದೇ ಸದಾವಕಾಲ ಉದಾಸೀನರಾಗಿರುತ್ತಿದ್ದರು. ಇದರಿಂದ ಸಂಸಾರದಲ್ಲಿ ಅಡಚಣೆ ತೊಂದರೆಯಾಗುತ್ತಿರುವುದು ಆಳಂದಿಯ ಸಿದ್ಧೋಪಂತರಿಗೆ ತಿಳಿದು ಅವರು ಕೂಡಲೇ ಆಪೇಗಾಂವಕ್ಕೆ ಬಂದು ಅಳಿಯ ಮಗಳಿಗೆ ಸಮಾಧಾನ ಹೇಳಿ ನೀವಿಬ್ಬರೂ ನಮ್ಮ ಮನೆಯಲ್ಲಿಯೇ ನಿರಾತಂಕವಾಗಿ ಇರಬೇಕೆಂದು ಕೇಳಿಕೊಂಡು ಅವರ ಒಪ್ಪಿಗೆಯೊಂದಿಗೆ ಆಳಂದಿಗೆ ಬಂದು ಮನೆತನದ ಎಲ್ಲ ಭಾರವನ್ನು ತಾವೇ ವಹಿಸಿಕೊಂಡರು. ವಿಠ್ಠಲಪಂತರು ಯಾವ ತೊಂದರೆ ಇಲ್ಲದೇ ಕೇವಲ ಪಾರಮಾರ್ಥಿಕ ಸಾಧನೆಗಳಲ್ಲಿಯೇ ಕಾಲವನ್ನು ಕಳೆಯುತ್ತಿದ್ದರು. ಪಂಢರಪೂರ ಆಷಾಢ ಕಾರ್ತೀಕ ವಾರಿಯನ್ನು ತಪ್ಪದೇ ಆಚರಿಸುತ್ತಿದ್ದರು.

ಇದರಂತೆ ಹನ್ನೆರಡು ವರ್ಷ ಕಾಲ ಗತಿಸಿದರೂ ಇವರಿಗೆ ಯಾವ ಸಂತಾನವಾಗಲಿಲ್ಲ. ವಿಠ್ಠಲಪಂತರಿಗೆ ಸಂಸಾರದಲ್ಲಿ ನಿರಾಸಕ್ತಿಯು ದಿನೇ ದಿನೇ ಬೆಳೆಯುತ್ತ ವೈರಾಗ್ಯವು ಬಲಿಷ್ಠಗೊಂಡಿತು. ಮೇಲಾಗಿ ಅವರ ಚಿತ್ತವೆಲ್ಲವೂ ಸಂನ್ಯಾಸದತ್ತ ಹರಿಯುತ್ತಿತ್ತು. ಆದರೆ ಮಕ್ಕಳಾಗದೇ, ಕೊನೆಗೆ ಪತ್ನಿಯ ಅನುಮತಿ ದೊರೆಯದೇ ಸಂನ್ಯಾಸವನ್ನು ಸ್ವೀಕರಿಸಲು ಬರುವುದಿಲ್ಲವೆಂಬುವುದು ಅರಿತಿದ್ದರು. ಆದ್ದರಿಂದ ಆಗಾಗ ತಮ್ಮ ಪತ್ನಿಗೆ ತಮ್ಮ ಸಂನ್ಯಾಸ ಸ್ವೀಕಾರದ ಬಯಕೆಯನ್ನು

ವ್ಯಕ್ತ ಮಾಡುತ್ತಿದ್ದರು. ಆದರೆ ಇದಕ್ಕೆ ಮಕ್ಕಳಾಗದ ರುಕ್ಮಿಣಿಯು ಒಪ್ಪಿಗೆ ಕೊಡಲು ಹೇಗೆ ಸಾಧ್ಯ? ಆದರೂ ಭಯಪಟ್ಟು ತಮ್ಮ ತಂದೆಯವರಲ್ಲಿ ಈ ವಿಷಯವನ್ನು ತಿಳಿಸುತ್ತಿದ್ದಳು. ಆಗ ತಂದೆಯು, ''ವಿಠ್ಠಲಪಂತರು ಶಾಸ್ತ್ರ ಬಲ್ಲವರು ನಿನ್ನ ಒಪ್ಪಿಗೆ ಇಲ್ಲದೇ ಸಂನ್ಯಾಸವನ್ನು ಎಂದೂ ಸ್ವೀಕರಿಸಲು ಸಾಧ್ಯವಿಲ್ಲ'' ಎಂದು ಮಗಳಿಗೆ ಧೈರ್ಯವನ್ನು ಕೊಡುತ್ತಿದ್ದರು.

ಒಂದು ದಿನ ರುಕ್ಮಿಣಿಯು ಪ್ರಕೃತಿ ತೊಂದರೆಯಿಂದ ಏನೋ ದುಶ್ಚಿತ ಸ್ಥಿತಿಯಲ್ಲಿದ್ದಳು. ಆಗ ಪತಿಯಾದ ವಿಠ್ಠಲಪಂತರು ಆಕೆಯ ಯೋಗಕ್ಷೇಮವನ್ನು ವಿಚಾರಿಸುವ ಬದಲಾಗಿ ಪುನಃ ಪುನಃ ''ನಾನು ಸಂನ್ಯಾಸವನ್ನು ಸ್ವೀಕರಿಸಲೆ ?'' ಎಂದು ಕೇಳಹತ್ತಿದರು. ಆಗ ರುಕ್ಮಿಣಿಯು ಯಾವುದೋ ದೃಷ್ಟಿಯಿಂದ ''ಆಗಬಹುದು'' ಎಂದು ಬಿಟ್ಟಳು. ಇಷ್ಟೇ ಬೇಕಾಗಿದ್ದ ವಿಠ್ಠಲಪಂತರು ತಕ್ಷಣ ರಾತ್ರಿಯಲ್ಲಿಯೇ ಉಟ್ಟ ಬಟ್ಟೆಯ ಮೇಲೆ ತೀವ್ರಗತಿಯಲ್ಲಿ ಕಾಶಿಕ್ಷೇತ್ರದತ್ತ ಹೊರಟರು. ಕಾಶಿಯನ್ನು ತಲುಪಿ ಶ್ರೀ ವಿಶ್ವನಾಥನ ದರ್ಶನ ಪಡೆದು ಯೋಗ್ಯರಾದ ಗುರುಗಳ ಶೋಧನೆಯನ್ನು ಮಾಡುತ್ತಿರಲು ಅಲ್ಲಿ ಅವರಿಗೆ ಮಹಾ ಸತ್ಪುರುಷರಾದ ಭಕ್ತೋದ್ಧಾರಕರಾದ ಶ್ರೀರಾಮಾನಂದ ಸ್ವಾಮಿಗಳವರ ದರ್ಶನವಾಯಿತು. ಅವರಿಗೆ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿ ನಾನು ತ್ರಿತಾಪದಿಂದ ಬಳಲುತ್ತಿದ್ದೇನೆ, ನನಗೆ ಸಂಸಾರದ ಯಾವ ಬಂಧನವೂ ಇಲ್ಲ, ನನಗೆ ಸಂನ್ಯಾಸ ದೀಕ್ಷೆಯನ್ನು ಕೊಟ್ಟು ಉದ್ಧರಿಸಿರಿ ಎಂದು ಬೇಡಿಕೊಂಡರು. ಶ್ರೀ ರಾಮಾನಂದ ಸ್ವಾಮಿಗಳು ವಿಠ್ಠಲಪಂತರ ಸಾತ್ತ್ವಿಕ ಭಾವದ ಮುಖದ ತೇಜ, ಹಾಗೂ ವೈರಾಗ್ಯದ ಮೂರ್ತಿಯೇ ಆಗಿರುವುದನ್ನು ಕಂಡು ಯೋಗ್ಯ ಶಿಷ್ಯನು ದೊರಕಿದ್ದಕ್ಕೆ ಸಂತೋಷಪಟ್ಟು ತಮ್ಮ ಆಶ್ರಮದಲ್ಲಿ ಇವರಿಗೆ ಆಶ್ರಯವನ್ನು ನೀಡಿ ಸಂನ್ಯಾಸ ದೀಕ್ಷೆಯನ್ನು ಕೊಟ್ಟು ''ಚೈತನ್ಯಾಶ್ರಮಸ್ವಾಮಿ'' ಎಂದು ನಾಮಕರಣ ಮಾಡಿ ಅದಕ್ಕೆ ಬೇಕಾಗುವ ಎಲ್ಲ ಮಾರ್ಗಗಳನ್ನು ಬೋಧಿಸಿದರು.

ವಿಠ್ಠಲಪಂತರು ಕಾಶಿಯಲ್ಲಿ ಸಂನ್ಯಾಸ ದೀಕ್ಷೆಯನ್ನು ಪಡೆದರೆಂಬ ವಾರ್ತೆಯು ಸಿದ್ಧೋಪಂತರಿಗೂ, ರುಕ್ಮಿಣಿಗೂ ತಿಳಿದು ಬಹಳ ಖೇದಗೊಂಡರು. ಕೊನೆಗೆ ಯಾವ ಉಪಾಯ ಕಾಣದೇ ರುಕ್ಮಿಣಿಯು ಆತ್ಮೋದ್ಧಾರ ದೃಷ್ಟಿಯಿಂದ ಸಿದ್ಧೇಶ್ವರನಿಗೆ ಪೂರ್ಣ ಶರಣಾಗತಳಾಗಿ ಅನನ್ಯ ಭಾವದಿಂದ ನಿತ್ಯ ನೇಮದಿಂದ ಸೇವೆ ಮಾಡುತ್ತ ಅಲ್ಲಿಯೇ ಶ್ರೀ ಅಶ್ವತ್ಥ ವೃಕ್ಷಕ್ಕೆ ನಿತ್ಯವೂ ಪ್ರದಕ್ಷಿಣೆಗಳನ್ನು ಹಾಕುತ್ತ ಕಠೋರವಾದ ವ್ರತದಲ್ಲಿ ನಿರತಳಾದಳು. ಪ್ರಪಂಚದಲ್ಲಿ ಉದಾಸೀನಳಾಗಿ ಎಲ್ಲವೂ ಶ್ರೀಹರಿ ಇಚ್ಛೆ ಎಂದು ಭಾವಿಸಿ ಒಬ್ಬ ತಪಸ್ವಿನಿಯಂತೆ ಹನ್ನೆರಡು ವರ್ಷ ಕಾಲ ಇದರಂತೆ ಜೀವನವನ್ನು ನಡೆಸಿದಳು. ಈಕೆಯ ತಪಪ್ರಭಾವದಿಂದ ಕಾಶಿಯಲ್ಲಿನ ಶ್ರೀ ರಾಮಾನಂದ ಸ್ವಾಮಿಗಳವರಿಗೆ ದಕ್ಷಿಣ ಭಾರತದ ತೀರ್ಥಯಾತ್ರೆಯ ಪ್ರೇರಣೆಯಾಗಿ ಅವರು ಕೆಲವು ಶಿಷ್ಯರೊಂದಿಗೆ ಅಲ್ಲಿಂದ ಸಿಗುವ ಎಲ್ಲ ತೀರ್ಥಕ್ಷೇತ್ರಗಳ ದರ್ಶನವನ್ನು ಪಡೆಯುತ್ತ ಭಗವತ್ ಪ್ರೇರಣೆಯಿಂದ ( ಆಳಂದಿ) ಅಲಂಕಾಪುರಿ ಕ್ಷೇತ್ರಕ್ಕೆ ಬಂದರು. ಇಂದ್ರಾಯಣಿ ತೀರ್ಥಸ್ನಾನ ಮಾಡಿ ಸಿದ್ಧೇಶ್ವರನ ದರ್ಶನ ಪಡೆದು ಅಶ್ವತ್ಥವೃಕ್ಷದ ಕಟ್ಟೆಗೆ ವಿಶ್ರಾಂತಿಗಾಗಿ ಕುಳಿತರು. ಆಗ ಪ್ರತಿನಿತ್ಯದಂತೆ ಅಶ್ವತ್ಥ ವೃಕ್ಷಕ್ಕೆ ಪ್ರದಕ್ಷಿಣೆ ಹಾಕಲು ಬಂದ ರುಕ್ಮಿಣಿಯು ಅಲ್ಲಿ ಆಸೀನರಾದ ತೇಜಃಪುಂಜ ಮಹಾಪುರುಷರನ್ನು ನೋಡಿ ಇವರಾರೊ ಮಹಾತಪಸ್ವಿಗಳಿರಬೇಕೆಂದು ತಿಳಿದು ಅನನ್ಯ ಭಾವದಿಂದ ಅವರ ಚರಣಗಳಿಗೆ ವಂದಿಸುತ್ತಿರಲು ಸ್ವಾಮಿಗಳು ರುಕ್ಮಿಣಿಯ ಭಕ್ತಿ ಭಾವ ಕಂಡು ಅತ್ಯಂತ ಪ್ರಸನ್ನರಾಗಿ ''ಪುತ್ರವತಿ ಭವ'' ಎಂದು ಆಶೀರ್ವದಿಸಿದರು. ರುಕ್ಮಿಣಿಯು ಅದಕ್ಕೆ ಸಂತೋಷ ಪಡದೇ ಮಹಾತ್ಮರ ಆಶೀರ್ವಾದವು ವ್ಯರ್ಥವಾಯಿತಲ್ಲವೆಂಬ ಭಾವನೆ ತಾಳಿ ಖೇದಗೊಂಡ ಮುಖ ನೋಡಿ ಸ್ವಾಮಿಗೆ ಆಶ್ಚರ್ಯವಾಗಿ, ಹೀಗೇಕೆ ವಿಷಾದಿಸುವೆ ? ನನ್ನ ಆಶೀರ್ವಾದವು ಎಂದೂ ಸುಳ್ಳಾಗುವುದಿಲ್ಲವೆಂದರು. ಆಗ ರುಕ್ಮಿಣಿಯು ವಿನಮ್ರಭಾವದಿಂದ ಸ್ವಾಮೀ ನನ್ನ ಪತಿಯು ಕಾಶಿಯಲ್ಲಿ ಸಂನ್ಯಾಸ ದೀಕ್ಷೆಯನ್ನು ಪಡೆದು ಹನ್ನೆರಡು ವರ್ಷಗಳಾಗಿವೆ. ಅಂದಮೇಲೆ ತಮ್ಮ ಆಶೀರ್ವಾದವು ಹೇಗೆ ಫಲಿಸಬೇಕು ? ಎಂದಾಗ ಸ್ವಾಮಿಯವರು ಎಲ್ಲವನ್ನೂ ಸವಿಸ್ತಾರವಾಗಿ ಚರ್ಚೆ ಮಾಡಲು ವಿಠ್ಠಲಪಂತರಿಗೆ ಸಂನ್ಯಾಸ ದೀಕ್ಷೆಯನ್ನು ಕೊಟ್ಟವರು ತಾವೇ ಎಂದು ನಿಶ್ಚಯವಾಗಿ ತಿಳಿಯಿತು. ಆಗ ತಕ್ಷಣವೇ ರುಕ್ಮಿಣಿಯೊಂದಿಗೆ ಅವರ ಮನೆಗೆ ಹೋಗಿ ಎಲ್ಲ ರೀತಿಯಲ್ಲಿ ಅವರಿಗೆ ಸಮಾಧಾನವನ್ನು ಹೇಳಿ ಈಗ ನೀವು ಎಲ್ಲರೂ ನನ್ನ ಜೊತೆಗೆ ಕಾಶಿಗೆ ಹೊರಡಿರಿ. ವಿಠ್ಠಲ ಪಂತರನ್ನು ಮರಳಿ ನಿಮಗೆ ಅರ್ಪಿಸುವೆ ಎಂದು ಆಶ್ವಾಸನೆ ಕೊಟ್ಟು ರಾಮೇಶ್ವರ ಯಾತ್ರೆಯನ್ನು ಬಿಟ್ಟು ಎಲ್ಲರೊಂದಿಗೆ ಕಾಶಿಗೆ ಹೊರಟರು.

ಕಾಶಿಯ ಆಶ್ರಮದಲ್ಲಿ ''ಚೈತನ್ಯಾಶ್ರಮಸ್ವಾಮಿ'' ಇವರಿಗೆ ಕರೆಯಿಸಿ ಎಲ್ಲರನ್ನು ಎದುರಿಗೆ ನಿಲ್ಲಿಸಲು ಆಗ ಸಂನ್ಯಾಸಿಯಾಗಿದ್ದ ವಿಠ್ಠಲಪಂತರು ನಿಜವನ್ನು ಒಪ್ಪಿಕೊಂಡು ತಮ್ಮ ಗುರುಗಳಿಗೆ ತಮ್ಮ ಅಪರಾಧವನ್ನು ಕ್ಷಮಿಸಲು ಬೇಡಿಕೊಂಡರು. ಆಗ ಗುರುಗಳು ''ಶಾಸ್ತ್ರಗಳ ವಿಧಿ ನಿಷೇಧ ಯಾವುದನ್ನೂ ನೋಡದೆ ಗುರುಗಳ ಆಜ್ಞೆಗೆ ಪೂರ್ಣವಾಗಿ ಮಹತ್ವಕೊಟ್ಟು ನೀನು ನನ್ನ ಆಜ್ಞೆಯಂತೆ ರುಕ್ಮಿಣಿಯನ್ನು ಪುನಃ ಹೊಂದಿಕೊ. ನಿನಗೆ ಈಶ್ವರನ ಆಶೀರ್ವಾದವು ಸದಾ ಇರುವುದು'' ಎಂದು ಹೇಳಿದಾಗ ಗುರುಗಳ ಆಜ್ಞೆಯನ್ನು ಮೀರಲು ಮಾರ್ಗವೇ ಇಲ್ಲದಾಗಿ ವಿಠ್ಠಲಪಂತರು ಪುನಃ ಗೃಹಸ್ಥಾಶ್ರಮಕ್ಕೆ ಹೊರಳಿದರು.

ಇವರು ಆಳಂದಿಗೆಬಂದಾಗ ಎಲ್ಲ ಬ್ರಾಹ್ಮಣರು ಸಭೆ ಸೇರಿ ವಿಠ್ಠಲಪಂತರು ಶಾಸ್ತ್ರಭ್ರಷ್ಟರು, ಸಂನ್ಯಾಸಿಯಾಗಿ ಪುನಃ ಪತ್ನಿಯನ್ನು ಕೂಡಿಕೊಂಡವರು ಇವರು ನಮ್ಮ ಕುಲದಲ್ಲಿ ಇರಲು ಯಾವ ಆಧಾರವು ಇಲ್ಲವೆಂದು ಅವರನ್ನು ಬಹಿಷ್ಕರಿಸಿದರು. ವಿಠ್ಠಲಪಂತರು ಇದರಿಂದ ವಿಚಲಿತರಾಗದೇ ಎಲ್ಲವೂ ಶ್ರೀಹರಿ ಇಚ್ಛೆ ಎಂದು ಭಾವಿಸಿ ಶಾಂತಚಿತ್ತರಾಗಿ ಆಳಂದಿ ಬಿಟ್ಟು ದೂರದಲ್ಲಿ ನದಿ ದಂಡೆಯಲ್ಲಿ ಪರ್ಣಕುಟೀರವನ್ನು ಕಟ್ಟಿಕೊಂಡು ಪತ್ನಿಯೊಂದಿಗೆ ಅಹೋರಾತ್ರಿ ಜಪ, ತಪ, ಅನುಷ್ಠಾನ, ಸದ್ಗ್ರಂಥಾವಲೋಕನ, ಸತತ ನಾಮಚಿಂತನ ಇತ್ಯಾದಿ ಪಾರಮಾರ್ಥಿಕ ಸಾಧನೆಗಳಲ್ಲಿಯೇ ನಿರತರಾದರು. ಉದರ ಪೋಷಣೆಗೆ ಊರಲ್ಲಿ ಮಾಧುಕರಿ ಮಾಡುತ್ತಿದ್ದರು. ಆಗ ಅಲ್ಲಿನ ದುಷ್ಟರು ಇವರನ್ನು ಕರ್ಣಕಠೋರವಾದ ಶಬ್ದಗಳಿಂದ ಹೀಯಾಳಿಸುತ್ತಿದ್ದರು. ಅನೇಕ ರೀತಿಯಲ್ಲಿ ತೊಂದರೆಗಳನ್ನು ಕೊಡುತ್ತಿದ್ದರು. ಒಂದೊಂದು ಸಲ ಮಾಧುಕರಿ ದೊರೆಯದೇ ಗಡ್ಡೆ ಗೆಣಸಿನ ಮೇಲೆ ಇರಬೇಕಾಗುತ್ತಿತ್ತು. ಇದೂ ಸಿಗದಾಗ ಜಲಹಾರದಿಂದ ಇರುತ್ತಿದ್ದರು. ಹೀಗಾದರೂ ಎಲ್ಲರನ್ನೂ ಭಗವದ್ಭಾವದಿಂದ ಕಾಣುತ್ತ ಜಗತ್ತಿನ ಪೀಡೆಯನ್ನು ಸಹಿಸುತ್ತಿದ್ದರು.

ತುಕಾ ಮ್ಹಣೇ ತೋಚಿ ಸಂತ । ಸೋಸಿ ಜಗಾಚಿ ಆಘಾತ ॥

ರುಕ್ಮಿಣಿಯು ಮಹಾಪತಿವ್ರತೆಯಳಾಗಿದ್ದು ಪತಿಪರಾಯಣಳಾಗಿ ಪತಿಯ ನೆರಳಿನಂತಿದ್ದು ಅಹೋರಾತ್ರಿ ಪತಿ ಸೇವೆಯಲ್ಲಿಯೇ ಆನಂದಪಡುತ್ತಿದ್ದಳು. ಪತಿಯೊಂದಿಗೆ ಸದಾ ಪಾರಮಾರ್ಥಿಕ ಚಿಂತನದಲ್ಲಿಯೇ ಕಾಲವನ್ನು ಕಳೆಯುತ್ತಿದ್ದಳು.

ವಿಠ್ಠಲಪಂತರು ಸತ್ಕುಲಸಂಪನ್ನರು, ಬಾಲ್ಯದಲ್ಲಿಯೇ ವೇದಾಧ್ಯಯನದಿಂದ ವೇದಮೂರ್ತಿಯಾಗಿ ಅಂತಃಕರಣವನ್ನು ಶುದ್ಧ ಮಾಡಿಕೊಂಡವರು. ಉತ್ತರ ದಕ್ಷಿಣ ಭಾರತದ ಪುಣ್ಯಕ್ಷೇತ್ರಗಳ ಸಾಧು ಸಂತರ ದರ್ಶನಗಳಿಂದ ಪುನೀತರಾದವರು. ಸಂಸಾರದಲ್ಲಿ ಬೇಸತ್ತು ಸಂನ್ಯಾಸಿಯಾಗಿ ಹನ್ನೆರಡು ವರ್ಷ ಕಾಲ ಅಖಂಡ ಧ್ಯಾನ ಚಿಂತನೆಗಳಿಂದ ಪರಿಶುದ್ಧರಾದವರು. ಶ್ರೀಗುರುಗಳ ಆಜ್ಞೆಯನ್ನು ಮೀರದೇ ಪತ್ನಿಯೊಂದಿಗೆ ಯಾವ ಜನರ ಸಂಪರ್ಕವಿಲ್ಲದೇ ಕೇವಲ ಪಾರಮಾರ್ಥಿಕ ಸಾಧನೆಗಳಲ್ಲಿಯೇ ಅಖಂಡವಾಗಿ ಆನಂದವನ್ನು ಭೋಗಿಸುತ್ತಿದ್ದರು. ರುಕ್ಮಿಣಿಯು ಸಹ ಸತ್ಕುಲಸಂಪನ್ನಳು, ಸುಶೀಲಳು, ಪತಿ ಪರಾಯಣಳು, ಪತಿಯ ಸಂನ್ಯಾಸದ ಹನ್ನೆರಡು ವರ್ಷಕಾಲ ಕಠೋರ ಅನುಷ್ಠಾನಗಳನ್ನು ಆಚರಿಸಿ ಸಂಸಾರದ ಆಸಕ್ತಿ ಬಿಟ್ಟು ಅಂತಃಕರಣದಿಂದ ಪರಿಶುದ್ಧಳಾದವಳು. ಈಗಂತೂ ಯಾವ ಜನರ ಆಪ್ತಸಂಬಂಧಿಗಳ ಸಂಪರ್ಕವಿಲ್ಲದೇ ಅಖಂಡವಾಗಿ ಪತಿಸೇವೆಯ ಮಹಾಲಾಭದಿಂದ ಪೂರ್ಣವಾಗಿ ಪುನೀತಳಾದವಳು. ಒಟ್ಟಿನಲ್ಲಿ ಈ ಸತಿಪತಿಯರು ಮಹಾಪತಿವ್ರತೆ ಅನುಸೂಯಾ ಹಾಗೂ ಮಹಾಋಷಿ ಅತ್ರಿಮುನಿಗಳಂತೆ ಜೀವನ ನಡೆಸುತ್ತಿದ್ದರು. ಹೀಗೆ ಇಲ್ಲಿ ಪುನಃ ಹನ್ನೆರಡು ವರ್ಷ ಕಳೆದ ಮೇಲೆ ಇವರಿಬ್ಬರೂ ಒಳಹೊರಗೆ ಸ್ಫಟಿಕಮಣಿಯಂತೆ ಪರಿಶುದ್ಧರಾಗಿದ್ದಕ್ಕೆ ಜಗದೋದ್ಧಾರಕ್ಕಾಗಿ ಆದಿಶಕ್ತಿಯೊಂದಿಗೆ ತ್ರಿಮೂರ್ತಿಗಳ ಅವತಾರವು ಇವರ ಗರ್ಭದಲ್ಲಿ ಆಗಬೇಕಾಯಿತು.

ಶ್ರೀ ಶಾಲಿವಾಹನ ಶಕೆ ೧೧೯೫ ನೆಯ ಶ್ರೀಮುಖನಾಮ ಸಂವತ್ಸರದ ಮಾಘ ಶುದ್ಧ ಪ್ರತಿಪದ ಸೋಮವಾರ ಪ್ರಾತಃಕಾಲದಲ್ಲಿ ನಿವೃತ್ತಿನಾಥರ ಜನನವಾಯಿತು. ಶಕೆ ೧೧೯೭ ನೆಯ ಯುವನಾಮ ಸಂವತ್ಸರದ ಶ್ರಾವಣ ಬಹುಳ ಅಷ್ಟಮಿ

ಗುರುವಾರ ಮಧ್ಯರಾತ್ರಿ ಜ್ಞಾನೇಶ್ವರ ಮಹಾರಾಜರ ಜನನವಾಯಿತು. ಶಕೆ೧೧೯೫ ನೆಯ ಈಶ್ವರನಾಮ ಸಂವತ್ಸರದ ಕಾರ್ತಿಕ ಶುದ್ಧ ಪ್ರತಿಪದ ರವಿವಾರ ಸೋಪಾನದೇವ ಅವರ ಜನನವಾಯಿತು. ಶಕೆ೧೨೦೧ ನೇ ಪ್ರಮಾಥಿನಾಮ ಸಂವತ್ಸರದ ಅಶ್ವೀಜ ಶುದ್ಧ ಪ್ರತಿಪದೆಯಲ್ಲಿ ಶುಕ್ರವಾರ ಮಧ್ಯಾಹ್ನ ಮುಕ್ತಾಬಾಯಿಯ ಜನನವಾಯಿತು.

ಈ ನಾಲ್ವರೂ ಪರಬ್ರಹ್ಮ ಮೂರ್ತಿಗಳಾಗಿದ್ದು, ಇವರ ಲಾವಣ್ಯ, ತೇಜ, ಜ್ಞಾನಗಳನ್ನು ಕಂಡು ಮಾತಾ ಪಿತೃಗಳು ಆನಂದಪುಲಕಿತರಾದರು. ವಿಠ್ಠಲಪಂತರೇ ಇವರಿಗೆ ಅಕ್ಷರ ಅಭ್ಯಾಸ, ವೇದಶಾಸ್ತ್ರಗಳ ಅಧ್ಯಯನ, ಪುರಾಣ ಪುಣ್ಯಕಥೆಗಳ ಶ್ರವಣ ಮಾಡಿಸಿದರು. ಇವರೆಲ್ಲರೂ ಈ ಎಲ್ಲ ಅಭ್ಯಾಸಗಳನ್ನು ತಮ್ಮ ಚಿಕ್ಕವಯಸ್ಸಿನಲ್ಲಿಯೇ ಮುಗಿಸಿದರು.

ಮುಂದೆ ಮೌಂಜಿ ಬಂಧನ ಪ್ರಾಪ್ತವಯಸ್ಕರಾದದ್ದಕ್ಕೆ ವಿಠ್ಠಲಪಂತರು ಆಳಂದಿಯ ಬ್ರಾಹ್ಮಣರಿಗೆ ಅಂತಃಕರಣದಿಂದ ವಂದಿಸಿ ತಮ್ಮ ಮಕ್ಕಳಿಗೆ ಮೌಂಜಿ ಬಂಧನ ನಡೆಸಿಕೊಡಬೇಕೆಂದು ಪರಿಪರಿಯಾಗಿ ಬೇಡಿಕೊಂಡರು. ಆದರೆ ಈ ಬ್ರಾಹ್ಮಣರು ಇವರಲ್ಲಿ ಸರಿಯಾಗಿ ಮಾತನಾಡಲು ಸಹ ಸಿದ್ಧರಿರದೇ ಅತ್ಯಂತ ಕಠೋರ ಶಬ್ದಗಳಿಂದ ಹೀಯಾಳಿಸಿ ಮರಳಿ ಕಳಿಸಿದರು. ಇದರಿಂದ ಖೇದಗೊಂಡ ವಿಠ್ಠಲಪಂತರಿಗೆ ರುಕ್ಮಿಣಿಯು ಸಂತೈಸಿ ಈಗ ನಾವು ಇಲ್ಲಿರುವುದು ಬೇಡ, ತ್ರ್ಯಂಬಕೇಶ್ವರಕ್ಕೆ ಹೋಗಿ ಬ್ರಹ್ಮಾಂಡ ನಾಯಕನಿರುವ ಬ್ರಹ್ಮಗಿರಿ ಪರ್ವತವನ್ನು ಪ್ರದಕ್ಷಿಣೆ ಹಾಕುವ ವ್ರತವನ್ನು ಆಚರಿಸೋಣ ಇದರಿಂದ ನಮಗೆ ಮಾರ್ಗವು ನಿಶ್ಚಿತವಾಗಿ ದೊರಕುವುದು ಎಂದು ಧೈರ್ಯ ನೀಡಿ ಎಲ್ಲರೊಂದಿಗೆ ತ್ರ್ಯಂಬಕೇಶ್ವರಕ್ಕೆ ಬಂದರು. ಅಲ್ಲಿ ಮಧ್ಯರಾತ್ರಿ ನಂತರ ಗೋದಾವರಿ ನದಿಯ ಉಗಮಸ್ಥಾನವಾದ ಕುಶಾವರ್ತಿಯಲ್ಲಿ ಸ್ನಾನಗೈದು ಬ್ರಹ್ಮಗಿರಿಗೆ ಪ್ರದಕ್ಷಿಣೆ ಹಾಕುವ ಉಗ್ರವ್ರತವನ್ನು ನಡೆಸಹತ್ತಿದರು. ಇದರಂತೆ ಇಲ್ಲಿ ಎಲ್ಲರೂ ನಾಲ್ಕಾರು ತಿಂಗಳವರೆಗೆ ಈ ಕಠೋರ ವ್ರತ ಆಚರಿಸುತ್ತಿರುವುದನ್ನು ಅಲ್ಲಿಯ ಆಂಜನೆಯ ಗುಹೆಯಲ್ಲಿ ವಾಸಿಸುತ್ತಿರುವ ಮಹಾಯೋಗಿ ಗಹಿನೀನಾಥರಿಗೆ ತಿಳಿಯಿತು. ಆಗ ಅವರು ತಮ್ಮ ಜ್ಞಾನದೃಷ್ಟಿಯಿಂದ ಇವರು ಆದಿಶಕ್ತಿಯೊಂದಿಗೆ ತ್ರಿಮೂರ್ತಿಗಳು ಎಂದು ಅರಿತು ಹೇಗಾದರೂ ಮಾಡಿನಿವೃತ್ತಿನಾಥರಿಗೆ ತಮ್ಮಲ್ಲಿ ಕರೆಯಿಸಿಕೊಳ್ಳಲು ವಿಚಾರಮಾಡಿ ತಮ್ಮ ಯೋಗಬಲದಿಂದ ಒಂದು ಹುಲಿಯನ್ನು ಹುಟ್ಟಿಸಿ ಪ್ರದಕ್ಷಿಣೆ ಮಾಡುವ ಸ್ಥಳಕ್ಕೆ ಗರ್ಜಿಸುತ್ತ ಧಾವಿಸುವಂತೆ ಮಾಡಿದರು. ಹುಲಿಯ ಗರ್ಜನೆಯಿಂದ ಎಲ್ಲರೂ ಅತ್ತಿತ್ತ ಸರಿದು ಹೋದರು. ಆಗ ಹುಲಿಯು ನಿವೃತ್ತಿನಾಥರಿಗೆ ಬೆನ್ನು ಹತ್ತಿ ಗಹಿನೀನಾಥರ ಗುಹೆಯಲ್ಲಿ ಪ್ರವೇಶಿಸುವಂತೆ ಮಾಡಿತು. ಸಧ್ಯಕ್ಕೆ ಭಯಗೊಂಡ ನಿವೃತ್ತಿನಾಥರು ಗುಹೆಯಲ್ಲಿ ಆಸೀನರಾಗಿದ್ದ ಮಹಾಯೋಗಿ ಗಹಿನೀನಾಥರ ದಿವ್ಯದರ್ಶನದಿಂದ ಪುಲಕಿತರಾದರು. ತ್ರಿಕರ್ಣಪೂರ್ವಕವಾಗಿ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿ ನಮಗೆ ಉದ್ಧರಿಸಿರಿ ಎಂದು ಪ್ರಾರ್ಥಿಸಿದರು. ಆಗ ಗಹಿನೀನಾಥರು ಅವರಿಗೆ ಅಭಯ ನೀಡಿ ಮಸ್ತಕದ ಮೇಲೆ ವರದಹಸ್ತವನ್ನಿಟ್ಟು ಕೃಷ್ಣನಾಮದ ಮಂತ್ರೋಪದೇಶ ಮಾಡಿ ಜಗತ್ಕಲ್ಯಾಣಕ್ಕಾಗಿ ಭಾಗವತ ಧರ್ಮವನ್ನು ಪ್ರಚಾರ ಮಾಡಲು ಆಜ್ಞಾಪಿಸಿ ತಮ್ಮಲ್ಲಿಯೇ ಎಂಟು ಹತ್ತು ದಿನಗಳವರೆಗೆ ವಾಸಮಾಡಿಕೊಂಡು ಭಕ್ತಿ ಜ್ಞಾನ ವೈರಾಗ್ಯ ಹಾಗೂ ಯೋಗಗಳ ರಹಸ್ಯಗಳನ್ನು ತಿಳಿಸಿ ಅವರನ್ನು ಪೂರ್ಣ ಮೂರ್ತಿಯನ್ನಾಗಿ ಮಾಡಿ ಕಳುಹಿಸಿಕೊಟ್ಟರು. ಶಿವನ ಅವತಾರವೇ ಆದ ನಿವೃತ್ತಿನಾಥರಿಗೆ ಸಾಧಕರಿಗೆ ಗುರುಗಳು ಬೇಕು ಎಂಬ ಮಾರ್ಗ ನಿರ್ಣಯಿಸುವ ನಿಮಿತ್ತ ಮಾತ್ರದಿಂದಲೇ ಗುರುಪದೇಶದ ಸಾಧನೆಮಾಡಿ ತೋರಿಸಬೇಕಾಯಿತು.

ಈ ಕಡೆ ಉಳಿದವರೆಲ್ಲರೂ ನಿವೃತ್ತಿನಾಥರ ವಿಯೋಗದಿಂದ ಚಿಂತಾಕ್ರಾಂತರಾಗಿ ಏನೇನೋ ವಿಚಾರಿಸುತ್ತಿರುವಾಗ ಇನ್ನಷ್ಟು ತೇಜಃಪುಂಜರಾದ ನಿವೃತ್ತಿನಾಥರ ಆಗಮನದಿಂದ ಎಲ್ಲರೂ ಅತ್ಯಂತ ಸಂತೋಷಪಟ್ಟರು. ನಿವೃತ್ತಿನಾಥರು ಆದ ಎಲ್ಲ ವಿಷಯಗಳನ್ನು ವಿಸ್ತರಿಸಿ ತಿಳಿಸಿದಾಗ ಮಾತಾ ಪಿತೃಗಳು ಮಗನಿಗೆ ಯೋಗ್ಯ ಗುರುಗಳ ಪ್ರಾಪ್ತಿಯಾಗಿದ್ದಕ್ಕೆ ಬಹಳ ತೃಪ್ತರಾದರು. ತದನಂತರ ನಿವೃತ್ತಿನಾಥರು ಜ್ಞಾನೇಶ್ವರ, ಸೋಪಾನ, ಮುಕ್ತಾಬಾಯಿಯವರಿಗೆ ತಮಗೆ ಲಭಿಸಿದ ಗುರುಪದೇಶವನ್ನು ಕೊಟ್ಟು ಅವರನ್ನು ತಮ್ಮಂತೆ ಮಾಡಿಕೊಂಡರು.

ಕೃಪಾಕಟಾಕ್ಷೇನ್ಯಾಹಾಳಿಲೇ । ಆಪುಲೇ ಪದೀ ಬೈಸವಿಲೇ ।
ಬಾಪರಖುಮಾದೇವಿವರು ವಿಠ್ಠಲೇ । ಭಕ್ತಾ ದಿಧಲೇ ವರದಾನ ॥

ಇವರೆಲ್ಲ ರೊಂದಿಗೆ ತ್ರ್ಯಂಬಕೇಶ್ವರದ ವ್ರತ ನೇಮಗಳನ್ನೆಲ್ಲವನ್ನು ಮುಗಿಸಿಕೊಂಡು ಪುನಃ ವಿಠ್ಠಲಪಂತರು ಆಳಂದಿಯ ಪರ್ಣಕುಟೀರಕ್ಕೆ ಮರಳಿ ಬಂದರು.

ಮಕ್ಕಳು ಮೌಂಜಿ ಬಂಧನದ ವಯಸ್ಸಿಗೆ ದಾಟುತ್ತಿರುವುದಕ್ಕೆ ವಿಠ್ಠಲಪಂತರು ತಮಗೆ ಒದಗಿದ ಶಾಸ್ತ್ರ ವಿರೋಧ ವರ್ತನೆಯಿಂದ ಮಕ್ಕಳು ಅದರ ಶಿಕ್ಷೆಯನ್ನು ಅನುಭವಿಸಬೇಕಾಯಿತಲ್ಲವೆಂದು ವಿಚಾರಿಸಿ ಆಳಂದಿ ಮುಖ್ಯಸ್ಥರಾದ ಮಹದೇವ ಶಾಸ್ತ್ರಿಗಳವರ ಮುಖಾಂತರ ಬ್ರಾಹ್ಮಣಸಭೆಯನ್ನು ಕೂಡಿಸಿ ನಾನು ಕಾಮ ವಾಸನೆಯಿಂದ ಸ್ತ್ರೀಯಳನ್ನು ಕೂಡಿದವನಲ್ಲ. ಗುರುಗಳ ಆಜ್ಞೆಯಿಂದ ಈ ವರ್ತನೆಯು ನಡೆಯಿತು. ಏನೇ ಇರಲಿ ನನ್ನ ಅಪರಾಧವನ್ನು ಕ್ಷಮಿಸಿರಿ, ಇಲ್ಲವೇ ತಾವು ಕೊಟ್ಟ ಯಾವ ಶಿಕ್ಷೆಯಾದರೂ ಅನುಭವಿಸಲು ನಾನು ಸಿದ್ಧನಿದ್ದೇನೆ. ಒಟ್ಟಿನಲ್ಲಿ ಹೇಗಾದರೂ ಮಾಡಿ ನನ್ನ ಮಕ್ಕಳಿಗೆ ಶುದ್ಧಗೊಳಿಸಿ ಕುಲದಲ್ಲಿ ಸೇರಿಸಿಕೊಳ್ಳಿರಿ ಎಂದು, ನಾನಾ ಪರಿಯಿಂದ ಬೇಡಿಕೊಂಡರು. ಆದಾಗ್ಯೂ ಕರ್ಮಠ ಬ್ರಾಹ್ಮಣರು ಇವರ ಯೋಗ್ಯತೆಯನ್ನು ಏನೂ ಅರಿಯದೆ ಶಾಸ್ತ್ರಾಭಿಮಾನದ ಮದದಿಂದ ತುಂಬಿದವರಾಗಿ ನೀನು ಮಾಡಿದ ಅಪರಾಧಕ್ಕೆ "ದೇಹಾಂತ ಪ್ರಾಯಶ್ಚಿತ್ತ" ಒಂದೇ ಎಂದು ಕಠೋರವಾಗಿ ನುಡಿದರು. ಇದನ್ನೇ ಪ್ರಸಾದವೆಂದು ತಿಳಿದು ವಿಠ್ಠಲಪಂತರು ರಾತ್ರಿ ಎಲ್ಲರೂ ಮಲಗಿಕೊಂಡಾಗ ದೇಹಾಂತ ಪ್ರಾಯಶ್ಚಿತ್ತಕ್ಕಾಗಿ ಪ್ರಯಾಗಕ್ಕೆ ಹೊರಡಲು ಸಿದ್ಧರಾದರು. ಆಗ ಮಹಾ ಪತಿವ್ರತೆಯಾದ ರುಕ್ಮಿಣಿಯು ನನ್ನಿಂದಲೇ ನನ್ನ ಪತಿಗೆ ಇಷ್ಟೊಂದು ಅವಸ್ಥೆ ಪ್ರಾಪ್ತವಾಯಿತೆಂದು ತಿಳಿದು ಪರಿಪೂರ್ಣ ಪತಿಭಕ್ತಿಯಲ್ಲಿ ತನ್ನ ಬ್ರಹ್ಮ ತೇಜಸ್ಸಿನ ರತ್ನ ಪ್ರಾಯದ ಎಳೆಯ ನಾಲ್ಕೂ ಮಕ್ಕಳ ಮೇಲಿನ ಮೋಹವನ್ನು ತೊರೆದು ಪತಿಯನ್ನು ನೆರಳಿನಂತೆ ಹಿಂಬಾಲಿಸಿದಳು. ಕೊನೆಯದಾಗಿ ಎಲ್ಲರ ಮುಖಾವಲೋಕನೆಯನ್ನು ಮಾಡಿ ತುಂಬಿದ ಹೃದಯದಿಂದ ಇವರ ಯೋಗ್ಯತೆಯೇ ಇವರಿಗೆ ಕಾಪಾಡಲಿ ಎಂದು ಹರಿಸಿ ಮನಸ್ಸನ್ನು ವಜ್ರದಂತೆ ಕಠಿಣ ಮಾಡಿ ಅಲ್ಲಿಂದ ರಾತ್ರಿಯೇ ಪ್ರಯಾಗದತ್ತ ಪ್ರಯಾಣ ಮಾಡಿದರು. ರಾತ್ರಿ ಮುಗಿದು ಅರುಣೋದಯ ಸಮಯದಲ್ಲಿ ಇವರಿಗೆ ಮಹಾಯೋಗಿಯಾದ ಗಹಿನೀನಾಥರ ದರ್ಶನವಾಗಿ ನೀವು ಮಕ್ಕಳಿಗಾಗಿ ಯಾವ ಚಿಂತೆ ಮಾಡಬೇಕಾಗಿಲ್ಲ. ಅವರು ಅವತಾರಿ ಪುರುಷರು. ಅವರಿಗೆ ಯಾವ ವಿಪತ್ತು ಬರಲು ಸಾಧ್ಯವೇ ಇಲ್ಲ. ಇವರಿಂದ ಜಗತ್ಕಲ್ಯಾಣವಾಗುವುದಿದೆ ಎಂದು ಹೇಳಿದಾಗ ಪತಿ ಪತ್ನಿಯರು ಬಹಳ ಸಂತೋಷಚಿತ್ತರಾಗಿ ಅವರನ್ನು ಭಕ್ತಿಯಿಂದ ವಂದಿಸಿ ಮುಂದೆ ನಡೆದು ಪ್ರಯಾಗವನ್ನು ತಲುಪಿ ಗಂಗಾ ಯಮುನಾ ಸರಸ್ವತಿ ಕೂಡಿರುವ ಪ್ರಯಾಗ ಸಂಗಮದಲ್ಲಿ ತಮ್ಮ ದೇಹಗಳನ್ನು ವಿಸರ್ಜಿಸಿದರು.

ಬೆಳಗ್ಗೆ ಎದ್ದ ಈ ಸೂಜ್ಞರಾದ ನಾಲ್ವರಿಗೆ ತಮ್ಮ ತಂದೆ ತಾಯಿಯವರು ಬ್ರಾಹ್ಮಣರು ವಿಧಿಸಿರುವ ದೇಹಾಂತ ಪ್ರಾಯಶ್ಚಿತ್ತಕ್ಕಾಗಿ ಪ್ರಯಾಗಕ್ಕೆ ಹೊರಟಿದ್ದು ತಿಳಿಯಲು ತಡವಾಗಲಿಲ್ಲ. ಗುರುಗಳ ಪೂರ್ಣ ಬೋಧೆಯಿಂದ ಪೂರ್ಣರಾಗಿರುವ ನಿವೃತ್ತಿನಾಥರು ಎಲ್ಲರನ್ನು ಸಮಾಧಾನಗೊಳಿಸಿ ಪುನಃ ಬ್ರಾಹ್ಮಣರ ಸಭೆ ಕೂಡಿಸಿ ತಾವು ವಿಧಿಸಿದಂತೆ ನಮ್ಮ ತಂದೆ ತಾಯಿಯವರು ದೇಹಾಂತ ಪ್ರಾಯಶ್ಚಿತ್ತವನ್ನು ತೆಗೆದುಕೊಂಡರು. ಇನ್ನು ನಮ್ಮ ಗತಿ ಏನು ? ಎಂದು ಕೇಳಿದರು. ಆಗ ಬ್ರಾಹ್ಮಣರು ನೀವು ಪೈಠಣಕ್ಕೆ ಹೋಗಿ ಅಲ್ಲಿಂದ ಶುದ್ಧಿ ಪತ್ರವನ್ನು ತಂದಾಗ ಮಾತ್ರ ನಾವು ನಿಮಗೆ ಕುಲದಲ್ಲಿ ಸೇರಿಸಿಕೊಳ್ಳುವೆವು ಎಂದು ತಿಳಿಸಿ ಪೈಠಣ ಬ್ರಾಹ್ಮಣರಿಗಾಗಿ ಒಂದು ಪತ್ರವನ್ನು ಬರೆದುಕೊಟ್ಟರು.

ಘನಪಾಠಿಗಳು, ಪಂಡಿತರು, ಕರ್ಮಠರು ಮೊದಲಾದ ಭೂಸುರರಿಂದ ಆಗ ಪೈಠಣವು ದಕ್ಷಿಣ ಭಾರತದಲ್ಲಿ ಸುಪ್ರಸಿದ್ಧವಾಗಿತ್ತು. ಬ್ರಾಹ್ಮಣರ ಆಜ್ಞೆಯಂತೆ ಈ ನಾಲ್ವರು ಬಹಳ ಪ್ರಯಾಸದೊಂದಿಗೆ ಪಾದಚಾರಿಗಳಾಗಿ ಪೈಠಣಕ್ಕೆ ಬಂದು ತಮ್ಮ ತಂದೆಯ ಸೋದರ ಮಾವನವರಾದ ಕೃಷ್ಣಾಜಿಪಂತರ ಮನೆಗೆ ಹೋಗಿ ತಮ್ಮ ಎಲ್ಲ ವೃತ್ತಾಂತವನ್ನು ತಿಳಿಸಿ ಅವರ ಮುಖಾಂತರ ಬ್ರಹ್ಮಸಭೆಯನ್ನು ಕೂಡಿಸಿ ತಾವು ತಂದಿರುವ ಆಳಂದೀ ಬ್ರಾಹ್ಮಣರ ಪತ್ರವನ್ನು ವಿನಯಪೂರ್ವಕವಾಗಿ ಬ್ರಾಹ್ಮಣರ

ಸಭೆಗೆ ಮುಟ್ಟಿಸಿದರು. ಆಗ ಸಭೆಯ ಮುಖ್ಯಸ್ಥರು ಶಾಸ್ತ್ರಗಳನ್ನು ಶೋಧಿಸಿ ಸಂನ್ಯಾಸಿ ಮಕ್ಕಳಿಗೆ ಮೌಂಜ ಬಂಧನಕ್ಕೆ ಶುದ್ಧಗೊಳಿಸಲು ಯಾವ ಆಧಾರವು ಇಲ್ಲ. ಈಗ ನೀವು ಎಲ್ಲರಲ್ಲಿಯೂ ಭಗವದ್ಭಾವವನ್ನಿಟ್ಟು ಶ್ರೀಹರಿಯ ಸೇವೆಯಲ್ಲಿ ನಿಮ್ಮ ಆಯುಷ್ಯವನ್ನು ವಿನಿಯೋಗಿಸಿರಿ ಎಂದು ಆಜ್ಞಾಪಿಸಿದರು. ಇದರಿಂದ ನಿವೃತ್ತಿನಾಥ, ಜ್ಞಾನೇಶ್ವರ, ಸೋಪಾನ, ಮುಕ್ತಾಬಾಯಿಯವರು ಬಹಳ ಸಂತೋಷಪಟ್ಟರು. ಆಗ ಆ ಸಭೆಯಲ್ಲಿ ಕೆಲವರು ಇವರ ಹೆಸರುಗಳನ್ನು ಕೇಳಿದರು. ನಿವೃತ್ತಿ, ಜ್ಞಾನದೇವ, ಸೋಪಾನ ಮುಕ್ತಾಬಾಯಿ ಎಂದು ಒಬ್ಬಬ್ಬರೇ ಕ್ರಮವಾಗಿ ಓವೀ ಬದ್ಧವಾಗಿ ತಿಳಿಸಿದರು. ಇದರಿಂದ ಗರ್ವಿಷ್ಠ ಬ್ರಾಹ್ಮಣರು ಹೆಸರಿನಲ್ಲಿ ಏನು ಅಂಥ ಮಹತ್ತ್ವವಿದೆ? ನಮ್ಮೂರಿನಲ್ಲಿ ಕೋಣವು "ಗ್ಯಾನ್ಯಾ" ಎಂದು ಕರೆಯಲ್ಪಡುವುದು ಎಂದಾಗ ಜ್ಞಾನೇಶ್ವರರು ನನ್ನಲ್ಲಿರುವ ಆತ್ಮಕ್ಕೂ ಕೋಣನಲ್ಲಿರುವ ಆತ್ಮಕ್ಕೂ ಯಾವ ಭೇದವೇ ಇಲ್ಲ ಎಂದರು. ಆಗ ಎದುರುತ್ತರ ಕೊಡುವ ಚೋಟು ಹುಡುಗನಿಗೆ ಸರಿಯಾದ ಪಾಠವನ್ನು ಕಲಿಸಬೇಕು ಎಂಬ ದುರುದ್ದೇಶದಿಂದ ಆ ಕೋಣವನ್ನು ತರಿಸಿ ಕೋಣವೂ ನೀನೂ ಒಂದೇ ಆಗಿದ್ದರೆ ನಾವು ಕೋಣಕ್ಕೆ ಬಾರಕೋಲದಿಂದ ಹೊಡೆಯುತ್ತೇವೆ, ಆ ಪೆಟ್ಟು ನಿನಗೆ ಬೀಳುವುದೇ? ಎಂದರು. ಆಗ ಜ್ಞಾನೇಶ್ವರರು ಹೌದೆಂದರು. ತಕ್ಷಣ ಸಿಟ್ಟಿನಿಂದ ಕೋಣಕ್ಕೆ ಬಾರಕೋಲದಿಂದ ಹೊಡೆಯಲು ಜ್ಞಾನೇಶ್ವರರ ಬೆನ್ನಿನ ಮೇಲೆ ಬಾರುಗಳು ಮೂಡಹತ್ತಿದವು. ಇದನ್ನು ಕಂಡು ಚಕಿತರಾದರೂ ಏನೋ ಮಾಯಾ ಮಂತ್ರ ವಿದ್ಯೆ ಕಲಿತಿರಬಹುದೆಂದು ಅದಕ್ಕೆ ಮಹತ್ತ್ವ ನೀಡದೇ ಪುನಃ ನೀನು ವಿದ್ಯಾ ಸಂಪನ್ನನು, ವೇದೋಕ್ತದಿಂದ ಮಾತನಾಡುವಿ. ಆದರೆ ನೀನೂ ಕೋಣವೂ ಒಂದೇ ಆದರೆ ನಿನ್ನಂತೆ ಕೋಣವು ವೇದವನ್ನು ನುಡಿಯುವುದೇ? ಎಂದರು. ಆಗ ಜ್ಞಾನೇಶ್ವರರು ನಿಮ್ಮ ಚರಣ ಕೃಪೆ ಇದ್ದರೆ ಏನಾಗಲಿಕ್ಕಿಲ್ಲ ? ಈ ಕೋಣವೂ ವೇದವನ್ನು ನುಡಿಯಬಹುದೆಂದರು. ಆಗ ಎಲ್ಲರೂ ಹಾಗಾದರೆ ಈ ಕೋಣದಿಂದ ಋಗ್ವೇದವನ್ನು ನುಡಿಸು ಎಂದರು. ಆಗ ಜ್ಞಾನೇಶ್ವರರು ನಿವೃತ್ತಿನಾಥರ ಆಶೀರ್ವಾದ ಪಡೆದು ಕೋಣದ ಮಸ್ತಕದ ಮೇಲೆ ವರದ ಹಸ್ತವನ್ನಿಡಲು ಆ ಕೋಣವು ಚಮತ್ಕಾರವಾಗಿ ಋಗ್ವೇದವನ್ನು ಲಯಬದ್ಧವಾಗಿ ನುಡಿಯ ಹತ್ತಿತು. ತಪ್ಪಿದ್ದರೆ ಇದನ್ನು ಖಂಡಿಸಬೇಕೆಂಬ ಉದ್ದೇಶದಿಂದ ಕೆಲವು ಬ್ರಾಹ್ಮಣರು ಓಡಿ ಹೋಗಿ ಋಗ್ವೇದ ಗ್ರಂಥವನ್ನು ತಂದು ಪರೀಕ್ಷಿಸಲು ಗ್ರಂಥದಲ್ಲಿಯೇ ಅಕ್ಷರ ದೋಷಗಳನ್ನು ಸರಿಪಡಿಸಬೇಕಾಯಿತು. ಇದು ನಾಲ್ಕು ತಾಸುಗಳವರೆಗೆ ನಡೆದು ಊರ ಬ್ರಾಹ್ಮಣರಿಗೆಲ್ಲರಿಗೂ ಪರಮಾಶ್ಚರ್ಯವಾಗಿ ಇವರು ಸಾಮಾನ್ಯ ಮನುಷ್ಯರಲ್ಲ. ಜಗದೋದ್ಧಾರಕ್ಕಾಗಿ ಆದಿಶಕ್ತಿಯೊಂದಿಗೆ ಬಂದ ತ್ರಿಮೂರ್ತಿಗಳ ಅವತಾರವೆಂದು ನಿರ್ಧರಿಸಿ, ತಮ್ಮ ಗರ್ವವನ್ನು ಬಿಟ್ಟು ಇವರಿಗೆ ವಂದಿಸಿದರು. ಆಗ ನಿವೃತ್ತಿನಾಥರು ಇದೆಲ್ಲವೂ ನಿಮ್ಮ ಚರಣ ಕೃಪೆಯ ಸಾಮರ್ಥ್ಯ ಎಂದರು. ಬ್ರಾಹ್ಮಣರ ಸಭೆಯು ವಿಸರ್ಜನೆಯಾದಾಗ ಒಬ್ಬ ಬ್ರಾಹ್ಮಣ ಗ್ರಹಸ್ಥನು ಇವರನ್ನು ಬಹಳ ನಮ್ರತೆಯಿಂದ ಪ್ರಾರ್ಥಿಸಿ ತಮ್ಮ ಮನೆಗೆ ಕರೆದುಕೊಂಡು ಹೋದನು. ಇವರ ಭಾವಯುಕ್ತ ಆದರದಿಂದ ಬಹಳ ದಿನಗಳವರೆಗೆ ಅಲ್ಲಿ ವಸತಿ ಮಾಡಿ ಪ್ರತಿನಿತ್ಯ ಸಾಯಂಕಾಲ ಪ್ರವಚನರೂಪದಲ್ಲಿ ಮತ್ತು ರಾತ್ರಿ ಕೀರ್ತನರೂಪದಲ್ಲಿ ತಮ್ಮ ಗುರುಗಳ ಆಜ್ಞೆಯಂತೆ ಜ್ಞಾನೇಶ್ವರರು ಕೃಷ್ಣನಾಮದಿಂದ ಭಾಗವತ ಧರ್ಮವನ್ನು ತಮ್ಮ ರಸಾಳ ಅಮೃತವಾಣಿಯಿಂದ ಪ್ರಚಾರಗೊಳಿಸಿದರು. ಇದರಿಂದ ಅನೇಕ ಶ್ರೋತೃಗಳು ಉದ್ಧಾರರಾದರು.

ಒಂದು ದಿನ ಆ ಬ್ರಾಹ್ಮಣನ ಮನೆಯಲ್ಲಿ ಅವರ ಪಿತೃಗಳ ಶ್ರಾದ್ಧ ಬಂದಿತು. ಆತನು ಪ್ರತಿವರ್ಷದಂತೆ ಊರ ಬ್ರಾಹ್ಮಣರಿಗೆ ಭೋಜನಕ್ಕೆ ಆಮಂತ್ರಣ ನೀಡಿ ಎಲ್ಲವನ್ನೂ ಸಿದ್ಧಗೊಳಿಸಿ ಮಧ್ಯಾಹ್ನ ಹೊತ್ತಿಗೆ ಬ್ರಾಹ್ಮಣರ ಆಗಮನವನ್ನು ಕಾಯುತ್ತಿರಲು ಅಷ್ಟರಲ್ಲಿ ಪೈಠಣದ ಇಬ್ಬರು ವೃದ್ಧ ಬ್ರಾಹ್ಮಣರಿಗೆ ಇನ್ನೂ ತಮ್ಮ ಕರ್ಮಠತನದ ಗರ್ವವು ಮುರಿಯದೇ ಸಂನ್ಯಾಸಿಯ ಮಕ್ಕಳು ಇದ್ದ ಮನೆಗೆ ಯಾರೂ ಹೋಗಕೂಡದೆಂದು ಎಲ್ಲರಿಗೂ ತಿಳಿಸಿ ಇವರ ಮನೆಗೆ ಯಾರೂ ಬಾರದಂತೆ ಮಾಡಿದರು. ಇತ್ತ ದಾರಿ ಕಾದು ಕಾದೂ ಯಾರೂ ಬಾರದ್ದಕ್ಕೆ ಬ್ರಾಹ್ಮಣನು ಖಿನ್ನನಾದದ್ದು ಜ್ಞಾನೇಶ್ವರರು ಕಂಡು ಏನೂ ಚಿಂತೆ ಮಾಡಲು ಕಾರಣವಿಲ್ಲ. ನಿಮ್ಮ ಎಲ್ಲ ಪೂರ್ವಜರನ್ನು ಇಲ್ಲಿಗೆ ಊಟಕ್ಕೆ ಬರಮಾಡಿಸುತ್ತೇನೆ. ಎಲ್ಲರಿಗೂ ಮಣೆಗಳನ್ನು ಹಾಕೆಂದು ಹೇಳಿ ಅವರವರ ಹೆಸರು ಹೇಳಿ ಅಕ್ಷತೆಯನ್ನು ಹಾಕಲು ಎಲ್ಲ ಪಿತೃಗಳು ಸಾಕ್ಷಾತ್ ಬಂದು ಮಣೆಯ ಮೇಲೆ ಆಸೀನರಾದರು. ಬ್ರಾಹ್ಮಣನು ಬಹಳ ಸಂತುಷ್ಟನಾಗಿ ಎಲ್ಲರಿಗೂ ಯಥೇಚ್ಛವಾಗಿ ಬಡಿಸಿದನು. ಪೂರ್ವಜರು ಪ್ರತ್ಯಕ್ಷ ಬಂದು ಭೋಜನ ಮಾಡುತ್ತಿರುವ

ದೃಶ್ಯವನ್ನು ಕಂಡು ಊರಿನ ಎಲ್ಲ ಬ್ರಾಹ್ಮಣರ ಸಂಪೂರ್ಣವಾಗಿ ಗರ್ವ ಹರಣವಾಗಿ ಪಶ್ಚಾತ್ತಾಪಪಟ್ಟು ಎಲ್ಲರೂ ಇವರಿಗೆ ಶರಣಾದರು. ಮರುದಿನ ಪುನಃ ಬ್ರಾಹ್ಮಣರ ಸಭೆಯನ್ನು ಕರೆದು ಎಲ್ಲರೂ ಇವರಿಗೆ ವಂದಿಸಿ ಬಹಳವಾಗಿ ಸನ್ಮಾನಿಸಿ ಶುದ್ಧಿ ಪತ್ರವನ್ನು ಗೌರವದಿಂದ ಕೊಟ್ಟರು. ಮುಕ್ತಕಂಠದಿಂದ ಇವರನ್ನು ಕೊಂಡಾಡಿದರು.

ಇದಾದ ಮೇಲೆ ಈ ನಾಲ್ವರು ಪುರಾತನ ಕ್ಷೇತ್ರವಾದ ನೇವಾಸಕ್ಕೆ ಪ್ರಯಾಣ ಬೆಳೆಸಿದರು. ಊರ ಜನರೆಲ್ಲರೂ ಇವರನ್ನು ಅತ್ಯಂತ ಗೌರವದಿಂದ ಬೀಳ್ಕೊಟ್ಟರು. ಮುಂದೆ ''ಆಳೆ'' ಎಂಬ ಗ್ರಾಮಕ್ಕೆ ಬಂದಾಗ ಕೋಣನ ಆಯುಷ್ಯವು ಮುಗಿದು ಅಲ್ಲಿ ಅದರ ದೇಹ ವಿಸರ್ಜನೆಯಾಗಿ ಅಲ್ಲಿಯೇ ಅದರ ಸಮಾಧಿಯನ್ನು ಮಾಡಿದರು. ಮುಂದೆ ನೇವಾಸಕ್ಕೆ ಆಗಮಿಸಿ ಅಲ್ಲಿ ಮೋಹಿನಿರಾಜ ಮಂದಿರದಲ್ಲಿ ವಾಸ್ತವ್ಯ ಮಾಡಿದರು. ಅಲ್ಲಿಂದಲೇ ಪ್ರಸಂಗಾನುಸಾರವಾಗಿ ಆಳಂದಿ, ಪ ಂಢರಪೂರ, ಪೈಠಣ ಇತ್ಯಾದಿ ಕ್ಷೇತ್ರಗಳಿಗೆ ಹೋಗಿಬರುವುದು ಮಾಡುತ್ತಿದ್ದರು.

ಒಂದು ದಿನ ಇವರು ನೇವಾಸದಲ್ಲಿ ಊರ ಹೊರಗೆ ಸಾಯಂಕಾಲ ವಿಹಾರಾರ್ಥವಾಗಿ ಬಂದು ಒಂದೆಡೆ ಆಸೀನರಾಗಿದ್ದರು. ಆಗ ಅಲ್ಲಿ ಸಹಗಮನಕ್ಕೆ ಹೊರಟ ಒಬ್ಬ ಸ್ತ್ರೀಯು ಈ ನಾಲ್ವರನ್ನು ಕಂಡು ಇವರಾರೋ ಮಹಾತ್ಮರಿರಬೇಕೆಂದು ತಿಳಿದು ಅಂತ್ಯಕಾಲದಲ್ಲಿ ಇವರ ಕೊನೆಯ ದರ್ಶನ ಪಡೆಯಬೇಕೆಂಬ ಅಪೇಕ್ಷೆಯಿಂದ ಅನನ್ಯ ಭಾವದೊಂದಿಗೆ ಜ್ಞಾನೇಶ್ವರರ ಚರಣಗಳಲ್ಲಿ ಮಸ್ತಕವನ್ನಿಟ್ಟಾಗ ಜ್ಞಾನೇಶ್ವರರು ಸಹಜವಾಗಿ ''ಕುಂಕುಮ ಸೌಭಾಗ್ಯವತಿ ಭವ'' ಎಂದು ಆಶೀರ್ವದಿಸಿದರು. ಆಗ ಆ ಸ್ತ್ರೀಯು ಇದರಿಂದ ಸಂತೋಷಪಡದೆ, ದುಃಖಿಸುವ ಕಾರಣ ಕೇಳಲು ನಿಜವು ತಿಳಿಯಿತು. ಆಗ ಸತ್ತ ಪತಿಯ ಹೆಸರನ್ನು ಕೇಳಲು ಸಚ್ಚಿದಾನಂದಬಾಬಾ ಎಂದು ಹೇಳಿದಾಗ ಜ್ಞಾನೇಶ್ವರರು ವಿನೋದವಾಗಿ ಸತ್ ಚಿತ್ ಆನಂದನಿಗೆ ಮರಣ ಎಲ್ಲಿಂದ ಬರಬೇಕು? ಎಂದು ಹೇಳಿ ಆ ಶವಕ್ಕೆ ಕೃಪಾದೃಷ್ಟಿಯಿಂದ ಕೈಯಾಡಿಸಿ ''ಸಚ್ಚಿದಾನಂದಬಾಬಾ ಏಳು'' ಎಂದಾಕ್ಷಣವೇ ನಿದ್ದೆಯಿಂದ ಎಚ್ಚರಾದವರಂತೆ ಸಚ್ಚಿದಾನಂದಬಾಬಾ ಕುಲಕರ್ಣಿ ಇವರು ಎದ್ದು ಕುಳಿತು ಎದುರಿಗಿರುವ ಮಹಾತ್ಮರನ್ನು ಕಂಡು ತನಗೆ ಪುನರ್ಜನ್ಮ ಪ್ರಾಪ್ತವಾಗಿದ್ದಕ್ಕೆ ಈಗ ತನ್ನ ದೇಹ ಸಾರ್ಥಕಕ್ಕಾಗಿ ಇವರಿಗೆ ಶರಣಾಗಿ ಶಿಷ್ಯನಾದನು. ಮುಂದೆ ಈತನೇ ಜ್ಞಾನೇಶ್ವರರು ಹೇಳಿದ ಜ್ಞಾನೇಶ್ವರೀ ಗ್ರಂಥದ ಲೇಖಕನಾದನು.

ಆಳಂದಿಯಲ್ಲಿ ಈ ನಾಲ್ವರು ತಮ್ಮ ಪರ್ಣಕುಟೀರದಲ್ಲಿ ಇದ್ದಾಗ ದೀಪಾವಳಿ ನಿಮಿತ್ಯ ನಿವೃತ್ತಿನಾಥರು ಮುಕ್ತಾಬಾಯಿಗೆ ಮಂಡಿಗೆ ಮಾಡಲು ತಿಳಿಸಿದರು. ಅದಕ್ಕಾಗಿ ಮುಕ್ತಾಬಾಯಿಯು ಹರವಿ ತರಲು ಕುಂಬಾರನ ಮನೆಗೆ ಹೋಗಲು ಆಗ ಅಲ್ಲಿ ಬಂದಿರುವ ಆಳಂದಿಯ ಸಾಧು ದ್ವೇಷಿಯಾದ ಕರ್ಮಠನಾದ ವಿಸೋಬಾ ಚಾಟಿ ಎಂಬ ಬ್ರಾಹ್ಮಣನು ಮುಕ್ತಾಬಾಯಿಗೆ ಸಂನ್ಯಾಸಿ ಮಕ್ಕಳೆಂದು ಅವಾಚ್ಯ ಶಬ್ದಗಳಿಂದ ಬೈದು, ಹೊಡೆದು, ಕುಂಬಾರದಿಂದ ಹರವಿಯನ್ನು ಕೊಡದಂತೆ ಮಾಡಿದನು. ಮುಕ್ತಾಬಾಯಿಯು ಖೇದಪಟ್ಟು ಆದ ವಿಷಯ ತಿಳಿಸಿದಳು. ಆಗ ಜ್ಞಾನೇಶ್ವರು ದುಃಖಿಸಬೇಡ ಮಂಡಿಗೆಗೆ ಎಲ್ಲವನ್ನೂ ಸಿದ್ಧಗೊಳಿಸು ಎಂದು ಹೇಳಿ ಮಂಡೆಗಾಲೂರಿ ತಮ್ಮ ಯೋಗ ಸಾಮರ್ಥ್ಯದಿಂದ ತಮ್ಮ ಶರೀರದಲ್ಲಿಯೇ ಅಗ್ನಿಯನ್ನು ಪ್ರಜ್ವಲಿಸಿದರು. ಆಗ ಮುಕ್ತಾಬಾಯಿಯು ಚೆನ್ನಾಗಿ ಕಾದಿರುವ ಬೆನ್ನಿನ ಮೇಲೆ ಮಂಡಿಗೆಯನ್ನು ಬೇಯಿಸಿದಳು. ಈ ದೃಶ್ಯವನ್ನು ಪ್ರತ್ಯಕ್ಷವಾಗಿ ಕದ್ದು ನೋಡಿದ ವಿಸೋಬಾನಿಗೆ ತನ್ನ ಎಲ್ಲ ಗರ್ವ ಅಹಂಕಾರಗಳು ಸಂಪೂರ್ಣವಾಗಿ ನಷ್ಟಗೊಂಡು ಪಶ್ಚಾತ್ತಾಪಪಟ್ಟು ಇವರನ್ನು ಪೂಜ್ಯ ಗುರುಭಾವದಿಂದ ಊಟಕ್ಕೆ ಕುಳಿತಾಗ ಓಡೋಡಿ ಬಂದು ಅವರ ತಾಟಿನಲ್ಲಿಯೇ ಪ್ರಸಾದವನ್ನುಸೇವಿಸಲು, ಆಗ ಜ್ಞಾನೇಶ್ವರರು ''ಹೇ ಖೇಚರ ಸರಿ ಹಿಂದೆ'' ಎಂದು ಹೇಳಿದ್ದನ್ನೇ ಗುರೂಪದೇಶವೆಂದು ತಿಳಿದು ತಾನು ತನ್ನ ಎಲ್ಲ ದುರ್ಗುಣಗಳಿಂದ ಹಿಂದಕ್ಕೆ ಸರಿದು ಮುಂದೆ ಇವರ ಕೃಪೆಯಿಂದಲೇ ಪೂರ್ಣವಾದ ಆತ್ಮಜ್ಞಾನವನ್ನು ಪ್ರಾಪ್ತಿಮಾಡಿಕೊಂಡು ಕೊನೆಗೆ ಭಕ್ತಶ್ರೇಷ್ಠ ಶ್ರೀ ನಾಮದೇವ ಮಹಾರಾಜರವರಿಗೆ ವಿಸೋಬಾ ಖೇಚರನಾಗಿ ಗುರುವಾದನು.

ಪುಣತುಂಬಾ ಗ್ರಾಮದಲ್ಲಿ ಮುಧೋಪಂತನ ಮಗನಾದ ಚಾಂಗದೇವನು ಬಾಲ್ಯದಲ್ಲಿಯೇ ಸಕಲ ಶಾಸ್ತ್ರ ಸಂಪನ್ನನಾಗಿ ಹದಿನಾಲ್ಕು ವಿದ್ಯೆಗಳನ್ನೂ, ಅರವತ್ನಾಲ್ಕು ಕಲೆಗಳನ್ನೂ ಕಲಿತಿದ್ದನು. ಅಷ್ಟಾಂಗ ಯೋಗಗಳನ್ನು ಸಾಧಿಸಿಕೊಂಡು ಅಷ್ಟ

ಮಹಾಸಿದ್ಧಿಗಳನ್ನು ಪ್ರಾಪ್ತ ಮಾಡಿಕೊಂಡಿದ್ದನು. ಈತನ ಯೋಗ್ಯತೆ ಕಂಡು ಅನೇಕ ಭಾಗಗಳಲ್ಲಿ ಇವನ ಅನೇಕ ಶಿಷ್ಯರಿದ್ದರು. ಇವನು ತನ್ನ ಯೋಗಬಲದಿಂದ ಹದಿನಾಲ್ಕು ನೂರು ವರ್ಷ ಬಾಳಿದ್ದನು. ಈತನು ಅನುಷ್ಠಾನಕ್ಕೆ ಕುಳಿತು ಕಣ್ಣು ತೆರೆದಾಗ ಎದುರಿಗಿರುವ ಹೆಣಗಳು ಸಜೀವವಾಗುತ್ತಿದ್ದವು. ಒಂದ ದಿನ ನಿವೃತ್ತಿ ನಾಥ, ಜ್ಞಾನೇಶ್ವರ, ಸೋಪಾನ, ಮುಕ್ತಾಬಾಯಿಯವರು ಈ ಪುಣತುಂಬಾ ಗ್ರಾಮಕ್ಕೆ ಬರಲು ಅಲ್ಲಿ ಹೆಣಗಳ ರಾಶಿಯನ್ನು ಕಂಡು, ಶ್ರೀಗುರು ನಿವೃತ್ತಿನಾಥರ ಆಜ್ಞೆ ಪಡೆದು ಮುಕ್ತಾಬಾಯಿಯು ಎಲ್ಲ ಹೆಣಗಳನ್ನು ಜೀವಂತ ಮಾಡಿ ಕಳಿಸಿ ಅಲ್ಲಿರದೇ ಎಲ್ಲರೂ ಮುಂದೆ ಸಾಗಿದರು. ಚಾಂಗದೇವನು ಅನುಷ್ಠಾನದಿಂದ ಎದ್ದು ಕಣ್ಣು ತೆರೆದು ನೋಡಲು ತನ್ನ ಮುಂದೆ ಒಂದು ಹೆಣವೂ ಇದ್ದಿಲ್ಲ. ಚಕಿತನಾಗಿ ವಿಚಾರಿಸಲು ಯಾರೋ ನಾಲ್ವರು ಮಹಾತ್ಮರು ಇಲ್ಲಿಗೆ ಆಗಮಿಸಿ ಅವರಲ್ಲಿ ಒಬ್ಬ ಚಿಕ್ಕ ಹುಡುಗಿಯು ಸಹಜವಾಗಿ ಎಲ್ಲ ಹೆಣಗಳನ್ನು ಎಬ್ಬಿಸಿ ಕಳಿಸಿದಳು ಎಂದು ಹೇಳಿದಾಗ ಚಾಂಗದೇವನು ಬೆಚ್ಚಿಬಿದ್ದನು. ಈಗಾಗಲೇ ಕೋಣನ ಮುಖದಿಂದ ವೇದ ನುಡಿಸಿದ್ದನ್ನು, ಪಿತೃಗಳಿಗೆ ಪ್ರತ್ಯಕ್ಷವಾಗಿ ಕರೆಯಿಸಿದ್ದನ್ನು ಕರ್ಣೋಪಕರ್ಣವಾಗಿ ಕೇಳಿದ್ದನು. ಈಗ ಪ್ರತ್ಯಕ್ಷವಾಗಿ ನಡೆದ ಘಟನೆಯಿಂದ ಅವರೇ ಈ ನಾಲ್ವರು ಎಂದು ನಿಶ್ಚಯಿಸಿ ಅವರನ್ನು ಕಾಣಲು ತವಕಪಟ್ಟನು. ಆದರೆ ತಾನೊಬ್ಬ ಮಹಾಯೋಗಿ ಎಂಬ ಗರ್ವದಿಂದ ಅವರ ದರ್ಶನಕ್ಕೆ ಹೋಗುವ ಮೊದಲು ಒಂದು ಪತ್ರ ಬರೆದು ತಿಳಿಸೋಣ ಎಂದು ಕಾಗದವನ್ನು ಕೈಯಲ್ಲಿ ಹಿಡಿದು ಆರಂಭಕ್ಕೆ ಚಿರಂಜೀವಿ ಎನ್ನಬೇಕೆ? ನನಗಿಂತಲೂ ಮಹತ್ವ ಉಳ್ಳವರೂ, ಶ್ರೀಯುತರೆನ್ನಬೇಕೆ? ನನಗಿಂತಲೂ ತೀರ ಚಿಕ್ಕವರು, ಹೀಗೆ ವಿಚಾರಿಸಿ ಕೊನೆಗೆ ನೋಡೋಣವೆಂದು ಬರಿಯ ಕಾಗದವನ್ನು ತನ್ನ ಶಿಷ್ಯರಿಂದ ಆಳಂದಿಗೆ ಕಳಿಸಿಕೊಟ್ಟನು. ಶಿಷ್ಯರು ಆಳಂದಿಗೆ ಬಂದು ನಿವೃತ್ತಿನಾಥರಿಗೆ ತಾವು ತಂದ ಪತ್ರವನ್ನು ಕೊಟ್ಟರು. ತೆಗೆದು ನೋಡಲು ಏನೂ ಇರದ ಬರಿಯ ಕಾಗದವನ್ನು ನೋಡಿ, ಮುಕ್ತಾಬಾಯಿಯು ಚಾಂಗದೇವನು ಹದಿನಾಲ್ಕು ನೂರು ವರ್ಷ ಬಾಳಿದರೂ ಇನ್ನೂ (ಕೋರಡಾ) ಶುಷ್ಕನಾಗಿದ್ದಾನಲ್ಲ! ಎಂದಳು. ನಿವೃತ್ತಿನಾಥರು ಚಾಂಗದೇವನು ಅರವತ್ನಾಲ್ಕು ಕಲೆಗಳನ್ನು ಅರಿತಿರುವನು. ಆದರೆ ಅರವತ್ತೈದನೆಯ ಬ್ರಹ್ಮವಿದ್ಯೆಯ ಅರಿವು ಇರುವುದಿಲ್ಲ. ಕಾರಣ ಜ್ಞಾನದೇವಾ ನೀನು ಈ ಕಾಗದದಲ್ಲಿ ಬ್ರಹ್ಮ ವಿದ್ಯೆಯನ್ನು ಕುರಿತು ಪತ್ರವನ್ನು ಬರೆದು ಕಳಿಸು ಎಂದು ಆಜ್ಞಾಪಿಸಿದರು. ಜ್ಞಾನೇಶ್ವರರು ಅರವತ್ತೈದು ಓವೀಗಳಲ್ಲಿ ಬ್ರಹ್ಮವಿದ್ಯೆಯನ್ನು ಕುರಿತು ಪತ್ರವನ್ನು ಬರೆದು ಕಳಿಸಿದರು. ಚಾಂಗದೇವನು ಇದನ್ನು ಎಷ್ಟು ಓದಿದರೂ ಅರ್ಥವಾಗದ್ದಕ್ಕೆ ಆಶ್ಚರ್ಯಪಟ್ಟು ಖೇದಗೊಂಡನು. ಇದೇ ಚಾಂಗದೇವ ಪಾಸಷ್ಠಿ ಗ್ರಂಥವಾಯಿತು. ಈಗ ಇವರನ್ನು ಪ್ರತ್ಯಕ್ಷವಾಗಿ ಕಾಣಬೇಕೆಂದು ಚಾಂಗದೇವನು ತನ್ನ ಯೋಗಬಲದಿಂದ ಹುಲಿಯ ಮೇಲೆ ಆರೋಹಣನಾಗಿ ಸರ್ಪವನ್ನು ಚಾವುಟಿಯನ್ನಾಗಿ ಮಾಡಿ ಅನೇಕ ಶಿಷ್ಯರೊಂದಿಗೆ ಆಕಾಶಮಾರ್ಗವಾಗಿ ಆಳಂದಿಗೆ ಬರುತ್ತಿರುವುದನ್ನು ಈ ನಾಲ್ವರು ಮಹಾತ್ಮರು ಒಂದು ಗೋಡೆಯ ಮೇಲೆ ಕುಳಿತುಕೊಂಡಾಗ ನೋಡಿದರು. ಆಗ ಜ್ಞಾನೇಶ್ವರರು ಚಾಂಗದೇವನಿಗೆ ಸ್ವಾಗತಿಸಲು ನಿರ್ಜೀವವಾದ ಗೋಡೆಗೆ ಆಕಾಶಮಾರ್ಗವಾಗಿ ನಡೆಯಲು ಆಜ್ಞಾಪಿಸಿದರು. ನಿರ್ಜೀವ ಗೋಡೆಯ ಮೇಲೆ ಎದುರಿಗೆ ಬರುತ್ತಿರುವುದನ್ನು ಕಂಡು ಚಾಂಗದೇವನು ತನ್ನ ಗರ್ವ ಅಹಂಕಾರಗಳನ್ನು ಸಂಪೂರ್ಣವಾಗಿ ತ್ಯಜಿಸಿ, ಕೆಳಗಿಳಿದು ಸಾಷ್ಟಾಂಗ ನಮಸ್ಕಾರ ಮಾಡಿ ತನಗೆ ಉದ್ಧರಿಸಬೇಕೆಂದು ಪ್ರಾರ್ಥಿಸಿದನು. ಮುಂದೆ ಅನನ್ಯ ಶಿಷ್ಯನಾದ ಚಾಂಗದೇವನಿಗೆ ಮುಕ್ತಾಬಾಯಿಯು ಆತ್ಮಜ್ಞಾನವನ್ನು ನೀಡಿ ಉದ್ಧರಿಸಿದಳು.

ಜ್ಞಾನೇಶ್ವರ ಮಹಾರಾಜರು ತಮ್ಮ ಗುರುಗಳಾದ ನಿವೃತ್ತಿನಾಥರ ಆಜ್ಞೆ ಮೇರೆಗೆ ಜಗತ್ಕಲ್ಯಾಣಕ್ಕಾಗಿ ಶ್ರೀಮದ್ಭಗವದ್ಗೀತೆಗೆ ಮರಾಠಿ ಭಾಷೆಯಲ್ಲಿ ಅಮೃತ ತುಲ್ಯ ನವರಸಭರಿತವಾದ ಒಂಬತ್ತು ಸಾವಿರ ಮೂವತ್ತೊರು ಓವೀಗಳಲ್ಲಿ ಅರ್ಥವನ್ನು ಪ್ರಕಟಿಸಿದರು.

ಗೀತಾ ಅಲಂಕಾರ ನಾಮ ಜ್ಞಾನೇಶ್ವರೀ ।
ಬ್ರಹ್ಮಾನಂದ ಲಹರೀ ಪ್ರಗಟ ಕೇಲೀ ॥

ಈ ಜ್ಞಾನೇಶ್ವರೀ ಗ್ರಂಥವನ್ನು ಶಾಲಿವಾಹನ ಶಕೆ ಹನ್ನೆರಡುನೂರಾ ಹನ್ನೆರಡರಲ್ಲಿ ನೇವಾಸದ ಶಂಕರ ಮಂದಿರದಲ್ಲಿ ನಿರ್ಮಾಣ ಮಾಡಿದರು. ನೇವಾಸದ ಸಚ್ಚಿದಾನಂದ ಬಾಬಾ ಕುಲಕರ್ಣಿ ಇವರು ಈ ಗ್ರಂಥದ ಲೇಖಕರಾದರು.

ಶಕೆ ಬಾರಾಶತೇ ಬಾರೋತ್ತರೆ । ತೈ ಟೀಕಾ ಕೇಲಿ ಜ್ಞಾನೇಶ್ವರೇ ।
ಸಚ್ಚಿದಾನಂದಬಾಬಾ ಆದರೇ । ಲೇಖಕು ಜಾಹಲಾ ॥

ಈ ಜ್ಞಾನೇಶ್ವರೀ ಗ್ರಂಥದ ಮಹಿಮೆಯನ್ನು ಎಷ್ಟು ಕೊಂಡಾಡಿದರೂ ಕಡಿಮೆಯೆ. ಪಾಮರ, ವಿಷಯೀ, ಮುಮುಕ್ಷು, ಮುಕ್ತರು ಮೊದಲು ಮಾಡಿ ಎಲ್ಲ ಭೂಮಿಕೆಯ ವ್ಯಕ್ತಿಗಳಿಗೂ ಉಪಯೋಗ ಬೀಳುವ ಅತ್ಯಂತ ಶ್ರೇಷ್ಠ ಮಾರ್ಗದರ್ಶಕ ಗ್ರಂಥವಾಗಿದೆ. ವಿಷಯಗಳು ಸಂಪೂರ್ಣವಾಗಿ ಲಕ್ಷಕ್ಕೆ ಬರುವುದಕ್ಕಾಗಿ ಒಂದರ ಮೇಲೊಂದು ಹೀಗೆ ದೃಷ್ಟಾಂತಗಳ ಸುರಿಮಳೆಯನ್ನೇ ಸುರಿದಿರುವುದು. ಭಾವಭಕ್ತಿಯಿಂದ ಈ ಗ್ರಂಥದ ಪಾರಾಯಣ ಮಾಡಿದವರಿಗೆ ಹರಿಕೃಪೆಯಾಗುವುದು. ಅರ್ಥದ ಅನುಭವದಿಂದ ಆತ್ಮಕಲ್ಯಾಣವಾಗುವುದು. ಅತ್ಯಂತ ಶ್ರೇಷ್ಠವಾದ ಈ ಗ್ರಂಥದ ಒಂದು ಓವೀಯಾದರೂ ಅನುಭವಿಸಿರಿ ಎಂದು ಶ್ರೀಸಂತ ಏಕನಾಥ ಹಾಗೂ ನಾಮದೇವ ಮಹಾರಾಜರು ಹೇಳುವರು.

ಭಾವ ಧರೂನಿಯಾ ವಾಚೇ ಜ್ಞಾನೇಶ್ವರೀ । ಕೃಪಾಕರೀ ಹರೀ ತಯಾವರಿ ॥ಏ॥
ನಾಮಾ ಮ್ಹಣೇ ಗ್ರಂಥ ಶ್ರೇಷ್ಠ ಜ್ಞಾನದೇವಿ । ಏಕ ತರೀ ಓವೀ ಅನುಭವಾವಿ ॥ನಾ॥

ತದನಂತರ ಜ್ಞಾನೇಶ್ವರ ಮಹಾರಾಜರು ಅಮೃತಾನುಭವ, ಯೋಗವಾಸಿಷ್ಠ, ಹರಿಪಾಠ, ಸ್ವಾತ್ಮಪತ್ರ ಇತ್ಯಾದಿ ಗ್ರಂಥಗಳನ್ನು ಬರೆದರು ಮತ್ತು ಭಕ್ತಿಜ್ಞಾನವೈರಾಗ್ಯರೂಪ ಅನೇಕ ಅಭಂಗಗಳನ್ನು ತಮ್ಮ ಅಮೃತವಾಣಿಯಿಂದ ರಸಾಳವಾಗಿ ರಚಿಸಿದರು. ಭಕ್ತಶ್ರೇಷ್ಠರಾದ ನಾಮದೇವ ಮಹಾರಾಜರ ಜೊತೆಯಲ್ಲಿ ಭಾರತದ ಪುಣ್ಯಕ್ಷೇತ್ರಗಳ ತೀರ್ಥಯಾತ್ರಾ ನಿಮಿತ್ತವಾಗಿ ಅಲ್ಲಲ್ಲಿ ಅನೇಕ ಚಮತ್ಕಾರಗಳೊಂದಿಗೆ ಜಗದೋದ್ಧಾರ ಕಾರ್ಯವನ್ನು ಮಾಡಿದರು. ಜ್ಞಾನೇಶ್ವರ ಮಹಾರಾಜರ ಆಯುಷ್ಯ ಮರ್ಯಾದೆಯು ಕೇವಲ ಹದಿನಾರು ವರ್ಷ ಮಾತ್ರ ಇತ್ತು. ಇವರು ಕಾಲವನ್ನು ಜಯಿಸಿರುವುದರಿಂದ ಅಣ್ಣಾ, ತಮ್ಮ, ತಂಗಿಯವರ ಅಪೇಕ್ಷೆ ಮೇರೆಗೆ ಆರು ವರ್ಷಗಳ ಕಾಲ ಹೆಚ್ಚಿಗೆ ಇದ್ದು, ಭಜನೆ, ಪ್ರವಚನ, ಕೀರ್ತನೆಗಳಿಂದ ಜಗತ್ತಿಗೆ ಬೋಧ ಮಾಡುತ್ತ ಜಡಜೀವಿಗಳಿಗೆ ಉದ್ಧರಿಸಿದರು. ವಿಶೇಷವಾಗಿ ಶ್ರೀಕ್ಷೇತ್ರ ಪಂಢರಪೂರದ ಆಷಾಢ ಕಾರ್ತಿಕವಾರಿಗಳನ್ನು ಪಾದಯಾತ್ರೆಯೊಂದಿಗೆ ಮಾಡುತ್ತ ಪಂಢರೀ ಸಾಂಪ್ರದಾಯವನ್ನು ಉಜ್ವಲಗೊಳಿಸಿದರು. ಇವರು ಜ್ಞಾನಿಗಳಲ್ಲಿ ಶ್ರೇಷ್ಠ ಜ್ಞಾನಿಗಳು, ಯೋಗಿಗಳಲ್ಲಿ ಯೋಗಾಚಾರ್ಯರು, ಭಕ್ತಿ ವೈರಾಗ್ಯಗಳಲ್ಲಿಯೂ ಅಗ್ರಗಣ್ಯರು.

ಉದರೇ ಉದರೇ ಕಾವೂ ತುರ್ಝೋ ಸೋನ್ಯಾನೇ ಮಡೀನ ಪಾವೂ ।
ಪಾಹುಣೇ ಪಂಢರೀರಾವೋ ಘರಾ ಕೈ ಯೇತೀ ॥

ಎಂದು ಶ್ರೀ ಪಾಂಡುರಂಗನ ಬಗ್ಗೆ ಕಾಗೆಗೂ ಕೇಳುವುದೆಂದರೆ ಎಂತಹ ಭಾವಿಕತನವಿರಬಹುದು !

ತುರ್ಝೀ ಆಣ ವಾಹೀನ ಗಾ ದೇವರಾಯಾ ।
ಬಹೂ ಆವಡಸಿ ಜೀವಾ ಪಾಸೂನಿಯಾ ॥

ಎಂದು ಪಾಂಡುರಂಗನಲ್ಲಿರುವ ಭಾವಭಕ್ತಿಯನ್ನು ನೋಡಿದರೆ ಎಂತಹ ಶ್ರೇಷ್ಠ ಭಕ್ತರಿರಬಹುದು ! ಕೇವಲ ಹದಿನೈದನೆಯ ವಯಸ್ಸಿನಲ್ಲಿಯೇ ಅಪ್ರತಿಮ, ಅತ್ಯದ್ಭುತ ಜ್ಞಾನೇಶ್ವರೀ ಗ್ರಂಥದ ರಚನೆಯಿಂದ ಇವರ ಅಗಾಧವಾದ ಜ್ಞಾನವು ಗೋಚರಿಸುವುದು. ಅವರ ಸಜೀವ ಸಮಾಧಿಯೇ ಅವರ ಯೋಗಸಾಮರ್ಥ್ಯವನ್ನು ತೋರಿಸುವುದು. ಈ ಪ್ರಕಾರವಾಗಿ ಭಕ್ತಿಜ್ಞಾನ ವೈರಾಗ್ಯದೊಂದಿಗೆ ಯೋಗದ ಮೂರ್ತಿಯೇ ಆಗಿದ್ದರೂ, ಜಗತ್ಕಲ್ಯಾಣ ದೃಷ್ಟಿಯಿಂದ ತಾವು ಸ್ವತಃ ಸಾಮಾನ್ಯ ವಾರಕರೀಯಂತೆ ಹೆಗಲ ಮೇಲೆ ಪತಾಕವನ್ನು ಧರಿಸಿ ಪಂಢರಪೂರಕ್ಕೆ ನಡೆದು ಬರುತ್ತಿದ್ದರು.

ಮಾರ್ಝೇ ಮನೀಚೇ ಆವಡೀ । ಪಂಢರಪೂರಾ ನೇಯೀನ ಗುಡೀ ॥
ಪಾಂಡುರಂಗೀ ಮನ ರಂಗಲೇ । ಗೋವಿಂದಾಚೇ ಗುಣೀ ವೇಧಲೇ ॥

ಈ ರೀತಿಯಲ್ಲಿ ತಮ್ಮ ಅವತಾರ ಕಾರ್ಯವನ್ನು ತೃಪ್ತಿಕರವಾಗಿ ಪೂರ್ಣಗೊಳಿಸಿ ತಮ್ಮ ಇಪ್ಪತ್ತೆರಡನೆಯ ವಯಸ್ಸಿನಲ್ಲಿ ಶ್ರೀಶಾಲಿವಾಹನಶಕೆ ೧೨೧೮ ನೆಯ ದುರ್ಮುಖಿನಾಮ ಸಂವತ್ಸರದ ಕಾರ್ತೀಕ ಬ॥೧೩ ರಂದು ಆಳಂದಿ ಪುಣ್ಯಕ್ಷೇತ್ರದಲ್ಲಿ ಶ್ರೀಪಾಂಡುರಂಗನ ಆಜ್ಞೆಯನ್ನು ಪಡೆದು ಸಮಾಧಿ ಉತ್ಸವವನ್ನು ನೆರವೇರಿಸಿ ಸಜೀವ ಸಮಾಧಿಯನ್ನು ತೆಗೆದುಕೊಂಡರು. ಸಮಾಧಿ ಕಾಲಕ್ಕೆ ಶ್ರೀ ಪಾಂಡುರಂಗ ಸಮೇತ ಎಲ್ಲ ದೇವತೆಗಳು, ಋಷಿಗಳು, ಮುನಿಗಳು, ಅನೇಕ ಸಾಧು ಸಂತ ಮಹಾತ್ಮರು ಕೂಡಿ ಸಮಾಧಿ ಉತ್ಸವವನ್ನು ಬಹು ವಿಜೃಂಭಣೆಯಿಂದ ನೆರವೇರಿಸಿದರು.

ಸಮಾಧಿ ಸಮಯೀ ಸಕಳ ಸಂತ ಸಮುದಾಯ । ಘೇವುನಿ ಸುರವರ ಆಲೇ ಶ್ರೀ ಪಂಢರಿರಾಯ ॥
ದ್ವಾರೀ ಅಜಾನವೃಕ್ಷ ಸುವರ್ಣ ಪಿಂಪಳ ಅಸುಮಾಯ । ಜಾಣೋನಿ ಮಹಿಮಾ ನೀಳಾ ಚರಣಾ ತಳೀ ರಾಹೇ ॥

ಅದೇ ವರ್ಷ ಮಾರ್ಗಶೀರ್ಷ ಬಹುಳ ತ್ರಯೋದಶಿರಂದು ಸೋಪಾನದೇವ ಅವರು ಸಾಸವಾಡದಲ್ಲಿ ಸಮಾಧಿಯನ್ನು ಸ್ವೀಕರಿಸಿದರು. ಶಕೆ ೧೨೧೯ ನೆಯ ವೈಶಾಖ ಬ॥ದಶಮಿ ದಿನ ಏದಲಾಬಾದನಲ್ಲಿ ಮುಕ್ತಾಬಾಯಿಯು ಅದೃಶ್ಯಳಾದಳು. ಮುಂದೆ ಜೇಷ್ಠ ಬಹುಳ ದ್ವಾದಶಿ ದಿನದಂದು ತ್ರ್ಯಂಬಕೇಶ್ವರದಲ್ಲಿ ನಿವೃತ್ತಿನಾಥ ಮಹಾರಾಜರು ಸಮಾಧಿಸ್ಥರಾದರು.

ಸಂತ ಶ್ರೇಷ್ಠ ಶ್ರೀಜ್ಞಾನೇಶ್ವರ ಮಹಾರಾಜರು ಜಗದೋದ್ಧಾರಕ್ಕಾಗಿ ಮಾತೃವಾತ್ಸಲ್ಯದಂತೆ ಅತ್ಯಂತ ಕರುಣಾಮಯ ದೃಷ್ಟಿಯಿಂದ ಜಡ ಜೀವಿಗಳಿಗೆ ನಾನಾ ರೀತಿಯಲ್ಲಿ ಮಾರ್ಗದರ್ಶನ ನೀಡಿ ಎಲ್ಲರಿಗೂ ಅಗಾಧವಾದ ಪ್ರೇಮಕ್ಕೆ ಪಾತ್ರರಾಗಿರುವರು. ಇವರನ್ನು ಭಕ್ತ ಕೋಟಿಯು ತುಂಬಿದ ಹೃದಯದಿಂದ ಮಾಉಲೀ, ಮಾಉಲೀ ಎಂದೇ ಕರೆಯುವರು. ಇದಕ್ಕೆ ವೇದಶಾಸ್ತ್ರಗಳೂ ಸಾಕ್ಷಿಯಾಗಿವೆ ಎಂದು ಭಕ್ತರು ಹೇಳುವರು.

ವೇದ ಶಾಸ್ತ್ರ ದೇತಿ ಗ್ವಾಹೀ ।
ಮ್ಹಣತೀ ಜ್ಞಾನಾಬಾಈ ಆಯೀ ॥

ಇವರು ಸಮಾಧಿಸ್ಥರಾಗಿ ಏಳುನೂರು ವರ್ಷಗಳು ಗತಿಸಿದ್ದರೂ ಗ್ರಂಥಗಳ ರೂಪದಿಂದ ನಮ್ಮ ಜೊತೆಯಲ್ಲಿಯೇ ಇದ್ದಾರೆಂದು ಭಾಸವಾಗುವುದು. ಇವರು ಸಮಾಧಿಸ್ಥರಾದ ಆಳಂದಿಯು ಪುಣ್ಯಕ್ಷೇತ್ರಗಳಲ್ಲಿ ಅಗ್ರಸ್ಥಾನವನ್ನು ಪಡೆದಿರುವುದು. ಇಲ್ಲಿರುವ ಇಂದ್ರಾಯಣಿ ತೀರ್ಥವು ಎಲ್ಲ ತೀರ್ಥಗಳ ಸಮಾವೇಶದಿಂದ ಅತ್ಯಂತ ಪಾವನ ತೀರ್ಥವಾಗಿರುವುದು. ಆಷಾಢವಾರಿಗಾಗಿ ಆಳಂದಿಯಿಂದ ಪಂಢರಪೂರಕ್ಕೆ ಶ್ರೀಜ್ಞಾನೇಶ್ವರ ಮಹಾರಾಜರ ಪಾಲಕಿ ಸೋಹಾಳದಲ್ಲಿ ಲಕ್ಷೋಪಲಕ್ಷ ಭಕ್ತ ಭಾವಿಕರು ಪಾದಚಾರಿಗಳಾಗಿ ಇಂದಿಗೂ ಭಜನೆಯೊಂದಿಗೆ ಬರುವ ಬೃಹತ್ ಪ್ರಮಾಣದ ಆಕರ್ಷಕ ಸುಂದರ ದೃಶ್ಯವು ಮೂರುಲೋಕಗಳಲ್ಲಿಯೂ ನೋಡಲು ಸಿಗುವುದಿಲ್ಲ. ಇವರ ಕೀರ್ತಿರೂಪ ಧ್ವಜವು ಮೂರುಲೋಕಗಳಲ್ಲಿಯೂ ಸ್ಥಾಪಿತಗೊಂಡಿದೆ.

ಉಭಾರಿಲಾ ಧ್ವಜ ತಿಹೀ ಲೋಕಾವರೀ ।
ಐಸೀ ಚರಾಚರೀ ಕೀರ್ತಿ ಜ್ಯಾಚೀ ॥

ಇವರ ನಾಮವನ್ನು ಸ್ಮರಿಸಿದರೆ ಸಾಕು, ಶ್ರೀಪಾಂಡುರಂಗನು ಜ್ಞಾನವನ್ನು ದಯಪಾಲಿಸುವನು ಮತ್ತು ಇವರ ಗ್ರಂಥವನ್ನು ಓದಿದರೆ ನಿಶ್ಚಿತವಾಗಿ ಜ್ಞಾನ ದೊರಕುವುದು. ಹೀಗೆಂದು ಶ್ರೀಸಂತ ಏಕನಾಥ ಮಹಾರಾಜರು ಹೇಳುವರು.

ಜ್ಞಾನದೇವ ಜ್ಞಾನದೇವ ಮ್ಹಣತಾ ಜ್ಞಾನದೇವ ದೇತೋ ।
ವಾಸುದೇವ ಹೋತೋ ಅಖಂಡ ವದನೀ ವದೇ ತೋ ॥
ನಮೋ ಜ್ಞಾನೇಶ್ವರಾ ನಿಷ್ಕಲಂಕಾ । ಜಯಾಚೀ ಗೀತೇಚೀ ವಾಚಿತಾ ಟೀಕಾ ।
ಜ್ಞಾನ ಹೋಯ ಲೋಕಾ । ಅತಿ ಭಾವಿಕಾ ಗ್ರಂಥಾರ್ಥಿಯಾ ॥

## ಶ್ರೀ ಚೈತನ್ಯ ಸದ್ಗುರು ವಾಸಕರ ಮಹಾರಾಜರ ಸಂಕ್ಷಿಪ್ತ ಪರಿಚಯ

ಪೂರ್ವದಲ್ಲಿ ಪರಬ್ರಹ್ಮ ಮೂರ್ತಿಯಾದ ಮಹಾವಿಷ್ಣು ಜಗತ್ಕಲ್ಯಾಣ ದೃಷ್ಟಿಯಿಂದ ಬ್ರಹ್ಮ ದೇವರಿಗೆ ಚತುಃಶ್ಲೋಕ ಭಾಗವತವನ್ನು ಹಂಸರೂಪದಿಂದ ಉಪದೇಶಿಸಿದನು. ಅದೇ ಬೋಧವನ್ನು ಬ್ರಹ್ಮನು ನಾರದರಿಗೆ, ನಾರದನು ವ್ಯಾಸಮುನಿಗಳಿಗೆ, ವ್ಯಾಸಮುನಿಗಳು ರಾಘವ ಚೈತನ್ಯರಿಗೆ, ರಾಘವ ಚೈತನ್ಯರು ಕೇಶವ ಚೈತನ್ಯರಿಗೆ, ಕೇಶವ ಚೈತನ್ಯರು ಬಾಬಾಜಿ ಚೈತನ್ಯರಿಗೆ, ಬಾಬಾಜಿ ಚೈತನ್ಯರು ತುಕಾರಾಮ ಮಹಾರಾಜರಿಗೆ ಉಪದೇಶಿಸಿದರು.

ಮುಖ್ಯ ಮಹಾವಿಷ್ಣು ಚೈತನ್ಯಾಚೇ ಮೂಳ । ಸಾಂಪ್ರದಾಯ ಫಳ ತೇಥೋನಿಯಾ ॥೧॥ ಹಂಸರೂಪೀ ಬ್ರಹ್ಮಾ ಉಪದೇಶೀ ಶ್ರೀಹರೀ । ಚತುಃಶ್ಲೋಕಿ ಚಾರೀ ಭಾಗವತ ॥೨॥ ತೇ ಗುಜ ವಿಧಾತಾ ಸಾಂಗೇ ನಾರದಾಸೀ । ನಾರದೇ ವ್ಯಾಸಾಸೀ ಉಪದೇಶಿಲೇ ॥೩॥ ರಾಘವ ಚೈತನ್ಯೇ ಕೇಲೇ ಅನುಷ್ಠಾನ । ತ್ಯಾಸೀ ದ್ವೈಪಾಯನೇ ಕೃಪಾ ಕೇಲೀ ॥೪॥ ಕೃಪಾ ಕರೂನೀ ಹಸ್ತ ಠೇವಿಯೇಲಾ ಶಿರೀ । ಬೋಧ ತೋ ಅಂತರೀ ಠಸಾವಲಾ ॥೫॥ ರಾಘವಾಚರಣೀ ಕೇಶವ ಶರಣ । ಬಾಬಾಜೀಶೀ ಪೂರ್ಣ ಕೃಪಾ ತ್ಯಾಚಿ ॥೬॥ ಬಾಬಾಜಿನೇ ಸ್ವಪ್ನೀ ಯೇವೂನೀ ತುಕಯಾಲಾ । ಅನುಗ್ರಹ ದಿಲಾ ನಿಜಪ್ರೀತಿ ॥೭॥ ಜಗದ್ಗುರು ತುಕಾ ಅವತಾರ ನಾಮಯಾಚಾ । ಸಾಂಪ್ರದಾಯ ಸಕಳಾಂಚಾ ಯೇಥೋನಿಯಾ ॥೮॥ ನಿಳಾ ಮ್ಹಣೇ ಮಜ ಉಪದೇಶ ಕೇಲಾ । ಸಾಂಪ್ರದಾಯ ಠೇವಿಲಾ ಸಕಳ ಜನಾ ॥೯॥

ಶ್ರೀ ಸಂತ ನಾಮದೇವ ಮಹಾರಾಜರು ಹನ್ನೆರಡನೆಯ ಶತಮಾನದಲ್ಲಿ ಜಗದೋದ್ಧಾರಕ್ಕಾಗಿ ಅವತರಿಸಿ ಶ್ರೀಪಾಂಡುರಂಗನ ಅನನ್ಯಭಕ್ತರಾಗಿ ತಮ್ಮ ರಸಭರಿತ ಸುಂದರ ವಾಣಿಯಿಂದ ಕೀರ್ತನರಂಗದಲ್ಲಿ ನರ್ತಿಸುತ್ತ ಜಗತ್ತನ್ನು ಜ್ಞಾನದೀಪದಿಂದ ಬೆಳಗಿದರು. ಜಗತ್ಕಲ್ಯಾಣಕ್ಕಾಗಿ ಅಸಂಖ್ಯಾತ ಅಭಂಗಗಳನ್ನು ರಚಿಸಿದರು. ಇವರೇ ಮುಂದೆ ಹದಿನಾರನೆಯ ಶತಮಾನದಲ್ಲಿ ಮಹಾರಾಷ್ಟ್ರದ ಪುಣೆ ಸಮೀಪ ದೇಹೂ ಗ್ರಾಮದಲ್ಲಿ ಶ್ರೀಸಂತ ತುಕಾರಾಮರಾಗಿ ಅವತರಿಸಿದರು. ಇವರು ಪ್ರಪಂಚದ ಎಲ್ಲ ರಚನೆಗಳನ್ನು ಭೋಗಿಸಿ ಮುಂದೆ ವೈರಾಗ್ಯ ತಾಳಿ ತ್ಯಾಗ ಮಾಡಿ ಶ್ರೀಪಾಂಡುರಂಗನ ಅನನ್ಯ ಭಕ್ತರಾಗಿ ಸಾಕ್ಷಾತ್ಕಾರವನ್ನು ಮಾಡಿಕೊಂಡರು. ಜಗತ್ಕಲ್ಯಾಣಕ್ಕಾಗಿ ಭಕ್ತಿ ಜ್ಞಾನವೈರಾಗ್ಯಯುಕ್ತ ಅನೇಕಾನೇಕ ಅಭಂಗಗಳನ್ನು ತಮ್ಮ ಅಧಿಕಾರಯುಕ್ತ ಪ್ರಾಸಾದಿಕ ವಾಣಿಯಿಂದ ರಚಿಸಿ ಜಡ ಜೀವಿಗಳಿಗೆ ದಾರಿ ದೀಪರಾದರು ಅಮೃತಕ್ಕೂ ಮೀರಿಸುವ ಪೂರ್ಣಾನುಭವದ ಇವರ ರಸಾಳ ಕೀರ್ತನೆಗಳಿಂದ ಅನೇಕರು ಉದ್ಧಾರರಾದರು. ಕೊನೆಗೆ ತಮ್ಮ ಎಲ್ಲ ಅವತಾರ ಕಾರ್ಯಗಳನ್ನು ಪೂರ್ಣಗೊಳಿಸಿ ಈ ಕಲಿಯುಗದಲ್ಲಿ ಮಾನವ ದೇಹದೊಂದಿಗೆ ವೈಕುಂಠ ನಿಜ ಧಾಮಕ್ಕೆ ಪ್ರಯಾಣಿಸಿದರು. ಮಹಾರಾಷ್ಟ್ರದ ನಗರ ಜಿಲ್ಲೆಯ ಪಿಂಪಳನೇರ ಗ್ರಾಮದ ಕುಲಕರ್ಣಿ ಮನೆತನದ ನಿಳೋಬಾ ಮಹಾರಾಜರು ಶ್ರೀ ಸಂತ ತುಕಾರಾಮ ಮಹಾರಾಜರ ಅನನ್ಯಭಕ್ತರಾಗಿದ್ದರು. ಇವರು ದೇಹೂ ಗ್ರಾಮಕ್ಕೆ ಬಂದು ತಮಗೆ ಅನುಗ್ರಹ ದೊರೆಯಬೇಕೆಂಬ ಏಕನಿಷ್ಠೆಯಿಂದ ಶ್ರೀತುಕಾರಾಮ ಮಹಾರಾಜರಿಗಾಗಿ ನಲವತ್ತೆರಡು ದಿನ ಅನ್ನ ನೀರು ತ್ಯಜಿಸಿ ಕಠೋರ ಅನುಷ್ಠಾನ ತಪಗೈದರು. ಇವರ ದೃಢವಾದ ಭಾವವನ್ನು ಅರಿತು ಜಗದ್ಗುರು ಶ್ರೀಸಂತ ತುಕಾರಾಮ ಮಹಾರಾಜರು ಇವರಿಗೆ ದರ್ಶನ ಕೊಟ್ಟು ಅನುಗ್ರಹ ಮಾಡಿ ಪ್ರಸಾದವೆಂದು ಟಾಳ, ವೀಣೆಯನ್ನು ಅರ್ಪಿಸಿದರು. ಶ್ರೀ ಸಂತ ನಿಳೋಬಾ ಮಹಾರಾಜರು ತಮ್ಮ ಗುರುಗಳ ಆಜ್ಞೆ ಪಡೆದು ತಮಗೆ ಅನುಗ್ರವಾದ ಟಾಳ, ವೀಣೆಯನ್ನು ತಮ್ಮ ಅವತಾರ ಕಾರ್ಯ ಮುಗಿದ ನಂತರ ಔರಂಗಾಬಾದ ಸಮೀಪದ ಶಿವೂರ ಗ್ರಾಮದ ಶ್ರೀಶಂಕರಸ್ವಾಮಿಗಳವರಿಗೆ ಅನುಗ್ರಹಿಸಿಕೊಟ್ಟರು. ಇವರ ತರುವಾಯ ಜಗದ್ಗುರು ಶ್ರೀಸಂತ ತುಕಾರಾಮ ಮಹಾರಾಜರೇ ಮೊಗಲಾಯಿ ಪ್ರಾಂತದ ಸೇನಾ ನದಿ ತಿರದಲ್ಲಿ ಇಸಾರೇಪಾಂಡೇ ಎಂಬ ಗ್ರಾಮದಲ್ಲಿ ವೀರಶೈವ ಮನೆತನದಲ್ಲಿ ಮಲ್ಲಾಪ್ಪಾ ನಾಮದಿಂದ ಶಕೆ ೧೬೭೯ ರಲ್ಲಿ ಅವತರಿಸಿದರು. ಮುಂದೆ ಇವರು ಉಸ್ಮಾನಾಬಾದ ಜಿಲ್ಲೆಯ ಭೂಮ ತಾಲೂಕಿನ ವಾಸೀ ಗ್ರಾಮಕ್ಕೆ ಬಂದರು. ಶ್ರೀಸದ್ಗುರು ಶಂಕರಸ್ವಾಮಿ ಶಿವೂರಕರ ಮಹಾರಾಜ ಇವರು ಮೊದಲೇ ಆಗಿರುವ ತಮ್ಮ ಗುರುಗಳ ಆಜ್ಞೆಯಂತೆ ಶ್ರೀಮಲ್ಲಾಪ್ಪಾ ವಾಸಕರ ಮಹಾರಾಜರಿಗೆ ಅವರ ಟಾಳ ವೀಣೆಯನ್ನು ಅವರಿಗೆ ಕೊಟ್ಟು ಅನುಗ್ರಹಿಸಿದರು. ಶ್ರೀ ಸದ್ಗುರು

ಮಲ್ಲಾಪ್ಪಾ ವಾಸಕರ ಮಹಾರಾಜರು ಪರಂಪರೆಯಿಂದ ನಡೆದು ಬಂದ ಶ್ರೀ ಪಾಂಡುರಂಗನ ಅನನ್ಯ ಭಕ್ತರಾಗಿ ನಿಷ್ಕಾಮ ಸೇವಾ ತತ್ಪರರಾಗಿ ಕಠೋರ ವ್ರತ ನಿಯಮಗಳೊಂದಿಗೆ ಭಜನ ಮಾರ್ಗದಲ್ಲಿ ತನ್ಮಯರಾದರು. ಜಗದ್ಗುರು ಶ್ರೀಸಂತ ತುಕಾರಾಮ ಮಹಾರಾಜರ ಅವತಾರ ಪುರುಷರಾಗಿದ್ದಕ್ಕೆ ಇವರ ಅಂಗದಲ್ಲಿ ಭಕ್ತಿ ಜ್ಞಾನ ವೈರಾಗ್ಯಗಳು ಸಹಜವಾಗಿ ಕಂಗೊಳಿಸುತ್ತಿದ್ದವು. ಇವರು ನಿಯಮ ಬದ್ಧವಾಗಿ ಫಡವನ್ನು ಸ್ಥಾಪಿಸಿದರು. ಈ ವಾಸಕರ ಫಡವು ಮೂಲ ಫಡವಾಗಿ ಇಲ್ಲಿಂದಲೇ ಅನೇಕ ಫಡಗಳು ಉದ್ಭವವಾಗಿ ದೊಡ್ಡ ವೃಕ್ಷಾಕಾರವಾಗಿ ಎಲ್ಲ ಕಡೆಗಳಲ್ಲಿ ವ್ಯಾಪಿಸಿರುವುದು. ಇವರು ತಮ್ಮ ವಯಸ್ಸಿನ ತೊಂಬತ್ತೆರಡು ವರ್ಷಗಳವರೆಗೂ ಅಖಂಡವಾಗಿ ವಾರಿ ಸೇವೆಯೊಂದಿಗೆ ಫಡವನ್ನು ಉತ್ಕೃಷ್ಟ ರೀತಿಯಲ್ಲಿ ನಡೆಸುತ್ತ ಭಜನೆ ಕೀರ್ತನೆಗಳಿಂದ ಲಕ್ಷಾವಧಿ ಸಮಾಜಕ್ಕೆ ಉದ್ಧರಿಸಿದರು. ಇವರ ಸಮಾಧಿ ಮಂದಿರವು ಆಳಂದಿ ಕ್ಷೇತ್ರದಲ್ಲಿರುವುದು. ಇವರ ಹಾಕಿ ಕೊಟ್ಟ ಸೇವಾ ಮಾರ್ಗದಲ್ಲಿ ವಂಶ ಪರಂಪರೆಯಾಗಿ ಅಚ್ಚುಕಟ್ಟಾಗಿ ಅವ್ಯಾಹತವಾಗಿ ಫಡದ ಸೇವೆಯು ಅಗ್ರಸ್ಥಾನದಲ್ಲಿ ನಡೆಯುತ್ತಿರುವುದು.

ಶ್ರೀಸದ್ಗುರು ಮಲ್ಲಾಪ್ಪಾ ವಾಸಕರ ಮಹಾರಾಜರ ಎಂಟನೆಯ ವಂಶಸ್ಥ ಪೀಠಾಧಿಕಾರಿಗಳಾದ ಶ್ರೀಸದ್ಗುರು ಹ.ಭ.ಪ.ತಾತ್ಯಾಸಾಹೇಬ ಬಾಬಾಸಾಹೇಬ ವಾಸಕರ ಮಹಾರಾಜರು ತಮ್ಮ ಫಡವನ್ನು ತಮ್ಮ ದೈವೀ ಶಕ್ತಿ ಪ್ರಭಾವದಿಂದ ವಿಶೇಷವಾಗಿ ಬೆಳೆಸಿದರು. ಸುಮಾರು ಐವತು ವರ್ಷಗಳ ಹಿಂದೆಯೇ ಇವರು ೧೦೮ ಕ್ಕೂ ಹೆಚ್ಚು ವಾರಕರೀ ಮಂಡಳಿಯವರ ೧೦೮ ಶ್ರೀ ಜ್ಞಾನೇಶ್ವರೀ ಸಾಮುದಾಯಿಕ ಪಾರಾಯಣವನ್ನು ಅನೇಕ ಕಡೆಗಳಲ್ಲಿ ನಡೆಸಿ ಶ್ರೀಗ್ರಂಥರಾಜ ಜ್ಞಾನೇಶ್ವರೀಯ ಸಾಮುದಾಯಿಕ ಪಾರಾಯಣದ ಅಭಿರುಚಿಯನ್ನು ಪ್ರಚಾರಗೊಳಿಸುವ ಅತ್ಯಂತ ಶ್ರೇಷ್ಠ ಮಹಾಕಾರ್ಯವನ್ನು ನೆರವೇರಿಸಿದರು. ಸಂತ ಶ್ರೇಷ್ಠ ಶ್ರೀ ಜ್ಞಾನೇಶ್ವರ ಮಹಾರಾಜರ ಜನ್ಮ ಶತಾಬ್ದಿ ಪ್ರೀತ್ಯರ್ಥವಾಗಿ ಏಳು ಸಾವಿರಕ್ಕೂ ಹೆಚ್ಚು ಭಕ್ತ ಭಾವಿಕರೊಂದಿಗೆ ಏಳು ಸಾಮುದಾಯಿಕ ಪಾರಾಯಣವನ್ನು ನಡೆಸಿ ಶ್ರೀ ಜ್ಞಾನೇಶ್ವರೀ ಗ್ರಂಥದ ಮಹಿಮೆಯನ್ನು ಅದರ ಶಿಖರದವರೆಗೂ ಮುಟ್ಟಿಸಿದರು. ಐದು ವರ್ಷಗಳ ಹಿಂದೆ ನಡೆದ ಗ್ರಂಥ ಸಪ್ತ ಶತಾಬ್ದಿ ನಿಮಿತ್ತ ಎಲ್ಲ ಫಡದವರು ಕೂಡಿ ಶ್ರೀಕ್ಷೇತ್ರ ಪಂಢರಪೂರದಲ್ಲಿ ನೆರವೇರಿಸಿದ ಒಂದು ಲಕ್ಷ ಶ್ರೀ ಜ್ಞಾನೇಶ್ವರೀ ಸಾಮುದಾಯಿಕ ಪಾರಾಯಣದಲ್ಲಿ ಅಗ್ರಸ್ಥಾನ ಪಡೆದು ಸೇವೆ ಸಲ್ಲಿಸಿದರು. ಮಹಾರಾಷ್ಟ್ರ ಕರ್ನಾಟಕಗಳಲ್ಲಿ ಮಹತ್ವ ಪೂರ್ಣ ಕಾರ್ಯಕ್ರಮಗಳಿಗೆ ಬಿಡುವು ಇಲ್ಲದೇ ಭಾಗವಹಿಸಿ ತಮ್ಮ ಅಧಿಕಾರಯುಕ್ತ ಪ್ರಾಸಾದಿಕ ಅಸ್ಖಲಿತ ರಂಗಯುಕ್ತ ರಸಾಳ ವಾಣಿಯಿಂದ ಕೀರ್ತನೆಗಳನ್ನು ಮಾಡುತ್ತ ಅಸಂಖ್ಯಾತ ಜಡಜೀವಿಗಳ ಉದ್ಧಾರ ಮಾಡಿದರು. ಇವರ ಮೂಲ ಪುರುಷರ ಮೂಲಸ್ಥಾನವಾದ ಶ್ರೀಕ್ಷೇತ್ರ ವಾಸಿಯಲ್ಲಿ ಬೃಹತ್ ಪ್ರಮಾಣದ ತಪೋವನ ನಿರ್ಮಿಸಿ ಅಲ್ಲಿ ಶ್ರೀವಿಠ್ಠಲ ರಖುಮಾಯಿಯೊಂದಿಗೆ ಅನೇಕ ಸುಂದರ ಮೂರ್ತಿಗಳನ್ನು ಸ್ಥಾಪಿಸಿ ಅದರ ಅಭಿವೃದ್ಧಿಗಾಗಿ ತಮ್ಮ ಪ್ರಕೃತಿಯ ಪ್ರತಿಕೂಲತೆಗಳಲ್ಲಿಯೂ ಅಹೋರಾತ್ರಿ ಪರಿಶ್ರಮಿಸುತ್ತಿರುವರು. ಇವರು ಕರ್ನಾಟಕ ವಾರಕರೀ ಭಕ್ತ ಭಾವಿಕರ ಮೇಲೆ ವಿಶೇಷವಾಗಿ ವಾತ್ಸಲ್ಯ ಹೊಂದಿರುವರು. ನೂರಾರು ವರ್ಷಗಳಿಂದ ಫಡದ ಸಂಪರ್ಕವಿಲ್ಲದೇ ತಪ್ಪಾಗಿ ನಡೆಯುತ್ತಿರುವ ದಿಂಡಿ ಉತ್ಸವ ಸಾಂಪ್ರದಾಯವನ್ನು ಶುದ್ಧೀಕರಿಸಿದರು. ಇವರು ರಿದ್ಧಿ ಸಿದ್ಧಿಗಳನ್ನು ಪ್ರಾಪ್ತಮಾಡಿಕೊಂಡಿರುವ ಒಬ್ಬ ಮಹಾನ ತಪಸ್ವಿಯಂತೆ ಇರುವುದರಿಂದ ಇವರಲ್ಲಿ ಎಲ್ಲರೂ ಬಹಳ ಭಯಭಕ್ತಿಯಿಂದ ನಡೆದು ಕೊಳ್ಳುವರು. ಎಲ್ಲರೂ ಇವರಿಗೆ ಪ್ರೀತಿಯಿಂದಾ ''ಆಬಾ'' ಎಂದೇ ಕರೆಯವರು. ಇವರ ಮೇಲ್ನೋಟಕ್ಕೆ ಬಿರುಸಾಗಿ ಕಂಡರೂ ಶ್ರೀಫಲದಂತೆ ಒಳಗೆ ಪರಿಶುದ್ಧ ಭಾವದಿಂದ ಪ್ರಿಯರಾಗಿರುವರು. ಇವರಿಗೆ ಶ್ರೀವಿಠ್ಠಲ ಮಹಾರಾಜ, ಶ್ರೀ ತುಕಾರಾಮ ಮಹಾರಾಜ, ಶ್ರೀನಾಮದೇವ ಮಹಾರಾಜ, ಮತ್ತು ಶ್ರೀ ಏಕನಾಥ ಮಹಾರಾಜ ಎಂಬ ನಾಲ್ವರು ಸುಪುತ್ರರು ಇದ್ದು ಫಡದ ಎಲ್ಲ ಕಾರ್ಯಭಾರಗಳನ್ನು ನಡೆಸುತ್ತಿರುವರು. ಇವರನ್ನು ಯಥಾ ಸ್ಥಿತಿಯಲ್ಲಿ ವರ್ಣಿಸುವ ನನಗೆ ಯಾವ ಆ ಅಧಿಕಾರವಿಲ್ಲದ್ದಕ್ಕೆ ಇವರ ಚರಣಗಳಲ್ಲಿ ಮಸ್ತಕವನ್ನಿಟ್ಟು ವಂದಿಸುತ್ತ ಇವರ ಆಶೀರ್ವಾದ ಬೇಡುವೆ.

ಸ್ತುತಿ ಕರೂ ಜೈಸಾ ನಾಹೀ ಅಧಿಕಾರ । ನ ಕಳೇ ವಿಚಾರ ಯೋಗ್ಯತೇಚಾ ॥೧॥
ತುಮಚೇ ಮೀ ದಾಸ ಸಂತಾಚೇ ದುರ್ಬಳ । ಕರೂನಿ ಸಾಂಭಾಳ ರಾಖಾ ಪಾಯೀ ॥೨॥

ಕರ್ನಾಟಕದಲ್ಲಿ ಇತ್ತೀಚೆಗೆ ಪಂಢರೀ ವಾರಕರೀ ಸಾಂಪ್ರದಾಯವು ಬಹಳ ಬೆಳೆಯುತ್ತಿದೆ. ಅನೇಕ ಕಡೆಗಳಲ್ಲಿ ಶ್ರೀಜ್ಞಾನೇಶ್ವರೀ ಗ್ರಂಥದ ಸಾಮುದಾಯಿಕ ಪಾರಾಯಣಗಳು ನಡೆಯುತ್ತಿವೆ. ಪಾರಾಯಣಕ್ಕಾಗಿಯೂ, ಓವೀಗಳ ಅರ್ಥದ ಅಭ್ಯಾಸಕ್ಕಾಗಿಯೂ ಶುದ್ಧ ಪ್ರತಿ ಜ್ಞಾನೇಶ್ವರೀ ಗ್ರಂಥಗಳ ಬಹಳ ಅವಶ್ಯಕತೆ ಇರುವುದು. ಸಂತ ಶ್ರೇಷ್ಠ ಶ್ರೀಜ್ಞಾನೇಶ್ವರ ಮಹಾರಾಜರು ಸಂಜೀವನ ಸಮಾಧಿಯನ್ನು ಸ್ವೀಕರಿಸಿ ಶಾಲಿವಾಹನ ಶಕೆ ೧೯೧೭ನೆಯ ಯುವನಾಮ ಸಂವತ್ಸರದ ಕಾರ್ತಿಕ ಬ. ೧೩ ಗೆ ಏಳುನೂರು ವರ್ಷಗಳು ತುಂಬುತ್ತಲಿವೆ. ಇವರ ಈಪುಣ್ಯ ಸ್ಮರಣಾರ್ಥವಾಗಿ ಮೂರು ಸಾವಿರ ಪ್ರತಿ ಜ್ಞಾನೇಶ್ವರೀ ಗ್ರಂಥಗಳನ್ನು ಅರ್ಥ ಸಮೇತವಾಗಿ ಕನ್ನಡದಲ್ಲಿ ರಚಿಸಿ, ವ್ಯಾಸಪೀಠ, ವಸ್ತ್ರ, ಶ್ರೀ ಸಂತ ಜ್ಞಾನೇಶ್ವರ ಮಹಾರಾಜರ, ಶ್ರೀಗುರು ವಾಸಕರ ಮಹಾರಾಜರ ಭಾವಚಿತ್ರಗಳೊಂದಿಗೆ ಕೊಪ್ಪಳದ ಸಾಮುದಾಯಿಕ ಪಾರಾಯಣದಲ್ಲಿ ಭಕ್ತ ಭಾವಿಕರಿಗೆ ದಾನವಾಗಿ ಮುಟ್ಟಿಸಬೇಕೆಂಬುವುದಕ್ಕೆ ಭಗವತ್ ಸಂಕಲ್ಪದಿಂದ ಪ್ರೇರಿತನಾಗಬೇಕಾಯಿತು. ಆದ ಪ್ರೇರಣೆಯನ್ನು ಶ್ರೀಗುರುವರ್ಯ ಹ.ಭ.ಪ. ತಾತ್ಯಾಸಾಹೇಬ ವಾಸಕರ ಮಹಾರಾಜರವರಲ್ಲಿ ನಿವೇದಿಸಿದಾಗ ಅವರು ಸಂತೋಷಪಟ್ಟು ಒಪ್ಪಿಗೆಯೊಂದಿಗೆ ಆಶೀರ್ವಾದದ ಶ್ರೀಫಲವನ್ನು ಕೊಟ್ಟರು. ಇದು ಅತ್ಯಂತ ಪರಿಶ್ರಮದ ಸೇವೆಯಾಗಿದ್ದರೂ ಶ್ರೀಪಾಂಡುರಂಗನ ಮೇಲೆ ಸರ್ವಭಾರವನ್ನು ಹಾಕಿ, ಶ್ರೀ ಶಾಲಿವಾಹನ ಶಕೆ ೧೯೧೬ ನೆಯ ಭಾವನಾಮ ಸಂವತ್ಸರದ ಕಾರ್ತಿಕ ಬ||೧೩ ರಂದು ಶ್ರೀಸಂತಜ್ಞಾನೇಶ್ವರ ಮಹಾರಾಜರ ಪುಣ್ಯತಿಥಿಯ ಪರ್ವಕಾಲದಲ್ಲಿ ಪೂಜೆ ಭಜನೆಯೊಂದಿಗೆ ಬರೆಯುವ ಕಾರ್ಯವನ್ನು ಆರಂಭಗೊಳಿಸಲಾಯಿತು.

ಪೂಜ್ಯರಾದ ಶ್ರೀಸಾಖರೇ ಮಹಾರಾಜ, ಶ್ರೀ ದಾಂಡೇಕರ ಮಹಾರಾಜ, ಶ್ರೀ ಶಂಕರ ಮಹಾರಾಜ ಖಂದಾರಕರ ಹಾಗೂ ಶ್ರೀರಾಮಚಂದ್ರ ಮಹಾರಾಜ ಯಾದವ ಇವರ ಮರಾಠಿ ಗ್ರಂಥಗಳ ಆಧಾರದಿಂದ ಮುದ್ರಣ ದೋಷ ಆಗದೇ ಇರುವ ಓವೀಗಳನ್ನು ಶೋಧಿಸಿಕೊಂಡು ಇವರ ಸಾರ್ಥ ಶ್ರೀಜ್ಞಾನೇಶ್ವರೀ ಗ್ರಂಥಗಳ ಆಧಾರದಿಂದಲೇ ಓವೀಗಳಿಗೆ ಕನ್ನಡದಲ್ಲಿ ಅರ್ಥಗಳನ್ನು ಬರೆಯಲಾಯಿತು. ಪರಸ್ಪರರ ಗ್ರಂಥಗಳಲ್ಲಿ ಕೆಲವು ಓವೀಗಳ, ಅರ್ಥಗಳ ಸಾಮ್ಯ ಇಲ್ಲದ್ದಕ್ಕೆ ಸರಿಯಾದದ್ದನ್ನು ಸ್ವೀಕರಿಸಲು ಬಹಳಷ್ಟು ಪರಿಶ್ರಮಪಡಬೇಕಾಯಿತು. ಆದಾಗ್ಯೂ ಹಲವು ಓವೀಗಳಲ್ಲಿ, ಅರ್ಥಗಳಲ್ಲಿ, ಹಾಗೂ ಅನುಸ್ವಾರಗಳಲ್ಲಿ ಹೆಚ್ಚು ಕಡಿಮೆಯಾಗಲು ಹಾಗೂ ಅನಿವಾರ್ಯವಾಗಿ ಅವಸರವಾಗಿದ್ದಕ್ಕೆ ಆಕಸ್ಮಿಕವಾಗಿ ದೋಷಗಳಾಗಲು ಸಾಧ್ಯತೆಗಳಿವೆ. ಇಲ್ಲಿ ಶ್ರೀ ಸಾಖರೇ ಮಹಾರಾಜರ ಗ್ರಂಥದ ಆಧಾರವನ್ನೇ ಹೆಚ್ಚಿಗೆ ಪಡೆಯಲಾಗಿದೆ. ಸಾಮಾನ್ಯರಿಗೂ ತಿಳಿಯಬೇಕೆಂದು ಪ್ರೌಢಭಾಷೆಯನ್ನು ಹೆಚ್ಚಿಗೆ ಬಳಸಿರುವುದಿಲ್ಲ. ಶ್ಲೋಕಾರ್ಥಗಳಿಗೆ ಸಾರ್ಥ ಗೀತೆ ಗ್ರಂಥಗಳ ಆಧಾರವನ್ನು ಪಡೆಯಲಾಗಿದೆ. ಗ್ರಂಥ ಬರೆಯುವ ಕಾರ್ಯದ ಜೊತೆಯಲ್ಲಿಯೇ ಗ್ರಂಥಗಳಿಗೆ ಹಣ ಕೂಡಿಸುವ ಕಾರ್ಯವನ್ನೂ ಕೈಗೆತ್ತಿಕೊಂಡು ಅದಕ್ಕಾಗಿ ಬೆಂಗಳೂರಿಗೆ ಹೋಗಬೇಕಾಯಿತು. ಆಗ ಮುಂದೆ ನಡೆಸಬೇಕಾದ ಪಾರಾಯಣಕ್ಕೆ ಕೇವಲ ಒಂಬತ್ತು ತಿಂಗಳು ಮಾತ್ರ ಉಳಿದಿತ್ತು. ಕರ್ನಾಟಕದ ಎಲ್ಲ ಭಾಗಗಳಿಗೆ ಹೋಗಿ ಹಣ ಸಂಗ್ರಹಿಸಲು ಹಾಗೂ ಗ್ರಂಥಗಳನ್ನು ಮುದ್ರಿಸಲು ಸಾಕಷ್ಟು ವೇಳೆ ಇಲ್ಲದಿರುವುದು, ಇದಲ್ಲದೇ ನನ್ನ ಪ್ರಕೃತಿಯ ಪ್ರತಿಕೂಲತೆಯ ತೊಂದರೆಯನ್ನು ಮನಗಂಡು ಬೆಂಗಳೂರಿನಲ್ಲಿಯೇ ಹಣದ ಸಂಗ್ರಹವಾಗಬೇಕೆಂಬ ಬಯಕೆಯನ್ನು ಹ.ಭ.ಪ.ಅಶ್ವತ್ಥನಾರಾಯಣರಾವ ಲಕ್ಷ್ಮಣರಾವ ಸವ್ವಾಸೇರೆ ಬೆಂಗಳೂರು ಇವರಿಗೆ ಕಳಕಳಿಯಿಂದ ತಿಳಿಸಲಾಯಿತು. ಇವರು ಈ ಮಹಾಕಾರ್ಯಕ್ಕೆ ಮನಸ್ಸು ಕೊಟ್ಟು ತಮ್ಮ ವ್ಯವಹಾರಗಳನ್ನು ತ್ಯಜಿಸಿ, ಅನೇಕ ಗಣ್ಯದಾನಿಗಳವರ ಭೇಟಿ ಮಾಡುವ ಯೋಜನೆಯನ್ನು ಹಾಕಿಕೊಂಡರು. ಹ.ಭ.ಪ.ವಿನೋದರಾಯ ಲಾಭುಭಾಯಿ ರಾಜಾ (ಶ್ರೀ ಜಲಾರಾಮ ಪರಿವಾರ) ಬೆಂಗಳೂರು ಇವರನ್ನು ಭೇಟಿ ಮಾಡಿಸಿದರು. ಶ್ರೀ ವಿನೋದರಾಯ ಅವರು ಗುಜರಾತ ಸಮಾಜದವರಾಗಿ ಪರೋಪಕಾರಿಗಳೂ, ಪಾರಮಾರ್ಥಿಕ ಅಂಗವುಳ್ಳವರೂ, ಭಜನ ಸೇವೆಯಲ್ಲಿ ತಲ್ಲೀನರಾಗುವವರೂ ಇದ್ದು, ಇವರು ಒಳಹೊರಗೂ ಪ್ರಕಾಶಮಾನರಾಗಿರುವರು. ಇವರು ನಮ್ಮ ಕಾರ್ಯವನ್ನು ಅಂತರ್ಮುಖಿಯಾಗಿ ಚಿಂತಿಸಿ ಇದೊಂದು ಜಗತ್ಕಲ್ಯಾಣದ ಅತ್ಯಂತ ಪವಿತ್ರ ಸೇವೆಯಾಗಿದೆ ಎಂದು ನಿಶ್ಚಯಿಸಿ, ಈ ಕಾರ್ಯವನ್ನು ಸಾಧಿಸಿಕೊಡಬೇಕೆಂದು ಪೂರ್ಣ ಮನಸ್ಸು ಮಾಡಿದರು. ಇವರು ಕೂಡಲೇ ತಮಗೆ ಪ್ರೀತಿಯಿಂದ ವಿಶ್ವಾಸದಿಂದ ಕಾಣುವ, ಶ್ರೀ ಶ್ರೀ ಶ್ರೀ ನಿತ್ಯಾನಂದ ಮಹಾಸ್ವಾಮಿಗಳವರ

ಭಕ್ತರಾದ, ಮಹಾದಾನಿಗಳವರಾದ ಸನ್ಮಾನ್ಯ ಶ್ರೀ ಪದ್ಮನಾಭಸಾ ಲಕ್ಷ್ಮಣಸಾ ಖೋಡೆ ಬೆಂಗಳೂರು ಇವರಲ್ಲಿ ನಮ್ಮನ್ನು ಕರೆದೊಯ್ದು ಎಲ್ಲವನ್ನೂ ನಿವೇದಿಸಿದರು. ಶ್ರೀ ಪದ್ಮನಾಭಸಾ ಖೋಡೆ ಇವರು ಎಲ್ಲ ರೀತಿಯಲ್ಲಿ ಸೂಕ್ಷ್ಮವಾಗಿ ಪರಿಶೀಲಿಸಿ, ಪರೀಕ್ಷಿಸಿ, ಚರ್ಚಿಸಿ, ಮಹಾಪವಿತ್ರವಾದ ಶ್ರೀಜ್ಞಾನೇಶ್ವರಿಯ ಮೂರು ಸಾವಿರ ಗ್ರಂಥಗಳನ್ನು ದಾನವಾಗಿ ಕೊಡುವ ಈ ಅದ್ಭುತ ಯೋಜನೆಗೆ ಪೂರ್ಣವಾಗಿ ಮಹತ್ವಕೊಟ್ಟು ಇದೊಂದು ಯೋಗ್ಯವಾದ ಸತ್ಪಾತ್ರ ದಾನವಾಗಿದೆ ಎಂದು ಮನಸಾ ನಿಶ್ಚಯಿಸಿ, ವ್ಯಾಸಪೀಠ, ವಸ್ತ್ರ, ಶ್ರೀಸಂತ ಜ್ಞಾನೇಶ್ವರ ಮಹಾರಾಜರ, ಶ್ರೀಗುರು ವಾಸಕರ ಮಹಾರಾಜರ ಭಾವಚಿತ್ರಗಳೊಂದಿಗೆ ಕನ್ನಡ ಶ್ರೀ ಸಾರ್ಥಜ್ಞಾನೇಶ್ವರೀಯ ಮೂರು ಸಾವಿರ ಗ್ರಂಥಗಳಿಗೆ ಬೇಕಾಗುವ ಐದು ಲಕ್ಷ ಮೂವತ್ತು ಸಾವಿರ ರೂಪಾಯಿಗಳನ್ನು ತಮ್ಮ ಹಿರಿಯ ಅಣ್ಣಂದಿರಾದ ಶ್ರೀರಾಮಚಂದ್ರಸಾ ಖೋಡೆ, ಶ್ರೀ ಶ್ರೀ ಹರಿಸಾ ಖೋಡೆ ಇವರ ಹೆಸರಿನಿಂದ ಹಾಗೂ ತಮ್ಮ ಪೂಜ್ಯ ತಂದೆ-ತಾಯಿಯವರಾದ ಶ್ರೀಲಕ್ಷ್ಮಣಸಾ ಈಶ್ವರಸಾ ಖೋಡೆ, ಶ್ರೀಮತಿ ಗಂಗಮ್ಮಾಬಾಯಿ ಲಕ್ಷ್ಮಣಸಾ ಖೋಡೆ ಇವರ ಪುಣ್ಯ ಸ್ಮರಣಾರ್ಥವಾಗಿ ದಾನವಾಗಿ ಕೊಡಲು ಅಂತಃಕರಣಪೂರ್ವಕವಾಗಿ ಒಪ್ಪಿಕೊಂಡರು. ಮುದ್ರಣ ಕಾರ್ಯವು ಆರಂಭಗೊಂಡಂತೆ ಬೇಕಾಗುವ ಹಣದ ಬಿಡುಗಡೆಯನ್ನು ಮಾಡುತ್ತ ಬಂದರು. ಈ ಖೋಡೆ ಮನೆತನದವರು ಶ್ರೇಷ್ಠ ದಾನಿಗಳವರಾಗಿದ್ದು ಇಲ್ಲಿಯವರೆಗೆ ಅನೇಕ ಕಡೆಗಳಲ್ಲಿ ಮಠ, ಮಂದಿರ, ಕಲ್ಯಾಣ ಮಂಟಪಗಳನ್ನು ಕಟ್ಟಿಸಿಕೊಟ್ಟಿದ್ದಾರೆ. ಹಾಗೂ ಹೇರಳಾಗಿ ಅನ್ನದಾನ, ವಸ್ತ್ರದಾನ, ಸುವರ್ಣದಾನ, ಯಂತ್ರದಾನ ಇತ್ಯಾದಿ ದಾನ ಕಾರ್ಯಗಳಲ್ಲಿ ಸುಪ್ರಸಿದ್ಧರಾದ ಸಿದ್ಧಹಸ್ತರು. ಇವರ ಹೃತ್ಪೂರ್ವಕವಾದ ಸಹಕಾರದಿಂದಲೇ ಈ ಜ್ಞಾನೇಶ್ವರೀ ಗ್ರಂಥಗಳನ್ನು ಸಮಯಕ್ಕೆ ಸರಿಯಾಗಿ ಸುಂದರವಾಗಿ ನಿರ್ಮಿಸಲು ಸಾಧ್ಯವಾಯಿತು. ಇದಕ್ಕಾಗಿ ಇವರನ್ನು ಈ ಸಂದರ್ಭದಲ್ಲಿ ಎಷ್ಟು ಕೊಂಡಾಡಿದರೂ ಕಡಿಮೆಯೇ ಆಗುವುದು. ಭಕ್ತಾಭಿಮಾನಿ ಶ್ರೀಪಾಂಡುರಂಗನು ಇವರಿಗೆ ಆಯುರಾರೋಗ್ಯವನ್ನು ದಯಪಾಲಿಸಿ ಸಕಲ ಮಂಗಲವನ್ನುಂಟು ಮಾಡಲಿ ಎಂದು ಅನನ್ಯ ಪ್ರಾರ್ಥನೆ.

ಆರಂಭದಲ್ಲಿ ಗದಗಿನಲ್ಲಿ ಮುದ್ರಣ ಕಾರ್ಯವನ್ನು ಮಾಡಿಸುವ ವಿಚಾರವಿತ್ತು. ಆಗ ನಮ್ಮ ಚಿ॥ಹ.ಭ.ಪ.ಡೋಂಗರಿಬಾ ಜ್ಞಾನವೋಠೆ ಇವರ ಸಲಹೆ ಮೇರೆಗೆ ಮುಂದಾಗುವ ತೊಂದರೆಗಳನ್ನು ತಪ್ಪಿಸಲು ಕೊಪ್ಪಳದಲ್ಲಿಯೇ ಮುದ್ರಣ ಮಾಡಿಸಬೇಕಾಯಿತು. ಶ್ರೀ ಶಾಲಿವಾಹನಶಕೆ ೧೯೧೭ ನೆಯ ಯುವನಾಮ ಸಂವತ್ಸರದ ಚೈತ್ರ ಶು ।೧ ರಂದು ಕೊಪ್ಪಳದ ಶ್ರೀ ಅರುಣ ಪ್ರಿಂಟಿಂಗ್ ಪ್ರೆಸ್‌ನಲ್ಲಿ ಪೂಜೆ ಭಜನೆಯೊಂದಿಗೆ ಮುದ್ರಣ ಕಾರ್ಯವು ಆರಂಭಗೊಂಡಿತು. ಶ್ರೀ ಅರುಣ ಪ್ರೆಸ್ಸಿನ ಮಾಲಕರಾದ ಶ್ರೀ ರಾಜಶೇಖರ ಮಹಾಂತಯ್ಯ ತಂಬ್ರಳ್ಳಿಮಠ ಇವರು ತ್ಯಾಗಶೀಲ ಮನೋಭಾವದಿಂದ ಕಡಿಮೆ ದರದಲ್ಲಿ ಮುದ್ರಣ ಕಾರ್ಯ ವಹಿಸಿಕೊಂಡು ಬೇರೆ ಯಾವ ಮುದ್ರಣ ಕಾರ್ಯ ಹಿಡಿಯದೆ ಈ ಗ್ರಂಥ ಮುದ್ರಣಕ್ಕೆ ಬೇಕಾಗುವ ಯೋಗ್ಯ ಕೆಲಸಗಾರರನ್ನು ತಮ್ಮ ಮಾವನವರಾದ ಶ್ರೀ ಶಂಭುಲಿಂಗಯ್ಯನವರು ಹುಚ್ಚಯ್ಯಮಠ ಗದಗ ಇವರ ಸಹಕಾರದಿಂದ ಕಂಪೋಜಿಂಗ್ ಕೆಲಸಕ್ಕೆ ನುರಿತರಾದ ಶ್ರೀ ಶ್ರೀನಿವಾಸ ನಾಗಪ್ಪ ಬಿಜ್ಜ ಗದಗ -ಬೆಟಗೇರಿ, ಹಾಗೂ ಶ್ರೀ ಬಸವರಾಜ ಗಂಟೆಪ್ಪ ರಾಂಪುರ ಗದಗ-ಬೆಟಗೇರಿ ಇವರನ್ನು ಮತ್ತು ಪ್ರಿಂಟಿಂಗ್ ಕಾರ್ಯಕ್ಕೆ ನುರಿತವರಾದ ಶ್ರೀ ವಿಜಯಕುಮಾರ ಶೇಷಗಿರಿಯಪ್ಪ ಸಫಾರೆ ಗದಗ ಇವರನ್ನು ಯೋಗ್ಯದರದಲ್ಲಿ ನೇಮಿಸಿದರು. ಬೈಂಡಿಂಗ್ ಕಾರ್ಯಕ್ಕೆ ಶ್ರೀ ಯಲ್ಲಪ್ಪ ಹುಚ್ಚಪ್ಪ ಮೆಣಸಿಗಿ ಗದಗ ಹಾಗೂ ಶ್ರೀ ಶರೀಫ್‌ಸಾಬ ಬಡೇಸಾಬ ಡಾಲಾಯತ ಗದಗ ಇವರನ್ನು ನೇಮಿಸಲಾಯಿತು. ಈ ಕೆಲಸಗಾರರು ಬಹಳ ಶ್ರದ್ಧೆಯಿಂದ ಸುಂದರವಾಗಿ ಕೆಲಸ ಮಾಡಿ ಈ ಗ್ರಂಥಗಳ ಶೋಭೆಗೆ ಕಾರಣರಾದರು.

ವೈ.ಹ.ಭ.ಪ. ದತ್ತೋಬರಾವ ರಾಮಚಂದ್ರರಾವ ಮಹೇಂದ್ರಕರ ಗದಗ ಇವರ ಪುತ್ರರಾದ ಶ್ರೀಯುತ ಪಾಂಡುರಂಗರಾವ ಮಹೇಂದ್ರಕರ ನಿವೃತ್ತ ಶಿಕ್ಷಕರು, ತಮ್ಮ ಹಿರಿಯ ಅಣ್ಣನವರಾದ ಹ.ಭ.ಪ.ಮೋಹನರಾವ ಮಹೇಂದ್ರಕರ ಇವರ ಆಜ್ಞೆಯ ಮೇರೆಗೆ ಈ ಗ್ರಂಥ ಮುದ್ರಣ ಕಾರ್ಯಕ್ಕಾಗಿ ನನ್ನ ಬಲಗೈಯಾಗಿ ಆರು ತಿಂಗಳವರೆಗೆ ತಮ್ಮ ಊರು ಮನೆಮಾರು ವ್ಯವಹಾರಗಳನ್ನು ತ್ಯಜಿಸಿ ತ್ರಿಕರ್ಣಪೂರ್ವಕವಾಗಿ ಸೇವೆಯನ್ನು ಮಾಡಿದರು. ಬರೆದ ಓವಿಗಳ ಅರ್ಥಗಳನ್ನು ಸರಿಯಾಗಿ ಶೋಧಿಸಿ

ಅಲ್ಲಲ್ಲಿ ದೋಷಗೊಂಡ ವ್ಯಾಕರಣ, ಅಕ್ಷರಗಳನ್ನು ಶುದ್ಧೀಕರಿಸಿ, ಮುದ್ರಣಕ್ಕೆ ಉತಾರಿಸಿ ಕೊಡುವ ಮತ್ತು ಮುದ್ರಣ ದೋಷವಾಗದಂತೆ ನೋಡಿಕೊಳ್ಳುವ ಕಾರ್ಯಭಾರವು ಇವರದಾಗಿತ್ತು. ಇವರಿಗೆ ಅಕ್ಷರಗಳು ದೋಷಗೊಳ್ಳದಂತೆ ಹ.ಭ.ಪ.ಗೋಪಾಲಕೃಷ್ಣ ಶಂಕ್ರಪ್ಪ ಸ್ಪಟಿಕೆ, ಶ್ರೀ ದಿನೇಶ ಅಶ್ವತ್ಥನಾರಾಯಣರಾವ ಸವ್ವಾಸೇರೆ ಬೆಂಗಳೂರು, ಹ.ಭ.ಪ. ತುಕಾರಾಮ ಡೋಂಗರಿಬಾ ಜ್ಞಾನಮೋಠೆ, ಶ್ರೀ ಫಕ್ಕಣ್ಣಾ ಲಕ್ಷ್ಮಣರಾವ ಬೊಂದಾಡೆ ಕೊಪ್ಪಳ ಇವರು ಪೂರ್ಣ ಸಹಕಾರ ನೀಡಿದರು. ಇವರುಗಳಲ್ಲಿ ಕು.ದಿನೇಶ ಸವ್ವಾಸೇರೆ ಇವರ ಅಕ್ಷರ ದೋಷ ಶೋಧನೆಯ ಚಾತುರ್ಯವು ವಿಶೇಷವಾಗಿತ್ತು. ಬರೆಯುವ ಕಾರ್ಯಕ್ಕೆ ತೊಂದರೆ ಬಂದಾಗ ಕುಕನೂರಿನ ಶ್ರೀ ದೇವೇಂದ್ರಪ್ಪ ಬಾಳಪ್ಪ ಸುಲಾಖೆ ಶಿಕ್ಷಕರು ಸಹಕಾರ ನೀಡಿ ಕೊರತೆಯನ್ನು ನೀಗಿಸಿದರು. ಈ ಗ್ರಂಥ ಪೂರ್ಣಗೊಳ್ಳುವವರೆಗೆ ಅನೇಕ ವಿಘ್ನಗಳು ಬಂದು ಶ್ರೀ ಮಾಉಲೀಯವರ ಕೃಪೆಯಿಂದ ದೂರಾದವು.

ಈ ಮಹಾ ಗ್ರಂಥವಾದ ಶ್ರೀ ಜ್ಞಾನೇಶ್ವರೀಯನ್ನು ಕನ್ನಡದಲ್ಲಿ ಅನುವಾದ ಮಾಡುವ ಯಾವ ಯೋಗ್ಯತೆಯೂ ನನ್ನಲ್ಲಿರುವುದಿಲ್ಲ. ಸಾಹಿತ್ಯ ಅರಿಯದ ಅಲ್ಪನಾದ ನಾನು ಮತಿಹೀನ, ಕ್ರಿಯಾಹೀನನಾಗಿ, ಪ್ರಕೃತಿಹೀನನೂ ಆಗಿರುವೆನು. ಯಾವ ಜನ್ಮದ ಯಾವ ಪುಣ್ಯದ ಫಲವೋ, ಈಶ್ವರ ಸಂಕಲ್ಪವು ನನಗೆ ನಿಮಿತ್ಯ ಮಾಡಿ ಈ ಮಹಾ ಪವಿತ್ರ ಗ್ರಂಥವನ್ನು ಕನ್ನಡ ಸಾಧಕರಿಗೆ ಮುಟ್ಟಿಸುವ ಮಹಾ ಭಾಗ್ಯವನ್ನು ಒದಗಿಸಿತು.

ತುಕಾ ಮ್ಹಣೇ ಮಜ ನ ಘಡತಾ ಸೇವಾ ।
ಪೂರ್ವಪುಣ್ಯ ಠೇವಾ ವೋಢವಲಾ ॥

ಈ ಗ್ರಂಥದಲ್ಲಿ ತಮಗೆ ಯೋಗ್ಯವೆನಿಸಿದ ಓವೀ ಅರ್ಥಗಳು ಶ್ರೀ ಮಾಉಲೀಯವರ ಅನುಗ್ರಹದಿಂದಲೇ ಪ್ರೇರಿತವೆಂದು, ಅಯೋಗ್ಯವಾದವುಗಳಿಗೆ ನನ್ನ ಬುದ್ಧಿಯ ದೋಷವೆಂದು ತಿಳಿದು ಹಂಸಕ್ಷೀರ ನ್ಯಾಯದಂತೆ ಗ್ರಂಥದ ಅನುವಾದಗಳನ್ನು ಅವಲೋಕಿಸಬೇಕಾಗಿ ನಮ್ರ ಪ್ರಾರ್ಥನೆ.

ತರೀ ನ್ಯೂನ ತೇ ಪುರತೇ । ಅಧಿಕ ತೇ ಸರತೇ ।
ಕರೂನಿ ಘೇಯಾವೇ ಹೇ ತುಮತೇ । ವಿನವಿತು ಅಸೇ ॥

ಪರಮ ಪವಿತ್ರ ಪ್ರಾಸಾದಿಕವಾಗಿರುವ ಈ ಗ್ರಂಥವನ್ನು ಭಕ್ತ ಭಾವಿಕರು ಪೂಜ್ಯಭಾವದಿಂದ ಪವಿತ್ರ ಸ್ಥಾನದಲ್ಲಿ ಸ್ಥಾಪಿಸಿ ಪೂಜೆಯೊಂದಿಗೆ ವಂದಿಸಿ ಓವೀಗಳನ್ನು ಪಾರಾಯಣ ಮಾಡುವ ಜೊತೆಗೆ ಅರ್ಥದ ಅವಲೋಕನ ಮಾಡಬೇಕಾಗುವುದು. ಬ್ರಹ್ಮ ಸಾಮ್ರಾಜ್ಯದ ಜ್ಯೋತಿಯಾಗಿರುವ, ಮಂತ್ರಮಯಗಳಾದ ಓವೀಗಳನ್ನು ಓದದೆ ಕೇವಲ ಅರ್ಥ ಓದುವುದು ಉಚಿತವಾಗುವುದಿಲ್ಲ. ಓವೀಗಳ ಅರ್ಥವನ್ನು ಮಾಡಿಕೊಂಡು ಅನುಭವಕ್ಕೆ ತರಲು ಪ್ರಯತ್ನಿಸಬೇಕಾಗುವುದು.

ಜ್ಞಾನೇಶ್ವರೀ ಗ್ರಂಥದ ಪ್ರತಿಯೊಂದು ಓವೀಯ ಅರ್ಥವನ್ನು ಸರಿಯಾಗಿ ಅಭ್ಯಾಸ ಮಾಡಿ ಮನನ ಮಾಡಿಕೊಂಡಾಗ ವೈಯಕ್ತಿಕ, ಸಾಮುದಾಯಿಕ ಪಾರಾಯಣಗಳಲ್ಲಿ ಅರ್ಥದ ಪ್ರಕಾಶದಿಂದ ತುಂಬಿದ ಆನಂದವು ಲಭಿಸುವುದು. ಹೀಗಾದಾಗಲೇ ಶ್ರೀ ಸಾರ್ಥಜ್ಞಾನೇಶ್ವರೀ ಗ್ರಂಥದ ಪಾರಾಯಣವು ಸಾರ್ಥಕವಾಗುವುದು. ಮರಾಠಿ ತಿಳಿಯದವರಿಗೆ ಈ ಕನ್ನಡ ಶ್ರೀ ಸಾರ್ಥ ಜ್ಞಾನೇಶ್ವರೀ ಗ್ರಂಥವು ಪಾಮರರಿಂದ ಹಿಡಿದು ಪಂಡಿತರವರೆಗೂ ಆತ್ಮ ಸಾಧನೆಗೆ ಬಹು ಉಪಯೋಗದ್ದಾಗಿರುವುದು. ಅನನ್ಯ ಶ್ರದ್ಧೆಯಿಂದ ಇದರ ಸೇವಕರಾಗಿ ಈ ಗ್ರಂಥ ಶಾಸ್ತ್ರದ ಶಸ್ತ್ರಗಳಿಂದ ಸಂಸಾರ ಯುದ್ಧವನ್ನು ಗೆದ್ದು ಬ್ರಹ್ಮ ಸಾಮ್ರಾಜ್ಯ ಪದವಿಯನ್ನು ಪ್ರಾಪ್ತಿ ಮಾಡಿಕೊಳ್ಳುವ ಸುಬುದ್ಧಿಯನ್ನು ಎಲ್ಲರಿಗೂ ಸಂತ ಶ್ರೇಷ್ಠ ಶ್ರೀಜ್ಞಾನೇಶ್ವರ ಮಹಾರಾಜರು ದಯಪಾಲಿಸಲಿ ಎಂದು ಅವರ ದಿವ್ಯ ಚರಣಗಳಲ್ಲಿ ಮಸ್ತಕವನ್ನಿಟ್ಟು ಪ್ರಾರ್ಥಿಸುತ್ತೇನೆ.

ಹೃದ್ಗತವನ್ನು ಬರೆದುಕೊಟ್ಟು ಈ ಗ್ರಂಥಕ್ಕೆ ವೈಭವವನ್ನು ತಂದು ಕೊಟ್ಟ ಶ್ರೀ ಚೈತನ್ಯ ಸದ್ಗುರು ಹ.ಭ.ಪ. ತಾತ್ಯಾಸಾಹೇಬ ಬಾಬಾಸಾಹೇಬ ವಾಸಕರ ಮಹಾರಾಜರವರ ಪೂಜ್ಯ ಚರಣ ಕಮಲಗಳಲ್ಲಿ ಕೃತಜ್ಞತೆಗಳೊಂದಿಗೆ ಅನನ್ಯ ಭಾವದ ಸಾಷ್ಟಾಂಗ ದಂಡವತಗಳೊಂದಿಗೆ ನಮಿಸುವೆ.

ಈ ಗ್ರಂಥ ಮುದ್ರಣದ ಆರಂಭದಿಂದಲೂ ಕೊನೆಯವರೆಗೆ ಪ್ರತ್ಯಕ್ಷವಾಗಿ, ಅಪ್ರತ್ಯಕ್ಷವಾಗಿ ಸಹಾಯ ಸಹಕಾರಗಳನ್ನು ನೀಡಿದ ಎಲ್ಲ ಮಹನೀಯರಿಗೆ ಹೃತ್ಪೂರ್ವಕವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತ ಇವರೆಲ್ಲರಿಗೂ ಭಕ್ತಕಾಮ ಕಲ್ಪದ್ರುಮ ಶ್ರೀ ಪಾಂಡುರಂಗನು ಎಲ್ಲ ದೃಷ್ಟಿಯಿಂದಲೂ ಕಲ್ಯಾಣವನ್ನುಂಟು ಮಾಡಲಿ ಎಂದು ಅನನ್ಯ ಪ್ರಾರ್ಥನೆಯೊಂದಿಗೆ ನನ್ನ ಅಲ್ಪಮತಿಯ ಪ್ರಸ್ತಾವನೆಯನ್ನು ಮುಗಿಸುವೆನು.

ಸಂತ ಚರಣ ಸೇವಕರ ಸೇವಕ,

ಹ.ಭ.ಪ.ಕೃಷ್ಣಾಜೀ ಡೋಂಗ್ರಪ್ಪ ಜ್ಞಾನಮೋಲೆ, ಕೊಪ್ಪಳ.

# ಹೃದ್ಗತ

ಮಹಾಭಾರತ ಭೀಷ್ಮ ಪರ್ವ ಪ್ರಸಂಗದಲ್ಲಿ ಅರ್ಜುನನು ಕುರುಕ್ಷೇತ್ರ ರಣರಂಗದಲ್ಲಿ ಕೂಡಿರುವ ತನ್ನ ಗುರುಬಂಧು ಇತ್ಯಾದಿ ಗೋತ್ರಜರನ್ನು ಕಂಡು ಮೋಹಿತನಾಗಿ ನಾನು ಕೊಲ್ಲುವವನು ಇವರು ಸಾಯುವವರು, ಇದರಿಂದ ನನಗೆ ಗೋತ್ರವಧೆಯ ಪಾಪ ಬರುವುದು, ಮುಂದೆ ವರ್ಣಸಂಕರಾದಿ ದೋಷಗಳಿಂದ ಅನಿಷ್ಠಗಳು ಒದಗುವುವು ಎಂದು ಅನೇಕ ರೀತಿಯಲ್ಲಿ ಚಿಂತಿಸಿ ಯುದ್ಧವನ್ನು ತ್ಯಜಿಸಿ ವಿಷಾದಪಟ್ಟು ಚಿಂತಾಗ್ರಸ್ಥನಾಗಿ ಸಂಕಟಕ್ಕೆ ಗುರಿಯಾದನು. ಕೊನೆಗೆ ಏನೂ ತಿಳಿಯಲಾರದಂತಾಗಿ ತನ್ನ ಸ್ವಾಮಿಯಾದ ಶ್ರೀಕೃಷ್ಣ ಪರಮಾತ್ಮನಿಗೆ ಶರಣಾಗತನಾಗಿ ಶಿಷ್ಯ ಭಾವದಿಂದ ನನಗೆ ಸರಿಯಾದ ಮಾರ್ಗದರ್ಶನ ಮಾಡಿ ಉಪದೇಶಿಸಿರಿ ಎಂದು ಪ್ರಾರ್ಥಿಸಿದನು. ಆಗ ಪರಬ್ರಹ್ಮ ಮೂರ್ತಿಯಾದ ಶ್ರೀಕೃಷ್ಣ ಪರಮಾತ್ಮನು ಜಗತ್ಕಲ್ಯಾಣ ದೃಷ್ಟಿಯಿಂದ ಅರ್ಜುನನಿಗೆ ನಿಮಿತ್ತ ಮಾಡಿ ಶ್ರೀಮದ್‌ಭಗವದ್ಗೀತೆಯನ್ನು ಉಪದೇಶಿಸುವನು.

ಅರ್ಜುನಾ ಸಂಕಟ ಪಡತಾ ಜಡಭಾರಿ । ಗೀತಾ ಸಾಂಗೇ ಹರಿ ಕುರುಕ್ಷೇತ್ರಿ ॥

ಈ ಭಗವದ್ಗೀತೆಯು ಎಲ್ಲ ವೇದಗಳ ಸಾರವಾಗಿದ್ದು ಪ್ರಸ್ಥಾನತ್ರಯಗಳಲ್ಲಿ ಅಗ್ರಸ್ಥಾನ ಪಡೆದಿರುವುದು. ಆದರೆ ಇದು ಸಂಸ್ಕೃತ ಭಾಷೆಯಲ್ಲಿರುವುದರಿಂದ ಸರ್ವ ಸಾಮಾನ್ಯರಿಗೆ ತಿಳಿಯಲಾರದಂತಾಯಿತು. ಇದನ್ನರಿತ ಶ್ರೀಕೃಷ್ಣ ಪರಮಾತ್ಮನಿಗೆ ಸಂಕಟವಾಯಿತು. ಆಗ ಆತನೇ ಜಗದೋದ್ಧಾರಕ್ಕಾಗಿ ಗೀತಾ ಗ್ರಂಥವನ್ನು ಮರಾಠಿ ಪ್ರಾಕೃತ ಭಾಷೆಯಲ್ಲಿ ಪ್ರಚಾರಗೊಳಿಸಲು ಅಲಂಕಾಪುರದಲ್ಲಿ ಶ್ರೀ ಜ್ಞಾನೇಶ್ವರ ಮಹಾರಾಜರ ರೂಪದಿಂದ ಅವತರಿಸಿ ರಸಾಳವಾಣಿಯಿಂದ ಬ್ರಹ್ಮ ವಿದ್ಯೆಯ ಸುಕಾಳವಾಗುವಂತೆ ಅತ್ಯದ್ಭುತವಾದ ಗ್ರಂಥರಾಜ ಶ್ರೀ ಜ್ಞಾನೇಶ್ವರೀಯನ್ನು ತಮ್ಮ ಹದಿನೈದನೆಯ ವಯಸ್ಸಿನಲ್ಲಿಯೇ ನಿರ್ಮಿಸಿದರು.

ಸಂಸ್ಕೃತಾಚಿ ಭಾಷಾ ಜಗಾಸೀ ಕಳೇನಾ । ಮ್ಹಣೋನಿ ನಾರಾಯಣಾ ಸಂಕಟ ಪಡಲೇ ॥  
ತೋಚಿ ಅವತಾರ ಧರೀ ಅಲಂಕಾಪುರಿ । ಜ್ಞಾನಾಬಾಈ ಸುಂದರೀ ತಾರಾವಯಾ ॥  
ಸಂಸ್ಕೃತಾಚಿ ಗಾಠಿ ಉಘಡೋನಿ ಜ್ಞಾನದೃಷ್ಟಿ । ಕೇಲೀಸೇ ಮರಾಠಿ ಗೀತಾದೇವಿ ॥  
ಗೀತಾ ಅಲಂಕಾರ ನಾಮ ಜ್ಞಾನೇಶ್ವರೀ । ಬ್ರಹ್ಮಾನಂದ ಲಹರೀ ಪ್ರಗಟ ಕೇಲಿ ॥

ಯೇ ಮರ್ಹಾಠಿಯೇಚಿಯಾ ನಗರೀ । ಬ್ರಹ್ಮವಿದ್ಯೇಚಾ ಸುಕಾಳು ಕರೀ ।  
ಘೇಣೇ ದೇಣೇ ಸುಖಚಿವರೀ । ಹೋ ದೇಈ ಯಾ ಜಗಾ ।೧೨-೧೬॥

ಮಾಝಾ ಮರಾಠಾಚಿ ಬೋಲು ಕೌತುಕೇ । ಪರೀ ಅಮೃತಾತೇಹೀ ಪೈಜಾ ಜಿಂಕೇ ।  
ಐಸೀ ಅಕ್ಷರೇ ರಸಿಕೇ । ಮೇಳವೀನ ।೧೬-೧೪॥

ಜಗದೋದ್ಧಾರಕ್ಕಾಗಿ ನಿರ್ಮಾಣಗೊಂಡ ಇಂಥ ಪರಮ ಪವಿತ್ರ ಶ್ರೇಷ್ಠ ಶ್ರೀ ಜ್ಞಾನೇಶ್ವರೀ ಗ್ರಂಥವು ಮರಾಠಿ ಭಾಷೆಯಲ್ಲಿದ್ದು ಕರ್ನಾಟಕ ವಾರಕರೀ ಭಕ್ತ ಭಾವಿಕರಿಗೆ ಇದರ ಸರಿಯಾದ ಅರ್ಥವಾಗದೇ ಇದೊಂದು ದೊಡ್ಡ ಕೊರತೆಯಾಗಿತ್ತು. ಶ್ರೀ ಸಂತ ಜ್ಞಾನೇಶ್ವರ ಮಹಾರಾಜರು ಸರ್ವಜ್ಞರಿದ್ದು ಇವರಿಗೆ ಅನೇಕ ಭಾಷೆಗಳ ಜ್ಞಾನವೂ ಇತ್ತು. ಇವರು ಗುಜರಾತ, ಹಿಂದಿ, ಕನ್ನಡ ಇತ್ಯಾದಿ ಭಾಷೆಗಳಲ್ಲೂ ಅಭಂಗಗಳನ್ನು ರಚಿಸಿರುವರು.

ಅಕ್ಕ ನೀ ಕೇಳೇ ಚಿಕ್ಕದೊಂದು ಮಾತು । ಕೊಳಲಿನ ಧ್ವನಿಗೆ ನಾ ಮರುಳಾದೆ ॥ ಜ್ಞಾನೇಶ್ವರೀ ಗ್ರಂಥದಲ್ಲಿಯೂ ಅನೇಕ ಭಾಷೆಗಳನ್ನು ಪ್ರಯೋಗಿಸಿ ಗೌರವಿಸಿರುವರು. ಛಪ್ಪನ್ನ ಭಾಷೇಚಾ ಕೇಲಾಸೇ ಗೌರವ । ಭವಾರ್ಣವಿ ನಾವ

ಉಭಾರಿಲಾ ॥ ಕರ್ನಾಟಕದಲ್ಲಿ ವಾರಕರೀ ಸಾಂಪ್ರದಾಯವು ದಿನೇ ದಿನೇ ಬೆಳೆಯುತ್ತಿದೆ. ಇವರಿಗಾಗಿ ಕನ್ನಡ ಭಾಷೆಯಲ್ಲಿ ಶ್ರೀ ಜ್ಞಾನೇಶ್ವರೀ ಶುದ್ಧ ಪ್ರತಿಗಳನ್ನು ನಿರ್ಮಿಸಬೇಕೆಂದು ಐವತ್ತು ವರ್ಷಗಳ ಹಿಂದೆಯೇನನ್ನ ಬಯಕೆ ಇತ್ತು. ನಲವತ್ತೇಳು ವರ್ಷಗಳ ಪೂರ್ವದಲ್ಲಿ ನಾನು ಪ್ರಪ್ರಥಮವಾಗಿ ಕನ್ನಡ ಭಜನಿ ಮಾಲಿಕಾ ಪ್ರಕಟಿಸಿರುವುದು ತಮಗೆಲ್ಲರಿಗೂ ತಿಳಿದಿರುವುದು. ಫಡದ ವಿವಿಧ ಕಾರ್ಯಗಳು, ಅನೇಕ ಕಡೆಗಳಲ್ಲಿ ಮಹತ್ವಪೂರ್ಣ ಕಾರ್ಯಕ್ರಮಗಳಿಗೆ ಭಾಗವಹಿಸುವುದು, ಶ್ರೀ ಕ್ಷೇತ್ರ ವಾಸಿಯಲ್ಲಿ ಬೃಹತ್ ಪ್ರಮಾಣದ ತಪೋವನ ನಿರ್ಮಾಣಗೊಳಿಸುವುದು ಇತ್ಯಾದಿ ಮೇಲಿಂದ ಮೇಲೆ ಬಿಡುವಿಲ್ಲದ ಕಾರ್ಯ ಹಾಗೂ ನನ್ನ ಪ್ರಕೃತಿಯ ಪ್ರತಿಕೂಲತೆಗಳಿಂದ ನನ್ನ ತಳಮಳಿತ ಅಪೇಕ್ಷೆಯು ಬೇಗನೇ ಪೂರ್ಣಗೊಳ್ಳಲಿಲ್ಲ. ತುಕಾಮ್ಹಣೇ ನಾಹೀ ಚಾಲತ ತಾತಡಿ । ಪ್ರಾಪ್ತ ಕಾಳ ಘಡಿ ಆಲ್ಯಾವೀಣ ॥ ಈ ಯಾವ ನನ್ನ ಸಂಕಲ್ಪವು ಈಶ್ವರ ಪ್ರೇರಣೆಯಿಂದ ಕೊಪ್ಪಳದ ಜ್ಞಾನಮೋರೆ ಕೃಷ್ಣಾಜಿಗೆ ನಿಮಿತ್ತ ಮಾಡಿ ಕರ್ನಾಟಕದ ಭಕ್ತ ಭಾವಿಕರಿಗೆ ಸಾರ್ಥ ಕನ್ನಡ ಶ್ರೀಜ್ಞಾನೇಶ್ವರೀ ೩೦೦೦ ಗ್ರಂಥಗಳು ದಾನರೂಪವಾಗಿ ದೊರೆಯಲು ಸಾಧ್ಯವಾಯಿತು. ಶ್ರೀರಾಮನು ವಾನರರಿಂದ ಲಂಕೆಯನ್ನು ಪಡೆಯಲಿಲ್ಲವೆ? ವಾನರಾ ಹಾತೀ ಲಂಕಾ । ಘೇವವಿಲೀ ಮ್ಹಣೇ ತುಕಾ ॥ ಇದರಿಂದ ನನ್ನ ಅಂತಃಕರಣಕ್ಕೆ ಬಹಳ ಆನಂದವಾಗಿ ಬಹುದಿನಗಳ ಇಚ್ಛೆಯು ಪೂರ್ಣಗೊಂಡಿದ್ದಕ್ಕೆ ಕೃತಕೃತ್ಯನಾಗಿರುವೆನು. ಬಹುತ ದಿವಸ ಹೋತೀ ಮಜ ಆಸ । ಆಜೀ ಫಡಲೇ ಸಾಯಾಸೇರೇ ॥ ಕೃತಕೃತ್ಯ ಝಾಲೋ । ಇಚ್ಛಾ ಕೇಲಿ ತೇ ಪಾವಲೋ ॥ ಈ ಜ್ಞಾನೇಶ್ವರೀ ಗ್ರಂಥ ರೂಪ ಮಂದಿರಕ್ಕೆ ಕೆಲವರು ಜಪರೂಪ ಪ್ರದಕ್ಷಣೆ ಮಾಡುವರು, ಶ್ರವಣರೂಪ ನೆರಳಿನಲ್ಲಿ ಕುಳಿತುಕೊಳ್ಳುವರು. ಏಕ ಪ್ರದಕ್ಷಿಣಾ ಜಪಾಚಿಯಾ । ಬಾಹೇರೋನಿ ಕರಿತೀ ಯಯಾ । ಏಕ ತೇ ಶ್ರವಣ ಮಿಷೇ ಛಾಯಾ । ಸೇವಿತಿ ಯಯಾಚಿ ।೧೮-೪೫॥ ಶ್ರೀಮಂತರ ಮನೆಗೆ ಭೋಜನಕ್ಕೆ ಹೋದಾಗ್ಗೆ ಪಂಕ್ತಿಯಲ್ಲಿ ಮೇಲಿನ ಕೆಳಗಿನ ಎಲೆಗಳಲ್ಲಿ ಒಂದೇ ಪ್ರಕಾರದ ಪಕ್ವಾನ್ನಗಳು ಇರುವುವು. ಶ್ರವಣ, ಪಠಣ, ಅರ್ಥ ತಿಳಿದುಕೊಳ್ಳುವವರಿಗೆ ಒಂದೇ ಮೋಕ್ಷವು ಲಭಿಸುವುದು. ಸಮರ್ಥಾಚಿಯೇ ಪಂಕ್ತಿ ಭೋಜನೇ । ತಳಿಲ್ಯಾ ವರಿಲ್ಯಾ ಏಕಚಿ ಪಕ್ವಾನ್ನೇ । ತೇವಿ ಶ್ರವಣೇ ಅರ್ಥೆ ಪಠಣೇ । ಮೋಕ್ಷುಚಿ ಲಾಭೇ ।೧೮-೪೮॥ ಈ ಗ್ರಂಥದ ಶ್ರವಣ ಮಾಡಿ ಸುಖ ಸಾಮ್ರಾಜ್ಯವನ್ನು ಪಡೆದುಕೊಳ್ಳಬೇಕು. ಶ್ರವಣಾಚಿ ಮಿಸೇ ಬೈಸಾವೇ ಯೇವೂನಿ । ಸಾಮ್ರಾಜ್ಯ ಭುವನೀ ಸುಖೀ ನಾಂದೇ ॥ ಒಟ್ಟಿನಲ್ಲಿ ಕಾಯಾ ವಾಚಾಮನದಿಂದ ಯಾರು ಈ ಗ್ರಂಥದ ಸೇವಕರಾಗುವರೋ ಅವರು ಸ್ವಾನಂದಸಾಮ್ರಾಜ್ಯದ ಚಕ್ರವರ್ತಿಯಾಗುವರು. ಮ್ಹಣೌನಿ ಮನೇ ಕಾಯೇ ವಾಚಾ । ಜೋ ಸೇವಕ ಹೋಈಲ ಇಯೇಚಾ । ತೋ ಸ್ವಾನಂದ ಸಾಮ್ರಾಜ್ಯಾಚಾ । ಚಕ್ರವರ್ತೀ ಕರೀ ।೧೮-೧೬೬೭॥ ನಾಮಾ ಮ್ಹಣೇ ಗ್ರಂಥ ಶ್ರೇಷ್ಠ ಜ್ಞಾನದೇವಿ । ಏಕತರಿ ಓವೀ ಅನುಭವಾವಿ ॥ ಆದ್ದರಿಂದ ಪ್ರತಿಯೊಬ್ಬರೂ ಈ ಗ್ರಂಥದ ಪೂರ್ಣ ಉಪಯೋಗ ಪಡೆದು ಜನ್ಮ ಸಾರ್ಥಕ ಮಾಡಿಕೊಳ್ಳಬೇಕೆಂಬ ನನ್ನ ಇಚ್ಛೆಯನ್ನು ಪೂರ್ಣಗೊಳಿಸಬೇಕು. ಈ ಜ್ಞಾನೇಶ್ವರೀ ಗ್ರಂಥದ ಸುಪ್ತ, ಗುಪ್ತ ಆತ್ಮ ವಿಶ್ವಾಸವು ಪೂರ್ಣ ಸಾಮರ್ಥ್ಯದಿಂದ ಪ್ರಕಟವಾಗಲಿ ಎಂದು ಬಯಸುವೆನು. ಕನ್ನಡದಲ್ಲಿ ಸಾರ್ಥ ಶ್ರೀ ಜ್ಞಾನೇಶ್ವರೀ ಗ್ರಂಥವನ್ನು ಶುದ್ಧ ರೀತಿಯಲ್ಲಿ ಅನುವಾದಿಸುವ ಸ್ತುತ್ಯ ಹಾಗೂ ಅತ್ಯಾವಶ್ಯಕ ಸೇವೆಯನ್ನು ಮಾಡಿದ್ದಕ್ಕೆ ಜ್ಞಾನಮೋರೆ ಕೃಷ್ಣಾಜಿಗೆ ಪರಮಾತ್ಮನು ಆಯುರಾರೋಗ್ಯ ಹಾಗೂ ಸದ್ಬುದ್ಧಿಯನ್ನು ದಯಪಾಲಿಸಿ ಮೇಲಿಂದ ಮೇಲೆ ಇಂಥ ಕಾರ್ಯಗಳನ್ನು ಮಾಡಿಸಿಕೊಳ್ಳಲಿ ಎಂದು ಭಕ್ತ ಕಾಮ ಕಲ್ಪದ್ರುಮ ಶ್ರೀ ಪಾಂಡುರಂಗನ ಚರಣಗಳಲ್ಲಿ ಮಸ್ತಕವನ್ನಿಟ್ಟು ಪ್ರಾರ್ಥಿಸಿ ನನ್ನ ಹೃದ್ಗತವನ್ನು ಮುಗಿಸುವೆ.

ಹ. ಭ. ಪ. ತಾತ್ಯಾಸಾಹೇಬ ಬಾಬಾಸಾಹೇಬ ವಾಸಕರ

## ಪ್ರಸ್ತಾವನೆ (ದ್ವಿತೀಯ ಮುದ್ರಣ)

ಹತ್ತು ವರ್ಷಗಳಿಂದ ಸತತವಾಗಿ ಸಾಧಕ ಸದ್ಭಕ್ತರಿಂದ ಈ ಸಾರ್ಥ ಶ್ರೀಜ್ಞಾನೇಶ್ವರೀ ಗ್ರಂಥಗಳ ಬೇಡಿಕೆ ಇದ್ದರೂ ಕೂಡ ಹಣದ ಅನುಕೂಲತೆ ಇಲ್ಲದ್ದಕ್ಕೆ ಮರುಮುದ್ರಣ ಸಾಧ್ಯವಾಗಿರಲಿಲ್ಲ. ಈಗ ಶ್ರೀಹರಿಗುರುಕೃಪೆಯಿಂದ ಸಾರ್ಥ ಶ್ರೀಏಕನಾಥೀ ಭಾಗವತ ಗ್ರಂಥಗಳ ಪ್ರಥಮ ಮುದ್ರಣಗೊಳ್ಳುತ್ತಿರುವ ಸುಸಂಧಿಯು ಸಾಧಿಸಿದ್ದಕ್ಕೆ ಇದೇ ಸಮಯದಲ್ಲಿ ಈ ಗ್ರಂಥಗಳ ಬೇಡಿಕೆ ಇದ್ದವರಿಂದ ಮುಂಗಡವಾಗಿ ಹಣ ಸಂಗ್ರಹಿಸಿ ಮರು ಮುದ್ರಣವನ್ನು ಸಾಧಿಸಲಾಯಿತು.

ಪ್ರಥಮ ಮುದ್ರಣವಾದ ಈ ಸಾರ್ಥ ಶ್ರೀಜ್ಞಾನೇಶ್ವರೀ ಗ್ರಂಥದಲ್ಲಿ ಅಲ್ಲಲ್ಲಿ ಆದ ತಪ್ಪುಗಳನ್ನು ಸರಿಪಡಿಸಿ ಸಾಹಿತ್ಯವನ್ನೂ ಸುಂದರಗೊಳಿಸಿ ಆಕರ್ಷಣೆಯಾಗುವಂತೆ ಮುದ್ರಣ ಕಾರ್ಯವನ್ನು ನೆರವೇರಿಸಲಾಗಿದೆ. ವಿಶೇಷವಾಗಿ ಈ ಗ್ರಂಥದಲ್ಲಿ ಮಹತ್ವಪೂರ್ಣವಾದ ವರ್ಣಾನುಕ್ರಮಣಿಕೆಯನ್ನು ಅಳವಡಿಸಲಾಗಿದೆ.

ಈ ಗ್ರಂಥದ ಡಿ.ಟಿ.ಪಿ.ಯ ಕಾರ್ಯವನ್ನು ಕಂಪ್ಯೂಟೆಕ್ ಡಾಟಾ ಫೋರ್ಸ್, ಕೊಪ್ಪಳ ಇದರ ಮಾಲೀಕರಾದ ಶ್ರೀಯುತ ಮಲ್ಲಿಕಾರ್ಜುನ ಮುದಿಯಪ್ಪ ಕೊತಬಾಳ ಡಿ.ಸಿ. ಎಸ್. ಇವರು ಅನನ್ಯ ಶ್ರದ್ಧೆಯಿಂದ ಯೋಗ್ಯದರದಲ್ಲಿ ನೆರವೇರಿಸಿಕೊಟ್ಟರು. ಇವರ ಮಾರ್ಗದರ್ಶನದಲ್ಲಿ ಶ್ರೀಯುತ ರಮೇಶ ಮಲ್ಲಪ್ಪ ತುಪ್ಪದ, ಕೊಪ್ಪಳ ಇವರು ಬಹಳ ಅಚ್ಚುಕಟ್ಟಾಗಿ, ಸುಂದರವಾಗಿ ಎಲ್ಲ ಅಧ್ಯಾಯಗಳ ಅಕ್ಷರ ಜೋಡಣೆ ಕಾರ್ಯವನ್ನು ಯೋಗ್ಯದರದಲ್ಲಿ ಮಾಡಿಕೊಟ್ಟರು.

ಡಿ.ಟಿ.ಪಿ.ಯಲ್ಲಿ ಆದ ತಪ್ಪುಗಳನ್ನು ಹ.ಭ.ಪ.ಪಾಂಡುರಂಗರಾವ ದತ್ತೋಬರಾವ ಮಹೇಂದ್ರಕರ (ನಿವೃತ್ತ ಶಿಕ್ಷಕರು) ಗದಗ, ಹ.ಭ.ಪ.ಗೋಪಾಲಕೃಷ್ಣರಾವ ಶಂಕರರಾವ ಘಟಗೆ ಕೊಪ್ಪಳ, ಹ.ಭ.ಪ.ನರಸಪ್ಪ ಯಮನಪ್ಪ ಹಡಪದ, ಕೊಪ್ಪಳ, ಶ್ರೀಯುತ ರಾಮಚಂದ್ರರಾವ ತುಳಜಾರಾಮರಾವ ಬೋಂದಾಡೆ, ಕೊಪ್ಪಳ ಹಾಗೂ ಕುಮಾರಿ ದ್ರೌಪತೀ ಡೋಂಗರೀಬಾ ಜ್ಞಾನಮೋಠೆ, ಕೊಪ್ಪಳ ಇವರು ತಿದ್ದಿ ಸರಿಪಡಿಸಿದ್ದಾರೆ.

ಈ ಗ್ರಂಥದ ವರ್ಣಾನುಕ್ರಮಣಿಕೆಯನ್ನು ಹ.ಭ.ಪ.ನಾಗೇಂದ್ರರಾವ ನರಸಿಂಗರಾವ ಲೋಖಂಡೆ, ಬೆಂಗಳೂರು ಇವರು ಬಹು ಶ್ರಮ ವಹಿಸಿ ತಮ್ಮ ಸಂಗಡಿಗರಾದ ಶ್ರೀಯುತ ಹರೀಶ ರಾಮಕೃಷ್ಣ ಚಂದಾವರ, ಬೆಂಗಳೂರು ಹಾಗೂ ಹ.ಭ.ಪ. ಭಾಸ್ಕರ ಕೃಷ್ಣಮೂರ್ತಿ ಥಗೆ, ಬೆಂಗಳೂರು ಇವರ ಡಿ.ಟಿ.ಪಿ.ಸಹಕಾರ ಸೇವೆಯನ್ನು ಸ್ವೀಕರಿಸಿ ಸುಂದರವಾಗಿ ನಿರ್ಮಿಸಿಕೊಟ್ಟಿರುವರು.

ಈ ಗ್ರಂಥದ ಮುದ್ರಣವನ್ನು ಬೈಂಡಿಂಗ್ ಸಮೇತವಾಗಿ ಗದುಗಿನ ಫ.ಶಿ.ಭಾಂಡಗೆಯವರ ತ್ವರಿತ ಮುದ್ರಣ ಆಫಸೆಟ್ ಪ್ರಿಂಟರ್ಸ್ ಇದರ ಮಾಲೀಕರಾದ ಕೆ.ಅಶೋಕ ಇವರು ಧಾರ್ಮಿಕ ಬುದ್ಧಿಯಿಂದ ಯೋಗ್ಯ ಬೆಲೆಯಲ್ಲಿ ಅತ್ಯಂತ ಸುಂದರವಾಗಿ ಮನಮೆಚ್ಚುವಂತೆ ತ್ವರಿತ ಗತಿಯಲ್ಲಿ ನೆರವೇರಿಸಿಕೊಟ್ಟು ತಮ್ಮ ಮುದ್ರಣಾಲಯದ ಹೆಸರನ್ನು ಸಾರ್ಥಕಗೊಳಿಸಿರುವರು.

ಇವರೆಲ್ಲರಿಗೂ ಮತ್ತು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಾಯ, ಸಹಕಾರ ನೀಡಿದ ಎಲ್ಲ ಮಹನೀಯರಿಗೂ ಭಕ್ತಕಾಮಕಲ್ಪದ್ರುಮ ಶ್ರೀಪಾಂಡುರಂಗನು ಆಯುರಾರೋಗ್ಯ ಕೊಟ್ಟು ಸಕಲ ಸನ್ಮಂಗಲಗಳನ್ನುಂಟು ಮಾಡಲಿ ಎಂದು ಅನನ್ಯ ಭಾವದಿಂದ ಪ್ರಾರ್ಥಿಸಿ ನನ್ನ ಅಲ್ಪಮತಿಯ ಚಿಕ್ಕ ಪ್ರಸ್ತಾವನೆಗೆ ವಿರಾಮಗೊಳಿಸುವೆನು.

ಸಂತ ಚರಣ ಸೇವಕರ ಸೇವಕ,

ಕೃಷ್ಣಾಜೀ ಡೋಂಗ್ರಪ್ಪ ಜ್ಞಾನಮೋಠೆ, ಕೊಪ್ಪಳ.

# ಅಥ ಧ್ಯಾನಮ್

ಪಾರ್ಥಾಯ ಪ್ರತಿಬೋಧಿತಾಂ ಭಗವತಾ ನಾರಾಯಣೇನ ಸ್ವಯಮ್ ।
ವ್ಯಾಸೇನ ಗ್ರಥಿತಾಂ ಪುರಾಣಮುನಿನಾ ಮಧ್ಯೇ ಮಹಾಭಾರತಮ್ ।
ಅದ್ವೈತಾಮೃತವರ್ಷಿಣೀಂ ಭಗವತೀಮ್ ಅಷ್ಟಾದಶಾಧ್ಯಾಯಿನೀಮ್ ।
ಅಂಬ ತ್ವಾಮನುಸಂದಧಾಮಿ ಭಗವದ್ಗೀತೇ ಭವದ್ವೇಷಿಣೀಮ್ । ॥೧॥

ನಮೋಽಸ್ತು ತೇ ವ್ಯಾಸ ವಿಶಾಲಬುದ್ಧೇ ಫುಲ್ಲಾರವಿಂದಾಯತಪತ್ರನೇತ್ರ ।
ಯೇನ ತ್ವಯಾ ಭಾರತ ತೈಲಪೂರ್ಣಃ ಪ್ರಜ್ವಾಲಿತೋ ಜ್ಞಾನಮಯಃ ಪ್ರದೀಪಃ ॥೨॥

ಪ್ರಪನ್ನ ಪಾರಿಜಾತಾಯ ತೋತ್ರವೇತ್ರೈಕಪಾಣಯೇ ।
ಜ್ಞಾನಮುದ್ರಾಯ ಕೃಷ್ಣಾಯ ಗೀತಾಮೃತದುಹೇ ನಮಃ ॥೩॥

ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನಂದನಃ ।
ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್ ॥೪॥

ವಸುದೇವ ಸುತಂ ದೇವಂ ಕಂಸ ಚಾಣೂರ ಮರ್ದನಮ್ ।
ದೇವಕೀ ಪರಮಾನಂದಂ ಕೃಷ್ಣಂ ವಂದೇ ಜಗದ್ಗುರುಮ್ ॥೫॥

ಭೀಷ್ಮ ದ್ರೋಣ ತಟಾ ಜಯದ್ರಥ ಜಲಾ ಗಾಂಧಾರನೀಲೋತ್ಪಲಾ ।
ಶಲ್ಯಗ್ರಾಹವತೀ ಕೃಪೇಣ ವಹನೀ ಕರ್ಣೇನ ವೇಲಾಕುಲಾ ।
ಅಶ್ವತ್ಥಾಮ ವಿಕರ್ಣ ಘೋರ ಮಕರಾ ದುರ್ಯೋಧನಾವರ್ತಿನೀ ।
ಸೋತ್ತೀರ್ಣಾ ಖಲು ಪಾಂಡವೈ ರಣನದೀ ಕೈವರ್ತಕಃ ಕೇಶವಃ ॥೬॥

ಪಾರಾಶರ್ಯ ವಚಃ ಸರೋಜಮಮಲಂ ಗೀತಾರ್ಥಗಂಧೋತ್ಕಟಮ್ ।
ನಾನಾಖ್ಯಾನಕಕೇಸರಂ ಹರಿಕಥಾಸಂಬೋಧನಾ ಬೋಧಿತಮ್ ।
ಲೋಕೇ ಸಜ್ಜನಷಟ್ಪದೈರಹರಹಃ ಪೇಪೀಯಮಾನಂ ಮುದಾ ।
ಭೂಯಾದ್ಭಾರತ ಪಂಕಜಂ ಕಲಿಮಲಪ್ರಧ್ವಂಸಿ ನಃ ಶ್ರೇಯಸೇ ॥೭॥

ಮೂಕಂ ಕರೋತಿ ವಾಚಾಲಂ ಪಂಗುಂ ಲಂಘಯತೇ ಗಿರಿಮ್ ।
ಯತ್ಕೃಪಾ ತಮಹಂ ವಂದೇ ಪರಮಾನಂದಮಾಧವಮ್ ॥೮॥

ಯಂ ಬ್ರಹ್ಮಾ ವರುಣೇಂದ್ರರುದ್ರಮರುತಃ ಸ್ತುನ್ವಂತಿ ದಿವ್ಯೈಃಸ್ತವೈಃ ।
ವೇದೈಃ ಸಾಂಗಪದಕ್ರಮೋಪನಿಷದೈರ್ಗಾಯಂತಿ ಯಂ ಸಾಮಗಾಃ ।
ಧ್ಯಾನಾವಸ್ಥಿತ ತದ್ಗತೇನ ಮನಸಾ ಪಶ್ಯಂತಿ ಯಂ ಯೋಗಿನೋ ।
ಯಸ್ಯಾಂತಂ ನ ವಿದುಃ ಸುರಾಽಸುರಗಣಾ ದೇವಾಯ ತಸ್ಮೈ ನಮಃ ॥೯॥

# ಧ್ಯಾನಾರ್ಥ

ಹೇ ಮಹಾಮಾತೇ ಭಗವದ್ಗೀತೇ, ಭಗವಾನ ನಾರಾಯಣನು ಸ್ವತಃ ಅರ್ಜುನನಿಗೆ ಉಪದೇಶಿಸಿದ, ಪ್ರಾಚೀನ ಮುನೀ ವ್ಯಾಸರು ಮಹಾಭಾರತದಲ್ಲಿ ಕಥನ ಮಾಡಿದ, ಅದ್ವೈತರೂಪ ಅಮೃತದ ಮಳೆಗರೆದ, ಸಂಸಾರದ ದ್ವೇಷ ನಷ್ಟಮಾಡುವ ಮತ್ತು ಹದಿನೆಂಟು ಅಧ್ಯಾಯಗಳುಳ್ಳ ಯಾವ ಪೂಜ್ಯ ಗೀತೆಯೇ, ನಾನು ನಿನ್ನ ಚಿಂತನೆ ಸ್ಮರಣೆ ಮಾಡುವೆನು ।೧॥

ಅರಳಿದ ಕಮಲಪತ್ರದಂತೆ ಆಕರ್ಣ ನೇತ್ರಗಳಿರುವ ವಿಶಾಲ ಬುದ್ಧಿಯವರಾದ ಹೇ ವ್ಯಾಸ ಮುನಿಗಳವರೇ, ನೀವು ಭಾರತರೂಪ ತೈಲದಿಂದ ತುಂಬಿದ ಜ್ಞಾನಪ್ರಚುರ ದೀಪವನ್ನು ಪ್ರದೀಪ್ತಗೊಳಿಸಿರುವಿರಿ ।೨॥

ಶರಣಾಗತರಿಗೆ ಕಲ್ಪವೃಕ್ಷದಂತೆ ಇರುವ, ಒಂದು ಹಸ್ತದಲ್ಲಿ ಚಾಬಕ (ಬಾರುಕೋಲು) ಹಿಡಿದಿರುವ, ಜ್ಞಾನದ ಮುದ್ರೆ ಧರಿಸಿರುವ, ಗೀತಾಮೃತವನ್ನು ಹಿಂಡುವ ಶ್ರೀಕೃಷ್ಣನಿಗೆ ನನ್ನ ನಮಸ್ಕಾರಗಳು ।೩॥

ಸರ್ವ ಉಪನಿಷತ್‌ಗಳೇ ಆಕಳು, ನಂದಗೋಪಾಲನ ಪುತ್ರನು ಹಿಂಡಿಕೊಡುವ ಗವಳಿಗನು, ಗೀತಾಮೃತದ ಪ್ರಾಶನ ಮಾಡುವ ಭೋಕ್ತಾ - ಜೀವ ಬುದ್ಧಿಮಾನ ಪಾರ್ಥನು ಆಕಳದ ಕರು, ಆತನಿಗಾಗಿ ಮೋಕ್ಷದಂತಹ ಶ್ರೇಷ್ಠ ಫಲವನ್ನು ಕೊಡುವ ಗೀತಾಮೃತವನ್ನು ಹಿಂಡಿಕೊಳ್ಳಲಾಯಿತು ।೪॥

ವಸುದೇವನ ಪುತ್ರನು, ಕಂಸ ಹಾಗೂ ಚಾಣೂರರನ್ನು ಸಂಹರಿಸದವನಾದ ದೇವನು, ದೇವಕಿಯ ಪರಮಾನಂದನು, ಸರ್ವ ಜಗತ್ತಿಗೆ ಧರ್ಮೋಪದೇಶಕನಾದ ಶ್ರೀಕೃಷ್ಣನಿಗೆ ನಾನು ವಂದಿಸುವೆನು ।೫॥

ಭೀಷ್ಮ ಮತ್ತು ದ್ರೋಣರು ಯಾವ ರಣನದಿಯ ಎರಡು ದಂಡೆಗಳಾಗಿರುವರು. ಜಯದ್ರಥನು ಆ ನದಿಯ ಜಲನಾಗಿರುವನು. ಕೃಪಾಚಾರ್ಯರು ಇಲ್ಲಿ ಪ್ರವಾಹದಿಂದ ಹರಿಯುತ್ತಿರುವರು. ಕರ್ಣನಿಂದ ಈ ಎರಡೂ ದಂಡೆಗಳು ಕ್ಷುಬ್ಧಗೊಂಡಿವೆ. ಅಶ್ವತ್ಥಾಮ ಮತ್ತು ವಿಕರ್ಣರು ಈ ನದಿಯಲ್ಲಿನ ಭಯಂಕರವಾದ ನಕ್ರಗಳಾಗಿರುವರು. ದುರ್ಯೋಧನನು ಈ ನದಿಯ ದೊಡ್ಡ ತಿರುಗಣೆಯಾಗಿರುವನು. ಇಂತಹ ರಣರೂಪ ನದಿಯನ್ನು ಪಾಂಡವರು ನಿಜವಾಗಿಯೂ ದಾಟಿದರು. ಕಾರಣ, ಇವರ ಅಂಬಿಗನು ಸಾಕ್ಷಾತ್ ಭಗವಾನ ಕೇಶವನಾಗಿದ್ದನು ।೬॥

ಪರಾಶರ ಪುತ್ರರಾದ ವೇದವ್ಯಾಸರ ವಚನರೂಪ ಗೀತಾರ್ಥವೇ ಅದರ ಉತ್ಪನ್ನವಾಗಿರುವ ನಿರ್ಮಲ, ಶುದ್ಧ, ಧರ್ಮ್ಯ ಸ್ವರೂಪ ಗೀತಾರ್ಥವೇ ಅದರ ಉತ್ಕೃಷ್ಟವಾದ ಸುಗಂಧವಾಗಿದೆ. ನಾನಾ ಪ್ರಕಾರಗಳ ವ್ಯಾಖ್ಯಾನಗಳೇ ಅದರಲ್ಲಿನ ಕೇಸರವಾಗಿದೆ. ಹರಿಕಥಾರೂಪ ಸದ್ವಾಸನೆಯಿಂದ ಸುವಾಸನೆಯಾಗಿದೆ. ಈ ಲೋಕದ ಧಾರ್ಮಿಕ ಸಂತಜನರು ಇದೇ ಭ್ರಮರದಿಂದ ಪ್ರತಿದಿನವೂ ಬಹು ಸಂತೋಷವಾಗಿ ಮೇಲಿಂದ ಮೇಲೆ ಸೇವಿಸುತ್ತಿರುವರು. ಹೀಗೆ ಕಲಿಮಲವನ್ನು ನಾಶಮಾಡುವ, ಪಾಪಗಳನ್ನು ಹೊಡೆದೋಡಿಸುವ ಭಾರತರೂಪ ಕಮಲವು ನಮ್ಮ ಕಲ್ಯಾಣಕ್ಕೆ ಕಾರಣವಾಗಲಿ, ನಮ್ಮೆಲ್ಲರ ಉದ್ಧಾರ ಮಾಡಲಿ ।೭॥

ಯಾರ ಕೃಪೆಯಿಂದ ಮೂಕನು ಮಾತನಾಡುವನು, ಕುಂಟನು ಪರ್ವತವನ್ನು ಏರುವನು, ಇಂತಹ ಪರಮಾನಂದರೂಪ ಮಾಧವನಿಗೆ ನಾನು ಮನಸಾ ವಂದಿಸುವೆನು ।೮॥

ಬ್ರಹ್ಮದೇವ, ವರುಣ, ಇಂದ್ರ, ರುದ್ರ ಹಾಗೂ ಮರುದ್ಗಣ ಇವರು ಯಾರನ್ನು ದಿವ್ಯ ಸ್ತುತಿಗಳಿಂದ ಸ್ತುತಿಸುವರೋ, ಸಾಮಗಾಯನ ಮಾಡುವ ವೈದಿಕ ವ್ಯಾಕರಣಾದಿ ಅಂಗಗಳಿಂದ, ಪದ್ಯಗಳಿಂದ, ಕ್ರಮ ಹಾಗೂ ಉಪನಿಷತ್‌ಗಳಿಂದ ವೇದಗಳು ಯಾರ ಗಾಯನ, ವರ್ಣನೆ ಮಾಡುವುವೋ, ಯೋಗಿಗಳು ಯಾರನ್ನು ಧ್ಯಾನದಿಂದ ಸ್ಥಿರಗೊಳಿಸಲು ಆತ್ಮನಿಷ್ಠ ಮನಸ್ಸಿನಿಂದ ಕಾಣುವರೋ, ದೇವ ದಾನವರ ಸಮೂಹವು ಯಾರ ಅಂತವನ್ನು ತಿಳಿಯಲಾರರೋ, ಅಂತಹ ಪರಮಾತ್ಮನಿಗೆ, ಸ್ವಯಂ ಪ್ರಕಾಶದೇವನಿಗೆ, ನನ್ನ ನಮಸ್ಕಾರಗಳು ।೯॥

# ಸಾರ್ಥ ಶ್ರೀಜ್ಞಾನೇಶ್ವರೀ

## ಅಧ್ಯಾಯ ಪಹಿಲಾ

ಶ್ರೀ ಗಣೇಶಾಯ ನಮಃ

ಓಂ ನಮೋ ಜೀ ಆದ್ಯಾ । ವೇದಪ್ರತಿಪಾದ್ಯಾ । ಜಯ ಜಯ ಸ್ವಸಂವೇದ್ಯಾ । ಆತ್ಮರೂಪಾ ॥೧॥ ದೇವಾ ತೂಚಿ ಗಣೇಶು । ಸಕಲಾರ್ಥಮತಿಪ್ರಕಾಶು । ಮ್ಹಣೇ ನಿವೃತ್ತಿದಾಸು । ಅವಧಾರಿಜೋ ಜೀ ॥೨॥ ಹೇ ಶಬ್ದಬ್ರಹ್ಮ ಅಶೇಷ । ತೇಚಿ ಮೂರ್ತಿ ಸುವೇಷ । ತೇಥ ವರ್ಣವಪು ನಿರ್ದೋಷ । ಮಿರವತ ಅಸೇ ॥೩॥ ಸ್ಮೃತಿ ತೇಚಿ ಅವೇವ । ದೇಖಾ ಆಂಗೀಕ ಭಾವ । ತೇಥ ಲಾವಣ್ಯಾಚೀ ಠೇವ । ಅರ್ಥಶೋಭಾ ॥೪॥ ಅಷ್ಟಾದಶ ಪುರಾಣೇ । ತೀಚಿ ಮಣಿಭೂಷಣೇ । ಪದ ಪದ್ಧತಿ ಖೇವಣೇ । ಪ್ರಮೇಯರತ್ನಾಂಚಿ ॥೫॥ ಪದಬಂಧ ನಾಗರ । ತೇಚಿ ರಂಗಾಥಿಲೇ ಅಂಬರ । ಜೇಥ ಸಾಹಿತ್ಯ ವಾಣೇಸಪೂರ । ಉಜಾಳಾಚೇ ॥೬॥ ದೇಖಾ ಕಾವ್ಯನಾಟಕಾ । ಜೇ ನಿರ್ಧಾರಿತಾ ಸಕೌತುಕಾ । ತ್ಯಾಚಿ ರುಣಝುಣತೀ ಕ್ಷುದ್ರ ಘಂಟಿಕಾ । ಅರ್ಥಧ್ವನಿ ॥೭॥ ನಾನಾ ಪ್ರಮೇಯಾಂಚೀ ಪರೀ । ನಿಪುಣಪಣೇ ಪಾಹತಾ ಕುಸರೀ । ದಿಸತೀ ಉಚಿತ ಪದೇ ಮಾಝಾರೀ । ರತ್ನೇ ಭಲೀ ॥೮॥ ತೇಥ ವ್ಯಾಸಾದಿಕಾಂಚ್ಯಾ ಮತೀ । ತೇಚಿ ಮೇಖಳಾ ಮಿರವತೀ । ಚೋಖಾಳಪಣೇ ಝಳಕತೀ । ಪಲ್ಲವಸಡಕಾ ॥೯॥ ದೇಖಾ ಷಡ್‌ದರ್ಶನೇ ಮ್ಹಣಿಪತೀ । ತೇಚಿ ಭುಜಾಂಚೀ ಆಕೃತೀ । ಮ್ಹಣೌನಿ ವಿಸಂವಾದೇ ಧರಿತೀ । ಆಯುಧೇ ಹಾತೀ ॥೧೦॥ ತರೀ ತರ್ಕು ತೋಚಿ ಫರಶು । ನೀತಿಭೇದು ಅಂಕುಶು । ವೇದಾಂತು ತೋ ಮಹಾರಸು । ಮೋದಕು ಮಿರವೇ ॥೧೧॥ ಏಕೇ ಹಾತೀ ದಂತು । ಜೋ ಸ್ವಭಾವತಾ ಖಂಡಿತು । ತೋ ಬೌದ್ಧಮತಸಂಕೇತು । ವಾರ್ತಿಕಾಂಚಾ ॥೧೨॥ ಮಗ ಸಹಜೇ ಸತ್ಕಾರವಾದು । ತೋ ಪದ್ಮಕರು ವರದು । ಧರ್ಮಪ್ರತಿಷ್ಠಾ ತೋ ಸಿದ್ಧು । ಅಭಯ ಹಸ್ತು ॥೧೩॥ ದೇಖಾ ವಿವೇಕವಂತು ಸುವಿಮಳು । ತೋಚಿ ಶುಂಡಾದಂಡು ಸರಳು । ಜೇಥ ಪರಮಾನಂದು ಕೇವಳು । ಮಹಾಸುಖಾಚಾ ॥೧೪॥ ತರೀ ಸಂವಾದು ತೋಚಿ ದಶನು । ಜೋ ಸಮತಾ ಶುಭ್ರವರ್ಣು । ದೇವೋ ಉನ್ಮೇಷಸೂಕ್ಷ್ಮೇಕ್ಷಣು । ವಿಘ್ನರಾಜು ॥೧೫॥

# ಸಾರ್ಥ ಶ್ರೀಜ್ಞಾನೇಶ್ವರೀ

## ಮೊದಲನೆಯ ಅಧ್ಯಾಯ

### ಶ್ರೀ ಗಣೇಶಾಯ ನಮಃ

ಓಂಕಾರ ಸ್ವರೂಪ ನಿರ್ಗುಣ ಪರಬ್ರಹ್ಮನೇ, ಆತ್ಮ ರೂಪನೇ, ನೀನು ಎಲ್ಲಕ್ಕೂ ಮೊದಲಿಗನಿರುವೆ. ನಿನ್ನನ್ನು ವೇದಗಳು ಹೊಗಳಿರುವುವು ಮತ್ತು ನಿನ್ನ ಸ್ವರೂಪವನ್ನು ತಿಳಿಯುವವನು ನೀನೇ ಆಗಿರುವೆ. ನಿನಗೆ ನನ್ನ ನಮಸ್ಕಾರ ಹಾಗೂ ಜಯಜಯಕರವು ॥೧॥

ದೇವಾ, ಸರ್ವರ ಬುದ್ಧಿಗೆ ಜ್ಞಾನದ ಪ್ರಕಾಶ ಕೊಡುವ ಶ್ರೀ ಗಣಪತಿಯು ನೀನೇ ಆಗಿರುವೆ ಎಂದು ಶ್ರೀ ನಿವೃತ್ತಿದಾಸರಾದ ಶ್ರೀಜ್ಞಾನೇಶ್ವರರು ಲಕ್ಷ ಕೊಟ್ಟು ಕೇಳಿರಿ ಎನ್ನುವರು ॥೨॥

ಸಂಪೂರ್ಣ ವೇದವು ಸುಶೋಭಿತ ಉತ್ತಮ ಗಣೇಶ ಮೂರ್ತಿಯಾಗಿ ಮೆರೆಯುತ್ತಿರುವುದು ॥೩॥

ಮನ್ವಾದಿಕರ ಸ್ಮೃತಿಗಳೇ ಆ ಶರೀರದ ಅವಯವಗಳಾಗಿದ್ದು ಅವುಗಳ ಸೌಂದರ್ಯವು ಅವರ್ಣನೀಯವಾಗಿದೆ. ಹಾಗೂ ಅವುಗಳ ಅರ್ಥವು ಸಹ ಲಾವಣ್ಯದ ಖಣಿಯೇ ಆಗಿದೆ ॥೪॥

ಹದಿನೆಂಟು ಪುರಾಣಗಳು ರತ್ನಖಚಿತ ಭೂಷಣಗಳಾಗಿವೆ ಮತ್ತು ಪುರಾಣಗಳಲ್ಲಿ ಪ್ರತಿಪಾದಿತ ತತ್ವಗಳು ಅದರ ಸುಂದರ ಜೋಡಣೆಗಳಾಗಿವೆ ॥೫॥

ಉತ್ತಮ ಪದ ರಚನೆಗಳು ಶರೀರ ಮೇಲಿನ ಬಣ್ಣ ಬಣ್ಣದ ವಸ್ತ್ರಗಳಾಗಿವೆ ಮತ್ತು ಆ ಪದಗಳಲ್ಲಿನ ಅಲಂಕಾರಗಳು ಲಕಲಕೀತ ಹೊಳೆಯುವ ನಯವಾದ ನೇಯ್ಗೆಯಿಂದ ಕೂಡಿರುವುವು ॥೬॥

ಕಾವ್ಯ ನಾಟಕಗಳು ಕಾಲೊಳಗಿನ ಸಣ್ಣ ಗೆಜ್ಜೆಗಳಾಗಿದ್ದು ಅವುಗಳ ಅರ್ಥವು ರುಣುಝುಣು ರುಣುಝುಣು ಧ್ವನಿ ಮಾಡುತ್ತಿರುತ್ತವೆ ॥೭॥

ಆ ಕಾವ್ಯ ನಾಟಕಗಳಲ್ಲಿ ಅನೇಕ ಸಿದ್ಧಾಂತಗಳ ಶಬ್ದಗಳು ಒಳಗೊಂಡಿವೆ. ಆ ಶಬ್ದಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಕವಿಗಳ ಕುಶಲತೆ ಕಾಣುವುದು. ಈ ಯೋಗ್ಯ ಶಬ್ದಗಳು ಗೆಜ್ಜೆಗಳಲ್ಲಿಯ ಅಮೌಲ್ಯ ರತ್ನಗಳಾಗಿವೆ ॥೮॥

ವ್ಯಾಸಾದಿಕ ಮಹರ್ಷಿಗಳ ಬುದ್ಧಿಯು ನಡುವಿಗೆ ಕಟ್ಟಿದ ಶೆಲ್ಲೆಯಾಗಿ ಸುಶೋಭಿತವಾಗಿ ಕಾಣುವುದು ಮತ್ತು ಆ ಬುದ್ಧಿಯ ಸರಳತೆಯು ಶೆಲ್ಲೆಯ ಅಂಚಾಗಿದ್ದು ಜರತಾರಿಯಿಂದ ಕೂಡಿ ಥಳಥಳನೆ ಹೊಳೆಯುತ್ತಿರುವುದು ॥೯॥

ಆರು ಶಾಸ್ತ್ರಗಳು ಇವೇ (ಗಣಪತಿಯ) ಆರು ಭುಜಗಳು. ಆದ್ದರಿಂದ ಶಾಸ್ತ್ರಗಳಲ್ಲಿಯ ಭಿನ್ನ ಭಿನ್ನ ಅಭಿಪ್ರಾಯಗಳಂತೆ ಕೈಗಳಲ್ಲಿ ಭಿನ್ನ ಭಿನ್ನ ಆಯುಧಗಳು ಇರುವುವು ॥೧೦॥

ತರ್ಕಶಾಸ್ತ್ರವು ಚಪಗೊಡಲಿಯಾಗಿ, ನ್ಯಾಯಶಾಸ್ತ್ರವು ಅಂಕುಶವಾಗಿ ಮತ್ತು ವೇದಾಂತ ಶಾಸ್ತ್ರವು ಸಿಹಿಯಾದ ರುಚಿಯಾದ ಮೋದಕವಾಗಿ ಕಂಗೊಳಿಸುತ್ತಿರುವುವು ॥೧೧॥

ವಾರ್ತಿಕಕಾರರ ವ್ಯಾಖ್ಯಾನದಿಂದ ಸ್ವಭಾವತಃ ಖಂಡಿಸಿರುವ ಬೌದ್ಧಮತವು ಇದು ಒಂದು ಹಸ್ತದಲ್ಲಿ ಮುರಿದ ಹಲ್ಲಿನಂತೆ ಸುಶೋಭಿಸುತ್ತದೆ ॥೧೨॥

ಬ್ರಹ್ಮವಿಷಯದ ವಾದದಿಂದ ಧರ್ಮಸ್ಥಾಪನೆ ಮಾಡುವ ಅದು ಸ್ವಭಾವಸಿದ್ಧ, ಕಲ್ಯಾಣಕಾರಕ, ವರದಾಯಕ ಅಭಯ ಹಸ್ತವಾಗಿರುವುದು ॥೧೩॥

ಎಲ್ಲಿ ಮಹಾಸುಖದ ಪರಮಾನಂದವು ಇರುವುದೋ ಅಲ್ಲಿಯೇ ಅತಿ ನಿರ್ಮಲವಾದ ಸುವಿಚಾರ ಇರುವುದು. ಅದುವೇ ಹೀನ ಉತ್ತಮ ತಿಳಿಯುವ ಉದ್ದಾದ ಸೊಂಡಿಲವಾಗಿದೆ ॥೧೪॥

ಉತ್ತಮ ಸಂವಾದವು ಇದು ಸರಳ ಹಾಗೂ ಶುಭ್ರವಾದ ದಂತಗಳಾಗಿವೆ. ಜ್ಞಾನದೃಷ್ಟಿಯು ಆ ವಿಘ್ನರಾಜ ಗಣಪತಿಯ ಸೂಕ್ಷ್ಮನೇತ್ರಗಳಾಗಿವೆ ॥೧೫॥

ಮಜ ಅವಗಮಲಿಯಾ ದೋನಿ । ಮೀಮಾಂಸಾ ಶ್ರವಣಸ್ಥಾನೀ । ಭೋಧಮದಾಮೃತ ಮುನೀ । ಅಲೀ ಸೇವತೀ ।।೧೬।। ಪ್ರಮೇಯಪ್ರವಾಲ ಸುಪ್ರಭ । ದ್ವೈತಾದ್ವೈತ ತೇಚಿ ನಿಕುಂಭ । ಸರಿಸೇಪಣೇ ಏಕವಟತ ಇಭ । ಮಸ್ತಕಾವರೀ ।।೧೭।। ಉಪರಿ ದಶೋಪನಿಷದೇ । ಜಿಯೇ ಉದಾರೇ ಜ್ಞಾನಮಕರಂದೇ । ತಿಯೇ ಕುಸುಮೇ ಮುಗುಟೀ ಸುಗಂಧೇ । ಶೋಭತೀ ಭಲೀ ।।೧೮।। ಅಕಾರ ಚರಣಯುಗುಲ । ಉಕಾರ ಉದರ ವಿಶಾಲ । ಮಕಾರ ಮಹಾಮಂಡಲ । ಮಸ್ತಕಾಕಾರೇ ।।೧೯।। ಹೇ ತೀನ್ಹೀ ಏಕವಟಲೇ । ತೇಥ ಶಬ್ದಬ್ರಹ್ಮ ಕವಳಲೇ । ತೇ ಮಿಯಾ ಶ್ರೀಗುರುಕೃಪಾ ನಮಿಲೇ । ಆದಿಬೀಜ ।।೨೦।। ಆತಾ ಅಭಿನವ ವಾಗ್ವಿಲಾಸಿನೀ । ಜೇ ಚಾತುರ್ಯಾರ್ಥ ಕಲಾಕಾಮಿನೀ । ತೇ ಶಾರದಾ ವಿಶ್ವಮೋಹಿನೀ । ನಮಿಲೀ ಮಿಯಾ ।।೨೧।। ಮಜ ಹೃದಯೀ ಸದ್ಗುರು । ಜೇಣೇ ತಾರಿಲೋ ಹಾ ಸಂಸಾರ ಪುರು । ಮ್ಹಣೌನಿ ವಿಶೇಷೇ ಅತ್ಯಾದರು । ವಿವೇಕಾವರೀ ।।೨೨।। ಜೈಸೇ ಡೋಳ್ಯಾ ಅಂಜನ ಭೇಟೇ । ತೇ ವೇಳೀ ದೃಷ್ಟೀಸೀ ಫಾಂಟಾ ಫುಟೇ । ಮಗ ವಾಸ ಪಾಹಿಜೇ ತೇಥ ಪ್ರಗಟೇ । ಮಹಾನಿಧೀ ।।೨೩।। ಕಾ ಚಿಂತಾಮಣಿ ಜಾಲಿಯಾ ಹಾತೀ । ಸದಾ ವಿಜಯವೃತ್ತೀ ಮನೋರಥೀ । ತೈಸಾ ಮೀ ಪೂರ್ಣಕಾಮ ಶ್ರೀನಿವೃತ್ತೀ । ಜ್ಞಾನದೇವೋ ಮ್ಹಣೇ ।।೨೪।। ಮ್ಹಣೋನಿ ಜಾಣತೇನೇ ಗುರುಭಜಿಜೇ । ತೇಣೇ ಕೃತಕಾರ್ಯ ಹೋಈಜೇ । ಜೈಸೇ ಮೂಳ ಸಿಂಚನೇ ಸಹಜೇ । ಶಾಖಾಪಲ್ಲವ ಸಂತೋಷತೀ ।।೨೫।। ಕಾ ತೀರ್ಥೇ ಜಿಯೇ ತ್ರಿಭುವನೀ । ತಿಯೇ ಘಡತೀ ಸಮುದ್ರಾವಗಾಹನೀ । ನಾ ತರೀ ಅಮೃತರಸಾ ಸ್ವಾದನೀ । ರಸ ಸಕಳ ।।೨೬।। ತೈಸಾ ಪುಢತಪುಢತೀ ತೋಚಿ । ಮಿಯಾ ಅಭಿವಂದಿಲಾ ಶ್ರೀಗುರುಚಿ । ಜೋ ಅಭಿಲಷಿತ ಮನೋರುಚಿ । ಪುರವಿತಾ ತೋ ।।೨೭।। ಆತಾ ಅವಧಾರಾ ಕಥಾ ಗಹನ । ಜೇ ಸಕಳಾ ಕೌತುಕಾ ಜನ್ಮಸ್ಥಾನ । ಕೀ ಅಭಿನವ ಉದ್ಯಾನ । ವಿವೇಕತರೂಂಚೇ ।।೨೮।। ನಾತರಿ ಸರ್ವ ಸುಖಾಚಿ ಆದಿ । ಜೇ ಪ್ರಮೇಯಮಹಾನಿಧಿ । ನಾನಾ ನವರಸಸುಧಾಬ್ಧಿ । ಪರಿಪೂರ್ಣ ಹೇ ।।೨೯।। ಕೀ ಪರಮಧಾಮ ಪ್ರಕಟ । ಸರ್ವ ವಿದ್ಯಾಂಚೇ ಮೂಳಪೀಠ । ಶಾಸ್ತ್ರಜಾತಾ ವಿಶಿಷ್ಟ । ಅಶೇಷಾಂಚೇ ।।೩೦।। ನಾ ತರಿ ಸಕಳ ಧರ್ಮಾಚೇ ಮಾಹೇರ । ಸಜ್ಜನಾಂಚೇ ಜಿವ್ಹಾರ । ಲಾವಣ್ಯ ರತ್ನಭಾಂಡಾರ । ಶಾರದೇಚೇ ।।೩೧।।

ಪೂರ್ವ ಮೀಮಾಂಸ ಹಾಗೂ ಉತ್ತರ ಮೀಮಾಂಸ ಗಳು ನನಗೆ (ಗಣಪತಿಯ) ಎರಡು ಕಿವಿಗಳಾಗಿ ಭಾಸವಾಗಿದೆ. ಸತತ ಶ್ರವಣ ಮನನ ಮಾಡುವ ಮುನಿಗಳು ಭ್ರಮರ ರೂಪದಿಂದ ಗಂಡಸ್ಥಳದ ಜ್ಞಾನ ರೂಪ ಮದಾಮೃತವನ್ನು ಸೇವಿಸುವರು ।೧೬।।

ಪ್ರಮೇಯ (ಸಿದ್ಧಾಂತ)ವು ಇದುವೇ ಗಂಡಸ್ಥಳದ ಸತೇಜ ಕೆಂಪುರತ್ನ (ಹವಳ)ವಾಗಿದೆ. ದ್ವೈತ ಹಾಗೂ ಅದ್ವೈತ ಸಿದ್ಧಾಂತಗಳು ಗಂಡಸ್ಥಳದಲ್ಲಿ ಸಮಾನವಾಗಿ ಸುಶೋಭಿಸುತ್ತವೆ ।೧೭।।

ಆ ಗಂಡಸ್ಥಳದ ಶಿರೋಭಾಗದಲ್ಲಿ ಶೋಭಿಸುವ ಸುಗಂಧ ಹೂಗಳು ಇವೇ ಜ್ಞಾನ ಮಕರಂದದಿಂದ ತುಂಬಿದ ದಶೋಪನಿಷತ್‌ಗಳಾಗಿವೆ ।೧೮।।

ಓಂಕಾರದಲ್ಲಿನ "ಅ" ಕಾರವು ಎರಡು ಚರಣಗಳಲ್ಲಿ "ಉ" ಕಾರವು ವಿಶಾಲ ಹೊಟ್ಟೆಯ ಆಕಾರದಲ್ಲಿ "ಮ" ಕಾರವು ಸರ್ವ ಅವಯವ ಶ್ರೇಷ್ಠ ಮಸ್ತಕ ಆಕಾರದಲ್ಲಿವೆ ।೧೯।।

"ಅಕಾರ" "ಉಕಾರ" "ಮಕಾರ" ಇವು ಮೂರೂ ಕೂಡಿದಾಗ ಅದರಲ್ಲಿ ಶಬ್ದಬ್ರಹ್ಮ (ವೇದ)ದ ಸಮಾವೇಶವಾಗಿ ಓಂಕಾರ ರೂಪ ಸಿದ್ಧವಾಯಿತು. ಈ ಆದಿಬೀಜಕ್ಕೆ ನಾನು ಶ್ರೀಗುರು ನಿವೃತ್ತಿನಾಥರ ಕೃಪೆಯಿಂದ ನಮಸ್ಕಾರ ಮಾಡುವೆ ।೨೦।।

ಈಗ ವಾಣಿಯಲ್ಲಿ ಅಪೂರ್ವವಾಗಿ ನಿತ್ಯ ನೂತನವಾಗಿ ಕ್ರೀಡಿಸುತ್ತಿರುವ ಮತ್ತು ಚಾತುರ್ಯ, ಅರ್ಥ ಮತ್ತು ಕಲೆಗಳ ದೇವತೆಯಾಗಿರುವ ಹಾಗೂ ಸರ್ವ ಜಗತ್ತನ್ನು ಮೋಹಗೊಳಿಸಿರುವ ಆ ಸರಸ್ವತಿ ಮಾತೆಗೆ ನನ್ನ ನಮಸ್ಕಾರವು ।೨೧।।

ನನ್ನ ಹೃದಯದಲ್ಲಿ ವಾಸಿಸಿರುವ ಸದ್ಗುರುಗಳವರ ಕೃಪೆಯಿಂದ ಸಂಸಾರ ಮಹಾಪೂರದಿಂದ ನಾನು ಪಾರಾಗಿರುವೆನು. ಆದ್ದರಿಂದ ಆತ್ಮಾನಾತ್ಮ ವಿಚಾರದಲ್ಲಿ ನನ್ನ ವಿಶೇಷ ಆದರ ಪ್ರೀತಿ ನೆಟ್ಟಿರುವುದು ।೨೨।।

ಕಾಲು ಮುಂದೆ ಮಾಡಿ ಹುಟ್ಟಿದವನ ಕಣ್ಣಲ್ಲಿ ಅಂಜನ ಹಾಕಿದಾಗ ಆತನ ದೃಷ್ಟಿಗೆ ವಿಶೇಷ ಶಕ್ತಿ ಬಂದು ಭೂಮಿಯಲಿನ (ನಿಧಿ) ದ್ರವ್ಯವು ಆತನಿಗೆ ಗೋಚರಿಸುವಂತೆ ।೨೩।।

ಅಥವಾ ಚಿಂತಾಮಣಿ ದೊರಕಿದಾಗ ಮನಸ್ಸಿನ ಬೇಡಿಕೆಗಳು ಯಾವಾಗಲೂ ಪೂರ್ಣಗೊಳ್ಳುವಂತೆ ನನಗೆ ಶ್ರೀಗುರು ನಿವೃತ್ತಿನಾಥರ ಕೃಪೆಯಿಂದ ಸರ್ವ ಇಚ್ಛೆಗಳು ಪೂರ್ಣಗೊಳ್ಳುವುವು ಎಂದು ಶ್ರೀ ಜ್ಞಾನೇಶ್ವರರು ಹೇಳುವರು ।೨೪।।

ಆದ್ದರಿಂದ ತಿಳಿದವರು ಶ್ರೀಗುರುಗಳ ಸೇವೆ ಸಾಧಿಸಿ ಉದ್ಧಾರರಾಗಬೇಕು. ಗಿಡದ ಬೇರುಗಳಿಗೆ ನೀರು ಹಣಿಸಿದಾಗ ಎಲ್ಲ ಟೊಂಗೆಗಳ ಎಲೆಗಳು ಅಂದವಾಗಿ ಎದ್ದು ಕಾಣುವುವು ।೨೫।।

ಅಥವಾ ಸಮುದ್ರ ಸ್ನಾನದಿಂದ ಸರ್ವ ತೀರ್ಥಗಳ ಸ್ನಾನ ಮಾಡಿದ ಫಲ ದೊರಕುವಂತೆ ಅಥವಾ ಅಮೃತ ರಸ ಸೇವನೆಯಿಂದ ಎಲ್ಲ ರಸಗಳ ಸೇವನೆಯಾದಂತೆ ಆಗುತ್ತದೆ ।೨೬।।

ಅದೇ ಪ್ರಕಾರವಾಗಿ ಇಚ್ಛಿತ ಕಾಮನೆಗಳನ್ನು ಪೂರ್ಣಗೊಳಿಸುವ ಶ್ರೀಗುರುಗಳನ್ನು ನಾನು ಪುನಃ ಪುನಃ ನಮಸ್ಕರಿಸುತ್ತೇನೆ ।೨೭।।

ಈಗ ಇನ್ನು ಮುಂದೆ ಪೂರ್ಣ ಕೌತುಕ ಹುಟ್ಟಿಸುವ ಅಥವಾ ವಿಚಾರರೂಪ ವೃಕ್ಷಗಳ ಅಪೂರ್ವ ತೋಟವಾಗಿರುವ ಗಹನವಾದ ಕಥೆಯನ್ನು ಕೇಳಿರಿ ।೨೮।।

ಈ ಕಥೆಯು ಸರ್ವ ಸುಖದ ಕಾರಣವಾಗಿದ್ದು ಸರ್ವ ಸಿದ್ಧಾಂತದ ಆಗರವಾಗಿದೆ. ಇದರಲ್ಲಿ ನವರಸದಿಂದ ಪೂರ್ಣ ತುಂಬಿದ ಅಮೃತ ಸಿಂಧು ಇದೆ ।೨೯।।

ಮೋಕ್ಷದ ಸ್ವಸ್ಥ ಸ್ಥಾನವಾಗಿ ಎಲ್ಲ ವಿದ್ಯೆಗಳ ಮೂಲ ಸ್ಥಾನವಾಗಿದೆ. ಈ ಕಥೆಯು ಎಲ್ಲ ಶಾಸ್ತ್ರಗಳ ಆಧಾರ ಹೊಂದಿದೆ ।೩೦।।

ಇದು ಎಲ್ಲ ಧರ್ಮಗಳ ತವರು ಮನೆಯಾಗಿ ಸಜ್ಜನರ ಹೃದಯವಾಗಿದೆ. ಅಥವಾ ಸರಸ್ವತಿಯ ಲಾವಣ್ಯ ರೂಪದ ರತ್ನದ ಆಗರವೇ ಆಗಿದೆ ।೩೧।।

ನಾನಾ ಕಥಾರೂಪೇ ಭಾರತೀ । ಪ್ರಕಟಲೀ ಅಸೇ ತ್ರಿಜಗತೀ । ಆವಿಷ್ಕರೋನಿ ಮಹಾಮತೀ । ವ್ಯಾಸಾಚಿಯೇ ।೩೨॥ ಮ್ಹಣೌನಿ ಹಾ ಕಾವ್ಯಾರಾವೋ । ಗ್ರಂಥ ಗುರುವತೀಚಾ ಠಾವೋ । ಏಥೂನಿ ರಸಾ ಝಾಲಾ ಆವೋ । ರಸಾಳಪಣಾಚಾ ।೩೩॥ ತೇವೀಚೀ ಆಇಕಾ ಆಣಿಕ ಏಕ । ಏಥೂನಿ ಶಬ್ದಶ್ರೀ ಸಚ್ಛಾಸ್ತ್ರಿಕ । ಆಣಿ ಮಹಾಬೋಧೀ ಕೋವಳೀಕ । ದುಣಾವಲೀ ।೩೪॥ ಏಥ ಚಾತುರ್ಯ ಶಹಾಣೇ ಝಾಲೇ । ಪ್ರಮೇಯ ರುಚೀಸ ಆಲೇ । ಆಣಿ ಸೌಭಾಗ್ಯ ಪೋಖಲೇ । ಸುಖಾಚೇ ಏಥ ।೩೫॥ ಮಾಧುರ್ಯೀ ಮಧುರತಾ । ಶೃಂಗಾರೀ ಸುರೇಖತಾ । ರೂಢಪಣ ಉಚಿತಾ । ದಿಸೇ ಭಲೇ ।೩೬॥ ಏಥ ಕಳಾವಿದಪಣ ಕಳಾ । ಪುಣ್ಯಾಸಿ ಪ್ರತಾಪು ಆಗಳಾ । ಮ್ಹಣೌನಿ ಜನಮೇಜಯಾಚೇ ಅವಲೀಳಾ । ದೋಷ ಹರಲೇ ।೩೭॥ ಆಣಿ ಪಾಹತಾ ನಾವೇಕ । ರಂಗೀ ಸುರಂಗತೇಚೀ ಆಗಳೀಕ । ಗುಣಾ ಸಗುಣಪಣಾಚೇ ಬಿಕ । ಬಹುವಸ ಏಥ ।೩೮॥ ಭಾನುಚೇನಿ ತೇಜೇ ಧವಳಲೇ । ಜೈಸೇ ತ್ರೈಲೋಕ್ಯ ದಿಸೇ ಉಜಳಿಲೇ । ತೈಸೇ ವ್ಯಾಸಮತಿ ಕವಳಿಲೇ । ಮಿರವೇ ವಿಶ್ವ ।೩೯॥ ಕಾ ಸುಕ್ಷೇತ್ರೀ ಬೀಜ ಘಾತಲೇ । ತೇ ಆಪುಲಿಯಾಪರೀ ವಿಸ್ತಾರಲೇ । ತೈಸೇ ಭಾರತೀ ಸುರವಾಡಲೇ । ಅರ್ಥಜಾತ ।೪೦॥ ನಾ ತರೀ ನಗರಾಂತರೀ ವಸಿಜೇ । ತರೀ ನಾಗರಾಚಿ ಹೋಈಜೇ । ತೈಸೇ ವ್ಯಾಸೋಕ್ತಿತೇಜೇ । ಧವಳಿತ ಸಕಳ ।೪೧॥ ಕೀ ಪ್ರಥಮ ವಯಸಾಕಾಳೀ । ಲಾವಣ್ಯಾಚೀ ನವ್ಹಾಳೀ । ಪ್ರಗಟೇ ಜೈಸೀ ಆಗಳೀ । ಅಂಗನಾಅಂಗೀ ।೪೨॥ ನಾ ತರೀ ಉದ್ಯಾನೀ ಮಾಧವೀ ಘಡೇ । ತೇಥ ವನಶೋಭೇಚೀ ಖಾಣೀ ಉಘಡೇ । ಆದಿಲಾಪಾಸೋನಿ ಅಪಾಡೇ । ಜಿಯಾಪರೀ ।೪೩॥ ನಾನಾ ಘನೀಭೂತ ಸುವರ್ಣ । ಜೈಸೇ ನ್ಯಾಹಾಳಿತಾ ಸಾಧಾರಣ । ಮಗ ಅಳಂಕಾರೀ ಬರವೇಪಣ । ನಿವಾಡು ದಾವೀ ।೪೪॥ ತೈಸೇ ವ್ಯಾಸೋಕ್ತೀ ಅಳಂಕಾರಿಲೇ । ಆವಡೇ ತೇ ಬರವೇಪಣ ಪಾತಲೇ । ತೇ ಜಾಣೋನಿ ಕಾಯ ಆಶ್ರಯಿಲೇ । ಇತಿಹಾಸೀ ।೪೫॥ ನಾನಾ ಪುರತಿಯೇ ಪ್ರತಿಷ್ಠೇಲಾಗೀ । ಸಾನೀವ ಧರೂನಿ ಆಂಗೀ । ಪುರಾಣೇ ಆಖ್ಯಾನರೂಪೇ ಜಗೀ । ಭಾರತಾ ಆಲೀ ।೪೬॥ ಮ್ಹಣೌನಿ ಮಹಾಭಾರತೀ ನಾಹೀ । ತೇ ನೋಹೇಚಿ ಲೋಕೀ ತಿಹೀ । ಯೇಣೇ ಕಾರಣೇ ಮ್ಹಣಿಪೇ ಪಾಹೀ । ವ್ಯಾಸೋಚ್ಛಿಷ್ಠ ಜಗತ್ರಯ ।೪೭॥ ಐಸೀ ಜಗೀ ಸುರಸ ಕಥಾ । ಜೇ ಜನ್ಮಭೂಮಿ ಪರಮಾರ್ಥಾ । ಮುನಿ ಸಾಂಗೇ ನೃಪನಾಥಾ । ಜನಮೇಜಯಾ ।೪೮॥

ಈ ಕಥೆಯು ಶ್ರೀ ವ್ಯಾಸಮಹರ್ಷಿಯ ಮಹಾಮತಿಯಲ್ಲಿ ಪ್ರವೇಶಿಸಿ ಮಹಾಭಾರತ ಕಥಾರೂಪದಿಂದ ಈ ತ್ರಿಭುವನದಲ್ಲಿ ಪ್ರಕಟಗೊಂಡಿದೆ ।೩೨॥

ಆದ್ದರಿಂದ ಈ ಕಥೆಯು ಎಲ್ಲ ಕಾವ್ಯಗಳ ರಾಜನಿದ್ದು, ಎಲ್ಲ ಗ್ರಂಥಗಳ ಒಡೆಯನಾಗಿದೆ. ಇಲ್ಲಿಂದಲೇ ಶೃಂಗಾರಾದಿ ನವರಸಗಳ ರಸಭರಿತ ವಿಶೇಷ ಸೌಂದರ್ಯ ಬಂದಿರುವುದು ।೩೩॥

ಹಾಗೆಯೇ ಇನ್ನೊಂದು ಮಾತು ಲಕ್ಷ್ಯದಲ್ಲಿ ಇಡುವುದೇನೆಂದರೆ ಈ ಕಥೆಯಿಂದಲೇ ಶಬ್ದರೂಪ ಲಕ್ಷ್ಮೀಗೆ ಸತ್ ಶಾಸ್ತ್ರೀಯತೆ ಒದಗಿ ಆತ್ಮ ಬೋಧನೆಗೆ ವಿಶೇಷ ಕಳೆ ಬಂದಿದೆ ।೩೪॥

ಈ ಕಥೆಯಿಂದಲೇ ಚತುರರು ಬುದ್ಧಿವಂತರಾದರು. ತತ್ವಜ್ಞಾನಿಗಳಿಗೆ ವಿಶೇಷ ರಸಾನಂದ ದೊರಕಿತು ಮತ್ತು ಸುಖದ ಸೌಭಾಗ್ಯದ ವೃದ್ಧಿಯು ಇದರಿಂದಲೇ ಆಗಿದೆ ।೩೫॥

ಮಾಧುರ್ಯಕ್ಕೆ ಮಧುರತೆ, ಶೃಂಗಾರಕ್ಕೆ ಸೌಂದರ್ಯತೆ ಮತ್ತು ಯೋಗ್ಯ ವಸ್ತುವಿಗೆ ಶ್ರೇಷ್ಠತೆ ಬಂದು ಸರ್ವೋತ್ತಮ ರೀತಿಯಲ್ಲಿ ಸುಶೋಭಿಸುತ್ತಿದೆ ।೩೬॥

ಕಲೆಗೆ ಕೌಶಲ್ಯತೆ ಪ್ರಾಪ್ತವಾದದ್ದು, ಪುಣ್ಯದ ಪ್ರತಾಪವು ಬಹು ಬೆಳೆದದ್ದು ಈ ಕಥೆಯಿಂದಲೇ. ಆದ್ದರಿಂದ ಜನ್ಮೇಜಯನ ಬ್ರಹ್ಮಹತ್ಯೆ ಮಹಾದೋಷವು (ಶ್ರವಣದಿಂದ) ಸಹಜವಾಗಿ ನಾಶವಾಯಿತು ।೩೭॥

ಕ್ಷಣಹೊತ್ತು ವಿಚಾರಿಸಿ ನೋಡಿದಾಗ ಶೃಂಗಾರಾದಿ ರಸಗಳಲ್ಲಿ ಅಧಿಕ ಸೌಂದರ್ಯತೆಯು ಹಾಗೂ ಗುಣಕ್ಕೆ ಉತ್ತಮತ್ವದ ಸಂಪೂರ್ಣತೆಯು ಈ ಕಥೆಯಿಂದಲೇ ಬಂದಿರುವುದು ।೩೮॥

ಸೂರ್ಯೋದಯವಾದಾಗ್ಗೆ ಮೂರು ಲೋಕಗಳು ಪ್ರಕಾಶಮಾನವಾಗುವಂತೆ ವ್ಯಾಸರ ಬುದ್ಧಿಯಿಂದ ಈ ಕಥೆಯು ಪ್ರಕಟವಾಗಿ ಪೂರ್ಣ ಜಗತ್ತು ಪ್ರಕಾಶಯುಕ್ತವಾಗಿ ಶೋಭಿಸುತ್ತಿದೆ ।೩೯॥

ಅಥವಾ ಉತ್ತಮ ಹದಗೊಂಡ ಹೊಲದಲ್ಲಿ ಬೀಜ ಬಿತ್ತಿದಾಗ ಅದರ ವಿಸ್ತಾರವು ಸಹಜವಾಗಿ ವಿಸ್ತಾರಗೊಳ್ಳುವಂತೆ ಈ ಮಹಾಭಾರತದಲ್ಲಿ ಎಲ್ಲ ವಿಷಯಗಳು ಬೆಳೆದು ನಿಂತಿವೆ ।೪೦॥

ಅಥವಾ ನಗರದಲ್ಲಿ ವಾಸಿಸುವವರ ವ್ಯವಹಾರಿಕ ಬುದ್ಧಿಯು ಸಹಜವಾಗಿ ಬೆಳೆಯುವಂತೆ ವ್ಯಾಸರ ವಾಣಿಯ ತೇಜದಿಂದ ಅಪ್ರಕಾಶಿತ ವಿಷಯಗಳೆಲ್ಲವೂ ಪ್ರಕಾಶಿತವಾಗಿವೆ ।೪೧॥

ತಾರುಣ್ಯಾವಸ್ಥೆಯಲ್ಲಿ ಸ್ತ್ರೀಯರ ಶರೀರದಲ್ಲಿ ಸೌಂದರ್ಯವು ಶೋಭಿಸುತ್ತಿರುವುದು ವಿಶೇಷವಾಗಿ ದೃಷ್ಟಿಗೆ ಬೀಳುವುದು ।೪೨॥

ವಸಂತ ಋತುಬಂದಾಗ ಎಲ್ಲ ಗಿಡ ಮರಗಳಿಗೆ ವನಶ್ರೀಯ ವಿಶೇಷ ಶೋಭೆಯು ಬರುವುದು ।೪೩॥

ಅಥವಾ ಬಂಗಾರದ ಗಟ್ಟಿ ನೋಡಿದಾಗ ಸಾಧಾರಣ ಕಂಡರೂ ಅದರಿಂದ ಆಭರಣಗಳು ರೂಪಗೊಂಡಾಗ ಅದರ ಶೋಭೆಯು ವಿಶೇಷವಾಗಿಯೇ ಕಂಗೊಳಿಸುವುದು ।೪೪॥

ಅದರಂತೆ ವ್ಯಾಸರ ವಚನಗಳಿಂದ ಪ್ರತಿಯೊಂದು ವಿಷಯಗಳು ಅಲಂಕೃತಗೊಂಡು ಶೋಭಾಯಮಾನವಾಗಿವೆ. ಇದನ್ನರಿತು ಕೊಂಡೇನೋ ಇತಿಹಾಸಗಳು ಮಹಾಭಾರತ ಕಥೆಯ ಆಶ್ರಯ ಪಡೆದವು ।೪೫॥

ಹಾಗೆಯೇ, ಪುರಾಣಗಳು ಜಗತ್ತಿನಲ್ಲಿ ತಮಗೆ ಪೂರ್ಣ ಪ್ರತಿಷ್ಠೆ ಪ್ರಾಪ್ತವಾದೀತೆಂದು ತಿಳಿದು ಬಹಳ ವಿನಮ್ರಭಾವ ತಾಳಿ ವ್ಯಾಖ್ಯಾನರೂಪದಿಂದ ಮಹಾಭಾರತದಲ್ಲಿ ಸೇರಿಕೊಂಡವು ।೪೬॥

ಆದ್ದರಿಂದ ಮಹಾಭಾರತದಲ್ಲಿ ಯಾವ ವಿಷಯವು ಇಲ್ಲವೋ ಅದು ಮೂರು ಲೋಕಗಳಲ್ಲಿಯೂ ಇಲ್ಲ. ಆದಕ್ಕಾಗಿ ಈ ಮೂರು ಲೋಕಗಳಲ್ಲಿಯ ಎಲ್ಲ ವಿಷಯಗಳು ವ್ಯಾಸರ ಉಚ್ಛಿಷ್ಠ (ಎಂಜಲು) ಎಂದು ಪ್ರಸಿದ್ಧಗೊಂಡಿದೆ ।೪೭॥

ಹೀಗೆ ಇದು ಜಗತ್ತಿನಲ್ಲಿ ಅತ್ಯಂತ ರಸಾಳ ಕಥೆಯಾಗಿದೆ. ಇದು ಪರಮಾರ್ಥದ ಜನ್ಮಭೂಮಿಯಾಗಿದೆ. ಆದ್ದರಿಂದ ಈ ಸುಂದರವಾದ ಭಾರತ ಕಥೆಯನ್ನು ವೈಶಂಪಾಯನ ಮುನಿಗಳು ಜನಮೇಜರಾಯನಿಗೆ ಹೇಳಿದರು ।೪೮॥

ಜೇ ಅದ್ವಿತೀಯ ಉತ್ತಮ । ಪವಿತ್ರೈಕ ನಿರುಪಮ । ಪರಮ ಮಂಗಲಧಾಮ । ಅವಧಾರಿಜೋ ॥೪೯॥ ಆತಾ ಭಾರತಕಮಳಪರಾಗು । ಗೀತಾಖ್ಯು ಪ್ರಸಂಗು । ಜೋ ಸಂವಾದಲಾ ಶ್ರೀರಂಗು । ಅರ್ಜುನೇಸೀ ॥೫೦॥ ನಾ ತರೀ ಶಬ್ದ ಬ್ರಹ್ಮಾಬ್ಧಿ । ಮಥಿಯಲಾ ವ್ಯಾಸಬುದ್ಧಿ । ನಿವಡಿಲೇ ನಿರವಧಿ । ನವನೀತ ಹೇ ॥೫೧॥ ಮಗ ಜ್ಞಾನಾಗ್ನಿಸಂಪರ್ಕೇ । ಕಡಸಿಲೇನಿ ವಿವೇಕೇ । ಪದ ಆಲೇ ಪರಿಪಾಕೇ । ಆಮೋದಾಸೀ ॥೫೨॥ ಜೇ ಅಪೇಕ್ಷಿ ಜೇ ವಿರಕ್ತೀ । ಸದಾ ಅನುಭವಿಜೇ ಸಂತೀ । ಸೋಹಂಭಾವೇ ಪಾರಂಗತೀ । ರಮಿಜೇ ಜೇಥ ॥೫೩॥ ಜೇ ಆಕರ್ಣಿಜೇ ಭಕ್ತೀ । ಜೇ ಆದಿವಂದ್ಯ ತ್ರಿಜಗತೀ । ಜೇ ಭೀಷ್ಮಪರ್ವ ಸಂಗತೀ । ಮ್ಹಣಿತಲೀ ಕಥಾ ॥೫೪॥ ಜೇ ಭಗವದ್ಗೀತಾ ಮ್ಹಣಿಜೇ । ಜೇ ಬ್ರಹ್ಮೇಶಾನೀ ಪ್ರಶಂಸಿಜೇ । ಜೇ ಸನಕಾದಿಕೀ ಸೇವಿಜೇ । ಆದರೇಸೀ ॥೫೫॥ ಜೈಸೇ ಶಾರದೀಚಿಯೇ ಚಂದ್ರಕಳೇ । ಮಾಜಿ ಅಮೃತಕಣ ಕೋವಳೇ । ತೇ ವೇಚಿತೀ ಮನೇ ಮವಾಳೇ । ಚಕೋರತಲಗೇ ॥೫೬॥ ತಿಯಾಪರೀ ಶ್ರೋತಾ । ಅನುಭವಾವೀ ಹೇ ಕಥಾ । ಅತಿ ಹಳುವಾರಪಣ ಚಿತ್ತಾ । ಆಣೂನಿಯಾ ॥೫೭॥ ಹೇ ಶಬ್ದೇವೀಣ ಸಂವಾದಿಜೇ । ಇಂದ್ರಿಯಾ ನೇಣತಾ ಭೋಗಿಜೇ । ಬೋಲಾಆದಿ ಝೋಂಬಿಜೇ । ಪ್ರಮೇಯಾಸೀ ॥೫೮॥ ಜೈಸೇ ಭ್ರಮರ ಪರಾಗು ನೇತೀ । ಪರೀ ಕಮಳದಳೇ ನೇಣತೀ । ತೈಸೀ ಪರೀ ಆಹೇ ಸೇವಿತೀ । ಗ್ರಂಥೀ ಇಯೇ ॥೫೯॥ ಕಾ ಆಪುಲಾ ಠಾವೋ ನ ಸಾಂಡಿತಾ । ಆಲಿಂಗಿಜೇ ಚಂದ್ರು ಪ್ರಕಟತಾ । ಹಾ ಅನುರಾಗು ಭೋಗಿತಾ । ಕುಮುದಿನೀ ಜಾಣೇ ॥೬೦॥ ಐಸೇನಿ ಗಂಭೀರಪಣೇ । ಸ್ಥಿರಾವಲೇನಿ ಅಂತಃಕರಣೇ । ಆಥಿಲಾ ತೋಚಿ ಜಾಣೇ । ಮಾನೂ ಇಯೇ ॥೬೧॥ ಅಹೋ ಅರ್ಜುನಾಚಿಯೇ ಪಾಂತೀ । ಜೇ ಪರಿಸಣಯಾ ಯೋಗ್ಯ ಹೋತೀ । ತಿಹೀ ಕೃಪಾಕರೂನಿ ಸಂತೀ । ಅವಧಾನ ದ್ಯಾವೇ ॥೬೨॥ ಹೇ ಸಲಗೀ ಮ್ಯಾ ಮ್ಹಣಿತಲೇ । ಚರಣಾ ಲಾಗೋನಿ ವಿನವಿಲೇ । ಪ್ರಭು ಸಖೋಲ ಹೃದಯ ಆಪುಲೇ । ಮ್ಹಣೌನಿಯಾ ॥೬೩॥ ಜೈಸಾ ಸ್ವಭಾವೋ ಮಾಯಬಾಪಾಂಚಾ । ಅಪತ್ಯ ಬೋಲೇ ಜರೀ ಬೋಬಡೀ ವಾಚಾ । ತರೀ ಅಧಿಕಚಿ ತಯಾಚಾ । ಸಂತೋಷ ಆಥೀ ॥೬೪॥ ತೈಸಾ ತುಮ್ಹೀ ಮೀ ಅಂಗಿಕಾರಿಲಾ । ಸಜ್ಜನಿ ಆಪುಲಾ ಮ್ಹಣಿತಲಾ । ತರೀ ಉಣೇ ಸಹಜೇ ಉಪಸಾಹಲಾ । ಪ್ರಾರ್ಥೂ ಕಾಯೀ ॥೬೫॥ ಪರೀ ಅಪರಾಧು ತೋ ಆಣಿಕ ಆಹೇ । ಜೇ ಮೀ ಗೀತಾರ್ಥು ಕವಳೂ ಪಾಹೇ । ತೇ ಅವಧಾರಾ ವಿನವೂ ಲಾಹೇ । ಮ್ಹಣೌನಿಯಾ ॥೬೬॥

ಈ ಕಥೆಯು ಅದ್ವಿತೀಯ, ಉತ್ತಮ, ಪಾವನ ಕಾರಕ, ಉಪವಮಾರಹಿತ ಮತ್ತು ಯಾವತ್ತೂ ಕಲ್ಯಾಣ ಕಾರಕ ಶ್ರೇಷ್ಠ ಸ್ಥಾನವಾದ್ದರಿಂದ ಇನ್ನು ಲಕ್ಷ ಕೊಟ್ಟು ಕೇಳಿರಿ ।೪೯॥

ಶ್ರೀಕೃಷ್ಣನು ಅರ್ಜುನನಿಗೆ ಪ್ರಶ್ನೋತ್ತರ ರೂಪದಲ್ಲಿ ಸಂವಾದ ಮಾಡಿದ ಶ್ರೀಭಗವತ್ ಗೀತೆಯ ಮಹಾ ಭಾರತವೆಂಬ ಕಮಲ ಪುಷ್ಪದ ಪರಾಗವೇ ಆಗಿದೆ ।೫೦॥

ಅಥವಾ ವ್ಯಾಸರು ವೇದರೂಪ ಸಮುದ್ರದಲ್ಲಿ ಬುದ್ಧಿರೂಪ ಕಡಗೋಲಿನಿಂದ ಮಂಥಿಸಿ ಅದರಲ್ಲಿ ಗೀತಾ ರೂಪದ ಅನುಪಮೇಯ ಬೆಣ್ಣೆಯನ್ನು ತೆಗೆದರು ।೫೧॥

ಆ ಬೆಣ್ಣೆಯನ್ನು ಜ್ಞಾನರೂಪ ಅಗ್ನಿಯಲ್ಲಿ ವಿಚಾರ ಪೂರ್ವಕ ಕಾಸಿದಾಗ ಗೀತಾರೂಪ ಸುಗಂಧಿತ ಉತ್ಕೃಷ್ಟ ತುಪ್ಪವು ತಯಾರಿಸಿತು ।೫೨॥

ಈ ಗೀತೆಯನ್ನು ವಿರಕ್ತರು ಇಚ್ಛಿಸುವರು. ಸಂತರು ಸದಾ ಗೀತೆಯ ಅನುಭವ ಪಡೆಯುವರು. ''ಅದುವೇ (ಪರಮಾತ್ಮ) ನಾನು'' ಎಂದು ಅಭೇದ ಭಾವದಲ್ಲಿ ನಿಷ್ನಾತರಾದ ಸೋಹಂಭಾವಿಗಳು ಈ ಗೀತೆಯಲ್ಲಿ ತಲ್ಲೀನರಾಗುವರು ।೫೩॥

ಭಕ್ತರಿಗೆ ಶ್ರವಣಮಾಡಲು ಯೋಗ್ಯವಾದ, ಮೂರು ಲೋಕಗಳಲ್ಲಿ ಪರಮಪೂಜ್ಯವಾದ ಈ ಗೀತೆಯನ್ನು ಭೀಷ್ಮ ಪರ್ವದಲ್ಲಿ ಹೇಳಿದೆ ।೫೪॥

''ಭಗವದ್ ಗೀತೆ'' ಎಂದು ಕರೆಯಲ್ಪಡುವ ಈ ಗ್ರಂಥವು ಸರ್ವ ಸಾಮಾನ್ಯ ಇರದೇ ಇದರ ಸ್ತುತಿಯನ್ನು ಬ್ರಹ್ಮ ಮಹೇಶ್ವರರು ಮಾಡುವರು. ಸನಕಾದಿಕ ಮುನಿವರರು ಶ್ರದ್ಧೆಯಿಂದ ಶ್ರವಣ ಪಠಣ ಮಾಡುವರು ।೫೫॥

ಯಾವ ರೀತಿ ಶರದ್ ಋತುವಿನಲ್ಲಿ ಹುಣ್ಣಿಮೆಯ ಚಂದ್ರನಲ್ಲಿಯ ಅತಿ ಸೂಕ್ಷ್ಮ ಅಮೃತ ಕಣವನ್ನು ಚಕೋರ ಪಕ್ಷಿಯ ಮರಿಗಳು ಹಗುರವಾದ ಮನಸ್ಸಿನಿಂದ ಕುಶಲತೆಯಿಂದ ಪ್ರಾಶನ ಮಾಡುವುವೋ ।೫೬॥

ಅದೇ ರೀತಿಯಲ್ಲಿ ಶ್ರೋತೃಗಳು ನಿಷ್ಕಾಮ ಹಾಗೂ ಕುಶಲ ಬುದ್ಧಿಯಿಂದ ಈ ಭಗವದ್ಗೀತೆಯ ಅನುಭವ ಪಡೆಯಬೇಕು ।೫೭॥

ಈ ಗೀತೆಯನ್ನು ಶಬ್ದೋಚ್ಚಾರ ಹೊರತಾಗಿ ಮನನ ಮಾಡಬೇಕು. ಇಂದ್ರಿಯಗಳಿಗೆ ತಿಳಿಯದೇ ಅನುಭವ ಪಡೆಯಬೇಕು. ಇದರ ವಿಷಯ ಹೇಳುವ ಮೊದಲೇ ಸಿದ್ಧಾಂತಕ್ಕೆ ಬಂದು ಮುಟ್ಟಬೇಕು ।೫೮॥

ಯಾವ ಪ್ರಕಾರವಾಗಿ ಭ್ರಮರವು ಕಮಲದಳಕ್ಕೆ ತಿಳಿಯದ ರೀತಿಯಲ್ಲಿ ಪುಷ್ಪರೇಣುವನ್ನು ಸೇವನೆ ಮಾಡುವುದೋ ಅದರಂತೆ ಈ ಗ್ರಂಥದ ಅರ್ಥವನ್ನು ಸ್ವೀಕರಿಸುವ ಪದ್ಧತಿ ಇರುವುದು ।೫೯॥

ಚಂದ್ರಪ್ರಕಾಶದಿಂದ ಚಂದ್ರವಿಕಸಿ ಕಮಲವು ಅರಳಿ ತನ್ನ ಸ್ಥಾನ ಬಿಡದೇ ಚಂದ್ರನಿಂದ ಆಲಿಂಗನದ ಸುಖವನ್ನು ಭೋಗಿಸುವುದು ।೬೦॥

ಅದರಂತೆ ಗಂಭೀರತನದಿಂದ ಸ್ಥಿರವಾದ ಅಂತಃಕರಣ ಹೊಂದಿದವರಿಗೆ ಮಾತ್ರ ಈ ಗೀತಾ ಗ್ರಂಥದ ಆದರ ಗೌರವವು ತಿಳಿಯುವುದು ।೬೧॥

ಶ್ರೋತೃಗಳವರೇ, ಅರ್ಜುನನ ಯೋಗ್ಯತೆಯಂತೆ ಶ್ರವಣ ಮಾಡುವ ಅಧಿಕಾರ ಇದ್ದವರು ನೀವು ಸಂತರು ಕೃಪೆ ತೋರಿ ಈ ಕಡೆ ಲಕ್ಷ ಕೊಡಿರಿ ।೬೨॥

ಪ್ರಭುಗಳೇ, ನಿಮ್ಮ ಹೃದಯವು ಬಹಳ ಆಳವಾಗಿದ್ದು ಸಲಗಿಯಿಂದ ''ಲಕ್ಷ ಕೊಡಿರಿ'' ಎಂದೆನು. ಇದು ನನ್ನ ಆಜ್ಞೆ ಇರದೇ ನಿಮ್ಮ ಚರಣಸ್ಪರ್ಶ ಮಾಡಿ ವಿನಂತಿಸಿರುವೆನು ।೬೩॥

ತಮ್ಮ ಕೂಸು ತೊದಲು ನುಡಿ ನುಡಿದರೆ ತಾಯಿ ತಂದೆಯವರಿಗೆ ಸ್ವಭಾವತಃ ಹೆಚ್ಚಿಗೆ ಸಂತೋಷವಾಗುವುದು ।೬೪॥

ಈ ಪ್ರಕಾರ ನೀವು ಸಜ್ಜನರು ನನ್ನ ಅಂಗೀಕಾರ ಮಾಡಿರುವಿರಿ. ಆದ್ದರಿಂದ ನನ್ನ ತಪ್ಪು ಸಹಜವಾಗಿ ಸಹಿಸುವಿರಿ. ಇದಕ್ಕಾಗಿ ನಾನು ನಿಮಗೆ ಏನನ್ನು ಪ್ರಾರ್ಥಿಸಲಿ ।೬೫॥

ಆದರೆ, ನನ್ನಿಂದ ಒಂದು ವಿಶೇಷ ಅಪರಾಧವಾಗಿದೆ. ಅಧಿಕಾರ ಇಲ್ಲದೇ ಗೀತೆಯ ಅರ್ಥ ಸ್ಪಷ್ಟೀಕರಣ ಮಾಡುತ್ತಿದ್ದೇನೆ. ಹೇಳುವುದು ಸರಿಯೋ ತಪ್ಪೋ ಎಂಬುದಕ್ಕಾಗಿ ನಿಮಗೆ ಲಕ್ಷ ಕೊಡಿರಿ ಎಂದು ವಿನಂತಿಸುವೆನು ।೬೬॥

ಹೇ ಅನಾವರ ನ ವಿಚಾರಿತಾ । ವಾಯಾಂಚಿ ಧಿಂವಸಾ ಉಪನಲಾ ಚಿತ್ತಾ । ಯೇರ್ಹ್ವೀ ಭಾನುತೇಜೀ ಕಾಯ ಖದ್ಯೋತಾ । ಶೋಭಾ ಆಥೀ ।೬೭।। ಕೀ ಟಿಟಿಭೂ ಚಾಂಚುವರೀ । ಮಾಪ ಸೂಯೇ ಸಾಗರೀ । ಮೀ ನೇಣತು ತ್ಯಾಪರೀ । ಪ್ರವರ್ತೇ ಯೇಥ ।೬೮।। ಆಇಕಾ ಆಕಾಶ ಗಿವಸಾವೇ । ತರೀ ಆಣೇಕ ತ್ಯಾಹೂನಿ ಥೋರ ಹೋಆವೇ । ಮ್ಹಣೌನಿ ಅಪಾಡು ಹೇ ಆಘವೇ । ನಿರ್ಧಾರಿತಾ ।೬೯।। ಯಾ ಗೀತಾರ್ಥಾಚೀ ಥೋರೀ । ಸ್ವಯೇ ಶಂಭೂ ವಿವರೀ । ಜೇಥ ಭವಾನೀ ಪ್ರಶ್ನು ಕರೀ । ಚಮತ್ಕಾರೋನಿ ।೭೦।। ತೇಥ ಹರು ಮ್ಹಣೇ ನೇಣಿಜೇ । ದೇವೀ ಜೈಸೇ ಕಾ ಸ್ವರೂಪ ತುಝೇ । ತೈಸೇ ಹೇ ನಿತ್ಯ ನೂತನ ದೇಖಿಜೇ । ಗೀತಾತತ್ವ ।೭೧।। ಹಾ ವೇದಾರ್ಥ ಸಾಗರು । ಜಯಾ ನಿದ್ರಿತಾಚಾ ಘೋರು । ತೋ ಸ್ವಯೇ ಸರ್ವೇಶ್ವರು । ಪ್ರತ್ಯಕ್ಷ ಅನುವಾದಲಾ ।೭೨।। ಐಸೇ ಜೇ ಅಗಾಧ । ಜೇಥ ವೇಡಾವತೀ ವೇದ । ತೇಥ ಅಲ್ಪ ಮೀ ಮತಿಮಂದ । ಕಾಈ ಹೋಯೇ ।೭೩।। ಹೇ ಅಪಾರ ಕೈಸೇನಿ ಕವಳಾವೇ । ಮಹಾತೇಜ ಕವಣೇ ಧವಳಾವೇ । ಗಗನ ಮುಠೀ ಸುವಾವೇ । ಮಶಕೇ ಕೇವಿ ।೭೪।। ಪರೀ ಏಥ ಅಸೇ ಏಕು ಆಧಾರು । ತೇಣೇಂಚಿ ಬೋಲೇ ಮೀ ಸಧರು । ಜೈ ಸಾನುಕೂಳ ಶ್ರೀಗುರು । ಜ್ಞಾನದೇವೋ ಮ್ಹಣೇ ।೭೫।। ಯೇರ್ಹ್ವೀ ತರೀ ಮೀ ಮೂರ್ಖು । ಜರೀ ಜಾಹಲಾ ಅವಿವೇಕು । ತರೀ ಸಂತಕೃಪಾದೀಪಕು । ಸೋಜ್ವಳು ಅಸೇ ।೭೬।। ಲೋಹಾಚೇ ಕನಕ ಹೋಯೇ । ಹೇ ಸಾಮರ್ಥ್ಯ ಪರೀಸಿಂಚ ಆಹೇ । ಕೀ ಮೃತಹೀ ಜೀವಿತ ಲಾಹೇ । ಅಮೃತ ಸಿದ್ಧಿ ।೭೭।। ಜರೀ ಪ್ರಕಟೇ ಸಿದ್ಧಸರಸ್ವತೀ । ತರೀ ಮುಕಯಾಹಿ ಆಥೀ ಭಾರತೀ । ಏಥ ವಸ್ತು ಸಾಮರ್ಥ್ಯ ಶಕ್ತೀ । ನವಲ ಕಾಯೀ ।೭೮।। ಜಯಾತೇ ಕಾಮಧೇನು ಮಾಯೇ । ತಯಾಸೀ ಅಪ್ರಾಪ್ಯ ಕಾಂಹೀ ಆಹೇ । ಮ್ಹಣೌನಿ ಮೀ ಪ್ರವರ್ತೋ ಲಾಹೇ । ಗ್ರಂಥೀ ಇಯೇ ।೭೯।। ತರೀ ನ್ಯೂನ ತೇ ಪುರತೇ । ಅಧಿಕ ತೇ ಸರತೇ । ಕರುನಿ ಘೇಯಾವೇ ಹೇ ತುಮತೇ । ವಿನವಿತು ಅಸೇ ।೮೦।। ಆತಾ ದೇಈಜೋ ಅವಧಾನ । ತುಮ್ಹೀ ಬೋಲವಿಲ್ಯಾ ಮೀ ಬೋಲೇನ । ಜೈಸೇ ಚೇಷ್ಟೇ ಸೂತ್ರಾಧೀನ । ದಾರುಯಂತ್ರ ।೮೧।। ತೈಸಾ ಮೀ ಅನುಗ್ರಹೀತು । ಸಾಧೂಂಚಾ ನಿರೂಪಿತು । ತೇ ಆಪುಲಿಯಾಪರೀ ಅಲಂಕಾರಿತು । ಭಲತಯಾಪರೀ ।೮೨।। ತಂವ ಶ್ರೀಗುರು ಮ್ಹಣತೀ ರಾಹೀ । ಹೇ ತುಜ ಬೋಲಾವೇ ನಲಗೇ ಕಾಂಹೀ । ಆತಾ ಗ್ರಂಥಾ ಚಿತ್ತ ದೇಈ । ಝುಡಕರೀ ವೇಗಾ ।೮೩।। ಯಾ ಬೋಲಾ ನಿವೃತ್ತಿದಾಸು । ಪಾವೂನಿ ಪರಮ ಉಲ್ಹಾಸು । ಮ್ಹಣೇ ಪರಿಯೇಸಾ ಮನಾ ಅವಕಾಶು । ದೇಊನಿಯಾ ।೮೪।।

ಈ ಗೀತಾರ್ಥದ ಕಾರ್ಯವು ಬಹಳ ಕಠಿಣವಾಗಿದೆ. ಇದನ್ನು ಮನದಲ್ಲಿ ತಾರದೇ ಅರ್ಥ ಬರೆಯುವ ಕಾರ್ಯಕ್ಕೆ ವ್ಯರ್ಥವಾಗಿ ಧೈರ್ಯ ಮಾಡಿದ್ದೇನೆ. ಸೂರ್ಯನ ಪ್ರಕಾಶದ ಮುಂದೆ ಬೆಂಕಿಹುಳದ ಪ್ರಕಾಶ ಎಲ್ಲಿ ಬೀಳಬೇಕು? ॥೬೭॥

ಟಿಟಿಭ ಪಕ್ಷಿಯು ಸಮುದ್ರವನ್ನು ಬರಿದು ಮಾಡುವೆ ಎಂದು ತನ್ನ ಚುಂಚುವಿನಿಂದ ನೀರು ಹೊರಹಾಕಲು ಪ್ರಯತ್ನ ಮಾಡಿದಂತೆ ಅಧಿಕಾರ ಇಲ್ಲದೇ ನಾನು ಗೀತೆಗೆ ಅರ್ಥ ಬರೆಯುವ ಪ್ರವೃತ್ತಿ ಹೊಂದಿರುವೆನು ॥೬೮॥

ಆಕಾಶಕ್ಕೆ ತೆಕ್ಕೆ ಬೀಳಬೇಕಾದರೆ ಅದಕ್ಕಿಂತಲೂ ಹೆಚ್ಚು ದೊಡ್ಡವರಾಗಬೇಕಾಗುವುದು. ಅದರಂತೆ ಗೀತೆಗೆ ವ್ಯಾಖ್ಯಾನ ಮಾಡುವವರು ಗೀತೆಗಿಂತಲೂ ಅಧಿಕ ಜ್ಞಾನ ಇದ್ದರೆ ಮಾತ್ರ ಯೋಗ್ಯವಾಗುವುದು. ಆದ್ದರಿಂದ ಅರ್ಥ ಬರೆಯುವ ಕಾರ್ಯವು ನನ್ನ ಶಕ್ತಿಗೆ ಮೀರಿರುವುದು ॥೬೯॥

ಕಾರಣ, ಈ ಗೀತಾತರ್ಥದ ಗರಿಮೆ ಎಷ್ಟಿದೆ ಎಂದರೆ ಸ್ವತಃ ಶಂಕರನು ಅದರ ಚರ್ಚೆ ಮಾಡುವಾಗ್ಗೆ ಭವಾನಿ ಪಾರ್ವತಿಯು ಚಮತ್ಕಾರವಾಗಿ ಈ ರೀತಿ ಪ್ರಶ್ನಿಸಿದಳು ॥೭೦॥

ಆಗ ಶಂಕರನು ಹೇ, ಪಾರ್ವತಿಯೇ, ನಿನ್ನ ಸ್ವರೂಪವು ನಿತ್ಯನೂತನ ಇರುವುದರಿಂದ ಅದರ ಕೊನೆ ಹತ್ತುವುದಿಲ್ಲ. ಅದರಂತೆಯೇ ಗೀತಾತ್ವವು ನಿತ್ಯ ನೂತನ ಇರುವುದರಿಂದ ಇದು ನನಗೆ ಸಂಪೂರ್ಣ ವಿಸ್ತಾರವಾಗಿ ತಿಳಿದಿಲ್ಲ ಎಂದನು ॥೭೧॥

ಯಾವ ಸರ್ವೇಶ್ವರನ ನಿದ್ರೆಯ ಗೊರಕೆಯಲ್ಲಿ ಸಹಜವಾಗಿ ವೇದಗಳು ಉತ್ಪನ್ನವಾದವೋ, ಅದೇ ಜಗದೀಶ್ವರನಾದ ಶ್ರೀಕೃಷ್ಣಪರಮಾತ್ಮನು ಪ್ರತ್ಯಕ್ಷ ಮುಖದಿಂದ ಈ ಗೀತಾಶಾಸ್ತ್ರವನ್ನು ಅರ್ಜುನನಿಗೆ ಹೇಳಿದನು ॥೭೨॥

ಹೀಗೆ ಗೀತಾಶಾಸ್ತ್ರವು ಗಹನವಾಗಿದ್ದು ಅಲ್ಲಿ ವೇದದ ಮತಿಯು ಸಹ ಗುಂಗಾಗುವುದು. ಅಂದ ಮೇಲೆ ಅಲ್ಪ, ಮತಿಮಂದನಾದ ನನ್ನ ಯಾವ ಕಥೆ ?॥೭೩॥

ಈ ಅಪಾರವಾದ ಗೀತಾ ತತ್ವವನ್ನು ಯಾವ ಉಪಾಯದಿಂದ ತಿಳಿಯಬೇಕು? ಸೂರ್ಯನ ಪ್ರಕಾಶಕ್ಕೆ ಯಾರೋ ಬೆಳಕು ಕೊಟ್ಟಂತೆ! ಅಥವಾ ನೊರಜು ತನ್ನ ಮುಷ್ಟಿಯಲ್ಲಿ ಆಕಾಶವನ್ನು ಹೇಗೆ ಹಿಡಿಯಬೇಕು? ॥೭೪॥

ಆದಾಗ್ಯೂ, ಈ ಕಾರ್ಯಕ್ಕೆ ಒಂದು ಆಧಾರವಿದೆ. ನನಗೆ ಶ್ರೀಗುರುಗಳು ಅನುಕೂಲ ಇರುವರು. ಇದೇ ಆಧಾರ ಬಲದಿಂದ ಧೈರ್ಯವಾಗಿ ಹೇಳುತ್ತಿದ್ದೇನೆ ಎಂದು ಜ್ಞಾನೇಶ್ವರರು ಹೇಳುವರು ॥೭೫॥

ಸಾಮಾನ್ಯವಾಗಿ ನಾನು ಅಜ್ಞಾನಿ, ಅವಿವೇಕಿಯಾಗಿ ಇದ್ದರೂ ಸಂತಕೃಪಾದಿಂದ ಪ್ರಕಾಶಿತನಾಗಿರುವೆನು ॥೭೬॥

ಪರಿಸಮಣಿಯ ಸಾಮರ್ಥ್ಯದಿಂದ ಕಬ್ಬಿಣವು ಸ್ಪರ್ಶ ಮಾತ್ರದಿಂದ ಬಂಗಾರವಾಗುವುದು, ಅಮೃತವು ಪ್ರಾಪ್ತವಾದರೆ ಸತ್ತ ಮನುಷ್ಯನು ಜೀವಂತನಾಗುವನು ॥೭೭॥

ಅಥವಾ ಸರಸ್ವತಿಯೇ ಪ್ರಸನ್ನಳಾದ ಮೇಲೆ ಮೂಕನಿಗೂ ಸಹ ವಾಚಾ ಹುಟ್ಟುವುದು. ಈ ಅದ್ಭುತ ಪರಿವರ್ತನೆಗೆ ವಸ್ತು ಸಾಮರ್ಥ್ಯದ ಕಾರಣವಿರುವುದರಿಂದ ಇದರಲ್ಲೇನು ಆಶ್ಚರ್ಯ ವಿದೆ? ॥೭೮॥

ಕಾಮಧೇನುವೇ ತಾಯಿಯಾದವನಿಗೆ ಜಗತ್ತಿನಲ್ಲಿ ದುರ್ಲಭ ವಸ್ತುಗಳು ಆತನಿಗೆ ಯಾವವಿರುವುವು ? ಆದ್ದರಿಂದ ಇದೇ ಆಧಾರದಿಂದ ನಾನು ಗೀತಾರ್ಥದತ್ತ ಪ್ರವೃತ್ತನಾಗಿರುವೆನು ॥೭೯॥

ಇನ್ನು ಇದರಲ್ಲಿ ಕಡಿಮೆ ಇದ್ದರೆ ಪೂರ್ಣಮಾಡಿಕೊಳ್ಳಿರಿ. ಅಧಿಕವಿದ್ದರೆ ಅದನ್ನು ಬಿಟ್ಟುಬಿಡಿರಿ. ಇಷ್ಟೇ ನಿಮಗೆ ನನ್ನ ವಿನಂತಿ ಇದೆ ॥೮೦॥

ಈಗ ನೀವು ನನ್ನತ್ತ ಲಕ್ಷಕೊಡಿರಿ. ಕಟ್ಟಿಗೆಯ ಯಾಂತ್ರಿಕ ಗೊಂಬೆಗಳು ಸೂತ್ರಧಾರಿ ಕುಣಿಸಿದಂತೆ ಹೇಗೆ ಕುಣಿಯುತ್ತವೆಯೋ ಅದರಂತೆ ನೀವು ನನಗೆ ನುಡಿಸಿದಂತೆ ನುಡಿಯುವೆನು ॥೮೧॥

ಸಾಧುಗಳಾದ ನೀವು ಆಜ್ಞೆ ಮಾಡಿರುವುದರಿಂದ ನೀವು ನನಗೆ ಅನುಗ್ರಹ ಮಾಡಿರುವ ರೀತಿಯಲ್ಲಿ ಈಗ ತಮ್ಮ ಇಚ್ಛೆಗೆ ಬಂದಂತೆ ನನ್ನನ್ನು ಸುಶೋಭಿತನನ್ನಾಗಿ ಮಾಡಿ ನುಡಿಸಿರಿ ॥೮೨॥

ಆಗ ಸಾಕು, ಇದನ್ನು ನೀನು ನಮಗೆ ಹೇಳಬೇಕಾಗಿಲ್ಲ. ಈಗ ಗೀತಾರ್ಥ ಹೇಳಲು ಬೇಗನೇ ಲಕ್ಷಕೊಡು ಎಂದು ಶ್ರೀಗುರುಗಳು ಹೇಳಿದರು ॥೮೩॥

ಹೀಗೆ ಶ್ರೀಗುರುಗಳ ಆಜ್ಞೆ ಆದದ್ದು ಕಂಡು ಶ್ರೀ ನಿವೃತ್ತಿದಾಸ ಜ್ಞಾನೇಶ್ವರರು ಪರಮ ಉಲ್ಹಾಸಿತರಾಗಿ ನಾನೀಗ ಹೇಳುವೆ, ತಾವುಗಳು ಪವಿತ್ರ ಮನಸ್ಸಿನಿಂದ ಕೇಳಿರಿ ಎಂದರು ॥೮೪॥

ಧೃತರಾಷ್ಟ್ರ ಉವಾಚ :-
ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ ।
ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ॥೧॥

ತರೀ ಪುತ್ರಸ್ನೇಹೇ ಮೋಹಿತು । ಧೃತರಾಷ್ಟ್ರ ಅಸೇ ಪುಸತು । ಮ್ಹಣೇ ಸಂಜಯಾ ಸಾಂಗೇ ಮಾತು । ಕುರುಕ್ಷೇತ್ರೀಂಚೀ ॥೮೫॥ ಜೇ ಧರ್ಮಾಲಯ ಮ್ಹಣಿಜೇ । ತೇಥ ಪಾಂಡವ ಆಣಿ ಮಾಝೇ । ಗೇಲೇ ಅಸತೀ ವ್ಯಾಜೇ । ಝುಂಝಾಜೇನಿ ॥೮೬॥ ತರೀ ತೇಚಿ ಯೇತುಲಾ ಅವಸರೀ । ಕಾಯ ಕಿಜತ ಅಸೇ ಯೇರಯೇರೀ । ತೇ ಝಡಕರೀ ಕಥನ ಕರೀ । ಮಜಪ್ರತೀ ॥೮೭॥

ಸಂಜಯ ಉವಾಚ :-
ದೃಷ್ಟ್ವಾತು ಪಾಂಡವಾನೀಕಮ್ ವ್ಯೂಢಂ ಧುರ್ಯೋಧನಸ್ತದಾ ।
ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥೨॥

ತಿಯೇ ವೇಳೀ ತೋ ಸಂಜಯ ಬೋಲೇ । ಮ್ಹಣೇ ಪಾಂಡವಸೈನ್ಯ ಉಚಲಲೇ । ಜೈಸೇ ಮಹಾಪ್ರಳಯೀ ಪಸರಲೇ । ಕೃತಾಂತಮುಖ ॥೮೮॥ ತೈಸೇ ತೇ ಘನದಾಟ । ಉಠಾವಲೇ ಏಕವಾಟ । ಜೈಸೇ ಉಸಳಲೇ ಕಾಳಕೂಟ । ಧರೀ ಕವಣ ॥೮೯॥ ನಾತರೀ ವಡವಾನಳು ಸಾದುಕಲಾ । ಪ್ರಳಯವಾತೇ ಪೋಖಲಾ । ಸಾಗರು ಶೋಷೂನಿ ಉಧವಲಾ । ಅಂಬರಾಸೀ ॥೯೦॥ ತೈಸೇ ದಳ ದುರ್ಧರ । ನಾನಾವ್ಯೂಹೀ ಪರಿಕರ । ಅವಗಮಲೇ ಭಯಾಸುರ । ತಿಯೇ ಕಾಳೀ ॥೯೧॥ ತೇ ದೇಖೋನಿಯಾ ದುರ್ಯೋಧನೇ । ಅವ್ಹೇರಿಲೇ ಕವಣೇ ಮಾನೇ । ಜೈಸೇ ನ ಗಣಿಜೇ ಪಂಚಾನನೇ । ಗಜಘಟಾಂತೇ ॥೯೨॥

ರಾಜೋವಾಚ :-
ಪಶ್ಯೈತಾಂ ಪಾಂಡುಪುತ್ರಾಣಾಮ್ ಆಚಾರ್ಯಮಹತೀಂ ಚಮೂಮ್ ।
ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥೩॥

ಮಗ ದ್ರೋಣಾಪಾಸೀ ಆಲಾ । ತಯಾತೇ ಮ್ಹಣೇ ಹಾ ದೇಖಿಲಾ । ಕೈಸಾ ದಳಭಾರು ಉಚಲಲಾ । ಪಾಂಡವಾಂಚಾ ॥೯೩॥ ಗಿರಿದುರ್ಗ ಜೈಸೇ ಚಾಲತೇ । ತೈಸೇ ವಿವಿಧ ವ್ಯೂಹ ಸಂಭವತೇ । ರಚಿಲೇ ಆಥೀ ಬುದ್ಧಿಮಂತೇ । ದ್ರುಪದಕುಮರೇ ॥೯೪॥ ಜೋ ಕಾ ತುಮ್ಹೀ ಶಿಕ್ಷಾಪಿಲಾ । ವಿದ್ಯಾ ದೇವೂನಿ ಕುರುಠಾ ಕೇಲಾ । ತೇಣೇ ಹಾ ಸೈನ್ಯಸಿಂಹು ಪಾಖರಿಲಾ । ದೇಖ ದೇಖ ॥೯೫॥

ಶ್ಲೋಕಾರ್ಥ :- ಧೃತರಾಷ್ಟ್ರನು ಹೇಳಿದನು : ಹೇ ಸಂಜಯ! ಯುದ್ಧ ಮಾಡಬೇಕೆಂಬ ಅಭಿಲಾಷೆ ಯುಳ್ಳವರಾಗಿ ನನ್ನ ಕುಮಾರರೂ, ಪಾಂಡವರೂ ಧರ್ಮಭೂಮಿಯಾದ ಕುರುಕ್ಷೇತ್ರದಲ್ಲಿ ಸೇರಿ ಏನು ಮಾಡುತ್ತಿರುವರು? ॥೧॥

ಪುತ್ರಪ್ರೇಮದಿಂದ ಮೋಹಿತನಾದ ಧೃತರಾಷ್ಟ್ರ ರಾಜನು ಸಂಜಯನಿಗೆ ಕುರುಕ್ಷೇತ್ರದಲ್ಲಿ ಏನೇನು ನಡೆದಿದೆ ಅದೆಲ್ಲ ವರ್ತಮಾನ ತಿಳಿಸು ಎಂದನು ॥೮೫॥

ಯಾವುದಕ್ಕೆ ಧರ್ಮದ ಮತ್ತು ಪುಣ್ಯದ ಉತ್ಪತ್ತಿ ಸ್ಥಾನ ಎಂದು ಕರೆಯುವರೋ ಆ ಕುರುಕ್ಷೇತ್ರಕ್ಕೆ ಪಾಂಡು ಪುತ್ರರು ಹಾಗೂ ನನ್ನ ಪುತ್ರರು ಯುದ್ಧಕ್ಕಾಗಿ ಹೋಗಿರುವರು ॥೮೬॥

ಆದರೆ ಅವರು ಪರಸ್ಪರರಲ್ಲಿ ಇಲ್ಲಿಯವರೆಗೆ ಏನೇನು ಮಾಡುತ್ತಿರುವರು ಎಂಬುದನ್ನು ನನಗೆ ನೀನು ಬೇಗನೇ ತಿಳಿಸು ॥೮೭॥

ಶ್ಲೋಕಾರ್ಥ :- ಸಂಜಯ ಹೇಳಿದನು: ಈ ಸಮಯದಲ್ಲಿ ರಾಜನಾದ ದುರ್ಯೋಧನನು ವ್ಯೂಹಾ ಕಾರವಾಗಿ ರಚಿಸಲ್ಪಟ್ಟ ಪಾಂಡವರ ಸೈನ್ಯವನ್ನು ನೋಡಿ ದ್ರೋಣಾಚಾರ್ಯರ ಸಮೀಪಕ್ಕೆ ಬಂದು ಈ ಮಾತನ್ನು ಹೇಳಿದನು ॥೨॥

ಆಗ ಸಂಜಯನು ಹೇಳುತ್ತಾನೆ; ಮಹಾ ಪ್ರಳಯ ಪ್ರಸಂಗದಲ್ಲಿ ಕಾಳನ ಮುಖವು ಹೇಗೆ ತೆರೆದಿರುವುದೋ ಅದರಂತೆ ಪಾಂಡವರ ಸೈನ್ಯವು ರೊಚ್ಚಿಗೆದ್ದಿದೆ ॥೮೮॥

ಪಾಂಡವರ ಸರ್ವ ಸೈನ್ಯವು ಒಂದೆಡೆ ಸೇರಿ ಒಂದೇ ರೇಖೆಯಲ್ಲಿ ಸಜ್ಜಾಗಿದೆ. ಈಗ ಅವರಿಗೆ ಯಾರು ನಿಭಾಯಿಸಬೇಕು? ಕಾಳಕೂಟ ವಿಷವು ಸಿಡಿದೆದ್ದಾಗ ಅದನ್ನು ಯಾರು ಶಾಂತಪಡಿಸಬೇಕು? ॥೮೯॥

ಅಥವಾ ವಡವಾಗ್ನಿಯು ಹೊತ್ತಿಕೊಂಡಾಗ ಪ್ರಳಯಾಂತಿಕ ಬಿರುಗಾಳಿಯಿಂದ ಇನ್ನೂ ಪ್ರಜ್ವಲಗೊಂಡು ಸಮುದ್ರವನ್ನೂ ಶೋಷಿಸಿ ಆಕಾಶದವರೆಗೂ ಭಡಕಾಯಿಸುವುದು ॥೯೦॥

ಅದರಂತೆ ಪಾಂಡವರ ಭಯಂಕರ ಸೈನ್ಯವು ಅನೇಕ ಪ್ರಕಾರದ ವ್ಯೂಹಗಳನ್ನು ರಚಿಸಿದ್ದು ಕಂಡರೆ ಬಹಳ ಭಯಾನಕವಾಗುವುದು ॥೯೧॥

ಆದಾಗ್ಯೂ, ಆನೆಗಳ ಹಿಂಡು ಕಂಡು ಸಿಂಹವು ಬೆದರದಂತೆ ದುರ್ಯೋಧನನು ಆ ಸೈನ್ಯವನ್ನು ಕಂಡು ಅಂಜಲಿಲ್ಲ ॥೯೨॥

ಶ್ಲೋಕಾರ್ಥ :- ರಾಜನು ಹೇಳಿದನು, ಹೇ ಆಚಾರ್ಯರೇ, ನಿನ್ನ ಶಿಷ್ಯನೂ, ಬುದ್ಧಿವಂತನೂ, ದ್ರುಪದ ಪುತ್ರನೂ ಆದ ಧೃಷ್ಟದ್ಯುಮ್ನನಿಂದ ವ್ಯೂಹಾ ಕಾರವಾಗಿ ರಚಿಸಲ್ಪಟ್ಟ ಪಾಂಡು ಪುತ್ರರ ಈ ದೊಡ್ಡ ಸೈನ್ಯವನ್ನು ನೋಡು ॥೩॥

ನಂತರ ದುರ್ಯೋಧನನು ದ್ರೋಣಾಚಾರ್ಯರಲ್ಲಿ ಬಂದು ಪಾಂಡವರ ಸೈನ್ಯವು ಯುದ್ಧದ ಉತ್ಸಾಹದಿಂದ ಹೇಗೆ ಹಾರಾಡುತ್ತಿರುವುದು ನೋಡಿದಿರಾ ? ಎಂದನು ॥೯೩॥

ಬುದ್ಧಿವಂತನಾದ ದ್ರುಪದ ಪುತ್ರ ಧೃಷ್ಟದ್ಯುಮ್ನನು ತನ್ನ ಚಾಣಾಕ್ಷತೆಯಿಂದ ನಡೆಯುವ ಪರ್ವತ ಕೋಟೆಗಳಂತೆ ಸೈನ್ಯವನ್ನು ರಚಿಸಿದ್ದಾನೆ ॥೯೪॥

ಯಾವ ಧೃಷ್ಟದ್ಯುಮ್ನನಿಗೆ ನೀವೇ ಕಲಿಸಿ ವಿದ್ಯೆಯ ನಿಧಿಯಾಗಿ ಮಾಡಿದಿರಿ. ಆತನೇ ಈಗ ನಿಮ್ಮ ಮೇಲೆ ಈ ಸೈನ್ಯ ಸಿಂಹವನ್ನು ನಾಲ್ಕು ದಿಕ್ಕಿಗೂ ಹಬ್ಬಿಸಿರುವನು. ನೋಡಿರಿ ॥೯೫॥

ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ ।
ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ।೪॥

ಆಣಿಕಹೀ ಅಸಾಧಾರಣ । ಜೇ ಶಸ್ತ್ರಾಸ್ತ್ರೀ ಪ್ರವೀಣ । ಕ್ಷಾತ್ರಧರ್ಮೀ ನಿಪುಣ । ವೀರ ಆಹಾತೀ ।೯೬॥ ಜೇ ಬಳೇ ಪ್ರೌಢೀ ಪೌರುಷೇ । ಭೀಮಾರ್ಜುನಾಸಾರಿಖೇ । ತೇ ಸಾಂಗೇನ ಕೌತುಕೇ । ಪ್ರಸಂಗೇಚೀ ।೯೭॥ ಏಥ ಯುಯುಧಾನು ಸುಭಟು । ಆಲಾ ಅಸೇ ವಿರಾಟು । ಮಹಾರಥೀ ಶ್ರೇಷ್ಠು । ದ್ರುಪದ ವೀರು ।೯೮॥

ಧೃಷ್ಟಕೇತುಶ್ಚೇಕಿತಾನಃ ಕಾಶೀರಾಜಶ್ಚ ವೀರ್ಯವಾನ್ ।
ಪುರುಜಿತ್ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ ।೫॥

ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್ ।
ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ।೬॥

ಚೇಕಿತಾನ ಧೃಷ್ಟಕೇತು । ಕಾಶೀರಾಜ ವೀರವಿಕ್ರಾಂತು । ಉತ್ತಮೌಜಾ ನೃಪನಾಥು । ಶೈಬ್ಯ ದೇಖ ।೯೯॥ ಹಾ ಕುಂತಿಭೋಜ ಪಾಹೇ ।ಏಥ ಯುಧಾಮನ್ಯು ಆಲಾ ಆಹೇ । ಆಣಿ ಪುರುಜಿತಾದಿ ರಾಯ ಹೇ । ಸಕಳ ದೇಖೇ ।೧೦೦॥ ಹಾ ಸುಭದ್ರಾಹೃದಯನಂದನು । ಜೋ ಅಪರುನವಾರ್ಜುನು । ತೋ ಅಭಿಮನ್ಯು ಮ್ಹಣೇ ದುರ್ಯೋಧನು । ದೇಖೇ ದ್ರೋಣಾ ।೧೦೧॥ ಆಣೀಕಹೀ ದ್ರೌಪದೀಕುಮರ । ಹೇ ಸಕಳಹೀ ಮಹಾರಥೀ ವೀರ । ಮಿತೀ ನೇಣಿಜೇ ಪರೀ ಅಪಾರ । ಮೀನಲೇ ಅಸತೀ ।೧೦೨॥

ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ ।
ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ ಬ್ರವೀಮಿ ತೇ ।೭॥

ಆತಾ ಆಮುಚ್ಯಾ ದಳೀ ನಾಯಕ । ಜೇ ರೂಢವೀರ ಸೈನಿಕ । ತೇ ಪ್ರಸಂಗೇ ಆಯಿಕ । ಸಾಂಗಿಜತೀ ।೧೦೩॥

ಭವಾನ್ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ ।
ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವ ಚ ।೮॥

ಉದ್ದೇಶೇ ಏಕ ದೋನೀ । ಜಾಯಿಜತೀ ಬೋಲೋನೀ । ತುಮ್ಹೀ ಆದಿ ಕರೂನಿ । ಮುಖ್ಯ ಜೇ ಜೇ ।೧೦೪॥ ಹಾ ಭೀಷ್ಮ ಗಂಗಾನಂದನು । ಜೋ ಪ್ರತಾಪತೇಜಸ್ವೀ ಭಾನು । ರಿಪುಗಜಪಂಚಾನನು । ಕರ್ಣವೀರು ।೧೦೫॥

ಶ್ಲೋಕಾರ್ಥ :- ಈ ಸೈನ್ಯದಲ್ಲಿ ದೊಡ್ಡ ಧನುರ್ಧಾರಿಗಳೂ ಭೀಮಾರ್ಜುನರ ಸಮಾನರೂ ಶೂರರೂ ಆದ ಯುಯುಧಾನ, ವಿರಾಟರಾಜ, ಮಹಾರಥನಾದ ದ್ರುಪದರಾಜನು ।೪॥

ಈ ಸೇನೆಯಲ್ಲಿ ದೃಷ್ಟದ್ಯುಮ್ನ ಹೊರತಾಗಿ ಇನ್ನೂ ಅನೇಕ ಅಸಾಮಾನ್ಯ ಯೋದ್ಧರಿರುವರು. ಅವರೆಲ್ಲರೂ ಶಸ್ತ್ರಪ್ರವೀಣರಿದ್ದು ಕ್ಷಾತ್ರ ಧರ್ಮವನ್ನು ತಿಳಿದವರಾಗಿದ್ದಾರೆ ।೯೬॥

ಶಕ್ತಿಯಿಂದ, ಧೈರ್ಯದಿಂದ ಮತ್ತು ಪರಾಕ್ರಮಗಳಿಂದ ಭೀಮಾರ್ಜುನರ ಸರಿಸಮಾನರು ಇದ್ದಾರೆ. ಈಗ ಪ್ರಸಂಗ ಬಂದಿರುವುದರಿಂದ ಅವರ ಹೆಸರು ಹೇಳುವೆನು ।೯೭॥

ಈ ಸೇನೆಯಲ್ಲಿ ಕುಶಲ ಮಹಾಯೋದ್ಧರಾದ ಯುಯುಧಾನ ರಾಜನು, ವಿರಾಟರಾಜನು, ಮತ್ತು ಶ್ರೇಷ್ಠ ಮಹಾರಥಿ ದೃಪದರಾಜನು ಸೇರಿದ್ದಾರೆ ।೯೮॥

ಶ್ಲೋಕಾರ್ಥ :- ಧೃಷ್ಟಕೇತು, ಚೇಕಿತಾನ, ವೀರ್ಯವಂತನಾದ ಕಾಶೀರಾಜ, ಪುರುಜಿತ್ತು, ಕುಂತಿಭೋಜ, ನರಶ್ರೇಷ್ಠನಾದ ಶೈಬ್ಯನು ।೫॥

ಶ್ಲೋಕಾರ್ಥ :- ಪರಾಕ್ರಮಶಾಲಿಯಾದ ಯುಧಾಮನ್ಯೂ, ವೀರ್ಯವಂತನಾದ ಉತ್ತಮೌಜಸ್ಸು ಮತ್ತು ಸುಭದ್ರೆಯ ಮಗನೂ, ದ್ರೌಪದಿಯ ಮಕ್ಕಳೂ ಇರುವರು. ಇವರೆಲ್ಲರೂ ಮಹಾರಥಿಗಳು ।೬॥

ಚೇಕಿತಾನ, ದೃಷ್ಟಕೇತು, ಪರಾಕ್ರಮಿಯಾದ ಕಾಶಿರಾಜ ಉತ್ತಮೌಜಾ, ನೃಪಶ್ರೇಷ್ಠ ಶೈಲ್ಯ ಬಂದಿರುವರು ನೋಡಿರಿ ।೯೯॥

ಆ ಕುಂತಿಭೋಜನನ್ನು ನೋಡಿರಿ. ಹಾಗೆಯೇ ಶೈಬ್ಯರಾಜನನ್ನೂ ಈ ಕಡೆ ನೋಡಿರಿ. ಅಲ್ಲದೇ ಪುರುಜಿತ್ ಮೊದಲು ಮಾಡಿ ಎಲ್ಲ ರಾಜರು ಬಂದಿರುವರು ನೋಡಿರಿ ।೧೦೦॥

ಪುನಃ ದುರ್ಯೋಧನನು ದ್ರೋಣಾಚಾರ್ಯರೇ ! ಸುಭದ್ರೆಯ ಅಂತಃಕರಣಕ್ಕೆ ಆನಂದ ಕೊಡುವ ಆಕೆಯ ಪುತ್ರ ಪ್ರತಿ ಅರ್ಜುನನಾಗಿರುವ ಅಭಿಮನ್ಯು ಬಂದಿರುವನು ।೧೦೧॥

ಇದಲ್ಲದೇ ದ್ರೌಪದಿಯ ಮಕ್ಕಳು ಹಾಗೂ ಎಲ್ಲ ಮಹಾರಥಿಗಳು ಗಣಿತ ಮಾಡಲಿಕ್ಕೆ ಬಾರದಷ್ಟು ಅಸಂಖ್ಯೆ ವೀರರು ಇಲ್ಲಿ ಕೂಡಿರುವರು ।೧೦೨॥

ಶ್ಲೋಕಾರ್ಥ :- ಹೇ ಬ್ರಾಹ್ಮಣೋತ್ತಮನೇ, ನಮ್ಮ ಪಕ್ಷದಲ್ಲಿ ಶ್ರೇಷ್ಠರೂ, ನಮ್ಮ ಸೈನ್ಯಕ್ಕೆ ನಾಯಕರಾದ ವರನ್ನು ನಿನ್ನ ತಿಳುವಳಿಕೆಗಾಗಿ ಹೇಳುತ್ತೇನೆ ।೭॥

ಶ್ಲೋಕಾರ್ಥ :- ನೀನು, ಭೀಷ್ಮ, ಸಮರಜಯಿ ಯಾದ ಕೃಪ, ಅಶ್ವತ್ಥಾಮ, ವಿಕರ್ಣ, ಸೋಮದತ್ತನ ಮಗನಾದ ಭೂರಿಶ್ರವಣನು ।೮॥

ಈಗ ನಮ್ಮ ಸೈನ್ಯದಲ್ಲಿ ಪ್ರಮುಖರಾದ ಮಹಾವೀರರು ಯಾರು ಯಾರು ಇದ್ದಾರೆ ಎಂಬುದು ಈ ಪ್ರಸಂಗದಲ್ಲಿ ಹೇಳುವೆ, ಕೇಳಿರಿ ।೧೦೩॥

ನಿಮ್ಮನ್ನು ಕೂಡಿಸಿ ಇತರ ಒಂದೆರಡು ವೀರರ ಹೆಸರು ನಿಮಗೆ ಸ್ವಲ್ಪದರಲ್ಲಿಯೇ ದೃಷ್ಟಿಗೋಚರಕ್ಕೆ ಬರಲಿ ಎಂದು ಹೇಳುವೆ, ಕೇಳಿರಿ ।೧೦೪॥

ಶೌರ್ಯದಲ್ಲಿ ಬಲದಲ್ಲಿ ಕೇವಲ ಪ್ರತಿಸೂರ್ಯರಾದ ಈ ಗಂಗಾನಂದ ಭೀಷ್ಮಾಚಾರ್ಯರು, ಶತ್ರುರೂಪ ಆನೆಗೆ ಸಿಂಹಪ್ರಾಯನಾದ ಈ ಪರಾಕ್ರಮಿ ಕರ್ಣನು ।೧೦೫॥

ಯಾ ಏಕೇಕಾಚೇನಿ ಮನೋವ್ಯಾಪಾರೇ । ಹೇ ವಿಶ್ವ ಹೋಯ ಸಂಹರೇ । ಹಾ ಕೃಪಾಚಾರ್ಯು ನ ಪುರೇ । ಏಕಲಾಚಿ ॥೧೦೬॥ ಏಥ ವಿಕರ್ಣ ವೀರು ಆಹೇ । ಹಾ ಅಶ್ವತ್ಥಾಮಾ ಪೈಲ ಪಾಹೇ । ಯಾಚಾ ಆಡದರು ಸದಾ ವಾಹೇ । ಕೃತಾಂತು ಮನೀ ॥೧೦೭॥ ಸಮಿತಿಂಜಯೋ ಸೌಮದತ್ತೀ ।

ಅನ್ಯೇ ಚ ಬಹವಃ ಶೂರಾ ಮದರ್ಥೇ ತ್ಯಕ್ತಜೀವಿತಾಃ । ನಾನಾಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ ॥೯॥

ಐಸೇ ಆಣಿಕಹೀ ಬಹುತ ಆಹಾತೀ । ಜಯಾಂಚಿಯಾ ಬಳಾ ಮಿತೀ । ಧಾತಾಹೀ ನೇಣೇ ॥೧೦೮॥ ಜೇ ಶಸ್ತ್ರವಿದ್ಯಾಪಾರಂಗತ । ಮಂತ್ರಾವತಾರ ಮೂರ್ತ । ಹೋ ಕಾ ಜೇ ಅಸ್ತ್ರಜಾತ । ಏಥೂನಿ ರೂಢ ॥೧೦೯॥ ಹೇ ಅಪ್ರತಿಮಲ್ಲ ಜಗೀ । ಪುರತಾ ಪ್ರತಾಪು ಅಂಗೀ । ಪರೀ ಸರ್ವ ಪ್ರಾಣೇ ಮಜಚಿಲಾಗೀ । ಆರಾಯಿಲೇ ಅಸತೀ ॥೧೧೦॥ ಪತಿವ್ರತೇಚೇ ಹೃದಯ ಜೈಸೇ । ಪತಿವಾಂಚೂನಿ ನ ಸ್ಪರ್ಶೇ । ಮೀ ಸರ್ವಸ್ವ ಯಾ ತೈಸೇ । ಸುಭಟಾಂಸೀ ॥೧೧೧॥ ಆಮುಚಿಯಾ ಕಾಜಾಚೇನಿ ಪಾಡೇ । ದೇಖತೀ ಆಪುಲೇ ಜೀವಿತ ಥೋಕಡೇ । ಐಸೇ ನಿರವಧೀ ಚೋಖಡೇ । ಸ್ವಾಮಿಭಕ್ತ ॥೧೧೨॥ ಝುಂಜತೀ ಕುಳಕಣೀ ಜಾಣತೀ । ಕಳೇ ಕೀರ್ತೀಸೀ ಜಿತೀ । ಹೇ ಬಹು ಅಸೋ ಕ್ಷಾತ್ರನೀತೀ । ಏಥೋನಿಯಾ ॥೧೧೩॥ ಐಸೇ ಸರ್ವಾಪರೀ ಪುರತೇ । ವೀರ ದಳೀ ಆಮುತೇ । ಆತಾ ಕಾಯ ಗಣೂ ಯಾಂತೇ । ಅಪಾರ ಹೇ ॥೧೧೪॥

ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ ।
ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ॥೧೦॥

ವರೀ ಕ್ಷತ್ರಿಯಾಂಮಾಜೀ ಶ್ರೇಷ್ಠು । ಜೋ ಜಗಜೇಠೀ ಜಗೀ ಸುಭಟು । ತಯಾ ದಳವೈಪಣಾಚಾ ಪಾಟು । ಭೀಷ್ಮಾಸಿ ಪೈ ॥೧೧೫॥ ಆತಾ ಯಾಚೇನಿ ಬಳೇ ಗವಸಲೇ । ಹೇ ದುರ್ಗ ಜೈಸೇ ಪನ್ನಾಸಿಲೇ । ಯೇಣೇ ಪಾಡೇ ಥೇಕುಲೇ । ಲೋಕತ್ರಯ ॥೧೧೬॥ ಆಧೀಂಚ ಸಮುದ್ರ ಪಾಹೀ । ತೇಥ ದುವಾಡಪಣ ಕವಣಾ ನಾಹೀ । ಮಗ ವಡವಾನಳು ತೈಸೇಯಾಹೀ । ವಿರಜಾ ಜೈಸಾ ॥೧೧೭॥ ನಾ ತರೀ ಪ್ರಳಯವನ್ಹೀ ಮಹಾವಾತು ।ಯಾ ದೋಘಾ ಜೈಸಾ ಸಾಂಘಾತು । ತೈಸಾ ಹಾ ಗಂಗಾಸುತು । ಸೇನಾಪತಿ ॥೧೧೮॥ ಆತಾ ಯೇಣೇಸಿ ಕವಣ ಭಿಡೇ । ಹೇ ಪಾಂಡವಸೈನ್ಯ ಕೀರ ಥೋಕಡೇ । ಪರೀ ವರಚಿಲೇನಿ ಪಾಡೇ । ದಿಸತ ಅಸೇ ॥೧೧೯॥ ವರೀ ಭೀಮಸೇನು ಬೇಥು । ತೋ ಜಾಹಲಾ ಅಸೇ ಸೇನಾನಾಥು । ಐಸೇ ಬೋಲೋನಿಯಾ ಮಾತು । ಸಾಂಡಿಲೀ ತೇಣೇ ॥೧೨೦॥

ಇವರಲ್ಲಿ ಒಬ್ಬೊಬ್ಬರ ಸಂಕಲ್ಪ ಮಾತ್ರದಿಂದ ಈ ವಿಶ್ವದ ಸಂಹಾರವಾದೀತು, ಹೆಚ್ಚಿಗೇನು ಹೇಳಬೇಕು? ಈ ಕೃಪಾಚಾರ್ಯರು ಒಬ್ಬರೇ ಸಾಕಾಗುವುದಿಲ್ಲವೇ? ॥೧೦೬॥

ನಮ್ಮಲ್ಲಿ ವಿಕರ್ಣ ವೀರನಿರುವನು. ಹಾಗೆಯೇ ಆ ಕಡೆ ಅಶ್ವತ್ಥಾಮನನ್ನು ನೋಡಿರಿ. ಪ್ರತ್ಯಕ್ಷ ಕಾಳನಿಗೂ ಈತನ ಭಯವಿರುವುದು ॥೧೦೭॥

ಯುದ್ಧದಲ್ಲಿ ಯಾವಾಗಲೂ ವಿಜಯನಾಗುವ ಈ ಸೌಮದತ್ತ (ಭೂರಿಶ್ರವ).

ಶ್ಲೋಕಾರ್ಥ :- ಮತ್ತು ನನಗಾಗಿ ಪ್ರಾಣತ್ಯಾಗ ಮಾಡಲು ಕೃತಸಂಕಲ್ಪರಾದ ಇನ್ನೂ ಅನೇಕ ಶೂರರು ಇದ್ದಾರೆ. ಅವರೆಲ್ಲರೂ ನಾನಾ ವಿಧವಾದ ಶಸ್ತ್ರ ಪ್ರಹಾರಗಳಲ್ಲಿ ದಕ್ಷರು ಮತ್ತು ಯುದ್ಧದಲ್ಲಿ ನಿಪುಣರು ॥೯॥

ಅದರಂತೆ ಯಾರ ಶೌರ್ಯದ ಗಣಿತವು ಪ್ರತ್ಯಕ್ಷ ಬ್ರಹ್ಮನಿಗೂ ಹತ್ತುವುದಿಲ್ಲವೋ ಅಂತಹ ಅನೇಕ ವೀರರಿರುವರು ॥೧೦೮॥

ಇವರು ಶಸ್ತ್ರ ವಿದ್ಯೆಗಳಲ್ಲಿ ನಿಪುಣರು. ಅಸ್ತ್ರ ವಿದ್ಯೆಗಳಲ್ಲಿ ಮಾತ್ರ, ಸಾಕ್ಷಾತ್ ಅವತಾರಿಗಳಾಗಿದ್ದಾರೆ. ಹೆಚ್ಚಿಗೆ ಏನು ಹೇಳಬೇಕು? ಇವರಿಂದಲೇ ಅಸ್ತ್ರ ವಿದ್ಯೆಯು ಜಗತ್ತಿನಲ್ಲಿ ಪ್ರಸಿದ್ಧಿಗೆ ಬಂದಿತು ॥೧೦೯॥

ಇವರ ಸರಿಸಮಾನರಾದ ಬೇರೆ ಯೋದ್ಧರು ಈ ಜಗತ್ತಿನಲ್ಲಿಯೇ ಇಲ್ಲ. ಇವರು ಇಷ್ಟೊಂದು ಬಲಾಢ್ಯರಾಗಿದ್ದರೂ ಜೀವಭಾವದಿಂದ ನನ್ನನ್ನೇ ಅನುಸರಿಸಿದ್ದಾರೆ ॥೧೧೦॥

ಪತಿವ್ರತೆಯರ ಮನಸ್ಸು ತಮ್ಮ ಪತಿ ಹೊರತಾಗಿ ಇತರರಿಗೆ ಸ್ಪರ್ಶಸಹಿತ ಮಾಡುವುದಿಲ್ಲ. ಅದರಂತೆ ಈ ಯೋದ್ಧರಿಗೆಲ್ಲ ಎಲ್ಲವೂ ನಾನೇ ಸರ್ವಸ್ವನಾಗಿದ್ದೇನೆ ॥೧೧೧॥

ನಮ್ಮ ಕಾರ್ಯದ ಮುಂದೆ ಇವರಿಗೆ ತಮ್ಮ ಜೀವಿತವು ತುಚ್ಛವಾಗಿರುವುದು. ಈ ರೀತಿಯ ನಿಷ್ಕಪಟ ನಿಃಸೀಮ ಸ್ವಾಮಿಭಕ್ತರಿರುವರು ॥೧೧೨॥

ಇವರು ಎಲ್ಲ ಯುದ್ಧಗಳಲ್ಲಿ ನಿಪುಣರಿರುವರು, ಯುದ್ಧಕಲೆಗಳಲ್ಲಿ ಕೀರ್ತಿಯನ್ನು ಸಹ ಗೆಲ್ಲುವಂಥವರು. ಹೆಚ್ಚಿಗೇನು ಹೇಳಬೇಕು? ಕ್ಷಾತ್ರಧರ್ಮವು ಇವರಿಂದಲೇ ಪ್ರಸಿದ್ಧಿಗೆ ಬಂದಿತು! ॥೧೧೩॥

ಈ ಪ್ರಕಾರವಾಗಿ ನಮ್ಮ ಸೈನ್ಯದಲ್ಲಿ ಎಲ್ಲ ರೀತಿಯಲ್ಲಿ ಪರಾಕ್ರಮ ಹೊಂದಿರುವ ಅಪಾರ ವೀರರಿರುವರು. ಎಷ್ಟೆಂದು ಇವರ ಗಣಿತ ಮಾಡಬೇಕು ? ॥೧೧೪॥

ಶ್ಲೋಕಾರ್ಥ :- ಭೀಷ್ಮನಿಂದ ರಕ್ಷಿತವಾದ ನಮ್ಮ ಸೇನೆಯು ಅಪರಿಮಿತವಾಗಿದೆ. ಆದರೆ ಭೀಮನಿಂದ ರಕ್ಷಿತವಾದ ಪಾಂಡವರ ಸೇನೆಯು ಪರಿಮಿತವಾಗಿದೆ ॥೧೦॥

ಹಾಗೆಯೇ ಸರ್ವ ಕ್ಷತ್ರಿಯರಲ್ಲಿ ಶ್ರೇಷ್ಠರಾದ ಮತ್ತು ಜಗತ್ತಿನ ಎಲ್ಲ ಯೋದ್ಧರಲ್ಲಿ ಮಹಾಪ್ರತಾಪಿಗಳಾದ ಭೀಷ್ಮಾಚಾರ್ಯರಿಗೆ ಸೇನಾಪತಿಯ ಅಧಿಕಾರ ಕೊಟ್ಟಿದೆ ॥೧೧೫॥

ಇವರು ಈ ಎಲ್ಲ ಸೈನ್ಯವನ್ನು ಆವರಿಸಿ ಸುರಕ್ಷತೆಗಾಗಿ ಭದ್ರಕೋಟೆಯನ್ನೇ ಕಟ್ಟಿದಂತೆ ಭಾಸವಾಗುತ್ತದೆ. ಇವರ ಸಾಮರ್ಥ್ಯದ ಎದುರು ಮೂರು ಲೋಕಗಳೂ ತುಚ್ಛವಾಗಿವೆ ॥೧೧೬॥

ಸಮುದ್ರವು ಎಲ್ಲ ಪ್ರಕಾರವಾಗಿ ದುಸ್ತರವಾಗಿದ್ದು ಅದಕ್ಕೆ ಪುನಃ ವಡವಾನಳ ಅಗ್ನಿಯ ಸಹಾಯವು ದೊರಕಿತೆಂದರೆ ॥೧೧೭॥

ಅಥವಾ ಪ್ರಳಯಕಾಲದ ಅಗ್ನಿಗೆ ದೊಡ್ಡ ಬಿರುಗಾಳಿಯ ಸಹಾಯ ದೊರಕಿದಾಗ ಈ ಸಂಯೋಗ ಹೇಗೋ ಅದರಂತೆ ನಮ್ಮ ಅಪಾರ ಸೈನ್ಯಕ್ಕೆ ಭೀಷ್ಮರಂತಹ ಸೇನಾಪತಿ ಸಿಕ್ಕಿದ್ದಾರೆ ॥೧೧೮॥

ಆದ್ದರಿಂದ ಈ ನಮ್ಮ ಸೈನ್ಯದ ಎದುರು ಯಾರು ಯುದ್ಧ ಮಾಡುವರು? ಪಾಂಡವರ ಸೈನ್ಯವು ನಿಜವಾಗಿಯೂ ಬಹಳ ಕಡಿಮೆ ಇರುವುದು. ಆದರೆ ರಚನೆ ಮಾತ್ರ ಬಹು ದೊಡ್ಡದಾಗಿ ಕಾಣುವುದು ॥೧೧೯॥

ಅದಲ್ಲದೇ ಪಾಂಡವರ ಸೇನಾಪತಿಯು ಸ್ಥೂಲ ಶರೀರದ ಭೀಮಸೇನನಾಗಿರುವನು. ಇಷ್ಟೊಂದು ಹೇಳಿದರೂ ದ್ರೋಣಾಚಾರ್ಯರ ಮನದಲ್ಲಿ ಯಾವ ಪರಿಣಾಮ ಆಗದ್ದಕ್ಕೆ ದುರ್ಯೋಧನನು ಸುಮ್ಮನಾದನು ॥೧೨೦॥

ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ ।
ಭೀಷ್ಮಮೇವಾಭಿರಕ್ಷಂತು ಭವಂತಃ ಸರ್ವ ಏವ ಹಿ ।।೧೧।।

ಮಗ ಪುನರಪಿ ಕಾಯ ಬೋಲೇ । ಸಕಳ ಸೈನಿಕಾಂತೇ ಮ್ಹಣಿತಲೇ । ಆತಾ ದಳಭಾರ ಆಪುಲಾಲೇ । ಸರಸೇ ಕರಾ ।।೧೨೧।। ಜಯಾ ಜಿಯಾ ಅಕ್ಷೌಹಿಣೀ । ತೇಣೇ ತಿಯಾ ಆಯಣೀ । ವರಗಣ ಕವಣಕವಣೀ । ಮಹಾರಥೀಯಾ ।।೧೨೨।। ತೇಣೇ ತಿಯಾ ಆವರಿಜೇ । ಭೀಷ್ಮಾತಳೀ ರಾಹಿಜೇ । ದ್ರೋಣಾತೇ ಮ್ಹಣೇ ಪಾಹಿಜೇ । ತುಮ್ಹೀ ಸಕಳ ।।೧೨೩।। ಹಾಚಿ ಏಕು ರಕ್ಷಾವಾ । ಮೀ ತೈಸಾ ಹಾ ದೇಖಾವಾ । ಯೇಣೇ ದಳಭಾರು ಆಘವಾ । ಸಾಚು ಆಮುಚಾ ।।೧೨೪।।

ತಸ್ಯ ಸಂಜನಯನ್ ಹರ್ಷಮ್ ಕುರುವೃದ್ಧಃ ಪಿತಾಮಹಃ ।
ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ।।೧೨।।

ಯಾ ರಾಜಯಾಚಿಯಾ ಬೋಲಾ । ಸೇನಾಪತಿ ಸಂತೋಷಲಾ । ಮಗ ತೇಣೇ ಕೇಲಾ । ಸಿಂಹನಾದು ।।೧೨೫।। ತೋ ಗಾಜತ ಅಸೇ ಅದ್ಭುತು । ದೋನ್ಹೀ ಸೈನ್ಯಾಂತು । ಪ್ರತಿಧ್ವನಿ ಸಮಾತು । ಉಪಜತ ಅಸೇ ।।೧೨೬।। ತಯಾಚಿ ತುಲಗಾಸವೇ । ವೀರವೃತ್ತೀಚೇನಿ ಥಾವೇ । ದಿವ್ಯ ಶಂಖಭೀಷ್ಮದೇವೇ । ಆಸ್ಫುರಿಲಾ ।।೧೨೭।। ತೇ ದೋನ್ಹೀ ನಾದ ಮೀನಲೇ । ತೇಥ ತ್ರೈಲೋಕ್ಯ ಬಧಿರೀಭೂತ ಜಾಹಲೇ । ಜೈಸೇ ಆಕಾಶ ಕಾ ಪಡಿಲೇ । ತುಟೋನಿಯಾ ।।೧೨೮।। ಘುಡಘುಡೀತ ಅಂಬರ । ಉಚಂಬಳತ ಸಾಗರ । ಕ್ಷೋಭಲೇ ಚರಾಚರ । ಕಾಂಪತ ಅಸೇ ।।೧೨೯।। ತೇಣೇ ಮಹಾಘೋಷಗಜರೇ । ದುಮದುಮಿತಾತೀ ಗಿರಿಕಂದರೇ । ತಂವ ದಳಾಮಾಜೀ ರಣತುರೇ । ಆಸ್ಪುರಿಲೀ ।।೧೩೦।।

ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।
ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್ ।।೧೩।।

ಉದಂಡ ಸೈಂಘ ವಾಜತೇ । ಭಯಾನಕೇ ಖಾಖಾತೇ । ಮಹಾಪ್ರಳಯೋ ಜೇಥೇ । ಧಾಕಡಾಂಸೀ ।।೧೩೧।। ಭೇರೀ ನಿಶಾಣ ಮಾಂದಳ । ಶಂಖ ಕಾಹಳಾ ಭೋಂಗಳ । ಆಣಿ ಭಯಾಸುರ ರಣಕೋಲ್ಹಾಳ । ಸುಭಟಾಂಚೇ ।।೧೩೨।। ಆವೇಶೇ ಭುಜಾ ತ್ರಾಹಾಟಿತೀ । ವಿಸಣೇಲೇ ಹಾಂಕಾ ದೇತೀ । ಜೇಥ ಮಹಾಮದ ಭದ್ರಜಾತೀ । ಆವರತೀನಾ ।।೧೩೩।। ತೇಥ ಭೇಡಾಂಚೀ ಕವಣ ಮಾತು । ಕಾಂಚಯಾ ಕೇರ ಫಿಟತು । ಜೇಣೇ ದಚಕಲಾ ಕೃತಾಂತು । ಆಂಗ ನೇಘೇ ।।೧೩೪।।

ಶ್ಲೋಕಾರ್ಥ :- ಸೇನೆಯ ಪ್ರವೇಶ ಮಾರ್ಗದಲ್ಲೆಲ್ಲಾ ಕಾದು ನಿಂತುಕೊಂಡು ನೀವೆಲ್ಲರೂ ಸರ್ವಪರಿಯಿಂದಲೂ ಭೀಷ್ಮರನ್ನು ಅನುಸರಿಸಬೇಕು ॥೧೧॥

ನಂತರ ಬೇರೆ ಕಡೆ ತಿರುಗಿ ಎಲ್ಲ ಉಪಸೇನಾಪತಿಗಳ ವರಿಗೆ ನಿಮ್ಮ ನಿಮ್ಮ ಸೈನ್ಯವನ್ನು ಸಜ್ಜುಗೊಳಿಸಿರಿ ಎಂದನು ॥೧೨೧॥

ಯಾರ ಆಧೀನದಲ್ಲಿ ಸೈನ್ಯದ ಅಕ್ಷೋಹಿಣಿ ಇರುವುದೋ ಅದರಲ್ಲಿನ ಶ್ರೇಷ್ಠ ಮಹಾರಥಿಗಳವರು ತಮ್ಮ ತಮ್ಮ ಅಕ್ಷೋಹಿಣಿ ಸೈನ್ಯದ ಮುಂದೆ ನಿಲ್ಲಿರಿ ॥೧೨೨॥

ಮತ್ತು ನೀವು ನಿಮ್ಮ ನಿಮ್ಮ ಸೈನ್ಯವನ್ನು ಸಂಭಾಳಿಸುತ್ತ ಭೀಷ್ಮಾಚಾರ್ಯರ ಆಜ್ಞೆಯನ್ನು ಪಾಲಿಸಬೇಕು. ಆಮೇಲೆ ಎಲ್ಲ ಸೈನ್ಯದ ಮೇಲೆ ನಿಮ್ಮ ದೃಷ್ಠಿ ಇರಲಿ ಎಂದು ದ್ರೋಣಾಚಾರ್ಯರಿಗೆ ಹೇಳಿದನು ॥೧೨೩॥

ಮತ್ತು ಭೀಷ್ಮಾಚಾರ್ಯರಿಗೆ ನಾನೇ ಎಂದು ತಿಳಿದು ಎಲ್ಲರೂ ಅವರ ರಕ್ಷಣೆ ಮಾಡಿರಿ. ಏಕೆಂದರೆ ನಮ್ಮ ಎಲ್ಲ ಸೈನ್ಯದ ಆಡಳಿತವು ಇವರನ್ನೇ ಕೂಡಿಕೊಂಡಿದೆ ॥೧೨೪॥

ಶ್ಲೋಕಾರ್ಥ :- ಹೀಗೆಂದು ಹೇಳಿದ ದುರ್ಯೋಧನನಿಗೆ ಉತ್ಸಾಹವನ್ನುಂಟು ಮಾಡುವ ಉದ್ದೇಶದಿಂದ ಕುರುಕುಲ ಪಿತಾಮಹನೂ ಅಸಮಾನ ಪ್ರತಾಪಶಾಲಿಯೂ ಆದ ಭೀಷ್ಮನು ಸಿಂಹನಾದವನ್ನು ಮಾಡಿ ಶಂಖ ಊದಿದನು ॥೧೨॥

ರಾಜಾ ಧುರ್ಯೋಧನನ ಈ ಮಾತುಗಳನ್ನು ಕೇಳಿ ಭೀಷ್ಮಾಚಾರ್ಯರು ಬಹಳ ಸಂತುಷ್ಠರಾದರು. ಸಿಂಹದಂತೆ ಗರ್ಜನೆ ಮಾಡಿದರು ॥೧೨೫॥

ಈ ಗರ್ಜನೆಯು ಎರಡೂ ಸೈನ್ಯಗಳಲ್ಲಿ ದುಮದುಮಿಸಿತು. ಅದರ ಪ್ರತಿಧ್ವನಿಯು ಆಕಾಶವನ್ನು ಹಿಡಿಸದೇ ಪುನಃ ಪುನಃ ಗರ್ಜಿಸುತ್ತಿತ್ತು ॥೧೨೬॥

ಆಗ ಅದೇ ವೀರವೃತ್ತಿಯಲ್ಲಿ ಭೀಷ್ಮಾಚಾರ್ಯರು ತಮ್ಮ ದಿವ್ಯ ಶಂಖವನ್ನು ಪ್ರತಿಧ್ವನಿಯ ಸರಿಯಾಗಿ ಊದಿದರು ॥೧೨೭॥

ಈ ಎರಡೂ ನಾದಗಳು ಕೂಡಿದಾಗ ಮೂರು ಲೋಕಗಳೂ ಕಿವುಡಾದವು. ಆಗ ಆಕಾಶವೇ ಕಳಚಿ ಬೀಳುವುದೋ ಏನೋ ಎಂಬಂತೆ ಭಾಸವಾಯಿತು ॥೧೨೮॥

ಆಗ ಆಕಾಶವು ಗುಡುಗಹತ್ತಿತು. ಸಮುದ್ರಕ್ಕೆ ಮಹಾಪೂರ ಬಂದಂತಾಯಿತು. ಜಗತ್ತಿನ ಎಲ್ಲ ಚರಾಚರರು ಗಾಬರಿಗೊಂಡು ಗಡಗಡ ನಡುಗ ಹತ್ತಿದರು ॥೧೨೯॥

ಮತ್ತು ಈ ಮಹಾನಾದದ ಘೋಷದಿಂದ ಪರ್ವತಗಳ ಗುಹೆಗಳಲ್ಲಿಯೂ ಸಹ ಪ್ರತಿಧ್ವನಿ ಹೊರಡಹತ್ತಿತು. ಇಷ್ಟರಲ್ಲಿ ಎರಡೂ ಸೈನ್ಯಗಳಲ್ಲಿ ರಣವಾದ್ಯಗಳು ಮೊಳಗಿದವು ॥೧೩೦॥

ಶ್ಲೋಕಾರ್ಥ :- ಆಮೇಲೆ ಒಂದೇ ಸಲಕ್ಕೆ ಎಲ್ಲರೂ ಶಂಖಗಳನ್ನೂ, ಭೇರಿಗಳನ್ನೂ, ಮೃದಂಗಗಳನ್ನೂ, ನಗಾರಿಗಳನ್ನೂ, ರಣಭೇರಿಗಳನ್ನೂ ಬಾರಿಸಿದರು. ಆ ಗದ್ದಲವು ಎಲ್ಲೆಲ್ಲಿಯೂ ತುಂಬಿತು ॥೧೩॥

ನಾನಾ ಪ್ರಕಾರದ ರಣವಾದ್ಯಗಳ ಧ್ವನಿಗಳು ಅತಿಯಾಗಿ ಕರ್ಕಶ, ಭಯಾನಕಗಳಾಗಿದ್ದು ಎಂತಹ ಧೈರ್ಯವಂತನಿಗೂ ಮಹಾಪ್ರಳಯದ ಭಾಸವಾಗುತ್ತಿತ್ತು ॥೧೩೧॥

ನೌಬತ್ತು, ನಿಶಾಣಾ, ಮಾಂದಳ, ಶಂಖ, ಝಾಂಜ, ತುತ್ತೂರಿ ಇತ್ಯಾದಿ ಅನೇಕ ರಣವಾದ್ಯಗಳ ಗರ್ಜನೆಯು ಮತ್ತು ವೀರರಲ್ಲಿ ದೊಡ್ಡ ಕೋಲಾಹಲ ಆರಂಭವಾಯಿತು ॥೧೩೨॥

ಕೆಲವರು ಆವೇಶದಿಂದ ಭುಜ ತಟ್ಟಿ ಶಡ್ಡು ಹೊಡೆಯ ಹತ್ತಿದರು. ಒಬ್ಬರಿಗೊಬ್ಬರು ತಿರಸ್ಕರಿಸುತ್ತಾ ಯುದ್ಧಕ್ಕಾಗಿ ದೊಡ್ಡ ಧ್ವನಿಯಿಂದ ಕೂಗುತ್ತಿದ್ದರು. ಇದರಿಂದ ಆನೆಗಳಿಗೆ ಮದವೇರಿ ಹಿಡಿಯುವುದೇ ಕಷ್ಟವಾಯಿತು ॥೧೩೩॥

ಇಲ್ಲಿ ಅಂಜುಬುರುಕರ ಏನು ಕಥೆ? ಇವರೆಲ್ಲರೂ ಅಶಕ್ತರು ಹುಲ್ಲಿನಂತೆ ಹಾರಿಹೋದರು. ಯಮಧರ್ಮನು ಸಹ ಹೆದರಿ ಈ ಕಡೆ ಮುಖ ಮಾಡದಂತಾಯಿತು ॥೧೩೪॥

ಏಕಾ ಉಭಯಾಂಚಿ ಪ್ರಾಣ ಗೇಲೇ । ಚಾಂಗಾಂಚೆ ದಾಂತ ಬೈಸಲೇ । ಬಿರುದಾಚೇ ದಾದುಲೇ । ಹಿಂವತಾತೀ ।।೧೩೫।। ಐಸಾ ಅದ್ಭುತ ತುರಬಂಬಾಳು । ಐಕೋನಿ ಬ್ರಹ್ಮಾ ವ್ಯಾಕುಳು । ದೇವ ಮ್ಹಣತೀ ಪ್ರಳಯಕಾಳು । ವೋಢವಲಾ ಆಜೀ ।।೧೩೬।।

ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ ।
ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ।।೧೪।।

ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।
ಪೌಂಡ್ರಂ ದಧ್ಮೌ ಮಹಾಶಂಖಮ್ ಭೀಮಕರ್ಮಾ ವೃಕೋದರಃ ।।೧೫।।

ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ । ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ ।।೧೬।।

ಐಸೀ ಸ್ವರ್ಗೀ ಮಾತು । ದೇಖೋನಿ ಆಕಾಂತು । ತವ ಪಾಂಡವದಳಾಆಂತು । ವರ್ತಲೇ ಕಾಯೀ ।।೧೩೭।। ಹೋ ಕಾ ನಿಜಸಾರ ವಿಜಯಾಚೇ । ಕೀ ತೇ ಭಾಂಡಾರ ಮಹಾತೇಜಾಚೇ । ಜೇಥ ಗರುಡಾಚಿಯೇ ಜಾವಳಿಯೇಚೇ । ಕಾಂತಲೇ ಚಾರ್ಹಿ ।।೧೩೮।। ಕೀ ಪಾಖಾಂಚಾ ಮೇರು ಜೈಸಾ । ರಹಂವರು ಮಿರವತಸೇ ತೈಸಾ । ತೇಜೇ ಕೋಂದಾಟಲಿಯಾ ದಿಶಾ । ಜಯಾಚೇನಿ ।।೧೩೯।। ಜೇಥ ಅಶ್ವವಾಹಕು ಆಪಣ । ವೈಕುಂಠೀಚಾ ರಾಣಾ ಜಾಣ । ತಯಾ ರಥಾಚೇ ಗುಣ । ಕಾಯ ವರ್ಣೂ ।।೧೪೦।। ಧ್ವಜಸ್ತಂಭಾವರೀ ವಾನರು । ತೋ ಮೂರ್ತಿಮಂತ ಶಂಕರು । ಸಾರಥೀ ಶಾರ್ಙ್ಗಧರು । ಅರ್ಜುನೇಸೀ ।।೧೪೧।। ದೇಖಾ ನವಲ ತಯಾ ಪ್ರಭೂಚೇ । ಅದ್ಭುತ ಪ್ರೇಮ ಭಕ್ತಾಚೇ । ಜೇ ಸಾರಥ್ಯಪಣ ಪಾರ್ಥಾಚೇ । ಕರಿತು ಅಸೇ ।।೧೪೨।। ಪಾಇಕು ಪಾಠೀಸೀ ಘಾತಲಾ । ಆಪಣ ಪುಢಾ ರಾಹಿಲಾ । ತೇಣೇ ಪಾಂಚಜನ್ಯು ಆಸ್ಫುರಿಲಾ । ಅವಲೀಳಾಚಿ ।।೧೪೩।। ಪರೀ ತೋ ಮಹಾಘೋಷು ಥೋರು । ಗರ್ಜತು ಅಸೇ ಗಂಹಿರು । ಜೈಸಾ ಉದೇಲಾ ಲೋಪೀ ದಿನಕರು । ನಕ್ಷತ್ರಾಂತೇ ।।೧೪೪।। ತೈಸೇ ತುರಬಂಬಾಳು ಭಂವತೇ । ಕೌರವದಳೀ ಗಾಜತ ಹೋತೇ । ತೇ ಹಾರಪೋನಿ ನೇಣೋ ಕೇಉತೇ । ಗೇಲೇ ತೇಥ ।।೧೪೫।। ತೈಸಾಚಿ ದೇಖೇ ಯೇರೇ । ನಿನಾದೇ ಅತಿ ಗಜರೇ । ದೇವದತ್ತ ಧನುರ್ಧರೇ । ಆಸ್ಫುರಿಲಾ ।।೧೪೬।। ತೇ ದೋನೀ ಶಬ್ದ ಅಚಾಟ । ಮಿನಲೇ ಏಕವಟ । ತೇಥ ಬ್ರಹ್ಮಕಟಾಹ ಶತಕೂಟ । ಹೋ ಪಾಹತ ಅಸೇ ।।೧೪೭।। ತಂವ ಭೀಮಸೇನು ವಿಸಣ್ಣೈಲಾ । ಜೈಸಾ ಮಹಾಕಾಳು ಖವಳಲಾ । ತೇಣೇ ಪೌಂಡ್ರ ಆಸ್ಫುರಿಲಾ । ಮಹಾಶಂಖು ।।೧೪೮।।

ಅನೇಕರು ನಿಂತ ನಿಂತಲ್ಲಿಯೇ ಪ್ರಾಣಬಿಟ್ಟರು. ಧೈರ್ಯವಂತರ ಹಲ್ಲು ಹಿಡಿದವು ಮತ್ತು ನಾಮಾಂಕಿತ ಯೋದ್ಧರು ನಡುಗಹತ್ತಿದರು ।।೧೩।।

ಈ ಪ್ರಕಾರದ ಭಯಂಕರ ರಣವಾದ್ಯ ಕೇಳಿ ಬ್ರಹ್ಮ ದೇವನು ಚಿಂತಾಗ್ರಸ್ಥನಾದನು ಮತ್ತು ಇಂದ್ರಾದಿ ದೇವತೆಗಳು ಈಗ ಪ್ರಳಯ ಕಾಲವೇ ಒದಗಿತಲ್ಲವೆಂದರು ।।೧೩೬।।

ಶ್ಲೋಕಾರ್ಥ :- ಅನಂತರ ಬಿಳಿಯ ಕುದುರೆಗಳ ಉತ್ತಮವಾದ ರಥದಲ್ಲಿ ವಿರಾಜಿಸುವ ಶ್ರೀಕೃಷ್ಣಾರ್ಜುನರು ಸಹ ದಿವ್ಯವಾದ ತಮ್ಮ ಶಂಖಗಳನ್ನು ಊದಿದರು ।।೧೪।।

ಶ್ಲೋಕಾರ್ಥ :- ಸರ್ವೇಂದ್ರಿಯ ಪ್ರೇರಕನಾದ ಶ್ರೀಕೃಷ್ಣನು ಪಾಂಚಜನ್ಯವೆಂಬ ಹೆಸರಿನ ಶಂಖವನ್ನೂ, ಅರ್ಜುನನು ದೇವದತ್ತನಾಮ ಶಂಖವನ್ನೂ, ಉಗ್ರ ಕರ್ಮವನ್ನು ಮಾಡುವ ಭೀಮನು ಪೌಂಡ್ರವೆಂಬ ಮಹಾಶಂಖವನ್ನೂ ಕ್ರಮವಾಗಿ ಊದಿದರು ।।೧೫।।

ಶ್ಲೋಕಾರ್ಥ :- ಕುಂತಿಯ ಮಗನಾದ ಧರ್ಮ ರಾಜನು ಅನಂತ ವಿಜಯವೆಂಬ ಶಂಖವನ್ನು, ನಕುಲನು ಸುಘೋಷವೆಂಬ ಶಂಖವನ್ನು, ಸಹದೇವನು ಮಣಿ ಪೂರಕವೆಂಬ ಶಂಖವನ್ನು ಊದಿದರು ।।೧೬।।

ಈ ಪ್ರಕಾರವಾಗಿ ಸ್ವರ್ಗಲೋಕದವರು ಸೈನ್ಯದಲ್ಲಿನ ಎಲ್ಲ ಘೋರ ಗರ್ಜನೆ ಕೇಳಿ ಪ್ರಳಯ ವಿಷಯಕ್ಕೆ ಮಾತನಾಡುತ್ತಿದ್ದಾಗ ಪಾಂಡವರ ಸೈನ್ಯದಲ್ಲಿ ಏನಾಯಿತೆಂದರೆ ।।೧೩೭।।

ಯಾವ ರಥವು ವಿಜಯದ ಪ್ರತ್ಯಕ್ಷ ತವರು ಮನೆಯಾಗಿದ್ದು, ತೇಜದ ಭಾಂಡಾರವಾಗಿರುವ ಹಾಗೂ ಗರುಡನಂತೆ ವೇಗವುಳ್ಳ ನಾಲ್ಕು ಕುದುರೆ ಕಟ್ಟಿರುವ ।।೧೩೮।।

ರೆಕ್ಕೆಗಳಿರುವ ಮೇರು ಪರ್ವತದಂತೆ ಸರ್ವಶ್ರೇಷ್ಠ ರಥವು ಅಲ್ಲಿ ಶೋಭಿಸುತ್ತಿತ್ತು. ಅದರ ಪ್ರಕಾಶವು ದಶದಿಕ್ಕುಗಳಲ್ಲಿ ವ್ಯಾಪಿಸಿಕೊಂಡಿತು ।।೧೩೯।।

ಯಾವ ರಥದಲ್ಲಿ ಪ್ರತ್ಯಕ್ಷ ವೈಕುಂಠಪೀಠಾಧಿಪತಿ ಶ್ರೀಕೃಷ್ಣನು ಸಾರಥಿಯಾದದ್ದು ಆ ರಥದ ವರ್ಣನೆ ಎಲ್ಲಿಯವರೆಗೆ ಮಾಡಬೇಕು? ।।೧೪೦।।

ಸಾಕ್ಷಾತ್ ಶಂಕರನ ಅವತಾರನಾದ ಹನುಮಂತನು ಆ ರಥದ ಧ್ವಜಸ್ತಂಭದ ಮೇಲೆ ಆರೂಢನಾಗಿರುವನು. ಶ್ರೀಕೃಷ್ಣ ಪರಮಾತ್ಮನು ಆ ರಥದಲ್ಲಿ ಅರ್ಜುನನ ಸಾರಥಿಯಾಗಿರುವನು ।।೧೪೧।।

ಇಲ್ಲಿ ನೋಡಿರಿ! ಆ ಪ್ರಭು ಶ್ರೀಕೃಷ್ಣನ ಕಾರ್ಯ ಎಷ್ಟು ಆಶ್ಚರ್ಯಕರವಾಗಿದೆ. ಈತನು ಭಕ್ತನ ಮೇಲೆ ವಿಲಕ್ಷಣ ಪ್ರೇಮ ಇಟ್ಟಿರುವುದರಿಂದ ಅರ್ಜುನನ ಸಾರಥ್ಯ ಮಾಡುತ್ತಿದ್ದಾನೆ ।।೧೪೨।।

ಶ್ರೀಕೃಷ್ಣನು ತನ್ನ ಸೇವಕನನ್ನು ಬೆನ್ನಿನ ಹಿಂದೆ ಇಟ್ಟು ತಾನು ಸ್ವತಃ ಮುಂದೆ ಇದ್ದು ಈಗ ಪಾಂಚಜನ್ಯ ಶಂಖವನ್ನು ಸಹಜ ಲೀಲೆಯಿಂದ ಊದಿದನು ।।೧೪೩।।

ಆಗ ಸೂರ್ಯನ ಉದಯವಾದಾಗ ನಕ್ಷತ್ರಗಳು ಹೇಗೆ ಲೋಪವಾಗುತ್ತವೆಯೋ, ಅದರಂತೆ ಈತನ ಶಂಖದ ಮಹಾನಾದದಿಂದ ।।೧೪೪।।

ಕೌರವರ ಸೈನ್ಯದಲ್ಲಿ ಆಗುತ್ತಿರುವ ಅನೇಕ ವಾದ್ಯ ಘೋಷಗಳು ಎಲ್ಲಿ ಅಡುಗಿ ಹೋದವೋ ತಿಳಿಯದಾಯಿತು ।।೧೪೫।।

ಅದರಂತೆ ಅರ್ಜುನನು ಸಹ ದೇವದತ್ತವೆಂಬ ಗಂಭೀರ ನಾದದ ಶಂಖವನ್ನು ಆವೇಶದಿಂದ ಊದಿದನು ।।೧೪೬।।

ಆಗ ಇವರಿಬ್ಬರ ಅದ್ಭುತ ಶಂಖಧ್ವನಿಗಳು ಒಂದಾಗಿ ಈ ಬ್ರಹ್ಮಾಂಡವು ನೂರಾರು ತುಂಡುಗಳಾಗಬಹುದೇನೋ ಎಂದು ಕಾಣಹತ್ತಿತು ।।೧೪೭।।

ಇಷ್ಟರಲ್ಲಿ ಭೀಮಸೇನನಿಗೂ ಆವೇಶ ಬಂದು ಮಹಾ ಕಾಳನಂತೆ ಸಿಡಿದೆದ್ದು ತನ್ನ ಪೌಂಡ್ರವೆಂಬ ಮಹಾಶಂಖವನ್ನು ಊದಿದನು ।।೧೪೮।।

ತೋ ಮಹಾಪ್ರಲಯ ಜಲಧರು । ಜೈಸಾ ಘಡಘಡಿಲಾ ಗಹಿರು । ತಂವ ಅನಂತ ವಿಜಯೋ ಯುಧಿಷ್ಠಿರು । ಆಸ್ಫುರಿತ ಅಸೇ ।।೧೪೯।। ನಕುಳೇ ಸುಘೋಷು । ಸಹದೇವೇ ಮಣಿಪುಷ್ಪಕು । ಜೇಣೇ ನಾದೇ ಅಂತಕು । ಗಜಬಜಲಾ ಠಾಕೇ ।।೧೫೦।।

ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ ।
ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ।।೧೭।।

ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ ।
ಸೌಭದ್ರಶ್ಚ ಮಹಾಬಾಹುಃ ಶಂಖಾನ್‌ದಧ್ಮುಃ ಪೃಥಕ್ ಪೃಥಕ್ ।।೧೮।।

ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ।
ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ ।।೧೯।।

ತೇಥ ಭೂಪತಿ ಹೋತೇ ಅನೇಕ । ದ್ರುಪದ ದ್ರೌಪದೇಯಾದಿಕ । ಹಾ ಕಾಶೀಪತಿ ದೇಖ । ಮಹಾಬಾಹೂ ।।೧೫೧।। ತೇಥ ಅರ್ಜುನಾಚಾ ಸುತು । ಸಾತ್ಯಕಿ ಅಪರಾಜಿತು । ಧೃಷ್ಟದ್ಯುಮ್ನು ನೃಪನಾಥು । ಶಿಖಂಡೀ ಹನ ।।೧೫೨।। ವಿರಾಟಾದಿ ನೃಪವರ । ಜೇ ಸೈನಿಕ ಮುಖ್ಯ ವೀರ । ತಿಹೀ ನಾನಾಶಂಖ ನಿರಂತರ । ಆಸ್ಫುರಿಲೇ ।।೧೫೩।। ತೇಣೇ ಮಹಾಘೋಷನಿರ್ಘಾತೇ । ಶೇಷ ಕೂರ್ಮ ಅವಚಿತೇ । ಗಜಬಜೋನಿ ಭೂಭಾರಾತೇ । ಸಾಂಡೂ ಪಾಹತೀ ।।೧೫೪।। ತೇಥ ತಿನ್ಹೀ ಲೋಕ ಡಳಮಳಿತ । ಮೇರು ಮಾಂದಾರ ಆಂದೋಳಿತ । ಸಮುದ್ರಜಳ ಉಸಳತ । ಕೈಲಾಸವೇರೀ ।।೧೫೫।। ಪೃಥ್ವೀತಳ ಉಲಥೋ ಪಹಾತ । ಆಕಾಶ ಅಸೇ ಆಸುಡತ । ತೇಥ ಸಡಾ ಹೋತ । ನಕ್ಷತ್ರಾಂಚಾ ।।೧೫೬।। ಸೃಷ್ಟಿ ಗೇಲೀ ರೇ ಗೇಲೀ । ದೇವಾ ಮೋಕಳವಾದೀ ಜಾಹಲೀ । ಐಶೀ ಏಕ ಟಾಳೀ ಪಿಟಲೀ । ಸತ್ಯಲೋಕೀ ।।೧೫೭।। ದಿಹಾಚಿ ದಿನ ಥೋಕಲಾ । ಜೈಸಾ ಪ್ರಳಯಕಾಳ ಮಾಂಡಲಾ । ತೈಸಾ ಹಾಹಾಕಾರು ಜಾಹಲಾ । ತಿಹೀ ಲೋಕೀ ।।೧೫೮।। ತೇ ದೇಖೋನಿ ಆದಿಪುರುಷು ವಿಸ್ಮಿತು । ಮ್ಹಣೇ ಝಣೇ ಹೋಯ ಪಾ ಅಂತು । ಮಗ ಲೋಪಿಲಾ ಅದ್ಭುತು । ಸಂಭ್ರಮು ತೋ ।।೧೫೯।। ಮ್ಹಣೌನಿ ವಿಶ್ವ ಸಾವರಲೇ । ಏರ್ಹವೀ ಯುಗಾಂತ ಹೋತೇ ವೋಢವಲೇ । ಜೈ ಮಹಾಶಂಖ ಆಸ್ಫುರಿಲೇ । ಕೃಷ್ಣಾದಿಕೀ ।।೧೬೦।। ತೋ ಘೋಷ ತರೀ ಉಪಸಂಹಾರಲಾ । ಪರಿ ಪಡಿಸಾದ ಹೋತಾ ರಾಹಿಲಾ । ತೇಣೇ ದಳಭಾರ ವಿಧ್ವಂಸಿಲಾ । ಕೌರವಾಂಚಾ ।।೧೬೧।।

ಆ ಶಂಖದ ಧ್ವನಿಯು ಭಯಂಕರವಾಗಿ ಮಹಾ ಪ್ರಳಯದ ಮೇಘಗರ್ಜನೆಯಂತಿತ್ತು. ಆಗ ಧರ್ಮರಾಜನು ಅನಂತವಿಜಯ ನಾಮದ ಶಂಖವನ್ನು ಊದಿದನು ॥೧೪೯॥

ನಕುಲನು ಸುಘೋಷ ನಾಮದ ಶಂಖವನ್ನು ಸಹದೇವನು ಮಣಿಪುಷ್ಪಕ ಹೆಸರಿನ ಶಂಖವನ್ನು ಊದಿದರು. ಇವರ ಘನಘೋರ ನಾದದಿಂದ ಯಮನು ಬೆಚ್ಚಿ ಬಿದ್ದನು ॥೧೫೦॥

ಶ್ಲೋಕಾರ್ಥ :- ದೊಡ್ಡ ಬಿಲ್ಲನ್ನು ಹಿಡಿದ ಕಾಶೀ ರಾಜನೂ, ಒಬ್ಬನೇ ಹತ್ತುಸಾವಿರ ಸೈನ್ಯದೊಡನೆ ಕಾದಾಡಬಲ್ಲ ಶಿಖಂಡಿಯೂ, ಧೃಷ್ಟದ್ಯುಮ್ನನೂ ವಿರಾಟನೂ ಮತ್ತೊಬ್ಬರಿಗೆ ಸೋಲದ ಸಾತ್ಯಕಿಯೂ ॥೧೭॥

ಶ್ಲೋಕಾರ್ಥ :- ದ್ರುಪದನೂ ದ್ರೌಪದಿಯ ಮಕ್ಕಳೂ, ಬಲವಾದ ತೋಳುಗಳುಳ್ಳ ಅಭಿಮನ್ಯುವೂ ಎಲ್ಲರೂ ಬೇರೆ ಬೇರೆ ಶಂಖಗಳನ್ನು ಊದಿದರು ॥೧೮॥

ಶ್ಲೋಕಾರ್ಥ :- ಆ ಶಂಖ ಧ್ವನಿಯು ಭೂಮಿ ಆಕಾಶಗಳನ್ನು ವ್ಯಾಪಿಸಿ ದುರ್ಯೋಧನಾದಿಗಳ ಹೃದಯ ವನ್ನು ಭೇದಿಸಿತು ॥೧೯॥

ದ್ರುಪದರಾಜ, ಮಹಾವೀರ ಕಾಶೀರಾಜ, ದ್ರೌಪದಿಯ ಮಕ್ಕಳು ಇತ್ಯಾದಿ ಅನೇಕ ರಾಜವೀರರು ಅಲ್ಲಿ ಕೂಡಿದ್ದರು ॥೧೫೧॥

ಅದರಂತೆ ಅರ್ಜುನನ ಪುತ್ರ ಅಭಿಮನ್ಯು, ಅಂಜಿಕ್ಯನಾಗಿ ಸಾತ್ಯಕಿ, ನೃಪಶ್ರೇಷ್ಠ ಧೃಷ್ಟದ್ಯುಮ್ನ, ಶಿಖಂಡಿ ॥೧೫೨॥

ಅದರಂತೆ ವಿರಾಟರಾಜ ಹಾಗೂ ಇತರ ಅನೇಕ ಸೇನಾ ನಾಯಕರು ಇದ್ದರು. ಅವರೆಲ್ಲರೂ ತಮ್ಮ ತಮ್ಮ ಭಿನ್ನ ಭಿನ್ನ ಶಂಖಗಳಿಂದ ಒಂದೇ ಸವನೇ ಊದಹತ್ತಿದರು ॥೧೫೩॥

ಈ ಶಂಖಗಳ ಮಹಾಧ್ವನಿಯ ಆಘಾತದಿಂದ ಶೇಷ ಕೂರ್ಮರು ಒಮ್ಮಿಂದೊಮ್ಮೆಲೇ ಬೆಚ್ಚಿ ಬಿದ್ದರು. ಹಾಗೆಯೇ ಪೃಥ್ವಿಭಾರವನ್ನು ಬಿಟ್ಟು ಬಿಡಲು ಸಿದ್ಧರಾದರು ॥೧೫೪॥

ಇದರಿಂದ ತ್ರೈಲೋಕಗಳು ಅಳುಗಾಡಹತ್ತಿದವು. ಮೇರು ಹಾಗೂ ಮಂದಾರ ಪರ್ವತಗಳು ತೂಗಾಡ ಹತ್ತಿದವು. ಸಮುದ್ರದ ನೀರು ಕೈಲಾಸದವರೆಗೂ ಉಕ್ಕೇರಿಬಿಟ್ಟಿತು ॥೧೫೫॥

ಪೃಥ್ವಿಯು ಬುಡಮೇಲು ಆಗುವುದೇನೋ ಹಾಗೂ ಆಕಾಶವು ಕಳಚಿ ಬೀಳುವುದೇನೋ ಎಂಬಂತೆ ಭಾಸವಾಗ ಹತ್ತಿತ್ತು. ಹಾಗೆಯೇ ನಕ್ಷತ್ರಗಳೆಲ್ಲವೂ ಉದುರಿ ಬೀಳಹತ್ತಿದವು ॥೧೫೬॥

ಸತ್ಯಲೋಕದಲ್ಲಿ ಎಲ್ಲ ದೇವತೆಗಳು "ಸೃಷ್ಟಿ ಹೋಯಿತು ಹೋಯಿತು, ನಾವು ನಿರಾಧಾರರಾದೆವು" ಎಂಬ ಒಂದೇ ಘೋಷ ಕೂಗುತ್ತಾ ಏಕಕಾಲಕ್ಕೆ ಎಲ್ಲರೂ ಚಪ್ಪಾಳೆ ತಟ್ಟಿ, ಭಯವನ್ನು ವ್ಯಕ್ತ ಮಾಡಿದರು ॥೧೫೭॥

ಸೂರ್ಯನು ಹಗಲೇ ನಿಂತುಬಿಟ್ಟನು ಮತ್ತು ಮಹಾ ಪ್ರಳಯಕಾಲದಂತೆ ಮೂರು ಲೋಕಗಳಲ್ಲಿ ಹಾಹಾಕಾರ ಎದ್ದಿತು ॥೧೫೮॥

ಇದನ್ನು ನೋಡಿ ಶ್ರೀಕೃಷ್ಣ ಪರಮಾತ್ಮನು ಬಹಳ ಆಶ್ಚರ್ಯಚಕಿತನಾಗಿ ಸೃಷ್ಟಿಯು ಅಂತ್ಯ ಆಗುವ ಲಕ್ಷಣ ಕಂಡು ಆ ಆವೇಶಯುಕ್ತ ಶಂಖನಾದವನ್ನು ಬಂದು ಮಾಡಿದನು ॥೧೫೯॥

ಹೀಗಾಗಿ ಈ ಜಗತ್ತು ಬದುಕಿ ಉಳಿಯಿತು. ಇಲ್ಲದಿದ್ದರೆ ಕೃಷ್ಣಾದಿಕರೆಲ್ಲರೂ ಶಂಖಗಳನ್ನು ಊದಿದಾಗಲೇ ಮಹಾ ಪ್ರಳಯ ಪ್ರಸಂಗ ಒದಗಿ ಬಂದಿತ್ತು ॥೧೬೦॥

ಈಗ ಆ ಶಂಖನಾದ ಬಂದಾಯಿತು. ಆದರೆ ಅದರ ಪ್ರತಿಧ್ವನಿ ಮಾತ್ರ ಗರ್ಜಿಸುತ್ತಿತ್ತು. ಇದರಿಂದಲೇ ಈ ಕೌರವರ ಸೈನ್ಯವು ಭಯಗ್ರಸ್ಥವಾಯಿತು ॥೧೬೧॥

ಜೈಸಾ ಗಜಘಟಾಆಂತು । ಸಿಂಹ ಲೀಲಾ ವಿದಾರಿತು । ತೈಸಾ ಹೃದಯಾತೇ ಭೇದಿತು । ಕೌರವಾಂಚಿಯಾ ।।೧೬೨।। ತೋ ಗಾಜತ ಜಂವ ಆಯಿಕತೀ । ತಂವ ಉಭೇಚಿ ಹಿಯೇ ಫಾಲಿತೀ । ಏಕಮೇಕಾಂತೇ ಮ್ಹಣತಿ । ಸಾವಧ ರೇ ಸಾವಧ ।।೧೬೩।।

ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।
ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ।।೨೦।।

ತೇಥ ಬಳೇ ಪ್ರೌಢೀಪುರತೇ । ಮಹಾರಥೀ ವೀರ ಹೋತೇ । ತಿಹೀ ಪುನರಪಿ ದಳಾತೇ । ಆವರಿಲೇ ।।೧೬೪।। ಮಗ ಸರಿಸೇಪಣೇ ಉಠಾವಲೇ । ದುಣವಟೋನಿ ಉಚಲಲೇ । ತಯಾ ದಂಡೀ ಕ್ಷೋಭಲೇ । ಲೋಕತ್ರಯ ।।೧೬೫।। ತೇಥ ಬಾಣವರೀ ಧನುರ್ಧರ । ವರ್ಷತಾತೀ ನಿರಂತರ । ಜೈಸೇ ಪ್ರಳಯಾಂತ ಜಲಧರ । ಅನಿವಾರ ಕಾ ।।೧೬೬।। ತೇ ದೇಖಿಲಿಯಾ ಅರ್ಜುನೇ । ಸಂತೋಷ ಘೇಊನಿ ಮನೇ । ಮಗ ಸಂಭ್ರಮೇ ದಿಠೀ ಸೇನೇ । ಘಾಲೀತಸೇ ।।೧೬೭।। ತಂವ ಸಂಗ್ರಾಮಿ ಸಜ್ಜ ಜಾಹಲೇ । ಸಕಳ ಕೌರವ ದೇಖಿಲೇ । ತಂವ ಲೀಲಾಧನುಷ್ಯ ಉಚಲಿಲೇ । ಪಂಡುಕುಮರೇ ।।೧೬೮।।

ಹೃಷೀಕೇಶಂ ತದಾ ವಾಕ್ಯಮ್ ಇದಮಾಹ ಮಹೀಪತೇ ।
ಅರ್ಜುನ ಉವಾಚ :-
ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ।।೨೧।।
ಯಾವದೇತಾನ್ನಿರೀಕ್ಷೇಽಹಮ್ ಯೋದ್ಧುಕಾಮಾನವಸ್ಥಿತಾನ್ ।
ಕೈರ್ಮಯಾ ಸಹ ಯೋದ್ಧವ್ಯಮ್ ಅಸ್ಮಿನ್ ರಣಸಮುದ್ಯಮೇ ।।೨೨।।
ಯೋತ್ಸ್ಯಮಾನಾನವೇಕ್ಷೇಽಹಮ್ ಯ ಏತೇಽತ್ರ ಸಮಾಗತಾಃ ।
ಧಾರ್ತರಾಷ್ಟ್ರಸ್ಯ ದುರ್ಬುದ್ಧೇಃ ಯುದ್ಧೇ ಪ್ರಿಯಚಿಕೀರ್ಷವಃ ।।೨೩।।

ತೇ ವೇಳೀ ಅರ್ಜುನ ಮ್ಹಣತಸೇ ದೇವಾ । ಆತಾ ಝುಡಕರೀ ರಥು ಪೇಲಾವಾ । ನೇಊನಿ ಮಧ್ಯೇ ಘಾಲಾವಾ । ದೋಹೀ ದಳಾ ।।೧೬೯।। ಜಂವ ಮೀ ನಾವೇಕ । ಹೇ ಸಕಳ ವೀರ ಸೈನಿಕ । ನ್ಯಾಹಾಳೀನ ಅಶೇಖ । ಝುಂಜತೇ ಜೇ ।।೧೭೦।। ಯೇಥ ಆಲೇ ಅಸತೀ ಆಘವೇ । ಪರೀ ಕವಣೇಸೀ ಮ್ಯಾ ಝುಂಜಾವೇ । ಹೇ ರಣೀ ಲಾಗೇ ಪಹಾವೇ । ಮ್ಹಣೌನಿಯಾ ।।೧೭೧।। ಬಹುತಕರೂನಿ ಕೌರವ । ಹೇ ಆತುರ ದುಃಸ್ವಭಾವ । ವಾಟಿವೇ ವೀಣ ಹಾಂವ । ಬಾಂಧಿತೀ ಝುಂಜೀ ।।೧೭೨।। ಝುಂಜಾಚೀ ಆವಡೀ ಧರಿತೀ । ಪರೀ ಸಂಗ್ರಾಮಿ ಧೀರ ನವ್ಹತೀ । ಹೇ ಸಾಂಗೋನಿ ರಾಯಾಪ್ರತೀ । ಕಾಯ ಸಂಜಯೋ ಮ್ಹಣೇ ।।೧೭೩।।

ಆನೆಗಳ ಹಿಂಡನ್ನು ಸಿಂಹವು ಸಹಜವಾಗಿ ನಾಶ ಮಾಡುವಂತೆ ಈ ಪ್ರತಿಧ್ವನಿಯು ಕೌರವರ ಹೃದಯಗಳನ್ನು ಸೀಳಿ ಹಾಕಿತು ।।೧೬೨।।

ಈ ಧ್ವನಿ ಕೇಳಿ ನಿಂತಲ್ಲಿಯೇ ಎಲ್ಲರ ಧೈರ್ಯ ಅಡುಗಿ ಹೋಯಿತು. ಅವರು ಒಬ್ಬರಿಗೊಬ್ಬರು ''ಎಚ್ಚರ, ಎಚ್ಚರ'' ಎಂದು ಕೂಗ ಹತ್ತಿದರು ।।೧೬೩।।

ಶ್ಲೋಕಾರ್ಥ :- ಅನಂತರ, ಕಪಿಧ್ವಜನಾದ ಅರ್ಜುನನು ಯುದ್ಧಕ್ಕಾಗಿ ಸಿದ್ಧವಾಗಿರುವ ದುರ್ಯೋಧನಾದಿಗಳನ್ನು ನೋಡಿ ತಾನೂ ಬಿಲ್ಲನ್ನು ತೆಗೆದುಕೊಂಡು ।।೨೦।।

ಅಲ್ಲಿ ಪೌರುಷ ಬಲಾಢ್ಯದಿಂದ ಕೂಡಿದ ಮಹಾ ರಥಿಗಳು ಸೈನ್ಯಕ್ಕೆ ಪುನಃ ಧೈರ್ಯಕೊಟ್ಟು ಮೊದಲಿನ ಸ್ಥಿತಿಗೆ ಬರುವಂತೆ ಮಾಡಿದರು ।।೧೬೪।।

ಆಗ ಸೈನಿಕರು ಹೆಚ್ಚಿನ ಸಿದ್ಧತೆಯಿಂದ ಮುಂದಾಗಿ ಮೊದಲಿನಕ್ಕಿಂತಲೂ ಎರಡು ಪಟ್ಟು ಆವೇಶದಿಂದ ಮುಂದಾದರು. ಈ ಸೈನ್ಯದ ಆರ್ಭಟಕ್ಕೆ ತ್ರಿಭುವನವು ಗಾಬರಿಯಾಯಿತು ।।೧೬೫।।

ಪ್ರಳಯಕಾಲದಲ್ಲಿ ಭಯಂಕರ ಮೋಡಗಳು ಅವ್ಯಾಹತವಾಗಿ ಮಳೆಗರೆಯುವಂತೆ ಧನುರ್ಧರರು ತೀಕ್ಷ್ಣ ಬಾಣಗಳನ್ನು ಬಿಡಹತ್ತಿದರು ।।೧೬೬।।

ಇದನ್ನು ನೋಡಿ ಅರ್ಜುನನ ಮನಸ್ಸಿಗೆ ಬಹಳ ಸಂತೋಷವಾಗಿ ಬಹು ಆವೇಶದಿಂದ ಸೈನ್ಯದ ಕಡೆ ದೃಷ್ಟಿ ಬೀರಿದನು ।।೧೬೭।।

ಆಗ ಎಲ್ಲ ಕೌರವರು ಯುದ್ಧಕ್ಕೆ ಸಿದ್ಧರಾದದ್ದು ಕಂಡು ಪಂಡುಪುತ್ರನು ಸಹಜ ಲೀಲೆಯಿಂದ ಧನುಷ್ಯವನ್ನು ಎತ್ತಿದನು ।।೧೬೮।।

ಶ್ಲೋಕಾರ್ಥ :- ಹೇ ಕುರುರಾಜಾ, ಶ್ರೀಕೃಷ್ಣನಿಗೆ ಈ ಮಾತನ್ನು ಹೇಳಿದನು.

ಶ್ಲೋಕಾರ್ಥ :- ಅರ್ಜುನನು ಹೀಗೆಂದನು - ಹೇ ಅಚ್ಯುತಾ! ಈ ಎರಡು ಸೇನೆಗಳ ಮಧ್ಯದಲ್ಲಿ ನನ್ನ ರಥವನ್ನು ನಿಲ್ಲಿಸು ।।೨೧।।

ಶ್ಲೋಕಾರ್ಥ :- ಈ ಯುದ್ಧರಂಗದಲ್ಲಿ ಯಾರು ಯಾರು ನನ್ನೊಂದಿಗೆ ಯುದ್ಧ ಮಾಡಲು ಬಯಸಿ ಬಂದಿರುವರೋ ನಾನು ಯಾರೊಂದಿಗೆ ಯುದ್ಧ ಮಾಡಬೇಕಾಗಿದೆಯೋ ಅವರನ್ನು ಪರೀಕ್ಷಿಸಿ ನೋಡುವೆನು ।।೨೨।।

ಶ್ಲೋಕಾರ್ಥ :- ದುಷ್ಟಚಿತ್ತವುಳ್ಳ ದುರ್ಯೋಧನನಿಗೆ ಪ್ರಿಯವನ್ನುಂಟು ಮಾಡುವುದಕ್ಕಾಗಿ ಯುದ್ಧ ಸನ್ನದ್ಧರಾಗಿ ಇಲ್ಲಿಗೆ ಬಂದವರನ್ನು ನಾನು ನೋಡ ಬಯಸುತ್ತೇನೆ ।।೨೩।।

ಅರ್ಜುನನು :- ಹೇ ದೇವಾ, ಈಗ ನಮ್ಮ ರಥವನ್ನು ಬೇಗನೇ ನಡೆಸಿ ಎರಡೂ ಸೈನ್ಯದ ಮಧ್ಯಭಾಗದಲ್ಲಿ ನಿಲ್ಲಿಸು ।।೧೬೯।।

ಏಕೆಂದರೆ ಅಲ್ಲಿ ಯುದ್ಧ ಮಾಡಲು ಬಂದ ವೀರರನ್ನು ನಾನು ಕ್ಷಣಹೊತ್ತು ದೃಷ್ಟಿಸಿ ನೋಡುವೆನು ।।೧೭೦।।

ಕಾರಣ ಇಷ್ಟೇ, ಇಲ್ಲಿ ಎಲ್ಲ ವೀರರು ಕೂಡಿರುವರು. ರಣಾಂಗಣದಲ್ಲಿ ನನಗೆ ಯಾರಲ್ಲಿ ಯುದ್ಧ ಮಾಡಬೇಕೆಂಬುದನ್ನು ನೋಡಬೇಕಾಗಿದೆ ।।೧೭೧।।

ಬಹುತೇಕ ಇವರೆಲ್ಲರೂ ಕೌರವರು ಅವಸರಪಟ್ಟು ದುಷ್ಟಬುದ್ಧಿಯಿಂದ ಮೈಯಲ್ಲಿ ಪರಕ್ರಾಮ ಇಲ್ಲದೇ ಯುದ್ಧದ ಅಪೇಕ್ಷೆ ಹಿಡಿದಿರುವರು ।।೧೭೨।।

ಯುದ್ಧದ ಛಂದವಿರುವುದು ನಿಜ, ಆದರೆ ಇವರಿಗೆ ರಣಭೂಮಿಯಲ್ಲಿ ಧೈರ್ಯ ಸಾಲದು. ಇಷ್ಟು ಧೃತರಾಷ್ಟ್ರನಿಗೆ ತಿಳಿಸಿ ಸಂಜಯನು ಪುನಃ ಹೇಳಹತ್ತಿದನು ।।೧೭೩।।

ಸಂಜಯ ಉವಾಚ :-

ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।
ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್ ।೨೪॥

ಭೀಷ್ಮ ದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಮ್ ।
ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ ।೨೫॥

ತತ್ರಾಪಶ್ಯತ್ಸ್ಥಿತಾನ್ಪಾರ್ಥಃ ಪಿತೃನಥ ಪಿತಾಮಹಾನ್ ।
ಆಚಾರ್ಯಾನ್ಮಾತುಲಾನ್ಭ್ರಾತೃನ್ಪುತ್ರಾನ್ಪೌತ್ರಾನ್ಸಖೀಂಸ್ತಥಾ ।೨೬॥

ಶ್ವಶುರಾನ್ಸುಹೃದಶ್ಚೈವ ಸೇನಯೋರುಭಯೋರಪಿ ।
ತಾನ್ಸಮೀಕ್ಷ್ಯ ಸ ಕೌಂತೇಯಃ ಸರ್ವಾನ್ಬಂಧೂನವಸ್ಥಿತಾನ್ ।೨೭॥

ಕೃಪಯಾ ಪರಯಾವಿಷ್ಟೋ ವಿಷೀದನ್ನಿದಮಬ್ರವೀತ್ ।

ಆಯಿಕಾ ಅರ್ಜುನ ಇತುಕೇ ಬೋಲಿಲಾ । ತಂವ ಶ್ರೀಕೃಷ್ಣೇ ರಥು ಪೇಲಿಲಾ । ದೋಹೀ ಸೈನ್ಯಾಂಮಾಜೀ ಕೇಲಾ । ಉಭಾ ತೇಣೇ ।೧೭೪॥ ಜೇಥ ಭೀಷ್ಮ ದ್ರೋಣಾದಿಕ । ಜವಳೀಕೇಚಿ ಸನ್ಮುಖ । ಪೃಥಿವೀಪತಿ ಆಣಿಕ । ಬಹುತ ಆಹಾತೀ ।೧೭೫॥ ತೇಥ ಸ್ಥಿರ ಕರೂನಿಯಾ ರಥು । ಅರ್ಜುನ ಅಸೇ ಪಾಹಾತು । ತೋ ದಳಭಾರ ಸಮಸ್ತು । ಸಂಭ್ರಮೇಸೀ ।೧೭೬॥ ಮಗ ದೇವಾ ಮ್ಹಣೇ ದೇಖ ದೇಖ । ಹೇ ಗೋತ್ರಗುರು ಅಶೇಖ । ತಂವ ಕೃಷ್ಣಮನೀ ನಾವೇಕ । ವಿಸ್ಮೋ ಜಾಹಲಾ ।೧೭೭॥ ತೋ ಆಪಣಯಾ ಆಪಣ ಮ್ಹಣೇ । ಏಥ ಕಾಯೀ ಕವಣ ಜಾಣೇ । ಹೇ ಮನೀ ಧರಿಲೇ ಯೇಣೇ । ಪರಿ ಕಾಂಹೀ ಆಶ್ಚರ್ಯ ಅಸೇ ।೧೭೮॥ ಐಸೀ ಪುಢೀಲ ಸೇ ಘೇತು । ತೋ ಸಹಜೇ ಜಾಣೇ ಹೃದಯಸ್ಥು । ಪರಿ ಉಗಾ ಅಸೇ ನಿವಾಂತು । ತಿಯೇ ವೇಳೀ ।೧೭೯॥ ತಂವ ತೇಥ ಪಾರ್ಥ ಸಕಳ । ಪಿತೃ ಪಿತಾಮಹ ಕೇವಳ । ಗುರು ಬಂಧು ಮಾತುಳ । ದೇಖತಾ ಜಾಹಲಾ ।೧೮೦॥ ಇಷ್ಟ ಮಿತ್ರ ಆಪುಲೇ । ಕುಮರಜನ ದೇಖಿಲೇ । ಹೇ ಸಕಳ ಅಸತೀ ಆಲೇ । ತಯಾಮಾಜೀ ।೧೮೧॥ ಸುಹೃಜ್ಜನ ಸಾಸರೇ । ಆಣೀಕಹೀ ಸಖೇ ಸೋಇರೇ । ಕುಮರ ಪೌತ್ರ ಧನುರ್ಧರೇ । ದೇಖಿಲೇ ತೇಥ ।೧೮೨॥ ಜಯಾ ಉಪಕಾರ ಹೋತೇ ಕೇಲೇ । ಕೀ ಆಪದೀ ಜೇ ರಕ್ಷಿಲೇ । ಹೇ ಅಸೋ ವಡೀಲ ಧಾಕುಲೇ । ಆದಿಕರೂನಿ ।೧೮೩॥ ಐಸೇ ಗೋತ್ರಚಿ ದೋಹೀ ದಳೀ । ಉದಿತ ಜಾಲೇ ಅಸೇ ಕಳೀ । ಹೇ ಅರ್ಜುನೇ ತಿಯೇ ವೇಳೀ । ಅವಲೋಕಿಲೇ ।೧೮೪॥ ತೇಥ ಮನಿ ಗಜಬಜ ಜಾಹಲೀ । ಆಣಿ ಆಪೈಸೀ ಕೃಪಾ ಆಲೀ । ತೇಣೇ ಅಪಮಾನೇ ನಿಘಾಲೀ । ವೀರವೃತ್ತೀ ।೧೮೫॥

ಸಂಜಯ ಹೇಳಿದನು :-

ಶ್ಲೋಕಾರ್ಥ :- ಹೇ ಧೃತರಾಷ್ಟ್ರಾ! ಈ ವಿಧವಾಗಿ ಹೇಳಿದ ಅರ್ಜುನನ ಮಾತನ್ನು ಶ್ರೀಕೃಷ್ಣನು ಕೇಳಿ, ಎರಡೂ ಸೈನ್ಯಗಳ ಮಧ್ಯದಲ್ಲಿ ಉತ್ತಮವಾದ ಆ ರಥವನ್ನು ನಿಲ್ಲಿಸಿ ।।೨೪।।

ಶ್ಲೋಕಾರ್ಥ :- ಭೀಷ್ಮ, ದ್ರೋಣ ಮೊದಲಾದ ಪ್ರಮುಖರ ಎದುರಿಗೆ ಹೇ ಅರ್ಜುನಾ! ಯುದ್ಧಕ್ಕೆ ಸೇರಿರುವ ಈ ಕೌರವರನ್ನು ನೋಡು ಎಂದು ಹೇಳಿದನು ।।೨೫।।

ಶ್ಲೋಕಾರ್ಥ :- ಅರ್ಜುನನು ಅಲ್ಲಿದ್ದ ತಂದೆಯವರು, ಅಜ್ಜಂದಿರು, ಗುರುಗಳು, ಸೋದರ ಮಾವಂದಿರು, ಅಣ್ಣತಮ್ಮಂದಿರು ।।೨೬।।

ಶ್ಲೋಕಾರ್ಥ :- ಮಕ್ಕಳು, ಮೊಮ್ಮಕ್ಕಳು, ಗೆಳೆಯರು ಮೊದಲಾದ ಸಂಬಂಧಿಕರನ್ನು ಹಾಗೆಯೇ ಮಾವಂದಿರು, ಉಪಕಾರಿಗಳು ಈ ರೀತಿ ಎರಡೂ ಸೇನೆಯಲ್ಲಿ ಕಂಡು ಹೆಚ್ಚು ಕನಿಕರದ ಆವೇಶವನ್ನು ಹೊಂದಿ ವಿಷಾದದಿಂದ ಈ ಮಾತನ್ನು ಹೇಳಿದನು ।।೨೭।।

ಹೇ ರಾಜನೇ ಕೇಳು, ಅರ್ಜುನನ ಮಾತಿನ ಪ್ರಕಾರ ಕೃಷ್ಣನು ರಥವನ್ನು ನಡೆಯಿಸಿ ಎರಡೂ ಸೈನ್ಯಗಳ ಮಧ್ಯೆಭಾಗದಲ್ಲಿ ನಿಲ್ಲಿಸಿದನು ।।೧೭೪।।

ಎಲ್ಲಿ ಭೀಷ್ಮ ದ್ರೋಣಾದಿಕ ಆಪ್ತ ಸಂಬಂಧಿಕರು ಹಾಗೂ ಅನೇಕ ರಾಜ ಮಹಾರಾಜರು ಮುಂದೆ ನಿಂತಿರುವರೋ ।।೧೭೫।।

ಅದೇ ಸ್ಥಳದಲ್ಲಿ ರಥವನ್ನು ನಿಲ್ಲಿಸಿದಾಗ ಅರ್ಜುನನು ಸೈನ್ಯದ ಕಡೆ ಉತ್ಸುಕತೆಯಿಂದ ನೋಡ ಹತ್ತಿದನು ।।೧೭೬।।

ತದನಂತರ ಏನು ಮಾಡುತ್ತಿದ್ದಾನೆಂದರೆ, ''ಹೇ ದೇವನೇ ನೋಡು ನೋಡು ಇವರೆಲ್ಲರೂ ನಮ್ಮ ಆಪ್ತ ವರ್ಗದವರು ಹಾಗೂ ಗುರುಗಳಿರುವರು.'' ಇದನ್ನು ಕೇಳಿ ಶ್ರೀಕೃಷ್ಣನಿಗೆ ಕ್ಷಣ ಹೊತ್ತು ಆಶ್ಚರ್ಯವಾಯಿತು ।।೧೭೭।।

ಆತನು (ಶ್ರೀಕೃಷ್ಣ) ತಮ್ಮ ಮನಸ್ಸಿನಲ್ಲಿಯೇ ಅರ್ಜುನನು ಇದನ್ನು ಮನಸ್ಸಿನಲ್ಲೇಕೆ ತಂದನು, ಯಾರು ಬಲ್ಲರು? ಆದರೆ ಇದರಲ್ಲಿ ಏನಾದರೂ ವಿಶೇಷ ಇದೆ ।।೧೭೮।।

ಆದರೆ ಶ್ರೀಭಗವಾನನು ಇನ್ನೊಬ್ಬರ ಮನೋಗತವನ್ನು ಸಹಜವಾಗಿ ತಿಳಿಯಬಲ್ಲವನಾಗಿದ್ದರೂ ಮುಂದಿನ ಭವಿಷ್ಯ ತರ್ಕಿಸಿಕೊಂಡು ಆಗ ಏನೂ ಹೇಳದೇ ಸುಮ್ಮನಾದನು ।।೧೭೯।।

ಆಗ ಅರ್ಜುನನು ತನ್ನ ಸರ್ವ ಹಿರಿಯರು, ಅಜ್ಜಂದಿರು, ಗುರುಗಳು, ಬಂಧುಗಳು, ಮಾವನವರು ಹೀಗೆ ನೋಡಿದನು ।।೧೮೦।।

ತನ್ನ ಇಷ್ಟ ಮಿತ್ರರು ಮತ್ತು ಮಕ್ಕಳು ಇವರೆಲ್ಲರೂ ಈ ಸ್ಥಳಕ್ಕೆ ಬಂದದ್ದನ್ನು ನೋಡಿದನು ।।೧೮೧।।

ಹಾಗೆಯೇ ಈತನು ತನ್ನ ಪ್ರಿಯ ಮಿತ್ರರನ್ನು ಮಾವಂದಿರನ್ನು, ಆಪ್ತ ವರ್ಗದವರನ್ನು ಹಾಗೂ ಮೊಮ್ಮಕ್ಕಳನ್ನು ಸಹ ಆ ಸ್ಥಳದಲ್ಲಿ ಅವಲೋಕನ ಮಾಡಿದನು ।।೧೮೨।।

ಯಾರು ತನ್ನ ಮೇಲೆ ಉಪಕಾರ ಮಾಡಿರುವರೋ, ಯಾರು ಸಂಕಟ ಸಮಯದಲ್ಲಿ ತನ್ನ ರಕ್ಷಣೆ ಮಾಡಿರುವರೋ ಹಾಗೂ ಇತರ ಎಲ್ಲ ಹಿರಿ ಕಿರಿಯರು ಇತ್ಯಾದಿ ।।೧೮೩।।

ಇವರೆಲ್ಲರೂ ಆತನ ಗೋತ್ರಜರು, ಎರಡೂ ಸೈನ್ಯಗಳಲ್ಲಿ ಯುದ್ಧಕ್ಕಾಗಿ ಸಜ್ಜಾಗಿರುವುದನ್ನು ಅರ್ಜುನನು ಆಗ ನೋಡಿದನು ।।೧೮೪।।

ಆಗ ಆತನು ಮನದಲ್ಲಿ ವ್ಯಾಕುಲಗೊಂಡನು. ಆತನ ಮನಸ್ಸಿನಲ್ಲಿ ಸಹಜವಾಗಿ ಕರುಣೆ ಹುಟ್ಟಿತು. ಈ ಕಾರಣದಿಂದ ವೀರವೃತ್ತಿಯು ಅಪಮಾನವಾಗಿ ಅದು ಅರ್ಜುನನ್ನು ಬಿಟ್ಟು ಕದಲಿತು ।।೧೮೫।।

ಜಿಯಾ ಉತ್ತಮ ಕುಳೀಂಚಿಯಾ ಹೋತೀ । ಆಣಿ ಗುಣಲಾವಣ್ಯ ಆಥೀ । ತಿಯಾ ಆಣಿಕೀ ತೇ ನ ಸಾಹತೀ । ಸುತೇಜಪಣೇ ॥೧೮೬॥ ನವಿಯೇ ಆವಡೀಚೇನಿ ಭರೇ । ಕಾಮುಕ ನಿಜವನಿತಾ ವಿಸರೇ । ಮಗ ಪಾಡೇವೀಣ ಅನುಸರೇ । ಭ್ರಮಲಾ ಜೈಸಾ ॥೧೮೭॥ ಕೀ ತಪೋಬಳೇ ಋದ್ಧೀ । ಪಾತಲಿಯಾ ಭ್ರಂಶೇ ಬುದ್ಧೀ । ಮಗ ತಯಾ ವಿರಕ್ತತಾ ಸಿದ್ಧೀ । ಆಠವೇನಾ ॥೧೮೮॥ ತೈಸೇ ಅರ್ಜುನಾ ತೇಥ ಜಾಹಲೇ । ಅಸತೇ ಪುರುಷತ್ವ ಗೇಲೇ । ಜೇ ಅಂತಃಕರಣ ದಿಧಲೇ । ಕಾರುಣ್ಯಾಸೀ ॥೧೮೯॥ ದೇಖಾ ಮಂತ್ರಜ್ಞು ಬರಳು ಜಾಯ । ಮಗ ತೇಥ ಕಾ ಜೈಸಾ ಸಂಚಾರು ಹೋಯ । ತೈಸಾ ತೋ ಧನುರ್ಧರ ಮಹಾಮೋಹೇ । ಆಕಳಿಲಾ ॥೧೯೦॥ ಮ್ಹಣೌನಿ ಅಸತಾ ಧೀರು ಗೇಲಾ । ಹೃದಯ ದ್ರಾವೋ ಆಲಾ । ಜೈಸಾ ಚಂದ್ರಕಳೀ ಶಿವತಲಾ । ಸೋಮಕಾಂತು ॥೧೯೧॥ ತಯಾಪರೀ ಪಾರ್ಥು । ಅತಿಸ್ನೇಹೇ ಮೋಹಿತು । ಮಗ ಸಖೇದ ಅಸೇ ಬೋಲತು । ಶ್ರೀಅಚ್ಯುತೇಸೀ ॥೧೯೨॥

ಅರ್ಜುನ ಉವಾಚ :-

ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್ ॥೨೮॥

ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ ।
ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ॥೨೯॥

ಗಾಂಡೀವಂ ಸ್ರಂಸತೇ ಹಸ್ತಾತ್ ತ್ವಕ್ಚೈವ ಪರಿದಹ್ಯತೇ ।
ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ॥೩೦॥

ತೋ ಮ್ಹಣೇ ಅವಧಾರೀ ದೇವಾ । ಮ್ಯಾ ಪಾಹಿಲಾ ಹಾ ಮೇಳಾವಾ । ತಂವ ಗೋತ್ರವರ್ಗು ಆಘವಾ । ದೇಖಿಲಾ ಏಥ ॥೧೯೩॥ ಹೇ ಸಂಗ್ರಾಮಿ ಉದಿತ । ಜಹಾಲೇ ಅಸತೀ ಕೀರ ಸಮಸ್ತ । ಪಣ ಆಪಣಪೇಯಾ ಉಚಿತ । ಕೇವೀ ಹೋಯ ॥೧೯೪॥ ಯೇಣೇ ನಾವೆಂಚಿ ನೇಣೋ ಕಾಯಿ । ಮಜ ಆಪಣಪೇ ಸರ್ವಥಾ ನಾಹೀ । ಮನ ಬುದ್ಧಿ ಠಾಯೀ । ಸ್ಥಿರ ನೋಹೇ ॥೧೯೫॥ ದೇಖೇ ದೇಹ ಕಾಂಪತ । ತೋಂಡ ಅಸೇ ಕೋರಡೇ ಹೋತ । ವಿಕಳತಾ ಉಪಜತ । ಗಾತ್ರಾಂಸೀಹೀ ॥೧೯೬॥ ಸರ್ವಾಂಗಾ ಕಾಂಟಾಳಾ ಆಲಾ । ಅತಿ ಸಂತಾಪು ಉಪನಲಾ । ತೇಥ ಬೇಂಬಳ ಹಾತು ಗೇಲಾ । ಗಾಂಡಿವಾಚಾ ॥೧೯೭॥ ತೇ ನ ಧರತಚಿ ನಿಷ್ಟಲೇ । ಪರೀ ನೇಣೇಚಿ ಹಾತೋನಿ ಪಡಿಲೇ । ಐಸೇ ಹೃದಯ ಅಸೇ ವ್ಯಾಪಿಲೇ । ಮೋಹೇ ಯೇಣೇ ॥೧೯೮॥

ಯಾವ ಸ್ತ್ರೀಯರು ಉತ್ತಮ ಕುಲದವರಿದ್ದು ಗುಣ ಲಾವಣ್ಯದಿಂದ ಕೂಡಿರುವಾಗ್ಗೆ ಅವರಿಗೆತಮ್ಮ ಸ್ವಾಭಿಮಾನದಿಂದ ಇತರ ಸ್ತ್ರೀ (ಸವತಿ)ಯ ವರ್ಚಸ್ಸು ಸಹಿಸುವುದಾಗುವುದಿಲ್ಲ ॥೧೮೬॥

ಕಾಮುಕನು ನವಯೌವನ ಪ್ರಾಪ್ತವಾದ ಹೊಸದಾಗಿ ಬಂದಿರುವ ದಾಸಿಯ ಮೇಲೆ ಪ್ರೇಮ ಇಟ್ಟು ತನ್ನ ನಿಜ ಪತ್ನಿಯನ್ನು ಮರೆತು ಭ್ರಮಿಷ್ಠನಾಗಿ ಯೋಗ್ಯತೆ ಇಲ್ಲದವಳ ಆಧೀನನಾಗುತ್ತಾನೆ ॥೧೮೭॥

ಅಥವಾ ತಪ ಪ್ರಭಾವದಿಂದ ರಿದ್ಧಿ ಸಿದ್ಧಿಗಳು ಪ್ರಾಪ್ತವಾದಾಗ್ಗೆ ವೈರಾಗ್ಯಶೀಲನಾದ ಪುರುಷನ ಬುದ್ಧಿಗೆ ಭ್ರಮೆ ಸೇರಿ ಆತನಿಗೆ ವೈರಾಗ್ಯದ ಮರುವು ಆಗುವುದು ॥೧೮೮॥

ಅದರಂತೆ ಅರ್ಜುನನು ತನ್ನ ಅಂತಃಕರಣದಲ್ಲಿ ದಯೆಗೆ ಅವಕಾಶ ಕೊಟ್ಟಿರುವುದರಿಂದ ಇದ್ದ ಪೌರುಷ ಎಲ್ಲವೂ ಇಲ್ಲದಾಯಿತು ॥೧೮೯॥

ಹೇಗೆಂದರೆ, ಮಾಂತ್ರಿಕನು ಮಂತ್ರೋಚ್ಚಾರದಲ್ಲಿ ತಪ್ಪಿದರೆ ಆತನಿಗೆ ಭೂತಬಾಧೆಯಾಗುವುದು. ಅದರಂತೆ ಅರ್ಜುನನಿಗೆ ಮಹಾಮೋಹವು ಗ್ರಾಸ ಮಾಡಿತು ॥೧೯೦॥

ಈ ಕಾರಣದಿಂದ ಆತನ ಸ್ವಾಭಾವಿಕ ಧೈರ್ಯ ನಷ್ಟಗೊಂಡಿತು. ಆತನ ಹೃದಯದಲ್ಲಿ ದಯೆಯ ಝುರಿಯೇ ಹರಿಯತೊಡಗಿತು. ಚಂದ್ರಕಿರಣ ಸ್ಪರ್ಶದಿಂದ ಚಂದ್ರಶಿಲೆಯು ಹೇಗೆ ದ್ರವಿಸುವುದೋ ॥೧೯೧॥

ಅದರಂತೆ ಅರ್ಜುನನು ಅತಿ ಸ್ನೇಹದಿಂದ ಮೋಹಿತನಾದನು ಮತ್ತು ಖೇದಯುಕ್ತ ಅಂತಃಕರಣದಿಂದ ಶ್ರೀಕೃಷ್ಣನಿಗೆ ಹೇಳಹತ್ತಿದನು ॥೧೯೨॥

ಅರ್ಜುನನು ಹೇಳಿದನು :-

ಶ್ಲೋಕಾರ್ಥ :- ಕೃಷ್ಣಾ! ಯುದ್ಧ ಮಾಡುವುದಕ್ಕಾಗಿ ನೆರೆದಿರುವ ಈ ನನ್ನವರನ್ನು ನೋಡಿ ॥೨೮॥

ಶ್ಲೋಕಾರ್ಥ :- ನನ್ನ ಅವಯವಗಳು ಸೊರಗುತ್ತಿವೆ. ಬಾಯಿ ಒಣಗುತ್ತಿದೆ. ನನ್ನ ಮೈಯಲ್ಲಿ ನಡುಕ, ರೋಮಾಂಚವೂ ಉಂಟಾಗುತ್ತಿದೆ ॥೨೯॥

ಶ್ಲೋಕಾರ್ಥ :- ಗಾಂಡೀವವು ಕೈಯಿಂದ ಜಾರಿ ಬೀಳುತ್ತಿದೆ. ಚರ್ಮವು ಸುಟ್ಟು ಹೋಗುತ್ತಿದೆ. ನಿಲ್ಲಲೂ ಸಹ ಶಕ್ತಿ ಇಲ್ಲ. ಮನಸ್ಸು ಭ್ರಮೆ ಪಡುತ್ತಿದೆ ॥೩೦॥

ಅರ್ಜುನನು ಹೀಗೆ ಹೇಳಹತ್ತಿದನು. ಹೇ ದೇವನೇ, ಈ ಕಡೆ ಲಕ್ಷ ಕೊಡು, ನಾನು ಇಲ್ಲಿ ಕೂಡಿದ ಸಮೂಹ ನೋಡಿದೆನು. ಅದರಲ್ಲಿ ಬಂಧು, ಆಪ್ತ, ಇಷ್ಟರು ಇತ್ಯಾದಿ ಗೋತ್ರ, ವರ್ಗದವರನ್ನು ಕಂಡೆನು ॥೧೯೩॥

ಈ ಎಲ್ಲ ಆಪ್ತೇಷ್ಟರು ಯುದ್ಧಕ್ಕಾಗಿ ಸಜ್ಜಾಗಿರುವುದು ನಿಜ. ಆದರೆ ಅವರ ಸಂಗಡ ಯುದ್ಧ ಮಾಡುವುದು ನಮಗೆ ಹೇಗೆ ಉಚಿತವಾಗುವುದು? ॥೧೯೪॥

ಇವರೊಂದಿಗೆ ಯುದ್ಧ ಮಾಡುವ ಹೆಸರೆತ್ತಿದರೆ ನನಗೆ ಏನೂ ತೋಚದಂತಾಗಿದೆ ಮತ್ತು ಮನ ಬುದ್ಧಿಗಳು ಸಹ ಸ್ಥಿರವಾಗಿ ಇರದಂತಾಗಿದೆ ॥೧೯೫॥

ಇಗೋ ನೋಡು, ನನ್ನ ಎಲ್ಲ ಶರೀರಕ್ಕೆ ಕಂಪನ ಮೂಡಿದೆ. ಬಾಯಿ ಒಣಗಹತ್ತಿದೆ. ಶರೀರ ಗಾತ್ರವು ಶಿಥಿಲಗೊಂಡಿದೆ ॥೧೯೬॥

ಮೈ ಕೂದಲಗಳೆಲ್ಲವೂ ನೆಟ್ಟಗಾಗಿವೆ, ಶರೀರವೆಲ್ಲವೂ ತಾಪಗೊಂಡಿದೆ ಮತ್ತು ಗಾಂಡೀವ ಧನುಷ್ಯ ಹಿಡಿಯುವ ಹಸ್ತವು ಶಿಥಿಲಗೊಂಡಿದೆ ॥೧೯೭॥

ಹೀಗಾಗಿ ಅದು ನನ್ನ ಕೈಯಿಂದ ಹೇಗೆ ಜಾರಿ ಬಿದ್ದಿದೆಯೋ ಅದು ಸಹ ನನಗೆ ತಿಳಿಯದಾಗಿದೆ. ಇಷ್ಟು ನನ್ನ ಅಂತಃಕರಣವು ಮೋಹದಿಂದ ವ್ಯಾಪಿಸಿಕೊಂಡಿದೆ ॥೧೯೮॥

ಜೇ ವಜ್ರಾಪಾಸೋನಿ ಕಠಿಣ । ದುರ್ಧರ ಅತಿದಾರುಣ । ತಯಾಹೂನ ಅಸಾಧಾರಣ । ಹೇ ಸ್ನೇಹ ನವಲ ।।೧೯೯।। ಜೇಣೇ ಸಂಗ್ರಾಮೀ ಹರು ಜಿಂತಿಲಾ । ನಿವಾತಕವಚಾಂಚಾ ಠಾವೋ ಫೇಡಿಲಾ । ತೋ ಅರ್ಜುನ ಮೋಹೇ ಕವಳಿಲಾ । ಕ್ಷಣಾಮಾಜೀ ।।೨೦೦।। ಜೈಸಾ ಭ್ರಮರ ಭೇದೀ ಕೋಡೇ । ಭಲತೈಸೇ ಕಾಷ್ಠ ಕೋರಡೇ । ಪರೀ ಕಳಿಕೇಮಾಜೀ ಸಾಂಪಡೇ । ಕೋವಳಿಯೇ ।।೨೦೧।। ತೇಥ ಉತ್ತೀರ್ಣ ಹೋಈಲ ಪ್ರಾಣೇ । ಪರೀ ತೇ ಕಮಳದಳ ಚಿರೂ ನೇಣೇ । ತೈಸೇ ಕಠಿಣ ಕೋವಳೇಪಣೇ । ಸ್ನೇಹ ದೇಖಾ ।।೨೦೨।। ಹೇ ಆದಿಪುರುಷಾಚೀ ಮಾಯಾ । ಬ್ರಹ್ಮೇಯಾಹೀ ನಯೇಚೀ ಆಯಾ । ಮ್ಹಣೌನಿ ಭುಲವಿಲಾ ಐಕೇ ರಾಯಾ । ಸಂಜಯೋ ಮ್ಹಣೇ ।।೨೦೩।। ಅವಧಾರೀ ಮಗ ತೋ ಅರ್ಜುನು । ದೇಖೋನಿ ಸಕಳ ಸ್ವಜನು । ವಿಸರಲಾ ಅಭಿಮಾನು । ಸಂಗ್ರಾಮೀಂಚಾ ।।೨೦೪।। ಕೈಸೀ ನೇಣೋ ಸದಯತಾ । ಉಪನಲೀ ತೇಥೇ ಚಿತ್ತಾ । ಮಗ ಮ್ಹಣೇ ಕೃಷ್ಣಾ ಆತಾ । ನಸಿಜೇ ಏಥ ।।೨೦೫।। ಮಾಝೇ ಅತಿಶಯ ಮನ ವ್ಯಾಕುಳ । ಹೋತಸೆ ವಾಚಾ ಬರಳ । ಜೇ ವಧಾವೇ ಹೇ ಸಕಳ । ಯೇಣೇ ನಾಂವೇ ।।೨೦೬।।

ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ ।
ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನ ಮಾಹವೇ ।।೩೧।।

ಯಾ ಕೌರವಾ ಜರೀ ವಧಾವೇ । ತರೀ ಯುಧಿಷ್ಠಿರಾಧಿಕಾ ಕಾ ನ ವಧಾವೇ । ಹೇ ಯೇರ ಯೇರ ಆಘವೇ । ಗೋತ್ರಜ ಆಮುಚೇ ।।೨೦೭।। ಮ್ಹಣೌನಿ ಜಳೋ ಹೇ ಝುಂಜ । ಪ್ರತ್ಯಯಾ ನಯೇ ಮಜ । ಯೇಣೇ ಕಾಯ ಕಾಜ । ಮಹಾಪಾಪೇ ।।೨೦೮।। ದೇವಾ ಬಹುತಾಪರೀ ಪಾಹತಾ । ಏಥ ವೋಖಟೇ ಹೋಈಲ ಝುಂಜತಾ । ವರ ಕಾಂಹೀ ಚುಕವಿತಾ । ಲಾಭು ಆಥೀ ।।೨೦೯।।

ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ ।
ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ ।।೩೨।।

ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ ।
ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ।।೩೩।।

ಆಚಾರ್ಯಾಃ ಪಿತರಃ ಪುತ್ರಾಃ ತಥೈವ ಚ ಪಿತಾಮಹಾಃ ।
ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಃ ಸಂಬಂಧಿನಸ್ತಥಾ ।।೩೪।।

ತಯಾ ವಿಜಯವೃತ್ತೀ ಕಾಂಹೀ । ಮಜ ಸರ್ವಥಾ ಕಾಜ ನಾಹೀ । ಏಥ ರಾಜ್ಯ ತರೀ ಕಾಯೀ । ಹೇ ಪಾವೋನಿಯಾ ।।೨೧೦।।

(ಅರ್ಜುನನ) ಹೃದಯವು ವಜ್ರಕ್ಕಿಂತಲೂ ಕಠಿಣವಿದ್ದು, ಯಾವುದೇ ಕಠಿಣ ಪ್ರಸಂಗದಲ್ಲಿ ಲೆಕ್ಕಿಸದೇ ಇರುವ ನಿಷ್ಠುರತೆ ಆತನದು. ಆದರೆ ಆಪ್ತವರ್ಗದಲ್ಲಿ ಇಷ್ಟೊಂದು ಮೋಹಗ್ರಸ್ಥವಾದದ್ದು ಬಹಳ ಆಶ್ಚರ್ಯ ।೧೯೯॥

ಯಾವನು ಯುದ್ಧದಲ್ಲಿ ಶಂಕರನನ್ನು ಗೆದ್ದಿರುವನೋ ಮತ್ತು ನಿವಾತ ಕವಚ ರಾಕ್ಷಸನನ್ನು ಹೇಳ ಹೆಸರಿಲ್ಲದಂತೆ ಮಾಡಿದನೋ ಅಂತಹ ಅರ್ಜುನನಿಗೆ ಮೋಹವು ಕ್ಷಣ ಮಾತ್ರದಲ್ಲಿ ನುಂಗಿ ಬಿಟ್ಟಿತು ।೨೦೦॥

ಭ್ರಮರವು ಯಾವುದೇ ಕಠಿಣ ಕಟ್ಟಿಗೆಯನ್ನು ಸಹಜವಾಗಿ ಕೊರೆಯುವುದು. ಆದರೆ ಕೋಮಲವಾದ ಕಮಲದ ಎಸಳಿನಲ್ಲಿ ಸಿಕ್ಕಿ ಬೀಳುವುದು ।೨೦೧॥

ಅಲ್ಲಿ ಅದರ ಪ್ರಾಣ ಹೋದರೂ ಅದು ಕಮಲ ದಳವನ್ನು ಕೊರೆಯುವ ಮನಸ್ಸೇ ಮಾಡುವುದಿಲ್ಲ. ಆದ್ದರಿಂದ ಸ್ನೇಹವು ಕೋಮಲತೆಯಿಂದಲೇ ಅತಿ ಕಠಿಣವಾಗಿರುವುದು ।೨೦೨॥

ಸಂಜಯ ಹೇಳುತ್ತಾನೆ:- ರಾಜಾ ಧೃತರಾಷ್ಟ್ರನೇ, ಈ ಮೋಹವೆಂದರೆ ಪರಮೇಶ್ವರನ ಮಾಯೆಯಾಗಿದೆ. ಇದನ್ನು ಬ್ರಹ್ಮದೇವರಿಗೂ ಸಹಿಸುವುದು ಆಗುವುದಿಲ್ಲ. ಆದ್ದರಿಂದಲೇ ಅರ್ಜುನನಿಗೆ ಮಾಯೆಯು ಮೋಹಿತ ನನ್ನಾಗಿ ಮಾಡಿದೆ ।೨೦೩॥

ರಾಜಾ ಕೇಳು, ನಂತರ ಅರ್ಜುನನು ತನ್ನ ಆಪ್ತ ವರ್ಗದವರೆಲ್ಲರನ್ನೂ ಕಂಡು ಯುದ್ಧ ವಿಷಯದ ಅಭಿಮಾನವನ್ನು ಸಂಪೂರ್ಣವಾಗಿ ಮರೆತು ಬಿಟ್ಟನು ।೨೦೪॥

ಆ ಸ್ಥಳದಲ್ಲಿ ಆತನ ಮನಸ್ಸಿನಲ್ಲಿ ಕರುಣೆಯು ಹೇಗೆ ಹುಟ್ಟಿತೋ ತಿಳಿಯದಾಗಿದೆ. ಆಗ ಆತನು ಶ್ರೀಕೃಷ್ಣನಿಗೆ ಹೇಳಿದನು, ಹೇ ದೇವನೇ ಈಗ ಇಲ್ಲಿ ಇರಬಾರದೆಂದು ನನಗೆ ಅನಿಸುತ್ತಿದೆ ।೨೦೫॥

ಈ ಎಲ್ಲರಿಗೂ ಕೊಲ್ಲುವುದು ಎಂದರೆ ನನ್ನ ಮನಸ್ಸಿಗೆ ಅತಿಶಯ ಕೆಟ್ಟದಾಗುತ್ತಿದೆ. ಬಾಯಿಯಿಂದ ಒಂದು ಶಬ್ದ ಸಹ ಹೊರಡದಂತಾಗಿದೆ ।೨೦೬॥

ಶ್ಲೋಕಾರ್ಥ :- ಹೇ ಕೇಶವಾ! ಕಾಣಬಾರದ ಅಪಶಕುನಗಳು ಕಾಣುತ್ತಿವೆ. ಯುದ್ಧದಲ್ಲಿ ಬಂಧುಗಳನ್ನು ಕೊಲ್ಲುವುದರಿಂದ ಯಾವ ಶ್ರೇಯಸ್ಸೂ ಕಂಡು ಬರುವುದಿಲ್ಲ ।೩೧॥

ಈ ಕೌರವರಿಗೆ ಕೊಲ್ಲುವುದಾದರೆ ಧರ್ಮರಾಜಾದಿ ಗಳವರನ್ನು ಏಕೆ ಕೊಲ್ಲಬಾರದು? ಏಕೆಂದರೆ ಇವರಿಬ್ಬರೂ ನನ್ನ ಗೋತ್ರಜರಿದ್ದಾರೆ ।೨೦೭॥

ಆದ್ದರಿಂದ ಈ ಯುದ್ಧಕ್ಕೆ ಬೆಂಕಿ ಹಚ್ಚಲಿ, ನನಗೆ ಈ ಕಾರ್ಯ ಹಿಡಿಸಲಾರದು. ಇಷ್ಟು ಮಹಾ ಪಾಪ ಮಾಡಬೇಕಾದ ಪ್ರಸಂಗವಾದರೂ ಏನಿದೆ? ।೨೦೮॥

ದೇವಾ, ಅನೇಕ ದೃಷ್ಟಿಯಿಂದ ವಿಚಾರ ಮಾಡಿ ನೋಡಿದಾಗ ಈ ಯುದ್ಧದಿಂದ ನಮಗೆ ಹಾನಿಯೇ ಇದೆ. ಅದಕ್ಕಿಂತ ಇದನ್ನು ತಪ್ಪಿಸಿದರೆ ಮಾತ್ರ ದೊಡ್ಡ ಲಾಭ ವಾಗುವುದಿದೆ ।೨೦೯॥

ಶ್ಲೋಕಾರ್ಥ :- ಕೃಷ್ಣಾ ! ಜಯದಲ್ಲಿಯಾಗಲೀ, ರಾಜ್ಯದಲ್ಲಿಯಾಗಲೀ, ಸುಖದಲ್ಲಿಯಾಗಲಿ ನನಗೆ ಅಪೇಕ್ಷೆಯಿಲ್ಲ. ಹೇ ಗೋವಿಂದಾ ! ಆ ರಾಜ್ಯದಿಂದ ಆ ಭೋಗಗಳಿಂದ ಆ ಜೀವಿತದಿಂದ ನನಗೆ ಏನು ಪ್ರಯೋಜನ? ।೩೨॥

ಶ್ಲೋಕಾರ್ಥ :- ಯಾರ ತೃಪ್ತಿಗೋಸ್ಕರ ನಾವು ರಾಜ್ಯವನ್ನು, ಭೋಗಗಳನ್ನು, ಸುಖಗಳನ್ನು ಕೋರುವೆವೋ, ಅಂಥವರೇ ಧನ ಮತ್ತು ಪ್ರಾಣಗಳ ಆಸೆಯನ್ನು ತ್ಯಜಿಸಿ ಯುದ್ಧದಲ್ಲಿ ನಿಂತಿರುವರು ।೩೩॥

ಶ್ಲೋಕಾರ್ಥ :- ಗುರುಗಳು, ತಂದೆಯಂದಿರು, ಸಂತರು, ಅಜ್ಜಂದಿರು, ಸೋದರಮಾವಂದಿರು, ಮಾವಂದಿರು,ಮೊಮ್ಮಕ್ಕಳು, ಭಾವ ಮೈದುನರು ಮತ್ತು ಸಂಬಂಧಿಗಳು ಎಷ್ಟೋ ಜನರು ಇಲ್ಲಿ ಇದ್ದಾರೆ ।೩೪॥

ಈ ರೀತಿಯಲ್ಲಿ (ಗೋತ್ರಜನರನ್ನು ಕೊಂದು) ರಾಜ್ಯ ಸಂಪಾದಿಸುವುದು ನನಗೆ ಸರ್ವಥಾ ಬೇಕಾಗಿಲ್ಲ. ಇಂತಹ ರಾಜ್ಯ ಸಂಪಾದಿಸಿ ಮಾಡುವುದಾದರೂ ಏನು? ।೨೧೦॥

ಯಾ ಸಕಳಾಂತೇ ವಧಾವೇ । ಮಗ ಜೇ ಭೋಗ ಭೋಗಾವೇ । ತೇ ಜಳೋತ ಆಘವೇ । ಪಾರ್ಥು ಮ್ಹಣೇ ।೨೧೧॥ ತೇಣೇ ಸುಖೇವಿಣ ಹೋಈಲ । ತೇ ಭಲತೈಸೇ ಸಾಹಿಜೇಲ । ವರೀ ಜೀವಿತಹೀ ವೇಂಚಿಜೇಲ । ಯಾಚಿಲಾಗೀ ।೨೧೨॥ ಪರೀ ಯಾಂಸೀ ಘಾತು ಕೀಜೇ । ಮಗ ಆಪಣ ರಾಜ್ಯ ಸುಖ ಭೋಗಿಜೇ । ಹೇ ಸ್ವಪ್ನೀಹೀ ಮನ ಮಾಝೇ । ಕರೂ ನ ಶಕೆ ।೨೧೩॥ ತರೀ ಆಮ್ಹೀ ಕಾ ಜನ್ಮಾವೇ । ಕವಣಾಲಾಗೀ ಜಿಯಾವೇ । ಜರೀ ವಡಿಲಾಯಾ ಚಿಂತಾವೇ । ವಿರುದ್ಧ ಮನೇ ।೨೧೪॥ ಪುತ್ರಾತೇ ಇಚ್ಛೀ ಕುಳ । ತಯಾಚೇ ಕಾಯಿ ಹೇಂಚಿ ಫಳ । ಜೇ ನಿರ್ದಳಿಜೇ ಕೇವಳ । ಗೋತ್ರ ಆಪುಲೇ ।೨೧೫॥ ಹೇ ಮನೀಚಿ ಕೇವಿ ಧರಿಜೇ । ಆಪಣ ವಜ್ರಾಚೇಯಾ ಹೋಈಜೇ । ವರೀ ಘಡೇ ತರೀ ಕೀಜೇ । ಭಲೇ ಇಯಾ ।೨೧೬॥ ಆಮ್ಹೀ ಜೇ ಜೇ ಜೋಡಾವೇ । ತೇ ಸಮಸ್ತೀ ಇಹೀ ಭೋಗಾವೇ । ಹೇ ಜೀವಿತಹೀ ಉಪಕಾರಾವೇ । ಕಾಜೇ ಯಾಂಚ್ಯಾ ।೨೧೭॥ ಆಮ್ಹೀ ದಿಗಂತೀಚೇ ಭೂಪಾಳ । ವಿಭಾಂಡೂನಿ ಸಕಳ । ಮಗ ಸಂತೋಷವಿಜೇ ಕುಳ । ಆಪುಲೇ ಜೇ ।೨೧೮॥ ತೇಚಿ ಹೇ ಸಮಸ್ತ । ಪರೀ ಕೈಸೇ ಕರ್ಮ ವಿಪರೀತ । ಜೇ ಜಾಹಲೇ ಅಸತೀ ಉದ್ಯತ । ಝುಂಜಾವಯಾ ।೨೧೯॥ ಅಂತೌರಿಯಾ ಕುಮರೇ । ಸಾಂಡೋನಿಯಾ ಭಾಂಡಾರೇ । ಶಸ್ತ್ರಾಗ್ರೀ ಜಿವ್ಹಾರೇ । ಆರೋಪುನೀ ।೨೨೦॥ ಐಸಿಯಾಂತೇ ಕೈಸೇನೀ ಮಾರೂ । ಕವಣಾವರೀ ಶಸ್ತ್ರ ಧರೂ । ನಿಜಹೃದಯಾ ಕರೂ । ಘಾತು ಕೇವೀ ।೨೨೧॥ ಹೇ ನೇಣಸೀ ತೂ ಕವಣ । ಪರೀ ಪೈಲ ಭೀಷ್ಮ ದ್ರೋಣ । ಜಯಾಂಚೇ ಉಪಕಾರ ಅಸಾಧಾರಣ । ಆಮ್ಹಾ ಬಹುತ ।೨೨೨॥ ಏಥ ಶಾಲಕ ಸಾಸರೇ ಮಾತುಳ । ಆಣಿ ಬಂಧು ಕೀ ಹೇ ಸಕಳ । ಪುತ್ರ ನಾತೂ ಕೇವಳ । ಇಷ್ಟ ಹೀ ಅಸತೀ ।೨೨೩॥ ಅವಧಾರೀ ಅತಿ ಜವಳಿಕೇಚೇ । ಹೇ ಸಕಳಹೀ ಸೋಯರೇ ಆಮುಚೇ । ಮ್ಹಣೋನಿ ದೋಷ ಆಥೀ ವಾಚೇ । ಬೋಲತಾಂಚಿ ।೨೨೪॥

ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ ।
ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ।೩೫॥

ಹೇ ವರೀ ಭಲತೇ ಕರಿತು । ಅತಾಂಚಿ ಯೇಥೇ ಮಾರಿತು । ಪರಿ ಆಪಣ ಮನೇ ಘಾತು । ನ ಚಿಂತಾವಾ ।೨೨೫॥ ತ್ರೈಲೋಕ್ಯೀಂಚೇ ಅನಕಳಿತ । ಜರೀ ರಾಜ್ಯ ಹೋಈಲ ಪ್ರಾಪ್ತ । ತರೀ ಹೇ ಅನುಚಿತ । ನಾಚರೇ ಮಿ ।೨೨೬॥ ಜರೀ ಆಜಿ ಏಥ ಐಸೇ ಕೀಜೇ । ತರೀ ಕವಣಾಚ್ಯಾ ಮನೀ ಉರಿಜೇ ? । ಸಾಂಗೇ ಮುಖ ಕೇವೀ ಪಾಹಿಜೇ । ತುಝೇ ಕೃಷ್ಣಾ ।೨೨೭॥

ಅರ್ಜುನನು ಹೇಳುತ್ತಾನೆ:- ಈ ಎಲ್ಲರನ್ನೂ ಕೊಂದು ರಾಜಭೋಗ ಭೋಗಿಸುವುದು ಎಲ್ಲ ದೃಷ್ಟಿಯಿಂದಲೂ ತುಚ್ಛವಾಗಿದೆ ।೨೧೧॥

ಈ ರಾಜ್ಯಸುಖ ಬಿಡುವುದರಿಂದ ಬರುವ ಯಾವುದೇ ದುಃಖಾವಸ್ಥೆಯನ್ನು ಸಹಿಸುವೆವು. ಹೆಚ್ಚಿಗೇನು ಹೇಳಬೇಕು? (ಭೀಷ್ಮಾದಿಕರಿಗಾಗಿ) ನಾವು ನಮ್ಮ ಪ್ರಾಣಗಳನ್ನಾದರೂ ಕೊಡುವೆವು ।೨೧೨॥

ಆದರೆ, ಇವರನ್ನು ಕೊಂದು ನಾವು ರಾಜ್ಯ ಸುಖ ಭೋಗಿಸುವ ಈ ವಿಚಾರ ಎಂದೂ ಸ್ವಪ್ನದಲ್ಲಿಯೂ ಸಹ ನನ್ನ ಮನಸ್ಸಿನಲ್ಲಿ ಬರಲಾರದು ।೨೧೩॥

ಒಂದು ವೇಳೆ ನಮ್ಮ ಹಿರಿಯರನ್ನು ಮನದಲ್ಲಿ ಅಹಿತ ಚಿಂತನೆ ಮಾಡಿದರೆ ನಾವು ಜನ್ಮಕ್ಕೆ ಬರುವುದಾದರೂ ಏತಕ್ಕೆ ? ಮತ್ತು ನಾವು ಬದುಕಿರುವುದು ಸಹ ಯಾರಿಗಾಗಿ ? ।೨೧೪॥

ಕುಲದಲ್ಲಿ ಪುತ್ರಪ್ರಾಪ್ತಿಯ ಇಚ್ಛೆ ಮಾಡುವುದು ಅದರ ಫಲವು ಇದೆ ಏನು? ಆ ಪುತ್ರನು ತನ್ನ ಕುಲವನ್ನು ಸಂಹಾರ ಮಾಡಬೇಕೇನು? ।೨೧೫॥

ಈ ವಿಷಯವಾಗಿ ಮನಸ್ಸನ್ನು ವಜ್ರಕ್ಕಿಂತ ಕಠೋರ ಮಾಡಬೇಕೆಂಬುದು ಹೇಗೆ ಚಿಂತಿಸಬೇಕು? ಅವರಿಗಾಗಿ (ಗೋತ್ರಜರಿಗಾಗಿ) ತನ್ನ ಕೈಲಾದಷ್ಟು ಒಳ್ಳೆಯದನ್ನೇ ಮಾಡಬೇಕು ।೨೧೬॥

ನಾವು ಕೂಡಿಸುವುದೆಲ್ಲವನ್ನು ಎಲ್ಲರೂ ಉಪಭೋಗಿಸಬೇಕು. ಇಷ್ಟೇ ಅಲ್ಲ, ಅವರಿಗಾಗಿ ನಾವು ನಮ್ಮ ಜೀವತವನ್ನೇ ಅರ್ಪಿಸಬೇಕು ।೨೧೭॥

ನಾವು ನಾನದೇಶಗಳ ರಾಜರನ್ನು ಜಯಿಸಿ ಅವರಿಂದ ಅಪಾರ ದ್ರವ್ಯ ಸಂಗ್ರಹಿಸಿ ನಮ್ಮ ಕುಲವನ್ನು ಸಂತೋಷಗೊಳಿಸಬೇಕು ।೨೧೮॥

ಆದರೆ, ಕರ್ಮದ ಎಂತಹ ವಿಪರೀತ ಗತಿಯಾಗಿದೆ? ನಮ್ಮ ಎಲ್ಲ ಗೋತ್ರಜರು ಯುದ್ಧ ಮಾಡಲು ಸನ್ನದ್ಧರಾಗಿದ್ದಾರೆ ।೨೧೯॥

ಹೆಂಡರು ಮಕ್ಕಳು ಧನಸಂಪತ್ತು ಎಲ್ಲವನ್ನೂ ಬಿಟ್ಟು ಖಡ್ಗಧಾರೆಯ ಮೇಲೆ ತಮ್ಮ ಜೀವನವನ್ನು ಇಟ್ಟಿದ್ದಾರೆ ।೨೨೦॥

ಇಂಥವರಿಗೆ ನಾನು ಹೇಗೆ ಕೊಲ್ಲಲಿ? ಯಾರ ಮೇಲೆ ಶಸ್ತ್ರ ಹಿಡಿಯಲಿ? ಮತ್ತು ನನ್ನ ಪ್ರೀತಿಯವರನ್ನು ಹೇಗೆ ಕೊಲ್ಲಲಿ ? ।೨೨೧॥

ಇವರು ಯಾರು ಎಂಬುದು ನನಗೆ ಗೊತ್ತಿಲ್ಲವೇ ? ಆ ಕಡೆ ನೋಡಿರಿ, ಭೀಷ್ಮ ದ್ರೋಣರಿರುವರು. ಅವರಿಂದ ನಮಗೆ ಅಗಣಿತ ಅಸಾಧಾರಣ ಉಪಕಾರವಾಗಿದೆ ।೨೨೨॥

ಇಲ್ಲಿ ಬೀಗರು, ಬಿಜ್ಜರು, ಮಾವಂದಿರು ಹಾಗೆಯೇ ಬಂಧುಗಳು ಮತ್ತು ಇವರೆಲ್ಲರ ಮಕ್ಕಳು, ಮೊಮ್ಮಕ್ಕಳು, ನನ್ನ ಇಷ್ಟಮಿತ್ರರು ಇರುವರು ।೨೨೩॥

ಹೇ ದೇವನೇ, ಇತ್ತ ಲಕ್ಷ ಕೊಡು! ಈ ಎಲ್ಲ ಬೀಗರು ನಮ್ಮ ಬಹಳ ಸಮೀಪದವರಿದ್ದಾರೆ. ಇವರನ್ನು ಕೊಲ್ಲುವ ವಿಷಯ ಮುಖದಿಂದ ನುಡಿದರೂ ಸಹ ಪಾಪ ಬರುವುದು ।೨೨೪॥

**ಶ್ಲೋಕಾರ್ಥ** :- ಇವರು ನನ್ನನ್ನು ಕೊಂದರೂ ಸರಿ. ಹೇ ಮಧುಸೂದನಾ! ಮೂರು ಲೋಕದ ರಾಜ್ಯಾಧಿಪತ್ಯವು ಬಂದರೂ ನಾನು ಇವರನ್ನು ಕೊಲ್ಲಲಾರೆನು! ಇನ್ನು ಈ ಭೂಲೋಕದ ರಾಜ್ಯಕ್ಕಾಗಿ ಕೊಲ್ಲುವೆನೆ? ।೩೫॥

ತಿರುಗಿ ಹೇಳಬೇಕೆಂದರೆ ಇವರೇ ಏನೂ ಬೇಕಾದರೂ ನಮಗೆ ಮಾಡಲಿ, ಅಥವಾ ಇಲ್ಲಿಯೇ ಅವರು ನಮಗೆ ಕೊಲ್ಲಲಿ. ಆದಾಗ್ಯೂ ನಾವು ಅವರನ್ನು ಕೊಲ್ಲುವ ವಿಚಾರ ಮನದಲ್ಲಿಯೇ ತರಬಾರದು ।೨೨೫॥

ತ್ರಿಭುವನ ರಾಜ್ಯವು ನನಗೆ ದೊರಕುವುದು ಎಂದರೂ ನಾನು ಈ ಅಯೋಗ್ಯ ಕಾರ್ಯ ಮಾಡಲಾರೆ ।೨೨೬॥

ಹೇ ಕೃಷ್ಣಾ ...! ಇಂದು ಇಲ್ಲಿ ನಾವು ನಮ್ಮ ಆಪ್ತವರ್ಗದವರನ್ನು ಕೊಲ್ಲುವ ಘೋರ ಕೃತ್ಯ ಮಾಡಿದರೆ ಯಾರ ಮನದಲ್ಲಿ ನಮ್ಮ ಬಗ್ಗೆ ಆದರ ಉಳಿಯುವುದು? ನಾವು ನಿನ್ನ ಮುಖವಾದರೂ ನೋಡುವುದು ಹೇಗೆ? ನೀನೇ ಹೇಳು ।೨೨೭॥

ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ ।
ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ।೩೬॥

ಜರೀ ವಧು ಕರೋನಿ ಗೋತ್ರಜಾಂಚಾ ।ತರೀ ವಸೌಟಾ ಹೋಊನಿ ದೋಷಾಂಚಾ । ಮಜ ಜೋಡಿಲಾಸೀ ತೂ ಹಾತೀಂಚಾ । ದೂರೀ ಹೋಸೀ ।೨೨೮॥ ಕುಳಹರಣೀ ಪಾತಕೇ । ತಿಯೆ ಆಂಗೀ ಜಡತೀ ಅಶೇಖೇ । ತಯೇ ವೇಳೀ ತೂ ಕವಣೇ ಕೇ । ದೇಖಾವಾಸೀ ? ।೨೨೯॥ ಜೈ ಉದ್ಯಾನಾಮಾಜೀ ಅನಳು । ಸಂಚರಲಾ ದೇಖೋನಿ ಪ್ರಬಳು । ಮಗ ಕ್ಷಣಭರೀ ಕೋಕಿಳು । ಸ್ಥಿರು ನೋಹೇ ।೨೩೦॥ ಕಾ ಸಕರ್ದಮ ಸರೋವರು । ಅವಲೋಕೂನಿ ಚಕೋರು । ನ ಸೇವಿತು ಅವ್ಹೇರು । ಕರೂನಿ ನಿಘೇ ।೨೩೧॥ ತಯಾಪರೀ ತೂ ದೇವಾ । ಮಜ ಝುಕವೂ ನ ಯೇಸೀ ಭಾವಾ । ಜರೀ ಪುಣ್ಯಾಚಾ ಫೋಲಾವಾ । ನಾಶೀಜೈಲ ।೨೩೨॥

ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ ಸ್ವಬಾಂಧವಾನ್ ।
ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ।೩೭॥

ಮ್ಹಣೌನಿ ಮೀ ಹೇ ನ ಕರಿ । ಇಯೇ ಸಂಗ್ರಾಮೀ ಶಸ್ತ್ರ ನ ಧರೀ । ಹೇ ಕಿಡಾಳ ಬಹುತೀ ಪರೀ । ದಿಸತಸೇ ।೨೩೩॥ ತುಜಸೀ ಅಂತರಾಯ ಹೋಈಲ । ಮಗ ಸಾಂಗೇ ಆಮುಚೇ ಕಾಯ ಉರೇಲ? । ತೇಣೇ ದುಃಖೇ ಹಿಯೇ ಫುಟೇಲ । ತುಜವೀಣ ಕೃಷ್ಣಾ ।೨೩೪॥ ಮ್ಹಣೌನಿ ಕೌರವ ಹೇ ವಧೀಜತೀ । ಮಗ ಆಮ್ಹೀ ಭೋಗ ಭೋಗೀಜತೀ । ಹೇ ಅಸೋ ಮಾತ ಅಘಡತೀ । ಅರ್ಜುನ ಮ್ಹಣೇ ।೨೩೫॥

ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ
ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್ ।೩೮॥
ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ ।
ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ।೩೯॥

ಹೇ ಅಭಿಮಾನ ಮದೇ ಭುಲಲೇ । ಜರೀ ಪಾ ಸಂಗ್ರಾಮಾ ಆಲೇ । ತರ್ಹೀ ಆಮ್ಹೀ ಹಿತ ಆಪುಲೇ । ಜಾಣಾವೇ ಲಾಗೇ ।೨೩೬॥ ಹೇ ಐಸೇ ಕೈಸೇ ಕರಾವೇ? । ಜೇ ಆಪುಲೇ ಆಪಣ ಮಾರಾವೇ? । ಜಾಣತ ಜಾಣತಾಂಚಿ ಸೇವಾವೇ । ಕಾಳಕೂಟ? ।೨೩೭॥ ಹಾ ಜೇ ಮಾರ್ಗೀ ಚಾಲತಾ । ಪುಢಾ ಸಿಂಹು ಜಾಹಲಾ ಅವಚಿತಾ । ತೋ ತಂವ ಚುಕವಿತಾ । ಲಾಭು ಆಥೀ ।೨೩೮॥ ಅಸತಾ ಪ್ರಕಾಶು ಸಾಂಡಾವಾ । ಮಗ ಅಂಧಕೂಪ ಆಶ್ರಾವಾ । ತರೀ ತೇಥ ಕವಣು ದೇವಾ । ಲಾಭು ಸಾಂಗೇ ।೨೩೯॥

ಶ್ಲೋಕಾರ್ಥ :- ಹೇ ಜನಾರ್ದನ ! ಕೌರವರನ್ನು ಕೊಲ್ಲುವುದರಿಂದ ನಾವು ಪಡೆಯುವ ಸಂತೋಷ ವೇನು? ಈ ಪಾಪಾತ್ಮರನ್ನು ಕೊಂದರೆ ನಮಗೆ ಪಾಪವೇ ಉಂಟಾದೀತು ।೩೬॥

ಏಕೆಂದರೆ, ನಾನು ಒಂದು ವೇಳೆ ಗೋತ್ರಜರನ್ನು ಕೊಂದಲ್ಲಿ ನಾನೇ ದೋಷಕ್ಕೆ ಪಾತ್ರನಾಗಿ ಅನಾಯಾಸವಾಗಿ ದೊರಕಿರುವ ನೀನು ನನ್ನಿಂದ ದೂರಾಗಬಹುದು ।೨೨೮॥

ಕುಲಕ್ಷಯ ಮಾಡಿದಾಗ ಅನಂತ ಪಾಪಗಳು ತಟ್ಟುವುವು. ಈ ಪಾಪದಿಂದ ನೀನು ಸಹ ದೂರಾಗುವಿ. (ನಿನ್ನನ್ನು ನಾವು ಕಳೆದುಕೊಳ್ಳಬೇಕಾಗುವುದು) ಆಗ ನಿನ್ನನ್ನು ಎಲ್ಲಿ ಹುಡುಕಬೇಕು ? ।೨೨೯॥

ತೋಟದಲ್ಲಿ ನಾಲ್ಕು ದಿಕ್ಕಿನಲ್ಲಿ ದೊಡ್ಡ ಅಗ್ನಿಯು ಹತ್ತಿದಾಗ ಅಲ್ಲಿ ಕೋಗಿಲೆ ಪಕ್ಷಿಯು ಕ್ಷಣಹೊತ್ತೂ ನಿಲ್ಲಲಾರದು ।೨೩೦॥

ಅಥವಾ ಸರೋವರವು ರಾಡಿಯಾದದ್ದು ಕಂಡರೆ ಚಕೋರ ಪಕ್ಷಿಯು ಅಲ್ಲಿರುವುದೇ ಇಲ್ಲ. (ಕಮಲದ) ತಿರಸ್ಕಾರ ಮಾಡಿ ಹೊರಟು ಹೋಗುವುದು ।೨೩೧॥

ಅದರಂತೆ ದೇವಾ, ನನ್ನಲ್ಲಿ ಪುಣ್ಯ ಸಂಗ್ರಹ ಇಲ್ಲದ್ದು ನೋಡಿ, ನೀನು ನಿನ್ನ ಮಾಯೆಯಲ್ಲಿ ನನ್ನನ್ನು ಸಿಲುಕಿಸಿ, ನೀನು ನನ್ನಿಂದ ದೂರಾಗಬಹುದು ।೨೩೨॥

ಶ್ಲೋಕಾರ್ಥ :- ಆದುದರಿಂದ ಸ್ವಬಾಂಧವರಾದ ದುರ್ಯೋಧನಾದಿಗಳನ್ನು ನಾವು ಕೊಲ್ಲುವುದು ಯೋಗ್ಯವಲ್ಲ, ಹೇ ಮಾಧವಾ! ಬಾಂಧವರನ್ನು ಕೊಂದು ಹೇಗೆ ಸುಖಿಗಳಾಗುವೆವು? ।೩೭॥

ಆದ್ದರಿಂದ ಈ ಅನುಚಿತ ಕಾರ್ಯವನ್ನು ನಾನು ಎಂದೂ ಮಾಡಲಾರೆ. ಕಾರಣವೇನೆಂದರೆ ಈ ಕೃತಿಯಲ್ಲಿ ಅನೇಕ ಪ್ರಕಾರಗಳಿಂದ ದೋಷವೇ ನನಗೆ ಕಾಣಿಸುತ್ತಿರುವುದು ।೨೩೩॥

ಹೇ ಕೃಷ್ಣಾ, ಇದರಿಂದ ನಮಗೆ ನಿನ್ನ ವಿಯೋಗವು ಆಗಬಹುದು. ನೀನೇ ಹೇಳು ಆಗ ನಮ್ಮ ಮಹತ್ವವು ಏನು ಉಳಿಯುವುದು? ನಿನ್ನ ಹೊರತು ಆಗುವ ದುಃಖದಿಂದ ನಮ್ಮ ಹೃದಯವು ಒಡೆದು ಹೋಗುವುದು ।೨೩೪॥

ಆದ್ದರಿಂದ ಈ ಕೌರವರನ್ನು ವಧಿಸಿ ಆಮೇಲೆ ನಾವು ರಾಜ್ಯ ಸುಖ ಭೋಗಿಸಬೇಕು ಎಂಬುದು ಆಗದ ಮಾತು. ಇನ್ನು ಇದರ ಹೆಸರೇ ಎತ್ತಬೇಡ, ಎಂದು ಅರ್ಜುನನು ಹೇಳಿದನು ।೨೩೫॥

ಶ್ಲೋಕಾರ್ಥ :- ಲೋಭದಿಂದ ಭ್ರಷ್ಟ ಚಿತ್ತರಾದ ಈ ಕೌರವರು ಕುಲಕ್ಷಯದಿಂದಾಗುವ ದೋಷವನ್ನೂ, ಮಿತ್ರದ್ರೋಹದ ಪಾಪವನ್ನೂ ಗ್ರಹಿಸಬಾರದವರಾಗಿದ್ದಾರೆ ।೩೮॥

ಶ್ಲೋಕಾರ್ಥ :- ಹೋಗಲಿ, ಕೃಷ್ಣಾ! ಕುಲನಾಶದಿಂದಾಗುವ ಪ್ರಮಾದವನ್ನು ಸ್ಪಷ್ಟವಾಗಿ ಗಮನಿಸ ಬಲ್ಲ ನಾವು ಈ ಪಾಪದಿಂದ ಏಕೆ ಹಿಂದೆಗೆಯಬಾರದು? ।೩೯॥

ಈ ಕೌರವರು ಅಭಿಮಾನದಿಂದ ಮದವೇರಿ ಯುದ್ಧ ಮಾಡಲು ಬಂದಿರುವರು. ಆದರೆ ನಮಗೆ ನಮ್ಮ ಹಿತ ನೋಡಬೇಕಾಗಿದೆ ।೨೩೬॥

ನಮ್ಮ ಆಪ್ತರನ್ನು ನಾವೇ ಕೊಲ್ಲುವುದು ಈ ಮಾತು ಹೇಗೆ ಸಾಧಿಸಬೇಕು? ಪ್ರತ್ಯಕ್ಷ ಕಂಡು ತಿಳಿದು ಕಾಳಕೂಟ ವಿಷವನ್ನು ಹೇಗೆ ಸೇವಿಸಬೇಕು? ।೨೩೭॥

ಅಹೋ ಮಹಾರಾಜರೇ, (ಕೃಷ್ಣನೇ) ದಾರಿ ನಡೆಯುವ ಕಾಲಕ್ಕೆ ಅಕಸ್ಮಾತಾಗಿ ನಮ್ಮ ಮುಂದಿನ ದಾರಿಯಲ್ಲಿ ಸಿಂಹವು ಬಂದರೆ ಅದನ್ನು ತಪ್ಪಿಸಿ ಹೋಗುವುದು ಶ್ರೇಯಸ್ಕರವು ।೨೩೮॥

ಇದ್ದ ಪ್ರಕಾಶವನ್ನು ತ್ಯಜಿಸಿ ಬೇಕೆಂತಲೇ (ಮುದ್ದಾಮು) ಕತ್ತಲು ಕೋಣೆಯಲ್ಲಿ ಹೋಗಿ ಕುಳಿತುಕೊಳ್ಳುವುದು ಇದರಲ್ಲಿ ಯಾವುದು ಲಾಭಕರ ಹೇಳು ದೇವಾ ನೋಡೋಣ? ।೨೩೯॥

ಕಾ ಸಮೋರ ಅಗ್ನಿ ದೇಖೋನಿ । ಜರೀ ನ ವಚಿಜೇ ವೋಸಂಡೋನೀ । ತರೀ ಕ್ಷಣಾ ಏಕ ಕವಳೂನೀ । ಜಾಳೂ ಸಕೇ ।೨೪೦॥ ತೈಸೇ ದೋಷ ಹೇ ಮೂರ್ತ । ಅಂಗೀ ವಾಜೋ ಅಸತೀ ಪಹಾತ । ಹೇ ಜಾಣತಾಹೀ ಕೇವೀ ಏಥ । ಪ್ರವರ್ತಾವೇ ? ।೨೪೧॥ ಐಸೇ ಪಾರ್ಥು ತಿಯೇ ಅವಸರೀ । ಮ್ಹಣೇ ದೇವಾ ಅವಧಾರೀ । ಯಾ ಕಲ್ಮಷಾಚೀ ಥೋರೀ । ಸಾಂಗೇನ ತುಜ ।೨೪೨॥

ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ ।
ಧರ್ಮೇ ನಷ್ಟೇ ಕುಲಂ ಕೃತ್ಸ್ನಮ್ ಅಧರ್ಮೋಽಭಿಭವತ್ಯುತ ।೪೦॥

ಜೈಸೇ ಕಾಷ್ಠೇ ಕಾಷ್ಠ ಮಥಿಜೇ । ತೇಥ ವನ್ಹಿ ಏಕ ಉಪಜೇ । ತೇಣೇ ಕಾಷ್ಠಜಾತ ಜಾಳಿಜೇ । ಪ್ರಜ್ವಳಲೇನಿ ।೨೪೩॥ ತೈಸಾ ಗೋತ್ರೀಚೇ ಪರಸ್ಪರೇ । ಜರೀ ವಧು ಘಡೇ ಮತ್ಸರೇ । ತರೀ ತೇಣೇ ಮಹಾದೋಷೇ ಘೋರೇ । ಕುಳಚಿ ನಾಶೇ ।೨೪೪॥ ಮ್ಹಣೌನಿ ಯೇಣೇ ಪಾಪೇ । ವಂಶಜಧರ್ಮು ಲೋಪೇ । ಮಗ ಅಧರ್ಮಚಿ ಆರೋಪೇ । ಕುಳಾಮಾಜೀ ।೨೪೫॥

ಅಧರ್ಮಾಭಿಭವಾತ್ ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ ।
ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ।೪೧॥

ಏಥ ಸಾರಾಸಾರ ವಿಚಾರಾವೇ । ಕವಣೇ ಕಾಯ ಆಚಾರಾವೇ । ಆಣಿ ವಿಧಿ ನಿಷೇಧ ಆಘವೇ । ಪಾರುಷತೀ ।೨೪೬॥ ಅಸತಾ ದೀಪು ದವಡಿಜೇ । ಮಗ ಅಂಧಕಾರೀ ರಾಹಾಟಜೇ । ತರೀ ಉಜೂಚಿ ಕಾ ಆಡಳಿಜೇ । ಜಯಾಪರೀ ।೨೪೭॥ ತೈಸಾ ಕುಳೀ ಕುಳಕ್ಷಯೋ ಹೋಯ । ತಯೇ ವೇಳೀ ತೋ ಆದ್ಯಧರ್ಮು ಜಾಯ । ಮಗ ಆನ ಕಾಂಹೀ ಆಹೇ । ಪಾಪಾವಾಂಚುನಿ? ।೨೪೮॥ ಜೈ ಯಮನಿಯಮ ಠಾಕತೀ । ತೇಥ ಇಂದ್ರಿಯೇ ಸೈರಾ ರಾಹಾಟತೀ । ಮ್ಹಣೌನಿ ವ್ಯಭಿಚಾರ ಘಡತೀ । ಕುಳಸ್ತ್ರಿಯಾಂಸೀ ।೨೪೯॥ ಉತ್ತಮ ಅಧಮೀ ಸಂಚರತಿ । ಐಸೇ ವರ್ಣಾವರ್ಣ ಮಿಸಳತೀ । ತೇಥ ಸಮೂಲ ಉಪಡತಿ । ಜಾತಿಧರ್ಮ ।೨೫೦॥ ಜೈಸೀ ಚೋಹಟಾಚಿಯೇ ಬಳೀ । ಪಾವಿಜೇ ಸೈರಾ ಕಾಉಳೀ । ತೈಸೀ ಮಹಾಪಾಪೇ ಕುಳೀ । ಸಂಚರತೀ ।೨೫೧॥

ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।
ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ।೪೨॥

ಅಥವಾ ಮುಂದೆ ಇರುವ ಅಗ್ನಿ ಕಂಡು ಅದರ ಮಾರ್ಗ ಬಿಡದೇ ನಡೆದರೆ ಅಗ್ನಿಯು ಕ್ಷಣದಲ್ಲಿ ನಮ್ಮನ್ನು ಸುಟ್ಟು ಹಾಕಬಲ್ಲದು ।೨೪೦॥

ಈ ಪ್ರಕಾರವಾಗಿ (ಗೋತ್ರವಧೆ) ದೋಷಗಳು ಪ್ರತ್ಯಕ್ಷವಾಗಿ ನಮಗೆ ಹತ್ತುವುದು ಎಂಬುದು ನಮಗೆ ತಿಳಿದೂ ತಿಳಿದು ನಾವು ಈ ಕಾರ್ಯ (ಯುದ್ಧ) ಮಾಡಲು ಹೇಗೆ ಸಾಧ್ಯ? ।೨೪೧॥

ಆಗ ಇಷ್ಟು ಹೇಳಿ ಅರ್ಜುನನು ಶ್ರೀಕೃಷ್ಣನಿಗೆ ಈ ಪ್ರಕಾರ ಹೇಳಿದನು: ''ಹೇ ದೇವನೇ, ಈ ಪಾತಕಗಳು ಎಷ್ಟು ಘೋರವಾಗಿವೆ ಎಂಬುದಕ್ಕೆ ನಾನು ನಿನಗೆ ಹೇಳುವೆ ಕೇಳು'' ।೨೪೨॥

**ಶ್ಲೋಕಾರ್ಥ** :- ಕುಲವು ಕೆಟ್ಟರೆ ಸನಾತನ ಕುಲ ಧರ್ಮಗಳು ನಾಶವಾಗುತ್ತವೆ. ಧರ್ಮವು ಹಾಳಾದರೆ ಕುಲವನ್ನೆಲ್ಲಾ ಅಧರ್ಮವು ವ್ಯಾಪಿಸುತ್ತದೆ ।೪೦॥

ಕಟ್ಟಿಗೆಯಿಂದ ಕಟ್ಟಿಗೆ ತಿಕ್ಕಿದರೆ ಅದರಿಂದ ಅಗ್ನಿ ಉತ್ಪನ್ನವಾಗುವುದು ಮತ್ತು ಆ ಅಗ್ನಿ ಬೆಳೆದು ಎಲ್ಲ ಕಟ್ಟಿಗೆಗಳನ್ನು ಸುಟ್ಟು ಹಾಕುವುದು ।೨೪೩॥

ಅದರಂತೆ ಕುಲದಲ್ಲಿಯ ಜನರು ಮತ್ಸರ ಬುದ್ಧಿಯಿಂದ ಒಬ್ಬರಿಗೊಬ್ಬರು ಕೊಂದರೆಂದರೆ ಆ ಭಯಂಕರ ಮಹಾ ದೋಷದಿಂದ ಸರ್ವ ಕುಲದ ನಾಶವಾಗುವುದು ।೨೪೪॥

ಆದ್ದರಿಂದ ಈ ಕುಲಕ್ಷಯದಿಂದ ಕುಲಧರ್ಮವು ಲೋಪವಾಗಿ ಆ ಕುಲದಲ್ಲಿ ಅಧರ್ಮದ ಪ್ರವೇಶವಾಗುವುದು ।೨೪೫॥

**ಶ್ಲೋಕಾರ್ಥ** :- ಕೃಷ್ಣಾ ! ಅಧರ್ಮವು ಪ್ರಬಲವಾದರೆ ಕುಲಸ್ತ್ರೀಯರು ಕೆಟ್ಟುಹೋಗುವರು. ಸ್ತ್ರೀಯರು ಕೆಟ್ಟರೆ ವರ್ಣ ಸಂಕರವು ಏರ್ಪಡುತ್ತದೆ ।೪೧॥

ಹೀಗಾದ ಮೇಲೆ ಸಾರಾ ಸಾರ ವಿಚಾರವು, ಯೋಗ್ಯಾಯೋಗ್ಯ ಆಚರಣೆಗಳು, ಕರ್ತವ್ಯ ಅಕರ್ತವ್ಯ ಮುಂತಾದವುಗಳು ನಷ್ಟವಾಗುವುವು ।೨೪೬॥

ಇದ್ದ ಬೆಳಕು ಆರಿಸಿ ಕತ್ತಲಲ್ಲಿ ನಡೆದಾಡ ಹತ್ತಿದರೆ ಸರಳ ರಸ್ತೆಯಲ್ಲಿಯೂ ಎಡವುಬೇಕಾಗುತ್ತದೆ ।೨೪೭॥

ಈ ಪ್ರಕಾರವಾಗಿ ಕುಲಕ್ಷಯಗೊಂಡಾಗ ಸನಾತನ ಕುಲಧರ್ಮವು ಇಲ್ಲದಂತಾಗುವುದು. ಆಗ ಆ ಕುಲದಲ್ಲಿ ಪಾಪದ ಹೊರತು ಏನು ಇರಲು ಸಾಧ್ಯ ? ।೨೪೮॥

ಆಗ ಮನಸ್ಸು ಇಂದ್ರಿಯಗಳ ನಿಗ್ರಹ ಆಗುವುದಿಲ್ಲ. ಇಂದ್ರಿಯಗಳು ಮನಬಂದಂತೆ ವರ್ತಿಸಲು ಉತ್ತಮ ಸ್ತ್ರೀಯರಿಂದ ಪಾಪಾಚರಣೆಗಳು ನಡೆಯುವುವು ।೨೪೯॥

ಉತ್ತಮ ಸ್ತ್ರೀಯರಲ್ಲಿ ಅಧಮ ಪುರುಷನ ಸಂಯೋಗವಾಗುವುದು. ಇದರಿಂದ ವರ್ಣದ ಪರಸ್ಪರ ಸಂಕರವಾಗಿ ಜಾತಿ ಧರ್ಮವು ಸಮೂಲ ನಷ್ಟವಾಗುವುದು ।೨೫೦॥

ನಾಲ್ಕು ದಿಕ್ಕು ಕೂಡಿದ ಸ್ಥಳದಲ್ಲಿ ಅನ್ನದ ಪಿಂಡ ಇಟ್ಟಾಗ ಎಲ್ಲ ದಿಕ್ಕುಗಳಿಂದ ಕಾಗೆಗಳು ಆ ಪಿಂಡಕ್ಕೆ ಮುಕ್ಕುರುವಂತೆ ಕುಲದಲ್ಲಿ ಪಾತಕಗಳು ಸಂಚರಿಸುವುವು ।೨೫೧॥

**ಶ್ಲೋಕಾರ್ಥ** :- ವರ್ಣಸಂಕರವು ಏರ್ಪಟ್ಟರೆ ಕುಲಕ್ಕೆ ಮತ್ತು ಕುಲನಾಶಕರಿಗೆ ನರಕವುಂಟಾಗುವುದು. ಅವರ ಪಿತೃದೇವತೆಗಳು ಪಿಂಡೋದಕ ಕಾರ್ಯವಿಲ್ಲದೇ ಅಧೋಗತಿಯ ಪಾಲಾಗುತ್ತಾರೆ ।೪೨॥

ಮಗ ಕುಳಾ ತಯಾ ಅಶೇಖಾ । ಆಣಿ ಕುಳಘಾತಕಾ । ಯೇರಯೇರಾ ನರಕಾ । ಜಾಣೇ ಆಥೀ ।೨೫೨॥ ದೇಖೇ ವಂಶವೃದ್ಧಿ ಸಮಸ್ತ । ಯಾಪರೀ ಹೋಯ ಪತಿತ । ಮಗ ವೋವಾಂಡಿತೀ ಸ್ವರ್ಗಸ್ಥ । ಪೂರ್ವ ಪುರುಷ ।೨೫೩॥ ಜೇಥ ನಿತ್ಯಾದಿ ಕ್ರಿಯಾ ಠಾಕೇ । ಆಣಿ ನೈಮಿತ್ತಿಕ ಕ್ರಿಯಾ ಪಾರುಖೇ । ತೇಥ ಕವಣಾ ತಿಳೋದಕೇ । ಕವಣ ಅರ್ಪೀ ।೨೫೪॥ ತರೀ ಪಿತರ ಕಾಯ ಕರಿತೀ? । ಕೈಸೇನಿ ಸ್ವರ್ಗೀ ವಸತೀ? । ಮ್ಹಣೌನಿ ತೇಹೀ ಯೇತೀ । ಕುಳಾಪಾಸೀ ।೨೫೫॥ ಜೈಸಾ ನಖಾಗ್ರೀ ವ್ಯಾಳೂ ಲಾಗೇ । ತೋ ಶಿಖಾಂತ ವ್ಯಾಪೀ ವೇಗೇ । ತೇವೀ ಆಬ್ರಹ್ಮ ಕುಳ ಅವಘೇ । ಆಪ್ಲವಿಜೇ ।೨೫೬॥

ದೋಷೈರೇತೈಃ ಕುಲಘ್ನಾನಂ ವರ್ಣಸಂಕರಕಾರಕೈಃ ।
ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ।೪೩॥

ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।
ನರಕೇಽನಿಯತಂ ವಾಸೋ ಭವತೀತ್ಯನುಶುಶ್ರುಮ ।೪೪॥

ಅಹೋ ಬತ ಮಹತ್‌ಪಾಪಮ್ ಕರ್ತುಂ ವ್ಯವಸಿತಾ ವಯಮ್ ।
ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ ।೪೫॥

ದೇವಾ ಅವಧಾರೀ ಆಣಿಕ ಏಕ । ಏಥ ಘಡೇ ಮಹಾಪಾತಕ । ಜೇ ಸಂಗದೋಷೇ ಹಾ ಲೌಕಿಕ । ಭ್ರಂಶು ಪಾವೇ ।೨೫೭॥ ಜೈಸಾ ಘರೀ ಆಪುಲಾ । ವಾನಿವಸೇ ಅಗ್ನಿ ಲಾಗಲಾ । ತೋ ಆಣಿಕಾಂಹೀ ಪ್ರಜ್ವಳಿಲಾ । ಜಾಳೂನಿ ಘಾಲೀ ।೨೫೮॥ ತೈಸಿಯಾ ತಯಾ ಕುಳಸಂಗತೀ । ಜೇ ಜೇ ಲೋಕ ವರ್ತತೀ । ತೇಹೀ ಬಾಧಾ ಪಾವತೀ । ನಿಮಿತ್ತೇ ಯೇಣೇ ।೨೫೯॥ ತೈಸೇ ನಾನಾ ದೋಷೇ ಸಕಳ । ಅರ್ಜುನ ಮ್ಹಣೇ ತೇ ಕುಳ । ಮಗ ಮಹಾಘೋರ ಕೇವಳ । ನಿರಯ ಭೋಗೀ ।೨೬೦॥ ಪಡಿಲಿಯಾ ತಿಯೇ ಠಾಯೀ । ಮಗ ಕಲ್ಪಾಂತೀಹೀ ಉಕಲು ನಾಹೀ । ಯೇಸಣೇ ಪತನ ಕುಳಕ್ಷಯೀ । ಅರ್ಜುನ ಮ್ಹಣೇ ।೨೬೧॥ ದೇವಾ ಹೇ ವಿವಿಧ ಕಾನೀ ಐಕಿಜೇ । ಪರೀ ಅಝುನಿವರೀ ತ್ರಾಸು ನುಪಜೇ । ಹೃದಯ ವಜ್ರಾಚೇ ಹೇ ಕಾಯ ಕೀಜೇ । ಅವಧಾರೀ ಪಾ ।೨೬೨॥ ಅಪೇಕ್ಷಿಜೇ ರಾಜ್ಯಸುಖ । ಜಯಾಲಾಗೀ ತೇ ತವ ಕ್ಷಣಿಕ । ಐಸೇ ಜಾಣತಾಂಹೀ ದೋಖ । ಅವ್ಹೇರೂ ನಾ ।೨೬೩॥

ತದನಂತನ ಆ ಕುಲಕ್ಕೂ ಮತ್ತು ಆ ಕುಲ ನಾಶ ಮಾಡಿದ ಉಭಯತರರಿಗೂ ನರಕ ಪ್ರಾಪ್ತವಾಗುವುದು ।೭೫೨।।

ಈ ಪ್ರಕಾರವಾಗಿ ಸರ್ವ ವಂಶದ ವೃದ್ಧಿಯು ಕುಂಠಿತ ಗೊಂಡು ಆಗ ಸ್ವರ್ಗದಲ್ಲಿರುವ ಪೂರ್ವಜರು ಸಹಜವಾಗಿ ಅಧೋಗತಿ ಹೊಂದಬೇಕಾಗುವುದು ।೭೫೩।।

ಯಾವ ಕುಲದಲ್ಲಿ ನಿತ್ಯ ನೈಮಿತ್ತಿಕ ಕರ್ಮಗಳು ನಡೆಯುವುದಿಲ್ಲವೋ ಅಲ್ಲಿ ಪಿತೃಗಳವರಿಗೆ ತಿಲೋದಕ ಅರ್ಪಣ ಯಾರು ಮಾಡಬೇಕು ? ।೭೫೪।।

ಹೀಗಾದ ಮೇಲೆ ಆ ಪಿತೃಗಳು ಏನು ಮಾಡಬೇಕು? ಸ್ವರ್ಗದಲ್ಲಿ ಹೇಗೆ ಇರಬೇಕು ? ಅವರೂ ಸಹ ತಮ್ಮ (ನರಕದಲ್ಲಿರುವ) ಕುಲದ ಕಡೆಗೆ ಬರಬೇಕಾಗುವುದು ।೭೫೫।।

ಯಾವ ಪ್ರಕಾರವಾಗಿ ಹೆಬ್ಬಟ್ಟಿಗೆ ಹಾವು ಕಡಿದ ವಿಷವು ಮಸ್ತಕದವರೆಗೂ ಇಡೀ ಶರೀರವನ್ನು ತೀವ್ರವಾಗಿ ಪಸರಿಸುವಂತೆ ಕುಲವಧೆಯ ಪಾಪವು ತನ್ನನ್ನು ಪತಿತ ಗೊಳಿಸುವುದಲ್ಲದೇ ಸತ್ಯ ಲೋಕದವರೆಗೂ ವ್ಯಾಪಿಸಿ ಪೂರ್ವಜರನ್ನು ಪತನಗೊಳಿಸುವುದು ।೭೫೬।।

ಶ್ಲೋಕಾರ್ಥ :- ವರ್ಣಗಳ ಬೆರಕೆಯನ್ನು ಮಾಡುವ ಈ ಕುಲನಾಶಕ ದೋಷಗಳಿಂದ ಎಷ್ಟೋ ಹಿಂದಿನಿಂದ ಸಾಗುತ್ತ ಬಂದಿರುವ ಜಾತಿ- ಧರ್ಮಗಳೂ, ಕುಲಧರ್ಮಗಳೂ ನಿರ್ಮೂಲವಾಗುತ್ತವೆ ।೪೩।।

ಶ್ಲೋಕಾರ್ಥ :- ಜನಾರ್ದನ! ''ಕುಲಧರ್ಮಗಳನ್ನು ನಾಶ ಮಾಡಿಕೊಂಡ ಮನುಷ್ಯರಿಗೆ ನರಕವುಂಟಾಗುತ್ತದೆ'' ಎಂದು ನಾವು ಕೇಳಿರುತ್ತೇವೆ ।೪೪।।

ಶ್ಲೋಕಾರ್ಥ :- ರಾಜ್ಯದಿಂದಾಗುವ ಸುಖದ ಮೇಲಿನ ಆಸೆಯಿಂದ ನೆಂಟರನ್ನು ಕೊಲ್ಲುವುದಕ್ಕೆ ಹೊರಟಿರುವ ನಾವು ಆಹಾ! ಎಂಥ ದೊಡ್ಡ ಪಾಪವನ್ನು ಮಾಡುವುದಕ್ಕೆ ಹೊರಟಿರುವೆವು? ।೪೫।।

ಕೃಷ್ಣಾ, ಇಲ್ಲಿ ಇನ್ನೊಂದು ಮಹಾಪಾತಕವು ಒದಗುವುದು, ಅದಾವುದೆಂದರೆ ಈ ದೋಷದಿಂದ ಲೋಕಾಚಾರವು ಇಲ್ಲದಂತಾಗುವುದು ।೭೫೭।।

ಯಾವ ಪ್ರಕಾವಾಗಿ ತನ್ನ ಮನೆಗೆ ಅಕಸ್ಮಾತಾಗಿ ಅಗ್ನಿ ಹತ್ತಿದರೆ ಆ ಜ್ವಾಲೆ ಬೆಳೆದು ನೆರೆಯ ಮನೆಗಳನ್ನು ಸುಟ್ಟು ಹಾಕುವುದೋ ।೭೫೮।।

ಅದರಂತೆ ಆ ಕುಲದ ಜೊತೆಗೆ ಸಂಬಂಧ ಬೆಳೆಸಿ ಯಾವ ಯಾವ ಜನರು ನಡೆದುಕೊಳ್ಳುವರೋ ಅವರು ಸಹ ಈ ನಿಮಿತ್ಯದಿಂದ ದೂಷಿತರಾಗುವರು ।೭೫೯।।

ಅದರಂತೆ ಆ ಕುಲದಲ್ಲಿ ನಾನಾ ಪ್ರಕಾರದ ದೋಷಗಳು ಒದಗಿ ಆ ಕುಲವೆಲ್ಲಾ ಭಯಂಕರ ನರಕ ವಾಸ ಭೋಗಿ ಸಬೇಕಾಗುವುದು ಎಂದು ಅರ್ಜುನನು ಹೇಳಿದನು ।೭೬೦।।

ಆ ನರಕದಲ್ಲಿ ಬಿದ್ದ ನಂತರ ಪುನಃ ಕಲ್ಪಾಂತಕು ಅಲ್ಲಿಂದ ಬಿಡುಗಡೆ ಆಗುವುದಿಲ್ಲ. ಇಷ್ಟೊಂದು ಕುಲಕ್ಷಯದಿಂದ ಅಧಃಪಾತವು ಆಗುವುದೆಂದು ಅರ್ಜುನನು ಹೇಳಿದನು ।೭೬೧।।

ಹೇ ದೇವನೇ, ಈ ಎಲ್ಲವನ್ನು ನಾವು (ಶಾಸ್ತ್ರ ಮುಖಾಂತರ) ಕಿವಿಯಿಂದ ಕೇಳಿ ಮನದಲ್ಲಿ ಪಾಪಕ್ಕಾಗಿ ಭಯಪಡದಿದ್ದರೆ ಹೇಗೆ? ಅದರ ಬದಲಾಗಿ ಪಾಪ ಕಾರ್ಯ ಮಾಡಲು ನಮ್ಮ ಹೃದಯವನ್ನು ವಜ್ರದಂತೆ ಮಾಡಬೇಕೆ? ನೀನೇ ಇದರ ವಿಚಾರ ಮಾಡು ।೭೬೨।।

ರಾಜ್ಯಕ್ಕಾಗಿ ರಾಜಭೋಕ್ಕಾಗಿ ಕುಲಕ್ಷಯ ಮಾಡುವ ಈ ಶರೀರವಾದರು ಕ್ಷಣಿಕವಾಗಿದೆ. ಇದನ್ನರಿತಾದರೂ ನಾವು ಕುಲಕ್ಷಯ ದೋಷ ಮಾಡುವುದು ಬಿಡಬಾರದೇ? ।೭೬೩।।

ಜೇ ಹೇ ವಡಿಲ ಸಕಳ ಆಪುಲೇ । ವಧಾವಯಾ ದಿಠೀ ಸೂದಲೇ । ಸಾಂಗ ಪಾ ಕಾಯ ಥೇಂಕುಲೇ । ಘಡಲೇ ಆಮ್ಹಾ ॥೨೬೪॥

ಯದಿ ಮಾಮಪ್ರತೀಕಾರಮ್ ಅಶಸ್ತ್ರಂ ಶಸ್ತ್ರಪಾಣಯಃ ।
ಧಾರ್ತರಾಷ್ಟ್ರಾ ರಣೇ ಹನ್ಯುಃ ತನ್ಮೇ ಕ್ಷೇಮತರಂ ಭವೇತ್ ॥೪೬॥

ಆತಾ ಯಾವರೀ ಜೇ ಜಿಯಾವೇ । ತಯಾಪಾಸೂನಿ ಹೇ ಬರವೇ । ಜೇ ಶಸ್ತ್ರ ಸಾಂಡೂನಿ ಸಾಹಾವೇ । ಬಾಣ ಯಾಂಚೇ ॥೨೬೫॥ ತಯಾವರೀ ಹೋಯ ಜಿತುಕೇ । ತೇ ಮರಣಹೀ ವರೀ ನಿಕೇ । ಪರೀ ಯೇಣೇ ಕಲ್ಮಷೇ । ಚಾಡ ನಾಹೀ ॥೨೬೬॥ ಐಸೇ ದೇಖೂನ ಸಕಳ । ಅರ್ಜುನೇ ಆಪುಲೇ ಕುಳ । ಮಗ ಮ್ಹಣೇ ರಾಜ್ಯ ತೇ ಕೇವಳ । ನಿರಯಭೋಗು ॥೨೬೭॥

ಸಂಜಯ ಉವಾಚ :-

ಏವಮುಕ್ತ್ವಾಽರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್ । ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ॥೪೭॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಅರ್ಜುನ ವಿಷಾದಯೋಗೋ ನಾಮ ಪ್ರಥಮೋಽಧ್ಯಾಯಃ

ಐಸೇ ತಿಯೇ ಅವಸರೀ । ಅರ್ಜುನ ಬೋಲಿಲಾ ಸಮರೀ । ಸಂಜಯೋ ಮ್ಹಣೇ ಅವಧಾರೀ । ಧೃತರಾಷ್ಟ್ರಾತೇ ॥೨೬೮॥ ಮಗ ಅತ್ಯಂತ ಉದ್ವೇಗಲಾ । ನ ಧರತ ಗಹಿವರು ಆಲಾ । ತೇಥ ಉಡೀ ಘಾತಲೀ ಖಾಲಾ । ರಥೌನಿಯಾ ॥೨೬೯॥ ಜೈಸಾ ರಾಜಕುಮರು ಪದಚ್ಯುತು । ಸರ್ವಥಾ ಹೋಯ ಉಪಹತು । ಕಾ ರವಿ ರಾಹುಗ್ರಸ್ತು । ಪ್ರಭಾಹೀನು ॥೨೭೦॥ ನಾತರೀ ಮಹಾಸಿದ್ಧೀ ಸಂಭ್ರಮೇ । ಜಿತಿಲಾ ತಾಪಸು ಭ್ರಮೇ । ಮಗ ಆಕಳೂನಿ ಕಾಮೇ । ದೀನು ಕೀಜೇ ॥೨೭೧॥ ತೈಸಾ ತೋ ಧನುರ್ಧರು । ಅತ್ಯಂತ ದುಃಖೇ ಜರ್ಜರು । ದಿಸೇ ಜೇಥ ರಹಂವರು । ತ್ಯಜಿಲಾ ತೇಣೇ ॥೨೭೨॥ ಮಗ ಧನುಷ್ಯ ಬಾಣ ಸಾಂಡಿಲೇ । ನ ಧರತ ಅಶ್ರುಪಾತ ಆಲೇ । ಐಸೇ ಐಕಾ ರಾಯಾ ವರ್ತಲೇ । ಸಂಜಯೋ ಮ್ಹಣೇ ॥೨೭೩॥ ಆತಾ ಯಾವರೀ ತೋ ವೈಕುಂಠನಾಥು । ದೇಖೋನಿ ಸಖೇದ ಪಾರ್ಥು । ಕವಣೇಪರೀ ಪರಮಾರ್ಥು । ನಿರೂಪೀಲ ॥೨೭೪॥ ತೇ ಸವಿಸ್ತರ ಪುಢಾರೀ ಕಥಾ । ಅತಿ ಸಕೌತುಕ ಐಕತಾ । ಜ್ಞಾನದೇವ ಮ್ಹಣೇ ಆತಾ । ನಿವೃತ್ತಿದಾಸು ॥೨೭೫॥

---

ಇತಿ ಶ್ರೀ ಜ್ಞಾನದೇವ ವಿರಚಿತಯಾಂ ಭಾವಾರ್ಥ ದೀಪಿಕಾಯಾಂ ಪ್ರಥಮೋಧ್ಯಾಯಃ ॥೧॥
ಶ್ಲೋಕ : ೪೭ ಓವಿ ॥೨೭೫॥

ನಮ್ಮ ಈ ಪೂಜ್ಯ ಹಿರಿಯರನ್ನು ಅವರು ಸಾಯಬೇಕೆಂದು ಕೇವಲ ವಿಚಾರ ಮಾಡಿದರೆ ಸಾಕು ನಮಗೇನು ಸಣ್ಣ ಪಾಪವು ಬರುವುದೇ? ನೀನೇ ಹೇಳು ॥೨೬೪॥

ಶ್ಲೋಕಾರ್ಥ :- ನಿರಾಯುಧನಾಗಿ ಪ್ರತೀಕಾರ ಮಾಡದೇ ಇರುವ ನನ್ನನ್ನು ಆಯುಧಧಾರಿಗಳಾದ ಕೌರವರು ಯುದ್ಧದಲ್ಲಿ ಕೊಂದರೂ ಅದೇ ನನ್ನ ಪಾಲಿಗೆ ಕ್ಷೇಮಕರವಾಗಿದೆ ॥೪೬॥

ಆದ್ದರಿಂದ ಈಗ ನಾವು ಜೀವಂತರಾಗಿರುವುದಕ್ಕಿಂತ ನಮ್ಮ ಶಸ್ತ್ರಗಳನ್ನು ಒಗೆದು ಅವರ ಬಾಣಗಳನ್ನು ಸಹಿಸುವುದು ಬಹಳ ಒಳ್ಳೆಯದು ॥೨೬೫॥

ಹೀಗೆ ಮಾಡುವುದರಿಂದ ಬಂದ ಮರಣ ಒಳ್ಳೆಯದು. ಆದರೆ ಇವರ ವಧೆ ಮಾಡಿ ಪಾಪಕ್ಕೆ ಗುರಿಯಾಗುವ ಇಚ್ಛೆ ನನಗಿಲ್ಲ ॥೨೬೬॥

ಈ ಪ್ರಕಾರವಾಗಿ ಅರ್ಜುನನು ತನ್ನ ಸರ್ವ ಕುಲವನ್ನು ನೋಡಿ ಇವರನ್ನು ವಧಿಸಿ ರಾಜ್ಯ ಪಡೆಯುವುದೆಂದರೆ, ಕೇವಲ ನರಕ ಜೋಡಿಸದಂತಾಗುವುದು ಎಂದು ಹೇಳಿದನು ॥೨೬೭॥

ಶ್ಲೋಕಾರ್ಥ :- ಸಂಜಯನು ಹೀಗೆ ಹೇಳಿದನು, ಅರ್ಜುನನು ಈ ವಿಧವಾಗಿ ಹೇಳಿ ದುಃಖಪೀಡಿತ ಚಿತ್ತನಾಗಿ ಧನುರ್ಭಾಣಗಳನ್ನು ಬಿಸಾಡಿ ರಣರಂಗದಲ್ಲಿ ರಥದ ಹಿಂಭಾಗದಲ್ಲಿ ಕುಳಿತುಕೊಂಡನು ॥೪೭॥

ಇಲ್ಲಿಗೆ ಉಪನಿಷತ್ತೂ ಬ್ರಹ್ಮವಿದ್ಯೆಯೂ ಯೋಗ ಶಾಸ್ತ್ರವೂ ಶ್ರೀಕೃಷ್ಣಾರ್ಜುನ ಸಂವಾದವೂ ಆದ ಶ್ರೀ ಮದ್ಭಗವದ್ಗೀತೆಯಲ್ಲಿ ಅರ್ಜುನ ವಿಷಾದ ಯೋಗವೆಂಬ ಹೆಸರಿನ ಮೊದಲನೆಯ ಅಧ್ಯಾಯವು ಮುಗಿದುದು.

ಸಂಜಯನು ಧೃತರಾಷ್ಟ್ರನಿಗೆ ಹೇಳಿದನು :- ರಾಜನೇ ಕೇಳು. ಆ ಸಮರಾಂಗಣದಲ್ಲಿ ಅರ್ಜುನನು ಈ ಪ್ರಕಾರವಾಗಿ ಹೇಳಿದನು ॥೨೬೮॥

ಮತ್ತು ಆಗ ಅತ್ಯಂತ ಉದಾಸೀನನಾದನು. ಅನಿವಾರ್ಯವಾಗಿ ಉದ್ರೇಕಭಾವದಿಂದ ಆತನು ರಥದಿಂದ ಜಿಗಿದನು ॥೨೬೯॥

ಯಾವ ಪ್ರಕಾರವಾಗಿ ಒಂದುವೇಳೆ ರಾಜಕುಮಾರನು ಅಧಿಕಾರ ಕಳೆದುಕೊಂಡಾಗ ಹೇಗೆ ನಿಸ್ತೇಜನಾಗುತ್ತಾನೆಯೋ ಅಥವಾ ಗ್ರಹಣ ಕಾಲದಲ್ಲಿ ರಾಹುಗ್ರಸ್ಥ ಸೂರ್ಯನು ಕಳಾಹೀನನಾಗುತ್ತಾನೆಯೋ ॥೨೭೦॥

ಅಥವಾ ಆಣಿಮಾದಿ ಮಹಾಸಿದ್ಧಿಗಳನ್ನು ಪ್ರಾಪ್ತ ಮಾಡಿಕೊಂಡ ತಪಸ್ವಿಯು ಭ್ರಮೆಯಲ್ಲಿ ಬಿದ್ದು ನಂತರ ವಿಷಯೀಕ ಇಚ್ಛೆಯ ಆಧೀನನಾಗಿ ದೀನನಾಗುತ್ತಾನೆಯೋ ॥೨೭೧॥

ಅದರಂತೆ ಅರ್ಜುನನು ಧನುರ್ಧಾರಿ ಯೋದ್ಧನಿದ್ದರೂ ದುಃಖದಿಂದ ಅತ್ಯಂತ ಪೀಡಿತನಾಗಿ ರಥದ ತ್ಯಾಗ ಮಾಡಿದನು ॥೨೭೨॥

ಆಮೇಲೆ ಆತನು ಧನುಷ್ಯ ಬಾಣ ಒಗೆದನು. ಆತನ ಕಣ್ಣಲ್ಲಿ ತಡೆಯಲಾರದಷ್ಟು ದುಃಖಾಶ್ರುಗಳ (ಕಣ್ಣೀರು) ಪ್ರವಾಹ ಹರಿಯಿತು ಎಂದು ರಾಜನಿಗೆ ಸಂಜಯನು ಹೇಳಿದನು ॥೨೭೩॥

ಈಗ ಇದಾದ ಮೇಲೆ ಅರ್ಜುನನು ದುಃಖ ಪೀಡಿತನಾದದ್ದು ನೋಡಿ ವೈಕುಂಠಪತಿ ಶ್ರೀಕೃಷ್ಣನು ಯಾವ ಪ್ರಕಾರವಾಗಿ ಆತನಿಗೆ ತತ್ತ್ವಜ್ಞಾನದ ಬೋಧೆಯನ್ನು ಮಾಡುವನು ॥೨೭೪॥

ಈ ಮುಂದೆ ಬರುವ ಸವಿಸ್ತಾರ ಕಥೆಯನ್ನು ಉತ್ಸುಕತೆಯಿಂದ ಕೇಳಿರಿ. ಹೀಗೆ ಶ್ರೀನಿವೃತ್ತಿದಾಸ ಶ್ರೀಜ್ಞಾನೇಶ್ವರರು ಹೇಳುವರು ॥೨೭೫॥

---

ಶ್ರೀ ಜ್ಞಾನೇಶ್ವರ ಮಹಾರಾಜರಿಂದ ರಚಿತವಾದ ಭಾವಾರ್ಥ ದೀಪಕೆಯ ಮೊದಲನೆಯ ಅಧ್ಯಾಯದ ವಿವರಣೆ ಸಮಾಪ್ತವು ॥೨೭೫॥

# ಸಾರ್ಥ ಶ್ರೀಜ್ಞಾನೇಶ್ವರೀ

## ಅಧ್ಯಾಯ ದುಸರಾ

ಶ್ರೀ ಗಣೇಶಾಯ ನಮಃ

ಸಂಜಯ ಉವಾಚ :-

ತಂ ತಥಾ ಕೃಪಯಾಽಽವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।
ವಿಷೀದಂತಮಿದಂ ವಾಕ್ಯಮುವಾಚ ಮಧುಸೂದನಃ ॥೧॥

ಮಗ ಸಂಜಯೋ ಮ್ಹಣೇ ರಾಯಾತೇ । ಆಇಕೇ ತೋ ಪಾರ್ಥು ತೇಥೇ । ಶೋಕಾಕುಲ ರುದನಾತೇ । ಕರಿತು ಅಸೇ ॥೧॥ ತೇ ಕುಳ ದೇಖೋನಿ ಸಮಸ್ತ । ಸ್ನೇಹ ಉಪನಲೇ ಅದ್ಭುತ । ತೇಣೇ ದ್ರವಲೇ ಅಸೇ ಚಿತ್ತ । ಕವಣೇಪರೀ ॥೨॥ ಜೈಸೇ ಲವಣ ಜಳೇ ಝುಳಂಬಲೇ । ನಾತರೀ ಅಭ್ರ ವಾತೇ ಹಾಲೇ । ತೈಸೇ ಸಧೀರ ಪರೀ ವಿರಮಲೇ । ಹೃದಯ ತಯಾಚೇ ॥೩॥ ಮ್ಹಣೌನಿ ಕೃಪಾ ಆಕಳಿಲಾ । ದಿಸತಸೇ ಅತಿ ಕೋಮಾ ಇಲಾ । ಜೈಸಾ ಕರ್ದಮೀ ರೂಪಲಾ । ರಾಜಹಂಸ ॥೪॥ ತಯಾಪರೀ ತೋ ಪಂಡುಕುಮರು । ಮಹಾಮೋಹೇ ಅತಿ ಜರ್ಜರು । ದೇಖೋನಿ ಶ್ರೀಶಾರಂಗಧರು । ಕಾಯ ಬೋಲೇ ॥೫॥

ಶ್ರೀ ಭಗವಾನ ಉವಾಚ :-

ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ ।
ಅನಾರ್ಯಜುಷ್ಟಮಸ್ವರ್ಗ್ಯಂ ಅಕೀರ್ತಿಕರಮರ್ಜುನ ॥೨॥

ಮ್ಹಣೇ ಅರ್ಜುನಾ ಆದಿ ಪಾಹೀ । ಹೇ ಉಚಿತ ಕಾಯ ಇಯೇ ಠಾಯೀ । ತೂ ಕವಣ ಹೇ ಕಾಯೀ । ಕರೀತ ಆಹಾಸೀ ॥೬॥ ತುಜ ಸಾಂಗೇ ಕಾಯ ಜಾಹಲೇ । ಕವಣ ಉಣೇ ಆಲೇ । ಕರಿತಾ ಕಾಯ ಠೇಲೇ । ಖೇದು ಕಾಯಿಸಾ ॥೭॥ ತೂ ಅನುಚಿತಾ ಚಿತ್ತ ನೇದಿಸೀ । ಧೀರು ಕಹೀ ನ ಸಂಡಿಸೀ । ತುಝೇನಿ ನಾಮೇ ಅಪಯಶೀ । ದಿಶಾ ಲಂಘಿಜೇ ॥೮॥ ತೂ ಶೂರವೃತ್ತೀಚಾ ಠಾವೋ । ಕ್ಷತ್ರಿಯಾಂಮಾಜೀ ರಾವೋ । ತುಝಿಯಾ ಲಾಠೇಪಣಾಚಾ ಆವೋ । ತಿಹೀ ಲೋಕೀ ॥೯॥ ತುವಾ ಸಂಗ್ರಾಮೀ ಹರು ಜಿಂಕಿಲಾ । ನಿವಾತಕವಚಾಂಚಾ ಠಾವೋ ಫೇಡಿಲಾ । ಪವಾಡಾ ತುವಾ ಕೇಲಾ । ಗಂಧರ್ವಾಸೀ ॥೧೦॥

# ಸಾರ್ಥ ಶ್ರೀಜ್ಞಾನೇಶ್ವರೀ

## ಎರಡನೆಯ ಅಧ್ಯಾಯ

ಶ್ಲೋಕಾರ್ಥ :- ಸಂಜಯನು ಹೀಗೆಂದನು : ಧೃತರಾಷ್ಟ್ರ ಮಹಾರಾಜಾ ಕೇಳು. ಈ ಪ್ರಕಾರ ಕಣ್ಣಿನಲ್ಲಿ ನೀರು ತುಂಬಿ ದುಃಖಿಸುತ್ತಿರುವ ಅರ್ಜುನನ್ನು ನೋಡಿ ಮಧುಸೂದನನು ಕೃಪೆಯಿಂದ ಈ ವಿಧವಾಗಿ ಹೇಳಿದನು ।।೧।।

ಆಗ ಸಂಜಯನು ಧೃತರಾಷ್ಟ್ರರಾಜನಿಗೆ ಹೇಳಿದನು :- ಮಹಾರಾಜರೇ ಕೇಳಿರಿ. ಅರ್ಜುನನು ಆ ಸ್ಥಳದಲ್ಲಿ ದುಃಖ ಪೀಡಿತನಾಗಿ ಅಳುತ್ತಿದ್ದಾನೆ ।।೧।।

ಆತನು ತನ್ನ ಸರ್ವಕುಲಜರನ್ನು ನೋಡಿದಾಗ ಆತನ ಮನಸ್ಸಿನಲ್ಲಿ ವಿಲಕ್ಷಣವಾದ ಮೋಹ ಉತ್ಪನ್ನವಾಯಿತು. ಆತನ ಚಿತ್ತವು ದ್ರವಿಸಿತು. ಅದು ಹೇಗೆಂದರೆ ।।೨।।

ನೀರಿನಿಂದ ಉಪ್ಪು ಕರಗುವಂತೆ ಅಥವಾ ಗಾಳಿಯಿಂದ ಮೋಡವು ಇಲ್ಲದಾಗುವಂತೆ, ಈತನು ಮಹಾ ಧೈರ್ಯವಂತನಿದ್ದರೂ ಆತನ ಹೃದಯವು ದ್ರವಿಸಿತು ।।೩।।

ರಾಜಹಂಸ ಪಕ್ಷಿಯು ರಾಡಿಯಲ್ಲಿ ಸಿಕ್ಕಾಗ ಹೇಗೆ ಮಲಿನಕಾಣುತ್ತದೆಯೋ ಅದರಂತೆ ಈತನು ಮಮತೆಯಿಂದ ದುಃಖಿತನಾಗಿ ಅತಿ ಮ್ಲಾನ ಮುಖನಾಗಿ ಕಾಣುತ್ತಿದ್ದಾನೆ ।।೪।।

ಇದರಂತೆ ಅರ್ಜುನನು ಮಹಾ ಮೋಹಗ್ರಸ್ತನಾದದ್ದು ನೋಡಿ ಶ್ರೀಕೃಷ್ಣ ಪರಮಾತ್ಮನು ಏನು ಹೇಳಿದನೆಂಬುದು ಕೇಳಿರಿ ।।೫।।

ಶ್ಲೋಕಾರ್ಥ :- ಶ್ರೀಭಗವಂತನು ಹೀಗೆಂದನು: ಹೇ ಅರ್ಜುನಾ! ಆರ್ಯರಿಗೆ ಯೋಗ್ಯವಲ್ಲದ, ನರಕದಾಯಕವಾದ, ಅಪಕೀರ್ತಿಕರವಾದ ಈ ನೀಚವೃತ್ತಿ ಈ ಸಂಕಟ ಕಾಲದಲ್ಲಿ ನಿನಗೆ ಹೇಗೆ ಆವರಿಸಿತು? ।।೨।।

ಅರ್ಜುನಾ ನೀನು ಮೊದಲು ಇದನ್ನು ವಿಚಾರಿಸು. ಈ ಪ್ರಸಂಗದಲ್ಲಿ ನಿನಗಿದು ಉಚಿತವೇ? ನೀನು ಯಾರಿರುವೆ? ಮತ್ತು ಇದೇನು ಮಾಡುತ್ತಿರುವೆ ।।೬।।

ನಿನಗೇನಾಗಿದೆ? ಹೇಳು. ನಿನಗೇನು ಕಡಿಮೆಯಾಗಿದೆ? ಕರ್ತವ್ಯ ಮಾಡುವಾಗ್ಗೆ ಏಕೆ ನಿಂತಿರುವೆ? ಮತ್ತು ಈ ಪ್ರಸಂಗದಲ್ಲಿ ಇಷ್ಟೊಂದು ಖೇದ ಪಡುವ ಕಾರಣವಾದರೂ ಏನು? ।।೭।।

ನೀನು ಅಯೋಗ್ಯ ಮಾತಿನಕಡೆ ಎಂದೂ ಲಕ್ಷಿಸುವವನಲ್ಲ ಮತ್ತು ಎಂದೂ ಧೈರ್ಯವನ್ನು ಬಿಡುವವನಲ್ಲ. ನಿನ್ನ ಹೆಸರು ಮಾತ್ರ ಕೇಳಿ ಅಪಯಶವು ದಿಕ್ಕೆಟ್ಟು ಓಡಿ ಹೋಗುವುದು ।।೮।।

ನೀನು ಶೌರ್ಯದ ನಿಧಿಯಾಗಿರುವೆ ಮತ್ತು ಕ್ಷತ್ರಿಯರಲ್ಲಿ ಮುಗುಟ ಮಣಿಯಾಗಿರುವೆ. ಅಲ್ಲದೆ ನಿನ್ನ ಶೌರ್ಯದ ಪ್ರತಾಪವು ಮೂರು ಲೋಕಗಳಲ್ಲಿ ಪ್ರಸಿದ್ಧವಾಗಿದೆ ।।೯।।

ನೀನು ಯುದ್ಧದಲ್ಲಿ ಶಂಕರನನ್ನು ಗೆದ್ದಿರುವೆ. ನಿವಾತ ಕವಚನೆಂಬ ರಾಕ್ಷಸನನ್ನು ಕೊಂದು ಆತನನ್ನು ಗೊತ್ತುಗುರಿ ಇಲ್ಲದಂತೆ ಮಾಡಿದೆ ಮತ್ತು ಗಂಧರ್ವರೊಂದಿಗೆ ಅಪೂರ್ವ ಯುದ್ಧ ಮಾಡಿದೆ ।।೧೦।।

ಪಾಹತಾ ತುಝೇನಿ ಪಾಡೇ । ದಿಸೇ ತ್ರೈಲೋಕ್ಯಹೀ ಥೋಕಡೇ । ಐಸೇ ಪುರುಷತ್ವ ಚೋಖಡೇ । ಪಾರ್ಥಾ ತುಝೇ ।೧೧॥ ತೋ ತೂ ಕೀ ಆಜಿ ಏಥೇ । ಸಾಂಡೂನಿಯಾ ವೀರವೃತ್ತಿತೇ । ಅಧೋಮುಖ ರುದನಾತೇ । ಕರಿತು ಆಹಾಸೀ ।೧೨॥ ವಿಚಾರೀ ತೂ ಅರ್ಜುನು । ಕೀ ಕಾರುಣ್ಯೇ ಕಿಜಸೀ ದೀನು । ಸಾಂಗ ಪಾ ಅಂಧಕಾರೇ ಭಾನು । ಗ್ರಾಸಿಲಾ ಆಥೀ ।೧೩॥ ನಾ ತರೀ ಪವನು ಮೇಘಾಸೀ ಬಿಹೇ? । ಕೀ ಅಮೃತಾಸೀ ಮರಣ ಆಹೇ? । ಪಾಹೇಪಾ ಇಂಧನಚಿ ಗಿಳೋನಿ ಜಾಯೇ । ಪಾವಕಾತೇ? ।೧೪॥ ಕೀ ಲವಣೇಚಿ ಜಳ ವಿರೆ? । ಸಂಸರ್ಗೆ ಕಾಳಕೂಟ ಮರೇ? । ಸಾಂಗ ಪಾ ಮಹಾಫಣೀ ದುರ್ದುರೇ । ಗಿಳಿಜೇ ಕಾಯೀ ? ।೧೫॥ ಸಿಂಹಾಸೀ ಝೋಂಬೇ ಕೋಲ್ಹಾ । ಐಸಾ ಅಪಾಡು ಆಥಿಕೇ ಜಾಹಲಾ? । ಪರೀ ತೋ ತ್ವಾಂ ಸಾಚ ಕೇಲಾ । ಆಜೀ ಏಥ ।೧೬॥ ಮ್ಹಣೌನೀ ಅಝುನಿ ಅರ್ಜುನಾ । ಝಣೇ ಚಿತ್ತ ದೇಸೀ ಯಾ ಹೀನಾ । ವೇಗೀ ಧೀರ ಕರೂನಿಯಾ ಮನಾ । ಸಾವಧು ಹೋಈ ।೧೭॥ ಸಾಂಡಿ ಹೇ ಮೂರ್ಖಪಣ । ಉಠೀ ಘೇ ಧನುಷ್ಯಬಾಣ । ಸಂಗ್ರಾಮೀ ಹೇ ಕವಣ । ಕಾರುಣ್ಯ ತುಝೇ ।೧೮॥ ಹಾ ಗಾ ತೂ ಜಾಣತಾ । ತರೀ ನ ವಿಚಾರಿಸೀ ಕಾ ಆತಾ । ಸಾಂಗೇ ಝುಂಜಾವೇಳೇ ಸದಯತಾ । ಉಚಿತ ಕಾಯೀ? ।೧೯॥ ಹೇ ಅಸತಿಯೇ ಕೀರ್ತಿಸೀ ನಾಶು । ಆಣಿ ಪಾರತ್ರಿಕಾಸೀ ಅಪಭ್ರಂಶು । ಮ್ಹಣೇ ಜಗನ್ನಿವಾಸು । ಅರ್ಜುನಾತೇ ।೨೦॥

ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ ।
ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ।೩॥

ಮ್ಹಣೌನಿ ಶೋಕು ನ ಕರೀ । ತೂ ಪುರತಾ ಧೀರು ಧರೀ । ಹೇ ಶೋಚ್ಯತಾ ಅವ್ಹೇರಿ । ಪಂಡುಕುಮರಾ ।೨೧॥ ತುಜ ನವ್ಹೇ ಹೇ ಉಚಿತ । ಯೇಣೇ ನಾಸೇಲ ಜೋಡಲೇ ಬಹುತ । ತೂ ಅಝುನಿ ವರೀ ಹಿತ । ವಿಚಾರೀ ಪಾ ।೨೨॥ ಯೇಣೇ ಸಂಗ್ರಾಮಾಚೇನಿ ಅವಸರೇ । ಏಥ ಕೃಪಾಳೂಪಣ ನುಪಕರೇ । ಹೇ ಆತಾಂಚಿ ಕಾಯ ಸೋಯರೇ । ಜಾಹಲೇ ತುಜ? ।೨೩॥ ತೂ ಆಧೀಂಚಿ ಕಾಯ ನೇಣಸಿ? । ಕೀ ಹೇ ಗೋತ್ರಜ ನೋಳಖಸಿ? । ವಾಯಾಚಿ ಕಾಯ ಕರೀಸೀ । ಅತಿಶೋ ಆತಾ ।೨೪॥ ಆಜಿಚೇ ಹೇ ಝುಂಜ । ಕಾಯ ಜನ್ಮಾ ನವಲ ತುಜ? । ಹೇ ಪರಸ್ಪರೇ ತುಮ್ಹಾ ವ್ಯಾಜ । ಸದಾಚಿ ಆಥೀ ।೨೫॥ ತರೀ ಆತಾ ಕಾಯ ಜಾಹಲೇ । ಕಾಯಿ ಸ್ನೇಹ ಉಪನಲೇ । ಹೇ ನೇಣಿಜೇ ಪರೀ ಕುಡೇ ಕೇಲೇ । ಅರ್ಜುನಾ ತುವಾ ।೨೬॥

ಅರ್ಜುನಾ, ಇದನ್ನೆಲ್ಲ ಮನಗಂಡು ನಿನ್ನ ಪರಾಕ್ರಮವನ್ನು ತೂಗಿ ನೋಡಿದರೆ ಮೂರು ಲೋಕಗಳು ನಿನಗಿಂತ ಸಣ್ಣದಾಗಿ ಕಾಣುತ್ತವೆ. ಹೀಗೆ ನಿನ್ನ ಪರಾಕ್ರಮವು ಶ್ರೇಷ್ಠವಾಗಿದೆ ||೧೧||

ಅದೇ ನೀನು, ಈಗ ವೀರವೃತ್ತಿಯನ್ನು ಬಿಟ್ಟುಕೊಟ್ಟು ಕೆಳಮುಖ ಮಾಡಿಕೊಂಡು ಅಳುತ್ತಾ ಕುಳಿತಿರುವೆಯಲ್ಲಾ? ||೧೨||

ಅರ್ಜುನನಾದ ನೀನು ವಿಚಾರವಂತನಲ್ಲವೇ? ಹಾಗಾದರೆ ಕಾರುಣ್ಯದಿಂದ ದೀನನಾಗುವುದು ಯೋಗ್ಯವೇ? ಕತ್ತಲವು ಎಂದಾದರೂ ಸೂರ್ಯನನ್ನು ನುಂಗಬಲ್ಲದೇ? ನೀನೇ ಹೇಳು ||೧೩||

ಅಥವಾ ಮೋಡಗಳಿಗೆ ಗಾಳಿ ಎಂದಾದರೂ ಹೆದರಿದೆಯೇ? ಅಥವಾ ಅಮೃತಕ್ಕೆ ಮರಣ ಇದೆಯೇ? ಕಟ್ಟಿಗೆಯು ಎಂದಾದರೂ ಅಗ್ನಿಯನ್ನು ನುಂಗಿದೆಯೇ? ||೧೪||

ಅಥವಾ ನೀರು ಉಪ್ಪಿನಿಂದ ಎಂದಾದರೂ ಕರಗಿದೆಯೇ ? ಅಥವಾ ಕಾಳಕೂಟ ವಿಷವು ಬೇರೆ ಸಂಸರ್ಗದಿಂದ ಸತ್ತಿದೆಯೇ ? ಅಥವಾ ಘಟಸರ್ಪವನ್ನು ಕಪ್ಪೆಯು ನುಂಗಿದೆಯೇ ? ||೧೫||

ಇನ್ನು ಎಂದಾದರೂ ನರಿಯು ಸಿಂಹದ ಜೊತೆ ಯುದ್ಧ ಮಾಡಬಲ್ಲದೆ ? ಇವೆಲ್ಲ ಆಗಲಾರದವು, ಎಂದಾದರೂ ಆಗಿವೆಯೇ ? ಆದರೆ, ನೀನು ಇಂದು ಇವುಗಳೆಲ್ಲವನ್ನು ನಿಜ ಮಾಡಿ ತೋರಿಸಿರುವಿರಿ! ||೧೬||

ಆದ್ದರಿಂದ ಅರ್ಜುನಾ ನೀನು ಈ ಮೋಹಕ್ಕೆ ನಿನ್ನಲ್ಲಿ ಆಸ್ಪದ ಕೊಡಬೇಡ. ಮನಸ್ಸಿಗೆ ಬೇಗ ಧೈರ್ಯ ಕೊಡು ಎಚ್ಚರಾಗು ||೧೭||

ಈ ಮೂರ್ಖತನವನ್ನು ಬಿಟ್ಟು ಬಿಡು. ಎದ್ದೇಳು ಧನುಷ್ಯ ಬಾಣ ಕೈಯಲ್ಲಿ ತೆಗೆದುಕೋ. ಏಕೆಂದರೆ ಈ ರಣಭೂಮಿಯಲ್ಲಿ ಎಲ್ಲಿಯ ನಿನ್ನ ಕರುಣೆಯ ಉಪಯೋಗ? ||೧೮||

ಅರ್ಜುನಾ ನೀನು ತಿಳಿದವನಿರುವೆ. ಈ ಸಂದರ್ಭದಲ್ಲಿ ಏಕೆ ವಿಚಾರ ಮಾಡುತ್ತಿಲ್ಲವಲ್ಲ? ಅಲ್ಲೋ ! ಯುದ್ಧ ಪ್ರಸಂಗದಲ್ಲಿ ದಯೆ ತೋರುವುದು ಯೋಗ್ಯವೇ ? ಹೇಳು ನೋಡೋಣ? ||೧೯||

ಈ ನಿನ್ನ ವರ್ತನೆಯು ಗಳಿಸಿದ ಕೀರ್ತಿಯ ನಾಶದಾಯಕವಾಗಿರುವುದು ಮತ್ತು ಪರಲೋಕ ಪ್ರಾಪ್ತಿಗೆ ಅಡಚಣೆ ತರುವಂತಹದ್ದಾಗಿರುವುದು ಎಂದು ಶ್ರೀಕೃಷ್ಣನು ಅರ್ಜುನನಿಗೆ ಹೇಳಿದನು ||೨೦||

ಶ್ಲೋಕಾರ್ಥ :- ಪಾರ್ಥಾ! ಈ ಹೇಡಿತನವನ್ನು ಬಿಡು. ಇದು ನಿನಗೆ ಯೋಗ್ಯವಾದುದಲ್ಲ. ಹೇ ಶತ್ರು ಮರ್ದನಾ! ತುಚ್ಛವಾದ ಮನೋದೌರ್ಬಲ್ಯವನ್ನು ತ್ಯಜಿಸಿ ಯುದ್ಧಕ್ಕೆ ಏಳು ||೩||

ಆದ್ದರಿಂದ ಅರ್ಜುನಾ ನೀನು ಶೋಕ ಮಾಡಬೇಡ. ಪೂರ್ಣವಾಗಿ ಧೈರ್ಯವನ್ನು ತಂದುಕೋ ಮತ್ತು ಆಪ್ತ ವಿಷಯದ ಈ ವಿಷಾದವನ್ನು ಬಿಟ್ಟು ಬಿಡು ||೨೧||

ನಿನಗೆ ಈ ರೀತಿ ಖೇದಿಸುವುದು ಶೋಭಿಸುವುದಿಲ್ಲ. ಇಲ್ಲಿಯವರೆಗೆ ಸಂಪಾದಿಸಿರುವ ಯಶವು ಈ ನಿಮಿತ್ತವಾಗಿ ಹಾಳಾದೀತು. ಅದಕ್ಕಾಗಿ ಈಗಾದರೂ ನಿನ್ನ ಹಿತ ಯಾವುದರಲ್ಲಿದೆ ಎಂಬುದನ್ನು ವಿಚಾರಿಸು ||೨೨||

ಇಂತಹ ಸಂಗ್ರಾಮದ ವೇಳೆಯಲ್ಲಿ ಕೃಪೆ ತೋರುವುದು ಉಪಯೋಗವಲ್ಲ. ಈ ಕೌರವರು ಈಗ ಮಾತ್ರ ನಿನ್ನ ಸಂಬಂಧಿಕರಾದರೇನು ? ||೨೩||

ಅರೇ, ಈ ಮಾತು ನಿನಗೆ ಪೂರ್ವದಲ್ಲಿಯೆ ತಿಳಿದಿರಲಿಲ್ಲವೆ ? ಅಥವಾ ಇವರು ಬಂಧು-ಬಳಗದವರ ಎಂಬುದು ನಿನಗೆ ಗೊತ್ತೆ ಇದ್ದಿಲ್ಲವೆ ? ಅಂದಮೇಲೆ ಈಗ ಮಾತ್ರ ವ್ಯರ್ಥವಾಗಿ ಖೇದವೇಕೆ ಮಾಡುವೆ ? ||೨೪||

ಏನು ಹೇಳಬೇಕು? ಇವತ್ತಿನ ಈ ಯುದ್ಧವು ನಿನ್ನ ಜನ್ಮದಲ್ಲಿಯೇ ಅಪೂರ್ವ ಅಂದರೆ ಹೊಸದೇನು ? ನಿಮ್ಮ ಪರಸ್ಪರರಲ್ಲಿ ಕಲಹವು ಯಾವಾಗಲೂ ಇದ್ದೇ ಇದೆ ||೨೫||

ಅಂದಮೇಲೆ ಈಗ ಮಾತ್ರ ಏನಾಯಿತು, ಈ ಮೋಹವು ನಿನಗೆ ಹೇಗೆ ಉತ್ಪನ್ನವಾಯಿತು? ಯಾರು ಬಲ್ಲರು ? ಆದರೆ ಅರ್ಜುನಾ ನೀನಿದನ್ನು ಬಹಳ ಕೆಡುಕು ಮಾಡಿದೆ ||೨೬||

ಮೋಹೋ ಧರಿಲಿಯಾ ಐಸೇ ಹೋಈಲ । ಜೇ ಅಸತೀ ಪ್ರತಿಷ್ಠಾ ಜಾಯಿೀಲ । ಆಣಿ ಪರಲೋಕಹೀ ಅಂತರೇಲ । ಐಹಿಕೇಸೀ ।೨೭॥ ಹೃದಯಾಚೇ ಢಿಲೇಪಣ । ಏಥ ನಿಕಯಾಸೀ ನವ್ಹೇ ಕಾರಣ । ಹೇ ಸಂಗ್ರಾಮಿ ಪತನ ಜಾಣ । ಕ್ಷತ್ರಿಯಾಂಸೀ ।೨೮॥ ಐಸೇನಿ ತೋ ಕೃಪಾವಂತು । ನಾನಾಪರೀ ಅಸೇ ಶಿಕವಿತು । ಹೇ ಐಕೋನಿ ಪಂಡುಸುತು । ಕಾಯ ಬೋಲೇ ।೨೯॥

ಅರ್ಜುನ ಉವಾಚ:-

ಕಥಂ ಭೀಷ್ಮ ಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ ।
ಇಷುಭಿಃ ಪ್ರತಿ ಯೋತ್ಸ್ಯಾಮಿ ಪೂಜಾರ್ಹಾವರಿಸೂದನ ।೪॥

ದೇವಾ ಹೇ ಯೇತುಲೇವರೀ । ಬೋಲಾವೇ ನಲಗೇ ಅವಧಾರೀ । ಆಧೀ ತೂಂಚೀ ವಿಚಾರೀ । ಸಂಗ್ರಾಮು ಹಾ ।೩೦॥ ಹೇ ಝುಂಜ ನವ್ಹೇ ಪ್ರಮಾದು । ಏಥ ಪ್ರವರ್ತಲಿಯಾ ದಿಸತೇ ಬಾಧು । ಹಾ ಉಘಡ ಲಿಂಗಭೇಧು । ವೋಢವಲಾ ಆಮ್ಹಾ ।೩೧॥ ದೇಖೇ ಮಾತಾಪಿತರೆ ಅರ್ಚಿಜತೀ । ಸರ್ವಸ್ವೇ ತೋಷು ಪಾವವಿಜತೀ । ತಿಯೇ ಪಾಠೀ ಕೇವೀ ವಧಿಜತೀ । ಆಪುಲಿಯಾ ಹಾತೀ ।೩೨॥ ದೇವಾ ಸಂತವೃಂದ ನಮಸ್ಕಾರಿಜೇ । ಕಾ ಘಡೇ ತರೀ ಪೂಜಿಜೇ । ಹೇ ವಾಚೂನಿ ಕೇವೀ ನಿಂದಿಜೇ । ಸ್ವಯೇ ವಾಚಾ? ।೩೩॥ ತೈಸೇ ಗೋತ್ರಗುರು ಆಮುಚೇ । ಹೇ ಪೂಜನೀಯ ಆಮ್ಹಾ ನಿಯಮಾಚೇ । ಮಜ ಬಹುತ ಭೀಷ್ಮ ದ್ರೋಣಾಂಚೆ । ವರ್ತತಸೇ ।೩೪॥ ಜಯಾಲಾಗೀ ಮನೇ ವಿರೂ । ಆಮ್ಹಿ ಸ್ವಪ್ನೀಹೀ ನ ಶಕೋ ಧರೂ । ತಯಾ ಪ್ರತ್ಯಕ್ಷ ಕೇವೀ ಕರೂ । ಘಾತು ದೇವಾ? ।೩೫॥ ವರಿ ಜಳೋ ಹೇ ಜಿಯಾಲೇ । ಏಥ ಆಘವೇಯಾಂಸಿ ಹೇಚಿ ಕಾಯ ಜಾಹಲೇ । ಜೇ ಯಾಂಚ್ಯಾ ವಧೀ ಅಭ್ಯಾಸಿಲೇ । ಮಿರವಿಜೇ ಆಮ್ಹಿ ।೩೬॥ ಮೀ ಪಾರ್ಥು ದ್ರೋಣಾಚಾ ಕೇಲಾ । ಯೇಣೇ ಧನುರ್ವೇದು ಮಜ ದಿಧಲಾ । ತೇಣೇ ಉಪಕಾರೇ ಕಾಯ ಆಭಾರೈಲಾ । ವಧೀ ತಯಾತೇ? ।೩೭॥ ಜೇಥೀಂಚಿಯಾ ಕೃಪಾ ಲಾಹಿಜೇ ವರು । ತೇಥೇಂಚಿ ಮನೇ ವ್ಯಭಿಚಾರು । ತರೀ ಕಾಯ ಮೀ ಭಸ್ಮಾಸುರು । ಅರ್ಜುನ ಮ್ಹಣೇ ।೩೮॥

ಗುರೂನಹತ್ವಾ ಹಿ ಮಹಾನುಭಾವಾನ್ ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ ।
ಹತ್ವಾರ್ಥಕಾಮಾಂಸ್ತು ಗುರೂನಿಹೈವ ಭುಂಜೀಯ ಭೋಗಾನ್ ರುಧಿರಪ್ರದಿಗ್ಧಾನ್ ।೫॥

ದೇವಾ ಸಮುದ್ರ, ಗಂಭೀರ ಆ ಇಕಿಜೇ । ವರಿ ತೋಹೀ ಆಹಾಚ ದೇಖಿಜೇ । ಪರೀ ಕ್ಷೋಭು ಮನೀ ನೇಣಿಜೇ । ದ್ರೋಣಾಚಿಯೇ ।೩೯॥

ಒಂದು ವೇಳೆ ನೀನು ಈ ಮೋಹದಲ್ಲಿ ಸಿಲುಕಿದ್ದಾದರೆ, ಅದರ ಪರಿಣಾಮದಿಂದ ಇಂದಿನವರೆಗೆ ಗಳಿಸಿದ ಲೌಕಿಕವು ಹಾಳಾಗಿ ಪರಲೋಕವನ್ನೂ ಕಳೆದುಕೊಳ್ಳುವಿ ।೨೭।।

ಈ ಹೃದಯದ ದುರ್ಬಲತೆ ಈ ಪ್ರಸಂಗದಲ್ಲಿ ನಿನ್ನ ಕಲ್ಯಾಣ ಮಾಡಲಾರದು. ದುರ್ಬಲತೆಯು ಕ್ಷತ್ರಿಯರ ಸಂಗ್ರಾಮದಲ್ಲಿನ ಅಧಃಪತನವಾಗಿರುವುದು ।೨೮।।

ಈ ಪ್ರಕಾರವಾಗಿ ದಯಾಘನ ಭಗವಾನನು ಅರ್ಜುನನಿಗೆ ಪರಿಪರಿಯಾಗಿ ತಿಳುವಳಿಕೆ ಕೊಡುತ್ತಿದ್ದರೂ ಪ್ರತಿಯಾಗಿ ಅರ್ಜುನನು ಏನು ಹೇಳಿದನೆಂಬುದು ಕೇಳಿರಿ ।೨೯।।

ಶ್ಲೋಕಾರ್ಥ :- ಅರ್ಜುನನು ಹೀಗೆಂದನು : ಹೇ ಮಧುಸೂದನ! ಪೂಜನೀಯರಾದ ಭೀಷ್ಮ ದ್ರೋಣರನ್ನು ಯುದ್ಧದಲ್ಲಿ ಎದುರಿಸಿ ಬಾಣಗಳಿಂದ ಹೇಗೆ ಹೊಡೆಯಲಿ? ।।೪।।

ಹೇ ದೇವನೇ, ನೀನು ಇದೆಲ್ಲ ಏನೂ ಹೇಳಬೇಕಾಗಿಲ್ಲ. ನನ್ನ ಹೇಳಿಕೆ ಏನೆಂಬುದು ಕೇಳು, ಈ ಯುದ್ಧ ವಿಷಯಕ್ಕೆ ಮೊದಲು ನೀನೇ ವಿಚಾರ ಮಾಡು ।೩೦।।

ಇದು ಯುದ್ಧವಲ್ಲದೇ ನಮ್ಮಿಂದ ದೊಡ್ಡ ದೋಷ ಸಿದ್ಧವಾಗುತ್ತದೆ. ಅದರಲ್ಲಿ ಪ್ರವರ್ತರಾದರೆ ಮಹತ್ತರ ಹಾನಿ ಒದಗುವಂತೆ ಕಾಣುತ್ತದೆ. ಇದರಿಂದ ಎದ್ದು ಕಾಣುವ ಹಾಗೆ ದೊಡ್ಡವರ ಉಚ್ಛೇದನ ಕಾರ್ಯದ ದೋಷವು ನಮ್ಮ ಮೇಲೆ ಬಂದು ಬಿದ್ದಿದೆ ।೩೧।।

ಹೀಗಿದೆ ನೋಡು, ತಾಯಿ ತಂದೆಯವರ ಸೇವೆ ಮಾಡಬೇಕು. ಅವರನ್ನು ಎಲ್ಲ ಪ್ರಕಾರವಾಗಿ ಸಂತೋಷ ವಾಗಿಡಬೇಕು. ಹೀಗೆ ಧರ್ಮವಿರುವುದು. ಹೀಗಿದ್ದಾಗ ಇದರ ವಿರುದ್ಧವಾಗಿ ನಾವೇ ನಮ್ಮ ಕೈಯಿಂದಲೇ ಅವರ ವಧೆ ಹೇಗೆ ಮಾಡಬೇಕು ? ।೩೨।।

ಹೇ ದೇವನೇ, ಸಾಧು ಸಂತರಿಗೆ ನಮಸ್ಕರಿಸಬೇಕು. ಸಾಧಿಸಿದರೆ ಅವರನ್ನು ಪೂಜಿಸಬೇಕು. ಆದರೆ ಇದನ್ನು ಬಿಟ್ಟು ತಾನೇ ತನ್ನ ಮುಖದಿಂದ ಅವರ ನಿಂದನೆ ಹೇಗೆ ಮಾಡಬೇಕು ? ।೩೩।।

ಇದೇ ಪ್ರಕಾರವಾಗಿ ಇವರು ಕುಲಗುರುಗಳಿದ್ದು ನಮಗೆ ಸದಾಕಾಲ ಪೂಜ್ಯರಿದ್ದಾರೆ. ಅಲ್ಲದೇ ವಿಶೇಷವಾಗಿ ಭೀಷ್ಮ ದ್ರೋಣರ ಬಗ್ಗೆ ನನ್ನ ಮನಸ್ಸು ಬಹಳ ಕಳವಳಿಸುತ್ತದೆ ।೩೪।।

ಹೇ ದೇವನೇ, ಇವರ ವಿಷಯವಾಗಿ ನಾವು ಸ್ವಪ್ನ ದಲ್ಲಿಯೂ ಸಹ ವೈರಭಾವ ಧರಿಸಲು ಸಾಧ್ಯವಿಲ್ಲ. ಅಂದಮೇಲೆ ಇವರನ್ನು ಪ್ರತ್ಯಕ್ಷವಾಗಿ ಹೇಗೆ ಕೊಲ್ಲಬೇಕು? ।೩೫।।

ಇದಕ್ಕಿಂತ ನಮ್ಮ ಜೀವನವೇ ವ್ಯರ್ಥವಿದೆ. ನಾವು ಇಲ್ಲಿಯವರೆಗೆ ವಿದ್ಯೆ ಸಂಪಾದನೆ ಮಾಡಿರುವುದು ಅದರ ಉಪಯೋಗ ಎಲ್ಲರನ್ನೂ ಕೊಂದು ನಾವು ಪ್ರತಿಷ್ಠೆಯಿಂದ ಮೆರೆಯಲಿಕ್ಕೆಯೇ? ಇದು ನಮ್ಮ ಕರ್ತವ್ಯವೇ ? ।೩೬।।

ನಾನು ಅರ್ಜುನನು, ದ್ರೋಣಾಚಾಯರ ಶಿಷ್ಯನು. ಅವರು ನನಗೆ ಧನುರ್ವಿದ್ಯೆ ಕಲಿಸಿರುವರು. ಈ ಉಪಕಾರದಿಂದ ಕೃತಜ್ಞನಾದ ನಾನು ಅವರನ್ನು ಕೊಲ್ಲಬೇಕೇನು? ।೩೭।।

ಯಾರ ಕೃಪೆಯಿಂದ ನಾವು ವರಪ್ರಾಪ್ತಿ ಮಾಡಿಕೊಂಡು ಅವರನ್ನೇ ಕೃತಘ್ನತೆ (ಅಪಕಾರ) ಮಾಡಹೋದರೆ ನಾನೇನು ಭಸ್ಮಾಸುರನೇ ? ಎಂದು ಅರ್ಜುನನು ಹೇಳಿದನು ।೩೮।।

ಶ್ಲೋಕಾರ್ಥ :- ಮಹನೀಯರಾದ ಗುರುಗಳನ್ನು ಕೊಲ್ಲುವುದನ್ನು ಬಿಟ್ಟು ಈ ಲೋಕದಲ್ಲಿ ಭಿಕ್ಷಾಚರಣೆ ಯಿಂದ ಜೀವಿಸುವುದು ಉತ್ತಮ. ಅವರನ್ನು ವಧಿಸಿದರೆ, ಅವರ ರಕ್ತದಿಂದ ಸಿಕ್ತವಾದ ಅರ್ಥ, ಕಾಮ, ಭೋಗಗಳನ್ನೇ ಇಲ್ಲಿ ತಿನ್ನಬೇಕಾಗುತ್ತದೆ ।೫।।

ಹೇ ದೇವನೇ, ಸಮುದ್ರವು ಗಂಭೀರವೆಂದು ಕೇಳುವೆವು. ಆದರೆ ಅದು ಸಹ ಕ್ಷುಬ್ಧ (ಅಲ್ಲೋಲ ಕಲ್ಲೋಲ) ವಾದದ್ದು ನೋಡುವೆವು. ಆದರೆ ದ್ರೋಣಾಚಾರ್ಯರು ಕ್ಷೋಭಿಸಿದ ನಾವು ಎಂದೂ ನೋಡಿಲ್ಲ ।೩೯।।

ಹೇ ಅಪಾರ ಜೇ ಗಗನ । ವರೀ ತಯಾಹೀ ಹೋಈಲ ಮಾನ । ಪರೀ ಅಗಾಧ ಭಲೇ ಗಹನ । ಹೃದಯ ಯಾಚೇ ।೯೦॥ ವರೀ ಅಮೃತಹೀ ವಿಟೇ । ಕೀ ಕಾಳವಶೇ ವಜ್ರಹೀ ಫುಟೇ । ಪರೀ ಮನೋಧರ್ಮು ನ ಲೋಟೇ । ವಿಕರವಿಲಾಹೀ ।೯೧॥ ಸ್ನೇಹಾಲಾಗೀ ಮಾಯೇ । ಮ್ಹಣಿಪೇ ತೇ ಕೀರು ಹೋಯೇ । ಪರೀ ಕೃಪಾ ತೇ ಮೂರ್ತ ಆಹೇ । ದ್ರೋಣಿ ಇಯೇ ।೯೨॥ ಹಾ ಕಾರುಣ್ಯಾಚಿ ಆದಿ । ಸಕಲ ಗುಣಾಂಚಾ ನಿಧಿ । ವಿದ್ಯಾಸಿಂಧು ನಿರವಧಿ । ಅರ್ಜುನ ಮ್ಹಣೇ ।೯೩॥ ಹಾ ಯೇಣೇಮಾನೇ ಮಹಂತು । ವರೀ ಆಮ್ಹಾಲಾಗೀ ಕೃಪಾವಂತು । ಆತಾ ಸಾಂಗ ಪಾ ಯೇಥ ಘಾತು । ಚಿಂತು ಯೇಈಲ ? ।೯೪॥ ಐಸೇ ಹೇ ರಣೀ ವಧಾವೇ । ಮಗ ಆಪಣ ರಾಜ್ಯಸುಖ ಭೋಗಾವೇ । ತೇ ಮನಾ ನ ಯೇ ಆಘವೇ । ಜೀವಿತೇಸೀ ।೯೫॥ ಹೇ ಯೇಣೇ ಮಾನೇ ದುರ್ಧರ । ಜೇ ಯಾಹೀಹುನೀ ಭೋಗ ಸಧರ । ತೇ ಅಸತು ಯೇಥವರ । ಭಿಕ್ಷಾ ಮಾಗತಾ ಭಲೀ ।೯೬॥ ನಾ ತರೀ ದೇಶತ್ಯಾಗೇ ಜಾಇಜೇ । ಕಾ ಗಿರಿಕಂದರ ಸೇವಿಜೇ । ಪರಿ ಶಸ್ತ್ರ ಆತಾ ನ ಧರೀಜೇ । ಇಯಾವರೀ ।೯೭॥ ದೇವಾ ನವನಿಶತೀಶರೀ । ವಾವರೋನಿ ಯಾಂಚ್ಯಾ ಜಿವ್ಹಾರೀ । ಭೋಗ ಗಿವಸಾವೇ ರುಧಿರೀ । ಬುಡಾಲೇ ಜೇ ।೯೮॥ ತೇ ಕಾಢೂನಿ ಕಾಯ ಕೀಜತಿ ? । ಲಿಪ್ತ ಕೇವೀ ಸೇವಿಜತಿ ? । ಮಜ ನಯೇ ಹೇ ಉಪಪತ್ತೀ । ಯಾಚಿಲಾಗೀ ।೯೯॥ ಐಸೇ ಅರ್ಜುನ ತಿಯೇ ಅವಸರೀ । ಮ್ಹಣೇ ಶ್ರೀಕೃಷ್ಣಾ ಅವಧಾರಿ । ಪರೀ ತೇ ಮನಾ ನಯೇಚಿ ಮುರಾರಿ । ಆಇಕೋನಿಯಾ ।೧೦೦॥ ಹೇ ಜಾಣೋನಿ ಪಾರ್ಥು ಬಿಹಾಲಾ । ಮಗ ಪುನರಪಿ ಬೋಲೋ ಲಾಗಲಾ । ಮ್ಹಣೇ ದೇವೋ ಕಾ ಚಿತ್ತ ಯಾ ಬೋಲಾ । ದೇತೀಚಿನಾ ।೧೦೧॥

ನ ಚೈತದ್ವಿದ್ಮಃ ಕತರನ್ನೋ ಗರೀಯೋ ಯದ್ವಾ ಜಯೇಮ ಯದಿ ವಾ ನೋ ಜಯೇಯುಃ ।
ಯಾನೇವ ಹತ್ವಾ ನ ಜಿಜೀವಿಷಾಮಃ ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ।೬॥

ಯೇರ್ಹವೀ ಮಾಝ್ಯಾ ಚಿತ್ತೀ ಜೇ ಹೋತೇ । ತೇ ಮೀ ವಿಚಾರೂನಿ ಬೋಲಿಲೋ ಏಥೇ । ಪರೀ ನಿಕೇ ಕಾಯ ಯಾಪರೌತೇ । ತೇ ತುಮ್ಹಿ ಜಾಣಾ ।೧೦೨॥ ಪೈ ವಿರು ಜಯಾಂಸೀ ಐಕಿಜೇ । ಆಣಿ ಯಾ ಬೋಲಿಚಿ ಪ್ರಾಣು ಸಾಂಡಿಜೇ । ತೇ ಏಥ ಸಂಗ್ರಾಮವ್ಯಾಜೇ । ಉಭೇ ಆಹಾತೀ ।೧೦೩॥ ಆತಾ ಐಸಿಯಾತೇ ವಧಾವೇ । ಕೀ ಆವ್ಹೇರೂನಿಯಾ ನಿಘಾವೇ । ಯಾ ದೋಹೀಮಾಜೀ ಬರವೇ । ತೇ ನೇಣೋ ಆಮ್ಹಿ ।೧೦೪॥

ಆಕಾಶಕ್ಕೆ ಅಂತ ಇಲ್ಲವೆಂದರೂ ಅದರ ಅಳತೆ ಮಾಡಬಹುದು. ಪರಂತು ದ್ರೋಣಾಚಾರ್ಯರ ಅಂತಃಕರಣವು ಎಷ್ಟು ವಿಶಾಲವಾಗಿದೆ ಎಂದರೆ ಅದರ ಅಳತೆ ಯಾರಿಗೂ ತಿಳಿಯಲಾರದು ।೪೦॥

ಒಂದುವೇಳೆ ಅಮೃತವು ಹಳಸಬಹುದು, ಅಥವಾ ಕಾಲಗತಿಯಿಂದ ವಜ್ರವು ಒಡೆಯಬಹುದು. ಆದರೆ ಅವರ ನಿರ್ವಿಕಾರಿ ಸ್ವಭಾವವನ್ನು ಯಾರಿಗೂ ಭಂಗ ಮಾಡಲು ಬರುವುದಿಲ್ಲ ।೪೧॥

ಸ್ನೇಹ ವಿಷಯಕ್ಕೆ ಯಾವಾಗಲೂ ತಾಯಿಯ ಉದಾಹರಣೆ ಕೊಡುವುದು ನಿಜವಿದೆ, ಆದರೆ ಈ ದ್ರೋಣಾಚಾರ್ಯರ ಹೃದಯದಲ್ಲಿ ಸ್ನೇಹವು ಮೂರ್ತಿಮಂತವಾಗಿ ವಸತಿ ಮಾಡಿದೆ ।೪೨॥

ಈ ಆಚಾರ್ಯರೆಂದರೆ ದಯೆಯ ಉಗಮಸ್ಥಾನ. ಎಲ್ಲ ಗುಣಗಳ ಖಣಿ. ವಿದ್ಯೆಯ ಬಹುದೊಡ್ಡ ಸಾಗರವೇ ಆಗಿದ್ದಾರೆ ಎಂದು ಅರ್ಜುನನು ಹೇಳಿದನು ।೪೩॥

ಈ ಪ್ರಕಾರವಾಗಿ ಇವರು ಸರ್ವಶ್ರೇಷ್ಠರಿದ್ದು, ನಮ್ಮ ಮೇಲಂತೂ ಪೂರ್ಣ ಕೃಪಾವಂತರಿದ್ದಾರೆ. ಅಂದಮೇಲೆ ಇವರನ್ನು ಕೊಲ್ಲುವ ಕೆಲಸ ಮನದಲ್ಲಿಯಾದರೂ ಚಿಂತಿಸಬಹುದೇ ? ।೪೪॥

ಇಂಥವರನ್ನು ರಣರಂಗದಲ್ಲಿ ಕೊಂದು ಆಮೇಲೆ ರಾಜ್ಯಸುಖ ಭೋಗಿಸುವುದು, ಈ ಮಾತು ನನ್ನ ಪ್ರಾಣ ಹೋದರೂ ಮನಕ್ಕೆ ಬರಲಿಕ್ಕಿಲ್ಲ ।೪೫॥

ಇಷ್ಟೊಂದು ಈ ಕಾರ್ಯ ಕಠಿಣವಿದೆ. ರಾಜ್ಯ ಭೋಗ ಶ್ರೇಷ್ಠ ಇದ್ದರೆ ಅದು ಅಲ್ಲೇ ಇರಲಿ. ಆದರೆ ನಮಗೆ ಅದಕ್ಕಿಂತಲೂ ಭಿಕ್ಷೆ ಬೇಡುವುದು ಒಳಿತು ।೪೬॥

ಇಲ್ಲದಿದ್ದರೆ ದೇಶ ತ್ಯಾಗ ಮಾಡಬೇಕು, ಅಥವಾ ಗಿರಿಕಂದರ (ಗುಡ್ಡ ಗುಹೆ)ಗೆ ಹೋಗಿ ಇರಬೇಕು. ಆದರೆ, ಇವರ ಮೇಲೆ ಶಸ್ತ್ರ ಮಾತ್ರ ಹಿಡಿಯಬಾರದು ।೪೭॥

ಹೇ ದೇವನೇ, ಹೊಸದಾಗಿ ಮಸಿದ ಬಾಣಗಳಿಂದ ಇವರ ಮರ್ಮಸ್ಥಾನಕ್ಕೆ ಹೊಡೆದು ಅವರ ರಕ್ತದಿಂದ ಮುಳುಗಿದ ಭೋಗವನ್ನು ನಾವು ಹುಡುಕುತ್ತಿರಬೇಕೆ ? ।೪೮॥

ಅದನ್ನು ಹುಡುಕಿ ದಕ್ಕಿಸಿಕೊಂಡು ಆ ರಕ್ತದಲ್ಲಿ ಮುಳಿಗಿದ ಭೋಗವನ್ನು ಹೊರಗೆಳೆದು ಏನು ಮಾಡಬೇಕಾಗಿದೆ ? ರಕ್ತ ಲೇಪಿತ ಆ ಭೋಗವನ್ನು ನಾವು ಹೇಗೆ ಸೇವಿಸಬೇಕು ? ಅದಕ್ಕಾಗಿ ನನಗೆ ಇದು ಹಿಡಿಸುತ್ತಿಲ್ಲ ।೪೯॥

ಆಗ ಅರ್ಜುನನು ಶ್ರೀಕೃಷ್ಣನಿಗೆ ತನ್ನ ಮಾತಿನತ್ತ ಲಕ್ಷ್ಯ ಕೊಡು ಎಂದು ಹೇಳಿದನು. ಆದರೆ ಆತನ ಮಾತು ಶ್ರೀಕೃಷ್ಣನಿಗೆ ಹಿಡಿಸಲಿಲ್ಲ ।೫೦॥

ಇದನ್ನರಿತು ಅರ್ಜುನನು ತನ್ನ ಮನಸ್ಸಿನಲ್ಲಿ ಹೆದರಿಕೊಂಡು ಪುನಃ ಹೇಳಹತ್ತಿದನು. ಹೇ ದೇವನೇ, ನನ್ನ ಮಾತಿಗೆ ನೀನೇಕೆ ಲಕ್ಷ ಕೊಡುವುದಿಲ್ಲ ? ।೫೧॥

ಶ್ಲೋಕಾರ್ಥ :- ನಾವು ಜಯಿಸುವೆವೋ, ಅವರು ಜಯಿಸುವರೋ, ಇದನ್ನು ಹೇಳಲಾಗುವುದಿಲ್ಲ. ಯಾರನ್ನು ಕೊಂದಮೇಲೆ ನಾವು ಬದುಕಬೇಕೆಂದಿಲ್ಲವೋ ಅಂಥ ಕೌರವರು ಎದುರಿಗೆ ನಿಂತಿದ್ದಾರೆ ।೬॥

ಸಾಮಾನ್ಯವಾಗಿ ನಾನು ನನ್ನ ಮನದಲ್ಲಿದ್ದದ್ದು ನಿಮಗೆ ಸವಿಸ್ತಾರವಾಗಿ ತಿಳಿಸಿದೆ. ಆದರೆ ಇದರ ಹೊರತು ನಿಜವಾದದ್ದು ಏನೆಂಬುದು ನಿಮಗೆ ತಿಳಿದ ವಿಷಯ ।೫೨॥

ಯಾರಲ್ಲಿ ನಮ್ಮ ವೈರತ್ವವು ಇದೆ ಎಂಬುದು ಈ ಅಕ್ಷರಗಳನ್ನು ಕೇಳಿದಾಕ್ಷಣ ನಾವು ಪ್ರಾಣ ಬಿಡಬೇಕು. ಅವರೇ ರಣಭೂಮಿಯ ಮೇಲೆ ಯುದ್ಧಕ್ಕಾಗಿ ಸನ್ನದ್ಧರಾಗಿದ್ದಾರೆ ।೫೩॥

ಆದರೆ ಇವರಿಗೆ ನಾವು ಕೊಲ್ಲಬೇಕೋ ಅಥವಾ ಇದನ್ನು ಬಿಟ್ಟು ಹೊರಟು ಹೋಗಬೇಕೋ ಈ ಎರಡರಲ್ಲಿ ಯಾವುದು ಒಳ್ಳೆಯದೆಂಬುದು ನಮಗೆ ತಿಳಿಯದಾಗಿದೆ ।೫೪॥

ಕಾರ್ಪಣ್ಯದೋಷೋಪಹತಸ್ವಭಾವಃ ಪೃಚ್ಛಾಮಿ ತ್ವಾಂ ಧರ್ಮಸಂಮೂಢಚೇತಾಃ ।
ಯಚ್ಛ್ರೇಯಃ ಸ್ಯಾನ್ನಿಶ್ಚಿತಮ್ ಬ್ರೂಹಿ ತನ್ಮೇ ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ ॥೭॥

ಆಮ್ಹಾ ಕಾಯ ಉಚಿತ । ತೇ ಪಾಹತಾ ನ ಸ್ಫುರೆ ಏಥ । ಜೇ ಮೋಹೇ ಯೇಣೇ ಚಿತ್ತ । ವ್ಯಾಕುಳ ಮಾಝೇ ॥೮೫॥ ತಿಮಿರಾವರುದ್ಧ ಜೈಸೇ । ದೃಷ್ಟೀ ಚೇ ತೇಜ ಭ್ರಂಶೇ । ಮಗ ಪಾಸೀಚ ಅಸತಾ ನ ದಿಸೇ । ವಸ್ತು ಜಾತ ॥೮೬॥ ದೇವಾ ತೈಸೇ ಮಜ ಜಾಹಲೇ । ಜೇ ಮನ ಹೇ ಭ್ರಾಂತೀ ಗ್ರಾಸಿಲೇ । ಆತಾ ಕಾಯ ಹಿತ ಆಪುಲೇ । ತೇಹೀ ನೇಣೇ ॥೮೭॥ ತರೀ ಶ್ರೀಕೃಷ್ಣಾ ತುವಾ ಜಾಣಾವೇ । ನಿಕೇ ತೇ ಆಮ್ಹಾ ಸಾಂಗಾವೇ । ಜೇ ಸಖಾ ಸರ್ವಸ್ವ ಆಘವೇ । ಆಮ್ಹಾಸಿ ತೂ ॥೮೮॥ ತೂ ಗುರು ಬಂಧು ಪಿತಾ । ತೂ ಆಮುಚಿ ಇಷ್ಟದೇವತಾ । ತೂಂಚಿ ಸದಾ ರಕ್ಷಿತಾ । ಆಪದೀ ಆಮುತೇ ॥೮೯॥ ಜೈಸಾ ಶಿಷ್ಯಾಂತೇ ಗುರು । ಸರ್ವಥಾ ನೇಣೇ ಅವ್ಹೇರು । ಕಿ ಸರಿತಾಂತೇ ಸಾಗರು । ತ್ಯಜೀ ಕೇವೀ? ॥೯೦॥ ನಾತರೀ ಅಪತ್ಯಾಂತೇ ಮಾಯೇ । ಸಾಂಡೂನಿ ಜರೀ ಜಾಯೇ । ತರೀ ತೇ ಕೈಸೇನಿ ಜಿಯೇ । ಐಕೇ ಕೃಷ್ಣಾ ॥೯೧॥ ತೈಸಾ ಸರ್ವಾಪರೀ ಆಮ್ಹಾಸೀ । ದೇವಾ ತೂಂಚಿ ಏಕ ಆಹ್ಹಾಸೀ । ಆಣಿ ಬೋಲಿಲೇ ಜರೀ ನ ಮಾನಸೀ । ಮಾಗೀಲ ಮಾಝೇ ॥೯೨॥ ತರೀ ಉಚಿತ ಕಾಯ ಆಮ್ಹಾ । ಜೇ ವ್ಯಭಿಚರೇನಾ ಧರ್ಮಾ । ತೇ ಝಡಕರೀ ಪುರುಷೋತ್ತಮಾ । ಸಾಂಗೈ ಆತಾ ॥೯೩॥

ನ ಹಿ ಪ್ರಪಶ್ಯಾಮಿ ಮಮಾಪನುದ್ಯಾತ್ ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಮ್ ।
ಅವಾಪ್ಯ ಭೂಮಾವಸಪತ್ನಮೃದ್ಧಂ ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್ ॥೮॥

ಹೇ ಸಕಳ ಕುಳ ದೇಖೋನಿ । ಜೋ ಶೋಕು ಉಪನಲಾಸೇ ಮನೀ । ತೋ ತುಝಿಯಾ ವಾಕ್ಯಾವಾಂಚುನೀ । ನ ಜಾಯ ಆಣಿಕೇ ॥೯೪॥ ಏಥ ಪೃಥ್ವೀತಳ ಆಪು ಹೋಈಲ । ಹೇ ಮಹೇಂದ್ರಪದಹೀ ಪಾವಿಜೇಲ । ಪರೀ ಮೋಹ ಹಾ ನ ಫಿಟೇಲ । ಮಾನಸೀಂಚಾ ॥೯೫॥ ಜೈಸೀ ಬಿಜೇ ಸರ್ವಥಾ ಆಹಾಳಾಲೀ । ತೀ ಸುಕ್ಷೇತ್ರೀ ಜರ್‍ಹಿ ಪೇರಿಲೀ । ತರೀ ನ ವಿರೂಢತೀ ಸಿಂಚಿಲೀ । ಆವಡೇ ತೈಸೀ ॥೯೬॥ ನಾತರೀ ಆಯುಷ್ಯ ಪುರಲೇ ಆಹೇ । ತರೀ ಔಷಧೇ ಕಾಂಹೀ ನೋಹೇ । ಏಥ ಏಕಚಿ ಉಪೇಗಾ ಜಾಯೇ । ಪರಮಾಮೃತ ॥೯೭॥ ತೈಸೇ ರಾಜ್ಯಭೋಗಸಮೃದ್ಧಿ । ಉಜ್ಜೀವನ ನೋಹೇ ಜೀವಬುದ್ಧಿ । ಏಥ ಜಿವ್ಹಾಳು ಕೃಪಾನಿಧಿ । ಕಾರುಣ್ಯ ತುಝೇ ॥೯೮॥ ಐಸೆ ಅರ್ಜುನ ತೇಥ ಬೋಲಿಲಾ । ಜಂವ ಕ್ಷಣ ಏಕ ಭ್ರಾಂತೀ ಸಾಂಡಿಲಾ । ಮಗ ಪುನರಪಿ ವ್ಯಾಪಿಲಾ । ಉರ್ಮೀ ತೇಣೇ ॥೯೯॥

ಶ್ಲೋಕಾರ್ಥ :- ಮನೋದೌರ್ಬಲ್ಯ ದೋಷದಿಂದ ನನ್ನ ಸ್ವಾಭಾವಿಕ ಶಕ್ತಿಯು ನಷ್ಟವಾಗಿದೆ. ನನ್ನ ಚಿತ್ತದಲ್ಲಿ ಧರ್ಮಾಧರ್ಮ ವಿವೇಕವು ನಷ್ಟ-ಭ್ರಷ್ಟವಾಗಿದೆ. ನಿನ್ನನ್ನು ಪ್ರಾರ್ಥಿಸುತ್ತೇನೆ. ಯಾವುದು ನನಗೆ ಶ್ರೇಯಸ್ಸೋ ಅದನ್ನು ಖಚಿತವಾಗಿ ಹೇಳು. ನಾನು ನಿನಗೆ ಶಿಷ್ಯನು. ಶರಣಾಗತನಾದ ನನಗೆ ಹಿತವನ್ನು ಉಪದೇಶಿಸು ॥೭॥

ನಾನು ಏನು ಮಾಡಿದರೆ ಒಳಿತು ಎಂಬುದು, ವಿಚಾರ ಮಾಡಿದರೂ ಈ ಪ್ರಸಂಗದಲ್ಲಿ ತಿಳಿಯದಾಗಿದೆ. ಏಕೆಂದರೆ ಈ ಮೋಹದಿಂದ ಚಿತ್ತವು ವ್ಯಾಕುಲಗೊಂಡಿದೆ ॥೫೫॥

ತಿಮಿರ ರೋಗ (ಮೋತಿ ಬಿಂದು) ಕಣ್ಣಲ್ಲಿ ಬಂದು ದೃಷ್ಟಿ ತೇಜವು ನಷ್ಟವಾದಲ್ಲಿ ಸಮೀಪವಿದ್ದ ಯಾವ ವಸ್ತುಗಳೂ ಕಾಣಿಸುವುದಿಲ್ಲ ॥೫೬॥

ಹೇ ದೇವನೇ, ಅದೇ ನನ್ನ ಗತಿಯಾಗಿದೆ. ನನ್ನ ಮನವು ಭ್ರಾಂತಿಯಿಂದ ಮುಳುಗಿ ನಮ್ಮ ಹಿತ ಎಲ್ಲಿದೆ ಎಂಬುದು ನನಗೆ ಈ ವೇಳೆಯಲ್ಲಿ ತಿಳಿಯದಾಗಿದೆ ॥೫೭॥

ಆದ್ದರಿಂದ ಶ್ರೀಕೃಷ್ಣನೇ, ನೀನೇ ವಿಚಾರ ಮಾಡಿ ನಿಜವೇನೆಂಬುದನ್ನು ನನಗೆ ಹೇಳು. ಏಕೆಂದರೆ ನಮ್ಮ ಇಷ್ಟ ಮಿತ್ರ ಸರ್ವವೂ ನೀನೇಯಾಗಿರುವಿ ॥೫೮॥

ನಮ್ಮ ಗುರು, ಬಂಧು, ತಂದೆ, ಕುಲದೈವತ ನೀನಿದ್ದು, ನೀನೇ ಸದಾಕಾಲ ನಮ್ಮ ಸಂಕಟ ಸಮಯದಲ್ಲಿ ರಕ್ಷಕನಾಗಿರುವೆ ॥೫೯॥

ಗುರುವು ಶಿಷ್ಯನನ್ನು ಹೇಗೆ ತಿರಸ್ಕರಿಸುವನು ? ಅಥವಾ ಸಮುದ್ರವು ನದಿಗಳಿಗೆ ಹೇಗೆ ತಿರಸ್ಕರಿಸುವುದು ? ॥೬೦॥

ಅಥವಾ ತಾಯಿಯು ಕೂಸನ್ನು ಬಿಟ್ಟು ದೂರ ಹೋದರೆ, ಆ ಕೂಸು ಹೇಗೆ ಬದುಕಬೇಕು ? ಕೃಷ್ಣನೇ ನನ್ನ ಅಭಿಪ್ರಾಯ ಕೇಳು ॥೬೧॥

ನಮಗೆ ನೀನೆ ಎಲ್ಲವೂ ಆಗಿರುವೆ. ಇಲ್ಲಿಯವರೆಗೆ ನಾನು ಹೇಳಿದ್ದು ನಿನಗೆ ಸರಿ ಕಾಣದಿದ್ದರೆ ॥೬೨॥

ಪುರುಷೋತ್ತಮನೇ, ನೀನು ಈಗ ನಮಗೆ ಉಚಿತ ಯಾವುದು ಎಂಬುದು ಮತ್ತು ಧರ್ಮಕ್ಕೆ ವಿರೋಧ ಅಲ್ಲದ್ದು ಬೇಗನೇ ತಿಳಿಸು ॥೬೩॥

ಶ್ಲೋಕಾರ್ಥ :- ಸಾಟಿಯಲ್ಲದ ಚಕ್ರವರ್ತಿ ಪದವಿ ಲಭಿಸಿದರೂ, ಸುರಲೋಕ ಸಾಮ್ರಾಜ್ಯವು ದೊರಕಿದರೂ, ಈಗ ನನ್ನ ಸರ್ವೇಂದ್ರಿಯಗಳನ್ನು ತಪ್ಪಿಸುವ ಈ ದುಃಖವು ಆರಲಾರದು ॥೮॥

ಈ ಎಲ್ಲ ಗೋತ್ರಜರನ್ನು ನೋಡಿ ನನ್ನ ಮನದಲ್ಲಿ ಮೂಡಿದ ಶೋಕವು ನಿನ್ನ ಉಪದೇಶದ ಹೊರತು ಇನ್ನು ಯಾವ ಬೇರೆ ಉಪಾಯದಿಂದಲೂ ಹೋಗಲಾರದು ॥೬೪॥

ಈಗ ಇಲ್ಲಿ ಇಡೀ ಪೃಥ್ವಿಯ ರಾಜ್ಯ ದಕ್ಕಿದರೂ ಇಲ್ಲವೇ ಇಂದ್ರಪದವು ದೊರಕಿದರೂ ಈ ನನ್ನ ಅಂತಃಕರಣದಲ್ಲಿ ನಿರ್ಮಾಣವಾಗಿರುವ ಮೋಹವು ದೂರಾಗಲಾರದು ॥೬೫॥

ಸುಟ್ಟ ಬೀಜವನ್ನು ಎಷ್ಟೇ ಉತ್ತಮ ಭೂಮಿಯಲ್ಲಿ ಬಿತ್ತಿ ಅದಕ್ಕೆ ಮನಸಾರೆ ನೀರುಣಿಸಿದರೂ ಮೊಳಕೆ ಹುಟ್ಟಲಾರದು ॥೬೬॥

ಅಥವಾ ಯಾರ ಆಯುಷ್ಯವು ಮುಗಿದಿದೆಯೋ ಅಲ್ಲಿ ಯಾವ ಔಷಧದ ಉಪಯೋಗ ಬೀಳದೇ ಪರಮಾಮೃತದ ಉಪಯೋಗ ಮಾತ್ರ ಆಗುವುದು ॥೬೭॥

ಅದರಂತೆ ನನಗೆ ಎಲ್ಲ ರಾಜ್ಯಬೋಗ ಧನ ಸಂಪತ್ತು ದೊರಕಿದರೂ ಮೋಹದಿಂದ ಪಾರಾಗಲು ಇವುಗಳ ಉಪಯೋಗ ಖಂಡಿತ ಆಗಲಾರದು. ಆದರೆ ಹೇ ಕೃಪಾನಿಧಿಯೇ, ನಿನ್ನ ಕೃಪೆಯ ಜಿವ್ಹಾಳವು ಮಾತ್ರ ಉಪಯೋಗವಾದೀತು ॥೬೮॥

ಈ ರೀತಿ ಕ್ಷಣ ಹೊತ್ತು ಭ್ರಾಂತಿ ದೂರ ಸರಿದಿದ್ದರಿಂದ ಅರ್ಜುನನು ಈ ಪ್ರಕಾರ ನುಡಿದನು. ಆದರೆ ಪುನಃ ಆತನಿಗೆ ಮೋಹವು ಗ್ರಾಸ ಮಾಡಿತು ॥೬೯॥

ಕೀ ಮಜ ಪಾಹತಾ ಉರ್ಮಿಿ ನೋಹೇ । ಹೇ ಅನಾರಿಸೇ ಗಮತ ಆಹೇ । ತೋ ಗ್ರಾಸಿಲಾ ಮಹಾಮೋಹೇ । ಕಾಳಸರ್ಪೇ ॥೭೦॥ ಸವರ್ಮ ಹೃದಯಕಲ್ಹಾರೀ । ತೇಥ ಕಾರುಣ್ಯ ವೇಳೇಚ್ಯಾ ಭರೀ । ಲಾಗಲಾ ಮ್ಹಣೌನಿ ಲಹರಿ । ಭಾಂಜೇಚಿನಾ ? ॥೭೧॥ ಹೇ ಜಾಣೋನಿ ಐಸೀ ಪ್ರೌಢೀ । ಜೋ ದೃಷ್ಟಿಸವೇಂಚಿ ವಿಷ ಫೇಡೀ । ತೋ ಧಾವಯಾ ಶ್ರೀಹರೀ ಗಾರುಡೀ । ಪಾತಲಾ ಕೀ ॥೭೨॥ ತೈಸಿಯಾ ಪಂಡುಕುಮರಾ ವ್ಯಾಕುಳಾ । ಮಿರವತಸೇ ಶ್ರೀಕೃಷ್ಣಾ ಜವಳಾ । ತೋ ಕೃಪಾವಶೇ ಅವಲೀಳಾ । ರಕ್ಷೀಲ ಆತಾ ॥೭೩॥ ಮ್ಹಣೋನಿ ತೋ ಪಾರ್ಥು । ಮೋಹಫಣಿಗ್ರಸ್ತು । ಮ್ಯಾ ಮ್ಹಣಿತಲಾ ಹಾ ಹೇತು । ಜಾಣೋನಿಯಾ ॥೭೪॥ ಮಗ ದೇಖಾ ತೇಥ ಫಾಲ್ಗುನು । ಘೇತಲಾ ಅಸೇ ಭ್ರಾಂತೀ ಕವಳೂನು । ಜೈಸಾ ಘನಪಟಳೀ ಭಾನು । ಆಚ್ಛಾದಿಜೇ ॥೭೫॥ ತಯಾಪರಿ ತೋ ಧನುರ್ಧರು । ಜಾಲಾಸೇ ದುಃಖೇ ಜರ್ಜರು । ಜೈಸಾ ಗ್ರೀಷ್ಮಕಾಳೀ ಗಿರಿವರು । ವಣವಲಾ ಕಾ ॥೭೬॥ ಮ್ಹಣೋನಿ ಸಹಜೇ ಸುನೀಳು । ಕೃಪಾಮೃತೇ ಸಜಳು । ತೋ ವೋಳಲಾಸೇ ಶ್ರೀಗೋಪಾಳು । ಮಹಾಮೇಘು ॥೭೭॥ ತೇಥ ಸುದರ್ಶನಾಂಚೀ ದ್ಯುತೀ । ತೇಚಿ ವಿದ್ಯುಲ್ಲತಾ ಝಳಕತೀ । ಗಂಭೀರ ವಾಚಾ ತೇ ಆಯಿತೀ । ಗರ್ಜನೇಚೀ ॥೭೮॥ ಆತಾ ತೋ ಉದಾರ ಕೈಸಾ ವರ್ಷೇಲ । ತೇಣೇ ಅರ್ಜುನಾಚಳು ನಿವೇಲ । ಮಗ ನವೀ ವಿರೂಢೀ ಫುಟೇಲ । ಉನ್ಮೇಷಾಚೀ ॥೭೯॥ ತೇ ಕಥಾ ಆಇಕಾ । ಮನಾಚಿಯಾ ಆರಾಣುಕಾ । ಜ್ಞಾನದೇವೋ ಮ್ಹಣೇ ದೇಖಾ । ನಿವೃತ್ತಿದಾಸು ॥೮೦॥

ಸಂಜಯ ಉವಾಚ :-
ಏವಮುಕ್ತ್ವಾ ಹೃಷಿಕೇಶಂ ಗುಡಾಕೇಶಃ ಪರಂತಪ ।
ನ ಯೋತ್ಸ್ಯ ಇತಿ ಗೋವಿಂದಂ ಉಕ್ತ್ವಾ ತೂಷ್ಣೀಂ ಬಭೂವ ಹ ॥೯॥

ಐಸೇ ಸಂಜಯೋ ಅಸೇ ಸಾಂಗತು । ಮ್ಹಣೇ ರಾಯಾ ತೋ ಪಾರ್ಥು । ಪುನರಪೀ ಶೋಕಾಕುಳಿತು । ಕಾಯ ಬೋಲೇ ॥೮೧॥ ಆಇಕೇ ಸಖೇದು ಬೋಲೇ ಶ್ರೀಕೃಷ್ಣಾತೇ । ಆತಾ ನಾಳವಾವೆ ತುಮ್ಹೀ ಮಾತೇ । ಮೀ ಸರ್ವಥಾ ನ ಝುಂಜೇ ಏಥೇ । ಭರಂವಸೇನೀ ॥೮೨॥ ಐಸೇ ಯೇಕಿ ಹೇಳಾ ಬೋಲಿಲಾ । ಮಗ ಮೌನ ಧರೂನಿ ಠೇಲಾ । ತೇಥ ಶ್ರೀಕೃಷ್ಣಾ ವಿಸ್ಮೋ ಪಾತಲಾ । ದೇಖೋನಿ ತಯಾತೇ ॥೮೩॥

ತಮುವಾಚ ಹೃಷಿಕೇಶಃ ಪ್ರಹಸನ್ನಿವ ಭಾರತ ।
ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ ॥೧೦॥

(ಅರ್ಜುನನ ಸ್ಥಿತಿಯಲ್ಲಿ ಜ್ಞಾನೇಶ್ವರರು ಈ ರೀತಿ ರೂಪಕ ಮಾಡುತ್ತಿದ್ದಾರೆ) ಈತನಿಗೆ ಮೋಹದ ಲಹರಿ ಇರದೇ ಬೇರೆ ಯಾವುದೇ ರೀತಿ ಇರಬೇಕೆಂದು ನನಗೆ ಅನಿಸಿಕೆ ಆಗುತ್ತಿದೆ. ಅದೇನೆಂದರೆ ಮಹಾಮೋಹ ರೂಪ ಕಾಳಸರ್ಪವು ಅರ್ಜುನನನ್ನು ನುಂಗಿಬಿಟ್ಟಿದೆ ॥೭೦॥

ಮರ್ಮದ ಸ್ಥಾನವಾದ ಹೃದಯ ಕಮಲದ ಸ್ಥಳದಲ್ಲಿ ಕಾರುಣ್ಯ ರೂಪ ಸಾಯಂಕಾಲ ಆ ಮಹಾಸರ್ಪವು ಕಚ್ಚಿತು. ಅಂತೆಯೇ ಭ್ರಮರೂಪ ವಿಷವು ಏರುತ್ತಲೇ ಇದ್ದು, ಇಳಿಯುವ ಸಾಧ್ಯತೆ ಇದ್ದಿಲ್ಲ ॥೭೧॥

ಈ ಪ್ರಕಾರ ವಿಷದ ಉಗ್ರತನ ಕಂಡು ನೋಟ ಮಾತ್ರದಿಂದ ವಿಷ ಇಳಿಸುವ ಸಮರ್ಥ ಗಾರುಡಿ ರೂಪ ಶ್ರೀಹರಿಯು ಧಾವಿಸಿ ಬಂದನು ॥೭೨॥

ಈಗ ಆ ವ್ಯಾಕುಲಗೊಂಡ ಅರ್ಜುನನ ಮಗ್ಗುಲಲ್ಲಿ ಶ್ರೀಕೃಷ್ಣನು ಗಾರುಡಿಯಂತೆ ಶೋಭಿಸುತ್ತಿದ್ದನು. ಆತನಿಗೆ ತನ್ನ ಕೃಪಾ ಸಾಮರ್ಥ್ಯದಿಂದ ಸಹಜ ಲೀಲೆಯಿಂದ ರಕ್ಷಿಸುವನು ॥೭೩॥

ಆದ್ದರಿಂದ ಮೋಹವೆಂಬ ಸರ್ಪವು ಅರ್ಜುನನಿಗೆ ಗ್ರಾಸ ಮಾಡಿದೆ, ಎಂಬ ಭಾವವನ್ನು ಮನದಲ್ಲಿ ತಂದು ನಾನು ಇಲ್ಲಿ ರೂಪಕ ಮಾಡಿರುವೆನು ॥೭೪॥

ಯಾವ ಪ್ರಕಾರವಾಗಿ ಸೂರ್ಯನು ಕಾರ್ಮೋಡಗಳಿಂದ ಆಚ್ಛಾದಿತನಾಗುವನೋ ಅದರಂತೆ ಈಗ ಅರ್ಜುನನು ಭ್ರಾಂತಿಯಿಂದ ಆಚ್ಛಾದಿತನಾಗಿದ್ದಾರೆ ॥೭೫॥

ಬೇಸಿಗೆ ಕಾಲದಲ್ಲಿ ಪರ್ವತಕ್ಕೆ ಬೆಂಕಿ ಹತ್ತಿ ಉರಿಯುವಂತೆ ಅರ್ಜುನನು ದುಃಖದಿಂದ ಅತೀ ಜರ್ಜರನಾಗಿ ಹೋದನು ॥೭೬॥

ಸಹಜವಾಗಿ ನೀಲವರ್ಣ ಮತ್ತು ಕೃಪಾಮೃತದಿಂದ ಜಲಮಯ ಹೀಗೆ ಶ್ರೀಗೋಪಾಲರೂಪಿ ಮಹಾಮೇಘವು ಮಳೆಗರೆಯಲು ಅರ್ಜುನನ ಕಡೆ ಹೊರಟಿತು ॥೭೭॥

ಅಲ್ಲಿ ಸುಂದರವಾದ ದಂತಗಳ ಕಾಂತಿಯು ಆಗಾಗ ಮಿಂಚುವ ಮಿಂಚಿನಂತೆ ಕಾಣುತ್ತಿತ್ತು ಮತ್ತು ಗುಡುಗುವುದು ಆತನ ಗಂಭೀರ ವಾಣಿಯಾಗಿತ್ತು ॥೭೮॥

ಹೀಗೆ ಶ್ರೀಭಗವಾನರೂಪ ಮೇಘವು ಈಗ ಯಾವ ರೀತಿ ಮಳೆಗರೆದು ಅರ್ಜುನನ ರೂಪ ಉರಿಯುವ ಪರ್ವತವನ್ನು ಹೇಗೆ ಶಾಂತವಾಗುವುದು ಮತ್ತು ಆತನಿಗೆ ಜ್ಞಾನದ ಅಂಕುರ ಹೇಗೆ ಮೂಡುವುದು ? ॥೭೯॥

ಈ ಕಥೆಯನ್ನು ಸಾವಧಾನ ಚಿತ್ತದಿಂದ ಕೇಳಿರಿ ಎಂದು ಶ್ರೀನಿವೃತ್ತಿದಾಸರಾದ ಜ್ಞಾನೇಶ್ವರರು ಹೇಳುವರು ॥೮೦॥

ಶ್ಲೋಕಾರ್ಥ :- ಸಂಜಯನು ಹೀಗೆ ಹೇಳಿದನು: ಹೇ ಧೃತರಾಷ್ಟ್ರಾ, ಅರ್ಜುನನು ಈ ವಿಧವಾಗಿ ಶ್ರೀಕೃಷ್ಣನಿಗೆ ಹೇಳಿ ಯುದ್ಧವನ್ನು ಬಿಟ್ಟು ಸುಮ್ಮನೆ ಕುಳಿತನು ॥೯॥

ಈ ಪ್ರಕಾರವಾಗಿ ಧೃತರಾಷ್ಟ್ರನಿಗೆ ಹೇಳಿ ಸಂಜಯನು ಪುನಃ ಹೇಳುತ್ತಾನೆ : ಹೇ ರಾಜನೇ ಪುನಃ ಅರ್ಜುನನು ಶೋಕಯುಕ್ತ ಅಂತಃಕರಣದಿಂದ ಹೇಳುತ್ತಿದ್ದಾನೆ ॥೮೧॥

ಅದನ್ನು ಕೇಳು, ಅರ್ಜುನನು ಬಹಳ ಖಿನ್ನನಾಗಿ ಈಗ ಏನಾದರೂ ಆಗಲಿ ನನ್ನನ್ನು ಮಾತ್ರ ಯುದ್ಧಕ್ಕೆ ಆಗ್ರಹ ಮಾಡಬೇಡ ಎಂದು ಶ್ರೀಕೃಷ್ಣನಿಗೆ ಹೇಳಿದನು ॥೮೨॥

ಈ ಪ್ರಕಾರವಾಗಿ ಒಮ್ಮಿಂದೊಮ್ಮೆಲೆ ಹೇಳಿ ಮುಂದೆ ಏನೂ ಮಾತನಾಡದೇ ಆತನು ಸುಮ್ಮನಾದನು. ಈತನ ಈ ಸ್ಥಿತಿಯನ್ನು ಕಂಡು ಭಗವಂತನಿಗೆ ಬಹಳ ಆಶ್ಚರ್ಯವಾಯಿತು ॥೮೩॥

ಶ್ಲೋಕಾರ್ಥ :- ಭರತ ಕುಲ ದೀಪಿಕಾ ಉಭಯ ಸೇನೆಗಳ ಮಧ್ಯೆ ದುಃಖಪಡುತ್ತಿರುವ ಅರ್ಜುನನ್ನು ನೋಡಿ ಹುಸಿನಗೆ ನಗುವವನಂತೆ ಅಂತರ್ಯಾಮಿಯಾದ ಹೃಷೀಕೇಶನು ಹೀಗೆ ಹೇಳಿದನು ॥೧೦॥

ಮಗ ಆಪುಲಾ ಚಿತ್ತೀ ಮ್ಹಣೇ । ಏಥ ಹೇ ಕಾಯೀ ಆದರಿಲೇ ಯೇಣೇ । ಅರ್ಜುನ ಸರ್ವಥಾ ಕಾಹೀ ನೇಣೇ । ಕಾಯ ಕೀಜೇ ॥೮೪॥ ಹಾ ಉಮಜೇ ಆತಾ ಕವಣೇಪರೀ । ಕೈಸೇನಿ ಧೀರು ಸ್ವೀಕಾರೀ । ಜೈಸಾ ಗ್ರಹಾತೇ ಪಂಚಾಕ್ಷರೀ । ಅನುಮಾನೀ ಕಾ ॥೮೫॥ ನಾ ತರೀ ಅಸಾಧ್ಯ ದೇಖೋನಿ ವ್ಯಾಧಿ । ಅಮೃತಾಸಮ ದಿವ್ಯ ಔಷಧಿ । ವೈದ್ಯ ಸೂಚಿ ನಿರವಧಿ । ನಿದಾನೀಚೀ ॥೮೬॥ ತೈಸೇ ವಿವರೀತು ಅಸೇ ಶ್ರೀಅನಂತು । ತಯಾ ದೋಹೀ ಸೈನ್ಯಾಆಂತು । ಜಯಾಪರೀ ಪಾರ್ಥು । ಭ್ರಾಂತೀ ಸಾಂಡೀ ॥೮೭॥ ತೇ ಕಾರಣ ಮನೀ ಧರಿಲೇ । ಮಗ ಸರೋಷ ಬೋಲೋ ಆದರಿಲೇ । ಜೈಸೇ ಮಾತೇಚ್ಯಾ ಕೋಪೀ ಥೋಕುಲೇ । ಸ್ನೇಹ ಆಥೀ ॥೮೮॥ ಕೀ ಔಷಧಾಚಿಯಾ ಕಡುವಟಪಣೀ । ಜೈಸೀ ಅಮೃತಾಚೀ ಪುರವಣೀ । ತೇ ಆಹಾಚ ನ ದಿಸೇ ಪರೀ ಗುಣೀ । ಪ್ರಕಟ ಹೋಯ ॥೮೯॥ ತೈಸೀ ವರಿವರಿ ಪಾಹತಾ ಉದಾಸೇ । ಆಂತ ತರೀ ಅತಿ ಸುರಸೇ । ತಿಯೇ ವಾಕ್ಯೇ ಹೃಷೀಕೇಶೇ । ಬೋಲೋ ಆದರಿಲೇ ॥೯೦॥

ಶ್ರೀಭಗವಾನುವಾಚ:-
ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।
ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ॥೧೧॥

ಮಗ ಅರ್ಜುನಾತೇ ಮ್ಹಣಿತಲೇ । ಆಮ್ಹೀ ಆಜಿ ಹೇ ನವಲ ದೇಖಿಲೇ । ಜೇ ತುವಾ ಏಥ ಆದರಿಲೇ । ಮಾಝಾರೀಂಚಿ ॥೯೧॥ ತೂ ಜಾಣತಾ ತರೀ ಮ್ಹಣವಿಸೀ । ಪರೀ ನೇಣಿವೇತೇ ನ ಸಂಡಿಸೀ । ಆಣಿ ಶಿಕವೂ ಮ್ಹಣೋ ತರೀ ಬೋಲಸೀ । ಬಹುಸಾಲ ನೀತಿ ॥೯೨॥ ಜಾತ್ಯಂಧಾ ಲಾಗೇ ಪಿಸೇ । ಮಗ ತೇ ಸೈರಾ ಧಾವೇ ಜೈಸೇ । ತುಝೇ ಶಹಾಣಪಣ ತೈಸೇ । ದಿಸತಸೇ ॥೯೩॥ ತೂ ಆಪಣಪೇ ತರೀ ನೇಣಸೀ । ಪರೀ ಯಾ ಕೌರವಾಂತೇ ಶೋಚೂ ಪಹಾಸೀ । ಹಾ ಬಹು ವಿಸ್ಮಯ ಆಮ್ಹಾಸೀ । ಪುಡತಪುಢತೀ ॥೯೪॥ ತರೀ ಸಾಂಗ ಪಾ ಅರ್ಜುನಾ । ತುಜಪಾಸೂನಿ ಸ್ಥಿತಿ ಯಾ ತ್ರಿಭುವನಾ? । ಹೇ ಅನಾದಿ ವಿಶ್ವರಚನಾ । ತೇ ಲಟಕೇ ಕಾಯೀ? ॥೯೫॥ ಏಥ ಸಮರ್ಥು ಏಕ ಆಥೀ । ತಯಾಪಾಸೂನಿ ಭೂತೇ ಹೋತೀ । ತರೀ ಹೇ ವಾಯಾಂಚಿ ಕಾಯ ಬೋಲತೀ । ಜಗಾಮಾಜಿ? ॥೯೬॥ ಹೋ ಕಾ ಸಾಂಪ್ರತ ಐಸೇ ಜಾಹಲೇ । ಜೇ ಹೇ ಜನ್ಮಮೃತ್ಯು ತುವಾ ಸೃಜಿಲೇ । ಆಣಿ ನಾಶು ಪಾವೇ ನಾಶಿಲೇ । ತುಝೇನಿ ಕಾಯೀ ॥೯೭॥ ತೂ ಭ್ರಮಲೇಪಣೇ ಅಹಂಕೃತೀ । ಯಾಂಸಿ ಘಾತು ನ ಧರಿಸಿ ಚಿತ್ತೀ । ತರೀ ಸಾಂಗೇ ಕಾಯಿ ಹೇ ಹೋತೀ । ಚಿರಂತನ ॥೯೮॥

ಭಗವಂತನು ತನ್ನಲ್ಲಿಯೇ ಚಿಂತಿಸುತ್ತಾನೆ - ಈ ಪ್ರಸಂಗದಲ್ಲಿ ಅರ್ಜುನನು ಏನು ಆರಂಭಿಸಿದ್ದಾನಲ್ಲ? ಅರ್ಜುನನಿಗೆ ಏನೂ ತಿಳಿಯದಾಗಿದೆ. ಈಗ ಈತನಿಗೆ ಏನು ಮಾಡಬೇಕು ? ।।೫೪।।

ಈಗ ಈತನಿಗೆ ಯಾವ ರೀತಿ ತಿಳಿವಳಿಕೆ ಕೊಡಬೇಕು? ಏನು ಮಾಡಿದರೆ ಈತನು ಧೈರ್ಯ ತಂದುಕೊಳ್ಳುವನು? ಯಾವ ಪ್ರಕಾರ ಮಾಂತ್ರಿಕನು ಪಿಶಾಚಾದಿಕರ ಪರೀಕ್ಷೆ ಮಾಡುವ ಹಾಗೆ ।।೫೫।।

ಅಥವಾ ರೋಗ ಅಸಾಧ್ಯ ಮಟ್ಟಕ್ಕೆ ಇರುವುದನ್ನು ನೋಡಿದಾಕ್ಷಣ ವೈದ್ಯನು ಕೊನೆಯದಾದ ಅಮೃತತುಲ್ಯ ದಿವ್ಯ ಔಷಧವನ್ನು ತತ್ಕಾಲದಲ್ಲಿ ಪ್ರಯೋಗಿಸುವನು ।।೫೬।।

ಆ ಪ್ರಕಾರವಾಗಿ, ಆ ಎರಡೂ ಸೈನ್ಯಗಳ ಮಧ್ಯೆ ಇರುವ ಶ್ರೀಕೃಷ್ಣ ಭಗವಾನನು ಯಾವ ಉಪಾಯದಿಂದ ಅರ್ಜುನನು ಮೋಹದಿಂದ ಮುಕ್ತನಾದಾನು ಎಂದು ವಿಚಾರಿಸುತ್ತಿರುವನು ।।೫೭।।

ಭಗವಾನನು ಮೋಹದ ಕಾರಣ ಮನದಲ್ಲಿ ನಿಶ್ಚಯಿಸಿಕೊಂಡು ಸಿಟ್ಟು ಬಂದವರಂತೆ ಹೇಳಲಾರಂಭಿಸಿದನು. ತಾಯಿಯ ಸಿಟ್ಟಿನಲ್ಲಿ ಪ್ರೇಮ ತುಂಬಿರುವಂತೆ ।।೫೮।।

ಅಥವಾ ಔಷಧದ ಕಹಿತನ ಅಮೃತದ ಸಮಾನ ಇರುವುದು. ಆದರೆ ಅದು ಪ್ರತ್ಯಕ್ಷ ಕಾಣಿಸುವುದಿಲ್ಲ. ಗುಣದಿಂದ ಮಾತ್ರ ಪ್ರಕಟವಾಗುತ್ತದೆ ।।೫೯।।

ಅದರಂತೆ ಮೇಲ್ನೋಟಕ್ಕೆ ಕೇಳಲು ಕಠೋರವಾಗಿದ್ದರೂ ಪರಿಣಾಮ ಮಾತ್ರ ಹಿತಕರವಾಗಿರುವ ಭಾಷಣವನ್ನು ಶ್ರೀಭಗವಾನನು ಮಾಡಹತ್ತಿದನು ।।೬೦।।

ಶ್ಲೋಕಾರ್ಥ :- ಶ್ರೀ ಭಗವಂತನು ಹೀಗೆ ಹೇಳಿದನು : ಪಾರ್ಥಾ! ನೀನು ಯಾರಿಗಾಗಿ ಅಳಬಾರದೋ, ಅವರಿಗಾಗಿ ಅಳುತ್ತಿದ್ದೀಯೆ ಮತ್ತು ಜಾಣತನದ ಮಾತುಗಳನ್ನು ಆಡುತ್ತಿದ್ದೀಯೇ, ಆತ್ಮನ ಸ್ವರೂಪವನ್ನು ತಿಳಿದವರು ಸತ್ತವರಿಗಾಗಲಿ, ಇರುವವರಿಗಾಗಲಿ, ಅಳುವುದಿಲ್ಲ ।।೧೧।।

ಆಗ ಅರ್ಜುನನಿಗೆ ಹೇಳುತ್ತಾನೆ: ಇಂದು ನಾವು ಒಂದು ಆಶ್ಚರ್ಯವನ್ನು ನೋಡುತ್ತಿದ್ದೇವೆ. ಈ ಯುದ್ಧ ಸಮಯದಲ್ಲಿ ಅಕಸ್ಮಾತ್ ನೀನೇನೋ ಆರಂಭಿಸಿರುವೆ. ಅಜ್ಞಾನವನ್ನು ಬಿಡಲೊಲ್ಲೆ ।।೬೧।।

ನೀನು ಸ್ವತಃ ಜ್ಞಾನಿ ಎಂದು ಹೇಳಿಕೊಳ್ಳುವೆ. ಆದರೆ ಅಜ್ಞಾನವನ್ನು ಬಿಡಲೊಲ್ಲೆ. ನಾನು ನಿನಗೆ ಏನಾದರೂ ತಿಳಿಸಬೇಕೆಂದರೆ ನೀನೇ ನಮಗೆ ಧರ್ಮ ನೀತಿಯ ಬುದ್ಧಿವಂತಿಕೆಯ ಮಾತು ಹೇಳುತ್ತಿರುವೆ ।।೬೨।।

ಹುಟ್ಟು ಕುರುಡನಿಗೆ ಹುಚ್ಚು ಹಿಡಿಯಿತೆಂದರೆ ಅವನು ಹೇಗೆ ಸಿಕ್ಕ ಸಿಕ್ಕಲ್ಲಿ ಮನಬಂದಂತೆ ಓಡುವನೋ ಅದರಂತೆ ನಿನ್ನ ಬುದ್ಧಿವಂತಿಕೆ ಕಾಣಿಸುತ್ತಿದೆ ।।೬೩।।

ನೀನು ಸ್ವಸ್ವರೂಪವನ್ನು ತಿಳಿಯದೇ ಕೌರವರಿಗಾಗಿ ಶೋಕವನ್ನು ಮಾಡುತ್ತಿರುವೆ. ಇದರ ವಿಷಯಕ್ಕೆ ನಮಗೆ ಮೇಲಿಂದ ಮೇಲೆ ಆಶ್ಚರ್ಯವಾಗುತ್ತಿದೆ ।।೬೪।।

ಆದರೆ, ಅರ್ಜುನಾ, ನೀನೇ ಹೇಳು ನೋಡೋಣ, ಈ ವಿಶ್ವದ ಅನಾದಿ ರಚನೆ ಸುಳ್ಳು ಇದ್ದು ತ್ರಿಲೋಕದ ಪಾಲನ ಕರ್ತನು ನೀನೇ ಇರುವಿಯಾ ? ।।೬೫।।

ಈ ಸೃಷ್ಟಿಯಲ್ಲಿ ಸರ್ವಶಕ್ತ ಈಶ್ವರನು ಇದ್ದಾನೆ. ಆತನಿಂದಲೇ ಪ್ರಾಣಿಮಾತ್ರರ ಉತ್ಪತ್ತಿಯಾಗುವುದು. ಹೀಗೆ ಜಗತ್ತಿನಲ್ಲಿ ಎಲ್ಲರೂ ಹೇಳುವುದು ಸುಳ್ಳೆ ? ।।೬೬।।

ಆದರೆ ಈಗ ಸಧ್ಯ ಕಾಲದಲ್ಲಿ ಬದಲಾವಣೆ ಆಗಿರಬಹುದೇನೋ, ನೀನೇ ಈ ವಿಶ್ವದ ಜನ್ಮ ಮರಣ ನಿರ್ಮಿಸಿರುವಿಯಾ ? ಮತ್ತು ನೀನೇ ನಾಶ ಮಾಡಿದಾಗ ಮಾತ್ರ ಇದರ ನಾಶವಾಗುವುದೇ? ।।೬೭।।

ಒಂದುವೇಳೆ ನೀನು ಭ್ರಮೆಯ ಮೂಲಕ ಅಹಂಕಾರದಿಂದ ಕೂಡಿದವನಾಗಿ ಈ ಕೌರವರನ್ನು ಕೊಲ್ಲುವುದು ಮನಸ್ಸಿನಲ್ಲಿ ತಾರದಿದ್ದರೆ ಇವರು ಚಿರಂಜೀವಿಯಾಗಿ ಇರುವರೇ ? ಹೇಳು ।।೬೮।।

ಕೀ ತೂ ಏಕ ವಧಿತಾ । ಆಣಿ ಸಕಳ ಲೋಕು ಹಾ ಮರತಾ । ಐಸೀ ಭ್ರಾಂತಿ ಝಣೇ ಚಿತ್ತಾ । ಯೇವೋ ದೇಸೀ ॥೯೯॥ ಅನಾದಿಸಿದ್ಧ ಹೇ ಆಘವೇ । ಹೋತ ಜಾತ ಸ್ವಭಾವೇ । ತರೀ ತುವಾ ಕಾ ಶೋಚಾವೇ । ಸಾಂಗೇ ಮಜ ॥೧೦೦॥ ಪರೀ ಮೂರ್ಖಪಣೇ ನೇಣಸೀ । ನ ಚಿಂತಾವೇ ತೇ ಚಿಂತಿಸೀ । ಆಣಿ ತೂಂಚಿ ನೀತಿ ಸಾಂಗಸೀ । ಆಮ್ಹಾ ಪ್ರತಿ ॥೧೦೧॥ ದೇಖೈ ವಿವೇಕೀ ಜೇ ಹೋತೀ । ತೇ ದೋಹೀತೇಹೀ ನ ಶೋಚಿತೀ । ಜೇ ಹೋಯ ಜಾಯ ಹೇ ಭ್ರಾಂತೀ । ಮ್ಹಣೌನಿಯಾ ॥೧೦೨॥

ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ।
ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥೧೨॥

ಅರ್ಜುನಾ ಸಾಂಗೈನ ಆಇಕ । ಏಥ ಆಮ್ಹೀ ತುಮ್ಹೀ ದೇಖ । ಆಣಿ ಹೇ ಭೂಪತಿ ಅಶೇಖ । ಆದಿಕರುನಿ ॥೧೦೩॥ ನಿತ್ಯತಾ ಐಸೇಚಿ ಅಸೋನೀ । ನಾ ತರೀ ನಿಶ್ಚಿತ ಕ್ಷಯ ಜಾಉನೀ । ಹೇ ಭ್ರಾಂತಿ ವೇಗಳೀ ಕರುನೀ । ದೋನ್ಹೀ ನಾಹೀ ॥೧೦೪॥ ಹೇ ಉಪಜೇ ಆಣಿ ನಾಶೇ । ತೇ ಮಾಯಾವಶೇ ದಿಸೇ । ಯೇರ್ಹವೀ ತತ್ತ್ವತಾ ವಸ್ತು ಜೇ ಅಸೇ । ತೇ ಅವಿನಾಶಚಿ ॥೧೦೫॥ ಜೈಸೇ ಪವನೇ ತೋಯ ಹಾಲವಿಲೇ । ಆಣಿ ತರಂಗಾಕಾರ ಜಾಹಲೇ । ತರೀ ಕವಣ ಕೇ ಜನ್ಮಲೇ । ಮ್ಹಣೋಯೇ ತೇಥ ?॥೧೦೬॥ ತೇಚಿ ವಾಯುಚೇ ಸ್ಫುರಣ ಠೇಲೇ । ಆಣಿ ಉದಕ ಸಹಜ ಸಪಾಟ ಜಾಹಲೇ । ತರೀ ಆತಾ ಕಾಯ ನಿಮಾಲೇ । ವಿಚಾರೀ ಪಾ ॥೧೦೭॥

ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।
ತಥಾ ದೇಹಾಂತರಪ್ರಾಪ್ತಿಃ ಧೀರಸ್ತತ್ರ ನ ಮುಹ್ಯತಿ ॥೧೩॥

ಆಇಕೇ ಶರೀರ ತರೀ ಏಕ । ಪರೀ ವಯಸಾಭೇದ ಅನೇಕ । ಹೇ ಪ್ರತ್ಯಕ್ಷಚಿ ದೇಖ । ಪ್ರಮಾಣ ತೂ ॥೧೦೮॥ ಏಥ ಕೌಮಾರತ್ವ ದಿಸೇ । ಮಗ ತಾರುಣ್ಯೀ ತೇ ಭ್ರಂಶೇ । ಪರೀ ದೇಹಚಿ ಹಾ ನ ನಾಶೇ । ಏಕೇಕಾಸವೇ ॥೧೦೯॥ ತೈಸೀ ಚೈತನ್ಯಾಚ್ಯಾ ಠಾಯೀ । ಇಯೇ ಶರೀರಾಂತರೇ ಹೋತಿ ಜಾತೀ ಪಾಹೀ । ಐಸೇ ಜಾಣೇ ತಯಾ ನಾಹೀ । ವ್ಯಾಮೋಹ ದುಃಖ ॥೧೧೦॥

ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ ।
ಆಗಮಾಪಾಯಿನೋಽನಿತ್ಯಾಃ ತಾಂಸ್ತಿತಿಕ್ಷಸ್ವ ಭಾರತ ॥೧೪॥

ಏಥ ನೇಣಾವಯಾ ಹೇಚಿ ಕಾರಣ । ಜೇ ಇಂದ್ರಿಯಾ ಆಧೀನಪಣ । ತಿಹೀ ಆಕಳಿಜೇ ಅಂತಃಕರಣ । ಮ್ಹಣಊನಿ ಭ್ರಮೇ ॥೧೧೧॥

ಅಥವಾ ನೀನೇ ಒಬ್ಬನು ಮಾತ್ರ ಕೊಲ್ಲುವವನು ಮತ್ತು ಉಳಿದವರು ಎಲ್ಲರೂ ಸಾಯುವವರು ಹೀಗೆ ಭ್ರಾಂತಿ ಕದಾಚಿತ್ ನಿನ್ನ ಚಿತ್ತಕ್ಕೆ ಮೂಡಬಹುದು. ಆದರೆ ಹಾಗೆ ಆಗದ ಹಾಗೆ ಮಾಡು ॥೯೯॥

ಇದೆಲ್ಲವೂ ಅನಾದಿಸಿದ್ಧವಾಗಿದೆ. ಅದು ಸ್ವಾಭಾವಿಕ ಉತ್ಪನ್ನವಾಗಿ ನಾಶವಾಗುತ್ತದೆ. ಈ ವಿಷಯಕ್ಕೆ ನೀನು ವ್ಯರ್ಥವಾಗಿ ಏಕೆ ಶೋಕಿಸುವೆ ? ಹೇಳು ನೋಡೋಣ ॥೧೦೦॥

ಆದಾಗ್ಯೂ, ಮೂರ್ಖತನದಿಂದ ನಿನಗೆ ಇದು ತಿಳಿಯಲಾರದು. ಯಾವ ಮಾತನ್ನು ಮನದಲ್ಲಿಯೇ ತರಬಾರದೋ ಅದರ ಬಗ್ಗೆ ವ್ಯರ್ಥವಾಗಿ ವಿಚಾರ ಮಾಡಿ ತಿರುಗಿ ನಮಗೆಯೇ ಬುದ್ಧಿವಂತಿಕೆಯ ಮಾತು ಹೇಳುವೆ ॥೧೦೧॥

ಇಲ್ಲಿ ನೋಡು, ವಿವೇಕಿಯು ಜನ್ಮ ಮತ್ತು ಮರಣವು ಇವು ಭ್ರಾಂತಿ ಎಂದು ತಿಳಿದು ಈ ಎರಡೂ ವಿಷಯಕ್ಕೆ ಶೋಕ ಮಾಡುವುದಿಲ್ಲ ॥೧೦೨॥

ಶ್ಲೋಕಾರ್ಥ :- ನಾನು ಯಾವಾಗಲೂ ಇಲ್ಲದೆ ಇರಲಿಲ್ಲ. ನನ್ನಂತೆ ನೀನೂ ನಿತ್ಯನು. ಈ ರಾಜರು (ಆತ್ಮ ದೃಷ್ಟ್ಯಾ) ಯಾವಾಗಲೂ ಇರುವವರೆ, ನಾವೆಲ್ಲರೂ ಇನ್ನು ಮುಂದೆ ಇರುವುದಿಲ್ಲವೆಂಬ ಮಾತಿಲ್ಲ ॥೧೨॥

ಅರ್ಜುನಾ ಪುನಃ ಹೇಳುವೆ ಕೇಳು. ನೀವು, ನಾವು ಮತ್ತು ಈ ಎಲ್ಲ ರಾಜರು ಈ ಸ್ಥಳದಲ್ಲಿ ಕೂಡಿರುವೆವು ॥೧೦೩॥

ಇವರೆಲ್ಲರೂ ಯಾವಾಗಲೂ ಇರುವರು ಅಥವಾ ನಿಶ್ಚಯವಾಗಿ ನಾಶವಾಗುವರು ಎಂದು ಹೇಳಲಿಕ್ಕೆ ಬರುವುದಿಲ್ಲ. ಇರುವಿಕೆ, ನಾಶವಾಗುವಿಕೆ ಇವು ಎರಡೂ ಭ್ರಾಂತಿಯಿಂದ ತೋರುತ್ತವೆ. ಯಾವುದೂ ನಿಜವಲ್ಲ ॥೧೦೪॥

ಏಕೆಂದರೆ, ಉತ್ಪತ್ತಿಯಾಗುವುದು, ನಾಶವಾಗುವುದು ಮಾಯೆಯ ಯೋಗ, ಆದರೆ ನಿಜವಾಗಿಯೂ ಆತ್ಮನು ಅವಿನಾಶಿ ಇರುವನು ॥೧೦೫॥

ನೀರಿನಲ್ಲಿ ಗಾಳಿಯ ಹೊಡೆತಕ್ಕೆ ತರಂಗಗಳು ಹುಟ್ಟುವುವು. ಅಲ್ಲಿ ಎಲ್ಲಿ ಹುಟ್ಟಿದವು ಎಂದು ಹೇಳಲಿಕ್ಕೆ ಆಗುವುದೆ ? ॥೧೦೬॥

ಈಗ ಅದೇ ಗಾಳಿಯು ಬೀಸುವಿಕೆ ನಿಂತಾಗ ನೀರಿನಲ್ಲಿ ಹುಟ್ಟಿದ ತರಂಗಗಳು ಇಲ್ಲದಂತಾಗುವುವು. ಈಗ ಇಲ್ಲಿ "ಅವು ಸತ್ತವು" ಎಂಬುದು ಇದೆಯೇ? ನೀನೇ ವಿಚಾರ ಮಾಡು ॥೧೦೭॥

ಶ್ಲೋಕಾರ್ಥ :- ಈ ಶರೀರಕ್ಕೆ ಬಾಲ್ಯ, ಯೌವನ, ವಾರ್ಧಿಕ್ಯ ಅವಸ್ಥೆಗಳು ಕ್ರಮವಾಗಿ ಬರುವಂತೆ ಆತ್ಮನಿಗೆ ಆಯಾ ದೇಹಗಳು ಬರುತ್ತಿರುತ್ತವೆ. ಈ ವಿಷಯದಲ್ಲಿ ಧೀರನು ಮೋಹಕ್ಕೆ ಒಳಗಾಗುವುದಿಲ್ಲ ॥೧೩॥

ಮತ್ತೊಂದು ಹೀಗಿದೆ ನೋಡು ; ಶರೀರ ಮಾತ್ರ ಒಂದೇ ಇರುತ್ತದೆ. ಆದರೆ ವಯಸ್ಸಿನ ತಕ್ಕಂತೆ ಅದರಲ್ಲಿಯೂ ಭೇದಗಳು ಆಗುವುವು. ಇದು ಪ್ರತ್ಯಕ್ಷ ಪ್ರಮಾಣವಾಗಿರುವುದು ॥೧೦೮॥

ಈ ಶರೀರದಲ್ಲಿ ಬಾಲ್ಯತ್ವವು ಕಾಣಿಸುತ್ತದೆ. ತದನಂತರ ಈ ಬಾಲ್ಯತ್ವವು ತಾರುಣ್ಯದಲ್ಲಿ ನಾಶವಾಗುತ್ತದೆ. ಆದರೆ ಒಂದರಿಂದ ಒಂದು ಅವಸ್ಥೆಯಲ್ಲಿ ದೇಹ ಮಾತ್ರ ನಾಶ ವಾಗುವುದಿಲ್ಲ ॥೧೦೯॥

ಅದರಂತೆ ಇಲ್ಲಿ ನೋಡು, ಆತ್ಮನಲ್ಲಿ ಅನಂತ ಶರೀರಗಳು ಉತ್ಪನ್ನವಾಗುತ್ತವೆ ಹಾಗೂ ನಾಶವಾಗುತ್ತವೆ. ಹೀಗೆ ತಿಳಿದುಕೊಂಡವರಿಗೆ ಮೋಹದಿಂದ ಆಗುವ ದುಃಖವನ್ನು ಅನುಭವಿಸಬೇಕಾಗಿಲ್ಲ ॥೧೧೦॥

ಶ್ಲೋಕಾರ್ಥ :- ಕುಂತಿಪುತ್ರಾ! ಇಂದ್ರಿಯಗಳು ವಿಷಯಗಳೊಂದಿಗೆ ಕೂಡಿದಾಗ ಶೀತೋಷ್ಣ ಸುಖ ದುಃಖಗಳು ಸಂಭವಿಸುತ್ತವೆ. ಆ ಕೂಡಿಕೆ ಸ್ಥಿರವಲ್ಲ, ಬಂದು ಹೋಗುತ್ತಿರುತ್ತವೆ. ಆದುದರಿಂದ ಹೇ ಭಾರತ ವೀರಾ! ಸಹಿಸಿಕೋ ॥೧೪॥

ಇಂದ್ರಿಯಗಳ ಆಧೀನವಾಗುವಿಕೆಯೇ ತತ್ತ್ವಜ್ಞಾನ ತಿಳಿಯಲಾರದ ಕಾರಣವಾಗಿದೆ. ಇಂದ್ರಿಯಗಳು ಅಂತಃಕರಣಕ್ಕೆ ವಿಷಯಗಳಲ್ಲಿ ರಮಿಸುವಂತೆ ಮಾಡಿ ಭ್ರಮಕ್ಕೆ ಕಾರಣವಾಗುತ್ತವೆ ॥೧೧೧॥

ಇಂದ್ರಿಯೇ ವಿಷಯ ಸೇವಿತೀ । ತೇಥ ಹರ್ಷಶೋಕ ಉಪಜತೀ । ತೇ ಅಂತರ ಆಪ್ಲವಿತೀ । ಸಂಗೇ ಯೇಣೇ ।।೧೧೨।। ಜಯಾ ವಿಷಯಾಂಚ್ಯಾ ಠಾಯೀ । ಏಕನಿಷ್ಠತಾ ಕಹೀ ನಾಹೀ । ತೇಥ ದುಃಖ ಆಣಿ ಕಾಂಹೀ । ಸುಖಹೀ ದಿಸೇ ।।೧೧೩।। ದೇಖೈ ಶಬ್ದಾಚಿ ವ್ಯಾಪ್ತಿ । ನಿಂದಾ ಆಣಿ ಸ್ತುತಿ । ತೇಥ ದ್ವೇಷಾದ್ವೇಷ ಉಪಜತೀ । ಶ್ರವಣದ್ವಾರೇ ।।೧೧೪।। ಮೃದು ಆಣಿ ಕಠಿಣ । ಹೇ ಸ್ಪರ್ಶಾಚೇ ದೋನ್ಹೀ ಗುಣ । ಜೇ ವಪೂಚೇನಿ ಸಂಗೇ ಕಾರಣ । ಸಂತೋಷಖೇದಾ ।।೧೧೫।। ಭ್ಯಾಸುರ ಆಣಿ ಸುರೇಖ । ಹೇ ರೂಪಾಚೇ ಸ್ವರೂಪ ದೇಖ । ಜೇ ಉಪಜವೀ ಸುಖದುಃಖ । ನೇತ್ರದ್ವಾರೇ ।।೧೧೬।। ಸುಗಂಧು ಆಣಿ ದುರ್ಗಂಧು । ಹಾ ಪರಿಮಳಾಚಾ ಭೇದು । ಜೋ ಘ್ರಾಣಸಂಗೇ ವಿಷಾದು । ತೋಷು ದೇತಾ ।।೧೧೭।। ತೈಸಾಚಿ ದ್ವಿವಿಧ ರಸು । ಉಪಜವೀ ಪ್ರೀತಿತ್ರಾಸು । ಮ್ಹಣೌನಿ ಹಾ ಅಪಭ್ರಂಶು । ವಿಷಯಸಂಗು ।।೧೧೮।। ದೇಖೈ ಇಂದ್ರಿಯಾ ಆಧೀನ ಹೋಈಜೇ । ತೈ ಶೀತೋಷ್ಣಾಂತೇ ಪಾವಿಜೇ । ಆಣಿ ಸುಖದುಃಖೀ ಆಕಳಿಜೇ । ಆಪಣಪೇ ।।೧೧೯।। ಯಾ ವಿಷಯಾವಾಚೂನಿ ಕಾಂಹೀ । ಆಣೀಕ ಸರ್ವಥಾ ರಮ್ಯ ನಾಹೀ । ಐಸಾ ಸ್ವಭಾವೋಚಿ ಪಾಹೀ । ಇಂದ್ರಿಯಾಂಚಾ ।।೧೨೦।। ಹೇ ವಿಷಯ ತರೀ ಕೈಸೇ । ರೋಹಿಣೀಚೇ ಜಳ ಜೈಸೇ । ಕಾ ಸ್ವಪ್ನೀಚಾ ಆಭಾಸೇ । ಭದ್ರಜಾತೀ ।।೧೨೧।। ದೇಖೈ ಅನಿತ್ಯ ತಿಯಾಪರಿ । ಮ್ಹಣೌನಿ ತೂ ಅವ್ಹೇರೀ । ಹಾ ಸರ್ವಥಾ ಸಂಗು ನ ಧರೀ । ಧನುರ್ಧರಾ ।।೧೨೨।।

ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ ।
ಸಮದುಃಖಸುಖಂ ಧೀರಂ ಸೋಮೃತತ್ವಾಯ ಕಲ್ಪತೇ ।।೧೫।।

ಹೇ ವಿಷಯ ಜಯಾತೇ ನಾಕಳಿತೀ । ತಯಾ ಸುಖದುಃಖೇ ದೋನ್ಹೀ ನ ಪವತೀ । ಆಣಿ ಗರ್ಭವಾಸುಸಂಗತೀ । ನಾಹೀ ತಯಾ ।।೧೨೩।। ತೋ ನಿತ್ಯರೂಪ ಪಾರ್ಥಾ । ವೋಳಖಾವಾ ಸರ್ವಥಾ । ಜೋ ಯಾ ಇಂದ್ರಿಯಾರ್ಥಾ । ನಾಗವೇಚಿ ।।೧೨೪।।

ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।
ಉಭಯೋರಪಿ ದೃಷ್ಟೋಽಂತಃ ತ್ವನಯೋಸ್ತತ್ತ್ವದರ್ಶಿಭಿಃ ।।೧೬।।

ಆತಾ ಅರ್ಜುನಾ ಕಾಂಹೀ ಏಕ । ಸಾಂಗೇನ ಮೀ ಆಇಕ । ಜೇ ವಿಚಾರ ಪರಲೋಕ । ವೋಳಖಿತೀ ।।೧೨೫।। ಯಾ ಉಪಾಧಿಮಾಜಿ ಗುಪ್ತ । ಚೈತನ್ಯ ಅಸೇ ಸರ್ವಗತ । ತೇ ತತ್ವಜ್ಞ ಸಂತ । ಸ್ವೀಕಾರಿತೀ ।।೧೨೬।।

ಇಂದ್ರಿಯಗಳು ವಿಷಯ ಸೇವನೆ ಮಾಡುವುವು. ಇದರಿಂದ ಸುಖ ದುಃಖಗಳು ಉತ್ಪನ್ನವಾಗುವುವು. ಇಂದ್ರಿಯ ವಿಷಯ ಸಂಬಂಧದಿಂದ ಸುಖ ದುಃಖಗಳು ಅಂತಃಕರಣಕ್ಕೆ ವ್ಯಾಪಿಸಿಕೊಳ್ಳುವುವು ||೧೧೨||

ಈ ವಿಷಯಗಳಲ್ಲಿ ನಿಶ್ಚಿತವಾಗಿ ಒಂದೇ ರೂಪ ಯಾವಾಗಲೂ ಇರುವುದಿಲ್ಲ. ಕೆಲವೊಮ್ಮೆ ಸುಖದಂತೆಯೂ ಮತ್ತು ಕೆಲವೊಮ್ಮೆ ದುಃಖದಂತೆಯೂ ಭಾಸವಾಗುತ್ತವೆ ||೧೧೩||

ಈಗ ಶಬ್ದದ ವ್ಯಾಪ್ತಿ ನೋಡು, ಕಿವಿಯಿಂದ ನಾವು ನಿಂದೆಯನ್ನು ಕೇಳಿದರೆ ದ್ವೇಷ ಉತ್ಪನ್ನವಾಗುವುದು ಮತ್ತು ಸ್ತುತಿ ಕೇಳಿದರೆ ಸಮಾಧಾನ ಸುಖವಾಗುವುದು ||೧೧೪||

ಮೃದು ಮತ್ತು ಕಠಿಣತ್ವವು ಈ ವಿಷಯದ ಎರಡು ಭೇದಗಳಿವೆ. ಅವು ಚರ್ಮ ಇಂದ್ರಯಗಳ ದ್ವಾರಾ ಶರೀರದ ಸಂಬಂಧದಿಂದ ಸುಖಕ್ಕೂ ದುಃಖಕ್ಕೂ ಕಾರಣವಾಗುವುವು ||೧೧೫||

ಅದರಂತೆ ಸುಂದರ ಕುರೂಪ ಹೀಗೆ ಎರಡೂ ಲಕ್ಷಣಗಳು ರೂಪ ವಿಷಯದ್ದಾಗಿವೆ. ಆದರೆ ಇವುಗಳನ್ನು ಕಣ್ಣಿನಿಂದ ನೋಡಿದಾಗ್ಗೆ ಸುಖದುಃಖಗಳು ಉತ್ಪನ್ನವಾಗುತ್ತವೆ ||೧೧೬||

ಇದೇ ಪ್ರಕಾರವಾಗಿ ಗಂಧ ವಿಷಯವಾಗಿ ಸುಗಂಧ ದುರ್ಗಂಧ ಹೀಗೆ ಎರಡು ಭೇದಗಳಿವೆ. ಇವು ಘ್ರಾಣೇಂದ್ರಿಯ (ಮೂಗು) ಮುಖಾಂತರ ಸಂತೋಷ ಅಸಂತೋಷ ಉತ್ಪನ್ನ ಮಾಡುತ್ತವೆ ||೧೧೭||

ಇದೇ ರೀತಿಯಲ್ಲಿ ಎರಡು ಪ್ರಕಾರದ ರಸಗಳು ಪ್ರೀತಿ-ತ್ರಾಸು ಉತ್ಪನ್ನ ಮಾಡುವುವು. ಆದ್ದರಿಂದ ವಿಷಯ ಸಂಗವು ಇದೇ ರೀತಿ ಮುಖ್ಯವಾಗಿ ಸ್ವರೂಪದಿಂದ ಭ್ರಷ್ಟ ಮಾಡುವುದು ||೧೧೮||

ಹೀಗಿದೆ ನೋಡು, ಯಾರು ಇಂದ್ರಿಯಗಳ ಆಧೀನರಾಗುತ್ತಾರೋ ಅವರಿಗೆ ಶೀತೋಷ್ಣ ಬಾಧೆಯಾಗಿ ಅವರು ಸಹಜವಾಗಿ ಸುಖದುಃಖಗಳ ಆಧೀನರಾಗುತ್ತಾರೆ ||೧೧೯||

ಇಂದ್ರಿಯಗಳ ಸ್ವಭಾವವು ಹೇಗಿದೆ ಎಂದರೆ, ಈ ವಿಷಯಗಳ ಹೊರತಾಗಿ ಜಗತ್ತಿನಲ್ಲಿ ರಮ್ಯವಾದದ್ದು ಏನೂ ಇದಕ್ಕೆ ಕಾಣುವುದಿಲ್ಲ ||೧೨೦||

ಈ ವಿಷಯಗಳು ಹೇಗೆ ಇವೆ ಎಂಬುದನ್ನು ವಿಚಾರ ಮಾಡಿದರೆ, ಮೃಗಜಲದಂತೆ ಇಲ್ಲವೇ ಸ್ವಪ್ನದಲ್ಲಿನ ಐಶ್ವರ್ಯದಂತೆ ಭಾಸವಾಗುತ್ತವೆ ||೧೨೧||

ಅದರಂತೆ ಈ ವಿಷಯಗಳು ಅನಿತ್ಯ ಇರುವುವು. ಹೀಗೆ ನಿಶ್ಚಯಮಾಡು ಮತ್ತು ಅರ್ಜುನಾ ಇವುಗಳ ಸಂಗತಿಯನ್ನು ಸರ್ವಥಾ ಹಿಡಿಯದೇ ಅವುಗಳ ತ್ಯಾಗ ಮಾಡು ||೧೨೨||

ಶ್ಲೋಕಾರ್ಥ :- ಹೇ ಪುರುಷವರ್ಯಾ ! ಸುಖ ದುಃಖಗಳಲ್ಲಿ ಸಮನಾಗಿರುವ ಧೀರ ಪುರುಷನನ್ನು, ಇಂದ್ರಿಯ ವಿಷಯಗಳ ಸಂಯೋಗಗಳು ಪೀಡಿಸಲಾರವು. ಅಂಥವರು ಮೋಕ್ಷಕ್ಕೆ ಅರ್ಹರಾಗುತ್ತಾರೆ ||೧೫||

ಯಾವ ಪುರುಷನು ಈ ವಿಷಯಗಳ ಸ್ವಾಧೀನನಾಗುವುದಿಲ್ಲವೋ ಆತನಿಗೆ ಸುಖ ಮತ್ತು ದುಃಖ ಇವೆರಡು ಪ್ರಾಪ್ತವಾಗುವುದಿಲ್ಲ ಮತ್ತು ಗರ್ಭವಾಸದ ಸಂಗತಿಯೂ ಆಗುವುದಿಲ್ಲ ||೧೨೩||

ಅರ್ಜುನಾ ಯಾವನು ಈ ವಿಷಯಗಳ ಪಾಶದಲ್ಲಿ ಬೀಳುವುದಿಲ್ಲವೋ ಆತನು ನಿತ್ಯ ಬ್ರಹ್ಮಸ್ವರೂಪನು. ಹೀಗೆ ನೀನು ನಿಃಸಂಶಯದಿಂದ ತಿಳಿ ||೧೨೪||

ಶ್ಲೋಕಾರ್ಥ :- ಇಲ್ಲದ ಅಸತ್ ಪದಾರ್ಥಕ್ಕೆ ಇರುವಿಕೆ ಇಲ್ಲ. ಇರುವ ಸದ್ ವಸ್ತುವಿಗೆ ಇಲ್ಲದಿರುವಿಕೆ ಇಲ್ಲ. ಈ ಎರಡರ ಕೊನೆಯ ನಿಷ್ಕರ್ಷೆಯನ್ನು ತತ್ತ್ವವೇತ್ತರು ಕಂಡಿರುತ್ತಾರೆ ||೧೬||

ಈಗ ಅರ್ಜುನಾ, ಯಾವುದನ್ನು ವಿಚಾರವಂತ ಜನರು (ಸತತ ಅಭ್ಯಾಸಿಗಳು) ತಿಳಿದುಕೊಂಡಿರುವರೋ ಅಂಥ ಇನ್ನೊಂದು ಮಾತನ್ನು ನಾನು ನಿನಗೆ ಹೇಳುವೆ ||೧೨೫||

ಈ ದೇಹಾದಿ ವಿಶ್ವದ ಉಪಾಧಿಯಲ್ಲಿ ಸರ್ವವ್ಯಾಪಕವಾಗಿ ಗೂಢವಾದ ಚೈತನ್ಯ ಇರುವುದು. ಅದನ್ನೇ ತತ್ತ್ವಜ್ಞ ಸಂತರು ಗ್ರಹಿಸುವರು ||೧೨೬||

ಸಲಿಲೀ ಪಯ ಜೈಸೇ । ಏಕ ಹೋಊನಿ ಮಿನಲೇ ಅಸೇ । ಪರೀ ನಿವಡೂನಿ ರಾಜಹಂಸೇ । ವೇಗಳೇ ಕೀಜೇ ।೧೨೭॥ ಕೀ ಅಗ್ನಿಮುಖೇ ಕಿಡಾಳ । ತೋಡೋನಿಯಾ ಚೋಖಾಳ । ನಿವಡತೀ ಕೇವಳ । ಬುದ್ಧಿಮಂತ ।೧೨೮॥ ನಾ ತರೀ ಜಾಣಿವೇಚ್ಯಾ ಆಯಣೀ । ಕರಿತಾ ದಧಿಕಡಸಣೀ । ಮಗ ನವನೀತ ನಿರ್ವಾಣೀ । ದಿಸೇ ಜೈಸೇ ।೧೨೯॥ ಕೀ ಭೂಸ ಬೀಜ ಏಕವಟ । ಉಪಣಿತಾ ರಾಹೇ ಘನವಟ । ತೇಥ ಉಡೇ ತೇ ಫಲಕಟ । ಜಾಣೋ ಆಲೇ ।೧೩೦॥ ತೈಸೆ ವಿಚಾರಿತಾ ನಿರಸಲೇ । ತೇ ಪ್ರಪಂಚು ಸಹಜೇ ಸಾಂಡವಲೇ । ಮಗ ತತ್ತ್ವತಾ ತತ್ತ್ವ ಉರಲೇ । ಜ್ಞಾನಿಯಾಂಸಿ ।೧೩೧॥ ಮ್ಹಣೌನಿ ಅನಿತ್ಯಾಚ್ಯಾ ಠಾಯೀ । ತಯಾ ಆಸ್ತಿಕ್ಯಬುದ್ಧಿ ನಾಹೀ । ನಿಷ್ಕರ್ಷು ದೋಹೀಂಹೀ । ದೇಖಿಲಾ ಅಸೇ ।೧೩೨॥

ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ ।
ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ ಕರ್ತುಮರ್ಹತಿ ।೧೭॥

ದೇಖೈ ಸಾರಾಸಾರ ವಿಚಾರಿತಾ । ಭ್ರಾಂತಿ ತೇ ಪಾಹೀ ಅಸಾರತಾ । ತರೀ ಸಾರ ತೇ ಸ್ವಭಾವತಾ । ನಿತ್ಯ ಜಾಣೇ ।೧೩೩॥ ಹಾ ಲೋಕತ್ರಯಾಕಾರು । ತೋ ಜಯಾಚಾ ವಿಸ್ತಾರು । ತೇಥ ನಾಮ ವರ್ಣ ಆಕಾರು । ಚಿನ್ಹ ನಾಹೀ ।೧೩೪॥ ಜೋ ಸರ್ವದಾ ಸರ್ವಗತು । ಜನ್ಮಕ್ಷಯಾತೀತು । ತಯಾ ಕೇಲಿಯಾಹೀ ಘಾತು । ಕದಾ ನೋಹೇ ।೧೩೫॥

ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।
ಅನಾಶಿನೋ ಅಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ।೧೮॥

ಆಣಿ ಶರೀರಜಾತ ಆಘವೇ । ಹೇ ನಾಶಿವಂತ ಸ್ವಭಾವೇ । ಮ್ಹಣೌನಿ ತುವಾ ಝುಂಜಾವೇ । ಪಂಡುಕುಮರಾ ।೧೩೬॥

ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಮ್ ।
ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ।೧೯॥

ತೂ ಧರೂನೀ ದೇಹಾಭಿಮಾನಾ ತೇ । ದಿಠೀ ಸೂನಿ ಶರೀರಾತೇ । ಮೀ ಮಾರಿತಾ ಹೇ ಮರತೇ । ಮ್ಹಣತು ಆಹಾಸಿ ।೧೩೭॥ ತರೀ ಅರ್ಜುನಾ ತೂ ಹೇ ನೇಣಸೀ । ಜರೀ ತತ್ತ್ವತಾ ವಿಚಾರಿಸೀ । ತರೀ ವಧಿತಾ ತೂ ನವ್ಹೇಸೀ । ಹೇ ವಧ್ಯ ನವ್ಹತೀ ।೧೩೮॥

ನ ಜಾಯತೇ ಮ್ರಿಯತೇ ವಾ ಕದಾಚಿತ್ ನಾಯಂ ಭೂತ್ವಾ ಭವಿತಾ ವಾ ನ ಭೂಯಃ ।
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯಮಾನೇ ಶರೀರೇ ।೨೦॥

ಯಾವ ರೀತಿ ನೀರಿನಲ್ಲಿ ಹಾಲು ಏಕರೂಪವಾಗಿ ಕೂಡಿಕೊಂಡಿದ್ದನ್ನು ರಾಜಹಂಸ ಪಕ್ಷಿಯು ನೀರಿನಿಂದ ಹಾಲನ್ನು ಬೇರೆ ಮಾಡುವುದು ॥೧೨೭॥

ಅಥವಾ ಅಕ್ಕಸಾಲಿಗನು ದೋಷಯುಕ್ತ ಬಂಗಾರವನ್ನು ಅಗ್ನಿಯಲ್ಲಿ ಹಾಕಿ ಅದನ್ನು ಕಾಯಿಸಿ ಶುದ್ಧ ಬಂಗಾರವನ್ನು ದೋಷಯುಕ್ತ ಬಂಗಾರದಿಂದ ಬೇರೆ ತೆಗೆಯುವನು ॥೧೨೮॥

ಅಥವಾ ಚತುರತನದಿಂದ ಮೊಸರನ್ನು ಕಡೆದಾಗ ಕೊನೆಗೆ ಅದರಲ್ಲಿ ಬೆಣ್ಣೆಯು ದೃಷ್ಟಿಗೆ ಬೀಳುತ್ತದೆ ॥೧೨೯॥

ಅಥವಾ ತೌಡು ಮತ್ತು ಧಾನ್ಯ ಇವು ಒಂದೆಡೆ ಸೇರಿರುವಾಗ ಗಾಳಿಗೆ ಹಿಡಿದು ತೂರಿದರೆ ಧಾನ್ಯವು ಕೆಳಗೆ ಉಳಿದು ತೌಡು ಹಾರಿ ಹೋಗುವುದು ॥೧೩೦॥

ಅದರಂತೆ ವಿಚಾರದ ಅಂತ್ಯದಲ್ಲಿ ಪ್ರಪಂಚವು ಸಹಜವಾಗಿ ಇಲ್ಲದಾಗಿ ತದನಂತರ ಜ್ಞಾನಿ ಪುರುಷನಿಗೆ ವಿಚಾರ ಮಾಡಲು ಕೇವಲ ತತ್ತ್ವ ಅಂದರೆ ಬ್ರಹ್ಮಮಾತ್ರ ಉಳಿಯುವುದು ॥೧೩೧॥

ಆದ್ದರಿಂದ ಅನಿತ್ಯ ಪ್ರಪಂಚದಲ್ಲಿ ಆತನ ಸತ್ಯಭಾವ ಇರುವುದಿಲ್ಲ. ಏಕೆಂದರೆ, ನಿತ್ಯ ಮತ್ತು ಅನಿತ್ಯ ಈ ಎರಡರ ನಿರ್ಣಯ ಆತನಿಗೆ ತಿಳಿದಿರುತ್ತದೆ ॥೧೩೨॥

ಶ್ಲೋಕಾರ್ಥ :- ಈ ಸಮಸ್ತ ವಿಶ್ವವನ್ನು ತುಂಬಿ ಕೊಂಡಿರುವ ಆತ್ಮನು ನಾಶಾಗುವವನಲ್ಲ. ಆ ಆತ್ಮನನ್ನು ನಾಶಪಡಿಸಲು ಯಾರೂ ಸಮರ್ಥರಲ್ಲ ॥೧೭॥

ನೋಡು ಹೀಗಿದೆ, ಸಾರ ಮತ್ತು ಅಸಾರ ಇವುಗಳ ವಿಚಾರ ಮಾಡಿದಾಗ ಅಸಾರವು ಭ್ರಮೆಯಾಗಿದೆ ಅಥವಾ ಮಿಥ್ಯವಾಗಿದೆ ಮತ್ತು ಸಾರವು ಸ್ವಾಭಾವಿಕವಾಗಿ ನಿತ್ಯ ಇರುವುದರಿಂದ ಅದು ಸತ್ಯವಾಗಿದೆ. ಹೀಗೆ ತಿಳಿ ॥೧೩೩॥

ಈ ತ್ರಿಲೋಕದ ಆಕಾರವು ಯಾವುದರಿಂದ ವಿಸ್ತಾರಗೊಂಡಿದೆಯೋ ಅದಕ್ಕೆ ನಾಮ, ಬಣ್ಣ, ರೂಪ, ಈ ಚಿನ್ಹೆಗಳು ಇರುವುದಿಲ್ಲ ॥೧೩೪॥

ಅದು ಯಾವಾಗಲೂ ವ್ಯಾಪಕವಿದ್ದು, ಜನ್ಮ ಮರಣಾತೀತ ಇರುವುದು. ಅದರ ನಾಶ ಮಾಡಬೇಕೆಂದರೆ ಎಂದೂ ಸಾಧ್ಯವಿಲ್ಲ ॥೧೩೫॥

ಶ್ಲೋಕಾರ್ಥ :- ಶರೀರಧಾರಿಯಾದ ಜೀವಾತ್ಮನು ನಿತ್ಯನು, ನಾಶರಹಿತನು, ಅಗೋಚರನು, ಸರಿಯೇ. ಆದರೂ ಅವನ ಈ ಶರೀರಗಳಿಗೆ ನಾಶವು ತಪ್ಪಿದಲ್ಲ. ಆದುದರಿಂದ ಹೇ ಭರತನಾಯಕಾ, ಯುದ್ಧವನ್ನು ಮಾಡು ॥೧೮॥

ಜಗತ್ತಿನಲ್ಲಿ ಎಲ್ಲ ಶರೀರಗಳು ಸ್ವಾಭಾವಿಕವಾಗಿ ನಾಶ ಹೊಂದುವುವು. ಆದ್ದರಿಂದ ಅರ್ಜುನಾ ನೀನು ಯುದ್ಧವನ್ನು ಮಾಡು ॥೧೩೬॥

ಶ್ಲೋಕಾರ್ಥ :- ಈ ಆತ್ಮ ಸಾಯುವುದೆಂದಾಗಲಿ, ಕೊಲ್ಲುವುದೆಂದಾಗಲಿ ತಿಳಿದವರಿಬ್ಬರೂ ಅಜ್ಞಾನಿಗಳೇ. ವಾಸ್ತವವಾಗಿ ಈ ಆತ್ಮ ಕೊಲ್ಲುವುದೂ ಇಲ್ಲ ; ಸಾಯುವುದೂ ಇಲ್ಲ ॥೧೯॥

ನೀನು ದೇಹದ ಅಭಿಮಾನ ಹಿಡಿದು ಶರೀರದ ಮೇಲೆ ದೃಷ್ಟಿ ಇಟ್ಟು ನಾನು ಕೊಲ್ಲುವವನು ಮತ್ತು ಈ ಕೌರವರು ಸಾಯುವವರು ಎಂದು ಹೇಳುತ್ತಿರುವೆ ॥೧೩೭॥

ಆದರೆ ಅರ್ಜುನಾ, ಅದರಲ್ಲಿಯ ತತ್ತ್ವಾರ್ಥವು ನಿನಗೆ ತಿಳಿಯುವುದಿಲ್ಲ. ಯಥಾರ್ಥ ವಿಚಾರ ಮಾಡಿದ್ದಾದರೆ ನೀನು ಕೊಲ್ಲುವವನೂ ಅಲ್ಲ. ಅವರು ಸಾಯುವವರೂ ಅಲ್ಲ ॥೧೩೮॥

ಶ್ಲೋಕಾರ್ಥ :- ಈ ಆತ್ಮ ಎಂದಿಗೂ ಹುಟ್ಟುವುದೂ ಇಲ್ಲ; ಸಾಯುವುದೂ ಇಲ್ಲ. ಈ ಆತ್ಮನು ಮೊದಲು ಇದ್ದವೆನಿಸಿಕೊಂಡು, ಆಮೇಲೆ ಇಲ್ಲದವನು ಆಗುವುದಿಲ್ಲ. ಈ ಆತ್ಮನು ಹುಟ್ಟಿಲ್ಲದವನು. ಸಾವಿಲ್ಲದವನು; ಬೇರೆ ಬಗೆಗಳಾಗದವನು, ಪುರಾತನು, ದೇಹವನ್ನು ಕೊಂದರೂ ಇವನು ಸಾಯುವುದಿಲ್ಲ ॥೨೦॥

ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಮ್ ।
ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಮ್ ॥೨೧॥

ಜೈಸೇ ಸ್ವಪ್ನಾ ಮಾಜೀ ದೇಖಿಜೇ । ತೇ ಸ್ವಪ್ನೀಂಚಿ ಸಾಚ ಆಪಜೇ । ಮಗ ಚೇಊನಿಯಾ ಪಾಹಿಜೇ । ತವ ಕಾಂಹೀ ನಾಹೀ ॥೧೩೯॥ ತೈಸೀ ಹೇ ಜಾಣ ಮಾಯಾ । ತೂ ಭ್ರಮತು ಆಹಾಸೀ ವಾಯಾ । ಶಸ್ತ್ರೇ ಹಾಣಿತಲಯಾ ಛಾಯಾ । ಜೈಸೀ ಆಂಗೀ ನ ರುಪೇ ॥೧೪೦॥ ಕಾ ಪೂರ್ಣ ಕುಂಭ ಉಲಂಡಲಾ । ತೇಥ ಬಿಂಬಾಕಾರು ದಿಸೇ ಭ್ರಂಶಲಾ । ಪರೀ ಭಾನು ನಾಹೀ ನಾಸಲಾ । ತಯಾಸವೇ ॥೧೪೧॥ ನಾ ತರೀ ಮಠೀ ಆಕಾಶ ಜೈಸೇ । ಮಠಾಕೃತೀ ಅವತರಲೇ ಅಸೇ । ತೋ ಭಂಗಲಿಯಾ ಆಪೈಸೇ । ಸ್ವರೂಪಚಿ ॥೧೪೨॥ ತೈಸೇ ಶರೀರಾಚ್ಯಾ ಲೋಪೀ । ಸರ್ವಥಾ ನಾಶು ನಾಹೀ ಸ್ವರೂಪಿ । ಮ್ಹಣೌನಿ ತೂ ಹೇ ನಾರೋಪೀ । ಭ್ರಾಂತಿ ಬಾಪಾ ॥೧೪೩॥

ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣಾತಿ ನರೋऽಪರಾಣಿ ।
ತಥಾ ಶರೀರಾಣಿ ವಿಹಾಯ ಜೀರ್ಣಾನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥೨೨॥

ಜೈಸೇ ಜೀರ್ಣ ವಸ್ತ್ರ ಸಾಂಡಿಜೇ । ಮಗ ನೂತನ ವೇಢಿಜೇ । ತೈಸೇ ದೇಹಾಂತರಾತೇ ಸ್ವಿಕಾರಿಜೇ । ಚೈತನ್ಯನಾಥೇ ॥೧೪೪॥

ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।
ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥೨೩॥

ಅಚ್ಛೇದ್ಯೋऽಯಮದಾಹ್ಯೋऽಯಂ ಆಕ್ಲೇದ್ಯೋऽಶೋಷ್ಯ ಏವ ಚ ।
ನಿತ್ಯಸ್ಸರ್ವಗತಃ ಸ್ಥಾಣುಃಅಚಲೋऽಯಂ ಸನಾತನಃ ॥೨೪॥

ಹಾ ಅನಾದಿ ನಿತ್ಯಸಿದ್ಧು । ನಿರುಪಾಧಿ ವಿಶುದ್ಧು । ಮ್ಹಣೌನಿ ಶಸ್ತ್ರಾದಿಕೀ ಛೇದು । ನ ಘಡೇ ಯಯಾ ॥೧೪೫॥ ಹಾ ಪ್ರಳಯೋದಕೇ ನಾಪ್ಲವೇ । ಅಗ್ನಿ ದಾಹೋ ನ ಸಂಭವೇ । ಏಥ ಮಹಾಶೋಷು ನ ಪ್ರಭವೇ । ಮಾರುತಾಚಾ ॥೧೪೬॥ ಅರ್ಜುನಾ ಹಾ ನಿತ್ಯು । ಅಚಳು ಹಾ ಶಾಶ್ವತು । ಸರ್ವತ್ರ ಸದೋದಿತು । ಪರಿಪೂರ್ಣ ಹಾ ॥೧೪೭॥

ಅವ್ಯಕ್ತೋऽಯಮಚಿಂತ್ಯೋऽಯಂ ಅವಿಕಾರ್ಯೋऽಯಮುಚ್ಯತೇ ।
ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ॥೨೫॥

ಹಾ ತರ್ಕಾಚಿಯೇ ದಿಠೀ । ಗೋಚರ ನೋಹೇ ಕಿರೀಟೀ । ಧ್ಯಾನ ಯಾಚಿಯೇ ಭೇಟೀ । ಉತ್ಕಂಠಾ ವಾಹೇ ॥೧೪೮॥

ಶ್ಲೋಕಾರ್ಥ :- ಅವಿನಾಶಿಯೆಂದೂ, ನಿತ್ಯವೆಂದೂ, ಅಜವೆಂದೂ, ಅವ್ಯಯವೆಂದೂ ಈ ಆತ್ಮನನ್ನು ಪರೋಕ್ಷವಾಗಿ ತಿಳಿದ ಪುರುಷನು ಹೇ ಪಾರ್ಥಾ! ಯಾರನ್ನು ಹೇಗೆ ಕೊಲ್ಲಿಸುತ್ತಾನೆ? ಯಾರನ್ನು ಹೇಗೆ ಕೊಲ್ಲುತ್ತಾನೆ ? ॥೨೧॥

ಯಾವ ಪ್ರಕಾರವಾಗಿ, ಸ್ವಪ್ನದ ವಿಷಯಗಳು ಸ್ವಪ್ನದಲ್ಲಿ ಮಾತ್ರ ನಿಜದಂತೆ ಭಾಸವಾಗುತ್ತವೆ. ಆದರೆ ಎಚ್ಚರಾದ ಮೇಲೆ ನೋಡಿದಾಗ ಅವು ಅಲ್ಲಿ ಒಂದೂ ಇರುವುದಿಲ್ಲ ॥೧೩೯॥

ಇದರಂತೆ ಇವು ಎಲ್ಲವೂ ಮಾಯಿಕವಾಗಿದ್ದು ನೀನು ಭ್ರಮದಲ್ಲಿ ವ್ಯರ್ಥ ಬಿದ್ದಿರುವೆ. ಮನುಷ್ಯನ ನೆರಳಿನ ಮೇಲೆ ಶಸ್ತ್ರ ಪ್ರಯೋಗ ಮಾಡಿದರೆ ಅದು ಆತನ ಮೈಯಲ್ಲಿ ನಡುವುದಿಲ್ಲ ॥೧೪೦॥

ಒಂದುವೇಳೆ ನೀರು ತುಂಬಿದ ಪಾತ್ರೆಯನ್ನು ತಿರುವಿ ಹಾಕಿದಾಗ ಅದರಲ್ಲಿಯ ಸೂರ್ಯಬಿಂಬವು ಇಲ್ಲದಂತೆ ಆಗುವುದು. ಆದರೆ, ಅದರ ಜೊತೆಗೆ ನಿಜವಾದ ಸೂರ್ಯನು ನಾಶಹೊಂದುವುದಿಲ್ಲ ॥೧೪೧॥

ಅಥವಾ ಆಕಾಶವು, ಕಟ್ಟಿದ ಮನೆಯ ಆಕೃತಿಯಂತೆ ಕಾಣುವುದು. ಆದರೆ ಆ ಮನೆಯು ಬಿದ್ದ ಮೇಲೆ ಯಾವ ಪ್ರಕಾರವಾಗಿ ಆಕಾಶದ ಮೂಲ ಸ್ವರೂಪವೇ ಇರುವುದೋ ॥೧೪೨॥

ಅದರಂತೆ ಶರೀರವು ನಾಶವಾದರೂ ಆತ್ಮದ ನಾಶವು ಎಂದೂ ಆಗುವುದಿಲ್ಲ. ಆದ್ದರಿಂದ ಅಪ್ಪಾ, ಅರ್ಜುನಾ, ನೀನು ಈ ಜನ್ಮ ಮರಣದ ಕೇವಲ ಭ್ರಾಂತಿಯನ್ನು ಆತ್ಮದ ಮೇಲೆ ಆರೋಪಿಸಬೇಡ ॥೧೪೩॥

ಶ್ಲೋಕಾರ್ಥ :- ಮನುಷ್ಯನು ಜೀರ್ಣವಾದ ವಸ್ತ್ರಗಳನ್ನು ಬಿಟ್ಟು ಬೇರೆ ಹೊಸ ವಸ್ತ್ರಗಳನ್ನು ಧರಿಸುವಂತೆ, ದೇಹದಲ್ಲಿ ಇರುವ ಜೀವನು ಜೀರ್ಣವಾದ ಶರೀರಗಳನ್ನು ತ್ಯಜಿಸಿ, ಹೊಸ ಹೊಸ ದೇಹಗಳನ್ನು ಹೊಂದುತ್ತಾನೆ ॥೨೨॥

ಮನುಷ್ಯನು ಯಾವ ಪ್ರಕಾರವಾಗಿ ಹಳೆಯದಾದ ವಸ್ತ್ರವನ್ನು (ಕಳಚಿ) ತೆಗೆದು ಹೊಸ ವಸ್ತ್ರವನ್ನು ಧರಿಸುವನೋ ಅದೇ ಪ್ರಕಾರವಾಗಿ ಆತ್ಮನು ಒಂದು ದೇಹಬಿಟ್ಟು ಬೇರೆ ದೇಹವನ್ನು ಸ್ವೀಕರಿಸುವನು ॥೧೪೪॥

ಶ್ಲೋಕಾರ್ಥ :- ಈ ಆತ್ಮನನ್ನು ಆಯುಧಗಳು ತುಂಡು ಮಾಡುವುದಿಲ್ಲ. ಇವನನ್ನು ಬೆಂಕಿಯು ಸುಡುವುದಿಲ್ಲ. ಇವನನ್ನು ನೀರು ನೆನೆಸುವುದೂ ಇಲ್ಲ, ಗಾಳಿಯು ಒಣಗಿಸುವುದೂ ಇಲ್ಲ ॥೨೩॥

ಶ್ಲೋಕಾರ್ಥ :- ಈ ಆತ್ಮ ಕತ್ತರಿಸಲ್ಪಡದು; ಸುಡಲ್ಪಡದು; ನೆನಸಲ್ಪಡದು; ಒಣಗಲ್ಪಡದು; ಇದು ನಿತ್ಯ; ಸರ್ವವ್ಯಾಪಕ; ಸ್ಥಿತ ಮತ್ತು ಸನಾತನವಾಗಿದೆ ॥೨೪॥

ಆತ್ಮವು ಜನ್ಮ ಮರಣರಹಿತವಾಗಿದ್ದು ನಿತ್ಯ ಸ್ವತಃ ಸಿದ್ಧವಾಗಿದೆ ಮತ್ತು ಅದು ಉಪಾಧಿರಹಿತವಾಗಿದ್ದು ಶುದ್ಧವಾಗಿದೆ. ಆದ್ದರಿಂದ ಈ ಆತ್ಮವು ಶಸ್ತ್ರಗಳಿಂದ ಘಾತವಾಗುವುದಿಲ್ಲ ॥೧೪೫॥

ಆತ್ಮವು ನೀರಿನಲ್ಲಿ ಮುಳುಗುವುದಿಲ್ಲ. ಅಗ್ನಿಯಲ್ಲಿ ಸುಡುವುದಿಲ್ಲ ಅದರಂತೆ ವಾಯುವಿನಿಂದ ಶುಷ್ಕವಾಗುವುದಿಲ್ಲ ॥೧೪೬॥

ಆದ್ದರಿಂದ ಅರ್ಜುನಾ ಇದು (ಆತ್ಮವು) ನಿತ್ಯ, ಕ್ರಿಯಾರಹಿತ, ಹಾಗೂ ಶಾಶ್ವತ ಇದ್ದು, ಎಲ್ಲ ಸ್ಥಳಗಳಲ್ಲಿಯೂ ಸದಾ ಸ್ವಯಂ ಪ್ರಕಾಶಕ ಹಾಗೂ ಪರಿಪೂರ್ಣವಾಗಿರುವುದು ॥೧೪೭॥

ಶ್ಲೋಕಾರ್ಥ :- ಇಂದ್ರಿಯಗಳಿಗೆ ಈ ಆತ್ಮ ಕಾಣ ಬರುವುದಿಲ್ಲ; ಮನಸ್ಸಿಗೆ ದೊರಕದು; ವಿಕಾರಕ್ಕೆ ಒಳಪಡದೆಂದು ಶಾಸ್ತ್ರಗಳು ಹೇಳುತ್ತಿವೆ. ಇವೆಲ್ಲವುಗಳನ್ನೂ ತಿಳಿದ ನೀನು ದುಃಖಿಸುವುದು ಯೋಗ್ಯವಲ್ಲ ॥೨೫॥

ಇದು (ಆತ್ಮವು) ತರ್ಕಶಾಸ್ತ್ರದ ದೃಷ್ಟಿಯಿಂದ ಕಾಣಿಸಲಾರದು. ಧ್ಯಾನಕ್ಕಾಗಿ ಮಾತ್ರ ಇದರ ತೀವ್ರ ಇಚ್ಛೆ ಇರುವುದು ॥೧೪೮॥

ಹಾ ಸದಾ ದುರ್ಲಭು ಮನಾ । ಆಪು ನೋಹೇ ಸಾಧನಾ । ನಿಃಸೀಮು ಹಾ ಅರ್ಜುನಾ । ಪುರುಷೋತ್ತಮು ॥೧೪೯॥ ಹಾ ಗುಣತ್ರಯಾರಹಿತು । ಅನಾದಿ ಅವಿಕೃತು । ವ್ಯಕ್ತೀಸೀ ಅತೀತು । ಸರ್ವರೂಪ ॥೧೫೦॥ ಅರ್ಜುನಾ ಐಸಾ ಹಾ ಜಾಣಾವಾ । ಸಕಳಾತ್ಮಕು ದೇಖಾವಾ । ಮಗ ಸೋಹಜೇ ಶೋಕು ಆಘವಾ । ಹರೇಲ ತುಝಾ ॥೧೫೧॥

ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್ ।
ತಥಾಪಿ ತ್ವಂ ಮಹಾಬಾಹೋ ನೈವಂ ಶೋಚಿತುಮರ್ಹಸಿ ॥೨೬॥

ಅಥವಾ ಐಸಾ ನೇಣಸೀ । ತೂ ಅಂತವಂತಚಿ ಮಾನಿಸೀ । ತರ್ಹೀ ಶೋಚೂ ನ ಪವಸೀ । ಪಂಡುಕುಮರಾ ॥೧೫೨॥ ಜೋ ಆದಿ ಸ್ಥಿತಿ ಅಂತು । ಹಾ ನಿರಂತರ ಅಸೇ ನಿತ್ಯು । ಜೈಸಾ ಪ್ರವಾಹೋ ಅನುಸ್ಯೂತು । ಗಂಗಾಜಳಾಚಾ ॥೧೫೩॥ ತೇ ಆದಿ ನಾಹೀ ಖಂಡಲೇ । ಸಮುದ್ರೀ ತರೀ ಅಸೇ ಮೀನಲೇ । ಆಣಿ ಜಾತಚಿ ಮಧ್ಯೇ ಉರಲೇ । ದಿಸೇ ಜೈಸೇ ॥೧೫೪॥ ಇಯೇ ತಿನ್ಹೀ ತಯಾಪರೀ । ಸರಸೀಚ ಸದಾ ಅವಧಾರೀ । ಭೂತಾಂಸೀ ಕವಣೇ ಅವಸರೀ । ಠಾಕತೀನಾ ॥೧೫೫॥ ಮ್ಹಣೌನಿ ಹೇ ಆಘವೇ । ಏಥ ತುಜ ನಲಗೇ ಶೋಚಾವೇ । ಜೇ ಸ್ಥಿತೀಚಿ ಹೇ ಸ್ವಭಾವೇ । ಅನಾದಿ ಐಸೀ ॥೧೫೬॥ ನಾ ತರೀ ಹೇ ಅರ್ಜುನಾ । ನಯೇಚಿ ತುಝಿಯಾ ಮನಾ । ಜೇ ದೇಖೋನಿ ಲೋಕು ಅಧೀನಾ । ಜನ್ಮಕ್ಷಯಾ ॥೧೫೭॥ ತರೀ ಏಥ ಕಾಂಹೀ । ತುಜ ಶೋಕಾಸೀ ಕಾರಣ ನಾಹೀ । ಹೇ ಜನ್ಮಮೃತ್ಯು ಪಾಹೀ । ಅಪರಿಹರ ॥೧೫೮॥

ಜಾತಸ್ಯ ಹಿ ಧ್ರುವೋ ಮೃತ್ಯುಃ ಧ್ರುವಂ ಜನ್ಮ ಮೃತಸ್ಯ ಚ ।
ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥೨೭॥

ಉಪಜೇ ತೇ ನಾಶೇ । ನಾಶಲೇ ಪುನರಪಿ ದಿಸೇ । ಹೇ ಘಟಿಕಾಯಂತ್ರ ಜೈಸೇ ಪರಿಭ್ರಮೇ ಗಾ ॥೧೫೯॥ ನಾ ತರೀ ಉದೋ ಅಸ್ತು ಆಪೈಸೇ । ಅಖಂಡಿತ ಹೋತ ಜಾತ ಜೈಸೇ । ಹೇ ಜನ್ಮಮರಣ ತೈಸೇ । ಅನಿವಾರ ಜಗೀ ॥೧೬೦॥ ಮಹಾಪ್ರಳಯ ಅವಸರೇ । ಹೇ ತ್ರೈಲೋಕ್ಯಹೀ ಸಂಹರೇ । ಮ್ಹಣೌನಿ ಹಾ ನ ಪರಿಹರೇ । ಆದಿ ಅಂತು ॥೧೬೧॥ ತೂ ಜರೀ ಹೇ ಐಸೇ ಮಾನಿಸೀ । ತರೀ ಖೇದು ಕಾ ಕರಿಸೀ? । ಕಾಯ ಜಾಣತುಚಿ ನೇಣಸೀ । ಧನುರ್ಧರಾ ॥೧೬೨॥ ಏಥ ಆಣೀಕಹೀ ಏಕ ಪಾರ್ಥಾ । ತುಜ ಬಹುತೀ ಪರೀ ಪಹತಾ । ದುಃಖ ಕರಾವಯಾ ಸರ್ವಥಾ । ವಿಷೋ ನಾಹೀ ॥೧೬೩॥

ಅರ್ಜುನಾ, ಇದು ಮನಸ್ಸಿಗೆ ಸದಾ ದುರ್ಲಭವಾಗಿದೆ. ಸಾಧನೆಗಳಿಂದ ಪ್ರಾಪ್ತವಾಗಲಾರದು. ಅರ್ಜುನಾ, ಪುರುಷೋತ್ತಮನು ಅನಂತನು ।।೧೪೯।।

ಈ ಆತ್ಮನು ಸತ್ವ, ರಜ ತಮ, ಈ ಮೂರು ಗುಣಗಳಿಂದ ರಹಿತನು. ಅನಾದಿ, ಅವಿಕಾರಿ ಮತ್ತು ಸ್ಥೂಲ ಸೂಕ್ಷ್ಮ ಆಕಾರ ಮೀರಿರುವ ಮತ್ತು ಸರ್ವ ರೂಪ ಇರುವವನು ।।೧೫೦।।

ಅರ್ಜುನನೇ, ಈ ಆತ್ಮವನ್ನು ಈ ಪ್ರಕಾರವಾಗಿ ತಿಳಿಯಬೇಕು. ಆತನನ್ನು ಸರ್ವಭೂತದಲ್ಲಿ ಕಾಣಬೇಕು. ಆಗ ಮಾತ್ರ, ನಿನ್ನ ಸಂಪೂರ್ಣ ಶೋಕವು ಸಹಜವಾಗಿ ನಷ್ಟವಾಗುವುದು ।।೧೫೧।।

ಶ್ಲೋಕಾರ್ಥ :- ಅರ್ಜುನಾ ! ಈ ಆತ್ಮನು ನಿತ್ಯವೂ ಹುಟ್ಟುವವನು, ಸಾಯುವವನು ಎಂದು ಒಂದು ವೇಳೆ (ಪ್ರಸಂಗಾನುಸಾರ) ನೀನು ತಿಳಿದರೂ, ಈ ದುಃಖವು ನಿನಗೆ ಯೋಗ್ಯವಲ್ಲ ।।೨೬।।

ಅಥವಾ ಅರ್ಜುನಾ, ಆತ್ಮ ಅವಿನಾಶಿ ಎಂಬುದು ತಿಳಿಯದೇ ನೀನು ಆತ್ಮನು ನಾಶವಂತನು ಎಂದು ತಿಳಿದರೂ ನಿನಗೆ ಶೋಕಮಾಡುವ ಕಾರಣ ಇಲ್ಲ ।।೧೫೨।।

ಏಕೆಂದರೆ, ಯಾವ ಪ್ರಕಾರ ಗಂಗಾನದಿಯು ಉಗಮದಿಂದ ಸಂಗಮದವರೆಗೆ ಅಖಂಡವಾಗಿ ಹರಿಯುತ್ತದೆಯೋ ಅದೇ ಪ್ರಕಾರವಾಗಿ ಉತ್ಪತ್ತಿ, ಸ್ಥಿತಿ ಮತ್ತು ನಾಶ ಈ ಮೂರರಲ್ಲಿ ಆತ್ಮವು ನಿತ್ಯ ಹಾಗೂ ಅಖಂಡವಾಗಿದೆ ।।೧೫೩।।

ಆ ನೀರು ಉಗಮಸ್ಥಾನದಲ್ಲಿ ಖಂಡವಾಗಿರುವುದಿಲ್ಲ. ಸಮುದ್ರದಲ್ಲಿ ಒಂದೇ ಸವನೇ ಕೂಡುತ್ತಿರುವುದು ಮತ್ತು ಉಗಮ ಸಂಗಮ ನಡುವೆ ಉಳಿದ ಭಾಗವೂ ಅಖಂಡ ಹರಿಯುತ್ತಿರುವುದು ಕಾಣುವುದು ।।೧೫೪।।

ಈ ಪ್ರಕಾರವಾಗಿ ಪ್ರಾಣಿಮಾತ್ರರ ಉತ್ಪತ್ತಿ ಸ್ಥಿತಿ ಹಾಗೂ ಲಯ ಈ ಮೂರು ಸದಾವಕಾಲ ಒಂದೇ ರೀತಿಯಾಗಿರುವುದು. ಅದರ ಪ್ರವಾಹವು ಎಂದೂ ಮುಗಿಯುವುದಿಲ್ಲ, ಹೀಗೆ ತಿಳಿ ।।೧೫೫।।

ಆದ್ದರಿಂದ ನಿನಗೆ ಇದರಲ್ಲಿ ಯಾವುದಕ್ಕೂ ಶೋಕಪಡಬೇಕಾಗಿಲ್ಲ. ಏಕೆಂದರೆ, ಸ್ವಾಭಾವಿಕವಾಗಿಯೇ ಹೀಗೆ ಅನಾದಿ ಸಿದ್ಧ ಸೃಷ್ಟಿ ಕ್ರಮ ಇರುವುದು ।।೧೫೬।।

ಇದು ನಿನ್ನ ಮನಸ್ಸಿಗೆ ಹಿಡಿಸದಿದ್ದರೆ ಪ್ರಾಣಿಮಾತ್ರರು ಜನ್ಮ ಮರಣದ ಆಧೀನರು ಎಂದು ತಿಳಿದ ನಂತರ ।।೧೫೭।।

ಆಗ ಇದರಲ್ಲಿ ಯಾವುದೇ ವಿಷಯಕ್ಕೆ ಶೋಕ ಮಾಡುವ ಕಾರಣವೇ ಇಲ್ಲ. ಈ ಜನ್ಮ ಮೃತ್ಯು ಅಪರಿಹಾರವಿದೆ, ಎಂದು ನೀನು ತಿಳಿದುಕೋ ।।೧೫೮।।

ಶ್ಲೋಕಾರ್ಥ :- ಹುಟ್ಟಿದವನು ಸಾಯುವುದು ನಿಜ. ಸತ್ತವನಿಗೆ ಜನ್ಮ ತಪ್ಪದು, ತಪ್ಪಿಸಲಾರದ ವಿಷಯಕ್ಕೆ ಚಿಂತಿಸಿ ಲಾಭವೇನು? ।।೨೭।।

ಜನ್ಮಕ್ಕೆ ಬಂದವರು ಮರಣಹೊಂದಲೇಬೇಕು. ಮರಣ ಹೊಂದಿದವರು ಪುನಃ ಜನ್ಮಕ್ಕೆ ಬರಲೇಬೇಕು, ಈ ಜನ್ಮ ಮರಣ ಪರಂಪರೆಯು (ತೋಟದಬಾವಿಯಲ್ಲಿನ) ರಾಹಟಿ ಗಡಿಗೆ ಯಂತ್ರದಂತೆ ಸತತವಾಗಿ ತಿರುಗುತ್ತಿರುತ್ತದೆ ।।೧೫೯।।

ಅಥವಾ ಉದಯಾಸ್ತಗಳು ಯಾವ ಪ್ರಕಾರವಾಗಿ ತನ್ನಷ್ಟಕ್ಕೆ ತಾನೇ ನಿರಂತರವಾಗಿ ತಪ್ಪದೇ ಆಗುತ್ತಿದೆಯೋ ಅದೇ ಪ್ರಕಾರವಾಗಿ ಈ ಜಗತ್ತಿನಲ್ಲಿ ಜನ್ಮ ಮರಣವು ಅನಿವಾರ್ಯವಾಗಿದೆ ।।೧೬೦।।

ಮಹಾಪ್ರಳಯ ಕಾಲದಲ್ಲಿ ಈ ತ್ರಿಲೋಕವೆಲ್ಲವೂ ಸಂಹಾರಗೊಳ್ಳುವುವು, ಆದಕ್ಕಾಗಿಯೇ ಆದಿ ಮತ್ತು ಅಂತ್ಯ ಇವು ಅಪರಿಹಾರ್ಯಗಳಾಗಿವೆ ।।೧೬೧।।

ಅರ್ಜುನಾ ನೀನು ಒಂದುವೇಳೆ ಆತ್ಮನನ್ನು ಅಂತವಂತನೆಂದು ಮಾನಿಸಿದರೂ ಖೇದವೇಕೆ ಮಾಡುವೆ ? ತಿಳುವಳಿಕೆ ತಿಳಿದೂ ತಿಳಿಯಲಾರದವರಲ್ಲೇಕೆ ಕೂಡುವೆ ? ।।೧೬೨।।

ಪಾರ್ಥಾ ನಿನಗೊಂದು ಮಾತು ಹೇಳುವೆ. ಅನೇಕ ಪ್ರಕಾರಗಳಿಂದ ವಿಚಾರ ಮಾಡಿದಾಗ ನಿನಗೆ ದುಃಖಪಡುವ ಕಾರಣ ಕಾಣಿಸುವುದಿಲ್ಲ ।।೧೬೩।।

ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।
ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ॥೨೮॥

ಜಿಯೇ ಸಮಸ್ತೇ ಇಯೇ ಭೂತೇ । ಜನ್ಮಾ ಆದಿ ಅಮೂರ್ತೇ । ಮಗ ಪಾತಲೀ ವ್ಯಕ್ತೀತೇ । ಜನ್ಮ ಲೇಯಾ ॥೧೬೪॥ ತಿಯೇ ಕ್ಷಯಾಸೀ ಜೇಥ ಜಾತೀ । ತೇಥ ನಿಭ್ರಾಂತ ಆನೇ ನವ್ಹತೀ । ದೇಖೈ ಪೂರ್ವಸ್ಥಿತೀಚ ಯೇತೀ । ಆಪುಲಿಯೇ ॥೧೬೫॥ ಯೇರ ಮಧ್ಯೇ ಜೇ ಪ್ರತಿಭಾಸೇ । ತೇ ನಿದ್ರಿತಾ ಸ್ವಪ್ನ ಜೈಸೇ । ತೈಸಾ ಆಕಾರು ಹಾ ಮಾಯಾವಶೇ ।ಸತ್ಸ್ವರೂಪೀ ॥೧೬೬॥ ನಾ ತರೀ ಪವನೇ ಸ್ಪರ್ಶಿಲೇ ನೀರ । ಪಢಿಯಾಸೇ ತರಂಗಾಕಾರ । ಕಾ ಪರಾಪೇಕ್ಷಾ ಅಳಂಕಾರ । ವ್ಯಕ್ತೀ ಕನಕೀ ॥೧೬೭॥ ತೈಸೇ ಸಕಳ ಹೇ ಮೂರ್ತ । ಜಾಣಪಾ ಮಾಯಾಕಾರಿತ । ಜೈಸೇ ಆಕಾಶೀ ಬಿಂಬಿತ । ಅಭ್ರಪಟಲ ॥೧೬೮॥ ತೈಸೇ ಆದೀಚಿ ಜೇ ನಾಹೀ । ತಯಾಲಾಗೀ ತೂ ರುದಸೀ ಕಾಯೀ । ತೂ ಅವಿಟ ತೇ ಪಾಹೀ । ಚೈತನ್ಯ ಏಕ ॥೧೬೯॥ ಜಯಾಚಿ ಆರ್ತೀಚಿ ಭೋಗಿತ । ವಿಷಯೀ ತ್ಯಜಿಲೇ ಸಂತ । ಜಯಾಲಾಗೀ ವಿರಕ್ತ । ವನವಾಸಿಯೇ ॥೧೭೦॥ ದಿಠೀ ಸೂನಿ ಜಯಾತೇ । ಬ್ರಹ್ಮಚರ್ಯಾದಿ ವ್ರತೇ । ಮುನೀಶ್ವರ ತಪಾತೇ । ಆಚರತಾತೀ ॥೧೭೧॥

ಆಶ್ಚರ್ಯವತ್ಪಶ್ಯತಿ ಕಶ್ಚಿದೇನಂ ಆಶ್ಚರ್ಯವದ್ವದತಿ ತಥೈವ ಚಾನ್ಯಃ ।
ಆಶ್ಚರ್ಯವಚ್ಚೈನಮನ್ಯಃ ಶೃಣೋತಿ ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್ ॥೨೯॥

ಏಕ ಅಂತರೀ ನಿಶ್ಚಳ । ಜೇ ನಿಹಾಳಿತಾ ಕೇವಳ । ವಿಸರಲೇ ಸಕಳ । ಸಂಸಾರಜಾತ ॥೧೭೨॥ ಏಕಾ ಗುಣಾನುವಾದು ಕರಿತಾ । ಉಪರತಿ ಹೋಊನಿ ಚಿತ್ತಾ । ನಿರವಧಿ ತಲ್ಲೀನತಾ । ನಿರಂತರ ॥೧೭೩॥ ಏಕ ಐಕತಾಂಚಿ ನಿವಾಲೇ । ತೇ ದೇಹಭಾವೀ ಸಾಂಡಿಲೇ । ಏಕ ಅನುಭವೇ ಪಾತಲೇ । ತದ್ರೂಪತಾ ॥೧೭೪॥ ಜೈಸೇ ಸರಿತಾ ಓಘ ಸಮಸ್ತ । ಸಮುದ್ರಾಮಾಜೀ ಮಿಳತ । ಪರಿ ಮಾಘೌತೇ ನಸಮಾತ । ಪರತಲೇ ನಾಹೀ ॥೧೭೫॥ ತೈಸಿಯಾ ಯೋಗೀಶ್ವರಾಂಚಿಯಾ ಮತಿ । ಮಿಳಣೀಸವೇ ಏಕವಟತೀ । ಪರೀ ಜೇ ವಿಚಾರುನಿ ಪುನರಾವೃತ್ತೀ । ಭಜತೀಚಿನಾ ॥೧೭೬॥

ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।
ತಸ್ಮಾತ್ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥೩೦॥

ಜೇ ಸರ್ವತ್ರ ಸರ್ವಹೀ ದೇಹೀ । ಜಯಾ ಕರಿತಾಂಹೀ ಘಾತು ನಾಹೀ । ತೇ ವಿಶ್ವಾತ್ಮಕ ತೂ ಪಾಹೀ । ಚೈತನ್ಯ ಏಕ ॥೧೭೭॥

ಶ್ಲೋಕಾರ್ಥ :- ಹೇ ಭಾರತಾ! ಈ ಪ್ರಾಣ ಕೋಟಿಗಳು ಹುಟ್ಟುವುದಕ್ಕೆ ಮೊದಲು ಕಂಡು ಬರುವುದಿಲ್ಲ. ಮಧ್ಯದಲ್ಲಿ ಕಂಡು ಬರುತ್ತವೆ. ಮರಣಾನಂತರವೂ ಕಂಡು ಬರುವುದಿಲ್ಲ. ಇದಕ್ಕೆ ಚಿಂತೆ ಏಕೆ? ||೨೮||

ಈ ಎಲ್ಲ ಪ್ರಾಣಿಗಳು ಹುಟ್ಟುವ ಪೂರ್ವದಲ್ಲಿ ನಿರಾಕಾರವಾಗಿದ್ದು ಜನ್ಮ ಧರಿಸಿದ ಮೇಲೆ ಆಕಾರಕ್ಕೆ ಬಂದವು ||೧೬೪||

ಅವು ಎಲ್ಲಿ ಲಯ ಹೊಂದುತ್ತವೆಯೋ ಅಲ್ಲಿಯೂ ಅವು ನಿಃಸಂಶಯವಾಗಿ ಬೇರೆ ಸ್ಥಿತಿಗೆ ಹೋಗುವುದಿಲ್ಲ. ಅಂದರೆ ತಮ್ಮ ಪೂರ್ವ ಅರ್ಥಾತ್ ಅವ್ಯಕ್ತ ಸ್ಥಿತಿಯನ್ನು ಹೊಂದುತ್ತವೆ ||೧೬೫||

ಮತ್ತು ಉತ್ಪತ್ತಿ ಮತ್ತು ನಾಶ ಇವುಗಳ ಮಧ್ಯದಲ್ಲಿ ಕಾಣುವ ಸಾಕಾರ ವಸ್ತುಗಳು ನಿದ್ರೆಯಲ್ಲಿನ ಸ್ವಪ್ನದಂತೆ ಮಾಯೆಯ ಯೋಗದಿಂದ ಬ್ರಹ್ಮಸ್ವರೂಪದಲ್ಲಿ ಭಾಸ ವಾಗುವುವು ||೧೬೬||

(ಗಾಳಿ ಬೀಸಿದಾಗ) ನೀರಿಗೆ ತೆರೆಯ ಆಕಾರ ಕಾಣುವಂತೆ ಅಥವಾ ಇನ್ನೊಬ್ಬರ ಇಚ್ಛೆಯಂತೆ ಬಂಗಾರಕ್ಕೆ ಅಲಂಕಾರದ ಆಕಾರವು ವ್ಯಕ್ತವಾಗುವಂತೆ ||೧೬೭||

ಈ ಪ್ರಕಾರವಾಗಿ ಎಲ್ಲ ಪದಾರ್ಥಗಳು ಮಾಯೆಯಿಂದ ಆಕಾರಕ್ಕೆ ಬಂದಿರುತ್ತವೆ. ಆಕಾಶದಲ್ಲಿ ಮೋಡಗಳು ಕವಿಯುತ್ತವೆ. ಆದರೆ ಆ ಮೋಡಗಳು ಮೊದಲೂ ಇರುವುದಿಲ್ಲ ಕೊನೆಗೂ ಇರುವುದಿಲ್ಲ. ನಡುವೆ ಮಾತ್ರ ಕಾಣುತ್ತವೆ ||೧೬೮||

ಯಾವುದು ಮೂಲದಲ್ಲಿ ಇಲ್ಲವೋ ಅದಕ್ಕಾಗಿ ನೀನು ಏನೆಂದು ಅಳುವೆ? ನೀನು ಒಂದೇ ಒಂದು ಚೈತನ್ಯ ನಿರ್ವಿಕಾರ ಬ್ರಹ್ಮನನ್ನು ತಿಳಿ ||೧೬೯||

ಯಾವ ಬ್ರಹ್ಮಸಾಕ್ಷಾತ್ಕಾರಕ್ಕಾಗಿ ಸಂತರು ವಿಷಯ ಭೋಗ ತ್ಯಾಗ ಮಾಡಿದರು. ವೈರಾಗ್ಯ ಸಂಪನ್ನರು ಅರಣ್ಯ ಸೇರಿದರು ||೧೭೦||

ಮತ್ತು ಆ ಬ್ರಹ್ಮನಲ್ಲಿ ದೃಷ್ಟಿಯಿಟ್ಟು ಮಹಾಮಹಾ ಮುನಿಗಳು ಬ್ರಹ್ಮಚರ್ಯಾದಿ ವ್ರತಗಳನ್ನು ವಾಚಿಕ, ಮಾನಸಿಕ ತಪಗಳನ್ನು ಆಚರಿಸುತ್ತಾರೆ ||೧೭೧||

ಶ್ಲೋಕಾರ್ಥ :- ಈ ಆತ್ಮನನ್ನು ಒಬ್ಬನೊಬ್ಬನು ಆಶ್ಚರ್ಯವಾಗಿ ನೋಡುತ್ತಾನೆ. ಮತ್ತೊಬ್ಬನು ಆಶ್ಚರ್ಯವಾಗಿ ಕೇಳುತ್ತಾನೆ. ಕೇಳಿದರೂ ಈ ಆತ್ಮನನ್ನು ಯಾರೂ ತಿಳಿಯಲಾರರು ||೨೯||

ಆ ಶುದ್ಧ ಬ್ರಹ್ಮನಲ್ಲಿ ಏಕಾಗ್ರ ಚಿತ್ತದಿಂದ ನೋಡುತ್ತ ನೋಡುತ್ತ, ಅಂತರ್ಯಾಮಿಯಲ್ಲಿ ಸ್ಥಿರ ಹೊಂದಿ ಎಲ್ಲ ಪ್ರಕಾರದ ಸಂಸಾರವನ್ನು ಮರೆತು ಬಿಡುವರು ||೧೭೨||

ಅನೇಕರು ಆತನ (ಭಗವಂತನ) ಗುಣಾನುವಾದ ಹಾಡುತ್ತಾ ಚಿತ್ತದಲ್ಲಿ ವಿಷಯ ವೈರಾಗ್ಯ ತಾಳಿ ಕೊನೆಗೆ ಆತನಲ್ಲಿ ಅಖಂಡವಾಗಿ ನಿತ್ಯ ನಿಮಗ್ನರಾಗುತ್ತಾರೆ ||೧೭೩||

ಇನ್ನು ಕೆಲವರು ಆತನ ಸ್ವರೂಪವನ್ನು ಶ್ರವಣ ಮಾತ್ರದಿಂದ ಶಾಂತರಾಗಿ ದೇಹಾಭಿಮಾನಗಳಿಂದ ನಿವೃತ್ತರಾಗುತ್ತಾರೆ. ಇನ್ನು ಕೆಲವರು ಅನುಭವಗಳಿಂದ ತದ್ರೂಪರಾಗುತ್ತಾರೆ ||೧೭೪||

ಯಾವ ಪ್ರಕಾರವಾಗಿ ನದಿಗಳೆಲ್ಲವೂ ಸಮುದ್ರಕ್ಕೆ ಕೂಡಿಕೊಂಡಾಗ ಆ ಸಮುದ್ರದಲ್ಲಿ ಸ್ಥಳಾವಕಾಶವಿಲ್ಲ ಎಂದು ತಿರುಗಿ ಬರುವುದೇ ಇಲ್ಲ ||೧೭೫||

ಅದೇ ಪ್ರಕಾರವಾಗಿ ಯೋಗೇಶ್ವರರ ಬುದ್ಧಿಯು ಬ್ರಹ್ಮಸಾಕ್ಷಾತ್ಕಾರದೊಂದಿಗೆ ತದ್ರೂಪವಾಗುವುದು ಮತ್ತು ಅವರು ಈ ರೀತಿಯಲ್ಲಿ ವಿಚಾರಿಸಿ ತದ್ರೂಪರಾದವರು ಪುನಃ ಸಂಸಾರಕ್ಕೆ ಬರುವುದಿಲ್ಲ ||೧೭೬||

ಶ್ಲೋಕಾರ್ಥ :- ಹೇ ಭಾರತವೀರಾ! ಎಲ್ಲರ ದೇಹಗಳಲ್ಲಿಯೂ ಇರತಕ್ಕ ಆತ್ಮನು ಕೊಲ್ಲಿಸಿ ಕೊಳ್ಳತಕ್ಕವನಲ್ಲ. ಆದುದರಿಂದ ನೀನು ಯಾರನ್ನೂ ಕುರಿತು ವ್ಯಥೆಪಡುವುದು ಅಗತ್ಯವಿಲ್ಲ ||೩೦||

ಯಾವುದು ಎಲ್ಲ ಕಡೆಗೂ ಎಲ್ಲ ದೇಹಗಳಲ್ಲಿಯೂ ತುಂಬಿಕೊಂಡಿದೆಯೋ, ಪ್ರಯತ್ನ ಮಾಡಿದರೂ ಅದರ ನಾಶವಾಗುವುದಿಲ್ಲವೋ, ಆ ಚೈತನ್ಯವು ಒಂದೇ ಒಂದು ಇದ್ದು ವಿಶ್ವವ್ಯಾಪಕವಾಗಿದೆ. ಹೀಗೆ ನೀನು ತಿಳಿ ||೧೭೭||

ಜಯಾಚೇನಿ ಸ್ವಭಾವೇ । ಹೇ ಹೋತ ಜಾತ ಆಘವೇ । ತರೀ ಸಾಂಗ ಕಾಯ ಶೋಚಾವೇ । ಏಥ ತುವಾ ।।೧೭೮।। ಏರ್ಹವೀ ತರೀ ಪಾರ್ಥಾ । ತುಜ ಕಾ ನೇಣೋ ನ ಮನೇ ಚಿತ್ತಾ । ಪರೀ ಕಿಡಾಳ ಹೇ ಶೋಚಿತಾ । ಬಹುತೀ ಪರೀ ।।೧೭೯।।

ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ।
ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ ।।೩೧।।

ತೂ ಅರ್ಝುನೀ ಕಾ ನ ವಿಚಾರಸೀ । ಕಾಯ ಹೇ ಚಿಂತಿತು ಆಹಾಸೀ । ಸ್ವಧರ್ಮುತೋ ವಿಸರಲಾಸೀ । ತರಾವೇ ಜೇಣೇ ।।೧೮೦।। ಯಾ ಕೌರವಾ ಭಲತೇ ಜಾಹಲೇ । ಅಥವಾ ತುಜಚಿ ಕಾಂಹೀ ಪಾತಲೇ । ಕೀ ಯುಗಚಿ ಹೇ ಬುಡಾಲೇ । ಜರ್ಹಿ ಏಥ ।।೧೮೧।। ತರೀ ಸ್ವಧರ್ಮು ಏಕು ಆಹೇ । ತೋ ಸರ್ವಥಾ ತ್ಯಾಜ್ಯ ನೋಹೇ । ಮಗ ತರಿಜೇಲ ಕಾಯ ಪಾಹೇ । ಕೃಪಾಳೂಪಣೇ ।।೧೮೨।। ಅರ್ಜುನಾ ತುರೆಂ ಚಿತ್ತ । ಜರ್ಹೀ ಜಾಹಲೇ ದ್ರವೀಭೂತ । ತರ್ಹೀ ಹೇ ಅನುಚಿತ । ಸಂಗ್ರಾಮಸಮಯೀ ।।೧೮೩।। ಅಗಾ ಗೋಕ್ಷೀರ ಜರೀ ಜಾಹಲೇ । ತರೀ ಪಥ್ಯಾಸೀ ನಾಹೀ ಮ್ಹಣಿತಲೇ । ಐಸೇನಿಹಿ ವಿಷ ಹೋಯ ಸುದಲೇ । ನವಜ್ವರೀ ದೇತಾ ।।೧೮೪।। ತೈಸೇ ಆನೀ ಆನ ಕರಿತಾ । ನಾಶು ಹೋಈಲ ಹಿತಾ । ಮ್ಹಣೌನಿ ತೂ ಆತಾ । ಸಾವಧ ಹೋಈ ।।೧೮೫।। ವಾಯಾಂಚಿ ವ್ಯಾಕುಳ ಕಾಯೀ । ಆಪುಲಾ ನಿಜಧರ್ಮು ಪಾಹೀ । ಜೋ ಆಚರಿತಾ ಬಾಧು ನಾಹೀ । ಕವಣೇ ಕಾಳೀ ।।೧೮೬।। ಜೈಸೇ ಮಾರ್ಗೇಚಿ ಚಾಲತಾ । ಅಪಾವೋ ನಪವೇ ಸರ್ವಥಾ । ಕಾ ದೀಪಾಧಾರೇ ವರ್ತತಾ । ನಾಡಳಿಜೇ ।।೧೮೭।। ತಯಾಪರೀ ಪಾರ್ಥಾ । ಸ್ವಧರ್ಮೇ ರಾಹಾಟತಾ । ಸಕಳ ಕಾಮಪೂರ್ಣತಾ । ಸಹಜೇ ಹೋಯ ।।೧೮೮।। ಮ್ಹಣೌನಿ ಯಾಲಾಗೀ ಪಾಹೀ । ತುಮ್ಹಾ ಕ್ಷತ್ರಿಯಾ ಆಣೀಕ ಕಾಂಹೀ । ಸಂಗ್ರಾಮಾವಾಂಚೂನಿ ನಾಹೀ । ಉಚಿತ ಜಾಣೇ ।।೧೮೯।। ನಿಷ್ಕಪಟಾ ಹೋಆವೇ । ಉಸಿಣಾ ಘಾಈ ಝುಂಜಾವೇ । ಹೇ ಅಸೋ ಕಾಯ ಸಾಂಗಾವೇ । ಪ್ರತ್ಯಕ್ಷಾ ವರೀ ।।೧೯೦।।

ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್ ।
ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಮ್ ।।೩೨।।

ಅರ್ಜುನಾ ಝುಂಜ ದೇಖೇ ಆತಾಚೇ । ಹೇ ಹೋಕಾ ಜೇ ದೈವ ತುಮಚೇ । ಕೀ ನಿಧಾನ ಸಕಳ ಧರ್ಮಾಚೇ । ಪ್ರಗಟಲೇ ಅಸೇ ।।೧೯೧।।

ಯಾವ ಚೈತನ್ಯದ ಆಧಾರದಿಂದ ಸಹಜವಾಗಿ ಇವು ಎಲ್ಲವೂ ಉತ್ಪನ್ನವಾಗಿ ನಾಶವಾಗುತ್ತವೆ. ಅಂದಮೇಲೆ ಇದರಲ್ಲಿ ಯಾವುದಕ್ಕಾಗಿ ಶೋಕ ಮಾಡಬೇಕು ? ನೀನೇ ಹೇಳು ।।೧೭೮।।

ಪಾರ್ಥಾ, ಸಾಮಾನ್ಯವಾಗಿ ನಿನ್ನ ಮನಸ್ಸಿಗೆ ಇದು ಏಕೆ ಹಿಡಿಸುವುದಿಲ್ಲವೆಂಬುದು ನನಗೆ ತಿಳಿಯದಾಗಿದೆ. ಆದರೆ ಒಟ್ಟಿನಲ್ಲಿ ಈ ರೀತಿ ಶೋಕ ಮಾಡುವುದು ಅನೇಕ ಪರಿಯಿಂದ ಅನುಚಿತವಾಗಿದೆ ।।೧೭೯।।

ಶ್ಲೋಕಾರ್ಥ :- (ಯುದ್ಧವು) ನಿನ್ನ ಧರ್ಮವೆಂಬುದು ನೋಡಿಯಾದರೂ ನೀನು ನಡುಗಬಾರದು. ಕ್ಷತ್ರಿಯನಿಗೆ ಧರ್ಮವಾದ ಯುದ್ಧಕ್ಕಿಂತಲೂ ಶ್ರೇಷ್ಠವಾದದ್ದು ಯಾವುದೂ ಇಲ್ಲ ।।೩೧।।

ನೀನು ಪುನಃ ಬೇರೆ ಪ್ರಕಾರದಿಂದ ಏಕೆ ವಿಚಾರಿಸುವುದಿಲ್ಲ ? ಮನದಲ್ಲಿ ಏನೇನೋ ಚಿಂತಿಸುತ್ತಿರುವೆ. ಭವನದಿಯಿಂದ ಪಾರು ಮಾಡುವಂಥ ಆ ಸ್ವಧರ್ಮವನ್ನೇ ಮರೆತುಬಿಟ್ಟೆಯಲ್ಲಾ ? ।।೧೮೦।।

ಈ ಯುದ್ಧದಲ್ಲಿ ಕೌರವರದು ಏನು ಬೇಕಾದ್ದಾದರೂ, ಅಥವಾ ನಿನ್ನ ಮೇಲೆಯೂ ಸಂಕಟ ಒದಗಿದರೂ, ಇಲ್ಲವೇ ಈ ಜಗವೆಲ್ಲ ಮುಳುಗಿದರೂ ।।೧೮೧।।

ಯಾವುದು ಸ್ವಧರ್ಮವೆಂದು ಒಂದಿದೆ, ಅದನ್ನು ಸರ್ವಥಾ ತ್ಯಾಜ್ಯವಲ್ಲ. ಇದರ ತ್ಯಾಗ ಮಾಡಿದರೆ ನಿನ್ನ ಯಾವ ಕೃಪಾಳುತನದಿಂದ ಉದ್ಧಾರನಾಗುವೆ? ।।೧೮೨।।

ಅರ್ಜುನಾ ನಿನ್ನ ಚಿತ್ತದಲ್ಲಿ ಒಂದು ವೇಳೆ ದಯೆಯು ಉತ್ಪನ್ನವಾದಲ್ಲಿ ಅದು ಈ ಯುದ್ಧ ಪ್ರಸಂಗದಲ್ಲಿ ಅಯೋಗ್ಯವಿರುವುದು ।।೧೮೩।।

ಆಕಳ ಹಾಲು ಉತ್ತಮ ಇರುವುದು. ಆದರೆ ಅದು ಪಥ್ಯಕ್ಕೆ ಬೇಡ ಎಂದಿದ್ದಾರೆ. ಹೀಗಿದ್ದರೂ ನವಜ್ವರ ಪೀಡಿತ ರೋಗಿಗೆ ಹಾಲು ಕೊಟ್ಟರೆ ವಿಷವಾಗುವುದು ।।೧೮೪।।

ಅದರಂತೆ ಯಾರು ಯಾವುದೋ ಸ್ಥಳದಲ್ಲಿ ಯಾವುದೇ ಕಾಲದಲ್ಲಿ ಯಾವುದೇ ಮಾಡಿದರೆ, ಹಿತದ ನಾಶವಾಗುವುದು. (ಕ್ಷತ್ರಿಯರು - ರಣರಂಗಕ್ಕೆ ಬಂದು ಯುದ್ಧ ಕಾಲಕ್ಕೆ ಶಸ್ತ್ರತ್ಯಾಗ ಮಾಡಿ ಭಿಕ್ಷೆ ಬೇಡಲು ಓಡಿ ಹೋಗುವ ವಿಚಾರ ಹಿತಕರ ಅಲ್ಲ) ಅದಕ್ಕಾಗಿ ನೀನಿಗ ಎಚ್ಚರಾಗು ।।೧೮೫।।

ಮೋಹದಿಂದ ವ್ಯರ್ಥವಾಗಿ ವ್ಯಾಕುಲನೇಕಾಗುವೆ? ನೀನು ನಿನ್ನ ಧರ್ಮದ ವಿಚಾರ ಮಾಡು. ಇದನ್ನಾಚರಿಸಿದರೆ ಯಾವ ಕಾಲಕ್ಕೂ ದೋಷವಾಗುವುದಿಲ್ಲ ।।೧೮೬।।

ದಾರಿ ಹಿಡಿದು ನಡೆದರೆ ಯಾವ ಅಪಾಯವಾಗುವುದಿಲ್ಲ. ರಾತ್ರಿಯಲ್ಲಿ ದೀಪದ ಆಧಾರದಿಂದ ವರ್ತಿಸಿದರೆ ಯಾವ ಅಡಚಣೆಯಾಗುವುದಿಲ್ಲ ।।೧೮೭।।

ಅರ್ಜುನಾ, ಅದರಂತೆ ಯಾರು ಸ್ವಧರ್ಮದ ಪ್ರಕಾರ ನಡೆಯುತ್ತಾನೆಯೋ ಆತನ ಎಲ್ಲ ಕಾಮನೆಗಳು ಪೂರ್ಣವಾಗುವುವು ।।೧೮೮।।

ಆದ್ದರಿಂದ, ಇದಕ್ಕಾಗಿ ಕ್ಷತ್ರಿಯರಾದ ನಿಮಗೆ ಯುದ್ಧದ ಹೊರತಾಗಿ ಬೇರೆ ಯಾವುದೂ ಉಚಿತ ಇರುವುದಿಲ್ಲ. ಹೀಗಿರುವುದನ್ನು ನೀನು ತಿಳಿದುಕೊ ।।೧೮೯।।

ಮನದಲ್ಲಿ ಕಪಟ ಹಿಡಿಯದೇ ಎದರಾಬದರು ನಿಂತು ಒಬ್ಬರಿಗೊಬ್ಬರು ಪ್ರಹಾರ ಮಾಡಿ ಯುದ್ಧ ಮಾಡಬೇಕು. ಇದು ಪ್ರತ್ಯಕ್ಷವಾಗಿ ನಿನಗೆಲ್ಲ ಗೊತ್ತಿದೆ. ಪುನಃ ನಾವೇನು ಹೇಳಬೇಕು? ।।೧೯೦।।

ಶ್ಲೋಕಾರ್ಥ :- ಬಯಸದೇ ಬಂದದ್ದಾದ, ಸೀದಾ ಸ್ವರ್ಗಕ್ಕೆ ಮಾರ್ಗವಾದ ಇಂಥಾ ಯುದ್ಧವು ಅರ್ಜುನಾ! ಪುಣ್ಯಾತ್ಮರಾದ ಕ್ಷತ್ರಿಯರಿಗೆ ಮಾತ್ರ ಲಭಿಸುತ್ತದೆ ।।೩೨।।

ಅರ್ಜುನಾ, ಈ ಯುದ್ಧವು ನಿಮ್ಮ ಪೂರ್ವಜನ್ಮದ ಭಾಗ್ಯವಾಗಿದೆ. ಅಥವಾ ಎಲ್ಲ ಧರ್ಮದ ನಿಧಿಯೇ ಪ್ರಗಟವಾಗಿದೆ ।।೧೯೧।।

ಹಾ ಸಂಗ್ರಾಮು ಕಾಯ ಮ್ಹಣಿಪೇ । ಕೀ ಸ್ವರ್ಗುಚಿ ಯೇಣೇ ರೂಪೇ । ಮೂರ್ತ ಕಾ ಪ್ರತಾಪೇ । ಉದೋ ಕೇಲಾ ॥೯೨॥ ನಾ ತರೀ ಗುಣಾಚೇನಿ ಪತಿಕರೇ । ಆರ್ತಿಚೇನಿ ಪಡಿಭರೇ । ಹೇ ಕೀರ್ತೀಚಿ ಸ್ವಯಂವರೇ । ಆಲೀ ತುಜ ॥೯೩॥ ಕ್ಷತ್ರಿಯೇ ಬಹುತ ಪುಣ್ಯ ಕೀಜೇ । ತೈ ಝುಂಜ ಐಸೇ ಲಾಹಿಜೇ । ಜೈಸೇ ಮಾರ್ಗೇ ಜಾತಾ ಆಡಳಿಜೇ । ಚಿಂತಾಮಣೀ ॥೯೪॥ ನಾ ತರೀ ಜಾಂಭಯಾ ಪಸರೇ ಮುಖ । ತೇಥ ಅವಚಟೇ ಪಡೆ ಪೀಯೂಖ । ತೈಸಾ ಸಂಗ್ರಾಮು ಹಾ ದೇಖ । ಪಾತಲಾ ಅಸೇ ॥೯೫॥

ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।
ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ॥೩೩॥

ಆತಾ ಹಾ ಐಸಾ ಅವ್ಹೇರಿಜೇ । ಮಗ ನಾಥಿಲೇ ಶೋಚೂ ಬೈಸಿಜೇ । ತರೀ ಆಪಣ ಆಹಾಣಾ ಹೋಈಜೇ । ಆಪಣಪೇಯಾ ॥೯೬॥ ಪೂರ್ವಜಾಂಚೇ ಜೋಡಲೇ । ಆಪಣಚಿ ಹೋಯ ಧಾಡಿಲೇ । ಜರೀ ಆಜಿ ಶಸ್ತ್ರ ಸಾಂಡಿಲೇ । ರಣೀ ಇಯೇ ॥೯೭॥ ಅಸತೀ ಕೀರ್ತೀ ಜಾಈಲ । ಜಗಚಿ ಅಭಿಶಾಪು ದೇಈಲ । ಆಣಿ ಗಿಂವಸಿತ ಪಾವತೀಲ । ಮಹಾದೋಷ ॥೯೮॥ ಜೈಸೀ ಭ್ರತಾರೇಹೀನ ವನಿತಾ । ಉಪಹತೀ ಪಾವೇ ಸರ್ವಥಾ । ತೈಶೀ ದಶಾ ಜೀವಿತಾ । ಸ್ವಧರ್ಮೇವೀಣ ॥೯೯॥ ನಾ ತರೀ ರಣೀ ಶವ ಸಾಂಡಿಜೇ । ತೇ ಚೌಮೇರಿ ಗಿಧೀ ವಿದಾರಿಜೇ । ತೈಸೇ ಸ್ವಧರ್ಮಹೀನಾ ಅಭಿಭವಿಜೇ । ಮಹಾದೋಷೀ ॥೧೦೦॥

ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಮ್ ।
ಸಂಭಾವಿತಸ್ಯ ಚಾಕೀರ್ತಿಃ ಮರಣಾದತಿರಿಚ್ಯತೇ ॥೩೪॥

ಮ್ಹಣೌನಿ ಸ್ವಧರ್ಮು ಹಾ ಸಾಂಡಸೀಲ । ತರೀ ಪಾಪಾ ವರಪಡಾ ಹೋಸೀಲ । ಆಣೀ ಅಪೇಶ ತೇ ನವಚೇಲ । ಕಲ್ಪಾಂತರೀ ॥೧೦೧॥ ಜಾಣತೇನಿ ತಂವಚಿ ಜಿಯಾವೇ । ಜಂವ ಅಪಕೀರ್ತೀ ಆಂಗಾ ನ ಪವೇ । ಆಣಿ ಸಾಂಗ ಪಾ ಕೇವಿ ನಿಗಾವೇ । ಏಥೋನಿಯಾ? ॥೧೦೨॥ ತೂ ನಿರ್ಮತ್ಸರ ಸದಯತಾ । ಯೇಥೂನಿ ನಿಘಸೀಲ ಕೀರ ಮಾಘೌತಾ । ಪರೀ ತೇ ಗತೀ ಸಮಸ್ತಾ । ನ ಮನೇಲ ಯಯಾ ॥೧೦೩॥ ಹೇ ಚಹೂಂಕಡೂನಿ ವೇಢಿತೀಲ । ಬಾಣವರೀ ಘೇತೀಲ । ತೇಥ ಪಾರ್ಥಾ ನ ಸುಟಿಜೇಲ । ಕೃಪಾಳುಪಣೇ ॥೧೦೪॥ ಐಸೇನಿಹೀ ಪ್ರಾಣಸಂಕಟೇ । ಜರೀ ವಿಪಾಯೇ ಪಾ ನಿಘಣೇ ಘಟೇ । ತರೀ ಜೇ ಜಿಯಾಲೇಹೀ ವೋಖಟೇ । ಮರಣಾಹುನೀ ॥೧೦೫॥

ಈ ಯುದ್ಧವು ಸಾಮಾನ್ಯವೆಂದು ಹೇಳಬೇಕೆ? ನಿಮ್ಮ ಪ್ರತಾಪದಿಂದ ಮೂರ್ತಿಮಂತ ಸ್ವರ್ಗವು ಯುದ್ಧರೂಪದಲ್ಲಿ ಬಂದು ನಿಂತಿರುವುದು ।।೧೯೨।।

ನಿನ್ನ ಸದ್ಗುಣಗಳಿಗೆ ಮಾರು ಹೋಗಿ ನೀನೇ ಪತಿಯಾಗಬೇಕೆಂಬ ತೀವ್ರ ಇಚ್ಛೆಯಿಂದ ಕೀರ್ತಿ ರೂಪ ಸ್ತ್ರೀಯು ನಿನ್ನನ್ನು ವರಿಸಲು ನಿನ್ನ ಬಳಿ ಬಂದಿರುವಳು ।।೧೯೩।।

ಕ್ಷತ್ರಿಯರು ಬಹಳ ಪುಣ್ಯ ಮಾಡಿರಬೇಕು. ಆಗ ಅವರಿಗೆ ಇಂಥ ಯುದ್ಧ ಪ್ರಸಂಗ ಒದಗುವುದು. ಯಾವ ಪ್ರಕಾರವಾಗಿ ದಾರಿ ನಡೆಯುವ ಕಾಲಕ್ಕೆ ಚಿಂತಾಮಣಿ ಅಕಸ್ಮಾತ್ ದೊರಕಿದರೆ ।।೧೯೪।।

ಅಥವಾ ಆಕಳಿಸುತ್ತಾ ಬಾಯಿ ತೆರೆದಾಗ ಅದರಲ್ಲಿ ಅಕಸ್ಮಾತ್ ಅಮೃತ ಬಿದ್ದರೆ, ಅದರಂತೆ ಈ ಯುದ್ಧ ಪ್ರಸಂಗವು ನಿಮಗೊದಗಿದೆ. ಹೀಗೆ ತಿಳಿ ।।೧೯೫।।

ಶ್ಲೋಕಾರ್ಥ :- ನೀನು ಈ ಯುದ್ಧವನ್ನು ಮಾಡದೆ ಬಿಟ್ಟರೆ ಸ್ವಧರ್ಮ ಭ್ರಷ್ಟನೂ, ಕೀರ್ತಿ ಭ್ರಷ್ಟನೂ, ಆಗಿ ಪಾಪಕ್ಕೆ ಗುರಿಯಾಗುವೆ ।।೩೩।।

ಈಗ ಇಂಥ ಈ ಯುದ್ಧವನ್ನು ಬಿಟ್ಟು ಯಾವುದೋ ಮಾತಿನ ಶೋಕ ಮಾಡುತ್ತಾ ಕುಳಿತರೆ ನಿನ್ನನ್ನು ನೀನೇ ಹಾನಿ ಮಾಡಿಕೊಂಡಂತಾಗುವುದು ।।೧೯೬।।

ಈ ರಣರಂಗದಲ್ಲಿ ಒಂದುವೇಳೆ ನೀನು ಶಸ್ತ್ರಗಳನ್ನು ಒಗೆದರೆ ಪೂರ್ವಜರು ಕೂಡಿಟ್ಟ ಕೀರ್ತಿಯನ್ನು ಹಾಳು ಮಾಡಿದಂತಾಗುವುದು ।।೧೯೭।।

ಇಷ್ಟೇ ಅಲ್ಲ, ನೀನು ಸಂಪಾದಿಸಿರುವ ಕೀರ್ತಿಯೂ ನಾಶವಾಗಿ ಸರ್ವ ಜಗವೂ ನಿನ್ನನ್ನು ನಿಂದಿಸುವುದು ಮತ್ತು ಅನೇಕ ಮಹಾದೋಷಗಳು ನಿನ್ನನ್ನು ಶೋಧಿಸುತ್ತಾ ಬರುವುವು ।।೧೯೮।।

ಪತಿಯನ್ನು ಕಳೆದುಕೊಂಡ ವಿಧವಾ ಸ್ತ್ರೀಯು ಮೇಲಿಂದ ಮೇಲೆ ಅಪಮಾನಿತಳಾಗುವಳು. ಅದರಂತೆ ಸ್ವಧರ್ಮ ಬಿಟ್ಟವರ ಜೀವನದ ಸ್ಥಿತಿಯಾಗುವುದು ।।೧೯೯।।

ಯುದ್ಧದಲ್ಲಿ ಮಡಿದ ಶವವನ್ನು ಎಲ್ಲಿಯಾದರೂ ಒಗೆದು ಬಿಟ್ಟರೆ ನಾಲ್ಕು ಕಡೆಯಿಂದ ರಣಹದ್ದುಗಳು ಬಂದು ಆ ಶವವನ್ನು ಛಿದ್ರ ಛಿದ್ರಮಾಡುವುವು. ಅದರಂತೆ ಸ್ವಧರ್ಮ ಹೀನ ಮನುಷ್ಯನಿಗೆ ಮಹಾದೋಷಗಳು ವ್ಯಾಪಿಸುವುವು ।।೨೦೦।।

ಶ್ಲೋಕಾರ್ಥ :- ನಿನ್ನ ಅಪಕೀರ್ತಿಯನ್ನು ಜನರು ಅನಂತ ಕಾಲದವರೆಗೆ ಆಡಿಕೊಳ್ಳುತ್ತಾರೆ. ಮರ್ಯಾದಸ್ಥನಿಗೆ ಅಪನಿಂದೆಯು ಮರಣಕ್ಕಿಂತ ಕೀಳಾದದ್ದು ।।೩೪।।

ಅದಕ್ಕಾಗಿ, ನೀನು ಈಗ ನಿನ್ನ ಕ್ಷಾತ್ರ ಧರ್ಮವನ್ನು ತ್ಯಾಗ ಮಾಡಿದರೆ, ನಿನಗೆ ಪಾಪ ತಟ್ಟುವುದು. ಅಲ್ಲದೇ ಕಲ್ಪಾಂತದವರೆಗೂ ಅಪಯಶದ ಕಳಂಕವು ನಶಿಸುವುದಿಲ್ಲ ।।೨೦೧।।

ಎಲ್ಲಿಯವರೆಗೆ ಅಪಕೀರ್ತಿ ಒದಗಿಲ್ಲವೋ ಅಲ್ಲಿಯವರೆಗೆ ಮಾತ್ರ ತಿಳಿದವರು ಬದುಕಬೇಕು. ಹೀಗಿರುವಾಗ್ಗೆ ನೀನೇ ಹೇಳು, ಈಗ ರಣರಂಗದಿಂದ ಹೇಗೆ ಹೋಗಬೇಕು? ।।೨೦೨।।

ನೀನು ದಯಾಭರಿತ ಅಂತಃಕರಣದಿಂದ ಮತ್ತು ನಿರ್ಮತ್ಸರ ಭಾವದಿಂದ ಈ ಯುದ್ಧದಿಂದ ಹಿಂದಕ್ಕೆ ಸರಿಯಬಹುದು ನಿಜ. ಆದರೆ ಇವರೆಲ್ಲರಿಗೂ ಈ ಮಾತು ನಿಜವೆನಿಸುವುದಿಲ್ಲ ।।೨೦೩।।

ಈ ಕೌರವರು ನಿನಗೆ ನಾಲ್ಕು ಕಡೆಯಿಂದ ಮುತ್ತಿಗೆ ಹಾಕುವರು ಹಾಗೂ ನಿನ್ನ ಮೇಲೆ ಬಾಣಗಳನ್ನು ಬಿಡುವರು. ಆಗ ಆ ಪ್ರಸಂಗದಲ್ಲಿ ನಿನ್ನ ಕೃಪಾಳುತನದಿಂದ ಹೇಗೆ ಬಿಡುಗಡೆಯಾಗುವೆ? ।।೨೦೪।।

ಇಷ್ಟಾದ ಮೇಲೆ ಒಂದು ವೇಳೆ ಕದಾಚಿತ್ ಬಹಳ ಸಾಯಾಸದಿಂದ ನೀನು ಇಲ್ಲಿಂದ ಪಾರಾದರೆ, ನಿನ್ನ ಬದುಕು ಮರಣಕ್ಕಿಂತಲೂ ಕೆಟ್ಟದ್ದಾಗುವುದು ।।೨೦೫।।

ಭಯಾದ್ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ।
ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಮ್ ।೩೫॥

ತೂ ಆಣೇಕಹೀ ಏಕ ನ ವಿಚಾರಿಸೀ । ಏಥ ಸಂಭ್ರಮೇ ಝುಂಜೋ ಆಲಾಸೀ । ಆಣಿ ಸಕಣವಪಣೇ ನಿಘಾಲಾಸೀ । ಮಾಗುತಾ ಜರೀ ।೨೦೬॥ ತರೀ ತುಝೇ ತೇ ಅರ್ಜುನಾ । ಯಾ ವೈರಿಯಾ ದುರ್ಜನಾ । ಕಾ ಪ್ರತ್ಯಯಾ ಯೇಈಲ ಮನಾ । ಸಾಂಗೈ ಮಜ ।೨೦೭॥

ಅವಾಚ್ಯವಾದಾಂಶ್ಚ ಬಹೂನ್ ವದಿಷ್ಯಂತಿ ತವಾಹಿತಾಃ।
ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್ ।೩೬॥

ಹೇ ಮ್ಹಣತೀ ಗೇಲಾ ರೇ ಗೇಲಾ । ಅರ್ಜುನ ಆಮ್ಹಾ ಬಿಹಾಲಾ । ಹಾ ಸಾಂಗೈ ಬೋಲು ಉರಲಾ । ನಿಕಾ ಕಾಯೀ? ।೨೦೮॥ ಲೋಕ ಸಾಯಾಸೆ ಕರೂನಿ ಬಹುತೇ । ಕಾ ವೇಂಚಿತೀ ಆಪುಲೀ ಜೀವಿತೇ । ಪರೀ ವಾಢವಿತೀ ಕೀರ್ತೀತೇ । ಧನುರ್ದರಾ ।೨೦೯॥ ತೇ ತುಜ ಅನಾಯಾಸೇ । ಅನಕಳಿತ ಜೋಡಿಲೀ ಅಸೇ । ಹೇ ಅದ್ವಿತೀಯ ಜೈಸೇ । ಗಗನ ಆಹೇ ।೨೧೦॥ ತೈಸಿ ಕೀರ್ತೀ ನಿಃಸೀಮ । ತುಝ್ಯಾ ಠಾಯೀ ನಿರುಪಮ । ತುಝೇ ಗುಣ ಉತ್ತಮ । ತಿಹೀ ಲೋಕೀ ।೨೧೧॥ ದಿಗಂತೀಚೇ ಭೂಪತಿ । ಭಾಟ ಹೋಊನಿ ವಾಖಾಣಿತಿ । ಜೇ ಐಕಿಲಿಯಾ ದಚಕತೀ । ಕೃತಾಂತಾದಿಕ ।೨೧೨॥ ಐಸೀ ಮಹಿಮಾ ಘನವಟ । ಗಂಗಾ ಜೈಸೀ ಚೋಖಟ । ಜಯಾ ದೇಖೀ ಜಗೀ ಸುಭಟ । ವಾಟ ಜಾಹಲೀ ।೨೧೩॥ ತೇ ಪೌರುಷ ತುಝೇ ಅದ್ಭುತ । ಆಇಕೋನಿಯಾ ಹೇ ಸಮಸ್ತ । ಜಾಹಲೇ ಆಥಿ ವಿರಕ್ತ । ಜೀವಿತೇಸಿ ।೨೧೪॥ ಜೈಸಾ ಸಿಂಹಾಚಿಯಾ ಹಾಂಕಾ । ಯುಗಾಂತು ಹೋಯ ಮದಮುಖಾ । ತೈಸಾ ಕೌರವಾ ಅಶೇಖಾ । ಧಾಕು ತುಝಾ ।೨೧೫॥ ಜೈಸೇ ಪರ್ವತ ವಜ್ರಾತೇ । ನಾ ತರೀ ಸರ್ಪ ಗರುಡಾತೇ । ತೈಸೇ ಅರ್ಜುನಾ ಹೇ ತೂತೇ । ಮಾನಿತೀ ಸದಾ ।೨೧೬॥ ತೇ ಅಗಾಧಪಣ ಜಾಈಲ । ಮಗ ಹೀಣವೋ ಅಂಗಾ ಯೇಈಲ । ಜರೀ ಮಾಗುತಾ ನಿಘಸೀಲ । ನ ಝುಂಜತುಚಿ ।೨೧೭॥ ಆಣೀ ಹೇ ಪಳತಾ ಪಳೋ ನೇದಿತೀ । ಧರೂನಿ ಅವಕಳಾ ಕರಿತೀ । ನ ಗಣಿತ ಕುಟೀ ಬೋಲತೀ । ಆಇಕತಾ ತುಜ ।೨೧೮॥ ಮಗ ತೇ ವೇಳೀ ಹಿಯೇ ಫುಟಾವೇ । ಆತಾ ಲಾಠೇಪಣೇ ಕಾ ನ ಝುಂಜಾವೇ ?। ಹೇ ಜಿಂತಲೇ ತರೀ ಭೋಗಾವೇ । ಮಹೀತಳ ।೨೧೯॥

ಶ್ಲೋಕಾರ್ಥ :- ನಿನ್ನನ್ನು, ಭಯದಿಂದ ಯುದ್ಧವನ್ನು ಬಿಟ್ಟವನೆಂದು ಈ ಕ್ಷತ್ರಿಯ ವೀರರು ತಿಳಿಯುತ್ತಾರೆ. ಇಲ್ಲಿಯವರೆಗೆ ನಿನ್ನನ್ನು ಗೌರವದಿಂದ ನೋಡಿದವರೇ, ಈಗ ಹಗುರವಾಗಿ ನೋಡುವರು ॥೩೫॥

ನೀನು ಮತ್ತೊಂದು ಮಾತಿನ ವಿಚಾರ ಮಾಡಿರುವುದಿಲ್ಲ. ಅದೇನೆಂದರೆ, ನೀನು ಇಲ್ಲಿಗೆ ಯುದ್ಧಕ್ಕಾಗಿ ಬಹಳ ಉತ್ಸಾಹದಿಂದ ಬಂದಿದ್ದು, ದಯೆಯಿಂದ ಹಿಂದಕ್ಕೆ ಹೊರಟರೆ ॥೨೦೬॥

ಅರ್ಜುನಾ ನೀನೇ ಹೇಳು, ನಿನ್ನ ದಯಾಳುತನವು ಈ ದುರ್ಜನ ವೈರಿ ಕೌರವರಿಗೆ ನಿಜವೆನಿಸುವುದೆ? ॥೨೦೭॥

ಶ್ಲೋಕಾರ್ಥ :- ಹಗೆಗಳು ನಿನ್ನ ಪರಾಕ್ರಮವನ್ನು ನಿಂದಿಸಿ ಮಾತನಾಡುವರು. ಇದಕ್ಕಿಂತ ಹೆಚ್ಚಿನ ದುಃಖವಿನ್ನು ಯಾವುದು? ॥೩೬॥

ಅವರು ಹೀಗೆ ಹೇಳುವರು:- ''ಹೋದನು, ಹೋದನು! ಅರ್ಜುನನು ನಮಗಂಜಿ ಓಡಿ ಹೋದನು.'' ಹೀಗೆ ನಿನ್ನ ಮೇಲೆ ಅಪವಾದ ಉಳಿದರೆ ಒಳ್ಳೆಯದೇ? ॥೨೦೮॥

ಅರ್ಜುನಾ, ಲೋಕದ ಜನರು ಸಾಕಷ್ಟು ಸಾಯಾಸದಿಂದ ಕೊನೆಗೆ ಜೀವವನ್ನೇ ಮುಡುಪಾಗಿಟ್ಟು ಕೀರ್ತಿಯ ಸಂಪಾದನೆ ಮಾಡುವರು ॥೨೦೯॥

ಆಕಾಶದಂತೆ ಹಿರಿಮೆಯಾದ ಅದ್ವಿತೀಯ ಕೀರ್ತಿ ಸಂಪಾದಿಸುವ ಪ್ರಸಂಗವು ನಿನಗೆ ಸಹಜವಾಗಿ ಒದಗಿಬಂದಿದೆ ॥೨೧೦॥

ನಿನ್ನ ಕೀರ್ತಿಯು ಅಪರಿಮಿತವಾಗಿದ್ದು ನಿನ್ನ ಗುಣವು ಉಪಮಾರಹಿತವಾಗಿ ಹೀಗೆ ನಿನ್ನ ಖ್ಯಾತಿ ಮೂರು ಲೋಕಗಳಲ್ಲಿದೆ ॥೨೧೧॥

ದೇಶಾಂತರದ ಅರಸರೆಲ್ಲರೂ ಭಟ್ಟಂಗಿಗಳಾಗಿ ನಿನ್ನ ಕೀರ್ತಿ ಹೊಗಳುತ್ತಾರೆ. ಇದನ್ನು ಕೇಳಿ ಯಮಾದಿಕರು ಮೊದಲು ಮಾಡಿ ದಟಕುವರು ॥೨೧೨॥

ಈ ಕೀರ್ತಿಯ ಮಹಿಮೆಯು ಗಂಗೆಯ ನೀರಿನಂತೆ ನಿರ್ಮಲವೂ, ಗಹನವೂ ಆಗಿದೆ. ಇದನ್ನು ಕೇಳಿ ಮಹಾ ಯೋಧರಿಗೆ ಕೀರ್ತಿ ಸಂಪಾದನೆಯ ಮಾರ್ಗವಾಗಿದೆ ॥೨೧೩॥

ಈ ಪ್ರಕಾರದ ನಿನ್ನ ಅದ್ಭುತ ಶೌರ್ಯದ ಮಹಿಮೆ ಕೇಳಿ ಕೌರವರು ತಮ್ಮ ಪ್ರಾಣಗಳ ಮೇಲೆ ನಿರಾಶರಾಗಿದ್ದಾರೆ ॥೨೧೪॥

ಯಾವ ಪ್ರಕಾರವಾಗಿ ಸಿಂಹದ ಗರ್ಜನೆ ಕೇಳಿದಾಕ್ಷಣ ಮದವೇರಿದ ಆನೆಗೂ ಸಹ ಪ್ರಳಯ ಕಾಲ ಬಂದಿತೆಂದು ಭಾಸವಾಗುತ್ತದೆಯೋ, ಅದರಂತೆ ಈ ಎಲ್ಲ ಕೌರವರಿಗೆ ನಿನ್ನ ಭಯದ ಭಾಸವಾಗುತ್ತದೆ ॥೨೧೫॥

ಪರ್ವತವು ವಜ್ರಕ್ಕೆ, ಗರುಡಕ್ಕೆ ಸರ್ಪವು ಭಯಪಡುವಂತೆ ಈ ಎಲ್ಲ ಕೌರವರು ನಿನಗೆ ಸದಾವಕಾಲ ಭಯಪಡುತ್ತಾರೆ ॥೨೧೬॥

ಅಂದಮೇಲೆ ಈಗ ನೀನು ಯುದ್ಧ ಮಾಡದೆ ಹಿಂದಕ್ಕೆ ತಿರುಗಿದರೆ, ಈ ನಿನ್ನ ದೊಡ್ಡಸ್ತಿಕೆ ನಾಶವಾಗಿ ನಿನಗೆ ಹೀನತ್ವವು ಪ್ರಾಪ್ತಿಯಾಗುವುದು ॥೨೧೭॥

ಒಂದು ವೇಳೆ ಓಡಿ ಹೋಗಬೇಕೆಂದು ನೀನು ಓಡಿದರೆ ಅವರು ನಿನಗೆ ಬಿಡುವುದಿಲ್ಲ. ನಿನ್ನನ್ನು ಹಿಡಿದು ನಿನ್ನ ಫಜೀತಿ ಮಾಡುವುದಲ್ಲದೇ ನಿನಗೆ ಕೇಳಿಸುವಂತೆ ಅತಿಶಯವಾಗಿ ನಿಂದಿಸುವರು ॥೨೧೮॥

ಆಗ ನಿನ್ನ ಹೃದಯ ಒಡೆದು ನೀರಾಗುವುದು. ಅದಕ್ಕಿಂತ ಈಗಲೇ ಶೌರ್ಯದಿಂದ ಯುದ್ಧ ಏಕೆ ಮಾಡಬಾರದು ? ನೀನು ಈ ಕೌರವರನ್ನು ಗೆದ್ದರೆ ಪೃಥ್ವಿಯ ರಾಜ್ಯ ಭೋಗಿಸುವೆ ॥೨೧೯॥

ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್ ।
ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥೩೭॥

ನಾ ತರೀ ರಣೀ ಏಥ । ಝುಂಜತಾ ವೇಚಲೇ ಜೀವಿತ । ತರೀ ಸ್ವರ್ಗಸುಖ ಅನಕಳಿತ । ಪಾವಸೀಲ ॥೨೨೦॥ ಮ್ಹಣೌನಿ ಯೇ ಗೋಠೀ । ವಿಚಾರು ನ ಕರೀ ಕಿರೀಟೀ । ಆತಾ ಧನುಷ್ಯ ಘೇಊನಿ ಉಠೀ । ಝುಂಜೈ ವೇಗೀ ॥೨೨೧॥ ದೈಖೈಲ ಸ್ವಧರ್ಮು ಹಾ ಆಚರತಾ । ದೋಷು ನಾಶೇ ಅಸತಾ । ತುಜ ಭ್ರಾಂತಿ ಹೇ ಕವಣ ಚಿತ್ತಾ । ಪಾತಕಾಚೀ ॥೨೨೨॥ ಸಾಂಗೈ ಪ್ಲವೇಂಚಿ ಕಾಯ ಬುಡಿಜೇ । ಕಾ ಮಾರ್ಗೀ ಜಾತಾ ಆಡಳಿಜೇ । ಪರೀ ವಿಪಾಯೇ ಚಾಲೋ ನೇಣಿಜೇ । ತರೀ ತೇಹೀ ಘಡೇ ॥೨೨೩॥ ಅಮೃತೇ ತರೀಚ ಮರಿಜೇ । ಜರೀ ವಿಖೇಂಸಿ ಸೇವಿಜೇ । ತೈಸಾ ಸ್ವಧರ್ಮೀ ದೋಷು ಪಾವಿಜೇ । ಹೇತುಕಪಣೇ ॥೨೨೪॥ ಮ್ಹಣೌನಿಯಾ ಪಾರ್ಥಾ । ಹೇತು ಸಾಂಡೋನಿ ಸರ್ವಥಾ । ತುಜ ಕ್ಷಾತ್ರವೃತ್ತಿ ಝುಂಜತಾ । ಪಾಪ ನಾಹೀ ॥೨೨೫॥

ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।
ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥೩೮॥

ಸುಖೀ ಸಂತೋಷಾ ನ ಯಾವೇ । ದುಃಖೀ ವಿಷಾದಾ ನ ಭಜಾವೇ । ಆಣಿ ಲಾಭಾಲಾಭ ನ ಧರಾವೇ । ಮನಾಮಾಜೀ ॥೨೨೬॥ ಯೇಥ ವಿಜಯಪಣ ಹೋಈಲ । ಕೀ ಸರ್ವಥಾ ದೇಹ ಜಾಈಲ । ಹೇ ಆಧೀಂಚಿ ಕಾಂಹೀ ಪುಢೀಲ । ಚಿಂತಾವೇನಾ ॥೨೨೭॥ ಆಪಣಯಾ ಉಚಿತಾ । ಸ್ವಧರ್ಮೇ ರಾಹಾಟತಾ । ಜೇ ಪಾವೇ ತೇ ನಿವಾಂತಾ । ಸಾಹೋನಿ ಜಾವೇ ॥೨೨೮॥ ಐಸಿಯಾ ಮನೇ ಹೋಆವೇ । ತರೀ ದೋಷು ನ ಘಡೇ ಸ್ವಭಾವೇ । ಮ್ಹಣೌನಿ ಆತಾ ಝುಂಜಾವೇ । ನಿಭ್ರಾಂತ ತುವಾ ॥೨೨೯॥

ಏಷಾ ತೇऽಭಿಹತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು ।
ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ ॥೩೯॥

ಹೇ ಸಾಂಖ್ಯಸ್ಥಿತಿ ಮುಕುಳಿತ । ಸಾಂಗಿತಲೀ ತುಜ ಯೇಥ । ಆತಾ ಬುದ್ಧಿಯೋಗು ನಿಶ್ಚಿತ । ಅವಧಾರಿ ಪಾ ॥೨೩೦॥ ಜಯಾ ಬುದ್ಧಿಯುಕ್ತಾ । ಜಾಹಲಿಯಾ ಪಾರ್ಥಾ । ಕರ್ಮಬಂಧು ಸರ್ವಥಾ । ಬಾಧು ನ ಪವೇ ॥೨೩೧॥ ಜೈಸೇ ವಜ್ರಕವಚ ಲೇಇಜೇ । ಮಗ ಶಾಸ್ತ್ರಾಂಚಾ ವರ್ಷಾವೋ ಸಾಹಿಜೇ । ಪರೀ ಜೈತೇಸೀ ಉರಿಜೇ । ಅಚುಂಬಿತ ॥೨೩೨॥

ಶ್ಲೋಕಾರ್ಥ :- ಸತ್ತರೆ ಸ್ವರ್ಗವನ್ನು ಸೇರುವೆ, ಗೆದ್ದರೆ ಭೂಮಿಯನ್ನು ಆಳುವೆ. ಆದ್ದರಿಂದ ಅರ್ಜುನಾ! ಕಾದುವುದಕ್ಕೆ ಮನಸ್ಸು ಗಟ್ಟಿ ಮಾಡಿಕೊಂಡು ಏಳು ।೩೭॥

ಅಥವಾ ನೀನು ಈ ಯುದ್ಧದಲ್ಲಿ ಮಡಿದರೆ ಸಹಜವಾಗಿ ಸ್ವರ್ಗ ಸುಖವನ್ನು ಭೋಗಿಸುವೆ ।೨೨೦॥

ಆದ್ದರಿಂದ ಅರ್ಜುನಾ, ಇದಕ್ಕಾಗಿ ಈಗ ವಿಚಾರ ಮಾಡುತ್ತ ಕುಳಿತುಕೊಳ್ಳಬೇಡ, ಎದ್ದೇಳು, ಕೈಯಲ್ಲಿ ಧನುಷ್ಯ ಹಿಡಿ, ಬೇಗನೇ ಯುದ್ಧ ಆರಂಭಿಸು ।೨೨೧॥

ಇಲ್ಲಿ ನೋಡು, ಸ್ವಧರ್ಮದ ಆಚರಣೆ ಮಾಡಿದರೆ ಇದ್ದ ಪಾಪಗಳು ನಷ್ಟವಾಗುವುವು. ಹೀಗಿದ್ದ ಮೇಲೆ ಅದರಿಂದ ಪಾಪ ತಟ್ಟುವುದು ಎಂದು ನಿನ್ನ ಮನಸ್ಸಿನಲ್ಲಿ ಈ ಭ್ರಮೆ ಎಲ್ಲಿಂದ ಬಂದೀತು? ।೨೨೨॥

ನೀನೇ ಹೇಳು; ತೇಲಿಸುವ ಹಡಗ ಎಂದಾದರೂ ಮುಳುಗುವುದೇ? ಉತ್ತಮ ರಸ್ತೆಯಲ್ಲಿ ನಡೆಯುವವನು ಎಡವುತ್ತಾನೆಯೇ? ಆದರೆ ಯಾರಿಗೆ ನಡೆಯಲು ಬರುವುದಿಲ್ಲ ಅವರು ಮಾತ್ರ ಎಡವುಬಹುದು ।೨೨೩॥

ಹಾಲು ಕುಡಿದರೆ ಸಾಯುವುದಿಲ್ಲ. ಆದರೆ ವಿಷ ಮಿಶ್ರಿತ ಹಾಲು ಸೇವಿಸಿದರೆ ಸಾಯಬೇಕಾಗುವುದು. ಅದರಂತೆ ಫಲದ ಆಶೆ ಇಟ್ಟುಕೊಂಡು ಸ್ವಧರ್ಮ ಆಚರಿಸಿದರೆ ದೋಷ ಬರುವುದು ।೨೨೪॥

ಆದ್ದರಿಂದ ಅರ್ಜುನಾ, ನಿಷ್ಕಾಮನಾಗಿ ಕ್ಷಾತ್ರ ಧರ್ಮದಿಂದ ಯುದ್ಧ ಮಾಡು. ಅಂದರೆ, ನಿನಗೆ ಪಾತಕವು ಲವಲೇಶವೂ ಹತ್ತುವುದಿಲ್ಲ ।೨೨೫॥

ಶ್ಲೋಕಾರ್ಥ :- ಸುಖದುಃಖಗಳನ್ನು, ಲಾಭ ನಷ್ಟಗಳನ್ನೂ, ಜಯಾಪಜಯಗಳನ್ನು ಸಮಾನವಾಗಿ ತಿಳಿದು ಯುದ್ಧವನ್ನು ಮಾಡು. ಹಾಗಾದರೆ ಪಾಪಗಳು ನಿನ್ನನ್ನು ಅಂಟಲಾರವು ।೩೮॥

ಸುಖಪ್ರಾಪ್ತವಾದರೆ ಸಂತೋಷಪಡಬೇಡ. ದುಃಖ ಪ್ರಾಪ್ತವಾದರೆ ಖೇದಪಡಬೇಡ ಮತ್ತು ಮನಸ್ಸಿನಲ್ಲಿ ಲಾಭ ಹಾನಿಯ ವಿಚಾರ ಮಾಡಲೇ ಬೇಡ ।೨೨೬॥

ಈ ಸಮರಾಂಗಣದಲ್ಲಿ ನನಗೆ ಜಯವಾಗುವುದೋ, ಮರಣವಾಗುವುದೋ ಮುಂದಿನ ಮಾತಿನ ವಿಚಾರ ನೀನು ಈಗಲೇ ಮಾಡುತ್ತ ಕುಳಿತುಕೊಳ್ಳಬೇಡ ।೨೨೭॥

ನಮಗೆ ವಿಹಿತವಾಗಿರುವ ಸ್ವಧರ್ಮವನ್ನು ಆಚರಿಸುವಾಗ್ಗೆ ಉತ್ತಮ ಕನಿಷ್ಠ ಫಲ ಪ್ರಾಪ್ತಿಯಾಗಬಹುದು. ಅದನ್ನು ಸಹಜವಾಗಿ ಸಹಿಸಿಕೊಳ್ಳಬೇಕು ।೨೨೮॥

ಈ ಪ್ರಕಾರವಾಗಿ ಮನಸ್ಸನ್ನು ನಿಶ್ಚಯಗೊಳಿಸಿದರೆ ಯಾವ ದೋಷವೂ ಹತ್ತುವುದಿಲ್ಲ, ಆದ್ದರಿಂದ ನೀನು ನಿಶ್ಚಯಪೂರ್ವಕವಾಗಿ ಯುದ್ಧವನ್ನು ಆರಂಭಿಸು ।೨೨೯॥

ಶ್ಲೋಕಾರ್ಥ :- ಪಾರ್ಥಾ! ಇಲ್ಲಿಯವರೆಗೆ ನಿನಗೆ ಸಾಂಖ್ಯ ಜ್ಞಾನವನ್ನು ಬೋಧಿಸಿದೆನು. ಯಾವ ಜ್ಞಾನವನ್ನು ಹೊಂದಿದರೆ ನೀನು ಕರ್ಮ ಬಂಧಕ್ಕೆ ಸಿಗುವುದಿಲ್ಲವೋ, ಆ ಯೋಗ ಸಂಬಂಧವಾದ ಜ್ಞಾನವನ್ನು ಇನ್ನೂ ಹೇಳುತ್ತೇನೆ ಕೇಳು ।೩೯॥

ಇಲ್ಲಿಯವರೆಗೆ ನಿನಗೆ ಈ ಜ್ಞಾನಯೋಗವನ್ನು ಸಂಕ್ಷಿಪ್ತವಾಗಿ ಹೇಳಿದೆನು. ಈಗ ಬುದ್ಧಿಯೋಗ ಹೇಳುವೆ, ಕೇಳು ।೨೩೦॥

ಅರ್ಜುನಾ, ಯಾವ ಪುರುಷನಿಗೆ ಬುದ್ಧಿಯೋಗವು ಪ್ರಾಪ್ತವಾಗಿದೆಯೋ ಅವರಿಗೆ ಕರ್ಮ ಬಂಧನದ ಬಾಧೆಯು ಆಗುವುದೇ ಇಲ್ಲ ।೨೩೧॥

ವಜ್ರದಿಂದ ತಯಾರಿಸಿದ ಅಂಗ ಕವಚ ಧರಿಸಿಕೊಂಡಾಗ (ಯುದ್ಧದಲ್ಲಿ) ತನ್ನ ಮೇಲೆ ಬಾಣಗಳ ಮಳೆಗರೆದರೂ ಯಾವ ಬಾಧೆಯೂ ಆಗದೇ ಸಜ್ಜಾಗಿರಲು ಬರುತ್ತದೆ ।೨೩೨॥

ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।
ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ।೪೦।।

ತೈಸೇ ಐಹಿಕ ತರೀ ನ ನಶೇ । ಆಣಿ ಮೋಕ್ಷು ತೋ ಉರಲಾ ಅಸೇ । ಜೇಥ ಪೂರ್ವಾನುಕ್ರಮು ದಿಸೇ । ಚೋಖಾಳತ ।೨೩೩।। ಕರ್ಮಾಧಾರೇ ರಾಹಾಟಿಜೇ । ಪರೀ ಕರ್ಮಫಳ ನ ನಿರೀಕ್ಷಿಜೇ । ಜೈಸಾ ಮಂತ್ರಜ್ಞು ನ ಬಂಧಿಜೇ । ಭೂತಬಾಧಾ ।೨೩೪।। ತಿಯಾಪರೀ ಜೇ ಸುಬುದ್ಧಿ । ಆಪುಲಾಲಿಯಾ ನಿರವಧಿ । ಹಾ ಅಸತಾಂಚಿ ಉಪಾಧಿ । ಆಕಳೂ ನ ಸಕೇ ।೨೩೫।। ಜೇಥ ನ ಸಂಚರೇ ಪುಣ್ಯಪಾಪ । ಜೇ ಸೂಕ್ಷ್ಮ ಅತಿ ನಿಷ್ಕಂಪ । ಗುಣತ್ರಯಾದಿ ಲೇಪ । ನ ಲಗತೀ ಜೇಥ ।೨೩೬।। ಅರ್ಜುನಾ ತೇ ಪುಣ್ಯವಶೇ । ಜರೀ ಅಲ್ಪಚಿ ಹೃದಯೀ ಬುದ್ಧಿ ಪ್ರಕಾಶೇ । ತರೀ ಅಶೇಷಹೀ ನಾಶೇ । ಸಂಸಾರಭಯ ।೨೩೭।।

ವ್ಯವಸಾಯಾತ್ಮಿಕಾ ಬುದ್ಧಿಃ ಏಕೇಹ ಕುರುನಂದನ ।
ಬಹುಶಾಖಾಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ ।೪೧।।

ಜೈಸೀ ದೀಪಕಾಳಿಕಾ ಧಾಕುಟೀ । ಪರೀ ಬಹು ತೇಜಾತೇ ಪ್ರಕಟೀ । ತೈಸೀ ಸದ್ಬುದ್ಧಿ ಹೇ ಥೇಕುಟೀ । ಮ್ಹಣೋ ನಯೇ ।೨೩೮।। ಪಾರ್ಥಾ ಬಹುತೀ ಪರೀ । ಹೇ ಅಪೇಕ್ಷಿಜೇ ವಿಚಾರಶೂರೀ । ಜೇ ದುರ್ಲಭ ಚರಾಚರೀ । ಸದ್ವಾಸನಾ ।೨೩೯।। ಆಣಿಕಾಸಾರೀಖಾ ಬಹುವಸು । ಜೈಸಾ ನ ಜೋಡೇ ಪರಿಸು । ಕಾ ಅಮೃತಾಚಾ ಲೇಶು । ದೈವಗುಣೇ ।೨೪೦।। ತೈಸೀ ದುರ್ಲಭ ಜೇ ಸದ್ಬುದ್ಧಿ । ಜಿಯೇ ಪರಮಾತ್ಮಾಚಿ ಅವಧಿ । ಜೈಸಾ ಗಂಗೇಸೀ ಉದಧಿ । ನಿರಂತರ ।೨೪೧।। ತೈಸೇ ಈಶ್ವರಾವಾಂಚೂನೀ ಕಾಂಹೀ । ಜಿಯೇ ಆಣೀಕ ಲಾಣೇ ನಾಹೀ । ತೇ ಏಕಚಿ ಬುದ್ಧಿ ಪಾಹೀ । ಅರ್ಜುನಾ ಜಗೀ ।೨೪೨।। ಯೇರ ತೇ ದುರ್ಮತಿ । ಜೇ ಬುಹುಧಾ ಅಸೇ ವಿಕರತೀ । ತೇಥ ನಿರಂತರ ರಮತೀ । ಅವಿವೇಕಿಯೇ ।೨೪೩।। ಮ್ಹಣೌನಿ ತಯಾ ಪಾರ್ಥಾ । ಸ್ವರ್ಗ ಸಂಸಾರ ನರಕಾವಸ್ಥಾ । ಆತ್ಮಸುಖ ಸರ್ವಥಾ । ದೃಷ್ಟ ನಾಹೀ ।೨೪೪।।

ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।
ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ।೪೨।।

ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಮ್ ।
ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ।೪೩।।

ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಮ್ ।
ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ।೪೪।।

ಶ್ಲೋಕಾರ್ಥ :- ಈ ಕರ್ಮಯೋಗವು ಮಾಡಿದಷ್ಟು ಫಲವನ್ನು ಕೊಡುವುದು. ಪೂರ್ಣವಾಗಿ ಮುಗಿಸದಿದ್ದರೂ ವ್ಯರ್ಥವಾಗುವುದಿಲ್ಲ; ತಪ್ಪು ಇರುವುದಿಲ್ಲ, ಸ್ವಲ್ಪ ಆಚರಿಸಿದರೂ ಈ ಧರ್ಮವು ಮಹಾಭಯದಿಂದ ಕಾಪಾಡಬಲ್ಲದು ।೪೦॥

ಅದರಂತೆ ಕರ್ಮಯೋಗದಿಂದ ಇಹಲೋಕದ ಭೋಗವು ನಾಶಹೊಂದುವುದಿಲ್ಲ ಮತ್ತು ಮೋಕ್ಷ ಪ್ರಾಪ್ತವಾಗುವುದು ಉಳಿದಿರುತ್ತದೆ. ಈ ಕರ್ಮಯೋಗದಲ್ಲಿ ಪೂರ್ವದಿಂದ ಮಾಡುತ್ತ ಬಂದ ಸಾಧನವು ಮುಂದೆ ಮೋಕ್ಷ ಪರ್ಯಂತ ಒಯ್ಯುವಂತೆ ಕಾಣುತ್ತದೆ ।ಟಿ೩೩॥

ವಿಧಿಯುಕ್ತ ಕರ್ಮದ ಆಧಾರದಿಂದ ಆಚರಣೆವಿರಬೇಕು. ಆದರೆ, ಆ ಕರ್ಮದಿಂದ ಆಗತಕ್ಕ ಫಲದ ಇಚ್ಛೆಯನ್ನು ಮಾಡಕೂಡದು. ಯಾವ ಪ್ರಕಾರವಾಗಿ ಮಂತ್ರಜ್ಞನಿಗೆ ಪಿಶಾಚಿಗಳ ಬಾಧೆಯಾಗುವುದಿಲ್ಲವೋ ।ಟಿ೩೪॥

ಅದರಂತೆ (ನಿಷ್ಕಾಮ ಕರ್ಮ ಮಾಡುವ)ಸದ್ಬುದ್ಧಿ ಯಾರಿಗೆ ಪ್ರಾಪ್ತವಾಗಿದೆಯೋ ಅವರಿಗೆ ಜನ್ಮ ಮರಣದ ಉಪಾಧಿಯು ಬಾಧಿಸುವುದಿಲ್ಲ ।ಟಿ೩೫॥

ಯಾವ ಬುದ್ಧಿಗೆ ಪಾಪ ಪುಣ್ಯದ ಬಾಧೆಯಾಗುವುದಿಲ್ಲವೋ ಅದು ಸೂಕ್ಷ್ಮ ನಿಶ್ಚಲವಾಗಿದ್ದು ಸತ್ವ, ರಜ, ತಮ ಈ ಮೂರು ಗುಣಗಳು ಅದರಲ್ಲಿ ಪ್ರವೇಶ ಮಾಡುವುದಿಲ್ಲ ।ಟಿ೩೬॥

ಅರ್ಜುನಾ, ಇಂಥ ಸದ್ಬುದ್ಧಿಯು ಪುಣ್ಯಪ್ರಭಾವದಿಂದ ಸ್ವಲ್ಪಾದರೂ ಪ್ರಾಪ್ತವಾದಲ್ಲಿ ಅದು ಸರ್ವ ಸಂಸಾರದ ಭಯವನ್ನು ನಾಶಮಾಡುವುದು ।ಟಿ೩೭॥

ಶ್ಲೋಕಾರ್ಥ :- ಅರ್ಜುನಾ ! ಈ ಸಾಧನಗಳಲ್ಲಿ ನೆಲೆಗೆ ನಿಂತ ಬುದ್ಧಿಯು ಒಂದೇ ಮುಖವಾಗಿರುವುದು. ನೆಲೆಗೆ ನಿಲ್ಲದವರ ಬುದ್ಧಿಯು ಅನೇಕ ಕೊಂಬೆಗಳುಳ್ಳದ್ದಾಗಿ ಬಗೆ ಬಗೆಯಾಗಿರುವುದು ।೪೧॥

ದೀಪದ ಜ್ಯೋತಿಯು ಸಣ್ಣದಾಗಿದ್ದರೂ ಅದರ ಪ್ರಕಾಶವು ದೊಡ್ಡದಾಗಿರುತ್ತದೆ. ಅದರಂತೆ ಸದ್ಬುದ್ಧಿಯು ಸ್ವಲ್ಪ ಇದ್ದರೂ ಸಹ ಅದಕ್ಕೆ ಸಣ್ಣದು ಎನ್ನಬಾರದು ।ಟಿ೩೮॥

ಅರ್ಜುನಾ, ಜ್ಞಾನಿ ಪುರುಷರು ಅನೇಕ ಪ್ರಕಾರವಾಗಿ ಸದ್ಬುದ್ಧಿಯ ಇಚ್ಛೆ ಮಾಡುವರು. ಆದರೆ ಅದು ಜಗತ್ತಿನಲ್ಲಿ ಬಹಳ ದುರ್ಲಭವಾಗಿರುವುದು ।ಟಿ೩೯॥

ಯಾವ ಪ್ರಕಾರವಾಗಿ ಸಾಮಾನ್ಯ ಕಲ್ಲುಗಳಂತೆ ಪರೀಸ ಮಣಿ ಸಾಕಷ್ಟು ಸಿಗುವುದಿಲ್ಲವೋ ಅಥವಾ ಒಂದು ಹನಿ ಅಮೃತ ಪ್ರಾಪ್ತಿಗೆ ದೈವಯೋಗ ಬೇಕಾಗುವುದೋ ।ಟಿ೪೦॥

ಅದರಂತೆ ಕರ್ಮಯೋಗ ವಿಷಯದ ಸದ್ಬುದ್ಧಿಯು ಬಹಳ ದುರ್ಲಭವು. ಆ ಸದ್ಬುದ್ಧಿಯ ಕೊನೆಯ ಫಲವು ಪರಮಾತ್ಮನೇ ಇರುವನು. ಗಂಗಾನದಿಗೆ ಯಾವಾಗಲೂ ಕೊನೆಯದಾಗಿ ಸಮುದ್ರವೇ ಇರುವುದು ।ಟಿ೪೧॥

ಹೀಗೆ ಈಶ್ವರ ಹೊರತಾಗಿ ಯಾವುದಕ್ಕೆ ಫಲ ರೂಪದಿಂದ ಆಶ್ರಯಸ್ಥಾನವಿಲ್ಲವೋ ಅರ್ಜುನಾ, ಅದು ಒಂದೇ ಒಂದು ಸದ್ಬುದ್ಧಿಯಾಗಿರುವುದು. ಹೀಗೆ ತಿಳಿ ।ಟಿ೪೨॥

ಇದರ ಹೊರತಾಗಿ ಇತರ ಬುದ್ಧಿ ಅದು ದುರ್ಬುದ್ಧಿಯಾಗಿರುವುದು. ಅದರಲ್ಲಿ ವಿಕಾರಗಳು ಹುಟ್ಟುವುವು. ಅಲ್ಲಿ ಅವಿಚಾರ ಜನರು ಸತತವಾಗಿ ರಮಿಸುವರು ।ಟಿ೪೩॥

ಆದ್ದರಿಂದ ಅರ್ಜುನಾ, ಈ ಜನರಿಗೆ ಸಂಸಾರ,ಸ್ವರ್ಗ, ನರಕಾವಸ್ಥೆಗಳು ಪ್ರಾಪ್ತವಾಗುವುವು. ಆದರೆ ಆತ್ಮ ಸುಖವು ಮಾತ್ರ ಇವರಿಗೆ ಎಂದೂ ಕಾಣುವುದಿಲ್ಲ ।ಟಿ೪೪॥

ಶ್ಲೋಕಾರ್ಥ :- ಎಲೈ ಅರ್ಜುನಾ, ಅವಿವೇಕಿಗಳೂ (ಕರ್ಮಫಲಗಳನ್ನು ತಿಳಿಸುವ) ವೇದವಾಕ್ಯಗಳಲ್ಲಿ ಆಸಕ್ತರೂ, ಮತ್ತೇನೂ ಇಲ್ಲವೆಂದು ವಾದಿಸುವವರೂ ।೪೨॥

ಶ್ಲೋಕಾರ್ಥ :- ಕಾಮಾತ್ಮರೂ, ಸ್ವರ್ಗವೇ ಮುಖ್ಯವೆಂದು ಭಾವಿಸುವವರು ಆದ ಜನರು ಜನ್ಮಕರ್ಮ ಫಲಪ್ರದವಾಗಿರುವ ಭೋಗೈಶ್ವರ್ಯಗಳನ್ನು ಹೊಂದುವುದಕ್ಕೆ ಉಪಾಯವಾದ ಮಾತನ್ನು ನುಡಿಯುತ್ತಾರೆ ।೪೩॥

ಶ್ಲೋಕಾರ್ಥ :- ಮಾತಿನಿಂದ ಅಪಹರಿಸಲ್ಪಟ್ಟ ಮನಸ್ಸುಳ್ಳವರಾಗಿ ಭೋಗೈಶ್ವರ್ಯಗಳಲ್ಲಿಯೇ ಆಸಕ್ತರಾಗಿರುವವರಿಗೆ ಮನಸ್ಸಿನಲ್ಲಿ ನಿಶ್ಚಯ ಭಾವವುಳ್ಳ ಬುದ್ಧಿಯು ಉಂಟಾಗಲಾರದು ।೪೪॥

ವೇದಾಧಾರೇ ಬೋಲತೀ । ಕೇವಳ ಕರ್ಮ ಪ್ರತಿಷ್ಠಿತೀ । ಪರೀ ಕರ್ಮಫಳೀ ಆಸಕ್ತೀ । ಧರೂನಿಯಾ ।।೨೪೫।। ಮ್ಹಣತೀ ಸಂಸಾರೀ ಜನ್ಮೀಜೇ । ಯಜ್ಞಾದಿಕ ಕರ್ಮ ಕೀಜೇ । ಮಗ ಸ್ವರ್ಗಸುಖ ಭೋಗಿಜೇ । ಮನೋಹರ ।।೨೪೬।। ಯೇಥ ಹೇ ವಾಂಚೂನಿ ಕಾಂಹೀ । ಆಣಿಕ ಸರ್ವಥಾ ಸುಖಚಿ ನಾಹೀ । ಐಸೇ ಅರ್ಜುನಾ ಬೋಲತೀ ಪಾಹೀ । ದುರ್ಬುದ್ಧಿ ತೇ ।।೨೪೭।। ದೇಖೈ ಕಾಮನಾಅಭಿಭೂತ । ಹೋಊನಿ ಕರ್ಮೀ ಆಚರತ । ತೇ ಕೇವಳ ಭೋಗೀ ಚಿತ್ತ । ದೇಊನಿಯಾ ।।೨೪೮।। ಕ್ರಿಯಾವಿಶೇಷೇ ಬಹುತೇ । ನ ಲೋಪಿತಿ ವಿಧಿತೇ । ನಿಪುಣ ಹೋಊನಿ ಧರ್ಮಾತೇ । ಅನುಷ್ಠಿತೀ ।।೨೪೯।। ಪರೀ ಏಕಚಿ ಕುಡೇ ಕರಿತೀ । ಜೇ ಸ್ವರ್ಗ ಕಾಮು ಮನೀ ಧರಿತೀ । ಯಜ್ಞಪುರುಷಾ ಚುಕತೀ । ಭೋಕ್ತಾ ಜೋ ।।೨೫೦।। ಜೈಸಾ ಕರ್ಪುರಾಚಾ ರಾಶೀ ಕೀಜೇ । ಮಗ ಅಗ್ನಿ ಲಾಊನ ದೀಜೇ । ಕಾ ಮಿಷ್ಟಾನ್ನೀ ಸಂಚರವಿಜೇ । ಕಾಳಕೂಟ ।।೨೫೧।। ದೈವೇ ಅಮೃತಕುಂಭ ಜೋಡಲಾ । ತೋ ಪಾಯೇ ಹಾಣೋನಿ ಉಲಂಡಿಲಾ । ತೈಸಾ ನಾಸಿತೀ ಧರ್ಮು ನಿಪಜಲಾ । ಹೇತುಕಪಣೇ ।।೨೫೨।। ಸಾಯಾಸೇ ಪುಣ್ಯ ಅರ್ಜಿಜೇ । ಮಗ ಸಂಸಾರು ಕಾ ಅಪೇಕ್ಷಿಜೇ ?। ಪರೀ ನೇಣತೀ ತೇ ಕಾಯ ಕೀಜೇ । ಅಪ್ರಾಪ್ಯ ದೇಖೈ ।।೨೫೩।। ಜೈಸೀ ರಾಂಧವಣೇ ರಸಸೋಯ ನಿಕೀ । ಕರೂನಿಯಾ ಮೋಲೇ ವಿಕೀ । ತೈಸಾ ಭೋಗಾಸಾಠೀ ಅವಿವೇಕೀ । ಧಾಡಿತೀ ಧರ್ಮು ।।೨೫೪।। ಮ್ಹಣೌನಿ ಹೇ ಪಾರ್ಥಾ । ದುರ್ಬುದ್ಧಿ ದೇಖ ಸರ್ವಥಾ । ತಯಾ ವೇದವಾದರತಾ । ಮನೀ ವಸೇ ।।೨೫೫।।

ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।
ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ।।೪೫।।

ತೀಹಿ ಗುಣೀ ಆವೃತ । ಹೇ ವೇದ ಜಾಣೈ ನಿಭ್ರಾಂತ । ಮ್ಹಣೌನಿ ಉಪನಿಷದಾದಿ ಸಮಸ್ತ । ಸಾತ್ತ್ವಿಕ ತೇ ।।೨೫೬।। ಯೇರ ರಜತಮಾತ್ಮಕ । ಜೇಥ ನಿರೂಪಿಜೇ ಕರ್ಮಾದಿಕ । ಜೇ ಕೇವಳ ಸ್ವರ್ಗಸೂಚಕ । ಧನುರ್ಧರಾ ।।೨೫೭।। ಮ್ಹಣೌನಿ ತೂ ಜಾಣ । ಹೇ ಸುಖದುಃಖಾಸೀಚ ಕಾರಣ । ಏಥ ಝಣೇ ಅಂತಃಕರಣ । ರಿಗೋ ದೇಸೀ ।।೨೫೮।। ತೂ ಗುಣ ತ್ರಯಾತೇ ಅವ್ಹೇರೀ । ಮೀ ಮಾಝೇ ಹೇ ನ ಕರೀ । ಏಕ ಆತ್ಮಸುಖ ಅಂತರೀ । ವಿಸಂಬ ಝಣೇ ।।೨೫೯।।

ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।
ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ।।೪೬।।

ಅವರು ವೇದದ ಆಧಾರದಿಂದ ಹೇಳಿ ಕರ್ಮ ಮಾರ್ಗದ ಶ್ರೇಷ್ಠತ್ವವನ್ನು ಸ್ಥಾಪಿಸುವರು. ಆದರೆ ಆ ಕರ್ಮದ ಫಲದ ಮೇಲೆ ಲೋಭವಿಡುವರು ।೨೪೫॥

ಮೃತ್ಯುಲೊಕದಲ್ಲಿ ಜನ್ಮವೆತ್ತಿ ಯಜ್ಞಾದಿಕ ಕರ್ಮಗಳನ್ನು ಮಾಡಬೇಕು ಮತ್ತು ಮನೋಹರ ಸ್ವರ್ಗಸುಖ ಭೋಗಿಸಬೇಕು. ಈ ರೀತಿ ಇವರ ಹೇಳಿಕೆಯಾಗಿರುವುದು ।೨೪೬॥

ಅರ್ಜುನಾ, ಈ ದುರ್ಬುದ್ಧಿಯವರು ಸ್ವರ್ಗ ಸುಖದ ಹೊರತು ಇನ್ನು ಬೇರೆ ಸುಖವೇ ಇಲ್ಲವೆಂದು ಯಾವಾಗಲೂ ಹೇಳುತ್ತಿರುತ್ತಾರೆ ।೨೪೭॥

ಇಲ್ಲಿ ನೋಡು, ಇವರು ಕೇವಲ ಭೋಗದ ಇಚ್ಛೆಯಲ್ಲಿ ಆಸಕ್ತರಾಗಿರುವುದರಿಂದ ಕರ್ಮಫಲದ ಮೇಲೆ ದೃಷ್ಟಿ ಇಟ್ಟುಕೊಂಡೇ ಸಕಾಮಕರ್ಮಗಳನ್ನು ಮಾಡುವರು ।೨೪೮॥

ಅನೇಕ ಪ್ರಕಾರದ ಅನುಷ್ಠಾನಗಳನ್ನು ವಿಧಿಯುಕ್ತ ಆಚರಿಸಿ ಅದನ್ನು ಪೂರ್ತಿಗೊಳಿಸಲು ಬಹಳ ದಕ್ಷತೆಯಿಂದ ಧರ್ಮಾಚರಣೆಯನ್ನು ಮಾಡುವರು ।೨೪೯॥

ಆದರೆ ಅರ್ಜುನಾ, ಇದೊಂದು ಮಾತ್ರ ಬಹಳ ಕೆಟ್ಟದ್ದನ್ನು ಮಾಡುತ್ತಾರೆ. ಯಾವುದೆಂದರೆ, ಮನಸ್ಸಿನಲ್ಲಿ ಸ್ವರ್ಗ - ಸುಖದ ಇಚ್ಛೆ ಧರಿಸಿಕೊಂಡು ಮಾಡುತ್ತ ಯಜ್ಞಭೋಕ್ತಾ ಈಶ್ವರರನ್ನು ಮರೆಯುತ್ತಾರೆ ।೨೫೦॥

ಯಾವ ಪ್ರಕಾರವಾಗಿ ಕರ್ಪುರದ ರಾಶಿ ಕೂಡಿಸಿ ಅದಕ್ಕೆ ಅಗ್ನಿ ಹಚ್ಚಿದರೆ, ಅಥವಾ ಮೃಷ್ಟಾನ್ನವನ್ನು ಕಾಳಕೂಟ ವಿಷದಿಂದ ಕೂಡಿಸಿದರೆ ।೨೫೧॥

ಅಥವಾ ದೈವಯೋಗದಿಂದ ಪ್ರಾಪ್ತವಾದ ಅಮೃತ ಕುಂಡವನ್ನು ಕಾಲಿನಿಂದ ಉರುಳಿಸಿದರೆ ಆಗುವ ಹಾನಿಗಳಂತೆ ಸಂಪಾದಿಸಿದ ಧರ್ಮವನ್ನು ಫಲಪ್ರಾಪ್ತಿಯ ಇಚ್ಛೆಯಿಂದ ನಾಶಪಡಿಸುವರು ।೨೫೨॥

ಅತಿಶಯ ಪರಿಶ್ರಮದಿಂದ ಪುಣ್ಯ ಸಂಪಾದನೆ ಮಾಡಿ ಪುನಃ ಸಂಸಾರ ಭೋಗದ ಇಚ್ಛೆ ಏಕೆ ಮಾಡಬೇಕು? ಆದರೆ ಏನು ಮಾಡುವುದು? ಈ ಅಜ್ಞಾನ ಜನರಿಗೆ ತಿಳಿಯುವುದಿಲ್ಲ ।೨೫೩॥

ಯಾವ ಪ್ರಕಾರವಾಗಿ ಉತ್ತಮ ಪಾಕಶಾಸ್ತ್ರಿಯು ನಾನಾ ತರಹದ ಉತ್ತಮ ಅಡುಗೆ ತಯಾರಿಸಿ ಹಣಕ್ಕೆ ಮಾರಿಕೊಂಡಂತೆ ಅವಿಚಾರಿ ಜನರು ಸುಖಭೋಗಕ್ಕಾಗಿ ಧರ್ಮ ಮಾರಿಕೊಳ್ಳುತ್ತಾರೆ ।೨೫೪॥

ಆದ್ದರಿಂದ ಅರ್ಜುನಾ, ವೇದದಲ್ಲಿನ ಅರ್ಥವಾದದಲ್ಲಿ ಮಗ್ನರಾದ ಜನರ ಮನಸ್ಸಿನಲ್ಲಿ ಎಲ್ಲ ಪ್ರಕಾರದ ದುರ್ಬುದ್ಧಿಯೇ ವಾಸಮಾಡಿರುತ್ತದೆ. ಇದನ್ನು ಲಕ್ಷದಲ್ಲಿಡು ।೨೫೫॥

ಶ್ಲೋಕಾರ್ಥ :- ಅರ್ಜುನಾ! ವೇದಗಳು ತ್ರಿಗುಣ ರೂಪವಾದ ಸಂಸಾರವನ್ನು ಹೇಳುತ್ತವೆ. ನೀನು ತ್ರಿಗುಣಾತೀತನೂ ದ್ವಂದ್ವರಹಿತನೂ ಆಗು. ಶುದ್ಧ ಸತ್ತ್ವವನ್ನು ಆಶ್ರಯಿಸುವವನಾಗಿಯೂ, ಯೋಗ ಕ್ಷೇಮಗಳ ಚಿಂತೆಯಿಲ್ಲದವನಾಗಿಯೂ ಆಗು, ಆತ್ಮನಿಷ್ಠನಾಗಿರು ।೪೫॥

ವೇದವು (ಸತ್ತ್ವ,ರಜ,ತಮ) ಮೂರು ಗುಣಗಳಿಂದ ಕೂಡಿರುವುದು. ಆದ್ದರಿಂದ ಉಪನಿಷತ್‌ಗಳನ್ನು ಸತ್ತ್ವ ಗುಣವನ್ನು ಗಣನೆಗೆ ತೆಗೆದುಕೊಂಡಿದೆ. ಹೀಗೆ ನೀನು ನಿಶ್ಚಯದಿಂದ ತಿಳಿ ।೨೫೬॥

ಧನುರ್ಧರಾ, ಉಪನಿಷತ್ ಹೊರತಾಗಿ ವೇದಭಾಗವು ಕೇವಲ ಕರ್ಮ ಉಪಾಸನಾ ಇತ್ಯಾದಿಗಳ ವಿವರಣೆಯಿಂದ ಕೂಡಿದೆ. ಇವು ರಜ, ತಮ ಗುಣಗಳಿಂದ ಕೂಡಿ ಕೇವಲ ಸ್ವರ್ಗ ಸೂಚಕವಾಗಿವೆ ।೨೫೭॥

ಆದ್ದರಿಂದ ನೀನು ಹೀಗೆ ನಿಶ್ಚಯವಾಗಿ ತಿಳಿ. ಇವು ಸುಖದುಃಖಗಳಿಗೆ ಕಾರಣವಾಗಿವೆ. ಇದಕ್ಕಾಗಿ ನೀನು ನಿನ್ನ ಮನಸ್ಸನ್ನು ಕದಾಚಿತ್ ಅಲ್ಲಿ ಸೇರಿಸಬೇಡ ।೨೫೮॥

ನೀನು ಈ ತ್ರಿಗುಣಗಳನ್ನು ಪೂರ್ಣ ತ್ಯಜಿಸು ಮತ್ತು ಅಹಂ ಮಮತೆಯನ್ನು ಬಿಟ್ಟು ಅಂತಃಕರಣದಲ್ಲಿ ಆತ್ಮಸುಖದ ಮರುವೆ ಆಗಗೊಡಬೇಡ ।೨೫೯॥

ಶ್ಲೋಕಾರ್ಥ :- ಚಿಕ್ಕ ಚಿಕ್ಕ ಜಲಧಾರೆಗಳಿಂದ ಉಂಟಾಗುವ ಪ್ರಯೋಜನಗಳೆಲ್ಲವೂ ದೊಡ್ಡ ಜಲಾರ್ಣವದಿಂದ ಉಂಟಾಗುವಂತೆ, ಸಮಸ್ತ ವೇದಗಳಲ್ಲಿ ಹೇಳಿದ ಕಾಮ್ಯ ಕರ್ಮ ಫಲಗಳೆಲ್ಲವೂ ಬ್ರಹ್ಮಜ್ಞಾನಿಯಲ್ಲಿ ಅಂತರ್ಭುಕ್ತಗಳಾಗಿ ಸೇರಿರುತ್ತವೆ ।೪೬॥

ಜರೀ ವೇದೇ ಬಹುತ ಬೋಲಿಲೇ । ವಿವಿಧ ಭೇದ ಸೂಚಿಲೇ । ತರ್ಹೀ ಆಪಣ ಹಿತ ಆಪುಲೇ । ತೇಂಚಿ ಘೇಪೇ ॥೨೬೦॥ ಜೈಸಾ ಪ್ರಗಟಲಿಯಾ ಗಭಸ್ತೀ । ಅಶೇಷಹೀ ಮಾರ್ಗ ದಿಸತೀ । ತರೀ ತೇತುಲೇಹಿ ಕಾಯ ಚಾಲೀಜತೀ । ಸಾಂಗೈ ಮಜ ॥೨೬೧॥ ಕಾ ಉದಕಮಯ ಸಕಳ । ಜರ್ಹೀ ಜಾಹಲೇ ಅಸೇ ಮಹೀತಳ । ತರೀ ಆಪಣ ಘೇಪೇ ಕೇವಳ । ಆರ್ತೀಚಿಜೋಗೇ ॥೨೬೨॥ ತೈಸೇ ಜ್ಞಾನಿಯೇ ಜೇ ಹೋತೀ । ತೇ ವೇದಾರ್ಥಾತೇ ವಿವರಿತೀ। ಮಗ ಅಪೇಕ್ಷಿತ ತೇ ಸ್ವೀಕಾರಿತೀ । ಶಾಶ್ವತ ಜೇ ॥೨೬೩॥

ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।
ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋಽಸ್ತ್ವಕರ್ಮಣಿ ॥೪೭॥

ಮ್ಹಣೌನಿ ಆಇಕೇ ಪಾರ್ಥಾ । ಯಾಚಿಪರೀ ಪಾಹತಾ । ತುಜ ಉಚಿತ ಹೋಯ ಆತಾ । ಸ್ವಕರ್ಮ ಹೇ ॥೨೬೪॥ ಆಮ್ಹೀ ಸಮಸ್ತ ಹೀ ವಿಚಾರಿಲೇ । ತಂವ ಐಸೇಂಚಿ ಹೇ ಮನಾ ಆಲೇ । ಜೇ ನ ಸಾಂಡಿಜೇ ತುವಾ ಆಪುಲೇ । ವಿಹಿತ ಕರ್ಮ ॥೨೬೫॥ ಪರೀ ಕರ್ಮಫಳೀ ಆಸ ನ ಕರಾವೀ । ಆಣಿ ಕುಕರ್ಮೀ ಸಂಗತೀ ನ ವ್ಹಾವೀ । ಹೇ ಸತ್ಕ್ರಿಯಾಚಿ ಆಚರಾವಿ । ಹೇತೂವೀಣ ॥೨೬೬॥

ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।
ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ॥೪೮॥

ತೂ ಯೋಗಯುಕ್ತ ಹೋಊನಿ । ಫಳಾಂಚಾ ಸಂಗು ಟಾಕುನೀ । ಮಗ ಅರ್ಜುನಾ ಚಿತ್ತ ದೇವುನಿ । ಕರೀ ಕರ್ಮೇ ॥೨೬೭॥ ಪರೀ ಆದರಿಲೇ ಕರ್ಮ ದೈವೇ । ಜರೀ ಸಮಾಪ್ತೀತೇ ಪಾವೇ । ತರೀ ವಿಶೇಷೇ ತೇಥ ತೋಷಾವೇ । ಹೇಹೀ ನಕೋ ॥೨೬೮॥ ಕೀ ನಿಮಿತ್ತೇ ಕೋಣೇ ಏಕೇ । ತೇ ಸಿದ್ಧೀ ನ ವಚತಾ ಠಾಕೇ । ತರೀ ತೇಥೀಂಚೇನಿ ಅಪರಿತೋಖೇ । ಕ್ಷೋಭಾವೆ ನಾ ॥೨೬೯॥ ಆಚರತಾ ಸಿದ್ಧೀ ಗೇಲೇ । ತರೀ ಕಾಜಾಚೀ ಕೀರ ಆಲೇ । ಪರೀ ಠೇಲಿಯಾಹೀ ಸಗುಣ ಜಹಾಲೇ । ಐಸೇಚಿ ಮಾನೀ ॥೨೭೦॥ ದೇಖೈ ಜೇತುಲಾಲೇ ಕರ್ಮ ನಿಪಜೇ । ತೇತುಲೇ ಆದಿ ಪುರುಷೀ ಅರ್ಪಿಜೇ । ತರೀ ಪರಿಪೂರ್ಣ ಸಹಜೇ । ಜಹಾಲೇ ಜಾಣೈ ॥೨೭೧॥ ದೇಖೈ ಸಂತಾಸಂತಕರ್ಮೀ । ಹೇ ಜೇ ಸರಿಸೇಪಣ ಮನೋಧರ್ಮೀ । ತೇಚಿ ಯೋಗಸ್ಥಿತಿ ಉತ್ತಮೀ । ಪ್ರಶಂಸಿಜೇ ॥೨೭೨॥

ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ।
ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥೪೯॥

ವೇದಾಂತವು ಸಾಕಷ್ಟು ವಿಷಯಗಳ ಬಗ್ಗೆ ಹೇಳಿದೆ ಮತ್ತು ಅನೇಕ ಮಾರ್ಗಗಳನ್ನು ಸೂಚಿಸಿದೆ. ಆದರೆ ಅದರಲ್ಲಿ ಯಾವುದರಿಂದ ಹಿತವಿದೆ, ಅದನ್ನೇ ಸ್ವೀಕರಿಸಬೇಕು ।೨೬೦॥

ಸುರ್ಯೋದಯವಾದ ಮೇಲೆ ಎಲ್ಲ ಮಾರ್ಗಗಳು ದೃಷ್ಟಿಗೆ ಗೋಚರಿಸುವುವು. ಆದರೆ ಆ ಎಲ್ಲ ಮಾರ್ಗಗಳಿಂದ ಮನುಷ್ಯನು ನಡೆಯುತ್ತಾನೆಯೇ? ನೀನೇ ಹೇಳು ।೨೬೧॥

ಅಥವಾ ಒಂದುವೇಳೆ ಇಡೀ ಪೃಥ್ವಿಯು ಜಲಮಯ ವಾದರೆ, ಆಗ ನಾವು ನಮಗೆ ಬೇಕಾದಷ್ಟೇ ನೀರನ್ನು ಅಲ್ಲಿಂದ ಸ್ವೀಕರಿಸುವೆವು ।೨೬೨॥

ಅದರಂತೆ ಜ್ಞಾನಿ ಪುರುಷರು ವೇದಾರ್ಥದ ವಿಚಾರ ಮಾಡಿ ತಮ್ಮ ಅಪೇಕ್ಷಿತ ಶಾಶ್ವತ ಬ್ರಹ್ಮ ಮಾತ್ರ ಸ್ವೀಕಾರ ಮಾಡುವರು ।೨೬೩॥

ಶ್ಲೋಕಾರ್ಥ :- ಕರ್ಮ ಮಾಡುವುದರಲ್ಲಿಯೇ ನಿನಗೆ ಅಧಿಕಾರ. ಕರ್ಮ ಫಲದಲ್ಲಿ ಆಸಕ್ತಿ ಯಾವಾಗಲೂ ಬೇಡ. ಸಕಾಮ ಭಾವದಿಂದ ಕರ್ಮವನ್ನು ಮಾಡಬೇಡ. ಕರ್ಮಗಳನ್ನೂ ಬಿಟ್ಟುಬಿಡಬೇಕೆಂಬ ಆಗ್ರಹವು ನಿನಗೆ ಬೇಡ ।೪೭॥

ಆದ್ದರಿಂದ ಪಾರ್ಥಾ; ಕೇಳು, ಈ ಎಲ್ಲ ಮಾತಿನ ವಿಚಾರ ಮಾಡಿ ನೋಡಿದಾಗ್ಗೆ ನಿನಗೆ ಸ್ವಕರ್ಮ ಮಾತ್ರ ಯೋಗ್ಯವಿರುವುದು ।೨೬೪॥

ನಾವು ಎಲ್ಲ ವಿಷಯಗಳ ಬಗ್ಗೆ ವಿಚಾರ ಮಾಡಿ ನೋಡಿದೆವು. ಅದು ನಮ್ಮ ಮನಸ್ಸಿಗೆ ಈ ರೀತಿ ಬಂದಿದೆ. ನಾವು ನಮ್ಮ ಕರ್ತವ್ಯ ಕರ್ಮ ಬಿಡಬಾರದು ।೨೬೫॥

ಆದರೆ, ಕರ್ಮ ಫಲದ ಇಚ್ಚೆಯನ್ನು ಇಡದೇ ಮತ್ತು ನಿಷಿದ್ಧ ಕರ್ಮದ ಅಂಗೀಕಾರವನ್ನು ಮಾಡದೇ ಸತ್ಕರ್ಮ ಮಾತ್ರ ನಿಷ್ಕಾಮದಿಂದ ಆಚರಿಸಬೇಕು ।೨೬೬॥

ಶ್ಲೋಕಾರ್ಥ :- ಹೇ ಧನಂಜಯಾ ! ಸಮತ್ವವೇ ಯೋಗವೆನಿಸುತ್ತದೆ. ಅಂಥಾ ಯೋಗವನ್ನು ಆಶ್ರಯಿಸಿ ಫಲಾಫಲಗಳಲ್ಲಿ ಸಮಭಾವವನ್ನಿಟ್ಟು ಆಸಕ್ತಿ ರಹಿತವಾಗಿ ಕರ್ಮವನ್ನು ಮಾಡು ।೪೮॥

ಅರ್ಜುನಾ, ನೀನು ಯೋಗಯುಕ್ತನಾಗಿ ಫಲದ ಇಚ್ಚೆಯನ್ನು ತ್ಯಜಿಸಿ ಮನಸ್ಸು ಕೊಟ್ಟು ಕರ್ಮ ಮಾಡು ।೨೬೭॥

ಒಂದು ವೇಳೆ ಆರಂಭ ಮಾಡಿದ ಕರ್ಮವು ದೈವ ಯೋಗದಿಂದ ಪೂರ್ಣಗೊಂಡಾಗ ಅದಕ್ಕಾಗಿ ಸಂತೋಷ ಪಡಬೇಡ ।೨೬೮॥

ಅಥವಾ ಯಾವುದೋ ಕಾರಣದಿಂದ ಹಿಡಿದ ಕರ್ಮವು ಪೂರ್ಣಗೊಳ್ಳದೇ ಹಾಗೆಯೇ ಉಳಿದರೆ ಅದಕ್ಕಾಗಿ ಅಸಂತೋಷಪಟ್ಟು ದುಃಖಿಸಬೇಡ ।೨೬೯॥

ಕರ್ಮ ಮಾಡುವಾಗ್ಗೆ ಅದು ಸಿದ್ಧಿಗೊಂಡರೆ ನಿಜವಾಗಿಯೂ ನಮಗೆ ಬಹಳ ಉಪಯೋಗಕ್ಕೆ ಬರುವುದು. ಆದರೆ ಕದಾಚಿತ್ ವಿಘ್ನಗಳು ಬಂದು ಅಪೂರ್ಣವಾಗಿ ಉಳಿದರೆ ಅದಕ್ಕೂ ಒಳ್ಳೇಯದಾಯಿತೆಂದೇ ತಿಳಿದುಕೋ ।೨೭೦॥

ಹೀಗಿದೆ ನೋಡು, ಎಷ್ಟು ಕರ್ಮಗಳನ್ನು ಮಾಡಲ್ಪಡುತ್ತವೆಯೋ ಅವುಗಳೆಲ್ಲವನ್ನೂ ಆದಿಪುರುಷನಾದ ಪರಮಾತ್ಮನಿಗೆ ಅರ್ಪಿಸಿದರೆ ಸಹಜವಾಗಿ ಅದು ಪರಿಪೂರ್ಣ ವಾಗುವುದು. ಹೀಗೆ ತಿಳಿ ।೨೭೧॥

ಪೂರ್ಣ ಹಾಗೂ ಅಪೂರ್ಣ ಕರ್ಮಗಳ ವಿಷಯದಲ್ಲಿ ಸಮಾನವಾಗಿ ಕಾಣುವುದೇ ನಿಜವಾದ ಯೋಗಸ್ಥಿತಿಯು (ನಿಷ್ಕಾಮ ಕರ್ಮಯೋಗ) ಜ್ಞಾನಿ ಪುರುಷರು ಇದನ್ನೇ ಹೊಗಳುವರು ।೨೭೨॥

ಶ್ಲೋಕಾರ್ಥ :- ಅರ್ಜುನಾ! ಸಮತ್ವ ಬುದ್ಧಿ ಯುಕ್ತವಾದ ಕರ್ಮಯೋಗಕ್ಕಿಂತ ಕಾಮ್ಯ ಕರ್ಮಗಳು ನಿಕೃಷ್ಟಗಳು. ಆದುದರಿಂದ ನೀನು ಸಮಬುದ್ಧಿಯನ್ನೇ ಆಶ್ರಯಿಸು. ಫಲಾಶೆಯುಳ್ಳವರು ದೀನರು ।೪೯॥

ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ ।
ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್ ॥೫೦॥

ಅರ್ಜುನಾ ಸಮತ್ವ ಚಿತ್ತಾಚೇ । ತೇಚಿ ಸಾರ ಜಾಣ್ಯೆ ಯೋಗಾಚೇ । ಜೇಥ ಮನ ಆಣಿ ಬುದ್ಧೀಚೇ । ಐಕ್ಯ ಆಥೀ ॥೨೭೩॥ ತೋ ಬುದ್ಧಿಯೋಗ ವಿವರಿತಾ । ಬಹುತೇ ಪಾಡೇ ಪಾರ್ಥಾ । ದಿಸೇ ಹಾ ಅರುತಾ । ಕರ್ಮಭಾಗು ॥೨೭೪॥ ಪರೀ ತೇಂಚಿ ಕರ್ಮ ಆಚರಿಜೇ । ತರೀಚ ಹಾ ಯೋಗು ಪಾವಿಜೇ । ಜೇ ಕರ್ಮಶೇಷ ಸಹಜೇ । ಯೋಗಸ್ಥಿತಿ ॥೨೭೫॥ ಮ್ಹಣೌನಿ ಬುದ್ಧಿಯೋಗು ಸಧರು । ತೇಥ ಅರ್ಜುನಾ ಹೋಈ ಸ್ಥಿರು । ಮನೇ ಕರೀ ಅವ್ಹೇರು । ಫಲಹೇತೂಚಾ ॥೨೭೬॥ ಜೇ ಬುದ್ಧಿಯೋಗಾ ಯೋಜಿಲೇ । ತೇಚಿ ಪಾರಂಗತ ಜಾಹಲೇ । ಇಹೀ ಉಭಯಬಂಧೀ ಸಾಂಡಿಲೇ । ಪಾಪಪುಣ್ಯೇ ॥೨೭೭॥

ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ ।
ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಮ್ ॥೫೧॥

ತೇ ಕರ್ಮೀ ತರೀ ವರ್ತತೀ । ಪರೀ ಕರ್ಮಫಳಾ ನಾತಳತೀ । ಆಣಿ ಯಾತಾಯಾತೀ ಲೋಪತಿ । ಅರ್ಜುನಾ ತಯಾ ॥೨೭೮॥ ಮಗ ನಿರಾಮಯಭರಿತ । ಪಾವತೀ ಪದ ಅಚ್ಯುತ । ತೇ ಬುದ್ಧಿಯೋಗಯುಕ್ತ । ಧನುರ್ಧರಾ ॥೨೭೯॥

ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।
ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥೫೨॥

ತೂ ಐಸಾ ತೈ ಹೋಸೀ । ಜೈ ಮೋಹಾತೇ ಯಯಾ ಸಾಂಡಿಸೀ । ಆಣಿ ವೈರಾಗ್ಯ ಮಾನಸೀ । ಸಂಚರೈಲ ॥೨೮೦॥ ಮಗ ನಿಷ್ಕಳಂಕ ಗಹನ । ಉಪಜೇಲ ಆತ್ಮಜ್ಞಾನ । ತೇಣೇ ನಿಚಾಡೇ ಹೋಈಲ ಮನ । ಅಪೈಸೇ ತುಝೇ ॥೨೮೧॥ ತೇಥ ಆಣಿಕ ಕಾಂಹೀ ಜಾಣಾವೇ । ಕಾ ಮಾಗಿಲಾತೇ ಸ್ಮರಾವೇ । ಹೇ ಅರ್ಜುನಾ ಆಘವೇ । ಪಾರುಷೇಲ ॥೨೮೨॥

ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।
ಸಮಾಧಾವಚಲಾ ಬುದ್ಧಿಃ ತದಾ ಯೋಗಮವಾಪ್ಸ್ಯಸಿ ॥೫೩॥

ಇಂದ್ರಿಯಾಂಚಿಯಾ ಸಂಗತಿ । ಜಿಯೇ ಪಸರು ಹೋತಸೇ ಮತಿ । ತೇ ಸ್ಥಿರ ಹೋಈಲ ಮಾಗುತೀ । ಆತ್ಮಸ್ವರೂಪೀ ॥೨೮೩॥ ಸಮಾಧಿಸುಖೀ ಕೇವಳ । ಜೈ ಬುದ್ಧಿ ಹೋಈಲ ನಿಶ್ಚಳ । ತೈ ಪಾವಸೀ ತೂ ಸಕಳ । ಯೋಗಸ್ಥಿತಿ ॥೨೮೪॥

ಶ್ಲೋಕಾರ್ಥ :- ಸಮತ್ವ ಬುದ್ಧಿಯುಕ್ತನು ಬದುಕಿರುವಾಗಲೇ ಪುಣ್ಯ, ಪಾಪ ಎರಡಕ್ಕೂ ಅತೀತನಾಗಬಲ್ಲನು. ಆದ್ದರಿಂದ ಆ ಯೋಗವನ್ನು ಆಶ್ರಯಿಸುವುದಕ್ಕೆ ಯತ್ನ ಮಾಡು ।೫೦॥

ಅರ್ಜುನಾ, ಚಿತ್ತದ ಸಮತೆಯು ಅದೇ ಯೋಗದ ಸಾರವಾಗಿದೆ. ಹೀಗೆ ನೀನು ತಿಳಿ. ಈ ಸಮತೆಯಲ್ಲಿ ಮನಸ್ಸು (ಕ್ರಿಯಾ) ಮತ್ತು ಬುದ್ಧಿ (ಜ್ಞಾನ) ಇವುಗಳ ಐಕ್ಯವಿರುತ್ತದೆ ।೨೭೩॥

ಪಾರ್ಥಾ, ಈ ಬುದ್ಧಿಯೋಗ ವಿಷಯಕ್ಕೆ ವಿಚಾರ ಮಾಡಿ ನೋಡಿದಾಗ (ಅಹಂಕಾರ ಯುಕ್ತ ಫಲೇಚ್ಛಾ ಸಹಿತ) ಈ ಕರ್ಮಯೋಗವು ಬಹಳಷ್ಟು ಪ್ರಮಾಣದಲ್ಲಿ ಕಡಿಮೆ ಯೋಗ್ಯತೆಯಂತೆ ಕಾಣುತ್ತದೆ ।೨೭೪॥

ಆದರೆ ಆ ಕರ್ಮಯೋಗವನ್ನೇ ಆಚರಿಸಿದರೆ ಮಾತ್ರ ಬುದ್ಧಿಯೋಗ ಸಾಧ್ಯವಾಗುತ್ತದೆ. ಕಾರಣ, ಕರ್ಮದ ಉತ್ತರಾವಸ್ಥೆಯು ಸ್ವಾಭಾವಿಕವಾಗಿ ಯೋಗಸ್ಥಿತಿ ಇರುವುದು ।೨೭೫॥

ಆದ್ದರಿಂದ ಅರ್ಜುನಾ, ಬುದ್ಧಿ ಯೋಗವೇ ಶ್ರೇಷ್ಠವಾದದ್ದು. ನೀನು ಅಲ್ಲಿಯೇ ನಿಶ್ಚಲನಾಗಿರು. ಆದರೆ ಫಲ ಪ್ರಾಪ್ತಿಯ ಆಶೆ ಮಾಡಬೇಡ ।೨೭೬॥

ಯಾರಲ್ಲಿ ಬುದ್ಧಿಯೋಗದಲ್ಲಿ ಪ್ರವೃತ್ತಿ ಇರುವುದೋ ಅವರೇ ಪಾರಾಗುತ್ತಾರೆ ಮತ್ತು ಪಾಪ, ಪುಣ್ಯ, ಈ ಎರಡರ ಬಂಧನದಿಂದ ಬಿಡುಗಡೆಯಾಗುತ್ತಾರೆ ।೨೭೭॥

ಶ್ಲೋಕಾರ್ಥ :- ಸಮತ್ವ ಬುದ್ಧಿಯಿಂದ ಕೂಡಿದ ಕರ್ಮಯೋಗ ಪರಾಯಣರು ಕರ್ಮಜನ್ಮ ಫಲಗಳಲ್ಲಿ ಆಸಕ್ತಿಯನ್ನು ಬಿಟ್ಟು ಜನ್ಮ ಬಂಧನದಿಂದ ವಿಮುಕ್ತಿಯನ್ನು ಪಡೆದವರಾಗಿ ಉಪದ್ರವರಹಿತವಾದ ಮೋಕ್ಷ ಪದವಿಯನ್ನು ಪಡೆಯುತ್ತಾರೆ ।೫೧॥

ಅರ್ಜುನಾ, ಅವರು ಕರ್ಮವನ್ನು ಮಾಡಿದರೂ ಕರ್ಮದ ಫಲದ ಇಚ್ಛೆ ಮಾಡುವುದಿಲ್ಲ. ಆದ್ದರಿಂದ ಅವರ ಜನ್ಮ ಮರಣದ ಯಾತಾಯಾತಿಯು ಮುಗಿಯುವುದು ।೨೭೮॥

ಧನುರ್ಧರಾ, ಆಗ ಅವರು ಬುದ್ಧಿಯೋಗ ಯುಕ್ತರಾಗಿ ಬ್ರಹ್ಮಾನಂದದಿಂದ ಕೂಡಿದ ಅವಿನಾಶಿ ಪದವನ್ನು ಪಡೆಯುವರು ।೨೭೯॥

ಶ್ಲೋಕಾರ್ಥ :- ನಿನ್ನ ಬುದ್ಧಿಯು ಮೋಹ ಜಾಲವನ್ನು ಅತಿಕ್ರಮಿಸಿ ಹೋದಾಗ ನೀನು ಕೇಳಬೇಕಾದ ಮತ್ತು ಕೇಳಿದ ಕರ್ಮ ವಿಷಯಗಳಲ್ಲಿ ವಿರಕ್ತಿಯನ್ನು ಪಡೆದುಕೊಳ್ಳುವೆ ।೫೨॥

ನೀನು ಈ ಮೋಹದ ತ್ಯಾಗ ಮಾಡಿದ ನಂತರ ನಿನ್ನ ಮನಸ್ಸಿನಲ್ಲಿ ವೈರಾಗ್ಯ ಸಂಚರಿಸುವುದು. ಆಗ ನೀನು ಬುದ್ಧಿಯೋಗ ಯುಕ್ತನಾಗುವೆ ।೨೮೦॥

ಈ ಯೋಗದಿಂದ ನಿರ್ದೋಷವಾದ ಮತ್ತು ಗಹನವಾದ ಆತ್ಮ ಜ್ಞಾನ ಉತ್ಪನ್ನವಾಗಿ ನಿನ್ನ ಅಂತಃಕರಣವು ಎಲ್ಲ ಪ್ರಕಾರಗಳಿಂದ ನಿರಿಚ್ಛೆಯಾಗುವುದು ।೨೮೧॥

ಈ ಅವಸ್ಥೆಯಲ್ಲಿ ಇನ್ನು ಏನಾದರೂ ಜ್ಞಾನ ಸಂಪಾದಿಸಬೇಕು ಅಥವಾ ಪೂರ್ವದಲ್ಲಿ ಆದ ಜ್ಞಾನವನ್ನು ಜ್ಞಾಪಿಸಿಕೊಳ್ಳಬೇಕು ಎಂಬುದು ಎಲ್ಲವೂ ನಿಂತು ಬಿಡುವುದು ।೨೮೨॥

ಶ್ಲೋಕಾರ್ಥ :- ವೇದ ವಾದಗಳಿಂದ ಚಂಚಲವಾಗಿರುವ ನಿನ್ನ ಬುದ್ಧಿಯು ವಿಷಯಗಳಿಗೆರಗದೆ, ಅಲುಗಾಡದೆ ಆತ್ಮದಲ್ಲಿ ನೆಲೆಯಾಗಿ ನಿಂತಾದ ಆತ್ಮದೊಡನೆ ಕೂಡಿದವನಾಗಿರುವೆ ।೫೩॥

ಇಂದ್ರಿಯಗಳ ಸಂಗತಿಯಿಂದ ಯಾವ ಬುದ್ಧಿಯು ಪಂಚವಿಷಯದಲ್ಲಿ ವಿಸ್ತಾರಗೊಳ್ಳುವುದೋ ಅದೇ ಬುದ್ಧಿಯು ನಿಷ್ಕಾಮ ಕರ್ಮದಿಂದ ಆತ್ಮ ಸ್ವರೂಪದಲ್ಲಿ ಸ್ಥಿರವಾಗುವುದು ।೨೮೩॥

ಸಮಾಧಿ ಸುಖದತ್ತ ನಿನ್ನ ಬುದ್ಧಿಯು ಸ್ಥಿರವಾದಾಗ್ಗೆ ನಿನಗೆ ಯೋಗದ ಫಲವು (ಜೀವಬ್ರಹ್ಮೈಕ್ಯ ಸ್ವರೂಪ) ಸಾಧಿಸುವುದು ।೨೮೪॥

ಅರ್ಜುನ ಉವಾಚ :-

ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।
ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಮ್ ।೫೪॥

ತೇಥ ಅರ್ಜುನ ಮ್ಹಣೇ ದೇವಾ । ಹಾಚಿ ಅಭಿಪ್ರಾವೋ ಆಘವಾ । ಮೀ ಪುಸೇನ ಆತಾ ಸಾಂಗಾವಾ । ಕೃಪಾನಿಧೀ ।೨೮೫॥ ಮಗ ಅಚ್ಯುತ ಮ್ಹಣೇ ಸುಖೇ । ಜೇ ಕಿರೀಟೀ ತುಜ ನಿಕೇ । ತೇ ಪೂಸ ಪಾ ಉನ್ಮೇಖೇ । ಮನಾಚೇನಿ ।೨೮೬॥ ಯಾ ಬೋಲಾ ಪಾರ್ಥೇ । ಮ್ಹಣೆತಲೇ ಸಾಂಗ ಪಾ ಶ್ರೀಕೃಷ್ಣಾತೇ । ಕಾಯ ಮ್ಹಣಿಪೇ ಸ್ಥಿತಪ್ರಜ್ಞಾತೇ । ವೋಳಖೋ ಕೇವೀ ।೨೮೭॥ ಆಣಿ ಸ್ಥಿರಬುದ್ಧಿ ಜೋ ಮ್ಹಣಿಜೇ । ತೋ ಕೈಸಿಯಾ ಚಿನ್ಹೀ ಜಾಣಿಜೇ । ಜೋ ಸಮಾಧಿಸುಖ ಭುಂಜೇ । ಅಖಂಡಿತ ।೨೮೮॥ ತೋ ಕವಣೇ ಸ್ಥಿತೀ ಅಸೇ । ಕೈಸೇನಿ ರೂಪೀ ವಿಲಸೇ । ದೇವಾ ಸಾಂಗಾವೇ ಹೇ ಐಸೇ । ಲಕ್ಷ್ಮೀಪತೀ ।೨೮೯॥ ತಂವ ಪರಬ್ರಹ್ಮ ಅವತರಣು । ಜೋ ಷಡ್ಗುಣಾಧಿಕರಣು । ತೋ ಕಾಯ ತೇಥ ನಾರಾಯಣು । ಬೋಲತು ಅಸೇ ।೨೯೦॥

ಶ್ರೀಭಗವಾನ್ ಉವಾಚ :-

ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ ।
ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ।೫೫॥

ಮ್ಹಣೇ ಅರ್ಜುನಾ ಪರಿಯೇಸೀ । ಜೋ ಹಾ ಅಭಿಲಾಷು ಪ್ರೌಢ ಮಾನಸೀ । ತೋ ಅಂತರಾಯ ಸ್ವಸುಖೇಸೀ । ಕರೀತು ಅಸೇ ।೨೯೧॥ ಜೋ ಸರ್ವದಾ ನಿತ್ಯತೃಪ್ತು । ಅಂತಃಕರಣ ಭರಿತು । ಪರೀ ವಿಷಯಾಮಾಜೀ ಪತಿತು । ಜೇಣೇ ಸಂಗೇ ಕೀಜೇ ।೨೯೨॥ ತೋ ಕಾಮು ಸರ್ವಥಾ ಜಾಯೇ । ಜಯಾಚೇ ಆತ್ಮತೋಷೀ ಮನ ರಾಹೇ । ತೋಚಿ ಸ್ಥಿತಪ್ರಜ್ಞು ಹೋಯೇ । ಪುರುಷ ಜಾಣ್ಯೆ ।೨೯೩॥

ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।
ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ।೫೬॥

ನಾನಾ ದುಃಖೀ ಪ್ರಾಪ್ತೀ । ಜಯಾಸೀ ಉದ್ವೇಗು ನಾಹೀ ಚಿತ್ತೀ । ಆಣಿ ಸುಖಾಚಿಯಾ ಆರ್ತೀ । ಅಡಪೈಜೇನಾ ।೨೯೪॥ ಅರ್ಜುನಾ ತಯಾಚ್ಯಾ ಠಾಯೀ । ಕಾಮಕ್ರೋಧು ಸಹಜೇ ನಾಹೀ । ಆಣಿ ಭಯಾತೇ ನೇಣೇ ಕಹೀ । ಪರಿಪೂರ್ಣು ತೋ ।೨೯೫॥ ಐಸಾ ಜೋ ನಿರವಧಿ । ತೋ ಜಾಣ ಪಾ ಸ್ಥಿರಬುದ್ಧಿ । ಜೋ ನಿರಸೂನಿ ಉಪಾಧಿ । ಭೇದರಹಿತು ।೨೯೬॥

ಶ್ಲೋಕಾರ್ಥ :- ಅರ್ಜುನನು ಹೀಗೆ ಹೇಳಿದನು: ಕೇಶವಾ! ಸಮಾಧಿನಿಷ್ಠನಾದ ಸ್ಥಿತಪ್ರಜ್ಞನ ಲಕ್ಷಣವೇನು? ಅವನು ಹೇಗೆ ಮಾತಾಡುತ್ತಾನೆ? ಹೇಗೆ ಇರುತ್ತಾನೆ? ಹೇಗೆ ವ್ಯವಹರಿಸುತ್ತಾನೆ? ।೫೪॥

ಆಗ ಅರ್ಜುನನು ಹೇಳಿದನು; ಕೃಪಾನಿಧಿ ಶ್ರೀಕೃಷ್ಣನೇ, ಇದೇ ವಿಷಯದ ವಿವರಣೆಗಾಗಿ ನಾನೊಂದು ಕೇಳುವೆನು. ಕೃಪೆ ಮಾಡಿ ನನಗೆ ಈಗದನ್ನು ಹೇಳು ।೨೮೫॥

ಆಗ ಶ್ರೀಕೃಷ್ಣನು ಹೇಳುತ್ತಾನೆ; ಅರ್ಜುನಾ ನೀನು ಸಂತೋಷ ಮನದಿಂದ ಏನೂ ಬೇಕಾದರೂ ಮನ ಬಿಚ್ಚಿ ಕೇಳು ।೨೮೬॥

ಹೀಗೆಂದಮೇಲೆ ಅರ್ಜುನನು ಕೃಷ್ಣನಿಗೆ ''ಸ್ಥಿತಪ್ರಜ್ಞ'' ಯಾರಿಗೆನ್ನಬೇಕು? ಮತ್ತು ಆತನನ್ನು ಹೇಗೆ ಕಂಡು ಹಿಡಿಯಬೇಕು? ಇದನ್ನು ಬಿಚ್ಚಿ ಹೇಳಿರಿ ।೨೮೭॥

ಯಾವುದಕ್ಕೆ ಸ್ಥಿರಬುದ್ಧಿ ಎನ್ನುವರು? ಮತ್ತು ಯಾರು ನಿರಂತರವಾಗಿ ಸಮಾಧಿ ಸುಖ ಭೋಗಿಸುವರು ? ಅವರನ್ನು ಯಾವ ಚಿನ್ಹದಿಂದ ತಿಳಿಯಬೇಕು? ।೨೮೮॥

ದೇವಾ, ಲಕ್ಷ್ಮೀಪತಿಯೇ, ಆತನು ಯಾವ ಸ್ಥಿತಿಯಲ್ಲಿರುವನು ? ಮತ್ತು ಯಾವ ರೂಪದಿಂದ ವರ್ತಿಸುವನು ? ಇದನ್ನು ಕೃಪೆ ಮಾಡಿ ತಿಳಿಸು ।೨೮೯॥

ಆಗ ಷಡ್ಗುಣೈಶ್ವರ್ಯ ಸಂಪನ್ನ, ಸರ್ವ ಗುಣದ ಅಧಿಷ್ಠಾನ ಹಾಗೂ ಪರಬ್ರಹ್ಮಾವತಾರನಾದ ಶ್ರೀಭಗವಾನ್ ಕೃಷ್ಣನು ಈ ರೀತಿ ಹೇಳಹತ್ತಿದನು ।೨೯೦॥

ಶ್ಲೋಕಾರ್ಥ :- ಭಗವಂತನು ಹೀಗೆ ಹೇಳಿದನು: ಅರ್ಜುನಾ! ಮನಸ್ಸಿನಲ್ಲಿರುವ ಬಯಕೆಗಳನ್ನೆಲ್ಲಾ ಬಿಟ್ಟಾಗ ಅವನು ತನ್ನಿಂದಲೇ ತನ್ನಲ್ಲಿ ತೃಪ್ತನಾಗಿ ಆತ್ಮದಲ್ಲಿ ಸ್ಥಿರವಾದ ಬುದ್ಧಿಯುಳ್ಳವನಾಗುತ್ತಾನೆ ।೫೫॥

ಅರ್ಜುನಾ, ಕೇಳು. ಮನಸ್ಸಿನ ಬಲವತ್ತರವಾದ ತೃಷ್ಣೆಯು ಆತ್ಮಸುಖಕ್ಕೆ ವಿಘ್ನ ಮಾಡುತ್ತಿರುವುದು ।೨೯೧॥

ಯಾರು ಯಾವಾಗಲೂ ತೃಪ್ತರಾಗಿದ್ದು ಅವರ ಅಂತಃಕರಣವು ಆತ್ಮಜ್ಞಾನದಿಂದ ತುಂಬಿಕೊಂಡಿರುವುದು. ಆದರೆ ಯಾವುದರ ಸಂಗತಿಯಿಂದ ಪುರುಷನು ವಿಷಯಾಸಕ್ತನಾಗುತ್ತಾನೆಯೋ ।೨೯೨॥

ಆ ಕಾಮವು ಯಾರ ಮನಸ್ಸಿನಿಂದ ಪೂರ್ಣ ನಿವೃತ್ತವಾಗಿ ಅವರ ಮನಸ್ಸು ಸ್ವಾನಂದದಲ್ಲಿ ಮಗ್ನರಾಗಿರುವುದೋ ಆ ಪುರುಷನೇ ಸ್ಥಿತಪ್ರಜ್ಞನೆಂದು ತಿಳಿ ।೨೯೩॥

ಶ್ಲೋಕಾರ್ಥ :- ದುಃಖ ಬಂದಾಗ ಉದ್ವಿಗ್ನವಿಲ್ಲದ ಮನಸ್ಸುಳ್ಳವನು. ಸುಖದಲ್ಲಿ ಇಚ್ಛೆಯಿಲ್ಲದವನು, ಅನುರಾಗ, ಭಯ, ಕ್ರೋಧಗಳನ್ನು ತ್ಯಜಿಸಿದವನು ಆದ ಮುನಿ ಸ್ಥಿತಪ್ರಜ್ಞನೆನಿಸುತ್ತಾನೆ ।೫೬॥

ನಾನಾ ಪ್ರಕಾರದ ದುಃಖಗಳು ಪ್ರಾಪ್ತವಾದಲ್ಲಿ ಅವರ ಮನಸ್ಸಿನಲ್ಲಿ ತ್ರಾಸು ಉತ್ಪನ್ನವಾಗುವುದಿಲ್ಲ ಮತ್ತು ಸುಖದ ಇಚ್ಛೆಗಾಗಿ ಚಡಪಡಿಸುವುದಿಲ್ಲ ।೨೯೪॥

ಅರ್ಜುನಾ, ಆ ಸತ್ಪುರುಷನ ಅಂತಃಕರಣದಿಂದ ಕಾಮಕ್ರೋಧಗಳು ಸಹಜವಾಗಿ ಇಲ್ಲದಾಗಿರುತ್ತವೆ ಮತ್ತು ಆ ಪೂರ್ಣಾವಸ್ಥೆಗೆ ಮುಟ್ಟಿರುವ ಪುರುಷನಿಗೆ ಭಯದ ಹೆಸರೇ ಗೊತ್ತಿರುವುದಿಲ್ಲ ।೨೯೫॥

ಈ ಪ್ರಕಾರವಾಗಿ (ದೇಹ ಪ್ರಪಂಚದ) ಉಪಾಧಿ ಬಿಟ್ಟು ಯಾರು ಕೇವಲ ಭೇದರಹಿತರಾಗಿರುತ್ತಾರೆಯೋ ಅವರೇ ಸ್ಥಿರ ಬುದ್ಧಿಯವರೆಂದು ತಿಳಿ ।೨೯೬॥

ಯಃ ಸರ್ವತ್ರಾನಭಿಸ್ನೇಹಃ ತತ್ತತ್ಪ್ರಾಪ್ಯ ಶುಭಾಶುಭಮ್ ।
ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ।೫೭॥

ಜೋ ಸರ್ವತ್ರ ಸದಾ ಸರಿಸಾ । ಪರಿಪೂರ್ಣು ಚಂದ್ರು ಕಾ ಜೈಸಾ । ಅಧಮೋತ್ತಮ ಪ್ರಕಾಶಾ । ಮಾಜೀ ನ ಮ್ಹಣೇ ।೨೯೭॥ ಐಸೀ ಅನವಚ್ಛಿನ್ನ ಸಮತಾ । ಭೂತಮಾತ್ರೀ ಸದಯತಾ । ಆಣಿ ಪಾಲಟು ನಾಹೀ ಚಿತ್ತಾ । ಕವಣೇ ವೇಳೇ ।೨೯೮॥ ಗೋಮಟೇ ಕಾಂಹೀ ಪಾವೇ । ತರೀ ಸಂತೋಷೇ ತೇಣೇ ನಾಭಿಭವೇ । ಜೋ ವೋಖಟೇನಿ ನಾಗವೇ । ವಿಷಾದಾಸೀ ।೨೯೯॥ ಐಸಾ ಹರೀಖ ಶೋಕರಹಿತು । ಜೋ ಆತ್ಮಬೋಧಭರಿತು । ತೋ ಜಾಣ ಪಾ ಪ್ರಜ್ಞಾಯುಕ್ತು । ಧನುರ್ಧರಾ ।೩೦೦॥

ಯದಾ ಸಂಹರತೇ ಚಾಯಮ್ ಕೂರ್ಮೋಽಂಗಾನೀವ ಸರ್ವಶಃ ।
ಇಂದ್ರಿಯಾಣೀಂದ್ರಿಯಾರ್ಥೇಭ್ಯಃ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ।೫೮॥

ಕಾ ಕೂರ್ಮಾಚಿಯಾಪರೀ । ಉವಾಇಲಾ ಅವೇವ ಪಸರೀ । ನಾ ತರೀ ಇಚ್ಛಾವಶೇ ಆವರೀ । ಆಪುಲೇ ಆಪಣ ।೩೦೧॥ ತೈಸೀ ಇಂದ್ರಿಯೇ ಆಪೈತೀ ಹೋತೀ । ಜಯಾಚೇ ಮ್ಹಣಿತಲೇ ಕರಿತಿ । ತಯಾಚೀ ಪ್ರಜ್ಞಾ ಜಾಣ ಸ್ಥಿತಿ । ಪಾತಲೀ ಅಸೇ ।೩೦೨॥

ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।
ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ।೫೯॥

ಅರ್ಜುನಾ ಆಣಿಕಹೀ ಏಕ । ಸಾಂಗೇನ ಐಕೇ ಕವತಿಕ । ಯಾ ವಿಷಯಾಂತೇ ಸಾಧಕ । ತ್ಯಜಿತೀ ನಿಯಮೇ ।೩೦೩॥ ಶ್ರೋತ್ರಾದಿ ಇಂದ್ರಿಯೇ ಆವರಿತೀ । ಪರಿ ರಸನೇ ನಿಯಮು ನ ಕರಿತೀ । ತೇ ಸಹಸ್ರಧಾ ಕವಳಿಜತೀ । ವಿಷಯೀ ಇಹೀ ।೩೦೪॥ ಜೈಸೀ ವರಿವರಿ ಪಾಲವೀ ಖುಡಿಜೇ । ಆಣಿ ಮುಳೀ ಉದಕ ಘಾಲಿಜೇ । ತರೀ ಕೈಸೇನಿ ನಾಶು ನಿಪಜೇ । ತಯಾ ವೃಕ್ಷಾ ।೩೦೫॥ ತೋ ಉದಕಾಚೇನಿ ಬಳೇ ಅಧಿಕೇ । ಜೈಸಾ ಆಡವೇನಿ ಆಂಗೇ ಫಾಂಕೇ । ತೈಸಾ ಮಾನಸೀ ವಿಷೋ ಪೋಖೇ । ರಸನಾದ್ವಾರೇ ।೩೦೬॥ ಯೇರಾ ಇಂದ್ರಿಯಾ ವಿಷಯ ತುಟೆ । ತೈಸಾ ನಿಯಮೂ ನ ಯೇ ರಸ ಹಟೇ । ಜೇ ಜೀವನ ಹೇ ನ ಘಟೇ । ಯೇಣೆವಿಣ ।೩೦೭॥ ಮಗ ಅರ್ಜುನಾ ಸ್ವಭಾವೇ । ಐಸಿಹೀ ನಿಯಮಾತೇ ಪಾವೇ । ಜೈ ಪರಬ್ರಹ್ಮ ಅನುಭವೇ । ಹೋಊನಿ ಜಾಇಜೇ ।೩೦೮॥ ತೈ ಶರೀರಭಾವ ನಾಸತೀ । ಇಂದ್ರಿಯೇ ವಿಷಯ ವಿಸರತಿ । ಜೈ ಸೋಹಂಭಾವ ಪ್ರತೀತಿ । ಪ್ರಗಟ ಹೋಯ ।೩೦೯॥

ಶ್ಲೋಕಾರ್ಥ :- ಎಲ್ಲಿಯೂ ದೃಢವಾದ ಸ್ನೇಹ ಬಂಧವಿಲ್ಲದವನು; ಬಂದ ಶುಭ ಅಶುಭಗಳಿಗಾಗಿ ಸಂತೋಷವೂ, ದ್ವೇಷವೂ ಇಲ್ಲದವನು ಸ್ಥಿತಪ್ರಜ್ಞನು ॥೫೭॥

ಪೌರ್ಣಿಮೆಯ ಚಂದ್ರನು ಉತ್ತಮ ಮತ್ತು ಅಧಮ ಜನರಿಗೆ ಒಂದೇ ಪ್ರಕಾಶ ಕೊಡುತ್ತಾನೆ. ಅದರಂತೆ ಅವರ ವರ್ತನೆಯು ಯಾವಾಗಲೂ ಸಮಾನವಾಗಿರುವುದು ॥೯೭॥

ಅದರಂತೆ ಅಖಂಡ ಸಮತೆ ಮತ್ತು ಪ್ರಾಣಿಮಾತ್ರರಲ್ಲಿ ಸದಯತೆವಿದ್ದು ಅವರ ಚಿತ್ತದ ಸ್ಥಿತಿಯು ಯಾವಾಗಲು ಬದಲಾಯಿಸುವುದಿಲ್ಲ ॥೯೮॥

ಯಾವುದಾದರೂ ಉತ್ತಮ ಸ್ಥಿತಿ ಪ್ರಾಪ್ತವಾದರೆ ಅವರು ಸಂತೋಷದಿಂದ ಉಬ್ಬುವುದಿಲ್ಲ. ಕೆಟ್ಟ ಘಟನೆಗಳಿಂದ ಅವರಿಗೆ ದುಃಖವಾಗುವುದಿಲ್ಲ ॥೯೯॥

ಈ ರೀತಿ ಯಾರು ಹರ್ಷ ಶೋಕ ರಹಿತರಾಗಿ ಯಾವಾಗಲೂ ಆತ್ಮ ಬೋಧೆಯಲ್ಲಿ ನಿಮಗ್ನರಾಗಿರುವರೋ ಅವರೇ ಸ್ಥಿರಬುದ್ಧಿಯವರು ಎಂದು ತಿಳಿ ॥೧೦೦॥

ಶ್ಲೋಕಾರ್ಥ :- ಆಮೆಯು ತನ್ನ ಅವಯವಗಳನ್ನು ಸಹಜವಾಗಿ ಆಕರ್ಷಿಸುವಂತೆ ಶಬ್ದಾದಿ ವಿಷಯಗಳಿಂದ ತನ್ನ ಇಂದ್ರಿಯಗಳನ್ನು ಸರ್ವವಿಧದಿಂದಲೂ ನಿಗ್ರಹಿಸ ಬಲ್ಲವನೇ ಸ್ಥಿತಪ್ರಜ್ಞನು ॥೫೮॥

(ಕೂರ್ಮ) ಆಮೆಯು ತನ್ನ ಇಚ್ಛೆಯಂತೆ ತನ್ನ ಅವಯವಗಳನ್ನು ಹೊರಗೆ ತೆಗೆಯುವುದು. ಬೇಡಾದಾಗ ಅವುಗಳನ್ನು ತನ್ನಿಂದ ತಾನೇ ಒಳಗೆ ತೆಗೆದುಕೊಳ್ಳುವುದು ॥೧೦೧॥

ಅದರಂತೆ ಯಾರ ಇಂದ್ರಿಯಗಳು ಅವರ ಸ್ವಾಧೀನವಾಗಿದ್ದು ಅವರ ಇಚ್ಛೆಯಂತೆ ವರ್ತಿಸುತ್ತವೆಯೋ ಅವರ ಬುದ್ಧಿ ಸ್ಥಿರತೆ ಹೊಂದಿದೆ ಎಂದು ತಿಳಿ ॥೧೦೨॥

ಶ್ಲೋಕಾರ್ಥ :- ನಿರಾಹಾರಿ ಯಾದವನಿಗೆ ಶಬ್ದಾದಿ ವಿಷಯಗಳು ಹಿಂದಿರುಗುವುವು. ಆದರೂ ವಿಷಯ ವಾಸನೆ ಉಳಿದಿರುವುದು. ಅದು ಪರಮಾತ್ಮನ ದರ್ಶನದಿಂದಲೇ ಇಲ್ಲದಂತಾಗುವುದು ॥೫೯॥

ಅರ್ಜುನಾ, ಇನ್ನೊಂದು ನಿನಗೆ ಮೋಜಿನ ಮಾತು ಹೇಳುವೆ ಕೇಳು. ಸಾಧಕರು ಈ ವಿಷಯಗಳನ್ನು ನಿಯಮದಿಂದ ತ್ಯಾಗ ಮಾಡುತ್ತಾರೆ ॥೧೦೩॥

ಶ್ರೋತ್ರಾದಿ ಇಂದ್ರಿಯಗಳನ್ನು ಸ್ವಾಧೀನ ಮಾಡಿಕೊಳ್ಳುವರು. ಆದರೆ (ಜಿವ್ಹಾ) ನಾಲಿಗೆಯನ್ನು ಮಾತ್ರ ಸ್ವಾಧೀನ ಪಡಿಸುವುದಿಲ್ಲ. ಇದರಿಂದ ಈ ನಾಲಿಗೆಯು ಅವರಿಗೆ ಸಾವಿರಾರು ರೀತಿಯಲ್ಲಿ ಕವಳಿಸುವುದು ॥೧೦೪॥

ಒಂದು ವೇಳೆ, ಗಿಡದ ಎಲೆಗಳನ್ನು ಮಾತ್ರ ಕತ್ತರಿಸುತ್ತ ಬೇರುಗಳಿಗೆ ನೀರು ಹಾಕುತ್ತಿದ್ದಾರೆ. ಆ ಗಿಡ ಎಂದು ನಾಶವಾಗಬೇಕು? ॥೧೦೫॥

ಅದು (ಆ ಗಿಡವು) ನೀರಿನ ಬಲದಿಂದ ಇನ್ನೂ ಹೆಚ್ಚಿಗೆ ಅಡ್ಡ ಬೆಳೆಯುವುದು. ಅದರಂತೆ ಈ ನಾಲಿಗೆ ಮುಖಾಂತರ ಅಂತಃಕರಣದಲ್ಲಿ ವಿಷಯಗಳು ಅಧಿಕವಾಗಿ ಬೆಳೆಯುವುವು ॥೧೦೬॥

ಇತರ ಇಂದ್ರಿಯಗಳಿಂದ ವಿಷಯಗಳನ್ನು ಬೇರ್ಪಡಿಸಬಹುದು. ಆದರೆ, ರಸನೇಂದ್ರಿಯ ದ್ವಾರಾ ''ರಸ'' ವಿಷಯವನ್ನು ಹಠದಿಂದ ಕಡಿಮೆ ಮಾಡಲು ಬರುವುದಿಲ್ಲ. ಏಕೆಂದರೆ ಇದರ ಹೊರತು ಶರೀರವು ಜೀವಂತವಾಗಿರಲಾರದು ॥೧೦೭॥

ಆದರೆ ಅರ್ಜುನಾ, ಸಾಧಕನು ಸ್ವಾನುಭಾವದಿಂದ ಪರಬ್ರಹ್ಮನಾದಾಗ್ಗೆ ಮಾತ್ರ ರಸನೇಂದ್ರಿಯವು ಸಹಜವಾಗಿ ಸ್ವಾಧೀನವಾಗುವುದು ॥೧೦೮॥

''ನಾನು ಬ್ರಹ್ಮ ಸ್ವರೂಪನು'' ಎಂಬ ಅನುಭವವಾದ ಮೇಲೆ ದೇಹ ಭಾವವು ನಷ್ಟಗೊಳ್ಳುವುದು. ಆಗ ಇಂದ್ರಿಯಗಳು ಎಲ್ಲ ವಿಷಯಗಳನ್ನು ಮರೆತು ಬಿಡುವುವು ॥೧೦೯॥

ಯತತೋ ಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ ।
ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ।।೬೦।।

ಯೇರ್ಹ್ವೀ ತರೀ ಅರ್ಜುನಾ । ಹೇ ಆಯಾ ನಯೇ ಸಾಧನಾ । ಜೇ ರಾಹಟತಾತೀ ಜತನಾ । ನಿರಂತರ ।।೩೧೦।। ಜಯಾತೇ ಅಭ್ಯಾಸಾಚೀ ಫುರಟೀ । ಯಮನಿಯಮಾಂಚೀ ತಾಟೀ । ಜೇ ಮನಾತೇ ಸದಾ ಮುಠೀ । ಧರೂನಿ ಆಹಾತೀ ।।೩೧೧।। ತೇಹೀ ಕಿಜತೀ ಕಾಸಾವಿಸೀ । ಯಾ ಇಂದ್ರಿಯಾಂಚೇ ಪ್ರೌಢಿ ಐಸೀ । ಜೈಸೀ ಮಂತ್ರಜ್ಞಾತೇ ವಿವಸೀ । ಭುಲವೀ ಕಾ ।।೩೧೨।। ದೇಖೈ ವಿಷಯ ಹೇ ತೈಸೇ । ಪಾವತೀ ಋದ್ಧಿಸಿದ್ಧೀಚೇನಿ ಮಿಷೇ । ಮಗ ಆಕಳಿತೀ ಸ್ಪರ್ಶೇ । ಇಂದ್ರಿಯಾಚೇನಿ ।।೩೧೩।। ತಿಯೇ ಸಂಧೀ ಮನ ಜಾಯೇ । ಮಗ ಅಭ್ಯಾಸಿ ಠೋತಾವಲೇ ಠಾಯೇ । ಐಸೇ ಬಳಕಟಪಣ ಆಹೇ । ಇಂದ್ರಿಯಾಂಚೇ ।।೩೧೪।।

ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ
ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ।।೬೧।।

ಮ್ಹಣೌನಿ ಆಇಕೇ ಪಾರ್ಥಾ । ಯಾಂತೇ ನಿರ್ದಳೀ ಜೋ ಸರ್ವಥಾ । ಸರ್ವ ವಿಷಯೀ ಆಸ್ಥಾ । ಸಾಂಡೂನಿಯಾ ।।೩೧೫।। ತೋಚಿ ತೂ ಜಾಣ । ಯೋಗನಿಷ್ಠೇಸೀ ಕಾರಣ । ಜಯಾಚೇ ವಿಷಯಸುಖೇ ಅಂತಃಕರಣ । ಝುಕವೇನಾ ।।೩೧೬।। ಜೋ ಆತ್ಮಬೋಧಯುಕ್ತು । ಹೋಊನಿ ಅಸೇ ಸತತು । ಜೋ ಮಾತೇ ಹೃದಯಾ ಆಂತು । ವಿಸಂಬೇನಾ ।।೩೧೭।। ಏರ್ಹ್ವೀ ಬಾಹ್ಯ ವಿಷಯ ತರೀ ನಾಹೀ । ಪರೀ ಮಾನಸೀ ಹೋಈಲ ಜರೀ ಕಾಂಹೀ । ತರೀ ಸಾದ್ಯಂತುಚಿ ಪಾಹೀ । ಸಂಸಾರು ಅಸೇ ।।೩೧೮।। ಜೈಸಾ ಕಾ ವಿಷಾಚಾ ಲೇಶು । ಘೇತಲಿಯಾ ಹೋಯ ಬಹುವಸು । ಮಗ ನಿಭ್ರಾಂತ ಕರೀ ನಾಶು । ಜೀವಿತಾಸೀ ।।೩೧೯।। ತೈಸೀ ವಿಷಯಾಚೀ ಶಂಕಾ । ಮನೀ ವಸತೀ ದೇಖಾ । ಘಾತುಕರೀ ಅಶೇಖಾ । ವಿವೇಕಜಾತಾ ।।೩೨೦।।

ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।
ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಽಭಿಜಾಯತೇ ।।೬೨।।

ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ಸ್ಮೃತಿವಿಭ್ರಮಃ ।
ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ।।೬೩।।

ಜರೀ ಹೃದಯೀ ವಿಷಯ ಸ್ಮರತೀ । ತರೀ ನಿಸಂಗಾಹೀ ಆಪಜೇ ಸಂಗತಿ । ಸಂಗೇ ಪ್ರಗಟೇ ಮೂರ್ತಿ । ಅಭಿಲಾಷಾಚೀ ।।೩೨೧।।

ಶ್ಲೋಕಾರ್ಥ :- ಕುಂತೀನಂದನಾ! ಪಂಡಿತನೂ ಪ್ರಯತ್ನಶೀಲನೂ ಆದ ಪುರುಷನ ಮನಸ್ಸನ್ನೂ ಸಹ ಪ್ರಥಮಶೀಲ ಇಂದ್ರಿಯಗಳು ಸೆಳೆಯುತ್ತವೆ ।೬೦॥

ಅರ್ಜುನಾ, ಇಂದ್ರಿಯಗಳು ಯಾವುದೇ ಸಾಧನ ಗಳಿಂದ ಸ್ವಾಧೀನವಾಗಲಾರವು. ಸಾಧಕರು ಇಂದ್ರಿಯ ಗಳನ್ನು ವಿಷಯದಿಂದ ದೂರ ಮಾಡಲು ಸತತವಾಗಿ ಸಾಕಷ್ಟು ಪ್ರಯತ್ನ ಮಾಡುವರು ।೩೧೦॥

ಇಂದ್ರಿಯಗಳನ್ನು ಸ್ವಾಧೀನ ಮಾಡಿಕೊಳ್ಳಲು ಪ್ರಾಣಾಯಾಮಾದಿ ಅಭ್ಯಾಸದ ಗೂಡು ಕಟ್ಟುತ್ತಾರೆ ಮತ್ತು ಇಂದ್ರಿಯಗಳು ಹೊರಗೆ ಹೋಗಬಾರದೆಂದು ಯಮ ನಿಯಮಾದಿ ಸಾಧನದ ಬಾಗಿಲ ಹಾಕುತ್ತಾರೆ. ಮನಸ್ಸನ್ನು ಯಾವಾಗಲೂ ಮುಷ್ಠಿಯಲ್ಲಿ ಹಿಡಿಯುತ್ತಾರೆ ।೩೧೧॥

ಇಂತಹ ಸಾಧಕರಿಗೆ ಈ ಇಂದ್ರಿಯಗಳು ವ್ಯಾಕುಲ ಮಾಡುತ್ತವೆ. ಇಷ್ಟೊಂದು ಇಂದ್ರಿಯಗಳ ಶಕ್ತಿ ಇದೆ. (ಡಾಕಿನಿ) ಪಿಶಾಚಿಯು ಮಾಂತ್ರಿಕನಿಗೆ ಹುಚ್ಚು ಹಿಡಿಸುವುದು ।೩೧೨॥

ಅದರಂತೆ ಈ ವಿಷಯಗಳು ರಿದ್ಧಿ ಸಿದ್ಧಿಯ ರೂಪದಲ್ಲಿ ಪ್ರಾಪ್ತವಾಗಿ ಇಂದ್ರಿಯಗಳ ಸಂಬಂಧದಿಂದ ಕಟ್ಟೆ ಹಾಕುವವು ।೩೧೩॥

ಈಗ ಇವರಿಬ್ಬರ ನಡುವೆ ಮನಸ್ಸು ಪ್ರವೇಶಿಸಿದರೆ ಅಭ್ಯಾಸಿಯು ಇದ್ದಲ್ಲಿಯೇ ಇರಬೇಕಾಗುವುದು. ಇಷ್ಟೊಂದು ಇಂದ್ರಿಯಗಳ ಬಲಾಢ್ಯತನ ಇರುವುದು ।೩೧೪॥

ಶ್ಲೋಕಾರ್ಥ :- ಇಂದ್ರಿಯಗಳು ಸ್ವಾಧೀನವಾಗಿರುವ ಪುರುಷನ ಬುದ್ಧಿಯು ಸ್ಥಿರವಾಗುವುದು. ಆದುದರಿಂದ ಅವುಗಳೆಲ್ಲವನ್ನೂ ನಿಗ್ರಹಿಸಿ ಪರಮಾತ್ಮನಾದ ನನ್ನನ್ನು ನಂಬಿರಬೇಕು ।೬೧॥

ಆದ್ದರಿಂದ ಪಾರ್ಥಾ, ಎಲ್ಲ ವಿಷಯಗಳಲ್ಲಿ ಎಲ್ಲ ಪ್ರಕಾರದ ಆಸಕ್ತಿ ಬಿಟ್ಟು ಯಾರು ಇಂದ್ರಿಯಗಳನ್ನು ಸ್ವಾಧೀನದಲ್ಲಿ ಇಡುವರೋ ।೩೧೫॥

ಯಾರ ಅಂತಃಕರಣವು ವಿಷಯದ ಸುಖದಿಂದ ಮಾರು ಹೋಗು (ಭುಲಾಯಿಸು) ವುದಿಲ್ಲವೋ ಅವರೇ ಯೋಗ ನಿಷ್ಠತೆ ಪ್ರಾಪ್ತಿ ಮಾಡಿಕೊಳ್ಳುವುದರಲ್ಲಿ ಯೋಗ್ಯರು. ಹೀಗೆ ತಿಳಿ ।೩೧೬॥

ಏಕೆಂದರೆ, ಅವರು ಯಾವಾಗಲೂ ಆತ್ಮಬೋಧ ಯುಕ್ತರಾಗಿರುತ್ತಾರೆ ಮತ್ತು ಅಂತಃಕರಣದಲ್ಲಿ ನನ್ನನ್ನು ಎಂದೂ ಮರೆಯುವುದಿಲ್ಲ ।೩೧೭॥

ಕೆಲವರು ಶಬ್ದಾದಿ ಬಾಹ್ಯ ವಿಷಯಗಳ ಸ್ವೀಕಾರ ಮಾಡುವುದಿಲ್ಲ. ಆದರೆ ಮನದಲ್ಲಿ ಕಿಂಚಿತ್ತಾದರೂ ವಿಷಯ ವಾಸನೆ ಇದ್ದರೆ ಆತನಿಗೆ ಆರಂಭದಿಂದಲೂ ಕೊನೆಯವರೆಗೆ (ಸಂಸಾರ) ಜನ್ಮ ಮರಣ ಸುತ್ತುವುದು ತಪ್ಪುವುದಿಲ್ಲ ।೩೧೮॥

ವಿಷವು (ಕಿಂಚಿತ್) ಸ್ವಲ್ಪ ಇದ್ದರೂ ಅದನ್ನು ಸೇವಿಸಿದರೆ ಅದು ಶರೀರದಲ್ಲಿ ವ್ಯಾಪಿಸಿ ಜೀವದ ನಾಶ ಮಾಡುವುದು ।೩೧೯॥

ಅದರಂತೆ ಮನದಲ್ಲಿ ವಿಷಯದ ಇಚ್ಛೆಯು ಸ್ವಲ್ಪಾಗಿದ್ದರೂ, ಅದು ಎಲ್ಲ ವಿವೇಕ ವಿಚಾರಗಳನ್ನು ಧ್ವಂಸ ಮಾಡುವುದು ।೩೨೦॥

ಶ್ಲೋಕಾರ್ಥ :- ಶಬ್ದಾದಿ ವಿಷಯಗಳನ್ನು ಸದಾ ಧ್ಯಾನಿಸುತ್ತಿರುವ ಮನುಷ್ಯನಿಗೆ ಅವುಗಳಲ್ಲಿ ಆಕರ್ಷಣೆ ಉಂಟಾಗುತ್ತದೆ. ಅದರಿಂದ ಕೋರಿಕೆ ಹುಟ್ಟುತ್ತದೆ. ಕೋರಿಕೆಯಿಂದ ಕೋಪ ಸಂಭವಿಸುತ್ತದೆ ।೬೨॥

ಶ್ಲೋಕಾರ್ಥ :- ಕೋಪದಿಂದ ಅವಿವೇಕವು ಆವೇಶವಾಗುತ್ತದೆ; ಅವಿವೇಕದಿಂದ ಮತಿ ಭ್ರಮೆ ಯುಂಟಾಗುತ್ತದೆ; ಅದರಿಂದ ಬುದ್ಧಿ ನಾಶವಾಗುತ್ತದೆ; ಬುದ್ಧಿ ನಾಶವಾದರೆ ಸರ್ವನಾಶವಾದಂತೆಯೇ ।೬೩॥

ಅಂತಃಕರಣದಲ್ಲಿ ಕೇವಲ ವಿಷಯದ ಸ್ಮರಣವಾದಲ್ಲಿ ವಿರಕ್ತ ಪುರುಷನಿಗೂ ಸಹ ಅದರ ಪ್ರತಿಯಾಗಿ ಮೂರ್ತಿಮಂತ ಕಾಮವು ಉತ್ಪನ್ನವಾಗುವುದು ।೩೨೧॥

ಜೇಥ ಕಾಮು ಉಪಜಲಾ । ತೇಥ ಕ್ರೋಧು ಆಧೀಚಿ ಆಲಾ । ಕ್ರೋಧೀ ಅಸೇ ಠೇವಿಲಾ। ಸಂಮೋಹ ಜಾಣ್ಯೆ ।೩೨೨॥ ಸಂಮೋಹ ಜಾಲಿಯಾ ವ್ಯಕ್ತಿ । ತರೀ ನಾಶು ಪಾವೇ ಸ್ಮೃತೀ । ಚಂಡವಾತೇ ಜ್ಯೋತಿ । ಆಹತ ಜೈಸೀ ।೩೨೩॥ ಕಾ ಅಸ್ತಮಾನೀ ನಿಶೀ । ಜೈಸಾ ಸೂರ್ಯ ತೇಜಾತೇ ಗ್ರಾಸೀ। ತೈಸೀ ದಶಾ ಸ್ಮೃತಿಭ್ರಂಶೀ । ಪ್ರಾಣಿಯಾಸೀ ।೩೨೪॥ ಮಗ ಅಜ್ಞಾನಾಂಧ ಕೇವಳ । ತೇಣೇ ಆಪ್ಲವಿಜೇ ಸಕಳ । ತೇಥ ಬುದ್ಧಿ ಹೋಯ ವ್ಯಾಕುಳ । ಹೃದಯಾಮಾಜೀ ।೩೨೫॥ ಜೈಸೇ ಜಾತ್ಯಂಧಾ ಪಳಣೇ ಪಾವೇ । ಮಗ ತೇ ಕಾಕುಳತೀ ಸೈರಾ ಧಾವೇ । ತೈಸೇ ಬುದ್ಧೀಸಿ ಹೋತೀ ಭವೇ । ಧನುರ್ಧರಾ ।೩೨೬॥ ಐಸಾ ಸ್ಮೃತಿಭ್ರಂಶು ಘಡೇ । ಮಗ ಸರ್ವಥಾ ಬುದ್ಧಿ ಅವಘಡೇ । ತೇಥ ಸಮೂಳ ಹೇ ಉಪಡೇ । ಜ್ಞಾನಜಾತ ।೩೨೭॥ ಚೈತನ್ಯಾಚ್ಯಾ ಭ್ರಂಸೀ । ಶರಿರಾ ದಶಾ ಜೈಶೀ । ತೈಸೇ ಪುರುಷಾ ಬುದ್ಧಿನಾಶೀ । ಹೋಯ ದೇಖೈ ।೩೨೮॥ ಮ್ಹಣೌನಿ ಆಇಕೇ ಅರ್ಜುನಾ । ಜೈಸಾ ವಿಸ್ಫುಲಿಂಗ ಲಾಗೇ ಇಂಧನಾ ।ಮಗ ತೋ ಪ್ರೌಢ ಜಾಲಿಯಾ ತ್ರಿಭುವನಾ । ಪುರೋ ಶಕೇ? ।೩೨೯॥ ತೈಸೇ ವಿಷಯಾಂಚೇ ಧ್ಯಾನ । ಜರೀ ವಿಪಾಯೇ ವಾಹೇ ಮನ । ತರೀ ಯೇಸಣೇ ಹೇ ಪತನ । ಗಿಂವಸಿತ ಪಾವೇ ।೩೩೦॥

ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।
ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ।೬೪॥

ಮ್ಹಣೌನಿ ವಿಷಯ ಹೇ ಆಘವೇ । ಸರ್ವಥಾ ಮ್ಹಣೌನಿ ಸಾಂಡಾವೇ । ಮಗ ರಾಗದ್ವೇಷ ಸ್ವಭಾವೇ । ನಾಶತೀಲ ।೩೩೧॥ ಪಾರ್ಥಾ ಆಣಿಕಹೀ ಏಕ । ಜರೀ ನಾಶಲೇ ರಾಗ ದ್ವೇಷ । ತರೀ ಇಂದ್ರಿಯಾ ವಿಷಯೀ ಬಾಧಕ । ರಮತಾ ನಾಹೀ ।೩೩೨॥ ಜೈಸಾ ಸೂರ್ಯ ಆಕಾಶಗತು । ರಶ್ಮಿಕರೇ ಜಗಾತೇ ಸ್ಪರ್ಶತು । ತರೀ ಸಂಗದೋಷೇ ಕಾಯ ಲಿಂಪತು । ತೇಥೀಚೇನಿ ।೩೩೩॥ ತೈಸಾ ಇಂದ್ರಿಯಾರ್ಥೀ ಉದಾಸೀನ । ಆತ್ಮರಸೇಚಿ ನಿರ್ಭಿನ್ನ । ಜೋ ಕಾಮಕ್ರೋಧವಿಹೀನ । ಹೋಊನಿ ಅಸೇ ।೩೩೪॥ ತರೀ ವಿಷಯಾಂತಹೀ ಕಾಂಹೀ । ಆಪಣಪೇವಾಂಚೂನಿ ನಾಹೀ । ಮಗ ವಿಷಯ ಕವಣ ಕಾಯೀ । ಬಾಧಿತೀಲ ಕವಣಾ ।೩೩೫॥ ಜರೀ ಉದಕೀ ಉದಕ ಬುಡಿಜೇ । ಕಾ ಅಗ್ನಿ ಆಗೀ ಪೋಳಿಜೇ । ತರೀ ವಿಷಯಸಂಗೇ ಆಪ್ಲವಿಜೇ । ಪರಿಪೂರ್ಣು ತೋ ।೩೩೬॥ ಐಸಾ ಆಪಣಚಿ ಕೇವಳು । ಹೋಊನಿ ಅಸೇ ನಿಖಳು । ತಯಾಚಿ ಪ್ರಜ್ಞಾ ಅಚಳು । ನಿಭ್ರಾಂತ ಮಾನೀ ।೩೩೭॥

ಎಲ್ಲಿ ಕಾಮ (ಇಚ್ಛೆ) ಯು ಉತ್ಪನ್ನವಾಗುವುದೋ ಅಲ್ಲಿ ಕ್ರೋಧವು ಮೊದಲೇ ನಿಶ್ಚಿತವಾಗಿ ಬರುವುದು ಮತ್ತು ಕ್ರೋಧದಿಂದ ಅವಿಚಾರ ತಪ್ಪದೇ ಹುಟ್ಟಿಕೊಳ್ಳುವುದು. ಹೀಗೆ ತಿಳಿ ।೩೨೨॥

ಯಾವ ಪ್ರಕಾರವಾಗಿ ದೀಪದ ಜ್ಯೋತಿಯನ್ನು ಬಿರುಗಾಳಿಯು ನಾಶಪಡಿಸುತ್ತದೆಯೋ ಅದೇ ಪ್ರಕಾರವಾಗಿ ಅವಿಚಾರಗಳಿಂದ (ಸ್ಮೃತಿ) ಆತ್ಮಜ್ಞಾನವು ನಷ್ಟಗೊಳ್ಳುವುದು ।೩೨೩॥

ಸಾಯಂಕಾಲವಾದ ಕ್ಷಣವೇ ರಾತ್ರಿಯು ಸೂರ್ಯನನ್ನು ನುಂಗಿಬಿಡುವಂತೆ ಸ್ಮೃತಿಯು ಭ್ರಂಶವಾದ ಮೇಲೆ ಮನುಷ್ಯನ ಗತಿ ಹೀಗಾಗುವುದು ।೩೨೪॥

ಆಗ ಅಜ್ಞಾನದಿಂದ ಆತನ ಬುದ್ಧಿಯು ಕುರುಡಾಗಿ ಅದರ ಪರಿಣಾಮವು ಎಲ್ಲಕ್ಕೂ ಆಗುವುದು. ಆಗ ಆತನಿಗೆ ಏನೂ ಹೊಳೆಯುವುದಿಲ್ಲ ।೩೨೫॥

ಹುಟ್ಟು ಕುರುಡನಿಗೆ ಓಡುವ ಪ್ರಸಂಗ ಬಂದರೆ ಆತನು ದೀನನಾಗಿ ಸಿಕ್ಕ ಸಿಕ್ಕ ಹಾಗೆ ಧಾವಿಸುವನು. ಅದೇ ಪ್ರಕಾರವಾಗಿ ಅರ್ಜುನಾ, ಬುದ್ಧಿಗೆ ಭ್ರಮೆ ಬರುವುದು ।೩೨೬॥

ಈ ರೀತಿ ಬುದ್ಧಿಯು ಭ್ರಂಶವಾಯಿತೆಂದರೆ ಆ ಬುದ್ಧಿಯು (ಪ್ರಮಾದ) ತಪ್ಪು ಮಾಡುವುದರಲ್ಲಿ ಮುಳುಗುವುದು. ಆಗ ಸರ್ವ ಜ್ಞಾನವು ನಷ್ಟವಾಗುವುದು ।೩೨೭॥

ಶರೀರದಲ್ಲಿನ ಪ್ರಾಣ ಹೋಯಿತೆಂದರೆ ದೇಹವು ಪ್ರೇತ (ಹೆಣ) ವಾಗುವುದು. ಅದರಂತೆ ಬುದ್ಧಿ ನಷ್ಟವಾದ ಮೇಲೆ ಜೀವದ ಸ್ಥಿತಿಯಾಗುವುದು ।೩೨೮॥

ಆದ್ದರಿಂದ ಅರ್ಜುನಾ, ಕೇಳು, ಬೆಂಕಿಯ ಕಿಡಿಯು ಹತ್ತಿ ಅದು ಪ್ರಜ್ವಲಿಸಿದರೆ ಅದಕ್ಕೆ ಸುಡಲು ತ್ರಿಭುವನವು ಸಾಲದಾಗುವುದು ।೩೨೯॥

ಇದೇ ಪ್ರಕಾರವಾಗಿ ಅಂತಃಕರಣದಲ್ಲಿ (ಕಿಂಚಿತ್) ಸ್ವಲ್ಪಾದರೂ ವಿಷಯದ ಸ್ಮರಣೆಯಾದರೆ ಇಷ್ಟೊಂದು ಅನರ್ಥವಾಗುವುದು ।೩೩೦॥

ಶ್ಲೋಕಾರ್ಥ :- ಸ್ವಾಧೀನವಾಗಿರುವ ಮತ್ತು ರಾಗದ್ವೇಷಗಳಿಲ್ಲದ ಇಂದ್ರಿಯಗಳಿಂದ ವಿಷಯ ಗಳನ್ನು ಅನುಭವಿಸುವ ಸಂಯಮಿಯು ಚಿತ್ತ ಪ್ರಶಾಂತಿ ಯನ್ನು ಪಡೆಯುತ್ತಾನೆ ।೬೪॥

ಅದಕ್ಕಾಗಿ ಮನಸ್ಸಿನಲ್ಲಿಯ ಎಲ್ಲ ವಿಷಯಗಳನ್ನು ತೆಗೆದೊಗೆಯಬೇಕು. ಆಗ ರಾಗದ್ವೇಷಗಳು ತಮ್ಮಷ್ಟಕ್ಕೆ ತಾವೇ ಇಲ್ಲದಂತಾಗುವುವು ।೩೩೧॥

ಪಾರ್ಥಾ, ಮತ್ತೊಂದು ನಿನಗೆ ಹೇಳಬೇಕೆಂದರೆ, ರಾಗದ್ವೇಷಗಳು ನಷ್ಟವಾದ ಮೇಲೆ ಇಂದ್ರಿಯಗಳ ಮುಖಾಂತರವಾಗಿ ವಿಷಯದಲ್ಲಿ ರಮಿಸಿದರೂ ಅದು ಬಾಧಕವಾಗುವುದಿಲ್ಲ ।೩೩೨॥

ಆಕಾಶದಿಂದ ಸೂರ್ಯನು ತನ್ನ ಕಿರಣ ರೂಪ ಹಸ್ತಗಳಿಂದ ಜಗತ್ತಿನ ಎಲ್ಲ ವಸ್ತುಗಳನ್ನು ಮುಟ್ಟುವನು. ಆದರೆ ಆತನಿಗೆ (ಸ್ಪರ್ಶ) ಮುಟ್ಟು ದೋಷವು ಅಂಟಿಕೊಳ್ಳುವುದಿಲ್ಲ ।೩೩೩॥

ಅದರಂತೆ ಯಾರು ವಿಷಯದಲ್ಲಿ ಉದಾಸೀನರಾಗಿ ಆತ್ಮಸ್ವರೂಪದಲ್ಲಿ ನಿಮಗ್ನರಾಗಿ ಕಾಮಕ್ರೋಧಗಳಿಂದ ಅಲಿಪ್ತರಾಗಿರುವರೋ ।೩೩೪॥

ಅರ್ಜುನಾ, ಯಾರು ವಿಷಯಗಳಲ್ಲಿ ಸ್ವರೂಪದ ಹೊರತಾಗಿ ಏನನ್ನೂ ನೋಡುವುದಿಲ್ಲವೋ ಅವರಿಗೆ ವಿಷಯ ಎಂಬುದು ಏನು? ಮತ್ತು ಅದು ಯಾರಿಗೆ ಬಾಧಿಸಬೇಕು? ।೩೩೫॥

ನೀರಿನಲ್ಲಿ ನೀರು ಮುಳುಗಿದರೆ, ಅಗ್ನಿಯಲ್ಲಿ ಅಗ್ನಿಯು ಸುಟ್ಟರೆ, ಪರಿಪೂರ್ಣ ಅವಸ್ಥೆಯನ್ನು ಪ್ರಾಪ್ತಮಾಡಿಕೊಂಡ ಪುರುಷನು ವಿಷಯ ಸಂಗತಿಯಲ್ಲಿ ಮುಳುಗಬಹುದು ।೩೩೬॥

ಈ ಪ್ರಕಾರವಾಗಿ ಯಾರು ತಾವೇ ಸ್ವತಃ ಸರ್ವರೂಪರಾಗಿರುವರೋ ಅವರೇ ಅಚಲ ಪ್ರಜ್ಞರು (ಸ್ಥಿರಬುದ್ಧಿಯವರು) ಎಂದು ಭ್ರಾಂತಿ ಬಿಟ್ಟು ತಿಳಿ ।೩೩೭॥

ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।
ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ।೬೫॥

ದೇಖೈ ಅಖಂಡಿತ ಪ್ರಸನ್ನತಾ । ಆಥೀ ಜೇಥ ಚಿತ್ತಾ । ತೇಥ ರಿಗಣೇ ನಾಹೀ ಸಮಸ್ತಾ । ಸಂಸಾರದುಃಖಾ ।೩೩೮॥ ಜೈಸಾ ಅಮೃತಾಚಾ ನಿರ್ಝರು । ಪ್ರಸವೇ ಜಯಾಚಾ ಜಠರು । ತಯಾ ಕ್ಷುಧೇತೃಷೇಚಾ ಆಡದರು । ಕಾಂಹೀಂಚಿ ನಾಹೀ ।೩೩೯॥ ತೈಸೇ ಹೃದಯ ಪ್ರಸನ್ನ ಹೋಯೇ । ತರೀ ದುಃಖ ಕೈಚೇ ಕೇ ಆಹೇ ? । ತೇಥ ಆಪೈಸೀ ಬುದ್ಧೀ ರಾಹೇ । ಪರಮಾತ್ಮರೂಪೀ ।೩೪೦॥ ಜೈಸಾ ನಿರ್ವಾತೀಚಾ ದೀಪು । ಸರ್ವಥಾ ನೇಣೇ ಕಂಪು । ತೈಸಾ ಸ್ಥಿರಬುದ್ಧಿ ಸುಸ್ವರೂಪು । ಯೋಗಯುಕ್ತು ।೩೪೧॥

ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।
ನ ಚಾಭಾವತಯಃ ಶಾಂತಿಃ ಅಶಾಂತಸ್ಯ ಕುತಃ ಸುಖಮ್ ।೬೬॥

ಯೇ ಯುಕ್ತೀಚೀ ಕಡಸಣೇ । ನಾಹೀ ಜಯಾಚ್ಯಾ ಅಂತಃಕರಣೇ । ತೋ ಆಕಳಿಲಾ ಜಾಣ ಗುಣೇ । ವಿಷಯಾದಿಕೀ ।೩೪೨॥ ತಯಾ ಸ್ಥಿರಬುದ್ಧಿ ಪಾರ್ಥಾ । ಕಾಂಹೀ ನಾಹೀ ಸರ್ವಥಾ । ಆಣಿ ಸ್ಥೈರ್ಯಾಚೀ ಆಸ್ಥಾ । ತೇಹಿ ನುಪಜೇ ।೩೪೩॥ ನಿಶ್ಚಳತ್ವಾಚೀ ಭಾವನಾ । ಜರೀ ನವ್ಹೇಚಿ ದೇಖೈ ಮನಾ । ತರೀ ಶಾಂತಿ ಕೇವೀ ಅರ್ಜುನಾ । ಆಪು ಹೋಯ ।೩೪೪॥ ಜೇಥ ಶಾಂತೀಚಾ ಜೀವ್ಹಾಳಾ ನಾಹೀ । ತೇಥ ಸುಖ ವಿಸರೋನಿ ನ ರಿಗೇ ಕಾಂಹೀ । ಜೈಸಾ ಪಾಪಿಯಾಚ್ಯಾ ಠಾಯೀ । ಮೋಕ್ಷು ನ ವಸೇ ।೩೪೫॥ ದೇಖೈ ಅಗ್ನಿ ಮಾಜೀ ಘಾವತೀ । ತಿಯೇ ಬೀಜೇ ಜರೀ ವಿರೂಢತಿ । ತರೀ ಅಶಾಂತಾ ಸುಖಪ್ರಾಪ್ತೀ । ಘಡೋ ಶಕೇ ।೩೪೬॥ ಮ್ಹಣೌನಿ ಅಯುಕ್ತಪಣ ಮನಾಚೇ । ತೇಚಿ ಸರ್ವಸ್ವ ದುಃಖಾಚೇ । ಯಾ ಕಾರಣೇ ಇಂದ್ರಿಯಾಂಚೇ । ದಮನ ನಿಕೇ ।೩೪೭॥

ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ ।
ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ।೬೭॥

ಇಂದ್ರಿಯೇ ಜೇ ಜೇ ಮ್ಹಣತಿ । ತೇ ತೇಚಿ ಜೇ ಪುರುಷ ಕರಿತೀ । ತೇ ತರಲೇಚಿ ನ ಹರತೀ । ವಿಷಯಸಿಂಧು ।೩೪೮॥ ಜೈಸೀ ನಾವ ಥಡಿಯೇ ಠಾಕಿತಾ । ಜರೀ ವರ ಪಡೀ ಹೋಯ ದುರ್ವಾತಾ । ತರೀ ಚುಕಲಾಹೀ ಮಾಗೌತಾ । ಅಪಾವೋ ಪಾವೇ ।೩೪೯॥ ತೈಸೀ ಪ್ರಾಪ್ತೇಹೀ ಪುರುಷೇ । ಇಂದ್ರಿಯೇ ಲಾಳಿಲೀ ಜರೀ ಕೌತುಕೇ । ತರೀ ಆಕ್ರಮಿಲಾ ಜಾಣ ದುಃಖೇ । ಸಂಸಾರಿಕೇ ।೩೫೦॥

ಶ್ಲೋಕಾರ್ಥ :- ಪ್ರಸನ್ನತ್ವದಿಂದ ಸಮಸ್ತ ದುಃಖಗಳು ಇಲ್ಲದಂತಾಗುವುವು. ಪ್ರಸನ್ನ ಚಿತ್ತನ ಬುದ್ಧಿಯೂ ತ್ವರೆಯಾಗಿ ಸ್ಥಿರತ್ವವನ್ನು ಪಡೆಯುವುದು ।೬೫।।

ಇಲ್ಲಿ ನೋಡು, ಎಲ್ಲಿ ಮನಸ್ಸಿನ ಪೂರ್ಣ ಶಾಂತಿ ಇದೆಯೋ ಅಲ್ಲಿ ಸಂಸಾರ ದುಃಖದ ಪ್ರವೇಶವಾಗುವುದಿಲ್ಲ ।೩೩೮।।

ಯಾರ ಉದರದಲ್ಲಿ ಅಮೃತದ ಝುರಿಯು ಹುಟ್ಟಿದ ಮೇಲೆ ಆತನಿಗೆ ಹಸಿವೆ ನೀರಡಿಕೆಯ ಬಾಧೆ ಎಂದೂ ಆಗುವುದಿಲ್ಲ ।೩೩೯।।

ಅದರಂತೆ ಯಾರ ಹೃದಯವು ಪ್ರಸನ್ನವಾಗಲು ಅವರಿಗೆ ದುಃಖ ಎಂಥಹದ್ದು ? ಅದು ಎಲ್ಲಿಂದ ಆಗಬೇಕು ? ಆತನ ಬುದ್ಧಿಯು ಸಹಜವಾಗಿ ಪರಮಾತ್ಮ ರೂಪದಲ್ಲಿ ಲೀನವಾಗಿರುತ್ತದೆ ।೩೪೦।।

ಯಾವ ಪ್ರಕಾರವಾಗಿ ಗಾಳಿ ಇಲ್ಲದ ಸ್ಥಳದಲ್ಲಿ ದೀಪದ ಜ್ಯೋತಿಯು ಅಲುಗಾಡುವುದಿಲ್ಲವೋ ಅದರಂತೆ ಯಾರು ಸ್ಥಿರಬುದ್ಧಿಯವರೋ ಅವರು ಸ್ವಸ್ವರೂಪದಲ್ಲಿ ನಿಶ್ಚಲರಾಗಿರುವರು ।೩೪೧।।

ಶ್ಲೋಕಾರ್ಥ :- ಜಿತೇಂದ್ರಿಯತ್ವವಿಲ್ಲದವನಿಗೆ ಸ್ಥಿರಬುದ್ಧಿಯಿರುವುದಿಲ್ಲ; ಅವನಿಗೆ ಸ್ಥಿರ ಭಾವನೆ ಇರಲಾರದು. ಸ್ಥಿರ ಭಾವನೆ ಇಲ್ಲದ ಅವನಿಗೆ ಶಾಂತಿಯು ಇಲ್ಲ. ಅಶಾಂತನಿಗೆ ಸುಖವೆಲ್ಲಿ? ।೬೬।।

ಈ ಯೋಗಬುದ್ಧಿಯ ವಿಚಾರವು ಯಾರ ಅಂತಃಕರಣದಲ್ಲಿ ಇಲ್ಲವೋ ಅವರಿಗೆ ವಿಷಯಗಳು ತಮ್ಮ ಪಾಶದಲ್ಲಿ ಕಟ್ಟಿಹಾಕುವುವು ।೩೪೨।।

ಪಾರ್ಥಾ ಅವರ ಬುದ್ಧಿಗೆ ಸ್ಥಿರತೆ ಎಂದೂ ಇರುವುದಿಲ್ಲ ಮತ್ತು ಇದರ ಪ್ರಾಪ್ತಿ ವಿಷಯಕ್ಕೆ ಅವರ ಅಂತಃಕರಣದಲ್ಲಿ ಇಚ್ಛೆಯೂ ಉತ್ಪನ್ನವಾಗುವುದಿಲ್ಲ ।೩೪೩।।

ಅರ್ಜುನಾ, ಸ್ಥಿರತೆಯ ಭಾವನೆಯು ಯಾರ ಅಂತಃಕರಣದಲ್ಲಿ ಆಗುವುದೇ ಇಲ್ಲವೋ ಅವರಿಗೆ ಶಾಂತಿ ಎಲ್ಲಿಂದ ಹೇಗೆ ಪ್ರಾಪ್ತವಾಗಬೇಕು? ।೩೪೪।।

ಪಾಪಿಯ ಕಡೆಗೆ ಮೋಕ್ಷವು ಇಣಕಿ ಸಹ ನೋಡುವುದಿಲ್ಲ. ಅದರಂತೆ ಎಲ್ಲಿ ಶಾಂತಿಯ ಲೇಶ ಮಾತ್ರ ಇಲ್ಲವೋ ಅಲ್ಲಿ ಸುಖವು ಅಪ್ಪಿತಪ್ಪಿಯೂ ಇರುವುದಿಲ್ಲ ।೩೪೫।।

ಒಂದು ವೇಳೆ ಅಗ್ನಿಯಲ್ಲಿ ಹಾಕಿದ ಧಾನ್ಯದ ಬೀಜಗಳು ಮೊಳಕೆ ಹೊಡೆದರೆ (ಹುಟ್ಟಿದರೆ) ಆಗ ಮಾತ್ರ ಶಾಂತಿಹೀನ ಮನುಷ್ಯನಿಗೆ ಸುಖಪ್ರಾಪ್ತಿಯು ದೊರಕಬಹುದು ।೩೪೬।।

ಆದ್ದರಿಂದ ಮನಸ್ಸಿನ ಅಶಾಂತತೆ ಅಥವಾ ಅವಿಚಾರತನವೇ ದುಃಖದ ಕಾರಣವಾಗಿರುತ್ತದೆ. ಇದಕ್ಕಾಗಿ ಇಂದ್ರಿಯ ನಿಗ್ರಹವನ್ನು ಅಗತ್ಯವಾಗಿ ಮಾಡಬೇಕು ।೩೪೭।।

ಶ್ಲೋಕಾರ್ಥ :- ಇಂದ್ರಿಯಗಳಿಗೆ ವಶವಾದ ಮನಸ್ಸು ನೀರಿನಲ್ಲಿ ನಾವೆಯನ್ನು ಸುಳಿಗಾಳಿಯು ಎಳೆದೊಯ್ಯುವಂತೆ ಪುರುಷನ ಬುದ್ಧಿಯನ್ನು ಎಳೆದೊಯ್ಯುತ್ತದೆ ।೬೭।।

ಯಾವ ಪುರುಷರು ಇಂದ್ರಿಯಗಳ ಇಚ್ಛೆಯಂತೆ ವರ್ತಿಸುವರೋ ಅವರು ಈ ವಿಷಯ ಸ್ವರೂಪಸಾಗರದಿಂದ ಪಾರಾಗಿದ್ದೇವೆ ಎಂದು ತಿಳಿದಿದ್ದರೂ ನಿಜವಾಗಿಯೂ ಅವರು ಪಾರಾಗಿರುವುದಿಲ್ಲ ।೩೪೮।।

ಯಾವ ಪ್ರಕಾರವಾಗಿ ಒಂದು ವೇಳೆ ಹಡಗವು ಆಚೆ ದಂಡೆಗೆ ಹೋಗಿ ಮುಟ್ಟುತ್ತಿದ್ದಾಗ ದೊಡ್ಡ ಬಿರುಗಾಳಿ ಬಿಟ್ಟರೆ ತಪ್ಪಿಸಿಕೊಂಡು ಬಂದ ಅಪಾಯವು ತಿರುಗಿ ಒದಗುವುದು ।೩೪೯।।

ಅದರಂತೆ (ಸಿದ್ಧ) ಕೃತಾರ್ಥನಾಗುತ್ತಿರುವ ಪುರುಷನು ಕೌತುಕದಿಂದ ಇಂದ್ರಿಯಗಳ ಲಾಲನೆ ಮಾಡಿದರೆ ಆತನು ಸಂಸಾರ ದುಃಖಕ್ಕೆ ಒಳಗಾಗುವನು ।೩೫೦।।

ತಸ್ಮಾ ದ್ಯಸ್ಯ ಮಹಾಬಾಹೋ ನಿಗೃಹಿತಾನಿ ಸರ್ವಶಃ ।
ಇಂದ್ರಿಯಾಣೇಂದ್ರಿಯಾರ್ಥೇಭ್ಯಃ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ।೬೮॥

ಮ್ಹಣೌನಿ ಆಪುಲೀ ಆಪಣಪೇಯಾ । ಜರೀ ಇಂದ್ರಿಯೇ ಯೇತೀ ಆಯಾ । ತರೀ ಅಧಿಕ ಕಾಂಹೀ ಧನಂಜಯಾ । ಸಾರ್ಥಕ ಅಸೇ ? ।೩೫೧॥ ದೇಖೈ ಕೂರ್ಮ ಜಿಯಾಪರಿ । ಉವಾಯಿಲಾ ಅವೇವ ಪಸರೀ । ನಾ ತರೀ ಇಚ್ಛಾವಶೇ ಆವರೀ । ಆಪಣಪೇಂಚಿ ।೩೫೨॥ ತೈಸೀ ಇಂದ್ರಿಯೇ ಆಪೈತೀ ಹೋತೀ । ಜಯಾಚೇ ಮ್ಹಣಿತಲೇ ಕರಿತೀ । ತಯಾಚೀ ಪ್ರಜ್ಞಾ ಜಾಣ ಸ್ಥಿತೀ । ಪಾವಲೀ ಅಸೇ ।೩೫೩॥ ಆತಾ ಆಣಿಕ ಏಕ ಗಹನ । ಪೂರ್ಣಾಚೇ ಚಿನ್ಹ । ಅರ್ಜುನಾ ತುಜ ಸಾಂಗೇನ । ಪರಿಸ ಪಾ ।೩೫೪॥

ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ॥
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ।೬೯॥

ದೇಖೈ ಭೂತಜಾತ ನಿದೇಲೇ । ತೇಥೇಂಚಿ ಜಯಾ ಪಾಹಲೇ । ಆಣಿ ಜೇವ ಜೇಥ ಚೇಇಲೇ । ತೇಥ ನಿದ್ರಿತು ಜೋ ।೩೫೫॥ ತೋಚಿ ತೋ ನಿರುಪಾಧಿ । ಅರ್ಜುನಾ ತೋ ಸ್ಥಿರಬುದ್ಧಿ । ತೋಚಿ ಜಾಣೇನಿರವಧಿ । ಮುನೀಶ್ವರ ।೩೫೬॥

ಆಪೂರ್ಯಮಾಣಮಚಲಪ್ರತಿಷ್ಠಂ ಸಮುದ್ರಮಾಪಃ ಪ್ರವಿಶಂತಿ ಯದ್ವತ್ ।
ತದ್ವತ್ಕಾಮಾ ಯಂ ಪ್ರವಿಶಂತಿ ಸರ್ವೇ ಸ ಶಾಂತಿಮಾಪ್ನೋತಿ ನ ಕಾಮಕಾಮೀ ।೭೦॥

ಪಾರ್ಥಾ ಆಣೀಕಹೀ ಪರೀ । ತೋ ಜಾಣೋ ಯೇಈಲ ಅವಧಾರೀ । ಜೈಸೀ ಅಕ್ಷೋಭತಾ ಸಾಗರೀ । ಅಖಂಡಿತ ।೩೫೭॥ ಜರ್‍ಹೀ ಸರಿತಾವೋಘ ಸಮಸ್ತ । ಪರಿಪೂರ್ಣ ಹೋಊನಿ ಮಿಳತ । ತರೀ ಅಧಿಕ ನೋಹೇ ಈಷತ್ । ಮರ್ಯಾದಾ ನ ಸಂಡೀ ।೩೫೮॥ ನಾತರೀ ಗ್ರೀಷ್ಮ ಕಾಳೀ ಸರಿತಾ । ಶೋಷೂನಿ ಜಾತೀ ಸಮಸ್ತಾ । ಪರೀ ನ್ಯೂನ ನವ್ಹೇ ಪಾರ್ಥಾ । ಸಮುದ್ರು ಜೈಸಾ ।೩೫೯॥ ತೈಸಾ ಪ್ರಾಪ್ತೀ ಋದ್ಧಿಸಿದ್ಧೀ । ತಯಾಸಿ ಕ್ಷೋಭು ನಾಹೀ ಬುದ್ಧೀ । ಆಣಿ ನ ಪವತಾ ನ ಬಾಧೀ । ಅಧೃತಿ ತಯಾತೇ ।೩೬೦॥ ಸಾಂಗೈ ಸೂರ್ಯಾಚ್ಯಾ ಘರೀ । ಪ್ರಕಾಶು ಕಾಯ ವಾತೀ ವೇರೀ । ಕಾ ನ ಲವಿಜೇ ತರೀ ಅಂಧಾರೀ । ಕೋಂಡೇಲ ತೋ ।೩೬೧॥ ದೇಖೈ ಋದ್ಧಿಸಿದ್ಧಿ ತಯಾಪರೀ । ಆಲೀ ಗೇಲೀ ಸೇ ನ ಕರೀ । ತೋ ವಿಗುಂತಲಾ ಅಸೇ ಅಂತರೀ । ಮಹಾಸುಖೀ ।೩೬೨॥ ಜೋ ಆಪುಲೇನಿ ನಾಗರಪಣೇ । ಇಂದ್ರಭುವನಾತೇ ಪಾಬಳೇ ಮ್ಹಣೇ । ತೋ ಕೇವೀ ರಂಜೇ ಪಾಲಿವಣೇ। ಭಿಲ್ಲಾಂಚೇನಿ? ।೩೬೩॥

ಶ್ಲೋಕಾರ್ಥ :- ಹೇ ಅರ್ಜುನಾ, ಆದುದರಿಂದ ಯಾವನ ಇಂದ್ರಿಯಗಳು ವಿಷಯಗಳಿಂದ ಪೂರ್ಣ ನಿಗ್ರಹಿಸಲ್ಪಟ್ಟಿರುವುವೋ ಅವನ ಪ್ರಜ್ಞೆಗೆ ಚಲನೆ ಇಲ್ಲ, ಅವನು ಸ್ಥಿತಪ್ರಜ್ಞನು ।೬೮॥

ಅದಕ್ಕಾಗಿ ಧನಂಜಯನೇ, ತನ್ನ ಇಂದ್ರಿಯಗಳು ತನ್ನ ಆಧೀನವಾಯಿತೆಂದರೆ ಇದಕ್ಕಿಂತ ಹೆಚ್ಚಿನ ಸಾರ್ಥಕತೆ ಏನಿದೆ? ।ಓ೫೧॥

ಇಲ್ಲಿ ನೋಡು, (ಕೂರ್ಮ) ಆಮೆಯು ತನ್ನ ಇಚ್ಛೆಯಂತೆ ತನ್ನ ಅವಯವಗಳನ್ನು ಪಸರಿಸುವುದು ಮತ್ತು ತನ್ನ ಇಚ್ಛೆಯಂತೆ ತನ್ನ ಅವಯವಗಳನ್ನು ಆವರಿಸುವುದು ।ಓ೫೨॥

ಅದರಂತೆ ಯಾರ ಇಂದ್ರಿಯಗಳು ತಮ್ಮ ಸ್ವಾಧೀನವಾಗಿ ಅವರು ಹೇಳಿದಂತೆ ವರ್ತಿಸುತ್ತಿದ್ದರೆ ಅವರಿಗೆ ಮಾತ್ರ ಸ್ಥಿರ ಬುದ್ಧಿತ್ವ ಪ್ರಾಪ್ತಿಯಾಗಿದೆ ಎಂದು ತಿಳಿ ।ಓ೫೩॥

ಅರ್ಜುನಾ, ಈಗ ಮತ್ತೊಂದು ಸ್ಥಿತಪ್ರಜ್ಞನ ಗಂಭೀರ ಲಕ್ಷಣ ನಿನಗೆ ಹೇಳುತ್ತೇನೆ. ಅದನ್ನು ಕೇಳು ।ಓ೫೪॥

ಶ್ಲೋಕಾರ್ಥ :- ಸಾಧಾರಣ ಮನುಷ್ಯರಿಗೆ ರಾತ್ರಿಯಂತಿರುವ ಜ್ಞಾನದೆಶೆಯಲ್ಲಿ ಯೋಗಿ ಎಚ್ಚೆತ್ತಿರುವನು. ಅವರಿಗೆ ಹಗಲಿನಂತಿರುವ ಭೋಗೇಚ್ಛಾ ವಿಷಯದಲ್ಲಿ ಆತ್ಮಜ್ಞಾನಿ ನಿದ್ರಿಸುತ್ತಾನೆ. (ಅಂದರೆ ಭೋಗಿಯ ರಾತ್ರಿ ಯೋಗಿಗೆ ಹಾಲು, ಯೋಗಿಯ ರಾತ್ರಿ ಭೋಗಿಗೆ ಹಗಲು) ।೬೯॥

ಹೀಗಿದೆ ನೋಡು, ಎಲ್ಲ ಪ್ರಾಣಿಮಾತ್ರರು ಆತ್ಮಸ್ವರೂಪದ ವಿಷಯದಲ್ಲಿ ಅಜ್ಞಾನದಿಂದ ಮಲಗಿರುತ್ತಾರೆ. ಆದರೆ ಇದರ ವಿಷಯಕ್ಕೆ ಜ್ಞಾನಿಗಳು ಎಚ್ಚರಾಗಿರುತ್ತಾರೆ. ಎಲ್ಲ ಪ್ರಾಣಿಮಾತ್ರರು ವಿಷಯ ಭೋಗದ ವಿಚಾರದಲ್ಲಿ ಎಚ್ಚರಾಗಿರುತ್ತಾರೆ. ಆದರೆ ಜ್ಞಾನಿಗಳವರು ಈ ವಿಷಯಕ್ಕೆ ಮಲಗಿರುತ್ತಾರೆ ।ಓ೫೫॥

ಅರ್ಜುನಾ, ಆತನೇ ಉಪಾಧಿರಹಿತ, ಸ್ಥಿರಬುದ್ಧಿ, ಗಂಭೀರ ಮತ್ತು ಮುನಿಗಳವರಲ್ಲಿ ಸರ್ವಶ್ರೇಷ್ಠನು ।ಓ೫೬॥

ಶ್ಲೋಕಾರ್ಥ :- ನಿತ್ಯ ಪರಿಪೂರ್ಣವೂ ಸ್ಥಿರ ಗಂಭೀರವೂ ಆದ ಸಮುದ್ರದಲ್ಲಿ ನದಿಯ ಪ್ರವಾಹಗಳೂ ಸೇರಿ ತದ್‌ರೂಪವೇ ಆಗುವಂತೆ, ವಿವಿಧ ಕಾಮನೆಗಳು ಮಹಾನುಭಾವರಲ್ಲಿ ಸೇರಿ ಆತನ ಸ್ವರೂಪವೇ ಆದವನು ಪರಮ ಶಾಂತಿದಾಯಕವಾದ ಮೋಕ್ಷವನ್ನು ಪಡೆಯಬಲ್ಲನು. ಆ ಪದವಿಯು ಕಾಮನೆಗಳ ದಾಸನಿಗೆ ಲಭ್ಯವಲ್ಲ ।೭೦॥

ಪಾರ್ಥ, ಇನ್ನೊಂದು ರೀತಿಯಲ್ಲಿ ಸ್ಥಿತಪ್ರಜ್ಞರನ್ನು ಕಂಡು ಹಿಡಿಯಬಹುದು, ಅದು ಹೇಗೆಂದರೆ, ಸಮುದ್ರದಲ್ಲಿ ಯಾವಾಗಲೂ ಶಾಂತತೆ ಇರುವಂತೆ ಅವರಲ್ಲಿ ಶಾಂತತೆ ಇರುತ್ತದೆ ।ಓ೫೭॥

ಮಳೆಗಾಲದಲ್ಲಿ ನದಿಗಳೆಲ್ಲವೂ ತುಂಬಿ ಹರಿದು ಸಮುದ್ರಕ್ಕೆ ಕೂಡುವುವು. ಆಗ ಸಮುದ್ರವು ಕಿಂಚಿತ್ತಾದರೂ ಬೆಳೆಯದೇ ತನ್ನ ಮರ್ಯಾದೆ ರೇಖೆಯನ್ನು ದಾಟುವುದಿಲ್ಲ ।ಓ೫೮॥

ಅಥವಾ ಅರ್ಜುನಾ, ಬೇಸಿಗೆ ಕಾಲದಲ್ಲಿ ಎಲ್ಲ ನದಿಗಳು ನೀರಿಲ್ಲದೇ ಬತ್ತಿದರೂ ಸಮುದ್ರ ಮಾತ್ರ ಎಷ್ಟು ಮಾತ್ರವೂ ಕಡಿಮೆಯಾಗುವುದಿಲ್ಲ ।ಓ೫೯॥

ಅದರಂತೆ ರಿದ್ಧಿಸಿದ್ಧಿಗಳ ಪ್ರಾಪ್ತಿಯಿಂದ ಆ ಪುರುಷನು ಸಂತೋಷಪಡುವುದಿಲ್ಲ ಮತ್ತು ಪ್ರಾಪ್ತವಾಗದಿದ್ದರೆ ದುಃಖಪಡುವುದಿಲ್ಲ ।ಓ೬೦॥

ಸೂರ್ಯನ ಮನೆಯಲ್ಲಿ ದೀಪದಿಂದ ಜ್ಯೋತಿಯನ್ನು ಬೆಳಗಿದಾಗ ಅಲ್ಲಿ ಪ್ರಕಾಶವು ಎದ್ದು ಕಾಣುವುದೇ? ಅಥವಾ ದೀಪ ಹಚ್ಚದಿದ್ದರೆ ಸೂರ್ಯನು ಕತ್ತಲೆಯಲ್ಲಿರಬೇಕಾಗುವುದೇ? ।ಓ೬೧॥

ಅದರಂತೆ ಆ ಮಹಾಪುರುಷರನಿಗೆ ರಿದ್ಧಿಸಿದ್ಧಿಗಳು ಬಂದರೇನು? ಹೋದರೇನು? ಅದರ ನೆನಪೇ ಅವರಿಗಿರುವುದಿಲ್ಲ. ಅವರು ಅಂತಃಕರಣದಲ್ಲಿ ಯಾವಾಗಲೂ ಮಹಾಸುಖದಲ್ಲಿ ತಲ್ಲೀನರಾಗಿರುತ್ತಾರೆ ।ಓ೬೨॥

ಯಾರು ತನ್ನ ಮನೆಯ ಸೌಂದರ್ಯದ ಮುಂದೆ ಇಂದ್ರಭವನವನ್ನು ತುಚ್ಛ ಮಾಡುವನೋ ಆತನಿಗೆ ಭಿಲ್ಲರ ಗುಡಿಸಲು ಹೇಗೆ ಹಿಡಿಸೀತು? ।ಓ೬೩॥

ಜೋ ಅಮೃತಾಸೀ ಠೀ ಠೇವೀ । ತೋ ಜೈಸಾ ಕಾಂಜಿ ನ ಸೇವೀ । ತೈಸಾ ಸ್ವಸುಖಾನುಭವೀ । ನ ಭೋಗೀ ಋದ್ಧಿ ।೩೬೪॥ ಪಾರ್ಥಾ ನವಲ ಹೇ ಪಾಹೀ । ಜೇಥ ಸ್ವರ್ಗಸುಖ ಲೇಖನೀಯ ನಾಹೀ । ತೇಥ ಋದ್ಧಿಸಿದ್ಧಿ ಕಾಯೀ । ಪ್ರಾಕೃತಾ ಹೋತೀ ।೩೬೫॥

ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ ನಿಃಸ್ಪೃಹಃ ।
ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ।೭೧॥

ಐಸಾ ಆತ್ಮಬೋಧೇ ತೋಷಲಾ । ಜೋ ಪರಮಾನಂದೇ ಪೋಖಲಾ । ತೋಚಿ ಸ್ಥಿತಪ್ರಜ್ಞ ಭಲಾ । ವೋಳಖ ತೂ ।೩೬೬॥ ತೋ ಅಹಂಕಾರಾತೇ ದಂಡುನೀ । ಸಕಳ ಕಾಮು ಸಾಂಡೋನಿ । ವಿಚರೇ ವಿಶ್ವ ಹೋಊನಿ । ವಿಶ್ವಾಮಾಜೀ ।೩೬೭॥

ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।
ಸ್ಥಿತ್ವಾಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ।೭೨॥
ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಸಾಂಖ್ಯಯೋಗೋನಾಮ ದ್ವಿತೀಯೋಽಧ್ಯಾಯಃ

ಹೇ ಬ್ರಹ್ಮಸ್ಥಿತಿ ನಿಃಸೀಮ । ಜೇ ಅನುಭವಿತಾ ನಿಷ್ಕಾಮ । ತೇ ಪಾವಲೇ ಪರಬ್ರಹ್ಮ । ಅನಾಯಾಸೇ ।೩೬೮॥ ಜೇ ಚಿದ್ರೂಪೀ ಮಿಳತಾ । ದೇಹಾಂತೀಚಿ ವ್ಯಾಕುಳತಾ । ಆಡ ಠಾಕೋ ನ ಸಕೇ ಚಿತ್ತಾ । ಪ್ರಾಜ್ಞಾ ಜಯಾ ।೩೬೯॥ ತೇಚಿ ಹೇ ಸ್ಥಿತಿ । ಸ್ವಮುಖೆ ಶ್ರೀಪತಿ । ಸಾಂಗತ ಅರ್ಜುನಾಪ್ರತಿ । ಸಂಜಯೋ ಮ್ಹಣೇ ।೩೭೦॥ ಐಸೇ ಕೃಷ್ಣವಾಕ್ಯ ಐಕಿಲೇ । ತೇಥ ಅರ್ಜುನೇ ಮನೀ ಮ್ಹಣಿತಲೇ । ಆತಾ ಆಮುಚಿಯಾಚಿ ಕಾಜಾ ಕೀರ ಆಲೇ । ಉಪಪತ್ತಿ ಇಯಾ ।೩೭೧॥ ಜೇ ಕರ್ಮಜಾತ ಆಘವೇ । ಏಥ ನಿರಾಕಾರಿಲೇ ದೇವೇ । ತರಿ ಪಾರುಷಲೇ ಮ್ಯಾ ಝುಂಜಾವೇ । ಮ್ಹಣೌನಿಯಾ ।೩೭೨॥ ಐಸಾ ಶ್ರೀ ಅಚ್ಯುತಾಚಿಯಾ ಬೋಲಾ । ಚಿತ್ತೀ ಧನುರ್ಧರು ಉವಾಇಲಾ । ಆತಾ ಪ್ರಶ್ನು ಕರೀಲ ಭಲಾ । ಆಶಂಕೋನೀ ।೩೭೩॥ ತೋ ಪ್ರಸಂಗು ಅಸೇ ನಾಗರು । ಜೋ ಸಕಳಧರ್ಮಾಸೀ ಆಗರು । ಕೀ ವಿವೇಕಾಮೃತ ಸಾಗರು । ಪ್ರಾಂತಹೀನು ।೩೭೪॥ ಜೋ ಆಪಣ ಸರ್ವಜ್ಞನಾಥು । ನಿರುಪಿತಾ ಹೋಈಲ ಶ್ರೀಅನಂತು । ಜ್ಞಾನದೇವೋ ಸಾಂಗೇಲ ಮಾತು । ನಿವೃತ್ತಿದಾಸು ।೩೭೫॥

---

ಇತಿ ಶ್ರೀ ಜ್ಞಾನದೇವ ವಿರಚಿತಯಾಂ ಭಾವಾರ್ಥದೀಪಿಕಾಯಾಂ ದ್ವಿತಿಯೋಽಧ್ಯಾಯಃ ।೨॥
ಶ್ಲೋಕ : ೭೨ ಓವಿ ।೩೭೫॥

ಅಮೃತಕ್ಕೂ ಮೊದಲು ಮಾಡಿ ಹೆಸರಿಡುವಾತನು ಗಂಜಿಯನ್ನು ಹೇಗೆ ಕುಡಿಯುವುದಿಲ್ಲವೋ ಅದರಂತೆ ಆತ್ಮಾನಂದದ ಅನುಭವ ಪಡೆಯುತ್ತಿರುವ ಮಹಾಪುರುಷನು ಕ್ಷುಲ್ಲಕವಾದ ರಿದ್ಧಿ ಸಿದ್ಧಿಗಳ ಉಪಭೋಗ ಮಾಡುವುದಿಲ್ಲ ।೩೬೪॥

ಪಾರ್ಥನೇ, ಏನು ಚಮತ್ಕಾರವಿದೆ; ನೋಡು! ಆ ಪುರುಷನಿಗೆ ಸ್ವರ್ಗ ಸುಖವು ಲೆಕ್ಕಕ್ಕೆ ಇಲ್ಲದಾಗ ಆತನಿಗೆ ರಿದ್ಧಿಸಿದ್ಧಿಗಳ ಯಾವ ಕಥೆ? ।೩೬೫॥

ಶ್ಲೋಕಾರ್ಥ :- ಎಲ್ಲ ಕಾಮನೆಗಳನ್ನೂ ಬಿಟ್ಟು ಆಸೆಯೂ, ಮಮಕಾರವೂ, ಅಹಂಕಾರವೂ ,ಇಲ್ಲದ ಪುರುಷನು ಮುಕ್ತಿಯನ್ನು ಪಡೆಯಬಲ್ಲನು ।೭೧॥

ಈ ಪ್ರಕಾರವಾಗಿ ಯಾರು ಆತ್ಮಬೋಧೆಯಲ್ಲಿ ಸಂತೋಷ ಪಡೆದು ಮತ್ತು ಪರಮಾನಂದದಲ್ಲಿ ನಿಮಗ್ನರಾಗಿರುವರೋ ಅವರೇ ನಿಜವಾದ ಸ್ಥಿತಪ್ರಜ್ಞರು ಹೀಗೆ ತಿಳಿ ॥ ೩೬೬॥

ಆತನು ''ನಾನು'' ಎಂಬುದನ್ನು ದೂರಿಕರಿಸಿ, ಎಲ್ಲ ವಿಷಯಗಳನ್ನು ತ್ಯಜಿಸಿ ಜಗದ್ರೂಪನಾಗಿ ಜಗತ್ತಿನಲ್ಲಿ ಸಂಚರಿಸುವನು ।೩೬೭॥

ಶ್ಲೋಕಾರ್ಥ :- ಅರ್ಜುನಾ! ಇದು ಬ್ರಾಹ್ಮೀ ಸ್ಥಿತಿ,ಅದನ್ನು ಪಡೆದವನು ಮೋಹದಲ್ಲಿ ಬೀಳನು. ಅಂಥವನು ಅಂತ್ಯಕಾಲದಲ್ಲಿಯೂ ಇದರಲ್ಲಿಯೇ ನಿಂತು ಬ್ರಹ್ಮ ನಿರ್ವಾಣ ರೂಪವಾದ ಮೋಕ್ಷವನ್ನು ಪಡೆಯುತ್ತಾನೆ ।೭೨॥

ಇಲ್ಲಿಗೆ ಉಪನಿಷತ್ತೂ, ಬ್ರಹ್ಮವಿದ್ಯೆಯೂ ಯೋಗ ಶಾಸ್ತ್ರವೂ ಶ್ರೀಕೃಷ್ಣಾರ್ಜುನ ಸಂವಾದವೂ ಆದ ಶ್ರೀಮದ್ಭಗವದ್ಗೀತೆಯಲ್ಲಿ ಸಾಂಖ್ಯಯೋಗವೆಂಬ ಹೆಸರಿನ ಎರಡನೆಯ ಅಧ್ಯಾಯವು ಮುಗಿದುದು.

ಯಾವ ನಿಷ್ಕಾಮ ಪುರುಷರು ನಿಃಸೀಮ ಬ್ರಹ್ಮಸ್ಥಿತಿಯ ಅನುಭವ ಪಡೆಯುತ್ತ ಅವರು ಅನಾಯಾಸವಾಗಿ ಆತ್ಮಸ್ವರೂಪ(ಪರಬ್ರಹ್ಮ)ವನ್ನು ಹೊಂದಿರುತ್ತಾರೆ ।೩೬೮॥

ಯಾರು ಬ್ರಹ್ಮಸ್ವರೂಪದಲ್ಲಿ ಕೂಡಿರುತ್ತಾರೆಯೋ ಅಂತಹ ಸ್ಥಿತಪ್ರಜ್ಞರ ಚಿತ್ತದಲ್ಲಿ ಮರಣ ಕಾಲದ ವ್ಯಾಕುಲತೆಯು ಪ್ರತಿಬಂಧ ಮಾಡಬಾರದು ।೩೬೯॥

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ; ರಾಜಾ ಈ ಸ್ಥಿತಿಯನ್ನೇ ಶ್ರೀಕೃಷ್ಣನು ಸ್ವತಃ ಅರ್ಜುನನಿಗೆ ಹೇಳಿದನು ।೩೭೦॥

ಈ ಪ್ರಕಾರವಾಗಿ ಶ್ರೀಕೃಷ್ಣನ ಹೇಳಿಕೆ ಕೇಳಿ ಅರ್ಜುನನು ಮನಸ್ಸಿನಲ್ಲಿ ಹೀಗೆ ವಿಚಾರಿಸಿದನು. ಭಗವಂತನ ಎಲ್ಲ ಹೇಳಿಕೆಗಳು ಈಗ ನಿಜವಾಗಿಯೂ ನಮ್ಮ ಮತಪ್ರಕಾರ ಉಪಯೋಗಕ್ಕೆ ಬಂದಿರುತ್ತವೆ ।೩೭೧॥

ಏಕೆಂದರೆ, ದೇವನು ಎಲ್ಲ ಕರ್ಮಗಳ ನಿಷೇಧ ಮಾಡಿದ್ದಾನೆ. ಆದ್ದರಿಂದ ನಾನು ಯುದ್ಧ ಮಾಡಬೇಕು ಎಂಬುದು ಅದರರ್ಥದಿಂದ ನಿಂತು ಬಿಡುವುದು ।೩೭೨॥

ಶ್ರೀಕೃಷ್ಣನ ಈ ರೀತಿಯ ಹೇಳಿಕೆಯಿಂದ ಅರ್ಜುನನು ಬಹಳ ಸಂತೋಷಪಟ್ಟನು ಮತ್ತು ಈಗ ಆತನು ಅನುಮಾನದಿಂದ ಉತ್ತಮ ಪ್ರಶ್ನೆಯನ್ನು ತಾನೇ ಮಾಡುವನು ॥೩೭೩॥

ಈ ಪ್ರಸಂಗವು ಬಹಳ ಸುಂದರವಾಗಿದೆ. ಎಲ್ಲ ಧರ್ಮದ ಆಗರವಾಗಿದ್ದು, ವಿವೇಕಾಮೃತದ ಅಮರ್ಯಾದ ಸಾಗರವೇ ಆಗಿದೆ ।೩೭೪॥

ಸರ್ವಜ್ಞರ ರಾಜನಾದ ಶ್ರೀಅನಂತನಾದ ಶ್ರೀಕೃಷ್ಣನು ಆ ಕಥೆಯ ನಿರೂಪಣೆ ಮಾಡುವನು. ಇದೇ ಕಥೆಯನ್ನು ಶ್ರೀನಿವೃತ್ತಿದಾಸರಾದ ಜ್ಞಾನೇಶ್ವರರು ಹೇಳುವರು ।೩೭೫॥

ಶ್ರೀ ಜ್ಞಾನೇಶ್ವರ ಮಹಾರಾಜರಿಂದ ರಚಿತವಾದ ಭಾವಾರ್ಥ ದೀಪಿಕೆಯ ಎರಡನೆಯ ಅಧ್ಯಾಯದ ವಿವರಣೆ ಸಮಾಪ್ತವು

# ಸಾರ್ಥ ಶ್ರೀಜ್ಞಾನೇಶ್ವರೀ

## ಅಧ್ಯಾಯ ತಿಸರಾ

ಶ್ರೀ ಗಣೇಶಾಯ ನಮಃ

---

ಅರ್ಜುನ ಉವಾಚ :-

ಜ್ಯಾಯಸೀ ಚೇತ್ ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ ।
ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥೧॥

ಮಗ ಆಇಕಾ ಅರ್ಜುನೇ ಮ್ಹಣಿತಲೇ । ದೇವಾ ತುಮ್ಹೀ ಜೇ ವಾಕ್ಯ ಬೋಲಿಲೇ । ತೇ ನಿಕೇ ಮ್ಯಾ ಪರಿಸಿಲೇ । ಕಮಳಾಪತೀ ॥೧॥ ತೇಥ ಕರ್ಮ ಆಣಿ ಕರ್ತಾ । ಉರೇಚಿನಾ ಪಾಹತಾ । ಐಸೇ ಮತ ತುಝೇ ಶ್ರೀಅನಂತಾ । ನಿಶ್ಚಿತ ಜರೀ ॥೨॥ ತರೀ ಮಾತೇ ಕೇವೀ ಶ್ರೀಹರೀ । ಮ್ಹಣಸೀ ಪಾರ್ಥಾ ಸಂಗ್ರಾಮು ಕರೀ । ಇಯೇ ಲಾಜಸೀ ನಾ ಮಹಾಘೋರೀ । ಕರ್ಮೀ ಸುತಾ ॥೩॥ ಹಾ ಗಾ ಕರ್ಮ ತೂಂಚಿ ಅಶೇಷ । ನಿರಾಕರಿಸೀ ನಿಃಶೇಷ । ತರೀ ಮಜ ಕರವೀ ಹೇ ಹಿಂಸಕ । ಕಾ ಕರವಿಸೀ ॥೪॥ ತರೀ ಹೇಂಚಿ ವಿಚಾರೀ ಹೃಷೀಕೇಶಾ । ತೂ ಮಾನು ದೇಸೀ ಕರ್ಮಲೇಶಾ । ಆಣಿ ಯೇಸಣೇ ಹೇ ಹಿಂಸಾ । ಕರವೀತು ಆಹಾಸೀ ॥೫॥

ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ।
ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್ ॥೨॥

ದೇವಾ ತುವಾಂಚಿ ಐಸೇ ಬೋಲಾವೇ । ತರೀ ಆಮ್ಹೀ ನೇಣತೀ ಕಾಯ ಕರಾವೇ । ಆತಾ ಸಂಪಲೇ ಮ್ಹಣ ಪಾ ಆಘವೇ । ವಿವೇಕಾಚೇ ॥೬॥ ಹಾ ಗಾ ಉಪದೇಶು ಜರೀ ಐಸಾ । ತರೀ ಅಪಭ್ರಂಶು ತೋ ಕೈಸಾ । ಆತಾ ಪುರಲಾ ಆಮ್ಹಾ ಧಿಂವಸಾ । ಆತ್ಮಬೋಧಾಚಾ ॥೭॥ ವೈದ್ಯು ಪಥ್ಯ ವಾರೂನಿ ಜಾಯೇ । ಮಗ ಜರೀ ಆಪಣಚಿ ವಿಷ ಸುಯೇ । ತರೀ ರೋಗಿಯಾ ಕೈಸೇನಿ ಜಿಯೇ । ಸಾಂಗೈ ಮಜ ॥೮॥ ಜೈಸೇ ಆಂಧಳೇ ಸುಯಿಜೇ ಆವ್ಹಾಂಟಾ । ಕಾ ಮಾಜವಣ ದೀಜೇ ಮರ್ಕಟಾ । ತೈಸಾ ಉಪದೇಶು ಹಾ ಗೋಮಟಾ । ವೋಢವಲಾ ಆಮ್ಹಾ ॥೯॥ ಮೀ ಆಧೀಂಚಿ ಕಾಂಹೀ ನೇಣೇ । ವರೀ ಕವಳಿಲೋ ಮೋಹೇ ಯೇಣೇ । ಶ್ರೀಕೃಷ್ಣಾ ವಿವೇಕು ಯಾ ಕಾರಣೇ । ಪುಸಿಲಾ ತುಜ ॥೧೦॥

# ಸಾರ್ಥ ಶ್ರೀಜ್ಞಾನೇಶ್ವರೀ

## ಮೂರನೆಯ ಅಧ್ಯಾಯ

ಶ್ಲೋಕಾರ್ಥ :- ಅರ್ಜುನನು ಹೀಗೆಂದನು: ಜನಾರ್ದನಾ! ಕರ್ಮಕ್ಕಿಂತ ಜ್ಞಾನವು ಶ್ರೇಷ್ಠವೆಂದು ನಿನ್ನ ಅಭಿಪ್ರಾಯವಾದರೆ, ಹೇ ಕೇಶವಾ! ಭಯಂಕರವಾದ ಈ ಯುದ್ಧಕ್ಕೆ ನನ್ನನ್ನು ಏತಕ್ಕೆ ಪ್ರೇರೇಪಿಸುವೆ? ।೧।।

ಆಗ ಅರ್ಜುನನು ಅಂದನು; ಹೇ, ದೇವರೇ, ಹೇ ಕೃಪಾನಿಧಿಯೇ, ನೀವು ಯಾವ ವಾಕ್ಯಗಳನ್ನು ಹೇಳಿರುವಿರೋ ಅದನ್ನು ನಾನು ಉತ್ತಮ ರೀತಿಯಲ್ಲಿ ಕೇಳಿರುತ್ತೇನೆ ।೧।।

ಆತ್ಮಸ್ವರೂಪ ವಿಚಾರದಲ್ಲಿ ಕರ್ಮ ಮತ್ತು ಕರ್ತ ಈ ವಿಚಾರ ಮಾಡಿ ನೋಡಿದರೆ, ಅವು ಉಳಿಯುವುದೇ ಇಲ್ಲ. ಶ್ರೀ ಅನಂತನೇ, ಇದೇ ನಿನ್ನ ನಿಶ್ಚಿತ ಮತವಿದ್ದರೆ ।೨।।

ಈಗ ಹೃಷೀಕೇಶಾ, ''ಪಾರ್ಥಾ ನೀನು ಯುದ್ಧ ಮಾಡು'' ಎಂದು ನನಗೇಕೆ ಹೇಳುವೆ? ನನಗೆ ಈ ಭಯಂಕರ ಕರ್ಮದಲ್ಲಿ ಸಿಲುಕಿಸಲು ನಿನಗೇಕೆ ಸಂಕೋಚವಾಗುವುದಿಲ್ಲ? ।೩।।

ಎಲ್ಲ ಕರ್ಮಗಳನ್ನು ನೀವೇ ನಿಷೇಧಿಸುತ್ತಿರುವಾಗ ನನ್ನ ಕೈಯಿಂದಾ ಇಂಥಹ ಹಿಂಸಾತ್ಮಕ ಕರ್ಮವನ್ನು ಏಕೆ ಮಾಡಿಸುವಿರಿ? ।೪।।

ಆದರೆ ಹೃಷೀಕೇಶಾ, ಇದನ್ನೇ ನೀವು ವಿಚಾರ ಮಾಡಿರಿ. ನೀವೀಗ ಕರ್ಮಮಾರ್ಗಕ್ಕೆ ಮಾನ್ಯ ಮಾಡಿ ನನ್ನಿಂದ ಇಷ್ಟೊಂದು ಘೋರ ಹಿಂಸೆ ಮಾಡಿಸುತ್ತಿರುವಿರಿ ।೫।।

ಶ್ಲೋಕಾರ್ಥ :- ನಿನ್ನ ಸಂದಿಗ್ಧ ವಚನಗಳಿಂದ ನನ್ನ ಬುದ್ಧಿಯು ಮೋಹಗೊಂಡಿದೆ. ನನಗೆ ಶ್ರೇಯಸ್ಸನ್ನು ಉಂಟು ಮಾಡುವ ಮಾರ್ಗ ಒಂದೇ ಒಂದನ್ನು ಖಂಡಿತವಾಗಿ ತಿಳಿಸು ।೨।।

ದೇವಾ, ನೀವೇ ಹೀಗೆ ಹೇಳಹತ್ತಿದರೆ, ಅಜ್ಞಾನಿಗಳಾದ ನಾವೇನು ಮಾಡಬೇಕು? ಆದರೆ ಈಗಲೇ ಎಲ್ಲ ವಿವೇಕವು ಮುಗಿಯಿತು ಎಂದು ಹೇಳುವ ಸರತಿ ಬಂದಿದೆ ।೬।।

ಅಜ್ಞಾನ ಕಳೆಯಲು ನೀವು ಈ ರೀತಿ ಸಂದಿಗ್ಧ ಉಪದೇಶ ಮಾಡಿದರೆ, ಅದರಿಂದ ನಮ್ಮ ಭ್ರಮೆ ಹೇಗೆ ದೂರಾಗಬೇಕು? ಈಗ ನಿಮ್ಮಿಂದ ಆತ್ಮಬೋಧೆಯನ್ನು ಪಡಯುವ ಇಚ್ಛೆಯ ಗತಿ ಏನಾದೀತು? ।೭।।

ನನಗೆ ಹೇಳಿರಿ; ವೈದ್ಯನು ರೋಗಿಯ ಪ್ರಕೃತಿ ನೋಡಿ ಪಥ್ಯದ ಯೋಜನೆ ಮಾಡಿದ ಮೇಲೆ, ತಾನೇ ಔಷಧದಲ್ಲಿ ವಿಷ ಹಾಕಿದರೆ ರೋಗಿಯು ಬದುಕಬಹುದೆ? ।೮।।

ಕುರುಡನಿಗೆ ಅಡ್ಡ ಹಾದಿ ಹಿಡಿಸುವುದು ; ಕೋತಿಗೆ ಮದ್ಯ ಕುಡಿಸುವುದು; ಹೀಗೆ ನಿಮ್ಮ ಉತ್ತಮ ಉಪದೇಶ ನಮಗೆ ಉತ್ತಮ ಫಲ ಕೊಟ್ಟಂತಾಯಿತಲ್ಲ? ।೯।।

ದೇವಾ ನೋಡು; ಮೊದಲೇ ನನಗೆ ಏನೂ ತಿಳಿಯದಂತಾಗಿದೆ. ಅದರಲ್ಲಿ ನಾನು ಈ ಮೋಹದಿಂದ ವ್ಯಾಪಿಸಿಕೊಂಡಿದ್ದೇನೆ. ಆದ್ದರಿಂದ ನಿಮಗೆ ವಿಚಾರದ ಮಾತು ಕೇಳಿದೆ ।೧೦।।

ತಂವ ತುಝೀ ಏಕೇಕ ನವಾಈ । ಏಥ ಉಪದೇಶಾಮಾಜೀ ಗೋವಾಈ । ತರೀ ಅನುಸರಲಿಯಾ ಕಾಈ । ಐಸೇ ಕೀಜೇ? ॥೧೧॥ ಆಮ್ಹೀ ತನುಮನುಜೀವೇಂ । ತುಝಿಯಾ ಬೋಲಾ ವೋಟಂಗಾವೇ । ಆಣಿ ತುವಾಂಚಿ ಐಸೇ ಕರಾವೇ । ತರೀ ಸರಲೇ ಮ್ಹಣೇ ॥೧೨॥ ಆತಾ ಐಸಿಯಾಪರೀ ಬೋಧಿಸೀ । ತರೀ ನಿಕೆ ಆಮ್ಹಾ ಕರಿಸೀ । ಏಥ ಜ್ಞಾನಾಚೀ ಆಸ ಕಾಯಸೀ । ಅರ್ಜುನ ಮ್ಹಣೇ ॥೧೩॥ ತರೀ ಯೇ ಜಾಣಿವೇಚೇ ಕೀರ ಸರಲೇ । ಪರೀ ಆಣಿಕ ಏಕ ಅಸೇ ಜಾಹಲೇ । ಜೇ ಥಿತೇ ಹೇ ಡಹುಳಲೇ । ಮಾನಸ ಮಾಝೇ ॥೧೪॥ ತೇವೀಂಚಿ ಶ್ರೀಕೃಷ್ಣಾ ಹೇ ತುಝೇ । ಚರಿತ್ರ ಕಾಂಹೀ ನೇಣಿಜೇ । ಜರೀ ಚಿತ್ತ ಪಾಹಸೀ ಮಾಝೇ । ಯೇಣೇ ಮಿಷೇ ॥೧೫॥ ನಾ ತರೀ ಝಕವೀತು ಆಹಾಸೀ ಮಾತೇ । ಕೀ ತತ್ತ್ವಚಿ ಕಥಿಲೇ ಧ್ವನಿತೇ । ಹೇ ಅವಗಮಿತಾ ನಿರುತೇ । ಜಾಣವೇನಾ ॥೧೬॥ ಮ್ಹಣೌನಿ ಆಇಕೇ ದೇವಾ । ಹಾ ಭಾವಾರ್ಥು ಆತಾ ನ ಬೋಲಾವಾ । ಮಜ ವಿವೇಕು ಸಾಂಗಾವಾ । ಮರ್‍ಹಾಟಾ ಜೀ ॥೧೭॥ ಮೀ ಅತ್ಯಂತ ಜಡ ಅಸೇ । ಪರೀ ಐಸಾಹೀ ನಿಕೇ ಪರಿಯೇಸೇ । ಶ್ರೀಕೃಷ್ಣಾ ಬೋಲಾವೇ ತುವಾ ತೈಸೇ । ಏಕನಿಷ್ಠ ॥೧೮॥ ದೇಖೈ ರೋಗಾತೇ ಜಿಣಾವೇ । ಔಷಧ ತರೀ ದೇಯಾವೇ । ಪರೀ ತೇ ಅತಿ ರುಚ್ಯ ವ್ಹಾವೇ । ಮಧುರ ಜೈಸೇ ॥೧೯॥ ತೈಸೇ ಸಕಳಾರ್ಥಭರಿತ । ತತ್ತ್ವ ಸಾಂಗಾವೇ ಉಚಿತ । ಪರೀ ಬೋಧೇ ಮಾಝೇ ಚಿತ್ತ । ಜಯಾಪರೀ ॥೨೦॥ ದೇವಾ ತುಝಾ ಐಸಾ ನಿಜಗುರು । ಆಜಿ ಆರ್ತೀಧಣೀ ಕಾ ನ ಕರೂ । ಏಥ ಭೀಡ ಕವಣಾಚೀ ಧರೂ । ತೂ ಮಾಯ ಆಮುಚೀ ॥೨೧॥ ಹಾ ಗಾ ಕಾಮಧೇನುಚೇ ದುಭತೇ । ದೈವೇ ಜಾಹಲೇ ಜರೀ ಆಪೈತೇ । ತರೀ ಕಾಮನೇಚೀ ಕಾ ತೇಥೇ । ವಾನೀ ಕೀಜೇ ? ॥೨೨॥ ಜರೀ ಚಿಂತಾಮಣೀ ಹಾತಾ ಚಢೇ । ತರೀ ವಾಂಛೇಚೇ ಕವಣ ಸಾಂಕಡೇ । ಕಾ ಆಪುಲೇನಿ ಸುರವಾಡೇ । ಇಚ್ಛಾವೇ ನಾ? ॥೨೩॥ ದೇಖಾ ಅಮೃತಸಿಂಧೂತೇ ಠಾಕಾವೇ । ಮಗ ತಾಹಾನಾಚಿ ಜರೀ ಫುಟಾವೇ । ತರೀ ಸಾಯಾಸು ಕಾ ಕರಾವೇ । ಮಾಗೀಲ ತೇ? ॥೨೪॥ ತೈಸಾ ಜನ್ಮಾಂತರೀ ಬಹುತೀ । ಉಪಾಸಿತಾ ಶ್ರೀಲಕ್ಷ್ಮೀಪತೀ । ತೂ ದೈವೇ ಆಜಿ ಹಾತೀ । ಜಾಹಾಲಾಸೀ ಜರೀ ॥೨೫॥ ತರೀ ಆಪುಲಿಯಾ ಸವೇಶಾ । ಕಾ ನ ಮಾಗಾವಾಸಿ ಪರೇಶಾ? । ದೇವಾ ಸುಕಾಳು ಹಾ ಮಾನಸಾ । ಪಾಹಲಾ ಅಸೇ ॥೨೬॥ ದೇಖೈ ಸಕಳಾರ್ತೀಚೇ ಜೀಯಾಲೇ । ಆಜಿ ಪುಣ್ಯ ಯಶಾಸಿ ಆಲೇ । ಹೇ ಮನೋರಥ ಜಾಹಾಲೇ । ವಿಜಯೀ ಮಾಝೆ ॥೨೭॥

ಆದರೆ, ನಿಮ್ಮದು ಒಂದೊಂದೇ ಆಶ್ಚರ್ಯ! ನಿಮ್ಮ ಉಪದೇಶದಲ್ಲಿ ಗೊಂದಲವೇ ಗೊಂದಲ! ನೀವು ಶರಣಾಗತರನ್ನು ಈ ರೀತಿ ನಡೆಸಿಕೊಳ್ಳಬೇಕೆ? ।।೧೧।।

ನಾವು ಕಾಯಾ ವಾಚಾ ಮನದಿಂದ ನಿಮ್ಮ ಹೇಳಿಕೆಯ ಮೇಲೆ ವಿಶ್ವಾಸವಿಡಬೇಕು; ಮತ್ತು ನೀವೇ ಈ ರೀತಿ ವರ್ತಿಸಿದರೆ, ಈಗ ನಮ್ಮ ಕಥೆ ಮುಗಿಯಿತೆನ್ನಬೇಕು ।।೧೨।।

ಈಗ ಇದೇ ರೀತಿ ಉಪದೇಶ ಮಾಡಹತ್ತಿದರೆ; ನಮ್ಮ ಹಿತ ಬಹು ಉತ್ತಮವಾಗಿ ಮಾಡುತ್ತಿರುವಂತೆ ಕಾಣುತ್ತಿಯೆ! ಈಗ ನಮಗೆ ಜ್ಞಾನದ ಆಶೆ ಎಲ್ಲಿಯದು? ।।೧೩।।

ಈಗ ಜ್ಞಾನದ ಆಶೆ ಏತಕ್ಕೆ ಬೇಕು? ಜ್ಞಾನ ಸಂಪಾದಿಸಬೇಕು, ಎಂಬುವ ಉತ್ಸಾಹವೇ ಮುಗಿಯಿತು. ಅದರ ಪ್ರತಿಯಾಗಿ ಈಗ ನನ್ನ ಮನದಲ್ಲಿದ್ದ ಸಂಶಯಗಳು ಇನ್ನೂ ಹೆಚ್ಚು ಗೊಂದಲಮಯಗಳಾಗಿವೆ ।।೧೪।।

ಆದರೂ ಕೃಷ್ಣಾ, ನಿಮ್ಮ ಲೀಲೆಯು ನಮಗೆ ಏನೂ ತಿಳಿಯುವುದಿಲ್ಲ. ಈ ಉಪದೇಶ ನಿಮಿತ್ತದಿಂದ ನಮ್ಮ ಮನಸ್ಸಿನ ಪರೀಕ್ಷೆ ತೆಗೆದುಕೊಳ್ಳುವುದಿದ್ದರೆ ಇದು ಯಾರಿಗೆ ತಿಳಿಯಬೇಕು? ।।೧೫।।

ಅಥವಾ ನನಗೆ ವಂಚಿಸುತ್ತಿರುವೆಯೋ; ಇಲ್ಲವೇ ಗೂಡಾರ್ಥದಿಂದ ಬ್ರಹ್ಮ ಸ್ವರೂಪವನ್ನು ಹೇಳುತ್ತಿರುವಿಯೋ; ನಿಜ ಯಾವುದೆಂದು ತಿಳಿಯದಾಗಿದೆ ।।೧೬।।

ಆದ್ದರಿಂದ ದೇವಾ, ಕೇಳಿರಿ. ಈಗ ನನಗೆ ಗೂಡಾರ್ಥದಿಂದ ಹೇಳಬೇಡಿರಿ. ನನಗೆ ತಿಳಿಯುವ ರೀತಿಯಲ್ಲಿ ಸ್ಪಷ್ಟವಾಗಿ ಸರಳಭಾಷೆಯಲ್ಲಿ ಹೇಳಿರಿ ।।೧೭।।

ಶ್ರೀಕೃಷ್ಣನೇ, ನಾನು ಬಹಳ ಮಂದ ಬುದ್ಧಿಯವನಿದ್ದೇನೆ. ಆದ್ದರಿಂದ ನನ್ನಂಥವನಿಗೂ ಸಹ ಸರಳವಾಗಿ ತಿಳಿಯಬಹುದಾದ ರೀತಿಯಲ್ಲಿ ಒಂದು ನಿಶ್ಚಯಾತ್ಮಕ ಹೇಳಿಕೆ ಹೇಳಿರಿ ।।೧೮।।

ನನ್ನ ಮಾತು ಕೇಳಿರಿ, ಔಷಧ ಕೊಟ್ಟರೆ ರೋಗವು ಗುಣಮುಖವಾಗಬೇಕು. ಹಾಗೂ ಆ ಔಷಧವು ಮಧುರವಾಗಿ ರುಚಿಕರವಾಗಿರಬೇಕು ।।೧೯।।

ಅದರಂತೆ ಸರ್ವಾರ್ಥದಿಂದ ಪರಿಪೂರ್ಣವಾದ; ಯೋಗ್ಯವಾದ ತತ್ತ್ವವನ್ನು ಹೇಳಿರಿ. ಅದು ನನಗೆ ಮನಸಾಪೂರ್ಣ ಬೋಧೆಯಾಗಿರಬೇಕು ।।೨೦।।

ದೇವಾ, ನಿಮ್ಮಂತಹ ನಿಜ ಗುರು ನನಗೆ ಸಿಕ್ಕಿರುವಾಗ ನಾನೇಕೆ ನನ್ನ ಮನಸ್ಸಿನ ಇಚ್ಛೆ ಪೂರ್ಣ ಮಾಡಿಕೊಳ್ಳಬಾರದು? ನಾನೇಕೆ ಸಂಕೋಚಪಡಬೇಕು? ನೀನು ನನ್ನ ತಾಯಿಯಾಗಿರುವೆ ।।೨೧।।

ಈಗ ಕೇಳಿರಿ : ದೈವಯೋಗದಿಂದ ಕಾಮಧೇನು ಕರೆಯಲು ಸಿಕ್ಕಾಗ ಇಚ್ಛಿತ ಕಾಮನೆಗಳನ್ನು ಬೇಡಲು ಏಕೆ ಸಂಕೋಚ ಮಾಡಿಕೊಳ್ಳಬೇಕು ? ।।೨೨।।

ಅಥವಾ ಚಿಂತಾಮಣಿಯು ಹಸ್ತಗತವಾದಾಗ ಇಚ್ಛಿತ ವಸ್ತು ಬೇಡಲು ಏಕೆ ಸಂಕಟ ಪಡಬೇಕು ? ಮನಸ್ಸಿನ ಅಪೇಕ್ಷೆಯಂತೆ ಬೇಡಬಾರದೇಕೆ ? ।।೨೩।।

ಅಮೃತಸಾಗರದ ದಂಡೆಯವರೆಗೆ ಬಂದು ನಿಂತು ಅಮೃತವನ್ನು ಸೇವನೆ ಮಾಡದೆ ನೀರಡಿಕೆಯಿಂದ ಚಡಪಡಿಸುವುದಾದರೆ, ಅಮೃತ ಸಾಗರದವರೆಗೆ ಬರುವ ಶ್ರಮವಾದರೂ ಏಕೆ ಮಾಡಬೇಕು? ।।೨೪।।

ಅದೇ ಪ್ರಕಾರ ಕಮಲಾಪತಿಯೇ, ನೀನು ನನಗೆ ಜನ್ಮಜನ್ಮದ ಉಪಾಸನಾ ಬಲದಿಂದ ದೈವಯೋಗಿಂದ ದೊರಕಿರುವೆ ।।೨೫।।

ಅಂದಮೇಲೆ ಪರಮೇಶ್ವರಾ, ನಮ್ಮ ಇಚ್ಛೆಯಂತೆ ನಾವು ನಿಮಗೇಕೆ ಬೇಡಬಾರದು ? ದೇವಾ, ಇಂದು ಮನಸ್ಸಿನ ಇಚ್ಛೆ ಪೂರ್ಣಗೊಳ್ಳುವ ಸುದಿನ ಉದಯವಾಗಿದೆ ।।೨೬।।

ಇಂದು ನನ್ನ ಸರ್ವ ಇಚ್ಛೆಯು ಪರಿಪೂರ್ಣಗೊಂಡು ಪೂರ್ವ ಪುಣ್ಯವು ಫಲದ್ರೂಪವಾಗಿ ಎಲ್ಲ ಮನೋರಥಗಳು ಪೂರ್ಣಗೊಂಡವು ।।೨೭।।

ಜೇ ಜೇ ಪರಮಮಂಗಳಧಾಮಾ । ಸಕಳ ದೇವದೇವೋತ್ತಮಾ । ತೂ ಸ್ವಾಧೀನು ಆಜಿ ಆಮ್ಹಾ । ಮ್ಹಣೌನಿಯಾ ।೨೮॥ ಜೈಸೇ ಮಾತೇಚ್ಯಾ ಠಾಯೀ । ಅಪತ್ಯಾ ಅನವಸರೂ ನಾಹೀ । ಸ್ತನ್ಯಾಲಾಗೂನಿ ಪಾಹೀ । ಜಿಯಾಪರಿ ।೨೯॥ ತೈಸೇ ದೇವಾ ತೂತೇ । ಪುಸಿಜತಸೇ ಆವಡೇ ತೇ । ಆಪುಲೇನಿ ಆರ್ತೇ । ಕೃಪಾನಿಧೀ ।೩೦॥ ತರೀ ಪಾರತ್ರಿಕೀ ಹಿತ । ಆಣಿ ಆಚರಿತಾ ತರೀ ಉಚಿತ । ತೈ ಸಾಂಗೈ ಏಕ ನಿಶ್ಚಿತ । ಪಾರ್ಥು ಮ್ಹಣೇ ।೩೧॥

ಶ್ರೀಭಗವಾನುಉವಾಚ:-
ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾಽನಘ ।
ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್ ।೩॥

ಯಾ ಬೋಲಾ ಶ್ರೀಅಚ್ಯುತು । ಮ್ಹಣತಸೇ ವಿಸ್ಮಿತು । ಅರ್ಜುನಾ ಹಾ ಧ್ವನಿತು । ಅಭಿಪ್ರಾವೋ ।೩೨॥ ಜೇ ಬುದ್ಧಿಯೋಗು ಸಾಂಗತಾ । ಸಾಂಖ್ಯಮತ ಸಂಸ್ಥಾ । ಪ್ರಕಟಲೀ ಸ್ವಭಾವತಾ । ಪ್ರಸಂಗೇ ಆಮ್ಹೀ ।೩೩॥ ತೋ ಉದ್ದೇಶು ತೂ ನೇಣಸೀಚಿ । ಮ್ಹಣೌನಿ ಕ್ಷೋಭಲಾಸಿ ವಾಯಾಂಚಿ । ತರೀ ಆತಾ ಜಾಣೇ ಮ್ಯಾಂಚಿ । ಉಕ್ತ ದೋನ್ಹೀ ।೩೪॥ ಅವಧಾರೀ ವೀರಶ್ರೇಷ್ಠಾ । ಯೇ ಲೋಕೀ ಯಾ ದೋನ್ಹೀ ನಿಷ್ಠಾ । ಮಜಚಿಪಾಸೂನಿ ಪ್ರಗಟಾ । ಅನಾದಿಸಿದ್ಧಾ ।೩೫॥ ಏಕು ಜ್ಞಾನಯೋಗು ಮ್ಹಣಿಜೇ । ಜೋ ಸಾಂಖ್ಯೀ ಅನುಷ್ಠಿಜೇ । ಜೇಥ ವೋಳಖೀಸವೇ ಪಾವಿಜೇ । ತದ್ರೂಪತಾ ।೩೬॥ ಏಕು ಕರ್ಮಯೋಗು ಜಾಣ । ಜೇಥ ಸಾಧಕಜನ ನಿಪುಣ । ಹೋಊನಿಯಾ ನಿರ್ವಾಣ । ಪಾವತೀ ವೇಳೇ ।೩೭॥ ಹೇ ಮಾರ್ಗು ತರೀ ದೋನೀ । ಪರೀ ಏಕವಟತೀ ನಿದಾನಿ । ಜೈಸೀ ಸಿದ್ಧಸಾಧ್ಯ ಭೋಜನೀ । ತೃಪ್ತೀ ಏಕ ।೩೮॥ ಕಾ ಪೂರ್ವಾಪರ ಸರಿತಾ । ಭಿನ್ನ ದಿಸತೀ ಪಾಹತಾ । ಮಗ ಸಿಂಧುಮಿಳಣೀ ಐಕ್ಯತಾ । ಪಾವತಿ ಶೇಖೀ ।೩೯॥ ತೈಸೀ ದೋನೀಹೀ ಮತೇ । ಸೂಚಿತೀ ಏಕಾ ಕಾರಣಾತೇ । ಪರೀ ಉಪಾಸ್ತಿ ತೇ ಯೋಗ್ಯತೇ । ಆಧೀನ ಅಸೇ ।೪೦॥ ದೇಖೈ ಉತ್ಪ್ಲವನಾಸರಿಸಾ । ಪಕ್ಷೀ ಫಲಾಸೀ ಝೋಂಬೇ ಜೈಸಾ । ಸಾಂಗೈ ನರೂ ಕೇವೀ ತೈಸಾ । ಪಾವೇ ವೇಗಾ ?।೪೧॥ ತೋ ಹಳೂ ಹಳೂ ಢಾಳೇ ಢಾಳೇ । ಕೇಉತೇನಿ ಏಕೇ ವೇಳೇ । ತಯಾ ಮಾರ್ಗಾಚೇನಿ ಬಳೇ । ನಿಶ್ಚಿತ ಠಾಕೀ ।೪೨॥ ತೈಸೇ ದೇಖ ಪಾ ವಿಹಂಗಮಮತೇ । ಅಧಿಷ್ಠೂನಿ ಜ್ಞಾನಾತೇ । ಸಾಂಖ್ಯ ಸದ್ಯ ಮೋಕ್ಷಾತೇ । ಆಕಳಿತೀ ।೪೩॥ ಯೇರ ಯೋಗಿಯೇ ಕರ್ಮಾಧಾರೇ । ವಿಹಿತೇಂಚಿ ನಿಜಾಚಾರೇ । ಪೂರ್ಣತಾ ಅವಸರೇ । ಪಾವತೇ ಹೋತೀ ।೪೪॥

ಏಕೆಂದರೆ, ಕಲ್ಯಾಣದ ಮೂಲಪೀಠನಾದ ಮತ್ತು ಎಲ್ಲ ದೇವರ ದೇವನಾದ ನೀನು ನಮಗೆ ಆಧೀನನಾಗಿರುವೆ ।೨೮॥

ತಾಯಿಯ ಸ್ತನಪಾನ ಮಾಡಲು ಕೂಸಿಗೆ ವೇಳೆಯ ಬಂಧನೆ ಇರುವುದಿಲ್ಲ ।೨೯॥

ಅದೇ ಪ್ರಕಾರವಾಗಿ ದೇವಾ, ಕೃಪಾನಿಧಿಯೇ, ನಾನು ನಿಮಗೆ ನನ್ನ ಮನಸ್ಸಿನಲ್ಲಿಯ ವಿಚಾರಗಳನ್ನು ತೋಚಿತ ರೀತಿಯಲ್ಲಿ ಕೇಳುತ್ತಿದ್ದೇನೆ ।೩೦॥

ಅರ್ಜುನನು ಅಂದನು ; ಆದ್ದರಿಂದ ದೇವಾ, ಇಹ ಲೋಕದಲ್ಲಿ ಆಚರಿಸಲು ಯೋಗ್ಯವಾದ, ಪರ ಲೋಕಕ್ಕೂ ಹಿತಕರವಾದ ಒಂದು ನಿಶ್ಚಿತ ಮಾತು ನನಗೆ ತಿಳಿಸು ।೩೧॥

ಶ್ಲೋಕಾರ್ಥ :- ಭಗವಂತನು ಹೀಗೆಂದನು: ಪಾಪ ರಹಿತನಾದ ಅರ್ಜುನಾ! ಸಾಂಖ್ಯರಿಗೆ ಜ್ಞಾನಯೋಗ, ಯೋಗಿಗಳಿಗೆ ಕರ್ಮಯೋಗ ಎಂಬ ಮುಕ್ತಿ ಮಾರ್ಗಗಳಾದ ಎರಡನ್ನು ಮೊದಲೇ ಪ್ರಪಂಚದಲ್ಲಿ ಏರ್ಪಡಿಸಿರುವೆನು ।೩।

ಈ ಮಾತುಗಳನ್ನು ಕೇಳಿ ಶ್ರೀಕೃಷ್ಣನು ಆಶ್ಚರ್ಯಚಕಿತನಾಗಿ ಹೇಳುತ್ತಿದ್ದಾನೆ; ಅರ್ಜುನಾ ನಾನು ನಿನಗೆ ಯಾವ ಅಭಿಪ್ರಾಯ ವ್ಯಕ್ತಮಾಡಿರುವೆನೋ ಅದು ಗರ್ಭಿತಾರ್ಥವಾಗಿರುವುದು ।೩೨॥

ಈಶ್ವರಾರ್ಪಣ ಕರ್ಮಯೋಗವನ್ನು ಹೇಳುತ್ತಿರುವಾಗ್ಗೆ ಪ್ರಸಂಗಾನುಸಾರವಾಗಿ ಸಾಂಖ್ಯ ಶಾಸ್ತ್ರದ ಜ್ಞಾನ ಮಹಿಮೆಯನ್ನು ಹೇಳಿದೆವು ।೩೩॥

ಆ ನಮ್ಮ ಉಪದೇಶವು ನಿನಗೆ ತಿಳಿಯಲಿಲ್ಲ. ಆದ್ದರಿಂದ ವ್ಯರ್ಥವಾಗಿ ಕ್ಷೋಭೆಗೊಂಡಿರುವಿ, ಈ ಜ್ಞಾನಯೋಗ ಮತ್ತು ಕರ್ಮ ಯೋಗಗಳ ಎರಡೂ ಮಾರ್ಗಗಳನ್ನು ನಾನೇ ಹೇಳಿರುವೆ ।೩೪॥

ವೀರಶ್ರೇಷ್ಠನೇ ಕೇಳು ; ಈ ಲೋಕದಲ್ಲಿ ಈ ಎರಡೂ ಸಂಪ್ರದಾಯಗಳು ಅನಾದಿ ಕಾಲದಿಂದಲೂ ನನ್ನಿಂದಲೇ ಪ್ರಕಟವಾಗಿ ನಡೆಯುತ್ತ ಬಂದಿವೆ ।೩೫॥

ಮೊದಲನೆಯದಾಗಿ ಆತ್ಮಾನಾತ್ಮ ವಿಚಾರ ಮಾಡುವವರು ಸಾಂಖ್ಯಶಾಸ್ತ್ರ ಅನುಷ್ಠಾನಗೊಳಿಸಿ ಅದರಿಂದ ಬ್ರಹ್ಮಸ್ವರೂಪವನ್ನು ತಿಳಿದುಕೊಂಡಾಕ್ಷಣಕ್ಕೆ ಅವರು ಆತ್ಮಸ್ವರೂಪ ಹೊಂದುತ್ತಾರೆ ।೩೬॥

ಎರಡನೆಯದಾಗಿ ಇದಕ್ಕೆ ಕರ್ಮಯೋಗವೆನ್ನುವರು. ಈ ಯೋಗದಲ್ಲಿರುವ ಮುಮುಕ್ಷು ಜನರು ಅವಕಾಶದಂತೆ (ಜ್ಞಾನೋತ್ತರ ಕಾಲದಲ್ಲಿ) ಮೋಕ್ಷವನ್ನು ಹೊಂದುತ್ತಾರೆ ।೩೭॥

ಸಿದ್ಧಗೊಂಡಿದ್ದ, ಅಥವಾ ಸಿದ್ಧಗೊಳಿಸುವ ಆಹಾರದ ಭೋಜನದಿಂದ ಯಾವ ಪ್ರಕಾರವಾಗಿ ಒಂದೇ ತೃಪ್ತಿ ಇದೆಯೋ ಅದರಂತೆ ಈ ಮಾರ್ಗಗಳು ಎರಡಿದ್ದರೂ ಪರಿಣಾಮ ಒಂದೇ ಆಗಿರುವುದು ।೩೮॥

ಅಥವಾ ಪೂರ್ವ -ಪಶ್ಚಿಮಕ್ಕೆ ಹರಿಯುವ ನದಿಗಳು ಭಿನ್ನವಾಗಿ ಕಾಣುತ್ತವೆ. ಆದರೆ ಅವು ಎರಡೂ ಒಂದೇ ಸಮುದ್ರಕ್ಕೆ ಕೂಡಿ ಒಂದೇ ಆಗುತ್ತವೆ ।೩೯॥

ಅದರಂತೆ (ಸಾಂಖ್ಯ-ಕರ್ಮ) ಎರಡೂ ಮಾರ್ಗಗಳ ಮತವು ಒಂದೇ ಆಗಿರುವುವು. ಅದು ಉಪಾಸನೆ, ಉಪಾಸಕರ ಯೋಗ್ಯತೆಯ ಮೇಲೆ ಅವಲಂಬಿಸಿರುವುದು ।೪೦॥

ಪಕ್ಷಿಯು ಒಂದೇ ಹಾರಿಕೆಯಲ್ಲಿ ಗಿಡದಲ್ಲಿನ ಹಣ್ಣನ್ನು ಹಿಡಿಯುವುದು. ಆದರೆ ಅದೇ ವೇಗದಿಂದ ಮನುಷ್ಯನಿಗೆ ಆ ಹಣ್ಣನ್ನು ಹೇಗೆ ಹಿಡಿಯಲು ಸಾಧ್ಯ? ಹೇಳು ನೋಡೋಣ? ।೪೧॥

ಆತನು ಮೆಲ್ಲ ಮೆಲ್ಲನೇ ಟೊಂಗೆಯಿಂದ ಟೊಂಗೆಗೆ ಕ್ರಮವಾಗಿ ಕ್ರಮಿಸುತ್ತ ಕೆಲ ಹೊತ್ತಿನ ಮೇಲೆ ನಿಜವಾಗಿಯೂ ಹೋಗಿ ಆ ಹಣ್ಣನ್ನು ಮುಟ್ಟುವನು ।೪೨॥

ಅದರಂತೆ ಸಾಂಖ್ಯ ಯೋಗಿಗಳು ಜ್ಞಾನದ ಆಶ್ರಯ ಪಡೆದು ವಿಹಂಗಮ ಮಾರ್ಗದಿಂದ ತತ್ಕಾಲದಲ್ಲಿ ಮೋಕ್ಷವನ್ನು ಪ್ರಾಪ್ತ ಮಾಡಿಕೊಳ್ಳುವರು ।೪೩॥

ಇತರ ಕರ್ಮಯೋಗಿಗಳು ವಿಹಿತ ವರ್ಣಾಶ್ರಮ ಧರ್ಮದ ಆಚರಣೆಯ ಆಶ್ರಯ ಪಡೆದು ಪಿಪಿಲಿಕಾ ಮಾರ್ಗದಿಂದ ಜ್ಞಾನೋತ್ತರ ಕಾಲದಲ್ಲಿ ಮೋಕ್ಷವನ್ನು ಪ್ರಾಪ್ತಿ ಮಾಡಿಕೊಳ್ಳುವರು ।೪೪॥

ನ ಕರ್ಮಣಾಮನಾರಂಭಾತ್ ನೈಷ್ಕರ್ಮ್ಯಂ ಪುರುಷೋಽಶ್ನುತೇ ।
ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ।೪॥

ವಾಂಚೋನಿ ಕರ್ಮಾರಂಭ ಉಚಿತ । ನ ಕರಿತಾ ಸಿದ್ಧವತ । ಕರ್ಮಹೀನಾ ನಿಶ್ಚಿತ । ಹೋಈಜೇನಾ ॥೪೫॥ ಕೀ ಪ್ರಾಪ್ತಕರ್ಮ ಸಾಂಡಿಜೇ । ಯೇತುಲೇನಿ ನೈಷರ್ಮ್ಯ ಹೋಇಜೇ । ಹೇ ಅರ್ಜುನಾ ವಾಯಾ ಬೋಲಿಜೇ । ಮೂರ್ಖಪಣೇ ॥೪೬॥ ಸಾಂಗೈ ಪೈಲತೀರಾ ಜಾವೇ । ಐಸೇ ವ್ಯಸನ ಕಾ ಜೇಥ ಪಾವೇ । ತೇಥ ನಾವೇ ತೇ ತ್ಯಜಾವೇ । ಘಡೇ ಕೇವೀ ॥೪೭॥ ನಾ ತರೀ ತೃಪ್ತೀ ಇಚ್ಛಿಜೇ । ತರೀ ಕೈಸೇನಿ ಪಾಕು ನ ಕೀಜೇ । ಕೀ ಸಿದ್ಧುಹೀ ನ ಸೇವಿಜೇ । ಕೇವೀ ಸಾಂಗೈ ॥೪೮॥ ಜವ ನಿರಾರ್ತತಾ ನಾಹೀ । ತವ ವ್ಯಾಪಾರು ಅಸೇ ಪಾಹೀ । ಮಗ ಸಂತುಷ್ಟೀಚ್ಯಾ ಠಾಯೀ । ಕುಂಠೇ ಸಹಜೇ ॥೪೯॥ ಮ್ಹಣೌನಿ ಆಇಕೇ ಪಾರ್ಥಾ । ಜಯಾ ನೈಷ್ಕರ್ಮ್ಯಪದೀ ಆಸ್ಥಾ । ತಯಾ ಉಚಿತ ಕರ್ಮ ಸರ್ವಥಾ । ತ್ಯಾಜ್ಯ ನೋಹೇ ॥೫೦॥ ಆಣಿ ಆಪುಲೆಯೇ ಚಾಡೇ । ಆಪಾದಿಲೇ ಹೇ ಮಾಂಡೇ । ಕೀ ತ್ಯಜಿಲೇ ಕರ್ಮ ಸಾಂಡೇ । ಐಸೇ ಆಹೇ? ॥೫೧॥ ಹೇ ವಾಯಾಂಚಿ ಸೈರಾ ಬೋಲಿಜೇ । ಉಕಲು ತರೀ ದೇಖೋನಿ ಪಾಹಿಜೇ । ಪರೀ ತ್ಯಜಿತಾ ಕರ್ಮ ನ ತ್ಯಜೆ । ನಿಭ್ರಾಂತ ಮಾನೀ ॥೫೨॥

ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।
ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ।೫॥

ಜವ ಪ್ರಕೃತೀಚೇ ಅಧಿಷ್ಠಾನ । ತವ ಸಾಂಡೀ ಮಾಂಡೀ ಹೇ ಅಜ್ಞಾನ । ಜೇ ಚೇಷ್ಟಾ ತೇ ಗುಣಾಧೀಣ । ಆಪೈಸೀ ಅಸೇ ॥೫೩॥ ದೇಖೈ ವಿಹಿತ ಕರ್ಮ ಜೇತುಲೇ । ತೇ ಸಳೇ ಜರೀ ವೋಸಂಡಿಲೇ । ತರೀ ಸ್ವಭಾವ ಕಾಯ ನಿಮಾಲೇ । ಇಂದ್ರಿಯಾಂಚೇ ॥೫೪॥ ಸಾಂಗೈ ಶ್ರವಣೇ ಐಕಾವೇ ಠೇಲೇ? । ಕೀ ನೇತ್ರೀಂಚೇ ತೇಜ ಗೇಲೇ? । ಹೇ ನಾಸಾರಂಧ್ರ ಬುಝಾಲೇ । ಪರಿಮಳು ನೇಘೇ? ॥೫೫॥ ನಾ ತರೀ ಪ್ರಾಣಾಪಾನಗತಿ । ಕೀ ನಿರ್ವಿಕಲ್ಪ ಜಾಹಲೀ ಮತಿ । ಕೀ ಕ್ಷುದಾತೃಷಾದಿ ಆರ್ತಿ । ಖುಂಟಲಿಯಾ? ॥೫೬॥ ಹೇ ಸ್ವಪ್ನಾವಬೋಧು ಠೇಲೇ । ಕೀ ಚರಣ ಚಾಲೋ ವಿಸರಲೇ । ಹೇ ಅಸೋ ಕಾಯ ನಿಮಾಲೇ । ಜನ್ಮಮೃತ್ಯು? ॥೫೭॥

ಶ್ಲೋಕಾರ್ಥ :- ಕರ್ಮಗಳಲ್ಲಿ ಪ್ರವರ್ತಿಸದೇ ಇದ್ದ ಮಾತ್ರದಿಂದ ಪುರುಷನು ನಿಷ್ಕ್ರಿಯಾತ್ಮ ಜ್ಞಾನವನ್ನು ಹೊಂದಲಾರನು. ಕರ್ಮವನ್ನು ಬಿಟ್ಟ ಮಾತ್ರದಿಂದಲೇ ಮೋಕ್ಷವು ದೊರಕಲಾರದು ।೫೪॥

ವಿಹಿತ ಕರ್ಮದ ಆರಂಭ ಮಾಡದ ಕರ್ಮಹೀನ ಪುರುಷನಿಗೆ ಸಿದ್ಧಪುರುಷರಂತೆ ನಿಶ್ಚಯವಾಗಿ ಜ್ಞಾನ ನಿಷ್ಠನಾಗಲು ಬರುವುದಿಲ್ಲ ।೫೫॥

ಮಾಡಬೇಕಾದ ವಿಹಿತ ಕರ್ಮಗಳನ್ನು, ತ್ಯಜಿಸಿದಾತನು ಕೃತಾರ್ಥನಾಗುವನು ಎಂದು ಹೇಳಿದರೆ ಅದು ಚೊಕ್ಕ ಮೂರ್ಖತನವಾಗುವುದು ।೫೬॥

ನದಿಯು ಎರಡೂ ದಂಡೆಯಲ್ಲಿ ತುಂಬಿ ಹರಿಯುತ್ತಿರುತ್ತದೆ. ಆ ನದಿಯನ್ನು ದಾಟಬೇಕೆನ್ನುವವನಿಗೆ ಹಡಗವನ್ನು ತ್ಯಜಿಸಿ ನದಿ ದಾಟಲು ಸಾಧ್ಯವೇ ? ನೀನೇ ಹೇಳು ।೫೭॥

ಉಂಡು ತೃಪ್ತನಾಗಬೇಕೆನ್ನುವಾತನು ಅಡುಗೆ ಮಾಡದೇ ಅಥವಾ ಸಿದ್ಧಗೊಂಡ ಅಡುಗೆ ಊಟ ಮಾಡದೇ ಹೇಗೆ ತೃಪ್ತನಾಗುವನು? ।೫೮॥

ಎಲ್ಲಿಯವರೆಗೆ ನಿರಿಚ್ಛೆಯು ಪ್ರಾಪ್ತವಾಗಿಲ್ಲವೋ ಅಲ್ಲಿಯವರೆಗೆ ಪರಿಶ್ರಮದ ವ್ಯಾಪಾರವು ಇದ್ದೇ ಇರುವುದು. ನಿರಿಚ್ಛೆ ಪ್ರಾಪ್ತವಾದಲ್ಲಿ ಆತ್ಮಾನಂದ ಪ್ರಾಪ್ತವಾಗಿ ಪರಿಶ್ರಮ ವ್ಯಾಪಾರವು ನಿಂತುಬಿಡುವುದು ।೫೯॥

ಆದ್ದರಿಂದ ಪಾರ್ಥಾ, ಯಾರಿಗೆ ಪರಮಾತ್ಮ ಪ್ರಾಪ್ತಿಯ ಇಚ್ಛೆ ಇದೆಯೋ ಅವರಿಗೆ ವಿಹಿತ ಕರ್ಮಾಚರಣೆಯನ್ನು ಎಂದೂ ಬಿಡಲು ಬರುವಂತೆಯೇ ಇಲ್ಲ ।೬೦॥

ಮತ್ತು ಇನ್ನೊಂದು ಹೀಗಿದೆ; ತನ್ನ ಇಚ್ಛೆಯಿಂದಲೇ ಕರ್ಮದ ಸ್ವೀಕಾರ ಮತ್ತು ತ್ಯಾಗ ಮಾಡಬೇಕೆಂದರೆ ಅದು ಸಾಧ್ಯವೇ?।೬೧॥

ಇದು ವ್ಯರ್ಥವಾದ ಸ್ವೇಚ್ಛಾಚಾರದ ಮಾತಾಗಿದೆ. ಇದರ ನೀಟಾದ ವಿಚಾರ ಮಾಡಿ ನೋಡಿದರೆ, ಕೇವಲ ಕಾರ್ಯಗಳನ್ನು ತ್ಯಜಿಸಿದರೆ ಕರ್ಮದ ತ್ಯಾಗವಾಗಲಾರದು. ಹೀಗೆ ನಿಶ್ಚಿತವಾಗಿ ತಿಳಿ ।೬೨॥

ಶ್ಲೋಕಾರ್ಥ :- ಕ್ಷಣ ಮಾತ್ರವೂ ಕರ್ಮವನ್ನು ಮಾಡದೆ ಯಾರೂ ಇರಲಾರರು. ಪ್ರಕೃತಿಜನ್ಯಗಳಾದ ಗುಣಗಳಿಗೆ ವಶರಾಗಿ ಪ್ರತಿಯೊಬ್ಬರೂ ಕರ್ಮಗಳನ್ನು ಮಾಡುತ್ತಲೇ ಇರುತ್ತಾರೆ ।೬೩॥

ಎಲ್ಲಿಯವರೆಗೆ ಜೀವಕ್ಕೆ ದೇಹೇಂದ್ರಿಯ ಮೊದಲು ಮಾಡಿ ಪ್ರಕೃತಿಯ ಆಶ್ರಯ ಇದೆಯೋ ಅಲ್ಲಿಯವರೆಗೆ ಕರ್ಮದ ಸ್ವೀಕಾರ ಅಥವಾ ತ್ಯಾಗ ಮಾಡುವೆ ಎಂಬುದು ಅಜ್ಞಾನದ ಲಕ್ಷಣವಾಗಿದೆ. ಈ ಕರ್ಮಗಳು ಮಾಯೆಯ ಸತ್ತ್ವಾದಿ ಗುಣಾಧೀನವಾಗಿವೆ ।೬೪॥

ಇಲ್ಲಿ ನೋಡು; ಇರುವ ವಿಹಿತ ಕರ್ಮಗಳನ್ನೆಲ್ಲಾ ದ್ವೇಷ, ತ್ವೇಷಗಳಿಂದ ತ್ಯಜಿಸಿದರೆ, ಇಂದ್ರಿಯಗಳ ಸ್ವಭಾವಗಳು ನಷ್ಟವಾಗುವುವೋ? ।೬೫॥

ಹೇಳು ನೋಡೋಣ, ಕಿವಿಯು ಕೇಳುವುದು ಬಿಟ್ಟಿದೆಯೇ? ಕಣ್ಣುಗಳಲ್ಲಿಯ ದೃಷ್ಟಿ ನಷ್ಟವಾಗಿದೆಯೇ? ಪರಿಮಳ ಸ್ವೀಕರಿಸಲಾರೆ ಎಂದು ಮೂಗಿನ ಸೊಳ್ಳೆಗಳು ಮುಚ್ಚಿಕೊಂಡಿವೆಯೇ? ।೬೬॥

ಅಥವಾ ಪ್ರಾಣಾಪಾನಗಳ ಗತಿಯು ನಿಂತು ಹೋಗಿದೆಯೇ? ಮನಸ್ಸು ಕಲ್ಪಿಸುವುದು ಬಿಟ್ಟಿದೆಯೇ? ಮತ್ತೆ ಹಸಿವೆ ನೀರಡಿಕೆಯ ಇಚ್ಛೆಯು ಇಲ್ಲದಂತಾಗಿದೆಯೇ? ।೬೭॥

ಸ್ವಪ್ನ ಜಾಗೃತಿಯ ಅವಸ್ಥೆಗಳು ಇಲ್ಲದಂತಾಗಿವೆಯೇ? ಅಥವಾ ಕಾಲುಗಳು ನಡೆಯುವುದನ್ನು ಮರೆತಿವೆಯೇ? ಇಷ್ಟೇ ಅಲ್ಲ, ಜನ್ಮ ಮರಣಗಳು ಇಲ್ಲದಾಗಿವೆಯೆ? ।೬೮॥

ಹೇ ನ ಠಕೇಚಿ ಜರೀ ಕಾಂಹೀ । ತರೀ ಸಾಂಡಿಲೇ ತೇ ಕಾಯೀ । ಮ್ಹಣೌನಿ ಕರ್ಮತ್ಯಾಗು ನಾಹೀ । ಪ್ರಕೃತಿಮಂತಾ ॥೮೮॥ ಕರ್ಮ ಪರಾಧೀನಪಣೇ । ನಿಪಜತಸೇ ಪ್ರಕೃತಿಗುಣೇ । ಯೇರಿ ಧರೀ ಮೋಕಲೀ ಅಂತಃಕರಣೇ । ವಾಹಿಜೇ ವಾಯಾ ॥೮೯॥ ದೇಖೈ ರಥೀ ಆರೂಢಿಜೇ । ಮಗ ಜರೀ ನಿಶ್ಚಳಾ ಬೈಸಿಜೇ । ತರೀ ಚಳು ಹೋಊನಿ ಹಿಂಡಿಜೇ । ಪರತಂತ್ರಾ ॥೯೦॥ ಕಾ ಉಚಲಿಲೇ ವಾಯುವಶೇ । ಚಳೇ ಶುಷ್ಕ ಪತ್ರ ಜೈಸೇ । ನಿಚೇಷ್ಟ ಆಕಾಶೇ । ಪರಿಭ್ರಮೇ ॥೯೧॥ ತೈಸೇ ಪ್ರಕೃತಿ ಆಧಾರೇ । ಕರ್ಮೇಂದ್ರಿಯವಿಕಾರೇ । ನೈಷ್ಕರ್ಮ್ಯಹೀ ವ್ಯಾಪಾರೇ । ನಿರಂತರ ॥೯೨॥ ಮ್ಹಣೌನಿ ಸಂಗು ಜಂವ ಪ್ರಕೃತೀಚಾ । ತಂವವರೀ ತ್ಯಾಗು ನ ಘಡೇ ಕರ್ಮಾಚಾ । ಐಸಿಯಾಹಿ ಕರೂ ಮ್ಹಣತೀ ತಯಾಂಚಾ । ಆಗ್ರಹೋಚಿ ಉರೇ ॥೯೩॥

ಕರ್ಮೇಂದ್ರಿಯಾಣಿ ಸಂಯಮ್ಯ ಆಸ್ತೇ ಮನಸಾ ಸ್ಮರನ್ ।
ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥೬॥

ಜೇ ಉಚಿತ ಕರ್ಮ ಸಾಂಡಿತೀ । ಮಗ ನೈಷ್ಕರ್ಮ್ಯ ಹೋಊ ಪಾಹತೀ । ಪರೀ ಕರ್ಮೇಂದ್ರಿಯಪ್ರವೃತ್ತೀ । ನಿರೋಧುನೀ ॥೯೪॥ ತಯಾ ಕರ್ಮತ್ಯಾಗು ನ ಘಡೇ । ಜೇ ಕರ್ತವ್ಯ ಮನೀ ಸಾಂಪಡೇ । ವರೀ ನಟತೀ ತೇ ಫುಡೇ । ದರಿದ್ರ ಜಾಣ ॥೯೫॥ ಐಸೇ ತೇ ಪಾರ್ಥಾ । ವಿಷಯಾಸಕ್ತ ಸರ್ವಥಾ । ಒಳಖಾವೇ ತತ್ತ್ವತಾ । ಭ್ರಾಂತಿ ನಾಹೀ ॥೯೬॥ ಆತಾ ದೇಈ ಅವಧಾನ । ಪ್ರಸಂಗೇ ತುಜ ಸಾಂಗೇನ । ಯಾ ನೈರಾಶ್ಯಾಚೇ ಚಿನ್ಹ । ಧನುರ್ಧರಾ ॥೯೭॥

ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।
ಕರ್ಮೇಂದ್ರಿಯೈಃ ಕರ್ಮಯೋಗಂ ಅಸಕ್ತಃ ಸ ವಿಶಿಷ್ಯತೇ ॥೭॥

ಜೋ ಅಂತರೀ ದೃಢ । ಪರಮಾತ್ಮರೂಪೀ ಗೂಢ । ಬಾಹ್ಯ ಭಾಗೂ ತರೀ ರೂಢ । ಲೌಕಿಕು ಜೈಸಾ ॥೯೮॥ ತೋ ಇಂದ್ರಿಯಾ ಆಜ್ಞಾ ನ ಕರೀ । ವಿಷಯಾಂಚೇ ಭಯ ನ ಧರೀ । ಪ್ರಾಪ್ತ ಕರ್ಮ ನಾವ್ಹೇರೀ । ಉಚಿತ ಜೇ ಜೇ ॥೯೯॥ ತೋ ಕರ್ಮೇಂದ್ರಿಯೇ ಕರ್ಮೀ । ರಾಹಟತಾ ತರೀ ನ ನಿಯಮೀ । ಪರೀ ತೇಥೀಚೇನಿ ಊರ್ಮೀ । ಝಾಂಕೋಳೇನಾ ॥೧೦೦॥ ತೋ ಕಾಮನಾಮಾತ್ರೇ ನ ಘೇಪೇ । ಮೋಹಮಳೇ ನ ಲಿಂಪೇ । ಜೈಸೇ ಜಳೀ ಜಳೇ ನ ಶಿಂಪೇ । ಪದ್ಮ ಪತ್ರ ॥೧೦೧॥

ಅಂದಮೇಲೆ, ಈ ಇಂದ್ರಿಯಗಳ ವ್ಯಾಪಾರವು ನಿಲ್ಲುವುದಿಲ್ಲ ಎಂದಾದರೆ, ತ್ಯಜಿಸಿದ್ದಾದರೂ ಏನು? (ದೇಹಾಭಿಮಾನ ಇರುವುದರಿಂದ ಕರ್ಮ ತ್ಯಾಗ ಎಂದೂ ಆಗುವುದಿಲ್ಲ) ।೫೮॥

ಕರ್ಮವು ಪರಾಧೀನತೆಯಿಂದ ಪ್ರಕೃತಿಯ ಗುಣಗಳೊಂದಿಗೆ ಆಗುತ್ತಿರುತ್ತದೆ. ಆದ್ದರಿಂದ ನಾನು ಕರ್ಮ ಮಾಡುವೆ ಅಥವಾ ಬಿಡುವೆ ಎಂದು ತಿಳಿದುಕೊಳ್ಳುವುದು ವ್ಯರ್ಥವಿದೆ ।೫೯॥

ಇಲ್ಲಿ ನೋಡು, ರಥ (ವಾಹನ) ದಲ್ಲಿ ಕುಳಿತಿರುವಾಗ್ಗೆ ನಡೆಯದೇ ಸುಮ್ಮನೇ ಇದ್ದರೂ, ರಥದ ಪರಾಧೀನತೆಯಿಂದ ನಡೆಯದೇ ನಡೆದ ಪ್ರವಾಸವಾಗುವುದು ।೬೦॥

ಅಥವಾ ಒಣಗಿದ ಎಲೆಗಳು ಬಿದ್ದಲೇ ಬಿದ್ದಿರಬೇಕು. ಆದರೆ ಅವು ಗಾಳಿಯ ವೇಗದ ಆಧೀನವಾಗಿ ಆಕಾಶದಲ್ಲಿ ಹಾರಾಡುವುವು ।೬೧॥

ಅದರಂತೆ ಮಾಯೆಯ ಆಶ್ರಯ ಪಡೆದು ಕರ್ಮೇಂದ್ರಿಯಗಳ ವಿಕಾರದಿಂದ ನೈಷ್ಕರ್ಮ ಸ್ಥಿತಿಗೆ ಹೋಗಿ ಮುಟ್ಟಿದ ಪುರುಷನಿಗೂ ಸತತವಾಗಿ ಶಾರೀರಿಕ ಕರ್ಮ ಮಾಡಬೇಕಾಗುವುದು ।೬೨॥

ಆದ್ದರಿಂದ ಎಲ್ಲಿಯವರೆಗೆ ಮಾಯೆಯ ಸಂಬಂಧ ವಿದೆಯೋ ಅಲ್ಲಿಯವರೆಗೆ ಕರ್ಮದ ತ್ಯಾಗ ಮಾಡಲು ಬರುವುದಿಲ್ಲ. ಒಂದುವೇಳೆ ಕರ್ಮದ ತ್ಯಾಗ ಮಾಡುವೆ ಎಂದರೆ (ಆಗ್ರಹ) ಹಠ ಮಾತ್ರ ಹಾಗೆಯೇ ಉಳಿಯುವುದು ।೬೩॥

ಶ್ಲೋಕಾರ್ಥ :- ಕರ್ಮೇಂದ್ರಿಯಗಳನ್ನು ತಡೆದು ಮನಸ್ಸಿನಲ್ಲಿ ವಿಷಯಗಳನ್ನು ಚಿಂತಿಸುವ ಮೂಢಾತ್ಮನು ಕಪಟಾಚಾರಿ ಎನ್ನಿಸಿಕೊಳ್ಳುವನು ।೬॥

ವಿಹಿತ ಕರ್ಮದ ತ್ಯಾಗ ಮಾಡಿ ಕರ್ಮೇಂದ್ರಿಯಗಳ ನಿಗ್ರಹ ಮಾಡುತ್ತಾ ಇಷ್ಟರಿಂದಲೇ ಕರ್ಮಾತೀತನಾಗಲು ಇಚ್ಛಿಸುತ್ತಾನೆ ।೬೪॥

ಆತನಿಗೆ ಕರ್ಮತ್ಯಾಗವು ಸಾಧಿಸುವುದಿಲ್ಲ. ಏಕೆಂದರೆ, ಆತನ ಮನಸ್ಸಿನಲ್ಲಿ ಕರ್ತವ್ಯದ ಶೇಷ ಉಳಿದು ಕರ್ಮಾತೀತನಾದಂತೆ ನಟನೆ ಮಾಡುತ್ತಾನೆ. ಆತನು ಶುದ್ಧ ದರಿದ್ರನಾಗಿರುತ್ತಾನೆ ।೬೫॥

ಪಾರ್ಥಾ, ಈ ಪ್ರಕಾರವಾಗಿ ಕರ್ಮತ್ಯಾಗದ ನಟನೆ ಮಾಡುವವರು ಯಾವಾಗಲೂ ವಿಷಯಾಸಕ್ತರಾಗಿರುತ್ತಾರೆ. ಹೀಗೆ ನೀನು ನಿಃಸಂಶಯವಾಗಿ ತಿಳಿ ।೬೬॥

ಅರ್ಜುನಾ ಈಗ ಲಕ್ಷ ಕೊಡು. ಪ್ರಸಂಗಾನುಸಾರ ನಿನಗೆ ನಿಜವಾದ ನಿರಿಚ್ಛ ಪುರುಷನ ಲಕ್ಷಣಗಳನ್ನು ಹೇಳುತ್ತೇನೆ ।೬೭॥

ಶ್ಲೋಕಾರ್ಥ :- ಅರ್ಜುನಾ! ಇಂದ್ರಿಯಗಳನ್ನು ಮನಸ್ಸಿನಿಂದ ನಿಗ್ರಹಿಸಿ, ಫಲಾಸೆಯಿಲ್ಲದೆ ಕರ್ಮೇಂದ್ರಿಯಗಳಿಂದ ಕರ್ಮಭೋಗವನ್ನು ಆಚರಿಸುವವನು ಉತ್ತಮನು ।೭॥

ಯಾರು ಅಂತಃಕರಣದಲ್ಲಿ ನಿಶ್ಚಯಪೂರ್ವಕವಾಗಿ ದೃಢರಾಗಿ ಪರಮಾತ್ಮ ಸ್ವರೂಪದಲ್ಲಿ ಲೀನರಾಗಿರುತ್ತಾರೆಯೋ, ಅವರು ಬಾಹ್ಯದಲ್ಲಿ ಲೋಕಾಚಾರದಂತೆ ನಟಿಸಿ ನಡೆಯುತ್ತಾರೆ ।೬೮॥

ಅವರು (ವಿಷಯ ಭೋಗಕ್ಕಾಗಿ) ಇಂದ್ರಿಯಗಳಿಗೆ ಆಜ್ಞೆ ಮಾಡುವುದಿಲ್ಲ. ಯೋಗ್ಯವಾಗಿರುವ ಪ್ರಾಪ್ತ ಕರ್ಮಗಳನ್ನು ತ್ಯಾಗ ಮಾಡುವುದಿಲ್ಲ ।೬೯॥

ಅವರು ಕರ್ಮೇಂದ್ರಿಯಗಳು ಕರ್ಮಗಳನ್ನು ಮಾಡುತ್ತಿರುವಾಗ್ಗೆ ಅವುಗಳನ್ನು ಬಿಡಿಸುವ ಪ್ರಯತ್ನ ಮಾಡುವುದಿಲ್ಲ. ಆದರೆ, ಕರ್ಮದ ಅಭಿಮಾನ ಫಲಾಶೆಯಿಂದ ವಿಕಾರ ಹೊಂದುವುದಿಲ್ಲ ।೭೦॥

ಅವರು ಯಾವ ಕಾಮನೆಗಳಿಗೂ ಆಧೀನರಾಗಿರುವುದಿಲ್ಲ. ಯಾವ ವಾಸನೆಗೂ ಆಸ್ಪದ ಕೊಡುವುದಿಲ್ಲ. ಯಾವಾಗಲೂ ನೀರಿನಲ್ಲಿಯೇ ಇರುವ ಕಮಲದ ಎಲೆಯು ನೀರನ್ನು ಅಂಟಿಕೊಳ್ಳದಂತೆ ಇರುವುದೋ ।೭೧॥

ತೈಸಾ ಸಂಸರ್ಗಾಮಾಜಿ ಅಸೇ । ಸಕಳಾಸಾರಿಖಾ ದಿಸೇ । ಜೈಸೇ ತೋಯಸಂಗೇ ಆಭಾಸೇ । ಭಾನುಬಿಂಬ ॥೭೨॥ ತೈಸಾ ಸಾಮಾನ್ಯತ್ವೇ ಪಾಹಿಜೇ । ತರೀ ಸಾಧಾರಣುಚಿ ದೇಖಿಜೇ । ಯೇರ್ಹವೀ ನಿರ್ಧಾರಿತಾ ನೇಣಿಜೇ । ಸೋಯ ಜಯಾಚೀ ॥೭೩॥ ಐಸಾ ಚಿನ್ಹೀ ಚಿನ್ಹಿತು । ದೇಖಸೀ ತೋಚಿ ಮುಕ್ತು । ಆಶಾಪಾಶರಹಿತು । ವೋಳಖ ಪಾ ॥೭೪॥ ಅರ್ಜುನಾ ತೋಚಿ ಯೋಗೀ । ವಿಶೇಷಿಜೇ ಜೋ ಜಗೀ । ಮ್ಹಣೌನಿ ಐಸಾ ಹೋಯ ಯಾಲಾಗೀ । ಮ್ಹಣಿಪೇ ತೂತೇ ॥೭೫॥ ತೂ ಮಾನಸಾ ನಿಯಮು ಕರೀ । ನಿಶ್ಚಳು ಹೋಯ ಅಂತರೀ । ಮಗ ಕರ್ಮೇಂದ್ರಿಯೇ ವ್ಯಾಪಾರೀ । ವರ್ತುತು ಸುಖೇ ॥೭೬॥

ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ ।
ಶರೀರಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ॥೮॥

ಮ್ಹಣೌನಿ ನೈಷ್ಕರ್ಮ್ಯ ಹೋಆವೇ । ತರೀ ಏಥ ತೇ ನ ಸಂಭವೇ । ಆಣಿ ನಿಷಿದ್ಧ ಕೇವಿ ರಾಹಾಟಾವೇ । ವಿಚಾರೀ ಪಾ? ॥೭೭॥ ಮ್ಹಣೌನಿ ಜೇ ಜೇ ಉಚಿತ । ಆಣಿ ಅವಸರೇ ಕರೂನೀ ಪ್ರಾಪ್ತ । ತೇ ಕರ್ಮ ಹೇತುರಹಿತ । ಆಚರೇ ತೂ ॥೭೮॥ ಪಾರ್ಥಾ ಆಣೀಕಹೀ ಏಕ । ನೇಣಸೀ ತೂ ಹೇ ಕವತಿಕ । ಜೇ ಐಸೇ ಕರ್ಮ ಮೋಚಕ । ಆಪೈಸೇ ಅಸೇ ॥೭೯॥ ದೇಖೈ ಅನುಕ್ರಮಾಧಾರೇ । ಸ್ವಧರ್ಮು ಜೋ ಆಚರೇ । ತೋ ಮೋಕ್ಷು ತೇಣೇ ವ್ಯಾಪಾರೇ । ನಿಶ್ಚಿತ ಪಾವೇ ॥೮೦॥

ಯಜ್ಞಾರ್ಥಾತ್ ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ ।
ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚಾರ ॥೯॥

ಸ್ವಧರ್ಮು ಜೋ ಬಾಪಾ । ತೋಚಿ ನಿತ್ಯಯಜ್ಞು ಜಾಣ ಪಾ । ಮ್ಹಣೌನಿ ವರ್ತತಾ ತೇಥ ಪಾಪಾ । ಸಂಚಾರು ನಾಹೀ ॥೮೧॥ ಹಾ ನಿಜಧರ್ಮು ಜೈ ಸಾಂಡೇ । ಆಣಿ ಕುಕರ್ಮೀ ರತಿ ಘಡೇ । ತೈಂಚಿ ಬಂಧು ಪಡೇ । ಸಂಸಾರಿಕಾ ॥೮೨॥ ಮ್ಹಣೌನಿ ಸ್ವಧರ್ಮಾನುಷ್ಠಾನ । ತೇ ಅಖಂಡ ಯಜ್ಞ ಯಾಜನ । ಜೋ ಕರೀ ತಯಾ ಬಂಧನ । ಕಾಹೀಂಚ ನ ಘಡೇ ॥೮೩॥ ಹಾ ಲೋಕು ಕರ್ಮೇ ಬಾಂಧಿಲಾ । ಜೋ ಪರತಂತ್ರಾಭೂತ ಝಾಲಾ । ತೋ ನಿತ್ಯ ಯಜ್ಞಾತೇ ಚುಕಲಾ । ಮ್ಹಣೌನಿಯಾ ॥೮೪॥ ಆತಾ ಯೇಚಿವಿಶೀ ಪಾರ್ಥಾ । ತುಜ ಸಾಂಗೇನ ಏಕ ಮೀ ಕಥಾ । ಜೈ ಸೃಷ್ಟ್ಯಾದಿ ಸಂಸ್ಥಾ । ಬ್ರಹ್ಮೇನೇ ಕೇಲೀ ॥೮೫॥

ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।
ಅನೇನ ಪ್ರಸವಿಷ್ಯಧ್ವಮ್ ಏಷ ವೋಽಸ್ತ್ವಿಷ್ಟಕಾಮಧುಕ್ ॥೧೦॥

ಅದರಂತೆ ಅವರು ಸಂಸಾರದಲ್ಲಿದ್ದು ಇತರ ಲೌಕಿಕರಂತೆ ಕಾಣುವರು. ಯಾವ ಪ್ರಕಾರವಾಗಿ ಸೂರ್ಯನು ನೀರಿನ ಸಂಗತಿಯಲ್ಲಿರುವಂತೆ ಕಾಣುತ್ತಾನೆಯೋ ||೭೨||

ಅದರಂತೆ ಅವರು ಮೇಲ್ನೋಟಕ್ಕೆ ಸಾಧಾರಣ ಮನುಷ್ಯರಂತೆ ಕಾಣುವರು. ವಿಚಾರಿಸಿ ನೋಡಿದಾಗ ಅವರ ನಿಜಸ್ಥಿತಿ ತಿಳಿಯಲಾರದು ||೭೩||

ಯಾರು ಈ ಲಕ್ಷಣಗಳಿಂದ ಕೂಡಿರುವರೋ ಹಾಗೂ ನಿರಿಚ್ಛೆಯಿಂದ ಇರುವರೋ, ಅವರೇ ಯೋಗಿಗಳು ಅವರೇ ಮುಕ್ತರು ಎಂದು ತಿಳಿ ||೭೪||

ಅರ್ಜುನಾ ಅವರೇ (ಕರ್ಮ) ಯೋಗಿಗಳು. ಜಗತ್ತಿನಲ್ಲಿ ಇವರೇ ಸ್ತುತಿಗೆ ಪಾತ್ರರಾಗಿರುತ್ತಾರೆ. ಆದಕಾರಣ ನೀನೂ ಸಹ ಇವರಂತಾಗು ಎಂದು ಹೇಳುತ್ತಿರುವೆ ||೭೫||

ನೀನು ಮನಸ್ಸನ್ನು ನಿಗ್ರಹಿಸು. ಅಂತಃಕರಣದಲ್ಲಿ ಸ್ಥಿರನಾಗು. ಹೀಗಾದ ಮೇಲೆ ಕರ್ಮೇಂದ್ರಿಯಗಳು ತಮ್ಮ ತಮ್ಮ ಕಾರ್ಯಗಳನ್ನು ಸುಖವಾಗಿ ಮಾಡುತ್ತಿರಲಿ ||೭೬||

ಶ್ಲೋಕಾರ್ಥ :- ಕರ್ತವ್ಯ ಕರ್ಮವನ್ನು ಮಾಡು, ಮಾಡದೆಯೇ ಇರುವುದಕ್ಕಿಂತ ಮಾಡುವುದು ಮೇಲು. ಕರ್ಮಗಳನ್ನು ಮಾಡದೇ ಇದ್ದರೆ ನಿನ್ನ ಜೀವನ ಯಾತ್ರೆಯೂ ನಡೆಯದು ||೮||

ಆದ್ದರಿಂದ ಕರ್ಮರಹಿತನಾಗುವುದು ಸಂಸಾರದಲ್ಲಿ ಸಾಧ್ಯವಾಗುವುದಿಲ್ಲ. ಅಂದಮೇಲೆ ಶಾಸ್ತ್ರ ವಿರುದ್ಧ ಏಕೆ ಆಚರಿಸಬೇಕು ? ಇದನ್ನು ವಿಚಾರಿಸಿ ನೋಡು ||೭೭||

ಅದಕ್ಕಾಗಿ ಯೋಗ್ಯವಾಗಿರುವ ಹಾಗೂ ಸಮಯಾನುಸಾರ ಪ್ರಾಪ್ತವಾದ ಕರ್ಮಗಳೆಲ್ಲವನ್ನು ನಿಷ್ಕಾಮ ಬುದ್ಧಿಯಿಂದ ಮಾಡು ||೭೮||

ಅರ್ಜುನಾ, ಇನ್ನೊಂದು ಸೋಜಿಗದ ವಿಷಯ ನಿನಗೆ ಗೊತ್ತಿಲ್ಲ. ನಿಷ್ಕಾಮ ಬುದ್ಧಿಯಿಂದ ಮಾಡಿದ ಕರ್ಮಗಳು ಕರ್ಮ ಬಂಧನದಿಂದ ಬಿಡಿಸುವುವು ||೭೯||

ಅವರವರ, ಅಧಿಕಾರದಂತೆ ಸ್ವಧರ್ಮವನ್ನು ಯಾರು ಆಚರಿಸುವರೋ ಅವರು ಅದೇ ಆಚರಣೆಯ ಬಲದಿಂದ ನಿಶ್ಚಯವಾಗಿ ಮೋಕ್ಷ ಹೊಂದುವರು. ಇದನ್ನು ನೀನು ವಿಚಾರಿಸಿ ತಿಳಿದುಕೊ ||೮೦||

ಶ್ಲೋಕಾರ್ಥ :- ಯಜ್ಞರೂಪವಾದ ಕರ್ಮಗಳ ವಿನಃ ಮಿಕ್ಕವುಗಳು ಜನರಿಗೆ ಬಂಧನವನ್ನುಂಟು ಮಾಡುತ್ತವೆ. ಆದುದರಿಂದ ಹೇ ಕೌಂತೇಯಾ! ಆಸಕ್ತಿಯನ್ನು ಬಿಟ್ಟು ಯಜ್ಞಾರ್ಥವಾಗಿ ಕರ್ಮವನ್ನು ಮಾಡು ||೯||

ಅಪ್ಪಾ, ಅರ್ಜುನಾ! ತಮ್ಮ ತಮ್ಮ ಧರ್ಮ ಪ್ರಕಾರ ಕರ್ಮ ಆಚರಿಸುವುದೇ ನಿತ್ಯ ಯಜ್ಞವಾಗಿರುವುದು. ಆದ್ದರಿಂದ ಈ ವರ್ತನೆಯಿಂದ ಅದರಲ್ಲಿ ಪಾಪದ ಪ್ರವೇಶವಾಗಲಾರದು ||೮೧||

ಸ್ವಧರ್ಮದ ತ್ಯಾಗ ಮಾಡಿದಾಗ ಕೆಟ್ಟ ಕಾರ್ಯಗಳಿಗೆ ಮನಸ್ಸಾಗುವುದು. ಅದರಿಂದ ಜನ್ಮ ಮರಣಗಳ ಬಂಧನದಲ್ಲಿ ರಬೇಕಾಗುವುದು ||೮೨||

ಆದ್ದರಿಂದ ಸ್ವಧರ್ಮದಂತೆ ಕರ್ಮಾಚರಣೆಯು ಅಖಂಡ ಯಜ್ಞವಾಗಿರುವುದು ಮತ್ತು ಯಾರು ಈ ಯಜ್ಞ ಆಚರಿಸುವರೋ ಅವರಿಗೆ ಯಾವ ತರಹದ ಬಂಧನ ವಿರುವುದಿಲ್ಲ ||೮೩||

ಈ ಎಲ್ಲ ಜಗವು ಕರ್ಮದಿಂದ ಬಂಧಿಸಲ್ಪಟ್ಟಿದೆ. ಯಾರು ಸ್ವಧರ್ಮವನ್ನು ಬಿಟ್ಟಿರುವರೋ ಅವರೇ ಮಾಯಾ ಪಾಶದಲ್ಲಿ ಸಿಲುಕಿರುವರು ||೮೪||

ಪಾರ್ಥಾ! ಈಗ ಇದೇ ವಿಷಯವಾಗಿ ನಾನು ನಿನಗೊಂದು ಕಥೆ ಹೇಳುವೆ ಕೇಳು. ಬ್ರಹ್ಮದೇವನು ಎಂದು ಸೃಷ್ಟಿ ಮಾಡಿದನೋ ||೮೫||

ಶ್ಲೋಕಾರ್ಥ :- ಮೊದಲು ಪ್ರಜಾಪತಿ ಬ್ರಹ್ಮನು ಯಜ್ಞಗಳೊಂದಿಗೆ ಪ್ರಜೆಗಳನ್ನು ಸೃಷ್ಟಿಸಿ ''ಈ ಯಜ್ಞದಿಂದ ನೀವು ಸಮೃದ್ಧಿಯನ್ನು ಪಡೆಯಿರಿ. ಇದು ನಿಮ್ಮ ಸಕಲ ಇಷ್ಟಾರ್ಥಗಳನ್ನು ದೊರಕಿಸುವ ಕಾಮಧೇನುವು'' ಎಂದು ಹೇಳಿದನು ||೧೦||

ತೈ ನಿತ್ಯ ಯಾಗ ಸಹಿತೇ । ಸೃಜಿಲೀ ಭೂತೇ ಸಮಸ್ತೇ । ಪರೀ ನೇಣತೀಚಿ ತಿಯೇ ಯಜ್ಞಾತೇ । ಸೂಕ್ಷ್ಮ ಮ್ಹಣೌನಿ ॥೮೬॥ ತೇ ವೇಳಿ ಪ್ರಜೀ ವಿನವಿಲಾ ಬ್ರಹ್ಮಾ । ದೇವಾ ಕಾಯ ಆಶ್ರಯೋ ಏಥ ಆಮ್ಹಾ । ತವ ಮ್ಹಣೇ ತೋ ಕಮಳ ಜನ್ಮಾ । ಭೂತಾಂಪ್ರತಿ ॥೮೭॥ ತುಮ್ಹಾ ವರ್ಣವಿಶೇಷವಶೇ । ಆಮ್ಹೀ ಹಾ ಸ್ವಧರ್ಮುಚಿ ವಹಿಲಾ ಅಸೇ । ಯಾತೇ ಉಪಾಸಾ ಮಗ ಆಪೈಸೇ । ಪುರತೀ ಕಾಮ ॥೮೮॥ ತುಮ್ಹೀ ವ್ರತೇ ನಿಯಮು ನ ಕರಾವೇ । ಶರೀರಾತೇ ನ ಪೀಡಾವೇ । ದುರೀ ಕೇಹೀ ನ ವಚಾವೇ । ತೀರ್ಥಾಸೀ ಗಾ ॥೮೯॥ ಯೋಗಾದಿಕೇ ಸಾಧನೇ । ಸಾಕಾಂಕ್ಷ ಆರಾಧನೇ । ಮಂತ್ರಯಂತ್ರವಿಧಾನೇ । ಝುಣೇ ಕರಾ ॥೯೦॥ ದೇವತಾಂತರಾ ನ ಭಜಾವೇ । ಹೇ ಸರ್ವಥಾ ಕಾಂಹೀ ನ ಕರಾವೇ । ತುಮ್ಹೀ ಸ್ವಧರ್ಮಯಜ್ಞೀ ಯಜಾವೇ । ಅನಾಯಾಸೇ ॥೯೧॥ ಅಹೇತುಕೇ ಚಿತ್ತೇ । ಅನುಷ್ಠಾ ಪಾ ಯಯಾತೇ । ಪತಿವ್ರತಾ ಪತೀತೇ । ಜಿಯಾ ಪರೀ ॥೯೨॥ ತೈಸಾ ಸ್ವಧರ್ಮರೂಪ ಮುಖು । ಹಾಚಿ ಸೇವ್ಯ ತುಮ್ಹಾ ಏಕು । ಐಸೇ ಸತ್ಯಲೋಕ ನಾಯಕು । ಬೋಲತಾ ಜಾಹಲಾ ॥೯೩॥ ದೇಖಾ ಸ್ವಧರ್ಮಾತೇ ಭಜಾಲ । ತರೀ ಕಾಮಧೇನು ಹಾ ಹೋಈಲ । ಮಗ ಪ್ರಜಾಹೋ ನ ಸಂಡೀಲ । ತುಮತೇ ಕದಾ ॥೯೪॥

ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ ।
ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥೧೧॥

ಜೇ ಯೇಣೇ ಕರೂನಿ ಸಮಸ್ತಾ । ಪರಿತೋಷು ಹೋಈಲ ದೇವತಾ । ಮಗ ತೇ ತುಮ್ಹಾ ಈಪ್ಸಿತಾ । ಅರ್ಥಾತೇ ದೇತೀ ॥೯೫॥ ಯಾ ಸ್ವಧರ್ಮಪೂಜಾ ಪೂಜಿತಾ । ದೇವತಾಗಣಾ ಸಮಸ್ತಾ । ಯೋಗಕ್ಷೇಮು ನಿಶ್ಚಿತಾ । ಕರಿತೀ ತುಮಚಾ ॥೯೬॥ ತುಮ್ಹೀ ದೇವಾಂತೇ ಭಜಾಲ । ದೇವ ತುಮ್ಹಾ ತುಷ್ಟತೀಲ । ಐಸೀ ಪರಸ್ಪರೇ ಘಡೇಲ । ಪ್ರೀತಿ ಜೇಥ ॥೯೭॥ ತೇಥ ತುಮ್ಹೀ ಜೇ ಕರೂ ಮ್ಹಣಾಲ । ತೇ ಆಪೈಸೇ ಸಿದ್ಧಿ ಜಾಈಲ । ವಾಂಛಿತಹೀ ಪುರೇಲ । ಮಾನಸೀಂಚೇ ॥೯೮॥ ವಾಚಾಸಿದ್ಧಿ ಪಾವಾಲ । ಆಜ್ಞಾಪಕ ಹೋಆಲ । ಮ್ಹಣಿಯೇ ತುಮತೇ ಮಾಗತೀಲ ।ಮಹಾಋದ್ಧೀ ॥೯೯॥ ಜೈಸೇ ಋತುಪತೀಚೇ ದ್ವಾರ । ವನಶ್ರೀ ನಿರಂತರ । ವೋಳಗೇ ಫಳಭಾರ । ಲಾವಣ್ಯೇಸೀ ॥೧೦೦॥

ಇಷ್ಟಾನ್ ಭೋಗಾನ್ ಹಿ ವೋ ದೇವಾಃ ದಾಸ್ಯಂತೇ ಯಜ್ಞಭಾವಿತಾಃ ।
ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥೧೨॥

ಆಗ ಪ್ರಾಣಿಗಳನ್ನು ಹಾಗೂ ನಿತ್ಯ ಆಚರಣೆಯ ಧರ್ಮವನ್ನು ಹೀಗೆ ಎರಡನ್ನೂ ಸಮಾನವಾಗಿ ಉತ್ಪನ್ನ ಮಾಡಿದನು. ಆದರೆ ಅದು ಗಹನವಾದ್ದರಿಂದ ಪ್ರಾಣಿಗಳಿಗೆ ತಿಳಿಯಲಿಲ್ಲ ॥೮೬॥

ಆಗ ಎಲ್ಲರೂ ಬ್ರಹ್ಮದೇವನನ್ನು ಕುರಿತು ಹೀಗೆ ಪ್ರಾರ್ಥಿಸಿದರು ''ಬ್ರಹ್ಮದೇವನೇ, ನಮಗೆ ಯಾವ ಕಾರ್ಯದಿಂದ ತರುಣೋಪಾಯವಿದೆ''? ಆಗ ಭಗವಾನನ ನಾಭಿ ಕಮಲದಲ್ಲಿ ಉದ್ಭವಿಸಿದ ಬ್ರಹ್ಮದೇವನು ಅವರಿಗೆ ತಿಳಿಯಪಡಿಸಹತ್ತಿದನು ॥೮೭॥

ನಿಮ್ಮ ವರ್ಣಾಶ್ರಮ ಪ್ರಕಾರ ನಾವು ಮೊದಲೇ ಧರ್ಮವನ್ನು ನಿರ್ಮಿಸಿರುವೆವು. ಅದರಂತೆ ನೀವು ಆಚರಿಸಿರಿ. ಅಂದರೆ ನಿಮ್ಮ ಇಷ್ಟಾರ್ಥಗಳು ಸಿದ್ಧಿಗೊಳ್ಳುವುವು ॥೮೮॥

ನೀವು ವ್ರತ ನೇಮಗಳನ್ನು ಮಾಡಬೇಡಿರಿ ಉಪವಾಸ ಮಾಡಿ ಶರೀರಕ್ಕೆ ಕಷ್ಟ ಕೊಡದಿರಿ ಮತ್ತು ತೀರ್ಥಯಾತ್ರೆ ಮಾಡುವ ಶ್ರಮ ವಹಿಸದಿರಿ ॥೮೯॥

ಯಾಗಾದಿಗಳ ಸಾಧನೆ, ಕಾಮನಿಕ ಆರಾಧನೆ, ತಂತ್ರ ಮಂತ್ರ ಅನುಷ್ಠಾನಗಳ ಬೆನ್ನು ಹತ್ತಬೇಡಿರಿ ॥೯೦॥

ಬೇರೆ ಬೇರೆ ದೇವತೆಗಳ ಆರಾಧನೆ ಮಾಡಬೇಡಿರಿ. ಹಾಗೂ ಆ ವಿಷಯಕ್ಕೆ ಮಾತನಾಡದಿರಿ. ಅಂದರೆ ನೀವು ನಿಮ್ಮ ನಿಮ್ಮ ವರ್ಣಾಶ್ರಮ ಪ್ರಕಾರವಾಗಿ ಹೇಳಿದ ಧರ್ಮವನ್ನು ಸುಖದಿಂದ ಆಚರಿಸಿರಿ ॥೯೧॥

ಯಾವ ಪ್ರಕಾರವಾಗಿ ಪತಿವ್ರತೆ ಸ್ತ್ರೀಯು ತನ್ನ ಪತಿ ಸೇವೆಯನ್ನು ನಿಷ್ಕಾಮ ಬುದ್ಧಿಯಿಂದ ಮಾಡುತ್ತಾಳೆಯೋ ಅದರಂತೆ ನೀವು ನಿಮ್ಮ ಧರ್ಮಗಳನ್ನು ನಿಷ್ಕಾಮ ಬುದ್ಧಿಯಿಂದ ಆಚರಿಸಿರಿ ॥೯೨॥

ಸ್ವಧರ್ಮದ ಆಚರಣೆಯಿಂದ ಇದೊಂದೇ ನಿಮ್ಮ ಯಜ್ಞವಾಗಿರುವುದು. ಆದ್ದರಿಂದ ಇದೊಂದೇ ನಿಮಗೆ ಆಚರಿಸಲು ಯೋಗ್ಯವಾಗಿರುವುದು ॥೯೩॥

ಪ್ರಜೆಗಳಿರಾ! ನೀವು ಸ್ವಧರ್ಮದಿಂದ ಕರ್ಮಾಚರಣೆ ಮಾಡಿದರೆ, ಅದುವೇ ಕಾಮಧೇನುವಿನಂತೆ ನಿಮಗೆ ಇಷ್ಟ ಫಲಗಳನ್ನು ಕೊಡುವುದು. ಹಾಗೆಯೇ ಅದು ನಿಮ್ಮನ್ನು ಎಂದೂ ಕೈಬಿಡುವುದಿಲ್ಲ ॥೯೪॥

ಶ್ಲೋಕಾರ್ಥ :- ಈ ಯಜ್ಞ ಕರ್ಮಗಳಿಂದ ನೀವು ದೇವತೆಗಳನ್ನು ಆರಾಧಿಸಿರಿ. ಅವರು ಮಳೆ ಮೊದಲಾದವುಗಳಿಂದ ನಿಮ್ಮನ್ನು ತೃಪ್ತಿಪಡಿಸುವರು. ಈ ರೀತಿ ಪರಸ್ಪರ ಸಹಕಾರದಿಂದ ಪರಮ ಶ್ರೇಯಸ್ಸನ್ನು ಪಡೆಯಿರಿ (ಎಂದು ಹೇಳಿದನು) ॥೧೧॥

ಈ ಸ್ವಧರ್ಮದ ಆಚರಣೆಯಿಂದ ಎಲ್ಲ ದೇವತೆಗಳು ಸಂತೋಷಪಡುವರು ಮತ್ತು ನಿಮ್ಮ ಇಷ್ಟದಂತೆ ಫಲವನ್ನು ಕೊಡುವರು ॥೯೫॥

ಈ ಪ್ರಕಾರದ ಸ್ವಧರ್ಮ ಆಚರಣೆ ಎಂಬ ಪೂಜೆಯಿಂದ ಎಲ್ಲ ದೇವತೆಗಳ ಸಮೂಹವನ್ನು ಪೂಜಿಸಿದಲ್ಲಿ ಅವರು ನಿಮ್ಮ ಯೋಗಕ್ಷೇಮ (ಅಪ್ರಾಪ್ತ ವಸ್ತುಗಳ ಪ್ರಾಪ್ತಿ ಹಾಗೂ ಆದರ ರಕ್ಷಣೆ) ನೋಡಿಕೊಳ್ಳುವರು ॥೯೬॥

ನೀವು ದೇವತೆಯರನ್ನು ಭಜಿಸಿದರೆ ಅವರು ನಿಮ್ಮ ಮೇಲೆ ಸಂತುಷ್ಟರಾಗುವರು. ಈ ಪ್ರಕಾರವಾಗಿ ನಿಮ್ಮ ಅವರ ಪರಸ್ಪರ ಪ್ರೇಮ ಕೂಡುವುದರಿಂದ ॥೯೭॥

ಆಗ ನೀವು ಏನು ಮಾಡಬೇಕೆಂದು ಬಯಸುವಿರೋ ಅವೆಲ್ಲವೂ ಪೂರ್ಣಗೊಳ್ಳುವುವು ಮತ್ತು ನಿಮ್ಮ ಮನದಲ್ಲಿನ ಎಲ್ಲ ವಾಸನೆಗಳು ಸಿದ್ಧಿಗೊಳ್ಳುವುವು ॥೯೮॥

ವಾಕ್‌ಸಿದ್ಧಿ (ನುಡಿದದ್ದು ನಡೆಯುವ) ಸಾಮರ್ಥ್ಯ ಬರುವುದು. ಇನ್ನೊಬ್ಬರಿಗೆ ಆಜ್ಞಾಪಿಸುವವರಾಗುವಿರಿ, ಹಾಗೂ ಮಹಾಋದ್ಧಿಯು ನಿಮ್ಮ ಸೇವಕನಾಗಿ ಸೇವೆಗಾಗಿ ಕಾಯುತ್ತಿರುವುದು ॥೯೯॥

ಯಾವ ಪ್ರಕಾರವಾಗಿ ವಸಂತ ಋತುವಿನ ಬಾಗಿಲದಲ್ಲಿ ವನಶೋಭೆಯು ತನ್ನ ಫಲಪುಷ್ಪಗಳ ಲಾವಣ್ಯದಿಂದ ಸದಾ ಹಸಿರಾಗಿರುತ್ತದೆಯೋ ॥೧೦೦॥

ಶ್ಲೋಕಾರ್ಥ :- ಯಜ್ಞದಿಂದ ಸಂಭಾವಿಸಲ್ಪಟ್ಟ ದೇವತೆಗಳು ನಿಮಗೆ ಅಭೀಷ್ಟ ಭೋಗಗಳನ್ನು ಕೊಡುವರು. ಅವರು ಕೊಟ್ಟ ಭೋಗ ವಸ್ತುಗಳನ್ನು ಅವರಿಗೆ ನಿವೇದಿಸದೇ ಅನುಭವಿಸುವವನು ಚೋರನಾಗಿರುತ್ತಾನೆ ॥೧೨॥

ತೈಸೇ ಸರ್ವ ಸುಖೇಸಹಿತ । ದೈವಚಿ ಮೂರ್ತಿಮಂತ । ಯೇಈಲ ದೇಖಾ ಕಾಢತ । ತುಮ್ಹಾ ಪಾಠೀ ॥೧೦೧॥ ಐಸೇ ಸಮಸ್ತ ಭೋಗಭರಿತ । ಹೋಆಲ ತುಮ್ಹಿ ಅನಾರ್ತ । ಜರೀ ಸ್ವಧರ್ಮೀನಿರತ । ವರ್ತಾಲ ಬಾಪಾ ॥೧೦೨॥ ಕಾ ಜಾಲಿಯಾ ಸಕಳ ಸಂಪದಾ । ಜೋ ಅನುಸರೇಲ ಇಂದ್ರಿಯಮದಾ । ಲುಬ್ಧ ಹೋಊನೀ ಯಾ ಸ್ವಾದಾ । ವಿಷಯಾಂಚಿಯಾ ॥೧೦೩॥ ತೀಹೀ ಯಜ್ಞಭಾವಿಕೀಸುರೀ । ಜೇ ಹೇ ಸಂಪತ್ತಿ ದಿಧಲೀ ಪುರೀ । ತಯಾ ಸ್ವಧರ್ಮಿ ಸರ್ವೇಶ್ವರೀ । ನ ಭಜೇಲ ಜೋ ॥೧೦೪॥ ಅಗ್ನಿಮುಖೀಹವನ । ನ ಕರೀಲ ದೇವತಾ ಪೂಜನ । ಪ್ರಾಪ್ತವೇಳೇ ಭೋಜನ । ಬ್ರಾಹ್ಮಣಾಚೇ ॥೧೦೫॥ ವಿಮುಖ ಹೋಈಲ ಗುರುಭಕ್ತೀ । ಆದರ ನ ಕರೀಲ ಅತಿಥೀ । ಸಂತೋಷ ನೇದೀಲ ಜ್ಞಾತೀ । ಆಪುಲಿಯೇ ॥೧೦೬॥ ಐಸಾ ಸ್ವಧರ್ಮಕ್ರಿಯಾರಹಿತು । ಆಥಿಲೇಪಣೇ ಪ್ರಮತ್ತು । ಕೇವಳ ಭೋಗಾಸಕ್ತು । ಹೋಈಲ ಜೋ ॥೧೦೭॥ ತಯಾ ಮಗ ಅಪಾವೋ ಥೋರ ಆಹೇ । ಜೇಣೇ ತೇ ಹಾತೀಂಚೇ ಸಕಳ ಜಾಯೇ । ದೇಖಾ ಪ್ರಾಪ್ತಹೀ ನ ಲಾಹೇ । ಭೋಗ ಭೋಗೂ ॥೧೦೮॥ ಜೈಸೇ ಗತಾಯುಷೀ ಶರೀರೀ । ಚೈತನ್ಯ ವಾಸು ನ ಕರೀ । ಕಾ ನಿದೈವಾಚ್ಯಾ ಘರೀ । ನ ರಾಹೇ ಲಕ್ಷ್ಮೀ ॥೧೦೯॥ ತೈಸಾ ಸ್ವಧರ್ಮು ಜರೀ ಲೋಪಲಾ । ತರೀ ಸರ್ವ ಸುಖಾಂಚಾ ಥಾರಾ ಮೋಡಲಾ । ಜೈಸಾ ದೀಪಾಸವೇ ಹರಪಲಾ । ಪ್ರಕಾಶು ಜಾಯ ॥೧೧೦॥ ತೈಸೀ ನಿಜವೃತ್ತಿ ಜೇಥ ಸಾಂಡೇ । ತೇಥ ಸ್ವತಂತ್ರತೇ ವಸ್ತೀ ನ ಘಡೇ । ಆಇಕಾ ಪ್ರಜಾಹೋ ಹೇ ಫುಢೇ । ವಿರಂಚಿ ಮ್ಹಣೇ ॥೧೧೧॥ ಮ್ಹಣೌನಿ ಸ್ವಧರ್ಮು ಜೋ ಸಾಂಡೀಲ । ತಯಾತೇ ಕಾಳು ದಂಡೀಲ । ಚೋರು ಮ್ಹಣೌನಿ ಹರೀಲ । ಸರ್ವಸ್ವ ತಯಾಚೇ ॥೧೧೨॥ ಮಗ ಸಕಳ ದೋಷು ಭಂವತೇ । ಗಿವಸೋನಿ ಘೇತೀ ತಯಾತೇ । ರಾತ್ರಿ ಸಮಯೀ ಸ್ಮಶಾನಾತೇ । ಭೂತೇ ಜೈಸೀ ॥೧೧೩॥ ತೈಸೀ ತ್ರಿಭುವನೀಂಚೀ ದುಃಖೇ । ಆಣಿ ನಾನಾವಿಧೇ ಪಾತಕೇ । ದೈನ್ಯಜಾತ ತಿತುಕೇ । ತೇಥೇಂಚಿ ವಸೇ ॥೧೧೪॥ ಐಸೇ ಹೋಯ ತಯಾ ಉನ್ಮತ್ತಾ । ಮಗ ನ ಸುಟೇ ಬಾಪಾ ರುದತಾ । ಕಲ್ಪಾಂತೀಹೀ ಸರ್ವಥಾ । ಪ್ರಾಣಿಗಣ ಹೋ ॥೧೧೫॥ ಮ್ಹಣೌನಿ ನಿಜವೃತ್ತೀ ಹೇ ನ ಸಾಂಡಾವೀ । ಇಂದ್ರಿಯೇ ಬರಳೋ ನೇದಾವೀ । ಐಸೇ ಪ್ರಜಾಂತೇ ಶಿಕವೀ । ಚತುರಾನನು ॥೧೧೬॥ ಜೈಸೇ ಜಳಚರಾ ಜಳ ಸಾಂಡೇ । ಆಣಿ ತತ್ಕ್ಷಣೆ ಮರಣ ಮಾಂಡೇ । ಹಾ ಸ್ವಧರ್ಮು ತೇಣೇ ಪಾಡೇ । ವಿಸಂಬೋ ನಯೇ ॥೧೧೭॥

ಆದರಂತೆ ನೀವು ಎಲ್ಲಿರುವಿರೋ ಅಲ್ಲಿ ಎಲ್ಲ ಸುಖ ಸಮೇತ ಮೂರ್ತಿಮಂತ ದೇವನು ನಿಮ್ಮನ್ನು ಹುಡುಕುತ್ತಾ ಬೆನ್ನಟ್ಟುವನು ।।೧೦೧।।

ಅಪ್ಪಗಳಿರಾ, ನೀವು ಪೂರ್ಣ ನಿಷ್ಠೆಯಿಂದ ಸ್ವಧರ್ಮದ ಆಚರಣೆ ಮಾಡಿದರೆ ನೀವೆಲ್ಲರೂ ಐಶ್ವರ್ಯ ಸಂಪನ್ನರಾಗಿ ನಿಮ್ಮ ಎಲ್ಲ ಇಚ್ಛೆಗಳು ಪೂರ್ಣಗೊಳ್ಳುವುವು ।।೧೦೨।।

ಸರ್ವ ಸಂಪತ್ತು ಪ್ರಾಪ್ತವಾದಾಗ್ಗೆ ವಿಷಯಾಸಕ್ತನಾಗಿ ಇಂದ್ರಿಯ ಲಂಪಟತೆಯಿಂದ ಸ್ವೇಚ್ಛಾಚಾರನಾದರೆ ।।೧೦೩।।

ಸ್ವಧರ್ಮ (ಯಜ್ಞ) ದಿಂದ ಸಂತುಷ್ಟರಾದ ದೇವತೆಗಳು ಪೂರ್ಣ ಸಂಪತ್ತು ಕೊಟ್ಟಿರುವಾಗ್ಗೆ ಸ್ವಧರ್ಮದಿಂದ ಯಾರು ಪರಮೇಶ್ವರನನ್ನು ಭಜಿಸುವುದಿಲ್ಲವೋ ।।೧೦೪।।

ಅಗ್ನಿಮುಖ ಹವನ, ದೇವರಪೂಜೆ, ಕಾಲಕ್ಕನುಸಾರವಾಗಿ ಬ್ರಾಹ್ಮಣರಿಗೆ ಭೋಜನ ಇತ್ಯಾದಿ ನಿತ್ಯ ನೈಮಿತ್ತಿಕ ಕರ್ಮ ಮಾಡುವುದಿಲ್ಲವೋ ।।೧೦೫।।

ಗುರು ಸೇವೆಗೆ ಹಿಂಜರಿಯುವುದು, ಅತಿಥಿಗಳವರನ್ನು ಆದರಿಸದಿರುವುದು ಮತ್ತು ತನ್ನ ಕುಲಜರನ್ನು ಸಂತೋಷ ಪಡಿಸದೇ ಇರುವುದು ।।೧೦೬।।

ಈ ಪ್ರಕಾರವಾಗಿ ಸ್ವಧರ್ಮಾಚರಣೆ ಮಾಡದವರು ಭೋಗದ ಸಂಪತ್ತಿನಲ್ಲಿ ಮದಾಂಧರಾದವರು ಕೇವಲ ವಿಷಯಾಸಕ್ತರಾಗಿರುವವರನ್ನು ।।೧೦೭।।

ಅವರಿಗೆ ಮಹಾ ಸಂಕಟಗಳು ಒದಗುವುವು. ಅದರಿಂದ ಇದ್ದ ಐಶ್ವರ್ಯವೆಲ್ಲವೂ ಹಾಳಾಗುವುವು ಮತ್ತು ಇದ್ದ ಭೋಗವನ್ನು ಭೋಗಿಸಲಾರದಂತಾಗುವುದು ।।೧೦೮।।

ಯಾವ ಪ್ರಕಾರವಾಗಿ ಆಯುಷ್ಯ ತೀರಿದ ಶರೀರದಲ್ಲಿ ಜೀವವು ವಾಸವಾಗುವುದಿಲ್ಲವೋ ಅಥವಾ ದರಿದ್ರನ ಮನೆಯಲ್ಲಿ ಲಕ್ಷ್ಮೀಯು ವಾಸ ಮಾಡುವುದಿಲ್ಲವೋ ।।೧೦೯।।

ಆದರಂತೆ ಸ್ವಧರ್ಮದ ನಾಶದಿಂದ ಸುಖದ ಆಶ್ರಯ ಸ್ಥಾನವು ನಷ್ಟಗೊಳ್ಳುವುದು. ದೀಪವು ಆರಿದಾಕ್ಷಣವೇ ಪ್ರಕಾಶವು ನಾಶಹೊಂದುವಂತೆ ।।೧೧೦।।

(ಪ್ರಜೆಗಳಿರಾ) ಯಾರು ತಮ್ಮ ತಮ್ಮ ವರ್ಣಾಶ್ರಮ ಧರ್ಮಗಳ ಆಚರಣೆ ಬಿಡುವರೋ ಅವರಿಗೆ ಸ್ವಾತಂತ್ರತೆ ನಷ್ಟಗೊಳ್ಳುವುದು ।।೧೧೧।।

ಆದ್ದರಿಂದ ಸ್ವಧರ್ಮದ ತ್ಯಾಗ ಮಾಡಿದವನಿಗೆ ಯಮನು ದಂಡಿಸುವನು. ಅಲ್ಲದೇ ಇವನೊಬ್ಬ ಕಳ್ಳನೆಂದು ತಿಳಿದು ಅವನ ಸರ್ವಸ್ವವನ್ನು ಇಲ್ಲದಂತೆ ಮಾಡುವನು ।।೧೧೨।।

ಆಗ ರಾತ್ರಿಯಾದ ಮೇಲೆ ಸ್ಮಶಾನದಲ್ಲಿ ಭೂತಗಳ ಸಂಚಾರವಾಗುವಂತೆ ಆತನಿಗೆ ಎಲ್ಲ ಸಂಕಟಗಳು ಆವರಿಸುವುವು ।।೧೧೩।।

ಹಾಗೆಯೇ, ಮೂರು ಲೋಕದ ಎಲ್ಲ ದುಃಖಗಳು ಮತ್ತು ನಾನಾ ಪ್ರಕಾರದ ಪಾತಕಗಳು. ಅಲ್ಲದೇ ಎಲ್ಲ ತರಹದ ದಾರಿದ್ರ್ಯಗಳು ಆತನಲ್ಲಿ ವಾಸಗೊಳ್ಳುವುವು ।।೧೧೪।।

ಪ್ರಜೆಗಳಿರಾ, ಈ ಪ್ರಕಾರವಾಗಿ ಸೊಕ್ಕಿದ ಮನುಷ್ಯನ ಗತಿಯಾಗುವುದು ಮತ್ತು ಒದಗಿದ ದುಃಖಗಳಿಂದ ಅಳುತ್ತಿರುವಾಗ್ಗೆ ಆತನನ್ನು ದುಃಖಗಳು ಕಲ್ಪಾಂತದವರೆಗೂ ಬಿಡುವುದಿಲ್ಲ ।।೧೧೫।।

ಆದ್ದರಿಂದ ನಿಮ್ಮ ನಿಮ್ಮ ಸ್ವಧರ್ಮ ಬಿಡಬೇಡಿರಿ ಮತ್ತು ಇಂದ್ರಿಯ ಲಂಪಟರಾಗಿ ಸ್ವೇಚ್ಛಾಚಾರರಾಗದಿರಿ ಎಂದು ಬ್ರಹ್ಮದೇವನು ಪ್ರಜೆಗಳಿಗೆ ಬೋಧಿಸಿದನು ।।೧೧೬।।

ಯಾವ ಪ್ರಕಾರವಾಗಿ, ಮೀನಿಗೆ ನೀರಿನಿಂದ ಹೊರಗೆ ತೆಗೆದಾಕ್ಷಣವೇ ಅದಕ್ಕೆ ಮೃತ್ಯು ಒದಗುವುದೋ ಆದರಂತೆ ನಿಮ್ಮ ಸ್ಥಿತಿಯಾಗುವುದು. ಆದ್ದರಿಂದ ಸ್ವಧರ್ಮವನ್ನು ಮರೆಯಬೇಡಿರಿ ।।೧೧೭।।

ಮ್ಹಣೌನಿ ತುಮ್ಹೀ ಸಮಸ್ತೀ । ಆಪುಲಾಲಿಯಾ ಕರ್ಮೀ ಉಚಿತೀ । ನಿರತ ವ್ಹಾವೇ ಪುಢತಪುಢತೀ । ಮ್ಹಣಿಪತ ಅಸೇ ॥೧೧೮॥

ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।
ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮ ಕಾರಣಾತ್ ॥೧೩॥

ದೇಖಾ ವಿಹಿತ ಕ್ರಿಯಾವಿಧಿ । ನಿರ್ಹೇತುಕಾ ಬುದ್ಧಿ । ಜೋ ಅಸತಿಯೇ ಸಮೃದ್ಧಿ । ವಿನಿಯೋಗು ಕರೀ ॥೧೧೯॥ ಗುರು ಗೋತ್ರ ಅಗ್ನಿಪೂಜೀ । ಅವಸರೀ ಭಜೇ ದ್ವಿಜೀ । ನಿಮಿತ್ತಾದಿಕೀ ಯಜೀ । ಪಿತರೋದ್ದೇಶೆ ॥೧೨೦॥ ಯಾ ಯಜ್ಞಕ್ರಿಯಾ ಉಚಿತಾ । ಯಜ್ಞೇಶೀ ಹವನ ಕರಿತಾ । ಹುತಶೇಷ ಸ್ವಭಾವತಃ । ಉರೇ ಜೇ ಜೇ ॥೧೨೧॥ ತೇ ಸುಖೇ ಆಪುಲೇ ಘರೀ । ಕುಟುಂಬೇಸೀ ಭೋಜನ ಕರೀ । ಕೀ ಭೋಗ್ಯಚಿ ತೇ ನಿವಾರೀ । ಕಲ್ಮಷಾತೇ ॥೧೨೨॥ ತೇ ಯಜ್ಞಾವಶಿಷ್ಟ ಭೋಗೀ । ಮ್ಹಣೌನಿ ಸಾಂಡಿಜೇ ತೋ ಅಘೀ । ಜಯಾಪರೀ ಮಹಾರೋಗೀ । ಅಮೃತಸಿದ್ಧಿ ॥೧೨೩॥ ಕೀ ತತ್ತ್ವನಿಷ್ಠ ಜೈಸಾ । ನಾಗವೇ ಭ್ರಾಂತಿಲೇಶಾ । ತೋ ಶೇಷಭೋಗೀ ತೈಸಾ । ನಾಕಳೇ ದೋಷಾ ॥೧೨೪॥ ಮ್ಹಣೌನಿ ಸ್ವಧರ್ಮೇ ಜೇ ಅರ್ಜೇ । ತೇ ಸ್ವಧರ್ಮೇಚಿ ವಿನಿಯೋಗಿಜೇ । ಮಗ ಉರೇ ತೇ ಭೋಗಿಜೆ । ಸಂತೋಷೇಸೀ ॥೧೨೫॥ ಹೇ ವಾಂಚೂನಿ ಪಾರ್ಥಾ । ರಾಹಾಟೋ ನಯೇ ಅನ್ಯಥಾ । ಐಸೀ ಆದ್ಯ ಹೇ ಕಥಾ । ಮುರಾರೀ ಸಾಂಗೇ ॥೧೨೬॥ ಜೇ ದೇಹಚಿ ಆಪಣಪೇ ಮಾನಿತೀ । ಆಣಿ ವಿಷಯಾಂತೇ ಭೋಗ್ಯ ಮ್ಹಣತೀ । ಯಾಪರತೇ ನ ಸ್ಮರತೀ । ಆಣಿಕ ಕಾಂಹೀ ॥೧೨೭॥ ಹೇ ಯಜ್ಞೋಪಕರಣ ಸಕಳ । ನೇಣತಸಾತೇ ಬರಳ । ಅಹಂಬುದ್ಧಿ ಕೇವಳ । ಭೋಗೂ ಪಾಹತೀ ॥೧೨೮॥ ಇಂದ್ರಿಯರುಚಿಸಾರಿಖೇ । ಕರವಿತೀ ಪಾಕ ನಿಕೇ । ತೇ ಪಾಪಿಯೇ ಪಾತಕೇ । ಸೇವಿತೀ ಜಾಣ ॥೧೨೯॥ ಸಂಪತ್ತಿಜಾತ ಆಘವೇ । ಹೇ ಹವನದ್ರವ್ಯ ಮಾನಾವೇ । ಮಗ ಸ್ವಧರ್ಮಯಜ್ಞೀ ಅರ್ಪಾವೇ । ಆದಿ ಪುರುಷೀ ॥೧೩೦॥ ಹೇ ಸಾಂಡೋನಿಯಾ ಮೂರ್ಖ । ಆಪಣಪೇಯಾಲಾಗೀ ದೇಖ । ನಿಪಜವಿತೀ ಪಾಕ । ನಾನಾವಿಧ ॥೧೩೧॥ ಜಿಹೀ ಯಜ್ಞು ಸಿದ್ಧೀ ಜಾಯೇ । ಪರೇಶಾ ತೋಷು ಹೋಯೇ । ತೇ ಹೇ ಸಾಮಾನ್ಯ ಅನ್ನ ನ ಹೋಯೇ । ಮ್ಹಣೌನಿಯಾ ॥೧೩೨॥ ಹೇ ನ ಮ್ಹಣಾವೇ ಸಾಧಾರಣ । ಅನ್ನ ಬ್ರಹ್ಮರೂಪ ಜಾಣ । ಜೇ ಜೀವನಹೇತು ಕಾರಣ । ವಿಶ್ವಾ ಯಯಾ ॥೧೩೩॥

ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥೧೪॥

ಆದ್ದರಿಂದ ನೀವೆಲ್ಲರೂ ನಿಮ್ಮ ನಿಮ್ಮ ಉಚಿತ ಕರ್ಮವನ್ನು ಮಾಡಲು ಸದಾ ಸಿದ್ಧರಾಗಿರಿ ಎಂದು ಬ್ರಹ್ಮದೇವನು ಹೇಳಿದನು ।।೧೧೮।।

ಶ್ಲೋಕಾರ್ಥ :- ಯಜ್ಞಶೇಷಗಳನ್ನು ಭುಂಜಿಸುವ ಸತ್ಪುರುಷರು ಸಮಸ್ತ ಪಾಪಗಳಿಂದ ಮುಕ್ತರಾಗುತ್ತಾರೆ. ತಮಗಾಗಿಯೇ ಬೇಯಿಸಿ ಕೊಳ್ಳುವವರು ಪಾಪವನ್ನೇ ತಿನ್ನುತ್ತಾರೆ ।।೧೩।।

ಯಾರು ವಿಹಿತ ಕರ್ಮಗಳನ್ನು ನಿಷ್ಕಾಮಬುದ್ಧಿಯಿಂದ ಆಚರಿಸುತ್ತಾ ತಮ್ಮಲ್ಲಿದ್ದ ಸಂಪತ್ತನ್ನು ಸ್ವಧರ್ಮಕ್ಕಾಗಿ ವಿನಿಯೋಗಿಸುವರೋ ।।೧೧೯।।

ಶ್ರೀಗುರು ಸೇವೆ, ಆಪ್ತವರ್ಗದವರ ಮೇಲೆ ಉಪಕಾರ, ಅಗ್ನಿಪೂಜೆ, ಯಥಾ ಪ್ರಸಂಗದಲ್ಲಿ ಬ್ರಾಹ್ಮಣರ ಸೇವೆ ಹಾಗೂ ಪಿತೃಗಳವರನ್ನು ಸರ್ವಕಾಲದಲ್ಲಿ ಪೂಜಿಸುವರೋ ।।೧೨೦।।

ಮತ್ತು ಇದರಂತೆ ವಿಹಿತ ಕರ್ಮಾಚರಣೆ, ಹಾಗೂ ಪಂಚ ಮಹಾಯಜ್ಞಾದಿ ಕಾರ್ಯಗಳನ್ನು ಆಚರಿಸಿ ಉಳಿದ ಯಜ್ಞ ಶೇಷವನ್ನು ।।೧೨೧।।

ಯಾರು ಸುಖವಾಗಿ ತಮ್ಮ ಸಹಕುಟುಂಬ ಪರಿವಾರದೊಂದಿಗೆ ಸೇವಿಸುವರೋ, ಅವರ ಎಲ್ಲ ಪಾಪಗಳು ಆ ಯಜ್ಞ ಶೇಷ ಸೇವನೆ ಮಾತ್ರದಿಂದ ನಾಶಗೊಳ್ಳುವುವು ।।೧೨೨।।

ಅಮೃತ ಸೇವನೆಯಿಂದ ಮಹಾರೋಗವು ನಾಶಗೊಳ್ಳುವಂತೆ ಯಜ್ಞ ಶೇಷ ಸೇವನೆಯಿಂದ ಮಾಡಿದ ಪಾಪಗಳೆಲ್ಲವೂ ನಾಶಗೊಳ್ಳುವುವು ।।೧೨೩।।

ಯಾವ ಪ್ರಕಾರವಾಗಿ ತತ್ವಜ್ಞಾನಿ ಬ್ರಹ್ಮನಿಷ್ಠನಿಗೆ ಕಿಂಚಿತ್ ಮಾತ್ರವೂ ಭ್ರಾಂತಿ ಬಾರದೋ, ಅದರಂತೆ ಯಜ್ಞ ಮಾಡಿ ಉಳಿದ ಶೇಷ ಅನ್ನದ ಸೇವನೆಯಿಂದ ಯಾವ ದೋಷವೂ ತಟ್ಟಲಾರದು ।।೧೨೪।।

ಆದ್ದರಿಂದ ಸ್ವಧರ್ಮದಿಂದ ಸಂಪಾದಿಸಿದ ದ್ರವ್ಯಗಳನ್ನು ಸ್ವಧರ್ಮಕ್ಕಾಗಿಯೇ ವಿನಿಯೋಗಿಸಬೇಕು ಮತ್ತು ಉಳಿದದ್ದನ್ನು ಸಂತೋಷದಿಂದ ಉಪಭೋಗಿಸಬೇಕು ।।೧೨೫।।

ಅರ್ಜುನಾ, ಈ ನಿಯಮಗಳ ಹೊರತಾಗಿ ಬೇರೆ ರೂಪದಿಂದ ನಡೆಯಕೂಡದು. ಹೀಗೆಂದು ಶ್ರೀಕೃಷ್ಣನು ಆರಂಭದ ಕಥೆಯನ್ನು ಹೇಳಿದನು ।।೧೨೬।।

ಕೆಲವು ಜನರು ತಮ್ಮ ದೇಹವೇ ಆತ್ಮವೆಂದು ಭಾವಿಸುವರು ಮತ್ತು ವಿಷಯಗಳಿಗೆ ಭೋಗ್ಯವಸ್ತು ಎಂದು ತಿಳಿಯುವರು. ಇದರ ಹೊರತಾಗಿ ಬೇರೆ ಏನೂ ಅರಿಯರು ।।೧೨೭।।

ಈ ಎಲ್ಲ ಪದಾರ್ಥಗಳು ಯಜ್ಞಸಂಬಂಧವಾಗಿವೆ ಎಂಬುದನ್ನು ಅರಿಯದೇ ಭ್ರಾಂತಿಯೊಳಗೆ ಬಿದ್ದು ಅಹಂಕಾರ ಬುದ್ಧಿಯಿಂದ ಕೇವಲ ವಿಷಯ ಭೋಗದಲ್ಲಿಯೇ ಅವರ ದೃಷ್ಟಿ ನಟ್ಟಿರುವುದು ।।೧೨೮।।

ಈ ಪಾಪಿಗಳು ತಮಗೆ ಇಷ್ಟಬಂದ ಉತ್ತಮ ಪಕ್ವಾನ್ನಗಳನ್ನು ತಯಾರಿಸಿ ಅದನ್ನು ತಾವೇ ಆ ಅನ್ನರೂಪ ಪಾಪವನ್ನೇ ಭಕ್ಷಿಸುವರು ।।೧೨೯।।

ಈ ಎಲ್ಲ ಧನ ಸಂಪತ್ತು ಸ್ವಧರ್ಮ ರೂಪ ಯಜ್ಞದ ಹವನ ದ್ರವ್ಯವಾಗಿರುವುದು. ಹೀಗೆ ತಿಳಿದು ಸ್ವಧರ್ಮ ಯಜ್ಞದಿಂದ ಪರಮೇಶ್ವರನಿಗೆ ಅರ್ಪಿಸಬೇಕು ।।೧೩೦।।

ಇದೆಲ್ಲವನ್ನು ಬಿಟ್ಟು ಮೂರ್ಖಜನರು ತಮಗಾಗಿಯೇ ನಾನಾ ಪ್ರಕಾರದ ಪದಾರ್ಥಗಳನ್ನು ನಿರ್ಮಿಸುವರು ।।೧೩೧।।

ಯಾವುದರಿಂದ ಯಜ್ಞವು ಪೂರ್ಣಗೊಂಡು ಸಫಲವಾಗುವುದೋ ಮತ್ತು ಅದನ್ನು ಸಮರ್ಪಿಸಿದಾಗ ಪರಮೇಶ್ವರನಿಗೂ ಸಂತೋಷವಾಗುವುದೋ ಇಂತಹ ಅನ್ನವು ಸರ್ವಸಾಮಾನ್ಯವಲ್ಲ. ಆದ್ದರಿಂದ ।।೧೩೨।।

ಈ ಅನ್ನಕ್ಕೆ ಸಾಮಾನ್ಯ ಅನ್ನ ಬಾರದು. ಅನ್ನವು ಬ್ರಹ್ಮರೂಪವಾಗಿದೆ ಎಂದು ತಿಳಿಯಬೇಕು. ಏಕೆಂದರೆ ಈ ವಿಶ್ವದ ಜೀವನಕ್ಕೆ ಅನ್ನವೇ ಕಾರಣವಾಗಿದೆ ।।೧೩೩।।

ಶ್ಲೋಕಾರ್ಥ :- ಅನ್ನದಿಂದ ಭೂತಪ್ರಾಣಿಗಳು ಉಂಟಾಗುತ್ತವೆ. ವರ್ಷದಿಂದ ಅನ್ನವು ಉತ್ಪತ್ತಿಯಾಗುತ್ತದೆ. ಯಜ್ಞದಿಂದ ವರ್ಷವು ಏರ್ಪಡುತ್ತದೆ. ಯಜ್ಞವು ಕರ್ಮದಿಂದ ಸಿದ್ಧಿಸುತ್ತದೆ ।।೧೪।।

ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್ ।
ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥೧೫॥

ಅನ್ನಾಸ್ತವ ಭೂತೇ । ಪ್ರರೋಹೋ ಪಾವತೀ ಸಮಸ್ತೇ । ಮಗ ಪರ್ಜನ್ಯು ಯಾ ಅನ್ನಾತೇ । ಸರ್ವತ್ರ ಪ್ರಸವೇ ॥೧೩೪॥ ತಯಾ ಪರ್ಜನ್ಯಾ ಯಜ್ಞೀ ಜನ್ಮ । ಯಜ್ಞಾತೇ ಪ್ರಗಟೀ ಕರ್ಮ । ಕರ್ಮಾಸಿ ಆದಿ ಬ್ರಹ್ಮ । ವೇದರೂಪ ॥೧೩೫॥ ತಯಾ ವೇದಾ ತೇ ಪರಾತ್ಪರ । ಪ್ರಸವತಸೇ ಅಕ್ಷರ । ಮ್ಹಣೌನಿ ಹೇ ಚರಾಚರ । ಬ್ರಹ್ಮಬದ್ಧ ॥೧೩೬॥ ಪರೀ ಕರ್ಮಾಚಿಯೇ ಮೂರ್ತಿ । ಯಜ್ಞೀ ಅಧಿವಾಸು ಶ್ರುತಿ । ಐಕೇ ಸುಭದ್ರಾಪತಿ । ಅಖಂಡ ಗಾ ॥೧೩೭॥

ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥೧೬॥

ಐಶೀ ಹೇ ಆದಿ ಪರಂಪರಾ । ಸಂಕ್ಷೇಪೇ ತುಜ ಧನುರ್ಧರಾ । ಸಾಂಗಿತಲೀ ಯಾ ಅಧ್ವರಾ । ಲಾಗೂನಿಯಾ ॥೧೩೮॥ ಮ್ಹಣೌನಿ ಸಮೂಳ ಹಾ ಉಚಿತು । ಸ್ವಧರ್ಮರೂಪ ಕ್ರತು । ನಾನುಷ್ಠೀ ಜೋ ಮತ್ತು । ಲೋಕೀ ಇಯೇ ॥೧೩೯॥ ತೋ ಪಾತಕಾಂಚೀ ರಾಶೀ । ಜಾಣ ಭಾರ ಭೂಮೀಸೀ । ಜೋ ಕುಕರ್ಮೇ ಇಂದ್ರಿಯಾಂಸೀ । ಉಪೇಗಾ ಗೇಲಾ ॥೧೪೦॥ ತೇ ಜನ್ಮಕರ್ಮ ಸಕಳ । ಅರ್ಜುನಾ ಅತಿನಿಷ್ಫಳ । ಜೈಸೇ ಕಾ ಅಭ್ರಪಟಳ । ಅಕಾಳೀಂಚೇ ॥೧೪೧॥ ಕಾ ಗಳಾ ಸ್ತನ ಅಜೇಚೇ । ತೈಸೇ ಜಿಯಾಲೇ ದೇಖೈ ತಯಾಚೇ । ಜಯಾ ಅನುಷ್ಠಾನ ಸ್ವಧರ್ಮಾಚೇ । ಘಡೇಚಿನಾ ॥೧೪೨॥ ಮ್ಹಣೌನಿ ಐಕೇ ಪಾಂಡವಾ । ಹಾ ಸ್ವಧರ್ಮು ಕವಣೇ ನ ಸಂಡಾವಾ । ಸರ್ವಭಾವೇ ಭಜಾವಾ । ಹಾಚಿ ಏಕು ॥೧೪೩॥ ಹಾ ಗಾ ಶರೀರ ಜರೀ ಜಾಹಲೇ । ತರೀ ಕರ್ತವ್ಯ ವೋಘೇ ಆಲೇ । ಮಗ ಉಚಿತ ಕಾ ಆಪುಲೇ । ವೋಸಂಡಾವೇ? ॥೧೪೪॥ ಪರಿಸ ಪಾ ಸವ್ಯಸಾಚೀ । ಮೂರ್ತಿ ಲಾಹೋನಿ ದೇಹಾಚೀ । ಖಂತೀ ಕರಿತೀ ಕರ್ಮಾಚೀ । ತೇ ಗಾಂವಢೇಗಾ ॥೧೪೫॥

ಯಸ್ತ್ವಾತ್ಮರತಿರೇವ ಸ್ಯಾತ್ ಆತ್ಮತೃಪ್ತಶ್ಚ ಮಾನವಃ ।
ಆತ್ಮನ್ಯೇವ ಚ ಸಂತುಷ್ಟಃ ತಸ್ಯ ಕಾರ್ಯಂ ನ ವಿದ್ಯತೇ ॥೧೭॥

ದೇಖೈ ಅಸತೇನಿ ದೇಹಧರ್ಮೇ । ಏಥ ತೋಚಿ ಏಕು ನ ಲಿಂಪೇ ಕರ್ಮೇ । ಜೋ ಅಖಂಡಿತ ರಮೇ । ಆಪಣಪಾಂಚೀ ॥೧೪೬॥

ಶ್ಲೋಕಾರ್ಥ :- ಕರ್ಮವು ವೇದದಿಂದ ಉತ್ಪನ್ನ ವಾಗುತ್ತದೆ. ವೇದವು ಪರಮಾತ್ಮನಿಂದ ಸಂಭವಿಸಿದೆ. ಆದುದರಿಂದ ಸರ್ವವ್ಯಾಪಕನಾದ ಪರಮಾತ್ಮನು ಸರ್ವದಾ ಯಜ್ಞದಲ್ಲಿ ಪ್ರತಿಷ್ಠಿತನಾಗಿದ್ದಾನೆ ।।೧೫।।

ಅನ್ನದಿಂದ ಎಲ್ಲ ಪ್ರಾಣಿಗಳ ಉತ್ಪತ್ತಿಯಾಗುವುದು ಮತ್ತು ಮಳೆಯಿಂದ ಎಲ್ಲ ಕಡೆಗೂ ಅನ್ನ ಉತ್ಪನ್ನ ವಾಗುವುದು ।।೧೩೪।।

ಆ ಮಳೆಯ ಉತ್ಪತ್ತಿಯು ಯಜ್ಞದಿಂದಾಗುವುದು ಮತ್ತು ಯಜ್ಞವು ಕರ್ಮದಿಂದಾಗುವುದು. ಕರ್ಮದ ಉತ್ಪತ್ತಿಯು ವೇದರೂಪ ಬ್ರಹ್ಮನಿಂದಾಗುವುದು ।।೧೩೫।।

ಮತ್ತು ಆ ವೇದದ ಉತ್ಪತ್ತಿಯು ಪರಮಾತ್ಮನಿಂದಾಗುವುದು. ಆದ್ದರಿಂದ ಈ ಎಲ್ಲ ಜಗವು ಬ್ರಹ್ಮಾಧೀನವಾಗಿದೆ ।।೧೩೬।।

ಆದಾಗ್ಯೂ ಹೇ ಸುಭದ್ರಾಪತಿಯೇ ಕೇಳು ; ಕರ್ಮದ ಮೂರ್ತಿಯಾಗಿರುವ ಯಜ್ಞದಲ್ಲಿ ವೇದರೂಪವಾದ ಬ್ರಹ್ಮವು ನಿರಂತರವಾಗಿ ವಾಸವಾಗಿರುವುದು ।।೧೩೭।।

ಶ್ಲೋಕಾರ್ಥ :- ಈ ಪರಿ ತಿರುಗುತ್ತಿರುವ ಜಗಚ್ಚಕ್ರವನ್ನು ಅನುಸರಿಸದವನು ಪಾಪಜೀವಿ; ಅವನು ಇಂದ್ರಿಯ ಲಂಪಟನು. ಅವನ ಜೀವಿತವು ವ್ಯರ್ಥ ।।೧೬।।

ಈ ಪ್ರಕಾರವಾಗಿ ಧನುರ್ಧರನೇ, ಈ ಸ್ವಧರ್ಮರೂಪ ಯಜ್ಞದ ಮೂಲ ಪೀಠಿಕೆಯನ್ನು ನಿನಗೆ ಸಂಕ್ಷಿಪ್ತವಾಗಿ ತಿಳಿಸಲಾಗಿದೆ ।।೧೩೮।।

ಆದ್ದರಿಂದ ಮದಾಂಧರಾದ ಯಾರು ಎಲ್ಲ ಪ್ರಕಾರಗಳಿಂದ ಉಚಿತವಾದ ಈ ಸ್ವಧರ್ಮ ರೂಪ ಯಜ್ಞವನ್ನು ಈ ಲೋಕದಲ್ಲಿ ಆಚರಿಸುವುದಿಲ್ಲವೋ ।।೧೩೯।।

ಅಲ್ಲದೇ ಆ ದುರಾಚಾರಿಯವರು ಇಂದ್ರಿಯಗಳಿಂದ ವಿಷಯಗಳನ್ನು ಭೋಗಿಸುವುದರಲ್ಲಿಯೇ ಕಾಲವನ್ನು ಕಳೆಯುವರೋ, ಆ ಪಾಪಾರಾಶಿ ಜೀವಿಗಳು ಕೇವಲ ಭೂಮಿಗೆ ಭಾರವಾಗಿರುವರು ।।೧೪೦।।

ಅಯೋಗ್ಯ ಕಾಲದಲ್ಲಿ ಆಕಾಶದಲ್ಲಿ ಬಂದ ಮೋಡಗಳು ಹೇಗೆ ನಿರುಪಯೋಗಿಯೋ, ಅದರಂತೆ ಅರ್ಜುನಾ ಈ ಮದಾಂಧರ ಎಲ್ಲ ಜನ್ಮಗಳ ಕರ್ಮಗಳು ನಿಷ್ಫಲವಾಗಿರುವುವು ।।೧೪೧।।

ಯಾರಿಗೆ ಸ್ವಧರ್ಮದ ಅನುಷ್ಠಾನ ಸಾಧಿಸುವುದಿಲ್ಲವೋ ಅವರ ಜೀವನವು ಆಡಿನ ಕೊರಳಿನ ಮೊಲೆಯಂತೆ ವ್ಯರ್ಥವಾಗಿರುವುದು ।।೧೪೨।।

ಆದ್ದರಿಂದ ಪಾಂಡವನೇ ಕೇಳು ; ಈ ಸ್ವಧರ್ಮವನ್ನು ಯಾರೂ ಬಿಡಬಾರದು. ಹಾಗೆಯೇ ಸರ್ವಭಾವದಿಂದ ಇದನ್ನು ಆಚರಿಸಬೇಕು ।।೧೪೩।।

ಹೀಗಿದೆ ನೋಡು; ಈ ಶರೀರವು ಹೇಗೋ ಪ್ರಾಪ್ತಿಯಾಗಿರುವುದು. ಅದಕ್ಕೆ ಪೂರ್ವ ಕರ್ತವ್ಯ ಕರ್ಮವು ಸಹಜವಾಗಿ ಒದಗಿ ಬಂದಿರುವುದು. ಅಂದಮೇಲೆ ನಮ್ಮ ಉಚಿತ ಕರ್ಮಗಳನ್ನು ಏಕೆ ಬಿಡಬೇಕು ? ।।೧೪೪।।

ಹೇ ಸವ್ಯಸಾಚಿಯೇ ಕೇಳು; ಈ ಮನುಷ್ಯ ದೇಹವು ಪ್ರಾಪ್ತವಾದ ಮೇಲೆ ಉಚಿತ ಕರ್ಮ ಆಚರಿಸಲು ಬೇಸರಪಟ್ಟರೆ ಅವನೊಬ್ಬ ಮೂರ್ಖನೆಂದು ತಿಳಿ ।।೧೪೫।।

ಶ್ಲೋಕಾರ್ಥ :- ಆತ್ಮಾರಾಮನು ಆತ್ಮತೃಪ್ತನು, ಆತ್ಮಸಂತೋಷಿಯು ಆದ ಮಾನವನಿಗೆ ಕರ್ತವ್ಯ ಕರ್ಮ ಯಾವುದೂ ಇಲ್ಲ ।।೧೭।।

ಇಲ್ಲಿ ನೋಡು ; ಯಾವ ಪುರುಷನು ಆತ್ಮಸ್ವರೂಪದಲ್ಲಿ ನಿಮಗ್ನನಾಗಿರುವನೋ, ಆತನು ಮಾತ್ರ ದೇಹ ಧರ್ಮದಲ್ಲಿದ್ದರೂ ಕರ್ಮದಿಂದ ಲಿಪ್ತನಾಗುವುದಿಲ್ಲ ।।೧೪೬।।

ಜೇ ತೋ ಆತ್ಮ ಬೋಧೇ ತೋಷಲಾ । ತರೀ ಕೃತಕಾರ್ಯು ದೇಖೈ ಜಾಹಲಾ । ಮ್ಹಣೌನಿ ಸಹಜೇ ಸಾಂಡವಲಾ । ಕರ್ಮಸಂಗು ।೧೪೭॥

ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।
ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ।೧೮॥

ತೃಪ್ತಿ ಜಾಲಿಯಾ ಜೈಸೀ । ಸಾಧನೇ ಸರತೀ ಆಪೈಸೀ । ದೇಖೈ ಆತ್ಮತುಷ್ಟೀ ತೈಸೀ । ಕರ್ಮೇ ನಾಹೀ ।೧೪೮॥ ಜಂವವರೀ ಅರ್ಜುನಾ । ತೋ ಬೋಧು ಭೇಟೇನಾ ಮನಾ । ತಂವಚಿ ಯಯಾ ಸಾಧನಾ । ಭಜಾವೇ ಲಾಗೇ ।೧೪೯॥

ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚಾರ ।
ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ।೧೯॥

ಮ್ಹಣೌನಿ ತೂ ನಿಯತು । ಸಕಳ ಕಾಮರಹಿತು । ಹೋಊನಿಯಾ ಉಚಿತು । ಸ್ವಧರ್ಮೇ ರಹಾಟೇ ।೧೫೦॥ ಜೇ ಸ್ವಧರ್ಮೇ ನಿಷ್ಕಾಮತಾ । ಅನುಸರಲೇ ಪಾರ್ಥಾ । ತೇ ಕೈವಲ್ಯಪದ ತತ್ತ್ವತಾ । ಪಾತಲೇ ಜಗೀ ।೧೫೧॥

ಕರ್ಮಣೈವ ಹಿ ಸಂಸಿದ್ಧಿಮ್ ಆಸ್ಥಿತಾ ಜನಕಾದಯಃ ।
ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ ।೨೦॥

ದೇಖಪಾ ಜನಕಾದಿಕ । ಕರ್ಮಜಾತ ಅಶೇಖ । ನ ಸಾಂಡಿತಾ ಮೋಕ್ಷಸುಖ । ಪಾವತೇ ಜಾಹಲೇ ।೧೫೨॥ ಯಾಕಾರಣೇ ಪಾರ್ಥಾ । ಹೋಆವೀ ಕರ್ಮೀ ಆಸ್ಥಾ । ಹೇ ಆಣಿಕಾಹೀ ಏಕಾ ಅರ್ಥಾ । ಉಪಕಾರೈಲ ।೧೫೩॥ ಜೇ ಆಚರತಾ ಆಪಣಪಯಾ । ದೇಖೀ ಲಾಗೇಲ ಲೋಕಾ ಯಯಾ । ತರೀ ಚುಕೇಲ ಅಪಾಯಾ । ಪ್ರಸಂಗೇಚೀ ।೧೫೪॥ ದೇಖೈ ಪ್ರಾಪ್ತಾರ್ಥ ಜಾಹಲೇ । ಜೇ ನಿಷ್ಕಾಮತಾ ಪಾವಲೇ । ತಯಾಂಹೀ ಕರ್ತವ್ಯ ಅಸೇ ಉರಲೇ । ಲೋಕಾಲಾಗಿ ।೧೫೫॥ ಮಾರ್ಗೀ ಅಂಧಾಸರಿಸಾ । ಪುಢಾ ದೇಖಣಾಹೀ ಚಾಲೇ ಜೈಸಾ । ಅಜ್ಞಾನಾ ಪ್ರಗಟಾವಾ ಧರ್ಮು ತೈಸಾ । ಆಚರೋನಿ ।೧೫೬॥ ಹಾ ಗಾ ಐಸೇ ಜರೀ ನ ಕೀಜೇ । ತರೀ ಅಜ್ಞಾನಾ ಕಾಯ ಉಮಜೇ । ತಿಹೀ ಕವಣೇಪರೀ ಜಾಣಿಜೇ । ಮಾರ್ಗಾತೇ ಯಾ ।೧೫೭॥

ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ ।
ಸ ಯತ್ ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ।೨೧॥

ಏಕೆಂದರೆ, ಆತ್ಮ ಭೋಧೆಯಿಂದ ಸಂತುಷ್ಠನಾಗಿರುವುದರಿಂದ ಕೃತಕೃತ್ಯನಾಗಿರುವನು. ಆದ್ದರಿಂದ ಸಹಜವಾಗಿ ಆತನು ಕರ್ಮಸಂಗದಿಂದ ಮುಕ್ತನಾಗಿರುವನು ।।೧೪೭।।

ಶ್ಲೋಕಾರ್ಥ :- ಕರ್ಮವನ್ನು ಮಾಡುವುದರಲ್ಲಿಯೂ, ಬಿಡುವುದರಲ್ಲಿಯೂ ಅವನಿಗೆ ಯಾವ ಸ್ವಾರ್ಥಲಾಭವಿರುವುದಿಲ್ಲ; ಅವನು ಯಾವುದರ ಮೇಲೂ ಆಧಾರ ಪಡಬೇಕಾದ್ದಿಲ್ಲ ।।೧೮।।

ಯಾವ ಪ್ರಕಾರವಾಗಿ ತೃಪ್ತಿಯಾದ ಮೇಲೆ ಅದರ ಸಾಧನೆಗಳಿಗೆ ಸಹಜವಾಗಿ ವಿರಾಮ ದೊರಕುವುದೋ ಅದರಂತೆ ಸ್ವರೂಪಾನಂದದಲ್ಲಿ ನಿಮಗ್ನರಾದವರಿಗೆ ಕರ್ಮಗಳು ಉಳಿಯುವುದಿಲ್ಲ ।।೧೪೮।।

ಅರ್ಜುನಾ, ಈ ಪ್ರಕಾರದ ಆತ್ಮಜ್ಞಾನವು ಎಲ್ಲಿಯವರೆಗೆ ಲಭಿಸಿಲ್ಲವೋ, ಅಲ್ಲಿಯವರೆಗೆ ಈ ಸಾಧನೆಗಳ ಆಚರಣೆ ಮಾಡಲೇಬೇಕಾಗುವುದು ।।೧೪೯।।

ಶ್ಲೋಕಾರ್ಥ :- ಆದುದರಿಂದ ಫಲಾಸಕ್ತಿಯನ್ನು ಬಿಟ್ಟು ನಿರಂತರವೂ ಮಾಡಬೇಕಾದ ಕರ್ಮವನ್ನು ಮಾಡು. ಆಸಕ್ತಿಯಿಲ್ಲದೆ ಕರ್ಮವನ್ನು ಮಾಡುವ ಪುರುಷನು ಮುಕ್ತಿಯನ್ನು ಪಡೆಯುತ್ತಾನೆ ।।೧೯।।

ಆದ್ದರಿಂದ ನೀನು ಯಾವಾಗಲೂ ಫಲದ ಆಶೆ ಬಿಟ್ಟು ಯೋಗ್ಯವಾದ ನಿನ್ನ ಧರ್ಮದ ಆಚರಣೆ ಮಾಡು ।।೧೫೦।।

ಪಾರ್ಥಾ, ಈ ಜಗತ್ತಿನಲ್ಲಿ ನಿಜವಾಗಿಯೂ ಯಾರು ಬುದ್ಧಿಯಿಂದ ಸ್ವಧರ್ಮವನ್ನು ಆಚರಿಸುವರೋ, ಅವರು ಮೋಕ್ಷ ಪದವಿಯನ್ನು ಹೊಂದಿರುವರು ।।೧೫೧।।

ಶ್ಲೋಕಾರ್ಥ :- ಜನಕರಾಜನೇ ಮೊದಲಾದವರು ಕರ್ಮಯೋಗದಿಂದಲೇ ಮೋಕ್ಷವನ್ನು ಪಡೆದುಕೊಂಡರು. ಲೋಕಕ್ಷೇಮವನ್ನು ನೋಡಿಯಾದರೂ ಕರ್ಮವನ್ನು ಮಾಡುವುದು ಯೋಗ್ಯವಾಗಿದೆ ।।೨೦।।

ಇಲ್ಲಿ ನೋಡು, ಜನಕಾದಿಕರು ಕರ್ಮದ ತ್ಯಾಗವನ್ನು ಎಷ್ಟೂ ಮಾಡದೇ ಮೋಕ್ಷ ಪದವಿಯನ್ನು ಹೊಂದಿದರು ।।೧೫೨।।

ಆದಕಾರಣ ಪಾರ್ಥಾ, ನೀನು ಕರ್ಮದ ಆಚರಣೆಯಲ್ಲಿ ಮನಸ್ಸಿಡು. ಏಕೆಂದರೆ ಅದರಿಂದ ಇನ್ನೊಂದು ಉಪಯೋಗವಾಗುವುದಿದೆ ।।೧೫೩।।

ಈ ಕರ್ಮದ ಆಚರಣೆಗಳು ನಿನ್ನಿಂದ ನಡೆದಲ್ಲಿ ಇತರ ಜನರಿಗೆ ಅದರ ಪರಿಣಾಮವಾಗಿ ಅವರ ದುಃಖಗಳು ಸಹಜವಾಗಿ ನಾಶಗೊಳ್ಳುವುವು ।।೧೫೪।।

ಹೀಗಿದೆ ನೋಡು; ಯಾರು ಕೃತಾರ್ಥರಾಗಿ ನಿಷ್ಕಾಮತೆಯನ್ನು ಹೊಂದಿರುವರೋ ಅವರು ಸಹ ಲೋಕಕಲ್ಯಾಣದ ದೃಷ್ಟಿಯಿಂದ ಕರ್ತವ್ಯವೆಂದು ಕರ್ಮ ಆಚರಿಸುವರು ।।೧೫೫।।

ಕುರುಡನನ್ನು ನಡೆಸುವ ಕಣ್ಣಿರುವ ಮನುಷ್ಯನು ಮುಂದಿದ್ದು ಕುರುಡನ ಗತಿಯಂತೆ ನಡೆಯುವನು. ಅದರಂತೆ ಜ್ಞಾನಿಗಳು ಸ್ವತಃ ಕರ್ಮಾಚರಣೆ ಮಾಡಿ ಅಜ್ಞಾನ ಜನರಿಗೆ ಧರ್ಮದ ಮಾರ್ಗಕ್ಕೆ ಹಚ್ಚಬೇಕು ।।೧೫೬।।

ಒಂದುವೇಳೆ ಜ್ಞಾನಿಗಳು ಇದರಂತೆ ವರ್ತಿಸದಿದ್ದರೆ, ಅಜ್ಞಾನಿಗಳ ಗತಿ ಏನು? ಅವರಿಗೆ ಹೇಗೆ ತಿಳಿಯಬೇಕು? ಅವರಿಗೆ ಧರ್ಮಮಾರ್ಗವು ಯಾವ ಉಪಾಯದಿಂದ ಕಾಣಬೇಕು? ।।೧೫೭।।

ಶ್ಲೋಕಾರ್ಥ :- ದೊಡ್ಡವರು ಹೋದ ದಾರಿಯನ್ನೇ ಅನುಸರಿಸುತ್ತಾರೆ, ಅವನು ಮಾಡಿದ ತೀರ್ಮಾನಕ್ಕೆ ಲೋಕವು ಒಳಪಟ್ಟಿರುತ್ತದೆ ।।೨೧।।

ಏಥ ವಡೀಲ ಜೇ ಜೇ ಕರಿತೀ । ತಯಾ ನಾಮ ಧರ್ಮು ಠೇವಿತೀ । ತೇಂಚಿ ಯೇರ ಅನುಷ್ಠಿತೀ । ಸಾಮಾನ್ಯ ಸಕಳ ॥೧೫೮॥ ಹೇ ಐಸೇ ಅಸೇ ಸ್ವಭಾವೇ । ಮ್ಹಣೌನಿ ಕರ್ಮ ನ ಸಂಡಾವೇ । ವಿಶೇಷೇ ಆಚರಾವೇ । ಲಾಗೇ ಸಂತೀ ॥೧೫೯॥

ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।
ನಾನವಾಪ್ತಮವಾಪ್ತವ್ಯಮ್ ವರ್ತ ಏವ ಚ ಕರ್ಮಣಿ ॥೨೨॥

ಆತಾ ಆಣಿಕಾಂಚಿಯಾ ಗೋಠೀ । ಕಾಯಶಾ ಸಾಂಗೋ ಕಿರೀಟೀ । ದೇಖೈ ಮೀಚ ಇಯೇ ರಾಹಾಟೀ । ವರ್ತತ ಅಸೇ ॥೧೬೦॥ ಕಾಯ ಸಾಂಕಡೇ ಕಾಂಹೀ ಮಾತೇ । ಕೀ ಕವಣೇ ಏಕೇ ಆರ್ತೇ । ಆಚರೇ ಮೀ ಧರ್ಮಾತೇ । ಮ್ಹಣಸೀ ಜರೀ ॥೧೬೧॥ ತರೀ ಪುರತೇಪಣಾಲಾಗೀ । ಆಣಿಕು ದುಸರಾ ನಾಹೀ ಜಗೀ । ಐಸೀ ಸಾಮುಗ್ರಿ ಮಾಝ್ಯಾ ಅಂಗೀ । ಜಾಣಸೀ ತೂ ॥೧೬೨॥ ಮೃತ ಗುರುಪುತ್ರ ಆಣಿಲಾ । ತೋ ತುವಾ ಪವಾಡಾ ದೇಖಿಲಾ । ತೋಹೀ ಮೀ ಉಗಲಾ । ಕರ್ಮೀ ವರ್ತೇ ॥೧೬೩॥

ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ ।
ಮಮ ವರ್ತ್ಮಾನವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥೨೩॥

ಪರೀ ಸ್ವಧರ್ಮೀ ವರ್ತೇ ಕೈಸಾ । ಸಾಕಾಂಕ್ಷು ಕಾ ಹೋಯ ಜೈಸಾ । ತಯಾಚೇ ಏಕಾ ಉದ್ದೇಶಾ । ಲಾಗೋನಿಯಾ ॥೧೬೪॥ ಜೇ ಭೂತಜಾತ ಸಕಳ । ಅಸೇ ಆಮ್ಹಾಚೇ ಆಧೀನ ಕೇವಳ । ತರೀ ನ ವ್ಹಾವೇ ಬರಳ । ಮ್ಹಣೌನಿಯಾ ॥೧೬೫॥

ಉತ್ಸೀದೇಯುರಿಮೇ ಲೋಕಾಃ ನ ಕುರ್ಯಾಂ ಕರ್ಮ ಚೇದಹಮ್ ।
ಸಂಕರಸ್ಯ ಚ ಕರ್ತಾ ಸ್ಯಾಮ್ ಉಪಹನ್ಯಾಮಿಮಾಃ ಪ್ರಜಾಃ ॥೨೪॥

ಆಮ್ಹೀ ಪೂರ್ಣ ಕಾಮ ಹೋಊನೀ । ಜರೀ ಆತ್ಮಸ್ಥಿತಿ ರಾಹುನೀ । ತರೀ ಪ್ರಜಾ ಹೇ ಕೈಸೇನಿ । ನಿಸ್ತರೇಲ? ॥೧೬೬॥ ಇಹೀ ಆಮುಚೇ ವಾಸ ಪಾಹಾವೇ । ಮಗ ವರ್ತತೀಪರೀ ಜಾಣಾವೇ । ತೇ ಲೋಕಸ್ಥಿತಿ ಆಘವೀ । ನಾಸಿಲೀ ಹೋಈಲ ॥೧೬೭॥ ಮ್ಹಣೌನಿ ಸಮರ್ಥು ಜೋ ಯೇಥೇ । ಆಥಿಲಾ ಸರ್ವಜ್ಞತೇ । ತೇಣೇ ಸವಿಶೇಷೇ ಕರ್ಮಾತೇ । ತ್ಯಜಾವೇ ನಾ ॥೧೬೮॥

ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ ।
ಕುರ್ಯಾದ್ವಿದ್ವಾಂಸ್ತಥಾಸಕ್ತಃ ಚಿಕೀರ್ಷುರ್ಲೋಕಸಂಗ್ರಹಮ್ ॥೨೫॥

ಈ ಲೋಕದಲ್ಲಿ ಶ್ರೇಷ್ಠ ಪುರುಷರು ಯಾವ ರೀತಿಯಲ್ಲಿ ಆಚರಿಸುವರೋ, ಅದಕ್ಕೆ ಧರ್ಮವೆಂದು ಹೆಸರಿಟ್ಟು ಇತರ ಎಲ್ಲ ಜನರು ಅವರಂತೆಯೇ ಆಚರಿಸುವರು ।೧೫೮॥

ಇದು ಸಹಜ ಸ್ವಭಾವವಾಗಿದೆ. ಆದ್ದರಿಂದ ಕರ್ಮದ ತ್ಯಾಗ ಮಾಡಬಾರದು ಮತ್ತು ಸಾಧು-ಸಂತರಿಗೆ ಮಾತ್ರ ಕರ್ಮದ ಆಚರಣೆಯನ್ನು ವಿಶೇಷವಾಗಿ ಆಚರಿಸಬೇಕಾಗುವುದು ।೧೫೯॥

ಶ್ಲೋಕಾರ್ಥ :- ಅರ್ಜುನಾ! ಮೂರು ಲೋಕದಲ್ಲಿಯೂ ನಾನು ವಿಧಿಯಾಗಿ ಮಾಡಬೇಕಾದ ಕರ್ಮ ಯಾವುದೂ ಇಲ್ಲ. ಪಡೆಯದೇ ಇಲ್ಲದ್ದೂ, ಪಡೆಯಬೇಕಾದದ್ದೂ ಆದ ಯಾವ ಪ್ರಯೋಜನವಿಲ್ಲದಿದ್ದರೂ ಸಹ ಕರ್ಮದಲ್ಲಿ ತೊಡಗಿರುತ್ತೇನೆ ।೨೨॥

ಅರ್ಜುನಾ, ಈಗ ಇನ್ನೊಬ್ಬರ ಮಾತುಗಳನ್ನೇ ಏಕೆ ಹೇಳುತ್ತ ಸಾಗಲಿ? ನಾನೇ ಸ್ವತಃ ಈ ಧರ್ಮದ ಆಚರಣೆಯನ್ನು ಮಾಡುತ್ತಿರುವೆನು ।೧೬೦॥

ಈಗ ನಮಗೆ ಏನಾದರೂ ಸಂಕಟ ಒದಗಿರಬಹುದು ಅಥವಾ ಯಾವುದಾದರೊಂದು ಅಪೇಕ್ಷೆ ಇಟ್ಟುಕೊಂಡಿರಬಹುದು. ಅದಕ್ಕಾಗಿ ನಾನು ಸ್ವಧರ್ಮದ ಆಚರಣೆ ಮಾಡುತ್ತಿರುವೆ ಎಂದು ನೀನು ತಿಳಿಯಬಹುದು ।೧೬೧॥

ಆದರೆ, ಈ ಜಗತ್ತಿನಲ್ಲಿ ನನ್ನಷ್ಟು ಗುಣಭರಿತ ಹಾಗೂ ಐಶ್ವರ್ಯವಂತ ಪುರುಷನು ಬೇರಾರೂ ಇಲ್ಲ. ಈ ನನ್ನ ಸಾಮರ್ಥ್ಯವು ನಿನಗೆ ಗೊತ್ತಿದೆ ।೧೬೨॥

ಸಾಂದಿಪ ಗುರುಗಳ ಸತ್ತ ಮಗನನ್ನು ತಂದು ಕೊಟ್ಟಿರುವೆ. ಆ ಪವಾಡ ನೀನು ನೋಡಿರುವೆ. ಹೀಗಿದ್ದೂ ನಾನೂ ಸಹ ಕರ್ಮದ ಆಚರಣೆಯನ್ನು ನಿರಿಚ್ಛಾಭಾವದಿಂದ ಮಾಡುತ್ತಿರುವೆ ।೧೬೩॥

ಶ್ಲೋಕಾರ್ಥ :- ಪಾರ್ಥಾ ! ನಾನು ಎಂದೆಂದಿಗೂ ಆಲಸ್ಯರಹಿತನಾಗಿ ಕರ್ಮದಲ್ಲಿ ತೊಡಗದೆ ಇದ್ದರೆ ಜನರು ಎಲ್ಲಾ ಬಗೆಯಿಂದಲೂ ನನ್ನ ದಾರಿಯನ್ನು ಹಿಂಬಾಲಿಸುತ್ತಾರೆ ।೨೩॥

ಯಾವ ಈ ಒಂದು ಲೋಕಕಲ್ಯಾಣ ದೃಷ್ಟಿಯಿಂದ ಒಬ್ಬ ಸಕಾಮ ಪುರುಷನು ಧರ್ಮಾಚರಣೆ ಮಾಡುವಂತೆ ನಾನು ಸ್ವಧರ್ಮಾಚರಣೆ ಮಾಡುತ್ತಿರುವೆ ।೧೬೪॥

ಏಕೆಂದರೆ ಸರ್ವ ಪ್ರಾಣಿಮಾತ್ರರು ನಮ್ಮ ಮೇಲೆಯೇ ಅವಲಂಬಿಸಿರುವರು. ಅಂದಮೇಲೆ ಅವರು ಕರ್ಮಭ್ರಷ್ಠರಾಗಬಾರದು ।೧೬೫॥

ಶ್ಲೋಕಾರ್ಥ :- ನಾನು ಕರ್ಮವನ್ನು ಮಾಡದೆ ಇದ್ದರೆ ಲೋಕವು ಕೆಟ್ಟು ಹೋಗುತ್ತದೆ. ವರ್ಣ ಸಂಕರಕ್ಕೂ ಪ್ರಜೆಗಳ ದುರ್ಗತಿಗೂ ನಾನೇ ಕಾರಣನಾಗುತ್ತೇನೆ ।೨೪॥

ನಾವು ನಿಷ್ಕಾಮರಾಗಿ ಆತ್ಮಾನಂದದಲ್ಲಿ ಮಗ್ನರಾಗಿ ವಿಹಿತ ಧರ್ಮಾಚರಣೆಗಳನ್ನು ಮಾಡದಿದ್ದರೆ, ಪ್ರಜೆಗಳ ತರಣೋಪಾಯವು ಹೇಗಾಗಬೇಕು ? ।೧೬೬॥

ಇವರು ನಮ್ಮ ವರ್ತನೆಯನ್ನು ಕಂಡು ಧರ್ಮದ ನೀತಿ ಅರಿಯಬೇಕಾಗುವುದು. ಇದು ಲೋಕಾಚಾರವಾಗಿದೆ. ಅಂದಮೇಲೆ ನಾವು ಧರ್ಮಾಚರಣೆ ಬಿಟ್ಟರೆ ಎಲ್ಲದೂ ಕೆಟ್ಟು ಹೋಗುವುದು ।೧೬೭॥

ಆದ್ದರಿಂದ ಯಾರು ಸಮರ್ಥರೋ, ಸರ್ವಜ್ಞಾನ ಸಂಪನ್ನರೋ, ಅವರು ವಿಶೇಷವಾಗಿ ಕರ್ಮದ ಆಚರಣೆಯನ್ನು ಎಂದೂ ತ್ಯಾಗ ಮಾಡಬಾರದು ।೧೬೮॥

ಶ್ಲೋಕಾರ್ಥ :- ಅರ್ಜುನಾ! ಮಮಕಾರ ಬದ್ಧರಾದ ಪಾಮರರು ಕರ್ಮವನ್ನು ಆಸಕ್ತಿಯಿಂದ ಮಾಡುವಂತೆ, ಆಸಕ್ತಿಯಿಲ್ಲದ ಪಂಡಿತರು ಸದಾ ಲೋಕ ಸಂಗ್ರಹವನ್ನು ಕೋರಿ ಕರ್ತವ್ಯ ಕರ್ಮವನ್ನು ಶ್ರದ್ಧೆಯಿಂದ ಮಾಡಬೇಕು ।೨೫॥

ದೇಖೈ ಫಳಾಚಿಯಾ ಆಶಾ । ಆಚರೇ ಕಾಮುಕು ಜೈಸಾ । ಕರ್ಮೀಭರು ಹೋಆವಾ ತೈಸಾ । ನಿರಾಶಾಹೀ ।।೧೭೯।। ಜೇ ಪುಢತಪುಢತಿ ಪಾರ್ಥಾ । ಹೇ ಸಕಳ ಲೋಕಸಂಸ್ಥಾ । ರಕ್ಷಣೀಯ ಸರ್ವಥಾ । ಮ್ಹಣೌನಿಯಾ ।।೧೮೦।। ಮಾರ್ಗಾಧಾರೇ ವರ್ತಾವೇ । ವಿಶ್ವ ಹೇ ಮೋಹರೇ ಲಾವಾವೇ । ಅಲೌಕಿಕಾ ನೋಹಾವೇ । ಲೋಕಾಂಪ್ರತಿ ।।೧೮೧।।

ನ ಬುದ್ಧಿಭೇದಂ ಜನಯೇತ್ ಅಜ್ಞಾನಾಂ ಕರ್ಮಸಂಗಿನಾಮ್ ।
ಜೋಷಯೇತ್ ಸರ್ವಕರ್ಮಾಣಿ ವಿದ್ವಾನ್ ಯುಕ್ತಃ ಸಮಾಚರನ್ ।।೨೬।।

ಜೇ ಸಾಯಾಸೇ ಸ್ತನ್ಯ ಸೇವೀ । ತೇ ಪಕ್ವಾನ್ನೇ ಕೇವೀ ಜೇವೀ । ಮ್ಹಣೌನಿ ಬಾಳಕಾ ಜೈಶೀ ನೇದಾವೀ । ಧನುರ್ಧರಾ ।।೧೮೨।। ತೈಶೀ ಕರ್ಮೀ ಜಯಾ ಅಯೋಗ್ಯತಾ । ತಯಾಪ್ರತಿ ನೈಷ್ಕರ್ಮ್ಯತಾ । ನ ಪ್ರಗಟಾವೀ ಖೇಳತಾ । ಆದಿಕರೂನೀ ।।೧೮೩।। ತೇಥೇ ಸತ್ಕ್ರಿಯಾಚಿ ಲಾವಾವೀ । ತೇಚಿ ಏಕೀ ಪ್ರಶಂಸಾವೀ । ನೈಷ್ಕರ್ಮೀಹೀ ದಾವಾವೀ । ಆಚರೋನಿ ।।೧೮೪।। ತಯಾ ಲೋಕಸಂಗ್ರಹಾಲಾಗೀ । ವರ್ತತಾ ಕರ್ಮಸಂಗೀ । ತೋ ಕರ್ಮಬಂಧು ಆಂಗೀ । ವಾಜೈಲನಾ ।।೧೮೫।। ಜೈಸೀ ಬಹುರೂಪಿಯಾಂಚೀ ರಾವೋ ರಾಣೀ । ಸ್ತ್ರೀಪುರುಷಭಾವೋ ನಾಹೀ ಮನೀ । ಪರೀ ಲೋಕಸಂಪಾದಣೀ । ತೈಶೀಚ ಕರಿತೀ ।।೧೮೬।।

ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।
ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ।।೨೭।।

ದೇಖೈ ಪುಢಿಲಾಚೇ ವೋಝೇ । ಜರೀ ಆಪುಲಾ ಮಾಥಾ ಘೇಇಜೇ । ತರೀ ಸಾಂಗೈ ಕಾ ನ ದಾಟಿಜೇ । ಧನುರ್ಧರಾ? ।।೧೮೭।। ತೈಶೀ ಶುಭಾಶುಭೆ ಕರ್ಮೇ । ಜಿಯೇ ನಿಪಜತೀ ಪ್ರಕೃತಿಧರ್ಮೇ । ತೀಯೇ ಮೂರ್ಖ ಮತಿಭ್ರಮೇ । ಮೀ ಕರ್ತಾ ಮ್ಹಣೇ ।।೧೮೮।। ಐಸಾ ಅಹಂಕಾರಾದಿ ರೂಢ । ಏಕದೇಶೀ ಮೂಢ । ತಯಾ ಹಾ ಪರಮಾರ್ಥ ಗೂಢ । ಪ್ರಗಟಾವಾ ನಾ ।।೧೮೯।। ಹೇ ಅಸೋ ಪ್ರಸ್ತುತ । ಸಾಂಗೀಜೈಲ ತುಜ ಹಿತ । ತೇ ಅರ್ಜುನಾ ದೇಊನಿ ಚಿತ್ತ । ಅವಧಾರೀ ಪಾ ।।೧೯೦।।

ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।
ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ।।೨೮।।

ಫಲದ ಇಚ್ಛೆ ಇಟ್ಟುಕೊಂಡು ಕರ್ಮಾಚರಣೆ ಮಾಡುವ ಪುರುಷನಂತೆ ಜ್ಞಾನ ಪುರುಷನು ಸಹ ಕರ್ಮಾಚರಣೆಯನ್ನು ವಿಶೇಷವಾಗಿ ಮಾಡಬೇಕಾಗುವುದು ॥೧೬೯॥

ಏಕೆಂದರೆ ಪಾರ್ಥಾ! ಮುಂದೆ ಆಗು ಹೋಗುವ ಲೋಕ ಸಮುದಾಯವನ್ನು ಪುನಃ ಪುನಃ ರಕ್ಷಣೆ ಮಾಡುವುದು ಅವಶ್ಯವಿದೆ. ಆದ್ದರಿಂದ ॥೧೭೦॥

ದೊಡ್ಡವರು ಸ್ವತಃ ಸನ್ಮಾರ್ಗದಿಂದ ವರ್ತಿಸಿ ಲೋಕದ ಜನರಿಗೆ ಧರ್ಮದ ಮಾರ್ಗಕ್ಕೆ ಹಚ್ಚಬೇಕು. ಆದರೆ ಸಾಮಾನ್ಯರಿಗೆ ತಾವು ಅಲೌಕಿಕರೆಂಬುದು ತೋರಿಸಿ ಕೊಡಬಾರದು ॥೧೭೧॥

ಶ್ಲೋಕಾರ್ಥ :- ಕರ್ಮದಲ್ಲಿ ಅಭಿರುಚಿಯಿರುವ ಪಾಮರ ಜನರ ಬುದ್ಧಿಗೆ ಪಂಡಿತನು ಬೇಧವನ್ನು ಉಂಟು ಮಾಡಕೂಡದು. ತಾನು ಯೋಗಯುಕ್ತನಾಗಿ ಸರಿಯಾಗಿ ಕರ್ಮ ಮಾಡುತ್ತ ಅವರನ್ನು ಕರ್ಮಕ್ಕೆ ಪ್ರೋತ್ಸಾಹಿಸಬೇಕು ॥೨೬॥

ಯಾವ ಕೂಸು ದೊಡ್ಡ ಸಾಹಸದೊಂದಿಗೆ ತಾಯಿಯ ಎದೆ ಹಾಲು ಕುಡಿಯುವುದು. ಅದು ಪಕ್ವಾನ್ನವನ್ನು ಹೇಗೆ ತಿಂದೀತು? ಆದ್ದರಿಂದ ಅರ್ಜುನಾ ಅದನ್ನು ಕೂಸಿಗೆ ಕೊಡಬಾರದು ॥೧೭೨॥

ಅದರಂತೆ ಯಾರಿಗೆ ಶಾಸ್ತ್ರೋಕ್ತ ಕರ್ಮಗಳನ್ನು ಸಹ ಸರಿಯಾಗಿ ಆಚರಿಸಲು ಬರುವುದಿಲ್ಲವೋ ಅವರಿಗೆ ನೈಷ್ಕರ್ಮತಾ ಇತ್ಯಾದಿ ಜ್ಞಾನಮಾರ್ಗವನ್ನು ಹುಡುಗಾಟದಿಂದಲೂ ಹೇಳಬಾರದು ॥೧೭೩॥

ಅವರಿಗೆ ಸತ್ಕರ್ಮವನ್ನೇ ಆಚರಿಸಲು ತಿಳಿಸಬೇಕು. ಸತ್ಕರ್ಮಗಳ ವರ್ಣನೆಯನ್ನೇ ಮಾಡಬೇಕು. ನಿಷ್ಕರ್ಮತಾ ಪ್ರಾಪ್ತಿ ಮಾಡಿಕೊಂಡ ಪುರುಷನು ಸಹ ಸತ್ಕರ್ಮಗಳನ್ನು ಮಾಡಿ ತೋರಿಸಬೇಕು ॥೧೭೪॥

ವರ್ಣಾಶ್ರಮದ ಧರ್ಮರಕ್ಷಣೆಗಾಗಿ ಕರ್ಮ ಮಾರ್ಗದ ಆಚರಣೆ ಮಾಡುತ್ತಿರುವಾಗ್ಗೆ, ಕರ್ಮ ಬಂಧನವನ್ನು ಭೋಗಿಸಬೇಕಾಗುವುದಿಲ್ಲ ॥೧೭೫॥

ಪಾತ್ರಧಾರಿಯು ರಾಜ - ರಾಣಿಯರ ವೇಶ ಹಾಕಿಕೊಂಡಾಗ ಆತನ ಮನಸ್ಸಿನಲ್ಲಿ ಸ್ತ್ರೀ ಪುರುಷ ಭಾವವು ಬರುವುದೇ ಇಲ್ಲ. ಆದಾಗ್ಯೂ, ಲೋಕದ ಜನರಿಗೆ ತೋರಿಸುವುದಕ್ಕಾಗಿ ಹಾಗೆ ನಟಿಸುವನು ॥೧೭೬॥

ಶ್ಲೋಕಾರ್ಥ :- ಗುಣಗಳ ದ್ವಾರಾ ಪ್ರಕೃತಿಯು ಎಲ್ಲಾ ವಿಧಿಯಿಂದಲೂ ನಿರ್ವಹಿಸುತ್ತಿರುವಾಗ ಕರ್ಮಗಳಿಗೆ ತಾನೇ ಕರ್ತನೆಂದು ಅಹಂಕಾರದಿಂದ ವಿಮೂಢವಾದ ಚಿತ್ತವುಳ್ಳವನು ಅಂದುಕೊಳ್ಳುತ್ತಾನೆ ॥೨೭॥

ಅರ್ಜುನಾ ನೋಡು! ಬೇರೆಯವರ ಭಾರವನ್ನು ನಾವು ನಮ್ಮ ತಲೆಯ ಮೇಲೆ ಹೇರಿಕೊಂಡರೆ ಗೋಣಿಗೆ ನೋವು ಆಗುವುದಿಲ್ಲವೇ? ॥೧೭೭॥

ಅದರಂತೆ ಪ್ರಕೃತಿಯ ಗುಣಗಳಿಂದ ಹೀನ ಉತ್ತಮ ಕರ್ಮಗಳು ಉತ್ಪನ್ನವಾಗುತ್ತವೆ. ಅದರ ಕರ್ತನು ನಾನೇ ಇರುವೆ ಎಂದು ಅಜ್ಞಾನಿಯು ಭ್ರಮೆಯಿಂದ ತಿಳಿಯುವನು ॥೧೭೮॥

ಈ ಪ್ರಕಾರವಾಗಿ ದೇಹಾಭಿಮಾನ ಧಾರಣೆ ಮಾಡಿರುವ ಮೂರ್ಖ, ಅಜ್ಞಾನಿ ಪುರುಷನಿಗೆ ನೈಷ್ಕರ್ಮ ಸ್ಥಿತಿಯ ಪರಮಾರ್ಥವನ್ನು ಪ್ರಗಟಗೊಳಿಸಬಾರದು ॥೧೭೯॥

ಅರ್ಜುನಾ, ಅದಿರಲಿ, ಈಗ ಹಿತವು ಯಾವುದರಲ್ಲಿದೆ ಎಂಬುದನ್ನು ನಿನಗೆ ತಿಳಿಸುವೆ, ಲಕ್ಷಕೊಟ್ಟು ಕೇಳು ॥೧೮೦॥

ಶ್ಲೋಕಾರ್ಥ :- ವೀರಶಿಖಾಮಣಿ! ಗುಣಕರ್ಮಗಳ ರಹಸ್ಯವನ್ನು ತಿಳಿದ ಜ್ಞಾನಿಯು ಗುಣ ಕಾರ್ಯಗಳಾದ ಇಂದ್ರಿಯಗಳು ಗುಣ ಕಾರ್ಯಗಳೇ ಆದ ವಿಷಯಗಳಲ್ಲಿ ಪ್ರವರ್ತಿಸುವೆ ಎಂದು ತಿಳಿದು ತಾನೂ ಅವುಗಳಲ್ಲಿ ಲಿಪ್ತನಾಗುವುದಿಲ್ಲ ॥೨೮॥

ಜೇ ತತ್ತ್ವಜ್ಞಾನಿಯಾಂಚ್ಯಾ ಠಾಯೀ । ತೋ ಪ್ರಕೃತಿಭಾವೋ ನಾಹೀ । ಜೇಥ ಕರ್ಮಜಾತ ಪಾಹೀ । ನಿಪಜತ ಅಸೇ ।।೧೮೧।। ತೇ ದೇಹಾಭಿಮಾನು ಸಾಂಡುನೀ । ಗುಣಕರ್ಮೇ ವೋಲಾಂಡುನೀ । ಸಾಕ್ಷಿ ಭೂತ ಹೋಉನೀ । ವರ್ತತಿ ದೇಹೀ ।।೧೮೨।। ಮ್ಹಣೌನಿ ಶರೀರೀ ಜರೀ ಹೋತೀ । ತರೀ ಕರ್ಮಬಂಧಾ ನಾತಳತೀ । ಜೈಸಾ ಕಾ ಭೂತಚೇಷ್ಟಾ ಗಭಸ್ತೀ । ಘೇಪವೇನಾ ।।೧೮೩।।

ಪ್ರಕೃತೇರ್ಗುಣಸಂಮೂಢಾಃ ಸಜ್ಜಂತೇ ಗುಣಕರ್ಮಸು ।
ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನ ವಿಚಾಲಯೇತ್ ।।೨೯।।

ಏಥ ಕರ್ಮೀ ತೋಚಿ ಲಿಂಪೇ । ಜೋ ಗುಣಸಂಭ್ರಮೇ ಘೇಪೇ । ಪ್ರಕೃತೀಚೇನಿ ಆಟೋಪೇ । ವರ್ತತು ಅಸೇ ।।೧೮೪।। ಇಂದ್ರಿಯೇ ಗುಣಾಧಾರೇ । ರಾಹಾಟತೀ ನಿಜವ್ಯಾಪಾರೇ । ತೇ ಪರಕರ್ಮ ಬಲಾತ್ಕಾರೇ । ಆಪಾದೀ ಜೋ ।।೧೮೫।।

ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ ।
ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ।।೩೦।।

ತರೀ ಉಚಿತೇ ಕರ್ಮೇ ಆಘವೀ । ತುವಾ ಆಚರೋನೀ ಮಜ ಅರ್ಪಾವೀ । ಪರೀ ಚಿತ್ತವೃತ್ತಿ ನ್ಯಾಸಾವೀ । ಆತ್ಮರೂಪೀ ।।೧೮೬।। ಆಣಿ ಹೇ ಕರ್ಮ ಮೀ ಕರ್ತಾ । ಕಾ ಆಚರೈನ ಯಾ ಅರ್ಥಾ । ಐಸಾ ಅಭಿಮಾನು ಝಣೇ ಚಿತ್ತಾ । ರಿಗೋ ದೇಸೀ ।।೧೮೭।। ತುವಾ ಶರೀರಪರಾ ನೋಹಾವೇ । ಕಾಮನಾಜಾತ ಸಾಂಡಾವೇ । ಮಗ ಅವಸರೋಚಿತ ಭೋಗಾವೇ । ಭೋಗ ಸಕಳ ।।೧೮೮।। ಆತಾ ಕೋದಂಡ ಘೇಊನಿ ಹಾತೀ । ಆರೂಢ ಪಾ ಇಯೇ ರಥೀ । ದೇಈ ಆಲಿಂಗನ ವೀರವೃತ್ತೀ । ಸಮಾಧಾನೇ ।।೧೮೯।। ಜಗೀ ಕೀರ್ತಿ ರೂಢವೀ । ಸ್ವಧರ್ಮಾಚಾ ಮಾನು ವಾಢವೀ । ಇಯಾ ಭಾರಾಪಾಸೋನಿ ಸೋಡವೀ । ಮೇದಿನೀ ಹೇ ।।೧೯೦।। ಆತಾ ಪಾರ್ಥಾ ನಿಃಶಂಕು ಹೋಈ । ಯಾ ಸಂಗ್ರಾಮಾ ಚಿತ್ತ ದೇಈ । ಏಥ ಹೇ ವಾಂಚೂನಿ ಕಾಂಹೀ । ಬೋಲೋ ನಯೇ ।।೧೯೧।।

ಯೇ ಮೇ ಮತಮಿದಂ ನಿತ್ಯಮ್ ಅನುತಿಷ್ಠಂತಿ ಮಾನವಾಃ ।
ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ ।।೩೧।।

ಹೇ ಅನುಪರೋಧ ಮತ ಮಾಝೇ । ಜಿಹೀ ಪರಮಾದರೇ ಸ್ವೀಕಾರಿಜೇ । ಶ್ರದ್ಧಾಪೂರ್ವಕ ಅನುಷ್ಠಿಜೇ । ಧನುರ್ಧರಾ ।।೧೯೨।। ತೇಹೀ ಸಕಳ ಕರ್ಮೀ ವರ್ತತು । ಜಾಣ ಪಾ ಕರ್ಮರಹಿತು । ಮ್ಹಣೌನಿ ಹೇ ನಿಶ್ಚಿತು । ಕರಣೀಯ ಗಾ ।।೧೯೩।।

ಯಾವುದರಿಂದ ಎಲ್ಲ ಕರ್ಮಗಳು ಉತ್ಪನ್ನವಾಗುವುವೋ ಆ ದೇಹಾಭಿಮಾನವು ತತ್ತ್ವಜ್ಞಾನಿಯರಲ್ಲಿ ಮೂಲತಃ ಇರುವುದಿಲ್ಲ ।।೧೮೧।।

ಆ ಜ್ಞಾನಿ ಪುರುಷನು ದೇಹದ ಅಭಿಮಾನ ತ್ಯಾಗ ಮಾಡಿ ಹಾಗೂ ಗುಣಕರ್ಮಾತೀತನಾಗಿ ದೇಹದಲ್ಲಿ ಕೇವಲ ಸಾಕ್ಷಿಯಾಗಿ ವರ್ತಿಸುವನು ।।೧೮೨।।

ಆದ್ದರಿಂದ ಯಾವ ಪ್ರಕಾರವಾಗಿ ಸೂರ್ಯನು ಜಗತ್ತಿನ ಮೇಲೆ ಪ್ರಕಾಶವನ್ನು ಬೀರಿ ಆ ಜಗತ್ತಿನ ಕರ್ಮದಿಂದ ಲಿಪ್ತನಾಗುವುದಿಲ್ಲವೋ ಅದರಂತೆ ದೇಹ ಧರಿಸಿದರೂ ದೇಹ ಕರ್ಮದಿಂದ ಬದ್ಧರಾಗುವುದಿಲ್ಲ ।।೧೮೩।।

ಶ್ಲೋಕಾರ್ಥ :- ಪ್ರಕೃತಿಯ ಗುಣಗಳಲ್ಲಿ ಮುಗ್ಧರಾದ ಜನರು ಗುಣಕರ್ಮಗಳಲ್ಲಿ ಆಸಕ್ತರಾಗಿರುತ್ತಾರೆ. ಪೂರ್ಣ ಜ್ಞಾನಿಯಾದವನು, ಅಲ್ಪಜ್ಞರಾದ ಅವರನ್ನು, ಅವರ ದಾರಿಯಿಂದ ಕದಲಿಸಕೂಡದು ।।೨೯।।

ಯಾರು ಪ್ರಕೃತಿಯ ಆಧೀನರಾಗಿ ನಡೆಯುವರೋ ಹಾಗೂ ಗುಣಗಳಲ್ಲಿ ಸಿಲುಕಿರುವರೋ ಅವರೇ ಕರ್ಮದಿಂದ ಲಿಪ್ತರಾಗುವರು ।।೧೮೪।।

ಇಂದ್ರಿಯಗಳು ಗುಣಗಳ ಆಧೀನವಾಗಿ ತಮ್ಮ ತಮ್ಮ ಕಾರ್ಯ ಮಾಡುತ್ತಿರುವಾಗ್ಗೆ ತನ್ನ ಹೊರತಾದ ಆ ಕರ್ಮಕ್ಕೆ ''ನಾನೇ ಮಾಡುತ್ತಿರುವೆ'' ಎಂದು ತನ್ನ ಮೇಲೆ ಹೇರಿಕೊಳ್ಳುವನು ।।೧೮೫।।

ಶ್ಲೋಕಾರ್ಥ :- ಆತ್ಮನಿಷ್ಠವಾದ ಬುದ್ಧಿಯಿಂದ ಸಮಸ್ತ ಕರ್ಮಗಳನ್ನು ನನ್ನಲ್ಲಿ ಸಮರ್ಪಿಸಿ, ಆಸೆ ಮಮಕಾರವಿಲ್ಲದವನಾಗಿ, ಮನಸ್ಸಿನ ತಳಮಳವಿಲ್ಲದೆ ಯುದ್ಧವನ್ನು ಮಾಡು ।।೩೦।।

ಆದ್ದರಿಂದ ವಿಹಿತ ಕರ್ಮಗಳ ಆಚರಣೆ ಮಾಡಿ ಅದನ್ನು ನೀನು ನನಗೆ ಅರ್ಪಿಸಬೇಕು. ಆದರೆ ಚಿತ್ತವೃತ್ತಿಯನ್ನು ಯಾವಾಗಲೂ ಆತ್ಮಸ್ವರೂಪದಲ್ಲಿ ಇಡಬೇಕು ।।೧೮೬।।

ಈ ಕರ್ಮಗಳ ಕರ್ತನು ನಾನು ಮತ್ತು ಯಾವುದೇ ಫಲಕ್ಕಾಗಿ ಇದನ್ನು ನಾನು ಮಾಡುತ್ತಿರುವೆ ಎಂಬ ಅಭಿಮಾನವನ್ನು ಚಿತ್ತದಲ್ಲಿ ತರಕೂಡದು ।।೧೮೭।।

ನೀನು ಶರೀರದ ಸ್ವಾಧೀನನಾಗದೇ ಎಲ್ಲ ಇಚ್ಛೆಗಳನ್ನು ತ್ಯಾಗಮಾಡು. ಆಮೇಲೆ ಎಲ್ಲ ಭೋಗಗಳನ್ನು ಯಥಾ ಕಾಲದಲ್ಲಿ ಭೋಗಿಸು ।।೧೮೮।।

ಆದ್ದರಿಂದ ಈಗ ನೀನು (ಕೋದಂಡ) ಧನುಷ್ಯವನ್ನು ಕೈಗೆತ್ತಿಕೊಂಡು ರಥದ ಮೇಲೆ ಕುಳಿತುಕೊ ಮತ್ತು ಆನಂದದಿಂದ ವೀರವೃತ್ತಿಯನ್ನು ಆಲಿಂಗಿಸು ।।೧೮೯।।

ಜಗತ್ತಿನಲ್ಲಿ ನಿನ್ನ ಕೀರ್ತಿಯನ್ನು ವೃದ್ಧಿಗೊಳಿಸಲು, ಸ್ವಧರ್ಮದ ಮಹಿಮೆಯನ್ನು ಪ್ರಕಾಶಿಸು ಮತ್ತು (ದುರ್ಯೋಧನಾದಿ) ದುಷ್ಟರ ಭಾರದಿಂದ ಪೃಥ್ವಿಯನ್ನು ಬಿಡಿಸು ।।೧೯೦।।

ಪಾರ್ಥಾ! ಈಗ ನೀನು ನಿಶ್ಚಯ ಭಾವ ತಾಳಿ ಈ ಯುದ್ಧದಲ್ಲಿ ಲಕ್ಷ ಕೊಡು. ಇದರ ಹೊರತಾಗಿ ಬೇರೆ ಏನನ್ನೂ ಹೇಳಬೇಡ ।।೧೯೧।।

ಶ್ಲೋಕಾರ್ಥ :- ಮಾತ್ಸರ್ಯವಿಲ್ಲದವರಾಗಿ, ಶ್ರದ್ಧಾವಂತರಾಗಿ ನನ್ನ ಈ ಮತವನ್ನು ಅನುಸರಿಸಿ ವರ್ತಿಸುವ ಮಾನವರು ಕರ್ಮ ಬಂಧನದಿಂದ ವಿಮುಕ್ತಿಯನ್ನು ಪಡೆಯುತ್ತಾರೆ ।।೩೧।।

ಅರ್ಜುನಾ, ಈ ನನ್ನ ಮತವು ನಿರ್ದೋಷಿ ಅಭಾಧಿತವಾಗಿರುವುದು. ಯಾರು ಈ ನನ್ನ ಮತವನ್ನು ಅತೀ ಆದರದಿಂದ ಸ್ವೀಕರಿಸಿ ಶ್ರದ್ಧೆಯಿಂದ ಆಚರಿಸುವರೋ ।।೧೯೨।।

ಅವರೂ ಸಹ ಕರ್ಮದಲ್ಲಿದ್ದುಕೊಂಡೇ ಕರ್ಮರಹಿತರಾಗುವರು. ಹೀಗೆ ತಿಳಿದುಕೊ. ಆದ್ದರಿಂದ ಈ ನನ್ನ ಮತವು ನಿಶ್ಚಯವಾಗಿ ಆಚರಿಸಲು ಯೋಗ್ಯವಾಗಿರುವುದು ।।೧೯೩।।

ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಮ್ ।
ಸರ್ವಜ್ಞಾನವಿಮೂಢಾಂಸ್ತಾನ್ ವಿದ್ಧಿ ನಷ್ಟಾನಚೇತಸಃ ।೩೨॥

ನಾತರೀ ಪ್ರಕೃತಿಮಂತು ಹೋಊನಿ । ಇಂದ್ರಿಯಾ ಲಳಾ ದೇಊನಿ । ಜೇ ಹೇ ಮಾಝೇ ಮತ ಅವ್ಹೇರುನೀ । ಓಸಂಡಿತೀ ।೧೯೪॥ ಜೇ ಸಾಮಾನ್ಯತ್ವೇ ಲೇಖಿತೀ । ಅವಜ್ಞಾ ಕರೂನಿ ದೇಖಿತೀ । ಕಾ ಹಾ ಅರ್ಥವಾದು ಮ್ಹಣತೀ । ವಾಚಾಳಪಣೇ ।೧೯೫॥ ತೇ ಮೋಹ ಮದಿರಾ ಭುಲಲೇ । ವಿಷಯವಿಖೇ ಘಾರಲೇ । ಅಜ್ಞಾನಪಂಕೀ ಬುಡಾಲೇ । ನಿಭ್ರಾಂತ ಮಾನೀ ।೧೯೬॥ ದೇಖ್ಯೆ ಶವಾಚ್ಯಾ ಹಾತೀ ದಿಧಲೇ । ಜೈಸೇ ರತ್ನ ಕಾ ವಾಯಾ ಗೇಲೇ । ನಾತರೀ ಜಾತ್ಯಂಧಾ ಪಾಹಲೇ । ಪ್ರಮಾಣ ನೋಹೇ ।೧೯೭॥ ಕಾ ಚಂದ್ರಾಚಾ ಉದಯೋ ಜೈಸಾ । ಉಪಯೋಗಾ ನವಚೇ ವಾಯಸಾ । ಮೂರ್ಖಾ ವಿವೇಕು ಹಾ ತೈಸಾ । ರುಚೇಲ ನಾ ।೧೯೮॥ ತೈಸೇ ಜೇ ಪಾರ್ಥಾ । ವಿಮುಖ ಯಾ ಪರಮಾರ್ಥಾ । ತಯಾಂಸೀ ಸಂಭಾಷಣ ಸರ್ವಥಾ । ಕರಾವೇನಾ ।೧೯೯॥ ಮ್ಹಣೌನಿ ತೇ ನ ಮಾನಿತೀ । ಆಣಿ ನಿಂದಾಹೀ ಕರೂ ಲಾಗತೀ । ಸಾಂಗ್ಯೆ ಪತಂಗು ಕಾಯ ಸಾಹತೀ । ಪ್ರಕಾಶಾತೇ ? ।೨೦೦॥ ಪತಂಗಾ ದೀಪೀ ಆಲಿಂಗನ । ತೇಥ ತ್ಯಾಸೀ ಅಚುಕ ಮರಣ । ತೇವೀ ವಿಷಯಾಚರಣ। ಆತ್ಮಘಾತಾ ।೨೦೧॥

ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।
ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ।೩೩॥

ಮ್ಹಣೌನಿ ಇಂದ್ರಿಯೇ ಏಕೇ । ಜಾಣತೇನೀ ಪುರುಖೇ । ಲಾಳಾವೀ ನಾ ಕೌತುಕೇ । ಆದಿಕರೂನೀ ।೨೦೨॥ ಹಾ ಗಾ ಸರ್ಪೇಸೀ ಖೇಳೋ ಯೇಯಿೀಲ ? । ಕೀ ವ್ಯಾಘ್ರಸಂಸರ್ಗ ಸಿದ್ಧಿ ಜಾಈಲ ?। ಸಾಂಗ್ಯೆ ಹಾಳಾಹಾಳ ಜಿರೇಲ । ಸೇವಿಲಿಯಾ ಕಾಈ ।೨೦೩॥ ದೇಖ್ಯೆ ಖೇಳತಾ ಅಗ್ನಿ ಲಾಗಲಾ । ಮಗ ತೋ ನ ಸಾವರೇ ಜೈಸಾ ಉಧವಲಾ । ತೈಸಾ ಇಂದ್ರಿಯಾ ಲಳಾ ದಿಧಲಾ । ಭಲಾ ನೋಹೇ ।೨೦೪॥ ಏರ್ಹ್ವಿ ತರೀ ಅರ್ಜುನಾ । ಯಾ ಶರೀರಾ ಪರಾಧೀನಾ । ಕಾ ನಾನಾ ಭೋಗರಚನಾ । ಮೇಳವಾವೀ?।೨೦೫॥ ಆಪಣ ಸಾಯಾಸೇ ಕರೂನಿ ಬಹುತೇ । ಸಕಳಹೀ ಸಮೃದ್ಧಿ ಜಾತೇ । ಉದೋಅಸ್ತು ಯಾ ದೇಹಾತೇ । ಪ್ರತಿಪಾಳಾವೇ ಕಾ? ।೨೦೬॥ ಸರ್ವಸ್ವೇ ಶಿಣೋನಿ ಏಥೇ । ಅರ್ಜವಾವೀ ಸಂಪತ್ತಿ ಜಾತೇ । ತೇಣೇ ಸ್ವಧರ್ಮು ಸಾಂಡುನಿ ದೇಹಾತೇ । ಪೋಖಾವೇ ಕಾಈ? ।೨೦೭॥

ಶ್ಲೋಕಾರ್ಥ :- ಅಸೂಯಾಪರರಾಗಿ ಈ ನನ್ನ ಮತವನ್ನು ನಿರಾಕರಿಸಿದವರು ಸರ್ವಪರಿಯಿಂದಲೂ ಕೆಟ್ಟು ಹೋದವರೆಂದು ತಿಳಿ ||೩೨||

ಹೀಗಾಗದಿದ್ದರೆ, ದೇಹದ ಪಾಶದಲ್ಲಿ ಸಿಲುಕಿ ಇಂದ್ರಿಯಗಳ ಲಾಲನೆಗೆ ಬಲಿಯಾಗಿ ಯಾರು ಈ ನನ್ನ ಮತವನ್ನು ತಿರಸ್ಕರಿಸುವರೋ ||೧೯೪||

ಅಲ್ಲದೇ ಯಾರು ಈ ಮಾತನ್ನು ಸಾಮಾನ್ಯವೆಂದು ತಿಳಿಯುತ್ತಾ ಅದರ ಅವಹೇಳನ ಮಾಡು ಹಾಗೂ ವಾಚಾಳಿತನದಿಂದ ಸ್ತುತಿಯಂತೆ ನಿಂದಿಸುವರೋ ||೧೯೫||

ಅವರು ಮೋಹರೂಪ ಮದ್ಯಪಾನ ಮಾಡಿ ಭ್ರಮಿಸಿರುವರು. ಹಾಗೂ ವಿಷಯರೂಪ ವಿಷದಿಂದ ವ್ಯಾಪಿಸಿರುವರು ಮತ್ತು ಅಜ್ಞಾನರೂಪ ಜಿಗಟಾದ ಆಳವಾದ ಮಣ್ಣಿನಲ್ಲಿ (ಹುದುಲಿನಲ್ಲಿ) ಸಿಕ್ಕಿಕೊಂಡಿರುವರು. ಹೀಗೆ ನಿಃಸಂಶಯವಾಗಿ ತಿಳಿ ||೧೯೬||

ಇಲ್ಲಿ ನೋಡು ; ಹೆಣದ ಕೈಯಲ್ಲಿ ಕೊಟ್ಟ ರತ್ನವು ಹೇಗೆ ನಿಃಷ್ಪ್ರಯೋಜನವಾಗುವುದೋ ಅಥವಾ ಹುಟ್ಟು ಕುರುಡನಿಗೆ ಪ್ರಕಾಶವು ಯಾವ ಉಪಯೋಗವಾಗು ವುದಿಲ್ಲವೋ ||೧೯೭||

ಅಥವಾ ಚಂದ್ರ ಪ್ರಕಾಶವು ಕಾಗೆಗೆ ಹೇಗೆ ಉಪಯೋಗವಾಗುವುದಿಲ್ಲವೋ ಅದರಂತೆ ಮೂರ್ಖರಿಗೆ ಈ ನಮ್ಮ ವಿಚಾರವು ರುಚಿಸುವುದಿಲ್ಲ ||೧೯೮||

ಹಾಗೆಯೇ ಅರ್ಜುನಾ, ಯಾವ ಜನರು ಈ ಪರಮಾರ್ಥದಿಂದ ವಿಮುಖರಾಗಿರುವರೋ, ಅವರಲ್ಲಿ ಸರ್ವಥಾ ಸಂಭಾಷಣೆ ಮಾಡಕೂಡದು ||೧೯೯||

ಏಕೆಂದರೆ, ಯಾವ ಪ್ರಕಾರವಾಗಿ ಪತಂಗ ಹುಳುವು ದೀಪದ ಮತ್ಸರ ಮಾಡುವಂತೆ ಈ ಜನರು ಈ ನಮ್ಮ ವಿಚಾರಗಳಿಗೆ ಭರವಸೆ ಮಾಡದೇ ತಿರುಗಿ ನಿಂದೆಯನ್ನೇ ಮಾಡುವರು ||೨೦೦||

ಪತಂಗ ಹುಳುವು ದೀಪಕ್ಕೆ ಆಲಿಂಗಿಸಿದಾಕ್ಷಣವೇ ಅದಕ್ಕೆ ತಪ್ಪದೇ ಹೇಗೆ ಮರಣ ಬರುವುದೋ ಹಾಗೆಯೇ ವಿಷಯಾಚರಣೆಯಲ್ಲಿ ಆತ್ಮಘಾತವಿರುವುದು ||೨೦೧||

ಶ್ಲೋಕಾರ್ಥ :- ಸಮಸ್ತ ಪ್ರಾಣಿಗಳು ತಮ್ಮ ತಮ್ಮ ಪ್ರಕೃತಿಗೆ ಅನುಕೂಲವಾಗಿ ನಡೆಯುತ್ತಿವೆ. ಜ್ಞಾನಿಯೂ ಸಹ ತನ್ನ ಪ್ರಕೃತಿ ಸ್ವಭಾವದಂತೆಯೇ ವರ್ತಿಸುತ್ತಾನೆ. ನಿಗ್ರಹವು ಏನು ಮಾಡಬಲ್ಲದು? ||೩೩||

ಆದ್ದರಿಂದ ಯಾವ ವಿಚಾರವಂತ ಪುರುಷನು ಈ ಇಂದ್ರಿಯಗಳಿಗೆ ಕೌತುಕದಿಂದಲಾದರೂ ಬೇಡಿದ್ದನ್ನು ಕೊಡಬಾರದು ||೨೦೨||

ಅರೇ, ಹೀಗೆ ನೋಡು; ಸರ್ಪದ ಜೊತೆಗೆ ಆಟವಾಡಲು ಬರುವುದೇ? ಅಥವಾ ಹುಲಿಯ ಸ್ನೇಹವು ಸಿದ್ಧಿಗೊಳ್ಳುವುದೇ? ಹಲಾಹಲ ವಿಷಪ್ರಾಶನ ಮಾಡಿ ಜೀರ್ಣಿಸಿಕೊಳ್ಳಬಹುದೇ? ಹೇಳು ನೋಡೋಣ ||೨೦೩||

ಇಲ್ಲಿ ನೋಡು; ಸಹಜವಾಗಿ ಆಡುವಾಗ ಅಗ್ನಿ ಹತ್ತಿದರೆ ಅದು ಪ್ರಜ್ವಲಗೊಂಡು ಆರಿಸುವುದಾಗುವುದಿಲ್ಲ. ಅದರಂತೆ ಕೌತುಕದಿಂದಾದರೂ ಇಂದ್ರಿಯಗಳಿಗೆ ಪ್ರೀತಿಸುವುದು ಸರಿಯಲ್ಲ ||೨೦೪||

ಅರ್ಜುನಾ, ವಿಚಾರಿಸಿ ನೋಡಿದರೆ, ಈ ಶರೀರವು ಪರಾಧೀನವಾಗಿರಲು ಅದಕ್ಕಾಗಿ ಪ್ರಯತ್ನ ಮಾಡಿ ವಿಷಯ ಭೋಗಕ್ಕಾಗಿ ಏಕೆ ಸಾಯಾಸ ಮಾಡಬೇಕು? ||೨೦೫||

ಸಾಕಷ್ಟು ಪ್ರಯತ್ನ ಮಾಡಿ ಅನೇಕ ವಸ್ತುಗಳ ಸಂಪಾದನೆ ಮಾಡಿ ಈ ದೇಹದ ಲಾಲನೆ ಪಾಲನೆ ಅಹೋ ರಾತ್ರಿ ಏಕೆ ಮಾಡಬೇಕು? ||೨೦೬||

ಇಲ್ಲಿ ಬಹುಪರಿಶ್ರಮಪಟ್ಟು ಹೇರಳ ಸಂಪತ್ತುಗಳಿಸಿ ಹಾಗೂ ಧರ್ಮದ ತ್ಯಾಗ ಮಾಡಿ ಕೇವಲ ದೇಹದ ಪೋಷಣೆ ಏಕೆ ಮಾಡಬೇಕು? ||೨೦೭||

ಮಗ ಹೇ ತವ ಪಾಂಚಮೇಳವಾ । ಶೇಖೀ ಅನುಸರೇಲ ಪಂಚತ್ವಾ । ತೇ ವೇಳೀ ಕೇಲಾ ಕೇಗಿಂವಸಾವಾ । ಶೀಣು ಆಪುಲಾ ।೨೦೮॥ ಮ್ಹಣೌನಿ ಕೇವಳ ದೇಹಭರಣ । ತೇ ಜಾಣೇ ಉಘಡೀ ನಾಗವಣ । ಯಾಲಾಗಿ ಏಥ ಅಂತಃಕರಣ । ದೇಯಾವೇನಾ ।೨೦೯॥

ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।
ತಯೋರ್ನ ವಶಮಾಗಚ್ಛೇತ್ ತೌ ಹ್ಯಸ್ಯ ಪರಿಪಂಥಿನೌ ।೩೪॥

ಏರ್ಹವೀ ಇಂದ್ರಿಯಾಂಚಿಯಾ ಅರ್ಥಾ । ಸಾರಿಖಾ ವಿಷೋ ಪೋಖಿತಾ । ಸಂತೋಷು ಕೀರ ಚಿತ್ತಾ । ಆಪಜೇಲ ।೨೧೦॥ ಪರೀ ಸಂವಚೋರಾಚಾ ಸಾಂಗಾತು । ಜೈಸಾ ನಾವೇಕ ಸ್ವಸ್ಥು । ಜಂವ ನಗರಾಚಾ ಪ್ರಾಂತು । ಸಾಂಡಿಜೇನಾ ।೨೧೧॥ ಬಾಪಾ ವಿಷಾಚೀ ಮಧುರತಾ । ಝಣೇ ಆವಡೀ ಉಪಜೇ ಚಿತ್ತಾ । ಪರೀ ತೋ ಪರಿಣಾಮು ವಿಚಾರಿತಾ । ಪ್ರಾಣು ಹರೀ ।೨೧೨॥ ದೇಖೈ ಇಂದ್ರಿಯೀ ಕಾಮು ಅಸೇ । ತೋ ಲಾವೀ ಸುಖದುರಾಶೇ । ಜೈಸಾ ಗಳೀ ಮೀನು ಆಮಿಷೇ । ಭುಲವಿಜೇ ಗಾ ।೨೧೩॥ ಪರೀ ತಯಾ ಮಾಜೀ ಗಳು ಆಹೇ । ಜೋ ಪ್ರಾಣಾತೇ ಘೇಊನಿ ಜಾಯೇ । ತೋ ಜೈಸಾ ಠಾಊವಾ ನೋಹೇ । ಝಾಂಕಲೇಪಣೇ ।೨೧೪॥ ತೈಸೇ ಅಭಿಲಾಷೇ ಯೇಣೇ ಕೀಜೇಲ । ವಿಷಯಾಂಚೇ ಆಶಾ ಧರಿಜೇಲ । ತರೀ ವರಪಡಾ ಹೋಈಜೇಲ । ಕ್ರೋಧಾನಳಾ ।೨೧೫॥ ಜೈಸಾ ಕವಳೋನಿಯಾ ಪಾರಧೀ । ಘಾತೇಚಿಯೇ ಸಂಧೀ । ಆಣಿ ಮೃಗಾತೇ ಬುದ್ಧೀ । ಸಾಧಾವಯಾ ।೨೧೬॥ ಏಥ ತೈಸೀಚಿ ಪರೀ ಆಹೇ । ಮ್ಹಣೌನಿ ಸಂಗು ಹಾ ತುಜ ನೋಹೇ । ಪಾರ್ಥಾ ದೋನ್ಹೀ ಕಾಮಕ್ರೋಧ ಹೇ । ಘಾತುಕ ಜಾಣೇ ।೨೧೭॥ ಮ್ಹಣೌನಿ ಹಾ ಆಶ್ರೋಚಿ ಕರಾವಾ । ಮನೇಹಿ ಆಠವೋ ನ ಧರಾವಾ । ಏಕು ನಿಜ ವೃತ್ತೀಚಾ ವೋಲಾವಾ । ನಾಸೋ ನೇದೀ ।೨೧೮॥

ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।
ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ।೩೫॥

ಆಗಾ ಸ್ವಧರ್ಮು ಹಾ ಆಪುಲಾ । ಜರೀ ಕಾ ಕಠಿಣು ಜಾಹಲಾ । ತರೀ ಹಾಚಿ ಅನುಷ್ಠಿಲಾ । ಭಲಾ ದೇಖೈ ।೨೧೯॥ ಯೇರು ಆಚಾರು ಜೋ ಪರಾವಾ । ತೋ ದೇಖತಾ ಕೀರ ಬರವಾ । ಪರೀ ಆಚರತೇನಿ ಆಚರಾವಾ । ಆಪುಲಾಚಿ ।೨೨೦॥

ತದನಂತರ ಇದು ಪಂಚಭೂತಗಳಿಂದ ನಿರ್ಮಿಸಿರುವ ಶರೀರವು ಕೊನೆಗೆ ಪಂಚಭೂತಗಳಲ್ಲಿ ಹೋಗಿ ಕೂಡುವುದು. ಆಗ ಇದಕ್ಕಾಗಿ ನಾವು ಮಾಡಿದ ಪರಿಶ್ರಮವನ್ನು ಎಲ್ಲಿ ಶೋಧಿಸಬೇಕು ।೨೦೮॥

ಆದ್ದರಿಂದ ಕೇವಲ ಶರೀರ ಪೋಷಣೆ ಮಾಡುವುದು ಇದು ಪ್ರತ್ಯಕ್ಷ ಹಾನಿಕಾರಕವಾಗಿರುವುದು. ಅದಕ್ಕಾಗಿ ಇದರ ವಿಚಾರದಲ್ಲಿ ಎಲ್ಲ ಲಕ್ಷವನ್ನು ಇಡಬೇಡ ।೨೦೯॥

ಶ್ಲೋಕಾರ್ಥ :- ಆಯಾ ಇಂದ್ರಿಯಗಳಿಗೂ ಆಯಾ ವಿಷಯಗಳಿಗೂ ಮಧ್ಯೆ ರಾಗ - ದ್ವೇಷಗಳು ವರ್ತಿಸುತ್ತವೆ; ಅವುಗಳಿಗೆ ವಶರಾಗಕೂಡದು. ಮನುಷ್ಯನಿಗೆ ಅವೇ ಶತ್ರುಗಳು ।೩೪॥

ಸಾಮಾನ್ಯವಾಗಿ ಇಂದ್ರಿಯಗಳ ಇಚ್ಛೆ ಪ್ರಕಾರ ವಿಷಯಗಳನ್ನು ಪೂರೈಸಿದಾಗ ಚಿತ್ತಕ್ಕೆ ಸಂತೋಷ ಪ್ರಾಪ್ತವಾಗುವುದು ನಿಜ ।೨೧೦॥

ಆದರೆ ಆ ಸಂತೋಷವು ಸಂಭಾವಿತ ಕಾಣುವ ಕಳ್ಳನ ಸಂಗತಿಯ ಪರಿಣಾಮದಂತೆ, ಆ ಕಳ್ಳನು ಊರು ದಾಟಿದ ಮೇಲೆ ಅರಣ್ಯದಲ್ಲಿ ಘಾತ ಮಾಡಿ ಹಣ ಕದ್ದು ಓಡಿ ಹೋಗುವನು ।೨೧೧॥

ಅಪ್ಪಾ ಅರ್ಜುನಾ, ಬಚನಾಗ ವಿಷವು ಪ್ರಥಮವಾಗಿ ಸೇವಿಸಲು ಸಿಹಿ ಹತ್ತುವುದು ನಿಜ. ಆದರೆ ಅದರ ಪರಿಣಾಮದ ವಿಚಾರ ಮಾಡಿದಾಗ ಅದು ಪ್ರಾಣನಾಶಕವಾಗಿದೆ ।೨೧೨॥

ಇಂದ್ರಿಯಗಳಲ್ಲಿರುವ ಕಾಮನೆಗಳು ವಿಷಯ ಸುಖದ ದುರಾಶೆಗೆ ಹತ್ತುವವು. ಬಲೆಗೆ ಹಚ್ಚಿದ ಆಮಿಷಕ್ಕೆ ಮೀನಗಳು ಮರಳಾಗುವವು ।೨೧೩॥

ಆದರೆ, ಆಮಿಷದ ಒಳಭಾಗದಲ್ಲಿ ಬಲೆಯು ಮುಚ್ಚಿಕೊಂಡಿರುವುದರಿಂದ ಆಮಿಷಕ್ಕಾಗಿ ನನ್ನ ಪ್ರಾಣ ಹೋದಿತೆಂಬುದು ಆ ಮೀನಕ್ಕೆ ತಿಳಿಯುವುದಿಲ್ಲ ।೨೧೪॥

ಅದರಂತೆ ವಿಷಯ ಸುಖದ ಅಭಿಲಾಷೆಯಿಂದ ಯಾರು ವಿಷಯದ ಇಚ್ಛೆ ಮಾಡುವರೋ ಅವರು ಕ್ರೋಧಾಗ್ನಿಯಲ್ಲಿ ಬೀಳುವರು ।೨೧೫॥

ಯಾವ ಪ್ರಕಾರವಾಗಿ ಬೇಟೆಗಾರನು ಮೃಗವನ್ನು ಹಿಡಿಯಲು ನಾಲ್ಕು ಕಡೆಯಿಂದಲೂ ಹೊಡೆಯುವ ಸಂಧಿ ಸಾಧಿಸಿ ಹಿಡಿದು ತರುವನೋ ।೨೧೬॥

ಅದೇ ಪ್ರಕಾರವಾಗಿ ವಿಷಯ ಸುಖದ ಪರಿಣಾಮವಿರುವುದು. ಆದ್ದರಿಂದ ಪಾರ್ಥಾ ಕಾಮಕ್ರೋಧಗಳು ಘಾತಕಾರಕ ಎಂದು ತಿಳಿದು ಅವುಗಳ ಸಂಗ ಮಾಡದಿರು ।೨೧೭॥

ಮತ್ತು ಈ ವಿಷಯಗಳಿಗೆ ಆಶ್ರಯ ನೀಡದಿರು. ಮನಸ್ಸಿನಲ್ಲಿಯೂ ಅವುಗಳ ಸ್ಮರಣೆ ಮಾಡದಿರು. ಹಾಗೆಯೇ ಆತ್ಮಜ್ಞಾನ ಬಗ್ಗೆ ಅಭಿರುಚಿ ಇಲ್ಲದಂತೆ ಮಾಡದಿರು ।೨೧೮॥

ಶ್ಲೋಕಾರ್ಥ :- ಸರಿಯಾಗಿ ಆಚರಿಸಿದ ಪರ ಧರ್ಮಕ್ಕಿಂತ ಸ್ವಧರ್ಮವೇ ಮೇಲು. ಸ್ವಧರ್ಮದಲ್ಲಿ ಕೆಲವು ಅಂಶದಿಂದ ಲೋಪವಿದ್ದರೂ ಇರಲಿ. ಪರಧರ್ಮವು ಭಯವನ್ನು ಉಂಟುಮಾಡುತ್ತದೆ. ಸ್ವಧರ್ಮದಲ್ಲಿ ಸತ್ತರೂ ಉತ್ತಮ ।೩೫॥

ಅರೆ, ತನ್ನ ಧರ್ಮವು ಆಚರಿಸಲು ಕಠಿಣವಾಗಿದ್ದರೂ ಅದನ್ನೇ ಆಚರಿಸುವುದು ಉತ್ತಮವು. ಹೀಗೆ ನೀನು ತಿಳಿ ।೨೧೯॥

ಬೇರೆಯವರ ಧರ್ಮವು ನಿಜವಾಗಿಯೂ ನೋಡಲು ಉತ್ತಮ ಕಂಡರೂ ಆಚರಣೆಯನ್ನು ತನ್ನ ಧರ್ಮವನ್ನೇ ಪಾಲಿಸಬೇಕು ।೨೨೦॥

ಸಾಂಗೈ ಶೂದ್ರ ಘರೀ ಆಘವೀ । ಪಕ್ವಾನ್ನೇ ಆಹಾತೀ ಬರವೀ । ತೀ ದ್ವಿಜೇ ಕೇವೀ ಸೇವಾವೀ । ದುರ್ಬಳು ಜರೀ ಜಾಹಲಾ ॥೨೨೧॥ ಹೇ ಅನುಚಿತ ಕೈಸೇನಿ ಕೀಜೇ । ಅಗ್ರಾಹ್ಯ ಕೇವೀ ಇಚ್ಛಿಜೇ । ಅಥವಾ ಇಚ್ಛಿಲೇಹೀ ಪಾವಿಜೇ । ವಿಚಾರೀ ಪಾ ॥೨೨೨॥ ತರೀ ಲೋಕಾಂಚೇ ಧವಳಾರೇ । ದೇಖೋನಿಯಾ ಮನೋಹರೇ । ಅಸತೀ ಆಪುಲೀ ತಣಾರೇ । ಮೋಡಾವೀ ಕೇವೀ ? ॥೨೨೩॥ ಹೇ ಅಸೋ ವನಿತಾ ಆಪುಲೀ । ಕುರೂಪ ಜರೀ ಜಾಹಲೀ । ತರ್ಹೀ ಭೋಗಿತಾ ತೇಚಿ ಭಲೀ । ಜಿಯಾಪರೀ ॥೨೨೪॥ ತೇವೀ ಆವಡೇ ತೈಸಾ ಸಾಂಕಡು । ಆಚರತಾ ಜರೀ ದುವಾಡು । ತರ್ಹೀ ಸ್ವಧರ್ಮುಚಿ ಸುರವಾಡು । ಪರತ್ರೀಚಾ ॥೨೨೫॥ ಹಾ ಗಾ ಸಾಕರ ಆಣಿ ದೂಧ । ಹೇ ಗೌಳ್ಯ ಕೀರ ಪ್ರಸಿದ್ಧ । ಪರೀ ಕೃಮಿದೋಷೀ ವಿರುದ್ಧ । ಘೇಪೇ ಕೇವೀ ? ॥೨೨೬॥ ಐಸೇನಿಹೀ ಜರೀ ಸೇವಿಜೇಲ । ತರೀ ತೇ ಅಳುಕೀಚಿ ಉರೇಲ । ಜೇ ತೇ ಪರಿಣಾಮೀ ಪಥ್ಯ ನವ್ಹೇಲ । ಧನುರ್ಧರಾ ॥೨೨೭॥ ಮ್ಹಣೌನಿ ಆಣಿಕಾಸೀ ಜೇ ವಿಹಿತ । ಆಣಿ ಆಪಣಪೇಯಾ ಅನುಚಿತ । ತೇ ನಾಚರಾವೇ ಜರೀ ಹಿತ । ವಿಚಾರಿಜೇ ॥೨೨೮॥ ಯಾ ಸ್ವಧರ್ಮಾತೇ ಅನುಷ್ಠಿತಾ । ವೇಚು ಹೋಈಲ ಜೀವಿತಾ । ತೋಹಿ ನಿಕಾ ವರ ಉಭಯತಾ । ದಿಸತ ಅಸೇ ॥೨೨೯॥ ಐಸೇ ಸಮಸ್ತ ಸುರಶಿರೋಮಣೀ । ಬೋಲಿಲೇ ಜೇಥ ಶಾರ್ಙ್ಗಪಾಣೀ । ತೇಥ ಅರ್ಜುನ ಮ್ಹಣೇ ವಿನವಣೀ । ಅಸೇ ದೇವಾ ॥೨೩೦॥ ಹೇ ಜೇ ತುಮ್ಹೀ ಸಾಂಗಿತಲೇ । ತೇ ಸಕಳ ಕೀರ ಮ್ಯಾ ಪರಿಸಿಲೇ । ತರೀ ಆತಾ ಪುಸೇನ ಕಾಂಹೀ ಆಪುಲೇ । ಅಪೇಕ್ಷಿತ ॥೨೩೧॥

ಅರ್ಜುನ ಉವಾಚ :-

ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ ।
ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥೩೬॥

ತರೀ ದೇವಾ ಹೇ ಐಸೇ ಕೈಸೇ । ಜೇ ಜ್ಞಾನಿಯಾಂಹೀ ಸ್ಥಿತಿ ಭ್ರಂಶೇ । ಮಾರ್ಗು ಸಾಂಡುನೀ ಅನಾರೀಸೇ । ಚಾಲತ ದೇಖೋ ॥೨೩೨॥ ಸರ್ವಜ್ಞುಹೀ ಜೇ ಹೋತೀ । ಹೇಯೋಪಾದೇಯಹೀ ಜಾಣತೀ । ತೇಹೀ ಪರಧರ್ಮೇ ವ್ಯಭಿಚರತೀ । ಕವಣೇ ಗುಣೇ? ॥೨೩೩॥ ಬೀಝಾ ಆಣಿ ಭೂಸಾ । ಅಂಧು ನಿವಾಡು ನೇಣೇ ಜೈಸಾ । ನಾವೇಕ ದೇಖಣಾಹೀ ತೈಸಾ । ಬರಳೇ ಕಾ ಪಾ? ॥೨೩೪॥ ಜೇ ಅಸತಾ ಸಂಗು ಸಾಂಡಿತೀ । ತೇಚಿ ಸಂಸರ್ಗು ಕರಿತಾ ನ ಧಾತೀ । ವನವಾಸಿಹೀ ಸೇವಿತೀ । ಜನಪದಾತೇ ॥೨೩೫॥

ಬ್ರಾಹ್ಮಣನು ಬಡವನಾಗಿರುವುದರಿಂದ ಆತನು ಶೂದ್ರನ ಮನೆಯಲ್ಲಿನ ಅನ್ನವನ್ನು ಹೇಗೆ ಸೇವನೆ ಮಾಡಬೇಕು? ಹೇಳು ನೋಡೋಣ? ।೨೨೧॥

ಹೀಗೆ ಅನುಚಿತ ಕರ್ಮವನ್ನು ಹೇಗೆ ಮಾಡಬೇಕು? ಮತ್ತು ಯಾವುದು ಸ್ವೀಕರಿಸಲು ಯೋಗ್ಯವಲ್ಲವೋ ಅದರ ಇಚ್ಛೆಯಾದರೂ ಹೇಗೆ ಮಾಡಬೇಕು? ಅಥವಾ ಇಚ್ಛಿತವು ಪ್ರಾಪ್ತವಾದರೆ ಸ್ವೀಕರಿಸಬೇಕೆ? ಇದರ ವಿಚಾರ ಮಾಡು ।೨೨೨॥

ಹಾಗೆಯೇ, ಇನ್ನೊಬ್ಬರ ದೊಡ್ಡ ದೊಡ್ಡ ಸುಂದರ ವಾದ ಮನೆಗಳನ್ನು ಕಂಡು ನಮಗಿರುವ ಹುಲ್ಲಿನ ಗುಡಿಸಲು ಕೆಡವುಬೇಕೆ ? ।೨೨೩॥

ಇದು ಇರಲಿ,ತನ್ನ ಸ್ತ್ರೀಯು ಒಂದು ವೇಳೆ ಕುರೂಪ ಗಳಾಗಿದ್ದರೂ ಆಕೆಯೇ ನಮಗೆ ಯಾವ ಪ್ರಕಾರವಾಗಿ ಎಲ್ಲಕ್ಕೂ ಯೋಗ್ಯವಾಗಿರುವಳೋ ।೨೨೪॥

ಅದರಂತೆ, ಬೇಕಾದಷ್ಟು ಕಠಿಣವಿದ್ದು, ಆಚರಿಸಲು ಕಷ್ಟಕರವಾಗಿದ್ದರೂ ಇಂತಹ ಸ್ವಧರ್ಮವು ಪರಲೋಕದ ಸ್ನೇಹಿತನಾಗಿರುವುದು ।೨೨೫॥

ಹಾಲು ಸಕ್ಕರೆ ಇವು ಎರಡು ಪದಾರ್ಥಗಳು ರುಚಿ ಯಾದದ್ದು ಎಂದು ಪ್ರಸಿದ್ಧವಾಗಿರುವುದು. ಆದರೆ ಕೃಮಿದೋಷಿ (ಜಂತು) ಆದವನಿಗೆ ಅದು ಕುಪಥ್ಯವಾಗಿದೆ. ಆತನು ಅದನ್ನು ಹೇಗೆ ಸೇವಿಸಬೇಕು ? ।೨೨೬॥

ಅರ್ಜುನಾ! ಹೀಗಿದ್ದರೂ ರೋಗಿಯು ಅದನ್ನು ಸೇವಿಸಿದರೆ ಹಠಮಾರಿತನವಾಗುವುದು. ಪರಿಣಾಮವು ಆತನಿಗೆ ಹಿತಕರ ವಾಗುವುದಿಲ್ಲ ।೨೨೭॥

ಆದ್ದರಿಂದ ಹಿತದ ವಿಚಾರ ಮಾಡಬೇಕಾದರೆ ಯಾವುದು ಇತರರಿಗೆ ಉಚಿತವಾಗಿದ್ದು ನಮಗೆ ಅನುಚಿತವಾಗಿದೆಯೋ ಅದರ ಆಚರಣೆ ಮಾಡಕೂಡದು।೨೨೮॥

ಸ್ವಧರ್ಮದಿಂದ ಆಚರಿಸುವಾಗ್ಗೆ ತನ್ನ ಜೀವ ಹೋದರೆ, ಅದು ಎರಡು ಲೋಕಕ್ಕೂ ನಿಜವಾಗಿಯೂ ಶ್ರೇಷ್ಠವೆಂದು ತಿಳಿಯಲಾಗುವುದು ।೨೨೯॥

ದೇವಾಧಿದೇವ ಶ್ರೀ ಶಾರ್ಙ್ಗಪಾಣಿಯ ಈ ಭಾಷಣವನ್ನು ಕೇಳಿ ಅರ್ಜುನನು ಹೇಳುತ್ತಾನೆ : ದೇವಾ, ನನ್ನದೊಂದು ವಿನಂತಿ ಇದೆ ।೨೩೦॥

ನೀವು ನನಗೆ ಹೇಳಿದ ಎಲ್ಲವನ್ನೂ ಚೆನ್ನಾಗಿ ಕೇಳಿರುವೆ ಈಗ ನನಗೆ ಬೇಕಾಗಿರುವುದನ್ನು ನಾನು ನಿಮಗೆ ಕೇಳುವೆನು ।೨೩೧॥

ಶ್ಲೋಕಾರ್ಥ :- ಅರ್ಜುನನು ಹೀಗೆಂದನು : ತನಗೆ ಇಷ್ಟವಿಲ್ಲದಿದ್ದರೂ ಬಲವಂತನಾಗಿ ಯಾವುದಕ್ಕೋ ಕಟ್ಟುಬಿದ್ದವನಂತೆ ಮನುಷ್ಯನು ಪಾಪವನ್ನು ಮಾಡುತ್ತಾನೆ. ಕೃಷ್ಣಾ! ಆ ಪ್ರಬಲ ಶಕ್ತಿಯು ಯಾವುದು? ।೩೬॥

ದೇವಾ, ಜ್ಞಾನಿ ಪುರುಷರ ಸ್ಥಿತಿಯೂ ಸಹ ಭ್ರಷ್ಟವಾಗಿ ಯಾವುದೋ ಮಾರ್ಗ ಹಿಡಿಯುತ್ತದೆ. ಹೀಗೇಕೆ? ।೨೩೨॥

ಅವರು ಎಲ್ಲವನ್ನೂ ಬಲ್ಲವರಾಗಿದ್ದು ಗ್ರಾಹ್ಯ ಯಾವುದು, ತ್ಯಾಜ್ಯ ಯಾವುದು ಇದರ ಅರಿವು ಇರುವುದು. ಅಂದಮೇಲೆ ಪರಧರ್ಮ ಆಚರಣೆಯನ್ನು ಯಾವ ಕಾರಣದಿಂದ ಆಚರಿಸುತ್ತಾರೆ? ।೨೩೩॥

ಕುರುಡನಿಗೆ ಧಾನ್ಯ - ತೌಡು ಬೇರ್ಪಡಿಸಲು ಬರುವುದಿಲ್ಲ. ಅದರಂತೆ ಕಣ್ಣಿದ್ದವರಿಗೂ ಒಂದುವೇಳೆ ಹೀಗೇಕಾಗಬೇಕು? ।೨೩೪॥

ಇದ್ದ (ಸ್ತ್ರೀ ಪುತ್ರರ) ಸಂಗತಿಯನ್ನು ತ್ಯಾಗ ಮಾಡುತ್ತಾರೆ. ಪುನಃ ಅದೇ ಸಂಗತಿ ಮಾಡಿಯೂ ತೃಪ್ತರಾಗಿರುವುದಿಲ್ಲ. ವನವಾಸದಲ್ಲಿದ್ದವರು ಪುನಃ ವ್ಯವಹಾರಿಕ ಜನರಲ್ಲಿ ಬಂದು ಕೂಡಿಕೊಳ್ಳುವರು ।೨೩೫॥

ಆಪಣ ತರೀ ಲಪತೀ । ಸರ್ವಸ್ವೇಂ ಪಾಪ ಚುಕವಿತೀ । ಪರೀ ಬಳಾತ್ಕಾರೇ ಸುಇಜತೀ । ತಯಾಚಿ ಮಾಜೇ ।೨೩೬॥ ಜಯಾಚೀ ಜೀವೇಂ ಘೇತೀ ವಿವಸೀ । ತೇಚಿ ಜಡೋನಿ ಠಾಕೇ ಜೀವೇಂಸೀ । ಚುಕವಿತಾ ತೇ ಗಿಂವಸೀ । ತಯಾತೇಂಚಿ ।೨೩೭॥ ಐಸಾ ಬಲಾತ್ಕಾರು ಏಕು ದಿಸೇ । ತೋ ಕವಣಾಚಾ ಏಥ ಆಗ್ರಹೋ ಅಸೇ । ಹೇ ಬೋಲಾವೇ ಹೃಷೀಕೇಶೇ । ಪಾರ್ಥು ಮ್ಹಣೇ ।೨೩೮॥

ಶ್ರೀ ಭಗವಾನುವಾಚ :-
ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ।
ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ।೩೭॥

ತಂವ ಹೃದಯಕಮಳ ಆರಾಮು । ಜೋ ಯೋಗಿಯಾಂಚಾ ನಿಷ್ಕಾಮಕಾಮು । ತೋ ಮ್ಹಣತಸೇ ಪುರುಷೋತ್ತಮು । ಸಾಂಗೇನ ಆಇಕ ।೨೩೯॥ ತರೀ ಹೇ ಕಾಮ ಕ್ರೋಧು ಪಾಹೀ । ಜಯಾಂತೇ ಕೃಪೇಚೀ ಸಾಂಠವಣ ನಾಹೀ । ಹೇ ಕೃತಾಂತಾಚ್ಯಾ ಠಾಯೀ । ಮಾನಿಜತೀ ।೨೪೦॥ ಹೇ ಜ್ಞಾನನಿಧೀಚೇ ಭುಜಂಗ । ವಿಷಯದರೀಚೇ ವಾಘ । ಭಜನಮಾರ್ಗೀಚೇ ಮಾಂಗ । ಮಾರಕ ಜೇ ।೨೪೧॥ ಹೇ ದೇಹದುರ್ಗೀಚೇ ಧೋಂಡ । ಇಂದ್ರಿಯಗ್ರಾಮೀಂಚೇ ಕೋಂಡ । ಯಾಂಚೇ ವ್ಯಾಮೋಹಾದಿಕ ದಬಡ । ಜಗಾವರೀ ।೨೪೨॥ ಹೇ ರಜೋಗುಣ ಮಾನಸೀಂಚೇ । ಸಮೂಳ ಆಸುರಿಯೇಚೇ । ಧಾಲೇಪಣ ಯಯಾಂಚೇ । ಅವಿದ್ಯಾ ಕೇಲೇ ।೨೪೩॥ ಹೇ ರಜಾಚೇ ಕೀರ ಜಾಹಲೇ । ಪರೀ ತಮಾಸೀ ಪಢಿಯಂತೇ ಭಲೇ । ತೇಣೇ ನಿಜಪದ ಯಾ ದಿಧಲೇ । ಪ್ರಮಾದ ಮೋಹೋ ।೨೪೪॥ ಹೇ ಮೃತ್ಯೂಚ್ಯಾ ನಗರೀ । ಮಾನಿಜತೀ ನಿಕಿಯಾಪರಿ । ಜೇ ಜೀವಿತಾಚೇ ವೈರೀ । ಮ್ಹಣೌನಿಯಾ ।೨೪೫॥ ಜಯಾಂಸಿ ಭುಕೇಲಿಯಾ ಆಮಿಷಾ । ಹೇ ವಿಶ್ವ ನ ಪುರೇಚಿ ಘಾಸಾ । ಕುಳವಾಡಿಯಾಂಚಿಯಾ ಆಶಾ । ಚಾಳೀತ ಅಸೇ ।೨೪೬॥ ಕೌತುಕೇ ಕವಳಿತಾ ಮುಠೀ । ಜಿಯೇ ಚವದಾ ಭುವನೇ ಥೇಂಕುಟೀ । ತಿಯೇ ಭ್ರಾಂತಿಹೀ ಧಾಕುಟೀ । ವಾಲ್ಹೀದುಲ್ಹೀ ।೨೪೭॥ ಜೇ ಲೋಕತ್ರಯಾಚೇ ಭಾತುಕೇ ।ಖೇಳತಾಂಚಿ ಖಾಯ ಕವತಿಕೇ । ತಿಚ್ಯಾ ದಾಸೀಪಣಾಚೇನಿ ಬಿಕೇ । ತೃಷ್ಣಾ ಜಿಯೇ ।೨೪೮॥ ಹೇ ಅಸೋ ಮೋಹೇ ಮಾನಿಜೇ । ಯಾಂತೇ ಅಹಂಕಾರೇ ಘೇಪೇ ದೀಜೇ । ಜೇಣೇ ಜಗ ಆಪುಲೇನಿ ಭೋಜೇ । ನಾಚವೀತ ಅಸೇ ।೨೪೯॥ ಜೇಣೇ ಸತ್ಯಾಚಾ ಭೋಕಸಾ ಕಾಢಿಲಾ । ಮಗ ಅಕೃತ್ಯ ತೃಣಕುಟಾ ಭರಿಲಾ । ತೋ ದಂಭು ರೂಢವಿಲಾ । ಜಗೀ ಇಹೀ ।೨೫೦॥

ಇವರು ಪಾಪದಿಂದ ಅಲಿಪ್ತರಾಗಿರಬೇಕೆನ್ನುವರು ಮತ್ತು ತಮ್ಮಿಂದ ಪಾಪ ಕಾರ್ಯವಾಗಬಾರದೆನ್ನುವರು. ಆದರೆ ಅವರಿಗೆ ಬಲಾತ್ಕಾರವಾಗಿ ಯಾರಿಂದಲಾದರೂ ಪಾಪಕ್ಕೆ ಗುರಿ ಮಾಡಿರುವ ಪ್ರತೀತಿ ಇದೆ ।।೨೩೬।।

ಇವರು ಪಾಪ ವಿಷಯಕ್ಕೆ ಮನಸಾ ಅಸಹ್ಯ (ಜಿಗುಪ್ಸೆ) ಪಡುತ್ತಾರೆ. ಆದರೆ ಪಾಪ ವಿಷಯಗಳು ಅವರನ್ನು ಪೂರ್ಣ ಮೆತ್ತಿಕೊಳ್ಳುತ್ತವೆ. ಇದರಿದ ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಆದರೆ ಅದರಲ್ಲಿ ಇನ್ನೂ ಹೆಚ್ಚಿಗೆ ಸಿಲುಕಿಕೊಳ್ಳುತ್ತಾರೆ ।।೨೩೭।।

ಹೀಗೆ ಪಾಪ ಮಾಡುವ ವಿಷಯವು ಬಲಾತ್ಕಾರವಾದದ್ದು ಎಂದು ಕಾಣುತ್ತದೆ. ಇದು ಯಾರ ಆಗ್ರಹ ಇರಬಹುದು? ಕೃಪೆ ಮಾಡಿ ತಿಳಿಸಬೇಕೆಂದು ಅರ್ಜುನನು ಹೇಳುತ್ತಾನೆ? ।।೨೩೮।।

ಶ್ಲೋಕಾರ್ಥ :- ಭಗವಂತನು ಹೀಗೆಂದನು: ಈ ರಜೋಗುಣದಿಂದ ಉತ್ಪನ್ನವಾದ ಈ ಕಾಮವೇ ಕ್ರೋಧವಾಗಿದೆ. ಇದರ ಹೊಟ್ಟೆ ದೊಡ್ಡದು. ಇದು ದೊಡ್ಡ ಪಾಪಿ, ಈ ಲೋಕದಲ್ಲಿ ಇದೇ ಶತ್ರುವೆಂದು ತಿಳಿ ।।೩೭।।

ಆಗ ಎಲ್ಲರ ಹೃದಯ ಕಮಲದಲ್ಲಿ ಆತ್ಮರೂಪದಿಂದ ರಮಿಸುವ, ನಿಷ್ಕಾಮ ಬುದ್ಧಿಯ ಯೋಗಿ ಜನರಿಗೂ ಇಚ್ಛೆ ಪಡುವ, ಇಂತಹ ಪುರುಷೋತ್ತಮ ಶ್ರೀಕೃಷ್ಣನು, ಹೇಳುವೆ ಕೇಳು ಎಂದನು ।।೨೩೯।।

ಕಾಮ ಕ್ರೋಧಗಳು ಹೇಗಿವೆ ಎಂದರೆ ಇವುಗಳಿಗೆ ದಯೆ ಎಂಬುದೇ ಇರುವುದಿಲ್ಲ. ಇನ್ನೊಬ್ಬರನ್ನು ನಾಶ ಮಾಡುವ ಯಮನಂತೆ ಸಮರ್ಥವಾಗಿರುವುವು ।।೨೪೦।।

ಈ ಕಾಮಕ್ರೋಧಗಳು ಜ್ಞಾನರೂಪದ ನಿಧಿಯ ಮೇಲೆ ಇರುವ ಸರ್ಪದಂತೆ, ವಿಷಯರೂಪ ಪರ್ವತದಲ್ಲಿನ ಗುಹೆಯಲ್ಲಿರುವ ಹುಲಿಗಳಂತೆ ಮತ್ತು ಭಕ್ತಿಮಾರ್ಗದಲ್ಲಿ ದಾರಿಕಳ್ಳರಾದ ಹೊಲೆಯನಂತಿರುವುವು ।।೨೪೧।।

ಇವು ದೇಹರೂಪೀ ಕೋಟೆಯ ದೊಡ್ಡ ಕಲ್ಲುಗಳಾಗಿವೆ. ಇಂದ್ರಿಯ ರೂಪಿ ಊರಲ್ಲಿನ ಕೊಂಡವಾಡಾಗಳಾಗಿವೆ. ಇವುಗಳ ಭ್ರಮೆ - ಪ್ರೇಮದ ಅವಿಚಾರಗಳು ಜಗತ್ತು ಸಿದ್ಧಿಗೊಂಡಿವೆ।।೨೪೨।।

ರಜೋಗುಣ ಮನುಷ್ಯನಲ್ಲಿ ಇವು ಎರಡು ಭಾಸವಾಗುತ್ತವೆ. ಇವುಗಳ ಆಕಾರವು ಮೂಲದಿದಲೇ ಅಸುರಿ ಪ್ರಕೃತಿಯಿಂದ ಕೂಡಿದೆ. ಇವುಗಳ ಪಾಲನೆ ಪೋಷಣೆ ಅವಿದ್ಯೆದಿಂದಾಗುತ್ತದೆ ।।೨೪೩।।

ಇವು ರಜೋಗುಣದಲ್ಲಿ ಹುಟ್ಟಿದರೂ ತಮೋಗುಣಕ್ಕೂ ಬಹಳ ಪ್ರಿಯವಾಗಿವೆ. ಆದ್ದರಿಂದ ತಮೋಗುಣವು ತನ್ನ ಪ್ರಮೋದ ಮೋಹಗಳೆಲ್ಲವನ್ನೂ ಇವುಗಳಿಗೆ ನೀಡಿತು ।।೨೪೪।।

ಇವು ಆಯುಷ್ಯದ ವೈರಗಳಾಗಿರುವುದರಿಂದ ಇವುಗಳಿಗೆ ಮೃತ್ಯುಲೋಕದಲ್ಲಿ ಬಹಳ ಮಾನ್ಯತೆ ದೊರಕಿರುವುದು ।।೨೪೫।।

ಎಂತಹ ಚಮತ್ಕಾರ!! ಇವುಗಳಿಗೆ ಹಸಿವೆ ಆಯಿತೆಂದರೆ ಈ ವಿಶ್ವವೆಲ್ಲವೂ ಒಂದೇ ತುತ್ತು ಸಹ ಆಗುವುದಿಲ್ಲ ! ಮತ್ತು ಆಶಾ ಎಂಬುದು ಇವುಗಳ ವ್ಯಾಪಾರವನ್ನು ವೃದ್ಧಿಗೊಳಿಸುತ್ತದೆ ।।೨೪೬।।

ಇದು ಸಹಜವಾಗಿ ಕೈಚಾಚಿ ಹಿಡಿಯಲು ಹೋದರೆ ಒಂದೇ ಮುಷ್ಟಿಯಲ್ಲಿ ಹದಿನಾಲ್ಕು ಭುವನಗಳು ಸಾಲುವುದಿಲ್ಲ. ಈ ಪ್ರಕಾರದ ಭ್ರಾಂತಿಯು ಆಶೆಯ (ತಿನಿಸುಬಕ್ಕ) ಪ್ರೀತಿಯ ತಂಗಿಯಾಗಿರುವಳು ।।೨೪೭।।

ಈ ಭ್ರಾಂತಿಯು ಅಡುಗೆಯ ಆಟ ಆಡುತ್ತಲೇ ಸಹಜವಾಗಿ ಮೂರು ಲೋಕಗಳನ್ನು ತಿಂದು ತೇಗುವುದು. ಇದರ ಸೇವೆ ಮಾಡುತ್ತ ಇಚ್ಛೆರೂಪದ ತೃಷ್ಣೆಯು ಬದುಕಿ ಬಲಿಷ್ಠವಾಗಿರುವುದು ।।೨೪೮।।

ಇದಲ್ಲದೇ, ಈ ಕಾಮಕ್ರೋಧಗಳಿಗೆ ಮೋಹದ ಮನೆಯಲ್ಲಿ ಬಹಳ ಪ್ರತಿಷ್ಠೆ ಇರುವುದು. ಅಹಂಕಾರ ಜೊತೆಗೆ ಇವುಗಳ ಕೊಡುವ ತೆಗೆದುಕೊಳ್ಳುವ ವ್ಯವಹಾರವಿದ್ದು ಈ ಅಹಂಕಾರವು ತನ್ನ ಇಚ್ಛೆಯಂತೆ ಜಗತ್ತನ್ನು ಕುಣಿಸಿ ತಲ್ಲಣಗೊಳಿಸುತ್ತದೆ ।।೨೪೯।।

ಈ ದಂಭವು ಸತ್ಯದ ಹೊಟ್ಟೆಯನ್ನು ದೊಡ್ಡದಾದ ತೂತು ಕೊರೆದು ಒಡೆದು ಅದರಲ್ಲಿ ಕೆಟ್ಟ ಕಾರ್ಯರೂಪ ಹುಲ್ಲಿನ ಪೆಂಡಿ ತುಂಬಿತು. ಈ ದಂಭಕ್ಕೆ (ಕಾಮಕ್ರೋಧ) ಇವರೇ ಜಗತ್ತಿನಲ್ಲಿ ಪ್ರಸಿದ್ಧಿಗೆ ತಂದರು।।೨೫೦।।

ಸಾಧ್ವೀ ಶಾಂತಿ ನಾಗವಿಲೀ । ಮಗ ಮಾಯಾ ಮಾಂಗೀ ಶೃಂಗಾರಿಲೀ । ತಿಯೇಕರವೀ ವಿಟಾಳವಿಲೀ । ಸಾಧುವೃಂದೇ ।।೨೫೧।। ಇಹೀ ವಿವೇಕಾಚೀ ತ್ರಾಯ ಫೇಡಿಲೀ । ವೈರಾಗ್ಯಾಚೀ ಖಾಲ ಕಾಢಿಲೀ । ಜಿತಯಾ ಮಾನ ಮೋಡಿಲೀ । ಉಪಶಮಾಚೀ ।।೨೫೨।। ಇಹೀ ಸಂತೋಷವನ ಖಾಂಡಿಲೇ । ಧೈರ್ಯದುರ್ಗ ಪಾಡಿಲೇ । ಆನಂದರೋಪೇ ಸಾಂಡಿಲೇ । ಉಪಡೂನಿಯಾ ।।೨೫೩।। ಇಹೀ ಬೋಧಾಚೀ ರೋಪೇ ಲುಂಚಿಲೀ ।ಸುಖಾಚೀ ಲಿಪೀ ಪುಸಿಲೀ । ಜಿವ್ಹಾರೀ ಆಗೀ ಸೂದಲೀ । ತಾಪತ್ರಯಾಚೀ ।।೨೫೪।। ಹೇ ಆಂಗಾ ತವ ಘಡಲೇ । ಜೀವೀಂಚೀ ಆಥೀ ಜಡಲೇ । ಪರೀ ನಾತುಡತೀ ಗಿಂವಸಿಲೇ । ಬ್ರಹ್ಮಾದಿಕಾ ।।೨೫೫।। ಹೇ ಚೈತನ್ಯಾಚೇ ಶೇಜಾರೀ । ವಸತೀ ಜ್ಞಾನಾಚ್ಯಾ ಏಕಾ ಹಾರೀ । ಮ್ಹಣೌನಿ ಪ್ರವರ್ತಲೇ ಮಹಾಮಾರೀ । ಸಾಂವರತೀ ನಾ ।।೨೫೬।। ಹೇ ಜಳೇವೀಣ ಬುಡವಿತೀ । ಆಗೀವೀಣ ಜಾಳಿತೀ । ನ ಬೋಲತಾ ಕವಳಿತೀ । ಪ್ರಾಣಿಯಾಂತೇ ।।೨೫೭।। ಹೇ ಶಸ್ತ್ರೇವೀಣ ಸಾಧಿತೀ । ದೋರೇವೀಣ ಬಾಂಧಿತೀ । ಜ್ಞಾನಿಯಾಸೀ ತರೀ ವಧಿತೀ । ಪೈಜ ಘೇಊನೀ ।।೨೫೮।। ಹೇ ಚಿಖಲೇವೀಣ ರೋಂವಿತೀ । ಪಾಶಿಕೇವೀಣ ಗೋಂವಿತೀ । ಹೇ ಕವಣಾಜೋಗೇ ನ ಹೋತೀ । ಅಂತೌಟೇಪಣೇ ।।೨೫೯।।

ಧೂಮೇನಾವ್ರಿಯತೇ ವಹ್ನಿ: ಯಥಾಽದರ್ಶೋ ಮಲೇನ ಚ ।
ಯಥೋಲ್ಬೇನಾವೃತೋ ಗರ್ಭಃ ತಥಾ ತೇನೇದಮಾವೃತಮ್ ।।೩೮।।

ಜೈಸೀ ಚಂದನಾಚೀ ಮುಳೀ । ಗಿವಸೋನಿ ಘೇಪೇ ವ್ಯಾಳೀ । ನಾತರೀ ಉಲ್ಬಾಚೀ ಖೋಳೀ । ಗರ್ಭಸ್ಥಾ ಸೀ ।।೨೬೦।। ಕಾ ಪ್ರಭಾವೀಣ ಭಾನು । ಧೂಮೇವೀಣ ಹುತಾಶನು । ಜೈಸಾ ದರ್ಪಣ ಮಳಹೀನು । ಕಾಹೀಂಚ ನಸೇ ।।೨೬೧।। ತೈಸೇ ಇಹೀವೀಣ ಏಕಲೇ । ಆಮ್ಹೀ ಜ್ಞಾನ ನಾಹೀ ದೇಖಿಲೇ । ಜೈಸೇ ಕೋಂಡೇನಿ ಪಾ ಗುಂತಲೇ । ಬೀಜ ನಿಪಜೇ ।।೨೬೨।।

ಆವೃತಂ ಜ್ಞಾನಮೇತನ ಜ್ಞಾನಿನೋ ನಿತ್ಯವೈರಿಣಾ ।
ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ ।।೩೯।।

ತೈಸೇ ಜ್ಞಾನ ತರೀ ಶುದ್ಧ । ಪರೀ ಇಹೀ ಅಸೇ ಪ್ರರುದ್ಧ । ಮ್ಹಣೌನಿ ತೇ ಅಗಾಧ । ಹೋಊನಿ ಠೇಲೇ ।।೨೬೩।। ಆಧೀ ಯಾಂತೇ ಜಿಣಾವೇ । ಮಗ ತೇ ಜ್ಞಾನ ಪಾವಾವೇ । ತಂವ ಪರಾಭವೋ ನ ಸಂಭವೇ । ರಾಗದ್ವೇಷಾ ।।೨೬೪।।

ಇವರು ಪತಿವ್ರತಾರೂಪ ಶಾಂತಿಯ ವಸ್ತ್ರಾಹರಣ (ಬತ್ತಲು) ಮಾಡಿ ಮಾಯಾ ರೂಪ ಹೊಲೆಯಳನ್ನು ಆ ವಸ್ತ್ರಾಲಂಕಾರಗಳಿಂದ ಶೃಂಗರಿಸಿದರು ಮತ್ತು ಇವಳಿಂದ ಸಾಧು ಸಮುದಾಯವನ್ನು ಭ್ರಷ್ಟಗೊಳಿಸಿದರು ।೨೫೧॥

ಇವರು ವಿವೇಕವನ್ನು ಸ್ಥಳದಿಂದ ಓಡಿಸಿದರು. ವೈರಾಗ್ಯದ ಮೈಚರ್ಮ ಸುಲಿಸಿದರು. ಶಮದಮಗಳ ರುಂಡಗಳನ್ನು ಜೀವಂತವಾಗಿಯೇ ಕಿತ್ತೊಗೆದರು ।೨೫೨॥

ಇವರು ಸಂತೋಷರೂಪ ವನವನ್ನು ಮುರಿದೊಗೆದರು. ಧೈರ್ಯದ ಕೋಟೆಯನ್ನು ಕೆಡವಿದರು. ಆನಂದ ರೂಪದ ಕೋಮಲ ಅಗಿಯನ್ನು ಕಿತ್ತೊಗೆದರು ।೨೫೩॥

ಇವರು ಜ್ಞಾನದ ಅಗಿಗಳನ್ನು ಬೇರು ಸಹಿತ ಅಗೆದೊಗೆದರು. ಸುಖದ ಅಕ್ಷರಗಳನ್ನು ಒರಿಸಿ ಬಿಟ್ಟರು ಮತ್ತು ಪ್ರಾಣಿಮಾತ್ರರಲ್ಲಿ ತಾಪತ್ರಯದ ಅಗ್ನಿಯನ್ನು ಉದ್ಭವಿಸಿದರು ।೨೫೪॥

ಇವರು ಶರೀರದೊಳಗೆ ಹುಟ್ಟಿರುವರು. ಅಂತಃಕರಣದಲ್ಲಿ ಅಂಟಿ ಕುಳಿತಿರುವರು. ಆದರೆ ಇವರನ್ನು ಹುಡುಕಲು ಹೋದರೆ ಬ್ರಹ್ಮಾದಿಕರಿಗೂ ಸಿಗದೇ ಇರುವರು ।೨೫೫॥

ಇವರು ಬ್ರಹ್ಮಸ್ವರೂಪದ ಮಗ್ಗಲಿಗೆ ಕುಳಿತಿರುವರು ಮತ್ತು ಜ್ಞಾನದ ಪಂಕ್ತಿಯಲ್ಲಿಯೂ ಕುಳಿತುಕೊಳ್ಳುವರು. ಆದ್ದರಿಂದ ಜಗತ್ತಿನ ಮಹಾಪ್ರಳಯಕ್ಕೆ ಕಾರಣೀಭೂತರಾಗಿ ಯಾರಿಗೂ ಬಗ್ಗುವುದಿಲ್ಲ ।೨೫೬॥

ಈ ಕಾಮ ಕ್ರೋಧಗಳು ನೀರಿಲ್ಲದೇ ಮುಳುಗಿಸುತ್ತಾರೆ. ಅಗ್ನಿಯಿಲ್ಲದೇ ಸುಡುತ್ತಾರೆ ಮತ್ತು ಪ್ರಾಣಿಗಳನ್ನು ತಿಳಿಯದ ಹಾಗೆ ನುಂಗಿಬಿಡುತ್ತಾರೆ ।೨೫೭॥

ಇವರು ಶಸ್ತ್ರವಿಲ್ಲದೇ ಸೀಳುತ್ತಾರೆ. ಹಗ್ಗವಿಲ್ಲದೇ ಬಂಧಿಸುತ್ತಾರೆ ಮತ್ತು ತತ್ತ್ವಜ್ಞಾನಿಗೆ ಮಾತ್ರ ಜಿದ್ದಿನಿಂದ ಜೂಜು ಕಟ್ಟಿಕೊಳ್ಳುತ್ತಾರೆ ।೨೫೮॥

ಇವರು ಹುದಲಿಲ್ಲದೇ ಸಿಗಿಸುವರು. ಪಾಶವಿಲ್ಲದೇ ಬಂಧಿಸುವರು. ಇವರು ಶರೀರದ ಒಳಭಾಗದಲ್ಲಿ ಗುಪ್ತವಾಗಿ ಅಡುಗಿಕೊಂಡು ಯಾರಿಗೂ ಆಧೀನರಾಗರು ।೨೫೯॥

**ಶ್ಲೋಕಾರ್ಥ :-** ಅಗ್ನಿಯನ್ನು ಹೊಗೆ ಆವರಿಸಿದಂತೆ, ಕನ್ನಡಿಯನ್ನು ಧೂಳು ಮುಸುಕಿದಂತೆ, ಪಿಂಡವನ್ನು ಜರೆಯೆಂಬ ಚೀಲವು ಆವರಿಸಿದಂತೆ ಈ ಕಾಮವು ಜ್ಞಾನವನ್ನು ಆವರಿಸಿದೆ ।೩೮॥

ಚಂದನದ ಬೇರಿಗೆ ಸರ್ಪವು ಸುತ್ತಿಕೊಂಡಿರುವಂತೆ, ಗರ್ಭದಲ್ಲಿನ ಶಿಶುವಿಗೆ ಗರ್ಭಚೀಲ ವ್ಯಾಪಿಸಿಕೊಂಡಂತೆ ।೨೬೦॥

ಅಥವಾ ಪ್ರಕಾಶ ಹೊರತಾಗಿ ಸೂರ್ಯನು, ಹೊಗೆ ಹೊರತಾದ ಅಗ್ನಿಯು, ಪಾರಜ ಇಲ್ಲದ ಕನ್ನಡಿಯು ಸಿಗುವುದಿಲ್ಲ ।೨೬೧॥

ಯಾವ ಪ್ರಕಾರವಾಗಿ ಬೀಜವು ಸಿಪ್ಪೆಯಿಂದ ಸುತ್ತಿಕೊಂಡೆ ಹುಟ್ಟುವುದೋ ಅದೇ ಪ್ರಕಾರವಾಗಿ ಕಾಮ ಕ್ರೋಧ ಹೊರತಾದ ಶುದ್ಧ ಜ್ಞಾನ ನಮ್ಮ ದೃಷ್ಟಿಗೆ ಬಿದ್ದಿಲ್ಲ ।೨೬೨॥

**ಶ್ಲೋಕಾರ್ಥ :-** ಅರ್ಜುನಾ! ತೃಪ್ತಿಯನ್ನೇ ಅರಿಯದ ನಿತ್ಯ ಶತ್ರುವಾದ ಈ ಕಾಮದಿಂದ ಜ್ಞಾನವು ಆವರಿಸಲ್ಪಟ್ಟಿರುತ್ತದೆ ।೩೯॥

ಹಾಗೆ ನೋಡಿದರೆ ಜ್ಞಾನವು ಸ್ವತಃ ಶುದ್ಧವಾಗಿರುವುದು. ಆದರೆ ಕಾಮ ಕ್ರೋಧಗಳಿಂದ ಆಚ್ಛಾದಿತವಾಗಿದೆ. ಇದರಿಂದ ಬ್ರಹ್ಮಜ್ಞಾನ ಕಠಿಣವಾಗಿ ಬಿಟ್ಟಿದೆ ।೨೬೩॥

ಮೊದಲು ಕಾಮ ಕ್ರೋಧಗಳನ್ನು ಜಯಿಸಬೇಕು. ಆಗ ಜ್ಞಾನದ ಪ್ರಾಪ್ತಿಯಾಗುವುದು. ಆದರೆ ಈ ಕಾಮ ಕ್ರೋಧಗಳನ್ನು ಗೆಲ್ಲುವುದು ಬಹಳ ಕಠಿಣ ಕಾರ್ಯವಾಗಿದೆ ।೨೬೪॥

ಯಾಂತೇ ಸಾಧಾವಯಾಲಾಗೀ । ಜೇ ಬಳ ಆಣಿಜೇ ಆಂಗೀ । ತೇ ಇಂಧನೇ ಜೈಸೀ ಆಗೀ । ಸಾವಾವೋ ಹೋಯ ॥೨೬೫॥

ಇಂದ್ರಿಯಾಣಿ ಮನೋ ಬುದ್ಧಿಃ ಅಸ್ಯಾಧಿಷ್ಠಾನಮುಚ್ಯತೇ ।
ಏತೈರ್ವಿಮೋಹಯತ್ಯೇಷಃ ಜ್ಞಾನಮಾವೃತ್ಯ ದೇಹಿನಮ್ ॥೪೦॥

ತೈಸೇ ಉಪಾಯ ಕೀಜತೀ ಜೇ ಜೇ । ತೇ ಯಾಂಸೀಚಿ ಹೋತೀ ವಿರಜೇ । ಮ್ಹಣೌನಿ ಹಟಿಯಾಂತೇ ಜಿಣಿಜೇ । ಇಹೀಂಚಿ ಜಗೀ ॥೨೬೬॥ ಐಸೀಯಾಂಹೀ ಸಾಂಕಡಾ ಬೋಲಾ । ಏಕ ಉಪಾಯೋ ಆಹೇ ಭಲಾ । ತೋ ಕರಿತಾ ಜರೀ ಆಂಗವಲಾ । ತರೀ ಸಾಂಗೇನ ತುಜ ॥೨೬೭॥

ತಸ್ಮಾತ್ ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।
ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್ ॥೪೧॥

ಯಾಂಚಾ ಪಹಿಲಾ ಕುರುಠಾ ಇಂದ್ರಿಯೇ । ಏಥೂನಿ ಪ್ರವೃತ್ತಿ ಕರ್ಮಾತೇ ವಿಯೇ । ಆಧೀ ನಿರ್ದಳೂನಿ ಘಾಲೀ ತಿಯೇ । ಸರ್ವಥೈವ ॥೨೬೮॥

ಇಂದ್ರಿಯಾಣಿ ಪರಾಣ್ಯಾಹುಃ ಇಂದ್ರಿಯೇಭ್ಯಃ ಪರಂ ಮನಃ ।
ಮನಸಸ್ತು ಪರಾ ಬುದ್ಧಿಃ ಯೋ ಬುದ್ಧೇಃ ಪರತಸ್ತು ಸಃ ॥೪೨॥

ಮಗ ಮನಾಚೀ ಧಾಂವ ಪಾರುಷೇಲ । ಆಣಿ ಬುದ್ಧೀಚೀ ಸೋಡವಣ ಹೋಈಲ । ಇತುಕೇನಿ ಥಾರಾ ಮೋಡೇಲ । ಯಾ ಪಾಪಿಯಾಂಚಾ ॥೨೬೯॥

ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ ।
ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ॥೪೩॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಕರ್ಮಯೋಗೋ ನಾಮ ತೃತೀಯೋಧ್ಯಾಯಃ

ಹೇ ಅಂತರೀಹೂನಿ ಜರೀ ಫಿಟಲೇ । ತರೀ ನಿಭ್ರಾಂತ ಜಾಣ ನಿವಟಲೇ । ಜೈಸೇ ರಶ್ಮೀವೀಣ ಉರಲೇ । ಮೃಗಜಳ ನಾಹೀ ॥೨೭೦॥ ತೈಸೇ ರಾಗದ್ವೇಷ ಜರೀ ನಿಮಾಲೇ । ತರೀ ಬ್ರಹ್ಮೀಂಚೇ ಸ್ವರಾಜ್ಯ ಆಲೇ । ಮಗ ತೋ ಭೋಗೀ ಸುಖ ಆಪುಲೇ । ಆಪಣಚಿ ॥೨೭೧॥ ತೇ ಗುರುಶಿಷ್ಯಾಚೀ ಗೋಠೀ । ಪದಪಿಂಡಾಚೀ ಗಾಠೀ । ತೇಥ ಸ್ಥಿರ ರಾಹೋನಿ ನುಠೀ । ಕವಣೇ ಕಾಳೀ ॥೨೭೨॥

ಏಕೆಂದರೆ ಇವರನ್ನು ಗೆಲ್ಲಲು ನಾವು ಹುಮ್ಮಸ್ಸು ಬೆಳೆಸಿಕೊಂಡರೆ, ಅದೇ ಹುಮ್ಮಸ್ಸು ಅವರಿಗೆ ಸಹಾಯವಾಗುತ್ತದೆ. ಅಗ್ನಿ ಆರಿಸಲು ಕಟ್ಟಿಗೆ ಒಗೆದಂತಾಗುವುದು ।೨೬೫॥

ಶ್ಲೋಕಾರ್ಥ :- ಇಂದ್ರಿಯಗಳು, ಮನಸ್ಸು, ಬುದ್ಧಿ, ಇವು ಕಾಮಕ್ಕೆ ಆಶ್ರಯ ಸ್ಥಾನಗಳು. ಇವುಗಳ ದ್ವಾರಾ ಕಾಮವು ಜ್ಞಾನವನ್ನು ಆವರಿಸಿ ಜೀವವನ್ನು ಪರವಶನನ್ನಾಗಿ ಮಾಡುತ್ತದೆ ।೪೦॥

ಈ ಪ್ರಕಾರವಾಗಿ ನಾವು ಇವರನ್ನು ಗೆಲ್ಲಲು ಏನೇನು ಉಪಾಯ ಮಾಡುವೆವೋ, ಅದೇ ಅವುಗಳಿಗೆ ಸಹಾಯವಾಗುವುವು. ಆದ್ದರಿಂದ ಹಠಯೋಗಿಗಳನ್ನೂ ಸಹ ಇವೇ ಗೆಲ್ಲುತ್ತವೆ ।೨೬೬॥

ಅಂದಮೇಲೆ ಈ ಕಾಮಕ್ರೋಧಗಳು ಅಜಿಂಕ್ಯವೆಂದು ತಿಳಿಯಬಹುದು. ಅರ್ಜುನಾ, ಹಾಗಿರುವುದಿಲ್ಲ. ಇಂತಹ ಸಂಕಟದಿಂದಲೂ ಪಾರಾಗಲು ಉಪಾಯವಿದೆ. ಹೇಳುವೆ ಕೇಳು ।೨೬೭॥

ಶ್ಲೋಕಾರ್ಥ :- ಆದುದರಿಂದ ಹೇ ಭರತ ಶ್ರೇಷ್ಠಾ! ನೀನು ಮೊದಲು ಇಂದ್ರಿಯಗಳನ್ನು ಸ್ವಾಧೀನ ಮಾಡಿಕೊಂಡು ಜ್ಞಾನವಿಜ್ಞಾನಗಳನ್ನು ನಾಶ ಮಾಡುವ ಈ ಪಾಪಿಯನ್ನು ಹೊಡೆದೋಡಿಸು ।೪೧॥

ಇವರ ಮೂಲ ಸ್ಥಾನವು ಇಂದ್ರಿಯಗಳಾಗಿರುವುವು ಮತ್ತು ಇಂದ್ರಿಯಗಳಿಂದ ಕರ್ಮದ ಪ್ರವೃತ್ತಿಯಾಗುವುದು. ಆದ್ದರಿಂದ ಈ ಇಂದ್ರಿಯಗಳನ್ನು ಮೊದಲು ಸಂಪೂರ್ಣವಾಗಿ ಗೆಲ್ಲು ।೨೬೮॥

ಶ್ಲೋಕಾರ್ಥ :- ವಿಷಯಗಳಿಗಿಂತ ಇಂದ್ರಿಯಗಳು ಉತ್ತಮ. ಇಂದ್ರಿಯಗಳಿಗಿಂತ ಮನಸ್ಸು ಉತ್ತಮ. ಮನಸ್ಸಿಗಿಂತ ಬುದ್ಧಿ ಮೇಲು. ಬುದ್ಧಿಗಿಂತ ಆತ್ಮವು ಶ್ರೇಷ್ಠವೆಂದು ಹೇಳುತ್ತಾರೆ ।೪೨॥

ಹೀಗಾದ ಮೇಲೆ ಮನಸ್ಸಿನ ಓಟ ನಿಲ್ಲುವುದು. ಬುದ್ಧಿಯು ಭ್ರಮೆಯಿಂದ ಬಿಡುಗಡೆ ಹೊಂದುವುದು. ಆಗ ಈ (ಕಾಮ - ಕ್ರೋಧ) ದುಷ್ಟರಿಗೆ ಇರಲು ಸ್ಥಾನವೇ ಇಲ್ಲದಂತಾಗುವುದು ।೨೬೯॥

ಶ್ಲೋಕಾರ್ಥ :- ಅರ್ಜುನಾ! ಈ ವಿಧವಾಗಿ ಬುದ್ಧಿಗಿಂತ ಶ್ರೇಷ್ಠವಾದ ಆತ್ಮನನ್ನು ತಿಳಿದು, ತನ್ನನ್ನು ತಾನು ಸ್ಥಿರಪಡಿಸಿಕೊಂಡು, ದುರ್ಜಯವಾದ ಶತ್ರುವಾದ ಕಾಮವನ್ನು ಜಯಿಸು ।೪೩॥

ಇಲ್ಲಿಗೆ ಉಪನಿಷತ್ತೂ, ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ, ಶ್ರೀಕೃಷ್ಣಾರ್ಜುನ ಸಂವಾದವೂ ಆದ ಶ್ರೀಮದ್ಭಗವದ್ಗೀತೆಯಲ್ಲಿ ಕರ್ಮಯೋಗವೆಂಬ ಹೆಸರಿನ ಮೂರನೆಯ ಅಧ್ಯಾಯವು ಮುಗಿದುದು.

ಈ ಪ್ರಕಾರವಾಗಿ ಇವುಗಳ ವಸತಿ ಅಂತಃಕರಣಲ್ಲಿ ಇಲ್ಲದಂತಾಗಲು ಅವು ಪೂರ್ಣ ಸತ್ತಂತೆ ಎಂದು ತಿಳಿ. ಸೂರ್ಯ ಕಿರಣದ ಹೊರತಾಗಿ ಮೃಗಜಲ ಕಾಣಿಸುವುದಿಲ್ಲ ।೨೭೦॥

(ರಾಗದ್ವೇಷ) ಕಾಮ ಕ್ರೋಧಗಳು ನಾಶವಾದ ಮೇಲೆ ಬ್ರಹ್ಮರೂಪಿ ಸ್ವರಾಜ್ಯವು ಪ್ರಾಪ್ತವಾಗುವುದು. ಆಗ ಆತನು ಸ್ವತಃ ನಿಜಸುಖ ಭೋಗಿಸುವನು ।೨೭೧॥

ಇದುವೇ ಗುರುಶಿಷ್ಯರ ಗುಟ್ಟಿನ ಮಾತಾಗಿದೆ. ಇದುವೇ ಜೀವ - ಬ್ರಹ್ಮರ ಐಕ್ಯವಾಗಿದೆ. ನೀನು ಇಲ್ಲಿ ಸ್ಥಿರವಾಗಿ ನಿಲ್ಲು, ಎಂದೂ ಕದಲಬೇಡ ।೨೭೨॥

ಐಸೇ ಸಕಳ ಸಿದ್ಧಾಂಚಾ ರಾವೋ । ದೇವೀ ಲಕ್ಷ್ಮೀಯೇಚಾ ನಾಹೋ । ರಾಯಾ ಐಕೇ ದೇವದೇವೋ । ಬೋಲತಾ ಜಾಹಲಾ ।೨೭೩॥ ಆತಾ ಪುನರಪಿ ತೋ ಅನಂತು । ಆದ್ಯ ಏಕೀ ಮಾತು । ಸಾಂಗೈಲ ತೇಥ ಪಂಡುಸುತು । ಪ್ರಶ್ನು ಕರೀಲ ।೨೭೪॥ ತಯಾ ಬೋಲಾಚಾ ಹನ ಪಾಡು । ಕೀ ರಸವೃತ್ತೀಚಾ ನಿವಾಡು । ಯೇಣೇ ಶ್ರೋತಯಾ ಹೋಈಲ ಸುರವಾಡು । ಶ್ರವಣಸುಖಾಚಾ ।೨೭೫॥ ಜ್ಞಾನದೇವೋ ಮ್ಹಣೇ ನಿವೃತ್ತೀಚಾ । ಚಾಂಗ ಉಠಾವಾ ಕರೂನಿ ಉನ್ಮೇಷಾಚಾ । ಮಗ ಸಂವಾದು ಶ್ರೀಹರಿಪಾರ್ಥಾಚಾ । ಭೋಗಾವಾ ಬಾಪಾ ।೨೭೬॥

---

ಇತಿ ಶ್ರೀಜ್ಞಾನದೇವ ವಿರಚಿತಯಾಂ ಭಾವಾರ್ಥ ದೀಪಿಕಾಯಾಂ ತೃತೀಯೋಽಧ್ಯಾಯಃ ।೩॥

ಶ್ಲೋಕ :೪೩ ಓವಿ ।೨೭೬॥

ಸಂಜಯನು ಹೇಳುತ್ತಾನೆ:- ರಾಜಾ ಕೇಳು, ಸಕಲ ಸಿದ್ಧ ಮುಕುಟಮಣಿ ಲಕ್ಷ್ಮೀಪತಿ ಶ್ರೀಕೃಷ್ಣನು ಈ ಪ್ರಕಾರವಾಗಿ ಹೇಳಿದನು ।೨೭೩॥

ಈಗ ಇನ್ನು ಮುಂದೆ ಶ್ರೀಕೃಷ್ಣ ಪರಮಾತ್ಮನು ಒಂದು ಪುರಾತನವಾದ ಕಥೆಯನ್ನು ಹೇಳುವನು. ಇದನ್ನು ಕೇಳಿ ಅರ್ಜುನನು ಪ್ರಶ್ನಿಸುವನು ।೨೭೪॥

ಈ ಹೇಳಿಕೆಯ ಯೋಗ್ಯತೆಯು ಶಾಂತಾದಿ ರಸಭರಿತವಾಗಿದ್ದುಕೊಂಡು ಶ್ರೋತೃಗಳವರಿಗೆ ಶ್ರವಣ ಸುಖದ ಸುಕಾಲ ಸಲ್ಲಿಸುವುದು ।೨೭೫॥

ಶ್ರೀ ನಿವೃತ್ತಿದಾಸರಾದ ಜ್ಞಾನೇಶ್ವರರು ಹೇಳುತ್ತಾರೆ: ಅಪ್ಪಗಳಿರಾ ! ನೀವು ಆತ್ಮಜ್ಞಾನದ ಪ್ರಾಪ್ತಿಗಾಗಿ ಉತ್ತಮ ರೀತಿಯಲ್ಲಿ ಸಿದ್ಧರಾಗಿ ಶ್ರೀಕೃಷ್ಣಾರ್ಜುನರ ಸಂವಾದವನ್ನು ಕೇಳಿರಿ ।೨೭೬॥

ಶ್ರೀ ಜ್ಞಾನೇಶ್ವರ ಮಹಾರಾಜರಿಂದ ರಚಿತವಾದ ಭಾವಾರ್ಥ ದೀಪಿಕೆಯ ಮೂರನೆಯ ಅಧ್ಯಾಯದ ವಿವರಣೆ ಸಮಾಪ್ತವು

# ಸಾರ್ಥ ಶ್ರೀಜ್ಞಾನೇಶ್ವರೀ

## ಅಧ್ಯಾಯ ಚವಥಾ

ಶ್ರೀ ಗಣೇಶಾಯ ನಮಃ

ಆಜಿ ಶ್ರವಣೇಂದ್ರಿಯಾ ಪಾಹಲೇ । ಜೇ ಯೇಣೇ ಗೀತಾನಿಧಾನ ದೇಖಿಲೇ । ಆತಾ ಸ್ವಪ್ನಚೀ ಹೇ ತುಕಲೇ । ಸಾಚಾಸರಿಸೇ ॥೧॥ ಆಧೀಂಚಿ ವಿವೇಕಾಚೀ ಗೋಠೀ । ವರೀ ಪ್ರತಿಪಾದೀ ಶ್ರೀಕೃಷ್ಣ ಜಗಜೇಠೀ । ಆಣಿ ಭಕ್ತರಾಜು ಕಿರೀಟೀ । ಪರಿಸತ ಅಸೇ ॥೨॥ ಜೈಸಾ ಪಂಚಮಾಲಾಪು ಸುಗಂಧು । ಕೀ ಪರಿಮಳು ಆಣಿ ಸುಸ್ವಾದು । ತೈಸಾ ಭಲಾ ಜಾಹಲಾ ವಿನೋದು । ಕಥೇಚಾ ಇಯೇ ॥೩॥ ಕೈಸೀ ಆಗಳಿಕ ದೈವಾಚೀ । ಜೇ ಗಂಗಾ ಜೋಡಲೀ ಅಮೃತಾಚೀ । ಹೋ ಕಾ ಜಪತಪೇ ಶ್ರೋತಯಾಂಚೀ । ಫಳಾ ಆಲೀ ॥೪॥ ಆತಾ ಇಂದ್ರಿಯಜಾತ ಆಘವೇ । ತಿಹೀ ಶ್ರವಣಾಚೇ ಘರ ರಿಘಾವೇ । ಮಗ ಸಂವಾದಸುಖ ಭೋಗಾವೇ । ಗೀತಾಖ್ಯ ಹೇ ॥೫॥ ಹಾ ಅತಿಸೋ ಅತಿಪ್ರಸಂಗೇ । ಸಾಂಡೂನಿ ಕಥಾಚಿ ತೇ ಸಾಂಗೇ । ಜೇ ಕೃಷ್ಣಾರ್ಜುನ ದೋಘೇ । ಬೋಲತ ಹೋತೇ ॥೬॥ ತೇ ವೇಳಿ ಸಂಜಯೋ ರಾಯಾತೇ ಮ್ಹಣೇ । ಅರ್ಜುನು ಅಧಿಷ್ಠಿಲಾ ದೈವಗುಣೇ । ಜೇ ಅತಿಪ್ರೀತಿ ಶ್ರೀನಾರಾಯಣೇ । ಬೋಲತು ಅಸೇ ॥೭॥ ಜೇ ನ ಸಂಗೇಚಿ ಪಿತಯಾ ವಸುದೇವಾಸೀ । ಜೇ ನ ಸಂಗೇಚಿ ಮಾತೇ ದೇವಕೀಸೀ । ಜೇ ನ ಸಂಗೇಚಿ ಬಂಧು ಬಳಿಭದ್ರಾಸೀ । ತೇ ಗುಹ್ಯ ಅರ್ಜುನೇಶೀ ಬೋಲತ ॥೮॥ ದೇವೀ ಲಕ್ಷ್ಮೀಯೇವಢೀ ಜವಳಿಕ । ಪರೀ ತೇಹೀ ನ ದೇಖೇ ಯಾ ಪ್ರೇಮಾಚೇ ಸುಖ । ಆಜಿ ಕೃಷ್ಣ ಸ್ನೇಹಾಚೇ ಬಿಕ । ಯಾತೇಂಚಿ ಆಥೀ ॥೯॥ ಸನಕಾದಿಕಾಂಚಿಯಾ ಆಶಾ । ವಾಢೀನಲ್ಯಾ ಹೋತಿಯಾ ಕೀರ ಬಹುವಸಾ । ಪರೀ ತ್ಯಾಹೀ ಯೇಣೇ ಮಾನೇ ಯಶಾ । ಯೇತೀಚಿನಾ ॥೧೦॥ ಯಾ ಜಗದೀಶ್ವರಾಚೇ ಪ್ರೇಮ । ಏಥ ದಿಸತಸೇ ನಿರುಪಮ । ಕೈಸೇ ಪಾರ್ಥೇ ಯೇಣೇ ಸರ್ವೋತ್ತಮ । ಪುಣ್ಯ ಕೇಲೇ ॥೧೧॥ ಹೋ ಕಾ ಜಯಾಚಿಯಾ ಪ್ರೀತಿ । ಅಮೂರ್ತ ಹಾ ಆಲಾ ವ್ಯಕ್ತೀ । ಮಜ ಏಕವಂಕೀ ಯಾಚೀ ಸ್ಥಿತೀ । ಆವಡತು ಅಸೇ ॥೧೨॥ ಏರ್ಹವೀ ಹಾ ಯೋಗಿಯಾ ನಾಡಳೇ । ವೇದಾರ್ಥಾಸೀ ನಾಕಳೇ । ಜೇಥ ಧ್ಯಾನಾಚೇಹೀ ಡೋಳೇ । ಪಾವತೀನಾ ॥೧೩॥

# ಸಾರ್ಥ ಶ್ರೀಜ್ಞಾನೇಶ್ವರೀ

## ನಾಲ್ಕನೆಯ ಅಧ್ಯಾಯ

ಇಂದು ಶ್ರವಣೇಂದ್ರಿಯಗಳಿಗೆ ಭಾಗ್ಯೋದಯವಾಗಿದೆ. ಕಾರಣ, ಗೀತಾಶಾಸ್ತ್ರದಂತಹ ಮಹಾನಿಧಿಗೋಚರಿಸಿದೆ. ಸ್ವಪ್ನವತ್‌ವಾಗಿರುವ ಈ ಗೀತಾ ಶ್ರವಣವು ಇಂದು ಸುಳ್ಳಾಗಿರುವ ಕನಸು ನಿಜವಾಗಿ ನನಸಾಗಿದೆ ।೧॥

ಮೊದಲೇ ಆತ್ಮ ವಿಚಾರದ ಚರ್ಚೆ, ಅದರಲ್ಲಿ ಜಗಜೇಠಿಯಾಗಿರುವ ಶ್ರೀಕೃಷ್ಣ ಪರಮಾತ್ಮನ ಪ್ರತಿಪಾದನೆ ಮತ್ತು ಭಕ್ತರಾಜ ಅರ್ಜುನನು ಕೇಳುವಾತನು ।೨॥

ಪಂಚಮ ಸ್ವರವು ಅದರಲ್ಲಿ ಸುಗಂಧತ್ವ ಮತ್ತು ಮಧುರತ್ವ ಕೂಡಿದರೆ ಆ ಆನಂದಕ್ಕೆ ಏನೆಂದು ಹೇಳಬೇಕು? ಅದರಂತೆ ಈ ಕಥೆಯು ಮನೋರಂಜನ ವೈಭವಯುಕ್ತವಾಗಿದೆ ।೩॥

ಎಂತಹ ಭಾಗ್ಯ ಒದಗಿರಬಹುದು? ಈ ಭಾಗ್ಯದಿಂದ ಶ್ರೋತೃಗಳವರ ಜಪತಪಗಳು ಫಲದ್ರೂಪವಾಗಿ ಅಮೃತ ರೂಪ ಗಂಗೆಯೇ ಹರಿದು ಬಂದಂತಿದೆ ।೪॥

ಆದ್ದರಿಂದ ಈಗ ಎಲ್ಲ ಇಂದ್ರಿಯಗಳು ತಮ್ಮ ತಮ್ಮ ಎಲ್ಲ ಕಾರ್ಯಗಳನ್ನು ಬಿಟ್ಟು ಶ್ರವಣೇಂದ್ರಿಯ ಮನೆಯಲ್ಲಿ ವಾಸ ಮಾಡಿ ಕೃಷ್ಣಾರ್ಜುನರ ಸಂವಾದ ರೂಪ ಗೀತಾ ಸುಖ ಭೋಗಿಸಬೇಕು ।೫॥

ಆಗಶ್ರೋತೃಗಳಾದಸಂತಮಂಡಳಿಯವರು ಜ್ಞಾನೇಶ್ವರರಿಗೆ ಹೇಳಿದರು:- ಈಗ ನಿಮ್ಮ ಅಪ್ರಾಸಂಗಿಕ ರಗಳೆ ಸಾಕು ಮಾಡಿ, ಶ್ರೀಕೃಷ್ಣಾರ್ಜುನರು ಹೇಳುತ್ತಿರುವುದನ್ನು ನಮಗೆ ತಿಳಿಸಿರಿ ।೬॥

ಆಗ ಸಂಜಯನು ಧೃತರಾಷ್ಟ್ರನಿಗೆ ಹೇಳಿದನು :- ದೈವಿ ಸಂಪತ್ತಿನಿಂದ ಕೂಡಿರುವ ಅರ್ಜುನನಿಗೆ ಶ್ರೀನಾರಾಯಣನು ಅತಿ ಪ್ರೀತಿಯಿಂದ ಹೇಳುತ್ತಿದ್ದಾನೆ ।೭॥

ಯಾವ ಗುಹ್ಯವಾದ ಜ್ಞಾನವನ್ನು ತನ್ನ ತಂದೆಯಾದ ವಸುದೇವನಿಗೂ ತಾಯಿಯಾದ ದೇವಕಿಗೂ ಅಣ್ಣನಾದ ಬಲರಾಮನಿಗೂ ಹೇಳಲಿಲ್ಲವೋ, ಅದನ್ನು ಅರ್ಜುನನಿಗೆ ಹೇಳುತ್ತಿದ್ದಾನೆ ।೮॥

ಲಕ್ಷ್ಮೀದೇವಿಯು ಯಾವಾಗಲೂ ಅತಿ ಸಮೀಪವಿದ್ದರೂ ಆಕೆಗೂ ಈ ಪ್ರೇಮ ಸುಖದ ಅನುಭವದ ಲಾಭವಾಗಲಿಲ್ಲ. ಇಂತಹ ಕೃಷ್ಣಪ್ರೇಮದ ಪಾತ್ರತೆಯು ಇಂದು ಅರ್ಜುನನಿಗೆ ಲಭಿಸಿದೆ ।೯॥

ಸನಕಾದಿಕ ಮುನಿಗಳು ಬಹು ದಿನಗಳಿಂದ ಇದರ ಇಚ್ಛೆ ಮಾಡುತ್ತಿರುವರು. ಆದರೆ ಅವರಿಗೂ ಇಷ್ಟೊಂದು ಯೋಗ್ಯತೆಯ ಪ್ರೇಮವು ಪ್ರಾಪ್ತವಾಗಲಿಲ್ಲ ।೧೦॥

ಆದರೆ, ಈ ಜಗದೀಶ್ವರನ ಅನುಪಮೇಯ ಪ್ರೇಮವು ಕೇವಲ ಅರ್ಜುನನಲ್ಲಿ ಮಾತ್ರ ಕಾಣುತ್ತಿದೆ. ಅಂದಮೇಲೆ, ಅರ್ಜುನನು ಎಂತಹ ಸರ್ವೋತ್ಕೃಷ್ಟ ಪುಣ್ಯ ಮಾಡಿರಬೇಕು? ತಿಳಿಯದಾಗಿದೆ ।೧೧॥

ಅರ್ಜುನನ ಪ್ರೇಮಕ್ಕಾಗಿಯೇ ನಿರಾಕಾರ ಪರಮಾತ್ಮನು ಸಾಕಾರನಾಗಿರಬಹುದೇ? ವಿಚಾರಿಸಿ ನೋಡಿದರೆ ಇವರಿಬ್ಬರ ದೇಹವು ಎರಡಾಗಿದ್ದರೂ ಒಂದೇ ರೂಪವೆಂದು ನನಗೆ ಭಾಸವಾಗುತ್ತಿದೆ ।೧೨॥

ಸಾಮಾನ್ಯವಾಗಿ ಈ ಭಗವಂತನು ಯೋಗಿಗಳಿಗೂ ದೊರಕುವುದಿಲ್ಲ. ವೇದಾರ್ಥಕ್ಕೂ ನಿಲುಕುವುದಿಲ್ಲ. ಆತನ ತನಕ ಧ್ಯಾನದ ದೃಷ್ಟಿಯೂ ಮುಟ್ಟುವುದಿಲ್ಲ ।೧೩॥

ತೋ ಹಾ ನಿಜಸ್ವರೂಪ । ಅನಾದಿ ನಿಷ್ಕಂಪ । ಪರೀ ಕವಣೇ ಮಾನೇ ಸಕೃಪ । ಜಾಹಲಾ ಆಹೇ ॥೧೪॥ ಹಾ ತ್ರೈಲೋಕ್ಯಪಟಾಚೀ ಘಡೀ । ಆಕಾರಾಚೀ ಪೈಲಥಡೀ । ಕೈಸಾ ಯಾಚಿಯೇ ಆವಡೀ । ಆವರಲಾ ಅಸೇ ॥೧೫॥

ಶ್ರೀ ಭಗವಾನುವಾಚ :-
ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ।
ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥೧॥

ಮಗ ದೇವ ಮ್ಹಣೇ ಪಂಡುಸುತಾ । ಹಾಚಿ ಯೋಗು ಆಮ್ಹೀ ವಿವಸ್ವತಾ । ಕಥಿಲಾ ಪರೀ ತೇ ವಾರ್ತಾ । ಬಹುತಾ ದಿವಸಾಂಚೀ ॥೧೬॥ ಮಗ ತೇಣೇ ವಿವಸ್ವತೇ ರವೀ । ಹೇ ಯೋಗಸ್ಥಿತಿ ಆಘವೀ । ನಿರೂಪಿಲೀ ಬರವೀ । ಮನೂಪ್ರತೀ ॥೧೭॥ ಮನೂನೇ ಆಪಣ ಅನುಷ್ಠಿಲೀ । ಮಗ ಇಕ್ಷ್ವಾಕುವಾ ಉಪದೇಶಿಲೀ । ಐಸೀ ಪರಂಪರಾ ವಿಸ್ತಾರಿಲೀ । ಆದ್ಯ ಹೇ ಗಾ ॥೧೮॥

ಏವಂ ಪರಂಪರಾಪ್ರಾಪ್ತಮ್ ಇಮಂ ರಾಜರ್ಷಯೋ ವಿದುಃ ।
ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥೨॥

ಮಗ ಆಣಿಕಹೀ ಯಾ ಯೋಗಾತೇ । ರಾಜರ್ಷಿ ಜಾಹಲೇ ಜಾಣತೇ । ಪರಿ ತೇಥೋನಿ ಆತಾ ಸಾಂಪ್ರತೇ । ನೇಣೇಜೇ ಕೋಣ್ಹೀ ॥೧೯॥ ಜೇ ಪ್ರಾಣಿಯಾ ಕಾಮೀ ಭರು । ದೇಹಾಚೀವರೀ ಆದರು । ಮ್ಹಣೌನಿ ಪಡಿಲಾ ವಿಸರು । ಆತ್ಮಬೋಧಾಚಾ ॥೨೦॥ ಆವ್ಹಾಂಟಲಿಯಾ ಆಸ್ಥಾಬುದ್ಧಿ । ವಿಷಯಸುಖಚಿ ಪರಮಾವಧಿ । ಜೀವು ತೈಸಾ ಉಪಾಧಿ । ಆವಡೇ ಲೋಕಾ ॥೨೧॥ ಏರ್ಹವೀ ತರೀ ಖವಣೇಯಾಂಚ್ಯಾ ಗಾವೀ । ಪಾಟಾಉವೇ ಕಾಯ ಕರಾವೀ । ಸಾಂಗೈ ಜಾತ್ಯಂಧಾ ರವೀ । ಕಾಯ ಆಥೀ ? ॥೨೨॥ ಕಾ ಬಹಿರಯಾಂಚ್ಯಾ ಆಸ್ಥಾನೀ । ಕವಣ ಗೀತಾತೇ ಮಾನೀ? । ಕೀ ಕೋಲ್ಹೆಯಾ ಚಾಂದಣೆ । ಆವಡೀ ಉಪಜೇ ? ॥೨೩॥ ಪೈ ಚಂದ್ರೋದಯಾ ಆರೌತೇ । ಜಯಾಂಚೇ ಡೋಳೇ ಫುಟತೀ ಅಸತೇ । ತೇ ಕಾಉಳೇ ಕೇವೀ ಚಂದ್ರಾತೇ । ವೋಳಖತಿ? ॥೨೪॥ ತೈಸೀ ವೈರಾಗ್ಯಾಚೀ ಶಿಂವ ನ ದೇಖತೀ । ಜೇ ವಿವೇಕಾಚೀ ಭಾಷ ನೇಣತೀ? । ತೇ ಮೂರ್ಖ ಕೇವೀ ಪಾವತೀ । ಮಜ ಈಶ್ವರಾತೇ ? ॥೨೫॥ ಕೈಸಾ ನೇಣೋ ಮೋಹೋ ವಾಢಿನಲಾ । ತೇಣೇ ಬಹುತೇಕ ಕಾಳು ವ್ಯರ್ಥ ಗೇಲಾ । ಮ್ಹಣೌನಿ ಯೋಗು ಹಾ ಲೋಪಲಾ । ಲೋಕೀ ಇಯೇ ॥೨೬॥

ಈತನು ಆತ್ಮಸ್ವರೂಪವನು, ಅನಾದಿಯು, ನಿಶ್ಚಲನಾಗಿರುವನು. ಇಂತಹ ಪರಮಾತ್ಮನು ಅರ್ಜುನನ ಮೇಲೆ ಎಷ್ಟೊಂದು ದಯಾಳುನಾಗಿದ್ದಾನೆ? ತಿಳಿಯದಾಗಿದೆ ।।೧೪।।

ಈತನು ತ್ರೈಲೋಕ್ಯರೂಪಿ ವಸ್ತ್ರದ ಮಡಿಕೆಯಾಗಿರುವನು. ಸ್ಥೂಲ ಸೂಕ್ಷ್ಮ ಆಕಾರದ ಆಚೆ ಇರುವನು. ಆದರೆ ಅರ್ಜುನನ ಪ್ರೇಮಕ್ಕೆ ಹೇಗೆ ಸ್ವಾಧೀನನಾದನು? ತಿಳಿಯದಾಗಿದೆ ।।೧೫।।

ಶ್ಲೋಕಾರ್ಥ :- ಭಗವಂತನು ಹೀಗೆಂದನು: ಅರ್ಜುನಾ! ಇಲ್ಲಿಯವರೆಗೆ ನಿನಗೆ ಹೇಳಿದ ಅವ್ಯಯವಾದ ಈ ಯೋಗ ವಿದ್ಯೆಯನ್ನು ಮೊದಲು ಸೂರ್ಯನಿಗೆ ಹೇಳಿದ್ದೆನು. ಸೂರ್ಯನು ಮನುವಿಗೆ ಹೇಳಿದನು. ಮನುವು ಇಕ್ಷ್ವಾಕುವಿಗೆ ತಿಳಿಸಿದನು ।।೧।।

ಆಗ ಶ್ರೀಕೃಷ್ಣನು ಅರ್ಜುನನಿಗೆ ಹೇಳಿದನು; ಯಾವ ಕರ್ಮ ಯೋಗವು ಯಾವುದರ ಉಪಾಯವಾಗಿದೆಯೋ, ಅಂತಹ ಜ್ಞಾನಯೋಗವನ್ನು ನಾನು ಪೂರ್ವದಲ್ಲಿ ವಿವಸ್ವಾನನಿಗೆ (ಸೂರ್ಯನಿಗೆ) ಹೇಳಿದ್ದೇನೆ. ಆದರೆ ಅದಕ್ಕೆ ಬಹಳಷ್ಟು ದಿನಗಳಾಗಿವೆ ।।೧೬।।

ಆಗ ಆ ವಿವಸ್ವಾನನು (ಸೂರ್ಯನು) ಈ ಎಲ್ಲ ಯೋಗ ನಿಷ್ಠೆಯನ್ನು ಮನುವಿಗೆ ಉತ್ತಮ ರೀತಿಯಲ್ಲಿ ತಿಳಿಸಿದನು ।।೧೭।।

ಮನುವು ಸ್ವತಃ ಆ ಯೋಗದ ಅನುಷ್ಠಾನ ಮಾಡಿದನು. ನಂತರ ತನ್ನ ಮಗನಾದ ಇಕ್ಷ್ವಾಕುನಿಗೆ ಉಪದೇಶ ಮಾಡಿದನು. ಹೀಗೆ ಈ ಪರಂಪರೆಯು ಮೂಲದಿಂದ ನಡೆದು ಬಂದಿದೆ ।।೧೮।।

ಶ್ಲೋಕಾರ್ಥ :- ಈ ರೀತಿ ಪರಂಪರೆಯಿಂದ ಲಭಿಸಿದ ಈ ಯೋಗವನ್ನು ರಾಜರ್ಷಿಗಳು ತಿಳಿದುಕೊಂಡರು. ಹೇ ಶತ್ರು ಭಯಂಕರಾ! ಬರಬರುತ್ತಾ ಕಾಲಗತಿಯಿಂದ ಈ ಯೋಗ ವಿದ್ಯೆಯು ಲೋಕದಲ್ಲಿ ನಷ್ಟಪ್ರಾಯವಾಯಿತು ।।೨।।

ಮುಂದೆ ಇನ್ನು ಕೆಲವು ರಾಜರ್ಷಿಗಳವರಿಗೆ ಈ ಯೋಗಗಳ ತಿಳುವಳಿಕೆ ಇತ್ತು. ಆದರೆ ಈಗ ಅದನ್ನು ಬಹಳವಾಗಿ ಯಾರೂ ತಿಳಿಯರು ।।೧೯।।

ಏಕೆಂದರೆ ಪ್ರಾಣಿಮಾತ್ರರು ವಿಷಯ ಸೇವನೆಯಲ್ಲಿಯೇ ಮಗ್ನರಾಗಿ ದೇಹದ ಮೇಲೆಯೇ ಅತಿ ಪ್ರೇಮ ಇಟ್ಟಿರುವುದರಿಂದ ಅವರಿಗೆ ಆತ್ಮಬೋಧೆಯ ಮರುವು ಆಗಿರುವುದು ।।೨೦।।

ಆಸ್ತಿಕ ಬುದ್ಧಿಯು ಅಡ್ಡ ಹಾದಿ ಹಿಡಿದಿರುವುದರಿಂದ ವಿಷಯ ಸುಖ ಸಂಪಾದನೆಯೇ ಈ ಜನರಿಗೆ ಇತಿ ಕರ್ತವ್ಯವಾಗಿದೆ. ಇವರು ಜೀವಕ್ಕಿಂತಲೂ ಹೆಚ್ಚಿಗೆ ವಿಷಯರೂಪ ಉಪಾಧಿಗಳಿಗೆ ಪ್ರೀತಿಸುತ್ತಾರೆ ।।೨೧।।

ಸರ್ವಸಾಮಾನ್ಯವಾಗಿ ಬತ್ತಲೆ ಇರುವ ಊರಿನಲ್ಲಿ ಭಾರಿ ವಸ್ತ್ರದ ಬೇಡಿಕೆ ಏನಿರುವುದು? ಅಥವಾ ಹುಟ್ಟು ಕುರುಡನಿಗೆ ಸೂರ್ಯನ ಬೆಳಕು ಯಾವ ಉಪಯೋಗವಾಗಬೇಕು? ನೀನೇ ಹೇಳು ।।೨೨।।

ಅಥವಾ ಕಿವುಡರ ಸಭೆಯಲ್ಲಿ (ಗವಾಯಿಗಳ) ಹಾಡಿಗೆ ಯಾರು ಮನ್ನಿಸಬೇಕು? ಇಲ್ಲವೇ ನರಿಗೆ ಚಂದ್ರನ ಬೆಳದಿಂಗಳಿಂದ ಹೇಗೆ ಆನಂದ ಸಿಕ್ಕೀತು? ।।೨೩।।

ಚಂದ್ರೋದಯ ಪೂರ್ವದಲ್ಲಿಯೇ ಕಾಗೆಯ ಕಣ್ಣುಗಳು ಒಡೆಯುವುವು. (ಕಾಣುವುದಿಲ್ಲ) ಅಂದ ಮೇಲೆ ಆ ಕಾಗೆಯು ಚಂದ್ರನನ್ನು ಹೇಗೆ ತಿಳಿದುಕೊಳ್ಳಬೇಕು ।।೨೪।।

ಅದರಂತೆ, ವೈರಾಗ್ಯದ (ಗಡಿ) ಸೀಮೆಯನ್ನೇ ಕಾಣದ ಮತ್ತು ವಿವೇಕದ ಹೆಸರೇ ಗೊತ್ತಿಲ್ಲದ ಆ ಮೂರ್ಖನಿಗೆ ನನ್ನ ಈಶ್ವರತ್ವದ ಲಾಭ ಹೇಗಾದೀತು? ।।೨೫।।

ಈ ಮೋಹವು ಇಷ್ಟೊಂದು ಹೇಗೆ ಬೆಳೆಯಿತೋ ಯಾರಿಗೆ ಗೊತ್ತು? ಆದರೆ ಅದರಿಂದ ಬಹುತೇಕ ವೇಳೆಯು ವ್ಯರ್ಥ ಹೋಯಿತು ಮತ್ತು ಇದರಿಂದ ಈ ಲೋಕದಲ್ಲಿ ಈ ಯೋಗವು ಮುಳುಗಿ ಹೋಯಿತು ।।೨೬।।

ಸ ಏವಾಯಂ ಮಯಾ ತೇऽದ್ಯ ಯೋಗಃ ಪ್ರೋಕ್ತಃ ಪುರಾತನಃ।
ಭಕ್ತೋऽಸೀ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್ ।೩॥

ತೋಚಿ ಹಾ ಆಜಿ ಆತಾ । ತುಜಪ್ರತೀ ಕುಂತೀಸುತಾ । ಸಾಂಗಿತಲಾ ಆಮ್ಹೀ ತತ್ವತಾ । ಭ್ರಾಂತಿ ನ ಕರೀ ।೨೭॥ ಹೇ ಜೀವೀಚೇ ನಿಜ ಗುಜ । ಪರೀ ಕೇವೀ ರಾಖೋ ತುಜ । ಜೇ ಪಢೀಯೇಸೀ ತೂ ಮಜ । ಮ್ಹಣೌನಿಯಾ ।೨೮॥ ತೂ ಪ್ರೇಮಾಚಾ ಪುತಳಾ । ಭಕ್ತೀಚಾ ಜಿವ್ಹಾಳಾ । ಮೈತ್ರಿಯೇಚಿ ಚಿತ್ಕಳಾ । ಧನುರ್ಧರಾ ।೨೯॥ ತೂ ಅನುಸಂಗಾಚಾ ಠಾವೋ । ಆತಾ ತುಜ ಕಾಯ ವಂಚೂ ಜಾವೋ? । ಜರ್ಹೀ ಸಂಗ್ರಾಮರೂಢ ಆಹೋ । ಜಾಹಲೋ ಆಮ್ಹೀ ।೩೦॥ ತರೀ ನಾವೇಕ ಹೇ ಸಹಾವೇ । ಗಾಜಾಬಜ್ಯ ಹೀ ನ ಧರಾವೇ । ಪರೀ ತುಝೇ ಅಜ್ಞಾನತ್ವ ಹರಾವೇ । ಲಾಗೇ ಆಧೀ ।೩೧॥

ಅರ್ಜುನ ಉವಾಚ:-
ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ।
ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ।೪॥

ತವ ಅರ್ಜುನ ಮ್ಹಣೇ ಶ್ರೀಹರೀ । ಮಾಯ ಆಪುಲೇಯಾಚಾ ಸ್ನೇಹೋ ಕರೀ । ಏಥ ವಿಸ್ಮಯೋ ಕಾಯ ಅವಧಾರೀ । ಕೃಪಾನಿಧೀ ।೩೨॥ ತೂ ಸಂಸಾರಶ್ರಾಂತಾಂಚೀ ಸಾಉಲೀ । ಅನಾಥ ಜೀವಾಂಚೀ ಮಾಉಲೀ । ಆಮುತೇ ಕೀರ ಪ್ರಸವಲೀ । ತುಝೀಚ ಕೃಪಾ ।೩೩॥ ದೇವಾ ಪಾಂಗುಳ ಏಕಾದೇ ವಿಜೇ । ತರಿ ಜನ್ಮೌನಿ ಜೋಜಾರು ಸಾಹಿಜೇ । ಹೇ ಬೋಲೋ ಕಾಯ ತುಝೇ । ತುಜಚಿ ಪುಢಾ ।೩೪॥ ಆತಾ ಪುಸೇನ ಜೇ ಮೀ ಕಾಂಹೀ । ತೇಥ ನಿಕೇ ಚಿತ್ತ ದೇಈ । ತೇವಿಂಚಿ ದೇವೇ ಕೋಪಾವೇ ನಾ ಕಾಂಹೀ । ಬೋಲಾ ಏಕಾ ।೩೫॥ ತರೀ ಮಾಗೀಲ ಜೇ ವಾರ್ತಾ । ತುವಾ ಸಾಂಗಿತಲೀ ಹೋತೀ ಅನಂತಾ । ತೇ ನಾವೇಕ ಮಜ ಚಿತ್ತಾ । ಮಾನೇಚಿನಾ ।೩೬॥ ಜೇ ತೋ ವಿವಸ್ವತು ಮ್ಹಣಜೇ ಕಾಯೀ । ಐಸೇ ಹೇ ವಡಿಲಾ ಠಾಉವೇ ನಾಹೀ । ತರೀ ತುವಾಂಚಿ ಕೇವೀ ಪಾಹೀ । ಉಪದೇಶಿಲಾ? ।೩೭॥ ತೋ ತರೀ ಆಇಕಿಜೇ ಬಹುತಾ ಕಾಳಾಂಚಾ । ಆಣಿ ತೂ ತಂವ ಶ್ರೀಕೃಷ್ಣ ಸಾಂಪೇಚಾ । ಮ್ಹಣೌನಿ ಗಾ ಇಯೇ ಮಾತುಚಾ । ವಿಸಂವಾದು ।೩೮॥ ತೇವಿಂಚಿ ದೇವಾ ಚರಿತ್ರ ತುಝೇ । ಆಪಣ ಕಾಹೀಂಚಿ ನೇಣಿಜೇ । ಹೇ ಲಟಿಕೆ ಕೇವೀ ಮ್ಹಣಿಜೇ । ಏಕಿಹೇಳಾ? ।೩೯॥ ಪರಿ ಹೇಚಿ ಮಾತು ಆಘವೀ । ಮೀ ಪರಿಯೇಸೇ ಐಶೀ ಸಾಂಗಾವೀ । ಜೇ ತುವಾಂಚಿ ರವೀ ಕೇವೀ । ಪಾಹೀ ಉಪದೇಶು ಕೇಲಾ ।೪೦॥

ಶ್ಲೋಕಾರ್ಥ :- ಆ ಪುರಾತನವಾದ ಯೋಗ ವಿದ್ಯೆಯನ್ನು ನನ್ನ ಭಕ್ತನೂ, ಪ್ರಿಯನೂ ಆದ ನಿನಗೆ ಈಗ ಹೇಳುವೆನು. ಇದು ಅತಿ ರಹಸ್ಯವಾದದ್ದು ।೩॥

ಹೇ, ಕುಂತಿ ಪುತ್ರನೇ, ನಿಜವಾಗಿಯು ಅದೇ ಯೋಗ ವನ್ನು ಈಗ ನಿನಗೆ ಹೇಳಿರುವೆನು, ನೀನು ಎಷ್ಟು ಮಾತ್ರಕ್ಕೂ ಅನುಮಾನ ಪಡಬೇಡ ।೨೭॥

ಈ ಯೋಗವು ನನ್ನ ಜೀವ-ಪ್ರಾಣವಾಗಿರುವುದು. ಆದರೆ ಅದನ್ನು ನಿನ್ನಿಂದ ಹೇಗೆ ಬಚ್ಚಿಡಲು ಸಾಧ್ಯ? ಏಕೆಂದರೆ ನೀನು ನನ್ನ ಪ್ರೀತಿಯ ಭಕ್ತನಾಗಿರುವೆ ।೨೮॥

ಧನುರ್ಧರಾ, ನೀನು ಕೇವಲ ಪ್ರೇಮದ ಮೂರ್ತಿಯೇ ಆಗಿರುವೆ. ಭಕ್ತಿಯ ಜಿವ್ಹಾಳನಾಗಿ, ನನ್ನ ಪ್ರಾಣ ಸ್ನೇಹಿತ ನಾಗಿರುವೆ ।೨೯॥

ಮತ್ತು ನೀನು ನನ್ನ ವಿಶ್ವಾಸಕ್ಕೆ ಪಾತ್ರನಾಗಿರುವೆ. ನಿನಗೆ ಹೇಗೆ ಮೋಸ ಮಾಡಲಿ? ಆದ್ದರಿಂದ ನಾವು ಈಗ ಯುದ್ಧಕ್ಕೆ ಸಿದ್ಧರಾಗಿದ್ದರೂ ।೩೦॥

ಒಂದು ಕ್ಷಣ ಹೊತ್ತು ಅದನ್ನು ಬದಿಗಿಟ್ಟು, ಯಾವ ಗಡಿಬಿಡಿಗೂ ಲಕ್ಷ ಕೊಡದೇ ಎಲ್ಲಕ್ಕೂ ಮೊದಲು ನಮಗೆ ನಿನ್ನ ಅಜ್ಞಾನವನ್ನು ಕಳೆಯಬೇಕಾಗಿದೆ ।೩೧॥

ಶ್ಲೋಕಾರ್ಥ :- ಅರ್ಜುನನು ಹೀಗೆ ಹೇಳಿದನು: ಕೃಷ್ಣಾ: ನಿನ್ನ ಜನ್ಮವು ಈಗಿನದು. ಸೂರ್ಯನ ಜನ್ಮವು ಹಿಂದಿನದು. ಈ ವಿದ್ಯೆಯನ್ನು ಸೂರ್ಯನಿಗೆ ಮೊದಲೇ ನೀನೇ ಹೇಳಿದೆಯೆಂಬುದು ಹೇಗೆ ನಂಬಲು ಸಾಧ್ಯ? ।೪॥

ಆಗ ಅರ್ಜುನನು ಹೇಳುತ್ತಾನೆ:- ಹೇ ಕೃಪಾನಿಧಿ ಶ್ರೀಹರಿಯೇ, ಹಡೆದ ತಾಯಿಯು ತನ್ನ ಕೂಸಿನ ಮೇಲೆ ಪ್ರೇಮ ಮಾಡಿದರೆ ಅದರಲ್ಲೇನು ಆಶ್ಚರ್ಯವಿದೆ? ।೩೨॥

ನೀನು, ಸಂಸಾರ ತಾಪದಲ್ಲಿ ಬೆಂದವರಿಗೆ ನೆರಳಾಗಿರುವೆ. ದೀನಜನರ ತಾಯಿಯಾಗಿರುವೆ. ನಿಜವಾಗಿಯೂ ನಮ್ಮ ಜನ್ಮವು ನಿನ್ನ ಕೃಪೆಯಿಂದಲೇ ಆಗಿರುವುದು ।೩೩॥

ದೇವಾ, ತಾಯಿಗೆ ಕುಂಟ ಮಗನು ಹುಟ್ಟಿದರೆ ಆಕೆಗೆ ಆತನಿಂದಾಗುವ ಕಷ್ಟ ಭೋಗಿಸಬೇಕಾಗುವುದು. ಇದೆಲ್ಲವೂ ನಿನಗೆ ಗೊತ್ತಿರುವುದರಿಂದ ನಿನಗೇನು ಹೇಳಬೇಕು ? ।೩೪॥

ಈಗ ನಾನು ಏನೋ ಕೇಳುವವನಿದ್ದೇನೆ. ಲಕ್ಷ ಕೊಡ ಬೇಕು. ಹಾಗೂ ನನ್ನ ಮಾತಿಗೆ ಕೋಪಿಸಿಕೊಳ್ಳಬಾರದು ।೩೫॥

ಹೇ ಅನಂತನೇ, ನೀವು ಹಿಂದಿನ ಆದ ಕಥೆ ಏನೋ ಹೇಳಿದಿರಿ. ಅದು ನನ್ನ ಮನಸ್ಸಿಗೆ ಹಿಡಿಸುತ್ತಿಲ್ಲ ।೩೬॥

ಸೂರ್ಯನೆಂದರೆ ಯಾರು ಎಂಬುದು ನಮ್ಮ ಅಜ್ಜ ಮುತ್ತಜ್ಜನವರಿಗೂ ಸಹ ಗೊತ್ತಿಲ್ಲ. ಹಾಗಾದರೆ ನೀವು ಅವರಿಗೆ ಎಂದು ಹೇಗೆ ಉಪದೇಶ ಮಾಡಿರುವಿರಿ ? ।೩೭॥

ಆ ಸೂರ್ಯನು ಬಹಳ ಬಹಳ ಹಿಂದಿನವನು ಎಂದು ಕೇಳಿದ್ದೇನೆ ಮತ್ತು ನೀನು ಶ್ರೀಕೃಷ್ಣನೇ ಈಗಿರುವಾತನು. ಆದ್ದರಿಂದ ಈ ನಿನ್ನ ಮಾತು ನನಗೆ ವಿರೋಧ ಕಾಣುತ್ತದೆ ।೩೮॥

ಆದಾಗ್ಯೂ ದೇವಾ, ನಿನ್ನ ಚರಿತ್ರೆಯು ಬಹಳ ಅಗಾಧ ವಾದದ್ದು, ನಮಗೆ ತಿಳಿಯದು. ನೀವು ಹೇಳುತ್ತಿರುವುದು ಸುಳ್ಳು ಎಂದು ಒಮ್ಮಿಂದೊಮ್ಮೆಲೆ ಹೇಗೆ ಹೇಳಬೇಕು? ।೩೯॥

ಆದ್ದರಿಂದ ನೀನು ಆ ಪ್ರಾಚೀನ ಕಾಲದ ಸೂರ್ಯನಿಗೆ ಉಪದೇಶ ಮಾಡಿದ ವಿವರಣೆಯನ್ನು ನನಗೆ ತಿಳಿಯುವ ರೀತಿಯಲ್ಲಿ ವಿಶದಪಡಿಸು ।೪೦॥

ಶ್ರೀಭಗವಾನುವಾಚ:-
ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ।
ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥೫॥

ತಂವ ಶ್ರೀಕೃಷ್ಣ ಮ್ಹಣೇ ಪಂಡುಸುತಾ । ತೋ ವಿವಸ್ವತು ಜೈ ಹೋತಾ । ತೈ ಆಮ್ಹೀ ನಸೋ ಐಸೀ ಚಿತ್ತಾ । ಭ್ರಾಂತಿ ಜರೀ ತುಜ ॥೪೧॥ ತರೀ ತೂ ಗಾ ಹೇ ನೇಣಸೀ । ಪೈ ಜನ್ಮೇ ಆಮ್ಹಾ ತುಮ್ಹಾಸೀ । ಬಹುತೇ ಗೇಲೀ ಪರೀ ತಿಯೇ ನ ಸ್ಮರಸೀ । ಆಪುಲೀ ತೂ ॥೪೨॥ ಮೀ ಜೇಣೇ ಜೇಣೇ ಅವಸರೇ । ಜೇ ಜೇ ಹೋಊನಿ ಅವತರೇ । ತೇ ಸಮಸ್ತ ಹೀ ಸ್ಮರೇ । ಧನುರ್ಧರಾ ॥೪೩॥

ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್।
ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥೬॥

ಮ್ಹಣೌನಿ ಹೇ ಆಘವೇ । ಮಾಗೀಲ ಮಜ ಆಠವೇ । ಮೀ ಅಜುಹೀ ಪರೀ ಸಂಭವೇ । ಪ್ರಕೃತಿಯೋಗೇ ॥೪೪॥ ಮಾಝೀ ಅವ್ಯಯತ್ವ ತರೀ ನ ನಸೇ । ಪರೀ ಹೋಣೇ ಜಾಣೇ ಏಕ ದಿಸೇ । ತೇ ಪ್ರತಿಬಿಂಬೇ ಮಾಯಾವಶೇ । ಮಾಝ್ಯಾಚಿ ಠಾಯೀ ॥೪೫॥ ಮಾಝೀ ಸ್ವತಂತ್ರತಾ ತರೀ ನ ಮೋಡೇ । ಪರೀ ಕರ್ಮಾಧೀನು ಐಸಾ ಆವಡೇ । ತೇಹೀ ಭ್ರಾಂತಿಬುದ್ಧಿ ತರೀ ಘಡೇ । ಏರ್ಹವೀ ನಾಹೀ ॥೪೬॥ ಕೀ ಏಕಚಿ ದಿಸೇ ದುಸರೇ । ತೇ ದರ್ಪಣಾಚೇನಿ ಆಧಾರೇ । ಏರ್ಹವೀ ಕಾಯ ವಸ್ತು ವಿಚಾರೇ । ದುಜೇ ಆಹೇ ? ॥೪೭॥ ತೈಸಾ ಅಮೂರ್ತಚಿ ಮೀ ಕಿರೀಟೀ । ಪರೀ ಪ್ರಕೃತಿ ಜೈ ಅಧಿಷ್ಠೀ । ತೈ ಸಾಕಾರಪಣೇ ನಟನಟೀ । ಕಾರ್ಯಾಲಾಗೀ ॥೪೮॥

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ।
ಅಭ್ಯುತ್ಥಾನಮಧರ್ಮಸ್ಯ ತದಾಽತ್ಮಾನಂ ಸೃಜಾಮ್ಯಹಮ್ ॥೭॥

ಜೇ ಧರ್ಮಜಾತ ಆಘವೇ । ಯುಗಾಯುಗೀ ಮ್ಯಾ ರಕ್ಷಾವೇ । ಐಸಾ ಓಘು ಹಾ ಸ್ವಭಾವೇ । ಆದ್ಯ ಅಸೇ ॥೪೯॥ ಮ್ಹಣೌನಿ ಅಜತ್ವ ಪರತೇ ಠೇವೀ । ಮೀ ಅವ್ಯಕ್ತಪಣಹೀ ನಾಠವೀ । ಜೇ ವೇಳೀ ಧರ್ಮಾತೇ ಅಭಿಭವೀ । ಅಧರ್ಮು ಹಾ ॥೫೦॥

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥೮॥

ಶ್ಲೋಕಾರ್ಥ :- ಶ್ರೀ ಭಗವಂತನು ಹೇಳಿದನು: ಅರ್ಜುನಾ! ನನಗೂ ನಿನಗೂ ಎಷ್ಟೋಜನ್ಮಗಳು ಕಳೆದು ಹೋಗಿವೆ. ಅವುಗಳೆಲ್ಲವನ್ನೂ ನಾನು ಬಲ್ಲೆನು. ಹೇ ಪರಂತಪಾ! ನೀನು ತಿಳಿಯಲಾರೆ ।೫।।

ಆಗ ಶ್ರೀಕೃಷ್ಣನು ಹೇಳುತ್ತಾನೆ:- ಅರ್ಜುನಾ ಯಾವ ಕಾಲದಲ್ಲಿ ಸೂರ್ಯನಿದ್ದನೋ ಆಗ ನಾವು ಇದ್ದಿಲ್ಲವೆಂಬುದು ನಿನ್ನ ಮನದಲ್ಲಿ ಅನುಮಾನ ಬಂದಿರುವುದು ।೩೧।।

ಆದರೆ ಇದು ನಿನಗೆ ಗೊತ್ತಿಲ್ಲ. ಏನೆಂದರೆ ನನ್ನ ಹಾಗೂ ನಿನ್ನ ಜನ್ಮಗಳು ಬಹಳಷ್ಟಾಗಿವೆ. ಆದರೆ ನಿನ್ನ ಜನ್ಮದ ಸ್ಮರಣೆ ನಿನಗಿರುವುದಿಲ್ಲ ।೩೨।।

ಅರ್ಜುನಾ, ನಾನು ಯಾವ ವೇಳೆಯಲ್ಲಿ ಯಾವ ಯಾವ ಅವತಾರ (ಜನ್ಮ) ಧರಿಸಿರುವೆನೋ ಅವೆಲ್ಲವೂ ನನಗೆ ಸ್ಮರಣೆಯಲ್ಲಿದೆ ।೩೩।।

ಶ್ಲೋಕಾರ್ಥ :- ಸಾವು ಹುಟ್ಟುಗಳಿಲ್ಲದ, ಸಮಸ್ತ ಭೂತಗಳಿಗೂ ಪ್ರಭುವಾದ ನಾನು, ನನ್ನ ಪ್ರಕೃತಿಯನ್ನು ವಶ ಮಾಡಿಕೊಂಡು ನನ್ನ ಮಾಯಾ ವಿಲಾಸದಿಂದ ಜನಿಸುತ್ತೇನೆ ।೬।।

ಆದ್ದರಿಂದ ನನಗೆ ಹಿಂದಿನ ಘಟನೆಗಳೆಲ್ಲವೂ ನೆನಪಿನಲ್ಲಿವೆ. ನಾನು ಜನ್ಮರಹಿತನಿದ್ದರೂ ಮಾಯೆಯ ಯೋಗದಿಂದ ಅವತಾರ ತೆಗೆದುಕೊಳ್ಳುತ್ತೇನೆ ।೩೪।।

ನನ್ನ ಅವ್ಯಯತ್ವವು ಎಂದೂ ನಷ್ಟವಾಗುವುದಿಲ್ಲ. ಆದರೆ ಅವತಾರಕ್ಕೆ ಬರುವುದು ನಿಜಧಾಮಕ್ಕೆ ಹೋಗುವುದು ಇದು ಮಾಯೆಯ ಯೋಗದಿಂದ ನನ್ನಲ್ಲಿಯೇ ಭಾಸವಾಗುತ್ತದೆ ।೩೫।।

ನನ್ನ ಸ್ವತಂತ್ರತೆಯು ಯಾವಾಗಲೂ ಭಂಗಗೊಳ್ಳುವುದಿಲ್ಲ. ಆದರೆ ನಾನು ಕರ್ಮಾಧೀನನಾಗಿರುವೆ ಎಂದು ಲೋಕದ ಜನರು ತಿಳಿಯುವುದು ಕೇವಲ ಭ್ರಾಂತಿಯಾಗಿದೆ. ನಿಜವಾಗಿಯೂ ನಾನು ಹಾಗಿರುವುದಿಲ್ಲ ।೩೬।।

ಅಥವಾ ಒಂದೇ ವಸ್ತು ಕನ್ನಡಿಯ ಆಧಾರದಿಂದ ಎರಡಾಗಿ ಕಾಣಿಸುತ್ತದೆ. ಆದರೆ ವಸ್ತುಸ್ಥಿತಿಯಿಂದ ವಿಚಾರಿಸಿದರೆ ಅಲ್ಲಿ ಎರಡು ಇರುವುದೇ? ।೩೭।।

ಅದರಂತೆ ಅರ್ಜುನಾ ನಾನು ಮಾತ್ರ ನಿರಾಕಾರನಾಗಿರುವೆ. ಆದರೆ ಜಗತ್ಕಾರ್ಯಕ್ಕಾಗಿ ಮಾಯೆಯನ್ನು ಸ್ವೀಕರಿಸಿ ನಟನಂತೆ ಅನೇಕ ಪ್ರಕಾರದ ಆಕಾರ ಧರಿಸುತ್ತೇನೆ ।೩೮।।

ಶ್ಲೋಕಾರ್ಥ :- ಹೇ ಭರತ ಕುಲೋದ್ಭವಾ! ಧರ್ಮವು ನಷ್ಟವಾಗಿ ಅಧರ್ಮವು ಅಭಿವೃದ್ಧಿಯಾದಾಗ ನಾನು ಜನ್ಮವನ್ನು ಎತ್ತುತ್ತೇನೆ ।೭।।

ಧರ್ಮವೆಂಬುದು ಎಷ್ಟಿವೆಯೋ ಅವುಗಳೆಲ್ಲವನ್ನೂ ನಾನು ಯುಗ ಯುಗದಲ್ಲಿ ರಕ್ಷಣೆ ಮಾಡಬೇಕಾಗುವುದು. ಈ ಕ್ರಮವು ಪೂರ್ಣವಾಗಿ ಮೂಲದಿಂದಲೇ ನಡೆದು ಬಂದಿರುವುದು ।೩೯।।

ಆದ್ದರಿಂದ ಯಾವ ಯಾವ ವೇಳೆಯಲ್ಲಿ ಅಧರ್ಮ ಬೆಳೆದು ಧರ್ಮನಷ್ಟವಾಗುವುದೋ ಆಗಾಗ ನಾನು ಜನ್ಮರಹಿತತನ ಸರಿಸಿ ನಿರಾಕಾರತನವನ್ನು ಮರೆಯುವೆನು ।೫೦।।

ಶ್ಲೋಕಾರ್ಥ :- ಸಾಧುಗಳ ಸಂರಕ್ಷಣೆಕ್ಕಾಗಿ ದುಷ್ಟರ ಸಂಹಾರಕ್ಕಾಗಿ, ಧರ್ಮ ಸಂಸ್ಥಾಪನೆಗೋಸ್ಕರ ಯುಗ ಯುಗಗಳಲ್ಲಿಯೂ ನಾನು ಹುಟ್ಟುತ್ತೇನೆ ।೮।।

ತೇ ವೇಳೀ ಆಪುಲ್ಯಾಚೇನಿ ಕೈವಾರೇ । ಮೀ ಸಾಕಾರು ಹೋಊನಿ ಅವತರೇ । ಮಗ ಅಜ್ಞಾನಾಚೇ ಅಂಧಾರೇ । ಗಿಳೂನಿ ಘಾಲೀ ।೫೧।। ಅಧರ್ಮಾಚೀ ಅವಧೀ ತೋಡೀ । ದೋಷಾಂಚೀ ಲಿಹಿಲೀ ಫಾಡೀ । ಸಜ್ಜನಾಕರವೀ ಗುಢೀ । ಸುಖಾಚೀ ಉಭವೀ ।೫೨।। ದೈತ್ಯಾಂಚೀ ಕುಳೇ ನಾಶೀ । ಸಾಧೂಂಚಾ ಮಾನು ಗಿಂವಶೀ । ಧರ್ಮಾಸೀ ನೀತೀಸೀ । ಶೇಸ ಭರೀ ।೫೩।। ಮೀ ಅವಿವೇಕಾಚೀ ಕಾಜಳೀ । ಫೇಡೂನಿ ವಿವೇಕದೀಪ ಉಜಳೀ । ತೈ ಯೋಗಿಯಾ ಪಾಹೇ ದಿವಾಳೀ । ನಿರಂತರ ।೫೪।। ಸತ್ಸುಖೇ ವಿಶ್ವ ಕೋಂದೇ । ಧರ್ಮುಚಿ ಜಗೀ ನಾಂದೇ । ಭಕ್ತಾ ನಿಘತೀ ದೋಂದೇ । ಸಾತ್ತ್ವಿಕಾಚೇ ।೫೫।। ತೈ ಪಾಪಾಂಚಾ ಅಚಳು ಫಿಟೇ । ಪುಣ್ಯಾಚೀ ಪಹಾಂಟ ಫುಟೇ । ಜೈ ಮೂರ್ತಿ ಮಾಝೀ ಪ್ರಗಟೇ । ಪಂಡುಕುಮರಾ ।೫೬।। ಐಸೇಯಾ ಕಾಜಾಲಾಗೀ । ಅವತರೇ ಮೀ ಯುಗೀ ಯುಗೀ । ಪರೀ ಹೇಂಚಿ ವೋಳಖೇ ಜೋ ಜಗೀ । ತೋ ವಿವೇಕಿಯಾ ।೫೭।।

ಜನ್ಮ ಕರ್ಮ ಚ ಮೇ ದಿವ್ಯಂ ಏವಂ ಯೋ ವೇತ್ತಿ ತತ್ತ್ವತಃ ।
ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ।೯।।

ಮಾಝೇ ಅಜತ್ವೇ ಜನ್ಮ ಣೇ । ಅಕ್ರಿಯತಾಚಿ ಕರ್ಮ ಕರಣೇ । ಹೇ ಅವಿಕಾರ ಜೋ ಜಾಣೇ । ತೋ ಪರಮಮುಕ್ತ ।೫೮।। ತೋ ಚಾಲಿಲಾ ಸಂಗೇ ನ ಚಳೇ । ದೇಹೀಂಚಾ ದೇಹಾ ನಾಕಳೇ । ಮಗ ಪಂಚತ್ವಿ ತಂವ ಮಿಳೇ । ಮಾಝ್ಯಾಂಚಿ ರೂಪೀ ।೫೯।।

ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।
ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ।೧೦।।

ಏರ್ಹ್ವೀ ಪರಾಪರ ನ ಶೋಚಿತೀ । ಜೇ ಕಾಮನಾಶೂನ್ಯ ಹೋತೀ । ವಾಟಾ ಕೇ ವೇಳೀ ನ ವಚತೀ । ಕ್ರೋಧಾಚಿಯಾ ।೬೦।। ಸದಾ ಮಿಯಾಂಚಿ ಆಥಿಲೇ । ಮಾಝಿಯಾ ಸೇವಾ ಜಿಯಾಲೇ । ಕೀ ಆತ್ಮಬೋಧೇ ತೋಷಲೇ । ವೀತರಾಗ ಜೇ ।೬೧।। ಜೇ ತಪೋತೇಜಾಚಿಯಾ ರಾಶೀ । ಕೀ ಏಕಾಯತನ ಜ್ಞಾನಾಸೀ । ಜೇ ಪವಿತ್ರತಾ ತೀರ್ಥಾಸೀ । ತೀರ್ಥರೂಪ ।೬೨।। ತೇ ಮದ್ಭಾವಾ ಸಹಜೇ ಆಲೇ । ಮೀ ತೇಚಿ ತೇ ಹೋಊನಿ ಠೇಲೇ । ಜೇ ಮಜ ತಯಾ ಉರಲೇ । ಪದರ ನಾಹೀ ।೬೩।। ಸಾಂಗೈ ಪಿತಳೇಚಿ ಗಂಧಿಕಾಳಿಕ । ಜೈ ಫಿಟಲೀ ಹೋಯ ನಿಃಶೇಖ । ತೈ ಸುವರ್ಣ ಕಾಈ ಆಣಿಕ । ಜೋಡೂ ಜಾಇಜೇ ।೬೪।।

ಆಗ ಭಕ್ತ ಕೈವಾರಿಯಾದ ನಾನು ದೇಹವನ್ನು ಧರಿಸಿ ಅವತರಿಸುವೆನು ಮತ್ತು ಅಜ್ಞಾನರೂಪವಾದ ಕತ್ತಲೆಯನ್ನು ನುಂಗಿಬಿಡುವೆನು ।೫೧॥

ಅಧರ್ಮದ ಮರ್ಯಾದೆಯನ್ನು ಮುರಿದು ಹಾಕುವೆ. ಪಾಪದೋಷಗಳ ಖಾತೆ ಕಿರ್ದಿಗಳನ್ನು ಹರಿದು ಹಾಕುವೆ. ಸಾಧು ಸಜ್ಜನರಿಂದ ಸುಖದ ಧ್ವಜ ಏರಿಸುವೆ ।೫೨॥

ದೈತ್ಯರ, ಅಧರ್ಮಗಳ ಕುಲವನ್ನೇ ನಾಶಮಾಡುತ್ತೇನೆ ಮತ್ತು ಸಾಧುಸಂತರಿಗೆ ಯೋಗ್ಯವಾದ ಮಾನ್ಯತೆ ಕೊಡಿಸುತ್ತೇನೆ ಹಾಗೂ ಧರ್ಮ ಮತ್ತು ನೀತಿಯರನ್ನು ಒಂದುಗೂಡಿಸುತ್ತೇನೆ ।೫೩॥

ಅವಿವೇಕ ಎಂಬ ಕುಡಿಯನ್ನು ಕತ್ತರಿಸಿ ವಿವೇಕವೆಂಬ ದೀಪವನ್ನು ಪ್ರಜ್ವಲಿಸುವೆನು. ಆಗ ಯೋಗಿ ಜನರಿಗೆ ನಿರಂತರವಾಗಿ ದೀಪಾವಳಿಯ ಆನಂದ ದೊರಕುವುದು ।೫೪॥

ಆಗ ನಿಜವಾದ ಸುಖದಿಂದ ವಿಶ್ವ ತುಂಬುವುದು. ಎಲ್ಲ ಕಡೆಗೂ ಜನರು ಧರ್ಮದ ಆಚರಣೆ ಮಾಡುವರು ಮತ್ತು ಭಕ್ತ ಜನರು ಸಾತ್ವಿಕ ಗುಣಭರಿತರಾಗುವರು ।೫೫॥

ಅರ್ಜುನಾ, ನಾನು ಎಂದು ಅವತಾರ ಧರಿಸುವೆನೋ ಅಂದು ಪಾಪದ ಪರ್ವತಗಳು ಪಲಾಯನ ಮಾಡುವುವು. ಹಾಗೂ ಪುಣ್ಯದ ಉದಯವಾಗುವುದು ।೫೬॥

ಈ ಕಾರ್ಯಕ್ಕಾಗಿ ನಾನು ಯುಗಯುಗದಲ್ಲಿ ಅವತಾರ ಧರಿಸುತ್ತೇನೆ. ಆದರೆ ಇದನ್ನು ಯಾರು ಅರಿತಿರುವರೋ ಅವರೇ ವಿಚಾರವಂತರು ।೫೭॥

**ಶ್ಲೋಕಾರ್ಥ** :- ಅರ್ಜುನಾ ! ದಿವ್ಯವಾದ ನನ್ನ ಜನ್ಮಕರ್ಮಗಳನ್ನು ವಾಸ್ತವವಾಗಿ ತಿಳಿದವನು, ಈ ದೇಹವನ್ನು ಬಿಟ್ಟನಂತರ ಪುನಃ ಜನಿಸುವುದಿಲ್ಲ. ಅವನು ನನ್ನನ್ನೇ ಸೇರುತ್ತಾನೆ ।೯॥

ನನ್ನ ಅಜತ್ವವು ಸ್ಥಿರವಾಗಿದ್ದು ಜನ್ಮ ಧರಿಸುವಿಕೆ, ಅಕರ್ತೃತ್ವ ಸ್ಥಿರವಾಗಿದ್ದು ಕರ್ಮ ಮಾಡುವಿಕೆ ಹೀಗೆ ನನ್ನ ನಿರ್ವಿಕಾರ ಸ್ವರೂಪವನ್ನು ಯಾರು ನಿಃಸಂಶಯವಾಗಿ ತಿಳಿದಿರುವರೋ ಅವರೇ ಪರಮ ಮುಕ್ತರು ।೫೮॥

ಈ ಪ್ರಕಾರವಾಗಿ ತಿಳಿದಾತನು ದೇಹಸಂಬಂಧದಿಂದ ನಡೆದಂತೆ ಕಂಡರೂ ನಡೆದಿಲ್ಲ. ಆತನು ದೇಹ ಧರಿಸಿದರೂ ದೇಹಭಾವದಲ್ಲಿ ಸಿಲುಕಿರುವುದಿಲ್ಲ. ನಂತರ ದೇಹಬಿಟ್ಟ ಮೇಲೆ ನನ್ನಲ್ಲಿಯೇ ಕೂಡುವನು ।೫೯॥

**ಶ್ಲೋಕಾರ್ಥ** :- ಕಾಮ ಕ್ರೋಧ ಭಯಗಳನ್ನು ಬಿಟ್ಟವನು, ನನ್ನಲ್ಲಿಯೇ ಮನ ನೆಟ್ಟವನು, ನನ್ನನ್ನೇ ಆಶ್ರಯಿಸಿದವನು. ಈ ರೀತಿ ಹಲವರು ಜ್ಞಾನ ತಪಸ್ಸಿನಿಂದ ಪವಿತ್ರರಾಗಿ ನನ್ನ ಸ್ವರೂಪವನ್ನು ಹೊಂದಿದವರಾಗುತ್ತಾರೆ ।೧೦॥

ಸಾಮಾನ್ಯವಾಗಿ ಹಿಂದಿನ ಮತ್ತು ಮುಂದಿನ ಮಾತಿಗಾಗಿ ಶೋಕ ಮಾಡದೇ ಯಾರು ವಾಸನಾರಹಿತರಾಗಿರುವರೋ ಅವರು ಯಾವ ಪ್ರಸಂಗದಲ್ಲಿಯೂ ಕ್ರೋಧದ ಮಾರ್ಗಕ್ಕೆ ಹೋಗುವುದಿಲ್ಲ ।೬೦॥

ವಿಷಯ ಪ್ರೀತಿ ರಹಿತರು, ಯಾವಾಗಲೂ ನನ್ನ ಸ್ವರೂಪವಾದ ಪ್ರಾಪ್ತಿಯಿಂದ ಕೃತಾರ್ಥರಾದವರು, ನನ್ನ ಸೇವೆಗಾಗಿಯೇ ಬದುಕಿರುವವರು, ಜ್ಞಾನದ ಬೋಧೆಯಿಂದ ಸಂತೋಷ ಪಡುವವರು ।೬೧॥

ತಪ ಪ್ರಭಾವದ ತೇಜ ರಾಶಿಯಾಗಿರುವವರು ಜ್ಞಾನದ ಮನೆಯೇ ಆಗಿರುವವರು, ತೀರ್ಥಕ್ಕೆ ಪವಿತ್ರತೆ ಕೊಡುವವರು ।೬೨॥

ಇವರೆಲ್ಲರೂ ಸಹಜವಾಗಿ ನನ್ನಲ್ಲಿ ಬಂದು ಕೂಡುವರು ಮತ್ತು ನನ್ನ ಸ್ವರೂಪರಾಗುವರು. ಅವರಲ್ಲಿ ಮತ್ತು ನನ್ನಲ್ಲಿ ಯಾವ ಭೇದ ಇರುವುದಿಲ್ಲ ।೬೩॥

ಸದೋಷಿ (ಮಿಶ್ರಿತ) ಬಂಗಾರದಲ್ಲಿನ ಹಿತ್ತಾಳಿಯ ಕೋಶ, ಕಿಲುಬು ಈ ದೋಷಗಳು ದೂರಾದ ಮೇಲೆ "ಶುದ್ಧ ಬಂಗಾರ"ವೆಂದು ಪುನಃ ಬೇರೆ ಕಡೆಯಲ್ಲಿ ಹುಡುಕಬೇಕಾಗುವುದೇ ? ।೬೪॥

ತೈಸೇ ಯಮನಿಯಮೀ ಕಡಸಲೇ । ಜೇ ತಪೋಜ್ಞಾನೇ ಚೋಖಾಳಲೇ । ಮೀ ತೇಚಿ ತೇ ಜಾಹಲೇ । ಏಥ ಸಂಶಯೋ ಕಾಯಸಾ ? ।೬೫॥

ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ ।
ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥೧೧॥

ಏರ್ಹವೀ ತರೀ ಪಾಹೀ । ಜೇ ಜೈಸೇ ಮಾಝ್ಯಾ ಠಾಯೀ । ಭಜತೀ ತಯಾ ಮೀಹೀ । ತೈಸಾಚಿ ಭಜೇ ।೬೬॥ ದೇಖೈ ಮನುಷ್ಯಜಾತ ಸಕಳ । ಹೇ ಸ್ವಭಾವತಾ ಭಜನಶೀಳ । ಜಾಹಲೇ ಅಸೇ ಕೇವಳ । ಮಾಝ್ಯಾಚಿ ಠಾಯೀ ।೬೭॥ ಪರೀ ಜ್ಞಾನೇವೀಣ ನಾಶಿಲೇ । ಜೇ ಬುದ್ಧಿಭೇದಾಸೀ ಆಲೇ । ತೇಣೇಚಿ ತ್ಯಾ ಕಲ್ಪಿಲೇ । ಅನೇಕತ್ವ ।೬೮॥ ಮ್ಹಣೌನಿ ಅಭೇಧೀ ಭೇಧು ದೇಖತೀ । ಯಯಾ ಅನಾಮ್ಯಾ ನಾಮೇ ಠೇವಿತೀ । ದೇವೀ ದೇವೋ ಮ್ಹಣತೀ । ಅಚರ್ಚಾತೇ ।೬೯॥ ಜೇ ಸರ್ವತ್ರ ಸದಾ ಸಮ । ತೇಥ ವಿಭಾಗ ಅಧಮೋತ್ತಮ । ಮತಿವಶೇ ಸಂಭ್ರಮ । ವಿವಂಚಿತೀ ।೭೦॥

ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ ।
ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ।೧೨॥

ಮಗ ನಾನಾಹೇತುಪ್ರಕಾರೇ । ಯಥೋಚಿತೇ ಉಪಚಾರೇ । ಮಾನಿಲೀ ದೇವತಾಂತರೇ । ಉಪಾಸಿತೀ ।೭೧॥ ತೇಥ ಜೇ ಜೇ ಅಪೇಕ್ಷಿತ । ತೇ ತೈಸೇಂಚಿ ಪಾವತೀ ಸಮಸ್ತ । ಪರೀ ತೇ ಕರ್ಮಫಳ ನಿಶ್ಚಿತ । ವೋಳಖ ತೂ ।೭೨॥ ವಾಂಚೂನ ದೇತೇ ಘೇತೇ ಆಣಿಕ । ನಿಭ್ರಾಂತ ನಾಹೀ ಸಮ್ಯಕ । ಏಥ ಕರ್ಮಚಿ ಫಳಸೂಚಕ । ಮನುಷ್ಯಲೋಕೀ ।೭೩॥ ಜೈಸೇ ಕ್ಷೇತ್ರೀ ಜೇ ಪೇರಿಜೇ । ತೇ ವಾಂಚೂನಿ ಆನ ನ ನಿಪಜೇ । ಕಾ ಪಾಹಿಜೇ ತೇಚಿ ದೇಖಿಜೆ । ದರ್ಪಣಾಧಾರೇ ।೭೪॥ ನಾತರೀ ಕಡೇಯಾತಳವಟೀ । ಜೈಸಾ ಆಪುಲಾಚಿ ಬೋಲೂ ಕಿರೀಟೀ । ಪಡಿಸಾದು ಹೋಊನಿ ಉಠೀ । ನಿಮಿತ್ತಯೋಗೇ ।೭೫॥ ತೈಸಾ ಸಮಸ್ತಾ ಯಾ ಭಜನಾ । ಮೀ ಸಾಕ್ಷಿಭೂತು ಪೈ ಅರ್ಜುನಾ । ಏಥ ಪ್ರತಿಫಳೇ ಭಾವನಾ । ಆಪುಲಾಲೀ ।೭೬॥

ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।
ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯ ।೧೩॥

ಅದರಂತೆ ಯಮ ನಿಯಮಗಳಲ್ಲಿ ಪಾರಾಂಗತರಾಗಿ ತಪದಿಂದ ಜ್ಞಾನದಿಂದ ಶುದ್ಧರಾದವರು ನನ್ನಲ್ಲಿ ಕೂಡಿ ಒಂದಾಗುವರು. ಇದರಲ್ಲಿ ಸಂಶಯ ಎಲ್ಲಿಯದು ? ।೬೫॥

ಶ್ಲೋಕಾರ್ಥ :- ಅರ್ಜುನಾ! ತನ್ನನ್ನು ಯಾರು ಹೇಗೆ ಶರಣೆಂದರೆ ನಾನು ಅವರಿಗೆ ಹಾಗೆಯೇ ಅನುಗ್ರಹಿಸುತ್ತೇನೆ. ಮನುಷ್ಯರು ಎಲ್ಲಾ ರೀತಿಯಿಂದಲೂ ನನ್ನ ದಾರಿಯನ್ನು ಹಿಂಬಾಲಿಸುತ್ತಾರೆ ।೧೧॥

ಸಹಜವಾಗಿ ಯಾರು ಯಾವ ಯಾವ ಭಾವನೆಯಿಂದ ನನ್ನನ್ನು ಭಜಿಸುವರೋ ಅವರಿಗೆ ನಾನು ಅದೇ ಪ್ರಕಾರವಾಗಿ ಪ್ರೀತಿಸುತ್ತೇನೆ ।೬೬॥

ಇಲ್ಲಿ ನೋಡು; ಮನುಷ್ಯ ಮಾತ್ರರಲ್ಲಿ ಸ್ವಭಾವತಃ ನನ್ನನ್ನು ಭಜಿಸುವ ಪ್ರವೃತ್ತಿ ಇರುವುದು ।೬೭॥

ಆದರೆ ಅವರಿಗೆ ನನ್ನ ನಿಜಸ್ವರೂಪದ ಜ್ಞಾನವಿಲ್ಲದೇ ವ್ಯರ್ಥರಾದರು. ಇವರು ನನಗೂ ಜೀವಿಗಳಿಗೂ ಭೇದ ಎಣಿಸಿ ವಿಪರೀತ ಜ್ಞಾನಕ್ಕೆ ತುತ್ತಾದರು. ಇವರು ನನ್ನ ಒಂದೇ ಒಂದು ಸ್ವರೂಪಕ್ಕೆ ಅನೇಕತ್ವ ಕಲ್ಪಿಸಿದರು ।೬೮॥

ಆದ್ದರಿಂದ ಸರ್ವಭೂತ ಮಾತ್ರರಲ್ಲಿ ಅಭಿನ್ನನಾಗಿರುವ ನನ್ನಲ್ಲಿ ಭೇದವನ್ನು ಕಲ್ಪಿಸುತ್ತಾರೆ. ನಾನು ನಾಮರಹಿತನಿದ್ದು ನನಗೆ ಅನೇಕ ನಾಮಗಳನ್ನು ಕೊಡುತ್ತಾರೆ. ಅಚರ್ಚೆಯಾಗಿರುವ ನನಗೆ ದೇವಿ, ದೇವ ಎನ್ನುತ್ತಾರೆ ।೬೯॥

ಯಾವ ಚೈತನ್ಯವು ಸರ್ವ ದೇಶಗಳಲ್ಲಿ ಸರ್ವ ಕಾಲದಲ್ಲಿ ಸರ್ವ ವಸ್ತುಗಳಲ್ಲಿ ಸಮವಾಗಿರುವುದು. ಈ ಚೈತನ್ಯದಲ್ಲಿ ಭ್ರಮೆಯಿಂದ ಉತ್ತಮ ಅಧಮ ಭೇದ ಮಾಡುತ್ತಾರೆ ।೭೦॥

ಶ್ಲೋಕಾರ್ಥ :- ಕರ್ಮಫಲದಲ್ಲಿ ಆಸೆಯಿರುವ ಮಾನವರು ಆಯಾ ಇತರೆ ದೇವತೆಗಳನ್ನು ಆರಾಧಿಸುತ್ತಾರೆ. ಮನುಷ್ಯ ಲೋಕದಲ್ಲಿ ಕರ್ಮ ಜನ್ಯ ಫಲವು ಶೀಘ್ರವಾಗಿ ದೊರೆಯುವುದು. (ನನ್ನ ಸಂಬಂಧವಾದ ಜ್ಞಾನಸಿದ್ಧಿಯು ಅಷ್ಟು ಸುಲಭವಾಗಿ ದೊರೆಯಲಾರದು) ।೧೨॥

ಆಗ ಮನದಲ್ಲಿ ನಾನಾ ಅಪೇಕ್ಷೆ ಧರಿಸಿ ಅನೇಕ ದೇವರನ್ನು ಮನ್ನಿಸಿ ಅವರವರ ತಕ್ಕಂತೆ ಉಪಚಾರದೊಂದಿಗೆ ಉಪಾಸನೆಯನ್ನು ಮಾಡುತ್ತಾರೆ ।೭೧॥

ಈ ಉಪಾಸನೆಯಿಂದ ಯಾರ ಮನದಲ್ಲಿ ಯಾವ ಇಚ್ಛೆ ಇರುವುದೋ ಅದು ಅವರಿಗೆ ಅದರಂತೆ ಪ್ರಾಪ್ತವಾಗುತ್ತದೆ. ಆದರೆ ಅವೆಲ್ಲವೂ ಅವರ ಕರ್ಮದ ಫಲವಾಗಿರುವುವು ಹೀಗೆ ನೀನು ನಿಶ್ಚಯವಾಗಿ ತಿಳಿ ।೭೨॥

ನಿಜವಾಗಿ ನೋಡಿದರೆ ಕೊಡುವುದು ಅಥವಾ ಸ್ವೀಕರಿಸುವುದು ಕರ್ಮದ ಹೊರತಾಗಿ ನಿಸಂಶಯವಾಗಿ ಬೇರೆ ಯಾವುದೂ ಇರುವುದಿಲ್ಲ. ಈ ಮನುಷ್ಯ ಲೋಕದಲ್ಲಿ ಕರ್ಮದಿಂದಲೇ ಫಲ ಪ್ರಾಪ್ತಿಯಾಗುವುದು ।೭೩॥

ಯಾವ ಪ್ರಕಾರವಾಗಿ ಭೂಮಿಯಲ್ಲಿ ಯಾವ ಧಾನ್ಯವನ್ನು ಬಿತ್ತುತ್ತೇವೆಯೋ ಅದರ ಹೊರತಾಗಿ ಬೇರೆ ಯಾವುದೂ ಹುಟ್ಟುವುದಿಲ್ಲ. ಅಥವಾ ಕನ್ನಡಿಯಲ್ಲಿ ತೋರಿಸಿದ್ದೇ ಕಾಣುವುದು ।೭೪॥

ಅಥವಾ ಅರ್ಜುನಾ, ಪರ್ವತದ ದಂಡೆಯ ಕೆಳಗೆ ನಾವು ಯಾವ ಶಬ್ದವನ್ನು ಪ್ರಯೋಗಿಸುತ್ತೇವೆಯೋ ಅದೇ ಶಬ್ದದ ಪ್ರತಿಧ್ವನಿಯಾಗುವುದು ।೭೫॥

ಅದರಂತೆ ಅರ್ಜುನಾ, ಈ ಎಲ್ಲ ಉಪಾಸನೆಗಳ ಸಾಕ್ಷಿಭೂತನು ನಾನೇ ಆಗಿರುವೆ. ಈ ಉಪಾಸನೆಗಳಲ್ಲಿ ಅವರವರ ಭಾವನೆಗೆ ತಕ್ಕಂತೆ ಫಲ ದೊರಕುವುದು ।೭೬॥

ಶ್ಲೋಕಾರ್ಥ :- ಗುಣಗಳ ಕರ್ಮಗಳ ಭೇದಕ್ಕನುಸಾರವಾಗಿ ನಾಲ್ಕು ವರ್ಣಗಳನ್ನು ನಾನು ಸೃಷ್ಟಿಸಿರುತ್ತೇನೆ. ಅವುಗಳಿಗೆ ಕರ್ತನಾಗಿದ್ದರೂ ನಾನು ಅಕರ್ತನು, ಅವಿಕಾರಿ ।೧೩॥

ಆತಾ ಯಾಚಿಪರೀ ಜಾಣ । ಚಾರ್ಹೀ ಹೇ ವರ್ಣ । ಸೃಜಿಲೇ ಮ್ಯಾ ಗುಣ । ಕರ್ಮವಿಭಾಗೇ ॥೭೭॥ ಜೇ ಪ್ರಕೃತೀಚೇನಿ ಆಧಾರೇ । ಗುಣಾಚೇನಿ ವ್ಯಭಿಚಾರೇ । ಕರ್ಮೇ ತದನುಸಾರೇ । ವಿವಂಚಿಲೀ ॥೭೮॥ ಏಥ ಏಕಚಿ ಹೇ ಧನುಷ್ಯಪಾಣೀ । ಪರೀ ಜಾಹಲೇ ಗಾ ಚಹೂ ವರ್ಣೀ । ಐಸೀ ಗುಣಕರ್ಮಕಡಸಣೀ । ಕೇಲೀ ಸಹಜೇ ॥೭೯॥ ಮ್ಹಣೌನೀ ಆಯಿಕೇ ಪಾರ್ಥಾ । ಹೇ ವರ್ಣಭೇದಸಂಸ್ಥಾ । ಮೀ ಕರ್ತಾ ನವ್ಹೇ ಸರ್ವಥಾ । ಯಾಚಿಲಾಗೀ ॥೮೦॥

ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ।
ಇತಿ ಮಾಂ ಯೋऽಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ ॥೧೪॥

ಹೇ ಮಜಚಿಸ್ತ ವ ಜಾಹಲೇ । ಪರೀ ಮ್ಯಾ ನಾಹೀ ಕೇಲೇ । ಐಸೇ ಜೇಣೇ ಜಾಣಿತಲೇ । ತೋ ಸುಟಲಾ ಗಾ ॥೮೧॥

ಏವಂ ಜ್ಞಾತ್ವಾಂ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।
ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈ ಪೂರ್ವತರಂ ಕೃತಮ್ ॥೧೫॥

ಮಾಗೀಲ ಮುಮುಕ್ಷು ಜೇ ಹೋತೇ । ತಿಹೀ ಐಶಿಯಾ ಜಾಣೋನಿ ಮಾತೇ । ಕರ್ಮೇ ಕೇಲೀ ಸಮಸ್ತೇ । ಧನುರ್ಧರಾ ॥೮೨॥ ಪರಿ ತೇ ಬೀಜೇ ಜೈಸೀ ದಗ್ಧಲೀ । ನುಗವತೀಂಚೀ ಪೇರಿಲೀ । ತೈಶೀ ಕರ್ಮೇಚಿ ಪರಿ ತಯಾ ಜಾಹಲೀ । ಮೋಕ್ಷ ಹೇತು ॥೮೩॥ ಏಥ ಆಣಿಕಹೀ ಏಕ ಅರ್ಜುನಾ । ಹೇ ಕರ್ಮಾಕರ್ಮವಿವಂಚನಾ । ಆಪುಲಿಯೇ ಚಾಡೇ ಸಜ್ಞಾನಾ । ಯೋಗ್ಯ ನೋಹೇ ॥೮೪॥

ಕಿಂ ಕರ್ಮ ಕಿಮಕರ್ಮೇತಿ ಕವಯೋऽಪ್ಯತ್ರ ಮೋಹಿತಾಃ ।
ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಞಾತ್ವಾ ಮೋಕ್ಷ್ಯಸೇऽಶುಭಾತ್ ॥೧೬॥

ಕರ್ಮ ಮ್ಹಣಿಪೇ ತೇಕವಣ । ಅಥವಾ ಅಕರ್ಮಾ ಕಾಯ ಲಕ್ಷಣ । ಐಸೇ ವಿಚಾರಿತಾ ವಿಚಕ್ಷಣ । ಗುಂಪೋನಿ ಠೇಲೇ ॥೮೫॥ ಜೈಸೇ ಕಾ ಕುಡೇ ನಾಣೇ । ಖರ್ಯಾಚೇನಿ ಸಾರಖೇಪಣೇ । ಡೋಳ್ಯಾಂಚೇಹೀ ದೇಖಣೇ । ಸಂಶಯೀ ಘಾಲೀ ॥೮೬॥ ತೈಸೇ ನೈಷ್ಕರ್ಮ್ಯತೇಚೇನಿ ಭ್ರಮೇ । ಗಿಂವಸಿಜತ ಆಹಾತೀ ಕರ್ಮೇ । ಜೇ ದುಜೀ ಸೃಷ್ಟಿ ಮನೋಧರ್ಮೇ । ಕರೂ ಸಕತೀ ॥೮೭॥ ವಾಂಚೂನಿ ಮುರ್ಖಾಚೀ ಗೋಠೀ ಕಾಯಸೀ । ಏಥ ಮೋಹಲೇ ಗಾ ಕ್ರಾಂತದರ್ಶೀ । ಮ್ಹಣೌನಿ ಆತಾ ತೇಂಚಿ ಪರಿಯೇಸೀ । ಸಾಂಗೇನ ತುಜ ॥೮೮॥

ಈಗ ಇದರಂತೆ ಈ ಯಾವ ನಾಲ್ಕು ವರ್ಣಗಳನ್ನು ಕರ್ಮ ಹಾಗೂ ಗುಣಗಳ ವಿಭಾಗದಿಂದ ನಾನೇ ಉತ್ಪನ್ನ ಮಾಡಿರುವೆನು. ಹೀಗೆ ನೀನು ತಿಳಿ ।೭೭॥

ಮತ್ತು ಈ ನಾಲ್ಕು ವರ್ಣಗಳ ಕರ್ಮಗಳನ್ನು ಅವರವರ ಪ್ರಕೃತಿ ಧರ್ಮದಂತೆ ಹಾಗೂ ಗುಣಗಳ ತಾರತಮ್ಯದಂತೆ ವ್ಯವಸ್ಥೆ ಮಾಡಿದೆ ।೭೮॥

ಅರ್ಜುನಾ, ಈ ಎಲ್ಲ ಜನರು ಒಂದೇಯಾಗಿದ್ದು ಚತುರ್ವರ್ಣಾತ್ಮಕರಾದರು. ಗುಣ ಮತ್ತು ಕರ್ಮ ಇವುಗಳ ಯೋಗದಿಂದ ನಾಲ್ಕು ವರ್ಣಗಳ ವ್ಯವಸ್ಥೆಯು ಸಹಜವಾಗಿ ಆದವು ।೭೯॥

ಗುಣ ಕರ್ಮಾನುರೂಪವೇ ವರ್ಣಭೇದದ ವ್ಯವಸ್ಥೆ ಮಾಡಿರುವುದು. ಆದ್ದರಿಂದ ಪಾರ್ಥಾ, ಈ ವರ್ಣಭೇದದ ಸ್ಥಾಪನೆಯ ಕರ್ತನು ಸರ್ವಥಾ ನಾನಲ್ಲ ।೮೦॥

ಶ್ಲೋಕಾರ್ಥ :- ಕರ್ಮಗಳು ನನ್ನನ್ನು ಅಂಟಲಾರವು. ನನಗೆ ಕರ್ಮಫಲದಲ್ಲಿ ಆಸಕ್ತಿಯಿಲ್ಲ. ಈ ವಿಧವಾಗಿ ನನ್ನನ್ನು ತಿಳಿದವನು ಕರ್ಮಕ್ಕೆ ಬದ್ಧನಾಗನು ।೧೪॥

ಈ ವರ್ಣಭೇದವು ನನ್ನಿಂದಾಗಿದೆ ಎಂದರೆ ನನ್ನ ಸತ್ತೆಯಿಂದಾಗಿರುವುದು. ಆದರೆ ಅದನ್ನು ನಾನು ಮಾಡಿಲ್ಲವೆಂದು ಯಾರು ತಿಳಿಯುತ್ತಾರೋ ಅವರೇ ಕರ್ಮಾತೀತರಾಗುವರು ।೮೧॥

ಶ್ಲೋಕಾರ್ಥ :- ಮೊದಲಿನ ಮುಮುಕ್ಷುಗಳು ಈ ವಿಧವಾಗಿ ತಿಳಿದು ಕರ್ಮವನ್ನು ಮಾಡಿದರು. ಅರ್ಜುನಾ! ನೀನೂ ಸಹ ಆ ಹಿಂದಿನವರಂತೆ ಕರ್ಮವನ್ನು ಆಚರಿಸು ।೧೫॥

ಅರ್ಜುನಾ, ಪೂರ್ವದಲ್ಲಿನ ಮುಮುಕ್ಷುಗಳವರು ಇದೇ ಪ್ರಕಾರವಾಗಿ ನನ್ನನ್ನು ತಿಳಿದುಕೊಂಡು ಎಲ್ಲ ಕರ್ಮಗಳನ್ನು ಮಾಡಿದರು ।೮೨॥

ಆದರೆ, ಸುಟ್ಟ ಬೀಜಗಳನ್ನು ಬಿತ್ತಿದರೆ ಯಾವ ಪ್ರಕಾರವಾಗಿ ಅವು ಹುಟ್ಟುವುದಿಲ್ಲವೋ ಅದರಂತೆ ಅವರ ನಿಷ್ಕಾಮ ಕರ್ಮಗಳೇ ಅವರಿಗೆ ಮೊಕ್ಷಕ್ಕೆ ಕಾರಣೀಭೂತವಾದವು ।೮೩॥

ಅರ್ಜುನಾ, ಮತ್ತೊಂದು ಮಾತು ಹೀಗಿದೆ ; ಇದು ಕರ್ಮವೋ ಅಕರ್ಮವೋ ಇದರ ವಿಚಾರವನ್ನು ತನ್ನ ಮತದಿಂದ ನಿರ್ಧರಿಸುವುದು ಬುದ್ಧಿವಂತನಿಗೂ ಕಠಿಣಕಾರಕವಾಗಿದೆ ।೮೪॥

ಶ್ಲೋಕಾರ್ಥ :- ಕರ್ಮವೆಂದರೇನು? ಅಕರ್ಮವೆಂದರೇನು? ಎಂಬ ವಿಷಯದಲ್ಲಿ ಪಂಡಿತರಿಗೂ ಸಹ ಭ್ರಾಂತಿಯಾಗಿದೆ. ಆ ಕರ್ಮ ರಹಸ್ಯವನ್ನು ನಾನು ನಿನಗೆ ಹೇಳುತ್ತೇನೆ. ಅದನ್ನು ತಿಳಿದರೆ ನೀನು ಸಂಸಾರ ಬಂಧನದಿಂದ ಮುಕ್ತನಾಗುವೆ ।೧೬॥

ಕರ್ಮ ಎಂಬುದು ಯಾವುದು? ಮತ್ತು ಅಕರ್ಮದ ಲಕ್ಷಣ ಯಾವುದು? ಈ ವಿಚಾರವನ್ನು ಮಾಡಿ ಮಾಡಿ ಬುದ್ಧಿವಂತರೂ ಸಹ ಗೊಂದಲದಲ್ಲಿ ಬಿದ್ದರು ।೮೫॥

ಖೊಟ್ಟಿ ನಾಣ್ಯಗಳು ಖರೇ ನಾಣ್ಯಗಳಂತೆ ಪ್ರತ್ಯಕ್ಷ ಕಾಣುತ್ತಿರುವುದರಿಂದ ತನ್ನ ದೃಷ್ಟಿಯೇ ತನಗೆ ಸಂಶಯಕ್ಕೆ ಗುರಿ ಮಾಡುತ್ತವೆ ।೮೬॥

ಅದರಂತೆ, ಸಂಕಲ್ಪ ಮಾತ್ರದಿಂದ ಪ್ರತಿ ಸೃಷ್ಟಿ ಮಾಡುವ ಸಾಮರ್ಥ್ಯ ಯಾರಿಗಿದೆಯೋ, ಅವರು ತಮ್ಮ ಕರ್ಮಕ್ಕೆ ಭ್ರಮೆಯಿಂದ ನೈಷ್ಕರ್ಮವೆಂದು ತಿಳಿಯುತ್ತಾರೆ. ಅದು ನಿಜವಾಗಿ ಕರ್ಮವಾಗಿದ್ದು ಅವರು ಕರ್ಮದ ಪಾಶದಲ್ಲಿ ಸಿಲುಕುವರು ।೮೭॥

ಕರ್ಮ ಅಕರ್ಮದ ವಿಚಾರದಲ್ಲಿ ಮಹಾ ಮಹಾ ಸರ್ವಜ್ಞರಿಗೂ ತೋಚದಾಗಿ ಫಜೀತಿ ಬೀಳುವರು. ಅಂದ ಮೇಲೆ ಮೂರ್ಖರ- ಅಜ್ಞಾನಿಗಳ ಮಾತೇನು? ಅದನ್ನೇ ಈಗ ಹೇಳುವೆ, ಕೇಳು ।೮೮॥

ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ।
ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ।೧೭॥

ತರೀ ಕರ್ಮ ಮ್ಹಣಜೇ ಸ್ವಭಾವೇ । ಜೇಣೇ ವಿಶ್ವಾಕಾರು ಸಂಭವೇ । ತೇ ಸಮ್ಯಕ ಆಧೀ ಜಾಣಾವೇ । ಲಾಗೇ ಏಥ ।೮೯॥ ಮಗ ವರ್ಣಾಶ್ರಮಾಸಿ ಉಚಿತ । ಜೇ ವಿಶೇಷ ಕರ್ಮ ವಿಹಿತ । ತೇಂಹೀ ವ್ರೋಳಖಾವೇ ನಿಶ್ಚಿತ । ಉಪಯೋಗೆಂಸೀ ।೯೦॥ ಪಾಠೀ ಜೇ ನಿಷಿದ್ಧ ಮ್ಹಣಿಪೇ । ತೇಂಹೀ ಬುಝಾವೇ ಸ್ವರೂಪೇ । ಯೇತುಲೇನಿ ಕಾಂಹೀ ನ ಗುಂಫೇ । ಆಪೈಸೇಂಚಿ ।೯೧॥ ಏರ್ಹ್ವೀ ಜಗ ಹೇ ಕರ್ಮಾಧೀನ । ಐಸೀ ಯಾಚಿ ವ್ಯಾಪ್ತೀ ಗಹನ । ಪರೀ ತೇ ಅಸೋ ಆಇಕೇ ಚಿನ್ಹ । ಪ್ರಾಪ್ತಾಂಚೇ ಗಾ ।೯೨॥

ಕರ್ಮಣ್ಯಕರ್ಮ ಯಃ ಪಶ್ಯೇತ್ ಅಕರ್ಮಣಿ ಚ ಕರ್ಮ ಯಃ।
ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನ ಕರ್ಮಕೃತ್ ।೧೮॥

ಜೋ ಸಕಳಕರ್ಮೀ ವರ್ತತಾ । ದೇಖೈ ಆಪುಲೀ ನೈಷ್ಕರ್ಮ್ಯತಾ । ಕರ್ಮಸಂಗೇ ನಿರಾಶತಾ । ಫಳಾಚಿಯಾ ।೯೩॥ ಆಣಿ ಕರ್ತವ್ಯತೇಲಾಗೀ । ಜಯಾದುಸರೇ ನಾಹೀ ಜಗೀ । ಐಸಿಯಾ ನೈಷ್ಕರ್ಮ್ಯತಾ ತರೀ ಚಾಂಗೀ । ಬೋಧಲಾ ಅಸೇ ।೯೪॥ ತರೀ ಕ್ರಿಯಾಕಲಾಪು ಆಘವಾ । ಆಚರತು ದಿಸೇ ಬರವಾ । ತೋಚಿ ತೋ ಯೇ ಚಿನ್ಹೀ ಜಾಣಾವಾ । ಜ್ಞಾನಿಯಾ ಗಾ ।೯೫॥ ಜೈಸಾ ಕಾ ಜಳಾಪಾಶೀ ಉಭಾ ಠಾಕೇ । ತೋ ಜರೀ ಆಪಣಪೇ ಜಳಾಮಾಜಿ ದೇಖೇ ।ತರೀ ತೋ ನಿಭ್ರಾಂತ ವ್ರೋಳಖೇ । ಮ್ಹಣೇ ಮೀ ವೇಗಳಾ ಆಹೇ ।೯೬॥ ಅಥವಾ ನಾವೇ ಹನ ಜೋ ರಿಗೇ । ತೋ ಥಡಿಯೇಚೇ ರುಖ ಜಾತಾ ದೇಖೇ ವೇಗೇ । ತೇಚಿ ಸಾಚೋಕಾರೇ ಜೋ ಪಾಹೋ ಲಾಗೇ। ತಂವ ರುಖ ಮ್ಹಣೇ ಅಚಳ ।೯೭॥ ತೈಸೇ ಸರ್ವ ಕರ್ಮೀ ಅಸಣೇ । ತೇ ಫುಡೇ ಮಾನುನಿ ವಾಯಾಣೇ । ಮಗ ಆಪಣಯಾ ಜೋ ಜಾಣೇ । ನೈಷ್ಕರ್ಮ್ಯ ಐಸಾ ।೯೮॥ ಆಣಿ ಉದೋಅಸ್ತುಚೇನಿ ಪ್ರಮಾಣೇ । ಜೈಸೇ ನ ಚಾಲತಾ ಸೂರ್ಯಾಚೇ ಚಾಲಣೇ । ತೈಸೇ ನೈಷ್ಕರ್ಮ್ಯತ್ವ ಜಾಣೇ । ಕರ್ಮೀಂಚಿ ಅಸತಾ ।೯೯॥ ತೋ ಮನುಷ್ಯಾಸಾರಿಖಾ ತರೀ ಆವಡೇ । ಪರೀ ಮನುಷ್ಯತ್ವ ತಯಾ ನ ಘಡೇ । ಜೈಸೇ ಜಳಾಮಾಜೀ ನ ಬುಡೇ । ಭಾನುಬಿಂಬ ।೧೦೦॥ ತೇಣೇ ನ ಪಾಹತಾ ವಿಶ್ವ ದೇಖಿಲೇ । ನ ಕರಿತಾ ಸರ್ವ ಕೇಲೇ । ನ ಭೋಗಿತಾ ಭೋಗಿಲೇ । ಭೋಗ್ಯ ಜಾತ ।೧೦೧॥

ಶ್ಲೋಕಾರ್ಥ :- ಕರ್ಮತತ್ತ್ವವನ್ನೂ, ವಿಕರ್ಮ ತತ್ತ್ವವನ್ನೂ ತಿಳಿದುಕೊಳ್ಳುವುದು ಅಗತ್ಯ. ಕರ್ಮ ವಿಷಯವು ಅಗಾಧವಾಗಿದೆ ॥೧೭॥

ಈಶ್ವರನಿಂದ ಜೀವದ ಕರ್ಮಾನುಸಾರವಾಗಿ ವಿಶ್ವ ಉತ್ಪನ್ನದ ಸಂಕಲ್ಪವು ಇದು ಕರ್ಮವಾಗಿದೆ. ಇಲ್ಲಿ ಪ್ರಥಮ ದಲ್ಲಿ ಇದನ್ನು ಯಥಾರ್ಥವಾಗಿ ತಿಳಿಯಬೇಕಾಗಿದೆ ॥೮೯॥

ತದನಂತರ ವರ್ಣಾಶ್ರಮಕ್ಕೆ ಯೋಗ್ಯವಾದ ಮತ್ತು ವಿಹಿತವಾದ ವಿಶೇಷ ಕರ್ಮವನ್ನು ಅದರ ಉಪಯೋಗ ದೊಂದಿಗೆ ನ್ಯಾಯವಾಗಿ ತಿಳಿದುಕೊಳ್ಳಬೇಕು ॥೯೦॥

ಆಮೇಲೆ ನಿಷಿದ್ಧ ಕರ್ಮಗಳನ್ನು ಯಥಾರ್ಥ ಸ್ವರೂಪ ಗಳಿಂದ ತಿಳಿದುಕೊಳ್ಳಬೇಕು. ಈ ಪ್ರಕಾರವಾಗಿ (ಕರ್ಮ, ವಿಕರ್ಮ,ಅಕರ್ಮ) ಇವುಗಳನ್ನು ಅರಿತುಕೊಂಡು ಕರ್ಮ ಮಾಡಿದರೆ, ಆತನು ಸಹಜವಾಗಿ ಎಂದೂ ಕರ್ಮಬದ್ಧ ನಾಗುವುದಿಲ್ಲ ॥೯೧॥

ಸಾಮಾನ್ಯವಾಗಿ ಈ ಸಂಪೂರ್ಣ ಜಗತ್ತು ಕರ್ಮದ ಆಧೀನವಾಗಿದೆ. ಈ ಪ್ರಕಾರವಾಗಿ ಕರ್ಮದ ವ್ಯಾಪಕತೆಯು ಬಹಳ ಗಹನವಾಗಿರುವುದು. ಅದಿರಲಿ, ಈಗ ಕೃತಾರ್ಥ ಪುರುಷರ ಲಕ್ಷಣಗಳನ್ನು ಕೇಳು ॥೯೨॥

ಶ್ಲೋಕಾರ್ಥ :- ಕರ್ಮದಲ್ಲಿ ಅಕರ್ಮವನ್ನು, ಅಕರ್ಮದಲ್ಲಿ ಕರ್ಮವನ್ನು ನೋಡುವ ಮನುಷ್ಯನೇ ಬುದ್ಧಿವಂತನು. ಅವನೇ ಯೋಗಿಯು, ಅವನೇ ಎಲ್ಲಾ ವಿಧದಿಂದಲೂ ಕೃತಕೃತ್ಯನು ॥೧೮॥

ಯಾರು ಶರೀರ ಇಂದ್ರಿಯಗಳಿಂದ ಎಲ್ಲ ಕರ್ಮಗಳನ್ನು ಮಾಡುತ್ತಿದ್ದರೂ ಆತ್ಮದ ನೈಷ್ಕರ್ಮ್ಯವನ್ನು ನೋಡುವರೋ ಅವರು ಕರ್ಮದ ಸಂಬಂಧ ಇದ್ದರೂ ಫಲದ ವಿಷಯಕ್ಕೆ ನಿರಿಚ್ಛರಿರುವರು ॥೯೩॥

ಮತ್ತು ತಾನು ಸ್ವತಃ ಕೃತಾರ್ಥನಾಗಿದ್ದು ಕರ್ತವ್ಯದಲ್ಲಿ ಈತನ ಸರಿಸಮಾನರು ಜಗತ್ತಿನಲ್ಲಿಯೇ ಇರುವುದಿಲ್ಲ. ''ನೈಷ್ಕರ್ಮ'' ವಿಷಯಕ್ಕೆ ಆತನಿಗೆ ತುಂಬಾ ಜ್ಞಾನವಿರುವುದು ॥೯೪॥

(ಲೌಕಿಕ, ವೈದಿಕ) ಎಲ್ಲ ಪ್ರಕಾರದ ಕರ್ಮಗಳನ್ನು ಉತ್ತಮ ರೀತಿಯಲ್ಲಿ ಆಚರಿಸುತ್ತ ನೈಷ್ಕರ್ಮವನ್ನು ಅರಿತಿರುವ, ಈ ಲಕ್ಷಣದಿಂದ ಇರುವಾತನೇ ಜ್ಞಾನಿಯು. ಹೀಗೆ ತಿಳಿ ॥೯೫॥

ಒಂದು ವೇಳೆ ಒಬ್ಬನು ನೀರಿನ ದಂಡೆಗೆ ನಿಂತಾಗ ಆತನಿಗೆ ತನ್ನ ನೆರಳು ನೀರಿನಲ್ಲಿ ಕಂಡರೂ ನೆರಳಿನಿಂದ ನಾನು ಭಿನ್ನ ನಿರುವೆ ಎಂದು ತಿಳಿದುಕೊಂಡಂತೆ ॥೯೬॥

ಅಥವಾ ಒಬ್ಬ ಮನುಷ್ಯನು ಹಡಗದಲ್ಲಿ ಪ್ರವಾಸ ಮಾಡುತ್ತಿರುವಾಗ್ಗೆ ನದಿ ದಂಡೆಯ ಗಿಡಮರಗಳು ತೀವ್ರ ವಾಗಿ ನಡೆಯುವಂತೆ ಕಾಣಿಸಿದರೂ ವಿಚಾರಿಸಿ ನೋಡಿ ಗಿಡಗಳು ಅಚಲ ಎಂದು ತಿಳಿಯುವನು ॥೯೭॥

ಅದರಂತೆ ಎಲ್ಲ ಕರ್ಮಗಳನ್ನು ಮಾಡುತ್ತಿರುವಾಗ್ಗೆ ನಿಶ್ಚಿತವಾಗಿ ಇವು ಮಿಥ್ಯ ಎಂದು ತಿಳಿದು ಕರ್ಮರಹಿತನಾದ ಪರಮಾತ್ಮನೇ ನನ್ನ ಸ್ವರೂಪವೆಂದು ತಿಳಿಯುವನು ॥೯೮॥

ಸೂರ್ಯನು ಉದಯಿಸುತ್ತಾನೆ, ಮುಳುಗುತ್ತಾನೆ ಇದರಿಂದ ಅಚಲನಾದ ಸೂರ್ಯನು ಚಲಿಸುವಂತೆ ತೋರು ತ್ತಾನೆ. ಅದರಂತೆ ಕರ್ಮ ಮಾಡುತ್ತಿದ್ದರೂ ನಾನು ಮಾಡು ತ್ತಿಲ್ಲವೆಂದು ತಿಳಿಯುವನು ॥೯೯॥

ಈತನು ಮನುಷ್ಯನಂತೆ ಕಾಣಿಸುತ್ತಿದ್ದರೂ ಮನುಷ್ಯ ನಲ್ಲದೇ ಪರಬ್ರಹ್ಮನೇ ಆಗಿರುವನೆಂದು ತಿಳಿ. ಸೂರ್ಯನ ಪ್ರತಿಬಿಂಬವು ನೀರಿನಲ್ಲಿ ಕಂಡರೂ ಅದು ಅಲ್ಲಿ ಮುಳುಗಿಲ್ಲ ॥೧೦೦॥

ಇಂತಹ ಪುರುಷನು ಏನು ನೋಡದಿದ್ದರೂ ವಿಶ್ವವನ್ನು ನೋಡಿದಂತೆ. ಏನು ಮಾಡದಿದ್ದರೂ ಎಲ್ಲವೂ ಮಾಡಿದಂತೆ, ಏನು ಭೋಗಿಸದಿದ್ದರೂ ಎಲ್ಲವನ್ನೂ ಭೋಗಿಸಿದಂತೆ ॥೧೦೧॥

ಏಕೇಚಿ ಠಾಯೀ ಬೈಸಲಾ । ಪರಿ ಸರ್ವತ್ರ ತೋಚಿ ಗೇಲಾ । ಹೇ ಅಸೋ ವಿಶ್ವ ಜಾಹಲಾ । ಆಂಗೇಚಿ ತೋ ।।೧೦೨।।

ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ ।
ಜ್ಞಾನಾಗ್ನಿದಗ್ಧ ಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ।।೧೯।।

ಜಯಾ ಪುರುಷಾಚ್ಯಾ ಠಾಯೀ । ಕರ್ಮಾಚಾ ತರೀ ಖೇದು ನಾಹೀ । ಪರೀ ಫಲಾಪೇಕ್ಷಾ ಕಹೀ । ಸಂಚರೇನಾ ।।೧೦೩।। ಆಣಿ ಹೇ ಕರ್ಮ ಮೀ ಕರೀನ । ಅಥವಾ ಆದರಿಲೇ ಸಿದ್ಧೀ ನೇಈನ । ಯೇಣೇ ಸಂಕಲ್ಪೇಂಹೀ ಜಯಾಚೇ ಮನ । ವಿಟಾಳೇನಾ ।।೧೦೪।। ಜ್ಞಾನಾಗ್ನೀಚೇನಿ ಮುಖೇ । ಜೇಣೇ ಜಾಳಿಲೀ ಕರ್ಮೇ ಅಶೇಖೇ । ತೋ ಪರಬ್ರಹ್ಮ ಚಿ ಮನುಷ್ಯವೇಷೇ । ವೋಳಖ ತೂ ।।೧೦೫।।

ತ್ಯಕ್ತ್ವಾ ಕರ್ಮಕರ್ಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ ।
ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ ।।೨೦।।

ಜೋ ಶರೀರೀ ಉದಾಸು । ಫಳಭೋಗಿ ನಿರಾಸು । ನಿತ್ಯತಾ ಉಲ್ಹಾಸು । ಹೋಊನಿ ಅಸೇ ।।೧೦೬।। ಜೋ ಸಂತೋಷಾಚಾ ಗಾಭಾರಾ । ಆತ್ಮಬೋಧಾಚಿಯೇ ವೋಗರಾ । ಪುರೇ ನ ಮ್ಹಣೇಚಿ ಧನುರ್ಧರಾ । ಆರೋಗಿತಾ ।।೧೦೭।।

ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ ।
ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ।।೨೧।।

ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।
ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಽಪಿ ನ ನಿಬಧ್ಯತೇ ।।೨೨।।

ಕೈಸೀ ಅಧಿಕಾಧಿಕ ಆವಡೀ । ಘೇತ ಮಹಾಸುಖಾಚೀ ಗೋಡೀ । ಸಾಂಡೋನಿಯಾ ಆಶಾ ಕುರೋಂಡೀ । ಅಹಂಭಾವೇಸೀ ।।೧೦೮।। ಮ್ಹಣೌನಿ ಅವಸರೇ ಜೇ ಜೇ ಪಾವೇ । ಕೀ ತೇಣೇಂಚೀ ತೋ ಸುಖಾವೇ । ಜಯಾ ಆಪುಲೇ ಆಣಿ ಪರಾವೇ । ದೋನ್ಹೀ ನಾಹೀ ।।೧೦೯।। ತೋ ದಿಠೀ ಜೇ ಪಾಹೇ । ತೇ ಆಪಣಚಿ ಹೋಊನಿ ಜಾಯೇ । ಆಇಕೇ ತೇ ಆಹೇ । ತೋಚಿ ಜಾಹಲಾ ।।೧೧೦।। ಚರಣೇ ಹನ ಚಾಲೇ । ಮುಖೇ ಜೇ ಜೇ ಬೋಲೇ । ಐಸೇ ಚೇಷ್ಟಾಜಾತ ತೇತುಲೇ । ಆಪಣಚಿ ಜೋ ।।೧೧೧।। ಹೇ ಅಸೋ ವಿಶ್ವ ಪಾಹೀ । ಜಯಾಸಿ ಆಪಣ ತೇ[illegible]ಂಚೂನಿ ನಾಹೀ । ಆತಾ ಕವಣ ತೇ ಕರ್ಮ ಕಾಯೀ । ಬಾಧೀ ತಯಾತೇ ।।೧೧೨।।

ಆತನು ಒಂದೇ ಸ್ಥಳದಲ್ಲಿ ಕುಳಿತಿದ್ದರೂ ಎಲ್ಲ ಕಡೆಗೂ ಗಮನ ಮಾಡಿದಂತೆ. ಇದಿರಲಿ, ಹೆಚ್ಚಿಗೇನು ಹೇಳಬೇಕು? ಸರ್ವ ವಿಶ್ವರೂಪ ಆತನೇ ಆಗಿರುವನು ।।೧೦೨।।

ಶ್ಲೋಕಾರ್ಥ :- ಯಾವನ ಕಾರ್ಯಾರಂಭದಲ್ಲಿ ಕಾಮ ಸಂಕಲ್ಪವಿರುವುದಿಲ್ಲವೋ, ಯಾವನು ತನ್ನ ಜ್ಞಾನಾಗ್ನಿಯಿಂದ ಸರ್ವಕರ್ಮಗಳನ್ನು ಸುಟ್ಟು ಬಿಟ್ಟಿರುವನೋ, ಅಂಥವನನ್ನು ಪಂಡಿತನೆಂದು ದೊಡ್ಡವರು ಹೇಳುತ್ತಾರೆ।।೧೯।।

ಯಾವ ಪುರುಷನಿಗೆ ಕರ್ಮಾಚರಣೆ ವಿಷಯಕ್ಕೆ ಮನದಲ್ಲಿ ಖೇದವಾಗುವುದಿಲ್ಲ. (ಉತ್ಸಾಹದಿಂದ ಮಾಡುತ್ತಾನೆ) ಆದರೆ ಫಲದ ಇಚ್ಛೆ ಮಾತ್ರ ಆತನ ಮನದಲ್ಲಿ ಎಂದೂ ಬರುವುದಿಲ್ಲ ।।೧೦೩।।

ಮತ್ತು ಇಂತಹ ಕಾರ್ಯ ನಾನು ಮಾಡುವೆನು ಅಥವಾ ಇಂತಹ ಕಾರ್ಯ ಆರಂಭಿಸಿ ಪೂರ್ಣಗೊಳಿಸುವೆನು ಎಂಬ ಸಂಕಲ್ಪ ಸಹ ಆತನ ಮನಸ್ಸಿನಲ್ಲಿ ಸ್ಪರ್ಶ ಮಾಡುವುದಿಲ್ಲ ।।೧೦೪।।

ಏಕೆಂದರೆ ಆತನು ಜ್ಞಾನರೂಪ ಅಗ್ನಿಯಲ್ಲಿ ತನ್ನ ಎಲ್ಲ ಕರ್ಮಗಳನ್ನು ಸುಟ್ಟಿರುತ್ತಾನೆ. ಇಂತಹ ಪುರುಷನು ಮನುಷ್ಯರೂಪದ ಪರಬ್ರಹ್ಮನೆಂದು ತಿಳಿ ।।೧೦೫।।

ಶ್ಲೋಕಾರ್ಥ :- ಕರ್ಮಫಲಗಳಲ್ಲಿ ಆಸಕ್ತಿಯನ್ನು ಬಿಟ್ಟು, ನಿತ್ಯತೃಪ್ತನೂ ಯಾವುದರ ಮೇಲೂ ಆಧಾರವಿಲ್ಲದವನೂ ಆದ ಪುರುಷನು ಕರ್ಮವನ್ನು ಮಾಡಿದರೂ ಮಾಡದವನು ।।೨೦।।

ಆತನು ಶರೀರ ವಿಷಯದಲ್ಲಿ ಉದಾಸೀನನಾಗಿರುವನು ಮತ್ತು ಕರ್ಮದಿಂದ ಆಗುವ ಫಲಪ್ರಾಪ್ತಿ ವಿಷಯದಲ್ಲಿ ನಿರಿಚ್ಛನಾಗಿರುವನು. ಹಾಗೂ ಸದಾವಕಾಲ ಆನಂದರೂಪನಾಗಿರುವನು ।।೧೦೬।।

ಪಾರ್ಥಾ, ಈತನು ಸಂತೋಷದ ಗರ್ಭಗುಡಿಯಲ್ಲಿ ಕುಳಿತು ಆತ್ಮ ಬೋಧೆಯ ಪಕ್ವಾನ್ನ ಭುಂಜಿಸುತ್ತ ''ಸಾಕು'' ಎಂದು ಅನ್ನುವುದೇ ಇಲ್ಲ ।।೧೦೭।।

ಶ್ಲೋಕಾರ್ಥ :- ಆಶೆಯಿಲ್ಲದವನೂ, ಮನ ಶರೀರಗಳನ್ನು ನಿಗ್ರಹಿಸದವನೂ ಸಮಸ್ತ ಪರಿಗ್ರಹಗಳನ್ನು ಬಿಟ್ಟವನೂ ಆದಂಥ ಮನುಷ್ಯನು ಶರೀರಯಾತ್ರೆಗೆ ಅವಶ್ಯವಾಗಿದ್ದಷ್ಟು ಕರ್ಮವನ್ನು ಮಾಡಿದರೂ ಪಾಪಕ್ಕೆ ಭಾಗಿಯಾಗುವುದಿಲ್ಲ ।।೨೧।।

ಶ್ಲೋಕಾರ್ಥ :- ದೊರೆತದ್ದರಲ್ಲಿ ತೃಪ್ತಿ ಪಡುವವನೂ, ಸುಖದುಃಖಾದಿ ದ್ವಂದ್ವಗಳನ್ನು ದಾಟಿದವನೂ, ಮತ್ಸರಬುದ್ಧಿಯಿಲ್ಲದವನೂ, ಜಯಾಪಜಯಗಳಲ್ಲಿ ಸಮಾನವಾಗಿರುವವನೂ ಕರ್ಮ ಮಾಡಿದರೂ ಬದ್ಧನಾಗುವುದಿಲ್ಲ ।।೨೨।।

ಅಹಂಕಾರ ಸಮೇತವಾಗಿ ಆಶೆಯನ್ನು ನಿವಾಳಿಸಿ ಚೆಲ್ಲಿ ಅತ್ಯಂತ ಅಧಿಕ ಪ್ರೇಮದಿಂದ ಬ್ರಹ್ಮಸುಖದ ಆನಂದ ಭೋಗಿಸುವನು ।।೧೦೮।।

ಆದ್ದರಿಂದ ಯಾವ ಯಾವ ವೇಳೆಯಲ್ಲಿ ಯಾವ ಯಾವುದು ದೊರೆಯುವುದೋ, ಅದರಲ್ಲಿಯೇ ಆನಂದ ಪಡೆಯುತ್ತಾನೆ ಮತ್ತು ಆತನಿಗೆ ನನ್ನದು ಪರರದು ಎಂಬ ಭೇದಭಾವವಿರುವುದಿಲ್ಲ ।।೧೦೯।।

ಆತನು ತನ್ನ ಕಣ್ಣಿನಿಂದ ನೋಡಿದ ಎಲ್ಲವನ್ನೂ ತಾನೇ ಆಗುವನು ಮತ್ತು ಕೇಳಿದ ಎಲ್ಲವನ್ನೂ ತಾನೇ ಆಗುವನು ।।೧೧೦।।

ಆತನು ಕಾಲಿನಿಂದ ಯಾವ ಮಾರ್ಗದಿಂದ ನಡೆಯುತ್ತಾನೆಯೋ, ಮತ್ತು ಮುಖದಿಂದ ಏನೇನು ಹೇಳುತ್ತಾನೆಯೋ, ಅದರಂತೆ ಶರೀರದಿಂದ ಏನೇನು ಕ್ರಿಯೆ ಮಾಡುತ್ತಾನೆಯೋ ಅವೆಲ್ಲವೂ ತಾನೇ ತಾನಾಗಿರುವನು ।।೧೧೧।।

ಅದಿರಲಿ, ಹೆಚ್ಚಿಗೇನು ಹೇಳಬೇಕು? ಜಗತ್ತನ್ನು ನೋಡಿದಾಗ ಆತನಿಗೆ ಆತ್ಮಸ್ವರೂಪದ ಹೊರತು ಇನ್ನು ಬೇರೆ ಯಾವುದೂ ಕಾಣುವುದಿಲ್ಲ. ಆತನಿಗೆ ಯಾವ ಕರ್ಮದಿಂದ ಯಾವ ಬಾಧೆಯಾಗಬೇಕು? ।।೧೧೨।।

ಹಾ ಮತ್ಸರು ಜೇಥೇ ಉಪಜೇ । ತೇತುಲೇ ನುರೇಚಿ ಜಯಾ ದುಜೇ । ತೋ ನಿರ್ಮತ್ಸರು ಕಾಇ ಮ್ಹಣಿಜೇ । ಬೋಲವರೀ? ॥೧೧೩॥ ಮ್ಹಣೌನಿ ಸರ್ವಾಪರೀ ಮುಕ್ತು । ತೋ ಸಕರ್ಮುಚಿ ಕರ್ಮರಹಿತು। ಸಗುಣ ಪರಿ ಗುಣಾತೀತು । ಏಥ ಭ್ರಾಂತಿ ನಾಹೀ ॥೧೧೪॥

ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ।
ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥೨೩॥

ತೋ ದೇಹಸಂಗೇ ತರೀ ಅಸೇ । ಪರೀ ಚೈತನ್ಯಾಸಾರಿಖಾ ದಿಸೇ । ಪಾಹತಾ ಪರಬ್ರಹ್ಮಾಚೇನಿ ಕಸೇ । ಚೋಖಾಳು ಭಲಾ ॥೧೧೫॥ ಐಸಾಹೀ ಪರೀ ಕೌತುಕೇ । ಜರೀ ಕರ್ಮೇ ಕರೀ ಯಜ್ಞಾದಿಕೇ । ತರೀ ತಿಯೇ ಲಯಾ ಜಾತೀ ನಿಃಶೇಖೇ । ತಯಾಚ್ಯಾಚಿ ಠಾಯೀ ॥೧೧೬॥ ಅಕಾಳೀಂಚೇ ಅಭ್ರೇ ಜೈಶೀ । ಊರ್ಮಿವೀಣ ಆಕಾಶೀ । ಹಾರಪತೀ ಆಪೈಶೀ । ಉದಯಲೀ ಸಾತೀ ॥೧೧೭॥ ತೈಶೀ ವಿಧಿವಿಧಾನೇ ವಿಹಿತೇ । ಜರೀ ಆಚರೇ ತೋ ಸಮಸ್ತೇ । ತರೀ ತಿಯೆ ಐಕ್ಯಭಾವೇ ಐಕ್ಯಾತೇ । ಪಾವತೀಚಿ ಗಾ ॥೧೧೮॥

ಬ್ರಹ್ಮಾರ್ಪಣಂ ಬ್ರಹ್ಮ ಹವಿಃ ಬ್ರಹ್ಮಾಗ್ನೌ ಬ್ರಹ್ಮಣಾ ಹುತಂ।
ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥೨೪॥

ಹೇ ಹವನ ಮೀ ಹೋತಾ । ಕಾ ಇಯೇ ಯಜ್ಞೀ ಹಾ ಭೋಕ್ತಾ । ಐಸಿಯಾ ಬುದ್ಧೀಸಿ ನಾಹೀ ಭಿನ್ನತಾ । ಮ್ಹಣೌನಿಯಾ ॥೧೧೯॥ ಜೇ ಇಷ್ಟಯಜ್ಞ ಯಜಾವೇ । ತೇ ಹವಿರ್ಮಂತ್ರಾದಿ ಆಘವೇ । ತೋ ದೇಖತಸೇ ಅವಿನಾಶಭಾವೇ । ಆತ್ಮಬುದ್ಧಿ ॥೧೨೦॥ ಮ್ಹಣೌನಿ ಬ್ರಹ್ಮ ತೇಚಿ ಕರ್ಮ । ಐಸೇ ಬೋಧಾ ಆಲೇ ಜಯಾ ಸಮ । ತಯಾ ಕರ್ತವ್ಯ ತೇ ನೈಷ್ಕರ್ಮ್ಯ । ಧನುರ್ಧರಾ ॥೧೨೧॥ ಆತಾ ಅವಿವೇಕು ಕುಮಾರತ್ವಾ ಮುಕಲೇ । ಜಯಾ ವಿರಕ್ತೀಚೇ ಪಾಣಿಗ್ರಹಣ ಜಾಹಲೇ । ಮಗ ಉಪಾಸನ ಜಿಹೀ ಆಣಿಲೇ । ಯೋಗಾಗ್ನೀಚೇ ॥೧೨೨॥

ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ।
ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥೨೫॥

ಜೇ ಯಜನಶೀಲ ಅಹರ್ನಿಶೀ । ಜಿಹೀ ಅವಿದ್ಯಾ ಹವಿಲೀ ಮನೇಸೀ । ಗುರುವಾಕ್ಯ ಹುತಾಶೀ । ಹವನ ಕೇಲೇ ॥೧೨೩॥

ಮತ್ಸರವು ದ್ವೈತದಲ್ಲಿ ಕಾಣುವುದು. ಇಷ್ಟು ಸಹ ದ್ವೈತವು ಯಾರಿಗೆ ಕಾಣಿಸುವುದಿಲ್ಲವೋ, ಅವರಿಗೆ ನಿರ್ಮತ್ಸರರು ಎಂದು ಶಬ್ದದಿಂದ ಹೇಳಬೇಕೆ? ।।೧೧೩।।

ಆತನು ಎಲ್ಲ ಪ್ರಕಾರದಿಂದ ಮುಕ್ತನಾಗಿರುವನು. ಆತನು ಎಲ್ಲ ಕರ್ಮಗಳನ್ನು ಮಾಡುತ್ತಿದ್ದರೂ ಕರ್ಮ ರಹಿತನಾಗಿ ರುವನು. ಆತನು ಸಗುಣನಂತೆ ಕಾಣುತ್ತಿದ್ದರೂ, ಗುಣಾತೀತ ನಾಗಿರುವನು. ಇದರಲ್ಲಿ ಸಂಶಯವಿಲ್ಲ ।।೧೧೪।।

ಶ್ಲೋಕಾರ್ಥ :- ಆಸಕ್ತಿಯಿಲ್ಲದವನು ಮುಕ್ತನು. ಆತ್ಮಜ್ಞಾನದಲ್ಲಿ ಸ್ಥಿರವಾದ ಅಂತಃಕರಣವುಳ್ಳವನು ಆದ ಪುರುಷನು ಮಾಡುವ ಯಜ್ಞರೂಪ ಕರ್ಮಗಳು ಕರ್ಮಗಳೇ ಅಲ್ಲ (ಕರ್ಮಾಭಾಸಗಳು) ।।೨೩।।

ಆತನು ದೇಹಧಾರಿಯಾಗಿರುವನು. ಆದರೆ ಚೈತನ್ಯದಂತೆ ಕಾಣಿಸುವನು ಮತ್ತು ಪರಬ್ರಹ್ಮನ ಒರೆಗೆ ಹಚ್ಚಿ ನೋಡಿದರೆ ಅದರಂತೆಯೇ ಶುದ್ಧ ಕಾಣಿಸುವನು ।।೧೧೫।।

ಈ ಪ್ರಕಾರವಾಗಿ ಈತನು ಕೇವಲ ಮುಕ್ತನಾಗಿರುವನು. ಆದರೆ ಒಂದುವೇಳೆ ಕೌತುಕದಿಂದ ಯಜ್ಞಾದಿ ಕರ್ಮದ ಆಚರಣೆ ಮಾಡಿದರೆ ಆ ಎಲ್ಲ ಕರ್ಮಗಳು ಆತನಲ್ಲಿಯೇ ಲಯಗೊಳ್ಳುವುವು ।।೧೧೬।।

ಅಕಾಲದಲ್ಲಿ ಆಕಾಶದಲ್ಲಿ ಹುಟ್ಟಿದ ಪೊಳ್ಳು ಮೋಡಗಳು ಮಳೆಗರೆಯದೇ ತಮ್ಮಷ್ಟಕ್ಕೆ ತಾವೇ ಇಲ್ಲದಂತಾಗುವುವು ।।೧೧೭।।

ಅದರಂತೆ ಈತನು ವೇದ ವಿಹಿತ ಕರ್ಮಗಳನ್ನು ಯಥಾವಿಧಿಯಾಗಿ ಆಚರಿಸುತ್ತಿದ್ದರೂ ಆ ಕರ್ಮದ ಮೇಲೆ ಈತನ ಅನ್ಯಭಾವ ಇಲ್ಲದ್ದರಿಂದ ಅದು ಈತನಲ್ಲಿಯೇ ಲಯಗೊಳ್ಳುವುದು ।।೧೧೮।।

ಶ್ಲೋಕಾರ್ಥ :- ಅರ್ಪಣಕ್ರಿಯೆ ಬ್ರಹ್ಮ, ಹವಿಸ್ಸು ಬ್ರಹ್ಮ, ಅಗ್ನಿ ಬ್ರಹ್ಮ, ಹೋಮವು ಬ್ರಹ್ಮ, ಕರ್ಮದಲ್ಲಿ ಬ್ರಹ್ಮ ಬುದ್ಧಿಯುಳ್ಳ ಪುರುಷನು ಪಡೆಯುವ ಫಲವೂ ಸಹ ಬ್ರಹ್ಮವೇ ।।೨೪।।

ಇದೊಂದು ಹವನ ಇದೆ. ನಾನೊಬ್ಬ ಇದರ ಕರ್ತನು ಅಥವಾ ಈ ಯಜ್ಞದ ಭೋಕ್ತಾ ಎಂಬ ಈ ಪ್ರಕಾರದ ಆತನ ಬುದ್ಧಿಗೆ ಭೇದಭಾವ ಇರುವುದಿಲ್ಲ. ಆದ್ದರಿಂದ ।।೧೧೯।।

ಯಾವ ಯಾವ ತನ್ನಿಷ್ಟದ ಯಜ್ಞ ಮಾಡುವನೋ ಅದರಲ್ಲಿಯ ಹೋಮ ದ್ರವ್ಯಗಳು ಹಾಗೂ ಮಂತ್ರಗಳು ಇವೆಲ್ಲವೂ ಆತ್ಮಸ್ವರೂಪವೇ ಎಂದು ತಿಳಿಯುತ್ತಾನೆ ।।೧೨೦।।

ಆದ್ದರಿಂದ ಅರ್ಜುನಾ, ಬ್ರಹ್ಮವೇ ಕರ್ಮ ಎಂಬ ಸಮಬುದ್ಧಿಯು ಯಾರ ಅಂತಃಕರಣದಲ್ಲಿ ನಟ್ಟಿದೆಯೋ ಅವರು ಕರ್ಮ ಮಾಡಿದರೂ ನೈಷ್ಕರ್ಮ್ಯರಾಗಿರುವರು ।।೧೨೧।।

ಯಾವ ಅವಿಚಾರರೂಪ ಬಾಲ್ಯಾವಸ್ಥೆಯು ಹೋದಾಗ್ಗೆ ವಿರಕ್ತಿ ಜೊತೆಯಲ್ಲಿ ಲಗ್ನವಾಯಿತು. ಆಗ ಜೀವ ಬ್ರಹ್ಮೈಕ್ಯ ಯೋಗಾಗ್ನಿಯ ಉಪಾಸನೆ ಆರಂಭಿಸಿದರು ।।೧೨೨।।

ಶ್ಲೋಕಾರ್ಥ :- ಕೆಲವರು ದೇವತಾ ಪ್ರಿಯಕರವಾದ ಯಜ್ಞಗಳನ್ನು ಆಚರಿಸುತ್ತಾರೆ. ಮತ್ತೆ ಕೆಲವರು ಬ್ರಹ್ಮವೆಂಬ ಅಗ್ನಿಯಲ್ಲಿ ಜೀವನವನ್ನು ಹೋಮ ಮಾಡುತ್ತಾರೆ. ಅಂದರೆ ತಮ್ಮ ಆತ್ಮನನ್ನು ಬ್ರಹ್ಮವೆಂದು ತಿಳಿಯುತ್ತಾರೆಂದರ್ಥ ।।೨೫।।

ಮತ್ತು ಹಗಲು ರಾತ್ರಿ ಯಜ್ಞ ಮಾಡುವವರು ಗುರು ವಾಕ್ಯರೂಪ ಅಗ್ನಿಯಲ್ಲಿ ಮನಸ್ಸಿನೊಂದಿಗೆ ಅಜ್ಞಾನದ ಹವನ ಮಾಡಿದರು ।।೧೨೩।।

ತಿಹೀ ಯೋಗಾಗ್ನಿಕೀ ಯಜಿಜೇ । ತೋ ದೈವಯಜ್ಞು ಮ್ಹಣಿಜೇ । ಜೇಣೇ ಆತ್ಮಸುಖ ಕಾಮಿಜೇ । ಪಂಡುಕುಮರಾ ।೧೨೪॥ ಆತಾ ಅವಧಾರೀ ಸಾಂಗೈನ ಆಣಿಕ । ಜೇ ಬ್ರಹ್ಮಾಗ್ನೀ ಸಾಗ್ನಿಕ । ತಯಾಂತೇ ಯಜ್ಞೇಂಚಿ ಯಜ್ಞು ದೇಖ । ಉಪಾಸಿಜೇ ।೧೨೫॥

ಶ್ರೋತ್ರಾದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।
ಶಬ್ದಾದೀನ್ ವಿಷಯಾನನ್ಯೇ ಇಂದ್ರಿಯಾಗ್ನಿಷು ಜುಹ್ವತಿ ।೨೬॥

ಏಕ ಸಂಯಮಾಗ್ನಿಹೋತ್ರೀ । ತೇ ಯುಕ್ತಿತ್ರಯಾಚ್ಯಾ ಮಂತ್ರೀ । ಯಜನ ಕರಿತೀ ಪವಿತ್ರೀ । ಇಂದ್ರಿಯದ್ರವ್ಯೀ ।೧೨೬॥ ಏಕಾ ವೈರಾಗ್ಯ ರವೀ ವಿವಳೇ ।ತವ ಸಂಯತೀ ವಿಹಾರ ಕೇಲೇ । ತೇಥ ಅಪಾವೃತ ಜಾಹಲೇ । ಇಂದ್ರಿಯಾನಳ ।೧೨೭॥ ತಿಹೀ ವಿರಕ್ತೀಚೀ ಜ್ವಾಳಾ ಘೇತಲೀ । ತವ ವಿಕಾರಾಂಚೀ ಇಂಧನೇ ಪಳಿಪಲೀ । ತೇಥ ಆಶಾಧೂಮೇ ಸಾಂಡಿಲೀ । ಪಾಚಹೀ ಕುಂಡೇ ।೧೨೮॥ ಮಗ ವಾಕ್ಯವಿಧೀಚಿಯಾ ನಿರವಡೀ । ವಿಷಯ ಆಹುತೀ ಉದಂಡೀ । ಹವನ ಕೇಲೇ ಕುಂಡೀ । ಇಂದ್ರಿಯಾಗ್ನೀಚ್ಯಾ ।೧೨೯॥

ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ ।
ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ।೨೭॥

ಏಕೀ ಯಯಾಪರೀ ಪಾರ್ಥಾ । ದೋಷು ಕ್ಷಾಳಲೇ ಸರ್ವಥಾ । ಆಣಿಕೀ ಹೃದಯಾರಣೀ ಮಂಥಾ । ವಿವೇಕು ಕೇಲಾ ।೧೩೦॥ ತೋ ಉಪಶಮೇ ನಿಹಟಿಲಾ । ಧೈರ್ಯೇವರೀ ದಾಟಿಲಾ । ಗುರುವಾಕ್ಯೇ ಕಾಢಿಲಾ । ಬಳಕಟಪಣೇ ।೧೩೧॥ ಐಸೇ ಸಮರಸೇ ಮಥನ ಕೇಲೇ । ತೇಥ ಝಡಕರೀ ಕಾಜಾ ಆಲೇ । ಜೇ ಉಜ್ಜೀವನ ಜಾಹಲೇ । ಜ್ಞಾನಾಗ್ನೀಚೇ ।೧೩೨॥ ಪಹಿಲಾ ಋದ್ಧಿಸಿದ್ಧೀಂಚಾ ಸಂಭ್ರಮು । ತೋ ನಿವರ್ತೋನಿ ಗೇಲಾ ಧೂಮು । ಮಗ ಪ್ರಗಟಲಾ ಸೂಕ್ಷ್ಮು । ವಿಸ್ಫುಲಿಂಗು ।೧೩೩॥ ತಯಾ ಮನಾಚೇ ಮೊಕಳೇ । ತೇಚಿ ಪೇಟವಣ ಘಾತಲೇ । ಜೇ ಯಮನಿಯಮೀ ಹಳುವಾರಲೇ । ಆಇತೇ ಹೋತೇ ।೧೩೪॥ ತೇಣೇ ಸಾದುಕಪಣೇ ಜ್ವಾಳಾ ಸಮೃದ್ಧಾ । ಮಗ ವಾಸನಾಂತರಾಚಿಯಾ ಸಮಿಧಾ । ಸ್ನೇಹೇಂಸಿ ನಾನಾವಿಧಾ । ಜಾಳಿಲಿಯಾ ।೧೩೫॥ ತೇಥ ಸೋಹಂಮಂತ್ರೇ ದೀಕ್ಷಿತೀ । ಇಂದ್ರಿಯಕರ್ಮಾಚ್ಯಾ ಆಹುತೀ । ತಿಯೇ ಜ್ಞಾನಾವಳೀ ಪ್ರದೀಪ್ತೀ । ದಿಧಲಿಯಾ ।೧೩೬॥

ಅರ್ಜುನಾ, ಯಾರಿಗೆ ಆತ್ಮಸುಖದ ಇಚ್ಛೆ ಇದೆಯೋ ಅವರೇ ಈ ಯೋಗಾಗ್ನಿಯ ಯಜನ ಮಾಡಬೇಕು. ಇದಕ್ಕೆ ದೈವಯಜ್ಞ ಎಂದು ಕರೆಯುವರು ॥೧೨೪॥

ಈಗ ಬ್ರಹ್ಮಾಗ್ನಿಯ ಅಗ್ನಿಹೋತ್ರಿಗಳು ಸ್ವಕರ್ಮದಿಂದ ಈಶ್ವರಾಧನೆ ಮಾಡುವರು. ಅದರ ವಿಷಯಕ್ಕೆ ವರ್ಣಿಸುವೆ ಕೇಳು ॥೧೨೫॥

ಶ್ಲೋಕಾರ್ಥ :- ಮತ್ತೆ ಕೆಲವರು ಶ್ರೋತ್ರಾದಿ ಇಂದ್ರಿಯಗಳನ್ನು ಸಂಯಮವೆಂಬ ಅಗ್ನಿಯಲ್ಲಿ ಹೋಮ ಮಾಡುತ್ತಾರೆ. (ಇಂದ್ರಿಯ ಸಂಯಮ) ಇನ್ನು ಕೆಲವರು ಶಾಬ್ದಾದಿ ವಿಷಯಗಳನ್ನು ಇಂದ್ರಿಯಗಳೆಂಬ ಅಗ್ನಿಯಲ್ಲಿ ಹೋಮ ಮಾಡುತ್ತಾರೆ (ಯೋಗ್ಯ ರೀತಿಯಲ್ಲಿ ವಿಷಯೋಪ ಭೋಗ) ॥೨೬॥

ಕೆಲವರು ಆತ್ಮಸಂಯಮರೂಪ ಅಗ್ನಿಯಲ್ಲಿ ಹೋಮ ಮಾಡುವವರು ಕಾಯಿಕ, ವಾಚಿಕ ಮತ್ತು ಮಾನಸಿಕ ಈ ಮೂರು ಯುಕ್ತಿ ಮಂತ್ರಗಳಿಂದ ಪವಿತ್ರ ಇಂದ್ರಿಯರೂಪ ದ್ರವ್ಯದಿಂದ ಹವನ ಮಾಡುವರು ॥೧೨೬॥

ಕೆಲವರು ವೈರಾಗ್ಯರೂಪ ಸೂರ್ಯನು ಉದಯಿಸಿದಾಗ ಸಂಯಮಾಗ್ನಿಯ ಉದ್ಧರಣ ಮಾಡಿ ಅದು ಪ್ರಜ್ವಲಿಸಿದಾಗ ಇಂದ್ರಿಯರೂಪ ಅಗ್ನಿಯನ್ನು ಜ್ಞಾನದಿಂದ ಹೊತ್ತಿಸುವರು ॥೧೨೭॥

ಆ ಇಂದ್ರಿಯಾಗ್ನಿಯಿಂದ ವೈರಾಗ್ಯರೂಪ ಜ್ವಾಲೆಯಲ್ಲಿ ವಿಷಯರೂಪ ಕಟ್ಟಿಗೆಗಳು ಹೊತ್ತಿದವು. ಆಗ ಜ್ಞಾನೇಂದ್ರಿಯಗಳ ಐದು ವಿಷಯಗಳ ಕುಂಡಗಳಿಂದ ಆಶಾರೂಪ ಹೊಗೆಯು ಹೊರಹೋಯಿತು ॥೧೨೮॥

ಆಗ ವೇದಾಂತದ ಹೇಳಿದ ವಿಧಿಯಿಂದ ಇಂದ್ರಿಯ ರೂಪ ಅಗ್ನಿಯು ಕುಂಡದಲ್ಲಿ ಹೊತ್ತಿಕೊಂಡಾಗ ವಿಷಯಗಳ ದೊಡ್ಡ ಆಹುತಿ ಕೊಟ್ಟರು॥೧೨೯॥

ಶ್ಲೋಕಾರ್ಥ :- ಮತ್ತೆ ಕೆಲವರು ಸಮಸ್ತ ಇಂದ್ರಿಯ ವ್ಯಾಪಾರಗಳನ್ನೂ, ಪ್ರಾಣ ವ್ಯಾಪಾರವನ್ನೂ, ಜ್ಞಾನ ಪ್ರದೀಪ್ತವಾದ ಆತ್ಮಾನುಸಂಧಾನವೆಂಬ ಅಗ್ನಿಯಲ್ಲಿ ಹೋಮ ಮಾಡುತ್ತಾರೆ ॥೨೭॥

ಪಾರ್ಥಾ, ಇದರಂತೆ ಕೆಲವರು ತಮ್ಮ ಎಲ್ಲ ದೋಷ ಗಳನ್ನು ತೊಳೆದುಕೊಂಡರು ಮತ್ತು ಹೃದಯ ರೂಪ ಅರಣಿ (ಕಟ್ಟಿಗೆ) ಮೇಲೆ ವಿಚಾರರೂಪ ಮಂಥಾ (ಅರೆಯುವ ಕಟ್ಟಿಗೆ) ಮಾಡಿದರು ॥೧೩೦॥

ಅವರು ಧೈರ್ಯರೂಪದಿಂದ ಒತ್ತಿ ಮತ್ತು ಶಾಂತಿ ರೂಪದಿಂದ ಹಗ್ಗದಿಂದ ಕಡೆದು ಗುರುರೂಪ ಮಂತ್ರದಿಂದ ಮಂಥನ ಮಾಡಿದರು ॥೧೩೧॥

ಈ ಪ್ರಕಾರವಾಗಿ ಎಲ್ಲ ವೃತ್ತಿಗಳಿಂದ ಐಕ್ಯಗೊಳಿಸಿ ಮಂಥಿಸಿದಾಗ ಅಲ್ಲಿ ತತ್ಕಾಲದಲ್ಲಿ ಜ್ಞಾನಾಗ್ನಿಯು ಪ್ರಜ್ವಲಿತವಾಯಿತು ॥೧೩೨॥

ಆಗ ಪ್ರಥಮವಾಗಿ ಋದ್ಧಿ ಸಿದ್ಧಿ ಮೋಹವು ಇದುವೇ ಹುಟ್ಟಿದ ಹೊಗೆಯು ಇಲ್ಲದಂತಾಗಿ ಅಲ್ಲಿ ಸೂಕ್ಷ್ಮವಾದ ಅಗ್ನಿ ಕಿಡಿ ಉತ್ಪನ್ನವಾಯಿತು ॥೧೩೩॥

ಶಮದಮದಿಂದ ಶುದ್ಧವಾದ ಹಗುರವಾದ ನಿರ್ದೋಷ ಮನವೆಂಬ ಒಣಗಿದ ಕಟ್ಟಿಗೆಗಳನ್ನು ಅದರಲ್ಲಿ ಅಗ್ನಿ ಹೊತ್ತಿ ಸಲಿಕ್ಕೆ ಹಾಕಿದರು ॥೧೩೪॥

ಇದರ ಸಹಾಯದಿಂದ ದೊಡ್ಡ ಅಗ್ನಿಯು ಉತ್ಪನ್ನ ವಾಯಿತು. ಆಗ ವಾಸನಾರೂಪ ''ಸಮಿಧಾ'' ಅನೇಕ ಪ್ರಕಾರದ ಮೋಹರೂಪ ''ತುಪ್ಪ''ವನ್ನು ಹಾಕಿ ಸುಟ್ಟರು ॥೧೩೫॥

ತದನಂತರ ಜೀವರೂಪ ದೀಕ್ಷಿತನು ಜ್ಞಾನರೂಪ ಪ್ರದೀಪ್ತಗೊಂಡ ಅಗ್ನಿಯಲ್ಲಿ ಇಂದ್ರಿಯ ಕರ್ಮಗಳನ್ನು ಆಹುತಿ ಮಾಡಿದನು ॥೧೩೬॥

ಪಾಠೀ ಪ್ರಾಣಕ್ರಿಯೇಚಿಯೇ ಶ್ರುವೇನಿಶೀ । ಪೂರ್ಣಾಹುತೀ ಪಡಲೀ ಹುತಾಶೀ । ತೇಥ ಅವಭೃತ ಸಮರಸೀ । ಸಹಜೇ ಜಹಾಲೇ ।।೧೩೭।। ಮಗ ಆತ್ಮ ಬೋಧೀಚೇ ಸುಖ । ಜೇ ಸಂಯಮಾಗ್ನೀಚೇ ಹುತಶೇಷ । ತೋಚಿ ಪುರೋಡಾಶು ದೇಖ । ಘೇತಲಾ ತಿಹೀ ।।೧೩೮।। ಏಕ ಐಶಿಯಾ ಇಹೀ ಯಜನೀ । ಮುಕ್ತ ತೇ ಜಾಹಲೇ ತ್ರಿಭುವನೀ । ಯಾ ಯಜ್ಞಕ್ರಿಯಾ ತರೀ ಆನಾನೀ । ಪರಿ ಪ್ರಾಪ್ಯ ತೇ ಏಕ ।।೧೩೯।।

ದ್ರವ್ಯಯಜ್ಞಾಸ್ತಪೋಯಜ್ಞಾ: ಯೋಗಯಜ್ಞಾಸ್ತಥಾऽಪರೇ ।
ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ।।೨೮।।

ಏಕ ದ್ರವ್ಯಯಜ್ಞು ಮ್ಹಣಿಪತೀ । ಏಕ ತಪಸಾಮುಗ್ರೀಯಾ ನಿಪಜವಿತೀ । ಏಕ ಯೋಗಯಾಗುಹೀ ಆಹಾತೀ । ಜೇ ಸಾಂಗಿತಲೇ ।।೧೪೦।। ಏಕೀ ಶಬ್ದೀ ಶಬ್ದು ಯಜಿಜೇ । ತೋ ವಾಗ್ಯಜ್ಞು ಮ್ಹಣಿಜೇ । ಜ್ಞಾನೇ ಜ್ಞೇಯ ಗಮಿಜೇ । ತೋ ಜ್ಞಾನಯಜ್ಞು ।।೧೪೧।। ಹೇ ಅರ್ಜುನಾ ಸಕಳ ಕುವಾಡೇ । ಜೇ ಅನುಷ್ಠಿತಾ ಅತಿಸಾಂಕಡೇ । ಪರೀ ಜಿತೇಂದ್ರಿಯಾಸೀಚಿ ಘಡೇ । ಯೋಗ್ಯತಾವಶೇ ।।೧೪೨।। ತೇ ಪ್ರವೀಣ ತೇಥ ಭಲೇ । ಆಣಿ ಯೋಗಸಮೃದ್ಧಿ ಆಥಿಲೇ । ಮ್ಹಣೌನಿ ಆಪಣಪಾ ತಿಹೀ ಕೇಲೇ । ಆತ್ಮ ಹವನ ।।೧೪೩।।

ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇऽಪಾನಂ ತಥಾಪರೇ ।
ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ ।।೨೯।।

ಮಗ ಅಪಾನಾಗ್ನಿಚೇನಿ ಮುಖೀ । ಪ್ರಾಣದ್ರವ್ಯೇ ದೇಖೀ । ಹವನ ಕೇಲೇ ಏಕೀ । ಅಭ್ಯಾಸಯೋಗೇ ।।೧೪೪।। ಏಕ ಅಪಾನು ಪ್ರಾಣೀ ಅರ್ಪಿತೀ । ಏಕ ದೋಹೀತೇಹೀ ನಿರುಂಧಿತೀ । ತೇ ಪ್ರಾಣಾಯಾಮೀ ಮ್ಹಣಿಪತೀ । ಪಂಡುಕುಮರಾ ।।೧೪೫।।

ಅಪರೇ ನಿಯತಾಹಾರಾಃ ಪ್ರಾಣಾನ್ ಪ್ರಾಣೇಷು ಜುಹ್ವತಿ ।
ಸರ್ವೇऽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ।।೩೦।।

ಏಕ ವಜ್ರಯೋಗಕ್ರಮೇ । ಸರ್ವಾಹಾರಸಂಯಮೇ । ಪ್ರಾಣೀ ಪ್ರಾಣು ಸಂಭ್ರಮೇ । ಹವನ ಕರಿತೀ ।।೧೪೬।। ಐಸೇ ಮೋಕ್ಷಕಾಮ ಸಕಳ । ಸಮಸ್ತ ಹೇ ಯಜನಶೀಳ । ಜಿಹೀ ಯಜ್ಞದ್ವಾರಾ ಮನೋಮಳ । ಕ್ಷಾಳಣ ಕೇಲೇ ।।೧೪೭।।

ಕೊನೆಗೆ ಪಂಚಪ್ರಾಣಗಳ ಕ್ರಿಯೆ ಎಂಬ ಯಜ್ಞ ಸಾಹಿತ್ಯಗಳನ್ನು "ಸ್ತ್ರುವಾ" ಎಂಬ ಯಜ್ಞ ಪಾತ್ರೆ ಸಹಿತವಾಗಿ ಪೂರ್ಣಾಹುತಿ ಕೊಟ್ಟ ಮೇಲೆ ಅವಭೃತ ಸ್ನಾನವು ಸಹಜವಾಗಿ ಸಾಧಿಸಿತು ||೧೩೭||

ಸಂಯಮಾಗ್ನಿಯಲ್ಲಿ ಇಂದ್ರಿಯಾದಿಕ ಹೋಮ ದ್ರವ್ಯಗಳನ್ನು ಆಹುತಿ ಕೊಟ್ಟು ಉಳಿದ ಆತ್ಮಸುಖ ಅದುವೆ "ಪುರೋಡಾಶ" ( ಉಳಿದ ಪ್ರಸಾದ)ವನ್ನು ಸ್ವೀಕರಿಸಿದರು ||೧೩೮||

ಈ ಪ್ರಕಾರವಾಗಿ ಕೆಲವರು ಯಜ್ಞವನ್ನು ಮಾಡಿ ಮೂರು ಲೋಕಗಳಲ್ಲಿ ಮುಕ್ತರಾದರು. ಈ ಯಜ್ಞಕ್ರಿಯೆಗಳು ನಾನಾ ಪ್ರಕಾರಗಳಾಗಿದ್ದರೂ ಫಲ ಮಾತ್ರ ಒಂದೇಯಾಗಿರುವುದು ||೧೩೯||

ಶ್ಲೋಕಾರ್ಥ :- ಆಗ್ರಹದಿಂದ ಕಠೋರ ವ್ರತಗಳನ್ನು ಆಚರಿಸುವ ಸಾಧಕರು ಕೆಲವರು ದ್ರವ್ಯಯಜ್ಞಗಳನ್ನು, ತಪೋಯಜ್ಞಗಳನ್ನು, ಯೋಗ ಯಜ್ಞಗಳನ್ನು ಸ್ವಾಧ್ಯಾಯ ಯಜ್ಞಗಳನ್ನು ಜ್ಞಾನ ಯಜ್ಞಗಳನ್ನು ಆಚರಿಸುತ್ತಾರೆ ||೨೮||

ಈಗ ಹೇಳಿದ ಯೋಗಗಳಲ್ಲಿ ಒಂದಕ್ಕೆ "ದ್ರವ್ಯ ಯಜ್ಞ" ಎನ್ನುವರು. ಇನ್ನೊಂದಕ್ಕೆ "ತಪೋಯಜ್ಞ" ಎನ್ನುವರು. ಮತ್ತೊಂದಕ್ಕೆ "ಯೋಗ ಯಜ್ಞ" ಎನ್ನುವರು ||೧೪೦||

ಯಾವುದರಲ್ಲಿ ಶಬ್ದದಿಂದ ಶಬ್ದದ ಹೋಮವಾಗುತ್ತದೆಯೋ ಅದಕ್ಕೆ "ವಾಗ್ಯಜ್ಞ" ಎಂದು ಹೇಳುವರು ಮತ್ತು ಯಾವ ಯಜ್ಞದಲ್ಲಿ ಜ್ಞಾನದಿಂದ ಬ್ರಹ್ಮ ದೊರಕುವುದೋ ಅದಕ್ಕೆ "ಜ್ಞಾನಯಜ್ಞ" ಎಂದು ಹೇಳುವರು ||೧೪೧||

ಅರ್ಜುನಾ, ಈ ಎಲ್ಲ ಯಜ್ಞಗಳು ಬಹಳ ಕಠಿಣವಾಗಿ ಇರುವುವು. ಆಚರಿಸಲು ಬಹಳ ಕಷ್ಟಕರವಾಗಿರುವುವು. ಆದರೆ ಇಂದ್ರಿಯಗಳನ್ನು ಜಯಿಸಿದವರಿಗೆ ಮಾತ್ರ ಯೋಗ್ಯತೆಯಂತೆ ಸಾಧಿಸುವುದು ||೧೪೨||

ಯೋಗ ಸಮೃದ್ಧಿಯಿಂದ ಸುಸಂಪನ್ನನಾದ ಪುರುಷನು ಮಾತ್ರ ಈ ಯಜ್ಞ ಮಾಡಲು ಶಕ್ಯನಾಗಿರುವನು. ಏಕೆಂದರೆ ಆತನು ತನ್ನ ಜೀವವನ್ನು ಆತ್ಮನಲ್ಲಿ ಹವನ ಮಾಡಿರುವನು ||೧೪೩||

ಶ್ಲೋಕಾರ್ಥ :- ಇನ್ನೂ ಕೆಲವರು ಅಪಾನದಲ್ಲಿ ಪ್ರಾಣವನ್ನು, ಪ್ರಾಣದಲ್ಲಿ ಅಪಾನವನ್ನು ಹೋಮ ಮಾಡುತ್ತಾರೆ. ಬೇರೆ ಕೆಲವರು ಪ್ರಾಣ ಅಪಾನಗಳನ್ನು ಬಂಧಿಸಿ ಪ್ರಾಣಾಯಾಮ ಪರಾಯಣರಾಗುತ್ತಾರೆ ||೨೯||

ಕೆಲವು ಯೋಗಿಗಳು ಅಭ್ಯಾಸ ಯೋಗದಿಂದ ಅಪಾನ ವಾಯುರೂಪ ಅಗ್ನಿಯೊಳಗೆ ಪ್ರಾಣ ವಾಯುರೂಪ ದ್ರವ್ಯದಿಂದ ಹವನ ಮಾಡುವರು ||೧೪೪||

ಪಂಡು ಕುಮಾರನೇ, ಕೆಲವರು ಅಪಾನ ವಾಯುವನ್ನು ಪ್ರಾಣವಾಯುವಿನಲ್ಲಿ ಕೂಡಿಸುವರು ಮತ್ತು ಕೆಲವರು ಎರಡೂ ವಾಯುಗಳ ನಿರೋಧ ಮಾಡುವರು. ಇವರಿಗೆ ಪ್ರಾಣಾಯಾಮಿಗಳೆನ್ನುವರು ||೧೪೫||

ಶ್ಲೋಕಾರ್ಥ :- ಮತ್ತೆ ಕೆಲವರು ಆಹಾರ ನಿಯಮವುಳ್ಳವರಾಗಿ ಪ್ರಾಣಗಳನ್ನು ಪ್ರಾಣ ವಾಯುವಿನಲ್ಲಿ ಹೋಮ ಮಾಡುತ್ತಾರೆ. ಮೇಲೆ ಹೇಳಿದ ಯಜ್ಞವೇತ್ತರೆಲ್ಲರೂ, ಆಯಾ ಯಜ್ಞಗಳಿಂದ ತಮ್ಮ ಪಾಪವನ್ನು ಕಳೆದುಕೊಳ್ಳುತ್ತಾರೆ ||೩೦||

ಕೆಲವರು ವಜ್ರಾಸನಾದಿ ಹಠಯೋಗ ಕ್ರಮದಿಂದ ಎಲ್ಲ ಪ್ರಕಾರದ ಆಹಾರ ಸಂಯಮ ಮಾಡಿ ಪ್ರಾಣರೂಪ ಕುಂಡಲಿನಿಯಲ್ಲಿ ಪ್ರಾಣವನ್ನು ಅತೀ ಸಾಹಸದಿಂದ ಹವನ ಮಾಡುವರು ||೧೪೬||

ಈ ಪ್ರಕಾರವಾಗಿ ಮೋಕ್ಷ ಪ್ರಾಪ್ತಿಯನ್ನು ಇಚ್ಛಿಸುವವರು ಈಗ ಹೇಳಿದ ಯಜ್ಞಕರ್ತರಿರುವರು. ಇವರು ಈ ಯಜ್ಞಗಳಿಂದ ಮನಸ್ಸಿಗೆ ಮಲೀನತನ (ಕಾಮ ಕ್ರೋಧ) ವನ್ನು ಇಲ್ಲದಂತೆ ಮಾಡುವರು ||೧೪೭||

ಜಯಾ ಅವಿದ್ಯಾಜಾತ ಜಾಳಿತಾ । ಜೇ ಉರಲೇ ನಿಜಸ್ವಭಾವತಾ । ಜೇಥ ಅಗ್ನಿ ಆಣಿ ಹೋತಾ । ಉರೇಚಿನಾ ॥೧೪೮॥ ಜೇಥ ಯಜಿತಯಾಚಾ ಕಾಮು ಪುರೇ । ಯಜ್ಞೀಂಚೇ ವಿಧಾನ ಸರೇ । ಮಾಗುತೇ ಜೇಥೂನಿ ವೋಸರೇ । ಕ್ರಿಯಾಜಾತ ॥೧೪೯॥ ವಿಚಾರ ಜೇಥ ನ ರಿಗೇ । ಹೇತು ಜೇಥ ನ ನಿಗೇ । ಜೇ ದ್ವೈತದೋಷಸಂಗೇ । ಸಿಂಪೇಚಿನಾ ॥೧೫೦॥

ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮ ಸನಾತನಮ್ ।
ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥೩೧॥

ಐಸೇ ಅನಾದಿಸಿದ್ಧ ಚೋಖಟ । ಜೇ ಜ್ಞಾನ ಯಜ್ಞಾವಶಿಷ್ಟ । ತೇ ಸೇವಿತೀ ಬ್ರಹ್ಮನಿಷ್ಠ । ಬ್ರಹ್ಮಾಹಂಮಂತ್ರೇ ॥೧೫೧॥ ಐಸೇ ಶೇಷಾಮೃತೇ ಧಾಲೇ । ಕೀ ಅಮರ್ತ್ಯಭಾವಾ ಆಲೇ । ಮ್ಹಣೌನಿ ಬ್ರಹ್ಮತೇ ಜಹಾಲೇ । ಅನಾಯಾಸೇ ॥೧೫೨॥ ಯೇರಾ ವಿರಕ್ತಿ ಮಾಳ ನ ಘಾಲೀಚಿ । ಜಯಾ ಸಂಯಮಾಗ್ನೀಚೀ ಸೇವಾ ನ ಘಡೇಚಿ । ಜೇ ಯೋಗಯಾಗು ನ ಕರಿತೀಚಿ । ಜನ್ಮಲೇ ಸಾತೇ ॥೧೫೩॥ ಜಯಾಂಚೇ ಐಹಿಕ ಧಡ ನಾಹೀ । ತಯಾಂಚೇ ಪರತ್ರ ಪುಸಸೀ ಕಾಈ । ಮ್ಹಣೌನಿ ಅಸೋ ಹೇ ಗೋಠೀ ಪಾಹೀ । ಪಂಡುಕುಮರಾ ॥೧೫೪॥

ಏವಂ ಬಹುವಿಧಾ ಯಜ್ಞಾಃ ವಿತತಾ ಬ್ರಹ್ಮಣೋ ಮುಖೇ ।
ಕರ್ಮಜಾನ್ ವಿದ್ಧಿ ತಾನ್ಸರ್ವಾನ್ ಏವಂ ಜ್ಞಾತ್ವಾ ವಿಮೋಕ್ಷ್ಯಸೇ ॥೩೨॥

ಐಸೇ ಬಹೂತೀ ಪರೀ ಅನೇಗ । ಜೇ ಸಾಂಗಿತಲೇ ತುಜ ಕಾ ಯಾಗ । ತೇ ವಿಸ್ತಾರೂನಿ ವೇದೇಚಿ ಚಾಂಗ । ಮ್ಹಣಿತಲೇ ಆಹಾತೀ ॥೧೫೫॥ ಪರೀ ತೇಣೇ ವಿಸ್ತಾರೇ ಕಾಯ ಕರಾವೇ । ಹೇಂಚಿ ಕರ್ಮಸಿದ್ಧ ಜಾಣಾವೇ । ಯೇತುಲೇನಿ ಕರ್ಮಬಂಧು ಸ್ವಭಾವೇ । ಪಾವೇಲ ನಾ ॥೧೫೬॥

ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ ।
ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥೩೩॥

ಅರ್ಜುನಾ ವೇದು ಜಯಾಂಚೇ ಮೂಳ । ಜೇ ಕ್ರಿಯಾವಿಶೇಷೇ ಸ್ಥೂಳ । ಜಯಾ ನವ್ಹಾಳಿಯೇಚೇ ಫಳ । ಸ್ವರ್ಗಸುಖ ॥೧೫೭॥ ತೇ ದ್ರವ್ಯಾದಿಯಾಗು ಕೀರ ಹೋತೀ । ಪರೀ ಜ್ಞಾನಯಜ್ಞಾಚೀ ಸರೀ ನ ಪವತೀ । ಜೈಸೀ ತಾರಾತೇಜಸಂಪತ್ತೀ । ದಿನಕರಾಪಾಶೀ ॥೧೫೮॥

ಈ ಪ್ರಕಾರವಾಗಿ ಎಲ್ಲ ಅಜ್ಞಾನವನ್ನು ಸುಟ್ಟಿರುವುದರಿಂದ ಆತನಿಗೆ ಸಹಜವಾಗಿ ಶುದ್ಧ ಸ್ವರೂಪವು ಉಳಿಯುತ್ತದೆ. ಹಾಗೂ ಅಗ್ನಿ ಮತ್ತು ಯಜ್ಞ ಮಾಡುವವನು ಎಂಬ ದ್ವೈತಭಾವವಿರುವುದಿಲ್ಲ ॥೧೪೮॥

ಯಜ್ಞ ಮಾಡುವವರ ಇಚ್ಛೆಯು ಪೂರ್ಣಗೊಳ್ಳುತ್ತದೆ, ಯಜ್ಞ ವಿಧಾನಗಳು ಮುಗಿಯುತ್ತವೆ. ಎಲ್ಲ ಕ್ರಿಯೆಗಳು ಆ ಸ್ಥಿತಿಯಿಂದ ಕಡಿಮೆಯಾಗುತ್ತ ಹೋಗುತ್ತವೆ ॥೧೪೯॥

ಮತ್ತು ಅಲ್ಲಿ ವಿಚಾರಗಳ ಪ್ರವೇಶವಾಗುವುದಿಲ್ಲ. ಕಾಮನೆಗಳ ಸ್ಪರ್ಶವಾಗುವುದಿಲ್ಲ. ಹಾಗೂ ದ್ವೈತದೋಷಗಳು ಸಹ ಮುಟ್ಟುವುದಿಲ್ಲ ॥೧೫೦॥

ಶ್ಲೋಕಾರ್ಥ :- ಕುರುಕುಲೋತ್ತಮಾ! ಯಜ್ಞವನ್ನು ಮಾಡಿ ಮಿಕ್ಕ ಆಹಾರವು ಅಮೃತಕ್ಕೆ ಸಮಾನವು. ಅದನ್ನು ಭುಂಜಿಸುವವರು ಸನಾತನ ಬ್ರಹ್ಮವನ್ನು ಪಡೆಯುತ್ತಾರೆ. ಯಾವ ಯಜ್ಞವನ್ನು ಮಾಡದವನಿಗೆ ಈ ಲೋಕವೇ ಇಲ್ಲವೆಂದ ಮೇಲೆ ಪರಲೋಕದ ಮಾತೇಕೇ ? ॥೩೧॥

ಈ ಪ್ರಕಾರದ ಅನಾದಿಸಿದ್ಧ ಹಾಗೂ ಶುದ್ಧ, ಜ್ಞಾನ ರೂಪ ಯಜ್ಞದಲ್ಲಿ ಉಳಿದಿರುವುದು ಬ್ರಹ್ಮವಾಗಿರುತ್ತದೆ. ಈ ಜ್ಞಾನರೂಪ ಬ್ರಹ್ಮವನ್ನು ಬ್ರಹ್ಮನಿಷ್ಠ ಪುರುಷರು ''ನಾನು ಬ್ರಹ್ಮನಿದ್ದೇನೆ'' ಎಂಬ ಮಂತ್ರದಿಂದ ಸೇವಿಸುವರು ॥೧೫೧॥

ಈ ಪ್ರಕಾರವಾಗಿ ಅವರು ಯಜ್ಞದಲ್ಲಿ ಉಳಿದ ಭಾಗ ಜ್ಞಾನರೂಪ ಅಮೃತವನ್ನು ಸೇವಿಸಿ ತೃಪ್ತರಾಗಿ ಅಮರರಾಗುವರು. ಅಂದರೆ ಅವರು ಸಹಜವಾಗಿ ಬ್ರಹ್ಮತ್ವವನ್ನು ಪಡೆಯುವರು ॥೧೫೨॥

ಜನ್ಮಕ್ಕೆ ಬಂದು ಯಾರಿಗೆ ಸಂಯಮಿ ರೂಪ ಅಗ್ನಿಯ ಸೇವೆ ಆಗುವುದಿಲ್ಲ ಹಾಗೂ ಯೋಗ, ಯಜ್ಞ ಯಾರಿಂದ ಆಗುವುದೇ ಇಲ್ಲ, ಯಾರಿಗೆ ವಿರಕ್ತಿಯು ಮಾಲೆ ಹಾಕುವುದಿಲ್ಲ ॥೧೫೩॥

ಅವರಿಗೆ ಇಹಲೋಕದಲ್ಲಿಯೇ ಸರಿ ಇರುವುದಿಲ್ಲ. ಪರಲೋಕದ ಮಾತೇನು ಕೇಳುವೆ ? ಆದ್ದರಿಂದ ಅರ್ಜುನಾ, ಈ ವ್ಯರ್ಥವಾದ ಮಾತು ಏತಕ್ಕೆ ಹೇಳಲಿ ? ॥೧೫೪॥

ಶ್ಲೋಕಾರ್ಥ :- ಈ ರೀತಿ ವೇದದಲ್ಲಿ ಮೊದಲೇ ಕರ್ಮಕಾಂಡದಲ್ಲಿ ನಾನಾವಿಧ ಯಜ್ಞಗಳನ್ನು ವಿಸ್ತಾರವಾಗಿ ವರ್ಣಿಸಿದೆ. ಅವು ಎಲ್ಲವೂ ಕರ್ಮಜನ್ಯಗಳೆಂದು ತಿಳಿದು ಅವುಗಳಿಂದ ಮುಕ್ತಿಯನ್ನು ಪಡೆಯುತ್ತೀಯೆ ॥೩೨॥

ಈ ಪ್ರಕಾರವಾಗಿ ನಿನಗೆ ಸಾಕಷ್ಟು ಪ್ರಕಾರಗಳ ಯೋಗಗಳನ್ನು ಹೇಳಿರುವೆನು. ಈ ಎಲ್ಲವನ್ನೂ ಮೂಲದಲ್ಲಿ ವೇದವು ಉತ್ತಮವಾಗಿ ವಿಸ್ತಾರವಾಗಿ ಹೇಳಿದೆ ॥೧೫೫॥

ಆದರೆ ವೇದದಲ್ಲಿನ ಅದರ ವಿಸ್ತಾರ ಕೇಳಿ ಮಾಡುವುದಾದರೂ ಏನು? ಈ ಎಲ್ಲ ಯಜ್ಞಗಳು ಕರ್ಮದಿಂದಲೇ ಉತ್ಪನ್ನವಾಗಿವೆ. ಇಷ್ಟು ತಿಳಿದುಕೊಂಡರೆ ಕರ್ಮದ ಬಾಧೆ ಯಾಗುವುದಿಲ್ಲ ॥೧೫೬॥

ಶ್ಲೋಕಾರ್ಥ :- ಪರಂತಪನಾದ ಹೇ ಅರ್ಜುನ! ಈ ದ್ರವ್ಯಯಜ್ಞಗಳಿಗಿಂತ ಜ್ಞಾನಯಜ್ಞವು ಶ್ರೇಷ್ಠ. ಎಲ್ಲಾ ಕರ್ಮಗಳಿಗೂ ಜ್ಞಾನವೇ ಪರಮಗಮ್ಯ ಸ್ಥಾನ ॥೩೩॥

ಅರ್ಜುನಾ, ಈ ಯಜ್ಞಗಳ ಮೂಲವು ವೇದವಾಗಿದೆ ಮತ್ತು ಅದರಲ್ಲಿ ಕ್ರಿಯೆಗಳ ಪರಿಶ್ರಮ ಬಹುವಾಗಿದೆ ಮತ್ತು ಅದರ ಪ್ರಥಮ ಫಲವು ಸ್ವರ್ಗವಾಗಿದೆ ॥೧೫೭॥

ದ್ರವ್ಯಯಜ್ಞಗಳಿರುವುದು ನಿಜ. ಆದರೆ ಸೂರ್ಯನ ಎದುರು ನಕ್ಷತ್ರಗಳ ತೇಜವು ಲೋಪವಾಗುವಂತೆ ಇವು ಜ್ಞಾನಯಜ್ಞದ ಸರಿಸಮಾನವಾಗಲಾರವು ॥೧೫೮॥

ದೇಖೈ ಪರಮಾತ್ಮ ಸುಖನಿಧಾನ । ಸಾಧಾವಯಾ ಯೋಗೀಜನ । ಜೇ ನ ವಿಸಂಬಿತೀ ಅಂಜನ । ಉನ್ಮೇಷನೇತ್ರೀ ।।೧೫೯।। ಜೇ ಧಾವಂತಯಾ ಕರ್ಮಾಚೀ ಲಾಣೀ । ನೈಷ್ಕರ್ಮ್ಯ ಬೋಧಾಚೀ ಖಾಣೀ । ಜೇ ಭುಕೇಲಿಯಾ ಧಣೀ । ಸಾಧನಾಚೀ ।।೧೬೦।। ಜೇಥ ಪ್ರವೃತ್ತಿ ಪಾಂಗುಳ ಜಾಹಲೀ । ತರ್ಕಾಚೀ ದಿಠೀ ಗೇಲೀ । ಜೇಣೇ ಇಂದ್ರಿಯೇ ವಿಸರಲೀ । ವಿಷಯಸಂಗು ।।೧೬೧।। ಮನಾಚೇ ಮನಪಣ ಗೇಲೇ । ಜೇಥ ಬೋಲಾಚೇ ಬೋಲಕೇಪಣ ಠೇಲೇ । ಜಯಾಮಾಜಿ ಸಾಂಪಡಲೇ । ಜ್ಞೇಯ ದಿಸೇ ।।೧೬೨।। ಜೇಥ ವೈರಾಗ್ಯಾಚಾ ಪಾಂಗು ಫಿಟೇ । ವಿವೇಕಾಚಾಹೀ ಸೋಸು ತುಟೇ । ಜೇಥ ನ ಪಾಹತಾ ಸಹಜ ಭೇಟೇ । ಆಪಣಪೇ ।।೧೬೩।।

ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ।।೩೪।।

ತೇ ಜ್ಞಾನ ಪೈಗಾ ಬರವೇ । ಜರೀ ಮನೀ ಆಥಿ ಆಣಾವೇ । ತರೀ ಸಂತಾ ಯಾ ಭಜಾವೇ । ಸರ್ವಸ್ವೇಸೀ ।।೧೬೪।। ಜೇ ಜ್ಞಾನಾಚಾ ಕುರುಠಾ । ತೇಥ ಸೇವಾ ಹಾ ದಾರವಂಠಾ । ತೋ ಸ್ವಾಧೀನ ಕರೀ ಸುಭಟಾ । ವೋಳಗೋನೀ ।।೧೬೫।। ತರೀ ತನುಮನುಜೀವೇ । ಚರಣಾಸೀ ಲಾಗಾವೇ । ಆಣಿ ಅಗರ್ವತಾ ಕರಾವೇ । ದಾಸ್ಯ ಸಕಳ ।।೧೬೬।। ಮಗ ಅಪೇಕ್ಷಿತ ಜೇ ಆಪುಲೇ । ತೇಹೀ ಸಾಂಗತೀ ಪುಸಿಲೇ । ಜೇಣೇ ಅಂತಃಕರಣ ಬೋಧಲೇ । ಸಂಕಲ್ಪಾ ನಯೇ ।।೧೬೭।।

ಯಜ್ಜ್ಞಾತ್ವಾ ನ ಪುನರ್ಮೋಹಂ ಏವಂ ಯಾಸ್ಯಸಿ ಪಾಂಡವ ।
ಯೇನ ಭೂತಾನ್ಯಶೇಷೇನ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ।।೩೫।।

ಜಯಾಚೇನಿ ವಾಕ್ಯ ಉಜಿವಡೇ । ಜಾಹಲೇ ಚಿತ್ತ ನಿಧಡೇ । ಬ್ರಹ್ಮಾಚೇನಿ ಪಾಡೇ । ನಿಃಶಂಕು ಹೋಯ ।।೧೬೮।। ತೇ ವೇಳಿ ಆಪಣಪೇ ಯಾ ಸಹಿತೇ । ಇಯೇ ಅಶೇಷೇಹೀ ಭೂತೇ । ಮಾಝ್ಯಾ ಸ್ವರೂಪೀ ಅಖಂಡಿತೇ । ದೇಖಸಿ ತೂ ।।೧೬೯।। ಐಸೇ ಜ್ಞಾನಪ್ರಕಾಶೇ ಪಾಹೇಲ । ತೈ ಮೋಹಾಂಧಕಾರು ಜಾಈಲ । ಜೈ ಗುರುಕೃಪಾ ಹೋಈಲ । ಪಾರ್ಥಾ ಗಾ ।।೧೭೦।।

ಯಾವ ಜ್ಞಾನಾಂಜನವನ್ನು ಕಣ್ಣಿನಲ್ಲಿ ಹಾಕಿಕೊಂಡು ಆತ್ಮಸುಖರೂಪ ನಿಧಿ ಪ್ರಾಪ್ತಿಗಾಗಿ ಯೋಗಿ ಜನರು ಹಗಲು ರಾತ್ರಿ ಜಾಗ್ರತರಾಗಿರುವರು ॥೧೫೯॥

ಯಾವ ಜ್ಞಾನವು ಆರಂಭಿಸಿದ ಕರ್ಮದ ಪ್ರಾಪ್ಯ ಸ್ಥಾನವಾಗಿದೆ. ಬ್ರಹ್ಮ ಬೋಧೆಯ ಖಣಿಯಾಗಿದೆ ಮತ್ತು ಬ್ರಹ್ಮ ಪ್ರಾಪ್ತಿಗಾಗಿ ಹಸಿದ ಸಾಧಕರ ತೃಪ್ತಿ ಸ್ಥಾನವಾಗಿದೆ ॥೧೬೦॥

ಅಲ್ಲಿ ಕರ್ಮದ ಪ್ರವೃತ್ತಿಯು ನಿಂತಿತು. ತರ್ಕದ ದೃಷ್ಟಿ ಹೋಯಿತು ಮತ್ತು ಇದರಿಂದ (ಜ್ಞಾನದಿಂದ) ಇಂದ್ರಿಯಗಳು ವಿಷಯ ಸೇವನೆಯನ್ನು ಮರೆತವು ॥೧೬೧॥

ಅಲ್ಲಿ ಮನಸ್ಸಿನ ಮನೆತನ ಹೋಯಿತು. ಅಲ್ಲಿ ಶಬ್ದಗಳ ಓಡಾಟ ನಿಂತಿತು ಮತ್ತು ಅಲ್ಲಿ ಜ್ಞೇಯ ಬ್ರಹ್ಮ ವ್ಯಾಪಿಸಿಕೊಂಡಿರುವುದು ಕಾಣುತ್ತದೆ ॥೧೬೨॥

ಅಲ್ಲಿ ವೈರಾಗ್ಯದ ಕಷ್ಟಪ್ರದ ಸ್ಥಿತಿಯು ಇಲ್ಲದಂತಾಗುವುದು. ವಿಚಾರ ಮಾಡುವ ಬಯಕೆ ಬಯಲಾಗುವುದು ಮತ್ತು ಯಾವ ಶ್ರಮವಿಲ್ಲದೇ ತನ್ನಷ್ಟಕ್ಕೆ ತಾನೇ ಆತ್ಮಜ್ಞಾನವಾಗುವುದು ॥೧೬೩॥

ಶ್ಲೋಕಾರ್ಥ :- ತತ್ತ್ವವೇತ್ತರಾದ ಆತ್ಮ ಜ್ಞಾನಿಗಳು ನಿನಗೆ ಈ ಜ್ಞಾನವನ್ನು ಉಪದೇಶ ಮಾಡಬಲ್ಲರು. ಅವರನ್ನು ಆಶ್ರಯಿಸಿ ಸೇವೆ ಮಾಡಿ ವಿನಯದಿಂದ ಪ್ರಶ್ನೆ ಮಾಡಿ ಅದನ್ನು ತಿಳಿದುಕೋ ॥೩೪॥

ಈ ಪ್ರಕಾರದ ಯಾವ ಸರ್ವಶ್ರೇಷ್ಠ ಜ್ಞಾನವು ನಿನಗೆ ಬೇಕಾದರೆ, ನೀನು (ಶ್ರೋತ್ರಿಯ ಬ್ರಹ್ಮನಿಷ್ಠ) ಸಂತರನ್ನು ಸರ್ವಭಾವದಿಂದ ಸೇವೆ ಮಾಡು ॥೧೬೪॥

ಈ ಸಂತರು ಜ್ಞಾನದ ಮನೆಯಾಗಿದ್ದು ಸೇವೆ ಧರ್ಮವು ಆ ಮನೆಯ ಹೊಸ್ತಿಲವಾಗಿರುವುದು. ಅದಕ್ಕಾಗಿ ಅರ್ಜುನಾ, ನೀನು ಆ ಸೇವೆ ಧರ್ಮವೆಂಬ ಹೊಸ್ತಿಲವನ್ನು ಸ್ವಾಧೀನಪಡಿಸಿಕೊ ॥೧೬೫॥

ಅಂದರೆ, ಸಂತರ ಸೇವೆಯನ್ನು ತನದಿಂದ ಮನದಿಂದ ಹಾಗೂ ಜೀವಭಾವದಿಂದ ಎಲ್ಲ ಪ್ರಕಾರದಿಂದ ಗರ್ವರಹಿತನಾಗಿ ಮಾಡುತ್ತ ಚರಣಸೇವೆಯನ್ನು ಮಾಡಬೇಕು ॥೧೬೬॥

(ಈ ಪ್ರಕಾರದ ಸೇವೆಯಿಂದ ಅವರು ಪ್ರಸನ್ನರಾದ ಮೇಲೆ) ಅವರ ಪ್ರಸನ್ನ ಸ್ಥಿತಿಯಲ್ಲಿ ಅಪೇಕ್ಷಿತ ಆತ್ಮ ಜ್ಞಾನದ ಬಗ್ಗೆ ಕೇಳಲು ಅವರು ಆ ಜ್ಞಾನವನ್ನು ಬೋಧಿಸುವರು. ಅವರ ಉಪದೇಶದಿಂದ ಅಂತಃಕರಣವು ಜ್ಞಾನಸಂಪನ್ನವಾಗಿ ಯಾವ ಸಂಶಯವೂ ಉಳಿಯುವುದಿಲ್ಲ ॥೧೬೭॥

ಶ್ಲೋಕಾರ್ಥ :- ಪಾಂಡು ಕುಮಾರಾ ! ಈ ಜ್ಞಾನವನ್ನು ತಿಳಿದುಕೊಂಡರೆ ನಿನಗೆ ಪುನಃ ಮೋಹವುಂಟಾಗುವುದಿಲ್ಲ. ಸಮಸ್ತ ಭೂತಗಳನ್ನು ಮೊದಲು ನಿನ್ನಲ್ಲಿಯೂ ನಂತರ ನನ್ನಲ್ಲಿಯೂ ನೋಡಬಲ್ಲೆ ॥೩೫॥

ಇವರ ಉಪದೇಶರೂಪ ಬೆಳಕಿನಿಂದ ಅಂತಃಕರಣವು ಬ್ರಹ್ಮಸ್ವರೂಪವಾಗಿ ನಿರ್ಭಯವೂ ನಿಃಸಂಶಯವೂ ಆಗುವುದು ॥೧೬೮॥

ಆಗ ನೀನು ನಿನ್ನ ಆತ್ಮ ಸಹ ಈ ಎಲ್ಲ ಜೀವಿಗಳನ್ನು ನನ್ನ ಸ್ವರೂಪವಾಗಿಯೇ ಕಾಣುವೆ ॥೧೬೯॥

ಪಾರ್ಥಾ, ಈ ಪ್ರಕಾರವಾಗಿ ಸದ್ಗುರುವಿನ ಕೃಪೆಯಾದಾಗ್ಗೆ ನಿನ್ನ ಅಂತಃಕರಣದಲ್ಲಿ ಜ್ಞಾನೋದಯವಾಗಿ ಮೋಹರೂಪ ಅಂಧಕಾರವು ತೊಲಗುವುದು ॥೧೭೦॥

ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ।
ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ।೩೬॥

ಜರೀ ಕಲ್ಮಷಾಚಾ ಆಗರು । ತೂ ಭ್ರಾಂತೀಚಾ ಸಾಗರು । ವ್ಯಾಮೋಹಾಚಾ ಡೋಂಗರು । ಹೋಊನೀ ಅಸಸೀ ।೧೭೧॥ ತರ್ಹೀ ಜ್ಞಾನಶಕ್ತಿಚೇನಿ ಪಾಡೇ । ಹೇ ಆಘವೇಂಚಿ ಗಾ ಥೋಕಡೇ । ಐಸೇ ಸಾಮರ್ಥ್ಯ ಅಸೇ ಚೋಖಡೇ । ಜ್ಞಾನೀ ಇಯೇ ।೧೭೨॥ ದೇಖೈ ವಿಶ್ವಭ್ರಮಾಐಸಾ । ಜೋ ಅಮೂರ್ತಾಚಾ ಕಡವಸಾ । ತೋ ಜಯಾಚಿಯಾ ಪ್ರಕಾಶಾ । ಪುರೇಚಿನಾ ।೧೭೩॥ ತಯಾ ಕಾಯಸೇ ಹೇ ಮನೋಮಳು । ಹೇ ಬೋಲತಾಂಚಿ ಅತಿ ಕಿಡಾಳು । ನಾಹೀ ಯೇಣೇ ಪಾಡೇ ಢಿಸಾಳು । ದುಜೇ ಜಗೀ ।೧೭೪॥

ಯಥೈಧಾಂಸಿ ಸಮಿದ್ಧೋಽಗ್ನಿಃ ಭಸ್ಮಸಾತ್ ಕುರುತೇಽರ್ಜುನ।
ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ।೩೭॥

ಸಾಂಗೈ ಭುವನತ್ರಯಾಚೀ ಕಾಜಳೀ । ಜೇ ಗಗನಾವಾಜಿ ಉಧವಲೀ । ತಿಯೇ ಪ್ರಳಯೀಂಚೇ ವಾಹಟುಳೀ । ಕಾಯ ಅಭ್ರಪುರೇ ? ।೧೭೫॥ ಕೀ ಪವನಾಚೇನಿ ಕೋಪೇ । ಪಾಣಿಯೇಂಚಿ ಜೋ ಪಳಿಪೇ । ತೋ ಪ್ರಳಯಾನಳು ದಡಪೇ । ತೃಣೇ ಕಾಷ್ಠೇ ಕಾಈ ।೧೭೬॥

ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ।
ತತ್ ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ।೩೮॥

ಮ್ಹಣೌನಿ ಅಸೋ ಹೇ ನ ಘಡೇ । ತೇ ವಿಚಾರಿತಾಂಚಿ ಅಸಂಗಡೇ । ಪುಢತೀ ಜ್ಞಾನಾಚೇನಿ ಪಾಡೇ । ಪವಿತ್ರ ನ ದಿಸೇ ।೧೭೭॥ ಏಥ ಜ್ಞಾನ ಹೇ ಉತ್ತಮ ಹೋಯೇ । ಆಣಿಕಹೀ ಏಕ ತೈಸೇ ಕೇ ಆಹೇ । ಜೈಸೇ ಚೈತನ್ಯ ಕಾ ನೋಹೇ ।ದುಸರೇ ಗಾ ।೧೭೮॥ ಯಾ ಮಹಾತೇಜಾಚೇನಿ ಕಸೇ । ಜರೀ ಚೋಖಾಳು ಪ್ರತಿಬಿಂಬ ದಿಸೇ । ಕಾ ಗಿಂವಸಿಲೇ ಗಿಂವಸೇ । ಆಕಾಶ ಹೇ ।೧೭೯॥ ನಾತರೀ ಪೃಥ್ವೀಚೇನಿ ಪಾಡೇ । ಕಾಂಟಾಳೇ ಜರೀ ಜೋಡೇ । ತರೀ ಉಪಮಾ ಜ್ಞಾನೀ ಘಡೇ । ಪಂಡುಕುಮರಾ ।೧೮೦॥ ಮ್ಹಣೌನಿ ಬಹುತೀ ಪರೀ ಪಾಹತಾ । ಪುಢತಪುಢತೀ ನಿರ್ಧಾರಿತಾ । ಹೇ ಜ್ಞಾನಾಚೀ ಪವಿತ್ರತಾ । ಜ್ಞಾನೀಂಚಿ ಆಥಿ ।೧೮೧॥

ಶ್ಲೋಕಾರ್ಥ :- ಪಾಪಿಗಳಲ್ಲೆಲ್ಲಾ ಪಾಪಿಯಾಗಿದ್ದರೂ ಈ ಜ್ಞಾನವೆಂಬ ನಾವೆಯಿಂದ ಪಾಪ ಸಮುದ್ರವನ್ನು ಅನಾಯಾಸಾಗಿ ದಾಟುವೆ ।೩೬॥

ನೀನು ಒಂದುವೇಳೆ ಪಾತಕಗಳ ಆಗರ, ಭ್ರಾಂತಿಯ ಸಾಗರ ಹಾಗೂ ವ್ಯಾಮೋಹದ ಪರ್ವತ ಶಿಖರನಾಗಿದ್ದರೂ ।೧೮೧॥

ಈ ಜ್ಞಾನದ ಸಾಮರ್ಥ್ಯದ ಅಡಿಯಲ್ಲಿ ಇವು ಎಲ್ಲವೂ ತುಚ್ಛವಾಗಿವೆ. ಇಷ್ಟೊಂದು ಈ ಜ್ಞಾನದ ಒಡಲಿನಲ್ಲಿ ಶಕ್ತಿ ತುಂಬಿದೆ ।೧೮೨॥

ಯಾವ ಆ ಪರಮಾತ್ಮ ಜ್ಞಾನದ ಪ್ರಕಾಶ ಬೀಳುತ್ತಲೇ ಈ ಜನ್ಮವು ಸತ್ಯವೆಂಬ ಭ್ರಮವು ನಷ್ಟಗೊಳ್ಳುವುದು ।೧೮೩॥

ಈ ಜ್ಞಾನದ ಮುಂದೆ ಮನಸ್ಸಿನಲ್ಲಿನ ಅಜ್ಞಾನದ ಯಾವ ಕಥೆ? ಜ್ಞಾನದಿಂದ ಮನದಲ್ಲಿನ ದೋಷವು ಹೇಗೆ ಹೋದಿತೆಂಬುವುದೇ ಅನುಚಿತವು. ಏಕೆಂದರೆ ಜಗತ್ತಿನಲ್ಲಿ ಜ್ಞಾನದ ಸರಿಸಮಾನ ಬೇರೆ ಯಾವ ಶಕ್ತಿಯೂ ಇರುವುದಿಲ್ಲ ।೧೮೪॥

ಶ್ಲೋಕಾರ್ಥ :- ಧಗಧಗನೆ ಉರಿಯುವ ಅಗ್ನಿಯು ಕಟ್ಟಿಗೆಗಳನ್ನು ಬೂದಿ ಮಾಡುವಂತೆ, ಅರ್ಜುನಾ! ಜ್ಞಾನವೆಂಬ ಅಗ್ನಿಯು ಕರ್ಮಗಳೆಲ್ಲವನ್ನು ಸುಟ್ಟು ಬೂದಿ ಮಾಡುವುದು ।೩೭॥

ಮೂರು ಲೋಕಗಳು ಉರಿಯತೊಡಗಿದಾಗ ಆಕಾಶದಲ್ಲಿ ಪಸರಿಸುವ ಹೊಗೆಯನ್ನು ದೂರ ಓಡಿಸಲು ಪ್ರಳಯ ಕಾಲದ ಬಿರುಗಾಳಿಗೆ ಕಠಿಣವಾಗುವುದೇ? ।೧೮೫॥

ಅಥವಾ ಗಾಳಿಯ ಸಹಾಯದಿಂದ ಭಡಕಾಯಿಸಿರುವ ಪ್ರಚಂಡ ಅಗ್ನಿಯು ನೀರನ್ನುಸಹ ಸುಟ್ಟು ಹಾಕುವುದು. ಅದನ್ನಾರಿಸಲು ಒಣ ಹುಲ್ಲಿಗೂ ಕಟ್ಟಿಗೆಗೂ ಸಾಧ್ಯವೇ ? ।೧೮೬॥

ಶ್ಲೋಕಾರ್ಥ :- ಅರ್ಜುನಾ! ಜ್ಞಾನಕ್ಕೆ ಸಮಾನವಾದ ಪವಿತ್ರಕರ ವಸ್ತುವು ಮತ್ತೊಂದಿಲ್ಲ. ಯೋಗ ಸಿದ್ಧಿಯನ್ನು ಪಡೆದವನು ಕಾಲಕ್ರಮವಾಗಿ ಸ್ವಯಂ ಇದನ್ನು ಪಡೆದುಕೊಳ್ಳುತ್ತಾನೆ ।೩೮॥

ಇರಲಿ, ಈ ಮಾತು ಎಂದೂ ಸಾಧಿಸಲು ಸಾಧ್ಯವಿಲ್ಲ. ಈ ವಿಚಾರ ಮಾಡುವುದೂ ಅಯೋಗ್ಯತನವು. ಆದ್ದರಿಂದ ಜ್ಞಾನದ ವಿಚಾರದಲ್ಲಿ ಅದರ ಯೋಗ್ಯತೆಯ ಪವಿತ್ರವಾದ ಬೇರೆ ವಸ್ತು ಯಾವುದೂ ಇಲ್ಲ ।೧೮೭॥

ಇಲ್ಲಿ ಚೈತನ್ಯಕ್ಕೆ ಸರಿಸಮಾನವಾದದ್ದು ಇನ್ನೊಂದಿಲ್ಲ. ಅದರಂತೆ ಈ ಲೋಕದಲ್ಲಿ ಇದುವೇ ಸರ್ವೋತ್ತಮವಿದ್ದು ಇದರ ಸರಿಸಮಾನವಾದದ್ದು ಇನ್ನೊಂದಿಲ್ಲ ।೧೮೮॥

ಒಂದುವೇಳೆ ಸೂರ್ಯನ ಸಮಾನವಾದ ಪ್ರತಿಬಿಂಬದ ತೇಜವು ಇನ್ನೊಂದು ಉದಯಿಸಿದರೆ, ಅಥವಾ ಆಕಾಶವನ್ನು ಬಾಹುಗಳಿಂದ ಅಪ್ಪಿಕೊಳ್ಳುವುದಾದರೆ ।೧೮೯॥

ಇಲ್ಲವೆ ಪೃಥ್ವಿಯ ಸರಿಸಮಾನ ಭಾರವಾದ ಇನ್ನೊಂದು ವಸ್ತು ಸಿಕ್ಕರೆ ಮಾತ್ರ ಅರ್ಜುನಾ, ಜ್ಞಾನದಂತಹ ಇನ್ನೊಂದು ವಸ್ತು ದೊರಕಬಹುದು ।೧೯೦॥

ಆದ್ದರಿಂದ ಅನೇಕ ಪ್ರಕಾರಗಳಿಂದ ಮೇಲಿಂದ ಮೇಲೆ ವಿಚಾರಿಸಿ ನೋಡಲಾಗಿ ಈ ಜ್ಞಾನದ ಪವಿತ್ರತೆಯು ಜ್ಞಾನಿಯಲ್ಲಿ ಮಾತ್ರ ಇರುವುದು ।೧೯೧॥

ಜೈಸೀ ಅಮೃತಾಚೀ ಚವೀ ನಿವಡಿಜೇ । ತರೀ ಅಮೃತಾಚಿ ಸಾರಖೀ ಮ್ಹಣಿಜೇ । ತೈಸೇ ಜ್ಞಾನ ಹೇ ಉಪಮಿಜೇ । ಜ್ಞಾನೇಸೀಂಚಿ ।೧೮೨॥ ಆತಾ ಯಾವರಿ ಜೇ ಬೋಲಣೇ । ತೇ ವಾಯಾಂಚಿ ವೇಳು ಫೇಡಣೇ । ತಂವ ಸಾಚಚಿ ಹೇ ಪಾರ್ಥು ಮ್ಹಣೇ । ಜೇ ಬೋಲತ ಅಸಾ ।೧೮೩॥ ಪರೀ ತೇಚಿ ಜ್ಞಾನ ಕೇವೀ ಜಾಣಾವೇ । ಐಸೇ ಅರ್ಜುನೇ ಜಂವ ಪುಸಾವೇ । ತಂವ ತೇ ಮನೋಗತ ದೇವೇ । ಜಾಣಿತಲೇ ।೧೮೪॥ ಮಗ ಮ್ಹಣತಸೇ ಕಿರೀಟೀ । ಆತಾ ಚಿತ್ತ ದೇಈ ಇಯೇ ಗೋಠೀ । ಸಾಂಗೇನ ಜ್ಞಾನಾಚಿಯೇ ಭೇಟೀ । ಉಪಾವೋ ತುಜ ।೧೮೫॥

ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ ।
ಜ್ಞಾನಂ ಲಬ್ಧ್ವಾ ಪರಾಂ ಶಾಂತಿಂ ಅಚಿರೇಣಾಧಿಗಚ್ಛತಿ ।೩೯॥

ತರೀ ಆತ್ಮ ಸುಖಾಚಿಯಾ ಗೋಡಿಯಾ । ವಿಟೇ ಜೋ ಕಾ ಸಕಳ ವಿಷಯಾ । ಜಯಾಚ್ಯಾ ಠಾಯೀ ಇಂದ್ರಿಯಾ । ಮಾನು ನಾಹೀ ।೧೮೬॥ ಜೋ ಮನಾಸೀ ಚಾಡ ನ ಸಾಂಗೇ । ಜೋ ಪ್ರಕೃತೀಚೇ ಕೇಲೇ ನೇಘೇ । ಜೋ ಶ್ರದ್ಧೇಚೇನಿ ಸಂಭೋಗೇ । ಸುಖಿಯಾ ಜಾಹಲಾ ।೧೮೭॥ ತಯಾತೇಚಿ ಗಿಂವಸಿತ । ತೇ ಜ್ಞಾನ ಪಾವೇ ನಿಶ್ಚಿತ । ಜಯಾಮಾಜಿ ಅಚುಂಬಿತ । ಶಾಂತಿ ಅಸೇ ।೧೮೮॥ ತೇ ಜ್ಞಾನ ಹೃದಯೀ ಪ್ರತಿಷ್ಠೇ । ಆಣೇ ಶಾಂತೀಚಾ ಅಂಕುರ ಫುಟೇ । ಮಗ ವಿಸ್ತಾರ ಬಹುಪ್ರಕಟೇ । ಆತ್ಮಬೋಧಾಚಾ ।೧೮೯॥ ಮಗ ಜೇಉತೀ ವಾಸ ಪಾಹಿಜೇ । ತೇಉತೀ ಶಾಂತೀಚಿ ದೇಖಿಜೇ । ತೇಥ ಆಪಪರು ನೇಣಿಜೇ । ನಿರ್ಧಾರಿತಾ ।೧೯೦॥ ಐಸಾ ಹಾ ಉತ್ತರೋತ್ತರು । ಜ್ಞಾನಬೀಜಾಚಾ ವಿಸ್ತಾರು । ಸಾಂಗತಾ ಅಸೇ ಅಪಾರು । ಪರಿ ಅಸೋ ಆತಾ ।೧೯೧॥

ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ ।
ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ।೪೦॥

ಐಕೇ ಜಯಾ ಪ್ರಾಣಿಯಾಚ್ಯಾ ಠಾಯೀ । ಇಯಾ ಜ್ಞಾನಾಚೀ ಆವಡೀ ನಾಹೀ । ತಯಾಚೇ ಜಿಯಾಲೇ ಮ್ಹಣೋ ಕಾಈ । ವರೀ ಮರಣಚಾಂಗ ।೧೯೨॥ ಶೂನ್ಯ ಜೈಸೇ ಕಾ ಗ್ರಹ । ಕಾ ಚೈತನ್ಯೇವೀಣ ದೇಹ । ತೈಸೇ ಜೀವಿತ ತೇ ಸಂಮೋಹ । ಜ್ಞಾನಹೀನ ।೧೯೩॥

ಅಮೃತದ ಮಧುರತ್ವ ಹೇಗಿದೆ ಎಂದು ಕೇಳಿದಾಗ ಅಮೃತದಂತೆಯೇ ಇದೆ ಎಂದು ಹೇಳಬೇಕಾಗುವುದು. ಅದರಂತೆ ಜ್ಞಾನಕ್ಕೆ ಜ್ಞಾನದ ಉಪಮೆಯನ್ನೇ ಕೊಡಬೇಕಾಗುವುದು ॥೧೮೨॥

ಇದಕ್ಕಿಂತಲೂ ಹೆಚ್ಚಿಗೆ ಜ್ಞಾನದ ವಿಷಯಕ್ಕೆ ಮಾತು ಕಥೆಯಾಡುವುದೆಂದರೆ ಸುಮ್ಮನೇ ವೇಳೆ ಕಳೆದಂತೆಯೇ ಸರಿ. ಆಗ ಅರ್ಜುನನು ''ನೀವು ಹೇಳುವುದು ನಿಜ ಎಂದನು'' ॥೧೮೩॥

ಆದರೆ ಆ ಜ್ಞಾನವನ್ನು ಹೇಗೆ ದೊರಕಿಸಿಕೊಳ್ಳಬೇಕೆಂದು ಅರ್ಜುನನು ಕೇಳುವವನಿದ್ದದ್ದು ಆತನ ಮನಸ್ಸಿನ ಮನೋಗತವನ್ನು ದೇವನರಿತನು ॥೧೮೪॥

ಆಗ ಅರ್ಜುನನಿಗೆ ಹೇಳಿದನು:- ಕಿರೀಟಿಯೇ, ಜ್ಞಾನ ಪ್ರಾಪ್ತಿಯ ಯಾವ ಉಪಾಯವನ್ನು ನಾನು ನಿನಗೆ ಹೇಳುವವನಿದ್ದೇನೆ. ಅದಕ್ಕಾಗಿ ಈ ಮಾತಿನ ಕಡೆಗೆ ನಿನ್ನ ಚಿತ್ತ ಕೊಡು ॥೧೮೫॥

ಶ್ಲೋಕಾರ್ಥ :- ಶ್ರದ್ಧಾವಂತನೂ, ತತ್ಪರನೂ, ಜಿತೇಂದ್ರಿಯನೂ, ಆದವನಿಗೆ ಜ್ಞಾನವು ಲಭಿಸುತ್ತದೆ. ಜ್ಞಾನವು ಬರುತ್ತಲೇ ಅವನು ಮುಕ್ತಿಯನ್ನು ಪಡೆಯುತ್ತಾನೆ ॥೩೯॥

ಆತ್ಮಸುಖದ ಬಗ್ಗೆ ಇರುವ ಪ್ರೇಮದಿಂದ ಯಾರ ಮನದಲ್ಲಿ ವಿಷಯಾದಿಗಳಿಗಾಗಿ ತಿರಸ್ಕಾರ ಉಂಟಾಗಿರುತ್ತದೆ ಮತ್ತು ಅದರಲ್ಲಿ ಇಂದ್ರಿಯಗಳಿಗೆ ಪ್ರಾಧಾನ್ಯತೆ ಇರುವುದಿಲ್ಲ ॥೧೮೬॥

ಯಾರು ಯಾವ ಇಚ್ಛೆಯನ್ನು ಮನಸ್ಸಿನಲ್ಲಿ ಬರಗೊಡುವುದಿಲ್ಲವೋ, ಯಾರು ಪ್ರಕೃತಿಯಿಂದ ನಡೆಯುವ ಕರ್ಮಗಳನ್ನು ತನ್ನ ಮೇಲೆ ತೆಗೆದುಕೊಳ್ಳುವುದಿಲ್ಲವೋ, ಶ್ರದ್ಧೆಯ ಉಪಭೋಗದಿಂದ ಯಾರು ಸುಖಿಯಾಗಿರುವರೋ ॥೧೮೭॥

ಯಾರ ಜ್ಞಾನದಲ್ಲಿ ಓತಪ್ರೋತವಾಗಿ ಶಾಂತಿಯು ತುಂಬಿರುವುದೋ, ಆ ಪುರುಷನಿಗೆ ಮಾತ್ರ ಜ್ಞಾನವು ಶೋಧಿಸುತ್ತ ಬಂದು ನಿಶ್ಚಯವಾಗಿ ಪ್ರಾಪ್ತವಾಗುವುದು ॥೧೮೮॥

ಈ ಜ್ಞಾನವು ಮನಸ್ಸಿನಲ್ಲಿ ಸ್ಥಿರವಾದರೆ ಶಾಂತಿಯ ಅಂಕುರವು ಉದಯಿಸಿ ಮುಂದೆ ಆತ್ಮಬೋಧೆಯ ವಿಸ್ತಾರವಾಗುವುದು ॥೧೮೯॥

ಆಗ ಆತನು ಎಲ್ಲಿ ನೋಡುವನೋ, ಅಲ್ಲಿ ಆತನಿಗೆ ಶಾಂತಿಯೇ ಕಾಣುವುದು ಮತ್ತು ಆ ಶಾಂತಿಯಲ್ಲಿ ಆಪಪರ ಭಾವವು ನಿಜವಾಗಿಯೂ ಇರುವುದಿಲ್ಲ ॥೧೯೦॥

ಈ ಪ್ರಕಾರವಾಗಿ ಜ್ಞಾನದ ವಿಷಯಕ್ಕೆ ಎಷ್ಟು ವರ್ಣಿಸಿದರೂ ಕಡಿಮೆಯೆ. ಆದ್ದರಿಂದ ಈಗ ಈ ಮಾತು ಇರಲಿ ॥೧೯೧॥

ಶ್ಲೋಕಾರ್ಥ :- ಅಜ್ಞಾನಿಯು, ಶ್ರದ್ಧೆ ಇಲ್ಲದವನು, ಸಂಶಯವುಳ್ಳವನು ಖಂಡಿತವಾಗಿ ಕೆಟ್ಟು ಹೋಗುತ್ತಾನೆ. ಸಂಶಯವುಳ್ಳವನಿಗೆ ಇಹ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವಿಲ್ಲ ॥೪೦॥

ಈಗ ಕೇಳು, ಯಾವ ಮನುಷ್ಯನಲ್ಲಿ ಈ ಪ್ರಕಾರ ಜ್ಞಾನದ ಇಚ್ಛೆ ಇಲ್ಲವೋ ಆತನ ಬದುಕು ಏನೆಂದು ಹೇಳಬೇಕು? ಇದಕ್ಕಿಂತ ಮರಣವೇ ಲೇಸು ॥೧೯೨॥

ಯಾವ ಪ್ರಕಾರವಾಗಿ ನಿರ್ಜನ (ಹಾಳುಬಿದ್ದ) ಮನೆ, ಅಥವಾ ಜೀವವಿಲ್ಲದ ಶರೀರ ಹೇಗೋ, ಅದರಂತೆ ಜ್ಞಾನಹೀನ ಮನುಷ್ಯನ ಜೀವನವು ಮೋಹಯುಕ್ತವಾಗಿದೆ ॥೧೯೩॥

ಅಥವಾ ಜ್ಞಾನ ಕೀರ ಆಪು ನೋಹೇ । ಪರೀ ತೇ ಚಾಡ ಏಕೀ ಜರೀ ವಾಹೇ । ತರೀ ತೇಥ ಜಿವ್ಹಾಳಾ ಕಾಂಹೀ ಆಹೇ । ಪ್ರಾಪ್ತೀಚಾ ಪೈ ॥೧೯೪॥ ವಾಂಚೂನಿ ಜ್ಞಾನಾಚೀ ಗೋಠೀ ಕಾಯಸೀ । ಪರೀ ತೇ ಆಸ್ಥಾ ಹೀ ನ ಧರೀ ಮಾನಸೀ । ತರೀ ತೋ ಸಂಶಯರೂಪ ಹುತಾಶೀ । ಪಡಿಲಾ ಜಾಣ ॥೧೯೫॥ ಜೇ ಅಮೃತಹೀ ಪರಿ ನಾವಡೇ । ಐಸೇ ಸಾವಿಯಾಚಿ ಆರೋಚಕು ಜೈ ಪಡೇ । ತೈ ಮರಣ ಆಲೇ ಅಸೇ ಫುಡೇ । ಜಾಣೋ ಯೇ ಕೀ ॥೧೯೬॥ ತೈಸಾ ವಿಷಯಸುಖೇ ರಂಜೇ । ಜೋ ಜ್ಞಾನೇಸಿಂಚಿ ವಾಜೇ । ತೋ ಸಂಶಯೇ ಅಂಗೀಕಾರಿಜೇ । ಏಥ ಭ್ರಾಂತಿ ನಾಹೀ ॥೧೯೭॥ ಮಗ ಸಂಶಯೀ ಜರಿ ಪಡಿಲಾ । ತರೀ ನಿಭ್ರಾಂತ ಜಾಣೇ ನಾಸಲಾ । ತೋ ಐಹಿಕಪರತ್ರಾ ಮುಕಲಾ । ಸುಖಾಸಿ ಗಾ ॥೧೯೮॥ ಜಯಾ ಕಾಳಜ್ವರು ಆಂಗೀ ಬಾಣೇ । ತೋ ಶೀತೋಷ್ಣೇ ಜೈಶೀ ನೇಣೇ । ಆಗೀ ಆಣೇ ಚಾಂದಿಣೇ । ಸರಿಸೇಚಿ ಮಾನೀ ॥೧೯೯॥ ತೈಸೇ ಸಾಚ ಆಣಿ ಲಟಿಕೇ । ವಿರುದ್ಧ ಆಣಿ ನಿಕೇ । ಸಂಶಯೀ ತೋ ನೋಳಖೇ । ಹಿತಾಹಿತ ॥೨೦೦॥ ಹಾ ರಾತ್ರಿದಿವಸು ಪಾಹೀ । ಜೈಸಾ ಜಾತ್ಯಂಧಾ ಠಾಉವಾ ನಾಹೀ । ತೈಸೇ ಸಂಶಯೀ ಅಸತಾ ಕಾಂಹೀ । ಮನಾ ನಯೇ ॥೨೦೧॥

ಯೋಗಸಂನ್ಯಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯಮ್ ।
ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ॥೪೧॥

ಮ್ಹಣೌನಿ ಸಂಶಯಾಹೂನಿ ಥೋರ । ಆಣಿಕ ನಾಹೀ ಪಾಪ ಘೋರ । ಹಾ ವಿನಾಶಾಚೀ ವಾಗುರ । ಪ್ರಾಣಿಯಾಂಸೀ ॥೨೦೨॥ ಯೇಣೇ ಕಾರಣೇ ತುವಾ ತ್ಯಜಾವಾ । ಆಧೀ ಹಾಚಿ ಏಕು ಜಿಣಾವಾ । ಜೋ ಜ್ಞಾನಾಚಿಯಾ ಅಭಾವಾ । ಮಾಜಿ ಅಸೇ ॥೨೦೩॥ ಜೈ ಅಜ್ಞಾನಾಚೇ ಗಡದ ಪಡೇ । ತೈ ಹಾ ಬಹುವಸ ಮನೀ ವಾಢೇ । ಮ್ಹಣೌನಿ ಸರ್ವಥಾ ಮಾರ್ಗು ಮೋಡೇ । ವಿಶ್ವಾಸಾಚಾ ॥೨೦೪॥ ಹೃದಯೀ ಹಾಚಿ ನ ಸಮಾಯೇ । ಬುದ್ಧಿತೇ ಗಿಂವಸೂನಿ ಠಾಯೇ । ತೇಥ ಸಂಶಯಾತ್ಮಕ ಹೋಯೇ । ಲೋಕತ್ರಯ ॥೨೦೫॥

ತಸ್ಮಾದಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿನಾತ್ಮನಃ ।
ಛಿತ್ತ್ವೈನಂ ಸಂಶಯಂ ಯೋಗಂ ಆತಿಷ್ಠೋತ್ತಿಷ್ಠ ಭಾರತ ॥೪೨॥

ನಿಜವಾದ ಜ್ಞಾನವು ಪ್ರಾಪ್ತವಾಗಿರುವುದಿಲ್ಲ. ಆದರೆ ಅದರ ಪ್ರಾಪ್ತಿಗಾಗಿ ಯಾವ ಮನುಷ್ಯನು ಇಚ್ಛೆ ಪಡುವನೋ ಆತನಿಗೆ ಜ್ಞಾನ ಪ್ರಾಪ್ತಿಯ ಸಂಭವವಿರುವುದು ।।೧೯೪।।

ಜ್ಞಾನವಿರುವ ಮಾತಿರಲಿ, ಆದರೆ ಅದು ಪ್ರಾಪ್ತವಾಗ ಬೇಕೆಂಬ ಕಳಕಳಿಯು ಯಾರಿಗೆ ಇಲ್ಲವೋ ಅವನು ಸಂಶಯ ರೂಪ ಅಗ್ನಿಯಲ್ಲಿ ಬೀಳುವನು. ಹೀಗೆ ತಿಳಿ ।।೧೯೫।।

ಹೇಗೆಂದರೆ, ಅಮೃತವು ಸಹ ಯಾರಿಗೆ ಹಿಡಿಸುವುದಿಲ್ಲವೋ ಅವರಿಗೆ ಅಷ್ಟೊಂದು ಅರುಚಿ ಸಹಜವಾಗಿ ಉತ್ಪನ್ನವಾಗಿರುತ್ತದೆ. ಅಂದಮೇಲೆ ಆ ಮನುಷ್ಯನು ಮರಣಕ್ಕೆ ಸಮೀಪಿಸಿರುವನು ಎಂದು ತಿಳಿ ।।೧೯೬।।

ಯಾವನು ವಿಷಯ ಸುಖದಲ್ಲಿಯೇ ಆನಂದ ಪಡುವನೋ ಮತ್ತು ಜ್ಞಾನ ಪ್ರಾಪ್ತಿ ವಿಷಯದಲ್ಲಿ ಮಹತ್ವ ಕೊಡದೆ ಲೆಕ್ಕಿಸದೇ ಇರುವನೋ, ಆತನಿಗೆ ಸಂಶಯವು ಗ್ರಾಸ ಮಾಡಿರುವುದು. ಇದರಲ್ಲಿ ಸಂಶಯವಿಲ್ಲ ।।೧೯೭।।

ಈ ರೀತಿಯಲ್ಲಿ ಯಾರು ಸಂಶಯದಲ್ಲಿ ಬದ್ಧರುವರೋ ಅವರ ನಾಶವು ನಿಃಸಂಶಯವಾಗಿ ಆಗುವುದು. ಹೀಗೆ ತಿಳಿ. ಇವರು ಈ ಲೋಕದ ಹಾಗೂ ಪರಲೋಕದ ಸುಖದಿಂದ ದೂರ ಉಳಿಯುವರು ।।೧೯೮।।

ಯಾರಿಗೆ ಸನ್ನಿಪಾತ ಜ್ವರದ ಬಾಧೆಯಾಗಿರುವುದೋ, ಅವರಿಗೆ ಶೀತ - ಉಷ್ಣ ತಿಳಿಯುವುದಿಲ್ಲ. ಆದ್ದರಿಂದ ಅವರು ಬಿಸಿಲು - ಬೆಳದಿಂಗಳೆರಡನ್ನು ಸಮಾನವಾಗಿ ಕಾಣುತ್ತಾರೆ ।।೧೯೯।।

ಆದರಂತೆ ಸತ್ಯ - ಅಸತ್ಯ, ಅನುಕೂಲ - ಪ್ರತಿಕೂಲ, ಹಿತ - ಅಹಿತ, ಇವು ಸಂಶಯ ಪುರುಷನಿಗೆ ತಿಳಿಯುವುದಿಲ್ಲ ।।೨೦೦।।

ಯಾವ ಪ್ರಕಾರವಾಗಿ ಹುಟ್ಟು ಕುರುಡನಿಗೆ ರಾತ್ರಿ ಹಗಲು ಗೊತ್ತಾಗುವುದಿಲ್ಲವೋ ಅದರಂತೆ ಸಂಶಯ ಪುರುಷನಿಗೆ ಯಾವುದೂ ತಿಳಿಯುವುದಿಲ್ಲ ।।೨೦೧।।

**ಶ್ಲೋಕಾರ್ಥ** :- ಧನಂಜಯಾ! ಯೋಗ ಬುದ್ಧಿಯಿಂದ ಕರ್ಮ ಸಂಬಂಧಕ್ಕೆ ಸ್ವಸ್ತಿಯನ್ನು ಹೇಳಿದವನೂ ಜ್ಞಾನ ಬಲದಿಂದ ಸಂಶಯವನ್ನು ಕತ್ತರಿಸಿದವನೂ ಆದ ಆತ್ಮಜ್ಞಾನಿಯನ್ನು ಕರ್ಮಗಳು ಬಂಧಿಸುವುದಿಲ್ಲ ।।೪೧।।

ಆದ್ದರಿಂದ ಸಂಶಯಕ್ಕಿಂತಲೂ ಬೇರೆ ಭಯಂಕರವಾದ ಪಾಪವು ಯಾವುದೂ ಇರುವುದಿಲ್ಲ. ಪ್ರಾಣಿಗಳನ್ನು ನಾಶ ಮಾಡುವ ಇದೊಂದು ಬಲೆ (ಜಾಲ) ಯಾಗಿದೆ.

ಈ ಕಾರಣವಾಗಿ ನೀನು ಇದರ ಸಂಗತಿಯನ್ನು ಬಿಟ್ಟು ಮೊದಲು ಇದನ್ನು ಜಯಿಸು. ಇದರ ವಾಸ್ತವ್ಯದಿಂದ ಜ್ಞಾನದ ಕೊರತೆಯಾಗುವುದು ।।೨೦೩।।

ಅಜ್ಞಾನದ ಘೋರಾಂಧಕಾರವಿದ್ದಾಗ ಈ ಸಂಶಯವು ಮನದಲ್ಲಿ ಬಹಳ ಬೆಳೆಯುವುದು. ಆದ್ದರಿಂದ ಶ್ರದ್ಧೆಯ ಮಾರ್ಗವು ಪೂರ್ಣವಾಗಿ ಇಲ್ಲದಂತಾಗುವುದು ।।೨೦೪।।

ಇದು ಕೇವಲ ಮನದಲ್ಲಿ ವ್ಯಾಪಿಸಿಕೊಂಡಿರುವುದಲ್ಲದೇ ಬುದ್ಧಿಯನ್ನೂ ನುಂಗಿ ಬಿಡುವುದು. ಆಗ ಆ ಮನುಷ್ಯನಿಗೆ ಮೂರು ಲೋಕಗಳು ಸಂಶಯವಾಗಿ ಕಾಣುತ್ತವೆ ।।೨೦೫।।

**ಶ್ಲೋಕಾರ್ಥ** :- ಆದುದರಿಂದ ಭಾರತ! ಅಜ್ಞಾನದಿಂದ ಉಂಟಾದ ನಿನ್ನ ಹೃದಯಗತ ಸಂಶಯವನ್ನು ಜ್ಞಾನ ಖಡ್ಗದಿಂದ ಭೇದಿಸಿ ಕರ್ಮಯೋಗವನ್ನು ಮಾಡುವುದಕ್ಕಾಗಿ ಏಳು ।।೪೨।।

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಜ್ಞಾನಯೋಗೋ ನಾಮ ಚತುರ್ಥೋಽಧ್ಯಾಯಃ

ಐಸಾ ಜರೀ ಥೋರಾವೇ । ತರೀ ಉಪಾಯೇ ಏಕೇ ಆಂಗವೇ । ಜರೀ ಹಾತೀ ಹೋಯ ಬರವೇ । ಜ್ಞಾನಖಡ್ಗ ।೨೦೬॥ ತರೀ ತೇಣೇ ಜ್ಞಾನಶಸ್ತ್ರೇ ತಿಖಟೇ । ನಿಖಿಳು ಹಾ ನಿವಟೇ । ಮಗ ನಿಃಶೇಖತಾ ಫಿಟೇ । ಮಾನಸೀಚಾ ।೨೦೭॥ ಯಾಕಾರಣೆ ಪಾರ್ಥಾ । ಉಠೀ ವೇಗಿ ವರೌತಾ । ನಾಶು ಕರೋನಿ ಹೃದಯಸ್ಥಾ । ಸಂಶಯಾಸೀ ।೨೦೮॥ ಐಸೇ ಸರ್ವಜ್ಞಾಚಾ ಬಾಪು । ಜೋ ಶ್ರೀಕೃಷ್ಣ ಜ್ಞಾನದೀಪು ।ತೋ ಮ್ಹಣತಸೇ ಸಕೃಪು । ಐಕೇ ರಾಯಾ ।೨೦೯॥ ತಂವ ಯಾ ಪೂರ್ವಾಪರ ಬೋಲಾಚಾ । ವಿಚಾರೂನಿ ಕುಮರು ಪಂಡೂಚಾ । ಕೈಸಾ ಪ್ರಶ್ನು ಅವಸರೀಚಾ । ಕರಿತಾ ಹೋಈಲ ।೨೧೦॥ ತೇ ಕಥೇಚೀ ಸಂಗತಿ । ಭಾವಾಚೀ ಸಂಪತ್ತಿ । ರಸಾಚೀ ಉನ್ನತಿ । ಮ್ಹಣಿಪೇಲ ಪುಢಾ ।೨೧೧॥ ಜಯಾಚಿಯಾ ಬರವೇಪಣೀ । ಕೀಜೇ ಆತಾ ರಸಾಂಚೀ ವೋವಾಳಣೀ । ಜೋ ಸಜ್ಜನಾಚಿಯೇ ಆಯಣೀ । ವಿಸಾಂವಾ ಜಗೀ ।೨೧೨॥ ತೋ ಶಾಂತುಚೀ ಅಭಿನವೇಲ । ತೇ ಪರಿಯಸಾ ಮರ್ಹಾಟೇ ಬೋಲ । ಜೇ ಸಮುದ್ರಾಹೂನಿ ಸಖೋಲ । ಅರ್ಥಭರಿತ ।೨೧೩॥ ಜೈಸೇ ಬಿಂಬ ತರೀ ಬಚಕೇ ಏವಢೇ । ಪರಿ ಪ್ರಕಾಶಾ ತ್ರೈಲೋಕ್ಯ ಥೋಕಡೇ । ಶಬ್ದಾಚೀ ವ್ಯಾಪ್ತಿ ತೇಣೇ ಪಾಡೇ । ಅನುಭವಾವೀ ।೨೧೪॥ ನಾತರೀ ಕಾಮಿತಯಾಚಿಯಾ ಇಚ್ಛಾ । ಫಳೇ ಕಲ್ಪವೃಕ್ಷು ಜೈಸಾ । ಬೋಲು ವ್ಯಾಪಕು ಹೋಯ ತೈಸಾ । ತರೀ ಅವಧಾನ ದ್ಯಾವೇ ।೨೧೫॥ ಹೇ ಅಸೋ ಕಾಯ ಮ್ಹಣಾವೇ । ಸರ್ವಜ್ಞು ಜಾಣತೀ ಸ್ವಭಾವೇ । ತರೀ ನಿಕೇ ಚಿತ್ತ ದ್ಯಾವೇ । ಹೇ ವಿನಂತೀ ಮಾಝೀ ।೨೧೬॥ ಜೇಥ ಸಾಹಿತ್ಯ ಆಣಿ ಶಾಂತಿ । ಹೇ ರೇಖಾ ದಿಸೇ ಬೋಲತೀ । ಜೈಸೀ ಲಾವಣ್ಯಗುಣಕುಳವತೀ । ಆಣಿ ಪತಿವ್ರತಾ ।೨೧೭॥ ಆಧೀಂಚ ಸಾಖರ ಆವಡೇ । ತೇಚಿ ಜರೀ ವೋಖದೀ ಜೋಡೇ । ತರೀ ಸೇವಾವೀ ನಾ ಕಾ ಕೋಡೇ । ನಾವಾನಾವಾ ? ।೨೧೮॥ ಸಹಜೇ ಮಲಯಾನಿಲು ಮಂದು ಸುಗಂಧು । ತಯಾ ಅಮೃತಾಚಾ ಹೋಯ ಸ್ವಾದು। ಆಣಿ ತೇಥೇಂಚಿ ಜೋಡೇ ನಾದು । ಜರೀ ದೈವಗತ್ಯಾ ।೨೧೯॥ ತರೀ ಸ್ಪರ್ಶೇ ಸರ್ವಾಂಗ ನಿವವೀ । ಸ್ವಾದೇ ಜಿವ್ಹೇತೇ ನಾಚವೀ । ತೇವಿಂಚಿ ಕಾನಾಕರವೀ । ಮ್ಹಣವೀ ಬಾಪು ಮಾಝಾ ।೨೨೦॥

ಇಲ್ಲಿಗೆ ಉಪನಿಷತ್ತೂ, ಬ್ರಹ್ಮವಿದ್ಯೆಯೂ, ಯೋಗ ಶಾಸ್ತ್ರವೂ, ಶ್ರೀಕೃಷ್ಣಾರ್ಜುನ ಸಂವಾದವೂ ಆದ ಶ್ರೀಮದ್ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ ಹೆಸರಿನ ನಾಲ್ಕನೆಯ ಅಧ್ಯಾಯವು ಮುಗಿದುದು.

ಇದು ಇಷ್ಟೊಂದು ಬೆಳೆದರೂ ಅದನ್ನು ಸ್ವಾಧೀನ ಪಡಿಸಿಕೊಳ್ಳಲು ಒಂದು ಉಪಾಯವಿದೆ. ತೀಕ್ಷ್ಣವಾದ ಜ್ಞಾನ ಖಡ್ಗ ಕೈಯಲ್ಲಿದ್ದರೆ ।೨೦೬।।

ಆಗ ಆ ತೀಕ್ಷ್ಣ ಶಸ್ತ್ರದ ಯೋಗದಿಂದ ಈ ಎಲ್ಲವೂ ಇಲ್ಲದಂತಾಗುವುವು ಮತ್ತು ಆಗ ಮನಸ್ಸಿನಿಂದ ಅದರ ಸಂಪೂರ್ಣ ನಾಶವಾಗುವುದು ।೨೦೭।।

ಆದ್ದರಿಂದ ಪಾರ್ಥಾ, ನೀನು ನಿನ್ನ ಮನಸ್ಸಿನಲ್ಲಿಯ ಸಂಶಯಗಳನ್ನೆಲ್ಲ ಹೋಗಲಾಡಿಸಿ ಬೇಗನೇ ಎದ್ದೇಳು ।೨೦೮।।

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:- ರಾಜಾ ಕೇಳು, ಜ್ಞಾನಿಜನರ ಜನಕನಾದ ಜ್ಞಾನದೀಪ ಭಗವಂತ ಶ್ರೀಕೃಷ್ಣನು ಬಹಳ ಪ್ರೀತಿಯಿಂದ ಅರ್ಜುನನಿಗೆ ಈ ಪ್ರಕಾರವಾಗಿ ಹೇಳಿದನು ।೨೦೯।।

ಆಗ ಈ ಎಲ್ಲ ಪೂರ್ವಾಪರ ಕಥೆಯ ವಿಚಾರ ಮಾಡಿ ಯಾವ ಅರ್ಜುನನು ಸಮಯೋಚಿತ ಪ್ರಶ್ನೆ ಮಾಡುವನು ।೨೧೦।।

ಆ ಕಥೆಯ ಜೋಡಣೆಯು, ಅಭಿಪ್ರಾಯಗಳ ವೈಭವವು, ಹಾಗೂ ರಸದ ಮಾಧುರ್ಯವು ಮುಂದೆ ಹೇಳಲ್ಪಡುವುದು ।೨೧೧।।

ಈತನ ಹೇಳಿಕೆಯ ಹೆಗ್ಗಳಿಕೆಯಲ್ಲಿ (ಶೃಂಗಾರಾದಿ) ಎಂಟು ರಸಗಳನ್ನು ನಿವಾಳಿಸಿ ಒಗೆಯಬೇಕು ಮತ್ತು ಸಜ್ಜನರ ಬುದ್ಧಿಗೆ ಜಗತ್ತಿನಲ್ಲಿ ವಿಶ್ರಾಂತಿ ಸ್ಥಾನವಾಗಿರುವುದು ।೨೧೨।।

ಯಾವ ಮರಾಠಿ ಭಾಷೆಯಿಂದ ಶಾಂತರಸವು ತುಂಬಿಕೊಂಡು ಪ್ರಕಟಿಸುವ ಮತ್ತು ಯಾವುದು ಸಮುದ್ರಕ್ಕಿಂತಲೂ ಗಂಭೀರವಾಗಿರುವ ಅರ್ಥಭರಿತವಾದ ಭಾಷಣವನ್ನು ಕೇಳು ।೨೧೩।।

ಸೂರ್ಯನ ಬಿಂಬವನ್ನು ನೋಡಿದರೆ ಅಂಗೈಯಲ್ಲಿ ಹಿಡಿಯುವಂತೆ ಕಾಣಿಸುತ್ತದೆ. ಆದರೆ ಅದರ ಪ್ರಕಾಶಕ್ಕೆ ಮೂರು ಲೋಕಗಳು ಸಾಲದು. ಅದರಂತೆ ಇಲ್ಲಿ ಶಬ್ದಾರ್ಥದ ವ್ಯಾಪ್ತಿ ಇದೆ. ಹೀಗೆ ಅನುಭವಿಸಬೇಕು ।೨೧೪।।

ಅಥವಾ ಕಲ್ಪವೃಕ್ಷವು ಯಾವ ಪ್ರಕಾರವಾಗಿ ಕಾಮಿತ ಜನರ ಇಚ್ಛೆಯನ್ನು ಪೂರ್ಣಗೊಳಿಸುವುದೋ ಅದರಂತೆ ಈ ಮಾತುಗಳು ಎಲ್ಲ ಇಚ್ಛೆಗಳನ್ನು ಪೂರ್ಣಗೊಳಿಸುತ್ತವೆ. ಆದ್ದರಿಂದ ಇದರ ಕಡೆಗೆ ಲಕ್ಷ ಕೊಡಬೇಕು ।೨೧೫।।

ಇದಿರಲಿ, ನಾನು ಇದಕ್ಕಾಗಿ ಹೆಚ್ಚಿಗೇನು ಹೇಳಲಿ ? ಯಾವ ಸರ್ವಜ್ಞ ಶ್ರೋತೃಗಳವರು ಸಹಜವಾಗಿ ಶಬ್ದದ ವ್ಯಾಪ್ತಿ ತಿಳಿಯುವರು. ಅದಕ್ಕಾಗಿ ಸರಿಯಾಗಿ ಲಕ್ಷ ಕೊಡಿರಿ ಎಂದು ನಾನು ಆಜ್ಞೆ ಮಾಡದೇ ವಿನಂತಿ ಮಾಡುವೆ ।೨೧೬।।

ಒಂದು ವೇಳೆ ಸ್ತ್ರೀಯು ಸುಂದರ, ಗುಣವತಿ ಹಾಗೂ ಕುಲವತಿ ಇದ್ದು ಪತಿವ್ರತೆಯಾಗಿದ್ದರೆ ಅದರಂತೆ ಈ ಹೇಳಿಕೆಯಲ್ಲಿ ಸಾಹಿತ್ಯದ ಎಲ್ಲ ಅಲಂಕಾರ ಶಾಂತಾದಿರಸಗಳು ಸ್ಪಷ್ಟವಾಗಿ ಎದ್ದು ಕಾಣುವುವು ।೨೧೭।।

ಮೊದಲೇ ಸಕ್ಕರೆಯ ಮೇಲೆ ಬಹಳ ಇಷ್ಟ ಇದ್ದವರಿಗೆ ಔಷಧೋಪಚಾರದಲ್ಲಿ ಸಕ್ಕರೆ ಸೇವಿಸಲು ಹೇಳಿದರೆ ಆನಂದದಿಂದ ಮೇಲಿಂದ ಮೇಲೆ ಏಕೆ ಸೇವಿಸಬಾರದು ? ।೨೧೮।।

ಸಹಜವಾಗಿ ಮೈಲಾಗಿರಿ ಪರ್ವತದಲ್ಲಿ ಸುಗಂಧಿತ ಮಂದವಾದ ಗಾಳಿ ಬೀಸುವಾಗ ಅದಕ್ಕೆ ಅಮೃತದ ಸ್ವಾದ ಬಂದು ಪುನಃ ಅಲ್ಲಿ ಪಂಚಮ ಸ್ವರದಂತೆ ಸುನಾದವು ಕಿವಿಗೆ ಕೇಳಿಸಿದರೆ ।೨೧೯।।

ತಂಪಾದ ಗಾಳಿಯ ಸ್ಪರ್ಶದಿಂದ ಶರೀರವು ತಣ್ಣಗಾಗುವುದು ಮತ್ತು ರುಚಿಯಿಂದ ನಾಲಿಗೆಯು ಕುಣಿಯಲಾರಂಭಿಸುವುದು. ಹಾಗೆಯೇ ಸುಮಧುರ ಧ್ವನಿಯಿಂದ ಕಿವಿಗಳು ಭಲೇ ಎನ್ನುವುವು ।೨೨೦।।

ತೈಸೇ ಕಥೇಚೇ ಇಯೇ ಐಕಣೇ । ಏಕ ಶ್ರವಣಾಸೀ ಹೋಯ ಪಾರಣೇ । ಆಣಿ ಸಂಸಾರ ದುಃಖ ಮೂಳವಣೇ । ವಿಕೃತೀವಿಣೇ ।೨೨೧॥ ಜರೀ ಮಂತ್ರೇಚಿ ವೈರೀ ಮರೇ । ತರೀ ವಾಯಾ ಕಾ ಬಾಂಧಾವೀ ಕಟಾರೆ?। ರೋಗ ಜಾಯ ದೂಧಸಾಖರೇ । ತರೀ ನಿಂಬ ಕಾ ಪಿಯಾವಾ? ।೨೨೨॥ ತೈಸಾ ಮನಾಚಾ ಮಾರು ನ ಕರಿತಾ । ಆಣಿ ಇಂದ್ರಿಯಾ ದುಃಖ ನ ದೇತಾ । ಏಥ ಮೋಕ್ಷು ಅಸೇ ಆಯತಾ । ಶ್ರವಣಾಚಿಮಾಜಿ ।೨೨೩॥ ಮ್ಹಣೌನಿ ಆಥಿಲಿಯಾ ಆರಾಣುಕಾ । ಗೀತಾರ್ಥು ಹಾ ನಿಕಾ । ಜ್ಞಾನದೇವೋ ಮ್ಹಣೇ ಆಇಕಾ । ನಿವೃತ್ತಿದಾಸು ।೨೨೪॥

---

ಇತಿ ಶ್ರೀಜ್ಞಾನದೇವ ವಿರಚಿತಯಾಂ ಭಾವಾರ್ಥ ದೀಪಿಕಾಯಾಂ ಚತುರ್ಥೋಧ್ಯಾಯಃ ।೪॥

ಶ್ಲೋಕ ::೪೨ ಓವಿ ।೨೨೪॥

ಅದರಂತೆ ಈ ಕಥೆ ಕೇಳುವುದರಿಂದ ಕಿವಿಗಳ ಇಚ್ಛೆ ಪೂರ್ಣಗೊಂಡು ಸಂಸಾರ ದುಃಖದಿಂದ ಯಾವ ಒಂದು ವಿಕಾರವಾಗದೇ ಅವು ಸಹಜವಾಗಿ ಇಲ್ಲದಂತಾಗುವುವು ।೨೨೧॥

ಒಂದು ವೇಳೆ ಮಂತ್ರದಿಂದಲೇ ಶತ್ರುವಿನ ನಾಶವಾಗುವುದಿದ್ದರೆ ಸುಮ್ಮನೆ ನಡುವಿಗೆ ಶಸ್ತ್ರಗಳನ್ನು ಏಕೆ ಕಟ್ಟಬೇಕು ? ಹಾಲು ಸಕ್ಕರೆಯಿಂದ ರೋಗ ನಷ್ಟವಾಗುತ್ತಿದ್ದರೆ ವಿಷ ಬೇವಿನ ರಸವೇಕೆ ಕುಡಿಯಬೇಕು ? ।೨೨೨॥

ಅದರಂತೆ ಮನಸ್ಸನ್ನು ಜಯಿಸದೇ ಇಂದ್ರಿಯಗಳಿಗೆ ದುಃಖ ಕೊಡದೇ ಈ ಶ್ರವಣದಲ್ಲಿಯೇ ಸಹಜವಾಗಿ ದೊರಕುವ ಮೋಕ್ಷವಿರುವುದು ।೨೨೩॥

ಆದ್ದರಿಂದ ನಿವೃತ್ತಿದಾಸರಾದ ಜ್ಞಾನೇಶ್ವರರು ಹೇಳುವರು "ನಿಮ್ಮ ಮನದಲ್ಲಿ ಎಷ್ಟು ಆತುರತೆ ಇದೆಯೋ ಆ ಎಲ್ಲ ಆತುರತೆಯಿಂದ ಈ ಗೀತೆಯ ಅರ್ಥವನ್ನು ಕೇಳಿರಿ" ।೨೨೪॥

ಶ್ರೀ ಜ್ಞಾನೇಶ್ವರ ಮಹಾರಾಜರಿಂದ ರಚಿತವಾದ ಭಾವಾರ್ಥ ದೀಪಿಕೆಯ ನಾಲ್ಕನೆಯ ಅಧ್ಯಾಯದ
ವಿವರಣೆ ಸಮಾಪ್ತವು

# ಸಾರ್ಥ ಶ್ರೀಜ್ಞಾನೇಶ್ವರೀ

## ಅಧ್ಯಾಯ ಪಾಂಚವಾ

ಶ್ರೀ ಗಣೇಶಾಯ ನಮಃ

---

ಅರ್ಜುನಉವಾಚ: -

ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ ।
ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್ ॥೧॥

ಮಗ ಪಾರ್ಥು ಶ್ರೀಕೃಷ್ಣಾತೇ ಮ್ಹಣೇ । ಹಾ ಹೋ ಹೇ ಕೈಸೇ ತುಮಚೇ ಬೋಲಣೇ । ಏಕ ಹೋಯ ತರೀ ಅಂತಃಕರಣೇ । ವಿಚಾರೂಯೇ ॥೧॥ ಮಾಗಾ ಸಕಳ ಕರ್ಮಾಚಾ ಸನ್ಯಾಸು । ತುಮ್ಹಿಂಚಿ ನಿರೋಪಿಲಾ ಹೋತಾ ಬಹುವಸು । ತರೀ ಕರ್ಮಯೋಗೀ ಕೇವೀ ಅತಿರಸು । ಪೋಖೀತಸಾ ಪುಢತೀ ?॥೨॥ ಐಸೇ ದ್ವಯ್ಯರ್ಥ ಹೇ ಬೋಲತಾ । ಆಮ್ಹಾ ನೇಣತಯಾಂಚ್ಯಾ ಚಿತ್ತಾ । ಆಪುಲಿಯೇ ಚಾಡೇ ಶ್ರೀಅನಂತಾ । ಉಮಜು ನೋಹೇ ॥೩॥ ಐಕೇ ಏಕಸಾರಾತೇ ಬೋಧಿಜೇ । ತರೀ ಏಕನಿಷ್ಠಚಿ ಬೋಲಿಜೇ । ಹೇ ಆಣಿಕೀ ಕಾಯ ಸಾಂಗಿಜೇ । ತುಮ್ಹಾ ಪ್ರತಿ ॥೪॥ ತರೀ ಯಾಚಿಲಾಗೀ ತುಮತೇ । ಮ್ಯಾ ರಾಉಳಾಸಿ ವಿನವಿಲೇ ಹೋತೇ । ಜೇ ಹಾ ಪರಮಾರ್ಥು ಧ್ವನಿತೇ । ನ ಬೋಲಾವಾ ॥೫॥ ಪರೀ ಮಾಗೀಲ ಅಸೋ ದೇವಾ । ಆತಾ ಪ್ರಸ್ತುತೀ ಉಕಲು ದೇಖಾವಾ । ಸಾಂಗೈ ದೋಹೀಮಾಜೀ ಬರವಾ । ಮಾರ್ಗು ಕವಣು ॥೬॥ ಜೋ ಪರಿಣಾಮೀಚಾ ನಿರ್ವಾಳಾ । ಅಚುಂಬಿತು ಯೇ ಫಳಾ ।  ಆಣಿ ಅನುಷ್ಠಿತಾ ಪ್ರಾಂಜಳಾ । ಸಾವಿಯಾಚಿ ॥೭॥ ಜೈಸೇ ನಿದ್ರೇಚೇ ಸುಖ ನ ಮೋಡೇ । ಆಣಿ ಮಾರ್ಗು ತರೀ ಬಹುಸಾಲ ಸಾಂಡೇ । ತೈಸೇ ಸೋಹೋಕಾಸನ ಸಾಂಗಡೇ । ಸೋಹಪೇ ಹೋಯ ॥೮॥ ಯೇಣೇ ಅರ್ಜುನಾಚೇನಿ ಬೋಲೇ । ದೇವೋ ಮನೀ ರಿಝುಲೇ । ಮಗ ಹೋಈಲ ಐಕೇ ಮ್ಹಣಿತಲೇ । ಸಂತೋಷೋನಿಯಾ ॥೯॥ ದೇಖಾ ಕಾಮಧೇನು ಐಸೀ ಮಾಯೇ । ಸದೈವಾ ಜಯಾ ಹೋಯೇ । ತೋ ಚಂದ್ರುಹೀ ಪರಿಲಾಹೇ । ಖೇಳಾವಯಾ ॥೧೦॥ ಪಾಹೇಪಾ ಶ್ರೀ ಶಂಭೂಚೀ ಪ್ರಸನ್ನತಾ ।ತಯಾ ಉಪಮನ್ಯೂಚಿಯಾ ಆರ್ತಾ । ಕಾಯ ಕ್ಷೀರಾಬ್ಧಿ ದೂಧ ಭಾತಾ । ದೇಇಜೇಚಿನಾ ? ॥೧೧॥

# ಸಾರ್ಥ ಶ್ರೀಜ್ಞಾನೇಶ್ವರೀ

## ಐದನೆಯ ಅಧ್ಯಾಯ

ಶ್ಲೋಕಾರ್ಥ :- ಅರ್ಜುನನು ಹೀಗೆಂದನು: ಕೃಷ್ಣಾ! ಒಂದು ಸಲ ಕರ್ಮಸನ್ಯಾಸವನ್ನು ಮತ್ತೊಂದು ಸಲ ಕರ್ಮಯೋಗವನ್ನು ಹೊಗಳುತ್ತಿರುವೆ. ಈ ಎರಡರಲ್ಲಿ ನನಗೆ ಶ್ರೇಯಸ್ಸನ್ನು ಮಾಡುವುದು ಯಾವುದು? ನಿಷ್ಕರ್ಷೆ ಯಾಗಿ ಹೇಳು ।೧॥

ಆಗ ಅರ್ಜುನನು ಶ್ರೀಕೃಷ್ಣನಿಗೆ ಹೇಳಿದನು:- ಹೇ ಕೃಷ್ಣನೇ ಎಂತಹ ನಿನ್ನ ಹೇಳಿಕೆ? ನೀವು ಯಾವುದಾದರೂ ಒಂದನ್ನು ಹೇಳಿದರೆ ಅದರ ವಿಚಾರ ಮಾಡಲು ಬರುವುದು ।೧॥

ಎಲ್ಲ ಕರ್ಮಗಳ ತ್ಯಾಗ ಮಾಡಬೇಕು ಎಂದು ನೀವೇ ಈ ಹಿಂದೆ ಪರಿಪರಿಯಾಗಿ ನಿರೂಪಿಸಿದಿರಿ ಮತ್ತು ಈಗ ಕರ್ಮ ಮಾಡಬೇಕು ಎಂಬ ವಿಷಯಕ್ಕೆ ಏಕೆ ಆಗ್ರಹ ಬೆಳೆಸುವಿರಿ? ।೨॥

ಹೇ ಅನಂತನೇ, ಈ ರೀತಿ ನಿಮ್ಮ ಎರಡು ಅರ್ಥದ ಹೇಳಿಕೆಯಿಂದ ನಮ್ಮಂತಹ ಅಜ್ಞಾನಿ ಜನರ ಮನಸ್ಸಿಗೆ ಇಚ್ಛೆಯಂತೆ ಒಂದನ್ನು ನಿರ್ಣಯಿಸಲು ಬರುವುದಿಲ್ಲ ।೩॥

ಇಲ್ಲಿ ನೋಡಿರಿ ; ಒಂದೇ ತತ್ತ್ವದ ಬೋಧೆಯನ್ನು ಮಾಡುವುದಿದ್ದರೆ ಒಂದೇ ಮಾರ್ಗವನ್ನು ಹೇಳಿರಿ. ಇದು ನಿಮಗೆ ಬೇರೆಯವರು ಕಲಿಸಿ ಕೊಡಬೇಕೇ? ।೪॥

ಅದಕ್ಕಾಗಿ ನಾನು ಈ ಪೂರ್ವದಲ್ಲಿ ಪೂಜ್ಯರಾದ ನಿಮಗೆ ಪರಮಾರ್ಥವನ್ನು ಗೂಢಾರ್ಥದಲ್ಲಿ ಹೇಳಬೇಡಿರಿ ಎಂದು ವಿನಂತಿಸಿಕೊಂಡಿದ್ದೇನೆ ।೫॥

ಆದರೆ, ದೇವಾ, ಈ ಹಿಂದಿನ ಮಾತಿರಲಿ, ಈಗ ಈ ಎರಡು ಮಾರ್ಗಗಳಲ್ಲಿ ಉತ್ತಮ ಮಾರ್ಗ ಯಾವುದು? ಇದನ್ನು ಸ್ಪಷ್ಟಮಾಡಿ ತಿಳಿಸಿರಿ ।೬॥

ಕೊನೆಯದಾಗಿ ಆರಿಸಿಕೊಂಡಂತಿರಬೇಕು, ತಪ್ಪದೇ ಫಲ ನೀಡುವಂತಹದ್ದಿರಬೇಕು, ಮತ್ತು ಆಚರಿಸಲಿಕ್ಕೆ ಸುಲಭ ವಾಗಿರಬೇಕು. ಈ ಪ್ರಕಾರವಾಗಿ ತಿಳಿಸಿರಿ ।೭॥

ಹೇಗೆಂದರೆ, ನಿದ್ರೆಯ ಸುಖವು ಭಂಗಗೊಳ್ಳಬಾರದು ಮತ್ತು ಮಾರ್ಗವು ಬಹಳಷ್ಟು ಕ್ರಮಿಸಿರಬೇಕು. ಆ ಪ್ರಕಾರ ವಾಗಿ ಕುಳಿತುಕೊಳ್ಳಲಿಕ್ಕೆ ಸುಖಾಸನ ಇರುವ ಪಾಲಕಿ ಸ್ವರೂಪ ವಾಹನದಂತೆ ಪರಮಾರ್ಥದ ಸುಲಭ ಸಾಧನೆ ತಿಳಿಸಿರಿ ।೮॥

ಈ ಪ್ರಕಾರ ಅರ್ಜುನನ ಮಾತು ಕೇಳಿ ದೇವನು ಮನ ದಲ್ಲಿಯೇ ಪ್ರಸನ್ನನಾಗಿ ಪರಮ ಉಲ್ಹಾಸದಿಂದ ಅರ್ಜುನ ನಿಗೆ ಹೇಳಿದನು:- ''ನೀನು ಕೇಳಿದಂತೆಯೇ ಹೇಳುವೆ, ಕೇಳು'' ।೯॥

(ಶ್ರೀಜಾನೇಶ್ವರರು ಶ್ರೋತೃಗಳವರಿಗೆ ಹೇಳುವರು) ಇಲ್ಲಿ ನೋಡಿರಿ, ಭಾಗ್ಯವಂತನಿಗೆ ತಾಯಿಯು ಕಾಮಧೇನು ವಿನಂತಿದ್ದರೆ ಆತನಿಗೆ ಆಡಲು ಆಕಾಶದಲ್ಲಿನ ಚಂದ್ರವೂ ಸಿಗಬಹುದು ।೧೦॥

ಇನ್ನೊಂದು ಹೀಗಿದೆ ನೋಡಿರಿ; ಶ್ರೀ ಶಂಕರನು ಉಪಮನ್ಯುನಿಗೆ ಪ್ರಸನ್ನನಾದ ಮೇಲೆ ಆತನ ಇಚ್ಛೆಯಂತೆ ಹಾಲು ಅನ್ನದ ಹೊರತಾಗಿ ಕ್ಷೀರ ಸಮುದ್ರವನ್ನೇ ಕೊಡ ಲಿಲ್ಲವೇ? ।೧೧॥

ತೈಸಾ ಔದಾರ್ಯಾಚಾ ಕುರುತಾ । ಶ್ರೀಕೃಷ್ಣು ಆಪು ಜಾಹಲಿಯಾ ಸುಭಟಾ । ಕಾ ಸರ್ವ ಸುಖಾಂಚಾ ವಸೌಟಾ । ತೋಚಿ ನೋಹಾವಾ ? ।೧೨॥ ಏಥ ಚಮತ್ಕಾರು ಕಾಯಸಾ । ಗೋಸಾವೀ ಶ್ರೀಲಕ್ಷ್ಮಿಕಾಂತಾಐಸಾ । ಆತಾ ಆಪುಲಿಯಾ ಸವೇಸಾ । ಮಾಗಾವಾ ಕೀ ।೧೩॥ ಮ್ಹಣೌನಿ ಅರ್ಜುನೇ ಮ್ಹಣಿತಲೇ । ತೇ ಹಾಂಸೋನಿ ಯೇರೆ ದಿಧಲೇ । ತೇಚಿ ಸಾಂಗೇನ ಬೋಲಿಲೇ । ಕಾಯ ಕೃಷ್ಣೇ ।೧೪॥

ಶ್ರೀಭಗವಾನುವಾಚ :-
ಸಂನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ ।
ತಯೋಸ್ತು ಕರ್ಮಸಂನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ ।೨॥

ತೋ ಮ್ಹಣೇ ಗಾ ಕುಂತೀಸುತಾ । ಹೇ ಸಂನ್ಯಾಸಯೋಗು ವಿಚಾರಿತಾ । ಮೋಕ್ಷಕರು ತತ್ತ್ವತಾ । ದೋನೀಹೀ ಹೋತೀ ।೧೫॥ ತರೀ ಜಾಣಾ ನೇಣಾ ಸಕಳಾ । ಹಾ ಕರ್ಮಯೋಗು ಕೀರ ಪ್ರಾಂಜಳಾ । ಜೈಸೀ ನಾವ ಸ್ತ್ರೀಯಾ ಬಾಳಾ । ತೋಯತರಣೀ ।೧೬॥ ತೈಸೇ ಸಾರಾಸಾರ ಪಾಹಿಜೇ ।ತರೀ ಸೋಹಪಾ ಹಾಚಿ ದೇಖಿಜೇ । ಯೇಣೇ ಸನ್ಯಾಸಫಳ ಲಾಹಿಜೇ । ಅನಾಯಾಸೇ।೧೭॥ ಆತಾ ಯಾಚಿಲಾಗೀ ಸಾಂಗೇನ । ತುಜ ಸನ್ಯಾಸಿಯಾಚೇ ಚಿನ್ಹ । ಮಗ ಸಹಜೇ ಹೇ ಅಭಿನ್ನ । ಜಾಣಸೀ ತೂ ।೧೮॥

ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।
ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬಂಧಾತ್ ಪ್ರಮುಚ್ಯತೇ ।೩॥

ತರೀ ಗೇಲಿಯಾಚೀ ಸೇ ನ ಕರೀ । ನ ಪವತಾ ಚಾಡ ನ ಧರೀ । ಜೋ ಸುನಿಶ್ಚಳು ಅಂತರೀ । ಮೇರು ಜೈಸಾ ।೧೯॥ ಆಣಿ ಮೀ ಮಾರೆಂಭೀ ಐಸೀ ಆಠವಣ । ವಿಸರಲೇ ಜಯಾಚೇ ಅಂತಃಕರಣ । ಪಾರ್ಥಾ ತೋ ಸಂನ್ಯಾಸೀ ಜಾಣ । ನಿರಂತರ ।೨೦॥ ಜೋ ಮನೇ ಐಸಾ ಜಾಹಲಾ । ಸಂಗೀ ತೋಚಿ ಸಾಂಡಿಲಾ । ಮ್ಹಣೌನಿ ಸುಖೇ ಸುಖ ಪಾವಲಾ । ಅಖಂಡಿತ ।೨೧॥ ಆತಾ ಗೃಹಾದಿಕ ಆಘವೇ । ತೇ ಕಾಂಹೀ ನಲಗೇ ತ್ಯಜಾವೇ । ಜೇ ಘೇತೇ ಜಾಹಲೇ ಸ್ವಭಾವೇ । ನಿಃಸಂಗು ಮ್ಹಣೌನಿ ।೨೨॥ ದೇಖೈ ಅಗ್ನಿ ವಿಝೋನಿ ಜಾಯೇ । ಮಗ ಜೇ ರಾಖೋಂಡಿ ಕೇವಳು ಹೋಯೇ । ತೈ ತೇ ಕಾಪುಸೇ ಗಿಂವಸೂಯೇ । ಜಿಯಾಪರೀ ।೨೩॥ ತೈಸಾ ಅಸತೇನಿ ಉಪಾಧೀ । ನಾಕಳಿಜೇ ತೋ ಕರ್ಮಬಂಧೀ । ಜಯಾಚಿಯೇ ಬುದ್ಧೀ । ಸಂಕಲ್ಪು ನಾಹೀ ।೨೪॥

ಅದರಂತೆ ಔದಾರ್ಯದ ಭಾಂಡಾರನಾಗಿರುವ ಶ್ರೀಕೃಷ್ಣ ಪರಮಾತ್ಮನು ಅರ್ಜುನನಿಗೆ ಪ್ರಾಪ್ತನಾಗಿರುವಾಗ್ಗೆ ಸುಖದ ವಸತಿಸ್ಥಾನ ಆತನೇಕಾಗಬಾರದು? ।।೧೨।।

ಅಥವಾ ಲಕ್ಷ್ಮಿಪತಿಯಂತೆ ಯಾರು ಮಾಲಕ ನಿರುವನೋ ಆತನಿಗೆ ತನ್ನ ಇಚ್ಛೆಯಂತೆ ಬೇಡುವುದರಲ್ಲಿ ಯಾವ ಚಮತ್ಕಾರವಿದೆ ? ।।೧೩।।

ಆದ್ದರಿಂದ ಅರ್ಜುನನು ಏನೇನು ಕೇಳಿದನೋ ಅದೆಲ್ಲವನ್ನೂ ಆತನಿಗೆ ಶ್ರೀಕೃಷ್ಣನು ನಗುನಗುತ್ತಾ ಹೇಳಿದನು. ಅದೇನೆಂಬುದು ಈಗ ಹೇಳುವೆ ಕೇಳಿರಿ ।।೧೪।।

ಶ್ಲೋಕಾರ್ಥ :- ಭಗವಂತನು ಹೀಗೆಂದನು:- ಸನ್ಯಾಸ ಹಾಗೂ ಕರ್ಮಯೋಗ ಎರಡೂ ಶ್ರೇಯಸ್ಸನ್ನುಂಟು ಮಾಡುವಂತಹವೇ. ಅವುಗಳಲ್ಲಿ ಕರ್ಮ ಸನ್ಯಾಸಕ್ಕಿಂತ ಕರ್ಮಯೋಗವು ಶ್ರೇಯಸ್ಕರ ।।೨।।

ಶ್ರೀಕೃಷ್ಣನು ಹೇಳಿದನು:- ಹೇ ಕುಂತಿಸುತನೇ, ನಿಜವಾಗಿ ವಿಚಾರ ಮಾಡಿದರೆ ಕರ್ಮಯೋಗ ಮತ್ತು ಕರ್ಮತ್ಯಾಗ ಇವು ಎರಡೂ ಮೋಕ್ಷದಾಯಕವೇ ಆಗಿವೆ ।।೧೫।।

ಆದಾಗ್ಯೂ, ಹಡಗವು ಯಾವ ರೀತಿಯಲ್ಲಿ ಹುಡುಗರಿಗೂ, ಸ್ತ್ರೀಯರಿಗೂ ನೀರಿನಿಂದ ಪಾರು ಮಾಡುವಂತೆ ತಿಳಿದವರಿಗೂ, ತಿಳಿಯಲಾರದವರಿಗೂ ಸಂಸಾರ ರೂಪ ಸಮುದ್ರದಿಂದ ಪಾರು ಮಾಡಲು ನಿಜವಾಗಿಯೂ ಕರ್ಮಯೋಗವು ಸುಲಭವಾಗಿದೆ ।।೧೬।।

ಸಾರಾಸಾರವಾಗಿ ವಿಚಾರ ಮಾಡಿದರೆ ಇದೇ ಯೋಗವು ಸುಲಭವಾಗಿದೆ ಮತ್ತು ಇದರ ಆಚರಣೆಯಿಂದ ಅನಾಯಾಸವಾಗಿ ಕರ್ಮತ್ಯಾಗದ ಫಲವು ದೊರಕುವುದು ।।೧೭।।

ಈ ಕಾರಣಕ್ಕಾಗಿ ನಿನಗೆ ಕರ್ಮ ಸನ್ಯಾಸದ ಲಕ್ಷಣ ಹೇಳುತ್ತೇನೆ. ಆಗ ನಿನಗೆ ಕರ್ಮಯೋಗ ಮತ್ತು ಸನ್ಯಾಸಯೋಗ ಇವೆರಡೂ ಒಂದೇಯಾಗಿದೆ ಎಂದು ಖಾತ್ರಿಯಾಗುವುದು ।।೧೮।।

ಶ್ಲೋಕಾರ್ಥ :- ಮಹಾಬಾಹೋ! ಒಂದು ಬೇಕೆನ್ನದೆ, ಒಂದು ಬೇಡವೆನ್ನದೆ ಇರುವವನೇ ನಿತ್ಯ ಸನ್ಯಾಸಿ. ದಂದ್ವ ರಹಿತನಾದ ಅವನು ಬಂಧನದಿಂದ ಸುಖವಾಗಿ ತಪ್ಪಿಸಿಕೊಳ್ಳುತ್ತಾನೆ ।।೩।।

ಯಾರು ಹೋದ ವಸ್ತುವಿನ ನೆನಪು ಮಾಡುವುದಿಲ್ಲ ಮತ್ತು ಸಿಗದೆ ಇದ್ದ ವಸ್ತುವಿನ ಇಚ್ಛೆ ಮಾಡುವುದಿಲ್ಲ ಮತ್ತು ಅಂತಃಕರಣವನ್ನು ಮೇರು ಪರ್ವತದಂತೆ ಸ್ಥಿರವಾಗಿ ಇಟ್ಟುಕೊಂಡಿರುವರು ।।೧೯।।

ಮತ್ತು ಪಾರ್ಥಾ, ಯಾರ ಅಂತಃಕರಣಕ್ಕೆ ನಾನು ಮತ್ತು ನನ್ನದು ಎಂಬುದು ನೆನಪು ಸಹ ಆಗುವುದಿಲ್ಲವೋ ಆತನು ನಿತ್ಯ ಸನ್ಯಾಸಿಯು. ಹೀಗೆ ತಿಳಿ ।।೨೦।।

ಯಾರ ಮನಸ್ಸಿನ ಸ್ಥಿತಿಯು ಹೀಗಾಗಿ ಮತ್ತು ವಿಷಯಗಳ ಇಚ್ಛೆಯನ್ನು ಬಿಟ್ಟು ಹೋಗಿರುವುದರಿಂದ ಆತನು ನಿಃಸಂಗನಾಗಿರುವನು. ಆತನಿಗೆ ಅಖಂಡ ಸುಖ ದೊರೆಯುವುದು।।೨೧।।

ಇಂತಹ ಮನುಷ್ಯನಿಗೆ ಗೃಹಾದಿಕ ಇತ್ಯಾದಿ ಯಾವುದೊಂದು ಬಿಡಬೇಕಾಗಿಲ್ಲ. ಏಕೆಂದರೆ ಇವುಗಳ ಸಂಬಂಧ ನನಗೆ ಇರುವುದಿಲ್ಲವೆಂದು ಮನಃಪೂರ್ವಕವಾಗಿ ತಿಳಿದಿರುತ್ತಾನೆ ।।೨೨।।

ಬೆಂಕಿಯು ಆರಿದ ಮೇಲೆ ಅದರಿಂದಾದ ಬೂದಿಯನ್ನು ಹಿಂಜಿದ ಅರಳೆಯಲ್ಲಿಯೂ ಕೂಡ ಇಡಲು ಬರುತ್ತದೆ ।।೨೩।।

ಅದರಂತೆ ಆತನ ಬುದ್ಧಿಯಲ್ಲಿ ನಾನು ಕರ್ತನಿದ್ದೇನೆ ಎಂಬ ಅಭಿಮಾನವಿರುವುದಿಲ್ಲ. ಆತನು ಶರೀರ ಇಂದ್ರಿಯಗಳ ಉಪಾಧಿಯಲ್ಲಿದ್ದರೂ ಕರ್ಮ ಬಂಧನದಲ್ಲಿ ಸಿಲುಕುವುದಿಲ್ಲ ।।೨೪।।

ಮ್ಹಣೌನಿ ಕಲ್ಪನಾ ಜೈ ಸಾಂಡೇ । ತೈಂಚಿ ಗಾ ಸಂನ್ಯಾಸು ಘಡೇ । ಇಯೇ ಕಾರಣೇ ದೋನೀ ಸಾಂಗಡೇ । ಸಂನ್ಯಾಸಯೋಗು ।೨೫॥

ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ ।
ಏಕಮಪ್ಯಾಸ್ಥಿತಃ ಸಮ್ಯಕ್ ಉಭಯೋರ್ವಿದಂತೇ ಫಲಮ್ ।೪॥

ಏರ್ಹ್ವೀ ತರೀ ಪಾರ್ಥಾ । ಜೇ ಮೂರ್ಖ ಹೋತೀ ಸರ್ವಥಾ । ತೇ ಸಾಂಖ್ಯಯೋಗು ಸಂಸ್ಥಾ । ಜಾಣತೀ ಕೇವೀ ?।೨೬॥ ಸಹಜೇ ತೇ ಅಜ್ಞಾನ । ಮ್ಹಣೌನಿ ಮ್ಹಣತೀ ತೇ ಭಿನ್ನ । ಏರ್ಹ್ವೀ ದೀಪಾಪ್ರತಿ ಕಾಈ ಆನಾನ । ಪ್ರಕಾಶು ಆಹಾತೀ ?।೨೭॥ ಪೈ ಸಮ್ಯಕ್ ಯೇಣೇ ಅನುಭವೇ । ಜಿಹೀ ದೇಖಿಲೇ ತತ್ತ್ವ ಆಘವೇ । ತೇ ದೋಹೀತೇಹೀ ಐಕ್ಯಭಾವೇ । ಮಾನಿತೀ ಗಾ ।೨೮॥

ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ ।
ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ।೫॥

ಆಣಿ ಸಾಂಖ್ಯೀ ಜೇ ಪಾವಿಜೇ । ತೇಂಚಿ ಯೋಗೀ ಗಮಿಜೇ । ಮ್ಹಣೌನಿ ಐಕ್ಯ ದೋಹಿಂತೇ ಸಹಜೇ । ಇಯಾಪರೀ ।೨೯॥ ದೇಖೈ ಆಕಾಶಾ ಆಣಿ ಅವಕಾಶಾ । ಭೇದು ನಾಹೀ ಜೈಸಾ । ತೈಸೇ ಐಕ್ಯ ಯೋಗಸಂನ್ಯಾಸಾ । ವೋಳಖೇ ಜೋ ।೩೦॥ ತಯಾಸೀಚಿ ಜಗೀ ಪಾಹಲೇ । ಆಪಣಪೇ ತೇಣೇಂಚಿ ದೇಖಿಲೇ । ಜಯಾ ಸಾಂಖ್ಯ ಯೋಗ ಜಾಣವಲೇ । ಭೇದೇವಿಣ ।೩೧॥

ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।
ಯೋಗಯುಕ್ತೋ ಮುನಿರ್ಬ್ರಹ್ಮ ನಚಿರೇಣಾಧಿಗಚ್ಛತಿ ।೬॥

ಜೇ ಯುಕ್ತಿಪಂಥೇ ಪಾರ್ಥಾ । ಚಢೇ ಮೋಕ್ಷಪರ್ವತಾ । ತೋ ಮಹಾಸುಖಾಚಾ ನಿಮಥಾ । ವಹಿಲಾ ಪಾವೇ ।೩೨॥ ಯೇರಾ ಯೋಗಸ್ಥಿತಿ ಜಯಾ ಸಾಂಡೇ । ತೋ ವಾಯಾಂಚೀ ಗಾ ಹವ್ಯಾಸೀ ಪಡೇ । ಪರಿ ಪ್ರಾಪ್ತಿ ಕಹೀ ನ ಘಡೇ । ಸಂನ್ಯಾಸಾಚೀ।೩೩॥

ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।
ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ।೭॥

ಜೇಣೇ ಭ್ರಾಂತೀಪಾಸೂನಿ ಹಿರತಲೇ । ಗುರುವಾಕ್ಯೇ ಮನ ಧುತಲೇ । ಮಗ ಆತ್ಮಸ್ವರೂಪೀ ಘಾತಲೇ । ಹಾರೌನಿಯಾ ।೩೪॥ ಜೈಸೇ ಸಮುದ್ರೀ ಲವಣ ನ ಪಡೇ । ತವ ವೇಗಳೇ ಅಲ್ಪ ಆವಡೇ । ಮಗ ಹೋಯ ಸಿಂಧೂಚಿ ಏವಢೇ । ಮಿಳೇ ತೆಂವ್ಹಾ ।೩೫॥

ಆದ್ದರಿಂದ ನಾನು ನನ್ನದೆಂಬ ಕಲ್ಪನೆ ಇಲ್ಲದಂತಾಗಲು ಆಗಲೇ ಸನ್ಯಾಸವು ಸಾಧಿಸುವುದು. ಇದೇ ಕಾರಣದಿಂದ ಕರ್ಮತ್ಯಾಗ, ಕರ್ಮಯೋಗಗಳೆರಡೂ ಒಂದೇ ಇರುವುವು ।೨೫॥

ಶ್ಲೋಕಾರ್ಥ :- ಜ್ಞಾನಯೋಗವು ಕರ್ಮ ಯೋಗವು ಬೇರೆ ಬೇರೆಯಂದು ಅಜ್ಞಾನಿಗಳು ಹೇಳುತ್ತಾರೆ. ಪಂಡಿತರು (ಹಾಗೆ) ಹೇಳುವುದಿಲ್ಲ; ಇವುಗಳಲ್ಲಿ ಸರಿಯಾಗಿ ಯಾವುದೋ ಒಂದನ್ನು ಆಚರಿಸಿದರೆ ಎರಡರ ಫಲವನ್ನೂ ಪಡೆಯಬಹುದು ।೪॥

ಪಾರ್ಥನೇ, ಸಾಮಾನ್ಯವಾಗಿ ಪೂರ್ಣ ಅಜ್ಞಾನಿಗಳಾಗಿರುವರೋ ಅವರಿಗೆ ಜ್ಞಾನ ಯೋಗ ಮತ್ತು ಕರ್ಮಯೋಗದ ವ್ಯವಸ್ಥೆ ಹೇಗೆ ತಿಳಿಯಬೇಕು? ।೨೬॥

ಅವರ ಸ್ವಾಭಾವಿಕ ಅಜ್ಞಾನದಿಂದ ಈ ಎರಡು ಯೋಗಗಳು ಭಿನ್ನವಾಗಿವೆ ಎಂದು ಹೇಳುವರು. ಆದರೆ ನೋಡು; ಅನೇಕ ಪ್ರಕಾರದ ದೀಪಗಳು ಭಿನ್ನ - ಭಿನ್ನವಾಗಿವೆಯೇ ? ।೨೭॥

ಆದ್ದರಿಂದ ಯಾರು ಸಮ್ಯಕ್ ಜ್ಞಾನದಿಂದ ಪರಬ್ರಹ್ಮ ರೂಪದ ತತ್ತ್ವವನ್ನು ತಿಳಿದಿರುತ್ತಾರೆಯೋ ಅವರು ಮಾತ್ರ ಈ ಎರಡೂ ಯೋಗಗಳು ಒಂದೇ ಎಂದು ಮನ್ನಿಸುತ್ತಾರೆ ।೨೮॥

ಶ್ಲೋಕಾರ್ಥ :- ಸಾಂಖ್ಯಯೋಗಿಗಳಿಗೆ ಲಭಿಸುವ ಫಲವು ಕರ್ಮಯೋಗಿಗಳಿಗೂ ಲಭಿಸುತ್ತದೆ. ಆ ಎರಡನ್ನು ಒಂದೇ ಎಂದು ತಿಳಿದವನು ಯಥಾರ್ಥ ಜ್ಞಾನಿ ।೫॥

ಮತ್ತು ಜ್ಞಾನಯೋಗದಿಂದ ಯಾವುದು ಪ್ರಾಪ್ತಿಯಾಗುವುದೋ ಅದೇ ಕರ್ಮಯೋಗದಿಂದ ದೊರಕುತ್ತದೆ. ಆದ್ದರಿಂದ ಈ ಎರಡರಲ್ಲೂ ಸಹಜವಾಗಿ ಐಕ್ಯವಿರುತ್ತದೆ ।೨೯॥

ಈಗ ನೋಡು, ಆಕಾಶ ಮತ್ತು ಅದರ ಅವಕಾಶ ಇವುಗಳಲ್ಲಿ ಬೇಧವಿಲ್ಲದಂತೆ ಕರ್ಮಯೋಗ ಮತ್ತು ಜ್ಞಾನ ಯೋಗಗಳಲ್ಲಿ ಐಕ್ಯಭಾವವಿರುತ್ತದೆ ।೩೦॥

ಯಾವನು ಜ್ಞಾನ, ಕರ್ಮಯೋಗಗಳನ್ನು ಭಿನ್ನಭಾವವಿಲ್ಲದ್ದು ಎಂದು ತಿಳಿದಿರುವನೋ, ಆತನಿಗೆ ಮಾತ್ರ ಈ ಜಗತ್ತಿನಲ್ಲಿ ಜ್ಞಾನಪ್ರಾಪ್ತಿಯಾಗಿ ಆತ್ಮಸ್ವರೂಪವನ್ನು ಕಾಣುವನು ।೩೧॥

ಶ್ಲೋಕಾರ್ಥ :- ಮಹಾಬಾಹೋ! ಕರ್ಮಯೋಗವನ್ನು ಆಚರಿಸದೆ ಸನ್ಯಾಸವನ್ನು ಪಡೆಯುವುದು ಕಷ್ಟ. ನಿಷ್ಕಾಮ ಕರ್ಮಯೋಗ ದ್ವಾರ ಸಂನ್ಯಾಸಿಯಾದವನು ಸುಲಭವಾಗಿ ಮುಕ್ತಿಯನ್ನು ಹೊಂದುತ್ತಾನೆ ।೬॥

ಪಾರ್ಥಾ, ಯಾವನು ಕರ್ಮ ಮಾರ್ಗದಿಂದ ಮೋಕ್ಷ ರೂಪ ಪರ್ವತವನ್ನು ಏರುವನೋ, ಅವನು ಆ ಪರ್ವತದ ಬ್ರಹ್ಮರೂಪಿ ಶಿಖರದ ಮೇಲೆ ಬೇಗನೇ ಹೋಗಿ ಮುಟ್ಟುವನು ।೩೨॥

ಸಾಮಾನ್ಯವಾಗಿ ಯಾರು ಕರ್ಮ ಮಾರ್ಗದ ಆಚರಣೆ ಮಾಡದೇ ಅವರು ಜ್ಞಾನಪ್ರಾಪ್ತಿಯ ವಿಷಯಕ್ಕಾಗಿ ಹವ್ಯಾಸ ಪಡುತ್ತಾರೆಯೋ, ಅವರಿಗೆ ಎಂದೂ ಜ್ಞಾನ ಪ್ರಾಪ್ತವಾಗುವುದಿಲ್ಲ ।೩೩॥

ಶ್ಲೋಕಾರ್ಥ .:- ಕರ್ಮಯೋಗಯುಕ್ತನು, ಪರಿಶುದ್ಧಾಂತಃ ಕರಣವುಳ್ಳವನು, ಸ್ವಾಧೀನಚಿತ್ತನು, ಜಿತೇಂದ್ರಿಯನು, ತನ್ನಂತೆ ಸಮಸ್ತ ಭೂತಗಳನ್ನು ನೋಡುವವನಾದ ಪುರುಷನು ಕರ್ಮಗಳನ್ನು ಮಾಡುತ್ತಿದ್ದರೂ ಬದ್ಧನಲ್ಲ ।೭॥

ಯಾವ ಪುರುಷನು ತನ್ನ ಮನಸ್ಸನ್ನು ಭ್ರಾಂತಿಯಿಂದ ಬಿಡಿಸಿಕೊಂಡು ಗುರುವಾಕ್ಯಗಳಿಂದ ಸ್ವಚ್ಛವಾಗಿ ತೊಳೆದುಕೊಂಡು ಆತ್ಮಸ್ವರೂಪದಲ್ಲಿ ಲೀನನಾಗಿರುತ್ತಾನೆಯೋ ।೩೪॥

ಎಲ್ಲಿಯವರೆಗೆ ಸಮುದ್ರದಲ್ಲಿ ಉಪ್ಪು ಹಾಕಿಲ್ಲವೋ, ಅಲ್ಲಿಯವರೆಗೆ ಅದು ಸಮುದ್ರದಿಂದ ಬೇರೆ ಇದ್ದು ಸಣ್ಣ ಆಕಾರದಿಂದ ಕಾಣಿಸುತ್ತದೆ. ಅದೇ ಉಪ್ಪನ್ನು ಸಮುದ್ರದಲ್ಲಿ ಹಾಕಿದಾಗ ಸಮುದ್ರದ ತುಂಬ ಪಸರಿಸುವುದು ।೩೫॥

ತೈಸೇ ಸಂಕಲ್ಪೋನಿ ಕಾಢಿಲೇ । ಜಯಾಚೇ ಮನಚಿ ಚೈತನ್ಯ ಜಾಹಲೇ । ತೇಣೇ ಏಕದೇಶಿಯೇ ಪರೀ ವ್ಯಾಪಿಲೇ । ಲೋಕತ್ರಯ ॥೩೬॥ ಆತಾ ಕರ್ತಾ ಕರ್ಮ ಕರಾವೇ । ಹೇ ಖುಂಟಲೇ ತಯಾ ಸ್ವಭಾವೇ । ಆಣಿ ಕರೀ ಜರ್ಹೀ ಆಘವೇ । ತರ್ಹೀ ಅಕರ್ತಾ ತೋ ॥೩೭॥

ನೈವ ಕಿಂಚಿತ್ಕರೋಮಿತಿ ಯುಕ್ತೋ ಮನ್ಯೇತ ತತ್ತ್ವವಿತ್ ।
ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ ಅಶ್ನನ್ ಗಚ್ಛನ್ ಸ್ವಪನ್ ಶ್ವಸನ್ ॥೮॥

ಪ್ರಲಪನ್ ವಿಸೃಜನ್ ಗೃಹ್ಣನ್ ಉನ್ಮಿಷನ್ನಿಮಿಷನ್ನಪಿ ।
ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ॥೯॥

ಜೇ ಪಾರ್ಥಾ ತಯಾ ದೇಹೀ । ಮೀ ಐಸಾ ಆಠಊ ನಾಹೀ । ತರೀ ಕರ್ತೃತ್ವ ಕೈಚೇ ಕಾಈ । ಉರೇ ಸಾಂಗೈ? ॥೩೮॥ ಐಸೇ ತನುತ್ಯಾಗೇ ವೀಣ । ಅಮೂರ್ತಾಚೇ ಗುಣ । ದಿಸತೀ ಸಂಪೂರ್ಣ । ಯೋಗಯುಕ್ತಾ ॥೩೯॥ ಏರ್ಹವೀ ಆಣಿಕಾಂಚಿಯೇ ಪರೀ । ತೋಹೀ ಏಕ ಶರೀರೀ । ಅಶೇಷಾಹೀ ವ್ಯಾಪಾರೀ । ವರ್ತತು ದಿಸೇ ॥೪೦॥ ತೋಹೀ ನೇತ್ರೀ ಪಾಹೇ । ಶ್ರವಣೀ ಐಕತು ಆಹೇ । ಪರೀ ತೇಥೀಚಾ ಸರ್ವಥಾ ನೋಹೇ । ನವಲ ದೇಖೇ ॥೪೧॥ ಸ್ಪರ್ಶಾಸಿ ತರೀ ಜಾಣೇ । ಪರಿಮಳು ಸೇವೀ ಘ್ರಾಣೇ । ಅವಸರೋಚಿತ ಬೋಲಣೇ । ತಯಾಹೀ ಆಥೀ ॥೪೨॥ ಆಹಾರಾತೇ ಸ್ವೀಕಾರೀ । ತ್ಯಜಾವೇ ತೇ ಪರಿಹರೀ । ನಿದ್ರೇಚಿಯಾ ಅವಸರೀ । ನಿದಿಜೇ ಸುಖೇ ॥೪೩॥ ಆಪುಲೇನಿ ಇಚ್ಛಾವಶೇ । ತೋಹೀ ಗಾ ಚಾಲತು ದಿಸೇ । ಪೈ ಸಕಳ ಕರ್ಮ ಐಸೇ । ರಾಹಟೇ ಕೀರ ॥೪೪॥ ಹೇ ಸಾಂಗೋ ಕಾಈ ಏಕೈಕ । ದೇಖೇ ಶ್ವಾಸೋಚ್ಛ್ವಾಸಾದಿಕ । ಆಣಿ ನಿಮಿಷೋನ್ಮಿಷ । ಆದಿಕರೂನೀ ॥೪೫॥ ಪಾರ್ಥಾ ತಯಾಚೇ ಠಾಯೀ । ಹೇ ಆಘವೇಂಚಿ ಆಥಿ ಪಾಹೀ । ಪರೀ ತೋ ಕರ್ತಾ ನವ್ಹೇ ಕಾಂಹೀ । ಪ್ರತೀತಿಬಳೇ ॥೪೬॥ ಜೈ ಭ್ರಾಂತಿ ಸೇಜೇ ಸುತಲಾ । ತೈ ಸ್ವಪ್ನಸುಖೇ ಭೂತಲಾ । ಮಗ ತೋ ಜ್ಞಾನೋದಯೀ ಚೇಇಲಾ । ಮ್ಹಣೌನಿಯಾ ॥೪೭॥

ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ ।
ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥೧೦॥

ಆತಾ ಅಧಿಷ್ಠಾನಸಂಗತೀ । ಅಶೇಷಾಹೀ ಇಂದ್ರಿಯವೃತ್ತೀ । ಆಪುಲಾಲಿಯಾ ಅರ್ಥೀ । ವರ್ತತ ಆಹಾತೀ ॥೪೮॥

ಅದರಂತೆ ಮನಸ್ಸು ಸಂಕಲ್ಪಗಳಿಂದ ಬಿಡುಗಡೆಯಾಗಿ ಬ್ರಹ್ಮರೂಪದಲ್ಲಿ ಕೂಡಿರುವುದರಿಂದ ಆತನ ಮನಸ್ಸು ಕಾಣಲು ಏಕದೇಶಿ ನಿಜ. ಆದರ ತ್ರಿಭುವನವನ್ನು ವ್ಯಾಪಿಸಿರುವನು ।೩೬॥

ಆಗ ಆತನಿಗೆ ''ನಾನೊಬ್ಬ ಕರ್ತನು'' ''ಇದೊಂದು ಕರ್ಮವು'', '' ಇಂತಹ ಕಾರ್ಯ ಮಾಡಬೇಕು'' ಈ ಮಾತುಗಳು ಸ್ವಾಭಾವಿಕವಾಗಿ ಇರುವುದಿಲ್ಲ. ಆತನು ಎಲ್ಲ ಕರ್ಮಗಳನ್ನು ಮಾಡಿದರೂ ಅಕರ್ತನಾಗಿರುವನು ।೩೭॥

ಶ್ಲೋಕಾರ್ಥ :- ತತ್ತ್ವವೇತ್ತನಾದ ಕರ್ಮಯೋಗಿಯು ಎಲ್ಲವನ್ನೂ ಮಾಡಿಯೂ ಮಾಡದವನು. ನೋಡಿದರೂ, ಕೇಳಿದರೂ, ಮುಟ್ಟಿದರೂ, ಮೂಸಿದರೂ, ತಿಂದರೂ, ತಿರುಗಿದರೂ, ನಿದ್ರಿಸಿದರೂ, ಉಸಿರಾಡಿದರೂ ।೮॥

ಶ್ಲೋಕಾರ್ಥ :- ಮಾತನಾಡಿದರೂ, ಬಿಟ್ಟರೂ, ಗ್ರಹಣ ಮಾಡಿದರೂ, ರೆಪ್ಪೆ ಹೊಡೆದರೂ, ಏನು ಮಾಡುತ್ತಿದ್ದರೂ ಆಯಾ ಇಂದ್ರಿಯಗಳು ಆಯಾ ವಿಷಯಗಳಲ್ಲಿ ಪ್ರವರ್ತಿಸುತ್ತವೆ; ತಾನು ಏನೂ ಮಾಡುವುದಿಲ್ಲವೆಂದು ಆತನ ನಿಶ್ಚಯ ।೯॥

ಏಕೆಂದರೆ ಪಾರ್ಥಾ ಆತನಿಗೆ ದೇಹದಲ್ಲಿ ''ನಾನು'' ಎಂಬುವ ಬುದ್ಧಿಯ ನೆನಪು ಸಹ ಇಲ್ಲದಿರುವಾಗ ''ನಾನು ಕರ್ತಾ'' ಎಂಬ ಅಭಿಮಾನ ಎಲ್ಲಿಂದ ಉಳಿಯಬೇಕು? ಹೇಳು ನೋಡೋಣ! ।೩೮॥

ಈ ಪ್ರಕಾರವಾಗಿ ಶರೀರದ ತ್ಯಾಗ ಮಾಡದೇ ಆ ಯೋಗಯುಕ್ತ ಪುರುಷನ ಶರೀರದಲ್ಲಿ ನಿರಾಕಾರ ಬ್ರಹ್ಮನ ಎಲ್ಲ ಗುಣಗಳು ದೃಷ್ಟಿಗೆ ಬೀಳುವುವು ।೩೯॥

ಉಳಿದ ಲೋಕದ ಜನರಂತೆ ಆತನೂ ಸಹ ಶರೀರ ದಾರಿಯಾಗಿ ಎಲ್ಲ ವ್ಯಾಪಾರಗಳನ್ನು ಮಾಡುವನಂತೆ ಕಾಣುತ್ತಾನೆ ।೪೦॥

ಆತನು ಕಣ್ಣಿನಿಂದ ನೋಡುತ್ತಾನೆ. ಕಿವಿಯಿಂದ ಕೇಳುತ್ತಾನೆ, ಆದರೆ ಶರೀರಭಾವದಲ್ಲಿ ಆತನು ಲಿಪ್ತನಾಗುವುದಿಲ್ಲ. ಇದೆಂತಹ ಆಶ್ಚರ್ಯ! ।೪೧॥

ಆತನಿಗೆ ಸ್ಪರ್ಶವಾದದ್ದು ತಿಳಿಯುವುದು. ಆತನು ಮೂಗಿನಿಂದ ವಾಸನೆ ತೆಗೆದುಕೊಳ್ಳುತ್ತಾನೆ ಮತ್ತು ಆತನಿಗೆ ಸಮಯೋಚಿತ ಭಾಷಣವನ್ನು ಮಾಡಲು ಬರುತ್ತದೆ ।೪೨॥

ಆತನು ಊಟ ಮಾಡುವನು. ವಿಸರ್ಜಿಸುವುದೆಲ್ಲವನ್ನೂ ವಿಸರ್ಜಿಸುವನು. ಮಲಗುವ ವೇಳೆಯಲ್ಲಿ ಸುಖವಾಗಿ ನಿದ್ರಿಸುವನು।೪೩॥

ತನ್ನ ಇಚ್ಛೆಯಂತೆ ನಡೆಯುತ್ತಾನೆ ಮತ್ತು ಅದರಂತೆಯೇ ಯಾವ ಯಾವ ವೇಳೆಯಲ್ಲಿ ಯಾವ ಯಾವ ಕರ್ಮಗಳನ್ನು ಮಾಡಬೇಕಾಗಿದೆಯೋ ಅವೆಲ್ಲವನ್ನೂ ಮಾಡುವನು ।೪೪॥

ಆತನ ಒಂದೊಂದೇ ಕಾರ್ಯಗಳನ್ನು ಎಷ್ಟೆಂದು ಹೇಳಲಿ? ಹೀಗಿದೆ ನೋಡು; ಆ ಕರ್ಮಯೋಗಿಯ ಶ್ವಾಸೋಚ್ಛ್ವಾಸ ಮಾಡುವುದು ಹಾಗೆಯೇ ಕಣ್ಣು ಮುಚ್ಚುವುದು ತೆಗೆಯುವುದು ಹೀಗೆ ಎಲ್ಲವನ್ನೂ ಮಾಡುವನು ।೪೫॥

ಅರ್ಜುನಾ ಹೀಗೆ ನೋಡು; ಆತನಲ್ಲಿ ಕರ್ಮಗಳು ಎಲ್ಲವೂ ಇರುವುವು. ಆದರೆ ಬ್ರಹ್ಮಭಾವದ ಬಲದಿಂದ ಆತನು ಈ ಕರ್ಮಗಳ ''ಕರ್ತಾ'' ಮಾತ್ರ ತಾನಾಗಿರುವುದಿಲ್ಲ ।೪೬॥

ಭ್ರಮೆಯ ಹಾಸಿಗೆಯ ಮೇಲೆ ಮಲಗಿಕೊಂಡು ವಿಶ್ವಸ್ವಪ್ನದಲ್ಲಿನ ವಿಷಯಿಕ ಸುಖದಿಂದ ಸುಖಿಯಾಗಿದ್ದನು. ಆಗ ಬ್ರಹ್ಮಜ್ಞಾನದ ಉದಯವಾಗುತ್ತಲೇ ಎಚ್ಚರಾದನು. ಆದ್ದರಿಂದ ಆತನು ಕರ್ತಾ ಭೋಕ್ತಾನಾಗಿರುವುದಿಲ್ಲ ।೪೭॥

ಶ್ಲೋಕಾರ್ಥ :- ಈಶ್ವರಾರ್ಪಣ ಬುದ್ಧಿಯಿಂದ ಫಲಾಸಕ್ತಿಯನ್ನು ಬಿಟ್ಟು ಕರ್ಮ ಮಾಡುವವನನ್ನು, ಕಮಲದ ಎಲೆಯನ್ನು ನೀರು ಮುಟ್ಟದಂತೆ, ಪಾಪವು ಅಂಟುವುದಿಲ್ಲ ।೧೦॥

ಈಗ ಆತ್ಮದ ಆಶ್ರಯದಿಂದ ಎಲ್ಲ ಇಂದ್ರಿಯ ವೃತ್ತಿಗಳು ತಮ್ಮ ತಮ್ಮ ವಿಷಯಗಳಲ್ಲಿ ವರ್ತಿಸುತ್ತಿರುತ್ತವೆ ।೪೮॥

ದೀಪಾಚೇನಿ ಪ್ರಕಾಶೇ । ಗೃಹೀಂಚೇ ವ್ಯಾಪ್ಯಾರ ಜೈಸೇ । ದೇಹೀ ಕರ್ಮಜಾತ ತೈಸೇ । ಯೋಗಯುಕ್ತಾ ।೫೯।। ತೋ ಕರ್ಮೇ ಕರೀ ಸಕಳೇ । ಪರೀ ಕರ್ಮಬಂಧಾ ನಾಕಳೇ । ಜೈಸೇ ನ ಸಿಂಪೇ ಜಳೀ ಜಳೇ । ಪದ್ಮಪತ್ರ ।೬೦।।

ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ।
ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ ।೧೧।।

ದೇಖೈ ಬುದ್ಧೀಚೇ ಭಾಷ ನೇಣಿಜೇ । ಮನಾಚಾ ಅಂಕುರ ನುದ್ಯೈಜೇ । ಐಸಾ ವ್ಯಾಪಾರು ತೋ ಬೋಲಿಜೇ । ಶರೀರು ಗಾ ।೬೧।। ಹೇಚ ಮರಾಠೇ ಪರಿಯೇಶೀ । ತರೀ ಬಾಳಕಾಚೀ ಚೇಷ್ಟಾ ಜೈಶೀ । ಯೋಗಿಯೇ ಕರ್ಮೇ ಕರಿತೀ ತೈಶೀ । ಕೇವಳಾ ತನು ।೬೨।। ಮಗ ಪಾಂಚಭೌತಿಕ ಸಂಚಲೇ । ಜೇವ್ಹಾ ಶರೀರ ಅಸೇ ನಿದೇಲೇ । ತೇಥ ಮನಚಿ ರಾಹಾಟೇ ಏಕಲೇ । ಸ್ವಪ್ನೀ ಜೇವೀ ।೬೩।। ನವಲ ಐಕೇ ಧನುರ್ಧರಾ । ಕೈಸಾ ವಾಸನೇಚಾ ಸಂಸಾರಾ । ದೇಹಾ ಹೋಊ ನೇದೀ ಉಜಗರಾ । ಪರೀ ಸುಖದುಃಖೇ ಭೋಗೀ ।೬೪।। ಇಂದ್ರಿಯಾಂಚ್ಯಾ ಗಾಂವೀ ನೇಣಿಜೇ । ಐಸಾ ವ್ಯಾಪಾರು ಜೋ ನಿಪಜೇ । ತೋ ಕೇವಳು ಗಾ ಮ್ಹಣಿಜೇ । ಮಾನಸಾಚಾ ।೬೫।। ಯೋಗಿಯೇ ತೋಹೀ ಕರಿತೀ । ಪರಿ ಕರ್ಮೇ ತೇ ನ ಬಂಧಿಜತೀ । ಜೇ ಸಾಂಡಿಲೀ ಆಹೇ ಸಂಗತೀ । ಅಹಂಭಾವಾಚೀ ।೬೬।। ಆತಾ ಜಾಹಾಲಿಯಾ ಭ್ರಮಹತ । ಜೈಸೇ ಪಿಶಾಚಾಚೇ ಚಿತ್ತ । ಮಗ ಇದ್ರಿಯಾಂಚೇ ಚೇಷ್ಟಿತ । ವಿಕಳು ದಿಸೇ ।೬೭।। ಸ್ವರೂಪ ತರೀ ದೇಖೇ । ಆಳವಿಲೇ ಆಇಕೇ । ಶಬ್ದು ಬೋಲೇ ಮುಖೇ । ಪರೀ ಜ್ಞಾನ ನಾಹೀ ।೬೮।। ಹೇ ಅಸೋ ಕಾಜೇವೀಣ । ಜೇ ಜೇ ಕಾಂಹೀ ಕಾರಣ । ತೇ ಕೇವಳ ಕರ್ಮ ಜಾಣ । ಇಂದ್ರಿಯಾಂಚೇ ।೬೯।। ಮಗ ಸರ್ವತ್ರ ಜೇ ಜಾಣತೇ । ತೇ ಬುದ್ಧೀಚೇ ಕರ್ಮ ನಿರುತೇ । ಓಳಖ ಅರ್ಜುನಾತೇ । ಮ್ಹಣೇ ಹರೀ ।೭೦।। ತೇ ಬುದ್ಧೀ ಧುರೇ ಕರೂನೀ । ಕರ್ಮ ಕರಿತೀ ಚಿತ್ತ ದೇಊನೀ । ಪರೀ ತೇ ನೈಷ್ಕರ್ಮ್ಯಾಪಾಸುನೀ । ಮುಕ್ತ ದಿಸತಿ ।೭೧।। ಜೇ ಬುದ್ಧೀಚಿಯೇ ಠಾವೂನಿ ದೇಹೀ । ತಯಾ ಅಹಂಕಾರಾಚೀ ಸೇಚಿ ನಾಹೀ । ಮ್ಹಣೌನಿ ಕರ್ಮ ಕರಿತಾ ಪಾಹೀ । ಚೋಖಾಳಲೇ ।೭೨।। ಅಗಾ ಕರಿತೇ ನವೀಣ ಕರ್ಮ । ತೇಚಿ ತೇ ನೈಷ್ಕರ್ಮ್ಯ । ಹೇ ಜಾಣತೀ ಸುವರ್ಮ । ಗುರುಗಮ್ಯ ಜೇ ।೭೩।। ಆತಾ ಶಾಂತರಸಾಚೇ ಭರಿತೇ । ಸಾಂಡೀತ ಆಹೇ ಪಾತ್ರಾತೇ । ಜೇ ಬೋಲಣೇ ಬೋಲಾಪರೌತೇ । ಬೋಲವಲೇ ।೭೪।।

ದೀಪದ ಬೆಳಕಿನಿಂದ ಮನೆಯಲ್ಲಿ ಯಾವ ಪ್ರಕಾರವಾಗಿ ವ್ಯವಹಾರ ನಡೆಯುತ್ತವೆಯೋ ಅದೇ ಪ್ರಕಾರವಾಗಿ ಜ್ಞಾನಿ ಪುರುಷರಿಂದ ಕರ್ಮಗಳು ನಡೆಯುತ್ತಿರುತ್ತವೆ ।೪೯॥

ಕಮಲದ ಎಲೆಯು ನೀರಿನಲ್ಲಿದ್ದರೂ ನೀರಿನಿಂದ ತೋಯುವುದಿಲ್ಲ (ಅಲಿಪ್ತವಾಗಿರುತ್ತದೆ). ಅದರಂತೆ ಜ್ಞಾನಿಯು ಎಲ್ಲ ಕರ್ಮಗಳನ್ನು ಮಾಡುತ್ತಿದ್ದರೂ ಕರ್ಮ ಬಂಧನಕ್ಕೆ ಒಳಗಾಗುವುದಿಲ್ಲ ।೫೦॥

ಶ್ಲೋಕಾರ್ಥ :- ಕರ್ಮಯೋಗಿಗಳು ಆಸಕ್ತಿಯನ್ನು ಬಿಟ್ಟು, ಶರೀರದಿಂದ, ಮನಸ್ಸಿನಿಂದ, ಬುದ್ಧಿಯಿಂದ, ಆಯಾ ಇಂದ್ರಿಯಗಳಿಂದ, ಆತ್ಮಶುದ್ಧಿಗಾಗಿ ಕರ್ಮಗಳನ್ನು ಮಾಡುತ್ತಾರೆ ।೧೧॥

ಯಾರ ಕರ್ಮದಲ್ಲಿ ಬುದ್ಧಿಪೂರ್ವಕತನ ಇರುವುದಿಲ್ಲ ಮತ್ತು ಮನಸ್ಸಿನ ಅಂಕುರವೂ ಉತ್ಪನ್ನವಾಗಿರುವುದಿಲ್ಲ. ಇದಕ್ಕೆ ''ಕಾಯಿಕ ಕರ್ಮ''ವೆಂದು ಕರೆಯುವರು ।೫೧॥

ಇದಕ್ಕಿಂತಲೂ ಸರಳ ಸ್ಪಷ್ಟವಾಗಿ ಹೇಳುವೆ ಕೇಳು, ಸಣ್ಣ ಹುಡುಗರ ವ್ಯಾಪಾರಗಳೆಲ್ಲವೂ ಮನಬುದ್ಧಿಗೆ ಬಿಟ್ಟು ನಡೆಯುವುವು. ಅದರಂತೆ ಯೋಗಿಗಳು ಕೇವಲ ದೇಹದಿಂದ ಕರ್ಮ ಮಾಡುವರು ।೫೨॥

ಆಗ ಪಂಚಭೂತಾತ್ಮಕ ಶರೀರವು ಮಲಗಿಕೊಂಡಿರುವಾಗ್ಗೆ ಈ ಮನಸ್ಸು ಒಂದೇ ಸ್ವಪ್ನದಂತೆ ವ್ಯವಹಾರ ಮಾಡುತ್ತಿರುತ್ತದೆ ।೫೩॥

ಅರ್ಜುನಾ, ಇದೊಂದು ಬಹಳ ಆಶ್ಚರ್ಯ ಕಾರಕವಾಗಿದೆ; ವಾಸನೆಯ ಗುಣ ವ್ಯಾಪಾರವು ಅದು ದೇಹಕ್ಕೆ ತಿಳಿಯಗೊಡದೇ ಅದರಿಂದ ಸುಖದುಃಖಗಳನ್ನು ಭೋಗಿಸಲು ಕಾರಣವಾಗುವುದು ।೫೪॥

ಇಂದ್ರಿಯಗಳಿಗೆ ಇವುಗಳ ವಾರ್ತೆಯೂ ಸಹ ಮುಟ್ಟದೇ ವ್ಯವಹಾರಗಳು ನಡೆಯುತ್ತವೆ. ಇದಕ್ಕೆ ಕೇವಲ ''ಮನೋವ್ಯಾಪಾರ'' ಎನ್ನಬೇಕು ।೫೫॥

ಯೋಗಿ ಜನರು ಮನೋವ್ಯಾಪಾರದ ವ್ಯವಹಾರವನ್ನು ಮಾಡುವರು. ಆದರೆ ಅವರು ಕರ್ಮದಿಂದ ಬಂಧಿಸಲ್ಪಡುವುದಿಲ್ಲ. ಕಾರಣವೇನೆಂದರೆ ಅವರು ಅಹಂಕಾರದ ತ್ಯಾಗ ಮಾಡಿರುವರು ।೫೬॥

ಒಬ್ಬ ಮನುಷ್ಯನು ಹುಚ್ಚನಾದರೆ ಅಥವಾ ಪಿಶಾಚಿ ಬಾಧೆಯವನಾದರೆ ಚಿತ್ತವಿದ್ದರೂ ಅದಕ್ಕೆ ತಿಳಿಯಗೊಡದೇ ಎಲ್ಲ ಇಂದ್ರಿಯ ಕಾರ್ಯಗಳು ಆಗುವುವು ।೫೭॥

ಆತನು ರೂಪ ನೋಡುವನು, ಯಾರಾದರೂ ಒದರಿದರೆ ಕೇಳುವನು. ಮುಖದಿಂದ ಶಬ್ದಗಳನ್ನು ಉಚ್ಚರಿಸುವನು, ಆದರೆ ಆತನಿಗೆ ತನ್ನ ಎಚ್ಚರ ಇರುವುದಿಲ್ಲ ।೫೮॥

ಇನ್ನು ಸಾಕು, ಒಟ್ಟನಲ್ಲಿ ತತ್ತ್ವಾರ್ಥವು ಏನೆಂದರೆ ಕಾರಣವಿಲ್ಲದೇ ಮಾಡುವ ಕಾರ್ಯಗಳೆಲ್ಲವೂ '' ಇಂದ್ರಿಯ ಕರ್ಮ''ವೆಂದು ತಿಳಿ ।೫೯॥

ಅರ್ಜುನನಿಗೆ ಶ್ರೀಕೃಷ್ಣನು ಹೇಳುವನು:- ಇದರ ಹೊರತಾಗಿ ಎಲ್ಲವನ್ನೂ ತಿಳಿದು ಮಾಡುವ ಯಾವ ಕರ್ಮವು ಅದು ''ಬುದ್ಧಿಯ ಕರ್ಮ''ವೆಂದು ತಿಳಿ ।೬೦॥

ಆ ಯೋಗಿಗಳು ಬುದ್ಧಿಗೆ ಮುಂದು ಮಾಡಿ ಮನಸ್ಸಿನಿಂದ ಕರ್ಮದ ಆಚರಣೆ ಮಾಡುವರು. ಆದರೆ ಅವರು ಕರ್ಮಾತೀತರಾಗಿ ಬ್ರಹ್ಮಭಾವದ ಆಚೆ ಇರುವುದರಿಂದ ಮುಕ್ತರಿರುವರು ।೬೧॥

ಏಕೆಂದರೆ ಬುದ್ಧಿಯಿಂದ ಹಿಡಿದು ದೇಹದವರೆಗೆ ಅವರಿಗೆ ಅಹಂಕಾರದ ನೆನಪು ಸಹ ಇರುವುದಿಲ್ಲ. ಆದ್ದರಿಂದ ಅವರು ಕರ್ಮ ಮಾಡುತ್ತಿದ್ದರೂ ಶುದ್ಧರು ।೬೨॥

''ಕರ್ಮ ಮಾಡುವವನು ನಾನಿದ್ದೇನೆ '' ಎಂಬ ಈ ಭಾವವಿಲ್ಲದೇ ಮಾಡುವ ಕರ್ಮಗಳು ಅವು ''ನೈಷ್ಕರ್ಮ್ಯ'' ವಾಗಿವೆ. ಗುರುಗಳಿಂದ ತಿಳಿಯುವ ಈ ತತ್ತ್ವವನ್ನು ಇವರು ತಿಳಿದಿರುತ್ತಾರೆ ।೬೩॥

ಈಗ ನಾವು ಶಬ್ದದಿಂದ ಪ್ರತಿಪಾದನೆ ಮಾಡಲು ಬಾರದ್ದನ್ನು ಶಬ್ದದಿಂದ ಹೇಳಿದೆವು. ಆದ್ದರಿಂದ ಶಾಂತಿ ರಸವು ಇದ್ದ ಪಾತ್ರೆಯು ತುಂಬಿ ತುಳುಕಿ ಚೆಲ್ಲುತ್ತಿರುವುದು ।೬೪॥

ಏಥ ಇಂದ್ರಿಯಾಂಚಾ ಪಾಂಗು । ಜಯಾ ಫಿಟಲಾ ಆಹೇ ಚಾಂಗು । ತಯಾಸೀಚಿ ಆಥೀ ಲಾಗು । ಪರಿಸಾವಯಾ ॥೬೫॥ ಹಾ ಅಸೋ ಅತಿಪ್ರಸಂಗು । ನ ಸಾಂಡಿ ಪಾ ಕಥಾಲಾಗು । ಹೋಈಲ ಶ್ಲೋಕಸಂಗತಿ ಭಂಗು । ಮ್ಹಣೌನಿಯಾ ॥೬೬॥ ಜೇ ಮನಾ ಆಕಳಿತಾ ಕುವಾಡೇ । ಘಾಘುಸಿತಾ ಬುದ್ಧೀ ನಾತುಡೇ । ತೇ ದೈವಾಚೇನಿ ಸುರವಾಡೇ । ಸಾಂಗವಲೇ ತುಜ ॥೬೭॥ ಜೇ ಶಬ್ದಾತೀತ ಸ್ವಭಾವೇ । ತೇ ಬೋಲಿಂಚಿ ಜರೀ ಫಾವೇ । ತರೀ ಆಣಿಕೇ ಕಾಯ ಕರಾವೇ । ಕಥಾ ಸಾಂಗೈ ॥೬೮॥ ಹಾ ಆರ್ತಿವಿಶೇಷು ಶ್ರೋತಯಾಂಚಾ । ಜಾಣೋನಿ ದಾಸ ನಿವೃತ್ತಿಚಾ । ಮ್ಹಣೇ ಸಂವಾದು ದೋಘಾಂಚಾ । ಪರಿಸೋನಿ ಪರಿಸಾ ॥೬೯॥ ಮಗ ಶ್ರೀಕೃಷ್ಣ ಮ್ಹಣೇ ಪಾರ್ಥಾತೇ । ಆತಾ ಪ್ರಾಪ್ತಾಚೇ ಚಿನ್ಹ ಪುರತೇ । ಸಾಂಗೇನ ತುಜ ನಿರುತೇ । ಚಿತ್ತ ದೇಈ ॥೭೦॥

ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಮ್ ।
ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥೧೨॥

ತರೀ ಆತ್ಮಯೋಗೇ ಆಥಿಲಾ । ಜೋ ಕರ್ಮಫಳಾಶೀ ವಿಟಲಾ । ತೋ ಘರ ರಿಘೋನಿ ವರಿಲಾ । ಶಾಂತೀ ಜಗೀ ॥೭೧॥ ಯೇರು ಕರ್ಮಬಂಧೇ ಕೀರೀಟೀ । ಅಭಿಲಾಷಾಚಿಯಾ ಗಾಂಠೀ । ಕಳಾಸಲಾ ಖುಂಟೀ । ಫಳಭೋಗಾಚ್ಯಾ ॥೭೨॥

ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।
ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್ ॥೧೩॥

ಜೈಸಾ ಫಳಾಚಿಯೇ ಹಾಂವೇ । ತೈಸೇ ಕರ್ಮ ಕರೀ ಆಘವೇ । ಮಗ ನ ಕೀಜೇಚಿ ಯೇಣೆ ಭಾವೇ । ಉಪೇಕ್ಷೀ ಜೋ ॥೭೩॥ ತೋ ಜಯಾಕಡೇ ವಾಸು ಪಾಹೇ । ತೇಉತೀ ಸುಖಾಚೀ ಸೃಷ್ಟಿ ಹೋಯೇ । ತೋ ಮ್ಹಣೇ ತೇಥ ರಾಹೇ । ಮಹಾಬೋಧು ॥೭೪॥ ನವದ್ವಾರೇ ದೇಹೀ । ತೋ ಅಸತುಚಿ ಪರೀ ನಾಹಿ । ಕರಿತುಚಿ ನ ಕರೀ ಕಾಂಹೀ । ಫಲತ್ಯಾಗೀ ॥೭೫॥

ನ ಕರ್ತೃತ್ವಂ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।
ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥೧೪॥

ಜೈಸಾ ಕಾ ಸರ್ವೇಶ್ವರು । ಪಾಹಿಂಜೇ ತಂವ ನಿರ್ವ್ಯಾಪಾರು । ಪರಿ ತೋಚಿ ರಚೀ ವಿಸ್ತಾರು । ತ್ರಿಭುವನಾಚಾ ॥೭೬॥ ಆಣಿ ಕರ್ತಾ ಐಸೇ ಮ್ಹಣಿಪೇ । ತರೀ ಕವಣೇ ಕರ್ಮೀ ನ ಶಿಂಪೇ । ಜೇ ಹಾತುಪಾವೋ ನ ಲಿಂಪೇ । ಉದಾಸವೃತ್ತೀಚಾ ॥೭೭॥ ಯೋಗನಿದ್ರಾ ತರೀ ನ ಮೋಡೇ । ಅಕರ್ತೇಪಣಾ ಸಳು ನ ಪಡೇ । ಪರಿ ಮಹಾಭೂತಾಂಚೇ ದಳವಾಡೇ । ಉಭಾರೀ ಭಲೇ ॥೭೮॥

ಇದನ್ನು ಕೇಳಲು ಅಧಿಕಾರಿ ಯಾರೆಂದರೆ, ಯಾರ ಇಂದ್ರಿಯಗಳು ದೈನ್ಯದಿಂದ ಪೂರ್ಣ ಇಲ್ಲದಂತಾಗಿರುವುವೋ, ಅವರಿಗೆ ಮಾತ್ರ ಈ ತತ್ತ್ವಜ್ಞಾನವನ್ನು ಕೇಳಲು ಅಧಿಕಾರಿವಿದೆ ।೬೫।।

(ಆಗ ಶ್ರೋತೃಗಳು ಹೇಳುವರು) ಹೀಗೆ ವಿಷಯಾಂತರ ಮಾಡುವುದು ಸಾಕು ಮಾಡಿರಿ. ಕಥೆಯ ಸಂಬಂಧ ಬಿಡಬೇಡಿರಿ. ಏಕೆಂದರೆ ಶ್ಲೋಕದ ಸಂಗತಿಯು ಬಿಗಡಾಯಿಸಬಹುದು ।೬೬।।

ಯಾವುದು ಮನಸ್ಸಿನಿಂದ ತಿಳಿಸಲು ಕಠಿಣವೋ, ಎಷ್ಟೊಂದು ವಿಚಾರಿಸಿದರೂ ಬುದ್ಧಿಗೆ ನಿಲುಕಲಾರದೋ, ಅದನ್ನು ದೈವಯೋಗದಿಂದ ನಿಮಗೆ ಹೇಳಲು ಬಂದಿರುವುದು ।೬೭।।

ಯಾವುದು ಸ್ವಭಾವತಃ ಶಬ್ದದ ಆಚೆಗೆ ಇರುವುದೋ ಅದು ಅನಾಯಾಸವಾಗಿ ಶಬ್ದದಲ್ಲಿ ಬಂದಿತು. ಇನ್ನು ಇತರ ಮಾತಿನ ಕಾರಣವೇನಿದೆ? ಆದ್ದರಿಂದ ನೀವು ಈಗ ಪ್ರಸ್ತುತ ಕಥೆಯನ್ನು ಹೇಳಿರಿ ।೬೮।।

ಕೇಳುವವರ ಈ ಉತ್ಕಟ ಇಚ್ಛೆಯನ್ನು ಲಾಲಿಸಿ ನಿವೃತ್ತಿದಾಸರಾದ ಜ್ಞಾನೇಶ್ವರರು ಹೇಳಿದರು. ಇಲ್ಲಿಯವರೆಗೆ ಇಬ್ಬರ ಸಂವಾದವನ್ನು ಕೇಳಿರುವಿರಿ. ಅದನ್ನೇ ಮನನ ಮಾಡಿ ಮುಂದೆ ಕೇಳಿರಿ ।೬೯।।

ಆಗ ಶ್ರೀಕೃಷ್ಣನು ಅರ್ಜುನನಿಗೆ ಹೇಳಿದನು :- ಪೂರ್ಣ ಬ್ರಹ್ಮನಿಷ್ಠನ ನಿಜವಾದ ಲಕ್ಷಣಗಳು ಯಾವುವು ಎಂಬುವುದಕ್ಕೆ ನಾನು ಹೇಳುವೆ, ಲಕ್ಷಗೊಟ್ಟು ಕೇಳು ।೭೦।।

ಶ್ಲೋಕಾರ್ಥ :- ನಿಷ್ಕಾಮ ಕರ್ಮಯೋಗಿಯು ಫಲಾಸಕ್ತಿಯನ್ನು ತ್ಯಜಿಸುವುದರಿಂದ ಜ್ಞಾನ ನಿಷ್ಠಾತ್ಮಕವಾದ ಮುಕ್ತಿಯನ್ನು ಪಡೆಯುತ್ತಾನೆ. ಯೋಗಹೀನನು ಕೋರಿಕೆಗಳಿಗೆ ಸಿಕ್ಕಿ ಫಲಾಸಕ್ತಿಯಿಂದ ಬಂಧಿಸಲ್ಪಡುತ್ತಾನೆ ।೧೨।।

ಇಲ್ಲಿ ನೋಡು; ಆತ್ಮಜ್ಞಾನದಿಂದ ಯಾರು ಪೂರ್ಣ ತುಂಬಿರುವರೋ ಮತ್ತು ಯಾರಿಗೆ ಕರ್ಮ ಫಲದ ಜಿಗುಪ್ಸೆಯಾಗಿರುವುದೋ ಅವರಿಗೆ ಈ ಜಗತ್ತಿನ ಮನೆಯಲ್ಲಿ ಕುಳಿತಿದ್ದರೂ ಶಾಂತಿಯು ಬಂದು ವರಿಸುವುದು ।೭೧।।

ಅರ್ಜುನಾ, ಇವರ ಹೊರತಾಗಿ ಬೇರೆಯವರಾದ ಸಂಸಾರಿಯು ಕರ್ಮ ಬಂಧನದಿಂದ ಬಂಧಿಸಲ್ಪಟ್ಟು ಅಭಿಲಾಷೆಯಿಂದ ಫಲಭೋಗದ ಗೂಟಕ್ಕೆ ಬಲವಾಗಿ ಕಟ್ಟಲ್ಪಟ್ಟಿರುತ್ತಾನೆ ।೭೨।।

ಶ್ಲೋಕಾರ್ಥ :- ಸಂಯಮಿಯಾದ ಪುರುಷನು ಸಮಸ್ತ ಕರ್ಮಗಳನ್ನೂ ಮನಸ್ಸಿನಿಂದ ತ್ಯಜಿಸಿ ತಾನು ಮಾಡದೆ, ಮಾಡಿಸದೆ, ನವದ್ವಾರದ ಪುರದಲ್ಲಿ ಸುಖವಾಗಿ ಇರುತ್ತಾನೆ ।೧೩।।

ಫಲೇಚ್ಛೆಯಿಂದ ಕರ್ಮಾಚರಣೆ ಮಾಡುವವರಂತೆ ಯಾರು ಎಲ್ಲ ಕರ್ಮಗಳನ್ನು ಮಾಡುತ್ತ ಈ ಕರ್ಮದ ಕರ್ತನು ನಾನಲ್ಲವೆಂದು ತಿಳಿದುಕೊಂಡು ಆ ಕರ್ಮದ ತ್ಯಾಗ ಮಾಡುವನು. ಈ ಪುರುಷನ ಯೋಗ್ಯತೆ ಏನೆಂದು ಹೇಳಬೇಕು ।೭೩।।

ಆ ಪುರುಷನು ಎಲ್ಲೆಲ್ಲಿ ನೋಡುವನೋ ಅವೆಲ್ಲವೂ ಸುಖಮಯ ಸೃಷ್ಟಿಯಾಗುವುದು ಮತ್ತು ಆತನು ಹೇಳಿದಲ್ಲಿ ಬ್ರಹ್ಮಜ್ಞಾನವು ನಿಂತಿರುವುದು ।೭೪।।

ಒಂದು ಫಲತ್ಯಾಗ ಪ್ರಭಾವದಿಂದ ಆತನು ನವದ್ವಾರ ದೇಹದಲ್ಲಿದ್ದರೂ ಇಲ್ಲದಂತಾಗಿರುತ್ತಾನೆ ಮತ್ತು ಎಲ್ಲ ಕರ್ಮಗಳನ್ನು ಮಾಡಿಯೂ ಮಾಡದಂತೆ ಇರುವನು।೭೫।।

ಶ್ಲೋಕಾರ್ಥ :- ಪ್ರಭುವಾದ ಆತ್ಮನು, ಕರ್ಮಗಳನ್ನಾಗಲಿ, ಕರ್ತೃತ್ವವನ್ನಾಗಲಿ, ಕರ್ಮಫಲ ಸಂಬಂಧವನ್ನಾಗಲಿ ಲೋಕಕ್ಕೆ ತಾನು ಅಂಟುಗಟ್ಟುವುದಿಲ್ಲ. ಅವೆಲ್ಲವೂ ಪ್ರಕೃತಿ ಸ್ವಭಾವದ ನಾಟಕವು ।೧೪।।

ಹಾಗೆ ನೋಡಿದರೆ ಈಶ್ವರನು ಅಕರ್ತನಿರುವನು. ಆದರೆ ಈ ತ್ರಿಭುವನದ ವಿಸ್ತಾರವನ್ನು ಆತನೇ ರಚಿಸುವನು ।೭೬।।

ಆತನು ಕರ್ತಾ ಎಂದು ಹೇಳಬೇಕೆಂದರೆ ಆತನು ಯಾವ ಕರ್ಮದಿಂದಲೂ ಲಿಪ್ತನಿರುವುದಿಲ್ಲ. ಆತನು ಉದಾಸೀನನಾಗಿರುವುದರಿಂದ ಆತನಿಗೆ ಯಾವ ಕರ್ಮಗಳು ಸ್ಪರ್ಶಿಸುವುದಿಲ್ಲ ।೭೭।।

ಆತನ ಯೋಗನಿದ್ರೆಯು ಭಂಗವಾಗುವುದಿಲ್ಲ ಮತ್ತು ಆತನ ಅಕರ್ತತನಕ್ಕೂ ಬಾಧೆಯಾಗುವುದಿಲ್ಲ. ಆದರೆ ಆತನು ಮಹಾಭೂತಗಳ ಸಮುದಾಯವನ್ನು ಉತ್ತಮ ರೀತಿಯಲ್ಲಿ ಉತ್ಪತ್ತಿಸುವನು ।೭೮।।

ಜಗಾಚ್ಯಾ ಜೇವೀ ಆಹೇ । ಪರೀ ಕವಣಾಚಾ ಕಹೀ ನೋಹೇ । ಜಗಚಿ ಹೇ ಹೋಯ ಜಾಯೇ । ತೋ ಶುದ್ಧೀಹಿ ನೇಣೇ ॥೭೯॥

ನಾದತ್ತೇ ಕಸ್ಯಚಿತ್ಪಾಪಂ ನ ಚೈವ ಸುಕೃತಂ ವಿಭುಃ ।
ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ ॥೧೫॥

ಪಾಪಪುಣ್ಯೇ ಅಶೇಷೇ । ಪಾಸೀಂಚಿ ಅಸತು ನ ದೇಖೇ । ಆಣಿ ಸಾಕ್ಷೀಹೀ ಹೋಊ ನ ಠಕೇ । ಯೇರೀ ಗೋಠೀ ಕಾಯಸೀ? ॥೮೦॥ ಪೈ ಮೂರ್ತೀಚೇನಿ ಮೇಳೇ । ತೋ ಮೂರ್ತಚಿ ಹೋಊನಿ ಖೇಳೇ । ಪರಿ ಅಮೂರ್ತಪಣ ನ ಮೈಳೇ । ದಾದುಲಯಾಚೇ ॥೮೧॥ ತೋ ಸೃಜೀ ಪಾಳೀ ಸಂಹಾರೀ । ಐಸೇ ಬೋಲತೀ ಜೇ ಚರಾಚರೀ । ತೇ ಅಜ್ಞಾನ ಗಾ ಅವಧಾರೀ । ಪಂಡುಕುಮರಾ ॥೮೨॥

ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।
ತೇಷಾಮಾದಿತ್ಯವಜ್ಞಾನಂ ಪ್ರಕಾಶಯತಿ ತತ್ಪರಮ್ ॥೧೬॥

ತೇ ಅಜ್ಞಾನ ಜೈ ಸಮೂಳ ತುಟೇ । ತೈ ಭ್ರಾಂತೀಚೇ ಮಸ್ಯೆರೇ ಫಿಟೇ । ಮಗ ಅಕರ್ತೃತ್ವ ಪ್ರಗಟೇ । ಮಜ ಈಶ್ವರಾಚೇ ॥೮೩॥ ಏಥ ಈಶ್ವರು ಏಕು ಅಕರ್ತಾ । ಐಸೇ ಮಾನಲೇ ಜರೀ ಚಿತ್ತಾ । ತರೀ ತೋಚಿ ಮೀ ಹೇ ಸ್ವಭಾವತಾ । ಆದೀಚಿ ಆಹೇ ॥೮೪॥ ಐಸೇನಿ ವಿವೇಕೇ ಉದೋ ಚಿತ್ತೀ । ತಯಾಸೀ ಭೇದು ಕೈಚಾ ತ್ರಿಜಗತೀ । ದೇಖೇ ಆಪುಲಿಯಾ ಪ್ರತೀತಿ । ಜಗಚಿ ಮುಕ್ತ ॥೮೫॥ ಜೈಶೀ ಪೂರ್ವದಿಶೇಚ್ಯಾ ರಾಉಳೀ । ಉದಯಾ ಯೇತಾಂಚಿ ಸೂರ್ಯ ದಿವಾಳೀ । ಕೀ ಯೇರೀಹೀ ದಿಶಾ ತಿಯೇಚೇ ಕಾಳೀ । ಕಾಳಿಮಾ ನಾಹೀ ॥೮೬॥

ತದ್ಬುದ್ಧಯಸ್ತದಾತ್ಮಾನಃ ತನ್ನಿಷ್ಠಾಸ್ತತ್ಪರಾಯಣಾಃ ।
ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥೧೭॥

ಬುದ್ಧಿನಿಶ್ಚಯೇ ಆತ್ಮಜ್ಞಾನ । ಬ್ರಹ್ಮರೂಪ ಭಾವೀ ಆಪಣಾ ಆಪಣ । ಬ್ರಹ್ಮನಿಷ್ಠಾ ರಾಖೇ ಪೂರ್ಣ । ತತ್ಪರಾಯಣ ಅಹರ್ನಿಶೀ ॥೮೭॥ ಐಸೇ ವ್ಯಾಪಕ ಜ್ಞಾನಭಲೇ । ಜಯಾಂಚಿಯಾ ಹೃದಯಾ ಗಿಂವಸಿತ ಆಲೇ । ತಯಾಂಚಿ ಸಮತಾ ದೃಷ್ಟಿ ಬೋಲೇ । ವಿಶೇಷೂ ಕಾಈ ॥೮೮॥ ಏಕ ಆಪಣಪಾಂಚಿ ಜೈಸೇ । ತೇ ದೇಖತೀ ವಿಶ್ವ ತೈಸೇ । ಹೇ ಬೋಲಣೇ ಕಾಯಸೇ । ನವಲು ಏಥ ॥೮೯॥ ಪರೀ ದೈವ ಜೈಸೇ ಕವತಿಕೇ । ಕಾಹೀಂಚಿ ದೈನ್ಯ ನ ದೇಖೇ । ಕಾ ವಿವೇಕು ಹಾ ನೋಳಖೇ । ಭ್ರಾಂತೀತೇ ಜೇವೀ ॥೯೦॥

ಈ ಜಗತ್ತಿನ ಪ್ರಾಣಿಮಾತ್ರರಲ್ಲಿ ಇರುವನು. ಆದರೆ ಯಾವಾಗಲೂ ಯಾರಿಂದಲೂ ಸಂಬಂಧ ಇರುವುದಿಲ್ಲ ಮತ್ತು ಈ ಜಗತ್ತು ಸೃಷ್ಟಿಯಾಗುವುದು ಮತ್ತು ಲಯವಾಗುವುದು. ಆದರೆ ಈತನಿಗೆ ಇದರ ವಾರ್ತೆ ಸಹ ತಿಳಿದಿರುವುದಿಲ್ಲ ।।೪೯।।

ಶ್ಲೋಕಾರ್ಥ :- ವಿಭುವಾದ ಆತ್ಮನು ಯಾರ ಪಾಪ ಪುಣ್ಯಗಳನ್ನೂ ತೆಗೆದುಕೊಳ್ಳುವುದಿಲ್ಲ. ಜ್ಞಾನವನ್ನು ಅಜ್ಞಾನವು ಮುಚ್ಚಿರುವುದರಿಂದ ಪ್ರಾಣಿಗಳೆಲ್ಲರೂ ಭ್ರಾಂತರಾಗಿರುತ್ತಾರೆ ।।೧೫।।

ಪಾಪ ಪುಣ್ಯಗಳೆಲ್ಲವೂ ಆತನ ಸಮೀಪವಿದ್ದರೂ ಆತನು ನೋಡುವುದಿಲ್ಲ. ಇಷ್ಟೇ ಅಲ್ಲ ಆತನಿಗೆ ಸಾಕ್ಷಿ ಭೂತತನವು ಇರುವುದಿಲ್ಲ. ಬೇರೆ ಮಾತಿಗಾಗಿ ಏನು ಏಕೆ ವಿಚಾರಿಸಬೇಕು? ।।೫೦।।

ತಥಾಪಿ ಈತನು ಅವತಾರವನ್ನು ಧರಿಸಿ ಜಗತ್ತಿನಲ್ಲಿ ದೇಹದೊಂದಿಗೆ ಆಟವಾಡುವನು. ಆದರೆ ಆ ಪ್ರಭುವಿನ ನಿರಾಕಾರತೆಯು ಭಂಗವಾಗುವುದಿಲ್ಲ ।।೫೧।।

ಹೀಗಿದ್ದರೂ ಅರ್ಜುನಾ, ಆತನು ಚರಾಚರ ಸೃಷ್ಟಿ ಉತ್ಪನ್ನ ಮಾಡುತ್ತಾನೆ, ಪಾಲನೆ ಮಾಡುತ್ತಾನೆ ಮತ್ತು ಸಾಂಹಾರ ಮಾಡುತ್ತಾನೆ ಎಂದು ಜನರು ಅಜ್ಞಾನದಿಂದ ಹೇಳುತ್ತಾರೆ ।।೫೨।।

ಶ್ಲೋಕಾರ್ಥ :- ಆತ್ಮಜ್ಞಾನದಿಂದ ಅಜ್ಞಾನವನ್ನು ನಾಶ ಮಾಡಿಕೊಂಡವರ ಜ್ಞಾನವು ಸೂರ್ಯನಂತೆ ಆತ್ಮನನ್ನು ಬೆಳಗುವುದು ।।೧೬।।

ಆ ಅಜ್ಞಾನ ಸಂಪೂರ್ಣ ನಷ್ಟವಾದಾಗ್ಗೆ ಭ್ರಾಂತಿ ರೂಪ ಗಾಢಾಂಧಕಾರ ಇಲ್ಲದಂತಾಗಿ ನನ್ನ ಈಶ್ವರತ್ವದ ಅಕರ್ತತೆಯು ಸ್ಪಷ್ಟವಾಗಿ ತಿಳಿಯುವುದು ।।೫೩।।

ಈ ಪ್ರಕಾರವಾಗಿ ಈಶ್ವರನು ಅಕರ್ತಾ ಎಂದು ಮನಸ್ಸಿನಲ್ಲಿ ನಿಶ್ಚಯವಾದರೆ ಆಗ ಸ್ವಭಾವತಃ ಆತನೇ ನಾನಿದ್ದೇನೆ ಎಂದು ಮೊದಲೇ ಸಿದ್ಧವಾಗಿದೆ ।।೫೪।।

ಈ ಪ್ರಕಾರವಾಗಿ ವಿವೇಕದಿಂದ ಯಾರ ಚಿತ್ತದಲ್ಲಿ ಪ್ರಕಾಶ ಬೀಳುವುದೋ ಆತನಿಗೆ ಈ ತ್ರಿಭುವನದಲ್ಲಿ ಎಲ್ಲಿಯ ಭೇದ? ತನ್ನ ಅನುಭವದಿಂದ ಎಲ್ಲ ಜಗತ್ತು ಮುಕ್ತವಾಗಿದೆ ಎಂದು ತಿಳಿಯುವನು ।।೫೫।।

ಹೇಗೆಂದರೆ, ಪೂರ್ವ ದಿಕ್ಕಿಗೆ ಸೂರ್ಯನು ಉದಯನಾಗುತ್ತಲೇ ಪ್ರಕಾಶವು ಬೀಳುವುದು. ಆಗ ಬೇರೆ ಎಲ್ಲ ದಿಕ್ಕುಗಳ ಕತ್ತಲೆಯು ಆಗಲೇ ಇಲ್ಲದಂತಾಗುವುದು ।।೫೬।।

ಶ್ಲೋಕಾರ್ಥ :- ಜ್ಞಾನ ಪ್ರಭಾವದಿಂದ ಪಾಪವನ್ನು ಕಳೆದುಕೊಂಡವರು, ಪರಮಾತ್ಮನಲ್ಲಿಯೇ ಬುದ್ಧಿ, ಮನಸ್ಸು, ಆಸಕ್ತಿ, ನಿಷ್ಠೆಗಳನ್ನು ಸ್ಥಿರಪಡಿಸಿಕೊಂಡವರಾಗಿ ತಿರುಗಿ ಬಾರದ ಪದವಿಯನ್ನು ಪಡೆಯುತ್ತಾರೆ ।।೧೭।।

ಯಾರ ಬುದ್ಧಿಯು ಆತ್ಮಜ್ಞಾನ ವಿಷಯಕ್ಕೆ ನಿಶ್ಚಯಗೊಂಡಿರುವುದೋ, ಮತ್ತು ಯಾರು ತನ್ನನ್ನು ತಾನು ಬ್ರಹ್ಮರೂಪ ಭಾವಿಸುವನೋ, ಮತ್ತು ಹಗಲು ರಾತ್ರಿ ಬ್ರಹ್ಮಪರಾಯಣನಾಗಿ ತನ್ನ ಬ್ರಹ್ಮಸ್ಥಿತಿಯನ್ನು ರಕ್ಷಿಸುವನೋ ।।೫೭।।

ಆತನಿಗೆ ಸರ್ವವ್ಯಾಪಕ ಜ್ಞಾನವು ಆತನನ್ನು ಶೋಧಿಸುತ್ತ ಬರುವುದು. ಆತನಿಗೆ ಸಮದೃಷ್ಟಿ ಲಭಿಸುವುದು. ಇದನ್ನು ವಿಶೇಷವಾಗಿ ಶಬ್ದದಿಂದ ಹೇಳಿ ಹೇಗೆ ತೋರಿಸಬೇಕು? ।।೫೮।।

ಹೇಗೆ ಅವರು ತಮ್ಮನ್ನು ಬ್ರಹ್ಮಸ್ವರೂಪವೆಂದು ತಿಳಿದಿರುತ್ತಾರೆಯೋ ಅದರಂತೆ ಎಲ್ಲ ವಿಶ್ವಕ್ಕೂ ಬ್ರಹ್ಮಸ್ವರೂಪವೇ ಎಂದು ತಿಳಿಯುವರು. ಇದರಲ್ಲೇನು ಆಶ್ಚರ್ಯ? ।।೫೯।।

ಯಾವ ಪ್ರಕಾರವಾಗಿ ಭಾಗ್ಯವು ವಿನೋದದಿಂದಲಾದರೂ ದಾರಿದ್ರ್ಯದ ಅನುಭವ ಪಡೆಯಲಾರದು. ಅದರಂತೆ ವಿವೇಕಕ್ಕೆ ಭ್ರಾಂತಿಯ ಹೆಸರೇ ಗೊತ್ತಿರುವುದಿಲ್ಲ ।।೬೦।।

ನಾ ತರೀ ಅಂಧಕಾರಾಚೀ ವಾನೀ । ಜೈಸಾ ಸೂರ್ಯೋ ನ ದೇಖೇ ಸ್ವಪ್ನಿ । ಅಮೃತ ನಾಯಕೇ ಕಾನೀ । ಮೃತ್ಯುಕಥಾ ।೯೧॥ ಹೇ ಅಸೋ ಸಂತಾಪು ಕೈಸಾ । ಚಂದ್ರು ನ ಸ್ಮರೇ ಜೈಸಾ । ಭೂತೀ ಭೇದು ನೇಣತೀ ತೈಸಾ । ಜ್ಞಾನಿಯೇ ತೇ ।೯೨॥

ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ।೧೮॥

ಮಗ ಹಾ ಮಶಕು ಹಾ ಗಜು । ಕೀ ಹಾ ಶ್ವಪಚು ಹಾ ದ್ವಿಜು । ಪೈಲ ಇತರು ಹಾ ಆತ್ಮಜು । ಹೇ ಉರೇಲ ಕೀ? ।೯೩॥ ನಾ ತರೀ ಹೇ ಧೇನು ಹೇ ಶ್ವಾನ । ಏಕ ಗುರು ಏಕ ಹೀನ । ಹೇ ಅಸೋ ಕೈಚೇ ಸ್ವಪ್ನ । ಜಾಗತಯಾ ।೯೪॥ ಏಥ ಭೇದು ತರೀ ಕೀ ದೇಖಾವಾ । ಜರೀ ಅಹಂಭಾವ ಉರಲಾ ಹೋಆವಾ । ತೋ ಆಧೀಂಚಿ ನಾಹಿ ಆಘವಾ । ಆತಾ ವಿಷಮು ಕಾಈ ।೯೫॥

ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ ।
ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್‌ಬ್ರಹ್ಮಣಿ ತೇ ಸ್ಥಿತಾಃ ।೧೯॥

ಮ್ಹಣೌನಿ ಸರ್ವತ್ರ ಸದಾ ಸಮ । ತೇ ಆಪಣಚಿ ಅದ್ವಯ ಬ್ರಹ್ಮ । ಹೇ ಸಂಪೂರ್ಣ ಜಾಣೇ ವರ್ಮ । ಸಮದೃಷ್ಟೀಚೇ ।೯೬॥ ಜಿಹೀ ವಿಷಯಸಂಗು ನ ಸಾಂಡಿತಾ । ಇಂದ್ರಿಯಾಂತೇ ನ ದಂಡಿತಾ । ಪರಿ ಭೋಗಿಲೀ ನಿಸಂಗತಾ । ಕಾಮನೇವಿಣ ।೯೭॥ ಜಿಹೀ ಲೋಕಾಂಚೇನಿ ಆಧಾರೇ । ಲೌಕಿಕೇಚಿ ವ್ಯಾಪಾರೇ । ಪರಿ ಸಾಂಡಿಲೇ ನಿದಸುರೇ । ಲೌಕಿಕು ಹೇ ।೯೮॥ ಜೈಸಾ ಜನಾಮಾಜಿ ಖೇಚರು । ಅಸತುಚಿ ಜನಾ ನೋಹೇ ಗೋಚರು । ತೈಸಾ ಶರೀರೀ ಪರೀ ಸಂಸಾರು । ನೋಳಖೇ ತಯಾಂತೇ ।೯೯॥ ಹೇ ಅಸೋ ಪವನಾಚೇನಿ ಮೇಳೇ । ಜೈಸೇ ಜಳೀಂಚಿ ಜಳ ಲೋಳೇ । ತೇ ಆಣಿಕೇ ಮ್ಹಣತೀ ವೇಗಳೇ । ಕಲ್ಲೋಳ ಹೇ ।೧೦೦॥ ತೈಸೇ ನಾಮ ರೂಪ ತಯಾಚೇ । ಏರ್ಹವೀ ಬ್ರಹ್ಮಚಿ ತೋ ಸಾಚೇ । ಮನ ಸಾಮ್ಯಾ ಆಲೇ ಜಯಾಚೇ । ಸರ್ವತ್ರ ಗಾ ।೧೦೧॥ ಐಸೇನಿ ಸಮದೃಷ್ಟೀ ಜೋ ಹೋಯೇ । ತಯಾ ಪುರುಷಾ ಲಕ್ಷಣಹೀ ಆಹೇ । ಅರ್ಜುನಾ ಸಂಕ್ಷೇಪೇ ಸಾಂಗೇನ ಪಾಹೇ । ಅಚ್ಯುತ ಮ್ಹಣೇ ।೧೦೨॥

ನ ಪ್ರಹೃಷ್ಯೇತ್ ಪ್ರಿಯಂ ಪ್ರಾಪ್ಯ ನೋದ್ವಿಜೇತ್ ಪ್ರಾಪ್ಯ ಚಾಪ್ರಿಯಮ್ ।
ಸ್ಥಿರಬುದ್ಧಿರಸಂಮೂಢೋ ಬ್ರಹ್ಮವಿದ್ ಬ್ರಹ್ಮಣಿ ಸ್ಥಿತಃ ।೨೦॥

ಅಥವಾ ಸೂರ್ಯನು ಕತ್ತಲದ ಸ್ವರೂಪವನ್ನು ಸ್ವಪ್ನದಲ್ಲಿಯೂ ಕಾಣಲಾರನು. ಅದರಂತೆ ಅಮೃತವು ಮೃತ್ಯು ಕಥೆಯನ್ನು ಕಿವಿಯಿಂದಲೂ ಕೇಳುವುದಿಲ್ಲ ॥೯೧॥

ಚಂದ್ರನಿಗೆ ಉಷ್ಣದ ಸೆಕೆ ಹೇಗಿರುವುದೆಂಬುದು ತಿಳಿಯದು. ಅದರಂತೆ ಜ್ಞಾನಿ ಪುರುಷರಿಗೆ ಪ್ರಾಣಿ ಮಾತ್ರರಲ್ಲಿ ಭೇದ ಕಾಣಿಸುವುದಿಲ್ಲ ॥೯೨॥

ಶ್ಲೋಕಾರ್ಥ :- ವಿದ್ಯಾವಿನಯಗಳುಳ್ಳ ಬ್ರಾಹ್ಮಣನಲ್ಲಿಯೂ, ಗೋವಿನಲ್ಲಿಯೂ, ಆನೆಯಲ್ಲಿಯೂ, ನಾಯಿಯಲ್ಲಿಯೂ, ನಾಯಿಯನ್ನು ತಿನ್ನುವ ಚಾಂಡಾಲನಲ್ಲಿಯೂ ಕೂಡಾ ಪಂಡಿತರಾದ ಜ್ಞಾನಿಗಳು ಸಮವಾದ ಬ್ರಹ್ಮವನ್ನು ಕಾಣುತ್ತಾರೆ ॥೧೮॥

ಆಗ ಇದು ಗುಂಗಾಡು (ಸೊಳ್ಳೆ) ಅಥವಾ ಇದು ಆನೆ ಹಾಗೆಯೇ ಇವನು ಮಾದಿಗನು ಅಥವಾ ಬ್ರಾಹ್ಮಣನು ಅದರಂತೆ ಇವನು ನನ್ನ ಮಗ ಅಥವಾ ಇವನು ಬೇರೆಯವ ಎಂಬುದು ಇವರಲ್ಲಿ ಎಲ್ಲಿಂದ ಉಳಿಯಬೇಕು ? ॥೯೩॥

ಇದು ಆಕಳು ಅಥವಾ ನಾಯಿ, ಒಂದು ದೊಡ್ಡದು, ಇನ್ನೊಂದು ಚಿಕ್ಕದು, ಈ ಪ್ರಕಾರದ ದ್ವೈತಭಾವದ ಸ್ವಪ್ನವು ಅದ್ವೈತ ಬೋಧದಲ್ಲಿ ಜಾಗೃತನಾಗಿರುವವನಿಗೆ ಹೇಗೆ ಬೀಳಬೇಕು ॥೯೪॥

ಎಲ್ಲಿ ''ನಾನು'' ಎಂಬುದು ಉಳಿದಿದೆಯೋ ಅಲ್ಲಿ ಭೇದವು ದೃಷ್ಟಿಗೆ ಬೀಳಬಹುದು. ಆದರೆ, ಅದು ಅಲ್ಲಿ ಕಿಂಚಿತ್‌ಮಾತ್ರವೂ ಇಲ್ಲದಾಗ ಭಿನ್ನತ್ವವು ಎಲ್ಲಿಂದ ಬರಬೇಕು? ॥೯೫॥

ಶ್ಲೋಕಾರ್ಥ :- ನಿರ್ದೋಷವಾದ ಬ್ರಹ್ಮವು ಸಮವಾಗಿದೆ. ಅವರು ಆ ಬ್ರಹ್ಮದಲ್ಲಿಯೇ ಇರುತ್ತಾರೆ. ಆದ್ದರಿಂದ ಸಾಮ್ಯಬುದ್ಧಿಯುಳ್ಳ ದೊಡ್ಡವರು ಬದುಕಿರುವಾಗಲೇ ಮುಕ್ತರಾಗಿರುತ್ತಾರೆ ॥೧೯॥

ಆದ್ದರಿಂದ ಯಾವಾಗಲೂ ಸರ್ವತ್ರ ಸಮದೃಷ್ಟಿ ಯಾರದಿದೆಯೋ, ಅವರು ಸ್ವತಃ ಅದ್ವಿತೀಯ ಬ್ರಹ್ಮವಾಗಿರುವರು. ಇದು ಸಮದೃಷ್ಟಿಯ ಮರ್ಮವಾಗಿರುವುದು ॥೯೬॥

ಈತನು ವಿಷಯ ಸಂಗವನ್ನು ಬಿಟ್ಟಿರುವುದಿಲ್ಲ ಮತ್ತು ಇಂದ್ರಿಯಗಳಿಗೂ ದಂಡಿಸಿರುವುದಿಲ್ಲ. ಸಂಪೂರ್ಣ ಭೋಗಗಳನ್ನು ಭೋಗಿಸುತ್ತಿದ್ದರೂ ''ವಾಸನಾ'' ಇಲ್ಲದ್ದಕ್ಕೆ ''ಅಕರ್ತಾ''ದ ಅನುಭವ ಪಡೆದಿರುತ್ತಾನೆ ॥೯೭॥

ಈತನು ಲೌಕಿಕದ ಆಶ್ರಯದಲ್ಲಿಯೇ ಇರುತ್ತಾ ಮತ್ತು ಎಲ್ಲ ವ್ಯವಹಾರಕ ವ್ಯಾಪಾರ ಮಾಡಿಯೂ ಲೌಕಿಕದಲ್ಲಿರುವ ಅಜ್ಞಾನವನ್ನು ಬಿಟ್ಟಿರುತ್ತಾನೆ ॥೯೮॥

ಪಿಶಾಚವು ಲೋಕದ ಜನರಲ್ಲಿ ಇದ್ದೂ ಅದು ಜನರಿಗೆ ಕಾಣಿಸುವುದಿಲ್ಲ. ಅದರಂತೆ ಈ ಪುರುಷನು ಶರೀರಧಾರಿಯಾಗಿದ್ದರೂ ಸಂಸಾರಿಕರು ಆತನನ್ನು ಗುರುತಿಸುವುದಿಲ್ಲ ॥೯೯॥

ಇದು ಇರಲಿ, ಗಾಳಿ ಬೀಸಿದಾಗ ನೀರಿನಲ್ಲಿ ನೀರು ಉಕ್ಕುವುದು. ಆದರೆ ಅದಕ್ಕೆ ಜನರು ನೀರಿನಿಂದ ಬೇರೆ ''ತೆರೆ'' ಎಂದು ಕರೆಯುವರು ॥೧೦೦॥

ಅದರಂತೆ ಆತನ ಮನವು ಎಲ್ಲ ಕಡೆಗೂ ಸಮವಾಗಿ ಹರಡಿದೆ. ಆತನ ಶರೀರ ಮತ್ತು ಹೆಸರು ಜಗತ್ತಿನಂತಿದೆ. ಆದರೆ ಆತನು ಸಾಕ್ಷಾತ್ ಬ್ರಹ್ಮನೇ ಆಗಿರುವನು ॥೧೦೧॥

ಶ್ರೀಕೃಷ್ಣನು ಹೇಳುವನು :- ಅರ್ಜುನಾ ಹೀಗೆ ಯಾರು ಸಮದೃಷ್ಟಿಯಾಗಿರುವರೋ ಆ ಪುರುಷನ ಲಕ್ಷಣಗಳು ಹೀಗಿವೆ. ಅದನ್ನು ಸಂಕ್ಷಿಪ್ತವಾಗಿ ಹೇಳುವೆ ಕೇಳು ॥೧೦೨॥

ಶ್ಲೋಕಾರ್ಥ :- ಸ್ಥಿರಬುದ್ಧಿಯುಳ್ಳವನೂ, ಮೋಹರಹಿತನೂ ಆದ ಬ್ರಹ್ಮಜ್ಞಾನಿಯು ಬ್ರಹ್ಮದಲ್ಲಿಯೇ ಸ್ಥಿರವಾಗಿರುವುದರಿಂದ ಅವನಿಗೆ ಪ್ರಿಯ ವಸ್ತುವಿನಲ್ಲಿ ಇಚ್ಛೆಯಿಲ್ಲ ಅಪ್ರಿಯವಾದ ವಸ್ತುವಿನಲ್ಲಿ ದ್ವೇಷವೂ ಇರುವುದಿಲ್ಲ ॥೨೦॥

ತರೀ ಮೃಗಜಳಾಚೇನಿ ಪೂರೇ । ಜೈಸೇ ನ ಲೋಟಿಜೇ ಕಾ ಗಿರಿವರೇ । ತೈಸಾ ಶುಭಾಶುಭೀ ನ ವಿಕರೇ । ಪಾತಲಿಯಾ ಜೋ ॥೧೦೩॥ ತೋಚಿ ತೋ ನಿರುತಾ ಸಮದೃಷ್ಟೀ ತತ್ತ್ವತಾ । ಹರಿ ಮ್ಹಣೇ ಪಂಡುಸುತಾ । ತೋಚಿ ಬ್ರಹ್ಮ ॥೧೦೪॥

ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಮ್ ।
ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯಮಶ್ನುತೇ ॥೨೧॥

ಜೋ ಆಪಣಪೈ ಸಾಂಡೂನಿ ಕಹೀ । ಇಂದ್ರಿಯಗ್ರಾಮಾವರೀ ಯೇಣೇಚಿ ನಾಹೀ । ತೋ ವಿಷಯ ನ ಸೇವೀ ಹೇ ಕಾಈ । ವಿಚಿತ್ರ ಯೇಥ ॥೧೦೫॥ ಸಹಜೇ ಸ್ವಸುಖಾಚೇನಿ ಅಪಾರೇ । ಸುರವಾಡಲೇನಿ ಅಂತರೇ । ರಚಿಲಾ ಮ್ಹಣೌನಿ ಬಾಹಿರೇ । ಪಾಉಲ ನ ಘಾಲೀ ॥೧೦೬॥ ಸಾಂಗೈ ಕುಮುದದಳಾಚೇನಿ ತಾಟೇ । ಜೋ ಜೇವಿಲಾ ಚಂದ್ರಕಿರಣೇ ಚೋಖಟೇ । ತೋ ಚಕೋರು ಕಾಈ ವಾಳುವಂಟೇ । ಚುಂಬಿತು ಅಸೇ ? ॥೧೦೭॥ ತೈಸೇ ಆತ್ಮಸುಖ ಉಪಾಇಲೇ । ಜಯಾಸಿ ಆಪಣಪೇಚಿ ಫಾವಲೇ । ತಯಾ ವಿಷಯೋ ಸಹಜೇ ಸಾಂಡವಲೇ । ಮ್ಹಣೋ ಕಾಈ ?॥೧೦೮॥ ಏರ್ಹವೀ ತರೀ ಕೌತುಕೇ । ವಿಚಾರೂನಿ ಪಾಹೇ ಪಾ ನಿಕೇ । ಯಾ ವಿಷಯಾಂಚೇನಿ ಸುಖೇ । ಝುಕವಿತೀ ಕವಣ ?॥೧೦೯॥

ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ।
ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥೨೨॥

ಜಿಹೀ ಆಪಣಪೇ ನಾಹೀ ದೇಖಿಲೇ । ತೇಚಿ ಇಹೀ ಇಂದ್ರಿಯಾರ್ಥೀ ರಂಜಲೇ । ಜೈಸೇ ರಂಕು ಕಾ ಆಳುಕೈಲೇ । ತುಷಾಂತೇ ಸೇವೀ ॥೧೧೦॥ ನಾತರೀ ಮೃಗೆ ತೃಷಾಪೀಡಿತೇ । ಸಂಭ್ರಮೇ ವಿಸರೋನಿ ಜಳಾಂತೇ । ಮಗ ತೋಯಬುದ್ಧೀ ಬರಡೀತೇ । ಠಾಕೂನಿ ಯೇತೀ ॥೧೧೧॥ ತೈಸೇ ಆಪಣಪೇ ನಾಹೀ ದಿಠೇ । ಜಯಾತೇ ಸ್ವಸುಖಾಚೇ ಸದಾ ಖರಾಂಟೇ । ತಯಾಸೀಚಿ ವಿಷಯ ಹೇ ಗೋಮಟೇ । ಆವಡತೀ ॥೧೧೨॥ ಏರ್ಹವೀ ವಿಷಯೀ ಸುಖ ಆಹೇ । ಹೇ ಬೋಲಣೇಚಿ ಸಾರಿಖೆ ನೋಹೇ । ತರೀ ವಿದ್ಯುತ್ಸ್ಫುರಣೇ ಕಾ ನ ಪಾಹೇ । ಜಗಾಮಾಜೀ ॥೧೧೩॥ ಸಾಂಗೈ ವಾತ ವರ್ಷ ಆತಪು ಧರೇ । ಐಸೇ ಅಭ್ರಚ್ಛಾಯಾಚಿ ಜರೀ ಸರೇ । ತರೀ ತ್ರಿಮಾಳಿಕ ಧವಳಾರೇ । ಕರಾವೀ ಕಾ ?॥೧೧೪॥ ಮ್ಹಣೌನಿ ವಿಷಯಸುಖ ಜೇ ಬೋಲಿಜೇ । ತೇ ನೇಣತಾ ಗಾ ವಾಯಾ ಜಲ್ಪಿಜೇ । ಜೈಸೇ ಮಹೂರ ಕಾ ಮ್ಹಣಿಜೇ । ವಿಷಕಂದಾತೇ ॥೧೧೫॥ ನಾತರೀ ಭೌಮಾ ನಾಮ ಮಂಗಳು । ರೋಹಿಣೀತೇ ಮ್ಹಣತೀ ಜಳು । ತೈಸಾ ಸುಖಪ್ರವಾದು ಬರಳು । ವಿಷಯಿಕು ಹಾ ॥೧೧೬॥

ಯಾವ ಪ್ರಕಾರವಾಗಿ ಮೃಗಜಲದ ಮಹಾಪೂರದಿಂದ ಪರ್ವತವು ತೇಲಿ ಹೋಗುವುದಿಲ್ಲವೋ ಅದರಂತೆ ಉತ್ತಮ ಅಥವಾ ಕೆಟ್ಟ ಪ್ರಸಂಗಗಳು ಒದಗಿದಾಗ ಅದರಿಂದ ಆತನು ವಿಕಾರ ಹೊಂದುವುದಿಲ್ಲ ।।೧೦೩।।

ಶ್ರೀಹರಿಯು ಅರ್ಜುನನಿಗೆ ಹೇಳುತ್ತಾನೆ:- ಆತನೇ ನಿಜವಾದ ಸಾಧು ಆತನೇ ಸಮದೃಷ್ಟಿಯ ತತ್ತ್ವವನ್ನು ಅರಿತಿರುವನು. ಆತನೇ ಸ್ವಯಮೇವ ಬ್ರಹ್ಮನಿರುವನು ।।೧೦೪।।

ಶ್ಲೋಕಾರ್ಥ :- ಬಾಹ್ಯ ವಿಷಯದಲ್ಲಿ ಆಸಕ್ತನಾಗದೆ ಆತ್ಮಸುಖದಲ್ಲಿಯೇ ತೃಪ್ತನಾದ ಯೋಗಿಯು ಬ್ರಹ್ಮಾನುಸಂಧಾನತತ್ಪರನಾಗಿ ಅಕ್ಷಯಸುಖವನ್ನು ಸೂರೆಗೊಳ್ಳುತ್ತಾನೆ ।।೨೧।।

ಈತನು ಆತ್ಮಸ್ವರೂಪವನ್ನು ಬಿಟ್ಟು ಎಂದೂ ಇಂದ್ರಿಯ ಆಧೀನನಾಗುವುದಿಲ್ಲ. ಈತನು ವಿಷಯದ ಸೇವನೆ ಮಾಡುವುದಿಲ್ಲ. ಇದರಲ್ಲಿ ಆಶ್ಚರ್ಯವೇನೆಂದರೆ ।।೧೦೫।।

ಆತ್ಮಸುಖದ ಪೂರ್ಣತೆಯಿಂದ ಈತನ ಅಂತಃಕರಣವು ಸ್ವಾಭಾವಿಕವಾಗಿಯೇ ಸಂತುಷ್ಟಗೊಂಡಿರುವುದು. ಆದ್ದರಿಂದ ಈತನು ಹೊರಗೆ ( ಇಂದ್ರಿಯಗಳತ್ತ) ಕಾಲಿಡುವುದೇ ಇಲ್ಲ ।।೧೦೬।।

ಯಾವ ಚಕೋರ ಪಕ್ಷಿಯು ಚಂದ್ರವಿಕಾಸಿ ಕಮಲದ ಎಲೆಯಲ್ಲಿ ಉತ್ತಮವಾದ ಕಿರಣಗಳ ಭೋಜನ ಮಾಡಿರುವುದರಿಂದ ಈಗ ಅದು ನದಿ ದಂಡೆಯಲ್ಲಿ ಉಸುಕನ್ನು ಕೆರೆಯುತ್ತ ಕುಳಿತುಕೊಳ್ಳಬಹುದೇ? ।।೧೦೭।।

ಈತನಿಗೆ ತನ್ನಲ್ಲಿಯೇ ಆತ್ಮಸುಖ ಪ್ರಾಪ್ತವಾಗಿರುವುದು. ಆದಕ್ಕಾಗಿ ಸಹಜವಾಗಿ ವಿಷಯಗಳು ತ್ಯಾಗವಾಗಿವೆ ಎಂದು ಬೇರೆ ಹೇಳಬೇಕೆ? ।।೧೦೮।।

ಉಳಿದವರು ಈ ವಿಷಯದ ಸುಖಕ್ಕೆ ಹೇಗೆ ಮೋಸ ಹೋಗುವರು ಎಂಬುದಕ್ಕೆ ಕೌತುಕದಿಂದ ಸಹಜವಾಗಿ ಉತ್ತಮ ರೀತಿಯಲ್ಲಿ ವಿಚಾರಿಸಿ ನೋಡಿರಿ ।।೧೦೯।।

ಶ್ಲೋಕಾರ್ಥ :- ಕುಂತೀಕುಮಾರಾ! ಬಾಹ್ಯ ವಿಷಯ ಭೋಗಗಳು ದುಃಖಕ್ಕೆ ಕಾರಣವಾಗಿರುತ್ತವೆ. ಅವು ಕ್ಷಣಿಕವಾದವುಗಳು. ವಿಜ್ಞಾನಿಯು ಅವುಗಳಲ್ಲಿ ರಮಿಸುವುದಿಲ್ಲ ।।೨೨।।

ಅತೀ ಬಡವನು ಹಸಿದು ವ್ಯಾಕುಳನಾದಾಗ್ಗೆ ತೌಡನ್ನೂ ಸಹ ತಿನ್ನುವಂತೆ ಆತ್ಮಾನುಭವ ಇಲ್ಲದವರು ಇಂದ್ರಿಯಗಳಿಂದ ಆಗುವ ಸುಖಕ್ಕೆ ರಮಿಸುವರು ।।೧೧೦।।

ನೀರಡಿಕೆಯಿಂದ ಬಳಲಿದ ಚಿಗರೆಯು ನಿಜವಾದ ನೀರನ್ನು ಮರೆತು ಮೃಗಜಲಕ್ಕೆ ನೀರು ಎಂದು ತಿಳಿದು ಧಾವಿಸುವುದು ।।೧೧೧।।

ಅದರಂತೆ ಯಾರು ಆತ್ಮಸುಖದ ಅನುಭವ ಪಡೆದಿರುವುದಿಲ್ಲವೋ, ಯಾರಿಗೆ ಸ್ವಾತ್ಮಸುಖದ ಸದಾ ದಾರಿದ್ರ್ಯತನ ಇರುವುದೋ  ಅವರಿಗೆ ಈ ವಿಷಯಗಳು ಉತ್ತಮ ರೀತಿಯಲ್ಲಿ ಪ್ರಿಯವಾಗುವುವು ।।೧೧೨।।

ವಿಷಯಗಳಲ್ಲಿ ಸುಖವಿದೆ ಎಂದು ಹೇಳುವುದು ಯೋಗ್ಯವಲ್ಲ. (ಸುಖವಿದೆ ಎಂದು ಗ್ರಹಿಸಿದರೆ) ಮಿಂಚಿನ ಬೆಳಕಿನಿಂದ ಜಗತ್ತಿನ ವ್ಯಾಪಾರ ಏಕೆ ನಡೆಯಬಾರದು ? ।।೧೧೩।।

ನೀನೇ ಹೇಳು ; ಮಳೆ, ಗಾಳಿ, ಬಿಸಿಲನ್ನು ಮೋಡದ ನೆರಳು ರಕ್ಷಿಸುವುದು ಎಂದಾದರೆ ಮೂರು ಅಂತಸ್ತುಗಳ ಮನೆಗಳನ್ನು ಕಟ್ಟುವ ಕಾರಣವಾದರೂ ಏಕೆ ? ।।೧೧೪।।

ಆದ್ದರಿಂದ ವಿಷದ ಗಡ್ಡೆ (ಬಚನಾಗ)ಕ್ಕೆ ಯಾವ ಪ್ರಕಾರವಾಗಿ ಅಜ್ಞಾನದಿಂದ ಸಿಹಿ ಎನ್ನುವರೋ ಆದರಂತೆ ವಿಷಯಗಳಲ್ಲಿ ಸುಖವಿದೆ ಎಂಬುದು ವ್ಯರ್ಥವಾಗಿ ಬಡಬಡಿಸಿದಂತೆಯೇ ಸರಿ ।।೧೧೫।।

ಅಥವಾ ಭೌಮ ಎಂಬ ಗ್ರಹಕ್ಕೆ ಮಂಗಲವೆಂದು ನಾಮವಿದೆ. ಆದರೆ ಅದರ ಅನುಭವ ಹಾಗಿರುವುದಿಲ್ಲ. ಅಥವಾ ಮೃಗಜಲಕ್ಕೂ ಜಲ ಎನ್ನುವರು. ಅದರಂತೆ ವಿಷಯಗಳಲ್ಲಿ ಸುಖವಿದೆ ಎಂಬುದು ವ್ಯರ್ಥ ।।೧೧೬।।

ಹೇ ಅಸೋ ಆಘವೀ ಬೋಲೀ । ಸಾಂಗ ಪಾ ಸರ್ಪಫಣೇಚಿ ಸಾಉಲೀ । ತೇ ಶೀತಲ ಹೋಈಲ ಕೇತುಲೀ । ಮೂಷಕಾಸೀ ? ।೧೧೭॥ ಜೈಸಾ ಆಮಿಷಕವಳು ಪಾಂಡವಾ । ಮೀನು ನ ಸೇವೀ ತಂವಚಿ ಬರವಾ । ತೈಸಾ ವಿಷಯಸಂಗು ಆಘವಾ । ನಿಭ್ರಾಂತ ಜಾಣೇ ।೧೧೮॥ ಹೇ ವಿರಕ್ತಾಂಚಿಯೇ ದಿಠೀ । ಜೈಸ್ಯಾ ನ್ಯಾಹಾಳಿಜೇ ಕಿರೀಟೀ । ತೈ ಪಾಂಡುರೋಗಾಚಿಯೇ ಪುಷ್ಟೀ । ಸಾರಿಖೇ ದಿಸೇ ।೧೧೯॥ ಮ್ಹಣೌನಿ ವಿಷಯಭೋಗೀ ಜೇ ಸುಖ । ತೇ ಸಾದ್ಯಂತಚಿ ಜಾಣ ದುಃಖ । ಪರಿ ಕಾಯ ಕೀಜೇ ಮೂರ್ಖ । ನ ಸೇವಿತಾ ನ ಸರೆ ।೧೨೦॥ ತೇ ಅಂತರ ನೇಣತೀ ಬಾಪುಡೇ । ಮ್ಹಣೌನಿ ಅಗತ್ಯ ಸೇವಣೇ ಘಡೇ । ಸಾಂಗೈ ಪೂಯಪಂಕೀಚೇ ಕಿಡೇ । ಕಾಯ ಚಿಳಸೀ ಘೇತಿ ? ।೧೨೧॥ ತಯಾದುಃಖಿಯಾ ದುಃಖಚಿ ಜಿವ್ಹಾರ । ತೇ ವಿಷಯಕರ್ದಮೀಚೇ ದರ್ದುರ । ತೇ ಭೋಗಜಳೀಂಚೇ ಜಳಚರ । ಸಾಂಡಿತೀ ಕೇವೀ ।೧೨೨॥ ಆಣಿ ದುಃಖ ಯೋನೀ ಜಿಯಾ ಆಹತಿ । ತಿಯಾ ನಿರರ್ಥಕಾ ತರೀ ನವ್ಹತೀ ? । ಜರೀ ವಿಷಯಾವರೀ ವಿರಕ್ತೀ । ಧರಿತೀ ಜೀವ ।೧೨೩॥ ನಾತರೀ ಗರ್ಭವಾಸಾದಿ ಸಂಕಟ । ಕಾ ಜನ್ಮ ಮರಣೇಚೇ ಕಷ್ಟ । ಹೇ ವಿಸಾವೇವೀಣ ವಾಟ । ವಾಹವೀ ಕವಣೇ ।೧೨೪॥ ಜರೀ ವಿಷಯೀ ವಿಷಯೋ ಸಾಂಡಿಜೇಲ । ತರೀ ಮಹಾದೋಷೀ ಕೇ ವಸಿಜೇಲ । ಆಣಿ ಸಂಸಾರು ಹಾ ಶಬ್ದು ನವ್ಹೇಲ । ಲಟಿಕಾ ಜಗಿ ।೧೨೫॥ ಮ್ಹಣೌನಿ ಅವಿದ್ಯಾಜಾತ ನಾಥಿಲೇ । ತೇ ತಿಹಿಂಚಿ ಸಾಚ ದಾವಿಲೇ । ಜಿಹೀ ಸುಖಬುದ್ಧೀ ಘೇತಲೇ । ವಿಷಯದುಃಖ ।೧೨೬॥ ಯಾ ಕಾರಣೇ ಗಾ ಸುಭಟಾ । ಹಾ ವಿಚಾರಿತಾ ವಿಷಯ ವೋಖಟಾ । ತೂ ಝಣೇ ಕಹೀ ಯಾ ವಾಟಾ । ವಿಸರೋನಿ ಜಾಶೀ ।೧೨೭॥ ಪೈ ಯಾತೇ ವಿರಕ್ತ ಪುರುಷ । ತ್ಯಜಿತೀ ಕಾ ಜೈಸೇ ವಿಷ । ನಿರಾಶಾ ತಯಾ ದುಃಖ । ದಾವಿಲೇ ನಾವಡೇ ।೧೨೮॥

ಶಕ್ನೋತೀಹೈವ ಯಃ ಸೋಢುಂ ಪ್ರಾಕ್ಶರೀರವಿಮೋಕ್ಷಣಾತ್ ।
ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ।೨೩॥

ಜ್ಞಾನಿಯಾಂಚ್ಯಾ ಹನ ಠಾಯೀ । ಯಾಚೀ ಮಾತುಹೀ ಕೀರ ನಾಹೀ । ದೇಹೀ ದೇಹಭಾವೋ ಜಿಹೀ । ಸ್ವವಶ ಕೇಲೇ ।೧೨೯॥ ಜಯಾಂತೇ ಬಾಹ್ಯಾಚೀ ಭಾಷ । ನೇಣಿಜೇಚಿ ನಿಃಶೇಷ । ಅಂತರೀ ಸುಖ । ಏಥ ಆಥಿ ।೧೩೦॥ ಪರೀ ತೇ ವೇಗಳೇಪಣೇ ಭೋಗಿಜೇ । ಜೈಸೇ ಪಕ್ಷಿಯೇ ಫಳ ಚುಂಬಿಜೇ । ತೈಸೇ ನವ್ಹೇ ತೇಥ ವಿಸರಿಜೇ । ಭೋಗಿತೇಪಣಹೀ ।೧೩೧॥

ಇವೆಲ್ಲ ಮಾತುಗಳು ಇರಲಿ, ಆದರೆ ನೀನೇ ಹೇಳು, ನಾಗರಹಾವಿನ ಹೆಡೆಯ ನೆರಳು ಇಲಿಗೆ ಎಷ್ಟರ ಮಟ್ಟಿಗೆ ಸುಖದಾಯಕವಾಗಬಹುದು? ।।೧೧೭।।

ಅರ್ಜುನಾ, ಬಲೆಗೆ ಹಚ್ಚಿರುವ ಮಾಂಸಕ್ಕೆ ಮೀನವು ಎಲ್ಲಿಯವರೆಗೆ ನುಂಗುವುದಿಲ್ಲವೋ ಅಲ್ಲಿಯವರೆಗೆ ಮಾತ್ರ ಅದಕ್ಕೆ ಒಳ್ಳೆಯದು. ಅದರಂತೆ ಎಲ್ಲಿಯವರೆಗೆ ವಿಷಯಗಳ ಭೋಗ ಭೋಗಿಸಿಲ್ಲವೋ ಅಲ್ಲಿಯವರೆಗೆ ಒಳ್ಳೆಯದು. ಇದು ನಿಃಸಂಶಯವಾಗಿ ತಿಳಿ ।।೧೧೮।।

ಹೇ ಕಿರೀಟಿಯೇ, ವಿರಕ್ತರದೃಷ್ಟಿಯಿಂದ ಈ ವಿಷಯಗಳನ್ನು ನೋಡಿದರೆ ಪಾಂಡುರೋಗದ ಪುಷ್ಟಿಯಂತೆ ಕಾಣುವುದು. (ಪಾಂಡುರೋಗಿಯು ನೋಡಲು ಬಹಳ ದಪ್ಪ ಆದರೆ ಅಷ್ಟೇ ನಿಃಶಕ್ತ) ।।೧೧೯।।

ಆದ್ದರಿಂದ ಭೋಗದಿಂದ ಸಿಗುವ ಸುಖವು ಸಾದ್ಯಂತ ವಾಗಿ ದುಃಖದಿಂದ ಕೂಡಿದೆ. ಆದರೆ ಮೂರ್ಖ ಜನರು ಏನು ಮಾಡಿಯಾರು? ಏಕೆಂದರೆ ಅದರ ಸೇವನೆಯ ಹೊರತಾಗಿ ಅವರಿಗೆ ಬೇರೆ ಗತಿಯೇ ಇಲ್ಲ ।।೧೨೦।।

ಅವರಿಗೆ ಅದರ ಮರ್ಮವು ತಿಳಿಯದೇ ಇದ್ದುದರಿಂದ ಅದರ ಸೇವನೆ ಮಾಡುವ ಪ್ರಸಂಗ ಒದಗಿದೆ. ಕೀವುದೊಳಗಿನ ಕೀಟಕ್ಕೆ ಅದರ ಹೇಸಿಗೆ ಎಂದಾದರೂ ಆಗಿದೆಯೇ? ನೀನೇ ಹೇಳು ।।೧೨೧।।

ಆ ದುಃಖಿಗಳಿಗೆ ದುಃಖವೇ ಪ್ರಿಯ (ಜೀವನ) ವಾಗಿ ರುತ್ತದೆ. ಕಾರಣವೇನೆಂದರೆ, ವಿಷಯರೂಪಿ ರಜ್ಜನಲ್ಲಿ ಕಪ್ಪೆಯಂತೆ, ಭೋಗರೂಪ ನೀರಿನಲ್ಲಿ ಮೀನಿನಂತೆ ಇರುವು ದರಿಂದ ವಿಷಯಭೋಗ ಹೇಗೆ ತ್ಯಜಿಸಬೇಕು? ।।೧೨೨।।

ಒಂದುವೇಳೆ ವಿಷಯಗಳಲ್ಲಿ ಜೀವಮಾತ್ರರು ವೈರಾಗ್ಯ ತಾಳಿದರೆ, ದುಃಖದಾಯಕ ಯೋನಿ (ಹುಟ್ಟು)ಗಳೆಲ್ಲ ವ್ಯರ್ಥ ವಾಗುವುದಿಲ್ಲವೆ? ।।೧೨೩।।

ಅಥವಾ ಗರ್ಭವಾಸದಲ್ಲಿ ಆಗತಕ್ಕ ದುಃಖಗಳನ್ನು ಮತ್ತು ಜನ್ಮ ಮರಣಗಳ ಕಷ್ಟಗಳನ್ನು ಅವಿಶ್ರಾಂತವಾಗಿ ನಡೆಯುತ್ತಿ ರುವ ಮಾರ್ಗವನ್ನು ಯಾರು ನಡೆಸಬೇಕು? ।।೧೨೪।।

ವಿಷಯಾಸಕ್ತ ಜನರು ವಿಷಯೋಪಭೋಗಗಳನ್ನು ತ್ಯಜಿಸಿದರೆ ಮಹಾ ದೋಷಗಳು ಎಲ್ಲಿ ವಸತಿ ಮಾಡಬೇಕು? ಮತ್ತು ''ಸಂಸಾರ'' ವೆಂಬುವ ಮಾತು ಜಗತ್ತಿನಲ್ಲಿ ಸುಳ್ಳಾಗು ವುದಿಲ್ಲವೇ? ।।೧೨೫।।

ಆದ್ದರಿಂದ ಯಾವ ವಿಷಯಾದಿಗಳ ಭೋಗದಿಂದ ಆಗುವ ದುಃಖಕ್ಕೆ ಸುಖ ಎಂದು ಭಾವಿಸುವರು. ಈ ವಿಷಯಾಸಕ್ತ ಜನರೇ ಸುಳ್ಳಾಗಿರುವುದನ್ನು ನಿಜವೆಂದು ಮಾಡಿ ತೋರಿಸಿದ್ದಾರೆ ।।೧೨೬।।

ಆದಕಾರಣ ಅರ್ಜುನಾ, ವಿಚಾರಮಾಡಿ ನೋಡಿದರೆ ಈ ವಿಷಯಗಳು ಬಹಳ ಕೆಟ್ಟಾಗಿವೆ. ಆದ್ದರಿಂದ ನೀನು ಅಕಸ್ಮಾತಾಗಿ ತಪ್ಪಿಯಾದರೂ ಈ ಮಾರ್ಗಕ್ಕೆ ಹೋಗದಿರು ।।೧೨೭।।

ಕಾರಣ, ವಿರಕ್ತ ಪುರುಷರು ವಿಷಯ ಸುಖಗಳಿಗೆ ವಿಷದಂತೆ ತಿಳಿದು ಅದರ ತ್ಯಾಗ ಮಾಡುವರು ಮತ್ತು ಅವರು ಆಶಾ ರಹಿತರಾಗಿದ್ದರಿಂದ ಸುಖದಂತೆ ಕಾಣುವ ವಿಷಯ ದುಃಖಗಳು ಅವರಿಗೆ ಹಿಡಿಸುವುದಿಲ್ಲ ।।೧೨೮।।

**ಶ್ಲೋಕಾರ್ಥ** :- ಬದುಕಿ ದೇಹದೊಡನೆ ಇರು ವಾಗಲೇ ಕಾಮಕ್ರೋಧಗಳ ವೇಗವನ್ನು ಸಹಿಸ ಬಲ್ಲವನೇ ಯೋಗಿ; ಅವನೇ ಸುಖವಂತನು।।೨೩।।

ಜ್ಞಾನಿಗಳವರಲ್ಲಿ ನಿಶ್ಚಯವಾಗಿಯೂ ವಿಷಯಗಳ ವಾರ್ತೆ ಸಹ ಇರುವುದಿಲ್ಲ. ಏಕೆಂದರೆ ಅವರು ದೇಹದಲ್ಲಿದ್ದರೂ ದೇಹಧರ್ಮವನ್ನು ತಮ್ಮ ವಶಪಡಿಸಿ ಕೊಂಡಿರುತ್ತಾರೆ ।।೧೨೯।।

ಯಾರಿಗೆ ಅಂತರ್ಯಾಮಿ ಆತ್ಮಸುಖದ ಲಾಭವಾ ಗಿದೆಯೋ ಅವರು ವಿಷಯಗಳ ಮಾತು ಸಹ ಆಡುವುದಿಲ್ಲ ।।೧೩೦।।

ಆದರೆ ಆ ಬ್ರಹ್ಮಸುಖವನ್ನು ವಿಲಕ್ಷಣ ಪದ್ಧತಿಯಿಂದ ಭೋಗಿಸಬೇಕಾಗುವುದು. ಪಕ್ಷಿಯು ಫಲವನ್ನು (ಭೋಕ್ತಾ, ಭೋಗ್ಯ, ಭೋಗ ಎಂಬ ತ್ರಿಪುಟಿಯೊಂದಿಗೆ) ಬೇರೆಯಾಗಿ ಭೋಗಿಸುವಂತೆ ಇಲ್ಲಿಲ್ಲ (ಇಂತಹ ತ್ರಿಪುಟಿ ಬ್ರಹ್ಮಸುಖ ದಲ್ಲಿಲ್ಲ). ಆ ಅವಸ್ಥೆಯಲ್ಲಿ ಭೋಕ್ತಾ ಎಂಬುವುದನ್ನೂ ಮರೆಯಬೇಕಾಗುವುದು ।।೧೩೧।।

ಭೋಗೀ ಅವಸ್ಥಾ ಏಕೀ ಉರೀ । ತೇ ಅಹಂಕಾರಾಚಾ ಅಚಳು ಲೋಟೀ । ಮಗ ಸುಖೇಸಿ ಘೇ ಆಂಠೀ । ಗಾಢೇಪಣೇ ॥೧೩೨॥ ತಿಯೇ ಆಲಿಂಗನಮೇಳೀ । ಹೋಯ ಆಪೇಆಪ ಕವಳೀ । ತೇಥ ಜಳ ಜೈಸೇ ಜಳೀ । ವೇಗಳೇ ನ ದಿಸೇ ॥೧೩೩॥ ಕಾ ಆಕಾಶೀ ವಾಯು ಹಾರಪೇ । ತೇಥ ದೋನ್ಹೀ ಹೇ ಭಾಷ ಲೋಪೇ । ತೈಸೇ ಸುಖಚಿ ಉರೇ ಸ್ವರೂಪೇ । ಸುರತೀ ತಿಯೇ ॥೧೩೪॥ ಐಶೀ ದ್ವೈತಾಚೀ ಭಾಷ ಜಾಯ । ಮಗ ಮ್ಹಣೋ ಜರೀ ಏಕಚಿ ಹೋಯ । ತರೀ ತೇಥ ಸಾಕ್ಷೀ ಕವಣು ಆಹೇ । ಜಾಣತೇ ಜೇ ॥೧೩೫॥

ಯೋಽಂತಃಸುಖೋಽಂತರಾರಾಮಃ ತಥಾಂತರ್ಜ್ಯೋತಿರೇವ ಯಃ ।
ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥೨೪॥

ಲಭಂತೇ ಬ್ರಹ್ಮನಿರ್ವಾಣಮ್ ಋಷಯಃ ಕ್ಷೀಣಕಲ್ಮಷಾಃ ।
ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇರತಾಃ ॥೨೫॥

ಮ್ಹಣೌನಿ ಅಸೋ ಹೇ ಆಘವೇ । ಏಥ ನ ಬೋಲಣೇ ಕಾಯ ಬೋಲಾವೇ । ತೇ ಖೂಣಾಚಿ ಪಾವೇಲ ಸ್ವಭಾವೇ । ಆತ್ಮಾರಾಮ ॥೧೩೬॥ ಜೇ ಐಸೇನಿ ಸುಖೇ ಮಾತಲೇ । ಆಪಣಪಾಂಚಿ ಆಪಣ ಗುಂತಲೇ । ತೇ ಮೀ ಜಾಣೇ ನಿಖಿಳ ವೋತಲೇ । ಸಾಮರಸ್ಯಾಚೇ ॥೧೩೭॥ ತೇ ಆನಂದಾಚೇ ಅನುಕಾರ । ಸುಖಾಚೇ ಅಂಕುರ । ಕೀ ಮಹಾಬೋಧೇ ವಿಹಾರ । ಕೇಲೇ ಜೈಸೇ ॥೧೩೮॥ ತೇ ವಿವೇಕಾಚೇ ಗಾಂವ । ಕಿ ಪರಬ್ರಹ್ಮೀಂಚೇ ಸ್ವಭಾವ । ನಾತರೀ ಅಳಂಕಾರಲೇ ಅವಯವ । ಬ್ರಹ್ಮವಿದ್ಯೇಚೇ ॥೧೩೯॥ ತೇ ಸತ್ತ್ವಾಚೇ ಸಾತ್ತ್ವಿಕ । ಕೀ ಚೈತನ್ಯಾಚೇ ಆಂಗಿಕ । ಹೇ ಬಹು ಅಸೋ ಏಕೈಕ । ವಾನಿಸೀ ಕಾಈ ॥೧೪೦॥ ತೂ ಸಂತಸ್ತವನೀ ರತಸೀ । ತರೀ ಕಥೇಚೇ ಸೇ ನ ಕರಿಸೀ । ಕೀ ನಿರಾಳೀ ಬೋಲ ದೇಖಸೀ । ಸನಾಗರ ॥೧೪೧॥ ಪರಿ ತೋ ರಸಾತಿಶಯೋ ಮುಕುಳೀ । ಮಗ ಗ್ರಂಥಾರ್ಥದೀಪು ಉಜಳೀ । ಕರೀ ಸಾಧುಹೃದಯ ರಾಉಳೀ । ಮಂಗಳಉಖಾ ॥೧೪೨॥ ಐಸಾ ಶ್ರೀಗುರೂಚಾ ಉವಾಯಿಲಾ । ನಿವೃತ್ತಿದಾಸಾಸೀ ಪಾತಲಾ । ಮಗ ತೋ ಮ್ಹಣೇ ಶ್ರೀಕೃಷ್ಣ ಬೋಲಿಲಾ । ತೇಂಚಿ ಆಇಕಾ ॥೧೪೩॥ ಅರ್ಜುನಾ ಅನಂತ ಸುಖಾಚ್ಯಾ ಡೋಹೀ । ಏಕಸರಾ ತಳುಚಿ ಘೇತಲಾ ಜಿಹೀ । ಮಗ ಸ್ಥಿರಾಊನಿ ತೇಹೀ । ತೇಂಚಿ ಜಾಹಲೇ ॥೧೪೪॥ ಅಥವಾ ಆತ್ಮಪ್ರಕಾಶೇ ಚೋಖೇ । ಜೋ ಆಪಣಪೇಂಚಿ ವಿಶ್ವ ದೇಖೇ । ತೋ ದೇಹೇಂಚಿ ಪರಬ್ರಹ್ಮ ಸುಖೇ । ಮಾನು ಯೇಈಲ ॥೧೪೫॥

ಆತ್ಮ ಸುಖದ ಭೋಗಕ್ಕೆ ಬೇಕಾಗುವ ವೃತ್ತಿಯು ಅಹಂಕಾರವನ್ನು ನಾಶ ಮಾಡುವುದು. ಆಗ ದೃಢವಾಗಿ ಸುಖಕ್ಕೆ ಆಲಿಂಗಿಸುವುದು ।।೧೩೨।।

ಮತ್ತು ಆ ಆಲಿಂಗನದ ಭರದಲ್ಲಿ ತನ್ನ ಪ್ರಕ್ಕೆ ತಾನೇ ಏಕ ರೂಪವಾಗುವುದು. ಯಾವ ಪ್ರಕಾರವಾಗಿ ನೀರು ನೀರಿನಲ್ಲಿ ಕೂಡಿದಾಗ ಬೇರೆ ಕಾಣುವುದಿಲ್ಲ ।।೧೩೩।।

ಆಕಾಶದಲ್ಲಿ ವಾಯುವು ಲೀನಗೊಂಡಾಗ ''ಇದು ಆಕಾಶ'', ''ಇದು ವಾಯು'' ಈ ಭೇದದ ಭಾಷೆಯು ಮುಗಿಯುವುದು. ಅದರಂತೆ ಐಕ್ಯತನ ಮತ್ತು ಬ್ರಹ್ಮಸುಖ ಎಂಬ ಭೇದ ಭಾಷೆಯು ಮುಗಿದು ಕೇವಲ ಸುಖ ಒಂದೇ ಉಳಿಯುವುದು ।।೧೩೪।।

ಈ ಪ್ರಕಾರವಾಗಿ ಭೇದದ ಭಾಷೆ ಮುಗಿಯಿತು ಮತ್ತು ಆಗ ಐಕ್ಯವಾಯಿತು. ಹೀಗೆ ಹೇಳಬೇಕೆಂದರೆ ಆ ಅವಸ್ಥೆಯಲ್ಲಿ ಸಾಕ್ಷಿ ಯಾರಿರುವರು? ಅಭೇದಾವಸ್ಥೆಯ ದೃಷ್ಟಾ ಆಗಬಹುದೇ? ।।೧೩೫।।

ಶ್ಲೋಕಾರ್ಥ :- ಆತ್ಮನಲ್ಲಿಯೇ ಸುಖಿಸುವವನು, ಆತ್ಮನಲ್ಲಿಯೇ ರಮಿಸುವವನು, ಆತ್ಮನೇ ಬೆಳಕಾಗಿರುವವನು ಆದ ಯೋಗಿಪುರುಷನು ಬ್ರಹ್ಮ ಸ್ವರೂಪನಾಗಿ ಮೋಕ್ಷವನ್ನು ಪಡೆಯುತ್ತಾನೆ ।।೨೪।।

ಶ್ಲೋಕಾರ್ಥ :- ಪಾಪರಹಿತರು, ಸಂಶಯ ಶೂನ್ಯರು, ಜಿತೇಂದ್ರಿಯರು, ಸರ್ವಭೂತಗಳ ಹಿತದಲ್ಲಿ ನಿರತರಾದ ಋಷಿಗಳು ಪರಮ ಮುಕ್ತಿಯನ್ನು ಪ್ರಾಪ್ತಿ ಮಾಡಿಕೊಳ್ಳುತ್ತಾರೆ ।।೨೫।।

ಆದ್ದರಿಂದ ಇದೆಲ್ಲ ಇರಲಿ, ಏಕೆಂದರೆ ಇಲ್ಲಿ ಹೇಳಲು ಬಾರದ ಮಾತನ್ನು ಕೇವಲ ಹೇಳುತ್ತಿದ್ದರೆ ಏನು ಉಪಯೋಗ ? ಯಾರು ಸ್ವತಃ ಆತ್ಮಸ್ವರೂಪನಾಗಿರುವನೋ ಆತನಿಗೆ ಮಾತ್ರ ಇದರ ರಹಸ್ಯ ಸಹಜವಾಗಿ ತಿಳಿಯಬಹುದು ।।೧೩೬।।

ಇಂತಹ ಸುಖದಿಂದ ಯಾರು ಪರಿಪೂರ್ಣರಾಗಿರುವರೋ ಹಾಗೂ ಸ್ವಸ್ವರೂಪದಲ್ಲಿ ನಿಮಗ್ನರಾಗಿರುವರೋ, ಅವರು ಮದ್ರೂಪರಾಗಿ ಬ್ರಹ್ಮಾನಂದದಿಂದ ಎರಕಹೊಯ್ದ ಮೂರ್ತಿಯಂತೆ ಆಗಿರುವರು. ಹೀಗೆ ನಾನು ತಿಳಿದಿರುವೆ ।।೧೩೭।।

ಅವರು ಆನಂದದ ಮೂರ್ತಿ, ಸ್ವರೂಪ ಸುಖದ ಅಂಕುರ ಅಥವಾ ಆತ್ಮಬೋಧೆಯ ಕ್ರೀಡಾಸ್ಥಾನವಾಗಿರುವರು ।।೧೩೮।।

ಅವರು ವಿವೇಕದ ಗ್ರಾಮ, ಪರಬ್ರಹ್ಮದ ಸ್ವಭಾವ, ಇಷ್ಟೇ ಅಲ್ಲ ಅವರು ಬ್ರಹ್ಮವಿದ್ಯೆಯ ಸುಶೋಭಿತ ಮಾಡಿದ ಅವಯವವೇ ಆಗಿರುವರು ।।೧೩೯।।

ಅವರು ಸತ್ತ್ವದ ಸಾತ್ವಿಕರು ಅಥವಾ ಚೈತನ್ಯದ ರೂಪರಾಗಿರುವರು. (ಹೀಗೆ ಮಹಾರಾಜರು ವರ್ಣನೆ ಮಾಡುವ ಭರದಲ್ಲಿರುವಾಗ್ಗೆ ಶ್ರೀನಿವೃತ್ತಿನಾಥರು ಹೇಳುವರು). ಇದು ಇರಲಿ ಆ ಪುರುಷರ ವರ್ಣನೆ ಎಷ್ಟೆಂದು ಮಾಡುವೆ ।।೧೪೦।।

ನೀನು ಸಾಧು ಸಂತರ ಸ್ತುತಿ ಮಾಡಲಾರಂಭಿಸಿದರೆ ನಿನಗೆ ಕಥೆಯ ನೆನಪು ಸಹ ಆಗುವುದಿಲ್ಲ ಮತ್ತು ನೀನು ನಿರ್ಗುಣ ಬ್ರಹ್ಮದ ರಸಾಳವಾದ ವರ್ಣನೆ ಮಾಡುವುದರಲ್ಲಿ ಲಕ್ಷ ಕೊಡುವೆ ।।೧೪೧।।

ಈಗ ಆ ಸ್ತುತಿಯನ್ನು ಸಾಕು ಮಾಡು ಮತ್ತು ಗೀತಾರ್ಥರೂಪಿ ದೀವಿಗೆಯನ್ನು ಬೆಳಗಿಸಿ ಸಾಧು ಸಜ್ಜನರ ಮಂದಿರದಲ್ಲಿ ಮಂಗಲದಾಯಕ ಜ್ಞಾನದ ಪ್ರಕಾಶ ಮಾಡು ।।೧೪೨।।

ಈ ಪ್ರಕಾರವಾಗಿ ಶ್ರೀನಿವೃತ್ತಿದಾಸರಿಗೆ ಗುರುಗಳ ಅಭಿಪ್ರಾಯ ತಿಳಿದು ಆಗ ಅವರು ಹೇಳುವರು. ಶ್ರೀಕೃಷ್ಣನು ಏನು ಹೇಳಿದನು, ಅದನ್ನೇ ಕೇಳಿರಿ ।।೧೪೩।।

ಅರ್ಜುನಾ, ಆತ್ಮಸುಖದ ಮಡುವಿನಲ್ಲಿ ಅವರು ಒಮ್ಮೆಲೆ ತಳದವರೆಗೂ ಮುಳುಗಿಬಿಟ್ಟಿದ್ದಾರೆ. ಅವರು ಅಲ್ಲಿಯೇ ಉಳಿದುಕೊಂಡು ಆತ್ಮಸ್ವರೂಪವೇ ಆಗಿರುವರು ।।೧೪೪।।

ಅಥವಾ ಆತ್ಮದ ನಿರ್ಮಲವಾದ ಪ್ರಕಾಶದಿಂದ ತಮ್ಮಲ್ಲಿಯೇ ವಿಶ್ವವನ್ನು ನೋಡುವರು. ಅವರು ದೇಹದಲ್ಲಿದ್ದರೂ ಪರಬ್ರಹ್ಮರಾದರು. ಹೀಗೆ ಸುಖವಾಗಿ ಇರುವರು ।।೧೪೫।।

ಜೇ ಸಾಚೋೕಕಾರೇ ಪರಮ । ನಾ ತೇ ಅಕ್ಷರ ನಿಃಸೀಮ । ಜಿಯೇ ಗಾಂವೀಂಚೇ ನಿಷ್ಕಾಮ । ಅಧಿಕಾರಿಯೇ ॥೧೪೬॥ ಜೇ ಮಹರ್ಷೀ ವಾಢಲೇ । ವಿರಕ್ತಾ ಭಾಗಾ ಫಿಟಲೇ । ಜೇ ನಿಃಸಂಶಯಾ ಪಿಕಲೇ । ನಿರಂತರ ॥೧೪೭॥

ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್ ।
ಅಭಿತೋ ಬ್ರಹ್ಮ ನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥೨೬॥

ಜಿಹೀ ವಿಷಯಾಪಾಸೋನಿ ಹಿರತಲೇ । ಚಿತ್ತ ಆಪುಲೇ ಆಪಣ ಜಿಂತಿಲೇ । ತೇ ನಿಶ್ಚಿತ ಜೇಥ ಸುತಲೇ । ಚೇತೀಚಿನಾ ॥೧೪೮॥ ತೇ ಪರಬ್ರಹ್ಮ ನಿರ್ವಾಣ । ಜೇ ಆತ್ಮವಿದಾಂಚೇ ಕಾರಣ । ತೇಂಚಿ ತೇ ಪುರುಷ ಜಾಣ । ಪಂಡುಕುಮರಾ ॥೧೪೯॥ ತೇ ಐಸೇ ಕೈಸೇನಿ ಜಹಾಲೇ । ಜೇ ದೇಹೀಂಚಿ ಬ್ರಹ್ಮತ್ವಾ ಆಲೇ । ಹೇ ಪುಸಸೀ ತರೀ ಭಲೇ । ಸಂಕ್ಷೇಪೇ ಸಾಂಗೋ ॥೧೫೦॥

ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾನ್ ಚಕ್ಷುಶ್ಚೈವಾಂತರೇ ಭ್ರುವೋಃ ।
ಪ್ರಾಣಾಪಾನೌ ಸಮೌ ಕೃತ್ವಾನಾಸಾಭ್ಯಂತರಚಾರಿಣೌ ॥೨೭॥
ಯತೇಂದ್ರಿಯಮನೋಬುದ್ಧಿಃ ಮುನಿರ್ಮೋಕ್ಷಪರಾಯಣಃ ।
ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ॥೨೮॥

ತರೀ ವೈರಾಗ್ಯಾಚೇನಿ ಆಧಾರೇ । ಜಿಹೀ ವಿಷಯ ದವಡೂನಿ ಬಾಹಿರೇ । ಶರೀರೀ ಏಕಂದರೇ । ಕೇಲೇ ಮನ ॥೧೫೧॥ ಸಹಜೇ ತಿಹೀ ಸಂಧೀ ಭೇಟೀ । ಜೇಥ ಭ್ರೂಪಲ್ಲವಾ ಪಡೇ ಗಾಂಠೀ । ತೇಥ ಪಾಠಿಮೋರಿ ದಿಠೀ । ಪಾರಖೋನಿಯಾ ॥೧೫೨॥ ಸಾಂಡೂನಿ ದಕ್ಷಿಣ ವಾಮ । ಪ್ರಾಣಾಪಾನಸಮ । ಚಿತ್ತೇಸೀ ವ್ಯೋಮ । ಗಾಮಿಯೇ ಕರಿತೀ ॥೧೫೩॥ ತೇಥ ಜೈಸೀ ರಥ್ಯೋದಕೇ ಸಕಳೇ । ಘೇಊನಿ ಗಂಗಾ ಸಮುದ್ರೀ ಮಿಳೇ । ಮಗ ಏಕೇಕು ವೇಗಳೇ । ನಿವಡೂ ನಯೇ ॥೧೫೪॥ ತೈಸೀ ವಾಸನಾಂತರಾಚೀ ವಿವಂಚನಾ । ಮಗ ಆಪೈಸೀ ಪಾರುಖೇ ಅರ್ಜುನಾ । ಜೇ ವೇಳೀ ಗಗನೀ ಲಯೋ ಮನಾ । ಪವನೇ ಕೀಜೇ ॥೧೫೫॥ ಜೇಥ ಹೇ ಸಂಸಾರ ಚಿತ್ರ ಉಮಟೇ । ತೋ ಮನೋರೂಪ ಪಟು ಫಾಟೇ । ಜೈಸೇ ಸರೋವರ ಆಟೇ । ಮಗ ಪ್ರತಿಭಾ ನಾಹೀ ॥೧೫೬॥ ತೈಸೇ ಮನ ಯೇಥ ಮುದ್ದಲ ಜಾಯೇ । ಮಗ ಅಹಂಭಾವಾದಿಕ ಕೇ ಆಹೇ । ಮ್ಹಣೌನಿ ಶರೀರೇಂಚಿ ಬ್ರಹ್ಮ ಹೋಯೇ । ಅನುಭವೀ ತೋ ॥೧೫೭॥

ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್ ।
ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ ॥೨೯॥

ಯಾವುದು ನಿಜವಾಗಿಯೂ ಅತಿ ಉತ್ತಮ, ಅವಿನಾಶಿ, ಅಮರ್ಯಾದ ಇರುವ ಬ್ರಹ್ಮ ಸುಖದ ಅಧಿಕಾರಿಗಳು ನಿರಿಚ್ಛ ಪುರುಷರಾಗುವರು ।।೧೪೬।।

ಈ ಸುಖವು ಮಹರ್ಷಿಗಳವರಿಗಾಗಿ ಕಾದಿಟ್ಟಿದೆ. ವಿರಕ್ತರ ಪಾಲಿಗೆ ಬಂದಿದೆ. ನಿಃಸಂದೇಹ ಜೀವಿಗಳವರಿಗೆ ನಿರಂತರವಾಗಿ ಬೆಳೆದು ನಿಂತಿದೆ ।।೧೪೭।।

ಶ್ಲೋಕಾರ್ಥ :- ಕಾಮಕ್ರೋಧಗಳನ್ನು ಬಿಟ್ಟು ಚಿತ್ತವನ್ನು ಜಯಿಸಿದ ಆತ್ಮಜ್ಞಾನಿಗಳಾದ ದೊಡ್ಡವರಿಗೆ ಬ್ರಹ್ಮ ನಿರ್ಮಾಣವು ಎಲ್ಲೆಲ್ಲಿಯೂ ತುಂಬಿರುತ್ತದೆ ।।೨೬।।

ಇವರು ತಮ್ಮ ಮನಸ್ಸನ್ನು ವಿಷಯಗಳಿಂದ ಹಿಂದಕ್ಕೆ ತೆಗೆದುಕೊಂಡು ಅದನ್ನು ಜಯಿಸಿರುವರು ಮತ್ತು ಇವರು ಎಲ್ಲಿ ಮಲಗಿರುವರೋ ಅಲ್ಲಿಂದ ನಿಶ್ಚಯವಾಗಿಯೂ ಎಚ್ಚರವಾಗುವುದಿಲ್ಲ (ದೇಹಭಾಸಕ್ಕೆ ಬರುವುದಿಲ್ಲ) ।।೧೪೮।।

ಹೇ ಪಂಡುಕುಮಾರನೇ, ಆ ಪುರುಷನೆಂದರೆ ಆತ್ಮಜ್ಞಾನದ ಕಾರಣ ಯಾವ ಕೈವಲ್ಯ ಪರಬ್ರಹ್ಮ ಅದುವೇ ಇವರಾಗಿರುವರು ।।೧೪೯।।

ಇವರು ಹೀಗೆ ಹೇಗಾದರು? ಮತ್ತು ದೇಹದಲ್ಲಿದ್ದು ಬ್ರಹ್ಮತ್ವವನ್ನು ಯಾವುದರಿಂದ ಪ್ರಾಪ್ತಿ ಮಾಡಿಕೊಂಡರು? ಇದನ್ನು ನೀನು ಕೇಳಬಹುದು. ಅದಕ್ಕಾಗಿ ನಿನಗೆ ಸಂಕ್ಷಿಪ್ತವಾಗಿ ಹೇಳುವೆ ಕೇಳು ।।೧೫೦।।

ಶ್ಲೋಕಾರ್ಥ :- ಬಾಹ್ಯ ವಿಷಯ ಚಿಂತನೆಯನ್ನು ತ್ಯಜಿಸಿ, ಭ್ರೂಮಧ್ಯದಲ್ಲಿ ದೃಷ್ಟಿಯನ್ನು ನಿಲ್ಲಿಸಿ ನಾನಾ ಪುಟಗಳಲ್ಲಿ ವರ್ತಿಸುವ ಪ್ರಾಣಾಪಾನ ವಾಯುಗಳನ್ನು ಸಮವಾಗಿ ಮಾಡಿ ।।೨೭।।

ಶ್ಲೋಕಾರ್ಥ :- ಇಂದ್ರಿಯ ಮನೋಬುದ್ಧಿಗಳನ್ನು ನಿಗ್ರಹಿಸಿ, ಇಚ್ಛಾ, ಭಯ, ಕ್ರೋಧಗಳನ್ನು ದೂರ ಮಾಡಿ ಮೋಕ್ಷ ದೀಕ್ಷೆಯುಳ್ಳ ಮುನಿಪುಂಗವರಿಗೆ ಮುಕ್ತಿಯು ನಿತ್ಯ ಸಿದ್ಧವಾಗಿರುತ್ತದೆ ।।೨೮।।

ಇವರು ವೈರಾಗ್ಯದ ಆಧಾರದಿಂದ ವಿಷಯಗಳನ್ನು ಹೊರಗೆ ಮಾಡಿ ಯಾವ ತಮ್ಮ ಶರೀರದಲ್ಲಿ ಮನಸ್ಸನ್ನು ಏಕಾಗ್ರಗೊಳಿಸಿದರು ।।೧೫೧।।

ಇಡಾ, ಪಿಂಗಲಾ ಮತ್ತು ಸುಷುಮ್ನಾ ಈ ಮೂರರ ಸಂಗಮದ ಸಂಧಿ ಅಂದರೆ ಹುಬ್ಬುಗಳು ಕೂಡುವ ಸ್ಥಳದಲ್ಲಿ ದೃಷ್ಟಿಯನ್ನು ಹಿಂತಿರುಗಿಸಿ ಸ್ಥಿರ ಪಡಿಸುವುದು ।।೧೫೨।।

ಮೂಗಿನ ಎಡ ಬಲ ಹೊರಳೆಗಳಿಂದ ವಾಯುವನ್ನು ನಿರೋಧಿಸಿ ಪ್ರಾಣ ಅಪಾನ ಈ ವಾಯುಗಳನ್ನು ಒಂದುಗೂಡಿಸಿ ಚಿತ್ತವನ್ನು ಚಿದಾಕಾಶದಲ್ಲಿ ಒಯ್ಯುವರು ।।೧೫೩।।

ಆಗ ದಾರಿಯಲ್ಲಿನ ಎಲ್ಲ ಉದಕವನ್ನು ಗಂಗಾ ನದಿಯು ಸ್ವೀಕರಿಸಿ ಆ ನೀರನ್ನು ಸಮುದ್ರದಲ್ಲಿ ಕೂಡಿಸಿದಾಗ ರಸ್ತೆಯಲ್ಲಿನ ಉದಕವನ್ನು ಅಲ್ಲಿ ಬೇರ್ಪಡಿಸಲು ಬರುವುದಿಲ್ಲ ।।೧೫೪।।

ಅದರಂತೆ ಅರ್ಜುನಾ ಪ್ರಾಣ ನಿರೋಧದಿಂದ ಚಿದಾಕಾಶದಲ್ಲಿ ಮನಸ್ಸು ಲಯ ಹೊಂದಿದಾಗ ಹಲವು ಬಗೆಯ ವಾಸನೆಗಳ ವಿಂಗಡನೆಯು ತಾನೇ ನಿಂತು ಹೋಗುವುದು ।।೧೫೫।।

ಮನೋರೂಪ ಪಟದಲ್ಲಿ ಸಂಸಾರ ರೂಪ ಚಿತ್ರ ಮೂಡಿರುವುದು. ಆ ಪಟವು ತನ್ನಷ್ಟಕ್ಕೆ ತಾನೇ ಹರಿದು ಹೋಗುವುದು. ಹೇಗೆಂದರೆ ಕೊಳವು ಬತ್ತಿದಾಗ ಅಲ್ಲಿನ ಪ್ರತಿಬಿಂಬವು ಕಾಣಸುವುದಿಲ್ಲ ।।೧೫೬।।

ಅದರಂತೆ ಇಲ್ಲಿ ಮುಖ್ಯವಾಗಿ ಮನಸ್ಸೇ ಇಲ್ಲದಂತಾಗಲು ಅಲ್ಲಿ ಅಹಂಕಾರಾದಿಗಳು ಎಲ್ಲಿಂದ ಇರಬೇಕು? ಆದ್ದರಿಂದಲೇ ಬ್ರಹ್ಮಸ್ವರೂಪದ ಅನುಭವ ಪಡೆದವನು ಆತನು ಶರೀರ ಇರುವಾಗಲೇ ಬ್ರಹ್ಮನಾಗುತ್ತಾನೆ ।।೧೫೭।।

ಶ್ಲೋಕಾರ್ಥ :- ತಪೋಯಜ್ಞಗಳ ಫಲಗಳ ಭೋಕ್ತನೂ, ಸರ್ವಲೋಕಗಳ ಪ್ರಭುವೂ ಸಮಸ್ತ ಭೂತಗಳಿಗೆ, ಆಪ್ತ ಮಿತ್ರನೂ ಆದ ನನ್ನನ್ನು ತಿಳಿದ ಪುರುಷನು ಶಾಂತಿಯನ್ನು ಪಡೆಯುತ್ತಾನೆ ।।೨೯।।

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಕರ್ಮಸಂನ್ಯಾಸಯೋಗೋ ನಾಮ ಪಂಚಮೋಽಧ್ಯಾಯಃ

ಆಮ್ಹೀ ಮಾಗಾ ಹನ ಸಾಂಗಿತಲೇ । ಜೇ ದೇಹಿಂಚಿ ಬ್ರಹ್ಮತ್ವ ಪಾವಲೇ । ತೇ ಯೇಣೇ ಮಾರ್ಗೇ ಆಲೇ । ಮ್ಹಣೌನಿಯಾ ॥೧೫೮॥ ಆಣಿ ಯಮನಿಯಮಾಂಚೇ ಡೋಂಗರ । ಅಭ್ಯಾಸಾಚೇ ಸಾಗರ । ಕ್ರಮೋನಿ ಹೇ ಪಾರ । ಪಾತಲೇ ತೇ ॥೧೫೯॥ ತಿಹೀ ಆಪಣಪೇ ಕರೂನಿ ನಿರ್ಲೇಪ । ಪ್ರಪಂಚಾಚೇ ಘೇತಲೇ ಮಾಪ । ಮಗ ಸಾಚಾಚೇಂಚಿ ರೂಪ । ಹೋಊನಿ ಠೇಲೇ ॥೧೬೦॥ ಐಸಾ ಯೋಗಯುಕ್ತೀಚಾ ಉದ್ದೇಶು । ಜೇಥ ಬೋಲಿಲಾ ಹೃಷೀಕೇಶು । ತೇಥ ಅರ್ಜುನು ಸುದಂಶು । ಮ್ಹಣೌನಿ ಚಮತ್ಕಾರಲಾ ॥೧೬೧॥ ತೇ ದೇಖಿಲಿಯಾ ಕೃಷ್ಣೇ ಜಾಣಿತಲೇ । ಮಗ ಹಾಸೋನಿ ಪಾರ್ಥಾತೇ ಮ್ಹಣಿತಲೇ । ಕಾಈ ಪಾ ಚಿತ್ತ ಉವಾಇಲೇ । ಇಯೇ ಬೋಲೀ ತುಝೇ? ॥೧೬೨॥ ತವ ಅರ್ಜುನ ಮ್ಹಣೇ ದೇವೋ । ಪರಚಿತ್ತ ಲಕ್ಷಣಾಂಚಾ ರಾವೋ । ಭಲಾ ಜಾಣಿತಲಾ ಜೇ ಭಾವೋ । ಮಾನಸು ಮಾಝಾ ॥೧೬೩॥ ಮ್ಯಾ ಜೇ ಕಾಂಹೀ ವಿವರೋನಿ ಪುಸಾವೇ । ತೇ ಆಧೀಂಚಿ ಜಾಣಿತಲೇ ದೇವೇ । ತರೀ ಬೋಲಿಲೇ ತೇಂಚಿ ಸಾಂಗಾವೇ । ವಿವಳ ಕರೂನಿ ॥೧೬೪॥ ಏರ್ಹವೀ ತರೀ ಅವಧಾರಾ । ಜೋ ದಾವಿಲಾ ತುಮ್ಹಿ ಅನುಸಾರಾ । ತೋ ಪವ್ಹಣ್ಯಾಹೂನಿ ಪಾಯ ಉತಾರಾ । ಸೋಹಪಾ ಜೈಸಾ ॥೧೬೫॥ ತೈಸಾ ಸಾಂಖ್ಯಾಹೂನಿ ಪ್ರಾಂಜಳಾ । ಆಮ್ಹಾ ಸಾರಿಖಿಯಾ ಅಭೋಳಾ । ಏಥ ಆಹಾತಿ ಪರಿ ಕಾಂಹೀ ಕಾಳಾ । ತೋ ಸಾಹೋ ಯೇ ವರ ॥೧೬೬॥ ಮ್ಹಣೌನಿ ಏಕ ವೇಳ ದೇವಾ । ತೋಚಿ ಪಡತಾಳಾ ಘೇಯಾವಾ । ವಿಸ್ತರೇಲ ತರೀ ಸಾಂಗಾವಾ । ಸಾದ್ಯಂತುಚಿ ॥೧೬೭॥ ತಂವ ಶ್ರೀಕೃಷ್ಣ ಮ್ಹಣತೀ ಹೋ ಕಾ । ತುಜ ಹಾ ಮಾರ್ಗು ಗಮಲಾ ನಿಕಾ । ತರೀ ಕಾಯ ಜಾಹಲೇ ಆಈಕಿ ಜೋ ಕಾ । ಸುಖೇ ಬೋಲೋ ॥೧೬೮॥ ಅರ್ಜುನಾ ತೂ ಪರಿಸಸೀ । ಪರಿಸೋನಿ ಅನುಷ್ಠಿಸೀ । ತರೀ ಆಮ್ಹಾ ಸೀಚಿ ವಾನೀ ಕಾಯಸೀ । ಸಾಂಗಾವಯಾಚಿ? ॥೧೬೯॥ ಆಧೀಂಚಿ ಚಿತ್ತ ಮಾಯೇಚೇ । ವರೀ ಮಿಷ ಜಾಹಲೇ ಪಢಿಯಂತಯಾಚೇ । ಆತಾ ತೇ ಅದ್ಭುತಪಣ ಸ್ನೇಹಾಚೇ । ಕವಣ ಜಾಣೇ ॥೧೭೦॥ ತೇ ಮ್ಹಣೋ ಕಾರುಣ್ಯ ರಸಾಚೀ ವೃಷ್ಟೀ । ಕೀ ನವಯಾ ಸ್ನೇಹಾಚೀ ಸೃಷ್ಟೀ । ಹೇ ಅಸೋ ನೇಣಿಜೇ ದೃಷ್ಟೀ । ಹರೀಚೀ ವಾನೂ ॥೧೭೧॥ ಜೇ ಅಮೃತಾಚೀ ವೋತಲೀ । ಕೀ ಪ್ರೇಮಚಿ ಪಿಊನಿ ಮಾತಲೀ । ಮ್ಹಣೌನಿ ಅರ್ಜುನ ಮೋಹೇ ಗುಂತಲೀ । ನಿಘೋ ನೇಣೇ ॥೧೭೨॥

ಇಲ್ಲಿಗೆ ಉಪನಿಷತ್ತೂ, ಬ್ರಹ್ಮವಿದ್ಯೆಯೂ, ಯೋಗ ಶಾಸ್ತ್ರವೂ, ಶ್ರೀಕೃಷ್ಣಾರ್ಜುನ ಸಂವಾದವೂ ಆದ ಶ್ರೀಮದ್ಭಗವದ್ಗೀತೆಯಲ್ಲಿ ಕರ್ಮಸಂನ್ಯಾಸಯೋಗವೆಂಬ ಹೆಸರಿನ ಐದನೆಯ ಅಧ್ಯಾಯವು ಮುಗಿದುದು.

ಈ ಪುರುಷರು ದೇಹದಲ್ಲಿದ್ದಾಗಲೇ ಬ್ರಹ್ಮಭಾವವನ್ನು ಹೊಂದುವರು. ಇವರು ಈ ಯೋಗ ಮಾರ್ಗದಿಂದಲೇ ಬಂದಿರುವುದರಿಂದ ನಾನು ನಿನಗೆ ಈ ಹಿಂದೆ ಯೋಗಮಾರ್ಗ ವಿಷಯಕ್ಕೆ ನಿರೂಪಿಸಿರುವೆನು ।।೧೫೮।।

ಇವರು ಯಮನಿಯಮರೂಪದ ಪರ್ವತವನ್ನು ಚಿತ್ತ ನಿರೋಧದ ಅಭ್ಯಾಸರೂಪ ಸಾಗರವನ್ನು ದಾಟಿ ಮೋಕ್ಷ ವನ್ನು ಪ್ರಾಪ್ತಮಾಡಿಕೊಂಡಿರುವರು ।।೧೫೯।।

ಮತ್ತು ಇವರು ತಮ್ಮನ್ನು ತಾವೇ ಉಪಾಧಿರಹಿತ ಮಾಡಿ ಕೊಂಡು ಪ್ರಪಂಚದ ಆಳವನ್ನು ಅರಿತರು. ಆದ್ದರಿಂದ ಇವರು ಸತ್ಯ ಬ್ರಹ್ಮದ ಸ್ವರೂಪರಾದರು ।।೧೬೦।।

ಈ ಪ್ರಕಾರವಾಗಿ ಶ್ರೀಕೃಷ್ಣನು ಯೋಗಯುಕ್ತಿಯ ಅಭಿಪ್ರಾಯ ಪ್ರದರ್ಶಿಸಿದಾಗ ಮಾರ್ಮಿಕ ಜ್ಞಾತಾನಾಗಿರುವ ಅರ್ಜುನನಿಗೆ ದೊಡ್ಡ ಚಮತ್ಕಾರವಾಯಿತು ।।೧೬೧।।

ಇದನ್ನು ನೋಡಿ ಶ್ರೀಕೃಷ್ಣನು ಆತನ ಮನಸ್ಸಿನಲ್ಲಿದ್ದದ್ದು ಅರಿತುಕೊಂಡು ಹಾಸ್ಯವದನಾಗಿ ಪಾರ್ಥನಿಗೆ ಹೇಳಿದನು:- "ನಾನು ಇದನ್ನು ಹೇಳಿರುವುದಕ್ಕೆ ನಿನಗೇಕೆ ಪ್ರಸನ್ನವಾಗಿದೆ?" ।।೧೬೨।।

ಆಗ ಅರ್ಜುನನು ಹೇಳಿದನು:- ದೇವಾ ಬೇರೆಯವರ ಮನೋಭಿಪ್ರಾಯ ತಿಳಿಯುವುದರಲ್ಲಿ ನೀವು ರಾಜರು. ಆದ್ದರಿಂದ ನನ್ನ ಮನದಿಂಗಿತವನ್ನು ಚೆನ್ನಾಗಿ ಬಲ್ಲಿರುವಿರಿ ।।೧೬೩।।

ದೇವಾ, ನಾನೇನು ವಿಚಾರಪೂರ್ವಕವಾಗಿ ಕೇಳಬೇಕಾದದ್ದು ಮೊದಲೇ ನೀವು ಅದನ್ನು ಅರಿತುಕೊಂಡಿರುವಿರಿ. ಈಗ ನೀವು ಹೇಳುವುದನ್ನು ವಿಶೇಷವಾಗಿ ಸ್ಪಷ್ಟಗೊಳಿಸಿರಿ ।।೧೬೪।।

ಸಹಜವಾಗಿ ವಿಚಾರಿಸಿ ನೋಡಲು ಮೇಲೆ ಹೇಳಿದ ಮಾರ್ಗದಿಂದ ಈಜಿ ಹೋಗುವುದಕ್ಕಿಂತಲೂ ಇಳಿಜಾರಿನ ಕಾಲು ದಾರಿಯಿಂದ ಹೋಗುವಷ್ಟು ಸುಲಭವಾಗಿದೆ ।।೧೬೫।।

ಆದ್ದರಿಂದ ಜ್ಞಾನಯೋಗಕ್ಕಿಂತಲೂ ಅಷ್ಟಾಂಗ ಯೋಗವು ನಮ್ಮಂತಹ ದುರ್ಬಲರಿಗೆ ಸುಗಮವಾಗಿದೆ. ಆದರೆ ಅದು ವಿಲಂಬ ಸಾಧ್ಯ ಇರುವುದಾದರೂ ಸರಿಯೇ ।।೧೬೬।।

ಅದಕ್ಕಾಗಿ ದೇವಾ ಈ ಯೋಗವನ್ನು ಪುನಃ ಒಮ್ಮೆ ಹೇಳಿರಿ. ಅದನ್ನು ವಿಸ್ತಾರವಾಗಿ ಸಾದ್ಯಂತ ತಿಳಿಸಿರಿ ।।೧೬೭।।

ಆಗ ಶ್ರೀಕೃಷ್ಣನು ಹೇಳಿದನು :- ಹೀಗೇನು ? ನಿನಗೆ ಈ ಯೋಗ ಮಾರ್ಗವು ಚೆನ್ನಾಗಿ ಹಿಡಿಸಿರುವುದರಿಂದ ಹೇಳು ವುದಕ್ಕೆ ನಮ್ಮದೇನು ಹೋಗುವುದು ? ನಾವು ಆನಂದದಿಂದ ಹೇಳುತ್ತೇವೆ, ಸಂತೋಷದಿಂದ ನೀನು ಕೇಳು ।।೧೬೮।।

ಅರ್ಜುನಾ, ನೀನು ಕೇಳುವವನಿದ್ದೂ ಮತ್ತು ಅದರಂತೆ ಆಚರಣೆ ಮಾಡುವವನಿದ್ದ ಮೇಲೆ ನಾವು ಹೇಳುವುದರಲ್ಲಿ ಕಡಿಮೆ ಏಕೆ ಮಾಡಬೇಕು ? ।।೧೬೯।।

ಜ್ಞಾನೇಶ್ವರ ಮಹಾರಾಜರು ಹೇಳುವರು :- ಮೊದಲೇ ತಾಯಿಯ ಅಂತಃಕರಣ ಕೂಸಿನ ಮೇಲೆ ಪ್ರೀತಿ. ಪುನಃ ಪ್ರೀತಿಯ ಕೂಸನ್ನು ಪ್ರೀತಿಸುವ ಅದ್ಭುತ ಪ್ರೇಮವನ್ನು ಯಾರು ಬಲ್ಲರು? ।।೧೭೦।।

ಆ ಪ್ರೇಮಕ್ಕೆ ಕಾರುಣ್ಯದ ಮಳೆಗರೆದಂತೆ ಎನ್ನಬೇಕೆ? ಅಥವಾ ವಿಲಕ್ಷಣವಾದ ಪ್ರೇಮದ ಸೃಷ್ಟಿ ಎನ್ನಬೇಕೆ? ಏನೇ ಇರಲಿ, ಶ್ರೀಕೃಷ್ಣನ ಕೃಪಾದೃಷ್ಟಿ ವರ್ಣನೆ ಮಾಡಲು ಬಾರದು ।।೧೭೧।।

ಈ ಕೃಪಾದೃಷ್ಟಿಯು ಅಮೃತದ ಮುಶಿಯಲ್ಲಿ ಕರಗಿ ಸುರಿದಿದೆ. ಅಥವಾ ಪ್ರೇಮವೆಲ್ಲವನ್ನು ಕುಡಿದು ಉನ್ಮತ್ತ ನಾಗಿದ್ದಕ್ಕೆ ಅರ್ಜುನನ ಮೋಹದಲ್ಲಿ ಗುಂತಾಯಿಸಿ ಹೊರಗೆ ಬರಲಿಕ್ಕಾಗದಾಗಿದೆ ।।೧೭೨।।

ಹೇ ಬಹು ಜೇ ಜೇ ಜಲ್ಪಿಜೇಲ । ತೇಥೇ ಕಥೇಸೀ ಘಾಂಕು ಹೋಈಲ । ಪರೀ ತೇ ಸ್ನೇಹ ರೂಪಾ ನ ಯೇಲ । ಬೋಲವರೀ ।೧೭೩।। ಮ್ಹಣೌನಿ ವಿಸುರಾ ಕಾಯ ಯೇಣೇ । ತೋ ಈಶ್ವರು ಕವಳಾವಾ ಕವಣೇ । ಜೋ ಆಪುಲೇ ಮಾನ ನೇಣೇ । ಆಪಣಚಿ ।೧೭೪।। ತರೀ ಮಾಗಿಲ ಧ್ವನಿಆಂತು । ಮಜ ಗಮಲಾ ಸಾವಿಯಾಚೀ ಮೋಹಿತು । ಜೇ ಬಲಾತ್ಕಾರೇ ಅಸೇ ಮ್ಹಣತು । ಪರಿಸ ಬಾಪಾ ।೧೭೫।। ಅರ್ಜುನಾ ಜೇಣೇ ಜೇಣೇ ಭೇದೇ । ತುಝೇ ಕಾ ಚಿತ್ತ ಬೋಧೇ । ತೈಸೇ ತೈಸೇ ವಿನೋದೇ । ನಿರೂಪಿಜೇಲ ।೧೭೬।। ತೋ ಕಾ ಇಸಯಾ ನಾಮ ಯೋಗು । ತಯಾಚಾ ಕವಣ ಉಪೇಗು । ಅಥವಾ ಅಧಿಕಾರಪ್ರಸಂಗು । ಕವಣಾ ಯೇಥ ।೧೭೭।। ಐಸೇ ಜೇ ಜೇ ಕಾಂಹೀ । ಉಕ್ತ ಅಸೇ ಇಯೇ ಠಾಈ । ತೇ ಆಘವೇಚಿ ಪಾಹೀ । ಸಾಂಗೇನ ಆತಾ ।೧೭೮।। ತೂ ಚಿತ್ತ ದೇಊನಿ ಅವಧಾರೀ । ಐಸೇ ಮ್ಹಣೌನಿ ಶ್ರೀಹರೀ । ಬೋಲಿಜೇಲ ತೇ ಪುಢಾರೀ । ಕಥಾ ಆಹೇ ।೧೭೯।। ಶ್ರೀಕೃಷ್ಣ ಅರ್ಜುನಾಸೀ ಸಂಗು । ನ ಸಾಂಡೋನಿ ಸಾಂಗೇಲ ಯೋಗು । ತೋ ವ್ಯಕ್ತ ಕರೂ ಪ್ರಸಂಗು । ಮ್ಹಣೇ ನಿವೃತ್ತಿದಾಸು ।೧೮೦।।

---

ಇತಿ ಶ್ರೀ ಜ್ಞಾನದೇವ ವಿರಚಿತಯಾಂ ಭಾವಾರ್ಥ ದೀಪಿಕಾಯಾಂ ಪಂಚಮೋಽಧ್ಯಾಯಃ ।೫।।

ಶ್ಲೋಕ :೨೯ ಓವಿ ।೧೮೦।।

ಇದರ ವಿಷಯಕ್ಕೆ ಹೇಳಲು ಹೋದರೆ ಕಥೆಯ ವಿಷಯಾಂತರ ಆಗಬಹುದು. ಅದಲ್ಲದೇ ಕೃಷ್ಣಾರ್ಜುನರ ಸ್ನೇಹದ ವರ್ಣನೆ ಶಬ್ದದಿಂದ ಮಾಡಲು ಬರುವುದಿಲ್ಲ ।।೧೭೩।।

ಆ ಈಶ್ವರನಿಗೆ ಸ್ವತಃ ತನ್ನ ಆಳತೆ ತನಗೆ ತಿಳಿಯುವುದಿಲ್ಲ. ಆತನಿಗೆ ಯಾರು ತಿಳಿಯಬೇಕು ? ಅದಕ್ಕಾಗಿ ಈ ವಿಚಾರ ಮಾಡುವುದರಲ್ಲಿ ಯಾವ ಅರ್ಥವಿದೆ ? ।।೧೭೪।।

ಆದರೆ ಹಿಂದಿನ ಹೇಳಿಕೆಯ ಅಭಿಪ್ರಾಯ ಮೇರೆಗೆ ನನಗೆ ಮಾತ್ರ ಅರ್ಜುನನ ಮೇಲೆ ಬಹಳ ಮೋಹಿತನಾದಂತೆ ಕಾಣುತ್ತದೆ. ಏಕೆಂದರೆ ಅರ್ಜುನನಿಗೆ ಆಗ್ರಹಪೂರ್ವಕಾಗಿ "ಕೇಳು" ಎಂದು ಹೇಳುತ್ತಿದ್ದಾನೆ ।।೧೭೫।।

ಅರ್ಜುನಾ, ಯಾವ ಯಾವ ಪ್ರಕಾರದಿಂದ ನಿನ್ನ ಮನಸ್ಸಿಗೆ ಬೋಧವಾಗುವುದೋ ಅದೇ ಪ್ರಕಾರದಿಂದ ನಿನಗೆ ಕೌತುಕದಿಂದ ಯೋಗ ಮಾರ್ಗ ಹೇಳುತ್ತೇನೆ ।।೧೭೬।।

ಆ ಯೋಗಕ್ಕೆ ಏನೆನ್ನುವರು? ಅದರ ಉಪಯೋಗವೇನು? ಮತ್ತು ಇದನ್ನು ಆಚರಿಸಲು ಅಧಿಕಾರಿ ಯಾರು? ।।೧೭೭।।

ಹೀಗೆ ಏನೇನು ಈ ಸಂಬಂಧದಿಂದ ಯೋಗ್ಯವೆನಿಸುವುದೋ, ಅದೆಲ್ಲವನ್ನೂ ಈಗ ನಿನಗೆ ಹೇಳುವೆನು ।।೧೭೮।।

"ಆದ್ದರಿಂದ ನೀನು ಚಿತ್ತಕೊಟ್ಟು ಕೇಳು". ಹೀಗೆ ಹೇಳಿ ಶ್ರೀಹರಿಯು ಹೇಳುವ ಕಥೆಯು ಮುಂದಿನ ಅಧ್ಯಾಯದಲ್ಲಿದೆ ।।೧೭೯।।

ನಿವೃತ್ತಿದಾಸರಾದ ಜ್ಞಾನೇಶ್ವರರು ಹೇಳುವರು:- ಅರ್ಜುನನ ಸಖ್ಯ ಸಂಬಂಧಕ್ಕೆ ಧಕ್ಕೆ ಬಾರದಂತೆ ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ ಯೋಗವನ್ನು ಪ್ರಸಂಗದಂತೆ ಸ್ಪಷ್ಟಗೊಳಿಸುವೆ ।।೧೮೦।।

ಶ್ರೀ ಜ್ಞಾನೇಶ್ವರ ಮಹಾರಾಜರಿಂದ ರಚಿತವಾದ ಭಾವಾರ್ಥ ದೀಪಿಕೆಯ ಐದನೆಯ ಅಧ್ಯಾಯದ ವಿವರಣೆ ಸಮಾಪ್ತವು

# ಸಾರ್ಥ ಶ್ರೀಜ್ಞಾನೇಶ್ವರೀ

## ಅಧ್ಯಾಯ ಸಹಾವಾ

ಶ್ರೀ ಗಣೇಶಾಯ ನಮಃ

---

ಮಗ ರಾಯಾತೇ ಮ್ಹಣೇ ಸಂಜಯೋ । ತೋಚಿ ಅಭಿಪ್ರಾವೋ ಅವಧಾರಿಜೋ । ಕೃಷ್ಣ ಸಾಂಗತೀ ಆತಾ ಜೋ । ಯೋಗರೂಪ ।।೧।। ಸಹಜೇ ಬ್ರಹ್ಮ ರಸಾಚೇ ಪಾರಣೇ । ಕೇಲೇ ಅರ್ಜುನಾಲಾಗೀ ನಾರಾಯಣೇ । ಕೀ ತೇಚಿ ಅವಸರೀ ಪಾಹುಣೇ । ಪಾತಲೋ ಆಮ್ಹೀ ।।೨।। ಕೈಸೀ ದೈವಾಚೀ ಆಗಳಿಕ ನೇಣಿಜೇ । ಜೈಸೇ ತಾನ್ಹೇಲಿಯಾ ತೋಯ ಸೇವಿಜೇ । ಕೀ ತೇಂಚಿ ಚವೀ ಕರೂನಿ ಪಾಹಿಜೇ । ತಂವ ಅಮೃತ ಆಹೇ ।।೩।। ತೈಸೇ ಆಮ್ಹಾ ತುಮ್ಹಾ ಜಾಹಲೇ । ಜೇ ಆಡಮುಠೀ ತತ್ತ್ವ ಫಾವಲೇ । ತಂವ ಧೃತರಾಷ್ಟ್ರೇ ಮ್ಹಣಿತಲೇ । ಹೇ ನ ಪುಸೋ ತೂತೇ ।।೪।। ತಯಾ ಸಂಜಯಾ ಯೇಣೇ ಬೋಲೇ । ರಾಯಾಚೇ ಹೃದಯ ಚೋಜವಲೇ । ಜೇ ಅವಸರೀ ಆಹೇ ಘೇತಲೇ । ಕುಮಾರಾಂಚಿಯಾ ।।೫।। ಹೇ ಜಾಣೋನಿ ಮನೀ ಹಾಂಸಿಲಾ । ಮ್ಹಣೇ ಮ್ಹಾತಾರಾ ಮೋಹೇ ನಾಶಿಲಾ । ಏರ್ಹವೀ ಬೋಲು ತರೀ ಭಲಾ ಜಾಹಲಾ । ಅವಸರೀ ಇಯೇ ।।೬।। ಪರಿ ತೇ ತೈಸೇ ಕೈಸೇನಿ ಹೋಈಲ । ಜಾತ್ಯಂಧು ಕೈಸೇ ಪಾಹೇಲ । ತೇವಿಂಚಿಯೇ ರುಸೇ ಘೇಈಲ । ಮ್ಹಣೌನಿ ಬಿಹೇ ।।೭।। ಪರಿ ಆಪಣ ಚಿತ್ತಿ ಆಪುಲಾ । ನಿಕಿಯಾಪರೀ ಸಂತೋಷಲಾ । ಜೇ ತೋ ಸಂವಾದು ಫಾವಲಾ । ಕೃಷ್ಣಾರ್ಜುನಾಂಚಾ ।।೮।। ತೇಣೇ ಆನಂದಾಚೇನಿ ಧಾಲೇಪಣೇ । ಸಾಭಿಪ್ರಾಯ ಅಂತಃಕರಣೇ । ಆತಾ ಆದರೇಸೀ ಬೋಲಣೇ । ಘಡೇಲ ತಯಾ ।।೯।। ತೋ ಗೀತೇಮಾಜಿ ಷಷ್ಠೀಚಾ । ಪ್ರಸಂಗು ಅಸೇ ಆಯಣೀಚಾ । ಜೈಸಾ ಕ್ಷೀರಾರ್ಣವೀ ಅಮೃತಾಚಾ ।ನಿವಾಡು ಜಾಹಲಾ ।।೧೦।। ತೈಸೇ ಗೀತಾರ್ಥಾಚೇ ಸಾರ । ಜೇ ವಿವೇಕಸಿಂಧೂಚೇ ಪಾರ । ನಾನಾ ಯೋಗವಿಭವಭಾಂಡಾರ । ಉಘಡಲೇ ಕಾ ।।೧೧।। ಜೇ ಆದಿಪ್ರಕೃತೀಚೇ ವಿಸವಣೇ । ಜೇ ಶಬ್ದಬ್ರಹ್ಮಾಸಿ ನ ಬೋಲಣೇ। ಜೇಥೂನಿ ಗೀತಾವಲ್ಲೀಚೆ ಠಾಣೇ । ಪ್ರರೋಹೋ ಪಾವೇ ।।೧೨।। ತೋ ಅಧ್ಯಾವೋ ಸಹಾವಾ । ವರಿ ಸಾಹಿತ್ಯಾಚಿಯಾ ಬರವಾ । ಸಾಂಗಿಜೈಲ ಮ್ಹಣೌನಿ ಪರಿಸಾವಾ । ಚಿತ್ತ ದೇಉನೀ ।।೧೩।।

# ಸಾರ್ಥ ಶ್ರೀಜ್ಞಾನೇಶ್ವರೀ

## ಆರನೆಯ ಅಧ್ಯಾಯ

ಆಗ ಸಂಜಯನು ಧೃತರಾಷ್ಟ್ರನಿಗೆ ಹೇಳಿದನು :- ರಾಜಾ, ಈಗ ಶ್ರೀಕೃಷ್ಣನು ಯೋಗ ವಿಷಯಕ್ಕೆ ತನ್ನ ಅಭಿಪ್ರಾಯ ಹೇಳುವನು, ಅದನ್ನೇ ಕೇಳು ।೧॥

ಬ್ರಹ್ಮ ರಸದ ಭೋಜನ ಪ್ರಸಂಗವನ್ನು ಶ್ರೀನಾರಾಯಣನು ಅರ್ಜುನನಿಗಾಗಿ ಸಹಜವಾಗಿ ಮಾಡಿರುವಾಗ, ಅದೇ ವೇಳೆಗೆ ನಾವು ''ಬೀಗರು'' ಆಗಿ ಪ್ರಾಪ್ತಿ ಮಾಡಿಕೊಂಡೆವು ।೨॥

ದೈವದ ದೊಡ್ಡಸ್ತಿಕೆ ಏನೆಂದು ವರ್ಣಿಸಬೇಕು? ನೀರಡಿಸಿದ ಮನುಷ್ಯನು ನೀರೆಂದು ತಿಳಿದು ಕುಡಿದಾಗ ಅದರ ರುಚಿ ನೋಡಲು ಪ್ರತ್ಯಕ್ಷ ಅಮೃತವೇ ಆಗಿತ್ತು ।೩॥

ಅದರಂತೆ ನಮಗೆ ನಿಮಗೆ ದೊರಕಿರುವುದು. ಏಕೆಂದರೆ (ಆಕಸ್ಮಾತಾಗಿ ಅಮೌಲ್ಯ ವಸ್ತು ಸೋವಿ ದರದಲ್ಲಿ ಸಿಕ್ಕಂತೆ) ಅಸಂಭವವಾಗಿರುವ ಬ್ರಹ್ಮ ಜ್ಞಾನವು ಸಹಜವಾಗಿ ನಮಗೆ ಸಿಕ್ಕಿರುವುದು. ಆಗ ಧೃತರಾಷ್ಟ್ರನು ''ನಾನು ನಿನಗೆ ಇದು ಕೇಳಿಲ್ಲ'' ಎಂದನು ।೪॥

ಈ ಹೇಳಿಕೆಯಿಂದ ಧೃತರಾಷ್ಟ್ರನ ಮನದಲ್ಲಿ ಪುತ್ರರ ವಿಷಯಗಳಿಗಾಗಿ ಕೇಳುವ ಉತ್ಕಂಠಿತ ಇಚ್ಛೆಯಾಗಿದೆ. ಹೀಗೆಂದು ಸಂಜಯನು ಹೇಳಿದನು ।೫॥

ಇದನ್ನು ತಿಳಿದು ಮನದಲ್ಲಿ ನಕ್ಕು ಹೀಗೆ ಅಂದುಕೊಂಡನು ; ಈ ಮುದುಕನು ಪುತ್ರವಾತ್ಸಲ್ಯದಿಂದ ಪೂರ್ಣ ವ್ಯರ್ಥಗೊಂಡನು. ಆದರೆ ಈಗ ಶ್ರೀಕೃಷ್ಣಾರ್ಜುನರ ಸಂವಾದವು ಬಹಳ ಉತ್ತಮವಾಗುವುದಿದೆ ।೬॥

ಆದರೆ ಈ ಸಂವಾದದ ರುಚಿಯು ಈತನಿಗೆ ಎಲ್ಲಿಂದ ಸಿಗಬೇಕು? ಜನ್ಮಾಂಧನಿಗೆ ಹೇಗೆ ಕಾಣಬೇಕು? ಆದರೆ ಇದನ್ನು ಸ್ಪಷ್ಟ ಹೇಳಿದರೆ ರಾಜನಿಗೆ ಕೋಪ ಬರಬಹುದೆಂದು ಭಯಪಡಬೇಕಾಯಿತು ।೭॥

ಆದರೆ (ಸಂಜಯನು) ಶ್ರೀಕೃಷ್ಣಾರ್ಜುನರ ಪರಸ್ಪರ ಸಂವಾದದಿಂದ ಮನದಲ್ಲಿ ಉತ್ತಮ ಪ್ರಕಾರದಿಂದ ಸಂತುಷ್ಟನಾದನು ।೮॥

ಈ ಆನಂದದ ತೃಪ್ತಿಯಲ್ಲಿ ಮತ್ತು ಪ್ರಫುಲ್ಲಿತ ಅಂತಃಕರಣದಿಂದ ಬಹಳ ಆದರದಿಂದ ಧೃತರಾಷ್ಟ್ರನಿಗೆ ಅಭಿಪ್ರಾಯ ತಿಳಿಸುವನು ।೯॥

ಕ್ಷೀರಸಾಗರದಲ್ಲಿ ಮಂಥನ ಮಾಡುವಾಗ್ಗೆ ಅಮೃತವು ಪ್ರಾಪ್ತಿಯಾದಂತೆ, ಈ ಗೀತೆಯ ಆರನೆಯ ಅಧ್ಯಾಯದ ಪ್ರಸಂಗವು ಬಹು ಚಾತುರ್ಯಮಯವಾಗಿದೆ ।೧೦॥

ಈ ಅಧ್ಯಾಯವು ಗೀತಾರ್ಥದ ಸಾರವಾಗಿದೆ. ಆತ್ಮಾನಾತ್ಮ ವಿಚಾರರೂಪ ಸಮುದ್ರದ ಆಚೆ ದಂಡೆಯಾಗಿದೆ. ಅಥವಾ ಅಷ್ಟಾಂಗಯೋಗದ ಐಶ್ವರ್ಯದ ತೆರೆದ ಭಾಂಡಾರವಾಗಿದೆ ।೧೧॥

ಇದು ಆದಿಮಾಯೆಯ ವಿಶ್ರಾಂತಿ ಸ್ಥಾನವಾಗಿದೆ. ಇಲ್ಲಿ ವೇದವೂ ಮೌನವಾಗಬೇಕಾಗುವುದು ಮತ್ತು ಇಲ್ಲಿಂದಲೇ ಗೀತಾರೂಪ ಬಳ್ಳಿಯು ಬೆಳೆಯತೊಡಗಿತು ।೧೨॥

ಇಂತಹ ಆರನೆಯ ಅಧ್ಯಾಯವನ್ನು ಸರ್ವ ಅಲಂಕಾರಯುಕ್ತವಾಗಿ ಪರಿಪೂರ್ಣ ಸಾಹಿತ್ಯದೊಂದಿಗೆ ಹೇಳುತ್ತೇನೆ. ಅದನ್ನು ಚಿತ್ತ ಕೊಟ್ಟು ಕೇಳಿರಿ ।೧೩॥

ಮಾಝಾ ಮರಾಠಾಚಿ ಬೋಲು ಕೌತುಕೇ । ಪರೀ ಅಮೃತಾತೇಂಹೀ ಪೈಜಾ ಜಿಂಕೇ । ಐಸೀ ಅಕ್ಷರೇ ರಸಿಕೇ । ಮೇಳವೀನ ।೧೪॥ ಜಿಯೇ ಕೋವಳಿಕೇಚೇನಿ ಪಾಡೇ । ದಿಸತೀ ನಾದೀಂಚೇ ರಂಗ ಥೋಡೇ । ವೇಧೇ ಪರಿಮಳಾಚೇ ಬೀಕ ಮೋಡೇ । ಜಯಾಚೇನಿ ।೧೫॥ ಐಕಾ ರಸಾಳಪಣಾಚಿಯಾ ಲೋಭಾ । ಕೀ ಶ್ರವಣೇಂಚಿ ಹೋತಿ ಜಿಭಾ । ಬೋಲೇ ಇಂದ್ರಿಯಾ ಲಾಗೇ ಕಳಂಭಾ । ಏಕಮೇಕಾ ।೧೬॥ ಸಹಜೇ ಶಬ್ದು ತರೀ ವಿಷೋ ಶ್ರವಣಾಚಾ । ಪರೀ ರಸನಾ ಮ್ಹಣೇ ರಸು ಹಾ ಆಮುಚಾ । ಘ್ರಾಣಾಸಿ ಭಾವೋ ಜಾಯ ಪರಿಮಳಾಚಾ । ಹಾ ತೋಚಿ ಹೋಈಲ ।೧೭॥ ನವಲ ಬೋಲತಿಯೇ ರೇಖೇಂಚೀ ವಾಹಣೀ । ದೇಖತಾ ಡೋಳ್ಯಾಹೀ ಪುರೋ ಲಾಗೇ ಧಣೀ । ತೇ ಮ್ಹಣತೀ ಉಘಡಲೀ ಖಾಣೀ । ರೂಪಾಚೀ ಹೇ ।೧೮॥ ಜೇಥ ಸಂಪೂರ್ಣ ಪದ ಉಭಾರೇ। ತೇಥ ಮನಚಿ ಧಾಂವೇ ಬಾಹಿರೇ। ಬೋಲು ಭುಜಾಹೀ ಆವಿಷ್ಕರೇ । ಆಲಿಂಗಾವಯಾ।೧೯॥ ಐಶಿ ಇಂದ್ರಿಯೇ ಆಪುಲಾಲಿಯಾ ಭಾವೀ। ಝೋಂಬತೀ ಪರೀ ತೋ ಸರಿಸೇಪಣೇಚಿ ಬುಝಾವೀ । ಜೈಸಾ ಏಕಲಾ ಜಗ ಚೇವವೀ । ಸಹಸ್ರಕರೂ ।೨೦॥ ತೈಸೇ ಶಬ್ದಾಚೇ ವ್ಯಾಪಕಪಣ । ದೇಖಿಜೇ ಅಸಾಧಾರಣ । ಪಾಹತಯಾ ಭಾವಜ್ಞಾ ಫಾವತೀ ಗುಣ । ಚಿಂತಾಮಣೀಚೇ ।೨೧॥ ಹೇ ಅಸೋತು ಯಾ ಬೋಲಾಂಚೀ ತಾಟೇ ಭಲೀ । ವರೀ ಕೈವಲ್ಯರಸೇ ವೋಗರಿಲೀ । ಹೀ ಪ್ರತಿಪತ್ತಿ ಮಿಯಾ ಕೇಲೀ । ನಿಷ್ಕಾಮಾಸೀ ।೨೨॥ ಆತಾ ಆತ್ಮಪ್ರಭಾ ನೀಚ ನವೀ । ತೇಚಿ ಕರೂನಿ ಠಾಣದಿವೀ । ಜೋ ಇಂದ್ರಿಯಾಂತೇ ಚೋರೂನಿ ಜೇವೀ । ತಯಾಸೀಚಿ ಫಾವೇ ।೨೩॥ ಯೇಥ ಶ್ರವಣಾಚೇನಿ ಪಾಂಗೇ । ವೀಣ ಶ್ರೋತಯಾ ಹೋಆವೆ ಲಾಗೇ । ಹೇ ಮನಾಚೇನಿ ನಿಜಾಂಗೇ । ಭೋಗಿಜೇ ಗಾ ।೨೪॥ ಆಹಾಚ ಬೋಲಾಚೀ ವಾಲೀಫ ಫೇಡಿಜೇ । ಆಣಿ ಬ್ರಹ್ಮಾಚಿಯಾಚಿ ಆಂಗಾ ಘಡಿಜೆ । ಮಗ ಸುಖೇಸೀ ಸುರವಾಡಿಜೇ । ಸುಖಾಚಿ ಮಾಜೀ ।೨೫॥ ಐಸೇ ಹಳುವಾರಪಣ ಜರೀ ಯೇಈಲ । ತರೀಚ ಹೇ ಉಪೇಗಾ ಜಾಈಲ । ಏರ್ಹವೀ ಆಘವೀ ಗೋಠೀ ಹೋಈಲ । ಮುಕಯಾಬಹಿರಯಾಚೀ ।೨೬॥ ಪರೀ ತೇ ಅಸೋ ಆತಾ ಆಘವೇ। ನಲಗೇ ಶ್ರೋತಯಾಂತೇ ಕಡಸಾವೇ । ಜೇ ಅಧಿಕಾರಿಯೇ ಏಥ ಸ್ವಭಾವೇ । ನಿಷ್ಕಾಮಕಾಮು ।೨೭॥ ಜೇಹೀ ಆತ್ಮ ಬೋಧಾಚಿಯಾ ಆವಡೀ । ಕೇಲೀ ಸ್ವರ್ಗ ಸಂಸಾರಾಚೀ ಕುರೋಂಡೀ । ತೇ ವಾಂಚೂನಿ ಏಥೀಂಚೀ ಗೋಡೀ । ನೇಣತೀ ಆಣಿಕ ।೨೮॥

ನನ್ನ ಪ್ರತಿಪಾದನೆಯು ಮರಾಠಿ ಭಾಷೆಯಲ್ಲಿರುವುದು ನಿಜ. ಆದರೆ ಸಹಜವಾಗಿ ಅಮೃತವನ್ನು ಪ್ರತಿಜ್ಞಾ ಪೂರ್ವಕವಾಗಿ ಗೆಲ್ಲುವಂತೆ ರಸಯುಕ್ತ ಶಬ್ದಗಳ ರಚನೆ ಮಾಡುವೆನು ।೧೪॥

ನನ್ನ ಮಾತಿನ ಮೃದುತನಕ್ಕೆ ಸಪ್ತಸ್ವರಗಳಿಂದ ಹುಟ್ಟುವ ರಂಗವು ಹೀನವೆಂದು ಭಾಸವಾಗುವುದು ಮತ್ತು ಇದರ ಛಂದದಿಂದ ಸುವಾಸನೆಯ ಸಾಮರ್ಥ್ಯವೂ ಸೋಲುವುದು ।೧೫॥

ವಾಣಿಯ ರಸಭರಿತ ರುಚಿ ಸವಿಯಲು ಕಿವಿಯಲ್ಲಿ ನಾಲಿಗೆ ಹುಟ್ಟುವುದು. ಆಗ ಇಂದ್ರಿಯಗಳು ತಮ್ಮ ತಮ್ಮಲ್ಲಿಯೇ ಕಲಹ ಮಾಡಲಾರಂಭಿಸುವುವು ।೧೬॥

ವಿಚಾರಿಸಿ ನೋಡಿದರೆ ಶಬ್ದವು ಕಿವಿಯ ವಿಷಯದ್ದಾಗಿದೆ. ಆದರೆ ನಾಲಿಗೆಯು ಇದು ನಮ್ಮ ರಸವೆಂದು ಹೇಳಹತ್ತುವುದು ಮತ್ತು ಮೂಗಿಗೂ ಇದು ನಮ್ಮ ರಸ ಎಂದು ಭಾಸವಾಗಲಿಕ್ಕೆ ಈ ಶಬ್ದ ವಿಷಯವೇ ಆಗಿದೆ ।೧೭॥

ಶಬ್ದ ರಚನೆ, ಸರಣಿಯ ಕೌತುಕವನ್ನು ಏನೆಂದು ವರ್ಣಿಸಬೇಕು? ಇದನ್ನು ಕಂಡ ಕಣ್ಣುಗಳು ತೃಪ್ತಗೊಂಡು ಇದು ವಾಣಿಯಾಗದೇ ಪ್ರತ್ಯಕ್ಷವಾಗಿ ರೂಪದ ಖಣಿಯೇ ಆಗಿದೆ ಎಂದವು ।೧೮॥

ಶಬ್ದರಚನೆ ಮುಗಿದು ವಾಕ್ಯಗಳು ಹೊರ ಹೊರಟಾಗ ಎಲ್ಲ ಇಂದ್ರಿಯಗಳನ್ನು ಹಿಂದೆ ಸರಿಸಿ ಮನವು ಮುಂದಾಗಿ ಆ ವಾಕ್ಯಗಳಿಗೆ ಆಲಿಂಗಿಸಲು ತನ್ನ ಎರಡು ಬಾಹುಗಳನ್ನು ಪಸರಿಸಿತು ।೧೯॥

ಈ ಪ್ರಕಾರವಾಗಿ ಎಲ್ಲ ಇಂದ್ರಿಯಗಳು ತಮ್ಮ ತಮ್ಮ ಧರ್ಮದಂತೆ ಪದರಚನೆಗೆ ಮುಕ್ಕುರಿಸಿದವು. ಆದರೆ ಒಬ್ಬ ಸೂರ್ಯನು ಎಲ್ಲ ಜಗತ್ತಿಗೂ ಎಚ್ಚರಿಸುವಂತೆ ಆ ಶಬ್ದಗಳು ಎಲ್ಲರಿಗೂ ಶಾಂತಗೊಳಿಸುವುವು ।೨೦॥

ಈ ಪ್ರಕಾರವಾಗಿ ಈ ಶಬ್ದಗಳ ವ್ಯಾಪಕತೆಯು ಅಲೌಕಿಕವಾಗಿರುವುದು ಮತ್ತು ಇದರರ್ಥ ಬಲ್ಲವರಿಗೆ ಈ ಶಬ್ದಗಳಲ್ಲಿ ಚಿಂತಾಮಣಿಯಂತೆ ಗುಣಗಳು ದೊರಕುವುವು ।೨೧॥

ಈ ಮಾತುಗಳ ದೊಡ್ಡ ದೊಡ್ಡ ಭೋಜನ ಪಾತ್ರೆ ಮಾಡಿ ಅದರಲ್ಲಿ ಮೋಕ್ಷ ರಸ ನೀಡಿ ನಿಷ್ಕಾಮ ಜನರಿಗೆ ಈ ಗ್ರಂಥ ರೂಪ ಭೋಜನ ಸಮಾರಂಭವನ್ನೇ ಹೂಡಿರುವೆನು ।೨೨॥

ಈ ಭೋಜನ ಕೂಟದಲ್ಲಿ ನಿತ್ಯ ನೂತನವಾದ ಆತ್ಮಜ್ಯೋತಿಯ ಪ್ರಕಾಶ ಮೂಡಿದೆ. ಆ ಪ್ರಕಾಶದಲ್ಲಿ ಇಂದ್ರಿಯಗಳಿಗೆ ತಿಳಿಯದೇ ಉಪಭೋಗಿಸುವವರಿಗೆ ಮಾತ್ರ ಈ ಭೋಜನ ಸಮಾರಂಭ ದೊರಕುವುದು ।೨೩॥

ಇಲ್ಲಿ ಶ್ರವಣದ ಸಾಧನೆಯಾದ ಶ್ರವಣೇಂದ್ರಿಯವನ್ನು ತ್ಯಜಿಸಿ ಮನಸ್ಸಿನಿಂದಲೇ ಉಪಭೋಗಿಸಬೇಕಾಗುವುದು ।೨೪॥

ಕೇವಲ ಭಾಷಾರೂಪ ಕವಚವನ್ನು ಬದಿಗೆಸೆದು (ಶಬ್ದಾರ್ಥ ಬಿಟ್ಟು) ಲಕ್ಷ್ಯಾರ್ಥದ ಬ್ರಹ್ಮನಲ್ಲಿ ತದ್ರೂಪನಾಗಿ ಸುಖದಿಂದಲೇ ಸುಖದ ಅನುಭವ ಪಡೆಯಬೇಕು ।೨೫॥

ಇಷ್ಟೊಂದು ರೀತಿಯಲ್ಲಿ ಮನವು ಸೂಕ್ಷ್ಮಗೊಂಡಾಗಲೇ ಇದರ ಉಪಭೋಗವಾದೀತು. ಇಲ್ಲದಿದ್ದರೆ ಮೂಕ ಹೇಳಿದ್ದನ್ನು ಕಿವುಡ ಕೇಳಿದಂತಾಗುವುದು।೨೬॥

ಆದರೆ ಈ ಪ್ರತಿಪಾದನೆಯು ಇರಲಿ, ಶ್ರೋತೃಗಳವರ ಚಿಕಿತ್ಸೆ ಮಾಡುವ ಈ ಪ್ರಸಂಗದಲ್ಲಿ ಸಾಮಾನ್ಯವಾಗಿ ಯಾರು ನಿಷ್ಕಾಮರಿರುವರೋ ಅವರೇ ಇದಕ್ಕೆ ಅಧಿಕಾರಿಗಳು ।೨೭॥

ಯಾರು ಬ್ರಹ್ಮಜ್ಞಾನದ ಬೇಡಿಕೆಗಾಗಿ ಸ್ವರ್ಗ ಹಾಗೂ ಸಂಸಾರ ಸುಖವನ್ನು ನಿವಾಳಿಸಿ ಒಗೆದಿರುವರೋ ಅವರ ಹೊರತಾಗಿ ಈ ಮಾತಿನ ರುಚಿ ಅನ್ಯರಿಗೆ ತಿಳಿಯದು ।೨೮॥

ಜೈಸಾ ವಾಯಸೀ ಚಂದ್ರ ನೋಳಖಿಜೇ । ತೈಸಾ ಪ್ರಾಕೃತೀ ಹಾ ಗ್ರಂಥು ನೇಣಿಜೇ । ಆಣಿ ತೋ ಹಿಮಾಂಶುಚಿ ಜೇವಿ ಖಾಜೇ । ಚಕೋರಾಚೇ।೩೯॥ ತೈಸಾ ಸಜ್ಞಾನಾಸೀ ತರೀ ಹಾ ಠಾವೋ । ಆಣಿ ಅಜ್ಞಾನಾಸೀ ಆನ ಗಾಂವೋ । ಮ್ಹಣೌನಿ ಬೋಲಾವಯಾ ವಿಷಯ ಪಹಾಹೋ । ವಿಶೇಷು ನಾಹೀ ।೪೦॥ ಪರೀ ಅನುವಾದಲೋ ಮೀ ಪ್ರಸಂಗೇ । ತೇ ಸಜ್ಜನಿ ಉಪಸಾಹಾವೇ ಲಾಗೇ । ಆತಾ ಸಾಂಗೇನ ಕಾಯ ಶ್ರೀರಂಗೇ । ನಿರೂಪಿಲೇ ಜೇ ।೪೧॥ ತೇ ಬುದ್ಧೀಹೀ ಆಕಳಿತಾ ಸಾಂಕಡೇ । ಮ್ಹಣೌನಿ ಬೋಲೀ ವಿಪಾಯೇ ಸಾಂಪಡೇ । ಪರೀ ಶ್ರೀ ನಿವೃತ್ತಿಕೃಪಾದೀಪ ಉಜಿಯೇಡೇ । ದೇಖೇನ ಮೀ ।೪೨॥ ಜೇ ದಿಠೀಹೀ ನ ಪವಿಜೇ । ತೇ ದಿಠೀವಿಣ ದೇಖಿಜೇ । ಜರೀ ಅತೀಂದ್ರಿಯ ಲಾಹಿಜೇ । ಜ್ಞಾನಬಳ ।೪೩॥ ನಾ ತರೀ ಜೇ ಧಾತುವಾದಾಹೀ ನ ಜೋಡೇ । ತೇ ಲೋಹೀಂಚಿ ಪಂಧರೇ ಸಾಂಪಡೇ। ಜರೀ ದೈವಯೋಗೇ ಚಢೇ। ಪರಿಸು ಹಾತಾ ।೪೪॥ ತೈಸೀ ಗುರುಕೃಪಾ ಹೋಯೇ। ತರೀ ಕರಿತಾ ಕಾಯ ಆಪು ನೋಹೇ । ಮ್ಹಣೌನಿ ತೇ ಅಪಾರ ಮಾತೇ ಆಹೇ। ಜ್ಞಾನದೇವೋ ಮ್ಹಣೇ ।೪೫॥ ತೇಣೇ ಕಾರಣೇ ಮೀ ಬೋಲೇನ। ಬೋಲೀ ಅರೂಪಾಚೇ ರೂಪ ದಾವೀನ। ಅತೀಂದ್ರಿಯ ಪರೀ ಭೋಗವೀನ। ಇಂದ್ರಿಯಾಕರವೀ ।೪೬॥ ಆಇಕಾ ಯಶ ಶ್ರೀ ಔದಾರ್ಯ। ಜ್ಞಾನ ವೈರಾಗ್ಯ ಐಶ್ವರ್ಯ। ಹೇ ಸಾಹೀ ಗುಣವರ್ಯ। ವಸತೀ ಜೇಥ ।೪೭॥ ಮ್ಹಣೌನಿ ತೋ ಭಗವಂತು । ಜೋ ನಿಃಸಂಗಾಚಾ ಸಾಂಗಾತು। ತೋ ಮ್ಹಣೇ ಪಾರ್ಥಾ ದತ್ತಚಿತ್ತು। ಹೋಈ ಆತಾ ।೪೮॥

ಶ್ರೀ ಭಗವಾನುವಾಚ :-
ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।
ಸಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ ।೧॥

ಆಇಕೇ ಯೋಗಿ ಆಣಿ ಸಂನ್ಯಾಸೀ ಜನೀ । ಹೇ ಏಕಚಿ ಸಿನಾನೇ ಝಣೇ ಮಾನೀ । ಏರ್ಹವೀ ವಿಚಾರಿಜತೀ ಜಂವ ದೋನ್ಹೀ । ತಂವ ಏಕಚಿ ತೇ ।೪೯॥ ಸಾಂಡಿಜೇ ದುಜಯಾ ನಾಮಾಚಾ ಆಭಾಸು । ತರೀ ಯೋಗು ತೋಚಿ ಸಂನ್ಯಾಸು । ಪಾಹತಾ ಬ್ರಹ್ಮೀ ನಾಹೀ ಅವಕಾಶು । ದೋಹೀಮಾಜೀ ।೫೦॥ ಜೈಸೇ ನಾಮಾಚೇನಿ ಅನಾರಿಸೇಪಣೇ । ಏಕಾ ಪುರುಷಾತೇ ಬೋಲಾವಣೇ । ಕಾ ದೋಹೀಮಾರ್ಗೀ ಜಾಣೇ । ಏಕಾಚಿ ಠಾಯಾ ।೫೧॥ ನಾತರೀ ಏಕಚೀ ಉದಕ ಸಹಜೇ । ಪರಿ ಸಿನಾನಾ ಘಟೀ ಭರಿಜೇ । ತೈಸೇ ಭಿನ್ನತ್ವ ಜಾಣಿಜೇ । ಯೋಗಸಂನ್ಯಾಸಾಂಚೇ ।೫೨॥

ಕಾಗೆಗೆ ಚಂದ್ರನ ಮಹತ್ವ ತಿಳಿದೀತೇ ? ಅದರಂತೆ ಸಾಮಾನ್ಯರಿಗೆ ಈ ಗ್ರಂಥವು ಹೇಗೆ ತಿಳಿದೀತು? ಅದೇ ಚಂದ್ರ ಕಿರಣದ ಭಕ್ಷಣ ಚಕೋರ ಪಕ್ಷಿಗೆ ಮಾತ್ರ ಸಾಧ್ಯ ।೨೯॥

ಅದರಂತೆ ಜ್ಞಾನಿಪುರುಷರಿಗೆ ಮಾತ್ರ ಈ ಗ್ರಂಥವು ವಿಶ್ರಾಂತಿ ಸ್ಥಾನವಾಗಿದೆ ಮತ್ತು ಅಜ್ಞಾನಿ ಜನರಿಗೆ ಪರಸ್ಥಳದಂತಿರುವುದು. ಆದ್ದರಿಂದ ಇದಕ್ಕಾಗಿ ಹೆಚ್ಚಿಗೇನು ಹೇಳಬೇಕು? ।೩೦॥

ಆದರೂ ಪ್ರಸಂಗಾನುಸಾರ ನಾನೇನೋ ಹೇಳಿರುವೆ ಅದಕ್ಕಾಗಿ ಸಜ್ಜನರಾದ ನೀವು ಕ್ಷಮಿಸಿರಿ. ಇನ್ನು ಮುಂದೆ ಶ್ರೀರಂಗನು ಹೇಳಿದ್ದನ್ನು ಹೇಳುವೆ ।೩೧॥

ಇದು ಬುದ್ಧಿಗೂ ತಿಳಿಯುವುದು ಕಠಿಣವಿದೆ. ಆದ್ದರಿಂದ ಶಬ್ದದಲ್ಲಿ ಅಕಸ್ಮಾತ್‌ವಾಗಿ ವ್ಯಕ್ತವಾಗಬಹುದು. ಆದಾಗ್ಯೂ ಶ್ರೀಗುರು ನಿವೃತ್ತಿನಾಥರ ಕೃಪಾರೂಪ ದೀಪದ ಬೆಳಕಿನಿಂದ ನಾನು ಅದನ್ನು ತಿಳಿದು ಹೇಳುವೆ ।೩೨॥

ಇಂದ್ರಿಯಾತೀತವಾದ ಬ್ರಹ್ಮಜ್ಞಾನವು ಒಂದು ವೇಳೆ ಪ್ರಾಪ್ತವಾದರೆ ಯಾವುದು ಕಣ್ಣಿಗೆ ಕಾಣಿಸುವುದಿಲ್ಲವೋ ಅದು ಕಣ್ಣಿಲ್ಲದೇ ಕಾಣಿಸುವುದು ।೩೩॥

ಒಂದುವೇಳೆ ದೈವಯೋಗದಿಂದ ಪರೀಸಮಣಿಯು ಹಸ್ತಗತವಾಗಿರುವಾಗ, (ಕಿಮಯಾಗಾರ) ರಸಾಯನ ಶಾಸ್ತ್ರನಿಗೂ ಕೂಡ ದೊರಕದಂತಹ ಉತ್ತಮ ಬಂಗಾರವು ಕಬ್ಬಿಣದಿಂದ ದೊರಕುವುದು ।೩೪॥

ಅದರಂತೆ ಸದ್ಗುರುವಿನ ಕೃಪೆ ಇದ್ದರೆ, ಯಾವ ವಸ್ತುವು ತಾನೇ ವಶವಾಗದಿರಬಹುದು ? ಆದ್ದರಿಂದ ಜ್ಞಾನೇಶ್ವರರು ನನಗೆ ಸದ್ಗುರುವಿನ ಕೃಪೆಯು ಪೂರ್ಣವಾಗಿದೆ ಎಂದು ಹೇಳುವರು ।೩೫॥

ಈ ಯೋಗದಿಂದಲೇ ನಾನು ಹೇಳುವೆ. ನಾನು ಹೇಳುವುದರಲ್ಲಿ ನಿರಾಕಾರ ವಸ್ತುವನ್ನು ಎಲ್ಲರಿಗೂ ತೋರಿಸುವೆ ಮತ್ತು ಯಾವುದು ಇಂದ್ರಿಯಾತೀತ ವಾಗಿದೆಯೋ ಅದನ್ನು ಇಂದ್ರಿಯಗಳಿಗೆ ಅನುಭವಕ್ಕೆ ಬರುವಂತೆ ಮಾಡುವೆನು ।೩೬॥

ಇಲ್ಲಿ ನೋಡಿರಿ; ಯಶ, ಲಕ್ಷ್ಮೀ, ಔದಾರ್ಯ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯ ಈ ಆರು ಶ್ರೇಷ್ಠ ಗುಣಗಳು ಶ್ರೀಕೃಷ್ಣನಲ್ಲಿ ವಾಸವಾಗಿರುವುವು ।೩೭॥

ಆದ್ದರಿಂದ ಆತನಿಗೆ ಭಗವಂತನು ಎಂದು ಕರೆಯುವರು ಮತ್ತು ಆತನು ಸರ್ವಸಂಗ ಪರಿತ್ಯಾಗ ಮಾಡಿರುವವನ ಮಿತ್ರನಾಗಿರುವನು. ಈತನು ಅರ್ಜುನನಿಗೆ ಸಾವಧಾನನಾಗು ಎಂದನು ।೩೮॥

ಶ್ಲೋಕಾರ್ಥ :- ಶ್ರೀಕೃಷ್ಣನು ಹೀಗೆಂದನು :- ಹೇ ಅರ್ಜುನಾ ! ಕರ್ಮಫಲವನ್ನು ಆಶಿಸದೆ ಕರ್ತವ್ಯ ಕರ್ಮವನ್ನು ಮಾಡುವವನೇ ನಿಜವಾದ ಸಂನ್ಯಾಸಿ, ನಿಜವಾದ ಯೋಗಿ ; ಅಷ್ಟೇ ಅಲ್ಲದೆ ಅಗ್ನಿ ಕಾರ್ಯಗಳನ್ನು ಬಿಟ್ಟವನೂ ಕರ್ಮಗಳನ್ನು ಬಿಟ್ಟವನೂ ಯೋಗಿ ಅಲ್ಲ ।೧॥

ಶ್ರೀಕೃಷ್ಣನು ಹೇಳುತ್ತಾನೆ:- ಪಾರ್ಥಾ ಕೇಳು, ಯೋಗಿ ಮತ್ತು ಸಂನ್ಯಾಸಿ ಈ ಜಗತ್ತಿನಲ್ಲಿ ಒಂದೇಯಾಗಿರುವರು. ಇವರು ಭಿನ್ನರು ಎಂದು ತಿಳಿದುಕೊಳ್ಳದಿರು.ಕಾರಣ, ಇವರಿಗಾಗಿ ಸಹಜ ವಿಚಾರ ಮಾಡಲು ಇವರು ಒಂದೇಯಾಗಿರುವರು ।೩೯॥

ಇವರ ಮೇಲೆ ಎರಡು ಹೆಸರಿನ ಆರೋಪ ಮಾತ್ರ ಇದೆ. ಇದನ್ನು ಬಿಡು, ಏಕೆಂದರೆ ಬ್ರಹ್ಮದೃಷ್ಟಿಯಿಂದ ನೋಡಿದಾಗ ಈ ಇಬ್ಬರಲ್ಲಿ ಭೇದವಿಲ್ಲ. ಆದ್ದರಿಂದ ಯೋಗವೇ ಸಂನ್ಯಾಸ ವಾಗಿರುವುದು ।೪೦॥

ಬೇರೆ ಬೇರೆ ಹೆಸರುಗಳಿಂದ ಒಬ್ಬನೇ ಪುರುಷನಿಗೆ ಕರೆದಂತೆ ಅಥವಾ ಎರಡು ದಾರಿಗಳಿಂದ ಒಂದೇ ಊರಿಗೆ ಹೋದಂತೆ ।೪೧॥

ಅಥವಾ ಒಂದೇ ನೀರನ್ನು ಎರಡು ಪಾತ್ರೆಗಳಲ್ಲಿ ತುಂಬಿದಾಗ ಹೇಗೆ ಭಿನ್ನಭಾವ ಇರುವುದಿಲ್ಲವೋ ಅದರಂತೆ ಯೋಗ ಮತ್ತು ಸಂನ್ಯಾಸ ಇವುಗಳಲ್ಲಿ ಭೇದವಿಲ್ಲ. ಹೀಗೆ ತಿಳಿ ।೪೨॥

ಆಇಕೇ ಸಕಳ ಸಂಮತೇ ಜಗೀ। ಅರ್ಜುನಾ ಗಾ ತೋಚಿ ಯೋಗೀ। ಜೋ ಕರ್ಮೇ ಕರೂನಿ ರಾಗಿ। ನೋಹೇಚಿ ಫಳೀ ।೪೩॥ ಜೈಸೀ ಮಹೀ ಹೇ ಉದ್ಭಿಜೇ। ಜನೀ ಅಹಂಬುದ್ಧೀವೀಣ ಸಹಜೇ । ಆಣಿ ತೇಥಿಂಚೀ ತಿಯೇ ಬೀಜೆ । ಅಪೇಕ್ಷಿನಾ ।೪೪॥ ತೈಸಾ ಅನ್ವಯಾಚೇನಿ ಆಧಾರೇ । ಜಾತೀಚೇನಿ ಅನುಕಾರೇ । ಜೇ ಜೇಣೇ ಅವಸರೇ। ಕರಣೇ ಪಾವೇ ।೪೫॥ ತೇ ತೈಸೇಂಚಿ ಉಚಿತ ಕರೀ । ಪರೀ ಸಾಟೋಪು ನೋಹೇ ಶರೀರೀ। ಆಣಿ ಬುದ್ಧೀಹೀ ಕರೋನಿ ಫಳವೇರೀ । ಜಾಯೇಚಿನಾ ।೪೬॥ ಐಸಾ ತೋಚಿ ಸಂನ್ಯಾಸೀ। ಪಾರ್ಥಾ ಗಾ ಪರಿಯೇಸೀ। ತೋಚಿ ಭರವಸೇನಿಸೀ। ಯೋಗೀಶ್ವರು।೪೭॥ ವಾಂಚೂನಿ ಉಚಿತ ಕರ್ಮ ಪ್ರಾಸಂಗಿಕ । ತಯಾತೇ ಮ್ಹಣೇ ಹೇ ಸಾಂಡಾವೇ ಬದ್ಧಕ। ತರೀ ಟಾಂಕೋಟಾಂಕೀ ಆಣಿಕ। ಮಾಂಡೀಚಿ ತೋ ।೪೮॥ ಜೈಸಾ ಕ್ಷಾಳೂನಿಯಾ ಲೇಪು ಏಕು। ಸವೇಂಚಿ ಲಾವಿಜೇ ಆಣಿಕು। ತೈಸೇನಿ ಆಗ್ರಹಾಚಾ ಪಾಇಕು । ವಿಚಂಬೇವಾಯಾ ।೪೯॥ ಗ್ರಹಸ್ಥಾಶ್ರಮಾಚೇ ವೋಝೇ। ಕಪಾಳೀ ಆಧೀಂಚಿ ಆಹೇ ಸಹಜೇ। ಕೀ ತೇಂಚಿ ಸಂನ್ಯಾಸಸವಾ ಠೇವಿಜೇ। ಸರಿಸೇ ಪುಢತೀ ।೫೦॥ ಮ್ಹಣೌನಿ ಅಗ್ನಿಸೇವಾ ನ ಸಾಂಡಿತಾ। ಕರ್ಮಾಚೀ ರೇಖಾ ನೋಲಾಂಡಿತಾ। ಆಹೇ ಯೋಗಸುಖ ಸ್ವಭಾವತಾ। ಆಪಣಪಾಂಚಿ ।೫೧॥

ಯಂ ಸಂನ್ಯಾಸಮಿತಿ ಪ್ರಾಹುः ಯೋಗಂ ತಂ ವಿದ್ಧಿ ಪಾಂಡವ ।
ನ ಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ।೨॥

ಐಕೇ ಸಂನ್ಯಾಸಿ ತೋಚಿ ಯೋಗೀ । ಐಸೀ ಏಕವಾಕ್ಯ ತೇಚೀ ಜಗೀ । ಗುಢೀ ಉಭವಿಲೀ ಅನೇಗೀ । ಶಾಸ್ತ್ರಾಂತರೀ ।೫೨॥ ಜೇಥ ಸಂನ್ಯಾಸಿಲಾ ಸಂಕಲ್ಪು ತುಟೇ । ತೇಥೇಚಿ ಯೋಗಾಚೇ ಸಾರ ಭೇಟೇ । ಐಸೇ ಹೇ ಅನುಭವಾಚೇನಿ ಧಟೇ । ಸಾಚೇ ಜಯಾ ।೫೩॥

ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ ।
ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ।೩॥

ಆತಾ ಯೋಗಾಚಳಾಚಾ ನಿಮಥಾ। ಜರೀ ಠಾಕಾವಾ ಆಥೀ ಪಾರ್ಥಾ। ತರೀ ಸೋಪಾನಾ ಯಾ ಕರ್ಮಪಥಾ। ಚುಕಾ ಝಣೇ ।೫೪॥ ಯೇಣೇ ಯಮನಿಯಮಾಂಚೇನಿ ತಳವಟೇ। ರಿಗೇ ಆಸನಾಚಿಯೇ ಪಾಉಲವಾಟೇ। ಯೇಈ ಪ್ರಾಣಾಯಾಮಾಚೇನಿ ಆಡಕಂಠೇ। ವರೌತಾ ಗಾ ।೫೫॥ ಮಗ ಪ್ರತ್ಯಾಹಾರಾಚಾ ಅಧಾಡಾ। ಜೋ ಬುದ್ಧೀಚಿಯಾಹೀ ಪಾಯಾ ನಿಸರಡಾ। ಜೇಥ ಹಟಿಯೇ ಸಾಂಡಿತೀ ಹೋಡಾ। ಕಡೇಲಗ ।೫೬॥

ಅರ್ಜುನಾ, ಕೇಳು ; ಯಾರು ಕರ್ಮಗಳನ್ನು ಮಾಡಿ ಅದರ ಫಲದ ಇಚ್ಛೆ ಮಾಡುವುದಿಲ್ಲವೋ, ಅವರೇ ಈ ಜಗತ್ತಿನಲ್ಲಿ ಎಲ್ಲರ ವಿಚಾರಗಳಲ್ಲಿ ಯೋಗಿಗಳೆಂದು ತಿಳಿಯಲ್ಪಡುವರು ।।೪೩।।

ಪೃಥ್ವಿಯು ಈ ಎಲ್ಲ ಗಿಡಮರಗಳನ್ನು ಉತ್ಪತ್ತಿಸಿ ಅದರ ಅಹಂಕಾರ ಬುದ್ಧಿಯನ್ನು ತೋರಿಸುವುದಿಲ್ಲ ಮತ್ತು ಆ ಗಿಡಮರಗಳಿಂದ ಉತ್ಪನ್ನವಾಗುವ ಫಲದ ಇಚ್ಛೆಯನ್ನು ಸಹ ಮಾಡುವುದಿಲ್ಲ ।।೪೪।।

ಅದರಂತೆ ಆತ್ಮಬೋಧೆಯ ಆಧಾರದಿಂದ ಮತ್ತು ಜಾತಿಗೆ ಅನುರೂಪವಾಗುವಂತಹ ಯಾವ ಕರ್ಮಗಳನ್ನು ಯಾವ ಕಾಲದ ಪ್ರಸಂಗದಲ್ಲಿ ಮಾಡಬೇಕಾಗಿದೆಯೋ ।।೪೫।।

ಅದೆಲ್ಲವನ್ನು ಯಥಾವಿಧಿ ಆಚರಿಸಿ ಆತನು ತನ್ನ ಶರೀರದಲ್ಲಿ ಅಹಂಕಾರವನ್ನು ಉತ್ಪನ್ನಗೊಳಿಸುವುದಿಲ್ಲ ಮತ್ತು ಬುದ್ಧಿಗೆ ಆಶೆಯತ್ತ ಹೋಗಗೊಡುವುದಿಲ್ಲ ।।೪೬।।

ಪಾರ್ಥಾ ಕೇಳು ; ಈ ಪ್ರಕಾರವಾಗಿ ಇರುವ ಪುರುಷನು, ಆತನೇ ಸಂನ್ಯಾಸಿಯು ಮತ್ತು ಆತನೇ ನಿಃಸಂಶಯವಾಗಿ ಯೋಗೀಶ್ವರನು ।।೪೭।।

ಇಂತಹ ಕೌಶಲ್ಯವನ್ನು ತೊರೆದು ನಿತ್ಯ ನೈಮಿತ್ತಿಕ ಕರ್ಮಗಳು ಬದ್ಧಕವಾಗಿವೆ ಎಂದು ತಿಳಿದುಕೊಂಡು ಅವುಗಳ ತ್ಯಾಗ ಮಾಡುವವನು ಮತ್ತು ಹಾಗೆಯೇ ಬೇರೆ ಕರ್ಮ ಮಾಡಲು ಪ್ರವೃತ್ತನಾಗುವವನು ।।೪೮।।

ಒಬ್ಬನು ಹಚ್ಚಿರುವ ಒಂದು ಬಣ್ಣದ ಲೇಪವನ್ನು ಅಳಿಸಿ ಇನ್ನೊಂದು ಲೇಪಹಚ್ಚುವ ಶ್ರಮದಲ್ಲಿ ಬೀಳುವನು. ಅದರಂತೆ ಉಚಿತ ಕರ್ಮಗಳ ತ್ಯಾಗ ಮಾಡಿ ಬೇರೆ ಕರ್ಮಗಳನ್ನು ಮಾಡುವ ಆಗ್ರಹಕ್ಕೆ ಬಿದ್ದು ವ್ಯರ್ಥವಾಗಿ ತ್ರಾಸು ಪಡುವವನು ।।೪೯।।

ಗೃಹಸ್ಥಾಶ್ರಮದ ಭಾರವು ಎಲ್ಲರ ತಲೆಯ ಮೇಲೆ ಸಹಜವಾಗಿ ಇದೆ. ಆದರೆ ಗೃಹಸ್ಥಾಶ್ರಮದ ಆಚರಣೆಯನ್ನು ಯಥಾವಿಧಿ ಮಾಡದೇ ಸಂನ್ಯಾಸ ಸ್ವೀಕರಿಸಿ ಮೊದಲನೇ ಭಾರ ತ್ಯಜಿಸಿ ಎರಡನೇ ಭಾರ ಹೊರುವವನು ।।೫೦।।

ಆದ್ದರಿಂದ ಗೃಹಸ್ಥಾಶ್ರಮದಲ್ಲಿಯೇ ಅಗ್ನಿಹೋತ್ರ ಬಿಡದೇ ವರ್ಣಾಶ್ರಮ ವಿಹಿತ ಧರ್ಮ ಮರ್ಯಾದೆಯ ರೇಖೆ ದಾಟದೇ ನಡೆದರೆ ತನ್ನಲ್ಲಿಯೇ ಸಹಜವಾಗಿ ಯೋಗಸುಖವಿದೆ ।।೫೧।।

ಶ್ಲೋಕಾರ್ಥ :- ಪಾಂಡುತನಯಾ! ಸಂನ್ಯಾಸವೆಂದರೂ, ಯೋಗವೆಂದರೂ ಒಂದೇ. ಸಂಕಲ್ಪವನ್ನು ಬಿಡದೆ ಯಾವನೂ ಯೋಗಿಯಾಗಲಾರನು ।।೨।।

ಕೇಳು ; ''ಸಂನ್ಯಾಸಿಯೇ ಯೋಗಿ'' ಹೀಗೆ ಒಂದೇ ವಾಕ್ಯದಲ್ಲಿ ಅನೇಕ ಶಾಸ್ತ್ರಗಳು ಈ ಜಗತ್ತಿನಲ್ಲಿ ಧ್ವಜವನ್ನು ಏರಿಸಿರುವುವು. ಪ್ರಚಾರ ಮಾಡಿರುವುವು ।।೫೨।।

ಯಾವ ಪುರುಷನಲ್ಲಿ ತ್ಯಾಗ ಬುದ್ಧಿಯಿಂದ ಸಂಕಲ್ಪವು ನಷ್ಟವಾಗಿರುವುದೋ, ಆಗ ಆತನಿಗೆ ಯೋಗದ ಸಾರವಾದ ಬ್ರಹ್ಮವು ದೊರಕುವುದು. ಹೀಗೆ ಸ್ವಾನುಭವವು ಆತನಿಂದ ನಿಶ್ಚಯಿಸುವುದು ।।೫೩।।

ಶ್ಲೋಕಾರ್ಥ :- ಧ್ಯಾನಯೋಗವನ್ನು ಸಿದ್ಧಿಸಿ ಕೊಳ್ಳಬೇಕೆಂಬ ಮುನಿಗೆ ನಿಷ್ಕಾಮ ಕರ್ಮವೇ ಸಾಧನ. ಯೋಗಾರೂಢನಿಗೆ ಉಪಶಾಂತಿಯೇ ಕಾರಣ ।।೩।।

ಪಾರ್ಥಾ, ಈ ಪ್ರಕಾರವಾಗಿ ಯೋಗ ರೂಪ ಪರ್ವತದ ಶಿಖರಕ್ಕೆ ಹೋಗಬೇಕಾದರೆ ಆ ಕರ್ಮ ಮಾರ್ಗ ರೂಪವಾದ ಪಾವುಟಗೆಯಿಂದ ಏರುವುದು ತಪ್ಪಬಾರದು ।।೫೪।।

ಈ ಕರ್ಮ ಮಾರ್ಗದಿಂದ ಹೋಗಲು ಹತ್ತಿದಾಗ ಆರಂಭದಲ್ಲಿ ಆ ಪರ್ವತದ ಯಮನಿಯಮ ರೂಪ ತಳ ಹತ್ತುವುದು. ಆಮೇಲೆ ಆಸನಗಳ ಕಾಲುದಾರಿಯಿಂದ ಪ್ರಾಣಾಯಾಮ ರೂಪ ಕಡಿದಾದ ದಾರಿಯಿಂದ ಮೇಲೆ ಏರಬೇಕಾಗುವುದು ।।೫೫।।

ಆಗ ಪ್ರತ್ಯಾಹಾರ ಇದು ಅರ್ಧ ಮುರಿದ ಕಡಿದಾದ ಪಾವುಟಗೆ ಹತ್ತುವುದು. ಅಲ್ಲಿ ಬುದ್ಧಿಯ ಕಾಲು ಸಹ ಜಾರುವುದು. ಇದನ್ನು ದಾಟುವಾಗ ಜಾರಿ ಬೀಳುವ ಪ್ರಸಂಗವು ಇದ್ದು, ಹಠಯೋಗಿಗಳ ಪ್ರತಿಜ್ಞೆಯು ಪೂರ್ಣವಾಗುವುದಿಲ್ಲ ।।೫೬।।

ತರೀ ಅಭ್ಯಾಸಾಚೇನಿ ಬಳೇ । ಪ್ರತ್ಯಾಹಾರೀ ನಿರಾಳೇ । ನಖೀ ಲಾಗೇಲ ಢಾಳೇಢಾಳೇ । ವೈರಾಗ್ಯಾಚೀ ।೮೭॥ ಐಸಾ ಪವನಾಚೇನಿ ಪಾಠಾರೇ । ಯೇತಾ ಧಾರಣೇಚೇನಿ ಪೈಸಾರೇ । ಕ್ರಮೀ ಧ್ಯಾನಾಚೇ ಚವರೇ। ಸಾಂಪಡೇ ತಂವ ।೮೮॥ ಮಗ ತಯಾ ಮಾರ್ಗಾಚೀ ಧಾಂವ। ಪುರೇಲ ಪ್ರವೃತ್ತೀಚೀ ಹಾಂವ। ಜೇಥ ಸಾಧ್ಯಸಾಧನಾ ಖೇಂವ । ಸಮರಸೇ ಹೋಯ ।೮೯॥ ಜೇಥ ಪುಢೀಲ ಪೈಸು ಪಾರುಖೇ । ಮಾಗೀಲ ಸ್ಮರಾವೇ ತೇ ಠಾಕೇ । ಐಸಿಯೇ ಸರಸೀಯೇ ಭೂಮಿಕೇ । ಸಮಾಧಿ ರಾಹೇ ।೯೦॥ ಯೇಣೇ ಉಪಾಯೇ ಯೋಗಾರೂಢು । ಜೋ ನಿರವಧಿ ಜಾಹಲಾ ಪ್ರೌಢು । ತಯಾಚಿಯಾ ಚಿನ್ಹಾಂಚಾ ನಿವಾಡು । ಸಾಂಗೈನ ಆಇಕೇ ।೯೧॥

ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ ।
ಸರ್ವಸಂಕಲ್ಪಸಂನ್ಯಾಸೀ ಯೋಗಾರೂಢಸ್ತದೋಚ್ಯತೇ ।೪॥

ತರೀ ಜಯಾಚಿಯಾ ಇಂದ್ರಿಯಾಂಚಿಯಾ ಘರಾ। ನಾಹೀ ವಿಷಯಾಂಚಿಯಾ ಯೇರಝಾರಾ। ಜೋ ಆತ್ಮಬೋಧಾಚಿಯಾ ವೋವರಾ। ಪಹುಡಲಾ ಅಸೇ ।೯೨॥ ಜಯಾಚೇ ಸುಖದುಃಖಾಚೇನಿ ಆಂಗೇ। ಝುಗಟಲೇ ಮಾನಸ ಚೇವೋ ನೇಘೇ। ವಿಷಯ ಪಾಸೀಹೀ ಆಲಿಯಾ ಸೇ ನ ರಿಗೇ। ಹೇ ಕಾಯ ಮ್ಹಣೌನಿ।೯೩॥ ಇಂದ್ರಿಯೇ ಕರ್ಮಾಚ್ಯಾ ಠಾಯೀ । ವಾಢೀನಲೀ ಪರಿ ಕಹೀ । ಫಳಹೇತೂಚೀ ಚಾಡ ನಾಹೀ । ಅಂತಃಕರಣೀ ।೯೪॥ ಅಸತೇನೀ ದೇಹೇ ಏತುಲಾ । ಜೋ ಚೇತುಚಿ ದಿಸೇ ನಿದೇಲಾ । ತೋಚಿ ಯೋಗಾರೂಢು ಭಲಾ । ವೋಳಖೇ ತೂ ।೯೫॥ ತೇಥ ಅರ್ಜುನ ಮ್ಹಣೇ ಅನಂತಾ । ಹೇ ಮಜ ವಿಸ್ಮೋ ಬಹು ಆಇಕತಾ । ಸಾಂಗೇ ತಯಾ ಐಸೀ ಯೋಗ್ಯತಾ । ಕವಣೇ ದೀಜೇ ।೯೬॥

ಉದ್ಧರೇದಾತ್ಮನಾऽತ್ಮಾನಂ ನಾತ್ಮಾನಮವಸಾದಯೇತ್ ।
ಆತ್ಮೈವ ಹ್ಯಾತ್ಮನೋ ಬಂಧುಃ ಆತ್ಮೈವ ರಿಪುರಾತ್ಮನಃ ।೫॥

ತಂವ ಹಾಂಸೋನಿ ಶ್ರೀಕೃಷ್ಣ ಮ್ಹಣೇ । ತುಝೇ ನವಲ ನಾ ಹೇ ಬೋಲಣೇ । ಕವಣಾಸಿ ಕಾಯ ದೀಜೇಲ ಕವಣೇ । ಅದ್ವೈತೀ ಇಯೇ ।೯೭॥ ಪೈ ವ್ಯಾಮೋಹಾಚಿಯೇ ಶೇಜೇ । ಬಳಿಯಾ ಅವಿದ್ಯಾ ನಿದ್ರಿತು ಹೋಇಜೇ । ತೇ ವೇಳೀ ದುಃಸ್ವಪ್ನ ಹಾ ಭೋಗಿಜೇ । ಜನ್ಮಮೃತ್ಯುಂಚಾ ।೯೮॥ ಪಾಠೀ ಅವಸಾಂತ ಯೇ ಚೇವೋ । ತೈ ತೇ ಆವಘೇಂಚಿ ಹೋಯ ವಾವೋ । ಐಸಾ ಉಪಜೇ ನಿತ್ಯ ಸದ್ಭಾವೋ । ತೋಹಿ ಆಪಣಪಾಂಚಿ ।೯೯॥

ಆದಾಗ್ಯೂ ಪ್ರತ್ಯಾಹಾರದಂತಹ ನಿರಾಲಂಬ ಕಠಿಣ ಮಾರ್ಗದಲ್ಲಿ ಕೇವಲ ವೈರಾಗ್ಯದ ಅಭ್ಯಾಸ ಬಲದಿಂದಲೇ ಮೆಲ್ಲಮೆಲ್ಲನೇ ಕಾಲೂರಿ ನಿಲ್ಲಲು ಸಮರ್ಥವಾಗುವುದು ।೫೭॥

ಈ ಪ್ರಕಾರವಾಗಿ ವಾಯುರೂಪ ಕುದುರೆಯ ಮೇಲೆ ಕುಳಿತು ಮಾರ್ಗ ಕ್ರಮಣ ಮಾಡುತ್ತಿರುವಾಗ್ಗೆ ವಿಸ್ತೃತ ಮಾರ್ಗದಿಂದ ಧ್ಯಾನದ ಶಿಖರವನ್ನು ಮುಟ್ಟುವವರೆಗೆ ಆತನು ಕ್ರಮಿಸಬೇಕಾಗುವುದು ।೫೮॥

ಆಗ ಅಲ್ಲಿ ಸಾಧ್ಯ ಮತ್ತು ಸಾಧನೆಗಳು ಒಂದಾಗುವುವು. ಆಗ ಧಾರಣ ಮಾರ್ಗದ ಓಟವೂ ಮತ್ತು ಪ್ರವೃತ್ತಿಯ ಅಪೇಕ್ಷೆಯೂ ಮುಗಿಯುವುದು ।೫೯॥

ಅಲ್ಲಿ ಮುಂದೆ ಹೆಜ್ಜೆ ಇಡುವುದು ಬಂದಾಗುವುದು. ಹಿಂದಿನದೂ ನೆನಪು ಇರುವುದಿಲ್ಲ. ಈ ಪ್ರಕಾರದ ಸಮಾನ ಭೂಮಿಕೆಯ ರೂಪವಾದ ಸಮಾಧಿಯ ಮೇಲೆ ಆ ಪುರುಷನು ಇರುವನು ।೬೦॥

ಈ ಉಪಾಯಗಳಿಂದ ಯಾರು ಯೋಗಾರೂಢ ರಾಗುತ್ತಾರೆಯೋ ಆತನು ನಿಃಸಂಶಯವಾಗಿ ಪೂರ್ಣ ನಾಗುತ್ತಾನೆ. ಈಗ ಆತನ ಲಕ್ಷಣಗಳ ನಿರ್ಣಯ ನಿನಗೆ ತಿಳಿಸುವೆ. ಅದನ್ನು ಕೇಳು ।೬೧॥

ಶ್ಲೋಕಾರ್ಥ :- ಶಬ್ದಾದಿ ವಿಷಯಗಳಲ್ಲಿಯೂ ಕರ್ಮಗಳಲ್ಲಿಯೂ ಆಸಕ್ತನಾಗದವನು. ಸರ್ವ ಸಂಕಲ್ಪವನ್ನು ತ್ಯಜಿಸಿದವನು. ಹೀಗೆ ಆದವನನ್ನು ಯೋಗಾರೂಢನೆಂದು ಕರೆಯುತ್ತಾರೆ ।೪॥

ಯಾವಾತನು ಆತ್ಮಬೋಧೆಯ ನೆಲಮನೆಯಲ್ಲಿ ಮಲಗಿರುವನೋ ಆತನಿಗೆ ಆತ್ಮಜ್ಞಾನವಾಗಿರುತ್ತದೆ. ಆತನ ಇಂದ್ರಿಯಗಳ ಮನೆಗೆ ವಿಷಯಗಳ ಬರ ಹೋಗುವಿಕೆ ನಿಲ್ಲುವುದು ।೬೨॥

ಸುಖ ದುಃಖಗಳ ಹೋರಾಟಗಳಲ್ಲಿ ಆತನ ಮನಸ್ಸು ಎಚ್ಚರವಾಗುವುದಿಲ್ಲ. ಹಾಗೆಯೇ ಆತನ ಎದುರಿನಲ್ಲಿ ಮೂರ್ತಿಮಂತ ವಿಷಯಗಳು ಬಂದು ನಿಂತರೂ ಇವುಗಳನ್ನರಿಯಲು ಸಹ ಎಚ್ಚರ ಆತನಿಗೆ ಇರುವುದಿಲ್ಲ ।೬೩॥

ಒಂದುವೇಳೆ ಇಂದ್ರಿಯಗಳು ಕರ್ಮ ಮಾಡಲು ಪ್ರವೃತ್ತವಾದರೆ ಆತನಿಗೆ ಅಂತಃಕರಣದಲ್ಲಿ ಫಲದ ಇಚ್ಛೆಯು ಎಂದೂ ಆಗುವುದಿಲ್ಲ ।೬೪॥

ಇಷ್ಟೊಂದು ದೇಹದ ವ್ಯಾಪಾರ ನಡೆದಿರುವಾಗಲೂ ಯಾವಾತನು ನಿದ್ರಾವಸ್ಥೆಯಂತೆ ಉದಾಸೀನನಾಗಿರುವನೋ ಆತನಿಗೆ ಮಾತ್ರ ನಿಜವಾದ ಯೋಗ ಸಾಧ್ಯವಾಯಿತೆಂದು ಹೀಗೆ ತಿಳಿ ।೬೫॥

ಈ ಯೋಗದ ಸ್ಥಿತಿ ಕೇಳಿ ಅರ್ಜುನನು ದೇವನಿಗೆ ಹೇಳುತ್ತಾನೆ:- ಹೇ ಅನಂತನೇ, ನೀವು ಹೇಳಿದ್ದನ್ನು ಕೇಳಿ ನನಗೆ ಆಶ್ಚರ್ಯವಾಗುತ್ತದೆ. ಆದರೆ ಈ ಯೋಗಿಗೆ ಇಂತಹ ಯೋಗ್ಯತೆ ಯಾರು ಕೊಟ್ಟರು, ಅದನ್ನು ಹೇಳಿರಿ ।೬೬॥

ಶ್ಲೋಕಾರ್ಥ :- ತನ್ನನ್ನು ತಾನು ಉದ್ಧರಿಸಿ ಕೊಳ್ಳಬೇಕು. ತನ್ನನ್ನು ತಾನು ಅಧೋಗತಿ ಪಾಲು ಮಾಡಕೂಡದು. ತನಗೆ ತಾನೇ ಬಂಧು, ತನಗೆ ತಾನೇ ಶತ್ರು, ಎಂದರೆ ತನ್ನ ಒಳಿತಿಗೆ ಮತ್ತು ಕೆಡುಕಿಗೆ ತಾನೇ ಕಾರಣನೆಂದರ್ಥ ।೫॥

ಆಗ ಶ್ರೀಕೃಷ್ಣನು ನಕ್ಕು ಹೇಳುವನು :- ನಿನ್ನ ಮಾತಿನಿಂದ ನನಗೆ ಬಹಳ ಆಶ್ಚರ್ಯವಾಗುತ್ತದೆ. ಕಾರಣ, ಇಂತಹ ಅದ್ವೈತ ಸ್ಥಿತಿಯಲ್ಲಿ ಯಾರು ಯಾರಿಗೆ ಏನು ಕೊಟ್ಟಾರು? ।೬೭॥

ಮನುಷ್ಯನು ಭ್ರಾಂತಿರೂಪ ಹಾಸಿಗೆಯ ಮೇಲೆ ಗಾಢವಾದ ಅಜ್ಞಾನದಿಂದ ಮಲಗಿರುತ್ತಾನೆ. ಆಗ ಆತನು ಜನ್ಮ ಮರಣದ ದುಷ್ಟ ಸ್ವಪ್ನವನ್ನು ಭೋಗಿಸುವನು ।೬೮॥

ಆಗ ಅಕಸ್ಮಾತ್ (ಗುರುಕೃಪೆಯಿಂದ) ಎಚ್ಚರನಾದ ಮೇಲೆ ಜನ್ಮ ಮರಣರೂಪ ಎಲ್ಲ ಸ್ವಪ್ನಗಳು ವ್ಯರ್ಥವಾಗುವುವು. ನಾನು ''ಅಮರನು'' ಎಂಬುದು ಆತನಲ್ಲಿಯೇ ನಿಶ್ಚಯವಾಗುವುದು ।೬೯॥

ಮ್ಹಣೌನಿ ಆಪಣಚಿ ಆಪಣಯಾ । ಘಾತು ಕೀಜತು ಅಸೇ ಧನಂಜಯಾ ।ಚಿತ್ತ ದೇಊನಿ ನಾಥಿಲಿಯಾ । ದೇಹಾಭಿಮಾನಾ ॥೭೦॥

ಬಂಧುರಾತ್ಮಾऽತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ।
ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥೬॥

ಹಾ ವಿಚಾರೂನಿ ಅಹಂಕಾರು ಸಾಂಡಿಜೇ । ಮಗ ಅಸತೀಚಿ ವಸ್ತು ಹೋಈಜೇ । ತರೀ ಆಪಲೀ ಸ್ವಸ್ತಿ ಸಹಜೇ । ಆಪಣ ಕೇಲೀ ॥೭೧॥ ಏರ್ಹವೀ ಕೋಶಕೀಟಕಾಚಿಯಾ ಪರೀ । ತೋ ಆಪಣಯಾ ಆಪಣ ವೈರೀ । ಜೋ ಆತ್ಮಬುದ್ಧಿ ಶರೀರೀ । ಚಾರುಸ್ಥಳೀ ॥೭೨॥ ಕೈಸೇ ಪ್ರಾಪ್ತೀಚಿಯೇ ವೇಳೇ । ನಿದೈವಾ ಅಂಧಳೇಪಣಾಚೇ ಡೋಹಳೇ । ಕೀ ಅಸತೇ ಆಪುಲೇ ಡೋಳೇ । ಆಪಣ ಝಾಂಕೀ ॥೭೩॥ ಕಾ ಕವಣ ಏಕು ಭ್ರಮಲೇಪಣೇ । ಮೀ ತೋ ನವ್ಹೇ ಗಾ ಚೋರಲೋ ಮ್ಹಣೇ । ಐಸಾ ನಾಥಿಲಾ ಛಂದು ಅಂತಃಕರಣೇ । ಘೇಊನಿ ಠಾಕೇ ॥೭೪॥ ಏರ್ಹವೀ ಹೋಯ ತೇ ತೋಚಿ ಆಹೇ । ಪರಿ ಕಾಈ ಕೀಜೇ ಬುದ್ಧಿ ತೈಶೀ ನೋಹೇ । ದೇಖಾ ಸ್ವಪ್ನೀಚೇನಿ ಘಾಯೇ । ಕೀ ಮರೇ ಸಾಚೇ ॥೭೫॥ ಜೈಶೀ ತೇ ಶುಕಾಚೇನಿ ಆಂಗಭಾರೇ । ನಳಿಕಾ ಭೋವಿನ್ನಲೀ ಏರೀ ಮೋಹರೇ । ತೇಣೇ ಉಡಾವೇ ಪರೀ ನ ಪುರೇ । ಮನಶಂಕಾ ॥೭೬॥ ವಾಯಾಂಚಿ ಮಾನ ಪಿಳೀ । ಆಟುವೇ ಹಿಯೇ ಆಂವಳೀ । ಟಿಟಾಂತು ನಳೀ । ಧರೂನಿ ಠಾಕೆ ॥೭೭॥ ಮ್ಹಣೇ ಬಾಂಧಲಾ ಮೀ ಫುಡಾ । ಐಸಿಯಾ ಭಾವನೇಚಿಯಾ ಪಡೇ ಖೋಡಾ । ಕೀ ಮೋಕಳಿಯಾ ಪಾಯಾಂಚಾ ಚವಡಾ । ಗೋವೀ ಅಧಿಕೇ ॥೭೮॥ ಐಸಾ ಕಾಜೇವೀಣ ಆಂತುಡಲಾ । ತೋ ಸಾಂಗ ಪಾ ಕಾಯ ಆಣಿಕೇ ಬಾಂಧಿಲಾ । ಮಗ ನ ಸೋಡೀಚ ಜರ್ಹೀ ನೇಲಾ । ತೋಡೂನಿ ಅರ್ಧಾ ॥೭೯॥ ಮ್ಹಣೌನಿ ಆಪಣಯಾ ಆಪಣಚೀ ರಿಪು । ಜೇಣೇ ವಾಢವಿಲಾ ಹಾ ಸಂಕಲ್ಪು । ಯೇರ ಸ್ವಯಂಬುದ್ಧೀ ಮ್ಹಣೇ ಬಾಪು । ಜೋ ನಾಥಿಲೇ ನೇಘೇ ॥೮೦॥

ಜಿತಾತ್ಮಾನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ।
ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ॥೭॥

ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ।
ಯುಕ್ತ ಇತ್ಯುಚ್ಯತೇ ಯೋಗೀ ಸಮಾಲೋಷ್ಟಾಶ್ಮಕಾಂಚನಃ ॥೮॥

ತಯಾ ಸ್ವಾಂತಃಕರಣಜಿತಾ । ಸಕಳಕಾಮೋಪಶಾಂತಾ । ಪರಮಾತ್ಮಾ ಪರೌತಾ । ದುರೀ ನಾಹೀ ॥೮೧॥ ಜೈಸಾ ಕಿಡಾಳಾಚಾ ದೋಷು ಜಾಯೇ । ತರೀ ಪಂಧರೇ ತೇಚಿ ಹೋಯೆ । ತೈಸೇ ಜೀವಾ ಬ್ರಹ್ಮತ್ವ ಆಹೇ । ಸಂಕಲ್ಪಲೋಪೀ ॥೮೨॥

ಆದ್ದರಿಂದ ಧನಂಜಯನೇ, ಸುಳ್ಳಾಗಿರುವ ದೇಹದ ಅಭಿಮಾನವನ್ನು ಹಿಡಿದುಕೊಂಡು ಮನುಷ್ಯನು ತನ್ನನ್ನು ತಾನೇ ಘಾತ ಮಾಡಿಕೊಳ್ಳುವನು ||೭೦||

ಶ್ಲೋಕಾರ್ಥ :- ಸ್ವಾಧೀನವಾದ ತನ್ನ ಮನಸ್ಸೇ ತನಗೆ ಆಪ್ತ. ಸ್ವಾಧೀನವಲ್ಲದ ತನ್ನ ಚಿತ್ತವೇ ತನಗೆ ವೈರಿ ||೬||

ವಿಚಾರಮಾಡಿ ಈ ಅಹಂಕಾರವನ್ನು ತ್ಯಜಿಸಿದಾಗ ನಿತ್ಯಸಿದ್ಧ ಬ್ರಹ್ಮವಸ್ತು ಆತನಾಗುವನು. ಹೀಗಾಯಿತೆಂದರೆ ತನ್ನನ್ನು ತಾನೇ ಸಹಜವಾಗಿ ಉದ್ಧರಿಸಿಕೊಂಡಂತಾಗುವುದು ||೭೧||

ಇಲ್ಲದಿದ್ದರೆ ಯಾವ ಈ ಸುಶೋಭಿತ ಶರೀರದಲ್ಲಿ ಲುಬ್ಧನಾಗಿ ಆತ್ಮ ಸ್ವರೂಪವನ್ನು ಮರೆಯುವನು. ದೇಹಬುದ್ಧಿಯನ್ನು ಧರಿಸುವನು. ಕೋಶ ಕಿಟಕ (ರೇಷ್ಮೆ ಹುಳ)ದಂತೆ ತನ್ನನ್ನು ತಾನೇ ವೈರಿಯಾಗುವನು ||೭೨||

ಏನು ಹೇಳಬೇಕು? ಲಾಭದ ಪ್ರಸಂಗವು ಒದಗಿ ಬಂದಾಗ ಹತಭಾಗಿ ಮನುಷ್ಯನಿಗೆ ಕುರುಡುತನದ ಬಯಕೆ ಉಂಟಾಗಿ ಕಣ್ಣುಗಳನ್ನು ಮುಚ್ಚಿ ಆಗುವ ವಸ್ತು ಲಾಭವನ್ನು ಕಳೆದುಕೊಳ್ಳುವನು ||೭೩||

ಅಥವಾ ಯಾವನೋ ಒಬ್ಬ ಮನುಷ್ಯನು ಭ್ರಮೆಯಿಂದ ಕೂಡಿ ತನ್ನನ್ನು ತಾನೇ ಕಳೆದುಕೊಂಡಿರುವೆ ಎನ್ನುವನು ಮತ್ತು ಮನಸ್ಸಿನಲ್ಲಿ ಆ ಸುಳ್ಳು ಭಾವನೆಯನ್ನೇ ಹಿಡಿದಿರುವನು ||೭೪||

ಸಾಮಾನ್ಯವಾಗಿ ವಿಚಾರ ಮಾಡಿ ನೋಡಿದರೆ ಆ ಹುಚ್ಚ ಮನುಷ್ಯ, ಮೊದಲು ತಾನು ಹೇಗಿದ್ದನೋ ಹಾಗೆಯೇ ಇರುವನು. ಆದರೆ ಏನು ಮಾಡುವುದು ? ಆತನಿಗೆ ಆ ಬುದ್ಧಿ ಬರಲೊಲ್ಲದು. ಸ್ವಪ್ನದಲ್ಲಿ ಶಸ್ತ್ರದಿಂದ ಕಡಿಸಿಕೊಂಡ ಮನುಷ್ಯನು ಜಾಗೃತದಲ್ಲಿ ನಿಜವಾಗಿ ಸಾಯುವನೇ ? ||೭೫||

ಗಿಳಿಗೆ (ಹಿಡಿಯಲು) ಕುಳಿತುಕೊಳ್ಳಲು ಹಚ್ಚಿದ ನಳಿಕೆಯು ಅದರ ಭಾರದಿಂದ ತಿರುಗಿದಾಗ ಅದು ಹಾರಿಹೋಗದೇ ತಾನು ಬೀಳುವೆನೆಂಬ ಭಯದಿಂದ ಅದನ್ನೇ ಗಟ್ಟಿಯಾಗಿ ಹಿಡಿದುಕೊಳ್ಳುವುದು ||೭೬||

ವ್ಯರ್ಥವಾಗಿ ಗೋಣು ಅಲುಗಾಡಿಸುವುದು. ಚುಂಚುವಿನಿಂದ ಬಿಗಿಯಾಗಿ ಹಿಡಿಯುವುದು ಮತ್ತು ಕೂಗಲಾರಂಭಿಸುವುದು ||೭೭||

ನಾನು ನಿಜವಾಗಿಯೇ ಬಂಧಿಸಲ್ಪಟ್ಟಿರುವೆ ಎಂದು ಭ್ರಮೆಯ ಮಡುವಿನಲ್ಲಿ ಬೀಳುವುದು ಮತ್ತು ಸರಳವಾಗಿರುವ ಕಾಲುಗಳಿಂದ ಇನ್ನಷ್ಟು ಬಿಗಿಯಾಗಿ ಹಿಡಿಯುವುದು ||೭೮||

ಇಂತಹ ಸ್ಥಿತಿಯಲ್ಲಿ ಅದನ್ನು ಅರ್ಧಕ್ಕೆ ಕೊಯ್ದುರೂ ಹಿಡಿದ ನಲಿಕೆ ಬಿಡುವುದಿಲ್ಲ. ಹೀಗೆ ಇದು ಕಾರಣವಿಲ್ಲದೇ ಸಿಕ್ಕಿಕೊಂಡಿರುವುದು. ಈಗ ನೀನೇ ಹೇಳು ಇದನ್ನು ಬಂಧಿಸಲು ಯಾರು ಬಂದಿರುವರು ? ||೭೯||

ಆದ್ದರಿಂದ ಮನದಲ್ಲಿ ''ನಾನು'' ''ನನ್ನದು'' ಎಂಬ ಸಂಕಲ್ಪವನ್ನು ಬೆಳೆಸಿಕೊಂಡು ತಮ್ಮನ್ನು ತಾವೇ ವೈರಿಯಾಗಿದ್ದಾರೆ. ಯಾರು ಆತ್ಮಾನುಭವಿ ಇರುವರೋ, ಅವರು ಈ ಸತ್ಯವಲ್ಲದ ಅಭಿಮಾನವನ್ನು ಹಿಡಿಯುವುದಿಲ್ಲ ||೮೦||

ಶ್ಲೋಕಾರ್ಥ :- ಶೀತೋಷ್ಣ ಸುಖದುಃಖ ಮಾನಾಪಮಾನಗಳಲ್ಲಿ ಚಿತ್ತವನ್ನು ಜಯಿಸಿದ ಪ್ರಶಾಂತನಿಗೆ ಪರಮಾತ್ಮನ ಅನುಭವವುಂಟಾಗುವುದು ||೭||

ಶ್ಲೋಕಾರ್ಥ :- ಶಾಸ್ತ್ರೀಯ ಮತ್ತು ಸ್ವಾನುಭವ ಜ್ಞಾನಗಳಿಂದ ತೃಪ್ತನಾಗುವನು. ಮಣ್ಣು, ಕಲ್ಲು, ಬಂಗಾರಗಳಲ್ಲಿ ಸಮಭಾವವುಳ್ಳವನು, ನಿರ್ವಿಕಾರನು. ಜಿತೇಂದ್ರಿಯನು ಆದವನೇ ಯೋಗಾರೂಢನೆಂದು ಹೇಳಿಸಿಕೊಳ್ಳುತ್ತಾನೆ ||೮||

ಯಾರು ತನ್ನ ಮನಸ್ಸನ್ನು ಜಯಿಸಿರುವರೋ ಮತ್ತು ಯಾರ ವಾಸನೆಗಳು ಇಲ್ಲದಂತಾಗಿ ಶಾಂತಗೊಂಡಿವೆಯೋ ಅವರಿಗೆ ಇತರರಂತೆ ಪರಮಾತ್ಮನು ದೂರವಿರುವುದಿಲ್ಲ ||೮೧||

ಬಂಗಾರದಲ್ಲಿನ ದೋಷಗಳು ಚೆನ್ನಾಗಿ ಕಾಸಿದಾಗ ಅವು ಇಲ್ಲದಂತಾಗಿ ಅದೇ ಬಂಗಾರವು ಉತ್ತಮ ಬಂಗಾರವಾಗುವುದು. ಮನಸ್ಸಿನ ಸಂಕಲ್ಪಗಳೆಲ್ಲವೂ ಇಲ್ಲದಂತಾಗಲು ಜೀವದ ಬ್ರಹ್ಮತ್ವವು ಸಹಜ ಸಿದ್ಧವಾಗಿರುವುದು ||೮೨||

ಹಾ ಘಟಾಕಾರು ಜೈಸಾ । ನಿಮಾಲಿಯಾ ತಯಾ ಅವಕಾಶಾ । ನಲಗೇ ಮಿಳೋ ಜಾಣೇ ಆಕಾಶಾ । ಆನಾ ಠಾಯಾ ।೮೩॥ ತೈಸಾ ದೇಹಾಹಂಕಾರು ನಾಥಿಲಾ । ಹಾ ಸಮೂಳ ಜಯಾಚಾ ನಾಶಿಲಾ । ತೋಚಿ ಪರಮಾತ್ಮಾ ಸಂಚಲಾ । ಆಧೀಂಚಿ ಆಹೇ ।೮೪॥ ಆತಾ ಶಿತೋಷ್ಣಾಚಿಯಾ ವಾಹಣೀ । ತೇಥ ಸುಖದುಃಖಾಚಿ ಕಡಸಣೀ । ಇಯೇ ನಸಮಾತೀ ಕಾಂಹೀ ಬೋಲಣೀ । ಮಾನಾಪಮಾನಾಂಚೀ ।೮೫॥ ಜೇ ಜಿಯೇ ವಾಟಾ ಸೂರ್ಯು ಜಾಯೇ । ತೇಉತೇ ತೇಜಾಚೇ ವಿಶ್ವ ಹೋಯೇ । ತೈಸೇ ತಯಾ ಪಾವೇ ತೇ ಆಹೇ । ತೋಚಿ ಮ್ಹಣೌನಿ ।೮೬॥ ದೇಖೈ ಮೇಘೌನಿ ಸುಟತೀ ಧಾರಾ । ತಿಯಾ ನ ರುಪತೀ ಜೈಸಿಯಾ ಸಾಗರಾ । ತೈಶೀ ಶುಭಾಶುಭೇ ಯೋಗೀಶ್ವರಾ । ನವ್ಹತೀ ಆನೇ ।೮೭॥ ಜೋ ಹಾ ವಿಜ್ಞಾನಾತ್ಮಕು ಭಾವೋ । ತಯಾ ವಿವರಿತಾ ಜಾಹಲಾ ವಾವೋ । ಮಗ ಲಾಗಲಾ ಜಂವ ಪಾಹೋ । ತಂವ ಜ್ಞಾನ ತೇ ತೋಚಿ ।೮೮॥ ಆತಾ ವ್ಯಾಪಕು ಕೀ ಏಕದೇಶೀ । ಹೇ ಊಹಪೋಹೀ ಜೇ ಐಸೀ । ತೇ ಕರಾವೀ ಠೇಲೀ ಆಪೈಶೀ ।ದುಜೇನವೀಣ ।೮೯॥ ಐಸಾ ಶರೀರೀಚಿ ಪರೀ ಕೌತುಕೇ । ಪರಬ್ರಹ್ಮಾ ಚೇನಿ ಪಾಡೇ ತುಕೇ । ಜೇಣೇ ಜಿಂತಲೀ ಏಕೇ । ಇಂದ್ರಿಯೇ ಗಾ ।೯೦॥ ತೋ ಜಿತೇಂದ್ರಿಯು ಸಹಜೇ ।ತೋಚಿ ಯೋಗಯುಕ್ತು ಮ್ಹಣಿಜೇ । ಜೇಣೇ ಸಾನೇ ಥೋರ ನೇಣಿಜೇ । ಕವಣೇ ಕಾಳೀ ।೯೧॥ ದೇಖೈ ಸೋನಯಾಚೇ ನಿಖಳ । ಮೇರುಯೇಸಣೇ ಢಿಸಾಳ । ಆಣಿ ಮಾತಿಯೇಚೇ ಡಿಖಳ । ಸರಿಸೇಂಚಿ ಮಾನೀ ।೯೨॥ ಪಾಹತಾ ಪ್ರಥ್ವೀಚೇ ಮೋಲ ಥೋಡೇ । ಐಸೇ ಅನರ್ಘ್ಯರತ್ನ ಚೋಖಡೇ ।ದೇಖೇ ದಗಡಾಚೇನಿ ಪಾಡೇ ।ನಿಚಾಡು ಐಸಾ ।೯೩॥

ಸುಹೃನ್ಮಿತ್ರಾರ್ಯುದಾಸೀನ ಮಧ್ಯಸ್ಥದ್ವೇಷ್ಯಬಂಧುಷು ।<br>ಸಾಧುಷ್ವಪಿ ಚಪಾಪೇಷು ಸಮಬುದ್ಧಿರ್ವಿಶಿಷ್ಯತೇ ।೯॥

ತೇಥ ಸುಹೃದ ಆಣಿ ಶತ್ರು । ಕಾ ಉದಾಸು ಆಣಿ ಮಿತ್ರು । ಹಾ ಭಾವಭೇದು ವಿಚಿತ್ರು । ಕಲ್ಪೂ ಕೈಂಚಾ ।೯೪॥ ತಯಾ ಬಂಧು ಕೋಣ ಕಾಹ್ಯಾಚಾ । ದ್ವೇಷಿಯಾ ಕವಣು ತಯಾಚಾ । ಮೀಚಿ ವಿಶ್ವ ಐಸಾ ಜಯಾಚಾ । ಭೋಧು ಜಾಹಲಾ ।೯೫॥

ಘಟದೊಳಗಿನ ಆಕಾಶಕ್ಕೆ, ಘಟದ ನಾಶವಾಗಲು ಮಹಾದಾಕಾಶಕ್ಕೆ ಕೂಡಲು ಬೇರೆ ಎಲ್ಲಿಯಾದರೂ ಹೋಗಬೇಕಾಗಿರುವುದಿಲ್ಲ ।೪೩॥

ಅದರಂತೆ ಯಾರ ದೇಹದಲ್ಲಿನ ಅಸತ್ಯ ಅಹಂಕಾರವು ಸಮೂಲವಾಗಿ ನಾಶಗೊಂಡಾಗ ಆ ಪುರುಷನು ಮೂಲತಃ ಪರಮಾತ್ಮ ನಿರುವನು ।೪೪॥

ಇಂತಹ ಸ್ಥಿತಿಯಲ್ಲಿ ಶೀಥ ಅಥವಾ ಉಷ್ಣ, ಸುಖ ಅಥವಾ ದುಃಖ, ಮಾನ ಅಥವಾ ಅಪಮಾನ ಇವು ಪ್ರಾಪ್ತವಾದಾಗ್ಯೂ ಅವರಲ್ಲಿ ಇದರ ಬಗ್ಗೆ ವಿಚಾರ ಸಂಭವಿಸುವುದಿಲ್ಲ ।೪೫॥

ಏಕೆಂದರೆ, ಯಾವ ಮಾರ್ಗದಿಂದ, ಸೂರ್ಯನು ಕ್ರಮಿಸುವನೋ ಅಲ್ಲಿಯೇ ವಿಶ್ವದ ಪ್ರಕಾಶವಾಗುವುದು. ಅದರಂತೆ ಈ ಯೋಗಿಗೆ ಪ್ರಾಪ್ತವಾಗುವುದೆಲ್ಲವೂ ಆತನ ಸ್ವರೂಪವೇ ಆಗಿದೆ. ಆದ್ದರಿಂದ ।೪೬॥

ಇಗೋ ನೋಡು, ಮೇಘದಿಂದಾಗುವ ಮಳೆಯು ಸಮುದ್ರಕ್ಕೆ (ತಿವಿದಂತಾಗಿ) ಬಾಧೆಯಾಗುವುದಿಲ್ಲ. ಅದರಂತೆ ಯೋಗಿಗೆ ಶುಭಾಶುಭ ಕರ್ಮಗಳು ಆತ್ಮಸ್ವರೂಪ ಹೊರತಾಗಿ ಭಿನ್ನ ಕಾಣುವುದಿಲ್ಲ ।೪೭॥

ಪ್ರತ್ಯಕ್ಷ ಅನುಭವಕ್ಕೆ ಬರುವ ಸಂಸಾರಿಕ ಭಾವವನ್ನು ವಿಚಾರ ಮಾಡಿದಾಗ ವ್ಯರ್ಥ (ಮಿಥ್ಯಾ) ಅನುಭವಾತ್ಮಕ ಜ್ಞಾನವು ಅದು ಸ್ವತಃ ತಾನೇ ಆದನು ।೪೮॥

ಹೀಗೆ ನಿಶ್ಚಯವಾದ ಮೇಲೆ ನಾನು ವ್ಯಾಪಕನೋ? ಏಕದೇಶಿಯೋ? ಅದರ ಚರ್ಚೆ ಮಾಡಲು ಈ ದ್ವೈತಬುದ್ಧಿಯ ಅಭಾವವು ಅಲ್ಲಿಯೇ ಇರುವುದು ।೪೯॥

ಅರ್ಜುನಾ, ಯಾರು ಇಂದ್ರಿಯಗಳನ್ನು ಜಯಿಸಿರುವರೋ ಆ ಜ್ಞಾನಿಪುರುಷರು ದೇಹ ಧಾರಿಯಾಗಿದ್ದರೂ ಪರಬ್ರಹ್ಮಸ್ವರೂಪರೆಂದು ತಿಳಿಯಬೇಕು ।೫೦॥

ಆತನೇ ಸಹಜ ಜಿತೇಂದ್ರಿಯನು, ಆತನೇ ಯೋಗಿಯು. ಕಾರಣ, ಆತನಿಗೆ ಚಿಕ್ಕದು ಮತ್ತು ದೊಡ್ಡದು ಈ ಭೇದವು ಯಾವಾಗಲೂ ಇರುವುದಿಲ್ಲ ।೫೧॥

ಇಲ್ಲಿ ನೋಡು ; ಆತನು ಮೇರು ಪರ್ವತ ಪ್ರಮಾಣದ ಶುದ್ಧ ಬಂಗಾರವನ್ನೂ, ಸಾಮಾನ್ಯವಾದ ಮಣ್ಣಿನ ಹೆಂಟೆಯನ್ನೂ, ಸಮವಾಗಿ ತಿಳಿಯುತ್ತಾನೆ ।೫೨॥

ಇಡೀ ಪೃಥ್ವಿಯ ಬೆಲೆಯು ಕಡಿಮೆಯಾಗುವಂತಹ ಅಮೌಲ್ಯ ರತ್ನಗಳಿದ್ದರೂ ಆತನಿಗೆ ಇವು ಕೇವಲ ಕಲ್ಲುಗಳ ಸಮವಾಗಿ ಕಾಣುವುವು. ಇಷ್ಟೊಂದು ಆತನಲ್ಲಿ ನಿಷ್ಕಾಮ, ನಿರಿಚ್ಛೆ ಇರುವುದು ।೫೩॥

ಶ್ಲೋಕಾರ್ಥ :– ಒಳ್ಳೇ ಮನಸ್ಸಿನವರು, ಗೆಳೆಯರು, ಹಗೆಗಳು, ಉದಾಸೀನರು, ಮಧ್ಯಸ್ಥರು, ದ್ವೇಷಿಗಳು, ಬಂಧುಗಳು, ಸುಜನರು, ಕುಜನರು ಎಂಬ ವಿಧವಿಧ ಗಳಲ್ಲಿಯೂ ಸಮಬುದ್ಧಿಯುಳ್ಳವನೇ ಯೋಗಿಗಳಲ್ಲಿ ಹೆಚ್ಚಿನವನು ।೯॥

ಆತನಲ್ಲಿ ಆತ್ಮರು ಮತ್ತು ಶತ್ರುಗಳು, ಅಥವಾ ಉದಾಸೀನರು ಮತ್ತು ಮಿತ್ರರು, ಈ ಪ್ರಕಾರದ ಚಿತ್ರ ವಿಚಿತ್ರ ಕಲ್ಪನೆಗಳು ಎಲ್ಲಿಂದ ಬರಬೇಕು? ।೫೪॥

''ನಾನೇ ಈ ಜಗತ್ತು'' ಎಂಬುದು ಯಾರ ಮನಸ್ಸಿಗೆ ಬೋಧೆಯಾಗಿರುವುದೋ ಆತನಿಗೆ ಬಂಧು ಯಾರು ? ಮತ್ತು ವೈರಿ ಎಲ್ಲಿಯವರು? ।೫೫॥

ಮಗ ತಯಾಚಿಯೇ ದಿಠೀ । ಅಧಮೋತ್ತಮ ಅಸೇ ಕಿರೀಟೀ ? । ಕಾಯ ಪರಿಸಾಚಿಯೇ ಕಸವಟೀ । ವಾನಿಯಾ ಕೀಜೇ ? ।೯೬॥ ತೇ ಜೈಶೀ ನಿರ್ವಾಣ ವರ್ಣುಚಿ ಕರೀ । ತೈಶೀ ಜಯಾಚೀ ಬುದ್ಧೀ ಚರಾಚರೀ । ಹೋಯ ಸಾಮ್ಯಾಚೀ ಉಜರೀ । ನಿರಂತರ ।೯೭॥ ಜೇ ತೇ ವಿಶ್ವಾಳಂಕಾರಾಚೇ ವಿಸುರೇ । ಜರೀ ಆಹಾತಿ ಆನಾನೇ ಆಕಾರೇ ।ತರೀ ಘಡಲೇ ಏಕಚಿ ಭಾಂಗಾರೇ । ಪರಬ್ರಹ್ಮೇ ।೯೮॥ ಐಸೇ ಜಾಣಣೇ ಜೇ ಬರವೇ । ತೇ ಫಾವಲೇ ತಯಾ ಆಘವೇ । ಮ್ಹಣೌನಿ ಆಹಾಚವಾಹಾಚೇ ನ ಝುಕವೇ । ಯೇಣೇ ಆಕಾರಚಿತ್ರೇ ।೯೯॥ ಘಾಪೇ ಪಟಾಮಾಜೀ ದೃಷ್ಟೀ । ದಿಸೇ ತಂತೂಚೇ ಸೈಂಘ ಸೃಷ್ಟೀ । ಪರೀ ತೋ ಏಕವಾಂಚೂನಿ ಗೋಠೀ । ದುಜೀ ನಾಹೀ ।೧೦೦॥ ಐಸೇನಿ ಪ್ರತೀತೀ ಹೇ ಗವಸೇ । ಐಸಾ ಅನುಭವ ಜಯಾತೇ ಅಸೇ । ತೋಚಿ ಸಮಬುದ್ಧಿ ಹೇ ಅನಾರಿಸೇ । ನವ್ಹೇ ಜಾಣೇ ।೧೦೧॥ ಜಯಾಚೇ ನಾಂವ ತೀರ್ಥರಾವೋ । ದರ್ಶನೇ ಪ್ರಶಸ್ತೀಸಿ ಠಾವೋ । ಜಯಾಚೇನಿ ಸಂಗೇ ಬ್ರಹ್ಮಭಾವೋ । ಭ್ರಾಂತಾಸಹೀ ।೧೦೨॥ ಜಯಾಚೇನೀ ಬೋಲೇ ಧರ್ಮು ಜಿಯೇ । ದಿಠೀ ಮಹಾಸಿದ್ಧೀತೇ ವಿಯೇ । ದೇಖೈ ಸ್ವರ್ಗಸುಖಾದಿ ಇಯೇ । ಖೇಳು ಜಯಾಚಾ ।೧೦೩॥ ವಿಪಾಯೇ ಜರೀ ಆಠವಲಾ ಚಿತ್ತಾ । ತರೀ ದೇ ಆಪುಲೀ ಯೋಗ್ಯತಾ । ಹೇ ಅಸೋ ತಯಾತೇ ಪ್ರಶಂಸಿತಾ । ಲಾಭು ಆಥೀ ।೧೦೪॥

ಯೋಗೀ ಯುಂಜೀತ ಸತತಮ್ ಆತ್ಮಾನಂ ರಹಸಿ ಸ್ಥಿತಃ ।
ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ।೧೦॥

ಪುಢತೀ ಅಸ್ತವೇನಾ ಐಸೇ । ಜಯಾ ಪಾಹಲೇ ಅದ್ವೈತದಿವಸೇ । ಮಗ ಆಪಣಪಾಂಚಿ ಆಪಣು ಅಸೇ । ಅಖಂಡೀತ ।೧೦೫॥ ಐಸಿಯಾ ದೃಷ್ಟೀ ಜೋ ವಿವೇಕೀ । ಪಾರ್ಥಾ ತೋ ಏಕಾಕೀ । ಸಹಜೇ ಅಪರಿಗ್ರಹೀ ಜೋ ತೀಹೀ ಲೋಕೀ । ತೋಚಿ ಮ್ಹಣೌನಿ ।೧೦೬॥ ಐಸಿಯೇ ಅಸಾಧಾರಣೇ । ನಿಷ್ಪನ್ನಾಚೀ ಲಕ್ಷಣೇ । ಆಪುಲೇನಿ ಬಹುವಸಪಣೇ । ಶ್ರೀಕೃಷ್ಣ ಬೋಲೇ ।೧೦೭॥ ಜೋ ಜ್ಞಾನಿಯಾಂಚಾ ಬಾಪು । ದೇಖಣೇಯಾಂಚೇ ದಿಠೀಚಾ ದೀಪು । ಜಯಾ ದಾದುಲಯಾಚಾ ಸಂಕಲ್ಪು । ವಿಶ್ವ ರಚೀ ।೧೦೮॥ ಪ್ರಣವಾಚಿಯೇ ಪೇಠೇ । ಜಾಹಲೇ ಶಬ್ದಬ್ರಹ್ಮ ಮಾಜಿಠೇ । ತೇ ಜಯಾಚಿಯಾ ಯಶಾ ಧಾಕುಟೇ । ವೇಢೂ ನ ಪುರೇ ।೧೦೯॥ ಜಯಾಚೇನಿ ಆಂಗಿಕೇ ತೇಜೇ । ಆವೋ ರವಿಶಶೀಚಿಯೇ ವಣಿಜೇ ।ಮ್ಹಣೌನಿ ಜಗ ಹೇ ವೇಶಜೇ । ವೀಣ ಅಸೇ ತಯಾ ।೧೧೦॥

ಆಗ ಅರ್ಜುನಾ, ಆತನ ದೃಷ್ಟಿಯಲ್ಲಿ ಸಣ್ಣದು ಮತ್ತು ದೊಡ್ಡದೆಂಬ ಭೇದವು ಎಲ್ಲಿಂದ ಭಾಸವಾಗಬೇಕು? ಪರಿಸಮಣಿ ಮುಟ್ಟಿದ ಬಂಗಾರಕ್ಕೆ ಬೇರೆ ಬೇರೆ ವರಿ ಹತ್ತಬಹುದೇ? ॥೯೬॥

ಪರಿಸದ ವರೆಯು (ಸ್ಪರ್ಶವು) ಎಲ್ಲ ಕಬ್ಬಿಣಕ್ಕೂ ಉತ್ತಮ ಬಂಗಾರವನ್ನೇ ಮಾಡುವುದು. ಅದರಂತೆ ಈತನ ಬುದ್ಧಿಯು ಚರಾಚರ ವಸ್ತುಗಳಲ್ಲಿ ಒಂದೇ ತತ್ತ್ವವನ್ನು ಕಾಣುತ್ತದೆ ॥೯೭॥

ಏಕೆಂದರೆ ವಿಶ್ವರೂಪ ಅಲಂಕಾರಗಳ ಪಡಿಯಚ್ಚುಗಳು ಅನೇಕ ರೂಪಗಳಿಂದ ಕೂಡಿರುವುವು. ಆದರೆ ಅವು ಒಂದೇ ಪರಬ್ರಹ್ಮ ರೂಪ ಬಂಗಾರದಿಂದ ಸಿದ್ಧವಾಗಿರುತ್ತವೆ ॥೯೮॥

ಹೀಗೆ ಶುದ್ಧವಾದ ಹಾಗೂ ಸತ್ಯವಾದ ತತ್ತ್ವವು ಯಾರಿಗೆ ಪೂರ್ಣವಾಗಿ ತಿಳಿದಿದೆಯೋ ಅವರು ಚಿತ್ರ ವಿಚಿತ್ರವಾದ ರಚನೆಗಳಿಂದ ಮೇಲಿಂದ ಮೇಲೆ ಮೋಸ ಹೋಗುವುದಿಲ್ಲ ॥೯೯॥

ವಸ್ತ್ರವನ್ನು ಶೋಧಿಸಿ ನೋಡಿದಾಗ ಅದರಲ್ಲಿ ಎಲ್ಲವೂ (ನೂಲು) ತಂತುಮಯವಾಗಿ ಕಾಣಿಸುವುದು. ಅದರಂತೆ ಆತನಿಗೆ ಬ್ರಹ್ಮದ ಹೊರತಾಗಿ ಜಗತ್ತಿನಲ್ಲಿ ಬೇರೆ ಏನೂ ಕಾಣಿಸುವುದಿಲ್ಲ ॥೧೦೦॥

ಈ ಪ್ರಕಾರವಾಗಿ ಸರ್ವ ಜಗತ್ತು ತುಂಬಿರುವುದು ಎಂದು ಹೀಗೆ ಯಾರಿಗೆ ಅನುಭವಕ್ಕೆ ಬರುವುದೋ, ಆತನೇ ''ಸಮಬುದ್ಧಿ'' ಪಡೆದವನು. ಇದು ಅಸತ್ಯವಲ್ಲ, ಹೀಗೆ ನಿಶ್ಚಯವಾಗಿ ತಿಳಿ ॥೧೦೧॥

ಇವರ ಹೆಸರು ತೀರ್ಥರಾಜ. ಇವರ ದರ್ಶನ ಪಡೆದರೆ ಅಂತಃಕರಣಕ್ಕೆ ಸಮಾಧಾನ ದೊರಕುವುದು ಮತ್ತು ಇವರ ಸಂಗತಿಯಿಂದ ಅಹಂಕಾರದಿಂದ ಭ್ರಮಿತನಾದ ಪುರುಷನ ಭ್ರಾಂತಿ ನಾಶವಾಗಿ ಆತನು ಬ್ರಹ್ಮ ಸ್ವರೂಪನಾಗುವನು ॥೧೦೨॥

ಆತನ ಭಾಷಣವು ಧರ್ಮದ ಜೀವನವು ಮತ್ತು ಆತನ ದೃಷ್ಟಿಯು ಮಹಾಸಿದ್ಧಿ ಉತ್ಪನ್ನಕಾರಕವು ಮತ್ತು ಸ್ವರ್ಗಾದಿ ಸುಖಗಳು ಆತನ ಆಟವಾಗಿರುವುದು ॥೧೦೩॥

ಇಂತಹ ಪುರುಷನನ್ನು ಚಿತ್ತದಲ್ಲಿ ಸಹಜವಾಗಿ ಸ್ಮರಿಸಿದರೆ ಆತನಿಗೆ ಆತನ ಯೋಗ್ಯತೆ ಬರುವುದು. ಹೆಚ್ಚಿಗೇನು ಹೇಳಬೇಕು ? ಆತನನ್ನು ಸ್ತುತಿಸಿದರೆ ಬಹು ದೊಡ್ಡ ಲಾಭವಾಗುವುದು ॥೧೦೪॥

ಶ್ಲೋಕಾರ್ಥ :- ಏಕಾಂತದಲ್ಲಿ ಒಬ್ಬನೇ ಇದ್ದು ಚಿತ್ತ, ಇಂದ್ರಿಯಗಳನ್ನು ವಶಪಡಿಸಿಕೊಂಡು ಸಂಗ್ರಹ ಬುದ್ಧಿ ಇರದವನಾಗಿ ಯೋಗಿಯು ಅಭ್ಯಾಸವನ್ನು ಮಾಡಬೇಕು ॥೧೦॥

ಎಂದೂ ಅಸ್ತನಾಗದ ಜ್ಞಾನಸೂರ್ಯನು ಯಾರ ಹೃದಯದಲ್ಲಿ ಉದಯಿಸಿರುವನೋ ಆತನು ತನ್ನಲ್ಲಿಯೇ ಸದೋದಿತ ಬ್ರಹ್ಮಾನಂದದಲ್ಲಿ ಮುಳುಗಿರುವನು ॥೧೦೫॥

ಪಾರ್ಥಾ, ಇಂತಹ ದೃಷ್ಟಿಯುಳ್ಳ ವಿವೇಕಿಯಾದವನೇ ಅದ್ವಿತಿಯನು. ಆತನೇ ಮೂರು ಲೋಕಗಳಲ್ಲಿ (ಅಪರಿಗ್ರಹಿ) ಸಂಗ್ರಹ ಮಾಡಲಾರದಾತನು. ಹೀಗೆ ತಿಳಿ ॥೧೦೬॥

ಈ ಪ್ರಕಾರವಾಗಿ ಶ್ರೀಕೃಷ್ಣನು ತನಗಿಂತಲೂ ಹೆಚ್ಚು ವಿಶೇಷ ಗೌರವದಿಂದ ಸಾಧುಗಳ ಮುಖ್ಯ ಲಕ್ಷಣಗಳನ್ನು ಹೇಳಿದನು ॥೧೦೭॥

ಶ್ರೀ ಕೃಷ್ಣನು ಸರ್ವಜ್ಞಾನಿಗಳ ಮುಕುಟಮಣಿಯು ಎಲ್ಲವನ್ನೂ ನೋಡುವವರ ದೃಷ್ಟಿಯ ಪ್ರಕಾಶಕನು ಮತ್ತು ಸಂಕಲ್ಪಮಾತ್ರದಿಂದ ವಿಶ್ವದ ರಚನೆ ಮಾಡುವ ಸಮರ್ಥನು ॥೧೦೮॥

ಓಂಕಾರದ ಪೇಟೆಯಲ್ಲಿ ವೇದವೆಂಬ ಉತ್ತಮ ವಸ್ತ್ರವು ಹುಟ್ಟಿತು. ಆ ವಸ್ತ್ರವು ದೇವನ ಯಶಸ್ಸಿಗೆ ಆಚ್ಛಾದನೆ ಮಾಡಲು ಸಾಲುವುದಿಲ್ಲ ॥೧೦೯॥

ಈತನ ಶರೀರದ ತೇಜದಿಂದ ಸೂರ್ಯ ಮತ್ತು ಚಂದ್ರರಿಗೆ ತಮ್ಮ ವ್ಯಾಪಾರದಿಂದ ಪ್ರತಿಷ್ಠೆ ಬಂದಿದೆ. ಅಂದಮೇಲೆ ಈ ಜಗತ್ತು ಆತನ ಆಧಾರದ ಹೊರತಾಗಿದೆಯೇ ॥೧೧೦॥

ಹಾ ಗಾ ನಾಮಚಿ ಏಕ ಜಯಾಚೇ । ಪಾಹತಾ ಗಗನಹೀ ದಿಸೇ ಟಾಂಚೇ । ಗುಣ ಏಕೈಕ ಕಾಯ ತಯಾಚೇ । ಆಕಳಶೀಲ ತೂ ॥೧೧೧॥ ಮ್ಹಣೌನಿ ಅಸೋ ಹೇ ವಾನಣೇ । ಸಾಂಗೋ ನೇಣೋ ಕವಣಾಚೀ ಲಕ್ಷಣೇ । ದಾವಾವೀ ಮಿಷೇ ಯೇಣೇ । ಕಾ ಬೋಲಿಲೋ ತೇ ॥೧೧೨॥ ಐಕೇ ದ್ವೈತಾಚಾ ಠಾವೋಚಿ ಫೇಡೀ । ತೇ ಬ್ರಹ್ಮವಿದ್ಯಾ ಕೀಜೇಲ ಉಘಡೀ । ತರೀ ಅರ್ಜುನಾ ಪಢಿಯೇ ಹೇ ಗೋಡೀ । ನಾಸೇಲ ಹನ ॥೧೧೩॥ ಮ್ಹಣೌನಿ ತೇ ತೈಸೇ ಬೋಲಣೇ ।ನವ್ಹೇ ಸಪಾತಳ ಆಡಲಾವಣೇ । ಕೇಲೇ ಮನಚಿ ವೇಗಳವಾಣೇ । ಭೋಗಾವಯಾ ॥೧೧೪॥ ಜಯಾ ಸೋಹಂಭಾವ ಅಟಕು । ಮೋಕ್ಷಸುಖಾಲಾಗೋನಿ ರಂಕು । ತಯಾಚಿಯೇ ದಿಠೀಚಾ ಝುಣೇ ಕಳಂಕು । ಲಾಗೇಲ ತುಝಿಯಾ ಪ್ರೇಮಾ ॥೧೧೫॥ ವಿಪಾಯೇ ಅಹಂಭಾವೋ ಯಯಾಚಾ ಜಾಈಲ । ಮೀ ತೇಂಚಿ ಹಾ ಜರೀ ಹೋಈಲ । ತರೀ ಮಗ ಕಾಯ ಕೀಜೇಲ । ಏಕಲೇಯಾ ॥೧೧೬॥ ದಿಠೀಚಿ ಪಾಹತಾ ನಿವಿಜೇ । ಕಾ ತೋಂಡ ಭರೋನಿ ಬೋಲಿಜೇ । ನಾತರೀ ದಾಟೂನಿ ಖೇಂವ ದೀಜೇ । ಐಸೇ ಕವಣ ಆಹೇ? ॥೧೧೭॥ ಆಪುಲಿಯಾ ಮನಾ ಬರವೀ । ಅಸಮಾಈ ಗೋಠೀ ಜೇವೀ । ತೇ ಕವಣೇಂಸಿ ಚಾವಳಾವೀ? । ಜರೀ ಐಕ್ಯ ಜಾಹಲೇ ॥೧೧೮॥ ಇಯಾ ಕಾಕುಳತೀ ಜನಾರ್ದನೇ । ಅನ್ಯೋಪದೇಶಾಚೇನಿ ಹಾತಾಶನೇ । ಬೋಲಾಮಾಜಿ ಮನ ಮನೇ । ಆಲಿಂಗೂ ಸರಲೇ ॥೧೧೯॥ ಹೇ ಪರಿಸತಾ ಜರೀ ಕಾನಡೇ । ತರೀ ಜಾಣ ಪಾ ಪಾರ್ಥ ಉಘಡೇ । ಕೃಷ್ಣಸುಖಾಚೇಂಚಿ ರೂಪಡೇ । ವೋತಲೇ ಗಾ ॥೧೨೦॥ ಹೇ ಅಸೋ ವಯಸೇಚಿಯೇ ಶೇವಟೀ । ಜೈಸೇ ಏಕಚಿ ವಿಯೇ ವಾಂಝೋಟೀ । ಮಗ ತೇ ಮೋಹಾಚೀ ತ್ರಿಪುಟೀ । ನಾಚೋ ಲಾಗೇ ॥೧೨೧॥ ತೈಸೇ ಜಾಹಲೇ ಶ್ರೀ ಅನಂತಾ । ಐಸೇ ತರೀ ಮೀ ನ ಮ್ಹಣತಾ । ಜರೀ ತಯಾಚಾ ನ ದೇಖತಾ । ಅತಿಶಯೋ ಏಥ ॥೧೨೨॥ ಪಾಹಾ ಪಾ ನವಲ ಕೈಸೇ ಚೋಜ । ಕೇ ಉಪದೇಶು ಕೇಉತೇ ಝುಂಜ । ಪರೀ ಪುಢೇ ವಾಲಭಾಚೇ ಭೋಜ । ನಾಚತ ಅಸೇ ॥೧೨೩॥ ಆವಡೀ ಆಣೀ ಲಾಜವೀ । ವ್ಯಸನ ಆಣಿ ಶಿಣವೀ । ಪಿಸೇ ಆಣಿ ನ ಭುಲವೀ । ತರೀ ತೇಚಿ ಕಾಈ ॥೧೨೪॥ ಮ್ಹಣೌನಿ ಭಾವಾರ್ಥು ತೋ ಐಸಾ । ಅರ್ಜುನ ಮೈತ್ರಿಯೇಚಾ ಕುವಾಸಾ । ಕೀ ಸುಖೇ ಶೃಂಗಾರಲಿಯಾ ಮಾನಸಾ । ದರ್ಪಣು ತೋ ॥೧೨೫॥

ಇಲ್ಲಿ ನೋಡು, ಆತನ ಕೇವಲ ನಾಮದ ಮುಂದೆ ಆಕಾಶವೂ ಸಣ್ಣದಾಗುವುದು. ಹೀಗೆ ನೀನು ಆತನ ಗುಣಗಳನ್ನು ಎಷ್ಟೆಂದು ಗ್ರಹಿಸುವೆ ।।೧೧೧।।

ಆದ್ದರಿಂದ ಈ ಪ್ರಶಂಸೆ ಸಾಕು. ಕಾರಣ ಇಂತಹ ಲಕ್ಷಣಗಳಿಂದ ಕೂಡಿದ ಶ್ರೀಕೃಷ್ಣನು ಯಾವ ಸಾಧುಗಳ ವರ್ಣನೆ ಮಾಡುತ್ತಿರುವಾಗ್ಗೆ ನಮಗೆ ವರ್ಣಿಸಲು ಸಾಧ್ಯವಿಲ್ಲ. ಹೇಳಬೇಕಾಗಿದ್ದರಿಂದ ಹೇಳಿದೆನು ।।೧೧೨।।

ಬ್ರಹ್ಮವಿದ್ಯೆಯು ದ್ವೈತದ ನಾಶ ಮಾಡುವುದು. ಅದನ್ನು ಸ್ಪಷ್ಟೀಕರಿಸಿದರೆ ತನ್ನ ಪ್ರಿಯಕರನಾದ ಅರ್ಜುನನ ಪ್ರೀತಿ ನಷ್ಟಗೊಂಡೀತು ।।೧೧೩।।

ಆದ್ದರಿಂದ ಬ್ರಹ್ಮಜ್ಞಾನ ವಿಷಯಕ್ಕೆ ಸ್ಪಷ್ಟ ಹೇಳದೇ ಅದಕ್ಕೆ ತೆರೆ ಎಳೆದು ಅರ್ಜುನನ ಪ್ರೇಮದ ಉಪಯೋಗ ತೆಗೆದುಕೊಳ್ಳುವುದಕ್ಕಾಗಿ ತನ್ನ ಮನಸ್ಸು ಬೇರೆ ಮಾಡಿದನು ।।೧೧೪।।

ಯಾರು ''ನಾನು ಬ್ರಹ್ಮನಿದ್ದೇನೆ'' ಎಂಬ ಬೋಧದಲ್ಲಿ ಸಿಲುಕಿರುವರು ಮತ್ತು ಯಾರು ಮೋಕ್ಷ ಸುಖಕ್ಕಾಗಿ ದೀನರಾಗಿರುವರು ಇಂತಹವರ ದೃಷ್ಟಿಯ ದೋಷವು ನಿನ್ನ ಪ್ರೇಮಕ್ಕೆ ಕದಾಚಿತ್ ತಾಗಬಹುದು ।।೧೧೫।।

ಒಂದು ವೇಳೆ ಈತನಿಗೆ ''ನಾನು'' ನಷ್ಟವಾಗಿ ತಾನೇ ತಾನಾಗಿ ಒಂದಾದರೆ ಆಗ ನಾನೊಬ್ಬನೇ ಏನು ಮಾಡಲಿ? ।।೧೧೬।।

ಕಣ್ಣಿನಿಂದ ನೋಡಿದಾಕ್ಷಣ ಶಾಂತನಾಗಲು ಅಥವಾ ಬಾಯಿತುಂಬಾ ಮಾತನಾಡಲು, ಬಿಗಿದಪ್ಪಿ ಆಲಿಂಗಿಸಲು ಹೀಗೆ ಬೇರೆ ನನಗೆ ಯಾರು ಇರುವರು? ।।೧೧೭।।

ಅರ್ಜುನನು ನನ್ನಲ್ಲಿ ಐಕ್ಯನಾದರೆ ನನಗೆ ಪ್ರಿಯವಾದ ಮಾತುಗಳು ನನ್ನ ಮನಸ್ಸಿನಲ್ಲಿ ಹಿಡಿದಿಡಲು ಆಗುವುದಿಲ್ಲ. ಆಗ ನಾನು ಆ ಮಾತುಗಳನ್ನು ಯಾರ ಮುಂದೆ ಆಡಲಿ? ।।೧೧೮।।

ಈ ಅಡಚಣೆಯಿಂದ ಶ್ರೀಕೃಷ್ಣನು ಹೇಳುವಾಗ ಸಾಧುಗಳ ಲಕ್ಷಣ ಹೇಳಿ ಬ್ರಹ್ಮಜ್ಞಾನದ ಉಪದೇಶ ಮಾಡಿದನು ಮತ್ತು ಆತನ ಮನಸ್ಸು ಹೊರಳಿಸಿದನು ।।೧೧೯।।

ಇದು ಕೇಳುವವರಿಗೆ ಒಂದು ವೇಳೆ ಅಶಕ್ಯವೆನಿಸ ಬಹುದು. ಆದರೆ ಪಾರ್ಥನು ನಿಜವಾಗಿಯೂ ಶ್ರೀಕೃಷ್ಣನ ಸುಖದ ಎರಕಹೊಯ್ದ ಮೂರ್ತಿಯಂತಿರುವನು. ಹೀಗೆ ನಿಶ್ಚಯವಾಗಿ ತಿಳಿಯಿರಿ ।।೧೨೦।।

ಇದು ಇರಲಿ, ಒಂದು ವೇಳೆ ಬಂಜೆ ಸ್ತ್ರೀಗೆ ವಯಸ್ಸಾದ ಮೇಲೆ ಒಬ್ಬನೇ ಒಬ್ಬ ಮಗನು ಹುಟ್ಟಿದನೆಂದರೆ ಅವನ ಮೇಲೆ ಆಕೆಯು ಪ್ರೇಮದ ಮೂರ್ತಿಯಾಗಿ ಕುಣಿಯುತ್ತಿರುವಳು ।।೧೨೧।।

ಹೀಗೆ ಶ್ರೀಕೃಷ್ಣನ ಪರಿಸ್ಥಿತಿಯಾಗಿರುವುದು. ಆತನ ಪ್ರೇಮವು ಅರ್ಜುನನ ಮೇಲೆ ಅತಿಶಯವಾಗಿರುವುದು ನನ್ನ ದೃಷ್ಟಿಗೆ ಬೀಳದಿದ್ದರೆ ನಾನು ಹೀಗೆ ಹೇಳುತ್ತಿದ್ದಿಲ್ಲ ।।೧೨೨।।

ನೋಡಿರಿ ಏನಾಶ್ಚರ್ಯ! ಎಂತಹ ಪ್ರೇಮ! ಎಂತಹ ಯುದ್ಧ ಪ್ರಸಂಗ! ಅದರಲ್ಲಿ ಎಂತಹ ಬ್ರಹ್ಮಜ್ಞಾನ ಉಪದೇಶ! ಅಂದಮೇಲೆ ಇದರಲ್ಲಿ ಭಗವಂತನ ಪ್ರೇಮವು ಅರ್ಜುನನಿಗಾಗಿ ಕುಣಿಯುತ್ತಿರುವುದು ಸ್ಪಷ್ಟವಾಗಿ ಕಾಣುತ್ತದೆ ।।೧೨೩।।

ಪ್ರೀತಿ ಇದ್ದು ನಾಚಿಕೆಯಾಗುತ್ತಿದ್ದರೆ, ವ್ಯಸನ ಇದ್ದು ದಣಿವು ಆಗುತ್ತಿದ್ದರೆ, ಹುಚ್ಚನಾಗಿ ಬುದ್ಧಿಯು ಭ್ರಷ್ಟ ವಾಗದಿದ್ದರೆ, ಇವು ನಿಜವೆಂದು ಹೇಳುವುದರಲ್ಲಿ ಯಾವ ಅರ್ಥವಿದೆ? ।।೧೨೪।।

ಈ ಮಾತಿನ ಸಾರವು ಇಷ್ಟೇ, ಈ ಅರ್ಜುನನು ಶ್ರೀಕೃಷ್ಣನ ಸ್ನೇಹದ ಮನೆಯಾಗಿರುವನು. ಅಥವಾ ಶೃಂಗರಿಸಿದ ಶ್ರೀಕೃಷ್ಣನ ಮನ ನೋಡುವ ''ಕನ್ನಡಿ'' ಯಾಗಿರುವನು ।।೧೨೫।।

ಯಾಪರೀ ಬಾಪ ಪುಣ್ಯಪವಿತ್ರ । ಜಗೀ ಭಕ್ತಿಬೀಜಾಸಿ ಸುಕ್ಷೇತ್ರ । ತೋ ಶ್ರೀಕೃಷ್ಣಕೃಪೇ ಪಾತ್ರ । ಯಾಚಿಲಾಗೀ ।।೧೨೬।। ಹೋ ಕಾ ಆತ್ಮನಿವೇದನಾತಳೀಂಚೀ । ಜೇ ಪೀಠಿಕಾ ಹೋಯ ಸಖ್ಯಾಚೀ । ಪಾರ್ಥು ಅಧಿಷ್ಠಾತ್ರೀ ತೇಥೀಂಚೀ । ಮಾತೃಕಾ ಗಾ ।।೧೨೭।। ಪಾಸೀಂಚೀ ಗೋಸಾವೀ ನ ವರ್ಣಿಜೇ । ಮಗ ಪಾಇಕಾಚಾ  ಗುಣ ಘೇಇಜೇ । ಐಸಾ ಅರ್ಜುನು ತೋ ಸಹಜೇ । ಪಢಿಯೇ ಹರೀ ।।೧೨೮।। ಪಾಹಾ ಪಾ ಅನುರಾಗೇ ಭಜೇ । ಜೇ ಪ್ರಿಯೋತ್ತಮೇ ಮಾನಿಜೇ । ತೇ ಪತೀಹೂನೀ ಕಾಯ ನ ವಾನಿಜೇ । ಪತಿವ್ರತಾ ? ।।೧೨೯।। ತೈಸಾ ಅರ್ಜುನಚಿ ವಿಶೇಷೇ ಸ್ತವಾವಾ । ಐಸೇ ಆವಡಲೇ ಮಜ ಜೀವಾ । ಜೇ ತೋ ತ್ರಿಭುವನೀಂಚಿಯಾ ದೈವಾ । ಏಕಾಯತನು ಜಾಹಲಾ ।।೧೩೦।। ಜಯಾಚಿಯಾ ಆವಡೀಚೇನಿ ಪಾಂಗೇ । ಅಮೂರ್ತುಹೀ ಮೂರ್ತಿ ಆವಗೇ । ಪೂರ್ಣಾಹಿ ಪರೀ ಲಾಗೇ । ಅವಸ್ಥಾ ಜಯಾಚೀ ।।೧೩೧।। ತಂವ ಶ್ರೋತೇ ಮ್ಹಣತೀ ದೈವ । ಕೈಸೀ ಬೋಲಾಚೀ ಹವಾವ । ಕಾಯ ನಾದಾತೇ ಹನ ಬರವ । ಜಿಣೋನಿ ಆಲೀ ।।೧೩೨।। ಹಾಹೋ ನವಲ ನೋಹೇ ದೇಶೀ । ಮರ್ಹಾಟೀ ಬೋಲಿಜೇ ತರೀ ಐಶೀ । ವಾಣೇ ಉಮಟತಾಹೇ ಆಕಾಶೀ । ಸಾಹಿತ್ಯ ರಂಗಾಚೇ ।।೧೩೩।। ಕೈಸೇ ಉನ್ಮೇಖಚಾಂದಿಣೇ ತಾರ । ಆಣಿ ಭಾವಾರ್ಥು ಪಡೇ ಗಾರ । ಹೇಚಿ ಶ್ಲೋಕಾರ್ಥ ಕುಮುದಿನೀ ಫಾರ । ಸಾವಿಯಾ ಹೋತೀ ।।೧೩೪।। ಚಾಡಚಿ ನಿಚಾಡಾ ಕರೀ । ಐಸೀ ಮನೋರಥೀ ಯೇ ಥೋರೀ । ತೇಣೇ ವಿವಳಲೇ ಅಂತರೀ । ತೇಥ ಡೋಲು ಆಲಾ ।।೧೩೫।। ತೇ ನಿವೃತ್ತಿದಾಸೇ ಜಾಣಿತಲೇ । ಮಗ ಅವಧಾನ ದ್ಯಾ ಮ್ಹಣಿತಲೇ । ನವಲ ಪಾಂಡವಕುಳೀ ಪಾಹಲೇ । ಕೃಷ್ಣದಿವಸೇ ।।೧೩೬।। ದೇವಕೀಯಾ ಉದರೀ ವಾಹಿಲಾ । ಯಶೋದಾ ಸಾಯಾಸೇ ಪಾಳಿಲಾ । ಕಾ ಶೇಖೀ ಉಪೇಗಾ ಗೇಲಾ । ಪಾಂಡವಾಂಸೀ ।।೧೩೭।। ಮ್ಹಣೌನಿ ಬಹುದಿವಸ ವೋಳಗಾವಾ । ಕಾ ಅವಸರು ಪಾಹೋನಿ ವಿನವಾವಾ । ಹಾಹೀ ಸೋಸು ತಯಾ ಸದೈವಾ । ಪಡೇಚಿನಾ ।।೧೩೮।। ಹೇ ಅಸೋ ಕಥಾ ಸಾಂಗೇ ವೇಗೀ । ಮಗ ಅರ್ಜುನ ಮ್ಹಣೇ ಸಲಗೀ । ದೇವಾ ಇಯೇ ಸಂತ ಚಿನ್ಹೇ ಆಂಗೀ । ನ ಠಕತೀ ಮಾಝ್ಯಾ ।।೧೩೯।। ಏರ್ಹವೀ ಯಾ ಲಕ್ಷಣಾಂಚಿ ನಿಜಸಾರಾ । ಮೀ ಅಪಾಡೇ ಕೀರ ಅಪುರಾ । ಪರಿ ತುಮಚೇನಿ ಬೋಲೇ ಅವಧಾರಾ । ಥೋರಾವೇ ಜರೀ ।।೧೪೦।। ಜೇ ತುಮ್ಹೀ ಚಿತ್ತ ದೇಯಾಲ । ತರೀ ಬ್ರಹ್ಮ ಮಿಯಾ ಹೋಇಜೇಲ । ಕಾಯ ಜಹಾಲೇ ಅಭ್ಯಾಸೀಜೇಲ । ಸಾಂಗಾಲ ಜೇ ।।೧೪೧।।

ಈ ಪ್ರಕಾರವಾಗಿ ಅರ್ಜುನನು ಧನ್ಯನು, ಪುಣ್ಯ ಪವಿತ್ರನು ಮತ್ತು ಭಕ್ತಿರೂಪವಾದ ಬೀಜವನ್ನು ಬಿತ್ತಲಿಕ್ಕೆ ಉತ್ತಮ ಕ್ಷೇತ್ರನು. ಆದ್ದರಿಂದ ಶ್ರೀಕೃಷ್ಣನ ಪ್ರೀತಿಗೆ ಪಾತ್ರನಾದನು ।।೧೨೬।।

ಶ್ರವಣದಿಂದ ಹಿಡಿದು ಆತ್ಮ ನಿವೇದನದವರೆಗೆ ಇರುವ ಒಂಬತ್ತು ಪ್ರಕಾರದ ಭಕ್ತಿಗಳಲ್ಲಿ ಆತ್ಮ ನಿವೇದನದ ಹಿಂದಿರುವ ಸಖ್ಯಭಕ್ತಿಯಲ್ಲಿ ಅರ್ಜುನನು ಮುಖ್ಯ ದೈವತನಾಗಿರುವನು ।।೧೨೭।।

(ಸ್ವಾಮಿ) ಭಗವಂತನು ಮಗ್ಗಲಿರುವಾಗ ಆತನನ್ನು ವರ್ಣಿಸದೇ ಸೇವಕನನ್ನು ವರ್ಣಿಸಿದರೂ ಸ್ವಾಮಿಗೆ ಪ್ರಿಯವಾಗುವುದು. ಈ ಪ್ರಕಾರದ ಯೋಗ್ಯತೆಯ ಅರ್ಜುನನು ಸ್ವಾಮಿಯ ಪ್ರೀತಿಗೆ ಪಾತ್ರನಾಗಿರುವನು ।।೧೨೮।।

ಪತಿವ್ರತೆಯು ತನ್ನ ಪತಿಯನ್ನು ಪ್ರೀತಿಯಿಂದ ಸೇವೆ ಮಾಡುತ್ತಾಳೆ ಮತ್ತು ಪತಿಗೆ ಮಾನ್ಯಳಾಗುತ್ತಾಳೆ, ಆ ಪತಿವ್ರತೆಯನ್ನು ಆಕೆಯ ಪತಿಗಿಂತಲೂ ಹೆಚ್ಚಿಗೆ ವರ್ಣಿಸುವುದಿಲ್ಲವೇ? ।।೧೨೯।।

ಅದರಂತೆ ಅರ್ಜುನನನ್ನು ವಿಶೇಷವಾಗಿ ಸ್ತುತಿಸಬೇಕೆಂದು ನನ್ನ ಮನಸ್ಸು ಬಯಸಿತು. ಏಕೆಂದರೆ ಆತನು ತ್ರಿಭುವನದ ಎಲ್ಲ ಭಾಗ್ಯಗಳಿಗೆ ಒಬ್ಬನೇ ಪಾತ್ರನಾಗಿರುವನು ।।೧೩೦।।

ಈತನ ಪ್ರೀತಿಗೆ ಹುಚ್ಚೆದ್ದು ನಿರಾಕಾರನಾದ ಪರಮಾತ್ಮನಿಗೆ ಅವತಾರ ಧರಿಸಬೇಕಾಯಿತು ಮತ್ತು ಆತನ ಇಚ್ಛೆಗಳೆಲ್ಲವೂ ಪೂರ್ಣವಾಗಿದ್ದರೂ ಸ್ನೇಹಿತನಿಗಾಗಿ ಉತ್ಕಟೇಚ್ಛೆ ಉತ್ಪನ್ನವಾಯಿತು ।।೧೩೧।।

ಆಗ ಶ್ರೋತೃಗಳು ಹೇಳಿದರು :- ದೈವದ ಗತಿಯು ಎಷ್ಟು ವಿಚಿತ್ರವಾಗಿದೆ? ವರ್ಣಿಸುವ ಶೈಲಿಯು ಎಷ್ಟೊಂದು ಶೋಭಾಯಮಾನವಾಗಿದೆ? ಈ ಸೌಂದರ್ಯವು ನಾದ ಬ್ರಹ್ಮನಿಗೂ (ಸಂಗೀತವನ್ನು) ಗೆದ್ದುಕೊಂಡಿರುವುದು ।।೧೩೨।।

ಮರಾಠಿ ಭಾಷೆಯಲ್ಲಿಯೂ ಈ ಪ್ರಕಾರವಾಗಿ ವರ್ಣನೆ ಮಾಡುತ್ತಿರುವುದು ಮತ್ತು ಅದರಿಂದ ನವರಸಾದಿಗಳು ಹೃದಯಕ್ಕೆ ಭಿನ್ನ ಭಿನ್ನ ಭಾವ ಮೂಡಿಸುತ್ತಿರುವುದು. ಇದು ಅತಿಶಯ ಆಶ್ಚರ್ಯವಲ್ಲವೇ ?।।೧೩೩।।

ಈ ಭಾಷಾರೂಪ ಆಕಾಶದಲ್ಲಿ ಹೇಗೆ ಚಂದ್ರನ ಬೆಳದಿಂಗಳು ಎಷ್ಟೊಂದು ಸ್ವಚ್ಛವಾಗಿದೆ! ಗೂಢ ಅಭಿಪ್ರಾಯಗಳ ತಂಪು ಸಹ ಅದರಲ್ಲಿ ಕೂಡಿದೆ. ಇದರ ಜೊತೆಯಲ್ಲಿ ಶ್ಲೋಕರೂಪ ಚಂದ್ರವಿಕಾಸಿ ಕಮಲಿನಿಯು ಅತಿಶಯವಾಗಿ ವಿಕಾಸಗೊಳ್ಳುತ್ತಿದೆ ।।೧೩೪।।

ಈ ಭಾಷೆಯು ನಿರಿಚ್ಛೆ ಸಾಧು ಪುರುಷರಿಗೂ ಕೇಳುವ ಇಚ್ಛೆ ಹುಟ್ಟಿಸುವುದು. ಇಂತಹ ಭಾಷೆಯಿಂದ ಶ್ರೋತೃಗಳ ಅಂತರ್ಯಾಮಿ ಪ್ರಸನ್ನನಾಗಿ ಅವರು ತೂಗಾಡಹತ್ತಿದರು ।।೧೩೫।।

ಈ ಪ್ರಕಾರದ ಶ್ರೋತೃಗಳವರ ಮನೋಭಾವ ಅರಿತು ನಿವೃತ್ತಿದಾಸ ಜ್ಞಾನೇಶ್ವರರು ಹೇಳುವರು:- ''ಶ್ರೋತೃಗಳವರೇ ಲಕ್ಷ ಕೊಡಿರಿ'' ಪಾಂಡವರ ಕುಲದಲ್ಲಿ ವಿಸ್ಮಯ ಕೃಷ್ಣ ದಿವಸವು ಪ್ರಕಾಶಗೊಂಡಿದೆ ।।೧೩೬।।

(ಆ ಕೃಷ್ಣನಿಗೆ) ದೇವಕಿಯು ಅತೀ ಕಷ್ಟದಿಂದ ಒಂಬತ್ತು ತಿಂಗಳು ಉದರದಲ್ಲಿ ಹೊತ್ತಳು. ಯಶೋದೆಯು ಅತಿ ಸಾಯಾಸದಿಂದ ದೊಡ್ಡವನನ್ನಾಗಿ ಬೆಳೆಸಿದಳು. ಆದರೆ ಆತನು ಕೊನೆಗೆ ಪಾಂಡವರಿಗೆ ಉಪಯೋಗವಾದನು ।।೧೩೭।।

ಅದಕ್ಕಾಗಿ ಅನೇಕ ದಿವಸಗಳವರೆಗೆ ಆತನ ಸೇವೆ ಮಾಡಬೇಕಾಗುವುದು ಮತ್ತು ಸಮಯ ನೋಡಿ ಆತನಿಗೆ ವಿನಂತಿಸಿಕೊಳ್ಳಬೇಕಾಗುವುದು. ಆದರೆ ಇಷ್ಟು ಸಹ ಪ್ರಯಾಸವು ಆ ದೈವ ಪುರುಷನಾದ ಅರ್ಜುನನಿಗೆ ಆಗಲಿಲ್ಲ ।।೧೩೮।।

ಶ್ರೋತೃಗಳವರು ಅಂದರು :- ಈಗ ಇದು ಇರಲಿ, ಮುಂದಿನ ಕಥಾಭಾಗ ಬೇಗ ಹೇಳಿರಿ. ಆಗ ಜ್ಞಾನೇಶ್ವರರು ಹೇಳುವರು :- ಅರ್ಜುನನು ಸಲಿಗೆಯಿಂದ ದೇವಾ, ನೀವೇನು ಸಂತರ ಲಕ್ಷಣ ಹೇಳಿದಿರಿ ಅದು ನನಗೆ ಪ್ರಾಪ್ತವಾಗುವುದಿಲ್ಲ ।।೧೩೯।।

ಸಾಮಾನ್ಯವಾಗಿ, ಈ ಲಕ್ಷಣಗಳ ತಾತ್ಪರ್ಯವನ್ನು ತಿಳಿಯಲು ನಾನು ನಿಜವಾಗಿಯೂ ಅಯೋಗ್ಯನು ಮತ್ತು ಅಪೂರ್ಣನು, ಆದರೆ ನಿಮ್ಮ ಬೋಧೆಯಿಂದ ಆ ಯೋಗ್ಯತೆ ಬರಬಹುದು ।।೧೪೦।।

ಒಂದುವೇಳೆ ನೀವು ಮನಸ್ಸು ಮಾಡಿದರೆ ನಾನು ಬ್ರಹ್ಮನಾದರೂ ಅದೇನು! ನೀವು ಹೇಳಿದ ಅಭ್ಯಾಸ ಮಾಡಲು ನನಗೇನು ಸಾಧ್ಯವಿಲ್ಲವೇ? ।।೧೪೧।।

ಹಾ ಹೋ ನೇಣೋ ಕವಣಾಚೀ ಕಾಹಾಣೀ। ಆಇಕೋನಿ ಶ್ಲಾಘಿಜತ ಅಸೋ ಅಂತಃಕರಣೀ। ಐಸೀ ಜಹಾಲೇಪಣಾಚೀ ಶಿರಯಾಣೀ। ಕಾಯಸೀ ದೇವಾ ।೧೪೨॥ ಹೇ ಆಂಗೇ ಮ್ಯಾ ಹೋಇಜೋ ಕಾ। ಯೇತುಲೇ ಗೋಸಾವೀ ಆಪುಲೇಪಣೇ ಕೀಜೋ ಕಾ। ತಂವ ಹಾಸೋನಿ ಶ್ರೀಕೃಷ್ಣ ಹೋ ಕಾ। ಕರೂ ಮ್ಹಣತೀ।೧೪೩॥ ದೇಖಾ ಸಂತೋಷು ಏಕ ನ ಜೋಡೇ। ತಂವಚಿ ಸುಖಾಚೇ ಸೈಂಘ ಸಾಂಕಡೇ। ಮಗ ಜೋಡಲಿಯಾ ಕವಣೇ ಕಡೇ। ಅಪುರೇ ಅಸೇ ? ।೧೪೪॥ ತೈಸಾ ಸರ್ವೇಶ್ವರು ಬಳಿಯಾ ಸೇವಕೇ। ಮ್ಹಣೌನಿ ಬ್ರಹ್ಮ ಹೀ ಹೋಯ ತೋ ಕೌತುಕೇ । ಪರಿ ಕೈಸಾ ಭಾರೇ ಆತಲಾ ಪಿಕೇ । ದೈವಾಚೇನಿ ।೧೪೫॥ ಜೋ ಜನ್ಮ ಸಹಸ್ರಾಂಚಿಯಾಸಾಠೀ । ಇಂದ್ರಾದಿಕಾಂಹೀ ಮಹಾಗು ಭೇಟೀ । ತೋ ಆಧೀನು ಕೇತುಲಾ ಕಿರೀಟೀ । ಜೇ ಬೋಲುಹೀ ನ ಸಾಹೇ ।೧೪೬॥ ಮಗ ಐಕಾ ಜೇ ಪಾಂಡವೇ। ಮ್ಹಣಿತಲೇ ಮ್ಯಾ ಬ್ರಹ್ಮ ಹೋಆವೇ। ತೇ ಅಶೇಷಹೀ ದೇವೇ। ಅವಧಾರಿಲೇ ।೧೪೭॥ ತೇಥ ಐಸೇಂಚಿ ಏಕ ವಿಚಾರಿಲೇ । ಜೇ ಯಾ ಬ್ರಹ್ಮತ್ವಾಚೇ ಡೋಹಳೇ ಜಾಹಲೇ। ಪರಿ ಉದರಾ ವೈರಾಗ್ಯ ಆಹೇ ಆಲೇ। ಬುದ್ಧೀಚಿಯಾ ।।೧೪೮॥ ಏರ್ಹವೀ ದಿವಸ ತರೀ ಅಪುರೇ। ಪರೀ ವೈರಾಗ್ಯವಸಂತಾಚೇನಿ ಭರೇ। ಜೇ ಸೋಹಂಭಾವ ಮುಹುರೇ। ಮೋಡೋನಿ ಆಲಾ ।೧೪೯॥ ಮ್ಹಣೌನಿ ಪ್ರಾಪ್ತೀಫಳೀ ಫಳತಾ। ಯಾಸಿ ವೇಳು ನ ಲಗೇಲ ಆತಾ। ಹೋಯ ವಿರಕ್ತು ಐಸಾ ಅನಂತಾ। ಭರಂವಸಾ ಜಾಹಲಾ ।೧೫೦॥ ಮ್ಹಣೇ ಜೇ ಜೇ ಹಾ ಅಧಿಷ್ಠೀಲ। ತೇ ಆರಂಭೀಚ ಯಯಾ ಫಳೇಲ। ಮ್ಹಣೌನಿ ಸಾಂಗಿತಲಾ ನ ವಚೇಲ। ಅಭ್ಯಾಸು ವಾಯಾ ।೧೫೧॥ ಐಸೇ ವಿವರೋನಿಯಾ ಶ್ರೀಹರೀ। ಮ್ಹಣಿತಲೇ ತೀಯೇ ಅವಸರೀ। ಅರ್ಜುನಾ ಹಾ ಅವಧಾರೀ। ಪಂಥರಾಜು ।೧೫೨॥ ತೇಥ ಪ್ರವೃತ್ತಿತರೂಚ್ಯಾ ಬುಡೀ। ದಿಸತೀ ನಿವೃತ್ತಿಫಳಾಚಿಯಾ ಕೋಡೀ। ಜಿಯೇ ಮಾರ್ಗೀಚಾ ಕಾಪಡೀ। ಮಹೇಶು ಆಝುನೀ ।೧೫೩॥ ಪೈಲ ಯೋಗವೃಂದೇ ವಹಿಲೀ । ಆಡವೀ ಆಕಾಶೀ ನಿಘಾಲೀ । ಕೀ ತೇಥ ಅನುಭವಾಚ್ಯಾ ಪಾಉಲೀ । ಧೋರಣು ಪಡಿಲಾ ।೧೫೪॥ ತಿಹೀ ಆತ್ಮಬೋಧಾಚೇನಿ ಉಜುಕಾರೇ । ಧಾಂವ ಘೇತಲೀ ಏಕಸರೇ । ಕೀ ಯೇರ ಸಕಳಮಾರ್ಗ ನಿದಸುರೇ । ಸಾಂಡೂನಿಯಾ ।೧೫೫॥ ಪಾಠೀ ಮಹರ್ಷೀ ಯೇಣೇ ಆಲೇ । ಸಾಧಕಾಂಚೇ ಸಿದ್ಧ ಜಾಹಾಲೇ । ಆತ್ಮವಿಧ ಥೋರಾವಲೇ । ಯೇಣೇಂಚಿ ಪಂಥೇ ।೧೫೬॥

ಇದು ನೀವು ಯಾರ ಮಾತು ಹೇಳಿದಿರಿ ಎಂಬುದು ನನಗೇನು ತಿಳಿಯದು. ಆದರೆ ಇದನ್ನು ಕೇಳಿದಾಗಿನಿಂದ ಇವರ ಸ್ತುತಿ ಮಾಡುವ ಹಂಬಲವಾಗಿದೆ. ಅಂದಮೇಲೆ ಈ ಯೋಗ್ಯತೆ ಇದ್ದವರ ಆನಂದಕ್ಕೆ ಅಂತಪಾರವೇ ಇಲ್ಲ ।।೧೪೨।।

ಪ್ರಭುವೇ, ಇವರಂತೆ ನನ್ನಲ್ಲಿ ಆ ಯೋಗ್ಯತೆ ಬರುವಂತೆ ನೀನು ಕೃಪೆ ಮಾಡುವಿಯಾ? ಆಗ ಶ್ರೀಕೃಷ್ಣನು ನಕ್ಕು ಹೇಳುತ್ತಾನೆ :- ''ಅಹೋ, ನಿನಗೆ ನಾನು ಬ್ರಹ್ಮರೂಪ ಮಾಡುವೆ'' ।।೧೪೩।।

ಇಲ್ಲಿ ನೋಡು, ಒಂದು ಸಂತೋಷವು ಪ್ರಾಪ್ತವಾಗದಿದ್ದಲ್ಲಿ ಎರಡೂ ಕಡೆಗೂ ಸುಖದ ಕೊರತೆ ಇರುವುದು. ಆದರೆ ಅದೇ ಸುಖವು ಒಮ್ಮೆ ಪ್ರಾಪ್ತವಾದರೆ ಎಲ್ಲ ಕಡೆಗೂ ಸುಖವೇ ಸುಖ ।।೧೪೪।।

ಯಾರು ಸರ್ವೇಶ್ವರನ ಪೂರ್ಣ ಸೇವಕರಾಗಿರುವರೋ, ಅವರು ಸಹಜವಾಗಿ ಬ್ರಹ್ಮರೂಪರಾಗಬಹುದು. ಆದರೆ ಅರ್ಜುನನ ಸುದೈವದ ಬೆಳೆಯು ಅದೆಷ್ಟು ಭಾರದಿಂದ ಬಾಗಿದೆ ।।೧೪೫।।

ಈಶ್ವರನು ಇಂದ್ರನ ಸಾವಿರಾರು ಜನ್ಮಕ್ಕೂ ದೊರಕಲು ದುರ್ಲಭನಾದವನು. ಆದರೆ ಅರ್ಜುನನಿಗೆ ಅದೆಂತಹ ಅಧೀನನು? ಆತನು ಕೇಳಿದ ಎಲ್ಲದಕ್ಕೂ ತಡಮಾಡದೇ ಉತ್ತರಿಸುವನು ।।೧೪೬।।

ತದನಂತರ ಈಗ ಕೇಳಿರಿ, ಅರ್ಜುನನು ''ನಾನು ಬ್ರಹ್ಮನಾಗಬೇಕು'' ಎಂದು ಹೇಳಿರುವ ಎಲ್ಲವನ್ನೂ ದೇವರು ಲಕ್ಷಕೊಟ್ಟು ಕೇಳಿದನು ।।೧೪೭।।

ಆಗ ದೇವರ ಮನಸ್ಸಿನಲ್ಲಿ ಈ ರೀತಿ ವಿಚಾರ ಮೂಡಿತು; ಈಗ ಅರ್ಜುನನಿಗೆ ಬ್ರಹ್ಮಸ್ವರೂಪನಾಗುವ ವಿಷಯದಲ್ಲಿ ಬಯಕೆಗಳು ಉತ್ಪನ್ನವಾಗಿವೆ. ಅಂದಮೇಲೆ ಆತನ ಬುದ್ಧಿಯ ಉದರದಲ್ಲಿ ವೈರಾಗ್ಯದ ಗರ್ಭ ನಿಂತಿರುವುದು ।।೧೪೮।।

ಸಾಮಾನ್ಯವಾಗಿ ಅರ್ಜುನರೂಪ ವೃಕ್ಷಕ್ಕೆ ಬ್ರಹ್ಮಪ್ರಾಪ್ತಿಯ ಫಲ ಬರಲು ದಿವಸಗಳು ತುಂಬಿರುವುದಿಲ್ಲ. ಆದಾಗ್ಯೂ ವೈರಾಗ್ಯರೂಪಿ ವಸಂತ ಋತುವಿನ ಬಲದಿಂದ ''ನಾನು ಬ್ರಹ್ಮನಾಗಬೇಕು'' ಎಂಬ ಇಚ್ಛೆ ಮೇರೆ ದಾಟಿ ನಿಂತಿದೆ ।।೧೪೯।।

ಆದ್ದರಿಂದ ಬ್ರಹ್ಮಪ್ರಾಪ್ತಿಯ ಫಲದಿಂದ ಸುಫಲನಾಗಲು (ಬ್ರಹ್ಮನಾಗಲು) ಈತನಿಗೆ ಇನ್ನು ಬಹಳ ವೇಳೆ ಹತ್ತುವುದಿಲ್ಲ. ಏಕೆಂದರೆ ಈತನೀಗ ವಿರಕ್ತನಾಗಿದ್ದಾನೆ. ಹೀಗೆ ದೇವರಿಗೆ ವಿಶ್ವಾಸವಾಯಿತು ।।೧೫೦।।

ದೇವರು ಮನದಲ್ಲಿಯೇ ಹೇಳಿದನು:- ಈ ಅರ್ಜುನನು ಈಗ ಯಾವ ಯಾವ ಸಾಧನೆಗಳ ಸ್ವೀಕಾರ ಮಾಡುವನೋ ಅದು ಈತನಿಗೆ ಆರಂಭದಲ್ಲಿಯೇ ಫಲ ಕೊಡುವುದು. ಆದ್ದರಿಂದ ಈತನಿಗೆ ಹೇಳುವ ಅಭ್ಯಾಸವು ವ್ಯರ್ಥ ಹೋಗುವುದಿಲ್ಲ ।।೧೫೧।।

ಈ ರೀತಿಯಾಗಿ ವಿಚಾರಮಾಡಿ ಶ್ರೀಕೃಷ್ಣನು ಹೇಳುತ್ತಾನೆ:- ಅರ್ಜುನಾ, ನಾವೀಗ ನಿನಗೆ ಯೋಗ ಮಾರ್ಗವನ್ನು ಹೇಳುತ್ತಿದ್ದೇವೆ. ಇದು ಎಲ್ಲ ಮಾರ್ಗಗಳ ರಾಜನಾಗಿದೆ ಅದನ್ನು ನೀನು ಕೇಳು ।।೧೫೨।।

ಈ ಯೋಗವು ಹೇಗಿದೆ ಎಂದರೆ, ಇದರ ಪ್ರವೃತ್ತಿರೂಪಿ ವೃಕ್ಷದಡಿಯಲ್ಲಿ ಕೋಟ್ಯಾವಧಿ ಮೋಕ್ಷ ಫಲಗಳು ದೃಷ್ಟಿಗೆ ಬೀಳುವುವು. ಯಾವ ಈ ಮಾರ್ಗದ ಯಾತ್ರಿಕನಾಗಿ ಈಗಲೂ ಶ್ರೀಶಂಕರನು ಇರುವನು ।।೧೫೩।।

ಯೋಗಿ ವೃಂದವು ವಿಚಾರ ಮಾಡದೇ ಒಮ್ಮಿಂದೊಮ್ಮೆಲೆ ಅಡ್ಡ ಮಾರ್ಗದಿಂದ ಬ್ರಹ್ಮರಂಧ್ರದ ಕಡೆ ಹೋಗಲು ಹೊರಟರು. ಆದರೆ ಮುಂದೆ ಅನುಭವದ ಹೆಜ್ಜೆಯಿಂದ ಹೋದಾಗ್ಗೆ ಅವರಿಗೆ ಆ ಮಾರ್ಗದ ಅಂದಾಜ ಸಿಕ್ಕಿತು ।।೧೫೪।।

ಆಗ ಇತರ ಅಜ್ಞಾನರೂಪ ಸರ್ವ ಮಾರ್ಗಗಳನ್ನು ಬಿಟ್ಟು ಆ ಯೋಗಿಗಳು ಆತ್ಮಬೋಧದ ಸರಳ ಮಾರ್ಗದಿಂದ ಕೂಡಲೇ ತೀವ್ರ ಚಲಿಸಿದರು ।।೧೫೫।।

ಪೂರ್ವದ ಮಹರ್ಷಿಗಳವರು ಇದೇ ಮಾರ್ಗದಿಂದ ಬಂದರು ಮತ್ತು ಅವರು ಸಾಧಕರಿದ್ದು ಸಿದ್ಧರಾದರು. ಇದರಂತೆ ತತ್ತ್ವಜ್ಞಾನಿಗಳು ಇದೇ ಪಂಥದಿಂದ ಶ್ರೇಷ್ಠತ್ವ ಪಡೆದರು ।।೧೫೬।।

ಹಾ ಮಾರ್ಗು ಜೈ ದೇಖಿಜೇ । ತೈ ತಹಾನ ಭೂಕ ವಿಸರಿಜೇ । ರಾತ್ರಿ ದಿವಸು ನೇಣಿಜೇ । ವಾಟೆ ಇಯೇ ॥೧೫೭॥ ಚಾಲತಾ ಪಾಊಲ ಜೇಥ ಪಡೇ । ತೇಥ ಅಪವರ್ಗಾಚೀ ಖಾಣೀ ಉಘಡೇ । ಆವ್ಹಾಂಟಲಿಯಾ ತರೀ ಜೋಡೆ । ಸ್ವರ್ಗಸುಖ ॥೧೫೮॥ ನಿಗಿಜೇ ಪೂರ್ವಿಲಿಯಾ ಮೋಹರಾ । ಕೀ ಯೇಇಜೇ ಪಶ್ಚಿಮೇಚಿಯಾ ಘರಾ । ನಿಶ್ಚಳಪಣೇ ಧನುರ್ಧರಾ । ಚಾಲಣೇ ಏಥಿಂಚೇ ॥೧೫೯॥ ಯೇಣೇ ಮಾರ್ಗೇ ಜಯಾ ಠಾಯಾ ಜಾಇಜೇ । ತೋ ಗಾಂವ್ರೋ ಆಪಣಚಿ ಹೋಇಜೇ । ಹೇ ಸಾಂಗೋ ಕಾಯ ಸಹಜೇ । ಜಾಣಸೀ ತೂ ॥೧೬೦॥ ತೇಥ ಪಾರ್ಥೇ ಮ್ಹಣಿತಲೇ ದೇವಾ । ತರಿ ತೇಂಚಿ ಮಗ ಕೇವ್ಹಾ । ಕಾ ಆರ್ತಿಸಮುದ್ರೌನಿ ನ ಕಾಢಾವಾ । ಬುಡತು ಜೇ ಮೀ ॥೧೬೧॥ ತಂವ ಶ್ರೀಕೃಷ್ಣ ಮ್ಹಣತೀ ಐಸೇ । ಹೇ ಉತ್ಸ್ಖಳ ಬೋಲಣೇ ಕಾಯಸೇ । ಆಮ್ಹೀ ಸಾಂಗತಸೋ ಆಪೈಸೇ । ವರಿ ಪುಶಿಲೇ ತುವಾ ॥೧೬೨॥

ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।
ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಮ್ ॥೧೧॥

ತರೀ ವಿಶೇಷೇ ಆತಾ ಬೋಲಿಜೇಲ । ಪರಿ ತೇ ಅನುಭವೇ ಉಪೇಗಾ ಜಾಈಲ । ಮ್ಹಣೌನಿ ತೈಸೇ ಏಕ ಲಾಗೇಲ । ಸ್ಥಾನ ಪಾಹಾವೇ ॥೧೬೩॥ ಜೇಥ ಅರಾಣುಕೇಚೆನಿ ಕೋಡೇ । ಬೈಸಲಿಯಾ ಉಠೋ ನಾವಡೇ । ವೈರಾಗ್ಯಾಸೀ ದುಣೇವ ಚಢೇ । ದೇಖಿಲಿಯಾ ಜೇ ॥೧೬೪॥ ಜೋ ಸಂತೀ ವಸವಿಲಾ ಠಾವೋ । ಸಂತೋಷಾಸೀ ಸಾವಾವೋ । ಮನಾ ಹೋಯ ಉತ್ಸಾವೋ । ಧೈರ್ಯಾಚಾ ॥೧೬೫॥ ಅಭ್ಯಾಸುಚೀ ಆಪಣಯಾತೇ ಕರೀ । ಹೃದಯಾತೇ ಅನುಭವು ವರೀ । ಐಸೀ ರಮ್ಯಪಣಾಚೀ ಥೋರೀ । ಅಖಂಡ ಜೇಥ ॥೧೬೬॥ ಜಯಾ ಆಡ ಜಾತಾ ಪಾರ್ಥಾ । ತಪಶ್ಚರ್ಯಾ ಮನೋರಥಾ । ಪಾಖಾಂಡಿಯಾಹೀ ಆಸ್ಥಾ । ಸಮೂಳ ಹೋಯ ॥೧೬೭॥ ಸ್ವಭಾವೇ ವಾಟೇ ಯೇತಾ । ಜರೀ ವರಪಡಾ ಜಾಹಲಾ ಅವಚಿತಾ । ತರೀ ಸಕಾಮುಹೀ ಪರಿ ಮಾಘೌತಾ । ನಿಘೋ ವಿಸರೇ ॥೧೬೮॥ ಐಸೇನಿ ನ ರಾಹತಯಾತೇ ರಾಹಾವೀ । ಭ್ರಮತಯಾತೇ ಬೈಸವೀ । ಥಾಪಟೂನಿ ಚೇವವೀ । ವಿರಕ್ತೀತೇ ॥೧೬೯॥ ಹೇ ರಾಜ್ಯ ವರ ಸಾಂಡಿಜೇ । ಮಗ ನಿವಾಂತಾ ಏಥೇಚಿ ಅಸಿಜೇ। ಐಸೇ ಶೃಂಗಾರಿ ಯಾಂಹಿ ಉಪಜೇ । ದೇಖತ ಖೇಂವ್ರೋ ॥೧೭೦॥ ಜೇ ಯೇಣೇವಮಾನೇ ಬರವಂಟ । ಆಣಿ ತೈಸೇಚಿ ಅತಿಚೋಖಟ । ಜೇಥ ಅಧಿಷ್ಠಾನ ಪ್ರಗಟ । ಡೋಳಾ ದಿಸೇ ॥೧೭೧॥

ಈ ಮಾರ್ಗವು ದೃಷ್ಟಿಗೆ ಬಿದ್ದಾಗ ಹಸಿವೆ ನೀರಡಿಕೆಗಳು ಇಲ್ಲ ದಂತಾಗುವುವು. ಈ ಮಾರ್ಗದಿಂದ ಕ್ರಮಿಸುವಾಗ ಹಗಲು ರಾತ್ರಿಯ ಪರಿವೆ ಇರುವುದಿಲ್ಲ ।।೧೫೭।।

ಈ ಮಾರ್ಗದ ಆಕ್ರಮಣ ಮಾಡುತ್ತಿರುವಾಗ್ಗೆ ಆ ಪುರುಷನು ಎಲ್ಲಿ ಕಾಲಿಡುವನೋ ಅಲ್ಲಿಯೇ ಮೋಕ್ಷದ ನಿಧಿ ಉತ್ಪನ್ನವಾಗುತ್ತದೆ. ಒಂದು ವೇಳೆ ಅಡ್ಡ ಮಾರ್ಗ ಹಿಡಿದರೂ ಸ್ವರ್ಗಸುಖ ಸಿಗುತ್ತದೆ ।।೧೫೮।।

ಅರ್ಜುನಾ, ಪೂರ್ವದಿಶೆಯಿಂದ ಹೊರಡಬೇಕು (ಅಂದರೆ ನಿಷ್ಕಾಮ ಕರ್ಮದಿಂದ ಆರಂಭಿಸಬೇಕು) ಪಶ್ಚಿಮದಿಕ್ಕಿನ ಮನೆಗೆ ಬರಬೇಕು. (ಅಂದರೆ ಸಮಾಧಿ ಅವಸ್ಥೆಗೆ ಪ್ರಾಪ್ತನಾಗಬೇಕು) ಹೀಗೆ ನಿಶ್ಚಲ ತತ್ತ್ವದಿಂದ ಇರುವುದು ಈ ಮಾರ್ಗದ ಕ್ರಮವಾಗಿದೆ ।।೧೫೯।।

ಈ ಮಾರ್ಗದಿಂದ ಎಲ್ಲಿಗೆ ಹೋಗಬೇಕಾಗಿದೆಯೋ ಅದು ಪರಮಾತ್ಮರೂಪಿ ಗ್ರಾಮವು ತಾನೇ ಆಗಬೇಕಾಗುವುದು. ಅದನ್ನು ಈಗಲೇ ಏಕೆ ಹೇಳಲಿ? ನೀನು ಮುಂದೆ ಸಹಜವಾಗಿ ತಿಳಿಯುವಿ ।।೧೬೦।।

ಆಗ ಅರ್ಜುನನು ಹೇಳಿದನು :- ದೇವಾ ಹೀಗಿದ್ದರೆ, ಆ ಮಾರ್ಗವನ್ನು ನನಗೆ ತಿಳಿಸುವುದೆಂದು? ಏಕೆಂದರೆ ಕೇಳುವ ಉತ್ಸುಕತೆಯ ಸಮುದ್ರದಲ್ಲಿ ನಾನು ಮುಳುಗುತ್ತಿರುವೆನು. ನನಗೆ ನೀವು ಮೇಲಕ್ಕೆ ಎತ್ತುವುದಿಲ್ಲವೇ? ।।೧೬೧।।

ಆಗ ಶ್ರೀಕೃಷ್ಣನು ಅಂದನು :- ಅರೇ, ದುಡುಕಿ ಇಂತಹ ಗಡಿಬಿಡಿಯ ಮಾತುಗಳೇಕೆ ಆಡುವೆ? ನಾನಾಗಿಯೇ ಇದನ್ನು ಹೇಳಲು ಮುಂದಾಗಿರುವೆ. ಅಲ್ಲದೇ ನೀನು ಸಹ ಕೇಳಿರುವೆ ।।೧೬೨।।

ಶ್ಲೋಕಾರ್ಥ :- ಪವಿತ್ರವಾದ ಪ್ರದೇಶದಲ್ಲಿ ಹೆಚ್ಚು ಎತ್ತರವೂ ಹೆಚ್ಚು ತಗ್ಗೂ ಇಲ್ಲದೆ ದರ್ಭೆ, ಕೃಷ್ಣಾಜಿನ, ವಸ್ತ್ರಗಳನ್ನು ಹಾಕಿಕೊಂಡು ।।೧೧।।

ಈಗಲೇ ನಿನಗೆ ಈ ಮಾರ್ಗದ ವಿಶೇಷವನ್ನು ಹೇಳುವೆ. ಆದರೆ ಈ ಮಾರ್ಗವನ್ನು (ಕೇಳುವುದರಿಂದ ಉಪಯೋಗ ವಾಗದೆ) ಪ್ರತ್ಯಕ್ಷವಾಗಿ ಅನುಷ್ಠಾನ ಮಾಡಿ ಅನುಭವಕ್ಕೆ ಬಂದಾಗ ಮಾತ್ರ ಉಪಯೋಗವಾಗುವುದು. ಅದಕ್ಕಾಗಿ ಆರಂಭಕ್ಕೆ ಉತ್ತಮ ಸ್ಥಾನವನ್ನು ನೋಡಬೇಕಾಗುವುದು ।।೧೬೩।।

ಆ ಸ್ಥಾನವು ಸಮಾಧಾನಕ್ಕಾಗಿ ಕುಳಿತುಕೊಂಡಾಗ ಎದ್ದು ಹೋಗಲು ಮನಸ್ಸಾಗಬಾರದು ಮತ್ತು ಆ ಸ್ಥಾನವನ್ನು ನೋಡಿದಾಗಲೇ ವೈರಾಗ್ಯವು ಎರಡು ಪಟ್ಟಾಗಬೇಕು ।।೧೬೪।।

ಆ ಸ್ಥಳವು ಪೂರ್ವದಲ್ಲಿ ಸಂತರು ವಾಸ್ತವ್ಯ ಮಾಡಿರ ಬೇಕು. ಅಲ್ಲಿ ಸಂತೋಷಕ್ಕೆ ಸಹಾಯ ಸಿಗಬೇಕು ಮತ್ತು ಅಲ್ಲಿ ಮನಸ್ಸಿಗೆ ಧೈರ್ಯದ ಉತ್ಸಾಹ ದೊರಕಬೇಕು ।।೧೬೫।।

ಅಲ್ಲಿ ಅಭ್ಯಾಸವನ್ನು ತನ್ನಿಂದ ಮಾಡಿಕೊಳ್ಳುವಂತಹ ದ್ದಿರಬೇಕು. ಅನುಭವವು ತಾನೇ ಬಂದು ಚಿತ್ತಕ್ಕೆ ವರಿಸಬೇಕು. ಈ ಪ್ರಕಾರದ ರಮಣೀಯ ಮಹತ್ವಪೂರ್ಣತೆ ಯಾವಾಗಲೂ ಅಲ್ಲಿರಬೇಕು ।।೧೬೬।।

ಅರ್ಜುನಾ, ಆ ಮಾರ್ಗದ ಮಗ್ಗುಲಾಗಿ ಹೋದರೂ ತಪಶ್ಚರ್ಯ ಮಾಡುವ ಬಯಕೆಯಾಗಬೇಕು ಮತ್ತು ಅಲ್ಲಿ ನಾಸ್ತಿಕನಿಗೂ ತಪ ಮಾಡುವ ಇಚ್ಛೆಯಾಗಬೇಕು ।।೧೬೭।।

ಸಹಜವಾಗಿ ಹೊರಟ ಮನುಷ್ಯನು ಆ ಸ್ಥಳವನ್ನು ನೋಡಿದಾಕ್ಷಣ ವಿಷಯಾಸಕ್ತನಾದ ಮತ್ತು ಕಾಯಕ ಮಗ್ನರಾಗಿರುವ ಆತನಿಗೆ ಎಲ್ಲವೂ ಮರೆತು ಅಲ್ಲಿಂದ ಹೋಗಲು ಮನಸ್ಸಾಗಬಾರದು ।।೧೬೮।।

ಈ ಪ್ರಕಾರದ ರಮ್ಯತೆಯಿಂದ ಕೂಡಿರುವುದರಿಂದ ಅಲ್ಲಿರಬಾರದು ಎಂಬುವವರಿಗೂ ಇರಲು ಹಚ್ಚುವುದು. ಸಿಕ್ಕ ಸಿಕ್ಕಲ್ಲಿ ತಿರುಗುತ್ತಿರುವವನಿಗೆ ಇಲ್ಲಿ ಕೂಡ್ರಿಸುವುದು. ವೈರಾಗ್ಯಶೀಲರಿಗೆ ಬೆನ್ನು ಚಪ್ಪರಿಸಿ ಜಾಗೃತಗೊಳಿಸುವುದು ।।೧೬೯।।

ವಿಲಾಸ ಪುರುಷನಾದ ರಾಜನು ಈ ಸ್ಥಳವನ್ನು ನೋಡಿದಾಕ್ಷಣವೇ ಆತನಿಗೆ ಸರ್ವರಾಜ್ಯ ತ್ಯಾಗ ಮಾಡಿ ಇಲ್ಲಿಯೇ ಏಕಾಂತವಾಗಿ ಇರಬೇಕು ಎಂದು ಅನಿಸಬೇಕು ।।೧೭೦।।

ಈ ಪ್ರಕಾರವಾಗಿ ಆ ಸ್ಥಾನವು ಉತ್ತಮವಾಗಿರಬೇಕು ಮತ್ತು ಅತೀ ಶುದ್ಧವಾಗಿರಬೇಕು. ಅದಲ್ಲದೇ ಪ್ರತ್ಯಕ್ಷ ಬ್ರಹ್ಮವು ಕಣ್ಣಿಗೆ ಕಾಣಿಸುವಂತೆ ಭಾಸವಾಗುತ್ತಿರಬೇಕು ।।೧೭೧।।

ಆಣೀಕಹೀ ಏಕ ಪಹಾವೇ । ಜೇ ಸಾಧಕೀ ವಸತೇ ಹೋಆವೇ । ಆಣಿ ಜನಾಚೇನಿ ಪಾಯರವೇ । ರುಳೇಚಿನಾ ॥೧೭೨॥ ಜೇಥ ಅಮೃತಾಚೇನಿ ಪಾಡೇ । ಮುಳಾಹೀಸಕಟ ಗೋಡೇ । ಜೋಡತೀ ದಾಟೇ ಝಾಡೇ । ಸದಾ ಫಳತೀ ॥೧೭೩॥ ಪಾಉಲಾ ಪಾಉಲಾ ಉದಕೇ । ವರ್ಷಾಕಾಳೇಹೀ ಅತಿಚೋಖೇ ।ನಿರ್ಝರೇ ಕಾ ವಿಶೇಖೇ । ಸುಲಭೇ ಜೇಥ ॥೧೭೪॥ ಹಾ ಆತಪುಹೀ ಅಳುಮಾಳು । ಜಾಣಿಜೇ ತರೀ ಶೀತಳು । ಪವನು ಅತಿ ನಿಶ್ಚಿಳು । ಮಂದು ಝುಳಕೇ ॥೧೭೫॥ ಬಹುತ ಕರೂನಿ ನಿಃಶಬ್ದ । ದಾಟ ನ ರಿಗೆ ಶ್ವಾಪದ । ಶುಕ ಹನ ಷಟ್ಪದ । ತೇಉತೇ ನಾಹೀ ॥೧೭೬॥ ಪಾಣಿಲಗೇ ಹಂಸೇ । ದೋನೀ ಚಾರೀ ಸಾರಸೇ । ಕವಣೇ ಏಕೇ ವೇಳೇ ಬೈಸೇ । ತರೀ ಕೋಕಿಳಹೀ ಹೋ ॥೧೭೭॥ ನಿರಂತರ ನಾಹೀ । ತರೀ ಆಲೀ ಗೇಲೀ ಕಾಂಹೀ । ಹೋತು ಕಾ ಮಯೂರೇಹೀ । ಆಮ್ಹಿ ನಾ ನ ಮ್ಹಣೋ ॥೧೭೮॥ ಪರೀ ಅವಶ್ಯಕ ಪಾಂಡವಾ । ಐಸಾ ಠಾವೋ ಜೋಡಾವಾ । ತೇಥ ನಿಗೂಢ ಮಠ ಹೋಆವಾ । ಕಾ ಶಿವಾಲಯ ॥೧೭೯॥ ದೋಹೀಮಾಜೀ ಆವಡೇ ತೇ । ಜೇ ಮಾನಲೇ ಹೋಯ ಚಿತ್ತೇ । ಬಹುತಕರೂನಿ ಏಕಾಂತೇ । ಬೈಸಿಜೇ ಗಾ ॥೧೮೦॥ ಮ್ಹಣೌನಿ ತೈಸೇ ತೇ ಜಾಣಾವೇ । ಮನ ರಾಹತೇ ಪಾಹಾವೇ । ರಾಹೀಲ ತೇಥ ರಚಾವೇ । ಆಸನ ಐಸೇ ॥೧೮೧॥ ವರೀ ಚೋಖಟ ಮೃಗಸೇವಡೀ । ಮಾಜೀ ಧೂತವಸ್ತ್ರಾಚೀ ಘಡೀ । ತಳವಟೀ ಅಮೋಡೀ । ಕುಶಾಂಕೂರ ॥೧೮೨॥ ಸಕೋಮಳ ಸರಿಸೇ । ಸುಬುದ್ಧ ರಾಹತೀ ಆಪೈಸೇ । ಏಕಪಾಡೇ ತೈಸೇ । ವೋಜಾ ಘಾಲೀ ॥೧೮೩॥ ಪರಿ ಸಾವಿಯಾಚಿ ಉಂಚ ಹೋಈಲ । ತರೀ ಆಂಗ ಹನ ಡೋಲೇಲ । ನೀಚ ತರೀ ಪಾವೇಲ । ಭೂಮಿದೋಷು ॥೧೮೪॥ ಮ್ಹಣೌನಿ ತೈಸೇ ನ ಕರಾವೇ । ಸಮಭಾವೇ ಧರಾವೇ । ಹೇ ಬಹು ಅಸೋ ಹೋಆವೇ । ಆಸನ ಐಸೇ ॥೧೮೫॥

ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ ।
ಉಪವಿಶ್ಯಾಽಸನೇ ಯುಂಜ್ಯಾತ್ ಯೋಗಮಾತ್ಮ ವಿಶುದ್ಧಯೇ ॥೧೨॥

ಮಗ ತೇಥ ಆಪಣ । ಏಕಾಗ್ರ ಅಂತಃಕರಣ । ಕರೂನಿ ಸದ್ಗುರು ಸ್ಮರಣ । ಅನುಭವಿಜೇ ॥೧೮೬॥ ಜೇಥ ಸ್ಮರತೇನಿ ಆದರೇ । ಸಬಾಹ್ಯ ಸಾತ್ವಿಕೇ ಭರೇ । ಜಂವ ಕಾಠಿಣ್ಯ ವಿರೇ । ಅಹಂಭಾವಾಚೇ ॥೧೮೭॥ ವಿಷಯಾಂಚಾ ವಿಸರು ಪಡೇ । ಇಂದ್ರಿಯಾಂಚೀ ಕಸಮಸ ಮೋಡೇ । ಮನಾಚೀ ಘಡೀ ಘಡೇ । ಹೃದಯಾ ಮಾಜೀ ॥೧೮೮॥

ಇನ್ನೊಂದು ಮಾತು ಸಾಧಕರು ಕಾಣಬೇಕು. ಈ ಸ್ಥಾನದಲ್ಲಿ ಸಾಧಕರ ಹೊರತಾಗಿ ಅನ್ಯ ಜನರ ಕಾಲಧೂಳಿಯು ಸಹ ಇರಬಾರದು. (ಜನರ ಬರ ಹೋಗುವ ಗದ್ದಲ ಇರಬಾರದು) ।।೧೭೨।।

ಅಲ್ಲಿ ಅಮೃತಕ್ಕೆ ಸರಿಸಮಾನವಾದ ಸಿಹಿಯಾಗಿರುವ ಹಣ್ಣುಗಳು ಯಾವಾಗಲೂ ದೊರಕುವಂತೆ ದಟ್ಟವಾದ ಗಿಡಮರಗಳಿರಬೇಕು ।।೧೭೩।।

ಅಲ್ಲಿ ಹೆಜ್ಜೆ ಹೆಜ್ಜೆಗೂ ನೀರಿನ ಝರಿಗಳಿರಬೇಕು. ಆ ನೀರು ಮಳೆಗಾಲದಲ್ಲಿಯೂ ನಿರ್ಮಲವಾಗಿರಬೇಕು ಮತ್ತು ಸಾಕಷ್ಟು ಇದ್ದು ಸ್ವೀಕರಿಸಲು ಸರಳವಾಗಿರಬೇಕು ।।೧೭೪।।

ಅಲ್ಲಿ ಸೂರ್ಯನ ಬಿಸಿಲು ಸೌಮ್ಯವಾಗಿರಬೇಕು. ಒಂದು ವೇಳೆ ಸ್ವಚ್ಛ ಬಿಸಿಲು ಬಿದ್ದರೂ ತಾಪವಾಗಿರಬಾರದು. ಹಾಗೆಯೇ ಗಾಳಿಯು ಮಂದವಾಗಿಯೂ ತಂಪಾಗಿಯೂ ಬೀಸುತ್ತಿರಬೇಕು ।।೧೭೫।।

ಅಲ್ಲಿ ಬಹಳಮಾಡಿ ನಿಶಬ್ದವೇ ಇರಬೇಕು. ದನ ಕರು ಪ್ರಾಣಿಗಳ ದಟ್ಟನೆ ಇರಬಾರದು. ಸದಾವಕಾಲ ಚೀರುತ್ತಿರುವ ಗಿಳಿ ಭ್ರಮರಗಳೂ ಬಹಳಿರಬಾರದು ।।೧೭೬।।

ನೀರಿನ ಸಂಬಂಧದಿಂದ ಅಲ್ಲಿ ಎರಡು ಅಥವಾ ನಾಲ್ಕು ಹಂಸಗಳು ಅದರಂತೆ ಚಕ್ರವಾಕ್ ಪಕ್ಷಿಗಳು ಅಲ್ಲದೇ ಕೋಗಿಲ ಪಕ್ಷಿಯು ಬಂದು ಕುಳಿತರೆ ಅಡ್ಡಿ ಇಲ್ಲ ।।೧೭೭।।

ಆಗಾಗ ನವಿಲುಗಳು ಬಂದು ಹೋಗುತ್ತಿದ್ದರೆ (ಅವು ಸುಂದರವಾಗಿ ಇದ್ದುದರಿಂದ) ನಾವು ಬೇಡವೆನ್ನುವುದಿಲ್ಲ. (ಅವು ದೊಡ್ಡ ಧ್ವನಿಯಿಂದ ಕೂಗುತ್ತವೆ) ಅವು ಸದಾಕಾಲ ಇಲ್ಲಿರಲು ನಮಗೆ ಬೇಡ ।।೧೭೮।।

ಆದ್ದರಿಂದ ಹೇ ಪಾಂಡವನೇ, ಇಂತಹ ಸ್ಥಳವನ್ನು ಅವಶ್ಯವಾಗಿ ನೋಡಬೇಕು ಮತ್ತು ಆ ಸ್ಥಳದಲ್ಲಿ ಗುಪ್ತಗುಹೆ ಇಲ್ಲವೆ ಶಿವಾಲಯವಿರಬೇಕು ।।೧೭೯।।

ಈ ಎರಡರಲ್ಲಿ ಯಾವುದು ಹಿಡಿಸುವುದೋ ಅಥವಾ ತನ್ನ ಚಿತ್ತಕ್ಕೆ ಸರಿ ಕಾಣುವ ಆ ಸ್ಥಳದಲ್ಲಿ ಏಕಾಂತವಾಗಿ ಇರಬೇಕು ।।೧೮೦।।

ಆದ್ದರಿಂದ ಈ ಸ್ಥಾನವು ಎಲ್ಲ ದೃಷ್ಟಿಯಿಂದ ಯೋಗ್ಯವಾಗಿದೆಯೋ ಅಥವಾ ಇಲ್ಲವೋ ಎಂಬುದನ್ನು ಪರೀಕ್ಷಿಸಿ ನೋಡಬೇಕು, ಅಲ್ಲದೆ ಇಲ್ಲಿ ಮನಸ್ಸು ಸ್ಥಿರವಾಗುವಂತೆ ಕಂಡಾಗ ಈ ಪ್ರಕಾರದ ಆಸನ ಹಾಕಬೇಕು ।।೧೮೧।।

ಮೇಲೆ ಧೂತ ವಸ್ತ್ರದಗಳಿಗೆ ಇರಬೇಕು. ಅದರ ಅಡಿಯಲ್ಲಿ ಶುದ್ಧವಾದ ಮೃಗಚರ್ಮ (ಕೃಷ್ಣಾಜಿನ) ಇರಬೇಕು, ಅದರ ಅಡಿಯಲ್ಲಿ ತುದಿವುಳ್ಳ ದರ್ಭ ಹರಡಿಸಬೇಕು ।।೧೮೨।।

ಆ ದರ್ಭಗಳು ಎಳೆಯದಾಗಿರಬೇಕು. ಒಂದೇ ತರಹದ್ದಿರಬೇಕು. ಒಂದಕ್ಕೊಂದು ಹೊಂದಿಕೊಂಡಿರುವಂತೆ ಉತ್ತಮ ರೀತಿಯಲ್ಲಿ ಜೋಡಿಸಿರಬೇಕು ।।೧೮೩।।

ಆದರೆ ಆ ಆಸನವು ಒಂದು ವೇಳೆ ಎತ್ತರವಾದರೆ ಶರೀರವು ಅಲುಗಾಡಬಹುದು. ಬಹಳ ಕೆಳಗೆ ಇದ್ದರೆ ಭೂಮಿಯ ತಂಪು ಇಲ್ಲವೆ ಇನ್ನಿತರ ದೋಷಗಳ ಬಾಧೆಯಾಗಬಹುದು ।।೧೮೪।।

ಆದ್ದರಿಂದ ಹಾಗೆ ಮಾಡದೇ ಸಮವಾಗಿ (ಅಂದರೆ ಹೆಚ್ಚು ಎತ್ತರ ಅಥವಾ ಹೆಚ್ಚು ತಗ್ಗು ಇರದಂತೆ) ಇರಬೇಕು. ಈ ಪ್ರಕಾರವಾಗಿ ಆಸನದ ಯೋಜನೆ ಮಾಡಬೇಕು ।।೧೮೫।।

ಶ್ಲೋಕಾರ್ಥ :- ಆ ಆಸನದ ಮೇಲೆ ಕುಳಿತು ಕೊಂಡು, ಮನಸ್ಸನ್ನು ಏಕಾಗ್ರ ಮಾಡಿ ಇಂದ್ರಿಯ ವೃತ್ತಿಗಳನ್ನು ನಿಗ್ರಹಿಸಿ ಅಂತಃಕರಣ ಶುದ್ಧಿಗಾಗಿ ಯೋಗವನ್ನು ಮಾಡಬೇಕು ।।೧೨।।

ಆಗ ಅಲ್ಲಿ ಮನದ ಏಕಾಗ್ರತೆಯನ್ನು ಮಾಡಿ ಸದ್ಗುರುವಿನ ಸ್ಮರಣೆಯೊಂದಿಗೆ ಆತ್ಮಸುಖದ ಅನುಭವ ಪಡೆಯಬೇಕು ।।೧೮೬।।

ಅಲ್ಲಿ ಅಹಂಭಾವವು ಇಲ್ಲದಂತಾಗಿ ಅಷ್ಟ ಸಾತ್ವಿಕ ಭಾವವು ಒಳಹೊರಗೆ ಹುಟ್ಟುವವರೆಗೆ ಸದ್ಗುರುವಿನ ಸ್ಮರಣೆಯನ್ನು ಬಹು ಆದರದಿಂದ ಮಾಡಬೇಕು ।।೧೮೭।।

ಇದರಿಂದ ವಿಷಯಗಳ ನೆನಪು ಸಹ ಆಗುವುದಿಲ್ಲ. ಇಂದ್ರಿಯಗಳಿಗೆ ವಿಷಯಗಳ ಮೇಲಿನ ಪ್ರೇಮವು ಇಲ್ಲದಂತಾಗುವುದು ಮತ್ತು ಮನಸ್ಸಿನ ಬೇಡಿಕೆ ಮುಗಿದು ಹೃದಯದಲ್ಲಿ ಮಡಿಚಿಕೊಳ್ಳುವುದು ।।೧೮೮।।

ಐಸೇ ಐಕ್ಯ ಹೇ ಸಹಜೇ । ಘಾಂವೇ ತಂವ ರಾಹಿಜೇ । ಮಗ ತೇಣೇಂಚಿ ಬೋಧೇ ಬೈಸಿಜೇ । ಆಸನಾವರೀ ॥೧೮೯॥ ಆತಾ ಆಂಗಾತೇ ಆಂಗ ವರೀ । ಪವನಾತೇ ಪವನು ಧರೀ । ಐಸೀ ಅನುಭವಾಚೀ ಉಜರೀ । ಹೋಏಚಿ ಲಾಗೇ ॥೧೯೦॥ ಪ್ರವೃತ್ತಿ ಮಾಘೌತಿ ಮೋಹರೇ । ಸಮಾಧಿ ಐಲಾಡೀ ಉತರೇ । ಆಘವೇ ಅಭ್ಯಾಸು ಸರೇ । ಬೈಸತಖೇಂವೋ ॥೧೯೧॥ ಮುದ್ರೇಚಿ ಪ್ರೌಢೀ ಐಶೀ । ತೇಚಿ ಸಾಂಗಿಜೇಲ ಆತಾ ಪರಿಯೇಸೀ । ತರೀ ಊರು ಯಾ ಜಘನಾಸೀ । ಜಡೋನಿ ಘಾಲೀ ॥೧೯೨॥ ಚರಣತಳೇ ದೇವ್ಹಡೀ । ಆಧಾರದ್ರುಮಾಚ್ಯಾ ಬುಡೀ । ಸುಘಟಿತೇ ಗಾಢೀ । ಸಂಚರೀ ಪಾ ॥೧೯೩॥ ಸವ್ಯ ತೋ ತಳೀ ಠೇವಿಜೇ । ತೇಣೇ ಸಿವಣೀಮಧ್ಯೇ ಪೀಡಿಜೇ । ವರೀ ಬೈಸೇ ತೋ ಸಹಜೇ । ವಾಮ ಚರಣು ॥೧೯೪॥ ಗುದ ಮೇಂಢ್ರಾ ಆಂತೌತೀ । ಚಾರೀ ಅಂಗುಳೇ ನಿಗುತೀ । ತೇಥ ಸಾರ್ಧ ಸಾರ್ಧ ಪ್ರಾಂತೀ । ಸಾಂಡೂನಿಯಾ ॥೧೯೫॥ ಮಾಜೀ ಅಂಗುಳ ಏಕ ನಿಗೇ । ತೇಥ ಟಾಂಚೇಚೇನಿ ಉತ್ತರ ಭಾಗೇ । ನೆಹೇಟಿಜೇ ವರೀ ಆಂಗೇ । ಪೇಲಲೇನಿ ॥೧೯೬॥ ಉಚಲಿಲೇ ಕಾ ನೇಣಿಜೇ । ತೈಸೇ ಪೃಷ್ಠಾಂತ ಉಚಲಿಜೇ । ಗುಲ್ಫದ್ವಯ ಧರಿಜೇ । ತೇಣೇಂಚಿ ಮಾನೇ ॥೧೯೭॥ ಮಗ ಶರೀರ ಸಂಚು ಪಾರ್ಥಾ । ಅಶೇಷಹೀ ಸರ್ವಥಾ । ಪಾರ್ಷ್ಣಿಂಚಾ ಮಾಥಾ । ಸ್ವಯಂಭು ಹೋಯ ॥೧೯೮॥ ಅರ್ಜುನಾ ಹೇ ಜಾಣ । ಮೂಳಬಂಧಾಚೇ ಲಕ್ಷಣ । ವಜ್ರಾಸನ ಗೌಣ । ನಾಮ ಯಾಸೀ ॥೧೯೯॥ ಐಸೀ ಆಧಾರೀ ಮುದ್ರಾ ಪಡೇ । ಆಣಿ ಆಧೀಂಚಾ ಮಾರ್ಗು ಮೋಡೇ । ತೇಥ ಅಪಾನು ಆಂತುಲೇಕಡೇ । ವೋಹೋಟೋ ಲಾಗೇ ॥೨೦೦॥

ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥೧೩॥

ತಂವ ಕರಸಂಪುಟ ಆಪೈಸೇ । ವಾಮಚರಣೀ ಬೈಸೇ । ತಂವ ಬಾಹುಮೂಳೀ ದಿಸೇ । ಥೋರೀವ ಆಲೀ ॥೨೦೧॥ ಮಾಜೀ ಉಭಾರಲೇನಿ ದಂಡೇ । ಶಿರಕಮಳ ಹೋಯ ಗಾಢೇ । ನೇತ್ರದ್ವಾರೀಂಚೇ ಕವಾಡೇ । ಲಾಗೂ ಪಾಹತೀ ॥೨೦೨॥ ವರಚಿಲೇ ಪಾತೀ ಢಳತೀ । ತಳೀಂಚೇ ತಳೀ ಪುಂಜಾಳತೀ । ತೇಥ ಅರ್ಧೋನ್ಮೀಲಿತ ಸ್ಥಿತೀ । ಉಪಜೇ ತಯಾ ॥೨೦೩॥ ದಿಠೀ ರಾಹೋನಿ ಆಂತುಲೀಕಡೇ । ಬಾಹೇರ ಪಾಊಲ ಘಾಲೀ ಕೋಡೇ । ತೇ ಠಾಯೀ ಠಾವೋ ಪಡೇ । ನಾಸಾಗ್ರಪೀಠೀ ॥೨೦೪॥

(ಅಂತಃಕರಣ ಮತ್ತು ಮನಸ್ಸು) ಹೀಗೆ ಇವುಗಳ ಐಕ್ಯವು ಸಹಜವಾಗಿ ಪ್ರಾಪ್ತವಾಗುವವರೆಗೆ ಸದ್ಗುರು ಸ್ಮರಣದಲ್ಲಿ ಸ್ಥಿರವಾಗಿರಬೇಕು ಮತ್ತು ಆಗ ಅದೇ ಬೋಧಯುಕ್ತನಾಗಿ ಆಸನದ ಮೇಲೆ ಕುಳಿತುಕೊಳ್ಳಬೇಕು ||೧೯೯||

ಆಮೇಲೆ ದೇಹವು ದೇಹವನ್ನು ಸಾವರಿಸುವುದು ಪ್ರಾಣಾಪಾನ ವಾಯುವು ಪ್ರಾಣಾಪಾನ ವಾಯುವನ್ನು ಆವರಿಸುವುದು. ಹೀಗೆ ಸ್ಪಷ್ಟವಾದ ಅನುಭವ ಬರುವುದು ||೧೯೦||

ಇಲ್ಲಿ ಪ್ರವೃತ್ತಿಯು ಹಿಂದಕ್ಕೆ ಸರಿದು ಸಮಾಧಿಯು ಸಹಜವಾಗಿ ಸಾಧ್ಯವಾಗುತ್ತದೆ. ಆಸನದ ಮೇಲೆ ಕುಳಿತುಕೊಂಡಾಗಲೇ ಎಲ್ಲ ಅಭ್ಯಾಸವು ಮುಗಿದಿದೆ ಎಂಬ ಭಾವ ಬರುವುದು ||೧೯೧||

ಮುದ್ರೆಯ ಯೋಗ್ಯತೆ ಎಷ್ಟೆಂಬುದು ಈಗ ವರ್ಣನೆ ಮಾಡಿ ಹೇಳುವೆ ಕೇಳು. ಮೀನಗಂಡಗಳನ್ನು ತೊಡೆಗೆ ಹಚ್ಚಿಕೊಂಡು ಆಸನ ಹಾಕಬೇಕು ||೧೯೨||

ಒಂದು ಚರಣದ ಮೇಲೆ ಎರಡನೇ ಚರಣವನ್ನು ವಕ್ರವಾಗಿ ಇಟ್ಟು ಗುದಸ್ಥಾನ ಬುಡಕ್ಕೆ ಹಿಮ್ಮಡವನ್ನು ಸ್ಥಿರವಾಗಿ ಹಾಗೂ ಬಿಗಿಯಾಗಿ ಹಚ್ಚಬೇಕು ||೧೯೩||

ಬಲ ಚರಣವನ್ನು ಕೆಳಗೆ ಇಟ್ಟು ಅದನ್ನು ವೃಷಣ ಗುದಸ್ಥಾನಗಳ ನಡುವಿನ ಹುರಿಗೆ ಹಚ್ಚಿ ಹತ್ತಿಕ್ಕಬೇಕು. ಮಡಚಿದ ಎಡಗಾಲು ಮೇಲೆ ಬರುವುದು ||೧೯೪||

ಗುದವೃಷಣಗಳ ನಡುವೆ ನಾಲ್ಕು ಅಂಗುಲ ಸ್ಥಳ ಇರುವುದು. ಈ ಭಾಗದಲ್ಲಿ ಎರಡು ಕಡೆಯಲ್ಲಿ ಒಂದುವರೆ ಅಂಗುಲ ಸ್ಥಳ ಬಿಡಬೇಕು ||೧೯೫||

ಮಧ್ಯದಲ್ಲಿ ಉಳಿದ ಒಂದು ಅಂಗುಲ ಸ್ಥಳದಲ್ಲಿ ಶರೀರವನ್ನು ಸಮತೋಲ ಇಟ್ಟುಕೊಂಡು ಹಿಮ್ಮಡದ ಮೇಲ್ಭಾಗದಿಂದ ಒತ್ತಬೇಕು ||೧೯೬||

ಎತ್ತಿ ಹಿಡಿದಿರುವೆನೋ ಇಲ್ಲವೋ ಎಂಬುದು ತಿಳಿಯದಂತೆ ಬೆನ್ನುಹುರಿಯ ತುದಿಯನ್ನು ಹಿಮ್ಮಡದ ಮೇಲೆತ್ತಿಟ್ಟು ಅದರಂತೆ ಎರಡೂ ಕಾಲುಗಳ ಹದಡುಗಳನ್ನು ಹಿಡಿಯಬೇಕು ||೧೯೭||

ಆಗ ಪಾರ್ಥನೇ, ಈ ಎಲ್ಲ ಶರೀರವು ಕಾಲಿನ ಹಿಮ್ಮಡಗಳ ಮೇಲೆ ನಿಂತ ಸ್ವಯಂಭೂಭಾಗವೋ ಎಂಬಂತಾಗುವುದು ||೧೯೮||

ಅರ್ಜುನಾ, ಇದು ''ಮೂಲಬಂಧ''ವೆಂಬ ಆಸನದ ಲಕ್ಷಣವಾಗಿದೆ. ಇದಕ್ಕೆ ಇನ್ನೊಂದು ''ವಜ್ರಾಸನ''ವೆಂಬ ಗೌಣನಾಮವು ಇದೆ ||೧೯೯||

ಈ ರೀತಿಯಲ್ಲಿ ಮೂಲಬಂಧ ಆಸನವನ್ನು ಮಾಡುವುದರಿಂದ ಕೆಳಗಿನ ಮಾರ್ಗವು ತುಂಡಾಗಿ ಅಪಾನ ವಾಯುವು ಒಳಗಿಂದೊಳಗೆ ಮೇಲೇರ ಹತ್ತುವುದು ||೨೦೦||

ಶ್ಲೋಕಾರ್ಥ :- ತಲೆ, ಕುತ್ತಿಗೆ, ಶರೀರಗಳನ್ನು ನೆಟ್ಟಗೆ ದೃಢವಾಗಿ ನಿಲ್ಲಿಸಿಕೊಂಡು, ಮೂಗಿನ ತುದಿಯನ್ನು ನೋಡುತ್ತ ದೃಷ್ಟಿಯನ್ನು ಅತ್ತ ಇತ್ತ ಹೋಗಗೊಡದೆ ||೧೩||

ಆಗ ಎಡಪಾದದ ಮೇಲೆ ಸಹಜವಾಗಿ ಎರಡೂ ಹಸ್ತಗಳನ್ನು ದ್ರೋಣಾಕಾರ ಮಾಡಿ ಇಡಬೇಕು. ಅಂದರೆ ಎರಡೂ ಹೆಗಲುಗಳು ಮೇಲೇರಿ ತೋರುವುವು ||೨೦೧||

ಆಗ ಶರೀರವು ಸ್ಥಿರವಾದಾಗ ಮೇಲೇರಿದ (ಹೆಗಲುಗಳಲ್ಲಿ) ಶಿರಕಮಲವು ಒಳಸೇರಿದಂತಾಗುವುದು. ಆಗ ಕಣ್ಣು ರೆಪ್ಪೆಗಳು ಮುಚ್ಚ ಹತ್ತುವುವು ||೨೦೨||

ಮೇಲಿನ ರೆಪ್ಪೆಗಳಿಗೆ ಆರಿಬಂದಂತಾಗಿ ಕೆಳಗಿನ ರೆಪ್ಪೆಗಳು ಪಸರಿಸುವುವು. ಆಗ ಅರ್ಧ ತೆರೆದಂತೆ, ಅರ್ಧ ಮುಚ್ಚಿದಂತೆ ಅರೆಗಣ್ಣಿನ ನೋಟವಾಗಿ ಕಾಣುವುದು ||೨೦೩||

ಈ ರೀತಿಯಲ್ಲಿ ದೃಷ್ಟಿಯು ಒಳಗಿಂದೊಳಗೇ ಇರುವುದು. ಕೌತುಕದಿಂದ ಬಹಳ ಮಾಡಿ ಹೊರಬಂದರೆ ಮೂಗಿನ ತುದಿಯ ಮೇಲೆ ನಿಲ್ಲುವುದು ||೨೦೪||

ಐಸೇ ಆಂತುಚ್ಯಾ ಆಂತುಚಿ ರಚೇ । ಬಾಹೇರೀ ಮಾಗುತೇ ನ ವಚೇ । ಮ್ಹಣೌನಿ ರಾಹಣೇ ಆಧಿಯೇ ದಿಠೀಚೇ । ತೇಥೇಂಚಿ ಹೋಯ ।೨೦೫॥ ಆತಾ ದಿಶಾಂಚೇ ಭೇಟೀ ಘ್ಯಾವೀ । ಕಾ ರೂಪಾಚೀ ವಾಸ ಪಹಾವೀ । ಹೇ ಚಾಡ ಸರೇ ಆಘವೀ । ಆಪೈಸಯಾ ।೨೦೬॥ ಮಗ ಕಂಠನಾಳ ಆಟೇ । ಹನುವಟೀ ಹಡೌತೀ ದಾಟೇ । ತೇ ಗಾಢೀ ಹೋಊನಿ ನೇಹಟೇ । ವಕ್ಷಃಸ್ಥಳೀ ।೨೦೭॥ ಮಾಜೀ ಘಂಟಿಕಾ ಲೋಪೇ । ವರೀ ಬಂಧು ಜೋ ಆರೋಪೇ । ತೋ ಜಾಲಂಧರು ಮ್ಹಣಿಪೇ । ಪಂಡುಕುಮರಾ ।೨೦೮॥ ನಾಭೀವರೀ ಪೋಖೇ । ಉದರ ಹೇ ಥೋಕೇ । ಅಂತರೀ ಫಾಂಕೇ । ಹೃದಯಕೋಶು ।೨೦೯॥ ಸ್ವಾಧಿಷ್ಠಾನಾವರೀಚಿಲೇ ಕಾಂಠೀ । ನಾಭಿಸ್ಥಾನಾ ತಳವಟೀ । ಬಂಧು ಪಡೇ ಕಿರೀಟೀ । ವೋಢಿಯಾಣಾ ತೋ ।೨೧೦॥ ಐಸೀ ಶರೀರಾಬಾಹೇರಲೀಕಡೇ । ಅಭ್ಯಾಸಾಚೀ ಪಾಂಖರ ಪಡೇ ।ತಂವ ಆಂತು ತ್ರಾಯ ಮೋಡೇ । ಮನೋಧರ್ಮಾಚೇ ।೨೧೧॥

ಪ್ರಶಾಂತಾತ್ಮಾ ವಿಗತಭೀಃ ಬ್ರಹ್ಮಚಾರಿವ್ರತೇ ಸ್ಥಿತಃ ।
ಮನಸ್ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀನ ಮತ್ಪರಃ ।೧೪॥

ಕಲ್ಪನಾ ನಿಮೇ । ಪ್ರವೃತ್ತೀ ಶಮೇ । ಆಂಗ ಮನ ವಿರಮೇ । ಸಾವಿಯಾಚಿ ।೨೧೨॥ ಕ್ಷುಧಾ ಕಾಯ ಜಾಹಾಲೀ । ನಿದ್ರಾ ಕೇಉತೀ ಗೇಲೀ । ಹೇ ಆಠವಣಹೀ ಹಾರಪಲೀ । ನ ದಿಸೇ ವೇಗಾ ।೨೧೩॥ ಜೋ ಮೂಳಬಂಧೇ ಕೋಂಡಲಾ । ಅಪಾನು ಮಾಘೌತಾ ಮುರಡಲಾ । ತೋ ಸವೇಂಚಿ ವರೀ ಸಾಂಕಡಲಾ । ಧರೀ ಫುಗೂ ।೨೧೪॥ ಕ್ಷೋಭಲೇಪಣೇ ಮಾಜೇ । ಉವಾಇಲಾ ಠಾಯೀ ಗಾಜೇ । ಮಣಿಪೂರೇಸೀ ಝುಂಜೇ । ರಾಹೋನಿಯಾ ।೨೧೫॥ ಮಗ ಥಾವಲಿಯೇ ವಾಹಟುಳೀ । ಸೈಂಘ ಫೇಊನಿ ಘರ ಡಹುಳೀ । ಬಾಳಪಣೇಂಚೀ ಕುಹೀಟುಳೀ । ಬಾಹೇರ ಘಾಲೀ ।೨೧೬॥ ಭೀತರೀ ವಳೀ ನ ಧರೇ । ಕೋಠ್ಯಾಮಾಜೀ ಸಂಚರೇ । ಕಫಪಿತ್ತಾಚೇ ಥಾರೇ । ಉರೋ ನೇದಿ ।೨೧೭॥ ಧಾತೂಂತೇ ಸಮುದ್ರ ಉಲಂಡೀ । ಮೇದಾಚೇ ಪರ್ವತ ಫೋಡೀ । ಆಂತಲೀ ಮಜ್ಜಾ ಕಾಢೀ । ಅಸ್ಥಿಗತ ।೨೧೮॥ ನಾಡೀತೇ ಸೋಡವೀ । ಗಾತ್ರಾಂತೇ ಬಿಘಡವೀ । ಸಾಧಕಾತೇ ಭೇಡಸಾವೀ । ಪರಿ ಬಿಹಾವೇ ನಾ ।೨೧೯॥ ವ್ಯಾಧೀತೇ ದಾವೀ । ಸವೇಂಚಿ ಹರವೀ । ಆಘ ಪೃಥ್ವೀ ಕಾಲವೀ । ಏಕವಾಟ ।೨೨೦॥ ತಂವ ಯೇರೀಕಡೇ ಧನುರ್ಧರಾ । ಆಸನಾಚಾ ಉಬಾರಾ। ಶಕ್ತಿ ಕರೀ ಉಜಗರಾ । ಕುಂಡಲಿನೀ ತೇ ।೨೨೧॥

ಇಂತು ದೃಷ್ಟಿಯು ಒಳಗಿಂದೊಳಗೆ ಸ್ಥಿರವಾಗುವುದು. ಮರಳಿ ಹೊರಬೀಳುವುದಿಲ್ಲ. ಆದ್ದರಿಂದ ಅರ್ಧೋನ್ಮಿಲಿತ ದೃಷ್ಟಿಯು ಮೂಗಿನ ತುದಿಯ ಮೇಲೆಯೇ ಸತತವಾಗಿ ಉಳಿಯುವುದು ।೨೦೫॥

ಇದರಿಂದ ಇದರ ದಿಶೆ ಕಡೆ ನೋಡಬೇಕೆಂಬ ಅಥವಾ ಸ್ವರೂಪವು ದೃಷ್ಟಿಗೆ ಬೀಳುವುದೆಂದು ದಾರಿ ಕಾಯುವುದು ಈ ಇಚ್ಛೆಯು ತನ್ನಷ್ಟಕ್ಕೆ ತಾನೇ ಇಲ್ಲದಂತಾಗುವುದು ।೨೦೬॥

ಇದಾದ ಬಳಿಕ ಕಂಠನಾಳವು ಆಕುಂಚಿತವಾಗುವುದು. ಗದ್ದವು ಕೊರಳ ಕೆಳಗಿನ ಸಂಧಿಯಲ್ಲಿ ಸಿಕ್ಕಿ ಬಿಡುವುದು ಮತ್ತು ಹೃದಯ ಮೇಲೆ ಗಟ್ಟಿಯಾಗಿ ಒತ್ತಿ ಬಿಡುವುದು ।೨೦೭॥

ಅರ್ಜುನಾ, ಇಷ್ಟಾದ ನಂತರ ಕಂಠಮಣಿಯು ಕಾಣದಂತಾಗುವುದು. ಈ ಪ್ರಕಾರವಾಗಿ ಸಾಧಿಸಿರುವ ಮುದ್ರೆಗೆ ''ಜಾಲಂಧರ ಬಂಧ'' ಎಂದು ಕರೆಯುವರು ।೨೦೮॥

ಹೊಕ್ಕಳವು ಮೇಲೆ ಉಬ್ಬುವುದು, ಹೊಟ್ಟೆ ತೆಳ್ಳಗಾಗುವುದು ಮತ್ತು ಹೃದಯ ಕಮಲವು ಅಂತರ್ಯಾಮಿಯು ಪ್ರಫುಲ್ಲಿತಗೊಳ್ಳುವುದು ।೨೦೯॥

ಇದರಿಂದ ಸ್ವಾಧಿಷ್ಠಾನ ಚಕ್ರದ ಮೇಲಿನ ಕಂಠದ ಮೇಲೆ ಮತ್ತು ಹೊಕ್ಕಳದ ಕೆಳಗಿನ ಭಾಗದಲ್ಲಿ ಬಂಧ ನಿರ್ಮಾಣ ವಾಗುವುದು. ಶರೀರದ ವಿಶಿಷ್ಟ ಆಕೃತಿಯಾಗುವುದು. ಇದಕ್ಕೆ ''ಓಡಿಯಾಣಾ ಬಂಧ'' ಎನ್ನುವರು ।೨೧೦॥

ಈ ಪ್ರಕಾರವಾಗಿ ಶರೀರದ ಹೊರಭಾಗದಿಂದ ಯೋಗಾಭ್ಯಾಸದ ಕ್ರಮವು ಆರಂಭಗೊಂಡು ಆಗ ಒಳಗೆ ಮನೋಧರ್ಮದ ಬಲವು ಇಲ್ಲದಂತಾಗುವುದು ।೨೧೧॥

ಶ್ಲೋಕಾರ್ಥ :- ಸ್ಥಿರ ಚಿತ್ತನು, ಭಯರಹಿತನು, ಬ್ರಹ್ಮಚರ್ಯದೀಕ್ಷಾ ಬದ್ಧನೂ ಆದ ಯೋಗಿಯು ನನ್ನನ್ನೇ ಹೆಚ್ಚಿನ ಗತಿ ಎಂದು ಧ್ಯಾನ ಮಾಡುತ್ತಿರಬೇಕು ।೧೪॥

ಕಲ್ಪನೆಗಳು ನಿಲ್ಲುವುವು, ಮನದ ಬೇಡಿಕೆಗಳು ಕುಗ್ಗುವುವು. ಆದರಿಂದ ಮನೋವಿಕಾರಗೊಳ್ಳುವುದು ಸಹಜವಾಗಿ ನಾಶವಾಗುವುದು ।೨೧೨॥

ಹಸಿವೆ ಏನಾಯಿತು ? ಮತ್ತು ನಿದ್ರೆಯು ಎಲ್ಲಿ ಹೋಯಿತು? ಎಂಬುವುದು ನೆನಪು ಸಹ ಇಲ್ಲದಂತಾಗಿ ಇವುಗಳ ಪತ್ತೆಯೇ ಹತ್ತುವುದಿಲ್ಲ ।೨೧೩॥

ಮೂಲ ಬಂಧದ ತಡೆಹಿಡಿದ ಅಪಾನವಾಯುವು ಹಿಂತಿರುಗಿತೆಂದರೆ ಸಹಜವಾಗಿ ಮೇಲೆ ಸಿಕ್ಕು ಬಿದ್ದು ಉಬ್ಬಿಕೊಳ್ಳುವುದು ।೨೧೪॥

ಅದು ಕ್ಷೋಭಿಸಿ ಬಲವತ್ತರವಾಗುವುದು. ಸಿಕ್ಕಿಬಿದ್ದಿರುವ ಸ್ಥಳದಲ್ಲಿ ಗುರುಗುಟ್ಟುವುದು ಮತ್ತು ತಡೆ ತಡೆದು ಲಿಂಗ ಚಕ್ರಕ್ಕೆ ತಳ್ಳುತ್ತದೆ ।೨೧೫॥

ಈ ಪ್ರಕಾರವಾಗಿ ಸೊಕ್ಕೇರಿದ ವಾಯುವು ಒಳಭಾಗವೆಲ್ಲ ತಿರುಗಿ ಶೋಧಿಸುವುದು. ಚಿಕ್ಕಂದಿನಿಂದ ಕೂಡಿಬಿದ್ದ ಕೊಳೆಯನ್ನೆಲ್ಲ ಹೊರದೂಡುವುದು ।೨೧೬॥

ಆ ವಾಯುವಿಗೆ ತಿರುಗಲು ಸ್ಥಳವಿಲ್ಲದ್ದರಿಂದ ಅದು ಕೋಷ್ಠದಲ್ಲಿ ಪ್ರವೇಶಿಸುವುದು ಮತ್ತು ಕಫ ಪಿತ್ತಗಳನ್ನು ನಾಶಪಡಿಸುವುದು ।೨೧೭॥

ಸಪ್ತ ಧಾತುಗಳ ಸಮುದ್ರವನ್ನು ಉಲ್ಲಂಘಿಸುವುದು. ಮೇದಸ್ಸಿನ ಪರ್ವತವನ್ನು ಒಡೆಯುವುದು ಮತ್ತು ಎಲುಬು ಗಳೊಳಗಿನ ರಸವನ್ನು ಹೊರಗೆಳೆಯುವುದು ।೨೧೮॥

ನಾಡಿ ಸರಗಳನ್ನು ಬಿಡಿಸುವುದು, ಅವಯವಗಳನ್ನು ಶಿಥಿಲಗೊಳಿಸುವುದು ಮತ್ತು ಯೋಗಸಾಧನ ಮಾಡುವವನಿಗೆ ಭಯ ಹುಟ್ಟಿಸುವುದು, ಆದರೆ ಆತನು ಹೆದರಬಾರದು ।೨೧೯॥

ಆ ವಾಯುವು ರೋಗಗಳನ್ನು ಹುಟ್ಟಿಸುವುದು ಮತ್ತು ಕೂಡಲೇ ಇಲ್ಲದಂತೆ ಮಾಡುವುದು. ಶರೀರದಲ್ಲಿರುವ ರಸ ಮತ್ತು ಜಡ ಪದಾರ್ಥಗಳನ್ನು ಒಂದುಗೂಡಿಸುವುದು ।೨೨೦॥

ಅರ್ಜುನಾ, ಆಗ ಬೇರೆ ಕಡೆಯಲ್ಲಿ ವಜ್ರಾಸನದಿಂದ ನಿರ್ಮಾಣವಾಗಿರುವ ಶರೀರದ ಉಷ್ಣತೆಯಿಂದ ''ಕುಂಡಲಿನಿ'' ಎಂಬ ಶಕ್ತಿಯನ್ನು ಜಾಗೃತಗೊಳಿಸುವುದು ।೨೨೧॥

ನಾಗಿಣೀಚೇ ಪಿಲೇ । ಕುಂಕುಮೇ ನಾಹಲೇ । ವಳಣ ಘೇಊನಿ ಆಲೇ । ಸೇಜೇ ಜೈಸೇ
।೨೨೨॥ ತೈಶೀ ತೇ ಕುಂಡಲಿನೀ । ಮೊಟಕೀ ಔಟ ವಳಣೀ । ಅಧೋಮುಖ ಸರ್ಪಿಣೀ ।
ನಿದೇಲೀ ಅಸೇ ।೨೨೩॥ ವಿದ್ಯುಲ್ಲತೇಚೀ ವಿಡೀ । ವನ್ಹಿ ಜ್ವಾಳಾಂಚೀ ಘಡೀ ।
ಪಂಧರೇಯಾಚೀ ಚೋಖಡೀ । ಘೊಂಟೀವ ಜೈಶೀ ।೨೨೪॥ ತೈಶೀ ಸುಬದ್ಧ ಆಟಲೀ ।
ಪುಟೀ ಹೋತೀ ದಾಟಲೀ । ತೇ ವಜ್ರಾಸನೇ ಚಿಮುಟಲೀ । ಸಾವಧು ಹೋಯ ।೨೨೫॥
ತೇಥ ನಕ್ಷತ್ರ ಜೈಸೇ ಉಲಂಡಲೇ । ಕೀ ಸೂರ್ಯಾಚೇ ಆಸನ ಮೋಡಲೇ । ತೇಜಾಚೇ
ಬೀಜ ವಿರೂಢಲೇ । ಅಂಕುರೇಶೀ ।೨೨೬॥ ತೈಶೀ ವೇಢಿಯಾತೇ ಸೋಡಿತೀ । ಕವತಿಕೇ
ಆಂಗ ಮೋಡಿತೀ । ಕಂದಾವರೀ ಶಕ್ತೀ । ಉಠಲೀ ದಿಸೇ ।೨೨೭॥ ಸಹಜೇ ಬಹುತಾ
ದಿವಸಾಂಚೀ ಭೂಕ । ವರೀ ಚೇವವಿಲೀ ತೇ ಹೊಯ ಮಿಷ । ಮಗ ಆವೇಶೇ ಪಸರೀ
ಮುಖ । ಊರ್ಧ್ವಾ ಉಜೂ ।೨೨೮॥ ತೇಥ ಹೃದಯಕೋಶಾತಳವಟೀ । ಜೋ ಪವನು
ಭರೇ ಕಿರೀಟೀ । ತಯಾ ಸಗಳೇಯಾಚಿ ಮಿಠೀ । ದೇಊನಿ ಘಾಲೀ ।೨೨೯॥ ಮುಖೀಂಚ್ಯಾ
ಜ್ವಾಳೀ । ತಳೀ ವರೀ ಕವಳೀ । ಮಾಂಸಾಚೀ ವಡವಾಳೀ । ಆರೋಗೂ ಲಾಗೇ ।೨೩೦॥
ಜೇ ಜೇ ಠಾಯ ಸಮಾಂಸ । ತೇಥ ಆಹಾಚ ಜೋಡೇ ಘಾಉಸ । ಪಾಠೀ ಏಕದೋನೀ
ಘಾಂಸ । ಹಿಯಾಹೀ ಭರೀ ।೨೩೧॥ ಮಗ ತಳವೇ ತಳಹಾತ ಶೋಧೀ । ಊರ್ಧ್ವಾಚೇ
ಖಂಡ ಭೇದೀ । ಝಾಡಾ ಘೇ ಸಂಧೀ । ಪ್ರತ್ಯಾಂಗಾಚಾ ।೨೩೨॥ ಅಧೋಭಾಗ ತರೀ ನ
ಸಂಡೀ । ಪರೀ ನಖೀಂಚೇಹೀ ಸತ್ತ್ವ ಕಾಢೀ । ತ್ವಚಾ ಧುವೂನಿ ಜಡೀ । ಪಾಂಜರೇಶೀ
।೨೩೩॥ ಅಸ್ಥೀಂಚೇ ನಳೇ ನಿರಪೇ । ಶಿರಾಂಚೇ ಹೀರ ವೋರಪೇ । ತಂವ ಬಾಹೇರೀ
ವಿರೂಢೀ ಕರಪೇ । ರೋಮ ಬೀಜಾಂಚೀ ।೨೩೪॥ ಮಗ ಸಪ್ತಧಾತೂಂಚ್ಯಾ ಸಾಗರೀ ।
ತಾಹಾನೇಲೀ ಘೋಟ ಭರೀ । ಆಣಿ ಸವೇಂಚಿ ಉನ್ಹಾಳಾ ಕರೀ । ಖಡಖಡೀತ ।೨೩೫॥
ನಾಸಾಪುಟೌನಿ ವಾರಾ । ಜೋ ಜಾತಸೇ ಅಂಗುಳೇ ಬಾರಾ । ತೋ ಗಚ್ಚ ಧರೂನಿ
ಮಾಘಾರಾ । ಆಂತು ಘಾಲೀ ।೨೩೬॥ ತೇಥ ಅಧವರೌತೇ ಆಕುಂಚೇ । ಊರ್ಧ್ವಾತಳೌತೇ
ಖಾಂಚೇ । ತಯಾ ಖೇಂವಾಮಾಜಿ ಚಕ್ರಾಚೇ । ಪದರ ಉರತೀ ।೨೩೭॥ ಏರ್ಹವೀ ತರೀ
ದೋನ್ಹೀ ತೇವ್ಹಾಂಚಿ ಮಿಳತೀ । ಪರೀ ಕುಂಡಲಿನೀ ನಾವೇಕ ದುಶ್ಚಿತ್ತ ಹೋತೀ । ತೇ
ತಯಾಂತೇ ಮ್ಹಣೇ ಪರೌತಿ । ತುಮ್ಹೀಚಿ ಕಾಯಸೀ ಏಥೇ ? ।೨೩೮॥

ಸರ್ಪದ ಮರಿಗಳು ಕುಂಕುಮದ ನೀರಿನಿಂದ ಎರೆದುಕೊಂಡ ರೀತಿಯಲ್ಲಿ ಸುರುಳಿ ಸುತ್ತಿಕೊಂಡು ನಿದ್ರೆಯಲ್ಲಿರುವಂತೆ ।೨೨೨॥

ಈ ಪ್ರಕಾರವಾಗಿ ಕುಂಡಲಿನಿಯು ಚಿಕ್ಕದಾಗಿರುವ ಮೂರುವರೆ ಸುತ್ತು ಸುತ್ತಿಕೊಂಡು ಕೆಳಮುಖ ಮಾಡಿಕೊಂಡು ಸರ್ಪದಂತೆ ಮಲಗಿಕೊಂಡಿರುತ್ತದೆ ।೨೨೩॥

ಅದು ವಿದ್ಯುತ್ತಿನ ಕಂಕಣದಂತೆ ಅಥವಾ ಜ್ವಾಲೆಯ ಗಳಿಗೆಯಂತೆ ಇಲ್ಲವೆ ಮೇಲಿಂದ ಮೇಲೆ ತಿಕ್ಕಿ ಕಾಂತಿ ಕೊಟ್ಟ ಬಂಗಾರದ ಬಳೆಯಂತೆ ।೨೨೪॥

ಇದು ನಾಭಿಕಮಲದಲ್ಲಿ ಒತ್ತಿಕೊಂಡು ಕುಳಿತುಕೊಂಡಿರುವುದು. ಇದು ಮೂಳಬಂಧದ ಚಿಮಟಿಗೆಯ ಹಿಡಿತದಿಂದ ಜಾಗೃತಗೊಳ್ಳುವುದು ।೨೨೫॥

ಆಗ ಅದು ನಕ್ಷತ್ರಗಳ ಪತನದಂತೆ ಅಥವಾ ಸೂರ್ಯನು ತನ್ನ ಆಸನವನ್ನು ಬಿಟ್ಟು ಕೆಳಗೆ ಬಂದಂತೆ ಇಲ್ಲವೆ ಪ್ರಕಾಶ ರೂಪ ಬೀಜವೇ ಅಂಕುರಿಸಿದಂತೆ ।೨೨೬॥

ಈ ಪ್ರಕಾರವಾಗಿ ಆ ಕುಂಡಲಿನಿಯು ತನ್ನ ಸುತ್ತುಗಳನ್ನು ಬಿಚ್ಚಿ ಕೌತುಕದಿಂದ ಆಲಸ್ಯದೊಂದಿಗೆ ಹೊಕ್ಕಳಿನ ಮೇಲೆ ಎದ್ದು ನಿಂತಿರುವಂತೆ ಕಾಣುತ್ತದೆ ।೨೨೭॥

ಸಹಜವಾಗಿ ಬಹಳ ದಿನಗಳಿಂದ ಹಸಿದುಕೊಂಡಿದ್ದಕ್ಕೆ ಆದರಲ್ಲಿ ಇದಕ್ಕೆ ಎಚ್ಚರಗೊಳಿಸಿರುವ ನಿಮಿತ್ತದಿಂದ ಆವೇಶಗೊಂಡು ಮುಖ ಪಸರಿಸಿಕೊಂಡು ನೀಟಾಗಿ ನಿಲ್ಲುವುದು ।೨೨೮॥

ಕಿರೀಟಿಯೇ, ಆಗ ಹೃದಯ ಕಮಲದ ಕೆಳಗೆ ತುಂಬಿಕೊಂಡಿರುವ ಗಾಳಿಯನ್ನು ಪೂರ್ಣವಾಗಿ ಬಿಗಿದಪ್ಪಿ ಕೊಳ್ಳುವುದು (ನುಂಗಿಬಿಡುವುದು) ।೨೨೯॥

ಮತ್ತು ಮುಖದೊಳಗಿನ ಜ್ವಾಲೆಯಿಂದ ಮೇಲಿನ ಮತ್ತು ಕೆಳಗಿನ ಮಾಂಸಾದಿಕಗಳನ್ನೆಲ್ಲವನ್ನೂ ತುತ್ತು ತುತ್ತಾಗಿ ತಿಂದುಬಿಡುವುದು ।೨೩೦॥

ಎಲ್ಲಿ ಮಾಂಸ ಇರುವುದೋ ಅದೆಲ್ಲವನ್ನೂ ತುತ್ತು ಮಾಡಿ ತಿನ್ನುವುದು ಮತ್ತು ಆಮೇಲೆ ಅಲ್ಲಿ ಉಳಿದ ಭಾಗವನ್ನು ಸಹ ತುತ್ತು ಮಾಡಿ ತಿನ್ನುವುದು ।೨೩೧॥

ತದನಂತರ ಅಂಗೈ, ಅಂಗಾಲುಗಳನ್ನು ಶೋಧಿಸಿ ಮೇಲಿನ ಭಾಗವನ್ನು ಭೇದಿಸುವುದು ಮತ್ತು ಪ್ರತಿಯೊಂದು ಭಾಗದ ಸಂದುಗಳನ್ನು ನಿರ್ಮಲಗೊಳಿಸುವುದು ।೨೩೨॥

ತನ್ನ ಮೂಲ ಸ್ಥಾನವನ್ನು ಬಿಡದೇ ಉಗುರಿನಲ್ಲಿಯ ಸತ್ತ್ವವನ್ನು ಸಹ ಹೀರಿಕೊಳ್ಳುವುದು ಮತ್ತು ತ್ವಚೆಯನ್ನು ತೊಳೆದು ಅದನ್ನು ಶರೀರದ ಎಲುಬುಗಳ ಪಂಜರಕ್ಕೆ ಅಂಟಿಸುವುದು ।೨೩೩॥

ಎಲುಬುಗಳ ನಳಿಕೆಗಳಲ್ಲಿಯ ರಸವನ್ನು ಹೀರುವುದು. ನರಗಳ ಅಂತರ ಭಾಗಗಳನ್ನು ಸಹ ಚೆನ್ನಾಗಿ ಹೀರಿಕೊಳ್ಳುವುದು. ಇದರಿಂದ ಹೊರಗಿರುವ ಕೂದಲುಗಳ ಬೇರು ಪೂರ್ಣ ಕರಕಾಗುವುದು ।೨೩೪॥

ತದನಂತರ ಸಪ್ತಧಾತುಗಳ ಸಾಗರದಲ್ಲಿ ತನ್ನ ನೀರಡಿಕೆಯನ್ನು ಶಮನಗೊಳಿಸುವುದು ಮತ್ತು ಅದರ ಸಂಗಡವೇ ಅಲ್ಲಲ್ಲಿಯ ಎಲ್ಲ ಶರೀರವನ್ನು ಖಡಾ ಖಂಡಿತವಾಗಿ ಬರಿದುಮಾಡುವುದು ।೨೩೫॥

ಮೂಗಿನ ಹೊರಳೆಯಿಂದ ಹನ್ನೆರಡು ಅಂಗುಲ ಪ್ರಮಾಣದಲ್ಲಿ ಹರಿಯುವ ಪ್ರಾಣವಾಯುವನ್ನು ಬಿಗಿಯಾಗಿ ಹಿಡಿದು ಒಳಗೆ ಎಳೆಯುವುದು ।೨೩೬॥

ಈ ಅವಸ್ಥೆಯಲ್ಲಿ ಕೆಳಗಿನ ಅಪಾನವಾಯುವು ಆಕುಂಚಿತವಾಗುವುದು. ಆಗ ಮೇಲಿನ ಪ್ರಾಣವಾಯುವು ಕೆಳಗೆ ಬರುವುದು. ಈ ಎರಡೂ ವಾಯುಗಳ ಭೇಟಿಯಿಂದ ಷಟ್‌ಚಕ್ರಗಳು ಕೇವಲ ಪದರುಗಳು ಉಳಿಯುವುವು ।೨೩೭॥

ಪ್ರಾಣ, ಅಪಾನ ವಾಯುಗಳು ಅದೇ ಕಾಲಕ್ಕೆ ಒಂದೇ ಸ್ಥಳದಲ್ಲಿ ಕೂಡಿರುತ್ತವೆ. ಆದರೆ ಆ ಕುಂಡಲಿನಿಯು ಕ್ಷಣ ಹೊತ್ತು ತಿಳಿಯಲಾರದಂತಾಗಿ ಆ ಪ್ರಾಣಾಪಾನಗಳಿಗೆ ''ನೀವು ಯಾರು'' ಹೋಗಿರಿ ಎಂದು ಗರ್ಜಿಸುವುದು ।೨೩೮॥

ಆಇಕೇ ಪಾರ್ಥಿವ ಧಾತು ಆಘವೀ । ಆರೋಗಿತಾ ಕಾಂಹೀ ನುರವೀ । ಆಣಿ ಆಪಾತೇ ತಂವ ಠೇವೀ । ಪುಸೋನಿಯಾ ।೨೩೯॥ ಐಸೀ ದೋನೀ ಭೂತೇ ಖಾಯೇ । ತೇ ವೇಳೀ ಸಂಪೂರ್ಣ ಧಾಯೇ । ಮಗ ಸೌಮ್ಯ ಹೋಊನಿ ರಾಹೇ । ಸುಷುಮ್ನೇಪಾಶೀ ।೨೪೦॥ ತೇಥ ತೃಪ್ತಿಚೇನಿ ಸಂತೋಷೇ । ಗರಳ ಜೇ ವಮೀ ಮುಖೇ । ತೇಣೇ ತಿಯೇಚೇನಿ ಪೀಯೂಷೇ । ಪ್ರಾಣು ಜಿಯೇ ।೨೪೧॥ ತೋ ಅಗ್ನಿ ಆಂತೂನಿ ನಿಘೇ । ಪರೀ ಸಬಾಹ್ಯ ನಿವವೂಂಚೀ ಲಾಗೇ । ತೇ ವೇಳೀ ಕಸು ಬಾಂಧಿತೀ ಆಂಗೇ । ಸಾಂಡಿಲಾ ಪುಢತೀ ।೨೪೨॥ ಮಾರ್ಗ ಮೋಡಿತೀ ನಾಡೀಚೇ । ನವವಿಧಪಣ ವಾಯೂಚೇ । ಜಾಯ ಮ್ಹಣೌನಿ ಶರೀರಾಚೇ । ಧರ್ಮು ನಾಹೀ ।೨೪೩॥ ಇಡಾ ಪಿಂಗಳಾ ಏಕವಟತೀ । ಗಾಂಠೀ ತಿನ್ಹೀ ಸುಟತೀ । ಸಾಹೀ ಪದರ ಫುಟತೀ । ಚಕ್ರಾಂಚೇ ಹೇ ।೨೪೪॥ ಮಗ ಶಶೀ ಆಣಿ ಭಾನು । ಐಸಾ ಕಲ್ಪಿಜೇ ಜೋ ಅನುಮಾನು । ತೋ ವಾತೀವರೀ ಪವನು । ಗಿಂವಸಿತಾ ನ ದಿಸೇ ।೨೪೫॥ ಬುದ್ಧೀಚೀ ಪುಳಿಕಾ ವಿರೇ । ಪರಿಮಳು ಘ್ರಾಣೀ ಉರೇ । ತೋಹೀ ಶಕ್ತಿಸವೇ ಸಂಚರೇ । ಮಧ್ಯಮೇಮಾಜೀ ।೨೪೬॥ ತಂವ ವರಿಲೇಕಡೋನಿ ಢಾಳೇ । ಚಂದ್ರಾಮೃತಾಚೇ ತಳೇ । ಕಾನವಡೋನಿ ಮಿಳೇ । ಶಕ್ತಿಮುಖೀ ।೨೪೭॥ ತೇಣೇ ನಾಳಕೇ ರಸ ಭರೇ । ತೋ ಸರ್ವಾಂಗಾಮಾಜೀ ಸಂಚರೇ । ಜೇಥಿಂಚಾ ತೇಥ ಮುರೇ । ಪ್ರಾಣಪವನು ।೨೪೮॥ ತಾತಲಿಯೇ ಮುಸೇ । ಮೇಣ ನಿಘೋನಿ ಜಾಯ ಜೈಸೇ । ಮಗ ಕೋಂದಲೀ ರಾಹೇ ರಸೇ । ವೋತಲೇನೀ ।೨೪೯॥ ತೈಸೇ ಪಿಂಡಾಚೇನಿ ಆಕಾರೇ । ತೇ ಕಳಾಚಿ ಕಾ ಅವತರೇ । ವರೀ ತ್ವಚೇಚೇನಿ ಪದರೇ । ಪಾಂಘುರಲೀ ಅಸೇ ।೨೫೦॥ ಜೈಶೀ ಆಭಾಳಾಚೀ ಬುಂಥೀ । ಕರೂನಿ ರಾಹೇ ಗಭಸ್ತೀ । ಮಗ ಫಿಟಲಿಯಾ ದೀಪ್ತಿ । ಧರೂ ನಯೇ ।೨೫೧॥ ತೈಸಾ ಆಹಾಚವರಿ ಕೋರಡಾ । ತ್ವಚೇಚಾ ಅಸೇ ಪಾತೋಡಾ । ತೋ ಝಡೋನಿ ಜಾಯ ಕೋಂಡಾ । ಜೈಸಾ ಹೋಯ ।೨೫೨॥ ಮಗ ಕಾಶ್ಮೀರೀಚೇ ಸ್ವಯಂಭ । ಕಾ ರತ್ನಬೀಜಾ ನಿಘಾಲೇ ಕೋಂಭ । ಅವಯವಕಾಂತೀಚೇ ಭಾಂಬ । ತೈಸೀ ದಿಸೇ ।೨೫೩॥ ನಾತರೀ ಸಂಧ್ಯಾರಾಗೀಂಚೇ ರಂಗ । ಕಾಢೂನಿ ವಳಿಲೇ ತೇ ಆಂಗ । ಕೀ ಅಂತರ್ಜ್ಯೋತೀಚೇ ಲಿಂಗ । ನಿರ್ವಾಳಿಲೇ ।೨೫೪॥ ಕುಂಕುಮಾಚೇ ಭರೀವ । ಸಿದ್ಧರಸಾಚೇ ವೋತೀವ । ಮಜ ಪಾಹತಾ ಸಾವೇವ । ಶಾಂತಿಚಿ ತೇ ।೨೫೫॥

ಅರ್ಜುನಾ, ಕೇಳು ಶರೀರದಲ್ಲಿಯ ಎಲ್ಲ ಪೃಥ್ವಿಯ ಭಾಗವನ್ನು ನಿಃಶೇಷವಾಗಿ ತಿಂದುಬಿಡುವುದು. ಅದರಂತೆಯೇ ನೀರಿನಭಾಗವನ್ನು ನಿಶೇಷವಾಗಿ ನೆಕ್ಕಿ ಒರೆಸಿಬಿಡುವುದು ।೨೩೯॥

ಈ ಪ್ರಕಾರವಾಗಿ ಎರಡೂ ಭೂತಗಳ ಭಾಗಗಳನ್ನು ತಿಂದು ತೇಗಿ ತೃಪ್ತಿಗೊಂಡು ಆಗ ಸೌಮ್ಯವಾಗಿ ಸ್ವಸ್ಥದಿಂದ ಸುಷುಮ್ನಾ ನಾಡಿಯಲ್ಲಿ ಬಂದು ನಿಲ್ಲುವುದು ।೨೪೦॥

ಅಲ್ಲಿ ತೃಪ್ತಿಯ ಭರದಲ್ಲಿ ಮುಖದಿಂದ ವಿಷವನ್ನು ಕಾರುತ್ತದೆ. ಅದೇ ವಿಷವು ಅಮೃತವಾಗಿ ಪ್ರಾಣ ರಕ್ಷಣೆಯಾಗುವುದು ।೨೪೧॥

ಆ ವಿಷರೂಪ ಅಗ್ನಿಯು ಹೊರಗೆ ಹೊರಡುವುದುನಿಜ. ಆದರೆ ಎಲ್ಲ ಅಂಗಗಳ ದಾಹವನ್ನು ಶಮನಗೊಳಿಸುತ್ತದೆ. ಅದರಿಂದ ಶರೀರದಲ್ಲಿ ಪೂರ್ವದಲ್ಲಿ ಹೋಗಿರುವ ಸಾಮರ್ಥ್ಯವು ಪುನಃ ಬರಹತ್ತುವುದು ।೨೪೨॥

ನಾಡಿಗಳ ಪ್ರವಾಹಗಳು ಕಟ್ಟಾಗುವುವು. ಒಂಬತ್ತು ವಾಯುಗಳ ವ್ಯಾಪಾರವು ಬಂದಾಗುವುದು. ಆದ್ದರಿಂದ ಶರೀರದ ಧರ್ಮಗಳು ಇಲ್ಲದಂತಾಗುವುವು ।೨೪೩॥

ಇಡಾ ಮತ್ತು ಪಿಂಗಲಾ ಎಂಬೆರಡು ನಾಡಿಗಳು ಒಂದಾಗುವುವು. ಮೂರು ಗಂಟುಗಳು ಬಿಚ್ಚುವುವು ಮತ್ತು ಆರೂ ಚಕ್ರಗಳ ಸಂಬಂಧವಿಲ್ಲದಂತಾಗುವುದು ।೨೪೪॥

ಚಂದ್ರ ಸೂರ್ಯ ಎಂದು ಹೆಸರುಳ್ಳ ಮೂಗಿನ ಎಡ ಬಲ ಹೊರಳೆಗೊಳಗಿನ ವಾಯುವಿನ ಚಲನೆಯು ನೂಲಿನ ಎಳೆ ಹಿಡಿದಾಗ್ಯೂ ಗೋಚರಿಸುವುದಿಲ್ಲ ।೨೪೫॥

ಬುದ್ಧಿಯ ಜ್ಞಾನಕಲೆಯು ಇದ್ದಲ್ಲಿಯೇ ಇಲ್ಲದಂತಾಗುವುದು ಮತ್ತು ಮೂಗಿನಲ್ಲಿ ಉಳಿದಿರುವ ಗಂಧಗ್ರಹಣ ಶಕ್ತಿಯು ಕುಂಡಲಿನಿ ಜೊತೆಯಲ್ಲಿ ಸುಷುಮ್ನಾದಲ್ಲಿ ಪ್ರವೇಶ ಮಾಡುವುದು ।೨೪೬॥

ಆಗ ಭ್ರುಕುಟಿ ಚಕ್ರದಲ್ಲಿರುವ ಚಂದ್ರಾಮೃತ ಸರೋವರಕ್ಕೆ ಧಕ್ಕೆ ತಗಲಿ ಅದು ವಕ್ರವಾಗುವುದು. ಅದರಲ್ಲಿನ ಅಮೃತವು ಕುಂಡಲಿನಿಯ ಮುಖದಲ್ಲಿ ಬೀಳಹತ್ತುವುದು ।೨೪೭॥

ಆ ಕುಂಡಲಿನಿಯ ನಳಿಕೆಗಳಲ್ಲಿ ರಸವು ತುಂಬಿಕೊಂಡು ಸರ್ವಾಂಗದಲ್ಲಿ ಸಂಚರಿಸುವುದು. ಆಗ ಪ್ರಾಣ ವಾಯುವು ಇದ್ದಲ್ಲಿಯೇ ಲಯವಾಗುವುದು ।೨೪೮॥

ಯಾವುದೇ ಧಾತುವಿನ ಕಾಯಿಸಿದ ರಸವನ್ನು ಮುಶಿಯಲ್ಲಿ ಸುರುವಿದಾಗ ಮುಶಿಯು ಸಹ ಕಾಯುವುದು. ಮುಶಿಯು ಕಾದದ್ದರಿಂದ ಮೇಣವು ತನ್ನಷ್ಟಕ್ಕೆ ತಾನೇ ಹೊರಟು ಹೋಗುವುದು. ಆಗ ಆ ಮುಸಿಯು ಸುರವಿದ ರಸದಿಂದ ತುಂಬಿರುತ್ತದೆ ।೨೪೯॥

ಅದರಂತೆ ಚಂದ್ರಾಮೃತದ ಸತರಾವಿ ಕಲೆಯು (ತೇಜವು) ಶರೀರರೂಪ ಧಾರಣೆ ಮಾಡಿ ಚರ್ಮದ ಹೊದಿಕೆಯೊಂದಿಗೆ ಪ್ರಕಟಗೊಂಡಿರುವುದು ।೨೫೦॥

ಸೂರ್ಯನು ಮೋಡದ ಮರೆಯಾದಾಗ ಆತನ ತೇಜವು ಅಡಗಿದಂತಾಗಿ ಆ ಮೋಡಗಳು ದೂರಾದಾಗ ಆತನು ತನ್ನ ತೇಜದಿಂದ ಪುನಃ ಬೆಳಗುವನು ।೨೫೧॥

ಅದರಂತೆ ತ್ವಚೆಯ ಮೇಲೆ ತೆಳ್ಳನೆಯ ಪರದೆ ಇರುವುದು. ಅದು ತೌಡಿನಂತೆ ಉದುರಿ ಹೋಗುವುದು ।೨೫೨॥

ಆತನ ಅವಯವಗಳ ಹೊಳಪಿನ ಸೌಂದರ್ಯವು ಮೂರ್ತಿಮಂತವಾಗಿ ಬಂದ ಕೇಸರಿ ಬಣ್ಣವೋ ಅಥವಾ ರತ್ನವೆಂಬ ಬೀಜಕ್ಕೆ ಬಿಟ್ಟ ಮೊಳಕೆಯೋ ಎಂಬಂತೆ ಕಾಣುವುದು ।೨೫೩॥

ಅಥವಾ ಸಂಜೆಯ ಸಂಧ್ಯಾರಾಗದ ಕೆಂಪು ಕಾಂತಿಯನ್ನು ತೆಗೆದು ಶರೀರಕ್ಕೆ ಹಚ್ಚಿರುವರೋ ಅಥವಾ ಆತ್ಮಚೈತನ್ಯದ ತೇಜದ ಲಿಂಗ ಮಾಡಿರುವರೋ ಎಂಬಂತೆ ತೋರುವುದು ।೨೫೪॥

ಈತನು ಕುಂಕುಮದಿಂದ ತುಂಬಿದವನಾಗಿಯೂ ಆತ್ಮರಸವನ್ನು ಕರಗಿಸಿ ಎರಕಹೊಯ್ದ ಮೂರ್ತಿಯಂತೆ ಕಾಣುವನು. ಅಲ್ಲದೆ ''ಆತನು ಅವಯವ ಧರಿಸಿದ ಶಾಂತಿ'' ಯಂತೆ ತೋರುವನು ಎಂದು ಜ್ಞಾನೇಶ್ವರರು ಹೇಳುವರು ।೨೫೫॥

ತೇ ಆನಂದಚಿತ್ರೀಂಚೇ ಲೇಪ । ನಾತರೀ ಮಹಾಸುಖಾಚೇ ರೂಪ । ಕೀ ಸಂತೋಷತರೂಚೇ ರೋಪ । ಥಾಂವಲೇ ಜೈಸೇ ।೨೫೬॥ ತೋ ಕನಕಚಂಪಕಾಚಾ ಕಳಾ । ಕೀ ಅಮೃತಾಚಾ ಪುತಳಾ । ನಾನಾ ಸಾಸಿನ್ನಲಾ ಮಳಾ । ಕೋವಳಿಕೇಚಾ ।೨೫೭॥ ಹೋ ಕಾ ಜೇ ಶಾರದಿಯೇಚೇನಿ ವೋಲೇ । ಚಂದ್ರಬಿಂಬ ಪಾಲ್ಹೇಲೇ । ಕಾ ತೇಜಚಿ ಮೂರ್ತ ಬೈಸಲೇ । ಆಸನಾವರೀ ।೨೫೮॥ ತೈಸೇ ಶರೀರ ಹೋಯೇ । ಜೇ ವೇಳೀ ಕುಂಡಲಿನೀ ಚಂದ್ರ ಪೀಯೆ । ಮಗ ದೇಹಾಕೃತಿ ಬಿಹೇ । ಕೃತಾಂತು ಗಾ ।೨೫೯॥ ವಾರ್ಧಕ್ಯ ತರೀ ಬಹುಡೇ । ತಾರುಣ್ಯಾಚೀ ಗಾಂಠೀ ವಿಘಡೇ । ಲೋಪಲೀ ಉಘಡೇ । ಬಾಳದಶಾ ।೨೬೦॥ ವಯಸಾ ತರೀ ಯೇತುಲೇವರೀ । ಏರ್ಹವೀ ಬಳಾಚಾ ಬಳಾರ್ಥು ಕರೀ । ಧೈರ್ಯಾಚೀ ಥೋರೀ । ನಿರುಪಮು ।೨೬೧॥ ಕನಕ ದ್ರುಮಾಚ್ಯಾ ಪಾಲವೀ । ರತ್ನ ಕಳಿಕಾ ನಿತ್ಯ ನವೀ । ನಖೇ ತೈಸೀ ಬರವೀ । ನವೀ ನಿಘತೀ।೨೬೨॥ ದಾಂತಹೀ ಆನ ಹೋತಿ । ಪರೀ ಆಪಾಡೇ ಸಾನೇಜತೀ । ಜೈಸೀ ದುಬಾಹೀ ಬೈಸೇ ಪಾಂತೀ । ಹಿರೇಯಾಂಚೀ ।೨೬೩॥ ಮಾಣಿಕುಲಿಯಾಂಚಿಯಾ ಕಣಿಯಾ । ಸಾವಿಯಾಚಿ ಅಣುಮಾನಿಯಾ । ತೈಸಿಯಾ ಸರ್ವಾಂಗೀ ಉಥವತೀ ಅಣಿಯಾ । ರೋಮಾಂಚಿಯಾ ।೨೬೪॥ ಕರಚರಣತಳೇ । ಜೈಸೀ ಕಾ ರಾತೋತ್ಪಳೇ । ಪಾಖಾಳೀವ ಹೋತೀ ಡೋಳೇ । ಕಾಯ ಸಾಂಗೋ ।೨೬೫॥ ನಿಡಾರಾಚೇನಿ ಕೋಂದಾಟೇ । ಮೋತಿಯೇ ನಾವರತೀ ಸಂಪುಟೇ । ಮಗ ಶಿವಣೀ ಜೈಸೀ ಉತಟೇ । ಶುಕ್ತಿ ಪಲ್ಲವಾಂಚೀ ।೨೬೬॥ ತೈಶೀ ಪಾತಿಯಾಂಚಿಯೇ ಕವಳಿಯೇ ನ ಸಮಾಯೇ । ದಿಠೀ ಜಾಕಳೋನಿ ನಿಘೋ ಪಾಹೇ । ಆಧಿಲೀಚಿ ಪರೀ ಹೋಯೇ । ಗಗನಾ ಕವಳಿತೀ ।೨೬೭॥ ಆಇಕೇ ದೇಹ ಹೋಯ ಸೋನಿಯಾಚೇ । ಪರಿ ಲಾಘವ ಯೇ ವಾಯೂಚೇ । ಜೇ ಆಪ ಆಣಿ ಪೃಥ್ವೀಚೇ । ಅಂಶು ನಾಹೀ ।೨೬೮॥ ಮಗ ಸಮುದ್ರಾಪೈಲೀಕಡೀಲ ದೇಖೇ । ಸ್ವರ್ಗೀಚಾ ಆಲೋಚು ಆಇಕೇ । ಮನೋಗತ ವೊಳಖೇ । ಮುಂಗಿಯೇಚೇ ।೨೬೯॥ ಪವನಾಚಾ ವಾರಿಕಾ ವಳಘೇ । ಚಾಲೇ ತರೀ ಉದಕೀ ಪಾಉಲ ನ ಲಾಗೇ । ಯೇಣೇ ಯೇಣೇ ಪ್ರಸಂಗೇ । ಯೇತಿ ಬಹುತಾ ಸಿದ್ಧಿ ।೨೭೦॥ ಆಇಕೇ ಪ್ರಾಣಾಚಾ ಹಾತು ಧರೂನೀ । ಗಗನಾಚೀ ಪಾಉಟೀ ಕರೂನೀ । ಮಧ್ಯಮೇಚೇನಿ ದಾದರಾಹುನೀ । ಹೃದಯಾ ಆಲೀ ।೨೭೧॥

ಈತನು ಆನಂದರೂಪ ಚಿತ್ರದ ಬಣ್ಣದಂತೆಯೂ ಅಥವಾ ಪರಬ್ರಹ್ಮಸುಖದ ರೂಪದಂತೆಯೂ ಹಾಗೂ ಸಂತೋಷರೂಪ ವೃಕ್ಷದ ಸಸಿಯಂತೆಯೂ ಭಾಸವಾಗುತ್ತಾನೆ ।೨೫೬॥

ಈತನು ಸುವರ್ಣ (ನಾಗ) ಸಂಪಿಗೆಯ ಮೊಗ್ಗು, ಅಥವಾ ಅಮೃತದ ಪುತ್ಥಳಿ, ಇಲ್ಲವೇ ತರಹ ತರಹದ ಕೋಮಲತೆಯು ಭರಕ್ಕೆ ಬಂದ ತೋಟದಂತೆ ಕಾಣುವನು ।೨೫೭॥

ಈತನು ಶರತ್ ಋತುವಿನ ತಂಪಿನಿಂದ ಹಬ್ಬಿದ ಚಂದ್ರಬಿಂಬದ ತೇಜವೇ ಮೂರ್ತಿಮಂತನಾಗಿ ಆಸನದ ಮೇಲೆ ಕುಳಿತಿರುವಂತೆ ತೋರುವನು ।೨೫೮॥

ಕುಂಡಲಿನಿಯು ಚಂದ್ರಾಮೃತವನ್ನು ಕುಡಿಯುತ್ತದೆ. ಆಗ ಆಗಿರುವ ಶರೀರದ ತೇಜವನ್ನು ಕಂಡು ಯಮನು ಸಹ ಭಯಪಡುವನು ।೨೫೯॥

ಮುಪ್ಪು ಹಿಂದಿರುಗುತ್ತದೆ, ತಾರುಣ್ಯದ ಗಂಟು ಸಡಿಲಾಗುತ್ತದೆ ಮತ್ತು ಮುಗಿದಿರುವ ಬಾಲ್ಯಾವಸ್ಥೆಯು ಪುನಃ ಪ್ರಾಪ್ತವಾಗುತ್ತದೆ ।೨೬೦॥

ವಯಸ್ಸಿನಿಂದ ಬಾಲಕರಂತೆ ಕಂಡರೂ ಬಹು ಬಲಾಢ್ಯನಾಗಿರುವನು ಮತ್ತು ಆತನ ಧೈರ್ಯಕ್ಕೆ ಸರಿಸಾಟಿಯೇ ಇಲ್ಲ ।೨೬೧॥

ಸುವರ್ಣ ವೃಕ್ಷದ ಚಿಗುರಿನಲ್ಲಿ ರತ್ನದ ಮೊಗ್ಗೆಗಳು ಸತತವಾಗಿ ಹೊರಡುವಂತೆ ಹೊಸ ಉಗುರುಗಳು ಹುಟ್ಟಿಕೊಂಡು ಸತೇಜವಾಗಿ ಕಾಣುವುವು ।೨೬೨॥

ಹಲ್ಲುಗಳು ಹೊಸದಾಗಿ ಬರುವುವು. ಆದರೆ ಅವು ತೀರ ಸಣ್ಣದಾಗಿರುವುವು. ನೋಡಲು ಇಬ್ಬದಿಗೆ ಪಚ್ಚರತ್ನದ ಪಂಕ್ತಿಯೇ ಎಂಬಂತೆ ತೋರುವುವು ।೨೬೩॥

ಶರೀರದ ಮೇಲೆ ಎಲ್ಲ ಕಡೆಗೂ ಮಾಣಿಕ್ಯದ ಕಣಗಳಂತೆ ಸಣ್ಣದಾಗಿರುವ ಕೂದಲುಗಳು ಸತೇಜವಾಗಿ ಹುಟ್ಟುವುವು ।೨೬೪॥

ಅಂಗಾಲು ಅಂಗೈಗಳು ಕೆಂಪು ಕಮಲಗಳಂತಾಗುವುವು ಮತ್ತು ಕಣ್ಣುಗಳು ಸ್ವಚ್ಛವಾಗಿ ತೊಳೆದಂತಾಗುವುವು ।೨೬೫॥

ಮುತ್ತುಗಳು ಪಕ್ವದೆಶೆಗೆ ಬಂದು ಉಬ್ಬಿಕೊಂಡು ಇರುವುದರಿಂದ ಶಿಂಪಿಯಲ್ಲಿ ಹಿಡಿಸಲಾರದಕ್ಕೆ (ಕಪ್ಪೆ ಚಿಪ್ಪು) ಶಿಂಪಿಯ ಸಂಧಿಯು ಬಿಚ್ಚುವುದು ।೨೬೬॥

ಅದರಂತೆ ದೃಷ್ಟಿಯು ರೆಪ್ಪೆಗಳಲ್ಲಿ ಹಿಡಿಸಲಾರದಕ್ಕೆ ಹೊರ ಹೊರಡಲು ಹವಣಿಸುವುದು. ಅದು ಮೊದಲಿನದೇ ಆದಾಗ್ಯೂ ಎಲ್ಲ ಗಗನವನ್ನು ವ್ಯಾಪಿಸುವುದು ।೨೬೭॥

ಅರ್ಜುನನೇ ಕೇಳು:- ಆತನ ದೇಹವ ಸುವರ್ಣ ಕಾಂತಿಯುಳ್ಳದ್ದಾಗಿರುತ್ತದೆ. ಆದರೆ ಅದೆಲ್ಲವೂ ವಾಯುಮಯವಾಗಿರುವುದು. ಅದರಲ್ಲಿ ಆಪ (ನೀರು) ಮತ್ತು ಪೃಥ್ವಿಯ ಅಂಶಗಳು ಇರುವುದಿಲ್ಲ ।೨೬೮॥

ಆಗ ಆತನಿಗೆ ಸಮುದ್ರದ ಆಚೆಗಿರುವ ವಸ್ತುಗಳು ಕಾಣಿಸುವುವು. ಸ್ವರ್ಗದಲ್ಲಿನ ಕಾರ್ಯಕಲಾಪಗಳು ತಿಳಿಯುವುವು ಮತ್ತು ಇರಿವೆಯ ಮನೋಗತವನ್ನು ಸಹ ತಿಳಿಯುವನು ।೨೬೯॥

ವಾಯುರೂಪದ ಕುದುರೆಯನ್ನು ಏರಿ ಸವಾರಿ ಮಾಡುತ್ತಾನೆ. ನೀರಿನಲ್ಲಿ ನಡೆಯುವಾಗ್ಗೆ ನೀರಿಗೆ ಕಾಲುಗಳು ಹತ್ತುವುದಿಲ್ಲ. ಈ ಪ್ರಕಾರವಾಗಿ ಪ್ರಸಂಗಾನುಸಾರ ಆತನಿಗೆ ಅನೇಕ ಸಿದ್ಧಿಗಳು ಪ್ರಾಪ್ತವಾಗುವುವು ।೨೭೦॥

ಕುಂಡಲಿನಿಯು ಪ್ರಾಣವಾಯುವಿನ ಕೈಹಿಡಿದು ಹೃದಯಾಕಾಶದ ಪಾವುಟಣಿಗೆ ಮಾಡಿ ಸುಷುಮ್ನೆಯ ಅಟ್ಟ ಏರಿ ಹೃದಯದಲ್ಲಿ ಬಂದು ಮುಟ್ಟುವುದು ।೨೭೧॥

ತೇ ಕುಂಡಲಿನೀ ಜಗದಂಬಾ । ಜೇ ಚೈತನ್ಯ ಚಕ್ರವರ್ತೀಚೀ ಶೋಭಾ । ಜಯಾ ವಿಶ್ವಬೀಜಾಚಿಯಾ ಕೋಂಭಾ । ಸಾಉಲೀ ಕೇಲೀ ।೨೭೨॥ ಜೇ ಶೂನ್ಯಲಿಂಗಾಚೀ ಪಿಂಡೀ । ಜೇ ಪರಮಾತ್ಮ ಯಾ ಶಿವಾಚೀ ಕರಂಡಿ । ಜೇ ಪ್ರಣವಾಚೀ ಉಘಡೀ । ಜನ್ಮ ಭೂಮೀ ।೨೭೩॥ ಹೇ ಅಸೋ ತೇ ಕುಂಡಲಿನೀ ಬಾಳೀ । ಹೃದಯಾಆಂತು ಆಲೀ । ಅನುಹತಾಚೀ ಬೋಲಿೀ । ಚಾವಳೇ ತೇ ।೨೭೪॥ ಶಕ್ತೀಚಿಯಾ ಆಂಗಾ ಲಾಗಲೇ । ಬುದ್ಧೀಚೇ ಚೈತನ್ಯ ಹೋತೇ ಜಾಹಲೇ । ತೇ ತೇಣೇ ಆಇಕಿಲೇ । ಅಳುಮಾಳು ।೨೭೫॥ ಘೋಷಾಚ್ಯಾ ಕುಂಡೀ । ನಾದಚಿತ್ರಾಂಚೀ ರೂಪಡೀ । ಪ್ರಣವಾಚಿಯಾ ಮೋಡೀ । ರೇಖಿಲೀ ಐಸೀ ।೨೭೬॥ ಹೇಂಚಿ ಕಲ್ಪಾವೇ ತರೀ ಜಾಣಿಜೇ । ಪರೀ ಕಲ್ಪಿತೇ ಕೈಚೇ ಆಣಿಜೇ । ತರೀ ನೇಣೋ ಕಾಯ ಗಾಜೇ । ತಿಯೇ ಠಾಯೀ ।೨೭೭॥ ವಿಸರೋನಿ ಗೇಲೋ ಅರ್ಜುನಾ । ಜಂವ ನಾಶು ನಾಹೀ ಪವನಾ । ತಂವ ವಾಚಾ ಆಥೀ ಗಗನಾ । ಮ್ಹಣೌನಿ ಘುಮೇ ।೨೭೮॥ ತಯಾ ಅನಾಹತಾಚೇನಿ ಮೇಘೇ । ಆಕಾಶ ದುಮದುಮೋ ಲಾಗೇ । ತಂವ ಬ್ರಹ್ಮಸ್ಥಾನೀಂಚೇ ಬೇಗೇ । ಸಹಜ ಫಿಟೇ ।೨೭೯॥ ಆಇಕೇ ಕಮಳಗರ್ಭಾಕಾರೇ । ಜೇ ಮಹದಾಕಾಶ ದುಸರೇ । ಜೇಥ ಚೈತನ್ಯ ಆಧಾತುರೇ । ಕರೂನಿ ಅಸಿಜೇ ।೨೮೦॥ ತಯಾ ಹೃದಯಾಚ್ಯಾ ಪರಿವರೀ । ಕುಂಡಲಿನಿಯಾ ಪರಮೇಶ್ವರೀ । ತೇಜಾಚೀ ಶಿದೋರೀ । ವಿನಿಯೋಗಿಲೀ ।೨೮೧॥ ಬುದ್ಧೀಚೇನಿ ಶಾಕೇ । ಹಾತಬೋನೇ ನಿಕೇ । ದ್ವೈತ ತೇಥ ನ ದೇಖೇ । ತೈಸೇ ಕೇಲೇ ।೨೮೨॥ ನಿಜಕಾಂತೀ ಹಾರವಿಲೀ । ಮಗ ಪ್ರಾಣುಚಿ ಕೇವಳ ಜಾಹಾಲೀ । ತೇ ವೇಳಿ ಕೈಸೀ ಗಮಲೀ । ಮ್ಹಣಾವೀ ಪಾ ? ।೨೮೩॥ ಹೋ ಕಾ ಜೇ ಪವನಾಚೀ ಪುತಳೀ । ಪಾಂಘುರಲೀ ಹೋತೀ ಸೋನಸಳೀ । ತೇ ಫೇಡೂನಿಯಾ ವೇಗಳೀ । ಠೇವಿಲೀ ತಿಯಾ ।೨೮೪॥ ನಾತರೀ ವಾಯೂಚೇನಿ ಆಂಗೇ ಝುಗಟಲೀ । ದೀಪಾಚೀ ದಿಠಿ ನಿವಟಲೀ । ಕಾ ಲಖಲಖೋನಿ ಹಾರಪಲೀ । ವೀಜು ಗಗನೀ ।೨೮೫॥ ತೈಶೀ ಹೃದಯಕಮಳ ವೇರ್ಹೀ । ದಿಸೇ ಜೈಶೀ ಸೋನಿಯಾಚೀ ಸರೀ । ನಾತರೀ ಪ್ರಕಾಶಜಳಾಚೀ ಝುರೀ । ವಾಹತ ಆಲೀ ।೨೮೬॥ ಮಗ ತೇ ಹೃದಯಭೂಮೀ ಪೋಕಳೇ । ಜಿರಾಲೀ ಕಾ ಏಕೇ ವೇಳೇ । ತೈಸೇ ಶಕ್ತಿಚೇ ರೂಪ ಮಾವಳೇ । ಶಕ್ತೀಚಿಮಾಜೀ ।೨೮೭॥ ತೇಂವ್ಹಾ ತರೀ ಶಕ್ತೀಚಿ ಮ್ಹಣೇಜೇ । ಏರ್ಹವೀ ತೋ ಪ್ರಾಣು ಕೇವಳ ಜಾಣಿಜೇ । ಆತಾ ನಾದಬಿಂದು ನೇಣಿಜೇ । ಕಳಾಜ್ಯೋತೀ ।೨೮೮॥

ಇದು ಬ್ರಹ್ಮಸ್ವರೂಪ ಸಾರ್ವಭೌಮನ ಶೋಭೆಯಾಗಿದ್ದು ಜಗತ್ತಿನ ತಾಯಿ ಎನಿಸುವುದು ಮತ್ತು ವಿಶ್ವ ಬೀಜದ ಮೊಳಕೆ ಎಂಬ ಜೀವಕ್ಕೆ ನೆರಳು ಮಾಡಿದೆ ।೨೭೨॥

ಇದು ನಿರಾಕಾರ ಬ್ರಹ್ಮದ ಸಾಕಾರಮೂರ್ತಿ, ಪರಮಾತ್ಮನಾದ ಶಿವನ ಕೈಯಲ್ಲಿನ ಕರಡಿಗೆಯಾಗಿದೆ ಮತ್ತು ಓಂಕಾರದ ಕೇವಲ ಜನ್ಮಭೂಮಿಯಾಗಿದೆ ।೨೭೩॥

ಮತ್ತೇನು ಹೇಳಬೇಕು! ಈ ಕುಂಡಲಿನಿ ಬಾಲೆಯು ಹೃದಯದಲ್ಲಿ ಬಂದಳೆಂದರೆ ಅಖಂಡವಾಗಿ ಓಂಕಾರ ಧ್ವನಿಯಾಗುತ್ತಿರುತ್ತದೆ ।೨೭೪॥

ಆ ಕುಂಡಲಿನಿಯ ಸಮೀಪವಾಗಿ ಬುದ್ಧಿ ಇರುವುದರಿಂದ ಅದರ ಕಿವಿಗೆ ಕಿಂಚಿತ್ ಓಂಕಾರದ ಧ್ವನಿ ಹೋಗುತ್ತದೆ ।೨೭೫॥

ಘೋಷದ (ಪರಾವಣಿಯಲ್ಲಿ) ಕುಂಡದಲ್ಲಿ ನಾದ (ಮಧ್ಯಮಾ) ಚಿತ್ರದ ಪ್ರತಿಮೆಗಳು ಓಂಕಾರದ ಆಕಾರದಂತೆ ರೇಖಿಸಲ್ಪಟ್ಟಿರುವುವು ।೨೭೬॥

ಈ ಸಂಗತಿಗಳನ್ನು ಕಲ್ಪನೆಗಳಿಂದಲೇ ತಿಳಿದುಕೊಳ್ಳಬೇಕು. ಆದರೆ ಕಲ್ಪಿಸುವವನನ್ನು ಎಲ್ಲಿಂದ ತರಬೇಕು? (ಏಕೆಂದರೆ ಆತನು ಜೀವಾತ್ಮನೊಡನೆ ಐಕ್ಯ ಹೊಂದಿರುವನು) ಆದ್ದರಿಂದ ಹೃದಯಾಕಾಶದಲ್ಲಿ ಅದೆಂತಹ ಗರ್ಜನೆಯಾಗುವುದೆಂಬುದು ಏನೂ ತಿಳಿಯದು ।೨೭೭॥

ಅರ್ಜುನಾ, ಆದರೆ ಅದು ಹಾಗಲ್ಲ, ಹೇಳುವುದನ್ನು ನಾನೇ ಮರೆತಿರುವೆನು. ಪ್ರಾಣ, ಅಪಾನ ವಾಯುಗಳು ನಾಶವಾಗುವವರೆಗೆ ಹೃದಯಾಕಾಶದಲ್ಲಿ ಶಬ್ದ ಇರುವುದು ।೨೭೮॥

ಆ ಅಖಂಡವಾದ ಅನಾಹತ ಓಂಕಾರದ ಮೇಘದಂತೆ ಗರ್ಜನೆಯ ನಾದವು ಹೃದಯಾಕಾಶದಲ್ಲಿ ತುಂಬಿ ನಿಲ್ಲುವುದು. ಆಗ ಬ್ರಹ್ಮರಂಧ್ರದ ಕಿಡಕಿಯು ತಾನೇ ತೆರೆಯುವುದು ।೨೭೯॥

ಕಮಲದಲ್ಲಿರುವ (ಪೊಳ್ಳು) ಅವಕಾಶದಂತೆ ಹೃದಯಾಕಾಶದಲ್ಲಿ ಪೊಳ್ಳು ಸ್ಥಳವಿರುವುದು. ಅಲ್ಲಿ ಚೈತನ್ಯವು ನಿರಾಲಂಬವಾಗಿ ವಾಸಿಸುವುದು ।೨೮೦॥

ಆ ಆತ್ಮದ ಮನೆಗೆ ಕುಂಡಲಿನಿ ಪರಮೇಶ್ವರೀ ಬೇಗತಿಯಾಗಿ ಬಂದ ಮೇಲೆ ತೇಜರೂಪ ಭೋಜನವನ್ನು ಕೊಡಲ್ಪಟ್ಟಿತು ।೨೮೧॥

ಆಗ ಆ ವೇಳೆಯಲ್ಲಿ ಬುದ್ಧಿರೂಪ ಪಲ್ಲೆ ಸಮೇತ ತಾಟನ್ನು ಬಡಿಸಲ್ಪಟ್ಟಿತು. ಅದರಲ್ಲಿ ದ್ವೈತವೆಂಬ ಕಲ್ಪನೆಯೂ ಬಾರದಂತೆ ಭೋಜನಕೂಟ ಏರ್ಪಡಿಸಲಾಯಿತು ।೨೮೨॥

ಈ ಪ್ರಕಾರವಾಗಿ ತನ್ನ ತೇಜವನ್ನು ಅರ್ಪಿಸಿದ ಮೇಲೆ ಆ ಕುಂಡಲಿನಿಯು ಕೇವಲ ವಾಯುರೂಪವಾಗುವುದು. ಆಗ ಅದು ಹೇಗೆ ಕಂಡಿತೆಂದರೆ ।೨೮೩॥

ಪ್ರತ್ಯಕ್ಷವಾಗಿ ಗಾಳಿಯ ಪುತ್ಥಳಿಯು ಇರುವ ಪಿತಾಂಬರವನ್ನು ಕಳೆದು ಒಂದು ಕಡೆಯಲ್ಲಿ ಇಟ್ಟಂತೆ ।೨೮೪॥

ಅಥವಾ ದೀಪದ ಬೆಳಕು ಗಾಳಿ ಬಡಿದಾಗ ಆರಿ ಹೋಗುವಂತೆ, ಅಥವಾ ಆಕಾಶದಲ್ಲಿ ಮಿಂಚುಮಿನುಗಿ ಹೋಗುವಂತೆ ।೨೮೫॥

ಅಥವಾ ಹೃದಯ ಕಮಲದವರೆಗೂ ಬಂಗಾರದ ಸರಿಗೆ ಇದ್ದಂತೆ, ಅಥವಾ ಪ್ರಕಾಶರೂಪವಾದ ನೀರಿನ ಝರಿಯು ಹರಿಯುತ್ತ ಬಂದಿದೆಯೋ ಎಂಬಂತೆ ತೋರುವುದು ।೨೮೬॥

ಆಮೇಲೆ ಅದು ಹೃದಯರೂಪ ಪೊಳ್ಳು ಭೂಮಿಯಲ್ಲಿ ಒಮ್ಮೆಲೇ ಇಂಗುವುದು. ಆ ಕುಂಡಲಿನಿ ಶಕ್ತಿಯ ರೂಪವು ಶಕ್ತಿಯಲ್ಲಿಯೇ ಲಯವಾಗುವುದು ।೨೮೭॥

ಈ ಸ್ಥಿತಿ ಆದಾಗ್ಗೆ ಅದಕ್ಕೆ ಶಕ್ತಿ ಎಂದೇ ಕರೆಯಬೇಕಾಗಿದೆ. ಇಲ್ಲವಾದರೆ ಅದು ನಿಜವಾಗಿ ಪ್ರಾಣವೇ ಆಗಿರುವುದು. ಆದರೆ ಆ ಸಮಯಕ್ಕೆ ಅದರ ಧ್ವನಿ, ಕಳೆ, ಜ್ಯೋತಿ ಇವೆಲ್ಲ ಇಲ್ಲದಾಗುವುವು ।೨೮೮॥

ಮನಾಚಾ ಹನ ಮಾರು । ಕಾ ಪವನಾಚಾ ಆಧಾರು । ಧ್ಯಾನಾಚಾ ಆದರು । ನಾಹೀ ಪರೀ ॥೨೮೯॥ ಹೇ ಕಲ್ಪನಾ ಘೇ ಸಾಂಡೀ । ತೇ ನಾಹೀ ಇಯೇ ಪರವಡೀ । ಹೇ ಮಹಾಭೂತಾಂಚೀ ಪುಡೀ । ಆಟಣೇ ದೇಖಾ ।೨೯೦॥ ಪಿಂಡೇ ಪಿಂಡಾಚಾ ಗ್ರಾಸು ।ತೋ ಹಾ ನಾಥಸಂಕೇತೀಂಚಾ ದಂಶು । ಪರೀ ದಾಊನಿ ಗೇಲಾ ಉದ್ದೇಶು । ಶ್ರೀಮಹಾವಿಷ್ಣು ।೨೯೧॥ ತಯಾ ಧ್ವನಿತಾಚೇ ಕೇಣೇ ಸೋಡುನೀ । ಯಥಾರ್ಥಾಚೀ ಘಡೀ ಝಾಡುನೀ । ಉಪಲವಿಲೀ ಮ್ಯಾ ಜಾಣುನೀ । ಗ್ರಾಹೀಕ ಶ್ರೋತೇ ।೨೯೨॥

ಯುಂಜನ್ನೇವಂ ಸದಾऽತ್ಮಾನಂ ಯೋಗೀ ನಿಯತಮಾನಸಃ ।
ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾ ಮಧಿಗಚ್ಛತಿ ।೧೫॥

ಐಕೇ ಶಕ್ತೀಚೇ ತೇಜ ಜೇವ್ಹಾ ಲೋಪೇ । ತೇಥ ದೇಹಾಚೇ ರೂಪ ಹಾರಪೇ । ಮಗ ತೋ ಡೋಳ್ಯಾಮಾಝೀ ಲಪೇ । ಜಗಾಚಿಯಾ ।೨೯೩॥ ಏರ್ಹವೀ ಆಧಿಲಾಚಿ ಐಸೇ । ಸಾವಯವ ತರೀ ದಿಸೇ । ಪರೀ ವಾಯೂಚೇ ಕಾ ಜೈಸೇ । ವಳಿಲೇ ಹೋಯ ।೨೯೪॥ ನಾತರೀ ಕರ್ದಳೀಚಾ ಗಾಭಾ । ಬುಂಥೀ ಸಾಂಡೋನೀ ಉಭಾ । ಕಾ ಅವಯವಚಿ ನಭಾ । ಉದಯಲಾ ತೋ ।೨೯೫॥ ತೈಸೇ ಹೋಯ ಶರೀರ । ತೈ ತೇ ಮ್ಹಣಿಜೇ ಖೇಚರ । ಹೇ ಪದ ಹೋತಾ ಚಮತ್ಕಾರ । ಪಿಂಡಜನೀ ।೨೯೬॥ ದೇಖೇ ಸಾಧಕು ನಿಘೋನಿ ಜಾಯೇ । ಮಾಗಾ ಪಾಉಲಾಂಚೀ ವೋಳರಾಹೇ । ತೇಥ ಠಾಯೀ ಠಾಯೀ ಹೋಯೇ । ಅಣಿಮಾದಿಕ ।೨೯೭॥ ಪರಿ ತೇಣೇ ಕಾಯ ಕಾಜ ಆಪಣಯಾ । ಅವಧಾರೀ ಐಸಾ ಧನಂಜಯಾ । ಲೋಪ ಆಥೀ ಭೂತತ್ರಯಾ । ದೇಹೀಂಚಾ ದೇಹೀ ।೨೯೮॥ ಪೃಥ್ವೀತೇ ಆಪ ವಿರವೀ । ಆಪಾತೇ ತೇಜ ಜಿರವೀ । ತೇಜಾತೇ ಪವನು ಹರವೀ । ಹೃದಯಾಮಾಜೀ ।೨೯೯॥ ಪಾಠೀ ಆಪಣ ಏಕಲಾ ಉರೇ । ಪರಿ ಶರೀರಾಚೇನಿ ಅನುಕಾರೇ । ಮಗ ತೋಹೀ ನಿಗೇ ಅಂತರೇ । ಗಗನಾ ಮಿಳೇ ।೩೦೦॥ ತೇ ವೇಳೀ ಕುಂಡಲಿನೀ ಹೇ ಭಾಷ ಜಾಯೇ । ಮಗ ಮಾರುತೀ ಐಸೇ ನಾಮ ಹೋಯೇ । ಪರಿ ಶಕ್ತಿಪಣ ತೇ ಆಹೇ । ಜಂವ ನ ಮಿಳೇ ಶಿವೀ ।೩೦೧॥ ಮಗ ಜಾಲಂಧರ ಸಾಂಡೀ । ಕಕಾರಾಂತ ಫೋಡೀ । ಗಗನಾಚಿಯೇ ಪಾಹಾಡೀ । ಪೈಠೀ ಹೋಯ ।೩೦೨॥ ತೇ ಓಂಕಾರಾಚಿಯೇ ಪಾಠೀ । ಪಾಯ ದೇತ ಉಠಾಉಠೀ । ಪಶ್ಯಂತೀಚಿಯೇ ಪಾಉಟೀ । ಮಾಗಾ ಘಾಲೀ ।೩೦೩॥

ಆ ಬಳಿಕ ಮನವು ನಿಲ್ಲುವುದು, ವಾಯುವನ್ನು ನಿರೋಧಿಸುವುದು, ಅಥವಾ ಧ್ಯಾನ ಮಾಡುವುದು ಇವೆಲ್ಲ ಪ್ರಕಾರಗಳು ಅಲ್ಲಿ ಇಲ್ಲದಂತಾಗುವುವು ।।೨೮೯।।

ಮತ್ತು ಆ ಕಲ್ಪನೆ ಹಿಡಿ ಈ ಕಲ್ಪನೆ ಬಿಡು ಮೊದಲಾದ ಪ್ರಕಾರದ ಸಾಹಸಗಳು ಅಲ್ಲಿರುವುದಿಲ್ಲ. ಆದ್ದರಿಂದ ಕುಂಡಲಿನಿ ಎಂದರೆ ಪಂಚಮಹಾಭೂತಗಳನ್ನು ಕರಗಿಸುವ ಮುಶಿಯಾಗಿದೆ ।।೨೯೦।।

ಶರೀರದಿಂದ ಶರೀರ ಇಲ್ಲದಂತೆ ಮಾಡುವುದು. ಈ ಯೋಗಶಾಸ್ತ್ರದ ಒಡೆಯ ಶ್ರೀಶಂಕರನು ಮಾಡಿದ ಸಿದ್ಧಾಂತದ ಅಭಿಪ್ರಾಯವು. ಇದರ ಉದ್ದೇಶದ ದರ್ಶನವನ್ನು ಮಹಾವಿಷ್ಣುವು ಮಾಡಿಕೊಟ್ಟನು ।।೨೯೧।।

ಆ ಮಹಾವಿಷ್ಣುವಿನ ಸಂಕೇತದ ಗಂಟು ಬಿಚ್ಚಿ ಯಥಾರ್ಥವೆಂಬ ವಸ್ತ್ರದ ಮಡಿಕೆ ತೆರೆದು ಶ್ರೋತೃಗಳೇ ಈ ಪದಾರ್ಥದ ಗಿರಾಕಿಗಳೆಂದು ತಿಳಿದು ನಾನದನ್ನೆಲ್ಲ ಅವರ ಮುಂದೆ ಮಂಡಿಸಿರುವೆ (ಎಂದು ಜ್ಞಾನೇಶ್ವರರು ಹೇಳಿದರು) ।।೨೯೨।।

ಶ್ಲೋಕಾರ್ಥ :- ಈ ವಿಧವಾದ ನೇಮದಿಂದ ಯೋಗವನ್ನು ಮಾಡುವವನು ನನ್ನ ಸ್ಥಾನವಾದ ಪರಮ ನಿರ್ವಾಣವನ್ನು ಸುಖವಾಗಿ ಪ್ರಾಪ್ತ ಮಾಡಿಕೊಳ್ಳುತ್ತಾನೆ ।।೧೫।।

ಇಲ್ಲಿ ನೋಡು, ಕುಂಡಲಿನಿಯ ತೇಜವು ಅಡಗಿದಾಗ ದೇಹರೂಪವು ಇಲ್ಲದಾಗುವುದು ಮತ್ತು ಆ ಯೋಗಿಯು ಜನರ ಕಣ್ಣಿಗೆ ಕಾಣದಷ್ಟು ಅತಿ ಸೂಕ್ಷ್ಮವಾದ ರೂಪವನ್ನು ಧರಿಸುವನು ।।೨೯೩।।

ಸಾಮಾನ್ಯವಾಗಿ ಆ ಶರೀರವು ಮೊದಲಿನಂತೆಯೇ ಸಾವಯವವಾಗಿರುವುದು. ಆದರೆ ಈಗ ಆ ದೇಹವು ವಾಯುವಿನಿಂದಲೇ ನಿರ್ಮಿತವಾಗಿದೆಯೇ ಎಂಬಂತೆ ಕಾಣುವುದು ।।೨೯೪।।

ಅಥವಾ ಬಾಳೆ ಕಂಭದ ಪೊಳ್ಳಿನ ಮೇಲ್ಭಾಗದ ಸಿಪ್ಪೆಗಳನ್ನೆಲ್ಲ ತೆಗೆದೊಗಿದಾಗ ಉಳಿದ ಪೊಳ್ಳು ನಿಂತಂತೆ ಇಲ್ಲವೆ ಆಕಾಶಕ್ಕೆನೇ ಅವಯವಗಳು ಹುಟ್ಟಿರಬೇಕೆಂಬಂತೆ ಆತನು ಕಾಣುವನು ।।೨೯೫।।

ಹೀಗೆ ಆತನ ಶರೀರವಾದ ಮೇಲೆ ಆತನಿಗೆ (ಖೇಚರ) ಗಗನ ವಿಹಾರಿ ಎನ್ನುವರು. ದೇಹಧಾರಿಯಾದ ಜನರಿಗೆ ಈ ರೂಪವು ಬಹಳ ಚಮತ್ಕಾರವಾಗಿ ಕಾಣುವುದು ।।೨೯೬।।

ಈಗ ನೋಡು, ಯೋಗಸಾಧ್ಯ ಮಾಡಿಕೊಳ್ಳುವ ಸಾಧಕನು ನಡೆದು ಹೋದ ಮೇಲೆ ಹಿಂದೆ ಆತನ ಹಜ್ಜೆಗಳು ಮೂಡಿರುವುವು. ಅಲ್ಲಿ ಅಣಿಮಾದಿ ಸಿದ್ಧಿಗಳು ಕೈಮುಗಿದು ನಿಂತಿರುವುವು ।।೨೯೭।।

ಧನಂಜಯನೇ ಕೇಳು! ಆ ಅಣಿಮಾದಿಕ ಸಿದ್ಧಿಗಳಿಂದ ನಮಗೇನು ಮಾಡಬೇಕಾಗಿದೆ? ಪೃಥ್ವಿ, ಆಪ ಮತ್ತು ತೇಜವು ಇವು ಮೂರು ಭೂತಗಳು ದೇಹದಲ್ಲಿ ಒಳಗಿಂದೊಳಗೆ ಇಲ್ಲದಾಗುವುವು ।।೨೯೮।।

ಪೃಥ್ವಿಯನ್ನು ಉದಕವು ನಾಶ ಮಾಡುತ್ತದೆ. ನೀರನ್ನು ತೇಜವು ನಾಶಮಾಡುತ್ತದೆ ಮತ್ತು ಹೃದಯದಲ್ಲಿ ವಾಯುವು ತೇಜಕ್ಕೆ ನಾಶಮಾಡುತ್ತದೆ ।।೨೯೯।।

ಅನಂತರ ಪ್ರಾಣವಾಯುವು ಒಂದೇ ಉಳಿಯುವುದು. ಆದರೆ ಅದು ಶರೀರದ ಆಕಾರದಿಂದ ಇರುವುದು ಮತ್ತು ಅದಾದರೂ ಕೆಲಕಾಲದ ನಂತರ ಹೊರಟು ಹೋಗಿ ಆಕಾಶದಲ್ಲಿ ಕೂಡುವುದು ।।೩೦೦।।

ಆಗ ಅದಕ್ಕೆ ಕುಂಡಲಿನಿ ಎಂಬ ಹೆಸರು ಹೋಗಿ ಮಾರುತ ಎಂಬ ಹೆಸರು ಬರುವುದು. ಆದರೆ ಅದು ಬ್ರಹ್ಮನಲ್ಲಿ ಕೂಡುವವರೆಗೂ ಅದರ ಶಕ್ತಿಯು ನಿಖರವಾಗಿ ಉಳಿದಿರುವುದು ।।೩೦೧।।

ತದನಂತರ ಜಾಲಂಧರಬಂಧವನ್ನು ಬಿಟ್ಟು ಕಾಕೀಮುಖಿ (ಕಂಠಸ್ಥಾನ) ಒಡೆದು ಬ್ರಹ್ಮರಂಧ್ರ, ಆಕಾಶದ ಶಿಖರಕ್ಕೆ ಆಶ್ರಯಿಸಿ ನಿಲ್ಲುವುದು ।।೩೦೨।।

ಅದು ಓಂಕಾರದ ಬೆನ್ನಿನ ಮೇಲೆ ಕಾಲಿಟ್ಟು ಪಶ್ಯಂತಿವಾಣಿಯ ಮೆಟ್ಟಲನ್ನು ಹಿಂದಕ್ಕೆ ತಳ್ಳುವುದು ।।೩೦೩।।

ಪುಢಾ ತನ್ಮಾತ್ರಾ ಅರ್ಧವೇರೀ । ಆಕಾಶಾಚ್ಯಾ ಅಂತರೀ । ಭರತೀ ಗಮೇ ಸಾಗರೀ । ಸರಿತಾ ಜೇವೀ ।೩೦೪॥ ಮಗ ಬ್ರಹ್ಮರಂಧ್ರೀ ಸ್ಥಿರಾವೋನೀ । ಸೋಹಂಭಾವಾಚ್ಯಾ ಬಾಹ್ಯಾ ಪಸರುನೀ । ಪರಮಾತ್ಮಲಿಂಗಾ ಧಾಂವೋನೀ । ಆಂಗಾ ಘಡೇ ।೩೦೫॥ ತಂವ ಮಹಾಭೂತಾಂಚೀ ಜವನಿಕಾ ಫಿಟೇ । ಮಗ ದೋಹೀಂಸಿ ಹೋಯ ಝುಟೇ । ತೇಥ ಗಗನಾಸಕಟ ಆಟೇ । ಸಮರಸೀ ತಿಯೇ ।೩೦೬॥ ಪೈ ಮೇಘಾಚೇನಿ ಮುಖೀ ನಿವಡಿಲಾ । ಸಮುದ್ರ ಕಾ ವೋಘೀ ಪಡಿಲಾ । ತೋ ಮಾಗುತಾ ಜೈಸಾ ಆಲಾ । ಆಪಣಪಯಾ ।೩೦೭॥ ತೇವೀ ಪಿಂಡಾಚೇನಿ ಮಿಷೇ । ಪದೀ ಪದ ಪ್ರವೇಶೇ । ತೇ ಏಕತ್ವ ಹೋಯ ತೈಸೇ । ಪಂಡುಕುಮರಾ ।೩೦೮॥ ಆತಾ ದುಜೇ ಹನ ಹೋತೇ ।ಕೀ ಏಕಚಿ ಹೇ ಆಇತೇ । ಐಶಿಯೇ ವಿವಂಚನೇಪುರತೇ । ಉರೇಚಿನಾ ।೩೦೯॥ ಗಗನೀ ಗಗನ ಲಯಾ ಜಾಯೇ । ಐಸೇ ಜೇ ಕಾಂಹೀ ಆಹೇ । ತೇ ಅನುಭವೇ ಜೋ ಹೋಯೇ । ತೋ ಹೋಊನಿ ಠಾಕೇ ।೩೧೦॥ ಮ್ಹಣೌನಿ ತೇಥಿಂಚೀ ವಾತು । ನ ಚಢೇಚಿ ಬೋಲಾಚಾ ಹಾತು । ಜೇಣೇ ಸಂವಾದಾಚಿಯಾ ಗಾಂವಾಆಂತು । ಪೈಠೀ ಕೀಜೇ ।೩೧೧॥ ಅರ್ಜುನಾ ಏರ್ಹವೀ ತರೀ । ಇಯಾ ಅಭಿಪ್ರಾಯಾಚಾ ಜೇ ಗರ್ವ ಧರೀ । ತೇ ಪಾಹೇ ಪಾ ವೈಖರೀ । ದುರೀ ಠೇಲೀ ।೩೧೨॥ ಭ್ರೂಲತಾ ಮಾಗಿಲೀಕಡೇ । ತೇಥ ಮಕರಾಚೇಂಚಿ ಆಂಗ ನ ಮಾಂಡೇ । ಸಡೇಯಾ ಪ್ರಾಣಾ ಸಾಂಕಡೇ । ಗಗನಾ ಯೇತಾ ।೩೧೩॥ ಪಾಠೀ ತೇಥೇಂಚೀ ತೋ ಭೇಸಳಲಾ । ತೈ ಶಬ್ದಾಚಾ ದಿವೋ ಮಾವಳಲಾ । ಮಗ ತಯಾಹಿ ವರೀ ಆಟು ಭವಿನ್ನಲಾ । ಆಕಾಶಾಚಾ ।೩೧೪॥ ಆತಾ ಮಹಾಶೂನ್ಯಾಚಿಯಾ ಡೋಹೀ । ಜೇಥ ಗಗನಾಸೀಚಿ ಥಾವೋ ನಾಹೀ । ತೇಥ ತಾಗಾ ಲಾಗೇಲ ಕಾಈ । ಬೋಲಾಚಾ ಇಯಾ ?।೩೧೫॥ ಮ್ಹಣೌನಿ ಆಖರಾಮಾಜೀ ಸಾಂಪಡೇ । ಕೀ ಕಾನವರೀ ಜೋಡೇ । ಹೇ ತೈಸೇ ನವ್ಹೇ ಫುಡೇ । ತ್ರಿಶುದ್ಧೀ ಗಾ ।೩೧೬॥ ಜೇ ಕಹೀ ದೈವೇ । ಅನುಭವಿಲೇ ಫಾವೇ । ತೈ ಆಪಣಚಿ ಹೇ ಠಾಕಾವೇ । ಹೋಊನಿಯಾ ।೩೧೭॥ ಪುಢತೀ ಜಾಣಣೇ ತೇ ನಾಹೀಂಚಿ । ಮ್ಹಣೌನಿ ಅಸೋ ಕಿತೀ ಹೇಂಚಿ । ಬೋಲಾವೇ ಆತಾ ವಾಯಾಂಚಿ । ಧನುರ್ಧರಾ ।೩೧೮॥ ಐಸೇ ಶಬ್ದಜಾತ ಮಾಘೌತೇ ಸರೇ । ತೇಥ ಸಂಕಲ್ಪಾಚೇ ಆಯುಷ್ಯ ಪುರೇ । ವಾರಾಹೀ ಜೇಥ ನ ಶಿರೇ । ವಿಚಾರಾಚಾ ।೩೧೯॥

ಮುಂದೆ ಓಂಕಾರದೊಳಗಿನ ಅರ್ಧ ವರ್ತುಲಾಕಾರದ ಮಾತ್ರೆಯನ್ನು ಹಿಂದಕ್ಕೆ ಚೆಲ್ಲಿ ನದಿಯು ಸಮುದ್ರಕ್ಕೆ ಕೂಡುವಂತೆ, ಅದು ಬ್ರಹ್ಮಾಕಾಶದಲ್ಲಿ ಹೋಗಿ ಕೂಡುವುದು ।೩೦೪॥

ಆಮೇಲೆ ಬ್ರಹ್ಮರಂಧ್ರದಲ್ಲಿ (ತಲೆಯೊಳಗಿನ ಪೊಳ್ಳಿನಲ್ಲಿ) ಸ್ಥಿರವಾಗಿ ನಿಂತು "ನಾನು ಬ್ರಹ್ಮನಿರುವೆ" ಎಂಬ ಭಾವನೆಯಿಂದ ಬಾಹುಗಳನ್ನು ಪಸರಿಸಿ ಪರಬ್ರಹ್ಮನನ್ನು ಆಲಿಂಗಿಸಿ ಒಂದಾಗುವುದು ।೩೦೫॥

ಆಗ ಪಂಚಮಹಾಭೂತಗಳ ಪರದೆ ಇಲ್ಲದಾಗಿ ಶಿವಶಕ್ತಿಯ ಐಕ್ಯವಾಗುವುದು. ಅಲ್ಲಿ ಅದು ಆಕಾಶದೊಡನೆ ಬ್ರಹ್ಮಾನಂದದಲ್ಲಿ ಕೂಡಿ ಹೋಗುವುದು ।೩೦೬॥

ಯಾವ ಪ್ರಕಾರವಾಗಿ ಸಮುದ್ರದ ನೀರು ಮೋಡಗಳಲ್ಲಿ ಸೇರಿ ತದನಂತರ ಭೂಮಿಯ ಮೇಲೆ ಮಳೆಯ ಮುಖಾಂತರ ಬಿದ್ದು ಆಗ ನದಿಯ ಮಾರ್ಗದಿಂದ ಪುನಃ ಸಮುದ್ರಕ್ಕೆ ಬಂದು ಸೇರುತ್ತದೆಯೋ ।೩೦೭॥

ಅದರಂತೆ ಅರ್ಜುನಾ, ದೇಹದ ನಿಮಿತ್ತದಿಂದ ಜೀವಾತ್ಮನು ಬ್ರಹ್ಮಪದಿಯಲ್ಲಿ ಪ್ರವೇಶ ಮಾಡುವನು. ಈ ಐಕ್ಯವು ನೀರು ನದಿಯಿಂದ ಸಮುದ್ರಕ್ಕೆ ಬಂದಂತೆ ।೩೦೮॥

ತದನಂತರ ನಾನು ಬೇರೆ ಮತ್ತು ಆತ್ಮವು ಬೇರೆ ಅಥವಾ ಎರಡೂ ಒಂದೇ ಎಂಬ ವಿಚಾರ ವಿನಿಮಯವು ಉಳಿಯುವುದೇ ಇಲ್ಲ ।೩೦೯॥

ಆಕಾಶವು ಆಕಾಶದಲ್ಲಿ ಕೂಡಿಕೊಂಡಿತು ಎಂಬುವುದೊಂದು ತತ್ತ್ವವಿದೆ. ಆ ತತ್ತ್ವದ ಅನುಭವ ಯಾರು ಪಡೆದಿರುವರೋ ಅವರೇ ಸಿದ್ಧರು ।೩೧೦॥

ಆದ್ದರಿಂದ ಆ ಅವಸ್ಥೆಯ ಅನುಭವವನ್ನು ಶಬ್ದಗಳಿಂದ ವ್ಯಕ್ತಮಾಡಿ ತೋರಿಸಲು ಬರುವುದಿಲ್ಲ. ಏಕೆಂದರೆ ಆ ಅನುಭವವು ಶಬ್ದಗಳಿಂದ ವರ್ಣನೆ ಮಾಡುವಂತಹದ್ದು ಇರುವುದಿಲ್ಲ ।೩೧೧॥

ಅರ್ಜುನಾ, ನಿಜವಾಗಿ ನೋಡಿದರೆ ಈ ವೈಖರಿ ವಾಣಿಯು ಮನದಲ್ಲಿರುವುದನ್ನು ವ್ಯಕ್ತಮಾಡುವ ಅಭಿಮಾನ ಪಡುವುದು. ಆದರೆ ಅದು ಸಹ ಈ ಅನುಭವದಿಂದ ದೂರ ಉಳಿದಿರುವುದು ।೩೧೨॥

ಹುಬ್ಬುಗಳ ಒಳಗಿನ ಭಾಗದ ಮಗ್ಗುಲಲ್ಲಿ ಮಕಾರದ ಸಹ ಪ್ರವೇಶವಾಗುವುದಿಲ್ಲ. ಅದರಂತೆ ಒಂದೇ ಪ್ರಾಣವಾಯುವಿಗೂ ಕೂಡ ಬ್ರಹ್ಮಾಕಾಶದಲ್ಲಿ ಪ್ರವೇಶಿಸಲು ಸಂಕಟವಾಗುವುದು ।೩೧೩॥

ಮುಂದೆ ಆ ವಾಯುವು ಅಲ್ಲಿ ಹೋದ ಮೇಲೆ ತದಾಕಾರವಾಗುವುದು. ಆಗ ಆ ವೇಳೆಯಲ್ಲಿ ಶಬ್ದಗಳ ಹೇಳುವಿಕೆ ಕುಂಠಿಸುವುದು. ಆಗ ಆಕಾಶ ತತ್ತ್ವವು ಸಹ ಅಡಗುವುದು ।೩೧೪॥

ಎಲ್ಲಿ ಯಾವ ಅವ್ಯಕ್ತ ಸ್ಥಿತಿಯ ಮಡುವಿನಲ್ಲಿ ಮಹದಾಕಾಶದ ಪತ್ತೆ ಸಹ ಹತ್ತುವುದಿಲ್ಲ. ಅಲ್ಲಿ ಈ ಶಬ್ದಗಳನ್ನು ಲೆಕ್ಕಿಸುವುದೆಂತು? ।೩೧೫॥

ಆದ್ದರಿಂದ ಈ ಬ್ರಹ್ಮವು ಅಕ್ಷರಗಳಲ್ಲಿ ತೊಡಕುವಂತಹದ್ದು (ವರ್ಣಿಸಲು ಬರುವಂತಹದು) ಅಥವಾ ಕೇಳಲು ಬರುವಂತಹದ್ದು ನಿಜವಾಗಿ ಅಲ್ಲ. ಇದು ತ್ರಿವಾರ ಸತ್ಯವಾಗಿದೆ ।೩೧೬॥

ದೈವಗತಿಯಿಂದ ಯಾರಿಗೆ ಇದರ ಅನುಭವ ಯಾವಾಗ್ಗೆ ಬರುವುದೋ ಆಗ ಆ ಅನುಭವ ಪಡೆಯುವವನು ತದ್ರೂಪನಾಗಿ ಹೋಗುವನು ।೩೧೭॥

ತದನಂತರ ಅಲ್ಲಿಯ ಸ್ಥಿತಿಯನ್ನು ಅರಿಯುವುದು ತನ್ನಷ್ಟಕ್ಕೆ ತಾನೇ ನಿಲ್ಲುವುದು. ಆದ್ದರಿಂದ ಅರ್ಜುನಾ, ಇದರ ವಿಷಯಕ್ಕೆ ಏನು ಎಷ್ಟು ಹೇಳಿದರೂ ಎಲ್ಲವೂ ವ್ಯರ್ಥವು ।೩೧೮॥

ಈ ಪ್ರಕಾರವಾಗಿ ಎಲ್ಲ ಶಬ್ದಗಳು ತನ್ನಷ್ಟಕ್ಕೆ ತಾನೇ ನಿಲ್ಲುವುವು. ಇಲ್ಲಿ ಸಂಕಲ್ಪಗಳು ಸಹ ಲಯಗೊಳ್ಳುವುವು. ಆದ್ದರಿಂದ ಅಲ್ಲಿ ವಿಚಾರಗಳ ಸುಳಿಯೂ ಹತ್ತುವುದಿಲ್ಲ ।೩೧೯॥

ಜೇ ಉನ್ಮನಿಯೇಚೇ ಲಾವಣ್ಯ । ಜೇ ತುರ್ಯೇಚೇ ತಾರುಣ್ಯ । ಅನಾದಿ ಜೇ ಅಗಣ್ಯ । ಪರಮತತ್ತ್ವ ।೩೨೦॥ ಜೇ ವಿಶ್ವಾಚೇ ಮೂಳ । ಜೇ ಯೋಗದ್ರುಮಾಚೇ ಫಳ । ಜೇ ಆನಂದಾಚೇ ಕೇವಳ । ಚೈತನ್ಯ ಗಾ ।೩೨೧॥ ಜೇ ಆಕಾರಾಚಾ ಪ್ರಾಂತು । ಜೇ ಮೋಕ್ಷಾಚಾ ಏಕಾಂತು । ಜೇಥ ಆದಿ ಆಣಿ ಅಂತು । ವಿರೋನೀ ಗೇಲೇ ।೩೨೨॥ ಜೇ ಮಹಾಭೂತಾಂಚೇ ಬೀಜ । ಜೇ ಮಹಾತೇಜಾಚೇ ತೇಜ । ಏವಂ ಪಾರ್ಥಾ ಜೇ ನಿಜ । ಸ್ವರೂಪ ಮಾಝೇ ।೩೨೩॥ ತೇ ಹೇ ಚತುರ್ಭುಜ ಕೋಂಭೇಲೀ । ಜಯಾಚೀ ಶೋಭಾ ರೂಪಾ ಆಲೀ । ದೇಖೋನಿ ನಾಸ್ತಿಕೀ ನೋಕಿಲೀ । ಭಕ್ತವೃಂದೇ ।೩೨೪॥ ತೇ ಅನಿರ್ವಾಚ್ಯ ಮಹಾಸುಖ । ಪೈ ಆಪಣಚಿ ಜಾಹಲೇ ಜೇ ಪುರುಷ । ಜಯಾಂಚೇ ಕಾ ನಿಷ್ಕರ್ಷ । ಪ್ರಾಪ್ತಿವೇರೀ ।೩೨೫॥ ಆಮ್ಹೀ ಸಾಧನ ಹೇ ಜೇ ಸಾಂಗಿತಲೇ । ತೇಂಚಿ ಶರೀರೀ ಜಿಹೀ ಕೇಲೇ । ತೇ ಆಮುಚೇನಿ ಪಾಡೇ ಆಲೇ । ನಿರ್ವಾಣಲೇಯಾ ।೩೨೬॥ ಪರಬ್ರಹ್ಮಾಚೇನಿ ರಸೇ । ದೇಹಾಕೃತೀಚಿಯೇ ಮುಸೇ । ವೋತೀಂವ ಜಾಹಲೇ ತೈಸೇ । ದಿಸತೀ ಆಂಗೇ ।೩೨೭॥ ಜರೀ ಹೇ ಪ್ರತೀತಿ ಹನ ಅಂತರೀ ಫಾಂಕೇ । ತರೀ ವಿಶ್ವಚಿ ಹೇ ಅವಘೇ ಝಾಂಕೇ । ತಂವ ಅರ್ಜುನ ಮ್ಹಣೇ ನಿಕೇ । ಸಾಚಚಿ ಜೇ ಹೇ ।೩೨೮॥ ಕಾ ಜೇ ಆಪಣ ಆತಾ ದೇವೋ । ಹಾ ಬೋಲಿಲೇ ಜೋ ಉಪಾವೋ । ತೋ ಪ್ರಾಪ್ತೀಚಾ ಠಾವೋ । ಮ್ಹಣೋನಿ ಘಡೇ ।೩೨೯॥ ಇಯೇ ಅಭ್ಯಾಸೀ ಜೇ ದೃಢ ಹೋತೀ । ತೇ ಭರಂವಸೇನಿ ಬ್ರಹ್ಮತ್ವಾ ಯೇತೀ । ಹೇ ಸಾಂಗತಿಯಾಚೀ ರೀತೀ । ಕಳಲೇ ಮಜ ।೩೩೦॥ ದೇವಾ ಗೋಠಿಚೇ ಹೇ ಐಕತಾ । ಬೋಧು ಉಪಜತಸೇ ಚಿತ್ತಾ । ಮಾ ಅನುಭವೇ ತಲ್ಲೀನತಾ । ನೋಹೇಲ ಕೇವೀ ? ।೩೩೧॥ ಮ್ಹಣೌನಿ ಏಥ ಕಾಂಹೀ । ಅನಾರಿಸೇ ನಾಹೀ । ಪರೀ ನಾವಭರೀ ಚಿತ್ತ ದೇಈ । ಬೋಲಾ ಏಕಾ ।೩೩೨॥ ಆತಾ ಕೃಷ್ಣಾ ತುವಾ ಸಾಂಗಿತಲಾ ಯೋಗು । ತೋ ಮನಾ ತರೀ ಆಲಾ ಚಾಂಗು । ಪರಿ ನ ಶಕೇ ಕರೂ ಪಾಂಗು । ಯೋಗ್ಯತೇಚಾ ।೩೩೩॥ ಸಹಜೇ ಆಂಗಿಕ ಜೇತುಲೇ ಆಹೇ । ತೇತುಲಿಯಾಚೇ ಜರೀ ಸಿದ್ಧಿ ಜಾಯೇ । ತರೀ ಹಾಚಿ ಮಾರ್ಗು ಸುಖೋಪಾಯೇ । ಅಭ್ಯಾಸೀನ ।೩೩೪॥ ನಾತರೀ ದೇವೋ ಜೈಸೇ ಸಾಂಗತೀಲ । ತೈಸೇ ಆಪಣಪೇ ಜರೀ ನ ಠಕೇಲ । ತರೀ ಯೋಗ್ಯತೇವೀಣ ಹೋಈಲ । ತೇಂಚಿ ಪುಸೋ ।೩೩೫॥ ಜೀವಿಂಚಿಯೇ ಐಸೀ ಧಾರಣಾ । ಮ್ಹಣೌನಿ ಪುಸಾವಯಾ ಜಾಹಲೇ ಕಾರಣಾ । ಮಗ ಮ್ಹಣೇ ತರೀ ಆಪಣಾ । ಚಿತ್ತ ದೇಇಜೋ ।೩೩೬॥

ಈ ಬ್ರಹ್ಮಸ್ವರೂಪವು ಉನ್ಮನೀ ಅವಸ್ಥೆ (ಅಮನಸ್ಕ ಸ್ಥಿತಿ) ಯ ಲಾವಣ್ಯವಾಗಿದೆ ಮತ್ತು ಸಮಾಧಿ ಅವಸ್ಥೆಯ ತಾರುಣ್ಯವಾಗಿದೆ. ಹಾಗೂ ಅನಾದಿಯಾಗಿದ್ದು ಅಳಿಯಲು ಬಾರದ್ದಾಗಿದೆ ।೩೨೦॥

ಇದು ವಿಶ್ವಕ್ಕೆ ಆಧಾರವಾಗಿದೆ. ಯೋಗರೂಪ ವೃಕ್ಷದ ಫಲವಾಗಿದೆ ಮತ್ತು ಆನಂದದ ಕೇವಲ ಜೀವನವಾಗಿದೆ ।೩೨೧॥

ಅಲ್ಲಿ ಆಕಾಶದ ಅಂತ್ಯವಾಗುವುದು. ಅದು ಕೇವಲ ಮೋಕ್ಷದ ಸ್ಥಿತಿಯಾಗಿರುವುದು ಮತ್ತು ಅಲ್ಲಿ ಆದಿ ಮತ್ತು ಅಂತ್ಯದ ಲಯವಾಗಿರುತ್ತದೆ ।೩೨೨॥

ಈ ಬ್ರಹ್ಮವು ಪಂಚಮಹಾಭೂತಗಳ ಮೂಲ ಕಾರಣವಾಗಿದೆ ಮತ್ತು ಮಹಾತೇಜದ ತೇಜವಾಗಿದೆ. ಒಟ್ಟಿನಲ್ಲಿ ಹೇಳಬೇಕೆಂದರೆ ಪಾರ್ಥಾ, ಆ ಬ್ರಹ್ಮವು ನನ್ನ ಸ್ವರೂಪವಾಗಿದೆ ।೩೨೩॥

ಸಾಧುವೃಂದರನ್ನು ನಾಸ್ತಿಕರು ಪೀಡಿಸಿದಾಗ ಇದೇ ಚತುರ್ಭುಜ ಮೂರ್ತಿಯು ಈ ಸ್ವರೂಪದಿಂದ ಆಕಾರಕ್ಕೆ ಬರುವುದು ।೩೨೪॥

(ಅರ್ಜುನಾ) ಹೀಗೆ ಈ ಮಹಾಸುಖವು ಅವರ್ಣನೀಯವೇ ಆಗಿದೆ. ಆದರೆ ಇದರ ಪ್ರಾಪ್ತಿಯಾಗುವ ವರೆಗೆ ಯಾವ ಪುರುಷನ ಪ್ರಯತ್ನವು ಅವ್ಯಾಹತವಾಗಿ ನಡೆದಿದೆಯೋ ಆ ಪುರುಷನು ಸ್ವಯಮೇವ ಸುಖರೂಪನಾಗುವನು ।೩೨೫॥

ನಾವು ಯಾವ ಈ ಅಷ್ಟಾಂಗಯೋಗದ ಸಾಧನೆಯನ್ನು ಹೇಳಿದಂತೆ ಶರೀರದಿಂದ ಯಾರು ಆಚರಿಸುವರೋ ಅವರು ಯೋಗದಿಂದ ಸಿದ್ಧರಾಗಿ ನನ್ನ ಯೋಗ್ಯತೆಯನ್ನೇ ಪಡೆಯುವರು ।೩೨೬॥

ಆ ಯೋಗಿಗಳ ಶರೀರವು ಪರಬ್ರಹ್ಮದ ರಸವನ್ನು ದೇಹಾಕೃತಿಯ ಮುಶಿಯಲ್ಲಿ ಸುರುವಿದಂತೆ ಸತೇಜವಾಗಿ ಕಾಣುವುದು ।೩೨೭॥

ಒಂದು ವೇಳೆ ಈ ಅನುಭವ ಅಂತರ್ಯಾಮಿ ಪ್ರಾಪ್ತವಾದಲ್ಲಿ ಅವರಿಗೆ ಈ ಜಗವೆಲ್ಲ ಲಯಗೊಂಡು ಮರೆಯಾಗುವುದು. ಆಗ ಅರ್ಜುನನು ಹೇಳಿದನು :- ದೇವಾ ನೀವು ಹೇಳಿದ್ದು ಸತ್ಯವಾಗಿದೆ ।೩೨೮॥

ದೇವಾ, ನೀನಿಗ ಹೇಳಿದ ಉಪಾಯಗಳು ಬ್ರಹ್ಮ ಪ್ರಾಪ್ತಿಯ ಸ್ಥಾನವಾಗಿದೆ. ಆದ್ದರಿಂದಲೇ ಈ ಸ್ಥಾನದಲ್ಲಿ ಬ್ರಹ್ಮಸಾಕ್ಷಾತ್ಕಾರವಾಗುವುದು ।೩೨೯॥

ನೀವು ಯಾವ ಈಮಾರ್ಗವನ್ನು ಹೇಳಿದಂತೆ ಯಾರು ದೃಢವಾಗಿ ಅಭ್ಯಾಸ ಮಾಡುವರೋ, ಅವರು ನಿಜವಾಗಿಯೂ ಬ್ರಹ್ಮಪದವನ್ನು ಪಡೆಯುವರು. ಇದು ನಿಮ್ಮ ಮಾತಿನಿಂದ ನನಗೆ ತಿಳಿಯಿತು ।೩೩೦॥

ದೇವಾ, ನೀವು ಹೇಳುತ್ತಿರುವ ಮಾತುಗಳನ್ನು ಕೇಳುವುದರಿಂದಲೇ ಚಿತ್ತದಲ್ಲಿ ಜ್ಞಾನವು ಉತ್ಪನ್ನವಾಗುವುದು. ಅಂದಮೇಲೆ ಇದರ ಅನುಭವ ಪಡೆಯುವವರಿಗೆ ತದ್ರೂಪತೆಯು ಏಕೆ ಪ್ರಾಪ್ತವಾಗುವುದಿಲ್ಲ? ।೩೩೧॥

ಆದ್ದರಿಂದ, ನೀವು ಹೇಳಿದ ಇದರಲ್ಲಿ ಯಾವ ಸಂಶಯವೂ ಇಲ್ಲ. ಆದರೆ ಕ್ಷಣ ಹೊತ್ತು ನಾನು ಮಾಡುವ ವಿನಂತಿಗಾಗಿ ಲಕ್ಷ ಕೊಡಿರಿ ।೩೩೨॥

ಕೃಷ್ಣಾ, ನೀವು ನನಗೆ ಹೇಳಿದ ಈ ಯೋಗವು ನನ್ನ ಮನಸ್ಸಿಗೆ ಮಾತ್ರ ಬಹಳ ಹಿಡಿಸಿತು. ಆದರೆ ನನ್ನ ಯೋಗ್ಯತೆಯು ಕಡಿಮೆ ಇರುವುದರಿಂದ ನನ್ನಿಂದ ಇದನ್ನು ಮಾಡಲು ಶಕ್ಯವಿಲ್ಲ ।೩೩೩॥

ನನ್ನಲ್ಲಿರುವ ಸರ್ವಶಕ್ತಿಯನ್ನು ಉಪಯೋಗಿಸುವುದರಿಂದ ಇದು ಪೂರ್ಣಗೊಂಡರೆ ಮಾತ್ರ, ನಾನು ಬಹಳ ಸಮಾಧಾನದಿಂದ ಇದರ ಅಭ್ಯಾಸ ಮಾಡುವೆನು ।೩೩೪॥

ಅಥವಾ ದೇವಾ, ನೀವು ಹೇಳಿದಂತೆ ನನ್ನಿಂದಾಗದಿದ್ದರೆ, ನನಗೆ ನೀಗುವುದನ್ನೇ ನಾನು ವಿಚಾರಿಸಬೇಕಾಗಿದೆ ।೩೩೫॥

ಈ ಪ್ರಕಾರವಾಗಿ ನನ್ನ ಮನದಲ್ಲಿ ಅಪೇಕ್ಷೆ ಉತ್ಪನ್ನವಾದ್ದರಿಂದ ನಿಮಗೆ ವಿಚಾರಿಸುವ ಕಾರಣವಾಯಿತು. ಅರ್ಜುನನು ಹೇಳಿದನು :- ದೇವಾ, ಆದ್ದರಿಂದ ನೀವು ಈ ನನ್ನ ಮಾತಿಗೆ ಲಕ್ಷ ಕೊಡಿರಿ ।೩೩೬॥

ಹಾಂಹೋ ಜೇ ಅವಧಾರಿಲೇ । ಜೇ ಹೇ ಸಾಧನ ತುಮ್ಹೀ ನಿರೂಪಿಲೇ । ತೇ ಆವಡತಯಾಹಿ ಅಭ್ಯಾಸಿಲೇ । ಘಾವೋ ಶಕೇ? ॥೩೩೭॥ ಕೀ ಯೋಗ್ಯತೇವೀಣ ನಾಹೀ । ಐಸೇ ಹನ ಆಹೇ ಕಾಂಹೀ । ತೇಥ ಶ್ರೀಕೃಷ್ಣ ಮ್ಹಣತೀ ಕಾಈ । ಧನುರ್ಧರಾ ॥೩೩೮॥ ಹೇ ಕಾಜ ಕೀರ ನಿರ್ವಾಣ । ಪರಿ ಆಣಿಕಹೀ ಜೇ ಕಾಂಹೀ ಸಾಧಾರಣ । ತೇಂಹೀ ಅಧಿಕಾರಾಚೇ ವೋಡವೇವಿಣ । ಕಾಯ ಸಿದ್ಧೀ ಜಾಯ? ॥೩೩೯॥ ಪೈ ಯೋಗ್ಯತಾ ಜೇ ಮ್ಹಣಿಜೇ । ತೇ ಪ್ರಾಪ್ತೀಚೇ ಆಧೀನ ಜಾಣಿಜೇ । ಕಾ ಜೇ ಯೋಗ್ಯ ಹೋಊನಿ ಕೀಜೇ । ತೇ ಆರಂಭಿಲೇ ಫಳೇ ॥೩೪೦॥ ತರೀ ತೈಸೀ ಏಥ ಕಾಂಹೀ । ಸಾವಿಯಾಚಿ ಕೇಣೀ ನಾಹೀ । ಆಣಿ ಯೋಗ್ಯತೇಚಿ ಕಾಈ । ಖಾಣೀ ಅಸೇ? ॥೩೪೧॥ ನಾವೇಕ ವಿರಕ್ತು । ಜಾಹಲಾ ದೇಹಧರ್ಮೀ ನಿಯತು । ತರೀ ತೋಚಿ ನವ್ಹೇ ವ್ಯವಸ್ಥಿತು । ಅಧಿಕಾರಿಯಾ ? ॥೩೪೨॥ ಯೇತುಲಾಲಿಯೇ ಆಯಣೀಮಾಜಿವಡೇ । ಯೋಗ್ಯಪಣ ತೂತೇಂಹೀ ಜೋಡೇ । ಐಸೇ ಪ್ರಸಂಗೇ ಸಾಂಕಡೇ । ಫೇಡಿಲೇ ತಯಾಚೇ ॥೩೪೩॥ ಮಗ ಮ್ಹಣೇ ಪಾರ್ಥಾ । ತೇ ಹೇ ಐಸೀ ವ್ಯವಸ್ಥಾ । ಅನಿಯತಾಸಿ ಸರ್ವಥಾ । ಯೋಗ್ಯತಾ ನಾಹೀ ॥೩೪೪॥

ನಾತ್ಯಶ್ನತಸ್ತು ಯೋಗೋऽಸ್ತಿ ನ ಚೈಕಾಂತಮನಶ್ನತಃ ।
ನ ಚಾತಿ ಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥೧೬॥

ಜೋ ರಸನೇಂದ್ರಿಯಾಚಾ ಅಂಕಿಲಾ । ಕಾ ನಿದ್ರೇಸಿ ಜಿವೇ ವಿಕಲಾ । ತೋ ನಾಹೀ ಏಥ ಮ್ಹಣಿತಲಾ । ಅಧಿಕಾರಿಯಾ ॥೩೪೫॥ ಅಥವಾ ಆಗ್ರಹಾಚಿಯೇ ಬಾಂದೋಡೀ । ಕ್ಷುಧಾ ತೃಷಾ ಕೋಂಡೀ । ಆಹಾರಾತೇ ತೋಡೀ । ಮಾರೂನಿಯಾ ॥೩೪೬॥ ನಿದ್ರೇಚಿಯಾ ವಾಟಾ ನವಚೇ । ಐಸಾ ದೃಢೀವೇಚೇನಿ ಅವತರಣೇ ನಾಚೇ । ತೇ ಶರೀರಚೀ ನವ್ಹೇ ತಯಾಚೇ । ಮಾ ಯೋಗು ಕವಣಾಚಾ? ॥೩೪೭॥ ಮ್ಹಣೌನಿ ಅತಿಶಯೇ ವಿಷಯೋ ಸೇವಾವಾ । ತೈಸಾ ವಿರೋಧು ನೋಹಾವಾ । ಕಾ ಸರ್ವಥಾ ನಿರೋಧವಾ । ಹೇಂಹೀ ನಕೋ ॥೩೪೮॥

ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।
ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥೧೭॥

ಆಹಾರ ತರೀ ಸೇವಿಜೇ । ಪರೀ ಯುಕ್ತೀಚೇನಿ ಮಾಪೇ ಮವಿಜೇ । ಕ್ರಿಯಾಜಾತ ಆಚರಿಜೇ । ತಯಾಚಿ ಸ್ಥಿತೀ ॥೩೪೯॥ ಮಿತಲಾ ಬೋಲೀ ಬೋಲಿಜೇ । ಮಿತಲಿಯಾ ಪಾಉಲೀ ಚಾಲಿಜೇ ।ನಿದ್ರೇಹೀ ಮಾನು ದೀಜೇ । ಅವಸರೇ ಏಕೇ ॥೩೫೦॥

ಮಹಾರಾಜರೇ, ನೀವು ಈಗ ಯೋಗ ಸಾಧನೆಯನ್ನು ಹೇಳಿರುವಿರಿ. ನಾನದನ್ನು ಕೇಳಿದೆನು. ಆದರೆ ಯಾರು ಬೇಕಾದರೂ ಈ ಅಭ್ಯಾಸವನ್ನು ಮಾಡಿದರೆ ಅವರಿಗೆ ಈ ಯೋಗದ ಪ್ರಾಪ್ತಿ ಆಗುವುದೇ ? ।೩೩೭॥

ಅಥವಾ ಯೋಗ್ಯತೆಯ ಹೊರತಾಗಿ ಆಗುವುದೇ ಇಲ್ಲ ಎನ್ನುವಂತೆ ಏನಾದರೂ ಇದೆಯೇ? ಆಗ ಶ್ರೀಕೃಷ್ಣನು ಹೇಳಿದನು:- ಅರ್ಜುನಾ ಇದನ್ನು ನೀನು ಹೀಗೇಕೆ ಕೇಳುವೆ ? ।೩೩೮॥

ಈ ಯೋಗಾಭ್ಯಾಸವು ನಿಜವಾಗಿಯೂ ಮೋಕ್ಷವನ್ನು ಕೊಡುವಂತಹದ್ದಾಗಿದೆ. ಆದರೆ ಇದರ ಹೊರತಾಗಿಯೂ ಬೇರೆ ಸಾಧಾರಣ ಸಾಧನೆಗಳಿಗೂ ಸಹ ಅಧಿಕಾರದ ಯೋಗ್ಯತೆ ಇಲ್ಲದೇ ಸಾಧಿಸುವುದೇ? ।೩೩೯॥

ಆದರೆ ಯೋಗ್ಯತೆ ಎಂದು ಯಾವುದಕ್ಕೆ ಹೇಳುವರೋ ಅದು ಪ್ರಾಪ್ತಿಯ ಆರಂಭಕ್ಕೆ ತಿಳಿಯುವುದಿಲ್ಲ. ಕಾರಣ ಅಧಿಕಾರಿಯಾಗಿ ಆರಂಭಿಸಿದ ಕಾರ್ಯಗಳು ತತ್ಕಾಲದಲ್ಲಿ ಫಲದ್ರೂಪವಾಗುವುವು ।೩೪೦॥

ಆದರೆ ಇಲ್ಲಿ ಅಂತಹದ್ದೇನು ನಿಜವಾಗಿಯೂ ಅಡಚಣೆ ಇಲ್ಲ. ಮತ್ತೊಂದು ಹೇಳಬೇಕೆಂದರೆ, ಯೋಗ್ಯತೆ ಎಂಬುದೊಂದು (ಭಾಂಡಾರ) ಗಣಿ ಇದೆಯೇ ? ।೩೪೧॥

ಯಾವಾತನು ಸ್ವಲ್ಪಾದರೂ ವೈರಾಗ್ಯ ತಾಳಿ ದೇಹದ ಧರ್ಮಗಳ ನಿಯಮವನ್ನು ವ್ಯವಸ್ಥಿತವಾಗಿ ಮಾಡುವನೋ, ಆತನೂ ಸಹ ಅಧಿಕಾರಿಯಾಗುವುದಿಲ್ಲವೇ? ।೩೪೨॥

ಈ ಯುಕ್ತಿಯಿಂದ ಇಷ್ಟು ಯೋಗ್ಯತೆ ನಿನ್ನಲ್ಲಿದೆ. ಈ ಪ್ರಕಾರವಾಗಿ ಅರ್ಜುನನ ಆ ಸಮಯದ ಸಂಕಟ ನಿವಾರಿಸಿದನು ।೩೪೩॥

ಆಗ ಶ್ರೀಕೃಷ್ಣನು ಹೇಳಿದನು:- ಪಾರ್ಥಾ, ಈ ಯೋಗ ಪ್ರಾಪ್ತಿಯ ವ್ಯವಸ್ಥೆಯು ಈ ಪ್ರಕಾರವಾಗಿ ಇರುವುದು. ಆದರೆ ಅವ್ಯವಸ್ಥಿತ ಮನುಷ್ಯನಿಗೆ ಇದರ ಪ್ರಾಪ್ತಿಯಾಗುವುದು, ಯಾವಾಗಲೂ ಸಾಧ್ಯವಿಲ್ಲ ।೩೪೪॥

ಶ್ಲೋಕಾರ್ಥ :- ಅತಿಯಾಗಿ ತಿನ್ನುವವನಿಗೂ, ಏನು ತಿನ್ನದೆ ಇರುವವನಿಗೂ, ಮಿತಿಮೀರಿ ನಿದ್ರಿಸುವವನಿಗೂ, ಮಿತಿಮೀರಿ ಎಚ್ಚೆತ್ತಿರುವವನಿಗೂ ಯೋಗವು ಸಿದ್ಧಿಸುವುದಿಲ್ಲ ।೧೬॥

ಯಾರು ರಸನೇಂದ್ರಿಯ (ನಾಲಿಗೆಯ) ಅಂಕಿತನಾಗಿ ರುವನೋ ಮತ್ತು ಯಾವಾಗಲೂ ನಿದ್ರೆಯ ಆಧೀನನಾಗಿ ನಿದ್ರೆಗೆ ತನ್ನನ್ನು ಮಾರಿಕೊಂಡಿರುವನೋ ಆತನು ಈ ಯೋಗದ ಅಧಿಕಾರಿ ಎಂದು ಪರಿಗಣಿಸಲಾಗದು ।೩೪೫॥

ಅಥವಾ ದುರಾಗ್ರಹದ ಆವೇಶದಲ್ಲಿ ಹಸಿವೆ ಮತ್ತು ನೀರಡಿಕೆಯನ್ನು ಕಟ್ಟಿ ಹಿಡಿದಾಕುವವನು ಮತ್ತು ಊಟವನ್ನು ಕಡಿಮೆ ಮಾಡುವವನು ।೩೪೬॥

ಮತ್ತು ನಿದ್ರೆಯ ಹೆಸರು ಸಹ ಎತ್ತದೇ ಬಲವಾದ ಅಭಿಮಾನವನ್ನು ಹಿಡಿಯುವವನಿಗೆ ತನ್ನ ಶರೀರವೂ ಸಹ ತನ್ನ ಆಧೀನವಾಗಿರುವುದಿಲ್ಲ. ಅಂದಮೇಲೆ ಆತನಿಗೆ ಯೋಗವು ಹೇಗೆ ಸಾಧಿಸಬೇಕು ? ।೩೪೭॥

ಆದ್ದರಿಂದ ವಿಷಯಗಳ ಅತೀ ಸೇವನೆ ಮಾಡುವ ಅಥವಾ ಅವುಗಳ ಪೂರ್ಣ ತ್ಯಾಗ ಮಾಡುವ ಇಚ್ಛೆ ಮಾಡಕೂಡದು. ಎಲ್ಲ ಸಂಗತಿಗಳು ನಿಯಮಿತವಾಗಿರಬೇಕು ।೩೪೮॥

ಶ್ಲೋಕಾರ್ಥ :- ಆಹಾರ ವಿಹಾರಗಳಲ್ಲಿ, ಗತಿ-ಸ್ಥಿತಿಗಳಲ್ಲಿ, ನಿದ್ರೆ - ಎಚ್ಚರಗಳಲ್ಲಿ, ಯುಕ್ತನಾಗಿರುವವನಿಗೆ ಯೋಗವು ಸುಖವಾಗಿ ಸಿದ್ಧಿಸುತ್ತದೆ ।೧೭॥

ಅನ್ನ ಆಹಾರಗಳನ್ನು ಸೇವಿಸಬೇಕು. ಆದರೆ ಅದನ್ನು ಯುಕ್ತಿಯಿಂದ ಪರಿಮಿತಗೊಳಿಸಬೇಕು. ಅದರಂತೆ ಉಳಿದ ಎಲ್ಲ ಕ್ರಿಯೆಗಳೂ ಹೀಗೆಯೇ ಇರಬೇಕು ।೩೪೯॥

ಮಾತನಾಡುವುದು ಪರಿಮಿತಿಯಾಗಿರಬೇಕು. ಅದರಂತೆ ಕಾಲು ನಡುಗೆಯೂ ಪರಿಮಿತಿಯಾಗಿರಬೇಕು ಮತ್ತು ನಿದ್ರೆಯನ್ನು ಸಹ ನಿಯಮಿತ ವೇಳೆಯಲ್ಲಿ ಮಾಡಬೇಕು ।೩೫೦॥

ಜಾಗಣೇ ಜರೀ ಜಾಹಲೇ । ತರೀ ಹೋಆವೇ ತೇ ಮಿತಲೇ । ಯೇತುಲೇನಿ ಧಾತು ಸಾಮ್ಯ ಸಂಚಲೇ । ಅಸೇಲ ಸಹಜೇ ॥೩೫೧॥ ಐಸೇ ಯುಕ್ತೀಚೇನಿ ಹಾತೇ । ಜೇ ಇಂದ್ರಿಯಾ ವೋಪಿಜೇ ಭಾತೇ । ತೈ ಸಂತೋಷಾಸೀ ವಾಢತೇ । ಮನಚಿ ಕರೀ ॥೩೫೨॥

ಯದಾ ವಿನಿಯತಂ ಚಿತ್ತಂ ಆತ್ಮನ್ಯೇವಾವತಿಷ್ಠತೇ ।
ನಿಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥೧೮॥

ಬಾಹೇರ ಯುಕ್ತೀಚೀ ಮುದ್ರಾ ಪಡೇ । ತಂವ ಆಂತ ಆಂತ ಸುಖ ವಾಢೇ । ತೇಥೇ ಸಹಜೇಂಚಿ ಯೋಗು ಘಡೇ । ನಾಭ್ಯಾಸಿತಾ ॥೩೫೩॥ ಜೈಸೇ ಭಾಗ್ಯಾಚಿಯಾ ಭಡಸೇ । ಉದ್ಯಮಾಚೇನಿ ಮಿಸೇ । ಮಗ ಸಮೃದ್ಧಿ ಜಾತ ಆಪೈಸೇ । ಘರ ರಿಘೇ ॥೩೫೪॥ ತೈಸಾಯುಕ್ತೀಮಂತು ಕೌತುಕೇ । ಅಭ್ಯಾಸಾಚಿಯಾ ಮೋಹರಾ ಠಾಕೇ । ಆಣೀ ಆತ್ಮಸಿದ್ಧೀಚಿ ಪಿಕೇ । ಅನುಭವು ತಯಾಚಾ ॥೩೫೫॥ ಮ್ಹಣೌನಿ ಯುಕ್ತಿ ಹೇ ಪಾಂಡವಾ । ಘಡೇ ಜಯಾ ಸದೈವಾ । ತೋ ಅಪವರ್ಗೀಚಿಯೇ ರಾಣಿವಾ । ಅಳಂಕಾರಿಜೇ ॥೩೫೬॥

ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ ।
ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ ॥೧೯॥

ಯುಕ್ತಿ ಯೋಗಾಚೇ ಆಂಗ ಪಾವೇ । ಐಸೇ ಪ್ರಯಾಗ ಜೇಥ ಹೋಯ ಬರವೇ । ತೇಥ ಕ್ಷೇತ್ರಸಂನ್ಯಾಸೇ ಸ್ಥಿರಾವೇ । ಮಾನಸ ಜಯಾಚೇ ॥೩೫೭॥ ತಯಾತೇ ಯೋಗ ಯುಕ್ತ ತೂ ಮ್ಹಣ । ಹೇಂಹೀ ಪ್ರಸಂಗೇ ಜಾಣ । ತೇ ದೀಪಾಚೇ ಉಪಲಕ್ಷಣ । ನಿರ್ವಾತೀಂಚಿಯಾ ॥೩೫೮॥ ಆತಾ ತುಝೇ ಮನೋಗತ ಜಾಣೋನೀ । ಕಾಂಹೀ ಏಕ ಆಮ್ಹೀ ಮ್ಹಣೌನಿ । ತೇ ನಿಕೇ ಚಿತ್ತ ದೇಉನೀ । ಪರಿಸಾವೇ ಗಾ ॥೩೫೯॥ ತೂ ಪ್ರಾಪ್ತೀಚೀ ಚಾಡ ವಾಹಸೀ । ಪರೀ ಅಭ್ಯಾಸೀ ದಕ್ಷು ನವ್ಹಸೀ । ತೇ ಸಾಂಗ ಪಾ ಕಾಯ ಬಿಹಸೀ । ದುವಾಡಪಣಾ? ॥೩೬೦॥ ತರೀ ಪಾರ್ಥಾ ಹೇ ಝಣೇ । ಸಾಯಾಸ ಘೇಶೀ ಹೋ ಮನೇ । ವಾಯಾ ಬಾಗೂಲ ಇಯೇ ದುರ್ಜನೇ । ಇಂದ್ರಿಯೇ ಕರಿತೀ ॥೩೬೧॥ ಪಾಹೇ ಪಾ ಆಯುಷ್ಯಾತೇ ಆಢಳ ಕರೀ । ಜೇ ಸರತೇ ಜೀವಿತ ವಾರೀ । ತಯಾ ಔಷಧಾತೇ ವೈರೀ । ಕಾಯ ಜಿವ್ಹಾ ನ ಮ್ಹಣೇ ॥೩೬೨॥ ಐಸೇ ಹಿತಾಸಿ ಜೇ ಜೇ ನಿಕೇ । ತೇ ಸದಾಚಿ ಯಾ ಇಂದ್ರಿಯಾ ದುಃಖೇ । ಏರ್ವ್ಹವೀ ಸೋಪೇ ಯೋಗಾ ಸಾರಿಖೇ । ಕಾಂಹೀ ಆಹೇ? ॥೩೬೩॥

ಜಾಗರಣೆ ಮಾಡಬೇಕಾದರೂ ಅದು ಸಹ ಪರಿಮಿತವಾಗಿರಬೇಕು. ಈ ಪ್ರಕಾರವಾಗಿ ನಿಯಮಿತ ರೀತಿಯಲ್ಲಿ ಆಚರಣೆ ಮಾಡಿದಾಗ ಶರೀರದಲ್ಲಿನ ಸಪ್ತ ಧಾತುಗಳು ಸಮತೋಲದಿಂದ ಸಹಜವಾಗಿ ಇರುವುವು ।೩೫೧॥

ಈ ಪ್ರಕಾರವಾಗಿ ಯುಕ್ತಿಯಿಂದ ನಿಧಾನವಾಗಿ ಇಂದ್ರಿಯಗಳಿಗೆ ತೃಪ್ತಿಕೊಟ್ಟಲ್ಲಿ ಆಗ ತನ್ನ ಮನವೇ ಸಂತೋಷದ ವೃದ್ಧಿ ಮಾಡುತ್ತದೆ ।೩೫೨॥

ಶ್ಲೋಕಾರ್ಥ :- ಚಿತ್ತವು ನಿಯಮಿಸಲ್ಪಟ್ಟು ಆತ್ಮಾನುಸಂಧಾನದಲ್ಲಿ ಸ್ಥಿರವಾದರೆ ಆಗ ಕೋರಿಕೆಗಳನ್ನೆಲ್ಲ ತ್ಯಜಿಸಿ ಯೋಗಸಿದ್ಧಿಯನ್ನು ಪಡೆಯುತ್ತಾನೆ ।೧೮॥

ಈ ಪ್ರಕಾರವಾಗಿ ಹೊರಗಿನ ಇಂದ್ರಿಯಗಳ ಸ್ಥಿತಿಯನ್ನು ನಿಯಮಬದ್ಧವಾಗಿ ಇಡುವುದರಿಂದ ಅಂತರ್ಯಾಮಿಯು ಸುಖ ಹೊಂದಿ ಆತನಿಗೆ ಅಭ್ಯಾಸ ಮಾಡದೇ ಯೋಗವು ಸಾಧಿಸುವುದು ।೩೫೩॥

ಭಾಗ್ಯೋದಯದ ಕಾಲವು ಒದಗಿ ಬಂದಾಗ ಉದ್ಯೋಗದ ನಿಮಿತ್ತದಿಂದ ಸರ್ವಪ್ರಕಾರದ ಸಂಪತ್ತು ತಾನಾಗಿಯೇ ಮನೆಗೆ ನಡೆದು ಬರುವುದು ।೩೫೪॥

ಅದರಂತೆಯೇ ನಿಯಮಶೀಲರಾದವರು ಕೌತುಕದಿಂದಲಾದರೂ ಯೋಗಾಭ್ಯಾಸದ ಕಡೆ ಒಲವು ತೋರಿಸಿದಲ್ಲಿ ಆತನಿಗೆ ಆತ್ಮಸ್ಥಿತಿಯ ಅನುಭವವು ಬಂದೇ ಬರುವುದು ।೩೫೫॥

ಆದ್ದರಿಂದ ಅರ್ಜುನಾ ಇಂತಹ ದೈವವುಳ್ಳ ಪುರುಷನಿಗೆ ಯುಕ್ತಿಯ ಸಹಾಯವು ಇರುತ್ತದೆ. ಆತನು ಮೋಕ್ಷದ ರಾಜ್ಯದಿಂದ ಅಲಂಕೃತನಾಗುವನು ।೩೫೬॥

ಶ್ಲೋಕಾರ್ಥ :- ಯೋಗಾಭ್ಯಾಸಿಯ ಚಿತ್ತವು ಗಾಳಿಯಿಲ್ಲದ ಸ್ಥಳದಲ್ಲಿಯ ದೀಪದಂತೆ ನಿಶ್ಚಲವಾಗಿರುವುದು ।೧೯॥

ನಿಯಮಿತನಿಗೆ ಯೋಗದ ಇಚ್ಛೆ ಆದರೆ ಅದು ಗಂಗಾ-ಯಮುನೆಗಳ ಸಂಗಮದಂತೆ ಪ್ರಯಾಗ ತೀರ್ಥವಾಗುವುದು. ಆ ಆತ್ಮಸ್ವರೂಪ ಪ್ರಯಾಗ ತೀರ್ಥದಲ್ಲಿ ಆತನ ಮನಸ್ಸು ಕ್ಷೇತ್ರ ಸಂನ್ಯಾಸಿಯಂತೆ ಸ್ಥಿರವಾಗುವುದು ।೧೫೭॥

ಅಂತಹವನಿಗೆ ನೀನು ಯೋಗಿ ಎಂದು ಸಂಭೋಧಿಸು, ಆತನ ಚಿತ್ತವು ಗಾಳಿ ಇಲ್ಲದ ಸ್ಥಳದಲ್ಲಿನ ದೀಪದಂತೆ ಎಂದು ಈ ಪ್ರಸಂಗದಲ್ಲಿ ಲಕ್ಷದಲ್ಲಿಡು ।೩೫೮॥

ಈಗ ನಾನು ನಿನ್ನ ಮನಸ್ಸಿನ ಮನೋಗತವನ್ನು ತಿಳಿದು ನಿನಗೆ ಕೆಲವು ಸಂಗತಿಗಳನ್ನು ಹೇಳುವೆನು ಲಕ್ಷಕೊಟ್ಟು ಕೇಳು ।೩೫೯॥

ನೀನು ಯೋಗಪ್ರಾಪ್ತಿಯ ಇಚ್ಛೆಯನ್ನು ಮನಸ್ಸಿನಲ್ಲಿ ತಂದಿರುವೆ. ಆದರೆ ಅಭ್ಯಾಸದತ್ತ ನಿನ್ನ ಲಕ್ಷವಿಲ್ಲ. ಅಂದಮೇಲೆ ಈ ಅಭ್ಯಾಸವು ಬಹಳ ಕಠಿಣವೆಂದು ನಿನ್ನ ಮನಸ್ಸಿನಲ್ಲಿ ಭಯವಿದೆಯೇ ಹೇಳು ? ।೩೬೦॥

ಪಾರ್ಥಾ ಕದಾಚಿತ್ ನೀನು ಈ ಭಯವನ್ನು ಮನಸ್ಸಿನಲ್ಲಿ ತರಬೇಡ. ಏಕೆಂದರೆ ಈ ದುರ್ಜನ ಇಂದ್ರಿಯಗಳು ಆ ಅಭ್ಯಾಸಕ್ಕೆ ಸುಮ್ಮನೆ ''ಬೆದರು ಗೊಂಬೆ'' ಮಾಡಿ ಭಯಹುಟ್ಟಿಸುವುವು ।೩೬೧॥

ಇಲ್ಲಿ ನೋಡು; ಆಯುಷ್ಯ ವೃದ್ಧಿಗೊಳಿಸುವ, ಮತ್ತು ಮೃತ್ಯುವಿನಿಂದ ಪಾರು ಮಾಡುವ ಔಷಧಕ್ಕೆ ನಾಲಿಗೆಯು ಶತ್ರುವೆಂದು ಭಾವಿಸುವುದಿಲ್ಲವೇ? ।೩೬೨॥

ಅದರಂತೆ ಪರಲೌಕಿಕ ಹಿತಸಾಧನೆಗೆ ಯಾವಾಗಲೂ ಇಂದ್ರಿಯಗಳು ದುಃಖದಾಯಕವೆಂದು ತಿಳಿಯುವುವು. ಸಾಮಾನ್ಯವಾಗಿ ಈ ಯೋಗ ಸಾಧನದಂತಹ ಸುಲಭ ಸಾಧನವು ಬೇರೆ ಉಂಟೇನು? ।೩೬೩॥

ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।
ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥೨೦॥

ಸುಖಮಾತ್ಯಂತಿಕಂ ಯತ್ತತ್ ಬುದ್ಧಿಗ್ರಾಹ್ಯಮತೀಂದ್ರಿಯಮ್ ।
ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥೨೧॥

ಮ್ಹಣೌನಿ ಆಸನಾಚಿಯಾ ಗಾಢಿಕಾ । ಜೋ ಆಮ್ಹೀ ಅಭ್ಯಾಸು ಸಾಂಗಿತಲಾ ನಿಕಾ । ತೇಣೇ ಹೋಈಲ ತರೀ ಹೋ ಕಾ । ನಿರೋಧು ಯಯಾ ॥೩೬೪॥ ಏರ್ಹವೀ ತರೀ ಯೇಣೇ ಯೋಗೇ । ಜೈ ಇಂದ್ರಿಯಾ ವಿಂದಾಣ ಲಾಗೇ । ತೈ ಚಿತ್ತ ಭೇಟೋ ರಿಗೇ । ಆಪಣಪೇಯಾ ॥೩೬೫॥ ಪರತೋನಿ ಪಾಠಿಮೋರೇ ಠಾಕೇ । ಆಣಿ ಆಪಣೆಯಾಂತೇ ಆಪಣ ದೇಖೇ । ದೇಖತಖೇಂವೋ ವೋಳಖೇ । ವ್ಹಣೇ ತತ್ತ್ವ ಹೇ ಮೀ ॥೩೬೬॥ ತಿಯೇ ಓಳಖೀಚೇಸರಿಸೇ । ಸುಖಾಚಿಯಾ ಸಾಮ್ರಾಜ್ಯೀ ಬೈಸೇ । ಮಗ ಆಪಣಪಾ ಸಮರಸೇ । ವಿರೋನಿ ಜಾಯ ॥೩೬೭॥ ಜಯಾಪರತೇ ಆಣಿಕ ನಾಹೀ । ಜಯಾತೆ ಇಂದ್ರಿಯೇ ನೇಣತೀ ಕಹೀ । ತೇ ಆಪಣಚಿ ಆಪುಲಿಯಾ ಠಾಯೀ । ಹೋಊನಿ ಠಾಕೇ ॥೩೬೮॥

ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।
ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥೨೨॥

ಮಗ ಮೇರೂಪಾಸೂನಿ ಥೋರೇ । ದೇಹ ದುಃಖಾಚೇನಿ ಡೋಂಗರೇ । ದಾಟಿಜೋಪಾ ಪಡಿಭರೇ । ಚಿತ್ತ ನ ದಟೇ ॥೩೬೯॥ ಕಾ ಶಸ್ತ್ರೇ ವರೀ ತೋಡಿಲಿಯಾ । ದೇಹ ಅಗ್ನಿಮಾಜೀ ಪಡಲಿಯಾ । ಚಿತ್ತ ಮಹಾಸುಖೀ ಪಹುಡಲಿಯಾ । ಚೇವೋಚಿ ನಯೇ ॥೩೭೦॥ ಐಸೇ ಆಪಣಪಾ ರಿಗೋನಿ ಠಾಯೇ । ಮಗ ದೇಹಾಚೇ ವಾಸು ನ ಪಾಹೇ । ಆಣಿಕಚಿ ಸುಖ ಹೋಊನಿ ಜಾಯೇ । ಮ್ಹಣೌನಿ ವಿಸರೇ ॥೩೭೧॥

ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ ।
ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣಚೇತಸಾ ॥೨೩॥

ಜಯಾ ಸುಖಾಚಿಯಾ ಗೋಡೀ । ಮನ ಆರ್ತೀಚಿ ಸೇಚಿ ಸೋಡೀ । ಸಂಸಾರಾಚಿಯಾ ತೋಂಡೀ । ಗುಂತಲೇ ಜೇ ॥೩೭೨॥ ಜೇ ಯೋಗಾಚೀ ಬರವ । ಸಂತೋಷಾಚೀ ರಾಣಿವ । ಜ್ಞಾನಾಚೀ ಜಾಣಿವ । ಜಯಾಲಾಗೀ ॥೩೭೩॥ ತೇ ಅಭ್ಯಾಸಿಲೇನಿ ಯೋಗೇ । ಸಾವಯವ ದೇಖಾವೇ ಲಾಗೇ । ದೇಖಿಲೇ ತರೀ ಆಂಗೇ । ಹೋಈಜೇಲ ಗಾ ॥೩೭೪॥

ಶ್ಲೋಕಾರ್ಥ :- ಯೋಗ ಸೇವೆಯ ಬಲದಿಂದ ಸ್ವಾಧೀನವಾದ ಚಿತ್ತಕ್ಕೆ ಎಲ್ಲಿ ಉಪಶಾಂತಿ ದೊರಕುತ್ತದೆಯೋ, ಶುದ್ಧಾಂತಃಕರಣದಲ್ಲಿ ಆತ್ಮನನ್ನು ದರ್ಶನ ಮಾಡಿ, ಯೋಗಿಯು ಯಾವ ಸ್ಥಿತಿಯಲ್ಲಿ ಸಂತೃಪ್ತಿಯನ್ನು ಪಡೆಯುತ್ತಾನೋ ।೨೦॥

ಶ್ಲೋಕಾರ್ಥ :- ಉತ್ತಮೋತ್ತಮವಾದ ಸುಖವು ಯಾವುದೋ, ಯಾವುದು ಇಂದ್ರಿಯಗಳಿಗೆ ಅಗೋಚರವಾಗಿದ್ದರೂ ಶುದ್ಧ ಬುದ್ಧಿಗೆ ಗ್ರಾಹ್ಯವಾಗುವುದೋ, ಯಾವ ಸ್ಥಾನದಲ್ಲಿ ಸೇರಿದರೆ ಪುನಃ ಚಲನವಿರುವುದಿಲ್ಲವೋ ।೨೧॥

ಆದ್ದರಿಂದಲೇ ಆಸನಗಳ ಬಲದಿಂದ ನಾವು ಹೇಳಿರುವ ಅಭ್ಯಾಸದ ಯೋಗದಿಂದ ಈ ಇಂದ್ರಿಯಗಳ ನಿಗ್ರಹವು ಆದೀತು ।೩೬೪॥

ಒಂದು ವೇಳೆ ಈ ಯೋಗಸಾಧನೆಗಳಿಂದ ಇಂದ್ರಿಯಗಳಿಗೆ ವೇಧನೆ ಹತ್ತಿದರೆ ಆಗ ತನ್ನಷ್ಟಕ್ಕೆ ತಾನೇ ಚಿತ್ತವು ಆತ್ಮದ ದರ್ಶನಕ್ಕಾಗಿ ಹೊರಡುವುದು ।೩೬೫॥

ಯಾವಾಗಲೂ ಬಹಿರ್ಮುಖವಾಗಿರುವ ಚಿತ್ತವು ತನ್ನ ಹೊರಗಿನ ಜಗ್ಗಾಟ ಬಿಟ್ಟು ಅಂತರ್ಮುಖವಾಗುವುದು. ಆಗ ಆತ್ಮ ದರ್ಶನವಾದೊಡನೆ ಆ ಆತ್ಮ ತತ್ತ್ವವು ನಾನೇ ಇರುವೆ ಎಂಬ ಪ್ರತೀತಿಯುಂಟಾಗುವುದು ।೩೬೬॥

ಈ ಪ್ರತೀತಿಯುಂಟಾದೊಡನೆಯೇ ಅದು ಸುಖದ ರಾಜ್ಯದ ಮೇಲೆ ಕುಳಿತುಕೊಳ್ಳುವುದು. ತದನಂತರ ಆತ್ಮಾನಂದದಲ್ಲಿಯೇ ಲಯವಾಗುವುದು ।೩೬೭॥

ಮತ್ತು ಇದಕ್ಕಿಂತ ಬೇರೆ ಯಾವುದೂ ಅಧಿಕವಲ್ಲದ್ದು ಮತ್ತು ಯಾವುದಕ್ಕೆ ಇಂದ್ರಿಯಗಳು ಎಂದೂ ತಿಳಿಯಲಾರದೋ ಅಂತಹ ಆತ್ಮಸ್ವರೂಪವೆಂದರೆ ಬ್ರಹ್ಮರೂಪವಾಗಿರುವುದು. ಅದು ತಾನೇ ಆಗುವುದು ।೩೬೮॥

ಶ್ಲೋಕಾರ್ಥ :- ಯಾವುದಕ್ಕಿಂತ ಹೆಚ್ಚಿನ ಲಾಭವು ಮತ್ತೊಂದಿಲ್ಲವೋ ಯಾವುದನ್ನು ಹೊಂದಿದವನಿಗೆ ದುಃಖ ಸ್ಪರ್ಶವಿರುವುದಿಲ್ಲವೋ ।೨೨॥

ಆಗ ಈ ಸ್ಥಿತಿ ಹೊಂದಿದನಂತರ ಮೇರು ಪರ್ವತಕ್ಕಿಂತಲೂ ಅಧಿಕ ದುಃಖದೊಂದಿಗೆ ದೇಹವು ಪೀಡಿತಗೊಂಡರೂ ಆ ಚಿತ್ತಕ್ಕೆ ದುಃಖವಾಗುವುದಿಲ್ಲ ।೩೬೯॥

ಒಂದುವೇಳೆ ಶಸ್ತ್ರದಿಂದ ದೇಹವನ್ನು ಕತ್ತರಿಸಿದರೂ ಅಥವಾ ಅಗ್ನಿಯಲ್ಲಿ ಬಿದ್ದರೂ ಸಹ ಮಹಾಸುಖದಲ್ಲಿ ನಿಮಗ್ನವಾಗಿರುವ ಆತನ ಚಿತ್ತವು ಜಾಗೃತವಾಗುವುದಿಲ್ಲ ।೩೭೦॥

ಈ ಪ್ರಕಾರವಾಗಿ ಆತ್ಮಸುಖದಲ್ಲಿ ನಿಮಗ್ನನಾಗಿರುವಾಗ ಆತನು ದೇಹದ ಸ್ಮರಣೆ ಮರೆಯುವನು ಮತ್ತು ಇಂತಹ ಅನಿರ್ವಾಚ್ಯ ಬ್ರಹ್ಮಸುಖವು ಪ್ರಾಪ್ತವಾಗಿದ್ದಕ್ಕೆ ಇತರ ಎಲ್ಲ ಸಂಗತಿಗಳು ಆತನಿಗೆ ಮರುವು ಆಗುವುದು ।೩೭೧॥

ಶ್ಲೋಕಾರ್ಥ :- ದುಃಖ ರಾಜ್ಯ ಪರಿಧಿಗೆ ಯಾವುದು ದೂರವಾಗಿರುವುದೋ, ಅದನ್ನೇ, ಯೋಗವೆಂದು ಕರೆಯುತ್ತಾರೆ. ಅಂಥಾ ಯೋಗವನ್ನು ದೃಢವಾಗಿಯೂ ಸಹನೆಯಿಂದಲೂ ಆಚರಿಸಬೇಕು ।೨೩॥

ಯಾವ ಬ್ರಹ್ಮಸುಖದ ಆನಂದದಿಂದ ಸಂಸಾರದಲ್ಲಿ ತೊಡಕಿಕೊಂಡಿದ್ದ ಮನಸ್ಸು ಇಚ್ಛೆಯ ಸ್ಮರಣೆ ಮಾಡುವುದೇ ಇಲ್ಲ ।೩೭೨॥

ಯಾವುದು ಯೋಗದ ಸೌಂದರ್ಯವಾಗಿ, ಸಂತೋಷದ ಕೇವಲ ರಾಜ್ಯವಾಗಿರುವ ಮತ್ತು ಯಾರಿಗಾಗಿ ಜ್ಞಾನದ ಅವಶ್ಯಕತೆ ಇರುವುದೋ ।೩೭೩॥

ಆ ಬ್ರಹ್ಮಸುಖವು ಅಭ್ಯಾಸದ ಯೋಗದಿಂದ ಮೂರ್ತಿಮಂತವಾಗಿ ಕಾಣಿಸುವುದು ಮತ್ತು ಈ ಸುಖವನ್ನು ಕಾಣುವಾತನು ತದ್‌ರೂಪನಾಗುತ್ತಾನೆ ।೩೭೪॥

ಸಂಕಲ್ಪಪ್ರಭವಾನ್ ಕಾಮಾನ್ ತ್ಯಕ್ತ್ವಾ ಸರ್ವಾನಶೇಷತಃ ।
ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ॥೨೪॥

ತರೀ ತೋಚಿ ಯೋಗು ಬಾಪಾ । ಏಕೇ ಪರೀ ಆಹೇ ಸೋಪಾ । ಜರೀ ಪುತ್ರಶೋಕು ಸಂಕಲ್ಪಾ । ದಾಖವಿಜೇ ॥೩೭೫॥ ಹಾ ವಿಷಯಾತೇ ನಿಮಾಲಿಯಾ ಆಇಕೇ । ಇಂದ್ರಿಯೇ ನೇಮಾಚಿಯಾ ಧಾರಣೀ ದೇಖೇ । ತರೀ ಹಿಯೇ ಫಾಲೂನಿ ಮುಕೇ । ಜೀವಿತ್ವಾಸೀ ॥೩೭೬॥ ಐಸೇ ವೈರಾಗ್ಯ ಹೇ ಕರೀ । ತರೀ ಸಂಕಲ್ಪಾಚೀ ಸರೇ ವಾರೀ । ಸುಖೇ ಧೃತೀಚಿಯಾ ಧವಳಾರೀ । ಬುದ್ಧಿ ನಾಂದೇ ॥೩೭೭॥

ಶನೈಃ ಶನೈರುಪರಮೇತ್ ಬುದ್ಧ್ಯಾ ಧೃತಿಗೃಹೀತಯಾ ।
ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ ॥೨೫॥

ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ ।
ತತಸ್ತತೋ ನಿಯಮ್ಯೈತತ್ ಆತ್ಮನ್ಯೇವ ವಶಂ ನಯೇತ್ ॥೨೬॥

ಬುದ್ಧೀ ಧೈರ್ಯಾ ಹೋಯ ವಸೌಟಾ । ತರೀ ಮನಾತೇ ಅನುಭವಾಚಿಯಾ ವಾಟಾ । ಹಳು ಹಳು ಕರೀ ಪ್ರತಿಷ್ಠಾ । ಆತ್ಮಭುವನೀ ॥೩೭೮॥ ಯಾಹೀ ಏಕೇ ಪರೀ । ಪ್ರಾಪ್ತಿ ಆಹೇ ವಿಚಾರೀ । ಹೇ ನ ಠಕೇ ತರೀ ಸೋಪಾರೀ । ಆಣಿಕ ಐಕೇ ॥೩೭೯॥ ಆತಾ ನಿಯಮುಚಿ ಹಾ ಏಕಲಾ । ಜೀವೇ ಕರಾವಾ ಆಪುಲಾ । ಜೈಸಾ ಕೃತನಿಶ್ಚಯಾಚಿಯಾ ಬೋಲಾ । ಬಾಹೇರಾ ನೋಹೇ ॥೩೮೦॥ ಜರೀ ಯೇತುಲೇನಿ ಚಿತ್ತ ಸ್ಥಿರಾವೇ । ತರೀ ಕಾಜಾ ಆಲೇ ಸ್ವಭಾವೇ । ನಾಹೀ ತರೀ ಘಾಲಾವೇ । ಮೋಕಲುನೀ ॥೩೮೧॥ ಮಗ ಮೋಕಲಿಲೇ ಜೇಥ ಜಾಈಲ । ತೇಥೂನಿ ನಿಯಮೂಚಿ ಘೇಉನಿ ಯೇಈಲ । ಐಸೇನಿ ಸ್ಥೈರ್ಯಚಿ ಹೋಈಲ । ಸಾವಿಯಾಚಿ ಕೀ ॥೩೮೨॥

ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।
ಉಪೈತಿ ಶಾಂತರಜಸಂ ಬ್ರಹ್ಮಭೂತಕಮಕಲ್ಮಷಮ್ ॥೨೭॥

ಪಾಠೀ ಕೇತುಲೇನಿ ಏಕೇ ವೇಳೇ । ಯಾ ಸ್ಥೈರ್ಯಾಚೇನಿ ಮೇಳೇ । ಆತ್ಮಸ್ವರೂಪಾ ಜವಳೇ । ಯೇಈಲ ಸಹಜೇ ॥೩೮೩॥ ತಯಾತೇ ದೇಖೋನಿ ಆಂಗಾ ಘುಡೇಲ । ತೇಥ ಅದ್ವೈತೀ ದ್ವೈತ ಬುಡೇಲ । ಆಣಿ ಐಕ್ಯತೇಜೇ ಉಘಡೇಲ । ತ್ರೈಲೋಕ್ಯ ಹೇ ॥೩೮೪॥

ಶ್ಲೋಕಾರ್ಥ :- ಸಂಕಲ್ಪದಿಂದ ಹುಟ್ಟಿದ ಕೋರಿಕೆಗಳನ್ನು ಪೂರ್ಣ ತ್ಯಜಿಸಿ,ಮನಸ್ಸಿನಿಂದ ಇಂದ್ರಿಯ ಸಮುದಾಯವನ್ನು ನಿಗ್ರಹಿಸಿ ।೨೪॥

ಆದಾಗ್ಯೂ ಅರ್ಜುನಾ ಒಂದು ರೀತಿಯಲ್ಲಿ ಈ ಯೋಗವು ಸುಲಭವಾಗಿದೆ. ಆದರೆ ಸಂಕಲ್ಪಕ್ಕೆ ಪುತ್ರಶೋಕವಾಗಬೇಕು. (ಅಂದರೆ ಕಾಮಕ್ರೋಧಾದಿಗಳು ನಷ್ಟವಾಗಬೇಕು) ।೩.೭೫॥

ವಿಷಯಗಳು ಲಯಗೊಂಡದ್ದು ಈ ಸಂಕಲ್ಪವು ಕೇಳಿ ಮತ್ತು ಇಂದ್ರಿಯಗಳು ನಿಯಮಿತದಿಂದ ನಡೆಯುವುದನ್ನು ಕಂಡು ಇದು ಎದೆ ಒಡೆದು ಸಾಯುವುದು ।೩.೭೬॥

ಈ ಪ್ರಕಾರವಾಗಿ ವೈರಾಗ್ಯವು ಪ್ರಾಪ್ತವಾದ ಮೇಲೆ ಸಂಕಲ್ಪದ ಯಾತ್ರೆಯು ಮುಗಿಯುವುದು ಮತ್ತು ಧೈರ್ಯದ ಮಂದಿರದಲ್ಲಿ ಬುದ್ಧಿಯು ಸುಖವಾಗಿ ವಾಸಮಾಡುವುದು ।೩.೭೭॥

ಶ್ಲೋಕಾರ್ಥ :- ಧೈರ್ಯದಿಂದ ಕೂಡಿದ ಬುದ್ಧಿಯಿಂದ ವಿಷಯಗಳನ್ನು ಮೆಲ್ಲಮೆಲ್ಲಗೆ ತಡೆದು, ಮನಸ್ಸನ್ನು ಆತ್ಮನಲ್ಲಿ ನಿಲ್ಲಿಸಿ, ಯೋಗಿಯು ನಿಶ್ಚಿಂತನಾಗಿರಬೇಕು ।೨೫॥

ಶ್ಲೋಕಾರ್ಥ :- ಮನಸ್ಸು ಚಲಿಸಿದಾಗಲೆಲ್ಲಾ ನಿಗ್ರಹಿಸುತ್ತಾ ಅದನ್ನು ಆತ್ಮನಲ್ಲಿ ನಿಲ್ಲಿಸಲು ಯೋಗಿಯು ಯತ್ನಿಸಬೇಕು ।೨೬।

ಬುದ್ಧಿಗೆ ಧೈರ್ಯದ ಆಶ್ರಯ ದೊರೆಯಿತೆಂದರೆ ಅದು ಕ್ರಮವಾಗಿ, ಸಾವಕಾಶವಾಗಿ ಮನಸ್ಸನ್ನು ಬ್ರಹ್ಮಾನುಭವ ಮಾರ್ಗಕ್ಕೆ ಹಚ್ಚಿ ಅದನ್ನು ಬ್ರಹ್ಮಸ್ವರೂಪದಲ್ಲಿ ಸ್ಥಾಪಿಸುವುದು ।೩.೭೮॥

ಈ ಒಂದು ಮಾರ್ಗದಿಂದ ಬ್ರಹ್ಮಪ್ರಾಪ್ತಿಯಾಗುವುದು ಮತ್ತು ಇದು ಸಹ ಸಾಧಿಸದಿದ್ದರೆ, ಇದಕ್ಕಿಂತಲೂ ಸುಲಭವಾದ ಮಾರ್ಗ ಒಂದನ್ನು ಹೇಳುವೆ ಕೇಳು ।೩.೭೯॥

ಒಮ್ಮೆ ಮಾಡಿದ ನಿಶ್ಚಯವನ್ನು ಎಂದೂ ಭಂಗಗೊಳ್ಳದಂತೆ, ಅದು ಒಂದು ನಿಯಮವನ್ನಾಗಿ ಸಾಧಕನು ಪಾಲಿಸಬೇಕು ।೩.೮೦॥

ಈ ಪ್ರಕಾರದ ನಿಶ್ಚಯದಿಂದ ಚಿತ್ತವು ಸ್ಥಿರಗೊಂಡರೆ ಅನಾಯಾಸವಾಗಿ ಕಾರ್ಯಸಾಧಿಸಿದಂತಾಯಿತು. ಒಂದು ವೇಳೆ ಇದಾಗದಿದ್ದರೆ ಆ ಚಿತ್ತಕ್ಕೆ ಸ್ವೈರವಾಗಿ (ತಿಳಿದ ರೀತಿಯಲ್ಲಿ) ನಡೆಯಲು ಬಿಡಬೇಕು ।೩.೮೧॥

ಆಗ ಆ ಚಿತ್ತಕ್ಕೆ ಸ್ವೈರವಾಗಿ ಬಿಟ್ಟ ಮೇಲೆ ಅದು ಹೋದ ಹೋದಲ್ಲೆಲ್ಲ ನಿಶ್ಚಯವು ಅದನ್ನು ತಿರುಗಿ ತರುವುದು ಮತ್ತು ಈ ರೀತಿಯಲ್ಲಿ ಆದು ತತ್ಕಾಲದಲ್ಲಿ ಸ್ಥಿರವಾಗಿರಬಹುದು ।೩.೮೨॥

ಶ್ಲೋಕಾರ್ಥ :- ಇಂಥವನೇ ಯೋಗಿ, ಅವನ ಚಿತ್ತವು ಶಾಂತವಾಗಿದೆ. ಅವನಿಗೆ ವಿಕ್ಷೇಪಗಳಿಲ್ಲ, ಅವನು ಪಾಪರಹಿತನು; ಬ್ರಹ್ಮಸ್ವರೂಪನು, ಅಂಥವನಿಗೆ ಸರ್ವೋತ್ತಮವಾದ ಸುಖವು ಸಿದ್ಧಿಸುತ್ತದೆ ।೨೭॥

ತದನಂತರ, ಈ ಪ್ರಕಾರದ ಅನೇಕ ಸಾರೆ ಸ್ಥಿರವಾಗುವುದರಿಂದ ಅದು ಸಹಜವಾಗಿ ಆತ್ಮಸ್ವರೂಪದತ್ತ ಬರುವುದು ।೩.೮೩॥

ಆಗ ಆ ಆತ್ಮಸ್ವರೂಪವನ್ನು ಕಂಡು ಸ್ವತಃ ತದ್ರೂಪವಾಗುವುದು ಮತ್ತು ಅದ್ವೈತದಲ್ಲಿ ದ್ವೈತವು ಮುಳುಗಿಹೋಗುವುದು. ಅದಲ್ಲದೇ ಐಕ್ಯದ ತೇಜಸ್ಸಿನಿಂದ ಮೂರು ಲೋಕಗಳು ಪ್ರಕಾಶಿತವಾಗುವುವು ।೩.೮೪॥

ಆಕಾಶೀ ದಿಸೇ ದುಸರೇ । ತೈ ಆಭ್ರ ಜೈ ವಿರೇ । ತೈ ಗಗನಚಿ ಭರೇ । ವಿಶ್ವ ಜೈಸೇ ।೪೮೫॥ ತೈಸೇ ಚಿತ್ತ ಲಯಾ ಜಾಯೇ । ಆಣಿ ಚೈತನ್ಯಚಿ ಆಘವೇ ಹೋಯೇ । ಐಸೀ ಪ್ರಾಪ್ತಿ ಸುಖೋಪಾಯೇ । ಆಹೇ ಯೇಣೇ ।೪೮೬॥

ಯುಂಜನ್ನೇವಂ ಸದಾತ್ಮಾನಂ ಯೋಗೀ ವಿಗತಕಲ್ಮಷಃ ।
ಸುಖೇನ ಬ್ರಹ್ಮಸಂಸ್ಪರ್ಶಮ್ ಅತ್ಯಂತಂ ಸುಖಮಶ್ನುತೇ ।೨೮॥

ಯಾ ಸೋಪಿಯಾ ಯೋಗಸ್ಥಿತೀ । ಉಕಲು ದೇಖಿಲಾ ಗಾ ಬಹುತೀ । ಸಂಕಲ್ಪಾಚಿಯಾ ಸಂಪತ್ತೀ । ರುಸೋನಿಯಾ ।೪೮೭॥ ತೇ ಸುಖಾಚೇನಿ ಸಾಂಗಾತೇ । ಆಲೇ ಪರಬ್ರಹ್ಮಾ ಆಂತೌತೇ । ತೇಥ ಲವಣ ಜೈಸೇ ಜಳಾತೇ । ಸಾಂಡು ನೇಣೇ ।೪೮೮॥ ತೈಸೇ ಹೋಯ ತಿಯೇ ಮೇಳೀ । ಮಗ ಸಾಮರಸ್ಯಾಚೇಯಾ ರಾಉಳೀ । ಮಹಾಸುಖಾಚೇ ದಿವಾಳೀ । ಜಗೇಂಸೀ ದಿಸೇ ।೪೮೯॥ ಐಸೇ ಆಪುಲೇ ಪಾಯವರೀ । ಚಾಲಿಜೇ ಆಪುಲೇ ಪಾಠೀವರೀ । ಹೇ ಪಾರ್ಥಾ ನಾಗವೇ ತರೀ । ಆನ ಐಕೇ ।೪೯೦॥

ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।
ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನ ।೨೯॥

ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।
ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ।೩೦॥

ತರೀ ಮೀ ತಂವ ಸಕಳ ದೇಹೀ । ಅಸೇ ಏಥ ವಿಚಾರು ನಾಹೀ । ಆಣಿ ತೈಸೇಂಚಿ ಮಾಝ್ಯಾ ಠಾಯೀ । ಸಕಳ ಅಸೇ।೪೯೧॥ ಹೇ ಐಸೇಂಚಿ ಸಂಚಲೇ । ಪರಸ್ಪರೇ ಮಿಸಳಲೇ । ಬುದ್ಧೀ ಘೇಪೇ ಏತುಲೇ । ಹೋಆವೇ ಗಾ ।೪೯೨॥ ಏರ್ಹವೀ ತರೀ ಅರ್ಜುನಾ । ಜೋ ಏಕವಟಲಿಯಾ ಭಾವನಾ । ಸರ್ವಭೂತೀ ಅಭಿನ್ನಾ । ಮಾತೇ ಭಜೇ ।೪೯೩॥ ಭೂತಾಂಚೇನಿ ಅನೇಕಪಣೇ । ಅನೇಕ ನೋಹೇ ಅಂತಃಕರಣೇ । ಕೇವಳ ಏಕತ್ವಚಿ ಮಾಝೇ ಜಾಣೇ । ಸರ್ವತ್ರ ಜೋ ।೪೯೪॥ ಮಗ ತೋ ಏಕ ಹಾ ಮಿಯಾ । ಬೋಲತಾ ದಿಸತಸೇ ವಾಯಾ । ಏರ್ಹವೀ ನ ಬೋಲಿಜೇ ತರೀ ಧನಂಜಯಾ । ತೋ ಮೀಚಿ ಆಹೇ ।೪೯೫॥ ದೀಪಾ ಆಣಿ ಪ್ರಕಾಶಾ । ಏಕವಂಕೀಚಾ ಪಾಡು ಜೈಸಾ । ತೋ ಮಾಝ್ಯಾ ಠಾಯೀ ತೈಸಾ । ಮೀ ತಯಾಮಾಜೀ ।೪೯೬॥

ಆಕಾಶದಲ್ಲಿ ತನ್ನಿಂದ ಬೇರೆ ಕಾಣುವ ಮೋಡಗಳು ಇಲ್ಲದಂತಾಗಲು ಆ ವೇಳೆಯಲ್ಲಿ ನೋಡಿದಲ್ಲೆಲ್ಲ ಶುದ್ಧ ಆಕಾಶವೇ ಕಾಣುವುದು ।೩೮೫॥

ಅದರಂತೆ ಚಿತ್ತವು ಲಯಗೊಂಡಾಗ ಎಲ್ಲವೂ ಬ್ರಹ್ಮವೇ ಆಗುವುದು. ಈ ಯೋಗರೂಪ ಸುಖಕರ ಉಪಾಯದಿಂದ ಇಂತಹ ದೊಡ್ಡ ಲಾಭವಾಗುವುದು ।೩೮೬॥

ಶ್ಲೋಕಾರ್ಥ :- ಈ ರೀತಿ ನಿರಂತರವಾಗಿ ಮನಸ್ಸನ್ನು ಯೋಗದಲ್ಲಿ ತೊಡಗಿಸಿದ ಯೋಗಿಯು ದೋಷಗಳನ್ನು ನಿವಾರಣೆ ಮಾಡಿಕೊಂಡು ಎಲ್ಲಕ್ಕೂ ಶ್ರೇಷ್ಠವಾದ ಬ್ರಹ್ಮಾನಂದ ಸುಖವನ್ನು ಪಡೆದುಕೊಳ್ಳುತ್ತಾನೆ ।೨೮॥

ಮನಸ್ಸಿನಲ್ಲಿಯ ಸಂಕಲ್ಪ - ವಿಕಲ್ಪಗಳನ್ನು ಬಿಟ್ಟು ಯಾವ ಈ ಸುಲಭ ಯೋಗಸ್ಥಿತಿಯ ಅನುಭವವನ್ನು ಅನೇಕರು ಪಡೆದು ಸುಖಿಗಳಾದರು ।೩೮೭॥

ಅವರು ಈ ಸುಖದ ಸಂಗತಿಯಿಂದ ಪರಬ್ರಹ್ಮ ಪದಕ್ಕೆ ಬಂದು ಮುಟ್ಟಿದರು. ಉಪ್ಪು ನೀರಿನಲ್ಲಿ ಕೂಡಿದಾಗ ಯಾವ ಪ್ರಕಾರವಾಗಿ ನೀರನ್ನು ಬಿಡಲು ಶಕ್ಯವಿಲ್ಲವೋ ।೩೮೮॥

ಅದರಂತೆ (ಜೀವ ಮತ್ತು ಬ್ರಹ್ಮರ) ಐಕ್ಯ ಆದಾಗ ಆ ಸ್ಥಿತಿಯಾಗುವುದು ಮತ್ತು ಆಗ ಬ್ರಹ್ಮಾನಂದದ ಮಂದಿರದಲ್ಲಿ ಮಹಾಸುಖದ ದೀಪಾವಳಿಯನ್ನು ಎಲ್ಲ ಜಗತ್ತಿಗೂ ಆಗಿದೆ ಎಂದು ಕಾಣುವುದು ।೩೮೯॥

ಅದರಂತೆ ತನ್ನ ಕಾಲುಗಳಿಂದಲೇ ತನ್ನ ಬೆನ್ನಿನ ಮೇಲೆ ಯೋಗಿಯು ನಡೆಯುವನು. ಇಂತಹ ಮಾರ್ಗವು ನಿನಗೆ ಕಠಿಣವೆನಿಸಿ ನಡೆಯದಾಗದಿದ್ದರೆ ಇನ್ನೊಂದು ಬೇರೆ ಮಾರ್ಗ ಹೇಳುವೆನು ಕೇಳು ।೩೯೦॥

ಶ್ಲೋಕಾರ್ಥ :- ಯೋಗಯುಕ್ತ ಚಿತ್ತವುಳ್ಳವನಾಗಿ, ಎಲ್ಲೆಲ್ಲಿಯೂ ಸಮದೃಷ್ಟಿಯುಳ್ಳವನಾಗಿ, ತನ್ನನ್ನು ಎಲ್ಲಾ ಭೂತಗಳಲ್ಲಿ ; ತನ್ನಲ್ಲಿ ಎಲ್ಲಾ ಭೂತಗಳನ್ನು ವೀಕ್ಷಿಸುತ್ತಾನೆ ।೨೯॥

ಶ್ಲೋಕಾರ್ಥ :- ಎಲ್ಲವುಗಳಲ್ಲಿ ನನ್ನನ್ನು, ನನ್ನಲ್ಲಿ ಎಲ್ಲವನ್ನು ನೋಡುವವನಿಗೆ ನಾನು ಮರೆಯಾಗುವುದಿಲ್ಲ, ಅವನೂ ನನಗೆ ಮರೆಯಾಗುವುದಿಲ್ಲ ।೩೦॥

ನಾನು ಎಲ್ಲರ ದೇಹಗಳಲ್ಲಿ ಇರುವೆನು ಮತ್ತು ನನ್ನಲ್ಲಿ ಎಲ್ಲವೂ ಇವೆ. ಈ ವಿಷಯದಲ್ಲಿ ಮಾತ್ರ ಯಾವ ವಾದವೂ ಇಲ್ಲವೇ ಇಲ್ಲ ।೩೯೧॥

ಈ ರೀತಿಯಲ್ಲಿ ಜಗತ್ತು ಮತ್ತು ಈಶ್ವರ ಇವು ಒಂದರಲ್ಲಿ ಒಂದು ಕೂಡಿಕೊಂಡಿವೆ. ಆದರೆ ಅದರಂತೆ ಸಾಧಕರ ಬುದ್ಧಿಯಿಂದ ತಿಳಿಯಲ್ಪಡಬೇಕಷ್ಟೇ ।೩೯೨॥

ಅರ್ಜುನನೇ, ಸರ್ವಸಾಮಾನ್ಯವಾಗಿ ನಾನು ಸರ್ವಭೂತಗಳಲ್ಲಿ ವ್ಯಾಪಕನಾಗಿರುವೆ ಎಂದು ತಿಳಿದು ಯಾರು ಭಜಿಸುವರೋ ।೩೯೩॥

ಮತ್ತು ವ್ಯಕ್ತಿಮಾತ್ರರ ಅನೇಕರಿಂದ ಯಾರ ಅಂತಃಕರಣದಲ್ಲಿ ಅನೇಕತ್ವವು ಉತ್ಪನ್ನವಾಗುವುದಿಲ್ಲವೋ ಮತ್ತು ಯಾರು ಎಲ್ಲ ಸ್ಥಳಗಳಲ್ಲಿಯೂ ನಾನೇ ಇರುವೆ ಎಂದು ತಿಳಿದಿರುವರೋ ।೩೯೪॥

ಆತನು ಮತ್ತು ನಾನು ಹೀಗೆ ಹೇಳುವುದೇ ವ್ಯರ್ಥವಾಗುವುದು. ಇಲ್ಲದಿದ್ದರೆ ಧನಂಜಯನೇ, ಇದನ್ನು ಹೇಳಿ ತೋರಿಸದಿದ್ದರೆ, ಆತನ ಮತ್ತು ನನ್ನ ರೂಪವು ಒಂದೇ ಆಗಿರುವುದು ।೩೯೫॥

ಯಾವ ಪ್ರಕಾರವಾಗಿ ದೀಪ ಮತ್ತು ಪ್ರಕಾಶ ಇದರಲ್ಲಿ ಏಕತ್ವದ ಯೋಗ್ಯತೆ ಇರುವುದೋ ಅದೇ ಪ್ರಕಾರವಾಗಿ ಆತನು ನನ್ನಲ್ಲಿ, ನಾನು ಆತನಲ್ಲಿ ಇರುವೆನು ।೩೯೬॥

ಜೈಸಾ ಉದಕಾಚೇನಿ ಆಯುಷ್ಯೇ ರಸು । ಕಾ ಗಗನಾಚೇನಿ ಮಾನೇ ಅವಕಾಶು । ತೈಸಾ ಮಾಝೇನಿ ರೂಪೇ ರೂಪಸು । ಪುರುಷು ತೋ ಗಾ ॥೩೯೭॥

ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।
ಸರ್ವಥಾ ವರ್ತಮಾನೋऽಪಿ ಸ ಯೋಗೀ ಮಯಿ ವರ್ತತೇ ॥೩೧॥

ಜೇಣೇ ಐಕ್ಯಾಚಿಯೇ ದಿಠೀ । ಸರ್ವತ್ರ, ಮಾತೇಂಚಿ ಕಿರೀಟೀ । ದೇಖಿಲಾ ಜೈಸಾ ಪಟೀ । ತಂತು ಏಕು ॥೩೯೮॥ ಕಾ ಸ್ವರೂಪೇ ತರೀ ಬಹುತೇ ಆಹಾತೀ । ಪರೀ ತೈಸೀ ಸೋನೀ ಬಹುವೇ ನ ಹೋತೀ । ಐಸೀ ಐಕ್ಯಾಚಳಾಚೀ ಸ್ಥಿತೀ । ಕೇಲೀ ಜೇಣೇ ॥೩೯೯॥ ನಾತರೀ ವೃಕ್ಷಾಂಚೀ ಪಾನೇ ಜೇತುಲೀ । ತೇತುಲೀ ರೋಪೇ ನಾಹೀ ಲಾವಿಲೀ । ಐಸೀ ಅದ್ವೈತ ದಿವಸೇ ಪಾಹಲೀ । ರಾತ್ರೀ ಜಯಾ ॥೪೦೦॥ ತೋ ಪಂಚಾತ್ಮಕೀ ಸಾಂಪಡೇ । ತರೀ ಮಗ ಸಾಂಗ ಪಾ ಕೈಸೇನಿ ಅಡೇ ? । ಜೋ ಪ್ರತೀತೀಚೇನಿ ಪಾಡೇ। ಮಜಸೀ ತುಕೇ? ॥೪೦೧॥ ಮಾಝೀ ವ್ಯಾಪಕಪಣ ಆಘವೇ । ಗವಸಲೇ ತಯಾಚೇನಿ ಅನುಭವೇ । ತರೀ ನ ಮ್ಹಣತಾ ಸ್ವಭಾವೇ । ವ್ಯಾಪಕು ಜಾಹಲಾ ॥೪೦೨॥ ಆತಾ ಶರೀರೀ ತರೀ ಆಹೇ । ಪರೀ ಶರೀರಾಚಾ ತೋ ನೋಹೇ । ಐಸೇ ಬೋಲವರೀ ಹೋಯೇ । ತೇ ಕರೂ ಯೇ ಕಾಈ ॥೪೦೩॥

ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋऽರ್ಜುನ ।
ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ॥೩೨॥

ಮ್ಹಣೌನಿ ಅಸೋ ತೇ ವಿಶೇಷೇ । ಅಪಣಪೇಯಾಸಾರಿಖೇ । ಜೋ ಚರಾಚರ ದೇಖೇ । ಅಖಂಡಿತ ॥೪೦೪॥ ಸುಖದುಃಖಾದಿ ವರ್ಮೇ । ಕಾ ಶುಭಾಶುಭೇ ಕರ್ಮೇ । ದೋನ್ಹೀ ಐಸೀ ಮನೋಧರ್ಮೇ । ನೇಣೇಚಿ ಜೋ ॥೪೦೫॥ ಹೇ ಸಮವಿಷಮ ಭಾವ । ಆಣಿಕಹೀ ವಿಚಿತ್ರ, ಜೇ ಸರ್ವ । ತೇ ಮಾನೀ ಜೈಸೇ ಅವಯವ । ಆಪುಲೇ ಹೋತೀ ॥೪೦೬॥ ಹೇ ಏಕೈಕ ಕಾಯ ಸಾಂಗಾವೇ । ಜಯಾ ತ್ರೈಲೋಕ್ಯಚಿ ಆಘವೇ । ಮೀ ಐಸೇ ಸ್ವಭಾವೇ । ಬೋಧಾ ಆಲೇ ॥೪೦೭॥ ತಯಾಹೀ ದೇಹ ಏಕು ಕೀರ ಆಥೀ । ಲೌಕಿಕೀ ಸುಖದುಃಖೀ ತಯಾತೇ ಮ್ಹಣತೀ । ಪರೀ ಆಮ್ಹಾತೇ ಐಸೀ ಪ್ರತೀತೀ । ಪರಬ್ರಹ್ಮಚಿ ಹಾ ॥೪೦೮॥ ಮ್ಹಣೌನಿ ಆಪಣಪಾ ವಿಶ್ವದೇಖಿಜೇ । ಆಣಿ ಆಪಣ ವಿಶ್ವ ಹೋಇಜೇ । ಐಸೇ ಸಾಮ್ಯಚಿ ಏಕೆ ಉಪಾಸಿಜೇ । ಪಾಂಡವಾ ಗಾ ॥೪೦೯॥ ಹೇ ತೂತೇ ಬಹುತೀ ಪ್ರಸಂಗೀ । ಆಮ್ಹೀ ಮ್ಹಣೋ ಯಾಚಿಲಾಗೀ । ಜೇ ಸಾಮ್ಯಾಪರೌತೀ ಜಗೀ । ಪ್ರಾಪ್ತಿ ನಾಹೀ ॥೪೧೦॥

ನೀರಿನ ಯೋಗದಿಂದ ರಸವು ಅಥವಾ ಗಗನದ ಯೋಗದಿಂದ ಪೊಳ್ಳುತನವು ಇವುಗಳ ಅಸ್ತಿತ್ವ ಇರುವುದು. ಅದರಂತೆ ನನ್ನ (ಸಚ್ಚಿದಾನಂದ) ರೂಪದಿಂದ ಯೋಗಿಯು (ಸಚ್ಚಿದಾನಂದ) ರೂಪನಾಗುವನು ।।೯೭।।

ಶ್ಲೋಕಾರ್ಥ :- ಎಲ್ಲಾ ಭೂತಗಳಲ್ಲಿ ನಾನಿರುವೆ ಎಂಬ ಏಕತ್ವ ಭಾವದಿಂದಿರುವ ಯೋಗಿ ಹೇಗಿದ್ದರೂ ತನ್ನಲ್ಲಿಯೇ ಇರುವನು ।।೩೧।।

ಅರ್ಜುನಾ, ವಸ್ತ್ರದಲ್ಲಿ ಕೇವಲ ಎಳೆಯನ್ನೇ ನೋಡುವನು. ಅದರ ಹೊರತಾಗಿ ಏನನ್ನೂ ನೋಡುವುದಿಲ್ಲ. ಅದರಂತೆ ಅವರು ಐಕ್ಯದೃಷ್ಟಿಯಿಂದ ಎಲ್ಲ ಸ್ಥಳಗಳಲ್ಲಿಯೂ ನನ್ನ ವ್ಯಾಪ್ತಿ ಇದೆ ಎಂದು ತಿಳಿದಿರುವರು ।।೯೮।।

ಅಥವಾ ಅಲಂಕಾರದ ಆಕಾರಗಳು ಬಹಳಿದ್ದಾಗ ಬಂಗಾರವೂ ಬಹಳ ಪ್ರಕಾರದ್ದು ಇರುವುದಿಲ್ಲ. ಅದರಂತೆ ಆತನು ಐಕ್ಯರೂಪ ಪರ್ವತಸ್ಥಿತಿ (ಅಚಲ) ಹೊಂದಿರುವವನು ।।೯೯।।

ಅಥವಾ ಗಿಡದ ಎಲೆಗಳು ಎಷ್ಟು ಇವೆಯೋ ಅಷ್ಟೇ ಸಸಿಗಳನ್ನು ಹಚ್ಚಿರುವುದಿಲ್ಲ (ಒಂದೇ ಸಸಿ ಇರುವುದು) ಅದರಂತೆ ಅದ್ವೈತ ಪ್ರಕಾಶದಿಂದ ಯಾವಾತನು ಅಜ್ಞಾನವನ್ನು ಕಳೆದುಕೊಂಡಿರುವನೋ ।।೧೦೦।।

ಆತನು ಪಂಚ ಭೂತಾತ್ಮಕ ಶರೀರದಲ್ಲಿ ಸಿಕ್ಕಿಕೊಂಡಿದ್ದರೂ ಆತನಿಗೆ ಸ್ವಸ್ವರೂಪಕ್ಕೆ ಬರಲು ಹೇಗೆ ಪ್ರತಿಬಂಧಕವಾಗುವುದು? ।।೧೦೧।।

ಆತನು ತನ್ನ ಅಂತಃಕರಣದಲ್ಲಿ ನನ್ನ ವ್ಯಾಪಕತ್ವವನ್ನು ತಿಳಿದಿರುವನು. ಆದ್ದರಿಂದ ಹೇಳದೇ ಆತನು ವ್ಯಾಪಕನಾದನು ।।೧೦೨।।

ಆತನು ಶರೀರಧಾರಿಯಾಗಿದ್ದರೂ ಶರೀರದೊಡನೆ ಆತನ ಸಂಬಂಧವೇನೂ ಇರುವುದಿಲ್ಲ. ಈ ಸಂಗತಿಯನ್ನು ಹೇಳಿ ತೋರಿಸಲಿಕ್ಕೆ ಬರುವುದಿಲ್ಲ. ಅಂದಮೇಲೆ ಇದರ ವರ್ಣನೆ ಮಾಡಲು ಬರಬಹುದೇ? ।।೧೦೩।।

ಶ್ಲೋಕಾರ್ಥ :- ಅರ್ಜುನಾ! ಇತರರ ಸುಖದುಃಖಗಳನ್ನು ತನ್ನದೆಂದು ಭಾವಿಸಿ ಎಲ್ಲರನ್ನೂ ಸಮವಾಗಿ ಭಾವಿಸುವ ಯೋಗಿಯು ಸರ್ವಯೋಗಿಗಳಲ್ಲಿ ಶ್ರೇಷ್ಠನೆಂದು ನನ್ನ ಅಭಿಪ್ರಾಯ ।।೩೨।।

ಅದಕ್ಕಾಗಿ ಆ ವಿಷಯವಾಗಿ ಈಗ ಹೆಚ್ಚು ಹೇಳುವುದು ಬೇಡ. ಸದಾವಕಾಲ ತನ್ನಂತೆಯೇ ಸರ್ವ ಜಗತ್ತನ್ನು ಕಾಣುವಾತನು ।।೧೦೪।।

ಸುಖ ಮತ್ತು ದುಃಖ ಇವುಗಳ ವಿಕಾರ ಅಥವಾ ಶುಭ ಮತ್ತು ಅಶುಭ ಹೀಗೆ ಎರಡು ಕರ್ಮಗಳು ಇವೆ ಎಂದು ಮನದಲ್ಲಿ ತಿಳಿಯಲಾರದಾತನು ।।೧೦೫।।

ಈ ಸಮ ವಿಷಮ ಪದಾರ್ಥಗಳು ಮತ್ತು ಬೇರೆ ಬೇರೆ ಏನೇನು ವಿಚಿತ್ರಗಳಿವೆ, ಅವೆಲ್ಲ ಅವಯವಗಳು ನನ್ನವೇ ಎಂದು ಭಾವಿಸುವಾತನು ।।೧೦೬।।

ಇದರಂತೆ ಒಂದೊಂದಾಗಿ ಹೇಗೆ ಬಣ್ಣಿಸಬೇಕು? ಯಾರಿಗೆ ಸರ್ವ ತ್ರೈಲೋಕವು ನಾನೇ ಇದ್ದೇನೆ ಎಂಬ ಅನುಭವದಿಂದ ತಿಳಿದಾತನು ।।೧೦೭।।

ಆತನಿಗೆ ಶರೀರ ಇರುವುದು ನಿಜ ಮತ್ತು ಆತನು ಸುಖ ದುಃಖ ಭೋಗಿಸುವವನು ಎಂದು ಲೋಕದ ಜನರು ಹೇಳುವರು. ಆದರೆ ನಮ್ಮ ಅನುಭವದಿಂದ ಆತನು ಪರಬ್ರಹ್ಮನೇ ಆಗಿರುವನು ।।೧೦೮।।

ಆದ್ದರಿಂದ ಅರ್ಜುನಾ, ಈ ಯೋಗದಿಂದ ನಿನ್ನಲ್ಲಿಯೇ ಎಲ್ಲ ವಿಶ್ವವನ್ನು ನೋಡಬಹುದು ಮತ್ತು ನೀನು ಸ್ವತಃ ವಿಶ್ವರೂಪನಾಗಬಹುದು. ಈ ಸಮ ದೃಷ್ಟಿಯ ಉಪಾಸನೆಯನ್ನು ನೀನು ಮಾಡು ।।೧೦೯।।

ನಾವು ನಿನಗೆ ಅನೇಕ ಸಲ ಈ ಮಾತುಗಳನ್ನು ಹೇಳಿರುವೆವು. ಅದಕ್ಕೆ ಕಾರಣವೇನೆಂದರೆ, ಜಗತ್ತಿನಲ್ಲಿ ಸಮದೃಷ್ಟಿಗಿಂತಲೂ ಹೆಚ್ಚಿನ ಪ್ರಾಪ್ತಿಯು ಮತ್ತೊಂದಿಲ್ಲ ।।೧೧೦।।

ಅರ್ಜುನ ಉವಾಚ:-
ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ।
ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್ ।೩೩॥
ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್।
ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ।೩೪॥

ತಂವ ಅರ್ಜುನ ಮ್ಹಣೇ ದೇವಾ । ತುಮ್ಹೀ ಸಾಂಗಾ ಕೀರ ಆಮುಚಿಯಾ ಕಣವಾ । ಪರೀ ನ ಪುರೋ ಜೇ ಸ್ವಭಾವಾ । ಮನಾಚಿಯಾ ।೪೧೧॥ ಹೇ ಮನ ಕೈಸೇ ಕೇವಢೇ । ಐಸೇ ಪಾಹೋ ಮ್ಹಣೋ ತರೀ ನ ಸಾಂಪಡೇ । ಏರ್ಹವೀ ರಾಹಾಟವಯಾ ಥೋಡೇ । ತ್ರೈಲೋಕ್ಯ ಯಯಾ ।೪೧೨॥ ಮ್ಹಣೌನಿ ಐಸೇ ಕೈಸೇ ಘಡೇಲ । ಜೇ ಮರ್ಕಟ ಸಮಾಧೀ ಯೇಈಲ । ಕಾ ರಾಹಾ ಮ್ಹಣತಲಿಯಾ ರಾಹೇಲ । ಮಹಾವಾತು ? ।೪೧೩॥ ಜೇ ಬುದ್ಧೀತೇ ಸಳೀ ।ನಿಶ್ಚಯಾತೇ ಟಾಳೀ । ಧೈರ್ಯೇಸೀ ಹಾತಫಳೀ । ಮಿಳಊನಿ ಜಾಯ ।೪೧೪॥ ಜೇ ವಿವೇಕಾತೇ ಭುಲವೀ । ಸಂತೋಷಾಸೀ ಚಾಡ ಲಾವೀ । ಬೈಸಿಜೇ ತರೀ ಹಿಂಡವೀ । ದಾಹೀ ದಿಶಾ ।೪೧೫॥ ಜೇ ನಿರೋಧಲೇ ಘೇ ಉವಾವೋ । ಜಯಾ ಸಂಯಮುಚಿ ಹೋಯ ಸಾವಾವೋ । ತೇ ಮನ ಆಪುಲಾ ಸ್ವಭಾವೋ । ಸಾಂಡೀಲ ಕಾಈ ?।೪೧೬॥ ಮ್ಹಣೌನಿ ಮನ ಏಕ ನಿಶ್ಚಳ ರಾಹೇಲ । ಮಗ ಆಮ್ಹಾಸಿ ಸಾಮ್ಯ ಹೋಈಲ । ಹೇ ವಿಶೇಷೇಹೀ ನ ಘಡೇಲ । ಯಾಚಿಲಾಗೀ ।೪೧೭॥

ಶ್ರೀಭಗವಾನುವಾಚ: -
ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।
ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ।೩೫॥

ತಂವ ಕೃಷ್ಣ ಮ್ಹಣತೀ ಸಾಚಚಿ । ಬೋಲತ ಆಹಾಸಿ ತೇ ತೈಸೇಂಚಿ । ಯಯಾ ಮನಾಚಾ ಕೀರ ಚಪಳಚಿ । ಸ್ವಭಾವೋ ಗಾ ।೪೧೮॥ ಪರಿ ವೈರಾಗ್ಯಾಚೇನಿ ಆಧಾರೇ । ಜರೀ ಲಾವಿಲೇ ಅಭ್ಯಾಸಾಚಿಯೇ ಮೋಹರೇ । ತರೀ ಕೇತುಲೇನಿ ಏಕೇ ಅವಸರೇ। ಸ್ಥಿರಾವೇಲ ।೪೧೯॥ ಕಾ ಜೇ ಯಯಾ ಮನಾಚೇ ಏಕ ನಿಕೇ ।ಜೇ ದೇಖಿಲೇ ಗೋಡೀಚಿಯಾ ಠಾಯಾ ಸೋಕೇ । ಮ್ಹಣೌನಿ ಅನುಭವಸುಖಚಿ ಕವತಿಕೇ । ದಾವೀತ ಜಾಇಜೇ ।೪೨೦॥

ಅಸಂಯಾತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ।
ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ।೩೬॥

ಶ್ಲೋಕಾರ್ಥ :- ಅರ್ಜುನನು ಹೀಗೆಂದನು:- ಹೇ ಮಧುಸೂದನಾ! ನೀನು ಹೇಳಿದ ಸಮತ್ವರೂಪವಾದ ಯೋಗವು ಮಾನಸಿಕ ಚಂಚಲತೆಯಿಂದ ಸ್ಥಿರವಾಗುವುದು ಕಷ್ಟವಾಗಿದೆ ।೩೩॥

ಶ್ಲೋಕಾರ್ಥ :- ಶ್ರೀಕೃಷ್ಣಾ! ಮನಸ್ಸು ಚಂಚಲವಾಗಿದೆ; ಕ್ಷೋಭೆಯನ್ನುಂಟು ಮಾಡುವಂಥಾದ್ದಾಗಿದೆ; ಬಲವಾಗಿದೆ; ದೃಢವಾಗಿದೆ. ಅದನ್ನು ನಿಲ್ಲಿಸುವುದೆಂದರೆ ಗಾಳಿಯನ್ನು ಕಟ್ಟುವಷ್ಟು ಅಸಾಧ್ಯ ।೩೪॥

ಆಗ ಅರ್ಜುನನು ಶ್ರೀಕೃಷ್ಣನಿಗೆ ಹೇಳುತ್ತಾನೆ:- ದೇವಾ, ನೀವು ನಮ್ಮ ಮೇಲೆ ಕೃಪೆತೋರಿ ಈ ಸಮತೆಯ ಮಾರ್ಗವನ್ನು ಹೇಳಿರುವಿರಿ. ಆದರೆ ಮನಸ್ಸಿನ ಚಂಚಲ ಸ್ವಭಾವ ಕಾರಣಕ್ಕೆ ನಮ್ಮ ಸ್ಥಿತಿ ಹತ್ತುವುದಿಲ್ಲ ।೪೧೧॥

ಈ ಮನಸ್ಸು ಹೇಗಿದೆ ಮತ್ತು ಎಷ್ಟಿದೆ ಎಂದು ನೋಡಲು ಹೋದಾಗ ಅದು ಸಿಗುವುದೇ ಇಲ್ಲ. ಅಲ್ಲದೇ ಇದಕ್ಕೆ ತಿರುಗಾಡಲು ಮೂರು ಲೋಕಗಳು ಸಾಲುವುದಿಲ್ಲ ।೪೧೨॥

ಆದ್ದರಿಂದ ಮರ್ಕಟ (ಮಂಗ)ಕ್ಕೆ ಸಮಾಧಿ ಹತ್ತಬಹುದೇ? ಅಥವಾ ಬಿರುಗಾಳಿಗೆ ನಿಲ್ಲು ಎಂದಾಕ್ಷಣ ನಿಲ್ಲಬಹುದೇ? ಈ ಮಾತುಗಳು ಹೇಗೆ ಸಾಧ್ಯ? ।೪೧೩॥

ಈ ಮನಸ್ಸು ಬುದ್ಧಿಗೆ ಪೀಡಿಸುತ್ತದೆ. ನಿಶ್ಚಯವನ್ನು ಮುರಿಯುತ್ತದೆ. ನೋಡು ನೋಡುವ ಷ್ಟರಲ್ಲಿಯೇ ಧೈರ್ಯವನ್ನು ಮೋಸಗೊಳಿಸುತ್ತದೆ ।೪೧೪॥

ವಿವೇಕವನ್ನು ಭ್ರಮೆಯಲ್ಲಿ ನೂಕುವುದು. ಸಂತೋಷವನ್ನು ಕಲಕಿಸುವುದು ಮತ್ತು ಮನುಷ್ಯನು ಒಂದೇ ಸ್ಥಳದಲ್ಲಿ ಕುಳಿತುಕೊಂಡರೂ ಆತನಿಗೆ ಹತ್ತೂ ದಿಕ್ಕುಗಳಿಗೆ ತಿರುಗಾಡಲು ಹಚ್ಚುವುದು ।೪೧೫॥

ಅದನ್ನು ಬಿಗಿಯಾಗಿ ಹಿಡಿದು ಬಂಧಿಸಲು ಹೋದರೆ ಜಿಗಿದು ಹೊರ ಹೊಮ್ಮುವುದು ಮತ್ತು ನಿಗ್ರಹವೇ ಪ್ರತಿಯಾಗಿ ಅದಕ್ಕೆ ಸಹಕಾರಿಯಾಗುವುದು. ಇಂತಹ ಈ ಮನಸ್ಸು ತನ್ನ ಹುಟ್ಟುಗುಣ ಬಿಡಬಹುದೇ? ।೪೧೬॥

ಆದ್ದರಿಂದ ಈ ಮನಸ್ಸು ಒಂದು ಸ್ಥಿರವಾಯಿತೆಂದರೆ ನಮಗೆ ಸಾಮ್ಯ ಅವಸ್ಥೆಯು ಪ್ರಾಪ್ತವಾದೀತು. ಆದರೆ ಮನಸ್ಸು ಇದೇ ಪ್ರಕಾರ ಚಂಚಲವಿದ್ದರೆ ಅದು ದೊರೆಯುವುದು ಕಠಿಣವಾಗುವುದು ।೪೧೭॥

ಶ್ಲೋಕಾರ್ಥ :- ಭಗವಂತನು ಹೀಗೆ ಹೇಳಿದನು:- ಮಹಾಬಾಹು! ಮನಸ್ಸು ಚಂಚಲವಾದುದು ನಿಜ. ಇದನ್ನು ನಿಗ್ರಹಿಸುವುದು ಕಷ್ಟವೆಂಬುದು ಸುಳ್ಳಲ್ಲ. ಆದರೂ ಕುಂತೀಕುಮಾರಾ! ಅಭ್ಯಾಸ ದಿಂದಲೂ ವೈರಾಗ್ಯ ದಿಂದಲೂ ಅದನ್ನು ಸ್ವಾಧೀನ ಮಾಡಿಕೊಳ್ಳಬಹುದು ।೩೫॥

ಆಗ ಶ್ರೀಕೃಷ್ಣನು ಹೇಳಿದನು:- ನೀನು ಇಲ್ಲಿ ಯವರೆಗೆ ಹೇಳಿದ್ದೆಲ್ಲವೂ ನಿಜವಾಗಿಯೂ ಹಾಗೆಯೇ ಇರುವುದು. ಈ ಮನಸ್ಸಿನ ಸ್ವಭಾವವು ನಿಜವಾಗಿಯೂ ಚಂಚಲವಾಗಿರುವುದು ।೪೧೮॥

ಆದಾಗ್ಯೂ ಇದನ್ನು ವೈರಾಗ್ಯದ ಆಧಾರದಿಂದ ಅಭ್ಯಾಸದ ಮಾರ್ಗಕ್ಕೆ ಹಚ್ಚಿದರೆ ಕೆಲಕಾಲದ ನಂತರ ಇದು ಸ್ಥಿರವಾಗಬಹುದು ।೪೧೯॥

ಕಾರಣವೇನೆಂದರೆ, ಈ ಮನಸ್ಸಿನಲ್ಲಿ ಒಂದು ಉತ್ತಮ ಗುಣವಿರುವುದು. ಒಂದು ಸಲ ಭೋಗಿಸಿದ ವಿಷಯಕ್ಕೆ ಚಟ ಹತ್ತಿ ಅಲ್ಲಿಯೇ ವಸತಿ ಮಾಡುವುದು. ಆದ್ದರಿಂದ ನೀನು ಕೌತುಕದಿಂದಲಾದರೂ ಆತ್ಮಸುಖ ತೋರಿಸುತ್ತಾ ಹೋಗಬೇಕು ।೪೨೦॥

ಶ್ಲೋಕಾರ್ಥ :- ಚಿತ್ತವು ಸ್ವಾಧೀನವಿಲ್ಲದವನು ಯೋಗವನ್ನು ಸಾಧಿಸಲಾರನು. ಸ್ವಾಧೀನ ಚಿತ್ತನಾದವನು ಪ್ರಯತ್ನಿಸುತ್ತ ಸುಲಭವಾಗಿ ಯೋಗ ಸಿದ್ಧಿಯನ್ನು ಪಡೆಯುವನು ।೩೬॥

ಏರ್ಹ್ವೀ ವಿರಕ್ತಿ ಜಯಾಂಸೀ ನಾಹೀ । ಜೇ ಅಭ್ಯಾಸೀ ನ ರಿಘತೀ ಕಾಂಹೀ । ತಯಾ ನಾಕಳೇ ಹೇ ಆಮ್ಹಿಂಹೀ । ನ ಮನೂ ಕಾಯೀ ॥೪೨೧॥ ಪರಿ ಯಮನಿಯಮಾಂಚಿಯಾ ವಾಟಾ ನ ವಚಿಜೇ । ಕಾಂಹೀ ವೈರಾಗ್ಯಾಚೀ ಸೇ ನ ಕರಿಜೇ । ಕೇವಳ ವಿಷಯಜಳೀ ಠಾಕಿಜೇ । ಬುಡೀ ದೇಉನೀ ॥೪೨॥ ಯಯಾ ಜಾಲಿಯಾ ಮಾನಸಾ ಕಾಂಹೀ । ಯುಕ್ತೀಚೀ ಕಾಂಬೀ ಲಾಗಲೀ ನಾಹೀ । ತರೀ ನಿಶ್ಚಳ ಹೋಈಲ ಕಾಈ । ಕೈಸೇನಿ ಸಾಂಗೇ? ॥೪೨೩॥ ಮ್ಹಣೌನಿ ಮನಾಚಾ ನಿಗ್ರಹೋ ಹೋಯೇ । ಐಸಾ ಉಪಾಯ ಜೋ ಆಹೇ । ತೋ ಆರಂಭೀ ಮಗ ನೋಹೇ । ಕೈಸಾ ಪಾಹೋ ॥೪೨೪॥ ತರೀ ಯೋಗ ಸಾಧನ ಜಿತುಕೇ । ತೇ ಅವಘೇಚಿ ಕಾಯ ಲಟಿಕೇ? । ಪರೀ ಆಪಣಯಾ ಅಭ್ಯಾಸೂ ನ ಠಾಕೇ?। ಹೇಚಿ ಮ್ಹಣ ॥೪೨೫॥ ಆಂಗೀ ಯೋಗಾಚೇ ಹೋಯ ಬಳ । ತರೀ ಮನ ಕೇತುಲೇ ಚಪಳ? । ಕಾಯ ಮಹದಾದಿ ಹೇ ಸಕಳ । ಆಪು ನೋಹೇ? ॥೪೨೬॥ ತೇಥ ಅರ್ಜುನ ಮ್ಹಣೇ ನಿಕೇ । ದೇವೋ ಬೋಲತೀ ತೇ ನ ಚುಕೇ । ಸಾಚಚಿ ಯೋಗಬಳೇಂಸೀ ನ ತುಕೇ । ಮನೋ ಬಳ ॥೪೨೭॥ ತರೀ ತೋಚಿ ಯೋಗು ಕೈಸಾ ಕೇವೀ ಜಾಣೋ । ಆಮ್ಹೀ ಯೇತುಲೇ ದಿವಸ ಯಾಚೀ ಮಾತುಹೀ ನೇಣೋ । ಮ್ಹಣೌನಿ ಮನಾತೇ ಜೇ ಮ್ಹಣೋ । ಅನಾವರ ॥೪೨೮॥ ಹಾ ಆತಾ ಆಘವೇಯಾ ಜನ್ಮಾ । ತುಝೇನಿ ಪ್ರಸಾದೇ ಪುರುಷೋತ್ತಮಾ । ಯೋಗ ಪರಿಚಯೋ ಆಮ್ಹಾ । ಜಾಹಲಾ ಆಜೀ ॥೪೨೯॥

ಅರ್ಜುನ ಉವಾಚ :-
ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ ।
ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ॥೩೭॥
ಕಚ್ಚಿನ್ನೋಭಯವಿಭ್ರಷ್ಟಃ ಛಿನ್ನಾಭ್ರಮಿವ ನಶ್ಯತಿ ।
ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ॥೩೮॥
ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ ।
ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ ॥೩೯॥

ಪರಿ ಆಣಿಕ ಏಕ ಗೋಸಾಂವಿಯಾ ।ಮಜ ಸಂಶಯೋ ಅಸೇ ಸಾವಿಯಾ । ತೋ ತೂವಾಂಚೂನಿ ಫೇಡಾವಯಾ । ಸಮರ್ಥು ನಾಹೀ ॥೪೩೦॥ ಮ್ಹಣೌನಿ ಸಾಂಗೇ ಗೋವಿಂದಾ । ಕವಣ ಏಕು ಮೋಕ್ಷಪದಾ । ಝೋಂಬತ ಹೋತಾ ಶ್ರದ್ಧಾ । ಉಪಾಯೇವಿಣ ॥೪೩೧॥

ಸಾಮಾನ್ಯವಾಗಿ ಯಾರಿಗೆ ವೈರಾಗ್ಯವಿಲ್ಲವೋ ಮತ್ತು ಯಾರು ಎಂದೂ ಅಭ್ಯಾಸವನ್ನು ಮಾಡುವುದಿಲ್ಲವೋ ಅವರಿಗೆ ಈ ಮನಸ್ಸು ಬಿಗಿಹಿಡಿಯುವುದಾಗುವುದಿಲ್ಲ ಎಂಬುದು ನಾವಾದರೂ ಎಲ್ಲಿ ಮನ್ನಿಸುವುದಿಲ್ಲ? ।೪೨೧॥

ಆದರೆ ಯಮ ನಿಯಮಾದಿಗಳನ್ನು ಅಭ್ಯಾಸವನ್ನು ಮಾಡದವನು ವೈರಾಗ್ಯದ ನೆನಪು ಸಹ ಎಂದೂ ಮಾಡದವನು ಮತ್ತು ಕೇವಲ ವಿಷಯರೂಪ ನೀರಿನಲ್ಲಿ ಮೀನಿನಂತೆ ಮುಳುಗಿರುವವನು ।೪೨೨॥

ಈ ಪ್ರಕಾರವಾಗಿ ವಿಷಯ ಲಂಪಟವಾಗಿರುವ ಆತನ ಮನಸ್ಸಿಗೆ ಎಳ್ಳಷ್ಟೂ ಯುಕ್ತಿ ಹತ್ತುವುದಿಲ್ಲ. ಅಂದಮೇಲೆ ಆತನ ಮನಸ್ಸು ನಿಶ್ಚಲ ಹೇಗಾದೀತು? ನೀನೇ ಹೇಳು ।೪೨೩॥

ಆದ್ದರಿಂದ ಮನಸ್ಸು ನಿಗ್ರಹಕ್ಕಾಗಿ ಇರುವ ಉಪಾಯಗಳನ್ನು ಆರಂಭಿಸು, ಆಗ ಅದು ಹೇಗೆ ನಿಶ್ಚಲವಾಗುವುದಿಲ್ಲವೋ ನೋಡೋಣ ।೪೨೪॥

ಯೋಗ ಸಾಧನೆಗಳೆನ್ನುವುವು ಎಷ್ಟಿವೆಯೋ ಅವೆಲ್ಲವೂ ಸುಳ್ಳು ಇವೆಯೇ? ಹಾಗಾದರೆ ನಮಗೆ ಅಭ್ಯಾಸಿಸಲು ಆಗುವುದಿಲ್ಲವೆಂದು ಹೀಗೆ ಹೇಳು ।೪೨೫॥

ಒಂದು ವೇಳೆ ಯೋಗ ಸಾಧನೆಯ ಬಲವು ಶರೀರದಲ್ಲಿದ್ದರೆ ಈ ಮನಸ್ಸಿನ ಚಂಚಲತೆಯ ಯಾವ ಕಥೆ? ಯೋಗ ಬಲದಿಂದ ಮಹತ್ ತತ್ತ್ವಾದಿಕಗಳು ಸ್ವಾಧೀನ ವಾಗುವುದಿಲ್ಲವೇ? ।೪೨೬॥

ಆಗ ಅರ್ಜುನನು ಹೇಳುತ್ತಾನೆ:- ದೇವಾ, ನೀವೇನು ಹೇಳಿದಿರಿ ಅದು ನಿಜವಿದೆ. ಸತ್ಯವಾಗಿಯೂ ಯೋಗ ಬಲದ ಮುಂದೆ ಮನಸ್ಸಿನ ಬಲವು ನಡೆಯಲಾರದು ।೪೨೭॥

ಆದರೆ ಆ ಯೋಗವು ಹೇಗಿದೆ ಮತ್ತು ಯಾವ ರೀತಿಯಿಂದ ತಿಳಿಯಬೇಕು ಎಂಬುದು ಇಲ್ಲಿಯವರೆಗೆ ನಮಗೆ ಇದರ ವಾರ್ತೆಯೂ ಸಹ ಇದ್ದಿಲ್ಲ. ಆದ್ದರಿಂದ ಮನಸ್ಸು ಅನಾವರವಿದೆ ಎಂದು ಹೇಳುತ್ತಿದ್ದೆ ।೪೨೮॥

ಹೇ ಪುರುಷೋತ್ತಮನೇ, ನಿನ್ನ ಪ್ರಸಾದದಿಂದ ಈ ಎಲ್ಲ ಜನ್ಮಗಳಲ್ಲಿ ಇಂದು ಯೋಗದ ಪರಿಚಯ ನಮಗೆ ದೊರೆಯಿತು ।೪೨೯॥

ಶ್ಲೋಕಾರ್ಥ :- ಅರ್ಜುನನು ಹೀಗೆಂದನು:- ಕೃಷ್ಣಾ! ಈ ಧ್ಯಾನಯೋಗದಲ್ಲಿ ಶ್ರದ್ಧೆಯುಳ್ಳವನಾಗಿಯೂ ಕೂಡ ಪ್ರಯತ್ನದ ಒಲವು ಕಡಿಮೆಯಾಗಿರುವುದರಿಂದ ಪೂರ್ಣ ಸಿದ್ಧಿಯನ್ನು ಪಡೆಯದೇ ಮಧ್ಯದಲ್ಲಿಯೇ ಯೋಗದಿಂದ ಜಾರಿದವನು ಯಾವ ಗತಿ ಪಡೆಯುತ್ತಾನೆ? ।೩೭॥

ಶ್ಲೋಕಾರ್ಥ :- ಗುರಿತಪ್ಪಿ ಮೋಕ್ಷ ಮಾರ್ಗದಿಂದ ಜಾರಿದ ಯೋಗಭ್ರಷ್ಟನು ಎರಡಕ್ಕೂ ತಪ್ಪಿದವನಾಗಿ ಭಿನ್ನ ಭಿನ್ನವಾದ ಮೋಡದಂತೆ ಹಾಳಾಗಿ ಹೋಗುವುದಿಲ್ಲವೇ? ।೩೮॥

ಶ್ಲೋಕಾರ್ಥ :- ಈ ನನ್ನ ಸಂಶಯವನ್ನು ಪೂರ್ಣ ನಿವಾರಿಸು. ಹೇ ಕೃಷ್ಣಾ! ನನ್ನ ಸಂದೇಹವನ್ನು ನಿವಾರಿಸಲು ಬೇರೆ ದಿಕ್ಕು ಇಲ್ಲ ।೩೯॥

ಹೇ ಪ್ರಭುವೇ, ಮತ್ತೊಂದು ಸಂಶಯವು ಸಹಜವಾಗಿ ಉತ್ಪನ್ನವಾಗಿದೆ. ಅದನ್ನು ನಿವಾರಿಸಲು ನಿಮ್ಮ ಹೊರತಾಗಿ ಬೇರೆ ಯಾರೂ ಸಮರ್ಥರಲ್ಲ ।೪೩೦॥

ಆದ್ದರಿಂದ ಗೋವಿಂದನೇ, ನನಗೆ ಹೇಳು: ಯಾವನೋ ಒಬ್ಬ ಮನುಷ್ಯನು ಮೋಕ್ಷ ಪ್ರಾಪ್ತಿಗಾಗಿ ಭಕ್ತಿಯುಕ್ತ ಅಂತಃಕರಣದಿಂದ ಉಪಾಯದ ಹೊರತಾಗಿ ಇಚ್ಛೆ ಮಾಡುತ್ತಿದ್ದನು ।೪೩೧॥

ಇಂದ್ರಿಯಗ್ರಾಮೋನಿ ನಿಘಾಲಾ । ಆಸ್ಥೇಚಿಯಾ ವಾಟೇ ಲಾಗಲಾ । ಆತ್ಮಸಿದ್ಧೀಚಿಯಾ ಪುಢಿಲಾ । ನಗರಾ ಯಾವಯಾ ॥೪೩೨॥ ತಂವ ಆತ್ಮಸಿದ್ಧಿ ನ ಠಕೇಚಿ । ಆಣಿ ಮಾಗುತೇ ನ ಯೇವವೇಚೀ । ಐಸಾ ಅಸ್ತು ಗೇಲಾ ಮಾರ್ಝಾರೀಂಚಿ। ಆಯುಷ್ಯಭಾನು ॥೪೩೩॥ ಜೈಸೇ ಅಕಾಳೀ ಆಭಾಳ । ಅಳುಮಾಳು ಸಪಾತಳ । ವಿಪಾಯೇ ಆಲೇ ಕೇವಳ । ವಸೇ ನಾ ವರ್ಷೇ ॥೪೩೪॥ ತೈಸೀ ದೋನ್ಹಿ ದುರಾವಲೀ । ಜೇ ಪ್ರಾಪ್ತೀ ತಂವ ಅಲಗ ಠೇಲೀ । ಆಣಿ ಅಪ್ರಾಪ್ತೀಹೀ ಸಾಂಡವಲೀ । ಶ್ರದ್ಧಾ ತಯಾ ॥೪೩೫॥ ಐಸಾ ದೋಲಾ ಅಂತರಲಾ ಕಾ ಜೇ । ಜೋ ಶ್ರದ್ಧೇಚ್ಯಾ ಸಮಾಜೇ ।ಬುಡಾಲಾ ತಯಾ ಹೋಜೇ । ಕವಣ ಗತೀ ॥೪೩೬॥

ಶ್ರೀ ಭಗವಾನುವಾಚ :-
ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।
ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ ॥೪೦॥

ತಂವ ಕೃಷ್ಣ ಮ್ಹಣತೀ ಪಾರ್ಥಾ । ಜಯಾ ಮೋಕ್ಷಸುಖೀ ಆಸ್ಥಾ । ತಯಾ ಮೋಕ್ಷಾವಾಂಚೂನಿ ಅನ್ಯಥಾ । ಗತೀ ಆಹೇಗಾ? ॥೪೩೭॥ ಪರಿ ಏತುಲೇ ಹೇಂಚಿ ಏಕ ಘಡೇ । ಜೇ ಮಾರ್ಝಾರೀ ವಿಸಾವಾವೇ ಪಡೇ । ತೇಂಹೀ ಪರೀ ಐಸೇನಿ ಸುರವಾಡೇ । ಜೋ ದೇವಾ ನಾಹೀ ॥೪೩೮॥ ಏರ್ಹವೀ ಅಭ್ಯಾಸಾಚಾ ಉಚಲತಾ । ಪಾಉಲೀ ಜರೀ ಚಾಲತಾ । ತರೀ ದಿವಸಾಆಧೀ ಠಾಕಿತಾ । ಸೋಹಂಸಿದ್ಧೀತೇ ॥೪೩೯॥ ಪರೀ ತೇತುಲಾ ವೇಗು ನವ್ಹೇಚಿ । ಮ್ಹಣೌನಿ ವಿಸಾವಾ ತರೀ ನಿಕಾಚಿ । ಪಾಠೀ ಮೋಕ್ಷು ತಂವ ತೈಸಾಚಿ । ಠೇವಿಲಾ ಅಸೇ ॥೪೪೦॥

ಪ್ರಾಪ್ಯ ಪುಣ್ಯಕೃತಾಂ ಲೋಕಾನ್ ಉಷಿತ್ವಾ ಶಾಶ್ವತೀಃ ಸಮಾಃ ।
ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ॥೪೧॥

ಐಕೇ ಕವತಿಕ ಹೇ ಕೈಸೇ । ಜೇ ಶತಮಖಾ ಲೋಕ ಸಾಯಾಸೇ । ತೇ ತೋ ಪಾವೇ ಅನಾಯಾಸೇ । ಕೈವಲ್ಯಕಾಮು ॥೪೪೧॥ ಮಗ ತೇಥೀಂಚೇ ಜೇ ಅಮೋಘ । ಅಲೌಕಿಕ ಭೋಗ । ಭೋಗಿತಾಂಹೀ ಸಾಂಗ । ಕಾಂಟಾಳೇ ಮನ ॥೪೪೨॥ ಹಾ ಅಂತರಾಯೋ ಅವಚಿತಾ । ಕಾ ವೋಢವಲಾ ಭಗವಂತಾ? । ಐಸಾ ದಿವಿಭೋಗ ಭೋಗಿತಾ । ಅನುತಾಪೀ ನಿತ್ಯ ॥೪೪೩॥ ಪಾಠೀ ಜನ್ಮೇ ಸಂಸಾರೀ । ಪರಿ ಸಕಳ ಧರ್ಮಾಚಿಯಾ ಮಾಹೇರೀ । ಲಾಂಬಾ ಉಗವೇ ಆಗರೀ । ವಿಭವಶ್ರೀಯೇಚಾ ॥೪೪೪॥

ಇಂದ್ರಿಯರೂಪಿ ಊರಿನಿಂದ ಮೋಕ್ಷ ರೂಪ ಊರಿಗೆ ಹೋಗುವುದಕ್ಕಾಗಿ ಆತನು ಭಕ್ತಿರೂಪ ಮಾರ್ಗವನ್ನು ಹಿಡಿದನು ।೪೩೨॥

ಆತನಿಗೆ ಮೋಕ್ಷ ಪ್ರಾಪ್ತಿಯೂ ಆಗಲಿಲ್ಲ ಮತ್ತು ಹಿಂದಿರುಗಿ ಬರುವುದೂ ಆಗುವುದಿಲ್ಲ. ಇಂತಹ ಸ್ಥಿತಿಯಲ್ಲಿ ಆತನ ಆಯುಷ್ಯರೂಪಿ ಸೂರ್ಯನು ನಡುವೆಯೇ ಮುಳುಗಿದನು ।೪೩೩॥

ಅಕಾಲದಲ್ಲಿ ಸಹಜವಾಗಿ ಬಂದಿರುವ ತಿಳುವಾದ ಚಿಕ್ಕ ಮೋಡವು ಯಾವ ಪ್ರಕಾರವಾಗಿ ಸ್ಥಿರವಾಗದೇ ಮಳೆಗರೆಯುವುದಿಲ್ಲವೋ ।೪೩೪॥

ಅದರಂತೆ ಯಾರಿಗೆ ಎರಡೂ ತಪ್ಪಿದ್ದಾದರೆ ಮೋಕ್ಷ ಪ್ರಾಪ್ತಿಯಂತೂ ದೂರ ಉಳಿಯಿತು ಮತ್ತು ಶ್ರದ್ಧೆಯಿಂದ ಬಿಟ್ಟ ಸಂಸಾರವನ್ನೂ ಹೊಂದಲಿಲ್ಲ ।೪೩೫॥

ಈ ಪ್ರಕಾರವಾಗಿ ಎರಡನ್ನೂ ಕಳೆದುಕೊಂಡನು. ಆದರೆ ಭಕ್ತಿಯಿಂದ ನಿಮಗ್ನನಾಗಿರುವುದರಿಂದ ಆತನಿಗೆ ಯಾವ ಗತಿಯು ಪ್ರಾಪ್ತವಾಗುವುದು ? ಅದನ್ನು ಹೇಳು ।೪೩೬॥

**ಶ್ಲೋಕಾರ್ಥ** :- ಭಗವಂತನು ಹೀಗೆಂದನು:- ಹೇ ಪಾರ್ಥಾ! ಯೋಗಭ್ರಷ್ಟನಿಗೆ ಇಹಪರಗಳಲ್ಲಿ ಎಲ್ಲಿಯೂ ಕೆಡುಕಿಲ್ಲ. ಅಯ್ಯಾ! ಒಳ್ಳೆಯದನ್ನು ಮಾಡಿದವನು ಯಾವಾಗಲೂ ಕೆಡುವುದಿಲ್ಲ ।೪೦॥

ಆಗ ಶ್ರೀಕೃಷ್ಣನು ಹೇಳಿದನು :- ಪಾರ್ಥಾ ಯಾರಿಗೆ ಮೋಕ್ಷ ಪ್ರಾಪ್ತಿಯ ಇಚ್ಛೆ ಇದೆಯೋ ಅವರಿಗೆ ಮೋಕ್ಷದ ಹೊರತು ಅನ್ಯಮಾರ್ಗ ಇದೆಯೇ ? ।೪೩೭॥

ಆದರೆ ಆತನಿಗೆ ನಡುವೆ ವಿಶ್ರಾಂತಿ ತೆಗೆದುಕೊಳ್ಳ ಬೇಕಾಗುವುದು. ಇಷ್ಟೇ ಅಲ್ಲದೇ ಪುನಃ ಆತನಿಗೆ ವಿಶ್ರಾಂತಿ ವೇಳೆಯಲ್ಲಿ ಸಿಗುವ ಆನಂದವು ದೇವತೆಗಳಿಗೂ ಸಿಗುವುದಿಲ್ಲ ।೪೩೮॥

ಒಂದು ವೇಳೆ ಈತನು ಅಭ್ಯಾಸದ ನಡಿಗೆಯನ್ನು ತೀವ್ರಗೊಳಿಸಿದರೆ (ಆಯುಷ್ಯ) ಹಗಲು ಮುಗಿಯುವುದರಲ್ಲಿಯೇ ಮೋಕ್ಷ ಪ್ರಾಪ್ತಿಯ ಊರಿಗೆ ಮುಟ್ಟಬಹುದಾಗಿತ್ತು ।೪೩೯॥

ಆದರೆ ಈತನದು ಅಷ್ಟೊಂದು ವೇಗ ಇಲ್ಲದ್ದಕ್ಕೆ ನಡುವೆ ವಿಶ್ರಾಂತಿ ಪಡೆಯಬೇಕಾಯಿತು. ಅದರಂತೆ ಕೊನೆಗೆ ಈತನಿಗಾಗಿ ಮೋಕ್ಷವು ಕಟ್ಟಿಟ್ಟದ್ದೇ ಎಂದು ತಿಳಿಯಬೇಕು ।೪೪೦॥

**ಶ್ಲೋಕಾರ್ಥ** :- ಯೋಗಸಿದ್ಧಿಯನ್ನು ಪಡೆಯದೇ ಸತ್ತವನು ಪುಣ್ಯವಂತರಿಗೆ ಯೋಗ್ಯವಾದ ಸ್ವರ್ಗಾದಿ ಲೋಕಗಳಲ್ಲಿ ಚಿರಕಾಲ ಸುಖವನ್ನನುಭವಿಸಿ, ಅನಂತರ ಪವಿತ್ರರಾದ ಭಾಗ್ಯವಂತರ ಗೃಹದಲ್ಲಿ ಜನಿಸುತ್ತಾನೆ ।೪೧॥

ಅರೇ, ಈ ಕೌತುಕವನ್ನು ನೋಡು, ಯಾವ ಲೋಕದ ಪ್ರಾಪ್ತಿಯಾಗಲು ನೂರು ಯಜ್ಞ ಮಾಡುವ ಸಾಹಸವು (ಇಂದ್ರನಿಗೂ) ಬೇಕಾಗುವುದು. ಆದರೆ ಈ ಮೋಕ್ಷ ಇಚ್ಛೆಯ ಪುರುಷನಿಗೆ ಅದು ಸಹಜವಾಗಿ ದೊರಕುವುದು ।೪೪೧॥

ಆಗ ಅಲ್ಲಿಯ ಫಲದಾಯಕ ಮತ್ತು ಅಪ್ರತಿಮ ಭೋಗಗಳನ್ನು ಭೋಗಿಸುತ್ತ ಮನಸ್ಸಿಗೆ ಬೇಸರ ಬರುವುದು ।೪೪೨॥

ಆ ದಿವ್ಯವಾದ ಭೋಗಗಳನ್ನು ಭೋಗಿಸುವಾಗ ಆತನಿಗೆ ಸುಖವಾಗುವುದಿಲ್ಲ. ಆತನು ''ಹೇ ಭಗವಂತನೇ ಈ ಭೋಗದ ವಿಘ್ನ ನನಗೇಕೆ ಬೆನ್ನು ಹತ್ತಿದೆ'' ಎಂದು ಸದಾವಕಾಲ ಪಶ್ಚಾತ್ತಾಪ ಪಡುತ್ತಿರುವನು ।೪೪೩॥

ಆಗ ಆತನು ಪುನಃ ಮೃತ್ಯುಲೋಕದಲ್ಲಿ ಜನ್ಮ ಪಡೆಯುವನು. ಆದರೆ ಎಲ್ಲ ಧರ್ಮದ ತವರುಮನೆ ಯಾಗಿರುವ ಕುಲದಲ್ಲಿ ಜನಿಸುವನು ಮತ್ತು ಬತ್ತವನ್ನು ಕೊಯ್ಯುವಾಗ ಬಿದ್ದ ಬೀಜಗಳು ಭರದಿಂದ ಬೆಳೆಯುವಂತೆ ಆತನ ಐಶ್ವರ್ಯವು ವೃದ್ಧಿಗೊಳ್ಳುತ್ತದೆ ।೪೪೪॥

ಜಯಾತೇ ನೀತಿಪಂಥೇ ಚಾಲೀಜೇ । ಸತ್ಯಧೂತ ಬೋಲಿಜೇ । ದೇಖಾವೇ ತೇ ದೇಖಿಜೇ । ಶಾಸ್ತ್ರದೃಷ್ಟೀ ।೪೪೫॥ ವೇದ ತೋ ಜಾಗೇಶ್ವರು । ಜಯಾ ವ್ಯವಸಾಯ ನಿಜಾಚಾರು । ಸಾರಾಸಾರ ವಿಚಾರು । ಮಂತ್ರೀ ಜಯಾ ।೪೪೬॥ ಜಯಾಚ್ಯಾ ಕುಳೀ ಚಿಂತಾ । ಜಾಲೀ ಈಶ್ವರಾಚೀ ಪತಿವ್ರತಾ । ಜಯಾತೇ ಗೃಹದೇವತಾ । ಆದಿ ಋದ್ಧಿ ।೪೪೭॥ ಐಸೀ ನಿಜ ಪುಣ್ಯಾಚೀ ಜೋಡೀ । ವಾಢಿನ್ನಲೀ ಸರ್ವಸುಖಾಚೀ ಕುಳವಾಡೀ । ತಿಯೇ ಜನ್ಮೇ ತೋ ಸುರವಾಡೀ । ಯೋಗಚ್ಯುತು ।೪೪೮॥

ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ ।
ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ।೪೨॥

ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಮ್ ।
ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ।೪೩॥

ಅಥವಾ ಜ್ಞಾನಾಗ್ನಿ ಹೋತ್ರಿ । ಜೇ ಪರಬ್ರಹ್ಮಣ್ಯಶ್ರೋತ್ರೀ । ಮಹಾಸುಖ ಕ್ಷೇತ್ರೀ । ಆದಿವಂತ ।೪೪೯॥ ಜೇ ಸಿದ್ಧಾಂತಾಚಿಯಾ ಸಿಂಹಾಸನೀ । ರಾಜ್ಯ ಕರತೀ ತ್ರಿಭುವನೀ । ಜೇ ಕೂಜತೀ ಕೋಕಿಲ ವನೀ । ಸಂತೋಷಾಚ್ಯಾ ।೪೫೦॥ ಜೇ ವಿವೇಕದ್ರುಮಾಚೇ ಮುಳೀ । ಬೈಸಲೇ ಆಹಾತಿ ನಿತ್ಯ ಫಳೀ । ತಯಾ ಯೋಗಿ ಯಾಂಚಿಯಾ ಕುಳೀ । ಜನ್ಮ ಪಾವೇ ।೪೫೧॥ ಮೋಟಕೀ ದೇಹಾಕೃತಿ ಉಮಟೇ । ಆಣಿ ನಿಜಜ್ಞಾನಾಚೀ ಪಾಹಾಟ ಫುಟೇ । ಸೂರ್ಯಾಪುಢೇ ಪ್ರಗಟೇ । ಪ್ರಕಾಶು ಜೈಸಾ ।೪೫೨॥ ತೈಸೀ ದಶೇಚೀ ವಾಟ ನ ಪಾಹತಾ । ವಯಸೇಚಿಯಾ ಗಾಂವಾ ನ ಯೇತಾ । ಬಾಳಪಣೇಂಚ ಸರ್ವಜ್ಞತಾ । ವರೀ ತಯಾತೇ ।೪೫೩॥ ತಿಯೇ ಸಿದ್ಧಪ್ರಜ್ಞೇಚೇನಿ ಲಾಭೇ । ಮನಚಿ ಸಾರಸ್ವತೇ ದುಭೇ । ಮಗ ಸಕಳ ಶಾಸ್ತ್ರೇ ಸ್ವಯಂಭೇ । ನಿಘತೀ ಮುಖೇ ।೪೫೪॥ ಐಸೇ ಜೇ ಜನ್ಮ । ಜಯಲಾಗೀ ದೇವ ಸಕಾಮ । ಸ್ವರ್ಗೀ ಠೇಲೇ ಜಪ ಹೋಮ । ಕರಿತೀ ಸದಾ ।೪೫೫॥ ಅಮರೀ ಭಾಟ ಹೋಈಜೇ । ಮಗ ಮೃತ್ಯುಲೋಕಾತೇ ವಾನಿಜೇ । ಐಸೇ ಜನ್ಮ ಪಾರ್ಥಾ ಗಾ ಜೇ । ತೇ ತೋ ಪಾವೇ ।೪೫೬॥

ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ ।
ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ।೪೪॥

ಯಾವ ಕುಲದಲ್ಲಿ ನೀತಿ ಮಾರ್ಗದಿಂದ ನಡೆಯುವವರು, ಸತ್ಯ ಮತ್ತು ಪವಿತ್ರ ಮಾತನಾಡುವವರು, ಮತ್ತು ಶಾಸ್ತ್ರಾನುಸಾರ ನಡೆಯುವವರು ।೪೪೫॥

ಯಾವ ಕುಲದಲ್ಲಿ ವೇದವು ನಿತ್ಯ ಜಾಗೃತವಾಗಿರುವುದು ಮತ್ತು ಸ್ವಧರ್ಮ ಆಚರಣೆಯು ಯಾರ ಕುಲದ ವ್ಯವಸಾಯವಾಗಿರುವುದು ಮತ್ತು ಸಾರಾಸಾರ ವಿಚಾರವೇ ಮಂತ್ರಿಯಾಗಿರುವುದು ।೪೪೬॥

ಯಾವ ಕುಲದಲ್ಲಿ ಚಿಂತನೆಯು ಈಶ್ವರನ ಪತಿವ್ರತಾ ಸ್ತ್ರೀಯಾಗಿರುವಳು (ಈಶ್ವರನ ಹೊರತಾದ ಬೇರೆ ಚಿಂತನೆ ಇರುವುದಿಲ್ಲ) ಋದ್ಧಿ ಸಿದ್ಧಿಗಳು ಯಾರ ಮನೆಯಲ್ಲಿ ದೇವತಾರೂಪದಿಂದ ವ್ಯವಹರಿಸುವುವು ।೪೪೭॥

ಈ ಪ್ರಕಾರವಾಗಿ ಯಾವ ಕುಲದಲ್ಲಿ ಪುಣ್ಯ ಸಂಪಾದನೆಯಾಗಿದೆಯೋ ಮತ್ತು ಅಲ್ಲಿ ಎಲ್ಲ ಸುಖದ ಸಮೃದ್ಧಿ ಇದೆಯೋ ಅಂತಹ ಕುಲದಲ್ಲಿ ಯೋಗಭ್ರಷ್ಟ ಪುರುಷನು ಸುಖದಿಂದ ಜನ್ಮ ಧರಿಸುವನು ।೪೪೮॥

ಶ್ಲೋಕಾರ್ಥ :- ಇಲ್ಲವೇ ಪ್ರಜ್ಞಾವಂತರಾದ ಯೋಗಿಗಳ ವಂಶದಲ್ಲಿ ಯಾದರೂ ಹುಟ್ಟುವನು. ನಿಜವಾಗಿ ಅಂಥಾ ಜನ್ಮವು ಲೋಕದಲ್ಲಿ ತೀರ ಅಪರೂಪ ।೪೨॥

ಶ್ಲೋಕಾರ್ಥ :- ಕುರುನಂದನ! ಅಂಥವನು ಪೂರ್ವಜನ್ಮದಲ್ಲಿ ಬಿಟ್ಟ ಯೋಗ ಬುದ್ಧಿಯನ್ನು ಈ ಜನ್ಮದಲ್ಲಿ ಪಡೆದು, ಪೂರ್ಣಸಿದ್ಧಿಗಾಗಿ ಪುನಃ ಪ್ರಯತ್ನ ಮಾಡುತ್ತಾನೆ ।೪೩॥

ಅಥವಾ ಜ್ಞಾನರೂಪ ಅಗ್ನಿಯಲ್ಲಿ ಹವನ ಮಾಡುವವರು ಮತ್ತು ಆಧ್ಯಾತ್ಮ ಸಿದ್ಧಾಂತದಲ್ಲಿ ನಿಷ್ಣಾತರಾದವರು. ಹಾಗೂ ಪರಬ್ರಹ್ಮರೂಪ ಗ್ರಾಮದಲ್ಲಿರುವ ಮೂಲನಿವಾಸಿಯಾದವರು ।೪೪೯॥

(ಏಕಮೇವಾದ್ವಿತೀಯಮ್) ಈ ಸಿದ್ಧಾಂತದ ಸಿಂಹಾಸನವನ್ನು ಏರಿ ತ್ರಿಭುವನದ ರಾಜ್ಯ ಪಾಲನೆ ಮಾಡುವವರು ಮತ್ತು ಸಂತೋಷರೂಪ ವನದಲ್ಲಿ ಕೋಕಿಲದಂತೆ ಧ್ವನಿ ಮಾಡುವವರು ।೪೫೦॥

ಮತ್ತು ವಿವೇಕ ವೃಕ್ಷದ ಅಡಿಯಲ್ಲಿ ಕುಳಿತು ಬ್ರಹ್ಮರೂಪ ಫಲವನ್ನು ನಿತ್ಯದಲ್ಲಿ ಸೇವಿಸುವವರು ಈ ಪ್ರಕಾರದ ಕುಲದಲ್ಲಿ ಯೋಗಭ್ರಷ್ಟ ಪುರುಷನು ಜನ್ಮ ಧರಿಸುವನು ।೪೫೧॥

ಇವರು ಜನ್ಮಧಾರಣೆ ಮಾಡಿದಾಗ ಚಿಕ್ಕ ವಯಸ್ಸಿನಲ್ಲಿಯೇ ಅವರಲ್ಲಿ ಆತ್ಮಜ್ಞಾನದ ಪ್ರಕಾಶ ಬೀರುವುದು. ಯಾವ ಪ್ರಕಾರವಾಗಿ ಸೂರ್ಯನು ಉದಯಿಸುವ ಮುನ್ನವೇ ನಾಲ್ಕು ಕಡೆಯಲ್ಲಿಯೂ ಪ್ರಭೆಯು ಹರಡುತ್ತದೆಯೋ ।೪೫೨॥

ಅದೇ ಪ್ರಕಾರವಾಗಿ, ಪ್ರೌಢವಯಸ್ಸಿನ ದಾರಿ ಕಾಯದೇ ಜ್ಞಾನವು ಇವರಿಗೆ ಬಾಲ್ಯಾವಸ್ಥೆಯಲ್ಲಿಯೇ ವರಿಸುವುದು (ಪ್ರಾಪ್ತಿಯಾಗುವುದು) ।೪೫೩॥

ಪೂರ್ವಜನ್ಮದಲ್ಲಿ ಸಿದ್ಧವಾಗಿರುವ ಬುದ್ಧಿಯ ಯೋಗದಿಂದ ಸರ್ವವಿದ್ಯೆಗಳು ಆತನಿಗೆ ಪ್ರಾಪ್ತವಾಗುವುವು ಮತ್ತು ಆತನ ಮುಖದಿಂದ ಸರ್ವಶಾಸ್ತ್ರಗಳು ಸ್ವಯಮೇವ ಹೊರ ಬೀಳುವುವು ।೪೫೪॥

ಇಂತಹ ಉತ್ತಮ ಕುಲದಲ್ಲಿ ಜನ್ಮವು ಪ್ರಾಪ್ತವಾಗಬೇಕೆಂಬ ಬಯಕೆಯಿಂದ ಸ್ವರ್ಗವಾಸಿ ದೇವತೆಗಳು ಮನದಲ್ಲಿ ಈ ಹೇತು ಧರಿಸಿಕೊಂಡು ನಿತ್ಯವೂ ಜಪ ಹೋಮ ಮಾಡುತ್ತಿರುವರು ।೪೫೫॥

ಪಾರ್ಥಾ, ಸ್ವರ್ಗದ ದೇವತೆಗಳು ಸ್ತುತಿ-ಪಾಠಕರಾಗಿ ಮೃತ್ಯುಲೋಕದ ವರ್ಣನೆ ಮಾಡುವಂತಿರುವ ಉತ್ತಮ ಕುಲದಲ್ಲಿ ಆ ಯೋಗಭ್ರಷ್ಟನು ಜನ್ಮ ಧರಿಸುವನು ।೪೫೬॥

ಶ್ಲೋಕಾರ್ಥ :- ಪೂರ್ವಜನ್ಮ ಸಂಸ್ಕಾರ ಬಲದಿಂದ ಅವನು ಅನಾಯಾಸವಾಗಿ ಮುಂದಕ್ಕೆ ನಡೆಯುವನು. ಈ ಯೋಗವನ್ನು ತಿಳಿದುಕೊಳ್ಳಬೇಕೆಂದು ಬಯಸುವವನೂ ಸಹ ಕರ್ಮ ಕಾಂಡರೂಪವಾದ ಶಬ್ದ ಬ್ರಹ್ಮವನ್ನೂ ದಾಟಿ ಹೋಗುತ್ತಾನೆ ।೪೪॥

ಆಣೀ ಮಾಗಿಲ ಜೇ ಸದ್ಬುದ್ಧಿ । ಜೇಥ ಜೇವಿತ್ವಾ ಜಾಹಾಲೀ ಹೋತೀ ಅವಧಿ । ಮಗ ತೇಚಿ ಪುಢತೀ ನಿರವಧಿ । ನವೀ ಲಾಹೇ ॥೪೫೭॥ ತೇಥ ಸದೈವಾ ಆಣಿ ಪಾಯಾಳಾ । ವರಿ ದಿವ್ಯಾಂಜನ ಹೋಯ ಡೋಳಾ । ಮಗ ದೇಖೇ ಜೈಸೀ ಅವಲೀಳಾ । ಪಾತಾಳಧನೇ ॥೪೫೮॥ ತೈಸೇ ದುರ್ಭೇದ ಜೇ ಅಭಿಪ್ರಾಯ । ಕಾ ಗುರುಗಮ್ಯ ಹನ ಠಾಯ । ತೇಥ ಸೌರಸೇವೀಣ ಜಾಯ । ಬುದ್ಧಿ ತಯಾಚೀ ॥೪೫೯॥ ಬಳಿಯೇ ಇಂದ್ರಿಯೇ ಯೇತಿ ಮನಾ । ಮನ ಏಕವಟೇ ಪವನಾ । ಪವನ ಸಹಜೇ ಗಗನಾ । ಮಿಳೋಚಿ ಲಾಗೇ ॥೪೬೦॥ ಐಸೇ ನೇಣೋ ಕಾಯ ಅಪೈಸೇ । ತಯಾತೇಂಚಿ ಕೀಜೇ ಅಭ್ಯಾಸೇ । ಸಮಾಧಿ ಘರ ಪುಸೇ । ಮಾನಸಾಚೇ ॥೪೬೧॥ ಜಾಣಿಜೇ ಯೋಗಪೀಠೀಚಾ ಭೈರವು । ಕಾಯ ಹಾ ಆರಂಭ ಹೇರಂಭೀಚಾ ಗೌರವು । ಕೀ ವೈರಾಗ್ಯ ಸಿದ್ಧೀಚಾ ಅನುಭವು । ರೂಪಾ ಆಲಾ ॥೪೬೨॥ ಹಾ ಸಂಸಾರು ಉಮಾಣಿತೇ ಮಾಪ । ಕಾ ಅಷ್ಟಾಂಗಸಾಮಗ್ರೀಚೇ ದ್ವೀಪ । ಜೈಸೇ ಪರಿಮಳೇಚಿ ಧರಿಜೇ ರೂಪ । ಚಂದನಾಚೇ ॥೪೬೩॥ ತೈಸಾ ಸಂತೋಷಾಚಾ ಕಾಯ ಘಡಿಲಾ । ಕೀ ಸಿದ್ಧಿ ಭಾಂಡಾರೀಹೂನಿ ಕಾಢಿಲಾ । ದಿಸೇ ತೇಣೇ ಮಾನೇ ರೂಢಲಾ । ಸಾಧಕ ದಶೇ ॥೪೬೪॥

ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ ।<br>ಅನೇಕಜನ್ಮಸಂಸಿದ್ಧಃ ತತೋ ಯಾತಿ ಪರಾಂ ಗತಿಮ್ ॥೪೫॥

ಜೇ ವರ್ಷಶತಾಂಚಿಯಾ ಕೋಡಿ । ಜನ್ಮ ಸಹಸ್ರಾಂಚಿಯಾ ಆಡೀ । ಲಂಘಿತಾ ಪಾತಲಾ ಥಡೀ । ಆತ್ಮಸಿದ್ಧೀಚೀ ॥೪೬೫॥ ಮ್ಹಣೌನಿ ಸಾಧನಜಾತ ಆಘವೇ । ಅನುಸರೇ ತಯಾ ಸ್ವಭಾವೇ । ಮಗ ಆಯತಿಯೇ ಬೈಸೇ ರಾಣಿವೇ । ವಿವೇಕಾಚಿಯೇ ॥೪೬೬॥ ಪಾಠೀ ವಿಚಾರಿತಯಾ ವೇಗಾ । ತೋ ವಿವೇಕು ಹೀ ಠಾಕೇ ಮಾಗಾ । ಮಗ ಅವಿಚಾರಣೀಯ ತೇ ಆಂಗಾ । ಘಡೋನಿ ಜಾಯ ॥೪೬೭॥ ತೇಥ ಮನಾಚೇ ಮೇಹುಡೇ ವಿರೇ । ಪವನಾಚೇ ಪವನಪಣ ಸರೇ । ಆಪಣಪಾ ಆಪಣ ಮುರೇ । ಆಕಾಶಹೀ ॥೪೬೮॥ ಪ್ರಣವಾಚಾ ಮಾಥಾ ಬುಡೇ । ಯೇತುಲೇನಿ ಅನಿರ್ವಾಚ್ಯ ಸುಖ ಜೋಡೇ । ಮ್ಹಣೌನಿ ಆಧೀಂಚಿ ಬೋಲು ಬಹುಡೇ । ತಯಾಲಾಗೀ ॥೪೬೯॥ ಐಸೀ ಬ್ರಹ್ಮೀಂಚೀ ಸ್ಥಿತೀ । ಜೇ ಸಕಳಾ ಗತೀಂಸೀ ಗತೀ । ತಯಾ ಅಮೂರ್ತಾಚೀ ಮೂರ್ತಿ । ಹೋಊನಿ ಠಾಕೇ ॥೪೭೦॥

ಮತ್ತು ಪೂರ್ವಜನ್ಮದಲ್ಲಿ ಆಯುಷ್ಯದ ಕೊನೆ ಆಗುವಾಗ ಆ ವೇಳೆಯಲ್ಲಿನ ಸದ್ಬುದ್ಧಿಯು ಆತನಿಗೆ ಪುನಃ ಪ್ರಾಪ್ತವಾಗುತ್ತದೆ ।೪೫೭॥

ಮೊದಲೇ ದೈವವಾನನು, ಕಾಲು ಮುಂದಾಗಿ ಹುಟ್ಟಿದವನು, ಪುನಃ ಕಣ್ಣಿಗೆ ದಿವ್ಯಾಂಜನ ಹಾಕಿಕೊಂಡ ಪುರುಷನಿಗೆ ಭೂಮಿಯಲ್ಲಿನ ಧನವು ಸಹಜವಾಗಿ ಗೋಚರಿಸುವುದು ।೪೫೮॥

ಅದರಂತೆ ಗುರುಮುಖದ ಹೊರತಾಗಿ ತಿಳಿಯಲಾರದ ಕಠಿಣವಾದ ಅಭಿಪ್ರಾಯಗಳನ್ನು ಆತನ ಬುದ್ಧಿಯು ಅನಾಯಾಸವಾಗಿ ಹೋಗಿ ಮುಟ್ಟುವುದು ।೪೫೯॥

ಇಂದ್ರಿಯಗಳು ತಾವಾಗಿಯೇ ಮನಸ್ಸಿನ ಆಧೀನಗಳಾಗುತ್ತವೆ. ಮನಸ್ಸು ಪ್ರಾಣವಾಯುವಿನಲ್ಲಿ ಐಕ್ಯವಾಗುತ್ತದೆ ಮತ್ತು ಆ ಪ್ರಾಣವಾಯುವು ಚಿದಾಕಾಶದಲ್ಲಿ ಕೂಡಿಕೊಳ್ಳುತ್ತದೆ ।೪೬೦॥

ಇನ್ನುಳಿದ ಮಾತುಗಳಿರಲಿ. ಆದರೆ ಯೋಗಾಭ್ಯಾಸವು ಆತನಿಗೆ ತನ್ನಷ್ಟಕ್ಕೆ ತಾನೇ ಪ್ರಾಪ್ತವಾಗುವುದು ಮತ್ತು ಸಮಾಧಿಯೂ ಆತನ ಮನಸ್ಸಿನ ಮನೆಯನ್ನು ಕೇಳುತ್ತಾ ಬರುವುದು ।೪೬೧॥

ಈ ಯೋಗಭ್ರಷ್ಟನು ಯೋಗಪೀಠದ ಮೇಲೆ ನಿಂತಿರುವ ಭೈರವದೇವ (ಶಂಕರ) ನಂತೆ ಇರುವನು ಮತ್ತು ಯೋಗಾರಂಭದ ಗೌರವಶೀಲ ಪ್ರಥಮ ಪೂಜನೀಯ ಗಣಪತಿಯಂತೆ ಅಥವಾ ವೈರಾಗ್ಯ ಸಿದ್ಧಿಯ ಅನುಭವವೇ ಆಕಾರಕ್ಕೆ ಬಂದಂತೆ ಕಾಣುವನು ।೪೬೨॥

ಈ ಪುರುಷನು ಸಂಸಾರದ ಮರ್ಯಾದೆಯನ್ನು ಅಳೆಯುವ ಅಳತೆಯಾಗಿರುವನು. ಅಥವಾ ಯಮನಿಯಮಾದಿ ಅಷ್ಟಾಂಗ ಯೋಗ ಸಾಮಗ್ರಿಯ ದ್ವೀಪ (ನಡುಗಡ್ಡೆ) ಆಗಿರುವನು. ಯಾವ ಪ್ರಕಾರವಾಗಿ ಸುಗಂಧವು ಚಂದನದ ರೂಪಧಾರಣೆ ಮಾಡಿದೆಯೋ ।೪೬೩॥

ಅದರಂತೆ ಸಾಧಕದಶೆಯ ಯೋಗದಿಂದ ಇಷ್ಟೊಂದು ಧೈರ್ಯವಂತನಾಗಿದ್ದು ಸಂತೋಷದ ಮೂರ್ತಿಯೇ ತಯಾರಿಸಿದಂತೆ ಅಥವಾ ಸಿದ್ಧಿಯ ಭಾಂಡಾರದಿಂದ ತಗೆದಿರುವಂತೆ ಕಾಣುತ್ತಾನೆ ।೪೬೪॥

ಶ್ಲೋಕಾರ್ಥ :- ಹಿಡಿದಿದ್ದನ್ನು ಬಿಡದೆ ಪ್ರಯತ್ನ ಮಾಡುವ ಯೋಗಿಯು ಬಹು ಜನ್ಮ ಪರಿಪಾಕದಿಂದ ಸಮಸ್ತ ದೋಷರಹಿತನಾಗಿ ಪರಮಸಿದ್ಧಿಯನ್ನು ಪಡೆಯುತ್ತಾನೆ ।೪೫॥

ಏಕೆಂದರೆ, ಕೋಟ್ಯಾವಧಿ ವರ್ಷಗಳಿಂದ ಸಾವಿರಾರು ಜನ್ಮಗಳ ಪ್ರತಿಬಂಧಗಳನ್ನು ದೂರ ಮಾಡಿ ಆತ್ಮಸಿದ್ಧಿಯ ದಂಡೆಗೆ ಬಂದು ಮುಟ್ಟಿರುತ್ತಾನೆ ।೪೬೫॥

ಆದ್ದರಿಂದ ಎಲ್ಲ ಸಾಧನೆಗಳು ಆತನಲ್ಲಿಗೆ ಬಂದು ಸ್ವಭಾವತಃ ಪ್ರಾಪ್ತವಾಗುವುವು ಮತ್ತು ಆಗ ಆತನು ಸಹಜವಾಗಿ ವಿವೇಕದ ಗಾದಿಯ ಮೇಲೆ ಆರೂಢನಾಗುವನು ।೪೬೬॥

ನಂತರ ವೇಗದಿಂದ ಆತ್ಮಾನಾತ್ಮ ವಿಚಾರ ಮಾಡುವಾಗ ಸಾಧಕನು ಮುಂದಾಗುವನು. ಇತರ ಸಾಧನೆ ಜೊತೆಗೆ ಆ ವಿಚಾರವು ಹಿಂದುಳಿಯುವುದು ಮತ್ತು ವಿಚಾರಕ್ಕೆ ಅಗಮ್ಯವಾದ ಬ್ರಹ್ಮವನ್ನು ಸ್ವತಃ ತಾನೇ ಆಗುವನು ।೪೬೭॥

ಅಲ್ಲಿ ಮನದ ಮೋಡಗಳು ಇಲ್ಲದಂತಾಗುವುವು. ಪ್ರಾಣವಾಯುವಿನ ಚಲನೆ ಬಂದಾಗುವುದು ಮತ್ತು ಆಕಾಶವು ತನ್ನಲ್ಲಿಯೇ ಲೀನವಾಗುವುದು ।೪೬೮॥

ಓಂಕಾರದ ಬಿಂದು ಸ್ವರೂಪ ಶಿರವು ಮುಳುಗಿ ಹೋಗುವುದು. ಇಷ್ಟೊಂದು ಶಬ್ದಕ್ಕೆ ಅಗೋಚರವಾದ ಅವರ್ಣನೀಯ ಸುಖವು ಪ್ರಾಪ್ತವಾಗುವುದು. ಆದ್ದರಿಂದ ಇಲ್ಲಿ ಈ ವಿಷಯಕ್ಕೆ ಹೇಳುವುದೇ ಬಂದಾಗುವುದು ।೪೬೯॥

ತದನಂತರ ಎಲ್ಲ ಗತಿಗಳಿಗೆ ಗತಿಯನ್ನು ಕೊಡುವ ಯಾವ ಬ್ರಹ್ಮಸ್ಥಿತಿಯು, ಆ ನಿರಾಕಾರ ಸ್ಥಿತಿಯ ಸ್ವರೂಪವೇ ತಾನಾಗುವನು ।೪೭೦॥

ತೇಣೇ ಬಹುತೀ ಜನ್ಮೀ ಮಾಗಿಲೀ । ವಿಕ್ಷೇಪಾಂಚೀ ಪಾಣಿವಳೇ ಝಾಡಿಲೀ । ಮ್ಹಣೌನಿ ಉಪಜತ ಖೇಂವೋ ಬುಡಾಲೀ । ಲಗ್ನಘಟಿಕಾ ।।೪೭೧।। ಆಣಿ ತದ್ರೂಪತೇಸೀ ಲಗ್ನ । ಲಾಗೋನಿ ಠೇಲೇ ಅಭಿನ್ನ । ಜೈಸೇ ಲೋಪಲೇ ಅಭ್ರ ಗಗನ । ಹೋಊನಿ ಠಾಕೇ ।।೪೭೨।। ತೈಸೇ ವಿಶ್ವ ಜೇಥ ಹೋಯೇ । ಮಾಗೌತೇ ಜೇಥ ಲಯಾ ಜಾಯೇ । ತೇ ವಿದ್ಯಮಾನೇಂಚಿ ದೇಹೇ । ಜಾಹಲಾ ತೋ ಗಾ ।।೪೭೩।।

ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ ।
ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ।।೪೬।।

ಜಯಾ ಲಾಭಾಚಿಯಾ ಆಶಾ । ಕರೂನಿ ಧೈರ್ಯಬಾಹೂಚಾ ಭರಂವಸಾ । ಘಾಲೀತ ಷಟ್ಕರ್ಮಾಚಾ ಧಾರಸಾ । ಕರ್ಮನಿಷ್ಠ ।।೪೭೪।। ಕಾ ಜಿಯೇ ಏಕ ವಸ್ತೂ ಲಾಗೀ । ಬಾಣೋನಿ ಜ್ಞಾನಾಚೀ ವಜ್ರಾಂಗೀ । ಝುಂಜತ ಪ್ರಪಂಚೇಶೀ ಸಮರಂಗೀ । ಜ್ಞಾನಿಯೇ ಗಾ ।।೪೭೫।। ಅಥವಾ ನಿಲಾಗೇ ನಿಸರಡಾ । ತಪೋ ದುರ್ಗಾಚಾ ಆಡಕಡಾ । ಝೊಂಬತೀ ತಪಿಯೇ ಚಾಡಾ । ಜಯಾಚಿಯಾ ।।೪೭೬।। ಜೇ ಭಜತಿಯಾ ಭಜ್ಯ । ಯಾಜ್ಞಿಕಾಂಚೇ ಯಾಜ್ಯ । ಏವಂ ಜೇ ಪೂಜ್ಯ । ಸಕಳಾ ಸದಾ ।।೪೭೭।। ತೇಂಚಿ ತೋ ಆಪಣ । ಸ್ವಯೇ ಜಾಹಲಾ ನಿರ್ವಾಣ । ಜೇ ಸಾಧಕಾಂಚೇ ಕಾರಣ । ಸಿದ್ಧ ತತ್ತ್ವ ।।೪೭೮।। ಮ್ಹಣೌನಿ ಕರ್ಮನಿಷ್ಠಾ ವಂದ್ಯು । ತೋ ಜ್ಞಾನಿಯಾಂಸಿ ವೇದ್ಯು । ತಾಪಸಾಂಚಾ ಆದ್ಯು । ತಪೋನಾಥು ।।೪೭೯।। ಪೈ ಜೀವ ಪರಮಾತ್ಮಸಂಗಮಾ । ಜಯಾಚೇ ಯೇಣೇ ಜಾಹಲೇ ಮನೋಧರ್ಮಾ । ತೋ ಶರೀರೀಚಿ ಪರೀ ಮಹಿಮಾ । ಐಶೀ ಪಾವೇ ।।೪೮೦।। ಮ್ಹಣೌನಿ ಯಾಕಾರಣೇ । ತೂತೇ ಮೀ ಸದಾ ಮ್ಹಣೇ । ಯೋಗಿ ಹೋಈ ಅಂತಃಕರಣೇ । ಪಂಡುಕುಮರಾ ।।೪೮೧।।

ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ ।
ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ।।೪೭।।
ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಧ್ಯಾನಯೋಗೋ ನಾಮ ಷಷ್ಠೋಽಧ್ಯಾಯಃ ।

ಆಗಾ ಯೋಗೀ ಜೋ ಮ್ಹಣಿಜೇ । ತೋ ದೇವಾಂಚಾ ದೇವೋ ಜಾಣಿಜೇ । ಆಣಿ ಸುಖ ಸರ್ವಸ್ವ ಮಾಝೇ । ಚೈತನ್ಯ ತೋ ।।೪೮೨।। ತೇಥ ಭಜತಾ ಭಜನ ಭಜಾವೇ । ಹೇ ಭಕ್ತಿಸಾಧನ ಜೇ ಆಘವೇ । ತೋ ಮೀಚಿ ಜಾಹಲೋ ಅನುಭವೇ । ಅಖಂಡಿತ ।।೪೮೩।। ಮಗ ತಯಾ ಆಮ್ಹಾ ಪ್ರೀತೀಚೇ । ಸ್ವರೂಪ ಬೋಲಿಲೀ ನಿರ್ವಚೇ । ಐಸೇ ನವ್ಹೇ ಗಾ ತೋ ಸಾಚೇ । ಸುಭದ್ರಾಪತೀ ।।೪೮೪।।

ಈತನು ಹಿಂದಿನ ಅನೇಕ ಜನ್ಮಗಳಲ್ಲಿ ಪ್ರತಿಬಂಧ ಎಂಬುವ ನೀರಿನ ಮೇಲಿನ ಹೊಲಸನ್ನು ತೆಗೆದೊಗೆದಿರುತ್ತಾನೆ. ಆದ್ದರಿಂದ ಈತನ ಲಗ್ನಘಟಿಕಾ ಈತನ ಜನ್ಮವಾಗುತ್ತಲೇ ಮುಳುಗುವುದು ।।೪೭೦।।

ಮತ್ತು ತದ್ರೂಪದ ಜೊತೆಗೆ ಶುಭಲಗ್ನವಾಗಿ ಅಭಿನತ್ವವನ್ನು ಹೊಂದುವನು. ಮೋಡಗಳು ಇಲ್ಲದಾಗಲು ಆಕಾಶವು ಯಥಾಸ್ಥಿತಿಯಾಗುವುದು ।।೪೭೨।।

ಅದರಂತೆ (ವಿಕ್ಷೇಪಾದಿ ವಿಘ್ನಗಳು ಇಲ್ಲದಾಗಲು) ಯಾವುದರಿಂದ ವಿಶ್ವದ ಉತ್ಪತ್ತಿಯಾಗುವುದೋ ಮತ್ತು ಯಾವುದರಲ್ಲಿ ಅದು ಪುನಃ ಲಯಗೊಳ್ಳುವುದೋ ಆ ಬ್ರಹ್ಮವನ್ನು ಈತನು ವಿದ್ಯಮಾನ ದೇಹದಲ್ಲಿದ್ದಾಗಲೇ ಆಗುವನು ।।೪೭೩।।

ಶ್ಲೋಕಾರ್ಥ :- ತಪಸ್ವಿಗಳಿಗಿಂತಲೂ, ಪರೋಕ್ಷ ಜ್ಞಾನಿಗಳಿಗಿಂತಲೂ, ಕರ್ಮನಿಷ್ಠರಿಗಿಂತಲೂ, ಯೋಗಿಯು ಶ್ರೇಷ್ಠನು. ಆದುದರಿಂದ ಅರ್ಜುನಾ! ನೀನು ಯೋಗಿಯಾಗು ।।೪೬।।

ಯಾವುದು ಲಾಭದ ಆಶೆಯಿಂದ ಕರ್ಮನಿಷ್ಠೆ ಪುರುಷರು ತಮ್ಮ ಬಾಹುಬಲದ ಭರವಸೆಯಿಂದ ಕರ್ಮಮಾರ್ಗದ ಪ್ರವಾಹದಲ್ಲಿ ಜಿಗಿಯುವರು ।।೪೭೪।।

ಅಥವಾ ಯಾವ ಒಂದು ವಸ್ತುವಿಗಾಗಿ ಜ್ಞಾನಿ ಪುರುಷರು ಜ್ಞಾನರೂಪ ಕವಚವನ್ನು ಧರಿಸಿ ರಣರಂಗದಲ್ಲಿ ಪ್ರಪಂಚ ಶತ್ರುಗಳೊಂದಿಗೆ ಯುದ್ಧ ಮಾಡುವರು ।।೪೭೫।।

ಅಥವಾ ಇದರ ಪ್ರಾಪ್ತಿಗಾಗಿ ತಪಸ್ವಿ ಜನರು ನಿರಾಧಾರವಾದ, ಜಾರಿಬೀಳುವಂತಹ, ತಪೋರೂಪ ಪರ್ವತದ ಕಡಿದಾದ ದಾರಿಯಲ್ಲಿ ಪ್ರವಾಸ ಮಾಡುವರು ।।೪೭೬।।

ಭಜನೆ ಮಾಡುವವರಿಗೆ ಭಜನದ ಅಧಿಷ್ಠಾನವು ಯಾಜ್ಞಿಕರಿಗೆ ಯಾಜ್ಯ ಯಜನಸ್ಥಾನವು ಇದ್ದಂತೆ ಎಲ್ಲರಿಗೂ ಯೋಗ್ಯವೂ, ಪೂಜ್ಯವೂ ಆಗಿದೆ ।।೪೭೭।।

ಮತ್ತು ಸಾಧಕರಿಗೆ ಸಿದ್ಧತತ್ತ್ವವಾಗಿರುವ ಆ ನಿರ್ವಾಣ ಪರಬ್ರಹ್ಮವು ಆತನು ಸ್ವತಃ ತಾನೇ ಆಗುತ್ತಾನೆ ।।೪೭೮।।

ಆದ್ದರಿಂದ ಆತನು ಕರ್ಮನಿಷ್ಠರಿಗೆ ವಂದನೀಯನು ಮತ್ತು ಜ್ಞಾನಿಗಳಿಗೆ ವಿಚಾರಣೀಯನು ಹಾಗೂ ತಪಸ್ವಿಗಳವರಿಗೆ ಮೂಲ ತಪೋನಾಥನು ।।೪೭೯।।

ಜೀವ - ಪರಮಾತ್ಮ ಇವರ ಸಂಗಮದಲ್ಲಿ ಆತನ ಮನಸ್ಸು ಐಕ್ಯಗೊಂಡಿರುವುದರಿಂದ ಆತನು ದೇಹಧಾರಿ ಆಗಿದ್ದರೂ ಇಂತಹ ಯೋಗ್ಯತೆಯನ್ನು ಪಡೆಯುವನು ।।೪೮೦।।

ಆದ್ದರಿಂದ ಅರ್ಜುನಾ, ಇದೇ ಕಾರಣದಿಂದ ''ನೀನು ಯೋಗಿಯಾಗು ಎಂದು ನಾನು ನಿನಗೆ ಮನಃಪೂರ್ವಕವಾಗಿ ಸದಾವಕಾಲದಲ್ಲಿ ಹೇಳುತ್ತಿರುತ್ತೇನೆ ।।೪೮೧।।

ಶ್ಲೋಕಾರ್ಥ :- ನನ್ನಲ್ಲೇ ಚಿತ್ತವನ್ನು ನಿಲ್ಲಿಸಿ ಶ್ರದ್ಧೆಯಿಂದ ನನ್ನನ್ನೇ ಸೇವಿಸುವರು ಯೋಗಿಗಳಲ್ಲೆಲ್ಲಾ ಮಹಾಯೋಗಿಗಳು ।।೪೭।।

ಇಲ್ಲಿಗೆ ಉಪನಿಷತ್ತೂ, ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ, ಶ್ರೀಕೃಷ್ಣಾರ್ಜುನ ಸಂವಾದವೂ ಆದ ಶ್ರೀಮದ್ಭಗವದ್ಗೀತೆಯಲ್ಲಿ ಆತ್ಮಸಂಯಮಯೋಗವೆಂಬ ಹೆಸರಿನ ಆರನೆಯ ಅಧ್ಯಾಯವು ಮುಗಿದುದು.

ಅರೇ, ಯೋಗಿ ಎಂದರೆ ಆತನು ದೇವರ ದೇವನು. ನನ್ನ ಸರ್ವಸುಖದ ಆಗರನು ಮತ್ತು ಕೇವಲ ನನ್ನ ಪ್ರಾಣನು ಹೀಗೆ ತಿಳಿದುಕೊ ।।೪೮೨।।

ಆತನಲ್ಲಿ, ಭಜನ ಮಾಡುವವನು, ಭಜನ ಕ್ರಿಯೆಯು, ಮತ್ತು ಭಜ್ಯವಸ್ತುವು ಈ ಭಕ್ತಿಯ ತ್ರಿಪುಟಿಯು ಆತನ ಅನುಭವದಿಂದ ನಾನೇ ಆಗಿರುವೆನು ।।೪೮೩।।

ಹೇ ಸುಭದ್ರಾಪತಿಯೇ! ಆಗ ಆತನ ಮತ್ತು ನನ್ನ ಪ್ರೀತಿಯ ಸ್ವರೂಪದ ವರ್ಣನೆಯನ್ನು ಮಾಡಲಿಕ್ಕಾಗದು. ಆತನೆಂದರೆ ಪ್ರತ್ಯಕ್ಷವಾಗಿ ನಾನೇ ಎಂದು ಹೀಗೆ ತಿಳಿ ।।೪೮೪।।

ತಯಾ ಏಕವಟಲಿಯಾ ಪ್ರೇಮಾ । ಜರೀ ಪಾಡೇ ಪಾಹಿಜೇ ಉಪಮಾ । ತರೀ ಮೀ ದೇಹ ತೋ ಆತ್ಮಾ । ಹೇಚಿ ಹೋಯ ।।೪೮೫।। ಐಸೇ ಭಕ್ತಚಕೋರಚಂದ್ರೇ । ತ್ರಿಭುವನೈಕನರೇಂದ್ರೇ । ಬೋಲಿಲೇ ಗುಣಸಮುದ್ರೇ । ಸಂಜಯೋ ಮ್ಹಣೇ ।।೪೮೬।। ತೇಥ ಆದಿಲಾಪಾಸೂನಿ ಪಾರ್ಥಾ । ಐಕಿಜೇ ಐಸೀಚಿ ಆಸ್ಥಾ । ದುಣಾವಲೀ ಹೇ ಯದುನಾಥಾ । ಭಾವೋ ಸರಲೇ ।।೪೮೭।। ಕೀ ಸಾವಿಯಾಚಿ ಮನೀ ಸಂತೋಷಲಾ । ಜೇ ಬೋಲಾ ಆರಿಸಾ ಜೋಡಲಾ । ತೇಣೇ ಹರಿಖೇ ಆತಾ ಉಪಲವಲಾ । ನಿರೂಪೀಲ ।।೪೮೮।। ತೋ ಪ್ರಸಂಗು ಆಹೇ ಪುಢಾ । ಜೇಥ ಶಾಂತು ದಿಸೇಲ ಉಘಡಾ । ತೋ ಪಾಲವಿಜೇಲ ಮುಡಾ । ಪ್ರಮೇಯಬೀಜಾಂಚಾ ।।೪೮೯।। ಜೇ ಸಾತ್ತ್ವಿಕಾಚೇನಿ ವಡಪೇ । ಗೇಲೇ ಆಧ್ಯಾತ್ಮಿಕ ಖರಪೇ । ಸಹಜೇ ನಿಡಾರಲೇ ವಾಫೇ । ಚತುರಚಿತ್ತಾಚೇ ।।೪೯೦।। ವರೀ ಅವಧಾನಾಚಾ ವಾಫಸಾ । ಲಾಧಲಾ ಸೋನಯಾಐಸಾ । ಮ್ಹಣೌನಿ ಪೇರಾವಯಾ ಧಿಂವಸಾ । ಶ್ರೀನಿವೃತ್ತಿಸೀ ।।೪೯೧।। ಜ್ಞಾನದೇವ ಮ್ಹಣೇ ಮೀ ಚಾಡೇ । ಸದ್ಗುರೂನೀ ಕೇಲೇ ಕೋಡೇ । ಮಾಥಾ ಹಾತ ಠೇವಿಲಾ ತೇ ಫುಡೇ । ಬೀಜಚಿ ವಾಇಲೇ ।।೪೯೨।। ಮ್ಹಣೌನಿ ಯೇಣೇ ಮುಖೇ ಜೇ ಜೇ ನಿಗೇ । ತೇ ಸಂತಾಚ್ಯಾ ಹೃದಯೀ ಸಾಚಚಿ ಲಾಗೇ । ಹೇ ಅಸೋ ಸಾಂಗೋ ಶ್ರೀರಂಗೇ । ಬೋಲಿಲೇ ಜೇ ।।೪೯೩।। ಪರೀ ತೇ ಮನಾಚ್ಯಾ ಕಾನೀ ಐಕಾವೇ । ಬೋಲ ಬುದ್ಧೀಚ್ಯಾ ಡೋಳಾ ದೇಖಾವೇ । ಹೇ ಸಾಂಟೋವಾಟೀ ಘ್ಯಾವೇ । ಚಿತ್ತಾಚಿಯಾ ।।೪೯೪।। ಅವಧಾನಾಚೇನಿ ಹಾತೇ । ನೇಯಾವೇ ಹೃದಯಾ ಆಂತೌತೇ । ಹೇ ರಿಝವಿತೀಲ ಆಯಣೀತೇ । ಸಜ್ಜನಾಂಚಿಯೇ ।।೪೯೫।। ಹೇ ಸ್ವಹಿತಾತೇ ನಿವವಿತೀ । ಪರಿಣಾಮಾತೇ ಜೀವವಿತೀ । ಸುಖಾಚೀ ವಾಹವಿತೀ । ಲಾಖೋಲೀ ಜೀವಾ ।।೪೯೬।। ಆತಾ ಅರ್ಜುನೇಸೀ ಶ್ರೀಮುಕುಂದೇ । ನಾಗರ ಬೋಲಿಜೇಲ ವಿನೋದೇ । ತೇ ವೋವಿಯೇಚೇನಿ ಪ್ರಬಂಧೇ । ಸಾಂಗೇನ ಮೀ ।।೪೯೭।।

---

ಇತಿ ಶ್ರೀ ಜ್ಞಾನದೇವ ವಿರಚಿತಯಾಂ ಭಾವಾರ್ಥ ದೀಪಿಕಾಯಾಂ ಷಷ್ಠೋಽಧ್ಯಾಯಃ ।।೬।।

ಶ್ಲೋಕ : ೪೭ ಓವಿ ।।೪೯೭।।

ಈ ರೀತಿಯಲ್ಲಿ ಯಾವ ಈ ಪ್ರೇಮವು ಐಕ್ಯವಾಗಿರುತ್ತದೆ. ಅದರ ತುಲನೆಗಾಗಿ ಉಪಮೆ ಬೇಕೆಂದರೆ ನಾನು ದೇಹ, ಆತನು ಆತ್ಮನು. ಇದರ ಹೊರತು ಬೇರೆ ಉಪಮೆಯೇ ಇಲ್ಲ ।೪೮೫॥

ಸಂಜಯನು ಹೇಳುತ್ತಾನೆ :- ರಾಜಾ, ಭಕ್ತರೂಪ ಚಕೋರ ಪಕ್ಷಿಯ ಚಂದ್ರನು ಅಥವಾ ಸರ್ವ ತ್ರಿಭುವನ ರಾಜನು ಹಾಗೂ ಗುಣಗಳ ಸಮುದ್ರನಾದ ಶ್ರೀಕೃಷ್ಣ ಪರಮಾತ್ಮನು ಹೀಗೆಂದನು ।೪೮೬॥

ಪಾರ್ಥನಿಗೆ ಮೊದಲಿನಿಂದಲೂ ಯೋಗದ ಐಶ್ವರ್ಯವನ್ನು ಕೇಳುವ ಆಸ್ಥೆ ಇದ್ದೇ ಇತ್ತು. ಅದು ಪುನಃ ಎರಡರಷ್ಟಾಗಿದೆ ಎಂಬುದು ಯದುನಾಥನು ಮನದಲ್ಲಿ ತಿಳಿದನು ।೪೮೭॥

ಮತ್ತು ಇದರಿಂದ ಶ್ರೀಕೃಷ್ಣನಿಗೆ ಸಹಜವಾಗಿ ಆನಂದವಾಯಿತು. ತನ್ನ ಪ್ರತಿಬಿಂಬವನ್ನು ನೋಡುವ ಕನ್ನಡಿಯಂತಿರುವ ಅರ್ಜುನನಿಗೆ ಆನಂದದ ಭರದಲ್ಲಿ ಮುಂದಿನ ಕಥೆಯನ್ನು ಹೇಳುವನು ।೪೮೮॥

ಈ ಕಥೆಯು ಮುಂದಿರುವುದು. ಅದರಲ್ಲಿ ಶಾಂತ ರಸವು ಸ್ಪಷ್ಟವಾಗಿ ಕಾಣುವುದು ಮತ್ತು ಜ್ಞಾನರೂಪ ಬೀಜಗಳಿಂದ ತುಂಬಿದ ಗಂಟು ಬಿಚ್ಚುವುದು ।೪೮೯॥

ಜ್ಞಾನಬೀಜಗಳನ್ನು ಬಿತ್ತುವುದಕ್ಕಾಗಿ ಸತ್ತ್ವಗುಣದ ಮಳೆಯಾಗಿ ಆಧ್ಯಾತ್ಮಿಕ ತಾಪಗಳ ಹೆಂಟೆಗಳು ಕರಗುವುವು. ಚತುರ ಶ್ರೋತೃಗಳ ಚಿತ್ತದ ಮಡಿಗಳು ಸಿದ್ಧವಾಗುವುವು ।೪೯೦॥

ಆಗ ಬಂಗಾರದಂತಹ ಅವಧಾನದ ಹದ ಸಾಧಿಸಿದಕ್ಕೆ ಶ್ರೀ ನಿವೃತ್ತಿನಾಥರಿಗೆ ಜ್ಞಾನರೂಪ ಬೀಜವನ್ನು ಬಿತ್ತುವ ಉತ್ಕಂಠತೆಯು ಉತ್ಪನ್ನವಾಯಿತು ।೪೯೧॥

ಜ್ಞಾನೇಶ್ವರರು ಹೇಳುವರು:- ಆ ಬೀಜವನ್ನು ಬಿತ್ತಲಿಕ್ಕೆ ಶ್ರೀಸದ್ಗುರುಗಳು ಹೆಚ್ಚಿನ ಕೌತುಕದಿಂದ ನನ್ನನ್ನು ಬಿತ್ತುವ ಸಡ್ಡಿಯನ್ನಾಗಿ ಯೋಜಿಸಿದರು ಮತ್ತು ನನ್ನ ಮಸ್ತಕದ ಮೇಲೆ ಹಸ್ತವನ್ನಿಟ್ಟರು. ಈ ಸಡ್ಡೆಯ ಬಟ್ಟಲದಿಂದ ಅವರೇ ಬೀಜವನ್ನು ಬಿತ್ತಿದರು ।೪೯೨॥

ಆದ್ದರಿಂದ ನನ್ನ ಮುಖದಿಂದ ಹೊರಡುವುದೆಲ್ಲವೂ ಶ್ರೀ ಸಂತರ ಮನಸ್ಸಿಗೆ ನಿಜವೆನಿಸುವುದು. ಇದಿರಲಿ, ಈಗ ಶ್ರೀರಂಗನು ಹೇಳಿದ್ದನ್ನು ನಾನು ಇನ್ನು ಮುಂದೆ ಹೇಳುವೆ ।೪೯೩॥

ಆದರೆ ಈ ಮಾತುಗಳನ್ನು ಮನಸ್ಸಿನ ಕಿವಿಗಳಿಂದ ಕೇಳಿರಿ. ಬುದ್ಧಿಯ ಕಣ್ಣಿನಿಂದ ನೋಡಿರಿ ಮತ್ತು ಇದರ ಉಹಾಪೋಹಗಳನ್ನು ಚಿತ್ತದಿಂದ ಮಾಡಿರಿ ।೪೯೪॥

ಶ್ರವಣ (ಕೇಳುವ) ಕೈಯಿಂದ ಹೃದಯದಲ್ಲಿ ತಂದು ಕೂಡಿಸಿರಿ. ಅಂದರೆ ಅದು ಸಜ್ಜನರ ಮನಸ್ಸಿಗೆ ರಮಣೀಯವಾಗುವುದು ।೪೯೫॥

ಈ ಮಾತುಗಳು ನಿತ್ಯ ಆತ್ಮಪ್ರಾಪ್ತಿ ಮಾಡಿಕೊಡುವುವು. ಸಂಕಟಗಳಿಂದ ಮುಕ್ತಮಾಡುವುವು ಮತ್ತು ಜೀವಕ್ಕೆ ಲಕ್ಷಾವಧಿ ಸುಖ ಧರಿಸುವುವು. (ಸುಖದ ಮಳೆಗರೆಯುವುದು) ।೪೯೬॥

ಈಗ ಶ್ರೀ ಮುಕುಂದನು ಅರ್ಜುನನಿಗೆ ವಿನೋದದಿಂದ ಯಾವ ಉತ್ಕೃಷ್ಟವಾದ ಹೇಳಿರುವ ಜ್ಞಾನವನ್ನು ನಾನು ನಿಮಗೆ ಓವಿ ರೂಪದಿಂದ ತಿಳಿಸುವೆನು ।೪೯೭॥

ಶ್ರೀಜ್ಞಾನೇಶ್ವರ ಮಹಾರಾಜರಿಂದ ರಚಿತವಾದ ಭಾವಾರ್ಥ ದೀಪಿಕೆಯ ಆರನೆಯ ಅಧ್ಯಾಯದ ವಿವರಣೆ ಸಮಾಪ್ತವು

# ಸಾರ್ಥ ಶ್ರೀಜ್ಞಾನೇಶ್ವರೀ

## ಅಧ್ಯಾಯ ಸಾತವಾ

ಶ್ರೀ ಗಣೇಶಾಯ ನಮಃ

---

ಶ್ರೀ ಭಗವಾನುವಾಚ:-

ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ಮದಾಶ್ರಯಃ।
ಅಸಂಶಯಂ ಸಮಗ್ರಂ ಮಾಮ್ ಯಥಾ ಜ್ಞಾಸ್ಯಸಿ ತಚ್ಛೃಣು ॥೧॥

ಜ್ಞಾನಂ ತೇಽಹಂ ಸವಿಜ್ಞಾನಮ್ ಇದಂ ವಕ್ಷ್ಯಾಮ್ಯಶೇಷತಃ।
ಯಜ್ಞಾತ್ವಾ ನೇಹ ಭೂಯೋಽನ್ಯಜ್ಞಾತವ್ಯಮವಶಿಷ್ಯತೇ ॥೨॥

ಆಇಕಾ ಮಗ ತೋ ಶ್ರೀಅನಂತು । ಪಾರ್ಥಾತೇ ಅಸೇ ಮ್ಹಣತು । ಪೈ ಗಾ ತೂ ಯೋಗಯುಕ್ತು । ಜಾಲಾಸಿ ಆತಾ ॥೧॥ ಮಜ ಸಮಗ್ರಾತೇ ಜಾಣಸೀ ಐಸೇ । ಆಪುಲಿಯಾ ತಳಹಾತೀಂಚೇ ರತ್ನ ಜೈಸೇ । ತುಜ ಜ್ಞಾನ ಸಾಂಗೇನ ತೈಸೇ । ವಿಜ್ಞಾನೇಸೀ ॥೨॥ ಏಥ ವಿಜ್ಞಾನೇ ಕಾಯ ಕರಾವೇ । ಐಸೇ ಘೇಸೀ ಜರೀ ಮನೋಭಾವೇ । ತರೀ ಪೈ ಆಧೀ ಜಾಣಾವೇ । ತೇಂಚಿ ಲಾಗೇ ॥೩॥ ಮಗ ಜ್ಞಾನಾಚಿಯೇ ವೇಳೇ । ಝಾಂಕತೀ ಜಾಣಿವೇಚೆ ಡೋಳೇ । ಜೈಸೀ ತೀರೀ ನಾವ ನ ಢಳೇ । ಟೇಕಲೀಸಾಂತೀ ॥೪॥ ತೈಸೀ ಜಾಣೀವ ಜೇಥ ನ ರಿಘೇ । ವಿಚಾರ ಮಾಗುತಾ ಪಾಉಲೀ ನಿಘೇ । ತರ್ಕು ಆಯಣೀ ನೇಘೇ । ಆಂಗೀ ಜಯಾಚ್ಯಾ ॥೫॥ ಅರ್ಜುನಾ ತಯಾ ನಾಂವ ಜ್ಞಾನ । ಯೇರ ಪ್ರಪಂಚು ಹೇ ವಿಜ್ಞಾನ । ತೇಥ ಸತ್ಯಬುದ್ಧಿ ತೇ ಅಜ್ಞಾನ । ಹೇಹೀ ಜಾಣ ॥೬॥ ಆತಾ ಅಜ್ಞಾನ ಅವಘೇ ಹರಪೇ । ವಿಜ್ಞಾನ ನಿಃಶೇಷ ಕರಪೇ । ಆಣಿ ಜ್ಞಾನ ತೇ ಸ್ವರೂಪೇ । ಹೋಊನಿ ಜಾಇಜೇ ॥೭॥ ಜೇಣೇ ಸಾಂಗತಯಾಚೇ ಬೋಲಣೇ ಖುಂಟೇ । ಐಕತಯಾಚೇ ವ್ಯಸನ ತುಟೇ । ಹೇ ಜಾಣಣೇ ಸಾನೇ ಮೋಠೇ । ಉರೋ ನೇದೀ ॥೮॥ ಐಸೇ ವರ್ಮ ಜೇ ಗೂಢ । ತೇ ಕೀಜೇಲ ವಾಕ್ಯಾರೂಢ । ಜೇಣೇ ಥೋಡೇನಿ ಪುರೇ ಕೋಡ । ಬಹುತ ಮನೀಂಚೇ ॥೯॥

ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ।
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥೩॥

# ಸಾರ್ಥ ಶ್ರೀಜ್ಞಾನೇಶ್ವರೀ

## ಏಳನೆಯ ಅಧ್ಯಾಯ

ಶ್ಲೋಕಾರ್ಥ :- ಶ್ರೀಕೃಷ್ಣನು ಹೀಗೆಂದನು :- ಹೇ ಅರ್ಜುನಾ! ನನ್ನಲ್ಲಿಯೇ ಮನಸ್ಸಿಟ್ಟು ನಾನೇ ಗತಿ ಎಂದು ನಂಬಿ, ಯೋಗವನ್ನು ಆಚರಿಸುವ ನೀನು ಸಂಶಯವಿಲ್ಲದೆ ನನ್ನ ಸಂಪೂರ್ಣ ಸ್ವರೂಪವನ್ನು ಹೇಗೆ ತಿಳಿದುಕೊಳ್ಳುವೆ ಎಂಬುದನ್ನು ಕೇಳು ।೧॥

ಶ್ಲೋಕಾರ್ಥ :- ಅನುಭವಜ್ಞಾನದಿಂದ ಕೂಡಿದ ಶಾಸ್ತ್ರೀಯ ಜ್ಞಾನವನ್ನು ನಿನಗೆ ಪೂರ್ಣವಾಗಿ ಹೇಳುತ್ತೇನೆ. ಇದನ್ನು ತಿಳಿದನಂತರ ತಿಳಿದು ಕೊಳ್ಳಬೇಕಾದುದು ಏನೂ ಉಳಿಯುವುದಿಲ್ಲ ।೨॥

ಶ್ರೋತೃಗಳೇ; ಕೇಳಿರಿ, ಆಗ ಶ್ರೀ ಅನಂತನು ಪಾರ್ಥನಿಗೆ ಹೇಳಿದನು :- ಅರೇ ! ನೀನು ನಿಶ್ಚಯವಾಗಿಯೂ ಯೋಗಸಂಪನ್ನನಾಗಿರುವೆ ।೧॥

ನಾನೀಗ ನಿನಗೆ ಬ್ರಹ್ಮಜ್ಞಾನವನ್ನು ಪ್ರಪಂಚ ಜ್ಞಾನ ಸಹಿತವಾಗಿ ಅತಿ ಉತ್ತಮ ರೀತಿಯಲ್ಲಿ ಹೇಳುವೆನು. ಇದರಿಂದ ನೀನು ಅಂಗೈಯಲ್ಲಿನ ರತ್ನದಂತೆ ನನ್ನನ್ನು ಪೂರ್ಣವಾಗಿ ತಿಳಿದುಕೊಳ್ಳುವೆ ।೨॥

ಇಲ್ಲಿ ಪ್ರಪಂಚ ಜ್ಞಾನದಿಂದ ಏನು ಮಾಡಬೇಕಾಗಿದೆ? ಹೀಗೆಂದು ನೀನು ಮನದಲ್ಲಿ ಭಾವಿಸಬಹುದು. ಆದರೆ ನಿಜವಾಗಿಯೂ ಅದನ್ನೇ ಮೊದಲು ತಿಳಿಯಬೇಕಾಗಿದೆ ।೩॥

ತದನಂತರ ಜ್ಞಾನದ ಸಾಕ್ಷಾತ್ಕಾರದ ವೇಳೆಯಲ್ಲಿ ಬುದ್ಧಿಯ ದೃಷ್ಟಿಯು ಕುಂಠಿತಗೊಳ್ಳುವುದು. ಯಾವ ಪ್ರಕಾರವಾಗಿ ದಂಡೆಗೆ ಮುಟ್ಟಿದ ಹಡಗವು ಅಲುಗಾಡುವುದಿಲ್ಲವೋ ।೪॥

ಅದರಂತೆ ಅಲ್ಲಿ ಬುದ್ಧಿಯ ಪ್ರವೇಶವೇ ಆಗುವುದಿಲ್ಲ. ವಿಚಾರಗಳು ಹಿಂದೆ ಸರಿಯುವುವು ಮತ್ತು ತರ್ಕದ ಸ್ಫೂರ್ತಿಯೂ ಮುರಿಯುವುದು ।೫॥

ಇದಕ್ಕೇನೆ ಜ್ಞಾನವೆಂದು ಹೇಳುವುದು. ಉಳಿದದ್ದೆಲ್ಲವೂ ಪ್ರಪಂಚ ಜ್ಞಾನದಿಂದ ಅದಕ್ಕೆ ವಿಜ್ಞಾನವೆಂದು ಹೇಳುವರು ಮತ್ತು ಈ ಪ್ರಪಂಚವು ನಿಜವೆಂದು ತಿಳಿಯುವುದು ಇದು ಅಜ್ಞಾನವು ಹೀಗೆ ತಿಳಿ ।೬॥

ಈಗ ಎಲ್ಲ ಅಜ್ಞಾನವು ಇಲ್ಲದಾಗುವುದು. ವಿಜ್ಞಾನವು ಸಮೂಲಾಗಿ ಕರ್ಪೂರಾಗುವುದು (ನಾಶವಾಗುವುದು) ಮತ್ತು ಮೂರ್ತಿಮಂತ ಜ್ಞಾನವು ಪ್ರಕಟವಾಗುವುದು ।೭॥

ಯಾವುದರ ಯೋಗದಿಂದ ಹೇಳುವಾತನ ಶಬ್ದಗಳು ನಿಲ್ಲುವುವು. ಕೇಳುವವರ ಇಚ್ಛೆಯು ತೃಪ್ತಿಗೊಳ್ಳುವುದು ಮತ್ತು ಚಿಕ್ಕ, ದೊಡ್ಡ ಭೇದ ಇರುವುದಿಲ್ಲ ।೮॥

ಇಂತಹ ಗುಪ್ತವಾದ ಮಾತನ್ನು ನಾನಾ ಶಬ್ದಗಳಿಂದ ಪ್ರಕಾಶಗೊಳಿಸುವೆನು. ಈ ಜ್ಞಾನವು ಶಬ್ದರೂಪದಿಂದ ಚಿಕ್ಕದ್ದು ಇರಬಹುದು. ಆದರೆ ಬ್ರಹ್ಮ ರೂಪದಿಂದ ಬಹು ದೊಡ್ಡದಾಗಿದೆ. ಆದ್ದರಿಂದ ಮನದಲ್ಲಿನ ಸರ್ವ ಇಚ್ಛೆಗಳು ಪೂರ್ಣವಾಗುವುವು ।೯॥

ಶ್ಲೋಕಾರ್ಥ :- ಸಾವಿರಾರು ಮನುಷ್ಯರಲ್ಲಿ ಜ್ಞಾನಸಿದ್ಧಿಗಾಗಿ ಯಾವನೋ ಒಬ್ಬನು ಪ್ರಯತ್ನಿಸುತ್ತಾನೆ. ಪ್ರಯತ್ನಪರರಾದ ಅವರಲ್ಲಿಯೂ ಯಾವನೋ ಒಬ್ಬನು ಯಥಾರ್ಥವಾಗಿ ನನ್ನನ್ನು ತಿಳಿಯುತ್ತಾನೆ ।೩॥

ಪೈ ಗಾ ಮನುಷ್ಯಾಂಚಿಯಾ ಸಹಸ್ರಂಶಾ । ಮಾಜಿ ವಿಪಾಇಲೇ ಯಾಚಿ ಧಿಂವಸಾ । ತೈಸೇ ಯಾ ಧಿಂವಸೇಕರಾ ಬಹುವಸಾ । ಮಾಜೀ ವಿರಳಾ ಜಾಣೇ ।।೧೦।। ಜೈಸಾ ಭರಲೇಯಾ ತ್ರಿಭುವನಾ । ಆಂತು ಏಕಏಕು ಚಾಂಗು ಅರ್ಜುನಾ । ನಿವಡೂನಿ ಕೀಜೇ ಸೇನಾ । ಲಕ್ಷವರೀ ।।೧೧।। ಕೀ ತಯಾಹೀ ಪಾಠೀ । ಜೇ ವೇಳೀ ಲೋಹ ಮಾಂಸಾತೇ ಘಾಂಟೀ । ತೇ ವೇಳೀ ವಿಜಯ ಶ್ರೀಯೇಚ್ಯಾ ಪಾಟೀ । ಏಕುಚಿ ಬೈಸೇ ।।೧೨।। ತೈಸೇ ಆಸ್ಥೇಚ್ಯಾ ಮಹಾಪುರೀ । ರಿಘತಾತೀ ಕೋಟಿವರೀ । ಪರೀ ಪ್ರಾಪ್ತೀಚ್ಯಾ ಪೈಲತೀರೀ । ವಿಪಾಇಲಾ ನಿಗೇ ।।೧೩।। ಮ್ಹಣೌನಿ ಸಾಮಾನ್ಯ ಗಾ ನೋಹೇ । ಹೇ ಸಾಂಗತಾ ವಡಿಲ ಗೋಠೀ ಆಹೇ । ಪರೀ ತೇ ಬೋಲೋ ಯೇಈಲ ಪಾಹೇ । ಆತಾ ಪ್ರಸ್ತುತ ಐಕೇ ।।೧೪।।

ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।
ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ।।೪।।

ತರೀ ಅವಧಾರೀ ಗಾ ಧನಂಜಯಾ । ಹೇ ಮಹದಾದಿಕ ಮಾಝೀ ಮಾಯಾ । ಜೈಸೀ ಪ್ರತಿಬಿಂಬೇ ಛಾಯಾ । ನಿಜಾಂಗಾಚೀ ।।೧೫।। ಆಣಿ ಇಯೇತೇ ಪ್ರಕೃತಿ ಮ್ಹಣಿಜೇ । ಜೇ ಅಷ್ಟಧಾ ಭಿನ್ನ ಜಾಣಿಜೇ । ಲೋಕತ್ರಯ ನಿಪಜೇ । ಇಯೇಸ್ತವ ।।೧೬।। ಹೇ ಅಷ್ಟಧಾ ಭಿನ್ನ ಕೈಸೀ । ಐಸಾ ಧ್ವನಿ ಧರಿಸೀ ಜರೀ ಮಾನಸೀ । ತರೀ ತೇಚಿ ಗಾ ಆತಾ ಪರಿಯೇಸೀ । ವಿವಂಚನಾ ।।೧೭।। ಆಪ ತೇಜ ಗಗನ । ಮಹೀ ಮಾರುತ ಮನ । ಬುದ್ಧಿ ಅಹಂಕಾರು ಹೇ ಭಿನ್ನ । ಆಠೈ ಭಾಗ ।।೧೮।।

ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ ।
ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ।।೫।।

ಯಾ ಆಠಾಂಚೀ ಜೇ ಸಾಮ್ಯಾವಸ್ಥಾ । ತೇ ಮಾಝೀ ಪರಮ ಪ್ರಕೃತಿ ಪಾರ್ಥಾ । ತಿಯೇ ನಾಮ ವ್ಯವಸ್ಥಾ । ಜೀವು ಐಸೀ ।।೧೯।। ಜೇ ಜಡಾತೇ ಜೀವವೀ । ಚೇತನೇತೇ ಚೇತವೀ । ಮನಾಕರವೀ ಮಾನವೀ । ಶೋಕ ಮೋಹೋ ।।೨೦।। ಪೈ ಬುದ್ಧೀಚ್ಯಾ ಅಂಗೀ ಜಾಣಣೇ । ತೇ ಜಿಯೇ ಜವಳೀಕೇಚೇ ಕರಣೇ । ಜಿಯಾ ಅಹಂಕಾರಾಚೇನಿ ವಿಂದಾಣೇ । ಜಗಚಿ ಧರಿಜೇ ।।೨೧।।

ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।
ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ।।೬।।

ಅರೇ, ನಿಜವಾಗಿಯೂ ಸಾವಿರಾರು ಮನುಷ್ಯರಲ್ಲಿ ಯಾರೋ ಒಬ್ಬರಿಗೆ ಈ ಜ್ಞಾನದ ಇಚ್ಛೆಯಾಗುವುದು ಮತ್ತು ಈ ಜ್ಞಾನದ ಇಚ್ಛೆ ಉತ್ಪನ್ನರಾದರನೇಕರಲ್ಲಿ ನನ್ನನ್ನು ತಿಳಿಯುವವರು ಕ್ವಚಿತರಾಗಿ ತೋರುವರು ।।೧೦।।

ಅರ್ಜುನಾ, ಮನುಷ್ಯರಿಂದ ತುಂಬಿರುವ ಈ ತ್ರಿಭುವನದಲ್ಲಿ ಸೈನ್ಯದಲ್ಲಿ ಸೇರಿಸಲು ಒಬ್ಬೊಬ್ಬರಂತೆ ಉತ್ತಮ ಶೂರರನ್ನು ಹುಡುಕಿ ಲಕ್ಷಾವಧಿ ಸೈನ್ಯವನ್ನು ತಯಾರಿಸುವರು ।।೧೧।।

ಮತ್ತು ಅದರಲ್ಲಿಯೂ ಯಾವ ವೇಳೆಯಲ್ಲಿ ತಲವಾರ (ಶಸ್ತ್ರಗಳ) ಹೊಡೆತಗಳು ಶರೀರದ ಮೇಲೆ ಬೀಳುವುವೋ, ಆಗ ಒಬ್ಬನೇ ವಿಜಯಶ್ರೀದ ಅಧಿಕಾರಿಯಾಗುವನು ।।೧೨।।

ಇದರಂತೆ ನನ್ನ ಜ್ಞಾನ ಪ್ರಾಪ್ತಿಗಾಗಿ ಕೋಟಿಗಟ್ಟಲೆ ಜನರು ಆಸ್ಥೆಯ ಮಹಾಪುರದಲ್ಲಿ ಜಿಗಿಯುವರು. ಆದರೆ ಅವರಲ್ಲಿ ಒಬ್ಬನೇ ಆಚೆದಂಡೆ ಮುಟ್ಟುವನು (ಒಬ್ಬನಿಗೆ ನನ್ನ ಪ್ರಾಪ್ತಿಯಾಗುವುದು) ।।೧೩।।

ಆದ್ದರಿಂದ ಈ ಸಂಗತಿಯು ಸಾಮಾನ್ಯವಾದದ್ದಲ್ಲ, ಬಹಳ ಮಹತ್ವದ್ದಾಗಿದೆ. ಆದರೆ ಇದನ್ನು ಮುಂದೆ ಹೇಳುವೆನು. ಪ್ರಸ್ತುತ (ನಿನಗೆ ವಿಜ್ಞಾನದ ರೂಪ ಹೇಳುವೆ) ಇದನ್ನು ಕೇಳು ।।೧೪।।

ಶ್ಲೋಕಾರ್ಥ :- ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಕಾರವೆಂಬ ಎಂಟು ವಿಧದಲ್ಲಿ ನನ್ನ ಪ್ರಕೃತಿಯು ವಿಭಜಿಸಲ್ಪಟ್ಟಿದೆ ।।೪।।

ಹೇ ಧನಂಜಯನೇ ಕೇಳು ; ನಮ್ಮ ಶರೀರಕ್ಕೆ ನೆರಳು ಇರುವುದು. ಅದರಂತೆ ಈ ಮಹದಾದಿ ತತ್ತ್ವಗಳು ಇವು ಕಾರ್ಯರೂಪದಿಂದ ನನ್ನ ಮಾಯೆಯಾಗಿವೆ ।।೧೫।।

ಇದಕ್ಕೆ ಪ್ರಕೃತಿ ಎಂದು ಹೇಳುವರು ಮತ್ತು ಇದಕ್ಕೆ ಎಂಟು ಬೇರೆ ಬೇರೆ ಭಾಗಗಳಿವೆ, ಹೀಗೆ ತಿಳಿಯಬೇಕು ಮತ್ತು ಇದರಿಂದಲೇ ಈ ತ್ರಿಭುವನವು ಉತ್ಪನ್ನವಾಗುವುದು।।೧೬।।

ಇದರ ಈ ಎಂಟು ಪ್ರಕಾರಗಳಿಂದ ಹೇಗೆ ಭಿನ್ನವಾಯಿತೆಂಬ ಶಂಕೆಯನ್ನು ನೀನು ಮನದಲ್ಲಿ ತರಬಹುದು. ಅದಕ್ಕಾಗಿ ಅದೇ ವಿಚಾರವನ್ನು ಹೇಳುವೆನು ಕೇಳು ।।೧೭।।

ಉದಕ, ತೇಜ, ಆಕಾಶ, ಪೃಥ್ವಿ, ವಾಯು, ಮನ, ಬುದ್ಧಿ ಮತ್ತು ಅಹಂಕಾರ ಇವೇ ಇದರ ಭಿನ್ನ ಭಿನ್ನ ಎಂಟು ಪ್ರಕಾರಗಳು ಇರುವುವು ।।೧೮।।

ಶ್ಲೋಕಾರ್ಥ :- ಇದು ಅಪರಾ ಪ್ರಕೃತಿ ಮಹಾಬಾಹೋ! ಮತ್ತೊಂದು ನನ್ನ ಪರಾಪ್ರಕೃತಿ ಇರುತ್ತದೆ. ಅದು ಜೀವರೂಪವಾದದ್ದು, ಅದರಿಂದಲೇ ಈ ಜಗತ್ತು ಧರಿಸಲ್ಪಟ್ಟಿರುತ್ತದೆ ।।೫।।

ಪಾರ್ಥ, ಈ ಎಂಟು ಭಾಗಗಳ ಸಾಮ್ಯಸ್ಥಿತಿಯು (ಏಕೀಕರಣವು) ಅದು ನನ್ನ ಪರಮ ಪ್ರಕೃತಿ ಇರುವುದು ಮತ್ತು ಇದೇ ಪರಮಾತ್ಮನಲ್ಲಿ ಜೀವಭಾವವನ್ನು ಹುಟ್ಟಿಸುತ್ತದೆ. ಆದ್ದರಿಂದ ಇದಕ್ಕೆ ''ಜೀವಭೂತ'' ಎಂದು ಕರೆಯುವರು ।।೧೯।।

ಇದು ಜಡ (ಶರೀರಾದಿಕ)ಕ್ಕೆ ಜೀವನವನ್ನು ಕೊಡುವುದು, ಜ್ಞಾನಕ್ಕೆ ಚೇತನವನ್ನು ಕೊಡುವುದು ಮತ್ತು ಮನಸ್ಸಿಗೆ ಶೋಕ ಮತ್ತು ಮೋಹವನ್ನು ಮೂಡಿಸುತ್ತದೆ ।।೨೦।।

ಇಲ್ಲಿ ನೋಡು; ಇದರ ಸನ್ನಿಧಿಯಿಂದ ಬುದ್ಧಿಗೆ ಜ್ಞಾನ ಹುಟ್ಟುವುದು ಮತ್ತು ಇದು ಅಹಂಕಾರದ ಕುಶಲತೆಯಿಂದ ಜಗತ್ತನ್ನು ಧರಿಸುವುದು ।।೨೧।।

ಶ್ಲೋಕಾರ್ಥ :- ಈ ನನ್ನ ಪರಾಪರ ಪ್ರಕೃತಿಗಳಿಂದಲೇ ಜಡ ಚೇತನಗಳಾದ ಸರ್ವಭೂತಗಳು ಉತ್ಪನ್ನವಾಗುತ್ತಿವೆ. ನಾನು ಸಮಸ್ತ ಜಗತ್ತಿನ ಸೃಷ್ಟಿ ಮತ್ತು ಪ್ರಳಯಗಳಿಗೆ ಮೂಲ ಕಾರಣನೆಂದು ತಿಳಿ ।।೬।।

ತೇ ಸೂಕ್ಷ್ಮ ಪ್ರಕೃತಿ ಕೋಡೇ । ಜೈ ಸ್ಥೂಳಾಚಿಯಾ ಆಂಗಾ ಘಡೇ । ತೈ ಭೂತಸೃಷ್ಟೀಚೇ ಪಡೇ । ಟಾಂಕಸಾಳ ।೨೨॥ ಚತುರ್ವಿಧ ಠಸಾ । ಉಮಟೋ ಲಾಗೇ ಆಪೈಸಾ । ಮೋಲಾ ತರೀ ಸರಸಾ । ಪರೀ ಥರಚೀ ಆನಾನ ।೨೩॥ ಹೋತಿ ಚೌರ್ಯಾಂಶೀ ಲಕ್ಷ ಥರಾ । ಯೇರಾ ಮಿತೀ ನೇಣಿಜೇ ಭಾಂಡಾರಾ । ಭರೇ ಆದಿ ಶೂನ್ಯಾಚ್ಯಾ ಗಾಭಾರಾ । ನಾಣೇಯಾಂಸೀ ।೨೪॥ ಐಸೇ ಏಕತುಕೇ ಪಾಂಚಭೌತಿಕ । ಪಡತೀ ಬಹುವಸ ಟಾಂಕ । ಮಗ ತಿಯೇ ಸಮೃದ್ಧೀಚೇ ಲೇಖ । ಪ್ರಕೃತೀಚಿ ಧರೀ ।೨೫॥ ಜೇ ಆಂಖೂನಿ ನಾಣೇ ವಿಸ್ತಾರೀ । ಪಾಠೀ ತಯಾಚೀ ಆಟಣೀ ಕರೀ । ಮಾಜೀ ಕರ್ಮಾಕರ್ಮಾಚಿಯಾ ವ್ಯವಹಾರೀ । ಪ್ರವರ್ತು ದಾವೀ ।೨೬॥ ಹೇ ರೂಪಕ ಪರೀ ಅಸೋ । ಸಾಂಗೋ ಉಘಡ ಜೈಸೇ ಪರಿಯೇಸೋ । ತರೀ ನಾಮ ರೂಪಾಚಾ ಅತಿಸೋ । ಪ್ರಕೃತೀಚ ಕೀಜೇ ।೨೭॥ ಆಣಿ ಪ್ರಕೃತಿ ತಂವ ಮಾಝ್ಯಾ ಠಾಯೀ । ಬಿಂಬೇ ಯೇಥ ಆನ ನಾಹೀ । ಮ್ಹಣೌನಿ ಆದಿ ಮಧ್ಯ ಅವಸಾನ ಪಾಹೀ । ಜಗಾಸಿ ಮೀ ।೨೮॥

ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ ।
ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ।೭॥

ಹೇ ರೋಹಿಣೀಚೇ ಜಳ । ತಯಾಚೇ ಪಾಹತಾ ಯೇಇಜೇ ಮೂಳ । ತೈ ರಶ್ಮೀ ನವ್ಹತೀ ಕೇವಳ । ಹೋಯ ತೇ ಭಾನು ।೨೯॥ ತಯಾಚಿಪರೀ ಕಿರೀಟೀ । ಇಯಾ ಪ್ರಕೃತೀ ಜಾಲಿಯೇ ಸೃಷ್ಟೀ । ಜೈ ಉಪಸಂಹರೂನಿ ಕೀಜೇಲ ಠೀ । ತೈ ಮೀಚಿ ಆಹೇ ।೩೦॥ ಐಸೇ ಹೋಯ ದಿಸೇ ನ ದಿಸೇ । ಹೇ ಮಜಚಿ ಮಾಜೀ ಅಸೇ । ಮಿಯಾ ವಿಶ್ವ ಧರಿಜೇ ಜೈಸೇ । ಸೂತ್ರೇ ಮಣಿ ।೩೧॥ ಸುವರ್ಣಾಚೇ ಮಣೀ ಕೇಲೇ । ತೇ ಸೋನಿಯಾಚೇ ಸುತೀ ವೋವಿಲೇ । ತೈಸೇ ಮ್ಯಾ ಜಗ ಧರಿಲೇ । ಸಬಾಹ್ಯಾಭ್ಯಂತರೀ ।೩೨॥

ರಸೋऽಹಮಪ್ಸು ಕೌಂತೇಯ ಪ್ರಭಾಸ್ಮಿ ಶಶಿಸೂರ್ಯಯೋಃ ।
ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ।೮॥
ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।
ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ।೯॥

ಮ್ಹಣೌನಿ ಉದಕೀ ರಸು । ಕಾ ಪವನೀ ಜೋ ಸ್ಪರ್ಶು । ಶಶಿಸೂರ್ಯೀ ಜೋ ಪ್ರಕಾಶು । ತೋ ಮೀಚಿ ಜಾಣ ।೩೩॥

ಇದು ಸೂಕ್ಷ್ಮ (ಪರಾ) ಪ್ರಕೃತಿಯು ಸ್ವ ಇಚ್ಛೆಯಿಂದ ಸ್ಥೂಲ ಪ್ರಕೃತಿಯೊಂದಿಗೆ ಕೂಡಿಕೊಂಡಾಗ ಸೃಷ್ಟಿಯಲ್ಲಿ ಪ್ರಾಣಿಗಳನ್ನು ತಯಾರಿಸುವ ಟಂಕಸಾಲೆಯೇ ಆರಂಭವಾಗುವುದು ।೨೨॥

ಈ ಟಂಕಸಾಲೆಯಲ್ಲಿ ನಾಲ್ಕು ಪ್ರಕಾರದ (ಸ್ವೇದಜ, ಜರಾಯುಜ, ಅಂಡಜ, ಉದ್ಭೀಜ) ಆಕೃತಿಗಳು (ನಾಣ್ಯಗಳು)ತಮ್ಮ ಷ್ಟಕ್ಕೆ ತಾವೇ ಮೂಡುವುವು. ಅವುಗಳಲ್ಲಿ ಪಂಚಭೂತಗಳ ಸಾಮ್ಯತೆ ಇರುವುದು. ಆದರೆ ಜಾತಿ ಭಿನ್ನವಾಗಿರುವುದು ।೨೩॥

ಅದರ ಎಂಭತ್ನಾಲ್ಕು ಲಕ್ಷ ಜಾತಿಗಳಿದ್ದು ಪುನಃ ಉಪಜಾತಿಗಳು ಎಷ್ಟು ಇವೆ ಎಂಬುದಕ್ಕೆ ಗಣಿತವೇ ಇಲ್ಲ. ಈ ರೀತಿಯಾಗಿ ಅನೇಕ ಜಾತಿಗಳು (ನಾಣ್ಯಗಳು) ಆದಿಶೂನ್ಯವಾದ ಮಾಯೆಯ ಭಾಂಡಾರವನ್ನೆಲ್ಲ ತುಂಬಿಬಿಡುವುದು ।೨೪॥

ಈ ಪ್ರಕಾರವಾಗಿ ಪಂಚಭೂತಗಳಿಂದ ಸತತವಾಗಿ ಅನೇಕ ನಾಣ್ಯಗಳು (ಜಾತಿಗಳು) ತಯಾರಾಗುವುವು. ಇದರ ಬೆಳವಣಿಗೆಯ ಗಣನೆಯನ್ನು ಪ್ರಕೃತಿಯೇ ಬಲ್ಲದು ।೨೫॥

ಆ ನಾಣ್ಯಗಳ ಆಕಾರಗಳನ್ನು ಮಾಡಿ (ಉತ್ಪತ್ತಿ) ವಿಸ್ತಾರಗೊಳಿಸುವುದು ಮತ್ತು ಕೊನೆಗೆ ಅವುಗಳನ್ನೆಲ್ಲವನ್ನು ಕರಗಿಸುವುದು (ಸಂಹಾರ ಮಾಡುವುದು) ಮಧ್ಯಂತರದಲ್ಲಿ ಪ್ರಾಣಿಗಳಿಂದ ಕರ್ಮಾ ಕರ್ಮ ಮಾಡಿಸುವುದು ಮಾಯೆಯ ಪ್ರವೃತ್ತಿಯಾಗಿರುವುದು ।೨೬॥

ಈ ರೂಪಕ ಭಾಷೆ ಇರಲಿ; ನಿನಗೆ ತಿಳಿಯುವ ರೀತಿಯಲ್ಲಿ ಬಿಚ್ಚಿ ಹೇಳಬೇಕೆಂದರೆ ಈ ಪ್ರಕೃತಿಯು ಪ್ರಾಣಿಗಳ ನಾಮ ರೂಪಗಳ ವಿಸ್ತಾರವನ್ನು ಮಾಡುವುದು ।೨೭॥

ಮತ್ತು ಈ ಪ್ರಕೃತಿಯು ನಿಃಸಂಶಯವಾಗಿ ನನ್ನಲ್ಲಿ ಮಿಥ್ಯಾಭಾಸವಾಗುವುದು, ಅದು ನನ್ನನ್ನು ಬಿಟ್ಟು ಬೇರೆ ಇಲ್ಲ. ಆದ್ದರಿಂದ ಜಗತ್ತಿನ ಉತ್ಪತ್ತಿ, ಸ್ಥಿತಿ ಮತ್ತು ಲಯ ಇವುಗಳಿಗೆ ನಾನೇ ಕಾರಣನು ।೨೮॥

ಶ್ಲೋಕಾರ್ಥ :- ಧನಂಜಯಾ! ನನಗಿಂತ ಬೇರೆಯಾದದ್ದು ಯಾವುದೂ ಇಲ್ಲ. ದಾರದಲ್ಲಿ ಮಣಿಗಳಂತೆ ಇವುಗಳೆಲ್ಲವೂ ನನ್ನ ಆಧಾರದಲ್ಲಿ ಇರುವುವು ।೭॥

ಈ ದೃಶ್ಯ ವಿಶ್ವವು ಮೃಗಜಲದಂತಿರುವುದು. ಮೃಗಜಲದ ಮೂಲವನ್ನು ಶೋಧಿಸುತ್ತ ಹೋದರೆ ಅದು ಕೇವಲ ಸೂರ್ಯನ ಕಿರಣವಲ್ಲದೇ ಸೂರ್ಯನೇ ಇರುವನು ।೨೯॥

ಅದರಂತೆ ಅರ್ಜುನಾ, ಪ್ರಕೃತಿಕಾರ್ಯವಾದ ಸೃಷ್ಟಿಯನ್ನು (ಉಪಸಂಹಾರ) ನಿರಾಶಗೊಳಿಸಿ ಅದರ ಮೂಲದತ್ತ ಬರಲು ಅವಶಿಷ್ಟ ತತ್ತ್ವವು ನಾನೇ ಆಗಿರುವೆನು ।೩೦॥

ಈ ಪ್ರಕಾರವಾಗಿ ಉತ್ಪನ್ನವಾಗುವುದು, ಸ್ಥಿತಿಯಾಗುವುದು ಮತ್ತು ಲಯವಾಗುವುದು ಇವು ನನ್ನಲ್ಲಿಯೇ ಆಗುವುವು. ನೂಲು ಮಣಿಗಳನ್ನು ಹಿಡಿದಿರುವಂತೆ ನಾನು ಈ ವಿಶ್ವವನ್ನು ಹಿಡಿದಿರುವೆನು ।೩೧॥

ಬಂಗಾರದ ಮಣಿಗಳನ್ನು ತಯಾರಿಸಿ ಬಂಗಾರದ ದಾರದಿಂದ ಪೋಣಿಸಿದಂತೆ, ಈ ಸರ್ವ ಜಗತ್ತಿನ ಒಳಹೊರಗೆ ನಾನೇ ತುಂಬಿಕೊಂಡಿದ್ದೇನೆ ।೩೨॥

ಶ್ಲೋಕಾರ್ಥ :- ಕುಂತೀತನಯಾ! ನಾನು ಜಲದಲ್ಲಿ ರಸಸ್ವರೂಪನಾಗಿರುವೆನು. ಚಂದ್ರ ಸೂರ್ಯರಲ್ಲಿ ಪ್ರಕಾಶನಾಗಿದ್ದೇನೆ. ವೇದಗಳಲ್ಲಿ ಓಂಕಾರವೂ, ಆಕಾಶದಲ್ಲಿ ಶಬ್ದವೂ ನರಗಳಲ್ಲಿ ಶಕ್ತಿಯಾಗಿಯೂ ಇದ್ದೇನೆ ।೮॥

ಶ್ಲೋಕಾರ್ಥ :- ಭೂಮಿಯಲ್ಲಿ ಪವಿತ್ರಗಂಧವೂ ಅಗ್ನಿಯಲ್ಲಿ ತೇಜಸ್ಸು, ಪ್ರಾಣಿಗಳಲ್ಲಿರುವ ಜೀವಶಕ್ತಿ, ತಪೋನಿಷ್ಠರಲ್ಲಿಯ ತಪಸ್ಸು ನಾನೇ ।೯॥

ಆದ್ದರಿಂದ ನೀರಿನಲ್ಲಿರುವ ರಸ, ಗಾಳಿಯಲ್ಲಿರುವ ಸ್ಪರ್ಶ ಮತ್ತು ಸೂರ್ಯ ಚಂದ್ರರಲ್ಲಿಯ ಪ್ರಕಾಶ ಇವು ಎಲ್ಲವೂ ನಾನೇ ಆಗಿರುವೆನೆಂದು ತಿಳಿ ।೩೩॥

ತೈಸಾಚಿ ನೈಸರ್ಗಿಕು ಶುದ್ಧು । ಮೀ ಪೃಥ್ವೀಚ್ಯಾ ಠಾಯೀ ಗಂಧು । ಗಗನೀ ಮೀ ಶಬ್ದು । ವೇದಿ ಪ್ರಣವು ।೩೪॥ ನರಾಚ್ಯಾ ಠಾಯೀ ನರತ್ವ । ಜೇ ಅಹಂಭಾವಿಯೇ ಸತ್ತ್ವ । ತೇ ಪೌರುಷ ಮೀ ಹೇ ತತ್ತ್ವ । ಬೋಲಿಜತ ಅಸೇ ।೩೫॥ ಅಗ್ನಿ ಐಸೇ ಆಹಾಚ । ತೇಜ ನಾಮಾಚೇ ಆಹೇ ಕವಚ । ತೇ ಪರತೇ ಕೇಲಿಯಾ ಸಾಚ । ನಿಜತೇಜ ತೇ ಮೀ ।೩೬॥ ಆಣಿ ನಾನಾವಿಧ ಯೋನಿ । ಜನ್ಮೋನಿ ಭೂತೇ ತ್ರಿಭುವನೀ । ವರ್ತತ ಆಹಾತಿ ಜೀವನೀ । ಆಪುಲ್ಯಾಲಾ ।೩೭॥ ಏಕೇ ಪವನೇಚಿ ಪಿತೀ । ಏಕೇ ತೃಣಾಸ್ತವ ಜಿತೀ । ಏಕೇ ಅನ್ನಾಧಾರೇ ರಾಹತೀ । ಜಳೇ ಏಕೇ ।೩೮॥ ಐಸೇ ಭೂತಪ್ರತಿ ಅನಾನ । ಜೇ ಪ್ರಕೃತಿವಶೇ ದಿಸೇ ಜೀವನ । ತೇ ಆಘವಾಠಾಯಿ ಅಭಿನ್ನ । ಮೀಚಿ ಏಕ ।೩೯॥

ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಮ್ ।
ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ।೧೦॥

ಬಲಂ ಬಲವತಾಂ ಚಾಹಂ ಕಾಮರಾಗವಿವರ್ಜಿತಮ್ ।
ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ! ।೧೧॥

ಪೈ ಆದಿಚೇನಿ ಅವಸರೇ । ವಿರೂಢೇ ಗಗನಾಚೇನಿ ಅಂಕುರೇ । ಜೇ ಅಂತೀ ಗಿಳೀ ಅಕ್ಷರೇ । ಪ್ರಣವಪೀಠಿಂಚೀ ।೪೦॥ ಜಂವ ಹಾ ವಿಶ್ವಾಕಾರು ಅಸೇ । ತಂವ ಜೇ ವಿಶ್ವಾಚೀಸಾರಿಖೇ ದಿಸೇ । ಮಗ ಮಹಾಪ್ರಳಯದಶೇ । ಕೈಸೇಹೀ ನವ್ಹೇ ।೪೧॥ ಐಸೇ ಅನಾದಿ ಜೇ ಸಹಜ । ತೇ ಮೀ ಗಾ ವಿಶ್ವಬೀಜ । ಹೇ ಹಾತಾತಳೀ ತುಜ । ದೇಇಜತ ಅಸೇ ।೪೨॥ ಮಗ ಉಘಡ ಕರೂನಿ ಪಾಂಡವಾ । ಜೈ ಹೇ ಆಣೇಸೀಲ ಸಾಂಖ್ಯಾಚಿಯಾ ಗಾಂವಾ। ತೈ ಯಯಾಚಾ ಉಪೇಗು ಬರವಾ । ದೇಖಶೀಲ ।೪೩॥ ಪರೀ ಹೇ ಅಪ್ರಾಸಂಗಿಕ ಆಲಾಪ । ಆತಾ ಅಸತು ನ ಬೋಲೋ ಸಂಕ್ಷೇಪ । ಜಾಣ ತಪಿಯಾಂಚ್ಯಾ ಠಾಯೀ ತಪ । ತೇ ರೂಪ ಮಾಝೇ ।೪೪॥ ಬಳಿಯಾಮಜೀ ಬಳ । ತೇ ಮೀ ಜಾಣೇ ಅಢಳ ।ಬುದ್ಧಿಮಂತೀ ಕೇವಳ । ಬುದ್ಧಿ ತೇ ಮೀ ।೪೫॥ ಭೂತಾಂಚ್ಯಾ ಠಾಯೀ ಕಾಮು ।ತೋ ಮೀ ಮ್ಹಣೇ ಆತ್ಮಾರಾಮು । ಜೇಣೇ ಅರ್ಥಾಸ್ತವ ಧರ್ಮು । ಥೋರು ಹೋಯ ।೪೬॥ ಏರ್ಹವೀ ವಿಕಾರಾಚೇನಿ ಪೈಸೇ । ಕರೀ ಕೀರ ಇಂದ್ರಿಯಾಂಚಿ ಐಸೇ । ಪರೀ ಧರ್ಮಾಸೀ ವೇಖಾಸೇ । ಜಾವೋ ನೇದೀ ।೪೭॥

ಅದರಂತೆ ಪೃಥ್ವಿಯಲ್ಲಿರುವ ಸ್ವಭಾವತಃ ಸುಗಂಧವು ನಾನಾಗಿದ್ದೇನೆ. ಆಕಾಶದಲ್ಲಿರುವ ಶಬ್ದವು ನಾನಾಗಿದ್ದೇನೆ. ಅದೇ ಪ್ರಕಾರವಾಗಿ ವೇದದಲ್ಲಿನ ಓಂಕಾರವು ಸಹ ನಾನಾಗಿದ್ದೇನೆ ।೩೪॥

ಮನುಷ್ಯನಲ್ಲಿರುವ ಮನುಷ್ಯತನದ ಅಹಂಭಾವದ ಸತ್ತ್ವ ಇದೆ. ಆ ಪೌರುಷವು ನಾನಾಗಿರುವೆ. ಈ ತತ್ತ್ವವನ್ನು ನಿನಗೆ ಹೇಳಿ ಇಟ್ಟಿರುವೆನು ।೩೫॥

ತೇಜಕ್ಕೆ ಅಗ್ನಿ ಎಂಬ ಹೆಸರನ್ನು ಸುಮ್ಮನೇ ಅದಕ್ಕೆ ಕವಚವನ್ನಾಗಿ ಮಾಡಿದೆ. ಅದನ್ನು ದೂರ ಮಾಡಿದಾಗ ನಿಜವಾದ ಸ್ವರೂಪವು ನಾನಾಗಿರುತ್ತೇನೆ ।೩೬॥

ಮತ್ತು ಈ ತ್ರಿಭುವನದಲ್ಲಿ ಪ್ರಾಣಿಗಳು ಅನೇಕ ಪ್ರಕಾರದ ಜಾತಿಗಳಲ್ಲಿ ಜನ್ಮ ಧರಿಸಿ ತಮ್ಮ ತಮ್ಮ ಜಾತಿಯ ಅನುರೋಧದಿಂದ ಆಹಾರ ಸೇವಿಸಿ ಜೀವಿಸುತ್ತವೆ ।೩೭॥

ಕೆಲವು ಗಾಳಿ ಸೇವಿಸಿ ಬದುಕುವುವು. ಕೆಲವು ಹುಲ್ಲು ತಿಂದು ಜೀವಿಸುವುವು. ಇನ್ನು ಕೆಲವು ಅನ್ನದಿಂದ ಬದುಕುವುವು ಮತ್ತೆ ಕೆಲವು ನೀರಿನಿಂದಲೇ ಉಪಜೀವಿಸುವುವು ।೩೮॥

ಹೀಗೆ ಪ್ರತ್ಯೇಕ ಪ್ರಾಣಿಗಳ ಪ್ರಕೃತಿಯ ಗುಣಗಳಿಂದ ಬೇರೆ ಬೇರೆ ಪ್ರಕಾರದ ಜೀವನವು ಕಾಣಿಸುವುದು. ಆದರೆ ಅದೆಲ್ಲವೂ ನಾನಾಗಿರುವೆನು ।೩೯॥

**ಶ್ಲೋಕಾರ್ಥ** :- ಸಮಸ್ತ ಭೂತಗಳಿಗೆ ನಾನೇ ಸನಾತನವಾದ ಮೂಲಬೀಜವಾಗಿದ್ದೇನೆ. ಅರ್ಜುನಾ! ಬುದ್ಧಿವಂತರಲ್ಲಿಯ ಬುದ್ಧಿಯು ನಾನು, ಪರಾಕ್ರಮ ವಂತರಲ್ಲಿಯ ಪರಾಕ್ರಮವು ನಾನೇ ।೧೦॥

**ಶ್ಲೋಕಾರ್ಥ** :- ಭಾರತವೀರಾ! ಬಲವಂತ ರಲ್ಲಿಯ ಕಾಮರಾಗರಹಿತವಾದ ಬಲವು ನಾನು. ಪ್ರಾಣಿ ಕೋಟಿಯಲ್ಲಿಯ ಧರ್ಮಕ್ಕೆ ವಿರುದ್ಧವಲ್ಲದ ಕಾಮವು ನಾನು ।೧೧॥

ಬೀಜವು ಜಗದುತ್ಪತ್ತಿಯ ಕಾಲದಲ್ಲಿ ಆಕಾಶದ ಅಂಕುರದಿಂದ ಬೆಳೆಯುವುದು (ವಿಸ್ತಾರವಾಗುವುದು) ಮತ್ತು ಅಂತ್ಯಕಾಲದಲ್ಲಿ ಓಂಕಾರದ ಅಕ್ಷರಗಳನ್ನು ಈ ಬೀಜವು ನುಂಗಿಬಿಡುವುದು ।೪೦॥

ಎಲ್ಲಿಯವರೆಗೆ ಈ ಜಗತ್ತಿಗೆ ಆಕಾರವಿದೆಯೋ ಅಲ್ಲಿಯವರೆಗೆ ಆ ಬೀಜವು ಅದರಂತೆಯೇ ಕಾಣುವುದು. ಆದರೆ ಮಹಾಪ್ರಳಯಕಾಲಕ್ಕೆ ಅದು ಯಾವ ಆಕಾರ ದಿಂದಲೂ ಇರುವುದಿಲ್ಲ ।೪೧॥

ಹೀಗೆ ಯಾವ ಈ ಜಗತ್ತಿನ ಅನಾದಿ ಮತ್ತು ಸ್ವತಃ ಸಿದ್ಧ ಬೀಜವು ಇದೆಯೋ ಅದು ನಾನಾಗಿರುವೆನು. ಅದನ್ನು ಇಂದು ಪರಿಪೂರ್ಣವಾಗಿ ನಿನ್ನ ಕೈಯಲ್ಲಿ ಕೊಡುತ್ತಿರುವೆನು ।೪೨॥

ಅದಕ್ಕಾಗಿ ಅರ್ಜುನಾ, ಇದನ್ನು ತಿಳಿದುಕೊಂಡು ಒಂದುವೇಳೆ ನೀನು ಆತ್ಮಾನಾತ್ಮ ವಿಚಾರ ಮಾಡಿದರೆ ಎಷ್ಟು ಚೆನ್ನಾಗಿ ಉಪಯೋಗ ಬೀಳುವುದು ಎಂಬುದನ್ನು ನೀನು ಕಾಣುವೆ ।೪೩॥

ಆದರೆ ಈಗ ಈ ಅಪ್ರಾಸಂಗಿಕ ಸಂಗತಿಗಳು ಬದಿಗಿರಲಿ, ನಿನಗೀಗ ಸ್ವಲ್ಪದರಲ್ಲಿಯೇ ಹೇಳುವೆ ಇಲ್ಲಿ ಕೇಳು, ತಪಸ್ವಿಗಳಲ್ಲಿನ ತಪವು ಅದು ನನ್ನ ರೂಪವು ।೪೪॥

ಬಲವಂತರಲ್ಲಿ ಇರುವ ಬಲ ಅದು ನಾನೆಂದು ನಿಃಸಂಶಯವಾಗಿ ತಿಳಿ ಮತ್ತು ಬುದ್ಧಿವಂತರಲ್ಲಿ ಬುದ್ಧಿ ಎಂಬುದು ನಾನೇ ಆಗಿರುವೆ ।೪೫॥

ಶ್ರೀಕೃಷ್ಣನು ಹೇಳುವನು:- ಯಾರ ಆಚರಣೆಗಳಿಂದ ಧರ್ಮ ಹಾಗೂ ಅರ್ಥ ಈ ಪುರುಷಾರ್ಥಗಳು ಸಾಧ್ಯವಾಗುವುವೋ ಆ ಪ್ರಾಣಿಮಾತ್ರರಲ್ಲಿರುವ ಕಾಮವು ನಾನಾಗಿರುವೆನು ।೪೬॥

ಸಾಮಾನ್ಯವಾಗಿ ವಿಕಾರಗಳ ಬಲದಿಂದ ಇಂದ್ರಿಯಗಳ ಇಚ್ಛೆಯಂತೆ ಒಂದುವೇಳೆ ಆಚರಿಸಿದರೂ ಆ ಕಾಮವು ಧರ್ಮದ ವಿರುದ್ಧ ಹೋಗೊಡಿಸುವುದಿಲ್ಲ ।೪೭॥

ಜೋ ಅಪ್ರವೃತ್ತಿಚಾ ಅವ್ಹಾಂಟಾ । ಸಾಂಡೂನಿ ವಿಧೀಚಿಯಾ ನಿಘೇ ವಾಟಾ । ತೇವಿಂಚಿ ನಿಯಮಾಚಾ ದಿವಟಾ । ಸವೇ ಚಾಲೇ ।೫೮॥ ಕಾಮು ಐಶಿಯಾ ವೋಜಾ ಪ್ರವರ್ತೇ । ಮ್ಹಣೌನಿ ಧರ್ಮಾಸಿ ಹೋಯ ಪುರತೇ । ಮೋಕ್ಷತೀರ್ಥೀಚೇ ಮುಕ್ತೇ । ಸಂಸಾರ ಭೋಗೀ ।೫೯॥ ಜೋ ಶ್ರುತಿಗೌರವಾಚ್ಯಾ ಮಾಂಡವೀ । ಕಾಮ ಸೃಷ್ಟೀಚಾ ವೇಲು ವಾಢವೀ । ಜಂವ ಕರ್ಮಫಳೇಸಿ ಪಾಲವೀ । ಅಪವರ್ಗೀ ಟೇಂಕೇ ।೬೦॥ ಐಸಾ ನಿಯತು ಕಾ ಕಂದರ್ಪು । ಜೋ ಭೂತಾ ಯಾ ಬೀಜರೂಪು । ತೋ ಮೀ ಮ್ಹಣೇ ಬಾಪು । ಯೋಗಿಯಾಂಚಾ ।೬೧॥ ಹೇ ಏಕೇಕ ಕಿತೀ ಸಾಂಗಾವೇ । ಆತಾ ವಸ್ತುಜಾತಚಿ ಆಘವೇ । ಮಜಪಾಸೂನಿ ಜಾಣಾವೇ । ವಿಕಾರಲೇ ಅಸೇ ।೬೨॥

ಯೇ ಚೈವ ಸಾತ್ತ್ವಿಕಾ ಭಾವಾಃ ರಾಜಸಾಸ್ತಾಮಸಾಶ್ಚ ಯೇ ।<br>ಮತ್ತ ಏವೇತಿ ತಾನ್ ವಿದ್ಧಿ ನ ತ್ವಹಂ ತೇಷು ತೇ ಮಯಿ ।೧೨॥

ಜೇ ಸಾತ್ತ್ವಿಕ ಹನ ಭಾವ । ಕಾ ರಜತಮಾದಿ ಸರ್ವ । ತೇ ಮಮರೂಪಸಂಭವ । ವೊಳಖೇ ತೂ ।೬೩॥ ಹೇ ಜಾಲೇ ತರೀ ಮಾಝ್ಯಾ ಠಾಯೀ । ಪರೀ ತಯಾಮಾಜೀ ಮೀ ನಾಹೀ । ಜೈಸೀ ಸ್ವಪ್ನಿಚ್ಯಾ ಡೋಹೀ । ಜಾಗೃತಿ ನ ಬುಡೇ ।೬೪॥ ಜೈಸೀ ರಸಾಚೀಚ ಸುಘಟ । ಬೀಜಕಣಿಕಾ ಘನವಟ । ಪರೀ ತಿಯೇಸ್ತವ ಹೋಯ ಕಾಷ್ಠ । ಅಂಕುರದ್ವಾರೇ ।೬೫॥ ಮಗ ತಯಾ ಕಾಷ್ಠಾಚ್ಯಾ ಠಾಯೀ । ಸಾಂಗ ಪಾ ಬೀಜಪಣ ಅಸೇ ಕಾಯೀ? । ತೈಸಾ ಮೀ ವಿಕಾರೀ ನಾಹೀ । ಜರೀ ವಿಕಾರಲಾ ದಿಸೇ ।೬೬॥ ಪೈ ಗಗನೀ ಉಪಜೇ ಆಭಾಳ । ಪರೀ ತೇಥ ಗಗನ ನಾಹೀ ಕೇವಳ । ಅಥವಾ ಆಭಾಳೀ ಹೋಯ ಸಲಿಲ । ತೇಥ ಅಭ್ರ ನಾಹೀ ।೬೭॥ ಮಗ ತ್ಯಾ ಉದಕಾಚೇನಿ ಆವೇಶೇ । ಪ್ರಗಟಲೇ ತೇಜ ಜೇ ಲಖಲಖೀತ ದಿಸೇ । ತಿಯೇ ವಿಜೂಮಾಜಿ ಅಸೇ । ಸಲಿಲ ಕಾಯೀ? ।೬೮॥ ಸಾಂಗೇ ಅಗ್ನೀಸ್ತವ ಧೂಮ ಹೋಯೇ । ತಿಯೇ ಧೂಮೀ ಕಾಯ ಅಗ್ನೀ ಆಹೇ? । ತೈಸಾ ವಿಕಾರು ಹಾ ಮೀ ನೋಹೇ । ಜರೀ ವಿಕಾರಲಾ ಅಸೇ ।೬೯॥

ತ್ರಿಭಿರ್ಗುಣಮಯೈರ್ಭಾವೈಃ ಏಭಿಃ ಸರ್ವಮಿದಂ ಜಗತ್ ।<br>ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್ ।೧೩॥

ಪರೀ ಉದಕೀ ಜಾಲೀ ಬಾಬುಳೀ । ತೇ ಉದಕಾತೇ ಜೈಸೀ ಝಾಂಕೋಳೀ । ಕಾ ವಾಯಾಂಚೀ ಆಭಾಳೀ । ಆಕಾಶ ಲೋಪೇ ।೭೦॥

ಆ ಕಾಮವು ನಿಷೇಧದ ಅಡ್ಡ ದಾರಿಯನ್ನು ಬಿಟ್ಟು ವಿಧಿಯ ಹಾದಿಯನ್ನು ಹಿಡಿದು ನೆಟ್ಟಗೆ ಹೋಗುವುದು ಮತ್ತು ಅದರಂತೆ ಅದರ ಜೊತೆಯಲ್ಲಿ ನಿಯಮರೂಪ ದೀವಟಿಗೆಯು ಹೊತ್ತಿಕೊಂಡಿರುವುದು ।೪೮॥

ಈ ಪ್ರಕಾರವಾಗಿ ಈ ಕಾಮವು ನಡೆಯುವುದು. ಆದ್ದರಿಂದ ಧರ್ಮದ ಆಚರಣೆಯು ಪೂರ್ಣವಾಗುವುದು ಮತ್ತು ಸಂಸಾರದಲ್ಲಿ ಇದ್ದವರಿಗೆ ಮೋಕ್ಷರೂಪ ತೀರ್ಥದಲ್ಲಿ ಮುಕ್ತಿಯು ದೊರೆಯುವುದು ।೪೯॥

ಆ ಕಾಮವು ವೇದವು ಗೌರವಿಸಿರುವ ಕರ್ಮರೂಪ ಹಂದರದಲ್ಲಿ ಕರ್ಮಫಲದ ಎಲೆಗಳು ಮೋಕ್ಷಕ್ಕೆ ಮುಟ್ಟುವವರೆಗೂ ತನ್ನ ಬಳ್ಳಿಯನ್ನು ಬೆಳೆಸುತ್ತದೆ ।೫೦॥

ಯೋಗಿಗಳ ಜನಕನಾದ ಶ್ರೀಕೃಷ್ಣನು ಹೇಳುವನು :- ಈ ನಿಯಮದಿಂದ ಇರುವ ಮತ್ತು ಪ್ರಾಣಿ ಮಾತ್ರರಿಗೆ ಬೀಜಭೂತವಾದ ಈ ಕಾಮವು ನಾನೇ ಇದ್ದೇನೆ ।೫೧॥

ಹೀಗೆ ಒಂದೊಂದೇ ನಿನಗೆ ಎಲ್ಲಿಯವರೆಗೆ ಹೇಳಬೇಕು? ಒಟ್ಟಿನಲ್ಲಿ ಹೇಳಬೇಕೆಂದರೆ, ವಸ್ತುಗಳೆಂದು ಇರುವವೆಲ್ಲವೂ ನನ್ನಿಂದಲೇ ವಿಸ್ತಾರಗೊಂಡಿದೆ ಎಂದು ತಿಳಿ ।೫೨॥

ಶ್ಲೋಕಾರ್ಥ :- ಸಾತ್ತ್ವಿಕ, ರಾಜಸ, ತಾಮಸ ಭಾವಗಳು ಯಾವುದೇ ಆದರೂ, ಅವೆಲ್ಲವೂ ನನ್ನಿಂದಲೇ ಆಗಿರುವವೆಂದು ತಿಳಿ. ಆದರೂ ಅವುಗಳಲ್ಲಿ ನಾನಿಲ್ಲ. ಅವುಗಳು ನನ್ನಲ್ಲಿ ಇರುತ್ತವೆ ।೧೨॥

ಯಾವ ಸಾತ್ತ್ವಿಕ ಭಾವವು ಮತ್ತು ರಾಜಸ, ತಾಮಸ ವಿಕಾರಗಳು ಇವು ಎಲ್ಲವೂ ನನ್ನ ರೂಪದಿಂದಲೇ ಉತ್ಪನ್ನವಾಗಿರುತ್ತವೆ, ಹೀಗೆಂದು ತಿಳಿದುಕೊ ।೫೩॥

ಇವುಗಳು ನನ್ನಲ್ಲಿಯೇ ಉದಯಿಸಿರುವುವು. ಆದರೆ ನಾನು ಅವುಗಳಲ್ಲಿರುವುದಿಲ್ಲ. ಸ್ವಪ್ನದಲ್ಲಿನ ಮಡುವಿನೊಳಗೆ ಜಾಗ್ರತೆಯಲ್ಲಿ ಮುಳುಗುವುದಿಲ್ಲ ।೫೪॥

ಅಥವಾ ಯಾವ ಪ್ರಕಾರವಾಗಿ ಬೀಜವು (ಧಾನ್ಯವು) ರಸದಿಂದ ಪೂರ್ಣವಾಗಿ ಕೂಡಿಕೊಂಡು ಇರುವುದು ಮತ್ತು ಅದರಿಂದಲೇ ಅಂಕುರವಾಗಿ ಕಟ್ಟಿಗೆ ತಯಾರಾಗುವುದು ।೫೫॥

ಆಗ ಆ ಕಟ್ಟಿಗೆಯಲ್ಲಿ ಬೀಜವಿರುವುದೇ? ನೀನೇ ಹೇಳು ನೋಡೋಣ! ಅದರಂತೆಯೇ ಸಾತ್ತ್ವಿಕಾದಿ ಎಲ್ಲ ವಿಕಾರಗಳು ನನ್ನಿಂದಲೇ ಉತ್ಪನ್ನವಾಗಿದ್ದರೂ ನಾನು ಅವುಗಳಲ್ಲಿ ಇಲ್ಲ ।೫೬॥

ನಿಶ್ಚಯವಾಗಿಯೂ, ಆಕಾಶದಲ್ಲಿ ಮೋಡಗಳು ಉತ್ಪನ್ನವಾಗುವುವು. ಅದರಲ್ಲಿ ಶುದ್ಧವಾದ ಆಕಾಶವು ಇರುವುದಿಲ್ಲ. ಅಥವಾ ಮೋಡಗಳಲ್ಲಿ ನೀರು ಇರುವುದು, ಆ ನೀರಿನಲ್ಲಿ ಮೋಡವಿರುವುದಿಲ್ಲ ।೫೭॥

ಆಮೇಲೆ ಆ ನೀರಿನ ಘರ್ಷಣೆಯಲ್ಲಿ ಹುಟ್ಟುವ ಮಿಂಚು ಅದು ತೇಜದಿಂದ ಚಕ - ಚಕಿತವಾಗಿ ಕಾಣುವುದು ಆದರೆ ಆ ಮಿಂಚಿನಲ್ಲಿ ನೀರು ಇದೆಯೇ? ।೫೮॥

ಅಗ್ನಿಯಿಂದಲೇ ಹೊಗೆಯು ಹುಟ್ಟುವುದು. ಆದರೆ ಆ ಹೊಗೆಯಲ್ಲಿ ಅಗ್ನಿ ಇರುವುದೇ? ನೀನೇ ಹೇಳು! ಅದರಂತೆ ಸಾತ್ತ್ವಿಕಾದಿ ವಿಕಾರಗಳು ನನ್ನಿಂದಾಗಿದ್ದರೂ ಅವುಗಳಲ್ಲಿ ನಾನಿಲ್ಲ ।೫೯॥

ಶ್ಲೋಕಾರ್ಥ :- ತ್ರಿಗುಣವಿಕಾರಗಳಿಗೆ ಗುರಿಯಾಗಿ ಭ್ರಮಿಸುವ ಈ ಜಗತ್ತು ಅವ್ಯಯನಾದ, ಪರವಸ್ತುವಾದ ನನ್ನನ್ನು ಗ್ರಹಿಸಲಾರದಾಗಿದೆ ।೧೩॥

ಅದಲ್ಲದೇ ನೀರಿನಲ್ಲಿಯೇ ಹುಟ್ಟಿರುವ ಹಾವಸೆಯು (ಅಂತರಗಂಗೆ) ನೀರನ್ನೇ ಮುಚ್ಚುವುದು. ಅಥವಾ ತುಂಬಾ ಮೋಡಗಳಿಂದ ಆಕಾಶವು ವ್ಯರ್ಥವಾಗಿ ಮುಚ್ಚಲ್ಪಡುವುದು ।೬೦॥

ಹಾ ಗಾ ಸ್ವಪ್ನಲಟಿಕೇ ಮ್ಹಣೋ ಯೇ । ಪರಿ ನಿದ್ರಾವಶೇ ಬಾಣಲೇ ಹೋಯೇ । ತಂವ ಆಠವು ಕಾಯ ದೇತ ಆಹೇ । ಆಪಣಪೇಯಾ ?॥೬೧॥ ಹೇ ಅಸೋ ಡೋಳ್ಯಾಂಚೇ । ಡೋಳಾಂಚಿ ಪಡಳ ರಚೇ । ತೇಣೇ ದೇಖಣೇಪಣ ಡೋಳ್ಯಾಂಚೇ । ನ ಗಿಳಿಜೇ ಕಾಯೀ ? ॥೬೨॥ ತೈಸೀ ಹೇ ಮಾಝೀಚ ಬಿಂಬಲೀ । ತ್ರಿಗುಣಾತ್ಮಕ ಸಾಉಲೀ । ಕೀ ಮಜಚಿ ಆಡ ವೋಡವಲೀ । ಜವನಿಕಾ ಜೈಸೀ ॥೬೩॥ ಮ್ಹಣೌನಿ ಭೂತೇ ಮಾತೇ ನೇಣತೀ । ಮಾಝೀಂಚ ಪರೀ ಮೀ ನವ್ಹತೀ ।ಜೈಸೀ ಜಳೀಂಚೀ ಜಳೀ ನ ವಿರತೀ । ಮುಕ್ತಾಫಳೇ ॥೬೪॥ ಪೈ ಪೃಥ್ವಿಯೇಚಾ ಘಟು ಕೀಜೇ । ಸವೇಂಚೀ ಪೃಥ್ವೀಸೀ ಮಿಳೇ ತರೀ ಮೇಳವಿಜೇ ।ಏರ್ಹ್ವೀ ತೋಚಿ ಅಗ್ನಿಸಂಗೇ ಸಿಜೇ । ತರೀ ವೇಗಳಾ ಹೋಯ ॥೬೫॥ ತೈಸೇ ಭೂತಜಾತ ಸರ್ವ । ಹೇ ಮಾಝೇಚಿ ಕೀರ ಅವಯವ । ಪರೀ ಮಾಯಾಯೋಗೆ ಜೀವ । ದಶೇ ಆಲೇ ॥೬೬॥ ಮ್ಹಣೌನಿ ಮಾಝೇಚಿ ಮೀ ನವ್ಹತೀ । ಮಾಝೇಚಿ ಮಜ ನೋಳಖತೀ । ಅಹಂಮಮತಾಭ್ರಾಂತೀ । ವಿಷಯಾಂಧ ಝಾಲೇ ॥೬೭॥

ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ।  
ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥೧೪॥

ಆತಾ ಮಹದಾದಿ ಹೇ ಮಾಝೀ ಮಾಯಾ । ಉತರೋನಿಯಾ ಧನಂಜಯಾ । ಮೀ ಹೋಇಜೇ ಹೇ ಆಯಾ । ಕೈಸೇನಿ ಯೇ ॥೬೮॥ ಜಿಯೇ ಬ್ರಹ್ಮಾಚಳಾಚಾ ಆಧಾಡಾ । ಪಹಿಲಿಯಾ ಸಂಕಲ್ಪಜಳಾಚಾ ಉಭಡಾ । ಸವೇಂಚಿ ಮಹಾಭೂತಾಂಚಾ ಬುಡಬುಡಾ । ಸಾನಾ ಆಲಾ ॥೬೯॥ ಜೇ ಸೃಷ್ಟಿವಿಸ್ತಾರಾಚೇನಿ ವೋಘೇ ।ಚಢತ ಕಾಳಕಳನೇಚೇನಿ ವೇಗೇ । ಪ್ರವೃತ್ತಿ ನಿವೃತ್ತೀಚೀ ತುಂಗೇ । ತಟೇ ಸಾಂಡೀ ॥೭೦॥ ಜೇ ಗುಣಘನಾಚೇನಿ ವೃಷ್ಟಿಭರೇ । ಭರಲೀ ಮೋಹಾಚೇನಿ ಮಹಾಪೂರೇ । ಘೇಊನಿ ಜಾತ ನಗರೇ । ಯಮ ನಿಯಮಾಂಚೀ ॥೭೧॥ ಜೇ ದ್ವೇಷಾಚ್ಯಾ ಆವರ್ತೀ ದಾಟತ । ಮತ್ಸರಾಚೇ ವಳಸೇ ಪಡತ । ಮಾಜೀ ಪ್ರಮಾದಾದಿ ತಳಪತ । ಮಹಾಮೀನ ॥೭೨॥ ಜೇಥ ಪ್ರಪಂಚಾಚೇ ವಳಣೇ । ಕರ್ಮಾಕರ್ಮಾಚೀ ವೋಭಾಣೇ । ವರೀ ತರ್ತಾತೀ ವೋಸಾಣೇ । ಸುಖದುಃಖಾಂಚೀ ॥೭೩॥ ರತೀಚಿಯಾ ಬೇಟಾ । ಆದಳತೀ ಕಾಮಾಚಿಯಾ ಲಾಟಾ । ಜೇಥಜೀವಫೇನ ಸಂಘಟಾ । ಸೈಂಘ ದಿಸೇ ॥೭೪॥ ಅಹಂಕಾರಾಚಿಯಾ ಚಳಿಯಾ । ವರಿ ಮದತ್ರಯಾಚಿಯಾ ಉಕಳಿಯಾ । ಜೇಥ ವಿಷಯೋರ್ಮೀಚ್ಯಾ ಆಕಳಿಯಾ । ಉಲ್ಲಾಳ ಘೇತೀ॥೭೫॥

ಈಗ ನೋಡು ; ಸ್ವಪ್ನವು ಅಸತ್ಯವಾಗಿರುವುದು. ಆದರೆ ಆ ವೇಳೆಯಲ್ಲಿ ನಿದ್ರೆಯ ಯೋಗದಿಂದ ಅದು ನಿಜವೆಂದು ಭಾಸವಾಗುತ್ತದೆ. ಆಗ ಅದು ನಮ್ಮನ್ನು ನಮಗೆ ನೆನಪಿಸಿಕೊಡುವುದೇ? ।೬೧॥

ಅಥವಾ ಕಣ್ಣಿನ ನೀರಿನಲ್ಲಿಯೇ ಕಣ್ಣಿನ ಪರಿಯು ಹುಟ್ಟುವುದು. ಆಗ ಆ ಪರಿಯು ಕಣ್ಣನ್ನು ಕಾಣಿಸದಂತೆ ಮಾಡುವುದಿಲ್ಲವೇ? ।೬೨॥

ಅದರಂತೆಯೇ ನನ್ನಲ್ಲಿಯೇ ಭಾಸವಾಗುವ (ಸತ್ತ್ವ, ರಜ,ತಮ) ತ್ರಿಗುಣಾಯುಕ್ತ ನನ್ನ ನೆರಳು (ಮಾಯಾ) ಪರದೆಯಂತೆ ನನ್ನ ಸ್ವರೂಪಕ್ಕೆ ಅಡ್ಡವಾಗಿದೆ ।೬೩॥

ಆದ್ದರಿಂದ ಪ್ರಾಣಿಗಳು ನನ್ನನ್ನು ಅರಿಯುವುದಿಲ್ಲ. ನನ್ನಿಂದಲೇ ಹುಟ್ಟಿದರೂ ನನ್ನಲ್ಲಿ ಕೂಡುವುದಿಲ್ಲ. ಯಾವ ಪ್ರಕಾರ ನೀರಿನಲ್ಲಿಯೇ ಹುಟ್ಟಿರುವ ಮುತ್ತುಗಳು ಪುನಃ ನೀರಿನಲ್ಲಿ ಕೂಡುವುದಿಲ್ಲ ।೬೪॥

ಅಥವಾ ಮಣ್ಣಿನಿಂದ ಮಡಿಕೆ ಮಾಡಿ ಅದನ್ನು ಹಸಿ ಇದ್ದಾಗ ಮಣ್ಣಿನಲ್ಲಿ ಕೂಡಿಸಿದರೆ ಕೂಡುವುದು. ಆದರೆ ಅದೇ ಮಡಿಕೆಯನ್ನು ಅಗ್ನಿಯಲ್ಲಿ ಸುಟ್ಟಮೇಲೆ ಮಣ್ಣಿನಲ್ಲಿ ಕೂಡುವುದಿಲ್ಲ ।೬೫॥

ಅದರಂತೆ ಎಲ್ಲ ಪ್ರಾಣಿಗಳು ನನ್ನ ಅವಯವಗಳಾಗಿವೆ. ಆದರೆ ಮಾಯೆಯ ಯೋಗದಿಂದ ಜೀವದಶೆ ಬಂದಿರುವುದು ।೬೬॥

ಅದಕ್ಕಾಗಿ ನನ್ನಿಂದಲೇ ಆಗಿದ್ದರೂ ನನ್ನನ್ನು ಹೊಂದುವುದಿಲ್ಲ. ನನ್ನವರಾಗಿದ್ದರೂ ನನ್ನನ್ನು ಅರಿಯರು ಮತ್ತು "ನಾನು" ಮತ್ತು "ನನ್ನದು" ಈ ಭ್ರಾಂತಿಯಿಂದ ವಿಷಯಾಂಧರಾಗಿರವರು ।೬೭॥

**ಶ್ಲೋಕಾರ್ಥ :**– ಈ ತ್ರಿಗುಣಮಯವಾದ ನನ್ನ ದೈವೀ ಮಾಯೆಯನ್ನು ದಾಟಲು ಅಶಕ್ಯವು. ಆದರೆ ನನ್ನನ್ನೇ ಯಾರು ಆಶ್ರಯಿಸುತ್ತಾರೋ, ಅವರು ಆ ಮಾಯೆಯನ್ನು ದಾಟುತ್ತಾರೆ ।೧೪॥

ಧನಂಜಯನೇ, ಈಗ ಈ ಮಹತತ್ತ್ವಾದಿ ನನ್ನ ಮಾಯೆಯನ್ನು (ದಾಟಿ) ಪಾರಾಗಿ ಮದ್ರೂಪನಾಗಬೇಕು. ಈ ಸಂಗತಿಯ ಅನುಭವವು ಹೇಗೆ ಬರಬೇಕು? ।೬೮॥

(ಕಾರಣ) ಈ ಮಾಯಾ ನದಿಯು ನಿರ್ಮಲವಾದ ಬ್ರಹ್ಮರೂಪ ಪರ್ವತದ ದಂಡೆಯ ಕಡಿವಾಡಿಯೊಳಗಿಂದ ಮೊದಲು ಸಂಕಲ್ಪವೆಂಬ ನೀರಿನ ಉಗಮವಾಗಿ ಪಂಚ ಮಹಾಭೂತಗಳ ಸಣ್ಣ ಸಣ್ಣ ಗುರುಳೆಗಳು ಎದ್ದವು ।೬೯॥

ಸೃಷ್ಟಿಯ ವಿಸ್ತಾರರೂಪದ ಪ್ರವಾಹದಿಂದ ಮತ್ತು ಕಾಲಗತಿಯ ವೇಗದಿಂದ ಬೆಳೆದು ಪ್ರವೃತ್ತಿ ನಿವೃತ್ತಿಯ ಎತ್ತರವಾದ ಅಂಚಿನ ಹೊರಗೆ ಹರಿಯ ಹತ್ತುವುದು ।೭೦॥

ಸತ್ತ್ವಾದಿಗುಣರೂಪದ ಮೋಡಗಳಿಂದ ರಭಸದ ಮಳೆಯಾದ ಮೂಲಕ, ಮೋಹರೂಪದ ಮಹಾಪೂರದಿಂದ ತುಂಬಿ, ಯಮ ನಿಯಮರೂಪದ ನಗರಗಳನ್ನು ಕೊಚ್ಚಿಕೊಂಡು ಹೋಗುವುವು ।೭೧॥

ಅದರಲ್ಲಿ ದ್ವೇಷರೂಪದ ತಿರುಗಣೆ ಮಡುಗಳು ಬಹಳವಾಗಿದ್ದು ಮತ್ಸರಗಳೆಂಬ ಚಕ್ರಗಳಿರುವುವು ಮತ್ತು ಅದರಲ್ಲಿ ಪ್ರಮಾದಗಳೆಂಬ ದೊಡ್ಡ ದೊಡ್ಡ ಮೀನುಗಳು ಮಿನುಗುವುವು ।೭೨॥

ಇದರಲ್ಲಿ (ಗೃಹ, ಪುತ್ರ, ದಾರಾ, ಧನ ಇತ್ಯಾದಿ) ಪ್ರಪಂಚರೂಪ ಅನೇಕ ತಿರುವುಗಳಿದ್ದು ಕರ್ಮಾಕರ್ಮಗಳ ಪೂರ ಉಂಟಾಗಿ ಸುಖದುಃಖರೂಪ ಕಸಕಡ್ಡಿಗಳು ದಂಡೆಗೆ ಬಂದು ಬೀಳುವುವು ।೭೩॥

ಇದರ ಪ್ರವಾಹದಲ್ಲಿ ಸ್ತ್ರೀ ಪುರುಷರ ಮೈಥುನ ರೂಪಿ ನಡುಗಡ್ಡೆಯ ಮೇಲೆ ಕಾಮ ವಿಕಾರಗಳ ತೆರೆಗಳು ಅಖಂಡವಾಗಿ ಅಪ್ಪಳಿಸುವುವು ಮತ್ತು ಅದರಿಂದ ಜೀವರೂಪ ನೊರೆಗಳ ಸಮುದಾಯಗಳು ಸಾಕಷ್ಟು ಕಾಣುವುವು ।೭೪॥

ಅಹಂಕಾರದ ಧಾರೆಯು ಎಲ್ಲ ಕಡೆ ಚಿಮ್ಮುತ್ತದೆ. ಸತ್ತಾ, ಸಂಪತ್ತು, ತಾರುಣ್ಯ ಈ ಮೂರು ಮದಗಳು ಉಕ್ಕುತ್ತಿರುವುವು. ಅಲ್ಲಿ ವಿಷಯತರಂಗಗಳ ತೆರೆಗಳು ಏಳುತ್ತಿರುತ್ತವೆ ।೭೫॥

ಉದಯಾಸ್ತಾಚೇ ಲೋಂಢೇ । ಪಾಡೀತ ಜನ್ಮಮರಣಾಚೇ ಚೊಂಢೇ । ಜೇಥ ಪಾಂಚಭೌತಿಕ ಬುಡಬುಡೇ । ಹೋತೀ ಜಾತೀ ॥೭೬॥ ಸಮ್ಮೋಹ ವಿಭ್ರಮ ಮಾಸೇ । ಗಿಳಿತಾತೀ ಧೈರ್ಯಾಚೇ ಆಮಿಸೇ । ತೇಥ ದೇವ್ಹಡೇ ಭೋವಂತ ವಳಸೇ । ಅಜ್ಞಾನಾಚೇ ॥೭೭॥ ಭ್ರಾಂತೀಚೇನಿ ಖಡುಳೇ । ರೇವಲೇ ಆಸ್ಥೇಚೇ ಅವಗಾಳೇ । ರಜೋಗುಣಾಚೇನಿ ಖಳಾಳೇ । ಸ್ವರ್ಗು ಗಾಜೇ ॥೭೮॥ ತಮಾಚೇ ಥಾರಸೇ ವಾಡ । ಸತ್ತ್ವಾಚೇ ಸ್ಥಿರಪಣ ಜಾಡ । ಕಿಂಬಹುನಾ ಹೇ ದುವಾಡ । ಮಾಯಾನದೀ ॥೭೯॥ ಪೈ ಪುನರಾವೃತ್ತೀಚೇನಿ ಉಭಡೇ । ಝಳಂಬತೀ ಸತ್ಯಲೋಕೀಂಚೇ ಹುಡೇ । ಘಾಯೇ ಗಡಬಡತೀ ಥೋಂಡೇ । ಬ್ರಹ್ಮಗೋಳಕಾಚೇ ॥೮೦॥ ತಯಾಪಾಣಿಯಾಚೇನಿ ವಹಿಲೇಪಣೇ । ಅಝುನೀ ನ ಧರಿತೀ ವೋಭಾಣೇ । ಐಸಾ ಮಾಯಾಪೂರ ಹಾ ಕವಣೇ । ತರಿಜೇಲ ಗಾ ? ॥೮೧॥ ಯೇಥ ಏಕ ನವಲಾವೋ । ಜೋ ಜೋ ಕೀಜೇ ತರಣೋಪಾವೋ । ತೋ ತೋ ಅಪಾವೋ । ಹೋಯ ತೇ ಐಕ ॥೮೨॥ ಏಕ ಸ್ವಯಂಬುದ್ಧೀಚ್ಯಾ ಬಾಹೀ । ರಿಗಾಲೇ ತಯಾಂಚೀ ಶುದ್ಧೀಚಿ ನಾಹೀ । ಏಕ ಜಾಣಿವೇಚೇ ಡೋಹೀ । ಗರ್ವೇಂಚಿ ಗಿಳಿಲೇ ॥೮೩॥ ಏಕೀ ವೇದತ್ರಯಾಚಿಯಾ ಸಾಂಗಡೀ । ಘೇತಲ್ಯಾ ಅಹಂಭಾವಾಚಿಯಾ ಥೋಂಡೀ । ತೇ ಮದಮೀನಾಚ್ಯಾ ತೋಂಡೀ । ಸಗಳೇಚಿ ಗೇಲೇ ॥೮೪॥ ಏಕೀ ವಯಸೇಚೇ ಜಾಡ ಬಾಂಧಲೇ । ಮಗ ಮನ್ಮಥಾಚಿಯೇ ಕಾಂಸೇ ಲಾಗಲೇ । ತೇ ವಿಷಯಮಗರೀ ಸಾಂಡಿಲೇ । ಚಘಳೂನಿಯಾ ॥೮೫॥ ಆತಾ ವಾರ್ಧಕ್ಯಾಚಾ ತರಂಗಾ । ಮಾಜೀ ಮತಿಭ್ರಂಶಾಚಾ ಜರಂಗಾ । ತೇಣೇ ಕವಳಿಜತಾತೀ ಪೈ ಗಾ । ಚಹೂಕಡೇ ॥೮೬॥ ಆಣೀ ಶೋಕಾಚಾ ಕಡಾ ಉಪಡತ । ಕ್ರೋಧಾಚ್ಯಾ ಆವರ್ತೀ ದಾಟತ । ಆಪದಾಗಿಧೀ ಚುಂಬಿಜತ । ಉಧವಲಾ ಠಾಯಿ ॥೮೭॥ ಮಗ ದುಃಖಾಚೇನಿ ಬರಬಟೇ ಬೋಂಬಲೇ । ಪಾಠೀ ಮರಣಾಚಿಯೇ ರೇವೇ ರೇವಲೇ । ಐಸೇ ಕಾಮಾಚೇ ಕಾಂಸೇ ಲಾಗಲೇ । ತೇ ಗೇಲೇ ವಾಯಾ ॥೮೮॥ ಏಕೀ ಯಜನಕ್ರಿಯೇಚೇ ಪೇಟೇ । ಬಾಂಧೋನಿ ಘಾತಲೀ ಪೋಟೇ । ತೇ ಸ್ವರ್ಗಸುಖಾಚ್ಯಾ ಕಪಾಟೇ । ಶಿರಕೋನಿ ಠೇಲೇ ॥೮೯॥ ಏಕೀ ಮೋಕ್ಷೀ ಲಾಗಾವಯಾಚಿಯಾ ಆಶಾ । ಕೇಲಾ ಕರ್ಮಬಾಹ್ಯಾಚಾ ಭರಂವಸಾ । ಪರೀ ತೇ ಪಡಿಲೇ ವಳಸಾ । ವಿಧಿನಿಷೇಧಾಚ್ಯಾ ॥೯೦॥ ಜೇಥ ವೈರಾಗ್ಯಾಚೇ ನಾವ ನ ರಿಗೆ । ವಿವೇಕಾಚಾ ತಾಗಾ ನ ಲಗೇ । ವರಿ ಕಾಂಹೀ ತರೋ ಯೇ ಯೋಗೇ । ತರೀ ವಿಪಾಯ ತೋ ॥೯೧॥

ಉದಯ ಮತ್ತು ಅಸ್ತ ಇವುಗಳ ದೊಡ್ಡ ಪ್ರವಾಹಗಳು ಜನ್ಮ ಮರಣಗಳೆಂಬ ಒಡ್ಡುಗಳನ್ನು ಒಡೆಯುತ್ತವೆ. ಅಲ್ಲಿ ಶರೀರರೂಪ ಗುರುಳೆಗಳು ಹುಟ್ಟುತ್ತವೆ ಮತ್ತು ಲಯಗೊಳ್ಳುತ್ತವೆ ||೭೬||

ಇದರಲ್ಲಿ ಮೋಹ ಮತ್ತು ಭ್ರಾಂತಿ ರೂಪದ ಮೀನುಗಳು ಧೈರ್ಯವೆಂಬ ಆಮಿಷವನ್ನು ನುಂಗಿ ಬಿಡುವುವು ಮತ್ತು ಅದರಲ್ಲಿ ಅಜ್ಞಾನವೆಂಬ ದೊಡ್ಡ ದೊಡ್ಡ ತಿರುಗಣೆಗಳು ತಿರುಗುವುವು ||೭೭||

ಭ್ರಾಂತಿ ಎಂಬ ರಾಡಿಯಲ್ಲಿ ಆಸ್ತೆ (ಆಶೆ) ಎಂಬ ಹುದಲಿನಲ್ಲಿ ಪ್ರಾಣಿಯು ಸಿಕ್ಕು ಬೀಳುವನು. ರಜೋಗುಣಕ್ಕೆ ಖಳಖಳಾಟವು (ಸಪ್ಪಳ) ಸ್ವರ್ಗಪ್ರಾಪ್ತಿಯ ಗರ್ಜನೆಯಾಗುತ್ತಿರುತ್ತದೆ ||೭೮||

ಅದರಂತೆ ತಮೋರೂಪಿ ಪ್ರವಾಹದಲ್ಲಿ ಮತ್ತು ಸತ್ತ್ವ ರೂಪಿ ಸ್ಥಿರವಾಗಿ ನಿಂತ ದೊಡ್ಡ ಮಡುವಿನಲ್ಲಿ ಈಸಿ ಪಾರಾಗುವುದು ಬಹಳ ಕಠಿಣವಿದೆ. ಹೆಚ್ಚೇನು ಹೇಳಬೇಕು? ಈ ಮಾಯಾ ನದಿಯು ಬಹಳ ಘಾತಕವಾಗಿದೆ ||೭೯||

ಈ ಮಾಯಾ ನದಿಯಲ್ಲಿ (ಪುನರಾವೃತ್ತಿ) ಪುನರ್ಜನ್ಮದ ಭಾರಿ ತೆರೆಗಳು ಸತ್ಯಲೋಕದ ಕಿಲ್ಲೆಯವರೆಗೆ ಹೋಗಿ ಅಪ್ಪಳಿಸುವುವು. ಇದರ ಆಘಾತದಿಂದ ಬ್ರಹ್ಮದೇವಾದಿ ಗೋಲಾಕಾರದ ಕಲ್ಲುಗಳು ಗಡಗಡಿಸುತ್ತಾ ಕೆಳಗೆ ಉರುಳುವುವು ||೮೦||

ಈ ನೀರಿನ ಪ್ರವಾಹದ ಸೆಳೆತವನ್ನು ಹಾಗೂ ಹೆಚ್ಚಿದ ಗತಿಯನ್ನು ಈಗಲೂ ಬ್ರಹ್ಮಾದಿಕ ದೇವತೆಗಳಿಗೆ ತಡೆಯುವುದು ಆಗುವುದಿಲ್ಲ. ಅಂದಮೇಲೆ ಇಂತಹ ಮಾಯಾ ನದಿಯ ಮಹಾಪೂರವನ್ನು ಯಾರು ದಾಟಬಲ್ಲರು? ||೮೧||

ಈ ಮಾಯಾನದಿ ಸಂಬಂಧದಲ್ಲಿ ಒಂದು ಆಶ್ಚರ್ಯದ ಘಟನೆ ಏನೆಂದರೆ ಇದನ್ನು ದಾಟಲು ಮಾಡುವ ಉಪಾಯಗಳೆಲ್ಲವೂ ಅಪಾಯಗಳಾಗುವುವು. ಇದು ಹೇಗೆಂಬುದು ಕೇಳು ||೮೨||

ಕೆಲವರು (ವೇದ, ಗುರುಗಳ ಸಹಾಯವಿಲ್ಲದೆ) ಸ್ವಯಂ ಬುದ್ಧಿಯ ಬಾಹುಬಲದಿಂದ ಈಸಿ ಪಾರಾಗಲು ಈ ಮಾಯಾ ನದಿಯಲ್ಲಿ ಜಿಗಿದರು. ಆದರೆ ಮುಂದೆ ಇವರೆಲ್ಲಿ ಹೋದರೆಂಬುದಕ್ಕೆ ಪತ್ತೆ ಹತ್ತಲಿಲ್ಲ. ಕೆಲವರು ಪಾಂಡಿತ್ಯದ ಮಡುವಿನಲ್ಲಿ ಗರ್ವದಿಂದ ಮುಳುಗಿ ಹೋದರು ||೮೩||

ಕೆಲವರು ಮೂರು ವೇದಗಳ ಈಜುಗುಂಬಳ ಕಾಯಿ ಕಟ್ಟಿಕೊಂಡರು. ಆದರೆ ವಿದ್ಯಾಭಿಮಾನಗಳ ಕಲ್ಲುಗಳು ಅವರಲ್ಲಿದ್ದುದಕ್ಕೆ ಅವರು ಮುಳುಗಬೇಕಾಯಿತು. ಮದ ರೂಪಿ ಮೀನುಗಳ ಮುಖದಲ್ಲಿ ಪೂರ್ಣ ಹೋದರು ||೮೪||

ಕೆಲವರು ತಾರುಣ್ಯದ ಬಲದಿಂದ ನಡವನ್ನು ಬಿಗಿಯಾಗಿ ಕಟ್ಟಿ ಮದನನ ಬೆನ್ನು ಹತ್ತಿದರು. ಆದರೆ ಅವರಿಗೆ ವಿಷಯ ರೂಪ ಮೊಸಳೆಯು ಸಹಜವಾಗಿ ಜಡಬಡಿಸಿ ಬಿಟ್ಟಿತು ||೮೫||

ಆಗ ಅವರು ವಾರ್ಧಕ್ಯರೂಪ ತೆರೆಯ ತರಂಗಗಳಲ್ಲಿ ಹೋಗುತ್ತಿರುವಾಗ ಮತಿಭ್ರಂಶ ಬಲೆಯಲ್ಲಿ ಸಿಕ್ಕಿಕೊಂಡು ನಾಲ್ಕು ಕಡೆಯಿಂದಲೂ ಬಂಧಿಸಲ್ಪಟ್ಟು ||೮೬||

ಶೋಕರೂಪವಾದ ದಂಡೆಗೆ ಅಪ್ಪಳಿಸುವರು. ಮುಂದೆ ಅವರು ಕ್ರೋಧರೂಪ ಸುಳಿಯಲ್ಲಿ ಸಿಕ್ಕಿಕೊಳ್ಳುವರು. ಅದರೊಳಗಿಂದ ಮೇಲೆ ತಲೆ ಎತ್ತಿದರೆ ಸಂಕಟರೂಪದ ರಣಹದ್ದುಗಳು ಕುಕ್ಕಿ ಕುಕ್ಕಿ ತಿನ್ನಲಾರಂಬಿಸುವುವು ||೮೭||

ಮತ್ತೆ ಇವರು ದುಃಖರೂಪ ರಾಡಿಯಿಂದ ಮೆತ್ತಿಕೊಂಡು ಮರಣರೂಪ ಉಸುಕಿನಲ್ಲಿ ಸಿಕ್ಕಿಕೊಳ್ಳುವರು. ಈ ರೀತಿ ವಿಷಯದ ಬೆನ್ನು ಹತ್ತಿದವರ ಜೀವನವು ವ್ಯರ್ಥವಾಗುವುದು ||೮೮||

ಇನ್ನು ಕೆಲವರು ಯಜ್ಞಾದಿಕ ಕ್ರಿಯಾರೂಪವಾದ ಪೆಟ್ಟಿಗೆಯನ್ನು ಹೊಟ್ಟೆಗೆ ಕಟ್ಟಿಕೊಂಡು ಮಾಯಾನದಿ ದಾಟಲು ಹಾರಿಕೊಂಡರು. ಆದರೆ ಅವರು ಸ್ವರ್ಗಸುಖದ ಇರುಕಿನಲ್ಲಿ ಸಿಕ್ಕಿಬಿದ್ದರು ||೮೯||

ಮತ್ತೆ ಕೆಲವರು ಮೋಕ್ಷಪ್ರಾಪ್ತಿಯ ಆಶೆಯಿಂದ ಕರ್ಮರೂಪ ಬಾಹುಬಲದ ಮೇಲೆ ಭರವಸೆ ಇಡುವರು. ಆದರೆ ಇವರು ವಿಧಿ ನಿಷೇಧಗಳ ತಿರುಗಣೆಯಲ್ಲಿ ಸಿಕ್ಕಿಬಿದ್ದರು ||೯೦||

ಈ ಮಾಯಾನದಿಯಲ್ಲಿ ವೈರಾಗ್ಯರೂಪ ಹಡಗವು ನಡೆಯುವುದಿಲ್ಲ ಮತ್ತು ಇದಕ್ಕೆ ಬುದ್ಧಿಯ ನೆಲೆ ಮುಟ್ಟುವುದಿಲ್ಲ. ಆದರೆ ಯೋಗದಿಂದ ಮಾತ್ರ ಪಾರಾಗಬಹುದು. ಆದರೆ ಇದು ಕ್ವಚಿತ ಸಾಧ್ಯ ||೯೧||

ಐಸೇ ತರೀ ಜೀವಾಚಿಯೇ ಆಂಗವಣೇ। ಇಯೇ ಮಾಯಾನದೀಚೇ ತರಣೇ । ಹೇ ಕಾಸಯಾಸಾರಿಖೇ ಬೋಲಣೇ । ಮ್ಹಣಾವೇ ಪಾ ।೯೨॥ ಜರೀ ಅಪಥ್ಯಶೀಳಾ ವ್ಯಾಧೀ । ಕಳೇ ಸಾಧೂಸೀ ದುರ್ಜನಾಚೀ ಬುದ್ಧೀ । ಕೀ ರಾಗೀ ಸಾಂಡೀ ರಿದ್ಧೀ । ಆಲೀ ಸಾಂತೀ ।೯೩॥ ಜರೀ ಚೋರಾ ಸಭಾ ದಾಟೇ । ಅಥವಾ ಮೀನಾ ಗಳು ಫೋಟೇ ।ನಾ ತರೀ ಭೇಡಾ ಉಲಟೇ । ವಿವಸೀ ಜರೀ ।೯೪॥ ಪಾಡಸ ವಾಗುರ ಕರಾಂಡೀ । ಕಾ ಮುಂಗೀ ಮೇರು ವೋಲಾಂಡೀ । ತರೀ ಮಾಯೇಚೀ ಪೈಲಥಡೀ । ದೇಖತೀ ಜೀವ ।೯೫॥ ಮ್ಹಣೌನಿ ಗಾ ಪಂಡುಸುತಾ । ಜೈಸೀ ಸಕಾಮಾ ನ ಜಿಣವೇಚಿ ವನಿತಾ । ತೇವೀ ಮಾಯಾಮಯ ಹೇ ಸರಿತಾ । ನ ತರವೇ ಜೀವಾ ।೯೬॥ ಯೇಥ ಏಕಚೀ ಲೀಲಾ ತರಲೇ । ಜೇ ಸರ್ವಭಾವೇ ಮಜ ಭಜಲೇ । ತಯಾ ಐಲೀಚ ಥಡೀ ಸರಲೇ । ಮಾಯಾಜಳ ।೯೭॥ ಜಯಾ ಸದ್ಗುರುತಾರೂ ಪುಡೇ । ಜೇ ಅನುಭವಾಚೇ ಕಾಂಸೇ ಗಾಢೇ । ಜಯಾ ಆತ್ಮನಿವೇದನ ತರಾಂಡೇ । ಆಂಕಳಲೇ ।೯೮॥ ಜೇ ಅಹಂಭಾವಾಚೇ ವೋಝೇ ಸಾಂಡುನೀ । ವಿಕಲ್ಪಾಚಿಯಾ ಝುಳಕಾ ಚುಕಾಉನೀ । ಆನುರಾಗಾಚಾ ನಿರುತಾ ಹೋಉನೀ । ಪಾಣಿಢಾಳು ।೯೯॥ ಜಯಾ ಐಕ್ಯಾಚಿಯಾ ಉತಾರಾ । ಬೋಧಾಚಾ ಜೋಡಲಾ ತಾರಾ । ಮಗ ನಿವೃತ್ತೀಚಿಯಾ ಪೈಲ ತೀರಾ । ಝೇಂಪಾವಲೇ ಜೇ ।೧೦೦॥ ತೇ ಉಪರತೀಚ್ಯಾ ವಾಂವೀ ಸೇಲತ । ಸೋಹಂಭಾವಾಚೇನಿ ಥಾವೇ ಪೇಲತ । ಮಗ ನಿಘಾಲೇ ಅನಕಳಿತ । ನಿವೃತ್ತಿ ತಟೀ ।೧೦೧॥ ಯೇಣೇ ಉಪಾಯೇ ಮಜ ಭಜಲೇ । ತೇ ಹೇ ಮಾಝೀ ಮಾಯಾ ತರಲೇ । ಪರೀ ಐಸೇ ಭಕ್ತ ವಿಪಾಇಲೇ । ಬಹುವಸ ನಾಹಿ ।೧೦೨॥

ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ ।<br>
ಮಾಯಯಾಽಪಹೃತಜ್ಞಾನಾಃ ಆಸುರಂ ಭಾವಮಾಶ್ರಿತಾಃ ।೧೫॥

ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ ।<br>
ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ।೧೬॥

ಜೇ ಬಹುತಾ ಏಕಾ ಆವ್ಹಾಂತರು। ಅಹಂಕಾರಾಚಾ ಭೂತಸಂಚಾರು । ಜಾಹಲಾ ಮ್ಹಣೌನಿ ವಿಸರು । ಆತ್ಮಭೋಧಾಚಾ ।೧೦೩॥ ತೇ ವೇಳಿ ನಿಯಮಾಚೇ ವಸ್ತ್ರ ನಾಠವೇ । ಪುಢೀಲ ಅಧೋಗತೀಚೇ ಲಾಜ ನೇಣವೇ । ಆಣಿ ಕರಿತಾತಿ ಜೇ ನ ಕರಾವೇ । ವೇದು ಮ್ಹಣೇ ।೧೦೪॥

ಅಂದಮೇಲೆ ಜೀವದ ಅಂಗ ಸಾಮರ್ಥ್ಯದಿಂದ ಈ ಮಾಯಾರೂಪ ನದಿಯನ್ನು ದಾಟಬಹುದು ಎನ್ನುವುದಾದರೆ ಅದು ಹೀಗಾಗುತ್ತದೆ ಕೇಳು ।೯೨॥

ಒಂದುವೇಳೆ ಪಥ್ಯ ಮಾಡಲಾರದವನ ರೋಗವು ಹೋಗುವುದಾದರೆ, ಸಾಧುವಿಗೆ ದುರ್ಜನರ ಬುದ್ಧಿ ತಿಳಿದರೆ, ಅಥವಾ ವಿಷಯಾಸಕ್ತ ಪುರುಷನಿಗೆ ಐಶ್ವರ್ಯ ಬಂದಾಗ ಆತನು ಅದನ್ನು ತ್ಯಜಿಸಿದರೆ ।೯೩॥

ಕಳ್ಳರ ಸಭೆಯಲ್ಲಿ ಕಿಕ್ಕಿರಿದು ಜನರು ಸೇರಿದರೆ, ಅಥವಾ ಮೀನಕ್ಕೆ ಗಾಣದ ಬಲೆಯನ್ನು ತಿಂದು ನುಂಗಲು ಬಂದರೆ, ಇಲ್ಲವೇ ಪುಕ್ಕನು ಭೂತ ಪಿಶಾಚಿಯನ್ನು ಹೆದರಿಸಿ ಓಡಿಸಿದರೆ, ।೯೪॥

ಒಂದುವೇಳೆ ಚಿಗರೆಯ ಮರಿಯು ತಾನು ಬಿದ್ದ ಬಲೆಯನ್ನು ಕಡಿದು ಹಾಕಿದರೆ, ಇರುವೆ ಒಂದು ಮೇರು ಪರ್ವತವನ್ನು ದಾಟಿದರೆ ಮಾತ್ರ ಜೀವನು (ತನ್ನ ಸ್ವಂತ ಬಲದಿಂದ) ಮಾಯಾನದಿಯನ್ನು ದಾಟಬಹುದು ।೯೫॥

ಆದ್ದರಿಂದ ಪಾಂಡವನೇ, ವಿಷಯ ಪುರುಷನಿಗೆ ಯಾವ ಪ್ರಕಾರವಾಗಿ ಸ್ತ್ರೀಯನ್ನು ಗೆಲ್ಲುವುದು ಆಗುವುದಿಲ್ಲವೋ ಅದರಂತೆ ಈ ಮಾಯಾರೂಪ ನದಿಯನ್ನು ಜೀವಕ್ಕೆ ಪಾರಾಗುವುದು ಆಗುವುದಿಲ್ಲ ।೯೬॥

ಆದಾಗ್ಯೂ ಯಾರು ನನಗೆ ಅನನ್ಯಭಾವದಿಂದ ಶರಣು ಬರುವರೋ ಅವರು ಈ ಮಾಯಾನದಿಯನ್ನು ಸಹಜವಾಗಿ ದಾಟುವರು. ಇಷ್ಟೇ ಏಕೆ? ಇವರು ಈ ದಂಡೆಗೆ ಇರುವಾಗಲೇ ನದಿಯಲ್ಲಿನ ಮಾಯಾರೂಪ ನೀರು ಸಂಪೂರ್ಣ ಇಲ್ಲದಾಗುವುದು ।೯೭॥

ಸದ್ಗುರುವೆಂಬ ಅಂಬಿಗನನ್ನು ಕೂಡಿಕೊಂಡು ಬ್ರಹ್ಮಸಾಕ್ಷಾತ್ಕಾರದ ಬಿಗಿಯಾದ ನಡಕಟ್ಟಿದವನು ಅಥವಾ ಆತ್ಮ ವಿವೇಚನೆ ಎಂಬ ಸಿಂಗಡಿ ದೊರೆತವನು ।೯೮॥

ಅಹಂಭಾವದ ಭಾರವನ್ನು ದೂರ ಎಸೆದು ವಿಕಲ್ಪ ರೂಪದ ಗಾಳಿಯ ಸುಳಿಯನ್ನು ತಪ್ಪಿಸಿ ಸ್ತ್ರೀ ಪುತ್ರರ ಮೇಲಿನ ಪ್ರೇಮರೂಪ ನೀರಿನ ಧಾರೆಯನ್ನು ಬದಿಗೆ ಸರಿಸಿದವನು ।೯೯॥

ಜೀವ ಪರಮಾತ್ಮನ ಐಕ್ಯಕ್ಕಾಗಿ ಬಲವಾದ ಸಂಕಲ್ಪದಿಂದ ಪೂರ ಇಲ್ಲದ ಸ್ಥಳ (ಸೆಳೆ, ತಿರುಗಣಿ, ಮಡುವು ಇಲ್ಲದ ಸ್ಥಳ)ದಲ್ಲಿ ಸಿಂಗಡಿಯನ್ನು ಕಟ್ಟಿಕೊಂಡು ನಿವೃತ್ತಿ ಎಂಬ ಆಚೆದಂಡೆಗೆ ಹಾರುತ್ತ ಜಿಗಿಯುತ್ತ ನಡೆದವನು ।೧೦೦॥

ಇವರು ವೈರಾಗ್ಯರೂಪ ಕೈಗಳನ್ನು ಹಾಕಿ ಎಳೆಯುತ್ತ "ಅಹಂಬ್ರಹ್ಮ" ಎಂಬ ಭಾವದ ಬಲದಿಂದ ಈಸಿ ಮುಕ್ತಿಯ ದಂಡೆಯನ್ನು ತಪ್ಪದೇ ಮುಟ್ಟುವರು ।೧೦೧॥

ಈ ಉಪಾಯಗಳಿಂದ ಯಾರು ನನ್ನನ್ನು ಭಜಿಸುವರೋ ಅವರೇ ಈ ಮಹಾನದಿಯನ್ನು ದಾಟುತ್ತಾರೆ. ಆದರೆ ಇಂತಹ ಭಕ್ತರು ಬಹಳ ಇರುವುದಿಲ್ಲ. ಅತಿ ವಿರಳರು ।೧೦೨॥

ಶ್ಲೋಕಾರ್ಥ :- ಯಾರ ಜ್ಞಾನವೆಂಬ ಧನವನ್ನು ಮಾಯಾಶಕ್ತಿಯು ಅಪಹರಿಸಿರುವುದೋ ಅವರು ಆಸುರೀವೃತ್ತಿಗೆ ಒಳಪಟ್ಟಿರುತ್ತಾರೆ. ಮೂಢರೂ ಪಾಪ ಕರ್ಮಗಳನ್ನು ಮಾಡುವ ಈ ನರಾಧಮರೂ ನನ್ನನ್ನು ಪಡೆಯಲಾರರು ।೧೫॥

ಶ್ಲೋಕಾರ್ಥ :- ಭರತಶ್ರೇಷ್ಠನಾದ ಅರ್ಜುನಾ! ದುಃಖಪೀಡಿತನು, ಜಿಜ್ಞಾಸು, ಸುಖಾಭಿಲಾಷಿ, ಮತ್ತು ಜ್ಞಾನಿಗಳೆಂದು ನಾಲ್ಕು ವಿಧಗಳಾದ ಪುಣ್ಯಾತ್ಮರು ನನ್ನನ್ನು ಸೇವಿಸುತ್ತಾರೆ ।೧೬॥

ಏಕೆಂದರೆ, ಈ ಒಬ್ಬ ಭಕ್ತನ ಹೊರತಾಗಿ ಉಳಿದ ಎಲ್ಲ ಪ್ರಾಣಿಗಳಿಗೆ ಅನಾದಿ ಕಾಲದಿಂದಲೂ ಅಹಂಕಾರ ರೂಪ ಭೂತದ ಸಂಚಾರವಾಗಿರುವುದರಿಂದ ಆತ್ಮ ಸ್ವರೂಪದ ಮರುವು ಆಗಿರುವುದು ।೧೦೩॥

ಆಗ ಇವರಿಗೆ ನಿಯಮರೂಪದ ವಸ್ತ್ರದ ಪರಿವೆಯೇ ಇರುವುದಿಲ್ಲ. ಅಧೋಗತಿಯ ಲಜ್ಜೆಯೂ ಇರುವುದಿಲ್ಲ ಮತ್ತು ವೇದವು ಬೇಡವೆಂದು ಹೇಳಿದ್ದನ್ನು ಮಾಡುತ್ತಿರುವರು ।೧೦೪॥

ಪಾಹೇ ಪಾ ಶರೀರಾಚಿಯಾ ಗಾಂವಾ । ಜಯಾಲಾಗೀ ಆಲೇ ಪಾಂಡವಾ । ತೋ ಕಾರ್ಯಾರ್ಥು ಆಥವಾ । ಸಾಂಡೂನಿಯಾ ।।೧೦೫।। ಇಂದ್ರಿಯಗ್ರಾಮೀಂಚೇ ರಾಜಬಿದೀ । ಅಹಂಮಮತೇಚಿಯಾ ಜಲ್ಪವಾದೀ । ವಿಕಾರಾಂತರಾಂಚೀ ಮಾಂದೀ । ಮೇಳವೂನಿಯಾ ।।೧೦೬।। ದುಃಖಶೋಕಾಂಚ್ಯಾ ಘಾಈ । ಮಾರಿಲಿಯಾಚೀ ಸೇಚಿ ನಾಹೀ । ಹೇ ಸಾಂಗಾವಯಾ ಕಾರಣ ಕಾಈ । ಜೇ ಗ್ರಾಸಿಲೇ ಮಾಯಾ ।।೧೦೭।। ಮ್ಹಣೌನಿ ತೇ ಮಾತೇ ಚುಕಲೇ । ಏಕಾ ಚತುರ್ವಿಧ ಮಜ ಭಜಲೇ । ಜಿಹೀ ಆತ್ಮಹಿತ ಕೇಲೇ । ವಾಢತೇ ಗಾ ।।೧೦೮।। ತೋ ಪಹಿಲಾ ಆರ್ತು ಮ್ಹಣಿಜೇ । ದುಸರಾ ಜಿಜ್ಞಾಸು ಬೋಲಿಜೇ । ತಿಜಾ ಅರ್ಥಾರ್ಥೀ ಜಾಣಿಜೇ । ಜ್ಞಾನಿಯಾ ಚೌಥಾ ।।೧೦೯।।

ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।
ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ।।೧೭।।

ತೇಥ ಆರ್ತು ತೋ ಆರ್ತೀಚೇನಿ ವ್ಯಾಜೇ । ಜಿಜ್ಞಾಸು ತೋ ಜಾಣಾವಯಾಲಾಗೀ ಭಜೇ । ತಿಜೇನಿ ತೇಣೇ ಇಚ್ಛಿಜೇ । ಅರ್ಥಸಿದ್ಧಿ ।।೧೧೦।। ಮಗ ಚೌಥಿಯಾಚ್ಯಾ ಠಾಯೀ । ಕಾಂಹೀಂಚಿ ಕರಣೇ ನಾಹೀ । ಮ್ಹಣೌನಿ ಭಕ್ತು ಏಕು ಪಾಹೀ । ಜ್ಞಾನಿಯಾ ಜೋ ।।೧೧೧।। ಜೇ ತಯಾ ಜ್ಞಾನಾಚೇನಿ ಪ್ರಕಾಶೇ । ಫಿಟಲೇ ಭೇದಾಭೇದಾಂಚೇ ಕಡವಸೇ । ಮಗ ಮೀಚಿ ಜಾಹಲಾ ಸಮರಸೇ । ಆಣಿ ಭಕ್ತುಹೀ ತೇವೀಂಚಿ ।।೧೧೨।। ಪರಿ ಆಣಿಕಾಂಚಿಯೇ ದಿಠೀ ನಾವೇಕ । ಜೈಸಾ ಸ್ಫಟಿಕುಚಿ ಆಭಾಸೇ ಉದಕ । ತೈಸಾ ಜ್ಞಾನೀ ನವ್ಹೇ ಕೌತುಕ । ಸಾಂಗತಾ ತೋ ।।೧೧೩।। ಜೈಸಾ ವಾರಾ ಕಾ ಗಗನೀ ವಿರೇ । ಮಗ ವಾರೇಪಣ ವೇಗಳೇ ನುರೇ । ತೇವೀ ಭಕ್ತ ಹೇ ಪೈಜ ನ ಸರೇ । ಜರೀ ಐಕ್ಯಾ ಆಲಾ ।।೧೧೪।। ಜರೀ ಪವನು ಹಾಲವೂನಿ ಪಾಹಿಜೇ । ತರೀ ಗಗನಾವೇಗಳಾ ದೇಖಿಜೇ । ಏರ್ಹವೀ ಗಗನ ತೋ ಸಹಜೇ । ಅಸೇ ಜೈಸೇ ।।೧೧೫।। ತೈಸೇ ಶರೀರೀ ಹನ ಕರ್ಮೆ । ತೋ ಭಕ್ತು ಐಸಾ ಗಮೇ । ಪರಿ ಅಂತರಪ್ರತೀತಿಧರ್ಮೆ । ಮೀಚಿ ಜಾಹಲಾ ।।೧೧೬।। ಆಣಿ ಜ್ಞಾನಾಚೇನಿ ಉಜಿಡಲೇಪಣೇ । ಮೀ ಆತ್ಮಾ ಐಸೇ ತೋ ಜಾಣೇ । ಮ್ಹಣೌನಿ ಮೀಹೀ ತೈಸೇಂಚಿ ಮ್ಹಣೇ । ಉಚಂಬಳಲಾ ಸಾಂತಾ ।।೧೧೭।। ಹಾ ಗಾ ಜೀವಾಪೈಲೀಕಡಿಲೀಯೇ ಖುಣೇ । ಜೋ ಪಾವೋನಿ ವಾವರೋ ಜಾಣೇ । ತೋ ದೇಹಾಚೇನಿ ವೇಗಳೇಪಣೇ । ಕಾಯ ವೇಗಳಾ ಹೋಯ ।।೧೧೮।।

ಅರ್ಜುನಾ ಇಲ್ಲಿ ನೋಡು; ಈ ಶರೀರರೂಪ ಊರಿಗೆ ಯಾವ ಕಾರ್ಯಕ್ಕೆ ಬಂದಿರುವರೋ, ಅದೆಲ್ಲ ಕರ್ಮಭಾಗವನ್ನು ಬಿಟ್ಟುಕೊಟ್ಟು ।।೧೦೫।।

ಈ ಇಂದ್ರಿಯ ಸಮುದಾಯ ರೂಪ ರಾಜ ಮಾರ್ಗದಲ್ಲಿ ಅಹಂ ಮಮತೆಯ ಬಡಬಡಿಸುವ ಕಾರ್ಯಕ್ಕಾಗಿ ಕಾಮಕ್ರೋಧಾದಿ ಸಮುದಾಯದ ಗುಂಪು ಕೂಡಿಸುವರು ।।೧೦೬।।

ಮತ್ತು ದುಃಖ ಹಾಗೂ ಶೋಕಗಳ ಹೊಡೆತ ಬೀಳುತ್ತಿದ್ದರೂ ಇವರಿಗೆ ಅದರ ಎಚ್ಚರವೇ ಇರುವುದಿಲ್ಲ. ಇದರ ಕಾರಣವೇನೆಂದರೆ ಮಾಯೆಯು ಇವರನ್ನು ಗ್ರಾಸ ಮಾಡಿರುವುದು ।।೧೦೭।।

ಆದ್ದರಿಂದ ಇವರು ನನ್ನಿಂದ ತೊಲಗಿದರು. ಆದರೆ ಭಕ್ತರಾದ ನಾಲ್ವರು ಮಾತ್ರ ನನ್ನನ್ನು ಭಜಿಸಿ ಆತ್ಮ ಹಿತವನ್ನು ಬೆಳೆಸಿದರು ।।೧೦೮।।

ಈ ನಾಲ್ವರಲ್ಲಿ ಮೊದಲಿಗನಿಗೆ ಆರ್ತ, ಎರಡನೆಯವರಿಗೆ ಜಿಜ್ಞಾಸು, ಮೂರನೆಯವನಿಗೆ ಅರ್ಥಾರ್ಥಿ ಮತ್ತು ನಾಲ್ಕನೆಯವನಿಗೆ ಜ್ಞಾನಿ ಎಂದು ಕರೆಯುವರು ।।೧೦೯।।

ಶ್ಲೋಕಾರ್ಥ :- ಅವರಲ್ಲಿ ಜ್ಞಾನಿಯು ಶ್ರೇಷ್ಠನು. ಅವನು ನನ್ನಿಂದ ದೂರವಾಗಿರುವುದಿಲ್ಲ. ಅವನ ಭಕ್ತಿ ಅನನ್ಯವಾದುದು, ಅವನು ನನಗೆ ಪರಮಪ್ರಿಯನು. ಅವನಿಗೆ ನಾನು ಪ್ರಾಣಪ್ರಿಯನು ।।೧೭।।

ಆರ್ತನು ತನ್ನ ದುಃಖ ನಿವಾರಣೆಗಾಗಿ ನನ್ನನ್ನು ಭಜಿಸುವನು. ಜಿಜ್ಞಾಸು, ಜ್ಞಾನಪ್ರಾಪ್ತಿಗಾಗಿ ನನ್ನನ್ನು ಬಜಿಸುವನು. ಮೂರನೆಯವನಾದ ಅರ್ಥಾರ್ಥಿಯು ದ್ರವ್ಯಾದಿ ಪ್ರಾಪ್ತಿಯ ಇಚ್ಛೆಯಿಂದ ನನ್ನನ್ನು ಭಜಿಸುವನು ।।೧೧೦।।

ಆದರೆ ನಾಲ್ಕನೆಯವನು ಆತನಿಗೆ ಯಾವ ಕರ್ತವ್ಯಗಳು ಇರದೇ, ಆತನು ನನ್ನನ್ನು ಭಜಿಸುವನು. ಆದ್ದರಿಂದ ಆ ಜ್ಞಾನಿ ಪುರುಷನು ಮಾತ್ರ ನನ್ನ ಭಕ್ತನಾಗಿರುವನು, ಎಂದು ತಿಳಿದುಕೋ ।।೧೧೧।।

ಏಕೆಂದರೆ, ಆತನ ಜ್ಞಾನ ಪ್ರಕಾಶದಿಂದ ಭೇದಾಭೇದ ರೂಪವಾದ ಅಂಧಃಕಾರವು ಇಲ್ಲದಂತಾಗಿರುವುದು. ಆಗ ಆತನು ನನ್ನಲ್ಲಿ ಐಕ್ಯನಾಗಿ ಮದ್ರೂಪನಾಗುವನು ಮತ್ತು ಆತನ ಭಕ್ತಿಯು ಹಾಗೆಯೇ ಸ್ಥಿರವಾಗಿರುವುದು ।।೧೧೨।।

ಸಾಮಾನ್ಯರ ದೃಷ್ಟಿಯಲ್ಲಿ ಸ್ಪಟಿಕವು ನೀರಿನಂತೆ ತೋರುವುದು. ಇದರಂತೆ (ಇವರು ಭಕ್ತರ ಕ್ರಿಯೆಯಲ್ಲಿರುವುದರಿಂದ) ಜ್ಞಾನಿ ಅಲ್ಲ (ಭಕ್ತನಿರುವನು) ಹೀಗೆ ಭಾಸವಾಗುವುದು. ಇದರಂತೆ ಇವರ ವಿಷಯಕ್ಕೆ ಹೇಳುವುದು ಬಹಳ ಕೌತುಕವಾಗುವುದು ।।೧೧೩।।

ಗಾಳಿಯು ಆಕಾಶದಲ್ಲಿ ಕೂಡಿಕೊಂಡಾಗ ಅದು ಬೇರೆಯಾಗಿ ಉಳಿಯದು. ಅದರಂತೆ ಜ್ಞಾನಿಯು ನನ್ನನ್ನು ಕೂಡಿದಾಗ ಆತನ ಜ್ಞಾನಿತನ ಬೇರೆಯಾಗಿ ಉಳಿಯದು. ಭಕ್ತತನವು ಉಳಿಯುವುದು. ಏಕೆಂದರೆ ''ಅಜೀವ ಭಕ್ತನಾಗಿರುವೆ'' ಎಂಬ ಆತನ ಪ್ರತಿಜ್ಞೆ ಇರುವುದು ।।೧೧೪।।

ಬೀಸಣಿಕೆಯಿಂದ ಬೀಸಿದಾಗ ಗಾಳಿಯು ಆಕಾಶದಿಂದ ಬೇರೆ ಕಾಣುವುದು. ಇಲ್ಲದಿದ್ದರೆ, ಗಾಳಿ ಮತ್ತು ಆಕಾಶವು ಇವರಲ್ಲಿ ಅನನ್ಯತ್ವ ಇರುವುದರಿಂದ ಗಾಳಿಯು ಆಕಾಶರೂಪವಾಗುತ್ತದೆ ।।೧೧೫।।

ಅದರಂತೆ ಜ್ಞಾನಿಯು ಶರೀರದಲ್ಲಿರುವನು ಭಕ್ತಿ ಕರ್ಮದಿಂದ ''ನನ್ನ ಭಕ್ತನಿದ್ದಾನೆ'' ಎಂದು ಭಾಸವಾಗುವುದು. ಆದರೆ ಒಳಗಿನ ನಿವೃತ್ತಿ ರೂಪ ಜ್ಞಾನ ಧರ್ಮದಿಂದ ನಾನೇ ಆಗಿರುತ್ತೇನೆ ।।೧೧೬।।

ಮತ್ತು ಜ್ಞಾನಪ್ರಾಪ್ತಿಯ ಪ್ರಕಾಶದಲ್ಲಿ ''ನಾನೇ ಆತನ ಆತ್ಮ'' ಎಂದು ಆತನು ತಿಳಿಯುವನು. ಆದ್ದರಿಂದ ನಾನೂ ಸಂತೋಷಭರಿತನಾಗಿ '' ಆತನು ನನ್ನ ಆತ್ಮ'' ಎಂದು ಹೀಗೆ ಹೇಳುವೆ ।।೧೧೭।।

ಯಾವುದು ಜೀವದೆಶೆಯ ಆಚೆಗಿರುವ ಆತ್ಮಸ್ವರೂಪದ ಲಕ್ಷಣವನ್ನು ಅರಿತು ವ್ಯವಹಾರದಲ್ಲಿ ಇರುವನು. ಈತನು ದೇಹಧಾರಣೆ ಮಾಡಿದ್ದಕ್ಕೆ ನನ್ನಿಂದ ಬೇರೆಯಾಗಬಹುದೇ? ನೀನೇ ನೋಡು ।।೧೧೮।।

ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ ।
ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ॥೧೮॥

ಮ್ಹಣೌನಿ ಆಪುಲಾಲ್ಯಾ ಹಿತಾಚೇನಿ ಲೋಭೇ । ಮಜ ಆವಡೇ ತೋಹೀ ಭಕ್ತು ಝೋಂಬೇ । ಪರೀ ಮೀಚಿ ಕರೀ ವಾಲಭೇ । ಐಸಾ ಜ್ಞಾನಿಯಾ ಏಕು ॥೧೧೯॥ ಪಾಹೇ ಪಾ ದುಭತಯಾಚಿಯಾ ಆಶಾ । ಜಗಚಿ ಧೇನೂಸಿ ಕರೀತಸೇ ಫಾಂಸಾ । ಪರಿ ದೋರೇವೀಣ ಕೈಸಾ । ವತ್ಸಾಚಾ ಬಳೀ ॥೧೨೦॥ ಕಾ ಜೇ ತನುಮನುಪ್ರಾಣೇ । ತೇ ಆಣಿಕ ಕಾಹೀಂಚಿ ನೇಣೇ । ದೇಖೇ ತಯಾತೇ ಮ್ಹಣೇ । ಹೇ ಮಾಯ ಮಾಝೀ ॥೧೨೧॥ ತೇ ಯೇಣೇ ಮಾನೇ ಅನನ್ಯಗತೀ । ಮ್ಹಣೌನಿ ಧೇನುಹೀ ತೈಸೀಚಿ ಪ್ರೀತಿ । ಯಾಲಾಗೀ ಲಕ್ಷ್ಮೀಪತೀ । ಬೋಲಿಲೇ ಸಾಚೇ ॥೧೨೨॥ ಹೇ ಅಸೋ ಮಗ ಮ್ಹಣಿತಲೇ । ಜೇ ಕಾ ತುಜ ಸಾಂಗಿತಲೇ । ತೇಹೀ ಭಕ್ತ ಭಲೇ । ಪಢಿಯಂತೇ ಆಮ್ಹಾ ॥೧೨೩॥ ಪರಿ ಜಾಣೋನಿಯಾ ಮಾತೇ । ಜೇ ಪಾಹೋ ವಿಸರಲೇ ಮಾಗೌತೇ । ಜೈಸೇ ಸಾಗರಾ ಯೇಊನಿ ಸರಿತೇ । ಮುರಡಾವೇ ಠೇಲೇ ॥೧೨೪॥ ತೈಸೀ ಅತಃಕರಣಕುಹರೀ ಜನ್ಮಲೀ । ಜಯಾಚೀ ಪ್ರತೀತಿಗಂಗಾ ಮಜ ಮೀನಲೀ । ತೋ ಮೀ ಹೇ ಕಾಯ ಬೋಲೀ । ಫಾರ ಕರೂ? ॥೧೨೫॥ ಏರ್ಹವೀ ಜ್ಞಾನಿಯಾ ಜೋ ಮ್ಹಣಿಜೇ । ತೋ ಚೈತನ್ಯಚಿ ಕೇವಳ ಮಾಝೇ । ಹೇ ನ ಮ್ಹಣಾವೇ ಪರಿ ಕಾಯ ಕೀಜೇ । ನ ಬೋಲಣೇ ಬೋಲೋ ॥೧೨೬॥

ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ ।
ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥೧೯॥

ಜೇ ತೋ ವಿಷಯಾಂಚೀ ದಾಟ ಝಾಡೀ । ಮಾಜಿ ಕಾಮಕ್ರೋಧಾಂಚೀ ಸಾಂಕಡೀ । ಚುಕಾವೂನಿ ಆಲಾ ಪಾಡೀ । ಸದ್ವಾಸನೇಚಿಯಾ ॥೧೨೭॥ ಮಗ ಸಾಧುಸಂಗೇ ಸುಭಟಾ । ಉಜೂ ಸತ್ಕರ್ಮಾಚಿಯಾ ವಾಟಾ । ಅಪ್ರವೃತ್ತೀಚಾ ಅವ್ಹಾಂಟಾ । ಡಾವಲೂನಿ ॥೧೨೮॥ ಆಣಿ ಜನ್ಮಶತಾಂಚಾ ವಾಹತವಣಾ । ತೇವಿಂಚೀ ಆಶೇಚಿಯಾ ನ ಲೇಚಿ ವಾಹಣಾ । ತೇಥ ಫಲಹೇತೂಚಾ ಉಗಾಣಾ । ಕವಣು ಚಾಳೀ ॥೧೨೯॥ ಐಸಾ ಶರೀರ ಸಂಯೋಗಾಚಿಯೇ ರಾತೀ । ಮಾಜೀ ಧಾಂವತಾ ಸಡಿಯಾ ಆಯತೀ । ತಂವ ಕರ್ಮಕ್ಷಯಾಚೀ ಪಾಹಾತೀ । ಪಾಹಾಂಟ ಜಾಲೀ ॥೧೩೦॥ ತೈಸೀಚ ಗುರುಕೃಪಾ ಉಖಾ ಉಜಳಲೀ । ಜ್ಞಾನಾಚೀ ವೋತಪಲೀ ಪಡಲೀ । ತೇಥ ಸಾಮ್ಯಾಚೀ ಋದ್ಧಿ ಉಘಡಲೀ । ತಯಾಚಿಯೇ ದಿಠೀ ॥೧೩೧॥

ಶ್ಲೋಕಾರ್ಥ :- ಮೇಲೆ ಹೇಳಿದ ನಾಲ್ಕು ವಿಧ ಭಕ್ತರೂ ಉತ್ತಮರೇ, ಆದರೂ, ಜ್ಞಾನಿಯಾದರೋ, ಸಾಕ್ಷಾತ್ ನನ್ನಸ್ವರೂಪನೇ. ಅವನು ಸರ್ವ ವಿಧದಿಂದಲೂ ನನ್ನನ್ನೇ ಪರಮಗತಿಯೆಂದು ನಂಬಿರುತ್ತಾನೆ ।।೧೮।।

ಆದ್ದರಿಂದ ತನ್ನ ಹಿತವನ್ನು ಸಾಧಿಸುವುದಕ್ಕಾಗಿ ಬೇಕಾದವನೊಬ್ಬ ಭಕ್ತನು ನನ್ನನ್ನು ಭಜಿಸುವನು. ಆದರೆ ನಾನು ಯಾರನ್ನು, ಪ್ರೇಮದಿಂದ ಕಾಣುತ್ತೇನೆಯೋ ಆತನೇ ಮಾತ್ರ ಜ್ಞಾನಿಭಕ್ತನಿರುವನು ।।೧೯।।

ಇಲ್ಲಿ ನೋಡು, ಹಾಲಿನ ಆಶೆಯಿಂದ ಲೋಕದ ಜನರು ಆಕಳಿಗೆ ದಳಿ ಹಾಕಿ ತೊರೆ ಬಿಡಿಸಿ ಹಾಲು ಹಿಂಡುವರು. ಆದರೆ ಅದೇ ಆಕಳು ತನ್ನ ಕರುವಿಗೆ ದಳಿ ಇಲ್ಲದೇ ಹಾಲನ್ನು ಕುಡಿಸುವುದು ।।೧೨೦।।

ಏಕೆಂದರೆ ಆ ಕರುವಿಗೆ ಇನ್ನೊಂದು ಬೇರೆ ಏನೂ ಅರಿಯದೇ ತನು, ಮನ, ಪ್ರಾಣದಿಂದ ಅದು ತನ್ನ ತಾಯಿಯನ್ನೇ ತಿಳಿಯುವುದು ಮತ್ತು (ತನ್ಮಯತೆಯಿಂದ) ಮುಂದೆ ನೋಡಿದ್ದೆಲ್ಲವನ್ನೂ ತನ್ನ ತಾಯಿ ಎಂದೇ ತಿಳಿಯುವುದು ।।೧೨೧।।

ಈ ಪ್ರಕಾರವಾಗಿ ಆಕಳಕರು ಅನನ್ಯ ಭಕ್ತನಾಗಿರುತ್ತದೆ. ಆದ್ದರಿಂದ ಅದರ ಮೇಲೆ ಆಕಳ ಪ್ರೀತಿಯು ಅದೇ ರೀತಿಯಾಗಿರುತ್ತದೆ. ಅದಕ್ಕಾಗಿ ಲಕ್ಷ್ಮೀಪತಿ ಶ್ರೀಕೃಷ್ಣ ಪರಮಾತ್ಮನು ಹೇಳಿದ್ದು ಪೂರ್ಣ ನಿಜವಿದೆ ।।೧೨೨।।

ಇದು ಇರಲಿ, ಪುನಃ ಹೇಳುತ್ತಾನೆ :- ಜ್ಞಾನಿಯ ಹೊರತಾಗಿ ನಿನಗೆ ತಿಳಿಸಿರುವ ಇತರ ಭಕ್ತರೂ ನನ್ನ ಪ್ರೀತಿಗೆ ಪಾತ್ರರಿರುವರು ।।೧೨೩।।

ಆದರೆ ಅವರಿಗೆ ನನ್ನ ಜ್ಞಾನವಾಯಿತೆಂದರೆ ಅವರು ಪುನಃ ಸಂಸಾರದತ್ತ ನೋಡುವುದೇ ಇಲ್ಲ. ಯಾವ ಪ್ರಕಾರವಾಗಿ ಸಾಗರವನ್ನು ಸೇರಿದ ನದಿಯು ಹಿಂದೆ ಹೊರಳುವುದಿಲ್ಲವೋ ।।೧೨೪।।

ಅದರಂತೆ ಆತನ ಅಂತಃಕರಣ ರೂಪ ಕಂದರದಿಂದ ಅನುಭವರೂಪ ಗಂಗೆಯು ಹೊರಟು ನನ್ನನ್ನು ಕೂಡಿಕೊಂಡಿತು. ಆತನು ಮದ್ರೂಪನಾದನು. ಈ ವರ್ಣನೆಯನ್ನು ಎಷ್ಟೆಂದು ಮಾಡಲಿ? ।।೧೨೫।।

ನಿಜವಾಗಿ ನೋಡಿದರೆ ಯಾರಿಗೆ ಜ್ಞಾನಿಭಕ್ತರೆನ್ನುವರೋ ಆತನು ಕೇವಲ ನನ್ನ ಚೈತನ್ಯವಾಗಿರುವನು. ಇದನ್ನು ಹೇಳ ಬಾರದು. ಆದರೆ ಏನು ಮಾಡಬೇಕು? ಹೇಳಬಾರದ್ದೂ ನಿನಗೆ ಪ್ರಸಂಗಾನುಸಾರ ಹೇಳಬೇಕಾಯಿತು ।।೧೨೬।।

ಶ್ಲೋಕಾರ್ಥ :- ಬಹಳಷ್ಟು ಜನ್ಮಗಳಲ್ಲಿ ಪರಿಪಕ್ವನಾದ ಜ್ಞಾನಿಯು "ಈ ಸಮಸ್ತವೂ ವಾಸುದೇವನೇ" ಎಂಬ ಅಖಂಡಾನುಭವದಿಂದ ನನ್ನನ್ನು ಪಡೆದಿರುತ್ತಾನೆ. ಅಂಥ ಮಹನೀಯರು ತೀರಾ ಅಪರೂಪ ।।೧೯।।

ಏಕೆಂದರೆ, ಆ ಜ್ಞಾನಿಯು ವಿಷಯರೂಪ ದಟ್ಟವಾದ ಗಿಡಗಂಟಿಗಳ ಕಾಮಕ್ರೋಧಗಳ ಸಂಕಟಗಳನ್ನು ತಪ್ಪಿಸಿಕೊಂಡು ಸದ್ವಾಸನೆಯೆಂಬ ಗುಡ್ಡದ ಅಣೆಯನ್ನೇರಿ ಬಂದನು ।।೧೨೭।।

ತದನಂತರ ಹೇ ವೀರಶ್ರೇಷ್ಠನಾದ ಅರ್ಜುನನೇ, ಆತನು ಸಾಧುಗಳ ಸಂಗತಿಯಿಂದ ಸತ್ಕರ್ಮಗಳ ಸರಳವಾದ ಹಾದಿಯಿಂದ ದುರಾಚಾರಗಳ ಅಡ್ಡ ಮಾರ್ಗಗಳನ್ನು ಬಿಟ್ಟು ।।೧೨೮।।

ಮತ್ತು ಫಲಾಶೆ ಎಂಬ ಪಾದರಕ್ಷೆಯನ್ನು ಕಾಲೊಳಗೆ ಧರಿಸದೇ ನೂರಾರು ಜನ್ಮವನ್ನು ಭಕ್ತಿಯ ಮಾರ್ಗದಲ್ಲಿ ನಡೆದಿರುವ ಆ ಜ್ಞಾನಿಭಕ್ತನು ಫಲದ ಇಚ್ಛೆಯನ್ನು ಏಕೆ ಮಾಡುವನು? ।।೧೨೯।।

ಈ ಪ್ರಕಾರವಾಗಿ ಶರೀರ ಸಂಬಂಧದ ಅಜ್ಞಾನರೂಪ ಕತ್ತಲಲ್ಲಿ ಒಬ್ಬನೇ ಉಪಾಧಿರಹಿತವಾಗಿ ದಾರಿ ನಡೆಯುತ್ತಿರುವಾಗ ಸಹಜವಾಗಿ ಕರ್ಮಕ್ಷಯವಾಗಿ ಜ್ಞಾನೋದಯದ ಬೆಳಗು ಕಂಡನು ।।೧೩೦।।

ಅದೇ ವೇಳೆಯಲ್ಲಿ ಗುರುಕೃಪೆರೂಪ ಉಷಃಕಾಲ ವಾಗುವುದು ಮತ್ತು ಆಗ ಜ್ಞಾನರೂಪ ಸೂರ್ಯನ ಕೋಮಲ ಕಿರಣಗಳು ಬಿದ್ದು ಸಮದೃಷ್ಟಿಯ ಐಶ್ವರ್ಯವು ಆತನ ದೃಷ್ಟಿಗೆ ಬೀಳುವುದು ।।೧೩೧।।

ತೇ ವೇಳೀ ಜಯಾಕಡೇ ವಾಸ ಪಾಹೇ । ತೇಉತಾ ಮೀಚಿ ತಯಾ ಏಕು ಆಹೇ । ಅಥವಾ ನಿವಾಂತ ಜರೀ ರಾಹೇ । ತರ್ಹಿ ಮೀಚಿ ತಯಾ ।೧೩೨॥ ಹೇ ಅಸೋ ಆಣಿಕ ಕಾಂಹೀ । ತಯಾ ಸರ್ವತ್ರ ಮೀ ವಾಂಚೂನಿ ನಾಹೀ । ಜೈಸೇ ಸಬಾಹ್ಯ ಜಳ ಡೋಹೀ । ಬುಡಾಲಿಯಾ ಘಟಾ ।೧೩೩॥ ತೈಸಾ ತೋ ಮಜ ಭೀತರೀ । ಮೀ ತಯಾ ಆಂತುಬಾಹೇರೀ । ಹೇ ಸಾಂಗಿಜೇಲ ಬೋಲವರೀ । ತೈಸೇ ನವ್ಹೇ ।೧೩೪॥ ಮ್ಹಣೌನಿ ಅಸೋ ಹೇ ಇಯಾಪರೀ । ತೋ ದೇಖೇ ಜ್ಞಾನಾಚೇ ವಾಖಾರೀ । ತೇಣೇ ಸಂಸರಲೇನಿ ಕರೀ । ಆಪು ವಿಶ್ವ ।೧೩೫॥ ಹೇ ಸಮಸ್ತ ಹೀ ಶ್ರೀವಾಸುದೇವೋ । ಐಸಾ ಪ್ರತೀತಿರಸಾಚಾ ವೋತಲಾ ಭಾವೋ । ಮ್ಹಣೌನಿ ಭಕ್ತಾಂಮಾಜೀ ರಾವೋ । ಆಣಿ ಜ್ಞಾನಿಯಾ ತೋಚಿ ।೧೩೬॥ ಜಯಾಚಿಯೇ ಪ್ರತೀತೀಚಾ ವಾಖಾರಾ । ಪವಾಡು ಹೋಯ ಚರಾಚರಾ । ತೋ ಮಹಾತ್ಮಾ ಧನುರ್ಧರಾ । ದುರ್ಲಭು ಆಥೀ ।೧೩೭॥ ಯೇರ ಬಹುತ ಜೋಡತೀ ಕಿರೀಟೀ । ಜಯಾಂಚೀ ಭಜನೇ ಭೋಗಾಸಾಠೀ । ಜೇ ಆಶಾತಿಮಿರೇ ದೃಷ್ಟೀ । ವಿಷಯಾಂಧ ಝಾಲೇ।೧೩೮॥

ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ ।
ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ।೨೦॥

ಆಣಿ ಫಳಾಚಿಯಾ ಹಾಂವಾ । ಹೃದಯೀ ಕಾಮ ಜಾಲಾ ರಿಗಾವಾ । ಕೀ ತಯಾಚಿಯೇ ಘುಸಣೀ ದಿವಾ । ಜ್ಞಾನಾಚಾ ಗೇಲಾ ।೧೩೯॥ ಐಸೇ ಉಭಯತಾ ಆಂಧಾರೀ ಪಡಲೇ । ಮ್ಹಣೌನಿ ಪಾಸೀಚಿ ಮಾತೇ ಚುಕಲೇ । ಮಗ ಸರ್ವಭಾವೇ ಅನುಸರಲೇ । ದೇವತಾಂತರಾ ।೧೪೦॥ ಆಧೀಂಚ ಪ್ರಕೃತೀಚೇ ಪಾಇಕ । ವರೀ ಭೋಗಾಲಾಗೀ ತಂವ ರಂಕ । ಮಗ ತೇಣೇ ಲೋಲುಪತ್ವೇ ಕೌತುಕ । ಕೈಸೇನಿ ಭಜತೀ ।೧೪೧॥ ಕವಣೇ ತಿಯಾ ನಿಯಮಬುದ್ಧಿ । ಕೈಸಿಯಾ ಹನ ಉಪಚಾರ ಸಮೃದ್ಧಿ । ಕಾ ಅರ್ಪಣ ಯಥಾವಿಧಿ । ವಿಹಿತ ಕರಣೇ ।೧೪೨॥

ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ ।
ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ।೨೧।

ಪೈ ಜೋ ಜಿಯೇ ದೇವತಾಂತರೀ । ಭಜಾವಯಾಚೀ ಚಾಡ ಕರೀ । ತಯಾಚೀ ತೇ ಚಾಡ ಪುರೀ । ಪುರವಿತಾ ಮೀ ।೧೪೩॥ ದೇವೋದೇವೀ ಮೀಚಿ ಪಾಹೀ । ಹಾಹೀ ನಿಶ್ಚಯೋ ತ್ಯಾಸಿ ನಾಹೀ । ಭಾವೋ ತೇ ತೇ ಠಾಯೀ । ವೇಗಳಾ ಧರಿತೀ ।೧೪೪॥

ಆಗ ಆತನು ಎಲ್ಲೆಲ್ಲಿ ನೋಡುವನೋ ಅಲ್ಲೆಲ್ಲ ಆತನಿಗೆ ನನ್ನ ಹೊರತು ಇನ್ನೊಂದು ಏನೂ ಕಾಣಿಸುವುದಿಲ್ಲ. ಅಥವಾ ಆತನು ಸ್ವಸ್ಥ ಕುಳಿತರೂ ಆತನಿಗೆ ನಾನೇ ಕಾಣಿಸುತ್ತೇನೆ ॥೧೩೨॥

ಹೆಚ್ಚಿಗೇನು ಹೇಳಬೇಕು ? ಆತನಿಗೆ ಎಲ್ಲ ಕಡೆಯಲ್ಲಿಯೂ ನನ್ನ ಹೊರತಾಗಿ ಇನ್ನೊಂದು ಏನೂ ಕಾಣದು. ಯಾವ ಪ್ರಕಾರವಾಗಿ ನೀರಿನಲ್ಲಿ ಮುಳುಗಿರುವ ಪಾತ್ರೆಯ ಒಳ ಹೊರಗೆ ನೀರೇ ಇರುವುದೋ ॥೧೩೩॥

ಅದರಂತೆ ಆತನು ನನ್ನಲ್ಲಿ ಇರುವನು ಮತ್ತು ನಾನು ಆತನ ಅಂತರಬಾಹ್ಯದಲ್ಲಿರುವೆನು. ಇದನ್ನು ಹೇಳಿ ತೋರಿಸಲಿಕ್ಕೆ ಬರುವಂತಹದಲ್ಲ ॥೧೩೪॥

ಆದ್ದರಿಂದ ಇದು ಇರಲಿ, ಈ ಪ್ರಕಾರವಾಗಿ ಆತನಿಗೆ ಜ್ಞಾನದ ಭಾಂಡಾರವೇ ದೃಷ್ಟಿಗೆ ಬೀಳುವುದು. ಆದ್ದರಿಂದ ಆತನು ಈ ವ್ಯಾಪಕ ಜ್ಞಾನದ ವ್ಯವಹಾರದಿಂದ ಇಡೀ ವಿಶ್ವವೆಲ್ಲ ತನ್ನಂತೆ ಮಾಡುವನು ॥೧೩೫॥

ಈ ಎಲ್ಲ ವಿಶ್ವದಲ್ಲಿ ಶ್ರೀವಾಸುದೇವನೇ ತುಂಬಿರುವನು. ಹೀಗೆ ಆತನ ಪೂರ್ಣ ಅನುಭವವಿರುವುದು. ಆದ್ದರಿಂದ ಭಕ್ತರಲ್ಲಿ ಆತನೇ ಸರ್ವಶ್ರೇಷ್ಠನು ಮತ್ತು ಆತನೇ ನಿಜವಾದ ಜ್ಞಾನಿಯು ॥೧೩೬॥

ಧನುರ್ಧರನೇ, ಆತನ ಅನುಭವದ ಕೋಠಾರ (ಗುದಾಮ)ದಲ್ಲಿ ಎಲ್ಲ ಚರಾಚರ ವಿಶ್ವವನ್ನು ಸಮಾವೇಶ ಗೊಂಡಿದೆ. ಇಂತಹ ಈ ಮಹಾತ್ಮನು ಬಹಳ ದುರ್ಲಭನು ॥೧೩೭॥

ಅರ್ಜುನಾ, ಈತನ ಹೊರತಾಗಿ ಅನೇಕರು ನನ್ನನ್ನು ಭಜಿಸುವರು ನಿಜ. ಆದರೆ ಅವರೆಲ್ಲರ ಭಕ್ತಿಯು ಕೇವಲ ವಿಷಯ ಸುಖಕ್ಕಾಗಿರುವುದು. ಏಕೆಂದರೆ ಆಶಾ ತಿಮಿರದಿಂದ ಅವರ ದೃಷ್ಟಿಯು ವಿಷಯಾಂಧವಾಗಿರುತ್ತದೆ ॥೧೩೮॥

ಶ್ಲೋಕಾರ್ಥ :- ತಮ್ಮ ತಮ್ಮ ನೈಜ ಸ್ವಭಾವಕ್ಕೆ ಪರವಶರಾಗಿ ಆಯಾ ಕೋರಿಕೆಗಳನ್ನು ಬಯಸಿ ಅದಕ್ಕೆ ಅನುಸಾರವಾದ ರೀತಿ ನೀತಿಯನ್ನು ಅನುಸರಿಸಿ, ಅವಿವೇಕಿಗಳು ಇತರ ದೇವತೆಗಳನ್ನು ಉಪಾಸಿಸುತ್ತಾರೆ ॥೨೦॥

ಮತ್ತು ಕಾಮದ ಇಚ್ಛೆಯಿಂದ ಅವರ ಹೃದಯದಲ್ಲಿ ಕಾಮದ ಪ್ರವೇಶವಾಗಿರುವುದರಿಂದ ಅದರ ಸಂಸರ್ಗದಿಂದ ಜ್ಞಾನರೂಪ ದೀಪವು ಆರಿಹೋಗಿರುವುದು ॥೧೩೯॥

ಈ ರೀತಿಯಲ್ಲಿ ಅವರಿಗೆ ಅಂತರ ಬಾಹ್ಯದಲ್ಲಿ ಕತ್ತಲ ಉಂಟಾಗುವುದು. ಆದ್ದರಿಂದ ನಾನು ಅವರಲ್ಲಿಯೇ ಇದ್ದರೂ ಅವರು ನನ್ನನ್ನರಿಯರು. ಯಾರು ಸರ್ವಭಾವ ದಿಂದ ಇತರ ದೇವತೆಗಳನ್ನು ಪೂಜಿಸುವವರು ॥೧೪೦॥

ಮೊದಲೇ ಇವರು ಮಾಯೆಯ ಅಧೀನರಾಗಿರುವರು ಮತ್ತು ಅದರಲ್ಲಿ ಫಲದಪ್ರಾಪ್ತಿಗಾಗಿ ದೀನರಾಗಿರುವರು. ಅಂದಮೇಲೆ ಅವರು ಬಹಳ ಕೌತುಕದಿಂದ ವಿಷಯ ಲಂಪಟರಾಗಿ ದೇವತೆಗಳ ಭಕ್ತಿ ಹೇಗೆ ಮಾಡುವರೆಂದರೆ ॥೧೪೧॥

ಯಾವ ಯಾವ ನಿಯಮದಿಂದ ಹಾಗೂ ಅನೇಕ ಉಪಚಾರ ದ್ರವ್ಯಗಳಿಂದ, ಹಾಗೆಯೇ ಯಥಾವಿಧಿಯಿಂದ ಯಾರಿಗೆ ಯಾವ ವಸ್ತು ಅರ್ಪಿಸಬೇಕೆಂಬುದಕ್ಕೆ ಲಕ್ಷ ಕೊಟ್ಟು ಅವರಿಗೆ ತೃಪ್ತಿಯಾಗುವ ರೀತಿಯಲ್ಲಿ ಉಪಚರಿಸುವರು ॥೧೪೨॥

ಶ್ಲೋಕಾರ್ಥ :- ಯಾರು ಯಾರು ಯಾವ ದೇವತೆಯನ್ನು ಶ್ರದ್ಧೆಯಿಂದ ಸೇವಿಸಲು ಇಷ್ಟ ಪಡುವರೋ ಅವರವರಿಗೆ ಆಯಾ ದೇವತೆಯಲ್ಲಿಯೇ ಸ್ಥಿರವಾದ ಶ್ರದ್ಧೆಯುಂಟಾಗುವಂತೆ ಮಾಡುವೆನು ॥೨೧॥

ಆದರೆ ಯಾರು ಯಾರು ಯಾವ ಯಾವ ದೇವತೆಗಳನ್ನು ಫಲಕ್ಕಾಗಿ ಉಪಾಸನೆಯನ್ನು ಮಾಡುವರೋ ಅವರ ಇಚ್ಛೆಯನ್ನು ನಾನೇ ಪೂರ್ಣಗೊಳಿಸುತ್ತೇನೆ ॥೧೪೩॥

ಇಲ್ಲಿ ನೋಡು, ದೇವ-ದೇವಿಯರು ನಾನೇ ಇರುವೆ. ಆದರೆ ಅವರ ನಿಶ್ಚಯ ಹಾಗಿರುವುದಿಲ್ಲ. ಅದಕ್ಕಾಗಿ ಆಯಾ ದೇವತೆಗಳಲ್ಲಿ ಅವರ ಭಿನ್ನ ಭಿನ್ನ ಭಾವವಿರುವುದು ॥೧೪೪॥

ಸ ತಯಾ ಶ್ರದ್ಧಯಾ ಯುಕ್ತ: ತಸ್ಯಾರಾಧನಮೀಹತೇ ।
ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿ ತಾನ್ ॥೨೨॥

ಮಗ ತಿಯಾ ಶ್ರದ್ಧಾಯುಕ್ತ । ತೇಥಿಂಚೇ ಆರಾಧನ ಜೇ ಉಚಿತ । ತೇ ಸಿದ್ಧೀವರೀ ಸಮಸ್ತ । ವರ್ತೋನೀ ಲಾಗೇ ॥೧೪೫॥ ಐಸೇ ಜೇಣೇ ಜೇ ಭಾವಿಜೇ । ತೇ ಫಳ ತೇಣೇ ಪಾವಿಜೇ । ಪರೀ ತೇಹೀ ಸಕಳ ನಿಪಜೇ । ಮಜಚಿಸ್ತವ ॥೧೪೬॥

ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್ ।
ದೇವಾನ್ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ ॥೨೩॥

ಪರೀ ತೇ ಭಕ್ತ ಮಾತೇ ನೇಣತೀ । ಜೇ ಕಲ್ಪನೇಬಾಹೇರೀ ನ ನಿಘತಿ । ಮ್ಹಣೌನಿ ಕಲ್ಪಿತ ಫಳ ಪಾವತೀ । ಅಂತವಂತ ॥೧೪೭॥ ಕಿಂಬಹುನಾ ಐಸೇ ಜೇ ಭಜನ । ತೇ ಸಂಸಾರಾಚೇಂಚಿ ಸಾಧನ । ಯೇರ ಫಳಭೋಗ ತೋ ಸ್ವಪ್ನ । ನಾವಭರೀ ದಿಸೇ ॥೧೪೮॥ ಹೇ ಅಸೋ ಪರೌತೇ । ಮಗ ಹೋ ಕಾ ಆವಡತೇ । ಪರೀ ಯಜೀ ಜೋ ದೇವತಾಂತೇ । ತೋ ದೇವತ್ವಾಸೀಚಿ ಯೇ ॥೧೪೯॥ ಯೇರ ತನುಮನುಪ್ರಾಣೀ । ಜೇ ಅನುಸರಲೇ ಮಾಝೇಯಾಚಿ ವಾಹಣೀ । ತೇ ದೇಹಾಚ್ಯಾ ನಿರ್ವಾಣೀ । ಮೀಚಿ ಹೋತೀ ॥೧೫೦॥

ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ ।
ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಮ್ ॥೨೪॥

ಪರೀ ತೈಸೇ ನ ಕರಿತೀ ಪ್ರಾಣಿಯೇ । ವಾಯಾ ಆಪುಲಿಯಾ ಹಿತೀ ವಾಣಿಯೇ । ಜೇ ಪೋಹತಾತೀ ಪ್ರಾಣಿಯೇ । ತಳಹಾತೀಂಚೇನಿ ॥೧೫೧॥ ನಾನಾ ಅಮೃತಾಚ್ಯಾ ಸಾಗರಿ ಬುಡಿಜೇ । ಮಗ ತೋಂಡಾ ಕಾ ವಜ್ರಮಿಠೀ ಪಾಡಿಜೇ । ಆಣಿ ಮನೀ ತರೀ ಆಠವಿಜೇ । ಥಿಲ್ಲರೋದಕಾಂತೆ? ॥೧೫೨॥ ಹೇ ಐಸೇ ಕಾಸಯಾ ಕರಾವೇ । ಜೇ ಅಮೃತೀಹೀ ರಿಗೋನಿ ಮರಾವೇ । ತೇ ಸುಖೇ ಅಮೃತ ಹೋಊನಿ ಕಾ ನಸಾವೇ । ಅಮೃತಾಮಾಜೀ? ॥೧೫೩॥ ತೈಸಾ ಫಳಹೇತೂಚಾ ಪಾಂಜರಾ। ಸಾಂಡೂನಿಯಾ ಧನುರ್ಧರಾ । ಕಾ ಪ್ರತೀತಿಪಾಖೀ ಚಿದಂಬರಾ । ಗೋಸಾವಿಯಾ ನೋಹಾವೇ? ॥೧೫೪॥ ಜೇಥ ಉಂಚಾವಲೇನಿ ಪವಾಡೇ । ಸುಖಾಚಾ ಪೈಸಾರು ಜೋಡೇ । ಆಪುಲೇನಿ ಸುರವಾಡೇ । ಉಡೋ ಯೇ ಐಸಾ ॥೧೫೫॥ ತಯಾ ಉಪಮಾ ಮಾಪ ಕಾ ಸುವಾವೇ । ಮಜ ಅವ್ಯಕ್ತಾ ವ್ಯಕ್ತ ಕಾ ಮಾನಾವೇ । ಸಿದ್ಧ ಅಸತಾ ಕಾ ನಿಮಾವೇ । ಸೌಧನವರೀ ॥೧೫೬॥

ಶ್ಲೋಕಾರ್ಥ :- ಅವನು ಆ ಶ್ರದ್ಧೆಯಿಂದ ಆ ದೇವತೆಯನ್ನು ಆರಾಧಿಸುತ್ತಾನೆ. ಆ ದೇವತೆಗಳ ಮೂಲಕವಾಗಿ ಅವನ ಇಷ್ಟಾರ್ಥಗಳನ್ನು ನೆರವೇರಿಸುವವನು ನಾನೇ ||೨೨||

ಆಗ ಯಾವ ಯಾವ ದೇವತೆಯರಲ್ಲಿ ಅವರ ಶ್ರದ್ಧೆ ಇರುವುದೋ ಆ ದೇವತೆಯನ್ನು ತಮ್ಮ ಕಾರ್ಯವು ಸಿದ್ಧಿಗೊಳ್ಳುವವರೆಗೂ ಅವರು ಯಥಾವಿಧಿ ಪೂಜೆಯನ್ನು ಮಾಡುವರು ||೧೪೫||

ಈ ಪ್ರಕಾರವಾಗಿ ಯಾರು ಯಾವ ಫಲವನ್ನು ಇಚ್ಛಿಸುವರೋ ಅದು ಅವರಿಗೆ ಪ್ರಾಪ್ತವಾಗುವುದು. ಆದರೆ ಅದೆಲ್ಲವೂ ನನ್ನಿಂದಲೇ ಸಿಗುವುದು ||೧೪೬||

ಶ್ಲೋಕಾರ್ಥ :- ಅಲ್ಪಬುದ್ಧಿಯವರಾದ ಅನ್ಯ ದೇವೋಪಾಸಕರು ಆ ದೇವತೆಗಳನ್ನು ಪಡೆದು ಅಶಾಶ್ವತವಾದ ಫಲವನ್ನು ಹೊಂದುತ್ತಾರೆ. ಆದರೆ ನನ್ನ ಭಕ್ತರು ನನ್ನನ್ನೇ ಪಡೆಯುವರು ||೨೩||

ಆದರೆ ಆ ಭಕ್ತರು ನನ್ನನ್ನು ತಿಳಿಯುವುದಿಲ್ಲ. ಏಕೆಂದರೆ ಇವರು ತಮ್ಮ ಕಲ್ಪನೆಯ ಆಚೆಗೆ ನೋಡುವುದೇ ಇಲ್ಲ. ಆದ್ದರಿಂದ ಅವರಿಗೆ ಕಲ್ಪನೆಯಂತೆ ನಾಶಿವಂತ ಫಲ ದೊರಕುವುದು ||೧೪೭||

ಕಿಂಬಹುನಾ, ಈ ಪ್ರಕಾರದ ಭಜನೆ ಎಂದರೆ ಸಂಸಾರದ ಸಾಧನೆಯೇ ಆಗಿರುವುದು. ಆತನ ಇತರ ಫಲಭೋಗವೆಂದರೆ ಸ್ವಪ್ನದಲ್ಲಿನ ಕ್ಷಣಿಕ ಸುಖದಂತೆಯೇ ಸರಿ ||೧೪೮||

ಇದು ಒಂದು ಕಡೆ ಇರಲಿ, ಆತನ ಪ್ರಿಯ ದೇವತೆಯು ಯಾರಾದರೂ ಇರಲಿ ಆತನು ಆ ದೈವತವನ್ನು ಪೂಜಿಸಿದನೆಂದರೆ ಆ ದೈವತ್ವವನ್ನು ಪಡೆಯುವನು ||೧೪೯||

ಉಳಿದ ಯಾರೆ ಇರಲಿ ಅವರು ಶರೀರದಿಂದ ಮನಸ್ಸಿನಿಂದ ಮತ್ತು ಪ್ರಾಣದಿಂದ ನನ್ನದೇ ಉಪಾಸನೆಯ ಪದ್ಧತಿಯನ್ನು ಅನುಸರಿಸಿದರೆ ಅವರು ದೇಹ ನಾಶದ ನಂತರ ನನ್ನನ್ನು ಕೂಡುವರು ||೧೫೦||

ಶ್ಲೋಕಾರ್ಥ :- ಶ್ರೇಷ್ಠವೂ, ಉತ್ಕೃಷ್ಟವೂ, ಅವ್ಯಯವೂ, ನಿಗೂಢವೂ ಆದ ನನ್ನ ಸ್ವರೂಪವನ್ನು ತಿಳಿಯದ ಮೂಢರು, ಜನ್ಮಮರಣಗಳನ್ನು ನನ್ನಲ್ಲಿ ಆರೋಪಿಸುವರು ||೨೪||

ಆದರೆ ಪ್ರಾಣಿಗಳು ಹಾಗೆ ಮಾಡುವುದಿಲ್ಲ, ಮತ್ತು ವ್ಯರ್ಥವಾಗಿ ತಮ್ಮ ಹಿತದ ಹಾನಿಯನ್ನು ಮಾಡಿಕೊಳ್ಳುವರು. ಅಂಗೈ ಪ್ರಮಾಣದ ನೀರಿನಲ್ಲಿ ಈಸಿದಂತೆ ಮಾಡಿಕೊಳ್ಳುವರು ||೧೫೧||

ಅಥವಾ ಅಮೃತದ ಸಾಗರದಲ್ಲಿ ಮುಳುಗಿದಾಗ ಬಾಯಿಯನ್ನು ಬಿಗಿಯಾಗಿ ಏಕೆ ಹಿಡಿಯಬೇಕು? ಮತ್ತು ಆಗ ಗುಂಡಿಯಲ್ಲಿ ನಿಂತ ನೀರನ್ನು ಏಕೆ ಸ್ಮರಿಸಬೇಕು? ||೧೫೨||

ಅಮೃತದಲ್ಲಿ ಪ್ರವೇಶಿಸಿದರೂ ಕೂಡಾ ಸಾಯಬೇಕೇ? ಹೀಗೇಕೇ ಮಾಡಿಕೊಳ್ಳಬೇಕು? ಅಮೃತದಲ್ಲಿ ಸುಖದಿಂದ ಅಮೃತರೂಪವಾಗಿ ಏಕೆ ಇರಬಾರದು? ||೧೫೩||

ಧನುರ್ಧರಾ, ಅದರಂತೆ ಫಲಾಶಾರೂಪದ ಬಲೆಯನ್ನು ತೊರೆದು (ಅನುಭವರೂಪದ ರೆಕ್ಕೆಗಳಿಂದ) ಚಿದಾಕಾಶದ (ಭಗವತ್‌ಸ್ವರೂಪದ) ಒಡೆಯನೇಕಾಗಬಾರದು ? ||೧೫೪||

ಆ ಚಿದಕಾಶದಲ್ಲಿ ನಾವು ಎಷ್ಟೇ ಎತ್ತರ ಹಾರಬೇಕೆಂಬುದು ಮನಸ್ಸಿನಲ್ಲಿ ತಂದಂತೆ. ಅದರಲ್ಲಿ ಇಚ್ಛೆ ಪ್ರಕಾರವಾಗಿ ಅನಾಯಾಸದಿಂದ ಸುಖದಿಂದ ಹಾರಾಡಲು ಅವಕಾಶವಿರುವುದು ||೧೫೫||

ಆತನು ಅಳೆಯಲು ಬಾರದ ನನ್ನನ್ನು ಏಕೆ ಅಳತೆಯಲ್ಲಿ ಹಾಕಬೇಕ? ನನ್ನ ನಿರಾಕಾರಕ್ಕೆ ಸಾಕಾರವೆಂದು ಏಕೆ ಮನ್ನಿಸಬೇಕ? ನಾನು ಸಿದ್ಧನಿರುವಾಗ ನನ್ನ ಪ್ರಾಪ್ತಿಗಾಗಿ ಸಾಧನೆಗಳಿಂದ ಏಕೆ ಶ್ರಮಿಸಬೇಕು ? ||೧೫೬||

ಪರೀ ಹಾ ಬೋಲ ಆಘವಾ । ಜರೀ ವಿಚಾರೀಜತಸೇ ಪಾಂಡವಾ । ತರೀ ವಿಶೇಷೇ ಯಾ ಜೀವಾ । ನ ಚೋಜವೇ ಗಾ ॥೧೫೭॥

ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ ।
ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಮ್ ॥೨೫॥

ಕಾ ಜೇ ಯೋಗಮಾಯಾಪಡಳೇ । ಹೇ ಜಾಲೇ ಆಹಾತಿ ಆಂಧಳೇ । ಮ್ಹಣೌನಿ ಪ್ರಕಾಶೇಚೇನಿ ದೇಹಬಳೇ । ನ ದೇಖತೀ ಮಾತೇ ॥೧೫೮॥ ಏರ್ಹ್ವೀ ಮೀ ನಸೇ ಐಸೇ । ಕಾಯ ವಸ್ತು ಜಾತ ಅಸೇ? । ಪಾಹೇ ಪಾ ಕವಣ ಜಳರಸೇ । ರಹಿತ ಆಹೇ? ॥೧೫೯॥ ಪವನು ಕವಣಾತೇ ನ ಶಿವೇಚಿ । ಆಕಾಶ ಕೇ ನ ಸಮಾಯೇಚಿ । ಹೇ ಅಸೋ ಏಕು ಮೀಚಿ । ವಿಶ್ವೀ ಆಹೇ ॥೧೬೦॥

ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।
ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥೨೬॥

ಯೇಥೇ ಭೂತೇ ಜಿಯೇ ಅತೀತಲೀ । ತಿಯೇ ಮೀಚಿ ಹೋಊನಿ ಠೇಲೀ । ಆಣಿ ವರ್ತತ ಆಹಾತಿ ಜೇತುಲೀ । ತೀಹೀ ಮೀಚಿ ॥೧೬೧॥ ಕಾ ಭವಿಷ್ಯಮಾಣೇ ಜೇಯೇ ಹೀ । ತೀಹೀ ಮಜವೇಗಳೀ ನಾಹೀ । ಹಾ ಬೋಲಚಿ ಏರ್ಹ್ವೀ ಕಾಂಹಿ । ಹೋಯ ನಾ ಜಾಯ ॥೧೬೨॥ ದೋರಾಚಿಯಾ ಸಾಪಾಸೀ । ಡೋಂಬಾ ಬಡಿಯಾ ನಾ ಗವ್ಹಾಳಾ ಐಸೀ । ಸಂಖ್ಯಾ ನ ಕರವೇ ಕೋಣ್ಹಾಸೀ । ತೇವೀ ಭೂತಾಂಸಿ ಮಿಥ್ಯತ್ವೇ ॥೧೬೩॥ ಐಸಾ ಮೀ ಪಂಡುಸುತಾ । ಆನುಸ್ಯೂತು ಸದಾ ಅಸತಾ । ಯಾ ಸಂಸಾರ ಜೋ ಭೂತಾ । ತೋ ಆನೇ ಬೋಲೇ ॥೧೬೪॥ ತರೀ ತೇಚಿ ಅತಾ ಥೋಡೇಸೀ । ಗೋಠೀ ಸಾಂಗಿಜೇಲ ಪರಿಯೇಸಿ । ಜೈ ಅಹಂಕಾರಾತನೂಸೀ । ವಾಲಭ ಪಡಿಲೇ ॥೧೬೫॥

ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ ।
ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ ॥೨೭॥

ತೇಥ ಇಚ್ಛಾ ಹೇ ಕುಮಾರೀ ಜಾಲೀ । ಮಗ ತೇ ಕಾಮಾಚಿಯಾ ತಾರುಣ್ಯಾ ಆಲೀ । ತೇಥ ದ್ವೇಷೇಸೀ ಮಾಂಡಿಲೀ । ವರ್ಹಾಡಿಕ ॥೧೬೬॥ ತಯಾ ದೋಘಾಂಸ್ತವ ಜನ್ಮಲಾ । ಐಸಾ ದ್ವಂದ್ವಮೋಹೋ ಜಾಲಾ । ಮಗ ತೋ ಆಜೇಯಾನೇ ವಾಢವಿಲಾ । ಅಹಂಕಾರೇ ॥೧೬೭॥ ಜೋ ಧೃತೀಸೀ ಸದಾ ಪ್ರತಿಕುಳು । ನಿಯಮಾಹೀ ನಾಗಿವೇ ಸಳು । ಆಶಾರಸೇ ದೋಂದಿಲು । ಜಾಲಾ ಸಾಂತಾ ॥೧೬೮॥

ಆದರೆ ಅರ್ಜುನಾ, ನಿಜವಾಗಿಯೂ ವಿಚಾರ ಮಾಡಿ ನೋಡಿದರೆ ಮೇಲಿನ ಈ ನನ್ನ ಮಾತುಗಳು ಜೀವಿಗಳಿಗೆ ಬಹಳ ಮಾಡಿ ಹಿಡಿಸುವುದಿಲ್ಲ ॥೧೫೭॥

ಶ್ಲೋಕಾರ್ಥ :- ನನ್ನ ವಾಸ್ತವ ಸ್ವರೂಪವು ಅಗೋಚರವಾಗಿದೆ. ಯೋಗ ಮಾಯೆಯಿಂದ ಆವರಿಸಿದ ಈ ಮೂಢ ಲೋಕವು ಜನ್ಮ ಮರಣವಿಲ್ಲದ ನನ್ನನ್ನು ತಿಳಿಯಲಾರದು ॥೨೫॥

ಏಕೆಂದರೆ ಯೋಗ ಮಾಯೆಯ ಪರದೆಯಿಂದ ಇವರು ಅಂಧರಾಗಿರುತ್ತಾರೆ. ಆದ್ದರಿಂದ ದೇಹಬುದ್ಧಿಯ ಬಲದಿಂದ ಪ್ರಕಾಶರೂಪನಾದ ನಾನು ಇವರಿಗೆ ಕಾಣಿಸುವುದಿಲ್ಲ ॥೧೫೮॥

ಸಾಮಾನ್ಯವಾಗಿ ನಾನು ಇಲ್ಲದ ಯಾವುದಾದರೂ ಒಂದು ವಸ್ತು ಇದೆಯೇ? ಸರಿಯಾಗಿ ನೋಡು, ಯಾವುದಾದರೂ ನೀರು ರಸರಹಿತವಾಗಿದೆಯೇ? ॥೧೫೯॥

ಗಾಳಿಯು ಯಾರಿಗೆ ಸ್ಪರ್ಶ ಮಾಡುವುದಿಲ್ಲ? ಆಕಾಶವು ಎಲ್ಲಿ ಹಿಡಿಸುವುದಿಲ್ಲ? ಅದು ಇರಲಿ,ಸಂಪೂರ್ಣ ವಿಶ್ವದಲ್ಲಿ ನಾನೇ ತುಂಬಿರುತ್ತೇನೆ ॥೧೬೦॥

ಶ್ಲೋಕಾರ್ಥ :- ಅರ್ಜುನಾ! ಹಿಂದಿನ, ಈಗಿನ, ಮುಂದಿನ ವಿಷಯಗಳೆಲ್ಲವನ್ನೂ ನಾನು ತಿಳಿಯಬಲ್ಲೆನು. ಆದರೆ ನನ್ನನ್ನು ಯಾರೂ ತಿಳಿಯಲಾರರು ॥೨೬॥

ಈ ಜಗತ್ತಿನಲ್ಲಿ ಎಷ್ಟು ಪ್ರಾಣಿಗಳು ಆಗಿಹೋದವೋ ಅವರಲ್ಲಿ ನಾನೇ ಇದ್ದೆನು. ಈಗ ಇರುವ ಎಲ್ಲರಲ್ಲಿಯೂ ನಾನೇ ಇದ್ದೇನೆ ॥೧೬೧॥

ಅಥವಾ ಮುಂದೆ ಆಗುವುದೆಲ್ಲವೂ ಅವು ನನ್ನಿಂದ ಭಿನ್ನವಿಲ್ಲ. ಆದರೆ ಇದನ್ನು ಕೇವಲ ಹೇಳಬೇಕಾಗಿದೆ. ವಾಸ್ತವಿಕ ವಿಚಾರಿಸಿದರೆ ಏನೂ ಆಗುವುದಿಲ್ಲ, ಏನೂ ಹೋಗುವುದಿಲ್ಲ ॥೧೬೨॥

ಹಗ್ಗವು ನಿಜವಾಗಿಯೂ ಹಾವಲ್ಲ. ಹೀಗಿರುವಾಗ್ಗೆ ಕರ್ರಗೆ ಬೆಳ್ಳಗೆ ಇತ್ಯಾದಿ ಏನೊಂದು ಕಲ್ಪನೆ ಮಾಡಲು ಬರುವುದಿಲ್ಲ. ಅದರಂತೆ ಪ್ರಾಣಿಮಾತ್ರರು ಮಿಥ್ಯಾ ಇರುವುದರಿಂದ ಅದರ ವಿಷಯಕ್ಕೆ ಯಾವ ಕಲ್ಪನೆಯೂ ಮಾಡಲು ಬರುವುದಿಲ್ಲ ॥೧೬೩॥

ಹೇ ಪಂಡುಸುತನೇ, ಈ ಪ್ರಕಾರವಾಗಿ ನಾನು ಯಾವಾಗಲೂ ಅಖಂಡವಾಗಿ ವ್ಯಾಪ್ತನಾಗಿದ್ದೇನೆ. ಪ್ರಾಣಿಮಾತ್ರರಿಗೆ ಯಾವ ಈ ಸಂಸಾರವು ಹತ್ತಿರುವುದಕ್ಕೆ ಬೇರೆ ಕಾರಣವಿದೆ ॥೧೬೪॥

ಆದ್ದರಿಂದ ಈ ವಿಷಯವಾಗಿ ಸ್ವಲ್ಪದರಲ್ಲಿಯೇ ಕೆಲವು ಮಾತುಗಳನ್ನು ಹೇಳುತ್ತೇನೆ ಅದನ್ನು ಕೇಳು. ಅಭಿಮಾನ ಮತ್ತು ಶರೀರ ಈ ಎರಡರ ಪ್ರೀತಿ ಕೂಡಿರುವುದು ॥೧೬೫॥

ಶ್ಲೋಕಾರ್ಥ :- ಹೇ ಶತ್ರುಭಯಂಕರಾ! ರಾಗದ್ವೇಷ ರೂಪವಾದ ದ್ವಂದ್ವ ಮೋಹಕ್ಕೆ ಸಿಕ್ಕಿಬಿದ್ದು ಸಮಸ್ತ ಪ್ರಾಣಿಗಳು ಸಂಸಾರದಲ್ಲಿ ಅಜ್ಞಾನವನ್ನು ಪಡೆಯುತ್ತಾರೆ ॥೨೭॥

ಈ ಇಬ್ಬರ ಪ್ರೀತಿಯಿಂದ ಇಚ್ಛಾರೂಪ ಕನ್ಯಾ ಉತ್ಪನ್ನಳಾದಳು. ಆಕೆಯು ತನ್ನ ಕಾಮದ ಪೂರ್ಣ ತಾರುಣ್ಯದಲ್ಲಿ ಬಂದಾಗ ಆಕೆಯೊಂದಿಗೆ ದ್ವೇಷದ ಲಗ್ನವಾಯಿತು ॥೧೬೬॥

ಇವರಿಬ್ಬರ ಕೂಡುವಿಕೆಯಿಂದ ದ್ವಂದ್ವ ಮೋಹ ಪುತ್ರನು ಹುಟ್ಟಿದನು. ತದನಂತರ ಈತನ ಅಜ್ಜನಾದ ಅಹಂಕಾರನು ಈತನನ್ನು ದೊಡ್ಡವನನ್ನಾಗಿ ಬೆಳೆಸಿದನು ॥೧೬೭॥

ಯಾವ ದ್ವಂದ್ವ ಮೋಹವು ಯಾವಾಗಲೂ ಧೈರ್ಯಕ್ಕೆ ಪ್ರತಿಕೂಲವಾಗಿದ್ದು ಮತ್ತು ಇಂದ್ರಿಯಗಳ ದಮನಕ್ಕೆ ದ್ವೇಷದಿಂದ ತಿಳಿಯುವುದಾಗುವುದಿಲ್ಲ. ಇವನು ಆಶಾರೂಪ ಹಾಲು ಕುಡಿದು ಪುಷ್ಟನಾಗಿರುವನು ॥೧೬೮॥

ಅಸಂತುಷ್ಟೀಚಿಯಾ ಮದಿರಾ । ಮತ್ತ ಹೋಊನಿ ಧನುರ್ಧರಾ । ವಿಷಯಾಂಚೇ ವೋವರಾ । ವಿಕೃತೀಶೀ ॥೧೭೯॥ ತೇಣೇ ಭಾವಶುದ್ಧೀಚಿಯೇ ವಾಟೇ । ವಿಖುರಲೇ ವಿಕಲ್ಪಾಚೇ ಕಾಂಟೇ । ಮಗ ಚಿರಿಲೇ ಆವ್ಹಾಂಟೇ । ಅಪ್ರವೃತ್ತೀಚೇ ॥೧೮೦॥ ತೇಣೇ ಭೂತೇ ಭಾಂಬಾವಲೀ । ಮ್ಹಣೌನಿ ಸಂಸಾರಾಚಿಯಾ ಆಡವಾಮಾಜೀ ಪಡಿಲೀ । ಮಗ ಮಹಾದುಃಖಾಚ್ಯಾ ಘೇತಲೀ । ದಾಂಡೇ ವರೀ ॥೧೮೧॥

ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್ ।
ತೇ ದ್ವಂದ್ವಮೋಹನಿರ್ಮುಕ್ತಾ: ಭಜಂತೇ ಮಾಂ ದೃಢವ್ರತಾಃ ॥೨೮॥

ಐಸೇ ವಿಕಲ್ಪಾಚೇ ವಾಯಾಣೇ । ಕಾಂಟೇ ದೇಖೋನಿ ಸಣಾಣೇ । ಜೇ ಮತಿಭ್ರಮಾಚೇ ಪಾಸಾವಣೇ । ಘೇತೀಚಿನಾ ॥೧೮೨॥ ಉಜೂ ಏಕನಿಷ್ಠೇಚ್ಯಾ ಪಾಊಲೀ ರಗಡೂನಿ ವಿಕಲ್ಪಾಚಿಯಾ ಝಾಲೀ । ಮಹಾಪಾತಕಾಂಚೇ ಸಾಂಡಿಲೀ । ಅಟವೀ ಜಿಹೀ ॥೧೮೩॥ ಮಗ ಪುಣ್ಯಾಚೇ ಧಾವಾ ಘೇತಲೇ । ಆಣಿ ಮಾಝೀ ಜವಳೀಕ ಪಾತಲೇ । ಕಿಂಬಹುನಾ ತೇ ಚುಕಲೇ । ವಾಟವಧೇಯಾ ॥೧೮೪॥

ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ ।
ತೇ ಬ್ರಹ್ಮ ತದ್ವಿದುಃ ಕೃತ್ಸ್ನಂ ಅಧ್ಯಾತ್ಮಂ ಕರ್ಮ ಚಾಖಿಲಮ್ ॥೨೯॥

ಏರ್ಹವೀ ತರೀ ಪಾರ್ಥಾ । ಜನ್ಮಮರಣಾಚೀ ನಿಮೇ ಕಥಾ । ಐಸಿಯಾ ಪ್ರಯತ್ನಾತೇ ಆಸ್ಥಾ । ವಿಯೇ ಜಯಾಂಚೀ ॥೧೮೫॥ ತಯಾ ತೋ ಪ್ರಯತ್ನುಚಿ ಏಕೇ ವೇಳೇ । ಮಗ ಸಮಗ್ರ ಪರಬ್ರಹ್ಮೇ ಫಳೇ । ಜಯಾ ಪಿಕಲೇಯಾ ರಸುಗಳೇ । ಪೂರ್ಣತೇಚಾ ॥೧೮೬॥ ತೇ ವೇಳೀ ಕೃತಕೃತ್ಯತಾ ಜಗ ಭರೇ । ತೇಥ ಆಧ್ಯಾತ್ಮಾಚೇ ನವಲಪಣ ಪುರೇ । ಕರ್ಮಾಚೇ ಕಾಮ ಸರೇ । ವಿರಮೇ ಮನ ॥೧೮೭॥ ಐಸಾ ಆಧ್ಯಾತ್ಮಲಾಭು ತಯಾ । ಹೋಯ ಗಾ ಧನಂಜಯಾ । ಭಾಂಡವಲ ಜಯಾ । ಉದ್ಯಮೀ ಮೀ ॥೧೮೮॥ ತಯಾತೇ ಸಾಮ್ಯಾಚಿಯೇ ವಾಢೀ । ಐಕ್ಯಾಚೇ ಸಾಂದೇ ಕುಳವಾಡೀ । ತೇಥ ಭೇದಾಚಿಯಾ ದುಬಳವಾಡೀ । ನೇಣಿಜೇ ತಯಾ ॥೧೮೯॥

ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।
ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥೩೦॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಜ್ಞಾನವಿಜ್ಞಾನಯೋಗೋ ನಾಮ ಸಪ್ತಮೋಽಧ್ಯಾಯಃ

ಹೇ ಧನುರ್ಧರನೇ, ಅಸಂತೋಷ ರೂಪದ ಮದ್ಯವನ್ನು ಸೇವಿಸಿ ಉನ್ಮತ್ತನಾದ್ದರಿಂದ ಆತನು ಪಂಚ ವಿಷಯದ ಖೋಲಿಯಲ್ಲಿ (ವಿಕೃತಿ) ಭ್ರಾಂತಿ ರೂಪ ಸ್ತ್ರೀ ಜೊತೆಯಲ್ಲಿ ಸುಖವಾಗಿ ಭೋಗಿಸುತ್ತ ಇರುವನು ।।೧೯೯।।

ಈತನು ಶುದ್ಧವಾದ ಭಕ್ತಿ ಮಾರ್ಗಕ್ಕೆ ವಿಕಲ್ಪ ರೂಪದ ಮುಳ್ಳುಗಳನ್ನು ಹಚ್ಚಿರುವನು ಮತ್ತು ಕೆಟ್ಟ ಮಾರ್ಗದ ಅಡ್ಡ ಹಾದಿಯನ್ನು ನಿರ್ಮಿಸಿದನು।।೨೦೦।।

ಇದರಿಂದ ಪ್ರಾಣಿಮಾತ್ರರು ಭ್ರಮೆ ಹೊಂದಿ ಸಂಸಾರರೂಪ ಅರಣ್ಯದಲ್ಲಿ ಬೀಳುವರು ಮತ್ತು ಇವರು ಮಹಾದುಃಖಗಳ ಬಡಿಗೆ ಹೊಡೆತಗಳ ಬಾಧೆಯನ್ನು ಸೋಸಬೇಕಾಗುವುದು ।।೨೦೧।।

ಶ್ಲೋಕಾರ್ಥ :- ಪುಣ್ಯ ಪ್ರಭಾವದಿಂದ ಯಾರ ಪಾಪಗಳು ನಾಶವಾಗಿವೆಯೋ ಆ ಮಹನೀಯರು ದ್ವಂದ್ವ ಮೋಹದಿಂದ ಬಿಡಲ್ಪಟ್ಟು ದೃಢವಾದ ಶ್ರದ್ಧೆಯಿಂದ ನನ್ನನ್ನು ಸೇವಿಸುತ್ತಾರೆ ।।೨೮।।

(ಪುಣ್ಯಾತ್ಮ ವಿಚಾರವಂತರು) ಈ ಪ್ರಕಾರದ ವಿಕಲ್ಪ ರೂಪದ ಪೊಳ್ಳಾದ ಮತ್ತು ಚೂಪಾದ ಮುಳ್ಳುಗಳನ್ನು ನೋಡಿ ಬುದ್ಧಿಗೆ ಭ್ರಂಶತನ ತಂದುಕೊಳ್ಳುವುದಿಲ್ಲ ।।೨೦೨।।

ಇವರು ಸರಳವಾದ ಏಕನಿಷ್ಠೆ ಎಂಬ ಹೆಜ್ಜೆಗಳಿಂದ ವಿಕಲ್ಪರೂಪ ಮುಳ್ಳುಗಳನ್ನು ಕಿತ್ತೊಗೆದು ದೊಡ್ಡ ದೊಡ್ಡ ಮಹಾಪಾತಕಗಳ ಅರಣ್ಯ ಮಾರ್ಗವನ್ನು ಬಿಟ್ಟರು ।।೨೦೩।।

ತದನಂತರ ಪುಣ್ಯಮಾರ್ಗ ಹಿಡಿದು ಓಡುತ್ತಾ ನನ್ನ ಕಡೆ ಧಾವಿಸಿ ಬಂದರು. ಹೆಚ್ಚಿಗೇನು ಹೇಳಬೇಕು ? ಈ ಭಕ್ತರು (ಕಾಮ, ದ್ವಂದ್ವ, ಮೋಹ ವಗೈರೆ) ದಾರಿ ಹೋಕರ ಸುಲಿಗೆಯಿಂದ ಪಾರಾದರು ।।೨೦೪।।

ಶ್ಲೋಕಾರ್ಥ :- ನನ್ನನ್ನು ಆಶ್ರಯಿಸಿ ಜರಾಮರಣ ವಿಮುಕ್ತಿಗಾಗಿ ಪ್ರಯತ್ನ ಮಾಡುವವರು ಬ್ರಹ್ಮತ್ವವನ್ನು, ಸಂಪೂರ್ಣವಾದ ಆಧ್ಯಾತ್ಮಿಕ ಕರ್ಮವನ್ನು ತಿಳಿದುಕೊಳ್ಳುತ್ತಾರೆ ।।೨೯।।

ಪಾರ್ಥಾ, ಸಾಮಾನ್ಯವಾಗಿ ಜನ್ಮ ಮರಣದ ಗತಿಯಿಂದ ಬಿಡುಗಡೆಯಾಗಬೇಕೆಂಬುವುದಕ್ಕೆ ಇರುವ ಸಾಧನೆಗಳಿಗೆ ಅದರ ಪ್ರಾಪ್ತಿಗಾಗಿ ಇವರಿಗೆ ಇಚ್ಛೆಯಾಗುವುದು ।।೨೦೫।।

ಅವರಿಗೆ ಅವರ ಪ್ರಯತ್ನವು ಎಂದಾದರೂ ಒಂದು ದಿನ ಫಲದ್ರೂಪವಾಗಿ ಬ್ರಹ್ಮಪ್ರಾಪ್ತಿಯಾಗುವುದು ಮತ್ತು ಪೂರ್ಣ ಪಕ್ವವಾದ ಹಣ್ಣಿನ ರಸದಂತೆ ಇವರು ಪೂರ್ಣತೆಯಿಂದ ತುಂಬಿ ತುಳುಕುವರು ।।೨೦೬।।

ಆಗ ಇವರಿಗೆ ''ನಾವು ಧನ್ಯರಾದೆವು'' ಎಂದು ತಿಳಿದು ಸರ್ವಜಗತ್ತು ಆನಂದದಿಂದ ತುಂಬಿಕೊಂಡಿದ್ದು ಕಾಣುವುದು. ಆಗ ಆತ್ಮಜ್ಞಾನದ ಬಯಕೆಯು ಪೂರ್ಣಗೊಳ್ಳುವುದು. ಕರ್ಮಗಳೆಲ್ಲವೂ ನಿರಸನವಾಗಿ ಆತನ ಮನಸ್ಸು ಶಾಂತಗೊಳ್ಳುವುದು ।।೨೦೭।।

ಹೇ ಧನಂಜಯನೇ, ಈ ರೀತಿಯಲ್ಲಿ ಆತನಿಗೆ ಆತ್ಮಜ್ಞಾನದ ಲಾಭವಾಗುವುದು. ಕಾರಣವೇನೆಂದರೆ ಆತನ ಈ ಪರಮಾರ್ಥರೂಪ ವ್ಯವಹಾರದಲ್ಲಿ ಭಾಂಡವಲವು ನಾನೇ ಆಗಿರುವೆನು ।।೨೦೮।।

ಇವರಿಗೆ ಸಮದೃಷ್ಟಿ ಎಂಬುದೇ ಬಡ್ಡಿ ದೊರೆತು ಐಕ್ಯರೂಪ ಸಂಪತ್ತು ಸಮೃದ್ಧಿಗೊಳ್ಳುವುದು. ಆದ್ದರಿಂದ ಭೇದರೂಪ ದಾರಿದ್ರ್ಯವು ಗೊತ್ತೇ ಇರುವುದಿಲ್ಲ ।।೨೦೯।।

ಶ್ಲೋಕಾರ್ಥ :- ಅಧಿಭೂತ ಅದಿದೈವ ಅಧಿಯಜ್ಞಗಳಿಂದ ಕೂಡಿದ ನನ್ನನ್ನು ತಿಳಿದು ನನ್ನಲ್ಲಿಯೇ ಚಿತ್ತವನ್ನು ಸಂಲಗ್ನ ಮಾಡಿದವರು. ಮರಣ ಕಾಲದಲ್ಲಿಯೂ ನನ್ನನ್ನು ತಿಳಿಯುತ್ತಾರೆ ।।೩೦।।

ಇಲ್ಲಿಗೆ ಉಪನಿಷತ್ತೂ, ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ, ಶ್ರೀಕೃಷ್ಣಾರ್ಜುನ ಸಂವಾದವೂ ಆದ ಶ್ರೀಮದ್ಭಗವದ್ಗೀತೆಯಲ್ಲಿ ಜ್ಞಾನವಿಜ್ಞಾನಯೋಗವೆಂಬ ಹೆಸರಿನ ಏಳನೆಯ ಅಧ್ಯಾಯವು ಮುಗಿದುದು.

ಜಿಹೀ ಸಾಧಿಭೂತಾ ಮಾತೇ । ಪ್ರತೀತೀಚೇನಿ ಹಾತೇ । ಧರೂನಿ ಅಧಿ ದೈವಾತೇ । ಶಿವತಲೇ ಗಾ ।।೧೮೦।। ಜಯಾ ಜಾಣಿವೇಚೇನಿ ವೇಗೇ । ಮೀ ಅಧಿಯಜ್ಞು ಹೀ ದೃಷ್ಟೀ ರಿಗೇ । ತೇ ತನೂಚೇನಿ ವಿಯೋಗೇ । ವಿರ್ಢಯೇ ನವ್ಢತೀ ।।೧೮೧।। ವಿರ್ಢವೀ ಆಯುಷ್ಯಾಚೇ ಸೂತ್ರ ವಿಘಡತಾ । ಭೂತಾಂಚೀ ಉಮಟೇ ಖಡಾಡತಾ । ಕಾಯ ನ ಮರತಯಾಚಿಯಾಹಿ ಚಿತ್ತಾ । ಯುಗಾಂತು ನೋಹೇ? ।।೧೮೨।। ಪರೀ ನೇಣೋ ಕೈಸೇ ಪೈ ಗಾ । ಜೇ ಜಡೋನಿ ಗೇಲೇ ಮಾಝಿಯಾ ಆಂಗಾ । ತೇ ಪ್ರಯಾಣೇಂಚಿಯಾ ಲಗಬಗಾ । ನ ಸಾಂಡಿತೀಚ ಮಾತೇ ।।೧೮೩।। ವಿರ್ಢವೀ ತರೀ ಜಾಣ । ಐಸೇ ಜೇ ನಿಪುಣ । ತೇಚಿ ಅಂತಃಕರಣ । ಯುಕ್ತ ಯೋಗೀ ।।೧೮೪।। ತಂವ ಇಯೇ ಶಬ್ದ ಕುಪಿಕೇತಳೀ । ನೋಡವೇಚಿ ಅವಧಾನಾಚೀ ಅಂಜುಳೀ । ಜೇ ನಾವೇಕ ಅರ್ಜುನ ತಯೇ ವೇಳೀ । ವಾಗಾಂಚೀ ಹೋತಾ ।।೧೮೫।। ಜೇಥ ತದ್ಬ್ರಹ್ಮವಾಕ್ಯಫಳೇ । ಜಿಯೇ ನಾನಾರ್ಥರಸೇ ರಸಾಳೇ । ಬಹಕತಾತೀ ಪರಿಮಳೇ । ಭಾವಾಚೇನಿ ।।೧೮೬।। ಸಹಜ ಕೃಪಾಮಂದಾನಿಳೇ । ಕೃಷ್ಣದ್ರುಮಾಚೀ ವಚನಫಳೇ । ಅರ್ಜುನಶ್ರವಣಾಚಿಯೇ ಖೋಳೇ । ಅವಚಿತ ಪಡಿಲೀ ।।೧೮೭।। ತಿಯೇ ಪ್ರಮೇಯಾಂಚೀ ಹೋ ಕಾ ವಳಲೀ । ಕೀ ಬ್ರಹ್ಮರಸಾಚ್ಯಾ ಸಾಗರೀ ಚುಬುಕಳಲೀ । ಮಗ ತೈಸೀಚಿ ಕಾ ಘೋಳಿಲೀ । ಪರಮಾನಂದೇ ।।೧೮೮।। ತೇಣೇ ಬರವೇಪಣೇ ನಿರ್ಮಳೇ । ಅರ್ಜುನಾ ಉನ್ಮೇಷಾಚೇ ಡೋಹಳೇ । ಫೇತಾತಿ ಗಳಾಳೇ । ವಿಸ್ಮಯಾಮೃತಾಚೇ ।।೧೮೯।। ತಿಯಾ ಸುಖಸಂಪತ್ತಿ ಜೋಡಲಿಯಾ । ಮಗ ಸ್ವರ್ಗಾ ವಾತಿ ವಾಂಕುಲಿಯಾ । ಹೃದಯಾಚ್ಯಾ ಜೀವೀ ಗುತಕುಲಿಯಾ । ಹೋತ ಆಹಾತೀ ।।೧೯೦।। ಐಸೇ ವರಚಿಲೀಚಿ ಬರವಾ । ಸುಖ ಜಾವೋ ಲಾಗಲೇ ಥಾವಾ । ತಂವ ರಸಸ್ವಾದಾಚಿಯಾ ಹಾಂವಾ । ಲಾಹೋ ಕೇಲಾ ।।೧೯೧।। ಝಡಕರೀ ಅನುಮಾನಾಚೇನಿ ಕರತಳೇ । ಘೇಊನಿ ತಿಯೇ ವಾಕ್ಯಫಳೇ । ಪ್ರತೀತಿಮುಖೀ ಏಕೇ ವೇಳೇ । ಘಾಲೂ ಪಾಹೇ ।।೧೯೨।। ತಂವ ವಿಚಾರಾಚಿಯಾ ರಸನಾ ನ ದಾಟತೀ । ಪರಿ ಹೇತೂಚ್ಯಾ ದಶನೀ ನ ಫುಟತೀ । ಐಸೇ ಜಾಣೌನಿ ಸುಭದ್ರಾಪತೀ । ಚುಂಬೀಚಿನಾ ।।೧೯೩।। ಮಗ ಚಮತ್ಕಾರಲಾ ಮ್ಹಣೇ । ಇಯೆ ಜಳೀಂಚೇ ಮಾ ತಾರಾಂಗಣೇ । ಕೈಸಾ ಝಕವಿಲೋ ಅಸಲಗಪಣೇ । ಅಕ್ಷರಾಂಚೇನಿ ।।೧೯೪।। ಇಯೇ ಪದೇ ನವ್ಹತಿ ಫುಡಿಯಾ । ಗಗನಾಚಿಯಾ ಘಡಿಯಾ । ಯೇಥ ಆಮುಚೀ ಮತಿ ಬುಡಾಲಿಯಾ । ಥಾವೋ ನ ನಿಘೇ ।।೧೯೫।।

ಇವರು ಅನುಭವದ ಕೈಗಳಿಂದ ಮಾಯಾವಶ ಜೀವವನ್ನು ಹಿಡಿದು ಪಾಂಚ ಭೌತಿಕದೊಂದಿಗೆ ನನಗೆ ಸ್ಪರ್ಶ ಮಾಡಿದರು।।೧೮೦।।

ಇವರು ಜ್ಞಾನದ ಬಲದಿಂದ ನನ್ನನ್ನು ಅಧಿಯಜ್ಞ (ಪರಮಾತ್ಮ) ದೃಷ್ಟಿಯಿಂದ ನೋಡಿದರು. ಅವರಿಗೆ ಶರೀರದ ವಿಯೋಗದಿಂದ (ಮರಣಕಾಲಕ್ಕೆ) ದುಃಖವಾಗುವುದಿಲ್ಲ ।।೧೮೧।।

ಸಾಮಾನ್ಯವಾಗಿ ಆಯುಷ್ಯದ ದಾರವು ಹರಿಯುವ ಪ್ರಸಂಗ ಒದಗಿದಾಗ ಪ್ರಾಣಿಗಳ ಯಾವ ದುಃಖ ಕಳವಳ (ಒದ್ದಾಟ) ನೋಡಿ ಸಾಯದಿರುವ (ಬದುಕಿರುವ) ಚಿತ್ತಕ್ಕೂ ಪ್ರಳಯಕಾಲ ಒದಗಿದಂತೆ ಆಗುವುದಿಲ್ಲವೇ? ।।೧೮೨।।

ಆದರೆ ಇವರು ನನ್ನಲ್ಲಿ ಯಾವ ರೀತಿ ಎಷ್ಟು ಐಕ್ಯ ಸ್ಥಿತಿಯನ್ನು ಹೊಂದಿರುವುದರ ಬಗ್ಗೆ ವರ್ಣನೆ ಮಾಡುವುದು ಅಶಕ್ಯವಾಗಿದೆ. ಕಾರಣ, ಇವರು ಮರಣದ ಅತ್ಯಂತ ಕಠಿಣ ಪ್ರಸಂಗದಲ್ಲಿಯೂ ನನ್ನನ್ನು ಮರೆಯುವುದಿಲ್ಲ ।।೧೮೩।।

ಸಾಮಾನ್ಯವಾಗಿ ಹೀಗೆ ನಿರ್ಧರಿಸಿ ತಿಳಿದುಕೊ. ಯಾರು ಈ ಪ್ರಕಾರವಾಗಿ ಪೂರ್ಣ ಜ್ಞಾನಿಗಳು ಇರುವರೋ ಅವರೇ ಅಂತಃಕರಣದಿಂದ ನನ್ನ ಐಕ್ಯವನ್ನು ಹೊಂದಿರುವರು ।।೧೮೪।।

ಈ ತತ್ತ್ವ ಹೇಳುತ್ತಿರುವಾಗ ಶ್ರೀಕೃಷ್ಣನ ಮುಖದಿಂದ ಶಬ್ದರೂಪ ಪಾತ್ರೆಯ ಕೆಳಗೆ ಅರ್ಜುನನ ಅವಧಾನರೂಪ ಬೊಗಸೆಯು ಒಡ್ಡಿದ್ದಿಲ್ಲ. ಏಕೆಂದರೆ ಆತನ ಚಿತ್ತವು ಹಿಂದಿನ (ಶ್ಲೋಕದ) ಚಿಂತನೆಯಲ್ಲಿ ಮುಳುಗಿತ್ತು ।।೧೮೫।।

ಇಲ್ಲಿ ಬ್ರಹ್ಮಪ್ರಾಪ್ತಿಯುಕ್ತ ವಾಕ್ಯರೂಪ ಫಲಗಳು ಸಾಕಷ್ಟು ಅರ್ಥರೂಪ ರಸದಿಂದ ತುಂಬಿಕೊಂಡಿದ್ದವು ಮತ್ತು ಅದರ ಭಕ್ತಿರೂಪ ಸುಗಂಧವು ನಾಲ್ಕು ಕಡೆಗೂ ಪಸರಿಸಿತ್ತು ।।೧೮೬।।

ಆಗ ಶ್ರೀಕೃಷ್ಣ ಕೃಪಾರೂಪ ಮಂದವಾದ ಗಾಳಿ ಮೂಲಕ ಶ್ರೀಕೃಷ್ಣರೂಪ ವೃಕ್ಷದಿಂದ ವಚನರೂಪ ಫಲಗಳು ಅರ್ಜುನನ ಶ್ರವಣರೂಪ ಉಡ್ಡಲದಲ್ಲಿ ಬಂದು ಬಿದ್ದವು ।।೧೮೭।।

ಈ ಫಲಗಳು ವೇದಾಂತ, ಸಿದ್ಧಾಂತಗಳಿಂದ ತಯಾರಿಸಿ, ಬ್ರಹ್ಮರಸದ ಸಾಗರದಲ್ಲಿ ಮುಳುಗಿಸಿ ಮತ್ತು ಹಾಗೆಯೇ ಪರಮಾನಂದರೂಪ ಸಕ್ಕರೆಯಲ್ಲಿ ಹೊರಳಾಡಿಸಿದವುಗಳಾಗಿದ್ದವು ।।೧೮೮।।

ಈ ರೀತಿಯಲ್ಲಿ ತಯಾರಿಸಿರುವ ನಿರ್ಮಲ ಫಲಗಳು, ಅದರ ಅರ್ಥರೂಪ ಗರ್ಭದ (ಜ್ಞಾನದ) ಲಾಭವಾಗಬೇಕು. ಹೀಗೆ ಅರ್ಜುನನಿಗೆ ಇಚ್ಛೆಯು ಉತ್ಪನ್ನವಾಗಿ ಆತನು ವಿಸ್ಮಯರೂಪ ಅಮೃತವನ್ನು ಗುಟುಕರಿಸಹತ್ತಿದನು ।।೧೮೯।।

ಈ ಪ್ರಕಾರದ ಸುಖಸಂಪತ್ತಿನ ಲಾಭದಿಂದ ಅರ್ಜುನನ ಅಂತಃಕರಣದಲ್ಲಿ ಇಷ್ಟೊಂದು ಆನಂದವು ಉಕ್ಕೇರಿ ಆತನು ಸ್ವರ್ಗಸುಖಕ್ಕೆ ಅಣಕಿಸಹತ್ತಿದನು ।।೧೯೦।।

ಈ ಪ್ರಕಾರವಾಗಿ ಈ ಫಲದ ಹೊರನೋಟ ಕಂಡು ಆತನ ಆನಂದವು ಬೆಳೆಯಹತ್ತಿತು. ಆಗ ಆ ಫಲದ ರುಚಿ ನೋಡಲು ಆತನ ನಾಲಿಗೆಗೆ ಉತ್ಕಟ ಇಚ್ಛೆ ಉಂಟಾಯಿತು ।।೧೯೧।।

ಆದ್ದರಿಂದ ಲಗುಬಗೆಯಿಂದ ಅನುಮಾನರೂಪ ಹಸ್ತಗಳಿಂದ ಶ್ರೀಕೃಷ್ಣ ವಾಕ್ಯರೂಪ ಫಲಗಳನ್ನು ಸ್ವೀಕರಿಸಿ ಅವುಗಳನ್ನು ಅನುಭವರೂಪ ಮುಖದಲ್ಲಿ ಒಮ್ಮೆಲೆ ಹಾಕಹತ್ತಿದನು ।।೧೯೨।।

ಆಗ ವಿಚಾರರೂಪ ನಾಲಿಗೆಯಿಂದ ಅದನ್ನು ತೆಗೆದುಕೊಳ್ಳಲು ಆಗಲಿಲ್ಲ ಮತ್ತು ಹೇತುರೂಪ ಹಲ್ಲಿನಿಂದ ಒಡೆಯಲು ಆಗಲಿಲ್ಲ. ಇದನ್ನರಿತು ಅರ್ಜುನನು ಅವುಗಳಿಗೆ ಮುಖ ಹಚ್ಚಲಿಲ್ಲ ।।೧೯೩।।

ಆಗ ಆತನಿಗೆ ಚಮತ್ಕಾರ ಉಂಟಾಗಿ ಹೀಗೆ ಹೇಳುತ್ತಾನೆ:- ''ಏನಿದು! ನೀರಿನಲ್ಲಿ ಕಾಣುವ ನಕ್ಷತ್ರದಂತೆ ಈ ಅಕ್ಷರಗಳ ಸೌಂದರ್ಯಕ್ಕೆ ನಾನು ಫಲವೆಂದು ತಿಳಿದು ಹೇಗೆ ಮೋಸ ಹೋದೆ?'' ।।೧೯೪।।

ಇವು ಅಕ್ಷರಗಳ ಪದಗಳಾಗದೇ ಕೇವಲ ಆಕಾಶದ ಮಡಿಕೆ(ಗಳಿಗೆ)ಯಾಗಿವೆ ಮತ್ತು ಇಲ್ಲಿ ನಮ್ಮ ಬುದ್ಧಿಯು ಎಷ್ಟು ಸಲ ಮುಳುಗಿದರೂ ಅವುಗಳ ನೆಲೆ ಹತ್ತಲಾರದು ।।೧೯೫।।

ವಾಂಚೂನಿ ಜಾಣಾವಯಾಚೀ ಕೇ ಗೋಠೀ । ಐಸೇ ಜೇವೀ ಕಲ್ಪೂನಿ ಕಿರೀಟೀ । ತಿಯಾ ಪುನರಪಿ ಕೇಲೀ ದೃಷ್ಟೀ । ಯಾದವೇಂದ್ರಾ ।।೧೯೬।। ಮಗ ವಿನವಿಲೇ ಸುಭಟೇ । ಹಾ ಹೋ ಜೀ ಯೇ ಏಕವಾಟೇ । ಸಾತಹೀ ಪದೇ ಅನುಚ್ಛಿಷ್ಟೇ । ನವಲೇ ಆಹಾತೀ ।।೧೯೭।। ಏರ್ಹ್ವೀ ಅವಧಾನಾಚೇನಿ ವಹಿಲೇಪಣೇ । ನಾನಾ ಪ್ರಮೇಯಾಂಚೇ ಉಗಾಣೇ । ಕಾಯ ಶ್ರವಣಾಚೇನಿ ಆಂಗವಣೇ । ಬೋಲೋ ಲಾಹತೀ ? ।।೧೯೮।। ಪರೀ ತೈಸೇ ಹೇ ನೋಹೇಚಿ ದೇವಾ । ದೇಖಿಲಾ ಅಕ್ಷರಾಂಚಾ ಮೇಳಾವಾ । ಆಣಿ ವಿಸ್ಮಯಾಚಿಯಾ ಜೀವಾ । ವಿಸ್ಮಯೋ ಜಾಲಾ ।।೧೯೯।। ಕಾನಾಚೇನಿ ಗವಾಕ್ಷದ್ವಾರೇ । ಬೋಲಾಚೇ ರಶ್ಮೀ ಅಭ್ಯಂತರೇ । ಪಾಹೇನಾ ತಂವ ಚಮತ್ಕಾರೇ । ಅವಧಾನ ಠಕಲೇ ।।೨೦೦।। ತೇವಿಂಚೀ ಅರ್ಥಾಚೀ ಚಾಡ ಮಜ ಆಹೇ । ತೇ ಸಾಂಗತಾಹೀ ವೇಳು ನ ಸಾಹೇ । ಮ್ಹಣೌನಿ ನಿರೂಪಣ ಲವಲಾಹೇ । ಕೀ ಜೋ ದೇವಾ ।।೨೦೧।। ಐಸಾ ಮಾಗೀಲ ಪಡತಾಳಾ ಘೇಉನೀ । ಪುಢಾ ಅಭಿಪ್ರಾಯ ದಿಠೀ ಸೂನೀ । ತೇವಿಂಚಿ ಮಾಜೀ ಶಿರಉನೀ । ಆರ್ತೀ ಆಪುಲೀ ।।೨೦೨।। ಕೈಸೀ ಪುಸತಿ ಪಾಹೇ ಪಾ ಜಾಣೇವ । ಭಿಡೇಂಚೀ ತರೀ ಲಂಘೋ ನೇದೀ ಶಿಂವ । ಏರ್ಹ್ವೀ ಶ್ರೀಕೃಷ್ಣ ಹೃದಯಾಸಿ ಖೇಂವ । ದೇವೋ ಸರಲಾ।೨೦೩।। ಅಹೋ ಶ್ರೀಗುರೂತೇ ಜೈ ಪುಸಾವೇ । ತೈ ಯೇಣೇ ಮಾನೇ ಸಾವಧ ಹೋಆವೇ । ಹೇ ಏಕಚಿ ಜಾಣೇ ಆಘವೇ । ಸವ್ಯಸಾಚೀ ।।೨೦೪।। ಆತಾ ತಯಾಂಚೇ ತೇ ಪ್ರಶ್ನ ಕರಣೇ । ವರೀ ಸರ್ವಜ್ಞ ಶ್ರೀಹರೀಚೇ ಬೋಲಣೇ । ಹೇ ಸಂಜಯೋ ಆವಡಲೇಪಣೇ । ಸಾಂಗೈಲ ಕೈಸೇ ।।೨೦೫।। ತಿಯೇ ಅವಧಾನ ದ್ಯಾವೇ ಗೋಠೀ । ಬೋಲಿಜೇಲ ನೀಟ ಮರ್ಹಾಟೀ । ಜೈಸೀ ಕಾನಾಚೇ ಆಧೀ ದಿಠೀ । ಉಪೇಗಾ ಜಾಯೇ ।।೨೦೬।। ಬುದ್ಧೀಚಿಯಾ ಜಿಭಾ । ಬೋಲಾಚಾ ನ ಚಾಖತಾ ಗಾಭಾ । ಅಕ್ಷರಾಂಚಿಯಾ ಭಾಂಬಾ । ಇಂದ್ರಿಯೇ ಜಿತೀ ।।೨೦೭।। ಪಹಾ ಪಾ ಮಾಲತೀಚೇ ಕಳೇ । ಘ್ರಾಣಾಸೀ ಕೀರ ವಾಟಲೇ ಪರೀಮಳೇ । ಪರಿ ವರಿಚಿಲಾ ಬರವಾ ಕಾಇ ಡೋಳೇ । ಸುಖಿಯೇ ನವ್ಹತೀ ।।೨೦೮।। ತೈಸೇ ದೇಶಿಯೇಚಿಯಾ ಹವಾವಾ । ಇಂದ್ರಿಯೇ ಕರಿತೀ ರಾಣೀವಾ । ಮಗ ಪ್ರಮೇಯಾಚಿಯಾ ಗಾಂವಾ । ಲೇಸಾ ಜಾಇಜೇ ।।೨೦೯।। ಐಸೇನಿ ನಾಗರಪಣೇ । ಬೋಲು ನಿಮೇ ತೇ ಬೋಲಣೇ । ಐಕಾ ಜ್ಞಾನದೇವೋ ಮ್ಹಣೇ । ನಿವೃತ್ತೀಚಾ ।।೨೧೦।।

---

ಇತಿ ಶ್ರೀ ಜ್ಞಾನದೇವ ವಿರಚಿತಯಾಂ ಭಾವಾರ್ಥ ದೀಪಿಕಾಯಾಂ ಸಪ್ತಮೋಽಧ್ಯಾಯಃ ।।೭।।

ಶ್ಲೋಕ : ೩೦ ಓವಿ ।।೨೧೦।।

ಆಗ ( ಈ ಫಲಗಳು ತೆಗೆದುಕೊಳ್ಳಲು ಬಾರದ್ದಾದರೆ) ಇದನ್ನು ತಿಳಿಯುವ ಬಗೆ ಏನು? ಹೀಗೆ ಅರ್ಜುನನು ಮನಸ್ಸಿನಲ್ಲಿ ತಂದು ಪುನಃ ಯಾದವೇಂದ್ರ ಶ್ರೀಕೃಷ್ಣನತ್ತ ನೋಡಿದನು ।೧೯೬॥

ಮತ್ತು ಅರ್ಜುನನು ದೇವನಿಗೆ ವಿನಂತಿ ಮಾಡಿದನು :- ದೇವನೇ ಈ ಒಟ್ಟುಗೂಡಿದ ಏಳು ಪದಗಳ ಸ್ವಾದವನ್ನು ಯಾರು ಎಂದೂ ಕಂಡಿಲ್ಲ. ಇದು ಬಹಳ ಆಶ್ಚರ್ಯವಾಗಿದೆ ।೧೯೭॥

ಸಾಮಾನ್ಯವಾಗಿ ಲಕ್ಷಪೂರ್ವಕವಾಗಿ ಕೇಳುವುದನ್ನು ಬಿಟ್ಟು ಕೇವಲ ಶ್ರವಣದ ಬಲದಿಂದ ಅನೇಕ ಸಾಧಾರಣ ಸಿದ್ಧಾಂತಗಳ ತಾತ್ಪರ್ಯಗಳನ್ನು ಹೇಳಲಿಕ್ಕೆ ಆಗುವುದೇ ? ।೧೯೮॥

ಆಗುವುದಿಲ್ಲ, ಮತ್ತು ಅದರಲ್ಲಿ ದೇವನೇ ನಿಮ್ಮ ಈ ಹೇಳಿಕೆಗಳೇನು ಸಾಧಾರಣವಲ್ಲ. ಈ ಅಕ್ಷರಗಳನ್ನು ಕೇವಲ ನೋಡುವುದರಿಂದಲೇ ಆಶ್ಚರ್ಯಕ್ಕೆ ಆಶ್ಚರ್ಯ ಉಂಟಾಗುವುದು ।೧೯೯॥

ಕಿವಿಗಳ ಕಿಂಡಿಗಳಿಂದ ಶಬ್ದಗಳ ರೂಪ ಕಿರಣಗಳು ಒಳಗೆ ಪ್ರವೇಶವಾಗಲಿಲ್ಲ. ಅದೇ ಆಶ್ಚರ್ಯವಾಗಿ ನನ್ನ ಲಕ್ಷವು ಕುಂಠಿತವಾಯಿತು. (ಬುದ್ಧಿ ನಡೆಯದಾಯಿತು) ।೨೦೦॥

ಈ ಶಬ್ದಗಳ ಅರ್ಥವನ್ನು ತಿಳಿದುಕೊಳ್ಳಲು ನನಗೆ ಬಹಳ ಇಚ್ಛೆಯಾಗಿದೆ. ಇಷ್ಟು ಹೇಳಲು ಆಗುವ ಸಮಯವನ್ನು ಸಹ ತಡೆಯಲು ಆಗುತ್ತಿಲ್ಲ. ಆದ್ದರಿಂದ ದೇವನೇ ಬೇಗ ಹೇಳು ।೨೦೧॥

ಈ ಪ್ರಕಾರವಾಗಿ ಹಿಂದಿನ ಅನುಭವ ಸ್ವೀಕರಿಸಿ ಮುಂದಿನ ಅಭಿಪ್ರಾಯಕ್ಕೆ ದೃಷ್ಟಿ ಇಟ್ಟು ಮತ್ತು ಮಧ್ಯದಲ್ಲಿಯೇ ತನ್ನ ಕೇಳುವ ಇಚ್ಛೆಯನ್ನು ವ್ಯಕ್ತ ಮಾಡಿ ಅರ್ಜುನನು ಕೇಳಿದನು ।೨೦೨॥

ಅರ್ಜುನನ ಪ್ರಶ್ನೆ ಮಾಡುವ ಶೈಲಿ ಹೇಗಿದೆ ನೋಡಿರಿ! ಮರ್ಯಾದೆಯ ಉಲ್ಲಂಘನೆ ಮಾಡದೇ ಶ್ರೀಕೃಷ್ಣನ ಹೃದಯಕ್ಕೆ ಪ್ರೇಮಾಲಿಂಗನವನ್ನು ಕೊಡಲು ಸಿದ್ಧನಾದನು ।೨೦೩॥

ಅಹೋ, ಶ್ರೀಗುರುಗಳಿಗೆ ಯಾವ ವೇಳೆಯಲ್ಲಿ ಕೇಳುವುದಾದರೆ ಆಗ ಇದೇ ರೀತಿಯಲ್ಲಿ ಮರ್ಯಾದೆಯಿಂದ ಕೇಳಬೇಕಾಗುವುದು. ಇವರ ಮರ್ಯಾದೆಯನ್ನು ಸ್ಥಿರವಾಗಿರಿಸಿ ಹೇಗೆ ಕೇಳಬೇಕೆಂಬುದು ಕೇವಲ ಅರ್ಜುನನಿಗೆ ಮಾತ್ರ ಗೊತ್ತು ।೨೦೪॥

ಈತ ಆತನು ಯಾವ ಪ್ರಶ್ನೆ ಮಾಡುವನು ಮತ್ತು ಅದಕ್ಕೆ ಸರ್ವಜ್ಞ ಶ್ರೀಹರಿಯು ಉತ್ತರಿಸುವುದನ್ನು ಸಂಜಯನು ಹೇಗೆ ಪ್ರೇಮದಿಂದ ಹೇಳುವನು ನೋಡಿರಿ ।೨೦೫॥

ಯಾವ ಈ ಮಾತುಗಳನ್ನು ಸರಳವಾದ ಮರಾಠಿ ಭಾಷೆಯಲ್ಲಿ ಹೇಳಲಾಗುವುದು. ಇದರ ಕಡೆ ಸರಿಯಾಗಿ ಲಕ್ಷಕೊಡಿರಿ. ಇದರಿಂದ ಕಿವಿಗಿಂತ ಮೊದಲೇ ದೃಷ್ಟಿಗೆ ಅರ್ಥವಾಗಿರಬೇಕು ।೨೦೬॥

ಬುದ್ಧಿ ನಾಲಿಗೆಯಿಂದ ಶಬ್ದಗಳ ರಹಸ್ಯವನ್ನು ಗ್ರಹಿಸದೇ, ಕೇವಲ ಅಕ್ಷರಗಳ ಸೌಂದರ್ಯದಿಂದ ಇಂದ್ರಿಯಗಳು ಬಾಳಬಹುದು ।೨೦೭॥

ಇಲ್ಲಿ ನೋಡಿರಿ, ಮಲ್ಲಿಗೆ ಹೂವಿನ ಮಗ್ಗಿಯ ಸುಗಂಧವು ಮೂಗಿಗೆ ನಿಜವಾಗಿಯೂ ಬರುವುದು. ಆದರೆ ಅದರ ಹೊರಗಿನ ಸುರೇಖಿತನ ಸೌಂದರ್ಯವು ಕಣ್ಣಿಗೆ ಸುಖವಾಗುವುದಿಲ್ಲವೇ ? ।೨೦೮॥

ಅದರಂತೆಯೇ ಮರಾಠಿ ಭಾಷೆಯ ಶೋಭೆಯಿಂ ಇಂದ್ರಿಯಗಳು ಸುಖದ ರಾಜ್ಯ ಮಾಡಬಹುದು ಮತ್ತು ತ್ವರಿತವಾಗಿ ಸಿದ್ಧಾಂತದ ಊರಿಗೆ ಹೋಗಬಹುದು ।೨೦೯॥

ಎಲ್ಲಿ ಶಬ್ದಗಳು ಇಲ್ಲದಾಗುವುವೋ ಆ ಮಾತುಗಳನ್ನು ನಾನು ಸುಂದರವಾಗಿ ಹೇಳುವೆನು ಕೇಳಿರಿ ಎಂದು ನಿವೃತ್ತಿದಾಸ ಜ್ಞಾನೇಶ್ವರರು ಹೇಳುವರು ।೨೧೦॥

ಶ್ರೀ ಜ್ಞಾನೇಶ್ವರ ಮಹಾರಾಜರಿಂದ ರಚಿತವಾದ ಭಾವಾರ್ಥ ದೀಪಿಕೆಯ
ಏಳನೆಯ ಅಧ್ಯಾಯದ ವಿವರಣೆ ಸಮಾಪ್ತವು.

# ಸಾರ್ಥ ಶ್ರೀಜ್ಞಾನೇಶ್ವರೀ

## ಅಧ್ಯಾಯ ಆಠವಾ

ಶ್ರೀ ಗಣೇಶಾಯ ನಮಃ

---

ಅರ್ಜುನ ಉವಾಚ :-
ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।
ಅಧಿಭೂತಂ ಚ ಕಿಂ ಪ್ರೋಕ್ತಮ್ ಅಧಿದೈವಂ ಕಿಮುಚ್ಯತೇ ।೧॥

ಮಗ ಅರ್ಜುನೇ ಮ್ಹಣಿತಲೇ । ಹಾ ಹೋ ಜೀ ಅವಧಾರಿಲೇ । ಜೇ ಮ್ಯಾ ಪುಸಿಲೇ । ತೇ ನಿರೂಪಿಜೋ ।೧॥ ಸಾಂಗಾ ಕವಣ ತೇ ಬ್ರಹ್ಮ । ಕಾಯಸಯಾ ನಾಮ ಕರ್ಮ । ಅಥವಾ ಅಧ್ಯಾತ್ಮ । ಕಾಯ ಮ್ಹಣಿಪೇ ।೨॥ ಅಧಿಭೂತ ತೇ ಕೈಸೇ । ಏಥ ಅಧಿದೈವ ತೇ ಕವಣ ಅಸೇ । ಹೇ ಉಘಡ ಮೀ ಪರಿಯೇಸೇ । ಐಸೇ ಬೋಲಾ ।೩॥

ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ ಮಧುಸೂದನ ।
ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ।೨॥

ದೇವಾ ಅಧಿಯಜ್ಞ ತೋ ಕಾಈ । ಕವಣ ಪಾ ಇಯೇ ದೇಹೀ । ಹೇ ಅನುಮಾನಾಸಿ ಕಾಂಹೀ । ದಿಠೀ ನ ಭರೇ ।೪॥ ಆಣಿ ನಿಯತಾ ಅಂತಃಕರಣೀ । ತೂ ಜಾಣಿಜಸೀ ದೇಹಪ್ರಯಾಣೀ । ತೇ ಕೈಸೇನಿ ಹೇ ಶಾರ್ಙ್ಗಪಾಣೀ । ಪರಿಸವಾ ಮಾತೇ ।೫॥ ದೇಖಾ ಧವಳಾರೀ ಚಿಂತಾಮಣೀಚಾ । ಜರೀ ಪಹುಡಲಾ ಹೋಯ ದೈವಾಚಾ । ತರೀ ವೋಸಣತಾಂಹೀ ಬೋಲು ತಯಾಚಾ । ಸೋಪು ನ ವಚೇ ।೬॥ ತೈಸೆ ಅರ್ಜುನಾಚಿಯಾ ಬೋಲಾಸವೇ । ಆಲೇ ತೇಂಚಿ ಮ್ಹಣಿತಲೇ ದೇವೇ । ತೇ ಪರಿಯೇಸೇ ಗಾ ಬರವೇ । ಜೇ ಪುಸಿಲೇ ತುವಾ ।೭॥ ಕಿರೀಟೀ ಕಾಮಧೇನೂಚಾ ಪಾಡಾ । ವರೀ ಕಲ್ಪತರೂಚಾ ಆಹೇ ಮಾಂಢೋಡಾ । ಮ್ಹಣೌನಿ ಮನೋರಥ ಸಿದ್ಧೀಚಿಯಾ ಚಾಡಾ । ತೋ ನವಲ ನೋಹೇ ।೮॥ ಕೃಷ್ಣ ಕೋಪೋನಿ ಜ್ಯಾಸೀ ಮಾರೀ । ತೋ ಪಾವೇ ಪರಬ್ರಹ್ಮಸಾಕ್ಷಾತ್ಕಾರೀ । ಮಾ ಕೃಪೇನೇ ಉಪದೇಶು ಕರೀ । ತೋ ಕೈಶಾಪರೀ ನ ಪವೇಲ? ।೯॥ ಜೈ ಕೃಷ್ಣಚಿ ಹೋಇಜೇ ಆಪಣ । ತೈ ಕೃಷ್ಣ ಹೋಯ ಆಪುಲೇ ಅಂತಃಕರಣ । ಮಗ ಸಂಕಲ್ಪಾಚೇ ಆಂಗಣ । ವೋಳಗತೀ ಸಿದ್ಧೀ ।೧೦॥

# ಸಾರ್ಥ ಶ್ರೀಜ್ಞಾನೇಶ್ವರೀ

## ಎಂಟನೆಯ ಅಧ್ಯಾಯ

ಶ್ಲೋಕಾರ್ಥ :- ಅರ್ಜುನನು ಹೀಗೆಂದನು:- ಹೇ ಪುರುಷೋತ್ತಮಾ! ಬ್ರಹ್ಮ ಎಂದರೇನು? ಆಧ್ಯಾತ್ಮ ಎಂದರೇನು? ಕರ್ಮವೆಂದರೇನು? ಅಧಿಭೂತ ಎಂದೂ, ಅಧಿದೈವ ಎಂದೂ ಯಾವುದಕ್ಕೆ ಹೇಳುತ್ತಾರೆ? ।೧॥

ಆಗ ಅರ್ಜುನನು ಅಂದನು:- ಅಹೋ ದೇವನೇ ಕೇಳಿದಿರಾ ? ನಾನೇನು ನಿಮಗೆ ಕೇಳುವೆನೋ ಅದನ್ನು ವಿಸ್ತಾರವಾಗಿ ನಿರೂಪಿಸಿರಿ ।೧॥

ಬ್ರಹ್ಮ ಎಂದರೆ ಯಾವುದು? ಕರ್ಮವು ಯಾವುದರ ಹೆಸರು? ಅಥವಾ ಆಧ್ಯಾತ್ಮ ಯಾವುದಕ್ಕೆ ಅನ್ನುವರು? ।೨॥

ಅಧಿಭೂತ ಇದು ಹೇಗೆ? ಈ ವಿಷಯದಲ್ಲಿ ಅಧಿದೈವ ಯಾವುದಿರುವುದು? ಇದನ್ನು ನನಗೆ ಸ್ಪಷ್ಟವಾಗಿ ತಿಳಿಯುವ ರೀತಿಯಲ್ಲಿ ಹೇಳಿರಿ ।೩॥

ಶ್ಲೋಕಾರ್ಥ :- ಮಧುಸೂದನಾ! ಈ ದೇಹದಲ್ಲಿ ಅಧಿಯಜ್ಞನು ಯಾರು? ಪ್ರಾಣ ಪ್ರಯಾಣ ಕಾಲದಲ್ಲಿ ಯೋಗಿಗಳು ನಿನ್ನನ್ನು ಹೇಗೆ ತಿಳಿದುಕೊಳ್ಳುತ್ತಾರೆ? ।೨॥

ದೇವಾ, ಅಧಿಯಜ್ಞವೆಂದರೇನು? ಅದು ಈ ದೇಹದಲ್ಲಿ ಯಾವುದು? ಅದು ಅನುಮಾನದಿಂದ ಸರಿಯಾಗಿ ಲಕ್ಷದಲ್ಲಿ ಬರುವುದಿಲ್ಲ ।೪॥

ಹೇ ಶಾರ್ಙ್ಗಪಾಣಿಯೇ, ಯಾರು ಅಂತಃಕರಣವನ್ನು ಸ್ವಾಧೀನಮಾಡಿಕೊಂಡರೋ, ಅವರಿಗೆ ಅಂತ್ಯ ಕಾಲದಲ್ಲಿ ನಿಮ್ಮನ್ನು ಹೇಗೆ ತಿಳಿಯಲು ಸಾಧ್ಯ ? ಇದನ್ನು ನನಗೆ ಉತ್ತಮ ರೀತಿಯಲ್ಲಿ ತಿಳಿಸಿರಿ ।೫॥

(ಜ್ಞಾನೇಶ್ವರರು ಹೇಳುವರು) ನೋಡಿರಿ, ಚಿಂತಾಮಣಿ ಮನೆಯಲ್ಲಿ ಒಂದು ವೇಳೆ ಭಾಗ್ಯಶಾಲಿಯು ಮಲಗಿಕೊಂಡಾಗ ಆತನು ನಿದ್ರೆಯಲ್ಲಿ ಬಡಬಡಿಸಿದರೂ ಆತನ ಬಡಬಡಿಕೆ ವ್ಯರ್ಥ ಹೋಗುವುದಿಲ್ಲ ।೬॥

ಆದರಂತೆ ನನಗೆ ಇದನ್ನು ಹೇಳಿರಿ ಎಂದು ಅರ್ಜುನನು ಕೇಳುವುದೊಂದೇ ತಡ, ದೇವನು ಹೇಳಿದನು "ನೀನು ಕೇಳಿರುವ ಎಲ್ಲವನ್ನೂ ಹೇಳುವೆ ಸರಿಯಾಗಿ ಕೇಳು" ।೭॥

ಕಿರೀಟಿಯು ಕಾಮಧೇನುವಿನ ಕರುವಾಗಿದ್ದು ಆತನ ಮೇಲೆ ಕಲ್ಪವೃಕ್ಷದ ಹಂದರವಿದೆ. ಅರ್ಥಾತ್ ಆತನ ಎಲ್ಲ ಮನೋರಥಗಳು ಸಿದ್ಧಿಗೊಳ್ಳುವುವು. ಇದರಲ್ಲೇನಾಶ್ಚರ್ಯ? ।೮॥

ಶ್ರೀಕೃಷ್ಣನು ಯಾರಿಗೆ ಕೋಪದಿಂದ ಸಂಹರಿಸುತ್ತಾನೆಯೋ ಆತನು ಸಹ ಬ್ರಹ್ಮರೂಪವನ್ನು ಹೊಂದುವನು. ಅಂದಮೇಲೆ ಕೃಪಾದೃಷ್ಟಿಯಿಂದ ಉಪದೇಶ ಮಾಡಿದಾಗ ಅವರಿಗೆ ಏನು ಪ್ರಾಪ್ತವಾಗಲಿಕ್ಕಿಲ್ಲ ? ।೯॥

ಯಾವ ವೇಳೆಯಲ್ಲಿ ಕೃಷ್ಣ ನಾನೇ ಇರುವೆ ಎಂದು ನಿಶ್ಚಯವಾಗುವುದೋ ಆ ವೇಳೆಯಲ್ಲಿ ಆತನ ಅಂತಃಕರಣವು ಕೃಷ್ಣರೂಪವಾಗುವುದು. ಆಗ ಸಂಕಲ್ಪ ರೂಪ ಅಂಗಳದಲ್ಲಿ ಋದ್ಧಿಸಿದ್ಧಿಗಳು ದುಡಿಯುತ್ತಿರುವುವು ।೧೦॥

ಪರಿ ಐಸೇ ಜೇ ಪ್ರೇಮ । ತೇ ಅರ್ಜುನೀಂಚಿ ಆಥೀ ನಿಸ್ಸೀಮ । ಮ್ಹಣೌನಿ ತಯಾಚೇ ಕಾಮ । ಸದಾ ಸಫಳ ।೧೧॥ ಯಾ ಕಾರಣೇ ಶ್ರೀಅನಂತೇ । ತೇ ಮನೋಗತ ತಯಾಚೇ ಪುಸತೇ । ಹೋಈಲ ಜಾಣೊನಿ ಆಇತೇ । ವೋಗರೂನಿ ಠೇವಿಲೇ ।೧೨॥ ಜೇ ಅಪತ್ಯ ಥಾನೀಹೂನಿ ನಿಗೇ । ತಯಾಚೀ ಭೂಕ ತೇ ಮಾಯೇಸೀಚಿ ಲಾಗೇ । ಏರ್ಹವೀ ತೇ ಶಬ್ದೇಂ ಕಾಯ ಸಾಂಗೇ । ಮಗ ಸ್ತನ್ಯ ದೇ ಯೇರೀ? ।೧೩॥ ಮ್ಹಣೌನಿ ಕೃಪಾಳುವಾ ಗುರೂಚಿಯಾ ಠಾಯೀಂ । ಹೇ ನವಲ ನೋಹೇ ಕಾಂಹೀ । ಪರಿ ತೇ ಅಸೋ ಆಇಕಾ ಕಾಈ । ಜೇ ದೇವ ಬೋಲತೇ ಜಾಹಲೇ ।೧೪॥

ಶ್ರೀಭಗವಾನುವಾಚ:-

ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮ ಮುಚ್ಯತೇ ।
ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ।೩॥

ಮಗ ಮ್ಹಣಿತಲೇ ಸರ್ವೇಶ್ವರೇ । ಜೇ ಆಕಾರೀ ಇಯೇ ಖೋಂಕರೇ । ಕೊಂದಲೇ ಅಸತ ನ ಖಿರೇ । ಕವಣೇ ಕಾಳೀ ।೧೫॥ ಏರ್ಹವೀ ಸಪೂರಪಣ ತಯಾಚೇ ಪಹಾವೇ । ತರೀ ಶೂನ್ಯಚಿ ನವ್ಹೇ ಸ್ವಭಾವೇ । ವರಿ ಗಗನಾಚೇನಿ ಪಾಲವೇ । ಗಾಳೂನಿ ಘೇತಲೇ ।೧೬॥ ಜೇ ಐಸೇಂಹೀ ಪರಿ ವಿರುಳೇ । ಇಯೇ ವಿಜ್ಞಾನಾಚಿಯೇ ಖೋಳೇ । ಹಾಲವಲೇಂಹೀ ನ ಗಳೇ । ತೇ ಪರಬ್ರಹ್ಮ ।೧೭॥ ಆಣಿ ಆಕಾರಾಚೇನಿ ಜಾಲೇಪಣೇ । ಜನ್ಮಧರ್ಮಾತೇ ನೇಣೇ । ಆಕಾರಲೋಪೀ ನಿಮಣೇ । ನಾಹೀ ಕಹೀ ।೧೮॥ ಐಶಿಯಾ ಆಪುಲಿಯಾಚೀ ಸಹಜ ಸ್ಥಿತೀ । ಜಯಾ ಬ್ರಹ್ಮಾಚೀ ನಿತ್ಯತಾ ಅಸತೀ । ತಯಾ ನಾಮ ಸುಭದ್ರಾಪತೀ । ಅಧ್ಯಾತ್ಮ ಗಾ ।೧೯॥ ಮಗ ಗಗನೀ ಜೇವೀ ನಿರ್ಮಳೇ । ನೇಣೋ ಕೈಚೀ ಏಕೇವೇಳೇ । ಉಠತೀ ಘನಪಟಳೇ । ನಾನಾವರ್ಣೇ ।೨೦॥ ತೈಸೇ ಅಮೂರ್ತೀ ತಿಯೇ ವಿಶುದ್ಧೇ । ಮಹದಾದಿ ಭೂತಭೇದೇ । ಬ್ರಹ್ಮಾಂಡಾಚೇ ಬಾಂಧೇ । ಹೋಚಿ ಲಾಗತೀ ।೨೧॥ ಪೈ ನಿರ್ವಿಕಲ್ಪಾಚಿಯೇ ಬರಡೀ । ಫುಟೇ ಆದಿಸಂಕಲ್ಪಾಚೀ ವಿರೂಢೀ । ಆಣಿ ತೇ ಸವೇಂಚಿ ಮೋಡೋನಿ ಯೇ ಢೋಂಢೀ । ಬ್ರಹ್ಮಗೋಳಕಾಂಚ್ಯಾ ।೨೨॥ ತಯಾ ಏಕೈಕಾಚೆ ಭೀತರೀ ಪಾಹಿಜೇ । ತಂವ ಬೀಜಾಚಾಚಿ ಭರಿಲಾ ದೇಖಿಜೇ ।ಮಾಜೀ ಹೋತಿಯಾ ಜಾತಿಯಾ ನೇಣಿಜೇ । ಲೇಖ ಜೀವಾ ।೨೩॥ ಮಗ ತಯಾ ಬ್ರಹ್ಮಗೋಳಕಾಂಚೇ ಅಂಶಾಂಸ । ಪ್ರಸವತೀ ಆದಿಸಂಕಲ್ಪ ಅಸಮಸಹಾಸ । ಹೇ ಅಸೋ ಐಸೀ ಬಹುವಸ । ಸೃಷ್ಟೀ ವಾಢೇ ।೨೪॥

ಆದರೆ ಈ ಪ್ರಕಾರದ ಯಾವ ನಿಃಸ್ಸೀಮ ಪ್ರೇಮವು ಒಬ್ಬ ಅರ್ಜುನನಲ್ಲಿ ಮಾತ್ರ ಇರುವುದು. ಆದ್ದರಿಂದ ಆತನ ಇಚ್ಛೆಯು ಯಾವಾಗಲೂ ಸಿದ್ಧಿಗೊಳ್ಳುವುದು ।೧೧।।

ಆದ್ದರಿಂದ ಅರ್ಜುನನು ಈಗ ತನ್ನ ಮನಸ್ಸಿನ ಸಂಗತಿಯನ್ನು ನನಗೆ ಕೇಳುವನು ಎಂದು ತಿಳಿದು ಶ್ರೀಕೃಷ್ಣನು ಮೊದಲೇ ಉತ್ತರದ ತಾಟವನ್ನು ಬಡಿಸಿ ಇಟ್ಟನು ।೧೨।।

ಸ್ತನಪಾನ ಮಾಡುವ ಕೂಸಿನ ಹಸಿವು ತಾಯಿಗಾಗುವುದು (ತಾಯಿಗೆ ಸಹಜವಾಗಿ ತಿಳಿಯುವುದು) ಅಲ್ಲದೇ ಆ ಕೂಸು ಕೇಳಿದ ಮೇಲೆ ಆಕೆಯು ಹಾಲು ಕುಡಿಸುವಳೇ ? ।೧೩।।

ಅರ್ಥಾತ್ ಕೃಪಾಳುನಾದ ಸದ್ಗುರುವಿನಲ್ಲಿ (ತನ್ನ ಶಿಷ್ಯನಿಗಾಗಿ) ಇಂತಹ ಪ್ರೇಮ ಇರುವುದು ಅಂದರೆ ಅದು ಆಶ್ಚರ್ಯವಲ್ಲ. ಆದರೆ ಅದು ಇರಲಿ, ದೇವನು ಏನು ಹೇಳಿದನೆಂಬುದನ್ನು ಕೇಳಿರಿ ।೧೪।।

**ಶ್ಲೋಕಾರ್ಥ** :- ಭಗವಂತನು ಹೀಗೆಂದನು:- ನಾಶರಹಿತವಾದ ಶ್ರೇಷ್ಠ ತತ್ತ್ವವು ಬ್ರಹ್ಮವು, ಅದರ ಸ್ವಭಾವವಾದ ಪ್ರತ್ಯಗಾತ್ಮನೇ ಆಧ್ಯಾತ್ಮ ಭೂತಕೋಟಿಗಳ ಸಾತ್ವಿಕಾದಿ ಭಾವಗಳನ್ನು ಉತ್ಪನ್ನ ಮಾಡುವ ಸೃಷ್ಟಿ ವ್ಯಾಪಾರವೇ ಕರ್ಮವೆನಿಸುತ್ತದೆ ।೩।।

ಆಗ ಸರ್ವೇಶ್ವರು ಅಂದನು:- ಯಾವ ಈ ಒಡಕು ಆಕಾರದಲ್ಲಿ (ಶರೀರದಲ್ಲಿ) ಓತಪ್ರೋತವಾಗಿ ತುಂಬಿಕೊಂಡಿದ್ದು ಯಾವ ಕಾಲಕ್ಕೂ ನಾಶ ಹೊಂದುವುದಿಲ್ಲ ।೧೫।।

ಸಾಮಾನ್ಯವಾಗಿ ಇದರ ಸೂಕ್ಷ್ಮತನಕ್ಕೆ ವಿಚಾರಿಸಿದರೆ ಶೂನ್ಯವೇ ಆಗಿದೆ ಎಂದು ಭಾಸವಾಗುವುದು. ಆದರೆ ಅದು ಹಾಗಲ್ಲ. ಇದು ಇಷ್ಟೊಂದು ಸೂಕ್ಷ್ಮವಾಗಿದೆ ಎಂದು ಹೇಳಬೇಕೆಂದರೆ ಆಕಾಶದ ಪದರಿನಿಂದ ಸೋಸಿ ತೆಗೆದಿದೆ ।೧೬।।

ಇದು ಇಷ್ಟು ಸೂಕ್ಷ್ಮವಾಗಿರುವುದು ನಿಜ. ಈ ಪ್ರಪಂಚವೆಂಬ ಅತಿ ನಯವಾದ ವಸ್ತ್ರದಲ್ಲಿ ಹಾಕಿ ಅಳುಗಾಡಿಸಿದರೂ ಅದು ಇಳಿಯುವುದಿಲ್ಲ. ಇದಕ್ಕೆ ಪರಬ್ರಹ್ಮವೆನ್ನುವರು ।೧೭।।

ಮತ್ತು ದೇಹಾದಿಕ ಆಕಾರದ ಜನ್ಮ ಧರಿಸಿದಾಗ ಆ ಜನ್ಮದ ವಿಕಾರ ತಿಳಿಯುವುದಿಲ್ಲ ಮತ್ತು ಆಕಾರದ ನಾಶವಾದ ಮೇಲೆ ಅದರ ನಾಶ ಎಂದೂ ಆಗುವುದಿಲ್ಲ ।೧೮।।

ಹೇ ಸುಭದ್ರಾಪತಿಯೇ, ಈ ರೀತಿಯಲ್ಲಿ ಆ ಬ್ರಹ್ಮಕ್ಕೆ ತನ್ನಲ್ಲಿಯೇ ನಿರಂತರ ಸಹಜಸ್ಥಿತಿ ಇರುತ್ತದೆ. ಅದಕ್ಕೆ ಆಧ್ಯಾತ್ಮವೆಂದು ಹೇಳುವರು ।೧೯।।

ನಿರ್ಮಲವಾದ ಆಕಾಶದಲ್ಲಿ ಒಮ್ಮಿಂದೊಮ್ಮೆಲೆ ಅನೇಕ ಬಣ್ಣ ಬಣ್ಣದ ಮೋಡಗಳ ಉತ್ಪತ್ತಿಯಾಗಿ ಸ್ಪಷ್ಟ ಕಾಣುವುದು. ಆದರೆ ಅದು ಯಾವ ಪ್ರಕಾರವಾಗಿ ತಿಳಿಯುವುದಿಲ್ಲವೋ ।೨೦।।

ಅದರಂತೆ ಅವ್ಯಕ್ತ ಮತ್ತು ಅತ್ಯಂತ ಶುದ್ಧವಾದ ಈ ಬ್ರಹ್ಮನಲ್ಲಿ ಪ್ರಕೃತಿ ಅಹಂಕಾರಾದಿಭೇದಗಳಿಂದ ಬ್ರಹ್ಮಾಂಡದ ಆಕಾರವು ಉತ್ಪನ್ನವಾಗುತ್ತಲೇ ಇರುವುದು ।೨೧।।

ಕಲ್ಪನಾತೀತ ಶುದ್ಧ ಬ್ರಹ್ಮದ ಬಯಲು ಭೂಮಿಯಲ್ಲಿ "ನಾನು ಬಹಳ ಪ್ರಕಾಶನಾಗುವೆ" ಎಂಬ ಸಂಕಲ್ಪದ ಅಂಕುರವು ಹುಟ್ಟಿ ಅದಕ್ಕೆ ತೀವ್ರವೇ ಬ್ರಹ್ಮಾಂಡದ ಅನೇಕ ಆಕಾರಗಳು ಉತ್ಪನ್ನವಾದವು ।೨೨।।

ಯಾವುದೇ ಆಕಾರದಲ್ಲಿ ನೋಡಲು ಅದು ಆ ಬೀಜ ಅಂದರೆ ಬ್ರಹ್ಮನಿಂದಲೇ ತುಂಬಿಕೊಂಡಿರುವುದು ಮತ್ತು ಈ ಬ್ರಹ್ಮಾಂಡದಲ್ಲಿ ಎಷ್ಟು ಜೀವಗಳು ಹುಟ್ಟುತ್ತವೆ ಮತ್ತು ಎಷ್ಟು ಸಾಯುತ್ತವೆ ಎಂಬುದಕ್ಕೆ ಗಣನೆ ಮಾಡಲು ಬರುವುದಿಲ್ಲ ।೨೩।।

ಮತ್ತು ಈಶ್ವರ ಆದಿಸಂಕಲ್ಪದಂತೆ ಬ್ರಹ್ಮಗೋಳಕದ ಅಂಶದಿಂದ ಅಂಶ (ಚತುರ್ದಶ ಭುವನದಿಂದ ರಾಷ್ಟ್ರ - ಪ್ರಾಂತ - ನಗರ - ಗ್ರಾಮ - ಮನೆ) ಈ ಪ್ರಕಾರವಾಗಿ ಸೃಷ್ಟಿಯ ವಿಸ್ತಾರವಾಗುವುದು ।೨೪।।

ಪರಿ ದುಜೇನವೀಣ ಏಕಲಾ । ಪರಬ್ರಹ್ಮಿಂಚೀ ಸಂಚಲಾ । ಅನೇಕತ್ವಾಚಾ ಆಲಾ । ಪೂರ ಜೈಸಾ ।೧೫॥ ತೈಸೇ ಸಮವಿಷಮತ್ವ ನೇಣೋ ಕೈಚೇ । ವಾಯಾಂಚಿ ಚರಾಚರ ರಚೇ । ಪಾಹತಾ ಪ್ರಸವತಿಯಾ ಯೋನೀಚೇ । ಲಕ್ಷ ದಿಸತೀ ।೧೬॥ ಯೇರಿ ಜೀವಭಾವಾಚಿಯೇ ಪಾಲವಿಯೇ । ಕಾಂಹೀ ಮರ್ಯಾದಾ ಕರೂ ನಯೇ । ಪಾಹಿಜೇ ಕವಣ ಹೇ ಆಘವೇ ವಿಯೇ । ತಂವ ಮೂಳ ತೇ ಶೂನ್ಯ।೧೭॥ ಮ್ಹಣೌನಿ ಕರ್ತಾ ಮುದಲ ನ ದಿಸೇ । ಆಣಿ ಸೇಖೀ ಕಾರಣಹೀ ಕಾಂಹೀ ನಸೇ । ಮಾಜೀ ಕಾರ್ಯಚಿ ಆಪೈಸೇ । ವಾಢೋ ಲಾಗೇ ।೧೮॥ ಐಸಾ ಕರಿತೇನವೀಣ ಗೋಚರು । ಅವ್ಯಕ್ತೀ ಹಾ ಆಕಾರು । ನಿಪಜೇ ಜೋ ವ್ಯಾಪಾರು । ತಯಾ ನಾಮ ಕರ್ಮ ।೧೯॥

ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್ ।
ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂ ವರ ।೪॥

ಆತಾ ಅಧಿಭೂತ ಜೇಮ್ಹಣಿಪೇ । ತೇಹಿ ಸಾಂಗೋ ಸಂಕ್ಷೇಪೇ । ತರೀ ಹೋಯ ಆಣಿ ಹಾರಪೇ । ಅಭ್ರ ಜೈಸೇ ।೨೦॥ ತೈಸೇ ಅಸತೇಪಣ ಆಹಾಚ । ನಾಹೀ ಹೋಇಜೇ ಹೇ ಸಾಚ । ಜಯಾಂತೇ ರೂಪಾ ಆಣಿತೀ ಪಾಂಚಪಾಂಚ । ಮಿಳೋನಿಯಾ ।೨೧॥ ಭೂತಾಂತೇ ಅಧಿಕರೂನಿ ಆಸೇ । ಆಣಿ ಭೂತಸಂಯೋಗೇ ತರೀ ದಿಸೇ । ಜೇ ವಿಯೋಗಾ ವೇಳೇ ಭ್ರಂಶೇ । ನಾಮರೂಪಾದಿಕ ।೨೨॥ ತಯಾತೇ ಅದಿಭೂತ ಮ್ಹಣಿಜೇ । ಮಗ ಅಧಿದೈವ ಪುರುಷ ಜಾಣಿಜೇ । ಜೇಣೇ ಪ್ರಕೃತೀಚೇ ಭೋಗಿಜೇ । ಉಪಾರ್ಜಿಲೇ ।೨೩॥ ಜೋ ಚೇತನೇಚಾ ಚಕ್ಷು । ಜೋ ಇಂದ್ರಿಯ ದೇಶೀಂಚಾ ಅಧ್ಯಕ್ಷು । ಜೋ ದೇಹಾಸ್ತಮಾನೀ ವೃಕ್ಷು । ಸಂಕಲ್ಪ ವಿಹಂಗಮಾಚಾ ।೨೪॥ ಜೋ ಪರಮಾತ್ಮಾಚಿ ಪರೀ ದುಸರಾ । ಜೋ ಅಹಂಕಾರನಿದ್ರಾ ನಿದಸುರಾ । ಮ್ಹಣೌನಿ ಸ್ವಪ್ನೀಚಿಯಾ ವೋರಬಾರಾ । ಸಂತೋಷೇ ಶಿಣೇ ।೨೫॥ ಜೀವ ಯೇಣೇನಾವೇ । ಜಯಾತೇ ಆಳವಿಜೇ ಸ್ವಭಾವೇ । ತೇ ಅಧಿದೈವತ ಜಾಣಾವೇ । ಪಂಚಾಯತನೀಂಚೇ ।೨೬॥ ಆತಾ ಇಯೇಚಿ ಶರೀರಗ್ರಾಮೀ । ಜೋ ಶರೀರಭಾವಾತೇ ಉಪಶಮೀ । ತೋ ಅಧಿಯಜ್ಞು ಏಥ ಗಾ ಮೀ । ಪಂಡುಕುಮರಾ ।೨೭॥ ಯೇರ ಅಧಿದೈವಾಧಿಭೂತ । ತೇಹಿ ಮೀಚಿ ಕೀರ ಸಮಸ್ತ । ಪರಿ ಪಂಧರೇ ಕಿಡಾಳಾ ಮಿಳತ । ತೇ ಕಾಯ ಸಾಂಕೇ ನೋಹೇ ? ।೨೮॥ ತರೀ ತೇ ಪಂಧರೇಪಣ ನ ಮೈಳೇ । ಆಣಿ ಕಿಡಾಳಾಚಿಯಾಹೀ ಅಂಶಾ ನ ಮಿಳೇ । ಪರಿ ಜಂವ ಅಸೇ ತಯಾಚೇನಿ ಮೇಳೇ । ತಂವ ಸಾಂಕೇಚಿ ಮ್ಹಣಿಜೇ ।೨೯॥

ಆದರೆ, ಬೇರೆ ಯಾರ ಹೊರತಾಗಿಯೂ ಕೇವಲ ಒಂದೇ ಪರಬ್ರಹ್ಮವು ಸರ್ವತ್ರ ತುಂಬಿಕೊಂಡಿದ್ದು ಅನೇಕ ರೂಪದಿಂದ ನಟಿಸಿ ಮಹಾಪೂರ ಬಂದಂತೆ ಕಾಣಿಸುವುದು ।೨೫॥

ಅದರಂತೆ ಸ್ಥಾವರ ಜಂಗಮ ವಿಶ್ವದ ರಚನೆ, ಕಾರಣವಿಲ್ಲದೇ ಸುಮ್ಮನೇ ಹೆಚ್ಚು ಕಡಿಮೆ ಹೇಗೆ ಆಗುತ್ತದೆಯೋ ಅದು ತಿಳಿಯುವುದಿಲ್ಲ. ಆದರೆ, ಹುಡುಕಿ ನೋಡಿದರೆ ಲಕ್ಷಗಟ್ಟಲೇ ಜಾತಿಗಳು ಉತ್ಪನ್ನವಾಗಿದ್ದು ತೋರುವುವು ।೨೬॥

ಇದಲ್ಲದೇ ನಾನಾ ಪ್ರಕಾರದ ಜೀವಗಳ ವಿಸ್ತಾರದ ಗಣನೆ ಮಾಡಲು ಬರುವುದಿಲ್ಲ. ಇವುಗಳು ಯಾರಿಂದ ಉತ್ಪನ್ನವಾಗುತ್ತವೆ ಎಂಬುದಕ್ಕೆ ಶೋಧ ಮಾಡಿದರೆ ಅವುಗಳ ಮೂಲವು ಶೂನ್ಯವಾಗಿರುವುದು ।೨೭॥

ಆದ್ದರಿಂದ ಈ ಬ್ರಹ್ಮಾಂಡದ ಮೂಲ ಕರ್ತನು ಕಾಣುವುದಿಲ್ಲ ಮತ್ತು ಕೊನೆಗೆ ಯಾವ ಕಾರಣವಿಲ್ಲದೇ ನಡುವೆಯೇ ಕಾರ್ಯವು ಸ್ವಭಾವತಃ ಬೆಳೆಯುತ್ತಲೇ ನಡೆದಿದೆ ।೨೮॥

ಈ ಪ್ರಕಾರವಾಗಿ ಅವ್ಯಕ್ತದ ಆಶ್ರಯದಲ್ಲಿ ಕರ್ತನ ಹೊರತಾಗಿ ಪ್ರತ್ಯಕ್ಷವಾಗಿ ಕಾಣುವ ಆಕಾರ ಉತ್ಪನ್ನ ಮಾಡುವ ಯಾವ ವ್ಯವಹಾರ ಇದೆಯೋ ಅದಕ್ಕೆ ಕರ್ಮವೆಂದು ಕರೆಯುವರು ।೨೯॥

ಶ್ಲೋಕಾರ್ಥ :- ನಾಶಿವಂತವಾದ ಶರೀರಾದಿ ಪದಾರ್ಥಗಳು ಅಧಿಭೂತಗಳು. ಸಮಷ್ಟಿ ಜೀವಾಭಿಮಾನಿಯಾದ ಹಿರಣ್ಯಗರ್ಭ ಪುರುಷನು ಅಧಿದೈವತವು. ಹೇ ನರೋತ್ತಮಾ! ಈ ದೇಹದಲ್ಲಿ ಅಂತರ್ಯಾಮಿಯಾದ ನಾನೇ ಅಧಿಯಜ್ಞನೆನಿಸಿಕೊಳ್ಳುತ್ತೇನೆ ।೪॥

ಈಗ "ಅಧಿಭೂತ" ಯಾವುದಕ್ಕೆ ಹೇಳುವರು ಎಂಬುದಕ್ಕೆ ಸಂಕ್ಷಿಪ್ತವಾಗಿ ಹೇಳುವೆನು. ಯಾವ ಪ್ರಕಾರವಾಗಿ ಆಕಾಶದಲ್ಲಿ ಮೋಡಗಳು ಉತ್ಪತ್ತಿಯಾಗಿ ಲಯಗೊಳ್ಳುತ್ತವೆಯೋ ।೩೦॥

ಅದೇ ಪ್ರಕಾರವಾಗಿ ಇದರ ಅಸ್ತಿತ್ವವು ಮೇಲ್ನೋಟಕ್ಕೆ ತೋರುತ್ತಿದ್ದರೂ ವಸ್ತುತಃ ಇಲ್ಲೆಂಬುವುದೇ ನಿಜವಾದ ಸ್ವರೂಪವು. ಪಂಚಮಹಾಭೂತಗಳು ಒಂದಾಗಿ ಇದಕ್ಕೆ ರೂಪವನ್ನುಂಟು ಮಾಡುವುವು ।೩೧॥

ಪಂಚಮಹಾಭೂತಗಳ ಆಶ್ರಯದಿಂದ ಇರುವುದು, ಅವುಗಳ ಸಂಯೋಗದಿಂದ ದೃಷ್ಟಿಗೆ ಬೀಳುವುದು ಮತ್ತು ವಿನಾಶಕಾಲದಲ್ಲಿ ಲಯಗೊಳ್ಳುವುದು. ಈ ಪ್ರಕಾರದ ನಾಮರೂಪ ।೩೨॥

ಇದಕ್ಕೆ "ಅಧಿಭೂತ" ಎಂದು ಕರೆಯುವರು. ಆಮೇಲೆ ಅಧಿದೈವತವೆಂದರೆ ಜೀವನು ಎಂದು ತಿಳಿಯಬೇಕು. ಆ ಜೀವನು ಪ್ರಕೃತಿಯು ಉತ್ಪನ್ನ ಮಾಡಿದ ಭೋಗದ ಉಪಭೋಗ ಪಡೆಯುವನು ।೩೩॥

ಜೀವನು ಮನ ಬುದ್ಧಿಯಲ್ಲಿರುವ ಜ್ಞಾನಪ್ರಕಾಶದ ಕಣ್ಣಾಗಿರುವನು. ಇಂದ್ರಿಯರೂಪ ದೇಶದ ಸ್ವಾಮಿಯಾಗಿರುವನು. ದೇಹಾವಸಾನದ ವೇಳೆಯಲ್ಲಿ ಸಂಕಲ್ಪರೂಪ ಪಕ್ಷಿ ಇರುವ ವೃಕ್ಷನಾಗಿರುವನು ।೩೪॥

(ಜೀವನು) ಪ್ರತ್ಯಕ್ಷವಾಗಿ ಎರಡನೆಯ ಪರಮಾತ್ಮನೇ ಆಗಿರುವನು. ಆದರೆ ಅಹಂಕಾರರೂಪ ನಿದ್ರೆಯಲ್ಲಿ ಮಲಗಿರುವುದರಿಂದ ಆತನಿಗೆ ಸ್ವಪ್ನದ ವ್ಯವಹಾರದಲ್ಲಿ ಸುಖ ದುಃಖಗಳಾಗುವುವು ।೩೫॥

ಮತ್ತು ಈತನಿಗೆ ಸಹಜವಾಗಿ "ಜೀವ" ಎಂದು ಕರೆಯುವರು ಮತ್ತು ಪಂಚಮಹಾಭೂತಾತ್ಮಕ ಶರೀರದ ಮುಖ್ಯ ದೇವತನಾಗಿರುವನು. ಈತನಿಗೆ "ಅಧಿದೈವತ" ಎನ್ನುವರು ।೩೬॥

ಪಂಡುಕುಮಾರನೇ, ಈಗ ಇದೇ ಶರೀರೂಪ ಗ್ರಾಮದಲ್ಲಿ ಯಾವ ಶಾರೀರಿಕ ಉಪಾಧಿಗಳ ಲಯ ಮಾಡುವನೋ ಆ "ಅಧಿಯಜ್ಞ" ನಾನಾಗಿರುವೆ ।೩೭॥

ಸಾಮಾನ್ಯವಾಗಿ ಅಧಿದೈವ ಮತ್ತು ಅಧಿಭೂತ ಇವು ಎಲ್ಲವೂ ನಿಜವಾಗಿಯೂ ನಾನೇ ಇರುವೆನು. ಆದರೆ ಚೊಕ್ಕ ಚಿನ್ನದಲ್ಲಿ ಹೀನ ಧಾತುಗಳನ್ನು ಕೂಡಿಸಿದರೆ ಅದು ಕಲಬೆರಕೆಯಾಗುವುದಿಲ್ಲವೇ ? ।೩೮॥

ಹಾಗೆಯೇ ಅದರ ಶ್ರೇಷ್ಠತೆ ಕುಂದುವುದಿಲ್ಲ ಮತ್ತು ಅದು ಕೇವಲ ಹೀನ ಧಾತು ಆಗುವುದಿಲ್ಲ. ಆದರೆ ಎಲ್ಲಿಯವರೆಗೆ ಹೀನ ಧಾತುವಿನಲ್ಲಿ ಏಕತ್ರವಿರುವುದೋ ಅಲ್ಲಿಯವರೆಗೆ ಕಲಬೆರಕೆ ಚಿನ್ನವೆನ್ನಬೇಕಾಗುವುದು ।೩೯॥

ತೈಸೇ ಅಧಿಭೂತಾದೀ ಆಘವೇ । ಹೇ ಅವಿದ್ಯೇಚೇನಿ ಪಾಲವೇ । ಝಾಕಲೇ ತಂವ ಮಾನಾವೇ । ವೇಗಳೇ ಐಸೇ ।೪೦॥ ತೇಚಿ ಅವಿದ್ಯೇಚಿ ಜವನಿಕಾ ಫಿಟೇ । ಆಣಿ ಭೇದಭಾವಾಚೀ ಅವಧೀ ತುಟೇ । ಮಗ ಮ್ಹಣೋ ಏಕ ಹೋಊನಿ ಜರಿ ಆಟೇ । ತರೀ ಕಾಯ ದೋನೀ ಹೋತೀ ?।೪೧॥ ಪೈ ಕೇಶಾಂಚಾ ಗುಂಡಾಳಾ । ವರಿ ಠೇವಿಲೀ ಸ್ಫಟಿಕಶಿಳಾ । ತೇ ವರಿ ಪಾಹಿಜೇ ಡೋಳಾ । ತಂವ ಭೇದಲೀ ಗಮತೀ ।೪೨॥ ಪಾಠೀ ಕೇಶ ಪರೌತೇ ನೇಲೇ । ಆಣಿ ಭೇದಲೇಪಣ ಕಾಯ ನೇಣೋ ಜಾಹಾಲೇ । ತರಿ ಡಾಂಕ ದೇಊನಿ ಸಾಂದಿಲೇ । ಶಿಳೇತೇ ಕಾಈ ?।೪೩॥ ನಾ ತೇ ಅಖಂಡಚಿ ಆಯತಿ । ಪರಿ ಸಂಗೇ ಭಿನ್ನ ಗಮಲೀ ಹೋತೀ । ತೇ ಸಾರಿಲಿಯಾ ಮಾಗೌತೀ । ಜೈಸೀ ಕಾ ತೈಸೀ ।೪೪॥ ತೇವೀಂಚಿ ಅಹಂಭಾವೋ ಜಾಯೇ । ತರೀ ಐಕ್ಯ ತೇ ಆಧೀಂಚಿ ಆಹೇ । ಹೇಂಚಿ ಸಾಚೇ ಜೇಥ ಹೋಯೇ । ತೋ ಅಧಿಯಜ್ಞು ಮೀ ।೪೫॥ ಪೈ ಗಾ ಆಮ್ಹೀ ತುಜ ।ಸಕಳ ಯಜ್ಞಕರ್ಮಜ । ಸಾಂಗಿತಲೇ ಕಾ ಜೇ ಕಾಜ । ಮನೀ ಧರೂನಿ।೪೬॥ ತೋ ಹಾ ಸಕಳ ಜೀವಾಂಚಾ ವಿಸಾಂವಾ । ನೈಷ್ಕರ್ಮ್ಯ ಸುಖಾಚಾ ಠೇವಾ । ಪರಿ ಉಘಡ ಕರೂನಿ ಪಾಂಡವಾ । ದಾವಿಜತ ಅಸೇ ।೪೭॥ ಪಹಿಲಿಯಾ ವೈರಾಗ್ಯ ಇಂಧನ ಪರಿಪೂರ್ತೀ । ಇಂದ್ರಿಯಾನಳೀ ಪ್ರದೀಪ್ತೀ । ವಿಷಯದ್ರವ್ಯಾಚಿಯಾ ಆಹುತೀ । ದೇಊನಿಯಾ ।೪೮॥ ಮಗ ವಜ್ರಾಸನ ತೇಚಿ ಉರ್ವಿ ೀ । ಶೋಧೂನಿ ಆಹಾರಮುದ್ರಾ ಬರವೀ । ವೇದಿಕಾ ರಚೇ ಮಾಂಡವೀ । ಶರೀರಾಚ್ಯಾ ।೪೯॥ ತೇಥ ಸಂಯಮಾಗ್ನೀಚೇ ಕುಂಡೇ । ಇಂದ್ರಿಯ ದ್ರವ್ಯಾಚೇನಿ ಪವಾಡೇ । ಯಜಿಜತೀ ಉದಂಡೇ । ಯುಕ್ತಿ ಘೋಷೇ ।೫೦॥ ಮಗ ಮನಪ್ರಾಣಸಂಯಮು । ಹಾಚಿ ಹವನಸಂಪದೇಚಾ ಸಂಭ್ರಮು । ಯೇಣೆ ಸಂತೋಷ ವಿಜೇ ನಿರ್ಧುಮು । ಜ್ಞಾನಾನಳೂ ।೫೧॥ ಐಸೇನಿ ಹೇ ಸಕಳ ಜ್ಞಾನೀ ಸಮರ್ಪೇ । ಮಗ ಜ್ಞಾನ ತೇ ಜ್ಞೇಯೀ ಹಾರಪೇ । ಪಾಠೀ ಜ್ಞೇಯಚಿ ಸ್ವರೂಪೇ । ನಿಖಿಲ ಉರೇ ।೫೨॥ ತಯಾ ನಾವ ಗಾ ಅಧಿಯಜ್ಞು । ಐಸೇ ಬೋಲಿಲಾ ಜಂವ ಸರ್ವಜ್ಞು । ತಂವ ಅರ್ಜುನ ಅತಿಪ್ರಾಜ್ಞು । ತಯಾ ಪಾತಲೇ ತೇ ।೫೩॥ ಹೇ ಜಾಣೋನಿ ಮ್ಹಣೆತಲೇ ದೇವೇ । ಪಾರ್ಥಾ ಪರಿಸತು ಆಹಾಸಿ ಬರವೇ । ಯಾ ಕೃಷ್ಣಾಚಿಯಾ ಬೋಲಾಸವೇ । ಯೇರು ಸುಖಾಚಾ ಜಾಹಲಾ ।೫೪॥ ದೇಖಾ ಬಾಲಕಾಚಿಯಾ ಧಣೀ ಧಾಇಜೇ । ಕಾ ಶಿಷ್ಯಾಚೇನಿ ಜಾಹಲೇಪಣೇ ಹೋಇಜೇ । ಹೇ ಸದ್ಗುರೂಚಿ ಏಕಲೇನಿ ಜಾಣಿಜೇ । ಕಾ ಪ್ರಸವತಿಯಾ ।೫೫॥

ಅದರಂತೆ ಅಧಿಭೂತಾದಿ ಇವೆಲ್ಲವೂ ಅಜ್ಞಾನದ ಪರದೆಯಲ್ಲಿ ಎಲ್ಲಿಯವರೆಗೆ ಅಡುಗಿಕೊಂಡಿರುವುವೋ ಅಲ್ಲಿಯವರೆಗೆ ಬೇರೆ ಎಂದು ಮನ್ನಿಸಬೇಕಾಗುವುದು।೪೦॥

ಅದೇ ಅಜ್ಞಾನದ ಪರದೆಯು ಹರಿದಾಗ ಭೇದಭಾವವು ನಷ್ಟಗೊಳ್ಳುವುದು. ಆಗ ಅವನ್ನು ಪುನಃ ಕೂಡಿಸಬೇಕೆಂದರೆ ಅವು ಎರಡಾಗಿವೆಯೇ? ।೪೧॥

ಇಲ್ಲಿ ನೋಡು, ಕೂದಲಿನ ಸುತ್ತು ಮಾಡಿ ಅದರ ಮೇಲೆ ಸ್ಪಟಿಕದ ಕಲ್ಲು ಇಟ್ಟಾಗ ಅದು ಮೇಲ್ನೋಟಕ್ಕೆ ಒಡೆದಂತೆ ಕಾಣುವುದು ।೪೨॥

ಹಿಂದಿನಿಂದ ಆ ಕೂದಲು ಒಂದು ಕಡೆ ಸರಿಸಿದಾಗ ಆ ಸ್ಪಟಿಕಶಿಲೆಯ ಒಡಕು ಎಲ್ಲಿ ಹೋಯಿತೆಂಬುದು ತಿಳಿಯುವುದಿಲ್ಲ. ಆದರೆ ಆ ಶಿಲೆಯನ್ನು ಅಂಟು ಹಚ್ಚಿ ಕೂಡಿಸಿದೆಯೇ? ।೪೩॥

ಇಲ್ಲ ; ಅದು ಮೂಲದಲ್ಲಿ ಅಖಂಡವಾಗಿಯೇ ಇತ್ತು. ಆದರೆ ಕೂದಲಿನ ಸಂಗತಿಯಿಂದ ಒಡಕಾದಂತೆ ಭಾಸವಾಗುತ್ತಿತ್ತು. ಕೂದಲು ಸರಿಸಿದಾಗ ಆ ಶಿಲೆಯು ಮೊದಲಿದ್ದ ಹಾಗೆಯೇ ಕಾಣಿಸುವುದು ।೪೪॥

ಅದರಂತೆ ಅಹಂಭಾವವು ನಷ್ಟವಾಯಿತೆಂದರೆ, ಐಕ್ಯವೂ ಮೂಲದಲ್ಲಿಯೇ ಇರುವುದು ಮತ್ತು ಈ ಐಕ್ಯವು ಎಲ್ಲಿ ಪ್ರತ್ಯಯಕ್ಕೆ ಬರುವುದೋ ಆ ಅಧಿಯಜ್ಞವೇ ನಾನು ।೪೫॥

ಇಲ್ಲಿ ನೋಡು; ಯಾವ ಉದ್ದೇಶವನ್ನು ಮನದಲ್ಲಿಟ್ಟುಕೊಂಡು ''ಎಲ್ಲ ಕರ್ಮಗಳು ಯಜ್ಞದಿಂದ ಆಗಿರುವುವು'' ಎಂದು ನಾವು ಮೊದಲೇ (ನಾಲ್ಕನೆಯ ಅಧ್ಯಾಯದಲ್ಲಿ) ನಿನಗೆ ಹೇಳಿರುವೆವು. ಅದೇ ''ಅಧಿಯಜ್ಞವು'' ।೪೬॥

ಇದು ಎಲ್ಲ ಜೀವಿಗಳ ಸುಖದ ವಿಶ್ರಾಂತಿ ಸ್ಥಾನವಾಗಿದ್ದು ಬ್ರಹ್ಮಸುಖದ ನಿಧಿಯಾಗಿರುವುದು. ಅದಕ್ಕಾಗಿ ಅರ್ಜುನಾ, ನಿನಗೆ ಇದನ್ನು ಸ್ಪಷ್ಟ ಮಾಡಿ ಹೇಳುವೆ ।೪೭॥

ಪ್ರಥಮವಾಗಿ ವೈರಾಗ್ಯರೂಪ ಕಟ್ಟಿಗೆಯ ಪೂರ್ಣತೆಯಿಂದ ಇಂದ್ರಿಯರೂಪ ಅಗ್ನಿಯನ್ನು ಹೊತ್ತಿಸಿ ಅದರಲ್ಲಿ ವಿಷಯರೂಪ ದ್ರವ್ಯದ ಆಹುತಿ ಕೊಡುವರು ।೪೮॥

ಆಗ ವಜ್ರಾಸನದ ಭೂಮಿಕೆಯನ್ನು ಶುದ್ಧಗೊಳಿಸಿ ಶರೀರರೂಪಿ ಹಂದರದಲ್ಲಿ ಮೂಳಬಂಧ ಮುದ್ರೆಯ ಕಟ್ಟೆ ಕಟ್ಟುವರು ।೪೯॥

ಆ ಸ್ಥಳದಲ್ಲಿ ಇಂದ್ರಿಯ ನಿಗ್ರಹರೂಪ ಅಗ್ನಿಯ ಕುಂಡದಲ್ಲಿ ಇಂದ್ರಿಯರೂಪ ಹೋಮ ದ್ರವ್ಯಗಳನ್ನು ಹಾಕಿ ಯೋಗ ಮಂತ್ರದಿಂದ ಹವನ ಮಾಡುವರು ।೫೦॥

ಆಗ ಮನಸ್ಸು ಮತ್ತು ಪ್ರಾಣ ಇವುಗಳ ನಿಗ್ರಹವು ಇವೇ ಹೋಮ ದ್ರವ್ಯದ ತಯಾರಿ ಮಾಡಿಕೊಂಡು ಆಗ ಹೊಗೆ ಇಲ್ಲದ ನಿರ್ದೋಷಿ ಜ್ಞಾನಾಗ್ನಿಯನ್ನು ಸಂತೋಷಗೊಳಿಸುವರು ।೫೧॥

ಈ ಪ್ರಕಾರವಾಗಿ ಈ ಸಾಹಿತ್ಯಗಳನ್ನು ಜ್ಞಾನದಲ್ಲಿ ಅರ್ಪಿಸಿ ಆಗ ಆ ಜ್ಞಾನವು ಬ್ರಹ್ಮದಲ್ಲಿ ಲಯಗೊಳ್ಳುವುದು. ನಂತರ ಕೇವಲ ಬ್ರಹ್ಮ ಇದೊಂದೇ ಉಳಿಯುವುದು ।೫೨॥

ಇದಕ್ಕೇನೇ ಅಧಿಯಜ್ಞ ಅಂದರೆ ಬ್ರಹ್ಮವೆನ್ನಬೇಕು. ಈ ಪ್ರಕಾರವಾಗಿ ಯಾವ ವೇಳೆಯಲ್ಲಿ ಸರ್ವೇಶ್ವರನಾದ ಶ್ರೀಕೃಷ್ಣನು ಹೇಳಿದಾಗ ಮಹಾಬುದ್ಧಿಶಾಲಿಯಾದ ಅರ್ಜುನನ ಧ್ಯಾನದಲ್ಲಿ ಬಂದಿತು ।೫೩॥

ಅರ್ಜುನನಿಗೆ ಬ್ರಹ್ಮ ತಿಳಿಯಲ್ಪಟ್ಟದ್ದು ದೇವನು ತಿಳಿದುಕೊಂಡು ಹೇಳಿದನು:- ''ನೀನು ಬಹಳ ಉತ್ತಮ ರೀತಿಯಲ್ಲಿ ಕೇಳುವೆ'' ಈ ಕೃಷ್ಣನ ಮಾತು ಕೇಳಿ ಅರ್ಜುನನು ಸಂತೋಷಗೊಂಡನು ।೫೪॥

ಇಲ್ಲಿ ನೋಡಿರಿ, ಸಣ್ಣ ಕೂಸಿನ ತೃಪ್ತಿಯಿಂದ ತಾನು ತೃಪ್ತಿಗೊಳ್ಳುವುದು ಅಥವಾ ಶಿಷ್ಯನ ಕೃತಾರ್ಥತೆಯಿಂದಾ ತಾನು ಕೃತಾರ್ಥತೆ ಪಡೆಯುವುದು ಇದು ಒಬ್ಬ ತಾಯಿ ಮತ್ತು ಸದ್ಗುರುಗಳಿಗೆ ಮಾತ್ರ ತಿಳಿದಿರುತ್ತದೆ ।೫೫॥

ಮ್ಹಣೌನಿ ಸಾತ್ತ್ವಿಕ ಭಾವಾಂಚೀ ಮಾಂದೀ । ಕೃಷ್ಣಾ ಆಂಗೀ ಅರ್ಜುನಾ ಆಧೀ । ನ ಸಮಾತಸೇ ಪರೀ ಬುದ್ಧೀ । ಸಾಂವರೂನಿ ದೇವೇ ।೫೬॥ ಮಗ ಪಿಕಲಿಯಾ ಸುಖಾಚಾ ಪರಿಮಳು। ಕೀ ನಿವಾಲಿಯಾ ಅಮೃತಾಚಾ ಕಲ್ಲೋಳು । ತೈಸಾ ಕೋಂವಳಾ ಆಣಿ ಸರಳು । ಬೋಲು ಬೋಲಿಲಾ ।೫೭॥ ಮ್ಹಣೇ ಪರಿಸಣೇಯಾಂಚಿಯಾ ರಾಯಾ। ಆಇಕೇ ಬಾಪಾ ಧನಂಜಯಾ । ಐಸೀ ಜಳೋ ಸರಲಿಯಾ ಮಾಯಾ । ತೇಥ ಜಾಳಿತೇ ತೇಂಹೀ ಜಳೇ ।೫೮॥

ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಮ್ ।
ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ।೫॥

ಜೇ ಆತಾಂಚಿ ಸಾಂಗಿತಲೇ ಹೋತೇ। ಅಗಾ ಅಧಿಯಜ್ಞ ಮ್ಹಣಿತಲಾ ಜಯಾತೇ । ಜೇ ಆದೀಂಚಿ ತಯಾಮಾತೇ । ಜಾಣೋನಿ ಅಂತೀ ।೫೯॥ ತೇ ದೇಹ ಝೋಲ ಐಸೇ ಮಾನುನೀ । ಠೇಲೇ ಆಪಣಪೇ ಆಪಣ ಹೋಉನೀ । ಜೈಸಾ ಮಠ ಗಗನಾ ಭರೂನೀ । ಗಗನೀಚಿ ಅಸೇ ।೬೦॥ ಯೇ ಪ್ರತೀತಿಚಿಯಾ ಮಾಜಘರೀ । ತಯಾ ನಿಶ್ಚಯಾಚೀ ವೋವರೀ । ಆಲೀ ಮ್ಹಣೌನಿ ಬಾಹೇರೀ । ನವ್ಹೇಚಿ ಸೇ।೬೧॥ ಐಸೇ ಸಬಾಹ್ಯ ಐಕ್ಯ ಸಂಚಲೇ । ಮೀಚಿ ಹೋಊನಿ ಆಸತಾ ರಚಿಲೇ । ಬಾಹೇರಿ ಭೂತಾಂಚೇ ಪಾಂಚಹೀ ಖವಲೇ । ನೇಣತಾಂಚಿ ಪಡಿಲಿ ।೬೨॥ ಆತಾ ಉಭಯಾ ಉಭೇಪಣ ನಾಹೀ ಜಯಾಚೇ । ಮಾ ಪಡಿಲಿಯಾ ಗಹನ ಕವಣ ತಯಾಚೇ । ಮ್ಹಣೌನಿ ಪ್ರತೀತೀಚಿಯೇ ಪೋಟೀಂಚೇ । ಪಾಣೀ ನ ಹಾಲೇ ।೬೩॥ ತೇ ಐಕ್ಯಾಚೀ ಆಹೇ ವೋತಿಲೀ । ಕೀ ನಿತ್ಯತೇಚಿಯಾ ಹೃದಯೀ ಘಾತಲೀ । ಜೈಸೀ ಸಮರಸ ಸಮುದ್ರೀ ಧುತಲೀ । ರುಳೇಚಿನಾ ।೬೪॥ ಪೈ ಅಥಾವೀ ಘಟ ಬುಡಾಲಾ । ತೋ ಆಂತ ಬಾಹೇರೀ ಉದಕೇ ಭರಲಾ । ಪಾಠೀ ದೈವಗತ್ಯಾ ಜರೀ ಫುಟಲಾ । ತರೀ ಉದಕ ಕಾಯ ಫುಟೇ? ।೬೫॥ ನಾತರೀ ಸರ್ಪೇ ಕವಚ ಸಾಂಡಿಲೇ। ಕಾ ಉಬಾರೇನೇ ವಸ್ತ್ರ ಫೇಡಿಲೇ। ತರೀ ಸಾಂಗ ಪಾ ಕಾಯ ಮೋಡಲೇ । ಅವೇವಾ ಮಾಜೇ? ।೬೬॥ ತೈಸಾ ಆಕಾರು ಹಾ ಆಹಾಚ ಭ್ರಂಶೇ । ವಾಂಚೂನೀ ವಸ್ತು ತೇ ಸಾಂಚಲೀಚಿ ಅಸೇ । ತೇಚಿ ಬುದ್ಧಿ ಜಾಲಿಯಾ ವಿಸಕುಸೇ । ಕೈಸೇನಿ ಆತಾ ।೬೭॥ ಮ್ಹಣೌನಿ ಯಾಪರೀ ಮಾತೇ । ಅಂತಕಾಳೀ ಜಾಣತಸಾತೇ । ಜೇ ಮೋಕಲಿತೀ ದೇಹಾತೇ । ತೇ ಮೀಚಿ ಹೋತೀ ।೬೮॥

ಆದ್ದರಿಂದ ಅರ್ಜುನನಕ್ಕಿಂತಲೂ ಮೊದಲೇ ಶ್ರೀಕೃಷ್ಣನ ಶರೀರದಲ್ಲಿ ಅಷ್ಟ ಸಾತ್ವಿಕಭಾವವು ಹುಟ್ಟಿಕೊಂಡು ಹಿಡಿಸಲಾರದಷ್ಟಾಯಿತು. ಆದರೂ ದೇವನು ಸಹಿಸಿಕೊಂಡನು ।೫೬।।

ಪೂರ್ಣತೆಗೆ ಮುಟ್ಟಿದ ಸುಖದ ಸುಗಂಧದಂತೆ ಅಥವಾ ಶಾಂತಗೊಂಡ ಅಮೃತದ ತೆರೆಗಳಂತೆ ಕೋಮಲವಾಗಿಯೂ ಮತ್ತು ಸರಳವಾಗಿಯೂ ಹೇಳಲಾರಂಭಿಸಿದನು ।೫೭।।

ಪುನಃ ಹೇಳುತ್ತಾನೆ:- ಶ್ರವಣ ಮಾಡುವುದರಲ್ಲಿ ಶ್ರೇಷ್ಠನಾದ ಅರ್ಜುನನೇ, ಅಪ್ಪಾ ಕೇಳು, ಮಾಯೆಯು ಸುಟ್ಟು ಹೋದ ಮೇಲೆ ಅದನ್ನು ಸುಡುವ ಜ್ಞಾನವೂ ಸುಟ್ಟು ಹೋಗುವುದು ।೫೮।।

ಶ್ಲೋಕಾರ್ಥ :- ಮರಣ ಕಾಲದಲ್ಲಿ ನನ್ನನ್ನೇ ಸ್ಮರಿಸುತ್ತಾ ಶರೀರವನ್ನು ಬಿಟ್ಟವನು, ನಿಸ್ಸಂಶಯವಾಗಿಯೂ ನನ್ನ ಸ್ವರೂಪವನ್ನೇ ಪಡೆದುಕೊಳ್ಳುತ್ತಾನೆ ।೫।।

ಅರೇ, ಅಧಿಯಜ್ಞ ಎಂದು ಯಾರಿಗೆ ಹೇಳಬೇಕು ಎಂಬುದನ್ನು ಈಗ ಮಾತ್ರ ಹೇಳಿರುವೆನು. ಅಂತಹ ಅಧಿಯಜ್ಞನಾದ ನನಗೆ ಜೀವದಿಂದ ಇರುವಾಗ ಮತ್ತು ಪ್ರಾಣಾಂತ ಸಮಯಕ್ಕೆ ತಿಳಿಯುತ್ತಾರೆ ।೫೯।।

ಈ ದೇಹಕ್ಕೆ ಮಿಥ್ಯಾ ಎಂದು ತಿಳಿದು ತನ್ನಲ್ಲಿಯೇ ಬ್ರಹ್ಮರೂಪನಾಗುತ್ತಾನೆ. ಯಾವ ಪ್ರಕಾರವಾಗಿ ಒಂದು ಮನೆಯು ಆಕಾಶದಿಂದ ತುಂಬಿಕೊಂಡು ಆಕಾಶದಲ್ಲಿ ಹೇಗೆ ಇರುವುದೋ ।೬೦।।

ಅದೇ ಪ್ರಕಾರವಾಗಿ ಅನುಭವರೂಪ ನನ್ನ ಮನೆಯಲ್ಲಿ ಆತನ ನಿಶ್ಚಯರೂಪ ಕೋಣೆ ಇರುವುದು. ಆದ್ದರಿಂದ ಆತನಿಗೆ ಬ್ರಹ್ಮದ ಹೊರತಾಗಿ ದೇಹಾದಿಕ ಸ್ಮರಣೆಯಾಗುವುದಿಲ್ಲ ।೬೧।।

ಈ ಪ್ರಕಾರವಾಗಿ ಆತನು ಅಂತರಬಾಹ್ಯ ಐಕ್ಯದಿಂದ ಮದ್ರೂಪವನ್ನೇ ಹೊಂದಿಕೊಂಡಿರುತ್ತಾನೆ. ಆತನ ಹೊರಗಿನ ಪಂಚಮಹಾಭೂತಗಳ ಐದು ಕವಚಗಳು (ಶರೀರವು) ಆತನಿಗೆ ತಿಳಿಯದೇ ಬಿದ್ದು ಹೋಗುವುವು ।೬೨।।

ಈ ಯಾವ ಶರೀರ ಜೀವಂತವಿರುವಾಗಲೇ ಇದರ ಪರಿವೆ ಇಲ್ಲದಂತಾಗಲು ಅದು ಬಿದ್ದಾಗ ಅದರ ದುಃಖ ಯಾರಿಗಾಗಬೇಕು? ಆದ್ದರಿಂದ ಅನುಭವದ ಹೊಟ್ಟೆಯಲ್ಲಿನ ನೀರು ಅಲುಗಾಡುವುದಿಲ್ಲ ।೬೩।।

ಆತನು ಅನುಭವವನ್ನು ಐಕ್ಯ ಭಾವದಲ್ಲಿ ಸುರುವಿ ಅವಿನಾಶಿಯ ಹೃದಯದಲ್ಲಿ ಹಾಕಿರುವನು ಮತ್ತು ಪೂರ್ಣಾನಂದ ಸಮುದ್ರದಲ್ಲಿ ತೊಳೆದಿರುವನು. ಆದ್ದರಿಂದ (ಕಾಮಾದಿಕ) ಹೊಲಸಿನಿಂದ ಆತನು ಮಲಿನನಾಗುವುದಿಲ್ಲ ।೬೪।।

ಇಲ್ಲಿ ನೋಡು, ಆಳವಾದ ನೀರಿನಲ್ಲಿ ಮಡಿಕೆಯು ಮುಳುಗಿದಾಗ ಅದರ ಒಳಹೊರಗೆ ನೀರು ತುಂಬಿರುವುದು. ದೈವಗತಿಯಿಂದ ಆ ಮಡಿಕೆಯು ಒಡೆದರೆ ನೀರು ಒಡೆದಂತಾಗುವುದೇ? ।೬೫।।

ಅಥವಾ ಸರ್ಪವು ಪರಿಯನ್ನು ಬಿಚ್ಚಿಬಿಟ್ಟಿತು, ಅಥವಾ ಉಷ್ಣತೆಯ ಸೆಕೆಯಿಂದ ವಸ್ತ್ರವನ್ನು ತೆಗೆದೊಗೆದರು, ಆದರೆ ಅವಯವಗಳ ಭಂಗವಾಗುವುದೇ? ನೀನೇ ಹೇಳು ।೬೬।।

ಆದರಂತೆ ಮೇಲ್ನೋಟಕ್ಕೆ ಕಾಣುವ ಮಿಥ್ಯಾ ಶರೀರವು ನಾಶಹೊಂದಿದರೆ ಬ್ರಹ್ಮವು ಎಲ್ಲ ಕಡೆಗೂ ತುಂಬಿಕೊಂಡೇ ಇರುವುದು ಮತ್ತು ಬ್ರಹ್ಮವೇ ಬುದ್ಧಿಯಾದಲ್ಲಿ ಯಾವುದಕ್ಕೆ ದುಃಖ ಪಡಬೇಕು? ।೬೭।।

ಆದ್ದರಿಂದ ಈ ರೀತಿಯಿಂದ ಅಂತ್ಯಕಾಲದ ಸಮಯದಲ್ಲಿ ನನ್ನ ಸ್ಮರಣೆ ಇಟ್ಟುಕೊಂಡು ಯಾರು ದೇಹಬಿಡುತ್ತಾರೋ ಅವರು ಮದ್ರೂಪರಾಗುವರು ।೬೮।।

ಏರ್ಹ್ವೀ ತರೀ ಸಾಧಾರಣ । ಉರೀ ಆದಳಲಿಯಾ ಮರಣ। ಜೋ ಆಠವು ಧರೀ ಅಂತಃಕರಣ । ತೇಂಚಿ ಹೋಇಜೇ ॥೬೯॥ ಜೈಸಾ ಕವಣು ಏಕು ಕಾಕುಳತೀ । ಪಳತಾ ಪವನಗತೀ ।ದುಪಾಉಲೀ ಅವಚಿತೀ । ಕುಹಾಮಾಜೀ ಪಡಿಯೇಲಾ ॥೭೦॥ ಆತಾ ತಯಾ ಪಡಣಯಾ ಆರೌತೇ । ಪಡಣ ಚುಕವಾವಯಾ ಪರೌತೇ । ನಾಹೀ ಮ್ಹ ಣೌನಿ ತೇಥೇ । ಪಡಾವೇಂಚಿ ಪಡೇ ॥೭೧॥ ತೇವಿ ಮೃತ್ಯೂಚೇನಿ ಅವಸರೇ ಏಕೇ । ಜೇ ಯೇಊನಿ ಜೀವಾಸಮೋರ ಠಾಕೇ । ತೇ ಹೋಣೇ ಮಗ ನ ಚುಕೇ । ಭಲತಯಾಪರೀ ॥೭೨॥ ಆಣಿ ಜಾಗತಾ ಜಂವ ಅಸಿಜೇ । ತಂವ ಜೇಣೇ ಧ್ಯಾನೇ ಭಾವನಾ ಭಾವಿಜೇ । ಡೋಳಾ ಲಾಗತಖೇವೋ ದೇಖಿಜೇ । ತೇಂಚಿ ಸ್ವಪ್ನೀ ॥೭೩॥

ಯಂ ಯಂ ವಾಽಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಮ್ ।
ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥೬॥

ತೇವಿ ಜಿತೇನಿ ಅವಸರೇ । ಜೇ ಆವಡೋನಿ ಜೀವೀ ಉರೇ । ತೇಂಚಿ ಮರಣಾಚಿಯೇ ಮೇರೇ । ಫಾರ ಹೋ ಲಾಗೇ ॥೭೪॥ ಆಣಿ ಮರಣೀ ಜಯಾ ಜೇ ಆಠವೇ । ತೋ ತೇಚಿ ಗತೀತೇ ಪಾವೇ ।

ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ ।
ಮಯ್ಯರ್ಪಿತಮನೋಬುದ್ಧಿಃ ಮಾಮೇವೈಷ್ಯಸ್ಯಸಂಶಯಮ್ ॥೭॥

ಮ್ಹ ಣೌನಿ ಸದಾಸ್ಮರವೇ । ಮಾತೇಂಚಿ ತುವಾ ॥೭೫॥ ಡೋಳಾ ಜೇ ದೇಖಾವೇ । ಕಾ ಕಾನೀ ಹನ ಐಕಾವೇ । ಮನೀ ಜೇ ಭಾವಾವೇ । ಬೋಲಾವೇ ವಾಚೇ ॥೭೬॥ ತೇ ಆಂತ ಬಾಹೇರೀ ಆಘವೇ । ಮೀಚಿ ಕರೂನಿ ಘಾಲಾವೇ । ಮಗ ಸರ್ವಿಕಾಳೀ ಸ್ವಭಾವೇ । ಮೀಚಿ ಆಹೇ ॥೭೭॥ ಅರ್ಜುನಾ ಐಸೇ ಜಾಹಾಲಿಯಾ । ಮಗ ನ ಮರಿಜೇ ದೇಹ ಗೇಲಿಯಾ । ಮಾ ಸಂಗ್ರಾಮು ಕೇಲಿಯಾ । ಭಯ ಕಾಯ ತುಜ ? ॥೭೮॥ ತೂ ಮನ ಬುದ್ಧೀ ಸಾಚೇಂಸೀ । ಜರೀ ಮಾಝಿಯಾ ಸ್ವರೂಪೀ ಅರ್ಪಿಸೀ । ತರೀ ಮಾತೇಂಚಿ ಗಾ ಪಾವಸೀ । ಹೇ ಮಾಝೀ ಭಾಕ ॥೭೯॥ ಹೇಂಚಿ ಕಾಯಿಸಯಾವರೀ ಹೋಯೇ । ಐಸಾ ಜರೀ ಸಂದೇಹೋ ವರ್ತತು ಆಹೇ । ತರೀ ಅಭ್ಯಾಸೂನಿ ಆದಿ ಪಾಹೇ । ಮಗ ನವ್ಹೇ ತರೀ ಕೋಪೇ ॥೮೦॥

ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ ।
ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್ ॥೮॥

ಸಾಧಾರಣವಾಗಿ ಸಾಮಾನ್ಯ ನಿಯಮವು ಹೀಗಿದೆ, ಅದೇನೆಂದರೆ, ಮರಣ ಪ್ರಾಪ್ತವಾದಾಗ ಅಂತಃಕರಣದಲ್ಲಿ ಯಾರಿಗೆ ಯಾವ ಸ್ಮರಣೆಯಾಗುವುದೋ ಅದೇ ಅವರಿಗೆ ದೊರೆಯುತ್ತದೆ ॥೭೯॥

ಯಾವನೋ ಒಬ್ಬ ಮನುಷ್ಯನು ಭಯಗ್ರಸ್ತನಾಗಿ ಗಾಳಿಯಂತೆ ತೀವ್ರಗತಿಯಿಂದ ಓಡುವ ಕಾಲಕ್ಕೆ ದಾರಿಯಲ್ಲಿ ಎರಡೂ ಕಾಲು ಅಕಸ್ಮಾತ್ ತಪ್ಪಿ ಹಾಳುಬಾವಿಯಲ್ಲಿ ಬೀಳುವನು ॥೮೦॥

ಆ ಸ್ಥಿತಿಯಲ್ಲಿ ಆತನಿಗೆ ಬೀಳುವುದಕ್ಕಿಂತ ಮುಂಚಿತವಾಗಿ ಓಡುವ ಗತಿಯನ್ನು ಹತ್ತಿಕ್ಕಿ ಬೀಳುವುದನ್ನು ತಪ್ಪಿಸುವುದು ಆಗುವುದಿಲ್ಲ. ಆದ್ದರಿಂದ ಬಾವಿಯಲ್ಲಿ ಬೀಳಬೇಕಾಯಿತು ॥೮೧॥

ಅದರಂತೆ ಮೃತ್ಯು ಸಮಯಕ್ಕೆ ಜೀವದ ಮುಂದೆ ಯಾವ ವಸ್ತು ನಿಂತಿರುವುದೋ (ಮರಣದ ನಂತರ) ಆತನಿಗೆ ಅದನ್ನೇ ಆಗಬೇಕಾಗುವುದು. ಇದು ಯಾವ ಉಪಾಯದಿಂದಲೂ ತಪ್ಪಿಸಲು ಬರುವುದಿಲ್ಲ ॥೮೨॥

ಮತ್ತು ಮನುಷ್ಯನು ಜಾಗೃತನಿದ್ದಾಗ ಆತನ ಮನಸ್ಸಿನಲ್ಲಿ ಬಂದ ಕಲ್ಪನೆಗಳು ಮಲಗಿಕೊಂಡಾಗ ಅದೇ ಕಲ್ಪನೆಗಳು ಸ್ವಪ್ನದಲ್ಲಿ ಕಾಣಬರುವುವು ॥೮೩॥

ಶ್ಲೋಕಾರ್ಥ :- ಹೇ ಕುಂತೀಕುಮಾರಾ! ಶರೀರವನ್ನು ಬಿಡುವಾಗ ಮನುಷ್ಯನು ಯಾವ ಯಾವ ವಿಷಯಗಳನ್ನು ಚಿಂತಿಸುವನೋ ಆಯಾ ವಾಸನಾ ಬಲದಿಂದ ಅವನಿಗೆ ಅಂಥ ಗತಿಯೇ ಆಗುವುದು॥೬॥

ಅದರಂತೆ ಜೀವಂತನಿದ್ದಾಗ ಅಂತಃಕರಣದಲ್ಲಿ ಯಾರಲ್ಲಿ ಯಾವ ಪ್ರೀತಿ ಇರುವುದೋ ಅದು ಅಂತ್ಯಕಾಲದಲ್ಲಿ ಬೆಳೆದು ನಿಲ್ಲುವುದು ॥೮೪॥

ಮತ್ತು ಮರಣದ ಸಮಯದಲ್ಲಿ ಯಾರಿಗೆ ಯಾವುದು ಸ್ಮರಣೆಯಾಗುವುದೋ ಅದೇ ಗತಿಗೆ ಅವರು (ಮರಣದ ನಂತರ) ಹೊಂದುವರು. ಆದ್ದರಿಂದ ನೀನು ಯಾವಾಗಲೂ ನನ್ನನ್ನೇ ಸ್ಮರಿಸುತ್ತ ಇರು॥೮೫॥

ಶ್ಲೋಕಾರ್ಥ :- ಆದುದರಿಂದ ಅರ್ಜುನಾ ! ಸದಾ ನನ್ನನ್ನೇ ಅನುಸಂಧಾನ ಮಾಡುತ್ತ ಯುದ್ಧವನ್ನು ಮಾಡು. ಮನೋಬುದ್ಧಿಗಳನ್ನು ನನಗೆ ಅರ್ಪಿಸಿದರೆ ನೀನು ನನ್ನನ್ನೇ ಪಡೆಯುವುದರಲ್ಲಿ ಸಂಶಯವಿಲ್ಲ ॥೭॥

ಕಣ್ಣಿನಿಂದ ನೋಡುವುದು, ಕಿವಿಯಿಂದ ಕೇಳುವುದು, ಮನಸ್ಸಿನಿಂದ ಚಿಂತಿಸುವುದು, ಅಥವಾ ವಾಣಿಯಿಂದ ಹೇಳುವುದು ॥೮೬॥

ಹೃದಯದಲ್ಲಿ ಭಾಸವಾಗುವುದು, ಮತ್ತು ಬಾಹ್ಯ ದೃಷ್ಟಿಗೆ ಕಾಣುವುದು, ಎಲ್ಲವೂ ನಾನೇ ಇರುವೆನೆಂದು ತಿಳಿಯಬೇಕು. ಆಗ ಎಲ್ಲ ಕಡೆಗೂ ನಾನೇ ಇರುವುದು ನಿನಗೆ ಸಹಜವಾಗಿ ಕಾಣುವುದು ॥೮೭॥

ಅರ್ಜುನಾ, ಈ ಪ್ರಮಾಣವಾಗಿ ಎಲ್ಲವೂ ಮದ್ರೂಪವು ಎಂದು ನಿನ್ನ ಮನಸ್ಸಿನಲ್ಲಿ ಮೂಡಿದಾಗ ದೇಹ ಹೋದರೂ ನೀನು ಸಾಯುವುದಿಲ್ಲ. ಅಂದಮೇಲೆ ಯುದ್ಧ ಮಾಡಲು ನಿನಗೇತರ ಭಯ ? ॥೮೮॥

ನೀನು ನಿನ್ನ ಮನಸ್ಸನ್ನು ಮತ್ತು ಬುದ್ಧಿಯನ್ನು ನಿಜವಾಗಿಯೂ ನನ್ನ ಸ್ವರೂಪದಲ್ಲಿ ಅರ್ಪಿಸಿದರೆ ನೀನು ಮದ್ರೂಪನಾಗುವೆ. ಇದನ್ನು ನಾನು ಪ್ರತಿಜ್ಞೆ ಪೂರ್ವಕವಾಗಿ ನಿನಗೆ ಹೇಳುವೆನು ॥೮೯॥

''ಇದು ಹೇಗಾಗಬಹುದು'' ಹೀಗೆಂದು ನಿನ್ನ ಮನದಲ್ಲಿ ಸಂಶಯ ಮೂಡುತ್ತಿದ್ದರೆ ಮೊದಲು ಇದರ ಅಭ್ಯಾಸ ಮಾಡಿ ಅನುಭವ ಪಡೆದುಕೊ. ಆಗ ನಾನು ಹೇಳಿದಂತೆ ಆಗದಿದ್ದರೆ ನನ್ನನ್ನು ಕೋಪಿಸುವಿಯಂತೆ ॥೯೦॥

ಶ್ಲೋಕಾರ್ಥ :- ಪಾರ್ಥಾ ! ಅಭ್ಯಾಸಯುಕ್ತವಾದ ಏಕಾಗ್ರಚಿತ್ತದಿಂದ ಮನುಷ್ಯನು ನಿರಂತರವೂ ಸ್ಮರಿಸಿ ಪರಮ ಪುರುಷನನ್ನು ಪಡೆದುಕೊಳ್ಳುತ್ತಾನೆ ॥೮॥

ಯೇಣೇಂಚಿ ಅಭ್ಯಾಸೇಂಸೀ ಯೋಗು । ಚಿತ್ತಾ ಸಿ ಕರೀ ಪಾ ಚಾಂಗು । ಅಗಾ ಉಪಾಯಬಳೇ ಪಂಗು । ಪಹಾಡ ಠಾಕೀ ।೮೧॥ ತೇವಿ ಸದಭ್ಯಾಸೇ ನಿರಂತರ । ಚಿತ್ತಾ ಸಿ ಪರಮಪುರುಷಾಚೀ ಮೋಹರ । ಲಾವೀ ಮಗ ಶರೀರ । ರಾಹೋ ಅಥವಾ ಜಾವೋ ।೮೨॥ ಜೇ ನಾನಾಗತೀತೇ ಪಾವವಿತೇ । ತೇ ಚಿತ್ತ ವರೀಲ ಆತ್ಮ ಯಾತೇ । ಮಗ ಕವಣ ಆಠವೀ ದೇಹಾತೇ । ಗೇಲೇ ಕೀ ಆಹೇ? ।೮೩॥ ಪೈ ಸರಿತೇಚೇನಿ ಓಘೇ । ಸಿಂಧುಜಳಾ ಮೀನಲೇ ಘೋಘೇ । ತೇ ಕಾಯ ವರ್ತತ ಆಹೇ ಮಾಗೇ । ಮ್ಹಣೌನಿ ಪಾಹೋ ಯೇತೀ ? ।೮೪॥ ನಾ ತೇ ಸಮುದ್ರಚಿ ಹೋಊನ ಠೇಲೇ । ತೇವೀ ಚಿತ್ತಾ ಚೇ ಚೈತನ್ಯ ಜಾಹಾಲೇ । ಜೇಥ ಯಾತಾಯಾತ ನಿಮಾಲೇ । ಘನಾನಂದ ಜೇ ।೮೫॥

ಕವಿಂ ಪುರಾನಮನುಶಾಸಿತಾರಮ್ ಅಣೋರಣೀಯಾಂಸಮನುಸ್ಮರೇದ್ಯಃ।
ಸರ್ವಸ್ಯ ಧಾತಾರಮಚಿಂತ್ಯರೂಪಂ ಆದಿತ್ಯವರ್ಣಂ ತಮಸಃ ಪರಸ್ತಾತ್ ।೯॥

ಜಯಾಚೇ ಆಕಾರಾವೀಣ ಅಸಣೇ । ಜಯಾ ಜನ್ಮ ನಾ ನಿಮಣೇ । ಜೇ ಆಘವೇಚಿ ಆಘವೇಪಣೇ । ದೇಖತ ಅಸೇ ।೮೬॥ ಜೇ ಗಗನಾಹೂನ ಜುನೇ । ಜೇ ಪರಮಾಣುಹೂನಿ ಸಾನೇ । ಜಯಾಚೇನಿ ಸನ್ನಿಧಾನೇ । ವಿಶ್ವ ಚಳೇ ।೮೭॥ ಜೇ ಸರ್ವಾತೇ ಯಯಾ ವಿಯೇ । ವಿಶ್ವ ಸರ್ವ ಜೇಣೇ ಜಿಯೇ । ಹೇತು ಜಯಾ ಬಿಹೇ । ಅಚಿಂತ್ಯ ಜೇ ।೮೮॥ ದೇಖೆ ವೋಳಂಬಾ ಇಂಗಳು ನ ಚರೆ । ತೇಜಿ ತಿಮಿರ ನ ಶಿರೇ । ಜೇ ದಿಹಾಚೇ ಅಂಧಾರೇ । ಚರ್ಮಚಕ್ಷೂಸೀ ।೮೯॥ ಸುಸಡಾ ಸೂರ್ಯಕಣಾಂಚ್ಯಾ ರಾಶೀ । ಜೋ ನಿತ್ಯ ಉದೋ ಜ್ಞಾನಿಯಾಂಸೀ । ಅಸ್ತಮನಾಚೇ ಜಯಾಸೀ । ಆಡನಾಂವ ನಾಹೀ ।೯೦॥

ಪ್ರಯಾಣಕಾಲೇ ಮನಸಾಽಚಲೇನ ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ।
ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್ ಸ ತಂ ಪರಂ ಪುರುಷಮುಪೈತಿ ದಿವ್ಯಮ್ ।೧೦॥

ತಯಾ ಅವ್ಯಂಗವಾಣೇಯಾ ಬ್ರಹ್ಮಾ ತೇ । ಪ್ರಯಾಣಕಾಲೇ ಪ್ರಾಪ್ತೇ । ಜೋ ಸ್ಥಿರಾವಲೇನಿ ಚಿತ್ತೇ । ಜಾಣೋನಿ ಸ್ಮರೇ ।೯೧॥ ಬಾಹೇರಿ ಪದ್ಮಾಸನ ರಚುನೀ । ಉತ್ತರಾಭಿಮುಖ ಬೈಸೋನಿ । ಜೀವಿ ಸುಖ ಸೂನೀ । ಕ್ರಮಯೋಗಾಚೇ ।೯೨॥ ಆಂತು ಮೀನಲೇನಿ ಮನೋಧರ್ಮೇ । ಸ್ವರೂಪಪ್ರಾಪ್ತಿ ಚೇನಿ ಪ್ರೇಮೇ । ಆಪೇ ಆಪ ಸಂಭ್ರಮೇ । ಮಿಳಾವಯಾ ।೯೩॥ ಆಕಳಲೇನಿ ಯೋಗೇ । ಮಧ್ಯಮಾ ಮಧ್ಯ ಮಾರ್ಗೇ । ಅಗ್ನಿಸ್ಥಾನೌನಿ ನಿಗೇ । ಬ್ರಹ್ಮರಂಧ್ರಾ ।೯೪॥

ಉತ್ತಮ ರೀತಿಯಲ್ಲಿ ಚಿತ್ತದ ಮತ್ತು ಅಭ್ಯಾಸದ ತಳಿಕೆ ಹಾಕಿದಲ್ಲಿ (ಮನಃಪೂರ್ವಕವಾಗಿ ಅಭ್ಯಾಸ ಮಾಡಿದಲ್ಲಿ) ಕುಂಟನು ಉಪಾಯದ ಬಲದಿಂದ ಪರ್ವತ ವನ್ನಾದರೂ ಏರುವಂತೆ (ನನ್ನನ್ನು ಹೊಂದುವಿ) ॥೫೧॥

ಅದಕ್ಕಾಗಿ ಯಾವಾಗಲೂ ಸತತವಾಗಿ ಬ್ರಹ್ಮ ವಿಚಾರದ ಅಭ್ಯಾಸ ಮಾಡುತ್ತ ಚಿತ್ತಕ್ಕೆ ಆತ್ಮದ ಛಂದವನ್ನು (ಅಭಿರುಚಿ) ಹಚ್ಚಿಸು. ಆಗ ಶರೀರವು ಇದ್ದರೆ ಇರಲಿ, ಹೋದರೆ ಹೋಗಲಿ ॥೫೨॥

ನಾನಾ ಗತಿಗಳಿಗೆ ಮುಟ್ಟಿಸುವ ಇಂತಹ ಚಿತ್ತವು ಆತ್ಮವನ್ನು ವರಿಸಿದಾಗ, ದೇಹವು ಇದೆಯೋ ಹೋಗಿದೆಯೋ ಎಂಬುವ ಸ್ಮರಣೆ ಯಾರು ಮಾಡಬೇಕು? ॥೫೩॥

ಇಲ್ಲಿ ನೋಡು, ನೀರು ನದಿಯ ಓಘದಿಂದ ಧೋಧೋ ಎಂದು ಭೋರ್ಗರೆಯುತ್ತ ಸಮುದ್ರವನ್ನು ಕೂಡಲು ಹೊರಟಾಗ ಹಿಂದೆ ಏನು ನಡೆದಿದೆ ಎಂಬುದನ್ನು ನೋಡಲು ಮರುಳುವುದೇ? ॥೫೪॥

ಇಲ್ಲ. ಅದು ಸಮುದ್ರವನ್ನು ಕೂಡಿದಾಗ ಸಮುದ್ರವೇ ಆಗುವುದು. ಅದರಂತೆ ಚಿತ್ತವು ಆತ್ಮರೂಪವಾಯಿತೆಂದರೆ, ಜನ್ಮ ಮರಣದ ಯಾತಾಯಾತಿಯು ತಪ್ಪುವುದು. ಕಾರಣ ಅಲ್ಲಿ ಪರಮಾನಂದವು ತುಂಬಿರುವುದು ॥೫೫॥

ಶ್ಲೋಕಾರ್ಥ :- ಯಾವ ಪುರುಷನು ಸರ್ವಜ್ಞ, ಅನಾದಿ, ಸರ್ವನಿಯಂತಾ, ಸೂಕ್ಷ್ಮದಲ್ಲಿ ಅತಿಸೂಕ್ಷ್ಮ, ಎಲ್ಲರ ಧಾರಣ ಪೋಷಣೆ ಮಾಡುವ, ಅಚಿಂತ್ಯ ಸ್ವರೂಪ, ಸೂರ್ಯನಂತೆ ನಿತ್ಯಚೇತನ ಪ್ರಕಾಶರೂಪ, ಅವಿದ್ಯಾ ರಹಿತ ಶುದ್ಧ ಸಚ್ಚಿದಾನಂದಘನ ಪರಮಾತ್ಮನನ್ನು ಸ್ಮರಣ ಮಾಡುತ್ತಾನೆ ॥೯॥

ಯಾವುದು ನಿರಾಕಾರ ಅಸ್ತಿತ್ವ ಹೊಂದಿದೆ. ಯಾವುದಕ್ಕೆ ಜನ್ಮ ಮರಣಗಳು ಇಲ್ಲ ಮತ್ತು ಯಾವುದು ಸರ್ವವ್ಯಾಪಕ ಹೊಂದಿ ಎಲ್ಲವನ್ನು ನೋಡುವುದು॥೫೬॥

ಯಾವುದು ಆಕಾಶಕ್ಕಿಂತಲೂ ಮೊದಲಿನದು ಯಾವುದು ಪರಮಾಣುಕ್ಕಿಂತಲೂ ಸೂಕ್ಷ್ಮವಾದದ್ದು, ಯಾವುದರ ಸಾನಿಧ್ಯದಿಂದ ವಿಶ್ವದ ಎಲ್ಲ ವ್ಯಾಪಾರಗಳು ನಡೆಯುವುವು ॥೫೭॥

ಯಾವುದರಿಂದ ಸರ್ವವೂ ಉತ್ಪತ್ತಿಯಾಗಿದೆ. ಎಲ್ಲ ಜಗತ್ತು ಬದುಕುತ್ತದೆ ಮತ್ತು ಯಾವುದರ ಅನುಮಾನ ಮಾಡಲು ಬಾರದ್ದಕ್ಕೆ ಅಚಿಂತ್ಯವಾಗಿದೆ ॥೫೮॥

ಇಲ್ಲಿ ನೋಡು ಗೆದ್ದಲಿ (ಗೊರಲಿ)ಯು ಅಗ್ನಿಯನ್ನು ಎಂದೂ ಭಕ್ಷಿಸುವುದಿಲ್ಲ. ತೇಜದಲ್ಲಿ ಕತ್ತಲವು ಪ್ರವೇಶಿಸುವುದಿಲ್ಲ. ಅದರಂತೆ ಯಾವುದು ಸ್ವಭಾವತಃ ಜ್ಞಾನಪ್ರಕಾಶದ ದಿವಸವಿದ್ದರೂ ಸ್ಥೂಲ ದೃಷ್ಟಿಗೆ ಅದು ಕಾಣುವುದಿಲ್ಲ ॥೫೯॥

ಯಾವುದು ನಿರ್ಮಲವಾದ ಸೂರ್ಯರೂಪಿ ಧಾನ್ಯಕಣದ ರಾಶಿಯಾಗಿದೆ. ಯಾವುದು ಜ್ಞಾನಿಗಳವರಿಗಾಗಿ ನಿತ್ಯ ಉದಯವಾಗಿ ಪ್ರಕಾಶ ಕೊಡುವುದಾಗಿದೆ ಮತ್ತು ಯಾವುದರಲ್ಲಿ "ಅಸ್ತ" ವೆಂಬುವ ಅಡ್ಡ ಹೆಸರೂ ಸಹ ಇರುವುದಿಲ್ಲ ॥೬೦॥

ಶ್ಲೋಕಾರ್ಥ :- ಆ ಭಕ್ತಿಯುಕ್ತ ಪುರುಷನು ಅಂತ್ಯ ಕಾಲದಲ್ಲಿ ಯೋಗಬಲದಿಂದ ಭ್ರುಕುಟಿಗಳ ನಡುವೆ ಪ್ರಾಣವನ್ನು ಸರಿಯಾಗಿ ಸ್ಥಾಪಿಸಿ ಪುನಃ ನಿಶ್ಚಲ ಮನದಿಂದ ಸ್ಮರಣೆಯನ್ನು ಮಾಡುತ್ತ ಆ ದಿವ್ಯಸ್ವರೂಪವಾದ ಪರಮ ಪುರುಷ ಪರಮಾತ್ಮನನ್ನೇ ಪ್ರಾಪ್ತಿ ಮಾಡಿಕೊಳ್ಳುವನು ॥೧೦॥

ಇಂತಹ ಅವ್ಯಂಗವಾಗಿರುವ ಬ್ರಹ್ಮವನ್ನು ತಿಳಿದು ಮರಣ ಕಾಲವು ಸಮೀಪಿಸಿದಾಗ ಯಾರು ಏಕಾಗ್ರಚಿತ್ತದಿಂದ ಇದರ ಸ್ಮರಣೆ ಮಾಡುವರೋ ॥೬೧॥

ಅವರು ಶರೀರವನ್ನು, ಪದ್ಮಾಸನವನ್ನು ಹಾಕಿ, ಉತ್ತರ ದಿಕ್ಕಿಗೆ ಮುಖಮಾಡಿ ಕುಳಿತುಕೊಂಡು ಮತ್ತು ಯೋಗಾಭ್ಯಾಸದ ಕ್ರಮದಿಂದ ಪ್ರಾಪ್ತವಾದ ಸುಖವನ್ನು ಅಂತಃಕರಣದಲ್ಲಿ ಮೂಡಿಸಿ ॥೬೨॥

ಅಂತರ್ಯಾಮಿ ಏಕಾಗ್ರ ಚಿತ್ತದಿಂದ ಸ್ವರೂಪ ಪ್ರಾಪ್ತಿಯ ಪ್ರೇಮದಿಂದ ತನ್ನಷ್ಟಕ್ಕೆ ತಾನೇ ಬ್ರಹ್ಮವನ್ನು ತ್ವರಿತವಾಗಿ ಕೂಡುವುದಕ್ಕಾಗಿ ॥೬೩॥

ಸಂಪಾದಿಸಿರುವ ಯೋಗದ್ವಾರಾ ಸೂಕ್ಷ್ಮ ನಾಡಿಯ ಮಧ್ಯ ಮಾರ್ಗದಿಂದ ಅಗ್ನಿ ಸ್ಥಾನದಿಂದ ಬ್ರಹ್ಮರಂಧ್ರಕ್ಕೆ ಹೋಗುವುದಕ್ಕೆ ಹೊರಡುವವನು॥೬೪॥

ತೇಥ ಅಚೇತ ಚಿತ್ತಾಚಾ ಸಾಂಗಾತು । ಆಹಾಚವಾಣಾ ದಿಸೇ ಮಾಂಡತು । ಜೇಥ ಪ್ರಾಣು ಗಗನಾಆಂತು । ಸಂಚರೇ ಕಾ ।೯೫॥ ಪರೀ ಮನಾಚೇನಿ ಸ್ಥೈರ್ಯೇ ಧರಿಲಾ । ಭಕ್ತಿಚಿಯಾ ಭಾವನಾ ಭರಲಾ । ಯೋಗಬಳೇ ಆವರಲಾ । ಸಜ್ಜ ಹೋಊನಿ ।೯೬॥ ತೋ ಜಡಾಜಡಾತೇ ವಿರವಿತು । ಭ್ರೂಲತಾಮಾಜೀ ಸಂಚರತು । ಜೈಸಾ ಘಂಟಾನಾದ ಲಯಸ್ತು । ಘಂಟೇಸಿಚ ಹೋಯ ।೯೭॥ ಕಾ ಝಾಂಕಲಿಯಾ ಘಟೇಂಚಾ ದಿವಾ। ನೇಣಿಜೇ ಕಾಯ ಜಾಹಲಾ ಕೇವ್ಹಾ। ಯಾ ರೀತೀ ಜೋ ಪಾಂಡವಾ । ದೇಹ ಠೇವೀ।೯೮॥ ತೋ ಕೇವಳ ಪರಬ್ರಹ್ಮ । ಜಯಾ ಪರಮ ಪುರುಷ ಐಸೇ ನಾಮ । ತೇ ಮಾಝೇ ನಿಜಧಾಮ । ಹೋಊನಿ ಠಾಕೇ ।೯೯॥

ಯದಕ್ಷರಂ ವೇದವಿದೋ ವದಂತಿ ವಿಶಂತಿ ಯದ್ಯತಯೋ ವೀತರಾಗಾಃ ।
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ।೧೧॥

ಸಕಳಾ ಜಾಣಣೇಯಾ ಜೇ ಲಾಣೇ । ತಿಯೇ ಜಾಣಿವೇಚಿ ಜೇ ಖಾಣೀ । ತಯಾ ಜ್ಞಾನಿಯಾಂಚಿಯೇ ಆಯಣೀ। ಜಯಾತೇ ಅಕ್ಷರು ಮ್ಹಣಿಪೇ ।೧೦೦॥ ಚಂಡವಾತೇಹೀ ನ ಮೋಡೇ । ತೇ ಗಗನಚಿ ಕೀ ಫುಡೇ । ವಾಂಚೂನಿ ಜರೀ ಹೋಈಲ ಮೇಹುಡೇ । ತರೀ ಉರೇಲ ಕೈಚೇ ? ।೧೦೧॥ ತೇವಿ ಜಾಣಣೇಯಾ ಜೇ ಆಕಳಿಲೇ । ತೇ ಜಾಣಿವಲೇಪಣೇಂಚಿ ಉಮಾಣಲೇ । ಮಗ ನೇಣವೇಚಿ ತಯಾ ಮ್ಹಣಿತಲೇ । ಅಕ್ಷರ ಸಜಹೇ ।೧೦೨॥ ಮ್ಹಣಾೌನಿ ವೇದವಿದ ನರ । ಮ್ಹಣತೀ ಜಯಾತೇ ಅಕ್ಷರ । ಜೇ ಪ್ರಕೃತೀಸೀ ಪರ । ಪರಮಾತ್ಮರೂಪ ।೧೦೩॥ ಆಣಿ ವಿಷಯಾಂಚೇ ವಿಷ ಉಲಂಡೂನಿ । ಜೇ ಸರ್ವೇಂದ್ರಿಯಾ ಪ್ರಾಯಶ್ಚಿತ್ತ ದೇಊನಿ । ಆಹಾತಿ ದೇಹಾಚಿಯಾ ಬೈಸೋನಿ । ಝಾಡಾತಳೀ ।೧೦೪॥ ತೇ ಯಾಪರೀ ವಿರಕ್ತ । ಜಯಾಚೀ ನಿರಂತರ ವಾಟ ಪಾಹತಾ । ನಿಷ್ಕಾಮಾಸಿ ಆಭಿಪ್ರೇತ । ಸರ್ವದಾ ಜೇ ।೧೦೫॥ ಜಯಾಚಿಯಾ ಆವಡೀ । ನ ಗಣಿತೀ ಬ್ರಹ್ಮಚರ್ಯಾಚೀ ಸಾಂಕಡೀ । ನಿಷ್ಠುರ ಹೋಊನಿ ಬಾಪುಡೀ । ಇಂದ್ರಿಯೇ ಕರಿತಿ ।೧೦೬॥ ಐಸೇ ಜೇ ಪದ । ದುರ್ಲಭ ಆಣಿ ಅಗಾಧ । ಜಯಾಚಿಯೇ ಥಡಿಯೇ ವೇದ । ಚುಬುಕಳಿಲೇ ಠೇಲೇ ।೧೦೭॥ ತೇ ತೇ ಪುರುಷ ಹೋತೀ । ಜೇ ಯಾ ಪರೀ ಲಯಾ ಜಾತೀ । ತರೀ ಪಾರ್ಥಾ ಹೇಚಿ ಸ್ಥಿತೀ । ಏಕ ವೇಳ ಸಾಂಗೋ ।೧೦೮॥

ಜಡವಾಗಿರುವ ಪ್ರಾಣ ಮತ್ತು ಚಿತ್ತದ ಸಂಗತಿ ಇದೆ ಎಂದು ಸುಮ್ಮನೇ ಬಾಹ್ಯದಲ್ಲಿ ತೋರುವುದು ಮತ್ತು ಪ್ರಾಣವು ಆಕಾಶದಲ್ಲಿ ಲಯಗೊಳ್ಳುವುದು ॥೯೫॥

ಪ್ರಾಣವು ಚಲನವಾಗಲಾರದಂತೆ ಮನವನ್ನು ಸ್ಥೈರ್ಯದಿಂದ ಬಿಗಿಯಾಗಿ ಹಿಡಿದು ಭಕ್ತಿಯ ಭಾವದಿಂದ ತುಂಬಿದವನಾಗಿ ಯೋಗಬಲದಿಂದ ಆವರಿಸಿಕೊಂಡು ಲಯನಾಗಲು ಸಿದ್ಧನಾಗಿ ॥೯೬॥

ಆ ಯೋಗಿಯು ಚಿತ್ತ ಮತ್ತು ಪ್ರಾಣವನ್ನು ಭ್ರುಕುಟಿಯಲ್ಲಿ ಸ್ಥಿರವಾಗಿ ಹಿಡಿದು ಘಂಟಾನಾದವು ಘಂಟೆಯಲ್ಲಿ ಲಯ ಗೊಳ್ಳುವಂತೆ ಆ ಎರಡನ್ನು (ಚಿತ್ತ ಪ್ರಾಣವನ್ನು) ಲಯಗೊಳಿಸುವನು ॥೯೭॥

ಅಥವಾ ಪಾತ್ರೆಯ ಕೆಳಗೆ ಮುಚ್ಚಿರುವ ದೀಪವು ಆರಿ ಹೋದವೇಳೆ ಹೇಗೆ ತಿಳಿಯುವುದಿಲ್ಲವೋ ಅದರಂತೆ ಅರ್ಜುನಾ, ಇವರು ತಮ್ಮ ದೇಹವನ್ನು ಬಿಡುವರು ॥೯೮॥

ಆತನು ಕೇವಲ ಪರಬ್ರಹ್ಮನು. ಆತನಿಗೆ ಪರಮ ಪುರುಷನೆಂದು ಕರೆಯುವರು ಮತ್ತು ಆತನು ನನ್ನ ನಿಜ ಸ್ವರೂಪದಲ್ಲಿ ಬಂದು ಕೂಡುವನು ॥೯೯॥

ಶ್ಲೋಕಾರ್ಥ :- ವೇದವೇತ್ತರು ಅಕ್ಷರ ಪುರುಷನೆಂದು ಯಾವುದನ್ನು ಹೇಳುತ್ತಾರೋ, ಯತೀಶ್ವರರು ಯಾವುದನ್ನು ಪಡೆದುಕೊಳ್ಳುತ್ತಾರೋ, ವಿರಾಗಿಗಳು ಯಾವುದನ್ನು ಕೋರಿ ಬ್ರಹ್ಮಚರ್ಯವನ್ನು ಅನುಷ್ಠಾನ ಮಾಡುವರೋ, ಆ ಪದವಿಯನ್ನು ನಿನಗೆ ಸೂಕ್ಷ್ಮವಾಗಿ ಹೇಳುತ್ತೇನೆ ॥೧೧॥

ಯಾವುದು ಸರ್ವಶಾಸ್ತ್ರದ ಪ್ರಾಪ್ತಸ್ಥಾನವಾಗಿರುವುದೋ, ಯಾವುದು ಬ್ರಹ್ಮಜ್ಞಾನ ಖಣಿಯಾಗಿ ರುವುದೋ ಅದಕ್ಕೆ ಜ್ಞಾನಿಪುರುಷರ ಬುದ್ಧಿಯಿಂದ "ಅಕ್ಷರ" ಎಂದು ಕರೆದಿದೆ ॥೧೦೦॥

ಪ್ರಚಂಡವಾದ ಬಿರುಗಾಳಿಯಿಂದ ಮುರಿದುಬೀಳದ ನಿಜವಾದ ಒಂದೇ ಒಂದು ವಸ್ತು ಎಂದರೆ ಅದು ಆಕಾಶವೇ ಸರಿ. ಇದರ ಹೊರತಾಗಿ ಆ ಗಾಳಿಯ ಎದುರಾಳಿಯಾಗಿ ಮೋಡಗಳು ಹೇಗೆ ಉಳಿಯಲು ಸಾಧ್ಯ? ॥೧೦೧॥

ಅದರಂತೆ ಜ್ಞಾನಕ್ಕೆ ಯಾವುದು ತಿಳಿಯುವುದೋ ಮತ್ತು ಜ್ಞಾನದ ಅಳತೆಯಲ್ಲಿ ಬರುವುದೋ ಅದು ಕ್ಷರ (ನಾಶಿವಂತ) ಇರುವುದು. ಯಾವುದು ತಿಳಿಯಲು ಅಶಕ್ಯವಾಗಿರುವುದೋ ಅದಕ್ಕೆ ಸಹಜವಾಗಿ "ಅಕ್ಷರ" (ಅವಿನಾಶಿ) ಎನ್ನುವರು ॥೧೦೨॥

ಆದ್ದರಿಂದ ವೇದ ಪಾರಂಗತ ಪುರುಷರು ಯಾವುದಕ್ಕೆ ಅಕ್ಷರ (ಬ್ರಹ್ಮ) ಎನ್ನುವರೋ ಅದು ಮಾಯೆಯನ್ನು ಮೀರಿರುವ ಸಚ್ಚಿದಾನಂದ ರೂಪವಾಗಿರುವುದು ॥೧೦೩॥

ಮತ್ತು ವಿಷಯಗಳ ವಿಷವನ್ನು ಹೊರಚೆಲ್ಲಿ ಹಾಗೂ ಎಲ್ಲ ಇಂದ್ರಿಯಗಳಿಗೆ ಪ್ರಾಯಶ್ಚಿತ್ತವನ್ನು ಕೊಟ್ಟು (ನಿಗ್ರಹಿಸಿ) ದೇಹರೂಪ ಗಿಡದ ಬುಡದಲ್ಲಿ ಉದಾಸೀನ ವೃತ್ತಿಯಲ್ಲಿ ಕುಳಿತಿರುವ ॥೧೦೪॥

ವಿರಕ್ತಪುರುಷರು ಸಹ ಇದರ ಸ್ವರೂಪಕ್ಕಾಗಿ ಯಾವಾಗಲು ದಾರಿ ಕಾಯುವರು ಮತ್ತು ಈ ಸ್ವರೂಪವು ಯಾವಾಗಲೂ ನಿರಿಚ್ಛ ಪುರುಷರಿಗೆ ಪ್ರಿಯವಾಗಿರುವುದು ॥೧೦೫॥

ಇದರ ಪ್ರೀತಿಗಾಗಿ ಯೋಗಿಗಳು ಬ್ರಹ್ಮಚರ್ಯದ ಸಂಕಟಗಳನ್ನು ಲೆಕ್ಕಿಸುವುದಿಲ್ಲ, ಮತ್ತು ನಿಷ್ಠುರತೆಯಿಂದ ಇಂದ್ರಿಯಗಳ ನಿಗ್ರಹ ಮಾಡುವರು ॥೧೦೬॥

ಇಂತಹ ಯಾವ ದುರ್ಲಭವಾದ ಮತ್ತು ಅತಿ ಗಂಭೀರವಾದ ಬ್ರಹ್ಮಪದವಿರುವುದನ್ನು ತಿಳಿಯಲಾರದೆ ವೇದಗಳು ಈಚೆಯ ದಂಡೆಯಲ್ಲಿಯೇ ಮುಳುಮುಳುಗಿ ಏಳುತ್ತಲಿವೆ ॥೧೦೭॥

ನಾನು ಹೇಳಿರುವ ರೀತಿಯಲ್ಲಿ ಯಾರು ದೇಹವನ್ನು ಬಿಡುವರೋ ಅವರು ಈ ಬ್ರಹ್ಮಪದವನ್ನು ಹೊಂದುವರು. ಪಾರ್ಥಾ, ಇದಕ್ಕಾಗಿ ನಿನಗೆ ಇದೇ ವಿಷಯಕ್ಕೆ ಮತ್ತೊಮ್ಮೆ ಹೇಳುವೆನು ॥೧೦೮॥

ತೇಥ ಅರ್ಜುನೇ ಮ್ಹಣಿತಲೇ ಸ್ವಾಮೀ । ಹೇಚಿ ಮ್ಹಣಾವಯಾ ಹೋತೋ ಪಾ ಮೀ । ತಂವ ಸಹಜೇ ಕೃಪಾ ಕೇಲೀ ತುಮ್ಹೀ । ತರೀ ಬೋಲಿಜೋ ಕಾ ॥೧೦೯॥ ಪರಿ ಬೋಲಾವೇ ತೇ ಅತಿ ಸೋಹೋಪೇ । ತೇಥೇ ಮ್ಹಣಿತಲೇ ತ್ರಿಭುವನದೀಪೇ । ತುಜ ಕಾಯ ನೇಣೋ ಸಂಕ್ಷೇಪೇ । ಸಾಂಗೇನ ಐಕ ॥೧೧೦॥ ತರೀ ಮನಾ ಯಾ ಬಾಹೇರಿಲೀಕಡೇ । ಯಾವಯಾಚೀ ಸಾವಿಯಾ ಸವೇ ಮೋಡೇ । ಹೇ ಹೃದಯಾಚಿಯಾ ಡೋಹೀ ಬುಡೇ । ತೈಸೇ ಕೀಜೇ ॥೧೧೧॥

ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ ।
ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಂ ಆಸ್ಥಿತೋ ಯೋಗಧಾರಣಾಮ್ ॥೧೨॥

ಪರೀ ಹೇ ತರೀಚ ಘಡೇ । ಜರೀ ಸಂಯಮಾಚೀ ಅಖಂಡೇ । ಸರ್ವದ್ವಾರೀ ಕವಾಡೇ । ಕಳಾಸತೀ ॥೧೧೨॥ ತರೀ ಸಹಜೇ ಮನ ಕೋಂಡಲೇ । ಹೃದಯೀಂಚಿ ಅಸೇಲ ಉಗಲೇ । ಜೈಸೇ ಕರಣಚರಣೀ ಮೋಡಲೇ । ಪರಿವರು ನ ಸಂಡೀ ॥೧೧೩॥ ತೈಸೇ ಚಿತ್ತ ರಾಹಿಲಿಯಾ ಪಾಂಡವಾ । ಪ್ರಾಣಾಂಚಾ ಪ್ರಣವುಚಿ ಕರಾವಾ । ಮಗ ಅನುವೃತ್ತಿಪಂಥೇ ಆಣಾವಾ । ಮೂರ್ಧ್ನಿವರೀ ॥೧೧೪॥ ತೇಥ ಆಕಾಶೀ ಮಿಳೇ ನ ಮಿಳೇ । ತೈಸಾ ಧರವಾ ಧಾರಣಾಬಳೇ । ಜಂವ ಮಾತ್ರಾತ್ರಯ ಮಾವಳೇ । ಅರ್ಧಬಿಂಬೀ ॥೧೧೫॥ ತಂವವರೀ ತೋ ಸಮೀರು । ನಿರಾಳೀ ಕೀಜೇ ಸ್ಥಿರು । ಮಗ ಲಗ್ನೀ ಜೇವೀ ಓಂಕಾರು । ಬಿಂಬೀಂಚ ವಿಲಸೇ ॥೧೧೬॥

ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನುಸ್ಮರನ್।
ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಮ್ ॥೧೩॥

ತೈಸೇ ಓಂ ಹೇ ಸ್ಮರೋ ಸರೇ । ಆಣಿ ತೇಥೇಂಚಿ ಪ್ರಾಣು ಪುರೇ । ಮಗ ಪ್ರಣವಾಂತೀ ಉರೇ । ಪೂರ್ಣಘನ ಜೇ ॥೧೧೭॥ ಮ್ಹಣೌನಿ ಪ್ರಣವೈಕನಾಮ । ಹೇ ಏಕಾಕ್ಷರ ಬ್ರಹ್ಮ । ಜೋ ಮಾಝೇ ಸ್ವರೂಪ ಪರಮ । ಸ್ಮರತಸಾಂತಾ ॥೧೧೮॥ ಯಾಪರೀ ತ್ಯಜೀ ದೇಹಾತೇ । ತೋ ತ್ರಿಶುದ್ಧೀ ಪಾವೇ ಮಾತೇ । ಜಯಾ ಪಾವಣಯಾ ಪರೌತೇ । ಆಣಿಕ ಪಾವಣೇ ನಾಹೀ ॥೧೧೯॥ ತೇಥ ಅರ್ಜುನಾ ಜರೀ ವಿಪಾಯೇ । ತುಝ್ಯಾ ಜೀವೀ ಹನ ಐಸೇ ಜಾಯೇ । ನಾ ಹೇ ಸ್ಮರಣ ಮಗ ಹೋಯೇ । ಕಾಯಸಯಾವರಿ ಅಂತೀ ॥೧೨೦॥ ಇಂದ್ರಿಯಾ ಅನುಘಡ ಪಡಲಿಯಾ । ಜೀವಿತಾಚೇ ಸುಖ ಬುಡಾಲಿಯಾ । ಆಂತುಬಾಹೇರಿ ಉಘಡಲಿಯಾ । ಮೃತ್ಯುಚಿನ್ಹೇ ॥೧೨೧॥

ಆಗ ಅರ್ಜುನನು ಹೇಳಿದನು :- ಸ್ವಾಮಿಯೇ ನಾನು ನಿಮಗೆ ಇದನ್ನೇ ಕೇಳುವವನಿದ್ದೆ. ಆದರೆ ನೀವು ಅಷ್ಟರಲ್ಲಿ ಸಹಜವಾಗಿ ನನ್ನ ಮೇಲೆ ಕೃಪೆ ಮಾಡಿರುವಿರಿ. ಈಗ ಹೇಳಲು ಆರಂಭಿಸಿರಿ ॥೧೯॥

ಆದರೆ ಹೇಳುವುದನ್ನು ಅತಿ ಸುಲಭವಾದ ರೀತಿಯಲ್ಲಿ ಮಾತ್ರ ಹೇಳಿರಿ. ಎಂದಾಗ ತ್ರಿಭುವನ ದೀಪನಾದ ಶ್ರೀಕೃಷ್ಣನು ಹೇಳಿದನು :- ನಿನಗೆ ನಾನು ಅರಿತಿಲ್ಲ ವೇ ? ನಿನಗೆ ಸಂಕ್ಷಿಪ್ತವಾಗಿಯೇ ಹೇಳುವೆ ಕೇಳು ॥೧೧೦॥

ಆದರೆ ಮನಸ್ಸಿಗೆ ದೇಹದ ಹೊರಗಿನ ವಿಷಯದ ಕಡೆ ಸಹಜವಾಗಿ ಹೋಗುವ ರೂಢಿಯಾಗಿರುವುದು. ಅದನ್ನು ನೀನು ಮುರಿದು ಹೃದಯದ ಮಡುವಿನಲ್ಲಿ ಮುಳುಗುವಂತೆ ಮಾಡು ॥೧೧೧॥

ಶ್ಲೋಕಾರ್ಥ :- ಇಂದ್ರಿಯ ದ್ವಾರಗಳನ್ನು ಮುಚ್ಚಿ, ಮನಸ್ಸನ್ನು ಹೃದಯದಲ್ಲಿ ನಿಲ್ಲಿಸಿ, ಪ್ರಾಣ ವಾಯುಗಳನ್ನು ಬ್ರಹ್ಮರಂಧ್ರಕ್ಕೆ ಏರಿಸಿ, ಯೋಗ ನಿಷ್ಠೆಯನ್ನು ಅವಲಂಬಿಸಿ ॥೧೨॥

ಏಕೆಂದರೆ ಇಂದ್ರಿಯಗಳ ಬಾಗಿಲಗಳನ್ನು ನಿಗ್ರಹರೂಪ ಕದಗಳಿಂದ ಮುಚ್ಚಲ್ಪಟ್ಟಾಗ ಮಾತ್ರ ಈ ಮಾತು ಸಾಧಿಸುವುದು ॥೧೧೨॥

ತದನಂತರ ಮನಸ್ಸು ಸಹಜವಾಗಿಯೇ ಬಂಧಿಸಲ್ಪಟ್ಟು ಸಹಜವಾಗಿಯೇ ಹೃದಯದಲ್ಲಿ ಶಾಂತವಾಗುವುದು. ಯಾವ ಪ್ರಕಾರವಾಗಿ ಕೈಕಾಲು ಮುರಿದುಕೊಂಡ ಪ್ರಾಣಿಯು ತನ್ನ ಮನೆಯನ್ನು ಬಿಡುವುದಿಲ್ಲವೋ ॥೧೧೩॥

ಅದರಂತೆ ಅರ್ಜುನಾ, ಚಿತ್ತವು ಸ್ಥಿರಗೊಂಡಾಗ ಪ್ರಾಣಾಯಾಮದಿಂದ ಓಂಕಾರದ ಧ್ಯಾನವನ್ನು ಮಾಡಬೇಕು. ಆಗ ಪ್ರಾಣವಾಯುವನ್ನು ಕ್ರಮಕ್ರಮವಾಗಿ ಬ್ರಹ್ಮರಂಧ್ರದವರೆಗೆ ತರಬೇಕು ॥೧೧೪॥

ಅಲ್ಲಿ ಬ್ರಹ್ಮಾಕಾಶದಲ್ಲಿ ಪ್ರಾಣವಾಯುವು ಲಯವಾಯಿತೋ ಇಲ್ಲೋ ಎನ್ನುವ ಸ್ಥಿತಿಯಲ್ಲಿ ಧಾರಣೆಯ ಬಲದಿಂದ ಅಕಾರ, ಉಕಾರ, ಮಕಾರ ಈ ಮೂರು ಮಾತ್ರೆಗಳು ಅರ್ಧ ಮಾತ್ರೆಯಲ್ಲಿ ಲಯವಾಗುವವರೆಗೆ ಪ್ರಾಣವಾಯುವನ್ನು ತಡೆಯಬೇಕು ॥೧೧೫॥

ಅಲ್ಲಿಯವರೆಗೆ ಆ ವಾಯುವನ್ನು ಮಸ್ತಕಾಕಾಶದಲ್ಲಿ ಸ್ಥಿರಗೊಳಿಸಬೇಕು. ನಂತರ ಓಂಕಾರದ ಮತ್ತು ಮಸ್ತಕಾಕಾಶದ ಸಂಯೋಗವಾದಾಗ ಮೂಲಸ್ವರೂಪ ಬ್ರಹ್ಮನಲ್ಲಿ ರಮಮಾಣವಾಗುವುದು ॥೧೧೬॥

ಶ್ಲೋಕಾರ್ಥ :- ಬ್ರಹ್ಮವಾಚಕವಾದ ಓಂಕಾರವನ್ನು ಉಚ್ಚರಿಸುತ್ತ ನನ್ನನ್ನು ಚಿಂತಿಸುತ್ತ ದೇಹವನ್ನು ಬಿಟ್ಟವರು ಪರಮಗತಿಯಾದ ಮೋಕ್ಷವನ್ನು ಪಡೆಯುತ್ತಾರೆ ॥೧೩॥

ಆಗ ಓಂಕಾರ ಸ್ಮರಣೆ ನಿಲ್ಲುವುದು ಮತ್ತು ಹಾಗೆಯೇ ಪ್ರಾಣದ ಕೊನೆಯಾಗುವುದು. ಆಗ ಓಂಕಾರದ ಆಚೆಗಿರುವ ಬ್ರಹ್ಮಾನಂದ ಸ್ವರೂಪ ಮಾತ್ರ ಉಳಿಯುವುದು ॥೧೧೭॥

ಆದ್ದರಿಂದ ಪ್ರಣವವು ಇದು ಏಕಾಕ್ಷರದ ಬ್ರಹ್ಮವಾಗಿರುವುದು. ಆ ನನ್ನ ಪರಮಸ್ವರೂಪದ ಸ್ಮರಣೆಯನ್ನು ಮಾಡುತ್ತಿರುವಾಗ ॥೧೧೮॥

ಯಾರು ಈ ಸ್ಥಿತಿಯಲ್ಲಿ ದೇಹತ್ಯಾಗ ಮಾಡುವರೋ ಅವರು ನಿಶ್ಚಯವಾಗಿ ನನ್ನನ್ನು ಹೊಂದುವರು. ಏಕೆಂದರೆ ಆತನಿಗೆ ನನ್ನ ಪ್ರಾಪ್ತಿಯ ಹೊರತಾಗಿ ಅನ್ಯ ಶ್ರೇಷ್ಠ ಗತಿಯೇ ಇರುವುದಿಲ್ಲ ॥೧೧೯॥

ಅರ್ಜುನಾ, ನಿನ್ನ ಚಿತ್ತದಲ್ಲಿ ಕದಾಚಿತ್ ಈ ಪ್ರಕಾರದ ಸಂಶಯ ಮೂಡಬಹುದು, ಏನೆಂದರೆ, ''ಮರಣದ ಸಮಯದಲ್ಲಿ ನನ್ನ ಸ್ಮರಣೆ ಹೇಗಾಗಬೇಕು ?'' ॥೧೨೦॥

ಕಾರಣ ಜೀವಿತದ ಸುಖವೆಲ್ಲ ಇಲ್ಲದಂತಾಗಿ ಮತ್ತು ಇಂದ್ರಿಯಗಳು ಸಂಕಟದಲ್ಲಿ ಬಿದ್ದು ಒಳ ಹೊರಗೆ ಮೃತ್ಯು ಚಿನ್ಹೆಗಳು ಎದ್ದು ಕಾಣುವಾಗ ॥೧೨೧॥

ತೇ ವೇಳೀ ಬೈಸಾವೇಂಚಿ ಕವಣೇ । ಮಗ ಕವಣ ನಿರೋಧೀ ಕರಣೇ । ತೇಥ ಕಾಹ್ಯಾಚೇನಿ ಅಂತಃಕರಣೇ । ಪ್ರಣವ ಸ್ಮರಾವಾ ॥೧೨೨॥ ತರಿ ಗಾ ಐಶಿಯಾ ಹೋ ಧ್ವನೀ । ಝಣೇ ಥಾರಾ ದೇಶೀ ಹೋ ಮನೀ । ಪೈ ನಿತ್ಯ ಸೇವಿಲಾ ಮೀ ನಿದಾನೀ । ಸೇವಕು ಹೋಯ ॥೧೨೩॥

ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।
ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥೧೪॥

ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಮ್ ।
ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥೧೫॥

ಜೇ ವಿಷಯಾಂಸಿ ತಿಳಾಂಜಳೀ ದೇಊನೀ । ಪ್ರವೃತ್ತೀವರೀ ನಿಗಡ ವಾಊನಿ । ಮಾತೇ ಹೃದಯೀ ಸೂನಿ । ಭೋಗಿತಾತೀ ॥೧೨೪॥ ಪರಿ ಭೋಗಿತಯಾ ಆರಾಣುಕಾ । ಭೇಟಣೇ ನಾಹೀ ಕ್ಷುಧಾದಿಕಾ । ತೇಥ ಚಕ್ಷುರಾದಿ ರಂಕಾ । ಕವಣ ಪಾಡು ॥೧೨೫॥ ಐಸೇ ನಿರಂತರ ಏಕವಟಲೇ । ಜೇ ಅಂತಃಕರಣೇ ಮಜಶೀ ಲಿಗಟಲೇ । ಮೀಚಿ ಹೋಊನಿ ಆಟಲೇ । ಉಪಾಸಿತೀ ॥೧೨೬॥ ತಯಾ ದೇಹಾವಸಾನ ಜೈ ಪಾವೇ । ತೈ ತಿಹೀ ಮಾತೇ ಸ್ಮರಾವೇ । ಮಗ ಮ್ಯಾ ಜರೀ ಪಾವಾವೇ । ತರಿ ಉಪಾಸ್ತಿ ತೇ ಕಾಯಸೀ ? ॥೧೨೭॥ ಪೈ ರಂಕು ಏಕ ಆಡಲೇಪಣೇ । ಕಾಕುಳತೀ ಧಾಂವ ಗಾ ಧಾಂವ ಮ್ಹಣೇ । ತರೀ ತಯಾಚಿಯೇ ಗ್ಲಾನೀ ಧಾಂವಣೇ । ಕಾಯ ನ ಘಡೇ ಮಜ ? ॥೧೨೮॥ ಆಣಿ ಭಕ್ತಾಂಹೀ ತೇಚಿ ದಶಾ । ತರೀ ಭಕ್ತೀಚಾ ಸೋಸು ಕಾಯಸಾ । ಮ್ಹಣೌನಿ ಹಾ ಧ್ವನೀ ಐಸಾ । ನ ವಾಖಾಣಾವಾ ॥೧೨೯॥ ತಿಹೀ ಜೇ ವೇಳೀ ಮೀ ಸ್ಮರವಾ । ತೇ ವೇಳೀ ಸ್ಮರಿಲಾ ಕೀ ಪಾವಾವಾ । ತೋ ಆಭಾರುಹೀ ಜೀವಾ । ಸಾಹವೇಚಿ ನಾ ॥೧೩೦॥ ತೇ ಋಣವೈಪಣ ದೇಖೋನಿ ಅಂಗೀ । ಮೀ ಆಪುಲಿಯಾಚಿ ಉತ್ತೀರ್ಣತ್ವಾಲಾಗೀ । ಭಕ್ತಾಂಚಿಯಾ ತನುತ್ಯಾಗೀ । ಪರಿಚರ್ಯಾ ಕರೀ ॥೧೩೧॥ ದೇಹವೈಕಲ್ಯಾಚಾ ವಾರಾ । ಝಣೇ ಲಾಗೇಲ ಯಾ ಸುಕುಮಾರಾ । ಮ್ಹಣೌನಿ ಆತ್ಮಬೋಧಾಚಿಯಾ ಪಾಂಜಿರಾ । ಸೂಯೀ ತಯಾತೇ ॥೧೩೨॥ ವರೀ ಆಪುಲಿಯಾ ಸ್ಮರಣಾಚೀ ಉವಾಇಲೀ । ಹೀಂವ ಐಸೀ ಕರೀ ಸಾಉಲೀ । ಐಸೇನಿ ನಿತ್ಯಬುದ್ಧಿ ಸಂಚಲೀ । ಮೀ ಆಣೀ ತಯಾತೇ ॥೧೩೩॥ ಮ್ಹಣೌನಿ ದೇಹಾಂತೀಚೇ ಸಾಂಕಡೇ । ಮಾಝಿಯಾ ಕಹೀಂಚಿ ನ ಪಡೇ । ಮೀ ಆಪುಲಿಯಾತೇ ಆಪುಲೀ ಕಡೇ । ಸುಖೇಚಿ ಆಣೀ ॥೧೩೪॥

ಆಗ ಎದ್ದು ಯಾರು ಕೂಡ್ರಿಸಬೇಕು? ಇಂದ್ರಿಯಗಳ ಸಂಯಮ ಯಾರು ಮಾಡಬೇಕು? ಮತ್ತು ಯಾವ ಅಂತಃ ಕರಣದಿಂದ ಓಂಕಾರದ ಸ್ಮರಣೆ ಮಾಡಬೇಕು? ।।೧೨೨।।

ಅರೇ! ಈ ರೀತಿ ನೀನು ನಿನ್ನ ಮನಸ್ಸಿನಲ್ಲಿ ಕದಾಚಿತ್ ಸಂಶಯಕ್ಕೆ ಸ್ಥಾನ ಕೊಡದಿರು. ಏಕೆಂದರೆ ಯಾರು ನನ್ನನ್ನು ನಿತ್ಯದಲ್ಲಿ ಸೇವೆಯನ್ನು ಮಾಡಿರುವರೋ ಅವರ ಅಂತ್ಯ ಕಾಲದಲ್ಲಿ ನಾನು ಅವರ ದಾಸನಾಗಿರುತ್ತೇನೆ ।।೧೨೩।।

ಶ್ಲೋಕಾರ್ಥ :- ಅನನ್ಯ ಚಿತ್ತದಿಂದ ಅನವರತವೂ ನನ್ನನ್ನೇ ಸ್ಮರಿಸುವ ನಿತ್ಯಯುಕ್ತನಾದ ಯೋಗಿಗೆ, ಪಾರ್ಥಾ! ನಾನು ಸುಲಭವಾಗಿ ಪ್ರಾಪ್ತನಾಗುತ್ತೇನೆ ।।೧೪।।

ಶ್ಲೋಕಾರ್ಥ :- ನನ್ನನ್ನು ಪಡೆದವರು, ದುಃಖ ಕೂಪವು, ವಿಕಾರಶೀಲವೂ, ಆದ ನರಕಕ್ಕೆ ಬೀಳುವುದಿಲ್ಲ. ಆ ಮಹಾನೀಯರು ಮೋಕ್ಷ ರಾಜ್ಯಕ್ಕೆ ಅರ್ಹರು ।।೧೫।।

ಯಾವ ವಿಷಯಗಳಿಗೆ (ತಿಲಾಂಜನ) ಎಳ್ಳು ನೀರು ಬಿಟ್ಟು, ವಿಷಯಗಳಿಗಾಗಿ ಹುಟ್ಟುವ ಇಚ್ಛೆಯನ್ನು ಬಂಧಿಸಿ ಹಾಗೂ ನನ್ನನ್ನು ಹೃದಯದಲ್ಲಿ ಸ್ಥಿರಗೊಳಿಸಿ ಆ ಸುಖದ ಉಪಭೋಗ ಪಡೆಯುವರು ।।೧೨೪।।

ಅವರಿಗೆ ಆ ಸಮಾಧಾನದಲ್ಲಿ ಹಸಿವೆ, ನೀರಡಿಕೆ ಇತ್ಯಾದಿ ಯಾವ ಸ್ಮರಣೆಯೂ ಆಗುವುದಿಲ್ಲ. ಅಂದಮೇಲೆ ಕಿವಿ, ಮೂಗು, ಕಣ್ಣುಗಳಾದ ಬಡ ಇಂದ್ರಿಯಗಳ ಪಾಡೇನು? ।।೧೨೫।।

ಈ ರೀತಿಯಲ್ಲಿ ನಿರಂತರವಾಗಿ ನನ್ನ ಐಕ್ಯರೂಪವನ್ನು ಹೊಂದಿರುವ ತಮ್ಮ ಅಂತಃಕರಣದಲ್ಲಿ ನನ್ನಿಂದ ತಲ್ಲೀನರಾದವರನ್ನು ಮತ್ತು ಮದ್ರೂಪರಾಗಿ ನನ್ನಸೇವೆಯನ್ನು ಮಾಡುವವರನ್ನು ।।೧೨೬।।

ಅವರ ಅಂತ್ಯಕಾಲವು ಸಮೀಪಿಸಬೇಕು, ಅವರು ನನ್ನನ್ನು ಸ್ಮರಿಸಬೇಕು, ಆಗ ನಾನು ಅವರಿಗೆ ಪ್ರಾಪ್ತನಾಗಬೇಕು. ಹೀಗಿದ್ದರೆ ಅವರು ಇಲ್ಲಿಯವರೆಗೆ ನನ್ನ ಉಪಾಸನೆಯನ್ನು ಮಾಡಿರುವುದು ಯಾವ ಉಪಯೋಗ ? ।।೧೨೭।।

ಇಲ್ಲಿ ನೋಡು, ಸಂಕಟದ ಸಮಯದಲ್ಲಿ ದೀನನೊಬ್ಬನು ನನ್ನನ್ನು ''ಹೇ ದೇವನೇ ಧಾವಿಸು ಧಾವಿಸು'' ಎಂದು ಮೊರೆ ಇಡಲು ಆಗ ನಾನು ಆತನ ದುಃಖ ನಿವಾರಣೆಗೆ ಧಾವಿಸುವುದಿಲ್ಲವೇ ? ।।೧೨೮।।

ಈಗ ನನ್ನ ಅನನ್ಯ ಭಕ್ತನಿಗೂ ನಾನು ಇದೇ ರೀತಿಯಲ್ಲಿ ನಡೆದುಕೊಂಡರೆ ಆತನು ನನ್ನ ಭಕ್ತಿಯ ಅಭಿಲಾಷೆಯನ್ನಾದರೂ ಏಕೆ ಮಾಡಬೇಕು ? ಅದಕ್ಕಾಗಿ ಇಂತಹ ಸಂಶಯದ ಮಾತೇ ಎತ್ತಬೇಡ ।।೧೨೯।।

ಕಾರಣ, ಅವರು ಆಗ ನನ್ನನ್ನು ಸ್ಮರಿಸಬೇಕು. ಸ್ಮರಿಸಿದಾಗ ಕ್ಷಣವೇ ನಾನು ಅವರನ್ನು ಅಂಗೀಕರಿಸಬೇಕೆನ್ನುವ ಸ್ಮರಣೆಯ ಭಾರವು ಸಹ ನನಗೆ ಸಹಿಸುವುದಾಗುವುದಿಲ್ಲ ।।೧೩೦।।

ಈ ಪ್ರಕಾರವಾಗಿ ನಾನು ಅವರ ಋಣಿಯಾಗಿ ರುವುದನ್ನು ಕಂಡು ಅದರಿಂದ ಋಣಮುಕ್ತನಾಗಲು ನಾನು ಭಕ್ತರ ಅಂತ್ಯ ಕಾಲದಲ್ಲಿ ಅವರ ಸೇವೆಯನ್ನು ಮಾಡುವೆನು ।।೧೩೧।।

(ಮರಣ ಪ್ರಸಂಗದಲ್ಲಿ) ದೇಹಕ್ಕೆ ಒದಗುವ ದುಃಖದ ಗಾಳಿಯು ನನ್ನ ಯಾವ ಸುಕುಮಾರ ಭಕ್ತನಿಗೆ ಬಡಿಯಬಾರದೆಂದು ನಾನು ಆತನಿಗೆ ಆತ್ಮ ಬೋಧ ರೂಪದ ಪಂಜರದಲ್ಲಿರಿಸುವೆನು ।।೧೩೨।।

ಅದರ ಮೇಲೆ ಪುನಃ ನನ್ನ ಸ್ಮರಣೆಯ ಅಹ್ಲಾದಕಾರಕ, ಶೀತಲ ನೆರಳನ್ನು ಮಾಡುವೆನು. ಈ ತರಹದ ಸ್ಮರಣದಿಂದ ಅವರು ಯಾವಾಗಲು ನನ್ನಲ್ಲಿ ಸ್ಥಿರಗೊಳ್ಳುವರು. ಆಗ ನಾನು ನನ್ನಸ್ವರೂಪ ಸ್ಥಿತಿಗೆ ತರುವೆನು ।।೧೩೩।।

ಆದ್ದರಿಂದ ದೇಹದ ಅಂತ್ಯಕಾಲದ ದುಃಖವು ನನ್ನ ಭಕ್ತನಿಗೆ ಎಂದೂ ಆಗುವುದಿಲ್ಲ ಮತ್ತು ನನ್ನ ಭಕ್ತನಿಗೆ ನಾನು ಸುಖವಾಗಿ ನನ್ನ ಕಡೆ ತರುವೆನು ।।೧೩೪।।

ವರಿಚೀಲ ದೇಹಾಚೀ ಗಂವಸಣೀ ಫೇಡೂನಿ । ಆಹಾಚ ಅಹಂಕಾರಾಚೀ ರಜ ಝಾಡುನೀ । ಶುದ್ಧ ವಾಸನಾ ನಿವಡುನೀ । ಆಪಣಪಾ ಮೇಳವೀ ॥೧೩೫॥ ಆಣೀ ಭಕ್ತಾ ತರೀ ದೇಹೀ । ವಿಶೇಷ ಏಕವಂಕೀಚಾ ಠಾವೋ ನಾಹೀ । ಮ್ಹಣೌನಿ ಅವ್ಹೇರು ಕರಿತಾ ಕಾಂಹೀ । ವಿಯೋಗು ಐಸಾ ನ ವಾಟೇ ॥೧೩೬॥ ನಾತರೀ ದೇಹಾಂತೀಚಿ ಮಿಯಾ ಯಾವೇ । ಮಗ ಆಪಣಪೇ ಯಾತೇ ನ್ಯಾವೇ । ಹೇಹೀ ನಾಹೀ ಸ್ವಭಾವೇ । ಜೇ ಆಧೀಂಚಿ ಮಜ ಮೀನಲೇ ॥೧೩೭॥ ಯೇರೀ ಶರೀರಾಚಿಯಾ ಸಲಿಲೀ । ಅಸತೇಪಣ ಹೇ ಸಾಉಲೀ । ವಾಂಚೂನಿ ಚಂದ್ರಿಕಾ ತೇ ಠೇಲೀ । ಚಂದ್ರೀಚ ಆಹೇ ॥೧೩೮॥ ಐಸೇ ಜೇ ನಿತ್ಯಯುಕ್ತ । ತಯಾಂಸಿ ಸುಲಭ ಮೀ ಸತತ । ಮ್ಹಣೌನಿ ದೇಹಾಂತೀ ನಿಶ್ಚಿತ । ಮೀಚಿ ಹೋತೀ ॥೧೩೯॥ ಮಗ ಕ್ಲೇಶತರೂಚೇ ವಾಡೀ । ಜೇ ತಾಪತ್ರಯಾಗ್ನೀಚೇ ಸಗಡೀ । ಜೇ ಮೃತ್ಯುಕಾಕಾಸೀ ಕುರೋಂಡೀ । ಸಾಂಡಿಲೀ ಆಹೇ ॥೧೪೦॥ ಜೇ ದೈನ್ಯಾಚೇ ದುಭತೇ । ಜೇ ಮಹಾಭಯಾತೇ ವಾಢವಿತೇ । ಜೇ ಸಕಳ ದುಃಖಾಚೇ ಪುರತೇ । ಭಾಂಡವಲ ॥೧೪೧॥ ಜೇ ದುರ್ಮತೀಚೇ ಮೂಳ । ಜೇ ಕುಕರ್ಮಾಚೇ ಫಳ । ಜೇ ವ್ಯಾಮೋಹಾಚೇ ಕೇವಳ । ಸ್ವರೂಪಚೇ ॥೧೪೨॥ ಜೇ ಸಂಸಾರಾಚೇ ಬೈಸಣೇ । ಜೇ ವಿಕಾರಾಚೇ ಉದ್ಯಾನೇ । ಜೇ ಸಕಳ ರೋಗಾಂಚೇ ಭಾಣೇ । ವಾಢಿಲೇ ಆಹೇ ॥೧೪೩॥ ಜೇ ಕಾಳಾಚಾ ಖಿಚು ಉಶಿಟಾ । ಜೇ ಆಶೇಚಾ ಆಂಗವಠಾ । ಜನ್ಮಮರಣಾಚಾ ವೋಲಿವಟಾ । ಸ್ವಭಾವೇ ಜೇ ॥೧೪೪॥ ಜೇ ಭುಲೀಚೇ ಭರೀವ । ಜೇ ವಿಕಲ್ಪಾಚೇ ವೋತಿವ । ಕಿಂಬಹುನಾ ಪೇವ । ವಿಂಚುವಾಚೇ ॥೧೪೫॥ ಜೇ ವ್ಯಾಘ್ರಾಚೇ ಕ್ಷೇತ್ರ । ಜೇ ಪಣ್ಯಾಂಗನಾಚೇ ಮಿತ್ರ । ಜೇ ವಿಷಯವಿಜ್ಞಾನಯಂತ್ರ । ಸುಪೂಜಿತ ॥೧೪೬॥ ಜೇ ಲಾವೇಚಾ ಕಳವಳಾ । ನಿವಾಲಿಯಾ ವಿಷೋದಕಾಚಾ ಗಳಾಳಾ। ಜೇ ವಿಶ್ವಾಸು ಆಂಗವಳಾ । ಸಂವಚೋರಾಚಾ ॥೧೪೭॥ ಜೇ ಕೋಢಿಯಾಚೇ ಖೇಂವ । ಜೇ ಕಾಳಸರ್ಪಾಚೇ ಮಾರ್ದವ । ಗೋರಿಯೇಚೇ ಸ್ವಭಾವ । ಗಾಯನ ಜೇ ॥೧೪೮॥ ಜೇ ವೈರಿಯಾಚಾ ಪಾಹುಣೇರು । ಜೇ ದುರ್ಜನಾಚಾ ಆದರು । ಹೇ ಅಸೋ ಜೇ ಸಾಗರು । ಅನರ್ಥಾಚಾ ॥೧೪೯॥ ಜೇ ಸ್ವಪ್ನೀ ದೇಖಿಲೇ ಸ್ವಪ್ನ । ಜೇ ಮೃಗಜಳೇ ಸಾಸಿನ್ನಲೇ ವನ । ಜೇ ಧೂಮ್ರರಜಾಂಚೇ ಗಗನ । ಓತಲೇ ಆಹೇ ॥೧೫೦॥ ಐಸೇ ಜೇ ಹೇ ಶರೀರ । ತೇ ತೇ ನ ಪವತೀಚಿ ಪುಢತೀ ನರ । ಜೇ ಹೋಊನಿ ಠೇಲೇ ಅಪಾರ । ಸ್ವರೂಪ ಮಾಝೇ ॥೧೫೧॥

ಆತ್ಮ ದ ಮೇಲಿನ ಶರೀರರೂಪ (ಗವಸಣಿಕೆ) ಹೊದಿಕೆ ಯನ್ನು ತೆಗೆದೊಗೆದು ಮಿಥ್ಯಾ ಅಹಂಕಾರದ ಧೂಳನ್ನು ಝಾಡಿಸಿ ಕೇವಲ ಭಗವತ್ ಪ್ರಾಪ್ತಿ ಯ ವಾಸನೆಯಿಂದ ಆತನಿಗೆ ಮದ್ರೂಪ ಮಾಡುವೆನು ।।೧೩೫।।

ಮತ್ತು ಭಕ್ತನಿಗೂ ದೇಹದಮೇಲೆ ಐಕ್ಯ (ಪ್ರೇಮ) ಇಲ್ಲದ್ದಕ್ಕೆ ದೇಹದ ತ್ಯಾಗ ಮಾಡುವಾಗ ಆತನಿಗೆ ದೇಹದ ವಿಯೋಗ ದುಃಖವಾಗುವುದಿಲ್ಲ ।।೧೩೬।।

ಅಲ್ಲದೇ ಅವರಿಗೆ ದೇಹದ ಅಂತ್ಯಕಾಲದಲ್ಲಿ ಭಗವಂತನು ಅಂಗೀಕರಿಸಬೇಕು ಮತ್ತು ನನ್ನನ್ನು ತನ್ನಲ್ಲಿ ಸ್ವರೂಪಕ್ಕೆ ಒಯ್ಯ ಬೇಕು ಎಂಬುವ ಭಾವವು ಅವರ ಮನಸ್ಸಿನಲ್ಲಿ ಬರುವುದಿಲ್ಲ. ಏಕೆಂದರೆ ಅವರು ಮೊದಲೇ ನನ್ನಲ್ಲಿ ಐಕ್ಯರಾಗಿರುವರು ।।೧೩೭।।

ಇದಲ್ಲದೇ ಅವರ ಶರೀರರೂಪ ನೀರಿನಲ್ಲಿ ಆತ್ಮ ನಿರುವಂತೆ ಕಾಣುವುದು ನಿಜ. ಆದರೆ ಅದು ಮಿಥ್ಯಾ ಇರುವುದು. ಯಾವ ಪ್ರಕಾರವಾಗಿ ಚಂದ್ರನ ಬೆಳದಿಂಗಳು ಹೊರಗೆ ಪಸರಿಸಿದಂತೆ ಕಂಡರೂ ಅದು ನಿಜವಾಗಿಯೂ ಚಂದ್ರನಲ್ಲಿಯೇ ಇರುವುದು ।।೧೩೮।।

ಈ ಬೋಧನೆಯಿಂದ ಕೂಡಿದವರಲ್ಲಿ ನಾನು ಅವರಿಗೆ ಯಾವಾಗಲೂ ಸುಲಭನಾಗಿರುವೆನು. ಆದ್ದರಿಂದ ಅವರು ಮರಣದ ನಂತರ ನಿಶ್ಚಯವಾಗಿ ನನ್ನ ಸ್ವರೂಪವನ್ನು ಪಡೆಯುವರು ।।೧೩೯।।

(ಯಾವ ಈ ಶರೀರವು) ದುಃಖರೂಪ ವೃಕ್ಷಗಳ ತೋಟವು, ತಾಪತ್ರಯರೂಪ ಅಗ್ನಿಷ್ಟಿಯು ಮತ್ತು ಮೃತ್ಯು ರೂಪ ಕಾಗೆಗೆ ಕೊಟ್ಟ ಬಲಿಯು ।।೧೪೦।।

ಇದು ದೈನ್ಯಗಳನ್ನು ಬೆಳೆಯಿಸುವುದು, ಮಹಾ ಭಯ (ಮರಣದ ಭಯ) ಹೆಚ್ಚಿಸುವುದು ಮತ್ತು ಎಲ್ಲ ದುಃಖಗಳನ್ನು ಸಂಪೂರ್ಣಗೊಳಿಸುವ ಭಾಂಡವಲವು ।।೧೪೧।।

ಇದು ಕೆಟ್ಟಬುದ್ಧಿಯ ಮೂಲವು ಮತ್ತು ಪೂರ್ವಜನ್ಮ ದಲ್ಲಿನ ಕೆಟ್ಟ ಕರ್ಮದ ಫಲವು, ಹಾಗೂ ಭ್ರಾಂತಿಯ ಕೇವಲ ಸ್ವರೂಪವಾಗಿರುವುದು ।।೧೪೨।।

ಇದು ಸಂಸಾರಕ್ಕೆ ವಸತಿ ಸ್ಥಳ, ಅಹಂಕಾರಾದಿ ವಿಕಾರಗಳ ವನ ಮತ್ತು ಎಲ್ಲ ರೋಗಗಳಿಂದ ಬಡಿಸಿದ ಪಾತ್ರೆಯಾಗಿರುವುದು ।।೧೪೩।।

ಇದು ಕಾಳನು ತಿಂದೊಗೆದ ಎಂಜಲ ಕಿಚಡಿಯು, ಆಶೆಯು ಕುಳಿತುಕೊಳ್ಳಲು ಕಟ್ಟೆಯಾಗಿರುವುದು ಮತ್ತು ಸ್ವಭಾವತಃ ಜನ್ಮ ಮರಣಕ್ಕೆ ಜಾಮೀನದಾರನಾಗಿರುವುದು ।।೧೪೪।।

ಇದು ಭ್ರಾಂತಿಯಿಂದ ತುಂಬಿಕೊಂಡಿರುವುದು, ಕೆಟ್ಟ ಕಲ್ಪನೆಗಳನ್ನು ಸುರುವಿಕೊಂಡಿರುವುದು. ಹೆಚ್ಚಿಗೇನು ಹೇಳ ಬೇಕು? ಅದು (ಶರೀರವು) ಚೇಳಿನ ಹುತ್ತವಾಗಿರುವುದು ।।೧೪೫।।

ಇದು ಹುಲಿಯ ವಸತಿ ಸ್ಥಾನವಾಗಿದೆ, ವೇಶ್ಯೆಯರ ಮಿತ್ರನಾಗಿದೆ. (ಮನಸ್ಸಿಗೆ ವೇಶ್ಯೆಯರಂತೆ, ಮೋಹಗೊಳಿಸುವು ದಾಗಿದೆ) ಮತ್ತು ವಿಷಯಗಳನ್ನು ತಿಳಿದುಕೊಳ್ಳುವ ಯಂತ್ರವಾಗಿದೆ ।।೧೪೬।।

ಇದು ಘಾತಕ ರಾಕ್ಷಸಿಯ (ತೋರಿಕೆಯ ಪ್ರೇಮ) ಕಳ ವಳದಂತಿದೆ, ತಣ್ಣಗಾಗಿರುವ ವಿಷರೂಪ ನೀರಿನ ಗುಟುಕಾಗಿದೆ ಮತ್ತು ಸ್ನೇಹದಿಂದ ವರ್ತಿಸುವ ಕಳ್ಳರ ಬಲವಾದ ವಿಶ್ವಾಸ ದಂತಿದೆ ।।೧೪೭।।

ಇದು ರಕ್ತಲೇಪಿತ ಕುಷ್ಟಮಯ ಮನುಷ್ಯನ ಆಲಿಂಗ ನದಂತಿದೆ, ಮಹಾ ವಿಷಮಯ ಸರ್ಪ ಶರೀರದ ಮೃದುತನ ದಂತಿದೆ, (ಜಿಂಕೆ) ಬೇಟೆಗಾರನ ಸಹಜವಾದ ಸಂಗೀತದ ಮಧುರತನದಂತಿದೆ ।।೧೪೮।।

ಇದು ವೈರಿಗಳ ಪ್ರೀತಿಯ ಉಪಚಾರದಂತಿದೆ, ದುರ್ಜನರು ಮಾಡುವ ಆದರ ಸ್ವಾಗತದಂತಿದೆ, ಹೆಚ್ಚಿಗೇನು ಹೇಳಬೇಕು? ಒಟ್ಟಿನಲ್ಲಿ ಅನರ್ಥದ ಸಮುದ್ರವೇ ಆಗಿದೆ ।।೧೪೯।।

ಇದು ಸ್ವಪ್ನದಲ್ಲಿ ಬಿದ್ದಿರುವ ಸ್ವಪ್ನದಂತಿದೆ, ಮೃಗಜಲ ದಿಂದ ಬೆಳೆದು ನಿಂತ ವನದಂತಿದೆ, ಹೊಗೆಯ ಕಣಗಳಿಂದ ತುಂಬಿದ ಆಕಾಶದಂತಿದೆ ।।೧೫೦।।

ಇಂತಹ ಈ ಶರೀರವು (ಜ್ಞಾನಿ, ಯೋಗಿ, ವಿರಕ್ತ, ಭಕ್ತಾದಿಗಳವರಿಗೆ) ಪುನಃ ಪ್ರಾಪ್ತವಾಗುವುದಿಲ್ಲ. ಏಕೆಂದರೆ ಅವರು ನನ್ನ ಅಗಾಧವಾದ ಸ್ವರೂಪವನ್ನು ಹೊಂದಿರುವರು ।।೧೫೦।।

ಆಬ್ರಹ್ಮ ಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।
ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ।।೧೬।।

ಏರ್ಹ್ವೀ ಬ್ರಹ್ಮ ಪಣಾಚಿಯೇ ಭಡಸೇ । ನ ಚುಕತೀಚೀ ಪುನರಾವೃತ್ತೀಚೇ ವಳಸೇ । ಪರಿ ನಿವಟಲಿಯಾಚೇ ಜೈಸೇ । ಪೋಟ ನ ದುಖೇ ।।೧೫೨।। ನಾತರೀ ಚೇಇಲಿಯಾನಂತರೇ । ನ ಬುಡಿಜೇ ಸ್ವಪ್ನಿಚೇನಿ ಮಹಾಪುರೇ । ತೇವೀ ಮಾತೇ ಪಾವಲೇ ತೇ ಸಂಸಾರೇ । ಲಿಂಪತೀಚಿ ನಾ ।।೧೫೩।। ಏರ್ಹ್ವೀ ಜಗದಾಕಾಶಾಚೇ ಶಿರೇ । ಜೇ ಚಿರಸ್ಥಾಯಿಯಾಂಚೇ ಧುರೇ । ಬ್ರಹ್ಮ ಭುವನ ಗಾ ಚವರೇ । ಲೋಕಾಚಳಾಚೇ ।।೧೫೪।। ಜಿಯೇ ಗಾಂವೀಂಚಾ ಪಹಾರು ದಿವೋವರೀ ।ಏಕಾ ಅಮರೇಂದ್ರಾಚೇ ಆಯುಷ್ಯ ನ ಧರೀ । ವಿಳೋನಿ ಪಾಂತೀ ಉಠೀ ಏಕಸರೀ । ಚವದಾಜಣಾಂಚೀ ।।೧೫೫।।

ಸಹಸ್ರಯುಗಪರ್ಯಂತಮ್ ಅಹರ್ಯದ್ಬ್ರಹ್ಮಣೋ ವಿದುಃ ।
ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ ।।೧೭।।

ಜೈ ಚೌಕಡಿಯಾ ಸಹಸ್ರ ಜಾಯೇ । ತೈ ಠಾಯೇ ಠಾವೋ ವಿಳುಚಿ ಹೋಯೇ । ಆಣಿ ತೈಸೇಚಿ ಸಹಸ್ರವರಿಯೇ  ಪಾಹೇ । ರಾತ್ರೀ ಜೇಥ ।।೧೫೬।। ಏವಢೇ ಅಹೋರಾತ್ರ ಜೇಥೀಂಚೇ । ತೇಣೇ ನ ಲೋಟತೀ ಜೇ ಭಾಗ್ಯಾಚೇ । ದೇಖತೀ ತೇ ಸ್ವರ್ಗೀಚೇ । ಚಿರಂಜೀವ ।।೧೫೭।। ಯೇರಾ ಸುರಗಣಾಂಚೀ ನವಾಈ । ವಿಶೇಷ ಸಾಂಗಾವೀ ಯೇಥ ಕಾಈ । ಮುದ್ದಲ ಇಂದ್ರಾಚೀಚಿ ದಶಾ ಪಾಹಿ । ಜೇ ದಿಹಾಚೇ ಚೌದಾ ।।೧೫೮।। ಪರಿ ಬ್ರಹ್ಮಯಾಚಿಯಾಹಿ ಆಠಾ ಪಾಹಾರಾಂತೇ । ಆಪುಲಿಯಾ ಡೋಳಾ ದೇಖತೇ। ಜೇ ಆಹಾತಿ ಗಾ ತಯಾತೇ। ಅಹೋರಾತ್ರವಿದ ಮ್ಹಣಿಪೇ ।।೧೫೯।।

ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ ।
ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತಸಂಜ್ಞಕೇ।।೧೮।।
ಭೂತಗ್ರಾಮಃ ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ ।
ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ।।೧೯।।

ತಯೇ ಬ್ರಹ್ಮಭುವನೀ ದಿವಸೇ ಪಾಹೇ । ತೇ ವೇಳೀ ಗಣನಾ ಕೆಹೀ ನ ಸಮಾಯೇ । ಐಸೇ ಅವ್ಯಾಕ್ತಾಚೇ ಹೋಯೇ । ವ್ಯಕ್ತ ವಿಶ್ವ ।।೧೬೦।। ಪುಢತೀ ದಿಹಾಂಚೀ ಚೌಪಾಹರಿ ಫಿಟೇ । ಆಣಿ ಹಾ ಆಕಾರಸಮುದ್ರ ಆಟೇ । ಪಾಠೀ ತೈಸಾಚಿ ಮಗ ಪಾಹಾಂಟೇ । ಭರೋ ಲಾಗೇ ।।೧೬೧।।

ಶ್ಲೋಕಾರ್ಥ :- ಅರ್ಜುನಾ ! ಬ್ರಹ್ಮಲೋಕ ಪರ್ಯಂತ ಹೋದರೂ ಪುನಃ ಜನ್ಮವು ತಪ್ಪುವುದಿಲ್ಲ. ನನ್ನನ್ನೇ ಪಡೆದು ಕೊಂಡವರು ಮಾತ್ರ ಜನ್ಮ ರಹಿತ ರಾಗುತ್ತಾರೆ ॥೧೬॥

ಸಾಮಾನ್ಯವಾಗಿ ವಿಚಾರಿಸಿದರೆ, ಬ್ರಹ್ಮ ಪದವಿಯಂತಹ ದೊಡ್ಡ ಸ್ಥಾನ ಪಡೆದ ಬ್ರಹ್ಮ ದೇವನಿಗೂ ಪುನರ್ಜನ್ಮದ ಸರತಿಯು ತಪ್ಪುವುದಿಲ್ಲ. ಆದರೆ ಸತ್ತ ಮನುಷ್ಯನ ಹೊಟ್ಟೆ ನೋಯದಂತೆ ॥೧೫೨॥

ಅಥವಾ ಎಚ್ಚರಾದ ಮೇಲೆ ಕನಸಿನಲ್ಲಿನ ಮಹಾಪೂರ ದೊಳಗೆ ಯಾರು ಮುಳುಗಲಾರದಂತೆ, ಯಾರು ನನ್ನನ್ನು ಹೊಂದಿ ರುವರೋ ಅವರು ಸಂಸಾರದಿಂದ ಲಿಪ್ತರಾಗುವುದಿಲ್ಲ ॥೧೫೩॥

ಸಹಜವಾಗಿ ನೋಡಿದರೆ, ಹದಿನಾಲ್ಕು ಲೋಕದ ಶಿಖರ ವಾಗಿರುವ ಹಾಗೂ ಸಪ್ತ ಚಿರಂಜೀವಿಗಳಲ್ಲಿ ಶ್ರೇಷ್ಠವಾಗಿ ರುವ ಮತ್ತು ತ್ರೈಲೋಕ್ಯರೂಪ ಪರ್ವತದ ಮಸ್ತಕವಾಗಿರುವ ಬ್ರಹ್ಮ ಭುವನವು ॥೧೫೪॥

ಅದೇ ಬ್ರಹ್ಮ ಲೋಕದ ದಿನದ ಒಂದು ಪ್ರಹರ ಕಾಲದಲ್ಲಿ ಒಬ್ಬ ಇಂದ್ರನ ಆಯುಷ್ಯವು ತಡೆಯುವುದಿಲ್ಲ. ಒಂದೇ ದಿನದಲ್ಲಿ ಹದಿನಾಲ್ಕು ಇಂದ್ರರು ಆಗಿ ಹೋಗುವರು ॥೧೫೫॥

ಶ್ಲೋಕಾರ್ಥ :- ಬ್ರಹ್ಮ ದೇವನ ಒಂದು ಹಗಲು ಸಾವಿರಾರು ಯುಗಗಳ ಕಾಲ. ರಾತ್ರಿಯೂ ಅಂಥದ್ದು. ಈ ವಿಷಯವನ್ನು ತಿಳಿದವರೇ ಅಹೋ ರಾತ್ರಿ ತತ್ತ್ವಜ್ಞರು ॥೧೭॥

ನಾಲ್ಕು ಯುಗಗಳು ಸಾವಿರಸಾರೆ ಸರಿದಾಗ ಬ್ರಹ್ಮ ದೇವ ನಿಗೆ ನಿಜವಾಗಿಯೂ ಒಂದು ಹಗಲು ಆಗುವುದು ಮತ್ತು ಅದರಂತೆಯೇ ಸಾವಿರ ಚೌಕಡಿಗಳಿಗೆ ಒಂದು ರಾತ್ರಿಯಾಗು ವುದು ॥೧೫೬॥

ಇಂತಹ ಹಗಲು ಮತ್ತು ರಾತ್ರಿ ಇರುವಲ್ಲಿ ಭಾಗ್ಯವಂತರೇ ಅಲ್ಲಿರುವರು. ಅವರು ಸಾಯುವುದಿಲ್ಲ ಮತ್ತು ಹಗಲು ರಾತ್ರಿ ಕಾಣುವರು. ಇವರು ಸ್ವರ್ಗ ಲೋಕದ ಚಿರಂಜೀವಿಗಳು ॥೧೫೭॥

ಮೂಲತಃ ಸರ್ವದೇವತೆಗಳ ರಾಜನಾದ ಇಂದ್ರನ ಗತಿ ಹೇಗಿದೆಯೆಂದರೆ ಬ್ರಹ್ಮ ದೇವನ ಒಂದೇ ದಿನದಲ್ಲಿ ಹದಿನಾಲ್ಕು ಇಂದ್ರರು ಬಂದು ಹೋಗುವರು. ಅಂದಮೇಲೆ ದೇವತೆಗಳ ಪ್ರತಿಷ್ಠೆ ಏನೆಂದು ವರ್ಣಿಸಬೇಕು ? ॥೧೫೮॥

ಆದರೆ ಬ್ರಹ್ಮ ದೇವನ ಎಂಟು ಪ್ರಹರಗಳನ್ನು ಯಾರು ತಮ್ಮ ಕಣ್ಣುಗಳಿಂದ ನೋಡುವರೋ ಅವರಿಗೆ (ಬ್ರಹ್ಮ ದೇವನ) ''ಅಹೋ ರಾತ್ರವೇತ್ತರು'' ಎಂದು ಕರೆಯುವರು ॥೧೫೯॥

ಶ್ಲೋಕಾರ್ಥ :- ಬ್ರಹ್ಮ ದೇವನ ಹಗಲಿನಲ್ಲಿಯೇ ಚರಾಚರ ಭೂತಗಳು ಅವ್ಯಕ್ತ ಪ್ರಕೃತಿಯಿಂದ ಹುಟ್ಟುತ್ತವೆ. ಆತನ ರಾತ್ರಿ ಕಾಲದಲ್ಲಿ ಇವೆಲ್ಲವೂ ಮೂಲಪ್ರಕೃತಿಯಲ್ಲಿ ಮುಳುಗಿ ಹೋಗುತ್ತವೆ ॥೧೮॥

ಶ್ಲೋಕಾರ್ಥ :- ಅರ್ಜುನಾ ! ಈ ಭೂತ ಸಮುದಾ ಯವು ಹುಟ್ಟಿ ಹುಟ್ಟಿ ಬ್ರಹ್ಮನ ರಾತ್ರಿ ಬರುತ್ತಲೇ ಪ್ರಳಯವಾಗಿ ಹೋಗುತ್ತದೆ. ಅನಂತರ ಹಗಲು ಬರುತ್ತಲೇ ಮತ್ತೆ ಸೃಷ್ಟಿಯು ಆರಂಭವಾಗುತ್ತದೆ ॥೧೯॥

ಬ್ರಹ್ಮ ಲೋಕದಲ್ಲಿ ದಿವಸವು ಉದಯವಾದಾಗ ನಿರಾಕರದ ಸಾಕಾರ ವಿಶ್ವಗಳು ಲೆಕ್ಕವಿಲ್ಲದಷ್ಟು ಹುಟ್ಟಿಕೊಳ್ಳುವುವು ॥೧೬೦॥

ಮುಂದೆ ಈ ಹಗಲಿನ ನಾಲ್ಕು ಪ್ರಹರಗಳು ಮುಗಿದನಂತರ ಈ ಎಲ್ಲ ವಿಶ್ವಗಳು ಇಲ್ಲದಾಗುವುವು ಮತ್ತು ಪುನಃ ಉದಯ ವಾಯಿತೆಂದರೆ ಮೊದಲಿನಂತೆಯೇ ತುಂಬುವುವು ॥೧೬೧॥

ಶಾರದೀಯೇಚಿಯೆ ಪ್ರವೇಶೀ। ಅಭ್ರೇ ಜಿರತೀ ಆಕಾಶೀ। ಮಗ ಗ್ರೀಷ್ಮಾಂತೀ ಜೈಶೀ । ನಿಗತೀ ಪುಢತೀ॥೧೬೨॥ ತೈಶೀ ಬ್ರಹ್ಮ ದಿನಾಚಿಯೇ ಆದೀ । ಹೇ ಭೂತಸೃಷ್ಟೀಚೀ ಮಾಂದೀ । ಮಿಳೇ ಜಂವ ಸಹಸ್ರಾವಧೀ । ನಿಮಿತ್ತ ಪುರೇ ॥೧೬೩॥ ಪಾಠೀ ರಾತ್ರೀಂಚಾ ಅವಸರು ಹೋಯೇ । ಆಣಿ ವಿಶ್ವ ಅವ್ಯಕ್ತೀ ಲಯಾ ಜಾಯೇ । ತೋಹೀ ಯುಗಸಹಸ್ರ ಮೋಟಕಾ ಪಾಹೇ । ಆಣಿ ತೈಸೇಚಿ ರಚೇ ॥೧೬೪॥ ಹೇ ಸಾಂಗಾವಯಾ ಕಾಯ ಉಪಪತ್ತೀ । ಜೇ ಜಗಾಚಾ ಪ್ರಳಯೋ ಆಣಿ ಸಂಭೂತೀ । ಇಯೇ ಬ್ರಹ್ಮ ಭುವನೀಂಚಿಯಾ ಹೋತೀ। ಅಹೋರಾತ್ರಾಮಾಜೀ ॥೧೬೫॥ ಕೈಸೇ ಥೋರಿವೇಚೇ ಮಾನ ಪಾಹೇ ಪಾ । ಜೋ ಸೃಷ್ಟೀಬೀಜಾಚಾ ಸಾಟೋಪಾ । ಪರಿ ಪುನರಾವೃತ್ತೀಚಿಯಾ ಮಾಪಾ । ಶೀಗ ಜಾಹಾಲಾ ॥೧೬೬॥ ಏರ್ಹವೀ ತ್ರೈಲೋಕ್ಯ ಹೇ ಧನುರ್ಧರಾ । ತಿಯೇ ಗಾಂವೀಚಾ ಗಾ ಪಸಾರಾ । ತೋ ಹಾ ದಿನೋದಯೀ ಏಕಸರಾ । ಮಾಂಡತು ಅಸೇ ॥೧೬೭॥ ಪಾಠೀ ರಾತ್ರೀಂಚಾ ಸಮೋ ಪಾವೇ । ಆಣಿ ಅಪೈಸಾಚಿ ಸಾಂಠವೇ । ಮ್ಹಣಿಯೇ ಜೇಥೀಂಚೇ ತೇಥ ಸ್ವಭಾವೇ । ಸಾಮ್ಯಾಸೀ ಯೇ ॥೧೬೮॥ ಜೈಸೆ ವೃಕ್ಷಪಣ ಬೀಜಾಸಿ ಆಲೇ । ಕೀ ಮೇಘು ಹೇ ಗಗನ ಜಾಹಾಲೇ । ತೈಸೇ ಅನೇಕತ್ವ ಜೇಥ ಸಾಮಾವಲೇ । ತೇ ಸಾಮ್ಯ ಮ್ಹಣಿಪೇ ॥೧೬೯॥

ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ।
ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥೨೦॥

ತೇಥ ಸಮವಿಷಮ ನ ದಿಸೇ ಕಾಂಹೀ । ಮ್ಹಣೌನಿ ಭೂತೇ ಹೇ ಭಾಷ ನಾಹೀ । ಜೇವಿ ದೂಧಚಿ ಜಾಹಾಲಿಯಾ ದಹೀ । ನಾಮರೂಪ ಜಾಯ ॥೧೭೦॥ ತೇವಿ ಆಕಾರಲೋಪಾಸರಿಸೇ । ಜಗಾಚೇ ಜಗಪಣ ಭ್ರಂಶೇ । ಪರಿ ಜೇಥೇ ಜಾಹಾಲೇ ತೇ ಜೈಸೇ । ತೈಸೇಂಚಿ ಅಸೇ ॥೧೭೧॥ ತೈ ತಯಾ ನಾಂವ ಸಹಜ ಅವ್ಯಕ್ತ । ಆಣಿ ಆಕಾರಾ ವೇಳೀ ತೇಚಿ ವ್ಯಕ್ತ । ಹೇ ಏಕಾಸ್ತವ ಏಕ ಸೂಚಿತ । ಏರ್ಹವೀ ದೋನೀ ನಾಹೀ॥೧೭೨॥ ಜೈಸೇ ಆಟಲಿಯಾ ರೂಪೇ । ಆಟಲೇಪಣ ತೇ ಖೋಟೀ ಮ್ಹಣಿಪೇ । ಪುಢತೀ ತೋ ಘನಾಕಾರು ಹಾರಪೇ । ಜೇ ವೇಳೀ ಅಲಂಕಾರ ಹೋತೀ ॥೧೭೩॥ ಹೀ ದೋನ್ಹೀ ಜೈಶೀ ಹೋಣೇ । ಏಕೀ ಸಾಕ್ಷಿಭೂತ ಸುವರ್ಣೇ । ತೈಸೀ ವ್ಯಕ್ತಾ ವ್ಯಕ್ತಾಚೀ ಕಡಸಣೇ । ವಸ್ತೂಚ್ಯಾ ಠಾಯೀ ॥೧೭೪॥ ತೇ ವರೀ ವ್ಯಕ್ತ ನಾ ಅವ್ಯಕ್ತ । ನಿತ್ಯ ನಾ ನಾಶವಂತ । ಯಾ ದೋನ್ಹೀ ಭಾವಾಅತೀತ । ಅನಾದಿಸಿದ್ಧ ॥೧೭೫॥

ಶರದ್ ಋತುವಿನ ಆರಂಭದಲ್ಲಿ ಮೋಡಗಳು ಆಕಾಶದಲ್ಲಿ ಇಲ್ಲದಾಗುವುವು ಮತ್ತು ಇವೇ ಮೋಡಗಳು ಗ್ರೀಷ್ಮ ಋತುವಿನ ಕೊನೆಯಲ್ಲಿ ಉತ್ಪನ್ನವಾಗುವುವು ।।೧೬೨।।

ಅದರಂತೆ ಬ್ರಹ್ಮದೇವನ ಹಗಲಿನ ಆರಂಭದಲ್ಲಿ ಭೂತ ಸೃಷ್ಟಿ ಸಮುದಾಯಗಳು ಒಂದುಗೂಡುವುವು ಮತ್ತು ಇವು ನಾಲ್ಕು ಯುಗಗಳು ಸಾವಿರಸಾರೆ ತಿರುಗುವವರೆಗೆ ಇರುವುವು ।।೧೬೩।।

ತದನಂತರ ಬ್ರಹ್ಮದೇವನ ರಾತ್ರಿ ಸಮಯವು ಬಂದಾಗ ಈ ಎಲ್ಲ ವಿಶ್ವಗಳು ನಿರಾಕಾರದಲ್ಲಿ ಲಯಗೊಳ್ಳುವುವು ಮತ್ತು ರಾತ್ರಿ ಹೋಗಿ ಹಗಲು ಉದಯಿಸಲು ಪುನಃ ಮೊದಲಿನಂತೆ ಆಗುವುವು ।।೧೬೪।।

ಈ ಪ್ರಕಾರವಾಗಿ ವಿಶ್ವದ ರಚನೆಯಾಗುವುದು. ಇದನ್ನು ಹೇಳುವ ಉದ್ದೇಶ ಇಷ್ಟೇ, ಬ್ರಹ್ಮದೇವನ ಹಗಲು ರಾತ್ರಿಗಳಲ್ಲಿ ವಿಶ್ವದ ಉತ್ಪತ್ತಿ ಲಯವಾಗುವುವು ।।೧೬೫।।

ಬ್ರಹ್ಮದೇವನ ಹಿರಿತನದ ಯೋಗ್ಯತೆ ನೋಡಲು ಹೋದರೆ ಆತನು ಸೃಷ್ಟಿಯ ಬೀಜದ ಭಾಂಡಾರನಾಗಿರುವನು. ಆದರೆ ಪುನರ್ಜನ್ಮದ ಅಳತೆಯಲ್ಲಿ ಅನಂತಭೂತಗಳನ್ನು ಹಾಕಿದ ಮೇಲೆ ಕೊನೆಗೆ ಮೇಲ್ಭಾಗದ ಧಾನ್ಯ ಅದೇ ಬ್ರಹ್ಮದೇವನಾಗಿದ್ದಾನೆ ।।೧೬೬।।

ಹೇ ಧನುರ್ಧರನೇ, ಈ ತ್ರೈಲೋಕ್ಯ ಸೃಷ್ಟಿಯು ಸತ್ಯ ಲೋಕದ ವ್ಯವಹಾರವಾಗಿರುವುದು. ಬ್ರಹ್ಮದೇವನ ಹಗಲು ಉದಯವಾದಾಗಿನಿಂದಲೂ ರಾತ್ರಿ ಆಗುವವರೆಗೆ ಒಂದೇ ಸವನೇ ಈ ವ್ಯವಹಾರ ನಡೆಯುತ್ತಿರುವುದು ।।೧೬೭।।

ಆಮೇಲೆ ರಾತ್ರಿ ಸಮಯವಾಯಿತೆಂದರೆ ಅವು ಸಹಜವಾಗಿ ಅವ್ಯಕ್ತದಲ್ಲಿ ಲಯಗೊಳ್ಳುವುವು ಮತ್ತು ಈ ಪಂಚಭೂತಾದಿಕಗಳು ಬ್ರಹ್ಮದೇವನ ಆಜ್ಞೆಯಿಂದ ಅಲ್ಲಿಂದಲೇ ಲಯಗೊಂಡು ಸಾಮ್ಯತ್ವವನ್ನು ಪಡೆಯುವುವು ।।೧೬೮।।

ಯಾವ ಪ್ರಕಾರವಾಗಿ ಗಿಡವು ಬೀಜರೂಪದಲ್ಲಿ ಸಮಾವಿಷ್ಟಗೊಳ್ಳುವುದೋ ಅಥವಾ ಅನೇಕ ಮೋಡಗಳು ಆಕಾಶರೂಪವಾಗುವುವೋ ಅದರಂತೆ. ಒಂದರಲ್ಲಿ ಅನೇಕ ಸಮಾವಿಷ್ಟಗೊಂಡಾಗ ಅದಕ್ಕೆ ಸಾಮ್ಯ ಎನ್ನುವರು ।।೧೬೯।।

ಶ್ಲೋಕಾರ್ಥ :- ಆ ಅವ್ಯಕ್ತ ಪ್ರಕೃತಿಗಿಂತ ವಿಲಕ್ಷಣವೂ, ಗೂಢವೂ, ಸನಾತನವೂ ಆದ ಬ್ರಹ್ಮ ತತ್ತ್ವವು ಇರುತ್ತದೆ. ಅದು ಈ ನಾಶವಾಗುವ ಸಮಸ್ತ ಭೂತಗಳಲ್ಲಿ ಇದ್ದರೂ ತಾನು ನಶಿಸದು ।।೨೦।।

ಈ ಸಾಮ್ಯದಲ್ಲಿ ಹೆಚ್ಚು ಕಡಿಮೆ ಏನೂ ಕಾಣಿಸುವುದಿಲ್ಲ. ಆದ್ದರಿಂದ ಅದಕ್ಕೆ ಭೂತ ಎಂಬ ಹೆಸರು ಅನ್ವಯಿಸುವುದಿಲ್ಲ. ಯಾವ ಪ್ರಕಾರವಾಗಿ ಹಾಲು ಮೊಸರಾದಾಗ ಹಾಲಿನ ನಾಮ ರೂಪಗಳು ಇಲ್ಲದಾಗುವುದು ।।೧೭೦।।

ಅದರಂತೆ ಆಕಾರದ ನಾಶವಾದಮೇಲೆ ಜಗತ್ತಿನ ಜಗತನವು ಭ್ರಂಶಗೊಳ್ಳುವುದು ಮತ್ತು ಯಾವುದರಿಂದ ಈಜಗತ್ತು ಆಗಿರುವುದೋ ಅದು ಇದ್ದ ಹಾಗೆಯೇ ಇರುವುದು ।।೧೭೧।।

ಆಗಲೇ ಅದಕ್ಕೆ "ಅವ್ಯಕ್ತ" ಎಂದು ಹೇಳುವರು ಮತ್ತು ಸಾಕಾರವಾದಾಗ ಅದಕ್ಕೇನೇ "ವ್ಯಕ್ತ" ಎಂದು ಹೇಳುವರು. ಇವು ಒಂದಕ್ಕೊಂದು ತೋರಿಸುವುವು. ಆದರೆ ವಿಚಾರಿಸಿ ನೋಡಿದರೆ ಎರಡೂ ಇಲ್ಲ ।।೧೭೨।।

ಯಾವ ಪ್ರಕಾರವಾಗಿ ಅಲಂಕಾರಗಳನ್ನು ಕರಗಿಸಿದಾಗ ಅದಕ್ಕೆ "ಗಟ್ಟಿ" ಎನ್ನುವರು. ಮುಂದೆ ಅದರಿಂದ ಅಲಂಕಾರಗಳು ತಯಾರಿಸಿದಾಗ "ಗಟ್ಟಿ" ಎಂಬುದು ಇಲ್ಲದಾಗುವುದು ।।೧೭೩।।

ಈ ಎರಡು ರೂಪಾಂತರಗಳು ಒಂದು ಸಾಕ್ಷಿ ಭೂತವಾದ ಬೆಳ್ಳಿ ಅಥವಾ ಬಂಗಾರದ ಆಧಾರದಿಂದ ಆಗುವುವು. ಅದರಂತೆ ವ್ಯಕ್ತ ಮತ್ತು ಅವ್ಯಕ್ತ ಇವೆರಡು ವಿಚಾರವು ಬ್ರಹ್ಮದಲ್ಲಿಯೇ ಆಗುವುವು ।।೧೭೪।।

ಈ ಬ್ರಹ್ಮವು ವ್ಯಕ್ತವೂ ಅಲ್ಲ ಅವ್ಯಕ್ತವೂ ಅಲ್ಲ. ನಿತ್ಯವೂ ಅಲ್ಲ, ಅನಿತ್ಯವೂ ಅಲ್ಲ. ಈ ಎರಡೂ ಸ್ಥಿತಿಗಳ ಆಚೆಗಿರುವ ಅನಾದಿಸಿದ್ಧವಾಗಿದೆ ।।೧೭೫।।

ಜೇ ಹೇ ವಿಶ್ವಚಿ ಹೋಊನಿ ಅಸೇ । ಪರಿ ವಿಶ್ವಪಣ ನಾಸಿಲೇನಿ ನ ನಾಸೇ । ಅಕ್ಷರೇ ಪುಸಿಲ್ಯಾ ನ ಪುಸೇ । ಅರ್ಥು ಜೈಸಾ ।।೧೭೬।। ಪಾಹೇ ಪಾ ತರಂಗ ತರೀ ಹೋತ ಜಾತ । ಪರಿ ತೇಥ ಉದಕ ತೇ ಅಖಂಡ ಅಸತ । ತೇವೀ ಭೂತಾಭಾವೀ ನ ನಾಶತ । ಅವಿನಾಶ ಜೇ ।।೧೭೭।। ನಾತರೀ ಆಟತಿಯೇ ಅಳಂಕಾರೀ । ನಾಟತೇ ಕನಕ ಅಸೇ ಜಯಾಪರಿ । ತೇವೀ ಮರತಿಯೇ ಜೀವಾ ಕಾರೀ । ಅಮರ ಜೇ ಆಹೇ ।।೧೭೮।।

ಅವ್ಯಕ್ತೋಽಕ್ಷರ ಇತ್ಯುಕ್ತಃ ತಮಾಹುಃ ಪರಮಾಂ ಗತಿಮ್ ।
ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ।।೨೧।।

ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।
ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ।।೨೨।।

ಜಯಾತೇ ಅವ್ಯಕ್ತ ಮ್ಹಣೋ ಯೇ ಕೋಡೇ । ಮ್ಹಣತಾ ಸ್ತುತಿ ಹೇ ಐಸೇ ನಾವಡೇ । ಜೇ ಮನ ಬುದ್ಧಿ ನ ಸಾಂಪಡೇ । ಮ್ಹಣೌನಿಯಾ ।।೧೭೯।। ಆಣಿ ಆಕಾರಾ ಆಲಿಯಾ ಜಯಾಚೇ । ನಿರಾಕಾರಪಣ ನ ವಚೇ । ಆಕಾರ ಲೋಪೇ ನ ವಿಸಂಚೇ । ನಿತ್ಯತಾ ಗಾ ।।೧೮೦।। ಮ್ಹಣೌನಿ ಅಕ್ಷರ ಜೇ ಮ್ಹಣಿಜೇ । ತೇವಿಂಚಿ ಮ್ಹಣತಾ ಬೋಧುಹಿ ಉಪಜೇ । ಜಯಾಪರೌತಾ ಪೈಸು ನ ದೇಖಿಜೇ । ಯಾ ನಾಮ ಪರಮಗತಿ।।೧೮೧।। ಪರಿ ಆಘವಾ ಇಹೀ ದೇಹಪುರೀ । ಆಹೇ ನಿಜಲಿಯಾಚೇ ಪರೀ। ಜೇ ವ್ಯಾಪಾರು ಕರವೀ ನಾ ಕರೀ । ಮ್ಹಣೌನಿಯಾ ।।೧೮೨।। ಏರ್ಹವೀ ಜೇ ಶಾರೀರಚೇಷ್ಟಾ । ತ್ಯಾಮಾಜೀ ಏಕಹೀ ನ ಠಕೇ ಗಾ ಸುಭಟಾ । ದಾಹೀ ಇಂದ್ರಿಯಾಂಚಿಯಾ ವಾಟಾ । ವಾಹತಚಿ ಆಹಾತೀ ।।೧೮೩।। ಉಕಲೂನಿ ವಿಷಯಾಂಚಾ ಪೇಟಾ । ಹೋತ ಮನಾಚಾ ಚೋಹಟಾ । ತೋ ಸುಖದುಃಖಾಚಾ ರಾಜವಾಂಟಾ । ಭೀತರಾಹೀ ಪಾವೇ ।।೧೮೪।। ಪರೀ ರಾವೋ ಪಹುಡಲಿಯಾ ಸುಖೇ । ಜೈಸಾ ದೇಶೀಂಚಾ ವ್ಯಾಪಾರು ನ ಠಕೇ । ಪ್ರಜಾ ಆಪುಲಾಲೇನಿ ಅಭಿಲಾಖೇ । ಕರಿತಚಿ ಅಸತೀ ।।೧೮೫।। ತೈಸೇ ಬುದ್ಧೀಚೇ ಹನ ಜಾಣಣೇ । ಕಾ ಮನಾಚೇ ಘೇಣೇ ದೇಣೇ । ಇಂದ್ರಿಯಾಂಚೇ ಕರಣೇ । ಸ್ಫುರಣ ವಾಯೂಚೇ ।।೧೮೬।। ಹೇ ದೇಹಕ್ರಿಯಾ ಆಘವೀ । ನ ಕರಿವಿತಾ ಹೋಯ ಬರವೀ । ಜೈಸಾ ನ ಚಲವಿತೇನಿ ರವೀ । ಲೋಕು ಚಾಲೇ ।।೧೮೭।। ಅರ್ಜುನಾ ತಯಾ ಪರೀ । ಸುತಲಾ ಐಸಾ ಆಹೇ ಶರೀರೀ । ಮ್ಹಣೌನಿ ಪುರುಷು ಗಾ ಅವಧಾರೀ । ಮ್ಹಣಿಪೇ ಜಯಾತೇ ।।೧೮೮।।

ಈ ಬ್ರಹ್ಮವು ವಿಶ್ವಾಕಾರವಾಗಿರುವುದು. ಆದರೆ ವಿಶ್ವಾಕಾ
ರವು ಇಲ್ಲದಾಗಲು ಅದು ಲಯಗೊಳ್ಳುವುದಿಲ್ಲ. ಯಾವ
ಪ್ರಕಾರವಾಗಿ ಅಕ್ಷರಗಳನ್ನು ಒರೆಸಿದರೆ ಅದರ ಅರ್ಥವನ್ನು
ಒರೆಸಲು ಬರುವುದಿಲ್ಲ ||೧೭೬||

ಇಲ್ಲಿ ನೋಡು, ನೀರಿನ ಮೇಲೆ ತೆರೆಗಳು ಹುಟ್ಟುವುವು ಇಲ್ಲ
ದಾಗುವುವು. ಆದರೆ ನೀರು ಮಾತ್ರ ಹಾಗೆಯೇ ಇರುವುದು.
ಅದರಂತೆ ಭೂತಗಳು ಇಲ್ಲದಾಗಲು ಪರಬ್ರಹ್ಮವು ನಾಶ
ವಾಗುವುದಿಲ್ಲ ||೧೭೭||

ಅಥವಾ ಅಲಂಕಾರಗಳನ್ನು ಕರಗಿಸಿದಾಗ ಬಂಗಾರವು
ಯಾವ ಪ್ರಕಾರವಾಗಿ ಕರಗುವುದಿಲ್ಲವೋ ಅದರಂತೆ ಮರಣ
ಹೊಂದುವ ಜೀವಗಳಲ್ಲಿ ಆತ್ಮವು ಅಮರವಾಗಿದೆ ||೧೭೮||

ಶ್ಲೋಕಾರ್ಥ :- ಅದನ್ನೇ ಅವ್ಯಕ್ತವೆಂದೂ, ಅಕ್ಷರ
ವೆಂದೂ, ಪರಮಗತಿಯೆಂದೂ ಸಹ ಹೇಳುತ್ತಾರೆ. ಅದು ನನ್ನ
ನಿಲಯ, ಅದನ್ನು ಪಡೆದವರು ತಿರುಗಿ ಈ ಲೋಕಕ್ಕೆ
ಬರುವುದಿಲ್ಲ ||೨೧||

ಶ್ಲೋಕಾರ್ಥ :- ಅರ್ಜುನಾ! ಸಮಸ್ತ ಭೂತ ಜಾಲವು
ಯಾವನಲ್ಲಿ ನಿಂತಿರುವುವೋ ಯಾವನು ಎಲ್ಲೆಲ್ಲಿಯೂ
ವ್ಯಾಪಿಸಿರುವನೋ, ಆ ಪರಮ ಪುರುಷನು ಅನನ್ಯ ಭಕ್ತಿಯಿಂದ
ಮಾತ್ರ ಲಭ್ಯನು ||೨೨||

ಇದಕ್ಕೆ ಕೌತುಕದಿಂದ ಅವ್ಯಕ್ತವೆಂದು ಸ್ತುತಿ ಮಾಡಿ
ದಂತೆ ತೋರುವುದು. ಏಕೆಂದರೆ ಇದು ಮನಬುದ್ಧಿಗೆ ದೊರಕ
ಲಾರದು ||೧೭೯||

ಇದು ಆಕಾರಕ್ಕೆ ಬಂದರೂ ಇದರ ನಿರಾಕಾರತ್ವವು ಹೋಗು
ವುದಿಲ್ಲ ಮತ್ತು ಆಕಾರದ ನಾಶವಾದರೂ ಅದರ ನಿತ್ಯತ್ವವು
ಭಂಗಗೊಳ್ಳುವುದಿಲ್ಲ ||೧೮೦||

ಆದ್ದರಿಂದ ಅದಕ್ಕೆ ''ಅಕ್ಷರ'' ನಾಶವಾಗದ್ದೆಂದು ಹೇಳು
ವರು. ಅದಕ್ಕೆ ಅಕ್ಷರವೆಂದೊಡನೆಯೇ ನಿತ್ಯತ್ವದ ಜ್ಞಾನ
ವಾಗುವುದು ಮತ್ತು ಇದರ ಆಚೆಗೆ ಯಾವುದೂ
ಇರುವುದಿಲ್ಲ. ಅದಕ್ಕಾಗಿ ಪರಮಗತಿ ಎಂದು ಹೆಸರು
ಇರುವುದು ||೧೮೧||

ಈ ಅಕ್ಷರವು ಎಲ್ಲ ದೇಹರೂಪ ನಗರದಲ್ಲಿ ಇದೆ. ಆದರೆ
ಇದು ಮಲಗಿದಂತೆ ಇದ್ದು, ದೇಹದಿಂದ ಯಾವ ಕ್ರಿಯೆಯನ್ನು
ಮಾಡಿಸುವುದಿಲ್ಲ ಮತ್ತು ಸ್ವತಃ ತಾನೂ ಮಾಡುವುದಿಲ್ಲ ||೧೮೨||

ಆದಾಗ್ಯೂ ಹೇ ಮಹಾವೀರನಾದ ಅರ್ಜುನನೇ, ಶರೀರದ
ಎಲ್ಲ ವ್ಯಾಪಾರಗಳಲ್ಲಿ ಒಂದು ವ್ಯಾಪಾರವೂ ನಿಲ್ಲುವುದಿಲ್ಲ.
ಹತ್ತು ಇಂದ್ರಿಯಗಳ ವ್ಯಾಪಾರವು ಸದಾ ನಡೆದಿರುವುದು ||೧೮೩||

ವಿಷಯರೂಪ ಬಜಾರವನ್ನು ಮನೋರೂಪ ನಾಲ್ಕು
ದಾರಿ ಕೂಡಿದ ಸ್ಥಳದಲ್ಲಿ ರಚಿಸಿ ಅಲ್ಲಿ ವ್ಯಾಪಾರ ಆರಂಭ
ಗೊಂಡಾಗ ಅದರಲ್ಲಾಗುವ ಸುಖ ದುಃಖಗಳ ಮುಖ್ಯ ಭಾಗವು
ಅಂತಃಕರಣಕ್ಕೂ ಸಹ ದೊರೆಯುವುದು ||೧೮೪||

ರಾಜನು ಸುಖವಾಗಿ ಮಲಗಿಕೊಂಡಾಗ ಯಾವ ಪ್ರಕಾರ
ವಾಗಿ ರಾಜ್ಯದೊಳಗಿನ ವ್ಯಾಪಾರವು ನಿಲ್ಲುವುದಿಲ್ಲವೋ,
ಅದರಂತೆ ಪ್ರಜೆಗಳು ತಮ್ಮ ಪ್ರಾಪ್ತಿಯ ಇಚ್ಛೆಯಿಂದ ವ್ಯಾಪಾರ
ವನ್ನು ಮಾಡುತ್ತಲೇ ಇರುವರು ||೧೮೫||

ಅದರಂತೆ ಬುದ್ಧಿಯಿಂದ ತಿಳಿಯುವುದು ಮತ್ತು ಮನಸ್ಸಿ
ನಿಂದ ಕೊಂಡುಕೊಳ್ಳುವುದು, ಇಂದ್ರಿಯಗಳು ಕಾರ್ಯ ಮಾಡು
ವುದು ಹಾಗೂ ವಾಯುವು ಚಲಿಸುವುದು ||೧೮೬||

ಈ ಎಲ್ಲ ದೇಹ ವ್ಯಾಪಾರಗಳು ಈ ಅಕ್ಷರವು ಮಾಡಿಸದೇ
ತಮುಷ್ಟಕ್ಕೆ ತಾವೇ ಆಗುವುವು. ಯಾವ ಪ್ರಕಾರವಾಗಿ ಸೂರ್ಯನು
ನಡಿಸದೇ ಆತನ ಪ್ರಕಾಶದಿಂದ ಲೋಕತ್ರಯಗಳು ನಡೆಯು
ವುವು ||೧೮೭||

ಅದರಂತೆ ಅರ್ಜುನಾ, ಆತನು ಶರೀರದಲ್ಲಿ ಮಲಗಿದಂತೆ
ಸ್ವಸ್ಥನಿರುವನು. ಆದ್ದರಿಂದ ಆತನಿಗೆ ''ಪುರುಷ'' ಎನ್ನುವರು
ಹೀಗೆ ತಿಳಿದುಕೊ ||೧೮೮||

ಆಣೀ ಪ್ರಕೃತಿ ಪತಿವ್ರತೇ । ಪಡಿಲಾ ಏಕಪತ್ನೀವ್ರತೇ । ಯೇಣೇಹಿ ಕಾರಣೇ ಜಯಾತೇ । ಪುರುಷು ಮ್ಹಣೋ ಯೇ ।೧೮೯॥ ಪೈ ವೇದಾಚೇ ಬಹುವಸಪಣ । ದೇಖೇಚಿನಾ ಜಯಾಚೇ ಆಂಗಣ । ಹೇ ಗಗನಾಚೇ ಪಾಂಘುರೂಣ । ಹೋಯ ದೇಖಾ ।೧೯೦॥ ಐಸೇ ಜಾಣೂನಿ ಯೋಗೀಶ್ವರ । ಜಯಾತೇ ಮ್ಹಣತೀ ಪರಾತ್ಪರ । ಜೇ ಅನನ್ಯಗತೀಚೇ ಘರ । ಗಿವಸೀತ ಯೇ ।೧೯೧॥ ಜೇ ತನೂ ವಾಚಾ ಚಿತ್ತೇ । ನಾಇಕತೀ ದುಜಿಯೇ ಗೋಷ್ಟೀತೇ । ತಯಾ ಏಕನಿಷ್ಠೇಚೇ ಪಿಕತೇ । ಸುಕ್ಷೇತ್ರ ಜೇ ।೧೯೨॥ ಹೇ ತ್ರೈಲೋಕ್ಯಚಿ ಪುರುಷೋತ್ತಮು । ಐಸಾ ಸಾಚ ಜಯಾಚಾ ಮನೋಧರ್ಮು । ತಯಾ ಆಸ್ತಿಕಾಚಾ ಆಶ್ರಮು । ಪಾಂಡವಾ ಗಾ ।೧೯೩॥ ಜೇ ನಿಗರ್ವಾಚೇ ಗೌರವ । ಜೇ ನಿರ್ಗುಣಾಚೇ ಜಾಣಿವ । ಜೇ ಸುಖಾಚೇ ರಾಣಿವ । ನಿರಾಶಾಂಸೀ ।೧೯೪॥ ಜೇ ಸಂತೋಷಿಯಾ ವಾಢಿಲೇ ತಾಟ । ಜೇ ಅಚಿಂತಾ ಅನಾಥಾಚೇ ಮಾಯಪೋಟ । ಭಕ್ತಿಸೀ ಉಜೂ ವಾಟ । ಜಯಾ ಗಾಂವಾ ।೧೯೫॥ ಹೇ ಏಕೈಕ ಸಾಂಗೋನಿ ವಾಯಾ । ಕಾಯ ಫಾರ ಕರೂ ಧನಂಜಯಾ । ಪೈ ಗೇಲಿಯಾ ಜಯಾ ಠಾಯಾ । ತೋ ಠಾವೋಚಿ ಹೋಇಜೇ ।೧೯೬॥ ಹಿಂವಾಚಿಯಾ ಝುಳುಕಾ । ಜೈಸೇ ಹಿಂವಚಿ ಪಡೇ ಉಷ್ಣೋದಕಾ । ಕಾ ಸಮೋರ ಜಾಲಿಯಾ ಅರ್ಕಾ । ತಮಚಿ ಪ್ರಕಾಶು ಹೋಯ ।೧೯೭॥ ತೈಸಾ ಸಂಸಾರು ಜಯಾ ಗಾಂವಾ । ಗೇಲಾ ಸಾಂತಾ ಪಾಂಡವಾ । ಹೋಊನಿ ಠಾಕೇ ಆಘವಾ । ಮೋಕ್ಷಾಚಾಚೇ ।೧೯೮॥ ತರೀ ಅಗ್ನೀಮಾಜೀ ಆಲೇ । ಜೈಸೇ ಇಂಧನಚಿ ಅಗ್ನಿ ಜಹಾಲೇ । ಪಾಠೀ ನ ನಿವಡೇಚಿ ಕಾಂಹೀ ಕೇಲೇ । ಕಾಷ್ಠಪಣ ।೧೯೯॥ ನಾತರೀ ಸಾಖರೇಚಾ ಮಾಘೌತಾ । ಬುದ್ಧಿಮಂತಪಣೇಹೀ ಕರಿತಾ । ಪರಿ ಊಂಸ ನವ್ಹೇ ಪಂಡುಸುತಾ । ಜಿಯಾಪರೀ ।೨೦೦॥ ಲೋಹಾಚೇ ಕನಕ ಜಾಹಲೇ । ಹೇ ಏಕೇ ಪರಿಸೇಚಿ ಕೇಲೇ । ಆತಾ ಆಣಿಕ ಕೈಚೇ ತೇ ಗೇಲೇ । ಲೋಹತ್ವ ಆಣಿ ।೨೦೧॥ ಮ್ಹಣೌನಿ ತೂಪ ಹೋಊನಿ ಮಾಘೌತೇ । ಜೇವೀ ದೂಧಪಣಾ ನ ಯೇಚಿ ನಿರುತೇ । ತೇವೀ ಪಾವೋನಿಯಾ ಜಯಾತೇ । ಜೇವೀ ದೂಧಪಣಾ ನ ಯೇಚಿ ನಿರುತೇ । ತೇವೀ ಪಾವೋನಿಯಾ ಜಯಾತೇ । ಪುನರಾವೃತ್ತಿ ನಾಹೀ ।೨೦೨॥ ತೇ ಮಾಝೇ ಪರಮ । ಸಾಚೋಕಾರೇ ನಿಜಧಾಮ । ಹೇ ಅಂತುವಟ ತುಜ ವರ್ಮ । ದಾವಿಜತ ಅಸೇ ।೨೦೩॥

ಯತ್ರ ಕಾಲೇ ತ್ವನಾವೃತ್ತಿಮ್ ಆವೃತ್ತಿಂ ಚೈವ ಯೋಗಿನಃ ।
ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ।೨೩॥

ಮತ್ತು ಮಾಯಾರೂಪ ಪತಿವ್ರತೆ ಸ್ತ್ರೀಯ ಏಕಪತ್ನಿ ವ್ರತಸ್ಥನಾಗಿರುವುದರಿಂದ ಈತನು ಪುರುಷನೆಂದು ಹೆಸರು ಪಡೆದಿರುವನು ।।೮೯।।

ಆದರೆ ವೇದವು ಬಹಳ ರೀತಿಯಿಂದ ವಿಚಾರ ಮಾಡಿದಾಗ್ಯೂ, ಅದರ ಅಂಗಳವು ಸಹ ಇದರ ದೃಷ್ಟಿಗೆ ಬೀಳುವುದಿಲ್ಲ. ಅದು ಆಕಾಶಕ್ಕೆ ಹೊದಿಕೆಯಾಗಿರುವುದು ।।೯೦।।

ಇದನ್ನರಿತ ಯೋಗಿ ಜನರು ಅದಕ್ಕೆ ಜೀವ ಪ್ರಕೃತಿಯರ ಆಚೆಗಿರುವ "ಪರಾತ್ಪರ" ಎನ್ನುವರು. ಅದು ಏಕನಿಷ್ಠ ಭಕ್ತರನ್ನು ಶೋಧಿಸುತ್ತ ಅವರ ಮನೆಗೆ ಬರುವುದು ।।೯೧।।

ಯಾವ ಏಕನಿಷ್ಠ ಭಕ್ತನು ಕಾಯಾ, ವಾಚಾ, ಮನಸ್ಸಿನಿಂದ ಬೇರೆ ಏನನ್ನೂ ತಿಳಿಯುವುದಿಲ್ಲ. ಆತನ ಏಕನಿಷ್ಠೆಯು ಬೆಳೆಕೊಡುವ ಉತ್ತಮ ಭೂಮಿಯೇ ಸರಿ ।।೯೨।।

ಹೇ ಪಾಂಡವನೇ, ಈ ತ್ರೈಲೋಕ್ಯವು ಭಗವದ್ರೂಪವಾಗಿರುವುದೆಂದು ನಿಜವಾಗಿಯೂ ಅವರ ಮನೋಭಾವವಾಗಿರುವುದು. ಈ ಆಸ್ತಿಕ್ಯವು ಭಕ್ತರ ಆಶ್ರಮವಾಗಿರುವುದು ।।೯೩।।

ಇದು ನಿರ್ಗರ್ವಿಗಳ ಗೌರವವಾಗಿರುವುದು. ಇದು ನಿರ್ಗುಣದ ಜ್ಞಾನವಾಗಿರುವುದು ಮತ್ತು ಇದು ನಿರಾಶಗಳವರ ಸುಖ, ಭೋಗ ಪಡೆಯುವ ರಾಜ್ಯವಾಗಿರುವುದು ।।೯೪।।

ಇದು ಸಂತೋಷ ಜನರ ಬಡಿಸಿದ ಊಟದ ತಟ್ಟೆಯಾಗಿರುವುದು. ಇದು ಸಂಸಾರದ ಚಿಂತೆಯನ್ನು ಮಾಡದ ಶರಣಾಗತರ ಪ್ರೀತಿಯ ಹೃದಯವಾಗಿರುವುದು ಮತ್ತು ಭಕ್ತಿಯಿಂದ ನಡೆಯುವವರಿಗೆ ಮೋಕ್ಷದ ಸರಳ ಮಾರ್ಗವಾಗಿರುವುದು ।।೯೫।।

ಧನಂಜಯನೇ, ಹೀಗೆ ಒಂದೊಂದೇ ಹೇಳುತ್ತ ಸುಮ್ಮನೇ ಎಷ್ಟೆಂದು ವರ್ಣಿಸಲಿ? ಸ್ವಲ್ಪದಲ್ಲಿ ಹೇಳಬೇಕೆಂದರೆ ಯಾವ ಪರಮಧಾಮಕ್ಕೆ ಹೋದಾಗ ಆತನು ಅದೇ ಸ್ವರೂಪನಾಗುವನು ।।೯೬।।

ಯಾವ ಪ್ರಕಾರವಾಗಿ ಶೀತಲವಾಯು ಬೀಸಿದಾಗ ಆ ಚಳಿಯಿಂದ ಕಾದ ನೀರು ತಣ್ಣಗಾಗುವುದು. ಅಥವಾ ಸೂರ್ಯನು ಉದಯಿಸಿದಾಗ ಕತ್ತಲವು ಪ್ರಕಾಶರೂಪವಾಗುವುದು ।।೯೭।।

ಅದರಂತೆ ಪಾಂಡವನೇ, ಈ ದುಃಖರೂಪ ಸಂಸಾರವು ಯಾವ ಪರಮಧಾಮರೂಪ ಗ್ರಾಮಕ್ಕೆ ಹೋದಾಗ ಸಂಪೂರ್ಣವಾಗಿ ಮೋಕ್ಷ ರೂಪವೇ ಸುಖರೂಪವಾಗುವುದು ।।೯೮।।

ಯಾವಪ್ರಕಾರವಾಗಿ ಅಗ್ನಿಯ ಕಕ್ಷೆಯಲ್ಲಿ ಬಂದ ಕಟ್ಟಿಗೆಯು ಅಗ್ನಿರೂಪವೇ ಆಗಿಬಿಡುವುದು. ತದನಂತರ ಅದರ ಕಟ್ಟಿಗೆತನವು ಎಷ್ಟು ಪ್ರಯತ್ನ ಮಾಡಿದರೂ ಬರುವುದಿಲ್ಲ ।।೯೯।।

ಅಥವಾ ಪಂಡುಸುತನೇ, ಯಾವ ಪ್ರಕಾರವಾಗಿ ಸಕ್ಕರೆಯು ತಯಾರಿಸಿದ ಮೇಲೆ ಯಾವ ಬುದ್ಧಿವಂತಿಕೆಯಿಂದಲೂ ಅದು ಪುನಃ ಕಬ್ಬಿನ ರೂಪಕ್ಕೆ ಬರಲಾರದು ।।೨೦೦।।

ಕಬ್ಬಿಣವನ್ನು ಪರೀಸಮಣಿಯು ಒಂದು ಸಾರೆ ಬಂಗಾರವನ್ನಾಗಿ ಮಾಡಿದ ಮೇಲೆ ಪುನಃ ಅದನ್ನು ಕಬ್ಬಿಣವನ್ನಾಗಿ ಮಾಡುವ ಬೇರೆ ಯಾವ ಪದಾರ್ಥವಿರುವುದು? ।।೨೦೧।।

ಆದ್ದರಿಂದ ತುಪ್ಪವು ಯಾವ ಕಾಲಕ್ಕೂ ನಿಶ್ಚಯವಾಗಿ ಹಾಲು ಆಗಲಾರದು. ಅದರಂತೆ ಪರಮಧಾಮಕ್ಕೆ ಸೇರಿದಾಗ ಪುನಃ ಜನ್ಮ ಮರಣದ ಪುನರಾವೃತ್ತಿಯು ಆಗಲಾರದು ।।೨೦೨।।

ಇದುವೇ ನನ್ನ ನಿಜವಾದ ಪರಮಶ್ರೇಷ್ಠ ಸ್ಥಾನವಾಗಿರುವುದು. ಈ ರಹಸ್ಯವನ್ನು ನಾನು ನಿನಗೆ ಸ್ಪಷ್ಟಮಾಡಿ ತಿಳಿಸಿರುವೆನು ।।೨೦೩।।

ಶ್ಲೋಕಾರ್ಥ :- ಭಾರತವೀರಾ! ಯೋಗಿಗಳು ಯಾವ ಕಾಲದಲ್ಲಿ ದೇಹವನ್ನು ಬಿಟ್ಟು ಪುನರ್ಜನ್ಮವನ್ನು ಪಡೆಯುವರೋ ಆ ಕಾಲವನ್ನು ಹೇಳುತ್ತೇನೆ ।।೨೩।।

ತೇವ್ಹಿಂಚಿ ಆಣಿಕೇಹೀ ಏಕೇ ಪ್ರಕಾರೇ । ಹೇ ಜಾಣತಾ ಆಹೇ ಸೋಪಾರೇ । ತರೀ ದೇಹ ಸಾಂಡಿತೇನಿ ಅವಸರೇ । ಜೇಥ ಮಿಳತೀ ಯೋಗೀ ।೨೦೪॥ ಅಥವಾ ಅವಚಟೇ ಐಸೇ ಘಡೇ । ಜೇ ಅನವಸರೇ ದೇಹ ಸಾಂಡೇ । ತರೀ ಮಾಘೌತೇ ಯೇಣೇ ಘಡೇ । ದೇಹಾಸೀಚಿ ।೨೦೫॥ ಮ್ಹಣೌನಿ ಕಾಳಶುದ್ಧೀ ಜರೀ ದೇಹ ಠೇವಿತೀ । ತರೀ ಠೇವಿತಖೇಂವೀ ಬ್ರಹ್ಮ ಚಿ ಹೋತೀ । ಏರ್ಹವೀ ಅಕಾಳೀ ತರೀ ಯೇತೀ । ಸಂಸಾರಾ ಪುಢತೀ ।೨೦೬॥ ತೈಸೇ ಸಾಯುಜ್ಯ ಆಣಿ ಪುನರಾವೃತ್ತೀ । ಯಾ ದೋನ್ಹೀ ಅವಸರಾ ಆಧೀನ ಆಹಾತೀ । ತೋಚಿ ಅವಸರು ತುಜಪ್ರತಿ । ಪ್ರಸಂಗೇ ಸಾಂಗೋ ।೨೦೭॥ ತರೀ ಐಕೇ ಗಾ ಸುಭಟಾ । ಪಾತಲಿಯಾ ಮರಣಾಚಾ ಮಾಜಿವಟಾ । ಪಾಂಚೈ ಆಪುಲಾಲಿಯಾ ವಾಟಾ । ನಿಘತಿ ಅಂತೀ ।೨೦೮॥ ಐಸಾ ವರಿಪಡಿಲಾ ಪ್ರಯಾಣಕಾಳೀ । ಬುದ್ಧೀತೇ ಭ್ರಮು ನ ಗಿಳೀ । ಸ್ಮೃತಿ ನವ್ಹೇ ಆಂಧಳೀ । ನ ಮರೇ ಮನ ।೨೦೯॥ ಹಾ ಚೇತನಾ ವರ್ಗು ಆಘವಾ । ಮರಣೀ ದಿಸೇ ಟವಟವಾ । ಪರೀ ಅನುಭವಿಲಿಯಾ ಬ್ರಹ್ಮ ಭಾವಾ । ಗಂವಸಣೇ ಹೋಊನಿ ।೨೧೦॥ ಐಸಾ ಸಾವಧ ಹಾ ಸಮವಾವೋ । ಆಣಿ ನಿರ್ವಾಣವೇರ್ಹೀ ನಿರ್ವಾಹೋ । ಹೇ ತರೀಚ ಘಡೇ ಜರೀ ಸಾವಾವೋ । ಅಗ್ನೀಚಾ ಆಥೀ ।೨೧೧॥ ಪಾಹಾ ಪಾ ವಾರೇನೇ ಕಾ ಉದಕೇ । ಜೈ ದಿವಿಯಾಚೇ ದಿವೇಪಣ ಝಾಂಕೇ । ತೈ ಅಸತೀಚ ಕಾಯ ದೇಖೇ । ದಿಠೀ ಆಪುಲೀ ? ।೨೧೨॥ ತೈಸೇ ದೇಹಾಂತೀಚೇನಿ ವಿಷಮ ವಾತೇ । ದೇಹ ಆಂತ ಬಾಹೇರಿ ಶ್ಲೇಷ್ಮಾ ಆಂತೇ । ತೈ ವಿಝೋನಿ ಜಾಯ ಉಜಿತೇ । ಅಗ್ನೀಚೇ ತೇ ।೨೧೩॥ ತೇ ವೇಳೀ ಪ್ರಾಣಾಸಿ ಪ್ರಾಣು ನಾಹೀ । ತೇಥ ಬುದ್ಧಿ ಅಸೋನಿ ಕರಿಲ ಕಾಈ । ಮ್ಹಣೌನಿ ಅಗ್ನಿವೀಣ ದೇಹೀ । ಚೇತನಾ ನ ಥರೇ ।೨೧೪॥ ಅಗಾ ದೇಹೀಂಚಾ ಅಗ್ನಿ ಜರೀ ಗೇಲಾ । ತರೀ ದೇಹ ನವ್ಹೇ ಚಿಖಲು ವೋಲಾ । ವಾಯಾ ಆಯುಷ್ಯವೇಳು ಆಪುಲಾ । ಆಂಧಾರೇ ಗಿಂವಸೀ ।೨೧೫॥ ಆಣಿ ಮಾಗೀಲ ಸ್ಮರಣ ಆಘವೇ । ತೇ ತೇಣೇ ಅವಸರೇ ಸಾಂಭಾಳವೇ । ಮಗ ದೇಹ ತ್ಯಜೂನಿ ಮಿಳಾವೇ । ಸ್ವರೂಪೀ ಕೀ ।೨೧೬॥ ತಂವ ತಯಾ ದೇಹ ಶ್ಲೇಷ್ಮಾ ಚೇ ಚಿಖಲೀ । ಚೇತನಾಚಿ ಬುಡೋನಿ ಗೇಲೀ । ತೇಥ ಮಾಗಿಲೀ ಪುಢಿಲೀ ಹೇ ಠೇಲೀ । ಆಠವಣ ಸಹಜೇ ।೨೧೭॥ ಮ್ಹಣೌನಿ ಆಧೀ ಅಭ್ಯಾಸು ಜೋ ಕೇಲಾ । ತೋ ಮರಣ ನ ಯೇತಾಂಚಿ ನಿಮೋನಿ ಗೇಲಾ । ಜೈಸೇ ಠೇವಣೇ ನ ದಿಸತಾ ಮಾಲವಲಾ । ದೀಪು ಹಾತೀಂಚಾ ।೨೧೮॥ ಆತಾ ಅಸೋ ಹೇ ಸಕಳ । ಜಾಣ ಪಾ ಜ್ಞಾನಾಸಿ ಅಗ್ನಿ ಮೂಳ । ತಯಾ ಅಗ್ನಿಚೇ ಪ್ರಯಾಣೀ ಬಳ । ಸಂಪೂರ್ಣ ಆಥೀ ।೨೧೯॥

ಅದರಂತೆ ದೇಹಬಿಟ್ಟಾಗ ಯಾವ ಸ್ವರೂಪವನ್ನು ಯೋಗಿಗಳು ಪ್ರಾಪ್ತ ಮಾಡಿಕೊಳ್ಳುವರೋ ಆ ರಹಸ್ಯವನ್ನು ಇನ್ನೊಂದು ರೀತಿಯಲ್ಲಿ ತಿಳಿದುಕೊಳ್ಳಲು ಸರಳವಾಗಿರುವುದು ।೨೦೪॥

ಅಥವಾ ಅಕಸ್ಮಾತ್ತಾಗಿ ಹೀಗೂ ಆಗಬಹುದು. ಯಾವ ಯೋಗಿಯು ಅಕಾಲದಲ್ಲಿ ದೇಹಬಿಡುವರೋ, ಆಗ ಅವರಿಗೆ ಪುನಃ ದೇಹಧಾರಣೆ ಮಾಡಬೇಕಾಗುವುದು ।೨೦೫॥

ಆದ್ದರಿಂದ ಶಾಸ್ತ್ರೋಕ್ತವಾಗಿ ಶುದ್ಧ ಕಾಲದಲ್ಲಿ ದೇಹದ ಅವಸಾನವಾದರೆ ತಕ್ಷಣವಾಗಿ ಆ ಯೋಗಿಯು ಬ್ರಹ್ಮನಾಗುವನು. ಇಲ್ಲದಿದ್ದರೆ ಅಕಾಲದಲ್ಲಿ ದೇಹದ ಅವಸಾನವಾದರೆ ಪುನಃ ಜನ್ಮಕ್ಕೆ ಬರುವನು ।೨೦೬॥

ಅದಕ್ಕಾಗಿ ಮೋಕ್ಷ ಮತ್ತು ಪುನರ್ಜನ್ಮವು ಇವೆರಡು ಕಾಲದ ಸ್ವಾಧೀನವಾಗಿರುವುವು. ಇಂತಹ ಯಾವ ಕಾಲವನ್ನು ನಿನಗೆ ಪ್ರಸಂಗಾನುಸಾರವಾಗಿ ತಿಳಿಸುವೆ ।೨೦೭॥

ಆದರೆ, ಮಹಾವೀರನಾದ ಅರ್ಜುನನೇ ಕೇಳು, ಮರಣ ಕಾಲವು ಸಮೀಪಿಸಿದಾಗ ಪಂಚಮಹಾಭೂತಗಳು ಕೊನೆಯಲ್ಲಿ ತಮ್ಮ ತಮ್ಮ ಹಾದಿಯಿಂದ ಹೋಗುವುವು ।೨೦೮॥

ಈ ರೀತಿಯಲ್ಲಿ ಮರಣಕಾಲವು ಪ್ರಾಪ್ತವಾದ ಮೇಲೆ ಬುದ್ಧಿಯನ್ನು ಭ್ರಾಂತಿಯು ನುಂಗುವುದಿಲ್ಲ. ಸ್ಮರಣಶಕ್ತಿಯು ಕುರುಡವಾಗುವುದಿಲ್ಲ ಮತ್ತು ಮನಸ್ಸೂ ಸಾಯುವುದಿಲ್ಲ ।೨೦೯॥

ಈ ಪ್ರಕಾರವಾಗಿ ಈ ಎಲ್ಲ ಜ್ಞಾನ ಸಮುದಾಯವು ಉತ್ಸಾಹಭರಿತವಾಗಿದ್ದು, ಅನುಭವಿಸಿರುವ ಬ್ರಹ್ಮಭಾವದ ಜ್ಞಾನ ಜಾಗೃತವಾಗಿ ಇರುವುದು ।೨೧೦॥

ಈ ರೀತಿಯಲ್ಲಿ ಬುದ್ಧ್ಯಾದಿಕ ಸಮುದಾಯದ ಜಾಗೃತವಿದ್ದು, ಈ ಜಾಗೃತಿಯು ಮರಣವಾಗುವವರೆಗೂ ನಿಲ್ಲುವುದು. ಇದಕ್ಕೆ ಯೋಗ್ಯ ಮರಣಕಾಲವೆನ್ನುವರು. ಆದರೆ ಜಠರಾಗ್ನಿಯ ಸಹಾಯವಿದ್ದರೆ ಮಾತ್ರ ಇದು ಸಾಧಿಸುವುದು ।೨೧೧॥

ಇಲ್ಲಿ ನೋಡು, ಗಾಳಿಯಿಂದ ಅಥವಾ ನೀರಿನಿಂದ ದೀಪದ ಪ್ರಕಾಶವು ಲೋಪವಾಗುವುದು. ಆ ವೇಳೆಯಲ್ಲಿ ಕಣ್ಣುಗಳು ಉತ್ತಮವಿದ್ದರೂ ಅವರಿಗೆ ಏನಾದರೂ ಕಾಣಿಸುವುದೇ? ।೨೧೨॥

ಅದರಂತೆ ದೇಹದ ಮರಣ ಕಾಲದಲ್ಲಿ ವಾಯು ಪ್ರಕೋಪದಿಂದ ಒಳಹೊರಗೆ ಕಫದಿಂದ ವ್ಯಾಪಿಸಿಕೊಂಡು ಜಠರಾಗ್ನಿಯ ತೇಜವು ಆರಿಹೋಗುವುದು।೨೧೩॥

ಆ ವೇಳೆಯಲ್ಲಿ ಪ್ರಾಣಕ್ಕೆ ಪ್ರಾಣವಿರುವುದಿಲ್ಲ. ಪ್ರಾಣವು ನಿಃಚೇಷ್ಟವಾಗಿರುವುದು. ಈ ಸ್ಥಿತಿಯಲ್ಲಿ ಬುದ್ಧಿ ಇದ್ದರೂ, ಅದು ಏನು ಮಾಡಬಲ್ಲದು? ಆದ್ದರಿಂದ ಜಠರಾಗ್ನಿಯ ಹೊರತು ಚೇತನ ಶಕ್ತಿಗೆ ಆಶ್ರಯವಿರುವುದಿಲ್ಲ ।೨೧೪॥

ಅರೇ, ದೇಹದಲ್ಲಿನ ಅಗ್ನಿಯು ನಷ್ಟವಾದಾಗ ಅದು ದೇಹವೇ ಅಲ್ಲ, ಅದು ಕೇವಲ ಹಸೀ ಮಣ್ಣಿನ ಮುದ್ದೆಯಾಗಿರುವುದು. ಇಂತಹ ವೇಳೆಯಲ್ಲಿ ಆಯುಷ್ಯವು ಕೊನೆಯ ಅವಸಾನದ ವೇಳೆಯನ್ನು ಕತ್ತಲದಲ್ಲಿ ವ್ಯರ್ಥವಾಗಿ ಹುಡುಕುತ್ತಿರುವುದು ।೨೧೫॥

ಇಂತಹ ಪ್ರಸಂಗದಲ್ಲಿ ಹಿಂದಿನ ಅಭ್ಯಾಸದ ಸ್ಮರಣೆಯನ್ನು ಇಟ್ಟುಕೊಂಡು ದೇಹತ್ಯಜಿಸಿ ಆತ್ಮ ಸ್ವರೂಪದಲ್ಲಿ ಲೀನವಾಗಬೇಕಾಗುವುದು. ಆದರೆ ಇದು ಹೇಗೆ ಸಾಧಿಸೀತು? ।೨೧೬॥

ಕಾರಣ, ಆಗ ದೇಹ ಮತ್ತು ಕಫ ಇವುಗಳ ಕೆಸರಿನಲ್ಲಿ ಚೇತನತಾಶಕ್ತಿಯು ಮುಳುಗಿಹೋಗಿರುವುದರಿಂದ ಹಿಂದಿನ ಮುಂದಿನ ಸ್ಮರಣಶಕ್ತಿಯು ಇಲ್ಲದಂತಾಗುವುದು ।೨೧೭॥

ಆದ್ದರಿಂದ, ಇಟ್ಟಿರುವ ವಸ್ತು ಕಣ್ಣಿಗೆ ಬೀಳದೇ ಕೈಯಲ್ಲಿರುವ ದೀಪವು ಆರಿಹೋದಂತೆ, ಪೂರ್ವದಲ್ಲಿ ಮಾಡಿರುವ ಬ್ರಹ್ಮದ ಅಭ್ಯಾಸವು ಮರಣದ ಮೊದಲೇ ನಷ್ಟವಾಗುವುದು ।೨೧೮॥

ಈಗ ಈ ಎಲ್ಲ ಮಾತು ಇರಲಿ, ಜ್ಞಾನಕ್ಕೆ ಜಠರಾಗ್ನಿಯು ಇದು ಮೂಲ ಕಾರಣವಾಗಿದೆ ಮತ್ತು ಪ್ರಯಾಣಕಾಲದಲ್ಲಿ ಆ ಅಗ್ನಿಯ ಸಂಪೂರ್ಣ ಬಲವು ಇರಬೇಕಾಗುವುದು ।೨೧೯॥

ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥೨೪॥

ಆಂತ ಅಗ್ನಿಜ್ಯೋತಿಚಾ ಪ್ರಕಾಶು । ಬಾಹೇರೀ ಶುಕ್ಲಪಕ್ಷು ಆಣಿ ದಿವಸು । ಆಣಿ ಸಾಮಾ ಸಾಮಾಜೀ ಮಾಸು । ಉತ್ತರಾಯಣ ॥೨೨೦॥ ಐಶಿಯಾ ಸಮ ಯೋಗಾಚೀ ನಿರುತೀ । ಲಾಹೋನಿ ಜೇ ದೇಹ ಠೇವಿತೀ । ತೇ ಬ್ರಹ್ಮಚಿ ಹೋತೀ । ಬ್ರಹ್ಮವಿದ ॥೨೨೧॥ ಅವಧಾರೀ ಗಾ ಧನುರ್ಧರಾ । ಯೇಥವರೀ ಸಾಮರ್ಥ್ಯ ಯಯಾ ಅವಸರಾ । ತೇವೀಂಚಿ ಹಾ ಉಜೂ ಮಾರ್ಗ ಸ್ವಪುರಾ । ಯಾವಯಾ ಪೈ ॥೨೨೨॥ ಏಥ ಅಗ್ನೀ ಹೇ ಪಹಿಲೇ ಪಾಯತರೇ । ಜ್ಯೋತಿರ್ಮಯ ಹೇ ದುಸರೇ । ದಿವಸ ಜಾಣೇ ತಿಸರೇ । ಚೌಥೇ ಶುಕ್ಲಪಕ್ಷ ॥೨೨೩॥ ಆಣಿ ಸಾಮಾಸ ಉತ್ತರಾಯಣ । ತೇ ವರಚೀಲ ಗಾ ಸೋಪಾನ । ಯೇಣೇ ಸಾಯುಜ್ಯ ಸಿದ್ಧಿಸದನ । ಪಾವತೀ ಯೋಗೀ ॥೨೨೪॥ ಹಾ ಉತ್ತಮ ಕಾಳು ಜಾಣಿಜೇ । ಯಾತೇ ಅರ್ಚಿರಾ ಮಾರ್ಗು ಮ್ಹಣಿಜೇ । ಆತಾ ಅಕಾಳು ತೋಹೀ ಸಹಜೇ । ಸಾಂಗೇನ ಆಇಕ ॥೨೨೫॥

ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।
ತತ್ರ ಚಾಂದ್ರಮಸಂ ಜ್ಯೋತಿಃ ಯೋಗೀ ಪ್ರಾಪ್ಯ ನಿವರ್ತತೇ ॥೨೫॥

ತರೀ ಪ್ರಯಾಣಾಚಿಯಾ ಅವಸರೇ । ವಾತಶ್ಲೇಷ್ಮಾ ಸುಭರೇ । ತೇಥ ಅಂತಃಕರಣೀ ಆಂಧಾರೇ । ಕೋಂದಲೇ ಠಾಕೇ ॥೨೨೬॥ ಸರ್ವೇಂದ್ರಿಯಾ ಲಾಂಕುಡ ಪಡೇ । ಸ್ಮೃತಿ ಭ್ರಮಾಮಾಜೀ ಬುಡೇ । ಮನ ಹೋಯ ವೇಡೇ । ಕೋಂಡೇ ಪ್ರಾಣ ॥೨೨೭॥ ಅಗ್ನೀಚೇ ಅಗ್ನಿಪಣ ಜಾಯೇ । ಮಗ ತೋ ಧೂಮಚಿ ಅವಘಾ ಹೋಯೇ । ತೇಣೇ ಚೇತನಾ ಗಿಂವಸಿಲೀ ಠಾಯೇ । ಶರೀರಿಂಚೀ ॥೨೨೮॥ ಜೈಸೇ ಚಂದ್ರಾಆಡ ಆಭಾಳ । ಸದಟ ದಾಟೇ ಸಜಳ । ಮಗ ಗಡದ ನಾ ಉಜಾಳ । ಐಸೇ ಝಾಂವಳೇ ಹೋಯ ॥೨೨೯॥ ಕಾ ಮರೇನಾ ಸಾವಧ । ಐಸೇ ಜೀವಿತಾಸಿ ಪಡೇ ಸ್ತಬ್ಧ । ಆಯುಷ್ಯ ಮರಣಾಚಿ ಮರ್ಯಾದ । ವೇಳು ಠಾಕಿ ॥೨೩೦॥ ಐಸೀ ಮನಬುದ್ಧಿಕರಣೇ । ಸಭೋಂವತೀ ಧೂಮಾಕುಳಾಚೀ ಕೋಂಡಣೇ । ತೇಥ ಜನ್ಮೇ ಜೋಡಲಿಯೇ ವಾಹಣೇ । ಯುಗಚಿ ಬುಡೇ ॥೨೩೧॥ ಹಾ ಗಾ ಹಾತೀಂಚೇ ಜೇ ವೇಳೀ ಜಾಯೇ । ತೇ ವೇಳೀ ಆಣಿಕಾ ಲಾಭಾಚೀ ಗೋಠೀ ಕೇ ಆಹೇ । ಮ್ಹಣೌನಿ ಪ್ರಯಾಣೀ ತಂವ ಹೋಯೇ । ಯೇತುಲೀ ದಶಾ ॥೨೩೨॥

ಶ್ಲೋಕಾರ್ಥ :- ಅಗ್ನಿ, ಪ್ರಕಾಶ, ಹಗಲು, ಶುಕ್ಲ ಪಕ್ಷ, ಉತ್ತರಾಯಣಗಳೆಂಬ ಮಾರ್ಗದಿಂದ ಹೋದ ಬ್ರಹ್ಮ ವೇತ್ತರು ಬ್ರಹ್ಮವನ್ನು ಪಡೆದು ತಿರುಗಿ ಬರುವುದಿಲ್ಲ ।೨೪॥

ಶರೀರದ ಒಳಗೆ ಜಠರಾಗ್ನಿಯು ಹಾಗೂ ಬುದ್ಧಿಯಲ್ಲಿನ ಜ್ಞಾನಪ್ರಕಾಶವು ಮತ್ತು ಹೊರಗೆ ಉತ್ತರಾಯಣ, ಆರು ತಿಂಗಳಲ್ಲಿ ಯಾವುದೇ ತಿಂಗಳದ ಶುಕ್ಲ ಪಕ್ಷದ ಹಗಲು ಇರಬೇಕು ।೨೨೦॥

ಈ ಪ್ರಕಾರವಾಗಿ ಎಲ್ಲವೂ ಉತ್ತಮವಾಗಿರುವ ಯೋಗ ವಿದ್ದಾಗ ಆ ಬ್ರಹ್ಮ ಅಭ್ಯಾಸ ಪುರುಷನು ತನ್ನ ದೇಹವನ್ನು ಬಿಡುವನು ಮತ್ತು ಬ್ರಹ್ಮಸ್ವರೂಪದಲ್ಲಿ ಕೂಡುವನು ।೨೨೧॥

ಧನುರ್ಧರನೇ ಕೇಳು, ಈ ವೇಳೆಯ ಯೋಗದಿಂದ (ತತ್ ಕಾಲಾಭಿಮಾನಿ ದೇವತೆಗಳ) ವಿಲಕ್ಷಣವಾದ ಸಾಮರ್ಥ್ಯ ಇರುವುದು. ಆದ್ದರಿಂದ ಮೋಕ್ಷ ಪ್ರಾಪ್ತಿಗಾಗಿ ಸ್ವಸ್ವರೂಪಕ್ಕೆ ಬರಲು ಇದು ಬಹಳ ಸರಳ ಮಾರ್ಗವಾಗಿರುವುದು ।೨೨೨॥

ಈ ಮಾರ್ಗದಲ್ಲಿ ಜಠರಾಗ್ನಿಯು ಮೊದಲನೆಯ ಸೋಪಾನವು. ಅಗ್ನಿಯ ಸತೇಜತ್ವವು ಇದು ಎರಡನೆಯ ಸೋಪಾನವು. ಹಗಲು ಇದು ಮೂರನೆಯ ಸೋಪಾನವು. ಶುಕ್ಲಪಕ್ಷ ಇದು ನಾಲ್ಕನೆಯ ಸೋಪಾನವಾಗಿದೆ ।೨೨೩॥

ಮತ್ತು ಉತ್ತರಾಯಣದಲ್ಲಿನ ಆರು ತಿಂಗಳ ಪೈಕಿ ಒಂದು ತಿಂಗಳವು ಇದು ಎಲ್ಲಕ್ಕಿಂತಲೂ ಮೇಲಿನ ಸೋಪಾನ ವಾಗಿ ರುವುದು. ಈ ಕ್ರಮಗಳಿಂದ ಕ್ರಮಿಸಿ ಯೋಗಿಯು ಮೋಕ್ಷ ಸಿದ್ಧಿರೂಪ ಮನೆಯನ್ನು ಸೇರುವನು ।೨೨೪॥

ಇದು ಉತ್ತಮಕಾಲವೆಂದು ತಿಳಿ ಮತ್ತು ಇದಕ್ಕೆ ಮಾತ್ರ ಅರ್ಚಿರಾಮಾರ್ಗವೆಂದು ಶಾಸ್ತ್ರದಲ್ಲಿ ಹೇಳುವರು. ಈಗ ಸಾಧಕರಿಗೆ ಅಯೋಗ್ಯಕಾಲ ಯಾವುದೆಂಬುದಕ್ಕೆ ಸಹಜವಾಗಿ ಹೇಳುವೆ ಕೇಳು ।೨೨೫॥

ಶ್ಲೋಕಾರ್ಥ :- ಹೊಗೆ, ರಾತ್ರಿ, ಕೃಷ್ಣಪಕ್ಷ, ದಕ್ಷಿಣಾಯನ ಮಾರ್ಗದಿಂದ ಹೋದ ಯೋಗಿಗಳು ಚಂದ್ರ ಲೋಕವನ್ನು ಸೇರಿ ಪುನಃ ಹುಟ್ಟುತ್ತಾರೆ ।೨೫॥

ಮರಣ ಸಮಯದಲ್ಲಿ ಕಫ ವಾತಾದಿ ದೋಷಗಳ ಭರ ದಿಂದ ಅಂತಃಕರಣದಲ್ಲಿ ಕತ್ತಲವಾಗಿ ಬಿಡುವುದು ।೨೨೬॥

ಎಲ್ಲ ಇಂದ್ರಿಯಗಳ ಗತಿಯು ಕುಂಠಿತವಾಗಿ ಕಟ್ಟಿಗೆಯಂತೆ ಬಿದ್ದಿರುವುವು. ಸ್ಮೃತಿಯು ಭ್ರಮದಲ್ಲಿ ಮುಳುಗುವುದು. ಮನಸ್ಸು ಹುಚ್ಚನಂತಾಗಿ ಪ್ರಾಣವು ತಡವರಿಸುವುದು ।೨೨೭॥

ಜಠರಾಗ್ನಿಯ ಅಗ್ನಿಯು ಆರಿ ಹೋಗುವುದು ಮತ್ತು ಅದರ ಹೊಗೆಯು ನಾಲ್ಕೂ ಕಡೆ ಹರಡುವುದು. ಇದರಿಂದ ಶರೀರದ ಜ್ಞಾನವು ಮುಚ್ಚಿ ಹೋಗುವುದು ।೨೨೮॥

ಯಾವ ಪ್ರಕಾರವಾಗಿ ಚಂದ್ರನಿಗೆ ನೀರು ತುಂಬಿದ ದಟ್ಟ ವಾದ ಮೋಡಗಳು ಅಡ್ಡ ಬಂದಾಗ ಕತ್ತಲವೂ ಅಲ್ಲ ಬೆಳಕೂ ಅಲ್ಲ ಹೀಗೆ ಮಬ್ಬುಗತ್ತಲೆಯಾಗುವುದು ।೨೨೯॥

ಅದರಂತೆ ಇವನು ಸಾಯುವುದೂ ಇಲ್ಲ, ಎಚ್ಚರ ನಾಗಿಯೂ ಇರುವುದಿಲ್ಲ. ಈ ರೀತಿಯ ಜೀವಿತದ ಸ್ಥಿತಿಯಾಗಿ ರುವುದು ಮತ್ತು ಆಯುಷ್ಯವು ಮರಣದ ವೇಳೆಯನ್ನು ಕಾಯುತ್ತಿ ರುವುದು ।೨೩೦॥

ಈ ಪ್ರಕಾರವಾಗಿ ಮನ, ಬುದ್ಧಿ, ಇಂದ್ರಿಯಗಳಿಗೆ ಹೊಗೆಯು ಸುತ್ತುವರಿದುಕೊಂಡು ಮುಚ್ಚಿ ಬಿಡುವುದು. ಆ ವೇಳೆಯಲ್ಲಿ ಜನ್ಮದಲ್ಲೆಲ್ಲ ಸಂಪಾದಿಸಿರುವ ಲಾಭಗಳೆಲ್ಲವೂ ನಾಶಗೊಳ್ಳು ವುವು ।೨೩೧॥

ಇಲ್ಲಿ ನೋಡು, ಯಾವ ವೇಳೆಯಲ್ಲಿ ಇಲ್ಲಿಯವರೆಗೆ ಗಳಿಸಿದ ಕೈಯಲ್ಲಿದ್ದಷ್ಟೂ ಹೋಗಿಬಿಡುವುದು. ಆ ವೇಳೆಯಲ್ಲಿ ಬೇರೆಯವರಿಂದ ಲಾಭವಾದಿತೆಂಬುವ ಮಾತು ಏತಕ್ಕೆ? ।೨೩೨॥

ಐಶೀ ದೇಹಾಆಂತು ಸ್ಥಿತೀ । ಬಾಹೇರಿ ಕೃಷ್ಣ ಪಕ್ಷು ವರಿ ರಾತೀ । ಆಣಿ ಸಾಮಾಸಹೀ ವೋಡವತೀ । ದಕ್ಷಿಣಾಯನ ।೨೩೩।। ಇಯೇ ಪುನರಾವೃತ್ತೀಚೀ ಘರಾಣೀ । ಆಘವೀ ಏಕವಟತೀ ಜಯಾಚಿಯಾ ಪ್ರಯಾಣೀ। ತೋ ಸ್ವರೂಪಸಿದ್ಧೀಚೀ ಕಾಹಾಣೀ । ಕೈಸೇನಿ ಆಇಕೇ? ।೨೩೪।। ಐಸಾ ಜಯಾಚಾ ದೇಹ ಪಡೇ । ತಯಾ ಯೋಗೀ ಮ್ಹಣೌನಿ ಚಂದ್ರವರೀ ಜಾಣೇ ಘಡೇ । ಮಗ ತೇಥೂನಿ ಮಾಗುತಾ ಬಹುಡೇ । ಸಂಸಾರಾ ಯೇ ।೨೩೫।। ಆಮ್ಹೀ ಅಕಾಳು ಜೋ ಪಾಂಡವಾ । ಮ್ಹಣೆತಲಾ ತೋ ಹಾ ಜಾಣಾವಾ । ಆಣಿ ಹಾಚಿ ಧೂಮ್ರಮಾರ್ಗು ಗಾಂವಾ । ಪುನರಾವೃತ್ತೀಚಿಯಾ ।೨೩೬।। ಯೇರ ತೋ ಅರ್ಚಿರಾ ಮಾರ್ಗು । ತೋ ವಸತಾ ಆಣಿ ಅಸಲಗು । ಸಾವಿಯಾ ಸ್ವಸ್ತ ಚಾಂಗು । ನಿವೃತ್ತೀವರೀ ।೨೩೭।।

ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ ।
ಏಕಯಾ ಯಾತ್ಯನಾವೃತ್ತಿಂ ಅನ್ಯಯಾऽವರ್ತತೇ ಪುನಃ ।೨೬।।

ಐಶಿಯಾ ಅನಾದಿಯಾ ದೋನ್ಹೀ ವಾಟಾ । ಏಕೀ ಉಜೂ ಏಕೀ ಅಂವ್ಹಾಟಾ । ಮ್ಹಣೌನಿ ಬುದ್ಧಿಪೂರ್ವಕ ಸುಭಟಾ । ದಾವಿಲಿಯಾ ತುಜ ।೨೩೮।। ಕಾ ಜೇ ಮಾರ್ಗಾ ಮಾರ್ಗ ದೇಖಾವೇ । ಸಾಚ ಲಟಿಕೇ ವೋಳಖಾವೇ । ಹಿತಾಹಿತ ಜಾಣಾವೇ । ಹಿತಾಚಿ ಲಾಗೀ ।೨೩೯।। ಪಾಹೇ ಪಾ ನಾವ ದೇಖತಾ ಬರವೀ । ಕೋಣೀ ಆಡ ಘಾಲೀ ಕಾಯ ಅಥಾವೀ । ಕಾ ಸುಪಂಥ ಜಾಣೋನಿಯಾ ಅಡವೀ । ರಿಗವತ ಅಸೇ ।೨೪೦।। ಜೋ ವಿಷ ಅಮೃತ ವೋಳಖೇ । ತೋ ಅಮೃತ ಕಾಯ ಸಾಂಡೂ ಶಕೇ? । ತೇವಿ ಜೋ ಉಜೂ ವಾಟ ದೇಖೇ ।ತೋ ಅವ್ಹಾಂಟಾ ನ ವಚೇ ।೨೪೧।। ಮ್ಹಣೌನಿ ಫುಡೇ । ಪಾರಖಾವೇ ಖರೇ ಕುಡೇ । ಪಾರಖಿಲೇ ತರೀ ನ ಪಡೇ । ಅನವಸರೇ ಕಹೀ ।೨೪೨।। ಏರ್ಹವೀ ದೇಹಾಂತೀ ಥೋರ ವಿಷಮ । ಯಾ ಮಾರ್ಗಾಚೇ ಆಹೇ ಸಂಭ್ರಮ । ಜನ್ಮೀ ಅಭ್ಯಾಸಿಲಿಯಾಚೇ ಹನ ಕಾಮ । ಜಾಈಲ ವಾಯಾ ।೨೪೩।। ಜರೀ ಅರ್ಚಿರಾ ಮಾರ್ಗು ಚುಕಲಿಯಾ । ಅವಚಟೇ ಧೂಮ್ರಪಂಥೇ ಪಡಲಿಯಾ । ತರೀ ಸಂಸಾರಪಾಂಥೀ ಜುಂತಲಿಯಾ । ಭಂವತಚಿ ಅಸಾವೇ ।೨೪೪।। ಹೇ ಸಾಯಾಸ ದೇಖೋನಿ ಮೋಠೇ । ಆತಾ ಕೈಸೇನಿ ಪಾ ಏಕ ವೇಳ ಫಿಟೇ । ಮ್ಹಣೌನಿ ಯೋಗಮಾರ್ಗು ಗೋಮಟೇ । ಶೋಧಿಲೇ ದೋನ್ಹೀ ।೨೪೫।। ತಂವ ಏಕೇ ಬ್ರಹ್ಮತ್ವಾ ಜಾಇಜೇ । ಆಣಿ ಏಕೇ ಪುನರಾವೃತ್ತೀ ಯೇಇಜೇ । ಪರಿ ದೈವಗತ್ಯಾ ಜೋ ಲಾಹಿಜೇ । ದೇಹಾಂತೀ ಜೇಣೇ ।೨೪೬।।

ಈ ಪ್ರಕಾರವಾಗಿ ದೇಹದ ಒಳಗೆ ಈ ಸ್ಥಿತಿ ಇರುವಾಗ ಇನ್ನು ಹೊರಗೆ ಕೃಷ್ಣಪಕ್ಷ ಮತ್ತು ಅದರಲ್ಲಿ ರಾತ್ರಿ ಇರುವುದು ಅಲ್ಲದೇ ದಕ್ಷಿಣಾಯನದ ಆರು ತಿಂಗಳಲ್ಲಿ ಒಂದು ತಿಂಗಳ ಪ್ರಾಪ್ತವಾಗಿರುವುದು ।೨೩೩॥

ಈ ಎಲ್ಲ ಜನ್ಮಮರಣದ ಚಕ್ರದಲ್ಲಿ ನೂಕುವ ಎಲ್ಲ ಯೋಗಗಳು ಆತನ ಮರಣ ಸಮಯದಲ್ಲಿ ಒಂದೇ ಸ್ಥಳದಲ್ಲಿ ಕೂಡಿದಾಗ ಮೋಕ್ಷ ಪ್ರಾಪ್ತಿಯ ಮಾತು ಆತನ ಕಿವಿಗೆ ಹೇಗೆ ಬೀಳುವುದು? ।೨೩೪॥

ಇಂತಹ ವೇಳೆಯಲ್ಲಿ ಯಾರ ದೇಹದ ಮರಣವಾಗುವುದೋ ಆತನು ಯೋಗಿ ಇರುವುದರಿಂದ ಚಂದ್ರಲೋಕದವರೆಗೆ ಹೋಗಲು ಸಾಧ್ಯವಾಗುವುದು. ಆಗ ಅಲ್ಲಿಂದ ಜನ್ಮ ಮರಣದ ತಿರುವಿನಲ್ಲಿ ಬೀಳುವನು ।೨೩೫॥

ಹೇ ಪಾಂಡವನೇ, ನಾವು ಮರಣಕ್ಕೆ ಅಯೋಗ್ಯ ಕಾಲವೆಂದು ಹೇಳಿರುವುದು ಇದೇ ಎಂದು ತಿಳಿ. ಜನ್ಮ ಮರಣದ ಗ್ರಾಮಕ್ಕೆ ಒಯ್ಯುವ ಧೂಮ್ರಮಾರ್ಗವು ಇದೇಯಾಗಿರುವುದು ।೨೩೬॥

ಇದರ ಹೊರತಾದ ಬೇರೆ ಯಾವ ಅರ್ಚಿರಾದ ಮಾರ್ಗವು ಸಾಧಕರಿಗೆ ಸಂಗತಿ ಮಾಡುವ ಮತ್ತು ಸಹಜವಾಗಿ ಕಲ್ಯಾಣಕಾಕರವಾಗಿದೆ. ಮಧ್ಯಂತರ ಖಂಡವಾಗದ ಮತ್ತು ಸುಲಭವಾಗಿ ಮೋಕ್ಷ ರೂಪ ಊರನ್ನು ಮುಟ್ಟಿಸುವುದಾಗಿದೆ ।೨೩೭॥

ಶ್ಲೋಕಾರ್ಥ :- ಈ ಶುಕ್ಲ, ಕೃಷ್ಣ ಮಾರ್ಗಗಳು ಎರಡೂ ಪ್ರಪಂಚದಲ್ಲಿ ಶಾಶ್ವತವಾಗಿವೆ. ಒಂದು ಮುಕ್ತಿಯನ್ನು ಮತ್ತೊಂದು ಪುನರ್ಜನ್ಮವನ್ನು ಉಂಟು ಮಾಡುತ್ತವೆ ।೨೬॥

ಒಂದು ಸರಳವಾದದ್ದು ಇನ್ನೊಂದು ಡೊಂಕಾಗಿರುವುದು ಹೀಗೆ ಎರಡು ಮಾರ್ಗಗಳು ಅನಾದಿಕಾಲದಿಂದಲೂ ನಡೆದು ಬಂದಿರುವುವು. ಆದ್ದರಿಂದ ಮಹಾವೀರನೇ, ನಿನಗೆ ಇದನ್ನು ಬುದ್ಧಿಪೂರ್ವಕವಾಗಿ ಹೇಳಿರುವೆನು ।೨೩೮॥

ಏಕೆಂದರೆ, ಈ ಮಾರ್ಗಗಳಲ್ಲಿ ಉತ್ತಮ ಹಾಗೂ ಕೆಟ್ಟದ್ದು ನಿನಗೆ ಕಾಣಬೇಕು ಮತ್ತು ಸತ್ಯ ಅಸತ್ಯ ತಿಳಿದುಕೊಂಡು ತಮ್ಮ ಹಿತವನ್ನು ಸಾಧಿಸಿಕೊಳ್ಳುವುದಕ್ಕಾಗಿ ಹಿತಾಹಿತದ ವಿಚಾರ ಮಾಡಬೇಕು ।೨೩೯॥

ಇಲ್ಲಿ ನೋಡು, ಉತ್ತಮವಾದ ಹಡಗವನ್ನು ಕಂಡು ಯಾರಾದರೂ ಆಳವಾದ ನೀರಿನಲ್ಲಿ ಹಾರಬಹುದೇ? ಅಥವಾ ರಾಜಮಾರ್ಗ ತ್ಯಜಿಸಿ ಅಡ್ಡ ಮಾರ್ಗಕ್ಕೆ ಹೋಗಬಹುದೇ? ।೨೪೦॥

ಯಾವನು ವಿಷ ಮತ್ತು ಅಮೃತ ಇವೆರಡನ್ನು ತಿಳಿಯುವವನು ಅಮೃತವನ್ನು ಚೆಲ್ಲುವನೇ? ಅದರಂತೆ ಯಾವನು ಸರಳ ಮಾರ್ಗವನ್ನು ಕಂಡಿರುವನೋ ಅವನು ಅಡ್ಡ ಮಾರ್ಗಕ್ಕೆ ಹೋಗಲಾರನು ।೨೪೧॥

ಆದ್ದರಿಂದ ಪ್ರಥಮವಾಗಿ ಸತ್ಯ ಅಸತ್ಯಗಳನ್ನು ಶೋಧಿಸಿ ತಿಳಿಯಬೇಕು. ತಿಳಿದ ಮೇಲೆ ಆತನು ಎಂದೂ ಸಂಕಟದಲ್ಲಿ ಬೀಳುವುದಿಲ್ಲ ।೨೪೨॥

ಒಂದು ವೇಳೆ ಹೀಗೆ ವಿಚಾರ ಮಾಡದಿದ್ದರೆ, ದೇಹದ ಮರಣಕಾಲದಲ್ಲಿ ಕೃಷ್ಣಮಾರ್ಗದ ದೊಡ್ಡ ಸಂಕಟ ಒದಗುವ ಸಾಧ್ಯತೆ ಇದೆ. ಈ ಕೃಷ್ಣ ಮಾರ್ಗದ ಗಡಿಬಿಡಿಯಿಂದ ಇಡೀ ಜನ್ಮದಲ್ಲಿ ಮಾಡಿದ ಅಭ್ಯಾಸವು ವ್ಯರ್ಥವಾಗುವುದು ।೨೪೩॥

ಒಂದು ವೇಳೆ ಅರ್ಚಿರಾಮಾರ್ಗವು ತಪ್ಪಿ ಅಕಸ್ಮಾತಾಗಿ ಯಾವನು ಧೂಮ್ರಮಾರ್ಗದಲ್ಲಿ ಬೀಳುವನೋ ಆತನು ಜನ್ಮ ಮರಣದ ಚಕ್ರದಲ್ಲಿ ಸಿಲುಕಿ ತಿರುಗುತ್ತಲೇ ಇರಬೇಕಾಗುವುದು ।೨೪೪॥

ಇಂತಹ ಭಾರಿ ಸಂಕಟಗಳನ್ನು ಕಂಡು ಇವುಗಳನ್ನು ದೂರ ಮಾಡುವುದಕ್ಕಾಗಿ ಎರಡು ಯೋಗ ಮಾರ್ಗಗಳನ್ನು ಉತ್ತಮ ರೀತಿಯಲ್ಲಿ ಸ್ಪಷ್ಟೀಕರಣ ಮಾಡಿರುವೆ ।೨೪೫॥

ಒಂದು ಮಾರ್ಗದಿಂದ ಯೋಗಿಯು ಮೋಕ್ಷವನ್ನು ಹೊಂದುತ್ತಾನೆ ಮತ್ತು ಎರಡನೇ ಮಾರ್ಗದಿಂದ ಜನ್ಮ ಮರಣದ ತಿರುಗಾಟದಲ್ಲಿ ಬೀಳುತ್ತಾನೆ. ಆದರೆ ಮರಣ ಕಾಲಕ್ಕೆ ಅವರ ದೈವದಂತೆ ಯಾವುದು ಲಭಿಸುವುದೋ ಅದೇ ನಿಜ ।೨೪೬॥

ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ್ ।
ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ।೨೭॥

ತೇ ವೇಳೀ ಮ್ಹಣಿತಲೇ ಹೇ ನವ್ಹೇ । ವಾಯಾ ಅವಚಟೇ ಕಾಯ ಪಾವೇ । ದೇಹ ತ್ಯಜೂನಿ ವಸ್ತು ಹೋಆವೇ । ಮಾರ್ಗೇಂಚಿ ಕೀ? ।೨೪೭॥ ತರೀ ಆತಾ ದೇಹ ಅಸೋ ಅಥವಾ ಜಾವೋ । ಆಮ್ಹೀ ತೋ ಕೇವಳ ವಸ್ತೂಚಿ ಆಹೋ । ಕಾ ಜೇ ದೋರೀ ಸರ್ಪತ್ವ ವಾವೋ । ದೋರಾಚಿಕಡುನಿ ।೨೪೮॥ ಮಜ ತರಂಗ ಪಣ ಅಸೇ ಕೀ ನಸೇ । ಐಸೇ ಹೇ ಉದಕಾಸೀ ಕಹೀ ಪ್ರತಿಭಾಸೇ ? । ತೇ ಭಲತೇವ್ಹಾ ಜೈಸೇ ತೈಸೇ । ಉದಕಚಿ ಕೀ ।೨೪೯॥ ತರಂಗಾಕಾರೇ ನ ಜನ್ಮೇಚಿ । ನಾ ತರಂಗಲೋಪೇ ನ ನಿಮೇಚಿ । ತೇವಿ ದೇಹೀ ಜೇ ದೇಹೇಂಚಿ । ವಸ್ತು ಜಾಹಲೇ ।೨೫೦॥ ಆತಾ ಶರೀರಾಚೇ ತಯಾಚಿಯಾ ಠಾಈ । ಆಡನಾಂವಹೀ ಉರಲೇ ನಾಹೀ । ತರೀ ಕೋಣೇ ಕಾಳೇ ಕಾಈ । ನಿಮೇ ತೇ ಪಾಹೇ ಪಾ ।೨೫೧॥ ಮಗ ಮಾರ್ಗಾತೇ ಕಾಸಯಾ ಶೋಧಾವೇ ? । ಕೋಣೇ ಕೋಠೂನಿ ಕೇ ಜಾವೆ ? । ಜರೀ ದೇಶಕಾಲಾದಿ ಆಘವೇ । ಆಪಣಚಿ ಅಸೇ ।೨೫೨॥ ಆಣಿ ಹಾ ಗಾ ಘಟು ಜೇ ವೇಳೀ ಫುಟೇ । ತೇ ವೇಳೀ ತೇಥೀಂಚೇ ಆಕಾಶ ಲಾಗೇ ನೀಟ ವಾಟೇ ।ವಾಟಾ ಲಾಗೇ ತರೀ ಗಗನಾ ಭೇಟೇ । ಏರ್ಹವೀ ಚುಕೇ ? ।೨೫೩॥ ಪಾಹೇ ಪಾ ಐಸೇ ಹನ ಆಹೇ । ಕೀ ತೋ ಆಕಾರುಚಿ ಜಾಯೇ । ಏರ ಗಗನ ತೇ ಗಗನೀಚಿ ಆಹೇ । ಘಟತ್ವಾಹೀ ಆಧೀ ।೨೫೪॥ ಐಸಿಯಾ ಬೋಧಾಚೇನಿ ಸುರವಾಡೇ । ಮಾರ್ಗಾ ಮಾರ್ಗಾಚೇ ಸಾಂಕಡೇ ।ತಯಾ ಸೋಹಂಸಿದ್ಧಾ ನ ಪಡೇ । ಯೋಗಿಯಾಂಸೀ ।೨೫೫॥ ಯಾಕಾರಣೇ ಪಂಡುಸುತಾ । ತುವಾ ಹೋಆವೇ ಯೋಗಯುಕ್ತಾ । ಏತುಲೇನಿ ಸರ್ವಕಾಳೀ ಸಾಮ್ಯತಾ । ಆಪೈಸಯಾ ಹೋಈಲ ।೨೫೬॥ ಮಗ ಭಲತೇಥ ಭಲತೇವ್ಹಾ । ದೇಹ ಅಸೋ ಅಥವಾ ಜಾವಾ । ಪರೀ ಅಬಂಧಾ ನಿತ್ಯ ಬ್ರಹ್ಮಭಾವಾ । ವಿಘಡು ನಾಹೀ ।೨೫೭॥ ತೋ ಕಲ್ಪಾದಿ ಜನ್ಮಾ ನಾಗವೇ । ಕಲ್ಪಾಂತೀ ಮರಣೇ ನಾಪ್ಲವೇ । ಮಾಜೀ ಸ್ವರ್ಗಸಂಸಾರಾಚೇನಿ ಲಾಘವೇ । ಝುಕವೇನಾ ।೨೫೮॥ ಯೆಣೇ ಬೋಧೇ ಜೋ ಯೋಗೀ ಹೋಯೇ । ತಯಾಸೀಚಿ ಯಾ ಬೋಧಾಚೇ ನೀಟಪಣ ಆಹೇ । ಕಾ ಜೇ ಭೋಗಾತೇ ಪೇಲೂನಿ ಪಾಯೇ । ನಿಜರೂಪಾ ಯೇ ।೨೫೯॥ ಪೈ ಗಾ ಇಂದ್ರಾದಿಕಾ ದೇವಾ । ಜಯಾ ಸರ್ವಸ್ವೇ ಗಾಜತೀ ರಾಣಿವಾ । ತೇ ಸಾಂಡಣೇ ಮಾನೂನಿ ಪಾಂಡವಾ । ಡಾವಲಿ ಜೋ ।೨೬೦॥

ಶ್ಲೋಕಾರ್ಥ :- ಪಾರ್ಥ! ಈ ಎರಡೂ ಮಾರ್ಗಗಳನ್ನು ತಿಳಿದ ಯೋಗಿ ಮೋಹ ಬದ್ಧನಾಗುವುದಿಲ್ಲ. ಆದುದರಿಂದ ಅರ್ಜುನಾ! ನೀನೂ ಸರ್ವದಾ ಯೋಗಯುಕ್ತನಾಗು ।೨೭॥

ಆಗ ದೇವನು ಹೇಳಿದನು:- ಅರ್ಜುನಾ, ಇದೇನು ಸರಿ ಅಲ್ಲ. ಏಕೆಂದರೆ ದೇಹದ ಅವಸಾನದಲ್ಲಿ ಅಕಸ್ಮಾತ್ ಯಾವ ಮಾರ್ಗಪ್ರಾಪ್ತವಾದೀತೆಂಬುದು ಸ್ವಾಧೀನವಿರುವುದಿಲ್ಲ. ದೇಹಾಂತದಲ್ಲಿ ಬ್ರಹ್ಮಪ್ರಾಪ್ತಿಗೆ ಇದೇ ಮಾರ್ಗ ಏಕೇ ಬೇಕು? ।೨೪೭॥

ಅಂದಮೇಲೆ ದೇಹವು ಇರಲಿ ಅಥವಾ ಹೋಗಲಿ ನಾವು ಕೇವಲ ಬ್ರಹ್ಮವೇ ಆಗಿರುವೆವು ಎಂದು ಜ್ಞಾನಿಗಳು ತಿಳಿಯುವರು. ಏಕೆಂದರೆ ಹಗ್ಗದಲ್ಲಿ ಸರ್ಪದ ಭಾಸವು ಸತ್ಯವಾಗಿ ಭಾಸವಾದ ಮೇಲೆ ಅದರ ಜ್ಞಾನವು ಸಹ ವ್ಯರ್ಥವಾಗುವುದು ।೨೪೮॥

ತನ್ನಲ್ಲಿ ತೆರೆಗಳು ಬರುವುವು ಅಥವಾ ಇಲ್ಲದಾಗುವುವು ಎಂಬ ಭಾಸವು ನೀರಿಗೆ ಆಗುವುದೇ? ಏಕೆಂದರೆ ಅದು ಯಾವಾಗ ಕಂಡರೂ ನೀರೇ ನೀರಾಗಿರುವುದು ।೨೪೯॥

ಅಲ್ಲಿ ತೆರೆಗಳು ಉತ್ಪನ್ನವಾದಾಗ ಜನ್ಮವಾಗುವುದಿಲ್ಲ, ಅಥವಾ ತೆರೆಗಳು ಇಲ್ಲದಾಗಲು ಮರಣಹೊಂದುವುದಿಲ್ಲ. ಅದರಂತೆ ದೇಹದಲ್ಲಿದ್ದುಕೊಂಡು ಅವರು ದೇವ ಸಹಿತ ಬ್ರಹ್ಮರಾಗಿರುವರು ।೨೫೦॥

ಇವರು ದೇಹಸಹಿತ ಬ್ರಹ್ಮರೂಪರಾದ ಮೇಲೆ ಅವರಲ್ಲಿ ದೇಹವೆಂಬುವ ಅಡ್ಡ ಹೆಸರು ಸಹ ಇರುವುದಿಲ್ಲ. ಅಂದಮೇಲೆ ಯಾವ ವೇಳೆಯಲ್ಲಿ ಯಾವುದರ ಲಯವಾಗುವುದು ?।೨೫೧॥

ದೇಶ, ಕಾಲ ಇತ್ಯಾದಿ ಎಲ್ಲ ಸಂಗತಿಗಳು ತಾನೇ ಆಗಿರುವುದರಿಂದ ಪುನಃ ಬ್ರಹ್ಮಪ್ರಾಪ್ತಿಯ ಶೋಧವನ್ನು ಏಕೆ ಮಾಡಬೇಕು? ಮತ್ತು ಯಾರು ಎಲ್ಲಿಗೆ ಎಲ್ಲಿಂದ ಹೋಗುವರು? ।೨೫೨॥

ಮತ್ತು (ಘಟವು) ಮಡಿಕೆಯು ಒಡೆದ ಮೇಲೆ ಅದರಲ್ಲಿರುವ ಆಕಾಶವು ಸರಿಯಾದ ಮಾರ್ಗವನ್ನು ಹಿಡಿದಾಗ ಮಾತ್ರ ಅದಕ್ಕೆ ಆಕಾಶವು ದೊರಕುತ್ತದೆ, ಇಲ್ಲದಿದ್ದರೆ ತಪ್ಪುವುದೆ ? ।೨೫೩॥

ಇಲ್ಲಿ ನೋಡು, ನಿಜವಾದ ಮಾತೆಂದರೆ ಸಾಮಾನ್ಯವಾಗಿ ಘಟಕಾಶವು ಈ ಘಟವು ನಿರ್ಮಾಣವಾಗುವುದಕ್ಕಿಂತ ಮುಂಚಿತವಾಗಿಯೇ ಮೂಲತಃ ಆಕಾಶರೂಪವೇ ಆಗಿರುವುದು ।೨೫೪॥

ಇಂತಹ ಜ್ಞಾನದ ಪರಿಪೂರ್ಣತೆಯಿಂದ ತಾನು ಬ್ರಹ್ಮವೇ ಇರುವೆನು ಎಂಬ ಅನುಭವ ಬಂದ ಯೋಗಿಗಳಿಗೆ ಉತ್ತಮ ಕೆಟ್ಟ ಮಾರ್ಗಗಳ ಸಂಕಟಗಳು ಒದಗುವುದಿಲ್ಲ ।೨೫೫॥

ಈ ಕಾರಣದಿಂದ ಪಂಡುಸುತನೇ, ನೀನು ಯೋಗಯುಕ್ತನಾಗು, ಈ ಯೋಗದಿಂದ ನಿನಗೆ ಯಾವಾಗಲೂ ಸಹಜವಾಗಿ ಬ್ರಹ್ಮಸ್ವರೂಪವು ಪ್ರಾಪ್ತವಾಗುವುದು ।೨೫೬॥

ಅಂದಮೇಲೆ ಯಾವುದೇ ಸ್ಥಳದಲ್ಲಿ ಹಾಗೂ ಯಾವುದೇ ವೇಳೆಯಲ್ಲಿ ದೇಹ ಇರಲಿ ಅಥವಾ ಹೋಗಲಿ ಆದರೆ ನಿಷ್ಕೃತಿ ಬಂಧ ಮತ್ತು ನಿತ್ಯವಾಗಿರುವ ಬ್ರಹ್ಮಸ್ವರೂಪಕ್ಕೆ ಎಂದೂ ವ್ಯತ್ಯಾಸವಾಗುವುದಿಲ್ಲ ।೨೫೭॥

ಆತನು ಸೃಷ್ಟಿಯ ಆರಂಭದಲ್ಲಿ ಜನ್ಮಕ್ಕೆ ಬರುವುದಿಲ್ಲ, ಸೃಷ್ಟಿಯ ಅಂತ್ಯಕ್ಕೆ ಮರಣ ಹೊಂದುವುದಿಲ್ಲ ಮತ್ತು ಸೃಷ್ಟಿಯ ಸ್ಥಿತಿಯಲ್ಲಿ ಸಂಸಾರ ಸ್ವರ್ಗಗಳ ಸುಖದ ಮೋಹಕ್ಕೆ ಎಂದೂ ಬೀಳುವುದಿಲ್ಲ ।೨೫೮॥

ಈ ಬೋಧೆಯಿಂದ ಮಾತ್ರ ಯಾವ ಯೋಗಿಯು ಎಚ್ಚರನಾಗಿರುವನೋ ಆತನಿಗೆ ಮಾತ್ರ ಈ ಬೋಧೆಯ ಫಲಪ್ರಾಪ್ತಿಯಾಗುವುದು. ಏಕೆಂದರೆ ಆತನು ವಿಷಯೋಪ ಭೋಗಗಳನ್ನು ದಾಟಿ ಬ್ರಹ್ಮರೂಪಕ್ಕೆ ಕೂಡುವನು ।೨೫೯॥

ಇಲ್ಲಿ ನೋಡು ಅರ್ಜುನಾ, ಇಂದ್ರಾದಿಕ ದೇವತೆಗಳಿಗೆ ಸ್ವರ್ಗದಲ್ಲಿ ಯಾವಾಗಲೂ ಎಲ್ಲ ಪ್ರಕಾರದ ಸುಖದ ಉಪಭೋಗ ದೊರಕುವುದು. ಈ ಸುಖವನ್ನು ನಿವಾಳಿಸಿ ಒಗೆದ ಪದಾರ್ಥದಂತೆ ತಿಳಿದು ಅದನ್ನು ದೂರ ಎಸೆದಿರುವನು ।೨೬೦॥

ವೇದೇಷು ಯಜ್ಞೇಷು ತಪಃಸು ಚೈವ ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್ ।
ಅತ್ಯೇತಿ ತತ್ಸರ್ವಮಿದಂ ವಿದಿತ್ವಾ ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್ ॥೨೮॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಅಕ್ಷರಪರಬ್ರಹ್ಮಯೋಗೋ ನಾಮ ಅಷ್ಟಮೋಽಧ್ಯಾಯಃ

ಜರೀ ವೇದಾಧ್ಯಯನಾಚೇ ಜಾಲೇ । ಅಥವಾ ಯಜ್ಞಾಚೇ ಶೇತಚಿ ಪಿಕಲೇ । ಕೀ ತಪೋದಾನಾಂಚೇ ಜೋಡಲೇ । ಸರ್ವಸ್ವ ಹನ ಜೇ ॥೨೬೧॥ ತಯಾ ಆಘವಯಾಚಿ ಪುಣ್ಯಾಚಾ ಮಳಾ । ಭಾರು ಆಂತೌನಿ ಜಯಾ ಯೇ ಫಳಾ । ತೇ ಪರಬ್ರಹ್ಮಾ ನಿರ್ಮಳಾ । ಸಾಂಟಿ ನ ಸರೇ ॥೨೬೨॥ ಜೇ ನಿತ್ಯಾನಂದಾಚೇನಿ ಮಾನೇ । ಉಪಮೇಚಾ ಕಾಂಟಾಳಾ ನ ದಿಸೇ ಸಾನೇ । ಪಾಹಾ ಪಾ ವೇದಯಜ್ಞಾದಿ ಸಾಧನೇ । ಜಯಾ ಸುಖಾ ॥೨೬೩॥ ಜೇ ವಿಟೇ ನಾ ಸರೇ । ಭೋಗಿ ತಯಾಚೇನಿ ಪವಾಡೇ ಪುರೇ । ಪುಢತೀ ಮಹಾಸುಖಾಚೇ ಸೋಯರೇ । ಭಾವಂಡಚೀ ॥೨೬೪॥ ಐಸೇ ದೃಷ್ಟೀಚೇನಿ ಸುಖಪಣೇ । ಜಯಾಸೀ ಅದೃಷ್ಟಾಚೇ ಬೈಸಣೇ । ಜೇ ಶತಮಖಾಹೀ ಆಂಗವಣೇ । ನೋಹೇಚಿ ಏಕಾ ॥೨೬೫॥ ತಯಾತೇ ಯೋಗೀಶ್ವರ ಅಲೌಕಿಕೇ । ದಿಠೀಚೇನಿ ಹಾತತುಕೇ । ಅನುಮಾನತೀ ಕೌತುಕೇ । ತಂವ ಹಳುವಟ ಆವಡೇ ॥೨೬೬॥ ಮಗ ತಯಾ ಸುಖಾಚೇ ಕಿರೀಟೀ । ಕರೂನಿಯಾ ಗಾ ಪಾಉಟೀ । ಪರಬ್ರಹ್ಮಾಚಿಯೇ ಪಾಠೀ। ಆರೂಢತೀ ॥೨೬೭॥ ಐಸೇ ಚರಾಚರೈಕ ಭಾಗ್ಯ । ಜೇ ಬ್ರಹ್ಮೇಶಾ ಆರಾಧನಾ ಯೋಗ್ಯ । ಯೋಗಿಯಾಂಚೇ ಭೋಗ್ಯ । ಭೋಗಧನ ಜೇ ॥೨೬೮॥ ಜೋ ಸಕಳ ಕಳಾಂಚಿ ಕಳಾ । ಜೋ ಪರಮಾನಂದಾಚಾ ಪುತಳಾ । ಜೋ ಜೀವಾಚಾ ಜೇವ್ಹಾಳಾ । ವಿಶ್ವಾಚಿಯಾ ॥೨೬೯॥ ಜೋ ಸರ್ವಜ್ಞತೇಚಾ ವೋಲಾವಾ । ಜೋ ಯಾದವಕುಳೀಂಚಾ ಕುಳದಿವಾ। ತೋ ಶ್ರೀಕೃಷ್ಣಜೇ ಪಾಂಡವಾ । ಪ್ರತೀ ಬೋಲಿಲಾ ॥೨೭೦॥ ಐಸಾ ಕುರುಕ್ಷೇತ್ರೀಂಚಾ ವೃತ್ತಾಂತು । ಸಂಜಯೋ ರಾಯಾಸೀ ಅಸೇ ಸಾಂಗತು। ತೇಚಿ ಪರಿಯೇಸಾ ಪುಢಾರೀ ಮಾತು । ಜ್ಞಾನದೇವ ಮ್ಹಣೇ ॥೨೭೧॥

---

ಇತಿ ಶ್ರೀಜ್ಞಾನದೇವ ವಿರಚಿತಾಯಾಂ ಭಾವಾರ್ಥದೀಪಿಕಾಯಾಂ ಅಷ್ಟಮೋಽಧ್ಯಾಯಃ ॥೮॥
ಶ್ಲೋಕ : ೨೮ ಓವಿ ॥೨೭೧॥

ಶ್ಲೋಕಾರ್ಥ :- ಇದನ್ನು ತಿಳಿದ ಯೋಗಿಯು ವೇದಗಳು, ಯಜ್ಞಗಳು, ತಪಸ್ಸುಗಳು, ದಾನಗಳು, ಇವುಗಳನ್ನು ಮಾಡುವುದರಿಂದ ಬರುವ ಪುಣ್ಯವನ್ನು ಸಹ ಅತಿಕ್ರಮಿಸಿ ಪ್ರಧಾನವಾದ ಪರಮ ಪದವಿಯನ್ನು ಪಡೆಯುತ್ತಾನೆ ||೨೮||

ಇಲ್ಲಿಗೆ ಉಪನಿಷತ್ತೂ, ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ, ಶ್ರೀಕೃಷ್ಣಾರ್ಜುನ ಸಂವಾದವೂ ಆದ ಶ್ರೀಮದ್ಭಗವದ್ಗೀತೆಯಲ್ಲಿ ಅಕ್ಷರ ಪರಬ್ರಹ್ಮಯೋಗವೆಂಬ ಹೆಸರಿನ ಎಂಟನೆಯ ಅಧ್ಯಾಯವು ಮುಗಿದುದು.

ಒಂದು ವೇಳೆ ವೇದದ ಅಧ್ಯಯನ ಮಾಡಿ ವೈದಿಕನಾದವನು, ಅಥವಾ ಯಜ್ಞ ಮಾಡಿ ಪುಣ್ಯದ ಹೊಲವನ್ನು ಬೆಳೆಸಿದವನು ಮತ್ತು ತಪಸ್ಸು ದಾನ ಮಾಡಿ ಎಲ್ಲ ಪುಣ್ಯ ಜೋಡಿಸಿದವನು ||೨೬೦||

ಈ ಪ್ರಕಾರದ ಎಲ್ಲ ಪುಣ್ಯರೂಪ ತೋಟವು ಒಂದು ವೇಳೆ ಫಲಗಳಿಂದ ತುಂಬಿಕೊಂಡಿದ್ದರೂ ನಿರ್ಮಲವಾದ ಪರಬ್ರಹ್ಮದ ಸರಿಸಮಾನವಾಗಲಾರದು ||೨೬೨||

ಇಲ್ಲಿ ನೋಡು, ವೇದಯಜ್ಞಾದಿಕ ಸಾಧನೆಗಳು ಸ್ವರ್ಗ ಸುಖಕ್ಕಾಗಿ ಇರುವುವು. ಈ ಸುಖವನ್ನು ನಿತ್ಯಾನಂದದ ತಕ್ಕಡಿಯಲ್ಲಿ ತೂಗಲು ಚಿಕ್ಕದಾಗಿ ತೋರುವುದಿಲ್ಲ. (ನೋಡಲು ದೊಡ್ಡದಾಗಿಯೇ ಕಾಣುವುದು) ||೨೬೩||

ಈ ಸುಖವು ಹಳಸುವುದಿಲ್ಲ, ಮುಗಿಯುವುದೂ ಇಲ್ಲ, ಭೋಗಿಸುವವರ ಯಾವುದೇ ಪ್ರಬಲ ಇಚ್ಛೆಯನ್ನು ಪೂರ್ಣಗೊಳಿಸುವುದು. ಅಲ್ಲದೇ ಈ ಸುಖವು ಬ್ರಹ್ಮಸುಖದ ಪ್ರೀತಿಯ ಸಹೋದರನಂತಿರುವುದು ||೨೬೪||

ಹೀಗೆ ಇದು ಕೇವಲ ನೋಡಲು ಮಾತ್ರ ಸುಖದಂತೆಯೇ ಕಾಣುವುದು ಮತ್ತು ಈ ಸುಖಕ್ಕೆ ಅದೃಷ್ಟ ಕರ್ಮಾಕರ್ಮದ ಆಧಾರವಿರುವುದು. ಈ ಸುಖವು ಯಾರಿಗೋ ಒಂದುನೂರು ಯಜ್ಞ ಮಾಡಿದರೂ ಸಿಗುವುದಿಲ್ಲ ||೨೬೫||

ಈ ಸ್ವರ್ಗಸುಖಕ್ಕೆ ಯೋಗೀಶ್ವರರು ಕೌತುಕದಿಂದ ಅಲೌಕಿಕ ಜ್ಞಾನದೃಷ್ಟಿಯ ಕೈಯಲ್ಲಿ ಹಿಡಿದು ಅದರ ತೂಕ ನೋಡಲು ಅವರಿಗೆ ಇದು ಹಗುರವಾಗಿ ಕಾಣುವುದು ||೨೬೬||

ಆಗ ಅರ್ಜುನಾ, ಆ ಸ್ವರ್ಗಾದಿಸುಖವನ್ನು ಪಾವುಟಣಿಗೆ ಮಾಡಿ ಅಂದರೆ ಅದನ್ನು ಕಾಲಿನಿಂದ ತುಳಿದು ಬ್ರಹ್ಮಪದವನ್ನು ಏರುವರು ||೨೬೭||

ಈ ಪ್ರಕಾರವಾಗಿ ಸ್ಥಾವರ ಜಂಗಮದ ಮುಖ್ಯ ಭಾಗ್ಯವಾಗಿರುವ ಮತ್ತು ಬ್ರಹ್ಮದೇವ ಶಂಕರರು ಆರಾಧನೆ ಮಾಡಲು ಯೋಗ್ಯವಾಗಿರುವ, ಹಾಗೂ ಯೋಗಿಗಳು ಉಪಭೋಗ ಮಾಡುವ ವಸ್ತುವಾಗಿರುವುದು ||೨೬೮||

ಯಾರು ಎಲ್ಲ ಕಲೆಗಳಿಗೆ ಆಶ್ರಯಭೂತ ಕಲೆಯಾಗಿರುವನು, ಯಾರು ಪರಮಾನಂದದ ಮೂರ್ತಿಯಾಗಿರುವನು ಮತ್ತು ವಿಶ್ವದ ಜೀವನಕ್ಕೆ ಜೀವನನಾಗಿರುವನು ||೨೬೯||

ಯಾರು ಎಲ್ಲ ಜ್ಞಾನದ ಜಿವ್ಹಾಳನು, ಮತ್ತು ಯಾದವ ಕುಲದ ಕುಲದೀಪಕನು ಹೀಗಿರುವ ಶ್ರೀಕೃಷ್ಣನು ಅರ್ಜುನನಿಗೆ ಹೇಳಿದನು ||೨೭೦||

ಹೀಗೆ ಕುರುಕ್ಷೇತ್ರದಲ್ಲಿನ ಕಥಾಭಾಗವನ್ನು ಸಂಜಯನು ಧೃತರಾಷ್ಟ್ರನಿಗೆ ಹೇಳಿರುವನು. ಈ ಕಥೆಯ ಮುಂದಿನ ಭಾಗವನ್ನು ಕೇಳಿರಿ ಎಂದು ಜ್ಞಾನೇಶ್ವರರು ಹೇಳಿದರು ||೨೭೧||

---

ಶ್ರೀ ಜ್ಞಾನೇಶ್ವರ ಮಹಾರಾಜರಿಂದ ರಚಿತವಾದ ಭಾವಾರ್ಥ ದೀಪಿಕೆಯ ಎಂಟನೆಯ ಅಧ್ಯಾಯದ ವಿವರಣೆ ಸಮಾಪ್ತವು

# ಸಾರ್ಥ ಶ್ರೀಜ್ಞಾನೇಶ್ವರೀ

## ಅಧ್ಯಾಯ ನವವಾ

ಶ್ರೀ ಗಣೇಶಾಯ ನಮಃ

ತರೀ ಅವಧಾನ ಏಕಲೇ ದೀಜೇ । ಮಗ ಸರ್ವಸುಖಾಸಿ ಪಾತ್ರ ಹೋಈಜೇ । ಹೇ ಪ್ರತಿಜ್ಞೋತ್ತರ ಮಾಝೇ । ಉಘಡ ಐಕಾ ॥೧॥ ಪರೀ ಪ್ರೌಢೀ ನ ಬೋಲೋ ಹೋಜೇ । ತುಮ್ಹಾ ಸರ್ವಜ್ಞಾಂಚ್ಯಾ ಸಮಾಜೇ । ದೇಯಾವೇ ಅವಧಾನ ಹೇ ಮಾಝೇ । ವಿನವಣೇ ಸಲಗೀಚೇ ॥೨॥ ಕಾ ಜೇ ಲಳೇಯಾಚೇ ಲಳೇ ಸರತೀ । ಮನೋರಥಾಂಚೇ ಮನೋರಥ ಪುರತೀ । ಜರೀ ಮಾಹೇರೇ ಶ್ರೀಮಂತೇ ಹೋತೀ । ತುಮ್ಹಾ ಐಸೀ॥೩॥ ತುಮಚೇ ಯಾ ದಿಠಿವೇಯಾಚಿಯೇ ವೋಲೇ । ಸಾಸಿನ್ನಲೇ ಪ್ರಸನ್ನತೇಚೇ ಮಳೇ । ತೇ ಸಾಉಲೀ ದೇಖೋನಿ ಲೊಳೇ । ಶ್ರಾಂತು ಜೇ ಮೀ ॥೪॥ ಪ್ರಭೂ ತುಮ್ಹೀ ಸುಖಾಮೃತಾಚೇ ಡೋಹೋ । ಮ್ಹಣೌನಿ ಆಮ್ಹೀ ಆಪುಲಿಯಾ ಸ್ವೇಚ್ಛಾ ವೋಲಾವೋ ಲಾಹೋ । ಯೇಥಹೀ ಜರೀ ಸಲಗೀ ಕರೂ ಬಿಹೋ । ತರೀ ನಿವೋ ಕೇ ಪಾ ॥೫॥ ನಾತರೀ ಬಾಲಕ ಬೋಬಡಾ ಬೋಲೀ । ಕಾ ವಾಂಕುಡಾ ವಿಚುಕಾ ಪಾಉಲೀ । ತೇ ಚೋಜ ಕರೂನಿ ಮಾಉಲೀ । ರಿಝೇ ಜೇವೀ ॥೬॥ ತೇವೀ ತುಮ್ಹಾ ಸಂತಾಂಚಾ ಪಢಿಯಾವೋ । ಕೈಸೇನಿ ತರೀ ಆಮ್ಹಾವರೀ ಹೋ । ಯಾ ಬಹುವಾ ಆಳುಕಿಯಾ ಜೇ ಆಹೋ । ಸಲಗೀ ಕರೀತ ॥೭॥ ವಾಂಚೂನಿ ಮಾಝಿಯೇ ಬೋಲತಿಯೇ ಯೋಗ್ಯತೇ । ಸರ್ವಜ್ಞ ಭವಾದೃಶ ಶ್ರೋತೇ । ಕಾಯ ಧಡ್ಯಾವರೀ ಸಾರಸ್ವತೇ । ಪಢೋ ಸಿಕಿಜೇ ? ॥೮॥ ಅವಧಾರಾ ಆವಡೇ ತೇಸಣಾ ಧುಂಧುರು । ಪರಿ ಮಹಾತೇಜಿ ನ ಮಿರವೇ ಕಾಯ ಕರೂ । ಅಮೃತಾಚಿಯಾ ತಾಟೀ ವೋಗರೂ । ಐಸೀ ರಸಸೋಯ ಕೈಂಚೀ? ॥೯॥ ಹಾ ಹೋ ಹಿಮಕರಾಸೀ ವಿಂಜಣೇ । ಕೀ ನಾದಾಪುಢೇ ಆಇಕವಣೇ । ಲೇಣೆಯಾಸೀ ಲೇಣೇ । ಹೇ ಕಹೀ ಆಥೀ? ॥೧೦॥ ಸಾಂಗಾ ಪರಿಮಳೇ ಕಾಯ ತುರಂಬಾವೇ? । ಸಾಗರೇ ಕವಣೇ ಠಾಯೀ ನಾಹಾವೇ? । ಹೇ ಗಗನಚಿ ಆಡೇ ಆಘವೇ । ಐಸಾ ಪವಾಡು ಕೈಂಚಾ? ॥೧೧॥

# ಸಾರ್ಥ ಶ್ರೀಜ್ಞಾನೇಶ್ವರೀ

## ಒಂಭತ್ತನೆಯ ಅಧ್ಯಾಯ

(ಶ್ರೀಜ್ಞಾನೇಶ್ವರ ಮಹಾರಾಜರು ಹೇಳುವರು) ಶ್ರೋತೃಗಳೇ, ನೀವು ಒಂದೇ ಒಂದು ಲಕ್ಷವನ್ನು ಇತ್ತಕಡೆ ಕೊಟ್ಟರೆ ಸರ್ವ ಸುಖಕ್ಕೆ ಪಾತ್ರಾರಾಗುವಿರಿ. ಇದನ್ನು ನಾನು ಪ್ರತಿಜ್ಞೆ ಪೂರ್ವಕವಾಗಿ ಸ್ಪಷ್ಟವಾಗಿ ಹೇಳುವೆ, ಕೇಳಿರಿ ।೧॥

ಆದರೆ ನಿಮ್ಮಂತಹ ಸರ್ವಜ್ಞರ ಸಭೆಯಲ್ಲಿ ನಾನು ಇದನ್ನು ಹೆಮ್ಮೆಯಿಂದ ಹೇಳುತ್ತಿಲ್ಲ. "ನೀವು ಲಕ್ಷ ಕೊಡಿರಿ" ಎಂದು ಹೇಳುವುದು ನನ್ನ ಸಲಿಗೆಯ ವಿನಂತಿಯಾಗಿರುವುದು ।೨॥

ಏಕೆಂದರೆ ತಮ್ಮಂತಹ ಶ್ರೀಮಂತ ತವರು ಮನೆ ನನಗಿರುವಾಗ ಮಮತೆಯ ಮಮತೆಯು ಪೂರ್ಣಗೊಳ್ಳುವುದು ಮತ್ತು ಮನೋರಥಗಳ ಮನೋರಥವು ತೃಪ್ತಗೊಳ್ಳುವುದು ।೩॥

ನಿಮ್ಮ ಕೃಪಾದೃಷ್ಟಿ ಎಂಬ ಹಸಿಯಿಂದ ಭರದಿಂದ ಬೆಳೆದು ನಿಂತ ಪ್ರಸನ್ನತೆಯ ತೋಟದ ತಂಪಾದ ನೆರಳನ್ನು ಕಂಡು, ಶ್ರಮಿಸಿರುವ ನಾನು ಅಲ್ಲಿ ವಿಶ್ರಾಂತಿ ಪಡೆಯುವೆನು ।೪॥

ಪ್ರಭುಗಳೇ, ನೀವು ಸುಖಾಮೃತದ ಮಡುವೇ ಆಗಿರುವಿರಿ. ಆದ್ದರಿಂದ ನಾವು ನಮ್ಮ ಇಚ್ಛೆಯಂತೆ ಅದರಿಂದ ತಂಪನ್ನು ಬಯಸುವೆವು. ಅಲ್ಲಿ ನಾವು ನಿಮ್ಮಲ್ಲಿ ಸಲಿಗೆ ಮಾಡಲು ಹೆದರಿದರೆ ನಾವು ಎಲ್ಲಿ ಹೇಗೆ ತೃಪ್ತರಾಗಬೇಕು? ।೫॥

ಇಲ್ಲವೇ ಚಿಕ್ಕ ಬಾಲಕನ ತೊದಲ್ನುಡಿಯ ಮಾತಿನಿಂದ ಹಾಗೂ ಅಪ್ಪು ತಪ್ಪು ಹೆಜ್ಜೆಗಳ ನಡಿಗೆಯಿಂದ ಕೌತುಕಪಟ್ಟು ತಾಯಿಯು ಯಾವ ಪ್ರಕಾರವಾಗಿ ಸಂತೋಷಪಡುವಳೋ ।೬॥

ಅದರಂತೆ ನಿಮ್ಮ ಸಂತಜನರ ಪ್ರೀತಿಯು ಯಾವುದೇ ರೀತಿಯಿಂದ ನನ್ನ ಮೇಲೆ ಆಗಲಿ ಎಂಬ ಪೂರ್ಣ ಉತ್ಕಟ ಇಚ್ಛೆಯೊಂದಿಗೆ ನಾನು ನಿಮ್ಮಲ್ಲಿ ಸಲಿಗೆ ಮಾಡುತ್ತಿದ್ದೇನೆ ।೭।

ಇಲ್ಲದಿದ್ದರೆ ನಿಮ್ಮಂತಹ ಸರ್ವಜ್ಞ ಶ್ರೋತೃಗಳಿಗೆ ನನ್ನ ಮಾತಿನಿಂದ ಹೊಸದಾಗಿ ಏನಾದರೂ ತಿಳಿದುಕೊಳ್ಳಬೇಕಾಗಿದೆಯೇ ? ಸರಸ್ವತಿ ಪುತ್ರನಿಗೆ ಪಾಠ ಕೊಟ್ಟು ಕಲಿಸಬೇಕಾಗುವುದೇ? ।೮॥

ಇಲ್ಲಿ ನೋಡಿರಿ, ಬೇಕಾದಷ್ಟು ದೊಡ್ಡದಾಗಿರಲಿ ಆ ಬೆಂಕಿ ಹುಳದಿಂದ ಸೂರ್ಯನ ಎದುರು ಅದರ ಪ್ರಕಾಶವು ಬೀಳಬಹುದೇ? ಹಾಗೆಯೇ ಅಮೃತದ ಪಾತ್ರೆಯಲ್ಲಿ ಬಡಿಸಲು ಅದರ ತಕ್ಕಂತೆ ಇನ್ನೊಂದು ಪಕ್ವಾನ್ನ ಉಂಟೇ? ।೯॥

ಅಹೋ! ತಂಪಾದ ಕಿರಣಗಳ ಚಂದ್ರಮನಿಗೆ ಬೀಸಣಿಕೆಯಿಂದ ಗಾಳಿ ಹಾಕುವುದು, ಅಥವಾ ಸುಸ್ವರಕ್ಕೆ ಹಾಡಿ ತೋರಿಸುವುದು ಹಾಗೆಯೇ ಅಲಂಕಾರಗಳಿಗೆ ಪುನಃ ಅಲಂಕಾರ ಮಾಡುವುದು ಇದು ಎಲ್ಲಿ, ಹೇಗಾಗಬೇಕು? ।೧೦॥

ಪರಿಮಳವು ಯಾವುದರ ವಾಸನೆ ಸೇವಿಸಬೇಕು? ಸಾಗರವು ಯಾವ ಸ್ಥಳದಲ್ಲಿ ಸ್ನಾನ ಮಾಡಬೇಕು? ಆಕಾಶವನ್ನು ಹಿಡಿಸುವಷ್ಟು ಯಾವ ವಸ್ತು ಇದೆ? ನೀವೇ ಹೇಳಿರಿ ।೧೧॥

ತೈಸೇ ತುಮಚೇ ಅವಧಾನ ಧಾಯೇ । ಆಣಿ ತುಮ್ಹೀ ಮ್ಹಣಾ ಹೇ ಹೋಯೇ । ಐಸೇ ವಕ್ತೃತ್ವ ಕವಣಾ ಆಹೇ । ಜೇಣೇ ರಿಝಾ ತುಮ್ಹೀ? ॥೧೨॥ ತರೀ ವಿಶ್ವಪ್ರಗಟತಿಯಾ ಗಭಸ್ತೀ । ಕಾಯ ಹಾತಿವೇನ ನ ಕೀಜೇ ಆರತೀ? । ಕಾ ಚುಳೋದಕೇ ಆಪಾಂಪತೀ । ಅರ್ಘ್ಯ ನೇದಿಜೇ ॥೧೩॥ ಪ್ರಭೂ ತುಮ್ಹೀ ಮಹೇಶಾಚಿಯಾ ಮೂರ್ತಿ । ಆಣಿ ಮೀ ದುಬಳಾ ಅರ್ಚಿತಸೇ ಭಕ್ತೀ । ಮ್ಹಣೌನಿ ಬೋಲ ಜರ್ಹೀ ಗಂಗಾವತೀ । ತರ್ಹೀ ಸ್ವೀಕಾರಾಲ ಕೀ ॥೧೪॥ ಬಾಳಕ ಬಾಪಾಚಿಯೇ ತಾಟೀ ರಿಗೇ । ಆಣಿ ಬಾಪಾತೇಚಿ ಜೇವಊ ಲಾಗೇ । ಕೀ ತೋ ಸಂತೋಷಲೇನಿ ವೇಗೇ । ಮುಖಚಿ ವೋಢವೀ ॥೧೫॥ ತೈಸಾ ಮೀ ಜರೀ ತುಮ್ಹಾಪ್ರತೀ । ಚಾವಟೀ ಕರೀತಸೇ ಬಾಳಮತೀ । ತರೀ ತುಮ್ಹೀ ಸಂತೋಷಿಜೇ ಐಸೀ ಜಾತೀ । ಪ್ರೇಮಾಚೀ ಅಸೇ ॥೧೬॥ ಆಣಿ ತೇಣೇ ಆಪುಲೇಪಣಾಚೇನಿ ಮೋಹೇ । ತುಮ್ಹೀ ಸಂತ ಘೇತಲೇ ಅಸಾ ಬಹುವೇ । ಮ್ಹಣೌನಿ ಕೇಲಿಯೇ ಸಲಗೀಚಾ ನೋಹೇ । ಆಭಾರು ತುಮ್ಹಾ ॥೧೭॥ ಅಹೋ ತಾನ್ಹಯಾಚೇ ಲಾಗತಾ ಝುಟೇ । ತೇಣೇ ಅಧಿಕಚಿ ಪಾನ್ಹಾ ಫುಟೇ । ರೋಷೇ ಪ್ರೇಮ ದುಣವಟೇ । ಪಢಿಯಂತಯಾಚೇನಿ ॥೧೮॥ ಮ್ಹಣೌನಿ ಮಜ ಲೇಕುರವಾಚೇನಿ ಬೋಲೇ । ತುಮಚೇ ಕೃಪಾಳೂಪಣ ನಿದ್ಯೆಲೇ । ತೇ ಚೇಇಲೇ ಐಸೇ ಜೇ ಜಾಣವಲೇ । ಯಾಲಾಗಿ ಬೋಲಿಲೋ ಮೀ ॥೧೯॥ ಏರ್ಹವೀ ಚಾಂದಿಣೇ ಪಿಕವಿಜತ ಆಹೇ ಚೇಪಣೇ? । ಕೀ ವಾರಯಾ ಘಾಪತ ಆಹೇ ವಾಹಣೇ? । ಹಾ ಹೋ ಗಗನಾಸೀ ಗಂವಸಣೇ । ಘಾಲಿಜೇ ಕೇವೀ? ॥೨೦॥ ಆಇಕಾ ಪಾಣೀ ವೋಥಿಜಾವೇ ನ ಲಗೇ । ನವನೀತೀ ಮಾಥುಲಾ ನ ರಿಗೇ । ತೇವೀ ಲಾಜಿಲೇ ವ್ಯಾಖ್ಯಾನ ನಿಗೇ । ದೇಖೋನಿ ಜಯಾತೇ ॥೨೧॥ ಹೇ ಅಸೋ ಶಬ್ದಪ್ರಬ್ರಹ್ಮ ಜಿಯೇ ಬಾಜೇ । ಶಬ್ದ ಮಾವಳಲೇಯಾ ನಿವಾಂತು ನಿಜೇ । ತೋ ಗೀತಾರ್ಥು ಮರ್ಹಾಠಿಯಾ ಬೋಲಿಜೇ । ಹಾ ಪಾಡು ಕಾಈ? ॥೨೨॥ ಪರಿ ಐಸಿಯಾಹೀ ಮಜ ಧಿವಸಾ । ತೋ ಪುಢತಿಯಾಚಿ ಯೇಕಿ ಆಶಾ । ಜೇ ಧಿಟೀವಾ ಕರೂನಿ ಭವಾದೃಶಾ । ಪಢಿಯಂತಯಾ ಹೋಆವೇ ॥೨೩॥ ತರಿ ಆತಾ ಚಂದ್ರಾಪಾಸೋನಿ ನಿವವಿತೇ । ಜೇ ಅಮೃತಾಹೂನಿ ಜೀವವಿತೇ । ತೇಣೇ ಅವಧಾನೇ ಕೀಜೋ ವಾಢತೇ । ಮನೋರಥಾ ಮಾಝಿಯಾ ॥೨೪॥ ಕಾ ಜೈ ದಿಠಿವಾ ತುಮಚಾ ವರುಷೇ । ತೈ ಸಕಳಾರ್ಥ ಸಿದ್ಧಿಮತೀ ಪಿಕೇ । ಏರ್ಹವೀ ಕೋಂಭೇಲಾ ಉನ್ಮೇಷು ಸುಕೇ । ಜರೀ ಉದಾಸ ತುಮ್ಹೀ ॥೨೫॥

ಅದರಂತೆ ನಿಮ್ಮ ಅವಧಾನವು ತೃಪ್ತವಾಗುವಂತೆ ಮತ್ತು ನೀವು ಅಹುದಹುದೆಂದು ಒಪ್ಪಿಕೊಳ್ಳುವಂತೆ ಹಾಗೂ ನೀವು ಸಂತೋಷಪಡುವಂತೆ ಹೇಳುವ ವ್ಯಕ್ತಿತ್ವವು ಯಾರಲ್ಲಿದೆ? ।।೧೨।।

ಆದಾಗ್ಯೂ, ವಿಶ್ವವನ್ನು ಪ್ರಕಾಶಿಸುವ ಸೂರ್ಯನಿಗೆ ಕೈಯಿಂದ ಹಿಡಿದು ಆರತಿ ಮಾಡಬಾರದೇ? ಅಥವಾ ಎಲ್ಲ ಜಲದ ಸ್ವಾಮಿಯಾಗಿರುವ ಸಮುದ್ರರಾಜನಿಗೆ ಒಂದು ಬೊಗಸೆ ನೀರಿನಿಂದ ಅರ್ಘ್ಯವನ್ನು ಕೊಡಬಾರದೇ ? ।।೧೩।।

ಪ್ರಭುಗಳೇ, ನೀವು ಮಹೇಶ (ಶಂಕರ)ನ ಮೂರ್ತಿ ಯಾಗಿರುವಿರಿ ಮತ್ತು ನಾನು ಸಾಮಾನ್ಯ ಬಡವನು. ಭಕ್ತಿಯಿಂದ ನಿಮ್ಮ ಪೂಜೆ ಮಾಡುತ್ತಿರುವೆನು. ಆದ್ದರಿಂದ ನೀವು ಬಿಲ್ವದಳದ ಹೊರತಾಗಿ ನನ್ನ ಮಾತುಗಳೆಂಬ ''ಲಕ್ಕಿ'' ಎಲೆಗಳನ್ನು ಸ್ವೀಕರಿಸುವುದಿಲ್ಲವೇ? ।।೧೪।।

ಚಿಕ್ಕ ಹುಡುಗನು ತನ್ನ ತಂದೆಯ ತಾಟಿನಲ್ಲಿ ಊಟಕ್ಕೆ ಕುಳಿತು ತನ್ನ ಯೋಗ್ಯತೆ ಇಲ್ಲದಿದ್ದರೂ ಪ್ರೀತಿಯಿಂದ ತಂದೆಗೆ ತುತ್ತು ಹಾಕಲು ಮುಂದಾದಾಗ ತಂದೆಯು ಸಂತೋಷಪಟ್ಟು ತಕ್ಷಣ ಮುಖವನ್ನು ಮುಂದೆ ಚಾಚುವನು ।।೧೫।।

ಅದರಂತೆ ನಾನೂ ಸಹ ನಿಮ್ಮಲ್ಲಿ ಬಾಲಕವೃತ್ತಿಯಂತೆ ವಿನೋದದಿಂದ ವರ್ತಿಸುವೆ. ಅದಕ್ಕೆ ನಿಮಗೆ ನನ್ನ ವರ್ತನೆಯಿಂದ ಸಂತೋಷವೇ ಆಗಬೇಕು. ಹೀಗೆ ಇದು ಪ್ರೇಮದ ಗುಣವಾಗಿದೆ ।।೧೬।।

ಮತ್ತು ಸಂತರಾದ ನೀವು ''ಜ್ಞಾನೋಬಾ ನನ್ನಾತನು'' ಎಂದು ಅತ್ಯಂತ ಮೋಹದಿಂದ ನನ್ನನ್ನು ಅಂಗೀಕಾರ ಮಾಡಿರುವುದರಿಂದ ನನ್ನ ಸಲಿಗೆಯು ನಿಮ್ಮನ್ನು ಭಾರವಾಗುವ ತೊಂದರೆ ಕೊಡಲಾರದು ।।೧೭।।

ಅಹೋ, ಕರುವು ಕೆಚ್ಚಲಿಗೆ ಹೆಚ್ಚು ಗುದ್ದಿದಂತೆ ಆಕಳು ಹೆಚ್ಚೆಚ್ಚು ತೊರೆ ಬಿಡುವುದು. ಅದರಂತೆ ಅತ್ಯಂತ ಪ್ರಿಯ ಮನುಷ್ಯನ ಕ್ರೋಧದಿಂದ ಪ್ರೇಮವು ಎರಡರಷ್ಟಾಗುವುದು ।।೧೮।।

ಆದ್ದರಿಂದ ಮಲಗಿರುವ ನಿಮ್ಮ ಕೃಪಾಳುತನವು ಜಾಗೃತವಾದೀತೆಂದು ತಿಳಿದುಕೊಂಡು ನಾನು ಬಾಲಬುದ್ಧಿಯ ತೊದಲ್ನುಡಿಯಿಂದ ಲಕ್ಷ ಕೊಡಿರಿ ಎಂದು ಹೇಳಿದೆನು ।।೧೯।।

ಚಂದ್ರನ ಬೆಳದಿಂಗಳವನ್ನು ಯಾರಾದರೂ ಅಡಿಯಲ್ಲಿ ಹಾಕಿ ಪಕ್ವಗೊಳಿಸಿರುವರೇ ? ಅಥವಾ ವಾಯುವಿಗೆ ಯಾರಾದರೂ ಅದಕ್ಕೆ ಗತಿಯನ್ನು ಕೊಟ್ಟಿರುವರೇ ? ಅದರಂತೆ ಆಕಾಶಕ್ಕೆ ಯಾರಾದರೂ ಹೊದಿಕೆ ಹಾಕಿರುವರೇ? ।।೨೦।।

ಕೇಳಿರಿ, ನೀರಿಗೆ ಅದಕ್ಕಿಂತಲೂ ತೆಳ್ಳಗೆ ಮಾಡಲು ಬರುವುದಿಲ್ಲ ಮತ್ತು ಬೆಣ್ಣೆಯು ಸಿದ್ಧವಾದ ಮೇಲೆ ಅದನ್ನು ಯಾರೂ ಕಡಗೋಲಿನಿಂದ ಕಡೆಯುವುದಿಲ್ಲ. ಅದರಂತೆ ಗೀತಾರ್ಥವನ್ನು ಕಂಡು ನನ್ನ ವ್ಯಾಖ್ಯಾನವು ನಾಚಿಕೆಪಟ್ಟು ಹಿಂದಕ್ಕೆ ಸರಿಯಹತ್ತಿದೆ ।।೨೧।।

ಇದು ಇರಲಿ, ಯಾವುದಕ್ಕೆ ವೇದಗಳ ಶಬ್ದಗಳು ಕುಂಠಿತವಾದುದ್ದಕ್ಕೆ ಅವು ಸಹ ಅದರ ಹಾಸಿಗೆಯಲ್ಲಿ ಗಾಢ ನಿದ್ರೆ ಮಾಡುವುವು. ಅಂತಹ ಗೀತಾರ್ಥವನ್ನು ಮರಾಠಿ ಭಾಷೆಯಲ್ಲಿ ಹೇಳುವುದು ನನಗೆ ಅಧಿಕಾರವು ಇದೆಯೇ? ।।೨೨।।

ಆದರೆ ಇಂತಹ ಸ್ಥಿತಿಯಲ್ಲಿಯೂ ನನಗೆ ಮುಂದಿನ ಆಶೆಗಾಗಿ ಇಚ್ಛೆಯಾಯಿತು. ಅದೇನೆಂದರೆ ಹೇಗಾದರೂ ದಿಟ್ಟತನದಿಂದ ಹೇಳಿ ತಮ್ಮಂಥವರ ಪ್ರೀತಿಗೆ ಪಾತ್ರನಾಗುವುದು ।।೨೩।।

ಅದಕ್ಕಾಗಿ ಈಗ ಚಂದ್ರನಕ್ಕಿಂತಲೂ ತಂಪು ಮಾಡುವ, ಅಮೃತಕ್ಕಿಂತಲೂ ಜೀವನ ಕೊಡುವ ನಿಮ್ಮ ಅವಧಾನ (ಲಕ್ಷ) ದಿಂದ ನನ್ನ ಮನೋರಥಕ್ಕೆ ಪುಷ್ಟಿಯನ್ನು ಕೊಡಿರಿ ।।೨೪।।

ಏಕೆಂದರೆ, ನಿಮ್ಮ ಕೃಪಾದೃಷ್ಟಿರೂಪ ಮಳೆಯು ನನ್ನ ಮೇಲೆ ಪರಿಪೂರ್ಣವಾದರೆ ನನ್ನ ಬುದ್ಧಿರೂಪ ಭೂಮಿಯಲ್ಲಿ ಸಕಲಾರ್ಥರೂಪ ಧಾನ್ಯಗಳು ಬೆಳೆಯುವುವು. ಒಂದುವೇಳೆ ನೀವು ಉದಾಸರಾದರೆ ಅಂಕುರಕ್ಕೆ ಬಂದ ಜ್ಞಾನವು ಒಣಗಿ ಹೋಗುವುದು ।।೨೫।।

ಸಹಜೇ ತರೀ ಅವಧಾರಾ । ವಕ್ತೃತ್ವಾ ಅವಧಾನಾಚಾ ಹೋಯ ಚಾರಾ । ತರೀ ದೋಂದೇ ಪೇಲತೀ ಅಕ್ಷರಾ । ಪ್ರಮೇಯಾಚೀ ।೨೬।। ಅರ್ಥ ಬೋಲಾಚೀ ವಾಟ ಪಾಹೇ । ತೇಥ ಅಭಿಪ್ರಾವೋಚಿ ಅಭಿಪ್ರಾಯಾತೇ ವಿಯೇ । ಭಾವಾಚಾ ಫುಲೌರಾ ಹೋತ ಜಾಯೇ । ಮತಿವರೀ ।೨೭।। ಮ್ಹಣೌನಿ ಸಂವಾದಾಚಾ ಸುವಾವೋ ಢಳೇ । ತರ್ಹಿ ಹೃದಯಾಕಾಶ ಸಾರಸ್ವತೇ ವೋಳೇ । ಆಣಿ ಶ್ರೋತಾ ದುಶ್ಚಿತಾ ತರಿ ವಿತುಳೇ । ಮಾಂಡಲಾ ರಸು ।೨೮।। ಅಹೋ ಚಂದ್ರಕಾಂತು ದ್ರವತಾ ಕೀರ ಹೋಯೇ । ಪರಿ ತೇ ಹಾತವಟೀ ಚಂದ್ರೀ ಕೀ ಆಹೇ । ಮ್ಹಣೌನಿ ವಕ್ತಾ ತೋ ವಕ್ತಾ ನೋಹೇ । ಶ್ರೋತೇನಿವಿಣ ।೨೯।। ಪರಿ ಆತಾ ಆಮುತೇ ಗೋಡ ಕರಾವೇ । ಐಸೇ ತಾಂದುಳೀ ಕಾಸಯಾ ವಿನವಾವೆ? । ಸಾಇಖಡಿಯಾನೇ ಕಾಇ ಪ್ರಾರ್ಥಾವೇ । ಸೂತ್ರಧಾರಾತೇ? ।೩೦।। ತೋ ಕಾಯ ಬಾಹುಲಿಯಾಂಚಿಯಾ ಕಾಜಾ ನಾಚವೀ?। ಕೀ ಆಪುಲಿಯೇ ಜಾಣಿವೇಚೀ ಕಳಾ ವಾಢವೀ । ಮ್ಹಣೌನಿ ಆಮ್ಹಾ ಯಾ ಠೇವಾಠೇವೀ । ಕಾಯ ಕಾಜ ।೩೧।। ತಂವ ಶ್ರೀಗುರು ಮ್ಹಣತೀ ಕಾಇ ಜಾಹಲೇ । ಹೇ ಸಮಸ್ತ ಹೀ ಆಮ್ಹಾ ಪಾವಲೇ । ಆತಾ ಸಾಂಗೈ ಜೇ ನಿರೂಪಿಲೇ । ನಾರಾಯಣೇ ।೩೨।। ಯೇಥ ಸಂತೋಷೋನಿ ನಿವೃತ್ತಿದಾಸೇ । ಜೀ ಜೀ ಮ್ಹಣೌನಿ ಉಲ್ಹಾಸೇ । ಅವಧಾರಾ ಶ್ರೀಕೃಷ್ಣ ಐಸೇ । ಬೋಲತೇ ಜಾಹಲೇ ।೩೩।।

ಶ್ರೀಭಗವಾನುವಾಚ :-
ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।
ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ।೧।।

ನಾತರಿ ಅರ್ಜುನಾ ಹೇ ಬೀಜ । ಪುಢತೀ ಸಾಂಗಿಜೇಲ ತುಜ । ಜೇ ಹೇ ಅಂತಃಕರಣೀಚೇ ಗುಜ । ಜೀವಾಚಿಯೇ ।೩೪।। ಯೇಣೇ ಮಾನೇ ಜೀವಾಚೇ ಹಿಯೇ ಫೋಡಾವೇ । ಮಗ ಗುಜ ಕಾ ಪಾ ಮಜ ಸಾಂಗಾವೇ? ಐಸೇ ಕಾಂಹೀ ಸ್ವಭಾವೇ । ಕಲ್ಪಿಶೀ ಜರೀ ।೩೫।। ತರೀ ಪರಿಯೇಸೀ ಗಾ ಪ್ರಾಜ್ಞಾ । ತೂ ಆಸ್ಥೇಚೀಚ ಸಂಜ್ಞಾ । ಬೋಲಿಲಿಯೇ ಗೋಷ್ಟೀಚೀ ಅವಜ್ಞಾ । ನೇಣಸೀ ಕರೂ ।೩೬।। ಮ್ಹಣೌನಿ ಗೂಢಪಣ ಆಪುಲೇ ಮೋಡೋ । ವರಿ ನ ಬೋಲಣೇಹೀ ಬೋಲಾವೇ ಘಡೋ । ಪರಿ ಆಮುಚಿಯೇ ಜೀವಿಂಚೇ ಪಡೋ । ತುಝ್ಯಾ ಜೀವಿ ।೩೭।। ಅಗಾ ಥಾನೀ ಕೀರ ದೂಧ ಗೂಢ । ಪರಿ ಥಾನಾಸೀಚಿ ನವ್ಹೆ ಕೀ ಗೋಡ । ಮ್ಹಣೌನಿ ಸರೋ ಕಾ ಸೇವಿತಯಾಚೀ ಚಾಡ । ಜರೀ ಅನನ್ಯು ಮಿಳೇ ।೩೮।।

ಈಗ ಸಹಜವಾಗಿ ಲಕ್ಷ ಕೊಟ್ಟು ನೋಡಿರಿ, ವಕ್ತೃತ್ವಕ್ಕೆ ಅವಧಾನ (ಲಕ್ಷ) ದ ಆಹಾರ ಇದ್ದರೆ ಮಾತ್ರ ಅಕ್ಷರಗಳಿಗೆ ಸಿದ್ಧಾಂತಗಳಿಂದ ಹೊಟ್ಟೆ ಬರುವುದು (ಬಜ್ಜು ಬರುವುದು) ।೨೬॥

ವರ್ಣನ ಮುಖದಿಂದ ಶಬ್ದಗಳು ಹೊರಡುವ ದಾರಿಯನ್ನೇ ಅರ್ಥಗಳು ಕಾಯುತ್ತಿರುವುವು ಮತ್ತು ಅಲ್ಲಿ ಒಂದರಿಂದ ಇನ್ನೊಂದು ಅನೇಕ ಅಭಿಪ್ರಾಯಗಳು ಹುಟ್ಟುವುವು ಮತ್ತು ಬುದ್ಧಿಯ ಮೇಲೆ ಭಾವದ ಹೂವುಗಳು ಅರಳುತ್ತಿರುವುವು ।೨೭॥

ಆದ್ದರಿಂದ ಉಲ್ಹಾಸದಿಂದ ಕೂಡಿದ ಸಂವಾದವೇ ಅನುಕೂಲಕರ ಗಾಳಿ ಬಿಟ್ಟಿತೆಂದರೆ ಹೃದಯರೂಪಿ ಆಕಾಶದಲ್ಲಿ ಶಾಸ್ತ್ರ ಸಿದ್ಧಾಂತರೂಪಿ ದಟ್ಟವಾದ ಮೋಡಗಳು ಹುಟ್ಟುವುವು. ಶ್ರೋತೃಗಳು ದುಶ್ಚಿತ್ತರಾದರೆ, ವ್ಯಾಖ್ಯಾನಕ್ಕೆ ಬಂದ ಕಳೆಯು ಕುಂದುವುದು ।೨೮॥

ಅಹೋ, ಚಂದ್ರಕಾಂತ ಮಣಿಯು ದ್ರವಿಸುವುದು ನಿಜ. ಆದರೆ, ಅದನ್ನು ದ್ರವಿಸುವ ಯುಕ್ತಿಯು ಚಂದ್ರನಲ್ಲಿರುವುದು. ಅದರಂತೆ ಶ್ರೋತೃಗಳ ಹೊರತಾಗಿ ವಕ್ತಾ ವಕ್ತಾನೇ ಅಲ್ಲ ।೨೯॥

ಇನ್ನು ಅಕ್ಕಿಯು ''ನಮ್ಮನ್ನು ಸಿಹಿಯಾಗಿ ಮಾಡಿ ಕೊಳ್ಳಿರಿ''. ಎಂದು ಅಡುಗೆಯವರಿಗೆ ಏಕೆ ವಿನಂತಿಸಬೇಕು? ಅದರಂತೆ ಸೂತ್ರಗೊಂಬೆಗೆ ''ನಮ್ಮನ್ನು ಚೆನ್ನಾಗಿ ಕುಣಿಸಿರಿ'' ಎಂದು ಸೂತ್ರಧಾರನಿಗೆ ಪ್ರಾರ್ಥಿಸಬೇಕಾಗುವುದೇ? ।೩೦॥

ಆ ಸೂತ್ರಧಾರನು ಸೂತ್ರಗೊಂಬೆಗಳ ಕಾರ್ಯಕ್ಕಾಗಿ ಅವುಗಳನ್ನು ಕುಣಿಸುವನೇ? (ಇಲ್ಲ). ಆದರೆ ಆತನು ತನ್ನ ಕುಶಲತೆಯನ್ನು ತೋರಿಸಲು ಅವುಗಳನ್ನು ಕುಣಿಸುವನು. ಅದರಂತೆ ನನಗೆ ಹಾಗೆ, ಹೀಗೆ ಹೇಳಿಸಿರಿ ಎಂದು ನಿಷ್ಕಾರಣವಾಗಿ ಪ್ರಾರ್ಥಿಸುವುದೇನಿದೇ? ।೩೧॥

ಆಗ ನಿವೃತ್ತಿನಾಥರು ಹೇಳಿದರು :- ''ನಿನಗೆ ಇಷ್ಟೊಂದು ವ್ಯಾಖ್ಯಾನ ಏಕೆ ಬೇಕು'' ? ನಿನ್ನ ಎಲ್ಲ ಅಭಿಪ್ರಾಯವು ನಮಗೆ ತಿಳಿದಿದೆ. ಈಗ ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ್ದನ್ನು ಶ್ರೋತೃಗಳಿಗೆ ಹೇಳು ।೩೨॥

ಆಗ ನಿವೃತ್ತಿದಾಸರಾದ ಜ್ಞಾನೇಶ್ವರರು ಸಂತೋಷ ದಿಂದ ಒಪ್ಪಿಕೊಂಡು, ಈಗ ಕೇಳಿರಿ, ಶ್ರೀಕೃಷ್ಣ ಪರಮಾತ್ಮನು ಹೀಗೆ ಹೇಳಿದನು ಎಂದು ಉಲ್ಹಾಸದಿಂದ ಹೇಳಿದರು ।೩೩॥

ಶ್ಲೋಕಾರ್ಥ :- ಶ್ರೀಭಗವಂತನು ಹೇಳಿದ್ದು- ಅರ್ಜುನಾ! ಯಾವುದನ್ನು ತಿಳಿದು ದುಃಖರೂಪ ಸಂಸಾರವನ್ನು ದಾಟುತ್ತಾರೋ ಆ ಗೋಪ್ಯವಾದ ವಿಜ್ಞಾನಸಹಿತ ಜ್ಞಾನವನ್ನು ಅಸೂಯಾರಹಿತನಾದ ನಿನಗೆ ಹೇಳುತ್ತೇನೆ ಕೇಳು ।೧॥

ಅರ್ಜುನನೇ, ನನ್ನ ಅಂತಃಕರಣದಲ್ಲಿನ ಅತೀ ಗುಹ್ಯವಾಗಿರುವ ಜ್ಞಾನದ ಆದಿಕಾರಣವನ್ನು ನಾನು ನಿನಗೆ ಪುನಃ ಹೇಳುವೆನು ।೩೪॥

ಈಗ ಈ ಪ್ರಕಾರವಾದ ಜೀವದ ರಹಸ್ಯವನ್ನು ಒಡೆದು ಅದನ್ನು ನಾನು ನಿನಗೆ ಏಕೆ ಹೇಳುವೆನು ಎಂಬ ಅನುಮಾನವು ನಿನಗೆ ಅಕಸ್ಮಾತ್ ಬರಬಹುದು ।೩೫॥

ಆದರೆ, ಹೇ ಬುದ್ಧಿವಂತ ಅರ್ಜುನನೇ, ನಿನಗೆ ಆಸ್ಥೆ ಎಂಬುದೇ ಹೆಸರಿರುವುದು. ನಿನ್ನ ರೂಪದಿಂದ ಆಸ್ಥೆ ಎಂಬುದು ವಸ್ತುವಾಗಿರುವುದು. ಅಲ್ಲದೇ ನೀನು ಹೇಳಿದ ಮಾತಿನ ಅನಾದರ (ಆಜ್ಞಾಭಂಗ) ಮಾಡುವುದಿಲ್ಲ ।೩೬॥

ಆದ್ದರಿಂದ ನನ್ನ ಗೌಪ್ಯವು ಬಯಲಾದರೂ ಆಗಲಿ ಅಥವಾ ಹೇಳಬಾರದೆಂಬುದಾದರೂ ಹೇಳುವಂತಾಗಲಿ. ಆದರೆ ನನ್ನ ಜೀವದಲ್ಲಿನ ಜ್ಞಾನವು ನಿನ್ನ ಜೀವದಲ್ಲಿ ಬೀಳಬೇಕು ಎಂಬುದೇ ನನ್ನ ಇಚ್ಛೆಯಾಗಿದೆ ।೩೭॥

ಅರೇ, ಸ್ತನದಲ್ಲಿ ಹಾಲು ಗುಪ್ತವಾಗಿರುವುದು ನಿಜ. ಆದರೆ ಸ್ತನಕ್ಕೆ ಅದು ರುಚಿಯಾಗುವುದಿಲ್ಲ, ಆದ್ದರಿಂದ ಅನನ್ಯವಾಗಿರುವ ಸಣ್ಣ ಕೂಸು ಸಿಕ್ಕಾಗ ಅದರ ಹಾಲು ಕುಡಿಯುವ ಇಚ್ಛೆ ಪೂರ್ಣವಾಗಬಹುದು ಮತ್ತು ಇದರಿಂದ ಸ್ತನದಲ್ಲಿನ ಹಾಲು ಮುಗಿದರೆ ಮುಗಿಯಲಿ ಎಂಬುದೇ ಮಾತೆಯ ಇಚ್ಛೆಯಾಗಿರುವುದು ।೩೮॥

ಮುಡಾಹೂನಿ ಬೀಜ ಕಾಢಿಲೇ । ಮಗ ನಿರ್ವಾಳಲಿಯೇ ಭೂಮೀ ಪೇರಿಲೇ । ತರಿ ತೇ ಸಾಂಡಿವಿಖುರೀ ಗೇಲೇ । ಮ್ಹಣೋ ಯೇ ಕಾಯೀ? ।೩೯॥ ಯಾಲಾಗೀ ಸುಮನು ಆಣಿ ಶುದ್ಧಮತೀ । ಜೋ ಅನಿಂದಕು ಅನನ್ಯಗತೀ । ಪೈ ಗಾ ಗೌಪ್ಯಹೀ ಪರಿ ತಯಾಪ್ರತೀ । ಚಾವಳಿಜೇ ಸುಖೇ ।೪೦॥ ತರಿ ಪ್ರಸ್ತುತ ಆತಾ ಗುಣೇ ಇಹೀ । ತೂವಾಂಚೂನ ಆಣಿಕ ನಾಹೀ । ಮ್ಹಣೌನಿ ಗುಜ ತರೀ ತುಝ್ಯಾ ಠಾಯೀ । ಲಪಲೂ ನಯೇ ।೪೧॥ ಆತಾ ಕಿತೀ ನಾವಾನಾವಾ ಗುಜ । ಮ್ಹಣತಾ ಕಾನಡೇ ವಾಟೇಲ ತುಜ । ತರಿ ಜ್ಞಾನ ಸಾಂಗೇನ ಸಹಜ । ವಿಜ್ಞಾನೇಸೀ ।೪೨॥ ಪರಿ ತೇಚಿ ಐಸೇನಿ ನಿವಾಡೇ । ಜೈಸೇ ಭೇಸಳಲೇ ಖರೇ ಕುಡೇ । ಮಗ ಕಾಢಿಜೇ ಫಾಡೋವಾಡೇ । ಪಾರಖೂನಿಯಾ ।೪೩॥ ಕಾ ಚಾಂಚೂಚೇನಿ ಸಾಂಡಸೇ । ಖಾಂಡಿಜೇ ಪಯ ಪಾಣೀ ರಾಜಹಂಸೇ । ತುಜ ಜ್ಞಾನ ವಿಜ್ಞಾನ ತೈಸೇ । ವಾಂಟೂನಿ ದೇಊ ।೪೪॥ ಮಗ ವಾರಯಾಚಿಯಾ ಧಾರಸಾ । ಪಡಿನ್ನಲಾ ಕೋಂಡಾ ಕಾ ನುರೇಚಿ ಜೈಸಾ । ಆಣಿ ಕಣಾಂಚಾ ಆಪೈಸಾ । ರಾಶಿವಾ ಜೋಡೇ ।೪೫॥ ತೈಸೇ ಜೇ ಜಾಣೆತಲೇಯಾಸಾಠೀ । ಸಂಸಾರ ಸಂಸಾರಾಚಿಯೇ ಗಾಂಠೀ । ಲಾಊನೀ ಬೈಸವೀ ಪಾಟೀ । ಮೋಕ್ಷಶ್ರೀಯೇಚ್ಯಾ ।೪೬॥

ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ ।
ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ।೨॥

ಜೇ ಜಾಣಣೇಯಾ ಆಘವೇಯಾಂಚ್ಯಾ ಗಾಂವೀ । ಗುರುತ್ವಾಚೀ ಆಚಾರ್ಯ ಪದವೀ । ಜೇ ಸಕಳ ಗುಹ್ಯಾಂಚಾ ಗೋಸಾವೀ । ಪವಿತ್ರಾ ರಾವೋ ।೪೭॥ ಆಣಿ ಧರ್ಮಾಚೇ ನಿಜಧಾಮ। ತೇವೀಂಚೀ ಉತ್ತಮಾಚೇ ಉತ್ತಮ । ಪೈ ಜಯಾ ಯೇತಾ ನಾಹೀ ಕಾಮ । ಜನ್ಮಾಂತರಾಚೇ ।೪೮॥ ಮೋಟಕೇ ಗುರುಮುಖೇ ಉದ್ಧೈಜತ ದಿಸೇ । ಆಣಿ ಹೃದಯೀ ಸ್ವಯಂಭಚಿ ಅಸೇ । ಪ್ರತ್ಯಕ್ಷ ಫಾವೋ ಲಾಗೇ । ತೈಸೇ ಆಪೈಸಯಾಚಿ ।೪೯॥ ತೇವೀಂಚಿ ಗಾ ಸುಖಾಚ್ಯಾ ಪಾಉಟೀ । ಚಢತಾ ಯೇ ಇಜೇ ಜಯಾಚ್ಯಾ ಭೇಟೀ । ಮಗ ಭೇಟಲ್ಯಾ ಕೀರ ಮಿಠೀ । ಭೋಗಣೇಯಾಹೀ ಪಡೇ ।೫೦॥ ಪರಿ ಭೋಗಾಚಿಯೇ ಐಲಿಕಡಿಲಿಯೇ ಮೇರೇ । ಚಿತ್ತ ಉಭೇ ಠೇಲೇ ಸುಖಾ ಭರೇ । ಐಸೇ ಸುಲಭ ಆಣಿ ಸೋಪಾರೇ । ವರಿ ಪರಬ್ರಹ್ಮ ।೫೧॥ ಪೈ ಗಾ ಆಣಿಕಹೀ ಏಕ ಯಾಚೇ । ಜೇ ಹಾತಾ ಆಲಿಯಾ ತರೀ ನ ವಚೇ । ಆಣಿ ಅನುಭವಿತಾ ಕಾಹೀ ನ ವೇಚೇ । ವರಿ ವಿಟೇಹಿ ನಾ ।೫೨॥

ಸಂಗ್ರಹದಿಂದ ಬೀಜವನ್ನು ತೆಗೆದು ಅದನ್ನು ಹದ ಮಾಡಿದ ಭೂಮಿಯಲ್ಲಿ ಬಿತ್ತಿದಾಗ ಅದನ್ನು ವ್ಯರ್ಥವಾಗಿ ಹರವಿ ಚೆಲ್ಲಲಾಯಿತು ಎಂದು ಹೇಳಬಹುದೇ? ।೩೯॥

ಆದ್ದರಿಂದ ಉತ್ತಮ ಮನಸ್ಸಿನ, ಶುದ್ಧಮತಿಯ, ನಿಂದೆಯನ್ನು ಮಾಡದ, ಏಕನಿಷ್ಠನಾದ ಭಕ್ತನಿದ್ದರೆ ಆತನಿಗೆ ತನ್ನ ಮನಸ್ಸಿನ ಗುಪ್ತ ಮಾತುಗಳನ್ನು ಸುಖವಾಗಿ ಹೇಳಬೇಕು ।೪೦॥

ಇನ್ನು, ಸಧ್ಯದಲ್ಲಿ ನಿನ್ನ ಹೊರತಾಗಿ ಈ ಎಲ್ಲ ಗುಣಗಳಿಂದ ಇರುವವರು ಯಾರೂ ಇರುವುದಿಲ್ಲ. ಆದ್ದರಿಂದ ಗುಪ್ತ ಮಾತುಗಳನ್ನು ನಿನ್ನಿಂದ ಕದ್ದು ಇಡಲಾಗುವುದಿಲ್ಲ ।೪೧॥

ಈಗ ಮೇಲಿಂದ ಮೇಲೆ ಗುಪ್ತಗುಪ್ತ ಎಂದು ಹೇಳುತ್ತ ಕುಳಿತರೆ ನಿನಗೆ ಬೇಸರ ಬರಬಹುದು. ಆದ್ದರಿಂದ ಆ ಗುಪ್ತವನ್ನು ಪ್ರಾಪಂಚಿಕ ಜ್ಞಾನದೊಂದಿಗೆ ಬ್ರಹ್ಮಜ್ಞಾನವನ್ನು ಹೇಳುವೆನು ।೪೨॥

ಇನ್ನು ಖರೇ, ಖೊಟ್ಟಿ ನಾಣ್ಯಗಳು ಒಂದೆಡೆಸೇರಿಕೊಂಡಾಗ ಯಾವ ಪ್ರಕಾರವಾಗಿ ಪರೀಕ್ಷೆ ಮಾಡಿ ಬೇರ್ಪಡಿಸುವರೋ, ಅದೇ ಪ್ರಕಾರವಾಗಿ ಜ್ಞಾನವಿಜ್ಞಾನವನ್ನು ಬೇರ್ಪಡಿಸಿ ತೋರಿಸುವೆನು ।೪೩॥

ಅಥವಾ ರಾಜಹಂಸ ಪಕ್ಷಿಯು ತನ್ನ ಚುಂಚನ್ನು ಇಕ್ಕಳವನ್ನಾಗಿ ಮಾಡಿ ಹಾಲು ಮತ್ತು ನೀರನ್ನು ಬೇರ್ಪಡಿಸುವುದು. ಅದರಂತೆ ಈ ಜ್ಞಾನ ಮತ್ತು ವಿಜ್ಞಾನವನ್ನು ಸ್ಪಷ್ಟವಾಗಿ ವಿಭಾಗ ಮಾಡಿ ಹೇಳುವೆನು ।೪೪॥

ಅಥವಾ ತೌಡಿನಿಂದ ಕೂಡಿದ ಧಾನ್ಯವನ್ನು ತೂರಲು ಗಾಳಿಯ ರಭಸದಿಂದ ತೌಡು ದೂರ ಹೋಗಿ ಕೆಳಗೆ ಉಳಿಯುವುದೇ ಇಲ್ಲ. ಅಲ್ಲಿ ತೌಡು ಬೇರ್ಪಟ್ಟು ಧಾನ್ಯದ ರಾಶಿ ಮಾತ್ರ ಸಹಜವಾಗಿ ಉಳಿಯುವುದು ।೪೫॥

ಅದರಂತೆ ಯಾವ ಜ್ಞಾನವನ್ನು ತಿಳಿದಾಗ ದೇಹಾದಿ ಪ್ರಪಂಚವು ಪಂಚಭೂತಾತ್ಮಕ ಪ್ರಪಂಚದ ಪದರಿಗೆ ಗಂಟುಹಾಕಿ ಜೀವಕ್ಕೆ ಮೋಕ್ಷ ಸಂಪತ್ತಿನ ಆಸನದ ಮೇಲೆ ಕೂಡ್ರಿಸುವುದು ।೪೬॥

**ಶ್ಲೋಕಾರ್ಥ** :- ಇದು ಎಲ್ಲದಕ್ಕಿಂತ ಶ್ರೇಷ್ಠವಾದ ವಿದ್ಯೆ, ಎಲ್ಲದಕ್ಕಿಂತ ಹೆಚ್ಚು ಗುಟ್ಟು, ಪವಿತ್ರವಾದದ್ದು, ಉತ್ತಮವಾದದ್ದು, ಸಾಕ್ಷತ್ ಫಲದಾಯಕವು, ಧರ್ಮಕ್ಕೆ ಅನುಕೂಲವಾದುದು, ಸುಲಭ ಸಾಧ್ಯವಾದುದು, ನಾಶವಿಲ್ಲದ್ದು ।೨॥

ಈ ಜ್ಞಾನಕ್ಕೆ ಎಲ್ಲ ಜ್ಞಾನದ ಗ್ರಾಮದಲ್ಲಿ ಹಿರಿತನದ ಆಚಾರ್ಯಪದವಿ ದೊರಕುವುದು. ಈ ಜ್ಞಾನವು ಎಲ್ಲ ಗುಹ್ಯಗಳ ಒಡೆಯನಾಗಿರುವುದು ಮತ್ತು ಪವಿತ್ರ ವಸ್ತುಗಳ ರಾಜನಾಗಿರುವುದು ।೪೭॥

ಮತ್ತು ಧರ್ಮದ ಅಧಿಷ್ಠಾನವಾಗಿರುವುದು. ಹಾಗೆಯೇ ಉತ್ತಮದಲ್ಲಿ ಉತ್ತಮವಾಗಿರುವುದು ಮತ್ತು ಈ ಜ್ಞಾನದ ಪ್ರಾಪ್ತಿಯಾಯಿತೆಂದರೆ, ಪುನಃ ಬೇರೆ ಜನ್ಮಕ್ಕೆ ಬರುವ ಕಾರಣವೇ ಇರುವುದಿಲ್ಲ ।೪೮॥

ಯಾವ ಈ ಬ್ರಹ್ಮಜ್ಞಾನವು ಗುರುಮುಖದಿಂದ ವಾಕ್ಯದ್ವಾರಾ ಹೊರಬೀಳುವುದೊಂದೇ ತಡ, ಅದು ಶಿಷ್ಯನ ಹೃದಯದಲ್ಲಿರುವ ಸ್ವಯಮೇವ ಬ್ರಹ್ಮವು ಆತನಿಗೆ ಸಹಜವಾಗಿ ಪ್ರತ್ಯಕ್ಷವಾಗುವುದು ।೪೯॥

ಹಾಗೆಯೇ, ಇದರ ಭೇಟಿಗೆ ಸುಖದ ಮೆಟ್ಟಲಿನಿಂದ (ಭಕ್ತಿ, ಸತ್ಸಂಗತಿ, ಶ್ರವಣ ಇತ್ಯಾದಿ) ಸಾಧನ ಮಾಡುತ್ತ, ಏರುತ್ತ ಬರಬೇಕು. ಆಗ ಬ್ರಹ್ಮಾಕಾರ ಜ್ಞಾನವು ಸಿಕ್ಕಾಗ ಸುಖದ ಭೋಗಕ್ಕೂ ಅನುಭವಕ್ಕೂ ಗಂಟುಬಿದ್ದು ಐಕ್ಯವಾಗುವುದು ।೫೦॥

ಆದರೆ, ಸುಖಾನುಭವದ ಈಕಡೆಯ ದಂಡೆಯ ಮೇಲೆ ಇರುವಾಗಲೇ ಚಿತ್ತವು ಆನಂದಮಯವಾಗುವುದು. ಹೀಗೆ ಸುಲಭವು ಮತ್ತು ಸರಳವಾಗಿದ್ದು ಅದು ಪರಬ್ರಹ್ಮ ವಾಗಿರುವುದು ।೫೧॥

ಮತ್ತೊಂದು ಈ ಜ್ಞಾನದ ವೈಶಿಷ್ಟವೇನೆಂದರೆ, ಇದು ಕೈಗೆ ಸಿಕ್ಕ ಮೇಲೆ ಎಲ್ಲೂ ಹೋಗುವುದಿಲ್ಲ. ಇದರ ಅನುಭವ ಪಡೆದಂತೆ ಕ್ಷೀಣಿಸುವುದಿಲ್ಲ ಮತ್ತು ಹಳಸುವುದಿಲ್ಲ ।೫೨॥

ಯೇಥ ಜರೀ ತೂ ತಾರ್ಕಿಕಾ । ಐಸೀ ಹನ ಘೇಸೀ ಶಂಕಾ । ನಾ ಯೆವಢೀ ವಸ್ತು ಹೇ ಲೋಕಾ । ಉರಲೀ ಕೇವಿ ಪಾ ? ।೫೩॥ ಜೇ ಏಕೋತ್ತರೇಯಾಚಿಯಾ ವಾಢೀ । ಜಳತಿಯೇ ಆಗೀ ಘಾಲಿತೀ ಉಡೀ ।ತೇ ಅನಾಯಾಸೇ ಸ್ವಗೋಡೀ । ಸಾಂಡಿತೀ ಕೇವೀ ? ।೫೪॥ ತರೀ ಪವಿತ್ರ ಆಣಿ ರಮ್ಯ । ತೇವೀಂಚಿ ಸುಖೋಪಾಯ ಗಮ್ಯ । ಆಣಿ ಸ್ವಸುಖ ಪರಮ ಧರ್ಮ್ಯ । ವರಿ ಆಪಣಪಾ ಜೋಡೇ ।೫೫॥ ಐಸಾ ಅವಘಾಚಿ ಹಾ ಸುರವಾಡು ಆಹೇ । ತರೀ ಜನಾ ಹಾತೀ ಕೇವೀ ಉರೋ ಲಾಹೇ। ಹಾ ಶಂಕೇಚಾ ಠಾವೋ ಕೀರ ಹೋಯೇ । ಪರಿ ನ ಧರಾವೀ ತುವಾ ।೫೬॥

ಅಶ್ರದ್ದಧಾನಾಃ ಪುರುಷಾಃ ಧರ್ಮಸ್ಯಾಸ್ಯ ಪರಂತಪ ।
ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ ।೩॥

ಪಾಹೇ ಪಾ ದೂಧ ಪವಿತ್ರ ಆಣಿ ಗೋಡ । ಪಾಸೀ ತ್ವಚೇಚಿಯಾ ಪದರಾ ಆಡ । ಪರಿ ತೇ ಅವ್ಹೇರೂನಿ ಗೋಚಿಡ । ಅಶುದ್ಧ ಕಾಯ ನ ಸೇವಿತೀ? ।೫೭॥ ಕಾ ಕಮಲಕಂದಾ ಆಣಿ ದರ್ದುರಿ । ನಾಂದಣೂಕ ಏಕೇಚಿ ಘರೀ । ಪರಿ ಪರಾಗು ಸೇವಿಜೇ ಭ್ರಮರೀ । ಯೇರಾ ಚಿಖಲುಚಿ ಉರೇ ।೫೮॥ ನಾತರೀ ನಿದ್ಯೆವಾಚ್ಯಾ ಪರಿವರೀ । ಲೋಹ್ಯಾ ರುತಲಿಯಾ ಆಹತಿ ಸಹಸ್ರವರೀ । ಪರಿ ತೇಥ ಬೈಸೋನಿ ಉಪವಾಸು ಕರೀ । ಕಾ ದರಿದ್ರೇ ಜಿಯೇ ।೫೯॥ ತೈಸಾ ಹೃದಯಾಮಧ್ಯೇ ಮೀ ರಾಮು । ಅಸತಾ ಸರ್ವಸುಖಾಚಾ ಆರಾಮು । ಕೀ ಭ್ರಾಂತಾಸೀ ಕಾಮು । ವಿಷಯಾವರೀ ।೬೦॥ ಬಹು ಮೃಗಜಳ ದೇಖೋನಿ ಡೋಳಾ । ಥುಂಕಿಜೇ ಅಮೃತಾಚಾ ಗಿಳಿತಾ ಗಳಾಳಾ । ತೋಡಿಲಾ ಪರಿಸು ಬಾಂಧಿಲಾ ಗಳಾ । ಶುಕ್ತಿಕಾ ಲಾಭೇ ।೬೧॥ ತೈಸೀ ಅಹಂಮಮತೇಚಿಯೇ ಲವಡಸವಡೀ । ಮಾತೇ ನ ಪವತೀಚೆ ಬಾಪುಡೀ । ಮ್ಹಣೌನಿ ಜನ್ಮಮರಣಾಚೀ ದುಥಡೀ । ಡಹುಳಿತೇ ಠೇಲೀ ।೬೨॥ ಏರ್ಹ್ವೀ ಮೀ ತರೀ ಕೈಸಾ । ಮುಖಾಪ್ರತಿ ಭಾನು ಕಾ ಜೈಸಾ । ಕಹೀ ದಿಸೇ ನ ದಿಸೇ ಐಸಾ । ವಾಣೇಚಾ ನೋಹೇ ।೬೩॥

ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।
ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ।೪॥

ಮಾಝೇಯಾ ವಿಸ್ತಾರಲೇಪಣಾ ನಾಂವೇ । ಹೇ ಜಗಚಿ ನೋಹೇ ಆಘವೇ? । ಜೈಸೇ ದೂಧ ಮುರಾಲೇ ಸ್ವಭಾವೇ । ತರಿ ತೇಂಚಿ ದಹೀ ।೬೪॥

ಹೇ ಚತುರನಾದ ಅರ್ಜುನನೇ, ಈ ವಿಪಯಕ್ಕೆ ಕದಾಚಿತ್ ನೀನು ಅನುಮಾನಪಡಬಹುದು. ಏನೆಂದರೆ ಇಷ್ಟೊಂದು ಮಹತ್ವದ ವಸ್ತುವಾದ ಜ್ಞಾನವು ಈ ಲೋಕದ ಜನರಿಗೆ ಅದೇಕೆ ಉಳಿಯಿತು ? (ಪ್ರಾಪ್ತವಾಗಿಲ್ಲ?) ।೫೩॥

ಯಾವ ಲೋಕದ ಜನರು ಶೇಕಡಾ ಒಂದು ರೂಪಾಯಿಯ ಬಡ್ಡಿ ತಿನ್ನುತ್ತಾ ''ಭಾಂಡವಲ'' ಬೆಳೆಸುವ ಲೋಭಕ್ಕೆ ಉರಿಯುವ ಅಗ್ನಿಯಲ್ಲಿಯೂ ಜಿಗಿಯಲು ಸಿದ್ಧರಿರುವಾಗ ಅವರು ತಮ್ಮಲ್ಲಿರುವ ಆನಂದವನ್ನು ಹೇಗೆ ಬಿಟ್ಟುಕೊಡುವರು? ।೫೪॥

ಹಾಗೆಯೇ ಪವಿತ್ರವಾದದ್ದು, ರಮಣೀಯವಾದದ್ದು, ಮತ್ತು ಸುಖವನ್ನು ಕೊಡುವಂತಹದ್ದು, ತಿಳಿಯಲು ಸುಲಭವಾದದ್ದು, ತನ್ನಲ್ಲಿಯೇ ಸುಖವಾದದ್ದು, ಧರ್ಮಕ್ಕೆ ಅನುಕೂಲವಾದದ್ದು ಮತ್ತು ತನ್ನಲ್ಲಿಯೇ ಪ್ರಾಪ್ತವಾಗುವಂತಹದ್ದು ।೫೫॥

ಹೀಗೆ ಈ ಜ್ಞಾನ ವಸ್ತುವಿನ ಎಲ್ಲ ಭಾಗವು ಎಲ್ಲ ಪ್ರಕಾರದಿಂದ ಅತ್ಯಂತ ಶ್ರೇಷ್ಠವಾಗಿರುವುದು. ಆದರೆ ಇದು ಅಸಂಖ್ಯ ಜನರ ಕೈಯಿಂದ ಇದು ಹೇಗೆ ಉಳಿಯಿತು ? ಹೀಗೆ ನಿಜವಾಗಿಯೂ ಅನುಮಾನ ಪಡೆಯಲು ಮಾರ್ಗವಿದೆ. ಆದರೆ ನೀನು ಮಾತ್ರ ಹೀಗೆ ಅನುಮಾನಿಸಬೇಡ ।೫೬॥

ಶ್ಲೋಕಾರ್ಥ :- ಶತ್ರುಭಯಂಕರಾ! ಈ ಧರ್ಮದಲ್ಲಿ ಶ್ರದ್ಧೆಯಿಲ್ಲದ ಮಾನವರು ನನಗೆ ದೂರವಾಗಿ ಜನನ ಮರಣ ರೂಪ ಸಂಸಾರದಲ್ಲಿ ಕಷ್ಟಪಡುತ್ತಾರೆ ।೩॥

ಇಲ್ಲಿ ನೋಡು, ಆಕಳ ಹಾಲು ಪವಿತ್ರವಾಗಿದ್ದು ರುಚಿಕರವಾಗಿದೆ. ಹಾಗೆಯೇ ಅತೀ ಸಮೀಪವಾಗಿ ಚರ್ಮದ ಪರದೆಯ ಒಳಗೆ ಇದೆ. ಆದರೆ ಅದನ್ನು ಬಿಟ್ಟು ಉಣ್ಣೆಯು ಕೇವಲ ರಕ್ತವನ್ನೇ ಕುಡಿಯುವುದಿಲ್ಲವೇ? ।೫೭॥

ಅಥವಾ ಕಮಲದ ಗಿಡ ಮತ್ತು ಕಪ್ಪೆಯು ಒಂದೇ ಸ್ಥಳದಲ್ಲಿ ವಸತಿ ಮಾಡಿರುವುವು. ಆದರೆ ಕಮಲದಲ್ಲಿನ ಮಕರಂದವನ್ನು ಭ್ರಮರವು ಸೇವಿಸುವುದು. ಕಪ್ಪೆಯ ಭಾಗಕ್ಕೆ ಕೆಸರೇ ಉಳಿಯುವುದು ।೫೮॥

ಅಥವಾ ದುರ್ದೈವಿಯ ಮನೆಯಲ್ಲಿ ಬಂಗಾರ, ದ್ರವ್ಯಗಳಿಂದ ತುಂಬಿದ ಸಾವಿರಾರು ಕೊಡಗಳು ಹುಗಿದಿರುವುವು. ಆದರೆ ಅಲ್ಲಿ ಆತನು ದಾರಿದ್ರ್ಯಾವಸ್ಥೆಯನ್ನು ಭೋಗಿಸುತ್ತ ಉಪವಾಸ ಇರುವನು ।೫೯॥

ಅದರಂತೆ ಪ್ರಾಣಿಮಾತ್ರರ ಸರ್ವಸುಖದ ವಿಶ್ರಾಂತಿ ಸ್ಥಾನವಾದ ನಾನು ''ರಾಮ''ನು, ಪ್ರಾಣಿಗಳ ಹೃದಯದಲ್ಲಿ ಇದ್ದರೂ ಆ ಅಜ್ಞಾನಿ ಜೀವಿಗಳಲ್ಲಿ ವಿಷಯಾದಿಗಳಲ್ಲಿಯೇ ಇಚ್ಛೆ ಇರುವುದು ।೬೦॥

ಹೆಚ್ಚಾದ ಮೃಗಜಲವನ್ನು ಕಣ್ಣಿನಿಂದ ಕಂಡು ಬಾಯಿಯಲ್ಲಿರುವ ಅಮೃತದ ಗುಟುಕನ್ನು ಉಗುಳಿದಂತೆ ಅಥವಾ (ಶಿಂಪಿ) ಕಪ್ಪೆಚಿಪ್ಪು ಸಿಕ್ಕಾಗ ಕೊರಳಲ್ಲಿರುವ ಪರೀಸಮಣಿಯನ್ನು ಹರಿದೊಗೆದಂತೆ ।೬೧॥

ಅದರಂತೆ ನಾನು, ನನ್ನದು ಎಂಬ ಗಡಿಬಿಡಿಯಲ್ಲಿ ಭ್ರಾಂತ ಹಾಗೂ ದೀನರಾದ ಜನರು ನನ್ನನ್ನು ಪ್ರಾಪ್ತಿ ಮಾಡಿಕೊಳ್ಳುವುದೇ ಇಲ್ಲ. ಆದ್ದರಿಂದ ಜನ್ಮ ಮರಣದ ಎರಡೂ ದಂಡೆಯ ನಡುವೆ ತೇಲುತ್ತ ಮುಳುಗುತ್ತಿರುವರು ।೬೨॥

ಸರ್ವಸಾಮಾನ್ಯವಾಗಿ ನಾನು ಎಲ್ಲಿಂದ ನೋಡಿದರೂ ಕಾಣುವ ಎದುರಿಗಿರುವ ಸೂರ್ಯನಂತಿರುವೆನು. ಸೂರ್ಯನು ಒಮ್ಮೆ ಕಂಡರೆ ಇನ್ನೊಮ್ಮೆ ಕಾಣಲಿಕ್ಕಿಲ್ಲ, ಆದರೆ ನಾನು ಹಾಗೆಂಬ ಮಾತೇ ಇಲ್ಲ (ಸದಾ ಕಾಣುವವನು) ।೬೩॥

ಶ್ಲೋಕಾರ್ಥ :- ಅತೀಂದ್ರಿಯ ಸ್ವರೂಪನಾದ ನಾನು ಈ ಜಗತ್ತೆಲ್ಲವನ್ನೂ ವ್ಯಾಪಿಸಿದ್ದೇನೆ, ಈ ಸಮಸ್ತ ಭೂತಗಳು ನನ್ನಲ್ಲಿ ಇರುತ್ತವೆ, ನಾನು ಅವುಗಳಲ್ಲಿಲ್ಲ ।೪॥

ನನ್ನ ನಿರ್ಗುಣ ಸ್ವರೂಪದ ವಿಸ್ತಾರವು ಈ ಜಗತ್ತು ಅಲ್ಲವೇ? ಯಾವ ಪ್ರಕಾರವಾಗಿ ಹಾಲು ಸಹಜವಾಗಿ ಹೆಪ್ಪಾಯಿತೆಂದರೆ ಅದುವೇ ಮೊಸರು ।೬೪॥

ಕಾ ಬೀಜಚಿ ಜಾಹಲೇ ತರು । ಅಥವಾ ಭಾಂಗಾರಚಿ ಅಳಂಕಾರು । ತೈಸಾ ಮಜ ಏಕಾಚಾ ವಿಸ್ತಾರು । ತೇ ಹೇ ಜಗ ॥೬೫॥ ಹೇ ಅವ್ಯಕ್ತಪಣೇ ಥಿಜಲೇ । ತೇಂಚಿ ಮಗ ವಿಶ್ವಾಕಾರೇ ವೋಥಿಜಲೇ । ತೈಸೇ ಅಮೂರ್ತಮೂರ್ತಿ ಮಿಯಾ ವಿಸ್ತಾರಲೇ । ತ್ರೈಲೋಕ್ಯ ಜಾಣೇ ॥೬೬॥ ಮಹದಾದಿ ದೇಹಾಂತೇ । ಇಯೇ ಅಶೇಷೇಹೀ ಭೂತೇ । ಪರೀ ಮಾಝ್ಯಾ ಠಾಯೀ ಬಿಂಬತೇ । ಜೈಸೇ ಜಳೀ ಫೇಣ ॥೬೭॥ ಪರಿ ತಯಾ ಫೇಣಾಆಂತು ಪಾಹಾತಾ। ಜೇವೀ ಜಳ ನ ದಿಸೇ ಪಂಡುಸುತಾ । ನಾತರೀ ಸ್ವಪ್ನೀಚೇ ಅನೇಕತಾ । ಚೇಇಲಿಯಾ ನೋಹಿಜೇ ॥೬೮॥ ತೈಸೀ ಭೂತೇ ಇಯೇಮಾಝ್ಯಾ ಠಾಯೀ । ಬಿಂಬತೀ ತಯಾ ಮಾಜೀ ಮೀ ನಾಹೀ । ಇಯಾ ಉಪಪತ್ತೀ ತುಜ ಪಾಹೀ । ಸಾಂಗಿತಲಿಯಾ ವಾಗಾ ॥೬೯॥ ಮ್ಹಣೌನಿ ಬೋಲಿಲಿಯಾ ಬೋಲಾಚಾ ಅತಿಸೋ । ನ ಕೀಜೇ ಯಾಲಾಗೀ ಹೇ ಅಸೋ । ಪರೀ ಮಜಆಂತ ಪೈಸೋ । ದಿಠೀ ತುಝೀ ॥೭೦॥

ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್ ।
ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥೫॥

ಆಮುಚಾ ಪ್ರಕೃತೀಪೈಲೀಕಡೀಲ ಭಾವೋ । ಜರೀ ಕಲ್ಪನೇವೀಣ ಲಾಗಸೀ ಪಾಹೋ । ತರೀ ಮಜಮಾಜೀ ಭೂತೇ ಹೇಹೀ ವಾವೋ । ಜೇ ಮೀ ಸರ್ವ ಮ್ಹಣೌನೀ ॥೭೧॥ ಏರ್ಹವೀ ಸಂಕಲ್ಪಾಚಿಯೇ ಸಾಂಜವೇಳೇ । ನಾವೇಕ ತಿಮಿರೇ ಜತೀ ಬುದ್ಧೀಚೇ ಡೋಳೇ । ಮ್ಹಣೌನಿ ಅಖಂಡಿತಚಿ ಪರಿ ಝಾಂವಳೇ । ಭೂತ ಭಿನ್ನ ಐಸೇ ದೇಖೇ ॥೭೨॥ ತೇಚಿ ಸಂಕಲ್ಪಾಚೀ ಸಾಂಜ ಜೈ ಲೋಪೇ । ತೈ ಅಖಂಡಿತಚಿ ಆಹೇ ಸ್ವರೂಪೇ । ಜೈಸೇ ಶಂಕಾ ಜಾತಖೇಂವೊ ಲೋಪೇ । ಸಾಪಪಣ ಮಾಳೇಚೇ ॥೭೩॥ ಏರ್ಹವೀ ತರೀ ಭೂಮೀ ಆಂತೂನಿ ಸ್ವಯಂಭ । ಕಾಯ ಘುಡೇಯಾಗಾಡಗೇಯಾಚೇ ನಿಘತೀ ಕೊಂಭ ಪರಿ ತೇ ಕುಲಾಲಮತೀಚೇ ಗರ್ಭ । ಉಮಟಲೇ ಕೀ ॥೭೪॥ ನಾತರಿ ಸಾಗರಿಂಚ್ಯಾ ಪಾಣೀ । ಕಾಯ ತರಂಗಾಚಿಯಾ ಆಹಾತೀ ಖಾಣೀ? । ತೇ ಆವಾಂತರ ಕರಣೀ । ವಾರಯಾಚೀ ನವ್ಹೇ? ॥೭೫॥ ಪಾಹೇ ಪಾ ಕಾಪಸಾಚ್ಯಾ ಪೋಟೀ । ಕಾಯ ಕಾಪಡಾಚೀ ಹೋತೀ ಪೇಟೀ? । ತೋ ವೇಢಿತಯಾಚಿಯಾ ದಿಠೀ । ಕಾಪಡ ಜಾಹಲಾ ॥೭೬॥ ಜರೀ ಸೋನೇ ಲೇಣೇ ಹೋಊನೀ ಘುಡೇ । ತರೀ ತಯಾಚೇ ಸೋನೇಪಣ ನ ಮೋಡೇ । ಯೇರ ಅಳಂಕಾರ ಹೇ ವರಚಿಲೀಕಡೇ । ಲೇತಯಾಚೇನಿ ಭಾವೇ ॥೭೭॥

ಅಥವಾ ಬೀಜದಿಂದಲೇ ವೃಕ್ಷವಾಗುವುದು. ಇಲ್ಲವೇ ಬಂಗಾರದಿಂದಲೇ ಒಡವೆಗಳಾಗುವುವು. ಅದರಂತೆಯೇ ನಿರ್ಗುಣವಾದ ನನ್ನ ಒಬ್ಬನ ವಿಸ್ತಾರವೇ ಈ ಜಗವು ।೬೫॥

ಈ ಜಗವು ಅವ್ಯಕ್ತದಿಂದ ಹೆಪ್ಪುಗಟ್ಟಿತ್ತು. ಅದೇ ನಂತರ ವಿಶ್ವದ ಆಕಾರದಿಂದ ತೆಳ್ಳಗೆ ವಿಸ್ತಾರವಾಯಿತು. ಹಾಗೆಯೇ ಯಾವುದು ಅಮೂರ್ತಕಾರಣವಾಗಿತ್ತೋ ಅದೇ ಮೂರ್ತ ತ್ರೈಲೋಕ್ಯ ಕಾರ್ಯರೂಪದಿಂದ ವಿಸ್ತಾರಗೊಂಡಿದೆ ಎಂದು ತಿಳಿ ।೬೬॥

ಮಹತ್ತತ್ತ್ವದಿಂದ ದೇಹದವರೆಗೂ ಈ ಎಲ್ಲ ಭೂತಗಳು ನಿಜವಾಗಿಯೂ ನನ್ನ ಸತ್ತೆಯಿಂದಲೇ ಭಾಸವಾಗುವುವು. ಯಾವ ಪ್ರಕಾರವಾಗಿ ನೀರಿನಲ್ಲಿ ಬುರುಗು ಭಾಸವಾಗುವುದು ।೬೭॥

ಆದರೆ ಆ ಬುರುಗಿನಲ್ಲಿ ನೋಡಲು ಹೋದರೆ ನೀರೇ ಕಾಣಿಸುವುದಿಲ್ಲ, ಅಥವಾ ಅರ್ಜುನನೇ, ಸ್ವಪ್ನದಲ್ಲಿ ಜೀವದ ಅನೇಕ ರೂಪಗಳು ಎಚ್ಚರಾದಮೇಲೆ ಯಾವುವೂ ಇರುವುದಿಲ್ಲ ।೬೮॥

ಅದರಂತೆ ಈ ಎಲ್ಲ ಭೂತಗಳು ನನ್ನಲ್ಲಿ ಭಾಸವಾದರೂ ಅವುಗಳಲ್ಲಿ ನಾನು ಇರುವುದಿಲ್ಲ. ಈ ಸಿದ್ಧಾಂತವನ್ನು ಈ ಹಿಂದೆ (ಅ.೭ ಶ್ಲೋಕ೧೨) ರಲ್ಲಿ ಹೇಳಲಾಗಿರುವುದು ।೬೯॥

ಅದಕ್ಕಾಗಿ ಯಾವುದು ಈ ಹಿಂದೆಯೇ ಹೇಳಿರುವುದೋ ಅದನ್ನೇ ಹೇಳಿ ಅತೀ ವಿಸ್ತಾರಮಾಡಬಾರದು. ಅದಕ್ಕಾಗಿ ಇದು ಇರಲಿ, ಆದರೆ ನಿನ್ನ ದೃಷ್ಟಿಯ ಪ್ರವೇಶವು ನನ್ನ ಯಥಾರ್ಥ ರೂಪದಲ್ಲಿ ಸೇರಲಿ ।೭೦॥

ಶ್ಲೋಕಾರ್ಥ :- ಪುನಃ ಹೇಳಬೇಕೆಂದರೆ ಆ ಭೂತಗಳು ನನ್ನಲ್ಲಿ ಇಲ್ಲ. ನನ್ನ ಈಶ್ವರೀಯೋಗ ಘಟನೆಯನ್ನು ನೋಡು. ನನ್ನ ಸ್ವರೂಪವು ಈ ಭೂತ ಕೋಟಿಯನ್ನು ಹುಟ್ಟಿಸುವುದೂ, ಬೆಳೆಯಿಸುವುದೂ ಆಗಿದ್ದರೂ ಅವುಗಳ ಸಂಬಂಧವು ನನಗಿಲ್ಲ ।೫॥

ಮಾಯೆಯ ಆಚೆಗಿರುವ ನಮ್ಮ ಶುದ್ಧ ಸ್ವರೂಪ ಸ್ಥಿತಿಯನ್ನು ನೀನು ಕಲ್ಪನೆ ಬಿಟ್ಟು ನೋಡಿದರೆ ಎಲ್ಲ ಪ್ರಾಣಿಗಳು ನನ್ನಲ್ಲಿವೆ ಎಂದು ಹೇಳುವುದು ಸಹ ವ್ಯರ್ಥ ವಾಗುವುದು. ಏಕೆಂದರೆ ಎಲ್ಲವೂ ನಾನೇ ಆಗಿರುವೆನು ।೭೧॥

ಸಾಮಾನ್ಯವಾಗಿ ಸಂಕಲ್ಪರೂಪ ಸಾಯಂಕಾಲದಲ್ಲಿ ಜ್ಞಾನರೂಪ ಕಣ್ಣುಗಳು ಅಜ್ಞಾನರೂಪ ಕತ್ತಲಿನಿಂದ ಸ್ವಲ್ಪ ಹೊತ್ತು ಮುಚ್ಚಿಕೊಳ್ಳುವುವು. ಆದ್ದರಂದ ಆ ಮುಸುಕಿನ ಹೊತ್ತಿನಲ್ಲಿ ನಾನು ಅಖಂಡನಿದ್ದರೂ ಭೂತಗಳು ನನ್ನಿಂದ ಬೇರೆಯಾಗಿ ಕಾಣುವುವು ।೭೨॥

ಹಾರದ ಮೇಲಿನ ಹಾವಿನ ಭ್ರಾಂತಿಯು ನಷ್ಟವಾದ ಮೇಲೆ ಹಾರವು ಹಾಗೆಯೇ ಉಳಿಯುವುದು. ಅದರಂತೆ ಆತನ ಸಂಕಲ್ಪದ ಸಾಯಂಕಾಲದ ವೇಳೆಯು ಮುಗಿಯಿತೆಂದರೆ ನನ್ನ ಅಖಂಡ ಸ್ವರೂಪವೇ ಉಳಿಯುವುದು ।೭೩॥

ಸಾಮಾನ್ಯವಾಗಿ ಭೂಮಿಯಿಂದಾ ಗಡಿಗೆ, ಮಡಿಕೆಗಳು ಅಂಕುರವಾಗಿ ಹುಟ್ಟುವುವೇ? ( ಇಲ್ಲ). ಆದರೆ ಕುಂಬಾರನ ಕಲ್ಪನೆಯ ಹೊಟ್ಟೆಯಲ್ಲಿ ಯಾವ ಆಕಾರದ ಗರ್ಭವು ಇರುವುದೋ ಅದೇ ಗಡಿಗೆ, ಮಡಿಕೆಗಳ ಆಕಾರದಲ್ಲಿ ಪ್ರಕಟವಾಗುವುವು ।೭೪॥

ಅಥವಾ ಸಮುದ್ರದ ನೀರಿನಲ್ಲಿ ತೆರೆಗಳ ಭಾಂಡಾರವು ಇದೆಯೇ ? (ಇಲ್ಲ). ಆದರೆ ನೀರಿನಿಂದ ತೆರೆಯನ್ನು ಬೇರೆಯಾಗಿ ಭಾಸಮಾಡುವ ಈ ಸ್ವತಂತ್ರ ಕಾರ್ಯವು ಗಾಳಿಯದಲ್ಲವೇ ? ।೭೫॥

ಇಲ್ಲಿ ನೋಡು, ಅರಳಿಯ ಹೊಟ್ಟೆಯಲ್ಲಿ ಹುಟ್ಟುವಾಗಲೇ ಬಟ್ಟೆಯ ಪೆಟ್ಟಿಗೆ ಇರುವುದೇ? ( ಇಲ್ಲ). ಆದರೆ ಅದು ಬಟ್ಟೆತೊಡುವವನ ಕಲ್ಪನೆಯಿಂದ ಬಟ್ಟೆ ತಯಾರಿಸಲ್ಪಡುವುದು ।೭೬॥

ಒಂದು ವೇಳೆ ಬಂಗಾರದಿಂದ ಒಡವೆಗಳನ್ನು ಸಿದ್ಧಗೊಳಿಸಿದರೆ ಅದರಲ್ಲಿ ಬಂಗಾರತ್ವವು ಇಲ್ಲದಂತಾ ಗುವುದಿಲ್ಲ. ಇತರ ಸ್ಥೂಲದೃಷ್ಟಿಯಿಂದ ನೋಡುವವರಿಗೆ ಅವು ಒಡವೆಗಳಾಗಿ ತೋರುವುವು ।೭೭॥

ಸಾಂಗೇ ಪಡಿಸಾದಾಚೇ ಪ್ರತ್ಯುತ್ತರೇ । ಕಾ ಆರಿಸಾ ಜೇ ಆವಿಷ್ಕರೇ । ತೇ ಆಪಲೇ ಕೀ ಸಾಚೋಕಾರೇ । ತೇಥೇಚಿ ಹೋತೇ? ॥೮೮॥ ತೈಸೀ ಇಯೇ ನಿರ್ಮಳೇ ಮಾಝ್ಯಾ ಸ್ವರೂಪೀ । ಜೋ ಭೂತಭಾವನಾ ಆರೋಪೀ । ತಯಾಸೀ ತಯಾಚ್ಯಾ ಸಂಕಲ್ಪೀ । ಭೂತಾಭಾಸು ಅಸೇ ॥೮೯॥ ತೇಚೀ ಕಲ್ಪಿತೀ ಪ್ರಕೃತೀ ಪುರೇ । ತರಿ ಭೂತಾಭಾಸು ಆಧೀಚಿ ಸರೇ । ಮಗ ಸ್ವರೂಪ ಉರೇ ಏಕಸರೇ । ನಿಖಳ ಮಾಝೇ ॥೯೦॥ ಹೇ ಅಸೋ ಆಂಗೀ ಭರಲಿಯಾ ಭವಂಡೀ । ಜೈಸಾ ಭೋಂವತ ದಿಸತೀ ಅರಡೀದರಡೀ । ತೈಶೀ ಆಪುಲಿಯಾ ಕಲ್ಪನಾ ಅಖಂಡೀ । ಗಮತೀ ಭೂತೇ ॥೯೧॥ ತೇಚಿ ಕಲ್ಪನಾ ಸಾಂಡೂನಿ ಪಾಹೀ । ತರಿ ಮೀ ಭೂತೀ ಭೂತೇ ಮಾಝಿಯಾ ಠಾಯೀ । ಹೇ ಸ್ವಪ್ನೀಹೀ ಪರಿ ನಾಹೀ । ಕಲ್ಪಾವಯಾಜೋಗೇ ॥೯೨॥ ಆತಾ ಮೀಚ ಏಕ ಭೂತಾಂತೇ ಧರ್ತಾ । ಅಥವಾ ಭೂತಾಮಾಜೀ ಮೀ ಅಸತಾ । ಯಾ ಸಂಕಲ್ಪಸನ್ನಿಪಾತಾ । ಆಂತುಲಿಯಾ ಬೋಲಿಯಾ ॥೯೩॥ ಮ್ಹಣೌನಿ ಪರಿಯೇಸೀ ಗಾ ಪ್ರಿಯೋತ್ತಮಾ । ಯಾಪರೀ ಮೀ ವಿಶ್ವೇಸೀ ವಿಶ್ವಾತ್ಮಾ । ಜೋ ಇಯಾ ಲಟಕಿಯಾ ಭೂತಗ್ರಾಮಾ । ಭಾವ್ಯ ಸದಾ ॥೯೪॥ ರಶ್ಮೀಚೇನಿ ಆಧಾರೇ ಜೈಸೇ । ನವ್ಹೇ ತೇಚಿ ಮೃಗಜಳ ಆಭಾಸೇ । ಮಾಝ್ಯಾ ಠಾಯೀ ಭೂತಜಾತ ತೈಸೇ । ಆಣಿ ಮಾತೇಹೀ ಭಾವೀ ॥೯೫॥ ಮೀ ಯೇ ಪರೀಚಾ ಭೂತಭಾವನು । ಪರೀ ಸರ್ವ ಭೂತಾಂಸೀ ಅಭಿನ್ನು । ಜೈಸೀ ಪ್ರಭಾ ಆಣಿ ಭಾನು । ಏಕಚಿ ತೇ ॥೯೬॥ ಹಾ ಆಮುಚಾ ಐಶ್ವರ್ಯಯೋಗು । ತುವಾ ದೇಖಿಲಾ ಕೀ ಚಾಂಗು? । ಆತಾ ಸಾಂಗೇ ಕಾಂಹೀ ಏಥ ಲಾಗು । ಭೂತಭೇದಾಚಾ ಅಸೇ? ॥೯೭॥ ಯಾಲಾಗೀ ಮಜ ಪಾಸೂನಿ ಭೂತೇ । ಆನೇ ನವ್ಹತೀ ಹೇ ನಿರುತೇ । ಆಣಿ ಭೂತಾವೇಗಳಿಯಾ ಮಾತೇ । ಕಹೀಂಚ ನ ಮನೀ ಹೋ! ॥೯೮॥

ಯಥಾಽಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ ।
ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥೬॥

ಪೈ ಗಗನ ಜೇವಢೇ ಜೈಸೇ । ಪವನುಹಿ ಗಗನೀ ತೇವಢಾಚಿ ಅಸೇ । ಸಹಜೇ ಹಾಲವಿಲಿಯಾ ವೇಗಳಾ ದಿಸೇ । ಏರ್ಹವೀ ಗಗನ ತೇಚಿ ತೋ ॥೯೯॥ ತೈಸೇ ಭೂತ ಜಾತ ಮಾಝ್ಯಾ ಠಾಯೀ । ಕಲ್ಪಿಜೇ ತರೀ ಆಭಾಸೇ ಕಾಂಹೀ । ನಿರ್ವಿಕಲ್ಪೀ ತರೀ ನಾಹೀ । ತೇಥ ಮೀಚಿ ಮೀ ಆಘವೇ ॥೧೦೦॥

ನಮ್ಮ ಶಬ್ದಗಳು ಪ್ರತಿಧ್ವನಿಯಲ್ಲಿ ಕೇಳಿಬರುತ್ತವೆ. ಅಥವಾ ಕನ್ನಡಿಯಲ್ಲಿ ನಮ್ಮ ರೂಪವನ್ನು ನಾವೇ ನೋಡುತ್ತೇವೆ. ಆದರೆ ನಿಜವಾಗಿ ಕೇಳುವ ಪ್ರತಿಧ್ವನಿ ಕಾಣುವ ಪ್ರತಿಬಿಂಬ ಅಲ್ಲಿ ಮೊದಲೇ ಇರುವುವೇ? ನೀನೇ ಹೇಳು ॥೪೮॥

ಅದರಂತೆ ಆ ನನ್ನ ನಿರುಪಾಧಿಕ ಸ್ವರೂಪದಲ್ಲಿ ಯಾರು ಭೂತಗಳ ಕಲ್ಪನೆಯ ಆರೋಪ ಮಾಡುವರೋ, ಅವರಿಗೆ ಕಲ್ಪನೆಯಿಂದಲೇ ನನ್ನಲ್ಲಿ ಭೂತಗಳ ಭಾಸವಾಗುವುದು ॥೪೯॥

ಅದೇ ಕಲ್ಪನೆ ಮಾಡುವ ಮಾಯೆಯು ಇಲ್ಲದಾಗಲು ನನ್ನಲ್ಲಿ ಭೂತಗಳ ಭಾಸವು ಮೊದಲೇ ಇಲ್ಲದಾಗುವುದು. ಆಗ ನನ್ನ ನಿರುಪಾಧಿಕವಾಗಿರುವ ಶುದ್ಧ ಸ್ವರೂಪವು ಒಂದೇ ಉಳಿಯುವುದು ॥೫೦॥

ಅದು ಇರಲಿ, ನಾವು ನಮ್ಮ ಸುತ್ತ ಭರದಿಂದ ಗರಗರ ತಿರುಗಿದಾಗ, ಕಣ್ಣಿಗೆ ಚಕ್ರ (ಬವಳಿ) ಬಂದು ಆಗ ಮುಂದಿನ (ಗೋಡೆ, ನದಿ, ಗಿರಿ, ಕಂದರಗಳು) ಎಲ್ಲವೂ ತಿರುಗುವಂತೆ ಕಾಣಿಸುವುವು. ಅದರಂತೆ ನಮ್ಮ ಕಲ್ಪನೆಯಿಂದ ನನ್ನ ಅಖಂಡ ಸ್ವರೂಪದಲ್ಲಿ ಭೂತಗಳ ಭಾಸವಾಗುವುದು ॥೫೧॥

ಇದೇ ಕಲ್ಪನೆಯನ್ನು ಬಿಟ್ಟು ನೋಡಿರೆ, ನಾನು ಭೂತದಲ್ಲಿ ಮತ್ತು ಭೂತಗಳು ನನ್ನಲ್ಲಿ ಎಂಬುವುದು ಸ್ವಪ್ನದಲ್ಲಿಯೂ ಕೂಡ ಕಲ್ಪನೆ ಮಾಡುವಂತಹದಲ್ಲ ॥೫೨॥

ಈಗ ನಾನೊಬ್ಬ ಭೂತಗಳನ್ನು ಧಾರಣೆ ಮಾಡುವವನು ಅಥವಾ ಭೂತಗಳಲ್ಲಿ ನಾನಿರುವವನು ಎಂಬ ಮಾತು ಸಂಕಲ್ಪರೂಪ ಸನ್ನಿಪಾತ ಮನುಷ್ಯನ ಬಡಬಡಿಕೆ ಯಾಗಿರುವುದು ॥೫೩॥

ಅದಕ್ಕಾಗಿ ಪ್ರಿಯೋತ್ತಮಾ (ಅರ್ಜುನಾ) ಕೇಳು, ನಾನು ವಿಶ್ವ ಸಹಿತವಾಗಿ ವಿಶ್ವದ ಆತ್ಮನಾಗಿರುವೆನು ಮತ್ತು ಆ ಯಾವ ಮಿಥ್ಯಾ ಭೂತಸಮುದಾಯಕ್ಕೆ ಸದಾವಕಾಲ ಆಶ್ರಯನಾಗಿದ್ದೇನೆ ॥೫೪॥

ಸೂರ್ಯಕಿರಣದ ಆಧಾರದಿಂದ ಯಾವ ಪ್ರಕಾರವಾಗಿ ಮಿಥ್ಯವಾದ ಮೃಗಜಲವು ಕಾಣಿಸುವುದೋ, ಅದರಂತೆ ಪ್ರಾಣಿಮಾತ್ರರು ನನ್ನಲ್ಲಿ ತೋರುವರೆಂದು ಮತ್ತು ನಾನು ಸೂರ್ಯನಂತೆ ಸತ್ಯ ಎಂದು ತಿಳಿ ॥೫೫॥

ಈ ಪ್ರಕಾರದ ನಾನು ಜಗತ್ತಿನ ಈ ಕಲ್ಪನೆಗೆ ಆಶ್ರಯನಾಗಿರುವೆನು. ಆದರೂ ನಾನು ಎಲ್ಲ ಜಗತ್ತಿನಿಂದ ಭಿನ್ನವಿಲ್ಲ. ಹೇಗೆಂದರೆ ಸೂರ್ಯ ಮತ್ತು ಸೂರ್ಯನ ಪ್ರಕಾಶವು ಒಂದೇಯಾಗಿರುವುದು ॥೫೬॥

ಈ ನಮ್ಮ ಐಶ್ವರ್ಯಯೋಗವನ್ನು ನಿನಗೆ ಸರಿಯಾಗಿ ತಿಳಿದಿದೆಯಾದರೆ ಈಗ ಹೇಳು ನಾನು ಮತ್ತು ಪ್ರಾಣಿಮಾತ್ರರು ಇವರಲ್ಲಿ ಏನಾದರೂ ಭೇದದ ಸಂಬಂಧ ಇದೆಯೇ ? ॥೫೭॥

ಆದ್ದರಿಂದ ನನ್ನಿಂದ ಸರ್ವ ಪ್ರಾಣಿಮಾತ್ರರು ನಿಜವಾಗಿಯೂ ಬೇರೆಯಾಗಿರುವುದಿಲ್ಲ ಮತ್ತು ನಾನು ಸಹ ಅವುಗಳಿಂದ ಬೇರೆ ಇರುವೆ ಎಂದು ಎಂದೂ ತಿಳಿಯಬೇಡ ॥೫೮॥

ಶ್ಲೋಕಾರ್ಥ :- ಎಲ್ಲೆಲ್ಲಿಯೂ ತಿರುಗುವ ವಾಯುವು ಯಾವಾಗಲೂ ಆಕಾಶದಲ್ಲಿ ಇರುವಂತೆ ಸಮಸ್ತ ಭೂತಗಳು ನನ್ನಲ್ಲಿ ಇರುವುದೆಂದು ಭಾವಿಸು ॥೬॥

ಆಕಾಶವು ಎಷ್ಟು ವಿಸ್ತಾರವಿದೆಯೋ ಅಷ್ಟೇ ಗಾಳಿಯು ತುಂಬಿಕೊಂಡಿರುವುದು. ಆದರೆ ಅದು ಸಹಜವಾಗಿ ಅಲುಗಾಡಲು ಆಕಾಶದಿಂದ ಬೇರೆಯಾಗಿ ಭಾಸವಾಗುತ್ತದೆ. ಆದರೆ ಅದು ಮತ್ತು ಆಕಾಶವು ಒಂದೇಯಾಗಿರುವುವು ॥೫೯॥

ಅದರಂತೆ ಪ್ರಾಣಿಗಳು ನನ್ನಲ್ಲಿವೆ ಎಂದು ಮನದಲ್ಲಿ ಕಲ್ಪನೆ ಬಂದರೆ, ನನ್ನಲ್ಲಿ ಭೂತಗಳಿವೆ ಎಂದು ಭಾಸವಾಗುವುದು. ಅದೇ ಕಲ್ಪನೆ ಇಲ್ಲದಾಗ ನೋಡಲು ಎಲ್ಲ ಕಡೆಯೂ ನಾನೊಬ್ಬನೇ ಇರುವೆನು ॥೬೦॥

ಮ್ಹಣೌನಿ ನಾಹೀ ಆಣಿ ಅಸೇ । ಹೇ ಕಲ್ಪನೇಚೇನಿ ಸೌರಸೇ । ಜೇ ಕಲ್ಪನಾ ಲೋಪೇ ಭ್ರಂಶೇ । ಆಣಿ ಕಲ್ಪನೇಸವೇ ಹೋಯ ॥೯೧॥ ತೇಂಚಿ ಕಲ್ಪಿತೇ ಮುದ್ದಲ ಜಾಯೇ । ತೈ ಅಸೇ ನಾಹೀ ಹೇ ಕೇ ಆಹೇ? । ಮ್ಹಣೌನಿ ಪುಢತೀ ತೂ ಪಾಹೇ । ಹಾ ಐಶ್ವರ್ಯಯೋಗು ॥೯೨॥ ಐಸಿಯಾ ಪ್ರತೀತಿಬೋಧಸಾಗರೀ । ತೂ ಆಪಣೇಯಾತೇ ಕಲ್ಲೋಳು ಏಕ ಕರೀ । ಮಗ ಜಂವ ಪಾಹಾಸೀ ಚರಾಚರೀ । ತಂವ ತೂಂಚಿ ಆಹಾಸೀ ॥೯೩॥ ಯಾ ಜಾಣಣೇಯಾಚಾ ಚೇವೋ । ತುಜ ಆಲಾ ನಾ? ಮ್ಹಣತೀ ದೇವೋ । ತರೀ ಆತಾ ದ್ವೈತ ಸ್ವಪ್ನ ವಾವೋ । ಜಾಲೇ ಕೀ ನಾ? ॥೯೪॥ ತರೀ ಪುಢತೀ ಜರೀ ವಿಪಾಯೇ । ಬುದ್ಧೀಸೀ ಕಲ್ಪನೇಚೀ ಝೋಂಪ ಯೇ । ತರೀ ಅಭೇದಬೋಧು ಜಾಯೇ । ಜೈ ಸ್ವಪ್ನೀ ಪಡಿಜೇ ॥೯೫॥ ಮ್ಹಣೌನಿ ಯೇ ನಿದ್ರೇಚೀ ವಾಟ ಮೋಡೇ । ನಿಖಿಳ ಉದ್ಬೋಧಾಚೇಂಚಿ ಆಪಣಪೇ ಘಡೇ । ಐಸೇ ವರ್ಮ ಜೇ ಆಹೇ ಪುಡೇ । ತೇ ದಾವೋ ಆತಾ ॥೯೬॥ ತರೀ ಧನುರ್ಧರಾ ಧೈರ್ಯಾ । ನಿಕೇ ಅವಧಾನ ದೇಈ ಬಾ ಧನಂಜಯಾ । ಪೈ ಸರ್ವ ಭೂತಾಂತೇ ಮಾಯಾ । ಕರೀ ಹರೀ ಗಾ ॥೯೭॥

ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಮ್ ।<br>ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ॥೭॥

ಜಿಯೇ ನಾಂವ ಗಾ ಪ್ರಕೃತೀ । ಜೇ ದ್ವಿವಿಧಾ ಸಾಂಗಿತಲೀ ತುಜಪ್ರತೀ । ಏಕೀ ಅಷ್ಟಧಾ ಭೇದವ್ಯಕ್ತೀ । ದುಜೀ ಜೀವರೂಪಾ॥೯೮॥ ಹಾ ಪ್ರಕೃತೀವಿಖೋ ಆಘವಾ । ತುವಾ ಮಾಗಾ ಪರಿಸಿಲಾಸೀ ಪಾಂಡವಾ । ಮ್ಹಣೌನಿ ಅಸೋ ಕಾಈ ಸಾಂಗಾವಾ । ಪುಢತಪುಢತೀ ॥೯೯॥ ತರೀ ಯೇ ಮಾಝಿಯೇ ಪ್ರಕೃತೀ । ಮಹಾಕಲ್ಪಾಚ್ಯಾ ಅಂತೀ । ಸರ್ವಭೂತೇ ಅವ್ಯಕ್ತೀ । ಐಕ್ಯಾಸೀ ಯೇತೀ ॥೧೦೦॥ ಗ್ರೀಷ್ಮಾಚ್ಯಾ ಅತಿರಸೀ । ಸಬೀಜೇ ತೃಣೇ ಜೈಸೀ । ಮಾಗುತೀ ಭೂಮೀಸೀ । ಸುಲೀನೇ ಹೋತೀ ॥೧೦೧॥ ಕಾ ವಾರ್ಷಿಯೇ ಢೇಂಢೇ ಫಿಟೇ । ಜೇವ್ಹಾ ಶಾರದೀಯೇಚಾ ಅನುಘಡು ಪುಟೇ । ತೇವ್ಹಾ ಘನಜಾತ ಆಟೇ । ಗಗನೀಚೇ ಗಗನೀ ॥೧೦೨॥ ನಾತರೀ ಆಕಾಶಾಚೇ ಖೋಪೇ । ವಾಯು ನಿವಾಂತುಚಿ ಲೋಪೇ । ಕಾ ತರಂಗತಾ ಹಾರಪೇ । ಜಳೀ ಜೇವೀ॥೧೦೩॥ ಅಥವಾ ಜಾಗಿನಲಿಯೇ ವೇಳೇ । ಸ್ವಪ್ನ ಮನೀಚೇ ಮನೀ ಮಾವಳೇ । ತೈಸೇ ಪ್ರಾಕೃತ ಪ್ರಕೃತೀ ಮಿಳೇ । ಕಲ್ಪಕ್ಷಯೀ ॥೧೦೪॥

ಆದ್ದರಿಂದ ಭೂತಗಳ ಇರುವಿಕೆ ಮತ್ತು ಇಲ್ಲದಿರುವಿಕೆಗಳು ಕೇವಲ ಕಲ್ಪನೆಗಳ ಸಂಬಂಧದಿಂದ ಭಾಸವಾಗುತ್ತವೆ ಮತ್ತು ಕಲ್ಪನೆ ಇಲ್ಲದಾಗಲು ಭಾಸವಾಗವುದಿಲ್ಲ ।೯೧॥

ಅದೇ ಕಲ್ಪನೆ ಹುಟ್ಟಿಸುವ ಅಜ್ಞಾನವು ಸಮೂಲವಾಗಿ ಇಲ್ಲದಾಗಲು ಭೂತಗಳ ಇರುವಿಕೆ ಇಲ್ಲದಿರುವಿಕೆಗಳು ಎಲ್ಲಿಂದ ಭಾಸವಾಗಬೇಕು ? ಆದ್ದರಿಂದ ಇನ್ನು ಮುಂದೆ ನನ್ನ ಐಶ್ವರ್ಯಯೋಗವನ್ನು ನೋಡು ।೯೨॥

ಇಂತಹ ಅನುಭವರೂಪ ಸಮುದ್ರದಲ್ಲಿ ಒಂದು ತೆರೆಯಾಗಿರು. ಆಗ ನೀನು ಈ ಚರಾಚರವನ್ನು ನೋಡಿದಾಗ್ಗೆ ಎಲ್ಲೆಡೆಗೂ ನೀನೇ ತುಂಬಿಕೊಂಡಿರುವಿ ಎಂದು ತಿಳಿಯುವುದು ।೯೩॥

ದೇವನು ಹೇಳಿದನು :- ಅರ್ಜುನಾ, ನಾನು ನಿನಗೆ ಯಾವ ಈ ಜ್ಞಾನವನ್ನು ಹೇಳಿದ್ದರಿಂದ ನಿನ್ನ ಮನಸ್ಸಿನಲ್ಲಿ ಏನಾದರೂ ಪ್ರಕಾಶಬಿದ್ದಿದೆಯೇ? ನಾನು ಮತ್ತು ವಿಶ್ವವು ಎರಡಿವೆ ಎಂಬ ನಿನ್ನ ಸ್ವಪ್ನವು ಸುಳ್ಳೆಂದು ನಿಶ್ಚಯವಾಯಿತೇ? ।೯೪॥

ಆದರೆ ನಿನ್ನ ಬುದ್ಧಿಗೆ ಪುನಃ ಒಂದುವೇಳೆ ಕಲ್ಪನಾರೂಪ ನಿದ್ರೆಯು ಹತ್ತಿ ಭೇದರೂಪ ಸ್ವಪ್ನದಲ್ಲಿ ಬಿದ್ದಿದ್ದಾದರೆ ಅಭೇದ ಬೋಧವು ನಷ್ಟವಾದೀತು ।೯೫॥

ಆದ್ದರಿಂದ ಈಕಲ್ಪನಾ ರೂಪ ನಿದ್ರೆಯ ಮಾರ್ಗವನ್ನು ಬಿಟ್ಟು ಶುದ್ಧ ಭೋಧರೂಪ ನಾನೇ ಇರುವೆ ಎಂಬ ಜ್ಞಾನದ ಮರ್ಮವು ಇರುವುದು. ಅದು ನಿನಗೆ ಇನ್ನು ಮುಂದೆ ಹೇಳುವೆ ।೯೬॥

ಅದಕ್ಕಾಗಿ ಧೈರ್ಯವಂತನಾದ ಧನುರ್ದರಾ ಧನಂಜಯನೇ, ನೀನು ಸರಿಯಾಗಿ ಲಕ್ಷ ಕೊಟ್ಟು ಕೇಳು. ಪ್ರಾಣಿಮಾತ್ರರ ಉತ್ಪತ್ತಿ, ಸ್ಥಿತಿ ಮತ್ತು ಲಯ ಇವುಗಳಿಗೆ ಮಾಯೆಯೇ ಕಾರಣವಾಗಿರುತ್ತದೆ ।೯೭॥

**ಶ್ಲೋಕಾರ್ಥ** :- ಅರ್ಜುನಾ! ಪ್ರಳಯಕಾಲದಲ್ಲಿ ಸಮಸ್ತ ಭೂತಗಳೂ ನನ್ನ ಪ್ರಕೃತಿಯಲ್ಲಿ ಲಯಿಸುತ್ತವೆ. ಪುನಃ ಸೃಷ್ಟಿಕಾಲದಲ್ಲಿ ಅವುಗಳನ್ನು ನಾನು ಪ್ರಕಟ ಮಾಡುತ್ತೇನೆ ।೭॥

ಆ ಮಾಯೆಗೆ ಪ್ರಕೃತಿ ಎಂದು ಹೇಳುವರು ಮತ್ತು ಅದು ಎರಡು ಪ್ರಕಾರದಿಂದ ಇರುವುದು. ಆದ್ದರಿಂದ ನಿನಗೆ ಈ ಹಿಂದೆ (೭ನೇ ಅಧ್ಯಾಯ ೪-೫ ಶ್ಲೋಕದಲ್ಲಿ) ಹೇಳಿದ್ದಾಗಿದೆ. ಅದರಲ್ಲಿ ಒಂದು, ಎಂಟು ಪ್ರಕಾರ ರೂಪದಿಂದ ಭಿನ್ನವಿದೆ ಮತ್ತು ಇನ್ನೊಂದು ಜೀವರೂಪದಿಂದ ಇದೆ ।೯೮॥

ಹೇ ಪಾಂಡವನೇ, ಈ ಪ್ರಕೃತಿಯ ಸರ್ವ ವಿಷಯ ಗಳನ್ನು ಈ ಹಿಂದೆ ನೀನು ಕೇಳಿರುವೆ. ಆದ್ದರಿಂದ ಇದರ ವಿಷಯಕ್ಕೆ ಪುನಃ ಪುನಃ ಹೇಳುವ ಕಾರಣವಿಲ್ಲ ।೯೯॥

ಆದರೆ ಮಹಾಕಲ್ಪದ ಕೊನೆಯಲ್ಲಿ ಈ ಎಲ್ಲ ಭೂತಗಳು ನನ್ನ ಪ್ರಕೃತಿರೂಪ ಅವ್ಯಕ್ತ ಸ್ವರೂಪದಲ್ಲಿ ಲಯಗೊಳ್ಳುವುವು ।೧೦೦॥

ಯಾವ ಪ್ರಕಾರವಾಗಿ (ಮಳೆಗಾಲದಲ್ಲಿ ನಿರ್ಮಾಣ ವಾಗಿರುವ) ನಾನಾ ಪ್ರಕಾರದ ಹುಲ್ಲುಗಳು ಗ್ರೀಷ್ಮ ಋತುವಿನ ಪ್ರಖರವಾದ ಬೇಸಿಗೆಯಲ್ಲಿ ಅವೆಲ್ಲವೂ ಬೀಜ ಸಮೇತವಾಗಿ ಭೂಮಿಯಲ್ಲಿ ಲೀನವಾಗುವುವು ।೧೦೧॥

ಅಥವಾ ವರ್ಷಾಕಾಲ (ಮಳೆಗಾಲ) ದ ಮೋಡಗಳ ಆರ್ಭಟವು ಮುಗಿದಮೇಲೆ ಶರದ್‌ಋತುವಿನ (ಚಳಿಗಾಲದ) ಅಂಕುರ ಹುಟ್ಟುವುದು. ಆಗ ಆಕಾಶದಲ್ಲಿನ ಎಲ್ಲ ಮೋಡಗಳು ಆಕಾಶದಲ್ಲಿಯೇ ಲಯಗೊಳ್ಳುವುವು ।೧೦೨॥

ಅಥವಾ ಆಕಾಶದ ಅವಕಾಶದಲ್ಲಿ (ಪೊಳ್ಳಿನಲ್ಲಿ) ಗಾಳಿಯು ಇಲ್ಲದಾಗುವುದು. ಅಥವಾ ನೀರಿನಲ್ಲಿ ಉತ್ಪನ್ನ ವಾಗಿರುವ ತೆರೆಗಳು ನೀರಿನಲ್ಲಿಯೇ ಇಲ್ಲದಾಗುವುವು ।೧೦೩॥

ಅಥವಾ ಮಲಗಿ ಎಚ್ಚರಾದ ಮೇಲೆ ಮನಸ್ಸಿನಲ್ಲಿಯ ಸ್ವಪ್ನಗಳು ಮನಸ್ಸಿನಲ್ಲಿಯೇ ಇಲ್ಲದಾಗುವುವು. ಅದರಂತೆ ಮಹಾ ಪ್ರಳಯ ಕಾಲದ ಕೊನೆಯಲ್ಲಿ ಪ್ರಕೃತಿಯಿಂದ ಹುಟ್ಟಿರುವ ಎಲ್ಲಭೂತಗಳು ಪ್ರಕೃತಿಯಲ್ಲಿಯೇ ಕೂಡುವುವು ।೧೦೪॥

ಮಗ ಕಲ್ಪಾದೀ ಪುಢತೀ । ಮೀಚಿ ಸೃಜೀ ಐಸಿ ವದಂತೀ । ತರೀ ಇಯೇ ವಿಷಯೀ ನಿರುತೀ । ಉಪಪತ್ತಿ ಆಇಕ ॥೧೦೫॥

ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ ।
ಭೂತಗ್ರಾಮಮಿಮಂ ಕೃತ್ಸ್ನಮ್ ಅವಶಂ ಪ್ರಕೃತೇರ್ವಶಾತ್ ॥೮॥

ತರೀ ಹೇಚಿ ಪ್ರಕೃತೀ ಕಿರೀಟೀ । ಮೀ ಸ್ವಕೀಯಾ ಸಹಜೇ ಅಧಿಷ್ಠೀ । ತೇಥ ತಂತೂಸಮವಾಯ ಪಟೀ । ಜೇವಿ ವೀಣಾವಣೀ ದಿಸೇ ॥೧೦೬॥ ಮಗ ತಿಯೇ ವೀಣಾವಣೇಚೇನಿ ಆಧಾರೇ । ಲಹಾನಾ ಚೌಕಡಿಯಾ ಪಟತ್ವ ಭರೇ । ತೈಸೀ ಪಂಚಾತ್ಮಕೇ ಆಕಾರೇ । ಪ್ರಕೃತೀಚಿ ಹೋಯ॥೧೦೭॥ ಜೈಸೇ ವಿರಜಣಿಯಾಚೇನಿ ಸಂಗೇ । ದೂಧಚಿ ಆಟೇಜೋ ಲಾಗೇ । ತೈಶೀ ಪ್ರಕೃತೀ ಆಂಗಾ ರಿಗೇ । ಸೃಷ್ಟೀ ಪಣಾಚಿಯಾ ॥೧೦೮॥ ಬೀಜ ಜಳಾಚೀ ಜವಳೀಕ ಲಾಹೇ । ಆಣಿ ತೇಚಿ ಶಾಖೋಪ ಶಾಖೀ ಹೋಯೇ । ತೈಸೇ ಮಜ ಕರಣೇ ಆಹೇ । ಭೂತಾಂಚೇ ಹೇ ॥೧೦೯॥ ಅಗಾ ನಗರ ಹೇ ರಾಯೇ ಕೇಲೇ । ಯಾ ಮ್ಹಣಣಿಯಾ ಸಾಚಪಣ ಕೀರ ಆಲೇ । ಪರಿ ನಿರುತೇ ಪಾಹತಾ ಕಾಯ ಸಿಣಲೇ । ರಾಯಚೇ ಹಾತ? ॥೧೧೦॥ ಆಣಿ ಮೀ ಪ್ರಕೃತೀ ಅಧಿಷ್ಠೀ ತೇ ಕೈಸೇ । ಜೈಸಾ ಸ್ವಪ್ನೀ ಜೋ ಅಸೇ । ಮಗ ತೋಚಿ ಪ್ರವೇಶೇ । ಜಾಗೃತಾವಸ್ಥೇ ॥೧೧೧॥ ತರೀ ಸ್ವಪ್ನೌನಿ ಜಾಗೃತೀ ಯೇತಾ । ಕಾಯ ಪಾಯ ದುಖತೀ ಪಂಡುಸುತಾ? । ಕೀ ಸ್ವಪ್ನಾ ಮಾಜೀ ಅಸತಾ । ಪ್ರವಾಸು ಹೋಯ ॥೧೧೨॥ ಯಾ ಆಘವಿಯಾಚಾ ಅಭಿಪ್ರಾವೋ ಕಾಯೀ । ಜೇ ಹೇ ಭೂತಸೃಷ್ಟೀಚೇ ಕಾಂಹೀ । ಮಜ ಏಕಹೀ ಕರಣೇ ನಾಹೀ । ಐಸಾಚಿ ಅರ್ಥು ॥೧೧೩॥ ಜೈಸಿ ರಾಯೇ ಅಧಿಷ್ಠಿಲೀ ಪ್ರಜಾ । ವ್ಯಾಪಾರೇ ಆಪುಲಾಲಿಯಾ ಕಾಜಾ । ತೈಸಾ ಪ್ರಕೃತೀಸಂಗು ಹಾ ಮಾಝಾ । ಯೇರ ಕರಣೇ ತೇ ಇಯೇಚೇ ॥೧೧೪॥ ಪಾಹೇ ಪಾ ಪೂರ್ಣ ಚಂದ್ರಾಚಿಯೇ ಭೇಟೀ । ಸಮುದ್ರೀ ಅಪಾರ ಭರತೇ ದಾಟೀ । ತೇಥ ಚಂದ್ರಾಸಿ ಕಾಯ ಕಿರೀಟೀ । ಉಪಖಾ ಪಡೇ? ॥೧೧೫॥ ಜಡ ಪರಿ ಜವಳಿಕಾ । ಲೋಹ ಚಳೇ ತರೀ ಚಳೋ ಕಾ । ತರಿ ಕವಣು ಶೀಣು ಭ್ರಾಮಕಾ । ಸನ್ನಿಧಾನಾಚಾ ॥೧೧೬॥ ಕಿಂಬಹುನಾ ಯಾಪರೀ । ಮೀ ನಿಜಪ್ರಕೃತಿ ಅಂಗೀಕಾರೀ । ಆಣಿ ಭೂತಸೃಷ್ಟೀ ಏಕಸರೀ । ಪ್ರಸವೋಚಿ ಲಾಗೇ ॥೧೧೭॥ ಜೋ ಹಾ ಭೂತಗ್ರಾಮು ಆಘವಾ । ಅಸೇ ಪ್ರಕೃತೀ ಆಧೀನ ಪಾಂಡವಾ । ಜೈಸಿ ಬೀಜಾಚಿಯಾ ವೇಲಪಾಲವಾ । ಸಮರ್ಥ ಭೂಮೀ ॥೧೧೮॥

ಆಗ ಸೃಷ್ಟಿಯ ಆರಂಭವನ್ನು ಪುನಃ ನಾನೇ ಮಾಡುತ್ತೇನೆ ಎಂದು ಶಾಸ್ತ್ರಗಳ ವಾರ್ತೆ ಇರುವುದು. ಈ ವಿಷಯದ ನಿಜ ಸ್ಥಿತಿಯನ್ನು ನಿನಗೆ ಹೇಳುವೆ ಆದನ್ನು ಕೇಳು ॥೧೦೫॥

ಶ್ಲೋಕಾರ್ಥ :- ಪ್ರಕೃತಿಗೆ ಪರವಾಗಿ ಪರ ತಂತ್ರವಾಗಿರುವ ಆ ಸಕಲಭೂತಗಳನ್ನು, ನನ್ನ ಮಾಯಾ ಶಕ್ತಿಯನ್ನು ಆಧಾರವಾಗಿಟ್ಟುಕೊಂಡು ಪುನಃ ಪುನಃ ನಾನು ಹುಟ್ಟಿಸುತ್ತೇನೆ ॥೮॥

ಆದರೆ ಅರ್ಜುನಾ, ಈ ನನ್ನ ಪ್ರಕೃತಿಯ ಅಂಗೀಕಾರವನ್ನು ಸಹಜವಾಗಿ ನಾನು ಅಂಗೀಕರಿಸಿದಾಗ, ಯಾವ ಪ್ರಕಾರವಾಗಿ ವಸ್ತ್ರದ ನೇಯಿಗೆಯಲ್ಲಿ ನೂಲಿನ ಸಂಬಂಧ ಕಾಣುವುದೋ ॥೧೦೬॥

ಮತ್ತು ಆಗ ಆ ನೇಯಿಗೆಯ ಆಧಾರದಿಂದ ಸಣ್ಣ ಸಣ್ಣ ಚೌಕಡಿಗಳಿಂದ ಪೂರ್ಣ ವಸ್ತ್ರ ಸಿದ್ಧವಾಗುವುದೋ, ಅದೇ ಪ್ರಕಾರವಾಗಿ ಪ್ರಕೃತಿಯು ಪಂಚಭೂತಾತ್ಮಕ ಆಕಾರವಾಗುವುದು ॥೧೦೭॥

ಯಾವ ಪ್ರಕಾರವಾಗಿ (ಹುಳಿ) ಹೆಪ್ಪಿನ ಸಂಗತಿಯಿಂದ ಹಾಲು ಗಟ್ಟಿಯಾಗುವುದೋ, ಅದೇ ಪ್ರಕಾರವಾಗಿ ಪ್ರಕೃತಿಯು ಸೃಷ್ಟಿಯ ಆಕಾರದಿಂದ ಪರಿಣಮಿಸುತ್ತದೆ. ಸ್ವತಃ ಪ್ರಕೃತಿಯೇ ಸೃಷ್ಟಿ ಮಾಡಲಾರಂಭಿಸುವುದು ॥೧೦೮॥

ಯಾವ ಪ್ರಕಾರವಾಗಿ ನೀರಿನ ಸಾನಿಧ್ಯದಿಂದ ಬೀಜಕ್ಕೆ ಸಣ್ಣ ದೊಡ್ಡ ಟೊಂಗೆಗಳು ಹುಟ್ಟಿ ಅದು ವೃಕ್ಷವಾಗುವಂತೆ ಪ್ರಕೃತಿಯ ವಿಸ್ತಾರವು ನನ್ನಿಂದಾಗುವುದು ॥೧೦೯॥

ಆರೆ, ಒಂದುವೇಳೆ ರಾಜನಿಂದ ನಗರವು ಕಟ್ಟಲ್ಪಟ್ಟಿತು ಎಂದು ಹೇಳುವುದು ನಿಜವಿದೆ. ಆದರೆ ನಿಜವಾಗಿ ನೋಡಿದರೆ ರಾಜನ ಕೈಗಳಿಗೆ ಏನಾದರೂ ಶ್ರಮವಾಗಿದೆಯೇ? ॥೧೧೦॥

ಮತ್ತು ನಾನೂ ಸಹ ಪ್ರಕೃತಿಯ ಸ್ವೀಕಾರ ಮಾಡುವೆನು. ಅದು ಹೇಗೆಂದರೆ ಒಬ್ಬನು ಸ್ವಪ್ನದಲ್ಲಿರುವನು, ಆತನಿಗೆ ಆಗ ಜಾಗೃತಕ್ಕೆ ಬರಬೇಕಾಗುವುದು ॥೧೧೧॥

ಆದರೆ ಪಂಡುಸುತನೇ, ಸ್ವಪ್ನಾವಸ್ಥೆಯಿಂದ ಜಾಗೃತಾವಸ್ಥೆಗೆ ಬರುವಾಗ್ಗೆ ಆ ಮನುಷ್ಯನ ಕಾಲುಗಳು ನೋಯಿಸುವುವೆ ? ಅಥವಾ ಸ್ವಪ್ನದಲ್ಲಿರುವಾಗ ಆತನಿಗೆ ನಿಜವಾಗಿಯೂ ಪ್ರವಾಸ ಪ್ರಯಾಸವಾಗುವುದೇ? ॥೧೧೨॥

ಸಂಪೂರ್ಣವಾದ ಅಭಿಪ್ರಾಯವೇನೆಂದರೆ, ಈ ಭೂತಗಳ ಸೃಷ್ಟಿ ನಿರ್ಮಿಸಲು ನನಗೆ ಯಾವುದೂ ಏನೊಂದು ಮಾಡಬೇಕಾಗಿಲ್ಲ. ಇದೇ ಅರ್ಥವಾಗಿದೆ ॥೧೧೩॥

ಯಾವ ಪ್ರಕಾರವಾಗಿ ರಾಜನ ಆಜ್ಞೆಯಿಂದ ಪ್ರಜೆಗಳು ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತ ವ್ಯಾಪಾರ ಮಾಡುವರೋ, ಅದರಂತೆ ಪ್ರಕೃತಿಯ ನನ್ನ ಸಂಬಂಧವಿದೆ. ಆದರೆ ಸೃಷ್ಟಿ ಸ್ಥಿತಿ ಲಯಗಳು ಪ್ರಕೃತಿಯಿಂದಾಗುವುವು ॥೧೧೪॥

ಇಲ್ಲಿ ನೋಡು, ಪೌರ್ಣಿಮೆಯ ಚಂದ್ರನ ಭೇಟಿ ಯಾದಂತೆಯೇ ಸಮುದ್ರಕ್ಕೆ ಅಪಾರ (ಏರಿಕೆ) ಭರತಿ ಬರುವುದು. ಆದರೆ ಅರ್ಜುನಾ, ಇಲ್ಲಿ ಚಂದ್ರನಿಗೆ ಏನಾದರೂ ಶ್ರಮಪಡಬೇಕಾಗಿದೆಯೇ? ॥೧೧೫॥

ಕಬ್ಬಿಣವು ಜಡವಾಗಿದ್ದರೂ ಲೋಹಚುಂಬಕವು ಸಮೀಪವಿರುವುದರಿಂದ ಅಲುಗಾಡುವುದು. ಆದರೆ ಲೋಹಚುಂಬಕಕ್ಕೆ ಸಮೀಪವಿರುವ ಶ್ರಮವೇನಾದರೂ ಆಗಿದೆಯೇ? ॥೧೧೬॥

ಹೆಚ್ಚಿಗೇನು ಹೇಳಬೇಕು ? ನಾನು ನನ್ನ ಸ್ವಂತ ಪ್ರಕೃತಿಯ ಅಂಗಿಕಾರಮಾಡುವೆನು. ಆಗ ಆ ಪ್ರಕೃತಿಯು ಈ ಪ್ರಕಾರ ಒಂದೇ ಸವನೇ ಭೂತಗಳ ಉತ್ಪತ್ತಿ ಮಾಡಲಾರಂಭಿಸುವುದು ॥೧೧೭॥

ಹೇ ಪಾಂಡವನೇ, ಈ ಎಲ್ಲ ಪ್ರಾಣಿ ಸಮುದಾಯವು ಪ್ರಕೃತಿಯ ಆಧೀನದಲ್ಲಿದೆ. ಯಾವ ಪ್ರಕಾರವಾಗಿ ಬೀಜಕ್ಕೆ ಟೊಂಗೆ ಎಲೆಗಳನ್ನು ಉತ್ಪನ್ನ ಮಾಡುವುದರಲ್ಲಿ ಭೂಮಿಯು ಸಮರ್ಥವಾಗುವಂತೆ ॥೧೧೮॥

ನಾತರೀ ಬಾಳಾದಿಕಾ ವಯಸಾ । ಗೋಸಾವೀ ದೇಹಸಂಗು ಜೈಸಾ । ಅಥವಾ ಘನಾವಳೀ ಆಕಾಶಾ । ವಾರ್ಷಿಯೇ ಜೇವೀ ॥೧೧೯॥ ಕಾ ಸ್ವಪ್ನಾಸಿ ಕಾರಣ ನಿದ್ರಾ । ತೈಸೀ ಪ್ರಕೃತೀ ಹೇ ನರೇಂದ್ರಾ । ಯಾ ಆಶೇಷಾಹಿ ಭೂತಸಮುದ್ರಾ । ಗೋಸಾವಿಣೀ ಗಾ ॥೧೨೦॥ ಸ್ಥಾವರಾ ಆಣಿ ಜಂಗಮಾ । ಸ್ಥೂಳಾ ಅಥವಾ ಸೂಕ್ಷ್ಮಾ । ಹೇ ಅಸೋ ಭೂತಗ್ರಾಮಾ । ಪ್ರಕೃತೀಚಿ ಮೂಳ ॥೧೨೧॥ ಮ್ಹಣೌನಿ ಭೂತೇ ಹನ ಸೃಜಾವೀ । ಕಾ ಸೃಜಿಲೀ ಪ್ರತಿಪಾಳಾವೀ । ಇಯೇ ಕರಣೀ ನ ಯೇತೀ ಆಘವೀ । ಆಮುಚಿಯಾ ಆಂಗಾ ॥೧೨೨॥ ಜಳೀ ಚಂದ್ರಿಕೇಚಿಯಾ ಪಸರತೀ ವೇಲೀ । ತೇ ವಾಢೀ ಚಂದ್ರೇ ನಾಹೀ ವಾಢವಿಲೀ । ತೇವಿ ಮಾತೇ ಪಾವೋನಿ ಠೇಲೀ । ದೂರೀ ಕರ್ಮೇ ॥೧೨೩॥

ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।
ಉದಾಸೀನವದಾಸೀನಮ್ ಅಸಕ್ತಂ ತೇಷು ಕರ್ಮಸು ॥೯॥

ಆಣಿ ಸುಟಲಿಯಾ ಸಿಂಧುಜಳಾಚಾ ಲೋಟು । ನ ಶಕೇ ಧರೂ ಸೈಂಧವಾಚಾ ಘಾಟು । ತೇವಿ ಸಕಳ ಕರ್ಮಾ ಮೀಚಿ ಶೇವಟು । ತೀ ಕಾಯ ಬಾಂಧತೀ ಮಾತೇ? ॥೧೨೪॥ ಧೂಮ್ರರಜಾಂಚೀ ಪಿಂಜರೀ । ವಾಜತಿಯಾ ವಾಯೂತೇ ಜರೀ ಹೋಕಾರೀ । ಕಾ ಸೂರ್ಯಬಿಂಬಾಮಾಝಾರೀ । ಆಂಧಾರೇ ಶಿರೇ? ॥೧೨೫॥ ಹೇ ಅಸೋ ಪರ್ವತಾಚಿಯೇ ಹೃದಯೀಂಚೇ । ಜೇವಿ ಪರ್ಜನ್ಯಧಾರಾಸ್ತವ ನ ಖೋಂಚೇ । ತೇವಿ ಕರ್ಮಜಾತ ಪ್ರಕೃತೀಚೇ । ನ ಲಗೇ ಮಜ ॥೧೨೬॥ ಏರ್ಹವೀ ಇಯೇ ಪ್ರಕೃತಿವಿಕಾರೀ । ಏಕು ಮೀಚಿ ಅಸೇ ಅವಧಾರೀ । ಪರಿ ಉದಾಸೀನಾಚಿಯಾ ಪರೀ । ಕರೀ ನಾ ಕರವೀ ॥೧೨೭॥ ಜೈಸಾ ದೀಪು ಠೇವಿಲಾ ಪರಿವರೀ । ಕವಣಾತೇ ನಿಯಮೀ ನಾ ನಿವಾರೀ । ಆಣಿ ಕವಣ ಕವಣಿಯೇ ವ್ಯಾಪಾರೀ । ರಾಹಾಟೇ ತೇಹಿ ನೇಣೇ ॥೧೨೮॥ ತೋ ಜೈಸಾ ಕಾ ಸಾಕ್ಷಿಭೂತು । ಗೃಹವ್ಯಾಪಾರ ಪ್ರವೃತ್ತಿಹೇತು । ತೈಸಾ ಭೂತಕರ್ಮೀ ಅನಾಸಕ್ತು । ಮೀ ಭೂತೀ ಅಸೇ ॥೧೨೯॥ ಹಾ ಏಕಚಿ ಅಭಿಪ್ರಾವೋ ಪುಢತಪುಢತೀ । ಕಾಯ ಸಾಂಗೋ ಬಹುತಾ ಉಪಪತ್ತೀ । ಯೇಥ ಏಕಹೇಳಾ ಸುಭದ್ರಾಪತೀ । ಯೇತುಲೇ ಜಾಣ ಪಾ ॥೧೩೦॥

ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ ।
ಹೇತುನಾನೇನ ಕೌಂತೇಯ ಜಗದ್ವಿಪರಿವರ್ತತೇ॥೧೦॥

ಅಥವಾ ಬಾಲ್ಯತ್ವ, ತಾರುಣ್ಯ ಮತ್ತು ವೃದ್ಧಾಪ್ಯ ಈ ಅವಸ್ಥೆಗಳಿಗೆ ಯಾವ ಪ್ರಕಾರವಾಗಿ ದೇಹಸಂಗವು ಮುಖ್ಯ ಕಾರಣವಾದಂತೆ ಅಥವಾ ಆಕಾಶದಲ್ಲಿ ಮೋಡಗಳ ಪಂಕ್ತಿಯನ್ನು ಉತ್ಪತ್ತಿಸಲು ಮಳೆಗಾಲವು ಕಾರಣ ವಾಗಿರುವಂತೆ ।।೧೯।।

ಅಥವಾ ಸ್ವಪ್ನಕ್ಕೆ ನಿದ್ರೆ ಕಾರಣವಾದಂತೆ ಹೇ ನರೇಂದ್ರನೇ, ಈ ಎಲ್ಲ ಪ್ರಾಣಿ ಸಮುದಾಯಕ್ಕೆ ಪ್ರಕೃತಿಯು ಮುಖ್ಯ ಕಾರಣವಾಗಿರುತ್ತದೆ ।।೧೨೦।।

ಸ್ಥಾವರ ಜಂಗಮಕ್ಕೆ, ಸ್ಥೂಲ ಸೂಕ್ಷ್ಮಕ್ಕೆ, ಹೆಚ್ಚಿಗೇನು ಹೇಳಬೇಕು? ಈ ಎಲ್ಲ ಜಗತ್ತಿಗೆ ಪ್ರಕೃತಿಯೇ ಮೂಲಕಾರಣ ವಾಗಿರುತ್ತದೆ ।।೧೨೧।।

ಆದ್ದರಿಂದ ಪ್ರಾಣಿ ಉತ್ಪನ್ನ ಮಾಡುವುದು ಮತ್ತು ಉತ್ಪನ್ನವಾದದ್ದನ್ನು ಪ್ರತಿಪಾಲಿಸುವುದು, ಈ ಎಲ್ಲ (ಪ್ರಕೃತಿಯ) ಕಾರ್ಯಗಳು ನನ್ನ ಕಡೆ ಬಾರವು ।।೧೨೨।।

ನೀರಿನಲ್ಲಿ ಪ್ರತಿಬಿಂಬ ರೂಪದಿಂದ ಬೆಳದಿಂಗಳದ ಬಳ್ಳಿ ಬೆಳೆದಂತೆ ತೋರುವುದು. ಆದರೆ ಈ ಬೆಳೆಯನ್ನು ಚಂದ್ರನು ಮಾಡಿರುವುದಿಲ್ಲ. ಅದರಂತೆ ಈ ಕರ್ಮಗಳು ನನ್ನಿಂದ ಹುಟ್ಟಿದ್ದರೂ ಸಹ ನನ್ನಿಂದ ದೂರ ಇರುವುವು ।।೧೨೩।।

ಶ್ಲೋಕಾರ್ಥ :- ಆದರೂ ಅರ್ಜುನಾ! ಆಸಕ್ತಿ ಇಲ್ಲದೆ ತಟಸ್ಥನಂತೆ ಇರುವ ನನ್ನನ್ನು ಆ ಕರ್ಮಗಳು ಬಂಧಿಸಲಾರವು ।।೯।।

ಮತ್ತು ಯಾವ ಪ್ರಕಾರವಾಗಿ ಸಮುದ್ರದ ನೀರಿನ ತೆರೆಗಳು ಹರಿಯುತ್ತಿರುವಾಗ್ಗೆ ಅವುಗಳಿಗೆ ಉಪ್ಪಿನ ಒಡ್ಡು ಅಡ್ಡಾಗಲು ಸಾಧ್ಯವಿಲ್ಲವೋ ಅದರಂತೆ ನನ್ನಲ್ಲಿ ಲಯಹೊಂದುವ ಎಲ್ಲ ಕರ್ಮಗಳು ನನ್ನನ್ನು ಹೇಗೆ ಬಂಧಿಸಬಲ್ಲವು? ।।೧೨೪।।

ಹೊಗೆಯ ಕಣಗಳ ಸಣ್ಣ ಭತ್ತವು (ಸ್ವಲ್ಪ ತಡೆಯಿರಿ ಎಂದು) ಭರದಿಂದ ಬೀಸುವ ಗಾಳಿಯನ್ನು ನಿಲ್ಲಿಸಬಹುದೇ? ಅಥವಾ ಸೂರ್ಯಬಿಂಬದಲ್ಲಿ ಕತ್ತಲವು ಪ್ರವೇಶ ಮಾಡಬಹುದೇ? ।।೧೨೫।।

ಇದು ಇರಲಿ, ಮಳೆಯಧಾರೆಗಳು ಪರ್ವತದ ಹೊಟ್ಟೆಯೊಳಗಿನ ಪದಾರ್ಥಗಳಿಗೆ ಚುಚ್ಚುವುದಿಲ್ಲ. ಅದರಂತೆ ಪ್ರಕೃತಿಯ ಕರ್ಮಗಳು ನನಗೆ ಬಂಧಿಸಲಾರವು ।।೧೨೬।।

ಸಾಮಾನ್ಯವಾಗಿ ಈ ಪ್ರಕೃತಿಯ ಕಾರ್ಯಗಳಿಗೆ ನಾನೊಬ್ಬನೇ ಕಾರಣನಾಗಿರುವೆ ಎಂಬುದು ಲಕ್ಷದಲ್ಲಿಡು. ಆದರೆ ಉದಾಸೀನನಂತೆ ನಾನು ಏನೂ ಮಾಡುವುದಿಲ್ಲ ಮತ್ತು ಮಾಡಿಸುವುದೂ ಇಲ್ಲ ।।೧೨೭।।

ಮನೆಯಲ್ಲಿಟ್ಟ ದೀಪವು ಇದನ್ನು ಮಾಡು ಅದನ್ನು ಬಿಡು ಎಂದು ಯಾರಿಗೂ ಹೇಳುವುದಿಲ್ಲ ಮತ್ತು ಯಾರೇನು ವ್ಯಾಪಾರ ಮಾಡುವರೋ ಅದೂ ಕೂಡ ತಿಳಿದು ಕೊಳ್ಳುವುದಿಲ್ಲ ।।೧೨೮।।

ಅದು ಸಾಕ್ಷಿಭೂತವಾಗಿದ್ದು ಗೃಹಕೃತ್ಯಗಳ ಪ್ರವೃತ್ತಿಗೆ ಕಾರಣೀಭೂತವಾಗುವುದು. ಅದರಂತೆ ನಾನು ಎಲ್ಲ ಭೂತಗಳಲ್ಲಿದ್ದು ಅವರಿಂದಾಗುವ ಎಲ್ಲ ಕರ್ಮಗಳಲ್ಲಿ ನಾನು ಉದಾಸೀನನಾಗಿರುತ್ತೇನೆ ।।೧೨೯।।

ಈ ಒಂದೇ ವಿಚಾರವನ್ನು ಯುಕ್ತಿ ಪ್ರಯುಕ್ತಿಗಳಿಂದ ಪುನಃ ಪುನಃ ಏನು ಹೇಳಲಿ ? ಸುಭದ್ರಾಪತಿಯೇ ಇಲ್ಲಿ (ಮತ್ತೆ) ಒಂದನ್ನು ಸ್ವಲ್ಪು ತಿಳಿದರೆ ಸಾಕು ।।೧೩೦।।

ಶ್ಲೋಕಾರ್ಥ :- ಕುಂತೀತನಯಾ! ಅಧ್ಯಕ್ಷನಾದ ನನ್ನ ಸನ್ನಿಧಾನ ಬಲದಿಂದ ಪ್ರಕೃತಿಯ ಜಂಗಮಾತ್ಮಕ ಪ್ರಪಂಚವನ್ನು ಸೃಷ್ಟಿಸುತ್ತದೆ. ಆ ಕಾರಣದಿಂದಲೇ ಜಗತ್ತು ನಾನಾ ಪ್ರಕಾರವಾಗಿ ಪರಿವರ್ತಿತವಾಗುತ್ತದೆ ।।೧೦।।

ಜೇ ಲೋಕಾಚೇಷ್ಟಾ ಸಮಸ್ತಾ । ಜೈಸಾ ನಿಮಿತ್ತ ಮಾತ್ರ ಕಾ ಸವಿತಾ । ತೈಸಾ ಜಗತ್ ಪ್ರಭವೀ ಪಂಡುಸುತಾ । ಹೇತು ಮೀ ಜಾಣೇ ।।೧೩೧।। ಕಾ ಜೇ ಮಿಯಾ ಅಧಿಷ್ಠಿಲಿಯಾ ಪ್ರಕೃತೀ । ಹೋತೀ ಚರಾಚರಾಚಿಯಾ ಸಂಭೂತೀ । ಮ್ಹಣೌನಿ ಮೀ ಹೇತು ಹೇ ಉಪಪತ್ತೀ । ಘಡೇಯಯಾ ।।೧೩೨।। ಆತಾ ಯೇಣೇ ಉಜಿವಡೇ ನಿರುತೇ । ನ್ಯಾಹಾಳೀ ಪಾ ಐಶ್ವರ್ಯಯೋಗಾತೇ । ಜೇ ಮಾಝ್ಯಾ ಠಾಯೀ ಭೂತೇ । ಪರೀ ಭೂತೀ ಮೀ ನಸೇ ।।೧೩೩।। ಅಥವಾ ಭೂತೇ ನಾ ಮಾಝ್ಯಾ ಠಾಯೀ । ಆಣಿ ಭೂತಾ ಮಾಜೀ ಮೀ ನಾಹೀ । ಯಾ ಖುಣಾ ತೂ ಕಹೀ । ಚುಕೋ ನಕೋ ।।೧೩೪।। ಹೇ ಸರ್ವಸ್ವ ಆಮುಚೇ ಗೂಢ । ಪರಿ ದಾವಿಲೇ ತುಜ ಉಘಡ । ಆತಾ ಇಂದ್ರಿಯಾ ದೇಊನಿ ಕವಾಡ । ಹೃದಯೀ ಭೋಗೀ ।।೧೩೫।। ಹಾ ದಂಶು ಜಂವ ನಯೇ ಹಾತಾ । ತಂವ ಮಾಝೀ ಸಾಚೋಕಾರೇಪಣ ಪಾರ್ಥಾ । ನ ಸಂಪಡೇ ಗಾ ಸರ್ವಥಾ । ಜೇವಿ ತುಷೀ ಕಣು ।।೧೩೬।। ಏರ್ಹವೀ ಅನುಮಾನಾಚೇನಿ ಪೈಸೇ । ಆವಡೇ ಕೀರ ಕಳಲೇ ಐಸೇ । ಪರಿ ಮೃಗಜಳಾಚೇನಿ ವೋಲಾಂಶೇ । ಕಾಯ ಭೂಮಿ ತಿಮೆ? ।।೧೩೭।। ಜೇ ಜಾಳ ಜಳೀ ಪಾಂಗಿಲೇ । ತೇಥ ಚಂದ್ರಬಿಂಬ ದಿಸೇ ಆಂತುಡಲೇ । ಪರೀ ಥಡಿಯೇ ಕಾಢೂನಿ ಝಾಡಿಲೇ । ತೇವ್ಹಾ ಬಿಂಬ ಕೇ ಸಾಂಗೈ? ।।೧೩೮।।ತೈಸೇ ಬೋಲವರೀ ವಾಚಾ ಬಳೇ । ವಾಯಾಂಚಿ ಝುಕವಿಜತೀ ಪ್ರತೀತೀಚೇ ಡೋಳೇ । ಮಗ ಸಾಚೋಕಾರೇ ಬೋಧಾವೇಳೇ? ಅಥಿ ನಾ ಹೋಇಜೇ ।।೧೩೯।।

ಅವಜಾನಂತಿ ಮಾಂ ಮೂಢಾಃ ಮಾನುಷೀಂ ತನುಮಾಶ್ರಿತಮ್ ।
ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ।।೧೧।।

ಕಿಂಬಹುನಾ ಭವಾ ಬಿಹಾಯಾ । ಆಣಿ ಸಾಚೇ ಚಾಡ ಅಥೀ ಜರೀ ಮಿಯಾ । ತರೀ ತೂ ಗಾ ಉಪಪತ್ತೀ ಇಯಾ । ಜತನ ಕೀಜೇ ।।೧೪೦।। ಏರ್ಹವೀ ದಿಠೀ ವೇಧಲೀ ಕವಳೇ । ತೈ ಚಾಂದಣೆಯಾತೇ ಮ್ಹಣೇ ಪಿವಳೇ । ತೇವಿ ಮಾಝ್ಯಾ ಸ್ವರೂಪೀ ನಿರ್ಮಳೇ । ದೇಖತೀ ದೋಷ ।।೧೪೧।। ನಾತರೀ ಜ್ವರೇ ವಿಟಾಳಲೇ ಮುಖ । ತೇ ದೂಧಾತೇ ಮ್ಹಣೇ ಕಡೂ ವಿಖ । ತೇವಿ ಅಮಾನುಷಾ ಮಾನುಷ । ಮಾನಿತೀ ಮಾತೇ ।।೧೪೨।। ಮ್ಹಣೌನಿ ಪುಢತಪುಢತೀ ಧನಂಜಯಾ । ಝಣೇ ವಿಸಂಬಸೀ ಯಾ ಅಭಿಪ್ರಾಯಾ । ಜೇ ಇಯಾ ಸ್ಥೂಲದೃಷ್ಟೀ ವಾಯಾ । ಜಾಇಜೇಲ ಗಾ ।।೧೪೩।।

ಅರ್ಜುನಾ, ಸರ್ವಸೃಷ್ಟಿಗಳಲ್ಲಿನ ಜನರ ವ್ಯಾಪಾರಕ್ಕೆ ಯಾವ ಪ್ರಕಾರವಾಗಿ ಸೂರ್ಯನು ಕೇವಲ ಕಾರಣೀಭೂತನಾಗಿರುವನೋ, ಅದರಂತೆ ಜಗತ್ತಿನ ಉತ್ಪತ್ತಿಗೆ ನಾನು ಕಾರಣನಿರುವೆನೆಂದು ತಿಳಿ ||೧೩೧||

ಏಕೆಂದರೆ, ಯಾವ ವೇಳೆಯಲ್ಲಿ ನಾನು ಮಾಯೆಯ ಅಂಗೀಕಾರ ಮಾಡುವೆನೋ, ಆಗ ಆಕೆಯ ಯೋಗದಿಂದ ಪ್ರಾಣಿಮಾತ್ರರ ಉತ್ಪತ್ತಿಯಾಗುವುದು. ಆದ್ದರಿಂದ ಈ ಜಗದ ಉತ್ಪತ್ತಿಗೆ ಕಾರಣ ನಾನು ಎಂದು ಜನರ ತಿಳುವಳಿಕೆಯಾಗಿರುವುದು ||೧೩೨||

ಅಂದಮೇಲೆ ನನ್ನಿಂದ ಭೂತಗಳ ಉತ್ಪತ್ತಿಯಾಗುತ್ತಿದ್ದರೂ ಸಹ ಭೂತಗಳಲ್ಲಿ ನಾನಿಲ್ಲ. ಈ ನನ್ನ (ಐಶ್ವರ್ಯಯೋಗ) ಅದ್ಭುತ ಕಾರ್ಯವನ್ನು, ಜ್ಞಾನದ ಪ್ರಕಾಶದಿಂದ ಸರಿಯಾಗಿ ವಿಚಾರಿಸಿ ನೋಡು ||೧೩೩||

ಅಥವಾ ಭೂತಗಳು ನನ್ನಲ್ಲಿಲ್ಲ, ಮತ್ತು ನಾನು ಭೂತಗಳಲ್ಲಿಲ್ಲ, ಈ ಮುಖ್ಯ ಮರ್ಮವನ್ನು ನೀನು ಎಂದೂ ಮರೆಯಬೇಡ ||೧೩೪||

ಈ ನನ್ನ ಮುಖ್ಯ ಗುಪ್ತ (ಮರ್ಮ) ವನ್ನು ನಿನಗೆ ಬಿಚ್ಚಿ ತೋರಿಸಿರುವೆನು, ಆದ್ದರಿಂದ ನೀನು ಈಗ ನಿನ್ನ ಇಂದ್ರಿಯಗಳ ದ್ವಾರಗಳನ್ನು ಮುಚ್ಚಿ (ವಿಷಯಭೋಗ ಬಿಟ್ಟು) ಹೃದಯದಲ್ಲಿ ಈ ಉಪಭೋಗ ಸೇವಿಸು ||೧೩೫||

ಅರ್ಜುನಾ, ಈ ಮರ್ಮವು ಎಲ್ಲಿ ಯವರೆಗೆ ಕೈಗೂಡುವುದಿಲ್ಲವೋ, ಅಲ್ಲಿಯವರೆಗೆ ನನ್ನ ನಿಜಸ್ಥಿತಿ ಸ್ವರೂಪವು ಎಂದೂ ಸಿಗಲು ಸಾಧ್ಯವಿಲ್ಲ. ತೌಡಿನಲ್ಲಿ ಶೋಧಿಸಿದಾಗ ಒಂದು ಕಾಳೂ ಕೂಡ ಸಿಗುವುದೇ ಇಲ್ಲ ||೧೩೬||

ಸಾಮಾನ್ಯವಾಗಿ ಅನುಮಾನದ ಒತ್ತಡದಿಂದ ಜೀವರಿಗೆ ಪರಮಾತ್ಮ ಜ್ಞಾನವಾಗಿದೆ ಎಂದು ಭಾಸವಾಗುವುದು ನಿಜ. ಆದರೆ ಅದು ವ್ಯರ್ಥವಾದದ್ದು. ಏಕೆಂದರೆ, ಮೃಗಜಲದ ನೀರಿನಿಂದ ಎಂದಾದರೂ ಭೂಮಿಯು ಹಸಿಯಾಗಿದೆಯೇ? ||೧೩೭||

ಮೀನುಗಳನ್ನು ಹಿಡಿಯಲು ಬಲೆಯನ್ನು ನೀರಿನಲ್ಲಿ ಹರಡಲು ಅದರಲ್ಲಿ ಚಂದ್ರನ ಬಿಂಬವು ಸಿಕ್ಕಿಕೊಂಡಂತೆ ಕಾಣುವುದು. ಆದರೆ ಆ ಬಲೆಯನ್ನು ದಂಡೆಗೆ ತಂದಾಗ ಚಂದ್ರಬಿಂಬವು ಎಲ್ಲಿರುವುದು? ನೀನೇ ಹೇಳು ||೧೩೮||

ಅದರಂತೆ ''ನಮಗೆ ಅನುಭವವಾಯಿತು'' ಹೀಗೆ ಶಬ್ದಗಳ ಮತ್ತು ಮಾತಿನ ಯೋಗದಿಂದ ಎಷ್ಟೋ ಜನರು ತಮ್ಮನ್ನು ತಾವೇ ವಂಚಿಸಿಕೊಳ್ಳುವರು. ಬಳಿಕ ನಿಜವಾದ ಬೋಧೆಯ ಪರೀಕ್ಷೆಯ ಸಮಯಕ್ಕೆ ಅವರ ಬೋಧೆಯು ನಿರುಪಯೋಗವಾಗುವುದು ||೧೩೯||

ಶ್ಲೋಕಾರ್ಥ :- ಸರ್ವಭೂತ ನಿಯಾಮಕನಾದರೂ, ಮಾನವ ಶರೀರಧಾರಿಯಾದ ನನ್ನನ್ನು ಮೂಢರು ತಿರಸ್ಕರಿಸುತ್ತಾರೆ, ಅವರಿಗೆ ನನ್ನ ಶ್ರೇಷ್ಠ ತತ್ತ್ವವು ತಿಳಿಯದು ||೧೧||

ಹೆಚ್ಚಿಗೇನು ಹೇಳಬೇಕು ? ಈ ಸಂಸಾರಕ್ಕೆ ಭಯಪಟ್ಟು ನನ್ನ ಪ್ರಾಪ್ತಿಯ ನಿಜವಾದ ಬಯಕೆವಾದರೆ ಮಾತ್ರ ನೀನು ನಾನು ಹೇಳಿದ ಮರ್ಮವನ್ನು ಸರಿಯಾಗಿ ಲಕ್ಷದಲ್ಲಿಡು ||೧೪೦||

ಸಾಮಾನ್ಯವಾಗಿ, ಕಾಮಣಿಯಾದವನಿಗೆ ದೃಷ್ಟಿಗೆ ದೋಷ ಬಂದು ಆತನು ಬೆಳದಿಂಗಳಿಗೆ ಹಳದಿ ಎನ್ನುವನು. ಅದರಂತೆ ನಿರ್ದೋಷನಾಗಿರುವ ನನ್ನ ಶುದ್ಧ ಸ್ವರೂಪದಲ್ಲಿ ಆತನಿಗೆ ದೋಷ ಕಾಣುವುದು ||೧೪೧||

ಅಥವಾ ಜ್ವರದಿಂದ ಬಾಯಿಯು ವಿಷವಾದ ಮೇಲೆ ಆತನಿಗೆ ಹಾಲು ವಿಷದಂತೆ ಕಹಿಯಾಗುವುದು. ಅದರಂತೆ ನಾನು ಮನುಷ್ಯನಲ್ಲದಿದ್ದರೂ, ಮನುಷ್ಯನೆಂದು ತಿಳಿಯುವರು ||೧೪೨||

ಆದ್ದರಿಂದ ಧನಂಜಯನೇ, ಪುನಃ ಪುನಃ ನಿನಗೆ ಹೇಳುವುದೇನೆಂದರೆ, ಈ ಅಭಿಪ್ರಾಯವನ್ನು ಕದಾಚಿತ್ ಮರೆಯದಿರು. ಕಾರಣ, ನೀನು ಸ್ಥೂಲ ದೃಷ್ಟಿಯಿಂದ ನೋಡಿದರೆ ನಿನ್ನ ನೋಟವು ವ್ಯರ್ಥವಾದೀತು ||೧೪೩||

ಪೈ ಸ್ಥೂಲದೃಷ್ಟೀ ದೇಖತೀ ಮಾತೇ । ತೇಂಚಿ ನ ದೇಖಣೇ ಜಾಣ ನಿರುತೇ । ಜೈಸೇ ಸ್ವಪ್ನೀಂಚೇನಿ ಅಮೃತೇ । ಅಮರಾ ನೋಹಿಜೇ ॥೧೪೪॥ ಏರ್ಹವೀ ಸ್ಥೂಲದೃಷ್ಟೀ ಮೂಢ । ಮಾತೇ ಜಾಣತೀ ಕೀರ ದೃಢ । ಪರಿ ತೇ ಜಾಣಣೇಂಚಿ ಜಾಣಣೇಯಾ ಆಡ । ರಿಗೋನಿ ಠಾಕೇ ॥೧೪೫॥ ಜೈಸಾ ನಕ್ಷತ್ರಾಚಿಯಾ ಆಭಾಸಾ । ಸಾಠೀ ಘಾತು ಝಾಲಾ ತಯಾ ಹಂಸಾ । ಮಾಜೀ ರತ್ನಬುದ್ಧೀಚಿಯಾ ಆಶಾ । ರಿಗೋನಿಯಾ ॥೧೪೬॥ ಸಾಂಗೈ ಗಂಗಾ ಯಾ ಬುದ್ಧೀ ಮೃಗಜಳ । ಠಾಕೋನಿ ಆಲಿಯಾಚೇ ಕವಣ ಫಳ । ಕಾಯ ಸುರತರು ಮ್ಹಣೌನಿ ಬಾಬುಳ । ಸೇವಿಲೀ ಕರೀ ॥೧೪೭॥ ಹಾರ ನಿಳಯಾಚಾಚಿ ದುಸರಾ । ಯಾ ಬುದ್ಧೀ ಹಾತು ಘಾತಲಾ ವಿಖಾರಾ । ಕಾ ರತ್ನೇ ಮ್ಹಣೌನಿ ಗಾರಾ । ವೇಂಚಿ ಜೇವೀ ॥೧೪೮॥ ಅಥವಾ ನಿಧಾನ ಹೇ ಪ್ರಗಟಲೇ । ಮ್ಹಣೌನಿ ಖದಿರಾಂಗಾರ ಖೋಳೇ ಭರಿಲೇ । ಕಾ ಸಾಉಲೀ ನೇಣತಾ ಘಾತಲೇ । ಕುಹಾ ಸಿಂಹೇ ॥೧೪೯॥ ತೇವೀ ಮೀ ಮ್ಹಣೌನಿ ಪ್ರಪಂಚೀ । ಜಿಹೀ ಬುಡೀ ದಿಧಲೀ ಕೃತನಿಶ್ಚಯಾಚೀ । ತಿಹೀ ಚಂದ್ರಾಸಾಠೀ ಜೇವೀ ಜಳೀಂಚೀ । ಪ್ರತಿಭಾ ಧರಿಲೀ ॥೧೫೦॥ ತೈಸಾ ಕೃತನಿಶ್ಚಯೋ ವಾಯಾ ಗೇಲಾ । ಜೈಸಾ ಕೋಣ್ಹೀ ಏಕು ಕಾಂಜೀ ಪ್ಯಾಲಾ । ಮಗ ಪರಿಣಾಮ ಪಾಹೋ ಲಾಗಲಾ । ಅಮೃತಾಚಾ ॥೧೫೧॥ ತೈಸೇ ಸ್ಥೂಲಾಕಾರೀ ನಾಶಿವಂತೇ । ಭರಂವಸಾ ಬಾಂಧೋನೀ ಚಿತ್ತೇ । ಪಾಹತೀ ಮಜ ಅವಿನಾಶಾತೇ । ತರೀ ಕೈಂಚಾ ದಿಸೇ? ॥೧೫೨॥ ಅಗಾ ಕಾಈ ಪಶ್ಚಿಮಸಮುದ್ರಾಚಿಯಾ ತಟಾ । ನಿಘಿಜತ ಆಹೇ ಪೂರ್ವಿಲಿಯಾ ವಾಟಾ । ಕಾ ಕೋಂಡಾ ಕಾಂಡತಾ ಸುಭಟಾ । ಕಣು ಆತುಡೇ? ॥೧೫೩॥ ತೈಸೇ ವಿಕಾರಲೇ ಹೇ ಸ್ಥೂಳ । ಜಾಣಿತಲೇಯಾ ಮೀ ಜಾಣವತಸೇ ಕೇವಳ । ಕಾಈ ಫೇಣ ಪಿತಾ ಜಳ । ಸೇವಿಲೇ ಹೋಯ ? ॥೧೫೪॥ ಮ್ಹಣೌನಿ ಮೋಹಿಲೇನಿ ಮನೋಧರ್ಮೇ । ಹೇಂಚಿ ಮೀ ಮಾನೂನಿ ಸಂಭ್ರಮೇ । ಮಗ ಯೇಥೀಂಚೇ ಜಿಯೇ ಜನ್ಮಕರ್ಮೇ । ತಿಯೇ ಮಜಚಿ ಮ್ಹಣತೀ ॥೧೫೫॥ ಯೇತುಲೇನಿ ಅನಾಮಾ ನಾಮ । ಮಜ ಅಕ್ರಿಯಾಸೀ ಕರ್ಮ । ವಿದೇಹಾಸೀ ದೇಹಧರ್ಮ । ಆರೋಪಿತೀ ॥೧೫೬॥ ಮಜ ಆಕಾರಶೂನ್ಯಾ ಆಕಾರು । ನಿರುಪಾಧಿಕಾ ಉಪಚಾರು । ಮಜ ವಿಧಿವರ್ಜಿತಾ ವ್ಯವಹಾರು । ಆಚಾರಾದಿಕ ॥೧೫೭॥ ಮಜ ವರ್ಣಹೀನಾ ವರ್ಣು । ಗುಣಾತೀತಾಸಿ ಗುಣು । ಮಜ ಅಚರಣಾ ಚರಣು । ಅಪಾಣಿಯಾ ಪಾಣೀ ॥೧೫೮॥

ಯಾವ ಪ್ರಕಾರವಾಗಿ ಸ್ವಪ್ನದಲ್ಲಿನ ಅಮೃತದಿಂದ ಯಾರೂ ಅಮರರಾಗುವುದಿಲ್ಲ. ಅದರಂತೆ ಯಾರು ನನ್ನನ್ನು ಸ್ಥೂಲದೃಷ್ಟಿಯಿಂದ ನೋಡುವರೋ, ಅವರು ನಿಜವಾಗಿಯೂ ನನ್ನನ್ನು ನೋಡಲಾರರು ॥೧೪೪॥

ಆದರೂ ಅಜ್ಞಾನಿ ಜನರು ಸ್ಥೂಲದೃಷ್ಟಿಯಿಂದ ನನ್ನನ್ನು ತಿಳಿದಿದ್ದೇನೆ ಎನ್ನುವರು. ಆದರೆ ಅವರ ಸ್ಥೂಲದೃಷ್ಟಿಯ ಜ್ಞಾನವು ಯತಾರ್ಥ ಜ್ಞಾನಕ್ಕೆ ಅಡ್ಡ ಬರುವುದು ॥೧೪೫॥

ನಕ್ಷತ್ರಗಳ ಪ್ರತಿಬಿಂಬವನ್ನು ನೀರಿನಲ್ಲಿ ಕಂಡು ಅವು ಮುತ್ತು ಎಂದು ತಿಳಿದು ಅವನ್ನು ಪ್ರಾಪ್ತಿ ಮಾಡುವುದಕ್ಕಾಗಿ ಹಂಸಪಕ್ಷಿಯು ಆಕಾಶದಿಂದ ಕೆಳಗೆ ಎರಗಿ ತನ್ನ ಪ್ರಾಣವನ್ನು ಕಳೆದುಕೊಳ್ಳುವುದು ॥೧೪೬॥

ಇದು ಗಂಗಾ ಪ್ರವಾಹವೆಂದು ತಿಳಿದು ಯಾರಾದರೂ ಮೃಗಜಲದ ಹತ್ತಿರ ಹೋದರೆ ಅವರಿಗೇನು ದೊರಕೀತು? ನೀನೇ ಹೇಳು. ಅದರಂತೆ ಕಲ್ಪವೃಕ್ಷವೆಂದು ಜಾಲಿಮರವನ್ನು ಆಶ್ರಯಿಸಿದರೆ ಯಾವ ಉಪಯೋಗ? ॥೧೪೭॥

ನೀಲಮಣಿಯ ಎರಡು ಸುತ್ತಿನ ಹಾರವೆಂದು ತಿಳಿದು ವಿಷಸರ್ಪವನ್ನು ಕೈಯಲ್ಲಿ ಹಿಡಿದರೆ ಅಥವಾ ರತ್ನವೆಂದು ತಿಳಿದು ಬೆನಕನಕಲ್ಲು ಆರಿಸಿ ತೆಗೆದುಕೊಂಡರೆ ॥೧೪೮॥

ಅಥವಾ ''ಇದು ದ್ರವ್ಯದ ನಿಧಿ ಪ್ರಗಟವಾಗಿದೆ'' ಎಂದು ತಿಳಿದು ಖದಿರ ಬೆಂಕಿಯನ್ನು ಸೆರಗಿನಲ್ಲಿ ಕಟ್ಟಿಕೊಂಡರೆ ಅಥವಾ ತನ್ನ ಪ್ರತಿಬಿಂಬವೆಂದು ತಿಳಿಯದೇ ಸಿಂಹವು ಬಾವಿಯಲ್ಲಿ ಹಾರಿಕೊಂಡರೆ ಹೇಗೋ ॥೧೪೯॥

ಅದರಂತೆ ನಾನು ಪರಮಾತ್ಮನು ದೇಹಧಾರಿಯಾಗಿರುವೆನು ಎಂದು ತನ್ನ ಬುದ್ಧಿಯಲ್ಲಿ ಕೃತನಿಶ್ಚಯ ಮಾಡಿಕೊಂಡರೆ ಆತನು ನಿಜವಾದ ಚಂದ್ರವೆಂದು ತಿಳಿದು ನೀರಿನಲ್ಲಿಯ ಚಂದ್ರನ ಪ್ರತಿಬಿಂಬವನ್ನು ಹಿಡಿದಂತಾದೀತು ॥೧೫೦॥

ಅದೇ ಪ್ರಕಾರವಾಗಿ ಸಂಸಾರದಲ್ಲಿ ನಾನಿದ್ದೇನೆ ಎಂದು ತಿಳಿದ ಅವರ ಕೃತನಿಶ್ಚಯವು ವ್ಯರ್ಥವಾಗುವುದು. ಯಾವನೋ ಒಬ್ಬನು ಗಂಜಿಯನ್ನು ಕುಡಿದು ಅಮೃತದಿಂದಾಗುವ ಲಾಭವನ್ನು ಇಚ್ಛಿಸಿದಂತೆ ॥೧೫೧॥

ಹೀಗೆ ಅಂತಃಕರಣಪೂರ್ವಕವಾಗಿ ಭರವಸೆಯಿಂದ ನಾಶಿವಂತ ಸ್ಥೂಲಾಕಾರಕ್ಕೆ ಅವಿನಾಶಿ ಬುದ್ಧಿಯಿಂದ ನನ್ನನ್ನು ನೋಡುವರು. ಹಾಗಾದರೆ ನಾನು ಅವರಿಗೆ ಹೇಗೆ ಕಾಣಬೇಕು? ॥೧೫೨॥

ಇಲ್ಲಿ ನೋಡು, ಯಾರೋ ಒಬ್ಬರು ಪಶ್ಚಿಮ ಸಮುದ್ರದ ದಂಡೆಗೆ ಹೋಗುವ ಉದ್ದೇಶದಿಂದ ಪೂರ್ವದಿಕ್ಕಿನ ಮಾರ್ಗಕ್ಕೆ ಹೋಗುತ್ತಿದ್ದರೆ, ಆತನಿಗೆ ಪಶ್ಚಿಮ ಸಮುದ್ರವು ಸಿಕ್ಕೀತೇ? ಅಥವಾ ಮಹಾವೀರನೇ, ತೌಡು ಕುಟ್ಟಿದರೆ ಕಾಳು ಸಿಕ್ಕೀತೇ? ॥೧೫೩॥

ಅದರಂತೆ ಈ ವಿಸ್ತಾರಗೊಂಡ ಜಗತ್ತನ್ನು ತಿಳಿಯುವುದರಿಂದ ನಿರ್ದೋಷನಾದ ನನ್ನನ್ನು ತಿಳಿಯಬಹುದೇ ? ಬುರುಗು ಕುಡಿದರೆ ನೀರು ಕುಡಿದಂತಾಗಬಹುದೇ? ॥೧೫೪॥

ಆದ್ದರಿಂದ ಮಾಯಾಮೋಹಿತ ಮನೋವೃತ್ತಿಯೊಂದಿಗೆ ಸಂಸಾರದಲ್ಲಿಯೇ ನಾನಿದ್ದೇನೆ ಎಂದು ಭ್ರಾಂತಿಯಿಂದ ತಿಳಿದು, ಅಲ್ಲಿನ ಜನ್ಮಮರಣಾದಿ ಎಲ್ಲಸ್ಥಿತಿಗಳು ನನಗೂ ಇವೆ ಎಂದು ಭಾವಿಸುವರು ॥೧೫೫॥

ಈ ಪ್ರಕಾರವಾಗಿ ನಾಮರಹಿತನು, ಕ್ರಿಯಾರಹಿತನು ಮತ್ತು ದೇಹರಹಿತನು ಆದ ನನಗೆ ನಾಮಧಾರಕನು, ಕರ್ಮಕಾರಕನು, ದೇಹಧರ್ಮದಿಂದ ಕೂಡಿದವನು ಎಂದು ತಿಳಿಯುವರು ॥೧೫೬॥

ನನಗೆ ನಿರಾಕಾರಕ್ಕೆ ಆಕಾರವನ್ನು, ನಿರುಪಾದಿಕಕ್ಕೆ ಉಪಚಾರವನ್ನು ವಿಧಿ ವರ್ಜಿತನಾದ ನನಗೆ ಆಚಾರಾದಿಕ ವ್ಯವಹಾರವನ್ನು ॥೧೫೭॥

ಜಾತಿ ರಹಿತನಾದ ನನಗೆ ಜಾತಿಯನ್ನು, ಗುಣಾತೀತನಾದ ನನಗೆ ಗುಣವನ್ನು, ಚರಣರಹಿತನಾದ ನನಗೆ ಚರಣವನ್ನು ಮತ್ತು ಹಸ್ತರಹಿತನಾದ ನನಗೆ ಹಸ್ತವನ್ನು ॥೧೫೮॥

ಮಜ ಅಮೇಯಾ ಮಾನ । ಸರ್ವಗತಾಸೀ ಸ್ಥಾನ । ಜೈಸೇ ಸೇಜೇಮಾಜೀ ವನ । ನಿದೇಲಾ ದೇಖೇ ।।೧೫೯।। ತೈಸೇ ಅಶ್ರವಣಾ ಶ್ರೋತ್ರ । ಮಜ ಅಚಕ್ಷೂಸೀ ನೇತ್ರ । ಅಗೋತ್ರಾ ಗೋತ್ರ । ಅರೂಪಾ ರೂಪ ।।೧೬೦।। ಮಜ ಅವ್ಯಕ್ತಾಸೀ ವ್ಯಕ್ತೀ । ಆನಾರ್ತಾಸೀ ಆರ್ತೀ । ಸ್ವಯಂತೃಪ್ತಾ ತೃಪ್ತೀ । ಭಾವಿತೀ ಗಾ ।।೧೬೧।। ಮಜ ಅನಾವರಣಾ ಪ್ರಾವರಣ । ಭೂಷಣಾತೀತಾಸಿ ಭೂಷಣ । ಮಜ ಸಕಳ ಕಾರಣಾ ಕಾರಣ । ದೇಖತೀ ತೇ ।।೧೬೨।। ಮಜ ಸಹಜಾತೇ ಕರಿತೀ । ಸ್ವಯಂಭಾತೇ ಪ್ರತಿಷ್ಠಿತೀ । ನಿರಂತರಾತೇ ಆವ್ಹಾನಿತೀ । ವಿಸರ್ಜಿತೀ ಗಾ ।।೧೬೩।। ಮೀ ಸರ್ವದಾ ಸ್ವತಃಸಿದ್ಧು । ತೋ ಕೀ ಬಾಳ ತರುಣ ವೃದ್ಧು । ಮಜ ಏಕರೂಪಾ ಸಂಬಂಧು । ಜಾಣತೀ ಐಸೇ ।।೧೬೪।। ಮಜ ಅದ್ವೈತಾಸಿ ದುಜೇ । ಮಜ ಅಕರ್ತಯಾಸಿ ಕಾಜೇ । ಮೀ ಅಭೋಕ್ತಾ ಕೀ ಭುಂಜೇ । ಐಸೇ ಮ್ಹಣತೀ ।।೧೬೫।। ಮಜ ಅಕುಳಾಚೇ ಕುಳ ವಾನಿತೀ । ಮಜ ನಿತ್ಯಾಚೇನಿ ನಿಧನೇ ಶಿಣತೀ । ಮಜ ಸರ್ವಾಂತರಾತೇ ಕಲ್ಪಿತೀ । ಅರಿ ಮಿತ್ರ ಗಾ ।।೧೬೬।। ಮೀ ಸ್ವಾನಂದಾಭಿ ರಾಮು । ತಯಾ ಮಜ ಅನೇಕ ಸುಖಾಂಚಾ ಕಾಮು । ಆಘವಾಚಿ ಮೀ ಅಸೇ ಸಮು । ಕೀ ಮ್ಹಣತೀ ಏಕದೇಶೀ ।।೧೬೭।। ಮೀ ಆತ್ಮಾ ಏಕ ಚರಾಚರೀ । ಮ್ಹಣತೀ ಏಕಾಚಾ ಕೈಪಕ್ಷ ಕರೀ । ಆಣಿ ಕೋಪೋನಿ ಏಕಾತೇ ಮಾರೀ । ಹೇಂಚಿ ವಾಢವಿತೀ ।।೧೬೮।। ಕಿಂಬಹುನಾ ಐಸೇ ಸಮಸ್ತ । ಜೇ ಹೇ ಮಾನುಷ ಧರ್ಮ ಪ್ರಾಕೃತ । ತಯಾಚಿ ನಾಂವ ಮೀ ಐಸೇ ವಿಪರೀತ । ಜ್ಞಾನ ತಯಾಂಚೇ ।।೧೬೯।। ಜಂವ ಆಕಾರು ಏಕ ಪುಢಾ ದೇಖತೀ । ತಂವ ಹಾ ದೇವ ಯೇಣೇ ಭಾವೇ ಭಜತೀ । ಮಗ ತೋಚಿ ವಿಘಡಲಿಯಾ ಟಾಕಿತೀ । ನಾಹೀ ಮ್ಹಣೌನಿ ।।೧೭೦।। ಮಾತೇ ಯೇಣೇ ಯೇಣೇ ಪ್ರಕಾರೇ । ಜಾಣತೀ ಮನುಷ್ಯ ಐಸೇನಿ ಆಕಾರೇ । ಮ್ಹಣೌನಿ ಜ್ಞಾನಚಿ ತೇ ಆಂಧಾರೇ । ಜ್ಞಾನಾಸಿ ಕರೀ ।।೧೭೧।।

ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।
ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ।।೧೨।।

ಯಾಲಾಗೀ ಜನ್ಮ ಲೇಚಿ ತೇ ಮೋಘ । ಜೈಸೇ ವಾರ್ಷಿಯೇವೀಣ ಮೇಘ । ಕಾ ಮೃಗಜಳಾಚೇ ತರಂಗ । ದುರೂನೀಚಿ ಪಾಹಾವೇ ।।೧೭೨।। ಅಥವಾ ಕೋಲ್ಹೇರೀಚೇ ಅಸಿವಾರ । ನಾತರೀ ವೋಡಂಬರೀಚೇ ಅಳಂಕಾರ । ಕೀ ಗಂಧರ್ವನಗರೀಚೇ ಆವಾರ । ಆಭಾಸತೀ ಕಾ ।।೧೭೩।।

ಪರಿಣಾಮತೀತನಾದ ನನಗೆ ಪರಿಣಾಮವನ್ನು, ಸರ್ವವ್ಯಾಪಕನಾದ ನನಗೆ ಒಂದು ಸ್ಥಾನವನ್ನು, ಮಲಗಿಕೊಂಡಾಗ ಹಾಸಿಗೆಯಲ್ಲಿಯೇ ಸ್ವಪ್ನದಲ್ಲಿ ವನಶೋಭೆಯನ್ನು ನೋಡಿದಂತೆ ॥೧೫೯॥

ಅದರಂತೆ ಕರ್ಣರಹಿತನಾದ ನನಗೆ ಕರ್ಣವನ್ನು, ನೇತ್ರರಹಿತನಾದ ನನಗೆ ನೇತ್ರಗಳನ್ನು, ಗೋತ್ರ ರಹಿತನಾದ ನನಗೆ ಗೋತ್ರವನ್ನು, ನಿರಾಕಾರನಾದ ನನಗೆ ಆಕಾರವನ್ನು ॥೧೬೦॥

ಅದೇ ಪ್ರಕಾರವಾಗಿ ಅವ್ಯಕ್ತನಾಗಿರುವ ನನಗೆ ವ್ಯಕ್ತಿತ್ವವನ್ನು, ನಿರಿಚ್ಛೆನಾದ ನನಗೆ ಇಚ್ಛೆಯನ್ನು, ಯಾವ ನಾನು ಸ್ವಯಮೇವ ತೃಪ್ತನಾದ ನನಗೆ ತೃಪ್ತಿಯನ್ನು ಹೀಗೆ ಕಲ್ಪಿಸುವರು ॥೧೬೧॥

ಸರ್ವಜಗಕ್ಕೆ ಹೊದಿಸುವ ನನಗೆ ಹೊದಿಕೆ ಹಾಕುವರು, ಭೂಷಣಾತೀತನಾದ ನನಗೆ ಅಲಂಕಾರಗಳನ್ನು ಹಾಕುವರು, ನಾನು ಸರ್ವಜಗತ್ತನ್ನು, ಉತ್ಪನ್ನ ಮಾಡಿದವನಿದ್ದರೂ ನನಗೆ ಯಾರೋ ಹುಟ್ಟಿಸಿದರು ಎಂದು ಭಾವಿಸುವರು ॥೧೬೨॥

ನಾನು ಸ್ವಯಮೇವನಿದ್ದು ನನ್ನ ಮೂರ್ತಿಗಳನ್ನು ಮಾಡುವುದು, ನಾನು ಸ್ವತಃ ಸಿದ್ಧನಿದ್ದು ನನ್ನ ಪ್ರಾಣ ಪ್ರತಿಷ್ಠೆ ಮಾಡುವರು, ನಾನು ನಿತ್ಯ ಸರ್ವತ್ರನಿದ್ದು ನನಗೆ ಆವ್ಹಾನ, ವಿಸರ್ಜನೆ ಮಾಡುವರು ॥೧೬೩॥

ನಾನು ಯಾವಾಗಲೂ ಸ್ವಯಮೇವ ನಿರಾಕಾರ ಸಿದ್ಧನಿದ್ದರೂ, ನನಗೆ ಬಾಲ್ಯ, ತಾರುಣ್ಯ ಮತ್ತು ವೃದ್ಧ ಹೀಗೆ ಅನೇಕ ಪ್ರಕಾರದ ಅವಸ್ಥೆಗಳ ಸಂಬಂಧವನ್ನು ಹಚ್ಚುವರು ॥೧೬೪॥

ನಾನು ಅದ್ವೈತನಿದ್ದು ನನ್ನಲ್ಲಿ ದ್ವೈತವನ್ನು ಭಾವಿಸುವರು. ನಾನು ಏನೂ ಮಾಡಲಾರದವನಿದ್ದು ಕರ್ಮ ಮಾಡುವವನು ಎಂದು ಮತ್ತು ಏನೂ ಭುಂಜಿಸಲಾರದ ನನಗೆ ಭುಂಜಿಸುವವನು ಎಂದು ಹೇಳುವರು ॥೧೬೫॥

ಕುಲ ಗೋತ್ರ ಇಲ್ಲದ ನನಗೆ ನನ್ನ ಕುಲದ ವರ್ಣನೆ ಮಾಡುವರು. ನಾನು ನಿತ್ಯನಾಗಿದ್ದರೂ ಕೂಡ ಸಾಯುವವನೆಂದು ತಿಳಿದು ನನ್ನ ಮರಣ ಶೋಕವನ್ನು ಮಾಡುವರು, ಎಲ್ಲರಲ್ಲಿಯೂ ಅಂತರ್ಯಾಮಿಯಾಗಿ ಇರುವ ನನ್ನಲ್ಲಿ ಶತ್ರು, ಮಿತ್ರರ ಕಲ್ಪನೆ ಮಾಡುವರು ॥೧೬೬॥

ನಿಜಾನಂದದಲ್ಲಿ ನಿಮಗ್ನನಾಗಿರುವ ನನಗೆ ಇತರ ಸುಖಗಳನ್ನು ಇಚ್ಛಿಸುವೆನೆನ್ನುವರು ಮತ್ತು ಸರ್ವಸ್ಥಳಗಳಲ್ಲಿ ನನ್ನ ವ್ಯಾಪ್ತಿಯ ಸಮಾನವಿದ್ದು ನನಗೆ ಏಕದೇಶಿ ಎನ್ನುವರು ॥೧೬೭॥

ಎಲ್ಲ ಸ್ಥಾವರ ಜಂಗಮರ ಆತ್ಮನಾಗಿರುವ ನನಗೆ ಒಬ್ಬರ ಕೈವಾರಿಯು (ರಕ್ಷಕನು) ಇನ್ನೊಬ್ಬರಿಗೆ ಕೋಪದಿಂದ ಕೊಲ್ಲುವವನು ಎಂದು ಪ್ರಸಿದ್ಧಿಗೊಳಿಸುವರು ॥೧೬೮॥

ಹೆಚ್ಚಿಗೇನು ಹೇಳಬೇಕು? ಈ ಪ್ರಕಾರದ ಸರ್ವ ಕ್ಷುದ್ರವಾದ ಮನುಷ್ಯ ಧರ್ಮವನ್ನು ಅವರು ಎಲ್ಲವನ್ನು ನನಗೆ ಹೋಲಿಸುವುದು ಅವರ ವಿಪರೀತ ಜ್ಞಾನವಾಗಿರುವುದು ॥೧೬೯॥

ಯಾವ ಕಾಲಕ್ಕೆ ಯಾವುದಾದರೊಂದು ಎದುರಿನ ಮೂರ್ತಿಯನ್ನು ಕಂಡು ಅದಕ್ಕೆ ದೇವರೆಂದು ಭಾವಿಸಿ ಪೂಜಿಸುವರು. ಆಗ ಅದೇ ಮೂರ್ತಿಯು ಭಂಗವಾದರೆ ಅದರಲ್ಲಿ ದೇವರಿಲ್ಲವೆಂದು ತಿಳಿದು ಅದನ್ನು ಒಗೆಯುವರು ॥೧೭೦॥

ನನಗೆ ಈ ಎಲ್ಲ ಪ್ರಕಾರವಾಗಿ ಮನುಷ್ಯನೇ ನಾನಾಗಿರುವೆ ಎಂದು ತಿಳಿಯುವರು. ಆದ್ದರಿಂದಲೇ ಅವರ ಜ್ಞಾನವು ನಿಜ ಜ್ಞಾನಕ್ಕೆ ಅಡ್ಡಾಗಿರುವುದು ॥೧೭೧॥

ಶ್ಲೋಕಾರ್ಥ :- ಅವರ ಆಸೆಗಳು ವ್ಯರ್ಥವಾದವುಗಳು, ಅವರ ಕೋರಿಕೆಗಳೂ ವ್ಯರ್ಥವೇ. ಅವರ ಅರಿವು ನಿರುಪಯೋಗಿ, ಅಂಥವರು ಮೋಹಕರವಾದ ರಾಕ್ಷಸೀ ಪ್ರಕೃತಿಗೆ, ಅಸುರೀ ಪ್ರಕೃತಿಗೆ ಸಿಕ್ಕಿ ಕೆಟ್ಟು ಹೋಗುತ್ತಾರೆ ॥೧೨॥

ಆದ್ದರಿಂದ ಯಾರು ನನ್ನ ವಿಷಯದಲ್ಲಿ ಈ ರೀತಿಯ ತಿಳುವಳಿಕೆ ಮಾಡಿಕೊಂಡಿರುವರೋ ಅವರ ಜನ್ಮವು ವ್ಯರ್ಥವಾದದ್ದು. ಮಳೆಗರೆಯದ ಮೋಡಗಳು ವ್ಯರ್ಥ, ಅಥವಾ ಮೃಗಜಲದ ತೆರೆಗಳನ್ನು ದೂರದಿಂದಲೇ ನೋಡಲು ಯೋಗ್ಯ ॥೧೭೨॥

ಅಥವಾ ಮಣ್ಣಿನಿಂದ ಮಾಡಿದ ಕುದುರೆ ಸವಾರನು, ಮಾಂತ್ರಿಕನು ಮಾಡಿದ ಅಲಂಕಾರಗಳು, ಇಲ್ಲವೇ ಸಾಯಂಕಾಲದ ಮೋಡಗಳಲ್ಲಿ ದೃಷ್ಟಿಗೆ ಬೀಳುವ ನಗರವು ಭಾಸವಾದಂತೆ ॥೧೭೩॥

ಸಾಬರೀ ವಾಢಿನ್ನಲ್ಯಾ ಸರಳಾ । ವರಿ ಫಳ ನಾ ಆಂತು ಪೋಕಳಾ ।ಕಾ ಸ್ತನ ಜಾಲೇ ಗಳಾ । ಶೇಳಿಯೇ ಜೈಸೇ ।।೧೭೪।। ತೈಸೇ ಮೂರ್ಖಾಚೇ ತಯಾ ಜಿಯಾಲೇ । ಆಣಿ ಧಿಗ್ ಕರ್ಮ ತಯಾಂಚೇ ನಿಪಜಲೇ । ಜೈಸೇ ಸಾಬರೀ ಫಳ ಆಲೇ । ಫೋಪೇ ನಾ ದೀಜೇ ।।೧೭೫।। ಮಗ ಜೇ ಕಾಂಹೀ ತೇ ಪಢಿನ್ನಲೇ । ತೇ ಮರ್ಕಟೇ ನಾರೇಳ ತೋಡಿಲೇ । ಕಾ ಆಂಧಳ್ಯಾ ಹಾತೀ ಪಡಿಲೇ । ಮೋತಿ ಜೈಸೇ ।।೧೭೬।। ಕಿಂಬಹುನಾ ತಯಾಂಚೀ ಶಾಸ್ತ್ರೇ । ಜೈಶೀ ಕುಮಾರೀ ಹಾತೀ ದಿಧಲೀ ಶಸ್ತ್ರೇ । ಕಾ ಅಶೌಚ್ಯಾ ಮಂತ್ರೇ । ಬೀಜೇ ಕಥಿಲೀ ।।೧೭೭।। ತೈಸೇ ಜ್ಞಾನಜಾತ ತಯಾ । ಆಣಿ ಜೇ ಕಾಂಹೀ ಆಚರಲೇ ಗಾ ಧನಂಜಯಾ । ತೇ ಆಘವೇಂಚಿ ಗೇಲೇ ವಾಯಾ । ಜೇ ಚಿತ್ತಹೀನ ।।೧೭೮।। ಪೈ ತಮೋಗುಣಾಚೀ ರಾಕ್ಷಸೀ । ಜೇ ಸದ್ಬುದ್ಧೀತೇ ಗ್ರಾಸೀ । ವಿವೇಕಾಚಾ ಠಾವೋಚಿ ಪುಸೀ । ನಿಶಾಚರೀ ಜೇ ।।೧೭೯।। ತಿಯೇ ಪ್ರಕೃತೀ ವರಪಡೇ ಜಾಲೇ । ಮ್ಹಣೌನಿ ಚಿಂತೇಚೇನಿ ಕಪಾಟೇ ಗೇಲೇ । ವರಿ ತಾಮಸೀ ಯೇಚಿಯೇ ಪಡಿಲೇ । ಮುಖಾಮಾಜೀ ।।೧೮೦।। ಜೇಥ ಆಶೇಚಿಯೇ ಲಾಳೇ । ಆಂತು ಹಿಂಸಾ ಜೀಭ ಲೋಳೇ । ತೇವೀಂಚಿ ಅಸಂತೋಷಾಚೇ ಚಾಕಳೇ । ಅಖಂಡ ಚಘಳೀ ।।೧೮೧।। ಜೇ ಅನರ್ಥಾಚೇ ಕಾನವೇರೀ । ಆವಾಳುವೇ ಚಾಟೀತ ನಿಘೇ ಬಾಹೇರೀ । ಜೇ ಪ್ರಮಾದಪರ್ವತೀಂಚೀ ದರೀ । ಸದಾಚಿ ಮಾತಲೀ ।।೧೮೨।। ಜೇಥ ದ್ವೇಷಾಚಿಯಾ ದಾಢಾ । ಖಸಖಸಾ ಜ್ಞಾನಾಚಾ ಕರಿತೀ ರಗಡಾ । ಜೇ ಅಗಸ್ತೀ ಗವಸಣೀ ಮೂಢಾ । ಸ್ಥೂಲಬುದ್ಧಿ ।।೧೮೩।। ಐಸೇ ಅಸುರಿಯೇ ಪ್ರಕೃತೀಚೇ ತೋಂಡೀ । ಜೇ ಜಾಲೇ ಗಾ ಭೂತೋಂಡೀ । ತೇ ಬುಡೋನಿ ಗೇಲೇ ಕುಂಡೀ । ವ್ಯಾಮೋಹಾಚ್ಯಾ ।।೧೮೪।। ಏವಂ ತಮಾಚಿಯೇ ಪಡಿಲೇ ಗರ್ತೇ । ನ ಪವಿಜತೀಚಿ ವಿಚಾರಾಚೇನಿ ಹಾತೇ । ಹೇ ಅಸೋ ತೇ ಗೇಲೇ ಜೇಥೇ । ತೇ ಶುದ್ಧೀಚಿ ನಾಹೀ ।।೧೮೫।। ಮ್ಹಣೌನಿ ಅಸೋತು ಇಯೇ ವಾಯಾಣೇ । ಕಾಯಶೀ ಮೂರ್ಖಾಂಚೀ ಬೋಲಣೇ । ವಾಯಾ ವಾಢವಿತಾ ವಾಣೇ । ಶಿಣೇಲ ಹನ ।।೧೮೬।। ಐಸೇ ಬೋಲಿಲೇ ದೇವೇ । ತೇಥ ಜೀ ಜೀ ಮ್ಹಣಿತಲೇ ಪಾಂಡವೇ । ಆಇಕೇ ಜೇಥ ವಾಚಾ ವಿಸವೇ । ತೇ ಸಾಧುಕಥಾ ।।೧೮೭।।

ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।
ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ।।೧೩।।

ಕಳ್ಳಿಗಿಡವು ಸರಿಯಾಗಿ ಬೆಳೆದರೂ ಅದು ಪೊಳ್ಳಾಗಿದ್ದು ಫಲವೂ ಕೊಡುವುದಿಲ್ಲ. ಅಥವಾ ಹೋತಿನ ಕೊರಳೊಳಗಿನ ಮೊಲೆಯಂತೆ (ವ್ಯರ್ಥ) ।।೧೭೪।।

ಅಥವಾ (ಸಾಂಬರಿ) ಬೂರಲ ಮರಕ್ಕೆ ಬಂದ ಫಲಗಳು ಯಾರಿಗೂ ಕೊಡಲೂ ಕೊಳ್ಳಲೂ ಆಗದು. ಅದರಂತೆ ಆ ಮೂರ್ಖನ ಜೀವನವಾಗಿದೆ ಮತ್ತು ಅವನು ಮಾಡಿದ ಕರ್ಮಗಳಿಗೂ ಧಿಕ್ಕಾರವು ।।೧೭೫।।

ಆಗ ಅವನು ಏನಾದರೂ ಶಾಸ್ತ್ರ ಅಧ್ಯಯನ ಮಾಡಿದರೆ ಅದು ಕೋತಿಯು ತೆಂಗಿನಕಾಯಿ ಮುರಿದಂತೆ.ಅಥವಾ ಕುರುಡನ ಕೈಯಲ್ಲಿ ಮುತ್ತು ಸಿಕ್ಕಂತೆ ಆಗುವುದು ।।೧೭೬।।

ಹೆಚ್ಚಿಗೇನು ಹೇಳಬೇಕು? ಆ ಮೂರ್ಖನು ಅಧ್ಯಯನ ಮಾಡಿದ ಶಾಸ್ತ್ರಗಳು ಚಿಕ್ಕ ಹುಡುಗಿಯ ಕೈಯಲ್ಲಿನ ಶಸ್ತ್ರಗಳಂತೆ, ಮತ್ತು ಅಪವಿತ್ರ ಮನುಷ್ಯನಿಗೆ ಕೊಟ್ಟ ಬೀಜ ಮಂತ್ರಗಳಂತೆ ನಿರರ್ಥಕವು ।।೧೭೭।।

ಧನಂಜಯನೇ, ಅದರಂತೆಯೇ ಯಾರ ಚಿತ್ತವು ಅವರ ಸ್ವಾಧೀನವಿರುವುದಿಲ್ಲವೋ ಅವರ ಉಳಿದ ಎಲ್ಲ ಜ್ಞಾನವು ಮತ್ತು ಆಚರಣೆಗಳು ವ್ಯರ್ಥ ಹೋಗುವುವು ।।೧೭೮।।

ಈ ರೀತಿಯಲ್ಲಿ ತಮೋಗುಣರೂಪ ರಾಕ್ಷಸಿಯು ಸದ್ಬುದ್ಧಿಯನ್ನು ನುಂಗಿ ಜ್ಞಾನದ ಹೇಳಹೆಸರಿಲ್ಲದಂತೆ ಮಾಡುವ ನಿಶಾಚಾರಿಯಾಗಿರುವುದು ।।೧೭೯।।

ಯಾರು ಈ ಪ್ರಕೃತಿಯ ಸ್ವಾಧೀನರಾಗಿರುವರೋ, ಅವರು ಸದಾವಕಾಲ ಚಿಂತಾಕ್ರಾಂತರಾಗುವರಲ್ಲದೇ ತಾಮಸ ಪ್ರಕೃತಿಯ ಬಾವಿಯಲ್ಲಿ ಸಹಜವಾಗಿ ಬೀಳುವರು ।।೧೮೦।।

ಈ ರಾಕ್ಷಸಿ ಪ್ರಕೃತಿಯು ಆಶಾರೂಪ ಜೊಲ್ಲಿನಲ್ಲಿ ಹಿಂಸಾರೂಪ ನಾಲಿಗೆಯನ್ನು ಚಪ್ಪರಿಸುತ್ತಾ ಅಸಂತೋಷ ರೂಪ ಮಾಂಸದ ಉಂಡಿಗಳನ್ನು ನಿರಂತರವಾಗಿ ಜಬಡಿಸುತ್ತಿರುವುದು ।।೧೮೧।।

ಆ ನಾಲಿಗೆಯು ಅನರ್ಥರೂಪದಿಂದ ತುಟಿಗಳನ್ನು ಕಡಿಯುತ್ತಾ ಕಿವಿಗಳವರೆಗೂ ಚಾಚುತ್ತದೆ ಮತ್ತು ಅದು ಪ್ರಮಾದರೂಪ ಪರ್ವತದ ಸೊಕ್ಕೇರಿದ ಕಂದರವಾಗಿದೆ ।।೧೮೨।।

ಆಕೆಯು ದ್ವೇಷರೂಪ ದವಡೆಹಲ್ಲುಗಳನ್ನು ಕರಕರವೆಂದು ಕಡೆಯುತ್ತಾ ಜ್ಞಾನವನ್ನು ಚೂರು ಚೂರಾಗಿ ಮಾಡುವಳು. ಅಗಸ್ತ್ಯಋಷಿಗೆ ಇರುವ ಕುಂಭದ ಆವರಣದಂತೆ, ಸ್ಥೂಲಬುದ್ಧಿಯು ಜನರಿಗೆ ಮಾಯೆಯ ಹೊದಿಕೆಯಾಗಿದೆ ।।೧೮೩।।

ಈ ಪ್ರಕಾರವಾಗಿ ಇಂತಹ ರಾಕ್ಷಸೀ ಪ್ರಕೃತಿಯ ಮುಖದಲ್ಲಿ ಬಲಿಯಾಗಿ ಬಿದ್ದವರು ಭ್ರಾಂತಿರೂಪ ಕುಂಡದಲ್ಲಿ ಮುಳುಗಿ ಹೋಗುವರು ।।೧೮೪।।

ಈ ಪ್ರಕಾರವಾಗಿ ಇವರು ಅಜ್ಞಾನರೂಪ ತೆಗ್ಗಿನಲ್ಲಿ ಬಿದ್ದು ಅವರಿಗೆ ವಿಚಾರರೂಪ ಹಸ್ತ ಸಹಾಯವು ದೊರಕುವುದಿಲ್ಲ. ಇಷ್ಟೇ ಅಲ್ಲ, ಅವರು ಎಲ್ಲಿ ಹೋಗುವರು ಎಂಬುದು ಸಹ ಪತ್ತೆ ಹತ್ತುವುದಿಲ್ಲ ।।೧೮೫।।

ಆದ್ದರಿಂದ ಈ ನಿಷ್ಫಲ ಕಥೆ ಇರಲಿ, ಏಕೆಂದರೆ ಮೂರ್ಖರ ವ್ಯರ್ಥವಾದ ವರ್ಣನೆ ಮಾಡುವುದರಿಂದ ವಾಣಿಗೆ ಶ್ರಮ ಮಾತ್ರ ಆಗುವುದು ।।೧೮೬।।

ಹೀಗೆ ಶ್ರೀಕೃಷ್ಣನು ಹೇಳಿದಾಗ್ಗೆ ಅರ್ಜುನನು ಅಹುದಹುದು ಎಂದನು. ಆಗ ದೇವನು ಹೇಳಿದನು, ಯಾವುದು ವರ್ಣನೆಮಾಡುವುದರಿಂದ ವಾಣಿಗೆ ಸುಖವಾಗುವುದೋ ಆ ಸಾಧುಕಥೆ ಕೇಳು ।।೧೮೭।।

**ಶ್ಲೋಕಾರ್ಥ** :- ಅರ್ಜುನಾ! ಮಹಾತ್ಮರಾದವರು ದೈವೀಪ್ರಕೃತಿಯನ್ನು ಆಶ್ರಯಿಸಿ, ಎಲ್ಲದರ ಆದಿಯೂ, ಅವ್ಯಯನೂ ಆದ ನನ್ನನ್ನು ತಿಳಿದು ಅನನ್ಯ ಚಿತ್ತದಿಂದ ಸೇವಿಸುತ್ತಾರೆ ।।೧೩।।

ತರೀ ಜಯಾಚೇ ಚೋಖಟೇ ಮಾನಸೀ । ಮೀ ಹೋಊನಿ ಅಸೇ ಕ್ಷೇತ್ರಸನ್ಯಾಸೀ । ಜಯಾ ನಿಜಲಿಯಾತೇ ಉಪಾಸೀ । ವೈರಾಗ್ಯ ಗಾ ।।೧೮೮।। ಜಯಾಚಿಯಾ ಆಸ್ಥೇಚಿಯಾ ಸದ್ಭಾವಾ । ಆಂತು ಧರ್ಮ ಕರೀ ರಾಣಿವಾ । ಜಯಾಚೇ ಮನ ಓಲಾವಾ । ವಿವೇಕಾಸೀ ।।೧೮೯।। ಜೇ ಜ್ಞಾನಗಂಗೇ ನಾಹಾಲೇ । ಪೂರ್ಣತಾ ಜೇಊನೀ ಧಾಲೇ । ಜೇ ಶಾಂತೀಸೀ ಆಲೇ !। ಪಾಲವ ನವೇ ।।೧೯೦।। ಜೇ ಪರಿಣಾಮಾ ನಿಘಾಲೇ ಕೋಂಭ । ಜೇ ಧೈರ್ಯಮಂಡಪಾಚೇ ಸ್ತಂಭ । ಜೇ ಆನಂದಸಮುದ್ರೀ ಕುಂಭ । ಚುಬಕಳೋನಿ ಭರಿಲೇ ।।೧೯೧।। ಜಯಾ ಭಕ್ತೀಚೀ ಯೇತುಲೀ ಪ್ರಾಪ್ತೀ । ಜೇ ಕೈವಲ್ಯಾತೇ ಪರೌತೇ ಸರ ಮ್ಹಣತೀ । ಜಯಾಚಿಯೇ ಲೀಲೇಮಾಜೀ ನೀತಿ । ಜಿಯಾಲೀ ದಿಸೇ ।।೧೯೨।। ಜೇ ಆಘವಾಂಚಿ ಕರಣೇ । ಲೇಇಲೇ ಶಾಂತೀಚೀ ಲೇಣೇ । ಜಯಾಂಚೇ ಚಿತ್ತ ಗವಸಣೇ । ವ್ಯಾಪಕಾ ಮಜ ।।೧೯೩।। ಐಸೇ ಜೇ ಮಹಾನುಭಾವ । ದೈವಿಯೇ ಪ್ರಕೃತೀಚೇ ದೈವ । ಜೇ ಜಾಣೋನಿಯಾ ಸರ್ವ । ಸ್ವರೂಪ ಮಾಝೇ ।।೧೯೪।। ಮಗ ವಾಢತೇನಿ ಪ್ರೇಮೇ । ಮಾತೇ ಭಜತೀ ಜೇ ಮಹಾತ್ಮೇ । ಪರಿ ದುಜೇಪಣ ಮನೋಧರ್ಮೇ । ಶಿವತಲೇ ನಾಹೀ ।।೧೯೫।। ಐಸೇ ಮೀಚ ಹೋಉನಿ ಪಾಂಡವಾ । ಕರಿತೀ ಮಾಝೀ ಸೇವಾ । ಪರಿ ನವಲಾವೋ ತೋ ಸಾಂಗಾವಾ । ಅಸೇ ಆಇಕ ।।೧೯೬।।

ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ ।
ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ।।೧೪।।

ತರೀ ಕೀರ್ತನಾಚೇನಿ ನಟನಾಚೇ । ನಾಶಿಲೇ ವ್ಯವಸಾಯ ಪ್ರಾಯಶ್ಚಿತ್ತಾಚೇ । ಜೇ ನಾಮಚಿ ನಾಹೀ ಪಾಪಾಚೇ । ಐಸೇ ಕೇಲೇ ।।೧೯೭।। ಯಮದಮಾ ಅವಕಳಾ ಆಣಿಲೀ । ತೀರ್ಥೇ ಠಾಯಾವರೂನಿ ಉಠವಿಲೀ । ಯಮಲೋಕೀಂಚೀ ಖುಂಟೀಲೀ । ರಾಹಾಟೀ ಆಘವೀ ।।೧೯೮।। ಯಮು ಮ್ಹಣೇ ಕಾಯ ಯಮಾವೇ । ದಮು ಮ್ಹಣೇ ಕವಣಾತೇ ದಮಾವೇ । ತೀರ್ಥೇ ಮ್ಹಣತೀ ಕಾಯ ಖಾವೇ । ದೋಷ ಓಖಧಾಸಿ ನಾಹೀ ।।೧೯೯।। ಐಸೇ ಮಾಝೇನಿ ನಾಮಘೋಷೇ । ನಾಹೀಂಚಿ ಕರಿತೀ ವಿಶ್ವಾಚೀ ದುಃಖೇ । ಅವಘೇ ಜಗಚಿ ಮಹಾಸುಖೇ । ದುಮದುಮಿತ ಭರಲೇ ।।೨೦೦।। ತೇ ಪಾಹಾಂಟೇವೀಣ ಪಾಹವಿತ । ಅಮೃತೇವೀಣ ಜೀವವಿತ । ಯೋಗೇವೀಣ ದಾವಿತ । ಕೈವಲ್ಯ ಡೋಳಾ ।।೨೦೧।।

ಯಾವ ಸಾಧುಜನರ ನಿರ್ಮಲವಾದ ಅಂತಃಕರಣದಲ್ಲಿ ನಾನು ಕ್ಷೇತ್ರ ಸಂನ್ಯಾಸಿಯಾಗಿ ಇರುವೆನು ಮತ್ತು ಅವರು ಮಲಗಿಕೊಂಡಾಗಲೂ ವೈರಾಗ್ಯವು ಅವರ ಸೇವೆಯನ್ನು ಮಾಡುವುದು ।।೧೮೮।।

ಅವರ ಪರಮಾತ್ಮ ಪ್ರಾಪ್ತಿಯ ಉತ್ಕಟ ಇಚ್ಛೆಯಲ್ಲಿ ಧರ್ಮವು ರಾಜ್ಯವಾಳುವುದು ಮತ್ತು ಅವರ ಮನವು ಯಾವಾಗಲೂ ಸದ್ವಿಚಾರಗಳಿಗೆ ಬಲ ನೀಡುವುದು ।।೧೮೯।।

ಇವರು ಜ್ಞಾನರೂಪ ಗಂಗೆಯಲ್ಲಿ ಸ್ನಾನ ಮಾಡಿ ಒಳಹೊರಗೆ ಶುದ್ಧರಾಗಿರುವರು. ಪೂರ್ಣ ಬ್ರಹ್ಮ ಸ್ವರೂಪದ ಪ್ರಾಪ್ತಿಯಿಂದ ತೃಪ್ತರಾಗಿರುವರು ಮತ್ತು ಅವರ ಶರೀರವೇ ಶಾಂತಿಗೆ ಹೊಸ ಚಿಗುರು ಬಿಟ್ಟಂತಾಗಿರುವುದು ।।೧೯೦।।

ಹಾಗೆಯೇ ಅವರ ಶರೀರವು ಪರಬ್ರಹ್ಮದ ಮೊಳಕೆಯಾಗಿದೆ. ಅಥವಾ ಧೈರ್ಯರೂಪ ಮಂಟಪದ ಕಂಭವಾಗಿದೆ. ಆನಂದ ಸಮುದ್ರದಲ್ಲಿ ಮುಳುಗೆದ್ದ ಕುಂಭದಂತಿದೆ ।।೧೯೧।।

ಇವರಿಗೆ ಭಕ್ತಿಯು ಎಷ್ಟೊಂದು ಪ್ರಾಪ್ತಿಯಾಗಿದೆ ಎಂದರೆ ಅವರು ಮೋಕ್ಷವನ್ನು ಸಹ ಹಿಂದಕ್ಕೆ ಸರಿಸುವರು ಮತ್ತು ಇವರ ಸಹಜ ಲೀಲೆಯಲ್ಲಿ ನೀತಿಯು ಜನ್ಮ ಧರಿಸುವಂತೆ ಕಾಣುವುದು ।।೧೯೨।।

ಇವರು ತಮ್ಮ ಎಲ್ಲ ಅವಯವಗಳಿಗೆ ಶಾಂತಿರೂಪ ಆಭರಣಗಳನ್ನು ಧರಿಸುವರು. ಇವರು ನನ್ನ ಸರ್ವ ವ್ಯಾಪಕತ್ವಕ್ಕೆ ತಮ್ಮ ಚಿತ್ತದಿಂದ ಗವಸಣಿಕೆ (ಹೊದಿಕೆ) ಮಾಡಿರುವರು ।।೧೯೩।।

ಇಂತಹ ಮಹಾತ್ಮರು ಯಾವ ಭಗವದ್ಭಕ್ತಿಯ ಅನುಕೂಲವಾಗಿರುವ ಸಾತ್ವಿಕ ಪ್ರಕೃತಿಯ ಭಾಗ್ಯವೇ ಆಗಿರುವರು. ಕಾಣುವ ಎಲ್ಲ ವಸ್ತುಗಳು ನನ್ನ ಸ್ವರೂಪವೆಂದು ತಿಳಿದು ।।೧೯೪।।

ಆಗ ಬೆಳೆಯುತ್ತಿರುವ ಪ್ರೇಮದಿಂದ ನನ್ನನ್ನು ಆ ಮಹಾತ್ಮರು ಭಜಿಸುವರು. ಆದರೆ ಅವರ ಮನೋಧರ್ಮ ದಿಂದ ದ್ವೈತಕ್ಕೆ ಸ್ಪರ್ಶ ಸಹ ಮಾಡಿರುವುದಿಲ್ಲ ।।೧೯೫।।

ಅರ್ಜುನಾ, ಈ ಪ್ರಕಾರವಾಗಿ ಇವರು ಮದ್ರೂಪರಾಗಿ ನನ್ನ ಸೇವೆಯನ್ನು ಮಾಡುವರು. ಆ ಸೇವೆಯ ಆಶ್ಚರ್ಯಕಾರಕವಾದ ಮಾತನ್ನು ಹೇಳುವುದು ಉಳಿದಿದೆ ಅದನ್ನು ಕೇಳು ।।೧೯೬।।

**ಶ್ಲೋಕಾರ್ಥ :-** ಅವರು ದೃಢನಿಷ್ಠರಾಗಿ, ನಿರಂತರವಾಗಿ ನನ್ನನ್ನೇ ಕೀರ್ತಿಸುತ್ತ ನನ್ನ ಪ್ರಾಪ್ತಿಗಾಗಿ ಪ್ರಯತ್ನಿಸುತ್ತ ಭಕ್ತಿಯಿಂದ ನನ್ನನ್ನು ನಮಸ್ಕರಿಸುತ್ತ ನಿತ್ಯಯುಕ್ತರಾಗಿ ನನ್ನನ್ನು ಸೇವಿಸುತ್ತಾರೆ ।।೧೪।।

ಆದರೆ (ಈ ಮಹಾತ್ಮರು) ಕೀರ್ತನದ ಪ್ರೇಮದಿಂದ (ನಿರ್ಲಜ್ಜರಾಗಿ) ನಟಿಸುತ್ತ ಹಾಗೂ ಕುಣಿಯುವುದರಿಂದ ಪ್ರಾಯಶ್ಚಿತ್ತಗಳ ಎಲ್ಲ ವ್ಯಾಪಾರವು ನಾಶವಾಗಿರುವುವು ಮತ್ತು ಕೀರ್ತನೆಯಿಂದ ಪಾಪದ ಹೇಳ ಹೆಸರಿಲ್ಲದಂತೆ ಮಾಡಿದರು ।।೧೯೭।।

ಯಮ (ಮನೋನಿಗ್ರಹ) ಮತ್ತು ದಮ (ಇಂದ್ರಿಯ ನಿಗ್ರಹ) ಇವರಿಬ್ಬರಿಗೂ ನಿಸ್ತೇಜಗೊಳಿಸಿದರು. ತೀರ್ಥಗಳಿಗೆ ತಮ್ಮ ತಮ್ಮ ಸ್ಥಾನಗಳನ್ನು ಬಿಟ್ಟು ಹೋಗುವಂತೆ ಮಾಡಿದರು ಮತ್ತು ಯಮ ಲೋಕದ ಸರ್ವ ವ್ಯವಹಾರಗಳು ನಿಂತುಬಿಟ್ಟವು ।।೧೯೮।।

''ಯಮ''ವು ಯಾರನ್ನು ನಿಯಂತ್ರಿಸಬೇಕು ? ಎಂದು ಮತ್ತು ''ದಮ''ವು ಯಾರನ್ನು ಗೆಲ್ಲಬೇಕು? ಎಂದು ಹಾಗೂ ತೀರ್ಥಗಳು ಯಾರ ದೋಷಗಳನ್ನು ಪಾವನಗೊಳಿಸಬೇಕು? ಎಂದು ಹೇಳಹತ್ತಿದವು. ಏಕೆಂದರೆ ದೋಷಗಳು ಔಷಧಿಗೂ ಉಳಿಯಲಿಲ್ಲ ।।೧೯೯।।

ಈ ಪ್ರಕಾರವಾಗಿ ನನ್ನ ನಾಮಘೋಷದಿಂದ ಜಗತ್ತಿನ ಎಲ್ಲ ಪ್ರಾಣಿಗಳ ದುಃಖವನ್ನು ಇಲ್ಲದಂತೆ ಮಾಡುವರು. ಹಾಗೂ ಎಲ್ಲ ಜಗತ್ತು ಬ್ರಹ್ಮಸುಖದಿಂದ ತುಂಬಿ ತುಳುಕಿಸುವರು ।।೨೦೦।।

ಆ ಮಹಾತ್ಮರು ಬೆಳಕಿಲ್ಲದೇ ಜೀವಕ್ಕೆ ಪ್ರಕಾಶ (ಆತ್ಮಜ್ಞಾನ)ವನ್ನು ಕೊಡುವರು. ಅಮೃತವಿಲ್ಲದೇ ಜೀವದ ಜೀವವನ್ನು ರಕ್ಷಿಸುವರು. ಅಲ್ಲದೇ ಯೋಗ ಸಾಧನ ಇಲ್ಲದೇ ಪ್ರತ್ಯಕ್ಷವಾಗಿ ಕಣ್ಣೆದುರಿಗೆ ಮೋಕ್ಷವನ್ನು ತೋರಿಸುವರು ।।೨೦೧।।

ಪರೀ ರಾಯಾ ರಂಕಾ ಪಾಡ ಧರೂ । ನೇಣತೀ ಸಾನೆಯಾ ಥೋರಾ ಕಡಸಣೀ ಕರೂ। ಏಕಸರೇ ಆನಂದಾಚೇ ಆವಾರೂ । ಹೋತ ಜಗಾ ।೨೦೨॥ ಕಹೀ ಏಕಾಧೇನಿ ವೈಕುಂಠಾ ಜಾವೇ । ತೇ ತಿಹೀ ವೈಕುಂಠಚಿ ಕೇಲೇ ಆಘವೇ । ಐಸೇ ನಾಮಘೋಷಗೌರವೇ । ಧವಳಲೇ ವಿಶ್ವ ।೨೦೩॥ ತೇಜೇ ಸೂರ್ಯ ತೈಸೇ ಸೋಜ್ವಳ । ಪರಿ ತೋಹೀ ಅಸ್ತವೇ ಹೇ ಕಿಡಾಳ । ಚಂದ್ರ ಸಂಪೂರ್ಣ ಏಖಾದೆ ವೇಳ । ಹೇ ಸದಾ ಪುರತೇ ।೨೦೪॥ ಮೇಘ ಉದಾರ ಪರೀ ವೋಸರೇ । ಮ್ಹಣೌನಿ ಉಪಮೇಸೀ ನ ಪುರೇ । ಹೇ ನಿಃಶಂಕಪಣೇ ಸಪಾಂಖರೇ । ಪಂಚಾನನ ।೨೦೫॥ ಜಯಾಂಚೇ ವಾಚೇಪುಢಾ ಭೋಜೇ । ನಾಮ ನಾಚತ ಅಸೇ ಮಾಝೇ । ಜೇ ಜನ್ಮ ಸಹಸ್ರೀ ವೋಳಗಿಜೇ । ಏಕ ವೇಳ ಯಾವಯಾ ।೨೦೬॥ ತೋ ಮೀ ವೈಕುಂಠೀ ನಸೇ । ವೇಳು ಏಕ ಭಾನುಬಿಂಬೀಹೀ ನ ದಿಸೇ । ವರೀ ಯೋಗಿಯಾಂಚೇಹೀ ಮಾನಸೇ । ಉಮರಡೋನಿ ಜಾಯ ।೨೦೭॥ ಪರೀ ತಯಾಪಾಶೀ ಪಾಂಡವಾ । ಮೀ ಹಾರಪಲಾ ಗಿವಸಾವಾ । ಜೇಥ ನಾಮಘೋಷು ಬರವಾ । ಕರಿತೀ ಮಾಝಾ ।೨೦೮॥ ಕೈಸೇ ಮಾಝ್ಯಾ ಗುಣೀ ಧಾಲೇ । ದೇಶಕಾಲಾತೇ ವಿಸರಲೇ! । ಕೀರ್ತನೇ ಸುಖೀ ಝಾಲೇ । ಆಪಣಪಾಂಚಿ ।೨೦೯॥ ಕೃಷ್ಣ ವಿಷ್ಣು ಹರಿ ಗೋವಿಂದ । ಯಾ ನಾಮಾಚೇ ನಿಖಿಳ ಪ್ರಬಂಧ । ಮಾಜೀ ಆತ್ಮ ಚರ್ಚಾ ವಿಶದ। ಉದಂಡ ಗಾತೀ ।೨೧೦॥ ಹೇ ಬಹು ಅಸೋ ಯಾಪರೀ । ಕೀರ್ತಿತ ಮಾತೇ ಅವಧಾರೀ । ಏಕ ವಿಚರತೀ ಚರಾಚರೀ । ಪಂಡುಕುಮರಾ ।೨೧೧॥ ಮಗ ಆಣಿಕತೇ ಅರ್ಜುನಾ । ಸಾವಿಯಾ ಬಹುವಾ ಜತನಾ । ಪಂಚಪ್ರಾಣ ಮನಾ । ಪಾಢಾಊ ಘೇಉನೀ ।೨೧೨॥ ಬಾಹೇರೀ ಯಮನಿಯಮಾಂಚೀ ಕಾಟೀ ಲಾವಿಲೀ । ಆಂತು ವಜ್ರಾಸನಾಚಿ ಪೌಳೀ ಪನ್ನಾಸಿಲೀ । ವರೀ ಪ್ರಾಣಾಯಾಮಾಚೀ ಮಾಂಡಿಲೀ । ವಾಹಾತೀ ಯಂತ್ರೇ ।೨೧೩॥ ತೇಥ ಉಲ್ಹಾಟ ಶಕ್ತೀಚೇನಿ ಉಜಿವಡೇ । ಮನ ಪವನಾಚೇನಿ ಸುರವಾಡೇ । ಸತರಾವಿಯೇಚೇ ಪಾಣಿಯಾಡೇ। ಬಳಿಯಾವಿಲೇ।೨೧೪॥ ತೇವ್ಹಾ ಪ್ರತ್ಯಾಹಾರೇ ಖ್ಯಾತೀ ಕೇಲೀ । ವಿಕಾರಾಂಚೀ ಸಪಿಲೀ ಬೋಹಲೀ । ಇಂದ್ರಿಯೇ ಬಾಂಧೋನಿ ಆಣಿಲೀ । ಹೃದಯಾಆಂತು ।೨೧೫॥ ತಂವ ಧಾರಣಾವಾರು ದಾಟಿನ್ನಲೇ । ಮಹಾಭೂತಾಂತೇ ಏಕವಟಿಲೇ । ಮಗ ಚತುರಂಗ ಸೈನ್ಯ ನಿವಟಿಲೇ । ಸಂಕಲ್ಪಾಚೇ ।೨೧೬॥ ತಯಾವರೀ ಜೈತ ರೇ ಜೈತ । ಮ್ಹಣೌನಿ ಧ್ಯಾನಾಚೇ ನಿಶಾಣ ವಾಜತ । ದಿಸೇ ತನ್ಮಯಾಚೇ ಝಳಕತ । ಏಕಛತ್ರ ।೨೧೭॥

ಆದರೆ, ರಾಜ, ಬಡವರಲ್ಲಿ ಭೇದ ಎಣಿಸುವುದಿಲ್ಲ ಮತ್ತು ಚಿಕ್ಕದು ದೊಡ್ಡದು ತಿಳಿಯರು. ಈ ಪ್ರಕಾರವಾಗಿ ಸಂಪೂರ್ಣ ಜಗತ್ತಿಗೆ ಆನಂದದ ತವರುಮನೆಯಾಗಿರುವವರು ॥೨೦೨॥

ವೈಕುಂಠಕ್ಕೆ ಹೋಗುವವರು ಅಕಸ್ಮಾತ್ ಸಿಗಬಹುದು. ಆದರೆ, ಈ ಮಹಾತ್ಮರು ಸರ್ವ ಜಗತ್ತನ್ನು ವೈಕುಂಠವನ್ನಾಗಿ ಮಾಡಿಬಿಟ್ಟರು. ಹೀಗೆ ನನ್ನ ನಾಮ ಭಜನೆಯ ಯೋಗ್ಯತೆಯಿಂದ ಎಲ್ಲವನ್ನು ಪವಿತ್ರಗೊಳಿಸಿದರು ॥೨೦೩॥

ಆ ಮಹಾತ್ಮನ ತೇಜವು ಸೂರ್ಯನಂತೆ ನಿರ್ಮಲವೆಂದು ಹೋಲಿಸಿದರೆ ಸೂರ್ಯನು ಪ್ರತಿ ದಿನ ಅಸ್ತನಾಗುವನು. ಚಂದ್ರನಂತೆಂದು ಹೋಲಿಸಿದರೆ ಚಂದ್ರನು ಒಂದೇ ಸಲ ಪೂರ್ಣನಿರುವನು, ಆದರೆ ಇವರು ಯಾವಾಗಲೂ ಪೂರ್ಣರಿರುವರು ॥೨೦೪॥

ಇವರ ಔದಾರ್ಯವು ಮೇಘದಂತೆ ಎಂದು ಹೋಲಿಸಿದರೆ ಅದು ಸಹ ಸೋರುವುದು. ಆದ್ದರಂದ ಈ ಉಪಮೆ ಯೋಗ್ಯವಲ್ಲ. ಆದರೆ ಈ ಮಹಾತ್ಮರು ನಿಃಸಂಶಯವಾಗಿ ಕೃಪಾಳು ಸಿಂಹವೇ ಸರಿ ॥೨೦೫॥

ಯಾವ ನನ್ನ ನಾಮದ ಒಂದು ಸಾರೆ ಯಥಾರ್ಥ ಉಚ್ಚಾರವಾಗಲು ಸಾವಿರಾರು ಜನ್ಮದಲ್ಲಿ ನನ್ನ ಸೇವೆ ಮಾಡಬೇಕಾಗುವುದು. ಅಂತಹ ಈ ನಾಮವು ಅವರ ಮುಖದಲ್ಲಿ ಕೌತುಕದಿಂದ ಕುಣಿಯುತ್ತಿರುವುದು ॥೨೦೬॥

ನಾನು ವೈಕುಂಠದಲ್ಲಿಯೂ ಇರುವುದಿಲ್ಲ. ಸೂರ್ಯ ಮಂಡಲದಲ್ಲಿಯೂ ಕಾಣಿಸುವುದಿಲ್ಲ, ಇಷ್ಟೇ ಏಕೆ? ಯೋಗಿಗಳ ಮನಸ್ಸನ್ನು ಸಹ ಉಲ್ಲಂಘಿಸಿ ಹೋಗುವೆ ॥೨೦೭॥

ಆದರೆ, ಹೇ ಪಾಂಡವನೇ, ಈ ರೀತಿ ನಾನು ಎಲ್ಲಿಯೂ ಸಿಗದಿದ್ದರೂ, ಯಾರು ನನ್ನ ನಾಮವನ್ನು ಸದಾ ಘೋಷಿಸುವರೋ, ಅಲ್ಲಿ ಮಾತ್ರ ನಿಶ್ಚಿತವಾಗಿ ಸಿಗುವೆ ॥೨೦೮॥

ಇವರು ನನ್ನ ಗುಣಾನುವಾದದಿಂದ ಎಷ್ಟು ತೃಪ್ತರಾಗಿದ್ದಾರೆಂದರೆ ದೇಶ ಕಾಲಗಳನ್ನು ಮರೆತು ನನ್ನ ನಾಮ ಸಂಕೀರ್ತನೆಯ ಯೋಗದಿಂದ ತಮ್ಮಲ್ಲಿ ಸುಖಿಯಾಗಿರುವರು ॥೨೦೯॥

ಕೃಷ್ಣ, ವಿಷ್ಣು, ಹರಿ, ಗೋವಿಂದ ಈ ಶುದ್ಧ ನಾಮದ ಕವಿತೆಗಳನ್ನು ಹಾಡುವರು ಮತ್ತು ನಡುನಡುವೆ ಆತ್ಮ ವಿಷಯದ ಚರ್ಚೆಯನ್ನೂ ಮಾಡುವರು ॥೨೧೦॥

ಹೇ ಪಂಡುಕುಮಾರನೇ, ಇನ್ನು ಕೆಲವರು ಈ ಪ್ರಕಾರದ ಇನ್ನೂ ಅನೇಕ ರೀತಿಯಲ್ಲಿ ನನ್ನ ಗುಣಾನುವಾದಗಳನ್ನು ಮಾಡುತ್ತ ಜಗತ್ತಿನಲ್ಲಿ ತಿರುಗುತ್ತಿರುವರು ॥೨೧೧॥

ಅರ್ಜುನಾ! ಆಮೇಲೆ, ಬೇರೆ ಇನ್ನು ಕೆಲವರು ಪಂಚಪ್ರಾಣಗಳನ್ನು ಮತ್ತು ಮನಸ್ಸನ್ನು ಸಂಪೂರ್ಣವಾಗಿ ಜಯಿಸಿ ಜಯಪತ್ರವನ್ನು ಪಡೆದಿರುವರು ॥೨೧೨॥

ಹೊರಗಿನಿಂದ ಯಮ, ನಿಯಮಗಳ ಬೇಲಿಯನ್ನು ಹಚ್ಚಿ ಒಳಗೆ ವಜ್ರಾಸನವೆಂಬ ಆಧಾರವನ್ನು ಸಿದ್ಧಗೊಳಿಸಿ ಅದರ ಮೇಲೆ ಪ್ರಾಣಾಯಾಮ ರೂಪದ ತೋಫುಗಳನ್ನು ಹಚ್ಚಿದರು ॥೨೧೩॥

ಆಗ ಕುಂಡಲಿನಿಯು ಊರ್ಧ್ವಮುಖವಾಗಿ ಅದರ ಪ್ರಕಾಶದಿಂದ ಮನಸ್ಸು ಹಾಗೂ ಪ್ರಾಣಗಳ ಅನುಕೂಲ ದಿಂದ ಚಂದ್ರಾಮೃತದ ಸತರಾವಿ ಕಲೆಯ ತಳವನ್ನು ಸ್ವಾಧೀನಮಾಡಿಕೊಳ್ಳುವರು ॥೨೧೪॥

ಆಗ ಪ್ರತ್ಯಾಹಾರವು ಬಹು ಪರಾಕ್ರಮದಿಂದ ಕಾಮ, ಕ್ರೋಧಾದಿಗಳ ವಿಕಾರಗಳ ಪರಿವಾರಸಮೇತವಾಗಿ ನಾಶ ಮಾಡಿ ಇಂದ್ರಿಯಗಳನ್ನು ಕಟ್ಟಿ ಹೃದಯಕ್ಕೆ ತರುವುದು ॥೨೧೫॥

ಇಷ್ಟರಲ್ಲಿ ಧಾರಣರೂಪ ಕುದುರೆ ಸವಾರನು ಧಾವಿಸಿ ಬಂದು ಪಂಚಮಹಾಭೂತಗಳ ಐಕ್ಯ ಮಾಡುವನು ಮತ್ತು ಸಂಕಲ್ಪದ ಚತುರಂಗ ಸೈನ್ಯ (ಮನ, ಬುದ್ಧಿ, ಚಿತ್ತ, ಅಹಂಕಾರ)ವನ್ನು ಇಲ್ಲದಂತೆ ಮಾಡುವನು ॥೨೧೬॥

ಆಗ ''ಜಯವಾಯಿತು ಜಯವಾಯಿತು'' ಎಂದು ಧ್ಯಾನದ ನೌಬತ್ತು ಬಾರಿಸುವುದು ಮತ್ತು ತದ್‌ರೂಪದ ಒಂದು ಛತ್ರವು ಹೊಳೆಯುತ್ತಿರುವುದು ಕಾಣುವುದು ॥೨೧೭॥

ಪಾಠೀ ಸಮಾಧಿಶ್ರೀಯೇಚಾ ಅಶೇಖಾ । ಆತ್ಮಾನುಭವ ರಾಜ್ಯಸುಖಾ । ಪಟ್ಟಾಭಿಷೇಕು ದೇಖಾ । ಸಮರಸೇ ಜಾಹಲಾ ।೨೧೮॥ ಐಸೇ ಹೇ ಗಹನ । ಅರ್ಜುನಾ ಮಾಝೇ ಭಜನ । ಆತಾ ಐಕೇ ಸಾಂಗೇನ । ಜೇ ಕರಿತೀ ಏಕ ।೨೧೯॥ ತರೀ ದೋನ್ಹೀ ಪಾಲವವೇರೀ । ಜೈಸಾ ಏಕ ತಂತೂ ಅಂಬರೀ । ತೈಸಾ ಮೀವಾಂಚೂನಿ ಚರಾಚರೀ । ಜಾಣತೀ ನಾ ।೨೨೦॥ ಆದಿ ಬ್ರಹ್ಮಾ ಕರೂನಿ । ಶೇವಟೀ ಮಶಕ ಧರೂನೀ । ಮಾಜೇ ಸಮಸ್ತ ಹೇ ಜಾಣೋನೀ । ಸ್ವರೂಪ ಮಾಝೇ ।೨೨೧॥ ಮಗ ವಾಢ ಧಾಕುಟೇ ನ ಮ್ಹಣತೀ । ಸಜೀವ ನಿರ್ಜೀವ ನೇಣತೀ। ದೇಖಿಲಿಯೇ ವಸ್ತು ಉಜೂ ಲುಂಟಿತೀ । ಮೀಚಿ ಮ್ಹಣೌನಿ ।೨೨೨॥ ಆಪುಲೇ ಉತ್ತಮತ್ವ ನಾಠವೇ । ಪುಢೀಲ ಯೋಗ್ಯಾಯೋಗ್ಯ ನೇಣವೇ । ಏಕಸರೇ ವ್ಯಕ್ತಿಮಾತ್ರಾಚೇನಿ ನಾಂವೇ । ನಮೂಚಿ ಆವಡೇ ।೨೨೩॥ ಜೈಸೇ ಉಂಚೀ ಉದಕ ಪಡಿಲೇ । ತೇ ತಳವಟವರೀ ಯೇ ಉಗೇಲೇ । ತೈಸೇ ನಮಿಜೇ ಭೂತಜಾತ ದೇಖಿಲೇ । ಐಸಾ ಸ್ವಭಾವೋಚಿ ತಯಾಂಚಾ ।೨೨೪॥ ಕಾ ಫಳಲಿಯಾ ತರೂಚೀ ಶಾಖಾ । ಸಹಜೇ ಭೂಮೀಸೀ ಉತರೇ ದೇಖಾ । ತೈಸೇ ಜೀವಮಾತ್ರಾ ಅಶೇಖಾ । ಖಾಲಾವತೀ ತೇ ।೨೨೫॥ ಅಖಂಡ ಅಗರ್ವತಾ ಹೋಊನೀ ಅಸತೀ । ತಯಾಂಚೀ ವಿನಯ ಹೇಚಿ ಸಂಪತ್ತಿ । ಜೇ ಜಯ ಜಯ ಮಂತ್ರೇ ಅರ್ಪಿತೀ । ಮಾಝ್ಯಾಚೀ ಠಾಯೀ ।೨೨೬॥ ನಮಿತಾ ಮಾನಾಪಮಾನ ಗಳಾಲೇ । ಮ್ಹಣೌನಿ ಅವಚಿತಾ ಮೀಚಿ ಜಹಾಲೇ । ಐಸೇ ನಿರಂತರ ಮಿಸಳಲೇ । ಉಪಾಸಿತೀ ।೨೨೭॥ ಅರ್ಜುನಾ ಹೇ ಗುರೂವೀ ಭಕ್ತೀ । ಸಾಂಗಿತಲೀ ತುಜಪ್ರತೀ । ಆತಾ ಜ್ಞಾನಯಜ್ಞೇ ಯಜಿತೀ । ತೇ ಭಕ್ತ ಆಇಕೇ ।೨೨೮॥ ಪರೀ ಭಜನ ಕರಿತೀ ಹಾತವಟೀ । ತೂ ಜಾಣತ ಆಹಾಸಿ ಕಿರೀಟೀ। ಜೇ ಮಾಗಾ ಇಯಾ ಗೋಷ್ಟೀ । ಕೇಲಿಯಾ ಆಮ್ಹೀ ।೨೨೯॥ ತಂವ ಆಥೀ ಜೇ ಅರ್ಜುನ ಮ್ಹಣೇ । ಹೇ ದೈವೀಕಿಯಾ ಪ್ರಸಾದಾಚೇ ಕರಣೇ । ತರಿ ಕಾಯ ಅಮೃತಾಚೇ ಆರೋಗಣೇ । ಪುರೇ ಮ್ಹಣವೇ ? ।೨೩೦॥ ಯಾ ಬೋಲಾ ಶ್ರೀಅನಂತೇ । ಲಾಗಟಾ ದೇಖಿಲೇ ತಯಾತೇ । ಕೀ ಸುಖಾವಲೇನಿ ಚಿತ್ತೇ । ಡೋಲತು ಅಸೇ ।೨೩೧॥ ಮ್ಹಣೇ ಭಲೇ ಕೇಲೇ ಪಾರ್ಥಾ । ಏರ್ಹವೀ ಹಾ ಅನವಸರು ಸರ್ವಥಾ । ಪರಿ ಬೋಲವೀತಸೇ ಆಸ್ಥಾ । ತುಝೀ ಮಾತೇ।೨೩೨॥ ತಂವ ಅರ್ಜುನ ಮ್ಹಣೇ ಹೇ ಕಾಈ । ಚಕೋರೆವೀಣ ಚಾಂದಣೇಚಿ ನಾಹೀ ?। ಜಗಚಿ ನಿವವಿಜೇ ಹಾ ತಯಾಚ್ಯಾ ಠಾಯೀ । ಸ್ವಭಾವೋ ಕೀ ಜೇ ।೨೩೩॥

ಆಮೇಲೆ ಸಮಾಧಿರೂಪ ಲಕ್ಷ್ಮೀಯ ಅಖಂಡ ಆತ್ಮಾನುಭವರೂಪ ರಾಜ್ಯಸುಖದ ಬ್ರಹ್ಮರೂಪ ಐಕ್ಯದಿಂದ ಪಟ್ಟಾಭಿಷೇಕವಾಗುವುದು।೨೧೮॥

ಹೇ ಅರ್ಜುನನೇ, ಹೀಗೆ ಯಾವ ನನ್ನ ಕಠಿಣ ಭಜನೆಯನ್ನು ಯಾರು ಮಾಡುತ್ತಾರೆ ಎಂಬುದನ್ನು ತಿಳಿಸಿದೆನು. ಈಗ ಇವರ ಹೊರತಾಗಿ ಬೇರೆ ರೀತಿಯಲ್ಲಿ ಭಜನೆ ಮಾಡುವವರು ಯಾರೆಂಬುದು ಕೇಳು ।೨೧೯॥

ವಸ್ತ್ರದ ಎರಡೂ ಸೆರಗಿನವರೆಗೆ ಅಡ್ಡ ಉದ್ದವಾಗಿ ನೂಲು ಮಾತ್ರ ತುಂಬಿರುವುದು. ಅದರಂತೆ ಚರಾಚರ ವಿಶ್ವದಲ್ಲಿ ಅವರು ನನ್ನ ಹೊರತು ಬೇರೆ ಯಾವುದನ್ನೂ ಅರಿಯರು ।೨೨೦॥

ಅತ್ಯಂತ ಶ್ರೇಷ್ಠನಿರುವ ಬ್ರಹ್ಮದೇವನಿಂದ ಹಿಡಿದು ಅತ್ಯಂತ ಕನಿಷ್ಠವಾದ ನೊರಜಿನವರೆಗೆ ಎಲ್ಲ ಭೂತಗಳಲ್ಲಿಯೂ ನನ್ನ ಸ್ವರೂಪವೇ ಇರುವುದೆಂದು ಅವರು ತಿಳಿದಿರುವರು ।೨೨೧॥

ಆಗ ಚಿಕ್ಕವರು, ದೊಡ್ಡವರು, ಸಜೀವ, ನಿರ್ಜೀವ ಹೀಗ ಭೇದ ಎಣಿಸದೇ ಕಾಣುವ ಎಲ್ಲ ಭೂತಗಳು ನನ್ನ ಸ್ವರೂಪವೆಂಬ ಸರಳವಾದ ಭಾವನೆಯಿಂದ ಅವರು ಜೀವ ಮಾತ್ರಕ್ಕೆ ಸಾಷ್ಟಾಂಗ ನಮಸ್ಕಾರ ಮಾಡುವರು ।೨೨೨॥

ತಮ್ಮ ದೊಡ್ಡಸ್ತಿಕೆಯನ್ನು ಮರೆತು ಮುಂದೆ ಬರುವವರು ಯೋಗ್ಯರೋ, ಅಯೋಗ್ಯರೋ ಎಂಬುದು ಸಹ ಅರಿಯದೇ ಸಾರಾಸಗಟವಾಗಿ ಎಲ್ಲ ವಸ್ತುಗಳಿಗೂ ನಾನೇ ಇರುವೆ ಎಂಬ ಭಾವನೆಯಿಂದ ನಮಸ್ಕರಿಸುವುದು ಇವರಿಗೆ ಬಹಳ ಪ್ರಿಯವು ।೨೨೩॥

ಬೇಕಾದಷ್ಟು ಎತ್ತರದಲ್ಲಿ ಹರಿಯುವ ನೀರು ಯಾವ ಪ್ರಕಾರವಾಗಿ ಸಂಪೂರ್ಣ ತಳಕ್ಕೆ ಬಂದು ಮುಟ್ಟುವುದೋ, ಅದೇ ಪ್ರಕಾರವಾಗಿ ದೃಷ್ಟಿಗೆ ಬಿದ್ದ ಪ್ರಾಣಿಗಳಿಗೆ ನಮಸ್ಕರಿಸುವುದು ಇವರ ಸ್ವಭಾವವೇ ಆಗಿದೆ ।೨೨೪॥

ಅಥವಾ ಫಲದಿಂದ ತುಂಬಿದ ಗಿಡದ ಟೊಂಗೆಯು ಅದು ಸಹಜವಾಗಿ ಕೆಳಗೆ ಬಾಗುವಂತೆ ಇವರು ಪ್ರಾಣಿಮಾತ್ರರಿಗೆ ಬಾಗಿ ನಮಸ್ಕಾರ ಮಾಡುವರು ।೨೨೫।

ಇವರು ಯಾವಾಗಲೂ ಗರ್ವರಹಿತರಾಗಿರುವರು ಮತ್ತು ನಮ್ರತೆಯೇ ಇವರ ಸರ್ವಸಂಪತ್ತಾಗಿರುವುದು. ಹಾಗೂ ಇವರು ಜಯ ಜಯ ಮಂತ್ರದಿಂದ ನನ್ನಲ್ಲಿ ಎಲ್ಲ ಕರ್ಮಗಳನ್ನು ಅರ್ಪಿಸುವರು ।೨೨೬॥

ನಮ್ರತೆ, ನಮಸ್ಕಾರಗಳಿಂದ, ಮಾನ, ಅಪಮಾನಗಳ ವಿಚಾರವು ನಷ್ಟವಾಗುವುದು. ಆದ್ದರಿಂದ ಇವರು ನಾನೇ ಆಗಿರುವರು ಮತ್ತು ಈ ಪ್ರಕಾರವಾಗಿ ಮದ್ರೂಪರಾಗಿ ನಿರಂತರವಾಗಿ ನನ್ನ ಉಪಾಸನೆಯನ್ನೇ ಮಾಡುವರು ।೨೨೭॥

ಅರ್ಜುನಾ, ಈ ಪ್ರಕಾರವಾಗಿ ನಿನಗೆ ಈ ಶ್ರೇಷ್ಠ ಭಕ್ತಿಯನ್ನು ಹೇಳಿರುವೆನು. ಈಗ ಯಾರು ನನ್ನನ್ನು ಜ್ಞಾನಯಜ್ಞದಿಂದ ಭಕ್ತಿ ಮಾಡುವರೋ ಅವರು ಯಾವ ಭಕ್ತರೆಂಬುದು ಕೇಳು ।೨೨೮॥

ಆದರೆ, ಹೇ ಕಿರೀಟಿಯೇ, ಅವರ ಭಜನೆ ಮಾಡುವ ಶೈಲಿಯು ನಿನಗೆ ಗೊತ್ತೇ ಇರುವುದು. ಇದರ ವಿಷಯವಾಗಿ ನಾವು ಈ ಹಿಂದೆ (ಅಧ್ಯಾಯ ೪ ಶ್ಲೋಕ ೩೩ ರಿಂದ ೪೨ ರವರೆಗೆ) ವರ್ಣನೆ ಮಾಡಿರುವೆವು ।೨೨೯॥

ಆಗ ಅರ್ಜುನನು ಹೇಳಿದನು:- ಹೌದು, ಇದು ಈಶ್ವರ ಪ್ರಸಾದವೇ ಆಗಿದೆ. ಅಲ್ಲದೇ ಅಮೃತದ ಸೇವನೆಗೆ ಎಂದಾದರೂ ಸಾಕು ಎಂದು ಹೇಳಬಹುದೇ? ।೨೩೦॥

ಆಗ ಅರ್ಜುನನ ಮಾತನ್ನು ಕೇಳಿ, ಆತನ ಶ್ರವಣದ ಆತುರತೆಯನ್ನು ಕಂಡು ಶ್ರೀ ಅನಂತ (ಕೃಷ್ಣ)ನು ಆನಂದದಿಂದ ತೂಗಾಡಹತ್ತಿದನು ।೨೩೧॥

ಪಾರ್ಥಾ, (ಕೇಳುವ ಉತ್ತೇಜನ ತೋರಿಸಿ) ಬಹಳ ಉತ್ತಮ ಕಾರ್ಯ ಮಾಡಿರುವೆ, ಏಕೆಂದರೆ ಹೇಳಿದ್ದನ್ನೇ ಪುನಃ ಈ ಯುದ್ಧ ಪ್ರಸಂಗದಲ್ಲಿ ಹೇಳುವುದು ಯೋಗ್ಯವಲ್ಲ, ಆದರೂ ನಿನ್ನ ಕೇಳುವ ಉತ್ಕಂಠತೆ ಕಂಡು ನನಗೆ ಹೇಳಬೇಕಾಗಿದೆ ।೨೩೨॥

ಆಗ ಅರ್ಜುನನು ಹೇಳಿದನು:- ಏನಿದು? ಚಕೋರದ ಹೊರತಾಗಿ ಬೆಳದಿಂಗಳ ಉಪಯೋಗವಿಲ್ಲವೇ? ಜಗತ್ತಿಗೂ ಶಾಂತಮಾಡುವ ಅದರ ಸ್ವಭಾವವಾಗಿದೆ ।೨೩೩॥

ಯೇರೇ ಚಕೋರೇ ತಿಯೇ ಆಪುಲಿಯೇ ಚಾಡೇ । ಚಾಂಚೂ ಕರಿತೀ ಚಂದ್ರಾಕಡೇ । ತೇವೀ ಆಮ್ಹೀ ವಿನವೂ ತೇ ಥೋಕಡೇ । ದೇವೋ ಕೃಪಾಸಿಂಧು ॥೨೩೪॥ ಜೀ ಮೇಘು ಆಪುಲಿಯೇ ಪ್ರೌಢೀ । ಜಗಾಚೀ ಆರ್ತೀ ದವಡೀ । ವಾಂಚೂನಿ ಚಾತಕಾಚೀ ತಾಹಾನ ಕೇವಢೀ । ತೋ ವರ್ಷಾವೋ ಪಾಹುನೀ? ॥೨೩೫॥ ಪರಿ ಚುಳಾ ಏಕಾಚಿಯಾ ಚಾಡೇ । ಜೇವೀ ಗಂಗೇತೇಚಿ ಠಾಕಣೇ ಪಡೇ । ತೇವೀ ಆರ್ತ ಬಹು ಕಾ ಥೋಡೇ । ತರೀ ಸಾಂಗಾವೇ ದೇವೇ? ॥೨೩೬॥ ತೇಥೇ ದೇವೇ ಮ್ಹಣಿತಲೇ ರಾಹೇ । ಜೋ ಸಂತೋಷು ಆಮ್ಹಾ ಜಾಹಲಾ ಆಹೇ । ತಯಾವರೀ ಸ್ತುತಿ ಸಾಹೇ । ಐಸೇ ಉರಲೇ ನಾಹೀ ॥೨೩೭॥ ಪೈ ಪರಿಸತು ಆಹಾಸಿ ನಿಕಿಯಾಪರೀ । ತೇಚಿ ವಕ್ತೃತ್ವಾ ವರ್ಹಾಡೀಕ ಕರೀ । ಐಸೇ ಪುರಸ್ಕರೋನಿ ಶ್ರೀಹರೀ । ಆದರಿಲೇ ಬೋಲೋ ॥೨೩೮॥

ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಾಸತೇ ।
ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಮ್ ॥೧೫॥

ತರೀ ಜ್ಞಾನಯಜ್ಞು ತೋ ಏವಂ ರೂಪು । ತೇಥ ಆದಿಸಂಕಲ್ಪು ಹಾ ಯೂಪು । ಮಹಾಭೂತೇ ಮಂಡಪು। ಭೇದು ತೋ ಪಶು ॥೨೩೯॥ ಮಗ ಪಾಂಚಾಂಚೇ ಜೇ ವಿಶೇಷ ಗುಣ । ಅಥವಾ ಇಂದ್ರಿಯೇ ಆಣಿ ಪ್ರಾಣ । ಹೇಚಿ ಯಜ್ಞೋಪಚಾರಭರಣ । ಅಜ್ಞಾನಘೃತ ॥೨೪೦॥ ತೇಥ ಮನಬುದ್ಧಿಯೇಚಿಯಾ ಕುಂಡಾ । ಆಂತು ಜ್ಞಾನಾಗ್ನಿ ಧಡಪುಡಾ । ಸಾಮ್ಯ ತೇಚಿ ಸುಹಾಡಾ । ವೇದಿಕಾ ಜಾಣೇ ॥೨೪೧॥ ಸವಿವೇಕಮತಿಪಾಟವ । ತೇಚಿ ಮಂತ್ರ ವಿದ್ಯಾಗೌರವ । ಶಾಂತಿ ಸ್ರುಕ್ ಸ್ರುವ । ಜೀವು ಯಜ್ವಾ ॥೨೪೨॥ ತೋ ಪ್ರತೀತೀಚೇನಿ ಪಾತ್ರೇ । ವಿವೇಕ ಮಹಾಮಂತ್ರೇ । ಜ್ಞಾನಾಗ್ನಿ ಹೋತ್ರೇ । ಭೇದು ನಾಶೀ ॥೨೪೩॥ ತೇಥ ಅಜ್ಞಾನ ಸರೋನಿ ಜಾಯೇ । ಆಣಿ ಯಜಿತಾ ಯಜನ ಹೇ ಠಾಯೇ । ಆತ್ಮಸಮರಸೀ ನ್ಹಾಯೇ । ಅವಭೃಥೀ ಜೇವ್ಹಾ ॥೨೪೪॥ ತೇವ್ಹಾ ಭೂತೇ ವಿಷಯ ಕರಣೇ । ಹೇ ವೇಗಳಾಲೇ ಕಾಂಹೀ ನ ಮ್ಹಣೇ । ಆಘವೇ ಏಕಚಿ ಐಸೇ ಜಾಣೇ । ಆತ್ಮಬುದ್ಧಿ ॥೨೪೫॥ ಜೈಸಾ ಚೇಇಲಾ ತೋ ಅರ್ಜುನಾ । ಮ್ಹಣೇ ಸ್ವಪ್ನೀಚೀ ಹೇ ವಿಚಿತ್ರ ಸೇನಾ । ಮೀಚಿ ಜಾಹಾಲೋ ಹೋತೋ ನಾ । ನಿದ್ರಾವಶೇ? ॥೨೪೬॥ ಆತಾ ಸೇನಾ ತೇ ಸೇನಾ ನವ್ಹೇ । ಹೇ ಮೀಚ ಏಕ ಆಘವೇ । ಐಸೇ ಏಕತ್ವೇ ಮಾನವೇ । ವಿಶ್ವ ತಯಾ ॥೨೪೭॥

ಚಕೋರ ಪಕ್ಷಿಯು ತನ್ನ ಅಪೇಕ್ಷೆ ಮೇರೆಗೆ ಚಂದ್ರನತ್ತ ತನ್ನ ಚುಂಚನ್ನು ಚಾಚುವಂತೆ ನಾವು ನಿಮ್ಮನ್ನು ವಿನಂತಿಸುವುದು ವಿಶೇಷವಲ್ಲ, ಆದರೆ ಜಗತ್ತಿನ ಕಲ್ಯಾಣ ಮಾಡುವುದರಲ್ಲಿ ನೀವು ಕೃಪಾಸಿಂಧುರಾಗಿರುವಿರಿ ।೨೩೪॥

ಮೇಘವು ತನ್ನ ಹಿರಿಮೆಯಿಂದ ಜಗತ್ತಿನ ಕೊರತೆಯನ್ನು ನಿವಾರಿಸುವುದು. ಅದರ ಭಾರಿ ಮಳೆಯ ಲೆಕ್ಕ ನೋಡಿದರೆ ಚಾತಕ ಪಕ್ಷಿಯ ನೀರಡಿಕೆ ಎಷ್ಟಾಗಬಹುದು? ।೨೩೫॥

ಅದರಂತೆ, ಒಂದು ಮುಕ್ಕು ನೀರು ಬೇಕಾದರೂ ಯಾವ ಪ್ರಕಾರವಾಗಿ ಗಂಗಾನದಿಗೆ ಹೋಗಬೇಕಾಗುವುದೋ, ಅದೇ ಪ್ರಕಾರವಾಗಿ ನಮ್ಮ ಇಚ್ಚೆಯು ಸ್ವಲ್ಪೇ ಇರಲಿ ಅಥವಾ ಬಹಳಿರಲಿ ದೇವರು ಅದನ್ನು ಪೂರ್ಣ ಮಾಡಲೇ ಬೇಕು ।೨೩೬॥

ಆಗ ದೇವನು ಹೇಳಿದನು :- ಅರ್ಜುನಾ, ಈಗ ನಿನ್ನ ಮಾತಿರಲಿ, ನಮಗೆ ಹೇಳುವ ವಿಷಯಕ್ಕೆ ಸಂತೋಷವಾಗಿದೆ. ಈಗ ಸ್ತುತಿ ಮಾಡುವ ಅವಶ್ಯಕತೆ ಉಳಿದಿಲ್ಲ ।೨೩೭॥

ನೀನು ಉತ್ತಮ ರೀತಿಯಲ್ಲಿ ಕೇಳುತ್ತಿರುವೆ, ಈ ಕೇಳುವಿಕೆಯೇ ನಮ್ಮ ವಕ್ತೃತ್ವಕ್ಕೆ ಬೀಗತನ ಮಾಡುತ್ತಿದೆ, ಸಂಬಂಧ ಬೆಳೆಸಿದೆ. ಶ್ರೀಕೃಷ್ಣನು ಅರ್ಜುನನ್ನು ಈ ಪ್ರಕಾರ ಗೌರವದಿಂದ ಪುರಸ್ಕರಿಸಿ ಬಹಳ ಪ್ರೀತಿಯಿಂದ ಹೇಳಲಾರಂಭಿಸಿದನು।೨೩೮॥

ಶ್ಲೋಕಾರ್ಥ :- ಮತ್ತೆ ಕೆಲವರು ಜ್ಞಾನ ಯಜ್ಞದಿಂದ ನನ್ನನ್ನು ಉಪಾಸಿಸುತ್ತಾರೆ, ವಿಶ್ವ ರೂಪನಾದ ನನ್ನನ್ನು ಕೆಲವರು ಏಕತ್ವಭಾವದಿಂದ, ಕೆಲವರು ಭೇದಭಾವದಿಂದ ಮತ್ತೆ ಕೆಲವರು ಪರಿಪರಿ ವಿಧವಾಗಿ ಸೇವಿಸುತ್ತಾರೆ ।೧೫॥

ಜ್ಞಾನಯಜ್ಞದ ಲಕ್ಷಣ ಯಾವುದೆಂದರೆ, ''ನಾನು ಅನೇಕ ರೂಪನಾಗಬೇಕು'' ಈ ಈಶ್ವರನ ಆದಿ ಸಂಕಲ್ಪವು ಯಜ್ಞ ಸ್ತಂಭವು. ಪಂಚಮಹಾಭೂತಗಳು ಇವೇ ಯಜ್ಞ ಮಂಟಪವು. ಜೀವ ಈಶ್ವರರ ಭಿನ್ನತ್ವವು ಇದುವೇ ಪಶು ।೨೩೯॥

ಪಂಚಮಹಾಭೂತಗಳ ವಿಶೇಷ ಶಬ್ದಾದಿಗುಣಗಳು ಮತ್ತು ಪಂಚ ಇಂದ್ರಿಯಗಳು, ಪಂಚಪ್ರಾಣಗಳು ಇವು ಯಜ್ಞದ ಸಾಹಿತ್ಯಗಳು ಮತ್ತು ಬ್ರಹ್ಮ ವಿಷಯದ ಅಜ್ಞಾನವು ಇದುವೇ ತುಪ್ಪವು ।೨೪೦॥

ಆ ಯಜ್ಞದಲ್ಲಿ ಮನಸ್ಸು ಮತ್ತು ಬುದ್ಧಿ ಎಂಬ ಕುಂಡಗಳಲ್ಲಿ ಪ್ರಜ್ವಲಿತ ಜ್ಞಾನರೂಪ ಅಗ್ನಿಯು ಇರುವುದು. ಭೂತಮಾತ್ರರಲ್ಲಿ ಬ್ರಹ್ಮರೂಪದಿಂದ ಸಾಮ್ಯ ಇರುವುದೇ ಅದು ಗಟ್ಟಿಯಾಗಿರುವ ''ವೇದಿಕೆ'' ಯಾಗಿರುವುದು ।೨೪೧॥

ಆತ್ಮಾನಾತ್ಮ ವಿಚಾರ ಮಾಡುವುದರಲ್ಲಿ ಬುದ್ಧಿಯ ಕುಶಲತೆಯು ಯಜ್ಞದ ಮಂತ್ರವಾಗಿದೆ. ವಿದ್ಯೆಯ ಮಹತ್ವವು ಇದು ಸ್ರುಕ್ ಮತ್ತು ಶಾಂತಿಯು ಸ್ರುವಾ ಮತ್ತು ಜೀವವು ಯಜ್ಞಮಾಡುವ ಯಜಮಾನನು ।೨೪೨॥

ಈ ಯಜ್ಞವಾಡುವ ಜೀವನು ಅನುಭವರೂಪ ಮಂತ್ರಗಳಿಂದ ಬ್ರಹ್ಮನ ವಿಚಾರರೂಪ ಮಹಾಮಂತ್ರದಿಂದ ಜ್ಞಾನರೂಪ ಅಗ್ನಿಹೋತ್ರ ಕರ್ಮದಿಂದ ಜೀವ ಈಶ್ವರರ ಭಿನ್ನತ್ವದ ಆಹುತಿ ಕೊಟ್ಟು ಭೇದ ಇಲ್ಲದಂತೆ ಮಾಡುವನು ।೨೪೩॥

ಆಗ ಅಜ್ಞಾನವು ಇಲ್ಲದಂತಾಗಿ ಯಜ್ಞ ಮಾಡುವವನು, ಮತ್ತು ಯಜ್ಞ ಕ್ರಿಯೆಯು ಅಲ್ಲಿಯೇ ಉಳಿಯುವುವು. ನಂತರ ಆತ್ಮ ಬ್ರಹ್ಮೈಕ್ಯ ರಸದಲ್ಲಿ ಜೀವರೂಪ ಯಜಮಾನನ ಅವಭೃತ ಸ್ನಾನವಾಗುವುದು ।೨೪೪॥

ಆಗ ಪಂಚಮಹಾಭೂತಗಳು, ಶಬ್ದ ಸ್ಪರ್ಶಾದಿ ವಿಷಯಗಳು, ಮತ್ತು ಇಂದ್ರಿಯಗಳು ಇವು ಭಿನ್ನವಾಗಿವೆ ಎಂದು ಹೇಳುವುದಿಲ್ಲ. ಹಾಗೆಯೇ ಬ್ರಹ್ಮನ ತಾದಾತ್ಮ್ಯ ಆಗಿರುವುದರಿಂದ ಎಲ್ಲವೂ ಒಂದೇ ಎಂದು ಜ್ಞಾನಿಯು ತಿಳಿಯುವನು ।೨೪೫॥

ಅರ್ಜುನಾ, ಮನುಷ್ಯನು ನಿದ್ರೆಯಿಂದ ಪೂರ್ಣ ಎಚ್ಚರಾದ ಮೇಲೆ ಹೀಗೆ ಹೇಳುವನು, ನಾನು ಸ್ವಪ್ನದಲ್ಲಿ ಚಿತ್ರ ವಿಚಿತ್ರ ಸೈನ್ಯವನ್ನು ನೋಡಿದ್ದು ಅದು ನಿದ್ರೆಯಲ್ಲಿ ಆಧೀನದಲ್ಲಿದ್ದರಿಂದ ಅವೆಲ್ಲವೂ ನಾನೇ ಆಗಿದ್ದೆನಲ್ಲ ? ।೨೪೬॥

ಈಗ ಯಾವ ಸೈನ್ಯವನ್ನು ನೋಡಿದ್ದೆನೋ, ಅದು ಸೈನ್ಯವಲ್ಲ, ಅದೆಲ್ಲವೂ ನಾನೇ ಆಗಿದ್ದೆ. ಅರ್ಜುನಾ, ಈ ಪ್ರಕಾರವಾಗಿ ಆ ಪುರುಷನಿಗೆ ಜಗತ್ತು ಏಕರೂಪವಾಗಿ ಭಾಸವಾಗುತ್ತದೆ ।೨೪೭॥

ಮಗ ತೋ ಜೀವು ಹೇ ಭಾಷ ಸರೇ । ಆಬ್ರಹ್ಮ ಪರಮಾತ್ಮ ಬೋಧೇ ಭರೇ । ಐಸೇ ಭಜತೀ ಜ್ಞಾನಾಧ್ವರೇ । ಏಕತ್ವೇ ಯೇಣೇ ॥೨೪೮॥ ಅಥವಾ ಅನಾದಿ ಹೇ ಅನೇಕ । ಜೇ ಆನಾಸಾರಿಖೇ ಏಕಾ ಏಕ । ಆಣಿ ನಾಮ ರೂಪಾದಿಕ । ತೇಹೀ ವಿಷಮ ॥೨೪೯॥ ಮ್ಹಣೌನಿ ವಿಶ್ವ ಭಿನ್ನ । ಪರಿ ನ ಭೇದೇ ತಯಾಚೇ ಜ್ಞಾನ । ಜೈಸೇ ಅವಯವ ತರಿ ಆನ ಆನ । ಪರಿ ಏಕೇಚಿ ದೇಹೀಂಚೇ ॥೨೫೦॥ ಕಾ ಶಾಖಾ ಸಾನಿಯಾ ಥೋರಾ । ಪರಿ ಆಹಾತಿ ಏಕಾಚಿಯಾ ತರುವರಾ । ಬಹು ರಶ್ಮಿ ಪರಿ ದಿನಕರಾ । ಏಕಾಚೇ ಜೇವಿ ॥೨೫೧॥ ತೇವಿ ನಾನಾವಿಧಾ ವ್ಯಕ್ತೀ । ಅನಾನೇನಾಮೇ ಆನಾನೀ ವೃತ್ತೀ । ಐಸೇ ಜಾಣತೀ ಭೇದಲಾ ಭೂತೀ । ಅಭೇದಾ ಮಾತೇ ॥೨೫೨॥ ಯೇಣೇ ವೇಗಳಾಲೇಪಣೇ ಪಾಂಡವಾ । ಕರಿತೀ ಜ್ಞಾನಯಜ್ಞು ಬರವಾ । ಜೇ ನ ಭೇದತಿ ಜಾಣಿವಾ । ಜಾಣತೇ ಮ್ಹಣೌನಿ ॥೨೫೩॥ ನಾ ತರೀ ಜೇಧವಾ ಜಿಯೇ ಠಾಯೀ । ದೇಖತೀ ಕಾ ಜೇ ಜೇ ಕಾಂಹೀ । ತೇ ಮೀವಾಂಚೂನಿ ನಾಹೀ । ಐಸಾಚಿ ಬೋಧು॥೨೫೪॥ ಪಾಹೇ ಪಾ ಬುಡಬುಡಾ ಜೇವುತಾ ಜಾಯೇ । ತೇಉತೇ ಜಳಚಿ ಏಕ ತಯಾ ಆಹೇ । ಮಗ ವಿರೇ ಅಥವಾ ರಾಹೇ । ತರ್‍ಹೀ ಜಳಾಚಿಮಾಜೀ ॥೨೫೫॥ ಕಾ ಪವನೇ ಪರಮಾಣು ಉಚಲಲೇ । ತೇ ಪೃಥ್ವಿಪಣಾ ವೇಗಳೇ ನಾಹೀ ಕೇಲೇ । ಆಣಿ ಮಾಘೌತೇ ಜರೀ ಪಡಲೇ । ತರೀ ಪೃಥ್ವೀಚಿವರೀ ॥೨೫೬॥ ತೈಸೇ ಭಲತೇಥ ಭಲತೇಣೇ ಭಾವೇ । ಭಲತೇಹೀ ಹೋ ಅಥವಾ ನೋಹಾವೇ । ಪರಿ ತೇ ಮೀ ಐಸೇ ಆಘವೇ । ಹೋಉನೀ ಠೇಲೇ ॥೨೫೭॥ ಅಗಾ ಹೇ ಜೇವ್ಢಡೀ ಮಾಝೀ ವ್ಯಾಪ್ತೀ । ತೇವ್ಢಡೀಚಿ ತಯಾಂಚಿ ಪ್ರತೀತೀ । ಐಸೇ ಬಹುಧಾಕಾರೀ ವರ್ತತೀ । ಬಹುಚಿ ಹೋಉನೀ ॥೨೫೮॥ ಹೇ ಭಾನುಬಿಂಬ ಆವಡೇ ತಯಾ । ಸನ್ಮುಖ ಜೈಸೇ ಧನಂಜಯಾ । ತೈಸೇ ತೇ ವಿಶ್ವಾ ಯಾ । ಸಮೋರ ಸದಾ ॥೨೫೯॥ ಅಗಾ ತಯಾಂಚಿಯಾ ಜ್ಞಾನಾ । ಪಾಠೀ ಪೋಟ ನಾಹೀ ಅರ್ಜುನಾ । ವಾಯು ಜೈಸಾ ಗಗನಾ । ಸರ್ವಾಂಗೀ ಅಸೇ ॥೨೬೦॥ ತೈಸಾ ಮೀ ಜೇತುಲಾ ಆಘವಾ । ತೇಚಿ ತುಕ ತಯಾಂಚಿಯಾ ಸದ್ಭಾವಾ । ತರೀ ನ ಕರಿತಾ ಪಾಂಡವಾ । ಭಜನ ಜಹಾಲೇ ॥೨೬೧॥ ಏರ್‍ಹವೀ ತರೀ ಸಕಳ ಮೀಚಿ ಆಹೇ । ತರೀ ಕವಣೀ ಕೇ ಉಪಾಸಿಲಾ ನೋಹೇ ?। ಏಥ ಏಕೇ ಜಾಣಣೇವೀಣ ಠಾಯೇ । ಅಪ್ರಾಪ್ತಾಸೀ ॥೨೬೨॥ ಪರಿ ತೇ ಅಸೋ ಯೇಣೇ ಉಚಿತೇ । ಜ್ಞಾನಯಜ್ಞೇ ಯಜಿತಸಾಂತೇ । ಉಪಾಸಿತೀ ಮಾತೇ । ತೇ ಸಾಂಗಿತಲೇ ॥೨೬೩॥

ಆಗ ಆತನು ನಾನು ಜೀವನಿರುವೆ ಎಂದು ವ್ಯವಹರಿಸುವುದಿಲ್ಲ. ಬ್ರಹ್ಮದೇವನಿಂದ ಹಿಡಿದು ಹುಲ್ಲಿನವರೆಗೂ ಆತ್ಮವೇ ತುಂಬಿರುವುದು ಎಂದು ತಿಳಿಯುವವನು. ಈ ಪ್ರಕಾರದ ಜ್ಞಾನಯಜ್ಞದಿಂದ ಐಕ್ಯರಾಗಿ ಎಷ್ಟೋ ಜನರು ನನ್ನನ್ನು ಭಜಿಸುವರು ।೨೪೮॥

ಇದಾದನಂತರ, ಬೇರೆ ಭಜನೆಯ ಸ್ವರೂಪವು ಹೀಗಿದೆ. ಈ ವಿಶ್ವವು ಅನಾದಿಕಾಲದಿಂದ ಅನೇಕ ಸ್ವರೂಪದ್ದಾಗಿದೆ. ಈ ವಿಶ್ವದಲ್ಲಿ ಪ್ರತ್ಯೇಕ ಪದಾರ್ಥವು ಒಂದರಿಂದ ಇನ್ನೊಂದು ವಿಲಕ್ಷಣವಾಗಿದೆ, ಮತ್ತು ಪ್ರತ್ಯೇಕ ಪದಾರ್ಥದ ಜಾತಿ ಸ್ವರೂಪಗಳು ಭಿನ್ನವಾಗಿವೆ ।೨೪೯॥

ಆದ್ದರಿಂದ ವಿಶ್ವವು ಭಿನ್ನ ಭಿನ್ನ ಸ್ವರೂಪದ್ದಾಗಿದ್ದರೂ ಆ ಜ್ಞಾನಿ ಭಕ್ತನ ಜ್ಞಾನವು ಭಿನ್ನವಾಗುವುದಿಲ್ಲ. ಶರೀರದಲ್ಲಿ ಅವಯವಗಳು ಭಿನ್ನ ಭಿನ್ನವಾಗಿದ್ದರೂ ಅವು ಒಂದೇ ದೇಹದ್ದಾಗಿರುವುವು ।೨೫೦॥

ಅಥವಾ ಸಣ್ಣ ದೊಡ್ಡ ಟೊಂಗೆಗಳು ಒಂದೇ ವೃಕ್ಷದ್ದಾಗಿರುವುವು. ಕಿರಣಗಳು ಅನೇಕವಿದ್ದರೂ ಅವು ಒಂದೇ ಸೂರ್ಯನಿಂದಾಗಿವೆ. ಅದು ಹೇಗೋ ।೨೫೧॥

ಅದರಂತೆ ವ್ಯಕ್ತಿಗಳು ನಾನಾ ಪ್ರಕಾರದಿಂದಿರುವರು. ಅವರ ಹೆಸರುಗಳು, ವರ್ತನೆಗಳು ಎಲ್ಲವೂ ಭಿನ್ನ ಭಿನ್ನವಾಗಿರುವುವು. ಈ ರೀತಿ ಭಿನ್ನವಾಗಿರುವ ಭೂತಗಳಲ್ಲಿ ನನ್ನನ್ನು ಅಭೇದದಿಂದ ತಿಳಿಯುವರು ।೨೫೨॥

ಹೇ ಪಾಂಡವನೇ, ಈ ರೀತಿಯಲ್ಲಿ ಎಲ್ಲ ಭೂತಗಳು ಭಿನ್ನವಾಗಿವೆ ಎಂಬುದು ತಿಳಿದು ಇವರು ಉತ್ತಮವಾದ ಜ್ಞಾನ ಯಜ್ಞವನ್ನು ಮಾಡುವರು ಮತ್ತು ಅವರು ಜ್ಞಾನಿಗಳಾಗಿರುವುದರಿಂದ ಅವರ ಜ್ಞಾನದಲ್ಲಿ ಭಿನ್ನ ಭಾವವು ಉಳಿಯುವುದಿಲ್ಲ ।೨೫೩॥

ಅಥವಾ ಅವರು ಎಲ್ಲಿ ಎಂದು ಯಾವ ಯಾವ ವಸ್ತುಗಳನ್ನು ನೋಡುವರೋ ಅವುಗಳಲ್ಲಿ ನನ್ನ ಹೊರತು ಅನ್ಯವು ಯಾವುದೂ ಇಲ್ಲವೆಂಬ ಅವರ ಮನದ ನಿಶ್ಚಯವಾಗಿರುವುದು।೨೫೪॥

ಇಲ್ಲಿ ನೋಡು, ನೀರಿನ ಮೇಲಿನ ಗುರುಳೆ ಎಲ್ಲಿ ಹೋದರೂ ಅಲ್ಲಿ ಅದಕ್ಕೆ ನೀರೆ ಇರುವುದು. ಅದು ಒಡೆದರೂ ಇದ್ದರೂ ನೀರಿನಲ್ಲಿಯೇ ಇರುವುದು ।೨೫೫॥

ಅಥವಾ ಗಾಳಿಯಿಂದ ಮಣ್ಣಿನ ಕಣಗಳು ಮೇಲೆ ಎತ್ತರಕ್ಕೆ ಹಾರಿದಾಗ ಅವು ಪೃಥ್ವಿತ್ವದಿಂದ ಬೇರೆಯಾಗಿ ರುವುದಿಲ್ಲ, ಪುನಃ ಅವು ಕೆಳಗೆ ಬಿದ್ದಾಗ ಪೃಥ್ವಿಯ ಮೇಲೆಯೇ ಇರುವುವು ।೨೫೬॥

ಅದರಂತೆ ಯಾವುದೇ ದೇಶ ಕಾಲದಲ್ಲಿ ಯಾವುದೇ ಪದಾರ್ಥದಲ್ಲಿ ಯಾವುದೇ ರೂಪವಿರಲಿ, ಇಲ್ಲದಿರಲಿ ಎಲ್ಲದರಲ್ಲಿಯೂ "ನಾನೇ ಇರುವೆ" ಎಂಬ ವೃತ್ತಿಯು ಅವರಿಗಾಗಿದೆ ।೨೫೭॥

ಅರ್ಜುನಾ, ನನ್ನ ರೂಪ ಎಷ್ಟು ವ್ಯಾಪಕವೋ ಅಷ್ಟೇ ಅವರ ಬೋಧ (ಜ್ಞಾನ) ವಾಗಿರುವುದು. ಆದ್ದರಿಂದ ಬಹು ಪ್ರಕಾರದಿಂದ ಜಗವು ಕಂಡರೂ ಬ್ರಹ್ಮರೂಪದಿಂದ ನಾನೇ ಇರುವೆ ಎಂದು ತಿಳಿದು ವ್ಯವಹರಿಸುವರು ।೨೫೮॥

ಧನಂಜಯನೇ, ಯಾವ ಪ್ರಕಾರವಾಗಿ ಸೂರ್ಯನ ಬಿಂಬವು ಎಲ್ಲರಿಗೂ ತನ್ನ ಮುಂದೆಯೇ ಇದೆ ಎನ್ನುವಂತೆ ಕಾಣುವುದು. ಅದರಂತೆ ಇವರು ಎಲ್ಲ ವಿಶ್ವಕ್ಕೆ ಜ್ಞಾನದಿಂದ ವ್ಯಾಪಕವಿರುವುದರಿಂದ ಎಲ್ಲರ ಎದುರಿಗೆ ಇರುವರು ।೨೫೯॥

ಅರ್ಜುನಾ, ಅವರ ಜ್ಞಾನಕ್ಕೆ ಒಳಗೆ ಹೊರಗೆ ಎಂಬ ಭೇದವಿಲ್ಲ. ಯಾವ ಪ್ರಕಾರವಾಗಿ ವಾಯುವು ಆಕಾಶದಲ್ಲಿ ಎಲ್ಲ ಕಡೆಗೂ ತುಂಬಿಕೊಂಡಿರುವುದೋ ।೨೬೦॥

ಅದರಂತೆ ನಾನು ಎಷ್ಟು ಸಂಪೂರ್ಣ ಇರುವೆನೋ ಅಷ್ಟೇ ಅವರ ಅಸ್ತಿತ್ವಭಾವವಿರುವುದು ಅಂದರೆ ಇಚ್ಛಿಕ ಅಳತೆಯು ಅಷ್ಟೇ ಇರುವುದು. ಹೀಗೆ ಯಾರ ಜ್ಞಾನವು ಇರುವುದೋ, ಅವರು ಮಾಡದೆಯೇ ಭಜನೆಯಾಗುವುದು ।೨೬೧॥

ಸಾಮಾನ್ಯವಾಗಿ ನಾನು ಎಲ್ಲೆಡೆಯೂ ತುಂಬಿರುವೆನು, ನನ್ನ ಉಪಾಸನೆ ಯಾರು ಮಾಡುವುದಿಲ್ಲ ? ಎಲ್ಲರಿಂದಲೂ ಎಲ್ಲ ಕಡೆಯಲ್ಲಿಯೂ ನನ್ನ ಉಪಾಸನೆಯು ನಡದೇ ಇರುವುದು. ಆದರೂ ನಾನು ಅವರಿಗೆ ಪ್ರಾಪ್ತನಾಗಿರು ವುದಿಲ್ಲ. ಕಾರಣ ಅವರ ಉಪಾಸನೆಯಲ್ಲಿ ನನ್ನ ಯಥಾರ್ಥ ಜ್ಞಾನವಾಗಿರುವುದಿಲ್ಲ ।೨೬೨॥

ಆದರೆ ಅದು ಇರಲಿ, ಯಾವ ಯೋಗ್ಯವಾದ ಜ್ಞಾನ ಯಜ್ಞದಿಂದ ನನ್ನ ಉಪಾಸನೆ ಮಾಡುವ ಭಕ್ತರ ವಿಷಯವಾಗಿ ನಾನು ನಿನಗೆ ಹೇಳಿರುವೆನು ।೨೬೩॥

ಅಖಂಡ ಸಕಳ ಹೇ ಸಕಳಾ ಮುಖೀ । ಸಹಜ ಅರ್ಪತ ಅಸೇ ಮಜ ಏಕೀ । ಕೀ ನೇಣಣೇ ಯಾಸಾಠೀ ಮೂರ್ಖೀ । ನ ಪವಿಜೇಚಿ ಮಾತೇ ।೨೬೪॥

ಅಹಂ ಕ್ರತುರಹಂ ಯಜ್ಞಃ ಸ್ವಧಾಽಹಮಹಮೌಷಧಮ್ ।
ಮಂತ್ರೋಽಹಮಹಮೇವಾಜ್ಯಮ್ ಅಹಮಗ್ನಿರಹಂ ಹುತಮ್ ।೧೬॥

ತೋಚಿ ಜಾಣಿವೇಚಾ ಜರೀ ಉದಯೋ ಹೋಯೇ । ತರೀ ಮುದ್ದಲ ವೇದು ಮೀಚಿ ಆಹೇ । ಆಣಿ ತೋ ವಿಧಾನಾತೇ ಜಯಾ ವಿಯೇ । ತೋ ಕ್ರತುಹೀ ಮೀಚಿ ।೨೬೫॥ ಮಗ ತಯಾ ಕರ್ಮಾಪಾಸೂನಿ ಬರವಾ । ಜೋ ಸಾಂಗೋಪಾಂಗು ಆಘವಾ । ಯಜ್ಞು ಪ್ರಗಟೇ ಪಾಂಡವಾ । ತೋಹೀ ಮೀ ಗಾ ।೨೬೬॥ ಸ್ವಾಹಾ ಮೀ ಸ್ವಧಾ । ಸೋಮಾದಿ ಔಷಧೀ ವಿವಿಧಾ । ಆಜ್ಯ ಮೀ ಸಮಿಧಾ । ಮಂತ್ರು ಮೀ ಹವಿ ।೨೬೭॥ ಹೋತಾ ಮೀ ಹವನ ಕೀಜೇ । ತೇಥ ಅಗ್ನೀ ತೋ ಸ್ವರೂಪ ಮಾಝೇ । ಆಣಿ ಹುತಕ ವಸ್ತು ಜೇಜೇ । ತೇಹೀ ಮೀಚಿ ।೨೬೮॥

ಪಿತಾಽಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।
ವೇದ್ಯಂ ಪವಿತ್ರಮೋಂಕಾರಃ ಋಕ್ ಸಾಮ ಯಜುರೇವ ಚ ।೧೭॥

ಪೈ ಜಯಾಚೇನಿ ಅಂಗಸಂಗೇ । ಇಯೇ ಪ್ರಕೃತೀಸ್ತವ ಆಷ್ಟಾಂಗೇ । ಜನ್ಮ ಪಾವಿಜತ ಅಸೇ ಜಗೇ । ತೋ ಪಿತಾ ಮೀ ಗಾ ।೨೬೯॥ ಅರ್ಧನಾರೀನಟೇಶ್ವರೀ । ಜೋ ಪುರುಷ ತೋಚಿ ನಾರೀ । ತೇವೀ ಮೀ ಚರಾಚರೀ । ಮಾತಾ ಹೀ ಹೋಯ ।೨೭೦॥ ಆಣಿ ಜಾಹಾಲೇ ಜಗ ಜೇಥ ರಾಹೇ । ಜೇಣೇ ಜೀವಿತ ವಾಢತ ಆಹೇ। ತೇ ಮೀ ವಾಂಚೂನಿ ನೋಹೇ । ಆನ ನಿರುತೇ ।೨೭೧॥ ಇಯೇ ಪ್ರಕೃತಿಪುರುಷೇ ದೋನ್ಹೀ । ಉಪಜಲೀ ಜಯಾಚಿಯಾ ಅಮನಮನೀ। ತೋ ಪಿತಾಮಹ ತ್ರಿಭುವನೀ । ವಿಶ್ವಾಚಾ ಮೀ ।೨೭೨॥ ಆಣಿ ಆಘವೇಯಾ ಜಾಣಣೇಯಾಚಿಯಾ ವಾಟಾ । ಜಯಾ ಗಾಂವಾ ಯೇತೀ ಗಾ ಸುಭಟಾ। ವೇದಾಂಚಿಯಾ ಚೋಹಟಾ । ವೇದ್ಯ ಜೇ ಮ್ಹಣಿಜೇ ।೨೭೩॥ ಜೇಥ ನಾನಾಮತಾ ಬುಝಾವಣೀ ಜಾಹಾಲೀ । ಏಕಮೇಕಾ ಶಾಸ್ತ್ರಾಂಚೀ ಅನೋಳಖೀ ಫಿಟಲೀ । ಚುಕಲೀ ಜ್ಞಾನೇ ಜೇಥ ಮಿಳೋ ಆಲೀ । ಜೇ ಪವಿತ್ರ ಮ್ಹಣಿಜೇ।೨೭೪॥ ಪೈ ಬ್ರಹ್ಮಬೀಜಾ ಜಾಹಲಾ ಅಂಕುರು। ಘೋಷಧ್ವನೀನಾದಾಕಾರು । ತಯಾಚೇ ಗಾ ಭುವನ ಜೋ ಓಂಕಾರು। ತೋಹೀ ಮೀ ಗಾ ।೨೭೫॥

ಸದಾ ಸರ್ವಕಾಲದಲ್ಲಿಯೂ ನಡೆಯುವ ಎಲ್ಲ ಕರ್ಮಗಳು ನನಗೆ ಎಲ್ಲ ರೀತಿಯಿಂದಲೂ ಸಹಜವಾಗಿ ಅರ್ಪಿತವಾಗುವುವು. ಆದರೆ ಆ ಮೂರ್ಖರು ತಿಳಿಯಲಾರದ್ದಕ್ಕೆ ಅವರಿಗೆ ನಾನು ಪ್ರಾಪ್ತನಾಗುವುದಿಲ್ಲ ।೨೬೪॥

ಶ್ಲೋಕಾರ್ಥ :- ಶ್ರೌತಕ್ರತುವು ನಾನು, ಸ್ಮಾರ್ತ ಯಜ್ಞವು ನಾನು, ಸ್ವಧಾಕಾರವು ನಾನು, ಸ್ವಾಹಾಕಾರವು ನಾನು, ಔಷಧ ನಾನು, ಸೋಮವು ನಾನು ।೧೬॥

ಆ ಜ್ಞಾನದ ಉದಯವಾಯಿತೆಂದರೆ, ಮುಖ್ಯವಾದ ವೇದವು ನಾನೇ ಆಗಿರುವೆ. ಆದರಲ್ಲಿಯ ವಿಧಿ - ಅನುಷ್ಠಾನಗಳನ್ನು ಹೇಳಿರುವ ಕೃತು (ಯಜ್ಞ) ನಾನೇ ಆಗಿರುವೆ ।೨೬೫॥

ಆಗ ಪಾಂಡವನೇ, ಆ ಕರ್ಮದಿಂದ ಪ್ರಕಟವಾಗುವ ಯಾವ ಯಥಾವಿಧಿ ಯಜ್ಞವು ಅದು ಸಹ ನಾನೇ ಆಗಿರುವೆ ।೨೬೬॥

ದೇವರಿಗೆ ಹವಿಸ್ಸು ಕೊಡುವ ಮಂತ್ರವು ನಾನಾಗಿರುವೆನು. ಪಿತರಿಗೆ ಹವಿಸ್ಸು ಕೊಡುವ ಮಂತ್ರವು ನಾನಾಗಿರುವೆನು. ಸೋಮದಲ್ಲಿ ಇತ್ಯಾದಿ ನಾನಾ ಪ್ರಕಾರದ ಔಷಧವು ನಾನಾಗಿರುವೆನು. ತುಪ್ಪ, ಸಮಿಧಾ, ಮಂತ್ರ, ಹೋಮದ್ರವ್ಯ ಎಲ್ಲವೂ ನಾನಾಗಿರುವೆನು ।೨೬೭॥

ಋತ್ವಿಜ ನಾನು, ಆದರಲ್ಲಿ ಹವನ ಮಾಡುವ ಅಗ್ನಿಯು ನನ್ನ ಸ್ವರೂಪವು, ಮತ್ತು ಅಗ್ನಿಯಲ್ಲಿ ಹವನ ಮಾಡುವ ಎಲ್ಲ ವಸ್ತುಗಳಲ್ಲಿ ನಾನೇ ಆಗಿರುವೆ ।೨೬೮॥

ಶ್ಲೋಕಾರ್ಥ :- ಈ ಜಗತ್ತಿಗೆ ತಾಯಿ, ತಂದೆ, ಧಾತಾ, ತಾತನು ನಾನೇ, ಓಂಕಾರವು ನಾನೇ, ವೇದಗಳೂ ನಾನೇ ।೧೭॥

ಇಲ್ಲಿ ನೋಡು, ಯಾರ ಅಂಗಸಂಗದಿಂದ ಈ ಅಷ್ಟಾಂಗ ಪ್ರಕೃತಿಯು ಜಗತ್ತನ್ನು ಹುಟ್ಟಿಸುವುದೋ ಆ ಜಗತ್ತಿನ ಪಿತನು ನಾನಾಗಿರುವೆನು ।೨೬೯॥

ಅರ್ಧನಾರಿನಟೇಶ್ವರ ರೂಪದಲ್ಲಿ ಯಾವ ಪ್ರಕಾರವಾಗಿ ಪುರುಷನೇ ಸ್ತ್ರೀಯಾಗಿ, ಸ್ತ್ರೀಯೇ ಪುರುಷನಾಗಿರುವುದೋ, ಆದರಂತೆ ಸ್ಥಾವರ ಜಂಗಮದ ತಾಯಿಯೂ ನಾನೇ ಆಗಿರುವೆನು ।೨೭೦॥

ಮತ್ತು ಉತ್ಪನ್ನವಾದ ಜಗತ್ತು ಯಾವ ಸ್ಥಳದಲ್ಲಿ ಇರುವುದೋ ಮತ್ತು ಯಾರ ಯೋಗದಿಂದ ಪ್ರಾಣಿಮಾತ್ರರ ರಕ್ಷಣೆಯಾಗುವುದೋ, ಅದು ನಿಃಸಂಶಯವಾಗಿ ನನ್ನ ಹೊರತು ಇನ್ನು ಯಾರೂ ಇರುವುದಿಲ್ಲ ।೨೭೧॥

ಈ ಪ್ರಕೃತಿ ಪುರುಷರಿಬ್ಬರೂ ಯಾವ ನಿರ್ಗುಣ ಸ್ವರೂಪದಲ್ಲಿ ಉತ್ಪನ್ನರಾಗಿರುವರೋ, ಅವರ ಈ ತ್ರಿಭುವನದಲ್ಲಿ ವಿಶ್ವದ ಅಜ್ಜನು ನಾನಾಗಿರುವೆನು ।೨೭೨॥

ಅರ್ಜುನನೇ, ಎಲ್ಲ ಜ್ಞಾನದ ದಾರಿಗಳು ಯಾವ ಊರಲ್ಲಿ ಬಂದು ಕೂಡುವುವೋ ಮತ್ತು ನಾಲ್ಕು ವೇದಗಳು ಏಕತ್ರ ಕೂಡಿದ ಸ್ಥಳಕ್ಕೆ ವೇದ್ಯ ಎನ್ನುವರೋ ।೨೭೩॥

ಅಲ್ಲಿ ಅನೇಕ ಪ್ರಕಾರದ ಮಾತುಗಳು ಐಕ್ಯಕ್ಕೆ ಬಂದವು. ಶಾಸ್ತ್ರಗಳ ಒಂದರಿಂದ ಒಂದು ಪರಿಚಯವಾಯಿತು ಮತ್ತು ತಪ್ಪಿಸಿಕೊಂಡ ಜ್ಞಾನವು ಇಲ್ಲಿ ಏಕತ್ರ ಕೂಡಿತು. ಇಂತಹ ಈ ಸ್ಥಾನಕ್ಕೆ ಪವಿತ್ರ ಎಂದು ಕರೆಯುವರು ।೨೭೪॥

ಇಲ್ಲಿ ನೋಡು, ಬ್ರಹ್ಮ ಬೀಜಕ್ಕೆ (ಪರಾ,ಪಶ್ಯಂತಿ ಮದ್ಯಮಾ ಮತ್ತು ವೈಖರಿ) ಈ ನಾಲ್ಕು ವಾಚಾಗಳ ಅಂಕುರ ಹುಟ್ಟಿದಾಗ ಅವರ ಮಂದಿರವಾದ ಓಂಕಾರವು ನಾನೇ ಆಗಿರುವೆನು ।೨೭೫॥

ಜಯಾ ಓಂಕಾರಾಚಿಯೇ ಕುಶೀ । ಅಕ್ಷರೇ ಹೋತೀ ಅಉಮಕಾರೇಸೀ । ಜಿಯೇ ಉಪಜತ ವೇದೇಸೀ । ಉಠಲೀ ತಿನ್ಹೀ ।೨೭೬॥ ಮ್ಹಣೌನಿ ಋಗ್ಯಜುಃಸಾಮು । ಹೇ ತಿನ್ಹೀ ಮ್ಹಣೇ ಮೀ ಆತ್ಮಾರಾಮು । ಏವಂ ಮೀಚಿ ಕುಲಕ್ರಮು । ಶಬ್ದಬ್ರಹ್ಮಾಚಾ ।೨೭೭॥

ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।
ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ।೧೮॥

ಹೇ ಚರಾಚರ ಆಘವೇ । ಜಿಯೇ ಪ್ರಕೃತೀ ಆಂತ ಸಾಂಠವೇ । ತೇ ಶಿಣಲೀ ಜೇಥ ವಿಸವೇ । ತೇ ಪರಮಗತೀ ಮೀ ।೨೭೮॥ ಆಣಿ ಜಯಾಚೇನಿ ಪ್ರಕೃತೀ ಜಿಯೇ । ಜೇಣೇ ಅಧಿಷ್ಠಿಲೀ ವಿಶ್ವ ವಿಯೇ । ಜೋ ಯೇಊನಿ ಪ್ರಕೃತೀ ಇಯೇ । ಗುಣಾತೇ ಭೋಗೀ ।೨೭೯॥ ತೋ ವಿಶ್ವ ಶ್ರಿಯೇಚಾ ಭರ್ತಾ । ಮೀಚಿ ಗಾ ಏಥ ಪಂಡುಸುತಾ । ಮೀ ಗೋಸಾವೀ ಅಸೇ ಸಮಸ್ತಾ । ತ್ರೈಲೋಕ್ಯಾಚಾ ।೨೮೦॥ ಆಕಾಶೇ ಸರ್ವತ್ರ ವಸಾವೇ । ವಾಯೂನೇ ನಾವಭರೀ ಉಗೇ ನಸಾವೇ । ಪಾವಕೇ ದಾಹಾವೇ । ವರ್ಷಾವೇ ಜಳೇ ।೨೮೧॥ ಪರ್ವತೀ ಬೈಸಕಾ ನ ಸಂಡಾವೀ । ಸಮುದ್ರೀ ರೇಖಾ ನೋಲಾಂಡಾವೀ । ಪೃಥ್ವೀಯಾ ಭೂತೇ ವಾಹಾವೀ । ಹೇ ಆಜ್ಞಾ ಮಾಝೀ ।೨೮೨॥ ಮ್ಯಾ ಬೋಲವಿಲ್ಯಾ ವೇದು ಬೋಲೇ । ಮ್ಯಾ ಚಾಲವಿಲ್ಯಾ ಸೂರ್ಯು ಚಾಲೇ । ಮ್ಯಾ ಹಾಲವಿಲ್ಯಾ ಪ್ರಾಣು ಹಾಲೇ । ಜೋ ಜಗಾತೇ ಚಾಳಿತಾ ।೨೮೩॥ ಮಿಯಾಂಚಿ ನಿಯಮಿಲಾಸಾಂತಾ । ಕಾಳು ಗ್ರಾಸಿತಸೇ ಭೂತಾ । ಇಯೇ ಮ್ಹಣಿಯಾಗತೇ ಪಂಡುಸುತಾ । ಸಕಳೇ ಜಯಾಚೀ ।೨೮೪॥ ಜೋ ಐಸಾ ಸಮರ್ಥು । ತೋ ಮೀ ಜಗಾಚಾ ನಾಥು । ಆಣಿ ಗಗನಾಐಸಾ ಸಾಕ್ಷಿಭೂತು । ತೋಹಿ ಮೀಚಿ ।೨೮೫॥ ಇಹೀ ನಾಮರೂಪೀ ಆಘವಾ । ಜೋ ಭರಲಾ ಅಸೇ ಪಾಂಡವಾ । ಆಣಿ ನಾಮರೂಪಾಂಚಾಹೀ ವೋಲ್ಹಾವಾ । ಆಪಣಚಿ ಜೋ ।೨೮೬॥ ಜೈಸೇ ಜಳಾಚೇ ಕಲ್ಲೋಳ । ಆಣಿ ಕಲ್ಲೋಳೀ ಆಥೀ ಜಳ । ಐಸೇನಿ ವಸವೀತಸೇ ಸಕಳ । ತೋ ನಿವಾಸು ಮೀ ।೨೮೭॥ ಜೋ ಮಜ ಹೋಯ ಅನನ್ಯ ಶರಣ । ತ್ಯಾಚೇ ನಿವಾರೀ ಮೀ ಜನ್ಮಮರಣ । ಯಾಲಾಗೀ ಶರಣಾಗತಾ ಶರಣ್ಯ । ಮೀಚಿ ಏಕು ।೨೮೮॥ ಮೀಚಿ ಏಕ ಅನೇಕಪಣೇ । ವೇಗಳಾಲೇನಿ ಪ್ರಕೃತೀ ಗುಣೇ । ಜೀತ ಜಗಾಚೇನಿ ಪ್ರಾಣೇ । ವರ್ತತ ಅಸೇ ।೨೮೯॥

ಆ ಓಂಕಾರದ ಗರ್ಭದಲ್ಲಿ, ಅಕಾರ, ಉಕಾರ, ಮಕಾರ ಹೀಗೆ ಅಕ್ಷರಗಳು ಉತ್ಪನ್ನವಾಗುವುವು ಮತ್ತು ಇವು ಹುಟ್ಟಿದಾಗಲೇ ಮೂರು ವೇದಗಳು ಉತ್ಪನ್ನವಾದವು ।೨೭೬॥

ಆದ್ದರಿಂದ ಋಕ್, ಯಜು ಮತ್ತು ಸಾಮ ಈ ಮೂರು ವೇದಗಳು ನಾನಾಗಿರುವೆ. ಈ ಪ್ರಕಾರವಾಗಿ ವೇದಗಳ ವಂಶಪರಂಪರೆಯು ನಾನಾಗಿರುವೆನು ಎಂದು ಶ್ರೀಕೃಷ್ಣನು ಹೇಳಿದನು ।೨೭೭॥

ಶ್ಲೋಕಾರ್ಥ :- ಈ ಜಗತ್ತಿಗೆ ಗತಿ, ಭರ್ತಾ, ಪ್ರಭು, ಸಾಕ್ಷಿಯು, ನಿವಾಸವು, ಆಶ್ರಯನು, ಆಪ್ತನು, ಪ್ರಭವಸ್ಥಾನವೂ, ಪ್ರಳಯಸ್ಥಾನವೂ, ಆಧಾರವೂ, ಶಾಶ್ವತ ಬೀಜನೂ, ನಾನೇ ।೧೮।-

ಈ ಸರ್ವ ಸ್ಥಾವರ ಜಂಗಮ ವಿಶ್ವವು ಪ್ರಕೃತಿಯ ಒಳಗೆ ತುಂಬಿಕೊಂಡಿರುವುದು. ಈ ಪ್ರಕೃತಿಯು ಶ್ರಮಗೊಂಡಾಗ ಎಲ್ಲಿ ವಿಶ್ರಾಂತಿ ಪಡೆಯುವುದೋ, ಆ ಉತ್ತಮ ಸ್ಥಾನವು ನಾನಾಗಿರುವೆನು ।೨೭೮॥

ಯಾವುದರಿಂದ ಈ ಪ್ರಕೃತಿಯು ಬದುಕುವುದೋ, ಯಾರ ಆಶ್ರಯದಿಂದ ವಿಶ್ವವು ಜನಿಸುವುದೋ ಮತ್ತು ಯಾವುದು ಪ್ರಕೃತಿಯ ಸ್ವಾಧೀನವಾಗಿ ಸತ್ತ್ವ, ರಜ, ತಮ ಗುಣಗಳ ಉಪಭೋಗ ಪಡೆಯುವುದೋ ।೨೭೯॥

ಆ ವಿಶ್ವ ಲಕ್ಷ್ಮೀಯ ಪತಿಯು ನಾನೇ ಆಗಿರುವೆನು ಮತ್ತು ಅರ್ಜುನಾ, ಎಲ್ಲ ತ್ರೈಲೋಕ್ಯದ ಸ್ವಾಮಿಯೂ ನಾನೇ ಆಗಿರುವೆನು ।೨೮೦॥

ಆಕಾಶವು ಎಲ್ಲ ಸ್ಥಳಗಳಲ್ಲಿ ಇರಬೇಕು, ವಾಯುವು ಒಂದು ಕ್ಷಣ ಸಹ ಸುಮ್ಮನೇ ಇರಕೂಡದು, ಅಗ್ನಿಯು ಸುಡಬೇಕು, ಮೇಘವು ಮಳೆಗರೆಯಬೇಕು ।೨೮೧॥

ಪರ್ವತವು ತನ್ನ ಸ್ಥಾನವನ್ನು ಬಿಡಬಾರದು, ಸಮುದ್ರವು ತನ್ನ ಮರ್ಯಾದೆ ರೇಖೆಯನ್ನು ದಾಟಬಾರದು, ಪೃಥ್ವಿಯು ಸರ್ವಭೂತಗಳ ಭಾರವನ್ನು ಹೊರಬೇಕು, ಇದು ನನ್ನ ಆಜ್ಞೆಯಾಗಿರುವುದು ।೨೮೨॥

ನಾನು ಹೇಳಿಸಿದಾಗ ವೇದಗಳು ಹೇಳುವುವು, ನಾನು ನಡೆಸಿದಾಗ ಸೂರ್ಯನು ನಡೆಯುವನು, ಸರ್ವ ಜಗತ್ತಿನ ಚಾಲಕನಾದ ಪ್ರಾಣವು ಅದು ಸಹ ನಾನು ಅಲುಗಾಡಿಸಿದಾಗ ಅಲುಗಾಡುವುದು ।೨೮೩॥

ಮತ್ತು ನಾನೇ ಆಜ್ಞೆ ಮಾಡಿದಾಗ ಕಾಳನು ಭೂತಗಳನ್ನು ಗ್ರಾಸ ಮಾಡುವನು, ಅರ್ಜುನಾ, ಈ ಪ್ರಕಾರವಾಗಿ ಎಲ್ಲವೂ ನನ್ನ ಆಜ್ಞಾಧಾರಕವಿದ್ದು, ತಮ್ಮ ತಮ್ಮ ಕಾರ್ಯಗಳನ್ನು ಮಾಡುವುವು ।೨೮೪॥

ಇಂತಹ ಯಾವ ಸಮರ್ಥನಾದ ಹಾಗೂ ಜಗತ್ತಿನ ಒಡೆಯನಾದ ನಾನು ಆಕಾಶದಂತೆ ಎಲ್ಲ ಕಡೆಯಲ್ಲಿ ಇದ್ದು ಸಾಕ್ಷಿ ಭೂತನಾಗಿ ಇರುವುದೂ ಕೂಡ ನಾನೇ ಆಗಿರುವೆನು ।೨೮೫॥

ಹೇ ಪಾಂಡವನೇ, ಈ ಪ್ರಕಾರವಾಗಿ ಈ ನಾಮ ರೂಪದಲ್ಲಿ ಯಾವುದು ಸರ್ವತ್ರ ತುಂಬಿಕೊಂಡಿರುವುದೋ, ಮತ್ತು ಯಾವುದು ತಾನೇ ನಾಮರೂಪದಲ್ಲಿಯು ಸಹ ಪ್ರೀತಿಯಿಂದ ಕೂಡಿರುವುದೋ ।೨೮೬॥

ಯಾವ ಪ್ರಕಾರವಾಗಿ ತೆರೆಗಳು ನೀರಿನಲ್ಲಿ ಹುಟ್ಟುವುವೋ, ಮತ್ತು ತೆರೆಗಳಲ್ಲಿಯೂ ನೀರು ಇರುವುದೋ, ಅದರಂತೆ ಜಗವು ನನ್ನಲ್ಲಿ ಮತ್ತು ನಾನು ಜಗತ್ತಿನಲ್ಲಿರುವೆನು. ಈ ರೀತಿಯಲ್ಲಿ ಜಗತ್ತಿನ ವಸತಿ ಸ್ಥಾನವು ನಾನಾಗಿರುವೆನು ।೨೮೭॥

ಯಾರು ನನಗೆ ಅನನ್ಯ ಭಾವದಿಂದ ಶರಣಾಗುವರೋ, ಅವರನ್ನು ಜನ್ಮ ಮರಣದಿಂದ ಮುಕ್ತರನ್ನಾಗಿ ಮಾಡುವೆನು. ಆದ್ದರಿಂದ ಶರಣಾಂಗತಿಗಳ ರಕ್ಷಣೆ ಮಾಡುವುದಕ್ಕೆ ನಾನು ಮಾತ್ರ ಒಬ್ಬನೇ ಇರುವೆನು ।೨೮೮॥

ಪ್ರಕೃತಿಯ ಭಿನ್ನ ಭಿನ್ನ ಗುಣಗಳಿಂದ ನಾನು ಒಬ್ಬನಾಗಿದ್ದರೂ ಅನೇಕ ರೀತಿಯಿಂದ ಜಗತ್ತಿನ ಪ್ರಾಣಿ ಮಾತ್ರರಲ್ಲಿ ಪ್ರಾಣರೂಪದಿಂದ ಜೀವಂತನಾಗಿರುತ್ತೇನೆ ।೨೮೯॥

ಜೈಸಾ ಸಮುದ್ರ ಥಿಲ್ಲರ ನ ಮ್ಹಣತಾ । ಭಲತೇಥ ಬಿಂಬೇ ಸವಿತಾ । ತೈಸಾ ಬ್ರಹ್ಮಾದಿ ಸರ್ವಾ ಭೂತಾ । ಸುಹೃದ ತೋ ಮೀ ॥೨೯೦॥ ಮೀಚಿ ಗಾ ಪಾಂಡವಾ । ಯಾ ತ್ರಿಭುವನಾಸೀ ವೋಲಾವಾ । ಸೃಷ್ಟಿಕ್ಷಯಪ್ರಭವಾ । ಮೂಳ ತೇ ಮೀ ॥೨೯೧॥ ಬೀಜ ಶಾಖಾಂತೇ ಪ್ರಸವೇ । ಮಗ ತೇ ರೂಖಪಣ ಬೀಜೀ ಸಾಮಾವೇ । ತೈಸೇ ಸಂಕಲ್ಪೇ ಹೋಯ ಆಘವೇ । ಪಾಠೀ ಸಂಕಲ್ಪೀ ಮಿಳೇ ॥೨೯೨॥ ಐಸೇ ಜಗಾಚೇ ಬೀಜ ಜೋ ಸಂಕಲ್ಪು । ಅವ್ಯಕ್ತ ವಾಸನಾರೂಪು । ತಯಾ ಕಲ್ಪಾಂತೀ ಜೇಥ ನಿಕ್ಷೇಪು । ಹೋಯ ತೇ ಸ್ಥಾನ ಮೀ ॥೨೯೩॥ ಇಯೇ ನಾಮರೂಪೇ ಲೋಟತೀ । ವರ್ಣ ವ್ಯಕ್ತೀ ಆಟತೀ । ಜಾತೀಚೇ ಭೇದ ಫಿಟತೀ । ಜೈ ಆಕಾರೂ ನಾಹೀ ॥೨೯೪॥ ತೈ ಸಂಕಲ್ಪವಾಸನಾಸಂಸ್ಕಾರ । ಮಾಘಾರೌತೇ ರಚಾವಯಾ ಚರಾಚರ । ಜೇಥ ರಾಹೋನಿ ಅಸತೀ ಅಮರ । ತೇ ನಿಧಾನ ಮೀ ॥೨೯೫॥

ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।
ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥೧೯॥

ಮೀ ಸೂರ್ಯಾಚೇನಿ ವೇಷೇ । ತಪೇ ತೈ ಹೇ ಶೋಷೇ । ಪಾಠೀ ಇಂದ್ರ ಹೋಊನಿ ವರ್ಷೇ । ತೈ ಪುಢತೀ ಭರೇ ॥೨೯೬॥ ಅಗ್ನಿ ಕಾಷ್ಠೇ ಖಾಯೇ । ತೇ ಕಾಷ್ಠಚಿ ಅಗ್ನಿ ಹೋಯೇ । ತೈಸೇ ಮರತೇ ಮಾರಿತೇ ಪಾಹೇ । ಸ್ವರೂಪ ಮಾಝೇ ॥೨೯೭॥ ಯಾಲಾಗೀ ಮೃತ್ಯೂಚ್ಯಾ ಭಾಗೀ ಜೇ ಜೇ । ತೇಹೀ ಪೈ ರೂಪ ಮಾಝೇ । ಆಣಿ ನ ಮರತೇ ತಂವ ಸಹಜೇ । ಮೀಚಿ ಆಹೇ ॥೨೯೮॥ ಆತಾ ಬಹು ಬೋಲೋನಿ ಸಾಂಗಾವೇ । ತೇ ಏಕೀಹೇಳಾ ಘೇ ಪಾ ಆಘವೇ । ತರೀ ಸತಾಸತಹೀ ಜಾಣಾವೇ । ಮೀಚಿ ಪೈ ಗಾ ॥೨೯೯॥ ಮ್ಹಣೌನಿ ಅರ್ಜುನಾ ಮೀ ನಸೇ । ಐಸಾ ಕವಣು ಠಾವ ಅಸೇ ? । ಪರಿ ಪ್ರಾಣಿಯಾಂಚೇ ದೈವ ಕೈಸೇ । ಜೇ ನ ದೇಖತೀ ಮಾತೇ ॥೩೦೦॥ ತರಂಗ ಪಾಣಿಯೇವೀಣ ಸುಕತೀ ! । ರಶ್ಮಿ ವಾತೀವಿಣ ನ ದೇಖತೀ ! । ತೈಸೇ ಮೀಚಿ ತೇ ಮೀ ನವ್ಹತೀ । ವಿಸ್ಮೋ ದೇಖೇ ! ॥೩೦೧॥ ಹೇ ಆಂತ ಬಾಹೇರ ಮಿಯಾ ಕೋಂದಲೇ । ಜಗ ನಿಖಿಲ ಮಾಝೇಂಚಿ ವೋತಿಲೇ । ಕೀ ಕೈಸೇ ಕರ್ಮ ತಯಾ ಆಡ ಆಲೇ । ಜೇ ಮೀಚಿ ನಾಹೀ ಮ್ಹಣತೀ ॥೩೦೨॥ ಪರಿ ಅಮೃತಕುಹಾ ಪಡಿಜೇ । ಕಾ ಆಪಣಯಾಂತೇ ಕಡಿಯೇ ಕಾಢಿಜೇ । ಐಸೇ ಆಥೀ ಕಾಯ ಕೀಜೇ । ಅಪ್ರಾಪ್ತಾಸೀ ॥೩೦೩॥

ಯಾವ ಪ್ರಕಾರವಾಗಿ ಸೂರ್ಯನು ಇದು ಸಮುದ್ರವು, ಇದು ಚಿಕ್ಕ ಗುಂಡಿಯು ಎಂಬ ಭೇದ ಎಣಿಸದೇ ಎಲ್ಲೆಡೆಯೂ ಪ್ರತಿಬಿಂಬಿಸುವನು. ಅದರಂತೆ ಬ್ರಹ್ಮ ದೇವನಿಂದ ಹಿಡಿದು ಎಲ್ಲರಲ್ಲಿಯೂ ಪ್ರಾಣಿಮಾತ್ರರಿಗೆ ಪ್ರಿಯನಾಗಿರುವವನು ನಾನೇ ಆಗಿರುವೆನು ।೮೯೦॥

ಪಾಂಡವನೇ, ಈ ತ್ರಿಭುವನದ ಜೀವನವು ನಾನೇ ಆಗಿರುವೆನು. ಉತ್ಪತ್ತಿ, ಸ್ಥಿತಿ ಮತ್ತು ಲಯ ಈ ಮೂರು ಅವಸ್ಥೆಗಳಿಗೆ ಕಾರಣನೂ ನಾನಾಗಿರುವೆನು ।೮೯೧॥

ಬೀಜದಿಂದ ವೃಕ್ಷ, ಅದರ ಶಾಖೆಗಳು ಉತ್ಪನ್ನವಾಗಿ ಮುಂದೆ ಆ ವೃಕ್ಷವು ಬೀಜದಲ್ಲಿ ಸಮಾವೇಶಗೊಳ್ಳುವುದು. ಅದರಂತೆ ಆದಿಸಂಕಲ್ಪದಿಂದ ಸರ್ವ ಜಗತ್ತಿನ ಉತ್ಪತ್ತಿಯಾಗಿ ಪುನಃ ಆದಿಸಂಕಲ್ಪದಲ್ಲಿಯೇ ಲಯಗೊಳ್ಳುವುದು ।೮೯೨॥

ಹೀಗೆ ಅವ್ಯಕ್ತವಾದದ್ದು ವಾಸನಾರೂಪ ಜಗತ್ತಿನ ಬೀಜವಾದ ಸಂಕಲ್ಪವು, ಅದರ ಕಲ್ಪಾಂತದಲ್ಲಿ ಎಲ್ಲಿ ಲಯ ಹೊಂದುವುದೋ ಆ ಸ್ಥಾನವು ನಾನೇ ಆಗಿರುವೆನು ।೮೯೩॥

ನಿರಾಕಾರ ಸ್ವರೂಪವು ಪ್ರಕಟಗೊಂಡರೆ ಆಗ ಈ ಎಲ್ಲ ನಾನಾ ರೂಪಗಳು ಲಯಗೊಳ್ಳುವುವು, ವರ್ಣ ವ್ಯಕ್ತಿಗಳು ಇಲ್ಲದಾಗುವರು ಮತ್ತು ಜಾತಿಯ ಭೇದವೂ ಸಹ ಇರುವುದಿಲ್ಲ ।೮೯೪॥

ಆಗ ಪುನಃ ಜಗತ್ತನ್ನು ನಿರ್ಮಾಣ ಮಾಡಲು ಸಂಸ್ಕಾರರೂಪ ವಾಸನಾಶಕ್ತಿಯನ್ನು ಧಾರಣೆ ಮಾಡಿ ಎಲ್ಲಿ ದೇವತೆಗಳು ಇರುವರೋ, ಆ ಸ್ಥಾನವು ನಾನೇ ಆಗಿರುವೆನು ।೮೯೫॥

**ಶ್ಲೋಕಾರ್ಥ** :- ತಪಿಸುವವನೂ, ಮಳೆಗರೆಯುವವನೂ ನಾನೇ; ಅರ್ಜುನಾ! ಅಮೃತವೂ ನಾನೇ, ಮೃತ್ಯುವೂ ನಾನೇ, ಸತ್ತು, ಅಸತ್ತು ಎರಡೂ ನಾನೇ ।೧೯॥

ನಾನು ಸೂರ್ಯನ ರೂಪದಲ್ಲಿ ಕಾಯುತ್ತೇನೆ. ಆಗ ಪೃಥ್ವಿಯು ಒಣಗುವುದು ಮತ್ತು ಪುನಃ ಇಂದ್ರನ ರೂಪದಿಂದ ಮಳೆಗರೆಯುತ್ತೇನೆ. ಆಗ ಅದು ಸಮೃದ್ಧ ಗೊಳ್ಳುವುದು ।೮೯೬॥

ಯಾವ ಪ್ರಕಾರವಾಗಿ ಅಗ್ನಿಯು ಕಟ್ಟಿಗೆಯನ್ನು ಭಕ್ಷಿಸಿದಾಗ ಆ ಕಟ್ಟಿಗೆಯು ಅಗ್ನಿರೂಪವಾಗುವುದು. ಅದರಂತೆ ಸಾಯುವ ಮತ್ತು ಕೊಲ್ಲುವ ಸ್ವರೂಪವು ನನ್ನದೇ ಆಗಿರುವುದು ।೮೯೭॥

ಆದ್ದರಿಂದ ಮೃತ್ಯುವಿನ ಮಾರ್ಗಕ್ಕೆ ಬಂದ ರೂಪಗಳೆಲ್ಲವೂ ನನ್ನವೇ ಆಗಿರುತ್ತವೆ ಮತ್ತು ಸಾಯದವರು ಮಾತ್ರ ಸಹಜವಾಗಿಯೇ ನನ್ನ ರೂಪವಾಗಿರುತ್ತಾರೆ ।೮೯೮॥

ಈಗ ಹೆಚ್ಚಿಗೆ ಏನೆಂದು ಹೇಳಬೇಕು? ಎಲ್ಲವೂ ನಿನಗೆ ಒಂದೇ ಸಾರೆ ಹೇಳಿ ಬಿಡುವೆ. ಸತ್, ಅಸತ್ (ಸತ್ಯ, ಅಸತ್ಯ) ಈ ಎರಡೂ ರೂಪಗಳು ನನ್ನವೇ ಆಗಿವೆ ಎಂದು ನೀನು ತಿಳಿದುಕೊ ।೮೯೯॥

ಆದ್ದರಿಂದ ಅರ್ಜುನಾ, ನಾನಿಲ್ಲದಿರುವ ಯಾವ ಸ್ಥಳ ಇರುವುದು ? ಆದರೆ ಪ್ರಾಣಿಗಳ ದೈವವು ಎಷ್ಟು ಚಮತ್ಕಾರಕವಾಗಿದೆ ನೋಡು, ಅವರು ನನಗೆ ನೋಡುವುದೇ ಇಲ್ಲ ।೯೦೦॥

ತೆರೆಯು ನೀರಿಲ್ಲದೇ ಒಣಗಬಹುದೇ? ಅಥವಾ ಸೂರ್ಯಕಿರಣವು ದೀಪವಿಲ್ಲದೇ ಕಾಣುವುದಿಲ್ಲವೇ? ಎಲ್ಲ ಜೀವಗಳು ನಾನೇ ಆಗಿದ್ದು ಅವು ನನ್ನನ್ನು ತಿಳಿದುಕೊಂಡಿಲ್ಲ, ಇದು ಎಷ್ಟು ಆಶ್ಚರ್ಯ ನೋಡು! ।೯೦೧॥

ಈ ಎಲ್ಲ ವಿಶ್ವಗಳಲ್ಲಿ ಒಳಹೊರಗೆ ನಾನೇ ತುಂಬಿ ಕೊಂಡಿರುವೆ ಮತ್ತು ಜಗತ್ತು ನನ್ನ ರೂಪವೇ ಆಗಿದೆ. ಆದರೆ ಜೀವದ ಕರ್ಮಕ್ಕೆ ಏನು ಅಡ್ಡ ಬಂದಿದೆಯೋ ಏನೋ ಅವರು ನಾನೇ (ದೇವರು) ಇಲ್ಲವೆಂದು ಹೇಳುವರು ।೯೦೨॥

ಆದರೆ ಅಮೃತದ ಕುಂಡದಲ್ಲಿ ಬಿದ್ದಾಗ ಮರಣದ ಭಯದಿಂದ ಹೊರಗೆ ಈಸಿ ಬರುವುದು ಹೇಗೋ, ಅದರಂತೆ ದೈವಹೀನ ಮನುಷ್ಯನಿಗೆ ಏನೆಂದು ಹೇಳಬೇಕು? ।೯೦೩॥

ಗ್ರಾಸಾ ಏಕಾ ಅನ್ನಾಸಾಠೀ । ಅಂಧು ಧಾಂವತಾಹೇ ಕಿರೀಟೀ । ಆಢಳಲಾ ಚಿಂತಾಮಣಿ ಪಾಯೀ ಲೋಟಿ । ಆಂಧಳೇಪಣೇ ।೩೦೪॥ ತೈಸೇ ಜ್ಞಾನ ಜೈ ಸಾಂಡೂನಿ ಜಾಯೇ । ತೈ ಐಸೀ ಹೇ ದಶಾ ಆಹೇ । ಮ್ಹಣೌನಿ ಕೀಜೇ ತೇ ಕೇಲೇ ನೋಹೇ । ಜ್ಞಾನೇವೀಣ ।೩೦೫॥ ಆಂಧಳೇಯಾ ಗರುಡಾಚೇ ಪಾಂಖ ಆಹಾತೀ । ತೇ ಕವಣಾ ಉಪೇಗಾ ಜಾತೀ ? । ತೈಸೇ ಸತ್ಕರ್ಮಾಚೇ ಉಪಖೇ ಠಾತೀ ।ಜ್ಞಾನೇವೀಣ ।೩೦೬॥

ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।<br>
ತೇ ಪುಣ್ಯಮಾಸಾದ್ಯ ಸುರೇಂದ್ರ ಲೋಕಂ ಅಶ್ನಂತಿ ದಿವ್ಯಾನ್ ದಿವಿದೇವಭೋಗಾನ್ ।೨೦॥

ದೇಖ ಪಾ ಗಾ ಕಿರೀಟೀ । ಆಶ್ರಮಧರ್ಮಾಚಿಯಾ ರಾಹಾಟೀ । ವಿಧಿ ಮಾರ್ಗಾ ಕಸವಟೀ । ಜೇ ಆಪಣಚಿ ಹೋತಿ ।೩೦೭॥ ಯಜನ ಕರಿತಾ ಕೌತುಕೇ । ತಿಹೀ ವೇದಾಂಚಾ ಮಾಥಾ ತುಕೇ । ಕ್ರಿಯಾಫಳೇಸಿ ಉಭೀ ಠಾಕೇ । ಪುಢಾ ಜಯಾ ।೩೦೮॥ ಐಸೇ ದೀಕ್ಷಿತ ಜೇ ಸೋಮಪ । ಜೇ ಆಪಣಚಿ ಯಜ್ಞಾಚೇ ಸ್ವರೂಪ । ತೀಹೀ ತಯಾ ಪುಣ್ಯಾಚೇನಿ ನಾಂವೇ ಪಾಪ । ಜೋಡಿಲೇ ದೇಖೇ ।೩೦೯॥ ಜೇ ಶ್ರುತಿತ್ರಯಾಂತೇ ಜಾಣೋನಿ । ಶತವರೀ ಯಜ್ಞ ಕರೂನೀ । ಯಜಿಲಿಯಾ ಮಾತೇ ಚುಕೋನೀ । ಸ್ವರ್ಗಾ ವರಿತೀ ।೩೧೦॥ ಜೈಸೇ ಕಲ್ಪತರೂ ತಳವಟೀ । ಬೈಸೋನಿ ಝೋಳಿಯೇ ದೇತಸೇ ಗಾಂಠೀ । ಮಗ ನಿದೈವ ನಿಘೇ ಕಿರೀಟೀ । ದೈನ್ಯಚಿ ಕರೂ ।೩೧೧॥ ತೈಸೇ ಶತಕ್ರತು ಯಜಿಲೀ ಮಾತೇ । ಕೀ ಈಪ್ಸಿತಾತಿ ಸ್ವರ್ಗ ಸುಖಾತೇ । ಆತಾ ಪುಣ್ಯ ಕೀ ಹೇ ನಿರೂತೇ । ಪಾಪ ನೋಹೆ ? ।೩೧೨॥ ಮ್ಹಣೌನಿ ಮಜವೀಣ ಪಾವಿಜೇ ಸ್ವರ್ಗು । ತೋ ಅಜ್ಞಾನಾಚಾ ಪುಣ್ಯ ಮಾರ್ಗು । ಜ್ಞಾನಿಯೇ ತಯಾತೇ ಉಪಸರ್ಗು । ಹಾನಿ ಮ್ಹಣತೀ ।೩೧೩॥ ಏರ್ಹವೀ ತರೀ ನರಕೀಚೇ ದುಃಖ । ಪಾವೋನಿ ಸ್ವರ್ಗಾ ನಾಮ ಕೀ ಸುಖ । ವಾಂಚೂನಿ ನಿತ್ಯಾನಂದ ಗಾ ನಿರ್ದೋಷ । ತೇ ಸ್ವರೂಪ ಮಾಝೇ ।೩೧೪॥ ಮಜ ಯೇತಾ ಪೈ ಸುಭಟಾ । ಯಾ ದ್ವಿವಿಧಾ ಗಾ ಆವ್ಹಾಂಟಾ । ಸ್ವರ್ಗು ನರಕು ಯಾ ವಾಟಾ । ಚೋರಾಂಚಿಯಾ ।೩೧೫॥ ಸ್ವರ್ಗಾ ಪುಣ್ಯಾತ್ಮಕೇ ಪಾಪೇ ಯೇಇಜೇ । ಪಾಪಾತ್ಮಕೇ ಪಾಪೇ ನರಕಾ ಜಾಇಜೇ । ಮಗ ಮಾತೇ ಜೇಣೇ ಪಾವಿಜೇ । ತೇ ಶುದ್ಧ ಪುಣ್ಯ ।೩೧೬॥ ಆಣಿ ಮಜಚಿಮಾಜೀ ಅಸತಾ । ಜೇಣೇ ಮೀ ದುರ್ಹಾವೇ ಪಂಡುಸುತಾ । ತೇ ಪುಣ್ಯ ಐಸೇ ಮ್ಹಣತಾ । ಜೀಭ ನ ತುಟೇ ಕಾಈ ।೩೧೭॥

ಹೇ ಕಿರೀಟಿಯೇ, ತುತ್ತು ಅನ್ನಕ್ಕಾಗಿ ಧಾವಿಸುತ್ತಿರುವ ಒಬ್ಬ ಕುರುಡನ ಕಾಲಿಗೆ ಒಂದು ಚಿಂತಾಮಣಿಯು ಹತ್ತಿದಾಗ ದೃಷ್ಟಿ ಇಲ್ಲದ್ದಕ್ಕೆ ಅವನು ಅದನ್ನು ಕಾಲಿನಿಂದ ಸರಿಸಿಬಿಡುವನು ।।೩೦೪।।

ಅದರಂತೆ ಯಥಾರ್ಥ ಜ್ಞಾನವಿಲ್ಲದಕ್ಕೆ ಈ ಕುರುಡನ ಸ್ಥಿತಿಯಾಗುವುದು. ಆದ್ದರಿಂದ ಜ್ಞಾನವಿಲ್ಲದೇ ಮಾಡಿದ ಕರ್ಮಗಳೆಲ್ಲವೂ ಏನು ಮಾಡದ ಹಾಗೆ ಆಗುವುದು ।।೩೦೫।।

ಕುರುಡ ಗರುಡನಿಗೆ ರೆಕ್ಕೆಗಳಿದ್ದರೂ ಅದಕ್ಕೆ ಯಾವ ಉಪಯೋಗ ? ಅದರಂತೆ ಯಥಾರ್ಥ ಜ್ಞಾನವಿಲ್ಲದೇ ಮಾಡುವ ಸತ್ಕರ್ಮಗಳು ವ್ಯರ್ಥವಾಗುವುದು ।।೩೦೬।।

ಶ್ಲೋಕಾರ್ಥ :- ಪುಣ್ಯವಂತರಾದ ವೈದಿಕ ಸೋಮಯಾಜಿಗಳು ಯಜ್ಞಗಳಿಂದ ನನ್ನನ್ನು ಪೂಜಿಸಿ ಸ್ವರ್ಗಲೋಕವನ್ನು ಆರ್ಥಿಸುತ್ತಾರೆ. ಅವರು ಆ ಪುಣ್ಯ ಬಲದಿಂದ ದೇವಲೋಕವನ್ನು ಹೊಂದಿ ನಾನಾವಿಧ ದೇವತಾ ಭೋಗಗಳನ್ನು ಯಥೇಚ್ಛವಾಗಿ ಅನುಭವಿಸುತ್ತಾರೆ ।।೨೦।।

ಅರೇ ಅರ್ಜುನಾ, ಇಲ್ಲಿ ನೋಡು, ವರ್ಣ ವಿಹಿತ ಧರ್ಮದ ಆಚರಣೆ ಮಾಡಿ ತಾವೇ ವಿಧಿಮಾರ್ಗದ ಒರೆಗಲ್ಲು ಆಗುವರು. (ವೇದದಲ್ಲಿ ಹೇಳಿದಂತೆ ಯಥಾವಿಧಿ ಆಚರಿಸುವರು) ।।೩೦೭।।

ಇವರು ಯಜ್ಞಮಾಡಲು ಮೂರು ವೇದಗಳು ಸಂತೋಷ ಹೊಂದಿ ತಲೆದೂಗಿಸುವುವು ಮತ್ತು ಅವರೆದುರಿಗೆ ಕ್ರಿಯೆಯ ಫಲಪ್ರಾಪ್ತಿಯೊಂದಿಗೆ ನಿಂತಿರುವುದು ।।೩೦೮।।

ಈ ಪ್ರಕಾರವಾಗಿ ಯಜ್ಞದಲ್ಲಿನ ಸೋಮಪಾನ ಮಾಡುವ ಯಜ್ಞಕರ್ತರು (ದೀಕ್ಷಿತರು) ಅವರೇ ಯಜ್ಞರೂಪರಾಗುವರು. ಅವರು ಆ ಪುಣ್ಯದ ಹೆಸರಿನಿಂದ ಪಾಪವನ್ನೇ ಸಂಪಾದಿಸಿದರೆಂದು ತಿಳಿ ।।೩೦೯।।

ಇವರು ಋಕ್, ಯಜು ಮತ್ತು ಸಾಮ ಈ ಮೂರು ವೇದಗಳನ್ನು ತಿಳಿದು ನೂರಾರು ಯಜ್ಞಗಳಿಂದ ನನ್ನ ಯಜನ ಮಾಡುವರು. ಆದರೆ ನನ್ನ ಪ್ರಾಪ್ತಿಯ ಇಚ್ಛೆಯನ್ನು ಬಿಟ್ಟು ಕ್ಷುದ್ರ ಸ್ವರ್ಗದ ಪ್ರಾಪ್ತಿಯ ಇಚ್ಛೆ ಮಾಡುವರು ।।೩೧೦।।

ಅರ್ಜುನಾ, ಈ ಪ್ರಕಾರವಾಗಿ ಯಾವನೋ ಒಬ್ಬ ದುರ್ಭಾಗಿಯು ಕಲ್ಪವೃಕ್ಷದ ಕೆಳಗೆ ಕುಳಿತು ತನ್ನ ಜೋಳಿಗೆಯ ಅಂಚಿಗೆ ಗಂಟು ಹಾಕಿ ಭಿಕ್ಷೆ ಬೇಡಲು ಹೊರಡುವನೋ ।।೩೧೧।।

ಅದೇ ಪ್ರಕಾರವಾಗಿ ನೂರಾರು ಯಜ್ಞಗಳಿಂದ ನನ್ನ ಯಜನವನ್ನು ಮಾಡಿ ಅವರು ಸ್ವರ್ಗ ಸುಖದ ಇಚ್ಛೆ ಮಾಡುವರು. ಅಂದಮೇಲೆ ಇದು ಪುಣ್ಯವಾಗದೇ ನಿಜವಾಗಿಯೂ ಪಾಪವಲ್ಲವೇ? ।।೩೧೨।।

ಆದ್ದರಿಂದ, ನನ್ನ ಪ್ರಾಪ್ತಿಯ ಇಚ್ಛೆಯನ್ನು ಬಿಟ್ಟು ಯಾರು ಸ್ವರ್ಗಕ್ಕೆ ಹೋಗುವರೋ, ಅವರಿಗೆ ಅಜ್ಞಾನಿ ಜನರು ಪುಣ್ಯಮಾರ್ಗ ಅನ್ನುವರು. ಆದರೆ ಜ್ಞಾನಿಗಳು ಜನ್ಮ ಮರಣದ ಉಪದ್ರವದ ಹಾನಿ ಎನ್ನುವರು ।।೩೧೩।।

ಸಹಜವಾಗಿ ವಿಚಾರ ಮಾಡಿದರೆ ನರಕದಲ್ಲಿನ ದುಃಖದ ಅಳತೆಯಿಂದ ಸ್ವರ್ಗಪ್ರಾಪ್ತಿಗೆ ಸುಖವೆನ್ನಬಹುದು. ಆದರೆ ಇವೆರಡರ ಹೊರತಾಗಿ ಅಖಂಡವಾದ ಆನಂದದಾಯಕ ಮತ್ತು ನಿರ್ದೋಷವಾದ ಸುಖ ಅದು ನನ್ನ ಸ್ವರೂಪವಾಗಿದೆ ।।೩೧೪।।

ಹೇ ಮಹಾವೀರ ಅರ್ಜುನಾ, ನನ್ನ ಪ್ರಾಪ್ತಿಗೆ ಸ್ವರ್ಗ ಮತ್ತು ನರಕ ಈ ಎರಡು ಅಡ್ಡ ಮಾರ್ಗಗಳಾಗಿದ್ದು, ಕಳ್ಳರ ಮಾರ್ಗವಾಗಿದೆ ।।೩೧೫।।

ಸ್ವರ್ಗ ಪ್ರಾಪ್ತಿಯು ಪುಣ್ಯಾತ್ಮಕ ಪಾಪದಿಂದ ದೊರಕುವುದು ಮತ್ತು ನರಕಪ್ರಾಪ್ತಿಯು ಪಾಪಾತ್ಮಕ ಪಾಪದಿಂದ ದೊರಕುವುದು. ಆದರೆ ಯಾವುದರಿಂದ ನನ್ನ ಪ್ರಾಪ್ತಿಯಾಗುವುದೋ, ಅದು ಶುದ್ಧ ಪುಣ್ಯವೆಂದು ತಿಳಿ ।।೩೧೬।।

ಹೇ ಪಂಡುಸುತನೇ, ನನ್ನ ಅಂಶವೇ ಇದ್ದು, ಯಾವ ಕರ್ಮದಿಂದ ನನ್ನ ಅಂತರವಾಗುವುದೋ ಅದಕ್ಕೆ ಪುಣ್ಯ ಎಂದು ಹೇಳಿದರೆ ನಾಲಿಗೆಯು ಕತ್ತರಿಸಿ ಬೀಳಲಿಕ್ಕಿಲ್ಲವೆ ? ।।೩೧೭।।

ಪರಿ ಹೇ ಅಸೋ ಆತಾ ಪ್ರಸ್ತುತ । ಐಕೇ ಯಾಪರೀ ತೇ ದೀಕ್ಷಿತ । ಯಜೂನಿ ಮಾತೇ ಯಾಚಿತ । ಸ್ವರ್ಗಭೋಗು ।೩೧೮॥ ಮಗ ಮೀ ನ ಪವಿಜೇ ಐಸೇ । ಜೇ ಪಾಪರೂಪ ಪುಣ್ಯ ಅಸೇ । ತೇಣೇ ಲಾಧಲೇನಿ ಸೌರಸೇ । ಸ್ವರ್ಗಾ ಯೇತೀ ।೩೧೯॥ ಜೇಥ ಅಮರತ್ವ ಹೇ ಸಿಂಹಾಸನ । ಐರಾವತಾಸಾರಿಖೇ ವಾಹನ । ರಾಜಧಾನೀಭುವನ । ಅಮರಾವತೀ ।೩೨೦॥ ಜೇಥ ಮಹಾಸಿದ್ಧೀಂಚೇ ಭಾಂಡಾರೇ । ಅಮೃತಾಚೇ ಕೋಠಾರೇ । ಜಿಯೇ ಗಾಂವೀ ಖಿಲ್ಲಾರೇ । ಕಾಮಧೇನೂಂಚೇ ।೩೨೧॥ ಜೇಥ ವೋಳಗೇ ದೇವ ಪಾಇಕಾ । ಸ್ವೈಂಥ ಚಿಂತಾಮಣೀಚಿಯಾ ಭೂಮಿಕಾ । ವಿನೋದವನವಾಟಿಕಾ । ಸುರತರೂಂಚಿಯಾ ।೩೨೨॥ ಗಂಧರ್ವ ಗಾತ ಗಾಣೇ । ಜೇಥ ರಂಭೇಐಸಿಯಾ ನಾಚಣೇ । ಊರ್ವಸೀ ಮುಖ್ಯವಿಲಾಸಿನೀ । ಅಂತೌರಿಯಾ ।೩೨೩॥ ಮದನ ವೋಳಗೇ ಶೇಜಾರೇ । ಜೇಥ ಚಂದ್ರ ಶಿಂಪೇ ಸಾಂಬರೇ । ಪವನಾ ಐಸೇ ಮ್ಹಣೆಯಾರೇ । ಧಾಂವಣೇ ಜೇಥ ।೩೨೪॥ ಪೈ ಬೃಹಸ್ಪತೀ ಮುಖ್ಯ ಆಪಣ । ಐಸೇ ಸ್ವಸ್ತಿ ಶ್ರಿಯೇಚೇ ಬ್ರಾಹ್ಮಣ । ತಾಟಿಯೇಚೇ ಸುರಗಣ । ಬಹುವಸ ಜೇಥೇ ।೩೨೫॥ ಲೋಕಪಾಳ ರಾಂಗೇಚೇ । ರಾವುತ ಜಿಯೆ ಪದವೀಚೇ । ಉಚ್ಚೈಃಶ್ರವಾ ಖಾಂಚೇ । ಖೋಲಣೆಯೇ ।೩೨೬॥ ಹೇ ಅಸೋ ಬಹು ಐಸೇ । ಭೋಗ ಇಂದ್ರಸುಖಾಸರಿಸೇ । ತೇ ಭೋಗಿಜತೀ ಜಂವ ಅಸೇ । ಪುಣ್ಯಲೇಶು ।೩೨೭॥

ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ।
ಏವಂ ತ್ರಯೀಧರ್ಮಮನುಪ್ರಪನ್ನಾಃ ಗತಾಗತಂ ಕಾಮಕಾಮಾ ಲಭಂತೇ ।೨೧॥

ಮಗ ತಯಾ ಪುಣ್ಯಾಚೀ ಪಾಲುಟೀ ಸರೇ । ಸವೇಂಚಿ ಇಂದ್ರಪಣಾಚೀ ಉಟೀ ಉತರೇ । ಆಣಿ ಏಊ ಲಾಗತೀ ಮಾಘಾರೇ । ಮೃತ್ಯುಲೋಕಾ ।೩೨೮॥ ಜೈಸಾ ವೇಶ್ಯಾಭೋಗೀ ಕವಡಾ ವೇಂಚೇ । ಮಗ ದಾರಹೀ ಚೇಪೂ ನಯೇ ತಿಯೇಚೇ । ತೈಸೇ ಲಾಜಿರವಾಣೇ ದೀಕ್ಷಿತಾಂಚೇ । ಕಾಯ ಸಾಂಗೋ ?।೩೨೯॥ ಏವಂ ಥಿತಿಯಾ ಮಾತೇ ಚುಕಲೇ । ಜೇಂಹೀ ಪುಣ್ಯೇ ಸ್ವರ್ಗ ಕಾಮಿಲೇ । ತಯಾ ಅಮರಪಣ ತೇ ವಾವೋ ಜಾಲೇ । ಅಂತೀ ಮೃತ್ಯುಲೋಕು ।೩೩೦॥ ಮಾತೇಚಿಯಾ ಉದರಕುಹರೀ । ಪಚೂನಿ ವಿಷ್ಠೇಚ್ಯಾ ದಾಥರೀ । ಉಕಡೂನಿ ನವಮಾಸವರೀ । ಜನ್ಮ ಜನ್ಮೋನಿ ಮರತೀ ।೩೩೧॥ ಅಗಾ ಸ್ವಪ್ನೀ ನಿಧಾನ ಪಾವೇ । ಪರಿ ಚೇಯಿಲಿಯಾ ಹಾರಪೇ ಆಘವೇ । ತೈಸೇ ಸ್ವರ್ಗಸುಖ ಜಾಣಾವೇ । ವೇದಜ್ಞಾಚೇ ।೩೩೨॥

ಆದರೆ, ಅದೀಗ ಇರಲಿ, ಈ ಪ್ರಕಾರವಾಗಿ ಆ ದೀಕ್ಷಿತರು ನನ್ನ ಯಜನವನ್ನು ಮಾಡಿ ಸ್ವರ್ಗಭೋಗದ ಇಚ್ಛೆಯನ್ನು ಮಾಡುವರು ।೩೧೮॥

ಆಗ ಯಾವ ಪುಣ್ಯದಿಂದ ನಾನು ಸಿಗುವುದಿಲ್ಲವೋ ಅಂತಹ ಪಾಪರೂಪದ ಪುಣ್ಯವನ್ನು ಪ್ರಾಪ್ತಿಮಾಡಿಕೊಂಡು ಆನಂದದಿಂದ ಸ್ವರ್ಗಕ್ಕೆ ಹೋಗುವರು ।೩೧೯॥

ಅಲ್ಲಿ ಅಮರತ್ವವೇ ಸಿಂಹಾಸನವು, ಐರಾವತದಂತಹ ವಾಹನವು, ಅಮರಾವತಿಯು ರಾಜಧಾನಿಯ ಭುವನವು ।೩೨೦॥

ಅಲ್ಲಿ ಅಷ್ಟಮಹಾಸಿದ್ಧಿಗಳ ಭಾಂಡಾರಗಳು ಇವೆ. ಅಮೃತದ ಉಗ್ರಾಣಗಳಿವೆ ಮತ್ತು ಊರಲ್ಲಿ ಕಾಮಧೇನುಗಳ ಹಿಂಡುಗಳು ಇವೆ ।೩೨೧॥

ಅಲ್ಲಿ ದೇವತೆಗಳ ಸೇವೆ ಮಾಡುವ ಸೇವಕರು, ಮಾರ್ಗಗಳೆಲ್ಲವೂ ಚಿಂತಾಮಣಿ ರತ್ನಗಳಿಂದ ನಿರ್ಮಿತವಾದವುಗಳು, ಮನೋರಂಜನೆಗಾಗಿ ಕಲ್ಪವೃಕ್ಷಗಳ ಉಪವನಗಳು ಇರುವುವು ।೩೨೨॥

ಅಲ್ಲಿ ಗಂಧರ್ವರು ಗಾಯನವನ್ನು ಮಾಡುವರು. ರಂಭಾ ಅಂತಹವರು ನೃತ್ಯ ಮಾಡುವವರಿರುವರು ಮತ್ತು ವಿಲಾಸಿನಿ ಸ್ತ್ರೀಯರಲ್ಲಿ ಊರ್ವಶಿ ಇರುವಳು ।೩೨೩॥

ಅಲ್ಲಿ ಕಾಮನು ಹಾಸಿಗೆ (ಮಲಗುವ) ಕೋಣೆಯಲ್ಲಿ ಸೇವೆ ಮಾಡುವನು. ಚಂದ್ರನು ಉಡುಗಿಸಾರಣೆ ಮಾಡುವನು. ಹೇಳಿದಾಕ್ಷಣ ಧಾವಿಸುವ ವಾಯುವಿನಂತೆ (ಸೇವಕರು) ಚಾಕರರು ಇರುವರು ।೩೨೪॥

ಅಲ್ಲಿ ಇಂದ್ರನಿಗೆ ಆಶೀರ್ವದಿಸಲು ಬೃಹಸ್ಪತಿಯಂತಹ ಮುಖ್ಯ ಬ್ರಾಹ್ಮಣನಿರುವನು. ಅಲ್ಲಿ ಸ್ತುತಿ ಪಾಠಕರಾದ ಸಹಸ್ರಾರು ದೇವತೆಗಳಿರುವರು ।೩೨೫॥

ಅಲ್ಲಿ ಸುತ್ತಲೂ ಲೋಕಪಾಲರಂತೆ ರಾಜರು ನಡೆಯುತ್ತಿದ್ದು ಜಯಗಳಿಸಿದ ಪದವೀಧರ ಸರದಾರು ಇರುವರು ಮತ್ತು ಉಚ್ಚೈಃಶ್ರವಾ ಎಂಬುವ ಸ್ವತಃ ಕೊತವಾಲ ಕುದುರೆ ಇರುವುದು ।೩೨೬॥

ಇದು ಇರಲಿ, ಈ ಪ್ರಕಾರವಾಗಿ ಪುಣ್ಯದ ಅಂಶ ಇರುವವರೆಗೂ ಅವರು ಇಂದ್ರನ ಸುಖದಂತೆ ಅನೇಕ ಭೋಗಗಳನ್ನು ಭೋಗಿಸುವರು ।೩೨೭॥

ಶ್ಲೋಕಾರ್ಥ :- ಅವರು ವಿಶಾಲವಾದ ಸ್ವರ್ಗ ಸುಖವನ್ನು ಅನುಭವಿಸಿ ಪುಣ್ಯವು ಕ್ಷೀಣಿಸುತ್ತಲೇ ಮನುಷ್ಯ ಲೋಕದಲ್ಲಿ ಪ್ರವೇಶಿಸುತ್ತಾರೆ. ಈ ರೀತಿ ಕರ್ಮಕಾಂಡವೇ ಗತಿಯೆಂದು ತಿಳಿದ ಕಾಮದಾಸರಿಗೆ ಸಂಸಾರಗಮನವು ತಪ್ಪುವುದಿಲ್ಲ ।೨೧॥

ಆಗ ಪುಣ್ಯದ ಬಂಡವಾಳವು ಮುಗಿದಾಕ್ಷಣವೇ ಇಂದ್ರತ್ವದ ಐಶ್ವರ್ಯದಿಂದ ಕೆಳಗೆ ಇಳಿದು ಪುನಃ ಇವರು ಮೃತ್ಯುಲೋಕಕ್ಕೆ ಹಿಂದಕ್ಕೆ ತಿರುಗಿ ಬರುವರು ।೩೨೮॥

ಯಾವ ಪ್ರಕಾರವಾಗಿ ಒಬ್ಬನು ವೇಶ್ಯೆಯ ಮನೆಯಲ್ಲಿ ತನ್ನ ಎಲ್ಲ ಹಣವನ್ನು ಖರ್ಚಿಸಿದಾಗ ಆತನಿಗೆ ಆಕೆಯ ಬಾಗಿಲಕ್ಕೂ ಕೈ ಹಚ್ಚುವ ಅಧಿಕಾರ ಇಲ್ಲದಂತಾಗುವುದೋ, ಅದರಂತೆ ಯಜ್ಞಕರ್ತಾ ದೀಕ್ಷಿತರ ಸ್ಥಿತಿ ಅತ್ಯಂತ ನಾಚಿಕೆಗೇಡಾಗುವುದು, ಏನೆಂದು ಹೇಳಬೇಕು ? ।೩೨೯॥

ಈ ಪ್ರಕಾರವಾಗಿ ಇವರು ಪುಣ್ಯಮಾಡಿ ಸ್ವರ್ಗದ ಇಚ್ಛೆ ಮಾಡಿದರು. ಅಖಂಡವಾಗಿ ಸಮೀಪದಲ್ಲಿರುವ ನನ್ನನ್ನು ತಪ್ಪಿಸಿಕೊಂಡು ನನ್ನಿಂದ ದೂರ ಹೋದರು. ಅವರಿಗೆ ದೊರಕಿದ ಅಮರತ್ವವು ವ್ಯರ್ಥವಾಯಿತು, ಕೊನೆಗೆ ಇವರಿಗೆ ಪುನಃ ಮೃತ್ಯುಲೋಕವೇ ಪ್ರಾಪ್ತವಾಯಿತು ।೩೩೦॥

ತದನಂತರ ತಾಯಿಯ ಉದರರೂಪ ಗುಹೆಯಲ್ಲಿ ನರಕದ ಆಶ್ರಯದೊಳಗೆ ಒಂಬತ್ತು ತಿಂಗಳವರೆಗೆ ಕುದ್ದು ಪಕ್ವವಾಗುತ್ತ ಪುನಃ ಪುನಃ ಜನ್ಮಕ್ಕೆ ಬಂದು ಮರಣ ಹೊಂದುತ್ತಾರೆ ।೩೩೧॥

ಸ್ವಪ್ನದಲ್ಲಿ ದೊರಕಿದ ನಿಧಿಯು ಎಚ್ಚರಾದ ಮೇಲೆ ಇಲ್ಲದಾಗುವಂತೆ ಯಜ್ಞಕಾರ್ಯದ ಸುಖವಾಗಿದೆ ಎಂದು ತಿಳಿ ।೩೩೨॥

ಅರ್ಜುನಾ ವೇದವಿದ ಜರ್ಹಿ ಜಾಹಲಾ । ತರೀ ಮಾತೇ ನೇಣತಾ ವಾಯಾ ಗೇಲಾ । ಕಣು ಸಾಂಡೂನಿ ಉಪಣಿಲಾ । ಕೋಂಡಾ ಜೈಸಾ ।೩೩೩॥ ಮ್ಹಣೌನಿ ಮಜ ಏಕೇವಿಣ । ಹೇ ತ್ರಯೀಧರ್ಮ ಅಕಾರಣ । ಆತಾ ಮಾತೇ ಜಾಣೋನಿ ಕಾಂಹೀ ನೇಣ । ತೂ ಸುಖಿಯಾ ಹೋಸೀ ।೩೩೪॥

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ।೨೨॥

ಪೈ ಸರ್ವಭಾವೇಸೀ ಉಖಿತೇ । ಜೇ ವೋಪಿಲೇ ಮಜ ಚಿತ್ತೇ । ಜೈಸಾ ಗರ್ಭಗೋಳು ಉದ್ಯಮಾತೇ । ಕೋಣಾಹೀ ನೇಣೇ ।೩೩೫॥ ತೈಸಾ ಮೀವಾಂಚೂನಿ ಕಾಂಹೀ । ಆಣಿಕ ಗೋಮಟೇಂಚಿ ನಾಹೀ । ಮಜಚಿ ನಾಮ ಪಾಹೀ । ಜಿಣೇಯಾ ಠೇವಿಲೇ ।೩೩೬॥ ಐಸೇ ಅನನ್ಯಗತಿಕೇ ಚಿತ್ತೇ । ಚಿಂತಿತಸಾಂತೇ ಮಾತೇ । ಜೇ ಉಪಾಸಿತೀ ತಯಾಂತೇ । ಮೀಚಿ ಸೇವೀ ।೩೩೭॥ ತೇ ಏಕವಟೂನಿ ಜಿಯೇ ಕ್ಷಣೇ । ಅನುಸರಲೇ ಗಾ ಮಾಝಿಯೇ ವಾಹಣೇ । ತೇವ್ಹಾಂಚಿ ತಯಾಂಚೇ ಚಿಂತವಣೇ । ಮಜಚಿ ಪಡಲೀ ।೩೩೮॥ ಮಗ ತೀಂಹೀ ಜೇ ಜೇ ಕರಾವೇ । ತೇ ಮಜಚಿ ಪಡಿಲೇ ಆಘವೇ । ಜೈಸೀ ಅಜಾತಪಕ್ಷಾಚೇನಿ ಜೀವೇ । ಪಕ್ಷಿಣೀ ಜಿಯೇ ।೩೩೯॥ ಆಪುಲೀ ತಹಾನ ಭೂಕ ನೇಣೇ । ತಾನ್ಹಯಾ ನಿಕೇ ತೇ ಮಾಉಲೀಸೀಚಿ ಕರಣೇ । ತೈಸೇ ಅನುಸರಲೇ ಜೇ ಮಜ ಪ್ರಾಣೇ । ತಯಾಂಚೇ ಸರ್ವ ಮೀ ಕರೀ ।೩೪೦॥ ತಯಾ ಮಾಝಿಯಾ ಸಾಯುಜ್ಯಾಚೀ ಚಾಡ । ತರಿ ತೇಂಚಿ ಪುರವೀ ಕೋಡ । ಕಾ ಸೇವಾ ಮ್ಹಣತೀ ತರೀ ಆಡ । ಪ್ರೇಮ ಸೂಯೇ ।೩೪೧॥ ಐಸಾ ಮನೀ ಜೋ ಜೋ ಧರಿತೀ ಭಾವೋ । ತೋ ತೋ ಪುಢಾ ಪುಢಾ ಲಾಗೇ ತಯಾ ದೇವೋ । ಆಣಿ ದಿಧಲಿಯಾಚಾ ನಿರ್ವಾಹೋ । ತೋಹೀ ಮೀಚಿ ಕರೀ ।೩೪೨॥ ಹಾ ಯೋಗಕ್ಷೇಮು ಆಘವಾ । ತಯಾಂಚಾ ಮಜಚಿ ಪಡಿಲಾ ಪಾಂಡವಾ । ಜಯಾಂಚಿಯಾ ಸರ್ವಭಾವಾ । ಆಶ್ರಯೋ ಮೀ ।೩೪೩॥

ಯೇऽಪ್ಯನ್ಯದೇವತಾ ಭಕ್ತಾಃ ಯಜಂತೇ ಶ್ರದ್ಧಯಾನ್ವಿತಾಃ ।
ತೇऽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಮ್ ।೨೩॥

ಆತಾ ಆಣಿಕಹೀ ಸಂಪ್ರದಾಯೇ । ಪರೀ ಮಾತೇ ನೇಣತೀ ಸಮವಾಯೇ । ಜೇ ಅಗ್ನಿ ಇಂದ್ರಸೂರ್ಯಸೋಮಾಯೇ । ಮ್ಹಣೌನಿ ಯಜಿತೀ ।೩೪೪॥

ಅರ್ಜುನಾ, ಯಾವ ಪ್ರಕಾರವಾಗಿ ಕಾಳಿಲ್ಲದ ತೌಡನ್ನು ತೂರಿ ಹಸನ ಮಾಡಿದರೆ ಅದು ವ್ಯರ್ಥವಾಗುವುದೋ, ಅದರಂತೆ ವೇದಾರ್ಥಜ್ಞಾನಿಯಾಗಿಯೂ ನನ್ನನ್ನು ತಿಳಿಯಲಾರದ ಆತನಜನ್ಮವು ವ್ಯರ್ಥವಾಗುವುದು ।೩೩೩॥

ಆದ್ದರಿಂದ ನನ್ನೊಬ್ಬನ ಹೊರತಾಗಿ ಈ ಮೂರೂ ವೇದೋಕ್ತ ಧರ್ಮಗಳು ವ್ಯರ್ಥವಾದವುಗಳು. ಅದಕ್ಕಾಗಿ ನನ್ನನ್ನೇ ತಿಳಿ, ಬೇರೆ ಯಾವುದನ್ನೂ ಮನದಲ್ಲಿ ತರಬೇಡ, ಅಂದರೇನೇ ಸುಖಿಯಾಗುವೆ ।೩೩೪॥

ಶ್ಲೋಕಾರ್ಥ :- ವಿಧಿ ವಿರಾಮವಿಲ್ಲದೆ ಅನನ್ಯ ಚಿಂತನೆಯಿಂದ ನನ್ನನ್ನು ಸೇವಿಸುವ ಜನರ ಯೋಗ ಕ್ಷೇಮಗಳನ್ನು ನಾನೇ ನಿರ್ವಹಿಸುತ್ತೇನೆ ।೨೨॥

ಇಲ್ಲಿ ನೋಡು, ಯಾರು ತನ್ನ ಚಿತ್ತವನ್ನು ಸರ್ವಭಾವದಿಂದ ನನ್ನಲ್ಲಿ ಗುತ್ತಿಗೆಯಾಗಿ ಮಾರಿಕೊಂಡಿರುವರೋ, ಯಾವ ಪ್ರಕಾರವಾಗಿ ಗರ್ಭದಲ್ಲಿರುವ ಪಿಂಡವು ಯಾವ ಉದ್ಯೋಗವನ್ನು ಮಾಡುವುದು ಅರಿಯದೋ ।೩೩೫॥

ಅದೇ ಪ್ರಕಾರವಾಗಿ ಅವರಿಗೆ ನನ್ನ ಹೊರತಾಗಿ ಬೇರೆ ಯಾವುದೂ ಉತ್ತಮವಾಗಿ ಕಾಣಿಸುವುದಿಲ್ಲ ಮತ್ತು ಅವರು ನನಗಾಗಿಯೇ ತಮ್ಮ ಜೀವವನ್ನು ಇಟ್ಟಿರುವರು ।೩೩೬॥

ಈ ಪ್ರಕಾರವಾಗಿ ಏಕನಿಷ್ಠ ಅಂತಃಕರಣದಿಂದ ಯಾರು ನನ್ನನ್ನು ಚಿಂತಿಸುತ್ತ ನನ್ನ ಸೇವೆಯನ್ನು ಮಾಡುವರೋ, ಅವರ ಸೇವೆಯನ್ನು ನಾನೇ ಮಾಡುವೆನು ।೩೩೭॥

ಈ ರೀತಿಯಲ್ಲಿ ಇವರು ನನ್ನನ್ನು ಪೂರ್ಣವಾಗಿ ಕೂಡಿಕೊಂಡು ನನ್ನ ಭಜನೆಯಲ್ಲಿ ನಿರತರಾದದ್ದು ಕಂಡಾಕ್ಷಣ ಅವರ ಎಲ್ಲ ಚಿಂತೆಯು ನನ್ನ ಮೇಲೆ ಬೀಳುವುದು ।೩೩೮॥

ಆಗ ಅವರು ಯಾವ ಯಾವುದು ಮಾಡಬೇಕೆಂದು ತಮ್ಮ ಮನದಲ್ಲಿ ಬಯಸುವರೋ, ಅದೆಲ್ಲವನ್ನು ನಾನೇ ಮಾಡಬೇಕಾಗುವುದು. ರೆಕ್ಕೆ ಮೂಡದ ಪಕ್ಷಿಯ ಹಿತಚಿಂತನೆ ವೆಲ್ಲವೂ ಪಕ್ಷಿಯೇ ಮಾಡುವಂತೆ ।೩೩೯॥

ಅಥವಾ ತನ್ನ ಹಸಿವೆ ನೀರಡಿಕೆ ನೋಡದೇ ತನ್ನ ಕೂಸಿನ ಸುಖಕ್ಕಾಗಿಯೇ ತಾಯಿಗೆ ಕಾಳಜಿ ವಹಿಸಬೇಕಾಗುವಂತೆ ಯಾರು ಮನಃಪೂರ್ವಕವಾಗಿ ಎಲ್ಲ ಭಾವವನ್ನು ನನ್ನ ಮೇಲೆ ಇಟ್ಟಿರುವರೋ, ಅವರ ಎಲ್ಲ ಇಚ್ಛಿತವನ್ನು ನಾನೇ ಪೂರೈಸುವೆನು ।೩೪೦॥

ಅವರಿಗೆ ನನ್ನ ಸಾಯುಜ್ಯದ ಇಚ್ಛೆಯಾದರೆ ಅವರಿಗೆ ಅದನ್ನೇ ಕೌತುಕದಿಂದ ಕೊಡುವೆನು. ಅಥವಾ ನನ್ನ ಸೇವೆಯನ್ನೇ ಬೇಕೆಂದು ಅಪೇಕ್ಷೆಪಟ್ಟರೆ ನನ್ನ ಪ್ರೇಮ ಭಾವವನ್ನು ಅವರಲ್ಲಿ ಉತ್ಪನ್ನಮಾಡುವೆ ।೩೪೧॥

ಈ ಪ್ರಕಾರವಾಗಿ ಅವರು ತಮ್ಮ ಮನದಲ್ಲಿ ಯಾವ ಯಾವ ಇಚ್ಛೆಯನ್ನು ಮಾಡುವರೋ, ಅದೆಲ್ಲವನ್ನು ಮೇಲಿಂದ ಮೇಲೆ ನನಗೆ ಪೂರ್ಣಗೊಳಿಸಬೇಕಾಗುವುದು ಮತ್ತು ಅವರಿಗೆ ಕೊಟ್ಟಿದ್ದೆಲ್ಲವನ್ನು ನಾನೇ ರಕ್ಷಿಸುವೆನು ।೩೪೨॥

ಹೇ ಪಾಂಡವನೇ, ಯಾರ ಭಾವವು ಪೂರ್ಣವಾಗಿ ನನ್ನ ಮೇಲಿರುವುದೋ, ಅವರ ಎಲ್ಲ ಯೋಗಕ್ಷೇಮವು ನನ್ನ ಮೇಲೆ ಬೀಳುವುದು ।೩೪೩॥

ಶ್ಲೋಕಾರ್ಥ :- ಅರ್ಜುನಾ! ಶ್ರದ್ಧೆಯಿಂದ ಇತರ ದೇವತೆಗಳನ್ನು ಪೂಜಿಸುವವರೂ ಸಹ ನನ್ನನ್ನು ಆರಾಧಿಸುವವರೇ ಆಗಿರುತ್ತಾರೆ. ಆದರೂ ಅವರ ಪೂಜೆಯು ವಿಧಿಪೂರ್ವಕವಾದುದಲ್ಲ ।೨೩॥

ಈಗ ಇನ್ನೂ ಕೆಲವು ಸಂಪ್ರದಾಯಗಳಿವೆ. ಆದರೆ, ಅವರು ನನ್ನನ್ನು ಸರ್ವವ್ಯಾಪಕ ರೂಪದಿಂದ ತಿಳಿಯಲಾರರು, ಆದ್ದರಿಂದ ಅವರು ಅಗ್ನಿ, ಇಂದ್ರ, ಸೂರ್ಯ, ಚಂದ್ರ ಇವರಿಗೆ ಭಜಿಸುವರು ।೩೪೪॥

ತೇಹೀ ಕೀರ ಮಾತೇಚಿ ಹೋಯೇ । ಕಾ ಜೇ ಹೇ ಆಘವೇ ಮೀಚಿ ಆಹೇ । ಪರಿ ತೇ ಭಜತೀ ಉಜರೀ ನವ್ಹೇ । ವಿಷಮ ಪಡೇ ।೩೪೫॥ ಪಾಹೇ ಪಾ ಶಾಖಾ ಪಲ್ಲವ ರುಖಾಚೇ। ಹೇ ಕಾಯ ನವ್ಹತೀ ಏಕಾಚಿ ಬೀಜಾಚೇ? । ಪರೀ ಪಾಣೀ ಘೇಣೇ ಮುಳಾಚೇ। ತೇ ಮುಳೀಂಚಿ ಘಾಘೇ ।೩೪೬॥ ಕಾ ದಹಾಹೀ ಇಂದ್ರಿಯೇ ಆಹಾತೀ । ಇಯೇ ಜರೀ ಏಕೇಚಿ ದೇಹೀಂಚೀ ಹೋತೀ । ಆಣಿ ಇಹೀ ಸೇವಿಲೇ ವಿಷಯೋ ಜಾತೀ । ಏಕಾಚಿ ಠಾಯಾ ।೩೪೭॥ ತರಿ ಕರೋನಿ ರಸಸೋಯ ಬರವೀ । ಕಾನೀ ಕೇವೀ ಭರಾವೀ? । ಫುಲೇ ಆಣೋನಿ ಬಾಂಧಾವೀ ।ಡೋಳಾ ಕೇವೀ? ।೩೪೮॥ ತೇಥ ರಸು ತೋ ಮುಖೇಚಿ ಸೇವಾವಾ । ಪರಿಮಳು ತೋ ಘ್ರಾಣೇಂಚಿ ಘ್ಯಾವಾ । ತೈಸಾ ಮೀ ತೋ ಯಜಾವಾ । ಮೀಚಿ ಮ್ಹಣೌನಿ ।೩೪೯॥ ಯೇರ ಮಾತೇ ನೇಣೋನಿ ಭಜನ । ತೇ ವಾಯಾಂಚಿ ಗಾ ಆನೇಆನ । ಮ್ಹಣೌನಿ ಕರ್ಮಾಚೇ ಡೋಳೇ ಜ್ಞಾನ। ತೇ ನಿರ್ದೋಷ ಹೋಆವೇ ।೩೫೦॥

ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।
ನ ತು ಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ ।೨೪॥

ಏರ್ಹವೀ ಪಾಹೇ ಪಾ ಪಂಡುಸುತಾ । ಯಾ ಯಜ್ಞೋಪಹಾರಾ ಸಮಸ್ತಾ । ಮೀವಾಂಚೂನಿ ಭೋಕ್ತಾ । ಕವಣು ಆಹೇ? ।೩೫೧॥ ಮೀ ಸಕಳಾ ಯಜ್ಞಾಂಚಾ ಆದಿ । ಆಣಿ ಯಜನಾ ಯಾ ಮೀಚಿ ಅವಧಿ । ಕೀ ಮಾತೇ ಚುಕೋನಿ ದುರ್ಬುದ್ಧಿ । ದೇವಾ ಭಜಲೇ ।೩೫೨॥ ಗಂಗೇಚೇ ಉದಕ ಗಂಗೇ ಜೈಸೇ । ಅರ್ಪಿಜೇ ದೇವಪಿತರೋದ್ದೇಶೇ । ಮಾಝೇ ಮಜ ದೇತೀ ತೈಸೇ । ಪರಿ ಆನಾನೀ ಭಾವೀ ।೩೫೩॥ ಮ್ಹಣೌನಿ ತೇ ಪಾರ್ಥಾ । ಮಾತೇ ನ ಪವತೀಚಿ ಸರ್ವಥಾ । ಮಗ ಮನೀ ವಾಹಿಲೀ ಜೇ ಆಸ್ಥಾ । ತೇಥ ಆಲೇ ।೩೫೪॥

ಯಾಂತಿ ದೇವವ್ರತಾ ದೇವಾನ್ ಪಿತೄನ್ ಯಾಂತಿ ಪಿತೃವ್ರತಾಃ ।
ಭೂತಾನಿ ಯಾಂತಿ ಭೂತೇಜ್ಯಾಃ ಯಾಂತಿ ಮದ್ಯಾಜಿನೋಽಪಿ ಮಾಮ್ ।೨೫॥

ಮನೇ ವಾಚಾ ಕರಣೇ । ಜಯಾಂಚೇ ಭಜನೆ ದೇವಾಂಚಿಯಾ ವಾಹಣೇ । ತೇ ಶರೀರ ಜಾತಿಯೇ ಕ್ಷಣೇ। ದೇವಚೀ ಜಾಲೇ ।೩೫೫॥ ಅಥವಾ ಪಿತರಾಂಚೀ ವ್ರತೇ । ವಾಹತೀ ಜಯಾಂಚೀ ಚಿತ್ತೇ । ಜೀವಿತ ಸರಲಿಯಾ ತಯಾಂತೇ। ಪಿತೃತ್ವ ವರೀ ।೩೫೬॥ ಕಾ ಕ್ಷುದ್ರದೇವತಾದಿ ಭೂತೇ । ತಿಯೇಚಿ ಜಯಾಂಚೀ ಪರಮ ದೈವತೇ । ಜೇಹೀ ಅಭಿಚಾರಿಕೀ ತಯಾಂತೇ । ಉಪಾಸಿಲೇ ।೩೫೭॥

ಅವರ ಪೂಜೆಯು ನಿಜವಾಗಿಯೂ ನನ್ನದೇ ಆಗಿರುವುದು. ಕಾರಣ ಈ ಎಲ್ಲ ಜಗತ್ತಿನಲ್ಲಿ ನಾನೇ ತುಂಬಿಕೊಂಡಿರುವೆನು. ಆದರೆ ಅವರ ಭಜನೆಯು ಪದ್ಧತಿಗೆ ಬಿಟ್ಟು ತಪ್ಪಿರುವುದು ।೩೪೫॥

ಇಲ್ಲಿ ನೋಡು, ಗಿಡದ ಟೊಂಗೆಗಳು ಎಲೆಗಳು ಇತ್ಯಾದಿ ಒಂದೇ ಬೀಜದಿಂದ ಉತ್ಪನ್ನವಾಗಿಲ್ಲವೇ? ಆದರೆ ನೀರು ಬೇರಿಗೆ ಮಾತ್ರ ಹಾಕಬೇಕಾಗುವುದು ।೩೪೬॥

ಅಥವಾ ಹತ್ತು ಇಂದ್ರಿಯಗಳು ಒಂದೇ ದೇಹದ್ದಿರುವುವು ಮತ್ತು ಅವು ಸೇವನೆ ಮಾಡಿದ ವಿಷಯಗಳೆಲ್ಲವೂ ಒಂದೇ ಸ್ಥಳಕ್ಕೆ ಮುಟ್ಟುವುವು ।೩೪೭॥

ಆದರೆ ಉತ್ತಮ ಅಡುಗೆ ಮಾಡಿ ಅದನ್ನು ಕಿವಿಯಲ್ಲಿ ಹೇಗೆ ಹಾಕಬೇಕು? ಮತ್ತು ಹೂವುಗಳನ್ನು ತಂದು ಅದರ ಸುವಾಸನೆಯನ್ನು ಕಣ್ಣುಗಳಿಂದ ಹೇಗೆ ಸ್ವೀಕರಿಸಬೇಕು ? ।೩೪೮॥

ಅಂದಮೇಲೆ ಅನ್ನವನ್ನು ಬಾಯಿಯಿಂದಲೇ ಸೇವನೆ ಮಾಡಬೇಕು ಮತ್ತು ಸುವಾಸನೆಯನ್ನು ಮೂಗಿನಿಂದಲೇ ಸೇವನೆ ಮಾಡಬೇಕು. ಅದರಂತೆ ನನ್ನ ಪೂಜೆ ಮಾಡಬೇಕಾದರೆ ನನ್ನ ಭಾವನೆಯಿಂದಲೇ ಮಾಡಬೇಕು ।೩೪೯॥

ಒಟ್ಟಿನಲ್ಲಿ ನನ್ನನ್ನು ತಿಳಿಯದೇ ಮಾಡಿದ ಭಜನೆಯು ಅದು ಏನೇ ಆಗಲಿ ವ್ಯರ್ಥವಾದದ್ದು, ಅದರಿಂದ ಕರ್ಮ ಆಚರಣೆಗೆ ಜ್ಞಾನವು ದೃಷ್ಟಿಯಾಗಿರುವುದು. ಆದರೆ ಆ ಜ್ಞಾನವು ನಿರ್ದೋಷವಾಗಿರಲೇಬೇಕು ।೩೫೦॥

ಶ್ಲೋಕಾರ್ಥ :- ಸಮಸ್ತ ಯಜ್ಞಗಳ ಫಲ ಭೋಕ್ತೃವೂ, ಪ್ರಭುವೂ ನಾನೇ, ವಾಸ್ತವವನ್ನು ತಿಳಿಯದೆ ಅವರು ವಿಭ್ರಷ್ಟರಾಗುತ್ತಾರೆ ।೨೪॥

ಅರ್ಜುನಾ, ಇಲ್ಲವಾದರೆ ಹೀಗೆ ನೋಡು, ಈ ಎಲ್ಲ ಯಜ್ಞೋಪಚಾರಗಳನ್ನು ನನ್ನ ಹೊರತಾಗಿ ಬೇರೆ ಯಾರು ಭೋಕ್ತಾನಾಗಿರುವನು? ।೩೫೧॥

ನಾನು ಎಲ್ಲ ಯಜ್ಞಗಳ ಆದಿಯಾಗಿರುವೆ ಮತ್ತು ಯಜನದ ಕೊನೆಗೂ ನಾನೇ ಇರುವೆ. ಆದರೆ ದುರ್ಬುದ್ಧಿಯಾದವರು ನನ್ನನ್ನು ಬಿಟ್ಟು ಇಂದ್ರಾದಿ ದೇವತೆಗಳನ್ನು ಭಜಿಸುವರು ।೩೫೨॥

ಯಾವ ಪ್ರಕಾರವಾಗಿ ಗಂಗಾನದಿಯ ನೀರನ್ನು ದೇವತೆಗಳ ಮತ್ತು ಪಿತರರ ಹೆಸರಿನಿಂದ ಗಂಗಾನದಿಯಲ್ಲೇ ಅರ್ಪಿಸುವರೋ, ಅದೇ ಪ್ರಕಾರವಾಗಿ ಇವರು ನನ್ನನ್ನು ನನಗೆ ಕೊಡುವರು, ಆದರೆ ಭಿನ್ನ ಭಿನ್ನ ಭಾವದಿಂದ ।೩೫೩॥

ಆದ್ದರಿಂದ ಪಾರ್ಥಾ, ಇವರು ಎಂದಿಗೂ ನನ್ನನ್ನು ಹೊಂದಲಾರರು ಮತ್ತು ಮನಸ್ಸಿನಲ್ಲಿ ಯಾವ ಇಚ್ಛೆಯನ್ನು ಧರಿಸುವರೋ, ಅದೇ ಸ್ಥಳಕ್ಕೆ ಹೋಗುವರು ।೩೫೪॥

ಶ್ಲೋಕಾರ್ಥ :- ದೇವತಾ ಭಕ್ತರಿಗೆ ದೇವತೆಗಳ ಪ್ರಾಪ್ತಿ, ಪಿತೃಗಳನ್ನು ಪೂಜಿಸುವವರಿಗೆ ಪಿತೃದೇವತಾ ಪ್ರಾಪ್ತಿ, ಭೂತೋಪಾಸಕರಿಗೆ ಭೂತಗಳ ಪ್ರಾಪ್ತಿ, ನನ್ನನ್ನು ಸೇವಿಸುವವರಿಗೆ ನನ್ನ ಪ್ರಾಪ್ತಿ ।೨೫॥

ಮನಸ್ಸು, ವಾಚಾ ಮತ್ತು ಇಂದ್ರಿಯಗಳಿಂದ ಇಂದ್ರಾದಿದೇವತೆಗಳ ಭಜನೆ ಮಾಡುವವರು ಶರೀರವನ್ನು ಬಿಟ್ಟಾಕ್ಷಣಕ್ಕೆ ಅವರು ದೇವತೆಗಳ ರೂಪರಾಗುವರು ।೩೫೫॥

ಅಥವಾ ಯಾರು ಮನಃಪೂರ್ವಕವಾಗಿ ಪಿತೃಗಳ ವ್ರತಗಳನ್ನಾಚರಿಸುವವರು ತಮ್ಮ ಮರಣೋತ್ತರದಲ್ಲಿ ಅವರಿಗೆ ಪಿತೃಲೋಕವು ಪ್ರಾಪ್ತವಾಗುವುದು ।೩೫೬॥

ಅಥವಾ ಬೇತಾಳಾದಿ ಪಿಶಾಚ್ಚ ಹಾಗೂ ಕ್ಷುದ್ರ ದೇವತೆಗಳನ್ನು ಪರಮ ದೇವತೆಗಳನ್ನಾಗಿ ಮಾಡಿಕೊಂಡು ಘಾತಕಗಳಾದ ಜಾರಣ ಮಾರಣ ಸಾಧಿಸಲು ಅವುಗಳ ಉಪಾಸನೆ ಮಾಡುವರು ।೩೫೭॥

ತಯಾ ದೇಹಾಚೀ ಜವನಿಕಾ ಫಿಟಲೀ । ಆಣಿ ಭೂತತ್ವಾಚೀ ಪ್ರಾಪ್ತಿ ಜಾಹಲೀ । ಏವಂ ಸಂಕಲ್ಪವಶೇ ಫಳಲೀ । ಕರ್ಮೆ ತಯಾ ।೩೫೮॥ ಮಗ ಮೀಚಿ ಡೋಳಾ ದೇಖಿಲಾ । ಜೇಂಹೀ ಕಾನೀ ಮೀಚಿ ಐಕಿಲಾ । ಮೀಚಿ ಮನೀ ಭಾವಿಲಾ । ವಾನಿಲಾ ವಾಚಾ ।೩೫೯॥ ಸರ್ವಾಂಗೀ ಸರ್ವಾಠಾಯೀ । ಮೀಚಿ ನಮಸ್ಕಾರಿಲಾ ಜೇಂಹೀ । ದಾನಪುಣ್ಯಾದಿಕೇ ಜೇ ಕಾಂಹೀ । ತೇ ಮಾಝಿಯೇಯಾಚಿ ಮೋಹರಾ ।೩೬೦॥ ಜೇಂಹೀ ಮಾತೇಂಚಿ ಅಧ್ಯಯನ ಕೇಲೇ । ಜೇ ಆಂತಬಾಹೇರಿ ಮಿಯಾಂಚಿ ಧಾಲೇ । ಜಯಾಂಚೇ ಜೀವಿತ್ವ ಜೋಡಲೇ । ಮಜಚಿಲಾಗೀ ।೩೬೧॥ ಜೇ ಅಹಂಕಾರು ವಾಹತ ಆಂಗೀ । ಆಮ್ಹೀ ಹರೀಚೇ ಭೂಷಾವಯಾಲಾಗೀ । ಜೇ ಲೋಭಿಯೇ ಏಕಚಿ ಜಗೀ ।ಮಾಝೋನಿ ಲೋಭೇ ।೩೬೨॥ ಜೇ ಮಾಝೋನಿ ಕಾಮೇ ಸಕಾಮ । ಜೇ ಮಾಝೋನಿ ಪ್ರೇಮೇ ಸಪ್ರೇಮ । ಜೇ ಮಾಝಿಯಾ ಭುಲೀ ಸಂಭ್ರಮ । ನೇಣತೀ ಲೋಕ ।೩೬೩॥ ಜಯಾಂಚೀ ಜಾಣತೀ ಮಜಚಿ ಶಾಸ್ತ್ರೇ । ಮೀ ಜೋಡೆ ಜಯಾಂಚೇನಿ ಮಂತ್ರೇ । ಐಸೇ ಜೇ ಚೇಷ್ಟಾಮಾತ್ರೇ । ಭಜಲೇ ಮಜ ।೩೬೪॥ ತೇ ಮರಣಾ ಐಲೀಚಕಡೇ । ಮಜ ಮಿಳೋನಿ ಗೇಲೇ ಪುಡೇ । ಮಗ ಮರಣೀ ಆಣಿಕೀಕಡೇ । ಜಾತೀಲ ಕೇವೀ? ।೩೬೫॥ ಮ್ಹಣೌನಿ ಮದ್ಯಾಜೀ ಜೇ ಜಾಹಲೇ । ತೇ ಮಾಝೀಯೇಯಾಚಿ ಸಾಯುಜ್ಯಾ ಆಲೇ । ಜೇಂಹೀ ಉಪಚಾರಮಿಷೆ ದಿಧಲೇ । ಆಪಣಪೇ ಮಜ ।೩೬೬॥ ಪೈ ಅರ್ಜುನಾ ಮಾಝೇ ಠಾಯೀ । ಆಪಣಪೇವೀಣ ಸೌರಸು ನಾಹೀ । ಮೀ ಉಪಚಾರೇ ಕವಣಾಹೀ । ನಾಕಳೇ ಗಾ ।೩೬೭॥ ಏಥ ಜಾಣೇವ ಕರೀ ತೋಚಿ ನೇಣೇ। ಆಥಿಲೇಪಣ ಮಿರವೀ ತೇಚಿ ಉಣೇ । ಆಮ್ಹೀ ಜಾಹಲೋ ಐಸೇ ಜೋ ಮ್ಹಣೇ । ತೋ ಕಾಹೀಂಚೀ ನವ್ಹೇ ।೩೬೮॥ ಅಥವಾ ಯಜ್ಞದಾನಾದಿ ಕಿರೀಟೀ । ಕಾ ತಪೇ ಹನ ಜೇ ಹುಟಹುಟೀ । ತೇ ತೃಣಾ ಏಕಾಸಾಠೀ । ನ ಸರೇ ಏಥ ।೩೬೯॥ ಪಾಹೇ ಪಾ ಜಾಣಿವೇಚೇನಿ ಬಳೇ । ಕೋಣ್ಹೀ ವೇದಾಪಾಸೂನಿ ಅಸೇ ಆಗಳೇ? । ಕೀ ಶೇಷಾಹೂನಿ ತೋಂಡಾಳೇ । ಬೋಲಕೇ ಆಥೀ? ।೩೭೦॥ ತೋಹಿ ಆಂಥರುಣಾತಳವಟೀ ದಡೇ । ಯೇರು ನೇತಿ ನೇತಿ ಮ್ಹಣೋನಿ ಬಹುಡೇ । ಏಥ ಸನಕಾದಿಕ ವೇಡೇ । ಪಿಸೆ ಜಾಹಲೇ ।೩೭೧॥ ಕರಿತಾ ತಾಪಸಾಂಚೀ ಕಡಸಣೀ । ಕವಣು ಜವಳಾ ಶೇವಿಜೇ ಶೂಳಪಾಣೀ । ತೋಹಿ ಅಭಿಮಾನು ಸಾಂಡೂನಿ ಪಾಯವಣೀ । ಮಾಥಾ ವಾಹೇ ।೩೭೨॥

ಅವರ ದೇಹದ ಪರದೆ ಬಿದ್ದಾಕ್ಷಣಕ್ಕೆ (ಸತ್ತನಂತರ) ಪಿಶಾಚ್ಯಯೋನಿಯು ಪ್ರಾಪ್ತವಾಗುವುದು. ಈ ಪ್ರಕಾರವಾಗಿ ಅವರ ಸಂಕಲ್ಪದಂತೆ ಅವರ ಕರ್ಮಗಳು ಅವರಿಗೆ ಫಲಿಸುವುವು ।೩೫೮॥

ಆದರೆ, ಯಾರು ದೃಷ್ಟಿಯಿಂದ ನನ್ನನ್ನೇ ನೋಡಿದರು, ಕಿವಿಯಿಂದ ನನ್ನ ನಾಮವನ್ನೇ ಶ್ರವಣಮಾಡಿದರು, ಮನಸ್ಸಿನಿಂದ ನನ್ನ ಧ್ಯಾನವನ್ನೇ ಮಾಡಿದರು, ವಾಚಾದಿಂದ ನನ್ನ ವರ್ಣನೆಯನ್ನೇ ಮಾಡಿದರು ।೩೫೯॥

ಸರ್ವಾಂಗದಿಂದ ಮತ್ತು ಸರ್ವಸ್ಥಳಗಳಲ್ಲಿ ನನ್ನನ್ನೇ ನಮಸ್ಕರಿಸಿದರು,ದಾನಗಳನ್ನು, ಪುಣ್ಯಗಳನ್ನು ಇತ್ಯಾದಿ ಎಲ್ಲವನ್ನೂ ನನ್ನ ಉದ್ದೇಶಕ್ಕಾಗಿಯೇ ಮಾಡಿದರು ।೩೬೦॥

ಮತ್ತು ಇವರು ನನ್ನ ಸ್ವರೂಪವನ್ನು ಯಥಾರ್ಥವಾಗಿ ತಿಳಿಯುವಂತಹ ಶಾಸ್ತ್ರಗಳ ಅಧ್ಯಯನ ಮಾಡಿದರು. ಇವರು ನನ್ನಿಂದಲೇ ಒಳ ಹೊರಗೆ ತೃಪ್ತರಾದರು. ಇವರು ತಮ್ಮ ಆಯುಷ್ಯವನ್ನೆಲ್ಲ ನನಗಾಗಿ ಖರ್ಚಿಸಿರುವರು ।೩೬೧॥

ಇವರಿಗೆ ನನ್ನ ಹೊರತಾಗಿ ಇತರ ಯಾವುದೇ ಪ್ರಾಪ್ತಿಯ ಇಚ್ಛೆ ಇರುವುದಿಲ್ಲ. ನಾವು ಹರಿಕೀರ್ತನೆಯನ್ನು ಬೆಳೆಸುವವರು ಎಂಬ ಅಭಿಮಾನ ಪಡುವರು ।೩೬೨॥

ನನ್ನ ಇಚ್ಛೆಯಿಂದಲೇ ಇವರು ಸಕಾಮರಾಗಿರುವರು. ಇವರು ನನ್ನ ಪ್ರೇಮದಿಂದಲೇ ಸಪ್ರೇಮರಾಗಿರುವರು. ಇವರು ನನ್ನಲ್ಲಿಯೇ ತಲ್ಲೀನರಾಗಿದ್ದಕ್ಕೆ ಲೌಕಿಕವು ಇವರಿಗೆ ಕಾಣಿಸುವುದಿಲ್ಲ ।೩೬೩॥

ನನ್ನನ್ನು ತಿಳಿಯುವುದೇ ಅವರ ಶಾಸ್ತ್ರಗಳಿರುವುವು ಮತ್ತು ಅವರ ಗುರು ಮಂತ್ರದಿಂದ ನನ್ನ ಪ್ರಾಪ್ತಿಯು ಇತರರಿಗಾಗುವುದು. ಈ ಪ್ರಕಾರವಾಗಿ ಇವರು ತಮ್ಮ ಎಲ್ಲ ವ್ಯವಹಾರಗಳಲ್ಲಿ ನನ್ನ ಹೊರತಾಗಿ ಇತರ ಯಾರ ಭಜನೆಯನ್ನೂ ಮಾಡುವುದಿಲ್ಲ ।೩೬೪॥

ಇವರು ಮರಣದ ಮುಂಚೆಯೇ ನನ್ನ ಸ್ವರೂಪ ಹೊಂದಿರುವರು. ಆಗ ಮರಣದ ನಂತರ ನನ್ನ ಹೊರತಾಗಿ ಬೇರೆಕಡೆಯಲ್ಲಿ ಹೇಗೆ ಹೋದಾರು? ।೩೬೫॥

ಆದ್ದರಿಂದ ನನ್ನ ಯಜನ ಮಾಡುವವರು ಮದ್ರೂಪ ರಾಗುವರು. ಕಾರಣ ಅವರು ಸೇವೆಯ ನಿಮಿತ್ತದಿಂದ ತಮ್ಮನ್ನು ನನಗೆ ಅರ್ಪಿಸುವರು ।೩೬೬॥

ಅರ್ಜುನಾ, ನನ್ನಲ್ಲಿ ಇವರು ಮಾಡಿದ ಆತ್ಮಾರ್ಪಣೆ ಹೊರತಾಗಿ ಬೇರೆ ಯಾವ ಉಪಚಾರದಲ್ಲಿಯೂ ನನಗೆ ಸ್ವಾರಸ್ಯ ಎನಿಸುವುದಿಲ್ಲ. ಏಕೆಂದರೆ ನಾನು ಬೇರೆ ಯಾವ ಉಪಚಾರಗಳಿಂದಲೂ ವಶನಾಗುವುದಿಲ್ಲ ।೩೬೭॥

ನನ್ನ ವಿಷಯಕ್ಕೆ ಜ್ಞಾನವಾಗಿದೆ ಎಂದು ಯಾರಿಗೆ ಗರ್ವ ಇರುವುದೋ, ಅವರಿಗೆ ಏನೂ ತಿಳಿದಿರುವುದಿಲ್ಲ, ನಾನು ಕೃತಾರ್ಥನಾದೆ ಎಂದು ಯಾರು ತೋರಿಸುವರೋ ಅವರೇ ಅಕೃತಾರ್ಥರು. ನಾನು ಮುಕ್ತನಾಗಿರುವೆ ಎಂದು ಹೇಳುವವನು ಏನೂ ಆಗಿಲ್ಲವೆಂದು ತಿಳಿ ।೩೬೮॥

ಅಥವಾ ಹೇ ಕಿರೀಟಿಯೇ, ನಾವು ಯಜ್ಞ ಮಾಡಿದೆವು, ನಾವು ಧರ್ಮಗಳನ್ನು ಮಾಡಿದೆವು, ನಾವು ತಪಗಳನ್ನು ಆಚರಿಸಿದೆವು ಎಂದು ಬಿಂಕು ತೋರಿಸುವವರು, ನನ್ನ ಪ್ರಾಪ್ತಿಯ ದೃಷ್ಟಿಯಿಂದ ಅವರ ಯೋಗ್ಯತೆಯು ತೃಣ ಸಮಾನವೂ ಆಗಲಾರದು ।೩೬೯॥

ಇಲ್ಲಿ ನೋಡು, ಜ್ಞಾನಬಲದಲ್ಲಿ ವೇದಕ್ಕಿಂತಲೂ ಯಾರಾದರೂ ಹೆಚ್ಚಿನವರು ಇರುವರೇ? ಅಥವಾ ಸಾವಿರ ಮುಖದಿಂದ ಹೇಳುವ ಶೇಷನಿಗಿಂತಲೂ ಯಾರಾದರೂ ಹೆಚ್ಚಿನವರು ಇರುವರೇ? ।೩೭೦॥

ಆದರೆ ಆ ಶೇಷನು ಸಹ ಪರಮಾತ್ಮನ ಹಾಸಿಗೆಯ ಕೆಳಗೆ ಅಡಗಿದನು. (ಹಾಸಿಗೆ ಆಗಿರುವನು) ವೇದವು ಸಹ ನೇತಿ, ನೇತಿ ಎಂದು ಸುಮ್ಮನಾಗಿದೆ, ಹಾಗೆಯೇ ಸನಕಾದಿಕರು ಪರಮಾತ್ಮನ ವಿಷಯಕ್ಕೆ ಹುಚ್ಚರಾಗಿರುವರು (ತಿಳಿಯದಾಗಿದೆ) ।೩೭೧॥

ತಪಸ್ವಿಗಳ ಬಗ್ಗೆ ವಿಚಾರಿಸಿದಾಗ ಮಹಾದೇವರ ಯೋಗ್ಯತೆಗೆ ಯಾರು ಹತ್ತುವರು? ಆದರೆ ಆತನು ಅಭಿಮಾನ ಬಿಟ್ಟು ಯಾರ ಪಾದೋದಕ ಭಾಗೀರಥಿಯನ್ನು ತನ್ನ ಮಸ್ತಕದಲ್ಲಿ ಧಾರಣೆ ಮಾಡಿದನು ।೩೭೨॥

ನಾತರೀ ಆಥಿಲೇಪಣೇ ಸರಿಶೀ । ಕವಣೇ ಆಹೇ ಲಕ್ಷ್ಮೀಯೇ ಐಸೀ? । ಶ್ರಿಯೇಸಾರಿಖಿಯಾ ದಾಸೀ । ಘರೀ ಜಿಯೇತೇ ॥೩೭೩॥ ತಿಯಾ ಖೇಳತಾ ಕರಿತೀ ಘರಕುಲೀ । ತಯಾ ನಾಮೇ ಅಮರಪುರೇ ಜರಿ ಠೇವಿಲೀ । ತರಿ ನ ಹೋತೀ ಕಾಯ ಬಾಹುಲೀ । ಇಂದ್ರಾದಿಕ ತಯಾಂಚೀ? ॥೩೭೪॥ ತಿಯಾ ನಾವಡೋನಿ ಜೇವ್ಹಾ ಮೋಡಿತೀ । ತೇವ್ಹಾ ಮಹೇಂದ್ರಾಚೇ ರಂಕ ಹೋತೀ । ತಿಯಾ ಝಾಡಾ ಜೇಉತೇ ಪಾಹತೀ । ತೇ ಕಲ್ಪವೃಕ್ಷ ॥೩೭೫॥ ಐಸಿಯಾ ಜಿಯೇಚಿಯಾ ಜವಳಿಕಾ । ಸಾಮರ್ಥ್ಯ ಘರೀಂಚಿಯಾ ಪಾಇಕಾ । ತೇ ಲಕ್ಷ್ಮೀ ಮುಖ್ಯನಾಯಕಾ। ನ ಮನೇಚಿ ಏಥ ॥೩೭೬॥ ಮಗ ಸರ್ವಸ್ವೇ ಕರೂನಿ ಸೇವಾ । ಅಭಿಮಾನು ಸಾಂಡೂನಿ ಪಾಂಡವಾ । ತೇ ಪಾಯ ಧುವಾವಯಾಚಿಯಾ ದೈವಾ । ಪಾತ್ರ ಜಾಹಾಲೀ ॥೩೭೭॥ ಮ್ಹಣೌನಿ ಥೋರಪಣ ಪರ್ಹಾ ಸಾಂಡಿಜೇ । ಏಥ ವ್ಯುತ್ಪತ್ತೀ ಆಘವೀ ವಿಸರಿಜೇ । ಜೈ ಜಗಾ ಧಾಕುಟೇ ಹೋಇಜೇ । ತೈ ಜವಳೀಕ ಮಾಝೀ ॥೩೭೮॥ ಅಗಾ ಸಹಸ್ರಕಿರಣಾಂಚಿಯೇ ದಿಠೀ । ಪುಢಾ ಚಂದ್ರಹೀ ಲೋಪೇ ಕಿರೀಟೀ । ತೇಥ ಖದ್ಯೋತ ಕಾ ಹುಟಹುಟೀ । ಆಪುಲೇನಿ ತೇಜೇ? ॥೩೭೯॥ ತೈಸೇ ಲಕ್ಷ್ಮೀಯೇಚೇ ಥೋರಪಣ ನ ಸರೇ । ಜೇಥ ಶಂಭೂಚೇಹೀ ತಪ ನ ಪುರೇ । ತೇಥ ಯೇರ ಪ್ರಾಕೃತ ಹೇಂದರೇ । ಕೇವೀ ಜಾಣೋ ಲಾಹೇ? ॥೩೮೦॥ ಯಾಲಾಗೀ ಶರೀರ ಸಾಂಡೋವಾ ಕೀಜೇ । ಸಕಳ ಗುಣಾಂಚೇ ಲೋಣ ಉತರಿಜೇ । ಸಂಪತ್ತಿಮದು ಸಾಂಡಿಜೇ । ಕುರವಂಡೀ ಕರುನೀ ॥೩೮೧॥

ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।
ತದಹಂ ಭಕ್ತ್ಯುಪಹೃತಮ್ ಅಶ್ನಾಮಿ ಪ್ರಯತಾತ್ಮನಃ ॥೨೬॥

ಮಗ ನಿಸ್ಸೀಮಭಾವ ಉಲ್ಹಾಸೇ । ಮಜ ಅರ್ಪಾವಯಾಚೇನಿ ಮಿಸೇ । ಫಳ ಏಕ ಆವಡೇ ತೈಸೇ । ಭಲತಯಾಚೇ ಹೋ ॥೩೮೨॥ ಭಕ್ತು ಮಾಝಿಯಾ ಕಡೇ ದಾವೀ । ಆಣಿ ಮೀ ದೋನ್ಹೀ ಹಾತ ವೋಡವೀ । ಮಗ ದೇಠು ನ ಫೇಡಿತಾ ಸೇವೀ । ಆದರೇಂಶೀ ॥೩೮೩॥ ಪೈ ಗಾ ಭಕ್ತೀಚೇನಿ ನಾಂವೇ । ಫೂಲ ಏಕ ಮಜ ದ್ಯಾವೇ । ತೇ ಲೇಖೇ ತರಿ ಮ್ಯಾ ತುರಂಬಾವೇ । ಪರಿ ಮುಖೀಂಚಿ ಘಾಲೀ ॥೩೮೪॥ ಹೇ ಅಸೋ ಕಾಯಸೀ ಫುಲೇ । ಪಾನಚಿ ಏಕ ಆವಡೇತೇ ಜಾಹಲೇ । ತೇ ಸಾಜುಕಹೀ ನ ಹೋ ಸುಕಲೇ । ಭಲತೈಸೇ ॥೩೮೫॥

ಅಥವಾ ಶ್ರೀಮಂತಿಕೆಯಲ್ಲಿ ಲಕ್ಷ್ಮೀ ಹೊರತಾಗಿ ಯಾರು ಅಧಿಕರಿರುವರು ? ಆಕೆಯ ಮನೆಯಲ್ಲಿ ಸಿದ್ಧಿಗಳಂತೆ ದಾಸಿಯರಿರುವರು ।೩೭೩॥

ಆ ದಾಸಿಯರು ತಮ್ಮ ಆಟದಲ್ಲಿ ಆಟದ ಮನೆಯನ್ನು ಮಾಡಿ ಅದಕ್ಕೆ ಅಮರಪುರಿ ಎಂದು ಹೆಸರಿಟ್ಟಾಗ ಇಂದ್ರಾದಿಕ ದೇವತೆಗಳು ಆ ಆಟದಮನೆಯ ಗೊಂಬೆಗಳಾಗುವುದಿಲ್ಲವೇ? ।೩೭೪॥

ಮುಂದೆ ಆ ದಾಸಿಯರು ಆ ಆಟದ ಮನೆಯನ್ನು ಹಿಡಿಸದೇ ಅದನ್ನು ಮುರಿದೊಗೆದಾಗ ಇಂದ್ರನು ರಂಕನಾಗುವನು ಮತ್ತು ಆ ದಾಸಿಯರು ಯಾವ ಗಿಡಗಳನ್ನು ನೋಡುವರೋ ಆ ಗಿಡಗಳು ಕಲ್ಪವೃಕ್ಷವಾಗುವುವು ।೩೭೫॥

ಈ ಪ್ರಕಾರವಾಗಿ ಯಾರ ಮನೆಯ ದಾಸಿಯರ ಸಾಮರ್ಥ್ಯ ಇರುವುದೋ, ಆ ಪಟ್ಟರಾಣಿಯಾದ ಶ್ರೀಲಕ್ಷ್ಮೀದೇವಿಯ ಪ್ರತಿಷ್ಠೆಯು ಸಹ ಇಲ್ಲಿ ನಡೆಯಲಿಲ್ಲ ।೩೭೬॥

ಆಗ ಅರ್ಜುನಾ, ಮನೋಭಾವದಿಂದ ಸೇವೆ ಮಾಡಿ ಮತ್ತು ಸರ್ವ ಅಭಿಮಾನವನ್ನು ತ್ಯಜಿಸಿದಾಗ ಆಕೆಯು ಪಾದತೊಳೆಯುವ ಅಧಿಕಾರಕ್ಕೆ ಪ್ರಾಪ್ತಳಾದಳು ।೩೭೭॥

ಆದ್ದರಿಂದ ದೊಡ್ಡಸ್ಥಿಕೆಯನ್ನು ದೂರ ಒಗೆದು, ಶಾಸ್ತ್ರೀಯ ಜ್ಞಾನದ ಅಭಿಮಾನ ಮರೆತು ಜಗತ್ತಿನಲ್ಲಿ ತೀರ ಚಿಕ್ಕವನಾದಾಗ (ನಮ್ರತೆಯಿಂದ ನಡೆದಾಗ) ಮಾತ್ರ ನನ್ನ ಪ್ರಾಪ್ತಿಯಾಗುವುದು ।೩೭೮॥

ಹೇ ಕಿರೀಟಿಯೇ, ಸೂರ್ಯನ ಪ್ರಕಾಶದಲ್ಲಿ ಚಂದ್ರನು ಸಹ ಲೋಪನಾಗುವನು. ಅಲ್ಲಿ ಬೆಂಕಿ ಹುಳವು ತನ್ನ ಪ್ರಕಾಶದ ಸೊಬಗನ್ನು ತೋರಿಸಲು ಹೋದರೆ ಏನಾದೀತು ? ।೩೭೯॥

ಅದರಂತೆ ಯಾವ ಸ್ಥಳದಲ್ಲಿ ಲಕ್ಷ್ಮೀಯ ಐಶ್ವರ್ಯವು ಮತ್ತು ಶಂಭುವಿನ ತಪವು ಸರಿಯಾಗದಾಗ ಅಲ್ಲಿ ಅಜ್ಞಾನಿ, ಮೂಢರು ನನ್ನನ್ನು ಹೇಗೆ ಬಲ್ಲರು ? ।೩೮೦॥

ಅದಕ್ಕಾಗಿ ಸರ್ವ ಶರೀರದ ಅಭಿಮಾನವನ್ನು ಒಗೆದು, ಸರ್ವಗುಣಗಳಿಂದ ನನ್ನನ್ನು ಆರತಿ ಮಾಡಿ ಮತ್ತು ಸಂಪತ್ತಿನ ಮದವನ್ನು ನನ್ನ ಮೇಲಿಂದ ನಿವಾಳಿಸಿ ಒಗೆಯಬೇಕು ।೩೮೧॥

ಶ್ಲೋಕಾರ್ಥ :- ಭಕ್ತನು ಭಕ್ತಿ ಪೂರ್ವಕವಾಗಿ ಸಮರ್ಪಿಸುವ ಪತ್ರ, ಪುಷ್ಪ, ಫಲ, ನೀರು ಇವುಗಳನ್ನು ಪ್ರೇಮದಿಂದ ನಾನು ಸ್ವೀಕರಿಸುತ್ತೇನೆ ।೨೬॥

ತದನಂತರ ಅತ್ಯಂತ ಪ್ರೇಮ ಉಲ್ಹಾಸದಿಂದ ನನಗೆ ಅರ್ಪಿಸುವುದಕ್ಕಾಗಿ ಯಾವುದೇ ಗಿಡದ ಯಾವುದೇ ಫಲವನ್ನು ।೩೮೨॥

ಭಕ್ತನು ನನ್ನ ಕಡೆ ತೋರಿಸುವುದೊಂದೇ ತಡ ನಾನು ಸ್ವತಃ ಎರಡೂ ಕೈಗಳನ್ನು ಮುಂದೆ ಚಾಚಿ ಸ್ವೀಕರಿಸುವೆ ಮತ್ತು ಅವುಗಳ ದೇಟು (ತುಂಬು) ಸಹ ತಗೆಯದೇ ಆದರದಿಂದ ಸೇವಿಸುವೆನು ।೩೮೩॥

ಇಲ್ಲಿ ನೋಡು, ಭಕ್ತಿಭಾವದಿಂದ ಯಾರಾದರೂ ಒಂದು ವೇಳೆ ಹೂವನ್ನು ಕೊಟ್ಟರೆ ಅದನ್ನು ವಾಸ್ತವಿಕವಾಗಿ ಮೂಸಿನೋಡಬೇಕಾಗಿತ್ತು. ಆದರೆ ಪ್ರೇಮದ ಭರದಲ್ಲಿ ಬಾಯಿಯಲ್ಲಿ ಹಾಕುವೆನು ! ।೩೮೪॥

ಅದು ಇರಲಿ, ಹೂವೇ ಏಕೆ? ಆದರೂ ಅದು ಯಾವುದೇ ಒಂದು ಎಲೆಯಾಗಿರಲಿ ಅದು ಸಹ ನನಗೆ ಪ್ರಿಯವಾಗಿದೆ. ಅದು ಯಾವುದೇ ಗಿಡದ ಒಳ್ಳೆಯದಿರಲಿ ಅಥವಾ ಒಣಗಿದ್ದು ಇರಲಿ ।೩೮೫॥

ಪರಿ ಸರ್ವಭಾವೇ ಭರಲೇ ದೇಖೇ । ಆಣಿ ಭುಕೇಲಾ ಅಮೃತೇ ತೋಖೇ । ತೈಸೇ ಪತ್ರಚಿ ಪರಿ ತೇಣೇ ಸುಖೇ । ಆರೋಗೂ ಲಾಗೇ ।೩೮೬॥ ಅಥವಾ ಐಸೇಹೀ ಏಕ ಘಡೇ । ಜೇ ಪಾಲಾಹೀ ಪರಿ ನಜೋಡೇ । ತರೀ ಉದಕಾಚೇ ತಂವ ಸಾಂಕಡೇ । ನವ್ಹೇ ಲ ಕೀ ?।೩೮೭॥ ತೇ ಭಲತೇಥ ನಿಮೋಲೇ । ನ ಜೋಡಿತಾ ಆಹೇ ಜೋಡಲೇ । ತೇಂಚಿ ಸರ್ವಸ್ವ ಕರೂನಿ ಅರ್ಪಿಲೇ । ಜೇಣೇ ಮಜ।೩೮೮॥ ತೇಣೇ ವೈಕುಂಠಾಪಾಸೋನಿ ವಿಶಾಳೇ । ಮಜಲಾಗೀ ಕೇಲೀ ರಾಉಳೇ । ಕೌಸ್ತುಭಾಹೋನಿ ನಿರ್ಮಳೇ । ಲೇಣೇ ದಿಧಲೀ ।೩೮೯॥ ದುಧಾಚೀ ಸೇಜಾರೇ । ಕ್ಷೀರಾಬ್ಧೀ ಐಸೀ ಮನೋಹರೇ । ಮಜಲಾಗಿ ಅಪಾರೇ । ಸೃಜಿಲೀ ತೇಣೇ ।೩೯೦॥ ಕರ್ಪೂರ ಚಂದನ ಅಗರು । ಐಸೇಯಾ ಸುಗಂಧಾಚಾ ಮಹಾಮೇರು । ಮಜ ಹಾತಿವಾ ಲಾವಿಲಾ ದಿನಕರು । ದೀಪಮಾಳೇ ।೩೯೧॥ ಗರುಡಾಸಾರಿಖೀ ವಾಹನೇ । ಮಜ ಸುರತರೂಂಚೀ ಉದ್ಯಾನೇ । ಕಾಮಧೇನೂಂಚೀ ಗೋಧನೇ । ಅರ್ಪಿಲೀ ತೇಣೇ ।೩೯೨॥ ಮಜ ಅಮೃತಾಹೂನಿ ಸುರಸೇ । ಬೋನೀ ವೋಗರಿಲೀ ಬಹುವಸೇ । ಐಸಾ ಭಕ್ತಾಂಚೇನಿ ಉದಕಲೇಶೇ । ಪರಿತೋಷೆ ಗಾ ।೩೯೩॥ ಹೇ ಸಾಂಗಾವೇ ಕಾಯ ಕಿರೀಟೀ । ತುವಾಂಚಿ ದೇಖಿಲೇ ಆಪುಲಿಯಾ ದಿಠೀ । ಮೀ ಸುದಾಮಯಾಚಿಯಾ ಸೋಡೀ ಗಾಂಠೀ । ಪವ್ಹಯಾ ಲಾಗೀ ।೩೯೪॥ ಪೈ ಭಕ್ತಿ ಏಕೀ ಮೀ ಜಾಣೇ । ತೇಥ ಸಾನೇ ಥೋರ ನ ಮ್ಹಣೇ । ಆಮ್ಹೀ ಭಾವಾಚೇ ಪಾಹುಣೇ । ಭಲತೇಯಾ ।೩೯೫॥ ಯೇರ ಪತ್ರ ಪುಷ್ಪ ಫಳ । ಹೇ ಭಜಾವಯಾ ಮಿಸ ಕೇವಳ । ವಾಂಚೂನಿ ಆಮುಚಾ ಲಾಗ ನಿಷ್ಕಳ । ಭಕ್ತಿತತ್ತ್ವ ।೩೯೬॥ ಮ್ಹಣೌನಿ ಅರ್ಜುನಾ ಅವಧಾರೀ । ತೂ ಬುದ್ಧೀ ಏಕೀ ಸೋಪಾರೀ ಕರೀ । ತರಿ ಸಹಜೇ ಆಪುಲಿಯಾ ಮನೋಮಂದಿರೀ । ನ ವಿಸಂಬೇ ಮಾತೇ ।೩೯೭॥

ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।<br>
ಯತ್ತಪಸ್ಯಸಿ ಕೌಂತೇಯ ತತ್ ಕುರುಷ್ವ ಮದರ್ಪಣಮ್ ।೨೭॥

ಜೇ ಜೇ ಕಾಂಹೀ ವ್ಯಾಪಾರ ಕರಿಸೀ । ಕಾ ಭೋಗ ಹನ ಭೋಗಿಸೀ । ಅಥವಾ ಯಜ್ಞೀ ಯಜಿಸೀ । ನಾನಾವಿಧೀ ।೩೯೮॥ ನಾತರೀ ಪಾತ್ರವಿಶೇಷೇ ದಾನೇ । ಕಾ ಸೇವಕಾ ದೇಸೀ ಜೀವನೇ । ತಪಾದಿ ಹನ ಸಾಧನೇ। ವ್ರತೇ ಕರಿಸೀ ।೩೯೯॥

ಆಗ ಅವರು ಭಕ್ತಿಭಾವದಿಂದ ಪರಿಪೂರ್ಣರಾಗಿದ್ದು ಕಂಡಾಕ್ಷಣವೇ ಹಸಿದವನಿಗೆ ಅಮೃತ ಸಿಕ್ಕು ತೃಪ್ತನಾದಂತೆ, ನಾನು ಅದರಂತೆ ಎಲೆಯನ್ನೇ ಆನಂದದಿಂದ ತಿನ್ನುತ್ತೇನೆ ।೩೮೬॥

ಅಥವಾ ಒಂದುವೇಳೆ ಎಲೆಯು ಎಲ್ಲಿಯೂ ಸಿಗದಿರ ಬಹುದು. ಆದರೆ ನೀರು ದೊರಕಲು ಏನೂ ತೊಂದರೆ ಬೀಳ ಲಿಕ್ಕಿಲ್ಲವಲ್ಲ ?।೩೮೭॥

ಇದು (ನೀರು) ಬೇಕಾದ ಸ್ಥಳಗಳಲ್ಲಿ ಪುಕ್ಕಟೆಯಾಗಿ ಪರಿಶ್ರಮವಿಲ್ಲದೇ ಸಿಗುವುದು. ಅದನ್ನೇ ನನಗೆ ಪರಿಪೂರ್ಣ ಭಕ್ತಿಯಿಂದ ಅರ್ಪಿಸಿದರೆ ।೩೮೮॥

ಆತನು ನನಗಾಗಿ ವೈಕುಂಠಕ್ಕಿಂತಲೂ ದೊಡ್ಡದಾದ ಮಂದಿರಗಳನ್ನು ಕಟ್ಟಿಸಿದಂತೆ, ಮತ್ತು ಕೌಸ್ತುಭ ಮಣಿಗಳಿ ಗಿಂತಲೂ ತೇಜಸ್ವಿಯಾದ ಆಭರಣಗಳನ್ನು ಕೊಟ್ಟಂತೆ ಆಗುವುದು ।೩೮೯॥

ಆತನು ಹಾಲಿನಂತೆ ಸ್ವಚ್ಛವಾಗಿರುವ ಮತ್ತು ಕ್ಷೀರಸಮುದ್ರ ದಂತೆ ಮನೋಹರವಾಗಿರುವ ಇಂತಹ ಅಗಣಿತ ಶಯನಗೃಹ ಗಳನ್ನು, ನನಗಾಗಿ ನಿರ್ಮಿಸಿದಂತೆ ಆಗುವುದು ।೩೯೦॥

ಕರ್ಪೂರ, ಚಂದನ ಮತ್ತು ಆಗರುಗಳಂತಹ ಸುಗಂಧ ದ್ರವ್ಯಗಳ ಮೇರು ಪರ್ವತವನ್ನೇ ನನಗೆ ಅರ್ಪಿಸಿದಂತಾಗುವುದು ಮತ್ತು ನನ್ನ ದೀಪ ಮಾಲೆಯ ಮೇಲೆ ಸೂರ್ಯನ ದೀವಟಿಗೆ ಯಿಂದ ಬೆಳಗಿದಂತಾಗುವುದು ।೩೯೧॥

ಆತನು ಗರುಡನಂತಹ ವಾಹನಗಳನ್ನು ಕಲ್ಪತರುಗಳ ವನವನ್ನು ಮತ್ತು ಕಾಮಧೇನುಗಳ ಹಿಂಡುಗಳನ್ನು ನನಗೆ ಅರ್ಪಿಸಿದಂತಾಗುವುದು ।೩೯೨॥

ನನಗೆ ಅಮೃತಕ್ಕಿಂತಲೂ ರುಚಿಯಾಗಿರುವ ಅನೇಕ ಪಕ್ವಾನ್ನ ಗಳನ್ನು ಬಡಿಸಿದಾಗ ಆಗುವ ಸಂತೋಷದಷ್ಟು ಆತನು ಭಕ್ತಿ ಯುಕ್ತ ಅಂತಃಕರಣದಿಂದ ಅರ್ಪಿಸಿದ ಹನಿ ನೀರಿನಿಂದ ಆಗುವುದು ।೩೯೩॥

ಹೇ ಕಿರೀಟಿಯೇ, ಹೆಚ್ಚಿಗೇನು ಹೇಳಬೇಕು? ನಾನು ಯಃಕ್ಶ್ಚಿತ್ ಅವಲಕ್ಕಿಗಾಗಿ ಸುದಾಮದೇವನ ಸೆರಗಿನ ಗಂಟು ಸ್ವತಃ ಬಿಚ್ಚಿದ್ದು ನೀನೇ ಕಣ್ಣಿನಿಂದ ನೋಡಿರುವಿ ।೩೯೪॥

ಆದ್ದರಿಂದ ನಾನು ಕೇವಲ ಭಕ್ತಿಯೊಂದನ್ನೇ ತಿಳಿಯು ತ್ತೇನೆ. ಅಲ್ಲಿ ಚಿಕ್ಕ ದೊಡ್ಡದ್ದನ್ನು ಮನದಲ್ಲಿ ತರಲಾರೆ, ಮತ್ತು ಎಲ್ಲಿಯೇ ಇರಲಿ ನನ್ನ ವಿಷಯಕ್ಕೆ ಅನನ್ಯ ಭಾವವಿದ್ದರೆ ಸಾಕು ನಾನು ಅವರ ಮನೆಯ ಆಪ್ತನಾಗುವೆನು ।೩೯೫॥

ಒಟ್ಟಿನಲ್ಲಿ ಪತ್ರ, ಪುಷ್ಪ, ಫಲ, ಇವು ನಮ್ಮ ಭಕ್ತಿ ಮಾಡಲು ಕೇವಲ ನಿಮಿತ್ತ ಮಾತ್ರ ಆಗಿರುವುವು. ನಿಜ ವಾಗಿಯೂ ನಿಷ್ಕಲಂಕ ಭಕ್ತಿಯು ನನ್ನ ಪ್ರಾಪ್ತಿಯ ಮುಖ್ಯ ಸಾಧನೆ ಇರುವುದು. ಇದರ ಹೊರತು ಎಲ್ಲವೂ ವ್ಯರ್ಥ ।೩೯೬॥

ಆದ್ದರಿಂದ ಅರ್ಜುನಾ, ಕೇಳು, ನೀನು ನಿನ್ನ ಬುದ್ಧಿ ಯನ್ನು ಸ್ವಾಧೀನ ಮಾಡಿಕೊಂಡು ಯಾವಾಗಲೂ ಮನೋ ರೂಪ ಮಂದಿರದಲ್ಲಿ ನನ್ನ ಮರುವು ಆಗಗೊಡಬೇಡ ।೩೯೭॥

ಶ್ಲೋಕಾರ್ಥ :- ಕೌಂತೇಯ! ನಿನ್ನ ಕೆಲಸಗಳನ್ನು, ನೀನು ತಿನ್ನುವುದನ್ನು, ನಿನ್ನ ಜಪತಪವನ್ನು, ನಿನ್ನ ದಾನ ಧರ್ಮ ಈ ಸಮಸ್ತಗಳನ್ನು ಸಮರ್ಪಣ ಭಾವದಿಂದ ನನಗೆ ಸಮರ್ಪಿಸು ।೨೭॥

ಇದಕ್ಕಾಗಿ, ನೀನು ಯಾವುದೇ ವ್ಯಾಪಾರ ಮಾಡಿದರೆ, ಅಥವಾ ಯಾವುದೇ ವಸ್ತುವಿನ ಉಪಭೋಗ ಮಾಡಿದರೆ ಇಲ್ಲವೇ ಅನೇಕ ಪ್ರಕಾರದ ಯಜ್ಞಗಳಿಂದ ನನ್ನ ಯಜನ ಮಾಡಿದರೆ ।೩೯೮॥

ಅಥವಾ ಸತ್ಪಾತ್ರಗಳಲ್ಲಿ ಯಾವುದೇ ದಾನಮಾಡಿದರೆ, ಇಲ್ಲವೇ ಸೇವಕರಿಗೆ ಯಾವುದೇ ವೇತನ ಕೊಟ್ಟರೆ ತಪಾದಿ ಸರ್ವ ಸಾಧನೆಗಳನ್ನು ಮತ್ತು ವ್ರತಗಳನ್ನು ಮಾಡಿದರೆ ।೩೯೯॥

ತೇ ಕ್ರಿಯಾಜಾತ ಆಘವೇ । ಜೇ ಜೈಸೇ ನಿಪಜೇಲ ಸ್ವಭಾವೇ । ತೇ ಭಾವನಾ ಕರೋನಿ ಕರಾವೇ । ಮಾಝಿಯಾ ಮೋಹರಾ ।೪೦೦॥ ಪರಿ ಸರ್ವಥಾ ಆಪುಲೇ ಜೀವೀ । ಕೇಲಿಯಾಚೀ ಸೇ ಕಾಹೀಂಚಿ ನುರವೀ। ಐಸೀ ಧುವೋನಿ ಕರ್ಮೇ ದ್ಯಾವೀ । ಮಾಝಿಯಾ ಹಾತೀ ।೪೦೧॥

ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ।
ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ।೨೮॥

ಮಗ ಅಗ್ನಿಕುಂಡೀ ಬೀಜೇ ಘಾತಲೀ । ತಿಯೇ ಅಂಕುರದಶೇ ಜೇವೀ ಮುಕಲೀ । ತೇವೀ ನ ಫಳತೀಚಿ ಮಜ ಅರ್ಪಿಲೀ । ಶುಭಾಶುಭೇ ।೪೦೨॥ ಅಗಾ ಕರ್ಮೇ ಜೈ ಉರಾವೇ । ತೈ ತಿಹೀ ಸುಖದುಃಖೀ ಫಳಾವೇ । ಆಣಿ ತಯಾತೇ ಭೋಗಾವಯಾ ಯಾವೇ । ದೇಹಾ ಏಕಾ ।೪೦೩॥ ತೇ ಉಗಾಣಿಲೇ ಮಜಕರ್ಮ । ತೇವ್ಹಾಂಚಿ ಪುಸೀಲೇ ಮರಣ ಜನ್ಮ । ಜನ್ಮಾಸವೇ ಶ್ರಮ । ವರಚಿಲಹೀ ಗೇಲೇ ।೪೦೪॥ ಮ್ಹಣೌನಿ ಅರ್ಜುನಾ ಯಾಪರೀ । ಪಾಹೇಚಾ ವೇಳು ನವ್ಹೇಲ ಭಾರೀ । ಹೇ ಸಂನ್ಯಾಸಯುಕ್ತಿ ಸೋಪಾರೀ । ದಿಧಲೀ ತುಜ ।೪೦೫॥ ಯಾ ದೇಹಾಚಿಯಾ ಬಾಂದೋಡೀ ನ ಪಡಿಜೇ । ಸುಖದುಃಖಾಚಿಯಾ ಸಾಗರೀ ನ ಬುಡಿಜೇ। ಸುಖೇ ಸುಖರೂಪಾ ಘಡಿಜೇ । ಮಾಝಿಯಾಚಿ ಆಂಗಾ ।೪೦೬॥

ಸಮೋಽಹಂ ಸರ್ವಭೂತೇಷು ನ ಮೇ ದ್ವೇಷೋಽಸ್ತಿ ನ ಪ್ರಿಯಃ।
ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್ ।೨೯॥

ತೋ ಮೀ ಪುಸಸೀ ಕೈಸಾ । ತರಿ ಜೋ ಸರ್ವಭೂತೀ ಸದಾ ಸರಿಸಾ । ಜೇಥ ಆಪಪರು ಐಸಾ । ಭಾಗು ನಾಹೀ ।೪೦೭॥ ಜೇ ಐಸಿಯಾ ಮಾತೇ ಜಾಣೋನಿ । ಅಹಂಕಾರಾಚಾ ಕುರುಠಾ ಮೋಡೋನಿ । ಜೇ ಜೀವೇ ಕರ್ಮೇ ಕರೂನಿ । ಮಾತೇ ಭಜಲೇ ।೪೦೮॥ ತೇ ವರ್ತತ ದಿಸತೀ ದೇಹೀ । ಪರಿ ತೇ ದೇಹೀ ನಾ ಮಾಝ್ಯಾ ಠಾಯೀ । ಆಣಿ ಮೀ ತಯಾಂಚ್ಯಾ ಹೃದಯೀ । ಸಮಗ್ರ ಅಸೇ ।೪೦೯॥ ಸವಿಸ್ತರ ವಟತ್ವ ಜೈಸೇ । ಬೀಜ ಕಣಿಕೇಮಾಜೀ ಅಸೇ । ಆಣಿ ಬೀಜಕಣು ವಸೇ । ವಟೀ ಜೇವಿ ।೪೧೦॥ ತೇವಿ ಆಮ್ಹಾ ತಯಾ ಪರಸ್ಪರೇ । ಬಾಹೇರ ನಾಮಾಚೇಂಚಿ ಅಂತರೇ । ವಾಂಚೂನಿ ಆಂತುವಟ ವಸ್ತು ವಿಚಾರೇ । ಮೀ ತೇಚಿ ತೇ ।೪೧೧॥ ಆತಾ ಜಾಯಾಂಚೇ ಜೈಸೇ ಲೇಣೇ । ಆಂಗಾವರಿ ಆಹಾಚವಾಣೇ । ತೈಸೇ ದೇಹಧರಣೇ । ಉದಾಸ ತಯಾಂಚೇ ।೪೧೨॥

ಈ ನಿನ್ನ ಕೈಯಿಂದ ಸಹಜವಾಗಿ ನಡೆಯುವ ಎಲ್ಲ ಕರ್ಮಗಳನ್ನು ನೀನು ನನ್ನ ಉದ್ದೇಶದಿಂದ ಭಕ್ತಿ ಪೂರ್ವಕವಾಗಿ ಮಾಡು ॥೪೦೦॥

ಆದರೆ ಅವುಗಳನ್ನು ಮಾಡಿದ ಬಗ್ಗೆ ನಿನ್ನ ಮನದಲ್ಲಿ ನೆನಪು ಸಹ ಇರಕೂಡದು. ಇಷ್ಟೊಂದು ನಿರಹಂಕಾರದಿಂದ ಮತ್ತು ನಿಷ್ಕಾಮ ಬುದ್ಧಿಯಿಂದ ಮಾಡಿದ ಸ್ವಚ್ಛವಾದ ಕರ್ಮಗಳನ್ನು ನನಗೆ ಅರ್ಪಿಸು ॥೪೦೧॥

ಶ್ಲೋಕಾರ್ಥ :- ಈ ವಿಧವಾಗಿ ಸಮರ್ಪಣ ಭಾವವನ್ನು ಆಶ್ರಯಿಸಿ ನೀನು ಪುಣ್ಯ ಪಾಪ ರೂಪವಾದ ಕರ್ಮಬಂಧಗಳಿಂದ ಮುಕ್ತನಾಗುವೆ ಸಂನ್ಯಾಸಯೋಗ ಯುಕ್ತನಾಗಿ ನನ್ನನ್ನು ಸೇರುವೆ ॥೨೮॥

ಆಗ, ಯಾವ ಪ್ರಕಾರವಾಗಿ ಅಗ್ನಿಯಲ್ಲಿ ಸುಟ್ಟ ಬೀಜಗಳಿಗೆ ಅಂಕುರವು ಹುಟ್ಟುವುದಿಲ್ಲವೋ, ಅದರಂತೆ ನನಗೆ ಅರ್ಪಿಸಿದ ಶುಭಾಶುಭ ಕರ್ಮಗಳ ಫಲ ಪ್ರಾಪ್ತಿಯು ನಿನಗಾಗದು ॥೪೦೨॥

ಅರೇ, ಮೊದಲು ಕರ್ಮಗಳು ಉಳಿದಿದ್ದರೆ, ಆಗ ಕರ್ಮಗಳಿಂದ ಸುಖದುಃಖ ರೂಪಗಳಿಂದ ಫಲದ್ರೂಪವಾಗಬೇಕು ಮತ್ತು ಆ ಸುಖದುಃಖಗಳನ್ನು ಭೋಗಿಸುವುದಕ್ಕಾಗಿ ಜನ್ಮವೆತ್ತಬೇಕು ॥೪೦೩॥

ಆದರೆ, ಅದೇ ಕರ್ಮಗಳನ್ನು ನನಗೆ ಅರ್ಪಿಸಿದರೆ ಅದೇ ಕ್ಷಣಕ್ಕೆ ಮರಣಜನ್ಮಗಳು ತಪ್ಪುವುವು ಮತ್ತು ಜನ್ಮಾಂತರದಿಂದ ಒದಗುವ ದುಃಖಗಳು ಸಹಜವಾಗಿ ಹೋಗುವುವು ॥೪೦೪॥

ಆದ್ದರಿಂದ ಅರ್ಜುನಾ, ಹೀಗೆ ಹೇಳಿದ ಸರಳ ಸಂನ್ಯಾಸದ ಯುಕ್ತಿಯನ್ನು ''ನೋಡೋಣ'' ''ಮಾಡೋಣ'' ಎಂದು ಹೇಳುತ್ತ ವೇಳೆ ಕಳೆಯುವಂತಿಲ್ಲ ॥೪೦೫॥

ಈ ಯುಕ್ತಿಯಿಂದ ದೇಹದ ಬಂಧನದಲ್ಲಿ ಬೀಳದೇ ಮತ್ತು ಸುಖದುಃಖಗಳ ಸಾಗರದಲ್ಲಿ ಮುಳುಗದೇ ಅನಾಯಾಸವಾಗಿ ಸುಖರೂಪವಾದ ಯಾವ ನನ್ನ ಸ್ವರೂಪದಲ್ಲಿ ನಿಮಗ್ನನಾಗು ॥೪೦೬॥

ಶ್ಲೋಕಾರ್ಥ :- ಸಮಸ್ತ ಜೀವರಾಶಿಗಳಲ್ಲಿ ನಾನು ಸಮಾನನಾಗಿದ್ದೇನೆ. ನನಗೆ ದ್ವೇಷಿಗಳೂ ಇಲ್ಲ. ಪ್ರಿಯರೂ ಇಲ್ಲ. ಆದರೂ ಭಕ್ತಿ ಪೂರ್ವಕವಾಗಿ ನನ್ನನ್ನು ಭಜಿಸುವರಲ್ಲಿ ನಾನು, ನನ್ನಲ್ಲಿ ಅವರು ಇರುತ್ತಾರೆ ॥೨೯॥

ನಾನು ಹೇಗೆ ಇರುವೆನೆಂದು ಕೇಳಬಹುದು, ಹಾಗಾದರೆ ನಾನು ಸರ್ವಭೂತಗಳಲ್ಲಿ ಯಾವಾಗಲೂ ಸಮವಾಗಿ ಇದ್ದು ನನ್ನಲ್ಲಿ ನನ್ನದು ನಿನ್ನದು ಎಂಬ ಭೇದವಿರುವುದಿಲ್ಲ ॥೪೦೭॥

ಹೀಗೆ ನನ್ನ ಸ್ವರೂಪವನ್ನು ತಿಳಿದು ಮತ್ತು ಅಹಂಕಾರದ ಅಂಕುರವನ್ನು ಮುರಿದು ಕಾಯಾ, ವಾಚಾ ಮನದಿಂದ ನನ್ನನ್ನು ಭಜಿಸುವರು ॥೪೦೮॥

ಅವರು ಜಗತ್ತಿನಲ್ಲಿ ದೇಹದಿಂದ ವ್ಯವಹಾರ ಮಾಡುವುದು ನಿಜ. ಆದಾಗ್ಯೂ, ಅವರು ದೇಹದಲ್ಲಿ ರದೇ ಅವರ ಚಿತ್ತವು ನನ್ನಲ್ಲಿರುವುದು. ನಾನೂ ಸಹ ಸಂಪೂರ್ಣವಾಗಿ ಅವರ ಹೃದಯದಲ್ಲಿರುವೆನು ॥೪೦೯॥

ಯಾವ ಪ್ರಕಾರವಾಗಿ ಬಹು ವಿಸ್ತಾರವಾಗಿರುವ ಆಲದ ಗಿಡವು ಸಣ್ಣ ಬೀಜದಲ್ಲಿರುವುದು ಮತ್ತು ಬೀಜವು ಆ ಗಿಡದಲ್ಲಿಯೇ ಇರುವುದು ॥೪೧೦॥

ಅದರಂತೆ ನನ್ನಲ್ಲಿ ಮತ್ತು ಅವರಲ್ಲಿ ಕೇವಲ ಹೆಸರಿನಿಂದ ಮಾತ್ರ ಭಿನ್ನವಾಗಿರುತ್ತದೆ. ಆದರೆ ಒಳಗಿನಿಂದ ವಿಚಾರ ಮಾಡಿ ನೋಡಿದರೆ, ಆತನೇ ನಾನು. ನಾನೇ ಆತನು ॥೪೧೧॥

ಈಗ ಬೇರೆ ಜನರಿಂದ ಬೇಡಿ ತಂದ ಆಭರಣಗಳನ್ನು ಮೈಮೇಲೆ ಧರಿಸಿದಂತೆ ಅವರ ದೇಹಧಾರಣೆಯು ಉದಾಸತನದಿಂದ ಕೂಡಿರುತ್ತದೆ ॥೪೧೨॥

ಪರಿಮಳು ನಿಘಾಲಿಯಾ ಪವನಾಪಾಠೀ । ಮಾಗೇ ವೋಸ ಫೂಲ ರಾಹೇ ದೇಠೀ । ತೈಸೇ ಆಯುಷ್ಯಾಚಿಯೇ ಮುಠೀ । ಕೇವಳ ದೇಹ॥೪೧೩॥ ಯೇರ ಅವಷ್ಟಂಭು ಜೋ ಆಘವಾ ।ತೋ ಆರೂಢೋನಿ ಮದ್ಭಾವಾ । ಮಜಚಿ ಆಂತು ಪಾಂಡವಾ । ಪೈಠಾ ಜಾಹಲಾ ॥೪೧೪॥

ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।
ಸಾಧುರೇವ ಸ ಮಂತವ್ಯಃ ಸಮ್ಯಕ್ವ್ಯವಸಿತೋ ಹಿ ಸಃ ॥೩೦॥

ಐಸೇ ಭಜತೇನಿ ಪ್ರೇಮಭಾವೇ । ಜಯಾ ಶರೀರಹೀ ಪಾಠೀ ನ ಪವೇ । ತೇಣೇ ಭಲತಯಾ ವ್ಹಾವೇ । ಜಾತೀಚಿಯಾ ॥೪೧೫॥ ಆಣಿ ಆಚರಣ ಪಾಹಾತಾ ಸುಭಟಾ । ತೋ ದುಷ್ಕೃತಾಚಾ ಕೀರ ಸೇಲ ವಾಂಟಾ । ಪರಿ ಜೀವಿತ ವೇಂಚಿಲೇ ಚೋಹಟಾ । ಭಕ್ತೀಚಿಯಾ ಕೀ ॥೪೧೬॥ ಅಗಾ ಅಂತೀಚಿಯಾ ಮತೀ । ಸಾಚಪಣ ಪುಢಿಲೇ ಗತೀ । ಮ್ಹಣೌನಿ ಜೀವಿತ ಜೇಣೇ ಭಕ್ತೀ । ದಿಧಲೇ ಶೇಖೀ ॥೪೧೭॥ ತೋ ಆಧೀ ಜರೀ ದುರಾಚಾರೀ ।ತರೀ ಸರ್ವೋತ್ತಮುಚಿ ಅವಧಾರೀ । ಜೈಸಾ ಬುಡಾಲಾ ಮಹಾಪುರೀ । ನ ಮರತು ನಿಘಾಲಾ ॥೪೧೮॥ ತಯಾಚೇ ಜೀವಿತ ಐಲಥಡಿಯೇ ಆಲೇ । ಮ್ಹಣೌನಿ ಬುಡಾಲೇಪಣ ಜೇವೀ ವಾಯಾ ಗೇಲೇ । ತೇವೀ ನುರೇಚಿ ಪಾಪ ಕೇಲೇ । ಶೇವಟಿಲಿಯೇ ಭಕ್ತೀ ॥೪೧೯॥ ಯಾಲಾಗೀ ದುಷ್ಕೃತೀ ಜರ್ಹೀ ಜಾಹಾಲಾ । ತರೀ ಅನುತಾಪತೀರ್ಥೀ ನ್ಹಾಲಾ । ನ್ಹಾಊನಿ ಮಜಆಂತು ಆಲಾ । ಸರ್ವಭಾವೇ ॥೪೨೦॥ ತರೀ ಆತಾ ಪವಿತ್ರ, ತಯಾಚೇಂಚಿ ಕುಳ । ಆಭಿಜಾತ್ಯತೇಂಚಿ ನಿರ್ಮಳ । ಜನ್ಮಲೇಯಾಚೇ ಫಳ ।ತಯಾಸೀಚ ಜೋಡಲೇ ॥೪೨೧॥ ತೋ ಸಕಳಹೀ ಪಢಿನ್ನಲಾ । ತಪೇ ತೋಚಿ ತಪಿನ್ನಲಾ । ಅಷ್ಟಾಂಗ ಅಭ್ಯಾಸಿಲಾ । ಯೋಗು ತೇಣೇ ॥೪೨೨॥ ಹೇ ಅಸೋ ಬಹುತ ಪಾರ್ಥಾ । ತೋ ಉತರಲಾ ಕರ್ಮೇ ಸರ್ವಥಾ । ಜಯಾಚೀ ಅಖಂಡ ಗಾ ಆಸ್ಥಾ । ಮಜಚಿಲಾಗೀ ॥೪೨೩॥ ಅವಘಿಯಾ ಮನೋಬುದ್ಧೀಚಿಯಾ ರಾಹಟೀ । ಭರೋನಿ ಏಕನಿಷ್ಠೇಚೀ ಪೇಟೀ । ಮಜಮಾಜೀ ಕಿರೀಟೀ । ನಿಕ್ಷೇಪಿಲೀ ಜೇಣೇ ॥೪೨೪॥

ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ।
ಕೌಂತೇಯ ಪ್ರತಿ ಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥೩೧॥

ಗಾಳಿಯ ಸಂಗಡ ಯಾವ ಪ್ರಕಾರವಾಗಿ ಹೂವಿನ ವಾಸನೆಯು ಅದರ ಹಿಂದೆಯೇ ಹೋಗಿ ತುಂಬಿನಲ್ಲಿ ಆ ಹೂವು ವಾಸನೆ ರಹಿತವಾಗಿ ಉಳಿಯುವುದೋ, ಅದರಂತೆ ಆಯುಷ್ಯವು ಮುಗಿಯುವ ತನಕ ಮಾತ್ರ ಅವರ ದೇಹವಿರುವುದು ।೪೧೩॥

ಹೇ ಪಾಂಡವನೇ, ಇರುವ ಅಹಂಕಾರವು ನನ್ನ ಭಕ್ತಿ ಸಂಪೂರ್ಣವಾಗಿ ಕಂಡು ನನ್ನಸ್ವರೂಪದಲ್ಲಿಯೇ ಲೀನವಾಯಿತು ।೪೧೪॥

ಶ್ಲೋಕಾರ್ಥ :- ಮಿತಿಮೀರಿನ ದುರಾಚಾರಿಯಾದರೂ ಸಹ ವಿಧವಿಧ ವಿಕಲ್ಪಗಳನ್ನು ತ್ಯಜಿಸಿ ನನ್ನನ್ನೇ ಭಜಿಸಿದರೆ ಅವನು ಧನ್ಯನೇ ಎಂದು ತಿಳಿ. ಏಕೆಂದರೆ ಅವನ ನಿಶ್ಚಯವು ಉತ್ತಮವಾದದ್ದು ।೩೦॥

ಇಂತಹ ಪ್ರೇಮಭಾವದಿಂದ ನನ್ನನ್ನು ಭಜಿಸುವವರಿಗೆ ಪುನಃ ಶರೀರವು ಪ್ರಾಪ್ತವಾಗುವುದಿಲ್ಲ. ಇವರು ಯಾವುದೇ ಜಾತಿಯವರಾಗಿರಬಹುದು ।೪೧೫॥

ಮತ್ತು ಹೇ ಮಹಾವೀರನೇ, ಅವರ ಆಚರಣೆಯನ್ನು ನೋಡಿದರೆ, ನಿಜವಾಗಿಯೂ ಪಾಪಗಳಿಂದ ಆರಿಸಿ ತೆಗೆದಂತೆ ಇರುವುದು. ಆದರೆ ಅವರು ಉಳಿದ ಎಲ್ಲ ಆಯುಷ್ಯವನ್ನು ಭಕ್ತಿಯ ಮಾರ್ಗದಲ್ಲಿ ಮುಗಿಸುವರು ।೪೧೬॥

ಅರೇ, ಅಂತ್ಯಕಾಲದಲ್ಲಿ ಯಾವ ರೀತಿ ವಾಸನೆ ಇರುವುದೋ, ಅದರಂತೆ ಮುಂದಿನ ಗತಿ ಮುಂದಿನ ಜನ್ಮವು ಪ್ರಾಪ್ತವಾಗುವುದು. ಆದ್ದರಿಂದ ಆಯುಷ್ಯದ ಕೊನೆಯ ಭಾಗವನ್ನು ಇವರು ಭಕ್ತಿಗೆ ಕೊಟ್ಟರು ।೪೧೭॥

ಆತನು ಆರಂಭದಲ್ಲಿ ದುರಾಚಾರಿಯಾಗಿದ್ದರೂ ನಂತರದ ಭಕ್ತಿಯ ಕಾಲದಲ್ಲಿ ಸರ್ವೋತ್ತಮನಾಗುವನು ಎಂದು ತಿಳಿಯಬೇಕು. ಮಹಾಪೂರದಲ್ಲಿ ಮುಳುಗಿದ ಮನುಷ್ಯನು ಸಾಯದೇ ಪಾರಾಗಿ ಬಂದಂತೆ ।೪೧೮॥

ಹಾಗಾದರೆ, ಆತನ ಜೀವಿತವು ಆಚೆಯ ದಂಡೆಗೆ ಸುಖವಾಗಿ ತಲುಪಿದ್ದಕ್ಕೆ ಆತನು ಮುಳುಗಿದೆನ್ನುವುದು ವ್ಯರ್ಥವಾದಂತೆ. ಆಯುಷ್ಯದ ಕೊನೆಯ ಅವಸ್ಥೆಯಲ್ಲಿ ಮಾಡಿದ ಭಕ್ತಿಯಿಂದ ಮೊದಲು ಮಾಡಿದ ಪಾಪವು ಉಳಿಯುವುದೇ ಇಲ್ಲ ।೪೧೯॥

ಆದ್ದರಿಂದ ಪಾಪಾಚರಣೆಯನ್ನು ಮಾಡಿದವರಾಗಿದ್ದರೂ ಅವರು ಪಶ್ಚಾತ್ತಾಪರೂಪ ತೀರ್ಥದಲ್ಲಿ ಸ್ನಾನ ಮಾಡಿ ಸರ್ವಬಾವದಿಂದ ಶರಣು ಬಂದರೆ ।೪೨೦॥

ಆಗ ಆತನ ಕುಲವು ಈಗ ಪವಿತ್ರವಾಯಿತು. ಆತನಿಗೆ ನಿರ್ಮಲವಾದ ಕುಲೀನತೆಯು ಪ್ರಾಪ್ತವಾಯಿತು ಮತ್ತು ಆತನ ಜನ್ಮವು ಸಾರ್ಥಕವಾಯಿತು ।೪೨೧॥

ಆತನೇ ಎಲ್ಲ ಶಾಸ್ತ್ರಗಳ ಅಧ್ಯಯನ ಮಾಡಿದವನು, ಎಲ್ಲ ತಪಗಳ ಆಚರಣೆ ಮಾಡಿದ ಶ್ರೇಯಸ್ಸನ್ನು ಹೊಂದಿದವನು, ಮತ್ತು ಆತನೇ ಅಷ್ಟಾಂಗಾದಿ ಯೋಗಭ್ಯಾಸ ಮಾಡಿದವನೆಂದೆನಿಸುವನು ।೪೨೨॥

ಪಾರ್ಥಾ, ಹೆಚ್ಚಿಗೇನು ಹೇಳಬೇಕು? ಇವರಲ್ಲಿ ನನ್ನ ವಿಷಯದಲ್ಲಿಯೇ ಎಲ್ಲ ರೀತಿಯಿಂದ ಅಖಂಡವಾಗಿ ಪ್ರೀತಿ ಇರುವುದು. ಇವರು ಕೇವಲ ಪ್ರಾರಬ್ಧ ಕರ್ಮದಿಂದ ಮಾತ್ರ ಉಳಿದಿರುವರು. ಇವರ ಪೂರ್ವಸಂಚಿತ ಪಾಪವು ನಷ್ಟವಾಗಿರುವುದು ।೪೨೩॥

ಏಕನಿಷ್ಠ ರೂಪ ಪೆಟ್ಟಿಗೆಯಲ್ಲಿ ಮನುಬುದ್ಧಿಯ ಸರ್ವ ವ್ಯಾಪಾರವನ್ನು ತುಂಬಿ ಅದನ್ನು ನನ್ನಲ್ಲಿಯೇ ಇಡುವರು ।೪೨೪॥

ಶ್ಲೋಕಾರ್ಥ :- ಅವನು ತ್ವರೆಯಾಗಿ ಧರ್ಮಾತ್ಮನಾಗಿ ಶಾಂತಿಯನ್ನು ಹೊಂದಬಲ್ಲನು. ಅರ್ಜುನಾ! ನನ್ನ ಭಕ್ತನು ಕೆಟ್ಟು ಹೋಗುವುದಿಲ್ಲವೆಂದು ದೃಢವಾಗಿ ತಿಳಿ ।೩೧॥

ತೋ ಆತಾ ಅವಸರೇ ಮಜಸಾರಿಖಾ ಹೋಈಲ । ಐಸಾ ಹನ ಭಾವ ತುಜ ಜಾಈಲ । ಹಾ ಗಾ ಅಮೃತಾಆಂತ ರಾಹೀಲ । ತಯಾ ಮರಣ ಕೈಚೇ? ।೪೨೫॥ ಪೈ ಸೂರ್ಯು ಜೋ ವೇಳು ನುದ್ಯೆಜೇ । ತಯಾ ವೇಳಾ ಕೀ ರಾತ್ರಿ ಮ್ಹಣಿಜೇ । ತೇವೀ ಮಾಝಿಯೇ ಭಕ್ತೀವಿಣ ಜೇ ಕೀಜೇ । ತೇ ಮಹಾಪಾಪ ನೋಹೇ? ।೪೨೬॥ ಮ್ಹಣೌನಿ ತಯಾಚಿಯಾ ಚಿತ್ತಾ । ಮಾಝೀ ಜವಳಿಕ ಪಂಡುಸುತಾ । ತೆವ್ಹಾಂಚಿ ತೋ ತತ್ತ್ವತಾ । ಸ್ವರೂಪ ಮಾಝೇ ।೪೨೭॥ ಜೈಸಾ ದೀಪೇ ದೀಪು ಲಾವಿಜೇ । ತೇಥ ಆದೀಲ ಕೋಣ ಹೇ ನೋಳಖಿಜೇ । ತೈಸಾ ಸರ್ವಸ್ವೇ ಜೋ ಮಜ ಭಜೇ । ತೋ ಮೀಚಿ ಹೋಊನಿ ಠಾಕೇ ।೪೨೮॥ ಮಗ ಮಾಝೀ ನಿತ್ಯಶಾಂತೀ । ತಯಾ ದಶಾ ತೇಚಿ ಕಾಂತೀ । ಕಿಂಬಹುನಾ ಜಿತೀ । ಮಾಝೇನಿ ಜೀವೇ ।೪೨೯॥ ಏಥ ಪಾರ್ಥಾ ಪುಢತಪುಢತೀ । ತೇಂಚಿ ತೇ ಸಾಂಗೋ ಕಿತೀ । ಜರೀ ಮಿಯಾ ಚಾಡ ತರೀ ಭಕ್ತೀ । ನ ವಿಸಂಬಿಜೇ ಗಾ ।೪೩೦॥ ಅಗಾ ಕುಳಾಚಿಯಾ ಚೋಖಟಪಣಾ ನಲಗಾ । ಆಭಿಜಾತ್ಯ ಝಣೀ ಶ್ಲಾಘಾ । ವ್ಯುತ್ಪತ್ತೀಚಾ ವಾಉಗಾ । ಸೋಸು ಕಾ ವಾಹವಾ? ।೪೩೧॥ ಕಾ ರೂಪವಯಸಾ ಮಾಜಾ । ಆಥಿಲೇಪಣೇ ಕಾ ಗಾಜಾ? । ಏಕ ಭಾವ ನಾಹೀ ಮಾಝಾ । ತರೀ ಪಾಲ್ಹಾಳ ತೇ ।೪೩೨॥ ಕಣೇವಿಣ ಸೋಪಟೇ । ಕಣಸೇ ಲಾಗಲೀ ಘನದಾಟೇ । ಕಾಯ ಕರಾವೇ ಗೋಮಟೇ । ವೋಸ ನಗರ? ।೪೩೩॥ ನಾತರೀ ಸರೋವರ ಆಟಲೇ । ರಾನೀ ದುಃಖಿಯಾ ದುಃಖೀ ಭೇಟಲೇ । ಕಾ ವಾಂಝು ಫುಲೀ ಫುಲಲೇ । ಝಾಡ ಜೈಸೇ ।೪೩೪॥ ತೈಸೇ ಸಕಳ ತೇ ವೈಭವ । ಅಥವಾ ಕುಳ ಜಾತಿ ಗೌರವ । ಜೈಸೇ ಶರೀರ ಆಹೇ ಸಾವೇವ । ಪರಿ ಜೀವಚಿ ನಾಹೀ ।೪೩೫॥ ತೈಸೇ ಮಾಝಿಯೇ ಭಕ್ತೀವಿಣ । ಜಳೋ ತೇ ಜಿಯಾಲೇಪಣ । ಅಗಾ ಪೃಥ್ವೀವರೀ ಪಾಷಾಣ । ನಸತೀ ಕಾಈ? ।೪೩೬॥ ಪೈ ಹಿವರಾಚೀ ದಾಟ ಸಾಉಲೀ । ಸಜ್ಜನೀ ಜೈಸೀ ವಾಳಿಲೀ । ತೈಸೀ ಪುಣ್ಯೇ ಡಾವಲೂನಿ ಗೇಲೀ । ಅಭಕ್ತಾಂತೇ ।೪೩೭॥ ನಿಂಬ ನಿಂಬೋಳಿಯಾ ಮೋಡೋನಿ ಆಲಾ । ತರಿ ತೋ ಕಾಉಳಿಯಾಂಸೀಚಿ ಸುಖಾಳು ಜಾಹಲಾ । ತೈಸಾ ಭಕ್ತಿಹೀನು ವಾಢಿನ್ನಲಾ । ದೋಷಾಂಚಿಲಾಗೀ ।೪೩೮॥ ಕಾ ಷಡ್ರಸ ಖಾಪರಿ ವಾಢಿಲೇ । ವಾಢೂನಿ ಚೋಹಟಾ ಠೇವಿಲೇ । ತೇ ಸುಣೆಯಾಂಚೇಚಿ ಐಸೇ ಝಾಲೇ । ಜಿಯಾಪರೀ ।೪೩೯॥

ಆತನು ಅವಕಾಶದೊಂದಿಗೆ (ಮರಣೋತ್ತರದಲ್ಲಿ) ನನ್ನ ಹಾಗೆ ಆಗಬಹುದೆಂದು ಕದಾಚಿತ್ ನಿನ್ನ ಅನಿಸಿಕೆ ಆಗಬಹುದು. ಆದರೆ, ಯಾರು ಅಮೃತದಲ್ಲಿಯೇ ವಾಸಮಾಡುವರೋ ಅವರಿಗೆ ಮರಣ ಎಲ್ಲಿಂದ ಬರಬೇಕು? ।೯೨೫॥

ಇಲ್ಲಿ ನೋಡು, ಸೂರ್ಯನು ಉದಯವಾಗದೇ ಇದ್ದಾಗ ಆ ವೇಳೆಗೆ ರಾತ್ರಿ ಎನ್ನುವರು. ಅದರಂತೆ ನನ್ನ ಭಕ್ತಿ ಹೊರತಾದ ಕಾರ್ಯಗಳು ಮಹಾಪಾಪ ಅಲ್ಲವೇ ? ।೯೨೬॥

ಹೇ ಪಂಡುಸುತನೇ, ಆತನ ಚಿತ್ತಕ್ಕೆ ನನ್ನ ಯೋಗ ಬಂದಾಗ ಆತನು ಮದ್ರೂಪನಾಗುವನು. ನಿಜವಾಗಿಯೂ ಆಗಲೇ ಆತನು ನನ್ನ ಸ್ವರೂಪವನ್ನು ಹೊಂದುವನು ।೯೨೭॥

ಒಂದು ದೀಪದಿಂದ ಇನ್ನೊಂದು ದೀಪವನ್ನು ಹಚ್ಚಿದಾಗ ಅದರಲ್ಲಿ ಮೊದಲಿನದು ಯಾವುದೆಂಬುದು ತಿಳಿಯುವುದಿಲ್ಲ. ಅದರಂತೆ ಯಾರು ಸರ್ವಭಾವದಿಂದ ನನ್ನನ್ನು ಭಜಿಸುವರೋ, ಅವರು ಮದ್ರೂಪರಾಗುವರು ।೯೨೮॥

ಆಗ ಆತನಿಗೆ ನನ್ನ ಸ್ಥಿತಿ, ನನ್ನ ಕಾಂತಿ ಮತ್ತು ನನ್ನ ನಿತ್ಯ ಶಾಂತಿ ಪ್ರಾಪ್ತವಾಗುವುದು. ಬಹಳ ಮಾಡಿ ಆತನು ನನ್ನ ಜೀವನದಿಂದಲೇ ಜೀವಂತನಾಗಿರುವನು ।೯೨೯॥

ಪಾರ್ಥಾ, ಇಲ್ಲಿ ಮೇಲಿಂದ ಮೇಲೆ ಅದನ್ನೇ ಎಷ್ಟೆಂದು ಹೇಳಲಿ? ಆದರೆ ಯಾರಿಗಾದರೂ ನನ್ನ ಪ್ರಾಪ್ತಿಯ ಇಚ್ಛೆ ಯಾದರೆ ಅವರು ನನ್ನ ಭಕ್ತಿಯನ್ನು ಮರೆತರೆ ಉಪಯೋಗ ವಾಗಲಾರದು ।೯೩೦॥

ಅರೇ, ಕುಲದ ಉತ್ತಮತ್ವದ ಅವಶ್ಯಕತೆ ಇಲ್ಲ. ಉತ್ತಮ ಜಾತಿಯೂ ಅಡಚಣೆ ತರುವುದಿಲ್ಲ ಮತ್ತು ವಿದ್ವತ್ತೆಯ ಬೇಡಿಕೆಯಾದರೂ ಸುಮ್ಮನೇ ಏಕೆ ಮಾಡಬೇಕು? ।೯೩೧॥

ಅಥವಾ ರೂಪದ ಮತ್ತು ವಯಸ್ಸಿನ ಪ್ರತಿಷ್ಠೆ ಹಾಗೂ ಸಂಪತ್ತಿನ ಡೌಲು ಇವು ನನ್ನಲ್ಲಿ ಭಕ್ತಿ ಒಂದೇ ಇರದಿದ್ದರೆ ಎಲ್ಲವೂ ವ್ಯರ್ಥ ।೯೩೨॥

ಕಾಳುಗಳಿಲ್ಲದ ತೆನೆಗಳು ಕೆಲಸಕ್ಕೆ ಬಾರದೇ ಬೇಕಾದಷ್ಟು ಬೆಳೆದರೂ ಅಥವಾ ಸುಂದರವಾದ ಪಟ್ಟಣವಿದ್ದು ಅಲ್ಲಿ ಯಾರು ವಾಸಿಸದೇ ಬರಿದಾಗಿದ್ದರೆ ಅದರಿಂದ ಉಪಯೋಗವೇನು ? ।೯೩೩॥

ಅಥವಾ ಸರೋವರವು ಒಣಗಿದರೆ, ಹಾಗೆಯೇ ಅರಣ್ಯದಲ್ಲಿ ಒಬ್ಬ ದುಃಖಪೀಡಿತನಿಗೆ ಇನ್ನೊಬ್ಬನು ಅಂಥವನೇ ಭೇಟಿಯಾದರೆ, ಯಾವ ಪ್ರಕಾರವಾಗಿ ಒಂದು ಗಿಡವು ಬಂಜೆಯಾದ ಹೂವನ್ನು ಬಿಟ್ಟರೆ ।೯೩೪॥

ಅದರಂತೆ ಎಲ್ಲ ವೈಭವವು, ಕುಲ ಜಾತಿಯ ಗೌರವವು ವ್ಯರ್ಥವು. ಯಾವ ಪ್ರಕಾರವಾಗಿ ಎಲ್ಲ ಅವಯವಗಳುಳ್ಳ ಶರೀರದಲ್ಲಿ ಜೀವವೇ ಇಲ್ಲವಾದರೆ ।೯೩೫॥

ಅದು ಹೇಗೋ, ಅದರಂತೆ ನನ್ನ ಭಕ್ತಿಯ ಹೊರತಾಗಿ ಆತನ ಜೀವನವು ವ್ಯರ್ಥವಾದದ್ದು. ಅರೇ, ಭೂಮಿಯ ಮೇಲೆ ಕಲ್ಲುಗಳು ಇರುವುದಿಲ್ಲವೇ? ।೯೩೬॥

ಇಲ್ಲಿ ನೋಡು, ಹಿವರಾ ಎಂಬ ಮುಳ್ಳಿನಗಿಡದ ಭಾರೀ ದಟ್ಟವಾದ ನೆರಳು ಇದೆ. ಆದರೆ ಸಜ್ಜನರು ಆದನ್ನು ನಿಷಿದ್ಧಗೊಳಿಸಿರುವರು. ಅದರಂತೆ ಯಾವನು ನನ್ನ ಭಕ್ತಿಯನ್ನು ಮಾಡುವುದಿಲ್ಲವೋ, ಆತನಿಗೆ ಪುಣ್ಯವು ತಿರಸ್ಕರಿಸಿ ಹೋಗುವುದು ।೯೩೭॥

ಬೇವಿನ ಮರಕ್ಕೆ ವಿಪುಲವಾಗಿ ಹಣ್ಣುಗಳು ಬಿಟ್ಟರೆ ಅವು ಕಾಗೆಗಳಿಗೆ ಮಾತ್ರ ಸುಕಾಳವಾಗುವುದು. ಅದರಂತೆ ಭಕ್ತಿಹೀನನು ಕೇವಲ ಪಾಪಕ್ಕಾಗಿ ಬೆಳೆದಿರುವನು ।೯೩೮॥

ಅಥವಾ ಷಡ್ರಸ ಮೃಷ್ಟಾನ್ನವನ್ನು ಹರವಿಯಲ್ಲಿ ಹಾಕಿ, ನಾಲ್ಕುದಾರಿ ಕೂಡಿದಲ್ಲಿ ಇಟ್ಟರೆ ಅದು ನಾಯಿಗಳಿಗೆ ಮಾತ್ರ ಉಪಯೋಗವಾಗುವುದು ।೯೩೯॥

ತೈಸೇ ಭಕ್ತಿಹೀನಾಚೇ ಜಿಣೇ । ಜೋ ಸ್ವಪ್ನೀಂಹೀ ಪರಿ ಸುಕೃತ ನೇಣೇ । ತೇಣೇ ಸಂಸಾರ ದುಃಖಾಸಿ ಭಾಣೇ । ವೋಗರಿಲೇ ।।೪೪೦।। ಮ್ಹಣೌನಿ ಕುಳ ಉತ್ತಮ ನೋಹಾವೇ । ಜಾತೀ ಅಂತ್ಯಜಹೀ ವ್ಹಾವೇ । ವರಿ ದೇಹಾಚೇನಿ ನಾಂವೇ । ಪಶುಚೇಂಹೀ ಲಾಭೋ ।।೪೪೧।। ಪಾಹೇ ಪಾ ಸಾವಜೇ ಹಾತಿರೂ ಧರಿಲೇ । ತೇಣೇ ತಯಾ ಕಾಕುಳತೀ ಮಾತೇ ಸ್ಮರಿಲೇ । ಕೀ ತಯಾಚೇ ಪಶುತ್ವ ವಾವೋ ಜಾಹಲೇ । ಪಾವಲಿಯಾ ಮಾತೇ ।।೪೪೨।।

ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಃ ತೇಽಪಿ ಯಾಂತಿ ಪರಾಂ ಗತಿಮ್ ।।೩೨।।

ಅಗಾ ನಾಂವೇ ಫೇತಾ ವೋಖಟೀ । ಜೇ ಆಘವೇಯಾ ಅಧಮಾಂಚಿಯೇ ಶೇವಟೀ । ತಿಯೇ ಪಾಪಯೋನೀ ಹೀ ಕಿರೀಟೀ । ಜನ್ಮಲೇ ಜೇ ।।೪೪೩।। ತೇ ಪಾಪಯೋನೀ ಮೂಢ । ಮೂರ್ಖ ಜೈಸೇ ಕಾ ದಗಡ । ಪರಿ ಮಾಝ್ಯಾ ಠಾಯೀ ದೃಢ । ಸರ್ವಭಾವೇ।।೪೪೪।। ಜಯಾಂಚಿಯೇ ವಾಚೇ ಮಾಝೇ ಆಲಾಪ । ದೃಷ್ಟೀ ಭೋಗೀ ಮಾಝೇಂಚಿ ರೂಪ । ಜಯಾಂಚೇ ಮನ ಸಂಕಲ್ಪ । ಮಾಝಾಚಿ ವಾಹೇ ।।೪೪೫।। ಮಾಝಿಯಾ ಕೀರ್ತಿವಿಣ । ಜಯಾಂಚೇ ರಿತೇ ನಾಹೀ ಶ್ರವಣ । ಜಯಾ ಸರ್ವಾಂಗೀ ಭೂಷಣ । ಮಾಝೀ ಸೇವಾ ।।೪೪೬।। ಜಯಾಂಚೇ ಜ್ಞಾನ ವಿಷೋ ನೇಣೇ । ಜಾಣೇವ ಮಜ ಏಕಾತೇಂಚಿ ಜಾಣೇ । ಜಯಾ ಐಸೇ ಲಾಭೇ ತರೀ ಜಿಣೇ । ಏರ್ಹವೀ ಮರಣ ।।೪೪೭।। ಐಸಾ ಆಘವಾಚಿ ಪರೀ ಪಾಂಡವಾ । ಜೇಂಹೀ ಆಪುಲಿಯಾ ಸರ್ವಭಾವಾ । ಜಿಯಾವಯಾಲಾಗೀ ವೋಲಾವಾ । ಮೀಂಚಿ ಕೇಲಾ ।।೪೪೮।। ತೇ ಪಾಪಯೋನೀಹೀ ಹೋತು ಕಾ । ತೇ ಶ್ರುತಾಧೀತಹೀ ನ ಹೋತು ಕಾ । ಪರಿ ಮಜಸೀ ತುಕಿತಾ ತುಕಾ । ತುಟೀ ನಾಹೀ ।।೪೪೯।। ಪಾಹೇ ಪಾ ಭಕ್ತೀಚೇನಿ ಆಥಿಲೇಪಣೇ । ದೈತ್ಯೀ ದೇವಾ ಆಣಿಲೇ ಉಣೇ । ಮಾಝೇ ನೃಸಿಂಹತ್ವ ಲೇಣೇ । ಜಯಾಚಿಯೇ ಮಹಿಮೆ ।।೪೫೦।। ತೋ ಪ್ರಹ್ಲಾದು ಗಾ ಮಜಸಾಠೀ । ಫೇತಾ ಬಹುತೇ ಸಂಕಟೇ ಸದಾ ಕಿರೀಟೀ । ಕಾ ಜೇ ಮಿಯಾ ದ್ಯಾವೇ ತೇ ಗೋಷ್ಠೀ । ತಯಾಚಿಯಾ ಜೋಡೇ ।।೪೫೧।। ಏರ್ಹವೀ ದೈತ್ಯಕುಳ ಸಾಚೋಕಾರೇ । ಪರಿ ಇಂದ್ರಹೀ ಸರಿ ನ ಲಾಹೇ ಉಪರೇ । ಮ್ಹಣೌನಿ ಭಕ್ತಿ ಗಾ ಏಥ ಸರೇ । ಜಾತಿ ಅಪ್ರಮಾಣ ।।೪೫೨।।

ಅದರಂತೆ ಭಕ್ತಿಹೀನನ ಜೀವನವು ಕೇವಲ ಪಾಪಕ್ಕಾಗಿಯೇ ಇರುವುದು. ಯಾವನು ಸ್ವಪ್ನದಲ್ಲಿಯೂ ಪುಣ್ಯ ಮಾಡುವುದನ್ನು ಅರಿಯನೋ, ಅವನು ಸಂಸಾರ ದುಃಖಗಳಿಗಾಗಿ ಆಯುಷ್ಯವನ್ನು ಎಡೆಮಾಡಿ ಇಟ್ಟಂತೆ ಎಂದು ತಿಳಿ ।४४०॥

ಆದ್ದರಿಂದ ಉತ್ತಮ ಕುಲ ಇರದಿದ್ದರೂ, ಅಥವಾ ಜಾತಿಯಿಂದ ಅಂತ್ಯಜನಾಗಿದ್ದರೂ ಹಾಗೂ ಪಶುವಿನ ದೇಹ ಪ್ರಾಪ್ತವಾಗಿದ್ದರೂ ಅಡ್ಡಿ ಇಲ್ಲ. ಆದರೆ ಭಕ್ತಿ ಮಾತ್ರ ಬೇಕು ।४४०॥

ಇಲ್ಲಿ ನೋಡು, ನಕ್ರನು ಗಜೇಂದ್ರನಿಗೆ ಹಿಡಿದಾಗ ಅದು ದೀನದಿಂದ ನನ್ನ ಸ್ಮರಣೆ ಮಾಡಿತು. ಆಗ ಅದಕ್ಕೆ ನನ್ನ ಪ್ರಾಪ್ತಿಯಿಂದ ಅದರ ಪಶುತ್ವವು ನಷ್ಟವಾಗಲಿಲ್ಲವೇ? ।४४೨॥

ಶ್ಲೋಕಾರ್ಥ :- ಅರ್ಜುನಾ! ನನ್ನನ್ನು ಆಶ್ರಯಿಸಿ ಸ್ತ್ರೀಯರಾದರೂ, ವೈಶ್ಯರಾದರೂ, ಶೂದ್ರರಾದರೂ ತೀರ ಪಾಪಯೋನಿಯವರೇ ಆದರೂ ಉತ್ತಮ ಪದವಿಯನ್ನು ಪಡೆಯವರು ।೩೨॥

ಅರೇ, ಯಾವುದು ಅಧಮದಲ್ಲಿ ಅಧಮವೋ ಮತ್ತು ಅದರ ಹೆಸರು ಸಹ ಹೇಳಲು ಅನುಚಿತವೋ, ಅಂತಹ ಪಾಪಯೋನಿಯಲ್ಲಿ ಯಾವನು ಜನ್ಮ ಧರಿಸುವನೋ ।४४३॥

ಅಂತಹ ಪಾಪಯೋನಿಯಲ್ಲಿ ಜನ್ಮವು, ಪುನಃ ಮೂರ್ಖತನದಲ್ಲಿ ಕೇವಲ ಕಲ್ಲಾದರೂ, ನನ್ನಲ್ಲಿ ಅವರ ಸರ್ವ ರೀತಿಯಲ್ಲಿ ದೃಢಭಾವವಿದೆ ।४४४॥

ಅವರ ವಾಣಿಯಿಂದ ನನ್ನ ನಾಮೋಚ್ಚಾರವಾಗುವುದು, ಅವರ ದೃಷ್ಟಿಯು ನನ್ನ ರೂಪವನ್ನೇ ನೋಡುವುದು ಮತ್ತು ಅವರ ಮನದಲ್ಲಿ ನನ್ನ ಹೊರತಾಗಿ ಬೇರೆ ಸಂಕಲ್ಪವೇ ಇರುವುದಿಲ್ಲ ।४४೫॥

ಅವರ ಕಿವಿಗಳು ನನ್ನ ಗುಣಾನುವಾದಗಳನ್ನು ಕೇಳುವ ಹೊರತಾಗಿ ಸುಮ್ಮ ನಿರಲಾರವು ಮತ್ತು ಅವರ ಎಲ್ಲ ಅವಯವಗಳಿಗೆ ನನ್ನ ಸೇವೆ ಹೊರತಾಗಿ ಇನ್ನು ಯಾವುದರಿಂದಲೂ ಭೂಷಣವಿಲ್ಲ ।४४೬॥

ಇವರ ಇಂದ್ರಿಯಗಳ ಜ್ಞಾನಕ್ಕೆ ವಿಷಯಗಳು ಕಾಣುವುದಿಲ್ಲ, ನಾನೊಬ್ಬನೇ ಕಾಣುವೆನು. ಈ ಸ್ಥಿತಿ ಇದ್ದರೆ ಮಾತ್ರ ಇವರು ಜೀವಂತ ಬದುಕುವರು, ಇಲ್ಲದಿದ್ದರೆ ಸಾಯುವರು ।४४೭॥

ಹೇ ಪಾಂಡವನೇ, ಈ ರೀತಿಯಲ್ಲಿ ಎಲ್ಲ ಪ್ರಕಾರವಾಗಿ ಯಾರು ತಮ್ಮ ಭಾವವನ್ನು ಸರ್ವಸ್ವದಿಂದ ನನ್ನ ಮೇಲೆ ಇಟ್ಟು ತಮ್ಮ ಜೀವಿತದ ಆಧಾರವನ್ನು ನನ್ನನ್ನೇ ಇಟ್ಟುಕೊಂಡಿರುವರು ।४४८॥

ಇವರು ಪಾಪಯೋನಿಯಲ್ಲಿ ಜನ್ಮ ಧರಿಸಿರಲಿ, ಅಥವಾ ಶಾಸ್ತ್ರಗಳನ್ನು ಕೇಳದಿರಲಿ ಇಲ್ಲವೆ ನೋಡದಿರಲಿ ಆದರೆ ಅವರನ್ನು ನನ್ನಲ್ಲಿ ತೂಗಿ ನೋಡಿದರೆ ಅವರು ನನಗಿಂತ ಕಡಿಮೆಯಾಗಿರುವುದಿಲ್ಲ ।४४೯॥

ಇಲ್ಲಿ ನೋಡು, ಭಕ್ತಿಯ ಮಹತ್ವದಿಂದ ದೈತ್ಯರಿಂದ ದೇವತೆಗಳಿಗೆ ಹಿಂದೆ ಹಾಕಿರುವೆನು ಮತ್ತು ಆ ಪ್ರಹ್ಲಾದನ ಭಕ್ತಿಯ ಮಹಿಮೆಗಾಗಿ ನನಗೆ ನರಸಿಂಹ ಅವತಾರವನ್ನು ತೆಗೆದುಕೊಳ್ಳಬೇಕಾಯಿತು ।४೫०॥

ಹೇ ಕಿರೀಟಿಯೇ, ಆ ಪ್ರಹ್ಲಾದನು ನನ್ನ ಪ್ರಾಪ್ತಿಗಾಗಿ ಯಾವಾಗಲೂ ಅನಂತ ಸಂಕಟಗಳನ್ನು ಸೋಸಿದನು. ಅದಕ್ಕಾಗಿ ಆತನಿಗೆ ನಾನು ಕೊಡಬೇಕಾದದ್ದು ಆತನ ವರ್ಣನೆ ಮಾಡಿದಾಗಲೇ ಆತನಿಗೆ ದೊರಕಿತು ।४೫०॥

ನಿಜವಾಗಿ ನೋಡಿದರೆ ಆತನು ದೈತ್ಯ ಕುಲದಲ್ಲಿ ಜನ್ಮ ಧರಿಸಿದ್ದನು. ಆದರೆ, ಆತನಿಗಿಂತ ಹೆಚ್ಚಿನ ದೊಡ್ಡ ಪದವಿಯು ಇಂದ್ರನಿಗೂ ದೊರಕಿರುವುದಿಲ್ಲ. ಅದಕ್ಕಾಗಿ ನನಗಾಗಿ ಒಂದು ಭಕ್ತಿಯೇ ಸಾಕು. ಜಾತಿಯು ಪ್ರಮಾಣವಲ್ಲ ।४೫೨॥

ರಾಜಾಜ್ಞೇಚೀ ಅಕ್ಷರೇ ಆಹಾತೀ । ತಿಯೇ ಚಾಮಾ ಏಕಾ ಜಯಾ ಪಡತೀ । ತಯಾ ಚಾಮಾಸಾಠೀ ಜೋಡತೀ । ಸಕಳ ವಸ್ತು ।೪೫೩॥ ವಾಂಚೂನಿ ಸೋನೇ ರುಪೇ ಪ್ರಮಾಣ ನೋಹೇ । ಏಥ ರಾಜಾಜ್ಞಾಚಿ ಸಮರ್ಥ ಆಹೇ । ತೇಂಚಿ ಚಾಮ ಏಕ ಜೈ ಲಾಹೇ । ತೇಣೇ ವಿಕತೀ ಆಘವೀ ।೪೫೪॥ ತೈಸೇ ಉತ್ತಮತ್ವ ತೈಂಚಿ ತರೇ । ತೈಂಚೀ ಸರ್ವಜ್ಞತಾ ಸರೇ । ಜೈ ಮನೋಬುದ್ಧಿ ಭರೇ । ಮಾಝೇನಿ ಪ್ರೇಮೇ ।೪೫೫॥ ಮ್ಹಣೌನಿ ಕುಳ ಜಾತಿ ವರ್ಣ । ಹೇ ಆಘವೇಂಚಿ ಗಾ ಅಕಾರಣ । ಏಥ ಅರ್ಜುನಾ ಮಾಝೇಪಣ । ಸಾರ್ಥಕ ಏಕ ।೪೫೬॥ ತೇಂಚಿ ಭಲತೇಣೇ ಭಾವೇ । ಮನ ಮಜ ಆಂತು ಯೇತೇ ಹೋಆವೇ । ಆಲೇ ತರೀ ಆಘವೇ । ಮಾಗೀಲ ವಾವೋ ।೪೫೭॥ ಜೈಸೇ ತಂವಚಿ ವಹಾಳ ವೋಹಳ । ಜಂವ ನ ಪವತೀ ಗಂಗಾಜಳ । ಮಗ ಹೋಊನಿ ಠಾಕತೀ ಕೇವಳ । ಗಂಗಾರೂಪ ।೪೫೮॥ ಕಾ ಖೈರ ಚಂದನ ಕಾಷ್ಠೇ । ಹೇ ವಿವಂಚನಾ ತಂವಚಿ ಘಟೇ । ಜಂವ ನ ಘಾಪತೀ ಏಕವಟೇ । ಅಗ್ನೀಮಾಜೀ ।೪೫೯॥ ತೈಸೇ ಕ್ಷತ್ರೀ ವೈಶ್ಯ ಸ್ತ್ರಿಯಾ । ಕಾ ಶೂದ್ರ ಅಂತ್ಯಜಾದಿ ಇಯಾ । ಜಾತೀ ತಂವಚಿ ವೇಗಳಾಲಿಯಾ । ಜಂವ ನ ಪವತೀ ಮಾತೇ ।೪೬೦॥ ಮಗ ಜಾತೀ ವ್ಯಕ್ತೀ ಪಡೇ ಬಿಂದುಲೇ । ಜೇವ್ಹಾ ಭಾವೇ ಹೋತೀ ಮಜ ಮೀನಲೇ । ಜೈಸೇ ಲವಣಕಣ ಘಾತಲೇ । ಸಾಗರಾಮಾಜೀ ।೪೬೧॥ ತಂವವರೀ ನದಾನದೀಂಚೀ ನಾಂವೇ । ತಂವಚಿ ಪೂರ್ವಪಶ್ಚಿಮೇಚೇ ಯಾವೇ । ಜಂವ ನ ಯೇತೀ ಆಘವೇ । ಸಮುದ್ರಾಮಾಜೀ ।೪೬೨॥ ಹೇಂಚಿ ಕವಣೇ ಏಕೇ ಮಿಸೇ । ಚಿತ್ತ ಮಾಝೀ ಠಾಯೀ ಪ್ರವೇಶೇ । ಯೇತುಲೇ ಹೋ ಮಗ ಆಪೈಸೇ । ಮೀಚಿ ಹೋಣೇ ಅಸೇ ।೪೬೩॥ ಅಗಾ ವರೀ ಫೋಡಾವಯಾ ಲಾಗೀ । ಲೋಹೋ ಮಿಳೋ ಕಾ ಪರಿಸಾಚೇ ಆಂಗೀ । ಕಾ ಜೇ ಮಿಳತಿಯೇ ಪ್ರಸಂಗೀ । ಸೋನೇಂಚಿ ಹೋಈಲ ।೪೬೪॥ ಪಾಹೇ ಪಾ ವಾಲಭಾಚೇನಿ ವ್ಯಾಜೇ । ತಿಯಾ ವ್ರಜಾಂಗನಾಂಚೀ ನಿಜೇ । ಮಜ ಮೀನಲಿಯಾ ಕಾಯ ಮಾಝೀ । ಸ್ವರೂಪ ನವ್ಹತೀ? ।೪೬೫॥ ನಾತರೀ ಭಯಾಚೇನಿ ಮಿಸೇ । ಮಾತೇ ನ ಪವಿಜೇಚಿ ಕಾಯ ಕಂಸೇ? । ಕೀ ಅಖಂಡ ವೈರವಶೇ । ಚೌದ್ಯಾದಿಕೀ ।೪೬೬॥ ಅಗಾ ಸೋಯೇರಪಣೇಂಚಿ ಪಾಂಡವಾ । ಮಾಝೇ ಸಾಯುಜ್ಯ ಯಾದವಾ । ಕೀ ಮಮತ್ವೇ ವಸುದೇವಾ । ದಿಕಾ ಸಕಳಾ ।೪೬೭॥

ರಾಜಾಜ್ಞೆಯ ಅಕ್ಷರಗಳು ಒಂದು ಚರ್ಮದತುಕಡಿಯಲ್ಲಿ ಇದ್ದರೂ ಆ ಚರ್ಮದಿಂದ ಎಲ್ಲ ವಸ್ತುಗಳೂ ಪ್ರಾಪ್ತವಾಗುವುವು ।೪೫೩॥

ಆ ಅಕ್ಷರಗಳಿಂತಲೂ ಬಂಗಾರ ಬೆಳ್ಳಿಗಳ ಕಿಮ್ಮತ್ತು ಇಲ್ಲ. ಆದರೆ ಇಲ್ಲಿ ರಾಜಾಜ್ಞೆಯೇ ಮುಖ್ಯವಾದದ್ದು ಮತ್ತು ಆ ರಾಜನ ಮುದ್ರೆಯ ಚರ್ಮದಿಂದ ಎಲ್ಲ ವಸ್ತುಗಳು ಮಾರಲು ಸಿಗುವುವು ।೪೫೪॥

ಅದರಂತೆ ಮನಬುದ್ಧಿಗಳು ನನ್ನದೇ ಪ್ರೇಮದಿಂದ ಕೂಡಿಕೊಂಡಾಗ ಆಗಲೇ ದೊಡ್ಡಸ್ಥಾನದ ಮತ್ತು ಸರ್ವಜ್ಞತನದ ಉಪಯೋಗ ಬೀಳುವುದು ।೪೫೫॥

ಆದ್ದರಿಂದ ಕುಲ, ಜಾತಿ ಮತ್ತು ವರ್ಣಗಳು ಇವೆಲ್ಲವೂ ನಿಷ್ಕಾರಣಗಳಾಗಿವೆ. ಆದರೆ ಅರ್ಜುನಾ, ಕೇವಲ ನನ್ನ ಭಕ್ತಿ ಮಾಡುವುದರಿಂದ ಸಾರ್ಥಕವಾಗುವುದು ।೪೫೬॥

ಈ ನನ್ನ ಭಕ್ತಿಯನ್ನು ಯಾರು ಬೇಕಾದರೂ ಮನೋಭಾವದಿಂದ ಮಾಡಬಹುದು. ಇದರಿಂದ ಇವರ ಹಿಂದಿನ ಯಾವುದೇ ಜಾತಿ ಕ್ರಿಯೆಗಳೆಲ್ಲವೂ ಇಲ್ಲದಾಗುವುವು ।೪೫೭॥

ಹಳ್ಳಗಳು ಗಂಗಾನದಿಯನ್ನು ಮುಟ್ಟದಿದ್ದಾಗ, ಅವುಗಳಿಗೆ ಹಳ್ಳ - ಕೊಳ್ಳ ಎಂದು ಕರೆಯುವರು. ಆದರೆ ಅವು ಗಂಗಾನದಿಯನ್ನು ಕೂಡಿದಾಗ ಗಂಗಾರೂಪವೇ ಆಗುವುವು ।೪೫೮॥

ಅ[illegible]ನಾ ಕಟ್ಟಿಗೆಗಳನ್ನು ಎಲ್ಲಿಯವರೆಗೆ ಅಗ್ನಿಯಲ್ಲಿ ಹಾಕಿಲ್ಲವೋ ಅಲ್ಲಿಯವರೆಗೆ ಅವುಗಳಿಗೆ ಖದಿರ-ಚಂದನ ಕಟ್ಟಿಗೆಗಳೆಂದು ಕರೆಯುವರು ।೪೫೯॥

ಅದರಂತೆ ಎಲ್ಲಿಯವರೆಗೆ ಮದ್ರೂಪತೆಯು ಪ್ರಾಪ್ತವಾಗಿಲ್ಲವೋ ಅಲ್ಲಿಯವರೆಗೆ ಕ್ಷತ್ರಿಯ, ವೈಶ್ಯ, ಸ್ತ್ರೀ, ಶೂದ್ರ, ಅಂತ್ಯಜ ಇತ್ಯಾದಿ ಜಾತಿಗಳು ಭಿನ್ನವಾಗಿರುವುವು ।೪೬೦॥

ಸಮುದ್ರದಲ್ಲಿ ಉಪ್ಪನ್ನು ಹಾಕಿದಾಗ ಅದು ಏಕರೂಪವಾಗುವುದು. ಅದರಂತೆ ಮನೋಭಾವದಿಂದ ನನಗೆ ಶರಣು ಬಂದಾಗ ಜಾತಿ, ವ್ಯಕ್ತಿ ಇತ್ಯಾದಿ ಭೇದಗಳು ಇಲ್ಲದಾಗುವುವು ।೪೬೧॥

ಎಲ್ಲಿಯವರೆಗೆ ಸಮುದ್ರಕ್ಕೆ ಬಂದು ಕೂಡಿಲ್ಲವೋ, ಅಲ್ಲಿಯವರೆಗೆ ನದಿಗೆ ಪೂರ್ವವಾಹಿನಿ, ಉತ್ತರವಾಹಿನಿ ಇತ್ಯಾದಿ ಭೇದಗಳು ಇರುವುವು ।೪೬೨॥

ಅದರಂತೆ ಯಾವುದೇ ನಿಮಿತ್ಯದಿಂದ ನನ್ನಲ್ಲಿ ಚಿತ್ತವು ನೆಟ್ಟಿತೆಂದರೆ ಸಾಕು, ಆಗ ಸಹಜವಾಗಿ ಮದ್ರೂಪವೇ ಪ್ರಾಪ್ತವಾಗುವುದು ।೪೬೩॥

ಅರೇ, ಒಡೆಯುವ ಉದ್ದೇಶದಿಂದಲಾದರೂ ಪರಿಸವು (ಪರಿಸಮಣಿಯು) ಕಬ್ಬಿಣಕ್ಕೆ ಸ್ಪರ್ಶ ಮಾಡಿದರೆ ಸಾಕು ತಕ್ಷಣವೇ ಕಬ್ಬಿಣವು ಬಂಗಾರವಾಗುವುದು ।೪೬೪॥

ಇಲ್ಲಿ ನೋಡು, ಗೋಪಿಕಾಸ್ತ್ರೀಯರು ವಿಷಯದ ಅಭಿಲಾಷೆಯಿಂದ ತಮ್ಮ ಚಿತ್ತವನ್ನು ನನ್ನಲ್ಲಿಟ್ಟರು. ಅದರಿಂದ ಅವರು ಮದ್ರೂಪರಾಗಲಿಲ್ಲವೇ ? ।೪೬೫॥

ಅಥವಾ ಭಯದಯೋಗದಿಂದ ಕಂಸನು ಮದ್ರೂಪನಾಗಲಿಲ್ಲವೇ? ಮತ್ತು ನನ್ನಲ್ಲಿ ಅಖಂಡವಾಗಿ ವೈರವನ್ನು ಮಾಡಿ ಶಿಶುಪಾಲಾದಿಕರು ಮದ್ರೂಪರಾಗಲಿಲ್ಲವೇ ? ।೪೬೬॥

ಅರೇ, ಹಾಗೆಯೇ ಪಾಂಡವರಿಗೆ, ಯಾದವರಿಗೆ ಬೀಗತನದ ಸಂಬಂಧದಿಂದ ಮತ್ತು ವಸುದೇವಾದಿಕರಿಗೆ ಮಮತ್ವದಿಂದ ನನ್ನ ಸಾಯುಜ್ಯವು ದೊರಕಲಿಲ್ಲವೇ ? ।೪೬೭॥

ನಾರದಾ ಧ್ರುವಾ ಅಕ್ರೂರಾ । ಶುಕಾ ಹನ ಸನತ್ಕುಮಾರಾ । ಇಯಾ ಭಕ್ತೀ ಮೀ ಧನುರ್ಧರಾ । ಪ್ರಾಪ್ಯ ಜೈಸಾ ॥೪೭೮॥ ತೈಸಾಚಿ ಗೋಪಿಕಾಂಸಿ ಕಾಮೇ । ತಯಾ ಕಂಸಾ ಭಯಸಂಭ್ರಮೇ । ಯೇರಾ ಘಾತಕಾ ಮನೋಧರ್ಮೇ । ಶಿಶುಪಾಲಾದಿಕಾ ॥೪೭೯॥ ಅಗಾ ಮೀ ಏಕುಲಾಣೇಚೇ ಖಾಗೇ । ಮಜ ಯೇವೋ ಪಾ ಭಲತೇನಿ ಮಾರ್ಗೇ । ಭಕ್ತೀ ಕಾ ವಿಷಯವಿರಾಗೇ । ಅಥವಾ ವೈರೇ ॥೪೮೦॥ ಮ್ಹಣೌನಿ ಪಾರ್ಥಾ ಪಾಹೀ । ಪ್ರವೇಶಾವಯಾ ಮಾಝ್ಯಾ ಠಾಯೀ । ಉಪಾಯಾಂಚೀ ನಾಹೀ । ವಾಣೀ ಏಥ ॥೪೮೧॥ ಆಣಿ ಭಲತಿಯಾ ಜಾತೀ ಜನ್ಮಾವೇ । ಮಗ ಭಜಿಜೇ ಕಾ ವಿರೋಧಾವೇ । ಪರಿ ಭಕ್ತ ಕಾ ವೈರಿಯಾ ವ್ಹಾವೇ । ಮಾಝಿಯಾಚೀ ॥೪೮೨॥ ಅಗಾ ಕವಣೇ ಏಕೇ ಬೋಲೇ । ಮಾಝೇಪಣ ಜರ್ಹೀ ಜಾಹಾಲೇ । ತರೀ ಮೀ ಹೋಣೇ ಆಲೇ । ಹಾತಾ ನಿರುತೇ ॥೪೮೩॥ ಯಾಲಾಗೀ ಪಾಪಯೋನೀಹೀ ಅರ್ಜುನಾ । ಕಾ ವೈಶ್ಯ ಶೂದ್ರ ಅಂಗನಾ । ಮಾತೇ ಭಜತಾ ಸದನಾ । ಮಾಝಿಯಾ ಯೇತೀ ॥೪೮೪॥

ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾಃ ಭಕ್ತಾ ರಾಜರ್ಷಯಸ್ತಥಾ ।
ಅನಿತ್ಯಮಸುಖಂ ಲೋಕಮ್ ಇಮಂ ಪ್ರಾಪ್ಯ ಭಜಸ್ವ ಮಾಮ್ ॥೩೩॥

ಮಗ ವರ್ಣಾವಮಾಜೀ ಛತ್ರ ಚಾಮರ । ಸ್ವರ್ಗ ಜಯಾಂಚೇ ಅಗ್ರಹಾರ । ಮಂತ್ರವಿದ್ಯೇಸೀ ಮಾಹೇರ । ಬ್ರಾಹ್ಮಣ ಜೇ ॥೪೮೫॥ ಜೇ ಪೃಥ್ವೀತಳೀಂಚೇ ದೇವ । ಜೇ ತಪೋವತಾರ ಸಾವಯವ । ಸಕಳ ತೀರ್ಥಾಂಸಿ ದೈವ । ಉದಯಲೇ ಜೇ ॥೪೮೬॥ ಜೇಥ ಅಖಂಡ ವಸಿಜೇ ಯಾಗೀ । ಜೇ ವೇದಾಂಚೀ ವಜ್ರಾಂಗೀ । ಜಯಾಂಚಿಯೇ ದಿಠೀಚಿಯಾ ಉತ್ಸಂಗೀ । ಮಂಗಳವಾಢೇ ॥೪೮೭॥ ಜಯಾಂಚಿಯೇ ಆಸ್ಥೇಚೇನಿ ವೋಲೇ । ಸತ್ಕರ್ಮ ಪಾಲ್ಹಾಳೀ ಗೇಲೇ । ಸಂಕಲ್ಪೇ ಸತ್ಯ ಜಿಯಾಲೇ । ಜಯಾಂಚೇನಿ ॥೪೮೮॥ ಜಯಾಂಚೇನಿ ಗಾ ಬೋಲೇ । ಅಗ್ನೀಸಿ ಆಯುಷ್ಯ ಜಾಹಾಲೇ । ಮ್ಹಣೌನಿ ಸಮುದ್ರೇ ಪಾಣೀ ಆಪುಲೇ । ದಿಧಲೇ ಯಾಂಚಿಪ್ರೀತೀ ॥೪೮೯॥ ಮಿಯಾ ಲಕ್ಷ್ಮೀ ಡಾವಲೋನಿ ಕೇಲೀ ಪರೌತೀ । ಫೇಡೋನಿ ಕೌಸ್ತುಭ ಘೇತಲಾ ಹಾತೀ । ಮಗ ವೋಢವಿಲೀ ವಕ್ಷಸ್ಥಳಾಚೀ ವಾಖತೀ । ಚರಣರಜಾ ॥೪೯೦॥ ಆಝುನಿ ಪಾಉಲಾಚೀ ಮುದ್ರಾ । ಮೀ ಹೃದಯೀ ವಾಹೇ ಗಾ ಸುಭದ್ರಾ । ಜೇ ಆಪುಲಿಯಾ ದೈವಸಮುದ್ರಾ । ಜತನೇಲಾಗೀ ॥೪೯೧॥

ಹೇ ಧನುರ್ಧರನೇ, ನಾರದ, ಧ್ರುವ, ಅಕ್ರೂರ, ಶುಕ ಮತ್ತು ಸನತ್ಕುಮಾರರಿಗೆ ಯಾವ ಪ್ರಕಾರವಾಗಿ ಭಕ್ತಿಯಿಂದ ಪ್ರಾಪ್ತನಾಗಿರುವೆನೋ ।।೪೬೮।।

ಅದರಂತೆ ಗೋಪಿಕಾ ಸ್ತ್ರೀಯರಿಗೆ ವಿಷಯ ಬುದ್ಧಿಯಿಂದ, ಕಂಸನಿಗೆ ಭಯದಿಂದ ಮತ್ತು ಶಿಶುಪಾಲಾದಿಕರಿಗೆ ವೈರ ಬುದ್ಧಿಯಿಂದ ನಾನು ಪ್ರಾಪ್ತನಾಗಿರುವೆನು ।।೪೬೯।।

ಅರೇ, ನಾನು ನಿರ್ವಾಣದ ಸ್ಥಾನನಾಗಿರುವೆನು. ಆದ್ದರಿಂದ ನನ್ನಲ್ಲಿ ಬೇಕಾದ ಮಾರ್ಗದಿಂದ ಅಂದರೆ ಭಕ್ತಿಯಿಂದ, ವಿಷಯ ಬುದ್ಧಿಯಿಂದ, ವಿರಕ್ತತೆಯಿಂದ ಇಲ್ಲವೇ ವೈರಭಾವದಿಂದ ಬಂದರೂ ಅಡ್ಡಿ ಇಲ್ಲ ।।೪೭೦।।

ಆದ್ದರಿಂದ ಪಾರ್ಥಾ, ಇಲ್ಲಿ ನೋಡು,ನನ್ನಲ್ಲಿ ಬಂದು ಕೂಡಲು ಉಪಾಯಗಳ ಕೊರತೆ ಯಾವುದೂ ಇಲ್ಲ ।।೪೭೧।।

ಮತ್ತು ಯಾವುದೇ ಜಾತಿಯಲ್ಲಿ ಜನ್ಮ ವೆತ್ತಲಿ ಮತ್ತು ನನ್ನ ಭಕ್ತಿ ಮಾಡಲಿ ಇಲ್ಲವೇ ವಿರೋಧ ಮಾಡಲಿ, ಆದರೆ ಭಕ್ತಿ ಇಲ್ಲವೆ ವೈರವನ್ನು ನನ್ನಲ್ಲಿಯೇ ಮಾಡಬೇಕು ।।೪೭೨।।

ಅರೇ, ಯಾವುದೇ ನಿಮಿತ್ತದಿಂದ ಯಾರಾದರೂ ನನಗೆ ಶರಣು ಬಂದರೆ ಅವರಿಗೆ ಮದ್ರೂಪನಾಗಲು ಅವರ ಕೈಯಲ್ಲಿಯೇ ಇರುವೆನು ।।೪೭೩।।

ಅದಕ್ಕಾಗಿ ಹೇ ಅರ್ಜುನನೇ, ಪಾಪಯೋನಿಗಳಲ್ಲಿ ಜನ್ಮ . ದರಿಸಿದವರಿಗೆ ಅಥವಾ ವೈಶ್ಯ, ಶೂದ್ರ, ಸ್ತ್ರೀಯರು ನನ್ನ ಭಕ್ತಿ ಮಾಡಿದರೆ ಅವರು ನನ್ನ ಸ್ವರೂಪವನ್ನು ಹೊಂದುವರು ।।೪೭೪।।

**ಶ್ಲೋಕಾರ್ಥ :-** ಹೀಗಿರುವಲ್ಲಿ ಪುಣ್ಯಾತ್ಮರಾದ ಬ್ರಾಹ್ಮಣರು, ಭಕ್ತರಾದ ರಾಜರ್ಷಿಗಳ ಬಗ್ಗೆ ಹೇಳುವುದೇನು? ಕ್ಷಣಿಕವೂ ದುಃಖಮಯವೂ ಆದ ಪ್ರಪಂಚದಲ್ಲಿ ಹುಟ್ಟಿದ ನೀನು ನನ್ನನ್ನು ಸೇವಿಸಿ ಕೃತಕೃತ್ಯನಾಗು ।।೩೩।।

ಅಂದಮೇಲೆ ಸ್ವರ್ಗಲೋಕವೆಂದರೆ ಯಾರ ಉಡುಗರೆ ಗ್ರಾಮವು ಮತ್ತು ಮಂತ್ರವಿದ್ಯೆಯು ಯಾರ ತವರುಮನೆಯು, ಯಾರು ಎಲ್ಲ ವರ್ಣಗಳಲ್ಲಿ ಶ್ರೇಷ್ಠರಾದ ಬ್ರಾಹ್ಮಣರು ।।೪೭೫।।

ಇವರು ಭೂಲೋಕದ ದೇವತೆಗಳು, ತಪಶ್ಚರ್ಯಗಳ ಮೂರ್ತಿಮಂತ ಅವತಾರಿಗಳು, ಇವರ ಯೋಗದಿಂದ ಎಲ್ಲ ತೀರ್ಥಗಳ ದೈವವು ಉದಯವಾಗಿದೆ ।।೪೭೬।।

ಇವರಲ್ಲಿ ಯಜ್ಞವು ಅಖಂಡವಾಸವಾಗಿದೆ. ಇವರು ವೇದಗಳಿಗೆ ವಜ್ರಕವಚರು ಮತ್ತು ಇವರ ದೃಷ್ಟಿ ಮಾತ್ರದಿಂದ ಎಲ್ಲ ಸ್ಥಳಗಳಲ್ಲಿ ಮಂಗಲದ ವೃದ್ಧಿ ಯಾಗುವುದು ।।೪೭೭।।

ಇವರ ಆಸಕ್ತಿರೂಪ ತೇವಿನಿಂದ ಸತ್ಕರ್ಮವು ಬೆಳೆಯಿತು ಮತ್ತು ಇವರ ನಿಶ್ಚಯದಿಂದ ಸತ್ಯವು ಜೀವಂತ ಉಳಿಯಿತು ।।೪೭೮।।

ಇವರ ಆಶೀರ್ವಾದದಿಂದ ಅಗ್ನಿಯ ಆಯುಷ್ಯವು ಬೆಳೆಯಿತು. ಆದ್ದರಿಂದಲೇ ಇವರ ಪ್ರೀತಿಗಾಗಿ ಸಮುದ್ರವು ಅಗ್ನಿಗೆ ತನ್ನಲ್ಲಿ ಆಶ್ರಯಕೊಟ್ಟಿತು ।।೪೭೯।।

ನಾನು ಲಕ್ಷ್ಮಿಯನ್ನೇ ಆಚೆಗೆ ಸರಿಸಿ ಮತ್ತು ಕೌಸ್ತುಭಮಣಿಯನ್ನು ತೆಗೆದು ಕೈಯಲ್ಲಿ ಹಿಡಿದೆ ಮತ್ತು ಆಗ ಆತನ ಚರಣರಜ ಪ್ರಾಪ್ತಿಗಾಗಿ ನಾನು ನನ್ನ ಎದೆಯನ್ನು ಮುಂದೆ ಮಾಡಿದೆ ।।೪೮೦।।

ಹೇ ಅರ್ಜುನಾ, ನನ್ನ ಶಾಂತತ್ವವು ಸ್ಥಿರವಾಗಿರಲು ಅವರ ಪಾದದ ಮುದ್ರೆಯನ್ನು ನಾನು ಈಗಲೂ ನನ್ನ ಹೃದಯದಲ್ಲಿ ಧರಿಸಿರುವೆನು ।।೪೮೧।।

ಜಯಾಂಚಾ ಕೋಪ ಸುಭಟಾ । ಕಾಳಾಗ್ನಿ ರುದ್ರಾಚಾ ವಸೌಟಾ । ಜಯಾಂಚೇ ಪ್ರಸಾದೀ ಪುಕಟಾ । ಜೋಡತೀ ಸಿದ್ಧಿ ।।೪೮೨।। ಐಸೇ ಪುಣ್ಯಪೂಜ್ಯ ಜೇ ಬ್ರಾಹ್ಮಣ । ಆಣಿ ಮಾಝ್ಯಾ ಠಾಯೀ ಅತಿನಿಪುಣ । ಆತಾ ಮಾತೇ ಪಾವತೀ ಹೇ ಕವಣ । ಸಮರ್ಥಾವೇ? ।।೪೮೩।। ಪಾಹೇ ಪಾ ಚಂದನಾಚೇನಿ ಅಂಗಾನಿಳೇ । ಶಿವತಿಲೇ ನಿಂಬ ಹೋತೇ ಜೇ ಜವಳೇ । ತೀಹೀ ನಿರ್ಜೀವೀಹೀ ದೇವಾಂಚೇ ನಿಡಳೇ । ಬೈಸಣೇ ಕೇಲೀ ।।೪೮೪।। ಮಗ ತೋ ಚಂದನು ತೇಥ ನ ಪವೇ । ಐಸೇ ಮನೀ ಕೈಸೇನೀ ಧರಾವೇ । ಅಥವಾ ಪಾತಲಾ ಹೇ ಸಮರ್ಥಾವೇ । ತೆವ್ಹಾ ಕಾಯೀ ಸಾಚ? ।।೪೮೫।। ಜೇಥ ನಿವವೀಲ ಐಶಿಯಾ ಆಶಾ । ಹರೇ ಚಂದ್ರಮಾ ಆಧಾ ಐಸಾ । ವಾಹಿಜತ ಅಸೇ ಶಿರಸಾ । ನಿರಂತರ ।।೪೮೬।। ತೇಥ ನಿವವಿತಾ ಆಣಿ ಸಗಳಾ । ಪರಿಮಳೇ ಚಂದ್ರಾಹೂನಿ ಆಗಳಾ । ತೋ ಚಂದನು ಕೇವಿ ಅವಲೀಳಾ । ಸರ್ವಾಂಗೀ ನ ಬೈಸೇ? ।।೪೮೭।। ಕಾ ರಥ್ಯೋದಕೇ ಜಿಯೇಚಿಯೇ ಕಾಸೇ । ಲಾಗಲಿಯಾ ಸಮುದ್ರ ಜಾಲೀ ಅನಾಯಾಸೇ । ತಿಯೇ ಗಂಗೇಸಿ ಕಾಯ ಅನಾರಿಸೇ । ಗತ್ಯಂತರ ಅಸೇ? ।।೪೮೮।। ಮ್ಹಣೌನಿ ರಾಜರ್ಷಿ ಕಾ ಬ್ರಾಹ್ಮಣ । ಜಯಾ ಗತಿ ಮತಿ ಮೀಚಿ ಶರಣ್ಯ । ತಯಾ ತ್ರಿಶುದ್ಧೀ ಮೀಚ ನಿರ್ವಾಣ । ಸ್ಥಿತೀಹೀ ಮೀಚಿ।।೪೮೯।। ಯಾಲಾಗೀ ಶತಜರ್ಜರ ನಾವೇ । ರಿಗೋನಿ ಕೇವೀ ನಿಶ್ಚಿಂತ ಹೋಆವೇ । ಕೈಸೇನಿ ಉಘಡಿಯಾ ಅಸಾವೇ । ಶಸ್ತ್ರವರ್ಷೀ ।।೪೯೦।। ಆಂಗಾವರೀ ಪಡತಾ ಪಾಷಾಣ । ನ ಸುವಾವೇ ಕೇವೀ ವೋಡಣ । ರೋಗೇ ದಾಟಲಾ ಆಣಿ ಉದಾಸಪಣ । ವೋಖದ ದೇಸೀ ।।೪೯೧।। ಜೇಥ ಚಹೂಕಡೇ ಜಳತ ವಣವಾ । ತೇಥೂನಿ ನ ನಿಗಿಜೇ ಕೇವೀ ಪಾಂಡವಾ । ತೇವೀ ಲೋಕಾ ಯೇಊನಿ ಸೋಪದ್ರವಾ । ಕೇವಿ ನ ಭಜಿಜೇ ಮಾತೇ ।।೪೯೨।। ಅಗಾ ಮಾತೇ ನ ಭಜಾವಯಾಲಾಗೀ । ಕವಣ ಬಳ ಪಾ ಆಪುಲಿಯಾ ಆಂಗೀ । ಕಾಆ ಘರೀ ಕೀ ಭೋಗೀ । ನಿಶ್ಚಿಂತೀ ಕೇಲೀ? ।।೪೯೩।। ನಾತರೀ ವಿದ್ಯಾ ಕೀ ವಯಸಾ । ಯಯಾ ಪ್ರಾಣಿಯಾಂಸಿ ಹಾ ಐಸಾ । ಮಜ ನ ಭಜತಾ ಭರಂವಸಾ । ಸುಖಾಚಾ ಕೋಣ? ।।೪೯೪।। ತರೀ ಭೋಗ್ಯಜಾತ ಜೇತುಲೇ । ತೇ ಏಕಾ ದೇಹಾಚಿಯಾ ನಿಕಿಯಾ ಲಾಗಲೇ । ಆಣಿ ಏಥ ದೇಹ ತಂವ ಅಸೇ ಪಡಿಲೇ । ಕಾಳಾಚಿಯೇ ತೋಂಡೀ ।।೪೯೫।। ಬಾಪ ದುಃಖಾಚೇ ಕೇಣೇ ಸುಟಲೇ । ಜೇಥ ಮರಣಾಚೇ ಭರೇ ಲೋಟಲೇ । ತಿಯೇ ಮೃತ್ಯುಲೋಕೀಂಚಿಯೇ ಶೇವಟಿಲೇ । ಯೇಣೇ ಜಾಹಾಲೇ ಹಾಟವೇಳೇ ।।೪೯೬।।

ಹೇ ಮಹಾವೀರನೇ, ಅವರ ಕೋಪವೆಂದರೆ ಕಾಳ, ಅಗ್ನಿ ಮತ್ತು ರುದ್ರರ ವಸತಿ ಸ್ಥಾನವಾಗಿದೆ ಮತ್ತು ಅವರು ಪ್ರಸನ್ನರಾದರೆ ಸಿದ್ಧಿಗಳು ಪುಕ್ಕಟೆಯಾಗಿ ಸಿಗುವುವು ।।೪೮೨।।

ಇಂತಹ ಪುಣ್ಯಪೂಜ್ಯ ಬ್ರಾಹ್ಮಣರು ಮತ್ತು ಅದರಲ್ಲಿ ನನ್ನನ್ನು ಪೂರ್ಣವಾಗಿ ಭಕ್ತಿ ಮಾಡುವವರು ಮದ್ರೂಪರಾಗುವರೆಂದು ಹೆಚ್ಚಿಗೆ ಸಮರ್ಥನೆ ಮಾಡಿ ಹೇಳಬೇಕೇ? ।।೪೮೩।।

ಇಲ್ಲಿ ನೋಡು, ಚಂದನಗಿಡದ ಅಂಗದಿಂದ ವಾಯುವಿನ ಸ್ಪರ್ಶ ಮಾಡಿದ ಸಮೀಪದ ಬೇವಿನ ಗಿಡಕ್ಕೆ (ಚಂದನವೇ ಆಗಿ) ದೇವರ ಮಸ್ತಕದಲ್ಲಿ ಸ್ಥಳ ದೊರಕುವುದು ।।೪೮೪।।

ಅಂದಮೇಲೆ ಚಂದನಕ್ಕೆ ಆ ಸ್ಥಳ ದೊರಕಿಲ್ಲವೇನು ? ಹೀಗೆ ಮನದಲ್ಲಾದರೂ ಹೇಗೆ ಅನುಮಾನಿಸಬೇಕು ? ಅದಕ್ಕೆ ಅಲ್ಲಿ ಸ್ಥಾನ ದೊರಕಿತು ಎಂದಾಗಲೇ ನಿಜವಾಗಿ, ಇಲ್ಲದಿದ್ದರೆ ಸುಳ್ಳಾಗುವುದೇ ? ।।೪೮೫।।

ಶಂಕರನು ವಿಷಪ್ರಾಶನ ಮಾಡಿದ್ದರಿಂದ, ಅದರಿಂದ ಆಗುವ ದಾಹದ ಶಮನವಾದೀತೆಂಬ ಆಶೆಯಿಂದ ಚಂದ್ರನನ್ನು ನಿರಂತರವಾಗಿ ಮಸ್ತಕದಲ್ಲಿ ಧರಿಸಿದನು ।।೪೮೬।।

ದಾಹದ ಶಮನ ಮಾಡುವ ಮತ್ತು ಚಂದ್ರನಕ್ಕಿಂತಲೂ ಸುವಾಸ ಅಧಿಕ ಇರುವ ಚಂದನವು, ಅದನ್ನು ಸರ್ವಾಂಗದಲ್ಲಿ ಸಹಜವಾಗಿ ಯಾಕೆ ಧಾರಣ ಮಾಡಲಾಗುವುದಿಲ್ಲ ? ।।೪೮೭।।

ಅಥವಾ ರಸ್ತೆಯ ಮೇಲಿನ ಉದಕವು ಗಂಗೆಯನ್ನು ಕೂಡಿಕೊಂಡಿದ್ದರಿಂದ ಸಮುದ್ರಕ್ಕೆ ಸಹಜವಾಗಿ ಕೂಡುವುದು ಮತ್ತು ಆ ಗಂಗಾನದಿಗೆ ಸಮುದ್ರದ ಹೊರತು ಬೇರೆ ಗತಿ ಇದೆಯೇ? ।।೪೮೮।।

ಆದ್ದರಿಂದ ಅವರಿಗೆ ಗತಿ ಮತ್ತು ಜ್ಞಾನಕೊಡುವ ಮತ್ತು ಅವರ ರಕ್ಷಣೆ ಮಾಡುವ ನಿಶ್ಚಯವಾಗಿ ನಾನೇ ಇರುವೆ. ಆ ರಾಜರ್ಷಿ, ಬ್ರಾಹ್ಮಣರಿಗೆ ಭಕ್ತಿ ಮತ್ತು ಮುಕ್ತಿಯ ಸ್ಥಾನವು ನಾನಾಗಿರುವೆನು ।।೪೮೯।।

ನೂರಾರು ಛಿದ್ರಗಳುಳ್ಳ ನಾವೆಯಲ್ಲಿ ಕುಳಿತು ನಾವು ಮುಳುಗುವುದಿಲ್ಲವೆಂದು ನಿಶ್ಚಿಂತೆಯಿಂದ ಹೇಗೆ ಇರಬೇಕು? ಶಸ್ತ್ರಗಳ ಮಳೆಗರೆಯುವಾಗ ಬರೀ ಮೈಯಿಂದ ಅಲ್ಲಿ ಹೇಗೆ ತಿರುಗಾಡಬೇಕು? ।।೪೯೦।।

ಮೈಮೇಲೆ ಶಿಲೆ ಬೀಳುವಾಗ ಢಾಲನ್ನು ಮುಂದೆ ಏಕೆ ಹಿಡಿಯಬಾರದು? ರೋಗಗ್ರಸ್ಥರಾದಾಗ ಔಷಧ ಸೇವನೆಗೆ ಉದಾಸೀನ ಏಕಾಗಬೇಕು ? ।।೪೯೧।।

ಹೇ ಅರ್ಜುನಾ, ನಾಲ್ಕು ಕಡೆಯಿಂದಲೂ ಅಗ್ನಿ ಹೊತ್ತಿಕೊಂಡಾಗ ಅಲ್ಲಿಂದ ಏಕೆ ಹೊರಗೆ ಬೀಳಬಾರದು? ಅದರಂತೆ ಅನೇಕ ದುಃಖಗಳಿಂದ ಕೂಡಿದ ಮೃತ್ಯುಲೋಕ ಪ್ರಾಪ್ತವಾದಾಗ ನನ್ನ ಭಜನೆಯನ್ನು ಏಕೆ ಮಾಡಬಾರದು? ।।೪೯೨।।

ಅರೇ, ನನ್ನನ್ನು ಭಜಿಸದೇ ಇರಲು ಮನುಷ್ಯನ ಅಂಗದಲ್ಲಿ ಅದಾವ ಸಾಮರ್ಥ್ಯವಿದೆ? ಇವರು ನಿಶ್ಚಿಂತೆಯಿಂದ ಇರಲು ಇವರ ಮನೆಯಲ್ಲಿ ಅದಾವ ಭೋಗ ವಸ್ತುವಿನ ಸಮೃದ್ಧಿ ಇದೆ? ।।೪೯೩।।

ಅಥವಾ ನನ್ನನ್ನು ಭಜಿಸದೇ, ವಿದ್ಯಾ, ತಾರುಣ್ಯ ಇವುಗಳಿಂದ ಸುಖಪ್ರಾಪ್ತಿಯಾದೀತೆಂದು ಇವರಿಗೆ ಇಂತಹ ಯಾವ ಭರವಸೆ ಇದೆ ? ।।೪೯೪।।

ಆದರೆ, ಇರುವ ಎಲ್ಲ ಭೋಗವಸ್ತುಗಳೆಲ್ಲವೂ ಇರುವ ಒಂದೇ ದೇಹದ ಸುಖಕ್ಕಾಗಿ ಇರುವುವು. ಅದರೆ ಈ ದೇಹ ನೋಡಿದರೆ ಕಾಳನ ಮುಖದಲ್ಲಿ ಬಿದ್ದಿರುವುದು ।।೪೯೫।।

ಅರೇ, ಈ ಮೃತ್ಯುಲೋಕದ ಕೊನೆಯದಾದ ಮನುಷ್ಯ ರೂಪ ಬಜಾರದಲ್ಲಿ ದುಃಖರೂಪ ವಸ್ತುಗಳು ತುಂಬಿ ಮರಣ ರೂಪ ಅಳತೆ ನಡೆದಿದೆ. ಇಲ್ಲಿ ಮನುಷ್ಯ ರೂಪದಲ್ಲಿ ಬಂದದ್ದಾಗಿದೆ ।।೪೯೬।।

ಆತಾ ಸುಖೇಂಸಿ ಜೇವಿತಾ । ಕೈಂಚೇ ಗ್ರಾಹಿಕೀ ಕಿಜೇಲ ಪಂಡುಸುತಾ । ಕಾಯ ರಾಖೋಂಡೀ ಫುಂಕಿತಾ । ದೀಪು ಲಾಗೇ? ।೪೯೭॥ ಅಗಾ ವಿಷಾಚೇ ಕಾಂದೇ ವಾಟುನೀ । ಜೋ ರಸು ಘೇಈಜೇ ಪಿಳುನೀ । ತಯಾ ನಾಮ ಅಮೃತ ಠೇವುನೀ । ಜೈಸೇ ಅಮರ ಹೋಣೇ ।೪೯೮॥ ತೇವೀ ವಿಷಯಾಂಚೇ ಜೇ ಸುಖ । ತೇ ಕೇವಳ ಪರಮ ದುಃಖ । ಪರಿ ಕಾಯ ಕೀಜೇ ಮೂರ್ಖ । ನ ಸೇವಿತಾ ನ ಸರೇ ।೪೯೯॥ ಕಾ ಶೀಸ ಖಾಂಡೂನಿ ಆಪುಲೇ । ಪಾಯೀಂಚ್ಯಾ ಖತೀ ಬಾಂಧಿಲೇ । ತೈಸೇ ಮೃತ್ಯುಲೋಕೀಂಚೇ ಭಲೇ । ಆಹೇ ಆಘವೇ ।೫೦೦॥ ಮ್ಹಣೌನಿ ಮೃತ್ಯು ಲೋಕೀ ಸುಖಾಚೇ ಕಾಹಾಣೇ । ಐಕಿಜೇಲ ಕವಣಾಚಿಯೇ ಶ್ರವಣೇ । ಕೈಂಚೇ ಸುಖನಿದ್ರಾ ಅಂಥರುಣೇ । ಇಂಗಳಾಂಚ್ಯಾ ।೫೦೧॥ ಜಿಯೇ ಲೋಕೀಂಚಾ ಚಂದ್ರು ಕ್ಷಯರೋಗೀ । ಜೇಥ ಉದಯೋ ಹೋಯ ಅಸ್ತಾಲಾಗೀ । ದುಃಖ ಲೇಊನೀ ಸುಖಾಚೇ ಆಂಗೀ । ಸಳಿತ ಜಗಾತೇ ।೫೦೨॥ ಜೇಥ ಮಂಗಳಾಚಿಯಾ ಅಂಕುರೀ । ಸವೇಂಚಿ ಅಮಂಗಳಾಚೇ ಪಡೇ ಪೋಹರೀ । ಮೃತ್ಯು ಉದರಾಚಿಯಾ ಪರಿವರೀ । ಗರ್ಭು ಗಿಂವಸೀ ।೫೦೩॥ ಜೇ ನಾಹೀ ತಯಾತೇ ಚಿಂತವೀ । ತಂವ ತೇಂಚಿ ನೇಇಜೇ ಗಂಧರ್ವೀ । ಗೇಲಿಯಾಚೀ ಕವಣೇ ಗಾಂವೀ । ಶುದ್ಧೀ ನ ಲಗೇ ।೫೦೪॥ ಅಗಾ ಗಿಂವಸಿತಾ ಆಘವಿಯಾ ವಾಟೀ । ಪರತಲೇ ಪಾಊಲಚಿ ನಾಹೀ ಕಿರೀಟೀ । ನಿಮಾಲಿಯಾಂಚಿಯಾ ಗೋಠೀ । ತಿಯೇ ಪುರಾಣೇ ಜೇಥಿಂಚೇ ।೫೦೫॥ ಜೇಥಿಂಚಿಯೇ ಅನಿತ್ಯತೇಚೀ ಥೋರೀ । ಕರಿತಯಾ ಬ್ರಹ್ಮಯಾಚೇ ಆಯುಷ್ಯವೇರೀ । ಕೈಸೇ ನಾಹೀ ಹೋಣೇ ಅವಧಾರೀ । ನಿಪಟೂನಿಯಾ ।೫೦೬॥ ಐಸೀ ಲೋಕೀಂಚೇ ಜಿಯೇ ನಾಂದಣೂಕ । ತೇಥ ಜನ್ಮಲೇ ಆಥಿ ಜೇ ಲೋಕ । ತಯಾಂಚಿಯೇ ನಿಶ್ಚಿಂತೀಚೇ ಕೌತುಕ । ದಿಸತ ಅಸೇ ।೫೦೭॥ ಪೈ ದೃಷ್ಟಾದೃಷ್ಟಾಚಿಯೇ ಜೋಡೀ । ಲಾಗೀ ಭಾಂಡವಲ ನ ಸುಟೇ ಕವಡೀ । ಜೇಥ ಸರ್ವಸ್ವೇ ಹಾನಿ ತೇಥ ಕೋಡೀ । ವೇಂಚಿತೀ ಗಾ ।೫೦೮॥ ಜೋ ಬಹುವೇ ವಿಷಯವಿಲಾಸೇ ಗುಂಫೇ । ತೋ ಮ್ಹಣತೀ ಉವಾಇ ಪಡಿಲಾ ಸಾಪೇ । ಜೋ ಅಭಿಲಾಷಭಾರೇ ದಡಪೇ । ತಯಾತೇ ಸಜ್ಞಾನ ಮ್ಹಣತೀ ।೫೦೯॥ ಜಯಾಚೇ ಆಯುಷ್ಯ ಧಾಕುಟೇ ಹೋಯ । ಬಳ ಪ್ರಜ್ಞಾ ಜಿರೌನಿ ಜಾಯ । ತಯಾಚೇ ನಮಸ್ಕಾರಿತೀ ಪಾಯ । ವಡೀಲ ಮ್ಹಣುನಿ ।೫೧೦॥ ಜಂವ ಜಂವ ಬಾಳ ಬಳಿಯಾ ವಾಢೇ । ತಂವ ತಂವ ಭೋಜೇ ನಾಚತೀ ಕೋಡೇ । ಆಯುಷ್ಯ ನಿಮಾಲೇ ಆಂತುಲಿಯೇ ಕಡೇ । ತೇ ಗ್ಲಾನೀಚಿ ನಾಹೀ ।೫೧೧॥

ಆದರೆ ಪಂಡುಸುತನೇ, ಇಂತಹ ದುಃಖರೂಪ ಬಜಾರದಲ್ಲಿ ಜೀವಕ್ಕೆ ಸುಖವಾಗುವ ಯಾವ ವಸ್ತುವನ್ನು ಕೊಳ್ಳಲು ಬಂದೀತು? ಬೂದಿ ಊದಿದರೆ ದೀಪ ಹತ್ತುವುದೇ? ॥೯೮॥

ಅರೇ, ವಿಷದ ಕಂದವನ್ನು ಕುಟ್ಟಿ ಹಿಂಡಿ ರಸವನ್ನು ತೆಗೆದು ಅದಕ್ಕೆ ಅಮೃತವೆಂದು ಹೇಳಿ ಕುಡಿದು ಅಮರನಾಗುವ ಇಚ್ಛೆ ಪಟ್ಟಂತಾಗುವುದು ॥೯೮॥

ಅದೇ ಪ್ರಕಾರವಾಗಿ ವಿಷಯದಿಂದಾಗುವ ಸುಖವು ಅದು ಕೇವಲ ಪರಮ ದುಃಖವಾಗಿರುವುದು. ಆದರೆ ಅಜ್ಞಾನಿ ಮೂರ್ಖ ಜನರಿಗೆ ಅದರ ಸೇವನೆ ಮಾಡುವುದು ಬಿಡಲಾಗುವುದಿಲ್ಲ ॥೯೯॥

ಕಾಲಿನ ಗಾಯಕ್ಕೆ ತನ್ನ ರುಂಡವನ್ನೇ ಕೊಯ್ದು ಹಚ್ಚಿದರೆ ಎಷ್ಟು ಒಳ್ಳೆಯದೋ, ಅಷ್ಟೇ ಈ ಮೃತ್ಯು ಲೋಕದ ಮಾತುಗಳು ಒಳ್ಳೆಯದಾಗಿವೆ ॥೫೦೦॥

ಆದ್ದರಿಂದ ಈ ಮೃತ್ಯುಲೋಕದ ಸುಖದ ಮಾತುಗಳು ಯಾರ ಕಿವಿಯಲ್ಲಿ ಕೇಳಿಸುತ್ತವೆಯೋ ಕೇಳಲಿ! ಬೆಂಕಿಯ ಹಾಸಿಗೆಯಲ್ಲಿ ಮಲಗಿಕೊಂಡರೆ ಗಾಢನಿದ್ರೆಯು ಹೇಗೆ ಹತ್ತುವುದು? ॥೫೦೧॥

ಅರೇ, ಯಾವ ಲೋಕದ ಚಂದ್ರನು ಕ್ಷಯ ರೋಗಿಯು, ಅಲ್ಲಿ ಉದಯವು ಅಸ್ತಕ್ಕಾಗಿ ಆಗುವುದು. ಅಲ್ಲಿ ದುಃಖವು ಸುಖದ ಹೊದಿಕೆ ಹೊದ್ದುಕೊಂಡು ಜಗತ್ತಿಗೆ ಪೀಡಿಸುವುದು ॥೫೦೨॥

ಅಲ್ಲಿ ಕಲ್ಯಾಣದ ಅಂಕುರ ಹುಟ್ಟುವುದೊಂದೇತ ತಡ, ತಕ್ಷಣ ಆ ಕಲ್ಯಾಣಕ್ಕೆ ಆವರಣ ಬೀಳುವುದು. ಮೃತ್ಯುವು ಗರ್ಭಕ್ಕೂ ಸಹ ಹುಡುಕುತ್ತ ಬರುವುದು ॥೫೦೩॥

ಯಾವುದು ಚಿಂತನೆ ಮಾಡಲು ಯೋಗ್ಯವಲ್ಲದ್ದನ್ನು ಚಿಂತನೆ ಮಾಡುವಷ್ಟರಲ್ಲಿ ಯಮದೂತರು ಬಂದು ಎಳೆದೊಯ್ಯುವರು ಮತ್ತು ಯಾವ ಊರಿಗೆ ಒಯ್ಯುವರೋ ಅದರ ಪತ್ತೆಯೇ ಹತ್ತುವುದಿಲ್ಲ ॥೫೦೪॥

ಅರೇ, ಎಲ್ಲ ಮಾರ್ಗಗಳನ್ನು ಶೋಧಿಸಿದರೂ ಅಲ್ಲಿಂದ ತಿರುಗಿ ಬರುವ ಮಾತೇ ಇರುವುದಿಲ್ಲ ಮತ್ತು ಅಲ್ಲಿ ಮೃತ್ಯು ಹೊಂದಿದ ಜನರ ಮಾತು ಇದೇ ಪುರಾಣಗಳು ॥೫೦೫॥

ಅಲ್ಲಿಯ ಅಶಾಶ್ವತದ ಲೌಕಿಕವನ್ನು ಸೃಷ್ಟಿ ಉತ್ಪನ್ನ ಮಾಡುವ ಬ್ರಹ್ಮದೇವನ ಆಯುಷ್ಯಪರ್ಯಂತವಾಗಿ ವರ್ಣಿಸಿದರೂ ಮುಗಿಯುವುದಿಲ್ಲ ॥೫೦೬॥

ಇಂತಹ ಯಾವ ಮೃತ್ಯು ಲೋಕದ ಸ್ಥಿತಿಯು. ಅಲ್ಲಿ ಜನ್ಮ . ದರಿಸಿದ ಜನರ ಸ್ವಸ್ಥಾವಸ್ಥೆಯನ್ನು ಕಂಡು ಬಹು ದೊಡ್ಡ ಆಶ್ಚರ್ಯವಾಗುತ್ತದೆ ॥೫೦೭॥

ಇಲ್ಲಿ ನೋಡು, ಪ್ರತ್ಯಕ್ಷ ಅಥವಾ ಪರಲೋಕದಲ್ಲಿ ಆಗುವ ಲಾಭದ ಪ್ರಾಪ್ತಿಗಾಗಿ ಒಂದು ಕವಡಿಯನ್ನು ಖರ್ಚು ಮಾಡುವುದಿಲ್ಲ. ಇವರು ಎಲ್ಲ ರೀತಿಯಿಂದ ಹಾನಿಯಾಗುವಲ್ಲಿ ಕೋಟಿಗಟ್ಟಲೇ ಹಣ ಖರ್ಚಿಸುವರು ॥೫೦೮॥

ಈಗಿನ ಕಾಲದಲ್ಲಿ ಯಾರು ಸಾಕಷ್ಟು ವಿಷಯ ಸುಖದಲ್ಲಿ ಸಿಕ್ಕಿಕೊಂಡಿರುವರೋ ಅವರಿಗೆ ಸುಖಿ ಎನ್ನುವರು ಮತ್ತು ಲೋಭಿಗೆ ಜ್ಞಾನಿ ಎಂದು ಕರೆಯುವರು ॥೫೦೯॥

ಯಾರ ಆಯುಷ್ಯವು ಸ್ವಲ್ಪೇ ಉಳಿದಿರುವುದು ಮತ್ತು ಅವರ ಶಕ್ತಿ, ಬುದ್ಧಿಯು ಕಡಿಮೆಯಾಗಿರುವುದು. ಅವರಿಗೆ "ಯಜಮಾನರು" ಎಂದು ಕಾಲು ಮುಗಿಯುವರು ॥೫೧೦॥

ಚಿಕ್ಕ ಮಗು ದಿನೇ ದಿನೇ ಬೆಳೆದಂತೆ ಅದನ್ನು ಕಂಡು ಸಂತೋಷಪಟ್ಟು ಕೌತುಕದಿಂದ ಕುಣಿಯುವರು, ಆದರೆ ಅವರ ಆಯುಷ್ಯವು ಒಳಗಿಂದೊಳಗೇ ಕಡಿಮೆಯಾಗುತ್ತ ಹೊರಟಿದೆ ಎಂದು ದುಃಖಪಡುವುದೇ ಇಲ್ಲ ॥೫೧೧॥

ಜನ್ಮಲಿಯಾ ದಿವಸದಿವಸೇ । ಹೋ ಲಾಗೇ ಕಾಳಾಚೇಂಚಿ ಐಸೇ । ಕೀ ವಾಢತೀ ಕರಿತೀ ಉಲ್ಹಾಸೇ । ಉಭವಿತೀ ಗುಢಿಯಾ ।೫೧೨॥ ಅಗಾ ಮರ ಹಾ ಬೋಲು ನ ಸಾಹತೀ । ಆಣಿ ಮೇಲಿಯಾ ತರೀ ರಡತೀ । ಪರಿ ಅಸತೇ ಜಾತ ನ ಗಣಿತೀ । ಗಹಿಂಸಪಣೇ ।೫೧೩॥ ದರ್ದೂರ ಸಾಪೇ ಗಿಳಿಜತು ಆಹೇ ಉಭಾ । ಕೀ ತೋ ಮಾಸಿಯಾ ವೇಂಟಾಳೀ ಜಿಭಾ । ತೈಸೇ ಪ್ರಾಣಿಯೇ ಕವಣಾ ಲೋಭಾ । ವಾಢವಿತೀ ತೃಷ್ಣಾ ।೫೧೪॥ ಅಹಾ ಕಟಕಟಾ ಹೇ ವೋಖಟೇ । ಇಯೇ ಮೃತ್ಯುಲೋಕೀಂಚೇ ಉಫರಾಟೇ । ಏಥ ಅರ್ಜುನಾ ಜರೀ ಅವಚಟೇ । ಜನ್ಮಲಾಸೀ ತೂ ।೫೧೫॥ ತರಿ ಝಡಝಡೋನಿ ವಹಿಲಾ ನಿಘ । ಇಯೇ ಭಕ್ತೀಚಿಯೇ ವಾಟೇ ಲಾಗ । ಜಿಯಾ ಪಾವಸೀ ಅವ್ಯಂಗ । ನಿಜಧಾಮ ಮಾಝೇ ।೫೧೬॥

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸೀ ಯುಕ್ತ್ವೈವಂ ಆತ್ಮಾನಂ ಮತ್ಪರಾಯಣಃ ।೩೪॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ರಾಜವಿದ್ಯಾರಾಜಗುಹ್ಯಯೋಗೋ ನಾಮ ನವಮೋಽಧ್ಯಾಯಃ

ತೂ ಮನ ಹೇ ಮೀಚಿ ಕರೀ । ಮಾಝಿಯಾ ಭಜನೀ ಪ್ರೇಮ ಧರೀ । ಸರ್ವತ್ರ ನಮಸ್ಕಾರೀ । ಮಜ ಏಕಾತೇ ।೫೧೭॥ ಮಾಝೇನಿ ಅನುಸಂಧಾನೇ ದೇಖ । ಸಂಕಲ್ಪು ಜಾಳಣೇ ನಿಃಶೇಖ । ಮದ್ಯಾಜೀ ಚೋಖ । ಯಾಚಿ ನಾಂವ ।೫೧೮॥ ಐಸಾ ಮಿಯಾ ಆಥಿಲಾ ಹೋಸೀ । ತೇಥ ಮಾಝಿಯಾಚಿ ಸ್ವರೂಪಾ ಪಾವಸೀ । ಹೇ ಅಂತಃಕರಣೀಂಚೇ ತುಜಪಾಸೀ । ಬೋಲಿಜತ ಅಸೇ ।೫೧೯॥ ಅಗಾ ಅವಘಿಯಾ ಚೋರಿಯಾ ಆಪುಲೇ । ಜೇ ಸರ್ವಸ್ವ ಆಮ್ಹೀ ಅಸೇ ಠೇವಿಲೇ । ತೇ ಪಾವೋನಿ ಸುಖ ಸಂಚಲೇ । ಹೋಊನಿ ಠಾಸೀ ।೫೨೦॥ ಐಸೇ ಸಾಂವಳೇನಿ ಪರಬ್ರಹ್ಮೇ । ಭಕ್ತಕಾಮಕಲ್ಪದ್ರುಮೇ । ಬೋಲಿಲೇ ಆತ್ಮಾರಾಮೇ । ಸಂಜಯೋ ಮ್ಹಣೇ ।೫೨೧॥ ಅಹೋ ಐಕಿಜತ ಅಸೇ ಕೀ ಅವಧಾರಾ । ತಂವ ಇಯಾ ಬೋಲಾ ನಿವಾಂತ ಮ್ಹಾತಾರಾ । ಜೈಸಾ ಮ್ಹೈಸಾ ನುಠೀ ಕಾ ಪುರಾ । ತೈಸಾ ಉಗಾಚಿ ಅಸೇ ।೫೨೨॥ ತೇಥ ಸಂಜಯೇ ಮಾಥಾ ತುಕಿಲಾ । ಅಹಾ ಅಮೃತಾಚಾ ಪಾಊಸ ವರ್ಷಲಾ । ಕೀ ಹಾ ಏಥ ಅಸತುಚಿ ಗೇಲಾ । ಸೇಜಿಯಾ ಗಾಂವಾ ।೫೨೩॥ ತರ್ಹೀ ದಾತಾರು ಹಾ ಆಮುಚಾ । ಮ್ಹಣೌನಿ ಹೇ ಬೋಲತಾ ಮೈಳೇಲ ವಾಚಾ । ಕಾಯ ಕೀಜೇ ಯಯಾಚಾ । ಸ್ವಭಾವೋಚಿ ಐಸಾ ।೫೨೪॥ ಪರಿ ಬಾಪ ಭಾಗ್ಯ ಮಾಝೇ । ಜೇ ವೃತ್ತಾಂತು ಸಾಂಗಾ ವಯಾಚೇನಿ ವ್ಯಾಜೇ । ಕೈಸಾ ರಕ್ಷಿಲೋ ಮುನಿರಾಜೇ । ಶ್ರೀವ್ಯಾಸದೇವೇ ।೫೨೫॥

ಹುಟ್ಟಿದಾಗಿನಿಂದ ದಿನದಿನಕ್ಕೆ ಕಾಳನ ಸ್ವಾಧೀನ (ಸಮೀಪ) ಆಗುತ್ತಿರುವುದು. ಆದರೆ ಆನಂದದಿಂದ ಹುಟ್ಟುಹಬ್ಬ ಆಚರಿಸಿ ಬಾವುಟ ಏರಿಸುವರು ।೫೧೨॥

ಅರೇ, ''ಮರಣ'' ಈ ಶಬ್ದವು ಸಹ ಸಹನೆ ಆಗುವುದಿಲ್ಲ ಮತ್ತು ಸತ್ತ ಮೇಲೆ ಅಳುವುದು ! ಆದರೆ ಇದ್ದ ಆಯುಷ್ಯವು ಮುಗಿಯುತ್ತ ಬಂದಿದೆ ಎಂದು ಮೂರ್ಖತನದಿಂದ ಎಣಿಕೆಯೇ ಮಾಡುವುದಿಲ್ಲ ।೫೧೩॥

ಕಪ್ಪೆಗೆ ಸರ್ಪವು ನುಂಗುತ್ತಿರುವಾಗಲೂ ಅದು ನೊಣಗಳನ್ನು ಹಿಡಿದು ನುಂಗುತ್ತಿರುವುದು. ಅದರಂತೆ ಈ ಪ್ರಾಣಿಗಳು ಯಾವ ಲಾಭಕ್ಕಾಗಿ ತಮ್ಮ ಇಚ್ಛೆಯನ್ನು ಬೆಳೆಸುತ್ತಿರುವರು, ಯಾರು ಬಲ್ಲರು ? ।೫೧೪॥

ಅಹಾಹಾ ! ದೈವವೇ ಇದು ಎಷ್ಟೊಂದು ಕೆಟ್ಟದ್ದಾಗಿದೆ. ಈ ಮೃತ್ಯುಲೋಕದ ಎಲ್ಲವೂ ಉಪರಾಟೆಯಾಗಿದೆ. ಅರ್ಜುನಾ, ಇಂತಹ ಮೃತ್ಯುಲೋಕದಲ್ಲಿ ನೀನು ದೈವವಶಾತ್ ಜನ್ಮ ಧರಿಸಿರುವೆ ।೫೧೫॥

ಅದಕ್ಕಾಗಿ ನೀನು ಮೈಝಾಡಿಸಿ ಇದರಿಂದ ಬೇರೆಯಾಗು ಮತ್ತು ಯಾವುದರಿಂದ ನನ್ನ ಅವಿನಾಶ ಪದಕ್ಕೆ ಪ್ರಾಪ್ತನಾಗುವಿಯೋ ಆ ಭಕ್ತಿ ಮಾರ್ಗವನ್ನು ಬೇಗನೇ ಹಿಡಿ ।೫೧೬॥

ಶ್ಲೋಕಾರ್ಥ :- ನನ್ನನ್ನೇ ಚಿಂತಿಸು, ನನ್ನನ್ನೇ ಭಜಿಸು, ನನ್ನನ್ನೇ ಸೇವಿಸು. ನನಗೆ ನಮಸ್ಕಾರ ಮಾಡು. ಸರ್ವವಿಧದಿಂದ ನನ್ನನ್ನೇ ಶರಣು ಹೊಂದಿದರೆ ನೀನು ತಪ್ಪದೇ ನನ್ನನ್ನೇ ಪಡೆದುಕೊಳ್ಳುವೆ ।೩೪॥

ಇಲ್ಲಿಗೆ ಉಪನಿಷತ್ತೂ, ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ, ಶ್ರೀಕೃಷ್ಣಾರ್ಜುನ ಸಂವಾದವೂ ಆದ ಶ್ರೀಮದ್ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗವೆಂಬ ಹೆಸರಿನ ಒಂಬತ್ತನೆಯ ಅಧ್ಯಾಯವು ಮುಗಿದುದು.

ನೀನು ನಿನ್ನ ಮನವನ್ನು ಮದ್ರೂಪ ಮಾಡಿ ನನ್ನ ಭಜನೆಯಲ್ಲಿ ಪ್ರೇಮ ಇಡು ಮತ್ತು ಎಲ್ಲ ಸ್ಥಳಗಳಲ್ಲಿಯೂ ನಾನೇ ಇರುವೆ ಎಂದು ತಿಳಿದು ನಮಸ್ಕಾರ ಮಾಡು ।೫೧೭॥

ನನ್ನ ಅನುಸಂಧಾನದಿಂದ ಸರ್ವ ಸಂಕಲ್ಪಗಳನ್ನು ಸುಟ್ಟು ಹಾಕು. ಇದಕ್ಕೆ ನನ್ನ ಯಜನವನ್ನು ಉತ್ತಮವಾಗಿ ಮಾಡುವವನು ಎಂದೆನ್ನುವರು ।೫೧೮॥

ಈ ಪ್ರಕಾರವಾಗಿ ನನ್ನ ಯೊಗದಿಂದ ಸಂಪನ್ನನಾದರೆ ಆಗ ನನ್ನ ಸ್ವರೂಪವನ್ನು ಹೊಂದುವಿ. ಈ ನನ್ನ ಅಂತಃಕರಣದ ಗುಹ್ಯವನ್ನು ನಾನು ನಿನಗಾಗಿ ಹೇಳುತ್ತಿರುವೆನು ।೫೧೯॥

ಅರೇ, ಎಲ್ಲರಿಂದ ಕದ್ದಿಟ್ಟ ಈ ನಮ್ಮ ಗುಪ್ತವಾದ ಮಾತುಗಳನ್ನು ನೀನು ಪ್ರಾಪ್ತ ಮಾಡಿಕೊಂಡು ಸುಖರೂಪನಾಗಿ ಇರಬಹುದು ।೫೨೦॥

ಸಂಜಯನು ಹೇಳಿದನು, ಶ್ಯಾಮವರ್ಣದ ಪರಮಾತ್ಮನು ಮತ್ತು ಭಕ್ತರ ಇಚ್ಛೆಯನ್ನು ಪೂರ್ಣ ಮಾಡುವ ಕಲ್ಪವೃಕ್ಷ ಶ್ರೀಕೃಷ್ಣನು ಈ ಪ್ರಕಾರವಾಗಿ ಹೇಳಿದನು ।೫೨೧॥

ಅಹೋ ಶ್ರೋತೃಗಳೇ ಕೇಳಿರಿ, ಯಾವ ಕೋಣವು ನದಿಯ ಪೂರದಲ್ಲಿ ಜುಮ್ಮ್ ಎನ್ನದೇ ಸುಮ್ಮನೇ ಕೂಡ್ರುವಂತೆ, ಶ್ರೀಕೃಷ್ಣಾರ್ಜುನರ ಸಂವಾದವನ್ನು ಕೇಳಿ ವೃದ್ಧ ಧೃತರಾಷ್ಟ್ರನು ಸುಮ್ಮನೇ ಕುಳಿತನು ।೫೨೨॥

ಆಗ ಸಂಜಯನು ತಲೆದೂಗಿ ಹೇಳಹತ್ತಿದನು. ಅಹಾಹಾ ! ಇಂದು ಅಮೃತದ ಮಳೆಯೇ ಸುರಿಯಿತು. ಆದರೆ ನಾನು ಇಲ್ಲಿಯೇ ಇದ್ದರೂ ಪರಸ್ಥಳಕ್ಕೆ ಹೋದಂತೆ ಆಯಿತು ।೫೨೩॥

ಆದರೂ ಈತನು ನಮ್ಮ ಅನ್ನದಾತಾ ಮಾಲಕನಿರುವನು. ಆದ್ದರಿಂದ ಇದನ್ನು ಹೆಚ್ಚಿಗೆ ಹೇಳಲು ಹೋದರೆ ನಮ್ಮ ವಾಣಿಯು ದೂಷಿತವಾಗಬಹುದು ಆದರೆ ಏನು ಮಾಡಬೇಕು ? ಇವರ ಸ್ವಭಾವವೇ ಹೀಗೆ ಇದೆ ।೫೨೪॥

ಆದಾಗ್ಯೂ ನಾನು ಧನ್ಯನಿರುವೆ, ನನ್ನ ಭಾಗ್ಯವು ದೊಡ್ಡದಾಗಿದೆ. ಯಾಕೆಂದರೆ ಕುರುಕ್ಷೇತ್ರದ ವೃತ್ತಾಂತ ಹೇಳುವ ನಿಮಿತ್ತದಿಂದ ಮುನಿರಾಜ ವ್ಯಾಸದೇವನು ನನಗೆ ಸಂಸಾರ ದುಃಖದಿಂದ ಅಕಸ್ಮಿಕವಾಗಿ ಹೇಗೆ ರಕ್ಷಣೆ ಮಾಡಿದನು? ।೫೨೫॥

ಯೇತುಲೇ ಹೇ ವಾಡೇ ಸಾಯಾಸೇ । ಜಂವ ಬೋಲತ ಅಸೇ ದೃಢಮಾನಸೇ । ತಂವ ನ ಧರವೇಚಿ ಆಪುಲಿಯಾ ಐಸೇ । ಸಾತ್ವಿಕೇ ಕೇಲೇ ।೫೨೬॥ ಚಿತ್ತ ಚಾಕಾಟಲೇ ಆಟು ಘೇತ । ವಾಚಾ ಪಾಂಗುಳಲೀ ಜೇಥಿಂಚೀ ತೇಥ । ಆಪಾದ ಕಂಚುಕಿತ । ರೋಮಾಂಚ ಆಲೇ ।೫೨೭॥ ಅರ್ಧೋನ್ಮೀಲಿತ ಡೋಳೇ । ವರ್ಷತಾತಿ ಆನಂದಜಳೇ । ಆಂತುಲಿಯಾ ಸುಖೋರ್ಮೀಚೇನಿ ಬಳೇ । ಬಾಹೇರೀ ಕಾಂಪೇ ।೫೨೮॥ ಪೈ ಆಘವಾಚಿ ರೋಮಮೂಳೀ । ಆಲೀ ಸ್ವೇದಕಣಿಕಾ ನಿರ್ಮಳೀ । ಲೇಇಲಾ ಮೋತಿಯಾಂಚೀ ಕಡಿಯಾಳೀ । ಆವಡೇ ತೈಸಾ ।೫೨೯॥ ಐಸಾ ಮಹಾಸುಖಾಚೇನಿ ಅತಿರಸೇ । ಜೇಥ ಆಟಣೇ ಹೋ ಪಾಹೇ ಜೀವದಶೇ । ತೇಥ ನಿರೋಪಿಲೇ ವ್ಯಾಸೇ । ತೇ ನೇದೀಚ ಹೋ ।೫೩೦॥ ಆಣಿಕ ಶ್ರೀಕೃಷ್ಣಾಚೇ ಬೋಲಣೇ । ಘೋಕರೀ ಆಲೇ ಶ್ರವಣೇ । ಕೀ ದೇಹಸ್ಮೃತೀಚಾ ತೇಣೇ । ವಾಪಸಾ ಕೇಲಾ ।೫೩೧॥ ತೇವ್ಹಾ ನೇತ್ರೀಂಚೇ ಜಳ ವಿಸರ್ಜೀ । ಸರ್ವಾಂಗೀಚಾ ಸ್ವೇದು ಪರಿಮಾರ್ಜೀ । ತೇವೀಂಚಿ ಅವಧಾರಾ ಮ್ಹಣೇ ಹೋಜೀ । ಧೃತರಾಷ್ಟ್ರಾತೇ ।೫೩೨॥ ಆತಾ ಶ್ರೀಕೃಷ್ಣವಾಕ್ಯಬೀಜಾ ನಿವಾಡು । ಆಣೇ ಸಂಜಯ ಸಾತ್ವಿಕಾಚಾ ಬಿವಡು । ಮ್ಹಣೋನಿ ಶ್ರೋತಯಾ ಹೋಈಲ ಸುರವಾಡು । ಪ್ರಮೇಯ ಪಿಕಾಚಾ ।೫೩೩॥ ಅಹೋ ಅಳುಮಾಳ ಅವಧಾನ ದೇಯಾವೇ । ಯೇತುಲೇನಿ ಆನಂದಾಚೇ ರಾಶೀವರೀ ಬೈಸಾವೇ । ಬಾಪ ಶ್ರವಣೇಂದ್ರಿಯಾ ದೈವೇ । ಘಾತಲೀ ಮಾಳ ।೫೩೪॥ ಮ್ಹಣೌನಿ ವಿಭೂತೀಂಚಾ ಠಾವೋ । ಅರ್ಜುನಾ ದಾವೀಲ ಸಿದ್ಧಾಂಚಾ ರಾವೋ । ತೋ ಐಕಾ ಮ್ಹಣೇ ಜ್ಞಾನದೇವೋ । ನಿವೃತ್ತೀಚಾ ।೫೩೫॥

---

ಇತಿ ಶ್ರೀ ಜ್ಞಾನದೇವ ವಿರಚಿತಾಯಾಂ ಭಾವಾರ್ಥದೀಪಿಕಾಯಾಂ ನವಮೋಽಧ್ಯಾಯಃ ।೯॥

ಶ್ಲೋಕ : ೩೪ ಓವಿ ।೫೩೫॥

ಇಷ್ಟು ಮನಸ್ಸಿನ ನಿಶ್ಚಯ ಮಾಡಿ ದೊಡ್ಡ ಸಾಯಾಸದಿಂದ ಹೇಳುವಾಗ ಸಂಜಯನಿಗೆ ಅಷ್ಟಸಾತ್ವಿಕ ಭಾವವು ಉತ್ಪನ್ನ ವಾಯಿತು. ಆಗ ಆತನಿಗೆ ಅದು ಆವರಿಸಲು ಆಗದಾಯಿತು ।೫೨೬॥

ಈ ಸಂಜಯನ ಚಿತ್ತವು ಚಕಿತಗೊಂಡಿತು, ಸಂಕುಚಿತ ವಾಯಿತು. ವಾಣಿಯು ಇದ್ದಲ್ಲಿಯೇ ಸ್ತಬ್ಧಗೊಂಡಿತು. ಪಾದ ದಿಂದ ಮಸ್ತಕದವರೆಗೆ ಹೊದಿಕೆ ಹಾಕಿದಂತೆ ಮೈಮೇಲೆ ರೋಮಾಂಚನವಾಯಿತು ।೫೨೭॥

ಅರ್ಧ ತೆಗೆದ ಕಣ್ಣುಗಳು ಆನಂದಾಶ್ರುಗಳ ಮಳೆಗರೆ ಯುತ್ತಿದ್ದವು. ಒಳಗಿನ ಸುಖಸಾಗರದ ತೆರೆಗಳ ಹೊಡೆತದಿಂದ ಹೊರಗೆ ಶರೀರವು ನಡುಗುತ್ತಿತ್ತು ।೫೨೮॥

ಹಾಗೆಯೇ ಎಲ್ಲ ರೋಮಗಳ ಕೆಳಗೆ ಬೆವರಿನ ನಿರ್ಮಲ ವಾದ ಹನಿಗಳು ಬಂದಿದ್ದರಿಂದ ಮುತ್ತುಗಳ ಜಾಲರಿಯನ್ನು ಹಾಕಿದೆಯೋ ಎಂಬಂತೆ ಭಾಸವಾಗುತ್ತಿತ್ತು ।೫೨೯॥

ಈ ಮಹಾಸುಖದ ಪ್ರೇಮದಿಂದ ಜೀವದೆಶೆಯು ಇಲ್ಲದಂತಾಗಿ ಶ್ರೀ ವ್ಯಾಸರು ಕೊಟ್ಟಿರುವ ಕಾರ್ಯ ಮಾಡ ದಂತಾಯಿತು ।೫೩೦॥

ಇಷ್ಟರಲ್ಲಿ ಶ್ರೀಕೃಷ್ಣಾರ್ಜುನರ ಸಂವಾದವು ಘೋಷ ಘೋ ಎಂದು ಕಿವಿಯಲ್ಲಿ ಬೀಳಹತ್ತಿತು. ಇದರಿಂದ ಸಂಜಯನು ದೇಹಸ್ಥಿತಿಗೆ ಮರಳಿದನು।೫೩೧॥

ಆಗ ಲಗುಬಗೆಯಿಂದ ಕಣ್ಣುಗಳ ನೀರನ್ನು ಒರೆಸುತ್ತ ಮತ್ತು ಸರ್ವಾಂಗದ ಬೆವರನ್ನು ಸಹ ಒರೆಸುತ್ತ ಧೃತರಾಷ್ಟ್ರನಿಗೆ ಹೇಳಿದನು, ಮಹಾರಾಜರೇ ಕೇಳಿರಿ ।೫೩೨॥

ಈಗ ಕೃಷ್ಣವಾಕ್ಯರೂಪ ಆರಿಸಿಕೊಂಡ ಶುದ್ಧ ಬೀಜಗಳನ್ನು ಸಂಜಯನ ಸಾತ್ತ್ವಿಕತೆಯ ಪುನರ್ವಾಪನೆಯ ಹಂಗಾಮ ದೊರೆತದ್ದರಿಂದ ಶ್ರೋತೃಗಳಿಗೆ ಸಿದ್ಧಾಂತರೂಪ ಫಲದ ಸುಕಾಳವಾದೀತು ।೫೩೩॥

ಅಹೋ, ಕಿಂಚಿತ್ ಅವಧಾನ ಕೊಟ್ಟರೆ ಆನಂದರೂಪ ರಾಶಿಯ ಮೇಲೆ ಕುಳಿತುಕೊಳ್ಳಬಹುದು. ಯಾಕೆಂದರೆ ಶ್ರವಣೇಂದ್ರಿಯಗಳಿಗೆ ದೈವದಿಂದ ಮಾಲೆಯನ್ನು ಹಾಕಿದೆ ಇದು ಎಂತಹ ಭಾಗ್ಯ ।೫೩೪॥

ಆದ್ದರಿಂದ ಈಶ್ವರ ವಿಭೂತಿಗಳ ಸ್ಥಾನಗಳನ್ನು ಸರ್ವ ಸಿದ್ಧರ ರಾಜನಾದ ಶ್ರೀಕೃಷ್ಣಪರಮಾತ್ಮನು ಅರ್ಜುನನಿಗೆ ತೋರಿಸುವನು. ನಿವೃತ್ತಿದಾಸರಾದ ಶ್ರೀಜ್ಞಾನೇಶ್ವರರು ಈ ಕಥೆಯನ್ನು ಕೇಳಿರಿ ಎಂದರು ।೫೩೫॥

ಶ್ರೀಜ್ಞಾನೇಶ್ವರ ಮಹಾರಾಜರಿಂದ ರಚಿತವಾದ ಭಾವಾರ್ಥ ದೀಪಿಕೆಯ ಒಂಭತ್ತನೆಯ ಅಧ್ಯಾಯದ ವಿವರಣೆ ಸಮಾಪ್ತವು

# ಸಾರ್ಥ ಶ್ರೀಜ್ಞಾನೇಶ್ವರೀ

## ಅಧ್ಯಾಯ ದಹಾವಾ

ಶ್ರೀ ಗಣೇಶಾಯ ನಮಃ

ನಮೋ ವಿಶದಬೋಧವಿದ್ಗ್ದಾ । ವಿದ್ಯಾರವಿಂದಪ್ರಬೋಧಾ । ಪರಾಪ್ರಮೇಯ ಪ್ರಮದಾ । ವಿಲಾಸಿಯಾ ॥೧॥ ನಮೋ ಸಂಸಾರತಮಸೂರ್ಯಾ । ಅಪರಿಮಿತಾ ಪರಮವೀರ್ಯಾ । ತರುಣತರತೂರ್ಯಾ । ಲಾಲನಲೀಲಾ ॥೨॥ ನಮೋ ಜಗದಖಿಲ ಪಾಲನಾ । ಮಂಗಳಮಣಿನಿಧಾನಾ । ಸಜ್ಜನವನಚಂದನಾ । ಆರಾಧ್ಯಲಿಂಗಾ ॥೩॥ ನಮೋ ಚತುರಚಿತ್ತಚಕೋರಚಂದ್ರಾ । ಆತ್ಮಾನುಭವನರೇಂದ್ರಾ । ಶ್ರುತಿಸಾರಸಮುದ್ರಾ । ಮನ್ಮಥ ಮನ್ಮಥಾ ॥೪॥ ನಮೋ ಸುಭಾವಭಜನಭಾಜನಾ । ಭವೇಭಕುಂಭಭಂಜನಾ । ವಿಶ್ವೋದ್ಭವ ಬುವನಾ । ಶ್ರೀಗುರುರಾಯಾ ॥೫॥ ತುಮಚಾ ಅನುಗ್ರಹೋ ಗಣೇಶು । ಜೈ ದೇ ಆಪುಲಾ ಸೌರಸು । ತೈ ಸಾರಸ್ವತೀ ಪ್ರವೇಶು । ಬಾಳಕಾಹೀ ಆಥೀ ॥೬॥ ಜೀ ದೈವಿಕೀ ಉದಾರ ವಾಚಾ । ಜೈ ಉದ್ದೇಶು ದೇ ನಾಭಿಕಾರಾಚಾ । ತೈ ನವರಸಸುಧಾಬ್ಧೀಚಾ । ಥಾವೋ ಲಾಭೇ ॥೭॥ ಜೀ ಆಪುಲಿಯಾ ಸ್ನೇಹಾಚೀ ವಾಗೇಶ್ವರೀ । ಜರೀ ಮುಕಯಾತೇ ಅಂಗಿಕಾರೀ । ತೋ ವಾಚಸ್ಪತೀಶೀ ಕರೀ । ಪ್ರಬಂಧುಹೋಡಾ ॥೮॥ ಹೇ ಅಸೋ ದಿಠೀ ಜಯಾವರೀ ಝಳಕೇ । ಕೀ ಹಾ ಪದ್ಮಕರು ಮಾಥಾ ಪಾರುಖೇ । ತೋ ಜೀವಚಿ ಪರಿ ತುಕೇ । ಮಹೇಶೇಸೀ ॥೯॥ ಏವಢೇ ಜಿಯೇ ಮಹಿಮೇಚೇ ಕರಣೇ । ತೇ ವಾಚಾಬಳೇ ವಾನೂ ಮೀ ಕವಣೇ । ಕಾ ಸೂರ್ಯಾಚಿಯಾ ಆಂಗಾ ಉಟಣೇ । ಲಾಗತ ಅಸೇ? ॥೧೦॥ ಕೇಉತಾ ಕಲ್ಪತರುವರೀ ಫುಲೌರಾ? । ಕಾಯಸೇನಿ ಪಾಹುಣೇರಾ ಕ್ಷೀರಸಾಗರಾ? । ಕವಣೇ ವಾಸೀ ಕಾಪುರಾ । ಸುವಾಸು ದೇವೋ? ॥೧೧॥ ಚಂದನಾತೇ ಕಾಯಸೇನಿ ಚರ್ಚಾವೇ । ಅಮೃತಾತೇ ಕೇಉತೇ ರಾಂಧಾವೇ ।ಗಗನಾವರೀ ಉಭವಾವೇ । ಘಡೇ ಕೇವೀ? ॥೧೨॥ ತೈಸೇ ಶ್ರೀಗುರೂಚೇ ಮಹಿಮಾನ । ಆಕಳಿತೇ ಕೇ ಅಸೇ ಸಾಧನ? । ಹೇ ಜಾಣೋನಿ ಮಿಯಾ ನಮನ । ನಿವಾಂತ ಕೇಲೇ ॥೧೩॥

# ಸಾರ್ಥ ಶ್ರೀಜ್ಞಾನೇಶ್ವರೀ

## ಹತ್ತನೆಯ ಅಧ್ಯಾಯ

ಸ್ಪಷ್ಟವಾಗಿ ಬೋಧಿಸುವ ವಿಷಯಕ್ಕೆ ಕುಶಲನೂ, ವಿದ್ಯೆ ಎಂಬ ಕಮಲವನ್ನು ವಿಕಾಸಗೊಳಿಸುವವನೂ, ಮತ್ತು ಪರಾವಾಣಿಯ ಪ್ರಮೇಯರೂಪ ತರುಣ ಸ್ತ್ರೀಯಲ್ಲಿ ವಿಲಾಸಿಸುವವನೂ ಆದ (ಶ್ರೀಗುರುವೇ) ನಿನಗೆ ನನ್ನ ನಮಸ್ಕಾರವು ।೧॥

ಸಂಸಾರರೂಪ ಕತ್ತಲೆಯನ್ನು ನಾಶಮಾಡುವ ಸೂರ್ಯನು ನೀನು, ನಿನ್ನ ಸಾಮರ್ಥ್ಯವು ಅಪಾರವಾದದ್ದು. ತಾರುಣ್ಯದ ಭರದಲ್ಲಿ ತುರ್ಯಾವಸ್ಥೆಯೊಂದಿಗೆ ವಿಲಾಸ ಮಾಡುವ ನಿನಗೆ ನನ್ನ ನಮಸ್ಕಾರವು ।೨॥

ಸರ್ವ ಜಗತ್ತಿನ ಪಾಲನೆ ಮಾಡುವವನು, ಕಲ್ಯಾಣ ರೂಪ ರತ್ನದ ನಿಧಿಯು, ಸಜ್ಜನರೂಪ ವನದಲ್ಲಿ ಚಂದನ ದಂತೆ ಶ್ರೇಷ್ಠನು, ಮತ್ತು ಆರಾಧಿಸಲಿಕ್ಕೆ ಯೋಗ್ಯನು. ಹೀಗಿರುವ ನಿನಗೆ ನನ್ನ ನಮಸ್ಕಾರವು ।೩॥

ಭಕ್ತರ ಚಿತ್ತರೂಪ ಚಕೋರ ಪಕ್ಷಿಗೆ ನೀನು ಚಂದ್ರನು, ಬ್ರಹ್ಮಾನಂದರೂಪ ಅನುಭವದ ರಾಜನು, ಶೃತಿ ಜ್ಞಾನದ ಸಮುದ್ರನು ಮತ್ತು ಮದನನ ನಾಶ ಮಾಡುವವನು, ಹೀಗಿರುವ ನಿನಗೆ ನನ್ನ ನಮಸ್ಕಾರವು ।೪॥

ಭಾವಯುಕ್ತ ಜ್ಞಾನದ ಭಜನೆಗೆ ಪಾತ್ರನು, ಸಂಸಾರ ರೂಪ ಆನೆಯ ಗಂಡಸ್ಥಳ ಒಡೆಯುವವನು ಮತ್ತು ಜಗತ್ತಿನ ಉತ್ಪತ್ತಿಸ್ಥಾನನು, ಹೀಗಿರುವ ಶ್ರೀಗುರುವೇ, ನಿನಗೆ ನನ್ನ ನಮಸ್ಕಾರವು ।೫॥

ನಿಮ್ಮ ಕೃಪಾರೂಪ ಗಣೇಶನ ಪ್ರಸಾದ ದೊರಕಿತೆಂದರೆ ಚಿಕ್ಕ ಬಾಲಕನಿಗೂ ಶಾಸ್ತ್ರಗಳ ಗುಹ್ಯ ಸಿದ್ಧಾಂತಗಳ ಜ್ಞಾನವಾಗುವುದು ।೬॥

ಗುರುವಿನ ಉದಾರ ವಾಣಿಯಿಂದ ಅಭಯ ವಚನ ದೊರಕಿದಾಗ ನವರಸರೂಪ ಅಮೃತಸಾಗರದ ಆಳವು ತಿಳಿಯುವುದು ।೭॥

ತನ್ನ ಪ್ರೇಮದ ಸರಸ್ವತಿಯು ಒಬ್ಬ ಮೂಕನನ್ನು ಅಂಗೀಕಾರ ಮಾಡಿದರೆ, ಆಗ ಆತನು ಗ್ರಂಥ ತಯಾರಿಸಲು ಬೃಹಸ್ಪತಿಯೊಡನೆಯೂ ಸ್ಪರ್ಧೆ ಮಾಡಬಹುದು ।೮॥

ಹೆಚ್ಚಿಗೇನು ಹೇಳಬೇಕು? ಯಾರ ಮೇಲೆ ಇವರ ಕೃಪಾದೃಷ್ಟಿ ಬೀಳುವುದೋ, ಅಥವಾ ಯಾರ ಮಸ್ತಕದ ಮೇಲೆ ಇವರ ವರದ ಹಸ್ತ ಬೀಳುವುದೋ, ಆತನು ಜೀವನಿದ್ದರೂ ಈಶ್ವರನ ಸಮಾನನಾಗುವನು ।೯॥

ಹೀಗೆ ಗುರುಕೃಪೆಯ ಮಹಿಮೆಯಾಗಿರುವುದು. ಇದರ ವರ್ಣನೆಯನ್ನು ನಾನು ಯಾವ ವಾಣಿಯ ಬಲದಿಂದ ಮಾಡಲಿ? ಏಕೆಂದರೆ ಸೂರ್ಯನ ಅಂಗಕ್ಕೆ ತಿಕ್ಕಿ ಸ್ವಚ್ಛ ಮಾಡಲು ಬರುವುದೇ? ।೧೦॥

ಕಲ್ಪತರುವಿಗೆ ಹೂವು ಬಿಡುವ ಇಚ್ಛೆಯು ಏಕೆ? ಕ್ಷೀರಸಾಗರಕ್ಕೆ ಏತರ ಉಪಚಾರ? ಕರ್ಪುರಕ್ಕೆ ಯಾವುದರ ಸುಗಂಧ ಕೊಡಲಾದೀತು? ।೧೧॥

ಚಂದನಕ್ಕೆ ಇನ್ನೇತರ ಲೇಪನ ಮಾಡಬೇಕು? ಅಮೃತಕ್ಕೆ ಹೇಗೆ ಕುದಿಸಬೇಕು? ಆಕಾಶಕ್ಕಿಂತಲೂ ಹೆಚ್ಚಿಗೆ ಎತ್ತರ ಯಾವುದು, ಹೇಗೆ ನಿಲ್ಲಿಸಬೇಕು? ।೧೨॥

ಅದರಂತೆಯೇ, ಶ್ರೀಗುರುಗಳ ಮಹಿಮೆಯನ್ನು ತಿಳಿಯಲು ಯಾವ ಸಾಧನವಿದೆ? ಇದನ್ನರಿತು ನಾನು ಗುರುಗಳಿಗೆ ಮೌನದಿಂದ ಸ್ವಸ್ಥನಾಗಿ ನಮಸ್ಕರಿಸಿದೆನು ।೧೩॥

ಜರೀ ಪ್ರಜ್ಞೇಚೇನಿ ಆಥಿಲೇಪಣೇ । ಶ್ರೀಗುರುಸಾಮಾರ್ಥ್ಯಾ ರೂಪ ಕರೂ ಮ್ಹಣೇ । ತರೀ ತೇ ಮೋತಿಯಾ ಭಿಂಗ ದೇಣೇ । ತೈಸೇ ಹೋಈಲ ।೧೪॥ ಕಾ ಸಾಡೇಪಂಧರಯಾ ರಜತವಣೇ । ತೈಶೀ ಸ್ತುತೀಂಚೀ ಬೋಲಣೇ । ಉಗಿಯಾಚಿ ಮಾಥಾ ಠೇವಿಜೇ ಚರಣೇ । ಹೇಂಚಿ ಭಲೇ ।೧೫॥ ಮಗ ಮ್ಹಣಿತಲೇ ಜೀ ಸ್ವಾಮೀ । ಭಲೇನಿ ಮಮತ್ವೇ ದೇಖಿಲೇ ತುಮ್ಹೀ । ಮ್ಹಣೌನಿ ಕೃಷ್ಣಾರ್ಜುನಸಂಗಮೀ । ಪ್ರಯಾಗವಟು ಜಾಹಲೋ ।೧೬॥ ಮಾಗಾ ದೂಧ ದೇ ಮ್ಹಣತಲಿಯಾಸಾಠೀ । ಆಘವಿಯಾ ಕ್ಷೀರಾಬ್ಧಿಚೀ ಕರೂನಿ ವಾಟೀ । ಉಪಮನ್ಯೂಪುಢೇ ಧೂರ್ಜಟೀ । ಠೇವಿಲೀ ಜೈಸೀ ।೧೭॥ ನಾ ತರೀ ವೈಕುಂಠ ಪೀಠ ನಾಯಕೇ । ರುಸಲಾ ಧ್ರುವ ಕವತಿಕೇ । ಬುಝಾವಿಲಾ ದೇಊನಿ ಭಾತುಕೇ । ಧ್ರುವ ಪದಾಚೇ ।೧೮॥ ತೈಸೀ ಜೇ ಬ್ರಹ್ಮವಿದ್ಯಾರಾವೋ । ಸಕಲ ಶಾಸ್ತ್ರಾಂಚಾ ವಿಸಂವತಾ ಠಾವೋ । ತೇ ಭಗವದ್ಗೀತಾ ಓವಿಯೇ ಗಾವೋ । ಐಸೇ ಕೇಲೇ ।೧೯॥ ಜೇ ಬೋಲಣಿಯಾಚೇ ರಾನೀ ಹಿಂಡತಾ । ನಾಯಕಿಜೇ ಫಳಲಿಯಾ ಅಕ್ಷರಾಚೀ ವಾರ್ತಾ । ಪರಿ ತೇ ವಾಚಾಚಿ ಕೇಲೀ ಕಲ್ಪಲತಾ । ವಿವೇಕಾಚೀ ।೨೦॥ ಹೋತೀ ದೇಹಬುದ್ಧಿ ಏಕಸರೀ । ತೇ ಆನಂದ ಭಾಂಡಾರ ಕೇಲೇ ವೋವರೀ । ಮನ ಗೀತಾರ್ಥಸಾಗರೀ । ಜಳಶಯನ ಜಾಲೇ ।೨೧॥ ಐಸೇ ಏಕೇಕ ದೇವಾಂಚೇ ಕರಣೇ । ತೇ ಅಪಾರ ಬೋಲೋ ಕೇವೀ ಮೀ ಜಾಣೇ । ತರ್ಹಿ ಅನುವಾದಲೋ ಧೀಟಪಣೇ । ತೇ ಉಪಸಾಹಿಜೋ ಜೀ ।೨೨॥ ಆತಾ ಆಪುಲೇನಿ ಕೃಪಾಪ್ರಸಾದೇ । ಮಿಯಾ ಭಗವದ್ಗೀತಾ ಓವೀಪ್ರಬಂಧೇ । ಪೂರ್ವಖಂಡ ವಿನೋದೇ । ವಾಖಾಣಿಲೇ ।೨೩॥ ಪ್ರಥಮೀ ಅರ್ಜುನಾಚಾ ವಿಷಾದು । ದುಜೀ ಬೋಲಿಲಾ ಯೋಗು ವಿಶದು । ಪರಿ ಸಾಂಖ್ಯಬುದ್ಧೀಸೀ ಭೇದು । ದಾಊನಿಯಾ ।೨೪॥ ತಿಜೀ ಕೇವಳ ಕರ್ಮ ಪ್ರತಿಷ್ಠಿಲೇ । ತೇಂಚಿ ಚತುರ್ಥೀ ಜ್ಞಾನೇಶೀ ಪ್ರಗಟಿಲೇ । ಪಂಚಮೀ ಗವ್ಹರಿಲೇ । ಯೋಗ ತತ್ತ್ವ ।೨೫॥ ತೇಚಿ ಷಷ್ಠಾಮಾಜೀ ಪ್ರಗಟ । ಆಸನಾ ಲಾಗೋನಿ ಸ್ಪಷ್ಟ । ಜೀವಾತ್ಮ ಭಾವ ಏಕವಟ । ಹೋತೀ ಜೇಣೇ ।೨೬॥ ತೈಸೀ ಜೇ ಯೋಗಸ್ಥಿತೀ । ಆಣಿ ಯೋಗಭ್ರಷ್ಟಾ ಜೇ ಗತೀ । ತೇ ಆಘವೀಚಿ ಉಪಪತ್ತೀ । ಸಾಂಗಿತಲೀ ಷಷ್ಠೀ ।೨೭॥ ತಯಾವರೀ ಸಪ್ತಮೀ । ಪ್ರಕೃತಿಪರಿಹಾರ ಉಪಕ್ರಮೀ । ಕರೂನಿ ಭಜತೀ ಜೇ ಪುರುಷೋತ್ತಮೀ । ತೇ ಬೋಲಿಲೇ ಚಾರ್ಹಿ ।೨೮॥

ಒಂದು ವೇಳೆ ಬುದ್ಧಿಯ ಬಲದಿಂದ ಶ್ರೀಗುರುಗಳ ಸಾಮರ್ಥ್ಯದ ವರ್ಣನೆ ಮಾಡಲು ಹೋದರೆ ಪರಿಶುದ್ಧವಾದ ಮುತ್ತುಗಳಿಗೆ ಅಭ್ರಕದ ಪುಟಕೊಟ್ಟಂತಾದೀತು ॥೧೪॥

ಶುದ್ಧವಾದ ಬಂಗಾರದ ಮೇಲೆ ಬೆಳ್ಳಿಯ (ಮುಲಾಮು) ಲೇಪವು ವ್ಯರ್ಥ. ಅದರಂತೆ ಶ್ರೀಗುರುಗಳ ಸ್ತುತಿ ಮಾಡಲು ಹೋದರೆ ವ್ಯರ್ಥವಾಗುವುದು. ಆದ್ದರಿಂದ ಗುರುಚರಣಕ್ಕೆ ಲೀನನಾಗಿ ಅವರ ಪಾದಕ್ಕೆ ಮಸ್ತಕ ಇಡುವುದು ಇದೇ ಉತ್ತಮವು ॥೧೫॥

ನಂತರ ಜ್ಞಾನೇಶ್ವರ ಮಹಾರಾಜರು ಹೇಳಿದರು:- ಹೇ ಸ್ವಾಮಿಯೇ, ನೀವು ನನ್ನ ಮೇಲೆ ಮಮತೆಯಿಂದ ಕೃಪಾದೃಷ್ಟಿ ತೋರಿದ್ದರಿಂದ ಕೃಷ್ಣಾರ್ಜುನ ಸಂವಾದರೂಪ ಸಂಗಮದಲ್ಲಿ ನಾನು ಪ್ರಯಾಗದ ವಟವೃಕ್ಷನಾದೆನು ॥೧೬॥

ಪೂರ್ವದಲ್ಲಿ ''ನನಗೆ ಹಾಲು ಬೇಕು'' ಎಂದು ಉಪಮನ್ಯು ಬೇಡಿದಾಗ ಶಂಕರನು ಕ್ಷೀರಸಮುದ್ರವನ್ನೇ ಬಟ್ಟಲು ಮಾಡಿ ಆತನ ಮುಂದಿಟ್ಟನು ॥೧೭॥

ಅಥವಾ ಧ್ರುವನು ಮುನಿಸುಗೊಂಡಾಗ ಆತನಿಗೆ ಅಢಳ ಪದದ ಖಾದ್ಯವನ್ನು ಕೊಟ್ಟು, ಶ್ರೀವಿಷ್ಣು ಆತನಿಗೆ ಸಮಾಧಾನಪಡಿಸಿದನು ॥೧೮॥

ಅದರಂತೆ ಬ್ರಹ್ಮವಿದ್ಯೆಯಲ್ಲಿ ಶ್ರೇಷ್ಠವಾದ ಮತ್ತು ಸರ್ವಶಾಸ್ತ್ರದ ವಿಶ್ರಾಂತಿ ಸ್ಥಾನವಾದ ಈ ಅಧ್ಯಾತ್ಮ ವಿದ್ಯಾ ರೂಪ ಭಗವದ್ಗೀತೆಯನ್ನು ಓವಿ ರೂಪದಿಂದ ವರ್ಣಿಸಲಿಕ್ಕೆ ನನಗೆ ಶಕ್ತಿ ನೀಡಿದರು ॥೧೯॥

ಭಾಷಣದ ಅಡವಿಯಲ್ಲಿ ಅಡ್ಡಾಡಲು ಫಲದ್ರೂಪವಾದ ಒಂದು ಅಕ್ಷರವೂ ಕೇಳಿ ಬರುವುದಿಲ್ಲ. ಆದರೆ ಇಂತಹ ಫಲದ್ರೂಪ ವಿಚಾರಯುಕ್ತ ನನ್ನ ವಾಣಿಯನ್ನು ಶ್ರೀಗುರುಗಳು ಕಲ್ಪವೃಕ್ಷವನ್ನಾಗಿ ಮಾಡಿದರು ॥೨೦॥

ನನ್ನ ಬುದ್ಧಿಯ ಗತಿಯು ದೇಹದ ಆಚೆಗೆ ಹೋಗಿದ್ದಿಲ್ಲ. ಆ ಬುದ್ಧಿಯನ್ನು ಈಗ ಬ್ರಹ್ಮಾನಂದ ರೂಪ ಭಾಂಡಾರದ ಸ್ಥಾನವನ್ನಾಗಿ ಮಾಡಿರುವರು ಮತ್ತು ನನ್ನ ಮನಸ್ಸಿಗೆ ಗೀತಾರ್ಥರೂಪ ಸಾಗರದಲ್ಲಿ ಜಲಶಯನ ಕೊಟ್ಟರು ॥೨೧॥

ಈ ಪ್ರಕಾರವಾಗಿ ಶ್ರೀಗುರುಗಳ ಒಂದೊಂದೇ ಘಟನೆಗಳು ಅಗಾಧವಾದ್ದರಿಂದ ನನಗೆ ಅವರ ಅಪಾರ ಸಾಮರ್ಥ್ಯದ ವರ್ಣನೆ ಹೇಗೆ ಮಾಡಲಾದೀತು? ಆದರೂ ಏನೋ ದಿಟ್ಟತನದಿಂದ ಹೇಳಿದ್ದಕ್ಕೆ ಮಹಾರಾಜರೇ ಕ್ಷಮಿಸಿರಿ ॥೨೨॥

ಇಲ್ಲಿಯವರೆಗೆ ನಿಮ್ಮ ಕೃಪಾಪ್ರಸಾದದಿಂದ ನಾನು ಭಗವದ್ಗೀತೆಯ ಪೂರ್ವಖಂಡದ ಓವಿಬದ್ಧ ವರ್ಣನೆಯನ್ನು ಸಹಜ ಲೀಲೆಯಿಂದ ಮಾಡಿರುವೆನು ॥೨೩॥

ಮೊದಲನೆಯ ಅಧ್ಯಾಯದಲ್ಲಿ ಅರ್ಜುನನ ವಿಷಾದವನ್ನು ಹೇಳಿದೆ. ಎರಡನೆಯ ಅಧ್ಯಾಯದಲ್ಲಿ ಸಾಂಖ್ಯಯೋಗ ಮತ್ತು ಬುದ್ಧಿಯೋಗ ಇದರಲ್ಲಿ ಯಾವ ಸ್ವರೂಪದಲ್ಲಿ ಭೇದವಿದೆ ಎಂಬುದನ್ನು ಸ್ಪಷ್ಟಪಡಿಸಿದೆ ॥೨೪॥

ಮೂರನೆಯ ಅಧ್ಯಾಯದಲ್ಲಿ ಕೇವಲ ನಿಷ್ಕಾಮ ಕರ್ಮವನ್ನೇ ಸಾಧಕರಿಗೆ ಯೋಗ್ಯವೆಂದು ಸಿದ್ಧ ಮಾಡಿದೆ. ನಾಲ್ಕನೆಯ ಅಧ್ಯಾಯದಲ್ಲಿ ಅದೇ ನಿಷ್ಕಾಮ ಕರ್ಮವನ್ನು ಜ್ಞಾನ ಸಹ ಹೇಳಿದೆ. ಐದನೆಯ ಅಧ್ಯಾಯದಲ್ಲಿ ಯೋಗತತ್ತ್ವವನ್ನು ಸೂಚಿಸಿದೆ ॥೨೫॥

ಅದೇ ಯೋಗತತ್ತ್ವವನ್ನು ಆರನೆಯ ಅಧ್ಯಾಯದಲ್ಲಿ ಆಸನ ವಿಧಿಯಿಂದ ಹಿಡಿದು ಜೀವದ ಐಕ್ಯವಾಗುವವರೆಗೆ ಸ್ಪಷ್ಟವಾಗಿ ಹೇಳಿದೆ ॥೨೬॥

ಅದರಂತೆ ಅಷ್ಟಾಂಗ ಯೋಗ ಸ್ಥಿತಿ ಮತ್ತು ಯೋಗ ಭ್ರಷ್ಟರಿಗೆ ದೊರಕುವ ಗತಿ, ಈ ವಿಷಯಕ್ಕೆ ಎಲ್ಲ ಸಿದ್ಧಾಂತವನ್ನು ಆರನೆಯ ಅಧ್ಯಾಯದಲ್ಲಿ ಹೇಳಿರುವುದು ॥೨೭॥

ನಂತರ ಏಳನೆಯ ಅಧ್ಯಾಯದಲ್ಲಿ ಆರಂಭಕ್ಕೆ ಪ್ರಕೃತಿಯ ಉಪಕ್ರಮ ಮತ್ತು ಪರಿಹಾರ ಹೇಳಿ, ತದನಂತರ ಈಶ್ವರ ಭಜನೆ ಮಾಡುವವರ ನಾಲ್ಕು ಪ್ರಕಾರದ ಭಕ್ತರ ವರ್ಣನೆ ಮಾಡಿದೆ ॥೨೮॥

ಪಾಠೀ ಸಪ್ತ ಪ್ರಶ್ನ ವಿಧಿ । ಬೋಲೋನಿ ಪ್ರಯಾಣಸಮಯಸಿದ್ಧೀ । ಏವಂ ಸಕಳ ವಾಕ್ಯಾವಧಿ । ಅಷ್ಟಮಾಧ್ಯಾಯೀ ।೨೯॥ ಮಗ ಶಬ್ದಬ್ರಹ್ಮೀ ಅಸಂಖ್ಯಾಕೇ । ಜೇತುಲಾ ಕಾಂಹೀ ಅಭಿಪ್ರಾಯ ಪಿಕೇ । ತೇತುಲಾ ಮಹಾಭಾರತೇ ಏಕೇ । ಲಕ್ಷೀ ಜೋಡೇ ।೩೦॥ ತಿಯೇ ಆಘವಾಂಚಿ ಜೇ ಮಹಾಭಾರತೀ । ತೇ ಲಾಭೇ ಕೃಷ್ಣಾರ್ಜುನವಾಚೋಕ್ತೀ । ಆಣಿ ಜೋ ಅಭಿಪ್ರಾವೋ ಸಾತೇಶತೀ । ತೋ ಏಕಲಾಚಿ ನವಮೀ ।೩೧॥ಮ್ಹಣೌನಿ ನವಮೀಂಚಿಯಾ ಅಭಿಪ್ರಾಯಾ । ಸಹಸಾ ಮುದ್ರಾ ಲಾವಾವಯಾ । ಬಿಹಾಲಾ ಮಗ ಮೀ ವಾಯಾ । ಗರ್ವ ಕಾ ಕರೂ? ।೩೨॥ ಅಹೋ ಗೂಳಾಸಾಖರೇ ಮಾಲಯಾಚೇ । ಹೇ ಬಾಂಧೇ ತರೀ ಏಕಾಚಿ ರಸಾಚೇ । ಪರಿ ಸ್ವಾದ ಗೋಡಿಯೇಚೇ । ಆನಆನ ಜೈಸೇ ।೩೩॥ ಏಕ ಜಾಣೋನಿಯಾ ಬೋಲತಿ । ಏಕ ಠಾಯೇ ಠಾವೋ ಜಾಣವಿತೀ । ಏಕ ಜಾಣೋ ಜಾತಾ ಹಾರಪತೀ । ಜಾಣತೇ ಗುಣೇಶೀ ।೩೪॥ ಹೇ ಐಸೇ ಅಧ್ಯಾಯ ಗೀತೇಚೇ । ಪರಿ ಅನಿರ್ವಾಚ್ಯಾಪಣ ನವಮಾಚೇ । ತೋ ಅನುವಾದಲೋ ಹೇ ತುಮಚೇ । ಸಾಮರ್ಥ್ಯ ಪ್ರಭೂ ।೩೫॥ ಅಹೋ ಏಕಾಚಿ ಶಾಟೀ ತಪಿನ್ನಲೀ । ಏಕೀ ಸೃಷ್ಟೀವರೀ ಸೃಷ್ಟೀ ಕೇಲೀ । ಏಕೀ ಪಾಷಾಣೇ ವಾಳೂನಿ ಉತರಲೀ । ಸಮುದ್ರೀ ಕಟಕೇ ।೩೬॥ ಏಕೀ ಆಕಾಶೀ ಸೂರ್ಯಾತೇ ಧರಿಲೇ । ಏಕೀ ಚುಳೀಂಚಿ ಸಾಗರಾತೇ ಭರಿಲೇ । ತೈಸೇ ಮಜ ಮುಕಯಾಕರವೀ ಬೋಲವಿಲೇ । ಅನಿರ್ವಾಚ್ಯ ತುಮ್ಹೀ ।೩೭॥ ಪರಿ ಹೇ ಅಸೋ ಏಥ ಐಸೇ। ರಾಮ ರಾವಣ ಝುಂಜಿನ್ನಲೇ ಕೈಸೇ ।ರಾಮ ರಾವಣ ಜೈಸೇ । ಮೀನಲೇ ಸಮರೀ ।೩೮॥ ತೈಸೇ ನವಮೀ ಕೃಷ್ಣಾಚೇ ಬೋಲಣೇ । ತೇ ನವಮೀಚಿಯಾಚಿ ಐಸೇ ಮೀ ಮ್ಹಣೇ । ಯಾ ನಿವಾಡಾ ತತ್ತ್ವಜ್ಞು ಜಾಣೇ । ಜಯಾ ಗೀತಾರ್ಥು ಹಾತೀ ।೩೯॥ ಏವಂ ನವಹೀ ಅಧ್ಯಾಯ ಪಹಿಲೇ । ಮಿಯಾ ಮತೀಸಾರಿಖೇ ವಾಖಾಣಿಲೇ । ಆತಾ ಉತ್ತರಖಂಡ ಉವಾಇಲೇ । ಗ್ರಂಥಾಚೇ ಐಕಾ ।೪೦॥ ಜೇಥ ವಿಭೂತಿ ಪ್ರತಿವಿಭೂತೀ । ಪ್ರಸ್ತುತ ಅರ್ಜುನಾ ಸಾಂಗಿಜೇತೀ । ತೇ ವಿದ್ಗದಾ ರಸವೃತ್ತೀ । ಮ್ಹಣಿಪ್ಯೆಲ ಕಥಾ ।೪೧॥ ದೇಶಿಯೇಂಚೇನಿ ನಾಗರಪಣೇ । ಶಾಂತು ಶೃಂಗಾರಾತೇ ಜಿಣೇ । ತರಿ ಓವಿಯಾ ಹೋತೀ ಲೇಣೇ । ಸಾಹಿತ್ಯಾಸಿ ।೪೨॥ ಮೂಳಗ್ರಂಥೀ ಚಿಯಾ ಸಂಸ್ಕೃತಾ । ವರಿ ಮರ್ಹಾಠೀ ನೀಟ ಪಢತಾ । ಅಭಿಪ್ರಾಯಾ ಮಾನಲಿಯಾ ಉಚಿತಾ । ಕವಣ ಭೂಮೀ ಹೇ ನ ಚೋಜವೇ ।೪೩॥

ಮುಂದೆ ಸಪ್ತ ಪ್ರಶ್ನೆಗಳ ಸ್ಪಷ್ಟೀಕರಣ ಮಾಡಿ ಕಾಲಾನು ರೋಧದಿಂದ ಯಾವ ಸ್ಥಿತಿ ಪ್ರಾಪ್ತವಾಗುವುದೆಂಬುದನ್ನು ಎಂಟನೆಯ ಅಧ್ಯಾಯದ ಕೊನೆಯವರೆಗೂ ಹೇಳಿದೆ ।೨೯॥

ಆಗ ಅನಂತ ವೇದಗಳಲ್ಲಿ ಇರುವ ಎಲ್ಲ ಅಭಿಪ್ರಾಯ ಗಳು ಒಂದು ಲಕ್ಷ ಶ್ಲೋಕಗಳಿರುವ ಮಹಾಭಾರತ ಗ್ರಂಥ ದಲ್ಲಿ ಪ್ರಾಪ್ತವಾಗುವುದು ।೩೦॥

ಈ ಮಹಾಭಾರತದಲ್ಲಿ ಹೇಳಿದ ಎಲ್ಲ ಅಭಿಪ್ರಾಯ ಗಳನ್ನು ಶ್ರೀಕೃಷ್ಣಾರ್ಜುನರ ಸಂವಾದ ರೂಪಗೀತೆಯ ಏಳುನೂರು ಶ್ಲೋಕಗಳಲ್ಲಿ ಹೇಳಿದೆ ಮತ್ತು ಅದೆಲ್ಲವೂ ಒಂದೇ ಒಂದು ಒಂಬತ್ತನೆಯ ಅಧ್ಯಾಯದಲ್ಲಿ ಹೇಳಿದೆ ।೩೧॥

ಆದ್ದರಿಂದ ಒಂಬತ್ತನೆಯ ಅಧ್ಯಾಯದಲ್ಲಿನ ಅಭಿಪ್ರಾಯಕ್ಕೆ ಅವಸರದಿಂದ ಉತ್ತಮತನದ ಮುದ್ರೆ ಒತ್ತಲು ನಾನು ಹೆದರಿರುವೆನು, ಇದನ್ನು ಸ್ಪಷ್ಟವಾಗಿ ಹೇಳುವೆನು ಎಂದು ವ್ಯರ್ಥವಾಗಿ ಏಕೆ ಗರ್ವಪಡಲಿ? ।೩೨॥

ಬೆಲ್ಲ, ಸಕ್ಕರೆ, ಕಾಕಂಬಿಗಳನ್ನು ಒಂದೇ ಕಬ್ಬಿನ ರಸದಿಂದ ಸಿದ್ಧಗೊಳಿಸುವರು. ಆದರೆ ಅವುಗಳ ಸಿಹಿಯ ರುಚಿಯು ಭಿನ್ನಭಿನ್ನವಾಗಿರುತ್ತದೆ ।೩೩॥

ಅದರಂತೆ ಕೆಲವು ಅಧ್ಯಾಯಗಳು ಬ್ರಹ್ಮವನ್ನು ತಿಳಿದು ಅದರ ಪ್ರತಿಪಾದನೆ ಮಾಡುವುವು. ಕೆಲವು ಬ್ರಹ್ಮನ ಸ್ಥಾನ ತೋರಿಸುವುವು ಮತ್ತು ಕೆಲವು ತಿಳಿಯಲು ಹೋದಾಗ ತನ್ನ ತಿಳಿಯುವ ಗುಣಸಹಿತವಾಗಿ ಬ್ರಹ್ಮರೂಪವೇ ಆಗುವುವು ।೩೪॥

ಇದರಂತೆ ಗೀತೆಯ ಅಧ್ಯಾಯಗಳಿವೆ. ಆದರೆ ಒಂಭತ್ತ ನೆಯ ಅಧ್ಯಾಯದ ವರ್ಣನೆಯನ್ನು ಮಾಡಲು ಬರಲಾರ ದಂತಿದ್ದರೂ, ಪ್ರಭುಗಳೇ, ನಾನದನ್ನು ವರ್ಣಿಸಿದ್ದು ನಿಮ್ಮ ಸಾಮರ್ಥ್ಯದಿಂದ ಮಾತ್ರ ।೩೫॥

ಒಬ್ಬ ಋಷಿಯ (ವಶಿಷ್ಠನ) ಅಂಗವಸ್ತ್ರವು ಸೂರ್ಯ ನಂತೆ ಪ್ರಕಾಶವಾಯತು. ಒಬ್ಬನು (ವಿಶ್ವಾಮಿತ್ರ) ಪ್ರತಿಸೃಷ್ಟಿ ನಿರ್ಮಿಸಿದನು. ಒಬ್ಬನು (ಶ್ರೀರಾಮನು) ಸಮುದ್ರದ ಮೇಲೆ ಕಲ್ಲಿನ ಸೇತುವೆ ಕಟ್ಟಿ ಎಲ್ಲ ಸೈನ್ಯವನ್ನು ದಾಟಿಸಿದನು ।೩೬॥

ಒಬ್ಬನು (ಮಾರುತಿಯು) ಹುಟ್ಟಿದ ಕೂಡಲೇ ಆಕಾಶಕ್ಕೆ ಹಾರಿ ಸೂರ್ಯನನ್ನು ಹಿಡಿದನು. ಒಬ್ಬನು (ಅಗಸ್ತ್ಯ ಋಷಿಯು) ಒಂದೇ ಅಚಮನದಿಂದ ಸಮುದ್ರವನ್ನೇ ಪ್ರಾಶನ ಮಾಡಿದನು. ಅದರಂತೆ ಮೂಕನಾದ ನನ್ನ ವಾಣಿಯಿಂದ ಅನಿರ್ವಾಚ್ಯ ಬ್ರಹ್ಮವನ್ನು ನುಡಿಸಿದಿರಿ ।೩೭॥

ಆದರೆ ಅದು ಇರಲಿ, ಏಕೆಂದರೆ ರಾಮರಾವಣರ ಯುದ್ಧವು ಹೇಗಾಯಿತೆಂದು ಕೇಳಿದರೆ, ರಾಮ ರಾವಣ ರಂತೆಯೇ ಆಯಿತು ಎಂದು ಹೇಳಬೇಕಾಗುವುದು ।೩೮॥

ಅದರಂತೆ ಶ್ರೀಕೃಷ್ಣನ ಒಂಬತ್ತನೆಯ ಅಧ್ಯಾಯದಲ್ಲಿನ ವಿವರಣೆಯು, ಒಂಭತ್ತನೆಯ ಅಧ್ಯಾಯದಂತೆಯೇ ಇದೆ ಎಂದು ನಾನು ಹೇಳುವೆ. ಇದು ಗೀತೆಯ ರಹಸ್ಯಬಲ್ಲ ತತ್ತ್ವಜ್ಞಾನಿಗೆ ಮಾತ್ರ ತಿಳಿಯುವುದು ।೩೯॥

ಒಟ್ಟಿನಲ್ಲಿ ಮೊದಲಿಗೆ ಒಂಭತ್ತು ಅಧ್ಯಾಯಗಳನ್ನು ನಾನು ನನ್ನ ಮತಿಯಂತೆ ವರ್ಣಿಸಿರುವೆನು. ಈಗ ಇಲ್ಲಿಂದ ಉತ್ತರ ಖಂಡವು ಆರಂಭಗೊಂಡಿದೆ ಕೇಳಿರಿ ।೪೦॥

ಇಲ್ಲಿ ಆರಂಭದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ತನ್ನ ಮುಖ್ಯ ಮತ್ತು ಗೌಣ ವಿಭೂತಿಗಳನ್ನು ಹೇಳಿರುವನು. ಈ ಉತ್ತಮವಾದ ರಸಭರಿತವಾದ ಕಥೆಯನ್ನು ನಾನು ನಿಮಗೆ ಹೇಳುವೆನು ।೪೧॥

ದೇಶಭಾಷೆಯ ಸೌಂದರ್ಯದಿಂದ ಶಾಂತರಸವು ಶೃಂಗಾರರಸವನ್ನು ಗೆದ್ದು, ಅದರಿಂದ ಮರಾಠಿ ಓವಿಗಳ ಅಲಂಕಾರ ಶಾಸ್ತ್ರಕ್ಕೆ ಭೂಷಣವಾಗಿ ಶೋಭಿಸುವುವು।೪೨॥

ಮೂಲ ಸಂಸ್ಕೃತ ಗ್ರಂಥವನ್ನು ಮತ್ತು ಅದರ ಮರಾಠೀ ಟೀಕೆಯನ್ನು ಓದಿ ನಿಜವಾದ ಅರ್ಥವನ್ನು ಮನನ ಮಾಡಿದರೆ, ಅದರಲ್ಲಿ ಯ ಮೂಲ ಗ್ರಂಥ ಯಾವುದು ಎಂಬುದು ತಿಳಿಯು ವುದಿಲ್ಲ ।೪೩॥

ಜೈಸೇ ಅಂಗಾಚೇನಿ ಸುಂದರಪಣೇ । ಲೇಣಿಯಾ ಆಂಗಚಿ ಹೋಯ ಲೇಣೇ । ತೇಥ ಅಳಂಕಾರಿಲೇ ಕವಣ ಕವಣೇ । ಹೇ ನಿರ್ವಚೇನಾ ॥೪೪॥ ತೈಸಿ ದೇಶೀ ಆಣೀ ಸಂಸ್ಕೃತ ವಾಣೀ । ಏಕಾ ಭಾವಾರ್ಥಾಚ್ಯಾ ಸುಖಾಸನೀ । ಶೋಭತೀ ಆಯಣಿ । ಚೋಖಟ ಆಇಕಾ ॥೪೫॥ ಉತಾವಲಿಯಾ ಭಾವಾ ರೂಪ । ಕರಿತಾ ರಸವೃತ್ತೀಚೇ ಲಾಗೇ ವಡಪ । ಚಾತುರ್ಯ ಮ್ಹಣೇ ಪಡಪ । ಜೋಡಲೇ ಆಮ್ಹಾ ॥೪೬॥ ತೈಸೇ ದೇಶಿಯೇಚೇ ಲಾವಣ್ಯ । ಹಿರೋನಿ ಆಣಿಲೇ ತಾರುಣ್ಯ । ಮಗ ರಚಿಲೇ ಅಗಣ್ಯ । ಗೀತಾತತ್ತ್ವ ॥೪೭॥ ಜೋ ಚರಾಚರಪರಮ ಗುರು । ಚತುರಚಿತ್ತಚಮತ್ಕಾರು । ತೋ ಏಕಾ ಯಾದವೇಶ್ವರು । ಬೋಲತಾ ಜಾಹಲಾ ॥೪೮॥ ಜ್ಞಾನದೇವ ನಿವೃತ್ತೀಚಾ ಮ್ಹಣೇ । ಐಸೇ ಬೋಲಿಲೇ ಶ್ರೀಹರಿ ತೇಣೇ । ಅರ್ಜುನಾ ಆಘವಿಯಾಚೇ ಮಾತು ಅಂತಃಕರಣೇ । ಧಡೌತಾ ಆಹಾಸಿ ॥೪೯॥

ಶ್ರೀ ಭಗವಾನುವಾಚ :-
ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ ।
ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ ॥೧॥

ಆಮ್ಹೀ ಮಾಗೀಲ ಜೇ ನಿರೂಪಣ ಕೇಲೇ । ತೇ ತುಝೇ ಅವಧಾನಚಿ ಪಾಹಿಲೇ । ತಂವ ಟಾಚೇ ನವ್ಹೇ ಭಲೇ । ಪುರತೇ ಆಹೇ ॥೫೦॥ ಘಟೀ ಥೋಡೇಸೇ ಉದಕ ಘಾಲಿಜೇ । ತೇಣೇ ನ ಗಳೇ ತರೀ ವರಿತಾ ಭರಿಜೇ । ಐಸಾ ಪರಿಸೌನಿ ಪಾಹಿಲಾಸೀ ತಂವ ಪರಿಸವಿಜೇ । ಐಸೇಂಚಿ ಹೋತಸೇ॥೫೧॥ ಅವಚಿತಯಾವರೀ ಸರ್ವಸ್ವ ಸಾಂಡಿಜೇ । ಮಗ ಚೋಖ ತರೀ ತೋಚಿ ಭಾಂಡಾರೀ ಕೀಜೇ । ತೈಸಾ ಕಿರೀಟೀ ತೂ ಆತಾ ಮಾಝೇ । ನಿಜಧಾಮ ಕೀ ॥೫೨॥ ಐಸೇ ಅರ್ಜುನಾ ಯೇಉತೇ ಸರ್ವೇಶ್ವರೇ । ಪಾಹೋನಿ ಬೋಲಿಲೇ ಅತ್ಯಾದರೇ । ಗಿರೀ ದೇಖೋನಿ ಸುಭರೇ । ಮೇಘು ಜೈಸಾ ॥೫೩॥ ತೈಸಾ ಕೃಪಾಳುವಾಂಚಾ ರಾವೋ । ಮ್ಹಣೇ ಆಇಕೇ ಗಾ ಮಹಾಬಾಹೋ । ಸಾಂಗಿತಲಾಚಿ ಅಭಿಪ್ರಾವೋ । ಸಾಂಗೇನ ಪುಢತೀ ॥೫೪॥ ಪೈ ಪ್ರತಿವರ್ಷೀ ಕ್ಷೇತ್ರ ಪೇರಿಜೇ । ಪಿಕಾಚೀ ಜಂವ ಜಂವ ವಾಢೀ ದೇಖಿಜೇ । ಯಾಲಾಗೀ ನುಬಗಿಜೇ । ವಾಹೋ ಕರಿತಾ ॥೫೫॥ ಪುಡತಪುಢತೀ ಪುಟೇ ದೇತಾ । ಜೋಡೆ ವಾನಿಯೇಚೇ ಅಧಿಕತಾ । ಮ್ಹಣೌನಿ ಸೋನೆ ಪಂಡುಸುತಾ । ಶೋಧೂಂಚಿ ಆವಡೇ ॥೫೬॥ ತೈಸೇ ಏಥ ಪಾರ್ಥಾ । ತುಜ ಆಭಾರ ನಾಹೀ ಸರ್ವಥಾ । ಆಮ್ಹೀ ಆಪುಲಿಯಾಚಿ ಸ್ವಾರ್ಥಾ । ಬೋಲೊ ಪುಢತೀ ॥೫೭॥

ಯಾವ ಪ್ರಕಾರವಾಗಿ ಶರೀರದ ಸೌಂದರ್ಯದಿಂದ ಶರೀರವೇ ಅಲಂಕಾರಗಳಿಗೆ ಶೋಭೆಯನ್ನು ತರುವುದು. ಇಲ್ಲಿ ಯಾವುದರಿಂದ ಯಾವುದಕ್ಕೆ ಶೋಭೆ ಬಂದಿತು ಎಂದು ಹೇಗೆ ಹೇಳಲಾಗುವುದಿಲ್ಲವೋ ।೫೪॥

ಅದರಂತೆ ದೇಶಿ ಮತ್ತು ಸಂಸ್ಕೃತ ಭಾಷೆಗಳು ಒಂದೇ ಗ್ರಂಥದ ಭಾವಾರ್ಥವನ್ನು ವರ್ಣಿಸಿ ಒಂದೇ ಸ್ಥಳದಲ್ಲಿ ಹೇಗೆ ಶೋಭಿಸುತ್ತವೆ ಎಂಬುದನ್ನು ಶುದ್ಧ ಬುದ್ಧಿಯಿಂದ ಕೇಳಿರಿ ।೫೫॥

ಯಾವುದೇ ಅಭಿಪ್ರಾಯಗಳನ್ನು ಪ್ರಕಟಿಸುವಾಗ ಶೃಂಗಾರಾದಿ ರಸಗಳ ವೃಷ್ಟಿಯಾಗುವುದು. ಆಗ ಚಾತುರ್ಯಕ್ಕೆ ಶೋಭೆ ಬರುವುದು ।೫೬॥

ಅದರಂತೆ ದೇಶಭಾಷೆಯ ಸೌಂದರ್ಯ ಮತ್ತು ತಾರುಣ್ಯವನ್ನು ಲುಟಾಯಿಸಿ ಅದರಿಂದ ಅಗಣಿತವಾಗಿ ಗೀತಾ ತತ್ತ್ವದ ರಚನೆಯನ್ನು ಮಾಡಿದೆ ।೫೭॥

ಯಾವ ಸ್ಥಾವರ ಜಂಗಮದ ಪರಮ ಗುರುವಾದ ಮತ್ತು ಚತುರ ಜನರ ಚಿತ್ತಕ್ಕೆ ಆನಂದ ಕೊಡುವ, ಆ ಯಾದವೇಶ್ವರ ಶ್ರೀಕೃಷ್ಣನು ಏನು ಹೇಳಿದನೆಂಬುದನ್ನು ಕೇಳಿರಿ ।೫೮॥

ಅರ್ಜುನಾ, ಎಲ್ಲ ಪ್ರಕಾರಗಳಿಂದ ಶ್ರವಣ ಮಾಡುವ ವಿಷಯದಲ್ಲಿ ನಿನ್ನ ಅಂತಃಕರಣವು ಸರ್ವತೋಪರಿ ತತ್ಪರವಾಗಿದೆಯೇ? ಎಂದು ಪರಮಾತ್ಮನು ಹೇಳಿದ್ದನ್ನು ನಿವೃತ್ತಿದಾಸರಾದ ಜ್ಞಾನೇಶ್ವರರು ಹೇಳುವರು ।೫೯॥

ಶ್ಲೋಕಾರ್ಥ :- ಭಗವಂತನು ಹೀಗೆಂದನು:- ಅರ್ಜುನಾ! ಮತ್ತೆ ನನ್ನ ಹಿತ ವಚನವನ್ನು ಕೇಳು. ನಿನ್ನ ಮೇಲಿರುವ ಅನುರಾಗದಿಂದ ನಿನ್ನ ಹಿತವನ್ನು ಕೋರಿ ಹೇಳುತ್ತೇನೆ ।೧॥

ನಾವು ಈ ಹಿಂದೆ ನಿರೂಪಣೆ ಮಾಡಿದ್ದನ್ನು ಕೇಳುವುದರಲ್ಲಿ ನಿನ್ನ ಲಕ್ಷ ಎಷ್ಟಿದೆ ಎಂದು ನೋಡಿದೆವು. ಅದು ಪೂರ್ಣವಾಗಿದ್ದು, ಅಪೂರ್ಣವಾಗಿಲ್ಲವೆಂಬುದು ನಮಗೆ ನಿಶ್ಚಯವಾಯಿತು ।೬೦॥

ಮೊದಲು ಕೊಡದಲ್ಲಿ ಸ್ವಲ್ಪ ನೀರು ಹಾಕಿ ನೋಡಬೇಕು, ಅದು ಸೋರದಿದ್ದರೆ ಅದನ್ನು ತುಂಬಿಸಬೇಕು. ಅದರಂತೆ ನಿನಗೆ ನಿರೂಪಣೆ ಮಾಡಿ ನೋಡಿದೆ. ಅದು ಅಂತಃಕರಣದಲ್ಲಿ ಸ್ಥಿರವಾದದ್ದು ಕಂಡು ಪುನಃ ಅದನ್ನೇ ಹೇಳಬೇಕೆಂದಿದ್ದೇನೆ ।೬೧॥

ಅಕಸ್ಮಾತ್ ಬಂದ ಸೇವಕನಿಗೆ ತನ್ನ ಎಲ್ಲ ಕಾರ್ಯಭಾರ ಒಪ್ಪಿಸಿ ನೋಡಬೇಕು. ಆತನು ಪ್ರಾಮಾಣಿಕನೆಂದು ತಿಳಿದಲ್ಲಿ ಆತನಿಗೆ ಖಜೀನದಾರರನ್ನಾಗಿ ಮಾಡಬೇಕು. ಅದರಂತೆ ಕಿರೀಟಿಯೇ, ನೀನು ನನಗೆ ಖಾತ್ರಿಯಾದುದ್ದಕ್ಕೆ ನನ್ನ ತತ್ತ್ವಜ್ಞಾನದ ಒಡೆಯನಾಗಿರುವಿ ।೬೨॥

ಈ ರೀತಿಯಲ್ಲಿ ಎಲ್ಲರ ಪ್ರಭು ಶ್ರೀಕೃಷ್ಣನು ಆ ಅರ್ಜುನನ ಇಷ್ಟೊಂದು ಯೋಗ್ಯತೆ ಕಂಡು ಪ್ರೇಮದಿಂದ ಹೇಳಹತ್ತಿದನು. ಯಾವ ಪ್ರಕಾರವಾಗಿ ಪರ್ವತಕ್ಕೆ ಮೋಡ ಮುಸುಕುವುದೋ ।೬೩॥

ಅದರಂತೆ ಕೃಪಾಳು ರಾಜನಾದ ಶ್ರೀಕೃಷ್ಣನು ಹೇಳಿದನು:- ಅರೇ, ಅಜಾನುಬಾಹು ಅರ್ಜುನನೇ ಕೇಳು, ಇನ್ನು ಮುಂದೆ ಈ ಹಿಂದೆ ಹೇಳಿದ ಅಭಿಪ್ರಾಯವನ್ನೇ ಪುನಃ ನಿನಗೆ ಹೇಳುವೆನು ।೬೪॥

ಇಲ್ಲಿ ನೋಡು, ಪ್ರತಿವರ್ಷ ಹೊಲ ಬಿತ್ತುತ್ತಿರಲು ಅದರ ಬೆಳೆ ಹೆಚ್ಚೆಚ್ಚು ಬರಹತ್ತಿದರೆ ಪುನಃ ಪುನಃ ಸಾಗುವಳಿ ಖರ್ಚು ಮಾಡಲು ಬೇಸರ ಬರುವುದಿಲ್ಲ ।೬೫॥

ಅಥವಾ ಪಂಡುಸುತನೇ, ಯಾವ ಪ್ರಕಾರವಾಗಿ ಮೇಲಿಂದ ಮೇಲೆ ಪುಟಕೊಟ್ಟಂತೆ ಬಂಗಾರದ ತೇಜವು ಹೆಚ್ಚಾಗುವುದು. ಆದ್ದರಿಂದಲೇ ಅಕ್ಕಸಾಲಿಗನು ಅದನ್ನು ಹೆಚ್ಚಿಗೆ ಶುದ್ಧ ಮಾಡುವನು ।೬೬॥

ಅದರಂತೆ ಪಾರ್ಥಾ, ಈ ಅಭಿಪ್ರಾಯವನ್ನು ಹೇಳುವುದರಿಂದ ನಿನ್ನ ಮೇಲೆ ಉಪಕಾರ ಸರ್ವಥಾ ಮಾಡದೇ ನಮ್ಮ ಸ್ವಾರ್ಥಕ್ಕಾಗಿ ಮುಂದಿನ ಭಾಗವನ್ನು ನಿನಗೆ ಹೇಳುವೆ ।೬೭॥

ಜೈಸಾ ಬಾಳಕಾ ಲೇವವಿಜೇ ಲೇಣೇ । ತಯಾ ಶೃಂಗಾರಾ ಬಾಳ ಕಾಇ ಜಾಣೇ? । ಪರಿ ತೇ ಸುಖಾಚೇ ಸೋಹಳೇ ಭೋಗಣೇ । ಮಾಉಲಿಯೇ ದಿಠೀ ।೮೮॥ ತೈಸೇ ತುಝೇ ಹಿತ ಆಘವೇ । ಜಂವ ಜಂವ ಕಾ ತುಜ ಫಾವೇ । ತಂವ ತಂವ ಆಮುಚೇ ಸುಖ ದುಣಾವೇ । ಐಸೇ ಆಹೇ ।೮೯॥ ಆತಾ ಅರ್ಜುನಾ ಅಸೋ ಹೇ ವಿಕಡೀ । ಮಜ ಉಘಡ ತುಝೀ ಆವಡೀ । ಮ್ಹಣೌನಿ ತೃಪ್ತೀಚೀ ಸವಡೀ । ಬೋಲತಾ ನ ಪಡೇ ।೯೦॥ ಆಮ್ಹಾ ಯೇತುಲಿ ಯಾಚಿ ಕಾರಣೇ । ತೇಂಚಿ ತೇ ತುಜಶೀ ಬೋಲಣೇ । ಪರಿ ಅಸೋ ಹೇ ಅಂತಃಕರಣೇ । ಅವಧಾನ ದೇಈ ।೯೧॥ ತರೀ ಐಕೇ ಐಕೇ ಗಾ ಸುವರ್ಮ । ವಾಕ್ಯ ಮಾಝೇ ಪರಮ । ಜೇ ಅಕ್ಷರೇ ಲೇಊನೀ ಪರಬ್ರಹ್ಮ । ತುಜ ಖೇಂವಾಸೀ ಆಲೇ ।೯೨॥ ಪರೀ ಕಿರೀಟೀ ತೂ ಮಾತೇ । ನೇಣಸೀ ನಾ ನಿರುತೇ । ತರೀ ತೋ ಗಾ ಜೋ ಮೀ ಏಥೇ । ತೇ ವಿಶ್ವಚಿ ಹೇ।೯೩॥

ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ ।
ಅಹಮಾದಿರ್ಹಿ ದೇವನಾಂ ಮಹರ್ಷೀಣಾಂ ಚ ಸರ್ವಶಃ ।೨॥

ಏಥ ವೇದ ಮುಕೇ ಜಾಹಾಲೇ । ಮನ ಪವನ ಪಾಂಗುಳಲೇ । ರಾತೀವಿಣ ಮಾವಳಲೇ । ರವಿಶಶೀ ಜೇಥ ।೯೪॥ ಅಗಾ ಉದರೀಂಚಾ ಗರ್ಭು ಜೈಸಾ । ನ ದೇಖೇ ಆಪುಲಿಯೇ ಮಾತೇಚೀ ವಯಸಾ । ಮೀ ಆಘವೇಯಾ ದೇವಾ ತೈಸಾ । ನೇಣವೇ ಕಾಂಹೀ ।೯೫॥ ಆಣಿ ಜಳಚರಾ ಉದಧೀಚೆ ಮಾನ । ಮಶಕಾ ನೋಲಾಂಡವೇಚಿ ಗಗನ । ತೇವೀ ಮಹರ್ಷೀಚೇ ಜ್ಞಾನ । ನ ದೇಖೇಚಿ ಮಾತೇ ।೯೬॥ ಮೀ ಕವಣ ಪಾ ಕೇತುಲಾ । ಕವಣಾಚಾ ಕೈ ಜಾಹಲಾ । ಯಾ ನಿರುತೀ ಕರಿತಾ ಬೋಲಾ । ಕಲ್ಪ ಗೇಲೇ ।೯೭॥ ಕಾ ಜೇ ಮಹರ್ಷೀ ಆಣಿ ಯಾ ದೇವಾ । ಏರಾ ಭೂತಜಾತಾ ಸರ್ವಾ । ಮೀ ಆದಿ ಮ್ಹಣೋನಿ ಪಾಂಡವಾ । ಅವಘಡ ಜಾಣತಾ ।೯೮॥ ಉತರಲೇ ಉದಕ ಪರ್ವತ ವಳಘೇ । ಜರೀ ಝಾಡ ವಾಢತ ಮುಳೀ ಲಾಗೇ । ತರೀ ಮಿಯಾ ಜಾಲೇನಿ ಜಗೇ । ಜಾಣಿಜೇ ಮಾತೇ ।೯೯॥ ಕಾ ಗಾಭೇವನೇ ವಟು ಗಿಂವಸವೇ । ಜರೀ ತರಂಗೀ ಸಾಗರು ಸಾಂಠವೇ । ಕಾ ಪರಮಾಣೂಮಾಜೇ ಸಾಮಾವೇ । ಭೂಗೋಲು ಹಾ ।೧೦೦॥ ತರೀ ಮಿಯಾ ಜಾಲಿಯಾ ಜಿವಾ । ಮಹರ್ಷೀ ಅಥವಾ ದೇವಾ । ಮಾತೇ ಜಾಣಾವಯಾ ಹೋಆವಾ । ಅವಕಾಶು ಗಾ ।೧೦೧॥ ಐಸಾಹೀ ಜರೀ ವಿಪಾಯೇ । ಸಾಂಡೂನಿ ಪುಢೀಲ ಪಾಯೇ । ಸರ್ವೇಂದ್ರಿಯಾಂಸೀ ಹೋಯೇ । ಪಾಠೀಮೋರಾ ಜೋ ।೧೦೨॥

ಯಾವ ರೀತಿಯಲ್ಲಿ ಬಾಲಕನಿಗೆ ಅಲಂಕಾರಗಳನ್ನು ಹಾಕಿದಾಗ ಅದರ ಸುಖವು ಅದಕ್ಕೆ ತಿಳಿಯುವುದೇ? ಆದರೆ, ಅದರ ಸುಖದ ಭೋಗವು ತಾಯಿಗೆ ಮಾತ್ರ ಆಗುವುದು ।೫೮॥

ಅದರಂತೆ ಹೇಗೆ ಹೇಗೆ ನಿನಗೆ ನಿನ್ನ ಹಿತವು ಪ್ರಾಪ್ತವಾಗುತ್ತಾ ಹೋದಂತೆ ಹಾಗೆ ಹಾಗೆ ನಮ್ಮದೇ ಸುಖವು (ದುಪ್ಪಟ್ಟು) ಎರಡರಷ್ಟು ಬೆಳೆಯುವುದು ।೫೯॥

ಅರ್ಜುನಾ, ಈಗ ಈ ಅಲಂಕೃತ ಮಾತಿರಲಿ, ನಿಜವಾಗಿಯೂ ನನ್ನದು ನಿನ್ನಮೇಲೆ ಬಹಳ ಪ್ರೀತಿ ಇರುವುದು. ಆದ್ದರಿಂದ ನಿನಗೆ ಎಷ್ಟು ಹೇಳಿದರೂ ನನಗೆ ತೃಪ್ತಿಯೇ ಆಗುವುದಿಲ್ಲ ।೬೦॥

ಆದ್ದರಿಂದಲೇ ನಮಗೆ ಹೇಳಿದ್ದನ್ನೇ ನಿನಗೆ ಹೇಳಬೇಕಾಗಿದೆ. ಇರಲಿ, ಈಗ ನಮ್ಮ ಮಾತಿನ ಕಡೆ ಅಂತಃಕರಣದಿಂದ ಲಕ್ಷವನ್ನು ಕೊಡು ।೬೧॥

ಹೇ ಮಾರ್ಮಿಕ ಅರ್ಜುನನೇ, ಅತ್ಯುತ್ತಮವಾದ ನನ್ನ ವಾಕ್ಯಗಳನ್ನು ಕೇಳು. ಇವು ಕೇವಲ ವಾಕ್ಯಗಳು ಇರದೇ ಅಕ್ಷರ ರೂಪದಿಂದ ಪರಬ್ರಹ್ಮವೇ ನಿನಗೆ ಆಲಿಂಗಿಸಲು ಬಂದಿರುವುವು ।೬೨॥

ಆದರೆ, ಹೇ ಕಿರೀಟೀಯೇ, ನೀನು ನಿಜವಾಗಿಯೂ ನನ್ನನ್ನು ತಿಳಿಯುವುದಿಲ್ಲವೇ? ಅದುವೇ ಸರ್ವ ವಿಶ್ವವಾಗಿರುವುದು ।೬೩॥

ಶ್ಲೋಕಾರ್ಥ :- ನನ್ನ ಹುಟ್ಟನ್ನು ದೇವತೆಗಳೂ ಋಷಿಗಳೂ ಸಹ ತಿಳಿಯರು. ಏಕೆಂದರೆ ಅವರೆಲ್ಲರಿಗೂ ನಾನೇ ಮೂಲ ಕಾರಣನಾಗಿದ್ದೇನೆ ।೨॥

ಈ ನನ್ನ ಸ್ವರೂಪ ತಿಳಿಯುವುದರಲ್ಲಿ ವೇದದ ವಾಣಿಯು ಮೌನವಾಯಿತು. ಮನಸ್ಸು ಮತ್ತು ಪ್ರಾಣಗಳ ಗತಿಯು ಕುಂಠಿತವಾಯಿತು ಮತ್ತು ನನ್ನ ತೇಜದೆದುರಿಗೆ ರಾತ್ರಿಯಾಗದೆ ಸೂರ್ಯ ಚಂದ್ರರು ಮುಳುಗಿದರು (ಅಸ್ತರಾದರು) ।೬೪॥

ಅರೇ, ಉದರದಲ್ಲಿನ ಗರ್ಭವು ತನ್ನ ತಾಯಿಯ ವಯಸ್ಸು ತಿಳಿಯಲಾರದಂತೆ, ನನ್ನಿಂದ ಉತ್ಪನ್ನವಾದ ದೇವತೆಗಳು ನನ್ನನ್ನು ತಿಳಿಯಲು ಸಮರ್ಥರಿಲ್ಲ ।೬೫॥

ಮತ್ತು ಜಲಚರ ಪ್ರಾಣಿಗಳಿಗೆ ಸಮುದ್ರದ ಅಂತವು ತಿಳಿಯುವುದಿಲ್ಲ. ನೊರಜಿಗೆ ಆಕಾಶವನ್ನು ದಾಟಲು ಬರುವುದಿಲ್ಲ. ಅದರಂತೆ ಮಹರ್ಷಿಗಳ ಜ್ಞಾನಕ್ಕೆ ನಾನು ತಿಳಿಯುವುದಿಲ್ಲ ।೬೬॥

ನಾನು ಯಾರು? ಎಂಥವನು? ಯಾವನು? ಯಾರಿಂದ ಆದೆನು? ಎಂಬ ಈ ಮಾತುಗಳ ನಿಶ್ಚಯ ಮಾಡಲು ಯುಗ ಯುಗಗಳ ಕಲ್ಪಗಳೇ ಉರುಳಿದವು ।೬೭॥

ಕಾರಣ, ಅರ್ಜುನಾ, ಈ ಎಲ್ಲ ಮಹರ್ಷಿಗಳು, ದೇವತೆಗಳು ಮತ್ತು ಇತರ ಎಲ್ಲ ಪ್ರಾಣಿಗಳ ಮೂಲವು ನಾನಾಗಿರುವುದರಿಂದ ನನ್ನನ್ನು ತಿಳಿಯಲು ಅವರಿಗೆ ಕಠಿಣವಾಗಿರುವುದು ।೬೮॥

ಒಂದುವೇಳೆ ಪರ್ವತದಿಂದ ಕೆಳಗಿಳಿದ ನೀರು ಪುನಃ ಮೇಲೇರಿದರೆ, ಅಥವಾ ಗಿಡವು ಬೆಳೆಯುತ್ತ ಹೋದಂತೆ ಬೇರಿಗೆ ಮುಟ್ಟಿಕೊಂಡರೆ ಮಾತ್ರ ನನ್ನಿಂದ ಆದ ಜಗತ್ತು ನನ್ನನ್ನು ಅರಿಯಬಹುದು ।೬೯॥

ಗರ್ಭ ಪತ್ರವು (ಇನ್ನೂ ಪೂರ್ಣ ಆಗದ ಎಲೆಯು) ಒಂದುವೇಳೆ ಪ್ರಚಂಡವಾದ ವಟವೃಕ್ಷವನ್ನು ವ್ಯಾಪಿಸಿಕೊಂಡರೆ, ತರಂಗದಲ್ಲಿ ಸಮುದ್ರವು ಅಡುಗಿದರೆ ಅಥವಾ ಪರಮಾಣುವಿನಲ್ಲಿ ಈ ಭೂಗೋಲವು ಸಮಾವೇಶವಾದರೆ ।೭೦॥

ಆಗ ಮಾತ್ರ ನನ್ನಿಂದ ಆದ ಜೀವಗಳಿಂದ ಮಹರ್ಷಿಗಳವರಿಂದ, ಅಥವಾ ದೇವತೆಗಳವರಿಂದ ನನ್ನನ್ನು ತಿಳಿಯುವ ಅವಕಾಶ ದೊರೆಯಬಹುದು ।೭೧॥

ಈ ಪ್ರಕಾರವಾಗಿ ನಾನು ತಿಳಿಯಲು ಕಠಿಣನಾಗಿರುವೆನು ನಿಜ, ಆದರೆ ಸಹಜವಾಗಿ ಅಪ್ಪಿತಪ್ಪಿ ಯಾರಾದರೂ ಪ್ರವೃತ್ತಿಮಾರ್ಗವನ್ನು ಬಿಟ್ಟು ಇಂದ್ರಿಯಗಳಿಗೆ ಬೆನ್ನು ತೋರಿಸಿದರೆ (ಗೆದ್ದುಕೊಂಡರೆ), ।೭೨॥

ಪ್ರವರ್ತಲಾಹೀ ವೇಗಿ ಬಹುಡೇ । ದೇಹ ಸಾಂಡೂನಿ ಮಾಗಲಿಕಡೇ । ಮಹಾಭೂತಾಂಚಿಯಾ ಚಢೇ । ಮಾಥಯಾವರೀ ॥೭೩॥

ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಮ್ ।
ಅಸಂಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥೩॥

ತೇಥ ರಾಹೋನಿ ಠಾಯಠಿಕೇ । ಸ್ವಪ್ರಕಾಶೇ ಚೋಖೇ । ಅಜತ್ವ ಮಾಝೇ ದೇಖೇ । ಆಪುಲಿಯಾ ಡೋಳಾ ॥೭೪॥ ಮೀ ಆದೀಸೀ ಪರು । ಸಕಳಲೋಕ ಮಹೇಶ್ವರು । ಐಸಿಯಾ ಮಾತೇ ಜೋ ನರು । ಯಾಪರೀ ಜಾಣೇ ॥೭೫॥ ತೋ ಪಾಷಾಣಮಾಜೀ ಪರಿಸು । ಜೈಸಾ ರಸಾಆಂತು ಸಿದ್ಧರಸು । ತೈಸಾ ಮನುಷ್ಯಾಆಂತು ತೋ ಅಂಶು । ಮಾಝಾಚಿ ಜಾಣ ॥೭೬॥ ತೇ ಚಾಲತೆ ಜ್ಞಾನಾಚಿ ಬಿಂಬ । ತಯಾಚೇ ಅವಯವ ತೇ ಸುಖಾಚೇ ಕೋಂಭ । ಏರ ಮಾಣುಸಪಣ ತೇ ಭಾಂಬ । ಲೌಕಿಕ ಭಾಗು ॥೭೭॥ ಅಗಾ ಅವಚಿತಾ ಕಾಪುರಾ । ಮಾಜೀ ಸಾಂಡಪಲಾ ಹಿರಾ । ವರೀ ಪಡಿಲಿಯಾ ನೀರಾ । ನ ನಿಗೇ ಕೇವಿ ॥೭೮॥ ತೈಸಾ ಮನುಷ್ಯ ಲೋಕಾಆಂತು ।ತೋ ಜಾಹಲಾ ಪ್ರಾಕೃತು । ತರೀ ಪ್ರಕೃತಿ ದೋಷಾಚಿ ಮಾತು । ನೇಣೇಂಚಿ ಕೀ ॥೭೯॥ ತೋ ಜರೀ ಜಾಹಲಾ ಆಪಸಯೇಂಚಿ ಸಾಂಡಿಜೇ ಪಾಪೀ । ಜೈಸಾ ಜಳತ ಚಂದನು ಸರ್ಪೀ । ತೇವಿ ಮಾತೇ ಜಾಣೇ ತೋ ಸಂಕಲ್ಪೀ । ವರ್ಜೂನಿ ಘಾಪೇ ॥೮೦॥ ತೇಂಚಿ ಆಮುತೇ ಕೈಸೇ ಜಾಣಿಜೇ । ಐಸೇ ಕಲ್ಪೀ ಜರೀ ಚಿತ್ತ ತುಝೇ । ತರೀ ಮೀ ಐಸಾ ಹೇ ಮಾಝೇ । ಭಾವ ಐಕೇ ॥೮೧॥ ಜೇ ವೇಗಳಾಲಿಯಾ ಭೂತೀ । ಸಾರಿಖೇ ಹೋಊನಿ ಪ್ರಕೃತೀ । ವಿಖುರಲೇ ಆಹೇತೀ ತ್ರಿಜಗತೀ । ಆಘವಿಯೇ ॥೮೨॥

ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯಂ ದಮಃ ಶಮಃ ।
ಸುಖಂ ದುಃಖಂ ಭವೋಽಭಾವೋ ಭಯಂ ಚಾಭಯಮೇವ ಚ ॥೪॥

ಅಹಿಂಸಾ ಸಮತಾ ತುಷ್ಟಿಃ ತಪೋ ದಾನಂ ಯಶೋಽಯಶಃ ।
ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥೫॥

ತೇಥ ಪ್ರಥಮ ಜಾಣ ಬುದ್ಧೀ । ಮಗ ಜ್ಞಾನ ಜೇ ನಿರವಧೀ । ಅಸಂಮೋಹ ಸಹನ ಸಿದ್ಧೀ । ಕ್ಷಮಾ ಸತ್ಯ ॥೮೩॥ ಮಗ ಶಮ ದಮ ದೋನ್ಹೀ । ಸುಖದುಃಖ ವರ್ತೆ ಜೇ ಜನೀ । ಅರ್ಜುನಾ ಭಾವಾಭಾವ ಮಾನೀ । ಭಾವಾಚಿಮಾಜೀ ॥೮೪॥

ಈ ಪ್ರಕಾರವಾಗಿ ಹಿಂದಿರುಗಿದಾಗ ದೇಹವನ್ನು ಹಿಂದಕ್ಕೆ ಬಿಟ್ಟು (ದೇಹಭಾವ ಬಿಟ್ಟು) ಯಾವ ಪಂಚ ಮಹಾಭೂತಗಳ ಆಚೆಗೆ ಹೋಗುವುದು ।೭೩॥

ಶ್ಲೋಕಾರ್ಥ :- ಆದ್ಯಂತಗಳು ಇಲ್ಲದವನೆಂದು ಸರ್ವಲೋಕ ಪ್ರಭುವೆಂದು ನನ್ನನ್ನು ತಿಳಿದವನು, ಮನುಷ್ಯರಲ್ಲೆಲ್ಲಾ ಉತ್ತಮ ಜ್ಞಾನಿ, ಅವನು ಪಾಪ ರಹಿತನು ।೩॥

ಹೀಗೆ ಮನದ ಸ್ಥಿತಿಯು ಸ್ಥಿರಗೊಂಡಾಗ ನಿರ್ಮಲವಾದ ಆತ್ಮ ಪ್ರಕಾಶದಿಂದ ಆತನ ಕಣ್ಣೆದುರಿಗೆ ಉತ್ಪತ್ತಿ ರಹಿತವಾದ ನನ್ನ ಸ್ವರೂಪವು ಕಾಣಿಸುವುದು ।೭೪॥

ನಾನು ಎಲ್ಲರ ಆರಂಭದವನೂ, ಕೊನೆಯವನೂ ಮತ್ತು ಎಲ್ಲ ಲೋಕದಲ್ಲಿ ಶ್ರೇಷ್ಠನಿರುವೆನು. ಹೀಗೆ ಯಾರು ನನ್ನನ್ನು ತಿಳಿಯುವರೋ ।೭೫॥

ಆತನು ಕಲ್ಲಿನಲ್ಲಿ ಪರಿಸಮಣಿಯಂತೆ, ಅಥವಾ ರಸದಲ್ಲಿ ಅಮೃತದಂತೆ, ಎಲ್ಲ ಮನುಷ್ಯರಲ್ಲಿ ಆತನು ನನ್ನ ಅಂಶವೇ ಎಂದು ತಿಳಿ ।೭೬॥

ಆತನು ನಡೆಯುವ, ಮಾತನಾಡುವ ಕೇವಲ ಜ್ಞಾನದ ಮೂರ್ತಿಯಾಗಿರುವನು ಮತ್ತು ಆತನ ಅವಯವಗಳು ಸುಖದ ಅಂಕುರಗಳಾಗಿವೆ. ಸಾಮಾನ್ಯವಾಗಿ ಲೌಕಿಕರ ದೃಷ್ಟಿಯಿಂದ ಆತನ ಮನುಷ್ಯತನವು ಅದು ಕೇವಲ ಭ್ರಮೆಯಾಗಿರುವುದು ।೭೭॥

ಅರೇ, ಕರ್ಪುರದಲ್ಲಿ ಆಕಸ್ಮಾತಾಗಿ ರತ್ನವು ಸಿಕ್ಕರೆ, ಮತ್ತು ಅದರ ಮೇಲೆ ನೀರು ಬಿದ್ದರೆ, ಅದು ಕರ್ಪುರದಂತೆ ಕರಗುವುದಿಲ್ಲ ।೭೮॥

ಅದರಂತೆ ಆತನು ಒಂದುವೇಳೆ ಮನುಷ್ಯ ಲೋಕದಲ್ಲಿ ಸಾಧಾರಣವಾಗಿ ಮನುಷ್ಯನಂತೆ ವರ್ತಿಸುತ್ತಿದ್ದರೂ, ಆತನಿಗೆ ಈ ಮಾಯೆಯ ಬಾಧೆಯು ಕಾಣುವುದಿಲ್ಲ ।೭೯॥

ತಾನಿರುವ ಚಂದನದ ಗಿಡಕ್ಕೆ ಉರಿ ಹತ್ತಿದರೆ ಸರ್ಪವು ಗಿಡದ ತ್ಯಾಗ ಮಾಡುವಂತೆ ಇವರಿಗೆ ಹೆದರಿ ಪಾಪವು ತಾನೇ ಇವರಿಂದ ದೂರಾಗುವಂತೆ ಯಾರು ನನ್ನನ್ನು ಅರಿಯುವರೋ ಅವರಿಗೆ ಎಲ್ಲ ಸಂಕಲ್ಪಗಳು ಬಿಡುವುವು ।೮೦॥

ಅದನ್ನೇ ನನ್ನನ್ನು ಹೇಗೆ ತಿಳಿಯಬೇಕೆಂದು ನಿನ್ನ ಮನದಲ್ಲಿ ಬಂದರೆ, ನಾನು ಹೇಗೆ ಇದ್ದೇನೆ, ನನ್ನ ವಿಕಾರಗಳು ಯಾವುವು ಎಂಬುದನ್ನು ಕೇಳು ।೮೧॥

ಈ ವಿಕಾರವು ಬೇರೆ ಬೇರೆ ಪ್ರಾಣಿಗಳಲ್ಲಿ ಅವುಗಳ ಪ್ರಕೃತಿಯಂತೆ ಆಗಿ ಎಲ್ಲ ತ್ರಿಭುವನದಲ್ಲಿ ಪಸರಿಸಿಕೊಂಡಿರುವುದು ।೮೨॥

ಶ್ಲೋಕಾರ್ಥ :- ಬುದ್ಧಿ, ಜ್ಞಾನ, ಮೋಹ ರಾಹಿತ್ಯ, ಕ್ಷಮಾ, ಸತ್ಯ, ದಮ, ಶಮ, ಸುಖದುಃಖಗಳು, ಜನನ ಮರಣಗಳು, ಭಯ ನಿರ್ಭಯಗಳು ।೪॥

ಶ್ಲೋಕಾರ್ಥ :- ಅಹಿಂಸೆ, ಸಮತ್ವ, ಸಂತೃಪ್ತಿ, ತಪಸ್ಸು, ದಾನ, ಕೀರ್ತಿ, ಅಪಕೀರ್ತಿ, ಅನೇಕ ವಿಧವಾಗಿ ಪ್ರಾಣಿಕೋಟಿಗಳಿಗೆ ಏರ್ಪಡುವ ಭಾವ ಸಂಘಟನೆಗಳೆಲ್ಲವೂ ನನ್ನಿಂದಲೇ ಉಂಟಾಗುತ್ತವೆ ।೫॥

ಆ ವಿಕಾರಗಳಲ್ಲಿ ಮೊದಲನೆಯದಾಗಿ ಬುದ್ಧಿಯು, ಆಗ ಅಮರ್ಯಾದ ಜ್ಞಾನ, ಮೋಹ ಆಗದಿರುವಿಕೆ, ಸಹನಶೀಲತೆ, ಕ್ಷಮೆ ಮತ್ತು ಸತ್ಯ ।೮೩॥

ಮನೋನಿಗ್ರಹ, ಮತ್ತು ಇಂದ್ರಿಯನಿಗ್ರಹ ಈ ಎರಡು ಮತ್ತು ಅರ್ಜುನಾ, ಜಗತ್ತಿನ ಸುಖದುಃಖಗಳು, ಜನ್ಮ ಮರಣಗಳು, ಇವೆಲ್ಲವೂ ಮೂಲತಃ ಭಾವರೂಪನಾದ ನನ್ನಲ್ಲಿಯೇ ಇವೆ ।೮೪॥

ಪೈ ಭಯ ಆಣಿ ನಿರ್ಭಯತಾ । ಅಹಿಂಸಾ ಆಣಿ ಸಮತಾ । ತುಷ್ಟಿ ತಪ ಪಂಡುಸುತಾ । ದಾನ ಜೇ ಗಾ ।೮೫॥ ಅಗಾ ಯಶ ಅಪಕೀರ್ತೀ । ಹೇ ಜೇ ಭಾವ ಸರ್ವತ್ರ ದಿಸತೀ । ತೇ ಮಜಚೀ ಪಾಸೂನಿ ಹೋತೀ । ಭೂತಾಂಚಿಯಾ ಠಾಯೀ ।೮೬॥ ಜೈಸೀ ಭೂತೇ ಆಹಾತೀ ಸಿನಾನೀ । ತೈಸೇಂಚಿ ಹೇಹೀ ವೇಗಳಾಲೇ ಮಾನೀ । ಏಕ ಉಪಜತೀ ಮಾಝ್ಯಾ ಜ್ಞಾನೀ । ಏಕ ನೇಣತೀ ಮಾತೇ ।೮೭॥ ಪ್ರಕಾಶ ಆಣಿ ಕಡವಸೇ । ಹೇ ಸೂರ್ಯಾಚಿಸ್ತವ ಜೈಸೇ । ಪ್ರಕಾಶ ಉದಯಿ ದಿಸೇ । ತಮ ಅಸ್ತುಸೀ ।೮೮॥ ಆಣಿ ಮಾಝೇ ಜಾಣಣೇ ನೇಣಣೇ । ತೇ ತಂವ ಭೂತಾಂಚಿಯಾ ದೈವಾಚೇ ಕರಣೇ । ಮ್ಹಣೌನಿ ಭೂತೀ ಭಾವಾಚೇ ಹೋಣೇ । ವಿಷಮ ಪಡೇ ।೮೯॥ ಯಾಪರೀ ಮಾಝಿಯಾ ಭಾವೀ । ಹೇ ಜೀವಸೃಷ್ಟಿ ಆಹೇ ಆಘವೀ । ಗುಂತಲೀ ಅಸೇ ಜಾಣಾವೀ । ಪಂಡುಕುಮರಾ ।೯೦॥ ಆತಾ ಇಯೇ ಸೃಷ್ಟೀಚೇ ಪಾಲಕ । ಜಯಾ ಆಧೀನ ವರ್ತತೀ ಲೋಕ । ತೇ ಆಕಾರ ಭಾವ ಆಣಿಕ । ಸಾಂಗೇನ ತುಜ ।೯೧॥

ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ ।
ಮದ್ಭಾವಾ ಮಾನಸಾ ಜಾತಾಃ ಯೇಷಾಂ ಲೋಕ ಇಮಾಃ ಪ್ರಜಾಃ ।೬॥

ತರೀ ಆಘವಾಚಿ ಗುಣೀ ವೃದ್ಧ । ಜೇ ಮಹರ್ಷೀ ಮಾಜೀ ಪ್ರಬುದ್ಧ । ಕಶ್ಯಪಾದಿ ಪ್ರಸಿದ್ಧ । ಸಪ್ತ ಋಷೀ ।೯೨॥ ಆಣಿಕಹೀ ಸಾಂಗಿತೀಲ । ಜೇ ಕಾ ಚೌದಾ ಆಂತುಲ ಮುದ್ದಲ । ಸ್ವಾಯಂಭೂ ಮುಖ್ಯ ವಡೀಲ । ಚಾರೀ ಮನು ।೯೩॥ ಐಸೇ ಹೇ ಅಕರಾ । ಮಾಝ್ಯಾ ಮನೀ ಜಾಹಾಲೇ ಧನುರ್ಧರಾ । ಸೃಷ್ಟೀಚಿಯಾ ವ್ಯಾಪಾರಾ । ಲಾಗೋನಿಯಾ ।೯೪॥ ಜೈ ಲೋಕಾಂಚೀ ವ್ಯವಸ್ಥಾ ನ ಪಡೇ । ಜೈ ಯಾ ತ್ರಿಭುನಾಚೇ ಕಾಂಹಿ ನ ಮಾಂಡೇ । ತೈ ಮಹಾಭೂತಾಂಚೇ ದಳವಾಡೇ । ಅಚುಂಬಿತ ಅಸೇ ।೯೫॥ ತೈಂಚಿ ಹೇ ಜಾಹಲೇ । ಮಗ ಇಹೀ ಲೋಕ ಕೇಲೇ । ತೇಥ ಅಧ್ಯಕ್ಷ ರಚೂನಿ ಠೇವಿಲೇ । ಇಹೀ ಜನ ।೯೬॥ ಮ್ಹಣೌನಿ ಅಕರಾಹೀ ಹೇ ರಾಜಾ । ಮಗ ಏರ ಜಗ ಯಾಂಚಿಯಾ ಪ್ರಜಾ । ಏವಂ ವಿಶ್ವ ವಿಸ್ತಾರು ಹಾ ಮಾಝಾ । ಐಸೇಚಿ ಜಾಣ ।೯೭॥ ಪಾಹೇ ಪಾ ಆರಂಭೀ ಬೀಜ ಏಕಲೇ । ಮಗ ತೇಂಚಿ ವಿರೂಢಲಿಯಾ ಬೂಡ ಜಾಹಾಲೇ । ಬುಡೀ ಕೋಂಭ ನಿಘಾಲೇ । ಖಾಂದಿಯಾಂಚೇ ।೯೮॥ ಖಾಂದಿಯಾ ಪಾಸೂನಿ ಅನೇಕಾ । ಫುಟಲಿಯಾ ನಾನಾ ಶಾಖಾ । ಶಾಖಾಂಸ್ತವ ದೇಖಾ । ಪಲ್ಲವ ಪಾನೇ ।೯೯॥

ಪಂಡುಸುತನೇ, ಭಯ, ನಿರ್ಭಯತೇ, ಅಹಿಂಸೆ, ಸಮತೆ, ಸಂತೋಷ, ತಪಶ್ಚರ್ಯ ಮತ್ತು ದಾನ ।।೫೫।।

ಆರೇ, ಹಾಗೆಯೇ ಎಲ್ಲ ಭೂತಗಳಲ್ಲಿನ ಯಶವು, ಅಪಕೀರ್ತಿ ಈ ಯಾವ ಭಾವಗಳು ದೃಷ್ಟಿಗೆ ಗೋಚರಿಸುವುವೋ, ಅವು ನನ್ನಿಂದಲೇ ಭೂತಗಳಲ್ಲಿ ಉತ್ಪನ್ನವಾಗುವುವು ।।೫೬।।

ಹೇಗೆ ಭೂತಗಳು ಭಿನ್ನ ಭಿನ್ನವೋ, ಅದರಂತೆ ವಿಕಾರಗಳೂ ಭಿನ್ನ ಭಿನ್ನವಾಗಿವೆ. ಇವುಗಳಲ್ಲಿ ಕೆಲವರಿಗೆ ನನ್ನ ಜ್ಞಾನವಾಗುವುದು, ಇನ್ನೂ ಕೆಲವರಿಗೆ ಆಗುವುದಿಲ್ಲ ।।೫೭।।

ಬೆಳಕು ಮತ್ತು ಕತ್ತಲೆಯು ಸೂರ್ಯನನ್ನೇ ಅವಲಂಬಿಸಿರುವುದು. ಸೂರ್ಯನ ಉದಯದಿಂದ ಬೆಳಕು ಕಂಡರೆ, ಅಸ್ತದಿಂದ ಕತ್ತಲೆಯಾಗುವುದು ।।೫೮।।

ಅದರಂತೆ ಪ್ರಾಣಿಗಳಿಗೆ ನನ್ನ ಜ್ಞಾನ ಆಗುವುದು ಬಿಡುವುದು ಅವರ ಕರ್ಮದ ಫಲವಾಗಿದೆ. ಆದ್ದರಿಂದಲೇ ಅವರಲ್ಲಿ ಭಿನ್ನ ಭಿನ್ನವಾದ ವಿಕಾರಗಳು ಉತ್ಪನ್ನವಾಗುವುವು ।।೫೯।।

ಅದರಂತೆ ಅರ್ಜುನಾ, ಈ ಎಲ್ಲ ಜೀವಸೃಷ್ಟಿಯು ನನ್ನಲ್ಲಿಯೇ ತುಂಬಿಕೊಂಡಿರುವುದು. ಹೀಗೆ ನೀನು ತಿಳಿದುಕೊ ।।೯೦।।

ಈಗ ಈ ಯಾವ ಸೃಷ್ಟಿಯ ಪಾಲಕರು ಇರುವರು ಮತ್ತು ಇವರ ಆಜ್ಞೆಯಿಂದ ಎಲ್ಲ ಲೋಕವು ವರ್ತಿಸುವುದು. ಹೀಗೆ ಇನ್ನು ಹನ್ನೊಂದು ಭಾವಗಳು ಇವೆ. ಅವುಗಳನ್ನು ನಿನಗೆ ಹೇಳುವೆ ।।೯೧।।

ಶ್ಲೋಕಾರ್ಥ :- ಈ ಸೃಷ್ಟಿಗಳೆಲ್ಲವೂ ಮೂಲ ಪುರುಷರೆಂದು ಹೇಳಿಕೊಳ್ಳುತ್ತಿರುವ ಅತ್ರಿ ಮೊದಲಾದ ಸಪ್ತ ಋಷಿಗಳು, ಸನಕಾದಿ ಮುನಿಕುಮಾರರು ಸ್ವಯಂಭುವ ಮೊದಲಾದ ಮನುಗಳು ಮೊದಲು ನನ್ನ ಸಂಕಲ್ಪದಿಂದ ಹುಟ್ಟಿದವರೇ ।।೬।।

ಯಾವುದೆಂದರೆ, ಸರ್ವಗುಣ ಶ್ರೇಷ್ಠರಾದ ಮತ್ತು ಮಹರ್ಷಿಗಳಲ್ಲಿ ಜ್ಞಾನಿಗಳಾದ ಪ್ರಖ್ಯಾತ (ಕಶ್ಯಪ, ಅತ್ರಿ, ಭಾರದ್ವಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ಹಾಗೂ ವಶಿಷ್ಠ) ಏಳು ಋಷಿಗಳಿರುವರು ।।೯೨।।

ಮತ್ತು ಹದಿನಾಲ್ಕು ಮನುಗಳು ಇರುವರು. ಅವರಲ್ಲಿ ಸ್ವಯಂಭುವಾದಿ ಮುಖ್ಯರಾದ ನಾಲ್ವರನ್ನು ನಾನು ನಿನಗೆ ಹೇಳುವೆ ।।೯೩।।

ಹೇ ಧನುರ್ಧರನೇ, ಹೀಗೆ (ಏಳು ಋಷಿಗಳು, ನಾಲ್ಕು ಮನುಗಳು) ಹನ್ನೊಂದು ಭಾವಗಳು ಸೃಷ್ಟಿಯ ಉತ್ಪತ್ತಿಗಾಗಿ ನನ್ನ ಮನಸ್ಸಿನಿಂದ ಉತ್ಪನ್ನರಾಗಿರುವರು ।।೯೪।।

ಹದಿನಾಲ್ಕು ಲೋಕಗಳ ವ್ಯವಸ್ಥೆ ಇಲ್ಲದಾಗ, ತ್ರಿಭುವನದ ರಚನೆಯು ಆಗದಿರುವಾಗ, ಪಂಚಮಹಾಭೂತಗಳ ಸಮುದಾಯವು ಕಾರ್ಯವಿಲ್ಲದೇ ಇದ್ದಲ್ಲಿಯೇ ಮೂಲಸ್ಥಿತಿಯಲ್ಲಿದ್ದವು ।।೯೫।।

ಆಗ ಈ ಏಳು ಋಷಿಗಳು ಮತ್ತು ನಾಲ್ಕು ಮನುಗಳು ಉತ್ಪನ್ನರಾಗಿ ಮತ್ತು ಅಷ್ಟ ಲೋಕಪಾಲಕರಿಗೆ ಉತ್ಪನ್ನ ಮಾಡಿ ಅವರಿಗೆ ಎಲ್ಲ ಜಗತ್ತಿಗೆ ಮುಖ್ಯಸ್ಥರನ್ನಾಗಿ ಮಾಡಿದರು ।।೯೬।।

ಆದ್ದರಿಂದ ಈ ಹನ್ನೊಂದು ಜನರು ರಾಜರಂತೆ ಇದ್ದು, ಉಳಿದವರೆಲ್ಲರೂ ಇವರ ಪ್ರಜೆಗಳಾಗಿರುವರು. ಈ ಪ್ರಕಾರವಾಗಿ ಈ ವಿಶ್ವ ವಿಸ್ತಾರವು ನನ್ನದೇ ಇರುವುದು ಹೀಗೆ ತಿಳಿ ।।೯೭।।

ಇಲ್ಲಿ ನೋಡು, ಆರಂಭಕ್ಕೆ ಪ್ರಥಮವಾಗಿ ಬೀಜವು ಒಂದೇ ಇರುವುದು. ಅದು ಬೆಳೆದ ನಂತರ ಅದಕ್ಕೆ ಬೇರು ಬಿಡುವುದು ಮತ್ತು ಬೇರಿಗೆ ಅಂಕುರವಾಗಿ ಅದರಿಂದ ಟೊಂಗೆಗಳಾಗುವುವು ।।೯೮।।

ಟೊಂಗೆಗಳಿಂದ ಅನೇಕ ಶಾಖೆಗಳು ಹುಟ್ಟಿಕೊಂಡು ಅದಕ್ಕೆ ಕೋಮಲವಾದ ಎಲೆಗಳು ಹುಟ್ಟಿಕೊಳ್ಳುವುವು ।।೯೯।।

ಪಲ್ಲವೀ ಫೂಲ ಫಳ । ಏವಂ ವೃಕ್ಷತ್ವ ಜಾಹಾಲೇ ಸಕಳ । ತೇ ನಿರ್ಧಾರಿತಾ ಕೇವಳ । ಬೀಜಚಿ ಆಘವೇ ।೧೦೦॥ ತೈಸೇ ಮೀ ಏಕಚಿ ಪಹಿಲೇ । ಮಗ ಮೀ ತೇಂಚಿ ಮನಾತೇ ವ್ಯಾಲೇ । ತೇಥ ಸಪ್ತ ಋಷಿ ಜಾಹಾಲೇ । ಆಣಿ ಚಾರೀ ಮನು ।೧೦೧॥ ಇಹೀ ಲೋಕಪಾಳ ಕೇಲೇ । ಲೋಕಪಾಳೀ ವಿವಿಧ ಲೋಕ ಸೃಜಿಲೇ । ಲೋಕಾಪಾಸೂನಿ ನಿಜಪಲೇ । ಪ್ರಜಾಜಾತ ।೧೦೨॥ ಐಸೇನಿ ಹೇ ವಿಶ್ವ ಯೇಥೇ । ಮೀಚಿ ವಿಸ್ತಾರಿಲೋಸೆ ನಿರುತೇ । ಪರೀ ಭಾವಾಚೇನಿ ಹಾತೇ । ಮಾನೇ ಜಯಾ ।೧೦೩॥

ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।
ಸೋಽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ।೭॥

ಯಾಲಾಗೀ ಸುಭದ್ರಾಪತಿ । ಹೇ ಭಾವ ಇಯಾ ಮಾಝಿಯಾ ವಿಭೂತೀ । ಆಣಿ ಯಾಂಚಿಯಾ ವ್ಯಾಪ್ತೀ । ವ್ಯಾಪಿಲೇ ಜಗ ।೧೦೪॥ ಮ್ಹಣೌನಿ ಗಾ ಯಾಪರೀ । ಬ್ರಹ್ಮಾದಿ ಪಿಪೀಲಿಕಾವರೀ । ಮೀವಾಂಚೂನಿ ದುಸರೀ । ಗೋಠೀ ನಾಹೀ ।೧೦೫॥ ಐಸೇ ಜಾಣೇ ಜೋ ಸಾಚೇ । ತಯಾ ಚೇಇರೆ ಜಾಹಾಲೇ ಜ್ಞಾನಾಚೇ । ಮ್ಹಣೌನಿ ಉತ್ತಮಾಧಮ ಭೇದಾಚೇ । ದುಃಸ್ವಪ್ನ ನ ದೇಖೇ ।೧೦೬॥ ಮೀ ಮಾಝಿಯಾ ವಿಭೂತೀ । ವಿಭೂತೀ ಅಧಿಷ್ಠಿಲಿಯಾ ವ್ಯಕ್ತೀ । ಹೇ ಆಘವೇ ಯೋಗಪ್ರತೀತೀ । ಏಕಚಿ ಮಾನೀ ।೧೦೭॥ ಮ್ಹಣೌನಿ ನಿಃಶಂಕೆ ಯೇಣೇ ಮಹಾಯೋಗೇ । ಮಜ ಮೀನಲಾ ಮನಾಚೇನಿ ಆಂಗೇ । ಏಥ ಸಂಶಯ ಕರಣೇ ನ ಲಗೇ । ತೋ ತ್ರಿಶುದ್ಧೀ ಜಾಹಲಾ ।೧೦೮॥ ಕಾ ಜೇ ಐಸೇ ಕಿರೀಟೀ । ಮಾತೇ ಭಜೇ ಜೋ ಅಭೇದಾ ದಿಠೀ । ತಯಾಚಿಯೇ ಭಜನಾಚೇ ನಾಟೀ । ಸೂತೀ ಮಜ ।೧೦೯॥ ಮ್ಹಣೌನಿ ಅಭೇದೇ ಜೋ ಭಕ್ತಿಯೋಗು । ತೇಥ ಶಂಕಾ ನಾಹೀ ನಯೇ ಖಂಗು । ಕರಿತಾ ಠೇಲಾ ತರೀ ಚಾಂಗು । ತೇ ಸಾಂಗಿತಲೇ ಷಷ್ಠೀ ।೧೧೦॥ ತೋಚಿ ಅಭೇದು ಕೈಸಾ । ಹೇ ಜಾಣಾವಯಾ ಮಾನಸಾ । ಸಾದ ಜಾಲೀ ತರೀ ಪರಿಯೇಸಾ । ಬೋಲಿಜೇಲ ।೧೧೧॥

ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।
ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ।೮॥

ತರೀ ಮೀಚಿ ಏಕ ಸರ್ವಾ । ಯಾ ಜಗಾ ಜನ್ಮ ಪಾಂಡವಾ । ಆಣಿ ಮಜಚಿ ಪಾಸೂನಿ ಆಘವಾ । ನಿರ್ವಾಹೋ ಯಾಂಚಾ ।೧೧೨॥

ಮತ್ತು ಎಲೆಗಳು ಹುಟ್ಟಿದ ಮೇಲೆ ಅದಕ್ಕೆ ಹೂವು ಮತ್ತು ಫಲಗಳು ಬರುವುವು. ಈ ಪ್ರಕಾರವಾಗಿ ಪರಿಪೂರ್ಣ ವೃಕ್ಷವಾದ ಮೇಲೆ ಅದರ ಕಾರಣ ದೃಷ್ಟಿಯಿಂದ ವಿಚಾರಿಸಿದಾಗ ಎಲ್ಲವೂ ಬೀಜವೇ ಎಂದು ಸಿದ್ಧವಾಗುವುದು ॥೧೦೦॥

ಅದರಂತೆ ಮೂಲಾರಂಭದಲ್ಲಿ ನಾನೊಬ್ಬನೇ ಇದ್ದೆನು, ನಂತರ ನನ್ನಿಂದ ಮನಸ್ಸು ಉತ್ಪನ್ನವಾಯಿತು. ಮನಸ್ಸಿನಿಂದ ಏಳು ಋಷಿಗಳು ನಾಲ್ಕು ಮನುಗಳು ಉತ್ಪನ್ನರಾದರು ॥೧೦೧॥

ಅವರಿಂದ ಇಂದ್ರಾದಿ ಅಷ್ಟಲೋಕಪಾಲಕರು ಉತ್ಪನ್ನರಾದರು ಮತ್ತು ಲೋಕಪಾಲಕರು ಅನೇಕ ತರಹದ ಲೋಕಗಳನ್ನು ಉತ್ಪನ್ನ ಮಾಡಿದರು ಮತ್ತು ಆ ಲೋಕಗಳಿಂದ ಸರ್ವ ಪ್ರಾಣಿಗಳು ಉತ್ಪನ್ನವಾದವು ॥೧೦೨॥

ಈ ಪ್ರಕಾರವಾಗಿ ನಿಜವಾಗಿಯೂ ಸರ್ವ ವಿಶ್ವದ ವಿಸ್ತಾರವೇ ನಾನೇ ಆಗಿರುವೆನು. ಆದರೆ ಯಾರಿಗೆ ಶ್ರದ್ಧೆಯಿಂದ ಮಾನ್ಯವಾಗುವುದೋ, ಅವರಿಗೆ ಮಾತ್ರ ತಿಳಿಯುವುದು ॥೧೦೩॥

ಶ್ಲೋಕಾರ್ಥ :- ನಾನು ಹೇಳುವ ಈ ವಿಭೂತಿ ಯೋಗವನ್ನು ಇದ್ದಕ್ಕಿದ್ದಂತೆ ತಿಳಿದವರು ಚಲನವಿಲ್ಲದ ಧ್ಯಾನಯೋಗದಲ್ಲಿಸ್ಥಿರಪಡುತ್ತಾರೆ. ಇದರಲ್ಲಿ ಸಂಶಯವಿಲ್ಲ ॥೭॥

ಅದಕ್ಕಾಗಿ ಹೇ ಸುಭದ್ರಾಪತಿಯೇ, ಈ ಹನ್ನೊಂದು ಭಾವ ಎಂದರೆ ನನ್ನ ವಿಭೂತಿಗಳಾಗಿರುವರು ಮತ್ತು ಈ ವಿಭೂತಿಗಳ ವ್ಯಾಪಕತ್ವದಿಂದ ಈ ವಿಶ್ವವು ವ್ಯಾಪಿಸಿಕೊಂಡಿದೆ ॥೧೦೪॥

ಆದ್ದರಿಂದ ಈ ಪ್ರಕಾರವಾಗಿ ಬ್ರಹ್ಮದೇವನಿಂದ ಹಿಡಿದು ಇರಿವೆಯವರೆಗೂ ಇರುವ ಎಲ್ಲ ಪ್ರಾಣಿಗಳಲ್ಲಿ ನಾನು ಇರುವ ಹೊರತಾಗಿ ಬೇರೆ ಮಾತೇ ಇಲ್ಲ ॥೧೦೫॥

ಹೀಗೆ ನನ್ನ ಸತ್ಯರೂಪವನ್ನು ಯಾರು ತಿಳಿಯುವರೋ, ಅವರಿಗೆ ಮಾತ್ರ ನಿಜ ಜ್ಞಾನವು ಜಾಗೃತವಾಗಿರುವುದು. ಆದ್ದರಿಂದಲೇ ಉತ್ತಮ ಅಧಮ ಹೀಗೆ ಪ್ರಾಣಿಗಳಲ್ಲಿ ಭೇದದ ದುಸ್ವಪ್ನವೂ ಅವರಿಗೆ ಬೀಳುವುದಿಲ್ಲ ॥೧೦೬॥

ನಾನು ನನ್ನ ವಿಭೂತಿಗಳು ಮತ್ತು ನನ್ನ ವಿಭೂತಿಗಳಿಂದ ಯುಕ್ತವಾದ ಪ್ರಾಣಿಗಳು ಇವು ಎಲ್ಲವೂ ಅನುಭವದಿಂದ ಒಂದೇಯಾಗಿರುವುವು, ಹೀಗೆ ತಿಳಿ ॥೧೦೭॥

ಆದ್ದರಿಂದ ನಿಜವಾಗಿಯೂ ಯಾರು ಈ ಜ್ಞಾನಯೋಗದಿಂದ, ಮನೋಭಾವದಿಂದ ಮದ್ರೂಪನಾದವನು ಕೃತಾರ್ಥನಾದನು. ಇದರಲ್ಲಿ ಸಂಶಯವಿಲ್ಲ ॥೧೦೮॥

ಕಾರಣ ಅರ್ಜುನಾ, ಅಭೇದ ದೃಷ್ಟಿಯಿಂದ ಯಾರು ನನ್ನನ್ನು ಭಜಿಸುವರೋ, ಅವರ ಭಜನೆಯ ಭರದಲ್ಲಿ ನಾನು ಅವರ ಪಾಶದಲ್ಲಿ ಬೀಳುವೆನು ॥೧೦೯॥

ಆದ್ದರಿಂದ ನನ್ನಲ್ಲಿ ಅಭೇದ ಭಾವದಿಂದ ಭಕ್ತಿ ಮಾಡುವವನಿಗೆ ನನ್ನ ಪ್ರಾಪ್ತಿಯಲ್ಲಿ ವ್ಯತವ್ಯಯ ಬರುವುದಿಲ್ಲ. ಹೀಗಿರುವಾಗ ದೇಹಬಿಟ್ಟರೂ ಉತ್ತಮವೇ ಎಂದು ಈ ಹಿಂದೆ ಆರನೆಯ ಅಧ್ಯಾಯದಲ್ಲಿ ಹೇಳಿರುವುದು ॥೧೧೦॥

ಈ ಅಭೇದ ಶಕ್ತಿಯು ಹೇಗಿರುವುದೆಂದು ತಿಳಿಯಲು ನಿನ್ನ ಮನದಲ್ಲಿ ಇಚ್ಛೆ ಇದ್ದರೆ ಹೇಳುವೆನು ಕೇಳು ॥೧೧೧॥

ಶ್ಲೋಕಾರ್ಥ :- ನಾನು ಎಲ್ಲದಕ್ಕೂ ಕಾರಣನು, ನನ್ನಿಂದಲೇ ಸರ್ವವೂ ನಡೆಯುತ್ತಿದೆ. ಹೀಗೆಂದು ತಿಳಿದು ಶ್ರದ್ಧಾವಂತರಾದ ಪಂಡಿತರು ನನ್ನನ್ನು ಬಿಡದೆ ಸ್ಮರಿಸುತ್ತಾರೆ ॥೮॥

ಅರ್ಜುನಾ, ಈ ಎಲ್ಲ ಜಗತ್ತಿನ ಉತ್ಪನ್ನ ಮಾಡುವವನೂ ಮತ್ತು ಪಾಲನೆ ಮಾಡುವವನೂ ನಾನೊಬ್ಬನೇ ಇರುವೆನು ॥೧೧೨॥

ಕಲ್ಲೋಳಮಾಳಾ ಅನೇಗಾ । ಜನ್ಮ ಜಳೀಂಚಿ ಪೈ ಗಾ । ಆಣಿ ತಯಾ ಜಳಚಿ ಆಶ್ರಯೋ ತರಂಗಾ । ಜೀವನಹೀ ಜಳ ॥೧೧೩॥ ಐಸೇ ಆಘವಾಚಿ ಠಾಯೀ । ತಯಾ ಜಳಚಿ ಜೇವಿ ಪಾಹೀ । ತೈಸಾ ಮೀವಾಂಚೂನಿ ನಾಹೀ । ವಿಶ್ವೀ ಇಯೇ ॥೧೧೪॥ ಐಸಿಯಾ ವ್ಯಾಪಕಾ ಮಾತೇ । ಮಾನೂನಿ ಜೇ ಭಜತೀ ಭಲತೇಥೇ । ಪರಿ ಸಾಚೋಕಾರೇ ಉದಿತೇ । ಪ್ರೇಮ ಭಾವೇ ॥೧೧೫॥ ದೇಶ ಕಾಳ ವರ್ತಮಾನ । ಆಘವೇ ಮಜಸೀ ಕರೂನಿ ಅಭಿನ್ನ । ಜೈಸಾ ವಾಯು ಹೋಊನಿ ಗಗನ । ಗಗನೀಂಚಿ ವಿಚರೇ ॥೧೧೬॥ ಐಸೇನಿ ಜೇ ನಿಜಜ್ಞಾನೀ । ಖೇಳತ ಸುಖೇ ತ್ರಿಭುವನೀ । ಜಗದ್ರೂಪಾ ಮನೀ । ಸಾಂಠಊನಿ ಮಾತೇ ॥೧೧೭॥ ಜೇ ಜೇ ಭೇಟೇ ಭೂತ । ತೇ ತೇ ಮಾನಿಜೇ ಭಗವಂತ । ಹಾ ಭಕ್ತಿಯೋಗು ನಿಶ್ಚಿತ । ಜಾಣ ಮಾಝಾ ॥೧೧೮॥

ಮಚ್ಚಿತ್ತಾ ಮದ್ಗತಪ್ರಾಣಾಃ ಬೋಧಯಂತಃ ಪರಸ್ಪರಮ್ ।
ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥೯॥

ಚಿತ್ತೇ ಮೀಚಿ ಜಾಹಾಲೇ । ಮಿಯಾಂಚಿ ಪ್ರಾಣೇ ಧಾಲೇ । ಜೀವ್ಹೋ ಮರೋ ವಿಸರಲೇ । ಬೋಧಾಚಿಯಾ ಭುಲೀ ॥೧೧೯॥ ಮಗ ತಯಾ ಬೋಧಾಚೇನಿ ಮಾಜೇ । ನಾಚತೀ ಸಂವಾದಸುಖಾಚೀ ಭೋಜೇ । ಆತಾ ಏಕಮೇಕಾ ಘೇಪೇ ದೀಜೇ । ಬೋಧಚಿ ವರೀ ॥೧೨೦॥ ಜೈಸೀ ಜವಳಿಕೇಚೀ ಸರೋವರೇ । ಉಂಚಬಳಲಿಯಾ ಕಾಲವತೀ ಪರಸ್ಪರೇ । ಮಗ ತರಂಗಾಸಿ ಧವಳಾರೇ । ತರಂಗಚಿ ಹೋತೀ ॥೧೨೧॥ ತೈಸೀ ಯೇರಯೇರಾಂಚಿಯೇ ಮಿಳಣೀ । ಪಡತ ಆನಂದಕಲ್ಲೋಳಾಂಚೀ ವೇಣೀ । ತೇಥ ಬೋಧ ಬೋಧಾಂಚೀ ಲೇಣೀ । ಬೋಧೇಂಚಿ ಮಿರವೀ ॥೧೨೨॥ ಜೈಸೇ ಸೂರ್ಯೆ ಸೂರ್ಯಾತೇ ವೋವಾಳಿಲೇ । ಕೀ ಚಂದ್ರೇ ಚಂದ್ರಮ್ಯಾ ಕ್ಷೇಮ ದಿಧಲೇ । ನಾ ತರೀ ಸರಿಸೇನೀ ಪಾಡೇ ಮೀನಲೇ । ದೋನಿ ವೋಘ ॥೧೨೩॥ ತೈಸೇ ಪ್ರಯಾಗ ಹೋತ ಸಾಮರಸ್ಯಾಚೇ । ವರೀ ವೋಸಾಣ ತರತಿ ಸಾತ್ತ್ವಿಕಾಚೇ । ತೇ ಸಂವಾದಚತುಷ್ಪಥೀಂಚೇ । ಗಣೇಶ ಜಾಹಲೇ ॥೧೨೪॥ ತೇವ್ಹಾ ತಯಾ ಮಹಾಸುಖಾಚೇನಿ ಭರೇ । ಧಾಂವೋನಿ ದೇಹಾಚಿಯೇ ಗಾಂವಾ ಬಾಹೇರೇ । ಮಿಯಾ ಧಾಲೇ ತೇಣೇ ಉದ್ಗಾರೇ । ಲಾಗತೀಗಾಜೋ ॥೧೨೫॥ ಪೈ ಗುರುಶಿಷ್ಯಾಂಚಿಯಾ ಏಕಾಂತೀ । ಜೇ ಅಕ್ಷರಾ ಏಕಾಚೀವದಂತೀ । ತೇ ಮೇಘಾಚಿಯಾ ಪರೀ ತ್ರಿಜಗತೀ । ಗರ್ಜತೀ ಸೈಂಘ ॥೧೨೬॥

ಅರೇ, ಅನೇಕ ತೆರೆಗಳ ಜ್ಞಾನವು ನೀರಿನಲ್ಲಿಯೇ ಆಗುವುದು ಮತ್ತು ಅದರ ಜೀವನವು ಸಹ ನೀರೇ ಆಗಿರುವುದು ||೧೧೩||

ಈ ಪ್ರಕಾರವಾಗಿ ಆ ತೆರೆಗಳಿಗೆ ಎಲ್ಲ ಸ್ಥಳಗಳಲ್ಲಿಯೂ ನೀರೇ ಹೇಗೆ ಇರುವುದೋ, ಅದೇ ಪ್ರಕಾರವಾಗಿ ಈ ವಿಶ್ವದಲ್ಲಿ ನನ್ನ ಹೊರತಾಗಿ ಬೇರೆ ಏನೂ ಇರುವುದಿಲ್ಲ ||೧೧೪||

ಈ ರೀತಿಯಲ್ಲಿ ನಾನು ಸರ್ವವ್ಯಾಪಕನಾಗಿರುವೆನು, ಎಂದು ತಿಳಿದು ಯಾವ ನಿಜವಾದ ಉತ್ಕಂಠದಿಂದ ಮತ್ತು ಪ್ರೇಮಭಾವದಿಂದ ಯಾವುದೇ ಸ್ಥಳದಲ್ಲಿ ನನ್ನನ್ನು ಭಜಿಸುವರು ||೧೧೫||

ದೇಶ ಕಾಲ ವರ್ತಮಾನ ಈ ಎಲ್ಲದರಿಂದಲೂ ನಾನು ಭಿನ್ನನಿರುವುದಿಲ್ಲ. ಯಾವ ಪ್ರಕಾರವಾಗಿ ವಾಯುವು ಆಕಾಶ ರೂಪ ತಾಳಿ ಆಕಾಶದಲ್ಲಿಯೇ ಸಂಚರಿಸುವುದೋ ||೧೧೬||

ಅದೇ ಪ್ರಕಾರವಾಗಿ ಯಾವ ಆತ್ಮಜ್ಞಾನಿಯು ಸರ್ವ ವ್ಯಾಪಕನಾಗಿರುವ ನನ್ನನ್ನು ಮನದಲ್ಲಿ ಸ್ಮರಿಸುತ್ತ ಸುಖವಾಗಿ ತ್ರಿಭುವನದಲ್ಲಿ ಕಾಲಕ್ರಮಣ ಮಾಡುವನು ||೧೧೭||

ಮತ್ತು ಯಾವ ಯಾವ ಪ್ರಾಣಿಯು ದೃಷ್ಟಿಗೆ ಬೀಳುವುದೋ, ಆ ಪ್ರಾಣಿಯನ್ನು ಈಶ್ವರನೆಂದು ತಿಳಿಯುವನು. ಇದು ನನ್ನ ನಿಜವಾದ ಭಕ್ತಿಯೋಗವಿರುವುದು. ಹೀಗೆ ತಿಳಿ ||೧೧೮||

ಶ್ಲೋಕಾರ್ಥ :- ಅಂಥ ಭಕ್ತರು ತಮ್ಮ ಚಿತ್ತಗಳನ್ನೂ, ತಮ್ಮ ಪ್ರಾಣಗಳನ್ನೂ, ನನಗೆ ಅರ್ಪಿಸಿ ಅನವರತವೂ ಪರಸ್ಪರ ನನ್ನ ಕಥೆಗಳನ್ನೇ ಹೇಳಿಕೊಳ್ಳುತ್ತ ಹಾಡುತ್ತಿರುತ್ತಾರೆ ||೯||

ಚಿತ್ತದಿಂದ ಮದ್ರೂಪರಾದವರು ಮತ್ತು ನನ್ನ ಯೋಗದಿಂದಲೇ ಅವರ ಪ್ರಾಣವು ತೃಪ್ತಗೊಂಡಿರುವುದು ಮತ್ತು ಜ್ಞಾನದ ನಾದದಲ್ಲಿ ಜೀವಂತವಾಗಿರುವುದು, ಮರಣವಾಗುವುದು ಇವುಗಳ ಪರಿವೆಯೇ ಇವರಿಗಿರುವುದಿಲ್ಲ ||೧೧೯||

ನಂತರ ಬೋಧೆಯ ಬಲದಿಂದ ಅವರು ಕೌತುಕದಿಂದ ಸಂವಾದ ಸುಖದಲ್ಲಿ ನರ್ತಿಸುತ್ತಿರುವರು. ಇಂತಹ ಸ್ಥಿತಿಯಲ್ಲಿ ಒಬ್ಬರಿಗೊಬ್ಬರ ಕೊಡುವ ತೆಗೆದುಕೊಳ್ಳುವ ವ್ಯವಹಾರವು ಜ್ಞಾನವೇ ಆಗಿರುತ್ತದೆ ||೧೨೦||

ಯಾವ ಪ್ರಕಾರವಾಗಿ ಅತಿ ಸಮೀಪದಲ್ಲಿರುವ ಎರಡು ಸರೋವರಗಳು ನೀರಿನಿಂದ ತುಂಬಿಕೊಂಡಾಗ ಅವುಗಳ ನೀರು ಒಂದರಿಂದ ಇನ್ನೊಂದಕ್ಕೆ ಸೇರುವುದು ಮತ್ತು ತೆರೆಗಳಿಗೆ ತೆರೆಗಳೇ ಆಶ್ರಯವಾಗುವುವು ||೧೨೧||

ಅದರಂತೆ ಜ್ಞಾನಿಗಳು ಒಂದೇ ಸ್ಥಳದಲ್ಲಿ ಕೂಡಿದಾಗ ಬ್ರಹ್ಮಾನಂದರೂಪ ತೆರೆಗಳು ಒಂದರಿಂದ ಇನ್ನೊಂದರಲ್ಲಿ ಬೆರೆಯುವುವು. ಆತ್ಮಬೋಧೆಯು ಆತ್ಮಬೋಧೆಗೆ ಆತ್ಮ ಬೋಧೆಯ ಅಲಂಕಾರ ಮಾಡಿ ಮೆರೆಯುವುದು ||೧೨೨||

ಯಾವ ಪ್ರಕಾರವಾಗಿ ಸೂರ್ಯನು ಸೂರ್ಯನಿಗೆ ಬೆಳಗಬೇಕು ಅಥವಾ ಚಂದ್ರನು ಚಂದ್ರನಿಗೆ ಆಲಿಂಗಿಸಬೇಕು, ಅಥವಾ ಎರಡು ಪ್ರವಾಹಗಳು ಒಂದೆಡೆ ಸೇರಿದರೆ ಹೇಗೋ ||೧೨೩||

ಅದರಂತೆ ಬ್ರಹ್ಮೈಕ್ಯದ ಸಂಗಮವಾಗುವುದು. ಐಕ್ಯರಸದ ಭರತಿಯ ಮೇಲೆ ಅಷ್ಟ ಸಾತ್ತ್ವಿಕ ಭಾವದ ಸ್ಫುರಣವು ತೇಲುವುದು. ಆ ಜ್ಞಾನಿಗಳು ಸಂವಾದರೂಪ ನಾಲ್ಕು ದಾರಿ ಕೂಡಿದ ಸ್ಥಳದ ಅಧಿಪತಿಯಾಗುವರು ||೧೨೪||

ಆಗ ಆ ಬ್ರಹ್ಮಾನಂದದ ಭರದಲ್ಲಿ ದೇಹರೂಪ ಗ್ರಾಮದ ಹೊರಗೆ ಧಾವಿಸುತ್ತ ನನ್ನ ಪ್ರಾಪ್ತಿಯಿಂದ ಸಂತೋಷವಾಯಿತೆಂದು ಘನಗರ್ಜನೆ ಮಾಡುವರು ||೧೨೫||

ಗುರು ಶಿಷ್ಯರ ಏಕಾಂತದಲ್ಲಿ ಒಂದಕ್ಷರ ಮಂತ್ರ ಇನ್ನೊಬ್ಬರಿಗೆ ಕೇಳಿಸದಂತೆ ಹೇಳುವುದನ್ನು ಇವರು ಮೂರು ಲೋಕದಲ್ಲಿ ಎಲ್ಲರೂ ಕೇಳಿಸುವಂತೆ ಮೇಘದಂತೆ ಗರ್ಜಿಸಿ ಹೇಳುವರು ||೧೨೬||

ಜೈಸೀ ಕಮಳಕಳಿಕಾ ಜಾಲೇಪಣೇ । ಹೃದಯೀಂಚಿಯಾ ಮಕರಂದಾತೇ ರಾಖೋ ನೇಣೇ । ದೇ ರಾಯಾ ರಂಕಾ ಪಾರಣೇ । ಅಮೋದಾಚೇ ॥೧೨೭॥ ತೈಸೇಂಚಿ ಮಾತೇ ವಿಶ್ವೀ ಕಥಿತ । ಕಥಿತೇನಿ ತೋಷೇ ಕಥೂ ವಿಸರತ । ಮಗ ತಯಾ ವಿಸರಾಮಾಜೀ ವಿರತ । ಆಂಗೇ ಜೀವೇ ॥೧೨೮॥ ಐಸೇ ಪ್ರೇಮಾಚೇನಿ ಬಹುವಸಪಣೇ । ನಾಹೀ ರಾತೀ ದಿವೋ ಜಾಣಣೇ । ಕೇಲೇ ಮಾಝೇ ಸುಖ ಅವ್ಯಂಗವಾಣೇ । ಆಪಣಪೇಯಾ ಜಿಹೀ ॥೧೨೯॥

ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।
ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥೧೦॥

ತಯಾ ಮಗ ಜೇ ಆಮ್ಹೀ ಕಾಂಹೀ । ದ್ಯಾವೇ ಅರ್ಜುನಾ ಪಾಹೀ ।ತೇ ಠಾಯಿಂಚೀಚ ತಿಹೀ । ಘೇತಲೀ ಸೇಲ ॥೧೩೦॥ ಕಾ ಜೇ ತೇ ಜಿಯಾ ವಾಟಾ । ನಿಗಾಲೇ ಗಾ ಸುಭಟಾ । ತೇ ಸೋಯ ಪಾಹೋನಿ ಅವ್ಹಾಂಟಾ । ಸ್ವರ್ಗಾಪವರ್ಗ ॥೧೩೧॥ ಮ್ಹಣೌನಿ ತಿಹೀ ಜೇ ಪ್ರೇಮ ಧರಿಲೇ । ತೇಂಚಿ ಆಮುಚೇ ದೇಣೇ ಉಪಾಇಲೇ । ಪರಿ ಆಮ್ಹೀ ದೇಯಾವೇ ಹೇಹೀ ಕೇಲೇ । ತಿಹೀಂಚೀ ಮ್ಹಣೇಪೇ ॥೧೩೨॥ ಆತಾ ಯಾವರೀ ಯೇತುಲೇ ಘಡೇ । ಜೇ ತೇಂಚಿ ಸುಖ ಆಗಳೇ ವಾಢೇ । ಆಣಿ ಕಾಳಾಚೀ ದೃಷ್ಟಿ ನ ಪಡೇ । ಹೇ ಆಮ್ಹಾ ಕರಣೇ ॥೧೩೩॥ ಲಳೇಯಾಚಿಯಾ ಬಾಳಕಾ  ಕಿರೀಟೀ । ಗವಸಣಿ ಕರೂನಿ ಸ್ನೇಹಚಿಯಾ ದಿಠೀ । ಜೈಸೀ ಖೇಳತಾ ಪಾಠೋಪಾಠೀ । ಮಾಉಲಿ ಧಾಂವೇ ॥೧೩೪॥ ತೇ ಜೋ ಜೋ ಖೇಳ ದಾವೀ । ತೋ ತೊ ಪುಢೇ ಸೋನಯಾಚಾ ಕರೂನಿ ಠೇವೀ । ತೈಸೀ ಉಪಾಸ್ತಿಚಿ ಪದವೀ । ಪೋಷಿತ ಮೀ ಜಾಯೇ ॥೧೩೫॥ ಜಿಯೇ ಪದವೀಚೇನಿ ಪೋಷಕೇ । ತೇ ಮಾತೇ ಪಾವತೀ ಯಥಾಸುಖೇ । ಹೇ ಪಾಳತೀ ಮಜ ವಿಶೇಖೇ । ಆವಡೇ ಕರೂ ॥೧೩೬॥ ಪೈ ಗಾ ಭಕ್ತಾಸಿ ಮಾಝೇ ಕೋಡ । ಮಜ ತಯಾಚೇ ಅನನ್ಯಾಗತೀಚೇ ಚಾಡ । ಕಾ ಜೇ ಪ್ರೇಮಳಾಂಚೇ ಸಾಂಕಡ । ಆಮುಚಿಯಾ ಘರೀ ॥೧೩೭॥ ಪಾಹೇ ಪಾ ಸ್ವರ್ಗ ಮೋಕ್ಷ ಉಪಾಇಲೇ । ದೋನ್ಹೀ ಮಾರ್ಗ ತಯಾಚಿಯೇ ವಾಹಣೇ ಕೇಲೇ । ಆಮ್ಹೀ ಆಂಗಹೀ ಶೇಖಿ ವೇಂಚಿಲೇ । ಲಕ್ಷ್ಮೀಯೇಸಿ ॥೧೩೮॥ ಪರಿ ಆಪಣಪೇವೀಣ ಜೇ ಏಕ । ತೇ ತೈಸೇಂಚಿ ಸುಖ ಸಾಜುಕ । ಸಪ್ರೇಮಳಾಲಾಗಿ ದೇಖ । ಠೇವಿಲೇ ಜತನ॥೧೩೯॥

ಕಮಲ ಕಲಿಕೆಯು ವಿಕಸಿತಗೊಂಡಾಗ ತನ್ನಲ್ಲಿಯ ಮಕರಂದವನ್ನು ಬಚ್ಚಿಡಲಾಗುವುದಿಲ್ಲ ಮತ್ತು ರಾಜನಿಂದ ಹಿಡಿದು ಬಡವನವರೆಗೂ ಎಲ್ಲರಿಗೂ ತನ್ನ ಸುಗಂಧದ ಉಪಚಾರ ಮಾಡುವುದು ।।೧೨೭।।

ಅದರಂತೆ ಜಗತ್ತಿನಲ್ಲಿ ನನ್ನ ಗುಣಗಾನ ಮಾಡುತ್ತ ಗುಣಗಾನದ ಭರದಲ್ಲಿ ಎಲ್ಲವನ್ನೂ ಮರೆಯುವರು, ದೇಹಭಾವವೂ ಇರುವುದಿಲ್ಲ. ಈ ಸ್ಥಿತಿಯಲ್ಲಿ ಜೀವಭಾವ, ದೇಹಭಾವ ಎರಡೂ ಇರುವುದಿಲ್ಲ ।।೧೨೮।।

ಈ ಪ್ರಕಾರವಾಗಿ ನನ್ನ ಪೂರ್ಣ ಸುಖವನ್ನು ತಮ್ಮದಾಗಿ ಮಾಡಿಕೊಂಡವರಿಗೆ ಆ ಪ್ರೇಮದಲ್ಲಿ ಹಗಲು ರಾತ್ರಿಗಳ ಸ್ಮರಣೆಯೇ ಉಳಿಯುವುದಿಲ್ಲ ।।೧೨೯।।

ಶ್ಲೋಕಾರ್ಥ :- ಬಿಡುವಿಲ್ಲದೇ ಪ್ರೇಮಪೂರ್ವಕವಾಗಿ ನನ್ನನ್ನು ಸೇವಿಸುವ ಅವರಿಗೆ ನಾನು ತತ್ತ್ವಜ್ಞಾನವನ್ನು ಪ್ರಸಾದಿಸುತ್ತೇನೆ. ಅದರ ಸಹಾಯದಿಂದ ಅವರು ನನ್ನನ್ನು ಸೇರುವರು ।।೧೦।।

ಅರ್ಜುನಾ, ನಾನು ಅವರಿಗೆ ಏನನ್ನು ಕೊಡಬೇಕೋ, ಅವರು ಆ ಭಾಗದ ವಿಶಿಷ್ಠ ಪಾಲನ್ನು ಪಡೆದಿರುವರು ।।೧೩೦।।

ಅರ್ಜುನಾ, ಕಾರಣವೇನೆಂದರೆ, ಅವರು ಯಾವ ಮಾರ್ಗದಿಂದ ನನ್ನಲ್ಲಿ ಬರಲು ಹೊರಟಿರುವರೋ, ಆ ಮಾರ್ಗದ ದೃಷ್ಟಿಯಿಂದ ಅವರಿಗೆ ಸ್ವರ್ಗ ಮತ್ತು ಮೋಕ್ಷಗಳು ಇವು ಅಡ್ಡದಾರಿ ಎಂದು ತಿಳಿದಿರುವರು ।।೧೩೧।।

ಆದ್ದರಿಂದ ಅವರು ನನ್ನಲ್ಲಿ ಭಕ್ತಿ ಮಾಡಿದರು. ಆ ಭಕ್ತಿಗಾಗಿ ನಾನು ಅವರಿಗೆ ಏನನ್ನು ಕೊಡಬೇಕಾಗಿತ್ತೋ, ಅದನ್ನು ಅವರು ಸ್ವಾಧೀನ ಮಾಡಿಕೊಂಡಿರುವರು ।।೧೩೨।।

ಈಗ ನನ್ನ ಭಕ್ತಿಯ ಪ್ರೇಮ ಸುಖವನ್ನು ಹೆಚ್ಚಿಗೆ ಬೆಳೆಸುವುದು ಮತ್ತು ಈ ನನ್ನ ಭಕ್ತರ ಮೇಲೆ ಕಾಳನ ದೃಷ್ಟಿ ಬೀಳದಂತೆ ನೋಡುವುದು ಇಷ್ಟೇ ನನ್ನ ಕರ್ತವ್ಯವಾಗಿರುವುದು ।।೧೩೩।।

ಹೇ ಕಿರೀಟಿಯೇ, ಪ್ರೀತಿಯ (ಲಡಿವಾಳದ) ಕೂಸು ಆಡುತ್ತಿರುವಾಗ್ಗೆ ತಾಯಿಯು ಅದರ ಮೇಲೆ ಪ್ರೇಮದೃಷ್ಟಿ ಇಟ್ಟು ಅದರ ಹಿಂದೆಯೇ ಧಾವಿಸುವಳು ।।೧೩೪।।

ಮತ್ತು ಆ ಕೂಸು ಯಾವುದೇ ಆಟದ ವಸ್ತು ಬೇಡಲಿ ಅದೆಲ್ಲವನ್ನೂ ಅದರ ಮನಸ್ಸಿನಂತೆಯೇ ಬಂಗಾರ ಮಾಡಿ ಕೊಡುವಳು. ಅದರಂತೆ ನನಗೆ ನನ್ನ ಭಕ್ತನ ಉಪಾಸನೆಯನ್ನು ಪೋಷಿಸಬೇಕಾಗುವುದು ।।೧೩೫।।

ಯಾವ ಸಂಪ್ರದಾಯವನ್ನು ಬೆಳೆಸುವುದರಿಂದ ನನ್ನ ಭಕ್ತರು ನನ್ನನ್ನು ಸಹಜವಾಗಿ ಬಂದು ಕೂಡುವರೋ, ಆ ಸಂಪ್ರದಾಯವನ್ನು ಬೆಳೆಸುವುದೇ ನನಗೆ ಪ್ರಿಯವು ।।೧೩೬।।

ಭಕ್ತರಿಗೆ ನನ್ನ ಬಗ್ಗೆ ಪ್ರೇಮವಿರುವುದು, ಆದ್ದರಿಂದ ನನಗೂ ಅವರ ಅನನ್ಯಭಾವದ ಇಚ್ಛೆಯಿರುವುದು. ಏಕೆಂದರೆ ನಮ್ಮ ಮನೆಯಲ್ಲಿ ಪ್ರೇಮಳ ಭಕ್ತರ ಬಹಳ ಕೊರತೆ ಇರುವುದು ।।೧೩೭।।

ಅರ್ಜುನಾ, ನೋಡು ಉಪಾಯದಿಂದ ಪ್ರಾಪ್ತವಾಗುವ ಸ್ವರ್ಗ ಮತ್ತು ಮೋಕ್ಷ ಈ ಎರಡು ರಸ್ತೆಗಳನ್ನು (ಸ್ವರ್ಗೇಚ್ಛು, ಮುಮುಕ್ಷು) ಇವರಿಗಾಗಿ ದಾರಿಯನ್ನು ತೆಗೆದಿರುತ್ತೇನೆ ಮತ್ತು ಶೇಷನಿಗೆ ಲಕ್ಷ್ಮೀ ಸಹಿತವಾಗಿ ನನ್ನ ಶರೀರವನ್ನು ಸ್ವಾಧೀನ ಕೊಟ್ಟಿದ್ದೇನೆ ।।೧೩೮।।

ಆದರೆ, ಯಾವುದರಲ್ಲಿ ನಾನು ಎಂಬುದು ಲವಲೇಶವೂ ಇಲ್ಲದ ಶುದ್ಧ ಪ್ರೇಮ ಸುಖವನ್ನು ಅದನ್ನು ಹಾಗೆಯೇ ನನ್ನ ಪ್ರೇಮಳ ಭಕ್ತನಿಗಾಗಿ ಬಚ್ಚಿಟ್ಟಿದ್ದೇನೆ ।।೧೩೯।।

ಹಾ ರಾಯವರೀ ಕಿರೀಟೀ । ಆಮ್ಹಿ ಪ್ರೇಮಳು ಘೇವೋ ಆಪಣಯಾಸಾಠೀ । ಯಾ ಬೋಲೀ ಬೋಲಿಜತ ಗೋಷ್ಟೀ । ತೈಸಿಯಾ ನವ್ಹತೀ ಗಾ ॥೧೪೦॥

ತೇಷಾಮೇವಾನುಕಂಪಾರ್ಥಮ್ ಅಹಮಜ್ಞಾನಜಂ ತಮಃ ।
ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥೧೧॥

ಮ್ಹಣೌನಿ ಮಜ ಆತ್ಮಯಾಚಾ ಭಾವೋ । ಜಿಹೀ ಜಿಯಾವಯಾ ಕೇಲಾ ಠಾವೋ । ಏಕ ಮೀವಾಂಚೂನಿ ವಾವೋ । ಯೇರ ಮಾನಿಲೇ ಜಿಹೀ ॥೧೪೧॥ ತಯಾ ತತ್ತ್ವಜ್ಞಾ ಚೋಖಟಾ । ದಿವೀ ಪೋತಾಸಾಚೀ ಸುಭಟಾ । ಮಗ ಮೀಚಿ ಹೋಊನಿ ದಿವಟಾ । ಪುಢಾ ಪುಢಾ ಚಾಲೇ ॥೧೪೨॥ ಅಜ್ಞಾನಾಚಿಯೇ ರಾತೀ । ಮಾಜೀ ತಮಾಚಿ ಮಿಳಣೀ ದಾಟತೀ । ತೇ ನಾಶೂನಿ ಘಾಲೀ ಪರೌತೀ । ತಯಾ ಕರೀ ನಿತ್ಯೋದಯೋ ॥೧೪೩॥ ಐಸೇ ಪ್ರೇಮಳಾಚೇನಿ ಪ್ರಿಯೋತ್ತಮೇ । ಬೋಲಿಲೇ ಜೇಥ ಪುರುಷೋತ್ತಮೇ । ತೇಥ ಅರ್ಜುನ ಮನೋಧರ್ಮೇ । ನಿವಾಲೊ ಮ್ಹಣತಸೇ ॥೧೪೪॥ ಹಾ ಹೋ ಜೇ ಅವಧಾರಾ । ಭಲಾ ಕೇರು ಫೇಡಿಲಾ ಸಂಸಾರಾ । ಜಾಹಲೋ ಜನನೀ ಜಠರಜೋಹರಾ । ವೇಗಳಾ ಪ್ರಭೂ ॥೧೪೫॥ ಜೀ ಜನ್ಮಲೇಪಣ ಆಪುಲೇ । ಹೇ ಆಜಿ ಮಿಯಾ ಡೋಳಾ ದೇಖಿಲೇ । ಜೀವಿತ ಹಾತಾ ಚಢಲೇ । ಆವಡತಸೇ ॥೧೪೬॥ ಆಜೀ ಆಯುಷ್ಯಾ ಉಜವಣ ಜಾಹ್ಲೀ । ಮಾಝಿಯಾ ದೈವಾ ದಶಾ ಉದಯಲೀ । ಜೇ ವಾಕ್ಯಕೃಪಾ ಲಾಧಲೀ । ದೈವಿಕೇನಿ ಮುಖೇ ॥೧೪೭॥ ಆತಾ ಯೇಣೇ ವಚನ ತೇಜಾಕಾರೇ । ಫಿಟಲೇ ಆಂತಿಲ ಬಾಹೇರೀಲ ಅಂಧಾರೇ । ಮ್ಹಣೌನಿ ದೇಖತಸೇ ಸಾಚೋಕಾರೇ । ಸ್ವರೂಪ ತುಝೇ ॥೧೪೮॥

ಅರ್ಜುನ ಉವಾಚ :-
ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ ।
ಪುರುಷಂ ಶಾಶ್ವತಂ ದಿವ್ಯಮ್ ಆದಿದೇವಮಜಂ ವಿಭುಮ್ ॥೧೨॥

ತರೀ ಹೋಸೀ ಗಾ ತೂ ಪರಬ್ರಹ್ಮ । ಜೇ ಯಾ ಮಹಾಭೂತಾ ವಿಸವತೇ ಧಾಮ । ಪವಿತ್ರ ತೂ ಪರಮ । ಜಗನ್ನಾಥಾ ॥೧೪೯॥ ತೂ ಪರಮ ದೈವತ ತಿಹೀ ದೇವಾ । ತೂ ಪುರುಷ ಜೇ ಪಂಚವಿಸವಾ । ದಿವ್ಯ ತೂ ಪ್ರಕೃತಿಭಾವಾ । ಪೈಲೀಕಡೀಲ ॥೧೫೦॥

ಅರ್ಜುನಾ, ಪ್ರೇಮಳ ಭಕ್ತರಿಗೆ ನಾನು ಇಷ್ಟೊಂದು ಸಮೀಪ ಮಾಡುವೆನು. ಈ ಮಾತು ಹೇಳಿ ತೋರಿಸಲಿಕ್ಕೆ ಬರಲಾರದು, ಅನುಭವದಿಂದ ಮಾತ್ರ ಸಾಧ್ಯ ॥೧೪೦॥

ಶ್ಲೋಕಾರ್ಥ :- ಅವರ ಮೇಲಿನ ದಯೆಯಿಂದ ಅವರ ಹೃದಯದಲ್ಲಿ ಇದ್ದು ಪ್ರಕಾಶವಂತವಾದ ಜ್ಞಾನ ದೀಪದಿಂದ ಅವರ ಅಜ್ಞಾನಾಂಧಕಾರವನ್ನು ತೊಲಗಿಸುತ್ತೇನೆ ॥೧೧॥

ಆದ್ದರಿಂದ ಆತ್ಮನಾದ ನನ್ನನ್ನು ಮತ್ತು ಆ ನನ್ನ ಭಕ್ತಿಯೇ ತನ್ನ ಜೀವಿತದ ಕಾರಣ ಮಾಡಿ ನನ್ನ ಹೊರತಾದ ಇತರ ಎಲ್ಲ ವಸ್ತುಗಳನ್ನು ವ್ಯರ್ಥವೆಂದು ತಿಳಿದಿರುವನು ॥೧೪೧॥

ಆ ಶುದ್ಧವಾದ ಜ್ಞಾನಕ್ಕಾಗಿ ನಾನು ಕರ್ಪೂರದ ದೀವಟಿಗೆಯಾಗಿ, ಕರ್ಪೂರವನ್ನು ಬೆಳಗುತ್ತ ಆತನ ಮುಂದೆ ಮುಂದೆ ನಡೆಯುವೆನು ॥೧೪೨॥

ಕಾರಣವೇನೆಂದರೆ, ಅಜ್ಞಾನರೂಪ ರಾತ್ರಿಯಲ್ಲಿ ಕೂಡಿದ ಕಗ್ಗತ್ತಲೆಯನ್ನು ನಾಶ ಮಾಡಿ, ಆ ಭಕ್ತನಿಗಾಗಿ ನಾನು ಯಾವಾಗಲೂ ಜ್ಞಾನರೂಪ ಸೂರ್ಯೋದಯ ಮಾಡುವೆನು ॥೧೪೩॥

ಪ್ರೇಮಳ ಭಕ್ತರಿಗೆ ಪ್ರಿಯನಾದ ಪುರುಷೋತ್ತಮನು ಈ ಪ್ರಕಾರವಾಗಿ ಹೇಳಿದಾಗ ಅರ್ಜುನನು ಹೇಳಿದನು:- ದೇವಾ, ನನ್ನ ಸರ್ವ ಮನೋರಥಗಳು ಪೂರ್ಣವಾದವು ॥೧೪೪॥

ಅಹೋ ಸ್ವಾಮಿಯೇ ಕೇಳು, ನನ್ನಲ್ಲಿಯ ಸಂಸಾರ ಭ್ರಾಂತಿಯ ಕಸವನ್ನು ಹಸನ ಮಾಡಿರುವಿ, ಇದರಿಂದ ತಾಯಿಯ ಗರ್ಭದ ಅಗ್ನಿಕುಂಡದ ಕಷ್ಟದಿಂದ ಹಿಡಿದು, ಮುಕ್ತನಾದೆ! ॥೧೪೫॥

ಜೀಯಾ, ಇಂದು ನನ್ನ ಜನ್ಮವನ್ನು ನಾನು ನನ್ನ ಕಣ್ಣಿನಿಂದ ನೋಡಿದೆನು, (ಆತ್ಮಜ್ಞಾನದಿಂದ ಹೊಸದಾಗಿ ಜನ್ಮ ತಾಳಿದಂತೆ ಇಂದಾಯಿತು) ಮತ್ತು ನನ್ನ ಜೀವನವು ಇಂದು ನನ್ನ ಕೈಯಲ್ಲಿ ಬಂದಂತೆ ನನಗೆ ಅನಿಸುತ್ತಿದೆ ॥೧೪೬॥

ಇಂದು ನನ್ನ ಆಯುಷ್ಯವು ಸಫಲವಾಯಿತು ಮತ್ತು ನನ್ನ ದೈವಕ್ಕೆ ಉತ್ತಮ ದಿವಸ ಉದಯವಾಯಿತು. ಕಾರಣ, ದೇವರ ಮುಖದಿಂದ ಉಪದೇಶ ರೂಪ ಕೃಪೆ ದೊರೆಯಿತು ॥೧೪೭॥

ಈಗ ಈ ನಿನ್ನ ವಾಕ್ಯರೂಪ ಪ್ರಕಾಶದಿಂದ ಒಳಗಿನ ಕತ್ತಲ, ಹೊರಗಿನ ಕತ್ತಲ ಎಲ್ಲವೂ ಇಲ್ಲದಂತಾಯಿತು. ಆದ್ದರಿಂದ ನಿನ್ನ ಯಥಾರ್ಥ ಸ್ವರೂಪವನ್ನು ನಾನು ನೋಡುವಂತಾಯಿತು ॥೧೪೮॥

ಶ್ಲೋಕಾರ್ಥ :- ಅರ್ಜುನನು ಹೀಗೆ ಹೇಳಿದನು :- ದೇವಾ! ನೀನು, ಸರ್ವೋತ್ಕೃಷ್ಟನೂ, ತೇಜೋ ಮಯನೂ ಹಾಗೂ ಪರಮಪವಿತ್ರನೂ ಆದ ಪರ ಬ್ರಹ್ಮನು ನೀನೆ ಆಗಿರುವೆ. ಶಾಶ್ವತ, ದಿವ್ಯ, ಆದಿ ದೇವನೂ, ಜನ್ಮ ರಹಿತನೂ, ಹಾಗೂ ವ್ಯಾಪಕನಾದ ಪುರುಷನೂ ॥೧೨॥

ಆದರೆ ಕೃಷ್ಣಾ, ನೀವು ಪರಬ್ರಹ್ಮ ನಿರುವಿರಿ ಮತ್ತು ಎಲ್ಲ ಭೂತಗಳ ವಿಶ್ರಾಂತಿಸ್ಥಾನರಾಗಿದ್ದು ಪವಿತ್ರ ಮತ್ತು ಸರ್ವ ಜಗತ್ತಿನ ಪಾಲನಕರ್ತರಾಗಿರುವಿರಿ ॥೧೪೯॥

ನೀನು ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ ಈ ಮೂವರ ಆದಿದೈವತನಿರುವೆ. ದೇವನೇ, ಇಪ್ಪತ್ತೈದನೆಯ ತತ್ತ್ವವಾದ ಆಚೆಗಿರುವ ದಿವ್ಯಭಾವವೂ ನೀನೇಯಾಗಿರುವೆ ॥೧೫೦॥

ಅನಾದಿಸಿದ್ಧ ತೂ ಸ್ವಾಮೀ । ಜೋ ನಾಕಳಿಜಸೀ ಜನ್ಮಧರ್ಮೀ । ತೋ ತೂ ಹೇ ಆಮ್ಹೀ । ಜಾಣಿತಲೇ ಆತಾ ॥೧೫೧॥ ತೂ ಯಾ ಕಾಲತ್ರಯಾಸಿ ಸೂತ್ರೀ । ತೂ ಜೀವಕಳೇಚಿ ಅಧಿಷ್ಠಾತ್ರೀ । ತೂ ಬ್ರಹ್ಮಕಟಾಹಧಾತ್ರೀ । ಹೇ ಕಳಲೇ ಫುಡೇ ॥೧೫೨॥

ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ ।
ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ॥೧೩॥

ಪೈ ಆಣಿಕಹೀ ಏಕೇ ಪರೀ । ಇಯೇ ಪ್ರತೀತೀಚೀ ಯೇತಸೇ ಥೋರೀ । ಜೇ ಮಾಗೇ ಐಸೇಚಿ ಋಷೀಶ್ವರೀ । ಸಾಂಗಿತಲೇ ತೂಂತೇ ॥೧೫೩॥ ಪರೀ ತಯಾ ಸಾಂಗೀತಲಿಯಾಚೆ ಸಾಚಪಣ । ಹೇ ಆತಾ ಮಾಝೇ ದೇಖತಸೇ ಅಂತಃಕರಣ । ಜೇ ಕೃಪಾ ಕೇಲೀ ಆಪಣ । ಮ್ಹಣೌನಿ ದೇವಾ ॥೧೫೪॥ ಏರ್ಹವಿ ನಾರದು ಅಖಂಡ ಜವಳಾ ಯೇ । ತೋಹೀ ಐಸೇಂಚಿ ವಚನೀ ಗಾಯೇ । ಪರಿ ಅರ್ಥ ನ ಬುಜೋನಿ ಠಾಯೇ । ಗೀತಸುಖಾಚಿ ಐಕೋ ॥೧೫೫॥ ಜೀ ಆಂಧಳೇಯಾಂಚ್ಯಾ ಗಾಂವೀ । ಆಪಣಪೇ ಪ್ರಗಟಲೇ ರವೀ । ತರೀ ತಿಹೀ ವೋತಪಲೀಚಿ ಘ್ಯಾವೀ । ವಾಂಚೂನಿ ಪ್ರಕಾಶು ಕೈಂಚಾ ? ॥೧೫೬॥ ಪರೀ ದೇವರ್ಷಿ ಅಧ್ಯಾತ್ಮ ಗಾತಾ । ಆಹಾಚ ರಾಗಾಂಗೇಸಿ ಜೇ ಮಧುರತಾ । ತೇಚಿ ಫಾವೇ ಯೇರ ಚಿತ್ತಾ । ನಲಗೇಚಿ ಕಾಂಹೀ ॥೧೫೭॥ ಪೈ ಅಸಿತಾ ದೇವಲಾಚೇನಿ ಮುಖೇ । ಮೀ ಏವಂವಿಧಾ ತೂಂತೆ ಆಇಕೇ । ಪರೀ ತೈ ಬುದ್ಧಿ ವಿಷಯವಿಖೇ । ಧಾರಿಲೀ ಹೋತೀ ॥೧೫೮॥ ವಿಷಯವಿಷಾಚಾ ಪಡಿಪಾಡೂ । ಗೋಡ ಪರಮಾರ್ಥು ಲಾಗೇ ಕಡೂ । ಕಡೂ ವಿಷಯ ತೋ ಗೋಡೂ । ಜೀವಾಸೀ ಜಾಹಲಾ ॥೧೫೯॥ ಆಣಿ ಹೇ ಆಣಿಕಾಂಚೇ ಕಾಯ ಸಾಂಗಾವೇ । ರಾವುಳಾ ಆಪಣಚಿ ಯೇಊನಿ ವ್ಯಾಸದೇವೇ । ತುಝೇ ಸ್ವರೂಪ ಆಘವೇ । ಸರ್ವದಾ ಸಾಂಗಿಜೇ ॥೧೬೦॥ ಪರೀ ತೋ ಅಂಧಾರೀ ಚಿಂತಾಮಣಿ ದೇಖಿಲಾ । ಜೇವೀ ನವ್ಹೇ ಯಾ ಬುದ್ಧೀ ಉಪೇಕ್ಷಿಲಾ । ಪಾಠೀ ದಿನೋದಯೀ ವೋಳಖಿಲಾ । ಹೋಯ ಮ್ಹಣೌನಿ ॥೧೬೧॥ ತೈಸೀ ವ್ಯಾಸಾದಿಕಾಂಚೀ ಬೋಲಣೀ । ತಿಯಾ ಮಜಪಾಶೀ ಚಿದ್ರತ್ನಾಂಚಿಯಾ ಖಾಣೀ । ಪರಿ ಉಪೇಕ್ಷಿಲ್ಯಾ ಜಾತ ಹೋತಿಯಾ ತರಣೀ । ತುಜವೀಣ ಕೃಷ್ಣಾ ॥೧೬೨॥

ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ ।
ನ ಹಿ ತೇ ಭಗವನ್ ವ್ಯಕ್ತಿಂ ವಿದುರ್ದೇವಾ ನ ದಾನವಾಃ ॥೧೪॥

ಹೇ ಸ್ವಾಮಿಯೇ, ನೀವು ಅನಾದಿಸಿದ್ಧರಾಗಿದ್ದು, ನಿಮಗೆ ಜನ್ಮಾದಿ ಧರ್ಮಗಳು ಇರುವುದಿಲ್ಲ. ಹೀಗೆ ನೀವು ಇರುವುದು ನನಗೆ ಈಗ ತಿಳಿಯಿತು ।।೧೫೧।।

ನೀವು ಮೂರೂ ಕಾಲದ ಚಾಲಕರಿರುವಿರಿ. ನೀವು ಜೀವಕಲೆಯ ಮುಖ್ಯದೇವತಾ ಆಗಿರುವಿರಿ ಮತ್ತು ನೀವು ಬ್ರಹ್ಮಾಂಡಕ್ಕೆ ಆಶ್ರಯಭೂತರಾಗಿರುವಿರಿ. ಹೀಗೆ ನನಗೆ ಈಗ ಸ್ಪಷ್ಟವಾಗಿ ತಿಳಿಯಿತು ।।೧೫೨।।

ಶ್ಲೋಕಾರ್ಥ :- ನೀನೇ ಆಗಿರುವಿ. ಹೀಗೆಂದು ಎಲ್ಲ ಋಷಿಗಳೂ, ನಾರದಾದಿ ದೇವ ಋಷಿಗಳೂ, ಅಸಿತ, ದೇವಲ, ವ್ಯಾಸಾದಿ ಋಷಿಗಳೂ ಹೇಳುತ್ತಾರೆ. ನೀನು ಸಹ ಹಾಗೆ ಹೇಳುವೆ ।।೧೩।।

ಇಲ್ಲಿ ನೋಡಿರಿ, ಇನ್ನೊಂದು ಪ್ರಕಾರದಿಂದ ಈ ಅನುಭವದ ದೊಡ್ಡಸ್ಥಿಕೆಯು ತಿಳಿದುಬರುವುದು. ಯಾಕೆಂದರೆ ಈ ಹಿಂದೆ ದೊಡ್ಡ ದೊಡ್ಡ ಋಷಿಗಳು ಇದರಂತೆಯೇ ನಿನ್ನ ವರ್ಣನೆ ಮಾಡಿದ್ದರು ।।೧೫೩।।

ಆದರೆ ಅವರು ಹೇಳಿದ ಸತ್ಯತನ ಇಂದು ನನಗೆ ತಿಳಿದುಬಂತು. ಅದು ಸಹ ನೀವು ಕೃಪೆತೋರಿರುವುದರಿಂದ ತಿಳಿಯಿತು ।।೧೫೪।।

ಸಾಮಾನ್ಯವಾಗಿ ದೇವಋಷಿನಾರದರು ನಮ್ಮ ಮನೆಗೆ ಯಾವಾಗಲೂ ಬರುತ್ತಿರುವರು. ಅವರು ಸಹ ಇದನ್ನೇ ಹಾಡುವರು. ಆದರೆ ಅರ್ಥ ತಿಳಿಯದೇ ನಾವು ಗಾನಸುಖ ವನ್ನು ಮಾತ್ರ ಅನುಭವಿಸುತ್ತಿದ್ದೆವು ।।೧೫೫।।

ಜೀಯಾ, ಕುರುಡರ ಊರಿನಲ್ಲಿ ಸೂರ್ಯನು ಸ್ವತಃ ಪ್ರಕಟನಾದರೆ ಅವರು ಕೋಮಲವಾದ ಬಿಸಿಲಿನ ಸುಖ ಮಾತ್ರ ಪಡೆಯಬೇಕಾಗುವುದು. ಆದರೆ ಅವರಿಗೆ ಪ್ರಕಾಶವು ಹೇಗೆ ಕಾಣಿಸೀತು? ।।೧೫೬।।

ಅದರಂತೆ ದೇವ ಋಷಿ ನಾರದರು ಅಧ್ಯಾತ್ಮ ಗಾಯನ ಮಾಡುತ್ತಿರುವಾಗ್ಗೆ ಅದರ ರಾಗ ರಾಗಿಣಿಯ ಮೇಲಿರುವ ಮಾಧುರ್ಯವನ್ನು ನಾವು ತಿಳಿಯುತ್ತಿದ್ದೆವು. ಬೇರೆ ಏನೂ ತಿಳಿಯುತ್ತಿದ್ದಿಲ್ಲ ।।೧೫೭।।

ಅದರಂತೆಯೇ ಅಸಿತ ಮತ್ತು ದೇವಲ ಈ ಋಷಿಗಳ ಮುಖದಿಂದ ಇದೇ ಪ್ರಕಾರದ ಗುಣಾನುವಾದವನ್ನು ಕೇಳುತ್ತಿದ್ದೆವು. ಆದರೆ ಆ ವೇಳೆಯಲ್ಲಿ ನನ್ನ ಬುದ್ಧಿಯು ವಿಷಯರೂಪ ವಿಷದಿಂದ ವ್ಯಾಪಿಸಿಕೊಂಡಿತ್ತು ।।೧೫೮।।

ವಿಷಯರೂಪ ವಿಷದ ಮಹಿಮೆ ಏನೆಂದರೆ ಸಿಹಿಯಾಗಿ ರುವ ಪರಮಾರ್ಥವು ಜೀವಕ್ಕೆ ವಿಷವಾಗಿ ಹತ್ತುವುದು ಮತ್ತು ವಿಷಯವು ವಿಷವಿದ್ದರೂ ಅದು ಸಿಹಿಯಾಗಿ ಹತ್ತುವುದು ।।೧೫೯।।

ಇನ್ನೊಂದು ಬೇರೆ ವಿಷಯ ಏನು ಹೇಳಬೇಕು? ಸರ್ವ ಶ್ರೇಷ್ಠರಾದ ವ್ಯಾಸಮುನಿಗಳು ಅವರು ಸಹ ಸ್ವತಃ ರಾಜ ವಾಡಕ್ಕೆ ಬಂದು ನಿಮ್ಮ ಸ್ವರೂಪವನ್ನು ಹೀಗೆ ವರ್ಣಿಸು ತ್ತಿದ್ದರು ।।೧೬೦।।

ಆದರೆ ಒಬ್ಬನಿಗೆ ಕತ್ತಲಲ್ಲಿ ಚಿಂತಾಮಣಿಯು ಸಿಕ್ಕಾಗ ತಿಳಿಯದ ಬುದ್ಧಿಯಿಂದ ಅದನ್ನು ಒಗೆಯುವನು ಮತ್ತು ಬೆಳಗಾದ ಮೇಲೆ ಆತನೇ ಅದನ್ನು ಚಿಂತಾಮಣಿ ಎಂದು ತಿಳಿಯುವನು ।।೧೬೧।।

ಅದರಂತೆಯೇ ಕೃಷ್ಣಾ, ವ್ಯಾಸಾದಿಕ ಮುನಿಗಳ ಭಾಷಣಗಳು ಜ್ಞಾನರೂಪ ಚಿಂತಾಮಣಿಗಳ ಖಣಿಯೇ ಆಗಿದ್ದು, ನಿನ್ನ ಉಪದೇಶರೂಪ ಸೂರ್ಯನಿಲ್ಲದಕ್ಕೆ ಅದನ್ನು ಅನಾದರ ಮಾಡುತ್ತಿದ್ದೆವು ।।೧೬೨।।

ಶ್ಲೋಕಾರ್ಥ :- ಹೇ ಕೇಶವ, ನೀನು ಯಾವುದನ್ನು ನನಗೆ ಹೇಳುತ್ತಿರುವೆಯೋ ಇವೆಲ್ಲವನ್ನು ಸತ್ಯವೆಂದು ತಿಳಿಯುತ್ತೇನೆ. ಎಲೈ ಭಗವಂತನೇ, ದೇವತೆಗಳೂ ದಾನವರೂ ಸಹ ನಿನ್ನ ಸ್ವರೂಪವನ್ನು ಅರಿಯರು ।।೧೪।।

ತೇ ಆತಾ ವಾಕ್ಯಸೂರ್ಯಕರ ತುರ್ಝೇ ಫಾಂಕಲೇ । ಆಣಿ ಋಷೀ ಮಾರ್ಗ ಹೋತೇ ಜೇ ಕಥಿಲೇ । ತಯಾ ಆಘವಯಾಂಚೇಚಿ ಫಿಟಲೇ । ಅನೋಳಖಿಪಣ ॥೧೬೩॥ ಜೇ ಜ್ಞಾನಾಚೇ ಬೀಜ ತಯಾಂಚೇ ಬೋಲ । ಮಾಜೇ ಹೃದಯಭೂಮಿಕೇ ಪಡಿಲೇ ಸಖೋಲ । ವರೀ ಇಯೇ ಕೃಪೇಚೇ ಜಾಹಾಲೀ ವೋಲ । ಮ್ಹಣೌನಿ ಸಂವಾದ ಫಳೇಶೀ ಉತಲೇ ॥೧೬೪॥ ಅಹೋ ನಾರದಾದಿಕಾ ಸಂತಾ । ತ್ಯಾಂಚಿಯಾ ಉಕ್ತಿರೂಪ ಸರಿತಾ । ಮೀ ಮಹೋದಧೀ ಜಾಹಲೋ ಅನಂತಾ । ಸಂವಾದ ಸುಖಾಚಾ ॥೧೬೫॥ ಪ್ರಭು ಆಘವೇನಿ ಯೇಣೇ ಜನ್ಮೇ । ಜಿಯೇ ಪುಣ್ಯೇ ಕೇಲೀ ಮಿಯಾ ಉತ್ತಮೇ । ತಯಾಂಚೀ ನ ಠಕತೀಚಿ ಅಂಗೀ ಕಾಮೇ । ಸದ್ಗುರು ತುವಾ ॥೧೬೬॥ ಏರ್‍ಹವೀ ವಡಿಲವಡಿಲಾಂಚೇನಿ ಮುಖೇ । ಮೀ ಸದಾ ತೂಂತೇ ಕಾನೀ ಆಇಕೇ । ಪರಿ ಕೃಪಾ ನ ಕೀಜೇಚಿ ತುವಾ ಏಕೇ । ತಂವ ನೇಣವೇಚಿ ಕಾಂಹೀ ॥೧೬೭॥ ಮ್ಹಣೌನಿ ಭಾಗ್ಯ ಜೈ ಸಾನುಕೂಳ । ಜಾಲಿಯಾ ಕೇಲೇ ಉದ್ಯಮ ಸದಾ ಸಫಳ । ತೈಸೇ ಶ್ರುತಾಧೀತ ಸಕಳ । ಗುರುಕೃಪಾಸಾಚ ॥೧೬೮॥ ಜೇ ಬನಕರು ಝಾಡೇ ಸಿಂಪೀ ಜೀವೇಸಾಟೀ । ಪಾಡೂನಿ ಜನ್ಮೇ ಕಾಢೀ ಆಟೀ । ಪರೀ ಫಳೇಸೀ ತೈಂಚಿ ಭೇಟೀ । ಜೈ ವಸಂತು ಪಾವೇ ॥೧೬೯॥ ಅಹೋ ವಿಷಮಾ ಜೈ ವೋಹಟ ಪಡೇ । ತೈ ಮಧುರ ತೇ ಮಧುರ ಆವಡೇ । ಪೈ ರಸಾಯನೇ ತೈ ಗೋಡೇ । ಜೈ ಆರೋಗ್ಯ ದೇಹೀ ॥೧೭೦॥ ಕಾ ಇಂದ್ರಿಯೇ ವಾಚಾ ಪ್ರಾಣ । ಯಾ ಜಾಲಿಯಾಂಚೇ ತೈಂಚೀ ಸಾರ್ಥಕಪಣ । ಜೈ ಚೈತನ್ಯ ಯೇಊನಿ ಆಪಣ । ಸಂಚರೇ ಮಾಜೀ ॥೧೭೧॥ ತೈಸೇ ಶಬ್ದಾಜಾತ ಆಲೋಡಿಲೇ । ಅಥವಾ ಯೋಗಾದಿಕ ಜೇ ಅಭ್ಯಾಸಿಲೇ । ತೇ ತೈಂಚೀ ಮ್ಹಣೋ ಯೇ ಆಪುಲೇ । ಜೈ ಸಾನುಕೂಲ ಶ್ರೀಗುರು ॥೧೭೨॥ ಐಸಿಯೇ ಜಾಲಿಯೇ ಪ್ರತೀತೀಚೇನಿ ಮಾಜೇ । ಅರ್ಜುನ ನಿಶ್ಚಯಾಚಿ ನಾಚತುಸೇ ಭೋಜೇ । ತೇವೀಂಚಿ ಮ್ಹಣೇ ದೇವಾ ತುರ್ಝೇ । ವಾಕ್ಯ ಮಜ ಮಾನಲೇ ॥೧೭೩॥ ತರಿ ಸಾಚಚಿ ಹೇ ಕೈವಲ್ಯಪತೀ । ಮಜ ತ್ರಿಶುದ್ಧೀ ಆಲೀ ಪ್ರತೀತಿ । ಜೇ ತೂ ದೇವದಾನವಾಂಚಿಯೇ ಮತೀ । ಜೋಗಾ ನವ್ಹಸೀ ॥೧೭೪॥ ತುರ್ಝೇ ವಾಕ್ಯ ವ್ಯಕ್ತೀ ನ ಯೇತಾ ದೇವಾ । ಜೋ ಆಪುಲಿಯಾ ಜಾಣೇ ಜಾಣಿವಾ । ತೋ ಕಹೀಂಚಿ ನೋಹೇ ಹೇ ಮದ್‌ಭಾವಾ । ಭರಂವಸೇನಿ ಆಲೇ॥೧೭೫॥

ಈಗ ಆ ನಿಮ್ಮ ವಾಕ್ಯರೂಪ ಸೂರ್ಯಕಿರಣಗಳು ನನ್ನ ಹೃದಯದಲ್ಲಿ ಸಮಗ್ರವಾಗಿ ಹರಡಿ ಋಷಿಗಳು ಹೇಳಿರುವ ಆ ಮಾರ್ಗದ ವಿಷಯಕ್ಕೆ ನನ್ನ ಅಜ್ಞಾನವು ಸಂಪೂರ್ಣವಾಗಿ ಇಲ್ಲದಾಗಿದೆ ।।೧೬೩।।

ಜೀಯಾ, ಆ ಋಷಿಗಳ ಶಬ್ದಗಳೆಂದರೆ ಜ್ಞಾನದ ಬೀಜಗಳು. ಅವು ನನ್ನ ಹೃದಯರೂಪ ಹೊಲದ ಆಳಿನಲ್ಲಿ ಬಿದ್ದಿದ್ದವು. ಆದರೆ ಈಗ ಅವುಗಳಿಗೆ ನಿಮ್ಮ ಕೃಪಾರೂಪ ಹಸಿಯಿಂದ ಸಂವಾದರೂಪ ಫಲಗಳು ಬಂದವು ।।೧೬೪।।

ಅಹೋ, ಅನಂತನೇ, ನಾರದಾದಿಕ ಸಂತರ ವಚನೋಕ್ತಿರೂಪ ನದಿಗಳಿಗೆ, ನಮ್ಮ ನಿಮ್ಮ ಯಾವ ಸಂವಾದವು, ಆ ಸಂವಾದರೂಪ ಸುಖದ ನಾನು ಸಮುದ್ರನಾಗಿರುವೆನು ।।೧೬೫।।

ಹೇ ಪ್ರಭುವೇ, ಸದ್ಗುರುವೇ, ನಾನು ಜನ್ಮ ಜನ್ಮಾಂತರಗಳಲ್ಲಿ ಉತ್ತಮವಾದ ಪುಣ್ಯ ಮಾಡಿದ್ದಕ್ಕೆ ಅದು ನಿಮ್ಮ ಪ್ರಾಪ್ತಿಮಾಡಿಕೊಟ್ಟು, ನನ್ನ ಋಣದಿಂದ ಮುಕ್ತಮಾಡಿದೆ ।।೧೬೬।।

ಸಹಜವಾಗಿ ದೊಡ್ಡವರ ಮುಖದಿಂದ ನಿಮ್ಮ ಗುಣಾನುವಾದಗಳು ನನ್ನ ಕಿವಿಗೆ ಬೀಳುತ್ತಿದ್ದವು. ಆದರೆ ನೀವು ಕೃಪೆ ಮಾಡಿದ್ದಿಲ್ಲ, ಇಲ್ಲಿಯವರೆಗೂ ನಾನು ಏನೂ ತಿಳಿದುಕೊಂಡಿದ್ದಿಲ್ಲ ।।೧೬೭।।

ಆದ್ದರಿಂದ ದೈವವು ಅನುಕೂಲ ಇದ್ದಾಗ ಮಾಡುವ ಎಲ್ಲ ಉದ್ಯೋಗಗಳಿಗೂ ಸಫಲತೆ ದೊರೆಯುವುದು. ಅದರಂತೆ ಗುರುಕೃಪೆಯಾಯಿತೆಂದರೆ ಕೇಳಿದ ಅಧ್ಯಯನ ಮಾಡಿದ ಎಲ್ಲವೂ ನಿಜವೆಂಬ ಅನುಭವ ಬರುವುದು ।।೧೬೮।।

ತೋಟಿಗನು ಗಿಡಗಳಿಗೆ ನೀರು ಹಣಿಸುತ್ತ ಜೀವಕ್ಕೆ ಜೀವಕೊಟ್ಟು ಆಯುಷ್ಯ ತುಂಬ ಪರಿಶ್ರಮ ಪಡುವನು. ಆದರೆ ಗಿಡಗಳಿಗೆ ವಸಂತ ಋತು ಹೊರತಾಗಿ ಫಲ ಬಾರದು ।।೧೬೯।।

ಅಹೋ, ವಿಷಮ ಜ್ವರವು ಇಳಿದಾಗಲೇ ರುಚಿ ಪದಾರ್ಥಗಳು ರುಚಿ ಹತ್ತುವುವು. ಇಲ್ಲಿ ನೋಡು ಗುಣಮುಖವಾಗದ ಹೊರತು ಔಷಧಕ್ಕೆ ಉತ್ತಮ ಎಂದು ಹೇಳಲು ಬರುವುದಿಲ್ಲ ।।೧೭೦।।

ಅಥವಾ ಇಂದ್ರಿಯಗಳು, ವಾಚಾ, ಪ್ರಾಣಗಳು, ಇವುಗಳಲ್ಲಿ ಚೈತನ್ಯ ಬಂದು ಸಂಚಾರಗೊಂಡಾಗ ಮಾತ್ರ ಅದರ ( ಔಷಧದ) ಸಾರ್ಥಕವಾಗುವುದು।।೧೭೧।।

ಅದರಂತೆ ವೇದಶಾಸ್ತ್ರಗಳ ಅಥವಾ ಯೋಗಾದಿಕಗಳ ಸಾಧನೆ, ಅಭ್ಯಾಸ ಮಾಡಿದರೂ ಶ್ರೀಗುರುಗಳ ಕೃಪೆ ಆದಾಗ ಮಾತ್ರ ಅವುಗಳ ಸಾರ್ಥಕತೆ ಆಗುವುದು ।।೧೭೨।।

ಇದರಂತೆ ಅನುಭವ ಬಂದಿದ್ದಕ್ಕೆ ಅರ್ಜುನನು ನಿಶ್ಚಯಪೂರ್ವಕ ಸಂತೋಷದಿಂದ ಕುಣಿಯತೊಡಗಿದನು ಮತ್ತು ದೇವನಿಗೆ ಹೀಗೆ ಹೇಳಿದನು:- ನಿಮ್ಮ ಮಾತುಗಳು ನನ್ನ ಅನುಭವಕ್ಕೆ ಬಂದವು ।।೧೭೩।।

ಹೇ ಮುಕ್ತಿದಾಯಕ ಶ್ರೀಕೃಷ್ಣನೇ, ನೀನು ದೇವದಾನವರ ಮತಿಗೆ ಗೋಚರಿಸಿದವನು ಎಂದು ನಿಜವಾಗಿಯೂ ನನ್ನ ಅನುಭವಕ್ಕೆ ಬಂದಿರುವುದು।।೧೭೪।।

ದೇವಾ, ನಿಮ್ಮ ವಾಕ್ಯಗಳ ಅನುಭವ ಬಾರದೇ ತಮ್ಮ ಜ್ಞಾನದಿಂದ ನಿಮ್ಮನ್ನು ತಿಳಿದಿರುವೆನೆಂದು ಹೇಳುವರು. ಆದರೆ ಅವರಿಗೆ ನಿಮ್ಮ ಜ್ಞಾನವು ಆಗುವುದೇ ಇಲ್ಲ ಎಂಬುದು ನಿಶ್ಚಯವಾಗಿ ನನ್ನ ಅನುಭವಕ್ಕೆ ಬಂದಿದೆ ।।೧೭೫।।

ಸ್ವಯಮೇವಾತ್ಮನಾऽತ್ಮನಂ ವೇತ್ಥ ತ್ವಂ ಪುರುಷೋತ್ತಮ।
ಭೂತಭಾವನ ಭೂತೇಶ ದೇವದೇವ ಜಗತ್ಪತೇ ॥೧೫॥

ಏಥ ಆಪುಲೇ ವಾಢಪಣ ಜೈಸೇ। ಆಪಣಚಿ ಜಾಣೆಜೇ ಆಕಾಶೇ। ಕಾ ಮೀ ಯೇತುಲೀ ಘನವಟ ಐಸೇ। ಪೃಥ್ವೀಚಿ ಜಾಣೇ ॥೧೭೬॥ ತೈಸಾ ಆಪುಲಿಯೇ ಸರ್ವಶಕ್ತೀ ।ತುಜ ತೂಂಚಿ ಜಾಣಸೀ ಲಕ್ಷ್ಮೀಪತೀ। ಯೇರ ವೇದಾದಿಕ ಮತೀ। ಮಿರವತೀ ವಾಯಾ ॥೧೭೭॥ ಹಾ ಗಾ ಮನಾತೇ ಮಾಗಾ ಸಾಂಡಾವೇ। ಪವನಾತೇ ವಾವೀ ಮವಾವೇ। ಆದಿಶೂನ್ಯ ತರೋನಿ ಜಾವೇ। ಕೇಉತೇ ಬಾಹೀ ॥೧೭೮॥ ತೈಸೇ ಹೇ ತುಝೇ ಜಾಣಣೇ ಆಹೇ। ಮ್ಹಣೌನಿ ಕೋಣಾಹೀ ಠಾವಕೇ ನೋಹೇ। ಆತಾ ತುಝೇ ಜ್ಞಾನ ಹೋಯೇ। ತುಜಚಿಜೋಗೇ ॥೧೭೯॥ ಜೇ ಆಪಣಯಾತೇ ತೂಂಚಿ ಜಾಣಸೀ। ಆಣಿಕಾತೇ ಸಾಂಗಾವಯಾಹೀ ಸಮರ್ಥ ಹೋಸೀ। ತರೀ ಆತಾ ಏಕ ವೇಳ ಘಾಮ ಪುಸೀ। ಆರ್ತೀಚಿಯೇ ನಿಡಳೀಂಚಾ ॥೧೮೦॥ ಹೇ ಆಇಕಿಲೇ ಕೀ ಭೂತಭಾವನಾ। ತ್ರಿಭುವನಗಜಪಂಚಾನನಾ। ಸಕಳದೇವ ದೇವತಾರ್ಚನಾ। ಜಗನ್ನಾಯಕಾ ॥೧೮೧॥ ಜರೀ ಥೋರೀ ತುಝೀ ಪಾಹಾತ ಆಹೋ। ತರೀ ಪಾಸೀ ಉಭೇ ಠಾಕಾವಯಾಹೀ ಯೋಗ್ಯ ನೋಹೋ। ಯಾ ಶೋಚ್ಯತಾ ಜರೀ ವಿನವೂ ಬಿಹೋ। ತರೀ ಆನ ಉಪಾಯೋ ನಾಹೀ ॥೧೮೨॥ ಭರಲೇ ಸಮುದ್ರ ಸರಿತಾ ಚಹೂಕಡೇ। ಪರಿ ತೇ ಬಾಪಿಯಾಸಿ ಕೋರಡೇ। ಕಾ ಜೈ ಮೇಘೌನಿ ಥೇಂಬುಟಾ ಪಡೇ। ತೈ ಪಾಣೀ ಕೀ ತಯಾ ॥೧೮೩॥ ತೈಸೇ ಶ್ರೀಗುರು ಸರ್ವತ್ರ ಆಥೀ। ಪರಿ ಕೃಷ್ಣಾ ಆಮ್ಹಾ ತೂಂಚಿ ಗತೀ। ಹೇ ಅಸೋ ಮಜಪ್ರತೀ। ವಿಭೂತೀ ಸಾಂಗೇ ॥೧೮೪॥

ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ।
ಯಾಭಿರ್ವಿಭೂತಿಭಿರ್ಲೋಕಾನ್ ಇಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥೧೬॥

ಜೇ ತುಝಿಯಾ ವಿಭೂತಿ ಆಘವಿಯಾ। ಪರಿ ವ್ಯಾಪಿತೀ ಶಕ್ತಿ ದಿವ್ಯಾ ಜಿಯಾ। ತಿಯಾ ಆಪುಲಿಯಾ ದಾವಾವಿಯಾ। ಆಪಣ ಮಜ ॥೧೮೫॥ ಜಿಹೀ ವಿಭೂತೀ ಯಯಾ ಸಮಸ್ತಾ। ಲೋಕಾಂತೇ ವ್ಯಾಪೂನಿ ಆಹಾಸೀ ಅನಂತಾ। ತಿಯಾ ಪ್ರಧಾನಾ ನಾಮಾಂಕಿತಾ। ಪ್ರಗಟಾ ಕರೀ ॥೧೮೬॥

ಕಥಂ ವಿದ್ಯಾಮಹಂ ಯೋಗಿನ್ ತ್ವಾಂ ಸದಾ ಪರಿಚಿಂತಯನ್।
ಕೇಷು ಕೇಷು ಚ ಭಾವೇಷು ಚಿಂತ್ಯೋऽಸಿ ಭಗವನ್ಮಯಾ ॥೧೭॥

ಶ್ಲೋಕಾರ್ಥ :- ಹೇ ಪುರುಷೋತ್ತಮಾ! ಹೇ ಸರ್ವಜನಕಾ! ಹೇ ಸರ್ವೇಶ್ವರಾ! ಹೇ ದೇವದೇವಾ! ಹೇ ಜಗನ್ನಾಥಾ! ನಿನ್ನನ್ನು ನೀನೇ ತಿಳಿಯಬಲ್ಲೆ ।।೧೫।।

ಯಾವ ಪ್ರಕಾರವಾಗಿ ಆಕಾಶದ ವಿಸ್ತಾರವು ಆಕಾಶಕ್ಕೆ ಮಾತ್ರ ತಿಳಿದಿರುವುದು. ಅಥವಾ ಪೃಥ್ವಿಯ ಭಾರವು ಪೃಥ್ವಿಗೆ ಮಾತ್ರ ತಿಳಿದಿರುವುದು ।।೧೭೬।।

ಆದರಂತೆ ಹೇ ಲಕ್ಷ್ಮೀಪತಿಯೇ, ನಿಮ್ಮ ಸರ್ವ ಶಕ್ತಿಯನ್ನು ನೀವೇ ತಿಳಿಯುವಿರಿ. ಆದರೆ ನಿಮ್ಮ ಶಕ್ತಿ ನಮಗೆ ತಿಳಿದಿದೆ ಎಂದು ವೇದಾದಿಕಗಳು ವ್ಯರ್ಥವಾಗಿ ಗರ್ವ ಪಡುವುವು ।।೧೭೭।।

ಅಹೋ, ಮನಸ್ಸಿನ ಗತಿಯನ್ನು ಹೇಗೆ ಹಿಂದಕ್ಕೆ ಹಾಕಬೇಕು? ಗಾಳಿಯನ್ನು ಮಾರು ಹಾಕಿ ಹೇಗೆ ಅಳೆಯ ಬೇಕು? ಮತ್ತು ಬಾಹುಬಲ (ಸಾಮರ್ಥ್ಯ) ದಿಂದ ಮಾಯೆ ಯನ್ನು ಹೇಗೆ ದಾಟಬೇಕು? ।।೧೭೮।।

ಅದರಂತೆ ನಿನ್ನ ಜ್ಞಾನವಾಗುವುದು ಬಹಳ ಕಠಿಣವಿದೆ. ಆದ್ದರಿಂದ ಯಾರಿಗೂ ಆಗುವುದಿಲ್ಲ. ಆದರೆ ನಿಮ್ಮದು ನಮಗೆ ಮಾತ್ರ ತಿಳಿಯುವುದು ।।೧೭೯।।

ಜೀಯಾ, ನಿಮ್ಮ ಜ್ಞಾನವು ನಿಮಗೆ ಮಾತ್ರ ಇದೆ ಮತ್ತು ಅದನ್ನು ಇತರರಿಗೆ ತಿಳಿಸಿಕೊಡುವ ಸಾಮರ್ಥ್ಯವೂ ನಿಮಗಿದೆ. ಅದಕ್ಕಾಗಿ ಕೇಳಬೇಕೆಂಬ ಬಯಕೆಯ ಬೆವರನ್ನು ಒಮ್ಮೆ ಒರೆಸಿರಿ ।।೧೮೦।।

ಅಹೋ, ಪ್ರಾಣಿಮಾತ್ರರ ಉತ್ಪಾದಕನೇ, ಸಂಸಾರ ರೂಪ ಆನೆಗಳ ನಾಶ ಮಾಡುವ ಸಿಂಹನೇ, ಸರ್ವದೇವತೆಗಳ ಪೂಜ್ಯನಾದ ಜಗಾದಾಧಿಪತಿಯೇ, ಇದನ್ನು ನೀನು ಕೇಳುವಿಯಾ? ।।೧೮೧।।

ನಿಮ್ಮ ಹಿರಿಮೆಯ ವಿಚಾರ ಮಾಡಿದರೆ ನಮಗೆ ನಿಮ್ಮ ಸಮೀಪ ಸಹ ನಿಲ್ಲುವ ಯೋಗ್ಯತೆ ಇಲ್ಲ. ಈ ಅನುಮಾನ ಮಾಡಿಕೊಂಡು ನಿಮ್ಮನ್ನು ವಿನಂತಿಸದಿದ್ದರೆ ನಮ್ಮ ಮನಸ್ಸಿನ ಸಮಾಧಾನಕ್ಕೆ ಬೇರೆ ಮಾರ್ಗವೇ ಇಲ್ಲ ।।೧೮೨।।

ನಾಲ್ಕು ಕಡೆಯಲ್ಲಿಯೂ ಸಮುದ್ರ, ನದಿಗಳು ನೀರಿನಿಂದ ತುಂಬಿಕೊಂಡಿದ್ದರೂ ಚಾತಕ ಪಕ್ಷಿಗೆ ಅವು ಒಣಗಿದಂತೆಯೇ. ಯಾಕೆಂದರೆ ಮೇಘದಿಂದ ಮಳೆ ಬಂದಾಗ ಮಾತ್ರ ಅದಕ್ಕೆ ನೀರು ಒದಗುವುದು ।।೧೮೩।।

ಅದರಂತೆ ಕೃಷ್ಣಾ, ಜಗತ್ತಿನಲ್ಲಿ ಎಲ್ಲ ಕಡೆಯೂ ಗುರುಗಳು ಇರುವರು. ಆದರೆ ನಮಗೆ ನಿಮ್ಮ ಹೊರತು ಯಾರೂ ಗುರು ಇರುವುದಿಲ್ಲ. ಇದು ಇರಲಿ, ಈಗ ನಿಮ್ಮ ವಿಭೂತಿಗಳನ್ನು ಹೇಳಿರಿ ।।೧೮೪।।

ಶ್ಲೋಕಾರ್ಥ :- ನೀನು ಯಾವ ಯಾವ ವಿಭೂತಿ ಗಳ ದ್ವಾರಾ ಈ ಲೋಕವನ್ನೆಲ್ಲಾ ವ್ಯಾಪಿಸಿರುವೆಯೋ ಅವುಗಳನ್ನೆಲ್ಲಾ ತಿಳಿಯುವಂತೆ ಹೇಳು ।।೧೬।।

ಜೀಯಾ, ನಿಮ್ಮ ಯಾವ ಇರುವ ವಿಭೂತಿಗಳಲ್ಲಿ ಎಷ್ಟು ವ್ಯಾಪಕತ್ವ. ಶಕ್ತಿಯುತ, ಮತ್ತು ಸತೇಜ ಇರುವುವೋ ಅಷ್ಟು ನೀವು ನನಗೆ ತೋರಿಸಿರಿ ।।೧೮೫।।

ಹೇ ಅನಂತನೇ, ಯಾವ ನಿನ್ನ ವಿಭೂತಿಯು ಮೂರು ಲೋಕಗಳಲ್ಲಿ ವ್ಯಾಪಿಸಿಕೊಂಡಿರುವುದು. ಅದರಲ್ಲಿ ಮುಖ್ಯ ಮುಖ್ಯ ನಾಮಾಂಕಿತ ಇದ್ದದ್ದನ್ನು ತಿಳಿಸಿರಿ ।।೧೮೬।।

ಶ್ಲೋಕಾರ್ಥ :- ಭಗವಂತಾ! ನಾನು ತಿಳಿದುಕೊಳ್ಳ ಬೇಕೆಂದರೆ ಯಾವ ಯಾವ ಪದಾರ್ಥಗಳಲ್ಲಿ ನಿನ್ನನ್ನು ನಾನು ಹೇಗೆ ಹೇಗೆ ಧ್ಯಾನಿಸಬೇಕು? ।।೧೭।।

ಜೇ ಕೈಸೇ ಮಿಯಾ ತೂಂತೆ ಜಾಣಾವೇ । ಕಾಯ ಜಾಣೋನಿ ಸದಾ ಚಿಂತಾವೇ । ಜರೀ ತೂಂಚಿ ಮ್ಹಣೋ ಆಘವೇ । ತರೀ ಚಿಂತನಚಿ ನ ಘಡೇ ।।೧೬೭।।ಮ್ಹಣೌನಿ ಮಾಗಾ ಭಾವ ಜೈಸೇ । ಆಪುಲೇ ಸಾಂಗೀತಲೇ ತುವಾ ಉದ್ದೇಶೇ । ಆತಾ ವಿಸ್ತಾರೋನಿ ತೈಸೇ । ಏಕ ವೇಳ ಬೋಲೇ ।।೧೬೮।। ಜಯಾ ಜಯಾ ಭಾವಾಚಿಯಾ ಠಾಯೀ । ತೂಂತೇ ಚಿಂತಿತಾ ಮಜ ಸಾಯಾಸು ನಾಹೀ । ತೋ ವಿವಳ ಕರೂನಿ ದೇಈ । ಯೋಗು ಆಪುಲಾ ।।೧೬೯।।

ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।
ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್ ।।೧೮।।

ಆಣಿ ಪುಸಲಿಯಾ ಜಿಯಾ ವಿಭೂತೀ । ತ್ಯಾಹೀ ಬೋಲಾವಿಯಾ ಭೂತಪತೀ । ಏಥ ಮ್ಹಣಸೀ ಜರೀ ಪುಢತಿ ।ಕಾಯ ಸಾಂಗೋ? ।।೧೭೦।। ತರೀ ಹಾ ಭಾವ ಮನಾ । ಝಣೇ ಜಾಯ ಹೋ ಜನಾರ್ದನಾ । ಪೈ ಪ್ರಾಕೃತಾಹೀ ಅಮೃತ ಪಾನಾ । ನಾ ನ ಮ್ಹಣವೇ ಜೇವೀ ।।೧೭೧।। ಜೇ ಕಾಳಕೂಟಾಚೇ ಸಹೋದರ ।ಜೇ ಮೃತ್ಯೂಭೇಣೇ ಪ್ಯಾಲೇ ಅಮರ । ತರಿ ದಿಹಾಚೇ ಪುರಂದರ । ಚೌದಾ ಜಾತೀ ।।೧೭೨।। ಐಸಾ ಕವಣ ಏಕ ಕ್ಷೀರಾಬ್ಧೀಚಾ ರಸು । ಜಯಾ ವಾಯಾಂಚಿ ಅಮೃತಪಣಾಚಾ ಆಭಾಸು ।ತಯಾಚಾಹೀ ಮೀಠಾಂಶು । ಜೇ ಪುರೇ ಮ್ಹಣೋ ನೇದಿ ।।೧೭೩।। ತಯಾ ಪಾಬಳೇಯಾಹೀ ಯೇತುಲೇವರೀ । ಗೋಡಿಯೇಚಿ ಆಥಿ ಥೋರೀ । ಮಗ ಹೇ ತಂವ ಅವಧಾರೀ । ಪರಮಾಮೃತ ಸಾಚೇ ।।೧೭೪।। ಜೇ ಮಂದರಾಚಳು ನ ಢಾಳಿತಾ । ಕ್ಷೀರಸಾಗರು ನ ಡಹುಳತಾ । ಅನಾದಿ ಸ್ವಭಾವತಾ । ಆಇತೇ ಆಹೇ ।।೧೭೫।। ಜೇ ದ್ರವ ನಾ ನವ್ಹೇ ಬದ್ಧ । ಜೇಥ ನೇಣಿಜತೀ ರಸ ಗಂಧ । ಜೇ ಭಲತಯಾಂಹೀ ಸಿದ್ಧ । ಆಠವಲೇಂಚಿ ಫಾವೇ ।।೧೭೬।। ಜಯಾಚೇ ಗೋಠೀಚಿ ಐಕತ ಖೇಂವೋ । ಆಘವಾ ಸಂಸಾರು ಹೋಯ ವಾವೋ । ಬಳಿಯಾ ನಿತ್ಯತಾ ಲಾಗೇ ಯೇವೋ । ಆಪಣಪೇಯಾ ।।೧೭೭।। ಜನ್ಮ ಮೃತ್ಯೂಚೀ ಭಾಖ । ಹಾರಪೋನಿ ಜಾಯ ನಿಃಶೇಖ । ಆಂತಬಾಹೇರಿ ಮಹಾಸುಖ । ವಾಢೋಚಿ ಲಾಗೇ ।।೧೭೮।। ಮಗ ದೈವಗತ್ಯಾ ಜರೀ ಸೇವಿಜೇ । ತರೀ ತೇ ಆಪಣಚಿ ಹೋಊನಿ ಠಾಕಿಜೇ । ತೇ ತುಜ ದೇತಾ ಚಿತ್ತ ಮಾಝೇ । ಪುರೇ ಮ್ಹಣೋ ನ ಶಕೆ ।।೧೭೯।।

ಜೀಯಾ, ನಾನು ನಿಮಗೆ ಹೇಗೆ ತಿಳಿಯಬೇಕು? ಮತ್ತು ಯಾವಾಗಲೂ ಯಾವುದರ ಚಿಂತನೆ ಮಾಡಬೇಕು? ಎಲ್ಲವೂ ನೀವೇ ಎಂದು ಹೇಳಿಕೊಂಡಾಗ ನನ್ನಿಂದ ನಿಮ್ಮ ಚಿಂತನೆ ಆಗಲಾರದು ।೧೮೭॥

ಆದ್ದರಿಂದ ಈ ಹಿಂದೆ (೪,೫,೬ ನೇಯ ಶ್ಲೋಕದಲ್ಲಿ) ಯಾವುದನ್ನು ಸಂಕ್ಷಿಪ್ತವಾಗಿ ನಿಮ್ಮ ವಿಭೂತಿಯನ್ನು ಹೇಳಿರುವಿರಿ. ಈಗ ಅದನ್ನೇ ವಿಸ್ತಾರ ಮಾಡಿ ಒಂದು ಸಲ ತಿಳಿಸಿರಿ ।೧೮೮॥

ಯಾವ ಯಾವ ವಿಭೂತಿಗಳಲ್ಲಿ ನೀವು ಇರುವಿರಿ ಎಂಬುದು ತಿಳಿದುಕೊಂಡು ಚಿಂತನೆ ಮಾಡಿದಾಗ ನನಗೆ ಶ್ರಮವಾಗಲಿಕ್ಕಿಲ್ಲ. ಹೀಗೆ ನಿಮ್ಮ ಪ್ರಾಪ್ತಿಯ ಯಾವ ಉಪಾಯವನ್ನು ಸ್ಪಷ್ಟವಾಗಿ ಹೇಳಿರಿ ।೧೮೯॥

ಶ್ಲೋಕಾರ್ಥ :- ಜನಾರ್ದನಾ! ನಿನ್ನ ಯೋಗ ಮಹಿಮೆಯನ್ನು, ನಿನ್ನ ವಿಭೂತಿರೂಪಗಳನ್ನು ಪುನಃ ವಿಸ್ತಾರವಾಗಿ ಹೇಳು. ನಿನ್ನ ಅಮೃತವಾಕ್ಯಗಳನ್ನು ಎಷ್ಟು ಕೇಳಿದರೂ ತೃಪ್ತಿಯಾಗುವುದಿಲ್ಲ ।೧೮॥

ಹೇ ಭೂತಪತಿಯೇ, ನಾನು ನಿಮಗೆ ವಿಭೂತಿ ಬಗ್ಗೆ ಕೇಳಿದ್ದನ್ನು ಹೇಳಿರಿ. ಪುನಃ ಪುನಃ ಏನು ಹೇಳುವುದು ಎಂದು ಒಂದುವೇಳೆ ನಿಮ್ಮ ಮನದಲ್ಲಿ ಬರಬಹುದು।೧೯೦॥

ಆದರೆ ಹೇ ಜನಾರ್ದನನೇ, ಇಂತಹ ಶಂಕೆಯನ್ನು ಮನದಲ್ಲಿ ತರಬೇಡ, ಏಕೆಂದರೆ ಸಾಧಾರಣವಾಗಿ ಜಗತ್ತಿನಲ್ಲಿ ಅಮೃತಪಾನಕ್ಕೆ ಯಾರೂ ಸಾಕೆಂದು ಹೇಳಲಾರರು ।೧೯೧॥

ಈ ಅಮೃತವು ಕಾಳಕೂಟ ವಿಷದ ಖಾಸ ಅಣ್ಣನಾಗಿರುವನು, ಅದನ್ನು ಮರಣದ ಭಯದಿಂದ ದೇವತೆಗಳು ಪ್ರಾಶನ ಮಾಡಿದಾಗ್ಯೂ, ಬ್ರಹ್ಮದೇವನ ಒಂದು ಹಗಲಿನಲ್ಲಿ ಹದಿನಾಲ್ಕು ಇಂದ್ರರು ಲಯಗೊಳ್ಳುವರು ।೧೯೨॥

ಕ್ಷೀರಾಬ್ಧಿಯ ಇಂತಹ ರಸಕ್ಕೆ ವ್ಯರ್ಥವಾಗಿ ಅಮೃತವೆಂದು ಹೆಸರು ಬಂದಿದೆ. ಆದರೆ ಅದರ ರುಚಿಯನ್ನು ಸಾಕು ಎಂದೂ ಯಾರೂ ಅನ್ನುವುದಿಲ್ಲ ।೧೯೩॥

ಆ ತುಚ್ಛವಾದ ಅಮೃತದ ರುಚಿಯ ಮಹಿಮೆಯು ಇಷ್ಟಿರುವಾಗ ವಿಚಾರಿಸಿ ನೋಡಿದರೆ, ಈ ನಿಮ್ಮ ವಾಣಿಯು ನಿಜವಾಗಿಯೂ ಪರಮಾಮೃತವೇ ಆಗಿದೆ ।೧೯೪॥

ಇದು ಮಾತ್ರ, ಮಂದರ ಪರ್ವತವನ್ನು ಅಲುಗಾಡಿಸದೇ, ಕ್ಷೀರಸಾಗರವನ್ನು ಮಂಥಿಸದೇ ಇದು ಅನಾದಿಯಾಗಿ ಸ್ವಯಮೇವವಾಗಿರುವುದು।೧೯೫॥

ಇದು ತಿಳಿವು ಅಲ್ಲ, ಘಟ್ಟಿಯೂ ಅಲ್ಲ ಮತ್ತು ಇದರಲ್ಲಿ ರುಚಿ ಮತ್ತು ಸುಗಂಧ ಇಲ್ಲವೇ ಇಲ್ಲ ಮತ್ತು ಇದು ಸ್ಮರಿಸಿದಾಗ ಯಾರಿಗಾದರೂ ಪ್ರಾಪ್ತವಾಗುವುದು ।೧೯೬॥

ಇದರ ಮಾತು ಕೇಳಿದಾಕ್ಷಣವೇ ಸರ್ವ ಸಂಸಾರವು ಮಿಥ್ಯಾ ಎಂದು ಭಾಸವಾಗುವುದು. ಇದರಿಂದ ಬಲತ್ಕಾರವಾಗಿ ನಿತ್ಯತ್ತ್ವವೂ ತನ್ನಲ್ಲಿಯೇ ಬರುವುದು ।೧೯೭॥

ಇದರ ಯೋಗದಿಂದ ಜನ್ಮಮರಣದ ವಾರ್ತೆಯು ಸಂಪೂರ್ಣವಾಗಿ ಇಲ್ಲದಾಗುವುದು ಮತ್ತು ಒಳಹೊರಗೆ ಮಹಾಸುಖದ ವೃದ್ಧಿಯಾಗುವುದು ।೧೯೮॥

ಆಗ ದೈವಯೋಗದಿಂದ ಒಂದುವೇಳೆ ಅದನ್ನು ಸೇವಿಸಿದರೆ ಅದು ಆತ್ಮರೂಪವನ್ನಾಗಿ ಮಾಡುವುದು. ಈ ಪ್ರಕಾರದ ನಿಮ್ಮ ಈ ಪರಮಾಮೃತವನ್ನು ನನಗೆ ನೀವು ಕುಡಿಸುತ್ತಿರುವಾಗ ನನ್ನ ಚಿತ್ತವು ಸಾಕೆಂದು ಹೇಳುವುದೇ ಇಲ್ಲ ।೧೯೯॥

ತುರ್ಘೀ ನಾಮಚಿ ಆಮ್ಹಾ ಆವಡೇ ।ವರೀ ಭೇಠೀ ಹೋಯ ಆಣಿ ಜವಳಿಕ ಜೋಡೇ । ಪಾಠೀ ಗೋಠೀ ಸಾಂಗಸೀ ಸುರವಾಡೇ । ಆನಂದಾಚೇನೀ ।೨೦೦॥ ಆತಾ ಹೇ ಸುಖ ಕಾಯಿಸಯಾಸಾರಿಖೇ । ಕಾಂಹೀ ನಿರ್ವಚೇನಾ ಮಜ ಪರಿತೋಖೇ । ತರೀ ಯೇತುಲೇ ಜಾಣೇ ಜೇ ಯೇಣೇ ಮುಖೇ । ಪುನರುಕ್ತಹೀ ಹೋ ।೨೦೧॥ ಹಾ ಗಾ ಸೂರ್ಯ ಕಾಯ ಶಿಳಾ? । ಅಗ್ನಿ ಮ್ಹಣೋ ಏತ ಆಹೇ ವ್ರೋಂವಿಳಾ? । ಕಾ ನಿತ್ಯ ವಾಹಾತಯಾ ಗಂಗಾಜಳಾ । ಪಾರಸೇಪಣ ಅಸೇ? ।೨೦೨॥ ತುವಾ ಸ್ವಮುಖೇ ಜೇ ಬೋಲಿಲೇ । ಹೇ ಆಮ್ಹೀ ನಾದಾಸಿ ರೂಪ ದೇಖಿಲೇ । ಆಜೀ ಚಂದನತರೂಚೇ ಫುಲೇ । ತುರಂಬಿತ ಆಹೋ ಮಾ ।೨೦೩॥ ತಯಾ ಪಾರ್ಥಾಚಿಯಾ ಬೋಲಾ । ಸರ್ವಾಂಗೇ ಶ್ರೀಕೃಷ್ಣ ಡೋಲಲಾ । ಮ್ಹಣೇ ಭಕ್ತಿಜ್ಞಾನಾಸಿ ಜಾಹಲಾ । ಆಗರು ಹಾ।೨೦೪॥ ಐಸಾ ಪತಿಕರಾಚಿಯಾ ತೋಷಾ ಆಂತು । ಪ್ರೇಮಾಚಾ ವೇಗು ಉಚಂಬಳತು। ಸಾಯಾಸೇ ಸಾಂವರೂನಿ ಅನಂತು । ಕಾಯ ಬೋಲೇ ।೨೦೫॥

ಶ್ರೀ ಭಗವಾನುವಾಚ :-
ಹಂತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮ ವಿಭೂತಯಃ।
ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯಂತೋ ವಿಸ್ತರಸ್ಯ ಮೇ ।೧೯॥

ಮೀ ಪಿತಾಮಹಾಚಾ ಪಿತಾ । ಹೇ ಆಠವಿತಾಹೀ ನಾಠವೇ ಚಿತ್ತಾ । ಕೀ ಮ್ಹಣತಸೇ ಬಾ ಪಂಡುಸುತಾ । ಭಲೇ ಕೇಲೇ ।೨೦೬॥ ಅರ್ಜುನಾತೇ ಬಾ ಮ್ಹಣೇ ಏಥ ಕಾಂಹೀ । ಆಮ್ಹಾ ವಿಸ್ಮೋ ಕರಾವಯಾ ಕಾರಣ ನಾಹೀ । ಆಂಗೇ ತೋ ಲೇಕರು ಕಾಈ । ನವ್ಹೇಚಿ ನಂದಾಚೇ ?।೨೦೭॥ ಪರಿ ಪ್ರಸ್ತುತ ಐಸೇ ಅಸೋ । ಹೇ ಕರವೀ ಆವಡೀಚಾ ಅತಿಸೋ । ಮಗ ಮ್ಹಣೇ ಆಇಕೇ ಸಾಂಗತಸೋ । ಧನುರ್ಧರಾ ।೨೦೮॥ ತರೀ ತುವಾ ಪುಸಲಿಯಾ ವಿಭೂತೀ । ತಯಾಂಚೇ ಅಪಾರಪಣ ಸುಭದ್ರಾಪತೀ । ಜ್ಯಾ ಮಾಝಿಯಾಚಿ ಪರಿ ಮಾಝಿಯೇ ಮತೀ । ಆಕಳತೀ ನಾ ।೨೦೯॥ ಆಂಗೀಚಿಯಾ ರೋಮಾ ಕಿತೀ । ಜಯಾಚಿಯಾ ತಯಾಸಿ ನ ಗಣವತೀ। ತೈಸಿಯಾ ಮಾಝಿಯಾ ವಿಭೂತೀ । ಅಸಂಖ್ಯ ಮಜ ।೨೧೦॥ ಏರ್ಹವೀ ತರೀ ಮೀ ಕೈಸಾ ಕೇವಢಾ । ಮ್ಹಣೌನಿ ಆಪಣಪಯಾಂಹೀ ನವ್ಹೇಚಿ ಫುಡಾ । ಯಾಲಾಗಿ ಪ್ರಧಾನಾ ಜಿಯಾ ರೂಢಾ । ತಿಯಾ ಆಇಕೇ ।೨೧೧॥

ಮೊದಲೇ ನಿಮ್ಮ ಹೆಸರು ನನಗೆ ಪ್ರಿಯವಾದದ್ದು. ಅದರಲ್ಲಿ ನಿಮ್ಮ ದರ್ಶನವಾಗಿ ಸಹವಾಸ ದೊರಕಿತು. ನಂತರ ಆನಂದಯುಕ್ತರಾಗಿ ನೀವು ನುಡಿಗಳನ್ನು ಹೇಳುತ್ತಿರುವಿರಿ ।೨೦೦।।

ಅಂದಮೇಲೆ ಈ ಸುಖವು ಎಂತಹದ್ದು ಎಂದು ನನಗೆ ಹೇಳಲುಬಾರದು, ಆದಾಗ್ಯೂ ನಿಮ್ಮ ಮುಖದಿಂದ ಪುನಃ ಕೇಳಲು ಸಂತೋೀವಾಗುತ್ತದೆ. ಅದರಲ್ಲಿ ಪುನರುಕ್ತಿ ಆದರೂ ಅಡ್ಡಿ ಇಲ್ಲ ।೨೦೧।।

ಸೂರ್ಯನ ನಿತ್ಯ ಪ್ರಕಾಶಕ್ಕೆ ತಂಗಳ ಎನ್ನಲು ಬರಬಹುದೇ? ಅಗ್ನಿಯನ್ನು ಮೈಲಿಗೆ ಎಂದು ಹೇಳಲು ಬರಬಹುದೇ? ಅಥವಾ ನಿತ್ಯ ಹರಿಯುವ ಗಂಗೋದಕಕ್ಕೆ ಅಪವಿತ್ರತೆ ಇರುವುದೇ ?।೨೦೨।।

ನೀವು ನಿಮ್ಮ ಮುಖದಿಂದ ಹೇಳಿದ ಜ್ಞಾನವನ್ನು ಕೇಳಿ ಮೂರ್ತಿಮಂತವಾದ ಬ್ರಹ್ಮವು ನಮ್ಮ ಮುಂದೆ ನಿಂತಿರುವಂತೆ ಕಾಣುತ್ತಿದೆ. ಹಾಗೆಯೇ ಅಲಭ್ಯವಾದ ಚಂದನದ ಹೂವುಗಳ ಸುಗಂಧವನ್ನು ಇಂದು ಸೇವಿಸುತ್ತಿದ್ದೇವೆ ।೨೦೩।।

ಅರ್ಜುನನ ಈ ಭಾಷಣವನ್ನು ಕೇಳಿ ಶ್ರೀಕೃಷ್ಣನು ಸರ್ವಾಂಗದಿಂದ ತೂಗಾಡಹತ್ತಿದನು, ಮತ್ತು ಈ ಪಾರ್ಥನು ಭಕ್ತಿ ಜ್ಞಾನಗಳ ಆಗರವೇ ಆಗಿರುವನು ಎಂದು ಹೇಳಿದನು ।೨೦೪।।

ಈ ಪ್ರಕಾರದ ಅರ್ಜುನನ ಮಾತುಗಳನ್ನು ಅಂಗೀಕರಿಸುವ ಸಂತೋಷದಲ್ಲಿ ಪ್ರೇಮದ ವೇಗವು ಉಕ್ಕೇರುತ್ತಿರುವಾಗ್ಗೆ ಹೇಗೋ ಸಾಯಾಸದಿಂದ ಸಹಿಸಿಕೊಂಡು ಶ್ರೀಕೃಷ್ಣನು ಏನು ಹೇಳಿದನೆಂದರೆ ।೨೦೫।।

ಶ್ಲೋಕಾರ್ಥ :- ಭಗವಂತನು ಹೀಗೆಂದನು:- ಕುರುಶ್ರೇಷ್ಠಾ! ಸರಿ, ಹಾಗೆಯೇ ಆಗಲಿ, ದಿವ್ಯಗಳಾದ ನನ್ನ ವಿಭೂತಿಗಳಲ್ಲಿ ಮುಖ್ಯವಾದ ಕೆಲವನ್ನು ಹೇಳುತ್ತೇನೆ. ನನ್ನ ವಿಭೂತಿಗಳಿಗೆ ಪರಿಮಿತಿ ಇಲ್ಲವೆಂಬುದನ್ನು ಮರೆಯಬೇಡ ।೧೯।।

ನಾನು ಬ್ರಹ್ಮದೇವರ ತಂದೆ ಎನ್ನುವುದು ತಿಳಿದಿದ್ದರೂ ಅದರ ನೆನಪು ಇಲ್ಲದೇ ಭಗವಾನನು ಹೇಳಿದನು:- ಅಪ್ಪಾ ಅರ್ಜುನಾ, ಬಹಳ ಉತ್ತಮ ಮಾಡಿದೆ ।೨೦೬।।

ಈಗ ಭಗವಂತನು ಅರ್ಜುನನಿಗೆ ಅಪ್ಪಾ ಎಂದನು, ಎಂದು ನಿಮಗೆ ಆಶ್ಚರ್ಯಪಡುವ ಕಾರಣವಿಲ್ಲ. ಯಾಕೆಂದರೆ ಭಗವಂತನು ಸ್ವತಃ ನಂದಪುತ್ರನಾಗಿ ಆಟಗಳನ್ನು ಆಡಲಿಲ್ಲವೇ ?।೨೦೭।।

ಆದರೆ ಸಧ್ಯ ಅದಿರಲಿ, ಇದೆಲ್ಲವೂ ಪ್ರೇಮದ ಪರಾಕಾಷ್ಠದಿಂದ ನಡೆಯುವುದು. ಆಗ ಭಗವಂತನು ಹೇಳಿದನು:- ಹೇ ಧನುರ್ಧರನೇ ನಾನು ಹೇಳುವುದನ್ನು ಕೇಳು ।೨೦೮।।

ಹೇ ಸುಭದ್ರಾಪತಿಯೇ, ನೀನು ಕೇಳಿದ ವಿಭೂತಿಗಳು ನನ್ನವೇ ಇದ್ದು, ಅಗಣಿತವಾಗಿವೆ. ನನ್ನ ಬುದ್ಧಿಯಿಂದಲೂ ಅದರ ಗಣನೆ ಮಾಡಲು ಬರುವುದಿಲ್ಲ ।೨೦೯।।

ಯಾವ ಪ್ರಕಾರವಾಗಿ ತನ್ನ ಶರೀರದ ರೋಮಗಳನ್ನು ತನಗೆನೇ ಎಣಿಸಲು ಹೇಗೆ ಬರುವುದಿಲ್ಲವೋ, ಅದರಂತೆ ನನ್ನ ವಿಭೂತಿಗಳನ್ನು ನನಗೆ ಎಣಿಸಲು ಬರುವುದಿಲ್ಲ? ।೨೧೦।।

ಸರ್ವಸಾಮಾನ್ಯವಾಗಿ ನಾನು ಹೇಗೆ ಮತ್ತು ಎಷ್ಟು ಎಂಬುದು ನಿಜವಾಗಿಯೂ ನನಗೂ ಸಹ ತಿಳಿಯುವುದಿಲ್ಲ. ಅದಕ್ಕಾಗಿ ನನ್ನ ಮುಖ್ಯವಾದ ಪ್ರಸಿದ್ಧವಾದ ವಿಭೂತಿಗಳನ್ನು ಹೇಳುವೆ ಕೇಳು ।೨೧೧।।

ಜಿಯಾ ಜಾಣತಲಿಯಾಸಾಠೀ । ಆಘವೀಯಾ ಜಾಣವತೀಲ ಕಿರೀಟೀ । ಜೈಸೇ ಬೀಜ ಆಲಿಯಾ ಮುಠೀ । ತರೂಚಿ ಆಲಾ ಹೋಯ ।೨೧೨॥ ಕಾ ಉದ್ಯಾನ ಹಾತಾ ಚಢಿನ್ನಲೇ । ತರೀ ಆಪೈಸೀ ಸಾಂಪಡಲೀ ಫಳೇ ಫುಲೇ । ತೇವಿ ದೇಖಿಲಿಯಾ ಜಿಯಾ ದೇಖಿವಲೇ । ವಿಶ್ವ ಸಕಳ ।೨೧೩॥ ಏರ್ಹ್ವೀ ಸಾಚಚಿ ಗಾ ಧನುರ್ಧರಾ । ನಾಹೀ ಶೇವಟು ಮಾಝಿಯಾ ವಿಸ್ತಾರಾ । ಪೈ ಗಗನಾ ಐಶಿಯಾ ಅಪಾರಾ । ಮಜಮಾಜೀ ಲಪಣೇ ।೨೧೪॥

ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।
ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ ।೨೦॥

ಆಇಕೆ ಕುಟಿಲಾಲಕಮಸ್ತಕಾ । ಧನುರ್ವೇದತ್ರ್ಯಂಬಕಾ । ಮೀ ಅತ್ಮಾ ಅಸೇ ಏಕೈಕಾ । ಭೂತಾಮಾತ್ರಾಚ್ಯಾ ಠಾಯೀ ।೨೧೫॥ ಆಂತುಲಿಕಡೇ ಮೀಚಿ ಯಾಂಚೇ ಅಂತಃಕರಣೀ । ಭೂತಾಬಾಹೇರೀ ಮಾಝೀಚ ಗಂವಸಣೀ । ಆದೀ ಮೀ ನಿರ್ವಾಣೀ । ಮಧ್ಯಹೀ ಮೀಚಿ ।೨೧೬॥ ಜೈಸೇ ಮೇಘಾ ಯಾ ತಳೀ ವರೀ ।ಏಕ ಆಕಾಶಚಿ ಆಂತ ಬಾಹೇರೀ । ಆಣೀ ಆಕಾಶೀಂಚಿ ಜಾಲೇ ಅವಧಾರಿ । ಅಸಣೇಹೀ ಆಕಾಶೀ ।೨೧೭॥ ಪಾಠೀ ಲಯಾ ಜೇ ವೇಳಿ ಜಾತೀ । ತೇ ವೇಳೀ ಆಕಾಶಚಿ ಹೋಊನಿ ಠಾತೀ । ತೇವೀ ಆದಿ ಸ್ಥಿತೀ ಗತೀ । ಭೂತಾಂಸಿ ಮೀ ।೨೧೮॥ ಐಸೇ ಬಹುವಸ ಆಣಿ ವ್ಯಾಪಕಪಣ । ಮಾಝೇ ವಿಭೂತಿಯೋಗೆ ಜಾಣ । ತರೀ ಜೀವಚಿ ಕರೂನಿ ಶ್ರವಣ । ಆಇಕೋನಿ ಆಇಕ ।೨೧೯॥ ಯಾಹೀವರೀ ತ್ಯಾ ವಿಭೂತೀ । ಸಾಂಗಣೇ ಠೇಲೇ ಸುಭದ್ರಾಪತೀ । ಸಾಂಗೇನ ಮ್ಹಣೆತಲೇ ತುಜಪ್ರತಿ । ತ್ಯಾ ಪ್ರಧಾನಾ ಆಇಕೇ ।೨೨೦॥

ಆದಿತ್ಯಾನಾಮಹಂ ವಿಷ್ಣುಃ ಜ್ಯೋತಿಷಾಂ ರವಿರಂಶುಮಾನ್ ।
ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ।೨೧॥

ಹೇ ಬೋಲೋನಿ ತೋ ಕೃಪಾವಂತು । ಮ್ಹಣೇ ವಿಷ್ಣು ಮೀ ಆದಿತ್ಯಾ ಆಂತು । ರವೀ ಮೀ ರಶ್ಮಿವಂತು । ಸುಪ್ರಭಾಮಾಜೀ ।೨೨೧॥ ಮರುದ್ಗಣಾಂಚ್ಯಾ ವರ್ಗಿ । ಮರೀಚಿ ಮ್ಹಣೇ ಮೀ ಶಾಂಙ್ರ್ಗಿ । ಚಂದ್ರ ಮೀ ಗಗನರಂಗೀ । ತಾರಾ ಮಾಜೀ ।೨೨೨॥

ವೇದಾನಾಂ ಸಾಮವೇದೋಽಸ್ಮಿ ದೇವನಾಮಸ್ಮಿ ವಾಸವಃ ।
ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತನಾಮಸ್ಮಿ ಚೇತನಾ ।೨೨॥

ಹೇ ಕಿರೀಟಿಯೇ, ಇವುಗಳನ್ನು ತಿಳಿದರೆ ಇತರ ಎಲ್ಲ ವಿಭೂತಿಗಳನ್ನೂ ತಿಳಿಯಬಹುದು, ಯಾವ ಪ್ರಕಾರವಾಗಿ ಬೀಜವು ಕೈಗೆ ಸಿಕ್ಕರೆ ಗಿಡವೇ ಕೈಗೆ ಸಿಕ್ಕಂತಾಗುವುದೋ ।೨೧೨।।

ಅಥವಾ ತೋಟವು ಕೈಗೆ ಸಿಕ್ಕಾಟ ಸಹಜವಾಗಿ ಹೇಗೆ ಫಲಪುಷ್ಪಗಳು ನಮ್ಮದಾಗುವುವೋ, ಅದರಂತೆ ಆ ವಿಭೂತಿಗಳನ್ನು ಕಂಡಾಗ ಸರ್ವ ವಿಶ್ವವನ್ನು ನೋಡಿದಂತೆಯೇ ಆಗುವುದು ।೨೧೩।।

ಹೇ ಧನುರ್ಧರನೇ, ನಿಜವಾಗಿಯೂ ನನ್ನ ವಿಸ್ತಾರದ ಅಂತವೇ ಇಲ್ಲ. ಇಲ್ಲಿ ನೋಡು, ಆಕಾಶದಂತಹ ದೊಡ್ಡ ದೊಡ್ಡ ವಸ್ತುಗಳು ನನ್ನಲ್ಲಿ ಅಡಗಿ ಹೋಗುವುವು ।೨೧೪।।

ಶ್ಲೋಕಾರ್ಥ :- ಗುಡಾಕೇಶಾ! ಸಮಸ್ತ ಪ್ರಾಣಿಗಳ ಹೃದಯದಲ್ಲಿರುವ ಆತ್ಮ ನಾನು. ಸರ್ವಭೂತಗಳ ಆದಿಮಧ್ಯಾಂತಗಳೇ ನಾನು ।೨೦।।

ಮಸ್ತಕದಲ್ಲಿ ಉಂಗುರ ಕೂದಲುಳ್ಳ ಮತ್ತು ಧನುರ್ವಿದ್ಯೆಯಲ್ಲಿ ಶಂಕರನಿಗೆ ಸಮಾನನಾದ ಅರ್ಜುನನೇ, ಪ್ರತಿಯೊಂದು ಪ್ರಾಣಿಗಳಲ್ಲಿ ಇರುವ ಆತ್ಮವು ನಾನು ।೨೧೫।।

ಶರೀರದ ಒಳಗಿನ ಅಂತಃಕರಣ ನಾನೇ ಇರುವೆ. ಪ್ರಾಣಿಮಾತ್ರರ ಹೊರಭಾಗದಲ್ಲಿ ನನ್ನದೇ ಆಜ್ಞಾಪನೆ ಇದೆ ಮತ್ತು ಪ್ರಾಣಿಮಾತ್ರರ ಆರಂಭದಲ್ಲಿ, ಮಧ್ಯದಲ್ಲಿ ಮತ್ತು ಅಂತ್ಯದಲ್ಲಿ ನಾನೇ ಇರುವೆನು ।೨೧೬।।

ಯಾವ ಪ್ರಕಾರವಾಗಿ ಮೇಘದ ಕೆಳಗೆ, ಮೇಲೆ ಒಳಗೆ ಮತ್ತು ಹೊರಗೆ ಸರ್ವತ್ರವೂ ಆಕಾಶವೇ ಇರುವುದು ಮತ್ತು ಆ ಆಕಾಶದಲ್ಲಿ ಉತ್ಪನ್ನವಾಗಿ ಆಕಾಶದಲ್ಲಿಯೇ ಇರುವುದು ।೨೧೭।।

ಮತ್ತು ಆ ವೇಳೆಯಲ್ಲಿ ಮೇಘಗಳು ಲಯಗೊಳ್ಳುವುವು. ಆಗಲೂ ಆಕಾಶರೂಪವನ್ನೇ ಹೊಂದಿರುವುವು. ಅದರಂತೆ ಉತ್ಪತ್ತಿ, ಸ್ಥಿತಿ ಮತ್ತು ಲಯ ಇವು ಮೂರು ಪ್ರಾಣಿಮಾತ್ರರ ಗತಿ ನಾನೇ ಆಗಿರುವೆನು ।೨೧೮।।

ಈ ಪ್ರಕಾರವಾಗಿ ಅನಂತತ್ವ ಮತ್ತು ವ್ಯಾಪಕತ್ವ ಇವು ನನ್ನ ವಿಭೂತಿಗಳ ಯೋಗದಿಂದ ತಿಳಿಯುವುದು. ಅದಕ್ಕಾಗಿ ಜೀವವನ್ನೇ ಕಿವಿಯನ್ನಾಗಿ ಮಾಡಿ ಹಿಂದೆ ಕೇಳಿದ್ದನ್ನು ಅನುಸಂಧಾನವನ್ನಿಟ್ಟು ಮುಂದೆ ಕೇಳು ।೨೧೯।।

ಹೇ ಸುಭದ್ರಾಪತಿಯೇ, ಇನ್ನು ಮುಂದೆ ನಿನಗೆ ಹೇಳುವುದನ್ನು ಉಳಿದಿದ್ದ ವಿಭೂತಿಗಳನ್ನು ನಿನಗೆ ಹೇಳುವೆ ಎಂದು ಹೇಳಿದ್ದೆನು. ಅದರಲ್ಲಿನ ಮುಖ್ಯ ಮುಖ್ಯವಾದದ್ದು ಕೇಳು ।೨೨೦।।

ಶ್ಲೋಕಾರ್ಥ :- ಆದಿತ್ಯರಲ್ಲಿ ವಿಷ್ಣುವು ನಾನು, ಪ್ರಕಾಶಕ ವಸ್ತುಗಳಲ್ಲಿ ಚಂಡ ಕಿರಣನಾದ ಸೂರ್ಯನು ನಾನು. ಮರುತರಲ್ಲಿ ಮರೀಚಿ ನಾನು, ನಕ್ಷತ್ರಗಳಲ್ಲಿ ಚಂದ್ರನು ನಾನು ।೨೧।।

ಇಷ್ಟಾದ ಮೇಲೆ ಕೃಪಾವಂತ ಶ್ರೀಕೃಷ್ಣನು ಹೇಳಿದನು:- ಹನ್ನೆರಡು ಆದಿತ್ಯರಲ್ಲಿ ವಿಷ್ಣು ನಾನು, ತೇಜಸ್ವಿ ವಸ್ತುಗಳಲ್ಲಿ ಕಿರಣಯುಕ್ತ ಆ ಸೂರ್ಯನು ನಾನು।೨೨೧।।

ಶ್ರೀಕೃಷ್ಣನು ಹೇಳುತ್ತಾನೆ:- ನಲವತ್ತೊಂಭತ್ತು (೪೯) ಮರುದ್ಗಣಗಳಲ್ಲಿ ಮರೀಚಿ ನಾನು ಮತ್ತು ಆಕಾಶದಲ್ಲಿನ ನಕ್ಷತ್ರಗಳಲ್ಲಿ ಚಂದ್ರನು ನಾನು ।೨೨೨।।

ಶ್ಲೋಕಾರ್ಥ :- ವೇದಗಳಲ್ಲಿ ಸಾಮವೇದ, ದೇವತೆಗಳಲ್ಲಿ ದೇವೇಂದ್ರ, ಇಂದ್ರಿಯಗಳಲ್ಲಿ ಮನಸ್ಸು, ಭೂತಗಳಲ್ಲಿ ಚೇತನಶಕ್ತಿಯು ನಾನು ।೨೨।।

ವೇದಾ ಆಂತ ಸಾಮವೇದು । ತೋ ಮೀ ಮ್ಹಣೇ ಗೋವಿಂದು । ದೇವಾ ಮಾಜಿ ಮರುದ್ಬಂಧು । ಮಹೇಂದ್ರು ತೋ ಮೀ ॥೨೨೩॥ ಇಂದ್ರಿಯಾ ಮಾಜೀ ಅಕರಾವೇ । ಮನ ತೇ ಮೀ ಹೇ ಜಾಣಾವೇ । ಭೂತಾಮಾಜೀ ಸ್ವಭಾವೇ । ಚೇತನಾ ತೇ ಮೀ ॥೨೨೪॥

ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಮ್ ।
ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಮ್ ॥೨೩॥

ಅಶೇಷಾಂಹೀ ರುದ್ರಾಮಾಝಾರಿ । ಶಂಕರ ಜೋ ಮದನಾರಿ । ತೋ ಮೀ ಏಥ ನ ಧರೀ । ಭ್ರಾಂತಿ ಕಾಂಹೀ ॥೨೨೫॥ ಯಕ್ಷರಕ್ಷೋಗಣಾ ಆಂತು । ಶಂಭೂಚಾ ಸಖಾ ಜೋ ಧನವಂತು । ತೋ ಕುಬೇರು ಮೀ ಹೇ ಅನಂತು । ಮ್ಹಣತಾ ಜಾಹಲಾ ॥೨೨೬॥ ಮಗ ಆಠಾಹೀ ವಸೂಮಾಝಾರೀ । ಪಾವಕು ತೋ ಮೀ ಅವಧಾರೀ । ಶಿಖರಾಥಿಲಿಯಾ ಸರ್ವೋಪರೀ । ಮೇರು ತೋ ಮೀ ॥೨೨೭॥

ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಮ್ ।
ಸೇನಾನೀನಾಮಹಂ ಸ್ಕಂಧಃ ಸರಸಾಮಸ್ಮಿ ಸಾಗರಃ ॥೨೪॥

ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್ ।
ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ ॥೨೫॥

ಜೋ ಸ್ವರ್ಗಸಿಂಹಾಸನಾ ಸಾವಾವೋ । ಸರ್ವಜ್ಞತೇ ಆದಿಚಾ ಠಾವೋ । ತೋ ಪುರೋಹಿತಾಮಾಜೀ ರಾವೋ । ಬೃಹಸ್ಪತೀ ಮೀ ॥೨೨೮॥ ತ್ರಿಭುವನೀಂಚಿಯಾ ಸೇನಾಪತೀ । ಆಂತ ಸ್ಕಂದು ತೋ ಮೀ ಮಹಾಮತಿ । ಜೋ ಹರವೀರ್ಯೋ ಅಗ್ನಿಸಂಗತೀ । ಕೃತ್ತಿಕಾಆಂತು ಜಾಹಲಾ ॥೨೨೯॥ ಸಕಳಿಕಾ ಸರೋವರಾಂಸೀ । ಮಾಜೀ ಸಮುದ್ರ ತೋ ಮೀ ಜಳರಾಶೀ । ಮಹರ್ಷಿ ಆಂತು ತಪೋರಾಶೀ । ಭೃಗು ತೋ ಮೀ ॥೨೩೦॥ ಅಶೇಷಾಂಹೀ ವಾಚಾ । ಮಾಜಿ ನಟನಾಚ ಸತ್ಯಾಚಾ । ತೇ ಅಕ್ಷರ ಏಕ ಮೀ ವೈಕುಂಠೀಚಾ । ವೇಲ್ಹಾಳು ಮ್ಹಣೇ ॥೨೩೧॥ ಸಮಸ್ತಾಹೀ ಯಜ್ಞಾಂಚ್ಯಾ ಪೈಕೀ । ಜಪಯಜ್ಞು ತೋ ಮೀ ಯೇಲೋಕೀ । ಜೋ ಕರ್ಮತ್ಯಾಗೇ ಪ್ರಣವಾದಿಕೀ । ನಿಫಜವಿಜೇ ॥೨೩೨॥ ನಾಮಜಪಯಜ್ಞು ತೋ ಪರಮ । ಬಾಧೂ ನ ಶಕೆ ಸ್ನಾನಾದಿ ಕರ್ಮ । ನಾಮೇ ಪಾವನ ಧರ್ಮಾಧರ್ಮ । ನಾಮ ಪರಬ್ರಹ್ಮ ವೇದಾರ್ಥೇ ॥೨೩೩॥ ಸ್ಥಾವರಾ ಗಿರೀ ಆಂತು । ಪುಣ್ಯಪುಂಜ ಜೋ ಹಿಮವಂತು । ತೋ ಮೀ ಮ್ಹಣೇ ಕಾಂತು । ಲಕ್ಷ್ಮೀಯೇಚಾ ॥೨೩೪॥

ಶ್ರೀಗೋವಿಂದನು ಹೇಳಿದನು:- ವೇದಗಳಲ್ಲಿ ಸಾಮವೇದವು ನಾನು. ದೇವತೆಗಳಲ್ಲಿ ಮರುದ್‌ಬಂಧುವಾದ ಯಾವ ಇಂದ್ರನು ನಾನು ।ಬ೨೩॥

ಮತ್ತು ಇಂದ್ರಿಯಗಳಲ್ಲಿ ಹನ್ನೊಂದನೆಯ ಯಾವ ಮನಸ್ಸು ಅದು ನಾನು, ಹೀಗೆ ತಿಳಿ. ಹಾಗೆಯೇ ಪ್ರಾಣಿಮಾತ್ರ ರಲ್ಲಿ ಯಾವ ಮೂಲವಾದ ಜೀವಕಳೆಯು ನಾನಾಗಿರುವೆನು ।ಬ೨೪॥

ಶ್ಲೋಕಾರ್ಥ :- ರುದ್ರರಲ್ಲಿ ಶಂಕರನು, ಯಕ್ಷ ರಾಕ್ಷಸರಲ್ಲಿ ಕುಬೇರನು. ವಸುಗಳಲ್ಲಿ ಪಾವಕನು. ಮೇರುಪರ್ವತವು ನಾನೆಂದು ತಿಳಿ ।೨೩॥

ಎಲ್ಲ ರುದ್ರರಲ್ಲಿ ಮದನದ ಶತ್ರುವಾಗಿರುವ ಯಾವ ಶಂಕರನು ನಾನಾಗಿರುವೆನು. ಇದರ ವಿಷಯಕ್ಕೆ ಮನದಲ್ಲಿ ಸಂಶಯಪಡಬೇಡ ।ಬ೨೫॥

ಶ್ರೀಅನಂತನು ಹೇಳುವನು:- ಯಕ್ಷ ರಾಕ್ಷಸರಲ್ಲಿ ಶಂಕರನ ಮಿತ್ರನಾದ ಯಾವ ಧನವಾನ ಕುಬೇರನು ನಾನಾಗಿರುವೆನು ।ಬ೨೬॥

ಅಷ್ಟವಸುಗಳಲ್ಲಿ ಅಗ್ನಿಯು ನಾನು, ಎಲ್ಲ ಶಿಖರ ಗಳನ್ನು ಧಾರಣ ಮಾಡುವ ಪರ್ವತಗಳಲ್ಲಿ ಎತ್ತರವಾಗಿರುವ ಮೇರುಪರ್ವತವು ನಾನಾಗಿರುವೆನು ।ಬ೨೭॥

ಶ್ಲೋಕಾರ್ಥ :- ಪಾರ್ಥ! ಪುರೋಹಿತರಲ್ಲಿ ಮುಖ್ಯನಾದ ಬೃಹಸ್ಪತಿಯು ನಾನು, ಸೇನಾಪತಿಗಳಲ್ಲಿ ಕುಮಾರಸ್ವಾಮಿಯು ನಾನು, ಜಲಾಶಯಗಳಲ್ಲಿ ಸಮುದ್ರನು ನಾನು ।೨೪॥

ಶ್ಲೋಕಾರ್ಥ :- ಮಹರ್ಷಿಗಳಲ್ಲಿ ಭೃಗು ಮಹರ್ಷಿ ನಾನು. ಶಬ್ದಗಳಲ್ಲಿ ಓಂಕಾರ ನಾನು, ಯಜ್ಞಗಳಲ್ಲಿ ಜಪಯಜ್ಞವು ನಾನು, ಸ್ಥಿರವಸ್ತುಗಳಲ್ಲಿ ಹಿಮಾಲಯವು ನಾನು ।೨೫॥

ಯಾವ ಇಂದ್ರನ ಮಂತ್ರಿಯು ಮತ್ತು ಸರ್ವ ಜ್ಞಾನಗಳ ಆದಿಪೀಠವು ಮತ್ತು ಪುರೋಹಿತರಲ್ಲಿ ಸರ್ವಶ್ರೇಷ್ಠರಾದ ಆ ಬೃಹಸ್ಪತಿಯು ನಾನು ।ಬ೨೮॥

ಅರ್ಜುನಾ, ಶಂಕರನ ವೀರ್ಯದಿಂದ ಅಗ್ನಿಯ ಸಂಗ ದಿಂದ ಕೃತಿಕೆಯ ಉದರದಲ್ಲಿ ಉತ್ಪನ್ನನಾದ ಮತ್ತು ತ್ರಿಭುವನದಲ್ಲಿ ಮುಖ್ಯ ಸೇನಾಪತಿಯಾಗಿರುವ ಕಾರ್ತಿಕ ಸ್ವಾಮಿಯು ನಾನು ।ಬ೨೯॥

ಸರ್ವ ಸರೋವರದಲ್ಲಿ ಜಲನಿಧಿಯಾಗಿರುವ ಯಾವ ಸಮುದ್ರವು ನಾನು, ಮಹರ್ಷಿಗಳಲ್ಲಿ ತಪೋರಾಶಿಯಾ ಗಿರುವ ಯಾವ ಭೃಗು ಋಷಿಯು ನಾನು ।ಬ೩೦॥

ವೈಕುಂಠವಿಲಾಸಿ ಶ್ರೀಕೃಷ್ಣನು ಹೇಳಿದನು:- ಎಲ್ಲ ಮಾತುಗಳಲ್ಲಿ ಯಾವುದು ಸತ್ಯವಾಗಿ ವ್ಯವಹಾರವಾ ಗುವುದೋ, ಆ ಸತ್ಯ ಅಕ್ಷರವಾದ ಓಂಕಾರವು ನಾನು ।ಬ೩೧॥

ಎಲ್ಲ ಯಜ್ಞಗಳಲ್ಲಿ ಕರ್ಮತ್ಯಾಗ ಮಾಡಿ ಓಂಕಾರಾದಿ ಗಳಿಗೆ ಉತ್ಪನ್ನವಾಗುವ ಯಾವ ಜಪ ಯಜ್ಞವು ನಾನಾಗಿರು ವೆನು ।ಬ೩೨॥

ಯಾವ ಈ ನಾಮಜಪಯಜ್ಞವು ಶ್ರೇಷ್ಠವಾಗಿದ್ದು, ಸ್ನಾನಾದಿಕ ನಿತ್ಯ ಕರ್ಮಗಳಲ್ಲಿ ಅಡಚಣೆ ತರುವುದಿಲ್ಲ. ಈ ಹೆಸರಿನಿಂದ ಧರ್ಮ ಮತ್ತು ಅಧರ್ಮಗಳು ಪವಿತ್ರವಾ ಗುವುವು ಮತ್ತು ವೇದಗಳಲ್ಲಿ ಇದಕ್ಕೆ ಪರಬ್ರಹ್ಮವೆನ್ನುವರು. ಅದು ನಾನು ।ಬ೩೩॥

ಶ್ರೀ ಲಕ್ಷ್ಮೀಪತಿಯು ಹೇಳಿದನು:- ಸ್ಥಾವರ ಪರ್ವತ ಗಳಲ್ಲಿ ಪುಣ್ಯರಾಶಿಯಾದ ಯಾವ ಹಿಮಾಲಯ ಪರ್ವತವು ನಾನಾಗಿರುವೆನು ।ಬ೩೪॥

ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।
ಗಂಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ ॥೨೬॥

ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಮ್ ।
ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಮ್ ॥೨೭॥

ಕಲ್ಪದ್ರುಮ ಹನ ಪಾರಿಜಾತು । ಗುಣೇ ಚಂದನುಹೀ ವಾಡ ವಿಖ್ಯಾತು । ತರೀ ಯಯಾ ವೃಕ್ಷಜಾತಾಆಂತು । ಅಶ್ವತ್ಥು ತೋ ಮೀ ॥೨೩೫॥ ದೇವಋಷೀ ಆಂತು ಪಾಂಡವಾ । ನಾರದು ತೋ ಮೀ ಜಾಣಾವಾ । ಚಿತ್ರರಥು ಮೀ ಗಂಧರ್ವಾ । ಸಕಳಿಕಾ ಮಾಜೀ ॥೨೩೬॥ ಯಯಾ ಅಶೇಷಾಂಹೀ ಸಿದ್ಧಾ । ಮಾಜೀ ಕಪಿಲಾಚಾರ್ಯು ಮೀ ಪ್ರಬುದ್ಧಾ । ತುರಂಗಜಾತಾ ಪ್ರಸಿದ್ಧಾ । ಆಂತ ಉಚ್ಚೈಃಶ್ರವಾ ಮೀ ॥೨೩೭॥ ರಾಜಭೂಷಣ ಗಜಾಆಂತು । ಅರ್ಜುನಾ ಮೀ ಗಾ ಐರಾವತು । ಪಯೋರಾಶೀ ಸುರಮಥಿತು । ಅಮೃತಾಂಸು ತೋ ಮೀ ॥೨೩೮॥ ಯಯಾ ನರಾಮಾಜೀ ರಾಜಾ । ತೋ ವಿಭೂತಿವಿಶೇಷ ಮಾಝಾ । ಜಯಾತೇ ಸಕಳ ಲೋಕ ಪ್ರಜಾ । ಹೋಊನಿ ಸೇವಿತೀ ॥೨೩೯॥

ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ ।
ಪ್ರಜನಶ್ಚಾಸ್ಮಿ ಕಂದರ್ಪಃ ಸರ್ಪಾಣಾಮಸ್ಮಿ ವಾಸುಕಿಃ ॥೨೮॥

ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಮ್ ।
ಪಿತೃಣಾಮರ್ಯಮಾ ಚಾಸ್ಮಿ ಯಮಃ ಸಂಯಮತಾಮಹಮ್ ॥೨೯॥

ಪೈ ಆಘವೇಯಾ ಹಾತಿಯೇರಾ । ಆಂತ ವಜ್ರ ತೇ ಮೀ ಧನುರ್ಧರಾ । ಜೇ ಶತಮಖೋತ್ತೀರ್ಣಕರಾ । ಆರೂಢೋನಿ ಅಸೇ ॥೨೪೦॥ ಧೇನೂಮಧ್ಯೇ ಕಾಮಧೇನು । ತೇ ಮೀ ಮ್ಹಣೇ ವಿಷ್ವಕ್‌ಸೇನು । ಜನ್ಮ ವಿತಯಾಆಂತ ಮದನು । ತೋ ಮೀ ಜಾಣೇ ॥೨೪೧॥ ಸರ್ಪಕುಳಾಆಂತ ಅಧಿಷ್ಠಿತಾ । ವಾಸುಕೀ ಗಾ ಮೀ ಕುಂತೀಸುತಾ । ನಾಗಾಮಾಜೀ ಸಮಸ್ತಾ । ಅನಂತು ತೋ ಮೀ ॥೨೪೨॥ ಅಗಾ ಯಾದಸಾಆಂತು । ಜೋ ಪಶ್ಚಿಮ ಪ್ರಮದೇಚಾ ಕಾಂತು । ತೋ ವರುಣ ಮೀ ಹೇ ಅನಂತು । ಸಾಂಗತ ಅಸೇ ॥೨೪೩॥ ಆಣಿ ಪಿತೃಗಣಾ ಸಮಸ್ತಾ । ಮಾಜೀ ಅರ್ಯಮಾ ಜೋ ಪಿತೃದೇವತಾ । ತೋ ಮೀ ಹೇ ತತ್ತ್ವತಾ । ಬೋಲತ ಆಹೇ ॥೨೪೪॥ ಜಗಾಚೇ ಶುಭಾಶುಭೇ ಲಿಹಿತಿ । ಪ್ರಾಣಿಯಾಂಚ್ಯಾ ಮಾನಸಾಂಚಾ ಝಾಡಾ ಘೇತೀ । ಮಗ ಕೇಲಿಯಾನುರೂಪ ಹೋತೀ । ಭೋಗನಿಯಮ ಜೇ ॥೨೪೫॥

ಶ್ಲೋಕಾರ್ಥ :- ವೃಕ್ಷಗಳಲ್ಲಿ ಅಶ್ವತ್ಥವೃಕ್ಷವು ನಾನು, ದೇವ ಋಷಿಗಳಲ್ಲಿ ನಾರದನು ನಾನು, ಗಂಧರ್ವರಲ್ಲಿ ಚಿತ್ರರಥನು ನಾನು, ಸಿದ್ಧರಲ್ಲಿ ಕಪಿಲ ಮುನಿಯು ನಾನು ।೨೬॥

ಶ್ಲೋಕಾರ್ಥ :- ಅಶ್ವಗಳಲ್ಲಿ ಅಮೃತದಿಂದ ಹುಟ್ಟಿದ ಉಚ್ಚೈಃಶ್ರವ ನಾನು. ಆನೆಗಳಲ್ಲಿ ಐರಾವತವು ನಾನು, ಮನುಷ್ಯರಲ್ಲಿ ರಾಜನು ನಾನು ।೨೭॥

ಕಲ್ಪವೃಕ್ಷ, ಮತ್ತು ಪಾರಿಜಾತ ಹಾಗೆಯೇ ಚಂದನ ವೃಕ್ಷ ಇವು ಗುಣಗಳಿಂದ ಬಹಳ ಪ್ರಸಿದ್ಧವಾಗಿವೆ. ಆದಾಗ್ಯೂ ಎಲ್ಲ ವೃಕ್ಷಗಳಲ್ಲಿ ಅಶ್ವತ್ಥ ವೃಕ್ಷವು ನಾನು ।೨೩೫॥

ಹೇ ಪಾಂಡವಾ, ಎಲ್ಲ ದೇವ ಋಷಿಗಳಲ್ಲಿ ನಾರದ ಋಷಿ, ನಾನಾಗಿರುವೆನೆಂದು ತಿಳಿ ಮತ್ತು ಎಲ್ಲ ಗಂಧರ್ವ ಗಳಲ್ಲಿ ಚಿತ್ರರಥ ಗಂಧರ್ವನು ನಾನು ।೨೩೬॥

ಹೇ ಜ್ಞಾನವಂತನೇ, ಈ ಎಲ್ಲ ಸಿದ್ಧರಲ್ಲಿ ಕಪಿಲಾ ಚಾರ್ಯನು ನಾನು. ಎಲ್ಲ ಕುದುರೆಗಳಲ್ಲಿ ಪ್ರಖ್ಯಾತವಾದ ಉಚ್ಚೈಃಶ್ರವ ಎಂಬ ಕುದುರೆಯು ನಾನು ।೨೩೭॥

ಹೇ ಅರ್ಜುನನೇ, ರಾಜರಿಗೆ ಭೂಷಣವಾದ ಆನೆ ಗಳಲ್ಲಿ, ದೇವತೆಗಳು ಅಮೃತಕ್ಕಾಗಿ ಸಮುದ್ರವನ್ನು ಮಂಥನ ಮಾಡುವಾಗ್ಗೆ ಅದರಲ್ಲಿ ಉತ್ಪನ್ನವಾದ ಐರಾವತ ಎಂಬ ಆನೆಯು ನಾನು ।೨೩೮॥

ಎಲ್ಲ ಜನರು ಆಜ್ಞಾಧಾರಕರಾಗಿ ಯಾರ ಸೇವೆಯನ್ನು ಮಾಡುವರೋ ಆ ಜನರಲ್ಲಿ ರಾಜನು ನನ್ನ ವಿಶೇಷ ವಿಭೂತಿ ಯಾಗಿರುವನು ।೨೩೯॥

ಶ್ಲೋಕಾರ್ಥ :- ಆಯುಧಗಳಲ್ಲಿ ವಜ್ರಾಯುಧ ವು ನಾನು. ಧೇನುಗಳಲ್ಲಿ ಕಾಮಧೇನುವು ನಾನು, ಉತ್ಪಾದಕರಲ್ಲಿ ಮನ್ಮಥನು, ಸರ್ಪಗಳಲ್ಲಿ ವಾಸುಕಿ ನಾನು ।೨೮॥

ಶ್ಲೋಕಾರ್ಥ :- ನಾಗಗಳಲ್ಲಿ ಶೇಷನು ನಾನು. ಜಲದೇವತೆಗಳಲ್ಲಿ ವರುಣನು ನಾನು, ಪಿತೃದೇವತೆಗಳಲ್ಲಿ ಆರ್ಯಮನು ನಾನು, ನಿಯಾಮಕರಲ್ಲಿ ಯಮನು ನಾನು ।೨೯॥

ಇಲ್ಲಿ ನೋಡು ಅರ್ಜುನಾ, ನೂರು ಯಜ್ಞಗಳನ್ನು ಪರಿಪೂರ್ಣ ಮಾಡಿದ ಇಂದ್ರನ ಕೈಯಲ್ಲಿರುವ ಎಲ್ಲ ಆಯುಧಗಳಲ್ಲಿ ಶ್ರೇಷ್ಠವಾದ ವಜ್ರಾಯುಧವು ನಾನು ।೨೪೦॥

ಎಲ್ಲ ಆಕಳುಗಳಲ್ಲಿ ಸ್ವರ್ಗದಲ್ಲಿರುವ ಕಾಮಧೇನು ಎಂಬ ಆಕಳವು ನಾನು. ಜನ್ಮ ಉತ್ಪತ್ತಿ ಮಾಡುವಲ್ಲಿ ಮದನ (ಕಾಮನು) ಎಂದು ತಿಳಿ, ಹೀಗೆ ಶ್ರೀಕೃಷ್ಣನು ಹೇಳಿದನು ।೨೪೧॥

ಹೇ ಕುಂತಿಸುತನೇ, ಸರ್ಪಕುಲದ ನಾಯಕನಾದ ವಾಸುಕಿಯು ನಾನು. ಸರ್ಪನಾಗಗಳಲ್ಲಿ ಶ್ರೇಷ್ಠವಾದ ಯಾವ ಅನಂತ (ಶೇಷ) ನು ನಾನು ।೨೪೨॥

ಶ್ರೀಕೃಷ್ಣನು ಹೇಳುತ್ತಾನೆ:- ಎಲ್ಲ ಜಲ ದೇವತೆಗಳಲ್ಲಿ ಪಶ್ಚಿಮ ದಿಶೆಯ ಪತಿಯಾದ ವರುಣನು ನಾನು ।೨೪೩॥

ಸರ್ವ ಪಿತೃ ಗಣಗಳಲ್ಲಿ ಪಿತೃದೇವನಾದ ಯಾವ ಆರ್ಯಮಾ ನಾನಾಗಿರುವೆನು. ಹೀಗೆ ನಿಜವಾಗಿಯೂ ತಾತ್ತ್ವಿಕ ದೃಷ್ಟಿಯಿಂದ ಹೇಳುವೆನು ।೨೪೪॥

ಯಾರು ಜಗತ್ತಿನ ಶುಭಾಶುಭ ಕರ್ಮಗಳನ್ನು ಬರೆಯುತ್ತಾರೆ. ಪ್ರಾಣಿಗಳ ಮನಸ್ಸಿನ ಮತ್ತು ಶರೀರದ ಕರ್ಮಗಳ ಶೋಧನೆ ಮಾಡುತ್ತಾರೆ ಮತ್ತು ಕರ್ಮಾನು ಸಾರವಾಗಿ ಭೋಗದ ಫಲವನ್ನು ಕೊಡುತ್ತಾರೆ ।೨೪೫॥

ತಯಾ ನಿಯಮಿತಯಾಮಾಜೀ ಯಮು । ಜೋ ಕರ್ಮಸಾಕ್ಷೀ ಧರ್ಮು । ತೋ ಮೀ ಮ್ಹಣೇ ಆತ್ಮಾರಾಮು । ರಮಾಪತೀ ।।೨೪೬।।

ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಮ್ ।
ಮೃಗಾಣಾಂ ಚ ಮೃಗೇಂದ್ರೋಽಹಮ್ ವೈನತೇಯಶ್ಚ ಪಕ್ಷಿಣಾಮ್ ।।೩೦।।

ಅಗಾ ದೈತ್ಯಾಂಚಿಯಾ ಕುಳೀ । ಪ್ರಹ್ಲಾದು ತೋ ಮೀ ನ್ಯಾಹಾಳೀ । ಮ್ಹಣೌನಿ ದೈತ್ಯಭಾವಾದಿ ಮೇಳೀ । ಲಿಂಪೇಚಿ ನಾ ।।೨೪೭।। ಪೈ ಕಳಿತಯಾ ಮಾಜೀ ಮಹಾಕಾಳು । ತೋ ಮೀ ಮ್ಹಣೇ ಗೋಪಾಳು । ಶ್ವಾಪದಾಮಾಜೀ ಶಾರ್ದೂಳು । ತೋ ಮೀ ಜಾಣ ।।೨೪೮।। ಪಕ್ಷಿಜಾತಿಮಾಝಾರೀ । ಗರುಡ ತೋ ಮೀ ಅವಧಾರೀ । ಯಾಲಾಗೀ ಜೋ ಪಾಠೀವರೀ । ವಾಹೋ ಶಕೇ ಮಾತೇ ।।೨೪೯।।

ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಮ್ ।
ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ।।೩೧।।

ಪೃಥ್ವೀಚಿಯಾ ಪೈಸಾರಾ । ಮಾಜೀ ಘಡೀ ನ ಲಗತಾ ಧನುರ್ಧರಾ । ಏಕೇಚಿ ಉಡ್ಡಾಣೇ ಸಾತಾಂಹೀ ಸಾಗರಾ । ಪ್ರದಕ್ಷಿಣಾ ಕೀಜೇ ।।೨೫೦।। ತಯಾ ವಹಿಲಿಯಾ ಗತಿಮಂತಾ । ಆಂತ ಪವನು ತೋ ಮೀ ಪಂಡುಸುತಾ । ಶಸ್ತ್ರಧರಾ ಸಮಸ್ತಾ । ಮಾಜೀ ಶ್ರೀರಾಮ ತೋ ಮೀ ।।೨೫೧।। ಜೇಣೇ ಸಾಂಕಡಲಿಯಾ ಧರ್ಮಾಚೇ ಕೈವಾರೇ । ಆಪಣಪಯಾ ಧನುಷ್ಯ ಕರೂನಿ ದುಸರೇ । ವಿಜಯ ಲಕ್ಷ್ಮಿಯೇ ಏಕ ಮೋಹರೇ ।ಕೇಲೇ ತ್ರೇತೀ ।।೨೫೨।। ಪಾಠೀ ಉಭೇ ಠಾಕೂನಿ ಸುವೇಳೀ । ಪ್ರತಾಪಲಂಕೇಶ್ವರಾಚೀ ಸಿಸಾಳಿ । ಗಗನೀ ಉದೋ ಮ್ಹಣತಯಾ ಹಸ್ತಬಳೀ । ದಿಧಲೀ ಭೂತಾ ।।೨೫೩।। ಜೇಣೇ ದೇವಾಂಚಾ ಮಾನು ಗಿಂವಸಿಲಾ । ಧರ್ಮಾಸಿ ಜೀರ್ಣೋದ್ಧಾರು ಕೇಲಾ । ಸೂರ್ಯವಂಶೀ ಉದೇಲಾ । ಸೂರ್ಯ ಜೋ ಕಾ ।।೨೫೪।। ತೋ ಹಾತೀಯೆರುಪರಜಿತಯಾ ಆಂತು । ರಾಮಚಂದ್ರ ಮೀ ಜಾನಕೀಕಾಂತು । ಮಕರ ಮೀ ಪುಚ್ಛವಂತು । ಜಳಚರಾಮಾಜೀ ।।೨೫೫।। ಪೈ ಸಮಸ್ತಾಂಹೀ ವೋಘಾ । ಮಧ್ಯೆ ಜೇ ಭಗೀರಥೇ ಆಣಿತಾ ಗಂಗಾ । ಜನ್ಹೂನೇ ಗಿಳಿಲೀ ಮಗ ಜಂಘಾ । ಫಾಡೂನಿ ದಿಧಲೀ ।।೨೫೬।। ತೇ ತ್ರಿಭುನೈಕಸರಿತಾ । ಜಾನ್ಹವೀ ಮೀ ಪಂಡುಸುತಾ । ಜಳಪ್ರವಾಹಾ ಸಮಸ್ತಾ । ಮಾಝಾರೀ ಜಾಣೇ ।।೨೫೭।। ಐಸೇನಿ ವೇಗಳಾಲಾ ಸೃಷ್ಟೀ ಪೈಕೀ । ವಿಭೂತೀ ನಾಮ ಸುತಾ ಏಕೇಕೀ । ಸಗಳೇನ ಜನ್ಮ ಸಹಸ್ರೇ ಅವಲೋಕೀ । ಅರ್ಧ್ಯಾ ನವ್ಹತೀ ।।೨೫೮।।

ಈ ನಿಯಮಗಳನ್ನು ಮಾಡುವುದರಲ್ಲಿ ಪ್ರಾಣಿಗಳ ಕರ್ಮದ ಸಾಕ್ಷಿ ಭೂತನಾದ ಯಮಧರ್ಮನು ನಾನಾಗಿರುವೆನು ಎಂದು ರಮಾಪತಿಯಾದ ಆತ್ಮಾರಾಮನು ಹೇಳಿದನು ॥೨೪೬॥

ಶ್ಲೋಕಾರ್ಥ :- ದೈತ್ಯರಲ್ಲಿ ಪ್ರಹ್ಲಾದನು ನಾನು, ಲೆಕ್ಕ ಮಾಡುವವರಲ್ಲಿ ಕಾಲ ಪುರುಷನು ನಾನು, ಮೃಗಗಳಲ್ಲಿ ಸಿಂಹನು ನಾನು, ಪಕ್ಷಿಗಳಲ್ಲಿ ಗರುಡನು ನಾನು ॥೩೦॥

ಅರೇ, ದೈತ್ಯಕುಲದಲ್ಲಿ ಜನಿಸಿದ ಪ್ರಹ್ಲಾದ ದೈತ್ಯನು ನಾನು ಎಂದು ಹೀಗೆ ತಿಳಿ, ಆದ್ದರಿಂದಲೇ ಆತನು ದೈತ್ಯ ಸ್ವಭಾವದಿಂದ ಲಿಪ್ತನಾಗಲಿಲ್ಲ ॥೨೪೭॥

ಶ್ರೀಗೋಪಾಲಕೃಷ್ಣನು ಹೇಳುತ್ತಾನೆ:- ನಾಶ ಮಾಡುವುದರಲ್ಲಿ ಯಾವ ಮಹಾಕಾಲನು ನಾನಾಗಿರುವೆನು ಮತ್ತು ಎಲ್ಲ ಪಶುಗಳಲ್ಲಿ ಪರಾಕ್ರಮಿಯಾದ ಸಿಂಹವು ನಾನಾಗಿರುವೆನೆಂದು ತಿಳಿ ॥೨೪೮॥

ಅರ್ಜುನಾ ಕೇಳು, ಎಲ್ಲ ಪಕ್ಷಿಗಳಲ್ಲಿ ಗರುಡ ಪಕ್ಷಿಯು ನಾನು. ಆದ್ದರಿಂದಲೇ ಆತನು ನನ್ನನ್ನು ಬೆನ್ನಿನ ಮೇಲೆ ಹೊರುವವನಾಗಿರುವನು ॥೨೪೯॥

ಶ್ಲೋಕಾರ್ಥ :- ಪಾವಕರಲ್ಲಿ ಪವನವು ನಾನು, ಶಸ್ತ್ರಧಾರಿಗಳಲ್ಲಿ ರಾಮನು ನಾನು, ಜಲಜಂತುಗಳಲ್ಲಿ ಮೊಸಳೆಯು ನಾನು, ನದಿಗಳಲ್ಲಿ ನಾನು ಗಂಗಾನದಿ ॥೩೧॥

ಹೇ ಧನುರ್ಧರನೇ, ಈ ಪೃಥ್ವಿಯನ್ನು ಸುತ್ತಲು ಒಂದು ಘಳಿಗೆ ಸಹ ಹಿಡಿಯದೇ ಸುತ್ತುವ ಮತ್ತು ಒಂದೇ ಹಾರಿಕೆಯಲ್ಲಿ ಏಳು ಸಮುದ್ರವನ್ನು ಪ್ರದಕ್ಷಿಣೆ ಮಾಡುವ ॥೨೫೦॥

ಇಂತಹ ವೇಗವಂತರಲ್ಲಿ ಶ್ರೇಷ್ಠವಾದ ವಾಯು ನಾನು ಮತ್ತು ಅರ್ಜುನಾ, ಸರ್ವಶಸ್ತ್ರಧಾರಿಗಳಲ್ಲಿ ಶ್ರೀರಾಮನು ನಾನು ॥೨೫೧॥

ಶ್ರೀರಾಮನು ತ್ರೇತಾಯುಗದಲ್ಲಿ ಸಂಕಟದಲ್ಲಿರುವ ಧರ್ಮದ ರಕ್ಷಣೆಗಾಗಿ ತನ್ನ ಪ್ರತಿಸ್ವರೂಪವೇ ಧನುಷ್ಯವನ್ನಾಗಿ ಮಾಡಿಕೊಂಡು ವಿಜಯಶ್ರೀಗೆ ತನ್ನ ಹೊರತು ಬೇರೆ ಮಾರ್ಗವೇ ಇಡಲಿಲ್ಲ ॥೨೫೨॥

ತದನಂತರ ಸುವೇಲಾ ಎಂಬ ಪರ್ವತದ ಮೇಲೆ ನಿಂತು ಲಂಕಾಧೀಶ ರಾವಣನ ಮಸ್ತಕಗಳನ್ನು ಗಗನದಲ್ಲಿ ಉದೋ ಉದೋ ಎಂದು ಕಿರಿಚುವ ಭೂತಗಳಿಗೆ ಬಲಿಕೊಟ್ಟನು ॥೨೫೩॥

ಆ ರಾಮನು ದೇವತೆಗಳಿಗೆ ಗೌರವವನ್ನು ಪ್ರಾಪ್ತ ಮಾಡಿಕೊಟ್ಟನು. ಧರ್ಮದ ಜೀರ್ಣೋದ್ಧಾರ ಮಾಡಿದನು ಮತ್ತು ಸೂರ್ಯವಂಶದಲ್ಲಿ ಕೇವಲ ಪ್ರತಿ ಸೂರ್ಯನೇ ಉದಯಿಸಿದನು ॥೨೫೪॥

ಹೀಗೆ ಶಸ್ತ್ರಪಾಣಿಗಳವರಲ್ಲಿ ಸೀತಾಪತಿ ಶ್ರೀರಾಮಚಂದ್ರನು ನಾನು ಮತ್ತು ಜಲಚರಗಳಲ್ಲಿ ಬಾಲವಿರುವ (ಮೊಸಳೆ) ಮಕರನು ನಾನು ॥೨೫೫॥

ಹರಿಯುವ ಸರ್ವ ನದಿಗಳಲ್ಲಿ ಯಾವ ಗಂಗೆಯನ್ನು ಭಗೀರಥನು ತರುತ್ತಿರಲು ಜಹ್ನು ಋಷಿಯು ಆಕೆಯನ್ನು ನುಂಗಿದನು. ಬಳಿಕ ತನ್ನ ತೊಡೆಯನ್ನು ಸೀಳಿ ಆಕೆಗೆ ಮಾರ್ಗವನ್ನು ಕೊಟ್ಟನು ॥೨೫೬॥

ಆಕೆ ತ್ರೈಲೋಕ್ಯದಲ್ಲಿನ ಎಲ್ಲ ನದಿಗಳಲ್ಲಿ ಮುಖ್ಯವಾಗಿರುವ ಜಾಹ್ನವೀ ನಾನು, ಹೀಗೆ ಅರ್ಜುನಾ ನೀನು ತಿಳಿದುಕೊ ॥೨೫೭॥

ಇಲ್ಲಿ ನೋಡು, ಈ ಪ್ರಕಾರವಾಗಿ ಸೃಷ್ಟಿಯೊಳಗಿನ ನನ್ನ ಒಂದೊಂದು ವಿವಿಧ ವಿಭೂತಿಗಳ ವರ್ಣನೆ ಮಾಡಲಾರಂಭಿಸಿದರೆ, ಸಾವಿರಜನ್ಮದಲ್ಲಿಯೂ ಅರ್ಧ ವಿಭೂತಿಗಳ ವರ್ಣನೆ ಸಹ ಆಗುವುದಿಲ್ಲ ॥೨೫೮॥

ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ ।
ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್ ॥೩೨॥

ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಃ ಸಾಮಾಸಿಕಸ್ಯ ಚ ।
ಅಹಮೇವಾಕ್ಷಯಃ ಕಾಲೋ ಧಾತಾಽಹಂ ವಿಶ್ವತೋಮುಖಃ ॥೩೩॥

ಜೈಸೀ ಅವಘೀಂಚಿ ನಕ್ಷತ್ರೇ ವೇಂಚಾವೀ । ಐಸೀ ಚಾಡ ಉಪಜೇಲ ಜೈ ಜೀವೀ । ತೈ ಗಗನಾಚಿ ಬಾಂಧಾವೀ । ಲೋಥ ಜೇವೀ ॥೨೭೯॥ ಕಾ ಪೃಥ್ವೀಯೇ ಪರಮಾಣೂಂಚಾ ಉಗಾಣಾ ಘ್ಯಾವಾ । ತರಿ ಭೂಗೋಲುಚಿ ಕಾಖೇ ಸುವಾವಾ । ತೈಸಾ ವಿಸ್ತಾರು ಮಾಝಾ ಪಹಾವಾ । ತರಿ ಜಾಣಾವೇ ಮಾತೇ ॥೨೮೦॥ ಜೈಸೇ.ಶಾಖಾಂಸೀ ಫೂಲ ಫಳ । ಏಕಿಹೇಳಾ ವೇಟಾಳೂ ಮ್ಹಣಿಜೇ ಸಕಳ । ತರೀ ಉಪಡೂನಿಯಾ ಮೂಳ । ಜೇವೀ ಹಾತೀ ಘೇಪೇ ॥೨೮೧॥ ತೇವೀ ಮಾಝೇ ವಿಭೂತಿವಿಶೇಷ । ಜರೀ ಜಾಣೋ ಪಾಹಿಜೇತೀ ಅಶೇಷ । ತರೀ ಸ್ವರೂಪ ಏಕ ನಿರ್ದೋಷ । ಜಾಣಿಜೇ ಮಾಝೇ ॥೨೮೨॥ ಏರ್ಹವೀ ವೇಗಳಾಲಿಯಾ ವಿಭೂತೀ । ಕಾಯಿಏಕ ಪರಿಸಸೀ ಕಿತೀ । ಮ್ಹಣೌನಿ ಏಕಿಹೇಳಾ ಮಹಾ ಮತೀ । ಸರ್ವ ಮೀ ಜಾಣ ॥೨೮೩॥ ಮೀ ಆಘವಿಯೇಚಿ ಸೃಷ್ಟೀ । ಆದಿಮಧ್ಯಾಂತೀ ಕಿರೀಟೀ । ಓತಪ್ರೋತ ಪಟೀ । ತಂತು ಜೇವೀ ॥೨೮೪॥ ಐಸಿಯಾ ವ್ಯಾಪಕಾ ಮಾತೇ ಜೈ ಜಾಣಾವೇ । ತೈ ವಿಭೂತಿಭೇದೇ ಕಾಯ ಕರಾವೇ । ಪರೀ ಹೇ ತುಝೀ ಯೋಗ್ಯತಾ ನವ್ಹೇ । ಮ್ಹಣೌನಿ ಅಸೋ ॥೨೮೫॥ ಕಾ ಜೇ ತುವಾ ಪುಸಿಲಿಯಾ ವಿಭೂತೀ । ಮ್ಹಣೌನಿ ತಿಯಾ ಆಇಕ ಸುಭದ್ರಾಪ್ರತೀ । ತರೀ ವಿದ್ಯಾಮಾಜೀ ಪ್ರಸ್ತುತೀ । ಅಧ್ಯಾತ್ಮವಿದ್ಯಾ ತೇಮೀ ॥೨೮೬॥ ಅಗಾ ಬೋಲತಯಾಂಚಿಯಾ ಠಾಯೀ । ವಾದು ತೋ ಮೀ ಪಾಹೀ । ಜೋ ಸಕಲಶಾಸ್ತ್ರ ಸಂಮತೆ ಕಹೀ । ಸರೇಚಿನಾ ॥೨೮೭॥ ಜೋ ನಿರ್ವಚೂಜಾತಾ ವಾಢೇ । ಆಇಕತಯಾ ಉತ್ಪ್ರೇಕ್ಷೆ ಸಳು ಚಢೇ । ಜಯಾವರೀ ಬೋಲತಯಾಂಚಿ ಗೋಡೇ । ಬೋಲಣೇ ಹೋತೀ ॥೨೮೮॥ ಐಸಾ ಪ್ರತಿಪಾದನಾಮಾಜೀ ವಾದು । ತೋ ಮೀ ಮ್ಹಣೇ ಗೋವಿಂದು । ಅಕ್ಷರಾಮಾಜೀ ವಿಶದು । ಅಕಾರು ತೋ ಮೀ ॥೨೮೯॥ ಪೈ ಗಾ ಸಮಾಸಾಮಾಝಾರೀ । ದ್ವಂದ್ವ ತೋ ಮೀ ಅವಧಾರೀ । ಮಶಕಾಲಾಗೋನಿ ಬ್ರಹ್ಮಾವೇರೀ । ಗ್ರಾಸಿತಾ ತೋ ಮೀ ॥೨೯೦॥ ಮೇರುಮಂದಾರಾದಿಕೀ ಸರ್ವೀ । ಸಹಿತ ಪೃಥ್ವೀತೇ ವಿರವೀ । ಜೋ ಏಕಾರ್ಣವಾತೇಹೀ ಜಿರವೀ । ಜೇಥೀಂಚಾ ತೇಥ ॥೨೯೧॥

ಶ್ಲೋಕಾರ್ಥ :- ಅರ್ಜುನಾ! ಸೃಷ್ಟಿಯ ಆದಿ ಮಧ್ಯಾಂತರಗಳು ನಾನು, ವಾದಿಸುವವರಲ್ಲಿ ವಾದ ಶಕ್ತಿಯು ನಾನು, ವಿದ್ಯೆಗಳಲ್ಲಿ ಅಧ್ಯಾತ್ಮ ವಿದ್ಯೆಯು ನಾನು ।೩೨॥

ಶ್ಲೋಕಾರ್ಥ :- ಅಕ್ಷರಗಳಲ್ಲಿ ''ಅ'' ಕಾರವು ನಾನು. ಸಮಾಸಗಳಲ್ಲಿ ದ್ವಂದ್ವ ಸಮಾಸವು ನಾನು, ನಾಶವಾಗದ ಕಾಲ ನಾನು,ಸರ್ವಭರ್ತನು, ಸರ್ವ ವ್ಯಾಪಕನು ನಾನು ।೩೩॥

ಎಲ್ಲ ನಕ್ಷತ್ರಗಳನ್ನು ಒಂದೆಡೆಗೆ ಸಂಗ್ರಹಿಸಬೇಕೆಂಬ ಬಯಕೆ ಉಂಟಾದರೆ, ಆಕಾಶವನ್ನೇ ಗಂಟು ಕಟ್ಟಿದರೆ ಎಲ್ಲವೂ ಕೈಗೆ ಸಿಗುವುವು ।೨೫೯॥

ಅಥವಾ ಪೃಥ್ವಿಯ ಪರಮಾಣುಗಳ ಗಣಿತ ಮಾಡುವುದಾದರೆ ಭೂಗೋಳವನ್ನೇ ಬಗಲಿಗೆ ಹಾಕಿಕೊಳ್ಳಬೇಕಾಗುವುದು. ಅದರಂತೆ ನನ್ನ ವಿಸ್ತಾರವನ್ನು ನೋಡ ಬೇಕಾದರೆ ನನ್ನನ್ನೇ ತಿಳಿದುಕೊಳ್ಳಬೇಕಾಗುವುದು ।೨೬೦॥

ಮರದ ಟೊಂಗೆ, ಹೂವು, ಹಣ್ಣು ಇತ್ಯಾದಿ ಎಲ್ಲವನ್ನೂ ಒಮ್ಮೆಲೇ ಸಿಗಬೇಕೆಂಬ ಬಯಕೆಯಾದರೆ ಆ ಮರವನ್ನು ಬೇರುಸಹಿತ ಕಿತ್ತುಕೊಳ್ಳಬೇಕಾಗುವುದು ।೨೬೧॥

ಅದರಂತೆ ನನ್ನ ಎಲ್ಲ ವಿಭೂತಿಗಳನ್ನು ತಿಳಿಯಬೇಕೆಂಬ ಇಚ್ಛೆ ಉಂಟಾದಲ್ಲಿ, ನನ್ನ ನಿರ್ದೋಷವಾದ (ಉಪಾಧಿ ರಹಿತ) ಸ್ವರೂಪವನ್ನು ತಿಳಿದುಕೊಳ್ಳಬೇಕು ।೨೬೨॥

ಇಲ್ಲದಿದ್ದರೆ ಅರ್ಜುನಾ, ನನ್ನ ಬೇರೆ ಬೇರೆ ವಿಭೂತಿಗಳನ್ನು ಎಷ್ಟೆಂದು ಕೇಳುವಿ? ಆದ್ದರಿಂದ ಒಂದು ಸಲ ಎಲ್ಲೆಲ್ಲಿಯೂ ನಾನೇ ಇರುವೆ ಎಂದು ಹೀಗೆ ತಿಳಿದು ಬಿಡು ।೨೬೩॥

ಹೇ ಕಿರೀಟಿಯೇ, ನಾನು ಸರ್ವಸೃಷ್ಟಿಯ ಆದಿ, ಮಧ್ಯ ಮತ್ತು ಅಂತ್ಯನಿರುವೆನು. ಯಾವ ಪ್ರಕಾರವಾಗಿ ವಸ್ತ್ರದಲ್ಲಿ ನೂಲುಗಳು ಅಡ್ಡ- ಉದ್ದ ತುಂಬಿಕೊಂಡಿರುವುವೋ ।೨೬೪॥

ಅದರಂತೆ ಯಾವ ನಾನು ಸರ್ವವ್ಯಾಪಕನಾಗಿರುವೆನು. ಹೀಗೆ ತಿಳಿದುಕೊಂಡನಂತರ ನನ್ನ ವಿಭೂತಿಗಳನ್ನು ತಿಳಿದುಕೊಂಡು ಏನು ಮಾಡುವುದಿದೆ? ಆದರೆ, ಹಾಗೆ ಮಾಡುವ ಯೋಗ್ಯತೆ ನಿನಗೆ ಇಲ್ಲ. ಅದಿರಲಿ ।೨೬೫॥

ಹೇ ಸುಭದ್ರಾಪತಿಯೇ, ನೀನು ನನ್ನ ವಿಭೂತಿ ಯಾವುವು ಎಂದು ಕೇಳಿದ್ದಕ್ಕೆ ಹೇಳುವೆ ಕೇಳು. ಸರ್ವ ವಿದ್ಯೆಗಳಲ್ಲಿ ವೇದಾಂತ ವಿದ್ಯೆಯು ನಾನೇ ಇರುವೆನು ।೨೬೬॥

ಅರೇ ಅರ್ಜುನಾ, ಸರ್ವಶಾಸ್ತ್ರ ಸಿದ್ಧಾಂತಗಳ ಸಮ್ಮತಿಯಿಂದ ಮಾತನಾಡುವವರ ಮುಗಿಯದಂತಹ ''ವಾದ''ವು ನಾನಾಗಿರುವೆನು ।೨೬೭॥

ವಿಚಾರ ಮಾಡಹತ್ತಿದಾಗ ಯಾವುದು ಪ್ರತಿಯಾಗಿ ಬೆಳೆಯುವುದು, ಕೇಳುವವರ ತರ್ಕಕ್ಕೆ ಬಲ ಬರುವುದು, ಹೇಳುವವರ ಭಾಷಣವು ರುಚಿಕಟ್ಟಾಗುವುದು ।೨೬೮॥

ಇಂತಹ ಪ್ರತಿಪಾದನೆಗಳಲ್ಲಿ ನಡೆಯುವ ವಾದವು ನಾನು ಮತ್ತು ಅಕ್ಷರಗಳಲ್ಲಿ ಸ್ಪಷ್ಟವಾಗಿರುವ ಯಾವ ಅಕಾರವು ನಾನು ।೨೬೯॥

ಎಲ್ಲ ಸಮಾಸಗಳಲ್ಲಿ ದ್ವಂದ್ವ ಸಮಾಸವು ನಾನು ಎಂದು ತಿಳಿ ಮತ್ತು ಸೊಳ್ಳೆಯಿಂದ ಹಿಡಿದು ಬ್ರಹ್ಮದೇವನವರೆಗೂ ಎಲ್ಲರನ್ನೂ ಗ್ರಾಸ ಮಾಡುವ ಕಾಲನು ನಾನಾಗಿರುವೆನು ।೨೭೦॥

ಪ್ರಳಯಕಾಲದ ಜಲದಲ್ಲಿ ಮೇರು ಮಂದಾರ ಸಹಿತವಾದ ಸಮಗ್ರ ಪೃಥ್ವಿಯು ಕರಗಿ ಹೋಗುವುದು ।೨೭೧॥

ಜೋ ಪ್ರಳಯತೇಜಾ ದೇತಮಿಠೀ । ಸಗಳಿಯಾ ಪವನಾತೇ ಗಿಳೀ ಕಿರೀಟೀ । ಆಕಾಶ ಜಯಾಚಿಯಾ ಪೋಟೀ । ಸಾಮಾವಲೇ ।೨೭೨॥ ಐಸಾ ಅಪಾರ ಜೋ ಕಾಳು । ತೋ ಮೀ ಮ್ಹಣೇ ಲಕ್ಷ್ಮೀಲೀಳು । ಮಗ ಪುಢತೀ ಸೃಷ್ಟೀಚಾ ಮೇಳು । ಸೃಜಿತಾ ತೋ ಮೀ ।೨೭೩॥

ಮೃತ್ಯುಃ ಸರ್ವಹರಶ್ಚಾಹಮ್ ಉದ್ಭವಶ್ಚ ಭವಿಷ್ಯತಾಮ್ ।
ಕೀರ್ತಿಃ ಶ್ರೀರ್ವಾಕ್ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ ।೩೪॥

ಆಣಿ ಸೃಜಿಲಿಯಾ ಭೂತಾಂತೇ ಮೀಚಿ ಧರೀ । ಸಕಳಾ ಜೀವನಹೀ ಮೀಚಿ ಅವಧಾರೀ । ಶೇಖೀ ಸರ್ವಾಂತೇ ಯಾ ಸಂಹಾರೀ । ತೇವ್ಹಾ ಮೃತ್ಯುಹೀ ಮೀಚಿ ।೨೭೪॥ ಆತಾ ಸ್ತ್ರೀಗಣಾಂಚ್ಯಾ ಪೈಕೀ । ಮಾಝ್ಯಿಯಾ ವಿಭೂತೀ ಸಾತ ಆಣಿಕೀ । ತಿಯಾ ಐಕ ಕವತಿಕೀ । ಸಾಂಗೀಜತೀಲ ।೨೭೫॥ ತರೀ ನಿತ್ಯ ನವೀ ಜೇ ಕೀರ್ತಿ । ಅರ್ಜುನಾ ತೇ ಮಾಝೀ ಮೂರ್ತಿ । ಆಣಿ ಔದಾರ್ಯೇಸೀ ಜೇ ಸಂಪತ್ತೀ । ತೇಹೀ ಮೀಚಿ ಜಾಣೇ ।೨೭೬॥ ಆಣಿ ತೇ ಗಾ ಮೀ ವಾಚಾ । ಜೇ ಸುಖಾಸನೀ ನ್ಯಾಯಾಚಾ । ಆರುಢೋನಿ ವಿವೇಕಾಚಾ । ಮಾರ್ಗೀ ಚಾಲೇ ।೨೭೭॥ ದೇಖಿಲೇನಿ ಪದಾರ್ಥೇ । ಜೇ ಆಠವೂನಿ ದೇ ಮಾತೇ । ತೇ ಸ್ಮೃತಿಹೀ ಏಥೇ । ತ್ರಿಶುದ್ಧಿ ಮೀ ।೨೭೮॥ ಪೈ ಸ್ವಹಿತಾ ಅನುಯಾಯಿನೀ । ಮೇಧಾ ತೇ ಗಾ ಮೀ ಇಯೇ ಜನೀ । ಧೃತೀ ಮೀ ತ್ರಿಭುವನೀ । ಕ್ಷಮಾ ತೇ ಮೀ ।೨೭೯॥ ಏವಂ ನಾರೀಮಾಝಾರೀ । ಯಾ ಸಾತಹೀ ಶಕ್ತಿ ಮೀ ಅವಧಾರೀ । ಐಸೇ ಸಂಸಾರಗಜಕೇಸರೀ । ಮ್ಹಣತಾ ಜಾಹಲಾ ।೨೮೦॥

ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛಂದಸಾಮಹಮ್ ।
ಮಾಸಾನಾಂ ಮಾರ್ಗಶೀರ್ಷೋಽಹಂ ಋತೂನಾಂ ಕುಸುಮಾಕರಃ ।೩೫॥

ವೇದರಾಶೀಚಿಯಾ ಸಾಮಾ । ಆಂತ ಬೃಹತ್ಸಾಮ ಜೇ ಪ್ರಿಯೋತ್ತಮಾ । ತೇ ಮೀ ಮ್ಹಣೇ ರಮಾ ಪ್ರಾಣೇಶ್ವರು ।೨೮೧॥ ಗಾಯತ್ರೀಛಂದ ಜೇ ಮ್ಹಣಿಜೇ । ತೇ ಸಕಳಾ ಛಂದಾಮಾಜೀ ಮಾಝೇ । ಸ್ವರೂಪ ಹೇ ಜಾಣಿಜೇ । ನಿಭ್ರಾಂತ ತುವಾ ।೨೮೨॥ ಮಾಸಾಆಂತ ಮಾರ್ಗಶೀರು । ತೋ ಮೀ ಮ್ಹಣೇ ಶಾರ್ಙ್ಗಧರು । ಋತೂಮಾಜೀ ಕುಸುಮಾಕರು । ವಸಂತು ತೋ ಮೀ ।೨೮೩॥

ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ।
ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಮ್ ।೩೬॥

ಹೇ ಕಿರೀಟಿಯೇ, ಪ್ರಳಯಕಾಲದ ತೇಜಕ್ಕೆ ಯಾವುದು ತೆಕ್ಕೆ ಬೀಳುವುದೋ, ಎಲ್ಲ ಗಾಳಿಯನ್ನು ನುಂಗಿಬಿಡುವುದೋ ಮತ್ತು ಯಾರ ಹೊಟ್ಟೆಯಲ್ಲಿ ಆಕಾಶವು ಹಿಡಿಯುವುದೋ ।೨೭೨॥

ಅಂತಹ ಅಪರಿಮಿತ ಕಾಲನು ನಾನು. ಹೀಗೆ ಲಕ್ಷ್ಮೀಯಲ್ಲಿ ವಿಲಾಸ ಮಾಡುವ ಶ್ರೀಕೃಷ್ಣನು ಹೇಳಿದನು. ಆಗ ಪುನಃ ಹೇಳಿದನು :- ಸೃಷ್ಟಿಯ ಉತ್ಪನ್ನ ಕರ್ತನು ನಾನು ।೨೭೩॥

ಶ್ಲೋಕಾರ್ಥ :- ಸರ್ವ ಭಕ್ಷರಲ್ಲಿ ಮೃತ್ಯುವು ನಾನು, ಭವಿಷ್ಯದ ಉತ್ಪತ್ತಿಯು ನಾನು, ಸ್ತ್ರೀಯರಲ್ಲಿರುವ ಕೀರ್ತಿ, ಮಾಂಗಲ್ಯ, ಮಾತಿನ ಮಾಧುರ್ಯ, ಜ್ಞಪ್ತಿ, ಧಾರಣ, ಸಹನೆ, ಧೈರ್ಯ ಇವೆಲ್ಲವೂ ನಾನು ।೩೪॥

ಉತ್ಪನ್ನವಾದ ಪ್ರಾಣಿಮಾತ್ರರ ಧಾರಣೆಮಾಡುವವನು ನಾನೇ. ಎಲ್ಲರ ಜೀವನವು ನಾನೇ. ಕೊನೆಗೆ ಎಲ್ಲರ ಸಂಹಾರ ಮಾಡುವುದರಿಂದ ಮೃತ್ಯುವೂ ನಾನೇ. ಹೀಗೆ ತಿಳಿ ।೨೭೪॥

ಈಗ ಸ್ತ್ರೀ ಜಾತಿ ಸಂಬಂಧವಾಗಿ ನನ್ನ ಇನ್ನೂ ಏಳು ವಿಭೂತಿಗಳು ಇವೆ. ಅವುಗಳನ್ನು ಕೌತುಕವಾಗಿ ವರ್ಣಿಸುವೆ. ಅದನ್ನು ಕೇಳು ।೨೭೫॥

ಅರ್ಜುನಾ, ನಿತ್ಯನೂತನ ಕೀರ್ತಿಯು, ಅದು ನನ್ನದೇ ಮೂರ್ತಿಯು. ಔದಾರ್ಯಯುಕ್ತವಾದ ಯಾವ ಸಂಪತ್ತು ಅದು ಸಹ ನಾನೇ ಇರುವೆನೆಂದು ತಿಳಿ ।೨೭೬॥

ಮತ್ತು ನ್ಯಾಯದ ಸಿಂಹಾಸನದ ಮೇಲೆ ಕುಳಿತುಕೊಂಡು ವಿವೇಕದ ಮಾರ್ಗದಲ್ಲಿ ನಡೆಯುವ ಯಾವ ವಾಣಿಯು ಅದು ಸಹ ನಾನಾಗಿರುವೆನು ।೨೭೭॥

ಪದಾರ್ಥಗಳನ್ನು ನೋಡಿದಾಗ ಅದರ ಯೋಗದಿಂದ ನನ್ನ ನೆನಪು ಆಗುವುದು. ಆ ಸ್ಮರಣಶಕ್ತಿಯು ನಾನು. ಹೀಗೆ ನೀನು ನಿಶ್ಚಯವಾಗಿ ತಿಳಿದುಕೊ ।೨೭೮॥

ಇಹಲೋಕದಲ್ಲಿ ಸ್ವಹಿತಕ್ಕೆ ಅನುಕೂಲವಾಗಿರುವ ಯಾವ ಬುದ್ಧಿಯು ನಾನು ಮತ್ತು ತ್ರಿಭುವನದಲ್ಲಿ ಧೃತಿಯು ನಾನು ಮತ್ತು ಕ್ಷಮೆಯು ನಾನು ।೨೭೯॥

ಈ ಪ್ರಕಾರವಾಗಿ ಸ್ತ್ರೀ ಜಾತಿಯಲ್ಲಿ ಏಳು ಶಕ್ತಿಗಳು ಇರುವುವು. ಅವು ಎಲ್ಲವೂ ನಾನು ಇರುವೆನೆಂದು, ಸಂಸಾರರೂಪ ಗಜೇಂದ್ರನ ನಾಶಮಾಡುವುದರಲ್ಲಿ ಕೇವಲ ಸಿಂಹವೇ ಆಗಿರುವ ಶ್ರೀಕೃಷ್ಣನು ಹೇಳಿದನು ।೨೮೦॥

ಶ್ಲೋಕಾರ್ಥ :- ಸಾಮವೇದ ಶಾಖೆಗಳಲ್ಲಿ ಬೃಹತ್ಸಾಮವು ನಾನು. ಛಂದಸ್ಸುಗಳಲ್ಲಿ ಗಾಯತ್ರಿಯು ನಾನು. ಮಾಸಗಳಲ್ಲಿ ಮಾರ್ಗಶೀರ್ಷವು ನಾನು. ಋತುಗಳಲ್ಲಿ ವಸಂತ ಋತುವು ನಾನು ।೩೫॥

ಶ್ರೀ ರಮಾಪತಿಯು ಹೇಳುತ್ತಾನೆ:- ಹೇ ಮಿತ್ರ ಶ್ರೇಷ್ಠನೇ, ವೇದದಲ್ಲಿ ಇರುವ ಸಾಮವೇದದಲ್ಲಿ ''ಬೃಹತ್ಸಾಮ'' ಇರುವುದು ಅದು ನಾನು ।೨೮೧॥

ಎಲ್ಲ ಛಂದಸ್ಸುಗಳಲ್ಲಿ ಗಾಯತ್ರಿ ಎಂದು ಯಾವ ಛಂದಸ್ಸು ಇದೆಯೋ ಅದು ನನ್ನ ಸ್ವರೂಪವಾಗಿದೆ. ಹೀಗೆ ನೀನು ನಿಃಸಂಶಯವಾಗಿ ತಿಳಿ ।೨೮೨॥

ಶ್ರೀಕೃಷ್ಣನು ಹೇಳಿದನು:- ಸರ್ವ ಮಾಸಗಳಲ್ಲಿ ಮಾರ್ಗಶೀರ್ಷ ಮಾಸವು ಅದು ನಾನಾಗಿರುವೆ ಮತ್ತು ಋತುಗಳಲ್ಲಿ ಹೂವುಗಳ ವೃದ್ಧಿ ಮಾಡುವ ವಸಂತ ಋತು ಅದು ನಾನಾಗಿರುವೆ ।೨೮೩॥

ಶ್ಲೋಕಾರ್ಥ :- ಮೋಸ ಕೃತ್ಯಗಳಲ್ಲಿ ಜೂಜು ನಾನು, ತೇಜಶ್ಶಾಲಿಗಳಲ್ಲಿ ತೇಜಸ್ಸು ನಾನು. ಜಯವು ನಾನು, ಪ್ರಯತ್ನವು ನಾನು, ಸಾತ್ವಿಕರಲ್ಲಿಯ ಸತ್ವಗುಣ ನಾನು ।೩೬॥

ವೃಷ್ಣೀನಾಂ ವಾಸುದೇವೋಽಸ್ಮಿ ಪಾಂಡವಾನಾಂ ಧನಂಜಯಃ ।
ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ ॥೩೭॥

ಭಳಿತಯಾ ವಿಂದಾಣಾ । ಮಾಜೀ ಜೂ ತೇ ಮೀ ವಿಚಕ್ಷಣಾ । ಮ್ಹಣೌನಿ ಚೋಹಟಾ ಚೋರೀ ಪರೀ ಕವಣಾ । ನಿವಾರೂ ನ ಯೇ ॥೨೮೪॥ ಅಗಾ ಅಶೇಷಾಂಹೀ ತೇಜಸಾ । ಆಂತ ತೇಜ ತೇ ಮೀ ಭರಂವಸಾ । ವಿಜಯೋ ಮೀ ಕಾರ್ಯೋದ್ದೇಶಾ । ಸಕಳಾಮಾಜೀ ॥೨೮೫॥ ಜೇಣೇ ಚೋಖಾಳತ ದಿಸೇ ನ್ಯಾಯ । ತೋ ವ್ಯವಸಾಯಾಂತ ವ್ಯವಸಾಯ । ಮಾರ್ಝೀ ಸ್ವರೂಪ ಹೇ ರಾಯ । ಸುರಾಂಚಾ ಮ್ಹಣೇ ॥೨೮೬॥ ಸತ್ತ್ವಥಿಲಿಯಾಆಂತು । ಸತ್ತ್ವ ಮೀ ಮ್ಹಣೇ ಅನಂತು । ಯಾದವಾ ಮಾಜೀ ಶ್ರೀಮಂತು । ತೋಚಿ ತೋ ಮೀ ॥೨೮೭॥ ಜೋ ದೇವಕೀವಸುದೇವಾಸ್ತವ ಜಾಹಲಾ । ಕುಮಾರೀಸಾಠೀ ಗೋಕುಳೀ ಗೇಲಾ । ತೋ ಮೀ ಪ್ರಾಣಾಸಕಟ ಪಿಯಾಲಾ । ಪೂತನೇತೇ ॥೨೮೮॥ ನುಘಡತಾ ಬಾಳ ಪಣಾಚೀ ಫುಲೀ । ಜೇಣೇ ಮಿಯಾ ಅದಾನವೀ ಸೃಷ್ಟಿ ಕೇಲೀ । ಕರೀ ಗಿರೀ ಧರೂನಿ ಉಮಾಣಿಲೀ । ಮಹೇಂದ್ರಮಹಿಮಾ ॥೨೮೯॥ ಕಾಲಿಂದೀಚೇ ಹೃದಯಶಲ್ಯ ಫೇಡಿಲೇ । ಜೇಣೇ ಮಿಯಾ ಜಳತ ಗೋಕುಳ ರಾಖಿಲೇ । ವಾಸುರುವಾಸಾಠೀ ಲಾವಿಲೇ । ವಿರಂಚೀಸ ಪಿಸೇ ॥೨೯೦॥ ಪ್ರಥಮದಶೇಚಿಯೇ ಪಹಾಂಟೇ । ಮಾಜೀ ಕಂಸಾಐಶೀ ಅಚಾಟೇ । ಮಹಾಥೇಂಡೀ ಅವಚಟೇ । ಲೀಳಾಚೀ ನಾಸಿಲೀ ॥೨೯೧॥ ಹೇ ಕಾಯ ಕಿತೀಏಕ ಸಾಂಗಾವೇ । ತುವಾಂಹೀ ದೇಖಿಲೇ ಐಕೀಲೇ ಅಸೇ ಆಘವೇ । ತರಿ ಯಾದವಾಮಾಜೀ ಜಾಣಾವೇ । ಹೇಂಚಿ ಸ್ವರೂಪ ಮಾರ್ಝೀ ॥೨೯೨॥ ಆಣಿ ಸೋಮವಂಶೀ ತುಮ್ಹಾ ಪಾಂಡವಾ । ಮಾಜೀ ಅರ್ಜುನ ತೋ ಮೀ ಜಾಣಾವಾ । ಮ್ಹಣೌನಿ ಏಕಮೇಕಾಂಚಿಯಾ ಪ್ರೇಮಭಾವಾ । ವಿಘಡು ನ ಪಡೇ ॥೨೯೩॥ ಸಂನ್ಯಾಸೀ ತುವಾ ಹೋಊನಿ ಜನೀ । ಚೋರೂನಿ ನೇಲೀ ಮಾರ್ಝೀ ಭಗಿನೀ । ತರ್ಹೀ ವಿಕಲ್ಪು ನುಪಜೇ ಮನೀ । ಮೀ ತೂ ದೋನ್ಹೀ ಸ್ವರೂಪ ಏಕ ॥೨೯೪॥ ಮುನೀಆಂತ ವ್ಯಾಸದೇವೋ । ತೋ ಮೀ ಮ್ಹಣೇ ಯಾದವರಾವೋ । ಕವೀಶ್ವರಾ ಮಾಜೀ ಧೈರ್ಯಾಠಾವೋ । ಉಶನಾಚಾರ್ಯ ತೋ ಮೀ ॥೨೯೫॥

ದಂಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್ ।
ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಮ್ ॥೩೮॥

ಶ್ಲೋಕಾರ್ಥ :- ಯಾದವರಲ್ಲಿ ವಾಸುದೇವನು ನಾನು, ಪಾಂಡವರಲ್ಲಿ ಅರ್ಜುನನು ನಾನು, ಮುನಿಗಳಲ್ಲಿ ವ್ಯಾಸನು ನಾನು, ಕವಿಗಳಲ್ಲಿ ಶುಕ್ರಾಚಾರ್ಯನು ನಾನು ।೩೭॥

ಹೇ ಬುದ್ಧಿವಂತ ಅರ್ಜುನನೇ, ವಂಚಿಸುವ ಪ್ರಕಾರಗಳಲ್ಲಿ ಜೂಜು ನಾನಾಗಿರುವೆನು. ಆದ್ದರಿಂದಲೇ ನಾಲ್ಕು ದಾರಿ ಕೂಡಿದ ಕೂಟದಲ್ಲಿ ಜೂಜು ರೂಪದ ಕಳ್ಳತನ ನಡೆದರೂ ಯಾರಿಂದಲೂ ನಿವಾರಿಸಲು ಬರುವುದಿಲ್ಲ ।೨೮೪॥

ಅರೇ, ಸರ್ವ ಸತೇಜ ಪದಾರ್ಥಗಳಲ್ಲಿ ತೇಜವು ನಾನು ಎಂದು ನಿಶ್ಚಯವಾಗಿ ತಿಳಿ ಮತ್ತು ಆರಂಭಿಸಿದ ಸರ್ವ ಕಾರ್ಯದ ಇಚ್ಛೆಯಾಗಿರುವ ಜಯವು ನಾನೇ ।೨೮೫॥

ಎಲ್ಲ ವ್ಯವಹಾರಗಳಲ್ಲಿ ನೀತಿ ಬಿಡದ ಉತ್ತಮ ವ್ಯವಹಾರವು ಅದು ನನ್ನ ಸ್ವರೂಪದ್ದಾಗಿದೆ ಎಂದು ದೇವಶ್ರೇಷ್ಠನಾದ ಶ್ರೀಕೃಷ್ಣನು ಹೇಳಿದನು ।೨೮೬॥

ಸಾತ್ತ್ವಿಕರಲ್ಲಿಯ ಸತ್ತ್ವಗುಣವು ನಾನು ಮತ್ತು ಯಾದವರಲ್ಲಿ ಶ್ರೀಮಂತನಾದ ಕೃಷ್ಣನು ನಾನು ಎಂದು ಶ್ರೀ ಅನಂತನು ಹೇಳಿದನು ।೨೮೭॥

ದೇವಕಿ ವಸುದೇವ ಇವರಿಗಾಗಿ ಜನ್ಮ ಧರಿಸಿ ಯಶೋಧೆಯ ಯೋಗಮಾಯೆ ಹೆಣ್ಣು ಕೂಸು ಬದಲಿಸಿ ಗೋಕುಲಕ್ಕೆ ಹೋಗಿ ಮತ್ತು ಸ್ತನಪಾನ ನಿಮಿತ್ತದಿಂದ ಪೂತನಾ ರಾಕ್ಷಸಿಯನ್ನು ಕೊಂದವನು ನಾನು ।೨೮೮॥

ಬಾಲ್ಯತನವು ಮುಗಿಯುವುದರೊಳಗೆಯೇ ಪೃಥ್ವಿಯನ್ನು ದೈತ್ಯರಹಿತನನ್ನಾಗಿ ಮಾಡಿದವನು ಮತ್ತು ಕೈಯಲ್ಲಿ ಗೋವರ್ಧನ ಪರ್ವತವನ್ನು ಎತ್ತಿ ಹಿಡಿದು ಇಂದ್ರನ ಗರ್ವವನ್ನು ಹರಣ ಮಾಡಿದವನು ।೨೮೯॥

ಯಮುನಾ ನದಿಯೊಳಗಿನ ಕಾಳಿಂಗ ಸರ್ಪದ ಮರ್ದನ ಮಾಡಿ ಅದರ ಹೃದಯದ ದುಃಖ ದೂರ ಮಾಡಿದವನು, ಅಗ್ನಿಯನ್ನು ಭಕ್ಷಣ ಮಾಡಿ ಉರಿಯುವ ಗೋಕುಲವನ್ನು ರಕ್ಷಿಸಿದವನು ಮತ್ತು ಬ್ರಹ್ಮದೇವನು ಗೋಪಾಲಕರನ್ನು, ಆಕಳಗಳನ್ನು ಹರಣ ಮಾಡಿದಾಗ ಪ್ರತಿ ಸೃಷ್ಟಿ ಮಾಡಿ ಆತನಿಗೆ ಭ್ರಮೆ ಹಿಡಿಸಿದವನು ।೨೯೦॥

ಬಾಲ್ಯದ ಆರಂಭದಲ್ಲಿಯೇ ಕಂಸ ಚಾಣೂರಾದಿಕ ಮಹಾ ಮಹಾ ವೀರರನ್ನು ಸಹಜವಾಗಿ ಕೊಂದವನು ।೨೯೧॥

ಹೀಗೆ ನಿನಗೆ ಎಷ್ಟೆಂದು ಹೇಳಲಿ? ನೀನು ಸಹ ಇಂತಹ ಪ್ರಸಂಗಗಳನ್ನು ಸಾಕಷ್ಟು ಕೇಳಿರುವಿ, ನೋಡಿರುವಿ, ಆದ್ದರಿಂದ ಯಾದವರಲ್ಲಿ ಇಂತಹ ಕೃತಿ ಯಾರದಿದೆಯೋ, ಅದೇ ಸ್ವರೂಪವು ನನ್ನದಾಗಿರುವುದು ।೨೯೨॥

ಮತ್ತು ಸೋಮವಂಶದಲ್ಲಿ ನಿಮ್ಮ ಪಾಂಡವರಲ್ಲಿ ಅರ್ಜುನನು ನಾನು, ಹೀಗೆ ತಿಳಿ. ಆದ್ದರಿಂದಲೇ ನನ್ನ ಮತ್ತು ನಿನ್ನ ಪ್ರೇಮಭಾವದಲ್ಲಿ ಅಂತರವಾಗುವುದಿಲ್ಲ ।೨೯೩॥

ನೀನು ಸಂನ್ಯಾಸಿಯಾಗಿ ನನ್ನ ತಂಗಿಯಾದ ಸುಭದ್ರಾಳನ್ನು ಹರಣ ಮಾಡಿದಾಗ ನಿನಗಾಗಿ ನನ್ನ ಮನದಲ್ಲಿ ವಿಕಲ್ಪ ಹುಟ್ಟಲಿಲ್ಲ. ಕಾರಣ ನಿನ್ನ ನನ್ನ ಸ್ವರೂಪವು ಒಂದೇ ಇರುವುದು ।೨೯೪॥

ಎಲ್ಲ ಮುನಿಗಳಲ್ಲಿ ಶ್ರೇಷ್ಠನಾದ ವ್ಯಾಸಮುನಿಯು ನಾನು, ಮತ್ತು ಎಲ್ಲ ಕವಿಗಳಲ್ಲಿ ಶ್ರೇಷ್ಠನಾದ ಉಶನಾಚಾರ್ಯನು ನಾನು, ಹೀಗೆ ಯಾದವ ಶ್ರೇಷ್ಠನಾದ ಶ್ರೀಕೃಷ್ಣನು ಹೇಳಿದನು ।೨೯೫॥

ಶ್ಲೋಕಾರ್ಥ :- ಶಾಸಿಸುವವರಲ್ಲಿ ದಂಡನೀತಿಯು ನಾನು, ಜಯಾಭಿಲಾಷೆಯುಳ್ಳವರಲ್ಲಿ ರಾಜ ನೀತಿಯು ನಾನು, ಗೋಪ್ಯವಸ್ತುಗಳಲ್ಲಿ ಮೌನವು ನಾನು, ಜ್ಞಾನವಂತರಲ್ಲಿಯ ಜ್ಞಾನವು ನಾನು ।೩೮॥

ಅಗಾ ದಮಿತಯಾಮಾಝಾರೀ । ಅನಿವಾರ ದಂಡು ತೋ ಮೀ ಅವಧಾರೀ । ಜೋ ಮುಂಗಿಯೇಲಾಗೋನಿ ಬ್ರಹ್ಮಾವೇರಿ । ನಿಯಮಿತ ಪಾವೇ ।೨೯೬॥ ಪೈ ಸಾರಾಸಾರ ನಿರ್ಧಾರಿತಯಾ । ಧರ್ಮಜ್ಞಾನಾಚಾ ಪಕ್ಷು ಧರಿತಯಾ । ಸಕಳ ಶಾಸ್ತ್ರಾಮಾಜೀ ಯಯಾ । ನೀತಿಶಾಸ್ತ್ರ ತೇ ಮೀ ।೨೯೭॥ ಆಘವಿಯಾಚಿ ಗೂಢಾ । ಮಾಜೀ ಮೌನ ತೇ ಮೀ ಸುಹಾಡಾ । ಮ್ಹಣೌನಿ ಬೋಲತಯಾ ಪುಢಾ । ಸೃಷ್ಟಾಹೀ ನೇಣ ಹೋಯ ।೨೯೮॥ ಅಗಾ ಜ್ಞಾನಿಯಾಂಚಿಯಾ ಠಾಯೀ । ಜ್ಞಾನ ತೇ ಮೀ ಪಾಹೀ । ಆತಾ ಅಸೋ ಹೇ ಯಯಾ ಕಾಂಹೀ । ಪಾರ ನ ದೇಖೋ ।೨೯೯॥

ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ ।
ನ ತದಸ್ತಿ ವಿನಾ ಯತ್ ಸ್ಯಾತ್ ಮಯಾ ಭೂತಂ ಚರಾಚರಮ್ ।೩೯॥

ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ ।
ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ।೪೦॥

ಪೈ ಪರ್ಜನ್ಯಾಚಿಯಾ ಧಾರಾ । ವರೀ ಲೇಖ ಕರವೇಲ ಧನುರ್ಧರಾ । ಕಾ ಪೃಥ್ವೀಚಿಯಾ ತೃಣಾಂಕುರಾ । ಹೋಈಲ ಠೀ ।೩೦೦॥ ಪೈ ಮಹೋದಧೀಚಿಯಾ ತರಂಗಾ । ವ್ಯವಸ್ಥಾ ಧರೂ ನಯೇ ಜೇವೀ ಗಾ । ತೇವೀ ಮಾಝಿಯಾ ವಿಶೇಷ ಲಿಂಗಾ । ನಾಹೀ ಮಿತೀ ।೩೦೧॥ ಐಶಿಯಾಂಹೀ ಸಾತಪಾಂಚ ಪ್ರಧಾನಾ । ವಿಭೂತೀ ಸಾಂಗಿತಲಿಯಾ ತುಜ ಅರ್ಜುನಾ । ತೋ ಹಾ ಉದ್ದೇಶು ಜೋ ಗಾ ಮನಾ । ಆಹಾಚ ಗಮಲಾ ।೩೦೨॥ ಯೇರಾ ವಿಭೂತಿ ವಿಸ್ತಾರಾಂಸಿ ಕಾಂಹೀ ।ಏಥ ಸರ್ವಥಾ ಲೇಖ ನಾಹೀ । ಮ್ಹಣೌನಿ ಪರಿಸಸೀ ತೂ ಕಾಈ । ಆಮ್ಹೀ ಸಾಂಗೋ ಕಿತೀ ।೩೦೩॥ ಯಾಲಾಗೀ ಏಕಿ ಹೇಳಾ ತುಜ । ದಾಊ ಆತಾ ವರ್ಮ ನಿಜ । ತರೀ ಸರ್ವ ಭೂತಾಂಕುರೇ ಬೀಜ । ವಿರೂಢತ ಅಸೇ ತೇ ಮೀ ।೩೦೪॥ ಮ್ಹಣೌನಿ ಸಾನೇ ಥೋರ ನ ಮ್ಹಣಾವೇ । ಉಂಚ ನೀಚ ಭಾವ ಸಾಂಡಾವೇ । ಏಕ ಮೀಚಿ ಐಸೇ ಮಾನಾವೇ । ವಸ್ತುಜಾತಾತೇ ।೩೦೫॥ ತರೀ ಯಾವರೀ ಸಾಧಾರಣ । ಆಇಕ ಪಾ ಆಣಿಕಹೀ ಖೂಣ । ತರೀ ಅರ್ಜುನಾ ತೇ ತೂ ಜಾಣ । ವಿಭೂತೀ ಮಾಝೀ ।೩೦೬॥

ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತ್ವದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ।೪೧॥

ಅರೇ, ದಂಡ ಮಾಡುವ ರೀತಿಯು ಇರುವೆಯಿಂದ ಹಿಡಿದು ಬ್ರಹ್ಮದೇವನವರೆಗೆ ಎಲ್ಲರಿಗೂ ಸಮಾನವಾಗಿ ಪ್ರಾಪ್ತವಾಗುವುದು. ಇಂತಹ ಅನಿವಾರ್ಯ ದಂಡವು ನಾನಾಗಿರುವೆನು ।೨೯೬॥

ಸಾರಾಸಾರವಾಗಿ ವಿಚಾರ ಮಾಡಿ ಯಾವ ಶಾಸ್ತ್ರದಲ್ಲಿ ಧರ್ಮ ಜ್ಞಾನದ ಅನುಕರಣೆಯನ್ನು ಮಾಡಿರುವುದು. ಆ ಎಲ್ಲ ಶಾಸ್ತ್ರಗಳಲ್ಲಿ ನೀತಿ ಶಾಸ್ತ್ರವು ನಾನು ।೨೯೭॥

ಹೇ ಬಲಾಢ್ಯ ಅರ್ಜುನನೇ, ಎಲ್ಲ ಗುಹ್ಯಗಳಲ್ಲಿ ಮೌನವು ನಾನು. ಆದ್ದರಿಂದಲೇ ಮೌನ ಧರಿಸಿದವರ ಎದುರಿಗೆ ಬ್ರಹ್ಮದೇವನು ಸಹ ಅಜ್ಞಾನಿ ಎನಿಸುವನು ।೨೯೮॥

ಅರೇ, ಜ್ಞಾನಿಗಳವರಲ್ಲಿ ಇರುವ ಜ್ಞಾನವು ನಾನು ಎಂದು ಹೀಗೆ ತಿಳಿ. ಈಗ ವಿಭೂತಿ ವಿಸ್ತಾರವು ಇರಲಿ, ಏಕೆಂದರೆ ಏನು ಮಾಡಿದರೂ ಈ ವಿಭೂತಿಗಳ ಅಂತವು ಹತ್ತಲಾರದು ।೨೯೯॥

ಶ್ಲೋಕಾರ್ಥ :- ಅರ್ಜುನಾ! ಎಲ್ಲಾ ಭೂತಗಳಿಗೂ ನಾನೇ ಮೂಲ ಬೀಜ. ಚರಾಚರ ವಸ್ತುಗಳಲ್ಲಿ ನಾನಲ್ಲದ ವಸ್ತುವು ಯಾವುದೂ ಇಲ್ಲ ।೩೯॥

ಶ್ಲೋಕಾರ್ಥ :- ಪರಂತಪಾ! ದಿವ್ಯಗಳಾದ ನನ್ನ ವಿಭೂತಿಗಳಿಗೆ ಅಂತವಿಲ್ಲ. ಆದರೂ ಅವುಗಳಲ್ಲಿ ಕೆಲವನ್ನು ಸಂಕ್ಷಿಪ್ತವಾಗಿ ಗುರುತಿಗಾಗಿ ಮಾತ್ರ ಹೇಳಿರುತ್ತೇನೆ ।೪೦॥

ಅರ್ಜುನಾ ಇಲ್ಲಿ ನೋಡು, ಮಳೆಯ ಧಾರೆಯ ಗಣನೆಯನ್ನು ಮಾಡಲು ಸಾಧ್ಯವೇ? ಅಥವಾ ಪೃಥ್ವಿಯ ಮೇಲಿನ ಹುಲ್ಲಿನ ಕಡ್ಡಿಯ ಸಂಖ್ಯೆಯನ್ನು ಎಣಿಸಲು ಸಾಧ್ಯವೇ? ।೩೦೦॥

ಅಲ್ಲದೇ ಮಹಾಸಾಗರದ ತೆರೆಗಳ ಗಣನೆಯನ್ನು ಯಾವ ಪ್ರಕಾರವಾಗಿ ಮಾಡಲು ಬರುವುದಿಲ್ಲವೋ, ಅದರಂತೆ ನನ್ನ ಗುಣ ವಿಶೇಷ ವಿಭೂತಿಗಳ ಗಣತಿಯನ್ನು ಮಾಡಲು ಬರುವುದಿಲ್ಲ ।೩೦೧॥

ಅರ್ಜುನಾ, ಹೀಗಿದ್ದರೂ ನಿನಗೆ ನನ್ನ ಎಪ್ಪತ್ತೈದು ಮುಖ್ಯಾತಿಮುಖ್ಯ ವಿಭೂತಿಗಳನ್ನು ಹೇಳಿರುವೆನು. ಈ ನನ್ನ ವಿಭೂತಿಗಳನ್ನು ತಿಳಿಯುವ ನಿನ್ನ ಇಚ್ಛೆಯು ವಿಶೇಷವಲ್ಲ ।೩೦೨॥

ಕಾರಣವೇನೆಂದರೆ, ಉಳಿದ ನನ್ನ ವಿಭೂತಿಗಳ ವಿಸ್ತಾರವು ಎಷ್ಟಿದೆ ಎಂದರೆ ಅದರ ಪತ್ತೆಯೇ ಹತ್ತುವುದಿಲ್ಲ. ಆದ್ದರಿಂದ ನೀನು ಕೇಳುವುದಾದರೂ ಎಷ್ಟು? ನಾನು ಹೇಳುವುದಾದರೂ ಎಷ್ಟು? ।೩೦೩॥

ಅದಕ್ಕಾಗಿ ನಿನಗೆ ಒಂದು ಸಲ ನಾನು ನನ್ನ ರಹಸ್ಯವನ್ನು ಹೇಳುವೆನು. ಯಾವ ಬೀಜದಿಂದ ಭೂತಗಳ ಅಂಕುರವು ಹುಟ್ಟುವುದೋ, ಆ ಬೀಜವು ನಾನಾಗಿರುವೆನು ।೩೦೪॥

ಆದ್ದರಿಂದ ಚಿಕ್ಕದು ದೊಡ್ಡದು ಎನ್ನದೇ ಉಚ್ಚ ನೀಚ ಭಾವವನ್ನು ಬಿಟ್ಟು ಎಲ್ಲ ವಸ್ತುಗಳಲ್ಲಿ ನಾನೇ ಇರುವೆ ಎಂಬುದನ್ನು ಮನ್ನಿಸು ।೩೦೫॥

ಅರ್ಜುನಾ, ಇದಕ್ಕಿಂತಲೂ ಸರ್ವಸಾಧಾರಣವಾಗಿ ನಿನಗೊಂದು ಸಂಜ್ಞೆ ಹೇಳುವೆ, ಅದನ್ನು ಕೇಳು. ಇದರಿಂದ ನನ್ನ ವಿಭೂತಿಗಳನ್ನು ನಿನಗೆ ತಿಳಿಯಲು ಸಾಧ್ಯ ।೩೦೬॥

ಶ್ಲೋಕಾರ್ಥ :- ಐಶ್ವರ್ಯವಂತವೂ, ಪುಷ್ಟಿವಂತವೂ, ಶೋಭಾವಂತವೂ, ವಿಕಾಸವಂತವೂ ಆದ ವಸ್ತುವು ಯಾವುದೇ ಆಗಿದ್ದರೂ ಅದು ನನ್ನ ಕಳಾತೇಜದಿಂದ ಕೂಡಿದ್ದೇ ಎಂದು ತಿಳಿ ।೪೧॥

ಜೇಥ ಜೇಥ ಸಂಪತ್ತಿ ಆಣಿ ದಯಾ । ದೋನ್ಹೀ ವಸತೀ ಆಲಿಯಾ ಠಾಯಾ । ತೇ ತೇ ಜಾಣ ಧನಂಜಯಾ । ವಿಭೂತಿ ಮಾಝೀ ।೩೦೭॥

ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।
ವಿಷ್ಟಭ್ಯಾಹಮಿದಂ ಕೃತ್ಸ್ನಮ್ ಏಕಾಂಶೇನ್ ಸ್ಥಿತೋ ಜಗತ್ ।೪೨॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ವಿಭೂತಿಯೋಗೋ ನಾಮ ದಶಮೋऽಧ್ಯಾಯಃ

ಅಥವಾ ಏಕಲೇ ಏಕ ಬಿಂಬ ಗಗನೀ । ಪರೀ ಪ್ರಭಾ ಫಾಂಕೇ ತ್ರಿಭುವನೀ । ತೇವೀ ಏಕಾಕಿಯಾಚೀ ಸಕಳ ಜನೀ । ಆಜ್ಞಾ ಪಾಳಿಜೇ ।೩೦೮॥ ತಯಾಂತೇ ಏಕಲೇ ಝಣೇ ಮ್ಹಣ । ತೋ ನಿರ್ಧನ ಯಾ ಭಾಷಾ ನೇಣ । ಕಾಯ ಕಾಮಧೇನೂಸವೇ ಸರ್ವಸ್ವ ಹನ । ಚಾಲತ ಅಸೇ? ।೩೦೯॥ ತಿಯೇತೇ ಜೇ ಜೇಧವಾ ಜೋ ಮಾಗೇ । ತೇ ತೇ ಏಕಸರೇಂಚಿ ಪ್ರಸವೋ ಲಾಗೇ । ತೇವೀ ವಿಶ್ವವಿಭವತಯಾ ಆಂಗೇ । ಹೋಊನಿ ಅಸತಿ ।೩೧೦॥ ತಯಾತೇ ವೋಳಖಾವಯಾ ಹೇಚಿ ಸಂಜ್ಞಾ । ಜೇ ಜಗೇ ನಮಸ್ಕಾರಿಜೇ ಆಜ್ಞಾ । ಐಸೇ ಆಥೀ ತೇ ಜಾಣ ಪ್ರಾಜ್ಞಾ । ಅವತಾರ ಮಾಝೇ ।೩೧೧॥ ಆಣಿ ಸಾಮಾನ್ಯ ವಿಶೇಷ । ಹೇ ಜಾಣಣೇ ಏಥ ಮಹಾದೋಷ । ಕಾ ಜೇ ಮೀಚಿ ಏಕ ಅಶೇಷ । ವಿಶ್ವ ಹೇ ಮ್ಹಣೌನಿ ।೩೧೨॥ ತರೀ ಆತಾ ಸಾಧಾರಣ ಆಣೀ ಚಾಂಗು । ಐಸಾ ಕೈಸೇನಿ ಪಾ ಕಲ್ಪಾವಾ ವಿಭಾಗು । ವಾಯಾ ಆಪುಲಿಯೇ ಮತೀ ವಂಗು । ಭೇದಾಚಾ ಲಾವಾವಾ ।೩೧೩॥ ಏರ್ಹವೀ ತೂಪ ಕಾಸಯಾ ಘುಸಳಾವೇ । ಅಮೃತ ಕಾ ರಾಂಧೂನಿ ಅರ್ಧೇ ಕರಾವೇ । ಹಾ ಗಾ ವಾಯೂಸಿ ಕಾಯ ಪಾ ಡಾವೇ । ಉಜವೇ ಆಂಗ ಆಹೇ? ।೩೧೪॥ ಪೈ ಸೂರ್ಯಬಿಂಬಾಸಿ ಪೋಟ ಪಾಠೀ । ಪಾಹತಾ ನಾಸೇಲ ಆಪುಲೀ ದಿಠೀ । ತೇವೀ ಮಾಝ್ಯಾ ಸ್ವರೂಪೀ ಗೋಠೀ । ಸಾಮಾನ್ಯವಿಶೇಷಾಚೀ ನಾಹೀ ।೩೧೫॥ ಆಣಿ ಸಿನಾನಾ ಇಹೀ ವಿಭೂತೀ । ಮಜ ಅಪಾರಾತೇ ಮವಿಸೀಲ ಕಿತೀ । ಮ್ಹಣೌನಿ ಕಿಂಬಹುನಾ ಸುಭದ್ರಾಪತೀ । ಅಸೋ ಹೇ ಜಾಣಣೇ ।೩೧೬॥ ಆತಾ ಪೈ ಮಾಝೇನಿ ಏಕೇ ಅಂಶೇ । ಹೇ ಜಗ ವ್ಯಾಪಿಲೇ ಅಸೇ । ಯಾಲಾಗೀ ಭೇದೂ ಸಾಂಡುನಿ ಸರಿಸೇ । ಸಾಮ್ಯೇ ಭಜ ।೩೧೭॥ ಐಸೇ ವಿಬುಧವನ ವಸಂತೇ । ತೇಣೇ ವಿರಕ್ತಾಂಚೇನಿ ಏಕಾಂತೇ । ಬೋಲಿಲೇ ಜೇಥ ಶ್ರೀಮಂತೇ । ಶ್ರೀಕೃಷ್ಣದೇವೇ ।೩೧೮॥ ತೇಥ ಅರ್ಜುನ ಮ್ಹಣೇ ಸ್ವಾಮೀ । ಯೇತುಲೇ ಹೇ ರಾಭಸ್ಯ ಬೋಲಿಲೇ ತುಮ್ಹೀ । ಜೇ ಭೇದು ಏಕ ಆಣಿ ಆಮ್ಹೀ । ಸಾಂಡಾವಾ ಏಕೀ ।೩೧೯॥

ಅರ್ಜುನಾ, ಯಾವ ಯಾವ ಪುರುಷನಲ್ಲಿ ಸಂಪತ್ತು ಮತ್ತು ದಯೆ ಈ ಎರಡೂ ವಾಸವಾಗಿದ್ದರೆ ಆಯಾ ಪುರುಷರು ನನ್ನ ವಿಭೂತಿಗಳಿರುವರೆಂದು ತಿಳಿ ।೩೦೭॥

ಶ್ಲೋಕಾರ್ಥ :- ಅರ್ಜುನಾ! ಹೆಚ್ಚು ಮಾತೇಕೆ? ನನ್ನ ವಿಶಾಲ ಸ್ವರೂಪದಲ್ಲಿ ಎಲ್ಲಾ ಜಗತ್ತು ಒಂದು ಅಂಶದಲ್ಲಿ ಇರುತ್ತದೆ ।೪೨॥

ಇಲ್ಲಿಗೆ ಉಪನಿಷತ್ತೂ, ಬ್ರಹ್ಮವಿದ್ಯೆಯೂ, ಯೋಗ ಶಾಸ್ತ್ರವೂ, ಶ್ರೀಕೃಷ್ಣಾರ್ಜುನ ಸಂವಾದವೂ ಆದ ಶ್ರೀಮದ್ಭಗವದ್ಗೀತೆಯಲ್ಲಿ ವಿಭೂತಿಯೋಗವೆಂಬ ಹೆಸರಿನ ಹತ್ತನೆಯ ಅಧ್ಯಾಯವು ಮುಗಿದುದು.

ಅಥವಾ ಆಕಾಶದಲ್ಲಿ ಸೂರ್ಯನ ಬಿಂಬವು ಒಂದೇ ಇದ್ದು ಅದರ ಪ್ರಭೆಯು ತ್ರಿಭುವನದಲ್ಲಿ ಹರಡುವುದು. ಅದರಂತೆ ಒಬ್ಬ ಪುರುಷನ ಆಜ್ಞೆಯನ್ನು ಸರ್ವ ಲೋಕಗಳು ಪಾಲಿಸುವುವು ।೩೦೮॥

ಆ ಮಹಾನುಭಾವನಿಗೆ ಒಬ್ಬನೇ ಎಂದು ಅನ್ನಬೇಡ, ಮತ್ತು ನಿರ್ಧನನು ಎಂದು ಅನ್ನಬೇಡ. ಇಲ್ಲಿ ನೋಡು, ಬೇರೆಯವರ ಇಚ್ಛೆಯನ್ನು ಪೂರ್ಣ ಮಾಡುವ ಕಾಮಧೇನುವಿಗೆ ಅನೇಕ ಸಾಮಗ್ರಿ ತೆಗೆದುಕೊಳ್ಳಬೇಕಾಗಿದೆಯೋ? ।೩೦೯॥

ಆಕೆಗೆ ಯಾರಾದರೂ ಯಾವಾಗ್ಗೆ ಏನು ಕೇಳಿದರೂ ಆಕೆ ಆಗಲೇ ಕೊಡುವಳು. ಅದರಂತೆ ನನ್ನ ವಿಭೂತಿಗಳಲ್ಲಿ ಸರ್ವ ಐಶ್ವರ್ಯವು ತುಂಬಿರುವುದು ।೩೧೦॥

ಯಾರ ಆಜ್ಞೆಯನ್ನು ಸರ್ವ ಜನರು ಶಿರಸಾ ಮಾನ್ಯ ಮಾಡುವರೋ, ಅವರು ನಿನ್ನ ದೃಷ್ಟಿಗೆ ಬಿದ್ದರೆ ಅದು ನನ್ನ ವಿಭೂತಿ ಎಂದರೆ ನನ್ನ ಅವತಾರ ಎಂದೇ ತಿಳಿ. ಹೇ ಬುದ್ಧಿವಂತನಾದ ಅರ್ಜುನನೇ, ಇದೇ ನನ್ನ ವಿಭೂತಿಯನ್ನು ತಿಳಿಯುವ ಸಂಜ್ಞೆಯಾಗಿದೆ ।೩೧೧॥

ಮತ್ತು ಇದು ಸಾಮಾನ್ಯ, ಇದು ವಿಶೇಷ ಹೀಗೆ ಭೇದ ಎಣಿಸುವುದು ಮಹಾದೋಷವಾಗಿದೆ. ಕಾರಣವೇನೆಂದರೆ ಈ ಎಲ್ಲ ವಿಶ್ವದಲ್ಲಿ ನಾನೊಬ್ಬನೇ ತುಂಬಿಕೊಂಡಿದ್ದೇನೆ ।೩೧೨॥

ಹಾಗಿರುವಾಗ ಸಾಮಾನ್ಯ ಮತ್ತು ವಿಶೇಷದ ಭೇದವನ್ನು ಕಲ್ಪಿಸಿ ಸುಮ್ಮನೇ ನಮ್ಮ ಬುದ್ಧಿಗೆ ಕಲಂಕವನ್ನು ಏಕೆ ಹಚ್ಚಿಕೊಳ್ಳಬೇಕು? ।೩೧೩॥

ತುಪ್ಪವನ್ನು ವ್ಯರ್ಥವಾಗಿ ಏಕೆ ಮಂಥನ ಮಾಡಬೇಕು? ಅಮೃತಕ್ಕೆ ಕುದಿಸಿ ಅರ್ಧವೇಕೆ ಮಾಡಬೇಕು? ಹಾಗೆಯೇ ವಾಯುವಿಗೆ ಎಡ, ಬಲ ಅಂಗವಿದೆಯೇ? ।೩೧೪॥

ಸೂರ್ಯಬಿಂಬದ ಮುಂದಿನ ಭಾಗ ಹಿಂದಿನ ಭಾಗ ಹೀಗೆ ನೋಡಲು ತನ್ನ ದೃಷ್ಟಿ ಮಾತ್ರ ಇಲ್ಲದಂತೆ ಆದೀತು. (ಆತನು ಸರ್ವ ಪ್ರಕಾಶಮಯನಿದ್ದಾನೆ) ಅದರಂತೆ ನನ್ನ ಸ್ವರೂಪದಲ್ಲಿ ಸಾಮಾನ್ಯ ವಿಶೇಷ ಭೇದವಿಲ್ಲ ।೩೧೫॥

ಮತ್ತು ಸುಭದ್ರಾಪತಿಯೇ, ನನ್ನ ಅನಂತ ಭಿನ್ನ ಭಿನ್ನ ವಿಭೂತಿಗಳನ್ನು ನೀನು ಎಷ್ಟೆಂದು ವರ್ಣಿಸಬಲ್ಲಿ? ಆದ್ದರಿಂದ ನನ್ನ ವಿಭೂತಿಗಳನ್ನು ತಿಳಿಯುವ ನಿನ್ನ ಇಚ್ಛೆಯನ್ನು ಸಾಕು ಮಾಡು ।೩೧೬॥

ಈಗ ಹೀಗೆ ನೋಡು, ನನ್ನ ಒಂದೇ ಅಂಶದಿಂದ ಈ ಜಗವೆಲ್ಲವೂ ತುಂಬಿಕೊಂಡಿದೆ. ಆದ್ದರಿಂದ ಅಭೇದ ಬುದ್ಧಿಯಿಂದ ನಾನೇ ಇರುವೆನೆಂಬ ಭಾವನೆಯಿಂದ ನನ್ನನ್ನು ಭಜಿಸು ।೩೧೭॥

ಜ್ಞಾನರೂಪ ವನಕ್ಕೆ ವಸಂತ ಋತುವಿನಂತೆ ಆನಂದ ಕೊಡುವ ಮತ್ತು ವಿರಕ್ತರ ಏಕಾಂತದಲ್ಲಿ ಜೊತೆಗೆ ಇರುವ ಇಂತಹ ಸಕಲೈಶ್ವರ್ಯ ಸಂಪನ್ನನಾದ ಶ್ರೀಕೃಷ್ಣ ಪರಮಾತ್ಮನು ಈ ಪ್ರಕಾರವಾಗಿ ಹೇಳಿದನು ।೩೧೮॥

ಆಗ ಅರ್ಜುನನು ಹೇಳಿದನು:- ಸ್ವಾಮೀ, ನನ್ನ ವಿಭೂತಿಗಳವರಲ್ಲಿ ಭೇದ ಬೇಡ ಎಂದು ತಾವು ತಮ್ಮ ಹಿರಿಮೆಯಿಂದ ಹೇಳಿರುವಿರಿ. ಆದರೆ ಭೇದವು ಬೇರೆ, ಅದನ್ನು ತ್ಯಾಗ ಮಾಡುವವರು ನಾವು ಬೇರೆ ಹೇಗಾಯಿತು? ।೩೧೯॥

ಹಾ ಹೋ ಸೂರ್ಯ ಮ್ಹಣೇ ಕಾಯ ಜಗಾತೇ । ಅಂಧಾರೇ ದವಡಾ ಕಾ ಪರೌತೇ । ತೇವೀ ಧಸಾಳ ಮ್ಹಣೋ ದೇವಾ ತೂಂತೇ । ತರೀ ಅಧಿಕ ಹಾ ಬೋಲು ।೩೨೦॥ ತುಝೀ ನಾಮುಚಿ ಏಕ ಕೋಣ್ಹೀ ವೇಳೇ । ಜಯಾಂಚಿಯೇ ಮುಖಾಸಿ ಕಾ ಕಾನಾ ಮಿಳೇ । ತಯಾಂಚಿಯಾ ಹೃದಯಾತೇ ಸಾಂಡೂನಿ ಪಳೇ । ಭೇದು ಜೇ ಸಾಚ ।೩೨೧॥ ತೋ ತೂ ಪರಬ್ರಹ್ಮಚಿ ಅಸಕೇ । ಮಜ ದೈವೇ ದಿಧಲಾಸೀ ಹಸ್ತೋದಕೇ । ತರೀ ಆತಾ ಭೇದು ಕಾಯಸಾ ಕೇ । ದೇಖಾವಾ ಕವಣೇ? ।೩೨೨॥ ಜೇ ಚಂದ್ರಬಿಂಬಾಚಾ ಗಾಭಾರಾ । ರಿಗಾಲಿ ಯಾವರೀಹೀ ಉಬಾರಾ । ಪರೀ ರಾಣೇಪಣೇ ಶಾರ್ಙ್ಗಧರಾ । ಬೋಲಾ ಹೇ ತುಮ್ಹೀ ।೩೨೩॥ ತೇಥ ಸಾವಿಯಾಚಿ ಪರಿತೋಷೋನಿ ದೇವೇ । ಅರ್ಜುನಾತೇ ಆಲಿಂಗಿಲೇ ಜೀವೇ । ಮಗ ಮ್ಹಣೇ ತುವಾ ನ ಕೋಪಾವೇ । ಆಮುಚಿಯಾ ಬೋಲಾ ।೩೨೪॥ ಆಮ್ಹೀ ತುಜ ಭೇದಾಚಿಯಾ ವಾಹಾಣೇ । ಸಾಂಗಿತಲೀ ಜೇ ವಿಭೂತೀಚೀ ಕಹಾಣೇ । ತೇ ಅಭೇದೇ ಕಾಯ ಅಂತಃಕರಣೇ । ಮಾನಿಲೀ ಕೀ ನ ಮನೇ ।೩೨೫॥ ಹೇಂಚಿ ಪಹಾವಯಾ ಲಾಗೀ । ನಾವೇಕ ಬೋಲಿಲೋ ಬಾಹೇರಿಸವಡಿಯಾ ಭಂಗೀ । ತಂವ ವಿಭೂತೀ ತುಜ ಚಾಂಗೀ । ಆಲಿಯಾ ಬೋಧಾ ।೩೨೬॥ ತೇಥ ಅರ್ಜುನ ಮ್ಹಣೇ ದೇವೇ । ಹೇ ಆಪುಲೇ ಆಪಣ ಜಾಣಾವೇ । ಪರೀ ದೇಖತಸೇ ವಿಶ್ವ ಆಘವೇ । ತುವಾ ಭರಲೇ ।೩೨೭॥ ಪೈ ರಾಯಾ ತೋ ಪಂಡುಸುತು । ಐಸಿಯೇ ಪ್ರತೀತೀಸಿ ಜಾಹಲಾ ವರಿತು । ಯಾ ಸಂಜಯಾಚಿಯಾ ಬೋಲಾ ನಿವಾಂತು । ಧೃತರಾಷ್ಟ್ರ ರಾಹೇ ।೩೨೮॥ ಕೀ ಸಂಜಯೋ ದುಃಖವಲೇನಿ ಅಂತಃಕರಣೇ । ಮ್ಹಣತಸೇ ನವಲ ನವ್ಹೇ ದೈವ ದವಡಣೇ । ಹಾ ಜೇವೇ ಧಾಡಸಾ ಆಹೇ ಮೀ ಮ್ಹಣೇ । ತಂವ ಆಂತುಹೀ ಆಂಧಳಾ ।೩೨೯॥ ಪರೀ ಅಸೋ ಹೇ ತೋ ಅರ್ಜುನು । ಸ್ವಹಿತಾಚಾ ವಾಢವಿತಸೇ ಮಾನು । ಕೀ ಯಾಹೀವರೀ ತಯಾ ಆನು । ಧಿವಸಾ ಉಪನಲಾ ।೩೩೦॥ ಮ್ಹಣೇ ಹೇಚಿ ಹೃದಯಾ ಆಂತುಲೀ ಪ್ರತೀತೀ । ಬಾಹೇರಿ ಅವತರೋ ಕಾ ಡೋಳ್ಯಾಪ್ರತೀ । ಇಯೇ ಆರ್ತಿಚಿಯಾ ಪಾಉಲೀ ಮತೀ । ಉಠತೀ ಜಾಹಲೀ ।೩೩೧॥ ಮಿಯಾ ಇಹೀಂಚ ದೋಹೀ ಡೋಳಾ । ಝೋಂಬಾವೇ ವಿಶ್ವರೂಪಾ ಸಕಳಾ । ಏವಢೀ ಹಾಂವ ತೋ ದೈವಾಆಗಳಾ । ಮ್ಹಣೌನಿ ಕರೀ ।೩೩೨॥

ಸೂರ್ಯನು ಉದಯಿಸುವಾಗ ಕತ್ತಲಕ್ಕೆ ''ನೀವು ದೂರ ಸರಿಯಿರಿ'' ಎಂದು ಹೇಳುವನೇ? ಆದರೆ ದೇವಾ, ಈ ವಿಷಯಕ್ಕೆ ನಿಮಗೆ ಅವಿಚಾರಿ ಎಂದು ಹೇಳಿದರೆ ಅಧಿಕ ಪ್ರಸಂಗವಾಗುವುದು ।೩೨೦॥

ನಿಮ್ಮ ನಾಮ ಮಾತ್ರ ಒಂದುಸಲ ಯಾರಾದರೂ ಮುಖದಿಂದ ಉಚ್ಚರಿಸಿದರೆ ಅಥವಾ ಕಿವಿಯಿಂದ ಕೇಳಿದರೆ, ಅವರ ಮನದಲ್ಲಿನ ಭೇದವು ನಿಜವಾಗಿಯೂ ಇಲ್ಲದಾಗುವುದು ।೩೨೧॥

ಅಂತಹ ನೀವು ಪ್ರತ್ಯಕ್ಷ ಪರಬ್ರಹ್ಮ ಮೂರ್ತಿಯು ಸುದೈವದಿಂದ ನಮ್ಮ ಕೈಗೆ ಸಿಕ್ಕಿರುವಿರಿ. ಅಂದಮೇಲೆ ನನ್ನ ನಿಮ್ಮಲ್ಲಿ ಭೇದ ಎಲ್ಲಿಂದ ಇರಬೇಕು? ಮತ್ತು ಯಾರು ಎಲ್ಲಿ ನೋಡಬೇಕು? ।೩೨೨॥

ಇಲ್ಲಿ ನೋಡಿರಿ, ಒಬ್ಬನು ಚಂದ್ರಬಿಂಬದ ಗರ್ಭದಲ್ಲಿ ಪ್ರವೇಶ ಮಾಡಿದಾಗ್ಯೂ ಆತನಿಗೆ ಸೆಕೆಯಾಗುವುದು ಎಂದು ಯಾರಾದರೂ ಹೇಳಿದರೆ, ಅದರಲ್ಲಿ ದಡ್ಡತನ ಇದೆ. ಆದರೆ ಶ್ರೀಕೃಷ್ಣನೇ ನೀವು ನಿಮ್ಮ ಪ್ರಭುತ್ವದಿಂದ ಏನಾದರೂ ಹೇಳಿರಿ ।೩೨೩॥

ಈ ಮಾತು ಕೇಳಿದಾಕ್ಷಣ ಶ್ರೀಕೃಷ್ಣನಿಗೆ ಅತಿಶಯ ಸಂತೋಷವಾಯಿತು ಮತ್ತು ಆತನು ಅರ್ಜುನನಿಗೆ ಅಂತಃಕರಣಪೂರ್ವಕವಾಗಿ ಆಲಿಂಗಿಸಿ ಹೇಳಿದನು:- ನಮ್ಮ ಮಾತಿಗೆ ನೀನು ಕೋಪಪಡಬೇಡ ।೩೨೪॥

ಭೇದ ಹೇಳುವ ಓಘದಲ್ಲಿ ನಾವು ವಿಭೂತಿ ವಿಷಯಕ್ಕೆ ಯಾವ ಪ್ರಕಾರಗಳನ್ನು ಹೇಳಿರುವುದನ್ನು ಅದು ಅಭೇದ ರೂಪದಿಂದ ನಿನ್ನ ಮನಸ್ಸಿನಲ್ಲಿ ಮೂಡಲಿಲ್ಲವೇ? ।೩೨೫॥

ಇದನ್ನು ತಿಳಿಯುವುದಕ್ಕಾಗಿ ಕ್ಷಣ ಹೊತ್ತು ಬಾಹ್ಯಾತ್ಕಾರಿಯಾಗಿ ಹೀಗೆ ಹೇಳಿದೆ. ನನ್ನ ವಿಭೂತಿಯ ವಿಷಯಕ್ಕೆ ನಿನಗೆ ಚೆನ್ನಾಗಿ ತಿಳಿದಿದೆ, ಎಂದು ನಮಗೆ ಕಂಡಿತು! ।೩೨೬॥

ಆಗ ಅರ್ಜುನನು ಹೇಳಿದನು:- ದೇವಾ, ನಿಮ್ಮದು ನೀವು ಏನಾದರೂ ತಿಳಿದುಕೊಳ್ಳಿರಿ, ಆದರೆ ಈ ವಿಶ್ವದಲ್ಲಿ ಎಲ್ಲೆಲ್ಲಿಯೂ ನೀವು ತುಂಬಿರುವಿರಿ ಹೀಗೆ ನನಗೆ ಕಾಣುತ್ತಿದೆ ।೩೨೭॥

ಈ ರೀತಿಯಲ್ಲಿ ಅರ್ಜುನನು ಯೋಗ್ಯತೆ ಪಡೆದದ್ದು ಸಂಜಯನು ಹೇಳುತ್ತಿದ್ದಾಗ ಧೃತರಾಷ್ಟ್ರ ರಾಜನು ಸ್ತಬ್ಧನಾಗಿ ಕುಳಿತಿದ್ದನು ।೩೨೮॥

ಸಂಜಯನು ಖೇದಗೊಂಡು ಹೇಳುತ್ತಾನೆ:- ಸಹಜವಾಗಿ ಲಾಭವಾಗುವುದನ್ನು ತಿರಸ್ಕರಿಸುವುದು ಆಶ್ಚರ್ಯವಲ್ಲವೇ? ಧೃತರಾಷ್ಟ್ರ ರಾಜನಿಗೆ ಒಳಗಿನ ಕಣ್ಣು (ಜ್ಞಾನ ದೃಷ್ಟಿ) ಇರಬಹುದೆಂದು ತಿಳಿದಿದ್ದೆ. ಆದರೆ ಈತನು ಒಳಹೊರಗೂ ಕುರುಡನು ।೩೨೯॥

ಆದರೆ ಅದಿರಲಿ, ಅರ್ಜುನನು ಮಾತ್ರ ತನ್ನ ಸ್ವಹಿತದ ಯೋಗ್ಯತೆಯನ್ನು ಬೆಳೆಸುತ್ತಿರುವನು. ಇದರಿಂದ ಇನ್ನೊಂದು ವಿಷಯದತ್ತ ಆತನ ಉತ್ಕಟ ಇಚ್ಛೆಯಾಗಿರುವುದು ।೩೩೦॥

ಪುನಃ ಹೇಳುತ್ತಾನೆ:- ಸರ್ವ ಜಗವು ಈಶ್ವರ ಮಯವಾಗಿರುವುದು. ಹೀಗೆ ನನ್ನ ಅಂತಃಕರಣದಲ್ಲಿ ಅನುಭವ ಬಂದಿದೆ. ಅದು ನನ್ನ ಕಣ್ಣುಮುಂದೆ ಪ್ರಕಟವಾಗಬೇಕು. ಈ ಇಚ್ಛೆಯ ಹೆಚ್ಚಿಯಿಂದ ಬುದ್ಧಿಯು ನಡೆಯಹತ್ತಿತು ।೩೩೧॥

ಆತನು (ಅರ್ಜುನನು) ಅಧಿಕ ಭಾಗ್ಯಶಾಲಿಯಾಗಿರುವುದರಿಂದ ಇದೇ ಕಣ್ಣಿನಿಂದ ತಾನು ಎಲ್ಲ ವಿಶ್ವರೂಪವನ್ನು ನೋಡಬೇಕೆಂದು ಇಚ್ಛೆ ಮಾಡಹತ್ತಿದನು ।೩೩೨॥

ಆಜಿ ತೋ ಕಲ್ಪತರೂಚೀ ಶಾಖಾ । ಮ್ಹಣೌನಿ ವಾಂಝೋಳೇ ನ ಲಗತೀ ದೇಖಾ । ಜೇ ಜೇ ಯೇಈಲ ತಯಾಚಿಯಾ ಮುಖಾ । ತೇ ತೇ ಸಾಚಚಿ ಕರೀತಸೇ ಯೇರು ॥೩೩೩॥ ಜೋ ಪ್ರಹ್ಲಾದಾಚಿಯಾ ಬೋಲಾ । ವಿಷಾಹೀ ಸಕಟ ಆಪಣಚಿ ಜಾಹಲಾ । ತೋ ಸದ್ಗುರು ಅಸೇ ಜೋಡಲಾ । ಕಿರೀಟೀಸೀ ॥೩೩೪॥ ಮ್ಹಣೌನಿ ವಿಶ್ವರೂಪ ಪುಸಾವಯಾಲಾಗೀ । ಪಾರ್ಥ ರಿಗತಾ ಹೋಈಲ ಕವಣೇ ಭಂಗೀ । ತೇ ಸಾಂಗೇನ ಪುಢಿಲಿಯೇ ಪ್ರಸಂಗೀ । ಜ್ಞಾನದೇವ ಮ್ಹಣೇ ನಿವೃತ್ತೀಚಾ ॥೩೩೫॥

ಇತಿ ಶ್ರೀ ಜ್ಞಾನದೇವ ವಿರಚಿತಾಯಾಂ ಭಾವಾರ್ಥದೀಪಿಕಾಯಾಂ ದಶಮೋಽಧ್ಯಾಯಃ ॥೧೦॥

ಶ್ಲೋಕ:೪೨ ಓವಿ:೩೩೫

ಇಂದು ಅರ್ಜುನನು ಎಂದರೆ ಕಲ್ಪತರುವಿನ ಕೇವಲ ಶಾಖೆಯೇ ಆಗಿರುವನು. ಆದ್ದರಿಂದ ಅದಕ್ಕೆ ಬಂಜೆ ಹೂವುಗಳು ಎಂದೂ ಬರಲಾರವು. ಯಾಕೆಂದರೆ ಆತನ ಮುಖದಿಂದ ಬಂದದ್ದೆಲ್ಲವನ್ನೂ ಶ್ರೀಕೃಷ್ಣನು ನಿಜ ಮಾಡುವನು ।੩੩੩॥

ಶ್ರೀಕೃಷ್ಣ ಪರಮಾತ್ಮನು ಪ್ರಹ್ಲಾದನ ಮಾತಿನಂತೆ ವಿಷ ಸಹ ತಾನೇ ಆದನು. ಅಂತಹ ಸದ್ಗುರು ಅರ್ಜುನನಿಗೆ ಪ್ರಾಪ್ತನಾಗಿರುವನು ।੩੩੪॥

ಆದ್ದರಿಂದ ನಿವೃತ್ತಿದಾಸ ಜ್ಞಾನೇಶ್ವರರು ಹೇಳುವರು:- ವಿಶ್ವರೂಪವನ್ನು ಕೇಳುವುದಕ್ಕಾಗಿ ಪಾರ್ಥನು ಯಾವ ರೀತಿಯಲ್ಲಿ ಆರಂಭಮಾಡುವನೆಂಬ ಕಥೆಯನ್ನು ಮುಂದಿನ ಪ್ರಸಂಗದಲ್ಲಿ ಹೇಳುವೆನು ।੩੩੫॥

ಶ್ರೀ ಜ್ಞಾನೇಶ್ವರ ಮಹಾರಾಜರಿಂದ ರಚಿತವಾದ ಭಾವಾರ್ಥ ದೀಪಿಕೆಯ ಹತ್ತನೆಯ ಅಧ್ಯಾಯದ ವಿವರಣೆ ಸಮಾಪ್ತವು

# ಸಾರ್ಥ ಶ್ರೀಜ್ಞಾನೇಶ್ವರೀ

## ಅಧ್ಯಾಯ ಅಕರಾವಾ

ಶ್ರೀಗಣೇಶಾಯ ನಮಃ

ಆತಾ ಯಾವರೀ ಏಕಾದಶೀ । ಕಥಾ ಆಹೇ ದೋಹೀ ರಸೀ । ಯೇಥ ಪಾರ್ಥಾ ವಿಶ್ವರೂಪೇಸೀ । ಹೋಈಲ ಭೇಟೀ ।೧॥ ಜೇಥ ಶಾಂತಾಚಿಯಾ ಘರಾ । ಅದ್‌ಭುತ ಆಲಾ ಆಹೇ ಪಾಹುಣೇರಾ । ಆಣಿ ಯೇರಾಂಹೀ ರಸಾ ಪಾಂತಿಕರಾ । ಜಾಹಲಾ ಮಾನು ।೨॥ ಅಹೋ ವಧೂವರಾಂಚಿಯೇ ಮಿಳಣೀ । ಜೈಸೀ ವರಾಡಿಯಾಂಹೀ ಲುಗಡೀ ಲೇಣೀ । ತೈಸೇ ದೇಶಿಯೇಚ್ಯಾ ಸುಖಾಸನೀ । ಮಿರವಲೇ ರಸ ।೩॥ ಪರೀ ಶಾಂತಾದ್ಭುತ ಬರವೇ । ಜೇ ಡೋಳಿಯಾಂಚ್ಯಾ ಅಂಜುಳೀ ಘ್ಯಾವೇ । ಜೈಸೇ ಹರಿಹರ ಪ್ರೇಮಭಾವೇ । ಆಲೇ ಖೇಂವಾ ।೪॥ ನಾತರೀ ಅಂವಸೇಚ್ಯಾ ದಿವಶೀ । ಭೇಟಲೀ ಬಿಂಬೇ ದೋನ್ಹೀ ಜೈಸೀ । ತೇವೀ ಏಕವಳಾ ರಸೀ । ಕೇಲಾ ಏಥ ।೫॥ ಮೀನಲೇ ಗಂಗೇಯಮುನೇಚೇ ವೋಘ । ತೈಸೇ ರಸಾ ಜಾಹಲೇ ಪ್ರಯಾಗ । ಮ್ಹಣೌನಿ ಸುಸ್ನಾತ ಹೋತ ಜಗ । ಆಘವೇ ಏಥ ।೬॥ ಮಾಜೀ ಗೀತಾ ಸರಸ್ವತೀ ಗುಪ್ತ । ಆಣಿ ದೋನೀ ರಸ ತೇ ಓಘ ಮೂರ್ತ । ಯಾಲಾಗೀ ತ್ರಿವೇಣೀ ಹೇ ಉಚಿತ । ಫಾವಲೀ ಬಾಪಾ ।೭॥ ಏಥ ಶ್ರವಣಾಚೇನಿ ದ್ವಾರೇ । ತೀರ್ಥಿ ರಿಘತಾ ಸೋಪಾರೇ । ಜ್ಞಾನದೇವೋ ಮ್ಹಣೇ ದಾತಾರೇ । ಮಾಝೋನಿ ಕೇಲೇ ।೮॥ ತೀರೇ ಸಂಸ್ಕೃತಾಚೀ ಗಹನೇ । ತೋಡೋನಿ ಮರ್ಹಾಠಿಯಾ ಶಬ್ದಸೋಪಾನೇ । ರಚಿಲೀ ಧರ್ಮನಿಧಾನೇ । ಶ್ರೀನಿವೃತ್ತಿದೇವೇ ।೯॥ ಮ್ಹಣೌನಿ ಭಲತೇಣೇ ಏಥ ಸದ್ಭಾವೇ ನಾಹಾವೇ । ಪ್ರಯಾಗಮಾಧವ ವಿಶ್ವರೂಪ ಪಹಾವೇ । ಯೇತುಲೇನಿ ಸಂಸಾರಾಸಿ ದ್ಯಾವೇ । ತಿಳೋದಕ ।೧೦॥ ಹೇ ಅಸೋ ಐಸೇ ಸಾವಯವ । ಏಥ ಸಾಸಿನ್ನಲೇ ಆಥೀ ರಸಭಾವ । ತೇಥ ಶ್ರವಣಸುಖಾಚೀ ರಾಣೀವ । ಜೋಡಲೀ ಜಗಾ ।೧೧॥ ಜೇಥ ಶಾಂತಾದ್ಭುತ ರೋಕಡೇ । ಆಣಿ ಯೇರಾ ರಸಾ ಪಡಪ ಜೋಡೇ । ಹೇ ಅಲ್ಪಚಿ ಪರೀ ಉಘಡೇ । ಕೈವಲ್ಯ ಏಥ ।೧೨॥ ತೋ ಹಾ ಅಕರಾವಾ ಅಧ್ಯಾಯೋ । ಜೋ ದೇವಾಚಾ ಆಪಣಪೇ ವಿಸಂವತಾ ಠಾವೋ । ಪರೀ ಅರ್ಜುನ ಸದೈವಾಂಚಾ ರಾವೋ । ಜೇ ಏಥಹೀ ಪಾತಲಾ ।೧೩॥

# ಸಾರ್ಥ ಶ್ರೀಜ್ಞಾನೇಶ್ವರೀ

## ಹನ್ನೊಂದನೆಯ ಅಧ್ಯಾಯ

ಈಗ ಇನ್ನು ಮುಂದೆ ಹನ್ನೊಂದನೆಯ ಅಧ್ಯಾಯದಲ್ಲಿನ ಕಥಾಭಾಗವು ಶಾಂತ ಮತ್ತು ಅದ್ಭುತ ಈ ಎರಡು ರಸಗಳಿಂದ ತುಂಬಿಕೊಂಡಿದೆ ಮತ್ತು ಇಲ್ಲಿ ಭಗವಂತನ ವಿಶ್ವರೂಪವು ಅರ್ಜುನನ ದೃಷ್ಟಿಗೆ ಬೀಳುವುದು ।೧॥

ಇಲ್ಲಿ ಶಾಂತರಸದ ಮನೆಗೆ ಅದ್ಭುತರಸ ಬೀಗನು ಬಂದಿರುವುದರಿಂದ ಇವನೊಂದಿಗೆ ಇತರ ರಸಗಳಿಗೂ ಪಂಕ್ತಿಲಾಭವು ದೊರೆಯಿತು ।೨॥

ವಧು-ವರರ ಲಗ್ನದಲ್ಲಿ ಯಾವ ಪ್ರಕಾರವಾಗಿ ನಿಬ್ಬಣದವರಿಗೂ ವಸ್ತ್ರಾಲಂಕಾರಗಳಿಂದ ಭೂಷಿತರಾಗಿ ಮೆರೆಯಲು ದೊರೆಯುವುದೋ, ಅದರಂತೆ ದೇಶ ಭಾಷೆಯ ಸುಖಾಸನದ ಮೇಲೆ ಎಲ್ಲ ರಸಗಳಿಗೂ ಮೆರೆಯುವ ಲಾಭ ದೊರೆಯಿತು ।೩॥

ಆದರೆ ಶಾಂತ ಮತ್ತು ಅದ್ಭುತ ಈ ಎರಡು ಉತ್ತಮ ರಸಗಳು ಕಣ್ಣುಗಳಿಗೆ ಎದ್ದು ಕಾಣುವುವು. ಒಂದೇ ಯೋಗ್ಯತೆಯ ದೇವರಾದ ವಿಷ್ಣು ಮತ್ತು ಶಂಕರರು ಪ್ರೇಮಭಾವದಿಂದ ಒಬ್ಬರಿಗೊಬ್ಬರು ಕೂಡಲು ಬಂದಂತೆ ತೋರುತ್ತಿದೆ ।೪॥

ಅಥವಾ ಅಮಾವಾಸ್ಯೆಯ ದಿನದಂದು ಯಾವ ಪ್ರಕಾರವಾಗಿ ಸೂರ್ಯ ಮತ್ತು ಚಂದ್ರ ಇವರ ಎರಡೂ ಬಿಂಬಗಳು ಒಂದೇ ಸಮಯಕ್ಕೆ ಕೂಡುವುವೋ, ಅದೇ ಪ್ರಕಾರವಾಗಿ ಶಾಂತ ಮತ್ತು ಅದ್ಭುತ ಇವುಗಳ ಐಕ್ಯವಾಗಿದೆ ।೫॥

ಅಥವಾ ಗಂಗಾ ಮತ್ತು ಯಮುನಾ ಈ ಎರಡೂ ನದಿಗಳ ಓಘವು ಪ್ರಯಾಗಕ್ಕೆ ಕೂಡಿದಂತೆ ಶಾಂತ ಮತ್ತು ಅದ್ಭುತ ಈ ಎರಡೂ ರಸಗಳು ಒಂದೆಡೆ ಸೇರಿ ಈ ಅಧ್ಯಾಯವು ಪ್ರಯಾಗವಾಗಿದೆ. ಆದ್ದರಿಂದ ಇದನ್ನು ಓದಿ ಜಗತ್ತಿನ ಎಲ್ಲರೂ ಪವಿತ್ರರಾಗುವರು ।೬॥

ಈ ಎರಡೂ ರಸಗಳ ಸಂಗಮದಲ್ಲಿ ಗೀತಾರೂಪ ಮೂರನೆಯ ಸರಸ್ವತಿ ನದಿಯು ಗುಪ್ತವಾಗಿದೆ. ಶಾಂತ, ಅದ್ಭುತ ಈ ಎರಡೂ ರಸಗಳು ಗಂಗಾ ಯಮುನಾಗಳಂತೆ ಮೂರ್ತಿಮಂತವಾಗಿವೆ. ಅದಕ್ಕಾಗಿ ಅಪ್ಪಗಳಿರಾ, ಇದಕ್ಕೆ ತ್ರಿವೇಣಿ ಸಂಗಮದ ಯೋಗ ಬಂದಿದೆ ಎಂದು ತಿಳಿಯಿರಿ ।೭॥

ಇಲ್ಲಿ ಶ್ರವಣೇಂದ್ರಿಯ ದ್ವಾರದಿಂದ ಈ ತೀರ್ಥದಲ್ಲಿ ಪ್ರವೇಶಿಸುವುದು ಬಹಳ ಸುಲಭವಾಗಿದೆ. ಇಷ್ಟೊಂದು ಸುಲಭ ಮಾರ್ಗವನ್ನು ನಮ್ಮ ಶ್ರೀಗುರು ನಿವೃತ್ತಿನಾಥರು ಮಾಡಿರುವರು ಎಂದು ಜ್ಞಾನೇಶ್ವರರು ಹೇಳುವರು ।೮॥

ಈ ಗೀತಾರೂಪ ತೀರ್ಥದ ಸಂಸ್ಕೃತ ಭಾಷಾರೂಪ ದಂಡೆಯು ಕಠಿಣವಿದ್ದದ್ದಕ್ಕೆ ಮರಾಠಿ ಭಾಷಾ ರೂಪ ಪಾವುಟಿಗೆಗಳನ್ನು (ಸುಲಭವಾದ ಘಾಟ) ಧರ್ಮದ ನಿಧಿಯಾದ ನನ್ನ ಶ್ರೀಗುರು ನಿವೃತ್ತಿನಾಥರು ಕಟ್ಟಿದರು ।೯॥

ಆದ್ದರಿಂದ ಯಾರು ಬೇಕಾದರೂ ಈ ತೀರ್ಥದಲ್ಲಿ ಭಕ್ತಿ-ಭಾವದಿಂದ ಸ್ನಾನ ಮಾಡಬೇಕು ಮತ್ತು ಪ್ರಯಾಗದಲ್ಲಿ ಮಾಧವನ ದರ್ಶನವಾಗುವಂತೆ, ಇಲ್ಲಿ ವಿಶ್ವರೂಪದ ದರ್ಶನ ಪಡೆದು, ಸಂಸಾರಕ್ಕೆ ತಿಲಾಂಜಲಿ ಕೊಡಬೇಕು ।೧೦॥

ಇದು ಇರಲಿ, ಈ ಪ್ರಕಾರವಾಗಿ ಇಲ್ಲಿ ಎಲ್ಲ ರಸಗಳ ಮೂರ್ತಿಮಂತ ಸ್ವರೂಪವು ತುಂಬಿಕೊಂಡಿದೆ. ಜಗತ್ತಿಗೆ ಶ್ರವಣ ಸುಖದ ರಾಜ್ಯ ಪ್ರಾಪ್ತವಾಗಿದೆ ।೧೧॥

ಇಲ್ಲಿ ಶಾಂತ ಅದ್ಭುತ ರಸಗಳು ಪ್ರತ್ಯಕ್ಷವಾಗಿ ಇತರ ರಸಗಳ ಶೋಭೆಯೂ ದೃಷ್ಟಿಗೆ ಬೀಳುತ್ತದೆ. ಈ ಉಪಮೆಯು ಅಲ್ಪವಾದರೂ ಇಲ್ಲಿ ಸ್ಪಷ್ಟವಾಗಿ ಮೋಕ್ಷಸುಖವು ಪ್ರಾಪ್ತವಾಗುವುದು ।೧೨॥

ಈ ಹನ್ನೊಂದನೆಯ ಅಧ್ಯಾಯವು ಸ್ವತಃ ದೇವರ ವಿಶ್ರಾಂತಿ ಸ್ಥಾನವಾಗಿದೆ. ಆದರೆ ಅರ್ಜುನನು ಭಾಗ್ಯವಂತರಲ್ಲಿ ಮುಕುಟಮಣಿಯೇ ಆಗಿರುವನು. ಯಾಕೆಂದರೆ ಈತನು ಇಂತಹ ಸ್ಥಾನದಲ್ಲಿಯೂ ಬಂದು ಮುಟ್ಟಿಕೊಂಡಿದ್ದಾನೆ ।೧೩॥

ಯೇಥ ಅರ್ಜುನಚಿ ಕಾಯ ಮ್ಹಣೋ ಪಾತಲಾ । ಆಣಿ ಆವಡತಯಾಹೀ ಸುಕಾಳು ಜಾಹಲಾ । ಜೇ ಗೀತಾರ್ಥು ಹಾ ಆಲಾ । ಮರ್ಹಾಠಿಯೇ ॥೧೪॥ ಯಾಚಿಲಾಗೀ ಮಾಝೀ । ವಿನವಿಲೇ ಆಇಕಿಜೇ । ತರೀ ಅವಧಾನ ದೀಜೇ । ಸಜ್ಜನೀ ತುಮ್ಹೀ ॥೧೫॥ ತೇವೀಂಚಿ ತುಮ್ಹಾ ಸಂತಾಚಿಯೇ ಸಭೇ । ಐಸೀ ಸಲಗೀ ಕೀರ ಕರೂ ನ ಲಭೇ । ಪರೀ ಮಾನಾವೇ ಜೇ ತುಮ್ಹೀ ಲೋಭೇ । ಅಪತ್ಯಾ ಮಜ ॥೧೬॥ ಅಹೋ ಪುಂಸಾ ಆಪಣಚಿ ಪಢವಿಜೇ । ಮಗ ಪಢೇ ತರೀ ಮಾಥಾ ತುಕಿಜೇ । ಕಾ ಕರವಿಲೇನಿ ಚೋಜೇ ನ ರಿಝೇ । ಬಾಳಕಾ ಮಾಯ ॥೧೭॥ ತೇವೀ ಮೀ ಜೇ ಜೇ ಬೋಲೇ । ತೇ ಪ್ರಭು ತುಮಚೇಂಚಿ ಶಿಕವಿಲೇ । ಮ್ಹಣೌನಿ ಅವಧಾರಿಜೋ ಆಪುಲೇ । ಆಪಣ ದೇವಾ ॥೧೮॥ ಹೇ ಸಾರಸ್ವತಾಚೇ ಗೋಡ । ತುಮ್ಹೀಂಚಿ ಲಾವಿಲೇ ಜೇ ಝಾಡ । ತರೀ ಆತಾ ಅವಧಾನಾಮೃತೇ ವಾಡ । ಸಿಂಪೋನಿ ಕೀಜೇ ॥೧೯॥ ಮಗ ಹೇ ರಸಭಾವ ಫುಲೀ ಫುಲೇಲ । ನಾನಾರ್ಥ ಫಳಭಾರೇ ಫಳಾ ಯೇಈಲ । ತುಮಚೇನಿ ಧರ್ಮೇ ಹೋಈಲ । ಸುರವಾಡು ಜಗಾ ॥೨೦॥ ಯಾ ಬೋಲಾ ಸಂತ ರಿಝಲೇ । ಮ್ಹಣತೀ ತೋಷಲೋ ಗಾ ಭಲೇ ಕೇಲೇ । ಆತಾ ಸಾಂಗೈ ಜೇ ಬೋಲಿಲೇ । ಅರ್ಜುನೇ ತೇಥ ॥೨೧॥ ತಂವ ನಿವೃತ್ತಿದಾಸ ಮ್ಹಣೇ । ಜೇ ಕೃಷ್ಣಾರ್ಜುನಾಂಚೇ ಬೋಲಣೇ । ಮೀ ಪ್ರಾಕೃತ ಕಾಯ ಸಾಂಗೋ ಜಾಣೇ । ಪರೀ ಸಾಂಗವಾ ತುಮ್ಹೀ ॥೨೨॥ ಅಹೋ ರಾನೀಚಿಯಾ ಪಾಲೇಖಾಯಿರಾ । ನೇವಾಣೇ ಕರವಿಲೇ ಲಂಕೇಶ್ವರಾ । ಏಕಲಾ ಅರ್ಜುನ ಪರಿ ಆಕ್ಷೌಹಿಣೀ ಅಕರಾ । ನ ಜಿಣೇಚಿ ಕಾಈ? ॥೨೩॥ ಮ್ಹಣೌನಿ ಸಮರ್ಥ ಜೇ ಜೇ ಕರೀ । ತೇ ನ ಹೋ ನ ಯೇ ಚರಾಚರೀ । ತುಮ್ಹೀ ಸಂತ ತಯಾಪರೀ । ಬೋಲವಾ ಮಾತೇ ?॥೨೪॥ ಆತಾ ಬೋಲಿಜತಸೇ ಆಇಕಾ । ಹಾ ಗೀತಾಭಾವ ನಿಕಾ । ಜೋ ಶ್ರೀವೈಕುಂಠನಾಯಕಾ । ಮುಖೌನಿ ನಿಘಾಲಾ ॥೨೫॥ ಬಾಪ ಬಾಪ ಗ್ರಂಥ ಗೀತಾ । ಜೋ ವೇದೀ ಪ್ರತಿಪಾದ್ಯ ದೇವತಾ । ತೋ ಶ್ರೀಕೃಷ್ಣವಕ್ತಾ । ಜಿಯೇ ಗ್ರಂಥೀ ॥೨೬॥ ತೇಥಿಂಚೇ ಗೌರವ ಕೈಸೇ ವಾನಾವೇ । ಜೇ ಶಂಭೂಚಿಯೇ ಮತೀ ನಾಗವೇ । ತೇ ಆತಾ ನಮಸ್ಕಾರಿಜೇ ಜೀವೇಭಾವೇ । ಹೇಂಚಿ ಭಲೇ ॥೨೭॥ ಮಗ ಆಇಕಾ ತೋ ಕಿರೀಟೀ । ಘಾಲೂನಿ ವಿಶ್ವರೂಪೀ ದಿಠೀ । ಪಹಿಲೀ ಕೈಸೀ ಗೋಠೀ । ಕರಿತಾ ಜಾಹಲಾ ॥೨೮॥

ಇಲ್ಲಿ ಅರ್ಜುನನು ಮಾತ್ರ ಬಂದನು ಎಂದು ಏಕೆ ಹೇಳಬೇಕು? ಈಗ ಗೀತೆಯ ಅರ್ಥವು ಮರಾಠಿಯಲ್ಲಿ ಆಗಿದ್ದಕ್ಕೆ ಯಾವ ಮನುಷ್ಯನಿಗಾದರೂ ಇಲ್ಲಿಯ ಸುಖದ ಸುಕಾಳವಾಗಿರುವುದು ।೧೪॥

ಇದಕ್ಕಾಗಿಯೇ ನನ್ನದೊಂದು ವಿನಂತಿ ಕೇಳಿರಿ. ಅದೇನೆಂದರೆ ಸಜ್ಜನರಾದ ನೀವುಗಳು ಈ ಕಡೆ ಲಕ್ಷವನ್ನು ಕೊಡಿರಿ ।೧೫॥

ಈ ನಿಮ್ಮ ಸಂತರ ಸಭೆಯಲ್ಲಿ ನಾನು ಇಷ್ಟೊಂದು ಸಲಿಗೆಯಿಂದ ಮಾತನಾಡುವುದು ಯೋಗ್ಯವಲ್ಲ, ಆದರೆ ನೀವು ನನಗೆ ಪ್ರೇಮದಿಂದ ನಿಮ್ಮ ಕೂಸಿನಂತೆ ತಿಳಿಯಿರಿ ।೧೬॥

ಅಹೋ, ಗಿಳಿಗೆ ತಾನೇ ಕಲಿಸುವವನು ಮತ್ತು ತಾನೇ ಕಲಿಸಿದ್ದು ಹೇಳಿದ ಮೇಲೆ ತನ್ನ ತಲೆ ತೂಗಿಸುವನು. ಅಥವಾ ತಾಯಿಯು ಮಗುವಿನೊಂದಿಗೆ ಏನಾದರೂ ಮಾಡಿಸಿ ಕೌತುಕದಿಂದ ಸಂತೋಷಪಡುವುದಿಲ್ಲವೇ? ।೧೭॥

ಅದರಂತೆಯೇ ಪ್ರಭುವೇ, ನಾನು ಏನೇನು ಹೇಳುವೆನೋ ಅದೆಲ್ಲವೂ ನೀವೇ ಕಲಿಸಿರುವಿರಿ. ಆದ್ದರಿಂದ ದೇವಾ, ನಿಮ್ಮ ಮಾತುಗಳನ್ನು ನೀವೇ ಶ್ರವಣ ಮಾಡಿರಿ ।೧೮॥

ನನ್ನ ಭಾಷಣವೆಂದರೆ ನೀವೇ ಹಚ್ಚಿದ ಸಿಹಿಯಾದ ಒಂದು ಜ್ಞಾನದ ಗಿಡವೇ ಆಗಿದೆ. ಅದಕ್ಕಾಗಿ ಇದಕ್ಕೆ ಏಕಾಗ್ರ ಅಂತಃಕರಣರೂಪ ನೀರಿನಿಂದ ಸಿಂಪಡಿಸಿ ಬೆಳೆಸಿರಿ ।೧೯॥

ಆಗ ಈ ಗಿಡಕ್ಕೆ ನವರಸಾದಿ ಹೂವುಗಳು ಬಿಟ್ಟು ಅನೇಕ ಪ್ರಕಾರಗಳ ಅರ್ಥರೂಪ ಫಲಗಳಿಂದ ತುಂಬಿ ಮತ್ತು ನಿಮ್ಮ ಧರ್ಮದಿಂದ ಸರ್ವಜಗತ್ತಿಗೆ ಸುಖ ಪ್ರಾಪ್ತವಾದೀತು ।೨೦॥

ಹೀಗೆ ಹೇಳಿದ ನಂತರ ಸಂತಜನರು ಪ್ರಸನ್ನರಾಗಿ ಹೇಳಿದರು:- ''ನಾವು ನಿನ್ನ ಮಾತುಗಳಿಂದ ಸಂತೋಷರಾಗಿದ್ದೇವೆ. ಈಗ ಅರ್ಜುನನು ಏನು ಹೇಳಿದನೆಂಬುದನ್ನು ಅಷ್ಟು ಹೇಳು'' ।೨೧॥

ಆಗ ನಿವೃತ್ತಿದದಾಸರಾದ ಶ್ರೀಜ್ಞಾನೇಶ್ವರರು ಹೇಳಿದರು:- ಕೃಷ್ಣಾರ್ಜುನರ ಸಂವಾದವನ್ನು, ನನಗೆ ಮರಾಠಿಯಲ್ಲಿ ಹೇಗೆ ಹೇಳಲು ಬಂದೀತು? ಆದರೆ ಅದನ್ನು ನೀವೇ ನನ್ನಿಂದ ಹೇಳಿಸಿರಿ ।೨೨॥

ಅಹೋ, ಅರಣ್ಯದಲ್ಲಿನ ಎಲೆಗಳನ್ನು ತಿನ್ನುವ ವಾನರರಿಂದ ಲಂಕಾದೀಶ ರಾವಣನ ಪರಾಭವ ಮಾಡಿಸಿದಿರಿ. ಅದರಂತೆ ಒಬ್ಬನೇ ಅರ್ಜುನನಿಂದ ಕೌರವರ ಹನ್ನೊಂದು ಅಕ್ಷೋಹಿಣೀ ಸೈನ್ಯವನ್ನು ಜಯಿಸಲಿಲ್ಲವೇ? ।೨೩॥

ಜಗತ್ತಿನಲ್ಲಿ ಸಮರ್ಥರು ಏನು ಮಾಡಬೇಕೆಂದು ಮನದಲ್ಲಿ ತರುವರೋ, ಅದು ಆಗಲಿಕ್ಕಿಲ್ಲವೆಂಬುದು ಇಲ್ಲ. ಅದರಂತೆಯೇ ತಾವು ಕೂಡ ಸಮರ್ಥರಿರುವಿರಿ. ಅದಕ್ಕಾಗಿ ನನ್ನಿಂದ ಗೀತಾರ್ಥವನ್ನು ಹೇಳಿಸಿರಿ ।೨೪॥

ಆಗ ವೈಕುಂಠನಾಯಕ ಶ್ರೀಕೃಷ್ಣನ ಮುಖದಿಂದ ಯಾವ ಗೀತೆಯ ನಿಜ ಭಾವಾರ್ಥ ಹೊರಡಿರುವುದನ್ನು ನಾನು ನಿಮಗೆ ಹೇಳುವೆ. ಈ ಕಡೆ ಲಕ್ಷವಿರಲಿ ।೨೫॥

ಧನ್ಯ ಧನ್ಯ ಈ ಗೀತಾಗ್ರಂಥ! ಏಕೆಂದರೆ ವೇದಗಳು ಯಾವ ಪರಮಾತ್ಮನ ಪ್ರತಿಪಾದನೆ ಮಾಡುವವೋ, ಆ ಪರಮಾತ್ಮನಾದ ಶ್ರೀಕೃಷ್ಣನು ಈ ಗ್ರಂಥದ ವಕ್ತಾನಾಗಿರುವನು ।೨೬॥

ಈ ಗೀತಾಶಾಸ್ತ್ರದ ಮಹತ್ತ್ವವು ಶಂಕರನ ಬುದ್ಧಿಗೂ ನಿಲುಕುವುದಿಲ್ಲ. ಅಂತಹ ಗೀತಾಶಾಸ್ತ್ರದ ಮಹತ್ತ್ವವನ್ನು ನಾನು ಹೇಗೆ ವರ್ಣಿಸಲಿ? ಅದಕ್ಕಾಗಿ ಇದಕ್ಕೆ ಜೀವಭಾವದಿಂದ ನಮಸ್ಕರಿಸುವುದೇ ಒಳಿತು ।೨೭॥

ಇಗ ಇನ್ನು ಮುಂದೆ ಅರ್ಜುನನು ವಿಶ್ವರೂಪ ನೋಡುವ ತನ್ನ ಇಚ್ಛೆಯನ್ನು ಪೂರ್ಣಗೊಳಿಸಲು ಚಾತುರ್ಯದಿಂದ ಮಾತಿನ ಉಪಕ್ರಮ ಹೇಗೆ ಮಾಡಿದನೆಂಬುದನ್ನು ಕೇಳಿರಿ ।೨೮॥

ಹೇ ಸರ್ವಹೀ ಸರ್ವೇಶ್ವರು । ಐಸಾ ಪ್ರತೀತಿಗತ ಜೋ ಪತಿಕರು । ತೋ ಬಾಹೇರೀ ಹೋಆವಾ ಗೋಚರು । ಲೋಚನಾಂಸೀ ।೨೯॥ ಹೇ ಜಿವಾಆಂತುಲೀ ಚಾಡ । ಪರೀ ದೇವಾಸಿ ಸಾಂಗತಾ ಸಾಂಕಡ । ಕಾ ಜೇ ವಿಶ್ವರೂಪ ಗೂಢ । ಕೈಸೇನಿ ಪುಸಾವೇ? ।೩೦॥ ಮ್ಹಣೇ ಮಾಗಾ ಕವಣೇ ಕಹೀ । ಜೇ ಪಢಿಯಂತೇನೇ ಪುಸಿಲೇ ನಾಹೀ । ತೇ ಸಹಸಾ ಕೈಸೇ ಕಾಈ । ಸಾಂಗಾ ಮ್ಹಣೋ ? ।೩೧॥ ಮೀ ಜರೀ ಸಲಗೀಚಾ ಚಾಂಗು । ತರೀ ಕಾಯ ಆಇಸೀಹೂನಿ ಅಂತರಂಗು । ಪರೀ ತೇಹೀ ಹಾ ಪ್ರಸಂಗು । ಬಿಹಾಲಿ ಪುಸೋ ।೩೨॥ ಮಾಝೀ ಆವಡೇ ತೈಸೀ ಸೇವಾ ಜಾಹಲೀ । ತರೀ ಕಾಯ ಹೋಈಲ ಗರುಡಾಚಿಯಾ ಯೇತುಲೀ? । ಪರೀ ತೋಹೀ ಹೇ ಬೋಲೀ । ಕರೀಚಿನಾ ।೩೩॥ ಮೀ ಕಾಯ ಸನಕಾದಿಕಾಹೂನಿ ಜವಳಾ । ಪರೀ ತಯಾಹೀ ನಾಗವೇಚಿ ಹಾ ಚಾಳಾ । ಮೀ ಆವಡೇನ ಕಾಯ ಪ್ರೇಮಳಾ । ಗೋಕುಳೀಂಚಿಯಾ ಐಸಾ? ।೩೪॥ ತಯಾಂತೇಹೀ ಲೇಕುರಪಣೇ ಝುಕವಿಲೇ । ಏಕಾಚೇ ಗರ್ಭವಾಸಹೀ ಸಾಹಿಲೇ । ಪರೀ ವಿಶ್ವರೂಪ ಹೇ ರಾಹವಿಲೇ । ನ ದಾವೀಚ ಕವಣಾ ।೩೫॥ ಹಾ ಠಾಯವರೀ ಗುಜ । ಯಾಚಿಯೇ ಆಂತರೀಂಚೇ ಹೇ ನಿಜ । ಕೇವೀ ಉರಾಉರೀ ಮಜ । ಪುಸೋ ಯೇ ಪಾ? ।೩೬॥ ಆಣಿ ನ ಪುಸೇಂಚಿ ಜರೀ ಮ್ಹಣೇ । ತರೀ ವಿಶ್ವರೂಪ ದೇಖಿಲಿಯಾವಿಣೇ । ಸುಖ ನೋಹೇಚಿ ಪರಿ ಜಿಣೇ । ತೇಹೀ ವಿಪಾಯೇ ।೩೭॥ ಮ್ಹಣೌನಿ ಆತಾ ಪುಸೋ ಅಳುಮಾಳಸೇ । ಮಗ ಕರೂ ದೇವಾ ಆವಡೇ ತೈಸೇ । ಯೇಣೇ ಪ್ರವರ್ತಲಾ ಸಾಧ್ವಸೇ । ಪಾರ್ಥು ಬೋಲೋ ।೩೮॥ ಪರೀ ತೇಂಚಿ ಐಸೇನಿ ಭಾವೇ । ಜೇ ಏಕಾ ದೋ ಉತ್ತರಾಸವೇ । ದಾವೀ ವಿಶ್ವರೂಪ ಆಘವೇ । ಝಾಡಾ ದೇಉನೀ ।೩೯॥ ಅಹೋ ವಾಂಸರೂ ದೇಖಿಲಿಯಾಚಿಸಾಠೀ । ಧೇನು ಖಡಬಡೋನಿ ಮೋಹೇ ಉಠೀ । ಮಗ ಸ್ತನಾ ಮುಖಾಚಿಯೇ ಭೇಟೀ । ಕಾಯ ಪಾನ್ಹಾ ಧರೇ? ।೪೦॥ ಪಾಹಾ ಪಾ ತಯಾ ಪಾಂಡವಾಚೇನಿ ನಾಂವೇ । ಜೋ ಕೃಷ್ಣ ರಾನೀಹೀ ಪ್ರತಿಪಾಳೂ ಧಾವೇ । ತಯಾತೇ ಅರ್ಜುನೇ ಜಂವ ಪುಸಾವೇ । ತಂವ ಸಾಹಿಲ ಕಾಈ? ।೪೧॥ ತೋ ಸಹಜೇಂಚಿ ಸ್ನೇಹಾಚೇ ಅವತರಣ । ಆಣಿ ಯೇರು ಸ್ನೇಹಾ ಘಾತಲೇ ಆಹೇ ಮಾಜವಣ । ಐಸಿಯೇ ಮಿಳವಣೇ ವೇಗಳೇಪಣ । ಉರೇ ಹೇಂಚಿ ಬಹು ।೪೨॥ ಮ್ಹಣೌನಿ ಅರ್ಜುನಾಚಿಯಾ ಬೋಲಾಸರಿಸಾ । ದೇವ ವಿಶ್ವರೂಪ ಹೋಈಲ ಆಪೈಸಾ । ತೋಚಿ ಪಹಿಲಾ ಪ್ರಸಂಗು ಐಸಾ । ಐಕಿಜೇ ತರೀ ।೪೩॥

ಈ ಎಲ್ಲವೂ ಸರ್ವೇಶ್ವರ ರೂಪವೆಂಬ ಅನುಭವಕ್ಕೆ ಬಂದ ಪರಮಾತ್ಮನನ್ನು ತನ್ನ ಮುಂದೆ ಕಣ್ಣಿನಿಂದ ಪ್ರತ್ಯಕ್ಷ ಕಾಣಿಸಬೇಕು ।೨೯॥

ಈ ಮನಸ್ಸಿನ ಇಚ್ಛೆಯು ನಿಜ. ಆದರೆ ಇದನ್ನು ದೇವರಿಗೆ ಕೇಳಲು ಸಂಕಟ ಎನಿಸುವುದು. ಕಾರಣ, ದೇವರ ವಿಶ್ವರೂಪವು ಗುಪ್ತವಾಗಿದೆ. ಅದನ್ನು ಪ್ರತ್ಯಕ್ಷ ಮಾಡಿ ತೋರಿಸಿರಿ ಎಂದು ಹೇಗೆ ಕೇಳಬೇಕು? ।೩೦॥

ಅರ್ಜುನನು ಹೇಳುವನು:- ಪೂರ್ವದಲ್ಲಿ ಯಾರೂ ಎಂದೂ ಅತ್ಯಂತ ಪ್ರಿಯರಾದವರೂ ಇದನ್ನು ಕೇಳಿಲ್ಲ. ಅದನ್ನು ಏಕಾಏಕಿ ಹೇಳಿರಿ ಎಂದು ಹೇಗೆ ಕೇಳಬೇಕು? ।೩೧॥

ನಾನೇನೋ, ಬಹಳ ಉತ್ತಮ ಪರಿಚಯದವನಿರಬಹುದು, ಆದರೆ ಮಾತೋಶ್ರೀ ಲಕ್ಷ್ಮೀಕ್ಕಿಂತಲೂ ಸಮೀಪದವನೇ? ಆದರೆ ಆಕೆಯು ಇಷ್ಟೊಂದು ಸಮೀಪವಿದ್ದರೂ ಇದನ್ನು ಕೇಳಲು ಭಯಪಟ್ಟಳು ।೩೨॥

ನನ್ನಿಂದ ಬೇಕಾದಷ್ಟು ಸೇವೆಯಾಗಿರಬಹುದು. ಆದರೆ ಗರುಡನ ಸೇವೆಯ ಸರಿಸಮಾನವಾಗಬಹುದೇ? ಆದರೆ ಇಷ್ಟೊಂದು ನಿಕಟ ಸೇವೆ ಮಾಡಿದ ಗರುಡನು ಸಹ ಈ ವಿಷಯದ ಮಾತೇ ಎತ್ತಿರುವುದಿಲ್ಲ ।೩೩॥

ನಾನು ಸನಕಾದಿಕರಿಗಿಂತಲೂ ಹೆಚ್ಚಿನ ಸಮೀಪದವನೇ? ಆದರೆ ಅವರಿಗೂ ಸಹ ಈ ಅಪೇಕ್ಷೆ ಮೂಡಿಲ್ಲ. ನಾನು ಗೋಕುಳದ ಪ್ರೇಮಳ ಗೋಪ ಗೋಪಿಯರಿಗಿಂತಲೂ ದೇವರಿಗೆ ಹೆಚ್ಚಿನ ಪ್ರಿಯತಮನೇ? ।೩೪॥

ಆದರೆ ಆ ಗೋಕುಳದ ಜನರಿಗೂ ತಾನು ಮಗು ಎಂಬ ಭಾವನೆ ತೋರಿಸಿ ಅವರಿಗೆ ವಂಚಿಸಿದನು. ಅಂಬಋಷಿಗಾಗಿ ಗರ್ಭವಾಸ ಸೋಸಿದನು. ಆದರೆ ತನ್ನ ವಿಶ್ವರೂಪವನ್ನು ಯಾರಿಗೂ ತೋರಿಸದೇ ಗುಪ್ತವಾಗಿಟ್ಟಿರುವನು ।೩೫॥

ಇಷ್ಟೊಂದು ಗುಹ್ಯವಾದ ಮಾತು, ಈತನ ಅಂತರ್ಯಾಮಿಯ ಮುಖ್ಯವಾದದ್ದು, ನನಗೆ ಒಮ್ಮೆಲೆ ಕೇಳಲು ಹೇಗೆ ಬಂದೀತು? ।೩೬॥

ಒಳ್ಳೆಯದು, ಕೇಳಬಾರದೆಂದರೆ ನನಗೆ ವಿಶ್ವರೂಪ ನೋಡದ ಹೊರತು ಸಮಾಧಾನವೇ ಆಗಲಾರದು. ಇಷ್ಟೇ ಅಲ್ಲ, ನಾನು ಜೀವಂತ ಇರುವೆನೋ ಇಲ್ಲವೋ ಇದು ಸಹ ಸಂಶಯವೇ ಸರಿ ।೩೭॥

ಅದಕ್ಕಾಗಿ ಈಗ ಮೆಲ್ಲನೇ ಕೇಳೋಣ. ಆಗ ದೇವರ ಇಚ್ಛೆ ಹೇಗಿದೆಯೋ ಹಾಗೆ ಮಾಡೋಣ. ಈ ರೀತಿಯಲ್ಲಿ ಅರ್ಜುನನು ಹೆದರುತ್ತ ಹೇಳಲು ಆರಂಭಿಸಿದನು।೩೮॥

ಆದರೆ ಆತನು ಇಷ್ಟೊಂದು ಜಾಣತನದಿಂದ ಹೇಳಿದನು. ಅದೇನೆಂದರೆ ದೇವನು ಒಂದೆರಡು ಪ್ರಶ್ನೋತ್ತರದಲ್ಲಿಯೇ ತನ್ನ ವಿಶ್ವರೂಪವನ್ನೇ ಸಂಪೂರ್ಣವಾಗಿ ತೋರಿಸಿರಬೇಕು ।೩೯॥

ಆಕಳು ಕರುವನ್ನು ಕಂಡೊಡನೆಯೇ ಲಗುಬಗೆಯಿಂದ ಪ್ರೀತಿಯಿಂದ ಎದ್ದು ನಿಲ್ಲುವುದು. ಆಗ ಕರುವು ಮೊಲೆಯುಣ್ಣುವಾಗ ತೊರೆಯನ್ನು ಅದು ನಿಲ್ಲಿಸಬಹುದೇ? ।೪೦॥

ಹೀಗಿದೆ ನೋಡು, ಯಾವ ಪಾಂಡವರ ಸಂರಕ್ಷಣೆಗಾಗಿ ಶ್ರೀಕೃಷ್ಣ ಪರಮಾತ್ಮನು ಅರಣ್ಯಕ್ಕೆ ಧಾವಿಸಿದನು. ಆತನಿಗೆ ಅರ್ಜುನನು ಕೇಳಿದ್ದಕ್ಕೆ ಹೇಳಲು ತಡೆಯುವನೇ? ।೪೧॥

ಈತನು ಮೂರ್ತಿಮಂತ ಸ್ನೇಹವೇ ಆಗಿರುವನು. ಆ ಸ್ನೇಹಕ್ಕೆ ಅಮಲನ್ನು ತರುವ ಅರ್ಜುನನು ಈ ಉತ್ತೇಜಕ ಪದಾರ್ಥ ಹಾಕಿರುವನು. ಹೀಗೆ ಒಂದೇ ಆಗುವ ಪ್ರಸಂಗದಲ್ಲಿ ಬೇರೆಯಾಗಿ ಕಾಣುವರು. ಇದು ಬಹು ಚಮತ್ಕಾರವು ।೪೨॥

ಆದ್ದರಿಂದ ಅರ್ಜುನನು ಕೇಳಿದಾಕ್ಷಣ ದೇವನು ಸಹಜವಾಗಿಯೇ ವಿಶ್ವರೂಪ ಧಾರಣೆ ಮಾಡುವನು. ಈಗ ಆರಂಭದ ಪ್ರಸಂಗವನ್ನು ಕೇಳಿರಿ ।೪೩॥

ಅರ್ಜುನ ಉವಾಚ:-

ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಮ್ ।
ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ ॥೧॥

ಮಗ ಪಾರ್ಥು ದೇವಾತೇ ಮ್ಹಣೇ । ಜೇ ತುಮ್ಹೀ ಮಜಕಾರಣೇ । ವಾಚ್ಯ ಕೇಲೇ ಜೇ ನ ಬೋಲಣೇ । ಕೃಪಾನಿಧೇ ॥೪೪॥ ಜೈ ಮಹಾಭೂತೇ ಬ್ರಹ್ಮೀ ಆಟತೀ । ಜೀವ ಮಹದಾದೀಂಚೇ ಠಾಯ ಫಿಟತೀ । ತೈ ಜೇ ದೇವ ಹೋಊನಿ ಠಾಕತೀ । ತೇ ವಿಸವಿಣೇ ಶೇಷೀಂಚೇ ॥೪೫॥ ಹೋತೇ ಹೃದಯಾಚಿಯೇ ಪರಿವರೀ । ರೋವಿಲೇ ಕೃಪಾಣಾಚಿಯೇ ಪರೀ । ಶಬ್ದಬ್ರಹ್ಮಾ ಸಹೀ ಚೋರೀ । ಜಯಾಚೀ ಕೇಲಿ ॥೪೬॥ ತೇ ತುಮ್ಹೀ ಆಜಿ ಆಪುಲೇ । ಮಜಪುಢಾ ಹೀಯೇ ಫೋಡಿಲೇ । ಜಯಾ ಅಧ್ಯಾತ್ಮಾ ವೋವಾಳಿಲೇ । ಐಶ್ವರ್ಯ ಹರೇ ॥೪೭॥ ತೇ ವಸ್ತು ಮಜ ಸ್ವಾಮೀ । ಏಕಿಹೇಳಾ ದಿಧಲೀ ತುಮ್ಹೀ । ಹೇ ಬೋಲೋ ತರೀ ಆಮ್ಹೀ । ತುಜ ಪಾವೋನಿ ಕೈಂಚೇ॥೪೮॥ ಪರೀ ಸಾಚಚಿ ಮಹಾಮೋಹಾಚಿಯೇ ಪುರೀ । ಬುಡಾಲೇಯಾ ದೇಖೋನಿ ಸೀಸವರೀ । ತುವಾ ಆಪಣಪೇ ಘಾಲೋನಿ ಶ್ರೀಹರೀ । ಮಗ ಕಾಡಿಲೇ ಮಾತೇ ॥೪೯॥ ಏಕ ತೂ ವಾಂಚೂನಿ ಕಾಂಹೀ । ವಿಶ್ವೀ ದುಜಿಯಾಚೀ ಭಾಷ ನಾಹೀ । ಕೀ ಆಮುಚೇ ಕರ್ಮ ಪಾಹೀ । ಜೇ ಆಮ್ಹೀ ಆಥೀ ಮ್ಹಣೋ ॥೫೦॥ ಮೀ ಜಗೀ ಏಕ ಅರ್ಜುನು । ಐಸಾ ದೇಹೀ ವಾಹೇ ಅಭಿಮಾನು । ಆಣಿ ಕೌರವಾಂತೇ ಇಯಾ ಸ್ವಜನು । ಆಪುಲೇ ಮ್ಹಣೇ ॥೫೧॥ ಯಾಹೀವರೀ ಯಾಂತೇ ಮೀ ಮಾರೀನ । ಮ್ಹಣೇ ತೇಣೇ ಪಾಪೇ ಕೇ ರಿಗೇನ । ಐಸೇ ದೇಖತ ಹೋತೋ ದುಃಸ್ವಪ್ನ । ತೋ ಚೇವವಿಲಾ ಪ್ರಭು ॥೫೨॥ ದೇವಾ ಗಂಧರ್ವನಗರೀಚೇ ವಸ್ತೀ । ಸೋಡೂನಿ ನಿಘಾಲೋ ಲಕ್ಷ್ಮೀಪತೀ । ಹೋತೋ ಉದಕಾಚಿಯಾ ಆರ್ತೀ । ರೋಹಿಣೇ ಪೀತ ॥೫೩॥ ಜೇ ಕಿರಡೂ ತರೀ ಕಾಪಡಾಚೇ । ಪರೀ ಲಹರೀ ಏತ ಹೋತಿಯಾ ಸಾಚೇ । ಐಸೇ ವಾಯಾ ಮರತಯಾ ಜೀವಾಚೇ । ಶ್ರೇಯ ತುವಾ ಘೇತಲೇ ॥೫೪॥ ಆಪುಲೇ ಪ್ರತಿಬಿಂಬ ನೇಣತಾ । ಸಿಂಹ ಕುಹಾ ಘಾಲೀಲ ದೇಖೋನಿ ಆತಾ । ಐಸಾ ಧರಿಜೇ ತೇವೀ ಅನಂತಾ । ರಾಖಿಲೇ ಮಾತೇ ॥೫೫॥ ಏರ್ಹವೀ ಮಾಝಾ ತರೀ ಯೇತುಲೇವರೀ । ಏಥ ನಿಶ್ಚಯ ಹೋತಾ ಅವಧಾರೀ । ಜೇ ಆತಾಂಚಿ ಸಾತಾಹೀ ಸಾಗರೀ । ಏಕತ್ರ ಮಿಳಿಜೇ ॥೫೬॥

ಶ್ಲೋಕಾರ್ಥ :- ಅರ್ಜುನನು ಹೀಗೆಂದನು:- ಕೃಷ್ಣಾ! ನನ್ನ ಮೇಲೆ ದಯೆಯಿಂದ ಉತ್ತಮವಾದ ರಹಸ್ಯವಾದ ಅಧ್ಯಾತ್ಮ ಜ್ಞಾನವನ್ನು ಬೋಧಿಸಿದೆ. ಅದರಿಂದ ನನ್ನ ಮೋಹಾಂಧಕಾರವು ನಾಶವಾಯಿತು ।೧॥

ಆಗ ಪಾರ್ಥನು ದೇವನಿಗೆ ಅಂದನು:- ಹೇ ಕೃಪಾನಿಧಿಯೇ,ನೀವು ನನಗಾಗಿ ಶಬ್ದದೊಳಗಿನ ಗುಹ್ಯವನ್ನು ಹೇಳಿ ತೋರಿಸಿರುವಿರಿ ।೪೪॥

ಪಂಚ ಮಹಾಭೂತಗಳು ಬ್ರಹ್ಮದಲ್ಲಿ ಲೀನಗೊಳ್ಳುವುವು. ಹಾಗೂ ಜೀವ ಮತ್ತು ಮಾಯಾ ಲಯಗೊಳ್ಳುವುವು. ಆಗ ಪರಮಾತ್ಮನು ಧರಿಸಿದ ರೂಪವು ಅದು ಕೊನೆಯ ಸ್ವರೂಪವು ।೪೫॥

ಈ ಸ್ವರೂಪ ಸ್ಥಿತಿಯನ್ನು ವೇದಕ್ಕೂ ತಿಳಿಯದಂತೆ (ನೀವು ನಿಮ್ಮ) ಅಂತಃಕರಣರೂಪ ಮನೆಯಲ್ಲಿ ಕೃಪಣನಂತೆ ಹುಗಿದು ಇಟ್ಟದ್ದು ।೪೬॥

ಅದನ್ನು ಇಂದು ನೀವು ನಿಮ್ಮ ಅಂತಃಕರಣದಲ್ಲಿನ ಗುಪ್ತವಾದ ಮಾತು ನನ್ನಲ್ಲಿ ಪ್ರಕಟಿಸಿದಿರಿ. ಈ ಅಧ್ಯಾತ್ಮ ಜ್ಞಾನದ ಮೇಲೆ ಶಂಕರನು ತನ್ನ ಐಶ್ವರ್ಯವನ್ನು ನಿವಾಳಿಸಿ ಒಗೆದಿರುವನು ।೪೭॥

ಸ್ವಾಮಿಯೇ, ಇಂತಹ ವಸ್ತುವನ್ನು ತಾವು ನನಗೆ ಒಂದು ಕ್ಷಣದಲ್ಲಿ ಕೊಟ್ಟಿರುವಿರಿ. ಹೀಗೆ ಹೇಳಬೇಕೆಂದರೆ ನಾವು ನಿಮ್ಮಿಂದ ಬೇರೆಯಾದರೂ ಎಲ್ಲಿ ಇರುವೆವು? ।೪೮॥

ಆದರೆ ನಿಜವಾಗಿಯೂ ಮೋಹದ ಮಹಾಪೂರದಲ್ಲಿ ನಾನು ತಲೆಯವರೆಗೂ ಮುಳುಗುವುದನ್ನು ಕಂಡು ಶ್ರೀಕೃಷ್ಣನೇ ನೀವು ಸ್ವಂತ ಜಿಗಿದು ನನ್ನನ್ನು ಹೊರಗೆ ತಂದಿರುವಿರಿ ।೪೯॥

ಕೇವಲ ನಿಮ್ಮ ಹೊರತು ಈ ಜಗತ್ತಿನಲ್ಲಿ ಬೇರೆ ವಸ್ತುವೇ ಇಲ್ಲ. ಆದಾಗ್ಯೂ ನನ್ನ ಕರ್ಮ ಹೇಗಿದೆ ಎಂದರೆ "ದೇಹವೇ ನಾನು" ಎಂಬ ತಿರುಗಣೆಯಲ್ಲಿ ಬಿದ್ದು ನಿಮ್ಮಿಂದ ಭಿನ್ನನಾಗಿರುವೆ ಎಂದು ಸ್ಪಷ್ಟವಾಗಿ ಹೇಳುತ್ತಿದ್ದೇನೆ ।೫೦॥

ನಾನು ಈ ಜಗತ್ತಿನಲ್ಲಿ ಅರ್ಜುನನಾಗಿರುವೆ, ಹೀಗೆ ಈ ದೇಹದ ಅಭಿಮಾನವನ್ನು ಧರಿಸಿದ್ದೆ ಮತ್ತು ಈ ಕೌರವರಿಗೆ ಆಪ್ತರೆನ್ನುತ್ತಿದ್ದೆ ।೫೧॥

ಮತ್ತು ಇವರಿಗೆ ನಾನು ಕೊಲ್ಲುವವನು, ಮತ್ತು ಈ ಪಾಪದಿಂದ ನನಗೆ ಯಾವ ಶಿಕ್ಷೆ ಆಗಬಹುದು? ಈ ಪ್ರಕಾರದ ಕೆಟ್ಟ ಕನಸು ಕಾಣುತ್ತಿದ್ದೆ. ಆಗ ಪ್ರಭುವೇ, ನೀನು ಜಾಗೃತಗೊಳಿಸಿದೆ ।೫೨॥

ದೇವಾ, ಗಂಧರ್ವ (ಕಾಲ್ಪನಿಕ) ನಗರದ ವಸತಿ ಬಿಟ್ಟು ನಾನುಹೊರಗೆ ಬಂದೆನು. ಹೇ ಲಕ್ಷ್ಮೀಪತಿಯೇ, ನಾನು ನೀರಿನ ಇಚ್ಛೆಯಿಂದ ಮೃಗಜಲವನ್ನು ಕುಡಿಯುತ್ತಿದ್ದೆ ।೫೩॥

ವಸ್ತ್ರದ ಹಾವು ಇದ್ದರೂ, ನಿಜವಾದ ಹಾವು ಕಡಿದಿದೆ ಎಂದು ಭಾವಿಸಿ ವಿಷ ಏರಿದಂತೆ ಭಾಸವಾಗುತ್ತಿತ್ತು ಮತ್ತು ಮರಣದ ಭಯದ ದುಃಖದಲ್ಲಿ ಮುಳುಗುತ್ತಿರುವಾಗ ಅದರಿಂದ ತೆಗೆದ ಶ್ರೇಯಸ್ಸು ನಿನ್ನದಾಗಿದೆ ।೫೪॥

ಬಾವಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ ಸಿಂಹವು ಅದರಲ್ಲಿ ಜಿಗಿಯುವುದನ್ನು ಕಂಡು ಯಾರೋ ಅದನ್ನು ರಕ್ಷಿಸಿದಂತೆ ಅನಂತನೇ, ನಾನು ಅಜ್ಞಾನ ಸಾಗರದಲ್ಲಿ ಮುಳುಗುತ್ತಿದ್ದಾಗ ನನಗೆ ಹಿಡಿದು ರಕ್ಷಿಸಿದೆ ।೫೫॥

ಒಟ್ಟಿನಲ್ಲಿ ನನ್ನದು ಮಾತ್ರ, ಇಲ್ಲಿಯವರೆಗೆ ಈ ರೀತಿ ನಿಶ್ಚಯವಿತ್ತು. ಅದೇನೆಂದರೆ, ಈಗಲೇ ಸಪ್ತ ಸಮುದ್ರಗಳು ಒಂದೆಡೆ ಸೇರಿದರೂ ।೫೬॥

ಹೇ ಜಗಚಿ ಆಘವೇ ಬುಡಾವೇ । ವರೀ ಆಕಾಶಹೀ ತುಟೋನಿ ಪಡಾವೇ । ಪರೀ ಝುಂಜಣೇ ನ ಘಡಾವೇ । ಗೋತ್ರಜೇಶೀ ಮಜ ॥೫೭॥ ಐಸಿಯಾ ಅಹಂಕಾರಾಚಿಯೇ ವಾಢೀ । ಮಿಯಾ ಆಗ್ರಹಜಳೀ ದಿಧಲೀ ಹೋತೀ ಬುಡೀ । ಚಾಂಗಚಿ ತೂ ಜವಳಾ ಏರ್ಹವೀ ಕಾಢೀ । ಕವಣು ಮಾತೇ ॥೫೮॥ ನಾಥಿಲೇ ಆಪಣ ಪಾ ಏಕ ಮಾನಿಲೇ । ಆಣಿ ನವ್ಹತಯಾ ನಾಮ ಗೋತ್ರ, ಠೇವಿಲೇ । ಥೋರ ಪಿಸೇ ಹೋತೇ ಲಾಗಲೇ । ಪರಿ ರಾಖಿಲೇ ತುಮ್ಹೀ ॥೫೯॥ ಮಾಗಾ ಜಳತ ಕಾಢಿಲೇ ಜೋಹರೀ । ತೈ ತೇ ದೇಹಾಸೀಚ ಭಯ ಅವಧಾರೀ । ಆತಾ ಹೇ ಜೋಹರವಾಹರ ದುಸರೀ । ಚೈತನ್ಯಾಸಕಟ ॥೬೦॥ ದುರಾಗ್ರಹೇ ಹಿರಣ್ಯಾಕ್ಷೇ । ಮಾಝೀ ಬುದ್ಧಿ ವಸುಂಧರಾ ಸೂದಲೀ ಕಾಖೇ । ಮಗ ಮಾಹಾರ್ಣವ ಗವಾಕ್ಷೇ । ರಿಘೋನಿ ಠೇಲಾ ॥೬೧॥ ತೇಥ ತುಝೇನಿ ಗೋಸಾವೀಪಣೇ । ಏಕವೇಳ ಬುದ್ಧೀಚಿಯಾ ಠಾಯಾ ಯೇಣೇ । ಹೇ ದುಸರೇ ವರಾಹ ಹೋಣೇ । ಪಡಿಲೇ ತುಜ ॥೬೨॥ ಐಸೇ ಅಪಾರ ತುಝೇ ಕೇಲೇ ।ಏಕೀ ವಾಚಾ ಕಾಯ ಮೀ ಬೋಲೇ । ಪರೀ ಪಾಂಚಹೀ ಪಾಲವ ಮೋಕಲಿಲೇ । ಮಜಪ್ರತೀ ॥೬೩॥ ತೇ ಕಾಂಹೀ ನ ವಚೇಚಿ ವಾಯಾ । ಭಲೇ ಯಶ ಫಾವಲೇ ದೇವರಾಯಾ। ಜೇ ಸಾದ್ಯಂತ ಮಾಯಾ । ನಿರಿಸಿಲೀ ಮಾಝೀ ॥೬೪॥ ಆಜೀ ಆನಂದಸರೋವರೀಂಚೀ ಕಮಳೇ । ತೈಸೇ ಹೇ ತುಝೇ ಡೋಳೇ । ಆಪುಲಿಯಾ ಪ್ರಸಾದಾಚೀ ರಾಉಳೇ । ಜಯಾಲಾಗೀ ಕರಿತೀ ॥೬೫॥ ಹಾ ಹೋ ತಯಾಹೀ ಆಣಿ ಮೋಹಾಚೀ ಭೇಟೀ । ಹೇ ಕಾಯಸೀ ಪಾಬಳೀ ಗೋಠೀ? । ಕೇಉತೀ ಮೃಗಜಳಾಚೀ ವೃಷ್ಟೀ । ವಡವಾನಳೇಸೀ? ॥೬೬॥ ಆಣಿ ಮೀ ತಂವ ದಾತಾರಾ । ಯೇ ಕೃಪೇಚಿಯೇ ರಿಘೋನಿ ಗಾಭಾರಾ । ಘೇತ ಆಹೇ ಚಾರಾ । ಬ್ರಹ್ಮರಸಾಚಾ ॥೬೭॥ ತೇಣೇ ಮಾಝಾ ಜೇ ಮೋಹ ಜಾಯೇ । ಏಥ ವಿಸ್ಮೋ ಕಾಂಹೀ ಆಹೇ? । ತರೀ ಉದ್ಧರಲೋ ಕೀ ತುಝೇ ಪಾಯೇ । ಶಿವತಲೇ ಆಹಾತೀ ॥೬೮॥

ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।
ತ್ವತ್ತಃ ಕಮಲಪತ್ರಾಕ್ಷ ಮಾಹಾತ್ಮ್ಯಮಪಿ ಚಾವ್ಯಯಮ್ ॥೨॥

ಪೈ ಕಮಲಾಯತಡೋಳಸಾ । ಸೂರ್ಯಕೋಟಿ ತೇಜಸಾ । ಮಿಯಾ ತುಜಪಾಸೋನಿ ಮಹೇಶಾ । ಪರಿಸಿಲೇ ಆಜೀ ॥೬೯॥

ಅಥವಾ ಈ ಎಲ್ಲ ಜಗತ್ತು ಮುಳುಗಿ ಹೋದರೂ, ಅಥವಾ ಆಕಾಶವೂ ಕಳಚಿ ಬಿದ್ದರೂ ಚಿಂತೆಯಿಲ್ಲ. ಆದರೆ ಗೋತ್ರಜರಲ್ಲಿ ಯುದ್ಧ ಮಾಡುವ ಪ್ರಸಂಗ ನನಗೆ ಬರಬಾರದು ।೫೭॥

ಹೀಗೆ ಅಹಂಕಾರದಿಂದ ನಾನು ಆಗ್ರಹರೂಪ ನೀರಿನಲ್ಲಿ ಮುಳುಗುತ್ತಿದ್ದೆನು. ಆದರೆ ನೀವು ಸಮೀಪವಾಗಿದ್ದುದರಿಂದ ಒಳ್ಳೆಯದಾಯಿತು, ಇಲ್ಲದಿದ್ದರೆ ಅಲ್ಲಿಂದ ನನಗೆ ಯಾರು ಹೊರಗೆ ತರುತ್ತಿದ್ದರು ? ।೫೮॥

ವಾಸ್ತವಿಕವಾಗಿ ನಾನು ಯಾರೂ ಇರದೇ ಸುಮ್ಮನೇ ನಾನು ಯಾರೋ (ಅರ್ಜುನ) ಇದ್ದೇನೆ ಹೀಗೆ ಮನ್ನಿಸಿದೆ ಮತ್ತು ಯಾರೂ ಅಲ್ಲದ ಕೌರವರಿಗೆ ಆಪ್ತರು ಎಂದು ಹೆಸರಿಟ್ಟೆ. ಈ ಪ್ರಕಾರವಾಗಿ ನನಗೆ ದೊಡ್ಡ ಭ್ರಮೆಯಾಗಿತ್ತು, ಆದರೆ ನೀವು ನನ್ನ ರಕ್ಷಣೆ ಮಾಡಿದಿರಿ ।೫೯॥

ಪೂರ್ವದಲ್ಲಿ ಲಾಕ್ಷಗೃಹದಲ್ಲಿ ಉರಿಯುವಾಗ ಅದರಿಂದ ರಕ್ಷಿಸಿದಿರಿ. ಆಗ ದೇಹದ ಮಾತ್ರ ಭಯವಿತ್ತು. ಇದು ಈಗ ಬೇರೆ ಅಗ್ನಿ ಪೀಡೆ ಇದ್ದು ಇದರಲ್ಲಿ ನನ್ನ ಚೈತನ್ಯ ನಾಶವಾಗುತ್ತಿತ್ತು. ಇದರಿಂದ ನೀವು ನನಗೆ ಹೊರಗೆ ತೆಗೆದಿರುವಿರಿ ।೬೦॥

ದುರಾಗ್ರಹರೂಪ ಹಿರಣ್ಯಾಕ್ಷ ದೈತ್ಯನು ನನ್ನ ಬುದ್ಧಿರೂಪ ಪೃಥ್ವಿಯನ್ನು ಬಗಲಿಗೆ ಹಾಕಿಕೊಂಡು ಮೋಹರೂಪ ಸಮುದ್ರದ ಆಳವಾದ ನೀರಿನಲ್ಲಿ ಒಯ್ದನು ।೬೧॥

ಆಗ ನಿಮ್ಮ ಬೋಧೆಯ ಸಾಮರ್ಥ್ಯದಿಂದ ನಾನು ಒಮ್ಮೆಲೆ ಎಚ್ಚರಾದೆನು. ಇದು ನಿಮಗೆ ಎರಡನೆಯ ವರಾಹ ಅವತಾರ ಧರಿಸಬೇಕಾಯಿತು ।೬೨॥

ಈ ಪ್ರಕಾರವಾದ ನಿಮ್ಮ ಅಪಾರ ಮಹಾಕೃತ್ಯಗಳಿವೆ. ಅವುಗಳನ್ನು ನನ್ನ ಒಂದು ನಾಲಿಗೆಯಿಂದ ಹೇಗೆ ಬಣ್ಣಿಸಲು ಸಾಧ್ಯ? ಹೆಚ್ಚಿಗೇನು ಹೇಳಬೇಕು? ನೀವು ನನಗಾಗಿ ಪಂಚಪ್ರಾಣವನ್ನೇ ಅರ್ಪಿಸಿರುವಿರಿ ।೬೩॥

ಅದಕ್ಕಾಗಿ ದೇವರಾಯನೇ, ನಿಮ್ಮ ಶ್ರಮವು ವ್ಯರ್ಥವಾಗದೇ ಯಶಪ್ರಾಪ್ತಿಯಾಯಿತು. ಅದೇನೆಂದರೆ, ನನ್ನ ಅಜ್ಞಾನದ ಸಮೂಲ ನಾಶವಾಯಿತು ।೬೪॥

ಮಹಾರಾಜರೇ, ಆನಂದರೂಪ ಸರೋವರದಲ್ಲಿನ ಕಮಲದಂತೆ ನಿಮ್ಮ ನೇತ್ರಗಳು ನಿಮ್ಮ ಕೃಪಾಪ್ರಸಾದದ ಮಂದಿರಗಳನ್ನು ಸಿದ್ಧಗೊಳಿಸುವುವು ।೬೫॥

ಅಹೋ ದೇವನೇ, ಅದಕ್ಕೂ ಮೋಹಕ್ಕೂ ಗಂಟು ಬೀಳುವುದು ಎಂದರೆ ಎಷ್ಟು ತುಚ್ಛ ? ಮೃಗಜಲದ ಮಳೆಯು ವಡವಾನಳಕ್ಕೆ ಏನು ಮಾಡಲಾದೀತು ? ।೬೬॥

ಮತ್ತು ಹೇ ಕೃಷ್ಣನೇ, ನಾನು ಮಾತ್ರ ನಿನ್ನ ಕೃಪಾಮಂದಿರದ ಕೋಣೆಯಲ್ಲಿ ಪ್ರವೇಶಿಸಿ ಆತ್ಮಜ್ಞಾನದ ಪೂರ್ಣ ಅನುಭವ ಪಡೆಯುತ್ತಿರುವೆನು ।೬೭॥

ಅಂದಮೇಲೆ ಈಗ ನನ್ನ ಮೋಹವು ನಾಶವಾಯಿತು. ಇದರಲ್ಲೇನು ಆಶ್ಚರ್ಯವಿದೆ? ನಿಜವಾಗಿಯೂ ನಾನು ನಿನ್ನ ಪಾದದ ಆಣೆಯಾಗಿ ಹೇಳುವೆ ನಾನು ಉದ್ಧಾರನಾಗಿರುವೆ ।೬೮॥

ಶ್ಲೋಕಾರ್ಥ :- ಹೇ ಕಮಲದಳನೇತ್ರಾ! ಭೂತಕೋಟಿಯ ಉತ್ಪತ್ತಿ ಪ್ರಳಯಗಳನ್ನೂ, ಅಖಂಡವಾದ ನಿನ್ನ ಮಹಾತ್ಮೆಯನ್ನು ಸಹ ನೀನು ಹೇಳಿದ್ದನ್ನು ವಿಸ್ತಾರವಾಗಿ ಕೇಳಿದೆನು ।೨॥

ಹೇ ಕಮಲನಯನೇ, ಕೋಟಿ ಸೂರ್ಯ ತೇಜಸನೇ, ಮಹೇಶನೇ, ಇಂದು ನಿಮ್ಮಿಂದ ನಾನು ಹೀಗೆ ಕೇಳಿದೆ ।೬೯॥

ಇಯೇ ಭೂತೇ ಜಯಾಪರೀ ಹೋತೀ । ಅಥವಾ ಲಯಾ ಹನ ಜೈಸೇನಿ ಜಾತೀ । ತೇ ಮಜಪುಢಾ ಪ್ರಕೃತೀ । ವಿವಂಚಿಲೀ ದೇವೇ ॥೭೦॥ ಆಣಿ ಪ್ರಕೃತೀ ಕೀರ ಉಗಾಣಾ ದಿಧಲಾ । ವರಿ ಪುರುಷಾಚಾಹೀ ಠಾವೋ ದಾವಿಲಾ । ಜಯಾಚಾ ಮಹಿಮಾ ಪಾಂಘುರೋನಿ ಜಾಹಲಾ । ಥಡೌತಾ ವೇದು ॥೭೧॥ ಜೇ ಶಬ್ದರಾಶೀ ವಾಢೇ ಜಿಯೇ । ಕಾ ಧರ್ಮಾಐಶಿಯಾ ರತ್ನಾಂತೇ ವಿಯೇ । ತೇ ಏಥೀಂಚೇ ಪ್ರಭೇಚೇ ಪಾಯೇ । ವೋಳಗೇ ಮ್ಹಣೌನಿ ॥೭೨॥ ಐಸೇ ಅಗಾಧ ಮಾಹಾತ್ಮ್ಯ । ಜೇ ಸಕಳಮಾರ್ಗೈಕಗಮ್ಯ । ಜೇ ಸ್ವಾತ್ಮಾನುಭವ ರಮ್ಯ । ತೇ ಇಯಾಪರೀ ದಾವಿಲೇ ॥೭೩॥ ಜೈಸಾ ಕೇರು ಫಿಟಲಿಯಾ ಆಭಾಳೀ । ದಿಠೀ ರಿಗೇ ಸೂರ್ಯಮಂಡಳೀ । ಕಾ ಹಾತೇ ಸಾರೂನಿ ಬಾಬುಳೀ । ಜಳ ದೇಖಿಜೇ ॥೭೪॥ ನಾತರೀ ಉಕಲತಯಾ ಸಾಪಾಚೇ ವೇಢೇ । ಜೈಸೇ ಚಂದನಾ ಖೇಂವ ದೇಣೇ ಘಡೇ । ಅಥವಾ ವಿವಸೀ ಪಳೇ ಮಗ ಚಢೇ । ನಿಧಾನ ಹಾತಾ ॥೭೫॥ ತೈಸೀ ಪ್ರಕೃತೀ ಹೇ ಆಡ ಹೋತೀ । ತೇ ದೇವೇಂಚಿ ಸಾರೋನಿ ಪರೌತೀ । ಮಗ ಪರತತ್ತ್ವ ಮಾಝಿಯೇ ಮತೀ । ಶೇಜಾರ ಕೇಲೇ ॥೭೬॥ ಮ್ಹಣೌನಿ ಇಯೇವಿಷಯೀಂಚಾ ಮಜ ದೇವಾ । ಭರಂವಸಾ ಕೀರ ಜಾಹಲಾ ಜೀವಾ । ಪರೀ ಆಣೀಕ ಏಕ ಹೇವಾ । ಉಪನಲಾ ಅಸೇ ॥೭೭॥ ತೋ ಭಿಡಾ ಜರೀ ಮ್ಹಣೋ ರಾಹೋ । ತರೀ ಆನಾ ಕವಣಾ ಪುಸೋ ಜಾವೋ । ಕಾಯ ತುಜವಾಂಚೋನಿ ಠಾವೋ । ಜಾಣತ ಆಹೋ ಆಮ್ಹೀ ?॥೭೮॥ ಜಳಚರು ಜಳಾಚಾ ಆಭಾರು ಧರೀ । ಬಾಳಕ ಸ್ತನಪಾನೀ ಉಪರೋಧು ಕರೀ । ತರೀ ತಯಾ ಜಿಣಯಾ ಶ್ರೀಹರೀ । ಆನ ಉಪಾಯೋ ಅಸೇ ?॥೭೯॥ ಮ್ಹಣೌನಿ ಭೀಡ ಸಾಂಕಡೀ ನ ಧರವೇ । ಜೀವಾ ಆವಡೇ ತೇಂಹೀ ತುಜಪುಢಾ ಬೋಲಾವೇ । ತಂವ ರಾಹೇ ಮ್ಹಣೆತಲೇ ದೇವೇ । ಚಾಡ ಸಾಂಗೈ ॥೮೦॥

ಏವಮೇತದ್ಯಥಾತ್ಥ ತ್ವಮ್ ಆತ್ಮಾನಂ ಪರಮೇಶ್ವರ ।
ದ್ರಷ್ಟುಮಿಚ್ಛಾಮಿ ತೇ ರೂಪಂ ಐಶ್ವರಂ ಪುರುಷೋತ್ತಮ ॥೩॥

ಮಗ ಬೋಲಿಲಾ ತೋ ಕಿರೀಟೀ । ಮ್ಹಣೇ ತುಮ್ಹೀ ಕೇಲಿ ಜೇ ಗೋಠೀ । ತಿಯಾ ಪ್ರತೀತೀಚೀ ದಿಠೀ । ನಿವಾಲೀ ಮಾಝೀ ॥೮೧॥ ಆತಾ ಜಯಾಚೇನಿ ಸಂಕಲ್ಪೇ । ಹೇ ಲೋಕಪರಂಪರಾ ಹೋಯ ಹಾರಪೇ । ಜಯಾ ಠಾಯಾತೇ ಆಪಣಪೇ । ಮೀ ಐಸೇ ಮ್ಹಣಸೀ ॥೮೨॥

ಹೇ ದೇವನೇ, ಎಲ್ಲ ಭೂತಗಳು ಯಾರಿಂದ ಉತ್ಪನ್ನವಾಗುವುವು ಮತ್ತು ಯಾರಿಂದ ಲಯವಾಗುವುವು ಎಂಬ ಮಾಯೆಯನ್ನು ನೀವು ನನಗೆ ವಿಸ್ತಾರಪೂರ್ವಕವಾಗಿ ತಿಳಿಸಿರುವಿರಿ ||೨೦||

ಮತ್ತು ಪ್ರಕೃತಿಯ ಬಗ್ಗೆ ಎಲ್ಲವನ್ನು ನನ್ನ ಸ್ವರೂಪದ ಲೆಕ್ಕ ಕೊಟ್ಟಿರುವುದು ನಿಜ. ಇದಲ್ಲದೇ ಪುರುಷನ ಸ್ವರೂಪವನ್ನು ತೋರಿಸಿರುವಿರಿ. ಯಾವ ಪುರುಷನ ಮಹಿಮೆಯನ್ನು ಹೊದ್ದಿಕೊಂಡು ವೇದವು ಜ್ಞಾನಸಂಪನ್ನವಾಗಿದೆ ||೨೧||

ಯಾವ ವೇದ ಸ್ವರೂಪ ಶಬ್ದರಾಶಿಯು ಸರ್ವಜ್ಞತೆಯ ಉತ್ಕರ್ಷಕ್ಕೆ ಪ್ರಾಪ್ತವಾಗುವುದು ಮತ್ತು ಜೀವಂತ ಇರುವುದು. ಅಲ್ಲದೇ ಧರ್ಮದಂತಹ ರತ್ನಗಳಿಗೆ ಜನ್ಮ ಕೊಡುವುದು. ಈ ಶಬ್ದರಾಶಿಯು ಈ ಪುರುಷನ ಜ್ಞಾನಪ್ರಭೆಯ ಪಾದಸೇವೆ ಮಾಡುವುದು ಆದ್ದರಿಂದ ||೨೨||

ಹೇ ದೇವನೇ, ನಿಮ್ಮ ಅಗಾಧ ಮಹಾತ್ಮೆಯನ್ನು ಯಾವುದು ಎಲ್ಲ ಮಾರ್ಗದಿಂದ ಒಂದನ್ನೇ ತಿಳಿಯಲು ಯೋಗ್ಯ ಮತ್ತು ಆತ್ಮಾನುಭಾವದಿಂದ ಪರಿಪೂರ್ಣವಾದದ್ದನ್ನು ನೀವು ನನಗೆ ತೋರಿಸಿದಿರಿ ||೨೩||

ಮೋಡಗಳು ಇಲ್ಲದಾಗಲು ಆಕಾಶದಲ್ಲಿ ಸೂರ್ಯ ಮಂಡಲವು ದೃಷ್ಟಿಗೆ ಬೀಳುವುದು. ಅಥವಾ ಹಾವಸೆ (ಕಪ್ಪಿಜಂಡು) ಬದಿಗೆ ಸರಿಸಿದಾಗ ಸ್ವಚ್ಛವಾದ ಉದಕವು ದೃಷ್ಟಿಗೆ ಬೀಳುವುದು ||೨೪||

ಅಥವಾ ಚಂದನ ಗಿಡಕ್ಕೆ ಸುತ್ತಿಕೊಂಡ ಹಾವು ಬಿಚ್ಚಿ ಹೋದಾಗ ಆ ಗಿಡಕ್ಕೆ ಆಲಂಗಿಸಲು ಬರುವುದು. ಇಲ್ಲವೇ ಪಿಶಾಚವು ಇಲ್ಲದಾಗಲು ದ್ರವ್ಯವು ಕೈಗೆ ಸಿಗುವುದು ||೨೫||

ಆದರಂತೆ ಜ್ಞಾನದ ಅಡ್ಡವಾಗಿ ಇದ್ದ ಮಾಯೆಯನ್ನು ದೇವನು ಆಚೆಗೆ ಸರಿಸಿದ್ದರಿಂದ ನನ್ನ ಬುದ್ಧಿಗೆ ಬ್ರಹ್ಮತ್ವವು ಸಿಕ್ಕಿತು ||೨೬||

ಆದ್ದರಿಂದ ಹೇ ದೇವನೇ, ನಿಮ್ಮ ಅಗಾಧ ಶಕ್ತಿಯ ಪ್ರಭಾವವನ್ನು ನನ್ನ ಜೀವಕ್ಕೆ ಪೂರ್ಣ ಭರವಸೆಯಾಗಿದೆ. ಆದರೆ ನನಗೆ ಇನ್ನೊಂದು ಇಚ್ಛೆಯು ಉತ್ಪನ್ನವಾಗಿದೆ ||೨೭||

ಇದನ್ನು ನಾನು ಭಿಡೆಮಾಡಿ ನಿಮಗೆ ಕೇಳದಿದ್ದರೆ, ಬೇರೆ ಇನ್ನಾರಿಗೆ ಕೇಳಲು ಹೋಗಬೇಕು ? ಏಕೆಂದರೆ ನಿಮ್ಮ ಹೊರತಾಗಿ ನಮಗೆ ಬೇರೆ ಸ್ಥಳ ಗೊತ್ತಿದೆಯೇ ? ||೨೮||

ಮೀನುಗಳು ಜಲದ ಆಭಾರ ಮನ್ನಿಸಿ ಹೊರಗೆ ಇರಬೇಕೆಂದು ಮನದಲ್ಲಿ ತಂದರೆ, ಅಥವಾ ಬಾಲಕನು ತನ್ನ ತಾಯಿಯ ಹತ್ತಿರ ಮೇಲಿಂದ ಮೇಲೆ ಸ್ತನಪಾನ ಬೇಡುವ ಭಿಡೆ ಮಾಡಿದರೆ, ಶ್ರೀಹರಿಯೇ ಅವರಿಗೆ ಬದುಕಲು ಬೇರೆ ಮಾರ್ಗವು ಇದೆಯೇ ? ||೨೯||

ಆದ್ದರಿಂದ ಭಿಡೆ ಬಿಟ್ಟು ಮನಸ್ಸಿಗೆ ಬಂದ ಮಾತನ್ನು ನಿನಗೆ ಕೇಳಬೇಕು. ಹೀಗೆ ಅರ್ಜುನನು ಹೇಳಲು ಆಗ ದೇವನು, ಈಗ ಈ ನಿನ್ನ ಮಾತಿರಲಿ, ನಿನಗೆ ಎಂತಹ ಇಚ್ಛೆಯಾಗಿದೆ ಎಂಬುದನ್ನು ಹೇಳೆಂದನು ||೩೦||

ಶ್ಲೋಕಾರ್ಥ :- ಪರಮೇಶ್ವರಾ! ನೀನು ಹೇಳಿದ್ದು ಅಕ್ಷರಶಃ ನಿಜವಾಗಿದೆ. ಪುರುಷೋತ್ತಮಾ! ಆ ನಿನ್ನ ವಿಶ್ವರೂಪವನ್ನು ನೋಡಬೇಕೆಂದು ಕೋರುತ್ತೇನೆ ||೩||

ಆಗ ಅರ್ಜುನನು ಹೇಳಿದನು:- ದೇವಾ, ನೀವು ಯಾವ ಮಾತುಗಳನ್ನು ಹೇಳಿರುವಿರೋ, ಅವುಗಳ ಅನುಭವದಿಂದ ನನ್ನ ದೃಷ್ಟಿಯು ಶಾಂತವಾಗಿದೆ ||೩೧||

ಈಗ ಯಾರ ಸಂಕಲ್ಪದಿಂದ ಈ ಎಲ್ಲ ಜಗವು ಉತ್ಪನ್ನವಾಗಿ ಮತ್ತು ಲಯಗೊಳ್ಳುವುದೋ ಆ ಸ್ಥಾನಕ್ಕೆ ನೀವು ಅದು ನನ್ನ ಸ್ವರೂಪ ಎನ್ನುವಿರಿ ||೩೨||

ತೇ ಮುದ್ದಲ ರೂಪ ತುರ್ಝೇ । ಜೇಥೂನಿ ಇಯೇ ದ್ವಿಭುಜೇ ಹನ ಚತುರ್ಭುಜೇ । ಸುರಕಾರ್ಯಾಚೇನಿ ವ್ಯಾಜೇ । ಘೇವೋಘೇವೋ ಯೇಸಿ ।೮೩॥ ಪೈ ಜಳಶಯನಾಚಿಯಾ ಅವಗಣಿಯಾ । ಕಾ ಮತ್ಸ್ಯ ಕೂರ್ಮ ಇಯಾ ಮಿರವಣಿಯಾ । ಖೇಳು ಸರಲಿಯಾ ತೂ ಗುಣಿಯಾ । ಸಾಂಠವಿಸೀ ಜೇಥ ।೮೪॥ ಉಪನಿಷದೇ ಜೇ ಗಾತೀ । ಯೋಗಿಯೇ ಹೃದಯೀ ರಿಗೋನಿ ಪಾಹಾತಿ । ಜಯಾತೇ ಸನಕಾದಿಕ ಆಹಾತೀ । ಪೋಟಾಳುನಿಯಾ ।೮೫॥ ಐಸೇ ಅಗಾಧ ಜೇ ತುರ್ಝೇ । ವಿಶ್ವರೂಪ ಕಾನೀ ಐಕಿಜೇ । ತೇ ದೇಖಾವಯಾ ಚಿತ್ತ ಮಾರ್ಝೇ । ಉತಾವೀಳ ದೇವಾ ।೮೬॥ ದೇವೇ ಫೇಡೋನಿಯಾ ಸಾಂಕಡ । ಲೋಭೇ ಪುಸಿಲೀ ಜರೀ ಚಾಡ । ತರೀ ಹೇಂಚಿ ಏಕೀ ವಾಡ । ಆರ್ತೀ ಜೇ ಮಜ ।೮೭॥ ತುರ್ಝೇ ವಿಶ್ವರೂಪ ಆಘವೇ । ಮಾರ್ಝಿಯೇ ದಿಠೀಸಿ ಗೋಚರ ಹೋಆವೇ । ಐಶೀ ಥೋರ ಆಸ ಜೀವೇ । ಬಾಂಧೋನಿ ಆಹೇ ।೮೮॥

ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।
ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಮ್ ।೪॥

ಪರೀ ಆಣೀಕ ಏಕ ಏಥ ಶಾರ್ಙ್ಗೀ । ತುಜ ವಿಶ್ವರೂಪಾತೇ ದೇಖಾವಯಾ ಲಾಗೀ । ಪೈ ಯೋಗ್ಯತಾ ಮಾರ್ಝಿಯಾ ಆಂಗೀ । ಅಸೇ ಕೀ ನಾಹೀ ।೮೯॥ ಹೇ ಆಪಲೇ ಆಪಣ ಮೀ ನೇಣೇ । ತೇ ಕಾ ನೇಣಸೀ ಜರೀ ದೇವ ಮ್ಹಣೇ । ತರೀ ಸರೋಗು ಕಾಯ ಜಾಣೇ । ನಿದಾನ ರೋಗಾಚೇ? ।೯೦॥ ಆಣಿ ಜೇ ಆರ್ತೀಚೇನಿ ಪಡಿಭರೇ । ಆರ್ತು ಆಪುಲೀ ರಾಕೀ ಪೈ ವಿಸರೇ । ಜೈಸಾ ತಾನ್ಹೇಲಾ ಮ್ಹಣೇ ನ ಪುರೇ । ಸಮುದ್ರ ಮಜ ।೯೧॥ ಐಶಾ ಸಚಾಡಪಣಾಚಿಯಾ ಭುಲೀ । ನ ಸಾಂಭಾಳವೇ ಸಮಸ್ಯಾ ಆಪುಲೀ । ಯಾಲಾಗೀ ಯೋಗ್ಯತಾ ಜೇವೀ ಮಾಉಲೀ । ಬಾಳಕಾಚೀ ಜಾಣೇ ।೯೨॥ ತಯಾಪರೀ ಶ್ರೀಜನಾರ್ದನಾ । ವಿಚಾರಿಜೋ ಮಾರ್ಝೀ ಸಂಭಾವನಾ । ಮಗ ವಿಶ್ವರೂಪದರ್ಶನಾ । ಉಪ್ರಕಮು ಕೀಜೇ ।೯೩॥ ತರೀ ಐಶೀ ತೇ ಕೃಪಾ ಕರಾ । ಏರ್ಹವೀ ನವ್ಹೇ ಹೇ ಮ್ಹಣಾ ಅವಧಾರಾ । ವಾಯಾ ಪಂಚಮಾಲಾಪೇ ಬಧಿರಾ । ಸುಖ ಕೇಉತೇ ದೇಣೇ? ।೯೪॥ ಏರ್ಹವೀ ಯೇಕಲೇ ಬಾಪಿಯಾಚೇ ತೃಷೇ । ಮೇಘ ಜಗಾಪುರತೇ ಕಾಯ ನ ವರ್ಷೇ? । ಪರೀ ಜಹಾಲೀಹೀ ವೃಷ್ಟಿ ಉಪಖೇ । ಜರ್ಹೀ ಖಡಕೀ ಹೋಯ ।೯೫॥

ಈ ನಿಮ್ಮ ಮುಖ್ಯ ಸ್ವರೂಪವು ದೇವತೆಗಳ ಸಂಕಟಗಳನ್ನು ನಿವಾರಿಸುವ ನಿಮಿತ್ತದಿಂದ ದ್ವಿಭುಜ, ಚತುರ್ಭುಜ ಹೀಗೆ ರೂಪಗಳನ್ನು ಧರಿಸಿ ನೀವು ಬರುವಿರಿ ।೮೩॥

ಕ್ಷೀರಾಬ್ಧಿಯ ಶೇಷ ಶಯನದ ಆರಂಭದಿಂದ ಮತ್ಸ್ಯ, ಕೂರ್ಮಾದಿ ಅವತಾರ ಧರಿಸಿ ಎಲ್ಲ ಅವತಾರ ಕಾರ್ಯ ಮುಗಿದ ಮೇಲೆ ಹೇ ಗಾರುಡಿ ಶ್ರೀಕೃಷ್ಣನೇ, ಆ ಸ್ಥಳಕ್ಕೆ ನೀವು ಪುನಃ ಹೋಗುವಿರಿ ।೮೪॥

ಉಪನಿಷತ್‌ಗಳು ಯಾರ ಗುಣಗಾನ ಮಾಡುವುವೋ, ಯೋಗಿ ಜನರು ಹೃದಯದಲ್ಲಿ ಸ್ಮರಿಸಿ ಧ್ಯಾನ ಮಾಡುವರೋ, ಮತ್ತು ಸನಕಾದಿಕರು ಆಲಿಂಗಿಸಿಕೊಳ್ಳುವರೋ ।೮೫॥

ಇಂತಹ ಯಾವ ನಿಮ್ಮ ಅಗಮ್ಯ ವಿಶ್ವರೂಪವನ್ನು ಯಾವುದನ್ನು ಲೌಕಿಕದಲ್ಲಿ ಕೇಳುತ್ತೇವೆಯೋ ಅದನ್ನು ನೋಡುವುದಕ್ಕಾಗಿ ಹೇ ದೇವನೇ, ನನ್ನ ಚಿತ್ತವು ಬಹಳ ಚಡಪಡಿಸುತ್ತಿರುವುದು ।೮೬॥

ನೀವು ಮನದಲ್ಲಿನ ಸಂಕೋಚ ಬಿಟ್ಟು, ಪ್ರೇಮದಿಂದ ನನ್ನ ಇಚ್ಛೆ ಏನಿದೆ ಎಂದು ಕೇಳಿದರೆ, ಇದೇ ನನ್ನ ಬಲವತ್ತರವಾದ ಇಚ್ಛೆಯಾಗಿರುವುದು ।೮೭॥

ನಿಮ್ಮ ಎಲ್ಲ ವಿಶ್ವರೂಪವು ನನ್ನ ದೃಷ್ಟಿಗೆ ಗೋಚರವಾಗಬೇಕು. ಇಂತಹ ದೊಡ್ಡ ಆಸೆಯನ್ನು ನಾನು ನನ್ನ ಮನಸ್ಸಿನಿಂದ ಕಟ್ಟಿ ಇಟ್ಟಿದ್ದೇನೆ ।೮೮॥

ಶ್ಲೋಕಾರ್ಥ :- ಸ್ವಾಮೀ! ಅದನ್ನು ನೋಡಲು ಯೋಗ್ಯತೆ ನನಗಿರುವುದೆಂದು ನೀನು ತಿಳಿದರೆ ಹೇ ಯೋಗೇಶ್ವರಾ! ನಿನ್ನ ಅವ್ಯಯ ಸ್ವರೂಪವನ್ನು ನನಗೆ ತೋರಿಸು ।೪॥

ಆದರೆ, ಹೇ ಶಾರ್ಙ್ಗಧರನೇ, ಇನ್ನೊಂದು ನನಗೆ ಅನುಮಾನವಾಗುತ್ತಿದೆ. ಅದೇನೆಂದರೆ ನಿಮ್ಮ ವಿಶ್ವರೂಪ ನೋಡುವ ಯೋಗ್ಯತೆ ನನ್ನಲ್ಲಿ ಇದೆಯೋ ಇಲ್ಲವೋ ? ।೮೯॥

ಈಗ ನನ್ನದು ನನಗೇಯೇ ತಿಳಿಯುತ್ತಿಲ್ಲ. ಏಕೆ ತಿಳಿಯುವುದಿಲ್ಲವೆಂದು ಕೇಳಿದರೆ ನೋಡು ದೇವನೇ, ರೋಗಿಗೆ ತನ್ನ ರೋಗದ ಸ್ಥಿತಿಗತಿ ತಿಳಿಯುವುದೇ? ।೯೦॥

ಇನ್ನೊಂದು ಹೇಳಬೇಕೆಂದರೆ, ಇಚ್ಛೆಯ ಆಸಕ್ತಿಯು ಪ್ರಬಲವಾದ್ದರಿಂದ ಇಚ್ಛೆ ಮಾಡುವ ಮನುಷ್ಯನು ತನ್ನ ಯೋಗ್ಯತೆಯನ್ನು ಮರೆಯುವನು. ಅಥವಾ ನೀರಡಿಸಿದವನಿಗೆ ಸಮುದ್ರವೂ ಸಾಲದೇನೋ ಎಂಬಂತೆ ಭಾಸವಾಗುತ್ತದೆ ।೯೦॥

ಅದೇ ರೀತಿಯ ಪ್ರಬಲವಾದ ಇಚ್ಛೆಯಿಂದ ನನಗೆ ಹುಚ್ಚು ಹಿಡಿದಿರುವುದರಿಂದ ನನ್ನ ಇಚ್ಛೆಯನ್ನು ಆವರಿಸಲು ಬಾರದಾಗಿದೆ. ಆದ್ದರಿಂದ ತಾಯಿಯು ಯಾವ ಪ್ರಕಾರವಾಗಿ ತನ್ನ ಮಗುವಿನ ಯೋಗ್ಯತೆ ಅರಿತು ಅದರ ಇಚ್ಛೆ ಪೂರ್ಣಮಾಡುವಳೋ ।೯೨॥

ಅದರಂತೆಯೇ ಹೇ ಜನಾರ್ದನೇ, ನನ್ನ ಅಧಿಕಾರದ ವಿಚಾರ ಮಾಡಿ ಆಗ ನೀವು ನಿಮ್ಮ ವಿಶ್ವರೂಪವನ್ನು ತೋರಿಸಲು ಆರಂಭಿಸಿರಿ ।೯೩॥

ನನ್ನ ಅಧಿಕಾರವಿದ್ದರೆ ಮಾತ್ರ ಈ ಕೃಪೆ ಮಾಡಿರಿ. ಇಲ್ಲದಿದ್ದರೆ ನನಗೆ ಅಧಿಕಾರ ಇಲ್ಲವೆಂದು ಹೇಳಿರಿ. ಪಂಚಮ ಸ್ವರದ ಉತ್ತಮ ಗಾಯನವನ್ನು ಕೇಳಿ ಕಿವುಡನಿಗೆ ಹೇಗೆ ಸುಖ ಸಿಕ್ಕೀತು? ।೯೪॥

ಮೇಘವು ಒಂದು ಚಾತಕ ಪಕ್ಷಿಗಾಗಿ ಮಳೆಗರೆದು ಜಗತ್ತಿಗಾಗಿ ಅಲ್ಲವೆಂದೇನು ಅಲ್ಲ. ಆದರೆ ಅದೇ ಮಳೆಯು ಕಲ್ಲುಗಳ ಮೇಲಾದರೆ ವ್ಯರ್ಥವಾಗುವುದು ।೯೫॥

ಚಕೋರಾ ಚಂದ್ರಾಮೃತ ಘಾವಲೇ । ಯೇರಾ ಆಣ ವಾಹೂನಿ ಕಾಯ ವಾರಿಲೇ ? । ಪರೀ ಡೋಳ್ಯಾವೀಣ ಪಾಹಲೇ । ವಾಯ ಜಾಯ ॥೯೬॥ ಮ್ಹಣೌನಿ ವಿಶ್ವರೂಪ ತೋ ಸಹಸಾ । ದಾವಿಸೀ ಕೀರ ಹಾ ಭರವಸಾ । ಕಾ ಜೇ ಕಡಾಡಾ ಆಣಿ ಗಹಿಂಸಾ । ಮಾಜೀ ನಿತ್ಯ ನವಾ ತೂ ಕೀ ॥೯೭॥ ತುರ್ಝೀ ಔದಾರ್ಯ ಜಾಣೋ ಸ್ವತಂತ್ರ । ದೇತಾ ನ ಮ್ಹಣಸೀ ಪಾತ್ರಾಪಾತ್ರ । ಪೈ ಕೈವಲ್ಯ ಐಸೇ ಪವಿತ್ರ । ಜೇ ವೈರಿಯಾಂಹೀ ದಿಧಲೇ ॥೯೮॥ ಮೋಕ್ಷು ದುರಾರಾಧ್ಯು ಕೀರ ಹೋಯ । ಪರೀ ತೋಹೀ ಆರಾಧೀ ತುರ್ಝೀ ಪಾಯ । ಮ್ಹಣೌನಿ ಧಾಡಿಸೀ ತೇಥ ಜಾಯ। ಪಾಇಕು ಜೈಸಾ ॥೯೯॥ ತುವಾ ಸನಕಾದಿಕಾಂಚೇನಿ ಮಾನೇ । ಸಾಯುಜ್ಯೇ ಸೌರಸು ದಿಧಲಾ ಪೂತನೇ । ಜೇ ವಿಷಾಚೇನಿ ಸ್ತನಪಾನೇ । ಮಾರೂ ಆಲೀ ॥೧೦೦॥ ಹಾ ಗಾ ರಾಜಸೂಯ ಯಾಗಾಚಿಯಾ ಸಭಾಸದೀ? ದೇಖತಾ ತ್ರಿಭುವನಾಚೀ ಮಾಂದೀ । ಕೈಸಾ ಶತಧಾ ದುರ್ವಾಕ್ಯ ಶಬ್ದೀ । ನಿಸ್ತೇಜಿಲಾಸಿ ॥೧೦೧॥ ಐಶಿಯಾ ಅಪರಾಧಿಯಾ ಶಿಶುಪಾಳಾ । ಆಪಣಪೇ ಠಾವೋ ದಿಧಲಾ ಗೋಪಾಳಾ । ಆಣಿ ಉತ್ತಾನಚರಣಾಚಿಯಾ ಬಾಳಾ । ಕಾಯ ಧ್ರುವಪದಿ ಚಾಡ? ॥೧೦೨॥ ತೋ ವನ ಆಲಾ ಯಾಚಿಲಾಗಿ । ಜೇ ಬೈಸಾವೇ ಪಿತಯಾಚಿಯಾ ಉತ್ಸಂಗೀ । ಕೀ ತೋ ಚಂದ್ರಸೂರ್ಯಾದಿಕಾಪರಿಸ ಜಗೀ । ಶ್ಲಾಘ್ಯು ಕೇಲಾ ॥೧೦೩॥ ಐಸಾ ವನವಾಸಿಯಾ ಸಕಳಾ । ದೇತಾ ಏಕಚಿ ತೂ ಧಸಾಳಾ । ಪುತ್ರಾ ಆಳವಿತಾ ಅಜಾಮಿಳಾ । ಆಪಣಪೇ ದೇಸೀ ॥೧೦೪॥ ಜೇಣೇ ಉರಿ ಹಾಣಿತಲಾಸಿ ಪಾಂಪರಾ । ತಯಾಚಾ ಚರಣು ವಾಹಾಸೀ ದಾತಾರಾ । ಆಝುನೀ ವೈರಿಯಾಂಚಿಯಾ ಕಲೇವರಾ । ವಿಸಂಬಸೀನಾ ॥೧೦೫॥ ಐಸಾ ಅಪಕಾರಿಯಾ ತುರಝಾ ಉಪಕಾರು । ತೂ ಅಪಾತ್ರಿಹೀ ಪರೀ ಉದಾರು । ದೇ ದಾನ ಮ್ಹಣೌನಿ ದಾರವಂಟೇಕರು । ಜಾಹಲಾಸೀ ಬಳೀಚಾ ॥೧೦೬॥ ತೂಂತೇ ಆರಾಧೀನಾ ಆಯಕೇ । ಹೋತೀ ಪುಂಸಾ ಬೋಲಾವಿತ ಕೌತುಕೇ । ತಿಯೇ ವೈಕುಂಠೀ ತುವಾ ಗಣಿಕೇ । ಸುರವಾಡು ಕೇಲಾ ॥೧೦೭॥ ಐಸೀ ಪಾಹೂನಿ ವಾಯಾಣೇ ಮಿಷೇ । ಆಪಣಪೇ ದೇವೋ ಲಾಗಸೀ ವಾನಿವಸೇ । ತೋ ತೂ ಕಾ ಅನಾರಿಸೇ । ಮಜಲಾಗೀ ಕರಿಸೀ ॥೧೦೮॥ ಹಾ ಗಾ ದುಭತಯಾಚೇನಿ ಪವಾಡೇ । ಜೇ ಜಗಾಚೇ ಫೇಡಿ ಸಾಂಕಡೇ । ತಿಯೇ ಕಾಮಧೇನೂಚೇ ಪಾಡೇ । ಕಾಯ ಭುಕೇಲೇ ಠಾತೀ? ॥೧೦೯॥

ಚಂದ್ರ ಪ್ರಕಾಶದಿಂದ ಚಕೋರ ಪಕ್ಷಿಗೆ ಮಾತ್ರ ಅಮೃತ ಪ್ರಾಪ್ತವಾಗುವುದು ಮತ್ತು ಬೇರೆಯವರಿಗೆ ಆಣೆ ಯಾಕೆ ಇಟ್ಟಿದೇ? ದೃಷ್ಟಿ ಇಲ್ಲದೇ ಪ್ರಕಾಶವು ವ್ಯರ್ಥವಾಗುವುದು ॥೯೬॥

ಆದ್ದರಿಂದ ನೀವು ಬಹಳ ಮಾಡಿ ನನಗೆ ವಿಶ್ವರೂಪ ತೋರಿಸಬಹುದೆಂದು ನನಗೆ ಪೂರ್ಣ ಭರವಸೆ ಇದೆ. ಕಾರಣ, ಭಯಂಕರ ಅಥವಾ ಸುಂದರ ರೂಪ ತೋರಿಸುವ ನಿಮಗೆ ಅಲೌಕಿಕ ಶಕ್ತಿ ಇದೆ ॥೯೭॥

ಕಾರಣ, ನಿಮ್ಮ ಔದಾರ್ಯವು ಸ್ವತಂತ್ರವಿದೆ ಮತ್ತು ನಿಮ್ಮ ಮನದಲ್ಲಿ ಒಮ್ಮೆ ಕೊಡಬೇಕೆಂದು ಬಂದರೆ ಪಾತ್ರ, ಅಪಾತ್ರ ನೋಡುವುದಿಲ್ಲ. ಮೋಕ್ಷವೆಂಬ ಪವಿತ್ರ ಸ್ಥಾನವನ್ನು ನೀವು ವೈರಿಗಳಿಗೂ ಕೊಟ್ಟಿರುವಿರಿ ॥೯೮॥

ಮೋಕ್ಷವು ನಿಜವಾಗಿಯೂ ದುಷ್‌ಪ್ರಾಪ್ಯವಾಗಿರುವುದು. ಆದರೆ ಅದು ನಿಮ್ಮ ಪಾದಸೇವೆಯನ್ನು ಮಾಡುವುದು. ಆದ್ದರಿಂದ ಸೇವಕನಂತೆ ಕಳಿಸಿದಲ್ಲಿ ಹೋಗುವುದು ॥೯೯॥

ತನ್ನ ಸ್ತನದಲ್ಲಿ ವಿಷ ತುಂಬಿಕೊಂಡು ನಿಮ್ಮನ್ನು ಕೊಲ್ಲಲು ಬಂದ ಪೂತನಾ ರಾಕ್ಷಸಿಗೂ ಸನಕಾದಿಕರ ತುಲನೆಯಲ್ಲಿ ಸಾಯುಜ್ಯ ಮುಕ್ತಿಯನ್ನು ಕೊಟ್ಟಿರುವಿರಿ ॥೧೦೦॥

(ಧರ್ಮರಾಜನ) ರಾಜಸೂಯ ಯಜ್ಞದಲ್ಲಿ ತ್ರಿಭುವನದ ದೇವತೆಗಳು, ಋಷಿಗಳು ರಾಜರು ಕೂಡಿದ್ದರು. ಅಲ್ಲಿ ಯಾವನು ದುರ್ವಾಕ್ಯಗಳಿಂದ ನಿಮ್ಮನ್ನು ಅಪಮಾನಗೊಳಿಸಿದನೋ ॥೧೦೧॥

ಆ ಮಹಾಪರಾಧಿ ಶಿಶುಪಾಲನಿಗೂ ನೀವು ಸ್ವರೂಪತಾ ಮುಕ್ತಿಯನ್ನು ಕೊಟ್ಟಿರುವಿರಿ, ಮತ್ತು ಗೋಪಾಲನೇ, ಉತ್ತಾನಪಾದ ರಾಜನ ಮಗ ಧ್ರುವನಿಗೆ ಅಢಳಪದವಿಯ ಯೋಗ್ಯತೆ ಇತ್ತೇ? ॥೧೦೨॥

ತಂದೆಯ ತೊಡೆಯ ಮೇಲೆ ಕುಳಿತುಕೊಳ್ಳುವ ಅಪೇಕ್ಷೆಯಿಂದ ಆತನು ಅರಣ್ಯಕ್ಕೆ ಬಂದಿದ್ದನು. ಆದರೆ ನೀವು ಸೂರ್ಯಚಂದ್ರರಕ್ಕಿಂತಲೂ ಶ್ರೇಷ್ಠವಾದ ಸ್ಥಾನದಲ್ಲಿ ಸ್ಥಿರಗೊಳಿಸಿದಿರಿ ॥೧೦೩॥

ಈ ಪ್ರಕಾರವಾಗಿ ದುಃಖಿತರಿಗೆ ಉದಾರತನದಿಂದ ಕೊಡುವವನು ನೀನೊಬ್ಬನೇ, ಅಜಾಮೇಳನು ಸಾಯುವ ಸಮಯದಲ್ಲಿ ಪುತ್ರ ನಿಮಿತ್ಯ ನಾರಾಯಣ ನಾಮದ ಉಚ್ಚಾರಮಾಡಿದ ಆತನಿಗೆ ಮುಕ್ತಿ ಕೊಟ್ಟೆ ॥೧೦೪॥

ಪ್ರಭುವೇ, ಭೃಗುಋಷಿಯು ನಿಮ್ಮ ಎದೆಗೆ ಒದ್ದನು. ಆದರೆ ನೀವು ಆತನ (ಶ್ರೀವತ್ಸ ಲಾಂಛನ) ಪಾದವನ್ನು ಎದೆಗೆ ಧರಿಸಿರುವಿರಿ. ವೈರಿಯ ಶಂಕಾಸುರನ ದೇಹವಾದ ಶಂಖವನ್ನು ಮರೆಯದೇ ಕೈಯಲ್ಲಿ ಧರಿಸುವಿರಿ ॥೧೦೫॥

ಈ ಪ್ರಕಾರವಾಗಿ ಅಪಕಾರ ಮಾಡಿದವರಿಗೂ ನೀನು ಉಪಕಾರ ಮಾಡಿರುವೆ ಮತ್ತು ಯೋಗ್ಯತೆ ಇಲ್ಲದವರಿಗೂ ನೀನು ಉದಾರದಿಂದ ದಾನ ಮಾಡಿರುವೆ. ಬಲಿರಾಜನಲ್ಲಿ ದಾನ ಬೇಡಲು ಹೋಗಿ ಆತನ ದ್ವಾರಪಾಲಕನಾಗಿರುವೆ ॥೧೦೬॥

ನಿಮ್ಮ ಆರಾಧನೆಯನ್ನು ಮಾಡದ ನಿಮ್ಮ ಗುಣಾನುವಾದವನ್ನು ಕೇಳದ ಆ ಗಣಿಕೆಯು ಗಿಳಿಗೆ ನಿಮ್ಮ ಹೆಸರಿನಿಂದ ಕೂಗಿದಾಗ ಆಕೆಗೆ ವೈಕುಂಠ ಸುಖದ ಪ್ರಾಪ್ತ ಮಾಡಿ ಕೊಟ್ಟಿರುವೆ ॥೧೦೭॥

ಹೀಗೆ ಕ್ಷುಲ್ಲಕ ಕಾರಣಕ್ಕೂ ಆಕಸ್ಮಾತ್ ನೀನು ಸ್ವಸ್ವರೂಪವನ್ನು ಪ್ರಾಪ್ತಮಾಡಿಕೊಡುವ ನೀನು,ನನಗೆ ಬೇರೆ ಪಾಪ್ತಿ ಹೇಗೆ ಮಾಡಿಕೊಡುವೆ? ॥೧೦೮॥

ಹಿಂಡುವ ಮಹತ್ವದಿಂದ ಯಾವ ಕಾಮಧೇನು ಜಗತ್ತಿನ ಸಂಕಟಗಳನ್ನು ನಿವಾರಿಸುತ್ತದೆ. ಅಂದಮೇಲೆ ಇದರ ಕುರುವು ಉಪವಾಸ ಬೀಳಬಹುದೇ? ॥೧೦೯॥

ಮ್ಹಣೌನಿ ಮಿಯಾ ಜೇ ವಿನವಿಲೇ ಕಾಂಹಿ । ತೇ ದೇವ ನ ದಾಖವಿತೀ ಹೇ ಕೀರ ನಾಹಿ । ಪರೀ ದೇಖಾವಯಾಲಾಗೀ ದೇಈ । ಪಾತ್ರತಾ ಮಜ ।।೧೧೦।। ತುಝ್ಯೇ ವಿಶ್ವರೂಪ ಆಕಳೇ । ಐಸೇ ಜರೀ ಜಾಣಸೀ ಮಾಝ್ಯೇ ಡೋಳೇ । ತರೀ ಆರ್ತಿಚೇ ಡೋಹಳೇ । ಪುರವೀ ದೇವಾ ।।೧೧೧।। ಐಸೀ ಠಾಯೇಠಾವೋ ವಿನಂತಿ । ಜಂವ ಕರೂ ಸರಲಾ ಸುಭದ್ರಾಪತೀ । ತಂವ ತಯಾ ಷಡ್ಗುಣಚಕ್ರವರ್ತೀ । ಸಾಹವೇಚಿನಾ ।।೧೧೨।। ತೋ ಕೃಪಾಪೀಯೂಷಸಜಳು । ಆಣಿ ಯೇರು ಜವಳಾ ಆಲಾ ವರ್ಷಾಕಾಳು । ನಾನಾ ಶ್ರೀಕೃಷ್ಣ ಕೋಕಿಳು । ಅರ್ಜುನ ವಸಂತು ।।೧೧೩।। ನಾತರೀ ಚಂದ್ರಬಿಂಬ ವಾಟೋಳೇ । ದೇಖೋನಿ ಕ್ಷೀರಸಾಗರ ಉಚಂಬಳೇ । ತೈಸಾ ದುಣೇಂಹೀ ವರೀ ಪ್ರೇಮಬಳೇ । ಉಲ್ಲಸಿತು ಜಾಹಲಾ ।।೧೧೪।। ಮಗ ತಿಯೇ ಪ್ರಸನ್ನತೇಚೇನಿ ಆಟೋಪೇ । ಗಾಜೋನಿ ಮ್ಹಣಿತಲೇ ಸಕೃಪೇ । ಪಾರ್ಥಾ ದೇಖ ದೇಖ ಅಮುಪೇ । ಸ್ವರೂಪೇ ಮಾಝೀ ।।೧೧೫।। ಏಕ ವಿಶ್ವರೂಪ ದೇಖಾವೇ । ಐಸಾ ಮನೋರಥು ಕೇಲಾ ಪಾಂಡವೇ । ಕೀ ವಿಶ್ವರೂಪಮಯ ಆಘವೇ । ಕರೂನಿ ಘಾತಲೇ ।।೧೧೬।। ಬಾಪ ಉದಾರ ದೇವೋ ಅಪರಿಮಿತು । ಯಾಚಕ ಸ್ವೇಚ್ಛಾ ಸದೋದಿತು । ಅಸೇ ಸಹಸ್ರವರೀ ದೇತು । ಸರ್ವಸ್ವ ಆಪುಲೇ ।।೧೧೭।। ಅಹೋ ಶೇಷಾಚೇಹೀ ಡೋಳೇ ಚೋರಿಲೇ । ವೇದ ಜಯಾಲಾಗೀ ಝಕವಿಲೇ । ಲಕ್ಷ್ಮೀಯೇಹೀ ರಾಹವಿಲೇ । ಜಿವ್ಹಾರ ಜೇ ।।೧೧೮।। ತೇ ಆತಾ ಪ್ರಕಟುನೀ ಅನೇಕಧಾ । ಕರೀತ ವಿಶ್ವರೂಪದರ್ಶನಾಚಾ ಧಾಂದಾ । ಬಾಪ ಭಾಗ್ಯಾ ಅಗಾಧಾ । ಪಾರ್ಥಾಚಿಯಾ ।।೧೧೯।। ಜೋ ಜಾಗತಾ ಸ್ವಪ್ನಾವಸ್ಥೇ ಜಾಯೇ । ತೋ ಜೇವೀ ಸ್ವಪ್ನೀಚೇ ಆಘವೇ ಹೋಯೇ । ತೇವೀ ಅನಂತ ಬ್ರಹ್ಮಕಟಾಹ ಆಹೇ । ಆಪಣಚಿ ಜಾಹಲಾ ।।೧೨೦।। ತೇ ಸಹಸಾ ಮುದ್ರಾ ಸೋಡಿಲೀ । ಆಣಿ ಸ್ಥೂಳದೃಷ್ಟೀಚೀ ಜವನಿಕಾ ಫೇಡಿಲೀ । ಕಿಂಬಹುನಾ ಉಘಡಿಲೀ । ಯೋಗಋದ್ಧೀ ।।೧೨೧।। ಪರೀ ಹಾ ಹೇ ದೇಖೇಲ ಕೀ ನಾಹೀ । ಐಸೀ ಸೇಚಿ ನ ಕರೀ ಕಾಂಹೀ । ಏಕಸರಾ ಮ್ಹಣತಸೇ ಪಾಹೀ । ಸ್ನೇಹಾತುರ ।।೧೨೨।।

ಶ್ರೀ ಭಗವಾನುವಾಚ :-

ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।<br>ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ।।೫।।

ಆದ್ದರಿಂದ ನಾನು ಯಾವುದಕ್ಕಾಗಿ ವಿನಂತಿಸಿರುವೆನೋ ಆ ವಿಶ್ವರೂಪವನ್ನು ದೇವನು ನನಗೆ ತೋರಿಸಲಕ್ಕಿಲ್ಲವೆಂಬುದು ಎಂದೂ ಆಗುವುದಿಲ್ಲ, ಆದರೆ ಅದನ್ನು ನೋಡುವುದಕ್ಕಾಗಿ ನನಗೆ ಯೋಗ್ಯತೆಯನ್ನು ಕೊಡು ॥೧೧೦॥

ನಿಮ್ಮ ವಿಶ್ವರೂಪವನ್ನು ನಾನು ನನ್ನ ಕಣ್ಣಿನಿಂದ ನೋಡಬಲ್ಲೆ ಎಂಬ ವಿಶ್ವಾಸ ನಿಮಗಿದ್ದರೆ ಹೇ ದೇವರೇ, ವಿಶ್ವರೂಪವನ್ನು ನೋಡುವ ನನ್ನ ಬಯಕೆ ಪೂರ್ಣಗೊಳಿಸಿರಿ ॥೧೧೧॥

ಹೀಗೆ ಅರ್ಜುನನು ವಿನಂತಿ ಮಾಡುವುದೊಂದೇ ತಡ, ಇಷ್ಟರಲ್ಲಿ ಷಡ್‌ಗುಣ ಚಕ್ರವರ್ತಿಯಾದ ಶ್ರೀಕೃಷ್ಣನಿಗೆ ಸಹಿಸುವುದೇ ಆಗಲಿಲ್ಲ ॥೧೧೨॥

ಅರ್ಜುನನು ಮಳೆಗಾಲದಂತೆ, ಶ್ರೀಕೃಷ್ಣನು ಮಳೆಗಾಲದ ಕೃಪಾಮೃತಯುಕ್ತ ಮೇಘದಂತೆ ಕಂಡರು. ಅಥವಾ ಅರ್ಜುನನು ವಸಂತ ಋತುವಿನಂತೆ, ಶ್ರೀಕೃಷ್ಣನು ಮಂಜುಳ ಶಬ್ದ ಮಾಡುವ ಕೋಗಿಲೆಯಂತೆ ಕಂಡರು ॥೧೧೩॥

ಅಥವಾ ಪೂರ್ಣಚಂದ್ರ ಬಿಂಬವನ್ನು ಕಂಡು ಕ್ಷೀರ ಸಾಗರಕ್ಕೆ ಭರತಿ ಬರುವಂತೆ ಆ ಸಮುದ್ರದ ದುಪ್ಪಟ್ಟಕ್ಕಿಂತಲೂ ಅಧಿಕ ಪ್ರೇಮದಿಂದ ಶ್ರೀಕೃಷ್ಣನು ಉಕ್ಕೇರಿದನು ॥೧೧೪॥

ಆಗ ಕೃಪಾವಂತನಾದ ಶ್ರೀಕೃಷ್ಣನು ಪ್ರಸನ್ನತೆಯ ಭರದಲ್ಲಿ ದೊಡ್ಡ ಧ್ವನಿಯಿಂದ ಹೇಳಿದನು:- ಪಾರ್ಥಾ, ನನ್ನ ಅಗಣಿತ ರೂಪಗಳನ್ನು ನೋಡು ॥೧೧೫॥

ಅರ್ಜುನನ ಮನದಲ್ಲಿ ದೇವರ ಒಂದೇ ವಿಶ್ವರೂಪ ನೋಡುವ ಉದ್ದೇಶವಿತ್ತು. ಆದರೆ ಶ್ರೀಕೃಷ್ಣನು ಸರ್ವಜಗವು ವಿಶ್ವರೂಪಮಯವಾಗಿರುವುದನ್ನು ತೋರಿಸಿದನು ॥೧೧೬॥

ಪ್ರಭುವಿನ ಔದಾರ್ಯವು ಧನ್ಯವಾಗಿದೆ. ಆತನು ಅಪರಿಮಿತನಾಗಿರುವುದರಿಂದ ಕೇಳುವವನ ಇಚ್ಛೆಗಿಂತ ಸಾವಿರ ಪಟ್ಟಿನಿಂದ ಯಾವಾಗಲೂ ಸರ್ವಸ್ವವನ್ನು ಕೊಡುವನು ॥೧೧೭॥

ಅಹೋ, ಯಾವ ತನ್ನ ಗುಹ್ಯವಾದ ವಿಶ್ವರೂಪವನ್ನು ಶೇಷನ ಎರಡು ಸಾವಿರ ಕಣ್ಣಿಗೂ ತೋರಿಸಿಲ್ಲ. ವೇದಗಳಿಗೂ ವಂಚಿಸಿದನು ಮತ್ತು ಲಕ್ಷ್ಮಿಯಿಂದಲೂ ಇದನ್ನು ಗುಪ್ತವಾಗಿ ಇಟ್ಟನು ॥೧೧೮॥

ಈ ವಿಶ್ವರೂಪವನ್ನು ಈಗ ಅನೇಕ ಪ್ರಕಾರಗಳಿಂದ ಪ್ರಕಟಿಸಿ ಪ್ರಭು ತೋರಿಸುವನು. ಅರ್ಜುನನ ಭಾಗ್ಯವು ಧನ್ಯವಾಗಿದೆ ॥೧೧೯॥

ಒಬ್ಬನ ಜಾಗ್ರತಾವಸ್ಥೆಯಿಂದ ಸ್ವಪ್ನಾವಸ್ಥೆಗೆ ಹೋದಾಗ ಯಾವ ಪ್ರಕಾರವಾಗಿ ಸ್ವಪ್ನದಲ್ಲಿ ದೃಷ್ಟಿಗೆ ಬೀಳುವ ಎಲ್ಲ ಪದಾರ್ಥಗಳನ್ನು ತಾನೇ ಹೇಗೆ ಆಗುವನೋ ಅದರಂತೆ ಶ್ರೀಕೃಷ್ಣನು ತಾನೇ ಬ್ರಹ್ಮಾಂಡನಾದನು ॥೧೨೦॥

ಈತನು ತ್ವರೆಯಾಗಿ ಶ್ರೀಕೃಷ್ಣರೂಪ ಬಿಟ್ಟು ಅಜ್ಞಾನ ದೃಷ್ಟಿಯ ಪರದೆಯಿಂದ ಜನರಿಗೆ ಮನುಷ್ಯ ರೂಪ ಕಾಣುವ ಆ ಪರದೆಯನ್ನು ತೆಗೆದು ತನ್ನ ಸರ್ವಯೋಗಬಲವನ್ನು ಪ್ರಕಟಿಸಿದನು ॥೧೨೧॥

ಆದರೆ ಅರ್ಜುನನು ಈ ರೂಪ ನೋಡಬಲ್ಲನೋ ಇಲ್ಲವೋ ಎಂಬ ಸ್ಮರಣವು ಉಳಿಯದೇ ಒಮ್ಮೆಲೇ ಪ್ರೇಮದ ಭರದಿಂದ ''ನನ್ನ ರೂಪವನ್ನು ನೋಡು'' ಎಂದು ಹೇಳಹತ್ತಿದನು ॥೧೨೨॥

ಶ್ಲೋಕಾರ್ಥ :- ಭಗವಂತನು ಹೀಗೆಂದನು:- ಪಾರ್ಥಾ! ಪರಿಪರಿವಿಧಗಳಿಂದ ನೂರಾರು ಸಾವಿರಾರು ನನ್ನ ದಿವ್ಯರೂಪಗಳನ್ನು ನೋಡು ॥೫॥

ಅರ್ಜುನ ತುವಾ ಏಕ ದಾವಾ ಮ್ಹಣಿತಲೇ । ಆಣಿ ತೇಂಚಿ ದಾವೂ ತರೀ ಕಾಯ ದಾವಿಲೇ । ಆತಾ ದೇಖೇ ಆಘವೇ ಭರಿಲೇ । ಮಾಝ್ಯಾಚಿ ರೂಪೀ ॥೧೨೩॥ ಏಕೇ ಕೃಶೇ ಏಕೇ ಸ್ಥೂಳೇ । ಏಕೇ ರ್‍ಹಸ್ವೇ ಏಕೇ ವಿಶಾಳೇ । ಪೃಥುತರೇ ಸರಳೇ । ಅಪ್ರಾಂತೇ ಏಕೇ ॥೧೨೪॥ ಏಕೇ ಅನಾವರೇ ಪ್ರಾಂಜಳೇ । ಸವ್ಯಾಪಾರೇ ಏಕೇ ನಿಶ್ಚಳೇ । ಉದಾಸೀನೇ ಸ್ನೇಹಾಳೇ । ತೀವ್ರೇ ಏಕೇ ॥೧೨೫॥ ಏಕೇ ಘೂರ್ಣಿತೇ ಸಾವಧೇ । ಅಸಲಗೇ ಏಕೇ ಅಗಾಧೇ । ಏಕೇ ಉದಾರೇ ಅತಿಬದ್ಧೇ । ಕ್ರುದ್ಧೇ ಏಕೇ ॥೧೨೬॥ ಏಕೇ ಶಾಂತೇ ಸನ್ಮದೇ । ಸ್ತಬ್ಧೇ ಏಕೇ ಸಾನಂದೇ । ಗರ್ಜಿತೇ ನಿಃಶಬ್ದೇ । ಸೌಮ್ಯೇ ಏಕೇ ॥೧೨೭॥ ಏಕೇ ಸಾಭಿಲಾಷೇ ವಿರಕ್ತೇ । ಉನ್ನಿದ್ರಿತೇ ಏಕೇ ನಿದ್ರಿತೇ । ಪರಿತುಷ್ಟೇ ಏಕೇ ಆರ್ತೇ । ಪ್ರಸನ್ನೇ ಏಕೇ ॥೧೨೮॥ ಏಕೇ ಅಶಸ್ತ್ರೇ ಸಶಸ್ತ್ರೇ । ಏಕೇ ರೌದ್ರೇ ಅತಿ ಮಿತ್ರೇ । ಭಯಾನಕೇ ಏಕೇ ವಿಚಿತ್ರೇ । ಲಯಸ್ಥೇ ಏಕೇ ॥೧೨೯॥ ಏಕೇ ಜನಲೀಲಾವಿಲಾಸೇ । ಏಕೇ ಪಾಲನಶೀಲೇ ಲಾಲಸೇ । ಏಕೇ ಸಂಹಾರಕೇ ಸಾವೇಶೇ । ಸಾಕ್ಷಿಭೂತೇ ಏಕೇ ॥೧೩೦॥ ಏವಂ ನಾನವಿಧೇ ಪರೀ ಬಹುವಸೇ । ಆಣಿ ದಿವ್ಯತೇಜಪ್ರಕಾಶೇ । ತೇವೀಂಚಿ ಏಕಏಕಾಐಸೇ । ವರ್ಣಹೀ ನವ್ಹೇ ॥೧೩೧॥ ಏಕೇ ತಾತಲೇ ಸಾಡೇಪಂಧರೇ । ತೈಸೀ ಕಪಿಲವರ್ಣೇ ಅಪಾರೇ । ಏಕೇ ಸರ್ವಾಂಗೀ ಜೈಸೇ ಸೇಂದುರೇ । ಡವರಲೇ ನಭ ॥೧೩೨॥ ಏಕೇ ಸಾವಿಯಾಚಿ ಚುಳುಕೀ । ಜೈಸೇ ಬ್ರಹ್ಮಕಟಾಹ ಖಚಿಲೇ ಮಾಣಿಕೀ । ಏಕೇ ಅರುಣೋದಯಾಸಾರಿಖೀ । ಕುಂಕುವರ್ಣೇ ॥೧೩೩॥ ಏಕೇ ಶುದ್ಧಸ್ಫಟಿಕ ಸೋಜ್ವಳೇ । ಏಕೇ ಇಂದ್ರನೀಳಸುನೀಳೇ । ಏಕೇ ಅಂಜನವರ್ಣೇ ಸಕಾಳೇ । ರಕ್ತವರ್ಣೇ ಏಕೇ ॥೧೩೪॥ ಏಕೇ ಲಸತ್ಕಾಂಚನಸಮ ಪಿಂವಳೀ । ಏಕೇ ನವಜಲ ದಶ್ಯಾಮಳೀ । ಏಕೇ ಚಾಂಪೇಗೌರಿ ಕೇವಳೀ । ಹರಿತೇ ಏಕೇ ॥೧೩೫॥ ಏಕೇ ಸಪ್ತತಾಮ್ರತಾಂಬಡೀ । ಏಕೇ ಶ್ವೇತಚಂದ್ರ ಚೋಖಡೀ । ಐಸೀ ನಾನಾವರ್ಣೇ ರೂಪಡೀ । ದೇಖೇ ಮಾಝೀ ॥೧೩೬॥ ಹೇ ಜೈಸೇ ಕಾ ಆನಾನ ವರ್ಣ । ತೈಸೇ ಆಕೃತೀಹೀ ಅನಾರಿಸೇಪಣ । ಲಾಜಾ ಕಂದರ್ಪ ರಿಘಾಲಾ ಶರಣ । ತೈಸೀ ಸುಂದರೇ ಏಕೇ ॥೧೩೭॥ ಏಕೇ ಅತಿಲಾವಣ್ಯಸಾಕಾರೇ । ಏಕೇ ಸ್ನಿಗ್ಧವಪು ಮನೋಹರೇ । ಶೃಂಗಾರ ಶ್ರೀಯೇಚೀ ಭಾಂಡಾರೇ । ಉಘಡಿಲೀ ಜೈಸೀ ॥೧೩೮॥ ಏಕೇ ಪೀನಾವ ಯವ ಮಾಂಸಾಳೇ । ಏಕೇ ಶುಷ್ಕೇ ಅತಿವಿಕ್ರಾಳೇ । ಏಕೇ ದೀರ್ಘಕಂಠೇ ವಿತಾಳೇ । ವಿಕಟೇ ಏಕೇ ॥೧೩೯॥

ಅರ್ಜುನಾ, ನೀನು ನನ್ನ ಒಂದೇ ವಿಶ್ವರೂಪವನ್ನು ತೋರಿಸು ಎಂದಿದ್ದಕ್ಕೆ ಅದು ಒಂದನ್ನೇ ತೋರಿಸಿದರೆ ಯಾವ ವಿಶೇಷ ಎಂದು ಈಗ ನನ್ನ ಸ್ವರೂಪದಲ್ಲಿ ಎಲ್ಲ ಜಗತ್ತು ತುಂಬಿಕೊಂಡಿರುವುದನ್ನು ನೋಡು ।।೧೨೩।।

ಕೆಲವು ಕೃಶ, ಕೆಲವು ಸ್ಥೂಲ, ಕೆಲವು ಕುಳ್ಳ, ಕೆಲವು ಎತ್ತರ, ಕೆಲವು ಭಾರ, ಕೆಲವು ಹಗುರ ಮತ್ತು ಕೆಲವು ಅಮರ್ಯಾದ ।।೧೨೪।।

ಕೆಲವು ಅನಾವರ, ಕೆಲವು ಸರಳ, ಕೆಲವು ಉದ್ಯೋಗಸ್ಥ, ಕೆಲವು ಸುಮ್ಮನೇ ಕುಳಿತ, ಕೆಲವು ಉದಾಸೀನ, ಕೆಲವು ಪ್ರೇಮಯುಕ್ತ, ಮತ್ತು ಕೆಲವು ತೀವ್ರ ಬುದ್ಧಿಯ ।।೧೨೫।।

ಕೆಲವು ಧುಂದ, ಕೆಲವು ಸಾವಧ, ಕೆಲವು ನಿಗೂಢ, ಕೆಲವು ಗೂಢ, ಕೆಲವು ಉದಾರ, ಕೆಲವು ಕೃಪಣ, ಕೆಲವು ಕ್ರೋಧ ।।೧೨೬।।

ಕೆಲವು ಶಾಂತ, ಕೆಲವು ಮದಯುಕ್ತ, ಕೆಲವು ನಿರುಪಯೋಗಿ, ಕೆಲವು ಆನಂದಯುಕ್ತ, ಕೆಲವು ಒದರುವ, ಕೆಲವು ಮಾತನಾಡದ, ಕೆಲವು ಸೌಮ್ಯ ।।೧೨೭।।

ಕೆಲವು ಆಶೆಬಡುಕ, ಕೆಲವುನಿರಾಶೆ, ಕೆಲವು ಎಚ್ಚರಾದ, ಕೆಲವು ಮಲಗಿದ, ಕೆಲವು ಪರಿತುಷ್ಟ, ಕೆಲವು ಆರ್ತ, ಮತ್ತು ಕೆಲವು ಪ್ರಸನ್ನ ।।೧೨೮।।

ಕೆಲವು ಅಶಸ್ತ್ರ, ಕೆಲವು ಸಶಸ್ತ್ರ,ಕೆಲವು ರೌದ್ರ, ಕೆಲವು ಅತಿಮಿತ್ರ, ಕೆಲವು ಭಯಾನಕ, ಕೆಲವು ಪವಿತ್ರ, ಕೆಲವು ಸಮಾಧಿಸ್ತ ।।೧೨೯।।

ಕೆಲವು ಉತ್ಪನ್ನಲೀಲಾಮಗ್ನ , ಕೆಲವು ಕರ್ತ, ಕೆಲವು ಆವೇಶಯುಕ್ತ ಸಂಹಾರಕ, ಕೆಲವು ತಟಸ್ಥ ।।೧೩೦।।

ಈ ಪ್ರಕಾರವಾಗಿ ನಾನಾ ಪ್ರಕಾರವಾದ ಬಹಳಷ್ಟು ಮತ್ತು ತೇಜವುಳ್ಳ ಮತ್ತು ಬೇರೆ ಬೇರೆ ಬಣ್ಣದ್ದಾಗಿವೆ ।।೧೩೧।।

ಕೆಲವು ಕಾಸಿದ ಚೊಕ್ಕ ಬಂಗಾರದಂತೆ, ಕೆಲವು ಅನಂತ ರೂಪಗಳು ಕಂದಿಬಣ್ಣದಂತೆ ಮತ್ತು ಕೆಲವು ಸಿಂಧೂರದಿಂದ ಆಕಾಶ ಸವರಿದಂತೆ ।।೧೩೨।।

ಕೆಲವು ಎಲ್ಲ ಬ್ರಹ್ಮಾಂಡವೇ ಮಾಣಿಕ್ಯದಿಂದ ತುಂಬಿ ಶೋಭಿಸುವಂತೆ, ಕೆಲವು ಕೆಂಪು ಬಣ್ಣದ ಅರುಣೋದಯ ದಂತೆ ।।೧೩೩।।

ಕೆಲವು ಸ್ವಚ್ಛ ಬೆಳ್ಳಗೆ ಶುದ್ಧ ಸ್ಪಟಿಕಮಣಿಯಂತೆ, ಕೆಲವು ನೀಲಿ ಇಂದ್ರನೀಲ ಮಣಿಯಂತೆ, ಕೆಲವು ಕಪ್ಪು ಕಾಡಿಗೆ ಯಂತೆ, ಕೆಲವು ಕೆಂಪು ರಕ್ತದಂತೆ ।।೧೩೪।।

ಕೆಲವು ಹಳದಿ ಉತ್ತಮ ಬಂಗಾರದಂತೆ, ಕೆಲವು ಶ್ಯಾಮವರ್ಣ ಹೊಸ ಮೋಡಗಳಂತೆ, ಕೆಲವು ಬಿಳಿ ಬಣ್ಣ ನಾಗಸಂಪಿಗೆಯಂತೆ, ಕೆಲವು ಹಚ್ಚಹಸಿರು ಬಣ್ಣದಂತೆ ।।೧೩೫।।

ಕೆಲವು ಕೆಂಪಗೆ ಕಾದ ತಾಮ್ರದಂತೆ, ಕೆಲವು ಅತಿ ಶುಭ್ರ ಚಂದ್ರನಂತೆ, ಹೀಗೆ ನನ್ನ ನಾನಾ ಪ್ರಕಾರವಾದ ರೂಪಗಳನ್ನು ನೋಡು ।।೧೩೬।।

ಹೇಗೆ ಭಿನ್ನ ಭಿನ್ನ ಬಣ್ಣಗಳಿವೆಯೋ ಹಾಗೆಯೇ ಭಿನ್ನ ಭಿನ್ನ ಆಕೃತಿಗಳು ಇವೆ. ಈ ಯಾವ ಆಕೃತಿಗಳ ಸೌಂದರ್ಯಕ್ಕೆ ಮದನನೂ ಸಹ ನಾಚಿಕೆಪಟ್ಟು ಶರಣಾದನು ।।೧೩೭।।

ಕೆಲವು ಆಕಾರದಿಂದ ಅತಿ ಲಾವಣ್ಯ, ಕೆಲವು ತೇಜಪುಂಜ, ಕೆಲವು ಮನೋಹರ, ಶೃಂಗಾರ ಲಕ್ಷ್ಮೀಯ ಭಾಂಡಾರವೇ ತೆರೆದಂತೆ ಕಾಣುತ್ತಿವೆ ।।೧೩೮।।

ಕೆಲವು ತುಂಬಿದ ಮಾಂಸದ ಅವಯವಗಳ ಪುಷ್ಟ, ಕೆಲವು ಒಣಗಿದ, ಕೆಲವು ಭಯಂಕರ, ಕೆಲವು ಎತ್ತರ ಗೋಣಿನ, ಕೆಲವು ದೊಡ್ಡ ತಲೆಯ, ಕೆಲವು ಕುರೂಪ ।।೧೩೯।।

ಏವಂ ನಾನಾವಿಧಾಕೃತೀ । ಇಯಾ ಪಾಹತಾ ಪಾರು ನಾಹೀ ಸುಭದ್ರಾಪತೀ । ಯಯಾಂಚ್ಯಾ ಏಕೇಕೀ ಅಂಗಪ್ರಾಂತೀ । ದೇಖ ಪಾ ಜಗ ।।೧೪೦।।

ಪಶ್ಯಾದಿತ್ಯಾನ್ ವಸೂನ್ ರುದ್ರಾನ್ ಅಶ್ವಿನೌ ಮರುತಸ್ತಥಾ ।
ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ।।೬।।

ಜೇಥ ಉನ್ಮೀಲನ ಹೋತ ಆಹೇ ದಿಠೀ । ತೇಥ ಪಸರತಿ ಆದಿತ್ಯಾಂಚಿಯಾ ಸೃಷ್ಟೀ । ಪುಢತೀ ನಿಮೀಲನೀ ಮಿಠೀ । ದೇತ ಆಹಾತಿ ।।೧೪೧।। ವದನೀಂಚಿಯಾ ವಾಫೇ ಸವೇ । ಹೋತ ಜ್ವಾಳಾಮಯ ಆಘವೇ । ಜೇಥ ಪಾವಕಾದಿಕ ಪಾವೇ । ಸಮೂಹ ವಸೂಂಚಾ ।।೧೪೨।। ಆಣಿ ಭ್ರೂಲತಾಂಚೇ ಶೇವಟ । ಕೋಪೇ ಮಿಳೋ ಪಾಹತೀ ಏಕವಟ । ತೇಥ ರುದ್ರಗಣಾಂಚೇ ಸಂಘಾಟ । ಅವತರತ ದೇಖೇ ।।೧೪೩।। ಪೈ ಸೌಮ್ಯತೇಜಾ ವೋಲಾವಾ । ಮಿತಿ ನೇಣಿಜೇ ಅಶ್ವಿನೌದೇವಾ । ಶ್ರೋತ್ರೀ ಹೋತೀ ಪಾಂಡವಾ। ಅನೇಕ ವಾಯು ।।೧೪೪।। ಯಾಪರೀ ಏಕೇಕಾಚಿಯೇ ಲೀಳೇ । ಜನ್ಮತೀ ಸುರಸಿದ್ಧಾಂಚೇ ಕುಳೇ । ಐಸೀ ಅಪಾರೇ ಆಣಿ ವಿಶಾಳೇ । ರೂಪೇ ಇಯೇ ಪಾಹೀ ।।೧೪೫।। ಜಯಾತೇ ಸಾಂಗಾವಯಾ ವೇದ ಬೋಬಡೇ । ಪಹಾವಯಾ ಕಾಳಾಚೇಂಹೀ ಆಯುಷ್ಯ ಥೋಕಡೇ । ಧಾತಯಾಹೀ ಪರೀ ನ ಸಾಂಪಡೇ । ಠಾವ ಜಯಾಂಚಾ ।।೧೪೬।। ಜಯಾಂತೇ ವೇದತ್ರಯೀ ಕಧೀ ನಾಯಕೇ । ತಿಯೇ ಇಯೇ ಪ್ರತ್ಯಕ್ಷ ದೇಖ ಅನೇಕೇ । ಭೋಗೀ ಆಶ್ಚರ್ಯಾಚೇ ಕವತಿಕೇ । ಮಹಾಸಿದ್ಧೀ ।।೧೪೭।।

ಇಹೈಕಸ್ಥಂ ಜಗತ್ ಕೃತ್ಸ್ನಂ ಪಶ್ಯಾದ್ಯ ಸಚರಾಚರಮ್ ।
ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ।।೭।।

ಇಯಾ ಮೂರ್ತೀಚಿಯಾ ಕಿರೀಟೀ । ರೋಮಮೂಳೀ ದೇಖೇ ಪಾ ಸೃಷ್ಟೀ । ಸುರತರೂತಳವಟೀ । ತೃಣಾಂಕುರ ಜೈಸೇ ।।೧೪೮।। ಚಂಡವಾತಾಚೇನಿ ಪ್ರಕಾಶೇ । ಉಡತ ಪರಮಾಣು ದಿಸತೀ ಜೈಸೇ । ಭ್ರಮತ ಬ್ರಹ್ಮಕಟಾಹ ತೈಸೇ । ಅವಯವ ಸಂಧೀ ।।೧೪೯।। ಏಥ ಏಕೈಕಾಚಿಯಾ ಪ್ರದೇಶೀ । ವಿಶ್ವ ದೇಖ ವಿಸ್ತಾರೇಶೀ । ಆಣಿ ವಿಶ್ವಾಹೀ ಪರೌತೇ ಮಾನಸಿ । ಜರೀ ದೇಖಾವೇ ವರ್ತೇ ।।೧೫೦।। ತರೀ ಇಯೇಹೀ ವಿಷಯೀಂಚೇ ಕಾಂಹೀ । ಏಥ ಸರ್ವಥಾ ಸಾಂಕಡೇ ನಾಹೀ । ಸುಖೇ ಆವಡೇ ತೇ ಮಾಝಿಯಾ ದೇಹೀ । ದೇಖಸೀ ತೂ ।।೧೫೧।।

ಹೇ ಸುಭದ್ರಾಪತಿಯೇ, ಈ ಪ್ರಕಾರವಾಗಿ ನನ್ನ ರೂಪದ ಅನೇಕ ಆಕೃತಿಗಳು ಇವೆ ಮತ್ತು ಇವುಗಳನ್ನು ನೋಡಲು ಅಂತವೇ ಹತ್ತುವುದಿಲ್ಲ. ಒಂದೊಂದು ರೂಪದ ಒಂದೊಂದು ಅವಯವದ ಮೇಲೆ ಸರ್ವ ಜಗತ್ತು ತುಂಬಿಕೊಂಡಿದೆ. ಇದನ್ನು ನೋಡು ।।೧೪೦।।

ಶ್ಲೋಕಾರ್ಥ :- ಅರ್ಜುನಾ! ಆದಿತ್ಯರನ್ನು, ವಸುಗಳನ್ನು, ರುದ್ರರನ್ನು, ಅಶ್ವಿನೀ ದೇವತೆಗಳನ್ನು, ಮರುತರನ್ನು, ಅವು ಇವು ಎಂದೇಕೆ? ಕೇಳದ ತಿಳಿಯದ ಅದ್ಭುತ ಚಿತ್ರಗಳನ್ನು ನೋಡು, ಪುನಃ ನೋಡು ।।೬।।

ನನ್ನ ದೃಷ್ಟಿಯು ತೆಗೆದಾಕ್ಷಣ ಆದಿತ್ಯಾದಿ ದೇವತೆಗಳ ಉತ್ಪತ್ತಿಯಾಗುವುದು ಮತ್ತು ಮುಂದೆ ಅದೇ ದೃಷ್ಟಿಯು ಮುಚ್ಚಿದಾಕ್ಷಣ ಎಲ್ಲ ದೇವತೆಗಳು ಲಯಗೊಳ್ಳುವುವು ।।೧೪೧।।

ನನ್ನ ಮುಖದ ಶ್ವಾಸೋಚ್ಛ್ವಾಸದಿಂದ ಎಲ್ಲವೂ ಜ್ವಾಲಾಮಯವಾಗಿ ಆ ಜ್ವಾಲೆಯಿಂದ ಅಷ್ಟವಸುಗಳ ಸಮುದಾಯವು ಉತ್ಪನ್ನವಾಗುವುವು ।।೧೪೨।।

ನನ್ನ ಹುಬ್ಬುಗಳು ಕೋಪದಿಂದ ಒಂದೆಡೆ ಸೇರಿಕೊಂಡದ್ದು ಕಂಡಾಗ ಹನ್ನೊಂದು ರುದ್ರಗಣಗಳ ಉತ್ಪನ್ನವಾದದ್ದು ದೃಷ್ಟಿಗೆ ಬೀಳುವುದು ।।೧೪೩।।

ನನ್ನ ಸೌಮ್ಯ ಮುದ್ರೆಯಿಂದ ಅಸಂಖ್ಯ ಅಶ್ವಿನೀ ಕುಮಾರರು ಹುಟ್ಟುವರು ಮತ್ತು ಹೇ ಪಾಂಡವನೇ, ಕಿವಿಗಳಿಂದ ಅನೇಕ ವಾಯುಗಳು ಹುಟ್ಟುವುವು ।।೧೪೪।।

ಈ ಪ್ರಕಾರವಾಗಿ ನನ್ನ ಒಂದೊಂದು ಅವಯವಗಳ ಲೀಲೆಯಿಂದ ದೇವತೆಗಳು, ಸಿದ್ಧರ ಕುಲಗಳು ಹುಟ್ಟುವುವು. ಹೀಗೆ ಅಪಾರ ಮತ್ತು ವಿಶಾಲರೂಪಗಳನ್ನು ಇಲ್ಲಿ ನೋಡು ।।೧೪೫।।

ಈ ರೂಪ ವರ್ಣಿಸಲು ವೇದಗಳು ಕುಂಠಿತವಾದವು. ಈ ರೂಪ ನೋಡಲು ಕಾಲನ ಆಯುಷ್ಯವೂ ಸಾಕಾಗಲಿಲ್ಲ ಮತ್ತು ಈ ರೂಪದ ಸ್ಥಿತಿಗತಿ ಬ್ರಹ್ಮದೇವನಿಗೂ ಸಿಗಲಿಲ್ಲ ।।೧೪೬।।

ಮತ್ತು ಯಾರ ಹೆಸರು ಮೂರು ವೇದಗಳು ಎಂದೂ ಕೇಳಿರುವುದಿಲ್ಲ. ಇಂತಹ ನನ್ನ ಅನೇಕ ರೂಪಗಳನ್ನಿಲ್ಲಿ ಪ್ರತ್ಯಕ್ಷವಾಗಿ ನೋಡು ಮತ್ತು ಇದರ ಆರಂಭದಿಂದ ಆಶ್ಚರ್ಯಕಾರಕ ಲೀಲೆಯ ಮಹಾಸಿದ್ಧಿಯ ಉಪಭೋಗ ಪಡೆದುಕೊ ।।೧೪೭।।

ಶ್ಲೋಕಾರ್ಥ :- ಗುಡಾಕೇಶಾ! ಜಡಚೇತನಾತ್ಮಕವಾದ ಈ ವಿಶ್ವಜಗತ್ತು ಇದೋ ನನ್ನ ದೇಹದ ಯಾವುದೋ ಒಂದು ಮೂಲೆಯಲ್ಲಿದೆ. ಇನ್ನು ನೀನು ನೋಡಬೇಕೆಂದು ಬಯಸಿದ್ದನ್ನೇ ನೋಡು ।।೭।।

ಹೇ ಕಿರೀಟೀಯೇ, ಈ ರೂಪದ ರೋಮಗಳ ಮೂಲದಲ್ಲಿ ಇರುವ ಸೃಷ್ಟಿಯನ್ನು ನೋಡು. ಕಲ್ಪತರುವಿನ ಕೆಳಗಿರುವ ಕೋಮಲವಾದ ಹುಲ್ಲು ಬೆಳೆದಂತೆ ಇದೆ ।।೧೪೮।

ಬಿರುಗಾಳಿಗೆ ಸಿಕ್ಕು ಪೃಥ್ವಿಯ ಪರಮಾಣುಗಳು ಪ್ರಕಾಶದಲ್ಲಿ ಹಾರುವಾಗ್ಗೆ ತರಂಗತ ಇದ್ದದ್ದು ಕಾಣುವುವು. ಈ ಮೂರ್ತಿಯ ಪ್ರತಿಯೊಂದು ಅವಯವಗಳ ಸಂಧಿಯಿಂದ ಬ್ರಹ್ಮಾಂಡಗಳ ಸಮೂಹಗಳೇ ಭ್ರಮಣ ಮಾಡುತ್ತಿವೆ. ಹೀಗೆ ಕಾಣುವುದನ್ನು ನೋಡು ।।೧೪೯।।

ಈ ಒಂದೊಂದೇ ಸ್ವರೂಪದ ಅವಯವಗಳಲ್ಲಿ ಎಲ್ಲ ಬ್ರಹ್ಮಾಂಡಗಳು ತುಂಬಿಕೊಂಡಿವೆ. ಇಲ್ಲಿ ನೋಡು, ಪುನಃ ಒಂದು ವೇಳೆ ವಿಶ್ವದ ಆಚೆಗೆ ಇನ್ನು ನೋಡಬೇಕೆಂದರೆ ।।೧೫೦।।

ಅದಕ್ಕೂ ಏನೂ ತೊಂದರೆಪಡಬೇಕಾಗಿಲ್ಲ. ಈ ನನ್ನ ಶರೀರದಲ್ಲಿ ನಿನಗೆ ನೋಡಬೇಕೆನ್ನುವ ಎಲ್ಲವನ್ನು ಸುಖವಾಗಿ ನೋಡು ।।೧೫೧।।

ಐಸೇ ವಿಶ್ವಮೂರ್ತೀ ತೇಣೇ । ಬೋಲಿಲೇ ಕಾರುಣ್ಯಪೂರ್ಣೇ । ತಂವ ದೇಖತ ಆಹೇ ಕೀ ನಾಹೀ ನ ಮ್ಹಣೇ । ನಿವಾಂತುಚಿ ಯೇರು ॥೧೫೨॥ ಏಥ ಕಾ ಪಾ ಹಾ ಉಗಲಾ ? । ಮ್ಹಣೌನಿ ಶ್ರೀಕೃಷ್ಣೇ ಜಂವ ಪಾಹಿಲಾ । ತಂವ ಆರ್ತೀಚೇ ಲೇಣೇ ಲೇಇಲಾ । ತೈಸಾಚಿ ಆಹೇ ॥೧೫೩॥

ನ ತು ಮಾಂ ಶಕ್ಯಸೇ ದ್ರಷ್ಟುಂ ಅನೇನೈವ ಸ್ವಚಕ್ಷುಷಾ ।
ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್ ॥೮॥

ಮಗ ಮ್ಹಣೇ ಉತ್ಕಂಠೇ ವೋಹಟ ನ ಪಡೇ । ಅರ್ಜುನೀ ಸುಖಾಚೇ ಸೋಯ ನ ಸಾಂಪಡೇ । ಪರೀ ದಾವಿಲೇ ತೇ ಪುಢೇ । ನಾಕಳೇಚಿ ಯಯಾ ॥೧೫೪॥ ಹೇ ಬೋಲೋನಿ ದೇವೋ ಹಾಂಸಿಲೇ । ಹಾಂಸೋನಿ ದೇಖಣೆಯಾ ತೇ ಮ್ಹಣಿತಲೇ । ಆಮ್ಹೀ ವಿಶ್ವರೂಪ ತರೀ ದಾವಿಲೇ । ಪರೀ ನ ದೇಖಸೀಚ ತೂ ॥೧೫೫॥ ಯಯಾ ಬೋಲಾ ಯೇರೇ ವಿಚಕ್ಷಣೇ । ಮ್ಹಣಿತಲೇ ಹಾ ಜೇ ಕವಣಾಸಿ ತೇ ಉಣೇ? । ತುಮ್ಹೀ ಬಕಾಕರವೀ ಚಾಂದಣೇ । ಚರವೂ ಪಹಾ ಮಾ! ॥೧೫೬॥ ಹಾ ಹೋ ಉಟೋನಿಯಾ ಆರಿಸಾ । ಆಂಧಳಿಯಾ ದಾಊ ಬೈಸಾ । ಬಹಿರಿಯಾಪುಢೇ ಹೃಷೀಕೇಶಾ । ಗಾಣೇವ ಕರಾ ॥೧೫೭॥ ಮಕರಂದಕಣಾಚಾ ಚಾರಾ । ಜಾಣತಾ ಘಾಲೂನಿ ದರ್ದುರಾ । ವಾಯಾ ಧಾಡಾ ಶಾರ್ಙ್ಗಧರಾ । ಕೋಪಾ ಕವಣಾ ॥೧೫೮॥ ಜೇ ಅತೀಂದ್ರಿಯ ಮ್ಹಣೌನಿ ವ್ಯವಸ್ಥಿಲೇ । ಕೇವಳ ಜ್ಞಾನದೃಷ್ಟೀಚಿಯಾ ಭಾಗಾ ಫಿಟಲೇ । ತೇ ತುಮ್ಹೀ ಚರ್ಮಚಕ್ಷೂಪುಢೇ ಸೂದಲೇ । ಮೀ ಕೈಸೇನಿ ದೇಖೇ ॥೧೫೯॥ ಪರೀ ಹೇ ತುಮಚೇ ಉಣೇ ನ ಬೋಲಾವೇ । ಮೀಚಿ ಸಾಹೇ ತೇಂಚಿ ಬರವೇ । ಏಥ ಆಧೀ ಮ್ಹಣಿತಲೇ ದೇವೇ । ಮಾನೂ ಬಾಪಾ ॥೧೬೦॥ ಸಾಚ ವಿಶ್ವರೂಪ ಜರೀ ಆಮ್ಹೀ ದಾವಾವೇ । ತರೀ ಆಧೀ ದೇಖಾವಯಾ ಸಾಮರ್ಥ್ಯ ಕೀ ದ್ಯಾವೇ । ಪರೀ ಬೋಲತ ಬೋಲತ ಪ್ರೇಮಭಾವೇ । ಧಸಾಳ ಗೇಲೋ ॥೧೬೧॥ ಕಾಯ ಜಾಹಲೇ ನ ವಾಹತಾ ಭುಈ ಪೇರಿಜೇ । ತರೀ ತೊ ವೇಲು ವಿಲಯಾ ಜಾಇಜೇ । ತರೀ ಆತಾ ಮಾಝೇ ನಿಜರೂಪ ದೇಖಿಜೇ । ತೇ ದೃಷ್ಟೀ ದೇವೋ ತುಜ ॥೧೬೨॥ ಮಗ ತಿಯಾ ದೃಷ್ಟೀ ಪಾಂಡವಾ । ಆಮುಚಾ ಐಶ್ವರ್ಯಯೋಗು ಆಘವಾ । ದೇಖೋನಿಯಾ ಅನುಭವಾ । ಮಾಜೀವಡಾ ಕರೀ? ॥೧೬೩॥ ಐಸೇ ತೇಣೇ ವೇದಾಂತ್ಯವೇದ್ಯೇ । ಸಕಳಲೋಕ ಆದ್ಯೇ । ಬೋಲಿಲೇ ಆರಾಧ್ಯೇ । ಜಗಾಚೇನಿ ॥೧೬೪॥

ಈ ಪ್ರಕಾರವಾಗಿ ಆ ವಿಶ್ವರೂಪ ಶ್ರೀಕೃಷ್ಣನು ಪೂರ್ಣಪ್ರೇಮದಿಂದ ಹೇಳಿದ ನಂತರ ಅರ್ಜುನನು ನನ್ನ ರೂಪವನ್ನು ನೋಡುತ್ತಿರುವನೋ ಇಲ್ಲವೋ ಎಂದು ನೋಡುವಾಗ, ಅರ್ಜುನನು ಸುಮ್ಮನೆ ಕುಳಿತದ್ದು ಕಂಡಿತು ।।೧೫೨।।

ಆಗ ಈತನೇಕೆ ಸುಮ್ಮನೇ ಕುಳಿತಿರುವನು ಎಂದು ಶ್ರೀಕೃಷ್ಣನು ನೋಡಿದಾಗ ಆತನು ವಿಶ್ವರೂಪ ನೋಡುವ ತವಕದ ಗುಂಗಿನಲ್ಲಿಯೇ ಇರುವುದು ದೃಷ್ಟಿಗೆ ಬಿದ್ದಿತು ।।೧೫೩।।

ಶ್ಲೋಕಾರ್ಥ :- ನಿನ್ನ ಸಾಧಾರಣ ಕಣ್ಣುಗಳಿಂದ ನನ್ನನ್ನು ನೋಡಲಾರೆ. ಆಯ್ಯಾ, ನಿನಗೆ ದಿವ್ಯದೃಷ್ಟಿಯನ್ನು ಕೊಡುತ್ತೇನೆ. ನನ್ನ ಅಲೌಕಿಕ ಯೋಗ ಶಕ್ತಿಯನ್ನು ನೋಡು ।।೮।।

ಆಗ ಮನದಲ್ಲಿ ವಿಚಾರಿಸಿದನು:- ಈತನ ಉತ್ಕಂಠತೆಯು ಇನ್ನು ಕಡಿಮೆಯೇ ಆಗಿಲ್ಲ ಮತ್ತು ಈತನಿಗೆ ಯಾವ ಆನಂದವೂ ದೊರಕಿಲ್ಲ. ನಾನು ಈತನಿಗೆ ವಿಶ್ವರೂಪ ತೋರಿಸಿದೆ, ಆದರೆ ಈತನಿಗೆ ಕಂಡಿಲ್ಲ ।।೧೫೪।।

ಹೀಗೆ ವಿಚಾರಿಸಿ ದೇವನು ನಕ್ಕನು ಮತ್ತು ನಗುತ್ತಲೇ ನೋಡುತ್ತಿರುವ ಅರ್ಜುನನಿಗೆ ಹೇಳಿದನು :- ನಾನು ನಿನಗೆ ವಿಶ್ವರೂಪ ತೋರಿಸಿರುವೆ, ಆದರೆ ನೀನು ನೋಡುವುದೇ ಇಲ್ಲವಲ್ಲ? ।।೧೫೫।।

ಈ ಮಾತನ್ನು ಕೇಳಿ ಬುದ್ಧಿವಂತ ಅರ್ಜುನನು ಹೇಳಿದನು :- ಹೇ ಸ್ವಾಮಿಯೇ, ಈ ದೋಷವು ಯಾರದು? ನೀವು ಬಕಪಕ್ಷಿಯಿಂದ ಚಂದ್ರಾಮೃತ ಕುಡಿಸುವ ಪ್ರಯತ್ನ ಮಾಡುತ್ತಿರುವಿರಿ ।।೧೫೬।।

ಅಹೋ ಮಹಾರಾಜರೇ, ಕನ್ನಡಿಯನ್ನು ಸ್ವಚ್ಛ ವರೆಸಿ ನೀವು ಅದನ್ನು ಕುರುಡನಿಗೆ ತೋರಿಸುವ ಶ್ರಮ ಮಾಡುತ್ತಿರುವಿರಿ ಮತ್ತು ಹೃಷಿಕೇಶಿಯೇ ಕಿವುಡನ ಮುಂದೆ ಗಾಯನ ಮಾಡುತ್ತಿರುವಿರಿ ।।೧೫೭।।

ಹೇ ಶಾರ್ಙ್ಗಧರನೇ, ನೀವು ತಿಳಿದೂ ತಿಳಿದೂ ಪುಷ್ಪ ಪರಾಗವನ್ನು ಭ್ರಮರಗಳಿಗೆ ಕೊಡದೇ ಕಪ್ಪೆಗೆ ಕೊಡುತ್ತಿರುವಿರಿ ಮತ್ತು ಇದು ವ್ಯರ್ಥವಾಯಿತೆಂದು ಯಾರನ್ನು ಕೋಪಿಸುವಿರಿ? ।।೧೫೮।।

ವಿಶ್ವರೂಪವು ಇಂದ್ರಿಯಗಳಿಗೆ ಅಗೋಚರವಾಗಿದೆ. ಹೀಗೆ ಶಾಸ್ತ್ರಗಳಲ್ಲಿ ವರ್ಣಿಸಿದೆ ಮತ್ತು ಇದನ್ನು ಕೇವಲ ಜ್ಞಾನ ದೃಷ್ಟಿಯಿಂದ ಮಾತ್ರ ನೋಡಲು ಸಾಧ್ಯ. ಅದನ್ನು ನೀವು ನನ್ನ ಚರ್ಮಚಕ್ಷು ಮುಂದೆ ಇಟ್ಟರೆ ನನ್ನಿಂದ ನೋಡಲು ಹೇಗೆ ಸಾಧ್ಯ? ।।೧೫೯।।

ಆದರೆ ನಿಮ್ಮ ತಪ್ಪನ್ನು ಉಚ್ಚಾರಿಸದೇ ನಾವೇ ಸಹಿಸಿಕೊಳ್ಳುವುದೇ ಒಳ್ಳೆಯದು. ಇದನ್ನು ಕೇಳಿ ದೇವನು ಅಂದನು:- ಅಪ್ಪಾ ಅರ್ಜುನಾ, ನಿನ್ನ ಮಾತು ನನಗೆ ಮಾನ್ಯವಾಗಿದೆ ।।೧೬೦।।

ನಿನಗೆ ವಿಶ್ವರೂಪವನ್ನು ತೋರಿಸುವ ಮೊದಲು ನನಗೆ ನಿಜವಾಗಿಯೂ ನೋಡುವ ಸಾಮರ್ಥ್ಯವನ್ನು ಕೊಡಬೇಕಾಗಿತ್ತು. ಆದರೆ ಪ್ರೇಮದ ಭರದಲ್ಲಿ ಹೇಳುತ್ತ ಹೇಳುತ್ತ ನಿನಗೆ ದೃಷ್ಟಿ ಕೊಡುವುದನ್ನು ಮರೆತುಬಿಟ್ಟೆ ।।೧೬೧।।

ಭೂಮಿಯನ್ನು ಹದಗೊಳಿಸದೇ ಬಿತ್ತಿದ ಬೀಜಗಳು ವ್ಯರ್ಥವಾಗುವುವು. ಅದರಂತೆ ನಿನಗೆ ವಿಶ್ವರೂಪ ತೋರಿಸುವ ನನ್ನ ಶ್ರಮವು ವ್ಯರ್ಥವಾಯಿತು. ಈಗನಿನಗೆ ನನ್ನ ವಿಶ್ವರೂಪ ನೋಡುವ ದೃಷ್ಟಿ ಕೊಡುವೆನು ।।೧೬೨।।

ಹೇ ಪಾಂಡವನೇ, ಈಗ ಈ ನನ್ನ ದೃಷ್ಟಿಯಿಂದ ನನ್ನ ಎಲ್ಲ (ಅಘಟಿತ ಘಟನಾರೂಪ) ಐಶ್ವರ್ಯ ಯೋಗವನ್ನು ನೋಡಿ ಅದರಿಂದ ನಿನ್ನ ಪೂರ್ಣ ಅನುಭವಕ್ಕೆ ತಂದುಕೊ ।।೧೬೩।।

ಯಾರು ವೇದಗಳಿಗೆ ಮಾತ್ರ ತಿಳಿಯಲು ಯೋಗ್ಯನೋ ಎಲ್ಲ ಲೋಕಗಳಿಗೂ ಆದಿ ಪುರುಷನೋ ಮತ್ತು ಎಲ್ಲ ಜಗತ್ತಿಗೂ ಪರಮಪೂಜ್ಯನೋ, ಆ ಶ್ರೀಕೃಷ್ಣ ಪರಮಾತ್ಮನು ಈ ರೀತಿ ಹೇಳಿದನು ।।೧೬೪।।

ಸಂಜಯ ಉವಾಚ :-
ಏವಮುಕ್ತ್ವಾ ತತೋ ರಾಜನ್ ಮಹಾಯೋಗೇಶ್ವರೋ ಹರಿಃ ।
ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್ ॥೯॥

ಪೈ ಕೌರವಕುಲಚಕ್ರವರ್ತೀ । ಮಜ ಹಾಚಿ ವಿಸ್ಮಯೋ ಪುಢತಪುಢತೀ । ಜೇ ಶ್ರೀಯೇಹೂನಿ ತ್ರಿಜಗತೀ । ಸದೈವ ಅಸೇ ಕವಣೀ ? ॥೧೬೫॥ ನಾ ತರೀ ಋಣೀಚೇ ವಾನಾವಯಾಲಾಗೀ । ಶ್ರುತೀವಾಂಚೂನಿ ದಾವಾ ಪಾ ಜಗೀ । ನಾ ಸೇವಕಪಣ ತರೀ ಆಂಗೀ । ಶೇಷಾಚ್ಯಾಚಿ ಆಥೀ ॥೧೬೬॥ ಹಾ ಹೋ ಜಯಾಚೇನಿ ಸೋಸೇ । ಶಿಣತ ಆಠಹೀ ಪಹಾರ ಯೋಗಿ ಜೈಸೇ । ಅನುಸರಲೇ ಗರುಡಾ ಐಸೇ । ಕವಣ ಆಹೇ ? ॥೧೬೭॥ ಪರೀ ತೇ ಆಘವೇಂಚಿ ಏಕೀಕಡೇ ಠೇಲೇ । ಸಾಪೇ ಕೃಷ್ಣಸುಖ ಏಕಂದರೇ ಜಾಹಲೇ । ಜಿಯೇ ದಿವೂನಿ ಜನ್ಮಲೇ । ಪಾಂಡವ ಹೇ ॥೧೬೮॥ ಪರೀ ಪಾಂಚಾಂಹೀ ಆಂತು ಅರ್ಜುನಾ । ಶ್ರೀಕೃಷ್ಣ ಸಾವಿಯಾಚಿ ಜಾಹಲಾ ಆಧೀನಾ । ಕಾಮುಕ ಕಾ ಜೈಸಾ ಅಂಗನಾ । ಆಪೈತಾ ಕೀಜೇ ॥೧೬೯॥ ಪಢವಿಲೇ ಪಾಖಿರೂ ಐಸೇ ನ ಬೋಲೇ । ಯಾಪರೀ ಕ್ರೀಡಾಮೃಗಹೀ ತೈಸಾ ನ ಚಲೇ । ಕೈಸೇ ದೈವ ಏಥೇ ಸುರವಾಡಲೇ । ತೇ ಜಾಣೋ ನ ಯೇ ॥೧೭೦॥ ಆಜಿ ಹೇ ಪರಬ್ರಹ್ಮ ಸಗಳೇ । ಭೋಗಾವಯಾ ಸದೈವ ಯಾಚೇನಿ ಡೋಳೇ । ಕೈಸೇ ವಾಚೇಚೇ ಹನ ಲಳೇ । ಪಾಳೀತ ಅಸೇ ॥೧೭೧॥ ಹಾ ಕೋಪೇ ಕೀ ನಿವಾಂತು ಸಾಹೇ । ಹಾ ರುಸೇ ತರೀ ಬುಝಾವೀತ ಜಾಯೇ । ನವಲ ಪಿಸೇ ಲಾಗಲೇ ಆಹೇ । ಪಾರ್ಥಾಚೇ ದೇವಾ ॥೧೭೨॥ ಏರ್ಹವೀ ವಿಷಯ ಜಿಣೋನಿ ಜನ್ಮಲೇ । ಜೇ ಶುಕಾದಿಕ ದಾದುಲೇ । ತೇ ವಿಷಯೋಚಿ ವಾನಿತಾ ಜಾಹಲೇ । ಭಾಟ ಯಯಾಚೇ ॥೧೭೩॥ ಹಾ ಯೋಗಿಯಾಂಚೇ ಸಮಾಧಿಧನ । ಕೇ ಹೋಊನ ಠೇಲೇ ಪಾರ್ಥಾಆಧೀನ । ಯಾಲಾಗೀ ವಿಸ್ಮಯೋ ಮಾಝೇ ಮನ । ಕರೀತಸೇ ರಾಯಾ ॥೧೭೪॥ ತೇವೀಂಚಿ ಸಂಜಯ ಮ್ಹಣೇ ಕಾಯಸಾ । ವಿಸ್ಮಯೋ ಏಥೇ ಕೌರವೇಶಾ । ಶ್ರೀಕೃಷ್ಣೇ ಸ್ವೀಕಾರಿಜೇ ತಯಾ ಐಸಾ । ಭಾಗ್ಯೋದಯ ಹೋಯ ॥೧೭೫॥ ಮ್ಹಣೌನಿ ತೋ ದೇವಾಂಚಾ ರಾವೋ । ಮ್ಹಣೇ ಪಾರ್ಥಾತೇ ತುಜ ದೃಷ್ಟಿ ದೇವೋ । ಜಯಾ ವಿಶ್ವರೂಪಾಚಾ ಠಾವೋ । ದೇಖಸೀ ತೂ ॥೧೭೬॥ ಐಸೀ ಶ್ರೀಮುಖೌನಿ ಅಕ್ಷರೇ । ನಿಘತೀ ನಾ ಜಂವ ಏಕಸರೇ । ತಂವ ಅವಿದ್ಯೇಚೆ ಆಂಧಾರೇ । ಜಾವೋಂಚಿ ಲಾಗೇ ॥೧೭೭॥

ಶ್ಲೋಕಾರ್ಥ :- ಸಂಜಯನು ಹೀಗೆ ಹೇಳಿದನು:- ಹೇ ಧೃತರಾಷ್ಟ್ರ ಮಹಾರಾಜಾ! ಈ ವಿಧವಾಗಿ ಹೇಳಿ ಮಹಾಯೋಗೀಶ್ವರನಾದ ಹರಿಯು ಉತ್ಕೃಷ್ಟವಾದ ತನ್ನ ಈಶ್ವರೀಯ ರೂಪವನ್ನು ಅರ್ಜುನನಿಗೆ ತೋರಿಸಿದನು ।೯॥

(ಸಂಜಯನು ಹೇಳಿದನು) ಹೇ ಕೌರವ ಕುಲದ ಸಾರ್ವಭೌಮ ಮಹಾರಾಜಾ, ನನಗೆ ಮೇಲಿಂದ ಮೇಲೆ ಇದೇ ಆಶ್ಚರ್ಯವಾಗುವುದು. ಏನೆಂದರೆ, ಲಕ್ಷ್ಮೀಗಿಂತಲೂ ತ್ರಿಭುವನದಲ್ಲಿ ಹೆಚ್ಚಿನ ಭಾಗ್ಯವಂತರು ಯಾರಾದರೂ ಇದ್ದಾರೆಯೇ?।೧೬೫॥

ಅಥವಾ ತತ್ತ್ವಗಳನ್ನು ವರ್ಣಿಸುವುದರಲ್ಲಿ ವೇದಕ್ಕಿಂತಲೂ ಹೆಚ್ಚಿನ ಸಮರ್ಥರು ಜಗತ್ತಿನಲ್ಲಿ ಯಾರಿರುವರು? ತೋರಿಸು ನೋಡೋಣ? ಏಕನಿಷ್ಠ ಸೇವಕತನವು ಒಬ್ಬ ಶೇಷನಲ್ಲಿ ಮಾತ್ರ ಇರುವುದು ।೧೬೬॥

ಅಹೋ, ಯಾವ ಪರಮಾತ್ಮನ ಪ್ರಾಪ್ತಿಯ ಇಚ್ಛೆಯಿಂದ ಯೋಗಿಗಳು ಎಂಟೂ ಪ್ರಹರಗಳಲ್ಲಿಯೂ ಶ್ರಮಪಡುವಂತೆ ಯಾರಿರುವರು ಮತ್ತು ಗರುಡನ ಹಾಗೆ ದೇವರಿಗೆ ಹೊರುವವರು ಯಾರಿರುವರು? ।೧೬೭॥

ಆದರೆ ಇದೆಲ್ಲವೂ ಒಂದೆಡೆ ಇಡಲಾಯಿತು. ಪಾಂಡವರು ಹುಟ್ಟಿದಾಗಿನಿಂದಲೂ ಶ್ರೀಕೃಷ್ಣನಿಂದ ಭಕ್ತರಿಗೆ ಆಗುವ ಸುಖಗಳೆಲ್ಲವೂ ಈ ಪಾಂಡವರಲ್ಲಿಯೇ ಒಂದುಗೂಡಿವೆ ।೧೬೮॥

ಆದರೆ ಪಂಚಪಾಂಡವರಲ್ಲಿ ಶ್ರೀಕೃಷ್ಣನು ಸಹಜವಾಗಿ ಅರ್ಜುನನ ಆಧೀನನಾಗಿರುವನು. ಹೇಗೆಂದರೆ ಒಬ್ಬ ವಿಷಯಾಸಕ್ತ ಪುರುಷನಿಗೆ ಸ್ತ್ರೀಯು ತನ್ನ ಆಧೀನ ಮಾಡಿಕೊಂಡಂತೆ ।೧೬೯॥

ಕಲಿಸಿದ ಪಕ್ಷಿಯೂ ಹೀಗೆ ಹೇಳುವುದಿಲ್ಲ. ಸಾಕಿದ ಪ್ರಾಣಿಯೂ ಆಜ್ಞೆ ಪಾಲಿಸುವುದಿಲ್ಲ. ಆದರೆ ಅರ್ಜುನನ ಆಧೀನ ಶ್ರೀಕೃಷ್ಣನಾಗಿರುವನು. ಅರ್ಜುನನಲ್ಲಿ ಎಂತಹ ಭಾಗ್ಯವಿರುವುದೆಂಬುದನ್ನು ತಿಳಿಯಲು ಸಾಧ್ಯವಿಲ್ಲ ।೧೭೦॥

ಈ ಪ್ರಸಂಗದಲ್ಲಿ ಸಂಪೂರ್ಣ ಪರಬ್ರಹ್ಮನನ್ನು ಅನುಭವಿಸುವ ಭಾಗ್ಯವು ಈತನ ದೃಷ್ಟಿಗೆ ಮಾತ್ರ ಲಭಿಸಿತು. ಇಲ್ಲಿ ನೋಡಿರಿ, ಶ್ರೀಕೃಷ್ಣನು ಅರ್ಜುನನ ಮಾತುಗಳನ್ನು ಹೇಗೆ ಪೂರೈಸುವನು ।೧೭೧॥

ಅರ್ಜುನನು ಕೋಪಿಸಿಕೊಂಡರೆ ದೇವನು ಸ್ವಸ್ಥನಾಗಿ ಸಹಿಸುವನು ಮತ್ತು ಮುನಿಸುಗೊಂಡರೆ ಆತನಿಗೆ ಸಮಾಧಾನ ಪಡಿಸುವನು. ಏನಾಶ್ಚರ್ಯ! ಅರ್ಜುನನ ಹುಚ್ಚು ದೇವರಿಗೆ ಎಷ್ಟೊಂದು ಹಿಡಿದಿದೆ! ।೧೭೨॥

ಸಹಜವಾಗಿ ವಿಚಾರಿಸಿ ನೋಡಿದರೆ, ವಿಷಯಗಳನ್ನು ಗೆದ್ದು ಜನ್ಮಕ್ಕೆ ಬಂದ ಶುಕಾದಿಕರು ನಿಜವಾದ ಪುರುಷರಾದ ಇವರು ಪರಮಾತ್ಮನ ಕೇವಲ ವಿಷಯಿಕ ಲೀಲೆಯ ವರ್ಣನೆಯನ್ನೇ ಮಾಡುವ ಹೊಗಳು ಭಟ್ಟರಾದರು ।೧೭೩॥

ರಾಜಾ, ಶ್ರೀಕೃಷ್ಣ ಪರಮಾತ್ಮನು ಯೋಗಿಗಳ ಸಮಾಧಿಯ ಅಧಿದೈವತನಾಗಿದ್ದು ಅರ್ಜುನನ ಸ್ವಾಧೀನನಾಗಿರುವುದಕ್ಕೆ ಮನಸ್ಸಿಗೆ ಆಶ್ಚರ್ಯವಾಗುತ್ತಿದೆ ।೧೭೪॥

ಇಷ್ಟು ಹೇಳಿ ಸಂಜಯನು ಪುನಃ ಧೃತರಾಷ್ಟ್ರನಿಗೆ ಹೇಳಿದನು:- ರಾಜಾ, ಇದರಲ್ಲಿ ಚಮತ್ಕಾರವಾದರೂ ಎಂತಹದ್ದು? ಶ್ರೀಕೃಷ್ಣನು ಯಾರನ್ನು ಅಂಗೀಕರಿಸುವನೋ ಆತನ ಭಾಗ್ಯವೇ ಅಂತಹದ್ದು ।೧೭೫॥

ಆದ್ದರಿಂದ ಆ ದೇವಾಧಿದೇವನು ಪಾರ್ಥನಿಗೆ ಹೇಳಿದ್ದೇನೆಂದರೆ, ನಿನಗೆ ದಿವ್ಯದೃಷ್ಟಿಯನ್ನು ಕೊಡುವೆನು. ಇದರ ಯೋಗದಿಂದ ಅಖಂಡ ವಿಶ್ವರೂಪವನ್ನು ನೋಡಬಹುದು? ।೧೭೬॥

ಶ್ರೀಕೃಷ್ಣನ ಮುಖದಿಂದ ಈ ಅಕ್ಷರಗಳು ಹೊರಟವೋ ಇಲ್ಲವೋ ಆಗಲೇ ತಕ್ಷಣ ಅರ್ಜುನನ ಅಜ್ಞಾನವು ಇಲ್ಲದಂತಾಯಿತು ।೧೭೭॥

ತೀ ಅಕ್ಷರೇ ನವ್ಹತೀ ದೇಖಾ । ಬ್ರಹ್ಮಸಾಮ್ರಾಜ್ಯದೀಪಿಕಾ । ಅರ್ಜುನಾಲಾಗೀ ಚಿತ್ಕಳಿಕಾ । ಉಜಳಲಿಯಾ ಶ್ರೀಕೃಷ್ಣೇ ।।೧೭೮।। ಮಗ ದಿವ್ಯಚಕ್ಷುಪ್ರಕಾಶು ಪ್ರಗಟಲಾ । ತಯಾ ಜ್ಞಾನದೃಷ್ಟೀ ಫಾಂಟಾ ಫುಟಲಾ । ಯಯಾಪರೀ ದಾವಿತಾ ಜಾಹಲಾ । ಐಶ್ವರ್ಯ ಆಪುಲೇ ।।೧೭೯।। ಹೇ ಅವತಾರ ಜೇ ಸಕಳ । ತೇ ಜಿಯೇ ಸಮುದ್ರೀಚೇ ಕಾ ಕಲ್ಲೋಳ । ವಿಶ್ವ ಹೇ ಮೃಗಜಳ । ಜಯಾ ರಶ್ಮೀಸ್ತವ ದಿಸೇ ।।೧೮೦।। ಜಿಯೇ ಅನಾದಿಭೂಮಿಕೇ ನಿಟೇ । ಚರಾಚರ ಹೇ ಚಿತ್ರ ಉಮಟೇ । ಆಪಣಪೇ ಶ್ರೀವೈಕುಂಠೇ । ದಾವಿಲೇ ತಯಾ ।।೧೮೧।। ಮಾಗಾ ಬಾಳಪಣೀ ಯೇಣೇ ಶ್ರೀಪತೀ । ಜೈ ಏಕವೇಳ ಖಾದಿಲೀ ಹೋತೀ ಮಾತೀ । ತೈ ಕೋಪೋನಿಯಾ ಹಾತೀ । ಯಶೋದಾ ಧರಿಲಾ ।।೧೮೨।। ಮಗ ಭೇಣೇ ಭೇಣೇ ಜೈಸೇ । ಮುಖೀ ಝಾಡಾ ದ್ಯಾವಯಾಚೇನಿ ಮಿಸೇ । ಚವದಾಹೀ ಭುವನೇ ಸಾವಕಾಶೇ । ದಾವಿಲೀ ತಿಯೇ ।।೧೮೩।। ನಾತರೀ ಮಧುವನೀ ಧ್ರುವಾಸೀ ಕೇಲೇ । ಜೈಸೇ ಕಪೋಲ ಶಂಖೇ ಶಿವತಲೇ । ಆಣಿ ವೇದಾಂಚಿಯೇಹೀ ಮತೀ ಠೇಲೇ । ತೇ ಲಾಗಲಾ ಬೋಲೋ ।।೧೮೪।। ತೈಸಾ ಅನುಗ್ರಹೋ ಪೈ ರಾಯಾ। ಶ್ರೀಹರೀ ಕೇಲಾ ಧನಂಜಯಾ । ಆತಾ ಕವಣೇಕಡೇಹೀ ಮಾಯಾ । ಐಸೀ ಭಾಷ ನೇಣೇಂಚಿ ತೋ ।।೧೮೫।। ಏಕಸರೇ ಐಶ್ವರ್ಯತೇಜೇ ಪಾಹಲೇ । ತಯಾ ಚಮತ್ಕಾರಾಚೇ ಏಕಾರ್ಣವ ಜಾಹಲೇ । ಚಿತ್ತ ಸಮಾಜೇ ಬುಡೋನಿ ಠೇಲೇ । ವಿಸ್ಮಯಾಚಿಯಾ ।।೧೮೬।। ಜೈಸಾ ಆಬ್ರಹ್ಮ ಪೂರ್ಣೋದಕೀ । ಪವ್ಹೇ ಮಾರ್ಕಂಡೇಯ ಏಕಾಕೀ । ತೈಸಾ ವಿಶ್ವರೂಪ ಕೌತುಕೀ । ಪಾರ್ಥು ಲೋಳೇ ।।೧೮೭।। ಮ್ಹಣೇ ಕೇವಢೇ ಗಗನ ಏಥ ಹೋತೇ । ತೇ ಕವಣೇ ನೇಲೇ ಪಾ ಕೇಉತೇ । ತೀ ಚರಾಚರೇ ಮಹಾಭೂತೇ । ಕಾಯ ಜಾಹಲೀ ? ।।೧೮೮।। ದಿಶಾಂಚೇ ಠಾವಹೀ ಹಾರಪಲೇ । ಅಧೋರ್ಧ್ವ ಕಾಯ ನೇಣೋ ಜಾಹಲೇ । ಚೇಇಲಿಯಾ ಸ್ವಪ್ನ ತೈಸೇ ಗೇಲೇ । ಲೋಕಾಕಾರ ।।೧೮೯।। ನಾನಾ ಸೂರ್ಯತೇಜಪ್ರತಾಪೇ । ಸಚಂದ್ರ ತಾರಾಂಗಣ ಜೈಸೇ ಲೋಪೇ । ತೈಸೀ ಗಿಳಿಲೀ ವಿಶ್ವರೂಪೇ । ಪ್ರಪಂಚರಚನಾ ।।೧೯೦।। ತೇವ್ಹಾ ಮನಾಸೀ ಮನಪಣ ನ ಸ್ಫುರೇ । ಬುದ್ಧಿ ಆಪಣಪೇ ನ ಸಾಂವರೇ । ಇಂದ್ರಿಯಾಂಚೇ ರಶ್ಮೀ ಮಾಘಾರೇ । ಹೃದಯವರೀ ಭರಲೇ ।।೧೯೧।। ತೇಥ ತಾಟಸ್ಥ್ಯೈ ತಾಟಸ್ಥ್ಯೈ ಪಡಿಲೇ । ಟಕಾಸೀ ಟಕ ಲಾಗಲೇ । ಜೈಸೇ ಮೋಹನಾಸ್ತ್ರ ಘಾತಲೇ । ವಿಚಾರಜಾತಾ ।।೧೯೨।। ತೈಸಾ ವಿಸ್ಮಿತು ಪಾಹೇ ಕೋಡೇ । ತಂವ ಪುಢಾ ಹೋತೇ ಚತುರ್ಭುಜ ರೂಪಡೇ । ತೇಂಚಿ ನಾನಾರೂಪ ಚಹೂಂಕಡೇ । ಮಾಂಡೋನಿ ಠೇಲೇ ।।೧೯೩।।

ಇವು ಅಕ್ಷರಗಳಲ್ಲದೇ ಬ್ರಹ್ಮಸಾಮ್ರಾಜ್ಯಕ್ಕೆ ಪ್ರಕಾಶ ಕೊಡುವ ಜ್ಞಾನರೂಪ ಜ್ಯೋತಿಯನ್ನೇ ಅರ್ಜುನನಿಗಾಗಿ ಶ್ರೀಕೃಷ್ಣನು ಬೆಳಗಿದನೆಂದು ತಿಳಿಯಿರಿ ।।೧೭೮।।

ತದನಂತರ ದಿವ್ಯದೃಷ್ಟಿಯ ಬೆಳಕು ಬಿದ್ದ ಕೂಡಲೇ ಅರ್ಜುನನ ಜ್ಞಾನದೃಷ್ಟಿಯು ನಾಲ್ಕೂ ಕಡೆಗಳಲ್ಲಿಯೂ ಪಸರಿಸಿತು. ಈ ಪ್ರಕಾರವಾಗಿ ತನ್ನ ಐಶ್ವರ್ಯವನ್ನು ಶ್ರೀಕೃಷ್ಣನು ಆತನಿಗೆ ತೋರಿಸಿದನು ।।೧೭೯।।

ಭಗವಂತನ ಎಲ್ಲ ಅವತಾರಗಳು ಯಾವ ವಿಶ್ವರೂಪ ಸಮುದ್ರದ ತೆರೆಯಾಗಿವೆ. ಅಥವಾ ಆತನ ತೇಜರೂಪ ಸೂರ್ಯಕಿರಣಗಳಿಂದ ಈ ಸರ್ವ ಜಗವು ಮೃಗಜಲದಂತೆ ಭಾವಿಸುವುದು ।।೧೮೦।।

ಯಾರ ಅನಾದಿಸಿದ್ಧ ಸತ್ತ್ವಸ್ವರೂಪ ಭೂಮಿಕೆಯ ಮೇಲೆ ಸ್ಥಾವರ ಜಂಗಮರೂಪ ಚಿತ್ರಗಳು ಮೂಡುವ ಆತನ್ನ ಮೂಲ ಸ್ವರೂಪವನ್ನು ಶ್ರೀಕೃಷ್ಣನು ಅರ್ಜುನನಿಗೆ ತೋರಿಸಿದನು ।।೧೮೧।।

ಪೂರ್ವದಲ್ಲಿ ಚಿಕ್ಕವನಿದ್ದಾಗ ಈ ಕೃಷ್ಣನು ಒಂದು ಸಾರೆ ಮಣ್ಣು ತಿಂದಾಗ ಯಶೋಧೆಯು ಕೋಪದಿಂದ ಕೈಯನ್ನು ಹಿಡಿದಳು ।।೧೮೨।।

ಆಗ ಆ ಸಮಯದಲ್ಲಿ ಹೆದರುತ್ತ ಹೆದರುತ್ತ ಮುಖದಲ್ಲಿನ ಮಣ್ಣಿನ ಶೋಧ ಮಾಡುವ ನಿಮಿತ್ತದಿಂದ (ಮುಖ ತೆರೆದು) ಶ್ರೀಕೃಷ್ಣನು ಯಶೋಧೆಗೆ ಹದಿನಾಲ್ಕು ಲೋಕಗಳನ್ನು ತೋರಿಸಿದನು ।।೧೮೩।।

ಅಥವಾ ಮಧುವನದಲ್ಲಿ ಧ್ರುವನು ತಪಶ್ಚರ್ಯ ಮಾಡಿದಾಗ ಭಗವಂತನು ಪ್ರಕಟನಾದನು. ಆಗ ಧ್ರುವನಿಗೆ ಆತನನ್ನು ಸ್ತುತಿಸುವ ಬಯಕೆಯಾಯಿತು. ಬಾರದ್ದಕ್ಕೆ ಭಗವಾನನು ಆತನ ಗಲ್ಲಕ್ಕೆ ಶಂಖನ್ನು ಮುಟ್ಟಿಸಿದಾಗ ವೇದಕ್ಕೂ ನಿಲುಕದ ಹಾಗೆ ಸ್ತುತಿಸಹತ್ತಿದನು ।।೧೮೪।।

ಈ ಪ್ರಕಾರವಾಗಿ ರಾಜಾ, ಶ್ರೀಹರಿಯು ಧನಂಜಯನಿಗೆ ಉಪದೇಶ ಮಾಡಿದಾಗ ಮಾಯೆಯು ಎಲ್ಲಿ ಹೋಯಿತೆಂಬುದು ತಿಳಿಯದಾಯಿತು ।।೧೮೫।।

ಒಮ್ಮೆಲೆ ಐಶ್ವರ್ಯತೇಜದ ಬೆಳಕು ಬಿದ್ದು, ಆತನಿಗೆ ಎಲ್ಲವೂ ಚಮತ್ಕಾರಮಯವಾಗಿ ಕಾಣಿಸಹತ್ತಿತು ಮತ್ತು ಆತನ ಚಿತ್ತವು ಆಶ್ಚರ್ಯದಿಂದ ನಿಮಗ್ನವಾಯಿತು ।।೧೮೬।।

ಮಾರ್ಕಂಡೇಯ ಋಷಿಯು ಸಂಧ್ಯಾವಂದನೆ ಮಾಡುವಾಗ್ಗೆ ದೇವರಿಗೆ ''ಆಶ್ಚರ್ಯವನ್ನು ತೋರಿಸು'' ಎಂದು ವಿನಂತಿಸಿದಾಗ ಬ್ರಹ್ಮಲೋಕದವರೆಗೂ ಜಲಮಯವಾಗಿ ಒಬ್ಬನೇ ಅದರಲ್ಲಿ ಈಸುತ್ತಿದ್ದಂತೆ ಪಾರ್ಥನು ಕೌತುಕದಲ್ಲಿ ನಿಮಗ್ನನಾಗಿದ್ದಾನೆ ।।೧೮೭।।

ಆಗ ಹೇಳಹತ್ತಿದನು, ಇಲ್ಲಿ ಎಂತಹ ಆಕಾಶವು ದೃಷ್ಟಿಗೆ ಬೀಳುತ್ತಿತ್ತು ಎಲ್ಲಿ ಹೋಯಿತು? ಅದು ಹಾಗೆಯೇ, ಈ ಸ್ಥಾವರ ಜಂಗಮಗಳು ಎಲ್ಲಿ ಹೋದವು? ।।೧೮೮।।

ದಿಶೆಗಳ ಪತ್ತೆಯೇ ಇಲ್ಲದಂತಾಗಿದೆ. ಆಕಾಶ ಪಾತಾಳಗಳು ಎಲ್ಲಿ ಹೋದವು ಎಂಬುದು ತಿಳಿಯದಾಗಿದೆ. ಸ್ವಪ್ನದಲ್ಲಿ ಕಾಣುತ್ತಿರುವ ಎಲ್ಲ ಪದಾರ್ಥಗಳು ಜಾಗೃತವಾದಾಗ ಇಲ್ಲದಾಗುವಂತೆ ಸೃಷ್ಟಿಯು ಇಲ್ಲದಾಗಿದೆ ।।೧೮೯।।

ಸೂರ್ಯನ ತೇಜದಿಂದ ಯಾವ ಪ್ರಕಾರವಾಗಿ ಚಂದ್ರ ಮತ್ತು ತಾರೆಗಳು ಇಲ್ಲದಂತಾಗುವುವೋ, ಅದೇ ಪ್ರಕಾರವಾಗಿ ಸೃಷ್ಟಿಯ ಎಲ್ಲ ರಚನೆಗಳನ್ನು ವಿಶ್ವರೂಪವು ಇಲ್ಲದಂತೆ ಮಾಡಿದೆ ।।೧೯೦।।

ಆಗ ಆತನಿಗೆ ತನ್ನ ಮನದ ಸ್ಮರಣೆ ಮನಕ್ಕೆ ಇಲ್ಲದಂತಾಗಿ ತನ್ನ ಬುದ್ಧಿಯು ತನಗೆ ಆವರಿಸಲಾಗದೇ ಇಂದ್ರಿಯಗಳ ಎಲ್ಲ ವೃತ್ತಿಗಳು ತಿರುಗಿ ಹೃದಯದಲ್ಲಿ ಕೂಡಿಕೊಂಡವು ।।೧೯೧।।

ಆಗ ತಾಟಸ್ಥಕ್ಕೆ ತಟಸ್ಥ್ಯ ಪ್ರಾಪ್ತವಾಯಿತು. ಏಕಾಗ್ರತೆಗೆ ಏಕಾಗ್ರತೆ ಹತ್ತಿತು, ಮತ್ತು ಎಲ್ಲ ವಿಚಾರಗಳಿಗೂ ಮೋಹಿನಿ ಅಸ್ತ್ರ ಹಾಕಿದಂತಾಯಿತು ।।೧೯೨।।

ಈ ರೀತಿ ಈತನು ಆಶ್ಚರ್ಯದೊಂದಿಗೆ ಕೌತುಕದಿಂದ ಎಲ್ಲ ಕಡೆಗೂ ನೋಡಹತ್ತಿದನು. ಆಗ ಆತನು ತನ್ನ ಮುಂದಿರುವ ಚತುರ್ಭುಜ ಚಿಕ್ಕ ಮೂರ್ತಿಯು ಬೆಳೆದು ಅನೇಕ ರೂಪಗಳಿಂದ ನಾಲ್ಕೂ ಕಡೆಗೂ ವಿಸ್ತರಿಸಿದ್ದು ಕಾಣಿಸಿತು ।।೧೯೩।।

ಜೈಸೇ ವರ್ಷಾಕಾಳೀಂಚೇ ಮೇಘೌಡೇ । ಕಾ ಮಹಾಪ್ರಳಯೀಂಚೇ ತೇಜ ವಾಢೇ । ತೈಸೇ ಆಪಣಾವೀಣ ಕವಣೀಕಡೇ । ನೇದೀಚಿ ಉರೋ ।೧೯೪।। ಪ್ರಥಮ ಸ್ವರೂಪಸಮಾಧಾನ । ಪಾವೋನಿ ಠೇಲಾ ಅರ್ಜುನ । ಸವೇಂಚಿ ಉಘಡೀ ಲೋಚನ । ತಂವ ವಿಶ್ವರೂಪ ದೇಖೇ ।೧೯೫।। ಇಹೀಂಚಿ ದೋಹೀ ಡೋಳಾ । ಪಾಹಾವೇ ವಿಶ್ವರೂಪಾ ಸಕಳಾ । ತೋ ಶ್ರೀಕೃಷ್ಣೇ ಸೋಹಳಾ । ಪುರವಿಲಾ ಐಸಾ ।೧೯೬।।

ಅನೇಕವಕ್ತ್ರನಯನಂ ಅನೇಕಾದ್ಭುತದರ್ಶನಮ್ ।
ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್ ।।೧೦।।

ಮಗ ತೇಥ ಸ್ವೈಂಫು ದೇಖೇ ವದನೇ । ಜೈಸೀ ರಮಾನಾಯಕಾಚೀ ರಾಜ ಭುವನೇ । ನಾನಾ ಪ್ರಗಟಲೀ ನಿಧಾನೇ । ಲಾವಣ್ಯ ಶ್ರೀಯೇಚೀ ।೧೯೭।। ಕೀ ಆನಂದಾಚೀ ವನೇ ಸಾಸಿನ್ನಲೀ । ಜೈಸೀ ಸೌಂದರ್ಯಾ ರಾಣೀವ ಜೋಡಲೀ । ತೈಸೀ ಮನೋಹರೇ ದೇಖಿಲೀ । ಹರೀಚಿ ವಕ್ತ್ರೇ ।೧೯೮।। ತಯಾಂಹೀಮಾಜೀ ಏಕ್ಕೇಕೇ । ಸಾವಿಯಾಚೀ ಭಯಾನಕೇ । ಕಾಳರಾತ್ರೀಚೀ ಕಟಕೇ । ಉಠಾವಲೀ ಜೈಸೀ ।೧೯೯।। ಕೀ ಮೃತ್ಯೂಸೀಚಿ ಮುಖೇ ಜಾಹಳೀ । ಹೋ ಕಾ ಜೇ ಭಯಾಚೀ ದುರ್ಗೇ ಪನ್ನಾಸಿಲೀ । ಕೀ ಮಹಾಕುಂಡೇ ಉಘಡಲೀ । ಪ್ರಳಯಾನಳಾಚೀ ।೨೦೦।। ತೈಸೀ ಅದ್ಭುತೇ ಭಯಾಸುರೇ । ತೇಥ ವದನೇ ದೇಖಿಲೇ ವೀರೇ । ಆಣಿಕೇ ಅಸಾಧಾರಣೇ ಸಾಳಂಕಾರೇ । ಸೌಮ್ಯೇ ಬಹುತೇ ।೨೦೧।। ಪೈ ಜ್ಞಾನ ದೃಷ್ಟೀಚೇನಿ ಅವಲೋಕೇ । ಪರೀ ವದನಾಂಚಾ ಶೇವಟು ನ ಟಕೇ । ಮಗ ಲೋಚನ ತೇ ಕವತಿಕೇ । ಲಾಗಲಾ ಪಾಹೋ ।೨೦೨।। ತಂವ ನಾನಾವರ್ಣೇ ಕಮಳವನೇ । ವಿಕಾಸಿಲೀ ತೈಸೇ ಅರ್ಜುನೇ । ನೇತ್ರ ದೇಖಿಲೇ ಪಾಲಿಂಗನೇ । ಆದಿತ್ಯಾಂಚೀ ।೨೦೩।। ತೇಥೇಂಚಿ ಕೃಷ್ಣಮೇಘಾಂಚಿಯಾ ದಾಟೀ । ಮಾಝಿ ಕಲ್ಪಾಂತ ವಿಜೂಂಚಿಯಾ ಸ್ಫೂಟೀ । ತೈಸಿಯಾ ವನ್ಹೀ ಪಿಂಗಳಾ ದಿಠೀ । ಭ್ರೂಭಂಗಾತಳೀ ।೨೦೪।। ಹೇ ಏಕ್ಕೈಕ ಆಶ್ಚರ್ಯ ಪಾಹತಾ । ತಿಯೇ ಏಕೇಚಿ ರೂಪಿ ಪಂಡುಸುತಾ। ದರ್ಶನಾಚೀ ಅನೇಕತಾ । ಪ್ರತಿಫಳಲೀ ।೨೦೫।। ಮಗ ಮ್ಹಣೇ ಚರಣ ತೇ ಕವಣೇಕಡೇ । ಕೇಉತೇ ಮಕುಟ ಕೇ ದೋರ್ದಂಡೇ । ಐಸೀ ವಾಢವಿತಾಹೇ ಕೋಡೇ । ಚಾಡ ದೇಖಾವಯಾಚೀ ।೨೦೬।। ತೇಥ ಭಾಗ್ಯನಿಧಿ ಪಾರ್ಥಾ । ಕಾ ವಿಫಲತ್ವ ಹೋಈಲ ಮನೋರಥಾ । ಕಾಯ ಪಿನಾಕಪಾಣೀಚಿಯಾ ಭಾತಾ । ವಾಯಕಾಂಡಿ ಆಹಾತೀ? ।೨೦೭।।

ಮಳೆಗಾಲದ ಮೇಘಗಳಂತೆ ಅಥವಾ ಮಹಾ ಪ್ರಳಯಕಾಲದ ಸೂರ್ಯನ ತೇಜವು ಒಮ್ಮೆಲೆ ನಾಲ್ಕೂ ಕಡೆಯಲ್ಲಿ ವಿಸ್ತರಿಸುವಂತೆ ಭಗವಂತನು ತನ್ನ ಹೊರತು ಎಲ್ಲಿಯೂ ಯಾರೂ ಉಳಿಯದಂತೆ ಮಾಡಿದನು ।೧೯೪॥

ಪ್ರಪ್ರಥಮದಲ್ಲಿ ಅರ್ಜುನನಿಗೆ ಶ್ರೀಕೃಷ್ಣನ ಸ್ವರೂಪವನ್ನು ಕಂಡು ಸಮಾಧಾನವಾಯಿತು. ಆಗ ತಕ್ಷಣವೇ ಕಣ್ಣು ತೆರೆದು ನೋಡಿದಾಗ ಆತನಿಗೆ ವಿಶ್ವರೂಪವು ದೃಷ್ಟಿ ಗೋಚರವಾಯಿತು ।೧೯೫॥

ಈ ರೀತಿಯಲ್ಲಿ ತನ್ನ ಎರಡೂ ಕಣ್ಣಿನಿಂದ ಎಲ್ಲ ವಿಶ್ವರೂಪವನ್ನು ಆತನು ನೋಡುವ ಇಚ್ಛೆಯು ಆ ಎಲ್ಲ ಬಯಕೆಗಳನ್ನು ಶ್ರೀಕೃಷ್ಣನು ಪೂರೈಸಿದನು ।೧೯೬॥

ಶ್ಲೋಕಾರ್ಥ :- ಅನೇಕ ವಿಧಗಳಾದ ಮುಖ ಗಳಿಂದಲೂ, ನೇತ್ರಗಳಿಂದಲೂ ಒಪ್ಪುವುದಾಗಿಯೂ, ನೋಡುವುದಕ್ಕೆ ಮಹಾ ಅದ್ಭುತವಾಗಿದ್ದುದಾಗಿಯೂ, ಅಸಂಖ್ಯವಾದ ದಿವ್ಯಾಭರಣಗಳಿಂದ ಭೂಷಿತವಾಗಿಯೂ, ಅನೇಕ ಆಯುಧಗಳನ್ನು ಧರಿಸಿರುವುದಾಗಿಯೂ ।೧೦॥

ಆಗ ಅನೇಕ ಮುಖಗಳನ್ನು ನೋಡಿದನು. ಅವು ಕೇವಲ ಶ್ರೀವಿಷ್ಣುವಿನ ರಾಜಮಂದಿರದಂತೆ ಸುಶೋಭಿತವಾಗಿ ಕಂಡವು. ಅಥವಾ ಲಾವಣ್ಯ ಶ್ರೀಯ ಭಾಂಡಾರವೇ ಹೊರಬಿದ್ದಂತೆ ।೧೯೭॥

ಅಥವಾ ಆನಂದರೂಪ ವನಕ್ಕೆ ತುಂಬಿಬಂದಂತೆ, ಯಾವ ಪ್ರಕಾರವಾಗಿ ಸೌಂದರ್ಯಕ್ಕೆ ರಾಜ್ಯಾಧಿಕಾರ ದೊರಕಿದಂತೆ ಆಹ್ಲಾದಕಾರಕಗಳಾದ ಶ್ರೀಹರಿಯ ಮುಖ ಗಳನ್ನು ಅರ್ಜುನನು ನೋಡಿದನು ।೧೯೮॥

ಮತ್ತು ಅದೇ ರೀತಿಯಾಗಿ ಆ ಮುಖಗಳಲ್ಲಿ ಭಯಂಕರ ವಾದ ಕಾಳರಾತ್ರಿಯ ಸೈನ್ಯವೇ ಎದ್ದಿದೆ ಎಂಬುವಂತೆ ಕಾಣ ಹತ್ತಿತು ।೧೯೯॥

ಅಥವಾ ಮೃತ್ಯುವಿಗೆಯೇ ಮುಖಗಳು ಉತ್ಪನ್ನವಾದಂತೆ ಭಯದ ಕಿಲ್ಲೆಗಳೇ ಎದ್ದು ನಿಂತಂತೆ, ಇಲ್ಲವೇ ಪ್ರಳಯಾಗ್ನಿಯ ಮಹಾಕುಂಡಗಳು ಹೊತ್ತಿಸಿದಂತೆ ।೨೦೦॥

ಈ ಪ್ರಕಾರವಾಗಿ ಅದ್ಭುತ ಮತ್ತು ಭಯಾನಕವಾದ ಮುಖಗಳನ್ನು ಅರ್ಜುನನು ಅಲ್ಲಿ ನೋಡಿದನು ಮತ್ತು ವಿಶೇಷ ಅಲಂಕೃತ ಸೌಮ್ಯ ಮುಖಗಳನ್ನು ನೋಡಿದನು ।೨೦೧॥

ಆತನ ಜ್ಞಾನದೃಷ್ಟಿಯ ಅವಲೋಕನೆಯು ಆ ಮುಖಗಳ ಅಂತವು ಆತನಿಗೆ ಹತ್ತಲಿಲ್ಲ. ಆದ್ದರಿಂದ ಅದನ್ನು ಬಿಟ್ಟು ಕಣ್ಣುಗಳು ಎಲ್ಲಿವೆ ಎಂದು ಕೌತುಕದಿಂದ ಹುಡುಕ ಹತ್ತಿದನು।೨೦೨॥

ಆಗ ನಾನಾ ಬಣ್ಣಗಳ ಕಮಲವನವೇ ವಿಕಾಸ ಗೊಂಡಿದೆ. ಸೂರ್ಯತೇಜದಂತೆ ಹೊಳೆಯುವ ಕಣ್ಣುಗಳ ಪಂಕ್ತಿಯು ಆ ಅರ್ಜುನನ ದೃಷ್ಟಿಗೆ ಗೋಚರವಾಯಿತು ।೨೦೩॥

ಅದರೊಳಗೆ ಕಡುಕಪ್ಪಾಗಿರುವ ಮೇಘದ ಗರ್ಜನೆ ಯಲ್ಲಿ ಕಲ್ಪಾಂತದ ಮಿಂಚುಗಳು ಮಿಂಚುವಂತೆ ಹುಬ್ಬಿನ ಕೆಳಗೆ ಅಗ್ನಿಯಂತೆ ಕಂದುಬಣ್ಣದ ಕಣ್ಣುಗಳು ಹೊಳೆಯು ತ್ತಿದ್ದವು ।೨೦೪॥

ಆ ಒಂದೇ ರೂಪದಲ್ಲಿ ಒಂದೊಂದು ಆಶ್ಚರ್ಯ ಕಂಡು ವಿಶ್ವರೂಪದಲ್ಲಿ ಅನೇಕ ವಿಷಯಗಳು ತುಂಬಿರುವುದು ಆತನ ಅನುಭವಕ್ಕೆ ಬಂದಿತು ।೨೦೫॥

ಆಗ ಈ ವಿಶ್ವರೂಪದ ಪಾದಗಳು ಎಲ್ಲಿವೆ, ಶಿರವು ಎಲ್ಲಿದೆ, ಮತ್ತು ಬಾಹುಗಳು ಎಲ್ಲಿವೆ ಎಂಬುವುದನ್ನು ನೋಡುವ ಆತನ ಕೌತುಕ ಇಚ್ಛೆಯು ಬೆಳೆಯ ಹತ್ತಿತು ।೨೦೬॥

ಆಗ ಭಾಗ್ಯನಿಧಿಯಾದ ಪಾರ್ಥನ ಮನೋರಥವು ನಿಷ್ಫಲ ಎಂದಾಗಬೇಕು? ಇಲ್ಲಿ ನೋಡು, ಶಂಕರನ ಬತ್ತಳಿಕೆಯಲ್ಲಿ ಎಂದಾದರೂ ಬಾಣಗಳು ಇಲ್ಲದ್ದು ಸಿಗ ಬಹುದೇ? ।೨೦೭॥

ನಾ ತರೀ ಚತುರಾನನಾಚಿಯೇ ವಾಚೇ । ಕಾಯ ಆಹಾತೀ ಲಟಕಿಯಾ ಅಕ್ಷರಾಂಚೆ ಸಾಚೇ? । ಮ್ಹಣೌನಿ ಸಾದ್ಯಂತಪಣ ಅಪರಾಂಚೇ । ದೇಖಿಲೇ ತೇಣೇ ।೨೦೮॥ ಜಯಾಚಿ ಸೋಯ ವೇದಾ ನಾಕಳೇ । ತಯಾಚೇ ಸಕಳಾವಯವ ಏಕೇಚಿ ವೇಳೇ । ಅರ್ಜುನಾಚೇ ದೋನ್ಹೀ ಡೋಳೇ । ಭೋಗಿತೇ ಜಾಹಲೇ ।೨೦೯॥ ಚರಣೌನಿ ಮುಕುಟವರೀ । ದೇಖತ ವಿಶ್ವರೂಪಾಚಿ ಥೋರೀ । ಜೇ ನಾನಾ ರತ್ನ ಅಳಂಕಾರೀ । ಮಿರವತ ಅಸೇ ।೨೧೦॥ ಪರಬ್ರಹ್ಮ ಆಪುಲೇನಿ ಆಂಗೇ । ಲ್ಯಾವಯಾ ಆಪಣಚಿ ಜಾಹಲಾ ಅನೇಗೇ । ತಿಯೇ ಲೇಣೇ ಮೀ ಸಾಂಗೇ । ಕಾಇಸಯಾ ಸಾರಿಖೀ ।೨೧೧॥ ಜಿಯೇ ಪ್ರಭೇಚಿಯೇ ಝುಳಾಳಾ । ಉಜಾಳು ಚಂದ್ರಾದಿತ್ಯ ಮಂಡಳಾ । ಜೇ ಮಹಾತೇಜಾಜಾ ಜಿವ್ಹಾಳಾ । ಜೇಣೇ ವಿಶ್ವ ಪ್ರಗಟೇ ।೨೧೨॥ ತೋ ದಿವ್ಯತೇಜ ಶೃಂಗಾರು । ಕೋಣಾಚಿಯೇ ಮತೀಸೀ ಹೋಯ ಗೋಚರು । ದೇವ ಆಪಣಪೇಂಚಿ ಲೇಇಲೇ ಐಸೇ ವೀರು । ದೇಖತ ಅಸೇ ।೨೧೩॥ ಮಗ ತೇಥೇಂಚಿ ಜ್ಞಾನಾಚಿಯಾ ಡೋಳಾ । ಪಹಾತ ಕರಪಲ್ಲವಾ ಜಂವ ಸರಳಾ । ತಂವ ತೋಡಿತ ಕಲ್ಪಾಂತೀಂಚಿಯಾ ಜ್ವಾಳಾ । ತೈಸೀ ಶಸ್ತ್ರೇ ಝುಳಕತ ದೇಖೇ ।೨೧೪॥ ಆಪಣ ಆಂಗ ಆಪಣ ಅಲಂಕಾರ । ಆಪಣ ಹಾತ ಆಪಣ ಹತಿಯಾರ । ಆಪಣ ಜೀವ ಆಪಣ ಶರೀರ । ದೇಖೇ ಚರಾಚರ ಕೋಂದಲೇ ದೇವೇ ।೨೧೫॥ ಜಯಾಚಿಯಾ ಕಿರಣಾಂಚಿ ನಿಖರಪಣೇ । ನಕ್ಷತ್ರಾಂಚೇ ಹೋತ ಫುಟಾಣೇ । ತೇಜೇ ಖಿರಡಲಾ ವನ್ಹೀ ಮ್ಹಣೇ । ಸಮುದ್ರೀ ರಿಘೋ ।೨೧೬॥ ಮಗ ಕಾಳಕೂಟ ಕಲ್ಲೋಳೀ ಕವಳಿಲೇ । ನಾನಾ ಮಹಾವಿಜೂಂಚೇ ದಾಗ ಉಮಟಲೇ । ತೈಸೇ ಅಪಾರ ಕರ ದೇಖಿಲೇ । ಉದಿತಾಯುಧೀ ।೨೧೭॥

ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಮ್ ।
ಸರ್ವಾಶ್ಚರ್ಯಮಯಂ ದೇವಂ ಅನಂತಂ ವಿಶ್ವತೋಮುಖಮ್ ।೧೧॥

ಕೀ ಭೇಣೇ ತೇಥೂನಿ ಕಾಢಿಲೀ ದಿಠೀ । ಮಗ ಕಂಠಮುಗುಟ ಪಹಾತಸೇ ಕಿರೀಟೀ । ತಂವ ಸುರತರೂಚೀ ಸೃಷ್ಟೀ । ಜಯಾಪಾಸೋನಿ ಕಾ ಜಾಹಲೀ ।೨೧೮॥ ಜಿಯೇ ಮಹಾಸಿದ್ಧೀಚೀ ಮೂಳಪೀಠೇ । ಶಿಣಲೀ ಕಮಳಾ ಜೇಥ ವಾವಟೇ । ತೈಸಿ ಕುಸುಮೇ ಅತೀ ಚೋಖಟೇ । ತುರಂಬಿಲೇ ದೇಖಿಲೇ।೨೧೯॥ ಮಗುಟಾ ವರೀ ಸ್ತಬಕ । ಠಾಯೀ-ಠಾಯೀ ಪೂಜಾಬಂಧ ಅನೇಕ । ಕಂಠೀ ರುಳತಾತಿ ಅಲೌಕಿಕ । ಮಾಳಾದಂಡ ।೨೨೦॥

ಇಲ್ಲವೇ ಬ್ರಹ್ಮದೇವನ ವಚನಗಳಲ್ಲಿ ಅಸತ್ಯ ಅಕ್ಷರಗಳು ಅಚ್ಚು ಇರಲು ಸಾಧ್ಯವೇ? ಆದ್ದರಿಂದ ಅಪಾರವಾಗಿರುವ ವಿಶ್ವರೂಪದ ಆದಿ ಅಂತವನ್ನು ಈ ಅರ್ಜುನನು ನೋಡಿದನು ॥೨೦೮॥

ಯಾವ ರೂಪದ ಯಥಾರ್ಥ ಸ್ವರೂಪವನ್ನು ವೇದಗಳು ಸಹ ಅರಿತಿಲ್ಲ. ಅಂತಹ ರೂಪದ ಎಲ್ಲ ಅವಯವಗಳನ್ನು ಅರ್ಜುನನು ಒಮ್ಮೆಲೆ ಎರಡೂ ಕಣ್ಣುಗಳಿಂದ ನೋಡಿದನು ॥೨೦೯॥

ಯಾವುದು ನಾನಾ ರತ್ನಗಳ ಅಲಂಕಾರಗಳಿಂದ ಶೋಭಾಯಮಾನವಾದ ವಿಶ್ವರೂಪದ ಚರಣಗಳಿಂದ ಶಿರದವರೆಗೆ ಎಲ್ಲ ಮಹಿಮೆ ಕಂಡನು ॥೨೧೦॥

ಪರಬ್ರಹ್ಮನು ತಾನು ಸ್ವತಃ ಸ್ವರೂಪವನ್ನು ಧಾರಣೆ ಮಾಡಿ ಅದರ ಮೇಲೆ ಪರಬ್ರಹ್ಮ ಸ್ವರೂಪವನ್ನೇ ಅಲಂಕಾರ ಹಾಕಿದಾಗ ಆ ಅಲಂಕಾರಗಳು ಯಾವ ಪ್ರಕಾರವಾಗಿ ಶೋಭಿಸುತ್ತವೆ ಎಂದು ಹೇಗೆ ಹೇಳಬೇಕು ? ॥೨೧೧॥

ಯಾವ ತೇಜದಿಂದ ಚಂದ್ರ ಮತ್ತು ಸೂರ್ಯ ಮಂಡಲಗಳು ಪ್ರಕಾಶಗೊಳ್ಳುವುವು ಮತ್ತು ಯಾವ ಮಹಾತೇಜದಿಂದ ವಿಶ್ವವು ಪ್ರಕಾಶಗೊಳ್ಳುವುದು. ಈ ಪ್ರಭೆಯು ಮಹಾತೇಜದ ಜೀವನವಾಗಿದೆ ॥೨೧೨॥

ಆ ಬ್ರಹ್ಮವು ಬ್ರಹ್ಮರೂಪ ಅಲಂಕಾರಗಳನ್ನು ಧರಿಸಿರುವುದನ್ನು ತಿಳಿಯುವ ಶಕ್ತಿಯು ಯಾರಿಗಿದೆ? ಆದರೆ ಅರ್ಜುನನಿಗೆ ಬ್ರಹ್ಮಕ್ಕೆ ಬ್ರಹ್ಮವೇ ಅಲಂಕಾರ ಹಾಕಿದ್ದು ಕಂಡಿತು ॥೨೧೩॥

ಆಗ ಜ್ಞಾನದೃಷ್ಟಿಯಿಂದ ವಿಶ್ವರೂಪದ ಹಸ್ತವನ್ನು ನೋಡುತ್ತಿದ್ದಾಗ ಅದು ಸರಳವಾಗಿದ್ದು ಅಲ್ಲಿ ಕಲ್ಪಾಂತದ ಜ್ವಾಲೆಯನ್ನು ಮೀರಿಸುವ ಶಸ್ತ್ರಗಳು ಝಳಪಿಸುತ್ತಿದ್ದವು ॥೨೧೪॥

ತಾನೇ ಶರೀರ, ತಾನೇ ಅದರ ಮೇಲೆ ಹಾಕಿದ ಅಲಂಕಾರ, ತಾನೇ ಹಸ್ತ, ತಾನೇ ಶಸ್ತ್ರ, ತಾನೇ ಜೀವ, ಮತ್ತು ಶರೀರವು ತಾನೇ, ಹೆಚ್ಚಿಗೇನು? ಚರಾಚರ ವಸ್ತುಗಳು ಪರಮಾತ್ಮನೇ ಇರುವನು ಎಂದು ಅರ್ಜುನನು ನೋಡಹತ್ತಿದನು ॥೨೧೫॥

ಅದರ ಕಿರಣಗಳು ಪ್ರಖರತೆಯಿಂದ ನಕ್ಷತ್ರಗಳು ಹುರಿದ ಕಡಲೆಯಾದವು ಮತ್ತು ಆ ತೇಜದಿಂದ ಅಗ್ನಿಯೂ ಬೆಂದಂತಾಗಿ ಅದಕ್ಕೆ ಸಮುದ್ರ ಪ್ರವೇಶದ ಇಚ್ಛೆಯಾಯಿತು ॥೨೧೬॥

ಆಗ ಕಾಳಕೂಟ ವಿಷವು ಉಕ್ಕೇರಿತು. ನಾನಾ ಪ್ರಕಾರದ ಮಹಾಮಿಂಚುಗಳ ಸಮುದಾಯವೇ ಮೂಡಿದಂತೆ ಆಯುಧಗಳೊಂದಿಗೆ ಅಪಾರ ಹಸ್ತಗಳನ್ನು ಅರ್ಜುನನು ನೋಡಿದನು ॥೨೧೭॥

ಶ್ಲೋಕಾರ್ಥ :- ದಿವ್ಯಗಳಾದ ವಸ್ತ್ರ ಮಾಲ್ಯಗಳಿಂದ ಸುಶೋಭಿತವಾಗಿಯೂ, ದಿವ್ಯವಾದ ಗಂಧವನ್ನು ಲೇಪಿಸಿರುವುದಾಗಿಯೂ, ಆಶ್ಚರ್ಯಕರವಾದುದಾಗಿಯೂ, ದೇದಿಪ್ಯಮಾನವಾದುದಾಗಿಯೂ, ಅನಂತವೂ ಸರ್ವತೋ ವ್ಯಾಪಕವಾದುದಾಗಿಯೂ, ಇರುವ ವಿಶ್ವರೂಪವನ್ನು ಅರ್ಜುನನು ನೋಡಿದನು ॥೧೧॥

ಕೈಯಲ್ಲಿನ ಶಸ್ತ್ರಗಳ ಭಯದಿಂದ ಅರ್ಜುನನು ತನ್ನ ದೃಷ್ಟಿಯನ್ನು ಬದಲಿಸಿ ಕಂಠ ಶಿರಗಳನ್ನು ನೋಡಹತ್ತಿದನು. ಆಗ ಆತನಿಗೆ ಅಲ್ಲಿ ಕಲ್ಪವೃಕ್ಷಗಳ ಉತ್ಪತ್ತಿಯು ಇಲ್ಲಿಂದಲೇ ಆಯಿತೆಂಬಂತೆ ಭಾಸವಾಯಿತು ॥೨೧೮॥

ಮಹಾಸಿದ್ಧಿಗಳ ಅಧಿಷ್ಠಾನದ ಲಕ್ಷ್ಮಿಯು ಶ್ರಮವಾದಾಗ ವಿಶ್ರಾಂತಿಯನ್ನು ಎಲ್ಲಿ ಪಡೆಯುವಳೋ, ಆ ಉತ್ಕೃಷ್ಟ ಕಮಲಗಳ ವಾಸನೆಯನ್ನು ಭಗವಾನನು ಮೂಸಿಸುತ್ತಿರುವುದನ್ನು ನೋಡಿದನು ॥೨೧೯॥

ಶಿರದ ಮೇಲೆ ಅನುಕ್ರಮದಿಂದ ಹೂಗಳ ಗೊಂಚಲವನ್ನು ಒಂದರ ಮೇಲೆ ಒಂದು ಹಚ್ಚಿದ್ದವು ಮತ್ತು ಕಂಠದಲ್ಲಿ ಅವರ್ಣನೀಯವಾದ ಪುಷ್ಪಮಾಲೆಯು ನೇತಾಡುತ್ತಿತ್ತು ॥೨೨೦॥

ಸ್ವರ್ಗೀ ಸೂರ್ಯತೇಜ ವೇಢಿಲೇ । ಜೈಸೇ ಪಂಧರೇನೇ ಮೇರೂತೇ ಮಢಿಲೇ । ತೈಸೇ ನಿತಂಬಾವರೀ ಗಾಢಿಲೇ । ಪೀತಾಂಬರು ಝುಳಕೇ ॥೨೨೧॥ ಶ್ರೀಮಹಾದೇವೋ ಕಾಪುರೇ ಉಟಿಲಾ । ಕಾ ಕೈಲಾಸು ಪಾರಜೇ ಡವರಿಲಾ । ನಾನಾ ಕ್ಷೀರೋದಕೇ ಪಾಂಘುರವಿಲಾ । ಕ್ಷೀರಾರ್ಣವೋ ಜೈಸಾ ॥೨೨೨॥ ಜೈಸೀ ಚಂದ್ರಮಯಾಚೀ ಘಡೀ ಉಪಲವೀಲೀ । ಮಗ ಗಗನಾಕರವೀ ಬುಂಥೀ ಘೇವವಿಲೀ । ತೈಸೀ ಚಂದನಪಿಂಜರೀ ದೇಖಿಲೀ । ಸರ್ವಾಂಗೀ ತೇಣೇ ॥೨೨೩॥ ಜೇಣೇ ಸ್ವಪ್ರಕಾಶಾ ಕಾಂತೀ ಚಡೇ । ಬ್ರಹ್ಮಾನಂದಾಚಾ ನಿದಾಘು ಮೋಡೇ । ಜಯಾಚೇನಿ ಸೌರಭ್ಯೇ ಜೀವಿತ ಜೋಡೇ । ವೇದವತಿಯೇ ॥೨೨೪॥ ಜಯಾಚೇ ನಿರ್ಲೇಪ ಅನುಲೇಪು ಕರೀ । ಜೇ ಅನಂಗುಹೀ ಸರ್ವಾಂಗೀ ಧರೀ । ತಯಾ ಸುಗಂಧಾಚೀ ಥೋರೀ । ಕವಣ ವಾನೀ? ॥೨೨೫॥ ಐಸೀ ಏಕೈಕ ಶೃಂಗಾರಶೋಭಾ । ಪಾಹತಾ ಅರ್ಜುನ ಜಾತಸೇ ಕ್ಷೋಭಾ । ತೇವೀಂಚಿ ದೇವೋ ಬೈಸಲಾ ಕೀ ಉಭಾ । ಕೀ ಶಯಾಲು ಹೇ ನೇಣವೇ ॥೨೨೬॥ ಬಾಹೇರ ದಿಠೀ ಉಘಡೋನಿ ಪಾಹೇ । ತಂವ ಆಘವೇ ಮೂರ್ತಿಮಯ ದೇಖತ ಆಹೇ । ಮಗ ಆತಾ ನ ಪಾಹೇ ಮ್ಹಣೌನಿ ಉಗಾ ರಾಹೇ । ತರೀ ಆಂತುಹೀ ತೈಸೇಂಚಿ ॥೨೨೭॥ ಅನಾವರೇ ಮುಖೇ ಸಮೋರ ದೇಖೇ । ತಯಾಭೇಣೇ ಪಾಠೀಮೋರಾ ಜಂವ ಠಾಕೇ । ತಂವ ತಯಾಹೀಕಡೇ ಶ್ರೀಮುಖೇ । ಕರಚರಣ ತೈಸೇಚಿ ॥೨೨೮॥ ಅಹೋ ಪಾಹತಾ ಕೀರ ಪ್ರತಿಭಾಸೇ । ಏಥ ನವಲಾವೋ ಕಾಯ ಅಸೇ? । ಪರಿ ನ ಪಾಹತಾಹೀ ದಿಸೇ । ಚೋಜ ಆಇಕಾ ॥೨೨೯॥ ಕೈಸೇ ಅನುಗ್ರಹಾಚೇ ಕರಣೇ । ಪಾರ್ಥಾಚೇ ಪಾಹಣೇ ಆಣೀ ನ ಪಾಹಣೇ । ತಯಾಹೀ ಸಕಟ ನಾರಾಯಣೇ । ವ್ಯಾಪೂನಿ ಘೇತಲೇ ॥೨೩೦॥ ಮ್ಹಣೌನಿ ಆಶ್ಚರ್ಯಾಚ್ಯಾ ಪುರೀ ಏಕೀ ।ಪಡಿಲಾ ಠಾಯೇಠಾವ ಥಡೀ ಠಾಕೀ । ತಂವ ಚಮತ್ಕಾರಾಚಿಯಾ ಆಣಿಕೀ । ಮಹಾರ್ಣವೀ ಪಡೇ ॥೨೩೧॥ ಐಸಾ ಅರ್ಜುನು ಅಸಾಧಾರಣೇ । ಆಪುಲಿಯಾ ದರ್ಶನಾಚೇನಿ ವಿಂದಾಣೇ । ಕವಳೂನಿ ಘೇತಲಾ ತೇಣೇ । ಅನಂತರೂಪೇ ॥೨೩೨॥ ತೋ ವಿಶ್ವತೋಮುಖ ಸ್ವಭಾವೇ । ಆಣಿ ತೇಚಿ ದಾವಾವಯಾಲಾಗೀ ಪಾಂಡವೇ । ಪ್ರಾರ್ಥಿಲಾ ಆತಾ ಆಘವೇ । ಹೋಊನಿ ಠೇಲಾ? ॥೨೩೩॥ ಆಣಿ ದೀಪೇ ಕಾ ಸೂರ್ಯೇ ಪ್ರಗಟೇ । ಅಥವಾ ನಿಮುಟಲಿಯಾ ದೇಖಾವೇಂಚಿ ಖುಂಟೇ । ತೈಸೀ ದಿಠೀ ನವ್ಹೇ ಜೇ ವೈಕುಂಠೇ । ದಿಧಲೀ ಆಹೇ ॥೨೩೪॥

ಸ್ವರ್ಗವು ಸೂರ್ಯತೇಜದಿಂದ ತುಂಬಿಕೊಂಡಂತೆ, ಅಥವಾ ಮೇರು ಪರ್ವತವು ಬಂಗಾರದಿಂದ ಹೊದಿಸಿದಂತೆ ನಡುವಿನಲ್ಲಿ ಧರಿಸಿದ ಪೀತ ಪೀತಾಂಬರವು ಹೊಳೆಯುತ್ತಿತ್ತು ।೨೨೧॥

ಶ್ರೀಮಹಾದೇವನಿಗೆ ಕರ್ಪುರದ ಲೇಪನ ಮಾಡಿದಂತೆ ಅಥವಾ ಕೈಲಾಸಪರ್ವತವನ್ನು ಪಾರಜದಿಂದ ಲೇಪಿಸಿದಂತೆ, ಇಲ್ಲವೇ ಕ್ಷೀರಸಾಗರಕ್ಕೆ ಬೆಳ್ಳಗಿರುವ ಸ್ವಚ್ಛ ನೀರು ಹೊಚ್ಚಿದಂತೆ ।೨೨೨॥

ಯಾವ ಪ್ರಕಾರವಾಗಿ ಚಂದ್ರನ ಮಡಿಕೆಯನ್ನು ಬಿಚ್ಚಿ ಅದನ್ನು ಆಕಾಶಕ್ಕೆ ಗವಸಣಿಕೆ ಹಾಕಿದರೆ ಹೇಗೋ, ಅದರಂತೆ ಸರ್ವಾಂಗದಲ್ಲಿ ಬಿಳಿಯಾದ ಶುಭ್ರವಾದ ಚಂದನದ ಲೇಪನವು ಕಂಡಿತು ।೨೨೩॥

ಈ ತೇಜದಿಂದ ಮೂಲ ತೇಜಕ್ಕೂ ತೇಜವು ಹೆಚ್ಚುವುದು. ಬ್ರಹ್ಮಾನಂದದ ದಾಹವು ಇಲ್ಲದಾಗುವುದು ಮತ್ತು ಇದರ ಸುಗಂಧದಿಂದ ಸ್ವಾಭಾವಿಕವಾಗಿಯೇ ಗಂಧ ಯುಕ್ತ ಪೃಥ್ವಿಗೆ ಜೀವಿತ ದೊರಕುವುದು ।೨೨೪॥

ನಿರ್ಲಿಪ್ತನಾದ ಪರಮಾತ್ಮನು ಸಹ ಯಾವ ಗಂಧದ ಅನುಲೇಪ ಮಾಡಿಕೊಳ್ಳುವನೋ ಮತ್ತು ಮದನನೂ ಅದರ ಲೇಪನವನ್ನು ಸರ್ವಾಂಗಕ್ಕೂ ಹಚ್ಚುವನೋ, ಆ ಸುಗಂಧ ಮಹಿಮೆಯನ್ನು ಯಾರು ವರ್ಣಿಸಬೇಕು? ।೨೨೫॥

ಈ ಪ್ರಕಾರವಾಗಿ ಒಂದೊಂದೇ ಅಲಂಕಾರಗಳ ಶೋಭೆ ಯನ್ನು ನೋಡಿ ಅರ್ಜುನನು ಬೆರಗಾದನು. ಆಗ ದೇವನು ಕುಳಿತಿರುವನೋ, ನಿಂತಿರುವನೋ, ಮಲಗಿರುವನೋ ಅಥವಾ ಯಾವುದರ ಮೇಲೆ ಇರುವನೆಂಬುದು ಆತನಿಗೆ ತಿಯಲಾರ ದಂತಾಯಿತು ।೨೨೬॥

ಕಣ್ಣು ತೆರೆದು ಹೊರಗೆ ಅತ್ತಿತ್ತ ನೋಡಲು ಎಲ್ಲವೂ ವಿಶ್ವರೂಪದಿಂದ ತುಂಬಿಕೊಂಡಿದ್ದು ಕಾಣಿಸಿತು. ನೋಡದೇ ಕಣ್ಣು ಮುಚ್ಚಿದಾಗ ಒಳಗೆ ಅಂತರ್ಯಾಮಿಯ ಅದೇ ವಿಶ್ವರೂಪ ಕಾಣಿಸಿತು ।೨೨೭॥

ಮುಂದೆ ಭಯಂಕರ ಮುಖಗಳು ಕಾಣಿಸುತ್ತವೆ ಎಂದು ಭಯದಿಂದ ಹಿಂದೆ ನೋಡಲು ಅಲ್ಲಿಯೂ ಅದೇ ವಿಶ್ವ ರೂಪದ ಮುಖಗಳು, ಹಸ್ತಪಾದಗಳು ಅದರಂತೆಯೇ ಕಾಣ ಸಹತ್ತಿದವು ।೨೨೮॥

ಅಹೋ, ದೃಷ್ಟಿ ತೆರೆದು ನೋಡಿದಾಗ ಸರ್ವತ್ರ ವಿಶ್ವರೂಪದ ಭಾಸವಾಗುವುದು. ಇದು ಯಾವ ಆಶ್ಚರ್ಯ? ಆದರೆ ಕಣ್ಣು ಮುಚ್ಚಿದಾಗಲೂ ಅದು ಕಾಣುವುದು. ಈ ಆಶ್ಚರ್ಯ ಕೇಳಿರಿ ।೨೨೯॥

ಪ್ರಭುವಿನ ಕೃತಿ ಹೇಗಿದೆ ನೋಡಿರಿ, ಪಾರ್ಥನ ನೋಡು ವುದರಲ್ಲಿ ಶ್ರೀಕೃಷ್ಣನದೇ ವ್ಯಾಪ್ತಿ ಇರುವುದು. ಇಷ್ಟೇ ಅಲ್ಲ, ನೋಡದಿದ್ದಲ್ಲಿಯೂ ಶ್ರೀಕೃಷ್ಣನ ವ್ಯಾಪ್ತಿ ಇರುವುದು ।೨೩೦॥

ಆದ್ದರಿಂದ ಒಂದು ಆಶ್ಚರ್ಯರೂಪದ ಪ್ರವಾಹದಲ್ಲಿ ಬಿದ್ದಾಕ್ಷಣವೇ ತತ್ಕಾಲವೇ ದಂಡೆಗೆ ಬಂದು ನಿಲ್ಲುವನು. ಅವನೇ ಎರಡನೆಯ ಚಮತ್ಕಾರವೆಂಬ ಮಹಾಸಮುದ್ರಕ್ಕೆ ಬಿದ್ದುಕೊಂಡನು ।೨೩೧॥

ಅದರಂತೆ ತನ್ನ ವಿಶ್ವರೂಪ ದರ್ಶನದ ವೇದನೆ ಹತ್ತಿದ್ದ ಅರ್ಜುನನಿಗೆ ಕುಶಲತೆಯಿಂದ ಶ್ರೀಕೃಷ್ಣನು ಅನಂತರೂಪ ಗಳನ್ನು ತೋರಿಸಿ ವ್ಯಾಪಿಸಿಬಿಟ್ಟನು ।೨೩೨॥

ಈತನು ಸ್ವಭಾವತಃ ಸರ್ವವ್ಯಾಪ್ತಿ, ಸರ್ವತೋಮುಖ ನಾಗಿರುವುದರಿಂದ ಮತ್ತು ಅರ್ಜುನನು ವಿಶ್ವರೂಪವನ್ನು ತೋರಿಸು ಎಂದು ಪ್ರಾರ್ಥಿಸಿರುವುದರಿಂದ ತಾನೇ ಎಲ್ಲ ರೂಪ ಧರಿಸಿ ನಟಿಸಿದನು ।೨೩೩॥

ದೀಪಇಲ್ಲವೇ ಸೂರ್ಯಪ್ರಕಾಶವಿದ್ದರೆಮಾತ್ರ ವಸ್ತುಗಳು ಕಾಣುವುವು. ಇಲ್ಲದಿದ್ದರೆ ನೋಡುವುದೇ ನಿಲ್ಲುವುದು. ಆದರೆ ಅರ್ಜುನನಿಗೆ ಕೊಟ್ಟ ದಿವ್ಯ ದೃಷ್ಟಿಯು ಹಾಗಿದ್ದಿಲ್ಲ ।೨೩೪॥

ಮ್ಹಣೌನಿ ಕಿರೀಟೇಸಿ ದೋಹೀ ಪರೀ । ತೇ ದೇಖಣೇ ದೇಖೇ ಅಂಧಾರೀ । ಹೇ ಸಂಜಯೋ ಹಸ್ತಿನಾಪುರೀ । ಸಾಂಗತಸೇ ರಾಯಾ ॥೨೩೫॥ ಮ್ಹಣೇ ಕಿಂಬಹುನಾ ಅವಧಾರಿಲೇ । ಪಾರ್ಥೇ ವಿಶ್ವರೂಪ ದೇಖಿಲೇ । ನಾನಾ ಆಭರಣೇ ಭರಲೇ । ವಿಶ್ವತೋಮುಖ ॥೨೩೬॥

ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।
ಯದಿ ಭಾಃ ಸದೃಶೀ ಸಾ ಸ್ಯಾತ್ ಭಾಸಸ್ತಸ್ಯ ಮಹಾತ್ಮನಃ ॥೧೨॥

ತಿಯೇ ಅಂಗಪ್ರಭೇಚಾ ದೇವಾ । ನವಲಾವೋ ಕಾಇಸಯಾ ಐಸಾ ಸಾಂಗಾವಾ । ಕಲ್ಪಾಂತೀ ಏಕುಚಿ ಮೇಳಾವಾ । ದ್ವಾದಶಾದಿತ್ಯಾಂಚಾ ಹೋಯ ॥೨೩೭॥ ತೈಸೇ ತೇ ದಿವ್ಯಸೂರ್ಯ ಸಹಸ್ರವರೀ । ಜರೀ ಉದಯಜತೀ ಕಾ ಏಕೇಚಿ ಅವಸರೀ । ತರ್ಹೀ ತಯಾ ತೇಜಾಚೀ ಥೋರೀ । ಉಪಮೂ ನಯೇ ॥೨೩೮॥ ಆಘವಯಾಚಿ ವಿಜೂಂಚಾ ಮೇಳಾವಾ ಕೀಜೇ । ಆಣಿ ಪ್ರಳಯಾಗ್ನೀಚೇ ಸರ್ವ ಸಾಮುಗ್ರೀ ಆಣಿಜೇ । ತೇವೀಂಚಿ ದಶಕುಹೀ ಮೇಳವಿಜೇ । ಮಹಾತೇಜಾಂಚಾ ॥೨೩೯॥ ತರ್ಹೀ ತಿಯೇ ಅಂಗಪ್ರಭೇಚೇನಿ ಪಾಡೇ । ಹೇ ತೇಜ ಕಾಂಹೀ ಕಾಂಹೀ ಹೋಈಲ ಥೋಡೇ । ಆಣಿ ತಯಾ ಐಸೇ ಕೀರ ಚೋಖಡೇ । ತ್ರಿಶುದ್ಧೀ ನೋಹೇ ॥೨೪೦॥ ಐಸೇ ಮಾಹಾತ್ಮಯಾ ಶ್ರೀಹರೀಚೇ ಸಹಜ । ಫಾಂಕತಸೇ ಸರ್ವಾಂಗೀಚೇ ತೇಜ । ತೇ ಮುನಿಕೃಪಾ ಜೀ ಮಜ । ದೃಶ್ಯ ಜಾಹಲೇ ॥೨೪೧॥

ತತ್ರೈಕಸ್ಥಂ ಜಗತ್ ಕೃತ್ಸ್ನಂ ಪ್ರವಿಭಕ್ತಮನೇಕಧಾ ।
ಅಪಶ್ಯದ್ದೇವದೇವಸ್ಯ ಶರೀರೇ ಪಾಂಡವಸ್ತದಾ ॥೧೩॥

ಆಣಿ ತಿಯೇ ವಿಶ್ವರೂಪೀ ಏಕೀಕಡೇ । ಜಗ ಆಘವೇ ಆಪುಲೇನಿ ಪವಾಡೇ । ಜೈಸೇ ಮಹೋದಧಿಮಾಜೀ ಬುಡಬುಡೇ । ಸಿನಾನೇ ದಿಸತೀ ॥೨೪೨॥ ಕಾ ಆಕಾಶಿ ಗಂಧರ್ವ ನಗರ । ಭೂತಳೀ ಪಿಪೀಲಿಕಾ ಬಾಂಧೇ ಘರ । ನಾನಾ ಮೇರೂವರೀ ಸಪುರ । ಪರಮಾಣು ಬೈಸಲೇ ॥೨೪೩॥ ವಿಶ್ವ ಆಘವೇಂಚಿ ತಯಾಪರೀ । ತಯಾ ದೇವಚಕ್ರವರ್ತೀಚಿಯಾ ಶರೀರೀ । ಅರ್ಜುನ ತಿಯೇ ಅವಸರೀ । ದೇಖತಾ ಜಾಹಲಾ ॥೨೪೪॥

ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ ।
ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ ॥೧೪॥

ಹೇಗೆಂದರೆ, ಅರ್ಜುನನಿಗೆ ಕಣ್ಣು ತೆರೆದರೂ ಅಥವಾ ಕಣ್ಣು ಮುಚ್ಚಿದರೂ ಅಲ್ಲದೇ ಕತ್ತಲೆಯಲ್ಲಿಯೂ ಸಹ ದಿವ್ಯದೃಷ್ಟಿಯಿಂದ ಕಾಣಿಸುತ್ತಿತ್ತು. ಹೀಗೆ ಹಸ್ತಿನಾಪುರದಲ್ಲಿ ಸಂಜಯನು ರಾಜನಿಗೆ ಹೇಳಿದನು ।೨೩೫॥

ಪುನಃ ಹೇಳಿದನು, ರಾಜಾ ಕೇಳಿದಿಯಾ? ನಾನಾ ಅಲಂಕಾರಗಳಿಂದ ತುಂಬಿರುವ ಮತ್ತು ವಿಶ್ವತೋಮುಖನಾಗಿರುವ ವಿಶ್ವರೂಪವನ್ನು ಪಾರ್ಥನು ನೋಡಿದನು ।೨೩೬॥

ಶ್ಲೋಕಾರ್ಥ :- ಆಕಾಶದಲ್ಲಿ ಸಾವಿರಾರು ಸೂರ್ಯರು ಒಂದೇ ಸಾರಿಗೆ ಉದಯಿಸಿದರೆ ಆ ವಿಶ್ವರೂಪ ದೇವನ ತೇಜಃ ಪ್ರಕಾಶಕ್ಕೆ ಸಮವಾಗುವುದೇನೋ! ।೧೨॥

ರಾಜಾ, ಆ ವಿಶ್ವರೂಪದ ತೇಜವು ಯಾವುದರಂತೆ ಇರುವುದೆಂದು ಹೇಳಲಿ? ಪ್ರಳಯಕಾಲದಲ್ಲಿ ದ್ವಾದಶ ಸೂರ್ಯರು ಏಕತ್ರ ಕೂಡುವರು ।೨೩೭॥

ಅದರಂತೆ ಸಹಸ್ರವಧಿ ದಿವ್ಯ ಸೂರ್ಯರು ಒಂದೇ ವೇಳೆಯಲ್ಲಿ ಉದಯರಾದರೂ ಸಹ ಇವರಿಂದಲೂ ಆ ವಿಶ್ವರೂಪದ ತೇಜದ ಸರಿಸಮಾನವಾಗಲಾರದು ।೨೩೮॥

ಎಲ್ಲ ಮಿಂಚುಗಳನ್ನು ಒಂದು ಗೂಡಿಸಿ ಮತ್ತು ಪ್ರಳಯಕಾಲದ ಅಗ್ನಿಯ ಎಲ್ಲ ಸಾಹಿತ್ಯಗಳನ್ನು ಕೂಡಿಸಿ ಹಾಗೆಯೇ ಅದರಲ್ಲಿ ಹತ್ತು ಮಹಾತೇಜಗಳನ್ನು ಒಂದು ಗೂಡಿಸಿದರೆ ।೨೩೯॥

ಆಗ ಮಾತ್ರ ಆ ವಿಶ್ವರೂಪದ ಅಂಗತೇಜಕ್ಕೆ ಏನಾದರೂ ಸ್ವಲ್ಪಮಟ್ಟಿಗೆ ಸಮವಾದೀತು. ಆದರೆ ಅದರ ಪೂರ್ಣ ಸರಿಸಮಾನತೆಯು ನಿಶ್ಚಿತ ಆಗಲಾರದು ।೨೪೦॥

ಹೀಗೆ ಶ್ರೀಹರಿಯ ಮಹಿಮೆಯು ಸಹಜವಾಗಿದೆ. ಆತನ ವಿಶ್ವರೂಪದ ತೇಜವು ಸರ್ವತ್ರವೂ ಪಸರಿಸಿಕೊಂಡಿದ್ದು, ಆ ವ್ಯಾಸ ಕೃಪೆಯಿಂದ ನನ್ನ ದೃಷ್ಟಿಗೆ ಗೋಚರಿಸಿತು ।೨೪೧॥

ಶ್ಲೋಕಾರ್ಥ :- ಆಗ ಅರ್ಜುನನು ವಿವಿಧ ವಿಚಿತ್ರಗಳಿಂದ ಕೂಡಿದ ಜಗತ್ತೆಲ್ಲಾ ದೇವಾದಿ ದೇವನಾದ ಶ್ರೀಕೃಷ್ಣ ಭಗವಂತನ ಶರೀರದಲ್ಲಿ ಒಂದೇ ಕಡೆಯಲ್ಲಿ ಇರುವುದನ್ನು ನೋಡಿದನು ।೧೩॥

ಮತ್ತು ಆ ವಿಶ್ವರೂಪದಲ್ಲಿ ಎಲ್ಲ ಜಗತ್ತುಗಳು ಯಾವುದೋ ಒಂದು ಭಾಗದಲ್ಲಿ ಇದ್ದವು. ಯಾವ ಪ್ರಕಾರವಾಗಿ ಸಮುದ್ರದ ನೀರಿನಲ್ಲಿ ಬೇರೆ ಬೇರೆ ಬುರುಗಿನ ಗುರುಳೆಗಳು ಕಾಣಿಸುವುವೋ ।೨೪೨॥

ಅಥವಾ ಆಕಾಶದಲ್ಲಿ ಮೇಘದ ಗಂಧರ್ವನಗರ, ಭೂಮಿಯ ಮೇಲೆ ಇರುವೆಯ ಹುತ್ತುಗಳು ಇಲ್ಲವೇ ಗುಡ್ಡಗಳಲ್ಲಿ ಸಣ್ಣ ಮಣ್ಣಿನ ಕಣಗಳು ಇರುವುವೋ ।೨೪೩॥

ಅದರಂತೆ ಆಗ ಆ ದೇವಾಧಿದೇವನಾದ ಶ್ರೀಕೃಷ್ಣನ ಶರೀರದಲ್ಲಿ ಅರ್ಜುನನು ಈ ಎಲ್ಲ ಜಗತ್ತುಗಳನ್ನು ನೋಡಿದನು ।೨೪೪॥

ಶ್ಲೋಕಾರ್ಥ :- ಅನಂತರ ಆಶ್ಚರ್ಯಪರ ವಶನಾಗಿ ರೋಮಾಂಚನವುಂಟಾಗಿ ಭಗವಂತನಿಗೆ ಶಿರಸಾ ನಮಸ್ಕಾರ ಮಾಡಿ ಕೈಜೋಡಿಸಿ ಹೇಳಿದನು ।೧೪॥

ತೇಥ ಏಕ ವಿಶ್ವ ಏಕ ಆಪಣ । ಐಸೇ ಅಳುಮಾಳೂ ಹೋತೇ ಜೇ ದುಜೇಪಣ । ತೇಹೀ ಆಟೋನಿ ಗೇಲೇ ಅಂತಃಕರಣ । ವಿರಾಲೇ ಸಹಸಾ ।೨೪೫॥ ಆಂತು ಆನಂದಾ ಚೇಹರೇ ಜಾಹಲೇ । ಬಾಹೇರಿ ಗಾತ್ರಾಂಚೇ ಬಳ ಹಾರಪೋನಿ ಗೇಲೇ । ಅಪಾದ ಪಾ ಗುಂತಲೇ । ಪುಲಕಾಂಚಲೇ ।೨೪೬॥ ವಾರ್ಷಿಯೇ ಪ್ರಥಮದಶೇ । ವೋಹಳ ಲಯಾ ಶೈಲಾಚೇ ಸರ್ವಾಂಗ ಜೈಸೇ । ವಿರೂಢೇ ಕೋಮಲಾಂಕುರೀ ತೈಸೇ । ರೋಮಾಂಚ ಜಾಹಲೇ ।೨೪೭॥ ಶಿವತಲಾ ಚಂದ್ರಕರೀ । ಸೋಮಕಾಂತು ದ್ರಾವೋ ಧರೀ । ತೈಸಿಯಾ ಸ್ವೇದಕಣಿಕಾ ಶರೀರೀ । ದಾಟಲಿಯಾ ।೨೪೮॥ ಮಾಜೀ ಸಾಂಪಡಲೇನಿ ಅಲಿಕುಳೇ । ಜಳಾವರೀ ಕಮಳಕಳಿಕಾ ಜೇವೀ ಆಂದೋಳೇ । ತೇವೀ ಆತುಲಿಯಾ ಸುಖೋರ್ಮೀಚೇನಿ ಬಳೇ । ಬಾಹೇರಿ ಕಾಂಪೇ ।೨೪೯॥ ಕರ್ಪೂರಕರ್ದಳೀಚೇ ಗರ್ಭಪುಟೇ । ಉಕಲತಾ ಕಾಪುರಾಚೇನಿ ಕೋಂದಾಟೇ । ಪುಲೀಕಾ ಗಳತೀ ತೇವಿ ಥೇಂಬುಟೇ । ನೇತ್ರೌನಿ ಪಡತಿ ।೨೫೦॥ ಉದಯಲೇನಿ ಸುಧಾಕರೇ । ಜೈಸಾ ಭರಲಾಚಿ ಸಮುದ್ರ ಭರೇ । ತೈಸಾ ವೇಳೋವೇಳಾ ಊರ್ಮಿಭರೇ । ಉಚಂಬಳತ ಅಸೇ ।೨೫೧॥ ಐಸಾ ಸಾತ್ತ್ವಿಕಾಂಹೀ ಆಠಾ ಭಾವಾ । ಪರಸ್ಪರೇ ವರ್ತತಸೇ ಹೇವಾ । ತೇಥ ಬ್ರಹ್ಮಾನಂದಾಚೇ ಜೇವಾ । ರಾಣೇವ ಘಾವಲೀ ।೨೫೨॥ ತೈಸಾಚಿ ತಯಾಸುಖಾನುಭವಾಪಾಠೀ । ಕೇಲಾ ದ್ವೈತಾಚಾ ಸಾಂಭಾಳು ದಿಠೀ । ಮಗ ಉಸಾಸೌನಿ ಕಿರೀಟೀ । ವಾಸ ಪಾಹಿಲೀ ।೨೫೩॥ ತೇಥ ಬೈಸಲಾ ಹೋತಾ ಜಿಯಾ ಸವಾ । ತಿಯಾಚಿಯಾಕಡೇ ಮಸ್ತಕ ಖಾಲವಿಲಾ ದೇವಾ । ಮಗ ಜೋಡೂನಿ ಕರಸಂಪುಟ ಬರವಾ । ಬೋಲತು ಅಸೇ ।೨೫೪॥

ಅರ್ಜುನ ಉವಾಚ :-

ಪಶ್ಯಾಮಿ ದೇವಾಂಸ್ತವ ದೇವ ದೇಹೇ ಸರ್ವಾಂಸ್ತಥಾ ಭೂತವಿಶೇಷಸಂಘಾನ್ ।
ಬ್ರಹ್ಮಾಣಮಿಶಂ ಕಮಲಾಸನಸ್ಥಂ ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ।೧೫॥

ಮ್ಹಣೇ ಜಯಜಯಾಜೀ ಸ್ವಾಮೀ । ನವಲ ಕೃಪಾ ಕೇಲೀ ತುಮ್ಹೀ । ಜೇ ಹೇ ವಿಶ್ವರೂಪ ಕೀ ಆಮ್ಹೀ । ಪ್ರಾಕೃತ ದೇಖೋ ।೨೫೫॥ ಪರಿ ಸಾಚಚಿ ಭಲೇ ಕೇಲೇ ಗೋಸಾವಿಯಾ । ಮಜ ಪರಿತೋಷು ಜಾಹಲಾ ಸಾವಿಯಾ । ಜೇ ದೇಖಿಲಾಸೀ ಜೋ ಇಯಾ । ಸೃಷ್ಟೀಸೀ ತೂ ಆಶ್ರಯೋ ।೨೫೬॥ ದೇವಾ ಮಂದರಾಚೇನಿ ಅಂಗಲಗೇ । ಠಾಯೀ ಠಾಯೀ ಶ್ವಾಪದಾಂಚೀ ದಾಂಗೇ । ತೈಸೀ ಇಯೇ ತುಝ್ಯಾ ದೇಹೀ ಅನೇಗೇ । ದೇಖತಸೇ ಭುವನೇ ।೨೫೭॥

ಆಗ ವಿಶ್ವವು ಬೇರೆ ಮತ್ತು ತಾನು ಬೇರೆ ಹೀಗೆ ಇದ್ದ ಅಲ್ಪ ದ್ವೈತವು ಸಹ ಇಲ್ಲದಾಗಿ ಅರ್ಜುನನ ಮನವು ಸಹಜವಾಗಿ ಕರಗಿಬಿಟ್ಟಿತು ।೨೪೫॥

ಒಳಗೆ ಆನಂದವು ಉಕ್ಕೇರಿತು, ಹೊರಗಿನ ಗಾತ್ರಗಳು ಸಡಿಲಾದವು ಮತ್ತು ಪಾದದಿಂದ ಮಸ್ತಕದವರೆಗೆ ರೋಮಾಂಚನವಾಯಿತು ।೨೪೬॥

ಮಳೆಗಾಲದ ಆರಂಭದಲ್ಲಿ ಪರ್ವತದ ಮೇಲಿನ ಎಲ್ಲ ಮಲಿನ ತೇಲಿ ಹೋದಾಗ ಅಲ್ಲಿ ಹುಟ್ಟುವ ಕೋಮಲ ಹುಲ್ಲಿನಂತೆ ಅರ್ಜುನನ ಸರ್ವಾಂಗದಲ್ಲಿ ರೋಮಗಳು ಎದ್ದು ನಿಂತವು ।೨೪೭॥

ಚಂದ್ರಕಿರಣಗಳ ಸ್ಪರ್ಶವಾದಾಗ ಯಾವ ಪ್ರಕಾರವಾಗಿ ಚಂದ್ರಕಾಂತ ಶಿಲೆಯು ದ್ರವಿಸುವುದೋ, ಆ ಪ್ರಕಾರವಾಗಿ ಅರ್ಜುನನ ಶರೀರದ ಮೇಲೆ ಬೆವರಿನ ಹನಿಗಳು ಬಂದವು ।೨೪೮॥

ಕಮಲದ ದಳದಲ್ಲಿ ಭೃಂಗವು ಸಿಕ್ಕಿಕೊಂಡಾಗ ಅದು ಅಲುಗಾಡುವಂತೆ ಅಂತರ್ಯಾಮಿಯ ಸುಖದ ಲಹರಿಯಿಂದ ಅರ್ಜುನನ ಶರೀರವು ನಡುಗಹತ್ತಿತು ।೨೪೯॥

ಕರ್ಪೂರ ಬಾಳೆಯ ಗರ್ಭಗಳನ್ನು ಪುಟಕ್ಕೆ ಹಾಕಲು ಅವು ಕುದ್ದು ಅವುಗಳ ಸಿಪ್ಪೆಗಳಿಂದ ಕರ್ಪೂರದ ಕಣಗಳು ಹೊರಬೀಳುವಂತೆ ಅರ್ಜುನನ ಕಣ್ಣುಗಳಿಂದ ಆನಂದ ಭಾಷ್ಪಗಳು ಬೀಳಹತ್ತಿದವು ।೨೫೦॥

ಚಂದ್ರೋದಯವಾದಾಗ ಸಮುದ್ರವು ತುಂಬಿಕೊಂಡಿದ್ದರೂ ಅದಕ್ಕೆ ಭರತಿಬರುವುದು. ಅದರಂತೆ ಒಳಗಿನ ಆನಂದವು ಉಕ್ಕೇರಹತ್ತಿತು ।೨೫೧॥

ಈ ಪ್ರಕಾರವಾಗಿ ಅಷ್ಟಸಾತ್ವಿಕ ಭಾವಗಳು ಒಂದಕ್ಕೊಂದು ಸ್ಪರ್ಧೆಯಿಂದ ಅರ್ಜುನನಿಗೆ ಬ್ರಹ್ಮಾನಂದದ ರಾಜ್ಯವು ಪ್ರಾಪ್ತವಾಯಿತು ।೨೫೨॥

ಅದರಂತೆ ಬ್ರಹ್ಮಾನಂದದ ಸುಖದ ಜೊತೆಯಲ್ಲಿಯೇ ದೇವನು, ನಾನು ಎಂಬ ದ್ವೈತವು ಸ್ಥಿರವಾಗಿರುವುದರಿಂದ ಅರ್ಜುನನ ಶ್ವಾಸವು ನಿಂತು ದೃಷ್ಟಿಯಿಂದ ನೋಡಹತ್ತಿದನು ।೨೫೩॥

ಮತ್ತು ಯಾವ ದಿಸೆಯಲ್ಲಿ ದೇವನು ಕುಳಿತಿದ್ದನೋ ಅದೇ ಸ್ಥಳದಲ್ಲಿ ತಿರುಗಿ ನತಮಸ್ತಕನಾಗಿ ಕೈಗಳನ್ನು ಜೋಡಿಸಿ ಪ್ರಾರ್ಥನೆ ಮಾಡಹತ್ತಿದನು ।೨೫೪॥

ಶ್ಲೋಕಾರ್ಥ :- ಅರ್ಜುನನು ಹೀಗೆಂದನು:- ಪ್ರಭೋ! ನಿನ್ನ ಶರೀರದಲ್ಲಿ ಸರ್ವಭೂತ ಸಮು ದಾಯವನ್ನು, ಕಮಲಗರ್ಭನಾದ ಬ್ರಹ್ಮ ದೇವನನ್ನು, ಋಷಿಗಳನ್ನು, ಸರ್ಪಗಳನ್ನು, ಮುಂತಾದವುಗಳನ್ನು ನೋಡುತ್ತಿದ್ದೇನೆ ।೧೫॥

ಅರ್ಜುನನು ಹೇಳಿದನು:- ಹೇ ಸ್ವಾಮಿಯೇ, ನಿನಗೆ ಜಯಜಯಕಾರವು. ನಮ್ಮ ಮೇಲೆ ನಿಮ್ಮ ಮಹಾಕೃಪೆಯಾಯಿತು. ಸಾಮಾನ್ಯ ಜೀವಿಯಾದ ನಾನು ನಿಮ್ಮ ವಿಶ್ವರೂಪವನ್ನು ನೋಡುತ್ತಿರುವೆ ।೨೫೫॥

ಹೇ ದೇವನೇ, ನೀವು ಬಹಳ ಒಳ್ಳೆಯದನ್ನೇ ಮಾಡಿರುವಿರಿ, ಇದರಿಂದ ನನಗೆ ಸ್ವಭಾವತಃವೇ ಬಹಳ ಆನಂದವಾಗಿದೆ. ಈ ಎಲ್ಲ ಸೃಷ್ಟಿಗೆ ನಿಮ್ಮ ಆಶ್ರಯವಿದೆ ಎಂಬುದು ಇಂದು ನಾನು ನೋಡಿದೆನು ।೨೫೬॥

ಪರ್ವತದ ಮಡಲಿನಲ್ಲಿ ಎಲ್ಲೆಲ್ಲಿಯೂ ಪಶುಗಳ ಹಿಂಡು ಇರುವಂತೆ. ನಿಮ್ಮ ಶರೀರದಲ್ಲಿ ನೂರಾರು ಇಂದ್ರ ಚಂದ್ರಾದಿ ಲೋಕಗಳು ನನ್ನ ದೃಷ್ಟಿಗೆ ಕಂಡವು ।೨೫೭॥

ಅಹೋ ಆಕಾಶಾಚಿಯೇ ಖೋಳೀ । ದಿಸತೀ ಗೃಹಗಣಾಂಚೀ ಕುಳೇ । ಕಾ ಮಹಾವೃಕ್ಷೀ ಅವಿಸಾಳೇ । ಪಕ್ಷಿ ಜಾತೀಚೇ ।೨೫೮॥ ತಯಾಪರೀ ಶ್ರೀಹರೀ । ತುಝಿಯಾ ವಿಶ್ವಾತ್ಮಕೀ ಇಯೇ ಶರೀರೀ । ಸ್ವರ್ಗು ದೇಖತಸೇ ಅವಧಾರೀ । ಸುರಗಣೇಸೀ ।೨೫೯॥ ಪ್ರಭು ಮಹಾಭೂತಾಂಚೇ ಪಂಚಕ । ಯೇಥ ದೇಖತ ಆಹೇ ಅನೇಕ । ಆಣಿ ಭೂತಗ್ರಾಮ ಏಕೇಕ । ಭೂತಸೃಷ್ಟೀಚೇ ।೨೬೦॥ ಜೀ ಸತ್ಯಲೋಕು ತುಜಮಾಜೀ ಆಹೇ । ದೇಖಿಲಾ ಚತುರಾನನು ಹಾ ನೋಹೇ? । ಆಣಿ ಯೇರೀಕಡೇ ಜಂವ ಪಾಹೇ । ತಂವ ಕೈಲಾಸುಹೀ ದಿಸೇ ।೨೬೧॥ ಶ್ರೀಮಹಾದೇವ ಭಾವಾನಿಯೇಶೀ । ತುಝ್ಯಾ ದಿಸತಸೇ ಏಕೇ ಅಂಶೀ । ಆಣಿ ತೂಂತೇಹೀ ಗಾ ಹೃಷೀಕೇಶೀ । ತುಜಮಾಜೀ ದೇಖೇ ।೨೬೨॥ ಪೈ ಕಶ್ಯಪಾದಿ ಋಷಿಕುಳೇ । ಇಯೇ ತುಝಿಯಾ ಸ್ವರೂಪೀ ಸಕಳೇ । ದೇಖತಸೇ ಪಾತಾಳೇ । ಪನ್ನಗೇಶೀ ।೨೬೩॥ ಕಿಂಬಹುನಾ ತ್ರೈಲೋಕ್ಯಪತೀ । ತುಝಿಯಾ ಏಕೇಕಾಚೇ ಅವಯವಾಚಿಯೇ ಭಿಂತೀ । ಇಯೇ ಚತುರ್ದಶಭುವನೇ ಚಿತ್ರಾಕೃತೀ । ಅಂಕುರಲೀ ಜಾಣೋ ।೨೬೪॥ ಆಣಿ ತೇಥೀಂಚೇ ಜೇ ಜೇ ಲೋಕ । ತೇ ಚಿತ್ರರಚನಾ ಜೀ ಅನೇಕ । ಐಸೇ ದೇಖತಸೇ ಅಲೋಲಿಕ । ಗಾಂಭೀರ್ಯ ತುಝೇ ।೨೬೫॥

ಅನೇಕಬಾಹೂದರವಕ್ತ್ರನೇತ್ರಂ ಪಶ್ಯಾಮಿ ತ್ವಾಂ ಸರ್ವತೋಽನಂತರೂಪಮ್ ।
ನಾಂತಂ ನ ಮಧ್ಯಂ ನ ಪುನಸ್ತವಾದಿಂ ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ।೧೬॥

ತ್ಯಾ ದಿವ್ಯಚಕ್ಷೂಂಚೇನಿ ಪೈಸೇ । ಚಹೂಕಡೇ ಜಂವ ಪಾಹಾತ ಅಸೇ । ತಂವ ದೋರ್ದಂಡಿಕಾ ಜೈಸೇ । ಆಕಾಶ ಕೋಂಬೈಲೇ ।೨೬೬॥ ತೈಸೇ ಏಕಚಿ ನಿರಂತರ । ದೇವಾ ದೇಖತ ಅಸೇ ತುಝೇ ಕರ । ಕರೀತ ಆಘವೇಚಿ ವ್ಯಾಪಾರ । ಏಕೇಚಿ ಕಾಳೀ ।೨೬೭॥ ಮಗ ಮಹಾಶೂನ್ಯಾಚೇನಿ ಪೈಸಾರೇ । ಉಘಡಲೀ ಬ್ರಹ್ಮಕಟಾಹಾಚಿ ಭಾಂಡಾರೇ । ತೈಸೀ ದೇಖತಸೇ ಅಪಾರೇ । ಉದರೇ ತುಝೀ ।೨೬೮॥ ಜೀ ಸಹಸ್ರಶೀರ್ಷಯಾತೇ ದೇಖಿಲೇ । ಕೋಡಿವರೀ ಹೋತಾತಿ ಏಕಿವೇಳೇ । ಕೀ ಪರಬ್ರಹ್ಮಚಿ ವದನ ಫಳೇ । ಮೋಡೋನಿ ಆಲೇ ।೨೬೯॥ ತೈಸೀ ವಕ್ತ್ರೇ ತೇಉತೀ । ತುಝೀ ದೇಖತಸೇ ವಿಶ್ವಮೂರ್ತೀ । ಆಣಿ ತಯಾಚಿಪರೀ ನೇತ್ರಪಂಕ್ತೀ । ಅನೇಕಾಸ್ಯೆಂಗ ।೨೭೦॥ ಹೇ ಅಸೋ ಸ್ವರ್ಗ ಪಾತಾಳ । ಕೀ ಭೂಮೀ ದಿಶಾ ಅಂತರಾಳ । ಹೇ ವಿವಕ್ಷಾ ಠೇಲೀ ಸಕಳ । ಮೂರ್ತಿಮಯ ದೇಖತಸೇ ।೨೭೧॥

ಅಹೋ, ಆಕಾಶದಲ್ಲಿ ಯಾವ ಪ್ರಕಾರವಾಗಿ ಗ್ರಹಗಳ ಸಮೂಹ ಕಾಣುವುವೋ ಅಥವಾ ದೊಡ್ಡ ವೃಕ್ಷದಲ್ಲಿ ಪಕ್ಷಿಗಳ ಸಮುದಾಯಗಳು ದೃಷ್ಟಿಗೆ ಬೀಳುವುವೋ ।೨೫೮॥

ಅದರಂತೆ ಶ್ರೀಹರಿಯೇ, ನಿಮ್ಮ ವಿಶ್ವರೂಪ ಶರೀರದಲ್ಲಿ ಎಲ್ಲ ದೇವತೆಗಣಗಳೊಂದಿಗೆ ಸ್ವರ್ಗವು ಕಾಣಿಸುತ್ತಿದೆ ।೨೫೯॥

ಹೇ ಪ್ರಭುವೇ, ಈ ನಿಮ್ಮ ಶರೀರದಲ್ಲಿ ಮಹಾಭೂತಗಳ ಅನೇಕ ಪಂಚಕಗಳು ಮತ್ತು ಭೂತ ಸೃಷ್ಟಿಯ ಭೂತಗಳಿಂದ ಉತ್ಪನ್ನವಾದ ಭಿನ್ನ ಭಿನ್ನ ಪ್ರಾಣಿಗಳ ಸಮೂಹಗಳನ್ನು ನೋಡುತ್ತಿದ್ದೇನೆ ।೨೬೦॥

ಹಾಗೆಯೇ ಈ ನಿಮ್ಮ ಶರೀರದಲ್ಲಿ ಸತ್ಯ ಲೋಕವೂ ಇದೆ. ಅಲ್ಲಿಯ ಬ್ರಹ್ಮನು ಈತನೇ ಅಲ್ಲವೇ ? ಬೇರೆ ಕಡೆ ನೋಡಿದರೆ ಆ ಕೈಲಾಸವೂ ಕಾಣಿಸಹತ್ತಿದೆ ।೨೬೧॥

ಪಾರ್ವತಿ ಸಹ ಶ್ರೀಶಂಕರನು ಇವರು ನಿಮ್ಮ ಶರೀರದ ಒಂದು ಭಾಗದಲ್ಲಿ ಕಾಣಿಸುತ್ತಿರುವರು. ಹೇ ಹೃಷೀಕೇಶನೇ, ನಿಮ್ಮನ್ನು ಸಹ ಈ ನಿಮ್ಮ ಶರೀರದಲ್ಲಿ ನಾನು ನೋಡುತ್ತಿದ್ದೇನೆ ।೨೬೨॥

ಕಶ್ಯಪಾದಿ ಋಷಿಗಳ ಸರ್ವ ಕುಲವನ್ನು ಮತ್ತು ಸ್ವರ್ಗ ಸಹ ಸರ್ಪಗಳೊಂದಿಗೆ ಪಾತಾಳವನ್ನು ನಿಮ್ಮ ವಿಶ್ವರೂಪದಲ್ಲಿ ಕಾಣುತ್ತಿದೆ ।೨೬೩॥

ಹೇ, ತ್ರೈಲೋಕ್ಯಪತಿಯೇ, ಒಟ್ಟಿನಲ್ಲಿ ನಿಮ್ಮ ಈ ಒಂದೊಂದು ಅವಯವರೂಪದ ಗೋಡೆಯ ಮೇಲೆ ಹದಿನಾಲ್ಕು ಲೋಕಗಳ ಚಿತ್ರಾಕೃತಿಯನ್ನೇ ಬರೆದಿರುವುದೇನೋ ಎಂಬಂತೆ ಭಾಸವಾಗುತ್ತದೆ ।೨೬೪॥

ಮತ್ತು ಆ ಭುವನಗಳಲ್ಲಿನ ಜನರೆಲ್ಲರೂ ಅನೇಕ ಪ್ರಕಾರದ ಚಿತ್ರರಚನೆಗಳಾಗಿವೆ. ಹೀಗೆ ನಿಮ್ಮ ಅಲೌಕಿಕ ಗಾಂಭೀರ್ಯವು ಕಾಣುತ್ತಿದೆ ।೨೬೫॥

ಶ್ಲೋಕಾರ್ಥ :- ಬಾಹುಗಳು, ಉದರಗಳು, ಮುಖಗಳು, ನೇತ್ರಗಳು ಲೆಕ್ಕಿವಿಲ್ಲದಷ್ಟು ಇರುವ, ಅನಂತವಾದ, ಎಲ್ಲೆಲ್ಲಿಯೂ ವ್ಯಾಪಿಸಿರುವ, ನಿನ್ನ ರೂಪವನ್ನು ನೋಡುತ್ತೇನೆ. ಹೇ ವಿಶ್ವೇಶ್ವರಾ! ವಿಶ್ವರೂಪಾ! ಈ ರೂಪಕ್ಕೆ ಆದಿಯೂ ಅಂತ್ಯವೂ ನನಗೆ ಗೋಚರವಾಗಲೊಲ್ಲದು ।೧೬೬॥

ನೀವು ಕೊಟ್ಟ ದಿವ್ಯ ಚಕ್ಷುವಿನ ಬಲದಿಂದ ನಾಲ್ಕೂ ಕಡೆ ನೋಡುತ್ತಿದ್ದಾಗ ನಿಮ್ಮ ತೋಳಿನಲ್ಲಿ ಆಕಾಶದ ಮೊಳಕೆ ಹುಟ್ಟಿದೆ ಏನೋ ಎಂಬಂತೆ ಅನಿಸುತ್ತಿದೆ ।೨೬೭॥

ಅದೇ ಪ್ರಕಾರವಾಗಿ ಹೇ ದೇವನೇ, ನಿಮ್ಮ ಕೈಗಳನ್ನು ನೋಡಿದರೆ ಅವು ಒಂದೇ ಕಾಲಕ್ಕೆ ಸರ್ವ ವ್ಯಾಪಾರವನ್ನು ಮಾಡುತ್ತಿರುವುದು ದೃಷ್ಟಿಗೆ ಗೋಚರಿಸುವುದು ।೨೬೮॥

ಈ ಚಿದಾಕಾಶದಲ್ಲಿ ಅವ್ಯಕ್ತ ಬ್ರಹ್ಮನ ಆಶ್ರಯದಿಂದ ಜಗದ ಭಾಂಡಾರಗಳು ಉತ್ಪನ್ನವಾಗುವಂತೆ ನಿಮ್ಮ ಶರೀರದಲ್ಲಿ ಅಪಾರ ಉದರಗಳು ಕಾಣಿಸುತ್ತಿವೆ ।೨೬೮॥

ಜೀಯಾ, ನಿಮಗೆ ಸಾವಿರ ಶಿರಗಳಿವೆ. ಇದರ ಅನುಭವವನ್ನು ಈ ವಿಶ್ವರೂಪದಲ್ಲಿ ಒಂದೇ ವೇಳೆಯಲ್ಲಿ ಕೋಟಿಗಿಂತಲೂ ಅಧಿಕಸಾರೆ ಪಡೆದೆನು. ಪರಬ್ರಹ್ಮ ರೂಪ ವೃಕ್ಷದಲ್ಲಿ ಮುಖಗಳೆಂಬ ಫಲಗಳು ತುಂಬಿಕೊಂಡಂತೆ ಕಾಣುತ್ತಿದೆ ।೨೬೯॥

ಅದರಂತೆ ನಿಮ್ಮ ವಿಶ್ವಮೂರ್ತಿಯಲ್ಲಿ ಎಲ್ಲಿ ನೋಡಿದಲ್ಲಿ ಮುಖಗಳೇ ಕಾಣುತ್ತಿವೆ ಮತ್ತು ನೇತ್ರಗಳ ಅನೇಕ ಪಂಕ್ತಿಗಳು ಕಾಣುತ್ತಿವೆ ।೨೭೦॥

ಇಷ್ಟೇ ಅಲ್ಲ ; ಯಾವ ಸ್ವರ್ಗ, ಪಾತಾಳ, ಭೂಮಿ, ದಿಶೆಗಳು, ಮತ್ತು ಈ ಎಲ್ಲ ಭೇದಗಳು ಇಲ್ಲದಂತಾಗಿ ಈ ಸರ್ವ ವಿಶ್ವವು ಮೂರ್ತಿಮಯವಾಗಿ ಕಾಣುತ್ತಿದೆ ।೨೭೧॥

ತುಜವೀಣ ಏಕಾದಿಯಾಕಡೇ । ಪರಮಾಣೂಹಿ ಏತುಲಾ ಕೋಡೇ । ಅವಕಾಶು ಪಾಹತಸೇ ಪರಿ ನ ಸಾಂಪಡೇ । ಐಸೇ ವ್ಯಾಪಿಲೇ ತುವಾ ।೨೭೨॥ ಇಯೇ ನಾನಾಪರೀ ಅಪರಿಮಿತೇ । ಜೇತುಲೀ ಸಾಂಠವಿಲೀ ಹೋತೀ ಮಹಾಭೂತೇ । ತೇತುಲಾಹೀ ಪವಾಡು ತುವಾ ಅನಂತೇ । ಕೋಂದಲಾ ದೇಖತಸೇ ।೨೭೩॥ ಐಸಾ ಕವಣೇ ಠಾಯಾಹೂನಿ ತೂ ಆಲಾಸೀ । ಏಥ ಬೈಸಲಾಸಿ ಕೀ ಉಭಾ ಆಹಾಸೀ । ಆಣಿ ಕವಣೆಯೇ ಮಾಯೇಚಿಯೇ ಪೋಟೀ ಹೋತಾಸೀ । ತುರ್ಝೀ ಠಾಣ ಕೇವಢೇ ।೨೭೪॥ ತುರ್ಝೀ ರೂಪ ವಯ ಕೈಸೇ । ತುಜಪೈಲಿಕಡೇ ಕಾಯ ಅಸೇ । ತೂ ಕಾಇಸಯಾವರಿ ಆಹಾಸೀ ಐಸೇ । ಪಾಹಿಲೇ ಮಿಯಾ ।೨೭೫॥ ತಂವ ದೇಖಿಲೇ ಜೇ ಆಘವೇಂಚಿ । ತರಿ ಆತಾ ತುರ್ಝಾ ಠಾವೋ ತೂಂಚಿ । ತೂ ಕವಣಾಚಾ ನವ್ಹೇಸಿ ಐಸಾಚಿ । ಅನಾದಿ ಆಯತಾ ।೨೭೬॥ ತೂ ಉಭಾ ನ ಬೈಠಾ । ದಿಗಡು ನಾ ಖುಜಟಾ । ತುಜ ತಳೀ ವರೀ ವೈಕುಂಠಾ । ತೂಂಚಿ ಆಹಾಸೀ ।೨೭೭॥ ತೂ ರೂಪೇ ಆಪಣಾಯಾಂಚಿ ಐಸಾ । ದೇವಾ ತುರ್ಝೀ ತೂಂಚೀ ವಯಸಾ । ಪಾಠೀ ಪೋಟ ಪರೇಶಾ । ತುರ್ಝೀ ತೂ ಗಾ ।೨೭೮॥ ಕಿಂಬಹುನಾ ಆತಾ । ತುರ್ಝೀ ತೂಂಚಿ ಆಘವೇ ಅನಂತಾ । ಹೇ ಪುಢತಪುಢತೀ ಪಾಹತಾ । ದೇಖಿಲೇ ಮಿಯಾ ।೨೭೯॥ ಪರಿ ಯಾ ತುರ್ಝಿಯಾ ರೂಪಾಆಂತು । ಜೇ ಉಣೇವ ಏಕ ಅಸೇ ದೇಖತು । ಜೇ ಆದಿ ಮಧ್ಯ ಅಂತು । ತಿನ್ಹೀ ನಾಹೀ ।೨೮೦॥ ಏರ್ಹವೀ ಗಿಂವಸಲೇ ಆಘವಾ ಠಾಯೀ । ಪರಿ ಸೋಯ ನ ಲಾಹೇಚಿ ಕಹೀ । ಮ್ಹಣೌನಿ ತ್ರಿಶುದ್ಧಿ ಹೇ ನಾಹೀ । ತಿನ್ಹೀ ಏಥ ।೨೮೧॥ ಏವಂ ಆದಿಮಧ್ಯಾಂತರಹಿತಾ । ತೂ ವಿಶ್ವೇಶ್ವರಾ ಅಪರಿಮಿತಾ । ದೇಖಿಲಾಸಿ ಜೀ ತತ್ತ್ವತಾ । ವಿಶ್ವರೂಪಾ ।೨೮೨॥ ತುಜ ಮಹಾಮೂರ್ತೀಚಿಯಾ ಆಂಗೀ । ಉಮಟಲಿಯಾ ಪೃಥಕ್ ಮೂರ್ತಿ ಅನೇಗೀ । ಲೇಇಲಾಸೀ ವಾನೇಪರೀಚೇ ಆಂಗೀ । ಐಸಾ ಆವಡತು ಆಹಾಸೀ ।೨೮೩॥ ನಾನಾ ಪೃಥಕ್ ಮೂರ್ತಿ ತಿಯಾ ದ್ರುಮವಲ್ಲೀ । ತುರ್ಝಿಯಾ ಸ್ವರೂಪಮಹಾಚಳೀ । ದಿವ್ಯಾಲಂಕಾರ ಫುಲೀ ಫಳೀ । ಸಾಸಿನ್ನಲಿಯಾ ।೨೮೪॥ ಹೋ ಕಾ ಜೇ ಮಹೋದಧೀ ತೂ ದೇವಾ । ಜಾಹಲಾಸಿ ತರಂಗಮೂರ್ತೀ ಹೇಲಾವಾ । ಕೀ ತೂ ಏಕ ವೃಕ್ಷು ಬರವಾ । ಮೂರ್ತಿಫಳೀ ಫಳಲಾಸೀ ।೨೮೫॥ ಜೇ ಭೂತೀ ಭೂತಳ ಮಾಂಡಿಲೇ । ಜೈಸೇ ನಕ್ಷತ್ರೀ ಗಗನ ಗುಢಲೇ । ತೈಸೇ ಮೂರ್ತಿಮಯ ಭರಲೇ । ದೇಖತಸೇ ತುರ್ಝೀ ರೂಪ ।೨೮೬॥

ನಿನ್ನ ಹೊರತಾಗಿ ಒಂದು ವೇಳೆ ಕೌತುಕದಿಂದ ಪರಮಾಣುವಿನಷ್ಟು ಸ್ಥಳವನ್ನು ಹುಡುಕಿದರೂ ಸಿಗುವುದಿಲ್ಲ. ಈ ಪ್ರಕಾರವಾಗಿ ಎಲ್ಲವನ್ನೂ ನೀನು ವ್ಯಾಪಿಸಿಕೊಂಡಿರುವೆ ।೨೭೨॥

ನಾನಾ ಪ್ರಕಾರದ ಅಪರಿಮಿತ ಮಹಾಭೂತಗಳಿಂದ ಎಲ್ಲವನ್ನೂ ವ್ಯಾಪಿಸಿಕೊಂಡಿರುವ ಅದೆಲ್ಲ ವಿಸ್ತಾರವು ಹೇ ಅನಂತನೇ, ನೀವೇ ವ್ಯಾಪಿಸಿರುವುದು ತೋರಿತು ।೨೭೩॥

ಇಂಥವರಾದ ನೀವು ಎಲ್ಲಿಂದ ಬಂದಿರುವಿರಿ ? ಇಲ್ಲಿ ಕುಳಿತಿರುವಿರೋ? ನಿಂತಿರುವಿರೋ? ಯಾವ ತಾಯಿಯ ಉದರದಲ್ಲಿದ್ದಿರಿ ಮತ್ತು ನಿಮ್ಮ ಆಕೃತಿ ಎಷ್ಟು? ।೨೭೪॥

ನಾನು ನೋಡುತ್ತಿರುವ ನಿಮ್ಮ ರೂಪ ಎಂತಹದ್ದು? ನಿಮ್ಮ ವಯಸ್ಸು ಎಷ್ಟು? ನಿಮ್ಮ ಆಚೆಗೆ ಏನಿದೆ? ನಿಮ್ಮ ಅಧಿಷ್ಠಾನ ಯಾವುದು? ।೨೭೫॥

ಅದನ್ನು ನಾನು ಸರ್ವತ್ರ, ನೋಡಿದೆನು. ನಿಮ್ಮ ಅಧಿಷ್ಠಾನವು ನೀವೇ ಇರುವಿರಿ. ನೀವು ಯಾರಿಂದಲೂ ಉತ್ಪನ್ನರಾಗಿಲ್ಲ. ಜನ್ಮರಹಿತ, ಹಾಗೆಯೇ ಸ್ವಯಂಮೇವರು ಇರುವಿರಿ ।೨೭೬॥

ಹೇ ವೈಕುಂಠನೇ, ನೀವು ನಿಂತಿಲ್ಲ, ಕುಂತಿಲ್ಲ, ಎತ್ತರರೂ ಅಲ್ಲ, ಕುಳ್ಳರೂ ಅಲ್ಲ, ನಿಮ್ಮ ಮೇಲೆ ಮತ್ತು ನಿಮ್ಮ ಕೆಳಗೆ ನೀವೇ ಇರುವಿರಿ ।೨೭೭॥

ಹೇ ದೇವನೇ, ನಿಮ್ಮ ರೂಪವು ನಿಮ್ಮ ಹಾಗೆಯೇ ಇರುವುದು. ನಿಮ್ಮ ವಯಸ್ಸು ನಿಮ್ಮಷ್ಟೇ ಇರುವುದು. ಹೇ ದೇವಾದಿದೇವನೇ, ನಿಮ್ಮ ಬೆನ್ನು ಹೊಟ್ಟೆಗಳು ನಿಮ್ಮಂತೆಯೇ ಇರುವುವು ।೨೭೮॥

ಹೇ ಅನಂತನೇ, ಹೆಚ್ಚಿಗೇನು? ನಾನು ಇನ್ನೇನು ನೋಡುವೆನೋ, ಅವು ನಿಮ್ಮ ಹಾಗೆಯೇ ನೀವೇ ಇರುವಿರಿ. ಹೀಗೆ ನನ್ನ ದೃಷ್ಟಿಗೆ ಗೋಚರವಾಯಿತು ।೨೭೯॥

ಆದರೆ, ನಿಮ್ಮ ವಿಶ್ವರೂಪದಲ್ಲಿ ನನಗೊಂದು ಕೊರತೆ ಕಾಣುವುದು. ಏನೆಂದರೆ, ಅದಕ್ಕೆ ಆದಿ,ಮಧ್ಯ, ಅಂತ್ಯ ಈ ಮೂರು ಇಲ್ಲ ।೨೮೦॥

ಉಳಿದೆಲ್ಲವನ್ನು ನಾನು ಎಲ್ಲೆಲ್ಲಿಯೂ ಶೋಧಿಸಿದೆ. ಆದರೆ ನನಗೆ ಪತ್ತೆಯೇ ಹತ್ತಲಿಲ್ಲ. ಆದ್ದರಿಂದ ಈ ಮೂರು ನಿನಗಿಲ್ಲ ಎಂಬುವುದರಲ್ಲಿ ಸಂಶಯವೇ ಇಲ್ಲ ।೨೮೧॥

ಹೇ ಆದಿಮಧ್ಯಂತರಹಿತನೇ, ಹೇ ಅಪರಿಮಿತನಾದ ಜಗದೀಶನೇ, ನಿಜವಾಗಿಯೂ ಈ ಪ್ರಕಾರವಾಗಿ ನಾನು ನಿಮ್ಮ ವಿಶ್ವರೂಪವನ್ನು ನೋಡಿದೆನು ।೨೮೨॥

ನಿನ್ನ ಮಹಾಮೂರ್ತಿಯಲ್ಲಿ ಅನೇಕ ಭಿನ್ನ ಭಿನ್ನ ಮೂರ್ತಿಗಳು ಹುಟ್ಟಿಕೊಂಡಿವೆ. ಆದ್ದರಿಂದ ನಿಮ್ಮ ಅಂಗಕ್ಕೆ ನಾನಾ ಪ್ರಕಾರದ ಬಣ್ಣಗಳ ಉಡುಗೆಗಳನ್ನು ತೊಟ್ಟಂತೆ ನೀವು ಕಾಣುವಿರಿ ।೨೮೩॥

ನಿಮ್ಮ ವಿಶ್ವರೂಪ ಪರ್ವತದಲ್ಲಿ ಬಗೆ ಬಗೆಯ ಭಿನ್ನ ಭಿನ್ನ ಮೂರ್ತಿಗಳು ಗಿಡಬಳ್ಳಿಗಳಂತೆ ಶೋಭಿಸುತ್ತಿರುವುವು ಮತ್ತು ಮೂರ್ತಿಗಳ ಅಲಂಕಾರಗಳು ಫಲಪುಷ್ಪಗಳಾಗಿವೆ ।೨೮೪॥

ಹೇ ದೇವನೇ, ನೀವು ಮಹಾಸಮುದ್ರರಾಗಿ ಮೂರ್ತಿ ರೂಪ ತೆರೆಗಳಿಂದ ತುಂಬಿದಂತೆ ಕಾಣುವಿರಿ. ಅಥವಾ ನೀವು ಒಂದು ಉತ್ತಮ ವೃಕ್ಷವಾಗಿ ಮೂರ್ತಿ ರೂಪ ಫಲಗಳಿಂದ ತುಂಬಿದಂತೆ ಕಾಣುವಿರಿ ।೨೮೫॥

ಪೃಥ್ವಿಯು ಭೂತಗಳಿಂದ ತುಂಬಿಕೊಂಡಿದೆ. ಹಾಗೂ ಆಕಾಶವು ನಕ್ಷತ್ರಗಳಿಂದ ತುಂಬಿಕೊಂಡಿದೆ. ಅದರಂತೆ ನಿಮ್ಮ ವಿಶ್ವರೂಪವು ಮೂರ್ತಿಗಳಿಂದ ತುಂಬಿಕೊಂಡಿದೆ, ಹೀಗೆ ಕಾಣುವುದು ।೨೮೬॥

ಜೇ ಏಕೇಕೀಚ್ಯಾ ಅಂಗಪ್ರಾಂತೀ । ಹೋಯ ಜಾಯ ಹೇ ತ್ರಿಜಗತೀ । ಏವಢಿಯಾಹೀ ತುರ್ಝ್ಯಾ ಆಂಗೀ ಮೂರ್ತೀ । ಕೀ ರೋಮಾ ಜಾಲಿಯಾ ॥೨೮೭॥ ಐಸಾ ಪವಾಡು ಮಾಂಡೂನಿ ವಿಶ್ವಾಚಾ। ತೂ ಕವಣ ಪಾ ಏಥ ಕೋಣಾಚಾ । ಹೇ ಪಾಹೀಲೇ ತಂವ ಆಮುಚಾ । ಸಾರಥೀ ತೋಚಿ ತೂ ॥೨೮೮॥ ತರೀ ಮಜ ಪಾಹತಾ ಮುಕುಂದಾ । ತೂ ಐಸಾಚಿ ವ್ಯಾಪಕು ಸರ್ವದಾ । ಮಗ ಭಕ್ತಾನುಗ್ರಹೇ ತಯಾ ಮುಗ್ಧಾ । ರೂಪಾತೇ ಧರಿಸೀ ॥೨೮೯॥ ಕೈಸೇ ಚಹೂ ಭುಜಾಂಚೇ ಸಾಂವಳೇ । ಪಾಹತಾ ವೋಲ್ಹಾವತೀ ಮನಡೋಳೇ । ಖೇಂವ ದೇಊ ಜಾಇಜೇ ತರೀ ಆಕಳೇ । ದೋಹೀಂಚೇ ಬಾಹೀ ॥೨೯೦॥ ಐಸೀ ಮೂರ್ತೀ ಕೋಡಿಸವಾಣೇ ಕೃಪಾ । ಕರೂನಿ ಹೋಸೀ ನಾ ವಿಶ್ವರೂಪಾ । ಕೀ ಆಮುಚಿಯಾಚಿ ದಿಠೀ ಸಲೇಪಾ । ಜೇ ಸಾಮಾನ್ಯತ್ವೇ ದೇಖತೀ ॥೨೯೧॥ ತರೀ ಆತಾ ದಿಠೀಚಾ ವಿಟಾಳು ಗೇಲಾ । ತುವಾ ಸಹಜೇ ದಿವ್ಯಚಕ್ಷೂ ಕೇಲಾ । ಮ್ಹಣೌನಿ ಯಥಾರೂಪೇ ದೇಖವಲಾ । ಮಹಿಮಾ ತುರ್ಝಾ ॥೨೯೨॥ ಪರಿ ಮಕರತುಂಡಾಮಾಗಿಲೇಕಡೇ । ಹೋತಾಸೀ ತೋಚೇ ತೋ ಏವಢೇ । ರೂಪ ಜಾಹಲಾಸಿ ಹೇ ಫುಡೇ । ವೋಳಖಿಲೇ ಮಿಯಾ ॥೨೯೩॥

ಕಿರೀಟಿನಂ ಗದಿನಂ ಚಕ್ರಿಣಂ ಚ ತೇಜೋರಾಶಿಂ ಸರ್ವತೋ ದೀಪ್ತಿಮಂತಮ್ ।
ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾತ್ ದೀಪ್ತಾನಲಾರ್ಕದ್ಯುತಿಮಪ್ರಮೇಯಮ್ ॥೧೭॥

ನೋಹೇ ತೋಚಿ ಹಾ ಶಿರೀ? । ಮುಕುಟ ಲೇಇಲಾಸೀ ಶ್ರೀಹರೀ । ಪರೀ ಆತಾಂಚೇ ತೇಜ ಆಣಿ ಥೋರೀ । ನವಲ ಕೀ ಬಹು ಹೇ? ॥೨೯೪॥ ತೇಂಚಿ ಹೇ ವರಿಲಿಯೇಚಿ ಹಾತೀ । ಚಕ್ರ ಪರಿಜಿತಯಾ ಆಯತಿ । ಸಾಂವರಿತಾಸಿ ವಿಶ್ವಮೂರ್ತೀ । ತೇ ನ ಮೋಡೇ ಖೂಣ ॥೨೯೫॥ ಯೇರೀಕಡೇ ತೇಚಿ ಹೇ ನೋಹೇ ಗದಾ । ಆಣಿ ತಳಿಲಿಯಾ ದೋನ್ಹೀ ಭುಜಾ ನಿರಾಯುಧಾ । ವಾಗೋರೆ ಸಾಂವರಾವಯಾ ಗೋವಿಂದಾ । ಸಂಸರಿಲಿಯಾ ॥೨೯೬॥ ಆಣಿ ತೇಣೇಂಚಿ ವೇಗೇ ಸಹಸಾ । ಮಾಝಿಯಾ ಮನೋರಥಾಸರಿಸಾ । ಜಾಹಲಾಸಿ ವಿಶ್ವರೂಪಾ ವಿಶ್ವೇಶಾ । ಮ್ಹಣೌನಿ ಜಾಣೇ ॥೨೯೭॥ ಪರೀ ಕಾಯಸೇ ಬಾ ಹೇ ಚೋಜ । ವಿಸ್ಮಯೋ ಕರಾವಯಾಹೀ ಪಾಡೂ ನಾಹೀ ಮಜ । ಚಿತ್ತ ಹೋಊನಿ ಜಾತಸೇ ನಿರ್ಬುಜ । ಆಶ್ಚರ್ಯೇ ಯೇಣೇ ॥೨೯೮॥ ಹೇ ಏಥ ಆಥಿ ಕಾ ಏತ ನಾಹೀ । ಐಸೇ ಶ್ವಸೋಹೀ ನಯೇ ಕಾಂಹೀ । ನವಲ ಅಂಗಪ್ರಭೇಚೀ ನವಾಈ । ಕೈಸೀ ಕೋಂದಲೀ ಸೈಂಘ ॥೨೯೯॥

ಯಾವ ಒಂದೊಂದೇ ಮೂರ್ತಿಯ ಅಂಗದ ಮೇಲೆ ತ್ರೈಲೋಕ್ಯವು ಸ್ಥಿತಿಗೊಂಡು ಲಯವಾಗುವುದು. ಇಂತಹ ಮೂರ್ತಿಗಳು ನಿಮ್ಮ ಅಂಗದ ಒಂದು ರೋಮದಲ್ಲಿ ಇರುವುವು ।೨೮೭॥

ಹೀಗೆ ಜಗದ ವಿಸ್ತಾರ ಮಾಡುವ ನೀವು, ಆ ನೀವು ಯಾರು ಮತ್ತು ಯಾರವರು ಎಂದು ನೋಡಲು ಹೋದರೆ, ನಮ್ಮ ಸಾರಥಿಯಾದವರು ಅದೇ ನೀವು ಇರುವಿರಿ ।೨೮೮॥

ಆದರೆ, ಹೇ ಮುಕುಂದನೇ, ನೀವು ಯಾವಾಗಲು ಹೀಗೆಯೇ ಸರ್ವವ್ಯಾಪಕರಾಗಿರುವಿರಿ. ಆದಾಗ್ಯೂ, ಭಕ್ತರನ್ನು ಅನುಗ್ರಹಿಸಲು ಸಗುಣರೂಪವನ್ನು ಧರಿಸುವಿರಿ. ಹೀಗೆ ನನಗೆ ಅನಿಸುತ್ತದೆ ।೨೮೯॥

ನಿಮ್ಮ ಈ ಚತುರ್ಭುಜ ಸಾದಗಪ್ಪು ಮೂರ್ತಿಯನ್ನು ನೋಡಿದಾಕ್ಷಣವೇ ಮನ, ನೇತ್ರಗಳು ಪೂರ್ಣ ತೃಪ್ತಿಗೊಳ್ಳುವುವು. ಆಲಿಂಗಿಸಿಕೊಳ್ಳಲು ಹೋದಾಗ ಎರಡೇ ಭುಜಕ್ಕೆ ನಿಲುಕುವಿರಿ ।೨೯೦॥

ಹೇ ವಿಶ್ವರೂಪನೇ, ಇಂತಹ ಮುದ್ದಾದ ರೂಪವನ್ನು ನೀವು ಭಕ್ತರ ಮೇಲೆ ಕೃಪೆ ಮಾಡಲು ಧರಿಸುವಿರಿ. ಆದರೆ ನಮ್ಮ ದೋಷಿತ ದೃಷ್ಟಿಯಿಂದ ನಿಮಗೆ ಸಾಮಾನ್ಯ ಮನುಷ್ಯರೆಂದು ತಿಳಿಯುತ್ತೇವೆ ।೨೯೧॥

ನೀವು ಸಹಜವಾಗಿ ದಿವ್ಯಚಕ್ಷು ಕೊಟ್ಟದ್ದಕ್ಕೆ ನನ್ನ ದೃಷ್ಟಿ ದೋಷವು ಇಲ್ಲದಂತಾಗಿ ನಿಮ್ಮ ಮಹಿಮೆಯನ್ನು ಯಥಾರ್ಥವಾಗಿ ದೃಷ್ಟಿಗೆ ಗೋಚರಿಸಿತು ।೨೯೨॥

ಆದರೆ ರಥದ ಮಕರ ಮುಖದ ಹಿಂಬದಿಯನ್ನು ಯಾವ ನೀನು ಸಾರಥಿಯಾಗಿ ಕುಳಿತಿರುವೆಯೋ, ಅದೇ ನೀನು ಇಂತಹ ವಿಶ್ವಾತ್ಮಕನಾಗಿರುವೆ ಎಂದು ನಾನು ನಿಶ್ಚಯವಾಗಿ ತಿಳಿದಿರುವೆ ।೨೯೩॥

ಶ್ಲೋಕಾರ್ಥ :- ಕಿರೀಟವನ್ನು, ಗದೆಯನ್ನು, ಚಕ್ರವನ್ನು ಧರಿಸಿ, ಅಗ್ನಿಯಂತೆ ಧಗಧಗಿಸುವ ಕಣ್ಣುಳ್ಳವನಾಗಿ ತಡೆಯಲಾರದ ಸೂರ್ಯಾಗ್ನಿಯ ತೇಜಸ್ಸಿನಿಂದ ಬೆಳಗುವ ನಿನ್ನನ್ನು ನೋಡುತ್ತಿದ್ದೇನೆ ।೧೭॥

ಹೇ ಶ್ರೀ ಹರಿಯೇ, ನೀವು ಶಿರದಲ್ಲಿ ಧರಿಸಿದ್ದ ಕಿರೀಟವು ಅದೇ ಇದಲ್ಲವೇ? ಆದರೆ ಈಗಿನ ಅದರ ತೇಜವು ಆಕಾರವು ವಿಶೇಷವಾಗಿದೆ. ಇದು ಬಹಳ ಆಶ್ಚರ್ಯ! ।೨೯೪॥

ಮೇಲಿನ ಕೈಯಲ್ಲಿ ತಿರುಗುತ್ತಿರುವ ಇದೇ ಚಕ್ರ ಅಲ್ಲವೇ? ಕಾರಣ, ಹೇ ವಿಶ್ವಮೂರ್ತಿಯೇ, ಅದನ್ನು ನೀವು ಸಾವರಿಸಿ ಕೈಯಲ್ಲಿ ಹಿಡಿಯುತ್ತಿರುವಿರಿ. ಈ ಚಿಹ್ನವು ಸ್ಥಿರವಾಗಿದೆ ।೨೯೫॥

ಎರಡನೆಯ ಕೈಯಲ್ಲಿನ ಇದೇ ಗದೆ ಅಲ್ಲವೇ? ಹೇ ಗೋವಿಂದನೇ, ಕೆಳಗಿನ ಎರಡು ಕೈಗಳು ಕುದುರೆಗಳನ್ನು ವ್ಯವಸ್ಥಿತಪಡಿಸಲು ನಿಃಶಸ್ತ್ರವಾಗಿವೆಯಲ್ಲವೇ? ।೨೯೬॥

ಮತ್ತು ಹೇ ವಿಶ್ವೇಶ್ವನೇ, ನನ್ನ ವಿಶ್ವರೂಪ ನೋಡುವ ಇಚ್ಛೆಯನ್ನು ಪೂರ್ಣಗೊಳಿಸುವ ಉದ್ದೇಶದಿಂದ ಒಮ್ಮೆಲೆ ವಿಶ್ವರೂಪವನ್ನು ಧರಿಸಿರುವುದು ನನಗೆ ತಿಳಿದಿದೆ ।೨೯೭॥

ಆದಾಗ್ಯೂ ದೇವಾ, ಈ ನಿಮ್ಮ ರೂಪದ ಆಶ್ಚರ್ಯವನ್ನು ಮನ್ನಿಸುವ ಯೋಗ್ಯತೆ ನನಗಿಲ್ಲ. ಈ ಆಶ್ಚರ್ಯದಿಂದ ನನ್ನ ಮನಸ್ಸು ಬಹಳ ಚಕಿತಗೊಂಡಿದೆ ।೨೯೮॥

ಈ ನಿಮ್ಮ ವಿಶ್ವರೂಪವು ಇಲ್ಲಿದೆಯೋ ಇಲ್ಲವೋ ಎಂದು ವಿಚಾರ ಮಾಡಲು ಅವಕಾಶವಿಲ್ಲ. ಈ ತೇಜದ ಚಮತ್ಕಾರವೆಂದರೆ ಅದು ಎಲ್ಲೆಲ್ಲಿಯೂ ತುಂಬಿಕೊಂಡಂತೆ ಕಾಣುವುದು ।೨೯೯॥

ಏಥ ಅಗ್ನಿಚೇಹೀ ದಿಠೀ ಕರಪತ । ಸೂರ್ಯ ಖದ್ಯೋತು ತೈಸಾ ಹಾರಪತ । ಐಸೇ ತೀವ್ರಪಣ ಅದ್ಭುತ । ತೇಜಾಚೇ ಯಯಾ ।೩೦೦॥ ಹೋ ಕಾ ಮಹಾತೇಜಾಚಿಯಾ ಮಹಾರ್ಣವೀ । ಬುಡೋನಿ ಗೇಲೀ ಸೃಷ್ಟೀ ಆಘವೀ । ಕೀ ಯುಗಾಂತ ವಿಜೂಂಚ್ಯಾ ಪಾಲವೀ । ಝಾಂಕಲೇ ಗಗನ ।೩೦೧॥ ನಾ ತರೀ ಸಂಹಾರತೇಜಾಚಿಯಾ ಜ್ವಾಳಾ । ತೋಡೋನಿ ಮಾಚೂ ಬಾಂಧಲಾ ಅಂತರಾಳಾ । ಆತಾ ದಿವ್ಯ ಜ್ಞಾನಾಚಿಯಾ ಡೋಳಾ । ಪಾಹವೇನಾ ।೩೦೨॥ ಉಜಾಳು ಅಧಿಕಾಧಿಕ ಬಹುವಸು । ಧಡಾಡೀತ ಆಹೇ ಅತಿದಾಹಸು । ಪಡತ ದಿವ್ಯಚಕ್ಷೂಂಸಹೀ ತ್ರಾಸು । ನ್ಯಾಹಾಳಿತಾ ।೩೦೩॥ ಹೋ ಕಾ ಜೇ ಮಹಾಪ್ರಳಯೀಂಚಾ ಭಡಾಡು । ಹೋತಾ ಕಾಳಾಗ್ನಿರುದ್ರಾಚಿಯಾ ಠಾಯೀ ಗೂಢು । ತೋ ತೃತೀಯನಯನಾಚಾ ಮಢೂ । ಫುಟಲಾ ಜೈಸಾ ।೩೦೪॥ ತೈಸೇ ಪಸರಲೇನಿ ಪ್ರಕಾಶೇ । ಸೈಂಘ ಪಾಂಚವನಿಯಾ ಜ್ವಾಳಾಂಚೇ ವಳಸೇ । ಪಡತಾ ಬ್ರಹ್ಮಕಟಾಹ ಕೋಳಿಸೇ । ಹೋತ ಆಹಾತೀ ।೩೦೫॥ ಐಸಾ ಅದುತ್ಭ ತೇಜೋರಾಶೀ। ಜನ್ಮಾ ನವಲ ಮ್ಯಾ ದೇಖಿಲಾಸೀ। ನಾಹೀ ವ್ಯಾಪ್ತೀ ಆಣಿ ಕಾಂತೀಸೀ । ಪಾರು ಜೀ ತುಝಿಯೇ ।೩೦೬॥

ತ್ವಮಕ್ಷರಂ ಪರಮಂ ವೇದಿತವ್ಯಂ ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।
ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ ಸನಾತನಸ್ತ್ವಂ ಪುರುಷೋ ಮತೋಮೇ ।।೧೮॥

ದೇವಾ ತೂ ಅಕ್ಷರ । ಔಟಾವಿಯೇ ಮಾತ್ರೇಸಿ ಪರ । ಶ್ರುತಿ ಜಯಾಚೇ ಘರ । ಗಿಂವಸೀತ ಆಹಾತೀ ।೩೦೭॥ ಜೇ ಆಕಾರಾಚೇ ಆಯತನ । ಜೇ ವಿಶ್ವ ನಿಕ್ಷೇಪೈಕನಿಧಾನ । ತೇ ಅವ್ಯಯ ತೂ ಗಹನ । ಅವಿನಾಶ ಜೀ ।೩೦೮॥ ತೂ ಧರ್ಮಾಚಾ ವೋಲಾವಾ । ಅನಾದಿಸಿದ್ಧ ತೂ ನಿತ್ಯ ನವಾ । ಜಾಣೇ ಮಿ ಸದತಿಸಾವಾ । ಪುರುಷ ವಿಶೇಷ ತೂ ।೩೦೯॥

ಅನಾದಿಮಧ್ಯಾಂತಮನಂತವೀರ್ಯಂ ಅನಂತಬಾಹುಂ ಶಶಿಸೂರ್ಯನೇತ್ರಮ್ ।
ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ ಸ್ವತೇಜಸಾ ವಿಶ್ವಮಿದಂ ತಪಂತಮ್ ।।೧೯॥

ತೂ ಆದಿಮಧ್ಯಾಂತರಹಿತು । ಸ್ವಸಾಮರ್ಥ್ಯೇ ತೂ ಅನಂತು । ವಿಶ್ವಬಾಹು ಅಪರಿಮಿತು । ವಿಶ್ವಚರಣ ತೂ ।೩೧೦॥ ಪೈ ಚಂದ್ರ ಚಂಡಾಶು ಡೋಳಾ । ದಾವಿತಾಸಿ ಕೋಪ ಪ್ರಸಾದ ಲೀಳಾ । ಏಕಾ ರೂಸಸೀ ತಮಾಚಿಯಾ ಡೋಳಾ । ಏಕಾ ಪಾಳಿತೋಸಿ ಕೃಪಾದೃಷ್ಟೀ ।೩೧೧॥

ಈ ರೂಪದ ತೇಜವು ಎಷ್ಟೊಂದು ಅಲೌಕಿಕ ತೀವ್ರವಾಗಿದೆ ಎಂದರೆ ಅಗ್ನಿಯ ದೃಷ್ಟಿಯೂ ಸುಟ್ಟು ಕರಕಾಗುವುದು ಮತ್ತು ಸೂರ್ಯನು ಬೆಂಕಿ ಹುಳದಂತೆ ಅಡಗಿ ಹೋಗುವನು ।೩೦೦॥

ಸರ್ವ ಸೃಷ್ಟಿಯ ಮಹಾತೇಜದ ದೊಡ್ಡ ಸಮುದ್ರದಲ್ಲಿ ಮುಳುಗಿದಂತೆ ಅಥವಾ ಕಲ್ಪಾಂತದ ವೇಳೆಯ ಮಿಂಚುಗಳು ಆಕಾಶವನ್ನೆಲ್ಲ ವ್ಯಾಪಿಸಿಕೊಂಡಿದೆ ಏನೋ ? ।೩೦೧॥

ಅಥವಾ ಪ್ರಳಯಕಾಲದ ತೇಜದ ಉರಿಯನ್ನು ಕತ್ತರಿಸಿ ಅದರಿಂದ ಆಕಾಶದಲ್ಲಿ ಮಹಡಿಯನ್ನು ಕಟ್ಟಿದೆಯೇನೋ ಎಂದೆನಿಸುವುದು. ಆದ್ದರಿಂದ ನೀನು ಕೊಟ್ಟ ದಿವ್ಯ ದೃಷ್ಟಿಯಿಂದಲೂ ನೋಡುವುದು ನನ್ನಿಂದಾಗದು ।೩೦೨॥

ಈ ತೇಜವು ಅಧಿಕ ಪ್ರಖರವಾಗಿ ಶರೀರಕ್ಕೆ ಅತೀ ದಾಹವನ್ನುಂಟುಮಾಡಿದೆ. ಅದನ್ನು ನೋಡಿ ನನ್ನ ದಿವ್ಯ ಚಕ್ಷುವಿಗೂ ತೊಂದರೆಯಾಗುತ್ತಿದೆ ।೩೦೩॥

ಮಹಾಮಹಿಮನೇ, ಪ್ರಳಯಕಾಲದ ಅಗ್ನಿಯು ಕಾಲಾಗ್ನಿ ರುದ್ರನಲ್ಲಿ ಗುಪ್ತವಾಗಿರುವುದು. ಆ ಪ್ರಳಯ ರುದ್ರನೆಂಬ ಮೊಗ್ಗೆಯು ಅರಳಿದಂತೆ ಭಾಸವಾಗುವುದು ।೩೦೪॥

ಹೀಗೆ ನಿಮ್ಮ ಸರ್ವತ್ರ ಪಸರಿಸಿದ ಮಹಾತೇಜದಿಂದ ಪಂಚಾಗ್ನಿಯ ಜ್ವಾಲೆಯ ಮುತ್ತಿಗೆಯು ಎಲ್ಲ ಕಡೆ ಹರಡಿ ಬ್ರಹ್ಮಾಂಡಗಳನ್ನು ಸುಟ್ಟು ಇದ್ದಲಿ ಮಾಡುತ್ತಿದೆ ।೩೦೫॥

ಇಂತಹ ಪ್ರಕಾಶದ ಅಪೂರ್ವತೇಜದ ರಾಶಿಯಾದ ನಿಮ್ಮ ಆಶ್ಚರ್ಯಕಾರಕ ರೂಪವನ್ನು ನನ್ನ ಜನ್ಮದಲ್ಲಿಯೇ ಇಂದೇ ನೋಡಿದೆ. ನಿಮ್ಮ ತೇಜ ವ್ಯಾಪ್ತಿಗೆ ಅಂತವೇ ಇಲ್ಲ ।೩೦೬॥

ಶ್ಲೋಕಾರ್ಥ :- ನೀನು ಪರಬ್ರಹ್ಮ, ನೀನೇ ತಿಳಿಯಲು ಯೋಗ್ಯನಾದನು, ನೀನೇ ಈ ಪ್ರಪಂಚಕ್ಕೆ ಮೂಲಕಾರಣ, ನಾಶರಹಿತನು, ಶಾಶ್ವತವಾದ ಧರ್ಮವನ್ನು ರಕ್ಷಿಸುವವನು, ಸನಾತನ ಪುರುಷನು ಎಂದು ನನ್ನ ಹೃದಯವು ಹೇಳುತ್ತಿದೆ ।೧೮॥

ದೇವಾ, ನೀನು ಪರಬ್ರಹ್ಮನು. ಮೂರುವರೆ ಮಾತ್ರೆಯ ಓಂಕಾರದ ಆಚೆಗೆ ಇರುವವನು ಮತ್ತು ನಿನ್ನ ಸ್ಥಾನವನ್ನು ಶೃತಿಗಳು ಶೋಧಿಸಿದರೂ ಸಿಗಲಾರದು ।೩೦೭॥

ನೀನು ಎಲ್ಲ ಆಕಾರಗಳ ಆಧಾರನು ಮತ್ತು ವಿಶ್ವರೂಪ ನಿಧಿಯನ್ನು ಇಡುವ ಸ್ಥಾನವು ನೀನೇ. ಅವಿಕಾರನೂ, ಗಹನನೂ ಮತ್ತು ಅವಿನಾಶಿಯೂ ಇರುವೆ ।೩೦೮॥

ನೀನು ಧರ್ಮದ ಜೀವನನು, ಅನಾದಿಸಿದ್ಧನು, ನಿತ್ಯ ನೂತನನಾಗಿರುವೆ ಮತ್ತು ಮೂವತ್ತಾರು ತತ್ತ್ವಗಳ ಆಚೆಗಿರುವ ಮೂವತ್ತೇಳನೆಯ ಪುರುಷ ವಿಶೇಷನು ನೀನು ।೩೦೯॥

ಶ್ಲೋಕಾರ್ಥ :- ಆದಿ ಮಧ್ಯಾಂತ ರಹಿತನೂ, ಅನಂತವೀರ್ಯನೂ, ಅನಂತಬಾಹುವೂ, ಚಂದ್ರ ಸೂರ್ಯರೇ ನೇತ್ರವಾಗಿರುವವನೂ, ಅಗ್ನಿ ಸಮಾನ ಮುಖವುಳ್ಳವನೂ, ಸ್ವಪ್ರಕಾಶದಿಂದ ಲೋಕವನ್ನೆಲ್ಲಾ ಬೆಳಗುವವನೂ ಆದ ನಿನ್ನನ್ನು ನೋಡುತ್ತೇನೆ ।೧೯॥

ನೀನು ಆದಿಮಧ್ಯಾಂತರಹಿತನು, ಸ್ವತಃ ಸಾಮರ್ಥ್ಯದಿಂದ ನೀನು ಅನಂತನಿರುವೆ. ನಿನಗೆ ಸರ್ವ ಭಾಗಗಳಿಂದ ಅಸಂಖ್ಯ ಪಾದ, ಅಸಂಖ್ಯ ಚರಣಗಳಿವೆ. ಹೀಗೆ ಅಪರಿಮಿತನು ನೀನು ।೩೧೦॥

ಚಂದ್ರಸೂರ್ಯರು ನಿಮ್ಮ ನೇತ್ರಗಳು. ಅವು ಶಾಂತಿ ಕೋಪಗಳ ಲೀಲೆಯನ್ನು ತೋರಿಸುವುವು. ನೀವು ತಮೋರೂಪ ನೇತ್ರದಿಂದ ಒಬ್ಬರಿಗೆ ಕೋಪಿಸುವಿರಿ ಮತ್ತು ಕೃಪಾರೂಪ ನೇತ್ರದಿಂದ ಒಬ್ಬರನ್ನು ರಕ್ಷಿಸುವಿರಿ ।೩೧೧॥

ಜೇ ಏವಂವಿಧಾ ತೂಂತೇ । ಮೀ ದೇಖತಸೇ ಹೇ ನಿರುತೇ । ಪೇಟಲೇ ಪ್ರಳಯಾಗ್ನೀಚೇ ಉಜಿತೇ । ತೈಸೇ ವಕ್ತ್ರ ಹೇ ತುಝೇ ।೩೧೨॥ ವಣಿವೇನಿ ಪೇಟಲೇ ಪರ್ವತ । ಕವಳೂನಿ ಜ್ವಾಳಾಂಚೇ ಉಭಡ ಉಠತ । ತೈಸೀ ಚಾಟೀತ ದಾಢಾ ದಾಂತ । ಜೀಭ ಲೋಳೇ ।೩೧೩॥ ಇಯೇ ವದನೀಂಚಿಯಾ ಉಭಾ । ಆಣಿ ಜೀ ಸರ್ವಾಂಗಕಾಂತೀಚಿಯಾ ಪ್ರಭಾ । ವಿಶ್ವ ತಾತಲೇ ಅತಿ ಕ್ಷೋಭಾ । ಜಾತ ಆಹೇ ।೩೧೪॥

ದ್ಯಾವಾಪೃಥಿವ್ಯೋರಿದಮಂತರಂ ಹಿ ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ।
ದೃಷ್ಟ್ವಾಽದ್ಭುತಂ ರೂಪಮುಗ್ರಂ ತವೇದಂ ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ।೨೦॥

ಕಾ ಜೇ ದ್ಯೌರ್ಲೋಕ ಆಣಿ ಪಾತಾಳ । ಪೃಥಿವಿ ಆಣಿ ಅಂತರಾಳ । ಅಥವಾ ದಶದಿಶಾ ಸಮಾಕುಳ । ದಿಶಾಚಕ್ರ ।೩೧೫॥ ಹೇ ಆಘವೇಂಚಿ ತುವಾ ಏಕೇ । ಭರಲೇ ದೇಖತ ಆಹೇ ಕೌತುಕೇ । ಪರಿ ಗಗನಾಹೀಸಕಟ ಭಯಾನಕೇ । ಅಪ್ಲವಿಜೇ ಜೇವೀ ।೩೧೬॥ ನಾತರೀ ಅದ್ಭುತ ರಸಾಚಿಯಾ ಕಲ್ಲೋಳೀ । ಜಾಹಲೀ ಚವದಾಹೀ ಭುವನಾಂಸಿ ಕಡಿಯಾಳೀ । ತೈಸೇ ಆಶ್ಚರ್ಯಚಿ ಮಗ ಮೀ ಆಕಳೀ । ಕಾಯ ಏಕ? ।೩೧೭॥ ನಾವರೇ ವ್ಯಾಪ್ತೀ ಹೇ ಅಸಾಧಾರಣ । ನ ಸಾಹವೇ ರೂಪಾಚೇ ಉಗ್ರಪಣ । ಸುಖ ದೂರೀ ಗೇಲೇ ಪರಿ ಪ್ರಾಣ । ವಿಪಾಯೇ ಧರಿಜೇ ।೩೧೮॥ ದೇವಾ ಐಸೇ ದೇಖೋನಿ ತೂಂತೇ । ನೇಣೋ ಕೈಸೇ ಆಲೇ ಭಯಾಚೇ ಭರಿತೇ । ಆತಾ ದುಃಖಕಲ್ಲೋಳೀ ಝಳಂಬತೇ । ತಿನ್ಹೀ ಭುವನೇ ।೩೧೯॥ ಏರ್ಹವೀ ತುಜ ಮಹಾತ್ಮಯಾಚೇ ದೇಖಣೇ । ತರಿ ಭಯದುಃಖಾಸಿ ಕಾ ಮೇಳವಣೇ ?। ಪರಿ ಹೇ ಸುಖ ನವ್ಹೇಚಿ ಜೇಣೇ ಗುಣೇ । ತೇ ಜಾಣತ ಆಹೇ ಮಜ ।೩೨೦॥ ಜಂವ ತುಝೇ ರೂಪ ನೋಹೇ ದಿಠೇ । ತಂವ ಜಗಾಸಿ ಸಂಸಾರಿಕ ಗೋಮಟೇ । ಆತಾ ದೇಖಿಲಾಸಿ ತರೀ ವಿಷಯವಿಟೇ । ಉಪನಲಾ ತ್ರಾಸು ।೩೨೧॥ ತೇವೀಂಚಿ ತುಜ ದೇಖಿಲಿಯಾ ಸಾಟೀ । ಕಾಯ ಸಹಸಾ ತುಜ ದೇವೋ ಯೇಈಲ ಮಿಠೀ । ಆಣಿ ನೇದೀ ತರೀ ಶೋಕಸಂಕಟೀ । ರಾಹೋ ಕೇವೀ? ।೩೨೨॥ ಮ್ಹಣೌನಿ ಮಾಗಾ ಸರೋ ತಂವ ಸಂಸಾರು । ಆಡವೀತ ಯೇತಸೇ ಅನಿವಾರು । ಆಣಿ ಪುಢಾ ತೂ ತಂವ ಅನಾವರು । ನಯೇಸಿ ಘೇವೋ ।೩೨೩॥ ಐಸಾ ಮಾಝಾರಲಿಯಾ ಸಾಂಕಡಾ । ಬಾಪುಡ್ಯಾ ತ್ರೈಲೋಕ್ಯಾಚಾ ಹೋತಸೇ ಹುರಡಾ । ಐಸಾ ಹಾ ಧ್ವನಿ ಜೇ ಪುಡಾ । ಚೋಜವಲಾ ಮಜ ।೩೨೪॥

ನಿಜವಾಗಿಯೂ ನೀವು ಹೀಗೆ ಅನೇಕ ಪ್ರಕಾರಗಳಿಂದ ನನ್ನ ದೃಷ್ಟಿಗೆ ಕಾಣಿಸುವಿರಿ. ಪ್ರಳಯಾಗ್ನಿ ಹೊತ್ತಿಕೊಂಡಾಗ ಎಲ್ಲ ಕಡೆ ಬೆಳಕು ಬೀಳುವಂತೆ ನಿಮ್ಮ ಮುಖವು ಮಹಾ ಪ್ರಖರವಾಗಿ ಕಾಣಿಸುವುದು ।ಶ್ಲೋ.೧೨॥

ಕಾಡಾಗ್ನಿಯಿಂದ ಪರ್ವತವು ಹೊತ್ತಿಕೊಂಡಾಗ ಅಲ್ಲಿನ ಎಲ್ಲ ಪದಾರ್ಥಗಳು ಉರಿಹೊತ್ತಿ ಜ್ವಾಲೆಯಿಂದ ಭಡಕಾಯಿಸುವಂತೆ ನಿಮ್ಮ ನಾಲಿಗೆಯು ದವಡೆಗಳನ್ನು ನೆಕ್ಕುತ್ತ ಹಲ್ಲುಗಳಲ್ಲಿ ಹೊರಳಾಡುವುದು ।ಶ್ಲೋ.೧೩॥

ಈ ಮುಖದ ಉಷ್ಣತೆಯಿಂದ ಮತ್ತು ಸರ್ವ ಶರೀರದ ತೇಜದ ಪ್ರಖರದಿಂದ ಸಂತಪ್ತಗೊಂಡ ವಿಶ್ವವು ಅತಿಶಯ ವಾಗಿ ಅಸಹ್ಯ ತ್ರಾಸಿನತ್ತ ನಡೆದಿದೆ ।ಶ್ಲೋ.೧೪॥

ಶ್ಲೋಕಾರ್ಥ :- ದಿಕ್ಕುಗಳನ್ನೆಲ್ಲಾ ತುಂಬಿರುವುದಲ್ಲದೇ ಭೂಮಿ ಆಕಾಶವನ್ನು ನೀನೊಬ್ಬನೇ ವ್ಯಾಪಿಸಿರುವೆ. ಉಗ್ರವೂ, ಅದ್ಭುತವೂ, ಆದ ನಿನ್ನ ಸ್ವರೂಪವನ್ನು ನೋಡಿ, ಮಹಾತ್ಮ! ಮೂರು ಲೋಕಗಳಿಗೂ ತಪಿಸುತ್ತಿವೆ ।೨೦॥

ಸ್ವರ್ಗ, ಪಾತಾಳ, ಪೃಥ್ವಿ, ಅಂತರಿಕ್ಷ, ದಶದಿಕ್ಕುಗಳು ಮತ್ತು ಸರ್ವವ್ಯಾಪ್ತ ದಿಶಾಚಕ್ರಗಳು ।ಶ್ಲೋ.೧೫॥

ಇವುಗಳೆಲ್ಲವೂ ನಿಮ್ಮ ಒಂದೇ ರೂಪದಿಂದ ವ್ಯಾಪಿಸಿ ಬಿಟ್ಟವೆ. ಹೀಗೆ ಕೌತುಕದಿಂದ ನಾನು ನೋಡುವೆ ಆದರೆ ಆಕಾಶ ಸಹ ಎಲ್ಲವೂ ಮುಳುಗುವಂತೆ ನಿಮ್ಮ ಭಯಾನಕ ರೂಪದಲ್ಲಿ ತೋರುವುದು ।ಶ್ಲೋ.೧೬॥

ನಿಮ್ಮ ಅದ್ಭುತರೂಪದ ರಸದ ತೆರೆಗಳಲ್ಲಿ ಹದಿನಾಲ್ಕು ಲೋಕಗಳು ಸಿಕ್ಕಿಕೊಂಡಿವೆ. ಹೀಗೆ ನಿಮ್ಮ ರೂಪವು ಆಶ್ಚರ್ಯ ಕಾರಕವಾಗಿದ್ದು, ನನಗೊಬ್ಬನಿಗೆ ಹೇಗೆ ನೋಡುವುದಾದೀತು? ।ಶ್ಲೋ.೧೭॥

ನಿಮ್ಮ ಭವ್ಯರೂಪದ ವ್ಯಾಪ್ತಿಯನ್ನು ಕಲ್ಪಿಸುವುದಾಗುವುದಿಲ್ಲ. ನಿಮ್ಮ ರೂಪದ ಉಗ್ರತನ ಸಹಿಸುವುದಾಗುವುದಿಲ್ಲ ಮತ್ತು ನಿಮ್ಮ ರೂಪದಿಂದ ಜಗತ್ತಿಗೆ ಸುಖದ ಬದಲು ದುಃಖವೇ ಒದಗಿದೆ ।ಶ್ಲೋ.೧೮॥

ದೇವಾ, ನಿಮ್ಮ ಅದ್ಭುತರೂಪವನ್ನು ನೋಡಿ ನನಗೆ ಭಯವು ಹೇಗೆ ಉಕ್ಕೇರುವುದೋ ತಿಳಿಯದಾಗಿದೆ. ಕಾರಣ ಇದರಿಂದಾಗುವ ದುಃಖದ ತೆರೆಗಳಲ್ಲಿ ಮೂರುಲೋಕಗಳು ಮುಳುಗಹತ್ತಿವೆ ।ಶ್ಲೋ.೧೯॥

ಸಾಮಾನ್ಯವಾಗಿ ಮಹಾತ್ಮರಾದ ನಿಮ್ಮ ದರ್ಶನದಿಂದ ಭಯ ದುಃಖಗಳು ಏಕಾಗಬೇಕು? ಆದಾಗ್ಯೂ ಈ ನಿಮ್ಮ ರೂಪದಿಂದ ಸುಖವಾಗುವುದಿಲ್ಲವೆಂದು ನನಗೆ ಭಾಸವಾಗುತ್ತಿದೆ ।ಶ್ಲೋ.೨೦॥

ಎಲ್ಲಿಯವರೆಗೆ ನಿನ್ನ ರೂಪವು ಕಾಣದೋ, ಅಲ್ಲಿಯವರೆಗೆ ಜಗತ್ತಿಗೆ ವಿಷಯ ಸುಖ ಉತ್ತಮ ಎನಿಸುವುದು. ಈಗ ನಿಮ್ಮ ಸ್ವರೂಪ ದರ್ಶನವಾಗಿದ್ದಕ್ಕೆ ವಿಷಯದ ತಿರಸ್ಕಾರ ಉಂಟಾಗಿ ಬೇಸರವಾಗಿದೆ ।ಶ್ಲೋ.೨೧॥

ಅದರಂತೆ ನಿನ್ನನ್ನು ನೋಡಿದಾಕ್ಷಣ ನಿನಗೆ ಆಲಿಂಗಿಸಲಿಕ್ಕೆ ಸಾಧ್ಯವೇ? ಹಾಗಾದರೆ ಆಲಿಂಗಿಸುವುದು ಬಿಟ್ಟರೆ ಈ ಸಂಕಟದಲ್ಲಿ ಹೇಗಿರಬೇಕು ? ।ಶ್ಲೋ.೨೨॥

ಆದ್ದರಿಂದ ಇದರಿಂದ ಹಿಂದೆ ಸರಿದರೆ ಜನ್ಮ ಮರಣ ಸಂಸಾರವು ಹಿಂದೆ ಸರಿಯಲು ಅಡ್ಡ ಬರುವುದು, ಮತ್ತು ಮುಂದಿರುವ ನೀನು ಅನಾವರನು ಇರುವುದರಿಂದ ಹಿಡಿಯಲಿಕ್ಕೆ ಬಾರದಾಗಿದೆ ।ಶ್ಲೋ.೨೩॥

ಈ ಪ್ರಕಾರವಾಗಿ ಮಧ್ಯದಲ್ಲಿಯೇ ಸಂಕಟದಲ್ಲಿ ಸಿಕ್ಕಿಕೊಂಡ ಮೂರುಲೊಕಗಳು ಹುರಪಳಿಸುತ್ತಿವೆ. ಹೀಗೆ ನನ್ನ ನಿಜವಾದ ಅಭಿಪ್ರಾಯವಾಗಿದೆ ।ಶ್ಲೋ.೨೪॥

ಜೈಸಾ ಆರಂಬಳಲಾ ಆಗೀ । ತೋ ಸಮುದ್ರಾಯೇ ನಿವಾವಯಲಾಗೀ । ತಂವ ಕಲ್ಲೋಳ ಪಾಣಿಯಾಚಿಯಾ ತರಂಗೀ । ಆಗಳಾ ಬಿಹೇ ।೩೨೫।। ತೈಸೇ ಯಾ ಜಗಾಸಿ ಜಾಹಲೇ । ತೂಂತೇ ದೇಖೋನಿ ತಳಮಳಿತ ಠೇಲೇ ।

ಅಮೀ ಹಿ ತ್ವಾಂ ಸುರಸಂಘಾ ವಿಶಂತಿ ಕೇಚಿದ್ಭೀತಾಃ ಪ್ರಾಂಜಲಯೋ ಗೃಣಂತಿ ।
ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧ ಸಂಘಾಃ ಸ್ತುವಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ।೨೧।।

ಯಾಮಾಜೀ ಪೈಲ ಭಲೇ । ಜ್ಞಾನಶೂರಾಂಚೇ ಮೇಳಾವೇ ।೩೨೬।। ಹೇ ತುರ್ಝೇನಿ ಆಂಗಿಕೇ ತೇಜೇ । ಜಾಳೂನಿ ಸರ್ವ ಕರ್ಮಾಂಚೀ ಬೀಜೇ । ಮಿಳತ ತುಜ ಆಂತು ಸಹಜೇ । ಸದ್ಭಾವೇಸೀ ।೩೨೭।। ಆಣಿಕ ಏಕ ಸಾವಿಯಾಚಿ ಭಯಭೀರು । ಸರ್ವಸ್ವೇ ಧರೂನಿ ತುಝೀ ಮೋಹರು । ತುಜ ಪ್ರಾರ್ಥಿತಾತೀ ಕರು । ಜೋಡೋನಿಯಾ ।೩೨೮।। ದೇವಾ ಅವಿದ್ಯಾರ್ಣವೀ ಪಡಿಲೋ । ಜೇ ವಿಷಯವಾಗುರೇ ಆಂತುಡಲೋ । ಸ್ವರ್ಗಸಂಸಾರಾಚಿಯಾ ಸಾಂಕಡಲೋ । ದೋಹೀ ಭಾಗೀ? ।೩೨೯।। ಐಸೇ ಆಮುಚೇ ಸೋಡವಣೇ । ತುಜವಾಂಚೋನಿ ಕೀಜೇಲ ಕವಣೇ? । ತುಜ ಶರಣ ಗಾ ಸರ್ವಪ್ರಾಣೇ । ಮ್ಹಣತ ದೇವಾ ।೩೩೦।। ಆಣಿ ಮಹರ್ಷೀ ಅಥವಾ ಸಿದ್ಧ । ವಿದ್ಯಾಧರಸಮೂಹ ವಿವಿಧ । ಹೇ ಬೋಲತ ತುಜ ಸ್ವಸ್ತಿವಾದ । ಕರಿತೀ ಸ್ತವನ ।೩೩೧।।

ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾಃ ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ।
ಗಂಧರ್ವಯಕ್ಷಾ ಸುರಸಿದ್ಧ ಸಂಘಾಃ ವೀಕ್ಷಂತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ।೨೨।।

ಹೇ ರುದ್ರಾದಿತ್ಯಾಂಚೇ ಮೇಳಾವೇ । ವಸು ಹನ ಸಾಧ್ಯ ಆಘವೇ । ಅಶ್ವಿನೌ ದೇವ ವಿಶ್ವೇದೇವ ವಿಭವೇ । ವಾಯುಹೀ ಹೇ ಜೇ ।೩೩೨।। ಅವಧಾರಾ ಪಿತರ ಹನ ಗಂಧರ್ವ । ಪೈಲ ಯಕ್ಷರಕ್ಷೋಗಣ ಸರ್ವ । ಜೇ ಮಹೇಂದ್ರಮುಖ್ಯದೇವ । ಕಾ ಸಿದ್ಧಾದಿಕ ।೩೩೩।। ಹೇ ಆಘವೇಚಿ ಆಪುಲಾಲಿಯಾ ಲೋಕೀ । ಸೋತ್ಕಂಠಿತ ಅವಲೋಕೀ । ಹೇ ಮಹಾಮೂರ್ತೀ ದೈವಿಕೀ । ಪಾಹಾತ ಆಹಾತೀ ।೩೩೪।। ಮಗ ಪಾಹಾತ ಪಾಹಾತ ಪ್ರತಿಕ್ಷಣೀ । ವಿಸ್ಮಿತ ಹೋಊನಿ ಅಂತಃಕರಣೀ । ಕರಿತ ನಿಜ ಮುಕುಟೀ ವೋವಾಳಣೀ । ಪ್ರಭೂಜೀ ತುಜ ।೩೩೫।। ತೇ ಜಯಜಯ ಘೋಷ ಕಲರವೇ । ಸ್ವರ್ಗ ಗಾಜವಿತಾತೀ ಆಘವೇ । ಠೇವಿತ ಲಲಾಟವರೀ ಬರವೇ । ಕರಸಂಪುಟ ।೩೩೬।।

ಅಗ್ನಿಯಿಂದ ಬೆಂದ ಮನುಷ್ಯನು ನಿವಾರಿಸಿಕೊಳ್ಳಲು ಸಮುದ್ರಕ್ಕೆ ಬಂದಾಗ ಅಲ್ಲಿನ ಉಕ್ಕೇರಿದ ತೆರೆಗಳಿಂದ ಇನ್ನೂ ಹೆಚ್ಚಿಗೆ ಬೆದರುವನು ।೩೨೫॥

ಇದರಂತೆ ಈಜಗತ್ತಿನ ಸ್ಥಿತಿಯಾಗಿದೆ ನಿಮ್ಮನ್ನು ನೋಡಿ ಅವರು ತಳಮಳಿಸುತ್ತಿರುವರು.

ಶ್ಲೋಕಾರ್ಥ :- ಇದೋ! ಈ ದೇವತೆಗಳು ನಿನ್ನಲ್ಲಿ ಪ್ರವೇಶಿಸುತ್ತಾರೆ. ಕೆಲವರು ಬೆದರಿ ಕೈಕಟ್ಟಿ ಕೊಳ್ಳುತ್ತಿದ್ದಾರೆ. ಮಹರ್ಷಿಗಳೂ, ಸಿದ್ಧರೂ, ಸ್ವಸ್ತಿ ವಚನಗಳನ್ನು ಹೇಳುತ್ತ ನಿನ್ನನ್ನು ಸ್ತುತಿಸುತ್ತಿದ್ದಾರೆ ।೨೧॥

ಈಗ ಆ ಕಡೆ ಇರುವ ಜ್ಞಾನಿಪುರುಷರ ಸಮುದಾಯದ ಆದ ಸ್ಥಿತಿ ನೋಡಿರಿ ।೩೨೬॥

ನಿಮ್ಮ ಅಂಗದ ತೇಜದಿಂದ ಈ ಪುರುಷರು ಎಲ್ಲ ಕರ್ಮಗಳ ಬೀಜಗಳನ್ನು ಸುಟ್ಟು ಸದ್ಭಾವಗಳಿಂದ ನಿಮ್ಮಲ್ಲಿ ಲೀನರಾಗುತ್ತಿದ್ದಾರೆ ।೩೨೭॥

ಇನ್ನು ಕೆಲವರು ಸಹಜವಾಗಿಯೇ ನಿಮ್ಮ ರೂಪವನ್ನು ಕಂಡು ಭಯಭೀತರಾಗಿದ್ದಾರೆ. ನಿಮ್ಮಲ್ಲಿಯೇ ಪೂರ್ಣ ವಿಶ್ವಾಸವನ್ನಿಟ್ಟು ನಿಮ್ಮೆದುರು ನಿಂತು ಕೈ ಜೋಡಿಸಿ ಪ್ರಾರ್ಥಿಸುತ್ತಿದ್ದಾರೆ ।೩೨೮॥

ದೇವಾ, ಅಜ್ಞಾನ ಸಮುದ್ರದಲ್ಲಿ ಬಿದ್ದು ವಿಷಯಗಳ ಬಲೆಯಲ್ಲಿ ನಾವು ಸಿಕ್ಕಿಕ್ಕೊಂಡಿದ್ದೇವೆ ಮತ್ತು ಸ್ವರ್ಗಸುಖ, ಸಂಸಾರದ ಪೇಚಿನಲ್ಲಿಯೂ ಸಿಕ್ಕಿಕೊಂಡಿದ್ದೇವೆ ।೩೨೯॥

ಇಂತಹ ಸಂಕಟಗಳಿಂದ ನಮ್ಮನ್ನು ಬಿಡಿಸುವವರು ಯಾರು? ಆದ್ದರಿಂದ ದೇವಾ, ನಾವು ಸರ್ವಭಾವದಿಂದ ನಿಮಗೆ ಶರಣು ಬಂದಿರುವೆವು. ಹೀಗೆ ಪ್ರಾರ್ಥಿಸುತ್ತಿರುವರು ನೋಡಿರಿ ।೩೩೦॥

ಮತ್ತು ಮಹರ್ಷಿಗಳು, ಸಿದ್ಧರು ಹಾಗೂ ವಿದ್ಯಾಧರರು ಮೊದಲು ಮಾಡಿ ಗಂಧರ್ವದ ಮೇಳಗಳು ಕಲ್ಯಾಣಕರ ಭಾಷಣಗಳಿಂದ ನಿಮ್ಮ ಸ್ತುತಿ ಮಾಡುತ್ತಿರುವರು ।೩೩೧॥

ಶ್ಲೋಕಾರ್ಥ :- ರುದ್ರರೂ, ಆದಿತ್ಯರೂ, ವಸು ಗಳೂ, ಸಾಧ್ಯರೂ, ಮರುದ್ಗಣಗಳೂ, ವಿಶ್ವ ದೇವತೆ ಗಳೂ, ಪಿತೃ ದೇವತೆಗಳೂ, ಯಕ್ಷ, ರಾಕ್ಷಸ, ಗಂಧರ್ವ, ಸಿದ್ಧ ಸಂಘಗಳೂ ಆಶ್ಚರ್ಯದಿಂದ ನಿನ್ನನ್ನು ನೋಡುತ್ತಿದ್ದಾರೆ ।೨೨॥

ಈ ಹನ್ನೊಂದು ರುದ್ರರು, ಹನ್ನೆರಡು ಆದಿತ್ಯರು, ಎಂಟು ವಸುಗಳು, ಸಾಧ್ಯನಾಮಕ ಎಲ್ಲ ದೇವತೆಗಳು, ಅಶ್ವಿನೀಕುಮಾರರು ಮತ್ತು ನಲವತ್ತೊಂಭತ್ತು ಮರುದ್ಗಣರು ಮತ್ತು ಎಲ್ಲ ವಾಯುಗಳು ತಮ್ಮ ವೈಭವದಿಂದ ।೩೩೨॥

ಹಾಗೆಯೇ ಪಿತರರು, ಗಂಧರ್ವರು,ಯಕ್ಷರು ಮತ್ತು ಎಲ್ಲ ರಾಕ್ಷಸ ಗಣರು, ಇಂದ್ರಾದಿಕ ಮುಖ್ಯ ದೇವತೆಗಳು, ಸಿದ್ಧರು ।೩೩೩॥

ಇವರೆಲ್ಲರೂ ತಮ್ಮ ತಮ್ಮ ಲೋಕಗಳಿಂದ ಹೆಚ್ಚಿನ ಉತ್ಕಂಠದಿಂದ ನಿಮ್ಮ ವಿಶ್ವರೂಪವನ್ನು ನೋಡುತ್ತಿರುವರು ।೩೩೪॥

ಪ್ರಭುವೇ, ಹಾಗೆಯೇ ನಿಮ್ಮನ್ನು ನೋಡುತ್ತಿದ್ದಂತೆಯೇ ಮನದಲ್ಲಿ ಆಶ್ಚರ್ಯಚಕಿತರಾಗಿ ನಿಮ್ಮಲ್ಲಿ ನತಮಸ್ತಕರಾಗುತ್ತಿರುವರು ।೩೩೫॥

ಇವರೆಲ್ಲರೂ ಸ್ವರ್ಗದಲ್ಲಿ ಮಂಜುಳ ಶಬ್ದಗಳಿಂದ ನಿಮ್ಮ ಜಯಜಯಕಾರವನ್ನು ಮಾಡುತ್ತಿರುವರು ಮತ್ತು ಶಿರದ ಮೇಲೆ ಎರಡೂ ಕೈಗಳನ್ನಿಟ್ಟು ನಿಮಗೆ ನಮಸ್ಕಾರ ಮಾಡುತ್ತಿರುವರು ।೩೩೬॥

ತಿಯೇ ವಿನಯದ್ರುಮಾಚಿಯೇ ಆರವೀ । ಸುರವಾಡಲೀ ಸಾತ್ತ್ವಿಕಾಂಚೀ ಮಾಧವೀ । ಮ್ಹಣೌನಿ ಕರಸಂಪುಟಪಲ್ಲವೀ । ತೂ ಹೋತಾಸಿ ಫಳ ।೩೩೭॥

ರೂಪಂ ಮಹತ್ತೇ ಬಹುವಕ್ತ್ರನೇತ್ರಂ ಮಹಾಬಾಹೋ ಬಹುಬಾಹೂರುಪಾದಂ।
ಬಹೂದರಂ ಬಹುದಂಷ್ಟ್ರಾಕರಾಲಂ ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಽಹಮ್ ।೨೩॥

ಜೇ ಲೋಚನಾ ಭಾಗ್ಯ ಉದೇಲೇ । ಮನಾ ಸುಖಾಚೇ ಸುಯಾಣೇ ಪಾಹಲೇ । ಜೇ ಅಗಾಧ ತುಝೇ ದೇಖಿಲೇ । ವಿಶ್ವರೂಪ ಇಹೀ ।೩೩೮॥ ಹೇ ಲೋಕತ್ರಯ ವ್ಯಾಪಕ ರೂಪಡೇ । ಪಾಹತಾ ದೇವಾಹೀ ವಚಕ ಪಡೇ । ಯಾಚೇ ಸನ್ಮುಖಪಣ ಜೋಡೇ । ಭಲತಯಾಕಡುನೀ ।೩೩೯॥ ಐಸೇ ಏಕಚಿ ಪರೀ ವಿಚಿತ್ರೇ । ಆಣಿ ಭಯಾನಕೇ ವಕ್ತ್ರೇ । ಬಹುಲೋಚನ ಹೇ ಸಶಸ್ತ್ರೇ । ಅನಂತಭುಜಾ ।೩೪೦॥ ಅನಂತ ಚಾರೂ ಬಾಹು ಚರಣ । ಬಹುದರ ಆಣಿ ನಾನಾವರ್ಣ । ಕೈಸೇ ಪ್ರತಿವದನೀ ಮಾತಲೇಪಣ । ಆವೇಶಾಚೇ ।೩೪೧॥ ಹೋ ಕಾ ಮಹಾಕಲ್ಪಾಚಿಯಾ ಅಂತೀ । ತವಕಲೇನೀ ಯಮೇ ಜೇಉತತೇಉತೀ । ಪ್ರಳಯಾಗ್ನೀಚೇ ಉಜಿತೀ । ಆಂಬುಖಿಲೀ ಜೈಸೀ ।೩೪೨॥ ನಾತರೀ ಸಂಹಾರ ತ್ರಿಪುರಾರೀಚೇ ಯಂತ್ರೇ । ಕೀ ಪ್ರಳಯ ಭೈರವಾಚೇ ಕ್ಷೇತ್ರೇ । ನಾನಾ ಯುಗಾಂತಶಕ್ತೀಚೇ ಪಾತ್ರೇ । ಭೂತಖಿಚಾ ವೋಢಾವಿಲೀ ।೩೪೩॥ ತೈಸೀ ಜಿಯೇತಿಯೇ ಕಡೇ । ತುಝೀ ವಕ್ತ್ರೇ ಜೇ ಪ್ರಚಂಡೇ । ನ ಸಮಾತೀ ದರೀಮಾಜೀ ಸಿಂವ್ಹಾಡೇ । ತೈಸೇ ದಶನ ದಿಸತೀ ರಾಗೀಟ ।೩೪೪॥ ಜೈಸೇ ಕಾಳರಾತ್ರೀಚೇನಿ ಅಂಧಾರೇ । ಉಲ್ಹಾಸತ ನಿಘತೀ ಸಂಹಾರಖೇಚರೇ । ತೈಸಿಯಾ ವದನೀ ಪ್ರಳಯರುಧೀರೇ । ಕಾಟಲಿಯಾ ದಾಢಾ ।೩೪೫॥ ಹೇ ಅಸೋ ಕಾಳೇ ಅವಂತಿಲೇ ರಣ । ಕಾ ಸರ್ವ ಸಂಹಾರೇ ಮಾತಲೇ ಮರಣ । ತೈಸೇ ಅತಿಭಿಂಗುಳವಾಣೇಪಣ । ವದನೀ ತುಝಿಯೇ ।೩೪೬॥ ಹೇ ಬಾಪುಡೀ ಲೋಕ ಸೃಷ್ಟೀ । ಮೋಟಕಿಯೇ ವಿಪಾಇಲೀ ದಿಠೀ । ಆಣಿ ದುಃಖಕಾಲಿಂದೀಚಿಯಾ ತಟೀ । ಝಾಡ ಹೋಊನಿ ಠೇಲೀ ।೩೪೭॥ ತುಜ ಮಹಾಮೃತ್ಯೂಂಚಿಯಾ ಸಾಗರೀ । ಆತಾ ಹೇ ತ್ರೈಲೋಕ್ಯಜೀವಿತಾಚೀ ತರೀ । ಶೋಕದುರ್ವಾತಲಹರೀ । ಆಂದೋಳತ ಅಸೇ ।೩೪೮॥ ಏಥ ಕೋಪೋನಿ ಜರೀ ವೈಕುಂಠೇ । ಐಸೇ ಹನ ಮ್ಹಣಿಪೈಲ ಅವಚಟೇ । ಜೇ ತುಜ ಲೋಕಾಂಚೇ ಕಾಯ ವಾಟೇ? ತೂ ಧ್ಯಾನಸುಖ ಹೇ ಭೋಗೀ ।೩೪೯॥

ಆ ದೇವತೆಗಳು ವಿನಮ್ರರೂಪ ವೃಕ್ಷದ ತೋಟದಲ್ಲಿ ಅಷ್ಟಸಾತ್ವಿಕ ಭಾವರೂಪ ವಸಂತ ಪ್ರಾಪ್ತವಾಗಿ ಆ ವೃಕ್ಷಗಳಿಗೆ ಕರಸಂಪುಟರೂಪ ಎಲೆಗಳು ಚಿಗುರಿ ಫಲರೂಪವಾಗಿ ನಿಮ್ಮ ಪ್ರಾಪ್ತಿಯಾಯಿತು ।೩೩೭॥

ಶ್ಲೋಕಾರ್ಥ :– ಹೇ ಮಹಾಬಾಹೋ! ಅಸಂಖ್ಯಾತ ಮುಖಗಳು, ನೇತ್ರಗಳು, ಬಾಹುಗಳು, ಎದೆಗಳು, ಪಾದಗಳು, ಉದರಗಳು, ಕೋರೆ ಹಲ್ಲು ಗಳು ಈ ರೀತಿ ಇರುವ ನಿನ್ನ ಕರಾಳರೂಪವನ್ನು ನೋಡಿ, ಲೋಕವು ಭಯಪಡುತ್ತಿದೆ. ನಾನೂ ಸಹ ಹೆದರುತ್ತಿದ್ದೇನೆ ।೨೩॥

ಅವರ ನೇತ್ರಗಳಿಗೆ ಭಾಗ್ಯವೇ ಉದಯವಾಗಿ ನಿಮ್ಮ ಅಗಾಧವಾದ ವಿಶ್ವರೂಪವನ್ನು ನೋಡಿ ಇಂದು ಅವರ ಮನಸ್ಸಿಗೆ ಸುಖದ ಸುದಿನವು ಸಿಕ್ಕಿತು ।೩೩೮॥

ಲೋಕತ್ರಯ ವ್ಯಾಪಕ ನಿಮ್ಮ ಸ್ವರೂಪವನ್ನು ನೋಡಿ ದೇವತೆಗಳೂ ಚಕಿತರಾಗಿದ್ದಾರೆ. ಕಾರಣ ಈ ಸ್ವರೂಪವು ಎಲ್ಲಿಂದ ನೋಡಿದರೂ ತನ್ನ ಮುಂದೆಯೇ ಇರುವಂತೆ ಕಾಣುವುದು ।೩೩೯॥

ಈ ಪ್ರಕಾರವಾಗಿ ಇದು ಒಂದೇ ಇದ್ದು, ವಿಚಿತ್ರವಾಗಿದೆ ಮತ್ತು ಭಯಾನಕವಾಗಿದೆ. ಇದಕ್ಕೆ ಅನೇಕ ಮುಖಗಳು ಮತ್ತು ಅನೇಕ ನೇತ್ರಗಳು ಹಾಗೂ ಶಸ್ತ್ರ ಧರಿಸಿದ ಅನಂತ ಹಸ್ತಗಳಿವೆ।೩೪೦॥

ಹಾಗೆಯೇ ಸುಂದರವಾದ ಅನೇಕ ಬಾಹುಗಳು, ಚರಣಗಳು, ಬಹು ಉದರಗಳು ಇವೆ ಮತ್ತು ಅನೇಕ ವರ್ಣಗಳಿಂದ ಕೂಡಿವೆ.ಪ್ರತಿಯೊಂದು ಮುಖಗಳು ತಿನ್ನಲು ಹವಣಿಸುವಂತೆ ತೋರುವುವು ।೩೪೧॥

ಯಾವ ಪ್ರಕಾರವಾಗಿ ಮಹಾಕಲ್ಪದ ಅಂತ್ಯದಲ್ಲಿ ಕ್ರೋಧಯುಕ್ತ ಯಮನು ಎಲ್ಲ ಕಡೆಯೂ ಪ್ರಳಯಾಗ್ನಿಯ ಹೋಳಿಗಳನ್ನು ಹರಡುವನು ।೩೪೨॥

ಅಥವಾ ಶಂಕರನಿಂದ ಸಂಹಾರ ಮಾಡುವ ಯಂತ್ರ ದಂತೆ, ಇಲ್ಲವೆ ಪ್ರಳಯ ಭೈರವನ ಸಂಘದಂತೆ, ಮತ್ತು ಯುಗದ ಅಂತ್ಯಗೊಳಿಸುವ ಕಾಲಶಕ್ತಿಯು ಭೂತಗಳಿಗೆ ತಿನ್ನಲು ನೀಡಿದ ಖಿಚಡಿ ಪಾತ್ರೆಯನ್ನು ಮುಂದೆ ಸರಿಸಿದಂತೆ ।೩೪೩॥

ಅದರಂತೆ ಎಲ್ಲೆಲ್ಲಿಯೂ ನಿಮ್ಮ ಪ್ರಚಂಡ ಮುಖಗಳು ಎಲ್ಲಿಯೂ ಹಿಡಿಸಲಾರದಷ್ಟು ಭಯಂಕರವಾಗಿವೆ. ಗುಹೆಯಲ್ಲಿ ಸಿಂಹವು ಕುಳಿತಂತೆ ನಿಮ್ಮ ಮುಖದಲ್ಲಿ ಸಿಟ್ಟಿನ ಹಲ್ಲುಗಳು ಕಾಣುತ್ತಿವೆ ।೩೪೪॥

ಕಾಲರಾತ್ರಿಯ ದಟ್ಟ ಕತ್ತಲೆಯಲ್ಲಿ ಸಂಹಾರ ಮಾಡುವ ಪಿಶಾಚಿಗಳು ಉಲ್ಹಾಸದಿಂದ ಸಂಚರಿಸುವುವು. ಆಗ ಪ್ರಳಯ ಕಾಲದಲ್ಲಿ ಮರಣಹೊಂದಿದ ಪ್ರಾಣಿಗಳ ರಕ್ತದಿಂದ ಕೂಡಿದ ದವಡೆಗಳು ಕಾಣುತ್ತಿವೆ ।೩೪೫॥

ಇದು ಇರಲಿ, ಕಾಲನು ಯುದ್ಧಕ್ಕೆ ಆಮಂತ್ರಿಸಿ ಎಲ್ಲರ ಸಂಹಾರ ಮಾಡಿದಾಗ ಮರಣವು ಮೆರೆಯುವಂತೆ ನಿನ್ನ ಮುಖದಲ್ಲಿ ಅತ್ಯಂತ ಭಯಾನಕವಿದೆ ।೩೪೬॥

ಏನು ಹೇಳಬೇಕು? ಈ ಎಲ್ಲ ಜಗವು ಅತ್ಯಂತ ದೀನ ವಾಗಿದೆ. ಕಾರಣ ಜಗತ್ತಿನತ್ತ ತುಸು ಹೊರಳಿ ನೋಡಿದರೆ ಅವರು ದುಃಖರೂಪ ಯಮುನಾನದಿ ದಂಡೆಯ ಗಿಡಗಳಂತೆ ನಿಂತುಬಿಟ್ಟಿದ್ದಾರೆ ।೩೪೭॥

ನಿಮ್ಮ ಈ ಮಹಾಮೃತ್ಯುರೂಪ ಸಾಗರದಲ್ಲಿ ಜಗತ್ತಿನ ಆಯುಷ್ಯವೆಂಬ ಹಡಗವು ಶೋಕರೂಪ ಬಿರುಗಾಳಿಯಿಂದ ಅಲ್ಲಾಡುತ್ತಿದೆ ।೩೪೮॥

ಈ ನಿನ್ನ ಮಾತಿನಿಂದ ಅಕಸ್ಮಾತ್ತಾಗಿ ಶ್ರೀಕೃಷ್ಣನು ಕೋಪಿಸಿಕೊಂಡು ನಿನಗೇಕೆ ಜಗತ್ತಿನ ಚಿಂತೆ ಮಾಡಬೇಕಾಗಿದೆ? ನೀನು ನನ್ನ ರೂಪದ ಧ್ಯಾನ ಸುಖವನ್ನು ಭೋಗಿಸು, ಎಂದು ಹೇಳಬಹುದೇನೋ ।೩೪೯॥

ತರೀ ಜೀ ಲೋಕಾಂಚೇ ಕೀರ ಸಾಧಾರಣ । ವಾಯಾ ಆಡ ಸೂತಸೇ ವೋಡಣ । ಕೇವಿ ಸಹಸಾ ಮ್ಹಣೇ ಪ್ರಾಣ । ಮಾರ್ಘೇಚಿ ಕಾಂಪತಿ ।೩೫೦॥ ಜ್ಯಾ ಮಜ ಸಂಹಾರರುದ್ರ ವಾಸಿಪೇ । ಜ್ಯಾ ಮಜ ಭೇಣೇ ಮೃತ್ಯು ಲಪೇ । ತೋ ಮೀ ಏಥೇ ಆಹಾಳಬಾಹಳೀ ಕಾಂಪೇ । ಐಸೇ ತುವಾ ಕೇಲೇ ।೩೫೧॥ ಪರಿನವಲ ಬಾಪಾ ಹೇ ಮಹಾಮಾರೀ । ಇಯಾ ನಾಮವಿಶ್ವ ರೂಪ ಜರೀ । ಹೇ ಭ್ಯಾಸುರಪಣೇ ಹಾರಿ । ಭಯಾಸಿ ಆಣೇ ।೩೫೨॥

ನಭಃಸ್ಪೃಶಂ ದೀಪ್ತಮನೇಕವರ್ಣಂ ವ್ಯಾತ್ತಾನನ ಂ ದೀಪ್ತವಿಶಾಲನೇತ್ರಮ್ ।
ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾಂತರಾತ್ಮಾ ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ ।೨೪॥

ತೇಲೀ ಮಹಾಕಾಳೇಸೀ ಹಟೇತಟೇ । ತೈಸೀ ಕಿತೀಏಕೇ ಮುಖೇ ರಾಗಿಟೇ । ಇಹೀ ವಾಢೋನಿಯಾ ಥಾಕುಟೇ । ಆಕಾಶ ಕೇಲೇ ।೩೫೩॥ ಗಗನಾಚೇನಿ ವಾಡ ಪಣೇ ನಾಕಳೇ । ತ್ರಿಭುವನೀಂಚಿಯಾಹೀ ವಾರಿಯಾ ನ ವೇಂಟಾಳೇ । ಯಯಾಚೇನಿ ವಾಫಾ ಆಗೀ ಜಳೇ । ಕೈಸೇ ಧಡಾಡೀತ ಅಸೇ ।೩೫೪॥ ತೇವೀಂಚಿ ಏಕಾಸಾರಿಖೇ ಏಕ ನೋಹೇ । ಏಥ ವರ್ಣಾ ವರ್ಣಾಚಾ ಭೇದು ಆಹೇ । ಹೋ ಕಾ ಜೇ ಪ್ರಳಯೀ ಸಾವಾವೋ ಲಾಹೇ । ವನ್ಹೀ ಯಯಾಚಾ ।೩೫೫॥ ಜಯಾಚಿಯೇ ಆಂಗೀಚೀ ದೀಪ್ತೀ ಯೇವಢೀ । ಜೇ ತ್ರೈಲೋಕ್ಯ ಕೀಜೆ ರಾಖೋಂಡೀ । ಕೀ ತಯಾಹೀ ತೋಂಡೇ ಆಣಿ ತೋಂಡೀ । ದಾಂತ ದಾಢಾ ।೩೫೬॥ ಕೈಸಾ ವಾರಯಾ ಧನುರ್ವಾತ ಚಢಲಾ । ಸಮುದ್ರ ಕೀ ಮಹಾಪುರೀ ಪಡಿಲಾ । ವಿಷಾಗ್ನಿ ಮಾರಾ ಪ್ರವರ್ತಲಾ । ವಡವಾನಳಾಸೀ ।೩೫೭॥ ಹಳಾಹಳ ಆಗೀ ಪಿಯಾಲೇ । ನವಲಮರಣ ಮಾರಾ ಪ್ರವರ್ತಲೇ । ತೈಸೇ ಸಂಹಾರತೇಜಾ ಯಾ ಜಾಹಲೇ । ವದನ ದೇಖಾ ।೩೫೮॥ ಪರೀ ಕೋಣೇ ಮಾನೇ ವಿಶಾಳ । ಜೈಸೇ ತುಟಲಿಯಾ ಅಂತರಾಳ । ಆಕಾಶಾಸೀ ಕವ್ಹಳ । ಪಡೋನಿ ಠೇಲೇ ।೩೫೯॥ ನಾತರೀ ಕಾಖೇ ಸೂನಿ ವಸುಂಧರೀ । ಜೈ ಹಿರಣ್ಯಾಕ್ಷು ರಿಗಾಲಾ ವಿವರೀ । ತೈ ಉಘಡಲೇ ಹಾಟಕೇಶ್ವರೀ । ಜೇವೀ ಪಾತಾಳಕುಹರ ।೩೬೦॥ ತೈಸಾ ವಕ್ತ್ರಾಂಚಾ ವಿಕಾಶು । ಮಾಜೀ ಜಿವ್ಹಾಂಚಾ ಆಗಳಾಚಿ ಆವೇಶು । ವಿಶ್ವ ನ ಪುರೇ ಮ್ಹಣೌನಿ ಘಾಸು । ನ ಭರೀಚಿ ಕೋಡೇ ।೩೬೧॥ ಆಣಿ ಪಾತಾಳವ್ಯಾಳಾಂಚಿಯಾ ಫೂತ್ಕಾರೀ । ಗರಳಜ್ವಾಳಾಲಾಗತೀ ಅಂಬರೀ । ತೈಸೀ ಪಸರಲಿಯೇ ವದನದರೀ । ಮಾಜೀ ಹೇ ಜಿವ್ಹಾ ।೩೬೨॥

ಆದರೆ, ಲೋಕದ ಭಯವು ಕೇವಲ ಅಡ್ಡ ಪರದೆ ಯಾಗಿದೆ. ನಿಜಹೇಳಬೇಕೆಂದರೆ ನಾನೇ ಸಹಿಸದೇ ಭಯದಿಂದ ನಡುಗುತ್ತಿರುವೆ ।೩೫೦॥

ಯಾವ ನನಗೆ ಪ್ರಳಯಕಾಲದ ರುದ್ರನು ಹೆದರುವನು ಮತ್ತು ನನ್ನ ಭಯದಿಂದ ಮೃತ್ಯುವು ಅಡಗಿಕೊಳ್ಳುವುದು. ಈಗ ಅದೇ ನಾನುನಿನ್ನ ಸ್ವರೂಪವನ್ನು ಕಂಡು ನಡುಗುತ್ತಿರುವೆ. ಇಂತಹ ಅವಸ್ಥೆ ತಂದಿರುವೆ ।೩೫೧॥

ಹೇ ಪ್ರಭುವೇ, ಈ ನಿಮ್ಮ ಅತಿ ಭಯಂಕರ ರೂಪದ ಉಗ್ರವಾದ ತೇಜದಿಂದ ಭಯವನ್ನೇ ಗೆದ್ದುಕೊಂಡಿದೆ. ಇದಕ್ಕೆ ವಿಶ್ವರೂಪ ಎನ್ನುವುದು ಆಶ್ಚರ್ಯವಲ್ಲವೇ? ಈ ಮಹಾಮಾರಿಯು ಭಯಕ್ಕೂ ಸೋಲಿಸುವುದು ।೩೫೨॥

ಶ್ಲೋಕಾರ್ಥ :- ವಿಶಾಲ ನೇತ್ರಗಳಿಂದಲೂ, ತೆರೆದ ಮುಖದಿಂದಲೂ, ಗಗನಕ್ಕೆ ಮುಟ್ಟುತ್ತಿರುವ ನಿನ್ನ ವಿಶ್ವ ರೂಪವನ್ನು ನೋಡಿ, ನನ್ನ ಹೃದಯವು ಗಾಬರಿಯಾಗಿದೆ. ಧೈರ್ಯವು ಬರಲೊಲ್ಲದು. ಭಗವಂತಾ ! ಕ್ಷೋಭೆ ಯುಂಟಾಗುತ್ತದೆ ।೨೪॥

ಎಷ್ಟೋ ಸಿಟ್ಟಿನ ಮುಖಗಳು ಮಹಾಕಾಳನಲ್ಲಿ ಸ್ಪರ್ಧೆಯಿಂದ ಕಾದಾಡುತ್ತಲಿವೆ ಮತ್ತು ಇವು ತಮ್ಮ ಹಿರಿಮೆಯಿಂದ ಆಕಾಶವನ್ನೇ ಕಿರಿದಾಗಿ ಮಾಡಿವೆ ।೩೫೩॥

ಇವು ಆಕಾಶದಂತಹ ದೊಡ್ಡ ಆಳತೆಯಿಂದಲೂ ಅಳಿಯಲು ಬಾರದಂತಹವು ಮತ್ತು ತ್ರಿಭುವನದ ಗಾಳಿಯಿಂದ ಸುತ್ತಲ್ಪಡಲಾರವು. ಪ್ರತಿಯಾಗಿ ತಮ್ಮ ಉಸುರಿನಿಂದ ಬೆಂಕಿಯನ್ನು ಸುಟ್ಟು ಸುತ್ತಲೂ ಉರಿ ಎಬ್ಬಿಸಿವೆ ।೩೫೪॥

ಇವು ಒಂದರಂತೆ ಒಂದು ಇರದೇ, ರಂಗರೂಪ ಭಿನ್ನವಾಗಿವೆ. ಪ್ರಳಯಕಾಲದ ಅಗ್ನಿಯು ಯಾವ ಕಾಲಕ್ಕೆ ಹುಟ್ಟುವುದೋ ಆಗ ಇದರ ಸಹಾಯದಿಂದಲೇ ಪೃಥ್ವಿಯು ಪ್ರಳಯವಾಗುವುದೇನೋ ।೩೫೫॥

ಇವುಗಳ ಅಂಗತೇಜಗಳಿಂದಮೂರು ಲೋಕಗಳು ಸುಟ್ಟು ಕರಕಾಗುವುದು. ಅಲ್ಲಿ ಮುಖಗಳು, ಮುಖಗಳಲ್ಲಿ ದವಡೆಹಲ್ಲುಗಳು ಇವೆ ।೩೫೬॥

ವಾಯುವಿಗೆ ಧನುರ್ವಾತವಾಯಿತೋ, ಸಮುದ್ರಕ್ಕೆ ಮಹಾಪೂರವು ಬಂದು ಮೇರೆ ತಪ್ಪಿ ಹರಿಯತೊಡಗಿತೋ, ಅಥವಾ ವಡವಾನಲ ಸಹಾಯದಿಂದ ವಿಷಾಗ್ನಿಯು ಹೊಡೆಯಲುನಿಂತಿತೋ ।೩೫೭॥

ಅಗ್ನಿಯ ಹಲಾಹಲ ವಿಷವನ್ನು ಕುಡಿದಂತೆ, ಮರಣವೇ ಹೊಡೆಯಲು ನಿಂತಂತೆ, ಹೀಗೆ ಈ ಸಂಹಾರಕ ತೇಜಕ್ಕೆ ಮುಖಗಳಾದವು. ಇದೆಲ್ಲವೂ ಆಶ್ಚರ್ಯವಾಗಿದೆ ।೩೫೮॥

ಆ ಮುಖಗಳು ಎಷ್ಟು ದೊಡ್ಡದಾಗಿವೆ ಎಂದರೆ ಮೇಲಿಂದ ಆಕಾಶವು ಕಳಚಿಬಿದ್ದು ಅದಕ್ಕೆ ಕಿಂಡಿಗಳು ಆದಂತೆ ।೩೫೯॥

ಅಥವಾ ಹಿರಣ್ಯಾಕ್ಷ ದೈತ್ಯನು ಪೃಥ್ವಿಯನ್ನು ಬಗಲಲ್ಲಿ ಇಟ್ಟುಕೊಂಡು ಪಾತಾಳಕ್ಕೆ ಹೊರಟಾಗ ಹಾಟಕೇಶ್ವರನು ಪಾತಾಳದ ಬಾಗಿಲುಗಳನ್ನು ತೆರದಂತೆ ।೩೬೦॥

ಈ ಪ್ರಕಾರವಾಗಿ ನಿಮ್ಮ ಮುಖಗಳು ತೆರೆದುಕೊಂಡಿದ್ದು ಅದರಲ್ಲಿನ ನಾಲಿಗೆಯ ಆವೇಶವೇ ವಿಶೇಷವಾಗಿದೆ. ಈ ವಿಶ್ವವು ನಿನಗೆ ಒಂದು ತುತ್ತು ಸಹ ಆಗಲಾರದೆಂದು ಕೌತುಕದಿಂದ ಅದನ್ನು ಬಿಟ್ಟಿರುವೆ ।೩೬೧॥

ಮತ್ತು ಪಾತಾಳದ ನಾಗಸರ್ಪಗಳ ಪೂತ್ಕಾರದಿಂದ ವಿಷದ ಜ್ವಾಲೆಗಳು ಆಕಾಶಕ್ಕೆ ಮುಟ್ಟುವಂತೆ ನಿನ್ನ ತೆರೆದ ಮುಖಗಳ ಗುಹೆಗಳಲ್ಲಿ ನಾಲಿಗೆಗಳು ಭಾಸವಾಗುತ್ತಿವೆ ।೩೬೨॥

ಕಾಢೂನಿ ಪ್ರಳಯವಿಜೂಂಚೇ ಜುಂಬಾಡೇ । ಜೈಸೇ ಪನ್ನಾಸಿಲೇ ಗಗನಾಚೇ ಹುಡೇ । ತೈಸೇ ಆವಾಳುವಾವರೀ ಆಂಕಡೇ । ಧಗಧಗೀತ ದಾಢಾಂಚೇ ।೩೬೩॥ ಆಣಿ ಲಲಾಟಪಟಾಚಿಯೇ ಖೋಳೀ । ಕೈಸೇ ಭಯಾತೇ ಭೇಡವಿತಾತೀ ಡೋಳೇ । ಹೋ ಕಾ ಜೇ ಮಹಾಮೃತ್ಯೂಚೇ ಉಮಾಳೇ । ಕಡವಸಾ ರಾಹಿಲೇ ।೩೬೪॥ ಐಸೇ ವಾಊನಿ ಭಯಾಚೇ ಭೋಜ । ಏಥ ಕಾಯ ನಿಪಜವೂ ಪಾಹಾತೋಸಿ ಕಾಜ । ತೇ ನೇಣೋ ಪರೀ ಮಜ । ಮರಣಭಯ ಆಲೇ ।೩೬೫॥ ದೇವಾ ವಿಶ್ವರೂಪ ಪಹಾವಯಾಚೇ ಡೋಹಳೇ । ಕೇಲೆ ತಿಯೇ ಪಾವಲೋ ಪ್ರತಿಫಳೇ । ಬಾಪಾ ದೇಖಿಲಾಸೀ ಆತಾ ಡೋಳೇ । ನಿವಾವೇ ತೈಸೇ ನಿವಾಲೇ ।೩೬೬॥ ಅಹೋ ದೇಹೋ ಪಾರ್ಥಿವ ಕೀರ ಜಾಯೇ । ಯಯಾಚೇ ಕಾಕುಳತೀ ಕವಣಾ ಆಹೇ । ಪರಿ ಆತಾ ಚೈತನ್ಯ ಮಾಝೇ ವಿಪಾಯೇ । ವಾಂಚೇ ಕೀ ನ ವಾಂಚೇ ।೩೬೭॥ ಏರ್ಹವೀ ಭಯಾಸ್ತವ ಆಂಗ ಕಾಂಪೇ । ನಾವೇಕ ಆಗಳೇ ತರೀ ಮನ ತಾಪೇ । ಅಥವಾ ಬುದ್ಧಿಹೀ ವಾಸಿಪೇ । ಅಭಿಮಾನು ವಿಸರಿಜೇ ।೩೬೮॥ ಪರೀ ಯೇತುಲಿಯಾಹೀ ವೇಗಳಾ । ಜೋ ಕೇವಳ ಆನಂದೈಕಕಳಾ । ತಯಾ ಅಂತರಾತ್ಮ ಯ್ಹಾಹೀ ನಿಶ್ಚಳಾ । ಶಿಯಾರೀ ಆಲೀ ।೩೬೯॥ ಬಾಪ ಸಾಕ್ಷಾತ್ಕಾರಾಚಾ ವೇಧು । ಕೈಸಾ ದೇಶಧಡೀ ಕೇಲಾ ಬೋಧು । ಹಾ ಗುರುಶಿಷ್ಯಸಂಬಂಧು । ವಿಪಾಯೇ ನಾಂದೇ ।೩೭೦॥ ದೇವಾ ತುಝ್ಯಾ ಯೇ ದರ್ಶನೀ । ಜೈ ವೈಕಲ್ಯ ಉಪಜಲೇ ಆಹೇ ಅಂತಃಕರಣೀ । ತೇ ಸಾಂವರಾವಯಾಲಾಗಿ ಗಂವಸಣೀ । ಧೈರ್ಯಾಚೀ ಕರಿತಸೇ ।೩೭೧॥ ತಂವ ಮಾಝೇನಿ ನಾಮೇ ಧೈರ್ಯ ಹರಪಲೇ । ಕೀ ತಯಾಹೀವರೀ ವಿಶ್ವರೂಪ ದರ್ಶನ ಜಾಹಲೇ । ಹೇ ಅಸೋ ಪರಿ ಮಜ ಭಲೇ ಅತುಡವಿಲೇ । ಉಪದೇಶಾ ಇಯಾ ।೩೭೨॥ ಜೀವ ವಿಸಂವಾವಯಾಚಿಯಾ ಚಾಡಾ । ಸೈಂಘ ಧಾಂವಾಂಧಾಂವೀ ಕರಿತಸೇ ಬಾಪುಡಾ । ಪರಿ ಸೋಯಹೀ ಕವಣೇಕಡಾ । ನ ಲಭೆ ಏಥ ।೩೭೩॥ ಐಸೇ ವಿಶ್ವರೂಪಾಚಿಯಾ ಮಹಾಮಾರೀ । ಜೀವಿತ್ವ ಗೇಲೇ ಆಹೇ ಚರಾಚರೀ । ಜೀ ನ ಬೋಲೇ ತರಿ ಕಾಯ ಕರೀ । ಕೈಸೇನಿ ರಾಹೇ? ।೩೭೪॥

ದಂಷ್ಟ್ರಾಕರಾಲಾನಿ ಚ ತೇ ಮುಖಾನಿ ದೃಷ್ಟ್ವೈವ ಕಾಲನಲಸನ್ನಿಭಾನಿ ।
ದಿಶೋ ನ ಜಾನೇ ನ ಲಭೇ ಚ ಶರ್ಮ ಪ್ರಸೀದ ದೇವೇಶ ಜಗನ್ನಿವಾಸ ।೨೫॥

ಪೈ ಅಖಂಡ ಡೋಳ್ಯಾಪುಢೇ । ಫುಟಲೇ ಜೈಸೇ ಮಹಾಭಯಾಚೇ ಭಾಂಡೇ । ತೈಸಿ ತುಝೀ ಮುಖೇ ವಿತಂಡೇ । ಪಸರಲೀ ದೇಖೇ ।೩೭೫॥

ಪ್ರಳಯಕಾಲದ ಮಿಂಚಿನ ಸಮುದಾಯಗಳನ್ನು, ಒಟ್ಟುಗೂಡಿಸಿ ಆಕಾಶದ ಕೋಟೆಗಳನ್ನು ಶೃಂಗರಿಸಿದಂತೆ ತುಟಿಗಳ ಎರಡೂ ಬದಿಯಲ್ಲಿ ಒಸಡೆಗಳ ಸಾಲುಗಳು ಪ್ರಖರವಾಗಿ ಕಾಣುವುವು ।೩೬೩॥

ಹಣೆಯ ಕೆಳಗಿನ ತೆಗ್ಗಿನಲ್ಲಿ ಭಯವನ್ನು ಬೆದರಿಸುವ ಕಣ್ಣುಗಳು ಕಾಣಿಸುತ್ತಿದ್ದು ಅವು ಮಹಾಮೃತ್ಯುವಿನ ಪ್ರವಾಹವು ಕತ್ತಲೆಯಲ್ಲಿ ಅಡಗಿ ಕುಳಿತಂತೆ ತೋರುವುವು ।೩೬೪॥

ಈ ಪ್ರಕಾರವಾಗಿ ಭಯದ ಕೌತುಕದಿಂದ ಇಲ್ಲಿ ನೀವು ಯಾವ ಪ್ರಾಪ್ತಿಗಾಗಿ ಹೀಗೆ ಮಾಡುತ್ತಿರುವಿರಿ ಎಂಬುದು ನನಗೆ ತಿಳಿಯದಾಗಿದೆ. ಆದರೆ ನನಗೆ ಮಾತ್ರ ಮರಣಭಯ ಹುಟ್ಟಿದೆ ।೩೬೫॥

ಹೇ ದೇವನೇ, ನನಗೆ ವಿಶ್ವರೂಪವನ್ನು ನೋಡಬೇಕೆಂಬ ಬಯಕೆಯು ಪೂರ್ಣವಾಗಿ ಫಲದ್ರೂಪವಾಯಿತು. ಇದನ್ನು ನೋಡಿ ಆಗಬೇಕಾಗುವಷ್ಟು ನೇತ್ರ ಶಾಂತಿಯಾಗಿದೆ ।೩೬೬॥

ದೇವಾ, ಈ ಕಾಯವು ಮಣ್ಣಿನದು. ಇದು ಇಲ್ಲದಾಗಲು ಇದರ ಪರಿವೆ ಯಾರು ಮಾಡಬೇಕು? ಆದರೆ ನನ್ನ ಚೈತನ್ಯವು ಕದಾಚಿತ್ ಇರುವುದೋ ಇಲ್ಲವೋ ಇದರ ಭರವಸೆಯೂ ಇಲ್ಲದಾಗಿದೆ ।೩೬೭॥

ಇದರಿಂದ ಭಯಗೊಂಡ ಶರೀರವು ಗಡಗಡನೇ ನಡಗುತ್ತಿದೆ. ಇದೇ ಭಯವು ಕ್ಷಣಕಾಲ ಬೇರೆ ರೀತಿಯಲ್ಲಿ ಬೆಳೆದರೆ ಮನಸ್ಸಿಗೆ ತಾಪವಾಗುವುದಲ್ಲದೇ ಬುದ್ಧಿಯೂ ಭಯಪಟ್ಟು ನಾನು ಎಂಬ ಅಭಿಮಾನವನ್ನು ಮರೆತುಬಿಟ್ಟಿದೆ ।೩೬೮॥

ಇಷ್ಟೇ ಅಲ್ಲ, ಇಂದ್ರಿಯಗಳಿಗೂ ಭಿನ್ನವಾಗಿರುವ ಆನಂದರೂಪ ನಿಶ್ಚಳವಾದ ಆತ್ಮನಿಗೂ ರೋಮಾಂಚನಗಳಾಗಿವೆ ।೩೬೯॥

ದೇವಾ, ವಿಶ್ವರೂಪ ಸಾಕ್ಷಾತ್ಕಾರಕ್ಕೆ ಏನು ಹೇಳಬೇಕು? ಇದರ ದರ್ಶನದಿಂದ ನನ್ನ ಜ್ಞಾನವೇ ದಿಕ್ಕೆಟ್ಟಿತು ಮತ್ತು ನಿಮ್ಮ ನಮ್ಮ ಗುರುಶಿಷ್ಯದ ಸಂಬಂಧವು ಸಂಕಟದಲ್ಲಿ ಬಿದ್ದಿದೆ ।೩೭೦॥

ದೇವಾ, ನಿಮ್ಮ ವಿಶ್ವರೂಪ ದರ್ಶನದಿಂದ ವ್ಯಾಕುಲಗೊಂಡ ನನ್ನ ಮನಸ್ಸನ್ನು ಆವರಿಸಿಕೊಳ್ಳಲು ನಾನು ಅದಕ್ಕೆ ಧೈರ್ಯವನ್ನು ಕೊಡುವ ಸಾಹಸ ಮಾಡುತ್ತಿರುವೆನು ।೩೭೧॥

ಆದರೆ ನನ್ನ ಹೆಸರಿನಿಂದ ಧೈರ್ಯವೇ ಕಳೆದಿದೆ ಮತ್ತು ಇಂತಹ ಸ್ಥಿತಿಯಲ್ಲಿ ನಿನ್ನ ವಿಶ್ವರೂಪ ದರ್ಶನವು ಆಗುತ್ತಲೇ ಇದೆ. ಇದಿರಲಿ, ದೇವನೇ, ನನಗೆ ಉಪದೇಶದ ಒಳ್ಳೆಯ ಪೇಚಿನಲ್ಲಿ ಸಿಲುಕಿಸಿರುವೆಯಲ್ಲಾ ?।೩೭೨॥

ನನ್ನ ದೀನವಾದ ಜೀವಾತ್ಮನು ವಿಶ್ರಾಂತಿಗಾಗಿ ನಾಲ್ಕು ಕಡೆಯಲ್ಲಿ ಧಾವಿಸುತ್ತಿರುವನು. ಆದರೆ ಆತನಿಗೆ ಎಲ್ಲಿಯೂ ಸ್ಥಾನ ಸಿಗಲಾರದಾಗಿದೆ ।೩೭೩॥

ಇದರಂತೆ ನಿಮ್ಮ ಈ ವಿಶ್ವರೂಪ ಮಹಾಮಾರಿಯ ದರ್ಶನದಿಂದ ಸೃಷ್ಟಿಯ ಸ್ಥಾವರ ಜಂಗಮಾದಿ ಎಲ್ಲ ಜೀವತ್ವ ಇಲ್ಲದಂತಾಗಿದೆ. ಜೀಯಾ, ಇದನ್ನು ಹೇಳದೇ ಏನು ಮಾಡಬೇಕು? ನಾವು ಹೇಗೆ ಬದುಕಬೇಕು ?।೩೭೪॥

ಶ್ಲೋಕಾರ್ಥ :- ಭಯಂಕರವಾದ ಕೋರೆಗಳನ್ನು ಕಾಲಾಗ್ನಿಗೆ ಸಮಾನವಾದ ನಿನ್ನ ಮುಖಗಳನ್ನು ನೋಡಿ ದಿಗ್ಭ್ರಮೆಯುಂಟಾಗುತ್ತಿದೆ. ಸ್ಥಿಮಿತವು ದೊರಕಲೊಲ್ಲದು. ಹೇ ದೇವದೇವಾ! ಹೇ ಜಗನ್ನಿವಾಸ! ಶಾಂತನಾಗು ।೨೫॥

ಮಹಾಭಯದ ಭಾಂಡೆಗಳು ಒಡೆದಂತೆ, ನಿನ್ನ ತೆರೆದ ಅಕ್ರಾಳ ವಿಕ್ರಾಳ ಮುಖಗಳು ನನ್ನ ಕಣ್ಮುಂದೆ ಅಖಂಡವಾಗಿ ಕಾಣುತ್ತಿವೆ ।೩೭೫॥

ಅಸೋ ದಾಂತ ದಾಢಾಂಚೇ ದಾಟೀ । ನ ಝಾಂಕವೇ ಮಾ ದೋದೋ ವೋಠೀ । ಸೈಂಘ ಪ್ರಳಯಶಸ್ತ್ರಾಂಚಿಯಾ ದಾಟ ಕಾಂಟೀ । ಲಾಗಲಿಯಾ ಜೈಸಾ ।೩೭೬॥ ಜೈಸೇ ತಕ್ಷಕಾ ವಿಷ ಭರಲೇ । ಹೋ ಕಾ ಜೇ ಕಾಳರಾತ್ರೀ ಭೂತ ಸಂಚರಲೇ । ಕೀ ಅಗ್ನೇಯಾಸ್ತ್ರ ಪರಜಿಲೇ । ವಜ್ರಾಗ್ನಿ ಜೈಸೇ ।೩೭೭॥ ತೈಶೀ ತುಝೀ ವಕ್ತ್ರೇ ಪ್ರಚಂಡೇ । ವರಿ ಆವೇಶ ಹಾ ಬಾಹೇರಿ ವೋಸಂಡೇ । ಆಲೇ ಮರಣರಸಾಚೇ ಲೊಂಡೇ । ಆಮ್ಹಾ ವರೀ ।೩೭೮॥ ಸಂಹಾರಸ ಮಯಿೀಚಾ ಚಂಡಾನಿಳು । ಆಣಿ ಮಹಾಕಲ್ಪಾಂತ ಪ್ರಳಯಾನಳು । ಯಾ ದೋಹೀ ಜೈ ಹೋಯ ಮೇಳು । ತೈ ಕಾಯ ಏಕ ನ ಜಳೇ? ।೩೭೯॥ ತೈಸೀ ಸಂಹಾರಕೇ ತುಝೀ ಮುಖೇ । ದೇಖೋನಿ ಧೀರು ಕಾ ಆಮ್ಹಾ ಪಾರುಖೇ? । ಆತಾ ಭುಲಲೋ ಮೀ ದಿಶಾ ನ ದೇಖೇ । ಆಪಣಪೇ ನೇಣೇ ।೩೮೦॥ ಮೋಟಕೇ ವಿಶ್ವರೂಪ ಡೋಳಾ ದೇಖಿಲೇ । ಆಣಿ ಸುಖಾಚೇ ಅವರ್ಷಣ ಪಡಿಲೇ । ಆತಾ ಜಾಪಾಣೇ ಜಾಪಾಣೇ ಆಪುಲೇ । ಅಸ್ತಾವ್ಯಸ್ತ ಹೇ ।೩೮೧॥ ಐಸೇ ಕರೀಸಿ ಮ್ಹಣೌನಿ ಜರೀ ಜಾಣೇ । ತರೀ ಹೇ ಗೋಷ್ಟೀ ಸಾಂಗಾವೀ ಕಾ ಮೀ ಮ್ಹಣೇ । ಆತಾ ಏಕ ವೇಳ ವಾಂಚವೀ ಜೇ ಪ್ರಾಣೇ । ಯಾ ಸ್ವರೂಪಪ್ರಳಯಾ ಪಾಸೋನಿ ।೩೮೨॥ ಜರೀ ತೂ ಗೋಸಾವೀ ಆಮುಚಾ ಅನಂತಾ । ತರೀ ಸುಈ ವೋಡಣಾ ಮಾಝಿಯಾ ಜೀವಿತಾ । ಸಾಂಟವೀ ಪಸಾರಾ ಹಾ ಮಾಗುತಾ । ಮಹಾಮಾರೀಚಾ ।೩೮೩॥ ಆಇಕೇ ಸಕಳ ದೇವಾಂಚಿಯಾ ಪರದೇವತೇ । ತುವಾ ಚೈತನ್ಯೇ ಗಾ ವಿಶ್ವ ವಸತೇ । ತೇ ವಿಸರಲಾಸಿ ಹೇ ಉಪರತೇ । ಸಂಹಾರೂ ಆದರಿಲೇ ।೩೮೪॥ ಮ್ಹಣೌನಿ ವೇಗೀ ಪ್ರಸನ್ನ ಹೋಈ ದೇವರಾಯಾ । ಸಂಹರೀ ಸಂಹರೀ ಆಪುಲೀ ಮಾಯಾ । ಕಾಢೀ ಮಾತೇ ಮಹಾ ಬಯಾ । ಪಾಸೋನಿಯಾ ।೩೮೫॥ ಹಾ ಠಾಯವರೀ ಪುಢತಪುಢತೀ । ತೂಂತೇ ಮ್ಹಣೇಜೇ ಬಹುವಾ ಕಾಕುಳತೀ । ಐಸಾ ಮೀ ವಿಶ್ವಮೂರ್ತೀ । ಭೇಡಕಾ ಜಾಹಲೋ ।೩೮೬॥ ಜೈ ಅಮರಾವತಿಯೇ ಆಲಾ ಧಾಡಾ । ತೈ ಮ್ಯಾ ಏಕಲೇನಿ ಕೇಲಾ ಉವೇಡಾ । ಜೋ ಮೀ ಕಾಳಾಚಿಯಾಹೀ ತೋಂಡಾ । ವಾಸಿಪು ನ ಧರೀ ।೩೮೭॥ ಪರಿ ತಯಾ ಆಂತುಲ ನವ್ಹೇ ಹೇ ದೇವಾ । ಏಥ ಮೃತ್ಯೂಸಹೀ ಕರೂನಿ ಚಢಾವಾ । ತುವಾ ಆಮುಚಾಚೀ ಘೋಟು ಭರಾವಾ । ಯಾ ಸಕಳ ವಿಶ್ವೇಸೀ ।೩೮೮॥ ಕೈಸಾ ನವ್ಹತಾ ಪ್ರಳಯಾಚಾ ವೇಳು । ಗೋಖಾ ತೂಂಚಿ ಮಿನಲಾಸಿ ಕಾಳು । ಬಾಪುಡಾ ಹಾ ತ್ರಿಭುವನ ಗೋಳು । ಅಲ್ಪಾಯು ಜಾಹಲಾ ।೩೮೯॥

ಪ್ರಳಯಕಾಲದಲ್ಲಿ ಶಸ್ತ್ರಗಳ ಬೇಲಿಯನ್ನು ಉದ್ದವಾಗಿ ಹಚ್ಚಿದಂತೆ ಹಲ್ಲು ದವಡೆಗಳ ಬಲು ಗದ್ದಲವಾಗಿದೆ ಮತ್ತು ಎರಡೂ ತುಟಿಗಳು ಮುಚ್ಚುತ್ತಿಲ್ಲ ।೩೭೬॥

ತಕ್ಷಕನ ಮುಖದಲ್ಲಿ ವಿಷ ತುಂಬಿದಂತೆ, ಇಲ್ಲವೇ ಕಾಳರಾತ್ರಿಯಲ್ಲಿ ಪಿಶಾಚಿಗಳ ಸಂಚಾರವಾದಂತೆ, ವಜ್ರಾಗ್ನಿಯು ಅಗ್ನೇಯಾಸ್ತ್ರವನ್ನು ತೀಕ್ಷ್ಣಗೊಳಿಸಿದಂತೆ ।೩೭೭॥

ಹೀಗೆ ನಿನ್ನ ಮುಖಗಳು ಪ್ರಚಂಡವಾಗಿದ್ದು, ಆ ಮುಖಗಳ ಕ್ರೋಧದ ಆವೇಶವು ಹೊರಚೆಲ್ಲುತ್ತಿದೆ. ಇದರಿಂದ ನಮ್ಮ ಮೇಲೆ ಮರಣದ ಪ್ರವಾಹವೇ ಹರಿದು ಬಂದಂತಾಗಿದೆ ।೩೭೮॥

ಸೃಷ್ಟಿ ಸಂಹಾರ ವೇಳೆಯ ಪ್ರಚಂಡವಾಯುವು ಮತ್ತು ಪ್ರಳಯಕಾಲದ ಅಗ್ನಿಯು ಇವರಿಬ್ಬರ ಮೇಳವು ಕೂಡಿದರೆ ಯಾವುದೊಂದು ಸುಡುವುದಿಲ್ಲ ? ।೩೭೯॥

ಇದರಂತೆ ನಿನ್ನ ಸಂಹಾರಕಾರಕ ಮುಖಗಳನ್ನು ನೋಡಿ ನನ್ನ ಧೈರ್ಯವು ನಷ್ಟಗೊಂಡಿದೆ. ನನಗೆ ದಿಕ್ಕು ತೋಚದಾಗಿದೆ. ನನ್ನನ್ನು ನಾನೇ ತಿಳಿಯದಾಗಿದೆ ।೩೮೦॥

ತುಸು ಹೊತ್ತು ಕಣ್ಣಿನಿಂದ ವಿಶ್ವರೂಪ ನೋಡಿದೆನು ಮತ್ತು ಇಷ್ಟರಿಂದಲೇ ನಮ್ಮ ಮೇಲೆ ಸುಖದ ಬರಬಿದ್ದಿತು. ಕಾರಣ ನೀನೀಗ ನಿನ್ನ ಅಚಾಟ ವಿಶ್ವರೂಪವನ್ನು ಆವರಿಸು, ಆವರಿಸು ।೩೮೧॥

ನೀವು ಈ ರೀತಿ ಮಾಡುವುದು ನನಗೆ ಮೊದಲೇ ತಿಳಿದಿದ್ದರೆ ನಿಮಗೆ ''ವಿಶ್ವರೂಪ ತೋರಿಸಿರಿ'' ಎಂದು ಏಕೆ ಹೇಳುತ್ತಿದ್ದೆ? ಇರಲಿ, ಈಗ ನಿಮ್ಮ ವಿಶ್ವರೂಪ ಪ್ರಳಯಾಗ್ನಿಯಿಂದ ಒಂದು ಸಾರೆ ನನ್ನ ಪ್ರಾಣವನ್ನು ಉಳಿಸಿರಿ ।೩೮೨॥

ಹೇ ಅನಂತಾ, ನೀನು ನಿಜವಾಗಿಯೂ ನಮ್ಮ ಮಾಲಕನಿರುವಿ. ಅದಕ್ಕಾಗಿ ನನ್ನ ಜೀವಿತ್ವಕ್ಕಾಗಿ ನಿನ್ನ ಕೃಪೆಯ ಢಾಲು ಹಿಡಿ, ಈ ಮಹಾಮಾರಿಯ ಎಲ್ಲವನ್ನು ನಿನ್ನ ಮೊದಲಿನ ರೂಪದಲ್ಲಿ ಹುದುಗಿಸು ।೩೮೩॥

ಹೇ ದೇವಾಧಿದೇವನೇ, ಈ ಸರ್ವ ಜಗತ್ತಿನ ಪಾಲನೆ ಮಾಡುವುದನ್ನು ಮರೆತು, ಪ್ರತಿಯಾಗಿ ಸಂಹಾರ ಮಾಡುವುದಕ್ಕೆ ಸಿದ್ಧನಾಗಿರುವೆ ।೩೮೪॥

ಆದ್ದರಿಂದ ಹೇ ದೇವರಾಯನೇ, ಬೇಗನೇ ಪ್ರಸನ್ನರಾಗಿ ನಿಮ್ಮ ಮಾಯೆಯನ್ನು ಆವರಿಸಿರಿ ಆವರಿಸಿರಿ ಮತ್ತು ನನಗೆ ಈ ಮಹಾಭಯದಿಂದ ಬಿಡಿಸಿರಿ ।೩೮೫॥

ಇಲ್ಲಿಯವರೆಗೆ ಅತ್ಯಂತ ಕಳಕಳಿಯಿಂದ ನಿಮ್ಮನ್ನು ಮೇಲಿಂದ ಮೇಲೆ ವಿನಂತಿಸಿಕೊಳ್ಳುತ್ತಿರುವೆನು. ಕಾರಣವೇನೆಂದರೆ, ವಿಶ್ವರೂಪವನ್ನು ಕಂಡು ನಾನಿಷ್ಟು ಅಂಜುಬುರುಕನಾಗಿರುವೆನು ।೩೮೬॥

ಅಮರಾವತಿಯ ಮೇಲೆ ರಾಕ್ಷಸರ ದಾಳಿ ಎದ್ದಾಗ ನಾನೊಬ್ಬನೇ ಅವರ ಪರಾಭವಮಾಡಿದೆ. ನಾನು ಕಾಳನ ಮುಖದಲ್ಲಿಯೂ ಹೋಗಲು ಹೆದರುವುದಿಲ್ಲ ।೩೮೭॥

ಆದಾಗ್ಯೂ ದೇವಾ, ಈ ವಿಶ್ವರೂಪವು ಇದರಂತೆ ಅಲ್ಲ, ಇಲ್ಲಿ ನೀನು ಮೃತ್ಯುವಿನ ಮೇಲೆಯೂ ಏರಿಹೋಗಿ ಈ ಎಲ್ಲ ವಿಶ್ವದೊಡನೆ ನಮ್ಮ ಗ್ರಾಸಮಾಡುವ ಅತಿ ಭಯಾನಕ ಪ್ರಸಂಗವಿದೆ ।೩೮೮॥

ಆದರೆ ಇದು ಹೇಗಾಯಿತೆಂಬುದು ತಿಳಿಯದಾಗಿದೆ. ಕಾರಣ ಈಗ ಪ್ರಳಯಕಾಲವಲ್ಲ, ನಡುವೆಯೇ ನೀನೇ ಒಬ್ಬ ಕಾಳನು ಸಿಕ್ಕಿರುವೆ. ಇದರಿಂದ ದೀನಗೊಂಡ ತ್ರಿಭುವನ ಗೋಲಗಳು ಅಲ್ಪಾಯುಷಿಗಳಾಗಿವೆ ।೩೮೯॥

ಅಹಾ ಭಾಗ್ಯಾ ವಿಪರೀತಾ । ವಿಘ್ನ ಉರಿಲೇ ಶಾಂತ ಕರಿತಾ । ಕಟಕಟಾ ವಿಶ್ವಗೇಲೇ ಆತಾ । ತೂ ಲಾಗಲಾಸಿ ಗ್ರಾಸೂ ।೯೦॥ ಹೇ ನವ್ಹೇ ಮಾ ರೋಕಡೇ । ಸೈಂಘ ಪಸರೂನಿಯಾ ತೋಂಡೇ । ಕವಳಿತಾಸಿ ಚಹೂಕಡೇ । ಸೈನ್ಯ ಇಯೇ ।೯೧॥

ಆಮಿ ಚ ತ್ವಾ ಧೃತರಾಷ್ಟ್ರಸ್ಯ ಪುತ್ರಾಃ ಸರ್ವೇ ಸಹೈವಾವನಿಪಾಲಸಂಘೈಃ ।
ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾऽಸೌ ಸಹಾಸ್ಮದೀಯೈರಪಿ ಯೋಧಮುಖ್ಯೈಃ ।೨೬॥

ನೋಹೇತಿ? ಹೇ ಕೌರವಕುಳೀಂಚೇ ವೀರ । ಆಂಧಳಿಯಾ ಧೃತರಾಷ್ಟ್ರಾಚೇ ಕುಮರ । ಹೇ ಗೇಲೇ ಸಹಪರಿವಾರ । ತುಝಿಯಾ ವದನೀ ।೯೨॥ ಆಣಿ ಜೇ ಜೇ ಯಾಂಚೇನಿ ಸಾವಾಯೇ । ಆಲೇ ದೇಶೋದೇಶೀಂಚೇ ರಾಯೇ । ತಯಾಂಚೇ ಸಾಂಗಾವಯಾ ಜಾವೋ ನ ಲಾಹೇ । ಐಸೇ ಸರಕಟಿತ ಆಹಾಸೀ ।೯೩॥ ಮದ ಮುಖಾಚಿಯಾ ಸಂಘಟಾ । ಘೇತ ಆಹಾಸಿ ಘುಟಘುಟಾ । ಆರಣೆ ಹನ ಥಾಟಾ । ದೇತಾಸೀ ಮಿಠೀ ।೯೪॥ ಜಂತ್ರಾವರಿಚೀಲ ಮಾರ । ಪದಾತೀಂಚೇ ಮೋಗರ । ಮುಖಾಆಂತ ಭಾರ । ಹಾರಪತಾತೀ ಮಾ ।೯೫॥ ಕೃತಾಂತಾಚಿಯಾ ಜಾವಳೀ । ಜೇ ಏಕಚೀ ವಿಶ್ವಾತೇ ಗಿಳೀ । ತಿಯೇ ಕೋಟೀವರೀ ಸಗಳೀ । ಗಿಳಿತಾಸಿ ಶಸ್ತ್ರೇ ।೯೬॥ ಚತುರಂಗಾ ಪರಿವಾರಾ । ಸಂಜೋಡಿಯಾ ರಹವರಾ । ದಾಂತ ನ ಲಾವಿಸೀ ಮಾ ಪರಮೇಶ್ವರಾ । ಕೈಸಾ ತುಷ್ಟಲಾಸಿ ಬರವಾ ।೯೭॥ ಹಾ ಗಾ ಭೀಷ್ಮಾ ಐಸಾ ಕವಣು । ಸತ್ಯಶೌರ್ಯನಿಪುಣು । ತೋಹೀ ಆಣಿ ಬ್ರಾಹ್ಮಣ ದ್ರೋಣು । ಗ್ರಾಸಿ ಲಾಸಿ ಕಟಕಟಾ ।೯೮॥ ಅಹಾ ಸಹಸ್ರಕರಾಚಾ ಕುಮರು । ಏಥ ಗೇಲಾ ಗೇಲಾ ಕರ್ಣವೀರು । ಆಣಿ ಆಮುಚಿಯಾ ಆಘವಯಾಂಚಾ ಕೇರು । ಫೇಡಿಲಾ ದೇಖೇ ।೯೯॥ ಕಟಕಟಾ ಧಾತಯಾ । ಕೈಸೇ ಜಾಹಲೇ ಅನುಗ್ರಹಾ ಯಯಾ । ಮಿಯಾ ಪ್ರಾರ್ಥೂನಿ ಜಗಾ ಬಾಪುಡಿಯಾ । ಆಣಿಲೇ ಮರಣ ।೪೦೦॥ ಮಾಗಾ ಥೋಡಿಯಾ ಬಹುವಾ ಉಪಪತ್ತೀ । ಯೇಣೇ ಸಾಂಗಿತಲೀಯಾ ವಿಭೂತೀ । ತೈಸಾ ನಸೇಚಿ ಮಾ ಪುಢತೀ । ಬೈಸಲೋ ಪುಸೋ ।೪೦೧॥ ಮ್ಹಣೌನಿ ಭೋಗ್ಯ ತೇ ತ್ರಿಶುದ್ಧಿ ನ ಚುಕೇ । ಆಣಿ ಬುದ್ಧೀಹೀ ಹೋಣಾರಾಸಾರಿಖೀ ಠಾಕೇ । ಮಾಝ್ಯಾ ಕಪಾಳೀ ಪಿಟಾವೇ ಲೋಕೇ । ತೇ ಲೋಟೇಲ ಕಾಂಹ್ಯಾ ।೪೦೨॥ ಪೂರ್ವೀ ಅಮೃತಹೀ ಹಾತಾ ಆಲೇ । ಪರೀ ದೇವ ನಸತೀಚಿ ಉಗಲೇ । ಮಗ ಕಾಳಕೂಟ ಉಠವಿಲೇ । ಶೇವಟೀ ಜೈಸೇ ।೪೦೩॥

ಆಹಾ ದೈವವೇ! ನಿನ್ನ ಗತಿಯು ಎಷ್ಟು ವಿಪರೀತ ವಾಗಿದೆ? ಶಾಂತಿಗಾಗಿ ವಿಶ್ವರೂಪ ಬೇಡಿದೆ, ಪ್ರತಿಯಾಗಿ ವಿಘ್ನವೇ ದೊರೆಯಿತು. ಅರೇರೆ! ದೇವಾ, ಈಗ ವಿಶ್ವ ಹೋಯಿತು! ನೀನೇ ಅದನ್ನು ಗ್ರಾಸ ಮಾಡುತ್ತಿರುವೆ ।೫೯೦॥

ನೀನು ಅನೇಕ ಮುಖಗಳನ್ನು ತೆರೆದು ಈ ಎಲ್ಲ ಸೈನ್ಯವನ್ನು ನಾಲ್ಕು ಕಡೆಯಿಂದಲೂ ಭಕ್ಷಿಸುತ್ತಿರುವೆ. ಇದು ನನ್ನ ಪ್ರತ್ಯಕ್ಷವಾಗಿ ಕಣ್ಣಿಗೆ ಬೀಳುವುದಿಲ್ಲವೇ? ।೫೯೧॥

ಶ್ಲೋಕಾರ್ಥ :- ಭೀಷ್ಮ ದ್ರೋಣ ಕರ್ಣಾದಿ ರಾಜ ರುಗಳಿಂದ ಕೂಡಿದ ದುರ್ಯೋಧನಾದಿ ಕೌರವರೂ, ನಮ್ಮ ಸೈನ್ಯದಲ್ಲಿಯ ವೀರರೂ ಎಲ್ಲರೂ ಸೇರಿ? ।೨೬॥

ಈ ನಿನ್ನ ಮುಖದಲ್ಲಿ ಹೋದವರು ಕೌರವ ಕುಲದ ವೀರರಲ್ಲವೇ? ಇವರೆಲ್ಲರೂ ಕುರುಡ ಧೃತರಾಷ್ಟ್ರನ ಮಕ್ಕಳು. ದೇವಾ, ನಿನ್ನ ಮುಖದಲ್ಲಿ ಇವರೆಲ್ಲರೂ ಸಹಪರಿವಾರದೊಂದಿಗೆ ಹೋಗಿಯೇ ಬಿಟ್ಟರು ।೫೯೨॥

ಇವರನ್ನು ಸಹಾಯ ಮಾಡಲು ಬಂದ ಅನೇಕ ದೇಶಗಳ ರಾಜರನ್ನು ಅವರ ಮರಣ ವಾರ್ತೆಯನ್ನು ಮುಟ್ಟಿಸುವವರೂ ಇಲ್ಲದಾಗಿದೆ. ಹೀಗೆ ಸಾರಾಸಗಟವಾಗಿ ಗ್ರಾಸಮಾಡುತ್ತಿರುವೆ ।೫೯೩॥

ಈ ರಣರಂಗದಲ್ಲಿ ಬಹು ಶೃಂಗಾರದ ಆನೆಗಳ ಸಮೂಹವನ್ನು ಘಟಘಟಾ ಎಂದು ನುಂಗುತ್ತಿರುವೆ ।೫೯೪॥

ರಣಬಂಡಿಯ ಮೇಲಿಂದ ಹೊಡೆಯುವ ತೋಪು ಗಳಿಂದ ಕಾದುವವರು, ಕಾಲ್ದಳಗಳ ಸಮುದಾಯವೆಲ್ಲವೂ ಗುಂಪುಗುಂಪಾಗಿ ನಿನ್ನ ಮುಖದಲ್ಲಿ ಇಲ್ಲದಾಗುವರು ।೫೯೫॥

ಯಾವ ಅಸ್ತ್ರಗಳು ಯಮನ ಅಣ್ಣನಾಗಿರುವುವೋ ಮತ್ತು ಒಂದೇ ಒಂದು ವಿಶ್ವದ ನಾಶಮಾಡಬಲ್ಲದೋ ಅಂತಹ ಕೋಟಿಗಿಂತಲೂ ಅಧಿಕ ಅಸ್ತ್ರಗಳನ್ನು ಎಲ್ಲವನ್ನು ನುಂಗುತ್ತಿರುವೆ ।೫೯೬॥

ಚತುರಂಗ ಸೈನ್ಯ ಹಾಗೂ ಕುದುರೆ ಕಟ್ಟಿದ ರಥಗಳು ಇವೆಲ್ಲವನ್ನು ಹಲ್ಲು ಹಚ್ಚದೇ ನುಂಗುತ್ತಿರುವೆ. ದೇವನೇ, ಇದರಿಂದ ನಿಮಗೆ ಹೇಗೆ ಸಂತುಷ್ಟವಾಗುವುದು? ।೫೯೭॥

ಅರೇ, ಭೀಷ್ಮನಂತಹ ಸತ್ಯ ಶೌರ್ಯದಲ್ಲಿ ಬೇರೆ ಯಾರಿದ್ದಾರೆ? ಆದರೆ, ಆತನಿಗೂ ಅಯ್ಯೋ!! ಈಗ ಗುರುಬ್ರಾಹ್ಮಣ ದ್ರೋಣಾಚಾರ್ಯರಿಗೂ ನುಂಗಿ ಬಿಟ್ಟಿಯಲ್ಲಾ ।೫೯೮॥

ಅರೇರೇ, ಸೂರ್ಯಪುತ್ರನಾದ ಮಹಾವೀರ ಕರ್ಣನೂ ಹೋಗಿಯೇ ಬಿಟ್ಟನು. ಈ ನಮ್ಮ ಯೋದ್ಧರ ಪಾಳಿ ಬಂದು ಅದರ ಕಸಹುಡುಗಿದಂತೆ ಕಾಣುತ್ತಿದೆ ।೫೯೯॥

ಅಯ್ಯೋ ಬ್ರಹ್ಮದೇವನೇ, ಭಗವಂತನ ಈ ಅನುಗ್ರಹ ದಿಂದ ಹೇಗೆ ವಿಪರೀತವಾಗಿದೆ ನೋಡು. ನಾನು ವಿಶ್ವರೂಪದ ದರ್ಶನಕ್ಕಾಗಿ ಪ್ರಾರ್ಥಿಸಿ ಈ ದೀನ ಜಗತ್ತಿಗೆ ಮರಣ ತಂದಿರುವೆ ।೬೦೦॥

ಈ ಹಿಂದೆ, ಶ್ರೀಕೃಷ್ಣನು ಸ್ವಲ್ಪಮಟ್ಟಿಗೆ ತನ್ನ ವಿಭೂತಿ ಗಳನ್ನು ತಿಳಿಸಿದ್ದನು. ಅದು ವ್ಯಾಪಕದಿಂದ ಕೂಡಿದ್ದಕ್ಕೆ ವಿಪರೀತ ಭಾವನೆಯಿಂದ ವಿಶ್ವರೂಪ ತೋರಿಸಲು ಕೇಳಿ ಕೊಂಡೆನು ।೬೦೧॥

ಆದ್ದರಿಂದ ದೈವದಲ್ಲಿ ಇದ್ದದ್ದು ಕಾಲತ್ರಯಕ್ಕೂ ತಪ್ಪುವುದಿಲ್ಲ ಮತ್ತು ಬುದ್ಧಿಯೂ ಹಾಗೆಯೇ ಆಗುವುದು. ಜನರು ತಮ್ಮ ಮರಣವನ್ನು ನನ್ನ ಹಣೆಬರಹಕ್ಕೆ (ತಲೆಗೆ) ಕಟ್ಟುವುದು ಹೇಗೆ ತಪ್ಪುವುದು? ।೬೦೨॥

ಪೂರ್ವದಲ್ಲಿ ಸಮುದ್ರ ಮಂಥನ ಕಾಲಕ್ಕೆ ಅಮೃತ ಸಿಕ್ಕರೂ ದೇವತೆಗಳು ತೃಪ್ತರಾಗದೇ ಅಧಿಕ ಇಚ್ಛೆ ಮಾಡಿದರು. ಆದರೆ ಕೊನೆಯಲ್ಲಿ ಅವರಿಗೆ ಕಾಳಕೂಟ ವಿಷ ಬಂದಿತು! ।೬೦೩॥

ಪರೀ ತೇ ಏಕಬಗೀ ಥೋಡೇ । ಕೇಲಿಯಾ ಪ್ರತಿಕಾರಾಮಾಜಿವಡೇ । ಆಣಿ ತಿಯೇ ಅವಸರೀಚೇ ತೇ ಸಾಂಕಡೇ । ನಿಸ್ತರವಿಲೇ ಶಂಭು ।।೪೦೪।। ಆತಾ ಹಾ ಜಳತಾ ವಾರಾ ಕೇ ವೇಂಟಾಳೇ? । ಕೋಣಾಹೇ ವಿಷಾ ಭರಲೇ ಗಗನ ಗಿಳೇ?। ಮಹಾಕಾಳೇಸಿ ಕೇ ಖೇಳೇ? । ಆಂಗವತ ಅಸೇ ।।೪೦೫।। ಐಸಾ ಅರ್ಜುನ ದುಃಖೇ ಶಿಣತು । ಶೋಚಿತ ಅಸೇ ಜೀವಾಆಂತು । ಪರೀ ನ ದೇಖೇ ತೋ ಪ್ರಸ್ತುತು । ಅಭಿಪ್ರಾಯ ದೇವಾಚಾ ।।೪೦೬।। ಜೇ ಮೀ ಮಾರಿತಾ ಹೇ ಕೌರವ ಮರತೇ । ಐಸೇನಿ ವೇಂಟಾಳಿಲಾ ಹೋತಾ ಮೋಹೇ ಬಹುತೇ । ತೋ ಫೇಡಾವಯಾಲಾಗೀ ಅನಂತೇ । ಹೇ ದಾಖವಿಲೇ ನಿಜ ।।೪೦೭।। ಅರೇ ಕೋಣ್ಹೀ ಕೋಣಾತೇ ನ ಮಾರೀ । ಏಥ ಮೀಚಿ ಹೋ ಸರ್ವ ಸಂಹಾರೀ । ಹೇ ವಿಶ್ವರೂಪವ್ಯಾಜೇ ಹರೀ । ಪ್ರಗಟಿತ ಅಸೇ ।।೪೦೮।। ಪರೀ ವಾಯಾಂಚಿ ವ್ಯಾಕುಲತಾ । ತೇ ನ ಚೋಜವೇಚಿ ಪಂಡುಸುತಾ । ಮಗ ಅಹಾ ಕಂಪು ನವ್ಹತಾ । ವಾಢವಿತ ಅಸೇ ।।೪೦೯।।

*ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ ದಂಷ್ಟ್ರಾಕರಾಲಾನಿ ಭಯಾನಕಾನಿ ।*
*ಕೇಚಿದ್ವಿಲಗ್ನಾ ದಶನಾಂತರೇಷು ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ ।।೨೭।।*

ತೇಥ ಮ್ಹಣೇ ಪಾಹಾ ಹೋ ಏಕೆ ವೇಳೇ । ಸಾಸಿಕವಚೇಂಸಿ ದೋನ್ಹೀ ದಳೇ । ವದನೀ ಗೇಲೀ ಆಭಾಳೇ । ಗಗನೀ ಕಾ ಜೈಸೀ ।।೪೧೦।। ಕಾ ಮಹಾಕಲ್ಪಾಚಿಯಾ ಶೇವಟೀ । ಜೈ ಕೃತಾಂತು ಕೋಪಲಾ ಹೋಯ ಸೃಷ್ಟೀ । ತೈ ಏಕವಿಸಾ ಹೀ ಸ್ವರ್ಗಾ ಮಿಠೀ । ಪಾತಾಳಾ ಸಕಟ ದೇ ।।೪೧೧।। ನಾತರೀ ಉದಾಸೀನೇ ದೈವೇ । ಸಂಚಕಾಚೇ ವೈಭವೇ । ಜೇಥೀಂಚೇ ತೇಥ ಸ್ವಭಾವೇ । ವಿಲಯಾ ಜಾತೀ ।।೪೧೨।। ತೈಸೀ ಸಾಸಿನ್ನಲೀ ಸೈನ್ಯೇ ಏಕವಟೇ । ಇಯೇ ಮುಖೀ ಜಾಹಲೀ ಪ್ರವಿಷ್ಟೇ । ಪರೀ ಏಕಹೀ ತೋಂಡೌನಿ ನ ಸುಟೇ । ಕೈಸೇ ಕರ್ಮ ದೇಖಾ ।।೪೧೩।। ಅಶೋಕಾಚೇ ಅಂಗವಸೇ । ಚಘುಳಿಲೇ ಕರ್ಹೇನಿ ಜೈಸೇ । ಲೋಕ ವಕ್ತ್ರಾಮಾಜೀ ತೈಸೇ । ವಾಯಾಗೇಲೇ ।।೪೧೪।। ಪರಿ ಸಿಸಾಳೇ ಮುಕುಟೇಸೀ । ಪಡಿಲೀ ದಾಢಾಂಚೇ ಸಾಂಡಸೀ । ಪೀಠ ಹೋತ ಕೈಸೀ । ದಿಸತ ಆಹಾತೀ ।।೪೧೫।। ತಿಯೇ ರತ್ನೇ ದಾಂತಾಚಿಯೇ ಸವಡೀ । ಕೂಟ ಲಾಗಲೇ ಜಿಭೇಚ್ಯಾ ಬುಡೀ । ಕಾಂಹೀ ಕಾಂಹೀ ಆಗರಡೀ । ದಷ್ಟ್ರಾಂಚೇ ಮಾಖಲೀ ।।೪೧೬।।

ಆದಾಗ್ಯೂ, ಇದು ಸಹ ಕಡಿಮೆಯೇ. ಇದನ್ನು ನಿವಾರಿಸಲು ಬರುವ ಹಾಗೆ ಇತ್ತು. ಆ ವೇಳೆಯಲ್ಲಿ ಆ ಸಂಕಟವನ್ನು ಶ್ರೀಶಂಕರನು ದೂರಮಾಡಿದನು ।೫೦೪॥

ಆದರೆ ಈಗ ಈ ವಿಶ್ವರೂಪದ ಉರಿಯುವ ಗಾಳಿಯನ್ನು ಯಾರು ಹಿಡಿಯಬೇಕು? ವಿಷದಿಂದ ತುಂಬಿದ ಆಕಾಶವನ್ನು ಯಾರು ನುಂಗಬೇಕು? ಮಹಾಕಾಳನ ಜೊತೆಯಲ್ಲಿ ಯಾರು ಹೋರಾಡಬೇಕು? ಇವೆಲ್ಲ ಆಗಬಹುದೇ? ।೫೦೫॥

ಈ ಪ್ರಕಾರವಾಗಿ ಅರ್ಜುನನು ದುಃಖದಿಂದ ವ್ಯಾಕುಲಗೊಂಡನು. ಅಂತಃಕರಣದಲ್ಲಿ ಶೋಕ ಮಾಡಹತ್ತಿದನು. ವಿಶ್ವರೂಪ ತೋರಿಸುವ ದೇವರ ಉದ್ದೇಶವೇನೆಂಬುದು ಆತನಿಗೆ ತಿಳಿಯಲಿಲ್ಲ ।೫೦೬॥

ನಾನು ಕೊಲ್ಲುವವನು, ಈ ಕೌರವರು ಸಾಯುವವರು ಎಂಬ ಮೋಹದಿಂದ ಅರ್ಜುನನು ವ್ಯಾಪಿಸಿಕೊಂಡದ್ದಕ್ಕೆ ಆ ಮೋಹವನ್ನು ನಷ್ಟಗೊಳಿಸಲು ಶ್ರೀಕೃಷ್ಣನು ತನ್ನ ವಿಶ್ವರೂಪವನ್ನು ತೋರಿಸಿದನು ।೫೦೭॥

ಅರೇ, ಯಾರು ಯಾರಿಗೂ ಕೊಲ್ಲುವುದಿಲ್ಲ. ಈ ಜಗತ್ತಿನಲ್ಲಿ ನಾನೊಬ್ಬನೇ ಎಲ್ಲರ ಸಂಹಾರ ಮಾಡುವವನು ಎಂದು ಈ ವಿಶ್ವರೂಪದಿಂದ ವ್ಯಕ್ತಮಾಡಿದನು ।೫೦೮॥

ಆದರೆ, ಅರ್ಜುನನು ಇದನ್ನು ತಿಳಿಯಲಾರದೇ ಆತನು ವ್ಯರ್ಥವಾಗಿ ವ್ಯಾಕುಲಗೊಂಡು ಇಲ್ಲದ ಭಯವನ್ನು ಸುಮ್ಮನೇ ಹಿಡಿದಿರುವನು ।೫೦೯॥

ಶ್ಲೋಕಾರ್ಥ :- ಕೋರೆಹಲ್ಲುಗಳಿರುವ ನಿನ್ನ ಮುಖಗಳಲ್ಲಿ ತ್ವರೆಯಾಗಿ ಪ್ರವೇಶಿಸುತ್ತಿದ್ದಾರೆ. ಹಲ್ಲುಗಳ ಸಂದಿನಲ್ಲಿ ಸಿಕ್ಕಿ ತಲೆಗಳು ನುಚ್ಚು ನೂರಾಗಿ ಹೋಗುತ್ತಿವೆ ।೨೭॥

ಆಗ ಪುನಃ ಹೇಳಿದನು, ಅಹೋ ನೋಡಿರಿ, ಆಕಾಶದಲ್ಲಿ ಮೋಡಗಳು ಇಲ್ಲದಾಗುವಂತೆ ಕಿರೀಟ ಕವಚಗಳ ಸಮೇತವಾಗಿ ಎರಡೂ ಕಡೆಯ ಸೈನ್ಯಗಳು ನಿಮ್ಮ ಮುಖದಲ್ಲಿ ಇಲ್ಲದಂತಾಗುವುವು ।೫೧೦॥

ಅಥವಾ ಮಹಾಕಲ್ಪದ ಕೊನೆಯಲ್ಲಿ ಯಮನು ಕೋಪಿಸಿಕೊಂಡಾಗ ಇಪ್ಪತ್ತೊಂದು ಸ್ವರ್ಗಸಮೇತವಾಗಿ ಪಾತಾಳವನ್ನು ಗ್ರಾಸ ಮಾಡುವನು ।೫೧೧॥

ಅಥವಾ ದೈವವು ಪ್ರತಿಕೂಲವಾದರೆ ಸಂಗ್ರಹ ಮಾಡುವವರ ಐಶ್ವರ್ಯವು ಇಟ್ಟದ್ದು ಇಟ್ಟಲ್ಲೇ ತನ್ನಷ್ಟಕ್ಕೆ ತಾನೇ ನಷ್ಟವಾಗುವುದು ।೫೧೨॥

ಅದರಂತೆ ಇಲ್ಲಿ ಕೂಡಿದ ಸೈನ್ಯವು ಒಮ್ಮೆಲೆ ಈ ಮುಖದಲ್ಲಿ ಹೊಕ್ಕು ಅಲ್ಲಿಂದ ಒಬ್ಬರೂ ಹೊರಬಂದಿಲ್ಲ. ಇದೆಂತಹ ವಿಲಕ್ಷಣ ಕರ್ಮದ ಗತಿಯಾಗಿರಬಹುದು? ।೫೧೩॥

ಒಂಟೆಯು ತನ್ನ ಮುಖದಲ್ಲಿ ಅಶೋಕ ವೃಕ್ಷದ ಮೇಲ್ಭಾಗಗಳನ್ನು ಮೆಲಕಾಡಿಸುವಂತೆ, ಈ ಎಲ್ಲ ಲೋಕಗಳು ವಿಶ್ವರೂಪ ಮುಖಗಳಲ್ಲಿ ವ್ಯರ್ಥವಾಗಿ ಹೋದವು ।೫೧೪॥

ಕಿರೀಟಗಳೊಂದಿಗೆ ಶಿರಗಳು ದವಡೆಗಳಲ್ಲಿ ಸಿಕ್ಕು ಹಿಟ್ಟುಹಿಟ್ಟಾಗುವಂತೆ ಕಾಣುತ್ತಿವೆ ।೫೧೫॥

ಆ ಕಿರೀಟಗಳ ರತ್ನಗಳು ಹಲ್ಲುಗಳ ಸಂಧಿಗಳಲ್ಲಿ ಸಿಕ್ಕಿಕೊಂಡು ಅವುಗಳ ಪುಡಿ ತಳದಲ್ಲಿ ಕೂಡಿವೆ. ದವಡೆಯ ಅಗ್ರಭಾಗಗಳು ಅಲ್ಪಸ್ವಲ್ಪ ರಕ್ತಲೇಪಿತವಾಗಿವೆ ।೫೧೬॥

ಹೋ ಕಾ ಜೇ ವಿಶ್ವರೂಪೇ ಕಾಳೇ । ಗ್ರಾಸಿಲೀ ಲೋಕಾಂಚೀ ಶರೀರಿ ಬಳೇ । ಪರಿ ಜೀವಿತ್ವ ದೇಹೀಂಚೇ ಸಿಸಾಳೇ । ಅವಶ್ಯ ಕೀ ರಾಖಿಲೀ ।।೪೧೭।। ತೈಸೀ ಶರೀರಾ ಮಾಜೀ ಚೋಖಡೀ । ಇಯೇ ಉತ್ತಮಾಂಗೇ ಹೋತೀ ಫುಡೀ । ಮ್ಹಣೌನಿ ಮಹಾಕಾಳಾಚಿಯಾಹಿ ತೋಂಡೀ । ಪರಿ ಉರಲೀ ಶೇಖೀ ।।೪೧೮।। ಮಗ ಮ್ಹಣೇ ಹೇ ಕಾಈ । ಜನ್ಮಲಯಾ ಆನ ಮೋಹರಚಿ ನಾಹೀ । ಜಗ ಆಪೈಸೇಂಚಿ ವದನ ಡೋಹೀ । ಸಂಚರತಾಹೇ ।।೪೧೯।। ಯಯಾ ಆಪೇಆಪ ಆಘವಿಯಾ ಸೃಷ್ಟೀ । ಲಾಗಲಿಯಾ ಆಹಾತೀ ವದನಾಚಿಯಾ ವಾಟೀ । ಆಣಿ ಹಾ ಜೇಥಿಂಚಿಯಾ ತೇಥ ಮಿಠೀ । ದೇತಸೇ ಉಗಲಾ ।।೪೨೦।। ಬ್ರಹ್ಮಾದಿಕ ಸಮಸ್ತ । ಉಂಚಾ ಮುಖಾ ಮಾಜೀ ಧಾಂವತ । ಯೇರ ಸಾಮಾನ್ಯ ಹೇ ಭರತ । ಐಲೀಚ ವದನೀ ।।೪೨೧।। ಆಣೇಕಹೀ ಭೂತಜಾತ । ತೇ ಉಪಜಲೇಚಿ ಠಾಯೀ ಗ್ರಾಸಿತ । ಪರಿ ಯಾಚಿಯಾ ಮುಖಾ ನಿಭ್ರಾಂತ । ನ ಸುಟೇಚಿ ಕಾಂಹೀ ।।೪೨೨।।

ಯಥಾ ನದೀನಾಂ ಬಹವೋऽಂಬುವೇಗಾಃ ಸಮುದ್ರಮೇವಾಭಿಮುಖಾ ದ್ರವಂತಿ।
ತಥಾ ತವಾಮಿ ನರಲೋಕವೀರಾಃ ವಿಶಂತಿ ವಕ್ತ್ರಾಣ್ಯಭಿವಿಜ್ವಲಂತಿ ।।೨೮।।

ಜೈಸೇ ಮಹಾನದೀಚೇ ವೋಘ । ವಹಿಲೇ ಠಾಕಿತೀ ಸಮುದ್ರಾಚೇ ಆಂಗ । ತೈಸೇ ಆಘವಾಚಿಕಡೂನಿ ಜಗ । ಪ್ರವೇಶತ ಮುಖೀ ।।೪೨೩।। ಆಯುಷ್ಯಪಂಥೇ ಪ್ರಾಣಿಗಣೇ । ಕರೋನಿ ಅಹೋರಾತ್ರಾಂಚೀ ಮೋವಣೇ । ವೇಗೇ ವಕ್ತ್ರಾಮಿಳಣೇ । ಸಾಧಿಜತ ಆಹಾತೀ ।।೪೨೪।।

ಯಥಾ ಪ್ರದೀಪ್ತಂ ಜ್ವಲನಂ ಪತಂಗಾಃ ವಿಶಂತಿ ನಾಶಾಯ ಸಮೃದ್ಧವೇಗಾಃ ।
ತಥೈವ ನಾಶಾಯ ವಿಶಂತಿ ಲೋಕಾಃ ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ।।೨೯।।

ಜಳತಯಾ ಗಿರೀಚ್ಯಾ ಗವಖಾ । ಮಾರ್ಝೀ ಘಾಪತೀ ಪತಂಗಾಚಿಯಾ ಝಾಕಾ । ತೈಸೇ ಸಮಗ್ರ ಲೋಕ ದೇಖಾ । ಇಯೇ ವದನೀ ಪಡತೀ ।।೪೨೫।। ಪರಿ ಜೇತುಲೇ ಏಥ ಪ್ರವೇಶಲೇ । ತೇ ತಾತಲಿಯಾ ಲೋಹೇ ಪಾಣೀಚಿ ಪಾ ಗಿಳಿಲೇ । ವಹಿವಟೀಹೀ ಪುಸಿಲೇ । ನಾಮರೂಪ ತಯಾಂಚೇ ।।೪೨೬।।

ಲೇಲಿಹ್ಯಸೇ ಗ್ರಸಮಾನಃ ಸಮಂತಾತ್ ಲೋಕಾನ್ಸಮಗ್ರಾನ್ವದನೈರ್ಜ್ವಲದ್ಭಿಃ।
ತೇಜೋಭಿರಾಪೂರ್ಯ ಜಗತ್ಸಮಗ್ರಂ ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ ।।೩೦।।

ಈ ವಿಶ್ವರೂಪ ಕಾಳನು ಆ ಬಲಿಷ್ಠ ಶರೀರಗಳೆಲ್ಲವನ್ನು ಗ್ರಾಸ ಮಾಡಿದನು. ಜೀವಿಗಳ ದೇಹದೊಳಗಿನ ಮಸ್ತಕಗಳನ್ನು ಮಾತ್ರಬೇಕೆಂತಲೇ ಕಾಯ್ದಿಟ್ಟನು ।೫೧೭॥

ಶರೀರದ ಎಲ್ಲ ಅವಯವಗಳಲ್ಲಿ ಉತ್ತಮ ಭಾಗವು ಈ ಮಸ್ತಕಗಳು ಇರುವುವು. ಆದ್ದರಿಂದಲೇ ಏನೋ, ಮಹಾಕಾಳನ ಮುಖದಲ್ಲಿ ಹೋಗಿಯೂ ಕೊನೆಗೆ ಹಾಗೆಯೇ ಉಳಿದುಕೊಂಡವು ।೫೧೮॥

ಪುನಃ ಹೇಳುತ್ತಾನೆ, ಏನು ಚಮತ್ಕಾರವಾಗಿದೆ! ಈ ಜಗತ್ತಿನಲ್ಲಿ ಜನ್ಮಕ್ಕೆ ಬಂದವರಿಗೆ ಮೃತ್ಯುಮುಖದಲ್ಲಿ ಹೋಗಿ ಬೀಳುವ ಹೊರತಾದ ಬೇರೆ ಮಾರ್ಗವೇ ಇಲ್ಲವಲ್ಲ? ಆದ್ದರಿಂದಲೇ ಎಲ್ಲ ಜಗವು ಮುಖದ ಮಡುವಿನಲ್ಲಿ ತಾನೇ ಬಂದು ಬೀಳುವುದು ।೫೧೯॥

ಈ ಎಲ್ಲ ಸೃಷ್ಟಿಯು ತಾನೇ ತಾನಾಗಿ ಈ ಮುಖದ ಮಾರ್ಗಕ್ಕೆ ಹತ್ತಿದೆ ಮತ್ತು ಈ ಪರಮಾತ್ಮನು ಇದ್ದಲ್ಲೇ ಸ್ವಸ್ಥನಾಗಿ ಸರ್ವಜಗವನ್ನು ಸಹಜವಾಗಿ ನುಂಗುತ್ತಿದ್ದಾನೆ ।೫೨೦॥

ಬ್ರಹ್ಮಾದಿಕ ದೇವತೆಗಳು ಎತ್ತರವಾಗಿರುವ ಮುಖಗಳತ್ತ ಧಾವಿಸಹತ್ತಿವೆ ಉಳಿದ ಇತರ ಮಂಡಳಿಯವರು ಈ ಕಡೆಯ ಮುಖಗಳಲ್ಲಿ ಹೋಗುತ್ತಿರುವರು ।೫೨೧॥

ಮತ್ತು ಇತರ ಪ್ರಾಣಿಮಾತ್ರರಿಗೆ ಹುಟ್ಟಿದಲ್ಲಿಯೇ ಗ್ರಾಸಿಸುವನು. ಒಟ್ಟಿನಲ್ಲಿ ಈ ವಿಶ್ವರೂಪ ಮುಖಕ್ಕೆ ಸಿಲುಕದೇ ನಿಃಸಂಶಯವಾಗಿ ಯಾವುದೂ ಉಳಿಯುವುದಿಲ್ಲ ।೫೨೨॥

ಶ್ಲೋಕಾರ್ಥ :- ಅನೇಕ ನದಿ ಪ್ರವಾಹಗಳು ಓಡಿ ಸಮುದ್ರದಲ್ಲಿ ಸೇರಿ ಹೋಗುವಂತೆ ಈ ಸೇನಾ ಸಮೂಹವು ನಿನ್ನ ಮುಖಾಗ್ನಿಯಲ್ಲಿ "ಸ್ವಾಹಾ" ಆಗುತ್ತಿವೆ ।೨೮॥

ಯಾವ ಪ್ರಕಾರವಾಗಿ ಮಹಾನದಿಗಳ ಪ್ರವಾಹವು ಸಹಜವಾಗಿ ಸಮುದ್ರದತ್ತ ಇರುವುವೋ, ಅದೇ ಪ್ರಕಾರವಾಗಿ ಎಲ್ಲ ಜಗವು ಎಲ್ಲ ಕಡೆಯಿಂದ ಬಂದು ನಿಮ್ಮ ಮುಖಗಳಲ್ಲಿ ಪ್ರವೇಶಿಸುತ್ತಿರುವುದು ।೫೨೩॥

ಎಲ್ಲ ಪ್ರಾಣಿಗಳು ಆಯುಷ್ಯರೂಪ ಮಾರ್ಗದಲ್ಲಿ ಹಗಲು ರಾತ್ರಿಯ ಆಳತೆಯಿಂದ ತ್ವರೆಯಿಂದ ಮುಖದಲ್ಲಿ ಬೀಳುವ ಯೋಗವನ್ನು ಸಾಧಿಸುತ್ತಿರುವುವು ।೫೨೪॥

ಶ್ಲೋಕಾರ್ಥ :- ಮರಣ ಸಮೀಪಿಸಿದ ಪತಂಗ ಹುಳಗಳು ಧಗಧಗ ಉರಿಯುತ್ತಿರುವ ದೀಪದಲ್ಲಿ ಬೀಳುವಂತೆ, ಕಾಲವು ಸಮೀಪಿಸಿರುವ ಈ ಪ್ರಾಣಿ ಕೋಟಿಗಳು ನಿನ್ನ ಮುಖಗಳಲ್ಲಿ ಪ್ರವೇಶಿಸುತ್ತಿವೆ ।೨೯॥

ಉರಿ ಹತ್ತಿದ ಪರ್ವತದ ಕಂದರಗಳಲ್ಲಿ ಪತಂಗಗಳು ಜಿಗಿಯುವಂತೆ ಎಲ್ಲ ಲೋಕಗಳು ನಿಮ್ಮ ಮುಖದಲ್ಲಿ ಬಂದು ಬೀಳುವುವು ।೫೨೫॥

ತುಂಬ ಕಾಯ್ದ ಹಂಚಿನಲ್ಲಿ ನೀರು ಬಿದ್ದರೆ ಸುಟ್ಟು ಕರಕಾಗುವುದು. ಅದರಂತೆ ನಿಮ್ಮ ಮುಖದಲ್ಲಿ ಪ್ರವೇಶ ಮಾಡಿದವರೆಲ್ಲರೂ ಅವರ ಹೇಳ ಹೆಸರು ಇಲ್ಲದಂತೆ ಒರೆಸಿ ಹೋದರು ।೫೨೬॥

ಶ್ಲೋಕಾರ್ಥ :- ಉರಿಯನ್ನು ಉಗುಳುವ ನಿನ್ನ ಬಾಯಿಗಳಿಂದ ಲೋಕಗಳನ್ನೆಲ್ಲ ನುಂಗುತ್ತ ನಾಲಿಗೆಯನ್ನು ಚಪ್ಪರಿಸುತ್ತಿವೆ. ಹೇ ವಿಷ್ಣೋ! ವಿಚಿತ್ರವಾದ ನಿನ್ನ ತೇಜಸ್ಸಿನಿಂದ ಬ್ರಹ್ಮಾಂಡವು ಕುದಿದು ಹೋಗುತ್ತಿದೆ ।೩೦॥

ಆಣಿ ಯೇತುಲಾಹೀ ಆರೋಗಣ । ಕರಿತಾ ಭುಕೇ ನಾಹೀ ಉಣೇಪಣ । ಕೈಸೇ ದೀಪನ ಅಸಾಧಾರಣ । ಉದಯಲೇ ಯಯಾ ।೪೨೭॥ ಜೈಸಾ ರೋಗಿಯಾ ಜ್ವರಾಹೂನಿ ಉಠಿಲಾ । ಕಾ ಭಣಂಗಾ ದುಕಾಳು ಪಾಹಲಾ । ತೈಸಾ ಜಿಭಾಚಾ ಲಳಲಳಾಟು ದೇಖಿಲಾ । ಆವಾಳುವೇ ಚಾಟಿತಾ ।।೪೨೮।। ತೈಸೇ ಆಹಾರಾಚೇ ನಾಂವೇ ಕಾಂಹೀ । ತೋಂಡಾಪಾಸೂನಿ ಉರಲೇಂಚಿ ನಾಹೀ । ಕೈಸೀ ಸಮಸಮೀತ ನವಾಈ । ಭುಕೇಲೇಪಣಾಚೀ ।೪೨೯॥ ಕಾಯ ಸಾಗರಾಚಾ ಘೋಟು ಭರಾವಾ?। ಕೀ ಪರ್ವತಾಚಾ ಘಾಸು ಕರಾವಾ? ಬ್ರಹ್ಮಕಟಾವೋ ಘಾಲಾವಾ । ಆಘವಾಚಿ ದಾಢೇ ।೪೩೦॥ ದಿಶಾ ಸಗಳಿಯಾಚಿ ಗಿಳಾವಿಯಾ । ಚಾಂದಿಣಿಯಾ ಚಾಟೂನಿ ಘ್ಯಾವಿಯಾ । ಐಸೇ ವರ್ತತ ಆಹೇ ಸಾವಿಯಾ । ಲೋಲುಪ್ಯ ಬಾತುರ್ಝೇ ।೪೩೧॥ ಜೈಸಾ ಭೋಗೀ ಕಾಮು ವಾಢೇ । ಕಾ ಇಂಧನೇ ಆಗೀಸಿ ಹಾಕಾಕ ಚಡೇ । ತೈಸೀ ಖಾತಖಾತಾಂಚಿ ತೊಂಡೇ ।ಖಾಖಾಂತೇ ಠೇಲೀ ।೪೩೨॥ ಕೈಸೇ ಏಕಚಿ ಕೇವಡೇ ಪಸರಲೇ । ತ್ರಿಭುವನ ಜಿವ್ಹಾಗ್ರೀ ಆಹೇ ಟೇಕಲೇ । ಜೈಸೇ ಕಾ ಕವೀಠ ಘಾತಲೇ । ವಡವಾನಳೀ ।೪೩೩॥ ಐಸೀ ಅಪಾರ ವದನೇ । ಆತಾ ಯೇತುಲೀ ಕೈಂಚೀ ತ್ರಿಭುವನೇ । ಕಾ ಆಹಾರು ನ ಮಿಳತಾ ಯೇಣೇ ಮಾನೇ । ವಾಢವಿಲೀ ಸೈಂಘು ।೪೩೪॥ ಅಗಾ ಹಾ ಲೋಕು ಬಾಪುಡಾ । ಜಾಹಲಾ ವದನಜ್ವಾಳಾ ವರಪಡಾ । ಜೈಸೀ ವಣವೇಯಾಚಿಯಾ ವೇಢಾ । ಸಾಂಪಡತೀ ಮೃಗೇ ।೪೩೫॥ ಆತಾ ತೈಸೇ ಯಾ ವಿಶ್ವಾ ಜಾಹಾಲೇ । ದೇವ ನವ್ಹೇ ಹೇ ಕರ್ಮ ಆಲೇ । ಕಾ ಜಗ ಚಳಚಳಾ ಪಾಂಗಿಲೇ । ಕಾಳಜಾಳೇ ।೪೩೬॥ ಆತಾ ಇಯೇ ಅಂಗಪ್ರಭೇಚಿಯೇ ವಾಗುರೇ । ಕೋಣೇಕಡೂನಿ ನಿಗಿಜೈಲ ಚರಾಚರೇ । ಹೀ ವಕ್ತ್ರೇ ನೋಹೇತಿ ಜೋಹರೇ । ವೋಡವಲೀ ಜಗಾ ।೪೩೭॥ ಆಗೀ ಆಪುಲೇನಿ ದಾಹಕಪಣೇ । ಕೈಸೇನಿ ಪೋಳಿಜೇ ತೇ ನೇಣೇ । ಪರಿ ಜಯಾ ಲಾಗೇ ತಯಾ ಪ್ರಾಣೇ । ಸುಟಿಕಾಚಿ ನಾಹೀ ।೪೩೮॥ ನಾತರೀ ಮಾರ್ಝೇನಿ ತಿಖಟಪಣೇ । ಕೈಸೇ ನಿವಟೇ ಹೇ ಶಸ್ತ್ರ ಕಾಯಿಜಾಣೇ । ಕಾ ಆಪುಲಿಯಾ ಮಾರಾ ನೇಣೇ । ವಿಷ ಜೈಸೇ ।೪೩೯॥ ತೈಸಿ ತುಜ ಕಾಂಹೀ । ಆಪುಲಿಯಾ ಉಗ್ರಪಣಾಚೀ ಸೇಚಿ ನಾಹೀ । ಪರೀ ಐಲೀಕಡಿಲೇ ಮುಖೀ ಖಾಈ । ಹೋ ಸರಲೀ ಜಗಾಚೀ ।೪೪೦॥ ಅಗಾ ಆತ್ಮಾ ತೂ ಏಕು । ಸಕಳ ವಿಶ್ವವ್ಯಾಪಕು । ತರೀ ಕಾ ಆಮ್ಹಾ ಅಂತಕು । ತೈಸಾ ವೋಡವಲಾಸೀ? ।೪೪೧॥

ಈ ಪ್ರಕಾರವಾಗಿ ಸರ್ವ ಜಗತ್ತನ್ನು ಭಕ್ಷಿಸಿದರೂ ನಿಮ್ಮ ಹಸಿವೆ ಕಡಿಮೆ ಆಗಿರುವುದಿಲ್ಲ. ಹಾಗಾದರೆ ನಿಮ್ಮ ಜಠರಾಗ್ನಿಯು ಇಷ್ಟೊಂದು ಪ್ರದೀಪ್ತ ಹೇಗಾಯಿತು? ।೪೨೭।।

ಒಬ್ಬ ರೋಗಿಯು ಜ್ವರದಿಂದ ಮುಕ್ತನಾದಾಗ್ಗೆ ಮೇಲಿಂದ ಮೇಲೆ ಹಸಿವೆ ಆಗುವುದು. ಕೂಳು ಕಾಣದ ಭಿಕ್ಷುಕನಿಗೆ ದುಷ್ಕಾಲ ಒದಗಿದಂತೆ ನೀವು ಎಲ್ಲ ಜಗತ್ತಿನ ಲಯ ಮಾಡಿಯೂ ಇನ್ನೂ ನಾಲಿಗೆಯನ್ನು ತುಟಿಯಲ್ಲಿ ನೆಕ್ಕುತ್ತಿರುವಿರಿ ।೪೨೮।।

ಹೀಗೆ ನಿಮ್ಮ ಮುಖದ ಮುಂದೆ ತಿನ್ನುವ ಯಾವ ಪದಾರ್ಥಗಳೂ ಉಳಿಯಲಿಲ್ಲ. ಹಾಗಾದರೆ ನಿಮ್ಮ ಹಸಿವೆಯ ಮಹಿಮೆಯನ್ನು ಏನೆಂದು ವರ್ಣಿಸಬೇಕು? ।೪೨೯।।

ಸಮುದ್ರವನ್ನು ಒಂದೇ ಗುಟುಕು ಮಾಡುವುದು, ಪರ್ವತಗಳನ್ನು ಒಂದೇ ತುತ್ತು ಮಾಡುವುದು, ಬ್ರಹ್ಮಾಂಡ ಗಳನ್ನೆಲ್ಲ ದವಡೆಯ ಬುಡದಲ್ಲಿ ಒತ್ತಿಡುವುದು ।೪೩೦।।

ಎಲ್ಲ ದಿಶೆಗಳನ್ನು ನುಂಗಿಬಿಡುವುದು, ಚಂದ್ರನನ್ನು ನೆಕ್ಕಿ ಬಿಡುವುದು, ಈ ಪ್ರಕಾರವಾದ ನಿಮ್ಮ ಹಸಿವೆಯಾಗಿದೆ ।೪೩೧।।

ಭೋಗ ಬೆಳೆದಂತೆ ಕಾಮವು ಬೆಳೆಯುವುದು. ಅಗ್ನಿಯು ಕಟ್ಟಿಗೆಗಳಿಂದ ಹೆಚ್ಚು ಭಡಕಾಯಿಸುವುದು, ಅದರಂತೆ ನಿಮಗೆ ಎಲ್ಲ ಜಗತ್ತನ್ನು ತಿನ್ನುತ್ತಿದ್ದಂತೆಯೇ ತಿನ್ನುವ ಬಯಕೆ ಹೆಚ್ಚಾಗುತ್ತಿದೆ ।೪೩೨।।

ವಡವಾಗ್ನಿಯಲ್ಲಿ ಒಂದು ಬೆಳುವಲಕಾಯಿ ಒಗೆದಂತೆ. ನಿನ್ನ ಒಂದೇ ಮುಖವು ಎಷ್ಟೊಂದು ವಿಸ್ತಾರಗೊಂಡಿದೆ ಎಂದರೆ ಅದರ ನಾಲಿಗೆಯ ತುದಿಯ ಮೇಲೆ ಈ ತ್ರಿಭುವನವು ನಿಂತಿದೆ ।೪೩೩।।

ಅಂದಮೇಲೆ ಒಂದೇ ಮುಖದ ಸ್ಥಿತಿಯು ಹೀಗಿರುವಾಗ ನಿನ್ನ ಅಗಣಿತ ಮುಖಗಳಿಗೆ ಇಷ್ಟೊಂದು ತ್ರಿಭುವನಗಳನ್ನು ಎಲ್ಲಿಂದ ತರಬೇಕು? ಆದ್ದರಿಂದ ಆಹಾರಕ್ಕಾಗಿ ಅಷ್ಟೊಂದು ತ್ರಿಭುವನಗಳನ್ನು ನಿರ್ಮಿಸಿರುವನು ।೪೩೪।।

ನಾಲ್ಕು ಕಡೆಯಲ್ಲಿಯೂ ಉರಿಹತ್ತಿ ನಡುವೆ ಚಿಗರೆಗಳು ಸಿಕ್ಕಿಕೊಂಡಂತೆ ದೀನವಾದ ಎಲ್ಲ ಜಗತ್ತು ಈ ನಿಮ್ಮ ವದನ ರೂಪ ಜ್ವಾಲೆಯ ನಡುವೆ ಸಿಕ್ಕಿಕೊಂಡಿದೆ ।೪೩೫।।

ಇದು ದೇವನಿಂದಾದುದಲ್ಲ. ಅವುಗಳ ಕರ್ಮ ಫಲವು. ಜಗರೂಪ ಚಲಚರಗಳಿಗೆ ನಿಮ್ಮ ವದನರೂಪ ಕಾಲ ಬಲಿಯೇ ಪಸರಿಸಿದೆ ।೪೩೬।।

ಆದ್ದರಿಂದ ನಿಮ್ಮ ವಿಶ್ವರೂಪ ತೇಜರೂಪ ಬಲೆಯಿಂದ ಸ್ಥಾವರ ಜಂಗಮ ವಸ್ತುಗಳು ಎಲ್ಲಿಂದ ಹೊರಗೆ ಬರಬೇಕು? ಇದು ನಿಮ್ಮ ಮುಖ ಇರದೇ ಲಾಕ್ಷಾಗ್ರಹವಾಗಿದೆ ।೪೩೭।।

ನಿಮ್ಮ ಪ್ರಖರ ತೇಜದಿಂದ ಪ್ರಾಣಿಮಾತ್ರರ ಅಂಗಗಳು ಹೇಗೆ ಬೆಂದುತ್ತವೆಯೋ ಅದು ಅಗ್ನಿಗೆ ತಿಳಿಯುವುದಿಲ್ಲ. ಆದರೆ ಯಾರಿಗೆ ಸ್ಪರ್ಶವಾಗಿದೆಯೋ ಅವರ ಪ್ರಾಣ ಹೋಗದೇ ಇರದು ।೪೩೮।।

ತನ್ನ ತೀಕ್ಷ್ಣವಾದ ಧಾರೆಯಿಂದ ಬೇರೆಯವರ ಪ್ರಾಣ ಹೇಗೆ ಹೋಗುವುದೆಂಬುದು ಶಸ್ತ್ರಕ್ಕೆ ತಿಳಿಯದಂತೆ ಮತ್ತು ಸೇವನೆಯಿಂದ ಜನರ ಪ್ರಾಣ ಹೇಗೆ ಹೋಗುವುದೆಂಬುದು ವಿಷಕ್ಕೆ ತಿಳಿಯದಂತೆ ।೪೩೯।।

ಅದೇ ಪ್ರಕಾರವಾಗಿ ನಿಮ್ಮ ಮುಖಗಳ ಪ್ರಖರಗಳ ಭಾವವು ನಿಮಗಿರುವುದಿಲ್ಲ. ಆದರೆ ನಿಮ್ಮ ಈ ಕಡೆಯ ಮುಖದಲ್ಲಿಯೇ ಎಲ್ಲ ಜಗತ್ತಿನ ಹೋಳಿಯಾಗುತ್ತಿದೆ ।೪೪೦।।

ದೇವಾ, ಆತ್ಮನೆಂದು ಯಾವುದಕ್ಕೆ ಹೇಳಬೇಕೋ, ಅದು ನೀವೊಬ್ಬರೇ ಇರುವಿರಿ ಮತ್ತು ಸರ್ವ ವಿಶ್ವದ ವ್ಯಾಪಕರಾಗಿರುವಿರಿ. ಆದರೆ, ನಮ್ಮ ನಾಶಮಾಡುವ ಪ್ರವೃತ್ತಿ ಏಕೆ? ।೪೪೧।।

ತರೀ ಮಿಯಾ ಸಾಂಡಿಲೀ ಜೀವಿತ್ವಾಚೀ ಚಾಡ । ಆಣಿ ತುವಾಂಹೀ ನ ಧರಾವೀ ಭೀಡ । ಮನೀ ಆಹೇ ತೇ ಉಘಡ । ಬೋಲ ಪಾ ಸುಖೇ ।೫೪೨॥ ಕಿತೀ ವಾಢವಿಸೀ ಯಾ ಉಗ್ರ ರೂಪಾ । ಆಂಗೀಚೇ ಭಗವಂತಪಣ ಆಠವೀ ಬಾಪಾ । ನಾಹೀ ತರೀ ಕೃಪಾ । ಮಜಪುರತೀ ಪಾಹೀ ।೫೪೩॥

ಆಖ್ಯಾಹೀ ಮೇ ಕೋ ಭವಾನುಗ್ರರೂಪೋ ನಮೋಽಸ್ತು ತೇ ದೇವವರ ಪ್ರಸೀದ ।
ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್ ।೩೧॥

ತರೀ ಏಕ ವೇಳ ವೇದವಿದ್ಯಾ । ಜೀ ತ್ರಿಭುವನೈಕ ಆದ್ಯಾ । ವಿನವಣೀ ವಿಶ್ವವಂದ್ಯಾ । ಆಇಕೇ ಮಾಝೀ ।೫೪೪॥ ಐಸೇ ಬೋಲೋನಿ ವೀರೇ । ಚರಣ ನಮಸ್ಕಾರಿಲೇ ಶಿರೇ । ಮಗ ಮ್ಹಣೇ ತರೀ ಸರ್ವೇಶ್ವರೇ । ಅವಧಾರಿಜೋ ।೫೪೫॥ ಮಿಯಾ ಹೋಆವಯಾ ಸಮಾಧಾನ । ಜೀ ಪುಸಿಲೇ ವಿಶ್ವರೂಪಧ್ಯಾನ । ಆಣಿ ಏಕೇಚಿ ಕಾಳೇ ತ್ರಿಭುವನ । ಗಿಳಿತುಚಿ ಉಠಿಲಾಸಿ ।೫೪೬॥ ತರೀ ತೂ ಕೋಣ ಕಾ ಯೇತುಲೀ । ಇಯೇ ಭ್ಯಾಸುರೇ ಮುಖೇ ಕಾ ಮೇಳವಿಲೀ । ಅವಘಿಯಾಚಿ ಕರೀ ಪರಿಜಿಲೀ । ಶಸ್ತ್ರೇ ಕಾಂಹ್ಯಾ ।೫೪೭॥ ಜೀ ಜಂವ ತಂವ ರಾಗೀಟಪಣೇ । ವಾಢೋನಿ ಗಗನಾ ಆಣಿತೋಸಿ ಉಣೇ । ಕಾ ಡೋಳೇ ಕರೂನಿ ಭಿಂಗುಳವಾಣೇ । ಭೇಡಸಾವೀತ ಆಹಾಸೀ ।೫೪೮॥ ಏಥ ಕೃತಾಂತೇಸಿ ದೇವಾ । ಕಾಸಯಾ ಕಿಜತಸೇ ಹೇವಾ । ಹಾ ಆಪುಲಾ ತುವಾ ಸಾಂಗಾವಾ । ಅಭಿಪ್ರಾಯ ಮಜ ।೫೪೯॥ ಯಾ ಬೋಲಾ ಮ್ಹಣೇ ಅನಂತು । ಮೀ ಕೋಣ ಹೇ ಆಹಾಸೀ ಪುಸತು । ಆಣಿ ಕಾಯಿಸಯಾ ಲಾಗೀ ಅಸೇ ವಾಢತು । ಉಗ್ರತೇಸಿ।೫೫೦॥

ಶ್ರೀಭಗವಾನುವಾಚ :-
ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ ।
ಋತೇಽಪಿ ತ್ವಾಂ ನ ಭವಿಷ್ಯಂತಿ ಸರ್ವೇ ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ।೩೨॥

ತರೀ ಮೀ ಕಾಳು ಗಾ ಹೇ ಫುಡೇ । ಲೋಕ ಸಂಹಾರಾವಯಾಲಾಗೀ ವಾಢೇ । ಸೈಂಘ ಪಸರಿಲೀ ಆಹಾತೀ ತೋಂಡೇ । ಆತಾ ಗ್ರಾಸೀನ ಹೇ ಆಘವೇ ।೫೫೧॥ ಏಥ ಅರ್ಜುನ ಮ್ಹಣೇ ಕಟಕಟಾ । ಉಬಗಿಲೋ ಮಾಗಿಲ್ಯಾ ಸಂಕಟಾ । ಮ್ಹಣೌನಿ ಆಳವಿಲಾ ತಂವ ವೋಖಟಾ । ಉವಾಇಲಾ ಹಾ ।೫೫೨॥ ತೇವಿಂಚಿ ಕಠಿಣ ಬೋಲೇ ಆಸತುಟೀ । ಅರ್ಜುನ ಹೋಈಲ ಹಿಂಪುಟೀ । ಮ್ಹಣೌನಿ ಸವೇಂಚಿ ಮ್ಹಣೇ ಕಿರೀಟೀ । ಪರಿ ಆನ ಏಕ ಅಸೇ ।೫೫೩॥

ನಾನು ಮಾತ್ರ ನನ್ನ ಜೀವದ ಆಶೆಯನ್ನು ಬಿಟ್ಟು ಬಿಟ್ಟಿದ್ದೇನೆ. ಈಗ ನೀವು ಸಹ ಭಿಡೆ ಬಿಟ್ಟು ನಿಮ್ಮ ಮನದಲ್ಲಿದ್ದುದ್ದನ್ನು ಸರಿಯಾಗಿ ಒಡೆದು ಹೇಳಿರಿ ।೫೪೨॥

ನೀವು ನಿಮ್ಮ ವಿಶ್ವರೂಪದ ಉಗ್ರತನ ಎಷ್ಟೊಂದು ಬೆಳೆಸುವಿರಿ? ದೇವಾ; ನಿಮ್ಮಲ್ಲಿರುವ ಪಾಲನೆತೆಯನ್ನು ತುಸು ನೆನೆಸಿಕೊಳ್ಳಿರಿ, ಕೊನೆಗೆ ನನ್ನ ಮೇಲಾದರೂ ಕೃಪೆ ತೋರಿರಿ ।೫೪೩॥

ಶ್ಲೋಕಾರ್ಥ :- ದೇವಾದಿದೇವಾ! ನಮೋ ನಮಃ ನಿನ್ನ ಲೀಲಾವಿಲಾಸಗಳನ್ನು ತಿಳಿಯದೆ ಆದಿ ಪುರುಷ ನಾದ ನಿನ್ನನ್ನು ಕೇಳಿಕೊಳ್ಳುತ್ತೇನೆ. ಈ ಉಗ್ರರೂಪವನ್ನು ಧರಿಸಿದ ನೀನು ಯಾರು? ದಯಮಾಡಿ ಹೇಳು ।೩೧॥

ಅಹೋ ವೇದವಂದ್ಯನೇ, ತ್ರಿಭುವನೈಕನೇ, ಆದ್ಯನೇ, ವಿಶ್ವವಂದ್ಯನೇ, ನನ್ನ ವಿನಂತಿ ಒಂದನ್ನು ಇಷ್ಟು ಮಾತ್ರ ಕೇಳು ।೫೪೪॥

ಈ ಪ್ರಕಾರವಾಗಿ ಹೇಳಿ ಅರ್ಜುನನು ಭಗವಂತನ ಚರಣಗಳ ಮೇಲೆ ಮಸ್ತಕವನ್ನಿಟ್ಟು ಪುನಃ ಹೇ, ಸರ್ವೇಶ್ವರನೇ, ನನ್ನ ಕಡೆ ಲಕ್ಷ ಕೊಡು ಎಂದನು ।೫೪೫॥

ನನಗೆ ಸಮಾಧಾನವಾಗಬೇಕೆಂದು ವಿಶ್ವರೂಪವನ್ನು ತೋರಿಸಿರಿ ಎಂದೆನು. ಆದರೆ, ನೀವು ಒಮ್ಮೆಲೆ ತ್ರಿಭುವನ ವನ್ನೆಲ್ಲ ನುಂಗುವುದಕ್ಕಾಗಿ ದೊಡ್ಡದಾದ ಭಯಂಕರ ರೂಪವನ್ನು ಧರಿಸಿರುವಿರಿ ।೫೪೬॥

ಆದರೆ ನೀನು ಯಾರಿರುವೆ? ಹೀಗೆ ಇಷ್ಟೊಂದು ಭಯಂಕರ ಮುಖಗಳನ್ನು ಏಕೆ ಧರಿಸಿರುವೆ? ಮತ್ತು ಹಾಗೆಯೇ ಈ ಎಲ್ಲ ಕೈಗಳಲ್ಲಿ ಶಸ್ತ್ರಗಳನ್ನು ಏಕೆ ಹಿಡಿದಿರುವೆ? ।೫೪೭॥

ಮೇಲಿಂದ ಮೇಲೆ ಸಿಟ್ಟಿಗೇಳುತ್ತ ಹೆಚ್ಚಿಚ್ಚು ಬೆಳೆಯುತ್ತ ಆಕಾಶವನ್ನೇ ಚಿಕ್ಕದಾಗಿ ಮಾಡಿರುವೆ. ಆಗಾಗ್ಗೆ ಭಯಾನಕದಿಂದ ಕಣ್ಣುಗಳನ್ನು ತಿರುಗಿಸುತ್ತ ಭಯವನ್ನು ಏಕೆ ತೋರಿಸುವೆ? ।೫೪೮॥

ಹೇ ದೇವನೇ, ಇಲ್ಲಿ ನೀನೇಕೆ ಯಮನಲ್ಲಿ ಸ್ಪರ್ಧೆ ಮಾಡುತ್ತಿರುವೆ? ಇಂತಹ ಉಗ್ರರೂಪ ಧರಿಸುವ ಕಾರಣ ವಾದರೂ ಏನು? ಅದೆಲ್ಲವನ್ನು ನನಗೆ ಹೇಳು ।೫೪೯॥

ಇದನ್ನು ಕೇಳಿ ಶ್ರೀಕೃಷ್ಣನು ಹೇಳಿದನು:- ನಾನು ಯಾರು? ಮತ್ತು ಏತಕ್ಕಾಗಿ ಈ ಉಗ್ರರೂಪ ಧರಿಸಿ ಇಷ್ಟೊಂದು ದೊಡ್ಡವನಾಗಿರುವೆ ಎಂಬುವುದಲ್ಲವೇ ನೀನು ಕೇಳುವುದು ।೫೫೦॥

ಶ್ಲೋಕಾರ್ಥ :- ಭಗವಂತನು ಹೀಗೆಂದನು:- ಲೋಕವನ್ನು ಭಕ್ಷಿಸುವುದಕ್ಕಾಗಿ ವಿಜೃಂಭಿಸಿದ ಕಾಲ ಪುರುಷನು ನಾನು, ಲೋಕಗಳನ್ನು ಪ್ರಳಯ ಮಾಡುವುದೇ ನನ್ನ ಕೆಲಸ. ನೀನು ಯುದ್ಧವನ್ನು ಮಾಡದಿದ್ದರೂ ಈ ಎದುರಿಗಿರುವ ಸೈನ್ಯದಲ್ಲಿ ಯಾರು ಬದುಕಿರಲಾರರು ।೩೨॥

ಹಾಗಾದರೆ ನಿಜವಾಗಿಯೂ ನಾನು ಕಾಳನಿರುವೆ ಮತ್ತು ಲೋಕದ ಸಂಹಾರ ಮಾಡುವುದಕ್ಕಾಗಿಯೇ ದೊಡ್ಡದಾಗಿ ಬೆಳೆದು ಎಲ್ಲ ಕಡೆ ಮುಖಗಳನ್ನು ತೆರೆದಿರುವೆ ಮತ್ತು ಈಗ ಸರ್ವವಿಶ್ವವನ್ನೇ ನುಂಗಿಬಿಡುವೆ ।೫೫೧॥

ಅರ್ಜುನನು ಹೇಳಿದನು:- ಅಕಟಕಟ, ಹಿಂದಿನ ಸಂಕಟಕ್ಕೆ ತ್ರಾಸಾಗಿ ಈತನ ಪ್ರಾರ್ಥನೆ ಮಾಡಿದೆನು. ಆದರೆ ಅದು ಪ್ರತಿಯಾಗಿ ಹೆಚ್ಚಿನ ಭಯಂಕರವಾದ ಸಂಕಟಕ್ಕೆ ಗುರಿಯಾಯಿತಲ್ಲ ।೫೫೨॥

ಆಗ ದೇವನು ವಿಚಾರಿಸಿ, ಜೀವಿತದ ಆಸೆಯನ್ನೇ ಬಿಡುವಂತಹ ನನ್ನ ಕಠೋರ ಭಾಷಣಗಳಿಂದ ಅರ್ಜುನನಿಗೆ ಕಷ್ಟವಾದೀತೆಂದು ತಿಳಿದು, ತಕ್ಷಣ ನಾನು ಕಾಳನು ನಿಜ, ಆದರೆ ಉದ್ದೇಶ ಬೇರೆ ಇದೆ ಎಂದು ಹೇಳಿದನು ।೫೫೩॥

ತರೀ ಆತಾಂಚಿಯೇ ಸಂಹಾರವಾಹರೇ । ತುಮ್ಹೀ ಪಾಂಡವ ಅಸಾ ಬಾಹಿರೇ । ತೇಥ ಜಾತಜಾತಾ ಧನುರ್ಧರೇ । ಸಾಂವರಿಲೇ ಪ್ರಾಣ ।।೪೫೪।। ಹೋತಾ ಮರಣ ಮಹಾಮಾರೀ ಗೇಲಾ । ತೋ ಮಾಗುತಾ ಸಾವಧು ಜಾಹಲಾ । ಮಗ ಲಾಗಲಾ ಬೋಲಾ । ಚಿತ್ತ ದೇಊ ।।೪೫೫।। ಐಸೇ ಮ್ಹಣಿಜತ ಆಹೇ ದೇವೇ । ಅರ್ಜುನಾ ತುಮ್ಹೀ ಮಾರ್ಝೀ ಹೇ ಜಾಣಾವೇ । ಯೇರ ಜಾಣ ಮೀ ಆಘವೇ । ಸರಲೋ ಗ್ರಾಸೂ ।।೪೫೬।। ವಜ್ರಾನಳೀ ಪ್ರಚಂಡೀ । ಜೈಸೀ ಘಾಪೇ ಲೋಣಿಯಾಚೀ ಉಂಡೀ। ತೈಸೇ ಜಗ ಹೇ ಮಾಝಿಯಾ ತೋಂಡೀ । ತುವಾ ದೇಖಿಲೇ ಜೇ ।।೪೫೭।। ತರೀ ತಯಾಮಾಝಾರೀ ಕಾಂಹೀ । ಭರಂವಸೇನಿ ಉಣೇ ನಾಹೀ । ಇಯೇ ವಾಯಾಂಚೀ ಸೈನ್ಯೆ ಪಾಹೀ । ಬರಳತ ಆಹಾತೀ ।।೪೫೮।। ಐಸಾ ಚತುರಂಗಾಚಿಯಾ ಸಂಪದಾ । ಕರಿತ ಮಹಾಕಾಳೇಸೀ ಸ್ಪರ್ಧಾ । ವಾಂಟಿವೇಚಿಯಾ ಮದಾ । ವಳಘಲೇ ಜೇ ।।೪೫೯।। ಹೇ ಜೇ ಮೀಳೋನಿಯಾ ಮೇಳೇ । ಕುಂಥತೀ ವೀರವೃತ್ತೀಚೇನಿ ಬಳೇ । ಯಮಾವರೀ ಗಜದಳೇ । ವಾಖಾಣಿಜತಾತೀ ।।೪೬೦।। ಮ್ಹಣತೀ ಸೃಷ್ಟೀವರೀ ಸೃಷ್ಟೀ ಕರೂ । ಆಣ ವಾಹೂನಿ ಮೃತ್ಯೂತೇ ಮಾರೂ । ಆಣಿ ಜಗಾಚಾ ಭರೂ । ಘೋಟು ಯಯಾ ।।೪೬೧।। ಪೃಥ್ವೀ ಸಗಳೀಚಿ ಗಿಳೂ । ಆಕಾಶ ವರಿಚ್ಯಾವರೀ ಜಾಳೂ । ಕಾ ಬಾಣವರೀ ಖಿಳೂ । ವಾರಯಾತೇ ।।೪೬೨।। ಬೋಲ ಹತಿಯೇರಾಹೂನಿ ತಿಖಟ । ದಿಸತೀ ಅಗ್ನಿ ಪರಿಸದಾಸಟ । ಮಾರಕಪಣೇ ಕಾಳಕೂಟ । ಮಹುರ ಮ್ಹಣತ ।।೪೬೩।। ತರೀ ಹೇ ಗಂಧರ್ವನಗರೀಂಚೆ ಉಮಾಳೇ । ಜಾಣ ಪೋಕಳೀಚೇ ಪೇಂಡವಳೇ । ಅಗಾ ಚಿತ್ರೀವ ಫಳೇ । ವೀರ ಹೇ ದೇಖೇ ।।೪೬೪।। ಹಾ ಗಾ ಮೃಗಜಳಾಚಾ ಪೂರ ಆಲಾ । ದಳ ನವ್ಹೇ ಕಾಪಡಾಚಾ ಸಾಪ ಕೇಲಾ । ಇಯಾ ಶೃಂಗಾರೂನಿಯಾ ಖಾಲಾ । ಮಾಂಡಿಲಿಯಾ ಪೈ ।।೪೬೫।।

ತಸ್ಮಾತ್ತ್ವಮುತ್ತಿಷ್ಠ ಯಶೋ ಲಭಸ್ವ ಜಿತ್ವಾ ಶತ್ರೂನ್ ಭುಂಕ್ಷ್ವ ರಾಜ್ಯಂ ಸಮೃದ್ಧಂ ।
ಮಯೈವೈತೇ ನಿಹತಾಃ ಪೂರ್ವಮೇವ ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ।।೩೩।।

ಏರ ಚೇಷ್ಟವಿತೇ ಜೇ ಬಳ । ತೇ ಮಾಗಾಂಚಿ ಮಿಯಾ ಗ್ರಾಸಿಲೇ ಸಕಳ । ಆತಾ ಕೋಲ್ಹಾರಿಚೇ ವೇತಾಳ । ತೈಸೇ ನಿರ್ಜೀವ ಹೇ ಆಹಾತೀ ।।೪೬೬।। ಹಾಲವಿತೀ ದೋರೀ ತುಟಲೀ । ತರೀ ತಿಯೇ ಖಾಂಬಾವರೀಲ ಬಾಹುಲೀ । ಭಲತೇಣೇ ಲೋಟಿಲೀ । ಉಲಥೋನಿ ಪಡತೀ ।।೪೬೭।।

ಆದರೆ, ಈಗಿನ ಈ ಸಂಹಾರರೂಪ ಸಂಕಟದಿಂದ ನೀವು ಪಾಂಡವರು ಮಾತ್ರ ಹೊರಗಿರುವಿರಿ. ಹೀಗೆ ಭಗವಂತನ ಮಾತು ಕೇಳಿ ಅರ್ಜುನನಿಗೆ ಜೀವದಲ್ಲಿ ಜೀವ ಬಂದಿತು ।೪೫೪॥

ಅರ್ಜುನನು ಮರಣರೂಪ ಮಹಾಮಾರಿಯಲ್ಲಿ ಸಿಲುಕಿದ್ದನು. ಈಗ ಆತನು ಎಚ್ಚರನಾಗಿ ಶ್ರೀಕೃಷ್ಣನ ಮಾತಿನತ್ತ ಚಿತ್ತವನ್ನಿಟ್ಟನು ।೪೫೫॥

ಅರ್ಜುನಾ, ನೀವು ಪಾಂಡವರಷ್ಟೇ ನನ್ನವರಾಗಿದ್ದಕ್ಕೆ, ನಿಮ್ಮ ಹೊರತಾಗಿ ಉಳಿದ ಇತರ ಎಲ್ಲರನ್ನು ಗ್ರಾಸಮಾಡಲು ನಾನು ಸಿದ್ಧನಾಗಿದ್ದೇನೆ ।೪೫೬॥

ಪ್ರಳಯಕಾಲದ ಪ್ರಚಂಡವಾದ ಅಗ್ನಿಯಲ್ಲಿ ಬೆಣ್ಣೆಯ ಮುದ್ದೆಯನ್ನು ಹಾಕಿದಾಗ ಅದು ನಾಶವಾಗುವಂತೆ ನನ್ನ ಮುಖದಲ್ಲಿ ಎಲ್ಲ ಜಗವು ಹೋಗಿದ್ದು ನೋಡಿರುವೆ ।೪೫೭॥

ಅದಕ್ಕಾಗಿ ಆ ಎಲ್ಲ ಜಗದ ನಾಶವಾಗುವುದೆಂದು ನೀನು ನಿಃಸಂಶಯವಾಗಿ ತಿಳಿ. ಈ ಎಲ್ಲ ಸೈನ್ಯವು ವ್ಯರ್ಥವಾಗಿ ಮೆರೆಯುತ್ತಿದೆ ।೪೫೮॥

ಇಂತಹ ಚತುರಂಗ ಸೈನ್ಯ ಸಂಪತ್ತಿನ ಬಲದ ಮೇಲೆ ಕೃತಾಂತನ ಎದುರಾಗಿ ಸ್ಪರ್ಧೆ ಮಾಡುತ್ತಿರುವರು, ಮತ್ತು ಪರಾಕ್ರಮದ ಗರ್ವದಿಂದ ಮೇಲೆರಿರುವರು ।೪೫೯॥

ಇಲ್ಲಿ ಕೂಡಿದ ಸೈನ್ಯದವರೆಲ್ಲರೂ ವೀರ ವೃತ್ತಿಯ ಬಲದಿಂದ ದೊಡ್ಡ ಡೌಲು ಮಾಡಿ ಯಮನೂ ಸಹ ನಮ್ಮ ಮುಂದೆ ತುಚ್ಛನು ಎಂದು ಹೇಳುತ್ತಿರುವರು ।೪೬೦॥

ನಾವು ಸೃಷ್ಟಿಯ ಮೇಲೆ ಪ್ರತಿಸೃಷ್ಟಿ ಮಾಡುವೆವು, ಜಿದ್ದಿನಿಂದ ಮೃತ್ಯುವಿಗೆ ಕೊಲ್ಲುವೆವು, ಮತ್ತು ಜಗತ್ತನ್ನೇ ಸಂಹರಿಸುವೆವು ಎಂದು ಇವರು ಹೇಳುತ್ತಿರುವರು ।೪೬೧॥

ಎಲ್ಲ ಪೃಥ್ವಿಯನ್ನು ನುಂಗಿಬಿಡುವೆವು, ಆಕಾಶವನ್ನು ಮೇಲೆಯೇ ಸುಟ್ಟುಹಾಕುವೆವು ಮತ್ತು ಬಾಣಗಳಿಂದ ವಾಯುವನ್ನು ನಿಲ್ಲಿಸುವೆವು ।೪೬೨॥

ಶಸ್ತ್ರಕ್ಕಿಂತಲೂ ಇವರ ಮಾತುಗಳು ಅತಿ ಖಾರವಾಗಿವೆ, ಅಗ್ನಿಗಿಂತಲೂದಾಹಕವಾಗಿವೆ ಮತ್ತು ಇವರ ಮಾರಕ ಶಬ್ದಗಳು ನೋಡಿದರೆ ಕಾಳಕೂಟ ವಿಷಕ್ಕೂ ಮಧುರವೆನ್ನಬಹುದು ।೪೬೩॥

ಆದರೆ, ಗಂಧರ್ವನಗರದ ತೆರೆಗಳು ಅಥವಾ ಪೊಳ್ಳಾದ ಪೆಂಡಿಗಳು ಇಲ್ಲವೆ ಚಿತ್ರದಲ್ಲಿ ಫಲಗಳು ಇರುವುವು. ಇವು ಹೇಗೋ ಆ ವೀರರೆಲ್ಲರೂ ನಿರ್ಜೀವರಿರುವರು ।೪೬೪॥

ಈ ಸೈನ್ಯವು ಮೃಗಜಲದ ಪೂರಿನಂತೆ ವಸ್ತ್ರದ ಹಾವಿನಂತೆ ಅಥವಾ ಅಲಂಕಾರಯುಕ್ತ ಗೊಂಬೆಯಂತೆ ಇರುವುದು ।೪೬೫॥

ಶ್ಲೋಕಾರ್ಥ :- ಅಯ್ಯೋ ಹುಚ್ಚಾ! ಏಳು, ಕೀರ್ತಿಯನ್ನು ಸಂಪಾದಿಸಿಕೊ. ಶತ್ರುಗಳನ್ನು ನಾಶ ಮಾಡಿ ನಿಷ್ಕಂಟಕವಾದ ರಾಜ್ಯವನ್ನು ಸ್ವೇಚ್ಛೆಯಾಗಿ ಅನುಭವಿಸು, ಆಗಲೇ ಇವರು ನನ್ನಿಂದ ಸತ್ತು ಹೋಗಿರುವರು. ಸವ್ಯಸಾಚಿ ! ನೀನು ನಿಮಿತ್ತ ಮಾತ್ರನಾಗಿ ನಿಲ್ಲು ।೩೩॥

ಸಾಮಾನ್ಯವಾಗಿ ಯಾವ ಬಲದಿಂದ ಶರೀರದ ಚೇಷ್ಟೆ ನಡೆಯುವುದೋ, ಅದೆಲ್ಲವನ್ನು ನಾನು ಮೊದಲೇ ಗ್ರಾಸಮಾಡಿದ್ದೇನೆ. ಈಗ ಈ ಎಲ್ಲ ಸೈನ್ಯವು ಕುಂಬಾರನ ಆಟದ ಗೊಂಬೆಗಳಂತೆ ನಿರ್ಜೀವವಾಗಿದೆ ।೪೬೬॥

ಸೂತ್ರ ಗೊಂಬೆಯ ದಾರವುಹರಿದಾಗ ಆ ಗೊಂಬೆಗಳಿಗೆ ಯಾರು ಬೇಕಾದರೂ ಸರಿಸಿದಲ್ಲಿ ಅವು ಬುಡ ಮೇಲಾಗಿ ಬೀಳುವುವು ।೪೬೭॥

ತೈಸಾ ಸೈನ್ಯಾಚಾ ಯಯಾ ಬಗಾ । ಮೋಡತಾ ವೇಳು ನಲಾಗೇಲ ಪೈ ಗಾ । ಮ್ಹಣೌನಿ ಉಠೀ ಉಠೀ ವೇಗಾ । ಶಾಹಾಣಾ ಹೋಈ ॥೪೬೮॥ ತುವಾ ಗೋಗ್ರಹಣಾಚೇನಿ ಅವಸರೇ । ಘಾತಲೇ ಮೋಹನಾಸ್ತ್ರ ಏಕಸರೇ । ಮಗ ವಿರಾಟಾಚೇನಿ ಮಹಾಭೇಡೇ ಉತ್ತರೇ । ಆಸಡೂನಿ ನಾಗವಿಲೇ ॥೪೬೯॥ ಆತಾ ಹೇ ತ್ಯಾಹೂನಿ ನಿಪಟಾರೇ ಜಾಹಲೇ । ನಿವಟೀ ಆಯಿತೇ ರಣ ಪಡಿಲೇ । ಘೇಈ ಯಶ ರಿಪು ಜಿಂತಿಲೇ । ಏಕಲೇನಿ ಅರ್ಜುನೇ ॥೪೭೦॥ ಆಣಿ ಕೋರಡೇ ಯಶಚಿ ನೋಹೇ । ಸಮಗ್ರ ರಾಜ್ಯಹೀ ಆಲೇ ಆಹೇ । ತೂ ನಿಮಿತ್ತಮಾತ್ರಚಿ ಹೋಯೇ । ಸವ್ಯಸಾಚೀ ॥೪೭೧॥

ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ ಕರ್ಣಂ ತಥಾನ್ಯಾನಪಿ ಯೋಧವೀರಾನ್ ।
ಮಯಾಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾಃ ಯುಧ್ಯಸ್ವ ಜೇತಾಽಸಿ ರಣೇ ಸಪತ್ನಾನ್ ॥೩೪॥

ದ್ರೋಣಾಚಾ ಪಾಡು ನ ಕರೀ । ಭೀಷ್ಮಾಚೇ ಭಯ ನ ಧರೀ । ಕೈಸೇನಿ ಕರ್ಣಾವರೀ । ಪರಜೂ ಹೇ ನ ಮ್ಹಣ ॥೪೭೨॥ ಕೋಣ ಉಪಾಯೋ ಜಯದ್ರಥಾ ಕೀಜೇ । ಹೇ ನ ಚಿಂತೂ ಚಿತ್ತ ತುಝೇ । ಆಣಿಕಹೀ ಆಥಿ ಜೇ ಜೇ । ನಾವಾಣಿಗೇ ವೀರ ॥೪೭೩॥ ತೇಹೀ ಏಕ ಏಕ ಆಘವೇ । ಚಿತ್ರೀಂಚೇ ಸಿಂಹಾಡೇ ಮಾನಾವೇ । ಜೈಸೇ ವೋಲೇನಿ ಹಾತೇ ಘ್ಯಾವೇ । ಪುಸೋನಿಯಾ ॥೪೭೪॥ ಯಾವರಿ ಪಾಂಡವಾ । ಕಾಇಸಾ ಯುದ್ಧಾಚಾ ಮೇಳಾವಾ ? । ಹಾ ಆಭಾಸು ಗಾ ಆಘವಾ । ಏರ ಗ್ರಾಸಿಲೇಮಿಯಾ ॥೪೭೫॥ ಜೇವ್ಹಾ ತುವಾ ದೇಖಿಲೇ । ಹೇ ಮಾಝಿಯಾ ವದನೀ ಪಡಿಲೇ । ತೇವ್ಹಾಂಚಿ ಯಾಂಚೇ ಆಯುಷ್ಯ ಸರಲೇ । ಆತಾ ರಿತೀ ಸೋಪೇ ॥೪೭೬॥ ಮ್ಹಣೌನಿ ವಹಿಲಾ ಉಠೀ । ಮಿಯಾ ಮಾರಿಲೇ ತೂ ನಿವಟೀ । ನ ರಿಗೇ ಶೋಕಸಂಕಟೀ । ನಾಥಿಲಿಯಾ ॥೪೭೭॥ ಆಪಣಚಿ ಆಡಖಿಳಾ ಕೀಜೇ । ತೋ ಕೌತುಕೇ ಜೈಸಾ ವಿಂಧೋನಿ ಪಾಡಿಜೇ । ತೈಸೇ ದೇಖೇ ಗಾ ತುಝೇ । ನಿಮಿತ್ತ ಆಹೇ ॥೪೭೮॥ ಬಾಪಾ ವಿರುದ್ಧ ಜೇ ಜಾಹಲೇ । ತೇ ಉಪಜತಾಂಚೀ ವಾಘೇ ನೇಲೇ । ಆತಾ ರಾಜೇಂಶೀ ಸಂಚಲೇ । ಯಶ ತೂ ಭೋಗೀ ॥೪೭೯॥ ಸಾವಿಯಾಚಿ ಉತತ ಹೋತೇ ದಾಯಾದ । ಆಣಿ ಬಳಿಯೇ ಜಗೀ ದುರ್ಮದ । ತೇ ವಧಿಲೇ ವಿಶದ । ಸಾಯಾಸು ನ ಲಾಗತಾ ॥೪೮೦॥ ಐಸಿಯಾ ಇಯಾ ಗೋಷ್ಟೀ । ವಿಶ್ವಾದ್ಯಾ ವಾಕ್ಪಟೀ । ಲಿಹೂನಿ ಘಾಲೀ ಕಿರೀಟೀ । ವಿಜಯೀ ಹೋಈ ॥೪೮೧॥

ಈ ಪ್ರಕಾರವಾಗಿ ಈ ಎಲ್ಲ ಸೈನ್ಯದ ಆಕಾರವನ್ನು ಮುರಿದೊಗೆಯಲು ಬಹಳ ಹೊತ್ತು ಹಿಡಿಯುವುದಿಲ್ಲ. ಆದ್ದರಿಂದ ಅರ್ಜುನಾ, ಬೇಗ ಏಳು ಎದ್ದೇಳು ಜಾಣನಾಗು ।೫೬೮॥

ನೀನು ಉತ್ತರ ಗೋಗ್ರಹಣದ ಕಾಲದಲ್ಲಿ ಶತ್ರುವಿನ ಸರ್ವ ಸೈನ್ಯಕ್ಕೆ ಮೋಹನಾಸ್ತ್ರ ಬಿಟ್ಟು ವಿರಾಟನ ಪುಕ್ಕ ಉತ್ತರಕುಮಾರನಿಂದ ಅವರ ವಸ್ತ್ರಗಳ ಹರಣ ಮಾಡಿಸಿರುವೆ ।೫೬೯॥

ಆದೇ ಸೈನ್ಯವು ಈಗ ಅದಕ್ಕಿಂತಲೂ ನಿಕೃಷ್ಟವಾಗಿದೆ ಮತ್ತು ಅನಾಯಾಸವಾಗಿ ರಣದಲ್ಲಿ ಬಂದಿರುವುದು. ಆದ್ದರಿಂದ ಅದರ ಸಂಹಾರಮಾಡು ಮತ್ತು ಒಬ್ಬನೇ ಅರ್ಜುನನು ಶತ್ರುಗಳನ್ನು ಗೆದ್ದನು ಎಂಬ ಯಶವನ್ನು ಪಡೆದುಕೋ ।೫೭೦॥

ಮತ್ತು ಕೇವಲ ಒಣಯಶವಲ್ಲದೇ ಅದರೊಂದಿಗೆ ಸಮಗ್ರವಾದ ರಾಜ್ಯವು ಪ್ರಾಪ್ತವಾದೀತು. ಸವ್ಯಸಾಚಿಯೇ, ನೀನು ನಿಮಿತ್ತ ಮಾತ್ರನಾಗಿ ಶತ್ರುವಿನ ಸಂಹಾರ ಮಾಡು ।೫೭೧॥

ಶ್ಲೋಕಾರ್ಥ :- ನನ್ನಿಂದ ಕೊಲ್ಲಲ್ಪಟ್ಟು ನಾಮ ಮಾತ್ರಕ್ಕೆ ಇರುವ ದ್ರೋಣ, ಭೀಷ್ಮ, ಸೈಂಧವ, ಕರ್ಣ ಮೊದಲಾದ ಶತ್ರುವೀರರನ್ನು ನಿರ್ಮೂಲ ಮಾಡು. ಚಿಂತೆಯನ್ನು ಬಿಟ್ಟು ಯುದ್ಧಮಾಡು, ನೀನು ತಪ್ಪದೇ ಜಯಿಸುವೆ ।೩೪॥

ನೀನು ದ್ರೋಣನನ್ನು ಲೆಕ್ಕಿಸಬೇಡ, ಭೀಷ್ಮನಿಗೆ ಭಯ ಪಡಬೇಡ ಮತ್ತು ಕರ್ಣನ ಮೇಲೆ ಹೇಗೆ ಶಸ್ತ್ರ ಹಿಡಿಯಲಿ ಎನ್ನಬೇಡ ।೫೭೨॥

ಮತ್ತು ಜಯದ್ರಥನನ್ನು ಕೊಲ್ಲಲು ಯಾವ ಉಪಾಯ ಮಾಡಬೇಕೆಂಬುದನ್ನು ವಿಚಾರ ಮಾಡಬೇಡ. ಇನ್ನೂ ಉಳಿದ ಇತರ ನಾಮಾಂಕಿತ ವೀರರಿರುವರು ।೫೭೩॥

ಇವರೆಲ್ಲರೂ ಗೋಡೆಯ ಮೇಲೆ ಬರೆದ ಸಿಂಹಗಳ ಚಿತ್ರದಂತೆ ನಿರ್ಜೀವರಾಗಿದ್ದಾರೆ ಎಂದು ತಿಳಿ. ಇದನ್ನು ಸಾರಿಣೆ ಅರಿವೆಯಿಂದ ಒರೆಸಿಬಿಡಬೇಕು ।೫೭೪॥

ಅದಕ್ಕಾಗಿ ಅರ್ಜುನಾ, ಈ ಯುದ್ಧಕ್ಕಾಗಿ ಕೂಡಿದ ವೀರರ ಪಾಡೇನು? ಇದೆಲ್ಲ ಭಾಸವಾಗಿರುವುದು. ಏಕೆಂದರೆ ಇವರೆಲ್ಲರಿಗೂ ನಾನು ಗ್ರಾಸ ಮಾಡಿಬಿಟ್ಟಿರುವೆನು ।೫೭೫॥

ನೀನು ಯಾವಾಗ್ಗೆ ಈ ಎಲ್ಲರೂ ನನ್ನ ಮುಖದಲ್ಲಿ ಹೋದದ್ದು ಕಂಡೆಯೋ, ಅದೇ ಕ್ಷಣಕ್ಕೆ ಇವರೆಲ್ಲರ ಆಯುಷ್ಯವು ಮುಗಿದುಹೋಗಿದೆ. ಈಗಿವರು ಪೊಳ್ಳು ಸಿಪ್ಪೆಯಾಗಿರುವರು ।೫೭೬॥

ಆದ್ದರಿಂದ ಬೇಗ ಏಳು ಮತ್ತು ನಾನು ಯಾರಿಗೆ ಮೊದಲೇ ಹೊಡೆದಿರುವೆನೋ, ಅವರೆಲ್ಲರನ್ನು ಸಂಹರಿಸು. ಇಲ್ಲದ ಶೋಕ ಸಂಕಟದಲ್ಲಿ ಬೀಳಬೇಡ ।೫೭೭॥

ತಾನೇ ಒಂದು ಗುರಿಯನ್ನು ನಿಲ್ಲಿಸಿ ಅದನ್ನು ತಾನೇ ಕೌತುಕದಿಂದ ಹೊಡೆದು ಕೆಡಹುವಂತೆ ಈ ಎಲ್ಲರ ನಾಶ ಮಾಡುವುದಕ್ಕಾಗಿ ನಿನಗೆ ಕೇವಲ ನಿಮಿತ್ತನನ್ನಾಗಿ ಮಾಡಿದೆ ।೫೭೮॥

ಅಪ್ಪಾ, ನಿನ್ನನ್ನು ವಿರೋಧಿಸುವವರಿಗೆ ಅವರು ಹುಟ್ಟಿದಾಕ್ಷಣವೇ ಹುಲಿಯು ಒಯ್ದಿದೆ ಎಂದು ತಿಳಿ. ಈಗ ರಾಜ್ಯ ಸಹ ಯಶಪಡೆದು ಅದನ್ನು ಉಪಭೋಗಿಸು ।೫೭೯॥

ಸ್ವಭಾವತಃ ಉನ್ಮತ್ತರಾದ, ಜಗತ್ತಿನಲ್ಲಿಯೇ ಬಲಿಷ್ಠರಾದ, ದುಷ್ಟರಾದ ಮತ್ತು ವಿಷಹಾಕುವವರಾದ ಬಂಧುಗಳು ನಿರಾಯಾಸವಾಗಿ ಕೊಲ್ಲಲ್ಪಟ್ಟರು ।೫೮೦॥

ಈ ಪ್ರಕಾರದ ಮಾತುಗಳನ್ನು ಅರ್ಜುನಾ, ಜಗತ್ತಿನ ನಾಲಿಗೆಯ ಮೇಲೆ ಬರೆದಿಡು. (ಎಲ್ಲರೂ ಚರ್ಚಿಸುವ ವಿಷಯವಾಗಲಿ ಮತ್ತು ವಿಜಯಿಯಾಗು) ।೫೮೧॥

ಸಂಜಯ ಉವಾಚ :-
ಏತಚ್ಛ್ರುತ್ವಾ ವಚನಂ ಕೇಶವಸ್ಯ ಕೃತಾಂಜಲಿರ್ವೇಪಮಾನಃ ಕಿರೀಟೀ ।
ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ ಸಗದ್ಗದಂ ಭೀತಭೀತಃ ಪ್ರಣಮ್ಯ ।੩೫॥

ಐಸೀ ಆಘವೇಚಿ ಹೇ ಕಥಾ । ತಯಾ ಅಪೂರ್ಣ ಮನೋರಥಾ । ಸಂಜಯೋ ಸಾಂಗೇ ಕುರುನಾಥಾ । ಜ್ಞಾನದೇವೋ ಮ್ಹಣೇ ।੪੮੨॥ ಮಗ ಸತ್ಯಲೋಕೌನಿ ಗಂಗಾಜಳ । ಸುಟಲಿಯಾ ವಾಜತ ಖಳಾಲ । ತೈಶೀ ವಾಚಾ ವಿಶಾಳ । ಬೋಲತಾ ತಯಾ ।੪੮੩॥ ನಾತರೀ ಮಹಾಮೇಘಾಂಚೇ ಉಮಾಳೇ । ಘಡಘಡೀತ ಏಕೇ ವೇಳೇ । ಕಾ ಘುಮ ಘುಮಿಲಾ ಮಂದರಾಚಳೇ । ಕ್ಷೀರಾಬ್ಧೀ ಜೈಸಾ ।੪੮੪॥ ತೈಸೇ ಗಂಭೀರೇ ಮಹಾನಾದೇ । ಹೇ ವಾಕ್ಯ ವಿಶ್ವಕಂದೇ । ಬೋಲಿಲೇ ಅಗಾಧೇ । ಅನಂತ ರೂಪೇ ।੪੮੫॥ ತೇ ಅರ್ಜುನೇ ಮೋಟಕೇ ಐಕಿಲೇ । ಆಣಿ ಸುಖ ಕೀ ಭಯ ದುಣಾವಲೇ । ಹೇ ನೇಣೋ ಪರಿ ಕಾಂಪಿನ್ನಲೇ । ಸರ್ವಾಂಗ ತಯಾಚೇ ।੪੮੬॥ ಸಖೋಲಪಣೇ ವಳಲೀ ಮೋಟ । ಆಣಿ ತೈಸೇಚಿ ಜೋಡಲೇ ಕರಸಂಪುಟ । ಆಣಿ ವೇಳೋವೇಳಾ ಲಲಾಟ । ಚರಣೀ ಠೇವೀ ।੪੮੭॥ ತೇವೀಂಚಿ ಕಾಂಹೀ ಬೋಲೋ ಜಾಯೇ । ತಂವ ಬುಜಾಲಾಚಿ ಠಾಯೇ । ಹೇ ಸುಖ ಕೀ ಭಯ ಹೋಯೇ । ಹೇ ವಿಚಾರಾ ತುಮ್ಹೀ ।੪੮੮॥ ಪರಿ ತೇವ್ಹಾ ದೇವಾಚೇನಿ ಬೋಲೇ । ಅರ್ಜುನಾ ಹೇ ಐಸೇ ಜಾಹಾಲೇ । ಮಿಯಾ ಪದಾಂವರೂನಿ ದೇಖಿಲೇ । ಶ್ಲೋಕಾಚಿಯಾ ।੪੮੯॥ ಮಗ ತೈಸಾಚಿ ಭೇಣಭೇಣ । ಪುಢತೀ ಜೋಹಾರೂನಿ ಚರಣ । ಮಗ ಮ್ಹಣೇ ಜೀ ಆಪಣ । ಐಸೇ ಬೋಲಿಲೇತೀ ।੪੯੦॥

ಅರ್ಜುನ ಉವಾಚ :-
ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ ಜಗತ್ ಪ್ರಹೃಷ್ಯತ್ಯನುರಜ್ಯತೇ ಚ ।
ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ ।੩੬॥

ನಾ ತರೀ ಅರ್ಜುನಾ ಮೀ ಕಾಳು । ಆಣಿ ಗ್ರಾಸಿಜೇ ತೋ ಮಾಝಾ ಖೇಳು । ಹಾ ಬೋಲು ತುಝಾ ಕೀರ ಅಢಳು । ಮಾನೂ ಆಮ್ಹೀ ।੪੯੧॥ ಪರಿ ತುವಾ ಜೀ ಕಾಳೇ । ಆಜಿ ಸ್ಥಿತೀಂಚಿಯೇ ವೇಳೇ । ಗ್ರಾಸಿಜೇ ಹೇ ನ ಮಿಳೇ । ವಿಚಾರಾಸೀ ।੪੯੨॥ ಕೈಸೇನಿ ಆಂಗೀಚೇ ತಾರುಣ್ಯ ಕಾಢಾವೇ? ಕೈಂಚೇ ನವ್ಹೇ ತೇ ವಾರ್ಧಕ್ಯ ಆಣಾವೇ?। ಮ್ಹಣೌನಿ ಕರೂ ಮ್ಹಣಸೀ ತೇ ನವ್ಹೇ । ಬಹುತ ಕರುನೀ ।੪੯੩॥

ಶ್ಲೋಕಾರ್ಥ :- ಸಂಜಯನು ಹೀಗೆಂದನು:- ಶ್ರೀಕೃಷ್ಣ ಭಗವಂತನ ಈ ಮಾತನ್ನು ಕೇಳಿ ಅರ್ಜುನನು ಗದ್ಗದ ಸ್ವರದಿಂದ ಗಡಗಡ ನಡುಗತ್ತ ಕೈ ಜೋಡಿಸಿ ಬಗ್ಗಿ ನಮಸ್ಕರಿಸಿ ಹೀಗೆಂದನು ।೩೫॥

ಜ್ಞಾನೇಶ್ವರರು ಹೇಳುವರು:- ಈ ಪ್ರಕಾರವಾಗಿ ಈ ಎಲ್ಲ ಕಥೆಯನ್ನು ಸಂಜಯನು ಅಪೂರ್ಣ ಮನೋರಥನಾದ ಧೃತರಾಷ್ಟ್ರನಿಗೆ ಹೇಳಿದನು ।೪೮೨॥

ಪುನಃ ಹೇಳಿದನೆನೆಂದರೆ, ಸತ್ಯಲೋಕದಿಂದ ಗಂಗೆಯ ಓಘವು ಹೊರಟಾಗ ಖಳಖಳವೆಂಬ ನಾದವಾಗುವಂತೆ ಗಂಭೀರ ವಾಣಿಯಿಂದ ಶ್ರೀಕೃಷ್ಣನು ಹೇಳಿದನು ।೪೮೩॥

ಅಥವಾ ಮಹಾಮೇಘಗಳು ಘಡಘಡವೆಂದು ಗರ್ಜಿಸುವಂತೆ, ಇಲ್ಲವೇ ಕ್ಷೀರಾಬ್ಧಿಯಲ್ಲಿ ಮಂದರಾಚಲ ದಿಂದ ಮಂಥಿಸುವಾಗ್ಗೆ ಘುಮಘುಮಿಸುವಂತೆ ।೪೮೪॥

ಈ ಪ್ರಕಾರವಾಗಿ ಅನಂತರೂಪಿಯಾದ ವಿಶ್ವದ ಮೂಲನಾದ ಶ್ರೀಕೃಷ್ಣನು ಗಂಭೀರವಾಣಿಯಿಂದ ಈ ವಾಕ್ಯಗಳನ್ನು ನುಡಿದನು ।೪೮೫॥

ಇದನ್ನು ಅರ್ಜುನನು ತುಸು ಕೇಳಿದನು. ಆಗ ಆತನಿಗೆ ಸುಖ ಬೆಳೆಯಿತೊ, ದುಃಖ ಬೆಳೆಯಿತೊ, ಇದಾವುದೂ ತಿಳಿಯದಾಯಿತು. ಆದರೆ ಆತನ ಸರ್ವಾಂಗವು ನಡುಗ ಹತ್ತಿತು ।೪೮೬॥

ಆತನು ಅತಿ ನಮ್ರತೆಯಿಂದ ಬಾಗಿ ಕೈಗಳನ್ನು ಜೋಡಿಸಿ ಮೇಲಿಂದ ಮೇಲೆ ಶ್ರೀಕೃಷ್ಣನ ಚರಣಗಳಲ್ಲಿ ಮಸ್ತಕ ವನ್ನಿಟ್ಟನು ।೪೮೭॥

ಮತ್ತು ಏನೋ ಹೇಳಬೇಕೆಂದಾಗ ಆತನ ಕಂಠ ಬಿಗಿಯಿತು. ಶ್ರೋತೃಗಳವರೇ, ಈ ಸ್ಥಿತಿಯು ಸುಖದಿಂದಾಯಿತೊ, ದುಃಖದಿಂದಾಯಿತೊ ಎಂಬುದನ್ನು ನೀವೇ ವಿಚಾರಿಸಿರಿ ।೪೮೮॥

ಆದಾಗ್ಯೂ; ದೇವನ ಮಾತಿನಿಂದ ಅರ್ಜುನನ ಈ ಸ್ಥಿತಿಯಾಯಿತೆಂದು ನಾನು ಶ್ಲೋಕದ ಪದಗಳ ಅರ್ಥದ ಮೇಲಿಂದ ಹೇಳುವೆ ।೪೮೯॥

ಆಗ ಅರ್ಜುನನು ಹಾಗೆಯೇ ಹೆದರುತ್ತ ಹೆದರುತ್ತ ಪುನಃ ಒಮ್ಮೆ ಚರಣಗಳಿಗೆ ನಮಸ್ಕರಿಸಿ ಆಗ ಹೇಳಿದನು, ಜೀಯಾ, ನೀವು ಹೀಗೆ ಹೇಳಿರುವಿರಿರೆಲ್ಲಾ ? ।೪೯೦॥

ಶ್ಲೋಕಾರ್ಥ :- ಅರ್ಜುನನು ಹೀಗೆ ಅಂದನು:- ಹೃಷಿಕೇಶಾ! ನಿನ್ನ ವಿಶಾಲ ಕೀರ್ತಿಯಿಂದ ಲೋಕವು ಹರ್ಷಪಡುವುದು. ನಿನ್ನಲ್ಲಿ ಅಧಿಕ ಶ್ರದ್ಧಾಭಕ್ತಿಗಳನ್ನು ತೋರಿಸುವುದು. ರಾಕ್ಷಸರು ಭಯದಿಂದ ದಿಕ್ಕುದಿಕ್ಕಿಗೆ ಓಡುವುದೂ ಸಮಸ್ತ ಸಿದ್ಧಸಮೂಹವು ನಿನಗೆ ನಮಸ್ಕರಿಸುವುದೂ. ಇವೆಲ್ಲವೂ ನಿನ್ನ ಮಹಿಮೆಗೆ ಯೋಗ್ಯವೇ ಆಗಿರುತ್ತವೆ ।೩೬॥

ಅರ್ಜುನಾ, ನಾನು ಕಾಳನಿರುವೆನು, ಮತ್ತು ಸರ್ವರ ಗ್ರಾಸಮಾಡುವುದು ನನ್ನ ಆಟವಿರುವುದು. ಈ ನಿನ್ನ ಮಾತುಗಳು ನಿಜ ಮತ್ತು ಸ್ಥಿರವಾದದ್ದು ಎಂದು ನಾವು ಒಂದು ವೇಳೆ ತಿಳಿದುಕೊಂಡರೆ ।೪೯೧॥

ಆದರೆ, ನೀವು ಕಾಳರೂಪಿ ಪರಮೇಶ್ವರರು. ಜಗತ್ತಿನ ಪ್ರಳಯಕಾಲ ಇರದೇ ಸ್ಥಿತಿಕಾಲದಲ್ಲಿಯೇ ನಾಶದ ಪ್ರವೃತ್ತನಾದದ್ದು ಇದು ವಿಚಾರದಿಂದ ಸರಿಯೆನಿಸುವುದಿಲ್ಲ ।೪೯೨॥

ಒಬ್ಬನ ಶರೀರದಲ್ಲಿನ ತಾರುಣ್ಯವನ್ನು ಒಮ್ಮೆಲೆ ತೆಗೆದು ವಾರ್ಧಕ್ಯ (ಮುದಿತನ) ಹೇಗೆ ಹಾಕಲು ಬರುವುದು? ಆದ್ದರಿಂದ ನೀವು ಮಾಡುವೆ ಎಂಬುದು ಬಹಳ ಮಾಡಿ ಆಗದ ಮಾತು ।೪೯೩॥

ಹಾ ಜೇ ಚೌಪಾಹಾರೀ ನ ಭರತಾ । ಕೋಣೇಹೀ ವೇಳೆ ಶ್ರೀಅನಂತಾ । ಕಾಯ ಮಾಧ್ಯಾನ್ಹೀ ಸವಿತಾ । ಮಾವಳತು ಆಹೇ? ।೯೪॥ ಪೈ ತುಜ ಅಖಂಡಿತಾ ಕಾಳಾ । ತಿನ್ಹೀ ಆಹಾತೀ ಜೇ ವೇಳಾ । ತ್ಯಾ ತಿನ್ಹೀ ಪರೀ ಸಬಳಾ । ಆಪುಲಾಲಿಯಾ ಸಮಯೀ ।೯೫॥ ಜೇ ವೇಳೀ ಹೋ ಲಾಗೇ ಉತ್ಪತ್ತೀ । ತೇ ವೇಳೀ ಸ್ಥಿತಿ ಪ್ರಳಯೋ ಹಾರಪತೀ । ಆಣಿ ಸ್ಥಿತಿಕಾಳೀ ನ ಮಿರವಿತೀ । ಉತ್ಪತ್ತಿ ಪ್ರಳಯೋ ।೯೬॥ ಪಾಠೀ ಪ್ರಳಯಾಚಿಯೇ ವೇಳೇ । ಉತ್ಪತ್ತಿ ಸ್ಥಿತಿ ಮಾವಳೇ । ಹೇ ಕಾಯಸೇನಹೀ ನ ಢಳೇ । ಅನಾದಿ ಐಸೇ ।೯೭॥ ಮ್ಹಣೌನಿ ಆಜಿ ತಂವ ಭರೇ ಭೋಗೇ । ಸ್ಥಿತಿ ವರ್ತಿಜತ ಆಹೇ ಜಗೇ। ಏಥ ಗ್ರಾಸಿಸೀ ತೂ ಹೇ ನ ಲಗೇ । ಮಾಝ್ಯಾ ಜೀವೀ ।೯೮॥ ತಂವ ಸಂಕೇತೇ ದೇವ ಬೋಲೇ । ಅಗಾ ಯಾ ದೋನ್ಹೀ ಸೈನ್ಯಾಂಸೀಚಿ ಭರಣ ಪುರಲೇ । ತೇ ಪ್ರತ್ಯಕ್ಷ ಚಿ ತುಜ ದಾವಿಲೇ । ಏರ ಯಥಾಕಾಳೇ ಜಾಣ ।೯೯॥ ಹಾ ಸಂಕೇತು ಜಂವ ಅನಂತಾ । ವೇಳು ಲಾಗಲಾ ಬೋಲತಾ । ತಂವ ಅರ್ಜುನೇ ಲೋಕು ಮಾಗುತಾ । ದೇಖಿಲಾ ಯಥಾಸ್ಥಿತೀ ।೧೦೦॥ ಮಗ ಮ್ಹಣತಸೇ ದೇವಾ । ತೂ ಸೂತ್ರೀ ವಿಶ್ವಲಾಘವಾ । ಜಗ ಆಲಾ ಮಾ ಆಘವಾ । ಪೂರ್ವಸ್ಥಿತಿ ಪುಢತೀ ।೧೦೧॥ ಪಡೀ ಪಡಲಿಯಾ ದುಃಖಸಾಗರೀ । ತೂ ಕಾಢಿಸೀ ಕಾ ಜಯಾಪರೀ । ತೇ ಕೀರ್ತೀ ತುಝೀ ಶ್ರೀಹರೀ । ಆಠವಿತ ಅಸೇ ।೧೦೨॥ ಕೀರ್ತಿ ಆಠವಿತಾ ವೇಳೋವೇಳಾ । ಭೋಗಿತಸೇ ಮಹಾಸುಖಾಚಾ ಸೋಹಳಾ । ತೇಥ ಹರ್ಷಾಮೃತಕಲ್ಲೋಳಾ । ವರೀ ಲೋಳತ ಆಹೇ ।೧೦೩॥ ದೇವಾ ಜಿಯಾಲೇಪಣೇ ಜಗ । ಧರೀ ತುಝ್ಯಾ ಠಾಯೀ ಅನುರಾಗ । ಆಣಿ ದುಷ್ಟಾ ತಯಾ ಭಂಗ । ಅಧಿಕಾಧಿಕ ।೧೦೪॥ ಪೈ ತ್ರಿಭುವನೀಂಚಿಯಾ ರಾಕ್ಷಸಾ । ಮಹಾಭಯ ತೂ ಹೃಷಿಕೇಶಾ । ಮ್ಹಣೌನಿ ಪಳತಾತೀ ದಾಹೀ ದಿಶಾ । ಪೈಲೀಕಡೇ ।೧೦೫॥ ಏಥ ಸುರ ನರ ಸಿದ್ಧ ಕಿನ್ನರ । ಕಿಂಬಹುನಾ ಚರಾಚರ । ತೇ ತುಜ ದೇಖೋನಿ ಹರ್ಷನಿರ್ಭರ । ನಮಸ್ಕಾರಿತ ಅಸತೀ ।೧೦೬॥

ಕಸ್ಮಾಚ್ಚ ತೇ ನ ನಮೇರನ್ ಮಹಾತ್ಮನ್ ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ ।
ಅನಂತ ದೇವೇಶ ಜಗನ್ನಿವಾಸ ತ್ವಮಕ್ಷರಂ ಸದಸತ್ತತ್ಪರಂ ಯತ್ ।೩೭॥

ಏಥ ಗಾ ಕವಣಾ ಕಾರಣಾ । ರಾಕ್ಷಸ ಹೇ ನಾರಾಯಣಾ । ನ ಲಗತೀಚಿ ಚರಣಾ । ಪಳತೇ ಜಾಹಲೇ ।೧೦೭॥

ಇಲ್ಲಿ ನೋಡು ಅನಂತಾ, ದಿವಸದ ನಾಲ್ಕುಪ್ರಹರ ಮುಗಿಯದೇ ಎಂದಾದರೂ ಮಧ್ಯಾಹ್ನವೇ ಸೂರ್ಯನು ಮುಳುಗುವನೇನು? ।೯೯೪॥

ಅಖಂಡವಾಗಿ ಕಾಳ ಸ್ವರೂಪವಿರುವ ನಿನ್ನ ಜಗದ ಉತ್ಪತ್ತಿ, ಸ್ಥಿತಿ, ನಾಶಗಳ ಈ ಮೂರು ಸಮಯವಿರುವುದು ಮಾನ್ಯವಿದೆ. ಇವು ತಮ್ಮ ತಮ್ಮ ಅವಸ್ಥೆಗಳಲ್ಲಿ ಸಮರ್ಥರಾಗಿರುವುವು ।೯೯೫॥

ಉತ್ಪತ್ತಿಯ ಕಾಲಕ್ಕೆ ಸ್ಥಿತಿ ಪ್ರಳಯಗಳು ಇರುವುದಿಲ್ಲ, ಮತ್ತು ಸ್ಥಿತಿಯ ಕಾಲಕ್ಕೆ ಉತ್ಪತ್ತಿ ಪ್ರಳಯಗಳು ಇರುವುದಿಲ್ಲ? ।೯೯೬॥

ಮತ್ತು ಕೊನೆಯಲ್ಲಿ ಪ್ರಳಯಕಾಲದಲ್ಲಿ ಉತ್ಪತ್ತಿ ಸ್ಥಿತಿಗಳು ಸಹಜವಾಗಿ ಇಲ್ಲದಾಗುವುವು. ಈ ಅವಸ್ಥೆಗಳು ಅನಾದಿ ಇದ್ದು ಯಾವುದರಿಂದಲೂ ಬದಲಾಗದು ।೯೯೭॥

ಆದ್ದರಿಂದ ಈಗ ಜಗವು ಸ್ಥಿತಿಯ ಉಪಭೋಗ ಪಡೆಯುವ ಭರದಲ್ಲಿರುವಾಗ ಅದನ್ನು ಗ್ರಾಸಿಸಿದೆ ಎಂದು ನೀವು ಹೇಳುವ ಮಾತು ನನಗೆ ಹಿಡಿಸುವುದಿಲ್ಲ ।೯೯೮॥

ಆಗ ದೇವನು ಸಂಕೇತದಿಂದ ಹೇಳಿದನು. ಅರೇ, ಈ ಎರಡೂ ಸೈನ್ಯಗಳ ಆಯುಷ್ಯ ಮುಗಿದಿದೆ ಎಂದು ನಿನಗೆ ಪ್ರತ್ಯಕ್ಷವಾಗಿ ತೋರಿಸಿದೆ. ಉಳಿದವರು ಯಥಾ ಕಾಲದಲ್ಲಿ ಸಾಯುವರು ಎಂದು ತಿಳಿ ।೯೯೯॥

ಈ ಸಂಕೇತವನ್ನು ಶ್ರೀಅನಂತನು ಹೇಳುವುದೊಂದೇ ತಡ, ಅರ್ಜುನನು ಪೂರ್ವದಂತೆ ಎಲ್ಲ ಸೈನ್ಯವು ಸ್ಥಳದಲ್ಲಿಯೇ ಇರುವುದನ್ನು ಕಂಡನು ।೬೦೦॥

ಆಗ ಆತನು ಹೇಳುತ್ತಾನೆ, ಹೇ ದೇವನೇ, ನೀವು ವಿಶ್ವದ ಚಾಲಕ ಸೂತ್ರಧಾರರಿರುವಿರಿ. ಆದ್ದರಿಂದ ಈ ಜಗವು ಪೂರ್ವಸ್ಥಿತಿಗೆ ಬಂದಿತು ।೬೦೧॥

ಆದರೆ ಶ್ರೀಹರಿಯೇ, ದುಃಖಸಾಗರದಲ್ಲಿ ಬಿದ್ದವರನ್ನು ನೀವು ಹೊರಗೆ ತೆಗೆಯುವಿರಿ. ಇದು ನಿಮ್ಮ ಕೀರ್ತಿಯಾಗಿದೆ. ಇದರ ಸ್ಮರಣೆ ನಮಗೆ ಪೂರ್ಣವಿದೆ ।೬೦೨॥

ನಿಮ್ಮ ಕೀರ್ತಿಗಳು ಮೇಲಿಂದ ಮೇಲೆ ಸ್ಮರಣೆಯಾಗಿ ಮಹಾಸುಖವನ್ನು ಭೋಗಿಸುತ್ತ ಆನಂದ ಸಮುದ್ರದ ತೆರೆಗಳಲ್ಲಿ ನಾನು ಉರುಳಾಡುತ್ತಿರುವೆನು ।೬೦೩॥

ದೇವಾ, ಈ ಜಗವು ಜೀವಂತವಾಗಿರುವುದರಿಂದ ನಿನ್ನಲ್ಲಿ ಪ್ರೀತಿ ಇಷ್ಟು ಸುಖವಾಗಿರುವುದು ಮತ್ತು ದುಷ್ಟರನ್ನು ನೀವು ಪುನಃ ಪುನಃ ನಾಶಗೊಳಿಸುವಿರಿ ।೬೦೪॥

ಆದರೆ, ಹೇ ಹೃಷೀಕೇಶಿಯೇ, ತ್ರಿಭುವನದಲ್ಲಿನ ರಾಕ್ಷಸರಿಗೆ ನಿಮ್ಮ ಭಯವಿರುವುದು. ಆದ್ದರಿಂದ ಅವರು ನಿಮ್ಮಿಂದ ದಶದಿಕ್ಕುಗಳಾಚೆಗೆ ದೂರ ಓಡುವರು ।೬೦೫॥

ಇವರ ಹೊರತಾಗಿ ದೇವತೆಗಳು, ಮನುಷ್ಯರು, ಸಿದ್ಧರು, ಯಕ್ಷರು, ಒಟ್ಟಿನಲ್ಲಿ ಎಲ್ಲ ಸ್ಥಾವರ ಜಂಗಮಗಳು ನಿಮ್ಮನ್ನು ಹರ್ಷಯುಕ್ತದಿಂದ ವಂದಿಸುವುವು ।೬೦೬॥

ಶ್ಲೋಕಾರ್ಥ :- ಮಹಾತ್ಮಾ! ಬ್ರಹ್ಮನಿಗೂ ಆದಿಕರ್ತನೂ ಘನನೂ ಆದ ನಿನಗೆ ನಮಸ್ಕರಿಸಿದೆ ಅವರು ಇರುವುದೆಂತು? ಅನಂತಾ! ದೇವೇಶಾ! ಜಗನ್ನಿವಾಸಾ! ನೀನು ಸತ್ತಿಗೂ ಅಸತ್ತಿಗೂ ಅತೀತನಾಗಿರುವ ಅಕ್ಷರ ಪರಬ್ರಹ್ಮನಲ್ಲವೇ? ।೩೭॥

ಹೇ ನಾರಾಯಣನೇ, ಯಾವ ಕಾರಣಕ್ಕಾಗಿ ರಾಕ್ಷಸರು ನಿಮ್ಮನ್ನು ನಮಸ್ಕರಿಸದೇ ದೂರ ಓಡುವರು? ।೬೦೭॥

ಆಣಿ ಹೇ ಕಾಯ ತೂಂತೇ ಪುಸಾವೇ । ಯೇತುಲೇ ಆಮ್ಹಾಂಸಿಹೀ ಜಾಣವೇ । ತರೀ ಸುರ್ಯೋದಯೀ ರಾಹಾವೇ । ಕೈಸೇನಿ ತಮೇ? ।೫೦೮॥ ಜೀ ತೂ ಪ್ರಕಾಶಾಚಾ ಆಗರೂ । ಆಣಿ ಜಾಹಲಾ ಆಮ್ಹಾಸಿ ಗೋಚರೂ । ಮ್ಹಣೌನಿಯಾ ನಿಶಾಚರಾ ಕೇರೂ । ಫಿಟಲಾ ಸಹಜೇ ।೫೦೯॥ ಹೇ ಯೇತುಲೇ ದಿವಸ ಆಮ್ಹಾ । ಕಾಂಹೀ ನೇಣವೇಚಿ ಶ್ರೀರಾಮಾ । ಆತಾ ದೇಖತಸೇ ಮಹಿಮಾ । ಗಂಭೀರ ತುಝಾ ।೫೧೦॥ ಜೇಥೂನಿ ನಾನಾ ಸೃಷ್ಟೀಂಚಿಯಾ ವೋಳೀ । ಪಸರತೀ ಭೂತಗ್ರಾಮಾಚಿಯಾ ವೇಲೀ । ತಯಾ ಮಹದ್‌ಬ್ರಹ್ಮಾತೇ ವ್ಯಾಲೀ । ದೈವಿಕೀ ಇಚ್ಛಾ ।೫೧೧॥ ದೇವೋ ನಿಃಸೀಮ ತತ್ತ್ವ ಸದೋದಿತು । ದೇವೋ ನಿಃಸೀಮ ಗುಣ ಅನಂತು । ದೇವೋ ನಿಃಸೀಮ ಸಾಮ್ಯ ಸತತು । ನರೇಂದ್ರ ದೇವಾಂಚಾ ।೫೧೨॥ ಜೀ ತೂ ತ್ರಿಜಗತಿಯೇ ವೋಲಾವಾ । ಅಕ್ಷರ ತೂ ಸದಾಶಿವಾ । ತೂಂಚಿ ಸದಸತ್ ದೇವಾ । ತಯಾಹೀ ಅತೀತ ತೇ ತೂ ।೫೧೩॥

ತ್ವಮಾದಿದೇವಃ ಪುರುಷಃ ಪುರಾಣಃ ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।<br>ವೇತ್ತಾಽಸಿ ವೇದ್ಯಂ ಚ ಪರಂ ಚ ಧಾಮ ತ್ವಯಾ ತತಂ ವಿಶ್ವಮನಂತರೂಪ ।೩೮॥

ತೂ ಪ್ರಕೃತಿಪುರುಷಾಂಚಿಯಾ ಆದೀ । ಜೀ ಮಹತ್ತತ್ತ್ವಾ ತೂಂಚಿ ಅವಧೀ । ಸ್ವಯೇ ತೂ ಅನಾದಿ । ಪುರಾತನು ।೫೧೪॥ ತೂ ಸಕಳ ವಿಶ್ವಜೀವನ । ಜೀವಾಂಸಿ ತೂಂಚಿ ನಿಧಾನ । ಭೂತವಿಷ್ಯಾಚೇ ಜ್ಞಾನ । ತುಝ್ಯಾಚಿ ಹಾತೀ ।೫೧೫॥ ಜೀ ಶ್ರುತೀಚಿಯಾ ಲೋಚನಾ । ಸ್ವರೂಪಸುಖ ತೂಂಚಿ ಅಭಿನ್ನಾ । ತ್ರಿಭುವನಾಚಿಯಾ ಆಯತನಾ । ಆಯತನ ತೂ ।೫೧೬॥ ಮ್ಹಣೌನಿ ಜೀ ಪರಮ । ತೂಂತೇ ಮ್ಹಣಿಜೇ ಮಹಾಧಾಮ । ಕಲ್ಪಾಂತೀ ಮಹದ್‌ಬ್ರಹ್ಮ । ತುಜಮಾಜೀ ರಿಗೇ ।೫೧೭॥ ಕಿಂಬಹುನಾ ತುವಾ ದೇವೇ । ವಿಶ್ವ ವಿಸ್ತಾರಿಲೇ ಆಹೇ ಆಘವೇ । ತರಿ ಅನಂತರೂಪಾ ವಾನಾವೇ । ಕವಣೇ ತೂಂತೇ ।೫೧೮॥

ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।<br>ನಮೋ ನಮಸ್ತೇಽಸ್ತು ಸಹಸ್ರಕೃತ್ವಃ ಪುನಶ್ಚ ಭೂಯೋಽಪಿ ನಮೋ ನಮಸ್ತೇ ।೩೯॥

ನಮಃ ಪುರಸ್ತಾದಥ ಪೃಷ್ಠತಸ್ತೇ ನಮೋಽಸ್ತು ತೇ ಸರ್ವತ ಏವ ಸರ್ವ ।<br>ಅನಂತವೀರ್ಯಾಮಿತವಿಕ್ರಮಸ್ತ್ವಂ ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ।೪೦॥

ಇದನ್ನು ನಿಮಗೆ ಕೇಳಬೇಕಾಗಿಲ್ಲ, ನಮಗೆ ತಿಳಿಯುವು ದೇನೆಂದರೆ ಸೂರ್ಯೋದಯವಾದಾಗ್ಗೆ ಕತ್ತಲವು ಹೇಗೆ ಉಳಿದೀತು? ಅದರಂತೆ ನಿಮ್ಮ ಮುಂದೆ ರಾಕ್ಷಸರು ಹೇಗೆ ನಿಲ್ಲ ಬಹುದು? ।೫೦೮॥

ನೀನು ಸ್ವಭಾವತಃ ಪ್ರಕಾಶದ ಆಗರನಾಗಿರುವೆ ಮತ್ತು ಇಲ್ಲಿ ದೃಷ್ಟಿಗೆ ಗೋಚರಿಸಿರುವೆ. ಆದ್ದರಿಂದ ರಾತ್ರಿ ಸಂಚಾರ ಮಾಡುವ ರಾಕ್ಷರನ್ನು ಸಹಜವಾಗಿ ಕಸ ಹೊಡೆಯಲಾಯಿತು. (ನಿನ್ನ ಪ್ರಕಾಶಕ್ಕೆ ಓಡಿ ಹೋದರು) ।೫೦೯॥

ಹೇ ಶ್ರೀರಾಮನೇ, ಇಷ್ಟು ದಿವಸದವರೆಗೂ ನಮಗೆ ನಿನ್ನ ಮಹಿಮೆಯು ತಿಳಿದಿದ್ದಿಲ್ಲ. ಆದರೆ ಈಗ ನಿಮ್ಮ ಈ ಅಲೌಕಿಕ ಮಹಿಮೆಯನ್ನು ನೋಡುತ್ತಿದ್ದೇವೆ ।೫೧೦॥

ಯಾವ ಸ್ಥಾನದಿಂದ ಸೃಷ್ಟಿಯ ಸರಣಿಯಾದ ಪ್ರಾಣಿ ಮಾತ್ರರ ಬಳ್ಳಿಯು ಜಗವೆಲ್ಲ ಪಸರಿಸುವುದು. ಈ ಮಾಯೆಗೆ ನಿಮ್ಮ ಇಚ್ಛೆಯೇ ಆದಿಸ್ಥಾನವಾಗಿದೆ ।೫೧೧॥

ದೇವಾ, ನೀವು ಈ ಅಮರ್ಯಾದ ತತ್ತ್ವರೂಪರಾಗಿದ್ದು ನಿಮ್ಮ ಅಸ್ತಿತ್ವವು ತ್ರಿಕಾಲಾಬಾಧಿತವಾಗಿದೆ. ಅಂತರಹಿತವಾದ ನಿಮ್ಮ ಗುಣಗಳ ಗಣತಿ ಇಲ್ಲ. ನೀವು ಅಖಂಡವಾಗಿ, ಪ್ರತಿ ಬಂಧರಹಿತರಾಗಿ, ಸರ್ವವ್ಯಾಪಿಯಾಗಿ, ದೇವರ ರಾಜರಾಗಿ ರುವಿರಿ ।೫೧೨॥

ಜೀಯಾ, ನೀನು ಮೂರುಲೋಕಗಳನ್ನು ಪ್ರೀತಿಸು ವವನು. ಸದಾ ಕಲ್ಯಾಣಸ್ವರೂಪನಾದ ದೇವನೇ, ನೀನು ವ್ಯಕ್ತ ಮತ್ತು ಅವ್ಯಕ್ತನಾಗಿದ್ದೂ ಅದರ ಆಚೆಗಿರುವ ತತ್ತ್ವವೂ ನೀನೇ ಇರುವೆ ।೫೧೩॥

ಶ್ಲೋಕಾರ್ಥ :- ನೀನು ಆದಿದೇವನು; ಪುರಾಣ ಪುರುಷನು; ಈ ವಿಶ್ವಕ್ಕೆ ಪರಂಧಾಮನು; ಎಲ್ಲವು ಗಳಿಂದ ತಿಳಿಯತಕ್ಕವನು ನೀನೇ, ನೀನು ಪರಂಧಾ ಮನು. ಹೇ ಅನಂತರೂಪಾ! ಜಗತ್ತಿನಲ್ಲೆಲ್ಲಾ ತುಂಬಿ ತುಳುಕುತ್ತಿರುವೆ ।೩೮॥

ನೀವು ಪ್ರಕೃತಿ ಪುರುಷರಕ್ಕಿಂತಲೂ ಮೊದಲಿಗರು ಮತ್ತು ಮಹತತ್ತ್ವ (ಮಾಯೆಯು) ನೀವೇ ಇರುವಿರಿ. ನೀವು ಪುರಾತನರಿದ್ದು ನಿಮಗಿಂತ ಪೂರ್ವದವರು ಯಾರೂ ಇರುವುದಿಲ್ಲ ।೫೧೪॥

ನೀವು ಸರ್ವವಿಶ್ವದ ಚಾಲಕರು ಮತ್ತು ಸರ್ವ ಜೀವದ ಅಧಿಷ್ಠಾನರು, ಭೂತ ಭವಿಷ್ಯದ ಜ್ಞಾನವು ನಿಮಗೆ ಮಾತ್ರ ಇದೆ ।೫೧೫॥

ಶ್ರುತಿಗಳ ನೇತ್ರಗಳಿಂದ ಆಗುವ ಸ್ವರೂಪ ಸುಖವು ಅಭೇದರಾದ ನೀವು ಅದು ನಿಮ್ಮದಾಗಿದೆ. ತ್ರಿಭುವನವನ್ನೆಲ್ಲ ವ್ಯಾಪಿಸಿರುವ ಆ ಮಾಯೆಗೆ ಆಶ್ರಯವು ನಿಮ್ಮದಾಗಿದೆ ।೫೧೬॥

ಆದ್ದರಿಂದ ನೀವು ಸರ್ವಸೃಷ್ಟಿಯ ಆಶ್ರಯಸ್ಥಾನರಾಗಿ ಪರಮಶ್ರೇಷ್ಠರಿರುವಿರಿ ಮತ್ತು ಬ್ರಹ್ಮಾಂಡದ ಅಂತ್ಯ ಕಾಲದಲ್ಲಿ ಮಾಯೆಯೂ ನಿಮ್ಮಲ್ಲಿಯೇ ಲಯವಾಗುವುದು ।೫೧೭॥

ಬಹಳ ಮಾಡಿ ದೇವನೇ, ಈ ಎಲ್ಲ ಜಗತ್ತನ್ನು ನೀವೇ ವಿಸ್ತರಿಸಿರುವಿರಿ. ಅನಂತರೂಪರಾದ ನಿಮಗೆ ನಿಮ್ಮ ವರ್ಣನೆಯನ್ನು ಯಾರಿಗೆ ಮಾಡಲು ಸಾಧ್ಯ ? ।೫೧೮॥

ಶ್ಲೋಕಾರ್ಥ :- ನೀನು ವಾಯು, ಯಮನು, ಅಗ್ನಿಯು, ವರುಣನು, ಚಂದ್ರನು, ಬ್ರಹ್ಮದೇವನು, ಬ್ರಹ್ಮದೇವನಿಗೂ ತಂದೆಯು ಅಂಥ ನಿನಗೆ, ಸಾವಿರಾರು ನಮಸ್ಕಾರ, ಪುನಃ ನಮಸ್ಕಾರ ।೩೯॥

ಶ್ಲೋಕಾರ್ಥ :- ಹೇ ವಿಶ್ವರೂಪಾ! ನಿನಗೆ ಮುಂದಿ ನಿಂದ ನಮಸ್ಕಾರ, ಹಿಂದಿನಿಂದ ನಮಸ್ಕಾರ. ಎಲ್ಲಾ ಕಡೆ ಗಳಿಂದಲೂ ನಮಸ್ಕಾರ. ಅಪರಿಮಿತ ಶಕ್ತಿ ಸಾಮರ್ಥ್ಯವುಳ್ಳ ನೀನು ಎಲ್ಲೆಲ್ಲಿಯೂ ತುಂಬಿ ಸರ್ವರೂಪ ನಾಗಿರುವೆ ।೪೦॥

ಜೇ ಕಾಯ ಏಕ ತೂ ನವ್ಹಸೀ । ಕವಣೇ ಠಾಯೀ ನಸಸೀ । ಹೇ ಅಸೋ ಜೈಸಾ ಆಹಾಸೀ । ತೈಸಿಯಾ ನಮೋ ।೫೧೯॥ ವಾಯು ತೂ ಅನಂತಾ । ಯಮ ತೂ ನಿಯಮಿತಾ । ಪ್ರಾಣಿಗಣೀ ವಸತಾ । ಅಗ್ನಿ ತೋ ತೂ ।೫೨೦॥ ವರುಣ ತೂ ಸೋಮ । ಸೃಷ್ಟಾ ತೂ ಬ್ರಹ್ಮ । ಪಿತಾಮಹಾಚಾಹೀ ಪರಮ । ಆದಿ ಜನಕ ತೂ ।೫೨೧॥ ಆಣಿಕಹೀ ಜೇ ಜೇ ಕಾಂಹೀ । ರೂಪ ಆಥಿ ಅಥವಾ ನಾಹೀ । ತಯಾ ನಮೋ ತುಜ ತೈಸಯಾಹೀ । ಜಗನ್ನಾಥಾ ।೫೨೨॥ ಐಸೇ ಸಾನುರಾಗೇ ಚಿತ್ತೇ । ನಮನ ಕೇಲೇ ಪಂಡುಸುತೇ । ಮಗ ಪುಢತೀ ಮ್ಹಣೇ ನಮಸ್ತೇ । ನಮಸ್ತೇ ಪ್ರಭೋ ।೫೨೩॥ ಪಾಠೀ ತಿಯೇ ಸಾದ್ಯಂತೇ । ನ್ಯಾಹಾಳೀ ಶ್ರೀಮೂರ್ತೀತೇ । ಆಣಿ ಪುಢತೀ ಮ್ಹಣೇ ನಮಸ್ತೇ । ನಮಸ್ತೇ ಪ್ರಭೋ ।೫೨೪॥ ಪಾಹತಾ ಪಾಹಾ ಪ್ರಾಂತೇ । ಸಮಾಧಾನ ಪಾವೇ ಚಿತ್ತೇ । ಆಣಿ ಪುಢತೀ ಮ್ಹಣೇ ನಮಸ್ತೇ । ನಮಸ್ತೆ ಪ್ರಭೋ ।೫೨೫॥ ಇಯೇ ಚರಾಚರೀ ಜೇ ಭೂತೇ । ಸರ್ವತ್ರ ದೇಖೇ ತಯಾತೇ । ಆಣಿ ಪುಢತೀ ಮ್ಹಣೇ ನಮಸ್ತೇ । ನಮಸ್ತೇ ಪ್ರಭೋ ।೫೨೬॥ ಐಸೀ ರೂಪೇ ತಿಯೇ ಅದ್ಭುತೇ । ಆಶ್ಚರ್ಯೇ ಸ್ಫುರತಿ ಅನಂತೇ । ತಂವ ತಂವ ನಮಸ್ತೇ । ನಮಸ್ತೇಚಿ ಮ್ಹಣೇ ।೫೨೭॥ ಆಣಿಕ ಸ್ತುತಿಹೀ ನಾಠವೇ । ಆಣಿ ನಿವಾಂತುಹೀ ನ ಬೈಸವೇ । ನೇಣೇ ಕೈಸಾ ಪ್ರೇಮಭಾವೇ । ಗಾಜೋಂಚಿ ಲಾಗೇ ।೫೨೮॥ ಕಿಂಬಹುನಾ ಇಯಾಪರೀ । ನಮನ ಕೇಲೇ ಸಹಸ್ರವರೀ । ಕೀ ಪುಢತೀ ಮ್ಹಣೇ ಶ್ರೀಹರೀ । ತುಜ ಸನ್ಮುಖಾ ನಮೋ ।೫೨೯॥ ದೇವಾಸಿ ಪಾಠೀ ಪೋಟ ಆಥಿ ಕೀ ನಾಹೀ । ಯೇಣೇ ಉಪಯೋಗು ಆಮ್ಹಾ ಕಾಈ । ತರೀ ತುಜ ಪಾಠೀಮೋರೇಯಾಹೀ । ನಮೋ ಸ್ವಾಮೀ ।೫೩೦॥ ಉಭಾ ಮಾಝಿಯೇ ಪಾಠೀಸೀ । ಮ್ಹಣೌನಿ ಪಾಠೀ ಮೋರೇ ಮ್ಹಣಾವೇ ತುಮ್ಹಾಸೀ । ಸನ್ಮುಖ ವಿಮುಖ ಜಗೇಸೀ । ನ ಘಡೇ ತುಜ ।೫೩೧॥ ಆತಾ ವೇಗಳಾಲಿಯಾ ಅವಯವಾ । ನೇಣೇ ರೂಪ ಕರೂ ದೇವಾ । ಮ್ಹಣೌನಿ ನಮೋ ತುಜ ಸರ್ವಾ । ಸರ್ವಾತ್ಮಕಾ ।೫೩೨॥ ಜೇ ಅನಂತ ಬಳಸಂಭ್ರಮಾ । ತುಜ ನಮೋ ಅಮಿತ ವಿಕ್ರಮಾ । ಸಕಳಕಾಳೀ ಸಮಾ । ಸರ್ವ ರೂಪಾ ।೫೩೩॥ ಆಘವಿಯಾ ಆಕಾಶೀ ಜೈಸೇ । ಅವಕಾಶಚಿ ಹೋಊನಿ ಆಕಾಶ ಅಸೇ । ತೂ ಸರ್ವಪಣೇ ತೈಸೇ । ಪಾತಲಾಸಿ ಸರ್ವ ।೫೩೪॥ ಕಿಂಬಹುನಾ ಕೇವಳ । ಸರ್ವ ಹೇ ತೂಂಚೀ ನಿಖಿಳ । ಪರೀ ಕ್ಷೀರಾರ್ಣವೀ ಕಲ್ಲೋಳ । ಪಯಾಚೇ ಜೈಸೇ ।೫೩೫॥

ನೀವು ಇರದ ವಸ್ತು ಜಗತ್ತಿನಲ್ಲಿ ಯಾವುದಿದೆ? ಮತ್ತು ನೀವಿರದ ಸ್ಥಾನವು ಯಾವುದಿದೆ? ಅಂದ ಮೇಲೆ ನೀವು ಹೇಗೆ ಇರುವಿರೋ ಹಾಗೆಯೇ ನನ್ನ ನಿಮಗೆ ನಮಸ್ಕಾರಗಳು ॥೬೧೯॥

ಶ್ರೀ ಅನಂತನೇ, ನೀನು ವಾಯುವಾಗಿರುವೆ. ಶಾಸನ ಮಾಡುವ ಯಮನು ನೀನು, ಪ್ರಾಣಿಮಾತ್ರರಲ್ಲಿ ವಾಸಮಾಡುವ ಜಠರಾಗ್ನಿಯು ನೀನಿರುವೆ ॥೬೨೦॥

ನೀನು ವರುಣನು, ಚಂದ್ರನು, ಸೃಷ್ಟಿಮಾಡುವ ಬ್ರಹ್ಮದೇವನು ನೀನು ಮತ್ತು ಬ್ರಹ್ಮದೇವನ ಜನಕನಾದರೂ ನೀನೇ ಇರುವೆ ॥೬೨೧॥

ಶ್ರೀ ಜಗನ್ನಾಥನೇ, ಇದಲ್ಲದೇ ಉಳಿದ ನಿನ್ನ ಎಲ್ಲ ವಿಭೂತಿಗಳಿಗೆ ಆಕಾರವಿರಲಿ ಇಲ್ಲದಿರಲಿ ಎಲ್ಲರಿಗೂ ನನ್ನ ನಮಸ್ಕಾರವಿರಲಿ ॥೬೨೨॥

ಈ ಪ್ರಕಾರವಾಗಿ ಅರ್ಜುನನು ಸಪ್ರೇಮ ಚಿತ್ತದಿಂದ ನಮಸ್ಕಾರ ಮಾಡಿ, ಪುನಃ ನಿನಗೆ ನಮಸ್ಕಾರ, ನಮಸ್ಕಾರ ಎಂದು ಹೇಳಿದನು ॥೬೨೩॥

ತದನಂತರ ಶ್ರೀಕೃಷ್ಣನ ಮೂರ್ತಿಯನ್ನು ಸರಿಯಾಗಿ ದೃಷ್ಟಿಸಿ ನೋಡಿ, ಹೇ ಪ್ರಭೋ, ನಿನಗೆ ನನ್ನ ನಮಸ್ಕಾರ, ನಮಸ್ಕಾರಗಳು ಎಂದನು ॥೬೨೪॥

ಒಂದೊಂದೇ ಅವಯವಗಳನ್ನು ಕಂಡು ಸಮಾಧಾನ ಪಟ್ಟು ಪುನಃ ಹೇ ಪ್ರಭೋ ನಿನಗೆ ನನ್ನ ನಮಸ್ಕಾರ, ನಮಸ್ಕಾರಗಳು ಎಂದನು ॥೬೨೫॥

ಈ ಯಾವ ಚರಾಚರ ಭೂತಗಳನ್ನು ಎಲ್ಲೆಡೆ ನೋಡಿ, ಪುನಃ ಹೇ ಪ್ರಭೋ ನಿನಗೆ ನನ್ನ ನಮಸ್ಕಾರ, ನಮಸ್ಕಾರಗಳು ಎಂದನು ॥೬೨೬॥

ಈ ಪ್ರಕಾರವಾಗಿ ಅದ್ಭುತರೂಪಗಳನ್ನು ಶ್ರೀ ಅನಂತನಲ್ಲಿ ಆಶ್ಚರ್ಯದಿಂದ ನೋಡಿ ನಿನಗೆ ನನ್ನ ನಮಸ್ಕಾರ, ನಮಸ್ಕಾರಗಳು ಎಂದು, ಎನ್ನುತ್ತಲೇ ಇದ್ದನು ॥೬೨೭॥

ಇದಕ್ಕಿಂತ ಹೆಚ್ಚಿಗೆ ಹೇಗೆ ಸ್ತುತಿಸಬೇಕೆಂಬುದು ತಿಳಿಯಲಾರದೇ ಮತ್ತು ಸುಮ್ಮನೇ ಇರುವುದಾಗದೇ ಅರ್ಜುನನ ಸ್ಥಿತಿ ಹೀಗಾಗಿ ಪ್ರೇಮಭಾವದಿಂದ ಮೇಲಿಂದ ಮೇಲೆ ನಮಸ್ಕಾರ, ನಮಸ್ಕಾರಗಳು ಎಂದು ಗರ್ಜಿಸಹತ್ತಿದನು ॥೬೨೮॥

ಒಟ್ಟಿನಲ್ಲಿ ಈತನು ಈ ಪ್ರಕಾರವಾಗಿ ಸಹಸ್ರ ಸಾರೆ ನಮಸ್ಕಾರಗಳನ್ನು ಮಾಡಿ ಪುನಃ ಶ್ರೀಹರಿಯನ್ನು ನೀವು ನನ್ನೆದುರು ಕಾಣಿಸುತ್ತಿರುವುದರಿಂದ ನಿನಗೆ ನನ್ನ ನಮಸ್ಕಾರಗಳು ಎಂದನು ॥೬೨೯॥

ದೇವರಿಗೆ ಹೊಟ್ಟೆ ಬೆನ್ನುಗಳು ಇವೆಯೋ ಇಲ್ಲವೋ ಎಂಬ ವಿಚಾರ ನಮಗೇಕೆ ಬೇಕು? ಹಾಗೆಂದು ಹೇ ಸ್ವಾಮಿಯೇ, ಹಿಂದೆಯೂ ಮುಂದೆಯೂ ನಿನಗೆ ನನ್ನ ನಮಸ್ಕಾರವು ॥೬೩೦॥

ನೀವು ನನ್ನ ಬೆನ್ನಿನ ಹಿಂದೆ ಇರುತ್ತಿರುವುದಕ್ಕೆ ಹೀಗೆ ಅಂದೆನು, ಇಲ್ಲದಿದ್ದರೆ ನಿಜವಾಗಿಯೂ ನಿಮಗೆ ಹಿಂದೆ ಮುಂದೆ ಎಂದು ಹೇಳಲಿಕ್ಕಾಗದು ॥೬೩೧॥

ನಿಮ್ಮ ಭಿನ್ನ ಭಿನ್ನ ಅವಯವಗಳ ಗಣತಿಮಾಡಲು ಬರುವುದಿಲ್ಲ. ಆದ್ದರಿಂದ ಸರ್ವರೂಪಿಯಾದ ನಿಮಗೆ ನಿಮ್ಮ ಸರ್ವ ಅವಯವಗಳಿಗೆ ನಮಸ್ಕಾರಗಳು ॥೬೩೨॥

ಹೇ ದೇವನೇ, ನೀವು ಅನಂತ ಬಲದ ನಿಧಿಯಾಗಿರುವಿರಿ. ನೀವು ಅಗಣಿತ ಪರಾಕ್ರಮಿಗಳು. ಯಾವಾಗಲೂ ಸಮನಾಗಿರುವ ನಿಮಗೆ ನನ್ನ ನಮಸ್ಕಾರಗಳು ॥೬೩೩॥

ಯಾವ ಪ್ರಕಾರವಾಗಿ ಎಲ್ಲ ಆಕಾಶದಲ್ಲಿ ಆಕಾಶಮಯವಾಗಿ ಆಕಾಶವೇ ಇರುವುದು. ಅದರಂತೆ ಎಲ್ಲೆಲ್ಲಿಯೂ ನಿಮ್ಮ ವ್ಯಾಪ್ತಿಯು ಇರುವುದರಿಂದ ನೀವು ಎಲ್ಲರಲ್ಲಿಯೂ ಇರುವಿರಿ ॥೬೩೪॥

ಒಟ್ಟಿನಲ್ಲಿ ಸರ್ವತ್ರದಲ್ಲಿ ನೀವೇ ತುಂಬಿಕೊಂಡಿರುವಿರಿ. ಆದರೆ ಕ್ಷೀರ ಸಮುದ್ರದಲ್ಲಿ ತೆರೆಗಳು ಹಾಲೇ ಆಗಿರುವಂತೆ ॥೬೩೫॥

ಮ್ಹಣೌನಿಯಾ ದೇವಾ । ತೂ ವೇಗಳಾ ನವ್ಹಸೀ ಸರ್ವಾ । ಹೇ ಆಲೇ ಮಜ ಸದ್ಭಾವಾ । ಆತಾ ತೂಂಚಿ ಸರ್ವ ।೫೩೬॥

ಸಖೇತಿ ಮತ್ವಾ ಪ್ರಸಭಂ ಯದುಕ್ತಂ ಹೇ ಕೃಷ್ಣ ಹೇ ಯಾದವ ಹೇ ಸಖೇತಿ ।
ಅಜಾನತಾ ಮಹಿಮಾನಂ ತವೇದಂ ಮಯಾ ಪ್ರಮಾದಾತ್ಪ್ರಣಯೇನ ವಾಪಿ ।೪೧॥

ಪರಿ ಐಸಿಯಾ ತೂಂತೇ ಸ್ವಾಮೀ । ಕಹೀಂಚ ನೇಣೋಜೇ ಆಮ್ಹೀ । ಮ್ಹಣೌನಿ ಸೋಯರೇ ಸಂಬಂಧಧರ್ಮೀ । ರಾಹಾಟಲೋ ತುಜಸೀ ।೫೩೭॥ ಅಹಾ ಥೋರ ವಾವುರ ಜಾಹಲೇ । ಅಮೃತೇ ಸಂಮಾರ್ಜನ ಮ್ಯಾ ಕೇಲೇ । ವಾರಿಕೇ ಘೇಊನಿ ದಿಧಲೇ । ಕಾಮಧೇನೂತೇ ।೫೩೮॥ ಪರಿಸಾಚಾ ಖಡವಾಚಿ ಜೋಡಲಾ । ಕೀ ಫೋಡೋನಿ ಆಮ್ಹೀ ಗಾಡೋರಾ ಘಾತಲಾ । ಕಲ್ಪತರೂ ತೋಡೋನಿ ಕೇಲಾ । ಕೂಪ ಶೇತಾ ।.೫೩೯॥ ಚಿಂತಾ ಮಣೀಚೀ ಖಾಣೀ ಲಾಗಲೀ । ತೇಣೇ ಕರೇ ವ್ಹೋಢಾಳೇ ವ್ಹೋಲ್ಹಾಂಡಿಲೀ । ತೈಸೀ ತುಝೀ ಜವಳಿಕ ಧಾಡಿಲೀ । ಸಾಂಗಾತೀಪಣೇ ।೫೪೦॥ ಹೇ ಆಜಿಚೇಂಚಿ ಪಾಹೇ ಪಾ ರೋಕಡೇ । ಕವಣ ಝುಂಜ ಹೇ ಕೇವಢೇ । ಏಥ ಪರಬ್ರಹ್ಮ ತೂ ಉಘಡೇ । ಸಾರಥೀ ಕೇಲಾಸೀ ।೫೪೧॥ ಯಯಾ ಕೌರವಾಂಚಿಯಾ ಘರಾ । ಶಿಷ್ಟಾ ಈ ಧಾಡಿಲಾಸಿ ದಾತಾರಾ । ಐಸಾ ವಣಿಜೇಸಾಠೀ ಜಾಗೇಶ್ವರಾ । ವಿಕಲಾಸಿ ಆಮ್ಹೀ ।೫೪೨॥ ತೂ ಯೋಗಿಯಾಂಚೇ ಸಮಾಧಿಸುಖ । ಕೈಸಾ ಜಾಣೇಚಿನಾ ಮೀ ಮೂರ್ಖ । ಉಪರೋಧು ಜೀ ಸನ್ಮುಖ । ತುಜಸೀ ಕರೂ।೫೪೩॥

ಯಚ್ಚಾವಹಾಸಾರ್ಥಮಸಸ್ಕೃತೋಽಸಿ ವಿಹಾರಶಯ್ಯಾಸನಭೋಜನೇಷು ।
ಏಕೋಽಥವಾಪ್ಯಚ್ಯುತ ತತ್ಸಮಕ್ಷಂ ತತ್ಕ್ಷಾಮಯೇತ್ವಾಮಹಮಪ್ರಮೇಯಂ ।೪೨॥

ತೂ ಯಾ ವಿಶ್ವಾಚೀ ಅನಾದಿ ಆದೀ । ಬೈಸಸೀ ಜಿಯೇ ಸಭಾಸದೀ । ತೇಥೇ ಸೋಯರೀ ಕೀಚಿಯಾ ಸಂಬಂಧೀ । ರಳೀ ಬೋಲೋ ।೫೪೪॥ ವಿಪಾಯೇ ರಾಉಳಾ ಯೇವೋ । ತರಿ ತುರ್ಝೋನಿ ಆಂಗೇ ಮಾನು ಪಾವೋ । ನ ಮಾನಿಸೀ ತರೀ ಜಾವೋ ರುಸೋನಿ ಸಲಗೀ ।೫೪೫॥ ಪಾಯಾ ಲಾಗೋನಿ ಬುಝಾವಣೇ । ತುಝ್ಯಾ ಠಾಯೀ ಶಾರ್ಙ್ಗಪಾಣೇ । ಪಾಹಿಜೇ ಐಶೀ ಕರಣೇ । ಬಹು ಕೇಲೀ ಆಮ್ಹೀ ।೫೪೬॥ ಸಜಣಪಣಾಚಿಯಾ ವಾಟಾ । ತುಜಪುಢೇ ಬೈಸೇ ಉಫರಾಟಾ । ಹಾ ಪಾಡು ಕಾಯ ವೈಕುಂಠಾ? । ಪರಿ ಚುಕಲೋ ಆಮ್ಹೀ ।೫೪೭॥

ಆದ್ದರಿಂದ ಹೇ ದೇವನೇ, ನೀವು ಸರ್ವವಸ್ತುಗಳಿಂದ ಭಿನ್ನರಿರುವುದಿಲ್ಲ. ಇದು ನನ್ನ ಅನುಭವಕ್ಕೆ ಬಂದಿರುವುದು. ಅದಕ್ಕಾಗಿ ಈಗ ನೀವು ಎಲ್ಲೆಲ್ಲಿಯೂ ನೀವೇ ಇರುವಿರಿ ।।೫೩೬।।

ಶ್ಲೋಕಾರ್ಥ :- ನಿನ್ನ ಮಹಿಮೆಯನ್ನು ತಿಳಿಯದೆ ಸ್ನೇಹದಿಂದಲೋ ಅಥವಾ ಬಾಯಿ ತಪ್ಪಿಯೋ ಮಿತ್ರಾ! ಕೃಷ್ಣಾ! ಯಾದವಾ! ಎಂದು ಧಿಕ್ಕರಿಸಿ ಮಾತಾಡಿದ್ದೇನೆ ।।೪೧।।

ಆದರೆ, ಹೇ ಸ್ವಾಮಿಯೇ, ನಿಮ್ಮ ಈ ಐಶ್ವರ್ಯವನ್ನು ನಾನು ಈ ಪೂರ್ವದಲ್ಲಿ ಏನೂ ತಿಳಿದಿದ್ದಿಲ್ಲ. ಆದ್ದರಿಂದ ಬೀಗತನದ ಸಂಬಂಧದಿಂದ ನಡೆದುಕೊಂಡೆನು ।।೫೩೭।।

ಅಯ್ಯೋ! ನಮ್ಮ ಕೈಯಿಂದ ಬಹಳ ಕೆಟ್ಟಕಾರ್ಯ ಒದಗಿತು. ಅಮೃತವನ್ನು ಅಂಗಳ ಸಾರಣೆಗೆ ಉಪಯೋಗಿಸಿದೆವು. ಕಾಮಧೇನುವನ್ನು ಕೊಟ್ಟು ಹೇಸರ ಕತ್ತೆಯನ್ನು ತೆಗೆದುಕೊಂಡೆವು ।।೫೩೮।।

ಪರಿಸದ ಪರ್ವತ ಸಿಕ್ಕಾಗ ಅದನ್ನು ಒಡೆದು ಮನೆಕಟ್ಟಲು ಬುನಾದಿಗೆ ತುಂಬಿದೆವು. ಹಾಗೆಯೇ ಕಲ್ಪವೃಕ್ಷ ಕೊರೆದು ಅದನ್ನು ಹೊಲದ ಬೇಲಿಗೆ ಉಪಯೋಗಿಸಿದೆವು ।।೫೩೯।।

ಚಿಂತಾಮಣಿಯ ಖಣಿಯೇ ಸಿಕ್ಕಾಗ ಅದನ್ನು ಒಡೆದು ಅದರಲ್ಲಿನ ರತ್ನಗಳನ್ನು ತುಡುಗದನಗಳನ್ನು ಹೊಡೆಯಲು ಒಗೆದವು. ಅದರಂತೆ ನಿಮ್ಮ ಸ್ನೇಹದ ಉಪಯೊಗ ಪಡೆಯದೇ ದೂರ ಮಾಡಿದೆವು ।।೫೪೦।।

ಈ ಇಂದಿನ ಸ್ಪಷ್ಟವಾದ ಉದಾಹರಣೆ ನೋಡಿರಿ, ಈ ಯುದ್ಧ ಎಷ್ಟರದು? ಇದಕ್ಕೆ ಯಾವ ಬೆಲೆ? ಆದರೆ, ನಿಮ್ಮಂತಹ ಪರಬ್ರಹ್ಮನಿಗೆ ನಾವು ಸಾರಥಿಯನ್ನಾಗಿ ಮಾಡಿದೆವು ।।೫೪೧।।

ಹೇ ದಾತಾರನೇ, ಈ ದುಷ್ಟ ಕೌರವರ ಮನೆಗೆ ಶಿಷ್ಟಾಯಿಗಾಗಿ ( ಒಪ್ಪಂದಕ್ಕಾಗಿ) ಕಳಿಸಿದೆವು. ನಾವು ನಮ್ಮ ಸಾಮಾನ್ಯ ಕಾರ್ಯಕ್ಕಾಗಿ ಜಗದೀಶ್ವರರಾದ ನಿಮಗೆ ಮಾರಿಕೊಂಡೆವು ।।೫೪೨।।

ನೀವು ಯೋಗಿಗಳ ಸಮಾಧಿಸುಖರಾಗಿದ್ದು ಮೂರ್ಖನಾದ ನಾನು ನಿಮ್ಮನ್ನು ಏನೂ ತಿಳಿದುಕೊಳ್ಳಲಿಲ್ಲ. ನಿಮ್ಮ ಜೊತೆಗೆ ವಿನೋದ ಮಾತುಗಳನ್ನು ಆಡಿದೆನು ।।೫೪೩।।

ಶ್ಲೋಕಾರ್ಥ :- ಆಹಾರ ವಿಹಾರಗಳಲ್ಲಿ ಆಸನ ಶಯನಗಳಲ್ಲಿ ನಿನ್ನನ್ನು ತೃಣೀಕರಿಸಿದ ಅಪಚಾರಕ್ಕಾಗಿ, ಹೇ ಅಚ್ಯುತಾ, ನಿನ್ನನ್ನು ಸಮಕ್ಷಮ ಕ್ಷಮಾಪಣೆ ಬೇಡುತ್ತೇನೆ ।।೪೨।।

ನೀವು ಈ ವಿಶ್ವದ ಆದಿಪುರುಷರು, ನೀವು ಸಭೆಯಲ್ಲಿ ಆಸೀನರಾದಾಗ್ಗೆ, ಅಲ್ಲಿಯೂ ನಿಮ್ಮ ಬೀಗತನದ ಸಂಬಂಧದಿಂದ ನಾನು ನಿಮಗೆ ವಿನೋದ ಮಾಡಿದೆನು ।।೫೪೪।।

ಎಂದಾದರೂ ನಿಮ್ಮ ಮನೆಗೆ ನಾನು ಬಂದರೆ, ನಿಮ್ಮ ಸರಿಸಮಾನವಾಗಿ ಮರ್ಯಾದೆ ಪಡೆಯುತ್ತಿದ್ದೆ. ಹಾಗೆ ನೀವು ನಡೆಯದಿದ್ದರೆ ಸಲಗಿಯಿಂದ ಮುನಿಸಿಕೊಂಡು ಹೋಗುತ್ತಿದ್ದೆ ।।೫೪೫।।

ಹೇ ಶಾರ್ಙ್ಗಪಾಣಿಯೇ, ಆಗ ನೀವು ನನ್ನ ಕಾಲು ಹಿಡಿದು ಸಮಾಧಾನಪಡಿಸುತ್ತಿದ್ದಿರಿ. ಈ ಪ್ರಕಾರವಾಗಿ ಇಚ್ಛೆ ಬಂದ ರೀತಿಯಲ್ಲಿ ನಾನು ನಿಮಗೆ ಅನುಚಿತವಾಗಿ ನಡೆದುಕೊಂಡಿದ್ದೇನೆ ।।೫೪೬।।

ನಾನು ನಿನ್ನ ಪ್ರಿಯ ಮಿತ್ರನೆಂದು ನಿನ್ನೆದುರಿಗೆ ಬೆನ್ನು ಮಾಡಿ ಕುಳಿತುಕೊಳ್ಳುತ್ತಿದ್ದೆ. ಶ್ರೀಕೃಷ್ಣನೇ ನನ್ನ ಯೋಗ್ಯತೆ ಹೀಗಿರುವುದೇ? ಆದರೆ ದೇವನೇ ನಾನು ತಪ್ಪಿದ್ದೇನೆ ।।೫೪೭।।

ದೇವೇಸಿ ಕೋಲಕಾರೀ ಧರೂ । ಅಖಾಡಾ ಝೋಂಬೀಲೋಂಬೀ ಕರೂ । ಸಾರೀ ಖೇಳತಾ ಆವಿಷ್ಕರೂ । ನಿಕರೇಹೀ ಭಾಂಡೋ ।೫೪೪॥ ಚಾಂಗ ತೇ ಉರಾ ಉರೀ ಮಾಗೋ । ದೇವಾಸಿ ಕೀ ಬುದ್ಧಿ ಸಾಂಗೋ । ತೇವಿಂಚಿ ಮ್ಹಣೋ ಕಾಯ ಲಾಗೋ । ತುಝೋ ಆಮ್ಹೀ ।೫೪೯॥ ಐಸಾ ಅಪರಾಧು ಹಾ ಆಹೇ । ಜೋ ತ್ರಿಭುವನೀ ನ ಸಮಾಯೇ । ಜೀ ನೇಣ ತಾಂಚಿ ಕೀ ಪಾಯೇ । ಶಿವತಿಲೇ ತುಝೇ ।೫೫೦॥ ದೇವೋ ಬೋನಯಾಚ್ಯಾ ಅವಸರೀ । ಲೋಭೇ ಕೀರ ಆಠವಣ ಕರೀ । ಪರೀ ಮಾಝ್ಯಾ ನಿಸುಗ ಗರ್ವ ಅವಧಾರೀ । ಜೇ ಫುಗನೂಚಿ ಬೈಸೇ ।೫೫೧॥ ದೇವಾಚಿಯಾ ಭೋಗಾಯತನೀ । ಖೇಳತಾ ಆಶಂಕೇನಾ ಮನೀ । ಜೀ ರಿಗೋನಿಯಾ ಶಯನೀ । ಸರಿಸಾ ಪಹುಡೇ ।೫೫೨॥ ಕೃಷ್ಣಾ ಮ್ಹಣೌನಿ ಹಾಕಾರಿಜೇ । ಯಾದವಪಣೇ ತೂಂತೇ ಲೇಖಿಜೇ । ಆಪಲೀ ಆಣ ಘಾಲಿಜೇ । ಜಾತಾ ತುಜ ।೫೫೩॥ ಮಜ ಏಕಾಸನೀ ಬೈಸಣೇ । ಕಾ ತುಝ್ಯಾ ಬೋಲು ನ ಮಾನಣೇ । ಹೇ ವೋತಟೀಚೇನಿ ದಾಟಪಣೇ । ಬಹುತ ಘಡಲೇ ।೫೫೪॥ ಮ್ಹಣೌನಿ ಕಾಯ ಕಾಯ ಆತಾ । ನಿವೇದಿಜೇಲ ಅನಂತಾ । ಮೀ ರಾಶಿ ಆಹೇ ಸಮಸ್ತಾ । ಅಪರಾಧಾಂಚಿ ।೫೫೫॥ ಯಾಲಾಗೀ ಪುಢಾ ಅಥವಾ ಪಾಠೀ । ಜಿಯೇ ರಾಹಟಲೋ ಬಹುವೇ ವೋಖಟೀ । ತಿಯೇ ಮಾಯೇಚಿಯಾ ಪರೀ ಪೋಟೀ । ಸಾಮಾವೀ ಪ್ರಭೋ ।೫೫೬॥ ಜೀ ಕೋಣ್ಹೀ ಏಕೇ ವೇಳೇ । ಸರಿತಾ ಘೇಊನಿ ಯೇತೀ ಖಡುಳೇ । ತಿಯೇ ಸಾಮಾವಿಜೇತಿ ಸಿಂಧುಜಳೇ । ಆನ ಉಪಾಯೋ ನಾಹೀ ।೫೫೭॥ ತೈಸೀ ಪ್ರೀತೀ ಕಾ ಪ್ರಮಾದೇ । ದೇವೇಸೀ ಮಜ ವಿರುದ್ಧೇ । ಬೋಲವಿಲೀ ತಿಯೇ ಮುಕುಂದೇ । ಉಪಸಾಹಾವೀ ಜೀ ।೫೫೮॥ ಆಣಿ ದೇವಾಚೇನಿ ಕ್ಷಮತ್ವೇ ಕ್ಷಮಾ । ಆಧಾರು ಜಾಲೀ ಆಹೇ ಯಾ ಭೂತಗ್ರಾಮಾ । ಮ್ಹಣೌನಿ ಜೀ ಪುರುಷೋತ್ತಮಾ । ವಿನವೂ ತೇ ಥೋಡೇ ।೫೫೯॥ ತರೀ ಆತಾ ಅಪ್ರಮೇಯಾ । ಮಜ ಶರಣಾಗತಾ ಆಪುಲಿಯಾ । ಕ್ಷಮಾ ಕೀಜೋ ಜೀ ಯಯಾ । ಅಪರಾಧಾಂಸಿ ।೫೬೦॥

ಪಿತಾಽಸಿ ಲೋಕಸ್ಯ ಚರಾಚರಸ್ಯ ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।
ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ ಲೋಕತ್ರಯೇಽಪ್ಯಪ್ರತಿಮಪ್ರಭಾವ ।೪೩॥

ಜೇ ಜಾಣಿತಲೇ ಮಿಯಾ ಸಾಚೇ । ಮಹಿಮಾನ ಆತಾ ದೇವಾಚೇ । ಜೇ ದೇವೋ ಹೋಯ ಚರಾಚರಾಚೇ । ಜನ್ಮಸ್ಥಾನ ।೫೬೧॥

ದೇವರಲ್ಲಿ ಕತ್ತಿ, ಢಾಲು ಆಟವಾಡುತ್ತಿದ್ದೆ, ಗರಡಿಯಲ್ಲಿ ದೇವರೊಂದಿಗೆ ಕುಸ್ತಿಯಾಡುತ್ತಿದ್ದೆ. ಪಗಡೆಯಾಟದಲ್ಲಿ ದೇವರಿಗೆ ಧಿಃಕ್ಕರಿಸಿ ಮಾತನಾಡುತ್ತ ಜಗಳ ಮಾಡುತ್ತಿದ್ದೆ ।೫೪೮॥

ಉತ್ತಮ ವಸ್ತು ಕಂಡರೆ ತಡಮಾಡದೇ ಕೇಳುತ್ತಿದ್ದೆ. ದೇವನಾದ ನಿಮಗೆ ಬುದ್ಧಿ ಹೇಳುತ್ತಿದ್ದೆ. ಅದರಂತೆ ನಾವೇನು ನಿಮಗೆ ಹತ್ತಬೇಕು? ಎನ್ನುತ್ತಿದ್ದೆ ।೫೪೯॥

ಈ ರೀತಿಯಲ್ಲಿ ತ್ರಿಭುವನದಲ್ಲಿಯೂ ಹಿಡಿಸಲಾರದಷ್ಟು ಅಪರಾಧಗಳು ನಮ್ಮಿಂದ ಆಗಿವೆ. ಆದರೆ, ನಾವು ನಿಮ್ಮನ್ನು ಅರಿಯದೇ ನಿಮ್ಮಲ್ಲಿ ಹೀಗೆ ವರ್ತಿಸಿದೆವು ಎಂದು ನಿಮ್ಮ ಚರಣಮುಟ್ಟಿ ಹೇಳುವೆವು ।೫೫೦॥

ದೇವನು ಊಟದ ಹೊತ್ತಿಗೆ ನನ್ನನ್ನು ಪ್ರೀತಿಯಿಂದ ಕರೆದರೂ ನಾನು ಸುಮ್ಮಸುಮ್ಮನೇ ಮುನಿಸಿಕೊಂಡು ಗರ್ವದಿಂದ ಉಬ್ಬಿಕೊಂಡು ಕುಳಿತುಕೊಳ್ಳುತ್ತಿದ್ದೆ ।೫೫೧॥

ದೇವನ ವಿಲಾಸಮಂದಿರದಲ್ಲಿ ಆಟವಾಡಲು ಮನದಲ್ಲಿ ಅನುಮಾನಪಡುತ್ತಿದ್ದಿಲ್ಲ. ಅವರ ಪ್ರತ್ಯೇಕ ಹಾಸಿಗೆಯಲ್ಲಿ ಹೋಗಿ ಅವರ ಮಗ್ಗಲಿಗೆ ಮಲಗುತ್ತಿದ್ದೆ ।೫೫೨॥

ನಾನು ನಿಮಗೆ ಇತರ ಯಾದವರಂತೆ ತಿಳಿದು ಕೃಷ್ಣಾ ಎಂದು ಕೂಗುತ್ತಿದ್ದೆ. ನೀವು ಹೋಗುತ್ತಿದ್ದರೆ ನನ್ನಾಣೆ ಎನ್ನುತ್ತಿದ್ದೆ ।೫೫೩॥

ನಾನು ನಿಮ್ಮ ಜೊತೆಯಲ್ಲಿ ಒಂದೇ ಆಸನದಲ್ಲಿ ಕುಳಿತುಕೊಳ್ಳುತ್ತಿದ್ದೆ. ನಿಮ್ಮ ಮಾತು ಮೀರುತ್ತಿದ್ದೆ. ಅತಿ ಪರಿಚಯದಿಂದ ಈ ರೀತಿ ಎಷ್ಟೋ ಸಾರಿ ನಡೆದಿವೆ ।೫೫೪॥

ಆದ್ದರಿಂದ ಅನಂತನೇ, ಈ ರೀತಿ ಏನೇನೆಂಬುದು ನಿನಗೆ ಎಷ್ಟೆಂದು ಹೇಳಲಿ? ಆದರೆ ನಾನು ಮಾತ್ರ ಅಪರಾಧಗಳ ರಾಶಿಯೇ ಆಗಿರುವೆನು ।೫೫೫॥

ಆದ್ದರಿಂದ ಪ್ರಭುವೇ, ನಿನ್ನ ಮುಂದೆ ಅಥವಾ ಹಿಂದೆ ಆಗಿರುವ ನನ್ನ ಕೈಯಾರೆ ಕೆಟ್ಟ ಕಾರ್ಯಗಳನ್ನೆಲ್ಲವನ್ನು ನೀನು ತಾಯಿಯಂತೆ ನಿನ್ನ ಹೊಟ್ಟೆಯಲ್ಲಿ ಹಾಕಿಕೊ ।೫೫೬॥

ಒಂದು ವೇಳೆ ಹೊಲಸಿನಿಂದ ಕೂಡಿದ ನದಿಯು ಸಮುದ್ರವನ್ನು ಸೇರಲು ಹೋದಾಗ್ಗೆ ಅದರ ಅಂಗೀಕಾರ ಮಾಡದ ಹೊರತು ಸಮುದ್ರಕ್ಕೆ ಅನ್ಯಮಾರ್ಗವೇ ಇರುವುದಿಲ್ಲ ।೫೫೭॥

ಅದರಂತೆ ಪ್ರೀತಿಯಿಂದಾಗಲೀ ಅಥವಾ ಪ್ರಮಾದದಿಂದಾಗಲೀ ದೇವಾ, ನಿನಗೆ ವಿರುದ್ಧವಾಗಿ ಮಾತನಾಡಿದ ಎಲ್ಲವನ್ನೂ, ಮುಕುಂದನೇ ಸಹಿಸಿಕೊ ।೫೫೮॥

ಹೇ ದೇವನೇ, ನಿಮ್ಮ ಸಹಿಸುವ ಶಕ್ತಿಯಿಂದಲೇ ಪೃಥ್ವಿಯು ಪ್ರಾಣಿಮಾತ್ರರ ಭಾರವನ್ನು ಸಹಿಸುವ ಸಾಮರ್ಥ್ಯ ಪಡೆದಿರುವುದು. ಆದ್ದರಿಂದ ಪುರುಷೋತ್ತಮಾ, ನಿಮಗೆ ಎಷ್ಟು ವಿನಂತಿಸಿದರೂ ಕಡಿಮೆಯೇ ।೫೫೯॥

ಆದರೆ, ಈಗ ಅತರ್ಕ್ಯನಾದ ಶ್ರೀಕೃಷ್ಣನೇ, ನಿನಗೆ ನಾನು ಶರಣಾಗತನಾಗಿದ್ದೇನೆ. ಆದ್ದರಿಂದ ನನ್ನ ಸರ್ವ ಅಪರಾಧಗಳನ್ನೆಲ್ಲವನ್ನೂ ಕ್ಷಮಿಸು ।೫೬೦॥

ಶ್ಲೋಕಾರ್ಥ :- ಅಸಮಾನ ಮಹಿಮಾಶಾಲಿ! ಈ ಚರಾಚರ ಜಗತ್ತಿಗೆ ನೀನು ತಂದೆ, ಪೂಜ್ಯನು, ಮಹಾ ಗುರುವು. ಮೂರೂಲೋಕದಲ್ಲಿ ನಿನಗೆ ಸರಿಯಾದವರು ಯಾರೂ ಇಲ್ಲ. ಎಂದ ಮೇಲೆ ಹೆಚ್ಚಿನವರೆಲ್ಲಿ? ।೪೩॥

ಹೇ ಕೃಷ್ಣನೇ, ನಿಮ್ಮ ಮಹಿಮೆಯನ್ನು ನಾನೀಗ ಯಥಾರ್ಥವಾಗಿ ತಿಳಿದುಕೊಂಡಿದ್ದೇನೆ. ದೇವಾ, ನೀವು ಈ ಚರಾಚರಗಳ ಉತ್ಪತ್ತಿ ಸ್ಥಾನರಾಗಿರುವಿರಿ ।೫೬೧॥

ಹರಿಹರಾದಿ ಸಮಸ್ತಾ । ದೇವಾ ತೂ ಪರಮ ದೇವತಾ । ವೇದಾತೇಂಹೀ ಪಢವಿತಾ । ಆದಿ ಗುರು ತೂ ।೫೬೨॥ ಗಂಭೀರ ತೂ ಶ್ರೀರಾಮಾ । ನಾನಾ ಭೂತೈಕಸಮಾ । ಸಕಳಗುಣೀ ಅಪ್ರತಿಮಾ । ಅದ್ವಿತೀಯಾ ।೫೬೩॥ ತುಜಸೀ ನಾಹೀ ಸರಿಸೇ । ಹೇ ಪ್ರತಿಪಾದನಚಿ ಕಾಯಸೇ? । ತುವಾ ಜಾಲೇನಿ ಆಕಾಶೇ । ಸಾಮಾವಿಲೇ ಜಗ ।೫೬೪॥ ತಯಾ ತುಝೇನಿ ಪಾಡೇ ದುಜೇ । ಐಸೇ ಬೋಲತಾಂಚಿ ಲಾಜಿಜೇ । ತೇಥ ಅಧಿಕಚಿ ಕೀಜೇ । ಗೋಠೀ ಕೇವೀ ।೫೬೫॥ ಮ್ಹಣೌನಿ ತ್ರಿಭುವನೀ ತೂ ಏಕು । ತುಜಸಾರಿಖಾ ನಾ ಅಧಿಕು । ತುಝಾ ಮಹಿಮಾ ಅಲೌಕಿಕು । ನೇಣಿಜೇ ವಾನೂ ।೫೬೬॥

ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ ಪ್ರಸಾದಯೇ ತ್ವಾಮಹಮೀಶಮೀಡ್ಯಂ ।
ಪಿತೇವ ಪುತ್ರಸ್ಯ ಸಖೇವ ಸಖ್ಯುಃ ಪ್ರಿಯಃ ಪ್ರಿಯಾಯಾರ್ಹಸಿ ದೇವಸೋಢುಂ ।೪೪॥

ಐಸೇ ಅರ್ಜುನೇ ಮ್ಹಣಿತಲೇ । ಮಗ ಪುಢತೀ ದಂಡವತ ಘಾತಲೇ । ತೇಥೇ ಸಾತ್ತ್ವಿಕಾಚೇ ಆಲೇ । ಭರತೇ ತಯಾ।೫೬೭॥ ಮಗ ಮ್ಹಣತಸೇ ಪ್ರಸೀದ ಪ್ರಸೀದ । ವಾಚಾ ಹೋತಸೇ ಸದ್ಗದ । ಕಾಢೀ ಜೇ ಅಪರಾಧ । ಸಮುದ್ರೌನಿಕ ಮಾತೇ ।೫೬೮॥ ತುಜ ವಿಶ್ವಸುಹೃದಾಂತೇ ಕಹೀ । ಸೋಯರೇಪಣೇ ನ ಮನೂಂಚಿ ಪಾಹೀ । ತುಜ ವಿಶ್ವೇಶ್ವರಾಚಿಯಾ ಠಾಯೀ । ಐಶ್ವರ್ಯ ಕೇಲೇ ।೫೬೯॥ ತೂ ವರ್ಣನೀಯ ಪರೀ ಲೋಭೇ । ಮಾತೇ ವರ್ಣಿಸೀ ಪಾ ಸಭೇ । ತರಿ ಮಿಯಾ ವಲ್ಗಿಜೇ ಕ್ಷೋಭೇ । ಅಧಿಕಾಧಿಕ ।೫೭೦॥ ಆತಾ ಐಸಿಯಾ ಅಪರಾಧಾ । ಮರ್ಯಾದಾ ನಾಹೀ ಮುಕುಂದಾ । ಮ್ಹಣೌನಿ ರಕ್ಷ ರಕ್ಷ ಪ್ರಮಾದಾ । ಪಾಸೋನಿಯಾ ।೫೭೧॥ ಜೇ ಹೇಂಚಿ ವಿನವಾವಯಲಾಗೀ । ಕೈಂಚೀ ಯೋಗ್ಯತಾ ಮಾಝಿಯಾ ಆಂಗೀ । ಪರೀ ಅಪತ್ಯ ಜೈಸೇ ಸಲಗೀ । ಬಾಪೇಂಸೀ ಬೋಲೇ ।೫೭೨॥ ಪುತ್ರಾಚೇ ಅಪರಾಧ । ಜರೀ ಜಾಹಲೇ ಅಗಾಧ । ತರೀ ಪಿತಾ ಸಾಹೇ ನಿರ್ದ್ವಂದ್ವ । ತೈಸೇ ಸಾಹಿಜೋ ಜೇ ।೫೭೩॥ ಸಖ್ಯಾಚೇ ಉದ್ಧತ । ಸಖಾ ಸಾಹೇ ನಿವಾಂತ । ತೈಸೇ ತುವಾ ಸಮಸ್ತ । ಸಾಹಿಜೋ ಜೇ ।೫೭೪॥ ಪ್ರಿಯಾಚಿಯಾ ಠಾಯೀ ಸನ್ಮಾನ । ಪ್ರಿಯ ನ ಪಾಹೇ ಸರ್ವಥಾ ಜಾಣ । ತೇವೀ ಉಚ್ಛಿಷ್ಟ ಕಾಢಿಲೇ ಆಪಣ । ತೇ ಕ್ಷಮಾ ಕೀಜೋ ಜೇ ।೫೭೫॥ ನಾತರೀ ಪ್ರಾಣಾಚೇ ಸೋಯರೇ ಭೇಟೇ । ಮಗ ಜೀವೇ ಭೂತಲೀ ಜಿಯೇ ಸಂಕಟೇ । ತಿಯೇ ನಿವೇದಿತಾ ನ ವಾಟೇ । ಸಂಕೋಚು ಕಾಂಹೀ ।೫೭೬॥

ನೀನು ಹರಿಹರರು ಮೊದಲು ಮಾಡಿ ಎಲ್ಲ ದೇವತೆಗಳ ಪರಮದೇವನು, ವೇದಕ್ಕೂ ಕಲಿಸುವ ಆದಿ ಗುರು ನೀನಾಗಿರುವೆ ।೫೬೨॥

ಹೇ ಶ್ರೀರಾಮಾ, ನೀನು ಗಂಭೀರನಾಗಿರುವೆ. ಎಲ್ಲ ಭೂತಮಾತ್ರರಲ್ಲಿ ನಿನ್ನ ಸಮದೃಷ್ಟಿ ಇರುವುದು. ನೀನು ಎಲ್ಲ ಗುಣಗಳಲ್ಲಿ ಅಪ್ರತಿಮ ಹಾಗೂ ಅದ್ವಿತೀಯನಾಗಿರುವೆ ।೫೬೩॥

ನಿಮ್ಮ ಸರಿಸಮಾನರು ಇನ್ನಾರೂ ಇಲ್ಲವೆಂಬುದರ ಪ್ರತಿಪಾದನೆಯನ್ನಾದರೂ ಹೇಗೆ ಮಾಡಬೇಕು? ಕಾರಣ ನೀವು ನಿರ್ಮಿಸಿರುವ ಆಕಾಶದಲ್ಲಿ ಎಲ್ಲ ಜಗದ ಸಮಾವೇಶ ವಾಗಿರುವುದು ।೫೬೪॥

ಈ ನಿಮ್ಮ ಸರಿಸಮಾನರು ಬೇರೆ ಯಾರಿದ್ದಾರೆ ಎಂದು ಹೀಗೆ ಹೇಳುವುದೇ ಲಜ್ಜಾಸ್ಪದವಾಗಿದೆ. ನಿಮ್ಮಗಿಂತ ಬೇರೆ ಅಧಿಕರು ಯಾರಿದ್ದಾರೆಂಬ ಮಾತೇ ಬೇಡ! ।೫೬೫॥

ಆದ್ದರಿಂದ ಎಲ್ಲ ತ್ರಿಭುವನದಲ್ಲಿ ನೀವು ಒಬ್ಬರೇ ಇದ್ದು, ನಿಮ್ಮ ಸಮವಾಗಿ ಇಲ್ಲವೇ ನಿಮಗಿಂತ ಅಧಿಕರು ಇನ್ನಾರೂ ಇಲ್ಲ ಮತ್ತು ನಿಮ್ಮ ಮಹಿಮೆಯು ಅಗಾಧ ವಾಗಿದ್ದು ಅದರ ವರ್ಣನೆ ಮಾಡಲು ನಾವು ಅಸಮರ್ಥ ರಿದ್ದೇವೆ ।೫೬೬॥

**ಶ್ಲೋಕಾರ್ಥ** :- ಆದುದರಿಂದ, ಪ್ರಭುವೇ! ಪೂಜ್ಯ ನಾದ ನಿನಗೆ ದೀರ್ಘದಂಡ ನಮಸ್ಕಾರ ಮಾಡಿ ಬೇಡಿ ಕೊಳ್ಳುತ್ತೇನೆ. ತಂದೆ ಮಗನನ್ನು, ಮಿತ್ರನು ಮಿತ್ರನನ್ನು, ಪ್ರಿಯನು ಪ್ರಿಯಳನ್ನು ಮನ್ನಿಸುವಂತೆ, ದೇವಾ ! ನನ್ನ ಅಪರಾಧಗಳನ್ನು ಕ್ಷಮಿಸು ।೪೪॥

ಈ ಪ್ರಕಾರವಾಗಿ ಹೇಳುತ್ತ ಅರ್ಜುನನು ಭಗವಂತನಿಗೆ ಸಾಷ್ಟಾಂಗ ನಮಸ್ಕಾರವನ್ನು ಹಾಕಿದನು. ಆಗಾತನಿಗೆ ಅಷ್ಟಸಾತ್ತ್ವಿಕ ಭಾವಗಳು ಉಕ್ಕೇರಿದವು ।೫೬೭॥

ಆಗ ಸದ್ಗದಿತ ವಾಣಿಯಿಂದ ಪ್ರಸನ್ನನಾಗು, ಪ್ರಸನ್ನ ನಾಗು, ನನ್ನನ್ನು ಅಪರಾಧ ಸಮುದ್ರದಿಂದ ಹೊರಗೆ ತೆಗೆ ।೫೬೮॥

ನೀವು ನಿಮ್ಮ ಆಪ್ತ ಸಂಬಂಧಿಕರೆಂಬ ಭಾವನೆಯಿಂದ ಜಗನ್ಮಿತ್ರರಾದ ನಿಮಗೆ ಎಂದೂ ಮರ್ಯಾದೆ ಕೊಡಲಿಲ್ಲ ಮತ್ತು ವಿಶ್ವದ ಈಶ್ವರನು ಆದ ನಿಮ್ಮನ್ನು ನಮ್ಮ ಐಶ್ವರ್ಯ (ಪ್ರಭುತ್ವ) ತೋರಿಸಿದೆವು (ಸಾರಥಿ ಮಾಡಿ ಧನಿಯಾದೆವು) ।೫೬೯॥

ನಾನೇ ನಿಮ್ಮನ್ನು ವರ್ಣಿಸುವುದು ಯೋಗ್ಯವಿದ್ದರೂ, ಸಭೆಯಲ್ಲಿ ನೀವು ಪ್ರೇಮದಿಂದ ನನ್ನ ವರ್ಣನೆ ಮಾಡಿದಾಗ ಪ್ರತಿಯಾಗಿ ನಾನು ಸುಮ್ಮನಿರದೇ ಗರ್ವದಿಂದ ಹೆಚ್ಚು ಹೆಚ್ಚಾಗಿ ಬಡಬಡಿಸುತ್ತಿದ್ದೆ ।೫೭೦॥

ಈಗ ಮುಕುಂದನೇ, ಹೀಗೆ ನನ್ನಿಂದ ಆದ ಅಪರಾಧ ಗಳಿಗೆ ಮರ್ಯಾದೆಯೇ ಇಲ್ಲ. ಆದ್ದರಿಂದ ಈ ಪ್ರಮಾದ ಗಳಿಂದ ರಕ್ಷಿಸು, ರಕ್ಷಿಸು ।೫೭೧॥

ಜೀಯಾ, ಈ ಪ್ರಕಾರವಾಗಿ ನಿಮ್ಮನ್ನು ಪ್ರಾರ್ಥಿಸಲೂ ಸಹ ನನ್ನಲ್ಲಿ ಯೋಗ್ಯತೆ ಇಲ್ಲ. ಆದರೆ ಚಿಕ್ಕ ಬಾಲಕನು ತಂದೆಯೊಡನೆ ಸಲಿಗೆಯಿಂದ ಮಾತನಾಡುವನು ।೫೭೨॥

ಅದರಂತೆ ಪುತ್ರನ ಅಪರಾಧಗಳು ಎಷ್ಟು ದೊಡ್ಡದಿದ್ದರೂಪಿತನು ಆತನಲ್ಲಿ ವೈರಭಾವ ಮಾಡದೇ ಸಹಿಸಿಕೊಳ್ಳುವನು. ಹಾಗೆಯೇ ನೀವು ನನ್ನ ಅಪರಾಧಗಳನ್ನು ಸಹಿಸಿಕೊಳ್ಳಿರಿ ।೫೭೩॥

ಹೇ ದೇವನೇ, ಮಿತ್ರನ ಉದ್ಧಟತನವನ್ನು ಮಿತ್ರನು ಶಾಂತಚಿತ್ತದಿಂದ ಸಹಿಸುವನು. ಅದರಂತೆ ನನ್ನ ಎಲ್ಲ ಅಪರಾಧಗಳನ್ನು ನೀವು ಸಹಿಸಿಕೊಳ್ಳಿರಿ ।೫೭೪॥

ತನಗೆ ಬೇಕಾದ ಮಿತ್ರನಿಂದ ತನಗೆ ಸನ್ಮಾನವಾಗ ಬೇಕೆಂದು ಯಾರೂ ಎಂದೂ ಅಪೇಕ್ಷಿಸುವುದಿಲ್ಲ. ಅದರಂತೆ ನೀವು (ರಾಜಸೂರ್ಯಜ್ಞದಲ್ಲಿ) ಎಂಜಲ ಬಳಿದಿರುವಿರಿ, ಅದಕ್ಕಾಗಿ ಕ್ಷಮಿಸಿರಿ ।೫೭೫॥

ಅಥವಾ ತನ್ನ ಜೀವದ ಮಿತ್ರನು ಕೂಡಿದಾಗ ಆತನು ತಾನು ಅನುಭವಿಸಿದ ಎಲ್ಲ ಸಂಕಟಗಳನ್ನು ಆತನಿಗೆ ಹೇಳುವುದರಲ್ಲಿ ಎಂದೂ ಸಂಕೋಚಪಡಲಾರನು ।೫೭೬॥

ಕಾ ಉಖಿತೇ ಆಂಗೇ ಜೀವೇ । ಆಪಣಪೇ ದಿಧಲೇ ಜಿಯಾ ಮನೋಭಾವೇ । ತಿಯಾ ಕಾಂತು ಮಿನಲಿಯಾ ನ ರಾಹವೇ । ಹೃದಯ ಜೇವೀ ।೫೭೭॥ ತಯಾಪರೀ ಜೇ ಮಿಯಾ । ಹೇ ವಿನವಿಲೇ ತುಮತೇ ಗೋಸಾವಿಯಾ । ಆಣೀಕ ಕಾಂಹೀ ಏಕ ಮ್ಹಣಾವಯಾ । ಕಾರಣ ಅಸೇ ।೫೭೮॥

ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ ಭಯೇನ ಚ ಪ್ರವ್ಯಥಿತಂ ಮನೋ ಮೇ ।
ತದೇವ ಮೇ ದರ್ಶಯ ದೇವ ರೂಪಂ ಪ್ರಸೀದ ದೇವೇಶ ಜಗನ್ನಿವಾಸ ।೪೫॥

ತರೀ ದೇವೇಸೀ ಸಲಗೀ ಕೇಲೀ । ಜೇ ವಿಶ್ವರೂಪಾಚೀ ಆಳೀ ಘೇತಲೀ । ತೇ ಮಾಯ ಬಾಪೇ ಪುರವಿಲೀ । ಸ್ನೇಹಾಳಾಚೇನಿ ।೫೭೯॥ ಸುರತರೂಂಚೀ ಝಾಡೇ । ಆಂಗಣೀ ಲಾವಾವಿ ಕೋಡೇ । ದೇಯಾವೇ ಕಾಮಧೇನೂಚೇ ಪಾಡೇ । ಖೇಳಾವಯಾ ।೫೮೦॥ ಮಿಯಾ ನಕ್ಷತ್ರೀ ಡಾವ ಪಾಡಾವಾ । ಚಂದ್ರ ಚೇಂಡುವಾಲಾಗೀ ಆಣಾವಾ । ಹಾ ಛಂದು ಸಿದ್ಧೀ ನೇಲಾ ಆಘವಾ । ಮಾಉಲೀಯೇ ತುವಾ ।೫೮೧॥ ಜಿಯಾ ಅಮೃತಲೇಶಾಲಾಗೀ ಸಾಯಾಸ । ತಯಾಚಾ ಪಾಊಸ ಕೇಲಾ ಚಾರೀ ಮಾಸ । ಪೃಥ್ವೀ ವಾಹೂನ ಚಾಸೇಚಾಸ । ಚಿಂತಾಮಣೀ ಪೇರಿಲೇ ।೫೮೨॥ ಐಸಾ ಕೃತಕೃತ್ಯ ಕೇಲಾ ಸ್ವಾಮೀ । ಬಹುವೇ ಲಳಾ ಪಾಳಿಲಾ ತುಮ್ಹೀ । ದಾವಿಲೇ ಜೇ ಹರಬ್ರಹ್ಮೀ । ನಾಯಕೀಜೇ ಕಾನೇ ।೫೮೩॥ ಮಾ ದೇಖಾವಯಾಚೇ ಕೇಉತೀ ಗೋಠೀ । ಜಯಾಚೇ ಉಪನಿಷದಾ ನಾಹೀ ಭೇಟೀ । ತೇ ಜಿವ್ಹಾರೀಂಚೀ ಗಾಂಠೀ । ಮಜಲಾಗೀ ಸೋಡಿಲೀ ।೫೮೪॥ ಜೇ ಕಲ್ಪಾದೀಲಾಗೋನೀ । ಆಜಿಚೀ ಘಡೀ ಧರುನೀ । ಮಾಝೀ ಜೇತುಲೀ ಹೋಉನೀ । ಗೇಲೀ ಜನ್ಮೇ ।೫೮೫॥ ತಯಾ ಆಘವಿಯಾಂಚಿ ಅಂತು । ಘುರಡೋಳೀ ಘೇಊನಿ ಅಸೇ ಪಾಹತು । ಪರಿ ಹೀ ದೇಖಿಲೀ ಐಕಿಲೀ ಮಾತು । ಆತುಡೇಚಿನಾ ।೫೮೬॥ ಬುದ್ಧೀಚೇ ಜಾಣಣೇ । ಕಹೀ ನ ವಚೇಚಿ ಯಾಚೇನಿ ಆಂಗಣೇ । ಹೇ ಸಾದಹೀ ಅಂತಃಕರಣೇ । ಕರವೇಚಿನಾ ।೫೮೭॥ ತೇಥ ಡೋಳ್ಯಾ ದೇಕೀ ಹೋಆವೀ । ಹೀ ಗೋಠೀಚಿ ಕಾಯಸಯಾ ಕರಾವೀ । ಕಿಂಬಹುನಾ ಪೂರ್ವೀ । ದೃಷ್ಟ ನಾ ಶ್ರುತ ।೫೮೮॥ ತೇ ಹೇ ವಿಶ್ವರೂಪ ಆಪುಲೇ । ತುಮ್ಹೀ ಮಜ ಡೋಳಾ ದಾವಿಲೇ । ತರೀ ಮಾಝೇ ಮನ ಝಾಲೇ । ಹೃಷ್ಟ ದೇವಾ ।೫೮೯॥ ಪರಿ ಆತಾ ಐಸೀ ಚಾಡ ಜೇವೀ । ಜೇ ತುಜಸೀ ಗೋಠೀ ಕರಾವೀ । ಜವಳೀಕ ಹೇ ಭೋಗಾವೀ । ಆಲಿಂಗಾವಾಸೀ ।೫೯೦॥

ಅಥವಾ ತನು ಮನ ಜೀವವನ್ನು ಸರ್ವಭಾವದಿಂದ ಪತಿಗೆ ಅರ್ಪಿಸಿದ ಕಾಂತೆಯು ತನ್ನ ಪತಿಯ ಭೆಟ್ಟಿಯಾದಾಗ್ಗೆ ತನ್ನ ಹೃದಯದಲ್ಲಿನ ಎಲ್ಲವನ್ನು ಬಿಚ್ಚಿ ಹೇಳುತ್ತಾಳೆ ।೫೭೭॥

ಅದರಂತೆ ಪ್ರಭುವೇ, ನನ್ನ ಅಪರಾಧಗಳನ್ನು ಕ್ಷಮಿಸಿರಿ ಎಂದು ನಿಮಗೆ ವಿನಂತಿಸಿರುವೆನು. ಆದರೆ ನನಗೆ ಇನ್ನೊಂದು ಮಾತು ವಿಚಾರಿಸಬೇಕೆಂದೆನಿಸುತ್ತದೆ ।೫೭೮॥

ಶ್ಲೋಕಾರ್ಥ :- ಸ್ವಾಮಿ! ನೋಡದ, ಕೇಳದ ಈ ನಿನ್ನ ರೂಪಗಳನ್ನು ನೋಡಿ ಪರವಶನಾದೆನು. ಭಯದಿಂದ ಅತಿಬಾಧೆಗೊಳಗಾದೆನು, ಇನ್ನು ಸಾಕು. ಹೇ! ದೇವದೇವಾ! ಜಗನ್ನಿವಾಸಾ, ದಯಮಾಡಿ ಮೊದಲಿನ ನಿನ್ನ ಮೂಲಸ್ವರೂಪವನ್ನೇ ತೋರಿಸು ।೫೫॥

ದೇವರಲ್ಲಿ ನಾನು ಸಲಿಗೆಯಿಂದ ನಡೆದುಕೊಂಡೆನು. ವಿಶ್ವರೂಪವನ್ನು ತೋರಿಸುವುದಕ್ಕಾಗಿ ಹಟತೊಟ್ಟೆನು. ಪ್ರಿಯಭಕ್ತರ ತಾಯಿ ತಂದೆಯರಾದ ನೀವು ಅದನ್ನು ಪೂರ್ಣಗೊಳಿಸಿದಿರಿ ।೫೭೯॥

ಅಂಗಳದಲ್ಲಿ ಕಲ್ಪವೃಕ್ಷ ಹಚ್ಚುವ ಮತ್ತು ಆಡಲು ಕಾಮಧೇನುವಿನ ಕರುವನ್ನು ಕೊಡುವ ನನ್ನ ತೀವ್ರ ಇಚ್ಛೆಯನ್ನು ಪೂರೈಸಿದಿರಿ ।೫೮೦॥

ಪಗಡಿಯಾಡಲು ಕವಡಿಯ ಬದಲು ನಕ್ಷತ್ರಗಳನ್ನು ಕೊಡುವ ಮತ್ತು ಆಡಲು ಚೆಂಡಿನ ಬದಲಾಗಿ ಚಂದ್ರನನ್ನು ಕೊಡುವ ಈ ಎಲ್ಲ ನನ್ನ ಅಭಿರುಚಿಗಳನ್ನು ತಾಯಿಯಾಗಿ ಸಿದ್ಧಿಗೊಳಿಸಿದಿರಿ ।೫೮೧॥

ಲೇಶ ಮಾತ್ರ ಅಮೃತಕ್ಕೆ ಸಾಕಷ್ಟು ಆಯಾಸಪಡ ಬೇಕಾಗುವುದು. ಆದರೆ ನೀವು ಅದರ ನಾಲ್ಕು ತಿಂಗಳವರೆಗೆ ಮಳೆಗರೆದು ಭೂಮಿಯಲ್ಲಿ ಮಡಿಗಳನ್ನು ಸಿದ್ಧಗೊಳಿಸಿ ಅದರಲ್ಲಿ ಚಿಂತಾಮಣಿಗಳನ್ನು ಬಿತ್ತಿದಿರಿ ।೫೮೨॥

ಸ್ವಾಮಿಯೇ, ಈ ಪ್ರಕಾರವಾಗಿ ನೀವು ನನ್ನ ಬಯಕೆಗಳೆಲ್ಲವನ್ನೂ ಪೂರೈಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಿರುವಿರಿ ಮತ್ತು ನೀವು ನನಗೆ ತೋರಿಸಿರುವ ವಿಶ್ವರೂಪವನ್ನು ಶಂಕರ, ಬ್ರಹ್ಮದೇವರು ಕಿವಿಯಿಂದಲೂ ಕೇಳಿರುವುದಿಲ್ಲ ।೫೮೩॥

ಅಂದಮೇಲೆ ಅದು ದೃಷ್ಟಿಗೆ ಹೇಗೆ ಬೀಳುವುದು? ಉಪನಿಷತ್‌ಗಳಿಗೂ ಇದರ ಭೇಟಿಯಾಗಿರುವುದಿಲ್ಲ. ನನಗೆ ಮಾತ್ರ ನೀವು ನಿಮ್ಮ ಅಂತರಂಗದಲ್ಲಿನ ರೂಪವನ್ನು ಬಿಚ್ಚಿ ತೋರಿಸಿರುವಿರಿ ।೫೮೪॥

ಕಲ್ಪದ ಆರಂಭದಿಂದಲೂ ಇಂದಿನ ಈ ಘಳಿಗೆಯ ವರೆಗೆ ನನ್ನ ಎಷ್ಟೋ ಜನ್ಮಗಳು ಆಗಿಹೋದವು ।೫೮೫॥

ಆ ಎಲ್ಲ ಜನ್ಮಗಳಲ್ಲಿಯೂ ಪ್ರತಿಯೊಂದು ಜನ್ಮದಲ್ಲಿ ನಾನು ನಿರೀಕ್ಷಿಸಿ ನೋಡಿದರೆ, ಈ ರೂಪದ ಮಾತನ್ನು ಎಂದೂ ಕೇಳಿಲ್ಲ ಅಥವಾ ನೋಡಿಲ್ಲ. ಹೀಗೆ ದೃಢಪಟ್ಟಿದೆ ।೫೮೬॥

ಈ ವಿಶ್ವರೂಪದ ಅಂಗಳದಲ್ಲಿಯೂ ಸಹ ಬುದ್ಧಿಯ ಕಲ್ಪನೆ ಹೋಗಿರುವುದಿಲ್ಲ. ಅಂದಮೇಲೆ ಅಂತಃಕರಣದಲ್ಲಿ ಅದರ ನೆನಪು ಎಲ್ಲಿಂದಾಗಬೇಕು? ।೫೮೭॥

ಈ ಪರಿಸ್ಥಿತಿಯಲ್ಲಿ ಈ ವಿಶ್ವರೂಪವನ್ನು ಕಣ್ಣಿನಿಂದ ನೋಡಬೇಕೆಂಬ ಮಾತು ಆಡುವುದೇ ಬೇಡ. ಒಟ್ಟಿನಲ್ಲಿ ಇಂತಹ ರೂಪವನ್ನು ಪೂರ್ವದಲ್ಲಿ ಎಂದೂ ಕೇಳಿರುವುದಿಲ್ಲ ಮತ್ತು ಎಂದೂ ನೋಡಿರುವುದಿಲ್ಲ ।೫೮೮॥

ಹೇ ದೇವನೇ, ಈ ಯಾವ ನಿಮ್ಮ ವಿಶ್ವರೂಪವನ್ನು ನೀವು ನನಗೆ ತೋರಿಸಿರುವುದರಿಂದ ನನ್ನ ಮನಸ್ಸು ಸಂತೋಷಗೊಂಡಿದೆ ।೫೮೯॥

ಆದರೆ, ಈಗ ನಿಮ್ಮಲ್ಲಿ ಮಾತನಾಡುತ್ತ ನಿಮ್ಮ ಸ್ನೇಹದ ಉಪಭೋಗ ತೆಗೆದುಕೊಳ್ಳುವ ಹಾಗೂ ನಿಮ್ಮ ಆಲಿಂಗನ ಪಡೆಯುವ ಇಚ್ಛೆಯಾಗಿದೆ ।೫೯೦॥

ತೇ ಯಾಚಿ ರೂಪೀ ಕರೂ ಮ್ಹಣಿಜೇ । ತರಿ ಕೋಣೇ ಏಕೇ ಮುಖೇಸಿ ಚಾವಳಿಜೇ । ಆಣಿ ಕವಣಾ ಖೇಂವ ದೇಈಜೇ । ತುಜ ಲೇಖಾ ನಾಹೀ ।೫೯೧॥ ಮ್ಹಣೌನಿ ವಾರಿಯಾಸವೇ ಧಾಂವಣೇ । ನ ಠಕೇ ಗಗನಾ ಖೇಂವ ದೇಣೇ । ಜಳ ಕೇಲೀ ಖೇಳಣೇ । ಸಮುದ್ರೀ ಕೇ ಉತೇ? ।೫೯೨॥ ಯಾಲಾಗೀ ಜೀ ದೇವಾ । ಏಥೀಂಚೇ ಭಯ ಉಪಜತಸೇ ಜೀವಾ । ಮ್ಹಣೌನಿ ಯೇತುಲಾ ಲಳಾ ಪಾಳಾವಾ । ಜೇ ಪುರೇ ಹೇ ಆತಾ ।೫೯೩॥ ಪೈ ಚರಾಚರ ವಿನೋದೇ ಪಾಹಿಜೇ । ಮಗ ತೇಣೇ ಸುಖೇ ಘರೀ ರಾಹಿಜೇ । ತೈಸೇ ಚತುರ್ಭುಜ ರೂಪ ತುಝೇ । ತೋ ವಿಸಾಂವಾ ಆಮ್ಹಾ ।೫೯೪॥ ಆಮ್ಹೀ ಯೋಗಜಾತ ಅಭ್ಯಾಸಾವೇ । ತೇಣೇ ಯಾಚಿ ಅನುಭವಾ ಯಾವೇ । ಶಾಸ್ತ್ರಾತೇ ಆಲೋಡಾವೇ । ಪರಿ ಸಿದ್ಧಾಂತು ತೋ ಹಾಚಿ ।೫೯೫॥ ಆಮ್ಹೀ ಯಜನತೇ ಕಿಜತೀ ಸಕಳೇ । ಪರಿ ತಿಯೇ ಫಳಾವೀ ಯೇಣೇಂಚಿ ಫಳೇ । ತೀರ್ಥೇ ಹೋತು ಸಕಳೇ । ಯಾಚಿಲಾಗೀ ।೫೯೬॥ ಆಣೀಕಹೀ ಕಾಂಹೀ ಜೇ ಜೇ । ದಾನ ಪುಣ್ಯ ಆಮ್ಹೀ ಕೀಜೇ । ತಯಾ ಫಳೀ ಫಳ ತುಝೇ । ಚತುರ್ಭುಜ ರೂಪ ।೫೯೭॥ ಐಸೀ ತೇಥೀಂಚೀ ಜೀವಾ ಆವಡೀ । ಮ್ಹಣೌನಿ ತೇಂಚಿ ದೇಖಾವಯಾ ಲವಡ ಸವಡೀ । ವರ್ತತ ಅಸೇ ತೇ ಸಾಂಕಡೀ । ಫೇಡಿಜೇ ವೇಗೀ ।೫೯೮॥ ಅಗಾ ಜೀವೀಂಚೇ ಜಾಣತೇಯಾ । ಸಕಳ ವಿಶ್ವವಸವಿತೇಯಾ । ಪ್ರಸನ್ನ ಹೋಈ ಪೂಜಿತಯಾ । ದೇವಾಂಚಿಯಾ ದೇವಾ ।೫೯೯॥

ಕಿರೀಟಿನಂ ಗದಿನಂ ಚಕ್ರಹಸ್ತಮ್ ಇಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ।
ತೇನೈವ ರೂಪೇಣ ಚತುರ್ಭುಜೇನ ಸಹಸ್ರಬಾಹೋ ಭವ ವಿಶ್ವಮೂರ್ತೇ ।೪೬॥

ಕೈಸೇ ನೀಲೋತ್ಪಲಾತೇ ರಾಂವಿತ । ಆಕಾಶಾಹೀ ರಂಗು ಲಾವಿತ । ತೇಜಾಚೀ ವೋಜ ದಾವಿತ । ಇಂದ್ರನೀಳಾ ।೬೦೦॥ ಜೈಸಾ ಪರಿಮಳ ಜಾಹಲಾ ಮರಗಜಾ । ಕಾ ಆನಂದಾಸಿ ನಿಘಾಲಿಯಾ ಭುಜಾ । ಜ್ಯಾಚೇ ಜಾನೂವರೀ ಮಕರಧ್ವಜಾ । ಜೋಡಲೀ ಬರವ ।೬೦೧॥ ಮಸ್ತಕೀ ಮಗುಟಾತೇ ಠೇವಿಲೇ । ಕೀ ಮುಕುಟಾ ಮುಕುಟ ಮಸ್ತಕ ಝಾಲೇ । ಶೃಂಗಾರಾ ಲೇಣೇ ಲಾಧಲೇ । ಅಂಗಾಚೇನಿ ಜಯಾ ।೬೦೨॥ ಇಂದ್ರಧನುಷ್ಯಾಚಿಯೇ ಆಡಣೀ । ಮಾಜೀ ಮೇಘ ಗಗನರಂಗಣೀ । ತೈಸೇ ಆವರಿಲೇ ಶಾರ್ಙ್ಗಪಾಣೀ । ವೈಜಯಂತಿಯಾ ।೬೦೩॥

ಅಂದಮೇಲೆ ಈ ಸ್ಥಿತಿಯಲ್ಲಿ ನಿಮ್ಮ ಯಾವ ಮುಖದೊಡನೆ ಮಾತನಾಡಬೇಕು? ಯಾರಿಗೆ ಆಲಿಂಗಿಸ ಬೇಕು? ಏಕೆಂದರೆ ನಿಮ್ಮ ರೂಪಗಳಿಗೆ ಅಂತಪಾರವೇ ಇಲ್ಲ ।೬೯೧॥

ಆದ್ದರಿಂದ ಗಾಳಿಯ ಜೊತೆಗೆ ಓಡುವುದು, ಅಥವಾ ಆಕಾಶಕ್ಕೆ ಆಲಿಂಗಿಸುವುದು ಸಾಧಿಸುವುದಿಲ್ಲ. ಹಾಗೆಯೇ ಸಮುದ್ರದಲ್ಲಿ ಜಲಕ್ರೀಡೆಯನ್ನು ಹೇಗೆ ಮಾಡಬೇಕು? ।೬೯೨॥

ಈ ಕಾರಣವಾಗಿ ದೇವಾ, ಈ ವಿಶ್ವರೂಪದ ಭಯವು ನನಗಾಗಿದೆ. ಆದ್ದರಿಂದ ಇದನ್ನು ಆವರಿಸಿಕೋ, ಇಷ್ಟೇ ನನ್ನ ಬಯಕೆಯನ್ನು ಪೂರ್ಣಗೊಳಿಸು ।೬೯೩॥

ಹೀಗಿದೆ ನೋಡು, ಈ ಚರಾಚರಗಳನ್ನು ಕೌತುಕದಿಂದ ಅವಲೋಕನ ಮಾಡಿದಾಗ್ಯೂ ತನ್ನ ಮನೆಯಲ್ಲಿಯೇ ಇರಬೇಕೆಂದೆನಿಸುತ್ತದೆ. ಅದರಂತೆ ನಿಮ್ಮ ಚತುರ್ಭುಜ ರೂಪವೇ ನಮಗೆ ವಿಶ್ರಾಂತಿ ಸ್ಥಾನವಾಗಿದೆ ।೬೯೪॥

ನಾವು ಎಲ್ಲ ಯೋಗಗಳ ಅಭ್ಯಾಸ ಮಾಡಿದಾಗ್ಗೆ ನೋಡುವುದು ಇದುವೇ ಮತ್ತು ಎಲ್ಲ ಶಾಸ್ತ್ರಗಳ ವಿಚಾರ ಮಾಡಿದಾಗ್ಗೆ ಸಿದ್ಧಾಂತವು ಇದುವೇ ।೬೯೫॥

ನಾವು ಎಲ್ಲ ಯಜ್ಞ ಮಾಡಿದಾಗ ದೊರಕುವ ಫಲಪ್ರಾಪ್ತಿಯು ಇದುವೇ. ಇದೇ ರೂಪಕ್ಕಾಗಿ ಎಲ್ಲ ತೀರ್ಥಗಳನ್ನು ಸುತ್ತಬೇಕಾಗುವುದು ।೬೯೬॥

ಇನ್ನುಳಿದ ಬೇರೆ ಬೇರೆ ಪುಣ್ಯ ಅಥವಾ ದಾನಗಳನ್ನು ಮಾಡುವುದರಿಂದ ದೊರೆಯುವ ಫಲಪ್ರಾಪ್ತಿಯು ಈ ನಿಮ್ಮ ಚತುರ್ಭುಜ ರೂಪವಾಗಿರುವುದು ।೬೯೭॥

ಈ ಪ್ರಕಾರವಾಗಿ ಈ ಚತುರ್ಭುಜ ರೂಪವು ಜೀವಕ್ಕೆ ಪ್ರೀತಿಯಾಗಿ ಮನಸ್ಸು ಗಡಬಡಿಸುತ್ತಿದೆ. ಆದ್ದರಿಂದ ಈ ನನ್ನ ಅಡಚಣೆಯನ್ನು ಬೇಗನೇ ದೂರ ಮಾಡು ।೬೯೮॥

ಅಹೋ, ಇತರರ ಮನದ ಮಾತುಗಳನ್ನು ತಿಳಿಯುವ ಜಗನ್ನಿವಾಸನೇ, ಪರಮಪೂಜ್ಯನೇ, ದೇವಾಧಿದೇವನೇ, ಪ್ರಸನ್ನನಾಗು ।೬೯೯॥

ಶ್ಲೋಕಾರ್ಥ :– ಹೇ ಸಹಸ್ರಬಾಹೋ! ವಿಶ್ವರೂಪಾ! ಯಥಾ ಪ್ರಕಾರವಾಗಿ ನಿನ್ನನ್ನು ನೋಡಲು ಬಯಸುತ್ತೇನೆ. ಕಿರೀಟವನ್ನು ಧರಿಸಿ ಚಕ್ರಹಸ್ತನಾಗಿ ಚತುರ್ಭುಜ ರೂಪನಾದ ನಿನ್ನನ್ನು ನೋಡಲು ಬಯಸುವೆನು ।೪೬॥

ಆಹಾ! ಈ ಚತುರ್ಭುಜ ಮೂರ್ತಿಯನ್ನು ಹೇಗೆ ವರ್ಣಿಸಬೇಕು? ಈತನಿಂದಲೇ ನೀಲಕಮಲಕ್ಕೂ, ಆಕಾಶಕ್ಕೂ ನೀಲವರ್ಣ ಒದಗಿದೆ ಮತ್ತು ಈತನಿಂದಲೇ ಇಂದ್ರನೀಲಮಣಿಯ ತೇಜದ ಪ್ರಕಾಶವು ಝಳಪಿಸುತ್ತದೆ ।೬೦೦॥

ಪಚ್ಚ ರತ್ನಕ್ಕೆ ಸುಗಂಧವು ಹುಟ್ಟಿದಂತೆ, ಆನಂದಕ್ಕೆ ಹಸ್ತಗಳು ಹುಟ್ಟಿದಂತೆ ; ಪ್ರಭುಗಳ ತೊಡೆಯ ಮೇಲೆ (ಮಗನೆಂದು ಆಡಿದ್ದರಿಂದ) ಮದನನಿಗೆ ಸೌಂದರ್ಯವು ಪ್ರಾಪ್ತವಾಗಿದೆ ।೬೦೧॥

ಮಸ್ತಕದ ಮೇಲೆ ಕಿರೀಟವಿದೆ. ಇದರಿಂದ ಶೋಭೆಯು ಕಿರೀಟದಿಂದ ಮಸ್ತಕವೋ ಅಥವಾ ಮಸ್ತಕದಿಂದ ಕಿರೀಟಕ್ಕೋ? ಈತನ ಅಂಗದಿಂದಲೇ ಅಲಂಕಾರಗಳಿಗೆ ಶೋಭೆ ಪ್ರಾಪ್ತವಾಗಿದೆ ।೬೦೨॥

ಆಕಾಶದಲ್ಲಿ ಮೂಡುವ ಇಂದ್ರಧನುಷ್ಯದ (ಕಾಮನ ಬಿಲ್ಲಿನ) ಮಧ್ಯಭಾಗದಲ್ಲಿ ಮೋಡಗಳು ತುಂಬಿಕೊಂಡಂತೆ ಶ್ರೀಕೃಷ್ಣನು ವೈಜಯಂತಿಮಾಲೆಯಿಂದ ಸುತ್ತುಗಟ್ಟಿ ಸುಶೋಭಿತನಾಗಿದ್ದಾನೆ ।೬೦೩॥

ಆತಾ ಕವಣೇ ತೇ ಉದಾರ ಗದಾ । ಅಸುರಾ ದೇತ ಕೈವಲ್ಯಪದಾ । ಕೈಸೇ ಚಕ್ರ ಹನ ಗೋವಿಂದಾ । ಸೌಮ್ಯತೇಜೇ ಮಿರವೇ ।೬೦೪॥ ಕಿಂಬಹುನಾ ಸ್ವಾಮೀ । ತೇ ದೇಖಾವಯಾ ಉತ್ಕಂಠಿತ ಪಾ ಮೀ । ಮ್ಹಣೌನಿ ಆತಾ ತುಮ್ಹೀ । ತೈಸಯಾ ಹೋಆವೇ ।೬೦೫॥ ಹೇ ವಿಶ್ವರೂಪಾಚೇ ಸೋಹಳೇ । ಭೋಗೂನಿ ನಿವಾಲೇ ಜೇ ಡೋಳೇ । ಆತಾ ಹೋತಾತಿ ಆಂಧಳೇ । ಕೃಷ್ಣಮೂರ್ತಿಲಾಗೀ ।೬೦೬॥ ತೇ ಸಾಕಾರ ಕೃಷ್ಣರೂಪಡೇ । ವಾಂಚೂನಿ ಪಾಹೋ ನಾವಡೇ । ತೇ ನ ದೇಖತಾ ಥೋಡೇ । ಮಾನಿತಾತೀ ಹೇ ।೬೦೭॥ ಆಮ್ಹಾ ಭೋಗಮೋಕ್ಷಾ ಚಿಯಾ ಠಾಯೀ । ಶ್ರೀಮೂರ್ತೀವಾಂಚೂನಿ ನಾಹೀ । ಮ್ಹಣೌನಿ ತೈಸಾಚಿ ಸಾಕಾರು ಹೋಈ । ಹೇ ಸಾಂವರೀ ಆತಾ ।೬೦೮॥

ಶ್ರೀ ಭಗವಾನುವಾಚ:-
ಮಯಾ ಪ್ರಸನ್ನೇನ ತವಾರ್ಜುನೇದಂ ರೂಪಂ ಪರಂ ದರ್ಶಿತಮಾತ್ಮಯೋಗಾತ್ ।
ತೇಜೋಮಯಂ ವಿಶ್ವಮನಂತಮಾದ್ಯಂ ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಂ ।೪೭॥

ಯಾ ಅರ್ಜುನಾಚಿಯಾ ಬೋಲಾ । ವಿಶ್ವರೂಪಾ ವಿಸ್ಮಯೋ ಜಾಹಲಾ । ಮ್ಹಣೇ ಐಸಾ ನಾಹೀ ದೇಖಿಲಾ । ಧಸಾಳ ಕೋಣೇ ।೬೦೯॥ ಕೋಣ ಹೇ ವಸ್ತು ಪಾವಲಾ ಆಹಾಸೀ । ತಯಾ ಲಾಭಾಚಾ ತೋಷು ನ ಘೇಸೀ । ಮಾ ಭೇಣೇ ಕಾಯ ನೇಣೋ ಬೋಲಸೀ । ಹೇಕಾಡು ಐಸಾ ।೬೧೦॥ ಆಮ್ಹೀ ಸಾವಿಯಾಚಿ ಜೈ ಪ್ರಸನ್ನ ಹೋಣೇ । ತೈ ಆಂಗಚಿವರೀ ಮ್ಹಣೇ ದೇಣೇ । ವಾಂಚೋನಿ ಜೀವ ಅಸೇ ವೇಂಚಣೇ । ಕವಣಾಸಿ ಗಾ ।೬೧೧॥ ತೇ ಹೇ ತುಝಿಯೇ ಚಾಡೇ । ಆಜಿ ಜಿವಾಚೇಂಚಿ ದಳವಾಡೇ । ಕಾಮಊನಿಯಾ ಯೇವಢೇ । ರಚಿಲೇ ಧ್ಯಾನ ।೬೧೨॥ ಐಸೀ ಕಾಯ ನೇಣೋ ತುಝಿಯೇ ಆವಡೀ । ಜಾಹಲೀ ಪ್ರಸನ್ನತಾ ಆಮುಚೀ ವೇಡೀ । ಮ್ಹಣೌನಿ ಗೌಪ್ಯಾಚೀಹೀ ಗುಢೀ । ಉಭಾವಿಲೀ ಜಗೀ ।೬೧೩॥ ತೇ ಹೇ ಅಪಾರಾ ಅಪಾರ । ಸ್ವರೂಪ ಮಾಝೇ ಪರಾತ್ಪರ । ಏಥೂನಿ ತೇ ಅವತಾರ । ಕೃಷ್ಣಾದಿಕ ।೬೧೪॥ ಹೇ ಜ್ಞಾನತೇಜಾಚೇ ನಿಖಿಳ । ವಿಶ್ವಾತ್ಮಕ ಕೇವಳ । ಅನಂತ ಹೇ ಅಢಳ । ಆದ್ಯ ಸಕಳಾ ।೬೧೫॥ ಹೇ ತುಜವಾಂಚೋನಿ ಅರ್ಜುನಾ । ಪೂರ್ವೀ ಶ್ರುತ ದೃಷ್ಟ ನಾಹೀ ಆನಾ । ಜೇ ಜೋಗೇ ನವ್ಹೇ ಸಾಧನಾ । ಮ್ಹಣೌನಿಯಾ ।೬೧೬॥

ನ ವೇದಯಜ್ಞಾಧ್ಯಯನೈರ್ನ ದಾನೈಃ ಚ ಕ್ರಿಯಾಭಿರ್ನ ತಪೋಭಿರುಗ್ರೈಃ ।
ಏವಂರೂಪಃ ಶಕ್ಯ ಅಹಂ ನೃಲೋಕೇ ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ।೪೮॥

ಈಗ ರಾಕ್ಷಸರಿಗೆ ಮೋಕ್ಷಪದಕ್ಕೆ ಕಳಿಸುವ ಗೋವಿಂದನ ಕೈಯಲ್ಲಿನ ಉದಾರಗದೆಯು ಹಾಗೆಯೇ ಕೈಯಲ್ಲಿನ ಚಕ್ರವು ಎಷ್ಟೊಂದು ಸೌಮ್ಯತೇಜದಿಂದ ಮೆರೆಯುತ್ತಿವೆ ।೬೦೪॥

ಹೇ ಸ್ವಾಮಿಯೇ, ಬಹಳ ಮಾಡಿ ನಾನು ಇಂತಹ ರೂಪವನ್ನು ನೋಡಲು ಬಹಳ ಉತ್ಸುಕನಾಗಿದ್ದೇನೆ. ಆದ್ದರಿಂದ ನೀವು ಇದರಂತೆ ರೂಪ ಧರಿಸಿರಿ ।೬೦೫॥

ವಿಶ್ವರೂಪವನ್ನು ನೋಡುವ ಉತ್ಸವವನ್ನು ಭೋಗಿಸಿ ನನ್ನ ಕಣ್ಣುಗಳು ತೃಪ್ತಗೊಂಡಿವೆ ಮತ್ತು ಈಗ ಅವು ಕೃಷ್ಣಮೂರ್ತಿಯನ್ನು ನೋಡಲು ಹಸಿದುಕೊಂಡಿವೆ ।೬೦೬॥

ನಿಮ್ಮ ಸುಂದರವಾದ ಕೃಷ್ಣರೂಪವನ್ನು ನೋಡುವ ಹೊರತಾಗಿ ಬೇರೆ ಯಾವ ಇಚ್ಛೆಯೂ ನನಗಿಲ್ಲ. ಒಂದುವೇಳೆ ಅದು ದೃಷ್ಟಿಗೆ ಬೀಳದಿದ್ದರೆ ಈಗಿನ ವಿಶ್ವರೂಪದ ಬೆಲೆಯು ನನಗೆ ಕಡಿಮೆಯೇ ।೬೦೭॥

ಈ ನಿನ್ನ ಮೂರ್ತಿಯ ಹೊರತಾಗಿ ಭೋಗ ಮೋಕ್ಷಗಳು ನಮಗಿಲ್ಲ. ಆದ್ದರಿಂದ ಈ ವಿಶ್ವರೂಪವನ್ನು ಅಡಗಿಸಿ ಸುಂದರವಾದ ಚತುರ್ಭುಜರೂಪವನ್ನು ಧರಿಸು ।೬೦೮॥

ಶ್ಲೋಕಾರ್ಥ :- ಭಗವಂತನು ಹೀಗೆಂದನು:- ಅರ್ಜುನಾ, ನನ್ನ ಯೋಗಶಕ್ತಿ ಪ್ರಭಾವದಿಂದ ಅನಾದಿಯೂ, ಅನಂತವೂ, ತೇಜೋಮಯವೂ ಆದ ವಿಶ್ವರೂಪವನ್ನು ದಯದಿಂದ ನಿನಗೆ ತೋರಿಸಿದೆನು. ನಿನ್ನ ವಿನಃ ಮೊದಲು ಯಾರೂ ನೋಡಿರಲಿಲ್ಲ ।೪೭॥

ಈ ಯಾವ ಅರ್ಜುನನ ಮಾತುಗಳನ್ನು ಕೇಳಿ ವಿಶ್ವರೂಪನಿಗೆ ಬಹಳ ಆಶ್ಚರ್ಯವಾಗಿ ಹೇಳಿದನು, ನಿನ್ನಂತಹ ಅವಿಚಾರಿ ಮನುಷ್ಯನನ್ನು ನಾನು ನೋಡಿಲ್ಲ ।೬೦೯॥

ಅರೇ, ನಿನಗೆ ಎಂತಹ ಲಾಭವಾಗಿದೆಂಬುದಕ್ಕೆ ಸಂತೋಷಪಡದೇ ಮನದಲ್ಲಿ ಭಯಹುಟ್ಟಿಸಿಕೊಂಡು ಹುಂಬನಂತೆ ಏನೋ ಹೇಳುತ್ತಿರುವಿಯಲ್ಲಾ ?।೬೧೦॥

ನಾವು ಯಾರಿಗಾದರೂ ಪ್ರಸನ್ನರಾದರೆ, ಅದು ಬಾಹ್ಯಾತ್ಕಾರವಾಗಿರುತ್ತದೆ. ಆದರೆ ಅಂತಃಕರಣದಿಂದ ಯಾರಿಗೂ ಪ್ರಸನ್ನರಾಗುವುದಿಲ್ಲ ।೬೧೧॥

ಹಾಗಿದ್ದರೂ, ನಾವು ಈಗ ನಮ್ಮ ಮನಃಪೂರ್ವಕವಾಗಿ ಪ್ರಸನ್ನರಾದದ್ದು ನಿನಗಾಗಿಯೇ. ಅಂತಃಕರಣದಿಂದ ಇಲ್ಲಿಯವರೆಗೆ ಗಳಿಸಿಟ್ಟ ಮಹತ್ತರವಾದ ಧ್ಯಾನವನ್ನು ಸಿದ್ಧಗೊಳಿಸಿದೆ ।೬೧೨॥

ನನ್ನ ಮನಸ್ಸು ನಿನ್ನ ಭಕ್ತಿ ಪ್ರೇಮಕ್ಕೆ ಹೇಗೆ ಮರುಳಾಗಿದೆಯೋ ನನಗೆ ತಿಳಿಯದಾಗಿದೆ. ಆದ್ದರಿಂದ ನನ್ನ ಅತ್ಯಂತ ಗುಪ್ತವಾಗಿರುವ ವಿಶ್ವರೂಪವನ್ನು ಜಗತ್ತಿನಲ್ಲಿ ಧ್ವಜನಿಲ್ಲಿಸಿದೆ ।೬೧೩॥

ಯಾವ ಇದು ಅಪಾರಕ್ಕೆ ಅಪಾರವಾಗಿ ನನ್ನ ಸ್ವರೂಪವು ಪರಾತ್ಪರವಾಗಿದೆ. ಇಲ್ಲಿಂದಲೇ ಕೃಷ್ಣಾದಿಕರ ಅವತಾರವಾಗಿದೆ ।೬೧೪॥

ಈ ಸ್ವರೂಪವು ಕೇವಲ ಜ್ಞಾನತೇಜದಿಂದ ತುಂಬಿಕೊಂಡಿದೆ, ವಿಶ್ವವ್ಯಾಪಕವಾಗಿದೆ, ಅನಂತವಾಗಿದೆ ಮತ್ತು ದೃಢವಾಗಿ ಎಲ್ಲಕ್ಕೂ ಮೊದಲಿನದಾಗಿದೆ ।೬೧೫॥

ಅರ್ಜುನಾ, ನಿನ್ನ ಹೊರತಾಗಿ ಬೇರೆಯಾದರೂ ಈ ಪೂರ್ವದಲ್ಲಿ ಇದನ್ನು ಕೇಳಿಲ್ಲ ಮತ್ತು ನೋಡಿಲ್ಲ. ಏಕೆಂದರೆ ಇದು ಸಾಧನದಿಂದ ಸಿಗುವ ವಸ್ತುವಲ್ಲ ।೬೧೬॥

ಶ್ಲೋಕಾರ್ಥ :- ಕುರುವೀರಾ! ವೇದಗಳನ್ನು, ಯಜ್ಞಗಳನ್ನು, ಅಧ್ಯಯನಗಳನ್ನು, ದಾನಗಳನ್ನು, ಉಗ್ರಕ್ರಿಯೆಗಳನ್ನು ಆಶ್ರಯಿಸಿದರೂ ಈ ನನ್ನ ಸ್ವರೂಪವನ್ನು ನೋಡಿದವರು ನಿನ್ನ ವಿನಃ ಭೂಲೋಕದಲ್ಲಿ ಯಾರೂ ಇಲ್ಲ ।೪೮॥

ಯಾಚೀ ಸೋಯ ಪಾತಲೇ । ಆಣೀ ವೇದೀ ಮೌನಚಿ ಘೇತಲೇ । ಯಾಜ್ಞಿಕೀ ಮಾಘಾರೇ ಆಲೇ । ಸ್ವರ್ಗಾನಿಯಾ ।೬೧೭॥ ಸಾಧಕೀ ದೇಖಿಲಾ ಆಯಾಸು । ಮ್ಹಣೌನಿ ವಾಳಿಲಾ ಯೋಗಾಭ್ಯಾಸು । ಆಣಿ ಅಧ್ಯಯನೇ ಸೌರಸು । ನಾಹೀ ಏಥ ।೬೧೮॥ ಸೀಗೇಚೀ ಸತ್ಕರ್ಮೇ । ಧಾವಿನ್ನಲೀ ಸಂಭ್ರಮೇ । ತಿಹೀ ಬಹುತೇಕೀ ಶ್ರಮೇ । ಸತ್ಯಲೋಕು ಠಾಕಿಲಾ ।೬೧೯॥ ತಪೀ ಐಶ್ವರ್ಯ ದೇಖಿಲೇ । ಆಣಿ ಉಗ್ರಪಣ ಉಭಯಾಂಚಿ ಸಾಂಡಿಲೇ । ಏವಂ ತಪ ಸಾಧನ ಜೇ ಠೇಲೇ । ಅಪರಾಂತರೇ ।೬೨೦॥ ತೇ ಹೇ ತುವಾ ಅನಾಯಾಸೇ । ವಿಶ್ವರೂಪ ದೇಖಿಲೇ ಜೈಸೇ । ಇಯೇ ಮನುಷ್ಯಲೋಕೀ ತೈಸೇ । ನ ಫಾವೇಚಿ ಕವಣಾ ।೬೨೧॥ ಆಜೀ ಧ್ಯಾನಸಂಪತ್ತಿಲಾಗೀ । ತೂಂಚಿ ಏಕು ಆಥಿಲಾ ಜಗೀ । ಹೇಪರಮ ಭಾಗ್ಯ ಆಂಗೀ । ವಿರಂಚಿಹೀ ನಾಹೀ ।೬೨೨॥

ಮಾ ತೇ ವ್ಯಥಾ ಮಾ ಚ ವಿಮೂಢಭಾವೋ ದೃಷ್ಟ್ವಾ ರೂಪಂ ಘೋರಮೀದೃಙ್ಮಮೇದಮ್ ।
ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ ತದೇವ ಮೇ ರೂಪಮಿದಂ ಪ್ರಪಶ್ಯ ।೪೯॥

ಮ್ಹಣೌನಿ ವಿಶ್ವರೂಪಲಾಭೇ ಶ್ಲಾಘ । ಏಥೀಂಚೇ ಭಯ ನೇಘ ನೇಘ । ಹೇ ವಾಂಚೂನಿ ಅನ್ಯಚಾಂಗ । ನ ಮನೀ ಕಾಂಹೀ ।೬೨೩॥ ಹಾ ಗಾ ಸಮುದ್ರು ಅಮೃತಾಚಾ ಭರಲಾ । ಆಣಿ ಅವಸಾಂತ ವರಪಡಾ ಜಾಹಲಾ । ಮಗ ಕೋಣೇಹೀ ಆಥೀ ವೋಸಂಡಿಲಾ । ಬುಡಿಜೈಲ ಮ್ಹಣೌನಿ? ।೬೨೪॥ ನಾತರೀ ಸೋನಯಾಚಾ ಡೋಂಗರು । ಯೇಸಣಾ ನ ಚಲೇ ಹಾ ಥೋರು । ಐಸೇ ಮ್ಹಣೌನಿ ಅವ್ಹೇರು । ಕರಣೇ ಘಡೇ? ।೬೨೫॥ ದೈವೇ ಚಿಂತಾಮಣಿ ಲೇಇಜೇ । ಕೀ ಹೇ ಓಝೀ ಮ್ಹಣೌನಿ ಸಾಂಡಿಜೇ? । ಕಾಮಧೇನು ದವಡಿಜೇ । ನ ಪೋಸವೇ ಮ್ಹಣೌನಿ? ।೬೨೬॥ ಚಂದ್ರಮಾ ಆಲಿಯಾ ಘರಾ । ಮ್ಹಣೇ ನಿಗೇ ಕರಿತೋಸಿ ಉಬಾರಾ । ಪಡಿಸಾಯಿ ಪಾಡಿತೋಸಿ ದಿನಕರಾ । ಪರತಾ ಸರ ।೬೨೭॥ ತೈಸೇ ಐಶ್ವರ್ಯ ಹೇ ಮಹಾತೇಜ । ಆಜಿ ಹಾತಾ ಆಲೇ ಆಹೇ ಸಹಜ । ಕೀ ಏಥ ತುಜ ಗಜಬಜ । ಹೋಆವೀ ಕಾ? ।೬೨೮॥ ಪರೀ ನೇಣಸೀಚ ಗಾಂವಢಿಯಾ । ಕಾಯ ಕೋಪೋ ಆತಾ ಧನಂಜಯಾ । ಆಂಗ ಸಾಂಡೋನಿ ಛಾಯಾ । ಆಲಿಂಗಿತೋಸಿ ಮಾ? ।೬೨೯॥ ಹೇ ನವ್ಹೇ ಜೋ ಮೀ ಸಾಚೇ । ಏಥ ಮನ ಕರೂನಿಯಾ ಕಾಚೇ । ಪ್ರೇಮ ಧರಿಸೀ ಅವಗಣಿಯೇಚೇ । ಚತುರ್ಭುಜ ಜೇ ।೬೩೦॥

ಈ ಸ್ವರೂಪದ ಸಮೀಪ ಬರುತ್ತಲೇ ವೇದಗಳು ಮೌನವಾದವು. ಯಜ್ಞ ಮಾಡುವವರು ಸ್ವರ್ಗಲೋಕದ ವರೆಗೂ ಹೋಗಿ ಹಿಂದಕ್ಕೆ ತಿರುಗಿ ಬಂದರು ॥೬೧೭॥

ಸಾಧಕರು ಯೋಗಾಭ್ಯಾಸದಲ್ಲಿ ಶ್ರಮವಾಗುವುದನ್ನು ಮನಗಂಡು ಆ ಯೋಗಾಭ್ಯಾಸವನ್ನೇ ಬಿಟ್ಟರು ಮತ್ತು ಅಧ್ಯಯನ ಮಾಡುವವರಿಗೂ ಈ ಸ್ವರೂಪದವರೆಗೆ ಬರುವುದು ಸುಲಭದ ಮಾತಲ್ಲ ॥೬೧೮॥

ನಿತ್ಯ ನೈಮಿತ್ತಿಕ ಕರ್ಮಗಳಿಂದ ಪೂರ್ಣಗೊಂಡವರು ತಮ್ಮ ದೊಡ್ಡಸ್ಥಿಕೆಯ ಭ್ರಮದಿಂದ ಧಾವಿಸಿದರು. ಆದರೆ ಅವರು ತಮ್ಮ ಅತಿಶಯ ಪರಿಶ್ರಮದಿಂದ ಸತ್ಯಲೋಕದವರೆಗೆ ಮಾತ್ರ ಬರುವರು ॥೬೧೯॥

ತಪಸ್ವಿಗಳು ಇದರ ಐಶ್ವರ್ಯ ಕಂಡು ನಿಂತನಿಂತಲ್ಲಿಯೇ ತಮ್ಮ ಉಗ್ರತನವನ್ನು ಬಿಟ್ಟರು. ಈ ಪ್ರಕಾರವಾಗಿ ತಪಸಾಧನೆ ಮಾಡುವವರೂ ಇದರಿಂದ ದೂರಾದರು ॥೬೨೦॥

ಇಂತಹ ಈ ವಿಶ್ವರೂಪವನ್ನು ಸಹಜವಾಗಿ ನಿನ್ನ ದೃಷ್ಟಿಗೆ ಗೋಚರವಾಗಿದೆ. ಹೀಗೆ ಈ ಮನುಷ್ಯಲೋಕದಲ್ಲಿ ಯಾರಿಗೂ ಪ್ರಾಪ್ತಿಯಾಗಿಲ್ಲ ॥೬೨೧॥

ಇಂದು ಈ ಜಗದಲ್ಲಿ ಧ್ಯಾನಸಂಪತ್ತಿಗೆ ನಿನೊಬ್ಬನೇ ಯೋಗ್ಯನಿರುವಿ. ಬ್ರಹ್ಮದೇವನಿಗೂ ಈ ವಿಶ್ವ ರೂಪದರ್ಶನದ ಮಹಾಲಾಭವಾಗಿಲ್ಲ ॥೬೨೨॥

ಶ್ಲೋಕಾರ್ಥ :- ಈ ನನ್ನ ಉಗ್ರರೂಪವನ್ನು ನೋಡಿ ಹೆದರುವ ಕಾರಣವಿಲ್ಲ. ಹೋಗಲಿ, ಇದೋ! ನಿರ್ಭಯವಾಗಿ ಉಲ್ಹಾಸದಿಂದ ನನ್ನ ಮೊದಲಿನ ರೂಪವನ್ನೇ ನೋಡು ॥೪೯॥

ಆದ್ದರಿಂದ, ವಿಶ್ವರೂಪದರ್ಶನದಿಂದ ನೀನು ಧನ್ಯನಾದೆ. ಅಪ್ಪಾ ! ಇದಕ್ಕೆ ನೀನು ಭಯಪಡಬೇಡ ಮತ್ತು ಇದಕ್ಕಿಂತಲೂ ಉತ್ತಮವಾದದ್ದು ಇನ್ನೊಂದಿದೆ ಎಂಬುದನ್ನು ಮನದಲ್ಲಿ ತಾರದೇ ಇರು ॥೬೨೩॥

ಅರೇ, ಅಮೃತದಿಂದ ತುಂಬಿದ ಸಮುದ್ರವು ಅಕಸ್ಮಾತ್ ದೊರೆತರೆ ಅದರಲ್ಲಿ ಬಿದ್ದು ಮುಳುಗಬಹುದೆಂದು ಯಾರಾದರೂ ಹೊರಗೆ ಬರುವರೇ? ॥೬೨೪॥

ಅಥವಾ ಬಂಗಾರದ ಪರ್ವತವೇ ಕಣ್ಣಿಗೆ ಕಂಡಾಗ ಇಷ್ಟೊಂದು ಬಂಗಾರ ಹೇಗೆ ಒಯ್ಯಬೇಕೆಂದು ಯಾರಾದರೂ ಅದನ್ನು ಬಿಟ್ಟು ಬರಬಹುದೇ? ॥೬೨೫॥

ದೈವಯೋಗದಿಂದ ಚಿಂತಾಮಣಿಯು ದೊರಕಿದಲ್ಲಿ ಅದು ಭಾರವಾದೀತೆಂದು ಯಾರಾದರೂ ಒಗೆಯಬಹುದೇ? ಹಾಗೆಯೇ ಕಾಮಧೇನು ದೊರಕಿದಲ್ಲಿ ಅದನ್ನು ಹೇಗೆ ಜೋಪಾನ ಮಾಡಬೇಕೆಂದು ಯಾರಾದರೂ ಅದನ್ನು ಹೊರಹಾಕುವರೇ? ॥೬೨೬॥

ಚಂದ್ರನು ಮನೆಗೆ ಬಂದಾಗ ಸೆಕೆಯಾದೀತೆಂದು ತಿಳಿದು ಯಾರಾದರೂ ಆತನಿಗೆ ಹೊರಗೆ ಹೋಗು ಎನ್ನಬಹುದೇ ? ಸೂರ್ಯನಿಗೆ ನಿನ್ನ ನೆರಳು ಬೀಳುವುದು ಮಗ್ಗುಲಸರಿ ಎಂದು ಆತನಿಗೆ ಯಾರಾದರೂ ಹೇಳಬಹುದೇ ? ॥೬೨೭॥

ಅದರಂತೆ ಈ ವಿಶ್ವರೂಪದ ಐಶ್ವರ್ಯವು ನಿನಗೆ ಸಹಜವಾಗಿ ಹಸ್ತಗತವಾಗಿರುವುದರಿಂದ ನಿನಗೇಕೆ ಭಯ ಹುಟ್ಟಬೇಕು ? ॥೬೨೮॥

ಆದರೆ ಅರ್ಜುನಾ, ಎಂತಹ ದಡ್ಡನೋ ನೀನು, ನಿನಗೇನೂ ತಿಳಿಯುವುದಿಲ್ಲ. ನಿನಗೇನೆನ್ನಬೇಕು? ಅರೇ, ನೀನು ಶರೀರವನ್ನು ಬಿಟ್ಟು ಅದರ ನರಳಿಗೆ ಆಲಿಂಗಿಸುವಿಯಲ್ಲಾ? ॥೬೨೯॥

ನೀನು ನಿನ್ನ ಮನಸ್ಸನ್ನು ಅಧಿರಗೊಳಿಸಿ ಈಗಿನ ಸಾಕಾರ ಚತುರ್ಭುಜ ರೂಪಕ್ಕೆ ಪ್ರೀತಿ ಮಾಡುತ್ತಿರುವೆ. ಆದರೆ ಅದು ನನ್ನ ನಿಜವಾದ ಸ್ವರೂಪವಲ್ಲ ॥೬೩೦॥

ತರಿ ಅರ್ಝುನಿವರೀ ಪಾರ್ಥಾ । ಸಾಂಡೀ ಸಾಂಡೀ ಹೇ ವ್ಯವಸ್ಥಾ । ಇಯೇ ವಿಷಯೀ ಆಸ್ಥಾ । ಕರಿಸೀ ಝಣೇ ।೬೩೧॥ ಹೇ ರೂಪ ಜರೀ ಘೋರ । ವಿಕೃತೀ ಆಣಿ ಥೋರ । ತರೀ ಕೃತನಿಶ್ಚಯಾಚೇ ಘರ । ಹೇಂಚಿ ಕರಿ ।೬೩೨॥ ಕೃಪಣ ಚಿತ್ತವೃತ್ತೀ ಜೈಸೀ । ರೋವೋನಿ ಘಾಲೀ ಠೇವಯಾಪಾಸೀ । ಮಗ ನುಸಧೇನಿ ದೇಹೇಸೀ । ಆಪಣ ಅಸೇ ।೬೩೩॥ ಕಾ ಅಜಾತಪಕ್ಷಿಯಾ ಜವಳಾ । ಜೀವ ಬೈಸವೂನಿ ಅವಿಸಾಳಾ । ಪಕ್ಷಿಣೀ ಅಂತರಾಳಾ । ಮಾಜೀ ಜಾಯ ।೬೩೪॥ ನಾನಾ ಗಾಯ ಚರೇ ಡೋಂಗರೀ । ಪರಿ ಚಿತ್ತ ಬಾಂಧಿಲೇ ವತ್ಸೀ ಘರೀ । ತೈಸೇ ಪ್ರೇಮ ಏಥೀಂಚೇ ಕರೀ । ಸ್ಥಾನಪತೀ ।೬೩೫॥ ಯೇರೇ ವರಿಚಿಲೇನಿ ಚಿತ್ತೇ । ಬಾಹ್ಯ ಸಖ್ಯ ಸುಖಾ ಪುರತೇ । ಭೋಗಿಜೋ ಕಾ ಶ್ರೀಮೂರ್ತೀತೇ । ಚತುರ್ಭುಜ ।೬೩೬॥ ಪರಿ ಪುಢತಪುಢತೀ ಪಾಂಡವಾ । ಹಾ ಏಕ ಬೋಲು ನ ವಿಸರಾವಾ । ಜೇ ಇಯೇ ರೂಪೀಹೂನಿ ಸದ್ಭಾವಾ । ನೇದಾವೇ ನಿಘೋ ।೬೩೭॥ ಹೇ ಕಹೀ ನವ್ಹತೇಂಚಿ ದೇಖಿಲೇ । ಮ್ಹಣೌನಿ ಭಯ ಜೇ ತುಜ ಉಪಜಲೇ । ತೇ ಸಾಂಡೀ ಏಥ ಸಂಚಲೇ । ಅಸೋದೇ ಪ್ರೇಮ ।೬೩೮॥ ಆತಾ ಕರೂ ತುಜಯಾಸಾರಿಖೇ । ಐಸೇ ಮ್ಹಣೆತಲೇ ವಿಶ್ವತೋಮುಖೇ । ತರಿ ಮಾಗೀಲ ರೂಪ ಸುಖೇ । ನ್ಯಾಹಾಳೀ ಪಾ ತೂ ।೬೩೯॥

ಸಂಜಯ ಉವಾಚ :-

ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ ಸ್ವಕಂ ರೂಪಂ ದರ್ಶಯಾಮಾಸ ಭೂಯಃ ।
ಆಶ್ವಾಸಯಾಮಾಸ ಚ ಭೀತಮೇನಂ ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ।೫೦॥

ಐಸೇ ವಾಕ್ಯ ಬೋಲತಖೇಂವೋ । ಮಾಗುತಾ ಮನುಷ್ಯಜಾಹಲಾ ದೇವೋ । ಹೇ ನಾ ಪರಿ ನವಲಾವೋ । ಆವಡೀಚಾ ತಿಯೇ ।೬೪೦॥ ಶ್ರೀಕೃಷ್ಣಚಿ ಕೈವಲ್ಯ ಉಘಡೇ । ವರಿ ಸರ್ವಸ್ವ ವಿಶ್ವರೂಪಾಯೇವಢೇ । ಹಾತಿ ದಿಧಲೇ ಕೀ ನಾವಡೇ । ಅರ್ಜುನಾಸೀ ।೬೪೧॥ ವಸ್ತು ಘೇಊನಿ ವಾಳಿಜೇ । ಜೈಸೇ ರತ್ನಾಸಿ ದೂಷಣ ಠೇವಿಜೇ । ನಾತರಿ ಕನ್ಯಾ ಪಾಹೂನಿಯಾ ಮ್ಹಣಿಜೇ । ಮನಾ ನ ಯೇ ಹೇ ।೬೪೨॥ ತಯಾ ವಿಶ್ವರೂಪಾಯೇವಢೀ ದಶಾ । ಕರಿತಾ ಪ್ರೀತೀಚಾ ವಾಢೂ ಕೈಸಾ । ಸೇಲ ದಿಧಲೀಸೇ ಉಪದೇಶಾ । ಕಿರೀಟೀಸಿ ದೇವೇ ।೬೪೩॥ ಮೋಡೋನಿ ಭಾಂಗರಾಚಾ ರವಾ । ಲೇಣೇ ಘಡಿಲೇ ಆಪಲಿಯಾ ಸವಾ । ಮಗ ನಾವಡೇ ಜರೀ ಜೀವಾ । ತರೀ ಆಟೀಜೇ ಪುಢತೀ ।೬೪೪॥

ಆದ್ದರಿಂದ ಪಾರ್ಥನೇ, ಈಗಲಾದರೂ ಈ ಚತು . ರ್ಭುಜರೂಪದ ಅಪೇಕ್ಷೆಯನ್ನು ಬಿಟ್ಟು ಬಿಡು ಮತ್ತು ನನ್ನ ವಿಶ್ವರೂಪದ ಉಪೇಕ್ಷೆ ಮಾಡದಿರು ।೬೩೧॥

ಈ ವಿಶ್ವರೂಪವು ಘನಘೋರ, ಭಯಂಕರ, ಅವಾಢವ್ಯ ಇರಬಹುದು. ಆದರೆ ನೀನು ಅದರಲ್ಲಿ ಪೂರ್ಣ ಅಚಲನಾಗು ।೬೩೨॥

ಕೃಪಣನು (ಕಡುಲೋಭಿಯು) ತನ್ನ ಮನವೆಲ್ಲ ದ್ರವ್ಯದಲ್ಲಿಟ್ಟು ತೋರಿಕೆಗಾಗಿ ಕೇವಲ ಶರೀರದಿಂದ ಜಗತ್ತಿನಲ್ಲಿ ವ್ಯವಹರಿಸುವಂತೆ ।೬೩೩॥

ತಾಯಿಯಾದ ಪಕ್ಷಿಯು ತನ್ನ ಇನ್ನೂ ರೆಕ್ಕೆ ಮೂಡದ ಮರಿಯ ಗೂಡಿನಲ್ಲಿ ತನ್ನ ಜೀವವನ್ನು ಇಟ್ಟು ಆಕಾಶದಲ್ಲಿ ಹಾರಾಡುವಂತೆ ।೬೩೪॥

ಅಥವಾ ಆಕಳವು ಗುಡ್ಡದಲ್ಲಿ ಮೇಯುತ್ತಿದ್ದರೂ ಅದರ ಚಿತ್ತವು ಮನೆಯಲ್ಲಿ ಕಟ್ಟಿದ ಕರುವಿನಲ್ಲಿ ಇರುವಂತೆ, ನಿನ್ನ ಪ್ರೇಮವನ್ನು ಈ ನನ್ನ ವಿಶ್ವರೂಪದಲ್ಲಿ ನಿರಂತರವಿಡು ।೬೩೫॥

ಇನ್ನು ಮನದ ಸಮಾಧಾನಕ್ಕಾಗಿ, ಮಿತ್ರಪ್ರೇಮಕ್ಕಾಗಿ, ಬಾಹ್ಯಾತ್ಕಾರವಾಗಿ ನನ್ನ ಸುಂದರವಾದ ಚತುರ್ಭುಜ ಕೃಷ್ಣಮೂರ್ತಿಯನ್ನು ಧ್ಯಾನಿಸು ।೬೩೬॥

ಆದರೆ, ಪಾಂಡವನೇ, ಮೇಲಿಂದ ಮೇಲೆ ಈ ನನ್ನ ವಾಕ್ಯವನ್ನು ಮರೆಯದಿರು ಮತ್ತು ನನ್ನ ಸ್ವರೂಪದಿಂದ ನಿನ್ನ ಭಾವವನ್ನು ಬೇರೆ ಕಡೆಗೆ ಹೋಗಗೊಡಬೇಡ ।೬೩೭॥

ಇದನ್ನು ನೀನು ಈ ಹಿಂದೆ ಎಂದೂ ನೋಡದ್ದಕ್ಕೆ ನಿನಗೆ ಭಯವುಂಟಾಗಿದೆ. ಅದನ್ನು ಬಿಟ್ಟುಬಿಡು. ಈಗ ಈ ವಿಶ್ವ ರೂಪದಲ್ಲಿ ನಿನ್ನ ಪ್ರೇಮವು ಸತತವಾಗಿರಲಿ ।೬೩೮॥

ತದನಂತರ, ವಿಶ್ವರೂಪ ಶ್ರೀಕೃಷ್ಣನು ಹೇಳಿದನು, ಅರ್ಜುನಾ, ನಿನ್ನ ಮಾತಿನಂತೆ ನಾನೀಗ ನನ್ನ ಪೂರ್ವದಂತೆ ಚತುರ್ಭುಜ ರೂಪವನ್ನು ಧರಿಸುವೆನು. ಅದನ್ನು ನೀನು ಸುಖದಿಂದ ನೋಡು ।೬೩೯॥

ಶ್ಲೋಕಾರ್ಥ :- ಸಂಜಯನು ಹೀಗೆಂದನು:- ಧೃತರಾಷ್ಟ್ರ ಮಹಾರಾಜ! ಶ್ರೀಕೃಷ್ಣನು ಈ ವಿಧವಾಗಿ ಹೇಳಿ ಮೊದಲಿನ ತನ್ನ ಸಹಜ ಶಾಂತರೂಪವನ್ನು ತೋರಿಸಿ ಭಯಗ್ರಸ್ತನಾದ ಅರ್ಜುನನ ಭಯವನ್ನು ನಿವಾರಿಸಿದನು ।೫೦॥

ಇಷ್ಟೊಂದು ವಾಕ್ಯಗಳನ್ನು, ಹೇಳಿ ದೇವನು ಪುನಃ ತಕ್ಷಣ ಮನುಷ್ಯರೂಪವನ್ನು ಧರಿಸಿದನು. ಇದರಲ್ಲಿ ವಿಶೇಷವೇನೂ ಇಲ್ಲ. ಆದರೆ ದೇವ ಭಕ್ತರ ಪ್ರೇಮವು ಆಶ್ಚರ್ಯಕಾರಕವಾಗಿದೆ ।೬೪೦॥

ಶ್ರೀಕೃಷ್ಣನು ಕೇವಲ ಪರಬ್ರಹ್ಮನು. ವಿಶ್ವರೂಪದಂತಹ ತನ್ನ ಸರ್ವಸ್ವವನ್ನು ಅರ್ಜುನನ ಕೈಯಲ್ಲಿ ಕೊಟ್ಟನು. ಆದರೆ ಆತನಿಗೆ ಅದು ಹಿಡಿಸಲಿಲ್ಲ ।೬೪೧॥

ಬೇಕು ಎಂದು ಕೇಳಿ ಪಡೆದು ಬೇಡೆಂದು ಒಗೆದಂತೆ, ರತ್ನಕ್ಕೆ ದೂಷಿಸಿದಂತೆ, ಅಥವಾ ಒಂದು ಕನ್ಯೆಯನ್ನು ಉತ್ತಮ ರೀತಿಯಲ್ಲಿ ಕೇಳಿ ನೋಡಿ ಪುನಃ ಮನಸ್ಸಿಗೆ ಬಾರದೇ ಬೇಡ ಎಂದಂತೆ ಆಯಿತು ।೬೪೨॥

ಶ್ರೀಕೃಷ್ಣನು ಅರ್ಜುನನಿಗೆ ಉಪದೇಶದ ಉತ್ತಮ ಭಾಗವಾದ ವಿಶ್ವರೂಪವನ್ನು ತೋರಿಸಿದನು. ಇದಕ್ಕಿಂತಲೂ ಆತನಲ್ಲಿ ಇನ್ನ್ಯಾವ ಪ್ರೇಮ ಹೇಗೆ ಮಾಡಬೇಕು? ।೬೪೩॥

ಬಂಗಾರದ ಗಟ್ಟಿಯನ್ನು ಕರಗಿಸಿ ಆತನ ಪ್ರೀತಿಯಂತೆ ಅಲಂಕಾರಗಳನ್ನು ಮಾಡಿಸಿದಾಗ ಅವು ಆತನ ಮನಸ್ಸಿಗೆ ಬಾರದೇ ಹೋದರೆ, ಪುನಃ ಅವುಗಳನ್ನು ಗಟ್ಟಿಯಾಗಿ ಮಾಡಿತು ।೬೪೪॥

ತೈಸೇ ಶಿಷ್ಯಾಚಿಯೇ ಪ್ರೀತಿ ಜಾಹಲೇ । ಕೃಷ್ಣತ್ವ ಹೋತೇ ತೇ ವಿಶ್ವರೂಪ ಕೇಲೇ । ತೇ ಮನಾ ನಯೇಚಿ ಮಗ ಆಣಿಲೇ । ಕೃಷ್ಣಪಣ ಮಾಗುತೇ ।೬೪೫॥ ಹಾ ಠಾವವರೀ ಶಿಷ್ಯಾಚೀ ನಿಕಸೀ । ಸಹಾತೇ ಗುರು ಆಹಾತೀ ಕವಣೇ ದೇಶೀ? । ಪರಿ ನೇಣೇಜೇ ಆವಡೀ ಕೈಶೀ । ಸಂಜಯೋ ಮ್ಹಣೇ ।೬೪೬॥ ಮಗ ವಿಶ್ವ ವ್ಯಾಪೂನಿ ಭೋವತೇ । ಜೇ ದಿವ್ಯ ತೇಜ ಪ್ರಗಟಲೇ ಹೋತೇ । ತೇಚಿ ಸಾಮಾವಲೇ ಮಾಗುತೇ । ಕೃಷ್ಣರೂಪಿ ತಯೇ ।೬೪೭॥ ಜೈಸೇ ತ್ವಂಪದ ಹೇ ಆಘವೇ । ತತ್ಪದೀ ಸಾಮಾವೇ । ಅಥವಾ ದ್ರುಮಾಕಾರು ಸಾಂಠವೇ । ಬೀಜಕಣಿಕ ಜೇವಿ ।೬೪೮॥ ನಾತರೀ ಸ್ವಪ್ನಸಂಭ್ರಮು ಜೈಸಾ । ಗಿಳೀ ಚೇಇಲೀ ಜೀವದಶಾ । ಶ್ರೀಕೃಷ್ಣೇ ಯೋಗು ಹಾ ತೈಸಾ । ಸಂಹಾರಿಲಾ ತೋ ।೬೪೯॥ ಜೈಸಿ ಪ್ರಭಾ ಹಾರಪಲೀ ಬಿಂಬೀ । ಕೀ ಜಳದಸಂಪತ್ತೀ ನಭೀ । ನಾನಾ ಭರತೇ ಸಿಂಧುಗರ್ಭಿ । ರಿಗಾಲೇ ರಾಯಾ ।೬೫೦॥ ಹೋ ಕಾ ಜೇ ಕೃಷ್ಣಾಕೃತೀಚಿಯೇ ಮೋಡೀ । ಹೋತೀ ವಿಶ್ವರೂಪಪಟಾಚೀ ಘಡೀ । ತೇ ಅರ್ಜುನಾಚಿಯೇ ಆವಡೀ । ಉಕಲೂನಿ ದಾವಿಲೀ ।೬೫೧॥ ತಂವ ಪರಿಮಾಣಾ ರಂಗು । ತೇಣೇ ದೇಖಿಲೇ ಸಾವಿಯಾ ಚಾಂಗು । ತೇಥ ಗ್ರಾಹಕೀಯೇ ನವ್ಹೇಚಿ ಲಾಗು । ಮ್ಹಣೌನಿ ಘಡೀ ಕೇಲೀ ಪುಢತೀ ।೬೫೨॥ ತೈಸೇ ವಾಢೀಚೇನಿ ಬಹುವಸಪಣೇ । ರೂಪೇ ವಿಶ್ವ ಜಿಂತಿಲೇ ಜೇಣೇ । ತೇ ಸೌಮ್ಯ ಕೋಡಿಸವಾಣೇ । ಸಾಕಾರ ಜಾಹಲೇ ।೬೫೩॥ ಕಿಂಬಹುನಾ ಅನಂತೇ । ಧರಿಲೇ ಧಾಕುಟಪಣ ಮಾಗುತೇ । ಪರಿ ಆಶ್ವಾಸಿಲೇ ಪಾರ್ಥಾತೇ । ಬಿಹಾಲಿಯಾಸಿ ।೬೫೪॥ ಜೋ ಸ್ವಪ್ನೀ ಸ್ವರ್ಗಾ ಗೇಲಾ । ತೋ ಅವಸಾಂತ ಜೈಸಾ ಚೇಇಲಾ । ತೈಸಾ ವಿಸ್ಮಯೋ ಜಾಹಲಾ । ಕಿರೀಟೀಸಿ ।೬೫೫॥ ನಾ ತರೀ ಗುರುಕೃಪೇಸವೇ । ವೋಸರಲೇಯಾ ಪ್ರಪಂಚಜ್ಞಾನ ಆಘವೇ । ಸ್ಫುರೇ ತತ್ತ್ವ ತೇವೀ ಪಾಂಡವೇ । ಶ್ರೀಮೂರ್ತಿ ದೇಖಿಲೀ ।೬೫೬॥ ತಯಾ ಪಾಂಡವಾ ಐಸೇ ಚಿತ್ತೀ । ಆಡ ವಿಶ್ವರೂಪಾಚೀ ಜವನಿಕಾ ಹೋತೀ । ತೇ ಫೀಟೋನಿ ಗೇಲೀ ಪರೌತೀ । ಹೇ ಭಲೇ ಜಾಹಲೇ ।೬೫೭॥ ಕಾಯ ಕಾಳಾತೇ ಜಿಣೋನಿ ಆಲಾ । ಕೀ ಮಹಾವಾತು ಮಾಗಾ ಸಾಂಡಿಲಾ । ಆಪುಲಿಯಾ ಬಾಹೀ ಉತರಲಾ । ಸಾತಹೀ ಸಿಂಧು ।೬೫೮॥ ಐಸಾ ಸಂತೋಷ ಬಹು ಚಿತ್ತೇ । ಘೇಇಜತ ಅಸೇ ಪಂಡುಸುತೇ । ವಿಶ್ವರೂಪಾಪಾಠೀ ಕೃಷ್ಣಾತೇತೇ । ದೇಖೋನಿಯಾ ।೬೫೯॥

ಅದರಂತೆ, ಪ್ರಥಮದಲ್ಲಿ ಕೃಷ್ಣರೂಪವು ಇದ್ದದ್ದನ್ನು ಶಿಷ್ಯನ ಪ್ರೀತಿಗಾಗಿ ವಿಶ್ವರೂಪವನ್ನಾಗಿ ಮಾಡಿದನು. ಮನಸ್ಸಿಗೆ ಬಾರದ್ದಕ್ಕೆ ಪುನಃ ಕೃಷ್ಣರೂಪವನ್ನು ಧರಿಸಿದನು ।೬೪೫॥

ಈ ಪ್ರಕಾರದ ಶಿಷ್ಯನ ಕಿರಿಕಿರಿಯನ್ನು ಸಹಿಸುವ ಗುರುವನ್ನು ಯಾವ ದೇಶದಲ್ಲಿ ಕಂಡಿರುವಿರಿ? ಆದರೆ ದೇವರಿಗೆ ಭಕ್ತನ ಪ್ರೇಮ ಎಷ್ಟಿದೆ ಎಂಬುದು ಹೇಳಲು ಬರುವುದಿಲ್ಲವೆಂದು ಸಂಜಯನು ಹೇಳಿದನು ।೬೪೬॥

ಭಗವಂತನು ವಿಶ್ವವನ್ನು ವ್ಯಾಪಿಸಿ ವಿಶ್ವರೂಪದ ದಿವ್ಯ ತೇಜವನ್ನು ಪ್ರಕಟಗೊಳಿಸಿದ್ದನ್ನು ಪುನಃ ಅದೇ ಕೃಷ್ಣ ರೂಪದಲ್ಲಿ ಸಮಾವೇಶಗೊಳಿಸಿದನು ।೬೪೭॥

ಯಾವ ಪ್ರಕಾರವಾಗಿ ಪರಮಾತ್ಮನ ಸ್ವರೂಪದಲ್ಲಿ ಎಲ್ಲ ಜೀವಸ್ವರೂಪದ ಸಮಾವೇಶವಾಗುತ್ತದೆಯೋ ಅಥವಾ ಬೀಜದಲ್ಲಿ ವೃಕ್ಷವು ಸಮಾವೇಶಗೊಂಡಿರುವುದೋ ।೬೪೮॥

ಅಥವಾ ಸ್ವಪ್ನದ ವಿಸ್ತಾರವು ಜಾಗೃತನಾದ ಮೇಲೆ ಇಲ್ಲದಂತಾಗುವುದೋ, ಅದರಂತೆ ಶ್ರೀಕೃಷ್ಣನು ಚತುರ್ಭುಜ ರೂಪವನ್ನು ಧರಿಸಿ ವಿಶ್ವರೂಪದ ಯೋಗವನ್ನು ಇಲ್ಲದಂತಾಗಿ ಮಾಡಿದನು ।೬೪೯॥

ಸೂರ್ಯನ ಪ್ರಭೆಯು ಸೂರ್ಯನಲ್ಲಿಯೇ ಲಯಗೊಳ್ಳುವುದು. ಅಥವಾ ಮೋಡಗಳು ಆಕಾಶದಲ್ಲಿಯೇ ಲಯಗೊಳ್ಳುವುವು. ಹಾಗೆಯೇ ಸಮುದ್ರದ ಭರತಿಯು ಸಮುದ್ರದಲ್ಲಿಯೇ ಕರಗುವುದು ।೬೫೦॥

ಹೀಗಿದೆ ನೋಡು, ಅರ್ಜುನನ ಪ್ರೀತಿಗಾಗಿ ಕೃಷ್ಣರೂಪ ಆಕೃತಿಯ ವಿಶ್ವರೂಪ ವಸ್ತ್ರದ ಹಾಕಿದ್ದ ಗಳಿಗೆಯನ್ನು ಬಿಚ್ಚಿ ತೋರಿಸಲಾಯಿತು ।೬೫೧॥

ಆಗ ಆ ವಸ್ತ್ರದ ಉದ್ದಗಲ ಬಣ್ಣಗಳನ್ನು ಸರಿಯಾಗಿ ನೋಡಿ ಗಿರಾಕಿ (ಅರ್ಜುನ)ಗೆ ಆ ವಸ್ತ್ರವನ್ನು ಖರೀದಿಸುವ ಇಚ್ಛೆ ಇಲ್ಲದ್ದಕ್ಕೆ ಪುನಃ ಅದನ್ನು ಮಡಿಚಿ ಇಡಲಾಯಿತು ।೬೫೨॥

ಅದರಂತೆ ಯಾವ ವಿಶ್ವರೂಪವು ಅತಿಯಾಗಿ ಬೆಳೆದು ಎಲ್ಲ ಜಗವನ್ನು ವ್ಯಾಪಿಸಿಕೊಂಡಿತ್ತೋ, ಅದೇ ರೂಪವು ಮುದ್ದಾದ ಚತುರ್ಭುಜವಾಯಿತು ।೬೫೩॥

ಒಟ್ಟಿನಲ್ಲಿ ಅನಂತನೇ, ಪುನಃ ಸಣ್ಣರೂಪ ಧರಿಸಿ ಬಹಳಷ್ಟು ಹೆದರಿದ ಅರ್ಜುನನಿಗೆ ಆಶ್ವಾಸನೆಯನ್ನು ಕೊಟ್ಟನು ।೬೫೪॥

ಯಾವನೊಬ್ಬನು ಒಮ್ಮೆ ಸ್ವಪ್ನದಲ್ಲಿ ಸ್ವರ್ಗಕ್ಕೆ ಹೋಗಿರುತ್ತಾನೆ. ಆತನು ಒಮ್ಮಿಂದೊಮ್ಮೆಲೆ ಎಚ್ಚರಾಗಿ ಆಶ್ಚರ್ಯಪಡುತ್ತಾನೆ. ಅದರಂತೆ ಅರ್ಜುನನು ಚಕಿತಗೊಂಡನು ।೬೫೫॥

ಅಥವಾ ಗುರುಕೃಪೆಯಾದಾಕ್ಷಣವೇ ಸರ್ವ ಪ್ರಪಂಚ ಜ್ಞಾನವು ಲಯಹೊಂದಿ ಪರಮಾತ್ಮನ ಸಾಕ್ಷಾತ್ಕಾರವಾಗುವುದು. ಅದರಂತೆ ಶ್ರೀಕೃಷ್ಣನನ್ನು ನೋಡಿ ಪಾಂಡವನ ಸ್ಥಿತಿಯಾಯಿತು ।೬೫೬॥

ಈ ಚತುರ್ಭುಜರೂಪಕ್ಕೆ ಅಡ್ಡವಾಗಿದ್ದ ಈ ವಿಶ್ವರೂಪ ಪರದೆಯು ಇಲ್ಲದಂತಾದದ್ದು ಬಹಳ ಒಳ್ಳೆಯದಾಯಿತು ಎಂದು ಪಾಂಡವನ ಚಿತ್ತಕ್ಕೆ ಮೂಡಿತು ।೬೫೭॥

ಕಾಳನನ್ನು ಗೆದ್ದರೆ, ಭಯಂಕರ ಬಿರುಗಾಳಿಯಿಂದ ತಪ್ಪಿಸಿ ಬಂದರೆ, ಅಥವಾ ಏಳು ಸಮುದ್ರಗಳನ್ನು ಕೈಯಿಂದ ಈಸಿ ಪಾರಾದಂತಾಯಿತು ।೬೫೮॥

ವಿಶ್ವರೂಪವನ್ನು ನೋಡಿದ ನಂತರ ಕೃಷ್ಣರೂಪ ನೋಡಿ ಅರ್ಜುನನ ಚಿತ್ತಕ್ಕೆ ಬಹಳ ಸಮಾಧಾನವಾಗಿ ಬಹು ಸಂತೋಷಪಟ್ಟನು ।೬೫೯॥

ಮಗ ಸೂರ್ಯಾಚಿಯಾ ಅಸ್ತಮಾನೀ । ಮಾಗುತೀ ತಾರಾ ಉಗವಿತೀ ಗಗನೀ । ತೈಸಾ ದೇಖೋ ಲಾಗಲಾ ಅವನೀ । ಲೋಕಾಸಹಿತ ।೬೬೦॥ ಪಾಹೇ ತಂವ ತೇಂಚಿ ಕುರುಕ್ಷೇತ್ರ । ತೈಸೇಂಚಿ ದೇಖೇ ದೋಹೀ ಭಾಗೀ ಗೋತ್ರ । ವೀರ ವರ್ಷತಾತಿ ಶಸ್ತ್ರಾಸ್ತ್ರ । ಸಂಘಾಟವರೀ ।೬೬೧॥ ತಯಾ ಬಾಣಾಂಚಿಯಾ ಮಾಂಡವಾ ಆಂತು । ತೈಸಾಚೀ ರಥು ದೇಖೇ ನಿವಾಂತು । ಧುರೇ ಬೈಸಲಾ ಲಕ್ಷ್ಮೀಕಾಂತು । ಆಪಣ ತಳೀ ।೬೬೨॥

ಅರ್ಜುನ ಉವಾಚ :-

ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ।
ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ ।೫೧॥

ಏವಂ ಮಾಗೀಲ ಜೈಸೇ ತೈಸೇ । ತೇಣೇ ದೇಖಿಲೇ ವೀರವಿಲಾಸೇ । ಮಗ ಮ್ಹಣೇ ಜೀಯಾಲೋ ಐಸೇ । ಜಾಹಲೇ ಆತಾ ।೬೬೩॥ ಬುದ್ಧೀತೇ ಸಾಂಡೋನಿ ಜ್ಞಾನ । ಭೇಣೇ ವಳಘಲೇ ರಾನ । ಅಹಂಕಾರೇಸಿ ಮನ । ದೇಶಧಡೀ ಜಾಹಲೇ ।೬೬೪॥ ಇಂದ್ರಿಯೇ ಪ್ರವೃತ್ತೀ ಭುಲಲೀ । ವಾಚಾ ಪ್ರಾಣಾ ಚುಕಲೀ । ಐಸೇ ಆಪಾಂಪರೀ ಹೋತೀ ಜಾಲೀ । ಶರೀರಗ್ರಾಮೀ ।೬೬೫॥ ತಿಯೇ ಆಘವೀಂಚಿ ಮಾಗುತೀ । ಜೀವಂತ ಭೇಟಲೀ ಪ್ರಕೃತೀ । ಆತಾ ಜಿತಾಣೇ ಶ್ರೀಮೂರ್ತೀ । ಜಾಹಲೇ ಯಿಯಾ ।೬೬೬॥ ಐಸೇ ಸುಖ ಜೀವೀ ಘೇತಲೇ । ಮಗ ಶ್ರೀಕೃಷ್ಣಾತೇ ಮ್ಹಣಿತಲೇ । ಮಿಯಾ ತುಮಚೇ ರೂಪ ದೇಖಿಲೇ । ಮಾನುಷ ಹೇ ।೬೬೭॥ ಹೇ ರೂಪ ದಾಖವಣೇ ದೇವರಾಯಾ । ಕೀ ಮಜ ಅಪತ್ಯಾ ಚುಕಲಿಯಾ । ಬುಝಾವೋನಿ ತುವಾ ಮಾಯಾ । ಸ್ತನಪಾನ ದಿಧಲೇ ।೬೬೮॥ ಜೀ ವಿಶ್ವರೂಪಾಚಿಯಾ ಸಾಗರೀ । ಹೋತೋ ತರಂಗ ಮವಿತ ವಾಂವೇವರೀ । ತೋ ಇಯೇ ನಿಜಮೂರ್ತೀಚ್ಯಾ ತೀರೀ । ನಿಗಾಲೋ ಆತಾ ।೬೬೯॥ ಆಇಕೇ ದ್ವಾರಕಾಪುರಸುಹಾಡಾ । ಮಜ ಸುಕತಿಯಾಜೇ ಝಾಡಾ । ಹೇ ಭೇಟೀ ನವ್ಹೇ ಬಹುಡಾ । ಮೇಘಾಚಾ ಕೇಲಾ ।೬೭೦॥ ಜೀ ಸಾವಿಯಾಚೀ ತೃಷಾ ಫುಟಲಾ । ತಯಾ ಮಜ ಅಮೃತಸಿಂಧು ಹಾ ಭೇಟಲಾ । ಆತಾ ಜಿಣಯಾಂಚಾ ಜಾಹಲಾ । ಭರಂವಸಾ ಮಜ ।೬೭೧॥ ಮಾಝಿಯಾ ಹೃದಯರಂಗಣೇ । ಹೋತಾಹೇ ಹರಿಖಲತಾಂಚೀ ಲಾವಣೇ । ಸುಖೇಸಿ ಬುಝಾವಣೇ । ಜಾಹಲೀ ಮಜ ।೬೭೨॥

ಸೂರ್ಯನು ಅಸ್ತಗೊಂಡಾಗ ಆಕಾಶದಲ್ಲಿ ತಾರೆಗಳು ಮಿನುಗುವಂತೆ ವಿಶ್ವರೂಪ ಅಸ್ತಗೊಂಡಾಗ ಅರ್ಜುನನಿಗೆ ಎಲ್ಲ ಲೋಕ ಸಮುದಾಯಗಳ ಸಮೇತ ಪೃಥ್ವಿಯು ದೃಷ್ಟಿಗೆ ಗೋಚರವಾಯಿತು ।೬೬೦॥

ಆಗ ಅದೇ ಕುರುಕ್ಷೇತ್ರ, ಅದೇ ತನ್ನ ಶತ್ರುಗಳ ಸೈನ್ಯದಲ್ಲಿ ತನ್ನೆಲ್ಲ ಗೋತ್ರಜರು ಒಬ್ಬರಮೇಲೊಬ್ಬರು ಶಸ್ತ್ರಗಳ ಮಳೆಗರೆಯುತ್ತಿದ್ದಾರೆ ।೬೬೧॥

ಮತ್ತು ಬಾಣಗಳ ಮಂಟಪದ ಕೆಳಗೆ ತನ್ನ ರಥವು ನಿಂತಲೇ ನಿಂತಿರುವುದು. ಅಲ್ಲದೇ ಲಕ್ಷ್ಮೀಪತಿಯಾದ ಶ್ರೀಕೃಷ್ಣನು ರಥದ ಮೇಲೆ ಕುಳಿತಿದ್ದು ತಾನುಕೆಳಗೆ ಇದ್ದದ್ದು ಗೊತ್ತಾಯಿತು ।೬೬೨॥

**ಶ್ಲೋಕಾರ್ಥ** :- ಅರ್ಜುನನುಹೀಗೆ ಹೇಳಿದನು:- ಜನಾರ್ದನಾ! ನಿನ್ನ ಈ ಶಾಂತರೂಪವಾದ ಮನುಷ್ಯ ರೂಪವನ್ನು ನೋಡಿ ಶಾಂತನಾದೆನು. ಚಿತ್ತವು ಸ್ಥಿರವಾಯಿತು ।೫೧॥

ಈ ಪ್ರಕಾರವಾಗಿ ವೀರಶ್ರೇಷ್ಠನಾದ ಅರ್ಜುನನು ಮೊದಲಿದ್ದಂತೆ ಪ್ರಭುವಿನ ರೂಪವನ್ನು ಕಂಡು ನಿಜವಾಗಿಯೂ ನಾನೀಗ ಬದುಕಿಕೊಂಡೆ ಎಂದನು ।೬೬೩॥

ಜ್ಞಾನವು ಬುದ್ಧಿಯನ್ನು ಬಿಟ್ಟು ಭಯದಿಂದ ಅರಣ್ಯವನ್ನುಸೇರಿತ್ತು. ಅಹಂಕಾರಯುಕ್ತ ಮನಸ್ಸು ದಿಕ್ಕೆಟ್ಟು ಹೋಗಿತ್ತು ।೬೬೪॥

ಇಂದ್ರಿಯಗಳ ವ್ಯಾಪಾರವು ಸ್ತಗಿತಗೊಂಡಿತ್ತು. ವಾಕ್ ಇಂದ್ರಿಯವು ಮಾತನಾಡುವುದನ್ನು ಮರೆತಿತ್ತು. ಈ ಪ್ರಕಾರವಾಗಿ ಶರೀರರೂಪ ಗ್ರಾಮದಲ್ಲಿ ಅವ್ಯವಸ್ಥೆ ನಡೆದಿತ್ತು ।೬೬೫॥

ಈಗ ಈ ಎಲ್ಲ ಅವ್ಯವಸ್ಥೆಗಳು ಇಲ್ಲದಾಗಿ ಎಲ್ಲ ಇಂದ್ರಿಯಗಳು ತಮ್ಮ ತಮ್ಮ ವ್ಯಾಪಾರಗಳನ್ನು ಮಾಡಹತ್ತಿವೆ. ಆದ್ದರಿಂದ ಶ್ರೀಕೃಷ್ಣಮೂರ್ತಿಯ ದರ್ಶನದಿಂದ ನಾನೀಗ ಬದುಕಿಕೊಂಡಿದ್ದೇನೆ ಎಂದಾತನಿಗೆ ಭಾಸವಾಯಿತು ।೬೬೬॥

ಈ ಪ್ರಕಾರವಾಗಿ ಅಂತಃಕರಣದಲ್ಲಿ ಸುಖಹೊಂದಿ ಅರ್ಜುನನು ಶ್ರೀಕೃಷ್ಣನಿಗೆ ಹೇಳಿದನು. ಹೇ ದೇವನೇ, ನೀನು ಮನುಷ್ಯರೂಪ ಧರಿಸಿರುವುದನ್ನು ನಾನು ಕಣ್ಣು ತುಂಬ ನೋಡಿದೆನು ।೬೬೭॥

ದೇವರಾಯಾ, ನೀವು ನಿಮ್ಮ ದರ್ಶನ ನೀಡಿದ್ದಕ್ಕೆ ನನಗೆ ತಪ್ಪಿಸಿಕೊಂಡ ಕೂಸಿಗೆ ತಾಯಿ ಸಿಕ್ಕು ಸಮಾಧಾನಗೊಳಿಸಿ ಸ್ತನಪಾನ ಮಾಡಿಸಿದಂತಾಗಿದೆ ।೬೬೮॥

ವಿಶ್ವರೂಪ ಸಮುದ್ರದಲ್ಲಿ ಕೈಯಿಂದ ತೆರೆಗಳನ್ನು ಬಡಿಯುತ್ತಿದ್ದೆ. ಈಗ ನಿಮ್ಮ ಚತುರ್ಭುಜ ರೂಪದಿಂದ ದಂಡೆಗೆ ಬಂದು ಹತ್ತಿದಂತೆ ಆಗಿದೆ ।೬೬೯॥

ದ್ವಾರಕಾವಾಸಿಯಾದ ವೀರೋತ್ತಮನೇ, ನನಗೆ ನೀನು ನಿನ್ನ ದರ್ಶನವನ್ನು ಕೊಟ್ಟಿದ್ದರಿಂದ ನನ್ನಂಥವನ ಒಣಗಿದ ಗಿಡಕ್ಕೆ ಮಳೆಗರೆದಂತಾಗಿದೆ ।೬೭೦॥

ಜೀಯಾ, ಸದ್ಯಕ್ಕೆ ನೀರಡಿಕೆಯಿಂದ ವ್ಯಾಕುಲನಾದ ನನಗೆ ಈಗ ಅಮೃತಸಿಂಧುವೇದೊರಕಿದಂತಾಗಿ ನನಗೆ ಬದುಕುವ ಭರವಸೆಯಾಗಿದೆ ।೬೭೧॥

ನನ್ನ ಹೃದಯರೂಪ ಅಂಗಳದಲ್ಲಿ ಹರ್ಷರೂಪ ಬಳ್ಳಿಗಳನ್ನೇ ಬೆಳೆದಂತಾಗಿದೆ ಮತ್ತು ಅನಾಯಾಸವಾಗಿ ನನಗೆ ತಿಳುವಳಿಕೆಯೂ ಆಯಿತು, ಮತ್ತು ಆನಂದವೂ ಆಯಿತು ।೬೭೨॥

ಶ್ರೀಭಗವಾನುವಾಚ :-
ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।
ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ ।೫೨॥

ಯಯಾ ಪಾರ್ಥಾಚಿಯಾ ಬೋಲಾವಸೇ । ಹೇ ಕಾಯ ಮ್ಹಣಿತಲೇ ದೇವೇ । ತುವಾ ಪ್ರೇಮ ಠೇವೂನಿ ಯಾವೇ । ವಿಶ್ವರೂಪೀ ಕೀ ।೬೭೩॥ ಮಗ ಇಯೇ ಶ್ರೀಮೂರ್ತೀ । ಭೇಟಾವೇ ಸಡಿಯಾ ಆಯತೀ । ತೇ ಶಿಕವಣ ಸುಭದ್ರಾಪತೀ । ವಿಸರಲಾಸಿ ಮಾ ।೬೭೪॥ ಅಗಾ ಆಂಧಳಿಯಾ ಅರ್ಜುನಾ । ಹಾತಾ ಆಲಿಯಾ ಮೇರುಹೀ ಹೋಯ ಸಾನಾ । ಐಸಾ ಆಥೀ ಮನಾ । ಚುಕೀಚಾ ಭಾವೋ ।೬೭೫॥ ತರೀ ವಿಶ್ವಾತ್ಮಕ ರೂಪಡೇ । ಜೇ ದಾವಿಲೇ ಆಮ್ಹೀ ತುಜಪುಢೇ । ತೇ ಶಂಭೂಹೀ ಪರಿ ನ ಜೋಡೇ । ತಪೇ ಕರಿತಾ ।೬೭೬॥ ಆಣಿ ಅಷ್ಟಾಂಗಾದಿಸಂಕಟೀ । ಯೋಗೀ ಶಿಣತಾತಿ ಕಿರೀಟೀ । ಪರಿ ಅವಸರು ನಾಹೀ ಭೇಟೀ । ಜಯಾಚಿಯೇ ।೬೭೭॥ ತೇ ವಿಶ್ವರೂಪ ಏಕಾದೇ ವೇಳ । ಕೈಸೇನಿ ದೇಖೋ ಅಳುಮಾಳ । ಐಸೇ ಸ್ಮರತಾ ಕಾಳ । ಜಾತಸೇ ದೇವೋ ।೬೭೮॥ ಆಶೇಚಿಯೇ ಅಂಜುಳೀ । ಠೇಊನಿ ಹೃದಯಾಚಿಯಾ ನಿಡಳೀ । ಚಾತಕ ನಿರಾಳೀ । ಲಾಗಲೇ ಜೈಸೇ ।೬೭೯॥ ತೈಸೇ ಉತ್ಕಂಠಾನಿರ್ಭರ । ಹೋಊನಿಯಾ ಸುರವರ । ಘೋಕೀತ ಆಠಹೀ ಪಾಹಾರ । ಭೇಟೀ ಜಯಾಚೀ ।೬೮೦॥ ಪರಿ ವಿಶ್ವರೂಪಾಸಾರಿಖೇ । ಸ್ವಪ್ನೀಹೀ ಕೋಣ್ಹೀ ನ ದೇಖೇ । ತೇ ಪ್ರತ್ಯಕ್ಷ ತುವಾ ಸುಖೇ । ದೇಖಿಲೇ ಹೇ ।೬೮೧॥

ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।
ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ।೫೩॥

ಪೈ ಉಪಯಾಂಸೀ ವಾಟಾ । ನ ವಾಹತೀ ಏಥ ಸುಭಟಾ । ಸಾಹೀಸಹಿತ ವೋಹಟಾ । ವಾಹಿಲಾ ವೇದೀ ।೬೮೨॥ ಮಜ ವಿಶ್ವರೂಪಾಚಿಯಾ ಮೋಹರಾ । ಚಾಲಾವಯಾ ಧನುರ್ಧರಾ । ತಪಾಂಚಿಯಾಹೀ ಸಂಭಾರಾ । ನವ್ಹೇಚಿ ಲಾಗು ।೬೮೩॥ ಆಣಿ ದಾನಾದಿ ಕೀರ ಕಾನಡೇ । ಮೀ ಯಜ್ಞೀಹೀ ತೈಸಾ ನ ಸಾಂಪಡೇ । ಜೈಸೇನಿ ಕಾ ಸುರವಾಡೇ । ದೇಖಿಲಾ ತುವಾ ।೬೮೪॥ ತೈಸಾ ಮೀ ಏಕೀಚಿ ಪರಿ । ಆತುಡೇ ಗಾ ಅವಧಾರೀ । ಜರೀ ಭಕ್ತಿ ಯೇಊನಿ ವರೀ । ಚಿತ್ತಾತೇ ಗಾ ।೬೮೫॥

ಶ್ಲೋಕಾರ್ಥ :- ಭಗವಂತನು ಹೀಗೆಂದನು:- ನಿನಗೆ ಸಿದ್ಧಿಸಿದ ನನ್ನ ಈ ವಿಶ್ವರೂಪವು ಸುಲಭವಾಗಿ ದೊರಕುವುದಲ್ಲ. ಈ ದರ್ಶನಕ್ಕಾಗಿ ದೇವತೆಗಳು ನಿತ್ಯವೂ ಪರಿತಪಿಸುತ್ತಾರೆ ।೫೨॥

ಅರ್ಜುನನ ಈ ಮಾತುಗಳನ್ನು ಕೇಳಿ ಶ್ರೀಕೃಷ್ಣನು ಹೇಳಿದನು ; ಅರೇ, ನೀನು ನಿಜವಾಗಿಯೂ ವಿಶ್ವರೂಪದಲ್ಲಿ ಪ್ರೇಮವಿಟ್ಟು ಅದರಿಂದಲೇ ನನ್ನನ್ನು ಕೂಡಬೇಕು ।೬೭೩॥

ತದನಂತರ ಈ ಚತುರ್ಭುಜ ಮೂರ್ತಿಯನ್ನು ಕೂಡಿಕೊಳ್ಳಲು ಕೇವಲ ಶರೀರದಿಂದ ಬರಬೇಕು. ಹೀಗೆ ಈ ಹಿಂದೆ ನಾನು ನಿನಗೆ ಕಲಿಸಿದ್ದು ಅರ್ಜುನನೇ, ಮರೆತು ಬಿಟ್ಟೆಯಾ ? ।೬೭೪॥

ಹೇ ಮೂರ್ಖ ಅರ್ಜುನನೇ, ಕುರುಡನಿಗೆ ಮೇರು ಪರ್ವತಪ್ರಾಯವಾದ ಬಂಗಾರ ಸಿಕ್ಕರೂ, ಅದು ಆತನಿಗೆ ಕಾಣದ್ದಕ್ಕೆ ಚಿಕ್ಕದ್ದಾಗಿ ಭಾಸವಾಗುವುದು. ಇದು ಮನಸ್ಸಿನ ತಪ್ಪು ಭಾವನೆಯಾಗಿದೆ ।೬೭೫॥

ಆದರೆ, ನಾವು ನಿನಗೆ ತೋರಿಸಿದ ವಿಶ್ವರೂಪವು ಮಹಾ ತಪಸ್ಸು ಮಾಡಿದ ಮಹಾದೇವರಿಗೂ ಪ್ರಾಪ್ತವಾಗುವುದಿಲ್ಲ ।೬೭೬॥

ಹೇ ಕಿರೀಟಿಯೇ, ಅಷ್ಟಾಂಗ ಯೋಗದಿಂದ ಯೋಗಿಗಳು ಎಷ್ಟೋ ಶ್ರಮಪಡುವರು. ಆದರೂ ಅವರಿಗೆ ವಿಶ್ವರೂಪವನ್ನು ನೋಡುವುದಕ್ಕೆ ಸಾಧ್ಯವಾಗಿಲ್ಲ ।೬೭೭॥

ಈ ವಿಶ್ವರೂಪವನ್ನು ಒಮ್ಮೆ ಯಾದರೂ ಸ್ವಲ್ಪಾದರೂ ದೃಷ್ಟಿಗೆ ಬೀಳಬೇಕೆಂದು ದೇವತೆಗಳು ಸ್ಮರಿಸುತ್ತ ಸ್ಮರಿಸುತ್ತ ಆಯುಷ್ಯವನ್ನೇ ಕಳೆದುಕೊಂಡರು ।೬೭೮॥

ಆಶಾರೂಪ ಕೈಗಳನ್ನು ಹೃದಯರೂಪ ಗಲ್ಲಕ್ಕೆ ಇಟ್ಟು ಹಾಗೂ ಚಾತಕಪಕ್ಷಿಯು ಆಕಾಶದತ್ತ ಮೇಘದ ದಾರಿಯನ್ನು ಹೇಗೆ ಕಾಯುತ್ತದೆಯೋ ।೬೭೯॥

ಅದರಂತೆ ಉತ್ಸುಕತೆಯಿಂದ ದೇವತೆಗಳು ಮತ್ತು ಮನುಷ್ಯರು ವಿಶ್ವರೂಪದರ್ಶನಕ್ಕಾಗಿ ಎಂಟು ಪ್ರಹರಗಳಲ್ಲಿಯೂ ಆಶಿಸುವರು ।೬೮೦॥

ಆದರೆ, ಅವರ ಪೈಕಿ ಒಬ್ಬರಾದರೂ ಈ ವಿಶ್ವರೂಪವನ್ನು ಸ್ವಪ್ನದಲ್ಲಿಯೂ ಕಂಡಿಲ್ಲ. ಅದನ್ನು ನೀನು ಬಹಳ ಆನಂದದಿಂದ ನೋಡಿರುವೆ ।೬೮೧॥

ಶ್ಲೋಕಾರ್ಥ :- ನೀನು ನೋಡಿದ ನನ್ನ ಸ್ವರೂಪವು, ವೇದಗಳನ್ನು ಓದಿದರೂ, ತಪಸ್ಸನ್ನು ಆಚರಿಸಿದರೂ, ದಾನಾದಿಗಳನ್ನು ಮಾಡಿದರೂ, ಯಾಗವನ್ನು ಆಚರಿಸಿದರೂ, ದೊರಕುವುದಿಲ್ಲ ।೫೩॥

ಇಲ್ಲಿ ನೋಡು ಅರ್ಜುನಾ, ಈ ವಿಶ್ವರೂಪವನ್ನು ನೋಡಲು ಯಾವ ಉಪಾಯವು ಇಲ್ಲವೆಂದು ತಿಳಿದು ನಾಲ್ಕು ವೇದಗಳು ಆರು ಶಾಸ್ತ್ರಗಳೊಂದಿಗೆ ಮರಳಿ ಹೋದವು ।೬೮೨॥

ಹೇ ಧನುರ್ಧರನೇ, ನನ್ನ ವಿಶ್ವರೂಪದ ಎದುರಿನಲ್ಲಿ ಬರಲಿಕ್ಕೆ ಬಹಳಷ್ಟು ತಪಗಳು ಸಮರ್ಥರಿಲ್ಲ ।೬೮೩॥

ನನ್ನ ವಿಶ್ವರೂಪವನ್ನು ನೀನು ಅನಾಯಾಸವಾಗಿ ನೋಡಿದೆ. ಅದು ದಾನಿಗಳಿಗೂ ಹಾಗೂ ಯಜ್ಞ ಮಾಡುವವರಿಗೂ ದೃಷ್ಟಿಗೆ ಬೀಳಲೂ ಸಹ ಬಹಳ ಕಠಿಣವಾಗಿದೆ ।೬೮೪॥

ಆದರೆ, ಅಂತಹದ್ದನ್ನು ನಾನು ಒಂದೇ ಒಂದು ಉಪಾಯದಿಂದ ಮಾತ್ರ ದೊರಕುವೆನು. ಅದಾವುದೆಂದರೆ, ಅಂತಃಕರಣವು ನನ್ನ ಭಕ್ತಿಯಿಂದ ಪರಿಪೂರ್ಣವಾದರೆ ಮಾತ್ರ ನನ್ನ ವಿಶ್ವರೂಪದ ದರ್ಶನವು ಸಾಧ್ಯವೆಂದು ಧ್ಯಾನದಲ್ಲಿಡು ।೬೮೫॥

ಭಕ್ತ್ಯಾ ತ್ವನನ್ಯಯಾ ಶಕ್ಯಃ ಅಹಮೇವಂವಿಧೋಽರ್ಜುನ ।
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ।೫೪॥

ಪರಿ ತೇಚಿ ಭಕ್ತಿ ಐಸೀ । ಪರ್ಜನ್ಯಾಚೀ ಸುಟಿಕಾ ಜೈಸೀ । ಧರಾವಾಂಚೂನಿ ಅನಾರಿಸೀ । ಗತೀಚಿ ನೇಣೇ ।೬೮೬॥ ಕಾ ಸಕಳ ಜಳಸಂಪತ್ತೀ । ಘೇಊನಿ ಸಮುದ್ರಾತೇ ಗಿಂವಸಿತೀ । ಗಂಗಾ ಜೈಸಿ ಅನನ್ಯಗತೀ । ಮಿಳಾಲೀಚಿ ಮಿಳೇ ।೬೮೭॥ ತೈಸೇ ಸರ್ವಭಾವಸಂಭಾರೇ । ನ ಧರತ ಪ್ರೇಮ ಏಕಸರೇ । ಮಜಮಾಜೀ ಸಂಚರೇ । ಮೀಚಿ ಹೋಊನಿ ।೬೮೮॥ ಆಣಿ ತೇವೀಂಚಿ ಮೀ ಐಸಾ । ಥಡಿಯೇ ಮಾಝಾರೀ ಸರಿಸಾ । ಕ್ಷೀರಾಬ್ಧಿ ಕಾ ಜೈಸಾ । ಕ್ಷೀರಾಚಾಚಿ ।೬೮೯॥ ತೈಸೇ ಮಜ ಲಾಗುನೀ ಮುಂಗೀವರೀ । ಕಿಂಬಹುನಾ ಚರಾಚರೀ । ಭಜನಾಸೀ ಕಾ ದುಸರೀ । ಪರೀಚಿ ನಾಹೀ ।೬೯೦॥ ತಯಾಚಿ ಕ್ಷಣಾಸವೇ । ಏವಂವಿಧ ಮೀ ಜಾಣಾವೇ । ಜಾಣಿತಲಾ ತರೀ ಸ್ವಭಾವೇ । ದೃಷ್ಟ ಹೀ ಹೋಯ ।೬೯೧॥ ಮಗ ಇಂಧನೀ ಅಗ್ನಿ ಉದ್ದೀಪೇ । ಆಣೀ ಇಂದನ ಹೇ ಭಾಷ ಹಾರಪೇ । ತೇ ಅಗ್ನೀಚಿ ಹೋಊನಿ ಆರೋಪೇ । ಮೂರ್ತ ಜೇವೀ ।೬೯೨॥ ಕಾ ಉದಯ ನ ಕೀಜೇ ತೇಜಾಕಾರೇ । ತಂವ ಗಗನಚಿ ಹೋಊನಿ ಅಸೇ ಅಂಧಾರೇ । ಮಗ ಉದಈಲಿಯಾ ಏಕಸರೇ । ಪ್ರಕಾಶು ಹೋಯ ।೬೯೩॥ ತೈಸೇ ಮಾಝಿಯೇ ಸಾಕ್ಷಾತ್ಕಾರೀ । ಸರೇ ಅಹಂಕಾರಾಚೀ ವಾರೀ । ಅಹಂಕಾರಲೋಪೀ ಅವಧಾರೀ । ದ್ವೈತ ಜಾಯ ।೬೯೪॥ ಮಗ ಮೀ ತೋ ಹೇ ಆಘವೇ । ಏಕ ಮೀಚಿ ಆಥೀ ಸ್ವಭಾವೇ । ಕಿಂಬಹುನಾ ಸಾಮಾವೇ । ಸಮರಸೇ ತೋ ।೬೯೫॥

ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ ।
ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ।೫೫॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ವಿಶ್ವರೂಪಸಂದರ್ಶನಯೋಗೋ ನಾಮ ಏಕಾದಶೋಽಧ್ಯಾಯಃ

ಜೋ ಮಜಚಿ ಏಕಾಲಾಗೀ । ಕರ್ಮೇ ವಾಹಾತಸೇ ಆಂಗೀ । ಜಯಾ ಮಜವಾಂಚೋನಿ ಜಗೀ । ಗೋಮಟೇ ನಾಹೀ ।೬೯೬॥ ದೃಷ್ಟಾದೃಷ್ಟ ಸಕಳ । ಜಯಾಚೇ ಮೀಚಿ ಕೇವಳ । ಜೇಣೇ ಜಿಣಯಾಚೇ ಫಳ । ಮಜಚಿ ನಾಮ ಠೇವಿಲೇ ।೬೯೭॥ ಮಗ ಭೂತೇ ಹೇ ಭಾಷ ವಿಸರಲಾ । ಜೇ ದೀಠೀ ಮೀಚಿ ಆಹೇ ಸೂದಲಾ । ಮ್ಹಣೌನಿ ನಿರ್ವೈರ ಜಾಹಲಾ । ಸರ್ವತ್ರ ಭಜೇ ।೬೯೮॥

**ಶ್ಲೋಕಾರ್ಥ** :- ಅರ್ಜುನಾ! ಕೇವಲ ಅನನ್ಯ ಭಕ್ತಿಯಿಂದ ಮಾತ್ರ ವಾಸ್ತವವಾಗಿ ನನ್ನನ್ನು ತಿಳಿದುಕೊಳ್ಳುವುದಕ್ಕೂ, ನೋಡುವುದಕ್ಕೂ ನನ್ನಲ್ಲಿ ಪ್ರವೇಶವಾಗುವುದಕ್ಕೂ ಸಾಧ್ಯವಾಗುತ್ತದೆ ॥೫೪॥

ಆದರೆ ಆ ಭಕ್ತಿಯ ಮಳೆಯಧಾರೆಯು ಆಕಾಶದಿಂದ ಬಿಟ್ಟ ಮೇಲೆ ಭೂಮಿಗೆ ಬಂದು ಬೀಳದ ಹೊರತು ಅನ್ಯ ಗತಿಯೇ ಇಲ್ಲ. ಅದರಂತೆ ಏಕನಿಷ್ಠನಿದ್ದರೆ ॥೬೮೬॥

ಅಥವಾ ಗಂಗಾನದಿಯು ತನ್ನಲ್ಲಿ ಕೂಡಿದ ಎಲ್ಲ ಓಘಗಳೊಂದಿಗೆ ಸಮುದ್ರವನ್ನು ಕೂಡುವುದಕ್ಕೆ ಹೊರಟಿರುವುದು. ಅದಕ್ಕೆ ಬೇರೆ ಗತಿ ಇರುವುದಿಲ್ಲ. ಆದ್ದರಿಂದ ಸಮುದ್ರಕ್ಕೆ ಕೂಡಿಕೊಂಡು ಸತತವಾಗಿ ಕೂಡುತ್ತಲೇ ಇರುವುದು ॥೬೮೭॥

ಅದರಂತೆ ಅಷ್ಟಸಾತ್ತ್ವಿಕ ಭಾವದಿಂದ ಯಾರು ಯಾವಾಗಲು ಸಮಾನ ಪ್ರೇಮವನ್ನು ನನ್ನಲ್ಲಿಟ್ಟು ಮದ್ರೂಪನಾಗುವನು ॥೬೮೮॥

ಮತ್ತು ಯಾವ ಪ್ರಕಾರವಾಗಿ ಕ್ಷೀರಸಮುದ್ರವು ದಂಡೆಯಲ್ಲಿಯೂ ಮಧ್ಯಭಾಗದಲ್ಲಿಯೂ ಒಂದೇ ಪ್ರಕಾರದ ಸಿಹಿ ಇರುತ್ತದೆಯೋ, ಅದರಂತೆ ಎಲ್ಲೆಡೆ ಒಂದೇ ಪ್ರಕಾರನಿರುವೆನು ॥೬೮೯॥

ಅದರಂತೆ ನನ್ನಿಂದ ಹಿಡಿದು ಇರುವೆಯವರೆಗೂ, ಒಟ್ಟಿನಲ್ಲಿ ಸ್ಥಾವರ ಜಂಗಮ ಪ್ರಾಣಿಮಾತ್ರರಲ್ಲಿ ಭಜಿಸಲು ಇವರಿಗೆ ದ್ವೈತಭಾವವು ಉಳಿಯುವುದೇ ಇಲ್ಲ ॥೬೯೦॥

ಹೀಗೆ ಯಾವ ವೇಳೆಯಲ್ಲಿ ಚಿತ್ತವೃತ್ತಿಯಾಗುವುದೋ, ಅದೇ ಕ್ಷಣಕ್ಕೆ ನನ್ನ ವಿಶ್ವರೂಪದ ಜ್ಞಾನವಾಗುವುದು. ಜ್ಞಾನವಾಯಿತೆಂದರೆ ದರ್ಶನವೂ ಆಗುವುದು ॥೬೯೧॥

ಆಗ ಕಟ್ಟಿಗೆಯಿಂದ ಅಗ್ನಿಯು ಉತ್ಪನ್ನವಾಗಿ ಕಟ್ಟಿಗೆಯು ಹೊತ್ತಿದಾಗ್ಗೆ ಕಟ್ಟಿಗೆ ಎಂಬ ಹೆಸರು ಹೋಗಿ ಅಗ್ನಿರೂಪವಾಗುವುದು ॥೬೯೨॥

ಅಥವಾ ಸೂರ್ಯ ಚಂದ್ರರು ಉದಯವಾಗುವವರೆಗೂ ಆಕಾಶದಲ್ಲಿ ಕತ್ತಲು ಕವಿದಿರುತ್ತದೆ. ಅವರು ಉದಯ ರಾದಾಗ ಎಲ್ಲ ಕಡೆಯೂ ಪ್ರಕಾಶ ಬೀಳುವುದು ॥೬೯೩॥

ಅದರಂತೆ ನನ್ನ ವಿಶ್ವರೂಪದ ಅನುಭವ ಪಡೆದಾಗ ಅಹಂಕಾರವು ಇಲ್ಲದಾಗುವುದು. ಅಹಂಕಾರ ಇಲ್ಲದಾಗಲು ದ್ವೈತಭಾವವು ಇಲ್ಲದಾಗುವುದು. ಹೀಗೆ ತಿಳಿ ॥೬೯೪॥

ಆಗ ನಾನು, ಅವನು, ಈ ಎಲ್ಲವೂ ಸಹಜವಾಗಿ ನನ್ನ ಸ್ವರೂಪವೇ ಇರುವುವು. ಹೆಚ್ಚಿಗೇನು ಹೇಳಬೇಕು ? ಈ ರೀತಿಯ ಬೋಧೆಯಿಂದ ನನ್ನಲ್ಲಿ ಸಮರಸನಾಗುವನು ॥೬೯೫॥

**ಶ್ಲೋಕಾರ್ಥ** :- ಆದುದರಿಂದ ಪಾಂಡುನಂದನಾ! ಯಾರು ನನಗಾಗಿ ಸತ್ಕರ್ಮಗಳನ್ನು ಮಾಡಿ, ನಾನೇ ಪರಮ ಶರಣ್ಯನೆಂದು ನಂಬಿ, ನನ್ನಲ್ಲಿ ಭಕ್ತಿಯುಳ್ಳವರಾಗಿ, ಯಾವುದರಲ್ಲಿಯೂ, ಸಂಗವಿಲ್ಲದೆ, ಯಾವ ಪ್ರಾಣಿಯಲ್ಲಿಯೂ ವೈರವಿಲ್ಲದೆ ಇರುವರೋ ಅವರೇ ನನ್ನನ್ನು ಪಡೆದುಕೊಳ್ಳುತ್ತಾರೆ. ಅನ್ಯಥಾ ಸಾಧ್ಯವಿಲ್ಲ ॥೫೫॥

ಇಲ್ಲಿಗೆ ಉಪನಿಷತ್ತೂ, ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ, ಶ್ರೀಕೃಷ್ಣಾರ್ಜುನ ಸಂವಾದವೂ ಆದ ಶ್ರೀಮದ್ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನ ಯೋಗವೆಂಬ ಹೆಸರಿನ ಹನ್ನೊಂದನೆಯ ಅಧ್ಯಾಯವು ಮುಗಿದುದು.

ಯಾರು ನನಗಾಗಿಯೇ ಸ್ವತಃ ತಮ್ಮ ಮೇಲೆ ಕರ್ಮದ ಭಾರವನ್ನು ವಹಿಸುವರು, ಕಾಯಾ, ವಾಚಾ, ಮನದಿಂದ ವೇದವಿಹಿತ ಕರ್ಮ ಮಾಡುವರು. ಇವರಿಗೆ ಜಗತ್ತಿನಲ್ಲಿ ನನಗಿಂತ ಬೇರೆ ಯಾರೂ ಉತ್ತಮರು ಕಾಣಿಸುವುದಿಲ್ಲ ॥೬೯೬॥

ಇವರು ಇಹಲೋಕದ ಮತ್ತು ಪರಲೋಕದ ಫಲವು ನಾನೇ ಆಗಿರುವೆನು ಎಂದು ತಿಳಿದಿರುತ್ತಾರೆ. ಇವರ ಬದುಕಿಗೆ ನನ್ನ ಹೆಸರೇ ಇಟ್ಟಿರುತ್ತಾರೆ. ನಾನೇ ಬದುಕಿನ ಫಲವಾಗಿದ್ದೇನೆ ॥೬೯೭॥

ಇವರು ಪ್ರಾಣಿಮಾತ್ರರ ಹೆಸರುಗಳನ್ನು ಮರೆತು ನನ್ನನ್ನೇ ಎಲ್ಲರಲ್ಲಿ ನೋಡುವರು. ಆದ್ದರಿಂದಲೇ ಅವರು ನಿರ್ವೈರರಾಗಿ ಜಗತ್ತಿನ ಕಾಣುವುದೆಲ್ಲವನ್ನು ಭಜಿಸುವರು ॥೬೯೮॥

ಐಸಾ ಜೋ ಭಕ್ತು ಹೋಯೇ । ತಯಾಚೇ ತ್ರಿಧಾತುಕ ಹೇ ಜೈ ಜಾಯೇ । ತೈ ಮೀಚಿ ಹೋಊನಿ ಠಾಯೇ । ಪಾಂಡವಾ ಗಾ ॥೬೯೯॥ ಐಸೇ ಜಗದುದರ ದೋಂದಿಲೇ । ತೇಣೇ ಕರುಣಾರಸರಸಾಳೇ । ಸಂಜಯೋ ಮ್ಹಣೇ ಬೋಲಿಲೇ । ಶ್ರೀಕೃಷ್ಣದೇವೆ ॥೭೦೦॥ ಯಯಾವರೀ ತೋ ಪಂಡುಕುಮರು । ಜಾಹಲಾ ಆನಂದಸಂಪದಾ ಥೋರು । ಆಣಿ ಕೃಷ್ಣಚರಣಚತುರು । ಏಕ ತೋ ಜಗೀ ॥೭೦೧॥ ತೇಣೇ ದೇವಾಚಿಯಾ ದೋನಹೀ ಮೂರ್ತಿ । ನಿಕಿಯಾ ನ್ಯಾಹಾಳಿಲಿಯಾ ಚಿತ್ತೀ । ತಂವ ವಿಶ್ವರೂಪಾಹೂನಿ ಕೃಷ್ಣಾಕೃತೀ । ದೇಖಿಲಾ ಲಾಭು ॥೭೦೨॥ ಪರಿ ತಯಾಚಿಯೇ ಜಾಣಿವೇ । ಮಾನು ನ ಕೀಜೇಚಿ ದೇವೇ । ಜೇ ವ್ಯಾಪಕಾಹೂನಿ ನವ್ಹೇ । ಏಕದೇಶೀ ॥೭೦೩॥ ಹೇಚಿ ಸಮರ್ಥಾವಯಾಲಾಗೀ । ಏಕ ದೋನ ಚಾಂಗೀ । ಉಪಪತ್ತೀ ಶಾರ್ಙ್ಗೀ । ದಾವಿತಾ ಜಾಹಲಾ ॥೭೦೪॥ ತಿಯಾ ಐಕೋನಿ ಸುಭದ್ರಾಕಾಂತು । ಚಿತ್ತೀ ಆಹೇ ಮ್ಹಣತು । ತರಿ ಹೋಯ ಬರವೇ ದೋನ್ಹೀ ಆಂತು । ತೇ ಪುಢತೀ ಪುಸೋ ॥೭೦೫॥ ಐಸಾ ಆಲೋಚು ಕರೂನಿ ಜೀವೀ । ಆತಾ ಪುಸತೀ ವೋಜ ಬರವೀ । ಆದರೀಲ ತೇ ಪರಿಸಾವೀ । ಪುಢೇ ಕಥಾ ॥೭೦೬॥ ಪ್ರಾಂಜಳ ವೋವೀಪ್ರಬಂಧೇ । ಗೋಷ್ಟೀ ಸಾಂಗಿಜೇಲ ವಿನೋದೇ । ತೇ ಪರಿಸಾ ಆನಂದೇ । ಜ್ಞಾನದೇವೋ ಮ್ಹಣೇ ॥೭೦೭॥ ಭರೋನಿ ಸದ್ಭಾವಾಚೀ ಅಂಜುಳೀ । ಮಿಯಾ ವೋವಿಯಾಫುಲೇ ಮೋಕಳೀ । ಅರ್ಪಿಲೀ ಅಂಘ್ರಿಯುಗಲೀ । ವಿಶ್ವರೂಪಾಚ್ಯಾ ॥೭೦೮॥

---

ಇತಿ ಶ್ರೀ ಜ್ಞಾನದೇವ ವಿರಚಿತಾಯಾಂ ಭಾವಾರ್ಥದೀಪಿಕಾಯಾಂ ಏಕಾದಶೋಽಧ್ಯಾಯಃ ॥೧೧॥
ಶ್ಲೋಕ :೫೫ ಓವಿ :೭೦೮

ಹೇ ಪಾಂಡವನೇ, ಈ ಪ್ರಕಾರವಾಗಿ ಆ ಭಕ್ತಿಯ ವೃತ್ತಿ ಸಿದ್ಧಗೊಳ್ಳುವುದು ಮತ್ತು ವಾತಪಿತ್ತ ಕಫಾತ್ಮಕ ಶರೀರವು ಇಲ್ಲದಾಗಲು ಅವರು ಆಗ ಮದ್ರೂಪರಾಗುವರು ॥೬೯೯॥

ಸಂಜಯನು ಹೇಳಿದನು:- ಹೇ ಧೃತರಾಷ್ಟ್ರನೇ, ಯಾರ ಉದರದಲ್ಲಿ ಸರ್ವಜಗತ್ತು ತುಂಬಿ ಉದರವು ದೊಡ್ಡದಾಗಿದೆಯೋ, ಆ ಕೃಷ್ಣ ಪರಮಾತ್ಮನು ಕರುಣಾರಸಯುಕ್ತ ವಾಣಿಯಿಂದ ಹೀಗೆ ಹೇಳಿದನು ॥೭೦೦॥

ಈ ಭಗವಂತನ ಉಪದೇಶದ ನಂತರ ಅರ್ಜುನನು ಆನಂದ ಸಂಪತ್ತಿನ ಲಾಭದಿಂದ ದೊಡ್ಡ ಶ್ರೀಮಂತನಾದನು ಮತ್ತು ಜಗತ್ತಿನಲ್ಲಿ ಆತನೇ ಶ್ರೀಕೃಷ್ಣಚರಣ ಸೇವೆ ಮಾಡುವುದರಲ್ಲಿ ಚತುರನಾದನು ॥೭೦೧॥

ಆತನು ದೇವರ ಎರಡೂ ರೂಪಗಳನ್ನು ಚೆನ್ನಾಗಿ ನೋಡಿದನು. ಆಗಾತನು ವಿಶ್ವರೂಪಕ್ಕಿಂತಲೂ ಕೃಷ್ಣ ರೂಪದಲ್ಲಿ ಲಾಭವಿರುವುದು ಎಂದು ತನ್ನ ಚಿತ್ತದಲ್ಲಿ ನಿರ್ಣಯಿಸಿದನು ॥೭೦೨॥

ಆದರೆ, ಅರ್ಜುನನ ನಿರ್ಣಯಕ್ಕೆ ಶ್ರೀಕೃಷ್ಣನು ಮನ್ನಿಸಲಿಲ್ಲ. ಕಾರಣವೇನೆಂದರೆ, ವ್ಯಾಪಕಕ್ಕಿಂತಲೂ ಏಕದೇಶಿ ರೂಪವು ನಿಜವಲ್ಲ ॥೭೦೩॥

ಇದನ್ನೇ ಸಿದ್ಧಗೊಳಿಸಲು ಶ್ರೀಕೃಷ್ಣನು ಒಂದೆರಡು ಉತ್ತಮವಾದ ಉದಾಹರಣೆಗಳನ್ನು ಕೊಟ್ಟನು ॥೭೦೪॥

ಇದನ್ನು ಕೇಳಿ ಅರ್ಜುನನು ತನ್ನ ಮನದಲ್ಲಿ ಈ ಎರಡೂ ರೂಪಗಳಲ್ಲಿ ಉತ್ತಮವಾದದ್ದು ಯಾವುದಿದೆ ಎಂಬುದು ಮುಂದೆ ವಿಚಾರಿಸೋಣವೆಂದನು ॥೭೦೫॥

ಈ ಪ್ರಕಾರವಾಗಿ ಮನದಲ್ಲಿ ವಿಚಾರಿಸಿ ಮುಂದೆ ಆತನು ಯಾವ ಪ್ರಕಾರವಾಗಿ ಶ್ರೀಕೃಷ್ಣನಿಗೆ ಪ್ರಶ್ನೆಯನ್ನು ಮಾಡುವನೆಂಬ ಕಥೆಯನ್ನು ಕೇಳಿರಿ ॥೭೦೬॥

ಜ್ಞಾನೇಶ್ವರರು ಹೇಳುವರು - ಈ ಮಾತುಗಳನ್ನು ಓವಿ ಪ್ರಬಂಧಗಳಲ್ಲಿ ವಿನೋದವಾಗಿ ಹೇಳಲ್ಪಡುವುದನ್ನು ನೀವು ಆನಂದಯುಕ್ತ ಅಂತಃಕರಣದಿಂದ ಕೇಳಿರಿ ॥೭೦೭॥

ಸದ್ಭಾವವೆಂಬ ತುಂಬಿದ ಬೊಗಸೆಯಿಂದ ಓವಿಗಳ ರೂಪ ಅರಳಿದ ಬಿಡಿಹೂವುಗಳನ್ನು ವಿಶ್ವರೂಪದ ಎರಡೂ ಚರಣಕಮಲಗಳಲ್ಲಿ ನಾನು ಅರ್ಪಿಸಿದೆನು ॥೭೦೮॥

ಶ್ರೀ ಜ್ಞಾನೇಶ್ವರ ಮಹಾರಾಜರಿಂದ ರಚಿತವಾದ ಭಾವಾರ್ಥ ದೀಪಿಕೆಯ ಹನ್ನೊಂದನೆಯ ಅಧ್ಯಾಯದ ವಿವರಣೆ ಸಮಾಪ್ತವು

# ಸಾರ್ಥ ಶ್ರೀಜ್ಞಾನೇಶ್ವರೀ

## ಅಧ್ಯಾಯ ಬಾರಾವಾ

ಶ್ರೀ ಗಣೇಶಾಯ ನಮಃ

---

ಜಯಜಯ ವ್ಹೋ ಶುದ್ಧೇ । ಉದಾರೇ ಪ್ರಸಿದ್ಧೇ । ಅನವರತ ಆನಂದೇ । ವರ್ಷತಿಯೇ ॥೧॥ ವಿಷಯವ್ಯಾಳೇ ಮಿಠೀ । ದಿಧಲಿಯಾ ನುಠೀ ತಾಠೀ । ತೇ ತುಝಿಯೇ ಗುರುಕೃಪಾ ದೃಷ್ಟೀ । ನಿರ್ವಿಷ ಹೋಯ ॥೨॥ ತರೀ ಕವಣಾತೇ ತಾಪು ಪೋಳೀ । ಕೈಸೇನಿ ವ್ಹೋ ಶೋಕು ಜಾಳೀ । ಜರೀ ಪ್ರಸಾದರಸ ಕಲ್ಲೋಳೀ । ಪೂರೇ ಯೇಸಿ ತೂ ॥೩॥ ಯೋಗಸುಖಾಚೇ ಸೋಹಳೇ । ಸೇವಕಾ ತುಝೇನಿ ಸ್ನೇಹಾಳೇ । ಸೋಹಂಸಿದ್ಧೀಚೇ ಲಳೇ । ಪಾಳಿಸೀ ತೂ ॥೪॥ ಆಧಾರಶಕ್ತೀಚಿಯಾ ಅಂಕೀ । ವಾಢವಿಸೀ ಕೌತುಕೀ । ಹೃದಯಾಕಾಶ ಪಲ್ಲಕೀ । ಪರಿಯೇ ದೇಸೀ ನಿಜೇ ॥೫॥ ಪ್ರತ್ಯಕ್ಜ್ಯೋತೀಚೇ ವ್ಹೋವಾಳಣೇ । ಕರಿಸೀ ಮನಪವನಾಚೇ ಖೇಳಣೇ । ಆತ್ಮಸುಖಾಚೇ ಬಾಳಲೇಣೇ । ಲೇವವಿಸೀ ॥೬॥ ಸತರಾವಿಯೇಚೇ ಸ್ತನ್ಯ ದೇಸೀ । ಅನುಹತಾಚಾ ಹಲ್ಲರೂ ಗಾಸೀ । ಸಮಾಧಿಬೋಧೇ ನಿಜವಿಸೀ । ಬುಝಾಊನಿ ॥೭॥ ಮ್ಹಣೌನಿ ಸಾಧಕಾ ತೂ ಮಾಉಲೀ । ಪಿಕೇ ಸಾರಸ್ವತ ತುಝಿಯಾ ಪಾಉಲೀ । ಯಾ ಕಾರಣೇ ಮೀ ಸಾಉಲೀ । ನ ಸಂಡೀ ತುಝೀ ॥೮॥ ಅಹೋ ಸದ್ಗುರುಚಿಯೇ ಕೃಪಾದೃಷ್ಟೀ । ತುಝೇ ಕಾರುಣ್ಯ ಜಯಾತೇ ಅಧಿಷ್ಠೀ । ತೋ ಸಕಳ ವಿದ್ಯಾಂಚಿಯೇ ಸೃಷ್ಟೀ । ಧಾತ್ರಾ ಹೋಯ ॥೯॥ ಮ್ಹಣೌನಿ ಅಂಬೇ ಶ್ರೀಮಂತೇ । ನಿಜಜನಕಲ್ಪಂತೇ । ಆಜ್ಞಾಪೀ ಮಾತೇ । ಗ್ರಂಥನಿರೂಪಣೇ ॥೧೦॥ ನವರಸೀ ಭರವೀ ಸಾಗರು । ಕರವೀ ಉಚಿತ ರತ್ನಾಂಚೇ ಆಗರು । ಭಾವಾರ್ಥಾಚೇ ಗಿರಿವರು । ನಿಫಜವೀ ಮಾಯೇ ॥೧೧॥ ಸಾಹಿತ್ಯಸೋನಿಯಾಚಿಯಾ ಖಾಣೀ । ಉಘಡವೀ ದೇಶಿಯೇಚಿಯಾ ಕ್ಷೋಣೀ । ವಿವೇಕವಲ್ಲೀಚೀ ಲಾವಣೀ । ಹೋ ದೇಈ ಸೈಂಘ ॥೧೨॥ ಸಂವಾದಫಳನಿಧಾನೇ । ಪ್ರಮೇಯಾಚೀ ಉದ್ಯಾನೇ । ಲಾವೀ ಮ್ಹಣೇ ಗಹನೇ । ನಿರಂತರ ॥೧೩॥ ಪಾಖಾಂಡಾಚೇ ದರಕುಟೇ । ಮೋಡೀ ವಾಗ್ವಾದ ಅವ್ಹಾಂಟೇ । ಕುತರ್ಕಾಚೀ ದುಷ್ಟೇ । ಸಾವಜೇ ಫೇಡೀ ॥೧೪॥

# ಸಾರ್ಥ ಶ್ರೀಜ್ಞಾನೇಶ್ವರೀ

## ಹನ್ನೆರಡನೆಯ ಅಧ್ಯಾಯ

ಹೇ ಶುದ್ಧಳಾದ ಸದ್ಗುರು ಮಾತೆಯೇ, ನಿನಗೆ ಜಯ ಜಯಕಾರವು. ನೀನು ನಿರ್ಮಲ ಹಾಗೂ ಉದಾರಳಾಗಿದ್ದು ನಿರಂತರವಾಗಿ ಆನಂದದ ಮಳೆಗರೆಯುವುದರಲ್ಲಿ ಪ್ರಸಿದ್ಧಳಾಗಿರುವೆ ।।೧।।

ವಿಷಯರೂಪ ಸರ್ಪವು ಸುತ್ತಿಕೊಂಡಾಗ ಮೂರ್ಛಿತನಾದ ಮನುಷ್ಯನ ವಿಷವು, ಹೇ ಗುರುಕೃಪಾದೃಷ್ಟೇ, ನಿನ್ನ ಯೋಗದಿಂದ ಇಳಿಯುವುದು ।।೨।।

ನಿನ್ನ ಪ್ರಸಾದರೂಪ ತೆರೆಗಳ ಪೂರವು ಬಂದಾಗ ಸಂಸಾರ ತಾಪದಿಂದ ಯಾರಿಗೆ ತ್ರಾಸಾಗಬೇಕು? ಮತ್ತು ಶೋಕದಿಂದ ಪೀಡೆಯು ಯಾರಿಗಾಗಬೇಕು? ।।೩।।

ಹೇ ಸ್ನೇಹಾಳೇ, ನಿನ್ನಿಂದ ಸೇವಕನಿಗೆ ಯೋಗಸುಖದ ಚಮತ್ಕಾರವು ಪ್ರಾಪ್ತವಾಗುವುದು ಮತ್ತು ''ನಾನು ಬ್ರಹ್ಮರೂಪನಾಗಬೇಕು'' ಎಂಬ ಬಯಕೆಯನ್ನು ನೀನು ಪೂರ್ಣಗೊಳಿಸುವೆ ।।೪।।

(ಭಕ್ತನಿಗೆ) ನೀನು ನಿನ್ನ ಆಧಾರಶಕ್ತಿ ತೊಡೆಯ ಮೇಲೆ ಕೂಡ್ರಿಸಿ ಕೌತುಕದಿಂದ ಬೆಳೆಸುವಿ ಮತ್ತು ಹೃದಯಾಕಾಶ ತೊಟ್ಟಿಲದಲ್ಲಿ ನಿನ್ನ ಉಪದೇಶದಿಂದ ತೂಗಿ ಮಲಗಿಸುವಿ ।।೫।।

ಮನವನ್ನು ವಿಷಯದಿಂದ ದೂರ ಮಾಡಿ ಆತ್ಮಜ್ಯೋತಿಯ ನಿವಾಳಿಮಾಡಿ, ಮನ ಮತ್ತು ಪವನದ ಆಟಿಗೆ ಮಾಡುವಿ ಮತ್ತು ಸೇವಕನಿಗೆ ಆತ್ಮಸುಖದ ಆಭರಣ ಧರಿಸಲು ಹಚ್ಚುವಿ ।।೬।।

ಜೀವನ ಕಲೆಯ ಅಮೃತಪಾನವನ್ನು ಕೊಟ್ಟು ''ಹಂಸಃ ಸೋಹಂ'' ಈ ಅಖಂಡ ಧ್ವನಿಯ ಗಿಲಗಂಚಿ ಕೈಯಲ್ಲಿ ಕೊಟ್ಟು ಸಮಾಧಿ ಸುಖದ ಬೋಧೆಯಿಂದ ಮಲಗಿಸುವೆ ।।೭।।

ಆದ್ದರಿಂದ ನೀನು ಸಾಧಕರ ತಾಯಿಯಾಗಿರುವಿ ಮತ್ತು ನಿನ್ನ ಚರಣ ಹಿಡಿದರೆ ಜ್ಞಾನಪ್ರಾಪ್ತಿಯಾಗಿ ವಿದ್ಯೆಯು ಬೆಳೆಯುವುದು. ಅದಕ್ಕಾಗಿ ನಾನು ನಿನ್ನಾಶ್ರಯವನ್ನು ಬಿಡುವುದಿಲ್ಲ ।।೮।।

ಹೇ ಸದ್ಗುರು ಕೃಪಾದೃಷ್ಟೇ, ಯಾರನ್ನು ನೀನು ದಯೆ ತೋರುವಿಯೋ, ಆತನು ಸರ್ವ ವಿದ್ಯಾರೂಪ ಸೃಷ್ಟಿಯ ಉತ್ಪನ್ನಕರ್ತನಾಗುವನು ।।೯।।

ಆದ್ದರಿಂದ ಹೇ ಶ್ರೀಮಂತ ಅಂಬೆಯೇ, ನೀನು ಸೇವಕನ ಮನದಿಚ್ಛೆಯನ್ನು ಪೂರ್ಣಗೊಳಿಸುವ ಕಲ್ಪವೃಕ್ಷವಾಗಿರುವಿ. ಅದಕ್ಕಾಗಿ ಈ ಗೀತೆಯ ಅರ್ಥ ಬರೆಯಲು ನನಗೆ ಆಜ್ಞಾಪಿಸು ।।೧೦।।

ಹೇ ಮಾತೆಯೇ, ಈ ನನ್ನ ಗ್ರಂಥದಲ್ಲಿ ನವರಸದ ಸಾಗರವನ್ನು, ಅಲಂಕಾರಗಳ ಖಣಿಯನ್ನು ಮತ್ತು ಭಾವಾರ್ಥಗಳ ಪರ್ವತಗಳನ್ನು ನಿರ್ಮಿಸು ।।೧೧।।

ದೇಶ ಭಾಷೆರೂಪ ಭೂಮಿಯಲ್ಲಿ ಅಲಂಕಾರರೂಪ ಸುವರ್ಣದ ಖಣಿಯನ್ನು ತೆಗೆದು ವಿಚಾರರೂಪ ದಟ್ಟವಾದ ಬಳ್ಳಿಗಳನ್ನು ಬೆಳೆಸು ।।೧೨।।

ಅದರಲ್ಲಿ ಸಂವಾದರೂಪ ಫಲಗಳನ್ನು ಸಂಗ್ರಹಿಸುವ ಮತ್ತು ಮಾರ್ಮಿಕ ಅರ್ಥರೂಪ ಸಿದ್ಧಾಂತಗಳ ಬಹಳಷ್ಟು ತೋಟಗಳನ್ನು ಸತತವಾಗಿ ಇರುವಂತೆ ನಿರ್ಮಿಸು ।।೧೩।।

ಪಾಖಂಡಿ (ನಾಸ್ತಿಕ) ರೂಪ ಕಲ್ಲು ಬಂಡೆಗಳನ್ನು, ವಿತಂಡವಾದರೂಪ ಅಡ್ಡದಾರಿಗಳನ್ನು ಇಲ್ಲದಂತೆ ಮಾಡಿ ಕುತರ್ಕರೂಪ ಹಿಂಸಕ ಪ್ರಾಣಿಗಳನ್ನು ದೂರ ಓಡಿಸು ।।೧೪।।

ಶ್ರೀಕೃಷ್ಣಗುಣೇ ಮಾತೇ । ಸರ್ವತ್ರ ಕರೀ ವೋ ಸರತೇ । ರಾಣಿವೇ ಬೈಸವೀ ಶ್ರೋತೇ । ಶ್ರವಣಾಚಿಯೇ ।।೧೫।। ಯೇ ಮರ್ಹಾಠಿಯೇಚಿಯಾ ನಗರೀ । ಬ್ರಹ್ಮವಿದ್ಯೇಚಾ ಸುಕಾಳು ಕರೀ । ಘೇಣೇ ದೇಣೇ ಸುಖಚಿವರೀ । ಹೋ ದೇಈ ಯಾ ಜಗಾ ।।೧೬।। ತೂ ಆಪುಲೇನಿ ಸ್ನೇಹಪಲ್ಲವೇ । ಮಾತೇ ಪಾಂಘುರವಿಶೀಲ ಸದೈವೇ । ತರೀ ಆತಾಂಚಿ ಹೇ ಆಘವೇ । ನಿರ್ಮೀನ ಮಾಯೇ ।।೧೭।। ಇಯೇ ವಿನವಣೀಯೇಸಾಠೀ । ಅವಲೋಕಿಲೇ ಗುರುಕೃಪಾದೃಷ್ಟೀ । ಮ್ಹಣೇ ಗೀತಾರ್ಥೇಸಿ ಉಠೀ । ನ ಬೋಲೇ ಬಹು ।।೧೮।। ತೇಥ ಜೀ ಜೀ ಮಹಾಪ್ರಸಾದು । ಮ್ಹಣೌನಿ ಸಾವಿಯಾ ಜಾಹಲಾ ಆನಂದು । ಆತಾ ನಿರೋಪೀನ ಪ್ರಬಂಧು । ಅವಧಾನ ದೀಜೇ ।।೧೯।।

ಅರ್ಜುನ ಉವಾಚ:-
ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।
ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ।।೧।।

ತರೀ ಸಕಳವೀರಾಧಿರಾಜು । ಜೋ ಸೋಮವಂಶೀ ವಿಜಯಧ್ವಜು । ತೋ ಬೋಲತಾ ಜಾಹಲಾ ಆತ್ಮಜು । ಪಂಡುನೃಪಾಚಾ ।।೨೦।। ಕೃಷ್ಣಾತೇ ಮ್ಹಣೇ ಅವಧಾರಿಲೇ । ಆಪಣ ವಿಶ್ವರೂಪ ಮಜ ದಾವಿಲೇ । ತೇ ನವಲ ಮ್ಹಣೌನಿ ಬಿಹಾಲೇ । ಚಿತ್ತ ಮಾಝೇ ।।೨೧।। ಆಣಿ ಇಯೇ ಕೃಷ್ಣಮೂರ್ತೀಚೀ ಸವೇ । ಯಾಲಾಗೀ ಸೋಯ ಧರಿಲೀ ಜೀವೇ । ತಂವ ನಕೋ ಮ್ಹಣೌನಿ ದೇವೇ । ವಾರಿಲೇ ಮಾತೇ ।।೨೨।। ತರೀ ವ್ಯಕ್ತ ಆಣಿ ಅವ್ಯಕ್ತ । ಹೇ ತೂಂಚಿ ಏಕ ನಿಭ್ರಾಂತ । ಭಕ್ತಿ ಪಾವಿಜೇ ವ್ಯಕ್ತ । ಅವ್ಯಕ್ತ ಯೋಗೇ ।।೨೩।। ಯಾ ದೋನೀ ಜೀ ವಾಟಾ । ತೂಂತೇ ಪಾವಾವಯಾ ವೈಕುಂಠಾ । ವ್ಯಕ್ತಾವ್ಯಕ್ತ ದಾರವಂಠಾ । ರಿಗಿಜೇ ಏಥ ।।೨೪।। ಪೈ ಜೇ ವಾನೀ ಶ್ಯಾತುಕಾ । ತೇಚಿ ವೇಗಳಿಯೇ ವಾಲಾ ಏಕಾ । ಮ್ಹಣೌನಿ ಏಕದೇಶಿಯಾ ವ್ಯಾಪಕಾ । ಸರಿಸಾ ಪಾಡೂ ।।೨೫।। ಅಮೃತಾಚಿಯಾ ಸಾಗರೀ । ಜೇ ಲಾಭೇ ಸಾಮರ್ಥ್ಯಾಚೀ ಥೋರೀ । ತೇಚಿ ದೇ ಅಮೃತಲಹರೀ । ಚುಳೀ ಘೇತಲಿಯಾ ।।೨೬।। ಹೇ ಕೀರ ಮಾಝ್ಯಾ ಚಿತ್ತೀ । ಪ್ರತೀತಿ ಆಥೀ ಜೀ ನಿರುತೀ । ಪರಿ ಪುಸಣೇ ಯೋಗಪತೀ । ತೇ ಯಾಚಿಲಾಗೀ ।।೨೭।। ಜೇ ದೇವಾ ತುಮ್ಹೀ ನಾವೇಕ । ಅಂಗಿಕಾರಿಲೇ ವ್ಯಾಪಕ । ತೇ ಸಾಚಚೀ ಕೀ ಕವತಿಕ । ಹೇ ಜಾಣಾವಯಾ ।।೨೮।। ತರೀ ತುಜಲಾಗೀ ಕರ್ಮ । ತೂಂಚೀ ಜಯಾಚೇ ಪರಮ । ಭಕ್ತೀಸೀ ಮನೋಧರ್ಮ । ವಿಕೋನಿ ಘಾತಲಾ ।।೨೯।।

ಹೇ ತಾಯಿಯೇ, ನನಗೆ ಸದಾವಕಾಲದಲ್ಲಿ ಶ್ರೀಕೃಷ್ಣನ ಗುಣಚಿಂತನೆ ಮಾಡಲು ಚಿತ್ತವು ರತವಾಗಿರಲಿ ಮತ್ತು ಶ್ರೋತೃಗಳವರಿಗೆ ಶ್ರವಣರೂಪ ರಾಜ್ಯದ ಮೇಲೆ ಕೂಡ್ರಿಸು ॥೧೫॥

ಮರಾಠಿ ಭಾಷೆರೂಪ ನಗರದಲ್ಲಿ ಬ್ರಹ್ಮವಿದ್ಯೆಯು ಸುಲಭದರದಲ್ಲಿರಲಿ, ಮತ್ತು ಎಲ್ಲ ಜನರೂ ಕೊಡುವ ತೆಗೆದುಕೊಳ್ಳುವ ಸುಖದ ವ್ಯಾಪಾರ ಮಾಡುವಂತೆ ಮಾಡು ॥೧೬॥

ಹೇ ಸದ್ಗುರು ಕೃಪಾದೃಷ್ಟಿ ತಾಯಿಯೇ, ನೀನು ಕೃಪಾರೂಪ ಸೆರಗಿನ ಹೊದಿಕೆ ಸದಾವಕಾಲ ನನಗೆ ಹಾಕಿದರೆ ನಾನು ಈಗಿಂದೀಗಲೇ ಈ ಎಲ್ಲ ಸಾಹಿತ್ಯವನ್ನು ನಿರ್ಮಿಸುವೆನು ॥೧೭॥

ಹೀಗೆ ವಿನಂತಿ ಮಾಡಿದಾಕ್ಷಣವೇ ಶ್ರೀಗುರುಗಳ ಕೃಪಾದೃಷ್ಟಿಯು ನನ್ನತ್ತ ನೋಡಿ ಹೇಳಿತು:- ಈಗ ನೀನು ಗೀತಾರ್ಥ ಹೇಳಲು ಬೇಗ ಸಿದ್ಧನಾಗು, ಹೆಚ್ಚಿಗೆ ಮಾತನಾಡಬೇಡ ॥೧೮॥

ಆಗ ಜ್ಞಾನೇಶ್ವರ ಮಹಾರಾಜರು 'ಜೀ ಜೀ ' ಶಬ್ದ ನುಡಿದು ಇದು ನನಗೆ ಮಹಾಪ್ರಸಾದ ದೊರಕಿತು, ಆದ್ದರಿಂದ ನನಗೆ ಅತಿಶಯ ಆನಂದವಾಯಿತು. ಈಗ ನಾನು ಗೀತಾಗ್ರಂಥದ ನಿರೂಪಣೆ ಮಾಡುವೆ. ಈ ಕಡೆ ಲಕ್ಷ ಕೊಡಿರಿ ಎಂದು ವಿನಂತಿಸಿದರು ॥೧೯॥

ಶ್ಲೋಕಾರ್ಥ :- ಅರ್ಜುನನು ಹೀಗೆಂದನು:- ಕೃಷ್ಣಾ! ನಿನ್ನ ಸಗುಣರೂಪವನ್ನು ಇಲ್ಲವೇ ನಿರ್ಗುಣ ರೂಪವನ್ನು ಎಡೆಬಿಡದೆ ಉಪಾಸಿಸುವ ಉಭಯ ವಿಧ ಭಕ್ತರಲ್ಲಿ ಉತ್ತಮರು ಯಾರು? ॥೧॥

ಈಗ ಎಲ್ಲ ವೀರರಲ್ಲಿ ಶ್ರೇಷ್ಠರಾಜನಾದ, ಸೋಮವಂಶದ ವಿಜಯಧ್ವಜನಾದ, ಪಾಂಡುರಾಜನ ಮಗನಾದ ಅರ್ಜುನನು ಹೇಳಹತ್ತಿದನು ॥೨೦॥

ಹೇ ಶ್ರೀಕೃಷ್ಣನೇ, ಕೇಳಿದಿರಾ? ನೀವು ನನಗೆ ವಿಶ್ವರೂಪವನ್ನು ತೋರಿಸಿದಾಗ ಅದು ಅದ್ಭುತವಾಗಿದ್ದಕ್ಕೆ ನನ್ನ ಚಿತ್ತಕ್ಕೆ ಭಯವು ಉತ್ಪನ್ನವಾಯಿತು ॥೨೧॥

ಮತ್ತು ನಿಮ್ಮ ಈ ಸಗುಣಮೂರ್ತಿಯ ಅಭ್ಯಾಸ ಇರುವುದರಿಂದ ನನ್ನ ಮನಸ್ಸಿಗೆ ಇದೇ ಹಿಡಿಸಿತು. ಆದರೆ, ದೇವನೇ, ನೀನು ಅದನ್ನು ನಿಷೇಧಿಸಿದೆ ॥೨೨॥

ಆದರೆ ದೇವಾ, ವ್ಯಕ್ತ ಮತ್ತು ಅವ್ಯಕ್ತ (ಸಾಕಾರ ಮತ್ತು ನಿರಾಕಾರ) ಇವೆರಡು ರೂಪದಿಂದ ನೀನೇ ಇರುವೆ. ಭಕ್ತಿಯಿಂದ ಸಾಕಾರವು (ಜ್ಞಾನ) ಯೋಗದಿಂದ ನಿರಾಕಾರವು ದೊರಕುವುದರಲ್ಲಿ ಸಂಶಯವಿಲ್ಲ ॥೨೩॥

ಹೇ ವೈಕುಂಠನೇ, ಭಕ್ತಿ ಮತ್ತು ಯೋಗ ಜ್ಞಾನ ಈ ಎರಡೂ ಮಾರ್ಗಗಳು ನಿನ್ನ ಪ್ರಾಪ್ತಿಗಾಗಿಯೇ ಇವೆ. ಈ ಮಾರ್ಗದಿಂದ ಹೊರಟಾಗ ವ್ಯಕ್ತಾವ್ಯಕ್ತಗಳ ಬಾಗಿಲ ಪ್ರವೇಶ ಮಾಡಲು ಬರುವುದು ॥೨೪॥

ನೂರು ತೊಲಿ ಚೊಕ್ಕ ಚಿನ್ನದಲ್ಲಿ ಒಂದು ತೊಲಿ ಬೇರ್ಪಡಿಸಿದಾಗ ಅದರಲ್ಲಿಯೂ ಅದೇ ಗುಣದ ಚಿನ್ನವಿರುವುದು. ಆದ್ದರಿಂದ ಏಕದೇಶಿ ಮತ್ತು ವ್ಯಾಪಕ ಈ ಎರಡರ ಯೋಗ್ಯತೆಯು ಸಮವಾಗಿರುವುದು ॥೨೫॥

ಅಮೃತದ ಸಾಗರದಲ್ಲಿ ಯಾವ ಅಮರನಾಗುವ ಸಾಮರ್ಥ್ಯ ದೊರಕುವುದೋ, ಅಷ್ಟೇ ಸಾಮರ್ಥ್ಯವು ಅದರ ಒಂದು ಗುಟುಕು ಸೇವಿಸಿದರೂ ದೊರಕುವುದು ॥೨೬॥

ಹೀಗೆ ನನ್ನ ಮನದ ಅನುಭವವು ನಿಜವಾಗಿಯೂ ಇದೇ ಇರುವುದು. ಆದರೆ ಇದಕ್ಕಾಗಿ ನನಗೆ ನಿಮ್ಮಲ್ಲಿ ಏನೋ ಕೇಳಬೇಕಾಗಿದೆ ॥೨೭॥

ಹೇ ದೇವನೇ, ನೀವು ಕ್ಷಣಹೊತ್ತು ವ್ಯಾಪಕ ಸ್ವರೂಪವನ್ನು ಧರಿಸಿರುವುದು ಅದೇ ನಿಮ್ಮ ನಿಜ ಸ್ವರೂಪವೋ? ಅಥವಾ ಲೀಲೆಯಾಗಿರುವುದೋ? ನನಗೆ ಇದನ್ನು ತಿಳಿಯಬೇಕೆಂಬ ಇಚ್ಛೆಯಾಗಿದೆ ॥೨೮॥

ಯಾವನು ತನ್ನ ಎಲ್ಲ ಕರ್ಮಗಳನ್ನು ನಿಮಗಾಗಿ ಮಾಡುವನು, ಆತನಿಗೆ ನಿಮ್ಮ ಹೊರತಾಗಿ ಅನ್ಯ ಶ್ರೇಷ್ಠರು ಜಗತ್ತಿನಲ್ಲಿ ಯಾರೂ ಇರುವುದಿಲ್ಲ ಮತ್ತು ಆತನು ತನ್ನ ಮನೋಧರ್ಮವನ್ನು ನಿಮ್ಮ ಭಕ್ತಿಗೆ ಮಾರಿಕೊಂಡಿರುವನು ॥೨೯॥

ಇತ್ಯಾದಿ ಸರ್ವಾಪರೀ । ಜೇ ಭಕ್ತ ತೂಂತೇ ಶ್ರೀಹರೀ । ಬಾಂಧೋನಿಯಾ ಜಿವ್ಹಾರೀ । ಉಪಾಸಿತೀ ।೩೦॥ ಆಣೀ ಜೇ ಪ್ರಣವಾ ಪೈಲೀಕಡೇ । ವೈಖರೀಯೇಸಿ ಜೇ ಕಾನಡೇ । ಕಾಯಿಸಯಾಹೀ ಸಾಂಗಡೇ । ನವ್ಹೇಚಿ ಜೇ ವಸ್ತು ।೩೧॥ ತೇ ಅಕ್ಷರ ಜೇ ಅವ್ಯಕ್ತ । ನಿರ್ದೇಶ ದೇಶರಹಿತ । ಸೋಹಂಭಾವೇ ಉಪಾಸಿತ । ಜ್ಞಾನಿಯೇ ಜೇ ।೩೨॥ ತಯಾ ಆಣಿ ಜೀ ಭಕ್ತಾ । ಯೇರಯೇರಾಮಾಜೀ ಅನಂತಾ । ಕವಣೇ ಯೋಗು ತತ್ತ್ವತಾ । ಜಾಣಿತಲಾ ಸಾಂಗಾ ।೩೩॥ ಇಯಾ ಕಿರೀಟೀಚಿಯಾ ಬೋಲಾ । ತೋ ಜಗದ್ಬಂಧು ಸಂತೋಷಲಾ । ಮ್ಹಣೇ ಹೋ ಪ್ರಶ್ನು ಭಲಾ । ಜಾಣಸೀ ಕರೂ ।೩೪॥

ಶ್ರೀಭಗವಾನುವಾಚ:-
ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।
ಶ್ರದ್ಧಯಾ ಪರಯೋಪೇತಾಃ ತೇ ಮೇ ಯುಕ್ತತಮಾ ಮತಾಃ ।೨॥

ತರೀ ಅಸ್ತು ಗಿರೀಚಿಯಾ ಉಪಕಂಠೀ । ರಿಗಾಲಿಯಾ ರವಿಬಿಂಬಾಪಾಠೀ । ರಶ್ಮೀ ಜೈಸೇ ಕಿರೀಟೀ । ಸಂಚರತೀಗಾ ।೩೫॥ ಕಾ ವರ್ಷಾಕಾಳೀ ಸರಿತಾ । ಜೈಸೀ ಚಢೋಲಾಗೇ ಪಂಡುಸುತಾ । ತೈಸೀ ನೀಚ ನವೀ ಭಜತಾ । ಶ್ರದ್ಧಾ ದಿಸೇ ।೩೬॥ ಪರಿ ಠಾಕಿಲಿಯಾಹಿ ಸಾಗರು । ಜೈಸಾ ಮಾಗೀಲಹೀ ಯಾವಾ ಅನಿವಾರು । ತಿಯೇ ಗಂಗೇಚಿಯೇ ಐಸಾ ಪಡಿಭರು । ಪ್ರೇಮಭಾವಾ ।೩೭॥ ತೈಸೇ ಸರ್ವೇಂದ್ರಿಯಾಸಹಿತ । ಮಜಮಾಜೀ ಸೂನಿ ಚಿತ್ತ । ಜೇ ರಾತ್ರಿದಿವಸ ನ ಮ್ಹಣತ । ಉಪಾಸಿತೀ ।೩೮॥ ಇಯಾಪರಿ ಜೇ ಭಕ್ತ । ಆಪಣಪೇ ಮಜ ದೇತ । ತೇಚಿ ಮೀ ಯೋಗ ಯುಕ್ತ । ಪರಮ ಮಾನೀ ।೩೯॥

ಯೇ ತ್ವಕ್ಷರಮನಿರ್ದೇಶ್ಯಂ ಅವ್ಯಕ್ತಂ ಪರ್ಯುಪಾಸತೇ ।
ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್ ।೩॥

ಸಂನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ ।
ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇ ರತಾಃ ।೪॥

ಆಣಿ ಯೇರ ತೇಹೀ ಪಾಂಡವಾ । ಜೇ ಆರೂಢೋನಿ ಸೋಹಂಭಾವಾ । ಝೋಂಬತೀ ನಿರವಯವಾ । ಅಕ್ಷರಾಂಸೀ ।೪೦॥ ಮನಾಚೀ ನಖೀ ನ ಲಗೇ । ಜೇಥ ಬುದ್ಧೀಚೀ ದೃಷ್ಟೀ ನ ರಿಗೇ । ಇಂದ್ರಿಯಾ ಕೀರ ಜೋಗೇ । ಕಾಯೀ ಹೋಈಲ? ।೪೧॥

ಈ ಪ್ರಕಾರವಾಗಿ ಹೇ ಶ್ರೀಹರಿಯೇ, ಯಾವ ಭಕ್ತನು ಸರ್ವತೋಪರಿ ನಿಮ್ಮ ಮೂರ್ತಿಯನ್ನು ಹೃದಯದಲ್ಲಿ ಧರಿಸಿ ಉಪಾಸನೆಯನ್ನು ಮಾಡುವನು।೩೦॥

ಮತ್ತು ನಿಮ್ಮ ಸ್ವರೂಪವು ಓಂಕಾರದ ಆಚೆಗೆ ಇದ್ದು, ವಾಣಿಯಿಂದ ವರ್ಣಿಸಲು ಅಸಾಧ್ಯವಾದದ್ದು ಮತ್ತು ಯಾವ ವಸ್ತುವಿಗೂ ತುಲನೆ ಮಾಡಲು ಬಾರದಂತಹದ್ದು ।೩೧॥

ಯಾವುದು ಅವಿನಾಶಿ, ನಿರಾಕಾರ, ಸ್ಥಳರಹಿತವಾಗಿದೆ ಮತ್ತು ಇದನ್ನು ಜ್ಞಾನಿಪುರುಷರು ಸೋಹಂ ಭಾವದಿಂದ ಉಪಾಸನೆಯನ್ನು ಮಾಡುತ್ತಾರೆ।೩೨॥

ಈ ಜ್ಞಾನಿಗಳಲ್ಲಿ ಮತ್ತು ಭಕ್ತರಲ್ಲಿ ಹೇ ಅನಂತನೇ, ನಿಜವಾದ ಯೋಗವು ಯಾರಿಗೆ ತಿಳಿದಿದೆ? ಅದನ್ನು ಹೇಳಿರಿ ।೩೩॥

ಅರ್ಜುನನ ಈ ಮಾತುಗಳಿಗೆ ಜಗದ್ಬಂಧು ಶ್ರೀಕೃಷ್ಣನು ಸಂತೋಷಭರಿತನಾಗಿ ಹೇಳಿದನು:- ವ್ಹಾಹವ್ಹಾ ! ಪ್ರಶ್ನೆ ಕೇಳುವ ಶೈಲಿಯು ನಿನಗೆ ಚೆನ್ನಾಗಿ ತಿಳಿದಿದೆ ।೩೪॥

ಶ್ಲೋಕಾರ್ಥ :- ಭಗವಂತನು ಹೀಗೆಂದನು:- ಅರ್ಜುನಾ! ನನ್ನಲ್ಲಿಯೇ ಮನಸ್ಸನ್ನು ನಿಲ್ಲಿಸಿ ಅತಿ ಶ್ರದ್ಧೆಯಿಂದ ನನ್ನ ಸಗುಣರೂಪವನ್ನು ಎಡೆಬಿಡದೆ ಸೇವಿಸುವವರೇ ಉತ್ತಮ ಯೋಗಿಗಳೆಂದು ನನ್ನ ಅಭಿಪ್ರಾಯ ।೨॥

ಅರ್ಜುನಾ ನೋಡು, ಅಸ್ತಮಾನದ ವೇಳೆಯಲ್ಲಿ ಸೂರ್ಯಬಿಂಬವು ಇಲ್ಲದಂತಾಗಲು ಅದರ ಹಿಂದೆಯೇ ಕಿರಣಗಳು ಹೋಗುವುವು ।೩೫॥

ಅಥವಾ ಅರ್ಜುನಾ, ಮಳೆಗಾಲದಲ್ಲಿ ನದಿಯು ದಿನ ದಿನಕ್ಕೆ ಬೆಳೆಯುತ್ತಿರುವಂತೆ ನನ್ನ ಭಕ್ತಿ ಮಾಡುವಾಗ್ಗೆ ಅದರಲ್ಲಿ ನಿತ್ಯನೂತನವಾದ ಶ್ರದ್ಧೆಯು ಗೋಚರಿಸುವುದು ।೩೬॥

ಇನ್ನು, ಸಮುದ್ರಕ್ಕೆ ಕೂಡಿದಾಗಲೂ ಹಿಂದಿನಿಂದ ಅನಿವಾರ್ಯವಾಗಿ ನೀರಿನ ಪ್ರವಾಹವು ಹರಿಯುತ್ತಲೇ ಇರುವ ಆ ಗಂಗಾನದಿಯಂತೆ ಇವರಲ್ಲಿ ಪೂರ್ಣ ಪ್ರೇಮ ಭಾವವು ಉಕ್ಕೇರುತ್ತಿರುತ್ತದೆ ।೩೭॥

ಹಾಗೆಯೇ ಹಗಲು ರಾತ್ರಿ ಎಂಬುದನ್ನು ಮನದಲ್ಲಿ ತಾರದೇ ಕಾಯಾ, ವಾಚಾ, ಮನದಿಂದ ನನ್ನಲ್ಲಿ ಚಿತ್ತವಿಟ್ಟು ಯಾರು ನನ್ನ ಉಪಾಸನೆಯನ್ನು ಮಾಡುವರೋ ।೩೮॥

ಮತ್ತು ಈ ಪ್ರಕಾರವಾಗಿ ಯಾವ ಭಕ್ತನು ತಾನು ಸ್ವತಃ ನನ್ನಲ್ಲಿ ಅರ್ಪಿಸಿಕೊಳ್ಳುವನೋ, ಆತನಿಗೆ ನಾನು ''ಪರಮ ಯೋಗಯುಕ್ತ''ನೆಂದು ತಿಳಿಯುವೆನು ।೩೯॥

ಶ್ಲೋಕಾರ್ಥ :- ಸಮಸ್ತ ಇಂದ್ರಿಯಗಳನ್ನು ನಿಗ್ರಹಿಸಿ, ಸರ್ವತ್ರವೂ ಸಮಭಾವವುಳ್ಳವರಾಗಿ, ಸರ್ವ ಭೂತಗಳ ಹಿತದಲ್ಲಿ ನಿರತರಾಗಿ ಯಾರು, ಅಕ್ಷರವೂ, ಅಗೋಚರವೂ, ಅಚಿಂತ್ಯವೂ, ವ್ಯಾಪಕವೂ, ಕೂಟಸ್ಥವೂ, ಅಚಲವೂ, ಧ್ರುವವೂ ಆದ ಅವ್ಯಕ್ತ ನಿರ್ಗುಣ ತತ್ತ್ವವನ್ನು ಉಪಾಸಿಸುವರೋ ಅವರೂ ಸಹ ನನ್ನನ್ನೇ ಪಡೆದುಕೊಳ್ಳುತ್ತಾರೆ ।೩-೪॥

ಮತ್ತು ಅರ್ಜುನಾ, ಇನ್ನು ಬೇರೆ ನನ್ನ ಜ್ಞಾನಿಭಕ್ತರು ಇದ್ದು, ಅವರು ''ನಾನು ಬ್ರಹ್ಮನಿದ್ದೇನೆ'' ಎಂಬ ವೃತ್ತಿಯನ್ನು ಧರಿಸಿ ನಿರಾಕಾರವಾದ ಬ್ರಹ್ಮನನ್ನು ಪಡೆಯುವ ಪರಿಶ್ರಮ ಪಡುವರು ।೪೦॥

ಮನಸ್ಸಿಗೆ ಅಚಿಂತ್ಯವಾದದ್ದು, ಬುದ್ಧಿಗೆ ತಿಳಿಯಲಾರದ್ದು, ಅದು ಇಂದ್ರಿಯಗಳಿಗೆ ಹೇಗೆ ತಿಳಿಯಬೇಕು? ।೪೧॥

ಪರಿ ಧ್ಯಾನಾಹೀ ಕುವಾಡೇ । ಮ್ಹಣೌನಿ ಏಕೇ ಠಾಯೀ ನ ಸಂಪಡೇ । ವ್ಯಕ್ತೀಸಿ ಮಾಜಿವಡೇ । ಕವಣೇಹೀ ನೋಹೇ ।।೫೨।। ಜಯಾ ಸರ್ವತ್ರ ಸರ್ವಪಣೇ । ಸರ್ವಾಹೀ ಕಾಳೀ ಅಸಣೇ । ಜೇ ಪಾವೂನಿ ಚಿಂತವಣೇ । ಹಿಂಪುಟೀ ಜಾಹಲೇ ।।೫೩।। ಜೇ ಹೋಯ ನಾ ನೋಹೇ । ಜೇ ನಾಹೀ ನಾ ಆಹೇ। ಐಸೇ ಮ್ಹಣೌನಿ ಉಪಾಯೇ । ಉಪಜತೀಚಿನಾ ।।೫೪।। ಜೇ ಚಳೇ ನಾ ಢಳೇ । ಸರೇ ನಾ ಮೈಳೇ । ತೇ ಆಪುಲೇನೀಚಿ ಬಳೇ । ಆಂಗವಿಲೇ ಜಿಹೀ ।।೫೫।। ಪೈ ವೈರಾಗ್ಯಮಹಾಪಾವಕೇ । ಜಾಳೂನೀ ವಿಷಯಾಂಚೀ ಕಟಕೇ । ಅಧಪಲೀ ತವಕೇ । ಇಂದ್ರಿಯೇ ಧರಿಲೀ ।।೫೬।। ಮಗ ಸಂಯಮಾಚೀ ಧಾಟೀ । ಸೂನಿ ಮುರಡಿಲಿ ಉಫರಾಟೀ । ಇಂದ್ರಿಯೇ ಕೋಂಡಿಲೀ ಕಪಾಟೀ । ಹೃದಯಾಚಿಯಾ ।।೫೭।। ಅಪಾನೀಂಚಿಯಾ ಕವಾಡಾ । ಲಾವೋನಿ ಆಸನಸಮುದ್ರಾ ಸುಹಾಡಾ । ಮೂಳಬಂಧಾಚಾ ಹುಡಾ । ಪನ್ನಾಸಿಲಾ ।।೫೮।। ಆಶೇಚೇ ಲಾಗ ತೋಡಿಲೇ । ಅಧೈರ್ಯಾಚೇ ಕಡೇ ಝಾಡಿಲೇ । ನಿದ್ರೇಚೇ ಶೋಧಿಲೇ । ಕಾಳವಖೇ ।।೫೯।। ವಜ್ರಾಗ್ನೀಚಿಯಾ ಜ್ವಾಳೀ । ಕರೂನಿ ಸಪ್ತಧಾತೂಂಚೀ ಹೋಳೀ । ವ್ಯಾಧೀಂಚ್ಯಾ ಸಿಸಾಳೀ । ಪೂಜಿಲೀ ಯಂತ್ರೇ ।।೬೦।। ಮಗ ಕುಂಡಲಿನಿಯೇಚಾ ಟೇಭಾ । ಆಧಾರೀ ಕೇಲಾ ಉಭಾ । ತಯಾ ಚೋಜವಲೇ ಪ್ರಭಾ । ನಿಮಥಾವರೀ ।।೬೧।। ನವದ್ವಾರಾಂಚಿಯಾ ಚೌಚಕೀ । ಬಾಣೂನಿ ಸಂಯತೀಚೀ ಆಡವಂಕೀ । ಉಘಡಲೀ ಖಿಡಕೀ । ಕಕಾರಾಂತೀಂಚಿ ।।೬೨।। ಪ್ರಾಣಶಕ್ತಿ ಚಾಮುಂಡೇ । ಪ್ರಹಾರೂನಿ ಸಂಕಲ್ಪ ಮೇಂಢೇ । ಮನೋಮಹಿಷಾಚೇನಿ ಮುಂಡೇ । ದಿಧಲೀ ಬಳೀ ।।೬೩।। ಚಂದ್ರಸೂರ್ಯಾ ಬುಝಾವಣೀ । ಕರೂನಿ ಅನುಹತಾಚೀ ಸುಡಾವಣೀ । ಸತರಾವಿಯೇಚೇಪಾಣೀ । ಜಿಂತಿಲೇ ವೇಗೀ ।।೬೪।। ಮಗ ಮಧ್ಯಮಾ ಮಧ್ಯ ವಿವರೇ । ತೇಣೇ ಕೋರಿವೇದಾದರೇ । ಠಾಕಿಲೇ ಚವರೇ । ಬ್ರಹ್ಮರಂಧ್ರ ।।೬೫।। ವರೀ ಮಕಾರಾಂತ ಸೋಪಾನ । ತೇ ಸಾಂಡೋನಿಯಾ ಗಹನ । ಕಾಖೇಸೂನಿಯಾ ಗಗನ । ಭರಲೇ ಬ್ರಹ್ಮೀ ।।೬೬।। ಐಸೇ ಜೇ ಸಮಬುದ್ಧೀ । ಗಿಳಾವಯಾ ಸೋಹಮ್‌ಸಿದ್ಧೀ । ಆಂಗವಿತಾತಿ ನಿರವಧೀ । ಯೋಗದುರ್ಗೇ ।।೬೭।। ಆಪುಲಿಯಾ ಸಾಟೋವಾಟೀ । ಶೂನ್ಯ ಘೇತಿ ಉಠಾಉಠೀ । ತೇಹೀ ಮಾತೇಂಚಿ ಕಿರೀಟೀ । ಪಾವತೀ ಗಾ ।।೬೮।। ವಾಂಚೂನಿ ಯೋಗಾಚೇನಿ ಬಳೇ । ಅಧಿಕ ಕಾಂಹೀ ಮಿಳೇ । ಐಸೇ ನಾಹೀ ಆಗಳೇ । ಕಷ್ಟಚಿ ತಯಾ ।।೬೯।।

ಅಲ್ಲದೇ ಧ್ಯಾನಕ್ಕೂ ಗೂಢವಾಗಿ ಇರುವುದರಿಂದ ಅದು ಒಂದೇ ಸ್ಥಳದಲ್ಲಿ ಸಿಗುವುದಿಲ್ಲ ಮತ್ತು ಅದಕ್ಕೆ ಯಾವ ಆಕಾರವೂ ಇರುವುದಿಲ್ಲ ।೫೨॥

ಯಾವುದು ಎಲ್ಲ ಸ್ಥಳಗಳಲ್ಲಿ ಎಲ್ಲ ರೂಪಗಳಲ್ಲಿ ಯಾವಾಗಲೂ ಇರುವುದು ಮತ್ತು ಇದರ ವ್ಯಾಪ್ತಿಯು ಆಯಿತೆಂದರೆ ಚಿಂತನವು ತಾನೇ ನಿಲ್ಲುತ್ತದೆ ।೫೩॥

ಯಾವುದು ಎಂದೂ ಆಗುವುದಿಲ್ಲ ಮತ್ತು ಆಗುವುದೂ ಇಲ್ಲ, ಹಾಗೆಯೇ, ಇದೆ ಎಂಬುದೂ ಇಲ್ಲ, ಇಲ್ಲ ಎಂಬುದೂ ಇಲ್ಲ. ಅಂದರೆ ಅದರ ಪ್ರಾಪ್ತಿ ವಿಷಯಕ್ಕೆ ಉಪಾಯವೇ ಇಲ್ಲ ।೫೪॥

ಯಾವುದು ನಡೆಯುವುದಿಲ್ಲ ಮತ್ತು ಅಲುಗಾಡುವುದಿಲ್ಲ. ಯಾವುದು ಮುಗಿಯುವುದಿಲ್ಲ ಮತ್ತು ದೂಷಿತವಾಗುವುದಿಲ್ಲ. ಇದನ್ನು ಅವರು ತಮ್ಮ ಅಂಗಬಲದಿಂದ ಸ್ವಾಧೀನಮಾಡಿಕೊಂಡಿರುವರು ।೫೫॥

ವೈರಾಗ್ಯರೂಪ ದೊಡ್ಡ ಅಗ್ನಿಯಿಂದ ವಿಷಯರೂಪ ಸೈನ್ಯವನ್ನು ಸುಟ್ಟು ಯಾವ ತಮ್ಮ ಬೆಂದ ಇಂದ್ರಿಯಗಳನ್ನು ಬಹುಕಷ್ಟದಿಂದ ಧಾರಣ ಮಾಡುವರು ।೫೬॥

ತದನಂತರ ಸಂಯಮವೆಂಬ ಪಾಶದಿಂದ ಇಂದ್ರಿಯಗಳ ವೃತ್ತಿಯನ್ನು ಹೊರಳಿಸಿ ಅವುಗಳನ್ನು ತಮ್ಮ ಹೃದಯಾಕಾಶವೆಂಬ ಗುಹೆಯಲ್ಲಿ ಬಚ್ಚಿಡುವರು ।೫೭॥

ಅಪಾನ ವಾಯುವಿನ ದ್ವಾರಕ್ಕೆ ಆಸನದ ಬಲವಾದ ಮುದ್ರೆಯನ್ನಿಟ್ಟು ಮೂಲಬಂಧನ ಕೊತ್ತಲವನ್ನು ನಿಲ್ಲಿಸುವರು ।೫೮॥

ಆಶಾಪಾಶವನ್ನು ಕತ್ತರಿಸಿ, ಅಧೀಕತೆಯ ಒತ್ತಡವನ್ನು ದೂರ ಸರಿಸಿ, ನಿದ್ದೆಯ ಮಬ್ಬನ್ನು ಇಲ್ಲದಂತೆ ಮಾಡುವರು ।೫೯॥

ಮೂಲಬಂಧವೆಂಬ ಆಸನದ ಜ್ವಾಲಾಗ್ನಿಯಲ್ಲಿ ಶರೀರದೊಳಗಿನ ಸಪ್ತ ಧಾತುಗಳನ್ನು ಸುಟ್ಟು ವ್ಯಾಧಿಯ ರುಂಡಗಳನ್ನು ಷಟ್‌ಚಕ್ರಗಳಲ್ಲಿ ಸೇರಿಸುವರು ।೬೦॥

ತದನಂತರ ಕುಂಡಲಿನಿಯ ಜ್ಯೋತಿಯನ್ನು, ಆಧಾರ ಚಕ್ರದ ಮೇಲೇರಿಸಿ, ಆ ಪ್ರಕಾಶದಲ್ಲಿ ಆನಂದದಿಂದ ಮಸ್ತಕದವರೆಗೆ ಪ್ರವೇಶಿಸುವರು ।೬೧॥

ನವದ್ವಾರಗಳ ಚೌಕಿಗಳಲ್ಲಿ ಇಂದ್ರಿಯ ನಿಗ್ರಹದ ಒಡ್ಡು ಕಟ್ಟಿ ಸುಷುಮ್ನೆಯ ಮಾರ್ಗವನ್ನು ತೆರವು ಮಾಡುವರು ।೬೨॥

ಪ್ರಾಣಶಕ್ತಿ ಎಂಬ ಚಾಮುಂಡೇಶ್ವರಿಯ ಪ್ರೀತ್ಯರ್ಥ ಸಂಕಲ್ಪರೂಪದ ಕುರಿಯನ್ನು ಕೊಂದು ಮನೋರೂಪವಾದ ಮಹಿಷಾಸುರನ ಮಸ್ತಕವನ್ನು ಬಲಿಯಾಗಿ ಅರ್ಪಿಸುವರು ।೬೩॥

ಇಡಾ ಪಿಂಗಲಾ ಎಂಬ ನಾಡಿಗಳನ್ನು ಐಕ್ಯಗೊಳಿಸಿ ಅನಾಹತ ಧ್ವನಿಯ ಗಜರ ಮಾಡುತ್ತ ಜೀವನ ಕಲೆಯ ಕೆರೆಯವರೆಗೆ ಒಯ್ಯುವರು ।೬೪॥

ಆಮೇಲೆ ಸುಷುಮ್ನಾ ನಾಡಿಯ ಮಧ್ಯ ವಿವರದೊಳಗಿನ ಇಕ್ಕಟ್ಟಾದ ಮೆಟ್ಟಿಲುಗಳಿಂದ ಮೇಲೆ ಏರುತ್ತ ಮಸ್ತಕದೊಳಗಿನ ಬ್ರಹ್ಮರಂಧ್ರದವರೆಗೆ ಮುಟ್ಟಿಸುವರು ।೬೫॥

ತದನಂತರ ಮಕಾರದ ಕಠಿಣವಾದ ಅಟ್ಟಗಳನ್ನು ಏರಿ ಮತ್ತು ಮಾಯೆಯನ್ನು ಬಗಲಿಗೆ ಹಾಕಿಕೊಂಡು ಬ್ರಹ್ಮನನ್ನು ಕೂಡುವರು ।೬೬॥

ಈ ಪ್ರಕಾರವಾಗಿ ಎಲ್ಲ ಕಡೆಯಲ್ಲಿಯೂ ಸಮಾನವಾದ ಬುದ್ಧಿ ಇಟ್ಟು, ಬ್ರಹ್ಮವನ್ನು ಪ್ರಾಪ್ತ ಮಾಡಿಕೊಳ್ಳುವುದಕ್ಕಾಗಿ ಯೋಗಾದಿಕ ಕಠಿಣ ಮಾರ್ಗವನ್ನು ಸ್ವಾಧೀನಮಾಡಿಕೊಳ್ಳುವರು ।೬೭॥

ಅರ್ಜುನಾ, ಈ ಪ್ರಕಾರವಾಗಿ ತಮ್ಮ ಅಹಂಭಾವವನ್ನು ಸಮರ್ಪಿಸಿ ಬ್ರಹ್ಮರೂಪ ಹೊಂದುವವರಾದರೂ ಮದ್ರೂಪರೇ ಆಗುವರು ।೬೮॥

ಇನ್ನು, ಯೋಗದ ಬಲದಿಂದ ಅವರಿಗೆ ಹೆಚ್ಚಿನದೇನು ಪ್ರಾಪ್ತಿಯಾಗುವುದು ಎಂಬುದು ಇಲ್ಲ. ಪ್ರತಿಯಾಗಿ ಅವರಿಗೆ ಹೆಚ್ಚಿಗೆ ಕಷ್ಟವನ್ನು ಭೋಗಿಸಬೇಕಾಗುವುದು ।೬೯॥

ಕ್ಲೇಶೋಽಧಿಕತರಸ್ತೇಷಾಂ ಅವ್ಯಕ್ತಾಸಕ್ತಚೇತಸಾಮ್ ।
ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ।೫॥

ಜಿಹೀ ಸಕಳ ಭೂತಾಂಚಿಯಾ ಹಿತೀ । ನಿರಾಲಂಬೀ ಅವ್ಯಕ್ತೀ । ಪಸರಲಿಯಾ ಆಸಕ್ತೀ । ಭಕ್ತೀವೀಣ ।೬೦॥ ತಯಾ ಮಹೇಂದ್ರಾದಿ ಪದೇ । ಕರಿತಾತೀ ವಾಟವಧೇ । ಆಣಿ ಋದ್ಧಿ ಸಿದ್ಧೀಂಚೀ ದ್ವಂದ್ವೇ । ಪಡೋನಿ ಠಾತೀ ।೬೧॥ ಕಾಮಕ್ರೋಧಾಂಚೇ ವಿಲಗ । ಉಠಾವತೀ ಅನೇಗ । ಆಣಿ ಶೂನ್ಯೇಸೀ ಆಂಗ । ಝುಂಜವಾವೇ ಕೀ ।೬೨॥ ತಾಹಾನೇ ತಾಹಾನಚಿ ಪಿಯಾವೀ । ಭುಕೇಲಿಯಾ ಭೂಕಚಿ ಖಾವೀ । ಅಹೋರಾತ್ರ ವಾವೀ । ಮವಾವಾ ವಾರಾ ।೬೩॥ ಉನೀ ದಿಹಾಚೇ ಪಹುಡಣೇ । ನಿರೋಧಾಚೇ ವೇಲ್ಹಾವಣೇ । ಝಾಡಾಸೀ ಸಾಜಣೇ । ಚಾಳಾವೇ ಗಾ ।೬೪॥ ಶೀತ ವೇಢಾವೇ । ಉಷ್ಣ ಪಾಂಘುರಾವೇ । ವೃಷ್ಟೀಚಿಯಾ ಅಸಾವೇ । ಘರಾಆಂತು ।೬೫॥ ಕಿಂಬಹುನಾ ಪಾಂಡವಾ । ಹಾ ಅಗ್ನಿಪ್ರವೇಶು ನೀಚ ನವಾ । ಭಾತಾರೇವಿಣ ಕರಾವಾ । ತೋ ಹಾ ಯೋಗು ।೬೬॥ ಏಥ ಸ್ವಾಮೀಚೇ ಕಾಜ । ನಾ ಬಾಪಿಕೇ ವ್ಯಾಜ। ಪರೀ ಮರಣೇಸೀ ಝುಂಜ । ನೀಚ ನವೇ ।೬೭॥ ಐಸೇ ಮೃತ್ಯುಹೂನಿ ತೀಖ । ಕಾ ಘೋಂಟೇ ಕಢತ ವಿಖ । ಡೋಂಗರ ಗಿಳಿತಾ ಮುಖ । ನ ಫಾಟೇ ಕಾಈ? ।೬೮॥ ಮ್ಹಣೌನಿ ಯೋಗಾಚಿಯಾ ವಾಟಾ । ಜೇ ನಿಗಾಲೇ ಗಾ ಸುಭಟಾ । ತಯಾ ದುಃಖಾಚಾಚಿ ವಾಂಟಾ । ಭಾಗಾ ಆಲಾ ।೬೯॥ ಪಾಹೇ ಪಾ ಲೋಹಾಚೇ ಚಣೇ । ಜೈ ಬೋಚರಿಯಾ ಪಡತೀ ಖಾಣೇ । ತೈ ಪೋಟ ಭರಣೇ ಕೀ ಪ್ರಾಣೇ । ಶುದ್ಧಿ ಮ್ಹಣೋ? ।೭೦॥ ಮ್ಹಣೌನಿ ಸಮುದ್ರ ಬಾಹೀ । ತರಣೇ ಆಥೀ ಕೇಂಹೀ । ಕಾ ಗಗನಾಮಾಜೀ ಪಾಈ । ಖೋಲಿಜತು ಅಸೇ? ।೭೧॥ ವಳಘಲಿಯಾ ರಣಾಚಿ ಥಾಟೀ । ಆಂಗೀ ನ ಲಗತಾ ಕಾಠೀ । ಸೂರ್ಯಾಚೀ ಪಾಉಟೀ । ಕಾ ಹೋಯ ಗಾ? ।೭೨॥ ಯಾಲಾಗೀ ಪಾಂಗುಳಾ ಹೇವಾ । ನವ್ಹೇ ವಾಯೂಸಿ ಪಾಂಡವಾ । ತೇವಿ ದೇಹವಂತಾ ಜೀವಾ । ಅವ್ಯಕ್ತೀ ಗತೀ ।೭೩॥ ಐಸಾಹೀ ಜರೀ ಧಿಂವಸಾ । ಬಾಂಧೋನಿಯಾ ಆಕಾಶಾ । ಝೊಂಬತೀ ತರೀ ಕ್ಲೇಶಾ । ಪಾತ್ರ ಹೋತೀ ।೭೪॥ ಮ್ಹಣೌನಿ ಯೇರ ತೇ ಪಾರ್ಥಾ । ನೇಣತೀಚಿ ಹೇ ವ್ಯಥಾ । ಜೇ ಕಾ ಭಕ್ತಿಪಂಥಾ । ವೋಟಂಗಲೇ ।೭೫॥

ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ ।
ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ।೬॥

ಶ್ಲೋಕಾರ್ಥ :- ನಿರ್ಗುಣೋಪಾಸಕರಿಗೆ ಕಷ್ಟವು ಹೆಚ್ಚು. ಯಾಕೆಂದರೆ ನಿರ್ಗುಣ ನಿಷ್ಠೆಯು ದೇಹದ ಅಭಿಮಾನವುಳ್ಳವರಿಗೆ ಪ್ರಯಾಸಕರವಾಗಿದೆ ।೫॥

ಯಾವ ಯೋಗಿಗಳು ಸರ್ವಭೂತಗಳ ಹಿತವಾದದ್ದು ನಿರ್ವಿಶೇಷ, ನಿರ್ಗುಣ, ನಿರಾಕಾರ, ನಿರಾಧಾರವಾದ ಬ್ರಹ್ಮವನ್ನು ಸಗುಣಭಕ್ತಿಯ ಸಹಾಯ ಪಡೆಯದೇ ಆಸಕ್ತಿಯನ್ನು ಬೆಳೆಸಿದ್ದಾರೆ ।೬೦॥

ಅವರಿಗೆ ದಾರಿ ಹೊಡಕರಾದ ಇಂದ್ರಾದಿಕ ಪದಗಳು ಅಡ್ಡಾಗುವುವು ಮತ್ತು ಋದ್ಧಿ ಸಿದ್ಧಿಗಳ ಜೋಡಿಗಳು ಪ್ರತಿಬಂಧ ಮಾಡುವುವು ।೬೧॥

ಕಾಮ ಕ್ರೋಧಗಳು ಬಹಳಷ್ಟು ಉಪದ್ರವ ಕೊಡುವುವು ಮತ್ತು ನಿರಾಕಾರಾವಾದ ಬ್ರಹ್ಮನ ಪ್ರಾಪ್ತಿಗಾಗಿ ಅವರಿಗೆ ಶೂನ್ಯದೊಂದಿಗೆ ಹೋರಾಡಬೇಕಾಗುತ್ತದೆ ।೬೨॥

ನೀರಡಿಕೆಯಾದರೆ ಅದನ್ನೇ ಕುಡಿದು ತೃಪ್ತರಾಗಬೇಕು, ಹಸಿವೆಯಾದರೆ ಅದನ್ನೇ ತಿಂದು ಸಮಾಧಾನ ಪಡಬೇಕು ಮತ್ತು ಅಹೋ ರಾತ್ರಿ ಕೈಮಾರಿನಿಂದ ಗಾಳಿಯನ್ನು ಅಳೆಯಬೇಕು ।೬೩॥

ಹಗಲು ಬಿಸಿಲಿನಲ್ಲಿ ಮಲಗಬೇಕಾಗುವುದು. ಸ್ವೈರ ಇಂದ್ರಿಯಗಳ ನಿರೋಧರೂಪ ಉಪಭೋಗಿಸ ಬೇಕಾಗುವುದು ಮತ್ತು ಗಿಡಗಳ ಜೊತೆಯಲ್ಲಿ ಮಿತ್ರರಾಗಿ ಇರಬೇಕಾಗುವುದು ।೬೪॥

ಥಂಡಿಯನ್ನು ತೊಡಬೇಕು, ಬಿಸಿಲನ್ನು ಹೊದ್ದುಕೊಳ್ಳಬೇಕು ಮತ್ತು ಮಳೆಯನ್ನೇ ಮನೆಯಾಗಿ ಮಾಡಬೇಕು ।೬೫॥

ಒಟ್ಟಿನಲ್ಲಿ ಅರ್ಜುನಾ, ಪತಿ ಇಲ್ಲದೆಯೇ ದಿನನಿತ್ಯ ಸತಿ ಹೋಗಬೇಕಾಗುವುದು. (ಅಗ್ನಿ ಪ್ರವೇಶ ಮಾಡುವುದು) ಈ ಪ್ರಕಾರದ ಈ ಯೋಗವಿರುವುದು ।೬೬॥

ಈ ಅಗ್ನಿ ಪ್ರವೇಶವು ಪತಿಗಾಗಿಯೂ ಅಲ್ಲ, ಅಥವಾ ಈ ತಾಪವು ಕುಲಾಚಾರದ ನಿಮಿತ್ತ ಮಾಡುವ ಹವನಾದಿಗಳಿಗಾಗಿಯೂ ಅಲ್ಲ, ಆದರೆ ಮರಣದೊಂದಿಗೆ ನಿತ್ಯ ಕಾಳಗ ಮಾಡಬೇಕಾಗುವುದು ।೬೭॥

ಇಂತಹ ಮೃತ್ಯುಗಿಂತಲೂ ತೀಕ್ಷ್ಣವೂ ಮತ್ತು ಕುದಿಯುವ ವಿಷವನ್ನು ನುಂಗಲು ಸಾಧ್ಯವೇ? ಅರೇ, ಗುಡ್ಡವನ್ನೇ ನುಂಗಲು ಹೋದರೆ ಮುಖವು ಹರಿಯ ಲಿಕ್ಕಿಲ್ಲವೇ? ।೬೮॥

ಆದ್ದರಿಂದ ಮಹಾವೀರನೇ, ನನ್ನ ಪ್ರಾಪ್ತಿಗಾಗಿ ಯೋಗವಮಾರ್ಗ ಅನುಸರಿಸಿದವರಿಗೆ ಅವರ ಪಾಲಿಗೆ ದುಃಖವೇ ಬರುವುದು ।೬೯॥

ಇಲ್ಲಿ ನೋಡು, ಲೋಹದ ಕಡಲೆಗಳನ್ನು ಬಚ್ಚಬಾಯಿಯವರಿಗೆ ತಿನ್ನುವ ಪ್ರಸಂಗ ಒದಗಿದರೆ, ಆತನ ಹೊಟ್ಟೆ ತುಂಬುವುದೋ, ಪ್ರಾಣಹೋಗುವುದೋ ತಿಳಿಯದು ।೭೦॥

ಆದ್ದರಿಂದ, ಬಾಹುಬಲದಿಂದ ಯಾರಾದರೂ ಸಮುದ್ರವನ್ನು ಈಸಿ ಪಾರಾಗಿದ್ದಾರೆಯೇ? ಅಥವಾ ಆಕಾಶದಲ್ಲಿ ಯಾರಾದರೂ ಕಾಲಿನಿಂದ ನಡೆದಿರುವರೇ? ।೭೧॥

ರಣರಂಗದಲ್ಲಿ ಹೋದಾಗ್ಗೆ ಮೈಮೇಲೆ ಒಂದೂ ಶಸ್ತ್ರದ ಘಾಯವಾಗದಿರುವುದೇ? ಸೂರ್ಯಲೋಕಕ್ಕೆ ಪಾವುಟಗೆಗೆ ಎಂದಾದರೂ ಆದೀತೇ? ।೭೨॥

ಆದಕ್ಕಾಗಿ ಅರ್ಜುನಾ, ಯಾವ ಪ್ರಕಾರವಾಗಿ ಕುಂಟನಿಗೆ ಗಾಳಿಯೊಡನೆ ಓಡಲು ಸ್ಪರ್ಧೆ ಕಟ್ಟಲು ಹೇಗೆ ಬರುವುದಿಲ್ಲವೋ, ಅದರಂತೆ ದೇಹಾಭಿಮಾನವಾದ ಜೀವಕ್ಕೆ ನಿರಾಕಾರಾದ ಪ್ರಾಪ್ತಿಯಾಗುವುದಿಲ್ಲ ।೭೩॥

ಹೀಗಿದ್ದರೂ ಮನದಲ್ಲಿ ದಿಟ್ಟತನದಿಂದ ಹಟತೊಟ್ಟು ಅವ್ಯಕ್ತದ ಜೊತೆಯಲ್ಲಿ ಹೋರಾಡುವವರು ಕ್ಲೇಶ ದುಃಖಗಳಿಗೆ ಮಾತ್ರ ಪಾತ್ರರಾಗುವರು ।೭೪॥

ಆದ್ದರಿಂದ ಪಾರ್ಥಾ, ಯಾರು ಭಕ್ತಿಮಾರ್ಗದ ಸ್ವೀಕಾರ ಮಾಡಿರುವರೋ, ಅವರಿಗೆ ಇಂತಹ ಕಷ್ಟಗಳನ್ನು ಭೋಗಿಸಬೇಕಾಗುವುದಿಲ್ಲ ।೭೫॥

ಶ್ಲೋಕಾರ್ಥ :- ಪಾರ್ಥಾ! ಸಮಸ್ತ ಕರ್ಮಗಳನ್ನು ನನ್ನಲ್ಲಿಯೇ ಸಮರ್ಪಿಸಿ ನಾನೇ ಸರ್ವೋತ್ತಮನೆಂದು ಭಾವಿಸಿ ಚಿತ್ತವನ್ನು ಬೇರೆಕಡೆಗೆ ಹೋಗದಂತೆ ನನ್ನನ್ನೇ ಧ್ಯಾನಿಸುತ್ತ ಉಪಾಸಿಸುವರೋ ।೬॥

ಕರ್ಮೇಂದ್ರಿಯೆ ಸುಖೇ । ಕರಿತೀ ಕರ್ಮೆ ಅಶೇಖೇ । ಜಿಯೇ ಕಾ ವರ್ಣ ವಿಶೇಖೇ । ಭಾಗಾ ಆಲೀ ॥೭೬॥ ವಿಧೀತೇ ಪಾಳಿತ । ನಿಷೇಧಾತೇ ಗಾಳಿತ । ಮಜ ದೇಊನಿ ಜಾಳಿತ । ಕರ್ಮಫಳೇ ॥೭೭॥ ಯಯಾಪರೀ ಪಾಹೀ । ಅರ್ಜುನಾ ಮಾಝೀ ಠಾಯೀ । ಸಂನ್ಯಾಸೂನಿ ನಾಹೀ । ಕರಿತೀ ಕರ್ಮೆ ॥೭೮॥ ಆಣಿಕಹೀ ಜೇ ಜೇ ಸರ್ವ । ಕಾಯಿಕ ವಾಚಿಕ ಮಾನಸಿಕ ಭಾವ । ತಯಾ ಮೀವಾಂಚೂನಿ ಧಾಂವ । ಅನೌತೀ ನಾಹೀ ॥೭೯॥ ಐಸೇ ಜೇ ಮತ್ಪರ । ಉಪಾಸಿತೀ ನಿರಂತರ । ಧ್ಯಾನಮಿಷೇ ಘರ । ಮಾಝೀ ಝಾಲೇ ॥೮೦॥ ಜಯಾಂಚಿಯೇ ಆವಡೀ । ಕೇಲೀ ಮಜಸೀ ಕುಳವಾಡೀ । ಭೋಗ ಮೋಕ್ಷ ಬಾಪುಡೀ । ತ್ಯಜಿಲೀ ಕುಳೇ ॥೮೧॥ ಐಸೇ ಅನನ್ಯಯೋಗೇ । ವಿಕಲೇ ಜೀವೇ ಮನೇ ಆಂಗೇ । ತಯಾಂಚೇ ಕಾಯಿ ಏಕ ಸಾಂಗೇ । ಜೇ ಸರ್ವ ಮೀ ಕರೀ ॥೮೨॥

ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।
ಭವಾಮಿ ನ ಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಮ್ ॥೭॥

ಕಿಂಬಹುನಾ ಧನುರ್ಧರಾ । ಜೋ ಮಾತೇಚಿಯಾ ಯೇ ಉದರಾ । ತೋ ಮಾತೇಚಾ ಸೋಯರಾ । ಕೇತುಲಾ ಪಾ? ॥೮೩॥ ತೇವೀ ಮೀ ತಯಾ । ಜೈಸೇ ಅಸತೀ ತೈಸಿಯಾ । ಕಳಿಕಾಳ ನೋಕೋನಿಯಾ । ಘೇತಲಾ ಪಟ್ಟಾ ॥೮೪॥ ಏರ್ಹವೀ ತರೀ ಮಾಝಿಯಾ ಭಕ್ತಾ । ಆಣಿ ಸಂಸಾರಾಚೀ ಚಿಂತಾ । ಕಾಯ ಸಮರ್ಥಾಚೀ ಕಾಂತಾ । ಕೋರಾನ್ನ ಮಾಗೇ ? ॥೮೫॥ ತೈಸೇ ತೇ ಮಾಝೇ । ಕಲತ್ರ ಹೇ ಜಾಣಿಜೇ । ಕಾಯಿಸೇನಿಹೀ ನ ಲಾಜೇ । ತಯಾಂಚೇನಿ ಮೀ ॥೮೬॥ ಜನ್ಮ ಮೃತ್ಯೂಚಿಯಾ ಲಾಟೀ । ಝಳಂಬತೀ ಇಯಾ ಸೃಷ್ಟೀ । ತೇ ದೇಖೋನಿಯಾ ಪೋಟೀ । ಐಸೇ ಜಾಹಲೇ ॥೮೭॥ ಭವಸಿಂಧೂಚೇನಿ ಮಾಜೇ । ಕವಣಾಸಿ ಧಾಕು ನುಪಜೇ । ತೇಥ ಜರೀ ಕೀ ಮಾಝೇ । ಬಿಹಿತೀ ಹನ ॥೮೮॥ ಮ್ಹಣೌನಿ ಗಾ ಪಾಂಡವಾ । ಮೂರ್ತೀಚಾ ಮೇಳಾವಾ । ಕರೂನಿ ತ್ಯಾಂಚಿಯಾ ಗಾಂವಾ । ಧಾವತು ಆಲೋ ॥೮೯॥ ನಾಮಾಚಿಯಾ ಸಹಸ್ರವರೀ । ನಾವಾ ಇಯಾ ಅವಧಾರೀ । ಸಜೂನಿಯಾ ಸಂಸಾರೀ । ತಾರೂ ಜಾಹಲೋ ॥೯೦॥ ಸಡೇ ಜೇ ದೇಖಿಲೇ । ತೇ ಧ್ಯಾನಕಾಸೇ ಲಾವಿಲೇ । ಪರಿಗ್ರಹೀ ಘಾತಲೇ । ತರಿಯಾವರೀ ॥೯೧॥ ಪ್ರೇಮಾಚೀ ಪೇಟೀ । ಬಾಂಧಲೀ ಏಕಾಚಿಯಾ ಪೋಟೀ । ಮಗ ಆಣಿಲೇ ತಟೀ । ಸಾಯುಜ್ಯಾಚಿಯಾ ॥೯೨॥

ತಮ್ಮ ವರ್ಣಾಶ್ರಮ ಧರ್ಮ ಪ್ರಕಾರವಾಗಿ ಯಾವ ಕರ್ಮಗಳನ್ನು ಮಾಡಬೇಕಾಗಿದೆಯೋ, ಆ ಎಲ್ಲ ಕರ್ಮಗಳನ್ನು ಇಂದ್ರಿಯಗಳು ಸುಖವಾಗಿ ಆಚರಿಸುವುವು ||೭೬||

ವೇದವು ಮಾಡು ಎಂದು ಹೇಳಿದ ವಿಧಿಗಳನ್ನು ಸಂಭಾಳಿಸುತ್ತ ಮತ್ತು ಬೇಡ ಎಂದು ಹೇಳಿದ ನಿಷೇಧಗಳನ್ನು ದೂರ ಮಾಡುತ್ತ ಎಲ್ಲ ಕರ್ಮಗಳನ್ನು ನನಗರ್ಪಿಸಿ, ಕರ್ಮಫಲಗಳನ್ನು ಸುಟ್ಟು ಹಾಕಿ ಭಕ್ತಿ ಮಾರ್ಗದಲ್ಲಿ ಹೋಗುವರು ||೭೭||

ಅರ್ಜುನಾ, ಈ ಪ್ರಕಾರವಾಗಿ ಎಲ್ಲ ಕರ್ಮಗಳನ್ನು ನನ್ನಲ್ಲಿ ಅರ್ಪಿಸಿ ತಮ್ಮಿಂದ ಆ ಕರ್ಮಗಳು ಆಗಿಯೇ ಇಲ್ಲವೆಂಬುವಂತೆ ಕರ್ಮ ನಾಶಮಾಡುವರು ||೭೮||

ಮತ್ತು ಕಾಯಿಕ, ವಾಚಿಕ, ಮಾನಸಿಕವಾಗಿ ಮಾಡುವ ಲೌಕಿಕ ಕರ್ಮಗಳು ಅವರಿಗೆ ನನ್ನ ಹೊರತಾಗಿ ಬೇರೆ ಕಡೆಗೆ ಧಾವಿಸಲರಿಯದು ||೭೯||

ಹೀಗೆ ಇವರು ನನ್ನಲ್ಲಿ ಸೇವಾತತ್ಪರ ಭಕ್ತರಾಗಿ, ನನ್ನನ್ನು ಧ್ಯಾನಪೂರ್ವಕವಾಗಿ ಅಖಂಡ ಉಪಾಸನೆಯನ್ನು ಮಾಡುವರು ಮತ್ತು ಆ ಧ್ಯಾನದ ನಿಮಿತ್ತದಿಂದ ಆ ಭಕ್ತರು ನಾನಿರುವ ಮನೆಯಾಗಿರುತ್ತಾರೆ ||೮೦||

ಇವರ ಪ್ರೇಮವು ನನ್ನಲ್ಲಿ ವ್ಯವಹಾರ ಮಾಡಿ ಪಾಪ! ಬಡ ಪ್ರಾಣಿಗಳಾದ ಭುಕ್ತಿ ಮುಕ್ತಿಗಳನ್ನು ಇವರು ಒಗೆದು ಬಿಟ್ಟಿದ್ದಾರೆ ||೮೧||

ಈ ಪ್ರಕಾರವಾಗಿ ಅನನ್ಯಭಾವದಿಂದ ಯಾರು ತಮ್ಮ ಮನ, ಜೀವ, ಶರೀರವನ್ನು, ನನಗರ್ಪಿಸಿರುವರೋ, ಅವರ ಯಾವ ಕಾರ್ಯ ನಾನು ಮಾಡುವುದಿಲ್ಲವೆಂದು ಹೇಳಲಿ? ಅವರ ಸರ್ವ ಇಚ್ಛೆಗಳನ್ನು ನಾನೇ ಪೂರ್ಣಗೊಳಿಸಬೇಕಾಗುವುದು ||೮೨||

ಶ್ಲೋಕಾರ್ಥ :- ಅಂಥ ಭಕ್ತರನ್ನು ನಾನು ಮೃತ್ಯು ಸಂಸಾರ ಸಮುದ್ರದಿಂದ ಶೀಘ್ರವಾಗಿ ಉದ್ಧರಿಸುತ್ತೇನೆ ||೭||

ಅರ್ಜುನಾ, ಹೆಚ್ಚಿಗೇನು ಹೇಳಬೇಕು? ತಾಯಿಯ ಹೊಟ್ಟೆಯಲ್ಲಿ ಹುಟ್ಟಿದವನು ತನ್ನ ತಾಯಿಗೆ ತಾನು ಎಷ್ಟರ ಮಟ್ಟಿಗೆ ಪ್ರೀತಿಗೆ ಪಾತ್ರನು? ಎಂಬುದು ಹೇಳಲು ಬರುವುದೇ? ||೮೩||

ಅದೇ ಪ್ರಕಾರವಾಗಿ ನಾನು ಆ ಭಕ್ತರನ್ನು ಅವರಲ್ಲಿಯ ಉಚ್ಚ ನೀಚ ಯಾವುದೂ ನೋಡದೇ ಅವರಿದ್ದ ಹಾಗೆಯೇ ಕಲಿಕಾಲದ ಪರಾಭವವನ್ನು ಮಾಡುವುದಕ್ಕೆ ನಾನು ನಿರ್ಣಯವನ್ನೇ ಮಾಡಿದ್ದೇನೆ ||೮೪||

ಅಂದ ಮೇಲೆ ನನ್ನ ಭಕ್ತರಿಗೆ ಸಂಸಾರದ ಚಿಂತೆ ಏಕೆ ಇರಬೇಕು? ಶ್ರೀಮಂತನ ಹೆಂಡತಿಗೆ ಎಂದಾದರೂ ಭಿಕ್ಷೆ ಬೇಡುವ ಪ್ರಸಂಗ ಬರಬಹುದೇ? ||೮೫||

ಅದರಂತೆಯೇ ನನ್ನ ಭಕ್ತರು ನನ್ನ ಕುಟುಂಬದವರೇ ಎಂದು ನಾನು ತಿಳಿದಿರುತ್ತೇನೆ. ಅವರಿಗೆ ಯಾವುದಾದರೂ ಸಂಕಟ ಒದಗಿದರೆ ನನಗೆ ನಾಚಿಕೆಯಾಗುವುದಿಲ್ಲವೇ? ||೮೬||

ನನ್ನ ಭಕ್ತರು ಈ ಸೃಷ್ಟಿಯಲ್ಲಿ ಜನ್ಮಮೃತ್ಯುವಿನ ತೆರೆಗಳಲ್ಲಿ ಮುಳುಗುತ್ತಿರುವುದನ್ನು ಕಂಡು ನನ್ನ ಹೊಟ್ಟೆಯಲ್ಲಿ ಹೇಗೋ ಆಗುತ್ತದೆ ||೮೭||

ಭವಸಾಗರದ ತೆರೆಗಳಿಂದ ಯಾರಿಗೆ ಭಯವಾಗುವುದಿಲ್ಲ? ಅರ್ಥಾತ್ ಅದರ ಭಯವು ನನ್ನ ಭಕ್ತರಿಗೂ ಇದ್ದೇ ಇದೆ ||೮೮||

ಆದ್ದರಿಂದ ಅರ್ಜುನಾ, ರಾಮಕೃಷ್ಣಾದಿ ಅವತಾರ ತೆಗೆದುಕೊಂಡು ಈ ಮೃತ್ಯುಲೋಕದಲ್ಲಿ ಅವರ ಊರಿಗೆ ಧಾವಿಸಿ ಬಂದಿರುವೆ ||೮೯||

ನನ್ನ ಸಹಸ್ರ ನಾಮರೂಪವಾದ ಹಡಗವನ್ನು ಸಿದ್ಧಗೊಳಿಸಿ ಈ ಸಂಸಾರರೂಪ ಸಾಗರದಲ್ಲಿ ಅವರಿಗೆ ತಾರಕನಾಗಿರುವೆನು, ಹೀಗೆ ತಿಳಿ ||೯೦||

ಉಪಾಧಿರಹಿತರಾದವರಿಗೆ ನಾನು ನನ್ನ ಧ್ಯಾನವನ್ನು ಮಾಡಲು ಹೇಳಿದೆ, ಮತ್ತು ಯಾರು ಪರಿವಾರ ಸಮೇತವಾಗಿ ಬಂದವರಿಗೆ ಈ ಹಡಗದಲ್ಲಿ ಕುಳಿತುಕೊಳ್ಳಲು ತಿಳಿಸಿದೆ ||೯೧||

ಕೆಲವು ಭಕ್ತರಿಗೆ ಹೊಟ್ಟೆಗೆ ಪ್ರೇಮರೂಪವಾದ ಸಿಂಗಡಿಕಾಯಿಯನ್ನು ಕಟ್ಟಿ ಅವರಿಗೆ ಮುಕ್ತಿರೂಪ ದಂಡೆಗೆ ತಂದಿರುವೆ ||೯೨||

ಪರೀ ಭಕ್ತಾಂಚೇನಿ ನಾವೇ । ಚತುಷ್ಪದಾದಿ ಆಘವೇ । ವೈಕುಂಠೀಚಿಯೇ ರಾಣಿವೇ । ಯೋಗ್ಯ ಕೇಲೇ ॥೯೩॥ ಮ್ಹಣೌನಿ ಗಾ ಭಕ್ತಾ । ನಾಹೀ ಏಕಹೀ ಚಿಂತಾ । ತಯಾತೇ ಸಮುದ್ಧರ್ತಾ । ಆಥೀ ಮೀ ಸದಾ ॥೯೪॥ ಆಣಿ ಜೇವ್ಹಾಂಚಿ ಕಾ ಭಕ್ತೀ । ದಿಧಲೀ ಆಪುಲೀ ಚಿತ್ತವೃತ್ತೀ । ತೇವ್ಹಾಂಚಿ ಮಜ ಸೂತಿ । ತ್ಯಾಂಚಿಯೇ ನಾಟೀ ॥೯೫॥ ಯಾಕಾರಣೇ ಗಾ ಭಕ್ತರಾಯಾ । ಹಾ ಮಂತ್ರ ತುವಾ ಧನಂಜಯಾ । ಶಿಕಿಜೇ ಜೇ ಯಯಾ । ಮಾರ್ಗಾ ಭಜಿಜೇ ॥೯೬॥

ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।
ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥೮॥

ಅಗಾ ಮಾನಸ ಹೇ ಏಕ । ಮಾಝ್ಯಾ ಸ್ವರೂಪೀ ವೃತ್ತಿಕ । ಕರೂನಿ ಘಾಲೀ ನಿಷ್ಟಂಕ । ಬುದ್ಧಿ ನಿಶ್ಚಯೇಸೀ ॥೯೭॥ ಇಯೇ ದೋನೀ ಸರಿಸೀ । ಮಜಮಾಜೀ ಪ್ರೇಮೇಸೀ । ರಿಗಾಲೀ ತರೀ ಪಾವಸೀ । ಮಾತೇ ತೂ ಗಾ ॥೯೮॥ ಜೇ ಮನ ಬುದ್ಧೀ ಇಹೀ । ಘರ ಕೇಲೇ ಮಾಝ್ಯಾ ಠಾಯೀ । ತರೀ ಸಾಂಗೇ ಮಜ ಕಾಈ । ಮೀ ತೂ ಐಸೇ ಉರೇ? ॥೯೯॥ ಮ್ಹಣೌನಿ ದೀಪ ಪಾಲವೇ । ಸವೇಂಚಿ ತೇಜ ಮಾಲವೇ । ಕಾ ರವಿಬಿಂಬಾಸವೇ । ಪ್ರಕಾಶು ಜಾಯ ॥೧೦೦॥ ಉಚಲಲೇಯಾ ಪ್ರಾಣಾಸರಿಸೀ । ಇಂದ್ರಿಯೇಹೀ ನಿಗತೀ ಜೈಸೀ । ತೈಸಾ ಮನೋಬುದ್ಧಿ ಪಾಶೀ । ಅಹಂಕಾರು ಯೇ ॥೧೦೧॥ ಮ್ಹಣೌನಿ ಮಾಝಿಯಾ ಸ್ವರೂಪೀ । ಮನ ಬುದ್ಧಿ ಇಯೇ ನಿಕ್ಷೇಪೀ । ಯೇತುಲೇನಿ ಸರ್ವವ್ಯಾಪೀ । ಮೀಚಿ ಹೋಸೀ ॥೧೦೨॥ ಯಯಾ ಬೋಲಾಕಾಂಹೀ । ಅನಾರಿಸೇ ನಾಹೀ । ಆಪಲೀ ಆಣ ಪಾಹೀ । ವಾಹತು ಅಸೇ ಗಾ ॥೧೦೩॥

ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।
ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥೯॥

ಅಥವಾ ಹೇ ಚಿತ್ತ । ಮನಬುದ್ಧಿಸಹಿತ । ಮಾಝ್ಯಾ ಹಾತೀ ಅಚುಂಬಿತ । ನ ಶಕಸೀ ದೇವ್ಹೋ ॥೧೦೪॥ ತರೀ ಗಾ ಐಸೇ ಕರೀ । ಯಯಾ ಆಠಾ ಪಹಾರಾ ಮಾಝಾರೀ । ಮೋಟಕೇ ನಿಮಿಷಭರೀ । ದೇತು ಜಾಯ ॥೧೦೫॥ ಮಗ ಜೇ ಜೇ ಕಾ ನಿಮಿಖ । ದೇಖೇಲ ಮಾಝೇ ಸುಖ । ತೇತುಲೇ ಅರೋಚಕ । ವಿಷಯೀ ಘೇಈಲ ॥೧೦೬॥ ಜೈಸೇ ಶರತ್ಕಾಲು ರಿಗೇ । ಆಣಿ ಸರಿತಾ ವೋಹಟೂ ಲಾಗೇ । ತೈಸೇ ಚಿತ್ತ ಕಾಢೇಲ ವೇಗೇ । ಪ್ರಪಂಚೌನೀ ॥೧೦೭॥

ಆದರೆ, ಭಕ್ತರೆನಿಸುವವರು ನಾಲ್ಕುಕಾಲುಗಳುಳ್ಳವರಾದರೂ ಅವರಿಗೆ ನಾನು ವೈಕುಂಠದ ರಾಜ್ಯದ ಮೇಲೆ ಕುಳಿತುಕೊಳ್ಳುವ ಯೋಗ್ಯತೆಯನ್ನು ಕೊಟ್ಟಿರುವೆ ॥೯೩॥

ಆದ್ದರಿಂದ ನನ್ನ ಭಕ್ತರಿಗೆ ಯಾವ ಚಿಂತೆಯೂ ಇರುವುದಿಲ್ಲ. ಕಾರಣ ನಾನು ಅವರಿಗೆ ಉದ್ಧರಿಸಲು ಸದಾ ಸಿದ್ಧನಾಗಿ ನಿಂತಿದ್ದೇನೆ ॥೯೪॥

ಮತ್ತು ನನ್ನ ಭಕ್ತರು ತಮ್ಮ ಚಿತ್ತ ವೃತ್ತಿಯನ್ನು ನನ್ನಲ್ಲಿ ಅರ್ಪಿಸಿದಾಕ್ಷಣವೇ ಅವರು ತಮ್ಮ ಪ್ರಕಾರ ನನ್ನನ್ನು ನಟಿಸಲು ಹಚ್ಚುವರು ॥೯೫॥

ಈ ಕಾರಣಕ್ಕಾಗಿಯೇ, ಹೇ ಭಕ್ತರಾಯಾ ಅರ್ಜುನಾ, ನಿನಗೆ ಈ ಭಕ್ತಿಮಾರ್ಗಕ್ಕೆ ಹತ್ತಬೇಕೆಂಬುವುದಿದ್ದರೆ ಎಲ್ಲ ಚಿತ್ತ ವೃತ್ತಿಯನ್ನು ನನಗೆ ಅರ್ಪಿಸುವ ಈ ಮಂತ್ರವನ್ನು ಕಲಿತುಕೋ ॥೯೬॥

ಶ್ಲೋಕಾರ್ಥ :- ನನ್ನಲ್ಲಿಯೇ ಮನಸ್ಸಿಡು, ನನ್ನಲ್ಲಿಯೇ ಬುದ್ಧಿಯನ್ನು ಸ್ಥಿರಮಾಡು. ಅನಂತರ ನನ್ನಲ್ಲಿ ಯೇ ನಿವಾಸ ಮಾಡುವೆ. ಇದರಲ್ಲಿ ಸಂದೇಹವಿಲ್ಲ ॥೮॥

ಅರೇ, ವೃತ್ತಿಯೊಂದಿಗೆ ಒಂದು ಮನಸ್ಸನ್ನು ಮತ್ತು ನಿಶ್ಚಯದೊಂದಿಗೆ ಒಂದು ಬುದ್ಧಿಯನ್ನು ನನ್ನ ಸಗುಣ ರೂಪದಲ್ಲಿ ಒಡೆತನದ ಹಕ್ಕುಳ್ಳದ್ದಾಗಿ ಮಾಡು ॥೯೭॥

ಈ ಪ್ರಕಾರವಾಗಿ ಈ ಎರಡು ಮನ ಬುದ್ಧಿಗಳನ್ನು ಪ್ರೇಮದಿಂದ ನನ್ನ ಸ್ವರೂಪದಲ್ಲಿ ಸರಿಯಾಗಿ ಏಕತ್ರವಾಗಿ ಪ್ರವೇಶಿಸಿದಲ್ಲಿ ನೀನು ನನ್ನನ್ನೇ ಬಂದು ಕೂಡುವಿ ॥೯೮॥

ಕಾರಣ, ಮನ ಬುದ್ಧಿಗಳೆರಡೂ ನನ್ನಲ್ಲಿ ವಸತಿ ಮಾಡಿದ ನಂತರ ನೀನು ಮತ್ತು ನಾನು ಎಂಬ ಬೇರೆ ಭಾವನೆ ಉಳಿಯಬಹುದೇ? ನೀನೇ ಹೇಳು ॥೯೯॥

ಆದ್ದರಿಂದ ದೀಪ ಆರಿದ ನಂತರ ಅದರ ಬೆಳಕು ಇಲ್ಲದಾಗುವುದು. ಅಥವಾ ಸೂರ್ಯಬಿಂಬವು ಮುಳುಗಿದಾಗ ಅದರ ಪ್ರಕಾಶವು ಇಲ್ಲದಾಗುವುದು ॥೧೦೦॥

ಅಥವಾ ಪ್ರಾಣವು ಹೊರಗೆ ಹೋಗುವ ಹೊತ್ತಿಗೆ ಪ್ರಾಣದ ಸಂಗಡವೇ ಎಲ್ಲ ಇಂದ್ರಿಯಗಳು ಹೊರಗೆ ಹೋಗುವುವು. ಅದರಂತೆ ಮನ ಬುದ್ಧಿಗಳು ಒಂದಾಗಿ ಹೋದಲ್ಲೆಲ್ಲ ಅಹಂಕಾರವು ತನ್ನಿಂದ ತಾನೇ ಅವರ ಸಂಗಡ ಹೋಗುವುದು ॥೧೦೧॥

ಆದ್ದರಿಂದ ನನ್ನ ಸ್ವರೂಪದಲ್ಲಿ ಮನಸ್ಸು ಮತ್ತು ಬುದ್ಧಿ ಈ ಎರಡನ್ನೂ ಯಾವಾಗಲೂ ಇಡು. ಇಷ್ಟರಿಂದಲೇ ಸರ್ವ ವ್ಯಾಪಕನಾದ ನಾನು ಅದೇ ನೀನಾಗುವೆ ॥೧೦೨॥

ಅರ್ಜುನಾ, ಹೀಗೆ ನಾನು ಹೇಳುವುದರಲ್ಲಿ ಒಂದಕ್ಷರವೂ ಸಹ ಸುಳ್ಳಾಗಿರುವುದಿಲ್ಲ. ನಿನಗೆ ನನ್ನಾಣೆಯಾಗಿ ಹೇಳುತ್ತೇನೆ ॥೧೦೩॥

ಶ್ಲೋಕಾರ್ಥ :- ಅರ್ಜುನಾ! ಒಂದು ವೇಳೆ ನನ್ನಲ್ಲಿ ಚಿತ್ತವನ್ನಿಡಲು ಸಾಧ್ಯವಾಗದಿದ್ದರೆ ಅಭ್ಯಾಸ ಯೋಗ ದಿಂದ ನನ್ನನ್ನು ಪಡೆಯಲು ಯತ್ನಿಸು ॥೯॥

ಅಥವಾ ಒಂದು ವೇಳೆ ಮನಸ್ಸು ಮತ್ತು ಬುದ್ಧಿ ಸಹಿತವಾಗಿ ನೀನು ನಿನ್ನ ಚಿತ್ತವನ್ನು ನನ್ನಲ್ಲಿ ಪೂರ್ಣವಾಗಿ ಅರ್ಪಿಸಲು ಸಾಮರ್ಥ್ಯ ಇಲ್ಲದಿದ್ದರೆ ॥೧೦೪॥

ಹಾಗಾದರೆ, ಹೀಗೆ ಮಾಡು, ಈ ಎಂಟು ಪ್ರಹರಗಳಲ್ಲಿ ಒಂದು ಕ್ಷಣವಾದರೂ ಮನಸ್ಸನ್ನು ಮತ್ತು ಬುದ್ಧಿಯನ್ನು ನನ್ನ ಕಡೆ ಹಚ್ಚು ॥೧೦೫॥

ಆಗ ಎಷ್ಟು ವೇಳೆಯವರೆಗೆ ನಿನ್ನ ಮನಸ್ಸಿಗೆ ನನ್ನ ಸಮಾಗಮ ಸುಖದ ಅನುಭವ ಬರುವುದೋ, ಅಷ್ಟೇ ವೇಳೆಯವರೆಗೆ ಇದಕ್ಕೆ ವಿಷಯದ ಅರುಚಿ ಆಗುವುದು ॥೧೦೬॥

ಅಂದರೆ, ಯಾವ ಪ್ರಕಾರವಾಗಿ ಶರದ್‌ಋತು ಆರಂಭವಾಯಿತೆಂದರೆ, ನದಿಗಳ ನೀರು ಕಡಿಮೆಯಾಗುತ್ತ ಹೋಗುವುದೋ, ಅದೇ ಪ್ರಕಾರವಾಗಿ ಹೇಗೆ ನನ್ನಲ್ಲಿ ನಿನ್ನ ಚಿತ್ತವು ಕೂಡುವುದೋ ಹಾಗೆಯೇ ಪ್ರಪಂಚದಿಂದ ಹೊರ ಬರುವುದು ॥೧೦೭॥

ಮಗ ಪುನವೇಹೂನಿ ಜೈಸೇ । ಶಶಿಬಿಂಬ ದಿಸೇಂದಿಸೇ । ಹಾರಪತ ಅಂವಸೇ । ನಾಹೀಂಚಿ ಹೋಯ ।೧೦೮॥ ತೈಸೇ ಭೋಗಾ ಆಂತುನಿ ನಿಗತಾ । ಚಿತ್ತ ಮಜಮಾಜೀ ರಿಗತಾ । ಹಳೂ ಹಳೂ ಪಂಡುಸುತಾ । ಮೀಚಿ ಹೋಈಲ ।೧೦೯॥ ಅಗಾ ಅಭ್ಯಾಸಯೋಗು ಮ್ಹಣಿಜೇ । ತೋ ಹಾ ಏಕು ಜಾಣಿಜೇ । ಯೇಣೇ ಕಾಂಹೀ ನ ನಿಪಜೇ । ಐಸೇ ನಾಹೀ ।೧೧೦॥ ಪೈ ಅಭ್ಯಾಸಾಚೇನಿ ಬಳೇ । ಏಕಾ ಗತಿ ಅಂತರಾಳೇ । ವ್ಯಾಘ್ರ ಸರ್ಪ ಪ್ರಾಂಜಳೇ । ಕೇಲೇ ಏಕೀ ।೧೧೧॥ ವಿಷ ಕೀ ಆಹಾರಿ ಪಡೇ । ಸಮುದ್ರೀ ಪಾಯವಾಟ ಜೋಡೇ । ಏಕೀ ವಾಗ್ಬ್ರಹ್ಮ ಥೋಕಡೇ । ಅಭ್ಯಾಸೇ ಕೇಲೇ ।೧೧೨॥ ಮ್ಹಣೌನಿ ಆಭ್ಯಾಸಾಸೀ ಕಾಂಹೀ । ಸರ್ವಥಾ ದುಷ್ಕರ ನಾಹೀ । ಯಾಲಾಗಿ ಮಾಝ್ಯಾ ಠಾಯೀ । ಅಭ್ಯಾಸೇ ಮೀಳ ।೧೧೩॥

ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।
ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ।೧೦॥

ಕಾ ಆಭ್ಯಾಸಾಹೀ ಲಾಗೀ । ಕಸು ನಾಹೀ ತುಝಿಯಾ ಅಂಗೀ । ತರೀ ಆಹಾಸೀ ಜಯಾ ಭಾಗೀ । ತೈಸಾಚಿ ಆಸ ।೧೧೪॥ ಇಂದ್ರಿಯೇ ನ ಕೋಂಡೀ । ಭೋಗಾತೇ ನ ತೋಡೀ । ಅಭಿಮಾನು ನ ಸಂಡೀ । ಸ್ವಜಾತೀಚಾ ।೧೧೫॥ ಕುಳಧರ್ಮು ಚಾಳೀ । ವಿಧಿನಿಷೇಧ ಪಾಳೀ । ಮಗ ಸುಖೇ ತುಜ ಸರಳೀ । ದಿಧಲಿ ಆಹೇ ।೧೧೬॥ ಪರಿ ಮನೇ ವಾಚಾ ದೇಹೇ । ಜೈಸಾ ಜೋ ವ್ಯಾಪಾರು ಹೋಯೇ । ತೋ ಮೀ ಕರಿತು ಆಹೇ । ಐಸೇ ನ ಮ್ಹಣ ।೧೧೭॥ ಕರಣೇ ಕಾ ನ ಕರಣೇ । ಹೇ ಆಘವೇ ತೋಚಿ ಜಾಣೇ । ವಿಶ್ವ ಚಳತಸೇ ಜೇಣೇ । ಪರಮಾತ್ಮೇನಿ ।೧೧೮॥ ಉಣಯಾಪುರೇಯಾಚೇ ಕಾಂಹೀ । ಉರೋ ನೇದೀ ಆಪುಲಿಯಾ ಠಾಯೀ । ಸ್ವಜಾತೀ ಕರೂನಿ ಘೇಈ । ಜೀವಿತ್ವ ಆಪುಲೇ ।೧೧೯॥ ಮಾಳಿಯೇ ಜೇಉತೇ ನೇಲೇ । ತೇಉತೇ ನಿವಾಂತಚಿ ಗೇಲೇ । ತಯಾ ಪಾಣಿಯಾ ಐಸೇ ಕೇಲೇ । ಹೋಆವೇ ಗಾ ।೧೨೦॥ ಮ್ಹಣೌನಿ ಪ್ರವೃತ್ತಿ ಆಣಿ ನಿವೃತ್ತೀ । ಇಯೇ ವೋಝೀ ನೇಘೇ ಮತೀ । ಅಖಂಡ ಚಿತ್ತವೃತ್ತೀ । ಮಾಝ್ಯಾ ಠಾಯೀ ।೧೨೧॥ ಏರ್ಹವಿ ತರೀ ಸುಭಟಾ । ಉಜೂ ಕಾ ಅವ್ಹಾಂಟಾ । ರಥು ಕಾಈ ಖಟಪಟಾ । ಕರಿತು ಅಸೇ ?।೧೨೨॥ ಆಣಿ ಜೇ ಜೇ ಕರ್ಮ ನಿಪಜೇ । ತೇ ಥೋಡೇ ಬಹು ನ ಮ್ಹಣಿಜೇ । ನಿವಾಂತಚಿ ಅರ್ಪಿಜೇ । ಮಾಝ್ಯಾ ಠಾಯೀ ।೧೨೩॥

ಅಥವಾ ಪೌರ್ಣಿಮೆಯಿಂದ ಚಂದ್ರ ಬಿಂಬವು ದಿನದಿನಕ್ಕೆ ಕಡಿಮೆಯಾಗುತ್ತ ಹೋಗಿ ಅಮವಾಸ್ಯೆಗೆ ಅದು ಇಲ್ಲದಾಗುವುದು ।೧೦೮॥

ಅದರಂತೆಯೇ ಅರ್ಜುನಾ, ಈ ಚಿತ್ತವು ಮೆಲ್ಲ ಮೆಲ್ಲನೇ ವಿಷಯ ಭೋಗದಿಂದ ಹೊರಟು ನನ್ನಲ್ಲಿ ಬರುತ್ತ ಬರುತ್ತ ಕೊನೆಗೆ ಮದ್ರೂಪವಾಗುವುದು ।೧೦೯॥

ಅದೇ, ಅಭ್ಯಾಸಯೋಗ ಎಂಬುದು ಇದನ್ನೇ ಎಂದು ನಿಖರವಾಗಿ ತಿಳಿ. ಇದರಿಂದ ಸಿಗಲಾರದ ವಸ್ತುವು ಯಾವುದೂ ಇಲ್ಲ ।೧೧೦॥

ಅಭ್ಯಾಸದ ಬಲದಿಂದ ಕೆಲವರು ಆಕಾಶದಲ್ಲಿ ಅಡ್ಡಾಡುವರು. ಇನ್ನು ಕೆಲವರು ಹುಲಿ, ಸರ್ಪಗಳನ್ನು ನಿರ್ವೈರರನ್ನಾಗಿ ಮಾಡಿರುವರು ।೧೧೧॥

ವಿಷವನ್ನು ಸಹ ಪಚನ ಮಾಡಬಹುದು, ಸಮುದ್ರದ ಮೇಲೆಯೂ ನಡೆದುಹೋಗಬಹುದು,ಕೆಲವರು ಅಭ್ಯಾಸದ ಯೋಗದಿಂದ ವೇದವನ್ನು ಸಹ ಹಸ್ತಗತ ಮಾಡಿಕೊಂಡಿರುವರು ।೧೧೨॥

ಆದ್ದರಿಂದ ಅಭ್ಯಾಸದಿಂದ ಇಂತಹ ವಸ್ತುವು ಪ್ರಾಪ್ತವಾಗುವುದಿಲ್ಲವೆಂಬುದು ಇಲ್ಲ. ಅದಕ್ಕಾಗಿಯೇ ಅಭ್ಯಾಸದ ಯೋಗದಿಂದ ನೀನು ನನ್ನಲ್ಲಿ ಬಂದು ಕೂಡು ।೧೧೩॥

ಶ್ಲೋಕಾರ್ಥ :– ಅಭ್ಯಾಸವೂ ನಿನಗೆ ಸಾಧ್ಯವಾಗದಿದ್ದರೆ ನನಗೆ ಪ್ರಿಯವಾದ ದೈವಿಕ ಕಾರ್ಯಗಳನ್ನು ಮಾಡಲು ಯತ್ನಿಸು. ನನ್ನ ಸಂಬಂಧವಾದ ಕರ್ಮಗಳನ್ನು ಮಾಡುತ್ತ ನೀನು ಸಿದ್ಧಿಯನ್ನು ಪಡೆದುಕೊಳ್ಳುವೆ ।೧೦॥

ಇನ್ನು, ಅಭ್ಯಾಸ ಮಾಡುವ ಶಕ್ತಿಯು ನಿನ್ನ ಅಂಗದಲ್ಲಿ ಇಲ್ಲದಿದ್ದರೆ, ನಿನ್ನ ಆಚರಣೆಯ ಯಾವ ಕ್ರಮ ಇದೆಯೋ, ಹಾಗೆಯೇ ನಡೆಸು ।೧೧೪॥

ಇಂದ್ರಿಯಗಳನ್ನು ತಡೆಯಬೇಡ, ಉಪಭೋಗಗಳನ್ನು ಇಳಿಸಬೇಡ, ಸ್ವಜಾತಿಯ ಅಭಿಮಾನವನ್ನು ಬಿಡಬೇಡ ।೧೧೫॥

ನಿನ್ನ ಕುಲಧರ್ಮವನ್ನು ಮತ್ತು ಕುಲಾಚಾರವನ್ನು ಯಥಾವಿಧಿ ನಡೆಸು; ಮಾಡುವ ಯೋಗ್ಯ ಕರ್ಮಗಳನ್ನೆಲ್ಲವನ್ನೂ ಮಾಡು ಮತ್ತು ಮಾಡಲು ಅಯೋಗ್ಯವಾದವುಗಳನ್ನು ಬಿಡು. ಈ ರೀತಿ ಸುಖವಾಗಿ ನಡೆಯಲು ನಿನಗೆ ಸರಳವಾಗಿದೆ ।೧೧೬॥

ಆದರೆ, ಕಾಯಾ, ವಾಚಾ ಮನಸ್ಸಿನಿಂದ ಆಗುವ ಎಲ್ಲ ವ್ಯವಹಾರಗಳನ್ನು "ನಾನು ಮಾಡುವೆ" ಎಂದು ಹೇಳಬೇಡ ।೧೧೭॥

ಈ ವಿಶ್ವದ ಚಾಲಕನಾದ ಪರಮಾತ್ಮನು, ಕರ್ಮಗಳ ಕರ್ತನು ಯಾರು ಮತ್ತು ಕರ್ಮಗಳನ್ನು ಮಾಡಲಾರದವನು ಯಾರು ಎಂಬುವುದನ್ನೆಲ್ಲ ಆತನು ತಿಳಿಯುವನು ।೧೧೮॥

ಇಂತಹ ಕರ್ಮಗಳು ಕಡಿಮೆಯಾದವು, ಹೆಚ್ಚಾದವು ಎಂದು ನಿನ್ನ ಮನದಲ್ಲಿ ಖೇದಪಡಬೇಡ, ನಿನ್ನ ಜೀವಿತವನ್ನು ಪರಮಾತ್ಮನಲ್ಲಿ ಒಂದೇ ರೂಪ ಮಾಡು ।೧೧೯॥

ಯಾವ ಪ್ರಕಾರವಾಗಿ ತೋಟಿಗನು ಒಯ್ದುಂತೆ ನೀರು ಸಮಾಧಾನದಿಂದ ಹೋಗುವುದೋ, ಅದರಂತೆ ಮನದಲ್ಲಿನ ಕತೃತ್ವಾಭಿಮಾನವನ್ನು ತೆಗೆದೊಗೆಯಬೇಕು ?।೧೨೦॥

ಅಂದಾಗ ಪ್ರವೃತ್ತಿ ನಿವೃತ್ತಿಯ ಭಾರವನ್ನು ಬುದ್ಧಿಯು ತನ್ನಲ್ಲಿ ಸ್ವೀಕರಿಸುವುದಿಲ್ಲ. ಏಕೆಂದರೆ ಚಿತ್ತ ವೃತ್ತಿಯು ನನ್ನಲ್ಲಿ ಅಖಂಡವಾಗಿ ಇರುವುದು ।೧೨೧॥

ಇನ್ನು ಅರ್ಜುನಾ, ರಸ್ತೆಯು ಸರಳವಾಗಿದೆಯೋ ಅಥವಾ ಅಡ್ಡತಿಡ್ಡಾಗಿದೆಯೋ ಎಂಬುದನ್ನು ರಥಕ್ಕೆ ಏನಾದರೂ ಚಿಂತೆ ಇದೆಯೇ? ಅದು ಒಯ್ಯುವಂತೆ ಬರುವುದು ।೧೨೨॥

ಅದರಂತೆ ನೀನು ಮಾಡುವ ಕರ್ಮಗಳನ್ನೆಲ್ಲವನ್ನು ಅವು ಸ್ವಲ್ಪೇ ಇರಲಿ, ಅಥವಾ ಬಹಳಿರಲಿ ಹಾಗೆ ತಿಳಿಯದೇ ಎಲ್ಲವನ್ನು ಏಕನಿಷ್ಠೆಯಿಂದ ನನಗರ್ಪಿಸು ।೧೨೩॥

ಐಸಿಯಾ ಮದ್ಭಾವನಾ । ತನುತ್ಯಾಗೀ ಅರ್ಜುನಾ । ತೂ ಸಾಯುಜ್ಯ ಸದನಾ । ಮಾಝಿಯಾ ಯೇಸೀ ॥೧೨೪॥

ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ ।
ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥೧೧॥

ನಾ ತರೀ ಹೇಹೀ ತುಜ । ನೇದವೇ ಕರ್ಮ ಮಜ । ತರೀ ಗಾ ತೂ ಬೂಝ । ಪಂಡುಕುಮರಾ ॥೧೨೫॥ ಬುದ್ಧೀಚಿಯೇ ಪಾಠೀ ಪೋಟೀ । ಕರ್ಮಾಆದಿ ಕಾ ಶೇವಟೀ । ಮಾತೇ ಬಾಂಧಣೇ ಕಿರೀಟೀ । ದುವಾಡ ಜರೀ ॥೧೨೬॥ ತರಿ ಹೇಹಿ ಅಸೋ । ಸಾಂಡೀ ಮಾಝಾ ಅತಿಸೋ । ಪರಿ ಸಂಯತಿಸೀ ವಸೋ । ಬುದ್ಧಿ ತುಝೀ ॥೧೨೭॥ ಆಣೀ ಜೇಣೇ ಜೇಣೇ ವೇಳೇ । ಘಡತೀ ಕರ್ಮೇ ಸಕಳೇ । ತಯಾಂಚೀ ತಿಯೇ ಫಳೇ । ತ್ಯಜಿತು ಜಾಯ ॥೧೨೮॥ ವೃಕ್ಷ ಕಾ ವೇಲೀ । ಲೋಟತೀ ಫಳೇ ಆಲೀ । ತೈಸೀ ಸಾಂಡೀ ನಿಪಜಲೀ । ಕರ್ಮೇ ಸಿದ್ಧೇ ॥೧೨೯॥ ಪರಿ ಮಾತೇ ಮನೀ ಧರಾವೇ । ಕಾ ಮಜ ಉದ್ದೇಶೇ ಕರಾವೇ । ಹೇ ಕಾಂಹೀ ನಕೋ ಆಘವೇ । ಜಾಊ ದೇ ಶೂನ್ಯೀ ॥೧೩೦॥ ಖಡಕೀ ಜೈಸೇ ವರ್ಷಲೇ । ಕಾ ಆಗೀಮಾಜೀ ಪೇರಿಲೇ । ಕರ್ಮ ಮಾನೀ ದೇಖಿಲೇ । ಸ್ವಪ್ನ ಜೈಸೇ ॥೧೩೧॥ ಅಗಾ ಆತ್ಮಜೇಚ್ಯಾ ವಿಷೀ । ಜಿವು ಜೈಸಾ ನಿರಭಿಲಾಷೀ । ತೈಸಾ ಕರ್ಮೀ ಅಶೇಷೀ । ನಿಷ್ಕಾಮು ಹೋಈ ॥೧೩೨॥ ವನ್ಹೀಚೀ ಜ್ವಾಳಾ ಜೈಸೀ । ವಾಯಾ ಜಾಯ ಆಕಾಶೀ । ಕ್ರಿಯಾ ಜಿರೋ ದೇ ತೈಸೀ । ಶೂನ್ಯಾಮಾಜೀ ॥೧೩೩॥ ಅರ್ಜುನಾ ಹಾ ಫಲತ್ಯಾಗು । ಆವಡೇ ಕೀರ ಅಸಲಗು । ಪರೀ ಯೋಗಾಮಾಜೀ ಯೋಗು । ಧುರೇಚಾ ಹಾ ॥೧೩೪॥ ಯೇಣೇ ಫಲತ್ಯಾಗೇ ಸಾಂಡೇ । ತೇ ತೇ ಕರ್ಮ ನ ವಿರೂಢೇ । ಏಕಚಿ ವೇಳೇ ವೇಳುರಝಾಡೇ । ವಾಂಝೇ ಜೈಸೀ ॥೧೩೫॥ ತೈಸೇ ಯೇಣೇಂಚಿ ಶರೀರೇ । ಶರೀರಾ ಯೇಣೇ ಸರೇ । ಕಿಂಬಹುನಾ ಯೇರಝಾರೇ । ಚಿರಾ ಪಡೇ ॥೧೩೬॥ ಪೈ ಅಭ್ಯಾಸಾಚಿಯಾ ಪಾಉಟೀ । ಠಾಕಿಜೇ ಜ್ಞಾನ ಕಿರೀಟೀ । ಜ್ಞಾನೇ ಯೇಈಜೇ ಭೇಟೀ । ಧ್ಯಾನಾಚಿಯೇ ॥೧೩೭॥ ಮಗ ಧ್ಯಾನಾಸಿ ಖೇಂವ । ದೇತೀ ಆಘವೇಚಿ ಭಾವ । ತೇವ್ಹಾ ಕರ್ಮಜಾತ ಸರ್ವ । ದೂರೀ ಠಾಕೇ ॥೧೩೮॥ ಕರ್ಮ ಜೇಥ ದುರಾವೇ । ತೇಥ ಫಲತ್ಯಾಗು ಸಂಭವೇ । ತ್ಯಾಗಾಸ್ತವ ಆಂಗವೇ । ಶಾಂತಿ ಸಗಳೀ ॥೧೩೯॥

ಅರ್ಜುನಾ, ಈ ಪ್ರಕಾರವಾಗಿ ಎಲ್ಲ ಕರ್ಮಗಳ ವಿಷಯಗಳಲ್ಲಿ ನನ್ನಲ್ಲಿಯೇ ಭಾವನೆಯನ್ನು ಧರಿಸಿದಲ್ಲಿ ಶರೀರ ತ್ಯಾಗದ ನಂತರ ನೀನು ನನ್ನ ಪಾದವನ್ನೇ ಸೇರುವೆ ॥೧೨೪॥

ಶ್ಲೋಕಾರ್ಥ :- ಅದೂ ನಿನ್ನಿಂದ ಆಗದಿದ್ದರೆ, ನಿಗ್ರಹವಂತನಾಗಿ ನನಗೆ ಶರಣು ಬಂದು ನೀನು ಮಾಡುವ ಕರ್ಮಗಳ ಫಲವನ್ನು ನನಗೆ ಅರ್ಪಿಸು ॥೧೧॥

ಇಲ್ಲದಿದ್ದರೆ ಹೇ ಪಾಂಡುಕುಮಾರನೇ, ಒಂದು ವೇಳೆ ನಿನ್ನಿಂದ ನನಗೆ ಕರ್ಮಗಳನ್ನು ಅರ್ಪಿಸುವುದು ಆಗದಿದ್ದರೆ, ಹೀಗೆ ನೀನು ತಿಳಿಯಬೇಕು ॥೧೨೫॥

ಕರ್ಮ ಮಾಡುವ ಬುದ್ಧಿಯ ಆರಂಭಕ್ಕೆ ಇಲ್ಲವೆ ಆ ಬಳಿಕ, ಅದರಂತೆ ಕರ್ಮದ ಆರಂಭಕ್ಕೆ ಇಲ್ಲವೆ ಕೊನೆಗೆ ನನ್ನನ್ನು ಸ್ಮರಿಸುವುದು ನಿನಗೆ ಕಠಿಣವಾದರೆ ॥೧೨೬॥

ಒಂದು ವೇಳೆ ಮೇಲಿಂದ ಮೇಲೆ ನನ್ನನ್ನು ನೆನೆಯುವುದು ಇದು ಸಹ ಒತ್ತಟ್ಟಿಗೆ ಇರಲಿ, ಆದರೆ ನಿನ್ನ ಬುದ್ಧಿಯ ವಿನಿಯೋಗವು ಮಾತ್ರ ಇಂದ್ರಿಯ ನಿಗ್ರಹದಲ್ಲಿ ಇರಲಿ ॥೧೨೭॥

ಮತ್ತು ಯಾವ ಯಾವ ಕರ್ಮಗಳು ಹೇಗೆ ಹೇಗೆ ನಡೆಯುತ್ತವೆಯೋ, ಅದರದರ ಫಲಗಳನ್ನು ತ್ಯಜಿಸುತ್ತ ಹೋಗು ॥೧೨೮॥

ಯಾವ ಪ್ರಕಾರವಾಗಿ ಗಿಡಗಳಾಗಲೀ, ಬಳ್ಳಿಗಳಾಗಲಿ ತಮಗೆ ಫಲಗಳು ಬಂದಾಗ ಅವುಗಳ ಆಶೆಯನ್ನು ಹಿಡಿಯದೇ ಹೇಗೆ ಬಿಟ್ಟುಬಿಡುವುವೋ, ಅದರಂತೆ ಪೂರ್ಣಗೊಂಡ ಪ್ರತಿಯೊಂದು ಕರ್ಮಫಲಗಳ ಆಶೆಯನ್ನು ಬಿಟ್ಟುಬಿಡು ॥೧೨೯॥

ಆದರೆ, ನನ್ನನ್ನು ಮನದಲ್ಲಿ ಸ್ಮರಿಸುವುದು ಅಥವಾ ನನ್ನನ್ನು ಉದ್ದೇಶಿಸಿ ಕರ್ಮ ಮಾಡುವುದು ಇವುಗಳ ಖಟಪಟಿ ಮಾಡದೇ ಮಾಡಿದ ಎಲ್ಲವನ್ನೂ ನಿಷ್ಫಲವಾಗಲಿ ॥೧೩೦॥

ಬಂಡೆಯ ಮೇಲೆ ಮಳೆಬಿದ್ದಾಗ ಅಥವಾ ಅಗ್ನಿಯಲ್ಲಿ ಬೀಜಗಳನ್ನು ಬಿತ್ತಿದಾಗ ಆಗುವ ನಿಷ್ಫಲದಂತೆ ನೀನು ಮಾಡುವ ಕರ್ಮಗಳನ್ನೆಲ್ಲವನ್ನು ಸ್ವಪ್ನದಂತೆ ತಿಳಿ ॥೧೩೧॥

ಅರೇ, ತಂದೆಯು ತನ್ನ ಮಗಳ ಮೇಲೆ ಅಭಿಲಾಷೆಯನ್ನು ಹಿಡಿಯುವನೇ? ಅದರಂತೆ ನೀನು ಮಾಡುವ ಪ್ರತಿಯೊಂದು ಕರ್ಮಗಳ ಫಲದ ಇಚ್ಛೆಯನ್ನು ಮಾಡಬೇಡ ॥೧೩೨॥

ಯಾವ ಪ್ರಕಾರವಾಗಿ ಅಗ್ನಿಯಜ್ವಾಲೆಯು ಆಕಾಶದಲ್ಲಿ ವ್ಯರ್ಥವಾಗಿ ಹೋಗುವುದೋ, ಅದರಂತೆ ಕರ್ಮದಿಂದ ಉತ್ಪನ್ನವಾಗುವ ಫಲಗಳು ವ್ಯರ್ಥವಾಗಿ ಹೋಗಲಿ ॥೧೩೩॥

ಅರ್ಜುನಾ, ಕರ್ಮಗಳನ್ನು ಮಾಡಿ ಅವುಗಳ ಫಲದ ಇಚ್ಛೆ ಬಿಡುವುದು ಇದು ಸಾಮಾನ್ಯ ಮಾರ್ಗದಂತೆ ಕಾಣಬಹುದು. ಆದರೆ ಇದು ಸರ್ವಯೋಗಗಳಲ್ಲಿ ಶ್ರೇಷ್ಠವಾಗಿರುವುದು ॥೧೩೪॥

ಈ ಪ್ರಕಾರವಾಗಿ ಕರ್ಮಗಳನ್ನು ಮಾಡಿ ಅವುಗಳ ಫಲತ್ಯಾಗ ಮಾಡಿದಲ್ಲಿ ಅದು ಪುನರ್ಜನ್ಮಕ್ಕೆ ಕಾರಣಭೂತವಾಗುವುದಿಲ್ಲ. ಬಿದಿರು ಒಮ್ಮೆ ಸಸಿ ಹುಟ್ಟಿಸಿ ಬಂಜೆಯಾಗುವಂತೆ ಆ ಕರ್ಮಗಳು ಮುಂದಿನ ಜನ್ಮಕ್ಕೆ ಫಲ ಕೊಡಲು ಬರುವುದಿಲ್ಲ. ಪುನಃ ಹುಟ್ಟಲು ನಮಗೆ ಕಾರಣ ಬೀಳುವುದಿಲ್ಲ ॥೧೩೫॥

ಈ ಪ್ರಕಾರವಾಗಿ ಈ ದೇಹದ (ಇದೇ ಜನ್ಮದಲ್ಲಿ) ಪುನಃ ದೇಹ ಧಾರಣೆ ಮಾಡುವುದು ಮುಗಿಯುವುದು. ಒಟ್ಟಿನಲ್ಲಿ ಜನ್ಮಮರಣದ ಮಾರ್ಗಕ್ಕೆ ಕಲ್ಲು ಬಿದ್ದಂತಾಗುವುದು ॥೧೩೬॥

ಆದರೆ ಅರ್ಜುನಾ, ಅಭ್ಯಾಸದ ಯೋಗದಿಂದ ಜ್ಞಾನವು ಪ್ರಾಪ್ತವಾಗುವುದು ಮತ್ತು ಜ್ಞಾನ ಪ್ರಾಪ್ತವಾದ ಮೇಲೆ ಧ್ಯಾನ ಮಾಡಲು ಬರುವುದು ॥೧೩೭॥

ತದನಂತರ ಎಲ್ಲ ಮನೋವೃತ್ತಿಗಳು ಮತ್ತು ಎಲ್ಲ ಧರ್ಮಗಳು ಧ್ಯಾನಕ್ಕೆ ಆಲಿಂಗಿಸುವುವು. ಆಗ ಕರ್ಮಗಳು ತಾವೇ ದೂರಾಗುವುವು ॥೧೩೮॥

ಕರ್ಮಗಳು ತಾವೇ ದೂರಾದಾಗ, ಫಲದ ಇಚ್ಛೆಯು ಇಲ್ಲದಾಗುವುದು. ಹೀಗಾದ ಮೇಲೆ ಸರ್ವಶಾಂತಿಯು ತಮ್ಮ ಸ್ವಾಧೀನವಾಗುವುದು ॥೧೩೯॥

ಮ್ಹಣೌನಿ ಯಾವಯಾ ಶಾಂತಿ । ಹಾಚಿ ಅನುಕ್ರಮು ಸುಭದ್ರಾಪತೀ । ಮ್ಹಣೌನಿ ಅಭ್ಯಾಸುಚಿ ಪ್ರಸ್ತುತೀ । ಕರಣೇ ಏಥ ॥೧೪೦॥

ಶ್ರೇಯೋ ಹಿ ಜ್ಞಾನಮಭ್ಯಾಸಾತ್ ಜ್ಞಾನಾದ್ಧ್ಯಾನಂ ವಿಶಿಷ್ಯತೇ ।
ಧ್ಯಾನಾತ್ಕರ್ಮಫಲತ್ಯಾಗಃ ತ್ಯಾಗಾಚ್ಛಾಂತಿರನಂತರಮ್ ॥೧೨॥

ಅಭ್ಯಾಸಾಹೂನಿ ಗಹನ । ಪಾರ್ಥಾ ಮಗ ಜ್ಞಾನ । ಜ್ಞಾನಾಪಾಸೋನಿ ಧ್ಯಾನ । ವಿಶೇಷಿಜೇ ॥೧೪೧॥ ಮಗ ಕರ್ಮಫಲತ್ಯಾಗು । ತೋ ಧ್ಯಾನಾಪಾಸೋನಿ ಚಾಂಗು । ತ್ಯಾಗಾಹೂನಿ ಭೋಗು । ಶಾಂತಿಸುಖಾಚಾ ॥೧೪೨॥ ಐಸಿಯಾ ಯಾ ವಾಟಾ । ಇಹೀಂಚಿ ಪೇಣಾ ಸುಭಟಾ । ಶಾಂತೀಚಾ ಮಾಜಿವಟಾ । ಠಾಕಲಾ ಜೇಣೇ ॥೧೪೩॥

ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।
ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ॥೧೩॥

ಜೋ ಸರ್ವ ಭೂತಾಂಚ್ಯಾ ಠಾಯೀ । ದ್ವೇಷಾತೇ ನೇಣೇಂಚಿ ಕಹೀ । ಆಪಪರು ನಾಹೀ । ಚೈತನ್ಯಾ ಜೈಸಾ ॥೧೪೪॥ ಉತ್ತಮಾತೇ ಧರಿಜೇ । ಅಧಮಾತೇ ಅವ್ಹೇರಿಜೇ । ಹೇ ಕಾಂಹೀಚ ನೇಣಿಜೇ । ವಸುಧಾ ಜೇವೀ ॥೧೪೫॥ ಕಾ ರಾಯಾಚೇ ದೇಹ ಚಾಳೂ । ರಂಕಾ ಪರೌತೇ ಗಾಳೂ । ಹೇ ನ ಮ್ಹಣೇಚಿ ಕೃಪಾಳೂ । ಪ್ರಾಣು ಪೈ ಗಾ ॥೧೪೬॥ ಗಾಈಚೀ ತೃಷಾ ಹರೂ । ಕಾ ವ್ಯಾಘ್ರಾ ವಿಷಹೋಊನಿ ಮಾರೂ । ಐಸೇ ನೇಣೇಂಚಿ ಗಾ ಕರೂ । ತೋಯ ಜೈಸೇ ॥೧೪೭॥ ತೈಸೀ ಆಘವಿಯಾಂಚಿ ಭೂತಮಾತ್ರೀ । ಏಕಪಣೇ ಜಯಾ ಮೈತ್ರೀ । ಕೃಪೇಸೀ ಧಾತ್ರೀ । ಆಪಣಚಿ ಜೋ ॥೧೪೮॥ ಆಣಿ ಮೀ ಹೇ ಭಾಷ ನೇಣೇ । ಮಾಝೇ ಕಾಹೀಂಚಿ ನ ಮ್ಹಣೇ । ಸುಖದುಃಖ ಜಾಣಣೇ । ನಾಹೀ ಜಯಾ ॥೧೪೯॥ ತೇವೀಂಚಿ ಕ್ಷಮೆಲಾಗೀ । ಪೃಥ್ವಿಸೀ ಪವಾಡು ಆಂಗೀ । ಸಂತೋಷಾ ಉತ್ಸಂಗೀ । ದಿಧಲೇ ಘರ ॥೧೫೦॥

ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।
ಮಯ್ಯರ್ಪಿತಮನೋಬುದ್ಧಿಃ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥೧೪॥

ವಾರ್ಷಿಯೇವೀಣ ಸಾಗರು । ಜೈಸಾ ಜಳೇ ನಿತ್ಯ ನಿರ್ಭರು । ತೈಸಾ ನಿರುಪಚಾರು । ಸಂತೋಷಿ ಜೋ ॥೧೫೧॥ ವಾಹೂನಿ ಆಪುಲೀ ಆಣ । ಧರೀ ಜೋ ಅಂತಃಕರಣ । ನಿಶ್ಚಯಾ ಸಾಚಪಣ । ಜಯಾಚೇನಿ ॥೧೫೨॥

ಆದ್ದರಿಂದ ಹೇ ಸುಭದ್ರಾಪತಿಯೇ, ಶಾಂತಿ ಉತ್ಪನ್ನವಾಗುವ ಇದೊಂದೇ ಮಾರ್ಗವಿರುವುದು. ಅದಕ್ಕಾಗಿ ನೀನು ಮೊದಲೇ ಅಭ್ಯಾಸ ಮಾಡಬೇಕಾಗುವುದು ।।೧೪೦।।

ಶ್ಲೋಕಾರ್ಥ :- ಅಭ್ಯಾಸಕ್ಕಿಂತ ಜ್ಞಾನ ಶ್ರೇಷ್ಠ, ಜ್ಞಾನಕ್ಕಿಂತ ಧ್ಯಾನವು ಶ್ರೇಷ್ಠ, ಧ್ಯಾನಕ್ಕಿಂತ ಕರ್ಮ ಫಲ ಶ್ರೇಷ್ಠ. ಆ ತ್ಯಾಗದಿಂದ ಅಂತ್ಯದಲ್ಲಿ ಶಾಂತಿ ದೊರಕುತ್ತದೆ ।।೧೨।।

ಪಾರ್ಥಾ, ಅಭ್ಯಾಸಕ್ಕಿಂತಲೂ ಜ್ಞಾನವು ಕಠಿಣವಾಗಿದೆ ಮತ್ತು ಜ್ಞಾನಕ್ಕಿಂತಲೂ ಧ್ಯಾನವು ಕಠಿಣವಾಗಿದೆ ।।೧೪೧।।

ತದನಂತರ ಕರ್ಮದ ಫಲದ ಇಚ್ಛೆ ಬಿಡುವುದು ಧ್ಯಾನಕ್ಕಿಂತಲೂ ಉತ್ತಮವಾಗಿದೆ ಮತ್ತು ಆ ತ್ಯಾಗಕ್ಕಿಂತಲೂ ಬ್ರಹ್ಮ ಪ್ರಾಪ್ತಿಯ ಶಾಂತಿ ಸುಖವು ವಿಶೇಷವಾಗಿದೆ ।।೧೪೨।।

ಹೇ ಮಹಾವೀರನೇ, ಈ ಪ್ರಕಾರವಾಗಿ ಬ್ರಹ್ಮ ಪ್ರಾಪ್ತಿಯ ಮಾರ್ಗದಿಂದ ಇವರು ಇಹಲೋಕದ ಮುಕ್ಕಾಂದಲ್ಲಿಯೇ ಈಗಿನ ಮನುಷ್ಯ ಶರೀರದಲ್ಲಿಯೇ ಬ್ರಹ್ಮ ರೂಪ ಶಾಂತಿಯ ಅಂತಃಪುರವನ್ನು ಪ್ರಾಪ್ತಿ ಮಾಡಿಕೊಂಡಿರುವರು ।।೧೪೩।।

ಶ್ಲೋಕಾರ್ಥ :- ಭೂತ ಸಮುದಾಯದಲ್ಲಿ ಹಗೆ ಇಲ್ಲದವನು, ಎಲ್ಲರಿಗೂ ಮಿತ್ರನು, ದಯಾಳು, ಅಹಂಕಾರ ಮಮಕಾರವಿಲ್ಲದವನು, ಸುಖ ದುಃಖಗಳಲ್ಲಿ ಸಮಾನವಾಗಿರುವವನು ।।೧೩।।

ಇವರಿಗೆ ಎಲ್ಲ ಭೂತಗಳಲ್ಲಿ ದ್ವೇಷ ಮಾಡುವುದು ಎಂದೂ ಗೊತ್ತಿಲ್ಲ. ಯಾವ ಪ್ರಕಾರವಾಗಿ ಚೈತನ್ಯಕ್ಕೆ 'ಇವನು ನಮ್ಮವನು, ಅವನು ಬೇರೆಯವನು' ಎಂಬ ಭೇದವು ಹೇಗೆ ಇರುವುದಿಲ್ಲವೋ, ಅದರಂತೆ ಇವರಲ್ಲಿ ಆಪಪರ ಭಾವವು ಇರುವುದಿಲ್ಲ ।।೧೪೪।।

ಉತ್ತಮರಿಗೆ ಹೊರಬೇಕು, ಅಧಮರಿಗೆ ತಿರಸ್ಕರಿಸಬೇಕು ಎಂಬ ರಾಗ ದ್ವೇಷಿಗಳನ್ನು ಪೃಥ್ವಿಯು ಎಂದೂ ತಿಳಿಯುವುದಿಲ್ಲ ।।೧೪೫।।

ಅಥವಾ ರಾಜನ ದೇಹದಲ್ಲಿ ಚಲಿಸಬೇಕು ಮತ್ತು ದರಿದ್ರನಿಗೆ ದೂರವಿಡಬೇಕು ಎಂದು ದಯಾಳು ಪ್ರಾಣವು ಎಂದೂ ಅನ್ನುವುದಿಲ್ಲ ।।೧೪೬।।

ಅದರಂತೆ ಆಕಳದ ನೀರಡಿಕೆ ದೂರ ಮಾಡಬೇಕು ಮತ್ತು ಹುಲಿಗೆ ವಿಷಕೊಟ್ಟು ಕೊಲ್ಲಬೇಕು, ಹೀಗೆ ನೀರು ಎಂದೂ ಭಾವಿಸುವುದಿಲ್ಲ ।।೧೪೭।।

ಈ ಪ್ರಕಾರವಾಗಿ ಇವರು ಸರ್ವ ಪ್ರಾಣಿಮಾತ್ರರಲ್ಲಿ ಒಂದೇ ಸಮಾನವಾದ ಮಿತ್ರತ್ವವನ್ನು ಇಟ್ಟು ಕೃಪೆಗೆ ತಾವು ಆಧಾರಭೂತರಾಗುವರು ।।೧೪೮।।

ಮತ್ತು ಇವರು ನಾನು ಮತ್ತು ನೀನು ಈ ದ್ವೈತದ ಭಾಷೆಯನ್ನೇ ಅರಿಯರು. ಜಗತ್ತಿನಲ್ಲಿ ನನ್ನದು ಏನಾದರೂ ಇದೆ ಅಥವಾ ಜಗತ್ತಿನಲ್ಲಿ ನನ್ನದು ಏನೂ ಇಲ್ಲ ಹಾಗೂ ನನ್ನದು, ನಿನ್ನದು ಹೀಗೆ ಇವರು ಏನೂ ಹೇಳುವುದಿಲ್ಲ ಮತ್ತು ಇವರಿಗೆ ಸುಖದುಃಖಗಳಲ್ಲಿ ಸಂತೋಷ ಖೇದವಾಗುವುದಿಲ್ಲ ।।೧೪೯।।

ಹಾಗೆಯೇ ಕ್ಷಮೆಗಾಗಿ ಇವರ ಅಂಗದಲ್ಲಿ ಪೃಥ್ವಿಯ ಯೋಗ್ಯತೆ ಇರುವುದು ಮತ್ತು ಸಂತೋಷಕ್ಕೆ ಇವರು ತಮ್ಮ ತೊಡೆಯ ಮೇಲೆ ಮನೆ ಮಾಡಿಕೊಟ್ಟಿರುವರು ।।೧೫೦।।

ಶ್ಲೋಕಾರ್ಥ :- ಸಹನೆಯುಳ್ಳವನು ಈ ರೀತಿಯ ಭಕ್ತನು ಪ್ರಿಯನು. ಸದಾ ಸಂತುಷ್ಟನೂ, ಯೋಗಿಯೂ, ತನ್ನಲ್ಲಿ ದೃಢವಾದ ನಿಶ್ಚಯವುಳ್ಳವನೂ, ಮನಸ್ಸು ಬುದ್ಧಿಗಳನ್ನು ನನಗೆ ಅರ್ಪಿಸಿದ ಭಕ್ತನು ನನಗೆ ಪ್ರಿಯನು ।।೧೪।।

ಮಳೆಗಾಲದ ಹೊರತಾಗಿಯೂ ಸಮುದ್ರವು ಯಾವಾಗಲೂ ನೀರಿನಿಂದ ತುಂಬಿರುವುದು. ಅದರಂತೆ ಆನಂದದ ಉಪಚಾರವಿಲ್ಲದೆಯೇ ಯಾವಾತನು ಸಹಜವಾಗಿ ಆನಂದಿತನಾಗಿರುವನೋ ।।೧೫೧।।

ಯಾವಾತನು ತನ್ನ ಮನಸ್ಸಿಗೆ ತನ್ನದೇ ಆಣೆ ಹಾಕಿ ತನ್ನ ಆಧೀನದಲ್ಲಿಟ್ಟುಕೊಂಡು, ಮತ್ತು ನಿಶ್ಚಯದ ಬಲದಿಂದ ನಿಶ್ಚಯಕ್ಕೆ ಸತ್ಯವನ್ನು ತಂದು ಕೊಡುವನೋ ।।೧೫೨।।

ಜೀವು ಪರಮಾತ್ಮಾ ದೋನ್ಹೀ । ಬೈಸಲೂನಿ ಐಕ್ಯಾಸನೀ । ಜಯಾಚಿಯಾ ಹೃದಯಭುವನೀ । ವಿರಾಜತೀ ।।೧೫೩।। ಐಸಾ ಯೋಗ ಸಮೃದ್ಧೀ । ಹೋಊನಿ ಜೋ ನಿರವಧೀ । ಅರ್ಪೀ ಮನೋಬುದ್ಧೀ । ಮಾಝ್ಯಾ ಠಾಯೀ ।।೧೫೪।। ಆಂತು ಬಾಹೇರಿ ಯೋಗು । ನಿರ್ವಾಳಲೇ ಯಾಹೀಚಾಂಗು । ತರೀ ಮಾಝಾ ಅನುರಾಗು । ಸಪ್ರೇಮ ಜಯಾ ।।೧೫೫।। ಅರ್ಜುನಾ ತೋ ಭಕ್ತು । ತೋಚಿ ಯೋಗೀ ತೋಚಿ ಮುಕ್ತು । ತೋ ವಲ್ಲಭಾ ಮೀಕಾಂತು । ಐಸಾ ಪಢಿಯೇ ।।೧೫೬।। ಹೇ ನಾ ತೋ ಆವಡೇ । ಮಜ ಜೀವಾಚೇನಿ ಪಾಡೇ । ಹೇಂಹೀ ಏಥ ಥೋಕಡೇ । ರೂಪ ಕರಣೇ ।।೧೫೭।। ತರೀ ಪಡಿಯಂತಯಾಚೀ ಕಾಹಾಣೀ । ಹೇ ಭುಲೀಚೀ ಭಾರಣೀ । ಇಯೇ ತಂವ ನ ಬೋಲಣೇ । ಪರೀ ಬೋಲವೀ ಶ್ರದ್ಧಾ ।।೧೫೮।। ಮ್ಹಣೌನಿ ಗಾ ಆಮ್ಹಾ । ವೇಗಾ ಆಲೀ ಉಪಮಾ । ಏರ್ಹ್ವೀ ಕಾಯ ಪ್ರೇಮಾ । ಅನುವಾದು ಅಸೇ? ।।೧೫೯।। ಆತಾ ಅಸೋ ಹೇ ಕಿರೀಟೀ । ಪೈ ಪ್ರಿಯಾಚಿಯಾ ಗೋಷ್ಟೀ । ದುಣಾ ಥಾಂವ ಉಠೀ । ಆವಡೀ ಗಾ ।।೧೬೦।। ತಯಾಹೀ ವರೀ ವಿಪಾಯೇ । ಪ್ರೇಮಳು ಸಂವಾದಿಯಾ ಹೋಯೇ । ತಿಯೇ ಗೋಡಿಸೀ ಆಹೇ । ಕಾಂಟಾಳೇ ಮಗ? ।।೧೬೧।। ಮ್ಹಣೌನಿ ಗಾ ಪಂಡುಸುತಾ । ತೂ ಪ್ರಿಯು ಆಣಿ ತೂಂಚಿ ಶ್ರೋತಾ । ವರೀ ಪ್ರಿಯಾಚೀ ವಾರ್ತಾ । ಪ್ರಸಂಗೇ ಆಲೀ ।।೧೬೨।। ತರೀ ಆತಾ ಬೋಲೋ । ಭಲೇ ಯಾ ಸುಖಾ ಮೀನಲೋ । ಐಸೇ ಮ್ಹಣತಖೇವೀ ಡೋಲೋ । ಲಾಗಲಾ ದೇವೋ ।।೧೬೩।। ಮಗ ಮ್ಹಣೇ ಜಾಣ । ತಯಾ ಭಕ್ತಾಚೇ ಲಕ್ಷಣ । ಜಯಾ ಮೀ ಅಂತಃಕರಣ । ಬೈಸೋ ಘಾಲೀ ।।೧೬೪।।

ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।
ಹರ್ಷಾಮರ್ಷಭಯೋದ್ವೇಗೈಃ ಮುಕ್ತೋ ಯಃ ಸ ಚ ಮೇ ಪ್ರಿಯಃ ।।೧೫।।

ತರೀ ಸಿಂಧೂಚೇನಿ ಮಾಜೇ । ಜಳಚರಾ ಭಯ ನುಪಜೇ । ಆಣಿ ಜಳಚರೀ ನುಬಗಿಜೇ । ಸಮುದ್ರು ಜೈಸಾ ।।೧೬೫।। ತೇವೀ ಉನ್ಮತ್ತೇ ಜಗೇ । ಜಯಾಸಿ ಖಂತೀ ನ ಲಗೇ । ಆಣಿ ಜಯಾಚೇನಿ ಆಂಗೇ । ನ ಶಿಣೇ ಲೋಕು ।।೧೬೬।। ಕಿಂಬಹುನಾ ಪಾಂಡವಾ । ಶರೀರ ಜೈಸೇ ಅವಯವಾ । ತೈಸಾ ನುಬಗೇ ಜೀವಾ । ಜೀವಪಣೇ ಜೋ ।।೧೬೭।। ಜಗಚಿ ದೇಹ ಜಾಹಲೇ । ಮ್ಹಣೌನಿ ಪ್ರಿಯಾಪ್ರಿಯ ಗೇಲೇ । ಹರ್ಷಾಮರ್ಷ ಠೇಲೇ । ದುಜೇನವೀಣ ।।೧೬೮।।

ಯಾವಾತನ ಹೃದಯ ಮಂದಿರದಲ್ಲಿ ಒಂದೇ ಆಸನ ದಲ್ಲಿ ಕುಳಿತು ಜೀವ ಮತ್ತು ಪರಮಾತ್ಮ ಇವರಿಬ್ಬರೂ ವಿರಾಜಮಾನರಾಗಿರುವರೋ ॥೧೫೩॥

ಹೀಗೆ ಯೋಗ ಸಂಪತ್ತಿನಿಂದ ಪೂರ್ಣತ್ವಕ್ಕೆ ತಲುಪಿ ಯಾವಾತನು ಮನಸ್ಸು ಮತ್ತು ಬುದ್ಧಿಯನ್ನು ನನ್ನಲ್ಲಿ ಅರ್ಪಿಸಿರುವನೋ ॥೧೫೪॥

ಮತ್ತು ಅಂತರ್ಯಾಮಿಯ ಧ್ಯಾನಯೋಗದಿಂದ ಮತ್ತು ಹೊರಗಿನ ಅಷ್ಟಾಂಗ ಯೋಗದಿಂದ ಸಿದ್ಧ ಪುರುಷ ನಾಗಿದ್ದರೂ ಯಾವಾತನು ತನ್ನ ಅನುರಾಗದಿಂದ ನನ್ನನ್ನು ಪ್ರೀತಿಸುತ್ತಾನೋ ॥೧೫೫॥

ಅರ್ಜುನಾ, ಆತನೇ ಭಕ್ತನು, ಆತನೇ ಯೋಗಿಯು, ಮತ್ತು ಆತನೇ ಮುಕ್ತನು. ಹೆಚ್ಚಿಗೇನು ಹೇಳಬೇಕು? ಆತನು ಸತಿ ನಾನು ಪತಿ. ಇಷ್ಟೊಂದು ಆತನು ನನಗೆ ಪ್ರಿಯನು ॥೧೫೬॥

ಸತಿ ಪತಿಯರ ದೃಷ್ಟಾಂತವೂ ಸರಿಬೀಳುವುದಿಲ್ಲ. ಆತನು ನನಗೆ ನನ್ನ ಜೀವಕ್ಕಿಂತಲೂ ಹೆಚ್ಚಿಗೆ ಪ್ರಿಯಕರ ನಿರುವನು. ಆದರೆ ಈ ದೃಷ್ಟಂತವೂ ಇಲ್ಲಿ ಕಡಿಮೆಯೇ ಆಗುವುದು ॥೧೫೭॥

ಪ್ರೀತಿಯ ವಸ್ತುವಿನ ವರ್ಣನೆ ಎಂದರೆ ಅದೊಂದು ಹುಚ್ಚು ಭ್ರಮೆಯಾಗಿದೆ, ವಸ್ತುತಃ ಇದನ್ನು ಹೇಳಿ ತೋರಿಸ ಲಿಕ್ಕೆ ಬರುವುದೇ ಇಲ್ಲ. ಆದರೆ ಪ್ರೀತಿಯೇ ನನ್ನಿಂದ ನುಡಿಸ ಹತ್ತಿದೆ ॥೧೫೮॥

ಆದ್ದರಿಂದಲೇ, ನಾವು ಸಹಜವಾಗಿ ಈ ರೀತಿಯಲ್ಲಿ ಉಪಮೆಗಳನ್ನು ಕೊಟ್ಟಿರುವೆವು. ಇನ್ನೂ ಪ್ರೇಮದ ಮಾತುಗಳನ್ನು ಅನುಮಾನ ಮಾಡಲಿಕ್ಕೆ ಬರಬಹುದೇ? ॥೧೫೯॥

ಅರ್ಜುನಾ, ಇವೆಲ್ಲ ಮಾತುಗಳು ಒತ್ತಟ್ಟಿಗಿರಲಿ, ಕಾರಣ ಪ್ರೀತಿಯ ಮನುಷ್ಯನ ಮಾತುಗಳು ಹೊರಟಾಗ ಪ್ರೀತಿಯು ಎರಡರಷ್ಟಾಗುವುದು ॥೧೬೦॥

ಅದರಲ್ಲಿಯೂ ಒಂದು ವೇಳೆ ಮಾತುಗಳನ್ನು ಕೇಳು ವಾತನು ಪ್ರೇಮದವನೇ ಸಿಕ್ಕರೆ, ಆಗ ಆಗುವ ಆನಂದಕ್ಕೆ ದೃಷ್ಟಾಂತವನ್ನು ಕೊಡಲು ಆದೀತೇ? ॥೧೬೧॥

ಆದ್ದರಿಂದ ಅರ್ಜುನಾ, ನೀನೇ ನನ್ನ ಪ್ರಿಯಕರನಿದ್ದು, ನೀನೇ ಪ್ರೀತಿಯ ಮಾತುಗಳನ್ನು ಕೇಳುವಾತನು, ಮತ್ತು ಅದರಲ್ಲಿ ನನ್ನ ಪ್ರಿಯ ಭಕ್ತರ ಮಾತುಗಳನ್ನು ನಿನ್ನಲ್ಲಿ ಹೇಳುವ ಪ್ರಸಂಗ ಬಂದಿತು ॥೧೬೨॥

ಈಗ ಏನಾಗುವುದಾಗಲಿ, ನಾನು ಹೇಳಿಯೇ ತೀರು ವೆನು, ಮತ್ತು ಹೇಳುವ ಪ್ರಸಂಗ ಬಂದಿದ್ದು ನನ್ನ ಭಾಗ್ಯವೇ ಸರಿ. ಹೀಗೆಂದು ದೇವನು ಮೈದೂಗ ಹತ್ತಿದನು ॥೧೬೩॥

ಆಗ ಹೇಳಿದನು:- ಯಾರನ್ನು ನಾನು ನನ್ನ ಹೃದಯ ದಲ್ಲಿ ಸ್ಥಾನವನ್ನು ಕೊಟ್ಟಿರುವೆನೋ, ಅಂತಹ ಭಕ್ತರ ಲಕ್ಷಣಗಳನ್ನು ಹೇಳುವೆ ಕೇಳು ॥೧೬೪॥

**ಶ್ಲೋಕಾರ್ಥ** :- ಯಾರಿಂದ ಲೋಕಕ್ಕೆ ಕೆಡುಕು ಇಲ್ಲವೋ, ಯಾರು ಲೋಕದಿಂದ ವ್ಯಥೆಗೊಳ್ಳದೆ ಇರುವರೋ, ಹರ್ಷ, ಕೋಪ, ಭಯ, ಸಂಭ್ರಮ ಗಳು ಯಾವನಲ್ಲಿ ಇರುವುದಿಲ್ಲವೋ ಅಂಥವನೇ ನನಗೆ ಭಕ್ತನು ॥೧೫॥

ಯಾವ ಪ್ರಕಾರವಾಗಿ ಸಮುದ್ರವು ಕ್ಷೋಭೆಗೊಂಡಾಗ ಜಲಚರಗಳಿಗೆ ಅದರ ಭಯವುಂಟಾಗುವುದಿಲ್ಲವೋ ಮತ್ತು ಜಲಚರಗಳ ಸಾಕಷ್ಟು ಸಮುದಾಯದ ವಿಸ್ತಾರದಿಂದ ಸಮುದ್ರಕ್ಕೆ ಅವುಗಳಿಂದ ಬೇಸರವುಂಟಾಗುವುದಿಲ್ಲವೋ ॥೧೬೫॥

ಅದೇ ಪ್ರಕಾರವಾಗಿ ಉನ್ಮತ್ತವಾಗಿರುವ ಜಗತ್ತಿನ ವರ್ತನೆಯಿಂದ ಇವರಿಗೆ ಖೇದವಾಗುವುದಿಲ್ಲ ಮತ್ತು ಇವರಿಂದ ಲೋಕದ ಜನರಿಗೆ ತೊಂದರೆಯಾಗುವುದಿಲ್ಲ ॥೧೬೬॥

ಹೆಚ್ಚಿಗೇನು ಹೇಳಬೇಕು ಅರ್ಜುನಾ, ಶರೀರವು ಯಾವ ಪ್ರಕಾರವಾಗಿ ಅವಯುವಗಳಿಗೆ ಬೇಸರಪಡುವುದಿಲ್ಲವೋ, ಅದರಂತೆ ತಾವು ಎಲ್ಲರ ಜೀವನಾಗಿರುವೆ ಎಂಬ ಭಾವನೆ ಯಿಂದ ಪ್ರಾಣಿಮಾತ್ರರಿಗೆ ಬೇಸರ ಪಡುವುದಿಲ್ಲ ॥೧೬೭॥

ಜಗವೇ ತನ್ನ ಶರೀರವಾದ ಮೇಲೆ ಆತನಿಗೆ ಪ್ರಿಯ ಅಪ್ರಿಯ ಮಾತಿನ ಭೇದವು ಉಳಿಯುವುದಿಲ್ಲ. ಈ ದ್ವೈತ ಭಾವದ ನಷ್ಟದಿಂದಲೇ ಆತನಲ್ಲಿ ಕೋಪಾನಂದಗಳಿಗೆ ಆಸ್ಪದವಿರುವುದಿಲ್ಲ ॥೧೬೮॥

ಐಸಾ ದ್ವಂದ್ವನಿರ್ಮುಕ್ತು । ಭಯೋದ್ವೇಗರಹಿತು । ಯಾಹೀ ವರೀ ಭಕ್ತು । ಮಾಝ್ಯಾ ಠಾಯೀ ॥೧೭೯॥ ತರೀ ತಯಾಚಾ ಗಾ ಮಜ ಮೋಹೋ । ಕಾಯ ಸಾಂಗೋ ತೋ ಪಢಿಯಾವ್ರೋ । ಹೇ ಅಸೋ ಜೀವೇ ಜೀವ್ರೋ । ಮಾಝೇನಿ ತೋ ॥೧೮೦॥ ಜೋ ನಿಜಾನಂದೇ ಧಾಲಾ । ಪರಿಣಾಮು ಆಯುಷ್ಯಾ ಆಲಾ । ಪೂರ್ಣತೇ ಜಾಹಲಾ । ವಲ್ಲಭು ಜೋ ॥೧೮೧॥

ಅನಪೇಕ್ಷಃ ಶುಚಿರ್ದಕ್ಷಃ ಉದಾಸೀನೋ ಗತವ್ಯಥಃ ।
ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥೧೬॥

ಜಯಾಚಿಯಾ ಠಾಯೀ ಪಾಂಡವಾ । ಅಪೇಕ್ಷೇ ನಾಹೀ ರಿಗಾವಾ । ಸುಖಾಸಿ ಚಢಾವಾ । ಜಯಾಚೇ ಅಸಣೇ ॥೧೮೨॥ ಮೋಕ್ಷ ದೇಊನೀ ಉದಾರ । ಕಾಶೀ ಹೋಯ ಕೀರ । ಪರೀ ವೇಂಚೇ ಲಾಗೇ ಶರೀರ । ತಿಯೇ ಗಾಂವೀ ॥೧೮೩॥ ಹಿಮವಂತು ದೋಷ ಖಾಯೇ । ಪರೀ ಜೀವಿತಾಚೀ ಹಾನಿ ಹೋಯೇ । ತೈಸೇ ಶುಚಿತ್ವ ನೋಹೇ । ಸಜ್ಜನಾಚೇ ॥೧೮೪॥ ಶುಚಿತ್ವೇ ಶುಚಿ ಗಂಗಾಹೋಯೇ । ಆಣಿ ಪಾಪತಾಪಹೀ ಜಾಯೇ । ಪರೀ ತೇಥೇ ಆಹೇ । ಬುಡಣೇ ಏಕ ॥೧೮೫॥ ಖೋಲಿಯೇ ಪಾರು ನೇಣಿಜೇ । ತರೀ ಭಕ್ತೀ ನ ಬುಡಿಜೇ । ರೋಕಡಾಚಿ ಲಾಹಿಜೇ । ನ ಮರತಾ ಮೋಕ್ಷು ॥೧೮೬॥ ಸಂತಾಚೇನಿ ಅಂಗಲಗೇ। ಪಾಪಾತೇ ಜಿಣಣೇ ಗಂಗೇ । ತೇಣೇ ಸಂತಸಂಗೇ । ಶುಚಿತ್ವ ಕೈಸೇ ॥೧೮೭॥ ಮ್ಹಣೌನಿ ಅಸೋ ಜೋ ಐಸಾ । ಶುಚಿತ್ವೇ ತೀರ್ಥಾ ಕುವಾಸಾ । ಜೇಣೇ ಉಲಂಘವಿಲೇ ದಿಶಾ । ಮನೋಮಳ ॥೧೮೮॥ ಆಂತು ಬಾಹೇರಿ ಚೋಖಾಳು । ಸೂರ್ಯ ತೈಸಾ ನಿರ್ಮಳು । ಆಣಿ ತತ್ತ್ವಾರ್ಥೀಚಾ ಪಾಯಾಳು । ದೇಖಣಾ ಜೋ ॥೧೮೯॥ ವ್ಯಾಪಕ ಆಣಿ ಉದಾಸ । ಜೈಸೇ ಕಾ ಆಕಾಶ । ತೈಸೇ ಜಯಾಚೇ ಮಾನಸ । ಸರ್ವತ್ರ ಗಾ ॥೧೯೦॥ ಸಂಸಾರವ್ಯಥೇ ಫಿಟಲಾ । ಜೋ ನೈರಾಶ್ಯೇ ವಿನಟಲಾ । ವ್ಯಾಧಾಹಾತೋನಿ ಸುಟಲಾ । ವಿಹಂಗು ಜೈಸಾ ॥೧೯೧॥ ತೈಸಾ ಸತತ ಜೋ ಸುಖೇ । ಕೋಣೇಹೀ ಟವಂಚ ನ ದೇಖೇ । ನೇಣಿಜೇ ಗತಾಯುಷೇ । ಲಜ್ಜಾ ಜೇವೀ ॥೧೯೨॥ ಆಣಿ ಕರ್ಮಾರಂಭಾಲಾಗೀ । ಜಯಾ ಅಹಂಕೃತೀ ನಾಹೀ ಆಂಗೀ । ಜೈಸೇ ನಿರಿಂಧನ ಆಗೀ । ವಿಝೋನಿ ಜಾಯ ॥೧೯೩॥ ತೈಸಾ ಉಪಶಮುಚಿ ಭಾಗಾ । ಜಯಾಸಿ ಆಲಾ ಪೈ ಗಾ । ಜೋ ಮೋಕ್ಷಾಚಿಯಾ ಆಂಗಾ । ಲಿಹಿಲಾ ಅಸೇ ॥೧೯೪॥

ಈ ಪ್ರಕಾರವಾಗಿ ಸುಖದುಃಖಗಳಿಂದ ಮುಕ್ತನಾದವನು,ಭಯ, ಉದ್ವೇಗ ಇತ್ಯಾದಿಗಳಿಂದ ರಹಿತನು, ಇಷ್ಟಿದ್ದು ನನ್ನ ಭಕ್ತಿಯನ್ನು ಮಾಡುತ್ತಿದ್ದರೆ ।।೧೯೯।।

ಆತನು ನನಗೆ ಅತೀ ಪ್ರಿಯಕರನು. ಆ ಪ್ರೇಮವನ್ನು ನಾನೇನು ವರ್ಣಿಸಲಿ? ಇಷ್ಟೇ ಅಲ್ಲ, ಆತನು ನನ್ನ ಪ್ರಾಣವೇ ಆಗಿರುವನು ।।೧೭೦।।

ಆತ್ಮಾನಂದದಿಂದ ಸದಾವಕಾಲ ತೃಪ್ತನಾಗಿರುವನು. ಬ್ರಹ್ಮವೇ ಈತನ ರೂಪದಿಂದ ಸಾಕಾರವಾದಂತೆ ತೋರುವುದು. ಆದ್ದರಿಂದ ಈತನು ಪೂರ್ಣತೆಯ ಒಡೆಯನಾಗಿರುವನು ।।೧೭೧।।

ಶ್ಲೋಕಾರ್ಥ :- ಅಪೇಕ್ಷೆಯಿಲ್ಲದವನೂ, ಪರಿಶುದ್ಧನೂ, ಸಮರ್ಥನೂ, ನಿಸ್ಪೃಹನೂ, ಚಿಂತೆಯಿಲ್ಲದವನೂ, ಕರ್ತೃತ್ವ ಶೂನ್ಯನೂ ಆದವನು ನನಗೆ ನಿಜವಾದ ಭಕ್ತನು ।।೧೬।।

ಹೇ ಪಾಂಡವಾ, ಆತನಲ್ಲಿ ಇಚ್ಛೆ ಎಂಬುದು ಎಷ್ಟು ಮಾತ್ರವೂ ಇರುವುದಿಲ್ಲ ಮತ್ತು ಆತನ ವೃತ್ತಿಯಲ್ಲಿ ಸುಖದ ಭರತಿ ಇರುವುದು ।।೧೭೨।।

ಕಾಶೀ ಕ್ಷೇತ್ರವು ಮೋಕ್ಷ ಕೊಡುವುದರಲ್ಲಿ ಪ್ರಖ್ಯಾತವಾಗಿದೆ, ಆದರೆ ಅಲ್ಲಿ ಶರೀರವನ್ನು ಬಿಡದ ಹೊರತು ಮೋಕ್ಷವು ದೊರೆಯುವುದಿಲ್ಲ ।।೧೭೩।।

ಹಿಮಾಲಯ ಪರ್ವತದ ಮೇಲೆ ಹೋದಾಗ ಅಲ್ಲಿ ದೋಷಗಳ ಕ್ಷಾಲನೆಯಾಗುವುದು ನಿಜ, ಆದರೆ ಅಲ್ಲಿ (ಹವಾಮಾನವು ಹಿಡಿಸದೇ) ಜೀವದ ಹಾನಿಯಾಗುವುದು. ಆದ್ದರಿಂದ ಸಜ್ಜನರಲ್ಲಿ ಜೀವದ ಹಾನಿಯಾಗದೇ ಶುಚಿತ್ವವು ದೊರಕುವುದು ।।೧೭೪।।

ಪಾವನಗೊಳಿಸುವ ಗಂಗೆಯ ಉದಕವೂ ಪವಿತ್ರವಾಗಿದೆ. ಅದರಲ್ಲಿ ಸ್ನಾನ ಮಾಡಿದಾಗ ಪಾಪವು ಹಾಗೂ ಮನಸ್ಸಿನ ತಾಪವು ದೂರಾಗುವುವು. ಆದರೆ ಅಲ್ಲಿ ಮುಳುಗುವ ಭಯವಿರುವುದು ।।೧೭೫।।

ಹಾಗಾದರೆ, ಭಕ್ತಿರೂಪ ನದಿಯು ಬಹಳ ಆಳವಾಗಿ ಇರುವುದು. ಯಾವ ಮನುಷ್ಯನು ಈ ಮಾರ್ಗದಿಂದ ಬರುವನೋ, ಆತನಿಗೆ ಮುಳುಗದೇ ಮತ್ತು ಪ್ರಾಣ ಹಾನಿ ಮಾಡಿಕೊಳ್ಳದೇ ಅವಿಚ್ಛಿನ್ನವಾದ ಮೋಕ್ಷವು ದೊರಕುವುದು ।।೧೭೬।।

ಯಾವ ಸಂತರ ಸಮಾಗಮದಿಂದ ಗಂಗೆಯ ಪಾತಕಗಳು ಇಲ್ಲದಾಗುವುವು. ಅಂದಮೇಲೆ ಈ ಸಂತ ಸಂಗತಿಯಿಂದ ಪವಿತ್ರತೆ ಹೇಗಾದೀತೆಂದು ವಿಚಾರಿಸಬೇಕೇ? ।।೧೭೭।।

ಆದ್ದರಿಂದ ಈ ಸಂತರು ತಮ್ಮ ಪಾವಿತ್ರತೆಯಿಂದ ತೀರ್ಥಗಳಿಗೂ ಆಶ್ರಯಭೂತರಾಗುವರು. ಅವರು ಮನಸ್ಸಿನ ಎಲ್ಲ ವಿಕಾರಗಳನ್ನು ದಶದಿಕ್ಕುಗಳಿಗೆ ಓಡಿಸುವರು ।।೧೭೮।।

ಇವರು ಸೂರ್ಯನಂತೆ ಒಳಹೊರಗೂ ನಿರ್ಮಲರಾಗಿರುವರು. ಕಾಲು ಮುಂದೆ ಮಾಡಿ ಹುಟ್ಟಿದವನಿಗೆ ದ್ರವ್ಯವು ದೃಷ್ಟಿಗೆ ಬೀಳುವಂತೆ ಇವರಿಗೆ ಬ್ರಹ್ಮತತ್ತ್ವವು ಕಾಣಿಸುವುದು ।।೧೭೯।।

ಯಾವ ಪ್ರಕಾರವಾಗಿ ಆಕಾಶವು ಸರ್ವ ವ್ಯಾಪಕಾಗಿದ್ದು ಅಲಿಪ್ತವಾಗಿರುವಂತೆ ಇವರ ಮನಸ್ಸು ಸರ್ವ ವ್ಯಾಪಕವಾಗಿ ಇದ್ದು ಯಾವುದರಿಂದಲೂ ಲಿಪ್ತವಾಗದೇ ಉದಾಸವಾಗಿ ಇರುವುದು ।।೧೮೦।।

ಬೇಟೆಗಾರನ ಕೈಯಿಂದ ಪಾರಾಗಿರುವ ಪಕ್ಷಿಯು ನಿರ್ಭಯವಾಗಿರುವಂತೆ ಇವರು ಸಂಸಾರದ ಚಿಂತೆಯಿಂದ ದೂರಾಗಿ ನಿರಿಚ್ಛರಾಗಿರುವರು ।।೧೮೧।।

ಸತ್ತ ಮನುಷ್ಯನಿಗೆ ತಾನು ಬತ್ತಲಾಗಿದ್ದಕ್ಕೆ ಹೇಗೆ ನಾಚಿಕೆಯಾಗುವುದಿಲ್ಲವೋ, ಅದರಂತೆ ಇವರಿಗೆ ಯಾವುದೂ ತುಚ್ಛವಾಗುವುದಿಲ್ಲ ಮತ್ತು ಯಾವಾಗಲು ಸುಖಿಯಾಗಿ ಇರುವರು ।।೧೮೨।।

ಮತ್ತು ಯಾವುದೇ ಕರ್ಮ ಮಾಡುವಾಗ್ಗೆ ಇವರಿಗೆ ಕರ್ತೃತ್ವ ಅಭಿಮಾನವು ಇರುವುದೇ ಇಲ್ಲ, ಯಾವ ಪ್ರಕಾರವಾಗಿ ಅಗ್ನಿಯು ಕಟ್ಟಿಗೆ ಮುಗಿದಾಗ ಹೇಗೆ ತಾನೇ ಆರಿ ಹೋಗುವುದೋ ।।೧೮೩।।

ಅದರಂತೆ, ಮೋಕ್ಷ ಪ್ರಾಪ್ತಿಗಾಗಿ ಬೇಕಾಗಿರುವ ಅಂಗಗಳ ಪೈಕಿ ಉಪಶಮನವು (ಶಾಂತಿ) ಅವರ ಪಾಲಿಗೆ ಬಂದಿರುವುದು ।।೧೮೪।।

ಅರ್ಜುನಾ ಹಾ ಠಾವೋವರೀ । ಜೋ ಸೋಹಂಭಾವೋ ಸರೋಭರೀ । ತೋ ದ್ವೈತಾಚ್ಯಾ ಪೈಲತೀರೀ । ನಿಗೋ ಸರಲಾ ।।೧೮೫।। ಕೀ ಭಕ್ತಿ ಸುಖಾಲಾಗೀ । ಆಪಣಪೇಂಚಿ ದೋಹೀ ಭಾಗೀ । ವಾಂಟೂನಿಯಾ ಆಂಗೀ । ಸೇವಕ್ಕೈ ಬಾಣೇ ।।೧೮೬।। ಯೇರ ನಾಮ ಮೀ ಶೇವೀ । ಮಗ ಭಜತೀ ವೋಜ ಬರವೀ । ನ ಭಜತಯಾ ದಾವೀ । ಯೋಗಿಯಾ ಜೋ ।।೧೮೭।। ತಯಾಚೇ ಆಮ್ಹಾ ವ್ಯಸನ । ಆಮುಚೇ ತೋ ನಿಜಧ್ಯಾನ। ಕಿಂಬಹುನಾ ಸಮಾಧಾನ । ತೋ ಮಿಳೇ ತೈ ।।೧೮೮।। ತಯಾಲಾಗೀ ಮಜ ರೂಪಾ ಯೇಣೇ । ತಯಾಚೇನಿ ಮಜ ಯೇಥೇ ಅಸಣೇ । ತಯಾ ಲೋಣ ಕೀಜೇ ಜೀವೇ ಪ್ರಾಣೇ । ಐಸಾ ಪಢಿಯೇ ।।೧೮೯।।

ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ।
ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಃ ಸ ಸಮೇ ಪ್ರಿಯಃ ।।೧೭।।

ಜೋ ಆತ್ಮಾಲಾಭಾಸಾರಿಖೇ । ಗೋಮಟೇ ಕಾಂಹೀಂಚಿ ನ ದೇಖೇ । ಮ್ಹಣೌನಿ ಭೋಗವಿಶೇಖೇ । ಹರಿಖೇಜೇನಾ ।।೧೯೦।। ಆಪಣಚಿ ವಿಶ್ವ ಜಾಹಲಾ । ತರೀ ಭೇದಭಾವೋ ಸಹಜಚಿ ಗೇಲಾ । ಮ್ಹಣೌನಿ ದ್ವೇಷು ಠೇಲಾ । ಜಯಾ ಪುರುಷಾ ।।೧೯೧।। ಪೈ ಆಪುಲೇ ಜೇ ಸಾಚೇ । ತೇ ಕಲ್ಪಾಂತೀಹೀ ನ ವಚೇ । ಹೇ ಜಾಣೋನಿ ಗತಾಚೇ । ನ ಶೋಚೀ ಜೋ ।।೧೯೨।। ಆಣಿ ಜಯಾಪರೌತೇ ಕಾಂಹೀ ನಾಹೀ । ತೇ ಆಪಣಪೇಂಚಿ ಆಪುಲ್ಯಾ ಠಾಯೀ । ಜಾಹಲಾ ಯಾಲಾಗೀ ಜೋ ಕಾಂಹೀ । ಆಕಾಂಕ್ಷೀನಾ ।।೧೯೩।। ವೋಖಟೇ ಕಾ ಗೋಮಟೇ । ಹೇ ಕಾಂಹೀಂಚಿ ತಯಾ ನುಮಟೇ । ರಾತ್ರಿ ದಿವಸ ನ ಫುಟೇ । ಸೂರ್ಯಾಸಿ ಜೇವೀ ।।೧೯೪।। ಐಸಾ ಬೋಧುಚಿ ಕೇವಳು । ಜೋ ಹೋಊನಿ ಅಸೇ ನಿಖಳು । ತ್ಯಾಹೀವರೀ ಭೌಜನ ಶೀಳು । ಮಾಝ್ಯಾ ಠಾಯೀ ।।೧೯೫।। ತರೀ ತಯಾ ಐಸೇ ದುಸರೇ । ಆಮ್ಹಾ ಪಢಿಯಂತೇ ಸೋಯರೇ । ನಾಹೀ ಗಾ ಸಾಚೋಕಾರೇ । ತುಝೀ ಆಣ ।।೧೯೬।।

ಸಮಃ ಸತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।
ಶೀತೋಷ್ಣಸುಖದುಃಖೇಷು ಸಮಃ ಸಂಗವಿವರ್ಜಿತಃ ।।೧೮।।

ಪಾರ್ಥಾ ಜಯಾಚಿಯಾ ಠಾಯೀ । ವೈಷಮ್ಯಾಚೀ ವಾರ್ತಾ ನಾಹೀ । ರಿಪುಮಿತ್ರಾ ದೋಹೀ । ಸಾರಿಸಾ ಪಾಡು ।।೧೯೭।। ಕಾ ಘರಿಚಿಯಾ ಉಜಿಯೇಡು ಕರಾವಾ । ಪಾರಖಿಯಾ ಆಂಧಾರು ಪಾಡಾವಾ । ಹೇ ನೇಣೇಂಚಿ ಗಾ ಪಾಂಡವಾ । ದೀಪು ಜೈಸಾ ।।೧೯೮।।

ಅರ್ಜುನಾ, ಈ ಪ್ರಕಾರವಾಗಿ ಯಾವ ಪುರುಷನು ಆತ್ಮಸ್ವರೂಪದಿಂದ ಓತಪ್ರೋತನಾಗಿ ತುಂಬಿ ಕೊಂಡಿರುವನೋ, ಆತನು ದ್ವೈತದ ಆಚೆದಂಡೆಗೆ ಹೋಗಿರುವನು ।।೧೮೫।।

ಭಕ್ತಿಯಿಂದ ಉತ್ಪನ್ನವಾಗುವ ಸುಖಕ್ಕಾಗಿ ನಾನೇ ಎರಡು ಭಾಗವಾಗಿ, ಒಂದರ ಹೆಸರು''ದೇವರು'' ಎಂದು ಇಟ್ಟು, ಇನ್ನೊಂದರ ಹೆಸರು ''ಸೇವಕ'' ಎಂದು ಇಟ್ಟಿರುವೆನು ।।೧೮೬।।

ಮತ್ತು ಸೇವಕನಿಂದ ಎರಡನೆಯದಾದ ಹೆಸರು ''ದೇವರು'' ಎಂದು ಇಟ್ಟು ಭಕ್ತಿ ಮಾಡದೇ ಇದ್ದ ಜನರಿಗೆ ಭಕ್ತಿ ಮಾರ್ಗವನ್ನು ಆಚರಿಸಿ ತೋರಿಸುವೆನು ।।೧೮೭।।

ಆತನ ಮೇಲೆಯೇ ನಮ್ಮ ಪ್ರೀತಿ ಇರುವುದು. ಆತನು ನಮ್ಮ ನಿಜ ಧ್ಯಾನನಾಗುವನು. ಹೆಚ್ಚಿಗೇನು ಹೇಳಬೇಕು? ಆತನು ಸಿಕ್ಕಾಗಲೇ ನಮಗೆ ಸಮಾಧಾನವಾಗುವುದು ।।೧೮೮।।

ಆತನಿಗಾಗಿಯೇ ನಮಗೆ ಅವತಾರಕ್ಕೆ ಬರಬೇಕಾಗುವುದು. ಆತನಿಗಾಗಿಯೇ ನಮಗೆ ಇಲ್ಲಿರ ಬೇಕಾಗುವುದು, ಮತ್ತು ಆತನಿಗಾಗಿ ನಾನು ನನ್ನ ಪಂಚಪ್ರಾಣಗಳನ್ನು ನಿವಾಳಿಸಿ ಒಗೆಯುವೆನು. ಇಷ್ಟೊಂದು ಆತನು ನನಗೆ ಪ್ರಿಯನು ।।೧೮೯।।

ಶ್ಲೋಕಾರ್ಥ :- ಒಳ್ಳೆಯದಕ್ಕೆ ಸಂತೋಷ ಪಡದೇ ಕೆಟ್ಟದ್ದಕ್ಕೆ ವಿಷಾದ ಪಡದೇ, ಒಂದು ಬರಲಿಲ್ಲವೆಂದು ದುಃಖಿಸದೇ; ಮತ್ತೊಂದು ಬೇಕೆಂದು ಬಯಸದೇ, ಇಷ್ಟಾನಿಷ್ಟಗಳಿಗೆ ದೂರನಾದ ಭಕ್ತನೇ ನನಗೆ ಪ್ರಿಯನು ।।೧೭।।

ಯಾರು ಬ್ರಹ್ಮಪ್ರಾಪ್ತಿಯ ಲಾಭಕ್ಕಿಂತ ಉತ್ತಮವಾದದ್ದು ಇನ್ನೊಂದು ಯಾವುದನ್ನೂ ಮನ್ನಿಸುವುದಿಲ್ಲವೋ, ಆತನಿಗೆ ಯಾವುದೇ ವಿಶೇಷ ಉಪಭೋಗದಿಂದ ಆನಂದವಾಗುವುದಿಲ್ಲ ।।೧೯೦।।

ಯಾರು ತಾವೇ ವಿಶ್ವವಾಗಿರುವುರಿಂದ ಅವರಲ್ಲಿ ಬಿನ್ನಭಾವವು ಸಹಜವಾಗಿ ಹೋಗಿರುವುದು. ಆದ್ದರಿಂದ ಆ ಪುರುಷನ ಮನಸ್ಸಿನಿಂದ ದ್ವೇಷವು ಇಲ್ಲದಾಗುವುದು ।।೧೯೧।।

ಯಾವುದು ನಿಜವಾಗಿಯೂ ತನ್ನ ವಸ್ತು ಇರುವುದೋ, ಅದು ಕಲ್ಪಾಂತಕ್ಕೂ ಹೋಗುವುದಿಲ್ಲ. (ಅಲ್ಲದ್ದು ಹೋಗುವುದು) ಹೀಗೆ ನಿಶ್ಚಿತವಾಗಿ ತಿಳಿದುಕೊಂಡು ಗತ ವಿಷಯಕ್ಕೆ ಶೋಕ ಮಾಡುವುದಿಲ್ಲ ।।೧೯೨।।

ಯಾವ ಸ್ವರೂಪಕ್ಕಿಂತಲೂ ಉತ್ತಮವಾದದ್ದು ಜಗತ್ತಿನಲ್ಲಿ ಬೇರೆ ಯಾವುದೂ ಇಲ್ಲ. ಅಂತಹದ್ದನ್ನು ತಾನು ಸ್ವತಃ ಆಗಿರುವನು. ಆದ್ದರಿಂದ ಆತನು ಯಾವುದೇ ವಸ್ತುವಿನ ಇಚ್ಛೆ ಮಾಡುವುದಿಲ್ಲ ।।೧೯೩।।

ಯಾವ ಪ್ರಕಾರವಾಗಿ ಸೂರ್ಯನಿಗೆ ಹಗಲು ರಾತ್ರಿಗಳಿಲ್ಲವೋ, ಅದರಂತೆ ಇವರಿಗೆ ಒಳ್ಳೆಯದು, ಕೆಟ್ಟದ್ದು ಹೀಗೆ ಭಾಸವಾಗುವುದಿಲ್ಲ ।।೧೯೪।।

ಈ ಪ್ರಕಾರವಾಗಿ ಯಾರು ಕೇವಲ ಜ್ಞಾನಸ್ವರೂಪರಾಗಿರುವರು ಮತ್ತು ಹೀಗಿದ್ದೂ ನನ್ನ ಭಜನದಲ್ಲಿ ತನ್ನ ವೇಳೆಯನ್ನು ಕಳೆಯುವರು ।।೧೯೫।।

ಆ ಭಕ್ತನಂತೆ ನಮಗೆ ಬೇರೆ ಯಾರೂ ಪ್ರಿಯಕರರಿಲ್ಲ. ಇದನ್ನು ನಾನು ನಿನ್ನ ಆಣೆಮಾಡಿ ಹೇಳುವೆ ।।೧೯೬।।

ಶ್ಲೋಕಾರ್ಥ :- ಶತ್ರು ಮಿತ್ರರುಗಳಲ್ಲಿಯೂ ಮಾನಾಪಮಾನಗಳಲ್ಲಿ, ಶೀತೋಷ್ಣಗಳಲ್ಲಿ, ಸುಖ ದುಃಖಗಳಲ್ಲಿ ಸಮಾನನೂ ಆಸಕ್ತಿ ಇಲ್ಲದವನೂ ।।೧೮।।

ಪಾರ್ಥಾ, ಇವರ ಮನದಲ್ಲಿ ವೈಷಮ್ಯದ ವಾರ್ತೆಯೂ ಇರುವುದಿಲ್ಲ ಮತ್ತು ಇವರು ಶತ್ರು ಮತ್ತು ಮಿತ್ರ ಇವರಿಬ್ಬರಿಗೂ ಸಮವಾಗಿ ಕಾಣುತ್ತಾರೆ ।।೧೯೭।।

ಅಥವಾ ಅರ್ಜುನಾ, ತನ್ನ ಮನೆಯ ಮಂದಿಗೆ ಬೆಳಕು ಕೊಡಬೇಕು, ಪರರಿಗೆ ಕತ್ತಲು ಬೀಳಬೇಕು ಎಂಬುದನ್ನು ದೀಪವು ಎಂದೂ ಅರಿಯದು ।।೧೯೮।।

ಜೋ ಖಾಂಡಾವಯಾ ಘಾವೋ ಘಾಲೀ । ಕಾ ಲಾವಣೇ ಜಯಾನೇ ಕೇಲೀ । ದೋಘಾ ಏಕಚಿ ಸಾಉಲೀ । ವೃಕ್ಷ ದೇ ಜೈಸಾ ॥೧೯೯॥ ನಾತರೀ ಇಕ್ಷುದಂಡು । ಪಾಳಿತಯಾ ಗೋಡು । ಗಾಳೀತಯಾ ಕಡು । ನೋಹೇಂಚಿ ಜೇವೀ ॥೨೦೦॥ ಅರಿಮಿತ್ರೀ ತೈಸಾ । ಅರ್ಜುನಾ ಜಯಾ ಭಾವೋ ಐಸಾ । ಮಾನಾಪಮಾನೀ ಸರಿಸಾ । ಹೋತು ಜಾಯ ॥೨೦೧॥ ತಿಹೀ ಋತೂ ಸಮಾನ । ಜೈಸೇ ಕಾ ಗಗನ । ತೈಸಾ ಏಕಚಿ ಮಾನ । ಶೀತೋಷ್ಣೀ ಜಯಾ ॥೨೦೨॥ ದಕ್ಷಿಣ ಉತ್ತರ ಮಾರುತಾ । ಮೇರು ಜೈಸಾ ಪಂಡುಸುತಾ । ತೈಸಾ ಸುಖದುಃಖ ಪ್ರಾಪ್ತಾ । ಮಧ್ಯಸ್ತು ಜೋ ॥೨೦೩॥ ಮಾಧುರ್ಯೇ ಚಂದ್ರಿಕಾ । ಸರಿಸೀ ರಾಯಾ ರಂಕಾ । ತೈಸಾ ಜೋ ಸಕಳಿಕಾ । ಭೂತಾ ಸಮು ॥೨೦೪॥ ಆಘವಿಯಾ ಜಗಾ ಏಕ । ಸೇವ್ಯ ಜೈಸೇ ಉದಕ । ತೈಸೇ ಜಯಾತೇ ತಿನ್ಹೀ ಲೋಕ । ಆಕಾಂಕ್ಷಿತೀ ॥೨೦೫॥ ಜೋ ಸಬಾಹ್ಯಸಂಗು । ಸಾಂಡೋನಿಯಾ ಲಾಗು । ಏಕಾಕೀ ಅಸೇ ಆಂಗು । ಆಂಗೀ ಸೂನೀ ॥೨೦೬॥

ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್ ।
ಅನಿಕೇತಃ ಸ್ಥಿರಮತಿಃ ಭಕ್ತಿಮಾನ್ ಮೇ ಪ್ರಿಯೋ ನರಃ ॥೧೯॥

ಜೋ ನಿಂದೇತೇ ನೇಘೇ । ಸ್ತುತಿ ನ ಶ್ಲಾಘೇ । ಆಕಾಶಾ ನ ಲಗೇ । ಲೇಪು ಜೈಸಾ ॥೨೦೭॥ ತೈಸೇ ನಿಂದೇ ಆಣಿ ಸ್ತುತೀ । ಮಾನು ಕರೂನಿ ಏಕೇ ಪಾಂತೀ । ವಿಚರೇ ಪ್ರಾಣವೃತ್ತೀ । ಜನೀ ವನೀ ॥೨೦೮॥ ಸಾಚ ಲಟಿಕೇ ದೋನ್ಹೀ । ಬೋಲೋನೀ ನ ಬೋಲೇ ಜಾಹಲಾ ಮೌನೀ । ಜೋ ಭೋಗಿತಾ ಉನ್ಮನೀ । ಆರಾಯೇನಾ ॥೨೦೯॥ ಜೋ ಯಥಾಲಾಭೇ ನ ತೋಖೇ । ಅಲಾಭೇ ನ ಪಾರುಖೇ । ಪಾವುಸೇವೀಣ ನ ಸುಕೇ । ಸಮುದ್ರು ಜೈಸಾ ॥೨೧೦॥ ಆಣಿ ವಾಯೂಸೀ ಏಕೇ ಠಾಯೀ । ಬಿಢಾರ ಜೈಸೇ ನಾಹೀ । ತೈಸಾ ನ ಧರೀಚ ಕಹೀ । ಆಶ್ರಯೋ ಜೋ ॥೨೧೧॥ ಆಘವಾಚಿ ಆಕಾಶಸ್ಥಿತಿ । ಜೇವೀ ವಾಯೂಸಿ ನಿತ್ಯ ವಸತೀ । ತೇವೀ ಜಗಚಿ ವಿಶ್ರಾಂತಿ । ಸ್ಥಾನ ಜಯಾ ॥೨೧೨॥ ಹೇ ವಿಶ್ವಚಿ ಮಾಝೇ ಘರ । ಐಸೀ ಮತೀ ಜಯಾಚೀ ಸ್ಥಿರ । ಕಿಂಬಹುನಾ ಚರಾಚರ । ಆಪಣ ಜಾಹಲಾ ॥೨೧೩॥ ಮಗ ಯಾಹೀವರೀ ಪಾರ್ಥಾ । ಮಾಝ್ಯಾ ಭಜನೀ ಆಸ್ಥಾ । ತರೀ ತಯಾತೇ ಮೀ ಮಾಥಾ । ಮುಗುಟ ಕರೀ ॥೨೧೪॥ ಉತ್ತಮಾಸಿ ಮಸ್ತಕ । ಖಾಲವಿಜೇ ಹೇ ಕಾಯ ಕೌತುಕ? । ಪರೀ ಮಾನು ಕರೀತೀ ತಿನ್ಹೀ ಲೋಕ । ಪಾಯವಣಿಯಾ ॥೨೧೫॥

ಯಾರು ತನ್ನನ್ನು ಕಡಿಯಲು ಕೊಡಲಿ ಹಾಕುವವನಿಗೂ, ಯಾರು ತನ್ನನ್ನು ಹೆಚ್ಚು ಜೋಪಾನ ಮಾಡಿದವನಿಗೂ ವೃಕ್ಷವು ಇಬ್ಬರಿಗೂ ಸಮಾನವಾಗಿ ನೆರಳನ್ನು ಕೊಡುವುದು ॥೧೯೯॥

ಅಥವಾ ಕಬ್ಬು ತನ್ನನ್ನು ನೀರುಣಿಸಿ ಬೆಳೆಸಿದವನಿಗೆ ಸಿಹಿಯಾಗಿ ಮತ್ತು ಯಾರು ತನ್ನನ್ನು ಯಂತ್ರದಲ್ಲಿ ಹಾಕಿ ಹಿಂಡುವವನಿಗೆ ಕಹಿಯಾಗಿ, ಹೀಗೆ ಅದು ಎಂದೂ ಮಾಡಲಾರದು ॥೨೦೦॥

ಈ ಪ್ರಕಾರವಾಗಿ ಅರ್ಜುನಾ, ಶತ್ರುಮಿತ್ರ ಭಾವವು ಈತನ ಮನದಲ್ಲಿ ಇರುವುದಿಲ್ಲ ಮತ್ತು ಈತನು ಮಾನಾಪಮಾನಗಳಲ್ಲಿ ಸಮಬುದ್ಧಿಯನ್ನು ಇಡುವನು ॥೨೦೧॥

ಆಕಾಶವು ಯಾವ ಪ್ರಕಾರವಾಗಿ ಮೂರೂ ಋತುಗಳಲ್ಲಿ ಸಮವಾಗಿಯೇ ಇರುವುದೋ, ಅದರಂತೆ ಇವರು ಚಳಿ ಮತ್ತು ಬೇಸಿಗೆ ಈ ಎರಡನ್ನು ಸಮಾನವಾಗಿ ಕಾಣುವರು ॥೨೦೨॥

ಅರ್ಜುನಾ, ಮೇರುಪರ್ವತವು ದಕ್ಷಿಣ ಉತ್ತರ ಗಾಳಿಯನ್ನು ಸಮವಾಗಿ ಕಾಣುವಂತೆ ಸುಖದುಃಖಗಳು ಒದಗಿದಾಗ ಇವರು ತಮ್ಮ ಮನಸ್ಸಿನ ಸಮತೆಯನ್ನು ಭಂಗಗೊಳಿಸುವುದಿಲ್ಲ ॥೨೦೩॥

ರಾಜನಿಂದ ಹಿಡಿದು ಬಡವನವರೆಗೂ ಚಂದ್ರನ ಬೆಳದಿಂಗಳು ಎಲ್ಲರಿಗೂ ಸಮಾನವಾಗಿ ಸುಖಕರವಾಗಿರುವುದು. ಅದರಂತೆ ಇವರು ಪ್ರಾಣಿಮಾತ್ರರಿಗೆ ಸಮಾನವಾಗಿ ಕಾಣುವರು ॥೨೦೪॥

ಎಲ್ಲ ಜಗತ್ತಿಗೂ ನೀರು ಎಲ್ಲರಿಗೂ ಒಂದೇ ರೀತಿಯಲ್ಲಿ ಸೇವಿಸುವಂತಹದ್ದಾಗಿದೆ. ಅದರಂತೆ ಯಾರನ್ನು ಮೂರು ಲೋಕದವರೂ ಇಚ್ಛಿಸುವರೋ ॥೨೦೫॥

ಅವರು ಒಳಹೊರಗೆ ಆಗುವ ವಿಷಯದ ಸಂಬಂಧವನ್ನು ಮತ್ತು ಮುಂದೆ ಒದಗುವ ಸಂಬಂಧಗಳನ್ನು ಬಿಟ್ಟು ಮತ್ತು ಏಕಾಂತದಲ್ಲಿದ್ದು, ತಮ್ಮ ಮನವನ್ನು ಮನದಲ್ಲಿಯೇ ಸ್ಥಿರಗೊಳಿಸಿ ಸುಖಪಡುವರು ॥೨೦೬॥

ಶ್ಲೋಕಾರ್ಥ :- ದೂಷಣ ಭೂಷಣಗಳಿಗೆ ಅಂಟದವನೂ, ಮೌನಿಯೂ, ಇದ್ದದ್ದರಲ್ಲಿ ತೃಪ್ತಿ ಪಡುವವನೂ, ಇಲ್ಲಿಯೇ ಇರಬೇಕೆಂಬ ನಿಯಮವಿಲ್ಲದವನೂ, ಸ್ಥಿರಬುದ್ಧಿಯುಳ್ಳವನೂ, ಆಗಿರುವ ಭಕ್ತನೇ ನನಗೆ ಪ್ರಿಯನು ॥೧೯॥

ಅವರು ಬೇರೆಯವರು ನಿಂದೆಯನ್ನು ಮಾಡಿದಾಗ ಕೋಪಿಸಿಕೊಳ್ಳುವುದಿಲ್ಲ ಮತ್ತು ಯಾರಾದರೂ ಸ್ತುತಿ ಮಾಡಿದರೆ ಆತನಿಗೆ ಧನ್ಯವಾದ ಹೇಳುವುದಿಲ್ಲ. ಯಾವ ಪ್ರಕಾರವಾಗಿ ಆಕಾಶವು ಸರ್ವವ್ಯಾಪಕವಾಗಿದ್ದು ಅದಕ್ಕೆ ಯಾವುದರ ಸಂಸರ್ಗವಾಗುವುದಿಲ್ಲವೋ ॥೨೦೭॥

ಅದೇ ಪ್ರಕಾರವಾಗಿ ನಿಂದೆ ಮತ್ತು ಸ್ತುತಿಗಳನ್ನು ಸಮವಾಗಿ ಕಾಣುವರು ಮತ್ತು ಪ್ರಪಂಚದಲ್ಲಿಯೂ ಮತ್ತು ವನದಲ್ಲಿಯೂ ತಮ್ಮ ವೃತ್ತಿಯನ್ನು ಸಮವಾಗಿಯೇ ಇಟ್ಟುಕೊಳ್ಳುವರು ॥೨೦೮॥

ಸತ್ಯ ಮತ್ತು ಅಸತ್ಯ ಭಾಷಣಗಳು ಮುಖದಿಂದ ಹೊರಟರೂ ಸಂಕಲ್ಪ ವೃತ್ತಿ ಇಲ್ಲದ್ದಕ್ಕೆ ಅವರ ಮೌನವು ಮುರಿಯುವುದಿಲ್ಲ ಮತ್ತು ಬ್ರಹ್ಮಸ್ಥಿತಿಯನ್ನು ಎಷ್ಟು ಉಪಭೋಗಿಸಿದರೂ ತೃಪ್ತಿ ಕಾಣರು ॥೨೦೯॥

ಮಳೆ ಬೀಳದಿದ್ದರೂ ಸಮುದ್ರವು ಒಣಗುವುದಿಲ್ಲ. ಅದರಂತೆ ತಮ್ಮ ಇಚ್ಛೆಯಂತೆ ಕಾರ್ಯಗಳಾದರೆ ಅವರು ಸಂತೋಷಪಡುವುದಿಲ್ಲ ಮತ್ತು ಇಚ್ಛೆಯ ವಿರುದ್ಧವಾಗಿ ಕಾರ್ಯಗಳಾದರೆ ಅಸಂತೋಷಪಡುವುದಿಲ್ಲ ॥೨೧೦॥

ಗಾಳಿಯು ಯಾವ ಪ್ರಕಾರವಾಗಿ ಒಂದು ಸ್ಥಾನದಲ್ಲಿ ಇರುವುದಿಲ್ಲವೋ, ಅದೇ ಪ್ರಕಾರವಾಗಿ ಅವರು ಎಲ್ಲಿಯೂ ಆಶ್ರಯಮಾಡಿರುವುದಿಲ್ಲ ॥೨೧೧॥

ಗಾಳಿಯು ಎಲ್ಲ ಆಕಾಶ ತುಂಬ ನಿತ್ಯವೂ ಇರುವಂತೆ, ಎಲ್ಲ ಜಗವು ಇವರ ವಿಶ್ರಾಂತಿ ಸ್ಥಾನವಾಗಿರುವುದು ॥೨೧೨॥

ಈ ವಿಶ್ವವೇ ನನ್ನ ಮನೆ ಎಂದು ಇವರ ನಿಶ್ಚಿತವಾದ ತಿಳುವಳಿಕೆ ಇರುವುದು. ಬಹಳೇನು ಹೇಳಬೇಕು? ಸ್ಥಾವರ ಜಂಗಮಾತ್ಮಕ ವಿಶ್ವವೇ ಅವರಾಗಿರುವರು ॥೨೧೩॥

ಮತ್ತು ಅರ್ಜುನಾ ಈ ರೀತಿಯಲ್ಲಿ ಪೂರ್ಣತ್ವಕ್ಕೆ ಮುಟ್ಟಿಕೊಂಡಿದ್ದರೂ ಆತನಲ್ಲಿ ನನ್ನ ಭಜನೆಯ ಪೂರ್ಣವಾದ ಆಸ್ಥೆ ಇರುವುದು. ಆತನನ್ನು ನಾನು ನನ್ನ ತಲೆಯ ಮೇಲೆ ಕಿರೀಟದಂತೆ ಧರಿಸುವೆನು ॥೨೧೪॥

ಉತ್ತಮ ಪುರುಷನಿಗೆ ಮಸ್ತಕಕ್ಕೆ ಧರಿಸುವುದರಲ್ಲಿ ಏನಾಶ್ಚರ್ಯವಿದೆ? ಆದರೆ ತ್ರಿಭುವನದ ಜನರು ಆತನ ಪಾದತೀರ್ಥದಿಂದ ಧನ್ಯತೆಯನ್ನು ಪಡೆಯುವರು ॥೨೧೫॥

ತರೀ ಶ್ರದ್ಧಾವಸ್ತೂಸೀ ಆದರು । ಕರಿತಾ ಜಾಣಿಜೇ ಪ್ರಕಾರು । ಜರೀ ಹೋಯ ಶ್ರೀಗುರು । ಸದಾಶಿವು ।೨೧೬॥ ಪರೀ ಹೇ ಅಸೋ ಆತಾ । ಮಹೇಶಾತೇ ವಾನಿತಾ । ಆತ್ಮಸ್ತುತಿ ಹೋತಾ । ಸಂಚಾರು ಅಸೇ ।೨೧೭॥ ಯಯಾಲಾಗೀ ಹೇ ನೋಹೇ । ಮ್ಹಣತಲೇ ರಮಾನಾಹೇ । ಅರ್ಜುನಾ ಮೀ ವಾಹೇ । ಶಿರೀ ತಯಾತೇ ।೨೧೮॥ ಜೇ ಪುರುಷಾರ್ಥಸಿದ್ಧಿ ಚೌಥೀ । ಘೇಊನಿ ಆಪುಲಿಯಾ ಹಾತೀ । ರಿಗಾಲಾ ಭಕ್ತಿಪಂಥೀ । ಜಗಾ ದೇತು ।೨೧೯॥ ಕೈವಲ್ಯಾಚಾ ಅಧಿಕಾರೀ । ಮೋಕ್ಷಾಚೀ ಸೋಡೀ ಬಾಂಧೀ ಕರೀ । ಕೀ ಜಳಾಚಿಯೇ ಪರೀ । ತಳವಟು ಘೇ ।೨೨೦॥ ಮ್ಹಣೌನಿ ಗಾ ನಮಸ್ಕಾರೂ । ತಯಾತೇ ಆಮ್ಹೀ ಮಾಥಾ ಮುಕುಟ ಕರೂ । ತಯಾಚೀ ಟಾಂಚ ಧರೂ । ಹೃದಯೀ ಆಮ್ಹೀ ।೨೨೧॥ ತಯಾಚಿಯಾ ಗುಣಾಂಚೀ ಲೇಣೀ । ಲೇವವೂ ಆಪುಲಿಯೇ ವಾಣೀ । ತಯಾಚೀ ಕೀರ್ತಿ ಶ್ರವಣೀ । ಆಮ್ಹೀ ಲೇವೂ ।೨೨೨॥ ತೋ ಪಹಾವಾ ಹೇ ಡೋಹಳೇ । ಮ್ಹಣೌನಿ ಅಚಕ್ಷೂಸೀ ಮಜ ಡೋಳೇ । ಹಾತೀಚೇನಿ ಲೀಲಾ ಕಮಳೇ । ಪೂಜೂ ತಯಾತೇ ।೨೨೩॥ ದೋವರೀ ದೋನೀ । ಭುಜಾ ಆಲೋ ಘೇಊನಿ । ಆಲಿಂಗಾವಯಾಲಾಗುನೀ । ತಯಾಚೇ ಆಂಗ ।೨೨೪॥ ತಯಾ ಸಂಗಾಚೇನಿ ಸುರವಾಡೇ । ಮಜ ವಿದೇಹಾ ದೇಹ ಧರಣೇ ಘಡೇ । ಕಿಂಬಹುನಾ ಆವಡೇ । ನಿರುಪಮು ।೨೨೫॥ ತೇಣೇಸೀ ಆಮ್ಹಾ ಮೈತ್ರ । ಏಥ ಕಾಯಸೇ ವಿಚಿತ್ರ? । ಪರೀ ತಯಾಚೇ ಚರಿತ್ರ । ಐಕತೀ ಜೇ ।೨೨೬॥ ತೇಹೀ ಪ್ರಾಣಾಪರೌತೇ । ಆವಡತೀ ಹೇ ನಿರುತೇ । ಜೇ ಭಕ್ತಚರಿತ್ರಾತೇ । ಪ್ರಶಂಸಿತೀ ।೨೨೭॥ ಜೋ ಹಾ ಅರ್ಜುನಾ ಸಾದ್ಯಂತ । ಸಾಂಗಿತಲಾ ಪ್ರಸ್ತುತ । ಭಕ್ತಿಯೋಗು ಸಮಸ್ತ । ಯೋಗರೂಪ ।೨೨೮॥ ತಯಾ ಮೀ ಪ್ರೀತಿ ಕರೀ । ಕಾ ಮನಿ ಶಿರಸಾ ಧರೀ । ಯೇವಢೀ ಥೋರೀ । ಜಯಾ ಸ್ಥಿತೀಯೇ ।೨೨೯॥

ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।
ಶ್ರದ್ದಧಾನಾ ಮತ್ಪರಮಾಃ ಭಕ್ತಾಸ್ತೇಽತೀವ ಮೇ ಪ್ರಿಯಾಃ ।೨೦॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ .
ಭಕ್ತಿಯೋಗೋ ನಾಮ ದ್ವಾದಶೋಽಧ್ಯಾಯಃ

ತೇ ಹೇ ಗೋಷ್ಟೀ ರಮ್ಯ । ಅಮೃತಧಾರಾ ಧರ್ಮ್ಯ । ಕರೀತೀ ಪ್ರತೀತಿ ಗಮ್ಯ । ಆಇಕೋನಿ ಜೇ ।೨೩೦॥

ಆತನು ನನ್ನಲ್ಲಿ ಪೂರ್ಣ ಶ್ರದ್ಧೆಯನ್ನಿಟ್ಟಿರುವನು, ಆತನ ಆದರ ಸತ್ಕಾರಗಳನ್ನು ಹೇಗೆ ಮಾಡಬೇಕೆಂದು ವಿಚಾರಿಸಿದರೆ ಮಹಾದೇವರು ಗುರುಗಳಾದರೆ ಮಾತ್ರ ತಿಳಿಯುವುದು ।೨೧೬॥

ಆದರೆ ಈ ಮಾತಿರಲಿ, ಕಾರಣ ಶ್ರೀಶಂಕರನ ಸ್ತುತಿ ಮಾಡಹತ್ತಿದರೆ ನಿಜವಾಗಿಯೂ ನನ್ನ ಸ್ತುತಿಯೇ ಆಗಿ ಆತ್ಮ ಸ್ತುತಿಯಾಗುವುದು ।೨೧೭॥

ಆದ್ದರಿಂದ ಶ್ರೀಕೃಷ್ಣನು ಹೇಳುವನು:- ಅರ್ಜುನಾ, ಈ ದೃಷ್ಟಾಂತವು ಸರಿ ಅಲ್ಲ, ಹೋಗಲಿ. ಒಟ್ಟಿನಲ್ಲಿ ನಾನು ನನ್ನ ಭಕ್ತನನ್ನು ಶಿರದ ಮೇಲೆ ಧರಿಸುವೆನು ।೨೧೮॥

ಆ ಪುರುಷನು ನಾಲ್ಕನೆಯ ಪುರುಷಾರ್ಥ ಸಿದ್ಧಿಯಾದ ಮೋಕ್ಷವನ್ನು ಹಸ್ತಗತ ಮಾಡಿಕೊಂಡು ಭಕ್ತಿ ಮಾರ್ಗದಿಂದ ನಡೆಯುತ್ತ ಜಗತ್ತಿಗೆ ದಾರಿ ನಿರ್ಮಿಸುವನು ।೨೧೯॥

ಆತನು ಬ್ರಹ್ಮಪ್ರಾಪ್ತಿಯ ಪೂರ್ಣ ಅಧಿಕಾರಿಯಾಗಿದ್ದು, ಮೋಕ್ಷದ ಗಂಟನ್ನು ಉಚ್ಚುವನು. ಹೀಗಿದ್ದರೂ ನೀರಿನಂತೆ ಬಹು ನಮ್ರನಿರುವನು ।೨೨೦॥

ಆದ್ದರಿಂದಲೇ ನಾವು ಆತನಿಗೆ ನಮಸ್ಕರಿಸುವೆವು. ನಮ್ಮ ಮಸ್ತಕದ ಮೇಲೆ ಧರಿಸುವೆವು ಮತ್ತು ಆತನ ಶ್ರೀವತ್ಸ ಲಾಂಛನ ಚಿನ್ಹವನ್ನು ನಾವು ನಮ್ಮ ಹೃದಯದಲ್ಲಿ ಧರಿಸುವೆವು ।೨೨೧॥

ಆತನ ಗುಣರೂಪ ಅಲಂಕಾರವನ್ನು ನಾವು ನಮ್ಮ ವಾಣಿಗೆ ಧರಿಸುವೆವು. (ಆತನ ಗುಣಾನುವಾದವನ್ನು ನಾವು ಮಾಡುವೆವು) ಮತ್ತು ಆತನ ಕೀರ್ತಿರೂಪ ಅಲಂಕಾರವನ್ನು ಕಿವಿಗಳಿಗೆ ಧರಿಸುವೆವು (ಅವರ ವರ್ಣನೆಯನ್ನು ನಾವು ಕೇಳುವೆವು) ।೨೨೨॥

ಆತನನ್ನು ನೋಡಲು ನನಗೆ ಬಯಕೆ ಬಂದಾಗ್ಗೆ ಅಚಕ್ಷುನಾದ ನಾನು ಅವತಾರವನ್ನು ಧರಿಸಿ ನೋಡುವೆನು ಮತ್ತು ಸದಾವಕಾಲ ಇರುವ ನನ್ನ ಕೈಯಲ್ಲಿನ ಲೀಲಾ ಕಮಲದಿಂದ ಆತನನ್ನು ಪೂಜಿಸುವೆನು ।೨೨೩॥

ಎರಡರ ಮೇಲೆ ಎರಡು ಹೀಗೆ ನಾಲ್ಕು ಕೈಗಳನ್ನು ಧರಿಸಿ ಆತನನ್ನು ಆಲಿಂಗಿಸಲು ಅವತಾರಕ್ಕೆ ಬರುವೆನು ।೨೨೪॥

ಆತನಸಂಗತಿಯ ಸುಖಕ್ಕಾಗಿ ನಿರಾಕಾರನಾದ ನಾನು, ನನಗೆ ದೇಹಧಾರಣೆ ಮಾಡಬೇಕಾಗುವುದು. ಹೆಚ್ಚಿಗೇನು ಹೇಳಬೇಕು? ಆತನು ನನ್ನ ಪ್ರಾಣವೇ ಆಗಿರುವನು ।೨೨೫॥

ಆತನೊಬ್ಬನೇ ನನ್ನ ಮಿತ್ರನು ಎಂದು ಹೇಳುವುದರಲ್ಲಿ ಏನು ಆಶ್ಚರ್ಯವಿದೆ? ಇಷ್ಟೇ ಅಲ್ಲ ಯಾರು ಇವರ ಚರಿತ್ರೆಯನ್ನು ಕೇಳುತ್ತಾರೋ ।೨೨೬॥

ಮತ್ತು ಯಾರು ನನ್ನ ಭಕ್ತರ ಚರಿತ್ರೆಯನ್ನು ಹೊಗಳುತ್ತಾರೋ, ಅವರೂ ಸಹ ನನಗೆ ನನ್ನ ಪ್ರಾಣಕ್ಕಿಂತಲೂ ಪ್ರಿಯರು ।೨೨೭॥

ಅರ್ಜುನಾ, ನಿನಗೆ ಪೂರ್ಣರೂಪದಿಂದ ಹೇಳಿದ ಯೋಗವು ಅದು ಭಗವತ್ ಪ್ರಾಪ್ತಿಯ ಉಪಾಯದಿಂದ ತುಂಬಿದ ಭಕ್ತಿಯೋಗವಾಗಿರುವುದು ।೨೨೮॥

ಈ ಭಕ್ತಿಯೋಗದ ಸ್ಥಿತಿಯು ಎಷ್ಟೊಂದು ದೊಡ್ಡದಾಗಿದೆ ಎಂದರೆ ಅವರನ್ನು ನಾನು ಪ್ರೀತಿಸುವೆನು ಮತ್ತು ಅವರನ್ನು ನನ್ನ ಮನದಲ್ಲಿ ಮಸ್ತಕದಲ್ಲಿ ಧರಿಸುವೆನು ।೨೨೯॥

ಶ್ಲೋಕಾರ್ಥ :- ಶ್ರದ್ಧೆಯುಂಟಾಗಿ ನನ್ನನ್ನೇ ನಂಬಿಕೊಂಡು ನಾನು ಹೇಳಿದ ಈ ಅಮೃತರೂಪ ಧರ್ಮವನ್ನು ಯಥಾರೀತಿಯಾಗಿ ಆಚರಿಸುವ ಭಕ್ತರು ನನಗೆ ಪ್ರಾಣಪ್ರಿಯರು ।೨೦॥

ಇಲ್ಲಿಗೆ ಉಪನಿಷತ್ತೂ, ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ, ಶ್ರೀಕೃಷ್ಣಾರ್ಜುನ ಸಂವಾದವೂ ಆದ ಶ್ರೀಮದ್ಭಗವದ್ಗೀತೆಯಲ್ಲಿ ಭಕ್ತಿಯೋಗವೆಂಬ ಹೆಸರಿನ ಹನ್ನೆರಡನೆಯ ಅಧ್ಯಾಯವು ಮುಗಿದುದು.

ಯಾವ ಈ ಯೋಗದ ರಮ್ಯವಾದ, ಅಮೃತದ ಮಳೆಗರೆಯುವ ಮತ್ತು ಧರ್ಮಕ್ಕೆ ಅನುಕೂಲವಾದ ಇಂತಹದನ್ನು ಕೇಳಿ ಯಾರು ಅದರ ಅನುಭವ ಪಡೆಯುವರೋ ।೨೩೦॥

ತೈಸೀಚಿ ಶ್ರದ್ಧೇಚೇನಿ ಆದರೇ । ಜಯಾಂಚೇ ಠಾಯೀ ವಿಸ್ತರೇ । ಜೇವೀ ಜಯಾ ಥಾರೇ । ಜೇ ಅನುಷ್ಠಿತೀ ।।೨೩೧।। ಪರೀ ನಿರೂಪಿಲೀ ಜೈಸೀ । ತೈಸೀಚ ಸ್ಥಿತಿ ಮಾನಸೀ । ಮಗ ಸುಕ್ಷೇತ್ರೀ ಜೈಸೀ । ಪೇರಣೀ ಕೇಲೀ ।।೨೩೨।। ಪರೀ ಮಾತೇ ಪರಮ ಕರೂನಿ । ಇಯೇ ಅರ್ಥೀ ಪ್ರೇಮ ಧರೂನಿ । ಹೇಂಚಿ ಸರ್ವಸ್ವ ಮಾನೂನಿ । ಘೇತೀ ಜೇ ಪೈ ।।೨೩೩।। ಪಾರ್ಥಾ ಗಾ ಜಗೀ । ತೇಚಿ ಭಕ್ತ ತೇಚಿ ಯೋಗೀ । ಉತ್ಕಂಠಾ ತಯಾಲಾಗೀ । ಅಖಂಡ ಮಜ ।।೨೩೪।। ತೇ ತೀರ್ಥ ತೇ ಕ್ಷೇತ್ರ । ಜಗೀ ತೇಂಚಿ ಪವಿತ್ರ । ಭಕ್ತಿಕಥೇಸೀ ಮೈತ್ರ । ಜಯಾ ಪುರುಷಾ ।।೨೩೫।। ಆಮ್ಹೀ ತಯಾಂಚೇ ಕರೂ ಧ್ಯಾನ । ತೇ ಆಮುಚೇ ದೇವತಾರ್ಚನ । ತೇ ವಾಂಚೂನಿ ಆನ । ಗೋಮಟೇ ನಾಹೀ ।।೨೩೬।। ತಯಾಂಚೇ ಆಮ್ಹಾ ವ್ಯಸನ । ತೇ ಆಮುಚೇ ನಿಧಿನಿಧಾನ । ಕಿಂಬಹುನಾ ಸಮಾಧಾನ । ತೇ ಮಿಳತೀ ತೈ ।।೨೩೭।। ಪೈ ಪ್ರೇಮಳಾಚೀ ವಾರ್ತಾ । ಜೇ ಅನುವಾದತೀ ಪಂಡುಸುತಾ । ತೇ ಮಾನೂ ಪರಮದೇವತಾ । ಆಪುಲೀ ಆಮ್ಹೀ ।।೨೩೮।। ಐಸೇ ನಿಜಜನಾನಂದೇ । ತೇಣೇ ಜಗದಾದಿಕಂದೇ । ಬೋಲಿಲೇ ಮುಕುಂದೇ । ಸಂಜಯೋ ಮ್ಹಣೇ ।।೨೩೯।। ರಾಯಾ ಜೋ ನಿರ್ಮಳು । ನಿಷ್ಕಲಂಕ ಲೋಕಕೃಪಾಳು । ಶರಣಾಗತಾ ಪ್ರತಿಪಾಳು । ಶರಣ್ಯು ಜೋ ।।೨೪೦।। ಪೈ ಸುರಸಹಾಯಶೀಳು । ಲೋಕಲಾಲನಲೀಳು । ಪ್ರಣತಪ್ರತಿಪಾಳು । ಹಾ ಖೇಳು ಜಯಾಚಾ ।।೨೪೧।। ಜೋ ಧರ್ಮಕೀರ್ತಿ ಧವಳು । ಅಗಾಧ ದಾತೃತ್ವೇ ಸರಳು । ಅತುಳಬಳೇ ಪ್ರಬಳು । ಬಳಿಬಂಧನು ।।೨೪೨।। ಜೋ ಭಕ್ತಜನವತ್ಸಲು । ಪ್ರೇಮಳಜನ ಪ್ರಾಂಜಳು । ಸತ್ಯಸೇತು ಸಕಳು । ಕಲಾನಿಧೀ ।।೨೪೩।। ತೋ ಶ್ರೀಕೃಷ್ಣವೈಕುಂಠೀಚಾ । ಚಕ್ರವರ್ತೀ ನಿಜಾಂಚಾ । ಸಾಂಗೇ ಯೇರು ದೈವಾಚಾ । ಆಇಕತು ಅಸೇ ।।೨೪೪।। ಆತಾ ಯಯಾವರೀ । ನಿರೂಪಿತೀ ಪರೀ । ಸಂಜಯೋ ಮ್ಹಣೇ ಅವಧಾರೀ । ಧೃತರಾಷ್ಟ್ರಾತೇ ।।೨೪೫।। ತೇಚಿ ರಸಾಳ ಕಥಾ । ಮರ್ಹಾಠಿಯಾ ಪ್ರತಿಪಥಾ । ಆಣಿಜೇಲ ಆತಾ । ಅವಧಾರಿಜೋ ।।೨೪೬।। ಜ್ಞಾನದೇವ ಮ್ಹಣೇ ತುಮ್ಹೀ । ಸಂತ ವೋಳಗಾವೇತಿ ಆಮ್ಹೀ । ಹೇ ಪಢವಿಲೊ ಜೀ ಸ್ವಾಮೀ । ನಿವೃತ್ತಿ ದೇವೀ ।।೨೪೭।।

---

ಇತಿ ಶ್ರೀ ಜ್ಞಾನದೇವ ವಿರಚಿತಾಯಾಂ ಭಾವಾರ್ಥದೀಪಿಕಾಯಾಂ ದ್ವಾದಶೋಽಧ್ಯಾಯಃ ।।೧೨।।

ಶ್ಲೋಕ:೨೦ ಓವಿ:೨೪೭

ಅದರಂತೆ ಈ ಯೋಗದಲ್ಲಿ ಪೂರ್ಣಶ್ರದ್ಧೆ ಇಟ್ಟು ಯಾರ ಮನದಲ್ಲಿ ಉತ್ತಮ ರೀತಿಯಲ್ಲಿ ನೆಟ್ಟಿರುವುದೋ, ಇದರ ಬಗ್ಗೆ ಪೂರ್ಣ ವಿಚಾರ ಮಾಡಿ ಯಾರು ಇದರ ಆಚರಣೆಯನ್ನು ಮಾಡುವರೋ ।೨೩೧॥

ಇಲ್ಲಿಯವರೆಗೆ ನಿರೂಪಿಸಿದಂತೆ ಯಾರು ಮನದ ಸ್ಥಿತಿಯನ್ನು ಮಾಡಿಕೊಳ್ಳುವರೋ, ಅವರಿಗೆ ಉತ್ತಮ ಹೊಲದಲ್ಲಿ ಬಿತ್ತಿ ಉತ್ತಮ ಬೆಳೆ ಬಂದು ಫಲದ್ರೂಪವಾಗುವುದು ।೨೩೨॥

ನನ್ನನ್ನು ಪರಮ ಶ್ರೇಷ್ಠನೆಂದು ಮಾನಿಸಿ ಮತ್ತು ನನ್ನಲ್ಲಿಯೇ ಪ್ರೇಮವನ್ನಿಟ್ಟು ಇದೇ ನನ್ನ ಸರ್ವಸ್ವವು ಎಂದು ಯಾರು ತಿಳಿಯುವರೋ ।೨೩೩॥

ಅವರೇ ಈ ಜಗತ್ತಿನಲ್ಲಿ ನನ್ನ ಭಕ್ತರು, ಮತ್ತು ಯೋಗಿಗಳು. ಆದ್ದರಿಂದಲೇ ಪಾರ್ಥಾ, ಅವರಿಗಾಗಿ ನನ್ನ ಅತಿಶಯ ಪ್ರೇಮವಿರುವುದು ।೨೩೪॥

ಯಾರಿಗೆ ಭಕ್ತಿಕಥೆಯು ಅತ್ಯಂತ ಪ್ರೇಮವಾಗಿರುವುದೋ, ಅವರೇ ಈ ಜಗದಲ್ಲಿ ನನ್ನ ತೀರ್ಥವು, ಅವರೇ ನನ್ನ ಕ್ಷೇತ್ರವು ಮತ್ತು ಅವರೇ ಪವಿತ್ರ ಪುರುಷರಿರುವರು ।೨೩೫॥

ಅವರ ಧ್ಯಾನವನ್ನು ನಾವು ಮಾಡುವೆವು, ಅವರೇ ನಮಗೆ ಪೂಜಿಸುವ ದೇವರು ಮತ್ತು ಅವರ ಹೊರತಾದ ಬೇರೆ ಇನ್ನೊಂದು ಮಾತು ನಮಗೆ ಯಾವುದೂ ಹಿಡಿಸುವುದಿಲ್ಲ ।೨೩೬॥

ಅವರದೇ ನಮಗೆ ನಾದ ಹತ್ತುವುದು ಮತ್ತು ಅವರೇ ನಮ್ಮ ನಿಧಿಯಾಗಿರುವರು. ಹೆಚ್ಚಿಗೇನು ಹೇಳಬೇಕು? ಅವರ ದರ್ಶನವಾದಾಗಲೇ ನಮಗೆ ಸಮಾಧಾನವಾಗುವುದು ।೨೩೭॥

ಹೇ ಪಂಡುಸುತನೇ, ಯಾವ ನನ್ನ ಭಕ್ತರ ಚರಿತ್ರೆಗಳನ್ನು ಯಾರು ಹೇಳುವರೋ, ಅವರೇ ನಮಗೆ ಪರಮದೇವರು. ಹೀಗೆ ನಾನು ಭಾವಿಸುತ್ತೇನೆ ।೨೩೮॥

ಸಂಜಯನು ಹೇಳಿದನು:- ಸರ್ವ ಜಗತ್ತಿಗೆ ಆನಂದ ಕೊಡುವ, ಮತ್ತು ಸರ್ವ ಜಗವನ್ನು ಹುಟ್ಟಿಸುವ ಯಾವ ಮುಕುಂದನು ಈ ಪ್ರಕಾರವಾಗಿ ಹೇಳಿದನು ।೨೩೯॥

ರಾಜಾ ಧೃತರಾಷ್ಟ್ರನೇ, ಯಾವ ನಿರ್ಮಲನು, ನಿಷ್ಕಲಂಕನು, ಲೋಕಕೃಪಾವಂತನು, ಶರಣಾಗತ ಶರಣ್ಯನು, ಶರಣ ಹೋಗಲಿಕ್ಕೆ ಯೋಗ್ಯನಾದವನು ।೨೪೦॥

ದೇವತೆಗಳಿಗೆ ಸಹಾಯ ಮಾಡುವುದೇ ಆತನ ಶೀಲವು, ಲೋಕವನ್ನು ಪಾಲನೆ ಮಾಡುವುದೇ ಆತನ ಲೀಲೆಯು, ಮತ್ತು ಶರಣಾಂಗರರನ್ನು ರಕ್ಷಿಸುವುದೇ ಆತನ ಆಟವಾಗಿರುವುದು ।೨೪೧॥

ಧರ್ಮ ಮತ್ತು ಕೀರ್ತಿಯಿಂದ ಸ್ವಚ್ಛವಾಗಿ ಶೋಭಿಸುವ, ದಾನ ಮಾಡುವುದರಲ್ಲಿ ಅಗಾಧವಾದ ಸರಳತನವಿರುವ, ಮತ್ತು ನಿರುಪಮ ಬಲವಾನನಾಗಿದ್ದು ಬಲಿಯ ಪ್ರೇಮ ಬಂಧನದಲ್ಲಿ ಬದ್ಧನಾಗಿರುವನು ।೨೪೨॥

ಭಕ್ತ ಜನರಿಗೆ ಕನಿಕರಪಡುವವನು, ಪ್ರೇಮಳ ಜನರಲ್ಲಿ ಸರಳ ಮನಸ್ಸಿನಿಂದ ನಡೆಯುವವನು, ಸತ್ಯವಂತರ ತಾರಕನು, ಮತ್ತು ಹದಿನಾಲ್ಕು ವಿದ್ಯೆ ಹಾಗೂ ಅರವತ್ನಾಲ್ಕು ಕಲೆಗಳ ನಿಧಿಯು ।೨೪೩॥

ಆ ಭಕ್ತರ ರಾಜನಾದ ವೈಕುಂಠ ನಾಯಕ ಶ್ರೀಕೃಷ್ಣ ಪರಮಾತ್ಮನು ಹೇಳಿದ್ದನ್ನು ದೈವಶಾಲಿಯಾದ ಅರ್ಜುನನು ಕೇಳಿದನು ।೨೪೪॥

ಸಂಜಯನು ಪುನಃ ಹೇಳಿದನು:- ಹೇ ರಾಜಾ ಧೃತರಾಷ್ಟ್ರನೇ, ಇನ್ನು ಮುಂದೆ ಕಥೆಯನ್ನು ಹೇಳುವ ಪ್ರಕಾರವನ್ನು ನೀನು ಕೇಳು ।೨೪೫॥

ಇದೇ ರಸಭರಿತವಾದ ಕಥೆಯನ್ನು ನಾವು ಮರಾಠಿ ಭಾಷೆಯಲ್ಲಿ ಹೇಳುವೆವು, ಅದನ್ನು ಲಕ್ಷಕೊಟ್ಟು ಕೇಳಿರಿ ।೨೪೬॥

ಜ್ಞಾನೇಶ್ವರರು ಹೇಳುವರು:- ಶ್ರೋತೃಗಳವರೇ, ನಿಮ್ಮಂತಹ ಸಂತರಿಗೆ ನಾವು ಶರಣುಹೋಗಬೇಕೆಂದು, ಇದನ್ನೇ ನಮಗೆ ನಮ್ಮ ಗುರುಗಳಾದ ನಿವೃತ್ತಿನಾಥರು ಕಲಿಸಿರುವರು ।೨೪೭॥

ಶ್ರೀಜ್ಞಾನೇಶ್ವರ ಮಹಾರಾಜರಿಂದ ರಚಿತವಾದ ಭಾವಾರ್ಥ ದೀಪಿಕೆಯ ಹನ್ನೆರಡನೆಯ ಅಧ್ಯಾಯದ ವಿವರಣೆ ಸಮಾಪ್ತವು

# ಸಾರ್ಥ ಶ್ರೀಜ್ಞಾನೇಶ್ವರೀ

## ಅಧ್ಯಾಯ ತೇರಾವಾ

ಶ್ರೀ ಗಣೇಶಾಯ ನಮಃ

ಆತ್ಮರೂಪ ಗಣೇಶು ಕೇಲಿಯಾ ಸ್ಮರಣ । ಸಕಳ ವಿದ್ಯಾಂಚೇ ಅಧಿಕರಣ । ತೇಚಿ ವಂದೂ ಶ್ರೀಚರಣ । ಶ್ರೀಗುರುಚೇ ।।೧।। ಜಯಾಂಚೇನಿ ಆಠವೇ । ಶಬ್ದಸೃಷ್ಟಿ ಆಂಗವೇ । ಸಾರಸ್ವತ ಆಘವೇ । ಜಿವ್ಹೇಸಿ ಯೇ ।।೨।। ವಕ್ತೃತ್ವಾ ಗೋಡಪಣೇ । ಅಮೃತಾತೇ ಪಾರುಖೇ ಮ್ಹಣೇ । ರಸ ಹೋತೀ ವೋಳಂಗಣೇ । ಅಕ್ಷರಾಂಸೀ ।।೩।। ಭಾವಾಚೇ ಅವತರಣ । ಅವತರವಿತೀ ಖೂಣ । ಹಾತಾ ಚಢೇ ಸಂಪೂರ್ಣ । ತತ್ತ್ವಭೇದ ।।೪।। ಶ್ರೀಗುರುಚೇ ಪಾಯ । ಜೈ ಹೃದಯ ಗಿಂವಸೂನಿ ಠಾಯ । ತೈ ಯೇವಢೇ ಭಾಗ್ಯ ಹೋಯ । ಉನ್ಮೇಖಾಸೀ ।।೫।। ತೇ ನಮಸ್ಕಾರೂನಿ ಆತಾ । ಜೋ ಪಿತಾಮಹಾಚಾ ಪಿತಾ । ಲಕ್ಷ್ಮೀಯೇಚಾ ಭರ್ತಾ । ಐಸೇ ಮ್ಹಣೇ ।।೬।।

ಶ್ರೀ ಭಗವಾನುವಾಚ :-
ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।
ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ।।೧।।

ತರೀ ಪಾರ್ಥಾ ಪರಿಸಿಜೇ । ದೇಹ ಹೇ ಕ್ಷೇತ್ರ ಮಣಿಜೇ । ಜೋ ಹೇ ಜಾಣೇ ತೋ ಬೋಲಿಜೇ । ಕ್ಷೇತ್ರಜ್ಞ ಏಥೇ ।।೭।।

ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ ।
ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ ।।೨।।

ತರೀ ಕ್ಷೇತ್ರಜ್ಞ ಜೋ ಏಥೇ । ತೋ ಮೀಚಿ ಜಾಣ ನಿರುತೇ । ಜೋ ಸರ್ವ ಕ್ಷೇತ್ರಾಂತೇ । ಸಂಗೋಪೋನಿ ಅಸೇ ।।೮।। ಕ್ಷೇತ್ರ ಆಣಿ ಕ್ಷೇತ್ರಜ್ಞಾತೇ । ಜಾಣಣೇ ಜೇ ನಿರುತೇ । ಜ್ಞಾನ ಐಸೇ ತಯಾತೇ । ಮಾನೂ ಆಮ್ಹೀ ।।೯।।

ತತ್ ಕ್ಷೇತ್ರಂ ಯಚ್ಚ ಯಾದೃಕ್ಚ ಯದ್ವಿಕಾರಿ ಯತಶ್ಚ ಯತ್ ।
ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು ।।೩।।

# ಸಾರ್ಥ ಶ್ರೀಜ್ಞಾನೇಶ್ವರೀ

## ಹದಿಮೂರನೆಯ ಅಧ್ಯಾಯ

ಆತ್ಮರೂಪ ಶ್ರೀಗಣೇಶನ ಸ್ಮರಣೆಯನ್ನು ಮಾಡಿ, ಸರ್ವವಿದ್ಯೆಗಳ ಆಶ್ರಯಸ್ಥಾನವಾದ ಶ್ರೀಗುರುಗಳ ಚರಣ ಕಮಲಗಳಿಗೆ ನಾನು ವಂದಿಸುವೆನು ॥೧॥

ಇವರ ಸ್ಮರಣೆ ಮಾಡುವುದರಿಂದ ಎಲ್ಲ ಕವಿತಾ ಶಕ್ತಿಯು ಸ್ವಾಧೀನವಾಗುವುದು ಮತ್ತು ಎಲ್ಲ ವಿದ್ಯೆಗಳು ನಾಲಿಗೆಯಲ್ಲಿ ಬರುವುವು ॥೨॥

ಹಾಗೆಯೇ ಅಮೃತವೂ ಸಪ್ಪಗಾಗುವಂತೆ ವಕ್ತೃತ್ವಕ್ಕೆ ಮಾಧುರ್ಯವು ಒದಗುವುದು ಮತ್ತು ಮುಖದಿಂದ ಹೊರಡುವ ಪ್ರತಿಯೊಂದು ಅಕ್ಷರಗಳು ರಸಮಯ ವಾಗುವುವು ॥೩॥

ಗರ್ಭಿತ ಅರ್ಥಗಳ ಆಗಮನವಾಗಿ ಅವು ಒಂದರಿಂದ ಒಂದು ಸೂಚಿಸುವುವು ಮತ್ತು ಆತ್ಮಜ್ಞಾನದ ಮರ್ಮವು ತಿಳಿಯುವುದು ॥೪॥

ತನ್ನ ಮನದಲ್ಲಿ ಶ್ರೀಗುರುಗಳ ಚರಣಗಳನ್ನು ಸದಾ ಕಾಲದಲ್ಲಿ ಸ್ಮರಿಸಿದರೆ ಮಾತ್ರ ಈ ಪ್ರಕಾರದ ಜ್ಞಾನೋದಯದ ಭಾಗ್ಯವು ದೊರಕುವುದು ॥೫॥

ಶ್ರೀಜ್ಞಾನೇಶ್ವರ ಮಹಾರಾಜರು ಹೇಳುವರು:- ಬ್ರಹ್ಮದೇವನ ಪಿತನಾದ ಮತ್ತು ಶ್ರೀಲಕ್ಷ್ಮೀಯ ಒಡೆಯನಾದ ಶ್ರೀಕೃಷ್ಣಪರಮಾತ್ಮನು ಹೀಗೆ ಹೇಳಿದನು ॥೬॥

ಶ್ಲೋಕಾರ್ಥ :- ಭಗವಂತನು ಹೀಗೆಂದನು:- ಹೇ ಕುಂತೀಕುಮಾರಾ! ಈ ಶರೀರಕ್ಕೆ ಕ್ಷೇತ್ರವೆಂದೂ ಇದನ್ನು ತಿಳಿಯುವವನು ಕ್ಷೇತ್ರಜ್ಞನೆಂದೂ ಅನುಭವ ವೇತ್ತರು ಹೇಳುತ್ತಾರೆ ॥೧॥

ಹೇ ಪಾರ್ಥನೇ ಕೇಳು, ಈ ದೇಹಕ್ಕೆ "ಕ್ಷೇತ್ರ" ಎಂದು ಹೇಳುವರು ಮತ್ತು ಯಾರು ಈ ಕ್ಷೇತ್ರವನ್ನು ಅರಿಯುವರೋ, ಅವರಿಗೆ "ಕ್ಷೇತ್ರಜ್ಞ" ಎಂದು ಹೇಳುವರು ॥೭॥

ಶ್ಲೋಕಾರ್ಥ :- ಕ್ಷೇತ್ರಗಳೆಂದು ಹೇಳಿಕೊಳ್ಳುವ ಈ ಎಲ್ಲ ಶರೀರಗಳಲ್ಲಿಯೂ ಸಹ ನಾನೇ ಕ್ಷೇತ್ರಜ್ಞ ಎಂದು ತಿಳಿ. ಅರ್ಜುನಾ! ಕ್ಷೇತ್ರ, ಕ್ಷೇತ್ರಜ್ಞರನ್ನು ವಿಭಾಗ ಮಾಡಿ ತಿಳಿದುಕೊಳ್ಳುವ ಜ್ಞಾನವೇ ನಿಜವಾದ ಜ್ಞಾನವೆಂದು ನನ್ನ ಅಭಿಪ್ರಾಯ ॥೨॥

ಮತ್ತು ಕ್ಷೇತ್ರಜ್ಞವೆಂದು ಯಾವುದಕ್ಕೆ ಹೇಳುವರೋ, ಮತ್ತು ಯಾವುದು ಎಲ್ಲ ಕ್ಷೇತ್ರಗಳ ಪೋಷಣೆ ಮಾಡುವುದೋ, ಅದು ನಾನೇ ಇರುವೆ ಎಂದು ನಿಶ್ಚಯವಾಗಿ ತಿಳಿ ॥೮॥

ಹಾಗೂ, ಕ್ಷೇತ್ರ ಮತ್ತು ಕ್ಷೇತ್ರಜ್ಞ ಇವುಗಳನ್ನು ಯಥಾರ್ಥವಾಗಿ ತಿಳಿದುಕೊಳ್ಳುವುದಕ್ಕೆ ನಾವು ಜ್ಞಾನವೆಂದು ತಿಳಿಯುತ್ತೇವೆ ॥೯॥

ಶ್ಲೋಕಾರ್ಥ :- ಕ್ಷೇತ್ರದ ಆಕಾರ ವಿಕಾರಗಳನ್ನು ಅದರ ಸ್ವರೂಪ ಸ್ವಭಾವದ ಪ್ರಭಾವಗಳನ್ನು ಸಂಕ್ಷೇಪವಾಗಿ ಹೇಳುತ್ತೇನೆ, ಕೇಳು ॥೩॥

ತರೀ ಕ್ಷೇತ್ರ ಯೇಣೇ ನಾಂವೇ । ಹೇ ಶರೀರ ಜೇಣೇ ಭಾವೇ । ಮ್ಹಣತಲೇ ತೇ ಆಘವೇ । ಸಾಂಗೋ ಆತಾ ॥೧೦॥ ಹೇ ಕ್ಷೇತ್ರ ಕಾ ಮ್ಹಣಿಜೇ? । ಕೈಸೇ ಕೇ ಹೇ ಉಪಜೇ? । ಕವಣಕವಣೇ ವಾಢವಿಜೇ? । ವಿಕಾರೀ ಏಥ ॥೧೧॥ ಹೇ ಔಟಹಾತ ಮೋಟಕೇ? । ಕೀ ಕೇವಢೇ ಪಾ ಕೇತುಕೇ? । ಬರಡ ಕೀ ಪಿಕೇ? । ಕೋಣಾಚೇ ಹೇ? ॥೧೨॥ ಇತ್ಯಾದಿ ಸರ್ವ । ಜೇ ಜೇ ಯಾಚೇ ಭಾವ । ತೇ ಬೋಲಿಜತೀ ಸಾವೇವ । ಅವಧಾನ ದೇಈ ॥೧೩॥ ಪೈ ಯಾಚಿ ಸ್ಥಳಾಕಾರಣೇ । ಶ್ರುತಿ ಸದಾ ಬೋಬಾಣೇ । ತರ್ಕು ಯೇಣೇಚಿ ಠೀ ಕರಣೇ । ತೋಂಡಾಳು ಕೇಲಾ ॥೧೪॥ ಚಾಳಿತಾ ಹೇಚಿ ಬೋಲೀ । ದರ್ಶನೇ ಶೇವಟಾ ಆಲೀ । ತೇವೀಂಚಿ ನಾಹೀ ಬುಝವಿಲೀ । ಅಝುನೀ ದ್ವಂದ್ವೇ ॥೧೫॥ ಶಾಸ್ತ್ರಾಂಚಿಯೇ ಸೋಯರಿಕೇ । ವಿಚಳಿಜೇ ಯೇಣೇಂಚಿ ಏಕೇ । ಯಾಚೇನಿ ಏಕವಂಕೇ । ಜಗಾಸಿ ವಾದು ॥೧೬॥ ತೋಂಡೇಸೀ ತೋಂಡಾ ನ ಪಡೇ । ಬೋಲಾ ಬೋಲೇಂಸೀ ನ ಘಡೇ । ಇಯಾ ಯುಕ್ತಿ ಬಡಬಡೇ । ತ್ರಾಯ ಜಾಹಲೀ ॥೧೭॥ ನೇಣೋ ಕೋಣಾಚೇ ಹೇ ಸ್ಥಳ । ಪರಿ ಕೈಸೇ ಅಭಿಲಾಷಾಚೇ ಬಳ । ಜೇ ಘರೋಘರೀ ಕಪಾಳ । ಪಿಟವೀತ ಅಸೇ ॥೧೮॥ ನಾಸ್ತಿಕಾ ದ್ಯಾವಯಾ ತೋಂಡ । ವೇದಾಂಚೇ ಗಾಢೇ ಬಂಡ । ತೇ ದೇಖೋನಿ ಪಾಖಾಂಡ । ಅನಚಿ ವಾಜೇ ॥೧೯॥ ಮ್ಹಣತೀ ತುಮ್ಹೀ ನಿರ್ಮೂಳ । ಲಟಿಕೇ ಹೇ ವಾಗ್ಜಾಳ । ನಾ ಮ್ಹಣಸೀ ತರೀ ಪೋಫಳ । ಘಾತಲೇ ಆಹೇ ॥೨೦॥ ಪಾಖಾಂಡಾಚೇ ಕಡೇ । ನಾಗವೀ ಲುಂಚಿತೀ ಮುಂಡೇ । ನಿಯೋಜಿಲೀ ವಿತಂಡೇ । ತಾಳಾಶೀ ಯೇತೀ ॥೨೧॥ ಮೃತ್ಯೂಬಳಾಚೇನಿ ಮಾಜೇ । ಹೇ ಜಾಈಲ ವೀಣ ಕಾಜೇ । ತೇ ದೇಖೋನಿಯಾ ವ್ಯಾಜೇ । ನಿಘಾಲೇ ಯೋಗೀ ॥೨೨॥ ಮೃತ್ಯೂನೀ ಆಧಾಧಿಲೇ । ತಿಹೀ ನಿರಂಜನ ಸೇವಿಲೇ । ಯಮನಿಯಮಾಂಚೇ ಕೇಲೇ । ಮೇಳಾವೇ ಪುರೇ ॥೨೩॥ ಯೇಣೇಂಚಿ ಕ್ಷೇತ್ರಾಭಿಮಾನೇ । ರಾಜ್ಯ ತ್ಯಜಿಲೇ ಈಶಾನೇ । ಗುಂತಿ ಜಾಣೋನಿ ಸ್ಮಶಾನೇ । ವಾಸು ಕೇಲಾ ॥೨೪॥ ಐಸಿಯಾ ಪೈಜಾ ಮಹೇಶಾ । ಪಾಂಘುರಣೇ ದಾಹೀ ದಿಶಾ । ಲಾಂಚಕರು ಮ್ಹಣೌನಿ ಕೋಳಸಾ । ಕಾಮು ಕೇಲಾ ॥೨೫॥ ಪೈ ಸತ್ಯಲೋಕನಾಥಾ । ವದನೇ ಆಲೀ ಬಾಳಾರ್ಥಾ । ತರೀ ತೋ ಸರ್ವಥಾ । ಜಾಣೇಚಿನಾ ॥೨೬॥

ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್ ।
ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ॥೪॥

ಆದರೆ ಈಗ ಈ ಶರೀರಕ್ಕೆ ಯಾವುದಕ್ಕಾಗಿ ಕ್ಷೇತ್ರವೆಂದು ಹೆಸರಿಟ್ಟಿರುವ, ಅದರ ಎಲ್ಲ ಅಭಿಪ್ರಾಯಗಳನ್ನು ನಾವು ಹೇಳುತ್ತೇವೆ ॥೧೦॥

ಇದಕ್ಕೆ ಕ್ಷೇತ್ರವೆಂದು ಏಕೆ ಕರೆಯಬೇಕು? ಇದು ಹೇಗೆ? ಮತ್ತು ಎಲ್ಲಿ ಉತ್ಪನ್ನವಾಗುವುದು? ಯಾವ ಯಾವ ವಿಕಾರಗಳಿಂದ ಇದು ಬೆಳೆಯುವುದು? ॥೧೧॥

ಇದು ಕೇವಲ ಮೂರುವರೆ ಮೊಳದಷ್ಟು ಚಿಕ್ಕದಾಗಿದೆ. ಆದರೆ ಎಷ್ಟು ದೊಡ್ಡದು, ಎಷ್ಟು ಭಾರವಾದದ್ದು, ಹಾಗೆಯೇ ಬರಡು ಭೂಮಿಯೋ, ಅಥವಾ ಫಲವತ್ತಾದದ್ದೋ? ಮತ್ತು ಯಾರದಿದೆ? ॥೧೨॥

ಇತ್ಯಾದಿ ಯಾವ ಯಾವ ಇದರ ಗುಣಗಳಿವೆಯೋ, ಅವುಗಳನ್ನೆಲ್ಲ ಯಥಾಸಾಂಗವಾಗಿ ನಾವು ಅವುಗಳ ವರ್ಣನೆಯನ್ನು ಮಾಡುತ್ತೇವೆ. ನೀನು ಈ ಕಡೆಗೆ ಲಕ್ಷ ಕೊಡು ॥೧೩॥

ಇದೇ ಕ್ಷೇತ್ರಕ್ಕಾಗಿ ಶ್ರುತಿಗಳು ಯಾವಾಗಲೂ ಬಡಬಡಿಸುತ್ತಿರುವುವು. ತರ್ಕವೂ ಇದರದ್ದೇ ನಿಶ್ಚಯ ಮಾಡುವುದಕ್ಕಾಗಿ ಒಂದೇ ಸವನೆ ಚಿಂತನೆ ಮಾಡುತ್ತಿದೆ ॥೧೪॥

ಇದೇ ವಿಷಯಕ್ಕೆ ಆರು ಶಾಸ್ತ್ರಗಳು ದಣಿದು ಸ್ವಸ್ಥ ಕುಳಿತಿವೆ ಮತ್ತು ಇದರಿಂದಲೇ ಇವುಗಳಲ್ಲಿ ಇದುವರೆಗೂ ಐಕ್ಯಮತವಿಲ್ಲ ॥೧೫॥

ಈ ಕ್ಷೇತ್ರ ವಿಷಯಕ್ಕೆ ಒಂದೇ ಮತವನ್ನು ಸ್ಥಾಪಿಸುವುದಕ್ಕಾಗಿ ಜಗತ್ತಿನ ತುಂಬ ಶಾಸ್ತ್ರಸಂಬಂಧಯುಕ್ತ ವಿಚಾರಗಳು ನಡೆಯುತ್ತಲೇ ಇವೆ ॥೧೬॥

ಆದರೆ ಇದುವರೆಗೂ ಒಬ್ಬರಿಗೊಬ್ಬರ ಮುಖಗಳು ಕೂಡಿರುವುದಿಲ್ಲ. ಇವು ಐಕ್ಯವೂ ಆಗಿರುವುದಿಲ್ಲ ಮತ್ತು ಇದರ ಸಂಬಂಧವಾಗಿ ಯುಕ್ತಿಗಳನ್ನು ಹುಡುಕುತ್ತ, ಹುಡುಕುತ್ತ ಸುಸ್ತಾಗಿ ಬಿಟ್ಟಿವೆ ॥೧೭॥

ಈ ಕ್ಷೇತ್ರ ಯಾರದಿದೆ ಎಂಬುದು ಯಾರೂ ತಿಳಿದಿಲ್ಲ. ಆದರೆ ಅವರ ಈ ಸಂಬಂಧವಾಗಿ ವಾದವಿವಾದದ ಹವ್ಯಾಸಕ್ಕೆ ಹೇಗೆ ಪುಷ್ಟಿ ಬಂದಿದೆಯೋ ತಿಳಿಯದು. ಮನೆಮನೆಯಲ್ಲಿಯೂ ವಿಚಾರ ದರ್ಶನಕಾರರು ತಲೆ ಹೊಡೆದುಕೊಳ್ಳುವಂತ ಹದ್ದಾಗಿದೆ ॥೧೮॥

ನಾಸ್ತಿಕರ ಬಾಯಿ ಮುಚ್ಚಲು ವೇದವು ವಿಶೇಷ ಬಲಿಷ್ಠವಾಗಿದೆ. ಇದನ್ನು ನೋಡಿ ಪಾಖಂಡಿಗಳವರು ವೇದ ವಿಷಯಕ್ಕೆ ಬೇರೆ ಏನೇನೋ ಬಡಬಡಿಸುತ್ತಿರುವರು ॥೧೯॥

ಇವರೆನ್ನುವರು :- ನೀವು ವೇದಗಳು ನಿರ್ಮೂಲರಾಗಿರುವಿರಿ ಮತ್ತು ವ್ಯರ್ಥವಾಗಿ ಬಡಬಡಿಸುವವರಾಗಿರುವಿರಿ. ಹೀಗಿಲ್ಲದಿದ್ದರೆ ಸಿದ್ಧ ಮಾಡಿ ತೋರಿಸಲು ಪ್ರತಿಜ್ಞೆ ಮಾಡಲು ಅಡಿಕೆಬೆಟ್ಟ ಇಟ್ಟಿದ್ದೇವೆ ॥೨೦॥

ಪಾಖಂಡಿಗಳು ಸಾಮೂಹಿಕವಾಗಿ ಕೆಲವರು ದಿಗಂಬರರಾಗುತ್ತಿದ್ದಾರೆ, ಕೆಲವರು ತಲೆಯ ಮೇಲಿನ ಕೂದಲುಗಳನ್ನು ಕಿತ್ತೊಗೆಯುತ್ತಾರೆ. ಆದರೆ ಅವರು ನಿರ್ಣಯಿಸಿರುವ ವಿತಂಡವಾದಗಳು ತಮ್ಮ ಪಕ್ಕಕ್ಕೆ ತಾವೇ ಕೆಳಗೆ ಕೂಡುತ್ತವೆ ॥೨೧॥

ಈ ಕ್ಷೇತ್ರವು ಮೃತ್ಯುವಿನ ಬಾಯಿಯಲ್ಲಿ ಸಿಕ್ಕಿಕೊಂಡಿದ್ದು ನಿರರ್ಥಕವಾಗಿ ಹೋದಿತೆಂದು (ಆತ್ಮವನ್ನು ಬ್ರಹ್ಮಾಂಡಕ್ಕೆ ಒಯ್ದು ಅದರ ಸಂರಕ್ಷಣೆ ಮಾಡುವುದಕ್ಕಾಗಿ) ಯೋಗಿಗಳು ಮುಂದಾಗಿರುವರು ॥೨೨॥

ಕೆಲವರು ಮೃತ್ಯುವಿಗೆ ಭಯಪಟ್ಟು, ಅವರು ಏಕಾಂತದಲ್ಲಿ ವಾಸಮಾಡಿ ಯಮನಿಯಮದ ಸಾಧನೆಯ ಸಮುದಾಯಗಳನ್ನು ಕೂಡಿಸುವರು ॥೨೩॥

ಇದೇ ಕ್ಷೇತ್ರದ ವಿಚಾರ ಅಭಿಮಾನಕ್ಕಾಗಿ ಶ್ರೀ ಶಂಕರನು ರಾಜ್ಯವನ್ನು ಬಿಟ್ಟನು ಮತ್ತು ಅದರಿಂದ ತನಗೆ ಉಪಾಧಿಗಳು ಹತ್ತಬಾರದೆಂದು ಆತನು ಸ್ಮಶಾನದಲ್ಲಿ ಹೋಗಿ ವಾಸಮಾಡಿದನು ॥೨೪॥

ಈ ಕ್ಷೇತ್ರದ ಜ್ಞಾನವನ್ನು ಮಾಡಿಕೊಳ್ಳುವೆ ಎಂದು ಪ್ರತಿಜ್ಞೆ ಮಾಡಿ ಶಂಕರನು ವನದಲ್ಲಿದ್ದುಕೊಂಡು, ಹತ್ತು ದಿಕ್ಕುಗಳನ್ನೇ ಹೊದಿಕೆಯನ್ನಾಗಿ ಮಾಡಿಕೊಂಡು ಕಾಮನು ಯೋಗ ಭ್ರಷ್ಟ ಮಾಡುವನೆಂದು ತಿಳಿದು ಆತನಿಗೆ ಸುಟ್ಟು ಹಾಕಿದನು ॥೨೫॥

ಇದೇ ವಿಷಯದ ನಿಶ್ಚಯ ಮಾಡಲು ಬ್ರಹ್ಮದೇವನಿಗೆ ನಾಲ್ಕು ಮುಖಗಳು ಉತ್ಪನ್ನವಾದವು. ಆದರೆ, ಆತನಿಗೂ ಈ ಕ್ಷೇತ್ರದ ಅರಿವು ಆಗಲೇ ಇಲ್ಲ ॥೨೬॥

**ಶ್ಲೋಕಾರ್ಥ** :- ಈ ವಿಷಯವು ಪೂರ್ವೀಕ ಋಷಿಗಳಿಂದ ಪರಿಪರಿಯಾಗಿ ಹೇಳಲ್ಪಟ್ಟಿದೆ. ವೇದಗಳು ನಾನಾವಿಧಿಯಾಗಿ ವರ್ಣಿಸಿವೆ. ಬ್ರಹ್ಮಸೂತ್ರಗಳಲ್ಲಿ ಸಯುಕ್ತಿಕವಾಗಿ ಈ ಸಿದ್ಧಾಂತವು ಮಾಡಲ್ಪಟ್ಟಿದೆ ॥೪॥

ಏಕ ಮ್ಹಣತೀ ಹೇ ಸ್ಥಳ । ಜೀವಾಚೇಂಚಿ ಸಮೂಳ । ಮಗ ಪ್ರಾಣ ಹೇ ಕೂಳ । ತಯಾಚೇ ಏಥ ।೨೭॥ ಜಯಾ ಪ್ರಾಣಾಚೇ ಘರೀ । ಅಂಗೇ ರಾಬತೀ ಭಾಊ ಚಾರೀ । ಆಣೀ ಮನಾ ಐಸಾ ಆವರೀ । ಕುಳವಾಡೀಕರು ।೨೮॥ ತಯಾತೇ ಇಂದ್ರಿಯಬೈಲಾಂಚೀ ಪೇಟೀ । ನ ಮ್ಹಣೇ ಅಂವಸೀ ಪಾಹಾಟೀ । ವಿಷಯಕ್ಷೇತ್ರೀ ಆಟೀ । ಕಾಢೀ ಭಲೀ ।೨೯॥ ಮಗ ವಿಧೀಚೀ ವಾಫ ಚುಕವೀ । ಆಣಿ ಅನ್ಯಾಯಾಚೇ ಬೀಜ ವಾಫವೀ । ಕುಕರ್ಮಾಚಾ ಕರವೀ । ರಾಬು ಜರೀ ।೩೦॥ ತರೀ ತಯಾಚಿಸಾರಿಖೇ । ಅಸಂಭಡ ಪಾಪ ಪಿಕೇ । ಮಗ ಜನ್ಮ ಕೋಟೀ ದುಃಖೇ । ಭೋಗೀ ಜೀವು ।೩೧॥ ನಾತರೀ ವಿಧೀಚಿಯೇ ವಾಫೇ । ಸತ್ಕ್ರಿಯಾ ಬೀಜ ಆರೋಪೇ । ತರೀ ಜನ್ಮಶತಾಚೇ ಮಾಪೇ । ಸುಖಚಿ ಮವಿ ಜೇ ।೩೨॥ ತಂವ ಆಣಿಕ ಮ್ಹಣತೀ ಹೇ ನವ್ಹೇ । ಹೇ ಜೀವಾಚೇಂಚೀ ನ ಮ್ಹಣಾವೇ । ಆಮುತೇ ಪುಸಾ ಆಘವೇ । ಕ್ಷೇತ್ರಾಚೇ ಯಾ ।೩೩॥ ಅಹೋ ಜೀವು ಏಥ ಉಖಿತಾ । ವಸ್ತೀಕರು ವಾಟೇ ಜಾತಾ । ಆಣಿ ಪ್ರಾಣು ಹಾ ಬಲೌತಾ । ಮ್ಹಣೌನಿ ಜಾಗೇ ।೩೪॥ ಅನಾದಿ ಜೇ ಪ್ರಕೃತೀ । ಸಾಂಖ್ಯ ಜಿಯೇತೇ ಗಾತೀ । ಕ್ಷೇತ್ರ ಹೇ ವೃತ್ತೀ । ತಿಯೇಚಿ ಜಾಣಾ ।೩೫॥ ಆಣಿ ಇಯೇತೇಂಚಿ ಆಘವಾ । ಆಥೀ ಘರಮೇಳಾವಾ । ಮ್ಹಣೌನಿ ತೇ ವಾಹಿವಾ । ಘರೀ ವಾಹೇ ।೩೬॥ ವಾಹ್ಯಾಚಿಯೇ ರಹಾಟೀ । ಜೇ ಕಾ ಮುದ್ದಲ ತಿಘೇ ಇಯೇ ಸೃಷ್ಟೀ । ತೇ ಇಯೇಚ್ಯಾಚಿ ಪೋಟೀ । ಜಹಾಲೇ ಗುಣ ।೩೭॥ ರಜೋಗುಣ ಪೇರೀ । ತೇತುಲೇ ಸತ್ತ್ವ ಸೋಕರೀ । ಮಗ ಏಕಲೇ ತಮ ಕರೀ । ಸಂವಗಣೀ ।೩೮॥ ರಚೂನಿ ಮಹತ್ತತ್ತ್ವಾಚೇ ಖಳೇ । ಮಳೀ ಏಕೇ ಕಾಳುಗೇನಿ ಪೋಳೇ । ತೇಥ ಅವ್ಯಕ್ತಾಚೇ ಮಿಳೇ । ಸಾಂಜ ಭಲೀ ।೩೯॥ ತಂವ ಏಕೀ ಮತಿವಂತೀ । ಯಾ ಬೋಲಾಚಿಯಾ ಖಂತೀ । ಮ್ಹಣಿತಲೇ ಯಾ ಜ್ಞಪ್ತಿ । ಆರ್ವಾಚೀನಾ ।೪೦॥ ಹಾ ಹೋ ಪರತತ್ತ್ವಾ ಆಂತು । ಕೇ ಪ್ರಕೃತೀಚೀ ಮಾತು । ಹಾ ಕ್ಷೇತ್ರ ವೃತ್ತಾಂತು । ಉಗೇಂಚಿ ಆಇಕಾ ।೪೧॥ ಶೂನ್ಯಸೇಜೇಶಾಲಿಯೇ । ಸುಲೀನತೇಚಿಯೇ ತುಳಿಯೇ । ನಿದ್ರಾ ಕೇಲೀ ಹೋತೀ ಬಳಿಯೇ । ಸಂಕಲ್ಪೇ ಯೇಣೇ ।೪೨॥ ತೋ ಅವಸಾಂತ ಚೇಇಲಾ । ಉದ್ಯಮೀ ಸದೈವ ಭಲಾ । ಮ್ಹಣೌನಿ ಠೇವಾ ಜೋಡಲಾ । ಇಚ್ಛಾವಶೇ ।೪೩॥ ನಿರಾಲಂಬೀಂಚೇ ವಾಡೀ । ಹೋತೀ ತ್ರಿಭುನಾಯೆವಢೀ । ಹೇ ತಯಾಚಿಯೇ ಜೋಡೀ । ರೂಪಾ ಆಲೀ ।೪೪॥

ತಯಾಪರೀ ಕಾಂಹೀ । ಜಯಾ ಕರಾ ಕರಣೇ ನಾಹೀ । ಜೇ ಅಕರ್ತಯಾಚ್ಯಾ ಠಾಯೀ । ಬೈಸೋ ಯೇತೀ ॥೨೮೧॥ ಆಸುಡ್ಯೈಲ ವಾರಾ । ನಖ ಲಾಗೇಲ ಅಂಬರಾ । ಇಯಾ ಬುದ್ಧೀ ಕರಾ ।ಚಳೋ ನೇದಿ ॥೨೮೨॥ ತೇಥ ಆಂಗಾವರಿಲೀ ಉಡವಾವೀ । ಕಾ ಡೋಳಾ ರಿಗತೇ ಝಾಡಾವೀ । ಪಶುಪಕ್ಷ್ಯೈ ದಾವಾವೀ । ತ್ರಾಸಮುದ್ರಾ ॥೨೮೩॥ ಇಯಾ ಕೇಉತಿಯಾ ಗೋಠೀ । ನಾವಡೇ ದಂಡು ಕಾಠೀ । ಮಗ ಶಸ್ತ್ರಾಚೇ ಕಿರೀಟೀ । ಬೋಲಣೇ ಕೇ? ॥೨೮೪॥ ಲೀಲಾಕಮಳೇ ಖೇಳಣೇ । ಕಾ ಪುಷ್ಪಮಾಳಾ ಝೇಲಣೇ । ನ ಕರೀ ಮ್ಹಣೇ ಗೋಫಣೇ । ಐಸೇ ಹೋಈಲ ॥೨೮೫॥ ಹಾಲವತೀಲ ರೋಮಾವಳೀ । ಯಾಲಾಗೀ ಆಂಗ ನ ಕುರವಾಳೀ । ನಖಾಂಚೀ ಗುಂಡಾಳೀ । ಬೋಟಾಂವರೀ ॥೨೮೬॥ ತಂವ ಕರಣೇಯಾಚಾಚಿ ಅಭಾವೋ । ಪರೀ ಐಸಾಹೀ ಪಡೇ ಪ್ರಸ್ತಾವೋ । ತರೀ ಹಾತಾ ಹಾಚಿ ಸರಾವೋ । ಜೇ ಜೋಡಿಜತೀ ॥೨೮೭॥ ಕಾ ನಾಭಿಕಾರಾ ಉಚಲಿಜೇ । ಹಾತು ಪಡಿಲಿಯಾ ದೇಇಜೇ । ನಾತರೀ ಆರ್ತಾತೇ ಸ್ಪರ್ಶಿಜೇ । ಅಳುಮಾಳು ॥೨೮೮॥ ಹೇಂಹೀ ಉಪರೋಧೇ ಕರಣೇ । ತರೀ ಆರ್ತಭಯ ಹರಣೇ । ನೇಣತೀ ಚಂದ್ರಕಿರಣೇ । ಜಿವ್ಹಾಳಾ ತೋ ॥೨೮೯॥ ಪಾವೋನಿ ತೋ ಸ್ಪರ್ಶು । ಮಳಯಾನಿಳು ಖರಪುಸು । ಯೇಣೇ ಮಾನೆ ಪಶು । ಕುರವಾಳಣೇ ॥೨೯೦॥ ಜೇ ಸದಾ ರಿತೆ ಮೋಕಳೇ । ಜೈಶೀ ಚಂದನಾಂಗೇ ನಿಸಳೇ । ನ ಫಳತಾಂಹೀ ನಿರ್ಫಳೇ । ಹೋತೀ ಚಿನಾ ॥೨೯೧॥ ಆತಾ ಅಸೋ ಹೇ ವಾಗ್ಜಾಳ । ಜಾಣೇ ತೇ ಕರತಳ। ಸಜ್ಜನಾಂಚೇ ಶೀಳ । ಸ್ವಭಾವ ಜೈಸೇ ॥೨೯೨॥ ಆತಾ ಮನ ತಯಾಚೇ । ಸಾಂಗೋ ಮ್ಹಣೋ ಜರೀ ಸಾಚೇ । ತರೀ ಸಾಂಗಿತಲೇ ಕೋಣಾಚೇ । ವಿಲಾಸ ಹೇ? ॥೨೯೩॥ ಕಾಇ ಶಾಖಾ ನವ್ಹೇ ತರು? । ಜಳೇವೀಣ ಅಸೇ ಸಾಗರು? । ತೇಜ ಆಣಿ ತೇಜಾಕಾರು । ಆನ ಕಾಈ? ॥೨೯೪॥ ಅವಯವ ಆಣಿ ಶರೀರ । ಹೇ ವೇಗಳಾಲೇ ಕಾಯ ಕೀರ? । ಕೀ ರಸು ಆಣಿ ನೀರ । ಸಿನಾನೀ ಆಥೀ? ॥೨೯೫॥ ಮ್ಹಣೌನಿ ಹೇ ಜೇ ಸರ್ವ । ಸಾಂಗಿತಲೇ ಬಾಹ್ಯ ಭಾವ । ತೇ ಮನಚಿ ಗಾ ಸಾವಯವ ।ಐಸೇ ಜಾಣೇ ॥೨೯೬॥ ಜೇ ಬೀಜ ಭುಈ ಖೋವಿಲೇ । ತೇಂಚಿ ವರೀ ರೂಖ ಜಾಹಲೇ । ತೈಸೇ ಇಂದ್ರಿಯದ್ವಾರೀ ಫಾಂಕಲೇ । ಅಂತರಚಿ ಕೀ ॥೨೯೭॥ ಪೈ ಮಾನಸೀಂಚಿ ಜರೀ । ಅಹಿಂಸೇಚಿ ಅವಸರೀ । ತರೀ ಕೈಂಚೀ ಬಾಹೇರೀ । ವೋಸಂಡೇಲ ॥೨೯೮॥ ಆವಡೇ ತೇ ವೃತ್ತೀ ಕಿರೀಟೀ । ಆಧೀ ಮಣೌನೀಚಿ ಉಠೀ । ಮಗ ತೇ ವಾಚೇ ದಿಠೀ । ಕರಾಂಸಿ ಯೇ ॥೨೯೯॥

ಆದರಂತೆ ಆತನಿಗೆ ಯಾವುದೇ ಕರ್ತವ್ಯವಿರುವುದಿಲ್ಲ. ಹಸ್ತಗಳು ಅನೇಕ ಜನ್ಮಗಳಲ್ಲಿ ಪ್ರಾಪಂಚಿಕ ಕಾರ್ಯ ಮಾಡಿ ದಣಿದುಕೊಂಡು ಆ ಜ್ಞಾನಿ ಪುರುಷನಲ್ಲಿ ವಸತಿ ಮಾಡಿದಂತೆ ಸುಮ್ಮನಿರುವುವು ।೨೮೧॥

ಗಾಳಿಗೆ ಧಕ್ಕೆಯಾದೀತು, ಆಕಾಶಕ್ಕೆ ಉಗುರು ಬಡೆದೀತು, ಹೀಗೆ ಮೃದು ಭಾವನೆಯಿಂದ ಆತನು ಕೈಗಳನ್ನು ಅಲುಗಾಡಿಸುವುದಿಲ್ಲ ।೨೮೨॥

ಮೈಮೇಲೆ ಕುಳಿತ ನೊಣಗಳನ್ನು ಹಾರಿಸಬೇಕು, ಕಣ್ಣಲ್ಲಿಯ ಹೊಲಸು ತೆಗೆಯಬೇಕು. ಅಥವಾ ಪಶು ಪಕ್ಷಿಗಳಿಗೆ ಕೆಟ್ಟ ಕಣ್ಣುಗಳಿಂದ ಹೆದರಿಸಬೇಕು ।೨೮೩॥

ಇವು ಎಲ್ಲಿಂದ ಹೇಗಾಗಬೇಕು? ಹೇ ಕಿರೀಟೀಯೇ, ಆತನಿಗೆ ಕೈಯಲ್ಲಿ ಕೋಲು ಬಡಿಗೆ ಹಿಡಿಯುವುದು ಹಿಡಿಸದಿದ್ದಾಗ ಶಸ್ತ್ರದ ಮಾತು ಎಲ್ಲಿಯದು? ।೨೮೪॥

ಕೈಯಲ್ಲಿ ಸಹಜವಾಗಿ ಕಮಲದ ಹೂವು ಹಿಡಿದು, ತಿರುಗಿಸಿದರೆ, ಅಥವಾ ಹೂಮಾಲೆಯನ್ನು ಬೀಸಿದರೆ, ಸರ್ವವ್ಯಾಪಿ ಪರಮಾತ್ಮನಿಗೆ ಕವಣೆಗಲ್ಲಿನಿಂದ ಹೊಡೆದಂತೆ ಆದೀತೆಂದು ಭಾವಿಸುವನು।೨೮೫॥

ಮೈಮೇಲಿನ ಕೂದಲುಗಳಿಗೆ ಧಕ್ಕೆಯಾದೀತೆಂದು ಆತನು ಮೈಮೇಲೆ ಕೈಯಾಡಿಸುವುದಿಲ್ಲ, ಬೆರಳುಗಳ ಉಗುರು ತೆಗೆದರೆ ಅದರಾಶ್ರಿತ ಕ್ರಿಮಿಗಳ ಹಿಂಸೆಯಾದೀತೆಂದು ಹಾಗೆಯೇ ಬೆಳೆಸುವನು ।೨೮೬॥

ಮೊದಲೇ ಕೈಗಳಿಂದ ಯಾವ ಕೆಲಸವೂ ಮಾಡುವಂತೆ ಇಲ್ಲ, ಒಂದು ವೇಳೆ ಪ್ರಸಂಗ ಬಂದರೆ ಕೈಗಳನ್ನು ಜೋಡಿಸುವ ಹೊರತಾಗಿ ಬೇರೆ ಅಭ್ಯಾಸವೇ ಇರುವುದಿಲ್ಲ ।೨೮೭॥

ಹೆದರಿದವನಿಗೆ ''ಹೆದರಬೇಡ'' ಎಂದು ಹೇಳಲು ಆತನ ಕೈಗಳು ಎತ್ತಲ್ಪಡುವುವು. ಬಿದ್ದ ಮನುಷ್ಯನಿಗೆ ಎದ್ದು ನಿಲ್ಲಿಸಲು ಆತನ ಕೈಗಳು ಆಧಾರವಾಗುವುವು ಮತ್ತು ಪೀಡಿತ ಮನುಷ್ಯನ ಮೇಲೆ ಮೆಲ್ಲನೆ ಕೈಯಾಡಿಸಲ್ಪಡುವುವು ।೨೮೮॥

ಇದು ಸಹ ಮಾಡುವುದು ಆತನ ಇಚ್ಛೆ ಇರುವುದಿಲ್ಲ. ಮಾಡುವುದಾದರೆ, ಪೀಡಿತ ಮನುಷ್ಯನ ಮೇಲೆ ಮೆಲ್ಲನೇ ಕೈಯಾಡಿಸಿ ಅವರ ದುಃಖ ದೂರ ಮಾಡುವನು. ಆತನ ಕ್ರಿಯೆಯಿಂದ ಹೊರಡುವ ಕೃಪಾರಸವು ಚಂದ್ರ ಕಿರಣಕ್ಕೂ ಆಗದ ಮಾತಾಗಿರುವುದು ।೨೮೯॥

ಮಲಯಗಿರಿಯ ಗಾಳಿಯಿಂದ ಪೀಡಿತ ಮನುಷ್ಯನಿಗೆ ಆನಂದವಾಗುವಂತೆ, ಆತನ ಕೈಯಾಡಿಸುವಿಕೆಯಿಂದ ಪಶುಗಳಿಗೆ ಆನಂದವಾಗುವುದು ।೨೯೦॥

ಚಂದನಗಿಡವು ಸರ್ವತೋಪರಿ ಶೀತಲವಾಗಿರುವುದು. ಅದು ಫಲಗಳನ್ನು ಕೊಡದಿದ್ದರೂ ನಿಷ್ಫಲವಾಗಲಾರದು. (ಸುಗಂಧವೇ ಇದರ ಫಲಗಳು) ಅದರಂತೆ ಇವರ ಕೈಗಳು ಖಾಲಿ ಇದ್ದು, ಶೀತಲ ಸಫಲವಾಗಿರುವುವು ।೨೯೧॥

ಈಗ ಈ ವರ್ಣನೆ ಸಾಕು, ಸಜ್ಜನರ ಶೀಲದಂತೆ ಹಾಗೂ ಅವರ ಸ್ವಭಾವದಂತೆ ಅವರ ಕೈಗಳ ಆಚರಣೆ ಇರುವುದು ।೨೯೨॥

ಈಗ ಆತನ ಮನಸ್ಸು ಹೇಗಿರುವುದು ಎಂದು ಹೇಳಬೇಕೆಂದರೆ ಇಲ್ಲಿಯವರೆಗೆ ವರ್ಣನೆ ಮಾಡಿದ ಕೃತಿಗಳು ಯಾರದಾಗಿರುವುವು? ।೨೯೩॥

ಗಿಡಗಳ ಟೊಂಗೆಗಳು ಎಂದಾಗ ಗಿಡವಿರುವುದಿಲ್ಲವೇ? ನೀರಿನ ಹೊರತಾಗಿ ಸಮುದ್ರವು ಇರುವುದೇ? ತೇಜ ಮತ್ತು ಸೂರ್ಯ ಇವು ಭಿನ್ನ ಇರುವುವೇ? ।೨೯೪॥

ಅವಯವಗಳು ಮತ್ತು ಶರೀರ ಇವು ಭಿನ್ನವಾಗಿ ಇರುವುವೇ? ಅಥವಾ ನೀರು ಮತ್ತು ನೀರಿನ ರುಚಿ ಇವು ಬೇರೆಯಾಗಿರುವುವೇ? ।೨೯೫॥

ಆದ್ದರಿಂದ ಈ ಎಲ್ಲ ಬಾಹ್ಯ ಇಂದ್ರಿಯಗಳ ವ್ಯಾಪಾರಗಳನ್ನು ಹೇಳಿದ್ದು, ಅದು ಮನಸ್ಸಿನದೇ ಎಂದು ತಿಳಿದುಕೊ ।೨೯೬॥

ಬಿತ್ತಿದ ಬೀಜವೇ ಗಿಡದ ರೂಪದಿಂದ ಮೇಲೆ ಬರುವಂತೆ ಇಂದ್ರಿಯಗಳಿಂದ ಆಗುವ ವ್ಯವಹಾರಗಳೆಲ್ಲವೂ ಅವು ಮನಸ್ಸಿನ ಪ್ರೇರಣೆಯಿಂದ ಆಗುವುವು ।೨೯೭॥

ಆದರೆ ಮನಸ್ಸಿನಲ್ಲಿ ಅಹಿಂಸೆಯು ಉದಯವಾಗದಿದ್ದರೆ, ಇಂದ್ರಿಯಗಳಿಂದ ಅದು ಹೊರಗೆ ಹೇಗೆ ಬೀಳಬೇಕು? ।೨೯೮॥

ಅರ್ಜುನಾ, ಯಾವುದೇ ವೃತ್ತಿಯು ಅದು ಮನಸ್ಸಿನಲ್ಲಿಯೇ ಮೊದಲು ಉತ್ಪನ್ನವಾಗುವುದು. ನಂತರ ಅದುವೇ ವಾಣಿಯಿಂದ, ದೃಷ್ಟಿಯಿಂದ, ಕೈಯಿಂದ ಹೊರಬೀಳುವುದು ।೨೯೯॥

ವಾಂಚೂನಿ ಮನೀಂಚಿ ನಾಹೀ । ತೇ ವಾಚೇಸಿ ಉಮಟೇಲ ಕಾಈ ?। ಬೀಜೇವೀಣ ಭುಈ । ಅಂಕುರ ಅಸೇ ।।೩೦೦।। ಮ್ಹಣೌನಿ ಮನಪಣ ಜೈ ಮೋಡೇ । ತೈ ಇಂದ್ರಿಯ ಆಧೀಂಚಿ ಉಬಡೇ । ಸೂತ್ರಧಾರೇವೀಣ ಸಾಇಖಡೇ । ವಾವೋ ಜೈಸೇ ।।೩೦೧।। ಉಗಮೀಂಚಿ ವಾಳೂನಿ ಜಾಯೇ । ತೇ ವೋಘೀ ಕೈಚೇ ವಾಹೇ । ಜೀವುಗೇಲಿಯಾ ಆಹೇ । ಚೇಷ್ಟಾ ದೇಹೀ? ।।೩೦೨।। ತೈಸೇ ಮನ ಹೇ ಪಾಂಡವಾ । ಮೂಳ ಯಾ ಇಂದ್ರಿಯಭಾವಾ । ಹೇಚಿ ರಾಹಟೇ ಆಘವಾ । ದ್ವಾರಿ ಇಹೀ ।।೩೦೩।। ಪರೀ ಜಿಯೇ ವೇಳೀ ಜೈಸೇ । ಜೇ ಹೋಊನಿ ಆಂತು ಅಸೇ । ಬಾಹೇರೀ ಯೇ ತೈಸೇ । ವ್ಯಾಪಾರರೂಪೇ ।।೩೦೪।। ಯಾಲಾಗೀ ಸಾಚೋಕಾರೇ । ಮನೀ ಅಹಿಂಸಾ ಥಾಂವೇ ಥೋರೇ । ಜೈಸೀ ಪಿಕಲೀ ದ್ರುತೀ ಆದರೇ । ಬೋಭಾತ ನಿಘೇ ।।೩೦೫।। ಮ್ಹಣೌನಿ ಇಂದ್ರಿಯೇ ತೇಚಿ ಸಂಪದಾ । ವೇಚಿತಾ ಹೀ ಉದಾವಾದಾ । ಅಹಿಂಸೇಚಾ ಧಂದಾ । ಕರಿತೇ ಆಹಾತೀ ।।೩೦೬।। ಸಮುದ್ರೀ ದಾಟೇ ಭರಿತೇ । ತೈ ಸಮುದ್ರಚಿ ಭರೀ ತರೀಯಾಂತೇ । ತೈಸೇ ಸ್ವಸಂಪತ್ತೀ ಚಿತ್ತೇ । ಇಂದ್ರಿಯಾ ಕೇಲೇ ।।೩೦೭।। ಹೇ ಬಹು ಅಸೋ ಪಂಡಿತು । ಧರೂನಿ ಬಾಳಕಾಚಾ ಹಾತು । ವೋಳಿಲಿಹೀ ವ್ಯಕ್ತು । ಆಪಣಚೀ ।।೩೦೮।। ತೈಸೇ ದಯಾಳುತ್ವ ಆಪುಲೇ । ಮನೇ ಹಾತಾ ಪಾಯಾ ಆಣಿಲೇ । ಮಗ ತೇಥ ಉಪಜವಿಲೇ । ಅಹಿಂಸೇತೇ ।।೩೦೯।। ಯಾಕಾರಣೇ ಕಿರೀಟೀ । ಇಂದ್ರಿಯಾಂಚಿಯಾ ಗೋಠೀ । ಮನಾಚಿಯೇ ರಾಹಾಟೀ । ರೂಪ ಕೇಲೇ ।।೩೧೦।। ಐಸಾ ಮನೇ ದೇಹೇ ವಾಚಾ । ಸರ್ವ ಸಂನ್ಯಾಸು ದಂಡಾಚಾ । ಜಾಹಲಾ ಠಾಯೀ ಜಯಾಚಾ । ದೇಖಿಶೀಲ ।।೩೧೧।। ತೋ ಜಾಣ ವೇಲ್ಹಾಳ । ಜ್ಞಾನಾಚೇ ವೇಳಾಉಳ । ಹೇ ಅಸೋ ನಿಖಿಳ । ಜ್ಞಾನಚಿ ತೋ ।।೩೧೨।। ಜೇ ಅಹಿಂಸಾ ಕಾನೇ ಐಕಿಜೇ । ಗ್ರಂಥಾಧಾರೇ ನಿರೂಪಿಜೇ । ತೇ ಪಾಹಾವೀ ಹೇ ಉಪಜೇ । ತೈ ತೋಚಿ ಪಾಹಾವಾ ।।೩೧೩।। ಐಸೇ ಮ್ಹಣಿತಲೇ ದೇವೇ । ತೇ ಬೋಲೇ ಏಕೇ ಸಾಂಗಾವೇ । ಪರೀ ಫಾಂಕಲಾ ಹೇ ಉಪಸಾಹಾವೇ । ತುಮ್ಹೀ ಮಜ ।।೩೧೪।। ಮ್ಹಣಾಲ ಹಿರವೇ ಚಾರೀ ಗುರೂ । ವಿಸರೇ ಮಾಗೀಲ ಮೋಹರಥರೂ । ಕಾ ವಾರೇಲಗೇ ಪಾಂಖಿರೂ । ಗಗನೀ ಭರೇ ।।೩೧೫।। ತೈಸಿಯಾ ಪ್ರೇಮಾಚಿಯಾ ಸ್ಫೂರ್ತೀ । ಘಾವಲಿಯಾ ರಸವೃತ್ತೀ । ವಾಹವಿಲಾ ಮತೀ । ಆಕಳೇನಾ ।।೩೧೬।। ತರೀ ತೈಸೇ ನೋಹೇ ಅವಧಾರಾ । ಕಾರಣ ಅಸೇ ವಿಸ್ತಾರಾ । ಏರ್ಹವೀ ಪದ ತರೀ ಅಕ್ಷರಾ । ತಿಹೀಚೇಂಚಿ ।।೩೧೭।।

ಮನಸ್ಸಿನಲ್ಲಿ ಹುಟ್ಟದ ಮಾತುಗಳು ಅವು ಬಾಯಿಯಿಂದ ಹೇಳಲು ಬರಬಹುದೇ? ಇಲ್ಲಿ ನೋಡು, ಬೀಜವಿಲ್ಲದೇ ಭೂಮಿಯಲ್ಲಿ ಅಂಕುರವು ಹುಟ್ಟಬಹುದೇ? ।೩೦೦॥

ಆದ್ದರಿಂದ ಸೂತ್ರಧಾರನ ಹೊರತಾಗಿ ಸೂತ್ರಗೊಂಬೆಗಳು ಚೇಷ್ಟಿಸುವುದಿಲ್ಲ. ಅದರಂತೆ ಮನಸ್ಸು ಯಾವ ವ್ಯಾಪಾರವನ್ನು ಮಾಡಲು ಪ್ರವರ್ತವಾಗದಿದ್ದರೆ, ಆಗ ಇಂದ್ರಿಯಗಳು ಮೊದಲೇ ನಿರ್ಬಲವಾಗುವುವು ।೩೦೧॥

ನೀರು ಉಗಮದಲ್ಲಿಯೇ ಒಣಗಿ ಹೋದರೆ ನದಿಯಲ್ಲಿ ನೀರುಹೇಗೆ ಹರಿಯಬೇಕು? ಪ್ರಾಣಹೋದ ಮೇಲೆ ದೇಹ ದಿಂದ ಏನಾದರೂ ವ್ಯವಹಾರ ನಡೆಯುವುದೇ? ।೩೦೨॥

ಪಾಂಡವಾ, ಅದರಂತೆ ಈ ಮನಸ್ಸು ಇಂದ್ರಿಯ ವ್ಯಾಪಾರಗಳಿಗೆ ಮೂಲ ಕಾರಣವಾಗಿರುವುದು. ಇದುವೇ ಎಲ್ಲ ಇಂದ್ರಿಯಗಳಿಂದ ವ್ಯಾಪಾರ ಮಾಡಿಸುವುದು ।೩೦೩॥

ಆದ್ದರಿಂದ ಮನಸ್ಸಿನಲ್ಲಿ ಯಾವ ಕಾಲಕ್ಕೆ ಹೇಗೆ ವಾಸನೆಯುಂಟಾಗುವುದೋ, ಅದೇ ಪ್ರಕಾರವಾಗಿ ಹೊರಗೆ ಇಂದ್ರಿಯಗಳಿಂದ ವ್ಯಾಪಾರವು ನಡೆಯುವುದು।೩೦೪॥

ಹಣ್ಣಾದ ಫಲಗಳ ವಾಸನೆಯು ಸಹಜವಾಗಿ ನಾಲ್ಕು ಕಡೆಯಲ್ಲಿಯೂ ಪಸರಿಸುವಂತೆ, ಮನಸ್ಸಿನಲ್ಲಿ ಅಹಿಂಸೆಯು ಬಲಿಷ್ಠವಾಗಿದ್ದಲ್ಲಿ, ಇಂದ್ರಿಯ ವ್ಯಾಪಾರಗಳಲ್ಲಿ ಅಹಿಂಸೆ ಯು ಕಂಡುಬರುವುದು ।೩೦೫॥

ಆದ್ದರಿಂದ ಇಂದ್ರಿಯಗಳೇ ಅಹಿಂಸೆಯ ತಮ್ಮ ಸಂಪತ್ತು, ಹೀಗೆ ಪೂರ್ಣವಾಗಿ ತಿಳಿದುಕೊಂಡು ಅವುಗಳಿಂದಲೇ ಸರ್ವವ್ಯಾಪಾರಗಳನ್ನು ಮಾಡುವರು ।೩೦೬॥

ಸಮುದ್ರಕ್ಕೆ ಭರತಿಯು ಬಂದರೆ ಸಮುದ್ರದ ನೀರಿನಿಂದ ಆಖಾತಗಳು ತುಂಬುವುವು. ಅದರಂತೆ ಮನದಲ್ಲಿನ ಅಹಿಂಸೆಯ ಭರತಿಯು ಇಂದ್ರಿಯ ವ್ಯಾಪಾರಗಳಲ್ಲಿ ಕಂಡು ಬರುವುದು ।೩೦೭॥

ಹೆಚ್ಚಿಗೇನು ಹೇಳಬೇಕು? ಶಾಲೆಯ ಗುರುಗಳು ಚಿಕ್ಕ ಬಾಲಕನ ಕೈ ಹಿಡಿದು ಆತನಿಂದ ತಾವೇ ಸುಂದರವಾದ ಅಕ್ಷರಗಳನ್ನು ಬರೆಯಿಸುವರು ।೩೦೮॥

ಅದರಂತೆ ತನ್ನಲ್ಲಿ ಪೂರ್ಣವಾಗಿರುವ ದಯೆಯನ್ನು ಹಸ್ತ ಪಾದ ಇತ್ಯಾದಿ ಇಂದ್ರಿಯಗಳಲ್ಲಿ ತಂದು ಮನಸ್ಸು ಅಲ್ಲಿ ಅಹಿಂಸೆಯನ್ನು ಹುಟ್ಟಿಸುವುದು ।೩೦೯॥

ಆದ್ದರಿಂದ ಅರ್ಜುನಾ, ಇಂದ್ರಿಯಗಳಿಂದ ಆಗುವ ಅಹಿಂಸೆಯ ಯಾವ ವಿಷಯಗಳನ್ನು ಹೇಳಿದ್ದನ್ನೆಲ್ಲ ಮನಸ್ಸಿನದೇ ಇರುವುದು, ಹೀಗೆ ತಿಳಿ ।೩೧೦॥

ಈ ಪ್ರಕಾರವಾಗಿ ಆತನು ಕಾಯಾ, ವಾಚಾ, ಮನಸ್ಸಿನಿಂದ ಹಿಂಸೆಯ ತ್ಯಾಗ ಮಾಡಿರುವುದು ನೀನು ನೋಡಬಹುದು ।೩೧೧॥

ಆ ಪುರುಷನು ಜ್ಞಾನದ ವಿಲಾಸಿಯು, ಮತ್ತು ಜ್ಞಾನದ ವಸತಿ ಸ್ಥಾನನಾಗಿರುವನು, ಹೀಗೆ ತಿಳಿ. ಇಷ್ಟೇ ಅಲ್ಲ, ಆತನು ಮೂರ್ತಿಮಂತ ಜ್ಞಾನವೇ ಆಗಿರುವನು ।೩೧೨॥

ಯಾವ ಅಹಿಂಸೆಯ ವರ್ಣನೆಯನ್ನು ನಾವು ಕಿವಿಯಿಂದ ಕೇಳುವೆವು. ಗ್ರಂಥಾಧಾರದಿಂದ ಅದರ ನಿರೂಪಣೆಯನ್ನು ಮಾಡುವೆವು. ಆ ಅಹಿಂಸೆಯನ್ನು ಪ್ರತ್ಯಕ್ಷವಾಗಿ ನೋಡಬೇಕೆಂದರೆ ಆ ಪುರುಷನ ದರ್ಶನ ಮಾಡಿಕೊಳ್ಳಬೇಕು ।೩೧೩॥

ಜ್ಞಾನೇಶ್ವರರು ಹೇಳುವರು:- ಹೀಗೆ ಶ್ರೀ ಕೃಷ್ಣನು ಅರ್ಜುನನಿಗೆ ಹೇಳಿದ್ದು, ನಾನು ನಿಮಗೆ ಒಂದೇ ವಾಕ್ಯದಲ್ಲಿ ಹೇಳಬೇಕಾಗಿತ್ತು, ಆದರೆ ಅದರ ವಿಸ್ತಾರವು ಬಹಳಾಯಿತು. ಅದಕ್ಕಾಗಿ ನನಗೆ ಕ್ಷಮಿಸಿರಿ ।೩೧೪॥

ನೀವು ಹೇಳಬಹುದು, ಪಶುಗಳು ಹಸಿರು ಹುಲ್ಲು ಮೇಯುತ್ತ ಮೇಯುತ್ತ ಮುಂದೆ ಸಾಗುತ್ತ ಸಾಗುತ್ತ ಹಿಂದಿನ ಕ್ರಮ ಬಿಡುವುವು. ಪಕ್ಷಿಗಳು ಆಕಾಶದಲ್ಲಿ ಹಾರಾಡುವಾಗ ಗಾಳಿಯ ವೇಗದಿಂದ ಮುಂದೆಯೇ ಹೋಗುತ್ತಿರುವುವು ।೩೧೫॥

ಅದರಂತೆ, ಪ್ರೇಮದ ಭರದಲ್ಲಿ ರಸವೃತ್ತಿಯು ಬೆಳೆದು ನನ್ನ ಬುದ್ಧಿಯು ನನಗೆನೇ ಆವರಿಸುವುದು ಆಗುತ್ತಿಲ್ಲ ।೩೧೬॥

ಹೀಗೆ ನೀವು ಸಂತ ಜನರು ಹೇಳಬಹುದು, ಆದರೆ ಅದು ಹಾಗೆ ಏನೂ ಇರುವುದಿಲ್ಲ. ವಿಸ್ತಾರ ಮಾಡುವುದರಲ್ಲಿ ಕಾರಣವಿದೆ, ಇಲ್ಲದಿದ್ದರೆ ಅಹಿಂಸೆಯು ಕೇವಲ ಮೂರು ಅಕ್ಷರದ್ದಿರುವುದು ।೩೧೭॥

ಅಹಿಂಸಾ ಮ್ಹಣತಾ ಥೋಡೀ । ಪರೀ ತೇ ತೈಂಚೀ ಹೋಯ ಉಘಡೀ । ಜೈ ಲೋಟಿಜತೀ ಕೋಡೀ । ಮತಾಂಚಿಯಾ ।೩.೧೮॥ ಏರ್ಹವೀ ಪ್ರಾಪ್ತೇ ಮತಾಂತರೇ । ಥಾತಂಬೂನಿ ಆಂಗಭರೇ । ಬೋಲಿಜೈಲ ತೇ ನ ಸರೇ । ತುಮ್ಹಾ ಪಾಶೀ।೩.೧೯॥ ರತ್ನ ಪಾರಖಿಯಾಂಚ್ಯಾ ಗಾಂವೀ । ಜಾಈಲ ಗಂಡಕೀ ತರೀ ಸೋಡಾವೀ । ಕಾಶ್ಮಿ ರೀ ನ ಕರಾವೀ । ಮಿಡಗಣ ಜೇವೀ ।೩.೨೦॥ ಕಾಇಸಾ ವಾಸು ಕಾಪುರಾ । ಮಂದ ಜೇಥ ಅವಧಾರಾ । ಪಿಠಾಚಾ ವಿಕರಾ । ತಿಯೇ ಸಾತೇ? ।೩.೨೧॥ ಮ್ಹಣೌನಿ ಇಯೇ ಸಭೇ । ಬೋಲಕೇ ಪಣಾಚೇನಿ ಕ್ಷೋಭೇ । ಲಾಗ ಸರೂ ನ ಲಭೇ । ಬೋಲಾ ಪ್ರಭು ।೩.೨೨॥ ಸಾಮಾನ್ಯಾ ಆಣಿ ವಿಶೇಷಾ । ಸಕಳೈ ಕೀಜೇಲ ದೇಖಾ । ತರೀ ಕಾನಾಚೇಯಾ ಮುಖಾ । ಕಡೇ ನ್ಯಾಲ ನಾ ತುಮ್ಹಿ ।೩.೨೩॥ ಶಂಕೇಚೇನಿ ಗದಳೇ । ಜೈ ಶುದ್ಧ ಪ್ರಮೇಯ ಮೈಳೇ । ತೈ ಮಾಗುತಿಯಾ ಪಾಉಲೀ ಪಳೇ । ಅವಧಾನ ಯೇತೇ ।೩.೨೪॥ ಕಾ ಕರೂನಿ ಬಾಬುಳಿ ಯೇಚೀ ಬುಂಥೀ । ಜಳೇ ಜಿಯೇ ಠಾತೀ । ತಯಾಂಚೀ ವಾಸ ಪಾಹಾತೀ । ಹಂಸು ಕಾಈ? ।೩.೨೫॥ ಕಾ ಅಭ್ರಾಪೈಲೀಕಡೇ । ಜೈ ಯೇತ ಚಾಂದಿಣೇ ಕೋಡೇ । ತೈ ಚಕೋರೇ ಚಾಂಚುವಡೇ । ಉಚಲಿತೀನಾ ।೩.೨೬॥ ತೈಸೇ ತುಮ್ಹಿ ವಾಸ ನ ಪಾಹಾಲ । ಗ್ರಂಥು ನೇಘಾ ವರೀ ಕೋಪಾಲ । ಜರೀ ನಿರ್ವಿವಾದ ನವ್ಹೈಲ । ನಿರೂಪಣ ।೩.೨೭॥ ನ ಬುರಘಾವಿತಾ ಮತೇ । ನ ಫಿಟೇ ಆಕ್ಷೇಪಾಚೇ ಲಾಗತೇ । ತೇ ವ್ಯಾಖ್ಯಾನ ಜೇ ತುಮತೇ । ಜೋಡೂನಿ ನೇದೀ ।೩.೨೮॥ ಆಣಿ ಮಾರ್ಝೀ ತಂವ ಆಘವೇ । ಗ್ರಂಥನ ಯೇಣೇಚಿ ಭಾವೇ। ಜೇ ತುಮ್ಹಿ ಸಂತೀ ಹೋಆವೇ । ಸನ್ಮುಖ ಸದಾ ।೩.೨೯॥ ಏರ್ಹವೀ ತರೀ ಸಾಚೋಕಾರೇ । ತುಮ್ಹಿ ಗೀತಾರ್ಥಾಚೇ ಸೋಇರೇ । ಜಾಣೋನಿ ಗೀತಾ ಏಕಸರೇ । ಧರಿಲೀ ಮಿಯಾ ।೩.೩೦॥ ಜೇ ಆಪುಲೇ ಸರ್ವಸ್ವ ದ್ಯಾಲ । ಮಗ ಇಯೇತೇ ಸೋಡವೂನಿ ನ್ಯಾಲ । ಮ್ಹಣೌನಿಗ್ರಂಥು ನವ್ಹೇ ವೋಲ । ಸಾಚಚಿ ಹೇ ।೩.೩೧॥ ಕಾ ಸರ್ವಸ್ವಾಚಾ ಲೋಭು ಧರಾ । ವೋಲೀಚಾ ಅವ್ಹೇರು ಕರಾ । ತರೀ ಗೀತೆ ಮಜ ಅವಧಾರಾ । ಏಕಚಿ ಗತೀ ।೩.೩೨॥ ಕಿಂಬಹುನಾ ಮಜ । ತುಮಚಿಯಾ ಕೃಪಾ ಕಾಜ । ತಿಯೇಲಾಗೀ ವ್ಯಾಜ । ಗ್ರಂಥಾಚೇ ಕೇಲೇ ।೩.೩೩॥ ತರೀ ತುಮ್ಹಾ ರಸಿಕಾಜೋಗೇ । ವ್ಯಾಖ್ಯಾನ ಶೋಧಾವೇ ಲಾಗೇ । ಮ್ಹಣೌನಿ ಜೇ ಮತಾಂಗೇ । ಬೋಲೋ ಗೇಲೋ ।೩.೩೪॥

ವಿಚಾರಿಸಿದರೆ ಅಹಿಂಸೆಯ ವರ್ಣನೆಯನ್ನು ಸ್ವಲ್ಪದರಲ್ಲಿಯೇ ಮಾಡಬಹುದು. ಆದರೆ ಹಿಂಸೆಯನ್ನೇ ಅಹಿಂಸೆಯನ್ನಾಗಿ ಮಾಡಿದ ಬಹುಮತಗಳನ್ನು ಖಂಡಿಸಿದಾಗಲೇ ಅದರ ಸ್ಪಷ್ಟೀಕರಣ ಮಾಡಲು ಬರುವುದು ।೩೧೮॥

ಉಳಿದ ಅಹಿಂಸೆಯ ವಿಷಯಕ್ಕಾಗಿ ಇರುವ ಮತಗಳನ್ನು ನಾನು ಹಾಗೆಯೇ ಬದಿಗಿಟ್ಟು ಅಹಿಂಸೆಯನ್ನು ಹೇಳಹತ್ತಿದರೆ ಅದು ನಿಮಗೆ ಹಿಡಿಸಲಿಕ್ಕಿಲ್ಲ ।೩೧೯॥

ರತ್ನ ಪರೀಕ್ಷಕ ಊರಲ್ಲಿ ಸಾಲಿಗ್ರಾಮವನ್ನು ಯಾರಾದರೂ ತೆಗೆದುಕೊಳ್ಳುವವರಿದ್ದರೆ ಮಾತ್ರ ಮಾರಲು ಗಂಟು ಬಿಚ್ಚಬೇಕು, ಇಲ್ಲದಿದ್ದರೆ ಅವರಲ್ಲಿ ಎಷ್ಟು ವರ್ಣಿಸಿದರೂ ಅದರ ಉಪಯೋಗವಾಗುವುದಿಲ್ಲ ।೩೨೦॥

ಯಾವ ಬಜಾರದಲ್ಲಿ ಕರ್ಪೂರದ ವಾಸನೆಯನ್ನು ಸಹ ಮಂದವಾಗಿ ಕಾಣುತ್ತಿರುವಾಗ್ಗೆ, ಅಲ್ಲಿ ಹಿಟ್ಟಿನ ಸುಗಂಧಿತ ವಸ್ತುವು ಹೇಗೆ ಮಾರಾಟವಾದೀತು ? ಇದನ್ನು ಲಕ್ಷದಲ್ಲಿಡಿರಿ ।೩೨೧॥

ಆದ್ದರಿಂದ ಶ್ರೋತೃಗಳವರೇ, ನಿಮ್ಮ ಸಭೆಯಲ್ಲಿ ನಾನೊಬ್ಬ ದೊಡ್ಡ ವಕ್ತಾನಿರುವೆ ಎಂದು ಅಭಿಮಾನ ಪಟ್ಟರೆ, ನನ್ನ ಮಾತುಗಳು ನಿಮಗೆ ಹಿಡಿಸಲಿಕ್ಕಿಲ್ಲ ।೩೨೨॥

ಸಾಮಾನ್ಯ ಮತ್ತು ವಿಶೇಷ ಮಾತುಗಳನ್ನು ನಾನು ಒಂದೇ ಸಮಾನವಾಗಿ ಹೇಳಿದರೆ, ಅದನ್ನು ನೀವು ನಿಮ್ಮ ಕಿವಿಯ ಮುಖದ ಮುಂದೆಯೂ ಒಯ್ಯುವುದಿಲ್ಲ (ಕಿವಿಯಲ್ಲಿ ಹಾಕುವುದಿಲ್ಲ) ।೩೨೩॥

ಯಾವುದೇ ವಸ್ತುವಿನ ನಿಜಸ್ವರೂಪವನ್ನು ಹೇಳುವಾಗ್ಗೆ, ಸಂಶಯಕ್ಕೆ ಆಸ್ಪದವು ಉಳಿದರೆ, ನೀವು ಲಕ್ಷಕೊಟ್ಟು ಕೇಳಲಾರಿರಿ ।೩೨೪॥

ಯಾವ ಪ್ರಕಾರವಾಗಿ ಅಂತರಗಂಗೆಯಿಂದ ಮುಚ್ಚಿದ ನೀರನ್ನು ಹಂಸಪಕ್ಷಿಯು ಇಣಿಕಿ ಸಹ ನೋಡುವುದಿಲ್ಲವೋ ।೩೨೫॥

ಇಲ್ಲವೇ, ಮೋಡವು ಮುಸುಕಿಕೊಂಡಾಗ ಆ ಬೆಳದಿಂಗಳಲ್ಲಿ ಅಮೃತರಸಪಾನಕ್ಕಾಗಿ ಚಕೋರ ಪಕ್ಷಿಯು ತನ್ನ ಚುಂಚನ್ನು ತೆರೆಯಲಾರದೋ ।೩೨೬॥

ಅದರಂತೆ ನಿರೂಪಣವು ನಿರ್ದೋಷವಾಗಿರದಿದ್ದರೆ, ನನ್ನ ಕಡೆ ನೋಡಲಾರಿರಿ (ಗ್ರಂಥವನ್ನು ಕೈಯಲ್ಲಿ ಹಿಡಿಯಲಾರಿರಿ) ಇಷ್ಟೇ ಅಲ್ಲ, ಪ್ರತಿಯಾಗಿ ಕೋಪಿಸಿ ಕೊಳ್ಳುವಿರಿ ।೩೨೭॥

ಅಹಿಂಸೆಯ ಬೇರೆ ಬೇರೆ ಮಾತುಗಳನ್ನು ತಿಳಿಸಿ ಹೇಳುವಾಗ ಸಂಶಯಗಳ ನಿರಸನವಾಗದಿದ್ದರೆ, ಆ ವ್ಯಾಖ್ಯಾನವು ನಿಮ್ಮ ಲಾಭವನ್ನು ನನಗೆ ಮಾಡಿಕೊಡುವುದಿಲ್ಲ (ನೀವು ಕೇಳುತ್ತಿರಲಿಲ್ಲ) ।೩೨೮॥

ಮತ್ತು ಈ ನನ್ನ ವ್ಯಾಖ್ಯಾನವು, ಸರ್ವ ಪ್ರತಿಪಾದನೆಯು ಸಂತಜನರಾದ ನೀವು ಯಾವಾಗಲೂ ಪ್ರಸನ್ನರಾಗಿರಬೇಕೆಂದು ಒಂದೇ ಉದ್ದೇಶಕ್ಕಾಗಿರುವುದು ।೩೨೯॥

ಇನ್ನು ವಿಚಾರಮಾಡಿ ನೋಡಿದರೆ, ನೀವು ಮಾತ್ರ ಗೀತಾರ್ಥದ ಸಂಬಂಧಿಕರೇ ಇರುವಿರಿ. ಇದನ್ನು ಅರಿತು ಕೊಂಡೇ ನಾನು ಈ ಗೀತೆಯನ್ನು ಜೀವದಂತೆ ಹಿಡಿದುಕೊಂಡಿರುವೆನು ।೩೩೦॥

ನೀವು ನಿಮ್ಮ (ಪ್ರೇಮ, ಕೃಪೆ, ಅವಧಾನ ಇತ್ಯಾದಿ) ಸರ್ವಸ್ವವನ್ನು ನನಗೆ ಕೊಟ್ಟರೆ, ನನ್ನಿಂದ ಗೀತೆಯನ್ನು ಬಿಡಿಸಿಕೊಳ್ಳಬಹುದು. ಆದ್ದರಿಂದ ಇದು ಗೀತಾಗ್ರಂಥ ಇರದೇ ನಿಜವಾಗಿ ನನ್ನಲ್ಲಿಟ್ಟ ನಿಮ್ಮ ಒತ್ತಿ ಇಟ್ಟ ಒಡವೆಯಾಗಿರುವುದು ।೩೩೧॥

ನೀವು ಪ್ರೇಮರೂಪ ಧನವನ್ನು ಲೋಭದಿಂದ ಕೊಡದಿದ್ದರೆ, ಈ ಗೀತೆಯನ್ನು ಬಿಡಿಸಿಕೊಳ್ಳದಿದ್ದರೆ ಗೀತೆಯ ಹಾಗೂ ನನ್ನ ಗತಿಯು ಒಂದೇ ಆಗುವುದು. ಇದನ್ನು ತಿಳಿದುಕೊಳ್ಳಿರಿ ।೩೩೨॥

ತಾತ್ಪರ್ಯವೇನೆಂದರೆ, ನಿಮ್ಮ ಕೃಪೆ ಪ್ರಸಾದದ ನನಗೆ ಅತ್ಯವಶ್ಯಕವಿರುವುದರಿಂದ ನಾನು ಗೀತಾರ್ಥವನ್ನು ಹೇಳುವ ನಿಮಿತ್ತ ಮಾಡಿಕೊಂಡಿರುವೆನು ।೩೩೩॥

ರಸಿಕರಾದ ನಿಮಗೆ ಕೇಳಲು ಯೋಗ್ಯವಾಗುವ ಹಾಗೆ ವ್ಯಾಖ್ಯಾನವನ್ನು ನನಗೆ ಶೋಧಿಸಬೇಕಾಗುವುದು. ವಿಚಾರ ಮಾಡಿ ಹೇಳಬೇಕಾಗುವುದು. ಆದ್ದರಿಂದ ಮತಗಳ ಪ್ರಕಾರಗಳನ್ನು ಹೇಳಲು ಪ್ರವರ್ತನಾದೆನು ।೩೩೪॥

ತಂವ ಕಥೇಸಿ ಪಸರು ಜಾಹಲಾ । ಶ್ಲೋಕಾರ್ಥು ದೂರೀ ಗೇಲಾ । ಕೀಜೋ ಕ್ಷಮಾ ಯಯಾ ಬೋಲಾ । ಅಪತ್ಯಾ ಮಜ ।೩೩೫॥ ಆಣೀ ಘಾಂಸಾಆಂತಿಲ ಹರಳು । ಫೇಡಿತಾ ಲಾಗೇ ವೇಳು । ತೇ ದೂಷಣ ನವ್ಹೇ ಖಡಳು । ಸಾಂಡಾವಾ ಕೀ ।೩೩೬॥ ಕಾ ಸಂವಚೋರಾ ಚುಕವಿತಾ । ದಿವಸ ಲಾಗಲಿಯಾ ಮಾತಾ । ಕೋಪಾವೇ ಕೀ ಜೀವಿತಾ ।ಜಿತಾಣೇ ಕೀಜೇ? ।೩೩೭॥ ಪರೀ ಯಾವರೀಲ ಹೇ ನವ್ಹೇ । ತುಮ್ಹೀ ಉಪಸಾಹಿಲೇ ತೇಂಚಿ ಬರವೇ । ಆತಾ ಅವಧಾರಿಜೋ ದೇವೇ । ಬೋಲಿಲೇ ಐಸೇ ।೩೩೮॥ ಮ್ಹಣೇ ಉನ್ಮೇಖ ಸುಲೋಚನಾ । ಸಾವಧ ಹೋಈ ಅರ್ಜುನಾ । ಕರೂ ತುಜ ಜ್ಞಾನಾ । ವೋಳಖೀ ಆತಾ ।೩೩೯॥ ತರೀ ಜ್ಞಾನ ಗಾ ತೇ ಏಥೇ । ವೋಳಖ ತೂ ನಿರುತೇ । ಆಕ್ರೋಶೇವೀಣ ಜೇಥೇ । ಕ್ಷಮಾ ಅಸೇ ।೩೪೦॥ ಅಗಾಧ ಸರೋವರೀ । ಕಮಳಿಣೀ ಜಿಯಾಪರೀ । ಕಾ ಸದೈವಾಚಿಯಾ ಘರೀ । ಸಂಪತ್ತಿ ಜೈಸೀ ।೩೪೧॥ ಪಾರ್ಥಾ ತೇಣೇ ಪಾಡೇ । ಕ್ಷಮಾ ಜಯಾತೇ ವಾಢೇ । ತೇಂಹೀ ಲಕ್ಷೀ ತೇ ಫುಡೇ । ಲಕ್ಷಣ ಸಾಂಗೋ ।೩೪೨॥ ತರಿ ಪಢಿಯಂತೇ ಲೇಣೇ । ಆಂಗೀ ಭಾವೇ ಜೇಣೇ । ಧರೀಜೇ ತೇವೀ ಸಾಹಣೇ । ಸರ್ವಾಚಿ ಜಯಾ ।೩೪೩॥ ತ್ರಿವಿಧ ಮುಖ್ಯ ಆಘವೇ । ಉಪದ್ರವಾಂಚೇ ಮೇಳಾವೇ । ವರಿ ಪಡಿಲಿಯಾ ನವ್ಹೇ । ವಾಂಕುಡಾ ಜೋ ।೩೪೪॥ ಅಪೇಕ್ಷಿತ ಪಾವೇ । ತೇ ಜೇಣೇ ತೋಷೇ ಮಾನವೇ । ಅನಪೇಕ್ಷಿತಾಹೀ ಕರವೇ । ತೋಚಿ ಮಾನು ।೩೪೫॥ ಜೋ ಮಾನಾಪಮಾನಾತೇ ಸಾಹೇ । ಸುಖದುಃಖ ಜೇಥ ಸಾಮಾಯೇ । ನಿಂದಾಸ್ತುತೀ ನೋಹೇ । ದುಖಂಡು ಜೋ ।೩೪೬॥ ಉನ್ಹಾಳೇನಿ ಜೋ ನ ತಪೇ । ಹಿಮವಂತೀ ನ ಕಾಂಪೇ । ಕಾಯಸೇನಿಹೀ ನ ವಾಸಿಪೇ । ಪಾತಲೇಯಾ ।೩೪೭॥ ಸ್ವಶಿಖರಾಂಚಾ ಭಾರು । ನೇಣೇ ಜೈಸಾ ಮೇರು । ಕೀ ಧರಾ ಯಜ್ಞಸೂಕರು । ವೋಝೆ ನ ಮ್ಹಣೇ ।೩೪೮॥ ನಾನಾ ಚರಾಚರೀ ಭೂತೀ । ದಾಟಣೀ ನವ್ಹೇ ಕ್ಷಿತೀ । ತೈಸಾ ನಾನಾ ದ್ವಂದ್ವೀ ಪ್ರಾಪ್ತೀ । ಘಾಮೇಜೇನಾ ।೩೪೯॥ ಘೇಉನೀ ಜಳಾಚೇ ಲೋಟ । ಆಲಿಯಾ ನದೀನದಾಂಚೇ ಸಂಘಾಟ । ಕರೀ ವಾಡ ಪೋಟ । ಸಮುದ್ರ ಜೇವೀ ।೩೫೦॥ ತೈಸೇ ಜಯಾಚಿಯಾ ಠಾಯೀ । ನ ಸಾಹಣೇ ಕಾಹೀಂಚಿ ನಾಹೀ । ಆಣಿ ಸಾಹತು ಅಸೇ ಐಸೇಂಹೀ । ಸ್ಮರಣ ನುರೇ ।೩೫೧॥ ಆಂಗಾ ಜೇ ಪಾತಲೇ । ತೇ ಕರೂನೀ ಘಾಲೀ ಆಪುಲೇ । ತೇಥ ಸಾಹತೇನಿ ನವಲೇ । ಘೇಪಿಜೇನಾ ।೩೫೨॥

ಅದನ್ನೇ ಹೇಳುವುದರಿಂದ ಕಥೆಯು ವಿಸ್ತಾರ ವಾಯಿತು. ಶ್ಲೋಕದ ಅರ್ಥವು ದೂರ ಹೋಗಿರುವುದು. ಆದ್ದರಿಂದ ಬಾಲಕನಾದ ನನಗೆ ಕ್ಷಮಿಸಿರಿ ।೩೩೫॥

ಊಟಮಾಡುವ ಕಾಲಕ್ಕೆ ತುತ್ತಿನಲ್ಲಿ ಹರಳು ಬಂದಾಗ ಅದನ್ನು ತೆಗೆದೊಗೆಯಲು ವೇಳೆ ಹತ್ತುವುದು. ಆದರೆ ಅದು ದೂಷಣವಲ್ಲ. ಕಾರಣ ಹರಳು ತೆಗೆಯುವುದು ಯೋಗ್ಯ ವಲ್ಲವೇ? ।೩೩೬॥

ತನ್ನ ಮಗನು ಊರಿನಿಂದ ಬರುವಾಗ್ಗೆ ಕಳ್ಳರಿಂದ ತಪ್ಪಿಸಿ ಕೊಂಡು ಬರುವುದು ಆತನಿಗೆ ತಡವಾದಲ್ಲಿ ಆತನ ತಾಯಿ ಯು ಆತನ ಮೇಲೆ ಕೋಪಿಸಬೇಕೋ? ಅಥವಾ ಸುರಕ್ಷಿತ ಬಂದನೆಂದು ದೃಷ್ಟಿ ತೆಗೆಯಬೇಕೋ? ।೩೩೭॥

ಆದರೆ ಈ ದೃಷ್ಟಾಂತಕೊಡುವ ಕಾರಣವಿಲ್ಲ. ನೀವು ಬಹಳ ಬೆಳೆದ ನನ್ನ ವ್ಯಾಖ್ಯಾನಕ್ಕಾಗಿ ಸಹಿಸಿಕೊಂಡದ್ದೇ ನನಗೆ ಬಹಳ ಒಳ್ಳೆಯದಾಯಿತು. ಈಗ ಕೇಳಿರಿ, ದೇವನು ಈ ರೀತಿ ಹೇಳುತ್ತಿದ್ದಾನೆ ।೩೩೮॥

ಭಗವಾನನು ಹೇಳಿದನು:- ಹೇ ಜ್ಞಾನೋತ್ತಮ ನಯನದ ಅರ್ಜುನನೇ, ಸಾವಧನಾಗು. ಈಗ ನಿನಗೆ ಜ್ಞಾನ ದ ಉತ್ತಮ ಪರಿಚಯ ಮಾಡಿಕೊಡುವೆ ।೩೩೯॥

ಹೀಗಿದೆ ನೋಡು, ಎಲ್ಲಿ (ಆಕ್ರೋಶ)ಬೈಗಳ, ಶಾಪ ಹೊರತಾದ ಕ್ಷಮೆವಿರುವುದೋ, ಅಲ್ಲಿ ಜ್ಞಾನವಿರುವುದು, ಹೀಗೆ ನೀನು ನಿಶ್ಚಯವಾಗಿ ತಿಳಿ ।೩೪೦॥

ಆಳವಾದ ಸರೋವರದಲ್ಲಿ ಕಮಲವು ಹೇಗೆ ಬೆಳೆಯು ವುದೋ, ಅಥವಾ ಭಾಗ್ಯವಂತನ ಮನೆಯಲ್ಲಿ ಸಂಪತ್ತು ಹೇಗೆ ಬೆಳೆಯುವುದೋ ।೩೪೧॥

ಅರ್ಜುನಾ, ಅದರಂತೆ ಆತನಲ್ಲಿ ಕ್ಷಮೆಯು ಬೆಳೆಯು ತ್ತದೆ ಮತ್ತು ಇದು ಯಾವ ಯೋಗದಿಂದ ತಿಳಿಯುವ ಆ ಲಕ್ಷಣಗಳನ್ನು ನಿನಗೆ ಸ್ಪಷ್ಟವಾಗಿ ಹೇಳುವೆ ।೩೪೨॥

ಪ್ರಿಯವಾದ ಅಲಂಕಾರಗಳನ್ನು ಯಾವ ಭಾವನೆ ಯಿಂದ ಧರಿಸಲ್ಪಡುವುದೋ, ಅದೇ ಭಾವನೆಯಿಂದ ಆತನಿಗೆ ಎಲ್ಲವನ್ನು ಸಹಿಸುವುದು ಪ್ರಿಯವಾಗಿರುವುದು ।೩೪೩॥

ಮುಖ್ಯವಾಗಿ ಆಧ್ಯಾತ್ಮಿಕ, ಆಧಿದೈವಿಕ ಮತ್ತು ಆದಿ ಭೌತಿಕ ಹೀಗೆ ಮೂರು ದುಃಖಗಳಿರುವುವು. ಈ ದುಃಖಗಳು ಒಮ್ಮಿಂದೊಮ್ಮೆಲೆ ಎಲ್ಲವೂ ಮೈಮೇಲೆ ಬಂದರೂ ಅದರ ಭಾರದಿಂದ ಆತನು ಬಗ್ಗುವುದಿಲ್ಲ ।೩೪೪॥

ಅಪೇಕ್ಷಿತ ವಸ್ತುಗಳು ಪ್ರಾಪ್ತವಾದಾಗ ಆಗುವ ಸಂತೋಷದಂತೆ ಅಪೇಕ್ಷೆ ಪಡದ ವಸ್ತುಗಳಲ್ಲಿಯೂ ಅದರಂತೆಯೇ ಇರುವನು ।೩೪೫॥

ಆತನು ಮಾನಾಪಮಾನಗಳನ್ನು ಸಹಿಸುವನು, ಸುಖ ದುಃಖಗಳಿಗೂ ಸ್ಥಾನಕೊಡುವನು ಮತ್ತು ನಿಂದೆಯಿಂದ ಅಥವಾ ಸ್ತುತಿಯಿಂದ ಮನಸ್ಸಿನ ಸಮತೆಯನ್ನು ಭಂಗಗೊಳಿ ಸುವುದಿಲ್ಲ ।೩೪೬॥

ಆತನು ಬೇಸಿಗೆಯ ತಾಪದಿಂದ ತಾಪಗೊಳ್ಳುವುದಿಲ್ಲ, ಚಳಿಯ ಥಂಡಿಯಿಂದ ನಡುಗುವುದಿಲ್ಲ. ಅಂದರೆ ಶೀತೋಷ್ಣ ವನ್ನು ಸಹಿಸುವನು ಮತ್ತು ಯಾವುದೇ ಪ್ರಸಂಗ ಒದಗಿದರೂ ಭಯಪಡುವುದಿಲ್ಲ ।೩೪೭॥

ಮೇರು ಪರ್ವತಕ್ಕೆ ತನ್ನ ಶಿಖರಗಳ ಭಾರವೆನಿಸುವು ದಿಲ್ಲ, ಅಥವಾ ಯಜ್ಞವರಾಹಕ್ಕೆ ಕೋರೆ ಹಲ್ಲಿನ ಮೇಲಿರುವ ಪೃಥ್ವಿಯು ಭಾರವೆನಿಸುವುದಿಲ್ಲ ।೩೪೮॥

ಅಥವಾ ಅನೇಕ ಸ್ಥಾವರ ಜಂಗಮ ಭೂತಗಳಿಂದ ಯಾವ ಪ್ರಕಾರವಾಗಿ ಪೃಥ್ವಿಗೆ ಭಾರವಾಗುವುದಿಲ್ಲವೋ, ಅದರಂತೆ ಅನೇಕ ಪ್ರಕಾರದ ಸುಖದುಃಖಗಳು ಒದಗಿದಾಗ ಆತನ ಅಂತಃಕರಣಕ್ಕೆ ಬೆವರು ಹುಟ್ಟುವುದಿಲ್ಲ ।೩೪೯॥

ನದೀನದ (ಸಣ್ಣ ದೊಡ್ಡ ಹೊಳೆಗಳು) ಇವು ನೀರಿನ ಪ್ರವಾಹಗಳ ಮೇಲೆ ಪ್ರವಾಹಗಳನ್ನು ತಂದಾಗ ಇವುಗಳನ್ನು ಎಲ್ಲಿಡಬೇಕೆಂದು ಸಮುದ್ರವು ಚಿಂತೆ ಮಾಡದೇ ತನ್ನ ಹೊಟ್ಟೆಯಲ್ಲಿ ಸಹಜವಾಗಿ ಹಾಕಿಕೊಳ್ಳುವುದು ।೩೫೦॥

ಈ ಪ್ರಕಾರವಾಗಿ ಆತನು ಸಹಿಸದೇ ಇರುವುದು ಯಾವುದೂ ಇರುವುದಿಲ್ಲ ಮತ್ತು ನಾನು ಇಷ್ಟೊಂದು ಸಹಿಸುವೆ ಎನ್ನುವುದು ಆತನಿಗೆ ಸ್ಮರಣೆಯೇ ಇರುವುದಿಲ್ಲ ।೩೫೧॥

ದೇಹಕ್ಕೆ ಯಾವ ಯಾವ ಘಟನೆಗಳು ಒದಗುವುವೋ, ಅವುಗಳೆಲ್ಲವೂ ನಾನೇ ಇರುವೆ ಎಂಬ ಭಾವನೆಯಿಂದ ಎಲ್ಲವನ್ನು ಸಹಿಸುವೆನು ಎಂಬ ಅಭಿಮಾನವು ಆತನಿಗೆ ಆಗುವುದಿಲ್ಲ ।೩೫೨॥

ಹೇ ಅನಾಕ್ರೋಶ ಕ್ಷಮಾ । ಜಯಾಪಾಶೀ ಪ್ರಿಯೋತ್ತಮಾ । ಜಾಣ ತೇಣೇ ಮಹಿಮಾ । ಜ್ಞಾನಾಸಿ ಗಾ ।೩೫೩॥ ತೋ ಪುರುಷು ಪಾಂಡವಾ । ಜ್ಞಾನಾಚಾ ವೋಲಾವಾ । ಆತಾ ಪರಿಸ ಆರ್ಜವಾ । ರೂಪ ಕರೂ ।೩೫೪॥ ತರೀ ಆರ್ಜವ ತೇ ಐಸೇ । ಪ್ರಾಣಾಚೇ ಸೌಜನ್ಯ ಜೈಸೇ । ಆವಡೇ ತಯಾಹೀ ದೋಷೇ । ಏಕಚಿ ಗಾ ।೩೫೫॥ ಕಾ ತೋಂಡ ಪಾಹೂನಿ ಪ್ರಕಾಶು । ನ ಕರೀ ಜೇವೀ ಚಂಡಾಂಶು । ಜಗಾ ಏಕುಚೀ ಅವಕಾಶು । ಆಕಾಶ ಜೈಸೇ ।೩೫೬॥ ತೈಸೇ ಜಯಾಚೇ ಮನ । ಮಾಣುಸಪ್ರತೀ ಆನ ಆನ । ನವ್ಹೇ ಆಣೀ ವರ್ತನ । ಐಸೇ ಪೈ ತೇ ।೩೫೭॥ ಜೇ ಜಗೇಚಿ ಸನೋಳಖಿ । ಜಗೇಸೀ ಜುನಾಟ ಸೋಯರಿಕ । ಆಪಪರ ಹೇ ಭಾಖ । ಜಾಣಣೇ ನಾಹೀ ।೩೫೮॥ ಭಲತೇಣೇಸೀ ಮೇಳು । ಪಾಣಿಯಾ ಐಸಾ ಢಾಳು । ಕವಣೇವಿಖೀ ಆಡಳು । ನೇಘೇ ಚಿತ್ತ ।೩೫೯॥ ವಾರಿಯಾಚೀ ಧಾಂವ । ತೈಸೇ ಸರಳ ಭಾವ । ಶಂಕಾ ಆಣಿ ಹಾಂವ । ನಾಹೀ ಜಯಾ ।೩೬೦॥ ಮಾಯೇಪುಢೇ ಬಾಳಕಾ । ರಿಗತಾ ನ ಪಡೇ ಶಂಕಾ । ತೈಸೇ ಮನ ದೇತಾ ಲೋಕಾ । ನಾಲೋಚೀ ಜೋ ।೩೬೧॥ ಫಾಂಕಲಿಯಾ ಇಂದೀವರಾ । ಪರಿವಾರು ನಾಹೀ ಧನುರ್ಧರಾ । ತೈಸಾ ಕೋನಕೋಪರಾ । ನೇಣೇಚಿ ಜೋ ।೩೬೨॥ ಚೋಖಾಳಪಣ ರತ್ನಾಚೇ । ಕಾ ರತ್ನಾ ವರೀ ಕಿರಣಾಚೇ । ತೈಸೇ ಪುಢಾ ಮನ ಜಯಾಚೇ । ಕರಣೇ ಪಾಠೀ ।೩೬೩॥ ಆಲೋಚು ಜೋ ನೇಣೇ । ಅನುಭವಚಿ ಜೋಗಾವಣೇ । ಧರೀ ಮೋಕಲೀ ಅಂತಃಕರಣೇ । ನವ್ಹೇಚಿ ಜಯಾ ।೩೬೪॥ ದಿಠೀ ನೋಹೇ ಮಿಣಧೀ । ಬೋಲಣೇ ನಾಹೀ ಸಂದಿಗ್ಧೀ । ಕವಣೇಸೀ ಹೀನ ಬುದ್ಧೀ । ರಾಹಾಟೀಜೇ ನಾ ।೩೬೫॥ ದಾಹೀ ಇಂದ್ರಿಯೇ ಪ್ರಾಂಜಳೇ । ನಿಃಪ್ರಪಂಚೇ ನಿರ್ಮಳೇ । ಪಾಂಚಹೀ ಪಾಲವ ಮೋಕಳೇ । ಆಠಹೀ ಪಾಹರ ।೩೬೬॥ ಅಮೃತಾಚೀ ಧಾರ । ತೈಸೇ ಉಜೂ ಅಂತರ । ಕಿಂಬಹುನಾ ಜೋ ಮಾಹೇರ । ಯಾ ಚಿನ್ಹಾಂಚೇ ।೩೬೭॥ ತೋ ಪುರುಷ ಸುಭಟಾ । ಆರ್ಜವಾಚಾ ಆಂಗವಟಾ । ಜಾಣ ತೇಥೇಂಚಿ ಘರಟಾ । ಜ್ಞಾನೇ ಕೇಲಾ ।೩೬೮॥ ಆತಾ ಯಯಾವರೀ । ಗುರುಭಕ್ತೀಚೀ ಪರೀ । ಸಾಂಗೋ ಗಾ ಅವಧಾರೀ । ಚತುರನಾಥಾ ।೩೬೯॥ ಆಘವೀಯಾಚೀ ದೈವಾ । ಜನ್ಮ ಭೂಮಿ ಹೇ ಸೇವಾ । ಜೇ ಬ್ರಹ್ಮ ಕರೀ ಜೀವಾ । ಶೋಚ್ಯಾತೇಹೀ ।೩೭೦॥ ತೇ ಆಚಾರ್ಯೋಪಾಸ್ತೀ । ಪ್ರಕಟಜೈಲ ತುಜಪ್ರತೀ । ಬೈಸೋ ದೇ ಏಕಪಾಂತೀ । ಅವಧಾನಾಚೀ ।೩೭೧॥

ಈ ಪ್ರಕಾರದ ಆಕ್ರೋಶವಿಲ್ಲದ ಕ್ಷಮೆಯು ಯಾವ ಪುರುಷನಲ್ಲಿ ವಾಸ ಮಾಡುವುದೋ, ಆತನಿಂದ ಅರ್ಜುನಾ, ಜ್ಞಾನಕ್ಕೂ ಮಹಿಮೆ ಒದಗುವುದು ।೧೫೩॥

ಹೇ ಪಾಂಡವನೇ, ಇಂತಹ ಪುರುಷನು ನಿಜವಾಗಿಯೂ ಜ್ಞಾನದ ಜೀವ್ಹಾಳನಾಗಿರುವನು. ಈಗ ಆರ್ಜವ (ಸರಳತೆ) ವಿಷಯಕ್ಕೆ ವರ್ಣಿಸುವೆ, ಅದನ್ನು ಕೇಳು ।೧೫೪॥

ಆರ್ಜವ ಎಂದರೆ, ಯಾವುದೇ ಉದ್ದೇಶದಿಂದಲಾದರೂ ಮನುಷ್ಯನು ಏನೇ ಮಾಡುತ್ತಿದ್ದರೂ ಆತನಿಗೆ ಆತನ ಪ್ರಾಣವು ಅನುಕೂಲವಾಗಿರುವುದು ।೧೫೫॥

ಸೂರ್ಯನು ಇವನು ಒಳ್ಳೆಯವನು, ಇವನು ಕೆಟ್ಟವನು ಎಂದು ಮುಖ ನೋಡಿ ಪ್ರಕಾಶಕೊಡುವುದಿಲ್ಲ. (ಎಲ್ಲರಿಗೂ ಪ್ರಕಾಶ ಕೊಡುವನು) ಅಥವಾ ಆಕಾಶವು ಎಲ್ಲ ಜಗತ್ತಿಗೆ ಸಮವಾಗಿಯೇ ಅವಕಾಶ ಕೊಡುವುದು ।೧೫೬॥

ಅದರಂತೆ ಆತನ ಮನಸ್ಸು ಪ್ರಾಣಿಗಳಿಗಾಗಿ ಬೇರೆ ಬೇರೆ ಇರುವುದಿಲ್ಲ ಮತ್ತು ಈತನ ವರ್ತನೆಯು ಹೇಗಿರುವುದೆಂದರೆ ।೧೫೭॥

ಎಲ್ಲ ಜಗತ್ತಿನ ಜನರು ಪರಿಚಯವಿದ್ದವರಂತೆ ಮತ್ತು ಎಲ್ಲರಲ್ಲಿಯೂ ಬಹಳಕಾಲದಿಂದ ಬಂದ ಶರೀರ ಸಂಬಂಧಿಕರಂತೆ ತಿಳಿದಿರುತ್ತಾನೆ, ಆತನಿಗೆ ಅಪಪರ ಭಾವದ ಮಾತೇ ಗೊತ್ತಿಲ್ಲ ।೧೫೮॥

ಆತನಿಗೆ ಯಾರಿಂದಲಾದರೂ ಸ್ನೇಹವಾಗುವುದು, ನೀರು ಎಲ್ಲದರಲ್ಲಿಯೂ ಕೂಡುವಂತೆ ಆತನ ಸ್ವಭಾವವಾಗಿರುವುದು ಮತ್ತು ಯಾವ ಮಾತಿಗೂ ಆತನ ಮನಸ್ಸು ಅಡ್ಡ ಬರುವುದಿಲ್ಲ ।೧೫೯॥

ಗಾಳಿಯ ವೇಗದಂತೆ ಆತನ ಮನಸ್ಸು ಸರಳವಾಗಿರುವುದು ಮತ್ತು ಈತನಿಗೆ ಅನುಮಾನ ಇಚ್ಛೆಗಳು ಇರುವುದೇ ಇಲ್ಲ ।೧೬೦॥

ಯಾವ ಪ್ರಕಾರವಾಗಿ ತಾಯಿಯ ತೊಡೆಯ ಮೇಲೆ ಕುಳಿತುಕೊಳ್ಳಲು ಕೂಸಿಗೆ ಅನುಮಾನವಾಗುವುದಿಲ್ಲವೋ, ಅದರಂತೆ ಆತನು ಬೇರೆಯವರಿಗೆ ತನ್ನ ಮನಸ್ಸು ಕೊಡುವಾಗ ಏನೂ ವಿಚಾರಿಸುವುದಿಲ್ಲ ।೧೬೧॥

ಹೇ ಧನುರ್ಧರನೇ, ಅರಳಿದ ಕಮಲಕ್ಕೆ ತನ್ನ ಸುಗಂಧವನ್ನು ಬಚ್ಚಿಡಲು ಬರುವುದಿಲ್ಲ. ಅದರಂತೆ ಒಳಗೊಂದು ಹೊರಗೊಂದು ವಿಚಾರಗಳು ಆತನ ಮನದಲ್ಲಿ ಬರುವುದಿಲ್ಲ ।೧೬೨॥

ಪ್ರಥಮವಾಗಿ ರತ್ನದ ಶುದ್ಧತೆ ಕಂಡು ತದನಂತರ ಅದರ ಪ್ರಕಾಶ ಕಾಣುವಂತೆ, ಅವರ ಶುದ್ಧ ಮನಸ್ಸು ಮುಂದಿದ್ದು ನಂತರ ಶುದ್ಧ ಕೃತಿಗಳಾಗುವುವು ।೧೬೩॥

ಆತನಿಗೆ ಚಿಂತೆ ಮಾಡುವುದು ಗೊತ್ತೇ ಇಲ್ಲ ಮತ್ತು ಯಾವಾಗಲೂ ತೃಪ್ತನಾಗಿರುವುದೇ ಆತನ ಅನುಭವವಾಗಿದೆ. ಇದು ಮಾಡಬೇಕು, ಅದು ಮಾಡಬಾರದೆಂಬ ವಿಚಾರಗಳು ಮನದಲ್ಲಿರುವುದಿಲ್ಲ ।೧೬೪॥

ಆತನ ದೃಷ್ಟಿಯು ಕಪಟವಾಗಿರುವುದಿಲ್ಲ, ಮಾತುಗಳು (ತಿಳಿಯದ) ಸಂದಿಗ್ಧವಿರುವುದಿಲ್ಲ ಮತ್ತು ಆತನು ಯಾರಲ್ಲಿಯೂ ಕೆಟ್ಟಬುದ್ಧಿಯಿಂದ ನಡೆದು ಕೊಳ್ಳುವುದಿಲ್ಲ ।೧೬೫॥

ಆತನ ಹತ್ತು ಇಂದ್ರಿಯಗಳು ಮತ್ತು ಐದು ಪ್ರಾಣಗಳು ಸದಾಸರ್ವದಾ ನಿಷ್ಕಪಟ ಬುದ್ಧಿಯಿಂದ ವರ್ತಿಸುತ್ತವೆ ।೧೬೬॥

ಅಮೃತದ ಧಾರೆಯಂತೆ ಆತನ ಮನಸ್ಸು ಸರಳವಾಗಿರುವುದು ಹೆಚ್ಚಿಗೇನು ಹೇಳಬೇಕು? ಆತನು ಈ ಲಕ್ಷಣಗಳ ತವರುಮನೆಯಾಗಿರುವನು ।೧೬೭॥

ಹೇ ವೀರನೇ, ಆ ಪುರುಷನು ಮೂರ್ತಿಮಂತ ಆರ್ಜವನಿರುವನು ಮತ್ತು ಆತನಲ್ಲಿಯೇ ಜ್ಞಾನವು ತನ್ನ ಸಾಹಿತ್ಯವನ್ನು ಇಟ್ಟಿರುವುದು. ಇದು ನಿನ್ನ ಧ್ಯಾನದಲ್ಲಿರಲಿ ।೧೬೮॥

ಹೇ ಚತುರಶ್ರೇಷ್ಠನೇ, ಈಗ ಇನ್ನು ಮುಂದೆ ನಿನಗೆ ಗುರುಭಕ್ತಿಯ ಪ್ರಕಾರಗಳನ್ನು ಹೇಳುವೆನು, ಕೇಳು ।೧೬೯॥

ಈ ಗುರುಸೇವೆ ಎಂದರೆ ಸರ್ವಭಾಗ್ಯದ ಜನ್ಮ ಭೂಮಿಯಾಗಿರುವುದು, ಕಾರಣ ಶೋಕದಿಂದ ಗ್ರಸ್ತನಾದ ಜೀವಕ್ಕೆ ಅದು ಬ್ರಹ್ಮಸ್ವರೂಪನನ್ನಾಗಿ ಮಾಡುವುದು ।೧೭೦॥

ಇಂತಹ ಈ ಯಾವ ಗುರುಸೇವೆಯನ್ನು ನಾನು ನಿನಗೆ ಹೇಳುವೆನು, ಅದರತ್ತ ನಿನ್ನ ಪೂರ್ಣಲಕ್ಷ ವಿರಲಿ ।೧೭೧॥

ತರೀ ಸಕಳ ಜಳಸಮೃದ್ಧೀ । ಘೇಊನಿ ಗಂಗಾ ನಿಘಾಲೀ ಉದಧೀ । ಕೀ ಶ್ರುತಿ ಹೇ ಮಹಾಪದೀ । ಪೈಂ ಜಾಹಾಲೀ ।೩೭೨॥ ನಾನಾ ವೇಂಟಾಳೂನಿ ಜೀವಿತೇ । ಗುಣಾಗುಣ ಉಖಿತೇ । ಪ್ರಾಣನಾಥಾ ಉಚಿತೇ । ದಿಧಲೇ ಪ್ರಿಯಾ ।೩೭೩॥ ತೈಸೇ ಸಬಾಹ್ಯ ಆಪುಲೇ । ಜೇಣೇ ಗುರುಕುಳೀ ವೋಪಿಲೇ । ಆಪಣಪೇ ಕೇಲೇ । ಭಕ್ತೀಚೇ ಘರ ।೩೭೪॥ ಗುರುಗೃಹ ಜಯೇ ದೇಶೀ । ತೋ ದೇಶುಚಿ ವಸೇ ಮಾನಸೀ । ವಿರಹಿಣೀ ಕಾ ಜೈಸೀ । ವಲ್ಲಭಾತೇ ।೩೭೫॥ ತಿಯೇಕಡೋನಿ ಯೇತಸೇ ವಾರಾ । ದೇಖೋನಿ ಧಾಂವೇ ಸಾಮೋರಾ । ಆಡ ಪಡೇ ಮ್ಹಣೇ ಘರಾ । ಬೀಜೇ ಕೀಜೋ ।೩೭೬॥ ಸಾಚಾ ಪ್ರೇಮಾಚಿಯಾ ಭುಲೀ । ತಯಾ ದಿಶೇಸೀಚಿ ಆವಡೇ ಬೋಲೀ । ಜೀವು ಥಾನಾಪತೀ ಕರೂನಿ ಘಾಲೀ । ಗುರುಗೃಹೀ ಜೋ ।೩೭೭॥ ಪರೀ ಗುರುಆಜ್ಞಾ ಧರಿಲೇ । ದೇಹಗಾಂವೀ ಅಸೇ ಏಕಲೇ । ವಾಂಸರುವಾ ಲಾವಿಲೇ ।ದಾವೇ ಜೈಸೇ ।೩೭೮॥ ಮ್ಹಣೇ ಕೈ ಹೇ ಬಿರಡೇ ಫಿಟೇಲ । ಕೈ ತೋ ಸ್ವಾಮೀ ಭೇಟೇಲ । ಯುಗಾಹೂನಿ ವಡೀಲ । ನಿಮಿಷ ಮಾನೀ ।೩೭೯॥ ಐಸೇಯಾ ಗುರು ಗ್ರಾಮೀಂಚೇ ಆಲೇ । ಕಾ ಸ್ವಯೇ ಗುರೂನೀಂಚಿ ಧಾಡಿಲೇ । ತರೀ ಗತಾಯುಷ್ಯಾ ಜೋಡಲೇ । ಆಯುಷ್ಯ ಜೈಸೇ ।೩೮೦॥ ಕಾ ಸುಕತಯಾ ಅಂಕುರಾ । ವರೀ ಪಡಲಿಯಾ ಪೀಯೂಷಧಾರಾ । ನಾನಾ ಅಲ್ಪೋದಕೀಂಚಾ ಸಾಗರಾ । ಆಲಾ ಮಾಸಾ ।೩೮೧॥ ನಾತರೀ ರಂಕೇ ನಿಧಾನ ದೇಖಿಲೇ । ಕಾ ಆಂಧಳಿಯಾ ಡೋಳೇ ಉಘಡಲೇ । ಭಣಂಗಾಚಿಯಾ ಆಂಗಾ ಆಲೇ । ಇಂದ್ರಪದ ।೩೮೨॥ ತೈಸೇ ಗುರುಕುಳಾಚೇನಿ ನಾಂವೇ । ಮಹಾಸುಖೇ ಅತಿ ಥೋರಾವೇ । ಜೇ ಕೋಡೇಂಹೀ ಪೋಟಾಳವೇ । ಆಕಾಶ ಕಾ ।೩೮೩॥ ಪೈ ಗುರುಕುಳೀ ಐಸೀ । ಆವಡೀ ಜಯಾ ದೇಖಿಸೀ । ಜಾಣ ಜ್ಞಾನ ತಯಾಪಾಸೀ । ಪಾಯಿಕೀ ಕರೀ ।೩೮೪॥ ಆಣಿ ಅಭ್ಯಂತರೀಲಿಯೇಕಡೇ । ಪ್ರೇಮಾಚೇನಿ ಪವಾಡೇ । ಶ್ರೀಗುರುಚೇ ರೂಪಡೇ । ಉಪಾಸೀ ಧ್ಯಾನೀ ।೩೮೫॥ ಹೃದಯಶುದ್ಧೀಚಿಯಾ ಆವಾರಿ । ಆರಾಧ್ಯು ತೋ ನಿಶ್ಚಲ ಧ್ರುವ ಕರೀ । ಮಗ ಸರ್ವ ಭಾವೇಸೀ ಪರಿವಾರೀ । ಆಪಣ ಹೋಯ ।೩೮೬॥ ಕಾ ಚೈತನ್ಯಾಚಿಯೇ ಪೋವಳೀ । ಮಾಜೀ ಆನಂದಾಚಿಯಾ ರಾಉಳೀ । ಶ್ರೀಗುರುಲಿಂಗಾ ಢಾಳೀ । ಧ್ಯಾನಾಮೃತ ।೩೮೭॥ ಉದಯಿಜತಾ ಬೋಧಾರ್ಕಾ । ಬುದ್ಧೀಚೇ ಡಾಳ ಸಾತ್ತ್ವಿಕಾ । ಭರೋನಿಯಾ ತ್ರ್ಯಂಬಕಾ । ಲಾಖೋಲೀ ವಾಹೇ ।೩೮೮॥

ಹೀಗಿದೆ ನೋಡು, ಯಾವ ಪ್ರಕಾರವಾಗಿ ಗಂಗಾ ನದಿ ಯು ತನ್ನ ಎಲ್ಲ ನೀರನ್ನು ಸಮುದ್ರಕ್ಕೆ ಕೂಡಿಸುವುದೋ, ಅಥವಾ ಎಲ್ಲ ಅಭಿಪ್ರಾಯಗಳೊಂದಿಗೆ ಶ್ರುತಿಯು ಬ್ರಹ್ಮ ಪದಕ್ಕೆ ಕೂಡಿಕೊಳ್ಳುವುದೋ ।೩೭೨॥

ಅಥವಾ ಪತಿವ್ರತೆಯಾದ ಸ್ತ್ರೀಯು ತನ್ನ ಜೀವಿತವನ್ನು, ಗುಣಾವಗುಣಗಳನ್ನು ಈ ಎಲ್ಲವನ್ನು ತನ್ನ ಪ್ರಿಯ ಪತಿಗೆ ಹೇಗೆ ಅರ್ಪಿಸುವಳೋ ।೩೭೩॥

ಅದರಂತೆ ಆತನು ತನ್ನ ಸರ್ವಸ್ವವನ್ನು ಗುರುಕುಲದಲ್ಲಿ ಅರ್ಪಿಸಿರುವನು ಮತ್ತು ತನ್ನ ಶರೀರವೆಂದರೆ ಗುರುಭಕ್ತಿಯ ಆಗರವೇ ಆಗಿರುವುದು ।೩೭೪॥

ವಿರಹಿಣಿ ಪತಿವ್ರತೆಯು ಯಾವಾಗಲೂ ತನ್ನ ಪತಿಯ ಚಿಂತನೆ ಮಾಡುವಳು. ಅದರಂತೆ ಯಾವ ದೇಶದಲ್ಲಿ ತನ್ನ ಗುರುವಿನ ಸ್ಥಾನವಿರುವುದೋ, ಅದೇ ಆತನ ಮನದಲ್ಲಿ ಸದಾಸ್ಮರಣೆವಿರುವುದು ।೩೭೫॥

ಗುರುಸ್ಥಾನದ ದಿಕ್ಕಿನಿಂದ ಗಾಳಿಗೂ ಎದುರು ಹೋಗಿ, ಅದಕ್ಕೆ ಸಾಷ್ಟಾಂಗ ನಮಸ್ಕರಿಸಿ ನನ್ನ ಮನೆಗೆ ವಸತಿಗೆ ಬರಬೇಕೆಂದು ಪ್ರಾರ್ಥಿಸುವನು ।೩೭೬॥

ನಿಜವಾದ ಪ್ರೇಮದಿಂದ ಮರುಳಾಗಿ ಗುರುಗಳು ಇರುವ ದಿಕ್ಕಿನೊಡನೆ ಆತನಿಗೆ ಮಾತನಾಡುವುದು ಪ್ರಿಯ ವೆನ್ನಿಸುವುದು. ಗುರುವಿನ ಮನೆಯಲ್ಲಿ ತನ್ನ ಜೀವವನ್ನು, ಆಸ್ತಿಯಾಗಿ (ಒತ್ತೆ) ಇಟ್ಟಿರುವನು ।೩೭೭॥

ಕರುವನ್ನು ಕಣ್ಣಿಯಿಂದ ಕಟ್ಟಿದ್ದಕ್ಕೆ ಅನಿವಾರ್ಯವಾಗಿ ಅದು ಹಟ್ಟಿಯಲ್ಲಿದ್ದರೂ ಅದರ ಚಿತ್ತವೆಲ್ಲವೂ ಆಕಳದತ್ತ ಇರುವಂತೆ, ಕೇವಲ ಗುರುವಿನ ಆಜ್ಞೆಯಿಂದಲೇ ಆತನ ಶರೀರವು ತನ್ನ ಊರಲ್ಲಿರುವುದು ।೩೭೮॥

ಆತನಿಗೆ ಗುರು ಆಜ್ಞೆ ರೂಪದ ಬಂಧನ ಎಂದು ಬಿಡು ಗಡೆಯಾದೀತು? ಎಂದು ಗುರುಗಳ ದರ್ಶನವಾದೀತು? ಎಂದು ಚಿಂತಿಸುತ್ತ ಆತನಿಗೆ ಪ್ರತಿ ನಿಮಿಷವೂ ಯುಗದಂತೆ ಭಾಸವಾಗುವುದು ।೩೭೯॥

ಹೀಗಿರುವಾಗ ತನ್ನ ಗುರುಗಳ ಊರಿನಿಂದ ಯಾರಾದರೂ ಬಂದರೆ, ಅಥವಾ ಸ್ವತಃ ಗುರುಗಳು ಒಬ್ಬರಿಗೆ ಕಳಿಸಿದರೆ ಆತನಿಗೆ ಆಯುಷ್ಯ ಮುಗಿದವನಿಗೆ ಆಯುಷ್ಯ ಸಿಕ್ಕಂತೆ ।೩೮೦॥

ಅಥವಾ ಒಣಗಿದ ಅಂಕುರಕ್ಕೆ ಅಮೃತದ ಧಾರೆ ಎರೆದಂತೆ, ಗುಂಡಿಯಲ್ಲಿರುವ ಮೀನಕ್ಕೆ ಸಮುದ್ರವು ದೊರಕಿದಂತೆ ।೩೮೧॥

ಇಲ್ಲವೇ ಒಬ್ಬ ದರಿದ್ರನಿಗೆ ದ್ರವ್ಯದ ನಿಧಿ ದೊರಕಿದಂತೆ, ಅಥವಾ ಹುಟ್ಟುಕುರುಡನಿಗೆ ಏಕಾಏಕಿ ಕಣ್ಣು ಬಂದಂತೆ ಭಿಕ್ಷುಕನಿಗೆ ದಾರಿಯಲ್ಲಿ ಇಂದ್ರಪದ ಸಿಕ್ಕಂತೆ ।೩೮೨॥

ಈ ಪ್ರಕಾರವಾಗಿ ಗುರುಗಳ ಕುಲದ ಹೆಸರು ಕೇಳುತ್ತಲೇ ಆತನು ಮಹಾಸುಖದಿಂದ ಅತಿಶಯವಾಗಿ ಉಬ್ಬುವನು. ಇಷ್ಟೇ ಅಲ್ಲ, ಆತನು ಕೌತುಕದಿಂದ ಆಕಾಶವನ್ನೇ ಅಪ್ಪಿಕೊಳ್ಳುವನು ।೩೮೩॥

ಇಲ್ಲಿ ನೋಡು, ಗುರುಕುಲದಲ್ಲಿ ಈ ಪ್ರಕಾರದ ಪ್ರೇಮವು ಯಾರಲ್ಲಿರುವುದು ನಿನಗೆ ತೋರುವುದೋ, ಆತನಲ್ಲಿ ಜ್ಞಾನವು ಸೇವೆ ಮಾಡುತ್ತಿರುವುದು ಎಂದು ತಿಳಿ ।೩೮೪॥

ಮತ್ತು ಅಂತಃಕರಣದಲ್ಲಿ ಅತ್ಯಂತ ಪ್ರೇಮದಿಂದ ಶ್ರೀಗುರುಗಳ ಮೂರ್ತಿಯ ಧ್ಯಾನೋಪಾಸನೆಯನ್ನು ಮಾಡುವನು ।೩೮೫॥

ಶುದ್ಧ ಹೃದಯವೆಂಬ ದೇವರಗುಡಿಯ ಆವಾರದಲ್ಲಿ ತನ್ನ ಆರಾಧ್ಯದೈವತನಾದ ಶ್ರೀಗುರುಗಳನ್ನು ಅಲ್ಲಿ ಸ್ಥಾಪಿಸಿ ತನ್ನ ಭಾವನೆಯಿಂದ ತಾನೇ ಪೂಜಾ ಸಾಹಿತ್ಯನಾಗುವನು ।೩೮೬॥

ಅಥವಾ ಜ್ಞಾನರೂಪ ಆವಾರದಲ್ಲಿರುವ ಆನಂದದ ಮಂದಿರದಲ್ಲಿ ಗುರುರೂಪ ಲಿಂಗಕ್ಕೆ ಧ್ಯಾನರೂಪ ಅಮೃತದ ಅಭಿಷೇಕ ಮಾಡುವನು ।೩೮೭॥

ಜ್ಞಾನಸೂರ್ಯನು ಉದಯಿಸಿದಾಗ ತನ್ನ ಬುದ್ಧಿರೂಪ ತಳಿಗೆಯಲ್ಲಿ ಅಷ್ಟಸಾತ್ತ್ವಿಕಭಾವಗಳೆಂಬ ಕಮಲಗಳನ್ನು ತುಂಬಿ ಶ್ರೀಗುರು ತ್ರ್ಯಂಬಕೇಶ್ವರನ ಮೇಲೆ ಪುಷ್ಪವೃಷ್ಟಿ ಮಾಡುವನು ।೩೮೮॥

ಕಾಳಶುದ್ಧೀ ತ್ರಿಕಾಳೀ । ಜೀವದಶಾ ಧೂಪ ಜಾಳೀ । ಜ್ಞಾನದೀಪೇ ವೋವಾಳೀ । ನಿರಂತರ ।।೩೭೯।। ಸಾಮರಸ್ಯಾಚೀ ರಸಸೋಯ । ಅಖಂಡ ಅರ್ಪಿತು ಜಾಯ । ಆಪಣ ಭರಾಡಾ ಹೋಯ । ಗುರು ತೋ ಲಿಂಗ ।।೩೮೦।। ನಾತರೀ ಜೀವಾಚಿಯೇ ಸೇಜೇ । ಗುರು ಕಾಂತು ಕರೂನಿ ಭುಂಜೇ । ಐಸೀ ಪ್ರೇಮಾಚೇನಿ ಭೋಜೇ । ಬುದ್ಧೀ ವಾಹೇ ।।೩೮೧।। ಕೋಣೇ ಏಕೇ ಅವಸರೀ । ಅನುರಾಗು ಭರೇ ಅಂತರೀ । ಕೀ ತಯಾ ನಾಮ ಕರೀ । ಕ್ಷೀರಾಬ್ಧೀ ।।೩೮೨।। ತೇಥ ಧ್ಯೇಯಧ್ಯಾನ ಬಹು ಸುಖ । ತೇಂಚಿ ಶೇಷತುಕಾ ನಿರ್ದೋಖ । ವರೀ ಜಳಶಯನ ದೇಖ । ಭಾವೀ ಗುರು ।।೩೮೩।। ಮಗ ವೋಳಗತೀ ಪಾಯ । ತೇ ಲಕ್ಷ್ಮೀ ಆಪಣ ಹೋಯ। ಗರುಡ ಹೋಊನೀ ಉಭಾ ರಾಹೇ । ಆಪಣಚೀ ।।೩೮೪।। ನಾಭೀ ಆಪಣ ಜನ್ಮೇ । ಐಸೇ ಗುರುಮೂರ್ತಿಪ್ರೇಮೇ । ಅನುಭವೀ ಮನೋಧರ್ಮೇ । ಧ್ಯಾನಸುಖ ।।೩೮೫।। ಏಕಾಧಿಯೇ ವೇಳೇ । ಗುರು ಮಾಯ ಕರೀ ಭಾವಬಳೇ । ಮಗ ಸ್ತನ್ಯ ಸುಖೇ ಲೋಳೇ । ಅಂಕಾವರೀ ।।೩೮೬।। ನಾತರೀ ಗಾ ಕಿರೀಟೀ । ಚೈತನ್ಯತರು ತಳವಟೀ । ಗುರು ಧೇನು ಆಪಣಾ ಪಾಠೀ । ವತ್ಸ ಹೋಯ ।।೩೮೭।। ಗುರುಕೃಪಾ ಸ್ನೇಹಸಲಿಲೀ । ಆಪಣ ಹೋಯ ಮಾಸೋಳೀ । ಕೋಣೇ ಏಕೇ ವೇಳೀ । ಹೇಚಿ ಭಾವೀ ।।೩೮೮।। ಗುರುಕೃಪಾಮೃತಾಚೇ ವಡಪ । ಆಪಣ ಸೇವಾವೃತ್ತೀಚೇ ಹೋಯ ರೋಪ । ಐಸೇಸೇ ಸಂಕಲ್ಪ । ವಿಯೇ ಮನ ।।೩೮೯।। ಚಕ್ಷುಪಕ್ಷೇವೀಣ । ಪಿಲೂ ಹೋಯ ಆಪಣ । ಕೈಸೇ ಪೈ ಅಪಾರಪಣ । ಆವಡೀಚೇ ।।೪೦೦।। ಗುರುತೇ ಪಕ್ಷಿಣೀ ಕರೀ । ಚಾರಾ ಘೇ ಚಾಂಚೂವರೀ । ಗುರು ತಾರೂ ಧರೀ । ಆಪಣಕಾಂಸ ।।೪೦೧।। ಐಸೇ ಪ್ರೇಮಾಚೇನಿ ಥಾವೇ । ಧ್ಯಾನಚಿ ಧ್ಯಾನಾತೇ ಪ್ರಸವೇ । ಪೂರ್ಣ ಸಿಂಧೂ ಹೇಲಾವೇ । ಫುಟತೀ ಜೈಸೇ ।।೪೦೨।। ಕಿಂಬಹುನಾ ಯಾಪರೀ । ಶ್ರೀಗುರುಮೂರ್ತೀ ಅಂತರಿ । ಭೋಗೀ ಆತಾ ಅವಧಾರಿ । ಬಾಹ್ಯ ಸೇವಾ ।।೪೦೩।। ತರೀ ಜೀವೀ ಐಸೇ ಆವಾಕೇ । ಮ್ಹಣೇ ದಾಸ್ಯ ಕರೀನ ನಿಕೇ । ಜೈಸೇನಿ ಗುರು ಕೌತುಕೇ । ಮಾಗ ಮ್ಹಣತೀ ।।೪೦೪।। ತೈಸಿಯಾ ಸಾಚಾ ಉಪಾಸ್ತಿ । ಗೋಸಾವೀ ಪ್ರಸನ್ನ ಹೋತೀ । ತೇಥ ಮೀ ವಿನಂತೀ । ಐಸೀ ಕರೀನ ।।೪೦೫।। ಮ್ಹಣೇನ ತುಮಚಾ ದೇವಾ । ಪರಿವಾರು ಜೋ ಆಘವಾ । ತೇತುಲೇ ರೂಪೇ ಹೋಆವಾ । ಮೀಚಿ ಏಕು ।।೪೦೬।। ಆಣಿ ಉಪಕರತೀ ಆಪುಲೀ । ಉಪಕರಣೇ ಆಥೀ ಜೇತುಲೀ । ಮಾಝೀ ರೂಪೇ ತೇತುಲೀ । ಹೋಆವೀ ಸ್ವಾಮೀ ।।೪೦೭।।

ತ್ರಿಕಾಲಗಳಲ್ಲಿಯೂ ಶುದ್ಧ ವಾತಾವರಣ ನಿರ್ಮಿಸಲು ಜೀವದಶಾರೂಪ ಧೂಪವನ್ನು ಹಾಕುವನು. ನಿರಂತರವಾಗಿ ಜ್ಞಾನದೀಪವನ್ನು ಬೆಳಗುವನು ||೮೯||

ಐಕ್ಯಭಾವದ ನೈವೇದ್ಯವನ್ನು ಅಖಂಡವಾಗಿ ಅರ್ಪಿಸುವನು. ಶ್ರೀಗುರುವನ್ನು ಶಂಕರಮೂರ್ತಿ ಎಂದು ಭಾವಿಸಿ ತಾನು ಆತನ ಭಕ್ತನಾಗುವನು ||೯೦||

ಅಥವಾ ಶ್ರೀಗುರುವು ತನ್ನ ಪತಿ ಎಂಬ ಭಾವನೆಯಿಂದ ಆತನನ್ನು ಜೀವವೆಂಬ ಹಾಸಿಗೆಯ ಮೇಲೆ ಮಲಗಿಸಿ ಭೋಗಿಸುವನು. ಹೀಗೆ ಪ್ರೇಮದ ಭರದಲ್ಲಿ ಬುದ್ಧಿಯು ಕಲ್ಪಿಸುವುದು ||೯೧||

ಒಂದು ವೇಳೆಯಲ್ಲಿ ಮನದಲ್ಲಿ ಗುರುವಿಷಯಕ್ಕೆ ಪ್ರೀತಿಯು ಉಕ್ಕೇರಿದಾಗ ಆತನಿಗೆ (ಗುರುಗಳಿಗೆ) ಕ್ಷೀರಸಾಗರವೆಂದು ಭಾವಿಸುವನು ||೯೨||

ಅಲ್ಲಿ ಗುರುಧ್ಯಾನದಿಂದಾಗುವ ಬಹುಸುಖರೂಪ ಶೇಷನ ಮೇಲೆ ಗುರುವು ಭಗವಾನ ಶ್ರೀವಿಷ್ಣುವೇ ಮಲಗಿರುವನೆಂದು ಭಾವಿಸುವನು ||೯೩||

ಆಗ ಪಾದಸೇವೆ ಮಾಡುವ ಶ್ರೀಲಕ್ಷ್ಮೀ ತಾನೇ ಆಗುವನು ಮತ್ತು ಗರುಡನು ತಾನೇ ಆಗಿ ಮುಂದೆ ಕೈಜೋಡಿಸಿ ನಿಲ್ಲುವನು ||೯೪||

ನಾಭಿಯಿಂದ ಹುಟ್ಟುವ ಬ್ರಹ್ಮದೇವನು ತಾನೇ ಆಗಿ ಗುರುಮೂರ್ತಿಯ ಪ್ರೇಮದಿಂದ ತನ್ನ ಮನದಲ್ಲಿ ಧ್ಯಾನ ಸುಖದ ಅನುಭವ ಪಡೆಯುವನು ||೯೫||

ಒಂದೊಂದು ಸಾರೆ ಭಕ್ತಿಯ ಪ್ರೇಮದಿಂದ ಗುರುವಿಗೆ ತಾಯಿ ಎಂದು ಕಲ್ಪಿಸಿ ಸ್ತನಪಾನದಿಂದ ಆಗುವ ಸುಖದ ಅನುಭವ ಪಡೆಯುತ್ತ ಆಕೆಯ ತೊಡೆಯ ಮೇಲೆ ಉರುಳಾಡುವನು ||೯೬||

ಅಥವಾ ಅರ್ಜುನಾ, ಜ್ಞಾನರೂಪ ವೃಕ್ಷದ ಕೆಳಗೆ ಗುರುವೇ ಆಕಳು ಎಂದು ಭಾವಿಸಿ ತನು ಅದರ ಹಿಂದೆ ಹಿಂದೆ ನಡೆಯುವ ಕರುವು ಆಗುವನು ||೯೭||

ಗುರುಕೃಪೆಯ ಸ್ನೇಹರೂಪ ನೀರಿನಲ್ಲಿ ತಾನು ಮೀನಾಗಿ ಇರುವೆ ಎಂದು ಈ ಪ್ರಕಾರ ಭಾವನೆಯನ್ನು ಮಾಡುವನು ||೯೮||

ಗುರುಕೃಪೆ ಎಂಬುವುದೇ ಅಮೃತದ ವೃಷ್ಟಿ ಮತ್ತು ಗುರುಸೇವೆರೂಪ ಅಗಿಯಾಗಿರುವೆ, ಹೀಗೆ ಬೇರೆ ಬೇರೆ ಭಾವನೆಗಳು ಆತನ ಮನಸ್ಸಿನಲ್ಲಿ ಹುಟ್ಟುವುವು ||೯೯||

ಆತನ ಪ್ರೇಮದ ಅಪಾರತನ ಎಷ್ಟಿದೆ ಎಂದರೆ, ಕಣ್ಣು, ರೆಕ್ಕೆ ಇಲ್ಲದ ಮರಿ ತಾನಾಗುವನು ||೪೦೦||

ತದನಂತರ ಗುರುವಿಗೆ ಪಕ್ಷಿ ಮಾಡಿ, ಆ ಪಕ್ಷಿಯ ಚುಂಚುವಿನಿಂದ ಆಹಾರವನ್ನು ತಾನು ಸ್ವೀಕರಿಸುವನು. ಅಥವಾ ಗುರುಗಳು ತಾರಕರು ಎಂದು ಭಾವಿಸಿ, ಅವರನ್ನು ಆಶ್ರಯಿಸುವನು ||೪೦೧||

ಈ ಪ್ರಕಾರವಾಗಿ, ಭರತಿ ಬಂದ ಸಮುದ್ರಕ್ಕೆ ಒಂದರ ಮೇಲೊಂದು ತೆರೆಗಳು ಹುಟ್ಟುವಂತೆ ಪ್ರೇಮದ ಭರದಲ್ಲಿ ಗುರುಧ್ಯಾನದಲ್ಲಿ ಅನೇಕ ಭಾವನೆಗಳು ಹುಟ್ಟುವುವು ||೪೦೨||

ಈ ಪ್ರಕಾರಗಳನ್ನು ಎಷ್ಟೆಂದು ಹೇಳಬೇಕು? ಗುರುಗಳ ಮೂರ್ತಿಯನ್ನು ಅಂತಃಕರಣದಲ್ಲಿ ಧರಿಸಿ, ಆತನು ಧ್ಯಾನಸುಖದ ಅನುಭವ ಪಡೆಯುವನು. ಈಗ ಶ್ರೀಗುರುಗಳ ಬಾಹ್ಯಸೇವೆ ಹೇಗೆ ಮಾಡುವನೆಂಬುವುದು ಕೇಳು ||೪೦೩||

ಈತನು ಮನಸ್ಸಿನಲ್ಲಿ ಹೇಗೆ ನಿಶ್ಚಯಿಸುವನೆಂದರೆ, ನಾನು ಗುರುಗಳ ಸೇವೆಯನ್ನು ಉತ್ತಮ ರೀತಿಯಲ್ಲಿ ಮಾಡಿದಾಗ ಗುರುಗಳು ಸಂತುಷ್ಟರಾಗಿ ನನಗೆ ''ಏನಾದರೂ ಕೇಳು'' ಎನ್ನಬೇಕು ||೪೦೪||

ಈ ಪ್ರಕಾರವಾಗಿ ನನ್ನ ಶುದ್ಧ ಸೇವೆಯಿಂದ ಗುರುಗಳು ಪ್ರಸನ್ನರಾದಾಗ ನಾನು ಆಗ ಅವರನ್ನು ಹೀಗೆ ವಿನಂತಿಸಿಕೊಳ್ಳುವೆನು ||೪೦೫||

ಹೇ ಪ್ರಭೋ, ನಿಮ್ಮ ಪರಿವಾರ ಎಷ್ಟಿದೆಯೋ, ಆ ಎಲ್ಲ ಪರಿವಾರದ ರೂಪಗಳನ್ನು ನನಗೊಬ್ಬನಿಗೆ ಮಾತ್ರ ಕೊಡಿರಿ ||೪೦೬||

ಮತ್ತು ನಿಮಗೆ ಉಪಯೋಗ ಬೀಳುವ ಎಷ್ಟೊಂದು ಉಪಕರಣಗಳಿವೆಯೋ, ಆ ಎಲ್ಲ ರೂಪಗಳನ್ನು ನನಗೆ ಕೊಡಿರಿ ||೪೦೭||

ಐಸಾ ಮಾಗೇನ ವರು । ತೇಥ ಹೋ ಮ್ಹಣತೀ ಶ್ರೀಗುರು । ಮಗ ತೋ ಪರಿವಾರು । ಮೀಚಿ ಹೋಈನ ।।೪೦೮।। ಉಪಕರಣಜಾತ ಸಕಳಿಕ । ತೇ ಮೀಚಿ ಹೋಈನ ಏಕೈಕ । ತೇವ್ಹಾ ಉಪಾಸ್ತೀಚೇ ಕೌತುಕ । ದೇಖಿಜೈಲ ।।೪೦೯।। ಗುರು ಬಹುತಾಂಚೀ ಮಾಯೇ । ಪರೀ ಏಕಲೌತೀ ಹೋಊನಿ ಠಾಯೇ । ತೈಸೇ ಕರೂನಿ ಆಣ ವಾಯೇ । ಕೃಪೇ ತಿಯೇ ।।೪೧೦।। ತಯಾ ಅನುರಾಗಾ ವೇಧು ಲಾವೀ । ಏಕಪತ್ನೀವ್ರತ ಘೇವವೀ । ಕ್ಷೇತ್ರ ಸಂನ್ಯಾಸು ಕರವೀ। ಲೋಭಾಕರವೀ ।।೪೧೧।। ಚತುರ್ದಿಕ್ಷು ವಾರಾ । ನ ಲಾಹೇ ನಿಘೋ ಬಾಹಿರಾ । ತೈಸಾ ಗುರುಕೃಪೇ ಪಾಂಜಿರಾ । ಮೀಚಿ ಹೋಈನ ।।೪೧೨।। ಆಪುಲಿಯಾ ಗುಣಾಂಚೀ ಲೇಣೀ । ಕರೀನ ಗುರುಸೇವೇ ಸ್ವಾಮಿಣೀ । ಹೇ ಅಸೋ ಹೋಈನ ಗಂವಸಣೀ । ಮೀಚಿ ಭಕ್ತೀಸೀ ।।೪೧೩।। ಗುರುಸ್ನೇಹಾಚಿಯೇ ವೃಷ್ಟೀ । ಮೀ ಪೃಥ್ವೀ ಹೋಈನ ತಳವಟೀ । ಐಸಿಯಾ ಮನೋರಥಾಂಚಿಯಾ ಸೃಷ್ಟೀ । ಅನಂತಾ ರಚೀ ।।೪೧೪।। ಮ್ಹಣೇ ಶ್ರೀಗುರುಚೇ ಭುವನ । ಆಪಣ ಮೀ ಹೋಈನ । ಆಣಿ ದಾಸ ಹೋಊನಿ ಕರೀನ । ದಾಸ್ಯ ತೇಥೀಂಚೇ ।।೪೧೫।। ನಿರ್ಗಮಾಗಮೀ ದಾತಾರೇ । ಜೇ ವೋಲಾಂಡಿಜತೀ ಉಂಬರೇ । ತೇ ಮೀ ಹೋಈನ ಆಣಿ ದ್ವಾರೇ । ದ್ವಾರಪಾಳು ।।೪೧೬।। ಪಾಉವಾ ಮೀ ಹೋಈನ । ತಿಯಾ ಮೀಚಿ ಲೇವವೀನ । ಛತ್ರ ಮೀ ಆಣಿ ಕರೀನ । ಬಾರೀಪಣ ।।೪೧೭।। ಮೀ ತಳ ಉಪರು ಜಾಣವಿತಾ । ಚವರಧರು ಹಾತು ದೇತಾ । ಸ್ವಾಮೀಪುಢೇ ಖೋಲತಾ । ಹೋಈನ ಮೀ ।।೪೧೮।। ಮೀಚಿ ಹೋಈನ ಸಾಗಳಾ । ಕರೂ ಸುಈನ ಗುರುಳಾ । ಸಾಂಡಿತೀ ತೋ ನೇಪಾಳಾ । ಪಾಡಿಘಾ ಮೀಚಿ ।।೪೧೯।। ಹಡಪ ಮೀ ವೋಳಗೈನ । ಮೀಚಿ ಉಗಾಳು ಘೇಈನ । ಉಳಿಗ ಮೀ ಕರೀನ । ಆಂಘೋಳೀಚೇ ।।೪೨೦।। ಹೋಈನ ಗುರೂಚೇ ಆಸನ । ಅಳಂಕಾರ ಪರಿಧಾನ । ಚಂದನಾದಿ ಹೋಈನ । ಉಪಚಾರ ತೇ ।।೪೨೧।। ಮೀಚಿ ಹೋಈನ ಸುಆರು । ವೋಗರೀನ ಉಪಹಾರು । ಆಪಣಪೇ ಶ್ರೀಗುರು । ವೋವಾಳೀನ ।।೪೨೨।। ಜೇ ವೇಳೀ ದೇವೋ ಆರೋಗಿತೀ । ತೇವ್ಹಾ ಪಾಂತೀಕರು ಮೀಚಿ ಪಾಂತೀ । ಮೀಚಿ ಹೋಈನ ಪುಢತೀ । ದೇಈನ ವಿಡಾ ।।೪೨೩।। ತಾಟ ಮೀ ಕಾಢೀನ । ಸೇಜ ಮೀ ಝಾಡೀನ । ಚರಣಸಂವಾಹನ । ಮೀಚಿ ಕರೀನ ।।೪೨೪।। ಸಿಂಹಾಸನ ಹೋಈನ ಆಪಣ । ವರೀ ಗುರುಕರಿತೀ ಆರೋಹಣ । ಹೋಈನ ಪುರೇಪಣ । ವೋಳಗೇಚೇ ।।೪೨೫।।

ಈ ಪ್ರಕಾರವಾಗಿ ನಾನು ವರವನ್ನು ಕೇಳಿದಾಗ ಶ್ರೀಗುರುಗಳು ''ಹೋ ಆಗಲಿ'' ಎನ್ನುವರು. ಆಗ ಅವರ ಎಲ್ಲ ಪರಿವಾರವು ನಾನೇ ಆಗುವೆನು ।೫೦೮॥

ಅವರ ಉಪಯೋಗಕ್ಕೆ ಬೀಳುವ ಎಲ್ಲ ವಸ್ತುಗಳ ಪ್ರತಿಯೊಂದು ರೂಪವು ನಾನೇ ಆಗುವೆನು. ಆಗ ನನ್ನ ಸೇವೆಯ ಚಮತ್ಕಾರವು ದೃಷ್ಟಿಗೆ ಬೀಳಬಹುದು ।೫೦೯॥

ಗುರುಗಳು ಅನೇಕ ಭಕ್ತರ ತಾಯಿಯಾಗಿರುವರು. ಆದರೆ ಆ ಗುರುಗಳ ಕೃಪೆಗೆ ನಾನು ನನ್ನ ಆಣೆ ಹಾಕಿ ನನ್ನ ಒಬ್ಬನ ತಾಯಿಯಾಗಿ ಮಾಡಿಕೊಳ್ಳುವೆನು ।೫೧೦॥

ಗುರುಗಳ ಪ್ರೇಮಕ್ಕೆ ನನ್ನ ಹುಚ್ಚು ಹಚ್ಚಿ ಅವರಿಂದ ಏಕಪತ್ನಿವ್ರತ ಆಚರಿಸಲು ಹಚ್ಚುವೆನು. ಗುರುವಿನ ಲೋಭಕ್ಕೆ ನನ್ನಲ್ಲಿಯೇ ವಾಸಮಾಡುವಂತೆ ಕ್ಷೇತ್ರ ಸಂನ್ಯಾಸ ಕೊಡಿಸುವೆನು ।೫೧೧॥

ಗಾಳಿಯು ಹೇಗೆ ಬೀಸಿದರೂ ನಾಲ್ಕು ದಿಕ್ಕುಗಳನ್ನು ದಾಟಿ ಹೋಗಲರಿಯದು. ಅದರಂತೆ ಗುರುಕೃಪೆಗೆ ನಾಲ್ಕೂ ಬದಿಯಲ್ಲಿ ನಾನೇ ಪಂಜರನಾಗುವೆನು ।೫೧೨॥

ನನ್ನ ಸ್ವಾಮಿನಿಯಾಗಿರುವ ಗುರುಸೇವೆಗೆ ನಾನು ನನ್ನ ಗುಣಗಳ ಅಲಂಕಾರ ಹಾಕುವೆನು. ಅಷ್ಟೇ ಏಕೇ? ಗುರುಭಕ್ತಿಗೆ ನಾನೇ ಹೊದಿಕೆಯಾಗುವೆನು ।೫೧೩॥

ಮತ್ತು ಗುರುಸ್ನೇಹರೂಪ ಮೇಲೆ ಮಳೆಗರೆಯುವಾಗ ನಾನು ಕೆಳಗೆ ಪೃಥ್ವಿಯಾಗುವೆನು. ಈ ಪ್ರಕಾರವಾಗಿ ನಾನಾ ರೀತಿಯಲ್ಲಿ ಮನದಲ್ಲಿ ಕಲ್ಪಿಸುವೆನು ।೫೧೪॥

ಮತ್ತು ಶ್ರೀಗುರುಗಳ ಇರುವ ಮನೆಯು ನಾನಾಗುವೆನು ಎಂದು ಹೇಳುವೆನು ಮತ್ತು ಅಲ್ಲಿ ದಾಸನಾಗಿ ನಾನು ಅವರ ಸೇವೆಯನ್ನು ಮಾಡುತ್ತಿರುವೆನು ।೫೧೫॥

ಹೋಗುವಾಗ್ಗೆ, ಬರುವಾಗ್ಗೆ ದಾಟುವ ಹೊಸ್ತಲವು ನಾನಾಗುವೆ ಮತ್ತು ದ್ವಾರಗಳೂ ನಾನಾಗುವೆ, ಅಲ್ಲದೇ ದ್ವಾರಪಾಲಕನೂ ನಾನೇ ಆಗುವೆ ।೫೧೬॥

ನಾನು ಗುರುವಿನ ಪಾದುಕೆಗಳಾಗಿ, ಆ ಪಾದುಕೆಗಳನ್ನು ನಾನೇ ತೊಡಿಸುವೆನು ಮತ್ತು ಛತ್ರವು ನಾನಾಗಿ ನಾನೇ ಗುರುವಿನ ಮೇಲೆ ಹಿಡಿಯುವೆನು ।೫೧೭॥

ತಗ್ಗು, ದಿನ್ನೆ ತೋರಿಸುವುದಕ್ಕಾಗಿ ನಾನು ಗುರುಗಳ ಮುಂದೆ ನಡೆಯುವ ಚೋಪದಾರನಾಗುವೆನು ಮತ್ತು ಗುರುಗಳ ಮೇಲೆ ಚವರಿ ಬೀಸುವೆನು. ಗುರುವಿಗೆ ಸಿಂಹಾಸನವೇರುವಾಗ ಕೈಕೊಡುವೆನು, ಮುಂದೆ ದೀವಟಿಗೆ ಹಿಡಿಯುವವನು ನಾನೇ ಆಗುವೆನು ।೫೧೮॥

ಗುರುವಿನ ಪಾತ್ರೆ ಹಿಡಿಯುವ ಸೇವಕನು ನಾನಾಗುವೆ, ಬಾಯಿ ಮುಕ್ಕಳಿಸಲು ನೀರು ನಾನೇ ಕೊಡುವೆನು. ಮುಕ್ಕಳಿಸಿ ಉಗುಳುವ ನೀರನ್ನು ಹಿಡಿಯುವ ತಳಿಗೆಯು ನಾನೇ ಆಗುವೆನು ।೫೧೯॥

ತಾಂಬೂಲ ಪೆಟ್ಟಿಗೆ ಹಿಡಿಯುವೆನು, ಸೇವಿಸಿದ ತಾಂಬೂಲ ನಾನೇ ಸ್ವೀಕರಿಸುವೆನು. ಸೇವಕನಾಗಿ ಅವರಿಗೆ ಸ್ನಾನವನ್ನು ಮಾಡಿಸುವೆನು ।೫೨೦॥

ಗುರುಗಳ ಆಸನ, ಅಲಂಕಾರ, ವಸ್ತ್ರ, ಚಂದನಾದಿ ಸರ್ವ ಉಪಚಾರಗಳನ್ನು ನಾನೇ ಆಗುವೆನು ।೫೨೧॥

ಗುರುಗಳಿಗೆ ಅಡುಗೆ ಮಾಡುವವನು ನಾನಾಗಿ, ಉಪ ಆಹಾರಾದಿ ಪದಾರ್ಥಗಳನ್ನು ಬಡಿಸುವೆನು ಮತ್ತು ಆತ್ಮತತ್ತ್ವದಿಂದ ಗುರುಗಳಿಗೆ ಆರತಿ ಬೆಳಗುವೆನು ।೫೨೨॥

ಗುರುಗಳು ಭೋಜನ ಮಾಡುವಾಗ್ಗೆ ನಾನು ಅವರ ಪಂಕ್ತಿ ಲಾಭ ಮಾಡಿಕೊಳ್ಳುವೆನು ಮತ್ತು ನಾನೇ ಮುಂದಾಗಿ ಅವರಿಗೆ ತಾಂಬೂಲ ಕೊಡುವೆನು ।೫೨೩॥

ಗುರುಗಳ ಎಂಜಲು ನಾನೇ ತೆಗೆಯುವೆನು, ಗುರುಗಳ ಹಾಸಿಗೆ ನಾನೇ ಝಾಡಿಸಿ ಹಾಕುವೆನು ಮತ್ತು ಗುರುಗಳ ಪಾದಸೇವೆಯನ್ನು ನಾನೇ ಮಾಡುವೆನು ।೫೨೪॥

ಮತ್ತು ಗುರುಗಳ ಸಿಂಹಾಸನ ನಾನೇ ಆಗುವೆನು. ಆಗ ಗುರುಗಳು ಅದರ ಮೇಲೆ ಆರೋಹಣ ಮಾಡುವರು. ಈ ರೀತಿಯಲ್ಲಿ ಎಲ್ಲ ಪ್ರಕಾರಗಳ ಗುರುಗಳ ಸೇವೆಯನ್ನು ಮಾಡುವೆನು ।೫೨೫॥

ಶ್ರೀಗುರುಚೇ ಮನ । ಜಯಾ ದೇಈಲ ಅವಧಾನ । ತೋ ಮೀ ಪುಢಾ ಹೋಈನ । ಚಮತ್ಕಾರು ॥೪೨೬॥ ತಯಾ ಶ್ರವಣಾಚೇ ಆಂಗಣೇ । ಹೋಈನ ಶಬ್ದಾಂಚಿಯಾ ಅಕ್ಷೌಹಿಣೇ । ಸ್ಪರ್ಶ ಹೋಈನ ಘುಸಣೇ । ಆಂಗಾಚಿಯಾ ॥೪೨೭॥ ಶ್ರೀಗುರುಚೇ ಡೋಳೇ । ಅವಲೋಕನೇ ಸ್ನೇಹಾಳೇ । ಪಾಹಾತೀ ತಿಯೇ ಸಕಳೇ । ಹೋಈನ ರೂಪೇ ॥೪೨೮॥ ತಿಯೇ ರಸನೇ ಜೋ ಜೋ ರುಚೇಲ । ತೋ ತೋ ರಸು ಮ್ಯಾ ಹೋಆಜೈಲ । ಗಂಧರೂಪೇ ಕೀಜೇಲ । ಘ್ರಾಣಸೇವಾ ॥೪೨೯॥ ಏವಂ ಬಾಹ್ಯಮನೋಗತ । ಶ್ರೀಗುರುಸೇವಾ ಸಮಸ್ತ । ವೇಂಟಾಳೀನ ವಸ್ತುಜಾತ । ಹೋಊನಿಯಾ॥೪೩೦॥ ಜಂವ ದೇಹ ಹೇ ಅಸೇಲ । ತಂವ ವೋಳಗೀ ಐಸೀ ಕೀಜೇಲ । ಮಗ ದೇಹಾಂತೀ ನವಲ । ಬುದ್ಧಿ ಆಹೇ ॥೪೩೧॥ ಇಯೇ ಶರೀರೀಂಚೀ ಮಾತೀ । ಮೇಳವೀನ ತಿಯೇ ಕ್ಷಿತೀ । ಜೇಥ ಶ್ರೀಚರಣ ಉಭೇ ಠಾತೀ । ಶ್ರೀಗುರೂಚೇ ॥೪೩೨॥ ಮಾಝಾ ಸ್ವಾಮೀ ಕವತಿಕೇ । ಸ್ಪರ್ಶೀಜತಿ ಜಿಯೇ ಉದಕೇ । ತೇಥ ಲಯಾ ನೇಈನ ನಿಕೇ । ಆಪೀ ಆಪ ॥೪೩೩॥ ಶ್ರೀಗುರು ವೋವಾಳೀಜತೀ । ಕಾ ಭುವನೀ ಜೇ ಉಜಳಿಜತೀ । ತಯಾ ದೀಪಾಂಚಿಯಾ ದೀಪ್ತೀ । ಠೇವೀನ ತೇಜ ॥೪೩೪॥ ಚಂವರೀ ಹನ ವಿಂಜಣಾ । ತೇಥ ಲಯೋ ಕರೀನ ಪ್ರಾಣಾ । ಮಗ ಆಂಗಾಚಾ ವೋಳಂಗಣಾ । ಹೋಈನ ಮೀ ॥೪೩೫॥ ಜಿಯೇ ಜಿಯೇ ಅವಕಾಶೀ । ಶ್ರೀಗುರು ಅಸತೀ ಪರಿವಾರೇಸೀ । ಆಕಾಶ ಲಯಾ ಆಕಾಶೀ । ನೇಈನ ತಿಯೇ ॥೪೩೬॥ ಪರೀ ಜೀತು ಮೇಲಾ ನ ಸಂಡೀ । ನಿಮೇಷು ಲೋಕಾ ನ ಧಾಡೀ । ಐಸೇನಿ ಗಣಾವಯಾ ಕೋಡೀ । ಕಲ್ಪಾಂಚಿಯಾ ॥೪೩೭॥ ಯೇತುಲೇವರೀ ಧಿಂವಸಾ । ಜಯಾಚಿಯಾ ಮಾನಸಾ । ಆಣಿ ಕರೂನಿಯಾಂಹೀ ತೈಸಾ । ಅಪಾರು ಜೋ ॥೪೩೮॥ ರಾತ್ರ ದಿವಸ ನೇಣೇ । ಥೋಡೇ ಬಹು ನ ಮ್ಹಣೇ । ಮ್ಹಣಿಯಾಚೇನಿ ದಾಟಪಣೇ । ಸಾಜಾ ಹೋಯ ॥೪೩೯॥ ತೋ ವ್ಯಾಪಾರು ಯೇಣೇ ನಾಂವೇ । ಗಗನಾಹೂನಿ ಥೋರಾವೇ ।ಏಕಲಾ ಕರೀ ಆಘವೇ । ಏಕೇಚಿ ಕಾಳೀ ॥೪೪೦॥ ಹೃದಯವೃತ್ತೀ ಪುಢಾ । ಆಂಗಚಿ ಘೇ ದವಡಾ । ಕಾಜ ಕರೀ ಹೋಡಾ । ಮಾನಸೇಶೀ ॥೪೪೧॥ ಏಕಾದಿಯಾ ವೇಳಾ । ಶ್ರೀಗುರುಚಿಯಾ ಖೇಳಾ । ಲೋಣ ಕರೀ ಸಕಳಾ । ಜೀವಿತಾಚೇ ॥೪೪೨॥ ಜೋ ಗುರುದಾಸ್ಯೇ ಕೃಶು । ಜೋ ಗುರುಪ್ರೇಮೇ ಸಪೋಷು । ಜೋ ಗುರು ಆಜ್ಞೇನಿವಾಸು । ಆಪಣಚಿ ಜೋ ॥೪೪೩॥

ಯಾವ ಚಮತ್ಕಾರಕ್ಕಾಗಿ ಶ್ರೀಗುರುಗಳ ಲಕ್ಷ ಹೋಗುವುದೋ, ಆ ಚಮತ್ಕಾರವು ನಾನೇ ಆಗುವೆನು ।।೪೨೬।।

ಗುರುಗಳ ಶ್ರವಣರೂಪ ಅಂಗಳದಲ್ಲಿ ಶಬ್ದಗಳ ಅಸಂಖ್ಯ ಸಮುದಾಯ ನಾನೇ ಆಗುವೆನು ಮತ್ತು ಗುರುಗಳ ಶರೀರವು ಎಲ್ಲಿ ಹತ್ತುವುದೋ, ಅಲ್ಲಿಯೂ ನಾನೇ ಅದಾಗುವೆನು ।।೪೨೭।।

ಶ್ರೀಗುರುಗಳ ಕಣ್ಣುಗಳು ಪ್ರೇಮಭಾವದಿಂದ ಅವಲೋಕನ ಮಾಡುವ ಎಲ್ಲ ರೂಪಗಳು ನಾನೇ ಆಗುವೆನು ।।೪೨೮।।

ಅವರ ನಾಲಿಗೆಗೆ ಯಾವ ಯಾವ ಪದಾರ್ಥಗಳು ಹಿಡಿಸುವುವೋ, ಅವುಗಳೆಲ್ಲವೂ ನಾನೇ ಆಗುವೆನು. ನಾನೇ ಸುಗಂಧನಾಗಿ ಅವರ ಘ್ರಾಣೇಂದ್ರಿಯದ ಸೇವೆಯನ್ನು ಮಾಡುವೆನು ।।೪೨೯।।

ಈ ಪ್ರಕಾರವಾಗಿ ಗುರುಗಳ ಬಾಹ್ಯಸೇವೆಯನ್ನು ಮಾಡಿ, ಗುರುಗಳಿಗೆ ಬೇಕಾಗುವ ಎಲ್ಲ ವಸ್ತುಗಳು ನಾನೇ ಆಗಿ ವ್ಯಾಪಿಸಿಬಿಡುವೆನು ।।೪೩೦।।

ಈ ನನ್ನ ದೇಹವಿರುವವರೆಗೆ ಗುರುಗಳ ಸೇವೆಯನ್ನು ಹೀಗೆಯೇ ಮಾಡುವೆನು. ದೇಹವು ಬಿದ್ದ ನಂತರ ಸೇವೆಯನ್ನು ಮಾಡುವ ಬುದ್ಧಿಯು ಆಶ್ಚರ್ಯಕಾರಕವಾಗಿದೆ ।।೪೩೧।।

ಈ ಶರೀರದ ಮಣ್ಣನ್ನು (ಭಸ್ಮವನ್ನು) ಶ್ರೀ ಗುರುಗಳು ನಿಲ್ಲುವ ಸ್ಥಳದಲ್ಲಿ ಕೂಡಿಸುವೆನು ।।೪೩೨।।

ನಾನು ನನ್ನ ಶರೀರದಲ್ಲಿನ ಉದಕ ಭಾಗವನ್ನು ಗುರುಗಳು ಕೌತುಕದಿಂದ ಉದಕವನ್ನು ಸ್ಪರ್ಶ ಮಾಡುವ ಭಾಗದಲ್ಲಿ ಕೂಡಿಸುವೆನು ।।೪೩೩।।

ನಾನು ನನ್ನ ಶರೀರದಲ್ಲಿನ ತೇಜವನ್ನು ಗುರುಗಳಿಗೆ ಬೆಳಗುವ ಆರತಿಯಲ್ಲಿ ಕೂಡಿಸುವೆನು ಮತ್ತು ಯಾವ ದೀಪವು ಗುರುಗಳ ಮಂದಿರದಲ್ಲಿ ಬೆಳಗುವುದೋ, ಅದರಲ್ಲಿಯೂ ಕೂಡಿಸುವೆನು ।।೪೩೪।।

ನಾನು ನನ್ನ ಶರೀರದಲ್ಲಿನ ವಾಯುವನ್ನು ಶ್ರೀಗುರುಗಳಿಗೆ ಚವರಿಯಿಂದ ಬೀಸುವ ಗಾಳಿಯಲ್ಲಿ ಕೂಡಿಸುವೆನು ।।೪೩೫।।

ನಾನು ನನ್ನ ಶರೀರದಲ್ಲಿನ ಆಕಾಶದ ಭಾಗವನ್ನು ಶ್ರೀಗುರುಗಳು ತಮ್ಮ ಪರಿವಾರದೊಂದಿಗೆ ವಾಸ ಮಾಡುವ ಸ್ಥಳದಲ್ಲಿ ಕೂಡಿಸುವೆನು ।।೪೩೬।।

ಜೀವಂತವಿದ್ದಾಗಲೂ, ದೇಹಬಿಟ್ಟಾಗಲೂ ಶ್ರೀಗುರುಗಳ ಸೇವೆ ಮಾಡದೇ ಇರಲಾರೆನು ಮತ್ತು ಒಂದು ಕ್ಷಣವೂ ಬೇರೆಯವರಿಗೆ ಗುರುಸೇವೆಯನ್ನು ಮಾಡಲು ಬಿಡುವುದಿಲ್ಲ. ಈ ಪ್ರಕಾರವಾಗಿ ಅನೇಕ ಕಲ್ಪದವರೆಗೆ ಗುರುಸೇವೆ ಮಾಡುವೆನು ।।೪೩೭।।

ಈ ಪ್ರಕಾರದ ಪೂರ್ಣ ಇಚ್ಛೆಯು ಯಾರ ಮನದಲ್ಲಿ ಇರುವುದೋ ಮತ್ತು ತನ್ನ ಮನಸ್ಸಿನಂತೆ ಅಪಾರವಾದ ಗುರುಸೇವೆಯನ್ನು ಮಾಡಿಯೂ ಸಹ ಯಾರು ।।೪೩೮।।

ಗುರುಸೇವೆಗಾಗಿ ಹಗಲು ರಾತ್ರಿ, ಎನ್ನದೇ ಹೆಚ್ಚು ಕಡಿಮೆ ಎನ್ನದೇ ಇರುವರು ಮತ್ತು ಈ ಸ್ಥಿತಿಯಲ್ಲಿ ಒಂದು ವೇಳೆ ಗುರುಗಳು ಕೆಲಸ ಮಾಡಲು ಆಜ್ಞೆ ಮಾಡಿದರೆ ಆತನಿಗೆ ಇನ್ನೂ ಹೆಚ್ಚಿಗೆ ಸ್ಫೂರ್ತಿ ಬರುವುದು ।।೪೩೯।।

ಗುರುಗಳ ಸೇವೆಯನ್ನು ಈ ಪ್ರಕಾರವಾಗಿ ಮಾಡಲು ಯಾರು ಆಕಾಶದಷ್ಟಾಗಿ ಮತ್ತು ಈ ಕಾರ್ಯವನ್ನು ಒಬ್ಬನೇ ಒಮ್ಮೆಲೇ ಮಾಡುವನು ।।೪೪೦।।

ಮನಸ್ಸಿನ ವೃತ್ತಿಗಿಂತ ಈತನ ಶರೀರದ ವೃತ್ತಿಯು ಮುಂದಿರುವುದು ಮತ್ತು ಈತನ ಕೆಲಸ ಮಾಡುವ ಇಚ್ಛೆಯು ತನ್ನ ಮನಸ್ಸಿನೊಂದಿಗೆ ಜೂಜು ಕಟ್ಟಿಸುವುದು ।।೪೪೧।।

ಒಮ್ಮೊಮ್ಮೆ ಆತನ ಶ್ರೀಗುರುವಿನ ಲೀಲೆಗಳಿಗೆ ತನ್ನ ಜೀವಿತವನ್ನೇ ನಿವಾಳಿಸುವನು ।।೪೪೨।।

ಆತನು ಶ್ರೀಗುರುಗಳ ಸೇವೆಯಿಂದ ಕೃಶನಾಗುವನು ಮತ್ತು ಶ್ರೀಗುರುಗಳ ಪ್ರೇಮದಿಂದ ಪುಷ್ಟನಿರುವನು ಮತ್ತು ಶ್ರೀಗುರುವಿನ ಆಜ್ಞೆಗೆ ತಾನೇ ಸ್ಥಾನವಾಗುವನು ।।೪೪೩।।

ಜೋ ಗುರುಕುಳೇ ಸುಕುಲೀನು । ಜೋ ಗುರುಬಂಧು ಸೌಜನ್ಯೇ ಸುಜನು । ಜೋ ಗುರುಸೇವಾವ್ಯಸನೇ ಸವ್ಯಸನು । ನಿರಂತರ ।೪೪೪॥ ಗುರುಸಂಪ್ರದಾಯ ಧರ್ಮ । ತೇಚಿ ಜಯಾಚೇ ವರ್ಣಾಶ್ರಮ । ಗುರು ಪರಿಚರ್ಯಾ ನಿತ್ಯಕರ್ಮ । ಜಯಾಚೇ ಗಾ ।೪೪೫॥ ಗುರು ಕ್ಷೇತ್ರ ಗುರುದೇವತಾ । ಗುರು ಮಾತಾ ಗುರು ಪಿತಾ । ಜೋ ಗುರುಸೇವೇ ಪರೌತಾ । ಮಾರ್ಗು ನೇಣೇ ।೪೪೬॥ ಶ್ರೀಗುರುಚೇ ದ್ವಾರ । ತೇ ಜಯಾಚೇ ಸರ್ವಸ್ವ ಸಾರ । ಗುರುಸೇವಕಾ ಸಹೋದರ । ಪ್ರೇಮೇ ಭಜೇ ।೪೪೭॥ ಜಯಾಚೇ ವಕ್ತ್ರ । ವಾಹೇ ಗುರುನಾಮಾಚೇ ಮಂತ್ರ । ಗುರುವಾಕ್ಯಾವಾಂಚೂನಿ ಶಾಸ್ತ್ರ । ಹಾತೀ ನ ಶಿವೇ ।೪೪೮॥ ಶಿವತಲೇ ಗುರುಚರಣೇ । ಭಲತ್ಯೆಸೇ ಹೋ ಪಾಣೀ । ತಯಾ ಸಕಳ ತೀರ್ಥೇ ಆಣೀ । ತ್ರೈಲೋಕೀಂಚೇ ।೪೪೯॥ ಶ್ರೀಗುರುಚೇ ಉಶಿಟೇ । ಲಾಹೇ ಜ್ರೈ ಅವಚಟೇ । ತ್ರೈ ತೇಣೇ ಲಾಭೇ ವಿಟೇ । ಸಮಾಧೀಸೀ ।೪೫೦॥ ಕೈವಲ್ಯಸುಖಾಸಾಠೀ । ಪರಮಾಣು ಘೇ ಕಿರೀಟೀ । ಉಧಳತೀ ಪಾಯಾಪಾಠೀ । ಚಾಲತಾ ಜೇ ।೪೫೧॥ ಹೇ ಅಸೋ ಸಾಂಗಾವೇ ಕಿತೀ । ನಾಹೀ ಪಾರು ಗುರುಭಕ್ತೀ । ಪರೀ ಗಾ ಉತ್ಕ್ರಾಂತಮತೀ । ಕಾರಣ ಹೇ ।೪೫೨॥ ಜಯಾ ಇಯೇ ಭಕ್ತೀಚೀ ಚಾಡ । ಜಯಾ ಇಯೇ ವಿಷಯೀಂಚೇ ಕೋಡ । ಜೋ ಹೇ ಸೇವೇ ವಾಂಚೂನ ಗೋಡ । ನ ಮನೀ ಕಾಂಹೀ ।೪೫೩॥ ತೋ ತತ್ತ್ವಜ್ಞಾನಾಚಾ ಠಾವೋ । ಜ್ಞಾನಾ ತೇಣೇಂಚಿ ಆವೋ । ಹೇ ಅಸೋ ತೋ ದೇವೋ । ಜ್ಞಾನಭಕ್ತು ।೪೫೪॥ ಹೇ ಜಾಣ ಪಾ ಸಾಚೋಕಾರೇ । ತೇಥ ಜ್ಞಾನ ಉಘಡೇನೀ ದ್ವಾರೇ । ನಾಂದತ ಅಸೇ ಜಗಾ ಪುರೇ । ಇಯಾ ರೀತೀ ।೪೫೫॥ ಜಿಯೇ ಗುರುಸೇವೇವಿಖೀ । ಮಾಝಾ ಜೀವ ಅಭಿಲಾಖೀ । ಮ್ಹಣೌನಿ ಸೋಯಚುಕೀ । ಬೋಲಿಲೀ ಕೇಲೀ ।೪೫೬॥ ಏರ್ಹ್ವೀ ಅಸತಾ ಹಾತೀ ಖುಳಾ । ಭಜನಾವಧಾನೀ ಆಂಧಳಾ । ಪರಿಚರ್ಯೇಲಾಗೀ ಪಾಂಗುಳಾ । ಪಾಸೂನಿ ಮಂದು ।೪೫೭॥ ಗುರುವರ್ಣನೀ ಮುಕಾ । ಆಳಶೀ ಪೋಶಿಜೇ ಫುಕಾ । ಪರೀ ಮನೀ ಆಥೀ ನಿಕಾ । ಸಾನುರಾಗು ।೪೫೮॥ ತೇಣೇಂಚಿ ಪೈ ಕಾರಣೇ । ಹೇ ಸ್ಥೂಳ ಪೋಸಣೇ । ಪಡಲೇ ಮಜ ಮ್ಹಣೇ । ಜ್ಞಾನದೇವೋ ।೪೫೯॥ ಪರಿ ತೋ ಬೋಲು ಉಪಸಾಹಾವಾ । ಆಣಿ ವೋಳಗೇ ಅವಸರು ದೇಯಾವಾ । ಆತಾ ಮ್ಹಣೇನ ಜೇ ಬರವಾ । ಗ್ರಂಥಾರ್ಥುಚೀ ।೪೬೦॥ ಪರಿಸಾ ಪರಿಸಾ ಶ್ರೀಕೃಷ್ಣು । ಜೋ ಭೂತಭಾರಸಹಿಷ್ಣು । ತೋ ಬೋಲತಸೇ ವಿಷ್ಣು । ಪಾರ್ಥೂ ಐಕೇ ।೪೬೧॥

ಅವರು ಗುರುಗಳ ಆಪ್ತರಲ್ಲಿ ಸೌಜನ್ಯದಿಂದ ನಡೆದು ಸುಜನರಾಗಿರುವರು ಮತ್ತು ಅವರು ಗುರು ಸೇವಾ ರೂಪ ಚಟದಿಂದ ನಿರಂತರ ವ್ಯಸನಿಯಾಗಿರುವರು ।।೪೪೪।।

ಗುರುಸಂಪ್ರದಾಯ ಧರ್ಮವು ಇದು ಅವರ ವರ್ಣಾಶ್ರಮ ಧರ್ಮವಾಗಿರುವುದು ಮತ್ತು ಗುರುಗಳ ಸೇವೆ ಮಾಡುವುದೇ ಅವರ ನಿತ್ಯ ನೈಮಿತ್ತಿಕ ಕರ್ಮವಾಗಿರುವುದು ।।೪೪೫।।

ಇವರಿಗೆ ಗುರುವೇ ಕ್ಷೇತ್ರವು. ಗುರುವೇ ದೈವತವು. ಗುರುವೇ ತಾಯಿಯು. ಗುರುವೇ ತಂದೆಯು ಮತ್ತು ಇವರು ಗುರುಸೇವೆಯ ಹೊರತಾಗಿ ಇನ್ನೊಂದು ಏನೂ ಅರಿಯರು ।।೪೪೬।।

ಗುರುಗಳ ದ್ವಾರವು ಇವರ ಸರ್ವಧರ್ಮದ ಸಾರವಾಗಿರುವುದು ಮತ್ತು ಗುರುಸೇವಕರ ಮೇಲೆ ತಮ್ಮ ಒಡಹುಟ್ಟಿದ ಅಣ್ಣತಮ್ಮಂದಿರಂತೆ ಪ್ರೀತಿ ಮಾಡುವರು ।।೪೪೭।।

ಇವರ ಮುಖದಿಂದ ಹಗಲು ರಾತ್ರಿ ಗುರುನಾಮದ ಉಚ್ಚಾರ ನಡೆದಿರುವುದು ಮತ್ತು ಇವರು ಗುರು ವಾಕ್ಯದ ಹೊರತಾದ ಶಾಸ್ತ್ರವನ್ನು ಕೈಯಿಂದ ಮುಟ್ಟುವುದಿಲ್ಲ ।।೪೪೮।।

ಯಾವ ಜಲಕ್ಕೆ ಗುರುಚರಣ ಹತ್ತಿರುವುದೋ, ಆ ಜಲವು ಹೇಗೆ ಇರಲಿ, ಅದನ್ನು ದೊಡ್ಡ ತೀರ್ಥವೆಂದು ಭಾವಿಸಿ ತ್ರೈಲೋಕದ ಸರ್ವ ತೀರ್ಥ ಅದರಲ್ಲಿ ತರುವನು ।।೪೪೯।।

ಅಕಸ್ಮಾತಾಗಿ ಗುರುಗಳ ಎಂಜಲ ಪ್ರಸಾದ ದೊರಕಿತೆಂದರೆ ಆ ಲಾಭದ ಮುಂದೆ ಸಮಾಧಿ ಸುಖವನ್ನು ತುಚ್ಛವೆಂದು ಭಾವಿಸುವನು ।।೪೫೦।।

ಅರ್ಜುನಾ, ಗುರುಗಳು ನಡೆಯುವಾಗ ಹಿಂದಿನಿಂದ ಗುರುಗಳ ಚರಣರಜ ಕಣಗಳು (ಪಾದ ಧೂಳಿ) ಹಾರುವುದನ್ನು ತನ್ನ ಮಸ್ತಕಕ್ಕೆ ಧರಿಸಿ, ಆ ಲಾಭದಿಂದ ಮೋಕ್ಷ ಸುಖ ತುಚ್ಛವೆನ್ನುವನು ।।೪೫೧।।

ಇದು ಇರಲಿ, ಗುರುಭಕ್ತಿಯ ಮಹಿಮೆಯನ್ನು ಎಷ್ಟೆಂದು ಹೇಳಬೇಕು? ಏಕೆಂದರೆ ಅದಕ್ಕೆ ಕೊನೆಯೇ ಇಲ್ಲ. ಆದರೆ ನನ್ನ ಬುದ್ಧಿಗೆ ಗುರುಭಕ್ತಿಯ ಭಾವಮೂಡಿದ್ದಕ್ಕೆ ಹೇಳಬೇಕಾಯಿತು ।।೪೫೨।।

ಯಾರಿಗೆ ಗುರುಭಕ್ತಿಯ ಇಚ್ಛೆ ಇದೆಯೋ, ಆತನಿಗೆ ಗುರುಭಕ್ತಿಯ ಕೌತುಕವೆನಿಸುವುದು ಮತ್ತು ಯಾರಿಗೆ ಗುರುಸೇವೆ ಹೊರತಾಗಿ ಬೇರೆ ಯಾವುದೂ ಹಿಡಿಸುವುದಿಲ್ಲವೋ ।।೪೫೩।।

ಆತನು ಬ್ರಹ್ಮಜ್ಞಾನದ ತವರುಮನೆಯಾಗಿರುವನು. ಜ್ಞಾನಕ್ಕೆ ಆತನಿಂದಲೇ ಶೋಭೆ ಬರುವುದು. ಇಷ್ಟೇ ಅಲ್ಲ, ಗುರುಸೇವಕನು ದೇವರಾಗಿ ಜ್ಞಾನವು ಆತನ ಭಕ್ತನಾಗುವುದು ।।೪೫೪।।

ಯಾರಿಗೆ ನಿಜವಾದ ಗುರುಭಕ್ತಿಯ ಪ್ರೇಮ ಇರುವುದೋ, ಅವರ ಮನೆಯಲ್ಲಿ ಜಗ ತುಂಬಿ ಉಳಿಯುವಷ್ಟು ಜ್ಞಾನವು ಬೆಳೆದಿರುವುದು ।।೪೫೫।।

(ಜ್ಞಾನೇಶ್ವರ ಮಹಾರಾಜರು ಹೇಳುವರು) ಗುರುಸೇವೆ ವಿಷಯದಲ್ಲಿ ನನ್ನ ಮನದಲ್ಲಿ ನಿಜವಾದ ಉತ್ಕಟ ಇಚ್ಛೆ ಇರುವುದರಿಂದ ನಾನು ಗುರುಭಕ್ತಿಯನ್ನು ಅಮರ್ಯಾದವಾಗಿ ವರ್ಣಿಸಿರುವೆನು ।।೪೫೬।।

ಸಾಮಾನ್ಯವಾಗಿ ನನಗೆ ಕೈಗಳಿದ್ದರೂ ನಾನು ಚೊಂಚನು. ಕಣ್ಣಿದ್ದರೂ ಭಜನ ವಿಷಯಕ್ಕೆ ಕುರುಡನು, ಮತ್ತು ಕಾಲುಗಳಿದ್ದರೂ ಗುರುಸೇವೆಯಲ್ಲಿ ಕುಂಟನಿಗಿಂತಲೂ ಕುಂಟನು ।।೪೫೭।।

ಮತ್ತು ಗುರುಗಳ ವರ್ಣನೆ ಮಾಡುವುದಕ್ಕೆ ಮೂಕನು ಮತ್ತು ಆಲಸಿಯೂ ಇರುವೆನು. ಇಷ್ಟೊಂದು ಅವಗುಣಗಳಿದ್ದರೂ ವ್ಯರ್ಥವಾಗಿ ಅವುಗಳ ಪೋಷಣೆ ಮಾಡುತ್ತಿರುವೆ. ಆದರೆ ಗುರುಭಕ್ತಿ ವಿಷಯಕ್ಕೆ ಮನದಲ್ಲಿ ಬಹಳಷ್ಟು ಪ್ರೇಮವಿದೆ ।।೪೫೮।।

ಮನದಲ್ಲಿ ಪ್ರೇಮವಿರುವುದರಿಂದಲೇ, ನಾನು ನನ್ನ ಶರೀರದ ಪೋಷಣೆಯನ್ನು ಮಾಡಲೇಬೇಕಾಯಿತೆಂದು ಜ್ಞಾನೇಶ್ವರರು ಹೇಳುವರು ।।೪೫೯।।

ಆದರೆ, ನಾನೇನು ಇಷ್ಟೊಂದು ಮರ್ಯಾದೆ ಬಿಟ್ಟು ಗುರುಸೇವೆ ವಿಷಯಕ್ಕೆ ವರ್ಣಿಸಿದ್ದು, ನೀವು ಸಹಿಸಿಕೊಂಡು ನಿಮ್ಮ ಸೇವೆಯನ್ನು ಮಾಡುವ ಸಂಧಿಯನ್ನು ಕೊಡಿರಿ. ಅಂದಾಗ ನಾನು ಗ್ರಂಥಾರ್ಥವನ್ನು ಉತ್ತಮವಾಗಿ ಹೇಳುವೆನು ।।೪೬೦।।

ಶ್ರೋತೃಗಳವರೇ ಕೇಳಿರಿ, ಕೇಳಿರಿ, ಭೂತಗಳ ಭಾರವನ್ನು ಸಹಿಸುವ ವಿಷ್ಣುವಿನ ಅವತಾರನಾದ ಶ್ರೀಕೃಷ್ಣ ಪರಮಾತ್ಮನು ಹೇಳುತ್ತಿರುವುದನ್ನು ಪಾರ್ಥನು ಕೇಳುತ್ತಿರುವನು ।।೪೬೧।।

ಮ್ಹಣೇ ಶುಚಿತ್ವ ಗಾ ಐಸೇ । ಜಿಯಾಪಾಶೀ ದಿಸೇ । ಆಂಗ ಮನ ಜೈಸೇ । ಕಾಪುರಾಚೇ ॥೪೬೨॥ ಕಾ ರತ್ನಾಚೇ ದಳವ್ಹಾಡೇ । ಜೈಸೇ ಸಬಾಹ್ಯ ಚೋಖಡೇ । ಆಂತ ಬಾಹೇರಿ ಏಕ್ಕೇ ಪಾಡೇ । ಸೂರ್ಯ ಜೈಸಾ ॥೪೬೩॥ ಬಾಹೇರೀ ಕರ್ಮೇ ಕ್ಷಾಳಲಾ । ಭೀತರೀ ಜ್ಞಾನೇ ಉಜಳಲಾ । ಇಹೀ ದೋಹೀ ಪರೀ ಆಲಾ । ಪಾಖಾಳಾ ಏಕಾ ॥೪೬೪॥ ಮೃತ್ತಿಕಾ ಆಣಿ ಜಳೇ । ಬಾಹ್ಯ ಯೇಣೇ ಮೋಳೇ । ನಿರ್ಮಳು ಹೋಯ ಬೋಲೇ । ವೇದಾಚೇನಿ ॥೪೬೫॥ ಭಲತೇಥ ಬುದ್ಧೀ ಬಳೀ । ರಜ ಆರಿಸಾ ಉಜಳೀ । ಸೌಂದಣೀ ಫೇಡೀ ಥಿಗಳೀ । ವಸ್ತ್ರಾಂಚಿಯಾ ॥೪೬೬॥ ಕಿಂಬಹುನಾ ಇಯಾಪರೀ । ಬಾಹ್ಯ ಚೋಖ ಅವಧಾರೀ । ಆಣಿ ಜ್ಞಾನದೀಪು ಅಂತರೀ । ಮ್ಹಣೌನಿ ಶುದ್ಧ ॥೪೬೭॥ ಏರ್ಹವಿ ತರೀ ಪಂಡುಸುತಾ । ಆಂತ ಶುದ್ಧ ನಸತಾ । ಬಾಹೇರಿ ಕರ್ಮ ತೋ ತತ್ತ್ವತಾ । ವಿಟಂಬು ಗಾ ॥೪೬೮॥ ಮೃತ ಜೈಸಾ ಶೃಂಗಾರಿಲಾ । ಗಾಢವ ತೀರ್ಥೀ ನ್ಹಾಣಿಲಾ । ಕಡುದುಧಿಯಾ ಮಾಖಿಲಾ । ಗುಳೀ ಜೈಸಾ ॥೪೬೯॥ ವೋಸಗೃಹೀ ತೋರಣ ಬಾಂಧಿಲೇ । ಕಾ ಉಪವಾಸೀ ಅನ್ನೇ ಲಿಂಪಿಲೇ । ಕುಂಕುಮ ಸೇಂದುರ ಕೇಲೇ । ಕಾಂತಹೀನೇನೇ ॥೪೭೦॥ ಕಳಸ ಢಿಮಾಚೇ ಪೋಕಳ । ಜಳೋ ವರಿಲ ತೇ ಝಳಾಳ । ಕಾಯ ಕರೂ ಚಿತ್ರೀಂಚ ಫಳ । ಆಂತು ಶೇಣ ॥೪೭೧॥ ತೈಸೇ ಕರ್ಮ ವರಿಚಿಲೇ ಕಡಾ । ನ ಸರೇ ಥೋರ ಮೋಲೇ ಕುಡಾ । ನವ್ಹೇ ಮದಿರೇಚಾ ಘಡಾ । ಪವಿತ್ರ ಗಂಗೇ ॥೪೭೨॥ ಮ್ಹಣೌನಿ ಅಂತರೀ ಜ್ಞಾನ ವ್ಹಾವೇ । ಮಗ ಬಾಹ್ಯ ಲಾಭೇಲ ಸ್ವಭಾವೇ । ವರೀ ಜ್ಞಾನ ಕರ್ಮೇ ಸಂಭವೇ । ಐಸೇ ಕೇ ಜೋಡೇ ? ॥೪೭೩॥ ಯಾಲಾಗೀ ಬಾಹ್ಯ ಭಾಗು । ಕರ್ಮೇ ಧುತಲಾ ಚಾಂಗು । ಜ್ಞಾನೇ ಫಿಟಲಾ ವಂಗು । ಅಂತರೀಂಚಾ ॥೪೭೪॥ ತೇಥ ಅಂತರ ಬಾಹ್ಯ ಗೇಲೇ । ನಿರ್ಮಳತ್ವ ಏಕ ಜಾಹಲೇ । ಕಿಂಬಹುನಾ ಉರಲೇ । ಶುಚಿತ್ವಚಿ ॥೪೭೫॥ ಮ್ಹಣೌನಿ ಸದ್ಭಾವ ಜೀವಗತ । ಬಾಹೇರೀ ದಿಸತೀ ಫಾಂಕತ । ಸ್ಫಟಿಕಗೃಹೀಂಚೇ ಡೋಲತ । ದೀಪ ಜೈಸೇ ॥೪೭೬॥ ವಿಕಲ್ಪ ಜೇಣೇ ಉಪಜೇ । ನಾಥಿಲೀ ವಿಕೃತೀ ನಿಪಜೇ । ಅಪ್ರವೃತ್ತೀಚೇ ಬೀಜೇ । ಅಂಕುರ ಫೇತೀ ॥೪೭೭॥ ತೇ ಆಇಕೇ ದೇಖೇ ಅಥವಾ ಭೇಟೇ । ಪರೀ ಮನೀ ಕಾಂಹೀಂಚಿ ನುಮಟೇ । ಮೇಘರಂಗೇ ನ ಕಾಂಟೇ । ವ್ಯೋಮ ಜೈಸೇ ॥೪೭೮॥ ಏರ್ಹವೀ ಇಂದ್ರಿಯಾಂಚೇನಿ ಮೇಳೇ । ವಿಷಯಾವರೀ ತರೀ ಲೋಳೇ । ಪರೀ ವಿಕಾರಾಚೇನಿ ವಿಟಾಳೇ । ಲಿಂಪಿಜೇನಾ ॥೪೭೯॥

ಕರ್ಪೂರವು ಒಳಗೆ ಶುದ್ಧವಾಗಿರುವುದು. ಹೀಗೆ ಯಾರ ಶುಚಿತ್ವವು ಸ್ವಚ್ಛವಾಗಿರುವುದೋ, ಅವರೇ ನಿಜವಾದ ಶುಚಿತ್ವರು ।೫೬೨॥

ರತ್ನದ ಮಣಿಯು ಒಳಹೊರಗೆ ಹೊಳೆಯುತ್ತಿರುವುದು. ಅಥವಾ ಸೂರ್ಯನು ಒಳಹೊರಗೆ ಅಕಲ್ಪಿತವಾಗಿ ಕಾಣುವನು ।೫೬೩॥

ಕರ್ಮದ ಯೋಗದಿಂದ ಆತನ ಬಾಹ್ಯಶುದ್ಧಿಯಾಗಿರುವುದು. ಜ್ಞಾನದ ಯೋಗದಿಂದ ಅಂತಃಶುದ್ಧಿಯಾಗಿರುವುದು. ಹೀಗೆ ಎರಡೂ ಪ್ರಕಾರಗಳಿಂದ ಶುದ್ಧನಾಗಿರುವನು ।೫೬೪॥

ವೇದಾಂತವು ಹೇಳಿದಂತೆ ಮಂತ್ರೋಚ್ಚಾರಮಾಡಿ, ಮಣ್ಣು ಮತ್ತು ನೀರು ಹೊರಗಿನಿಂದ ಹಚ್ಚಿದಾಗ ಬಾಹ್ಯಶುದ್ಧಿಯಾಗುವುದು ।೫೬೫॥

ಬುದ್ಧಿಯ ಯೋಗದಿಂದ ಕನ್ನಡಿಯನ್ನು ಬೇಕಾದಾಗ ಧೂಳಿನಿಂದ ಸ್ವಚ್ಛ ಮಾಡಲು ಬರುವುದು. ಅಥವಾ ಮಲೀನ ವಸ್ತ್ರಗಳನ್ನು ಅಗಸನ ಭಟ್ಟಿಯಿಂದ ತೊಳೆದಾಗ ಅದರ ಕಲೆಗಳು ಇಲ್ಲದಾಗುವುದು ।೫೬೬॥

ಹೆಚ್ಚಿಗೇನು ಹೇಳಬೇಕು? ಈ ಪ್ರಕಾರವಾಗಿ ಹೊರಗೆ ನಿರ್ಮಲವಾಗಿರುವವನು ಮತ್ತು ಅಂತಃಕರಣದಲ್ಲಿ ಜ್ಞಾನದ ಬೆಳಕು ಆಗಿರುವುದರಿಂದ ನಿಜವಾಗಿಯೂ ಅಂತರ್‌ಬಾಹ್ಯ ಶುದ್ಧನಾಗಿರುವನು ।೫೬೭॥

ಇಲ್ಲದಿದ್ದರೆ, ಅರ್ಜುನಾ, ಅಂತಃಕರಣದಲ್ಲಿ ಶುದ್ಧವಿರದೇ, ಬಾಹ್ಯದಲ್ಲಿ ಕರ್ಮಗಳನ್ನು ಮಾಡುವುದು ಎಲ್ಲ ರೀತಿಯಿಂದ ಅವಹೇಳನದ್ದಾಗಿದೆ ।೫೬೮॥

ಹೆಣಕ್ಕೆ ಅಲಂಕಾರಗಳನ್ನು ಹಾಕಿ ಶೃಂಗರಿಸಿದಂತೆ, ಅಥವಾ ಕತ್ತೆಯನ್ನು ತೀರ್ಥದಲ್ಲಿ ಸ್ನಾನ ಮಾಡಿಸಿದಂತೆ, ವಿಷ ಕುಂಬಳಕಾಯಿಯನ್ನು ಬೆಲ್ಲದಿಂದ ಮೆತ್ತಿದಂತೆ ।೫೬೯॥

ಹಾಳುಮನೆಗೆ ತೋರಣ ಕಟ್ಟಿದಂತೆ, ಅಥವಾ ಹಸಿದ ಮನುಷ್ಯನ ಹೊಟ್ಟೆಗೆ ಅನ್ನವನ್ನು ಕಟ್ಟಿದಂತೆ, ಇಲ್ಲವೆ ಗಂಡ ಸತ್ತವಳಿಗೆ ಕುಂಕುಮ, ಸಿಂಧೂರ ಹಚ್ಚಿದಂತೆ ।೫೭೦॥

ಬಂಗಾರದ ಮಲಾಮ ಹಚ್ಚಿದ ಪೊಳ್ಳು ಕಳಸವು ಎಷ್ಟೊಂದು ಹೊಳಪು ಮಾಡಿದರೇನು? ಹಾಗೆಯೇ ಚಿತ್ರದ ಫಲಗಳು ಎಷ್ಟೊಂದು ಅಂದವಾಗಿ ಕಂಡರೂ ಒಳಗೆ ಸಗಣಿಯೇ ತುಂಬಿದೆ ।೫೭೧॥

ಅದರಂತೆ ಬಾಹ್ಯಾಕಾರದಲ್ಲಿ ಕರ್ಮ ಮಾಡುವವರ ಸ್ಥಿತಿಯಾಗಿದೆ. ನಕಲಿ ವಸ್ತುಗಳಿಗೆ ಬೆಲೆ ಬರಬಹುದೇ? ಅಥವಾ ಸರಾಯಿ ತುಂಬಿದ ಕೊಡವು ಗಂಗೆಯಲ್ಲಿಟ್ಟರೆ ಪವಿತ್ರವಾದೀತೆ? ।೫೭೨॥

ಆದ್ದರಿಂದ ಅಂತರ್ಯಾಮಿಯಲ್ಲಿ ಜ್ಞಾನವು ಪ್ರಾಪ್ತವಾದಾಗ ಬಾಹ್ಯದಲ್ಲಿ ಕರ್ಮಗಳು ಸಹಜವಾಗಿ ಶುದ್ಧವಾಗುವುವು. ಆದರೆ ಜ್ಞಾನಯುಕ್ತ ಬಾಹ್ಯ ಕರ್ಮಾಚರಣೆಯು ಎಲ್ಲಿರುವುದು? ।೫೭೩॥

ಆದಕಾರಣ, ಬಾಹ್ಯಾಕಾರಿ ಕರ್ಮದ ಆಚರಣೆಗಳನ್ನು ಮಾಡಿ ಶುದ್ಧನಾಗುವನು. ಜ್ಞಾನಪ್ರಾಪ್ತಿಯಿಂದ ಅಂತಃಕರಣವು ನಿರ್ಮಲವಾಗಿರುವುದು ।೫೭೪॥

ಅಲ್ಲಿ ಒಳಹೊರಗೆ ಭೇದವಿಲ್ಲದೇ ಸರ್ವವು ಶುದ್ಧಿಯಾಗಿ ಆತನಲ್ಲಿ ಕೇವಲ ಶುಚಿತ್ವವು ವಾಸವಾಗಿರುವುದು ।೫೭೫॥

ಆದ್ದರಿಂದ ಮನದಲ್ಲಿನ ಸದ್ಭಾವಗಳು ಹೊರಗಿನ ದೇಹೇಂದ್ರಿಯಗಳಲ್ಲಿ ಸ್ಪಷ್ಟವಾಗಿ ತೋರುವುವು. ಸ್ಫಟಿಕದ ಒಳಗೆ ಪ್ರಕಾಶಿಸುವ ಬೆಳಕು, ಹೊರಗೂ ಹಾಗೆಯೇ ಕಾಣುವುದು ।೫೭೬॥

ಯಾವುದರಿಂದ ಮನದಲ್ಲಿ ವಿಕಲ್ಪಗಳು ಹುಟ್ಟುವುವೋ, ಕಾಮಕ್ರೋಧಾದಿ ವಿಕೃತಿಗಳಾಗುವುವೋ ಆ ಕೆಟ್ಟ ಕೆಲಸಗಳ ಪ್ರವೃತ್ತಿಯಾಗುವುದೋ ।೫೭೭॥

ಅಂತಹ ವಿಷಯಗಳು ಸಿಕ್ಕಾಗ, ಕಿವಿಯಿಂದ ಕೇಳಿದಾಗ, ಪ್ರತ್ಯಕ್ಷ ಕಂಡಾಗ, ಆತನ ಮನದಲ್ಲಿ ಅದರ ಪರಿಣಾಮವೇನೂ ಆಗುವುದಿಲ್ಲ, ಮೋಡಗಳ ಬಣ್ಣಗಳಿಂದ ಆಕಾಶವು ಮಲೀನವಾಗದಂತೆ ಇರುವನು ।೫೭೮॥

ಸಾಮಾನ್ಯವಾಗಿ ಇಂದ್ರಿಯಗಳ ಸಂಗತಿಯಿಂದ ವಿಷಯಗಳ ಮೇಲೆ ಉರುಳಾಡಿದರೂ, ಅನೇಕ ವಿಷಯಗಳ ಭೋಗ ಭೋಗಿಸಿದರೂ ಆತನು ರಾಗದ್ವೇಷಾದಿ ವಿಕಾರಗಳ ಮಲೀನತೆಯಿಂದ ಲಿಪ್ತನಾಗುವುದಿಲ್ಲ ।೫೭೯॥

ಭೇಟಲೇಯಾ ವಾಟೇವರೀ । ಚೋಖೀ ಆಣೇ ಮಾಹಾರೀ । ತೇಥ ನಾತಳೇ ತಿಯಾಪರೀ । ರಾಹಾಟೋ ಜಾಣೇ ।೪೮೦॥ ಕಾ ಪತಿಪುತ್ರಾಂತೇ ಆಲಿಂಗೀ ।ಏಕಚಿ ತೇ ತರುಣಾಂಗೀ । ತೇಥ ಪುತ್ರಭಾವಾಚ್ಯಾ ಆಂಗೀ । ನ ರಿಗೇ ಕಾಮು ।೪೮೧॥ ತೈಸೇ ಹೃದಯ ಚೋಖ । ಸಂಕಲ್ಪವಿಕಲ್ಪೀ ಸನೋಳಖ । ಕೃತ್ಯಾಕೃತ್ಯ ವಿಶೇಖ । ಪುಡೇ ಜಾಣೇ ।೪೮೨॥ ಪಾಣಿಯೇ ಹಿರಾ ನ ಭಿಜೇ । ಆಧಣೀ ಹರಳು ನ ಶಿಜೇ । ತೈಸೀ ವಿಕಲ್ಪಜಾತೇ ನ ಲಿಂಪಿಜೇ । ಮನೋವೃತ್ತೀ ।೪೮೩॥ ತಯಾ ನಾಂವ ಶುಚಿಪಣ । ಪಾರ್ಥಾ ಗಾ ಸಂಪೂರ್ಣ । ಹೇ ದೇಖಸೀ ತೇಥ ಜಾಣ । ಜ್ಞಾನ ಅಸೇ ।೪೮೪॥ ಆಣಿ ಸ್ಥಿರತಾ ಸಾಚೇ। ಘರ ರಿಘಾಲೀ ಜಯಾಚೇ । ತೋ ಪುರುಷ ಜ್ಞಾನಾಚೇ । ಆಯುಷ್ಯ ಗಾ ।೪೮೫॥ ದೇಹ ತರೀ ವರಿಚಿಲೀಕಡೇ । ಆಪುಲಿಯಾ ಪರೀ ಹಿಂಡೇ । ಪರೀ ಬೈಸಕಾ ನ ಮೋಡೇ । ಮಾನಸೀಂಚೀ ।೪೮೬॥ ವತ್ಸಾವರೂನಿ ಧೇನೂಚೇ । ಸ್ನೇಹ ರಾನಾ ನ ವಚೇ । ನವ್ಹತೀ ಭೋಗ ಸತಿಯೇಚೇ । ಪ್ರೇಮ ಭೋಗ ।೪೮೭॥ ಕಾ ಲೋಭಿಯಾ ದೂರ ಜಾಯೇ । ಪರೀ ಜೀವ ಠೇವಿಲಾಚಿ ಠಾಯೇ । ತೈಸಾ ದೇಹೋ ಚಾಳಿತಾ ನವ್ಹೇ । ಚಳು ಚಿತ್ತಾ ।೪೮೮॥ ಜಾತಯಾ ಅಭ್ರಾಸವೇ । ಜೈಸೇ ಆಕಾಶ ನ ಧಾಂವೇ । ಭ್ರಮಣಚಕ್ರೀ ನ ಭಂವೇ । ಧ್ರುವ ಜೈಸಾ ।೪೮೯॥ ಪಾಂಥಿಕಾಚಿಯಾ ಯೇರಝಾರಾ । ಸವೇ ಪಂಥು ನ ವಚೇ ಧನುರ್ಧರಾ। ಕಾ ನಾಹೀ ಜೇವೀ ತರುವರಾ । ಯೇಣೇ ಜಾಣೇ ।೪೯೦॥ ತೈಸಾ ಚಳಣವಳಣಾತ್ಮಕೀ । ಅಸೋನಿ ಯೇ ಪಾಂಚಭೌತಿಕೀ । ಭೂತೋರ್ಮಿ ಏಕೀ । ಚಳಿಜೇನಾ ।೪೯೧॥ ವಾಹುಟೋಳಿಚೇನಿ ಬಳೇ। ಪೃಥ್ವೀ ಜೈಸೀ ನ ಢಳೇ । ತೈಸಾ ಉಪದ್ರವ ಉಮಾಳೇ । ನ ಲೋಟೇ ಜೋ ।೪೯೨॥ ದೈನ್ಯದುಃಖೀ ನ ತಪೇ । ಭಯಶೋಕೀ ನ ಕಂಪೇ । ದೇಹಮೃತ್ಯು ನ ವಾಸಿಪೇ । ಪಾತಲೇನೀ ।೪೯೩॥ ಆರ್ತೀ ಆಸಾ ಪಡಿಭರೇ । ವಯ ವ್ಯಾಧೀ ಗಜರೇ । ಉಜೂ ಅಸತಾ ಪಾಠೀ ಮೋರೇ । ನವ್ಹೇ ಚಿತ್ತ ।೪೯೪॥ ನಿಂದಾ ನಿಸ್ತೇಜ ದಂಡೀ । ಕಾಮಲೋಭಾ ವರ ಪಡೀ । ಪರೀ ರೋಮಾ ನವ್ಹೇ ವಾಂಕುಡೀ । ಮಾನಸಾಚೀ ।೪೯೫॥ ಆಕಾಶ ಹೇ ವೋಸರೋ । ಪೃಥ್ವೀ ವರೀ ವಿರೋ । ಪರಿ ನೇಣೇ ಮೋಹರೋ । ಚಿತ್ತವೃತ್ತೀ ।೪೯೬॥ ಹಾತೀ ಹಾಲಾ ಫುಲೀ । ಪಾಸವಣಾ ಜೇವೀ ನ ಘಾಲೀ । ತೈಸಾ ನ ಲೋಟೇ ದುರ್ವಾಕ್ಯಶೇಲೀ । ಶೇಲಿಲಾ ಸಾಂತಾ ।೪೯೭॥

ದಾರಿಯಲ್ಲಿ ಹೋಗುವಾಗ ಎದುರಿಗೆ ಪವಿತ್ರ ಸ್ತ್ರೀ, ಅಪವಿತ್ರ ಸ್ತ್ರೀ ಕೂಡಿದಲ್ಲಿ ಒಬ್ಬಳು ಇನ್ನೊಬ್ಬಳನ್ನು ಸ್ಪರ್ಶಿಸುವುದಿಲ್ಲ. ಅದರಂತೆ ಈತನು ಯಾವ ವಿಷಯಗಳಿಂದಲೂ ಲಿಪ್ತನಾಗದಂತೆ ತಿಳಿದಿರುವವನು ।೫೮೦॥

ಒಬ್ಬ ತರುಣ ಸ್ತ್ರೀಯು ತನ್ನ ಪತಿಗೂ ಮತ್ತು ಪುತ್ರನಿಗೂ ಆಲಿಂಗನ ಕೊಡುವಳು. ಆದರೆ ಪುತ್ರನಿಗೆ ಆಲಿಂಗಿಸುವಾಗ ಆಕೆಯ ಮನದಲ್ಲಿ ಕಾಮವಾಸನೆಯು ಹುಟ್ಟುವುದಿಲ್ಲ ।೫೮೧॥

ಈ ಪ್ರಕಾರವಾಗಿ ಈತನ ಮನಸ್ಸು ನಿರ್ಮಲವಾಗಿದ್ದು, ಉತ್ತಮ, ಕೆಟ್ಟ ವಿಕಾರಗಳ ಅರಿವು ಇರುವುದು. ಯೋಗ್ಯಾಯೋಗ್ಯ ಕರ್ಮಗಳ ಬಗ್ಗೆ ಜ್ಞಾನವಿರುವುದು ।೫೮೨॥

ಯಾವ ಪ್ರಕಾರವಾಗಿ ನೀರಿನಲ್ಲಿ ವಜ್ರವು ತೋಯುವುದಿಲ್ಲವೋ, ಮತ್ತು ಕುದಿಯುವ ನೀರಿನಲ್ಲಿ ಉಸುಕು ಬೇಯುವುದಿಲ್ಲವೋ, ಅದರಂತೆ ಆತನ ಮನೋವೃತ್ತಿಗೆ ವಿಕಾರದ ಬಾಧೆಯಾಗುವುದಿಲ್ಲ ।೫೮೩॥

ಪಾರ್ಥಾ, ಇದೇ ಆಚರಣೆಗಳ ಹೆಸರು ಶುಚಿತ್ವ ಎಂದು ಇರುವುದು ಮತ್ತು ಯಾರಲ್ಲಿ ಇದು ತೋರುವುದೋ, ಅಲ್ಲಿ ಜ್ಞಾನವು ಇದೆ ಎಂದು ತಿಳಿ ।೫೮೪॥

ಮತ್ತು (ಧೈರ್ಯ) ಸ್ಥಿರತೆಯು ಯಾರ ಮನದಲ್ಲಿ ತಾನಾಗಿಯೇ ಪೂರ್ಣವಾಗಿ ಪ್ರಾಪ್ತವಾಗಿದೆಯೋ, ಆ ಪುರುಷನು ಜ್ಞಾನದ ಜೀವನವೇ ಆಗಿರುವನು ।೫೮೫॥

ಒಂದು ವೇಳೆ ಆತನು ಮೇಲ್ನೋಟಕ್ಕೆ ದೇಹದಿಂದ ಬೇಕಾದಲ್ಲಿ ತಿರುಗುತ್ತಿರುಬಹುದು, ಆದರೆ, ಆತನ ಮನಸ್ಸಿನ ಸ್ಥಿತಿಯು ನಿಶ್ಚಲವಾಗಿರುವುದು ।೫೮೬॥

ಆಕಳು ಅರಣ್ಯದಲ್ಲಿ ಮೇಯಲು ಹೋದಾಗ ಅದರ ಕರುವಿನ ಮೇಲಿನ ಪ್ರೀತಿಯು ಅರಣ್ಯದಲ್ಲಿ ನಷ್ಟಗೊಳ್ಳುವುದಿಲ್ಲ. ಪತಿವ್ರತೆ ಸ್ತ್ರೀಯಳಿಗೆ ಸಹಗಮನ ವೇಳೆಯಲ್ಲಿನ ಭೋಗಗಳು ಪ್ರಿಯವಾಗುವುದಿಲ್ಲ ।೫೮೭॥

ಅಥವಾ ಧನಲೋಭಿಯು ಮನೆಬಿಟ್ಟು ದೂರ ಹೋಗಿದ್ದರೂ, ಆತನ ಚಿತ್ತವು ಹುಗಿದಿಟ್ಟ ದ್ರವ್ಯದ ಸಮೀಪವಿರುವುದು. ಅದರಂತೆ ದೇಹದ ವ್ಯಾಪಾರವು ನಡೆಯುತ್ತಿದ್ದರೂ, ಆತನ ಚಿತ್ತವು ಸ್ಥಿರವಾಗಿರುವುದು ।೫೮೮॥

ಓಡುವ ಮೋಡಗಳ ಜೊತೆಗೆ ಆಕಾಶವು ಓಡುವುದಿಲ್ಲ. ತಿರುಗುತ್ತಿರುವ ನಕ್ಷತ್ರಗಳ ಜೊತೆಯಲ್ಲಿ ಧ್ರುವ ತಾರೆ ತಿರುಗುವುದಿಲ್ಲ ।೫೮೯॥

ಅರ್ಜುನಾ, ಪ್ರವಾಸ ಮಾಡುವವನ ಜೊತೆಯಲ್ಲಿ ರಸ್ತೆಯು ನಡೆಯುವುದಿಲ್ಲ, ಅಥವಾ ವೃಕ್ಷಗಳು ಬರುವುದು ಹೋಗುವುದು ಮಾಡುವುದಿಲ್ಲ ।೫೯೦॥

ಅದರಂತೆ ಪಂಚಮಹಾಭೂತಾತ್ಮಕ ಶರೀರದ ಇಂದ್ರಿಯಗಳ ಸಂಬಂಧದಿಂದ ಕ್ರಿಯೆಗಳು ನಡೆಯುತ್ತಿದ್ದರೂ, ಆತನ ಮನಸ್ಸು ಯಾವ ವಿಕಾರಗಳಿಂದ ಚಲಿಸುವುದಿಲ್ಲ ।೫೯೧॥

ಬಿರುಗಾಳಿಯ ಹೊಡೆತಕ್ಕೆ ಪೃಥ್ವಿಯು ಅಲುಗಾಡುವುದಿಲ್ಲವೋ, ಅದೇ ಪ್ರಕಾರವಾಗಿ ವಿಕಾರಗಳ ಯೋಗದಿಂದ ಈತನ ಮನಸ್ಸು ಅಲುಗಾಡುವುದಿಲ್ಲ ।೫೯೨॥

ದಾರಿದ್ರ್ಯ ಮತ್ತು ದುಃಖಗಳಿಂದ ತಾಪಗೊಳ್ಳುವುದಿಲ್ಲ, ಭಯ ಶೋಕಗಳಿಂದ ನಡುಗುವುದಿಲ್ಲ ಮತ್ತು ದೇಹಕ್ಕೆ ಮೃತ್ಯು ಒದಗಿದರೂ ಭಯಭೀತನಾಗುವುದಿಲ್ಲ ।೫೯೩॥

ಯಾವುದೇ ವಸ್ತುವಿನ ಬಲವತ್ತರದ ಆಶೆ, ವಾರ್ಧಕ್ಯ ಮತ್ತು ಅದರಲ್ಲಿ ವ್ಯಾಧಿಗಳು ಹೀಗೆ ಶರೀರದ ಮೇಲೆ ಭಾರ ಬಿದ್ದರೂ ಆತನ ಚಿತ್ತವು ವಿಚಲಿತವಾಗುವುದಿಲ್ಲ ।೫೯೪॥

ನಿಂದೆ, ಅಪಮಾನ, ದಂಡ ಕಾಮ ಮತ್ತು ಲೋಭಗಳು ಮೈಮೇಲೆ ಬಿದ್ದರೂ, ಈತನ ಒಂದು ಕೂದಲೂ ಸಹ ಡೊಂಕಾಗುವುದಿಲ್ಲ ।೫೯೫॥

ಆಕಾಶವು ಮುರಿದು ಬೀಳಲಿ, ಪೃಥ್ವಿಯು ಕರಗಿ ಹೋಗಲಿ, ಆದರೆ ಈತನ ಚಿತ್ತವೃತ್ತಿಯು ಹಿಂದಕ್ಕೆ ಸರಿಯುವುದಿಲ್ಲ ।೫೯೬॥

ಆನೆಗೆ ಹೂವಿನ ಹಾರದಿಂದ ಹೊಡೆದರೆ ಅದು ಹಿಂಜರಿಯಬಹುದೇ? ಅದರಂತೆ ಕೆಟ್ಟ ಶಬ್ದಗಳಿಂದ ಆತನು ಎಂದೂ ಖೇದಪಡುವುದಿಲ್ಲ ।೫೯೭॥

ಕ್ಷೀರಾರ್ಣವಾಚಿಯಾ ಕಲ್ಲೋಳೀ । ಕಂಪು ನಾಹೀ ಮಂದರಾಚಳೀ । ಆಕಾಶ ನ ಜಳೇ ಜಾಳೀ । ವಣವಿಯಾಚ್ಯಾ ।೪೯೮।। ತೈಸಾ ಆಲ್ಯಾ ಗೇಲ್ಯಾ ಊರ್ಮೀ । ನವ್ಹೇ ಗಜಬಜ ಮನೋಧರ್ಮೀ । ಕಿಂಬಹುನಾ ಧೈರ್ಯ ಕ್ಷಮೀ । ಕಲ್ಪಾಂತೀಹೀ ।೪೯೯।। ಪೈ ಸ್ಥೈರ್ಯ ಐಸೀ ಭಾಷ । ಬೋಲಿಜೇ ಜೇ ಸವಿಶೇಷ । ತೇ ಹೇ ದಶಾ ಗಾ ದೇಖ । ದೇಖಣೇಯಾ ।೫೦೦।। ಹೇ ಸ್ಥೈರ್ಯ ನಿಧಡೇ । ಜೇಥ ಆಂಗೇ ಜೀವೇ ಜೋಡೇ । ತೇ ಜ್ಞಾನಾಚೇ ಉಘಡೇ । ನಿಧಾನ ಸಾಚೇ ।೫೦೧।। ಆಣಿ ಇಸಾಳು ಜೈಸಾ ಘರಾ । ಕಾ ದಂದಿಯಾ ಹತಿಯೇರಾ । ನ ವಿಸಂಬೇ ಭಾಂಡಾರಾ । ಬದ್ಧಕು ಜೈಸಾ ।೫೦೨।। ಕಾ ಏಕಲೌತಿಯಾ ಬಾಳಕಾ । ವರಿ ಪಡೌನಿ ಠಾಕೇ ಅಂಬಿಕಾ । ಮಧುವಿಷೀ ಮಧುಮಕ್ಷಿಕಾ । ಲೋಭಿಣೀ ಜೈಸೀ ।೫೦೩।। ಅರ್ಜುನಾ ಜೋ ಯಾಪರೀ । ಅಂತಃಕರಣ ಜತನ ಕರೀ । ನೇದೀ ಉಭೇ ಠಾಕೋ ದ್ವಾರೀ । ಇಂದ್ರಿಯಾಂಚ್ಯಾ ।೫೦೪।। ಮ್ಹಣೇ ಕಾಮ ಬಾಗುಲ ಐಕೇಲ । ಹೇ ಆಶಾ ಸಿಯಾರೀ ದೇಖೈಲ । ತರೀ ಜೀವಾ ಟೇಂಕೈಲ । ಮ್ಹಣೌನಿ ಬಿಹೇ ।೫೦೫।। ಬಾಹೇರೀ ಧೀಟ ಜೈಸೀ । ದಾಟುಗಾ ಪತಿ ಕಳಾಸೀ । ಕರೀ ಟೇಹಣೀ ತೈಸೀ । ಪ್ರವೃತ್ತೀಸೀ ।೫೦೬।। ಸಚೇತನೀ ವಾಣೇಪಣೇ । ದೇಹಾಸಕಟ ಆಟಣೆ । ಸಂಯಮಾವರೀ ಕರಣೇ । ಬುಝೂನಿ ಘಾಲೀ ।೫೦೭।। ಮನಾಚಿಯಾ ಮಹಾದ್ವಾರೀ । ಪ್ರತ್ಯಾಹಾರಾಚಿಯಾ ಠಾಣಾಂತರೀ । ಜೋ ಯಮದಮ ಶರೀರೀ । ಜಾಗವೀ ಉಭೇ ।೫೦೮।। ಆಧಾರೀ ನಾಭೀ ಕಂಠೀ । ಬಂಧತ್ರಯಾಚೀ ಘರಟೀ । ಚಂದ್ರಸೂರ್ಯ ಸಂಪುಟೀ । ಸೂಯೇ ಚಿತ್ತ ।೫೦೯।। ಸಮಾಧಿಚೇ ಶೇಜೆಪಾಸೀ । ಬಾಂಧೋನಿ ಘಾಲೀ ಧ್ಯಾನಾಸೀ । ಚಿತ್ತ ಚೈತನ್ಯ ಸಮರಸೀ । ಆತುರತೇ ।೫೧೦।। ಅಗಾ ಅಂತಃಕರಣ ನಿಗ್ರಹೋ ಜೋ । ತೋ ಹಾ ಹೇ ಜಾಣೆಜೋ । ಹಾ ಆಥೀ ತೇಥ ವಿಜೋ । ಜ್ಞಾನಾಚಾ ಪೈ ।೫೧೧।। ಜಯಾಚೇ ಆಜ್ಞಾ ಆಪಣ । ಶಿರೀ ವಾಹೇ ಅಂತಃಕರಣ । ಮನುಷ್ಯಾಕಾರೇ ಜಾಣ । ಜ್ಞಾನಚಿ ತೋ ।೫೧೨।।

ಇಂದ್ರಿಯಾರ್ಥೇಷು ವೈರಾಗ್ಯಂ ಅನಹಂಕಾರ ಏವ ಚ ।
ಜನ್ಮ ಮೃತ್ಯುಜರಾವ್ಯಾಧಿ ದುಃಖದೋಷಾನುದರ್ಶನಮ್ ।ಽ।।

ಆಣಿ ವಿಷಯಾಂವಿಖೀ । ವೈರಾಗ್ಯಾಚಿ ನಿಕೀ । ಪುರವಣೀ ಮಾನಸೀ ಕೀ । ಜಿತೀ ಆಥೀ ।೫೧೩।।

ಕ್ಷೀರಸಾಗರದ ತೆರೆಗಳಿಂದ ಮಂದರಾಚಲವು ಅಲುಗಾಡದಂತೆ ಅಥವಾ ಕಾಡಾಗ್ನಿ ಜ್ವಾಲೆಯಿಂದ ಆಕಾಶವು ಹೇಗೆ ಸುಡುವುದಿಲ್ಲವೋ ।೩೯೮॥

ಅದರಂತೆ ಇಂದ್ರಿಯಗಳ ಮೇಲೆ ವಿಷಯಗಳ ತೆರೆಗಳು ಎಷ್ಟು ಬಂದರೂ ಅಥವಾ ಹೋದರೂ ಆತನ ಮನಸ್ಸು ಗಡಿಬಡಿಸುವುದಿಲ್ಲ. ಆತನು ಕಲ್ಪಾಂತಕ್ಕೂ ತನ್ನ ಧೈರ್ಯವನ್ನು ಬಿಡುವುದಿಲ್ಲ ।೩೯೯॥

ವಿಚಾರನೇತ್ರದ ಅರ್ಜುನನೇ, ಧೈರ್ಯವೆಂದು ಯಾವುದಕ್ಕೆ ಹೇಳುತ್ತಾರೋ ಮತ್ತು ಯಾವ ಈ ನಾಮವು ಪ್ರಸಿದ್ಧವಾಗಿದೆಯೋ, ಅದರ ಈ ಲಕ್ಷಣಗಳಿವೆ. ಹೀಗೆ ತಿಳಿ ।೪೦೦॥

ಇದೇ ಬಲಾಢ್ಯವಾದ ಸ್ಥೈರ್ಯವು ಯಾವ ಶರೀರದಲ್ಲಿ ಒಳಹೊರಗೆ ವ್ಯಾಪಿಸಿರುವುದೋ, ಆತನು ಜ್ಞಾನದ ಪ್ರತ್ಯಕ್ಷವಾದ ನಿಧಿಯೇ ಆಗಿರುವನು ।೪೦೧॥

ಸರ್ಪವು ತನ್ನನ್ನು ಕೆಣಕಿದವರ ಮನೆಯನ್ನು, ಯೋಧನು ತನ್ನ ಖಡ್ಗವನ್ನು ಅಥವಾ ಧನಲೋಭಿಯು ತನ್ನ ನಿಧಿಯನ್ನು ಮರೆಯುವುದಿಲ್ಲ ।೪೦೨॥

ಅಥವಾ ಒಬ್ಬನೇ ಒಬ್ಬ ಮಗನ ಮೇಲೆ ಆತನ ತಾಯಿಯು ಆತನ ಮೇಲೆ ಜೀವ ಪ್ರಾಣದಂತೆ ಇರುವಳು. ಅಥವಾ ಜೇನು ನೊಣಗಳು ಜೇನಿನ ಮೇಲೆ ಲೋಭಿಷ್ಟವಾಗಿರುವುವು ।೪೦೩॥

ಅದರಂತೆ ಅರ್ಜುನಾ, ಆತನು ತನ್ನ ಅಂತಃಕರಣವನ್ನು ಸಂಭಾಳಿಸುತ್ತ ಇರುವನು ಮತ್ತು ಅದಕ್ಕೆ ಇಂದ್ರಿಯಗಳ ಬಾಗಿಲದಲ್ಲಿಯೂ ನಿಲ್ಲಲು ಬಿಡುವುದಿಲ್ಲ ।೪೦೪॥

ಆತನು ಹೇಳುವುದೇನೆಂದರೆ, ನಾನು ಅಂತಃಕರಣವನ್ನು ನನ್ನ ಸ್ವಾಧೀನದಲ್ಲಿಟ್ಟಿರುವೆ. ಆದರೆ ಅದನ್ನು ಬೆದರುಭೂತ ಕೇಳುವುದೇನೋ? ಮತ್ತು ಆಶಾರೂಪ ಡಾಕಿಣಿ ರಾಕ್ಷಿಸಿ ಇದನ್ನು ನೋಡುವಳೇನೋ? ಇದರಿಂದ ತನ್ನ ಜೀವದ ಮೇಲೆಯೇ ಬರುವ ಸಂಭವವಿದೆ ಎಂದು ಭಯಗ್ರಸ್ತನಾಗಿರುವನು ।೪೦೫॥

ವ್ಯಭಿಚಾರ ಬುದ್ಧಿಯ ಸ್ತ್ರೀಯಳನ್ನು ಆಕೆಯ ಧಾಡಸಿ ಗಂಡನು ಹೊರಗೆ ಬಿಡದೇ ಆಕೆಯನ್ನು ಮನೆಯಲ್ಲಿಯೇ ಬಂಧನದಲ್ಲಿಡುವನು. ಅದರಂತೆ ಆತನು ತನ್ನ ಮನೋವೃತ್ತಿಯು ಇಂದ್ರಿಯಗಳತ್ತ ಹೋಗದಂತೆ ಬಂಧಿಸಿರುವನು ।೪೦೬॥

ಜೀವಿತದಲ್ಲಿ ದೇಹದ ಮೇಲೆ ಪರಿವೆ ಮಾಡದೇ, ದೇಹವನ್ನು ಸವಿಸಿ ಇಂದ್ರಿಯಗಳ ನಿಗ್ರಹ ಮಾಡುವನು ।೪೦೭॥

ಮನಸ್ಸಿನ ಮಹಾದ್ವಾರದಲ್ಲಿ ಮತ್ತು ಪ್ರತ್ಯಾಹಾರದ ಸ್ಥಳದಲ್ಲಿ ಅನುಕ್ರಮವಾಗಿ ಯಮ ಮತ್ತು ದಮ ಇವು ಮೂರ್ತಿಮಂತವಾಗಿ ಹಗಲು ರಾತ್ರಿ ಜಾಗೃತರಾಗಿ ಕಾಯುತ್ತಿರುವುವು ।೪೦೮॥

ಮೂಳಬಂಧ, ಓಡಿಯಾಣಾಬಂಧ, ಜಾಲಂಧರ ಬಂಧ ಇವು ಮೂರನ್ನು ಸ್ಥಿರಗೊಳಿಸಿ ಇಡಾ ಮತ್ತು ಪಿಂಗಳಾ ಇವುಗಳ ಮಧ್ಯವಿರುವ ಸುಷುಮ್ನೆಯಲ್ಲಿ ಚಿತ್ತವನ್ನು ಲಯಗೊಳಿಸುವನು ।೪೦೯॥

ಸಮಾಧಿಯ ಹಾಸಿಗೆಯ ಬಳಿಯಲ್ಲಿ ಧ್ಯಾನವನ್ನು ಕಟ್ಟಿ ಹಾಕುವನು ಮತ್ತು ಚಿತ್ತವನ್ನು ಚೈತನ್ಯದಲ್ಲಿ ಐಕ್ಯವಾಗಲು ಸ್ಥಿರವಾಗಿರುತ್ತದೆ ।೪೧೦॥

ಈ ಯಾವ ಚಿತ್ತದ ಸ್ಥಿತಿಗೆ ಅಂತಃಕರಣ ನಿಗ್ರಹವೆಂದು ಹೇಳುವರು ಮತ್ತು ಇಂತಹ ಅಂತಃಕರಣ ನಿಗ್ರಹ ಯಾರಲ್ಲಿದೆಯೋ, ಆತನಲ್ಲಿ ಜ್ಞಾನದ ವಿಜಯವಿದೆ ಎಂದು ತಿಳಿ ।೪೧೧॥

ಯಾವ ಸಾಧಕನ ಆಜ್ಞೆಯನ್ನು ಆತನ ಮನಸ್ಸು ಶಿರಸಾ ವಂದಿಸಿ ಮಾನ್ಯ ಮಾಡುವುದೋ, ಆತನು ಮನುಷ್ಯನಂತೆ ಕಂಡರೂ ಆತನು ಮೂರ್ತಿಮಂತ ಜ್ಞಾನವೇ ಆಗಿರುವನು ಹೀಗೆ ತಿಳಿ ।೪೧೨॥

ಶ್ಲೋಕಾರ್ಥ :- ವಿಷಯಗಳಲ್ಲಿ ವೈರಾಗ್ಯ, ಅಹಂಕಾರರಾಹಿತ್ಯ, ಜನ್ಮ ಮರಣ, ವೃದ್ಧಾಪ್ಯವು, ರೋಗ, ದುಃಖ ಇವುಗಳಲ್ಲಿ ದೋಷಗಳನ್ನು ತಿಳಿಯುವಿಕೆ ।೮॥

ಮತ್ತು ವೈರಾಗ್ಯದ ವಿಷಯದಲ್ಲಿ ಆತನ ಮನಸ್ಸಿನಲ್ಲಿ ವೈರಾಗ್ಯದ ಉತ್ತಮವಾದ ಜೀವಂತ ಸಹಕಾರವಿರುವುದು ।೪೧೩॥

ವಮಿಲಿಯಾ ಅನ್ನಾ । ಲಾಳ ನ ಘೋಟೀ ರಸನಾ । ಕಾ ಆಂಗ ನ ಸೂಯೇ ಆಲಿಂಗನಾ । ಪ್ರೇತಾಚಿಯಾ ।೮೧೪॥ ವಿಷ ಖಾಣೇ ನಾಗವೇ । ಜಳತ ಘರೀ ನ ರಿಗವೇ । ವ್ಯಾಘ್ರವಿವರಾ ನ ವಚವೇ । ವಸ್ತೀ ಜೇವೀ ।೮೧೫॥ ಧಡಾಡೀತ ಲೋಹರಸೀ । ಉಡೀ ನ ಘಾಲವೇ ಜೈಸೀ । ನ ಕರವೇ ಉಶಿಶೀ । ಅಜಗರಾಚೀ ।೮೧೬॥ ಅರ್ಜುನಾ ತೇಣೇ ಪಾಡೇ । ಜಯಾಸೀ ವಿಷಯವಾರ್ತಾ ನಾವಡೇ । ನೇದೀ ಇಂದ್ರಿಯಾಚೇನಿ ತೋಂಡೇ । ಕಾಂಹೀಂಚ ಜಾವೋ ।೮೧೭॥ ಜಯಾಚೇ ಮನೀ ಆಲಸ್ಯ । ದೇಹೀ ಅತಿಕಾರ್ಶ್ಯ । ಶಮದಮೀ ಸೌರಸ್ಯ । ಜಯಾಸಿಗಾ ।೮೧೮॥ ತಪೋವ್ರತಾಂಚಾ ಮೇಳಾವಾ । ಜಯಾಚೇ ಠಾಯೀ ಪಾಂಡವಾ । ಯುಗಾಂತ ಜಯಾ ಗಾಂವಾ । ಆಂತು ಯೇತಾ ।೮೧೯॥ ಬಹು ಯೋಗಾಭ್ಯಾಸೀ ಹಾಂವ । ವಿಜನಾಕಡೇ ಧಾಂವ । ನ ಸಾಹೇ ಜೋ ನಾಂವ । ಸಂಘಾತಾಚೇ ।೮೨೦॥ ನಾರಾಚಾಂಚೀ ಆಂಥುರಣೇ । ಪೂಯಪಂಕೀ ಲೋಳಣೇ । ತೈಸೇ ಲೇಖಿ ಭೋಗಣೇ । ಐಹಿಕೀಂಚೇ ।೮೨೧॥ ಆಣಿ ಸ್ವರ್ಗಾತೇ ಮಾನಸೇ । ಐಕೋನಿ ಮಾನೀ ಐಸೇ । ಕುಹಿಲೇ ಪಿಶಿತ ಜೈಸೇ । ಶ್ವಾನಾಚೇ ಕಾ ॥ ೫೨೨॥ ತೇ ಹೇ ವಿಷಯವೈರಾಗ್ಯ । ಜೇ ಆತ್ಮಲಾಭಾಚೇ ಸಭಾಗ್ಯ । ಯೇಣೇ ಬ್ರಹ್ಮಾನಂದಾ ಯೋಗ್ಯ । ಜೀವ ಹೋತೀ ।೮೨೩॥ ಐಸಾ ಉಭಯಭೋಗೀ ತ್ರಾಸು । ದೇಖಸೀ ಜೇಥ ಬಹುವಸು । ತೇಥ ಜಾಣ ರಹಿವಾಸು । ಜ್ಞಾನಾಚಾ ತೂ ।೮೨೪॥ ಆಣಿ ಸಕಾಡಾಚಿಯೇ ಪರೀ । ಇಷ್ಟಾಪೂರ್ತೇ ಕರೀ । ಪರೀ ಕೇಲೇಪಣ ಶರೀರೀ । ವಸೋ ನೇದೀ ।೮೨೫॥ ವರ್ಣಾಶ್ರಮಪೋಷಕೇ । ಕರ್ಮೇ ನಿತ್ಯನೈಮಿತ್ತಿಕೇ । ತಯಾಮಾಜೀ ಕಾಂಹೀ ನ ಠಕೇ । ಆಚರತಾ ।೮೨೬॥ ಪರಿ ಹೇ ಮಿಯಾ ಕೇಲೇ । ಕೀ ಹೇ ಮಾಝೇನಿ ಸಿದ್ಧೀ ಗೇಲೇ । ಐಸೇ ನಾಹೀ ಠೇವಿಲೇ । ವಾಸನೇಮಾಜೀ ।೮೨೭॥ ಜೈಸೇ ಅವಚಿತಪಣೇ । ವಾಯೂಸೀ ಸರ್ವತ್ರ ವಿಚರಣೇ । ಕೀ ನಿರಭಿಮಾನ ಉದ್ಯೆಜಣೇ । ಸೂರ್ಯಾಚೇ ಜೈಸೇ ।೮೨೮॥ ಕಾ ಶ್ರುತಿ ಸ್ವಭಾವತಾ ಬೋಲೇ । ಗಂಗಾ ಕಾಜೇವೀಣ ಚಾಲೇ । ತೈಸೇ ಅವಷ್ಟಂಭಹೀನ ಭಲೇ । ವರ್ತಣೇ ಜ್ಯಾಚೇ ।೮೨೯॥ ಋತುಕಾಳೀ ತರೀ ಫಳತೀ । ಪರೀ ಫಳಲೋ ಹೇ ನೇಣತೀ । ತಯಾ ವೃಕ್ಷಾಂಚಿಯೇ ಐಸೀ ವೃತ್ತೀ । ಕರ್ಮೀ ಸದಾ ।೮೩೦॥ ಏವಂ ಮನೀ ಕರ್ಮೀ ಬೋಲೀ । ಜೇಥ ಅಹಂಕಾರಾ ಉಖೀ ಜಾಹಲೀ । ಏಕಾವಳೀಚೀ ಕಾಢಿಲೀ । ದೋರೀ ಜೈಸೀ ।೮೩೧॥

ವಾಂತಿ ಮಾಡಿಕೊಂಡ ಅನ್ನವನ್ನು ತಿರುಗಿ ತಿನ್ನಲು ನಾಲಿಗೆಗೆ ನೀರು ಬಿಡುವುದಿಲ್ಲ, ಅಥವಾ ಹೆಣಕ್ಕೆ ಆಲಿಂಗಿಸಬೇಕೆಂದು ಇಚ್ಛೆಯಾಗುವುದಿಲ್ಲ ।೫೧೪॥

ವಿಷ ತಿನ್ನಲು ಹಿಡಿಸುವುದಿಲ್ಲ. ಉರಿಯುವ ಮನೆಯಲ್ಲಿ ಹೋಗಲು ಆಗುವುದಿಲ್ಲ. ಹುಲಿಯ ಗುಹೆಯಲ್ಲಿ ವಸತಿ ಮಾಡಲು ಧೈರ್ಯ ಸಾಲುವುದಿಲ್ಲ ।೫೧೫॥

ಖಳಖಳನೇ ಕುದಿಯುತ್ತಿರುವ ಕಬ್ಬಿಣದ ರಸದಲ್ಲಿ ಹಾರುವುದು ಆಗುವುದಿಲ್ಲ. ಅಥವಾ ಹೆಬ್ಬಾವಿನ ಸುರಳೆಯನ್ನು ತಲೆದಿಂಬು ಮಾಡಿಕೊಳ್ಳುವುದು ಆಗುವುದಿಲ್ಲ ।೫೧೬॥

ಅದರಂತೆ ಅರ್ಜುನಾ, ಈತನಿಗೆ ವಿಷಯಗಳ ಹೆಸರೆತ್ತಿದರೂ ಹಿಡಿಸುವುದಿಲ್ಲ. ಈತನು ಯಾವ ವಿಷಯವನ್ನೂ ಇಂದ್ರಿಯಗಳ ಬಾಯಿಗೆ ಹೋಗಗೊಡುವುದಿಲ್ಲ ।೫೧೭॥

ಈತನ ಮನದಲ್ಲಿ ವಿಷಯಗಳ ಬಗ್ಗೆ ಆಲಸ್ಯವಿರುವುದು. ಈತನ ದೇಹದಲ್ಲಿ ವಿಷಯ ಸೇವನೆಯ ಸಾಮರ್ಥ್ಯವಿರುವುದಿಲ್ಲ ಮತ್ತು ಶಮ ದಮಗಳ ಪ್ರೇಮವಿರುವುದು ।೫೧೮॥

ಹೇ ಪಾಂಡವನೇ, ಈತನು ಯಾವಾಗಲೂ ತಪಸ್ಸು ಮತ್ತು ವ್ರತಗಳನ್ನು ಒಂದೇ ಸವನೇ ಮಾಡುತ್ತಿರುವನು ಮತ್ತು ಈತನಿಗೆ ಜನವಸತಿಯಲ್ಲಿ ಬರಲು ಪ್ರಾಣ ಸಂಕಟವಾಗುವುದು ।೫೧೯॥

ಈತನಿಗೆ ಯೋಗಾಭ್ಯಾಸ ವಿಷಯಕ್ಕೆ ಬಹಳ ಅಪೇಕ್ಷೆವಿರುವುದು ಮತ್ತು ಅರಣ್ಯದಲ್ಲಿರುವುದು ಬಹಳ ಹಿಡಿಸುವುದು ಮತ್ತು ಸಂಘ ಸಂಸ್ಥೆಗಳಲ್ಲಿ ಕೂಡುವ ಹೆಸರು ಸಹ ಆತನಿಗೆ ಸಹಿಸುವುದಿಲ್ಲ ।೫೨೦॥

ಬಾಣಗಳ ಹಾಸಿಗೆಯ ಮೇಲೆ ಮಲಗಿದಂತೆ, ಅಥವಾ ಕೀವು ರಾಡಿಯಲ್ಲಿ ಉರುಳಾಡುವಂತೆ, ಈತನಿಗೆ ಇಹಲೋಕದ ಭೋಗಗಳು ಅನಿಸುವುವು ।೫೨೧॥

ಮತ್ತು ಸ್ವರ್ಗ ಪ್ರಾಪ್ತಿಯ ವಿಷಯವೆತ್ತಿದಾಗ ಆತನಿಗೆ ಸತ್ತು ಉಬ್ಬಿ ಕೊಳೆತ ನಾಯಿಯ ಮಾಂಸದಂತೆ ಭಾಸವಾಗುತ್ತದೆ ।೫೨೨॥

ಇದಕ್ಕೆ ವಿಷಯ ವೈರಾಗ್ಯವೆಂದು ಹೇಳುವರು ಮತ್ತು ಇದುವೇ ಆತ್ಮಪ್ರಾಪ್ತಿಯ ಭಾಗ್ಯವಾಗಿದ್ದು, ಇದರಿಂದಲೇ ಜೀವವು ಬ್ರಹ್ಮಾನಂದ ಸುಖ ಭೋಗಿಸಲು ಯೋಗ್ಯವಾಗುವುದು ।೫೨೩॥

ಈ ಪ್ರಕಾರವಾಗಿ ಇಹಲೋಕದ ಸುಖಭೋಗವು ಯಾರಿಗೆ ಪೂರ್ಣವಾಗಿ ಹೇಯವಾಗಿದೆಯೋ, ಅಲ್ಲಿಯೇ ಜ್ಞಾನದ ವಸತಿ ಇದೆ ಎಂದು ನಿಶ್ಚಯವಾಗಿ ತಿಳಿ ।೫೨೪॥

ಮತ್ತು ಯಾರು ಆಸ್ಥೆಪೂರ್ವಕವಾಗಿ ಯಜ್ಞ ಮಾಡುವುದು, ಕೆರೆ ಕಟ್ಟುವುದು, ತೋಟ ಮಾಡುವುದು. ಈ ಕರ್ಮ ಮಾಡುತ್ತ ಕರ್ತವ್ಯದ ಅಭಿಮಾನದ ಲವಲೇಶವನ್ನೂ ತನ್ನಲ್ಲಿರಿಸುವುದಿಲ್ಲ ।೫೨೫॥

ವರ್ಣಾಶ್ರಮದ ಪೋಷಣೆ ಮಾಡುವ ನಿತ್ಯ ನೈಮಿತ್ತಿಕ ಕರ್ಮಗಳನ್ನು ಯಥಾವಿಧಿ ಆಚರಿಸುವರು. ಅದರಲ್ಲಿ ಸ್ವಲ್ಪವೂ ನ್ಯೂನ್ಯತೆ ಮಾಡುವುದಿಲ್ಲ ।೫೨೬॥

ಆದರೆ ಈ ಕರ್ಮಗಳು ನಾನು ಮಾಡಿದೆ ಮತ್ತು ನಾನು ಮಾಡಿದ್ದರಿಂದ ಪೂರ್ಣಗೊಂಡಿತು. ಹೀಗೆ ಮನದಲ್ಲಿ ತರುವುದೇ ಇಲ್ಲ ।೫೨೭॥

ಯಾವ ಪ್ರಕಾರವಾಗಿ ಗಾಳಿಯು ಸಹಜವಾಗಿ ಎಲ್ಲ ಕಡೆಗೂ ಬೀಸುವುದೋ, ಅಥವಾ ಸೂರ್ಯನು ನಿರಾಭಿಮಾನದಿಂದ ಎಲ್ಲ ಕಡೆಗೂ ಪ್ರಕಾಶ ಕೊಡುವನೋ ।೫೨೮॥

ಅಥವಾ ಶ್ರುತಿಯು ಸ್ವಭಾವತಃ ಎಲ್ಲರಿಗೂ ಇಷ್ಟವಾದ ವಿಷಯಗಳ ವರ್ಣನೆ ಮಾಡುವುದು. ಅಥವಾ ಗಂಗಾ ನದಿಯು ಹೀಗೆಯೇ ಹೋಗಬೇಕೆಂಬ ಮನಸ್ಸು ಮಾಡದೇ ಸಹಜವಾಗಿ ಓಘದಿಂದ ಹೋಗುವುದು. ಅದರಂತೆ ಇವರ ಸದಾ ವರ್ತನೆಯು ಅಭಿಮಾನ ಶೂನ್ಯದಿಂದ ಇರುವುದು ।೫೨೯॥

ವೃಕ್ಷಗಳಿಗೆ ಯಥಾ ಕಾಲದಲ್ಲಿ ಫಲಗಳು ಬರುವುವು. ಆದರೆ ಅದರ ನೆನಪು ಸಹ ಅವಕ್ಕೆ ಇರುವುದಿಲ್ಲ. ಈ ವೃಕ್ಷಗಳಂತೆ ಕರ್ಮ ಮಾಡುವ ಕರ್ಮಫಲಕ್ಕಾಗಿ ಇವರು ಉದಾಸೀನರಾಗಿರುತ್ತಾರೆ ।೫೩೦॥

ಹಾರದೊಳಗಿನ ದಾರದ ಎಳೆಯನ್ನು ತಗೆದಾಗ ಅದರಲ್ಲಿಯ ಐಕ್ಯವು ನಾಶವಾಗುವಂತೆ, ಮನದಲ್ಲಿ, ಆಚರಣೆಯಲ್ಲಿ ಮತ್ತು ಮಾತನಾಡುವುದರಲ್ಲಿ ಆತನು ಅಹಂಕಾರದ ನಾಶ ಮಾಡಿರುವನು ।೫೩೧॥

ಸಂಬಂಧೇವೀಣ ಜೈಸೀ । ಅಭ್ರೇ ಅಸತೀ ಆಕಾಶೀ ।ದೇಹೀ ಕರ್ಮೇ ತೈಸೀ । ಜಯಾಸೀ ಗಾ ।೫೩೨॥ ಮದ್ಯಪಾಆಂಗೀಚೇ ವಸ್ತ್ರ । ಕಾ ಲೇಪಾಹಾತೀಚೇ ಶಸ್ತ್ರ । ಬೈಲಾವರೀ ಶಾಸ್ತ್ರ । ಬಾಂಧಲೇ ಆಹೇ ।೫೩೩॥ ತಯಾ ಪಾಡೇ ದೇಹೀ । ಜಯಾ ಮೀ ಆಹೇ ಹೇ ಸೇಚಿ ನಾಹೀ । ನಿರಹಂಕಾರತಾ ಪಾಹೀ । ತಯಾ ನಾಂವ ।೫೩೪॥ ಹೇ ಸಂಪೂರ್ಣ ಜೇಥೇ ದಿಸೇ । ತೇಥೇಂಚಿ ಜ್ಞಾನ ಅಸೇ । ಇಯೇವಿಷೀ ಅನಾರಿಸೇ । ಬೋಲೋ ನಯೇ ।೫೩೫॥ ಜನ್ಮ ಮೃತ್ಯು ಜರಾದುಃಖೇ । ವ್ಯಾಧಿವಾರ್ಧಕ್ಯ ಕಲುಷೇ । ತಿಯೇ ಆಂಗಾ ನ ಯೇತಾ ದೇಖೇ । ದುರೂನಿ ಜೋ ।೫೩೬॥ ಸಾಧಕು ವಿವಸಿಯಾ । ಕಾ ಉಪಸರ್ಗು ಯೋಗಿಯಾ । ಪಾವೇ ಉಣೇಯಾಪುರೇಯಾ । ವೋಥಂಬಾ ಜೇವೀ ।೫೩೭॥ ವೈರ ಜನ್ಮಾಂತರೀಚೇ । ಸರ್ಪಾ ಮಣಾೌನಿ ನ ವಚೇ । ತೇವೀ ಅತೀತಾ ಜನ್ಮಾ ಚೇ । ಉಣೇ ಜೋ ವಾಹೇ ।೫೩೮॥ ಡೋಳಾ ಹರಳ ನ ವಿರೇ । ಘಾಈ ಕೋತ ನ ಜಿರೇ । ತೈಸೇ ಕಾಳೀಂಚೇ ನ ವಿಸರೇ । ಜನ್ಮ ದುಃಖ ।೫೩೯॥ ಮ್ಹಣೇ ಪೂಯಗರ್ತೇ ರಿಗಾಲಾ । ಅಹಾ ಮೂತ್ರರಂಧ್ರೇ ನಿಘಾಲಾ । ಕಟಾರೇ ಮಿಯಾ ಚಾಟಿಲಾ । ಕುಚಸ್ವೇದು ।೫೪೦॥ ಐಸ ಐಸಿಯಾ ಪರೀ । ಜನ್ಮಾ ಚಾ ಕಾಂಟಾಳಾ ಧರೀ । ಮ್ಹಣೇ ಆತಾ ತೇ ಮೀ ನ ಕರೀ । ಜೇಣೇ ಐಸೇ ಹೋಯ ।೫೪೧॥ ಹಾರೀ ಉಮಚಾವಯಾ । ಜುಂವಾರೀ ಜೈಸಾ ಯೇ ಡಾಯಾ । ಕೀ ವೈರಾ ಬಾಪಾಚೇಯಾ । ಪುತ್ರ ಜಚೇ ।೫೪೨॥ ಮಾರಿಲಿಯಾಚೇನಿ ರಾಗೇ । ಪಾಠೀಚಾ ಜೇವೀ ಸೂಡ ಮಾಗೇ । ತೇಣೇ ಆಕ್ಷೇಪೇ ಲಾಗೇ । ಜನ್ಮಾ ಪಾಠೀ ।೫೪೩॥ ಪರೀ ಜನ್ಮ ತೀ ತೇ ಲಾಜ । ನ ಸಾಂಡಿ ಜಯಾಚೇ ನಿಜ । ಸಂಭಾವಿತಾ ನಿಸ್ತೇಜ । ನ ಜಿರೇ ಜೇವೀ ।೫೪೪॥ ಆಣೀ ಮೃತ್ಯು ಪುಢಾ ಆಹೇ । ತೋಚಿ ಕಲ್ಪಾಂತೀ ಕಾ ಪಾಹೇ । ಪರೀ ಆಜೀಚಿ ಹೋಯೇ । ಸಾವಧು ಜೋ ।೫೪೫॥ ಮಾಜಿ ಅಥಾಂವ ಮ್ಹಣತಾ । ಥಡಿಯೇಚಿ ಪಂಡುಸುತಾ । ಪೋಹಣಾರ ಆಇತಾ ।ಕಾಸೇ ಜೇವೀ ।೫೪೬॥ ಕಾ ನ ಪವತಾ ರಣಾಚಾ ಠಾವೋ । ಸಾಂಭಾಳಿಜೇ ಜೈಸಾ ಆವೋ । ವೋಡಣ ಸುಇಜೇ ಘಾವೋ । ನ ಲಾಗತಾಂಚಿ ।೫೪೭॥ ಪಾಹೇಚಾ ಪೇಣಾ ವಾಟವಧಾ । ತಂವ ಆಜೀಚಿ ಹೋಇಜೇ ಸಾವಧಾ । ಜೀವು ನ ವಚತಾ ಔಷಧಾ । ಧಾಂವಿಜೇ ಜೇವೀ ।೫೪೮॥ ಏರ್ಹವೀ ಐಸೇ ಘಡೇ । ಜೋ ಜಳತ ಘರೀ ಸಾಂಪಡೇ । ತೋ ಮಗ ನ ಪವಾಡೇ । ಕುಹಾ ಖಣೋ ।೫೪೯॥

ಆಕಾಶದ ಸಂಬಂಧವಿಲ್ಲದೇ ಮೋಡಗಳು ಆಕಾಶದಲ್ಲಿ ತೋರುವುವು. ಅದರಂತೆ ಆತನು ದೇಹದಿಂದ ಕರ್ಮಗಳನ್ನು ಮಾಡುತ್ತಿದ್ದರೂ, ಅವುಗಳಿಂದ ಅಲಿಪ್ತನಾಗಿರುವನು ।।೫೩೨।।

ಸೆರೆಕುಡುಕನಿಗೆ ತನ್ನ ಮೈಮೇಲಿನ ವಸ್ತ್ರದ ಅರಿವು ಇರುವುದಿಲ್ಲ. ಅಥವಾ ಗೊಂಬೆಗೆ ಕೈಯಲ್ಲಿ ಕೊಟ್ಟ ಶಸ್ತ್ರದ ಅರಿವು ಇರುವುದಿಲ್ಲ. ಹಾಗೂ ತನ್ನ ಮೈಮೇಲೆ ಕಟ್ಟಿರುವ ಶಸ್ತ್ರಗಳ ಅರಿವು ಎತ್ತುಗಳಿಗಿರುವುದಿಲ್ಲ ।।೫೩೩।।

ಅದರಂತೆ ನಾನು ದೇಹದಲ್ಲಿರುವೆ ಎಂಬ ಭಾವವೆ ಆತನಿಗೆ ಇರುವುದಿಲ್ಲ. ಇಂಥವನಿಗೆ ಮಾತ್ರ ನಿರಂಹಕಾರ ಎಂದು ಹೀಗೆ ಹೇಳುವರು ।।೫೩೪।।

ಈ ಚಿನ್ಹವು ಯಾರಲ್ಲಿ ಸಂಪೂರ್ಣವಾಗಿ ಇರುವುದು ದೃಷ್ಟಿಗೆ ಬೀಳುವುದೋ, ಆತನಲ್ಲಿಯೇ ಜ್ಞಾನವು ವಾಸ ಮಾಡುವುದು. ಇದಕ್ಕಾಗಿ ಎಷ್ಟು ಮಾತ್ರವೂ ಸಂಶಯವಿಲ್ಲ ।।೫೩೫।।

ಜನ್ಮ, ಮರಣ, ದೇಹದ ಜೀರ್ಣತೆ, ಅಶಕ್ತತೆ, ದುಃಖಗಳು, ರೋಗಗಳು, ಮುದುಕತನ ಮತ್ತು ಪಾಪಗಳು ಇವುಗಳೆಲ್ಲವೂ ತನ್ನ ಕಡೆ ಬಂದಿಲ್ಲವಾದರೂ ಅವುಗಳನ್ನು ದೂರದಿಂದ ವಿಚಾರದೊಂದಿಗೆ ನೋಡುವವನು ।।೫೩೬।।

ಮಾಂತ್ರಿಕನು ಪಿಶಾಚದ ಬಾಧೆಯಾಗದಂತೆ ಮೊದಲೇ ವ್ಯವಸ್ಥೆ ಮಾಡಿರುವವನು. ಯೋಗಿಗಳು ತಮ್ಮ ಸಮಾಧಿಗೆ ಪ್ರತಿಬಂಧವಾಗುವುದನ್ನು ಮೊದಲೇ ಅರಿತಿರುವರು (ಗೌಂಡಿ) ಬೇಲ್ದಾರನು ಗೋಡೆ ಹಿಂದು ಮುಂದು ಆಗದಂತೆ ಮೊದಲೇ ತೂಕದ ಗುಂಡು ಉಪಯೋಗಿಸುವನು. ಅದರಂತೆ ಈತನು ಎಲ್ಲವನ್ನು ಮೊದಲೇ ವಿಚಾರಿಸಿರುವವನು ।।೫೩೭।।

ಸರ್ಪದ ಮನದಲ್ಲಿ ಜನ್ಮಾಂತರದ ವೈರವು ನಾಶವಾಗಿರುವುದಿಲ್ಲ. ಅದರಂತೆ ಈತನು ಪೂರ್ವಜನ್ಮದ ದುಃಖಗಳನ್ನು ಸ್ಮರಿಸಿ, ಪುನಃ ಜನ್ಮಕ್ಕೆ ಬಾರದೆ ಉದ್ಯೋಗಕ್ಕೆ ಹತ್ತುವನು ।।೫೩೮।।

ಯಾವ ಪ್ರಕಾರವಾಗಿ ಕಣ್ಣಿನಲ್ಲಿಯ ಹರಳು ಕರಗುವುದಿಲ್ಲವೋ, ಶಸ್ತ್ರದ ಘಾಯದಲ್ಲಿ ಬರ್ಚಿಯ ಸಹನೆವಾಗುವುದಿಲ್ಲವೋ, ಅದರಂತೆ ಜನ್ಮದಲ್ಲಿ ಆಗುವ ನಿತ್ಯ ದುಃಖವನ್ನು ಆತನು ಮರೆಯುವುದಿಲ್ಲ ।।೫೩೯।।

ಹೇಗೆ ವಿಚಾರಿಸುವನೆಂದರೆ, ಅರೆರೇರೇ, ನಾನು ಪ್ರತ್ಯೇಕ ಯೋನಿಯಲ್ಲಿ ಕೀವಿನಂಥ ವೀರ್ಯದಲ್ಲಿ ಸೇರಿಕೊಂಡೆ. ಪುನಃ ಮೂತ್ರ ದ್ವಾರದಿಂದ ಹೊರಬಂದೆ, ಅಯ್ಯೋ, ನಾನು ಸ್ತನಪಾನ ಮಾಡುವಾಗ್ಗೆ ಅದರ ಮೇಲಿನ ಬೆವರು ಸಹ ನೆಕ್ಕಿದೆನಲ್ಲ! ।।೫೪೦।।

ಈ ಪ್ರಕಾರವಾಗಿ ಆತನು ಜನ್ಮದ ಹೇಸಿಗೆ ಮಾಡಿಕೊಳ್ಳುವನು. ಪುನಃ ಜನ್ಮಕ್ಕೆ ಬರುವಂತಹ ಕರ್ಮಗಳನ್ನು ನಾನು ಮಾಡಲಾರೆ ಎನ್ನುವನು ।।೫೪೧।।

ಸೋತ ಜೂಜುಗಾರನು ಪುನಃ ಗೆಲ್ಲಬೇಕೆಂದು ಲಕ್ಷಕೊಟ್ಟು ಜೂಜಾಡುವಂತೆ, ತನ್ನ ತಂದೆಯನ್ನು ಕೊಂದವನಿಗಾಗಿ ಆತನ ಮಗನು ಕಾಯುತ್ತಿರುವವನಂತೆ ।।೫೪೨।।

ಅಣ್ಣನಿಗೆ ಕೊಂದವನಿಗಾಗಿ ತಮ್ಮನು ಸೇಡು ತೀರಿಸಲು ಹವಣಿಸುವಂತೆ, ಈತನು ಪುನಃ ಜನ್ಮಕ್ಕೆ ಬಾರದಂತೆ ಕಾಳಜಿಪೂರ್ವಕವಾಗಿ ದಕ್ಷತೆ ವಹಿಸುವನು ।।೫೪೩।।

ಸಂಭಾವಿತ ಮನುಷ್ಯನಿಗೆ ಅಪಕೀರ್ತಿಯು ಸಹಿಸುವುದಾಗುವುದಿಲ್ಲ. ಅದರಂತೆ ಆತನ ಮನಸ್ಸಿನಲ್ಲಿ ಇಂತಹ ಅಮಂಗಲ ಜನ್ಮದ ಲಜ್ಜೆಯು ಇಲ್ಲದಾಗುವುದಿಲ್ಲ ।।೫೪೪।।

ಮುಂದೆ ಬರುವ ಮರಣವು ಅದು ಕಲ್ಪಾಂತದಲ್ಲಿರಲಿ, ಆದರೆ ಆತನು ಅದರ ಬಗ್ಗೆ ಇಂದೇ ಸಾವಧನಾಗಿರುವನು ।।೫೪೫।।

ಅರ್ಜುನಾ, ನದಿಯ ಮಧ್ಯಭಾಗದಲ್ಲಿ ಆಳವಾದ ನೀರು ಇದೆ ಎಂದು ತಿಳಿದಾಗ ಈಸುವವನು ದಂಡೆಯ ಮೇಲೆಯೇ ಸರಿಯಾಗಿ ನಡಕಟ್ಟುವನು ।।೫೪೬।।

ಅಥವಾ ರಣರಂಗದಲ್ಲಿ ಹೋಗುವ ಪೂರ್ವದಲ್ಲಿಯೇ ಯೋಧನು ತನ್ನ ಧೈರ್ಯವನ್ನು ಸಂಭಾಳಿಸಬೇಕಾಗುವುದು. ಶಸ್ತ್ರ ಘಾತವಾಗುವ ಮೊದಲೇ ಢಾಲು ಮುಂದೆ ಮಾಡಬೇಕಾಗುವುದು ।।೫೪೭।।

ನಾಳಿನ ಮುಕ್ಕಾಮದಲ್ಲಿ ಏನೋ ಮೋಸವಿದೆ ಎಂದು ತಿಳಿದಾಗ ಯಾರು ಇಂದೇ ಎಚ್ಚರಾಗಿರುವರು, ಮತ್ತು ಪ್ರಾಣ ಹೋಗುವುದಕ್ಕಿಂತ ಮುಂಚಿತವಾಗಿಯೇ ಔಷಧಗಳ ಯೋಜನೆ ಮಾಡುವರು ।।೫೪೮।।

ಇಲ್ಲದಿದ್ದರೆ, ಮನೆಗೆ ಬೆಂಕಿ ಹತ್ತಿದಾಗ ಬಾವಿ ತೆಗೆಯುವ ಪ್ರಯತ್ನವು ವ್ಯರ್ಥವಾದಂತೆ ಆಗುವುದು ।।೫೪೯।।

ಚೋಂಡಿಯೇ ಪಾಥರು ಗೇಲಾ । ತೈಸೇನಿ ಜೋ ಬುಡಾಲಾ । ತೋ ಬೊಂಬೇಹೀಸಕಟ ನಿಮಾಲಾ । ಕೋಣ ಸಾಂಗೇ।೮೫೦॥ ಮ್ಹಣೌನಿ ಸಮರ್ಥೇಸೀ ವೈರ । ಜಯಾ ಪಡಿಲೇ ಹಾಡಖಾಇರ । ತೋ ಜೈಸಾ ಆರಹೀ ಪಾಹರ । ಪರಜೂನಿ ಅಸೇ ।೮೫೧॥ ನಾತರೀ ಕೇಳವಲೀ ನೋವರೀ । ಕಾ ಸಂನ್ಯಾಸೀ ಜಿಯಾಪರೀ । ತೈಸಾ ನ ಮರತಾ ಜೋ ಕರೀ । ಮೃತ್ಯುಸೂಚನಾ ।೮೫೨॥ ಪೈ ಗಾ ಜೋ ಯಯಾಪರೀ । ಜನ್ಮೇಂಚಿ ಜನ್ಮ ನಿವಾರೀ । ಮರಣೇ ಮೃತ್ಯು ಮಾರೀ । ಆಪಣ ಉರೇ ।೮೫೩॥ ತಯಾ ಘರೀ ಜ್ಞಾನಾಚೇ । ಸಾಂಕಡೇ ನಾಹೀ ಸಾಚೇ । ಜಯಾ ಜನ್ಮಮೃತ್ಯೂಚೇ । ನಿಮಾಲೇ ಶಲ್ಯ ।೮೫೪॥ ಆಣಿ ತಯಾಚಿಪರೀ ಜರಾ । ನ ಟೇಂಕತಾ ಶರೀರಾ । ತಾರುಣ್ಯಾಚಿಯಾ ಭರಾ । ಮಾಜೀ ದೇಖೇ ।೮೫೫॥ ಮ್ಹಣೇ ಆಜಿಚ್ಯಾ ಅವಸರೀ । ಪುಷ್ಟೀ ಜೇ ಶರೀರೀ । ತೇ ಪಾಹೇ ಹೋಈಲ ಕಾಚರೀ । ವಾಳಲೀ ಜೈಸೀ ।೮೫೬॥ ನಿದೈವ್ಯಾಚೇ ವ್ಯವಸಾಯ । ತೈಸೇ ಠಾಕತೀ ಹಾತಪಾಯ । ಅಮಂತ್ರ್ಯಾ ರಾಜಾಚೇ ಪರೀ ಆಹೇ । ಬಳಾ ಯಯಾ।೮೫೭॥ ಫುಲಾಂಚಿಯಾ ಭೋಗಾ । ಲಾಗೀ ಪ್ರೇಮ ಟಾಂಗಾ । ತೇ ಕರೆಯಾಚಾ ಗುಡಘಾ । ತೈಸೇ ಹೋಈಲ ।೮೫೮॥ ವೋಢಾಳಾಚ್ಯಾ ಖುರೀ । ಆಖುರುಆತೇ ಬುರೀ । ತೇ ದಶಾ ಮಾಝ್ಯಾ ಶಿರೀ । ಪಾವೇಲ ಗಾ ।೮೫೯॥ ಪದ್ಮದಳೇಸೀ ಇಸಾಳೇ। ಭಾಂಡತಾತಿ ಹೇ ಡೋಳೇ । ತೇ ಹೋತೀ ಪಡವಳೇ । ಪಿಕಲೀ ಜೈಸೀ ।೮೬೦॥ ಭಂವಈಚೇ ಪಡಳೇ । ವೋಮಥತೀ ಶಿನಸಾಳೇ । ಉರು ಕುಹಿಜೈಲ ಜಳೇ । ಆಂಸುವಾಚೇನಿ ।೮೬೧॥ ಜೈಸೇ ಬಾಭುಳೀಚೇ ಖೋಡ । ಗಿರಬಡೂನಿ ಜಾತೀ ಸರಡ । ತೈಸೇ ಪಿಚಡೀ ತೋಂಡ । ಸರಕಟಿಜೈಲ ।೮೬೨॥ ರಾಂಧವಣೀ ಚುಲೀಪುಢೇ । ಪರ್ಢೀ ಉನ್ಮಾದತೀ ಖಾತವಡೇ । ತೈಸೀಂಚಿ ಯೇ ನಾಕಾಡೇ । ಬಿಡಬಿಡತೀ ।೮೬೩॥ ತಾಂಬೂಲೇ ವೋಠ ರಾಊ । ಹಾಂಸತಾ ದಾಂತ ದಾವೂ । ಸನಾಗರ ಮಿರಊ । ಬೋಲ ಜೇಣೇ ।೮೬೪॥ ತಯಾಚಿ ಪಾಹೇ ಯಾ ತೋಂಡಾ । ಯೇಈಲ ಜಳಂಬಟಾಚಾ ಲೋಂಢಾ । ಇಯಾ ಉಮಳತೀ ದಾಢಾ । ದಾಂತಾ ಸಹಿತ ।೮೬೫॥ ಕುಳವಾಡೀ ರಿಣೇ ದಾಟಲೀ । ಕಾ ವಾಂಕಡಿಯಾ ಢೋರೇ ಬೈಸಲೀ । ತೈಸೀ ನುಠೀ ಕಾಂಹೀ ಕೇಲೀ । ಜೀಭಚಿ ಹೇ ।೮೬೬॥ ಕುಸಳೇ ಕೋರಡೀ । ವಾರೇನೇ ಜಾತೀ ಬರಡೀ । ತೈಸೀ ಆಪದಾ ತೋಂಡೀ। ದಾಢಿಯೇಸೀ ।೮೬೭॥

ಆಳವಾದ ಮಡುವಿನಲ್ಲಿ ಬಿದ್ದ ಕಲ್ಲು ತಳ ಸೇರುವಂತೆ, ಯಾವನೊಬ್ಬನು ಯಾರೂ ಇಲ್ಲದ ಮಡುವಿನಲ್ಲಿ ಬಿದ್ದು ಸಂಕಟಪಟ್ಟು ಚೀರಾಡಿ ಮುಳುಗಿ ಸತ್ತರೆ ಅದನ್ನು ಹೇಳುವವ ರಾದರೂ ಯಾರಿದ್ದಾರೆ? ।೫೫೦॥

ಅದರಂತೆ ಬಲಾಢ್ಯ ವೈರಿಯೊಂದಿಗೆ ಹಗೆತನ ಬೆಳೆಸಿದ ವನು,ತನ್ನ ಆತ್ಮರಕ್ಷಣೆಗಾಗಿ ಶಸ್ತ್ರಗಳೊಂದಿಗೆ ಸದಾ ಸಿದ್ಧನಿರ ಬೇಕಾಗುವುದು ।೫೫೧॥

ಉಪವರಳಾದ ಕನ್ಯೆಯು ಲಗ್ನಕ್ಕೆ ಮುಂಚೆಯೇ ಬೇರೆ ಮನೆಗೆ ಹೋಗುವಳು ಎಂಬ ಭಾವನೆ ಇರುವುದು. ಸಂನ್ಯಾಸಿ ಯು ಮರಣಕ್ಕೆ ಸದಾ ಸಿದ್ಧನಿರುವನು. ಅದರಂತೆ ಈತನು ಜೀವಂತನಿದ್ದರೂ ಮೃತ್ಯುವಿನ ಬಗ್ಗೆ ವಿಚಾರ ಮಾಡುವನು ।೫೫೨॥

ಯಾರು ಈ ಪ್ರಕಾರವಾಗಿ ಜೀವಂತವಿರುವಾಗಲೇ ಪುನರ್ಜನ್ಮದ ನಿವಾರಣೆ ಮಾಡುವನು, ಈ ದೇಹದ ಮೃತ್ಯುವಿನಿಂದ ಮೃತ್ಯುವಿಗೆ ಮೃತ್ಯು ತಂದು ತಾನು ಬ್ರಹ್ಮಸ್ವರೂಪನಾಗುವನು ।೫೫೩॥

ಮತ್ತು ಈ ಪ್ರಕಾರವಾಗಿ ಆತನಿಗೆ ಜನ್ಮಮರಣದ ದುಃಖ ಉಳಿಯಲಿಲ್ಲ. ಆತನಿಗೆ ಜ್ಞಾನದ ಕೊರತೆಯಾಗು ವುದಿಲ್ಲ ।೫೫೪॥

ಮತ್ತು ಅದರಂತೆಯೇ, ಶರೀರದಲ್ಲಿ ಮುದುಕುತನ ಬರುವ ಮುಂಚೆಯೇ ಅದನ್ನು ತುಂಬಿದ ತಾರುಣ್ಯದ ಭರದಲ್ಲಿ ಈತನು ಮುದುಕತನದ ವಿಚಾರ ಮಾಡುವನು ।೫೫೫॥

ಮತ್ತು ಈತನು ಹೇಳುವುದೇನೆಂದರೆ, ಇಂದು ನನ್ನ ಶರೀರದಲ್ಲಿ ಯಾವ ಶಕ್ತಿ ಇದೆಯೋ, ಅದಕ್ಕೆ ವೃದ್ಧಾಪ್ಯ ಪ್ರಾಪ್ತವಾದಾಗ ಒಣಗಿದ ಹೋಳು ಮಾಡಿದ ಪಲ್ಯದಂತೆ ಆದೀತು? ॥೫೫೬॥

ದೈವಹೀನನ ಸಾಹಸವು ವ್ಯರ್ಥವಾಗುವಂತೆ ಅಥವಾ ಮಂತ್ರಿ ಇಲ್ಲದ ರಾಜನ ಸ್ಥಿತಿಯಾದಂತೆ ನನ್ನ ಕೈಕಾಲುಗಳು ನಡೆಯದಂತೆ ನನ್ನ ಶಕ್ತಿಯ ಸ್ಥಿತಿಯಾಗುವುದು ।೫೫೭॥

ಹೂವುಗಳ ಸುಗಂಧ ಭೋಗ ಸಂಭ್ರಮ ಪಡೆಯುವ ಮೂಗು ಒಂಟೆಯ ಮೊಣಕಾಲ ಪರಟೆಯಂತಾಗುವುದು ।೫೫೮॥

ಆಷಾಢ ಮಾಸದಲ್ಲಿ ಮಳೆಯ ಹೊಡೆತಕ್ಕೆ ಉಡಾಳ ದನದ ಕಾಲುಗಳು ರಾಡಿಯಿಂದ ಕೊಳೆಯುವಂತೆ ಆಗ ನನ್ನ ಶರೀರವಾದೀತು ।೫೫೯॥

ಕಮಲ ಪತ್ರಕ್ಕೆ ಸ್ಪರ್ಧೆ ಮಾಡುತ್ತಿರುವ ಈ ಯಾವ ನನ್ನ ವಿಶಾಲ ಕಣ್ಣುಗಳು ಅವು ಮುಂದೆ ಹಣ್ಣಾದ ಪಡವಲ ಕಾಯಿಯಂತೆ ನಿಸ್ತೇಜವಾಗಿ ಒಳಗೆ ಹೋಗುವುವು ।೫೬೦॥

ಹುಬ್ಬುಗಳು ಒಣಗಿದ ತೊಗಟೆಯಂತಾಗಿ ಕೆಳಗಿರುವ ಕಣ್ಣುಗಳ ಮೇಲೆ ಜೋತಾಡುವುವು ಮತ್ತು ಕಣ್ಣಿನಿಂದ ಹರಿಯುವ ನೀರಿನಿಂದ ಎದೆಯು ಕೊಳೆಯುವುದು ।೫೬೧॥

ಓತಿಕಾಟವು ಜಾಲಿಯ ಬೊಡ್ಡೆಯ ಮೇಲೆ ಅತ್ತಿಂದಿತ್ತ ಓಡಾಡುವಾಗ ಮೈಯಲ್ಲ ಅಂಟನಿಂದ ಜಿಗಟಾಗುವಂತೆ ಉಗುಳಿನಿಂದ ಮುಖವೆಲ್ಲ ತುಂಬಿಕೊಳ್ಳುವುದು ।೫೬೨॥

ಅಡುಗೆಯ ಒಲೆಯ ಮುಂದೆ ತೆಗೆದ ಹರಿಯಲ್ಲಿ ಬಿದ್ದ ಮುಸುರೆಯ ನೀರಿನಿಂದ ಬುಜುಗುಡುವಂತೆ ಮೂಗು ಸಿಂಬಳದಿಂದ ತುಂಬಿ ಬುಜುಗುಡುವುದು ।೫೬೩॥

ಯಾವ ಈ ಮುಖದ ತುಟಿಯನ್ನು ತಾಂಬೂಲದಿಂದ ಕೆಂಪಗೆ ಮಾಡುವೆ, ನಗುವಾಗ ಹಲ್ಲುಗಳನ್ನು ತೋರಿಸುವೆ ಮತ್ತು ಇವುಗಳಿಂದ ನನಗೆ ಉತ್ತಮವಾಗಿ ಮಾತನಾಡಲು ಬರುವುದು ।೫೬೪॥

ಅದೇ ಆ ಮುಖಕ್ಕೆ ಜೊಲ್ಲಿನ ಪ್ರವಾಹವೇ ಹರಿಯು ವುದು, ಹಲ್ಲುಗಳೆಲ್ಲ ದವಡೆ, ವಸಡೆಗಳಿಂದ ಕಿತ್ತು ಹೋಗು ವುವು ।೫೬೫॥

ಸಾಲದಲ್ಲಿ ಮುಳುಗಿದ ರೈತನಂತೆ, ಅಥವಾ ಮಳೆಯಲ್ಲಿ ಬಿದ್ದುಕೊಂಡ ದನಗಳು ಏನೂ ಮಾಡಿದರೂ ಚಲಿಸದಂತೆ ನಾಲಿಗೆ ಜಡವಾಗಿ ಸರಿಯಾಗಿ ಮಾತನಾಡಲಾರದು ।೫೬೬॥

ಹುಲ್ಲಿನ ಒಣ ಎಸಳುಗಳು ಗಾಳಿಗೆ ಹಾರಿ ಹೋಗುವಂತೆ ಕೂದಲುಗಳು ಉದರಿ ಹೋಗುವುವು. ಗಡ್ಡ ಮೀಸೆಗಳಿಗೆ ಆಪತ್ತು ಒದಗುವುದು ।೫೬೭॥

ಆಷಾಢೀಚೇನಿ ಜಳೇ । ಜೈಸೀ ಝಿರಪತೀ ಶೈಲಾಂಚೀ ಮೌಳೇ । ತೈಸೇ ಖಾಂಡೀಹೂನಿ ಲಾಳೇ । ಪಡತೀ ಪುರ ।೫೬೮।। ವಾಚೇಸಿ ಅಪವಾಡು । ಕಾನೀ ಅನುಘಡು । ಪಿಂಡ ಗರುವಾ ವಾಕಡು । ಹೋಈಲ ಹಾ ।।೫೬೯।। ತೃಣಾಚೇ ಬುರಖುವಣೇ । ಆಂದೋಳೇ ವಾರೇನಗುಣೇ । ತೈಸೇ ಯೇಈಲ ಕಾಂಪಣೇ । ಸರ್ವಾಗಾಂಸೀ ।೫೭೦।। ಪಾಯಾ ಪಡತೀ ವೇಂಗಡೀ । ಹಾತ ವಳತೀ ಮುರಕುಂಡೀ । ಬರವೇಪಣಾ ಬಾಗಡೀ। ನಾಚವಿಜೈಲ ।೫೭೧।। ಮಳಮೂತ್ರದ್ವಾರೇ । ಹೋಊನಿ ಠಾತೀ ಖೋಂಕರೇ । ನವಸಿಯೇ ಹೋತೀ ಇತರೇ । ಮಾಝಿಯಾ ನಿಧನೀ ।೫೭೨।। ದೇಖೋನಿ ಥುಂಕೀಲ ಜಗು। ಮೃತ್ಯೂಚಾ ಪಡೈಲ ಪಾಂಗು । ಸೋಇರಿಯಾ ಉಬಗು । ಯೇಈಲ ಮಾಝಾ ।೫೭೩।। ಸ್ತ್ರಿಯಾ ಮ್ಹಣತೀ ವಿವಸೀ । ಬಾಳೇ ಜಾತೀ ಮೂರ್ಚ್ಛೇ । ಕಿಂಬಹುನಾ ಚಿಳಸೀ । ಪಾತ್ರ ಹೋಈನ ।೫೭೪।। ಉಭಳೀಚಾ ಉಜಗರಾ । ಸೇಜಾರಿಯಾ ಸೋಈಲಿಯಾ ಘರಾ । ಶಿಣವೀಲ ಮ್ಹಣತೀ ಮ್ಹಾತಾರಾ । ಬಹುತಾಂತೇ ಹಾ ।೫೭೫।। ಐಸೀ ವಾರ್ಧಕ್ಯಾಚೀ ಸೂಚಣೇ । ಆಪಣಿಯಾ ತರುಣಪಣೇ । ದೇಖೇ ಮಗ ಮನೀ । ವಿಟೇ ಜೋ ಗಾ ।೫೭೬।। ಮ್ಹಣೇ ಪಾಹೇ ಹೇ ಯೇಈಲ । ಆಣಿ ಆತಾಂಚೇ ಭೋಗಿತಾ ಜಾಈಲ । ಮಗ ಕಾಯ ಉರೇಲ । ಹಿತಾಲಾಗೀ ?।೫೭೭।। ಮ್ಹಣೌನಿ ನಾಇಕಣೇ ಪಾವೇ । ತಂವ ಆಇಕೋನಿ ಘಾಲೀ ಆಘವೇ । ಪಂಗು ನ ಹೋತಾ ಜಾವೇ । ತೇಥ ಜಾಯ ।೫೭೮।। ದೃಷ್ಟೀ ಜಂವ ಆಹೇ । ತಂವ ಪಾಹಾವೇ ತೇತುಲೇ ಪಾಹೇ । ಮೂಕತ್ವಾ ಆಧೀ ವಾಚಾ ವಾಹೇ । ಸುಭಾಷಿತೇ ।೫೭೯।। ಹಾತ ಹೋತೀ ಖುಳೇ । ಹೇ ಪುಢೀಲ ಮೋಟಕೇ ಕಳೇ । ತಂವ ಕರೂನಿ ಘಾಲೀ ಸಕಳೇ । ದಾನಾದಿಕೇ ।೫೮೦।। ಐಸೀ ದಶಾ ಯೇಈಲ ಪುಢೇ । ತೈ ಮನ ಹೋಈಲ ವೇಡೇ । ತಂವ ಚಿಂತೂನಿ ಠೇವೀ ಚೋಖಡೇ । ಆತ್ಮಜ್ಞಾನ ।೫೮೧।। ಜೈ ಚೋರ ಪಾಹೇ ಝೋಂಬತೀ । ತಂವ ಆಜೀಚಿ ರುಸಿಜೇ ಸಂಪತ್ತೀ । ಕಾ ಝಾಂಕಾರಝಾಂಕೀ ವಾತೀ । ನ ವಚತಾ ಕೀಜೇ ।೫೮೨।। ತೈಸೇ ವಾರ್ಧಕ್ಯ ಯಾವೇ । ಮಗ ಜೇ ವಾಯಾ ಜಾವೇ । ತೇ ಆತಾಂಚಿ ಆಘವೇ । ಸವತೇ ಕರೀ ।೫೮೩।। ಆತಾ ಮೋಡೋನಿ ಠೇಲೀ ದುರ್ಗೇ । ಕಾ ವಳಿತ ಧರಿಲೇ ಖಗೇ । ತೇಥ ಉಪೇಕ್ಷೂನಿ ಜೋ ನಿಘೇ । ತೋ ನಾಗವಲಾ ಕೀ? ।೫೮೪।।

ಆಷಾಢ ಮಾಸದಲ್ಲಿ ಮಳೆಯ ನೀರಿನಿಂದ ಪರ್ವತದ ಶಿಖರಗಳು ಒಸರುವಂತೆ, ತುಟಿಯ ಎರಡೂ ಕಡೆಯೂ ಕಿಂಡಿಗಳಿಂದ ಜೊಲ್ಲು ಒಂದೇ ಸವನೆ ಸೋರುತ್ತಿರುವುದು ।೭೬೮॥

ವಾಣಿಗೆ ಮಾತನಾಡುವ ಸಾಮರ್ಥ್ಯವಿರುವುದಿಲ್ಲ, ಕಿವಿಯಿಂದ ಸ್ಪಷ್ಟವಾಗಿ ಕೇಳಲು ಬರುವುದಿಲ್ಲ. ಹೀಗೆ ಈ ಶರೀರದ ಸ್ಥಿತಿಯು ಮುದಿ ಮಂಗನಂತಾಗುವುದು ।೭೬೯॥

ಹೊಲದಲ್ಲಿ ಬೆದರುಗೊಂಬೆಯಾಗಿ ನಿಲ್ಲಿಸಿದ ಹುಲ್ಲಿನ ಗೊಂಬೆಯು ಗಾಳಿಯಿಂದ ಸಹಜವಾಗಿ ಅಲುಗಾಡುವಂತೆ ಶರೀರವೆಲ್ಲವೂ ನಡುಗುತ್ತಿರುವುದು ।೭೭೦॥

ನಡೆಯುವಾಗ ಕಾಲುಗಳು ತೊಡಕು ಬೀಳುವುವು. ಕೈಗಳು ನಡುಗಹತ್ತುವುವು. ಈಗಿನ ಸೌಂದರ್ಯಕ್ಕೆ ಮುಂದೆ ಮಂಗನ ಆಟದಂತೆ ಕುಣಿಸಲ್ಪಡುವುದು ।೭೭೧॥

ಮಲಮೂತ್ರ ದ್ವಾರಗಳು ಯಾವಾಗಲೂ ಒಡಕು ಗಡಿಗೆಯಂತೆ ಸೋರುತ್ತಿರುವುವು. ಆಗ ಇತರರೆಲ್ಲರೂ ನನ್ನ ಮರಣಕ್ಕಾಗಿ ಹರಕೆ ಹೊರುವರು ।೭೭೨॥

ನನ್ನ ಹೊಲಸು ಸ್ಥಿತಿಯನ್ನು ಕಂಡು ಜನರು ಉಗುಳುವರು. ಮೃತ್ಯು ಬೇಗ ಬಾರದ್ದಕ್ಕೆ ಬೀಗರು ಬಿಜ್ಜರಿಗೆ ಬೇಸರಿಕೆ ಬರುವುದು ।೭೭೩॥

ಸ್ತ್ರೀಯರು ನನಗೆ ಪಿಶಾಚಿ ಎನ್ನುವರು. ಚಿಕ್ಕ ಬಾಲಕರು ನನ್ನನ್ನು ನೋಡಿ ಹೆದರಿ ಮೂರ್ಛಿತರಾಗುವರು. ಹೆಚ್ಚಿಗೇನು ಹೇಳಬೇಕು? ಎಲ್ಲ ಪ್ರಕಾರಗಳಿಂದ ಜನರಿಗೆ ನಾನು ಅಸಹ್ಯ ನಾಗುವೆನು ।೭೭೪॥

ನೆರೆಮನೆಯವರು ಮಲಗಿಕೊಂಡಿರುವಾಗ ನಾನು ಕೆಮ್ಮುವ ದೊಡ್ಡ ಕರ್ಕಶಧ್ವನಿ ಕೇಳಿ ಎಚ್ಚೆತ್ತು, ಈ ಮುದುಕನು ಎಷ್ಟು ಜನರಿಗೆ ತ್ರಾಸು ಕೊಡುವನೋ, ತಿಳಿಯದಾಗಿದೆ ಎನ್ನುವರು ।೭೭೫॥

ಈ ಪ್ರಕಾರವಾಗಿ ಮುದುಕತನದಲ್ಲಿ ನನ್ನ ಸ್ಥಿತಿಯಾದೀತೆಂದು ಮನದಲ್ಲಿ ತಂದು ಆತನು ತಾರುಣ್ಯದಲ್ಲಿಯೇ ಆ ಸ್ಥಿತಿಗಾಗಿ ಮನಸ್ಸಿನಲ್ಲಿ ಖೇದ ಪಡುವನು।೭೭೬॥

ನಾಳೆ ಈ ಮುದಕುತನ (ಮುಪ್ಪು) ಬರುವುದು ಮತ್ತು ಈಗಿನ ತಾರುಣ್ಯವು ವಿಷಯಗಳನ್ನು ಭೋಗಿಸುತ್ತ ಮುಗಿದು ಹೋಗುವುದು. ಆಗ ತನ್ನ ಕಲ್ಯಾಣ ಮಾಡಿಕೊಳ್ಳಲು ಯಾವುದುಳಿಯುವುದು? ।೭೭೭॥

ಆದ್ದರಿಂದ ಕಿವಿಗಳು ಕಿವುಡಾಗುವುದಕ್ಕಿಂತ ಮುಂಚಿತವಾಗಿಯೇ ಎಲ್ಲ (ಶಾಸ್ತ್ರಗಳನ್ನು) ಕೇಳುವೆ ಮತ್ತು ಎಲ್ಲಿಯವರೆಗೆ ಶರೀರವು ಸ್ವಾಧೀನವಾಗಿದೆಯೋ, ಅಲ್ಲಿಯವರೆಗೆ ತೀರ್ಥಯಾತ್ರೆ ಮಾಡಿಕೊಳ್ಳುವೆ ।೭೭೮॥

ದೃಷ್ಟಿಯು ಸರಿಯಾಗಿ ಇರುವವರೆಗೆ ಶಾಸ್ತ್ರಗಳನ್ನು ಓದಿಕೊಳ್ಳುವೆ ಮತ್ತು ವಾಣಿಯು ಎಲ್ಲಿಯವರೆಗೆ ಸ್ಥಿರವಾಗಿದೆಯೋ, ಅಲ್ಲಿಯವರೆಗೆ ಈಶ್ವರನ ಗುಣಗಾನ ಮಾಡುವೆನು ।೭೭೯॥

ಕೈಗಳು ಕೆಲಸಕ್ಕೆ ಬರದಂತಾಗುವುದು ಎಂದು ತಿಳಿದು ತನ್ನಲ್ಲಿ ಸಾಧ್ಯವಾದಷ್ಟು ದಾನಧರ್ಮಗಳನ್ನು ಮಾಡಿ ಮುಗಿಸುವೆನು ।೭೮೦॥

ಈ ಪ್ರಕಾರದ ಸ್ಥಿತಿಯು ಮುಂದೆ ಒದಗಿದರೆ ಮನಸ್ಸು ಎಚ್ಚರವಾಗಿ ಇರುವುದಿಲ್ಲವೆಂದು ತಿಳಿದು ಮೊದಲೇ ಆತ್ಮಜ್ಞಾನದ ಪೂರ್ಣ ವಿಚಾರ ಮಾಡಿಕೊಳ್ಳುವೆನು ।೭೮೧॥

ನಾಳೆ ನನ್ನದು ಕಳ್ಳರು ಲೂಟಿ ಮಾಡಬಹುದು ಎಂದು ತಿಳಿದು ಇಂದೇ ತನ್ನಲ್ಲಿದ್ದ ಎಲ್ಲ ಸಂಪತ್ತನ್ನು ವ್ಯವಸ್ಥೆ ಮಾಡಿ ಅಲಿಪ್ತನಾಗುವನು. ಅಥವಾ ದೀಪ ಆರುವುದಕ್ಕಿಂತ ಮುಂಚಿತವಾಗಿ ಎಲ್ಲ ಸಾಮಾನುಗಳನ್ನು ವ್ಯವಸ್ಥಿತ ಇಡುವನು ।೭೮೨॥

ನಾಳೆ ಮುಪ್ಪು ಬರಬೇಕು ಮತ್ತು ಹಿತ ಸಾಧಿಸದೇ ವ್ಯರ್ಥವಾಗಿ ಹೋಗಬೇಕು. ಇದಕ್ಕಿಂತ ಈಗಲೇ ತಾರುಣ್ಯದಲ್ಲಿ ಎಲ್ಲ ಹಿತವನ್ನು ಸ್ವಾಧೀನಪಡಿಸುವೆ ।೭೮೩॥

ಯಾವ ಹಾದಿಯಲ್ಲಿ ಪರ್ವತ ಕಿಲ್ಲೆಗಳು ಇವೆ ಎಂಬುದು ತಿಳಿದು ಪಕ್ಷಿಗಳು ತಿರುಗಿ ಗೂಡಿಗೆ ಬರುವ ಸಾಯಂಕಾಲವಾದದ್ದು ತಿಳಿದು ಅದರ ತಿರಸ್ಕಾರ ಮಾಡಿ ಪ್ರವಾಸ ಮಾಡಿದರೆ ಎಲ್ಲ ಸಂಕಟಕ್ಕೆ ಗುರಿಯಾಗುವುವು ।೭೮೪॥

ತೈಸೇ ವೃದ್ಧಾಪ್ಯ ಹೋಯ। ಆಲೇಪಣ ತೇ ವಾಯಾ ಜಾಯ। ಜೇ ತೋ ಶತವೃದ್ಧ ಆಹೇ । ನೇಣೋ ಕೈಂಚಾ ।೮೭೫॥ ಝಾಡಿಲೀಂಚಿ ಕೋಳೇ ಝಾಡೀ । ತಯಾ ನ ಫಳೇ ಜೇವೀ ಚೋಂಡೀ । ಜಾಹಲಾ ಅಗ್ನೀ ತರೀ ರಾಖೋಂಡೀ । ಜಾಳೀಲ ಕಾಈ ? ।೮೭೬॥ ಮ್ಹಣೌನಿ ವಾರ್ಧಕ್ಯಾಚೇನಿ ಆಠವೇ । ವಾರ್ಧಕ್ಯಾ ಜೋ ನಾಗಾವೇ । ತಯಾಚ್ಯಾ ಠಾಯೀ ಜಾಣಾವೇ । ಜ್ಞಾನ ಆಹೇ ।೮೭೭॥ ತೈಸೇಂಚಿ ನಾನಾ ರೋಗ । ಪಡಿಘಾತೀ ನಾ ಜಂವ ಪುಢಾ ಆಂಗ । ತಂವ ಆರೋಗ್ಯಾಚೇ ಉಪೇಗ। ಕರೂನಿ ಘಾಲೀ ।೮೭೮॥ ಸಾಪಾಚ್ಯಾ ತೊಂಡೀ । ಪಡಲೀ ಜೇ ಉಂಡೀ । ತೇ ಲಾವೂನಿ ಸಾಂಡೀ । ಪ್ರಬುದ್ಧ ಜೈಸಾ ।೮೭೯॥ ತೈಸಾ ವಿಯೋಗೆ ಜೇಣೇ ದುಃಖೇ । ವಿಪತ್ತಿ ಶೋಕ ಪೋಖೇ । ತೇ ಸ್ನೇಹ ಸಾಂಡೂನಿ ಸುಖೇ । ಉದಾಸು ಹೋಯ ।೮೮೦॥ ಆಣಿ ಜೇಣೇ ಜೇಣೇ ಕಡೇ । ದೋಷ ಸೂತಿಲ ತೋಂಡೇ । ತಯಾ ಕರ್ಮರಂಧ್ರೀ ಗುಂಡೇ । ನಿಯಮಾಚೇ ದಾಟೀ ।೮೮೧॥ ಐಸಐಸಿಯಾ ಆಇತೀ । ಜಯಾಚೀ ಪರೀ ಅಸತೀ ।ತೋಚಿ ತೋ ಜ್ಞಾನ ಸಂಪತ್ತೀ । ಗೋಸಾವೀ ಗಾ ।೮೮೨॥ ಆತಾ ಆಣೇಕಹೀ ಏಕ । ಲಕ್ಷಣ ಅಲೌಕಿಕ । ಸಾಂಗೇನ ಆಇಕ । ಧನಂಜಯಾ ।೮೮೩॥

ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು।
ನಿತ್ಯಂ ಚ ಸಮಚಿತ್ತತ್ವಮ್ ಇಷ್ಟಾನಿಷ್ಟೋಪಪತ್ತಿಷು ।೯॥

ತರಿ ಜೋ ಯಾ ದೇಹಾವರೀ । ಉದಾಸು ಐಸಿಯಾ ಪರೀ । ಉಖಿತಾ ಜೈಸಾ ಬಿಢಾರೀ । ಬೈಸಲಾ ಆಹೇ ।೮೮೪॥ ಕಾ ವೃಕ್ಷಾಚೀ ಸಾಉಲೀ । ವಾಟೇ ಜಾತಾ ಮೀನಲಿ । ಘರಾವರೀ ತೇತುಲೀ । ಆಸ್ಥಾ ನಾಹೀ ।೮೮೫॥ ಸಾಉಲೀ ಸರಿಸೀಚ ಅಸೇ । ಪರೀ ಅಸೇ ಹೇ ನೇಣಿಜೇ ಜೈಸೇ । ಸ್ತ್ರಿಯೇಚೇ ತೈಸೇ । ಲೋಲುಪ್ಯ ನಾಹೀ ।೮೮೬॥ ಆಣಿ ಪ್ರಜಾ ಜೇ ಜಾಲೀ । ತಿಯೇ ವಸ್ತೀ ಕೀರ ಆಲೀ । ಕಾ ಗೌರುವೇ ಬೈಸಲೀ । ರುಖಾತಳೀ ।೮೮೭॥ ಜೋ ಸಂಪತ್ತೀ ಮಾಜೀ ಅಸತಾ । ಐಸಾ ಗಮೇ ಪಂಡುಸುತಾ । ಜೈಸಾ ಕಾ ವಾಟೇ ಜಾತಾ । ಸಾಕ್ಷೀ ಠೇವಿಲಾ ।೮೮೮॥ ಕಿಂಬಹುನಾ ಪುಸಾ । ಪಾಂಜರಿಯಾಮಾಜೀ ಜೈಸಾ । ವೇದಾಜ್ಞೇಸೀ ತೈಸಾ । ಬಿಹೂನಿ ಅಸೇ ।೮೮೯॥ ಏರ್ಹವೀ ದಾರಾಗೃಹಪುತ್ರೀ । ನಾಹೀ ಜಯಾ ಮೈತ್ರೀ । ತೋ ಜಾಣ ಪಾ ಧಾತ್ರೀ । ಜ್ಞಾನಾಸಿ ಗಾ ।೯೦೦॥ ಮಹಾಸಿಂಧೂ ಜೈಸೇ । ಗ್ರೀಷ್ಮವರ್ಷೀ ಸರಿಸೇ । ಇಷ್ಟಾನಿಷ್ಟ ತೈಸೇ । ಜಯಾಚ್ಯಾ ಠಾಯೀ ।೯೦೧॥

ಅದರಂತೆ ನಾಳೆ ಮುಪ್ಪು ಬಂದ ಈಗಿದ್ದ ತಾರುಣ್ಯವು ಹಿತವಾಗದೇ ವ್ಯರ್ಥಹೋದೀತು, ಈಗಿನ ತಾರುಣ್ಯಕ್ಕೆ ತಿರಸ್ಕರಿಸಿ ಮುಂದೆ ಮುಪ್ಪಾದಾಗ ಹಿತ ಸಾಧಿಸುವೆ ಎಂದರೆ ಶಕ್ಯವಿಲ್ಲ, ಐವತ್ತಕ್ಕೆ ಮರಣ ಬರುವಾಗ ನೂರುವರ್ಷ ಬಾಳುವುದು ಹೇಗೆ ತಿಳಿದೀತು? ।೫೮೫॥

ಎಳ್ಳಿನ ಪೆಂಡಿಯನ್ನು ಒಮ್ಮೆ ಝಾಡಿಸಿ, ಪುನಃ ಝಾಡಿಸಿದರೆ ಅದರಲ್ಲಿ ಎಳ್ಳು ದೊರಕುವುದಿಲ್ಲ, ಅಗ್ನಿಯು ಎಷ್ಟು ದೊಡ್ಡದಾಗಿದ್ದರೂ ಅದು ಆರಿ ಬೂದಿಯಾದ ಮೇಲೆ ಪುನಃ ಅದು ಸುಡಬಹುದೇ? ।೫೮೬॥

ಆದ್ದರಿಂದ ಮುಪ್ಪಿನ ವಿಚಾರವನ್ನು ಆತನು ಮೊದಲೇ ಮಾಡಿರುವುದರಿಂದ ಆತನಿಗೆ ಮುಪ್ಪಿನಿಂದ ಯಾವ ಹಾನಿಯೂ ಆಗುವುದಿಲ್ಲ, ಮತ್ತು ಆತನಲ್ಲಿಯೇ ಜ್ಞಾನವಿದೆ ಎಂದು ತಿಳಿಯಬೇಕು ।೫೮೭॥

ಅದರಂತೆಯೇ ನಾನಾ ಪ್ರಕಾರದ ರೋಗಗಳು ಶರೀರಕ್ಕೆ ಒದಗುವ ಮೊದಲೇ ಅದರಿಂದ ಆತ್ಮ ಜ್ಞಾನದ ಉಪಯೋಗ ಪಡೆಯುವನು ।೫೮೮॥

ಯಾವ ಪ್ರಕಾರವಾಗಿ ಹಾವಿನ ಬಾಯಿಯಿಂದ ಬಿದ್ದ ಅನ್ನದ ಉಂಡಿಯನ್ನು ಬುದ್ಧಿವಂತನಾದವನು ಅದನ್ನು ಹೇಗೆ ಒಗೆಯುವನೋ ।೫೮೯॥

ಅದರಂತೆ ಯಾವ ಸ್ನೇಹದ ಯೋಗದಿಂದ ವಿಯೋಗ ಮತ್ತು ದುಃಖಗಳು, ವಿಪತ್ತು ಮತ್ತು ಶೋಕವು ಇವು ರಕ್ಷಿಸಲ್ಪಡುವುವು. ಈ ಸ್ನೇಹವನ್ನು ಬಿಟ್ಟು, ಸಮಾಧಾನ ವೃತ್ತಿಯಿಂದ ಉದಾಸನಾಗಿರುವನು ।೫೯೦॥

ಮತ್ತು ಯಾವುದರಿಂದ ತನಗೆ ದೋಷವಾಗುವುದೋ, ಆ ಕರ್ಮಗಳನ್ನು ಮಾಡುವುದಿಲ್ಲ, ಮತ್ತು ಕರ್ಮೇಂದ್ರಿಯ ಗಳಿಂದ ದೋಷಗಳು ಒಳಗೆ ಹೋಗಬಾರದೆಂದು ನಿಯಮ ರೂಪ ಕಲ್ಲುಗಳನ್ನು ಅಡ್ಡಹಾಕಿ ಆ ದಾರಿಯನ್ನು ಬಂದ ಮಾಡುವನು ।೫೯೧॥

ಈ ಸಾಮಗ್ರಿಗಳಿಂದ ಯಾರ ಆಚರಣೆಯ ರೀತಿ ಇರುವುದೋ, ಆತನೇ ಜ್ಞಾನರೂಪ ಐಶ್ವರ್ಯದ ಒಡೆಯನಿರುವನು ಎಂದು ತಿಳಿ ।೫೯೨॥

ಈಗ ಅರ್ಜುನಾ, ನಿನಗೆ ಈ ಜ್ಞಾನವಂತರ ಇನ್ನೊಂದು ಅಲೌಕಿಕ ಲಕ್ಷಣವನ್ನು ಹೇಳುತ್ತೇನೆ, ಅದನ್ನು ಕೇಳು ।೫೯೩॥

ಶ್ಲೋಕಾರ್ಥ :- ಪುತ್ರರು, ಪತ್ನಿ, ಗೃಹಾದಿಗಳಲ್ಲಿ ಆಸಕ್ತಿಯಿಲ್ಲದಿರುವಿಕೆ, ಇಷ್ಟಾನಿಷ್ಟ ಪ್ರಾಪ್ತಿಗಳಲ್ಲಿ ಸದಾ ಸಮಬುದ್ಧಿಯುಂಟಾಗುವಿಕೆ ।೯॥

ಒಬ್ಬ ಪ್ರವಾಸಿ ಮನುಷ್ಯನು ಮುಕ್ಕಾಮಿಗಾಗಿ ಒಂದು ಸ್ಥಳದಲ್ಲಿ ಕುಳಿತಿರುವನು. ಆದರೆ ಆತನಿಗೆ ಆ ಸ್ಥಳದ ಬಗ್ಗೆ ಕಿಂಚಿತ್‌ವಾದರೂ ಆಸಕ್ತಿ ಇರುವುದಿಲ್ಲ. ಅದರಂತೆ ಆತನು ಈ ದೇಹದ ಮೇಲೆ ಉದಾಸನಾಗಿರುವನು ।೫೯೪॥

ಅಥವಾ ದಾರಿ ನಡೆಯುವ ಕಾಲಕ್ಕೆ ವಿಶ್ರಾಂತಿಗಾಗಿ ಒಬ್ಬ ಮನುಷ್ಯನು ಗಿಡದ ಬುಡಕ್ಕೆ ಕೂಡ್ರುವನು, ಅಲ್ಲಿರುವ ಆಸ್ಥೆಯಷ್ಟು ಸಹ ಆತನ ಮನೆಯ ಮೇಲೆ ಇರುವುದಿಲ್ಲ ।೫೯೫॥

ತನ್ನ ದೇಹದ ಜೊತೆಗೆ ತನ್ನ ನೆರಳು ಸದಾ ಇರುವುದು, ಆದರೆ ಇದೆ ಎಂಬುದು ಲಕ್ಷದಲ್ಲಿ ಇರುವುದಿಲ್ಲ. ಅದರಂತೆ ತನ್ನ ಜೊತೆಗೆ ಸದಾ ಇರುವ ಸ್ತ್ರೀಯ ಬಗ್ಗೆ ಆತನಿಗೆ ಪ್ರೇಮವೆನಿಸುವುದಿಲ್ಲ ।೫೯೬॥

ಹಾದಿಕಾರರು ವಸತಿಗೆ ಬಂದಿರುವರೆಂದೂ, ಅಥವಾ ದನಕರುಗಳು ಮಧ್ಯಾಹ್ನ ವಿಶ್ರಾಂತಿಗಾಗಿ ಗಿಡದಡಿಯಲ್ಲಿ ಕುಳಿತು ಹೋಗುವುವು ಎಂದೂ, ತನ್ನ ಸಂತತಿಯ ಬಗ್ಗೆ ತಿಳಿದಿರುವನು ।೫೯೭॥

ಅರ್ಜುನಾ, ಈತನು ಸಂಪತ್ತಿನಲ್ಲಿದ್ದರೂ ದಾರಿಯಲ್ಲಿ ಒಬ್ಬರು ಇನ್ನೊಬ್ಬರಲ್ಲಿ ಗಂಟು ಇಟ್ಟಾಗ ಆತನು ಅದನ್ನು ಕೇವಲ ಸಾಕ್ಷಿಯಾಗಿ ನೋಡುತ್ತಿರುವಂತೆ, ತನ್ನ ಸಂಪತ್ತಿನ ಬಗ್ಗೆ ಸಾಕ್ಷಿಯಾಗಿರುವನು ।೫೯೮॥

ಹೆಚ್ಚಿಗೇನು ಹೇಳಬೇಕು? ಪಂಜರದಲ್ಲಿನ ಗಿಳಿಯು ಸಾಕಿದವನ ಮಾತು ಕೇಳುವಂತೆ ಈತನು ವೇದಾಜ್ಞೆಯನ್ನು ಪಾಲಿಸುವನು ।೫೯೯॥

ಈ ರೀತಿಯಲ್ಲಿ ಮನೆ, ಹೆಂಡತಿ, ಮಕ್ಕಳ ಬಗ್ಗೆ ಯಾವ ಪ್ರೀತಿಯೂ ಇರುವುದಿಲ್ಲ. ಈತನು ಜ್ಞಾನದ ಅಧಿಷ್ಠಾನನಾಗಿರುವನು ಹೀಗೆ ತಿಳಿ ।೬೦೦॥

ಸಮುದ್ರವು ಗ್ರೀಷ್ಮ ಋತುವಿನಲ್ಲಿ ಕಡಿಮೆಯಾಗುವುದಿಲ್ಲ, ವರ್ಷಋತುವಿನಲ್ಲಿ ಹೆಚ್ಚಾಗುವುದಿಲ್ಲ. ಅದರಂತೆ ಈತನಿಗೆ ಲಾಭ ಹಾನಿಗಳಿಂದ ಯಾವ ಪರಿಣಾಮವಾಗುವುದಿಲ್ಲ ।೬೦೧॥

ಕಾ ತಿನ್ಹೀ ಕಾಳ ಹೋತಾ । ತ್ರಿಧಾ ನವ್ಹೇ ಸವಿತಾ । ತೈಸಾ ಸುಖದುಃಖೀ ಚಿತ್ತಾ । ಭೇದು ನಾಹೀ ।೬೦೨॥ ಜೇಥ ನಭಾಚೇನಿ ಪಾಡೇ । ಸಮತ್ವಾ ಉಣೇ ನ ಪಡೇ। ತೇಥ ಜ್ಞಾನ ರೋಕಡೇ । ವೋಳಖ ತೂ ।೬೦೩॥

ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।
ವಿವಿಕ್ತದೇಶಸೇವಿತ್ವಂ ಅರತಿರ್ಜನಸಂಸದಿ ।೧೦॥

ಆಣಿ ಮೀವಾಂಚೂನಿ ಕಾಂಹೀ । ಆಣಿಕ ಗೋಮಟೇ ನಾಹೀ । ಐಸಾ ನಿಶ್ಚಯೋಚಿ ತಿನ್ಹೀ । ಜಯಾಚಾ ಕೇಲಾ ।೬೦೪॥ ಶರೀರ ವಾಚಾ ಮಾನಸ । ಪಿಯಾಲೀ ಕೃತನಿಶ್ಚಯಾಚಾ ಕೋಶ । ಏಕ ಮೀವಾಂಚೂನಿ ವಾಸ । ನ ಪಾಹತೀ ಆನ ।೬೦೫॥ ಕಿಂಬಹುನಾ ನಿಕಟ ನಿಜ । ಜಯಾಚೇ ಜಾಹಲೇ ಮಜ । ತೇಣೇ ಆಪಣಯಾ ಆಮ್ಹಾ ಸೇಜ । ಐಕೀ ಕೇಲೀ ।೬೦೬॥ ರಿಗತಾ ವಲ್ಲಭಾಪುಢೇ । ನಾಹೀ ಆಂಗೀ ಜೀವೀ ಸಾಂಕಡೇ । ತಿಯೇ ಕಾಂತೇಚೇನಿ ಪಾಡೇ । ಏಕಸರಲಾ ಜೋ ।೬೦೭॥ ಮಿಳೋನಿ ಮಿಳತಚಿ ಅಸೇ । ಸಮುದ್ರೀ ಗಂಗಾಜಳ ಜೈಸೇ । ಮೀ ಹೋಊನಿ ಮಜ ತೈಸೇ । ಸರ್ವಸ್ವೇ ಭಜತೀ ।೬೦೮॥ ಸೂರ್ಯಾಚ್ಯಾ ಹೋಣ್ಯಾ ಹೋಇಜೆ । ಕಾ ಸೂರ್ಯಾಸವೇಂಚಿ ಜಾಇಜೇ । ಹೇ ವಿಕಲೇಪಣ ಸಾಜೇ । ಪ್ರಭೇಸೀ ಜೇವೀ ।೬೦೯॥ ಪೈ ಪಾಣಿಯಾಚಿಯೇ ಭೂಮಿಕೇ । ಪಾಣೀ ತಳಪೆ ಕೌತುಕೇ । ತೇ ಲಹರೀ ಮ್ಹಣತೀ ಲೌಕಿಕೇ । ಏರ್ಹವೀ ತೇ ಪಾಣೀ ।೬೧೦॥ ಜೋ ಅನನ್ಯ ಯಾಪರೀ । ಮೀ ಜಾಹಲಾಹೀ ಮಾತೇ ವರೀ । ತೋಚಿ ತೋ ಮೂರ್ತಧಾರೀ । ಜ್ಞಾನ ಪೈ ಗಾ ।೬೧೧॥ ಆಣೀ ತೀರ್ಥೇ ಧೌತೇ ತಟೇ । ತಪೋವನೇ ಚೋಖಟೇ । ಆವಡತೀ ಕಪಾಟೇ । ವಸುವೂ ಜಯಾ ।೬೧೨॥ ಶೈಲಕಕ್ಷಾಂಚೀ ಕುಹರೇ । ಜಳಾಶಯ ಪರಿಸರೇ । ಅಧಿಷ್ಠೀ ಜೋ ಆದರೇ । ನಗರಾ ನಯೇ ।೬೧೩॥ ಬಹು ಏಕಾಂತಾವರೀ ಪ್ರೀತೀ । ಜಯಾ ಜನಪದಾಚೀ ಖಂತೀ । ಜಾಣ ಮನುಷ್ಯಾಕಾರೇ ಮೂರ್ತೀ । ಜ್ಞಾನಾಚೀ ತೋ ।೬೧೪॥ ಆಣಿಕಹೀ ಪುಢತೀ । ಚಿನ್ಹೇ ಗಾ ಸುಮತೀ । ಜ್ಞಾನಾಚಿಯೇ ನಿರುತೀ । ಲಾಗೀ ಸಾಂಗೋ ।೬೧೫॥

ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್ ।
ಏತಜ್ಞಾನಮಿತಿ ಪ್ರೋಕ್ತಮ್ ಅಜ್ಞಾನಂ ಯದತೋಽನ್ಯಥಾ ।೧೧॥

ಮೂರು ಕಾಲಗಳಲ್ಲಿ ಸೂರ್ಯನು ಮೂರು ಪ್ರಕಾರ ಗಳಾಗುವುದಿಲ್ಲ. ಅದರಂತೆ ಆತನ ಮನಸ್ಸಿಗೆ ಸುಖದುಃಖ ಗಳಿಂದ ಬೇಧವಾಗುವುದಿಲ್ಲ ।।೬೦೨।।

ಮತ್ತು ಈತನಲ್ಲಿ ಆಕಾಶದಂತೆ ಸಮತೆಯಲ್ಲಿ ಯಾವ ಪ್ರಕಾರವಾಗಿ ಕಡಿಮೆತನ ಇರುವುದಿಲ್ಲ. ಆದ್ದ ರಿಂದ ಈತನಲ್ಲಿ ಜ್ಞಾನವು ಪ್ರತ್ಯಕ್ಷ ವಾಗಿ ವಾಸಮಾಡಿದೆ ಎಂದು ತಿಳಿ ।।೬೦೩।।

ಶ್ಲೋಕಾರ್ಥ :- ನನಗಿಂತ ಬೇರೆ ಚಿಂತೆಯಿಲ್ಲದೇ ನಾನೇ ಗತಿಯೆಂದು ನಂಬಿ ನನ್ನಲ್ಲಿ ಸ್ಥಿರವಾದ ಭಕ್ತಿ ಯುಂಟಾಗುವಿಕೆ, ನಿರ್ಜನ ಸ್ಥಳದಲ್ಲಿ ಇರುವಿಕೆ, ಜನ ಸಮೂಹದಲ್ಲಿ ಪ್ರೀತಿ ಇಲ್ಲದಿರುವಿಕೆ ।।೧೦।।

ಮತ್ತು ನನ್ನ ಹೊರತಾಗಿ ಬೇರೆ ಯಾವ ವಸ್ತುವೂ ಒಳ್ಳೆಯದಾಗಿಲ್ಲವೆಂದು ಆತನು ಕಾಯಾ, ವಾಚಾ, ಮನಸಾ ನಿಶ್ಚಯಿಸಿರುವನು ।।೬೦೪।।

ಈತನ ಶರೀರದಿಂದ, ವಾಣಿಯಿಂದ ಮತ್ತು ಮನಸ್ಸಿ ನಿಂದ ಕೃತ ನಿಶ್ಚಯದ ಶಪಥ ಮಾಡಿ ಈಜಗತ್ತಿನಲ್ಲಿ ನನ್ನ ಹೊರತಾಗಿ ಯಾರನ್ನೂ ಅಪೇಕ್ಷಿಸುವುದಿಲ್ಲ ।।೬೦೫।।

ಹೆಚ್ಚಿಗೇನು ಹೇಳಬೇಕು? ಆತನು ತನ್ನ ಮನಸ್ಸನ್ನು ನನ್ನಲ್ಲಿ ಲೀನಗೊಳಿಸಿದನು ಮತ್ತು ನನ್ನ ಮತ್ತು ತನ್ನ ಐಕ್ಯ ಮಾಡಿ ನನ್ನ ಸ್ವರೂಪದ ಹಾಸಿಗೆಯನ್ನು ಮಾಡಿದನು ।।೬೦೬।।

ತನ್ನ ಗಂಡನಲ್ಲಿ ಕೂಡಲು ಹೊರಟ ಪತಿವ್ರತಾ ಹೆಂಡತಿಗೆ ಶರೀರದಲ್ಲಿ, ಮನದಲ್ಲಿ ಸಂಕೋಚವಿರುವುದಿಲ್ಲ. ಅದರಂತೆ ಈತನು ನನ್ನಲ್ಲಿ ಅನನ್ಯಭಾವದಿಂದ ಅನುಸರಿ ಸುತ್ತಾನೆ ।।೬೦೭।।

ಗಂಗೆಯ ನೀರು ಸಮುದ್ರಕ್ಕೆ ಕೂಡಿ ಪುನಃ ಕೂಡುತ್ತಲೇ ಇರುವುದು. ಅದರಂತೆ ಆತನು ನಾನಾಗಿದ್ದು, ಸರ್ವಭಾವ ದಿಂದ ನನ್ನನ್ನು ಭಜಿಸುವನು ।।೬೦೮।।

ಸೂರ್ಯನ ಪ್ರಭೆಯು ಸೂರ್ಯನ ಜೊತೆಯಲ್ಲಿ ಉದಯವಾಗುವುದು ಮತ್ತು ಸೂರ್ಯನ ಜೊತೆಯಲ್ಲಿ ಅಸ್ತವಾಗುವುದು. ಇದು ಪರತಂತ್ರತೆಯು ಪ್ರಭೆಗೆ ಮಾತ್ರ ಶೋಭಿಸುವುದು ।।೬೦೯।।

ಹಾಗೆಯೇ ಗಾಳಿಯಿಂದ ನೀರಿನ ಮೇಲೆ ಯಾವ ನೀರು ಉಕ್ಕೇರಿದಾಗ ಅದಕ್ಕೆ ಜನರು ತೆರೆ ಎಂದು ಕರೆಯುವರು. ಆದರೆ ಅದನ್ನು ವಿಚಾರ ಮಾಡಿ, ನೋಡಿದರೆ ಅದು ನೀರೇ ಆಗಿರುವುದು ।।೬೧೦।।

ಅದರಂತೆ ಏಕನಿಷ್ಠನಾಗಿ ಮತ್ತು ನನ್ನಲ್ಲಿ ಏಕರೂಪನಾಗಿ ನನ್ನನ್ನೇ ಭಜನೆಗಾಗಿ ಸ್ವೀಕರಿಸುವನು. ಆ ಪುರುಷನೇ ಆಕಾರ ಧರಿಸಿರುವ ಜ್ಞಾನವಾಗಿರುವನು ।।೬೧೧।।

ಇಂತಹ ಪುರುಷನಿಗೆ ಪವಿತ್ರವಾದ ತೀರ್ಥಗಳಲ್ಲಿ ಉತ್ತಮವಾದ ತಪೋವನದಲ್ಲಿ, ಮತ್ತು ಗುಹೆಗಳಲ್ಲಿ ವಾಸ ಮಾಡಲು ಪ್ರಿಯವೆನಿಸುತ್ತದೆ ।।೬೧೨।।

ಪರ್ವತದ ಗುಹೆಗಳಲ್ಲಿ ಸರೋವರದ ದಂಡೆಯಲ್ಲಿ ವಾಸಮಾಡುವ ಆತನಿಗೆ ಹೆಚ್ಚಾದ ಪ್ರೇಮವಿದ್ದು, ಆತನು ಪಟ್ಟಣಗಳಲ್ಲಿ ಇರಲು ಮನಸ್ಸು ಮಾಡುವುದಿಲ್ಲ ।।೬೧೩।।

ಈತನಿಗೆ ಏಕಾಂತವಾಸವೇ ಬಹಳ ಪ್ರಿಯವೆನಿಸುವುದು ಮತ್ತು ಮನುಷ್ಯರ ವಸತಿಯಲ್ಲಿ ಇರಲು ಬೇಸರವಾಗುವುದು. ಆತನು ಮನುಷ್ಯರೂಪದ ಜ್ಞಾನಮೂರ್ತಿಯೇ ಸರಿ ।।೬೧೪।।

ಸುಮತಿ ಅರ್ಜುನಾ, ಜ್ಞಾನದ ಸ್ಪಷ್ಟೀಕರಣಕ್ಕಾಗಿ ನಿನಗೆ ಇನ್ನೂ ಕೆಲವು ಲಕ್ಷಣಗಳನ್ನು ಮುಂದೆ ಹೇಳುವೆ ।।೬೧೫।।

ಶ್ಲೋಕಾರ್ಥ :- ಆತ್ಮಜ್ಞಾನದಲ್ಲಿ ನಿತ್ಯಭಾವ ವುಂಟಾಗಿರುವಿಕೆ, ಮೋಕ್ಷಪ್ರಾಪ್ತಿಯಲ್ಲಿಯೇ ಪ್ರಯೋಜನ ಇರುವಿಕೆ, ಇವೆಲ್ಲಾ ಜ್ಞಾನವೆಂದು ಹೇಳಿಕೊಳ್ಳುತ್ತವೆ. ಇದಕ್ಕೆ ವ್ಯತಿರಿಕ್ತವಾದುದೆಲ್ಲವೂ ಅಜ್ಞಾನವೆಂದು ಹೇಳಿಕೊಳ್ಳುತ್ತದೆ ।।೧೧।।

ತರೀ ಪರಮಾತ್ಮಾ ಐಸೇ । ಜೇ ಏಕ ವಸ್ತು ಅಸೇ । ತೇ ಜಯಾ ದಿಸೇ । ಜ್ಞಾನಾಸ್ತವ ॥೬೧೬॥ ತೇ ಏಕಾವಾಂಚೂನಿ ಆನೇ । ಜಿಯೇ ಭವಸ್ವರ್ಗಾದಿ ಜ್ಞಾನೇ । ತೇ ಅಜ್ಞಾನ ಐಸಾ ಮನೇ । ನಿಶ್ಚಯೋ ಕೇಲಾ ॥೬೧೭॥ ಸ್ವರ್ಗಾ ಜಾಣೇ ಹೇ ಸಾಂಡೀ । ಭವವಿಷಯೀ ಕಾನ ಝಾಡೀ । ದೇ ಅಧ್ಯಾತ್ಮಜ್ಞಾನಿ ಬುಡೀ । ಸದ್ಭಾವಾಚೀ ॥೬೧೮॥ ಭಂಗಲಿಯೇ ವಾಟೇ । ಶೋಧೂನಿಯಾ ಅವ್ಹಾಂಟೇ । ನಿಘೀಜೇ ಜೇವೀ ನೀಟೇ । ರಾಜಪಂಥೇ ॥೬೧೯॥ ತೈಸೇ ಜ್ಞಾನಜಾತಾ ಕರೀ । ಆಘವೇಂಚಿ ಏಕೀಕಡೇ ಸಾರೀ । ಮಗ ಮನ ಬುದ್ಧೀ ಮೋಹರೀ । ಅಧ್ಯಾತ್ಮ ಜ್ಞಾನೀ ॥೬೨೦॥ ಮ್ಹಣೇ ಏಕ ಹೇಂಚಿ ಆಥೀ । ಯೇರ ಜಾಣಣೇ ತೇ ಭ್ರಾಂತೀ । ಐಸೀ ನಿಕುರೇಸೀ ಮತೀ । ಮೇರು ಹೋಯ ॥೬೨೧॥ ಏವಂ ನಿಶ್ಚಯೋ ಜಯಾಚಾ । ದ್ವಾರೀ ಅಧ್ಯಾತ್ಮಜ್ಞಾನಾಚಾ । ಧ್ರುವ ದೇವೋ ಗಗನೀಂಚಾ । ತೈಸಾ ರಾಹಿಲಾ ॥೬೨೨॥ ತಯಾಚಿಯಾ ಠಾಯೀ ಜ್ಞಾನ । ಯಾ ಬೋಲಾ ನಾಹೀ ಆನ । ಜೇ ಜ್ಞಾನೀ ಬೈಸಲೇ ಮನ । ತೇವ್ಹಾಂಚಿ ತೇ ತೋ ಮೀ ॥೬೨೩॥ ತರೀ ಬೈಸಲೇಪಣೇ ಜೇ ಹೋಯೇ । ತೇ ಬೈಸತಾಂಚಿ ಬೋಲೇ ನ ಹೋಯೇ । ತರೀ ಜ್ಞಾನಾ ತಯಾ ಆಹೇ । ಸರಿಸಾ ಪಾಡು ॥೬೨೪॥ ಆಣಿ ತತ್ತ್ವಜ್ಞಾನ ನಿರ್ಮಳ । ಫಳೇ ಜೇ ಏಕ ಫಳ । ತೇ ಜ್ಞೇಯಹೀ ವರೀ ಸರಳ । ದಿಠೀ ಜಯಾ ॥೬೨೫॥ ಏರ್ಹವೀ ಬೋಧಾ ಆಲೇನಿ ಜ್ಞಾನೇ । ಜರೀ ಜ್ಞೇಯ ನ ದಿಸೇಚಿ ಮನೇ । ತರೀ ಜ್ಞಾನ ಲಾಭುಹೀ ನ ಮನೇ । ಜಾಹಲಾ ಸಾಂತಾ ॥೬೨೬॥ ಆಂಧಳೇನಿ ಹಾತೀ ದಿವಾ । ಘೇಊನಿ ಕಾಯ ಕರಾವಾ ? । ತೈಸಾ ಜ್ಞಾನನಿಶ್ಚಯೋ ಆಘವಾ । ವಾಯಾಂಚಿ ಜಾಯ ॥೬೨೭॥ ಜರೀ ಜ್ಞಾನಾಚೇನಿ ಪ್ರಕಾಶೇ । ಪರತತ್ತ್ವೀ ದಿಠೀ ನ ಪೈಸೇ । ತೇ ಸ್ಫೂರ್ತಿಚಿ ಅಸೇ । ಅಂಧ ಹೋಊನೀ ॥೬೨೮॥ ಮ್ಹಣೌನಿ ಜ್ಞಾನ ಜೇತುಲೇ ದಾವೀ । ತೇತುಲೀ ಹೀ ವಸ್ತುಚಿ ಆಘವೀ । ತೇ ದೇಖೇ ಐಶೀ ವ್ಹಾವೀ । ಬುದ್ಧೀ ಚೋಖ ॥೬೨೯॥ ಯಾಲಾಗೀ ಜ್ಞಾನೇ ನಿರ್ದೋಖೇ । ದಾವಿಲೇ ಜ್ಞೇಯ ದೇಖೇ । ತೈಸೇನಿ ಉನ್ಮೇಖೇ । ಆಥಿಲಾ ಜೋ ॥೬೩೦॥ ಜೆವಢೀ ಜ್ಞಾನಾಚೀ ವೃದ್ಧೀ । ತೇವಢೀಚ ಜಯಾಚೀ ಬುದ್ಧೀ । ತೋ ಜ್ಞಾನ ಹೇ ಶಬ್ದೀ । ಕರಣೇ ನ ಲಗೇ ॥೬೩೧॥ ಪೈ ಜ್ಞಾನಾಚಿಯೇ ಪ್ರಭೇಸವೇ । ಜಯಾಚೀ ಮತೀ ಜ್ಞೇಯೀ ಪಾವೇ । ತೋ ಹಾತಧರಣೆಯಾ ಶಿವೇ । ಪರತತ್ತ್ವಾಂತೇ ॥೬೩೨॥

ಇಲ್ಲಿ ನೋಡು, ಪರಮಾತ್ಮ ಎಂದು ಯಾವುದೊಂದು ವಸ್ತು ಇದ್ದು, ಅದು ಯಾವ ಜ್ಞಾನದಿಂದ ಕಾಣುವುದೋ ॥೬೧೬॥

ಈ ಒಂದು ಜ್ಞಾನದ ಹೊರತಾಗಿ, ಸಂಸಾರ ಮತ್ತು ಸ್ವರ್ಗವು ಯಾವ ಜ್ಞಾನದಿಂದ ಪ್ರಾಪ್ತವಾಗುವುದೋ, ಆ ಎಲ್ಲ ಜ್ಞಾನಗಳು ಅಜ್ಞಾನವೇ ಆಗಿರುವುವು ಎಂದು ಆತನ ಮನದಲ್ಲಿ ನಿಶ್ಚಯವಾಗಿರುವುದು ॥೬೧೭॥

ಆದ್ದರಿಂದ ಆತನು ಸ್ವರ್ಗಕ್ಕೆ ಹೋಗುವ ಇಚ್ಛೆಯನ್ನು ಬಿಟ್ಟಿರುವನು. ಸಂಸಾರದ ವಾರ್ತೆ ಸಹ ಕಿವಿಯಿಂದ ಕೇಳುವುದಿಲ್ಲ ಮತ್ತು ಅಧ್ಯಾತ್ಮ ಜ್ಞಾನದಲ್ಲಿ ಸದ್ಭಾವದಿಂದ ಮುಳುಗಿರುವನು ॥೬೧೮॥

ಯಾವ ಪ್ರಕಾರವಾಗಿ ಒಬ್ಬ ದಾರಿ ನಡೆಯುವವನು ಒಂದು ಸ್ಥಳದಲ್ಲಿ ಅನೇಕ ಮಾರ್ಗಗಳು ಕೂಡಿದಾಗ, ಅಲ್ಲಿ ಸರಿಯಾಗಿ ಶೋಧಿಸಿ ಅಡ್ಡ ಮಾರ್ಗಗಳನ್ನು ಬಿಟ್ಟು ಸರಳವಾದ ರಾಜಮಾರ್ಗದಿಂದ ಹೇಗೆ ಹೋಗುವನೋ ॥೬೧೯॥

ಅದರಂತೆ ಜ್ಞಾನಮಾತ್ರ ವಿಷಯಗಳಲ್ಲಿ ವಿಚಾರ ಮಾಡಿ ಇತರ ಜ್ಞಾನಗಳನ್ನು ಬಿಟ್ಟು ತನ್ನ ಮನಸ್ಸು ಮತ್ತು ಬುದ್ಧಿಯನ್ನು ಅಧ್ಯಾತ್ಮ ಜ್ಞಾನದಲ್ಲಿಯೇ ತೊಡಗಿಸುವನು ॥೬೨೦॥

ಅವನು ಹೇಳುವುದೇನೆಂದರೆ, ಈ ಒಂದು ಆತ್ಮ ಜ್ಞಾನವೇ ಶ್ರೇಷ್ಠ ಜ್ಞಾನವಾಗಿದೆ. ಇತರ ದೇಹಾದಿ ವಿಷಯಗಳ ಜ್ಞಾನವು ಭ್ರಮೆಯ ಜ್ಞಾನವಾಗಿದೆ. ಈ ನಿಶ್ಚಯಕ್ಕಾಗಿ ಆತನ ಬುದ್ಧಿಯು ಮೇರುಪರ್ವತದಂತೆ ಅಚಲವಾಗಿರುತ್ತದೆ ॥೬೨೧॥

ಯಾವ ಪ್ರಕಾರವಾಗಿ ಆಕಾಶದಲ್ಲಿನ ನಕ್ಷತ್ರಗಳಂತೆ ಧ್ರುವತಾರೆಯು ಎಂದೂ ಚಲಿಸುವುದಿಲ್ಲವೋ, ಅದರಂತೆ ಅಧ್ಯಾತ್ಮ ಜ್ಞಾನವನ್ನು ಸಂಪಾದಿಸುವ ವಿಷಯದಲ್ಲಿ ಆತನ ನಿಶ್ಚಯವು ಚಲಿಸುವುದಿಲ್ಲ ॥೬೨೨॥

ಆತನಲ್ಲಿಯೇ ಜ್ಞಾನವು ವಾಸಮಾಡುವುದು. ಇದರಲ್ಲಿ ಸಂಶಯವಿಲ್ಲ ಮತ್ತು ಈ ಪ್ರಕಾರವಾಗಿ ಆತನ ಮನದಲ್ಲಿ ಆ ಜ್ಞಾನವು ಪೂರ್ಣವಾಗಿ ಬಿಂಬಿದಾಕ್ಷಣವೇ ಆತನು ಮದ್ರೂಪನಾಗುವನು ॥೬೨೩॥

ಯಾವ ಪ್ರಕಾರವಾಗಿ ಊಟಕ್ಕೆ ಕುಳಿತವನಿಗೆ ಆತನು ಊಟವನ್ನು ಆರಂಭಮಾಡುವ ಹೊರತಾಗಿ ಉಂಡನು ಎಂದು ಹೇಳಲು ಹೇಗೆ ಬರುವುದಿಲ್ಲವೋ, ಅದರಂತೆ ಜ್ಞಾನದ ಪ್ರಾಪ್ತಿಯ ಇಚ್ಛೆ ಆದವನಿಗೆ ಜ್ಞಾನವು ಸಿಗದ ಹೊರತು ಆತನಿಗೆ ಜ್ಞಾನಿ ಎಂದು ಹೇಳಲು ಬರುವುದಿಲ್ಲ ॥೬೨೪॥

ಮತ್ತು ತತ್ತ್ವಜ್ಞಾನದಿಂದ ಯಾವ ಒಂದು ಫಲ ಪ್ರಾಪ್ತವಾಗುವುದೋ, ಅದು ಜ್ಞೇಯವಾಗಿದೆ. ಅದರ ಮೇಲೆಯೇ ಆತನ ಸರಳ ದೃಷ್ಟಿ ಹೋಗುವುದು ॥೬೨೫॥

ಇಲ್ಲದಿದ್ದರೆ ಜ್ಞಾನದ ಲಾಭದ ಮೇಲೆ ಜ್ಞೇಯವು ಕೈಗೆ ಹತ್ತದಿದ್ದರೆ ಜ್ಞಾನದ ಲಾಭವಾಗಿಯೂ ಆಗದಂತೆ ಇರುವುದು, ಹೀಗೆ ತಿಳಿಯಬೇಕು ॥೬೨೬॥

ಕುರುಡನು ಕೈಯಲ್ಲಿ ದೀಪವನ್ನು ತೆಗೆದುಕೊಂಡರೆ ಆತನಿಗೆ ಅದರ ಯಾವ ಉಪಯೋಗ? ಅದರಂತೆ ಜ್ಞಾನದ ಕೇವಲ ನಿಶ್ಚಯಮಾಡಿ ಆತ್ಮ ದರ್ಶನವಾಗದಿದ್ದರೆ ಅದು ವ್ಯರ್ಥವು ॥೬೨೭॥

ಒಂದುವೇಳೆ ಜ್ಞಾನದ ಪ್ರಕಾಶದಿಂದ ಪರಮಾತ್ಮನ ಪ್ರಾಪ್ತಿವಾಗದಿದ್ದಲ್ಲಿ, ಆ ಬುದ್ಧಿಯು ಕುರುಡನಂತೆ ನಿರರ್ಥಕವಾದದ್ದು ॥೬೨೮॥

ಆದ್ದರಿಂದ ಆ ಜ್ಞಾನದಿಂದ ಎಲ್ಲಿ ಬೇಕಾದರೂ ಅಲ್ಲಿ ಪರಮಾತ್ಮನೇ ದೃಷ್ಟಿಗೆ ಬೀಳುವನು. ಹೀಗೆ ಆತನ ಬುದ್ಧಿಯು ಸ್ವಚ್ಛವಾಗಿರುವುದು ॥೬೨೯॥

ಆದ್ದರಿಂದ ಈ ನಿರ್ದೋಷ ಜ್ಞಾನದಿಂದ ತೋರಿಸಿದ ಜ್ಞೇಯವು ಯಾರು ನೋಡುವರೋ, ಅದೇ ಜ್ಞಾನದಿಂದ ಆತನು ಸಂಪನ್ನನಾಗಿರುವನು ॥೬೩೦॥

ಮತ್ತು ಜ್ಞಾನವು ಎಷ್ಟೊಂದು ದೊಡ್ಡದಾಗಿದೆಯೋ, ಅಷ್ಟೇ ಆತನ ಬುದ್ಧಿಯೂ ದೊಡ್ಡದಾಗಿರುವುದು. ಆತನು ಜ್ಞಾನಸಂಪನ್ನನು ಎಂದು ಶಬ್ದದಿಂದ ಹೇಳಬೇಕೆ? ॥೬೩೧॥

ಯಾರ ಬುದ್ಧಿಯು ಜ್ಞಾನದ ಪ್ರಕಾಶದೊಂದಿಗೆ ಜ್ಞೇಯವನ್ನು ಕಾಣುವುದೋ, ಆತನು ಸಹಜವಾಗಿ ಪರತತ್ತ್ವದ ಪ್ರಾಪ್ತಿ ಮಾಡಿಕೊಳ್ಳುವನು ॥೬೩೨॥

ತೋಚಿ ಜ್ಞಾನ ಹೇ ಬೋಲತಾ । ವಿಸ್ಮ ಯೋ ಕವಣ ಪಂಡುಸುತಾ? । ಕಾಯ ಸವಿತಯಾತೇ ಸವಿತಾ । ಮ್ಹಣಾವೇ ಅಸೇ? ।೬೩೩॥ ತಂವ ಶ್ರೋತೇ ಮ್ಹಣತೀ ಅಸೋ । ನ ಸಂಗೆ ತಯಾಚಾ ಅತಿಸೋ । ಗ್ರಂಥೋಕ್ತೀ ತೇಥ ಆಡಸೋ । ಫಾಲಿತಾಸೀ ಕಾ? ।೬೩೪॥ ತುರ್ಘಾ ಹಾಚಿ ಆಮ್ಹಾ ಥೋರು । ವಕ್ತೃತ್ವಾಚಾ ಪಾಹುಣೇರು । ಜೇ ಜ್ಞಾನವಿಷೋ ಫಾರು । ನಿರೋಪಿಲಾ ।೬೩೫॥ ರಸು ಹೋಆವಾ ಅತಿಮಾತ್ರು । ಹಾ ಫೇತಾಸೀ ಕವಿಮಂತ್ರು । ತರೀ ಅವಂತೂನಿ ಶತ್ರು । ಕರಿತೋಸಿ ಕಾ ಗಾ? ।೬೩೬॥ ಠಾಯೀ ಬೈಸತಿಯೇ ವೇಳೇ । ಜೇ ರಸ ಸೋಯ ಘೇಊನಿ ಪಳೇ । ತಿಯೇಚಾ ಯೇರು ವೋಡವ ಮಿಳೇ । ಕೋಣಾ ಅರ್ಥಾ? ।೬೩೭॥ ಆಘವಾಚಿ ವಿಷಯೀ ಭಾದೀ । ಪರೀ ಸಾಂಜವಣೇ ಟೇಕೋ ನೇದೀ । ತೇ ಖುರತೋಡೀ ನುಸಧೀ । ಪೋಷೀ ಕವಣ? ।೬೩೮॥ ತೈಸಿ ಜ್ಞಾನೀ ಮತೀ ನ ಘಾಂಕೇ । ಯೇರ ಜಲ್ಪತೀ ನೇಣೋ ಕೇತುಕೇ । ಪರಿ ತೇ ಅಸೋ ನಿಕೇ । ಕೇಲೇ ತುವಾ ।೬೩೯॥ ಜಯಾ ಜ್ಞಾನಲೇಶೋದ್ದೇಶೇ । ಕಿಜತೀ ಯೋಗಾದಿ ಸಾಯಾಸೇ । ತೇ ಧಣೀಚೇ ಆಥೀ ತುಝಿಯಾ ಐಸೇ । ನಿರೂಪಣ ।೬೪೦॥ ಅಮೃತಾಚಿ ಸಾತವಾಂಕುಡೀ । ಲಾಗೋ ಕಾ ಅನುಘಡೀ । ಸುಖಾಚ್ಯಾ ದಿವಸ ಕೋಡೀ । ಗಣಿಜತು ಕಾ ।೬೪೧॥ ಪೂರ್ಣಚಂದ್ರೇಸೀ ರಾತೀ । ಯುಗ ಏಕ ಅಸೋನಿ ಪಹಾತೀ । ತರೀ ಕಾಯ ನ ಪಾಹತ ಆಹಾತೀ । ಚಕೋರ ತೇ ।೬೪೨॥ ತೈಸೇ ಜ್ಞಾನಾಚೇ ಬೋಲಣೇ । ಆಣೀ ಯೇಣೇ ರಸಾಳಪಣೇ । ಆತಾ ಪುರೇ ಕೋಣ ಮ್ಹಣೇ? । ಆಕರ್ಣಿತಾ ।೬೪೩॥ ಆಣೀ ಸಭಾಗ್ಯು ಪಾಹುಣಾಯೀ । ಸುಭಗಾಚೀ ವಾಢತೀ ಹೋಯೀ । ತೈ ಸರೋ ನೇಣೇ ರಸಸೋಯೀ । ಐಸೇ ಆಥೀ ।೬೪೪॥ ತೈಸಾ ಜಾಹಲಾ ಪ್ರಸಂಗು । ಜೇ ಜ್ಞಾನೀ ಆಮ್ಹಾಂಸಿ ಲಾಗು । ಆಣಿ ತುಜಹೀ ಅನುರಾಗು । ಆಥೀ ತೇಥ ।೬೪೫॥ ಮ್ಹಣೌನಿ ಯಯಾ ವಾಖಾಣಾ । ಪಾಸೀ ಸೇ ಆಲೀ ಚೌಗುಣಾ । ನಾ ಮ್ಹಣೋ ನಯೇಸಿ ದೇಖಣಾ? । ಹೋಸೀ ಜ್ಞಾನೀ ।೬೪೬॥ ತರೀ ಆತಾ ಯಯಾವರೀ । ಪ್ರಜ್ಞೇಚ್ಯಾ ಮಾಜಘರೀ । ಪದೇ ಸಾಚ ಕರೀ । ನಿರೂಪಣೀ ।೬೪೭॥ ಯಾ ಸಂತವಾಕ್ಯಾಸರಿಸೇ । ಮ್ಹಣೆತಲೇ ನಿವೃತ್ತಿದಾಸೇ । ಮಾರ್ಝೇಂಹೀ ಜೇ ಐಸೇ । ಮನೋಗತ ।೬೪೮॥ ಯಾವರೀ ಆತಾ ತುಮ್ಹೀ । ಆಜ್ಞಾಪಿಲಾ ಸ್ವಾಮೀ । ತರೀ ವಾಯಾ ವಾಗ್ ಮೀ । ವಾಢೋ ನೇದೀ ।೬೪೯॥ ಏವಂ ಇಯೇ ಅವಧಾರಾ । ಜ್ಞಾನಲಕ್ಷಣೇ ಅಠರಾ । ಶ್ರೀಕೃಷ್ಣೇ ಧನುರ್ಧರಾ । ನಿರೂಪಿಲೀ ।೬೫೦॥

ಅರ್ಜುನಾ, ಆತನು ಜ್ಞಾನರೂಪನಿರುವನು. ಎಂದು ಹೇಳಿದರೆ, ಅದರಲ್ಲಿ ಏನಾಶ್ಚರ್ಯ? ಇಲ್ಲಿ ನೋಡು, ಸೂರ್ಯನಿಗೆ ಸೂರ್ಯನೆಂದು ಹೇಳಬೇಕಾಗುವುದೇ? ।೬೩೩॥

ಆಗ ಶ್ರೋತೃಗಳವರು ಹೇಳಹತ್ತಿದರು:- ಈಗ ಇದು ಇರಲಿ, ಆ ಜ್ಞಾನಿಪುರುಷನ ದೊಡ್ಡಸ್ಥಿತಿಯನ್ನು ಹೇಳ ಬೇಡಿರಿ. ಮುಖ್ಯವಾಗಿ ಗೀತಾ ಗ್ರಂಥದ ಈ ವಿಸ್ತಾರದ ಪ್ರತಿಬಂಧವೇಕೆ ಮಾಡುವಿರಿ? ।೬೩೪॥

ನೀವು ಅಧ್ಯಾತ್ಮ ಜ್ಞಾನದ ವಿಷಯವನ್ನು ವಿಸ್ತಾರ ಮಾಡಿ ನಿರೂಪಣೆ ಮಾಡಿರಿ, ಇದುವೇ ನಮಗೆ ನಿಮ್ಮ ವಕ್ತೃತ್ವದ ಉಪಕಾರವಾಗಿದೆ ।೬೩೫॥

ಇತರ ಕವಿಗಳಂತೆ ಮುಖ್ಯ ವಿಷಯಕ್ಕಿಂತ ಉಪಾಂಗ ವಿಷಯಕ್ಕೆ ಪ್ರಮಾಣಮೀರಿ ರಸಬೆಳೆಸಿ ವರ್ಣಿಸುವ ಆ ಕವಿ ಮಂತ್ರವನ್ನು ಸ್ವೀಕರಿಸಿ ಶ್ರೋತೃಗಳ ವೈರಿಯಾಗಬೇಕಾ ದೀತು? ।೬೩೬॥

ಒಬ್ಬ ಸ್ತ್ರೀಯು ಊಟಕ್ಕೆ ಕರೆದು ಎಲೆಯ ಮೇಲೆ ಕುಳ್ಳಿರಿಸಿ ತಯಾರಿಸಿದ ಅಡುಗೆಯನ್ನು ಅಲ್ಲಿಂದ ದೂರ ಒಯ್ದರೆ ಆಕೆಯ ಇತರ ಆದರ ಸತ್ಕಾರಗಳ ಯಾವ ಉಪ ಯೋಗ ? ।೬೩೭॥

ಉಳಿದ ಎಲ್ಲ ವಿಷಯಕ್ಕೆ ಉತ್ತಮವಾಗಿದೆ. ಆದರೆ ಹಾಲು ಹಿಂಡಲು ಹೋದರೆ ಕೆಚ್ಚಲು ಕೆಳಗೆ ಕೂಡ್ರಿಸಿ ಕೊಳ್ಳು ವುದಿಲ್ಲ, ಇಂತಹ ಒದೆಯುವ ಆಕಳನ್ನು ಯಾರು ಸಾಕ ಬೇಕು? ।೬೩೮॥

ಅದರಂತೆ ( ಇತರ ಕವಿಗಳು) ಜ್ಞಾನದಲ್ಲಿ ಬುದ್ಧಿಯ ವಿಸ್ತಾರ ಮಾಡದೇ ಜ್ಞಾನದ ಹೊರತು ಇತರ ವಿಷಯಕ್ಕೆ ಎಷ್ಟೊಂದು ವ್ಯರ್ಥವಾಗಿ ವಿಸ್ತರಿಸುವರೋ, ತಿಳಿಯದು. ಅದು ಇರಲಿ, ನೀವು ಮಾತ್ರ ಉತ್ತಮ ಮಾಡಿರುವಿರಿ ।೬೩೯॥

ಯಾವ ಜ್ಞಾನದ ಅಲ್ಪಪ್ರಾಪ್ತಿಗಾಗಿ ಜನರ ಯೋಗಾದಿಕ ಸಾಧನೆಗಳನ್ನು ಬಹಳ ಕಷ್ಟದಿಂದ ಮಾಡುವರು. ಈ ತರಹದ ಬುದ್ಧಿಯನ್ನು ತೃಪ್ತಗೊಳಿಸುವ ಜ್ಞಾನವನ್ನು ತಮ್ಮಂಥವರು ವರ್ಣಿಸಿರುವಿರಿ ।೬೪೦॥

ಈ ಪ್ರಕಾರದ ಅಮೃತದ ವೃಷ್ಟಿಯು ಸತತವಾಗಿ ಏಳು ದಿವಸದವರೆಗೆ ಹತ್ತಿದರೂ ಅದಕ್ಕೆ ಯಾರು ಬೇಸರಾಗ ಬೇಕು? ಸುಖದ ಕೋಟ್ಯಾವಧಿ ದಿವಸಗಳು ಹೋದರೂ ಬೇಸರ ಪಟ್ಟು ದಿವಸಗಳನ್ನು ಯಾರು ಎಣಿಸುವರು? ।೬೪೧॥

ಪೌರ್ಣಿಮೆಯ ಚಂದ್ರನ ರಾತ್ರಿಯು ಒಂದು ಯುಗದ ವರೆಗೆ ಇದ್ದರೂ, ಚಕೋರ ಪಕ್ಷಿಯು ಅದರ ಕಡೆಗೆ ನೋಡುವುದಿಲ್ಲವೇ? ।೬೪೨॥

ಅದರಂತೆ ನಿಮ್ಮಂತಹ ರಸಾಳ ವಕ್ತಾನ ಕಡೆಯಿಂದ ಜ್ಞಾನದ ಮಾತುಗಳು ನಡೆದಿರುವಾಗ ಅದನ್ನು ಕೇಳುತ್ತ, "ಈಗ ಸಾಕು" ಎಂದು ಯಾರು ಹೇಳುವರು? ।೬೪೩॥

ಶ್ರೀಮಂತ ಬೀಗನು ಮನೆಗೆ ಬಂದಾಗ ನೀಡುವವಳು ಶ್ರೀಮಂತಳೂ, ಉದಾರಳೂ ಇದ್ದರೆ, ರಸಯುಕ್ತ ರುಚಿ ಯಾದ ಮೃಷ್ಟಾನ್ನವು ಮುಗಿಯಬಾರದೆಂದು ಇಬ್ಬರಿಗೂ ಇಚ್ಛೆಯಾಗುವುದು ।೬೪೪॥

ಅದೇ ಪ್ರಕಾರವಾಗಿ ಇಂದಿನ ಪ್ರಸಂಗವಿರುವುದು. ಕಾರಣ ನಮಗೆ ಜ್ಞಾನ ವಿಷಯಕ್ಕೆ ಶ್ರವಣ ಮಾಡುವ ಪ್ರೇಮವಿದೆ, ನಿಮಗೂ ಅದನ್ನು ಹೇಳುವ ಪ್ರೇಮವೇ ಇದೆ ।೬೪೫॥

ಈ ಕಾರಣದಿಂದ ನಿಮ್ಮ ವ್ಯಾಖ್ಯಾನಕ್ಕೆ ನಾಲ್ಕುಪಟ್ಟು ಬಲಬಂದಿದೆ. ಅಂದಮೇಲೆ ನಾವು ನಿಮಗೆ "ಜ್ಞಾನ ವಿಷಯಕ್ಕೆ ಪರಿಪೂರ್ಣರಿರುವಿರಿ" ಎಂದು ಹೇಳದೇ ಹೇಗೆ ಇರಬೇಕು? ।೬೪೬॥

ಹಾಗಾದರೆ, ಈಗ ಇನ್ನು ಮುಂದೆ ಬುದ್ಧಿಯ ನಡು ಮನೆಯಲ್ಲಿ ಜ್ಞಾನದ ಹದಿನೆಂಟು ಗುಣಗಳ ವಿರುದ್ಧವಾದ ಅಜ್ಞಾನದ ವರ್ಣನೆಯನ್ನು ಮಾಡಿರಿ ।೬೪೭॥

ಈ ಯಾವ ಸಂತರ ಮಾತುಗಳನ್ನು ಕೇಳಿದ ಮೇಲೆ, ನಿವೃತ್ತಿದಾಸರಾದ ಜ್ಞಾನೇಶ್ವರರು ಹೇಳಿದರೇನೆಂದರೆ, ನನ್ನ ಮನದಲ್ಲಿಯೂ ಅಜ್ಞಾನ ವಿಷಯಕ್ಕೆ ವರ್ಣನೆ ಮಾಡುವುದು ಇತ್ತು ।೬೪೮॥

ಅಂದಮೇಲೆ ಶ್ರೀಗುರುವೇ, ನೀವು ನನಗೆ ಆಜ್ಞೆ ಮಾಡಿರುವಿರಿ. ಅದಕ್ಕಾಗಿ ಈಗ ನಾನು ವ್ಯರ್ಥವಾಗಿ ಶಬ್ದಗಳನ್ನು ಬೆಳೆಸುವುದಿಲ್ಲ ।೬೪೯॥

ಇಲ್ಲಿ ನೋಡಿರಿ, ಈ ಪ್ರಕಾರವಾಗಿ ಶ್ರೀಕೃಷ್ಣನು ಅರ್ಜುನನಿಗೆ ಜ್ಞಾನದ ಹದಿನೆಂಟು ಲಕ್ಷಣಗಳನ್ನು ಹೇಳಿದನು ।೬೫೦॥

ಮಗ ಮ್ಹಣೇ ಯಾ ನಾಂವೇ । ಜ್ಞಾನ ಏಥ ಜಾಣಾವೇ । ಹೇ ಸ್ವಮತ ಆಣಿ ಆಘವೇ । ಜ್ಞಾನಿಯೇಹೀ ಮ್ಹಣತೀ ।೬೫೧॥ ಕರತಳಾವರೀ ವಾಟೋಳಾ । ಡೋಲತು ದೇಖಿಜೇ ಆಂವಳಾ । ತೈಸೇ ಜ್ಞಾನ ಆಮ್ಹಿ ಡೋಳಾ ।ದಾವಿಲೇ ತುಜ ।೬೫೨॥ ಆತಾ ಧನಂಜಯಾ ಮಹಾಮತೀ । ಅಜ್ಞಾನ ಐಸೀ ವದಂತೀ । ತೇಹೀ ಸಾಂಗೋ ವ್ಯಕ್ತೀ । ಲಕ್ಷಣೇಸೀ ।೬೫೩॥ ಏರ್ಹವೀ ಜ್ಞಾನ ಫುಡೇ ಜಾಲಿಯಾ । ಅಜ್ಞಾನ ಜಾಣವೇ ಧನಂಜಯಾ । ಜೇ ಜ್ಞಾನ ನವ್ಹೇ ತೇ ಅಪೈಸಯಾ । ಅಜ್ಞಾನಚೀ ।೬೫೪॥ ಪಾಹೇ ಪಾ ದಿವಸು ಆಘವಾ ಸರೇ । ಮಗ ರಾತ್ರೀಚೀ ವಾರೀ ಉರೇ । ವಾಂಚೂನಿ ಕಾಂಹೀ ತಿಸರೇ । ನಾಹೀ ಜೇವಿ ।೬೫೫॥ ತೈಸೇ ಜ್ಞಾನ ಜೇಥ ನಾಹೀ । ತೇಂಚಿ ಅಜ್ಞಾನ ಪಾಹೀ । ತರೀ ಸಾಂಗೋ ಕಾಂಹೀ ಕಾಂಹೀ । ಚಿನ್ಹೇ ತಿಯೇ ।೬೫೬॥ ತರೀ ಸಂಭಾವನೇ ಜಿಯೇ । ಜೋ ಮಾನಾಚೀ ವಾಟ ಪಾಹೇ । ಸತ್ಕಾರೇ ಹೋಯೇ । ತೋಷು ಜಯಾ ।೬೫೭॥ ಗರ್ವೇ ಪರ್ವತಾಚೇ ಶಿಖರೇ । ತೈಸಾ ಮಹತ್ತ್ವಾವರೂನಿ ನುತರೇ । ತಯಾಚಿಯಾ ಠಾಯೀ ಪುರೇ । ಅಜ್ಞಾನ ಆಹೇ ।೬೫೮॥ ಆಣಿ ಸ್ವಧರ್ಮಾಚೀ ಮಾಂಗಳೀ । ಬಾಂಧೇ ವಾಚೇಚ್ಯಾ ಪಿಂಪಳೀ । ಉಭಿಲಾ ಜೈಸಾ ದೇಉಳೀ । ಜಾಣೋನಿ ಕುಂಚಾ ।೬೫೯॥ ಘಾಲೀ ವಿದ್ಯೇಚಾ ಪಸಾರಾ । ಸುಯೇ ಸುಕೃತಾಚಾ ಡಾಂಗೋರಾ । ಕರೀ ತೇತುಲೇ ಮೋಹರಾ । ಸ್ಫಿತೀಚಿಯಾ ।೬೬೦॥ ಆಂಗ ವರಿವರಿ ಚರ್ಚೀ । ಜನಾತೇ ಅಭ್ಯರ್ಚಿತಾ ವಂಚೀ । ತೋ ಜಾಣ ಪಾ ಅಜ್ಞಾನಾಚೀ । ಖಾಣೀ ಏಥ ।೬೬೧॥ ಆಣಿ ವನ್ಹಿ ವನೀ ವಿಚರೇ । ತೇಥ ಜಳತೀ ಜೈಸೀ ಜಂಗಮೇ ಸ್ಥಾವರೇ । ತೈಸೇ ಜಯಾಚೇನಿ ಆಚಾರೇ । ಜಗಾ ದುಃಖ ।೬೬೨॥ ಕೌತುಕೇ ಜೇ ಜೇ ಜಲ್ಪೇ । ತೇ ಸಾಬಳಾಹೂನಿ ತೀಖ ರುಪೇ । ವಿಷಾಹೂನಿ ಸಂಕಲ್ಪೇ । ಮಾರಕು ಜೇ ।೬೬೩॥ ತಯಾತೇ ಬಹು ಅಜ್ಞಾನ । ತೋ ಅಜ್ಞಾನಾಚೇ ನಿಧಾನ । ಹಿಂಸೇಸಿ ಆಯತನ । ಜಯಾಚೇ ಜಿಣೇ ।೬೬೪॥ ಆಣಿ ಫುಂಕೇ ಭಾತಾ ಫುಗೇ । ರೇಚಿಲಿಯಾ ಸವೇಂಚಿ ಉಫಗೇ । ತೈಸಾ ಸಂಯೋಗವಿಯೋಗೇ । ಚಢೇ ವೋಹಟೇ ।೬೬೫॥ ಪಡಲೀ ವಾರಯಾಚಿಯಾ ವಳಸಾ । ಧುಳೀ ಚಢೇ ಆಕಾಶಾ । ಹರಿಖಾ ವಳಘೇ ತೈಸಾ । ಸ್ತುತೀವೇಳೇ ।೬೬೬॥ ನಿಂದಾ ಮೋಟಕೀ ಆಇಕೇ । ಆಣಿ ಕಪಾಳ ಧರೂನಿ ಠಾಕೇ । ಥೇಂಬೇ ವಿರೇ ವಾರೇನಿ ಶೋಖೇ । ಚಿಖಲು ಜೈಸಾ ।೬೬೭॥

ಆಗ ದೇವನು ಹೇಳಿದನು, ಈ ಲಕ್ಷಣಗಳು ಯಾರಲ್ಲಿ ತೋರುವುವೋ, ಆತನಲ್ಲಿ ಜ್ಞಾನವು ವಾಸಮಾಡುವುದು, ಇದು ನನ್ನ ಸ್ವಂತದ ಮತ ಇರುವುದು ಮತ್ತು ಎಲ್ಲ ಜ್ಞಾನಿಗಳೂ ಹೀಗೆಯೇ ಹೇಳುವರು ।೬೫೧॥

ಅಂಗೈಯೊಳಗಿನ ನೆಲ್ಲಿಕಾಯಿಯಂತೆ ಅವನ್ನು ಉರುಳಿಸುತ್ತಿದ್ದರೆ, ಎಲ್ಲವನ್ನೂ ಕಾಣುವಂತೆ, ನಾನು ನಿನಗೆ ಜ್ಞಾನವನ್ನು ಪ್ರತ್ಯಕ್ಷವಾಗಿ ತೋರಿಸಿದೆನು ।೬೫೨॥

ಹೇ ಮಹಾಮತಿ ಧನಂಜಯನೇ, ಈಗ ಅಜ್ಞಾನವೆಂದು ಯಾವುದಕ್ಕೆ ಹೇಳಬೇಕು ಎಂಬುದನ್ನು ಅದರ ಲಕ್ಷಣಗಳೊಂದಿಗೆ ಸ್ಪಷ್ಟವಾಗಿ ಹೇಳುವೆನು ।೬೫೩॥

ಅರ್ಜುನನೇ, ಜ್ಞಾನವು ತಿಳಿದ ಮೇಲೆ ಅಜ್ಞಾನವು ಸಹಜವಾಗಿ ತಿಳಿಯಲ್ಪಡುವುದು. ಕಾರಣ ಯಾವುದು ಜ್ಞಾನವಲ್ಲವೋ, ಅದೇ ಅಜ್ಞಾನವು ।೬೫೪॥

ಇಲ್ಲಿ ನೋಡು, ಹಗಲು ಮುಗಿದ ನಂತರ ರಾತ್ರಿಯ ಪಾಳಿಯೇ ಬರುವುದು. ಕಾರಣ ಹಗಲು ರಾತ್ರಿಯ ಈ ಎರಡರ ಹೊರತಾಗಿ ಮೂರನೆಯ ಪ್ರಕಾರವೇ ಇರುವುದಿಲ್ಲ ।೬೫೫॥

ಈ ಪ್ರಮಾಣದಂತೆ, ಎಲ್ಲಿ ಜ್ಞಾನವಿಲ್ಲವೋ, ಅದೇ ಅಜ್ಞಾನವಾಗಿರುವುದು. ಹೀಗೆ ತಿಳಿ. ಹಾಗೂ ಅಜ್ಞಾನದ ಕೆಲವು ಲಕ್ಷಣಗಳನ್ನು ನಿನಗೆ ಹೇಳುವೆನು ।೬೫೬॥

ತನ್ನ ಪ್ರತಿಷ್ಠೆ ಬೆಳೆಯಲು ಜನರು ತನಗೆ ಎಂದು ಸನ್ಮಾನಿಸುವರೆಂದು ಇದರ ಹಾದಿ ಕಾಯುವವನು ಮತ್ತು ಜನರ ಸತ್ಕಾರದಿಂದ ಆತನಿಗೆ ಸಂತೋಷವಾಗುವುದು ।೬೫೭॥

ಮತ್ತು ಈ ಪ್ರಕಾರದ ಮಾನವು ದೊರಕಿದಾಗ ಗರ್ವದಿಂದ ಪರ್ವತದ ಶಿಖರದ ಮೇಲೆಹೋಗಿ ಕುಳಿತುಕೊಳ್ಳುವನು, ಅಲ್ಲಿಂದ ಎಂದೂ ಕೆಳಗೆ ಇಳಿಯುವುದಿಲ್ಲ. ಇಂತಹ ಪುರುಷನಲ್ಲಿ ಪೂರ್ಣವಾಗಿ ಅಜ್ಞಾನ ವಾಸ ಮಾಡಿರುವುದು, ಹೀಗೆ ತಿಳಿ ।೬೫೮॥

ಅಶ್ವತ್ಥವೃಕ್ಷದ ಮುಂಜಿ ಮಾಡಿದಾಗ ಅದಕ್ಕೆ ಎಲ್ಲರಿಗೂ ಕಾಣುವ ಹಾಗೆ ದಾರವನ್ನು ಕಟ್ಟಿದಂತೆ ತಾನು ಮಾಡಿದ ಸ್ವಧರ್ಮರೂಪ ಮುಂಜಿಯನ್ನು ವಾಣಿರೂಪ ಅಶ್ವತ್ಥವೃಕ್ಷಕ್ಕೆ ಕಟ್ಟುವನು. ಅಥವಾ ಗುಡಿಯಲ್ಲಿ ನವಿಲು ಗರಿಯ ಕುಂಚವನ್ನು ಎಲ್ಲರಿಗೂ ಕಾಣಿಸುವಂತೆ ಇಟ್ಟಿರುವನು ।೬೫೯॥

ಅದರಂತೆ ತನ್ನ ವಿದ್ಯೆಯನ್ನು ಹರಡಿಸುವನು, ಮಾಡಿದ ಪುಣ್ಯ ಕಾರ್ಯಗಳಿಗೆ ಡಂಗುರ ಹೊಡೆಸುವನು, ಯಾವುದರಿಂದ ಕೀರ್ತಿ ಬೆಳೆಯುವುದೋ, ಅದೆಲ್ಲವನ್ನು ಯಾವಾಗಲೂ ಮಾಡುವನು ।೬೬೦॥

ಒಳಗೆ ಶುದ್ಧ ಮಾಡದೇ, ಶರೀರದ ಮೇಲೆ, ಮೇಲಿಂದ ಮೇಲೆ ಭಸ್ಮ ಗಂಧಗಳಿಂದ ಶೃಂಗರಿಸಿ ದೊಡ್ಡ ಭಕ್ತನಂತೆ ನಟಿಸಿ ಜನರಿಗೆ ವಂಚಿಸುವನು. ಆತನು ಅಜ್ಞಾನದ ಖಣಿಯೇ ಆಗಿರುವನು ।೬೬೧॥

ಅರಣ್ಯದಲ್ಲಿ ಅಗ್ನಿಯು ಹೊತ್ತಿತೆಂದರೆ, ಅದು ಸ್ಥಾವರ ಜಂಗಮ ಎಲ್ಲವನ್ನು ಸುಡುವಂತೆ ಈತನ ಸಹಜ ವರ್ತನೆಯು ಜಗತ್ತಿಗೆ ದುಃಖವನ್ನು ಕೊಡುವುದು ।೬೬೨॥

ಈತನು ಸಹಜವಾಗಿ ಮಾತನಾಡಿದರೂ ಅದು ಮನುಷ್ಯರ ಹೃದಯಕ್ಕೆ ಬಾಣಗಳು ನೆಟ್ಟಂತಾಗುವುವು ಮತ್ತು ಈತನ ಎಲ್ಲ ಕಾರ್ಯಗಳು ಇತರ ಜನರಿಗೆ ವಿಷದಂತೆ ಮಾರಕವಾಗಿರುವುವು ।೬೬೩॥

ಆತನಲ್ಲಿ ಬೇಕಾದಷ್ಟು ಅಜ್ಞಾನವಿದೆ, ಹೆಚ್ಚಿಗೇನು ಹೇಳಬೇಕು? ಆತನು ಅಜ್ಞಾನದ ತವರು ಮನೆಯಾಗಿರುವನು ಮತ್ತು ಆತನ ಜೀವನವು ಹಿಂಸೆಯ ಆಶ್ರಯ ಸ್ಥಾನವಾಗಿರುವುದು ।೬೬೪॥

ಮತ್ತು ಕುಲುಮೆಯ ತಿದಿಯು ಗಾಳಿಯಿಂದ ಉಬ್ಬುವುದು, ಗಾಳಿ ಹೊರಬಂದಾಗ ತಕ್ಷಣ ಕುಗ್ಗುವುದು. ಅದರಂತೆ ಲಾಭವಾದಾಗ ಉಬ್ಬುವನು, ನಷ್ಟವಾದಾಗ ಕೂಡಲೇ ಕುಗ್ಗುವನು ।೬೬೫॥

ಬಿರುಗಾಳಿಗೆ ಸಿಕ್ಕ ಮಣ್ಣಿನ ಧೂಳು ಯಾವ ಪ್ರಕಾರವಾಗಿ ಆಕಾಶದಲ್ಲಿ ಎತ್ತರ ಹಾರುವುದೋ, ಅದರಂತೆ ಜನರು ಈತನಿಗೆ ಹೊಗಳಿದರೆ, ಸಂತೋಷದಿಂದ ಉಬ್ಬಿ ಮೇಲೆ ಕುಳಿತುಕೊಳ್ಳುವನು ।೬೬೬॥

ಈತನಿಗೆ ಯಾರಾದರೂ ತುಸು ನಿಂದೆಯನ್ನು ಮಾಡಿದರೆ ಸಾಕು, ಹನಿ ನೀರಿನಿಂದ ಹಸಿಯಾಗುವ, ತುಸು ಗಾಳಿಯಿಂದ ಒಣಗುವ ಅರಲಿನಂತೆ ತಲೆ ಹಿಡಿದು ಕುಳಿತುಕೊಳ್ಳುವನು ।೬೬೭॥

ತೈಸಾ ಮಾನಾಪಮಾನೀ ಹೋಯೇ । ಜೋ ಕೋಣ್ಹ ಚೀ ಉರ್ಮಿ ನ ಸಾಹೇ । ತಯಾಚ್ಯಾ ಠಾಯೀ ಆಹೇ । ಅಜ್ಞಾನ ಪುರೇ ।೬೭೮।। ಆಣಿ ಜಯಾಚಿಯಾ ಮನೀ ಗಾಂಠೀ । ವರಿವರೀ ಮೋಕಳೀವಾಚಾ ದಿಠೀ । ಆಂಗೇ ಮಿಳೇ ಜೀವೇ ಪಾಠೀ । ಭಲತಯಾ ದೇ ।೬೭೯।। ವ್ಯಾಧಾಚೇ ಚಾರಾ ಘಾಲಣೇ । ತೈಸೇ ಪ್ರಾಂಜಳ ಜೋಗಾವಣೇ । ಚಾಂಗಾಚೇ ಅಂತಃ ಕರಣೇ । ವಿರು ಕರೀ ।೬೮೦।। ಗಾರ ಶೇವಾಳೇ ಗುಂಡಾಳಲೀ ।ಕಾ ನಿಂಬೋಳಿ ಜೈಸೀ ಪಿಕಲೀ । ತೈಸೀ ಜಯಾಚೀ ಭಲೀ । ಬಾಹ್ಯ ಕ್ರಿಯಾ ।೬೮೧।। ಅಜ್ಞಾನ ತಯಾಚಿಯಾ ಠಾಯೀ । ಠೇವಿಲೇ ಅಸೇ ಪಾಹೀ । ಯಾ ಬೋಲಾ ಆನ ನಾಹೀ । ಸತ್ಯ ಮಾನೀ ।೬೮೨।। ಆಣಿ ಗುರುಕುಳೀ ಲಾಜೇ । ಜೋ ಗುರುಭಕ್ತೀ ಉಭಜೇ । ವಿದ್ಯಾ ಘೇಊನೀ ಮಾಜೇ । ಗುರೂಸೀಂಚಿ ಜೋ ।೬೮೩।। ತಯಾಚೇ ನಾಮು ಘೇಣೇ । ತೇ ವಾಚೇ ಶೂದ್ರಾನ್ನ ಹೋಣೇ । ಪರೀ ಘಡಲೇ ಲಕ್ಷಣೇ । ಬೋಲತಾ ಇಯೇ ।೬೮೪।। ಆತಾ ಗುರುಭಕ್ತಾಂಚೇ ನಾಂವ ಘೇವೋ । ತೇಣೇ ವಾಚೇಸೀ ಪ್ರಾಯಶ್ಚಿತ್ತ ದೇವೋ । ಗುರುಸೇವಕಾ ನಾಂವ ಪಾವೋ । ಸೂರ್ಯು ಜೈಸಾ ।೬೮೫।। ಯೇತುಲೇನಿ ಪಾಂಗು ಪಾಪಾಚಾ । ನಿಸ್ತರೇಲ ಹೇ ವಾಚಾ । ಜೋ ಗುರುತಲ್ಪಗಾಚಾ । ನಾಮೀ ಜಾಲಾ ।೬೮೬।। ಹಾ ಠಾಯವರೀ । ತಯಾ ನಾಮಾಚೇ ಭಯ ಹರೀ । ಮಗ ಮ್ಹಣೇ ಅವಧಾರೀ । ಆಣಿಕೇ ಚಿನ್ಹೇ ।೬೮೭।। ತರೀ ಆಂಗೇ ಕರ್ಮೇ ಢಿಲಾ । ಜೋ ಮನೇ ವಿಕಲ್ಪೇ ಭರಲಾ । ಅಡವೀಂಚಾ ಅವಗಳಲಾ । ಕುಹಾ ಜೈಸಾ ।೬೮೮।। ತಯಾ ತೋಂಡೀ ಕಾಂಟವಡೇ। ಆಂತು ನುಸಧೀ ಹಾಡೇ । ಅಶುಚಿ ತೇಣೇ ಪಾಡೇ । ಸಬಾಹ್ಯ ಜೋ ।೬೮೯।। ಜೈಸೇ ಪೋಟಾಲಾಗೀ ಸುಣೇ । ಉಘಡೇ ಝಾಂಕಲೇ ನ ಮ್ಹಣೇ । ತೈಸೇ ಆಪಲೇ ಪರಾವೇ ನೇಣೇ । ದ್ರವ್ಯಾಲಾಗೀ ।೬೯೦।। ಇಯಾ ಗ್ರಾಮಸಿಂಹಾಚಿಯಾ ಠಾಯೀ । ಜೈಸಾ ಮಿಳಣೀ ಠಾವೋ ಅಠಾವೋ ನಾಹೀ । ತೈಸಾ ಸ್ತ್ರೀವಿಷಯೀ ಕಾಂಹೀ । ವಿಚಾರೀನಾ ।೬೯೧।। ಕರ್ಮಾಚಾ ವೇಳು ಚುಕೇ । ಕಾ ನಿತ್ಯನೈಮಿತ್ತಿಕ ಠಾಕೇ । ತೇ ಜಯಾ ನ ದುಃಖೇ । ಜೀವಾಮಾಜೀ ।೬೯೨।। ಪಾಪೀ ಜೋ ನಿಸುಗು । ಪುಣ್ಯಾವಿಷಯೀ ಅತಿನಿಲಾಗು । ಜಯಾಚಿಯಾ ಮನೀ ವೇಗು । ವಿಕಲ್ಪಾಚಾ ।೬೯೩।। ತೋ ಜಾಣ ನಿಖಿಳಾ । ಅಜ್ಞಾನಾಚಾ ಪುತಳಾ । ಜೋ ಬಾಂಧೋನಿ ಅಸೇ ಡೋಳಾ । ವಿತ್ತಾಶೇತೇ ।೬೯೪।।

ಹಾಗೆಯೇ ಈತನಿಗೆ ಮಾನ ಮತ್ತು ಅಪಮಾನ ಇವೆರಡೂ ಸಹಿಸುವುದಾಗುವುದಿಲ್ಲ. ಈತನಲ್ಲಿ ಪೂರ್ಣ ಅಜ್ಞಾನವು ವಾಸವಾಗಿದೆ ಎಂದು ತಿಳಿ ।೬೬೮॥

ಯಾರು ಮನದಲ್ಲಿ ಒಂದು, ಮಾತನಾಡುವುದು ಮತ್ತೊಂದು ಮತ್ತು ಒಬ್ಬರಿಗೆ ಮಾತುಕೊಟ್ಟು ಇನ್ನೊಬ್ಬರಿಗೆ ಸಹಕರಿಸುವುದು।೬೬೯॥

ಬೇಟೆಗಾರನು ದುಷ್ಟ ಬುದ್ಧಿಯಿಂದ ಪಶು ಪಕ್ಷಿಗಳಿಗೆ ಆಹಾರ ಹಾಕುವನು. ಅದರಂತೆ ಯಾರು ಬೇರೆಯವರಲ್ಲಿ ಪ್ರೇಮದಿಂದ ನಡೆಯುವಂತೆ ತೋರಿಸಿ, ಉತ್ತಮರಲ್ಲಿ ಅಂತಃಕರಣದಲ್ಲಿ ವಿರೋಧಿಸುವನು ।೬೭೦॥

ಹಾವುಸೆಗಟ್ಟಿದ ಬೆಣಚುಕಲ್ಲು ಮೇಲ್ನೋಟಕ್ಕೆ ಹಚ್ಚಗೆ ಹಸಿರು ಕಾಣುವಂತೆ, ಹಣ್ಣಾದ ಬೇವಿನಕಾಯಿಗಳು ಹಳದಿ ಬಣ್ಣದ್ದಾಗಿ ಎದ್ದು ಕಾಣುವಂತೆ, ಈತನ ಕೃತಿಗಳು ಹೊರ ನೋಟಕ್ಕೆ ಮಾತ್ರ ಉತ್ತಮವಾಗಿ ಕಾಣುತ್ತವೆ ।೬೭೧॥

ಈ ಮನುಷ್ಯನಲ್ಲಿ ಅಜ್ಞಾನವು ನಿಃಸಂಶಯವಾಗಿ ಇರುವುದೆಂದು ನೀನು ನಿಶ್ಚಯವಾಗಿ ತಿಳಿದುಕೋ ।೬೭೨॥

ಮತ್ತು ಗುರುಕುಲದ ಹೆಸರು ಹೇಳಲು ಯಾರಿಗೆ ನಾಚಿಕೆಯಾಗುವುದೋ, ಗುರು ಸೇವೆಯನ್ನು ಯಾರು ತಿರಸ್ಕರಿಸುವರೋ ಮತ್ತು ವಿದ್ಯೆಯನ್ನು ಕೊಟ್ಟ ಗುರುಗಳನ್ನು ಸಹ ಮಾನ್ಯ ಮಾಡುವುದಿಲ್ಲವೋ ।೬೭೩॥

ಇಂತಹ ಮನುಷ್ಯನ ಹೆಸರು ತೆಗೆದುಕೊಳ್ಳುವುದೆಂದರೆ ಶೂದ್ರನ ಅನ್ನ ಸೇವನೆ ಮಾಡಿದಂತೆ! ಆದರೆ ಏನು ಮಾಡುವುದು? ಅಜ್ಞಾನಿಗಳ ಲಕ್ಷಣಗಳನ್ನು ಹೇಳುವಾಗ್ಗೆ ಆತನ ಉಚ್ಚಾರ ಮಾಡಬೇಕಾಯಿತು ।೬೭೪॥

ಅಂದಮೇಲೆ, ಈಗ ಗುರುಭಕ್ತರ ಹೆಸರು ತೆಗೆದುಕೊಳ್ಳುವುದು, ಸೂರ್ಯನ ತೇಜದಂತೆ ಎಲ್ಲ ಅಜ್ಞಾನಾಂಧಕಾರವನ್ನು ನಾಶ ಮಾಡುತ್ತದೆ. ಆತನ ಹೆಸರು ತೆಗೆದುಕೊಂಡು ವಾಣಿಗೆ ಆದ ಪಾಪಕ್ಕೆ ಪ್ರಾಯಶ್ಚಿತ್ತ ಕೊಡುವೆ ।೬೭೫॥

ಇಷ್ಟರಿಂದಲೇ ಗುರುನಿಂದಕನ ನಾಮೋಚ್ಚಾರಣೆಯಿಂದ (ವಾಣಿ) ವಾಚೆಗೆ ಆಗಿರುವ ನುಹಾದೋಷದ ನಿರಸನವಾಗುವುದು ।೬೭೬॥

ಗುರುನಿಂದಕರ ನಾಮೋಚ್ಚಾರಣೆಯಿಂದ ಉತ್ಪನ್ನವಾಗುವ ಮಹಾ ಭಯಗಳನ್ನು ನಿವೃತ್ತಗೊಳಿಸುವ ಸಾಮರ್ಥ್ಯವು ಗುರುಭಕ್ತನ ನಾಮೋಚ್ಚಾರದಲ್ಲಿರುವುದು. ಇರಲಿ, ಅಜ್ಞಾನದ ಉಳಿದ ಲಕ್ಷಣಗಳನ್ನು ಕೇಳಿರಿ ।೬೭೭॥

ಯಾವನು ಸ್ವತಃ ಕರ್ಮಗಳನ್ನು ಮಾಡುವುದಿಲ್ಲ, ಮತ್ತು ಮನದಲ್ಲಿ ಸಂಶಯವನ್ನು ಧರಿಸುವನೋ, ಅವನು ಅಡವಿಯಲ್ಲಿನ ರಾಡಿ ತುಂಬಿದ ಮತ್ತು ಮುಳ್ಳು ಮುಚ್ಚಿದ ಬಾವಿಯಂತೆ ಇರುವನು ।೬೭೮॥

ಆ ಬಾವಿಯು ಹೇಗಿರುವುದೆಂದರೆ, ಅದಕ್ಕೆಹೊರಗೆ ಮುಖದಲ್ಲಿ ಎಲ್ಲ ಕಡೆ ಮುಳ್ಳಿನ ಗಿಡಗಳು ಹುಟ್ಟಿರುವುವು. ಒಳಗೆ ಅನೇಕ ಪ್ರಾಣಿಗಳು ಬಿದ್ದು ಸತ್ತು ಎಲುಬುಗಳು ಕೂಡಿರುವುವು. ಇದರಂತೆ ಯಾವ ಮನುಷ್ಯನು ಒಳ ಹೊರಗೆ ಅಶುದ್ಧನಿರುವನೋ ।೬೭೯॥

ಅನ್ನವು ಮುಚ್ಚಿದೆಯೋ, ತೆರೆದಿದೆಯೋ, ಯಾವುದೂ ನೋಡದೇ ನಾಯಿಯು ಅದನ್ನು ತಿನ್ನುವಂತೆ ತನ್ನದು ಪರರದು ಎನ್ನುವ ವಿಚಾರ ಮಾಡದೇ ಯಾವನು ದ್ರವ್ಯದ ಅಭಿಲಾಷೆ ಮಾಡುವನೋ ।೬೮೦॥

ನಾಯಿಯು ಸ್ತ್ರೀ ಸಂಗದ ವಿಷಯದಲ್ಲಿ ಏಕಾಂತ ಲೋಕಾಂತದ ವಿಚಾರ ಮಾಡುವುದಿಲ್ಲ. ಅದರಂತೆ ಯಾವನು ಸ್ತ್ರೀ ವಿಷಯದಲ್ಲಿ ನಿರ್ಲಜ್ಜನಾಗಿರುವನೋ ।೬೮೧॥

ಸ್ವಧರ್ಮದ ಕರ್ಮದ ವೇಳೆ ತಪ್ಪುವುದು ಅಥವಾ ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾಡದೇ ಉಳಿದವು ಎಂಬುವ ವಿಷಯಕ್ಕೆ ಯಾವನ ಮನಸ್ಸಿನಲ್ಲಿ ಖೇದವಾಗುವುದಿಲ್ಲವೋ ।೬೮೨॥

ಪಾಪಾಚರಣೆ ವಿಷಯದಲ್ಲಿ ಯಾವನು ನಿರ್ಲಜ್ಜನು ಮತ್ತು ಪುಣ್ಯಕರ್ಮಗಳ ಆಚರಣೆ ಮಾಡುವ ಕಲ್ಪನೆಯೂ ಮನದಲ್ಲಿ ಬಾರದವನು ಮತ್ತು ಯಾವನ ಮನದಲ್ಲಿ ಅತಿಶಯವಾಗಿ ವಿಕಲ್ಪಗಳು ಬರುವುವೋ ।೬೮೩॥

ಮತ್ತು ಯಾವನು ದ್ರವ್ಯ ವಿಷಯಕ್ಕೆ ಪಾಪ ಪುಣ್ಯಗಳನ್ನು ನೋಡುವುದಿಲ್ಲವೋ, ಅವನು ಕೇವಲ ಅಜ್ಞಾನದ ಮೂರ್ತಿಯೇ ಆಗಿರುವನು ।೬೮೪॥

ಆಣಿ ಸ್ವಾರ್ಥೇ ಅಳುಮಾಳೇ । ಜೋ ಧೈರ್ಯಾಪಾಸೋನಿ ಚಳೇ । ಜೈಸೇ ತೃಣಬೀಜ ಢಳೇ । ಮುಂಗಿಯೇಚೇನೀ ।೬೮೫।। ಪಾವೋ ಸೂದಲಿಯಾ ಸವೇ । ಜೈಸೇ ಥಿಲ್ಲರ ಕಾಲವೇ । ತೈಸಾ ಭಯಾಚೇನಿ ನಾಂವೇ । ಗಜಬಜೇ ಜೋ ।೬೮೬।। ಮನೋರಥಾಂಚಿಯಾ ಧಾರಸಾ । ವಾಹಣೇ ಜಯಾಚಿಯಾ ಮಾನಸಾ । ಪೂರೀ ಪಡಿಲಾ ಜೈಸಾ । ದುಥಿಯಾ ಪಾಹೀ ।೬೮೭।। ವಾಯೂಚೇನಿ ಸಾವಾಯೇ । ಧೂ ದಿಗಂತರಾ ಜಾಯೇ । ದುಃಖವಾರ್ತಾ ಹೋಯೇ । ತೈಸೇ ಜಯಾ ।೬೮೮।। ವಾಉಧಣಾಚಿಯಾ ಪರೀ । ಜೋ ಆಶ್ರೋ ಕಹೀಂಚಿ ನ ಧರೀ । ಕ್ಷೇತ್ರೀ ತೀರ್ಥೀ ಪುರೀ । ಥಾರೋ ನೇಣೇ ।೬೮೯।। ಕಾ ಮಾತಲಿಯಾ ಸರಡಾ । ಪುಢತೀ ಬುಡುಖ ಪುಢತೀ ಶೇಂಡಾ । ಹಿಂಡಣ ವಾರಾ ಕೋರಡಾ । ತೈಸಾ ಜಯಾ ।೬೯೦।। ಜೈಸಾ ರೋಂವಿಲ್ಯಾ ವಿಣೇ । ರಾಂಜಣು ಥಾರೋ ನೇಣೇ । ತೈಸಾ ಪಡೇ ತೈ ರಾಹಣೇ । ಏರ್ಹವೀ ಹಿಂಡೇ ।೬೯೧।। ತಯಾಚ್ಯಾ ಠಾಯೀ ಉದಂಡ । ಅಜ್ಞಾನ ಅಸೇ ವಿತಂಡ । ಜೋ ಚಾಂಚಲ್ಯೇ ಭಾವಂಡ । ಮರ್ಕಟಾಚೇ ।೬೯೨।। ಆಣಿ ಪೈ ಗಾ ಧನುರ್ಧರಾ । ಜಯಾಚಿಯಾ ಅಂತರಾ । ನಾಹೀ ವೋಢಾವಾರಾ । ಸಂಯಮಾಚಾ ।೬೯೩।। ಲೇಂಡಿಯೇ ಆಲಾ ಲೋಂಢಾ । ನ ಮನೀ ವಾಳುವೇಚಾ ವರವಂಡಾ । ತೈಸಾ ನಿಷೇಧಾಚಿಯಾ ತೋಂಡಾ । ಬಿಹೇನಾ ಜೋ ।೬೯೪।। ವ್ರತಾತೇ ಆಡ ಮೋಡೀ । ಸ್ವಧರ್ಮು ಪಾಯೇ ವೋಲಾಂಡೀ । ನಿಯಮಾಚೀ ಆಶ ತೋಡೀ । ಜಯಾಚೀ ಕ್ರಿಯಾ ।೬೯೫।। ನಾಹೀ ಪಾಪಾಚಾ ಕಂಟಾಳಾ । ನೇಣೇ ಪುಣ್ಯಾಚಾ ಜಿವ್ಹಾಳಾ । ಲಾಜೇಚಾ ಪೇಂಡವಳಾ । ಖಾಣೋ ನಿಘಾಲೀ ।೬೯೬।। ಕುಳೇಸೀ ಜೋ ಪಾಠಮೋರಾ । ವೇದಾಜ್ಞೇಸೀ ದುರ್ಹಾ । ಕೃತ್ಯಾಕೃತ್ಯವ್ಯಾಪಾರಾ । ನಿವಾಡು ನೇಣೇ ।೬೯೭।। ವಸೂ ಜೈಸಾ ಮೋಕಾಟು । ವಾರಾ ಜೈಸಾ ಅಫಾಟು । ಫುಟಲಾ ಜೈಸಾ ಪಾಟು । ನಿರ್ಜನಿ ।೬೯೮।। ಆಂಧಳೇ ಹಾತಿರೂ ಮಾತಲೇ । ಕಾ ಡೋಂಗರೀ ಜೈಸೇ ಪೇಟಲೇ । ತೈಸೇ ವಿಷಯೀ ಸುಟಲೇ । ಚಿತ್ತ ಜಯಾಚೇ ।೬೯೯।। ಪೈ ಉಬಧಡಾ ಕಾಯ ನ ಪಡೇ । ಮೋಕಾಟು ಕೋಣಾ ನಾತುಡೇ । ಗ್ರಾಮ ದ್ವಾರೀಂಚೇ ಆಡೇ । ನೋಲಾಂಡೀ ಕೋಣ ।೭೦೦।। ಜೈಸೇ ಸತ್ರೀ ಅನ್ನ ಜಾಲೇ । ಕೀ ಸಾಮಾನ್ಯಾ ಬೀಕ ಆಲೇ । ವಾಣಸಿ ಯೇಚೇ ಉಭವಿಲೇ । ಕೋಣ ನ ರಿಗೇ? ।೭೦೧।।

ಮತ್ತು ಯಾವ ಪ್ರಕಾರವಾಗಿ ಹುಲ್ಲಿನ ಬೀಜವು ಇರುವೆಯ ಕಾಲುಗಳಿಂದಲೇ ಅಲುಗಾಡುವುದೋ, ಅದರಂತೆ ಅಲ್ಪಸ್ವಾರ್ಥಕ್ಕಾಗಿ ಸಾತ್ತ್ವಿಕ ಧೈರ್ಯದಿಂದ ಚಲಿತನಾಗುವನು ।।೬೮೫।।

ನಿಂತ ನೀರಿನ ತಗ್ಗಿನಲ್ಲಿ ಕಾಲಿಟ್ಟಾಕ್ಷಣವೇ, ಅದರಲ್ಲಿನ ನೀರು ಹೇಗೆ ರಾಡಿಯಾಗುವುದೋ, ಅದರಂತೆ ಭಯದ ಮಾತುಗಳು ಕೇಳಿದಾಕ್ಷಣವೇ ಭಯಪಡುವನು ।।೬೮೬।।

ಪ್ರವಾಹದಲ್ಲಿ ಬಿದ್ದ ಕುಂಬಳಕಾಯಿಯು ಎಲ್ಲಿ ಬೇಕಾದಲ್ಲಿ ಪ್ರವಾಹದೊಂದಿಗೆ ಹೋಗುವುದೋ, ಅದರಂತೆ ಇವನು ಮನೋರಥಗಳ ಪ್ರವಾಹದಲ್ಲಿ ಸಿಕ್ಕು ಹೋಗುತ್ತಿರುವವನು ।।೬೮೭।।

ಗಾಳಿಯ ಸಹಾಯದಿಂದ ಹೊಗೆಯು ಆಕಾಶದಲ್ಲಿ ಅತಿ ಎತ್ತರ ಹೋಗುವುದೋ ಅದರಂತೆ ಯಾವನಿಗೆ ದುಃಖದ ಮಾತುಗಳನ್ನು ಕೇಳಿದ ಕೂಡಲೇ ಗಡಬಡಿಸುವುದು ।।೬೮೮।।

ಬಿರುಗಾಳಿಯು ಎಲ್ಲಿಯೂ ಸ್ಥಿರವಾಗಿ ನಿಲ್ಲುವುದಿಲ್ಲ. ಅದರಂತೆ ಇವನು ಯಾವುದೇ ಕ್ಷೇತ್ರದಲ್ಲಿ ಅಥವಾ ಯಾವುದೇ ತೀರ್ಥಸ್ಥಳದಲ್ಲಿ, ಇಲ್ಲವೇ ಯಾವುದೇ ಪುರೀಯಲ್ಲಿ ಸ್ಥಿರವಾಗಿರುವುದು ತಿಳಿಯಲಾರನು ।।೬೮೯।।

ಯಾವ ಸೊಕ್ಕಿದ ಓತಿಕಾಟವು ಗಿಡದಲ್ಲಿ ಬೊಡ್ಡೆಯಿಂದ ಮೇಲಕ್ಕೆ, ಮೇಲಿಂದ ಕೆಳಕ್ಕೆ, ಹೀಗೆ ಮೇಲಿಂದ ಮೇಲೆ ನಿಷ್ಕಾರಣವಾಗಿ ಓಡಾಡುತ್ತಿರುವುದು. ಅದರಂತೆ ಯಾವನ ಶರೀರದಲ್ಲಿ ಅಲ್ಲಿಂದಿಲ್ಲಿಗೆ, ಇಲ್ಲಿಂದಲ್ಲಿಗೆ ಹೀಗೆ ತಿರುಗುವ ಗಾಳಿ ತುಂಬಿರುವುದೋ ।।೬೯೦।।

ನೀರಿನ ಮಡಿಕೆಯು ಹೂಳದ ಹೊರತಾಗಿ ಒಂದು ಕಡೆ ನಿಲ್ಲದು, ಅದರಂತೆ ಯಾವನು ನಿದ್ರೆ ಹೊರತಾಗಿ ಒಂದು ಕಡೆ ನಿಲ್ಲದೇ ಎಲ್ಲ ಕಡೆ ತಿರುಗಾಡುತ್ತಿರುವನೋ ।।೬೯೧।।

ಆತನಲ್ಲಿ ಅಜ್ಞಾನವು ಪೂರ್ಣವಾಗಿ ವಾಸ ಮಾಡುವುದು ಮತ್ತು ಆತನು ಚಾಂಚಲ್ಯದಲ್ಲಿ ಕೋತಿಯ ಖಾಸ ಅಣ್ಣನಾಗಿರುವನು ।।೬೯೨।।

ಮತ್ತು ಅರ್ಜುನಾ, ಈತನ ಅಂತಃಕರಣದಲ್ಲಿ ಆತ್ಮ ಸಂಯಮದ ಗಾಳಿಯೂ ಇರುವುದಿಲ್ಲ ।।೬೯೩।।

ಹಳ್ಳಕ್ಕೆ ನೀರಿನ ಪ್ರವಾಹ ಬಂದರೆ, ಅದು ಉಸುಕಿನ ಒಡ್ಡಿಗೆ ಲೆಕ್ಕಿಸದೇ ಮುಂದೆ ದಾಟುವುದು. ಅದರಂತೆ ಯಾವನು ಶಾಸ್ತ್ರನಿಷಿದ್ಧ ಮಾತಿಗೆ ಹೆದರುವುದಿಲ್ಲವೋ ।।೬೯೪।।

ಯಾವನು ವ್ರತಗಳನ್ನು ಪಾಲಿಸುವುದಿಲ್ಲ, ಸ್ವಧರ್ಮವನ್ನು ಕಾಲಿನಿಂದ ಒದೆಯುವನು ಮತ್ತು ಶಾಸ್ತ್ರಗಳು ಹಾಕಿಕೊಟ್ಟ ನಿಯಮಗಳ ವಿರುದ್ಧವಾಗಿ ಯಾರ ಆಚರಣೆ ವಿರುವುದೋ ।।೬೯೫।।

ಯಾರಿಗೆ ಪಾಪಾಚರಣೆಯಲ್ಲಿ ಬೇಸರವಾಗುವುದಿಲ್ಲ, ಪುಣ್ಯಾಚರಣೆಗಳನ್ನು ಲೇಶ ಮಾತ್ರವೂ ತಿಳಿದಿಲ್ಲ ಮತ್ತು ಯಾವನು ನಾಚಿಕೆಯ ಸೀಮೆಯನ್ನೇ ಮುರಿದೊಗೆದಿರುವನೋ ।।೬೯೬।।

ಯಾವನು ಕುಲಧರ್ಮವನ್ನು ತಿಳಿಯಲಾರನು, ವೇದಾಂತದಲ್ಲಿನ ಆಜ್ಞೆಯನ್ನು ಪಾಲಿಸಲಾರನು ಮತ್ತು ಯಾರಿಗೆ ಒಳ್ಳೆಯ, ಕೆಟ್ಟ ಮತಗಳ ಪರಿವೆಯೇ ಇರುವುದಿಲ್ಲವೋ ।।೬೯೭।।

ದೇವರಿಗೆ ಬಿಟ್ಟ ಗೂಳಿಯು ಯಾವ ಬಂಧನವಿಲ್ಲದೇ ತಿರುಗಾಡುವುದು ಮತ್ತು ಗಾಳಿಯು ಸಿಕ್ಕಂತೆ ಬೀಸುವುದು, ಅಡವಿಯಲ್ಲಿನ ನೀರಿನ ಝರಿಗಳು ಸಿಕ್ಕಂತೆ ಹರಿಯುವುವು ।।೬೯೮।।

ಕುರುಡು ಆನೆಗೆ ಮದವೇರಿದರೆ, ಅಥವಾ ಗುಡ್ಡಕ್ಕೆ ಬೆಂಕಿ ಹತ್ತಿದರೆ ಹೇಗೋ, ಅದರಂತೆ ಯಾರ ಮನವು ವಿಷಯಗಳಿಗೆ ಸಿಕ್ಕ ಸಿಕ್ಕ ಹಾಗೆ ಹರಿಯುವುದೋ ।।೬೯೯।।

ಇಲ್ಲಿ ನೋಡು, ತಿಪ್ಪೆಯಲ್ಲಿ ಏನೊಂದು ಒಗೆಯುವುದಿಲ್ಲ? ಸೊಕ್ಕಿದ ಗೂಳಿಗೆ ಯಾರು ತಡೆಯಬೇಕು? ಮತ್ತು ಅಗಸೆಯ ಹೊಸ್ತಿಲವನ್ನು ಯಾರು ದಾಟುವುದಿಲ್ಲ? ।।೭೦೦।।

ಯಾವ ಪ್ರಕಾರವಾಗಿ ಅನ್ನಛತ್ರದಲ್ಲಿ ಯಾರು ಬೇಕಾದರೂ ಊಟ ಮಾಡುವರು. ಅಥವಾ ಸಾಧಾರಣ ಮನುಷ್ಯನಿಗೆ ಅಧಿಕಾರ ದೊರೆತರೆ, ಆತನು ಸಿಕ್ಕಹಾಗೆ ಮೆರೆಯುವನು. ಅಥವಾ ಬಣಜಿಗನ ಅಂಗಡಿಗೆ ಯಾರಾದರೂ ಹೋಗಬಹುದು ।।೭೦೧।।

ತೈಸೇ ಜಯಾಚೇ ಅಂತಃಕರಣ । ತಯಾಚ್ಯಾ ಠಾಯೀ ಸಂಪೂರ್ಣ । ಅಜ್ಞಾನಾಚೇ ಜಾಣ । ಋದ್ಧೀ ಆಹೇ ॥೭೦೨॥ ಆಣಿ ವಿಷಯಾಂಚೀ ಗೋಡೀ । ಜೋ ಜೀತು ಮೇಲಾ ನ ಸಂಡೀ । ಸ್ವರ್ಗೀಹೀ ಖಾವಯಾ ಜೋಡೀ । ಏಥೂನಿಚೀ ॥೭೦೩॥ ಜೋ ಅಖಂಡ ಭೋಗಾ ಜಚೇ। ಜಯಾ ವ್ಯಸನ ಕಾಮ್ಯಕ್ರಿಯೇಚೇ । ಮುಖ ದೇಖೋನಿ ವಿರಕ್ತಾಚೇ । ಸಚೈಲ ಕರೀ ॥೭೦೪॥ ವಿಷೋ ಶಿಣೋನಿ ಜಾಯೇ । ಪರೀ ನ ಶಿಣೇ ಸಾವಧು ನೋಹೇ । ಕುಹಿಲಾ ಹಾತೀ ಖಾಯೇ । ಕೋಢೀ ಜೈಸಾ ॥೭೦೫॥ ಖರೀ ಟೇಕೋ ನೇದೀ ಉಡೇ । ಲಾತೌನಿ ಫೋಡೀ ನಾಕಾಡೇ । ತರ್ಹೀ ಜೇವೀ ನ ಕಾಢೇ । ಮಾಘೌತಾ ಖರು ॥೭೦೬॥ ತೈಸಾ ಜೋ ವಿಷಯಾಲಾಗೀ । ಉಡೀ ಘಾಲೀ ಜಳತಿಯೇ ಆಗೀ । ವ್ಯಸನಾಚೀ ಆಂಗೀ । ಲೇಣೇ ಮಿರವೀ ॥೭೦೭॥ ಫುಟೋನಿ ಪಡೆ ತಂವ । ಮೃಗ ವಾಢವೀ ಹಾಂವ । ಪರೀ ನ ಮ್ಹಣೇ ತೇ ಮಾವ । ರೋಹಿಣೀಚೇ ॥೭೦೮॥ ತೈಸಾ ಜನ್ಮೋನಿ ಮೃತ್ಯು ವರೀ । ವಿಷಯೀ ತ್ರಾಸಿತಾ ಬಹುತೀ ಪರೀ । ತರ್ಹೀ ತ್ರಾಸು ನೇಘೇ ಧರೀ । ಅಧಿಕ ಪ್ರೇಮ ॥೭೦೯॥ ಪಹಿಲಿಯೇ ಬಾಳದಶೇ । ಆಈ ಬಾ ಹೇಂಚಿ ಪಿಸೇ । ತೇ ಸರೇ ಮಗ ಸ್ತ್ರಿಮಾಂಸೇ । ಭುಲೋನಿ ಠಾಕಿ ॥೭೧೦॥ ಮಗ ಸ್ತ್ರೀ ಭೋಗಿತಾ ಥಾಂವೋ । ವೃದ್ಧಾಪ್ಯ ಲಾಗೆ ಯೇವೋ । ತೇವ್ಹಾ ತೋಚಿ ಪ್ರೇಮಭಾವೋ ।ಬಾಳಕಾಂಸೀ ಆಣೀ ॥೭೧೧॥ ಆಂಧಳೇ ವ್ಯಾಲೇ ಜೈಸೇ । ತೈಸಾ ಬಾಳೇ ಪರಿವಸೇ । ಪರೀ ಜೀವೇ ಮರೇ ತೋ ನ ತ್ರಾಸೇ । ವಿಷಯಾಂಸಿ ಜೋ ॥೭೧೨॥ ಜಾಣ ತಯಾಚ್ಯಾ ಠಾಯೀ । ಅಜ್ಞಾನಾಸಿ ಪಾರು ನಾಹೀ । ಆತಾ ಆಣೇಕ ಕಾಂಹೀ । ಚಿನ್ಹೇ ಸಾಂಗೋ ॥೭೧೩॥ ತರೀ ದೇಹ ಹಾಚಿ ಆತ್ಮಾ । ಐಸೇಯಾ ಜೋ ಮನೋಧರ್ಮಾ । ವಳಘೋನಿಯಾ ಕರ್ಮಾ । ಆರಂಭು ಕರೀ ॥೭೧೪॥ ಆಣಿ ಉಣೇ ಕಾ ಪುರೇ । ಜೇ ಜೇ ಕಾಂಹೀ ಆಚರೇ । ತಯಾಚೇನಿ ಆವಿಷ್ಕಾರೇ । ಕುಂಥೋ ಲಾಗೇ ॥೭೧೫॥ ಡೋಇಯೇ ಠೇವಿಲೇನಿ ಭೋಜೇ । ದೇವಲವಿಸೇ ಜೇವೀ ಫುಜೇ । ತೈಸಾ ವಿದ್ಯಾವಯಸಾ ಮಾಜೇ । ಉತಾಣಾ ಚಾಲೇ ॥೭೧೬॥ ಮ್ಹಣೇ ಮೀಚಿ ಏಕು ಆಥೀ । ಮಾಝ್ಯಾಚಿ ಘರೀ ಸಂಪತ್ತೀ । ಮಾಝೀ ಆಚರತೀ ರಿತೀ । ಕೋಣಾ ಆಹೇ ॥೭೧೭॥ ನಾಹೀ ಮಾಝೇನಿ ಪಾಡೇ ವಾಡು । ಮೀ ಸರ್ವಜ್ಞು ಏಕುಚಿ ರೂಢು । ಐಸಾ ಗರ್ವ ತುಷ್ಟೀಗಂಡು । ಫೇಲೂನಿ ಠಾಕೇ ॥೭೧೮॥

ಅದರಂತೆ ಯಾವನ ಅಂತಃಕರಣದಲ್ಲಿ ಚಂಚಲವಿದೆಯೋ, ಅವನಲ್ಲಿ ಸಂಪೂರ್ಣವಾಗಿ ಅಜ್ಞಾನದ ಋದ್ಧಿ ಇರುವುದು. ಹೀಗೆ ತಿಳಿದುಕೊ ॥೨೦೨॥

ಮತ್ತು ಈತನು ಜೀವಂತನಿದ್ದಾಗಲೂ, ಮರಣ ಹೊಂದಿದಾಗಲೂ ವಿಷಯಗಳ ಇಚ್ಛೆಯನ್ನು ಬಿಡುವುದಿಲ್ಲ ಮತ್ತು ಯಾವುದರಿಂದ ಸ್ವರ್ಗದ ಭೋಗವು ಲಭಿಸುವುದೋ, ಆ ಮಾರ್ಗದ ಆಚರಣೆಯನ್ನು ಈತನು ಇಲ್ಲಿಯೇ ಮಾಡುವನು ॥೨೦೩॥

ಈತನ ಎಲ್ಲ ಶ್ರಮಗಳು ವಿಷಯ ಭೋಗಗಳಿಗಾಗಿರುವುವು. ಈತನಿಗೆ ಸಕಾಮ ಕರ್ಮಗಳ ಹೊರತಾಗಿ ಇತರ ಕರ್ಮಗಳು ಪ್ರಿಯವಾಗುವುದಿಲ್ಲ. ವಿರಕ್ತರ ದರ್ಶನವಾದರೆ ಸಚೈಲಸ್ನಾನ ಮಾಡುವನು ॥೨೦೪॥

ಮಹಾರೋಗಿಯು ತನ್ನ ಕೊಳೆತ ಕೈಯಿಂದ ಊಟ ಮಾಡಲು ಹೇಸಿಗೆ ಪಡುವುದಿಲ್ಲ. ಅದರಂತೆ ವಿಷಯಗಳಿಗೆ ಬೇಸರವಾದರೂ ಈತನಿಗೆ ವಿಷಯಗಳಿಗಾಗಿ ಬೇಸರ ಪಡುವುದಿಲ್ಲ ॥೨೦೫॥

ಹೆಣ್ಣು ಕತ್ತೆಯ ಹಿಂದೆ ಗಂಡುಕತ್ತೆಯು ಬೆನ್ನು ಹತ್ತಿದಾಗ ಆ ಹೆಣ್ಣು ಕತ್ತೆಯು ಹಿಂದಿನಿಂದ ಕಾಲೆತ್ತಿ ಜಿಗಿದೊದೆದು ಅದರ ಮೂಗು ಒಡೆಯುವುದು. ಆದರೂ ಆ ಗಂಡು ಕತ್ತೆಯು ಹಿಂಜರಿಯದೇ ಅದರ ಬೆನ್ನು ಹತ್ತುವುದು ॥೨೦೬॥

ಅದರಂತೆ ಈತನು ಉರಿಯುವ ಅಗ್ನಿಯಲ್ಲಿಯೂ ವಿಷಯಕ್ಕಾಗಿ ಜಿಗಿಯಲು ಹಿಂದು ಮುಂದು ನೋಡಲಾರನು ಮತ್ತು ವಿಷಯಗಳು ದೂಷಣವಲ್ಲದೇ ಭೂಷಣವಾಗಿವೆ ಎನ್ನುವನು ॥೨೦೭॥

ಮೃಗಜಲದ ಲಾಲಸೆಯಿಂದ ಚಿಗರೆಯು ಧಾವಿಸುತ್ತ, ಧಾವಿಸುತ್ತ ತನ್ನ ಎದೆಯು ಒಡೆದರೂ ಅದರ ಅಪೇಕ್ಷೆಯು ಕುಂದದೇ ಇನ್ನೂ ಹೆಚ್ಚಿಗೆ ಆಗುವುದು. ಇದು ಸುಳ್ಳಾಗಿದೆ ಎಂದು ಅನ್ನುವುದೇ ಇಲ್ಲ ॥೨೦೮॥

ಅದರಂತೆ ಹುಟ್ಟಿದಾಗಿನಿಂದಲೂ ಸಾಯುವವರೆಗೆ ವಿಷಯಗಳಿಗಾಗಿ ಒಂದೇಸವನೇ ಕಷ್ಟಪಡುವನು. ಆದಾಗ್ಯೂ ಆತನಿಗೆ ಅದಕ್ಕಾಗಿ ಶ್ರಮವೆನಿಸದೇ, ಇನ್ನೂ ಅಧಿಕವಾಗಿ ಪ್ರೇಮವೇ ಆಗುವುದು ॥೨೦೯॥

ಬಾಲ್ಯದಲ್ಲಿ ತಂದೆ ತಾಯಿಯವರ ಹುಚ್ಚು ಮತ್ತು ಅದು ಮುಗಿದಾಗ ತಾರುಣ್ಯದಶೆಯಲ್ಲಿ ಸ್ತ್ರೀ ಶರೀರದ ಮಾಂಸ ಪಿಂಡಕ್ಕೆ ಅತಿ ಮೋಹಿತನಾಗುವನು ॥೨೧೦॥

ಆಗ ಸ್ತ್ರೀ ಭೋಗವು ಸಂಪೂರ್ಣ ಮುಗಿದಾಗ ತನ್ನ ಶರೀರಕ್ಕೆ ಮುಪ್ಪು ಬರುವುದು. ಆಗ ಅದೇ ಪ್ರೇಮವನ್ನು ಬಾಲಕರ ಮೇಲೆ ಇಡುವನು ॥೨೧೧॥

ಹುಟ್ಟು ಕುರುಡನು ಹೇಗೆ ಮನೆಬಿಟ್ಟು ಹೊರಗೆ ಹೋಗುವುದಿಲ್ಲವೋ, ಅದರಂತೆ ಆತನು ಮಕ್ಕಳ, ಮೊಮ್ಮಕ್ಕಳ, ಗಿರಿಮೊಮ್ಮಕ್ಕಳ ಜೊತೆಗೆ ಕಾಲಕ್ರಮಿಸುವನು. ಹೀಗೆ ಸಾಯುವವರೆಗೂ ವಿಷಯಗಳ ತಿರಸ್ಕಾರವಾಗುವುದಿಲ್ಲ ॥೨೧೨॥

ಆತನಲ್ಲಿ ಅಜ್ಞಾನಕ್ಕೆ ಪಾರವೇ ಇಲ್ಲ ಹೀಗೆ ತಿಳಿದುಕೊ, ಈಗ ಅಜ್ಞಾನದ ಇನ್ನೂ ಕೆಲವು ಲಕ್ಷಣಗಳನ್ನು ಹೇಳುವೆನು ॥೨೧೩॥

ಇಲ್ಲಿ ನೋಡು,ತನ್ನ ದೇಹಕ್ಕೇನೇ ಆತ್ಮವೆಂಬ ಮನೋವೃತ್ತಿಯ ಮೇಲೆ ಆರೂಢನಾಗಿ ಯಾವನು ಕರ್ಮಗಳನ್ನು ಮಾಡಲು ಆರಂಭಿಸುವನು ॥೨೧೪॥

ಒಂದುವೇಳೆ ಕರ್ಮದ ಆಚರಣೆಗಳು ಹೆಚ್ಚು ಇಲ್ಲವೆ ಕಡಿಮೆಯಾದರೆ ಅಭಿಮಾನದಿಂದ ಉಬ್ಬುವನು, ಇಲ್ಲವೇ ತಿಣುಕುತ್ತಿರುವನು ॥೨೧೫॥

ಕ್ಷುದ್ರ ದೇವರ ಪ್ರಸಾದವು ತಲೆಯ ಮೇಲೆ ಇಟ್ಟಾಗ ದೇವನ ಭಕ್ತನ ಮೈಯಲ್ಲಿ ಬಂದು ಓಡಾಡಲು, ಕುಣಿಯಲು ಆರಂಭಿಸುವನು. ಅದರಂತೆ ಇವನು ವಿದ್ಯೆಯ ಮತ್ತು ತಾರುಣ್ಯದ ಬಲದಿಂದ, ಅಭಿಮಾನದಿಂದ ಸೆಟೆದು ಎದೆಮುಂದೆ ಮಾಡಿ ನಡೆಯುವನು ॥೨೧೬॥

ಇವನು ಹೇಳುವುದೇನೆಂದರೆ, ಸರ್ವ ಜಗತ್ತಿನಲ್ಲಿ ನಾನೊಬ್ಬನೇ ಬಲ್ಲವನು ಜಾಣನು,ನಾನೇ ಶ್ರೀಮಂತನು, ನನ್ನಂತೆ ನಡೆ ನುಡಿ ಯಾರದಿರುವುದು? ॥೨೧೭॥

ನನ್ನ ಸರಿಸಮಾನರು ಇನ್ನಾರೂ ಇಲ್ಲ, ನಾನೇ ಸರ್ವಜ್ಞನಿದ್ದು, ನಾನೊಬ್ಬನೇ ಈ ಜಗತ್ತಿನಲ್ಲಿ ಜ್ಞಾನಿಯಾಗಿರುವೆನು. ಈ ಪ್ರಕಾರವಾಗಿ ಎಲ್ಲ ಮಾತಿಗೂ ಗರ್ವ ಪಡುವನು ॥೨೧೮॥

ವ್ಯಾಧಿ ಲಾಗಲಿಯಾ ಮಾಣುಸಾ । ನಯೇಚಿ ಭೋಗ ದಾಊ ಜೈಸಾ । ನಿಕೇ ನ ಸಾಹೇ ಜೋ ತೈಸಾ । ಪುಢಿಲಾಂಚೇ ॥೭೯॥ ಪೈ ಗುಣು ತೇತುಲಾ ಖಾಯ। ಸ್ನೇಹ ಕೀ ಜಾಳಿತು ಜಾಯ । ಜೇಥ ಠೇವಿಜೇ ತೇಥ ಹೋಯ । ಮಸೀಐಸೇ ॥೭೨೦॥ ಜೇವನೇ ಶಿಂಪಿಲಾ ತಿಡಪಿಡೀ । ವಿಜಿಲಾ ಪ್ರಾಣ ಸಾಂಡೀ । ಲಾಗಲಾ ತರೀ ಕಾಢೀ। ಉರೋ ನೇದೀ ॥೭೨೧॥ ಅಳುಮಾಳ ಪ್ರಕಾಶು ಕರೀ । ತೇತುಲೇನೀಚ ಉಬಾರಾ ಧರೀ । ತೈಸಿಯಾ ದೀಪಾಚಿಯಾ ಪರೀ । ಸುವಿದ್ಯ ಜೋ ॥೭೨೨॥ ಔಷಧಾಚೇನಿ ನಾಂವೇ ಅಮೃತೇ । ಜೈಸಾ ನವಜ್ವರು ಆಂಬುಥೇ । ಕಾ ವಿಷಚಿ ಹೋಊನಿ ಪರತೇ । ಸರ್ಪಾ ದೂಧ ॥೭೨೩॥ ತೈಸಾ ಸದ್ಗುಣೇ ಮತ್ಸರು । ವ್ಯುತ್ಪತ್ತೀ ಅಹಂಕಾರು । ತಪೋಜ್ಞಾನೇ ಅಪಾರು । ತಾತಾ ಚಢೇ ॥೭೨೪॥ ಅಂತ್ಯರಾಣಿವೇ ಬೈಸವಿಲಾ । ಆರೇ ಧಾರಣು ಗಿಳಿಲಾ । ತೈಸಾ ಗರ್ವೇ ಫುಗಲಾ । ದೇಖಿಸೀ ಜೋ ॥೭೨೫॥ ಜೋ ಲಾಟಣೇ ಐಸಾ ನ ಲವೇ । ಪಾಥರು ತೇವೀ ನ ದ್ರವೇ । ಗುಣಿಯಾಸಿ ನಾಗವೇ । ಫೋಡಸೇ ಜೈಸೇ ॥೭೨೬॥ ಕಿಂಬಹುನಾ ತಯಾಪಾಶೀ । ಅಜ್ಞಾನ ಆಹೇ ವಾಢಿಸೀ । ಹೇ ನಿಕರೇ ಗಾ ತುಜಸೀ । ಬೋಲತ ಅಸೋ ॥೭೨೭॥ ಆಣೀಕಹೀ ಧನಂಜಯಾ । ಜೋ ಗೃಹದೇಹ ಸಾಮಗ್ರಿಯಾ । ನ ದೇಖೇ ಕಾಲಚೇಯಾ । ಜನ್ಮಾತೇ ಗಾ ॥೭೨೮॥ ಕೃತಘ್ನಾ ಉಪಕಾರು ಕೇಲಾ । ಕಾ ಚೋರಾ ವ್ಯವಹಾರು ದಿಧಲಾ । ನಿಸುಗು ಸ್ತವಿಲಾ । ವಿಸರೇ ಜೈಸಾ ॥೭೨೯॥ ವೋಢಾಳಿತಾ ಲಾವಿಲೇ । ತೇ ತೈಸೇಂಚ ಕಾನ ಪೂಂಸ ವೋಲೇ । ಕೀ ಪುಢತೀ ವೋಢಾಳು ಆಲೇ । ಸುಣೇ ಜೈಸೇ ॥೭೩೦॥ ಬೇಡೂಕ ಸಾಪಾಚಿಯಾ ತೋಂಡೀ । ಜಾತಸೇ ಸಬುಡಬುಡೀ । ತೋ ಮಕ್ಷಿಕಾಂಚಿಯಾ ಕೋಡೀ । ಸ್ಮರೇನಾ ಕಾಂಹೀ? ॥೭೩೧॥ ತೈಸೀ ನವಹೀ ದ್ವಾರೇ ಸ್ರವತೀ । ಆಂಗೀ ದೇಹಾಚಿ ಲುತೀ ಜಿತೀ । ಜೇಣೇ ಜಾಲೀ ತೇ ಚಿತ್ತೀ । ಸಲೇನಾ ಜಯಾ ॥೭೩೨॥ ಮಾತೇಚ್ಯಾ ಉದರಕುಹರೀ । ಪಚೂನಿ ವಿಷ್ಠೇಚ್ಯಾ ದಾಥರೀ । ಜಠರೀ ನವಮಾಸವರೀ । ಉಕಡಲಾ ಜೋ ॥೭೩೩॥ ತೇ ಗರ್ಭೀಚೀ ಜೇ ವ್ಯಥಾ । ಕಾ ಜೇ ಜಾಲೇ ಉಪಜತಾ । ತೇ ಕಾಂಹೀಂಚಿ ಸರ್ವಥಾ । ನಾಠವೀ ಜೋ ॥೭೩೪॥ ಮಲಮೂತ್ರ ಪಂಕೀ । ಜೇ ಲೋಳತೇ ಬಾಳ ಅಂಕೀ । ತೇ ದೇಖೋನಿ ಜೋ ನ ಥುಂಕೀ । ತ್ರಾಸು ನೇಘೇ ॥೭೩೫॥ ಕಾಲಚಿ ನಾ ಜನ್ಮ ಗೇಲೇ । ಪಾಹೇಚ ಪುಢತೀ ಆಲೇ । ಐಸೇ ಹೇ ಕಾಂಹೀ ವಾಟಲೇ । ನಾಹೀ ಜಯಾ ॥೭೩೬॥

ರೋಗ ಪೀಡಿತ ಮನುಷ್ಯನಿಗೆ ಯಾವ ಪ್ರಕಾರವಾಗಿ ಯಾವುದೇ ಭೋಗವು ಸಹನವಾಗುವುದಿಲ್ಲವೋ, ಅದರಂತೆ ಬೇರೆಯವರ ಉತ್ತಮ ಸ್ಥಿತಿಯು ಈತನಿಗೆ ಸಹನವಾಗುವುದಿಲ್ಲ ।।೭೧೯।।

ದೀಪವು ಹತ್ತಿಯ ಬತ್ತಿಯನ್ನು ತಿನ್ನುವುದು ಮತ್ತು ಎಣ್ಣೆಯನ್ನು ಸುಟ್ಟು ಬಿಡುವುದು ಮತ್ತು ಆ ಸ್ಥಳವನ್ನು ಕಪ್ಪಾಗಿ ಮಾಡುವುದು ।।೭೨೦।।

ನೀರಿನ ಒಂದು ಹನಿ ತನ್ನ ಮೇಲೆ ಬಿದ್ದರೆ ಚುರುಬುರುಸುವುದು, ಗಾಳಿಯಿಂದ ಆರಿ ಹೋಗುವುದು. ಮನೆಗೆ ಹತ್ತಿದರೆ ಅಲ್ಲಿ ಒಂದು ಕಡ್ಡಿಯನ್ನೂ ಸಹ ಉಳಿಸುವುದಿಲ್ಲ ।।೭೨೧।।

ಏನೋ, ಸ್ವಲ್ಪ ಬೆಳಕು ಕೊಡುವುದು, ಅಷ್ಟೇ ಬಿಸಿ ಮಾಡುವುದು. ಆ ಪಣತಿಯಂತೆ ಇವನು ಅಲ್ಪ ವಿದ್ಯಾ ಮಹಾಗರ್ವಿ (ಬಹುದೋಷಿ) ಯಾಗಿರುವನು ।।೭೨೨।।

ನವಜ್ವರದ ರೋಗಿಗೆ ಅಮೃತಮಯ ಹಾಲು ಕೊಟ್ಟರೆ ಅದರಿಂದ ಜ್ವರವು ಇನ್ನೂ ಬೆಳೆಯುವುದು. ಸರ್ಪಕ್ಕೆ ಆ ಹಾಲು ಕುಡಿಸಿದರೆ ಅದು ಅದರಲ್ಲಿ ವಿರುದ್ಧವಾಗಿ ವಿಷವಾಗುವುದು ।।೭೨೩।।

ಅದರಂತೆ ಸದ್ಗುಣಿಯವರನ್ನು ಮತ್ಸರ ಮಾಡುವನು. ವಿದ್ಯೆಯ ಅಹಂಕಾರ ತೋರಿಸುವನು. ತಪಾಚರಣೆಗಳ ಅಭಿಮಾನದಿಂದ ಗರ್ವವನ್ನು ಬೆಳೆಸುವನು ।।೭೨೪।।

ನೀಚನಾದ ಅಂತ್ಯಜನಿಗೆ ರಾಜ್ಯ ಪದವಿ ಸಿಕ್ಕರೆ ಅಭಿಮಾನದಿಂದ ಉಬ್ಬುವನು. ಅಥವಾ ಹೆಬ್ಬಾವು ಕಟ್ಟಿಗೆಯ ಕಂಬವನ್ನು ನುಂಗಿದರೆ, ಅದು ಹೇಗೆ ಸೆಟೆಯುವುದೋ, ಹಾಗೆ ಈತನ ಶರೀರದಲ್ಲಿ ಅಭಿಮಾನವು ತುಂಬಿದ್ದು ತೋರುವುದು ।।೭೨೫।।

ಇವನು ಲಟ್ಟಣಿಗೆಯಂತೆ ಯಾವಾಗಲೂ ಬಗ್ಗುವುದೇ ಇಲ್ಲ. ಕಲ್ಲಿನಂತೆ ಇವನು ಯಾವಾಗಲೂ ದ್ರವಿಸುವುದಿಲ್ಲ. ಮಿಡಿ ನಾಗರಹಾವಿನಂತೆ ಗಾರುಡಿಯ ಮಂತ್ರ ಔಷಧಕ್ಕೆ ಬಗ್ಗುವುದಿಲ್ಲ ।।೭೨೬।।

ಹೆಚ್ಚಿಗೇನು ಹೇಳಬೇಕು? ಈ ಪ್ರಕಾರದ ಯಾವನ ಸ್ಥಿತಿಯಾಗಿರುವುದೋ, ಆತನಲ್ಲಿ ಅಜ್ಞಾನವು ಬೆಳೆಯುತ್ತಲೇ ಇದೆ ಎಂದು ನಿನಗೆ ನಿಶ್ಚಯವಾಗಿ ಹೇಳುವೆ ।।೭೨೭।।

ಇನ್ನೊಂದು ಅರ್ಜುನಾ, ಇವನು ತನ್ನ ಮನೆಮಾರು, ಸಂಪತ್ತು, ದೇಹ ಮತ್ತು ತನ್ನ ವಿದ್ಯಮಾನ ಜನ್ಮ ಈ ವಿಷಯಗಳಲ್ಲಿ ಏನೊಂದು ವಿಚಾರಿಸುವುದಿಲ್ಲ ।।೭೨೮।।

ಕೃತಘ್ನನಿಗೆ ಉಪಕಾರ ಮಾಡಿದರೆ, ಅಥವಾ ಕಳ್ಳರಿಗೆ ವ್ಯಾಪಾರಕ್ಕಾಗಿ ಬಂಡವಾಳ ಕೊಟ್ಟರೆ, ಅಥವಾ ನಿರ್ಲಜ್ಜ ಮನುಷ್ಯನ ಸ್ತುತಿ ಮಾಡಿದರೆ, ಇವರು ಮಾಡಿದ ಉಪಕಾರಗಳನ್ನು ಮರೆಯುವರು ।।೭೨೯।।

ಉಡಾಳ ನಾಯಿಯ ಕಿವಿ ಮತ್ತು ಬಾಲಗಳನ್ನು ಕೊಯ್ದು ಮನೆಯಿಂದ ಹೊರಗೆ ಹಾಕಿದರೂ ಅದು ರಕ್ತ ಸೋರುತ್ತಿದ್ದರೂ ಪುನಃ ಅದು ಅದೇ ಮನೆಯಲ್ಲಿ ಹೊಕ್ಕುವುದು ।।೭೩೦।।

ಕಪ್ಪೆಯು ಸರ್ಪದ ಬಾಯಿಗೆ ಸಿಕ್ಕು ತನ್ನನ್ನು ನುಂಗುತ್ತಿರುವಾಗಲೂ ಅದು ಆಶೆಬುರುಕತನದಿಂದ ನೊಣ ಹಿಡಿದು ನುಂಗುವ ಪ್ರಯತ್ನ ಮಾಡುವುದು. ಆದರೆ ತನ್ನ ಸ್ಥಿತಿ ಏನಾಗಿದೆ ಎಂಬುದು ಅದಕ್ಕೆ ಸ್ಮರಣವೇ ಇರುವುದಿಲ್ಲ ।।೭೩೧।।

ಅದರಂತೆ ಶರೀರದಲ್ಲಿ ಒಂಬತ್ತು ದ್ವಾರಗಳು ಸೋರುತ್ತಿದ್ದರೂ, ಯಾರ ಮನಸ್ಸಿನಲ್ಲಿ ಇದು ಹೀಗೇಕಾಗುವುದೆಂಬುದಕ್ಕೆ ಖೇದವೂ ಆಗುವುದಿಲ್ಲ ।।೭೩೨।।

ತಾಯಿಯ ಗರ್ಭದ ಗುಹೆಯಲ್ಲಿ ಮಲದ (ಥರ) ಪದರಿನಲ್ಲಿ ಪಚಿಸಿ ಒಂಬತ್ತು ತಿಂಗಳವರೆಗೆ ಜಠರಾಗ್ನಿಯಲ್ಲಿ ಕುದಿಸಲ್ಪಡುವನು ।।೭೩೩।।

ಇವನು ಆ ಗರ್ಭದಲ್ಲಿನ ದುಃಖವನ್ನು ಅಥವಾ ಉದರದಿಂದ ಹೊರಗೆ ಬರುವ ಸಮಯದ ದುಃಖವನ್ನು ಏನೊಂದೂ ಸ್ಮರಿಸುವುದಿಲ್ಲ ।।೭೩೪।।

ತೊಡೆಯ ಮೇಲೆ ತೆಗೆದುಕೊಂಡ ಕೂಸು ಮಲ ಮೂತ್ರಗಳ ರಾಡಿಯಲ್ಲಿ ಉರುಳಾಡುತ್ತಿರುವುದನ್ನು ಮೇಲಿಂದ ಮೇಲೆ ಕಂಡೂ ಮನಸ್ಸಿಗೆ ವಾಕರಿಕೆಯಾಗಿ ತ್ರಾಸಾಗುವುದಿಲ್ಲ ।।೭೩೫।।

ನಿನ್ನೆಯೇ ಈ ಜನ್ಮ ಹೋಗಿದೆ ಮತ್ತು ನಾಳೆಯೇ ಇನ್ನೊಂದು ಜನ್ಮ ಬರುವುದು, ಇದರ ವಿಷಯಕ್ಕೆ ಈತನ ಮನಸ್ಸಿನಲ್ಲಿ ಯಾವ ವಿಚಾರವೂ ಹುಟ್ಟುವುದಿಲ್ಲ ।।೭೩೬।।

ಆಣಿ ಪೈ ತಯಾಚೀ ಪರೀ । ಜೀವಿತಾಚೀ ಘರಾರೀ । ದೇಖೋನಿ ಜೋ ನ ಕರೀ । ಮೃತ್ಯು ಚಿಂತಾ ॥೭೩೭॥ ಜಿಣೇಯಾಚೇನಿ ವಿಶ್ವಾಸೇ । ಮೃತ್ಯು ಏಕ ಏಥ ಅಸೇ । ಹೇ ಜಯಾಚೇನಿ ಮಾನಸೇ । ಮಾನಿಜೇನಾ ॥೭೩೮॥ ಅಲ್ಪೋದಕೀಂಚಾ ಮಾಸಾ । ಹೇ ನಾಟೇ ಐಸಿಯಾ ಆಶಾ । ನ ವಚೇಚಿ ಕಾ ಜೈಸಾ । ಅಗಾಧ ಡೋಹಾ ॥೭೩೯॥ ಕಾ ಗೋರೀಚಿಯಾ ಭುಲೀ । ಮೃಗ ವ್ಯಾಧಾ ದೃಷ್ಟಿ ನ ಘಾಲೀ । ಗಳು ನ ಪಾಹತಾ ಗಿಳಿಲೀ । ಉಂಡೀ ಮೀನೇ ॥೭೪೦॥ ದೀಪಾಚಿಯಾ ಝುಗಮಗಾ । ಜಾಳೀಲ ಹೇ ಪತಂಗಾ । ನೇಣವೇಚಿ ಪೈ ಗಾ । ಜಯಾಪರೀ ॥೭೪೧॥ ಗವ್ಹಾರು ನಿದ್ರಾಸುಖೇ । ಘರ ಜಳತ ಅಸೇ ತೇ ನ ದೇಖೇ । ನೇಣತಾ ಜೇವೀ ವಿಖೇ । ರಾಂಧಿಲೇ ಅನ್ನ ॥೭೪೨॥ ತೈಸಾ ಜೀವಿತಾಚೇನಿ ಮಿಷೇ । ಹಾ ಮೃತ್ಯುಚಿ ಆಲಾ ಅಸೇ । ಹೇ ನೇಣೇಚಿ ರಾಜಸೇ । ಸುಖೇ ಜೋ ಗಾ ॥೭೪೩॥ ಶರೀರಿಚೀ ವಾಢೀ । ಅಹೋರಾತ್ರಾಂಚೀ ಜೋಡೀ । ವಿಷಯಸುಖಪ್ರೌಢೀ । ಸಾಚಚಿ ಮಾನೀ ॥೭೪೪॥ ಪರೀ ಬಾಪುಡಾ ಐಸೇ ನೇಣೇ । ಜೇ ವೇಶ್ಯೇಚೇ ಸರ್ವಸ್ವ ದೇಣೇ । ತೇಂಚಿ ತೇ ನಾಗವಣೇ । ರೂಪ ಏಥ ॥೭೪೫॥ ಸಂವಚೋರಾಚೇ ಸಾಜಣೇ । ತೇಂಚಿ ತೇ ಪ್ರಾಣ ಘೇಣೇ । ಲೇಪಾಸ್ನಪನ ಕರಣೇ । ತೋಚಿ ನಾಶು ॥೭೪೬॥ ಪಾಂಡುರೋಗೇ ಆಂಗ ಸುಟಲೇ । ತೇ ತಯಾಚಿ ನಾಂವೇ ಖಿಂಟಲೇ । ತೈಸೇ ನೇಣೇ ಭುಲಲೇ । ಆಹಾರ ನಿದ್ರಾ ॥೭೪೭॥ ಸನ್ಮುಖ ಶೂಲಾ । ಧಾಂವತಯಾ ಪಾಯೇ ಚಪಳಾ । ಪ್ರತಿಪದೀ ಯೇ ಜವಳಾ । ಮೃತ್ಯು ಜೇವೀ ॥೭೪೮॥ ತೇವೀ ದೇಹಾ ಜಂವ ಜಂವ ವಾಢು । ಜಂವ ಜಂವ ದಿವಸಾಂಚಾ ಪವಾಡು । ಜಂವ ಜಂವ ಸುರವಾಡು । ಭೋಗಾಂಚಾ ಯಾ ॥೭೪೯॥ ತಂವ ತಂವ ಅಧಿಕಾಧಿಕೇ । ಮರಣ ಆಯುಷ್ಯಾತೇ ಜಿಂಕೇ । ಮೀಠ ಜೇವೀ ಉದಕೇ । ಘಾಂಸಿಜತ ಅಸೇ ॥೭೫೦॥ ತೈಸೇ ಜೀವಿತ್ವ ಜಾಯೇ । ತಯಾಸ್ತವ ಕಾಳು ಪಾಹೇ । ಹೇ ಹಾತೋಹಾತೀಂಚೇ ನ ಹೋಯೇ । ಠಾಉಕೇ ಜಯಾ ॥೭೫೧॥ ಕಿಂಬಹುನಾ ಪಾಂಡವಾ । ಹಾ ಆಂಗೀಂಚಾ ಮೃತ್ಯು ನಿತ್ಯ ನವಾ । ನ ದೇಖೇ ಜೋ ಮಾವಾ । ವಿಷಯಾಂಚಿಯಾ ॥೭೫೨॥ ತೋ ಅಜ್ಞಾನದೇಶೀಂಚಾ ರಾವೋ । ಯಾ ಬೋಲಾ ಮಹಾಬಾಹೋ । ನ ಪಡೇ ಗಾ ಠಾವೋ । ಆಣಿಕಾಂಚಾ ॥೭೫೩॥ ಪೈ ಜೀವಿತಾಚೇನಿ ತೋಖೇ । ಜೈಸಾ ಕಾ ಮೃತ್ಯು ನ ದೇಖೇ । ತೈಸಾಚಿ ತಾರುಣ್ಯೇ ಪೋಖೇ । ಜರಾ ನ ಗಣೇ ॥೭೫೪॥

ಮತ್ತು ತನ್ನ ಆಯುಷ್ಯದ ಭರಭರಾಟೆಯಲ್ಲಿ ಮುಂದೆ ಒದಗುವ ಮೃತ್ಯುವಿನ ಯಾವುದೊಂದು ಚಿಂತೆ ಮಾಡುವುದಿಲ್ಲ ||೭೩೭||

ತನ್ನ ಜೀವಿತದ ಮೇಲೆ ಪೂರ್ಣ ವಿಶ್ವಾಸವಿಟ್ಟು, ಈ ಜಗತ್ತಿನಲ್ಲಿ ಮೃತ್ಯು ಎಂಬುದೊಂದು ಇದೆ ಎಂದು ಮನದಲ್ಲಿ ವಿಚಾರವನ್ನು ಮಾಡುವುದೇ ಇಲ್ಲ ||೭೩೮||

ಚಿಕ್ಕಮಡುವಿನಲ್ಲಿ ನೀರು ಒಣಗುವುದಿಲ್ಲವೆಂಬ ತಿಳುವಳಿಕೆಯಿಂದ ಅದರಲ್ಲಿರುವ ಮೀನವು ದೊಡ್ಡ ಜಲಾಶಯವನ್ನು ಸೇರುವುದಿಲ್ಲ ||೭೩೯||

ಅಥವಾ ಬೇಡರವನು ನುಡಿಸುವ ನಾದಕ್ಕೆ ಭುಲಾಯಿಸಿ ಮೃಗವು ಬೇಡನ ಕಡೆಗೆ ನೋಡುವುದೇ ಇಲ್ಲ. ಅಥವಾ ಮೀನವು ಬಲೆಗೆ ಹಚ್ಚಿರುವ ಮಾಂಸದ ಒಳಗೆ ಏನಿದೆ ಎನ್ನುವುದು ತಿಳಿಯದೇ ಅದನ್ನು ತಿಂದು ಸಾಯುತ್ತದೆ ||೭೪೦||

ಇಲ್ಲವೇ, ದೀಪದ ಜ್ಯೋತಿಯಿಂದ ನಾನು ಸುಟ್ಟು ಹೋಗುವೆ ಎಂದು ತಿಳಿಯದೇ ಪತಂಗ ಹುಳವು ಅದರ ಮೇಲೆ ಜಿಗಿಯುವುದು ||೭೪೧||

ಒಬ್ಬ ಮೂರ್ಖನು ನಿದ್ರೆಯ ಸುಖದಲ್ಲಿ ಮನೆಯು ಬೆಂಕಿಯಿಂದ ಉರಿಯುತ್ತಿದ್ದರೂ ಅದರ ಕಡೆಗೆ ಲಕ್ಷವನ್ನು ಕೊಡುವುದಿಲ್ಲ. ಅಥವಾ ವಿಷ ಮಿಶ್ರಿತ ಅನ್ನವನ್ನು ತಿಳಿಯದೇ ಉಣ್ಣುವನು ||೭೪೨||

ಅದರಂತೆ ಜೀವಿತದ ರೂಪದಿಂದ ಮೃತ್ಯುವೇ ಬಂದಿರುವುದು ಎಂದು ರಾಜಸಿಕ ವಿಷಯದ ಭರದಲ್ಲಿ ತಿಳಿಯುವುದಿಲ್ಲ ||೭೪೩||

ಶರೀರದ ಬೆಳವಣಿಗೆ, ಹಗಲು ರಾತ್ರಿಗಳ ಜೋಡಿಯ ಉಪಯೋಗ ಮತ್ತು ವಿಷಯಸುಖವನ್ನು ಬಹಳ ಹೆಮ್ಮೆಯಿಂದ ಸತ್ಯವೆಂದು ತಿಳಿಯುವನು ||೭೪೪||

ಆದರೆ ಈ ದೀನನಿಗೆ ಇದು ತಿಳಿಯುವುದಿಲ್ಲ, ಏನೆಂದರೆ ವೇಶ್ಯಾಸ್ತ್ರೀಯು ತಾನು ತನು ಮನ ಎಲ್ಲವನ್ನು ಕೊಟ್ಟಂತೆ ಮಾಡಿ, ಆತನಲ್ಲಿದ್ದದ್ದು ಎಲ್ಲವನ್ನೂ ಹೀರಿಕೊಳ್ಳುವಳು ||೭೪೫||

ಮಾರ್ಗದಲ್ಲಿ ಕಳ್ಳರ ಸಂಗತಿಯು ನೋಡಲು ಬಲು ಸ್ನೇಹ ಕಾಣುವುದು. ಆದರೆ ಅದು ಸ್ನೇಹವಿರದೇ ಪ್ರಾಣಘಾತವಾಗಿರುವುದು. ಮಣ್ಣಿನ ಗೊಂಬೆಗೆ ಸ್ನಾನ ಮಾಡಿಸುವುದೆಂದರೆ ಅದರ ನಾಶವೇ ಸರಿ ||೭೪೬||

ಪಾಂಡುರೋಗದಿಂದ ಮನುಷ್ಯನು ಪುಷ್ಟನಂತೆ ಕಾಣುವನು. ಆದರೆ ಆತನು ಸಶಕ್ತನಿರದೇ ಆತನ ಆಯುಷ್ಯವು ಮುಗಿದಿರುತ್ತದೆ. ಅದರಂತೆ ಈತನು ಆಹಾರ, ನಿದ್ರೆಯಲ್ಲಿ ತನ್ಮಯನಾಗಿ ಇದರಲ್ಲಿ ತನ್ನ ನಾಶವನ್ನು ಅರಿಯುವುದಿಲ್ಲ ||೭೪೭||

ಚಪಲತೆಯಿಂದ ಶೂಲದ ಕಡೆ ಧಾವಿಸುವವನ ಪ್ರತಿಯೊಂದು ಹೆಜ್ಜೆಗಳಿಂದ ಮೃತ್ಯುವು ಸಮೀಪವಾಗುತ್ತಿರುವುದು ||೭೪೮||

ಅದರಂತೆ, ದೇಹವು ಹೇಗೆ ಹೇಗೆ ಬೆಳೆಯುತ್ತಿರುವುದೋ, ಆಯುಷ್ಯವು ಹೇಗೆ ಹೇಗೆ ಹೆಚ್ಚುತ್ತದೆಯೋ ಮತ್ತು ಹೇಗೆ ಹೇಗೆ ವಿಷಯಸುಖದಲ್ಲಿ ನಿಮಗ್ನನಾಗುತ್ತಾನೆಯೋ ||೭೪೯||

ಹಾಗೆ ಹಾಗೆ ಮರಣವು ಆಯುಷ್ಯವನ್ನು ಗೆಲ್ಲುವುದು ಮತ್ತು ಉಪ್ಪು ನೀರಿನಲ್ಲಿ ಒಗೆದಾಗ ಹೇಗೆ ಕರಗುವುದೋ ||೭೫೦||

ಅದರಂತೆ ಹೇಗೆ ಹೇಗೆ ಆಯುಷ್ಯವು ಬೆಳೆಯುವುದೋ, ಹಾಗೆ ಹಾಗೆ ಮೃತ್ಯುವು ಸಮೀಪ ಬರುವುದು ಮತ್ತು ಅದು ಕೈಯಲ್ಲಿ ಕೈಹಾಕಿ ಕಸಿದುಕೊಂಡು ಹೋಗುವುದು ತಿಳಿಯುವುದೇ ಇಲ್ಲ ||೭೫೧||

ಅರ್ಜುನಾ, ಆಯುಷ್ಯದ ವೃದ್ಧಿಯಿಂದ ತನ್ನ ಮೃತ್ಯುವು ಪ್ರತಿದಿನ ಸಮೀಪಕ್ಕೆ ಬರುತ್ತಾ ಇದೆ ಎಂಬುದು ವಿಷಯಗಳ ಮೋಹದಿಂದ ತಿಳಿಯುವುದೇ ಇಲ್ಲ ||೭೫೨||

ಮಹಾಬಾಹುನಾದ ಅರ್ಜುನನೇ, ಅವನು ಅಜ್ಞಾನ ರೂಪ ದೇಶದ ರಾಜನು ಎಂದು ಹೇಳುವುದರಲ್ಲಿ ಯಾವ ಅನುಮಾನವೂ ಇರುವುದಿಲ್ಲ ||೭೫೩||

ಯಾವ ಪ್ರಕಾರವಾಗಿ ಇವನು ಮೃತ್ಯುವಿನ ಬಗ್ಗೆ ಚಿಂತನೆ ಮಾಡುವುದಿಲ್ಲವೋ, ಅದರಂತೆ ತಾರುಣ್ಯದ ಭರದಲ್ಲಿ ಮುಂದೆ ಬರುವ ಮುಪ್ಪಿಗಾಗಿ ಚಿಂತೆ ಮಾಡುವುದಿಲ್ಲ ||೭೫೪||

ಕಡಾಡೀ ಲೋಟಲಾ ಗಾಡಾ । ಕಾ ಶಿಖರೌನಿ ಸುಟಲಾ ಧೋಂಡಾ । ತೈಸಾ ನ ದೇಖೇ ಜೋ ಪುಢಾ । ವಾರ್ಧಕ್ಯ ಆಹೇ ।।೭೫೫।। ಕಾ ಆಡವೋಹಳಾ ಪಾಣೆ ಆಲೇ । ಕಾ ಜೈಸೇ ಮ್ಹೈಸಯಾಚೇ ಝುಂಜ ಮಾತಲೇ । ತೈಸೇ ತಾರುಣ್ಯಾಚೇ ಚಢಲೇ । ಭುರರೇ ಜಯಾ ।।೭೫೬।। ಪುಷ್ಟೀ ಲಾಗೇ ವಿಘರೋ । ಕಾಂತಿ ಪಾಹೇ ನಿಸರೋ । ಮಸ್ತಕ ಆದರೀ ಶಿರೋ। ಭಾಗೀ ಕಂಪ ।।೭೫೭।। ದಾಢೀ ಸಾಲುಳ ಧರೀ । ಮಾನ ಹಾಲೌನಿ ವಾರೀ । ತರೀ ಜೋ ಕರೀ । ಮಾಯೇಚಾ ಪೈಸು ।।೭೫೮।। ಪುಢೀಲ ಉರೀ ಆದಳೇ । ತಂವ ನ ದೇಖೇ ಜೇವೀ ಆಂಧಳೇ । ಕಾ ಡೋಳ್ಯಾವರಲೇ ನಿಗಳೇ । ಆಳಶೀ ತೋಷೇ ।।೭೫೯।। ತೈಸೇ ತಾರುಣ್ಯ ಆಜಿಚೇ । ಭೋಗಿತಾ ವೃದ್ಧಾಪ್ಯ ಪಾಹೇಚೇ । ನ ದೇಖೇ ತೋಚೀ ಸಾಚೇ । ಅಜ್ಞಾನು ಗಾ ।।೭೬೦।। ದೇಖೇ ಅಕ್ಷಮೇ ಕುಬ್ಜೇ । ಕೀ ವಿಟಾವೂ ಲಾಗೇ ಪುಂಜೇ । ಪರಿ ನ ಮ್ಹಣೇ ಪಾಹೇ ಮಾಝೇ । ಐಸೇಂಚಿ ಭವೇ ।।೭೬೧।। ಆಣಿ ಆಂಗೀ ವೃದ್ಧಾಪ್ಯತೇಚೇ । ಸಂಜ್ಞಾ ಯೇ ಮರಣಾಚೇ । ಪರಿ ಜಯಾ ತಾರುಣ್ಯಾಚೇ । ಭುಲೀ ನ ಫಿಟೇ ।।೭೬೨।। ತೋ ಅಜ್ಞಾನಾಚೇ ಘರ । ಹೇ ಸಾಚಚಿ ಘೇ ಉತ್ತರ । ತೇವೀಂಚಿ ಪರಿಯೇಸೀ ಥೋರ । ಚಿನ್ಹೇ ಆಣಿಕ ।।೭೬೩।। ತರೀ ವಾಘಾಚಿಯೇ ಅಡವೇ । ಏಕವೇಳ ಆಲಾ ಚರೋನಿ ದೈವೇ । ತೇಣೇ ವಿಶ್ವಾಸೇ ಪುಢತೀ ಧಾವೇ । ವಸೂ ಜೈಸಾ ।।೭೬೪।। ಕಾ ಸರ್ಪಘರಾಆಂತು । ಅವಚಟೇ ಠೇವಾ ಆಣಿಲಾ ಸ್ವಸ್ಥ । ಯೇತುಲಿ ಯಾಸಾಠೀ ನಿಶ್ಚಿತು । ನಾಸ್ತಿಕು ಹೋಯ ।।೭೬೫।। ತೈಸೇಂಚಿ ಅವಚಟೇ ಹೇ । ಏಕದೋನೀ ವೇಳಾ ಲಾಹೇ । ಏಥ ರೋಗ ಏಕ ಆಹೇ । ಹೇ ಮಾನೀನಾ ಜೋ ।।೭೬೬।। ವೈರಿಯಾ ನೀದ ಆಲೀ । ಆತಾ ದ್ವಂದ್ವೇ ಮಾಝೀ ಸರಲೀ । ಹೇ ಮಾನೀ ತೋ ಸಪಿಲೀ । ಮುಕಲಾ ಜೇವೀ ।।೭೬೭।। ತೈಸೀ ಆಹಾರನಿದ್ರೇಚೀ ಉಜರೀ । ರೋಗ ನಿವಾಂತು ಜೋವರಿ । ತಂವ ಜೋ ನ ಕರೀ । ವ್ಯಾಧೀ ಚಿಂತಾ ।।೭೬೮।। ಆಣಿ ಸ್ತ್ರೀಪುತ್ರಾ ಮೇಳೇ । ಸಂಪತ್ತೀ ಜಂವ ಜಂವ ಫಳೇ । ತೇಣೇ ರಜೇ ಡೋಳೇ । ಜಾತೀ ಜಯಾಚೇ ।।೭೬೯।। ಸವೇಂಚಿ ವಿಯೋಗು ಪಡೈಲ । ವಿಳೌನಿ ವಿಪತ್ತಿ ಯೇಈಲ । ಹೇ ದುಃಖ ಪುಢೀಲ । ದೇಖೇನಾ ಜೋ ।।೭೭೦।। ತೋ ಅಜ್ಞಾನ ಗಾ ಪಾಂಡವಾ । ಆಣಿ ತೋಹೀ ತೋಚಿ ಜಾಣಾವಾ । ಜೋ ಇಂದ್ರಿಯೇ ಅವ್ಹಾಸವಾ । ಚಾರೀ ಏಥ ।।೭೭೧।। ವಯಸೇಚೇನಿ ಉವಾಯೇ । ಸಂಪತ್ತಿಚೇನಿ ಸಾವಾಯೇ । ಸೇವ್ಯಾಸೇವ್ಯ ಜಾಯೇ । ಸರಕಟಿತು ।।೭೭೨।।

ಗುಡ್ಡದ ಇಳಿಜಾರಿನಲ್ಲಿ ಬಂಡಿ ಬಿಟ್ಟಾಗ ಅಥವಾ ಪರ್ವತದ ಶಿಖರದಿಂದ ಕಲ್ಲು ಉರುಳಿದಾಗ ಇವುಗಳಿಗೆ ಮುಂದೇನಿದೆ ಎಂಬುದು ಹೇಗೆ ತಿಳಿಯುವುದಿಲ್ಲವೋ, ಅದರಂತೆ ಮುಂದೆ ಮುಪ್ಪು ಬಂದು ತನ್ನ ಸ್ಥಿತಿ ಏನಾದೀತೆಂಬುದು ತಿಳಿಯುವುದಿಲ್ಲ ॥೭೫೫॥

ಅಡವಿಯ ಹಳ್ಳಕ್ಕೆ ಪ್ರವಾಹ ಬಂದರೆ, ಅದರ ರಭಸಕ್ಕೆ ದಾಟುವುದಾಗುವುದಿಲ್ಲ. ಮದವೇರಿದ ಕೋಣಗಳೆರಡು ಸೆಣಸಾಡುವಾಗ ಬೇರೆಯವರಿಗೆ ಸಮೀಪಬರಿಸಿ ಕೊಡುವು ದಿಲ್ಲ. ಅದರಂತೆ ತಾರುಣ್ಯದ ಮದವು ಆತನಿಗೆ ತುಂಬಿರು ವುದು ॥೭೫೬॥

ಶರೀರ ಸಂಪತ್ತು ಕಡಿಮೆಯಾಗಿರುವುದು, ಶರೀರದ ತೇಜವು ಕುಂದಿರುವುದು ಮತ್ತು ತಲೆಯು ಗೋಣಿನೊಂದಿಗೆ ನಡುಗ ಹತ್ತುವುದು ॥೭೫೭॥

ಗಡ್ಡವು ಬಿಳಿದಾಗಿ ಒಲ್ಲೆ ಒಲ್ಲೆ ಎಂಬುವಂತೆ ಸುಮ್ಮನೇ ಗೋಣು ಅಲುಗಾಡುತ್ತಿರುವುದು. ಈ ಪರಿಸ್ಥಿತಿಯಾದರೂ ಆಶೆಯನ್ನು ಬೆಳೆಯಿಸುವನು ॥೭೫೮॥

ಕುರುಡನಿಗೆ ಮುಂದಿರುವ ಕಂಭವು ಎದೆಗೆ ಬಡಿಯುವ ವರೆಗೆ ತಿಳಿಯುವುದಿಲ್ಲ. ಅಥವಾ ಕಣ್ಣುಂದೆ ನೀರಲ ಗಿಡದಿಂದ ಹಣ್ಣು ಬಿದ್ದದ್ದು, ಬೇರೆಯವರು ತಂದು ಬಾವಿಯಲ್ಲಿ ಹಾಕಿದಾಗ ಆಲಸಿಯು ಸಂತೋಷಪಡುವನು ॥೭೫೯॥

ಅದರಂತೆ ತಾರುಣ್ಯದ ಉಪಭೋಗದಲ್ಲಿ ಮುಂದೆ ಬರುವ ಮುಪ್ಪಿನ ಚಿಂತೆಯನ್ನು ಯಾವನು ಮಾಡುವುದಿಲ್ಲವೋ, ಅವನೇ ಕೇವಲ ಅಜ್ಞಾನದ ರೂಪನು ॥೭೬೦॥

ತಾರುಣ್ಯದ ಭರದಲ್ಲಿ ಒಬ್ಬನು ಕುರುಡನನ್ನು ಬಗ್ಗಿದ ಮನುಷ್ಯನನ್ನು ಕಂಡರೆ ಆತನಿಗೆ ಚೇಷ್ಟೆಮಾಡಿ ತೋರಿಸು ವನು. ಆದರೆ ತನ್ನದೂ ಮುಂದೆ ಇದೇ ಸ್ಥಿತಿಯಾಗುವುದೆಂದು ಮನದಲ್ಲಿ ತರುವುದಿಲ್ಲ ॥೭೬೧॥

ಮತ್ತು ಮರಣದ ಚಿನ್ಹವಾದ ಮುಪ್ಪು ಬಂದು ಒದಗಿ ದರೂ ಇವನು ತಾರುಣ್ಯಾವಸ್ಥೆಯ ಘಮಿಂಡಿಯನ್ನು ಬಿಡುವುದಿಲ್ಲ ॥೭೬೨॥

ಅವನು ಅಜ್ಞಾನದ ಮನೆಯಾಗಿರುವನೆಂದು ನಿಶ್ಚಿತ ವಾಗಿ ತಿಳಿ. ಅದರಂತೆ ಇನ್ನು ಕೆಲವು ಅಜ್ಞಾನದ ಲಕ್ಷಣ ಗಳನ್ನು ಹೇಳುವೆ ಕೇಳು ॥೭೬೩॥

ಹುಲಿಗಳಿರುವ ಅರಣ್ಯದಲ್ಲಿ ಒಂದುವೇಳೆ ದನವು ಮೇಯ್ದು ದೈವಯೋಗದಿಂದ ಸುಖವಾಗಿ ತಿರುಗಿ ಬಂದರೆ ಅದೇ ವಿಶ್ವಾಸದಿಂದ ಅದು ಪುನಃ ಅದೇ ಅರಣ್ಯಕ್ಕೆ ಹೋಗುವುದು ॥೭೬೪॥

ಅಥವಾ ಯಾವ ಮನೆಯ ಸಂಪತ್ತಿನ ಮೇಲೆ ಸರ್ಪ ಕಾವಲಿದ್ದು, ಅಲ್ಲಿನ ದ್ರವ್ಯವನ್ನು ಯಾವನೊಬ್ಬನು ಸರ್ಪ ದಂಶವಿಲ್ಲದೇ ತಂದಾಗ ಅವನು ಸಂಪತ್ತಿನ ಮೇಲೆ ಸರ್ಪ ವಿರುವ ಬಗ್ಗೆ ವಿಶ್ವಾಸಪಡುವುದಿಲ್ಲ ॥೭೬೫॥

ಅದರಂತೆ ಕೆಲವು ಕಾಲದವರೆಗೆ ತನ್ನ ಶರೀರವು ನಿರೋಗಿಯಾಗಿರುವ ಗರ್ವದಿಂದ ಮುಂದೆ ರೋಗವು ಬಂದೀ ತೆಂದು ನಿಜವಾಗಿ ಮನ್ನಿಸುವುದಿಲ್ಲ ॥೭೬೬॥

ತನ್ನ ವೈರಿಯು ಮಲಗಿರುವನು, ಇನ್ನು ನಮ್ಮ ಅವರ ವೈರವು ಮುಗಿಯಿತು ಎಂದು ತಿಳಿದು ಸುಮ್ಮನಾದರೆ ಆತನು ಎದ್ದಾಗ ಅವನು ತನ್ನನ್ನು ಮಕ್ಕಳ ಸಮೇತ ಕೊಲ್ಲದೇ ಬಿಡನು ॥೭೬೭॥

ಯಾವನಿಗೆ ಹಸಿವೆ ಸರಿಯಾಗಿ ಆಗಿ ವೇಳೆಗೆ ತಕ್ಕಂತೆ ಆಹಾರ ಸೇವಿಸುತ್ತ, ನಿದ್ರೆಯನ್ನು ಸರಿಯಾಗಿ ಮಾಡುವನೋ, ಅವನಿಗೆ ಯಾವ ರೋಗವು ತಗಲುವುದಿಲ್ಲ. ಆಗ ಅವನು ಮುಂದಿನ ರೋಗದ ಚಿಂತನೆ ಮಾಡುವುದಿಲ್ಲ ॥೭೬೮॥

ಮತ್ತು ಸ್ತ್ರಿ, ಪುತ್ರಾದಿ, ಸಂಪತ್ತು ಹೇಗೆ ಹೇಗೆ ಹೆಚ್ಚುತ್ತ ಹೋಗುವುದೋ, ಹಾಗೆ ಹಾಗೆ ಆತನ ಕಣ್ಣಿಗೆ ಅಧಿಕವಾಗಿ ಮಬ್ಬು ಬಂದು ದುಂಧವಾಗುವುದು ॥೭೬೯॥

ಆದರೆ ಸ್ತ್ರೀ ಪುತ್ರಾದಿಕರ ವಿಯೋಗವು ಒಂದು ಕ್ಷಣದಲ್ಲಿ ಆದೀತು, ಒಂದೇ ಕ್ಷಣದಲ್ಲಿ ಸಂಪತ್ತು ನಾಶವಾಗಿ ವಿಪತ್ತು ಒದಗೀತು, ಎಂಬ ಮುಂದಿನ ದುಃಖವನ್ನು ನೋಡು ವುದಿಲ್ಲ ॥೭೭೦॥

ಅವನು ಅಜ್ಞಾನಿಯು ಮತ್ತು ಅರ್ಜುನಾ, ಯಾವನು ಈ ಮೃತ್ಯುಲೋಕದಲ್ಲಿ ಇಂದ್ರಿಯಗಳಿಗೆ ಸುಖವಾಗಿ ಮೇಯಲು ಬಿಡುವನೋ, ಅವನು ಅಜ್ಞಾನಿ ಎಂದು ತಿಳಿ ॥೭೭೧॥

ತಾರುಣ್ಯದ ಭರದಲ್ಲಿ ಸಂಪತ್ತಿನ ಮದದೊಂದಿಗೆ ಯಾವುದು ಸೇವಿಸಬೇಕು, ಯಾವುದು ಸೇವಿಸಬಾರದು, ಇದರ ವಿಚಾರವನ್ನು ಮಾಡದೇ ಎಲ್ಲವನ್ನು ಉಪಭೋಗಿ ಸುವನು ॥೭೭೨॥

ನ ಕರಾವೆ ತೇ ಕರೀ । ಅಸಂಭಾವ್ಯ ಮನೀ ಧರೀ । ಚಿಂತೂ ನಯೇ ತೇ ವಿಚಾರೀ । ಜಯಾಚೀ ಮತೀ ॥೭೭೩॥ ರಿಘೋ ಜೇಥ ನ ರಿಘಾವೇ । ಮಾಗೇ ಜೇ ನ ಘ್ಯಾವೇ । ಸ್ಪರ್ಶೇ ಜೇಥ ನ ಲಾಗಾವೇ । ಅಂಗ ಮನ ॥೭೭೪॥ ನ ಜಾವೇ ತೇಥ ಜಾಯೇ । ನ ಪಾಹಾವೇ ತೇ ಜೋ ಪಾಹೇ । ನ ಖಾವೇ ತೇ ಖಾಯೇ । ತೇಣೇಂಚಿ ತೋಷೇ ॥೭೭೫॥ ನ ಧರಾವಾ ತೋ ಸಂಗು । ನ ಲಾಗಾವೇ ತೇಥ ಲಾಗು । ನಾಚರಾವಾ ತೋ ಮಾರ್ಗು । ಆಚರೇ ಜೋ ॥೭೭೬॥ ನಾಯಕಾವೇ ತೇ ಆಇಕೇ । ನ ಬೋಲಾವೇ ತೇ ಬಕೇ । ಪರಿ ದೋಷ ಹೋತಿಲ ಹೇ ನ ದೇಖೇ । ಪ್ರವರ್ತತಾ ॥೭೭೭॥ ಅಂಗಾ ಮನಾಸಿ ರುಚಾವೇ । ಯೇತುಲೇನಿ ಕೃತ್ಯಾಕೃತ್ಯ ನಾಠವೇ । ಜೋ ಕರಣೇಯಾಚೇನಿ ನಾಂವೇ । ಭಲತೇಂಚಿ ಕರೀ ॥೭೭೮॥ ಪರಿ ಪಾಪ ಮಜ ಹೋಈಲ । ಕಾ ನರಕಯಾತನಾ ಯೇಈಲ । ಹೇ ಕಾಂಹೀಂಚಿ ಪುಢೀಲ । ದೇಖೇನಾ ಜೋ ॥೭೭೯॥ ತಯಾಚೇನಿ ಆಂಗಲಗೇ । ಅಜ್ಞಾನ ಜಗೀ ದಾಟುಗೇ । ಜೇ ಸಜ್ಞಾನಾಹೀ ಸಂಗೇ । ಝೋಂಬೋ ಸಕೇ ॥೭೮೦॥ ಪರೀ ಅಸೋ ಹೇ ಆಇಕ । ಅಜ್ಞಾನ ಚಿನ್ಹೇ ಆಣಿಕ । ಜೇಣೇ ತುಜ ಸಮ್ಯಕ । ಜಾಣವೇ ತೇ ॥೭೮೧॥ ತರೀ ಜಯಾಚೀ ಪ್ರೀತಿ ಪುರೀ । ಗುಂತಲೀ ದೇಖಸೀ ಘರೀ । ನವಗಂಧ ಕೇಸರೀ । ಭ್ರಮರೀ ಜೈಸೀ ॥೭೮೨॥ ಸಾಕರೇಚಿಯಾ ರಾಶೀ । ಬೈಸಲೀ ನುಠೇ ಮಾಶೀ । ತೈಸೇನಿ ಸ್ತ್ರೀಚಿತ್ತ ಆವೇಶೀ । ಜಯಾಚೇ ಮನ ॥೭೮೩॥ ಠೇಲಾ ಬೇಡೂಕ ಕುಂಡೀ । ಮಶಕ ಗುಂತಲಾ ಶೇಂಬುಡೀ । ಜೈಸಾ ಢೋರು ಸಬುಡಬುಡೀ । ರುತಲಾ ಪಂಕೀ ॥೭೮೪॥ ತೈಸೇ ಘರೀಹೂನಿ ನಿಘಣೇ । ನಾಹೀ ಜೀವೇ ಮನೇ ಪ್ರಾಣೇ । ಜಯಾ ಸಾಪ ಹೋಊನಿ ಅಸಣೇ । ಭಾಟೀ ತಿಯೇ ॥೭೮೫॥ ಪ್ರಿಯೋತ್ತಮಾಚಿಯಾ ಕಂಠೀ । ಪ್ರಮದಾ ಘೇ ಆಟೀ । ತೈಶೀ ಜೀವೇಸೀ ಕೋಪಟೀ । ಧರೂನಿ ಠಾಕೇ ॥೭೮೬॥ ಮಧು ರಸೋದ್ದೇಶೇ । ಮಧುಕರ ಜಚೇ ಜೈಸೇ । ಗೃಹಸಂಗೋಪನ ತೈಸೇ । ಕರೀ ಜೋ ಗಾ ॥೭೮೭॥ ಮ್ಹಾತಾರಪಣೀ ಜಾಲೇ । ಮಾ ಆಣಿಕ ಏಕ ವಿಪಾಇಲೇ । ತಯಾಚೇ ಕಾ ಜೇತುಲೇ । ಮಾತಾಪಿತರಾ ॥೭೮೮॥ ತೇತುಲೇನಿ ಪಾಡೇ ಪಾರ್ಥಾ । ಘರೀ ಜಯಾ ಪ್ರೇಮಆಸ್ಥಾ । ಆಣಿ ಸ್ತ್ರೀವಾಂಚೂನಿ ಸರ್ವಥಾ । ಜಾಣೇನಾ ಜೋ ॥೭೮೯॥ ತೈಸಾ ಸ್ತ್ರೀದೇಹೀ ಜೋ ಜೀವೇ । ಪಡೋನಿಯಾ ಸರ್ವಭಾವೇ । ಕೋಣ ಮೀ ಕಾಯ ಕರಾವೇ । ಕಾಂಹೀ ನೇಣೇ ॥೭೯೦॥

ಮಾತನಾಡಬಾರದನ್ನು ಮಾತನಾಡುವನು, ಅಸಂಭವ್ಯ ಬಗ್ಗೆ ಮನಸ್ಸು ಮಾಡುವನು ಮತ್ತು ಯಾವ ವಿಷಯಕ್ಕೆ ವಿಚಾರಿಸಬಾರದೋ, ಅದನ್ನು ಸದಾ ಮನದಲ್ಲಿ ತರುವನು ॥೭೭೩॥

ಎಲ್ಲಿ ಪ್ರವೇಶ ಮಾಡಬಾರದೋ, ಅಲ್ಲಿ ನುಗ್ಗುವನು, ಯಾವ ವಸ್ತು ಸ್ವೀಕರಿಸಬಾರದೋ, ಅದನ್ನು ಬೇಡುವನು. ಯಾವುದನ್ನು ಮನದಲ್ಲಿಯೇ ತರಬಾರದೋ ಇಲ್ಲವೇ ಮುಟ್ಟಬಾರದೋ, ಅದೆಲ್ಲವನ್ನೂ ಮಾಡುವನು॥೭೭೪॥

ಎಲ್ಲಿ ಹೋಗಬಾರದೋ, ಅಲ್ಲಿ ಹೋಗುವನು. ಯಾವುದು ನೋಡಬಾರದೋ, ಅದನ್ನು ನೋಡುವನು. ಯಾವುದು ತಿನ್ನಬಾರದೋ, ಅದನ್ನು ತಿನ್ನುವನು. ಹೀಗೆ ಮಾಡಿದಾಗಲೇ ಸಂತೋಷ ಪಡುವನು ॥೭೭೫॥

ಯಾರ ಸಂಗತಿ ಮಾಡಬಾರದೋ, ಅವರ ಸಂಗತಿ ಮಾಡುವನು. ಎಲ್ಲಿ ಸಂಬಂಧ ಇಡಬಾರದೋ, ಅಲ್ಲಿ ಸಂಬಂಧ ಬೆಳೆಸುವನು ಮತ್ತು ಯಾವ ಮಾರ್ಗವನ್ನು ಆಚರಿಸಬಾರದೋ, ಆ ಮಾರ್ಗವನ್ನು ಆಚರಿಸುವನು ॥೭೭೬॥

ಕೇಳಬಾರದ್ದನ್ನೆಲ್ಲ ಕೇಳುವನು, ಹೇಳಬಾರದ್ದನ್ನೆಲ್ಲ ಬಡಬಡಿಸುವನು. ಆದರೆ ಹೀಗೆ ಮಾಡಿದರೆ ತನ್ನಿಂದ ದೋಷ ವಾದೀತೆಂದು ಮನದಲ್ಲಿ ತರುವುದಿಲ್ಲ ॥೭೭೭॥

ಶರೀರಕ್ಕೆ ಮತ್ತು ಮನಸ್ಸಿಗೆ ರುಚಿಸಿದ್ದನ್ನು ಮಾಡುವುದರಿಂದ ಕರ್ತವ್ಯ, ಅಕರ್ತವ್ಯಗಳ ವಿಚಾರವನ್ನು ಮಾಡುವುದಿಲ್ಲ. ಮಾಡುವ ಹೆಸರಿನಿಂದ ಏನೇನೋ ಮಾಡು ವನು ॥೭೭೮॥

ಆದರೆ ಇಂದರಿಂದ ನನಗೆ ಪಾಪವು ಬಂದೀತು, ನರಕ ಯಾತನೆಯನ್ನು ಭೋಗಿಸಬೇಕಾದೀತು ಎಂದು ಮುಂದಿನ ಯಾವುದನ್ನೂ ನೋಡುವುದಿಲ್ಲ ॥೭೭೯॥

ಇಂತಹ ಧರ್ಮಭ್ರಷ್ಟರ ಸಂಗತಿಯಿಂದ ಜಗತ್ತಿನಲ್ಲಿ ಎಲ್ಲ ಕಡೆ ಅತಿಶಯವಾಗಿ ಅಜ್ಞಾನವು ಹರಡುವುದು ಮತ್ತು ಈ ಅಜ್ಞಾನವು ಬಲಿಷ್ಠವಾಗಿ ಜ್ಞಾನಕ್ಕೂ ಹಿಂದಕ್ಕೆ ತಳ್ಳುವುದು ॥೭೮೦॥

ಆದರೆ, ಇದು ಇರಲಿ, ಯಾವುದರಿಂದ ನಿನಗೆ ಅಜ್ಞಾನದ ಸ್ವರೂಪವು ಸ್ಪಷ್ಟವಾಗಿ ತಿಳಿಯುವಂತೆ ಇನ್ನು ಕೆಲವು ಲಕ್ಷಣಗಳನ್ನು ಹೇಳುವೆನು ಕೇಳು ॥೭೮೧॥

ಭ್ರಮರದ ಚಿತ್ತವು ಹೊಸದಾಗಿ ಅರಳಿದ ಕುಸುಮದ ಮೇಲೆ ಆಸಕ್ತಿ ಇರುವಂತೆ ಇವನ ಪ್ರೀತಿಯು ಮನೆಯಲ್ಲಿ ಅಂಟಿಕೊಂಡಿರುವುದು ॥೭೮೨॥

ಸಕ್ಕರೆಯ ರಾಶಿಯ ಮೇಲಿಂದ ನೊಣವು ಏಳುವುದಿಲ್ಲ. ಅದರಂತೆ ಆತನ ಮನಸ್ಸು ಸ್ತ್ರೀಯಲ್ಲಿ ಆಸಕ್ತವಾಗಿರುವುದು ॥೭೮೩॥

ಕಪ್ಪೆಯು ನೀರಿನ ಕುಂಡದಿಂದ ಹೊರಗೆ ಬರುವುದಿಲ್ಲ. ನೊಣವು ಸಿಂಬಳದಲ್ಲಿ ಸಿಕ್ಕು ಹೊರಗೆ ಬರುವುದಾಗು ವುದಿಲ್ಲ. ಅಥವಾ ದನವು ಆಳವಾದ ಅರಲಿನಲ್ಲಿ ಸಿಕ್ಕು ಹೊರಗೆ ಬರಲಿಕ್ಕಾಗುವುದಿಲ್ಲ ॥೭೮೪॥

ಅದರಂತೆ ಈತನು ಜೀವದಿಂದ, ಮನದಿಂದ, ಪ್ರಾಣದಿಂದ ಮನೆಬಿಟ್ಟು ಹೊರಗೆ ಎಂದೂ ಹೊರಡು ವುದಿಲ್ಲ, ಮತ್ತು ಸತ್ತಾಗ ಅದೇ ಹಾಳುಮನೆಯಲ್ಲಿ ಸರ್ಪ ವಾಗಿ ಇರುವನು ॥೭೮೫॥

ತರುಣಿಯು ತನ್ನ ಪ್ರಿಯತಮನ ಕೊರಳಿಗೆ ಆಲಿಂಗಿಸು ವಂತೆ ಆತನು ತನ್ನ ಚಿಕ್ಕದಾದ ಮನೆಗೆ ಜೀವದಿಂದ ಮೋಹಿಸಿ ರುವನು ॥೭೮೬॥

ಜೇನಿನ ಸಂರಕ್ಷಣೆಗಾಗಿ ಜೇನು ನೊಣಗಳು ಕಷ್ಟ ಪಡುವಂತೆ ಇವನು ಯಾವುದೇ ಬಂದ ಕಷ್ಟಗಳನ್ನು ಸೋಸುತ್ತ ತನ್ನ ಮನೆಯ ಸಂರಕ್ಷಣೆಯನ್ನು ಮಾಡುವನು ॥೭೮೭॥

ಮುಪ್ಪಾವಸ್ಥೆಯಲ್ಲಿ ಆದ, ಅದು ಒಬ್ಬನೇ ಒಬ್ಬ ಮಗನು ಇದ್ದನೆಂದರೆ ಅವನ ಮೇಲೆ ತಂದೆ ತಾಯಿಯವರ ಪ್ರೇಮವು ಎಷ್ಟು ಇರುವುದೋ ॥೭೮೮॥

ಅಷ್ಟೊಂದು ಪ್ರೇಮವು ಆತನ ಮನೆಯ ಮೇಲೆ ಇರು ವುದು ಮತ್ತು ಅರ್ಜುನಾ, ಆತನಿಗೆ ಸ್ತ್ರೀಹೊರತಾಗಿ ಜಗತ್ತಿ ನಲ್ಲಿ ಪ್ರಿಯವಾದ ವಸ್ತುವೇ ಇರುವುದಿಲ್ಲ ॥೭೮೯॥

ಅದೇ ಪ್ರಕಾರವಾಗಿ ಇವನು ಜೀವ ಭಾವದಿಂದ ಸ್ತ್ರೀಯನ್ನು ಪ್ರೀತಿಸುವನು ಮತ್ತು ತಾನು ಯಾರು, ತನ್ನ ಸ್ವಾರ್ಥಕತೆ ಯಾವುದರಿಂದ ಆದೀತು? ಇದಾವುದೂ ತಿಳಿಯುವುದಿಲ್ಲ ॥೭೯೦॥

ಮಹಾಪುರಾಷಾಚೇ ಚಿತ್ತ । ಜಾಲಿಯಾ ವಸ್ತುಗತ । ಠಾಕೇ ವ್ಯವಹಾರಜಾತ । ಜಯಾಪರೀ ।।೬೯೧।। ಹಾನಿ ಲಾಜ ನ ದೇಖೇ । ಪರಾಪವಾದು ನಾಇಕೇ । ಜಯಾಚೀ ಇಂದ್ರಿಯೇ ಏಕಮುಖೇ । ಸ್ತ್ರಿಯಾ ಕೇಲೀ ।।೬೯೨।। ಚಿತ್ತ ಆರಾಧೀ ಸ್ತ್ರಿಯೇಚೇ । ಆಣಿ ತಿಯೇಚೇನಿ ಛಂದೇ ನಾಚೇ । ಮಾಕಡ ಗಾರುಡಿಯಾಚೇ । ಜೈಸೇ ಹೋಯ ।।೬೯೩।। ಆಪಣಪೇಹೀ ಶಿಣವೀ । ಇಷ್ಟಮಿತ್ರ ದುಃಖವೀ । ಮಗ ಕವಡಾಚಿ ವಾಢವೀ । ಲೋಭೀ ಜೈಸಾ ।।೬೯೪।। ತೈಸಾ ದಾನಪುಣ್ಯೇ ಖಾಂಚೀ । ಗೋತ್ರಕುಟುಂಬಾ ವಂಚೀ । ಪರೀ ಗಾರೀ ಭರೀ ಸ್ತ್ರಿಯೇಚೀ । ಉಣೀ ಹೋ ನೇದೀ ।।೬೯೫।। ಪೂಜಿತೀ ದೈವತೇ ಜೋಗಾವೀ । ಗುರೂತೇ ಬೋಲೇ ಝಕವೀ । ಮಾಯಬಾಪಾ ದಾವೀ । ನಿದಾರಪಣ ।।೬೯೬।। ಸ್ತ್ರೀಯೇಚ್ಯಾ ತರೀ ವಿಖೀ । ಭೋಗಸಂಪತ್ತೀ ಅನೇಕೀ । ಆಣೀ ವಸ್ತು ನಿಕೀ । ಜೇ ಜೇ ದೇಖೇ ।।೬೯೭।। ಪ್ರೇಮಾಥಿಲೇನಿ ಭಕ್ತೀ । ಜೈಸೇನಿ ಭಜಿಜೇ ಕುಳದೈವತೇ । ತೈಸಾ ಏಕಾಗ್ರಚಿತ್ತೇ । ಸ್ತ್ರೀ ಜೋ ಉಪಾಸೀ ।।೬೯೮।। ಸಾಚ ಆಣಿ ಚೋಖ । ತೇ ಸ್ತ್ರಿಯೇಸೀಚಿ ಅಶೇಖ । ಏರಾವಿಷಯೀ ಜೋಗಾವಣೂಕ । ತೇಂಹೀ ನಾಹೀ ।।೬೯೯।। ಇಯೇತೇ ಹನಕೋಣೀ ದೇಖೈಲ । ಇಯೇಸೀ ವೇಖಾವೇ ಜಾಈಲ । ತರೀ ಯುಗಚಿ ಬುಡೈಲ । ಐಸೇ ಜಯಾ।।೮೦೦।। ನಾಯಟ್ಯಾಂಭೇಣ । ನ ಮೋಡಿಜೇ ನಾಗಾಂಚೀ ಆಣ । ತೈಸೀ ಪಾಳೀ ಉಣಖುಣ । ಸ್ತ್ರೀಯೇಚೀ ಜೋ ।।೮೦೧।। ಕಿಂಬಹುನಾ ಧನಂಜಯಾ । ಸ್ತ್ರೀಚಿ ಸರ್ವಸ್ವ ಜಯಾ । ಆಣಿ ತಿಯೇಚಿಯಾ ಜಾಲಿಯಾ । ಲಾಗೀ ಪ್ರೇಮ ।।೮೦೨।। ಆಣಿಕಹೀ ಜೇ ಸಮಸ್ತ । ತಿಯೇಚೇ ಸಂಪತ್ತಿಜಾತ । ತೇ ಜೀವಾಹೂನಿ ಆಪ್ತ । ಮಾನೀ ಜೋ ಕಾ ।।೮೦೩।। ಜೋ ಅಜ್ಞಾನಾಸೀ ಮೂಳ । ಅಜ್ಞಾನ ತ್ಯಾಚೇನಿ ಬಳ । ಹೇ ಅಸೋ ಕೇವಳ । ತೋ ತೇಂಚಿ ರೂಪ ।।೮೦೪।। ಆಣಿ ಮಾತಲಿಯಾ ಸಾಗರೀ । ಮೋಕಲಲಿಯಾ ತರೀ । ಲಾಟಾಂಚ್ಯಾ ಯೇರಝಾರೀ । ಆಂದೋಳೇ ಜೇವೀ ।।೮೦೫।। ತೇವೀ ಪ್ರಿಯ ವಸ್ತು ಪಾವೇ । ಆಣಿ ಸುಖೇ ಜೋ ಉಂಚಾವೇ । ತೈಸಾಚಿ ಅಪ್ರಿಯಾಸವೇ । ತಳವಟು ಘೇ ।।೮೦೬।। ಐಸೇನಿ ಜಯಾಚೇ ಚಿತ್ತೀ । ವೈಷಮ್ಯ ಸಾಮ್ಯಾಚೀ ವಾಖತೀ । ವಾಹೇ ತೋ ಮಹಾಮತೀ । ಅಜ್ಞಾನ ಗಾ ।।೮೦೭।। ಆಣಿ ಮಾಝ್ಯಾ ಠಾಯೀ ಭಕ್ತೀ । ಫಳಾಲಾಗೀ ಜಯಾ ಆರ್ತೀ । ಧನೋದ್ದೇಶೇ ವಿರಕ್ತೀ । ನಟಣೇ ಜೇವೀ ।।೮೦೮।।

ಯಾವ ಪ್ರಕಾರವಾಗಿ ಮಹಾಪುರುಷನ ಚಿತ್ತವು ಬ್ರಹ್ಮಸ್ವರೂಪದಲ್ಲಿ ಲೀನವಾದಾಗ್ಗೆ ಆತನ ಎಲ್ಲ ವ್ಯವಹಾರಗಳು ನಿಲ್ಲುವುವೋ ।।೭೯೧।।

ಅದರಂತೆ ಆತನು ತನ್ನ ಸರ್ವಸ್ವವನ್ನು ಸ್ತ್ರೀಯಳಿಗೆ ಮಾರಿಕೊಂಡಿರುವನು. ಅವನು ತನ್ನ ಹಾನಿ, ಲೋಕ ಲಜ್ಜಾ, ಪರಾಪವಾದ ಯಾವುದಕ್ಕೂ ಲಕ್ಷಗೊಡುವುದಿಲ್ಲ ।।೭೯೨।।

ಮಂಗವು ಗಾರುಡಿಗನ ವಶದಲ್ಲಿರುವಂತೆ, ಇವನು ಮನದಲ್ಲಿ ಸ್ತ್ರೀಯಳ ಧ್ಯಾನ ಹಿಡಿದು ಆಕೆಯ ಬಯಕೆಯಂತೆ ಕುಣಿಯುವನು ।।೭೯೩।।

ತಾನು ಅತಿಶಯವಾಗಿ ಕಷ್ಟಗಳನ್ನು ಸೋಸಿ, ಆಪ್ತೇಷ್ಟರ ಮನಸ್ಸನ್ನು ನೋಯಿಸಿ, ಧನಲೋಭಿಯು ದ್ರವ್ಯವನ್ನು ಗಳಿಸಿ ಬೆಳೆಸುವನು ।।೭೯೪।।

ಅದರಂತೆ ದಾನ ಪುಣ್ಯಗಳನ್ನು ಮಾಡದೇ, ಕುಟುಂಬದ ಇತರರಿಗೆ ವಂಚಿಸಿ ತನ್ನ ಸ್ತ್ರೀಯಳ ವಿಷಯ ಇಚ್ಛೆಗಳನ್ನು ಪೂರ್ಣ ಮಾಡುವುದರಲ್ಲಿ ಏನೂ ಕೊರತೆ ಮಾಡುವುದಿಲ್ಲ ।।೭೯೫।।

ತನ್ನ ಆರಾಧ್ಯ ದೈವತದ ಸುಮ್ಮನೇ ಸಾಧಾರಣ ಪೂಜೆ ಮಾಡುವನು. ಗುರುಗಳಿಗೆ ಏನೋ ಹೇಳಿ ವಂಚಿಸುವನು. ತಂದೆ ತಾಯಿಯರ ಮುಂದೆ ಹಣದ ಅಡಚಣೆ ತೋರಿಸುವನು ।।೭೯೬।।

ಆದರೆ, ತನ್ನ ಸ್ತ್ರೀ ವಿಷಯಕ್ಕೆ ಆಕೆಯ ಭೋಗ ಸಂಪತ್ತಿಗಾಗಿ ಬೇಕಾಗುವ ಅನೇಕ ಉತ್ತಮ ವಸ್ತುಗಳನ್ನು ತಂದು ಕೊಡುವನು ।।೭೯೭।।

ಯಾವ ಪ್ರಕಾರವಾಗಿ ಪ್ರೇಮಳ ಭಕ್ತನು ತನ್ನ ಇಷ್ಟ ದೇವರನ್ನು ಭಜಿಸುವನೋ, ಅದೇ ಪ್ರಕಾರವಾಗಿ ಇವನು ಸ್ತ್ರೀಯಳನ್ನು ಏಕಾಗ್ರ ಚಿತ್ತದಿಂದ ಸೇವೆ ಮಾಡುವನು ।।೭೯೮।।

ಉತ್ತಮವಾಗಿರುವ ಮತ್ತು ಬೆಲೆಯುಳ್ಳ ಎಲ್ಲ ವಸ್ತುಗಳನ್ನು ತನ್ನ ಸ್ತ್ರೀಗೆ ತಂದುಕೊಡುವನು ಮತ್ತು ಉಳಿದ ಕುಟುಂಬದ ಜನರಿಗೆ ಕನಿಷ್ಠ ಬೇಕಾಗುವಷ್ಟು ಸಹ ತಂದು ಕೊಡುವುದಿಲ್ಲ ।।೭೯೯।।

ತನ್ನ ಸ್ತ್ರೀಯಳಿಗೆ ಯಾರಾದರೂ ನೋಡಿದರೆ ಅಥವಾ ವಿರುದ್ಧ ನಡೆದರೆ ಇವನಿಗೆ ಯುಗವೇ ಮುಳುಗಿದಂತೆ ಭಾಸವಾಗುವುದು (ಬಹಳ ಕೆಟ್ಟಾಗುವುದು) ।।೮೦೦।।

ತದ್ವ, ಗಜಕರ್ಣವಾದೀತೆಂದು ಈ ಭಯದಿಂದ ನಾಗಸರ್ಪದ ಹರಕೆ ಪೂರೈಸುವಂತೆ ತನ್ನ ಹೆಂಡತಿಯ ಎಲ್ಲ ಅಪೇಕ್ಷೆಗಳನ್ನು ಪೂರೈಸುವನು ।।೮೦೧।।

ಅರ್ಜುನಾ, ಹೆಚ್ಚಿಗೇನು ಹೇಳಬೇಕು? ಸ್ತ್ರೀಯೇ ಆತನಿಗೆ ದೇವರಂತೆ ಸರ್ವಸ್ವಳಾಗಿರುವಳು ಮತ್ತು ಆಕೆಯಿಂದ ಹುಟ್ಟಿದ ಪುತ್ರಾದಿಕರ ಮೇಲೆ ವಿಶೇಷ ಪ್ರೀತಿಯನ್ನು ಮಾಡುವನು ।।೮೦೨।।

ಮತ್ತು ಆಕೆಯ ಎಷ್ಟು ಆಪ್ತ ಸಂಬಂಧಿಕರಿರುವರೋ, ಅವರೆಲ್ಲರನ್ನೂ ತನ್ನ ಜೀವಕ್ಕಿಂತಲೂ ಹೆಚ್ಚೆಂದು ತಿಳಿಯುವನು ।।೮೦೩।।

ಆತನು ಅಜ್ಞಾನದ ಮೂಲನಾಗಿರುವನು ಮತ್ತು ಆತನಿಂದಲೇ ಅಜ್ಞಾನವು ಬೆಳೆಯುವುದು. ಹೆಚ್ಚಿಗೇನು ಹೇಳಬೇಕು? ಅವನು ಕೇವಲ ಅಜ್ಞಾನದ ರೂಪವೇ ಆಗಿರುವನು ।।೮೦೪।।

ಅಲ್ಲೋಲ ಕಲ್ಲೋಲವಾದ ಸಮುದ್ರದಲ್ಲಿ ಹಡಗವು ಮೇಲಿಂದ ಕೆಳಗೆ, ಕೆಳಗಿನಿಂದ ಮೇಲೆ ಆಗುತ್ತ ಹೊಯ್ದಾಡುತ್ತಿರುವುದು ।।೮೦೫।।

ಅದರಂತೆ ಪ್ರಿಯ ವಸ್ತುಗಳು ಪ್ರಾಪ್ತವಾದಲ್ಲಿ ಸುಖದ ಶಿಖರಕ್ಕೆ ಏರುವನು ಮತ್ತು ಅಪ್ರಿಯವಸ್ತು ದೊರಕಿದಲ್ಲಿ ಕೆಳಗೆ ಅಪ್ಪಳಿಸಿ ಬೀಳುವನು ।।೮೦೬।।

ಹೇ ಮಹಾಮತಿ ಅರ್ಜುನನೇ, ಈ ಪ್ರಕಾರವಾಗಿ ಯಾರ ಚಿತ್ತದಲ್ಲಿ ವಸ್ತುಗಳ ಲಾಭಾಲಾಭದಿಂದ ಹರ್ಷ ಶೋಕ ಉತ್ಪನ್ನವಾಗುವುದೋ, ಅವನು ಅಜ್ಞಾನಿಯು ।।೮೦೭।।

ಮತ್ತು ನನ್ನಲ್ಲಿ ಭಕ್ತಿ ಮಾಡುವನು, ಆದರೆ ಮನದಲ್ಲಿ ಫಲದ ಇಚ್ಛೆ ಮಾಡುವನು. ಯಾವ ಪ್ರಕಾರವಾಗಿ ಹೊರಗೆ ವಿರಕ್ತತನವನ್ನು ತೋರಿಸುತ್ತ, ಅಂತಃಕರಣದಲ್ಲಿ ಧನದ ಇಚ್ಛೆ ಮಾಡುವನೋ ।।೮೦೮।।

ನಾತರೀ ಕಾಂತಾಚ್ಯಾಮಾನಸೀ । ರಿಗೋನಿ ಸ್ವೈರಿಣೀ ಜೈಸೀ । ರಾಹಾಟೇ ಜಾರೇಸೀ । ಜಾವಯಾಲಾಗೀ ।೨೦೯॥ ತೈಸೀ ಮಾತೇ ಕಿರೀಟೀ । ಭಜತೀ ಗಾ ಪಾಉಟೀ । ಕರೂನಿ ಜೋ ದಿಠೀ । ವಿಷೋಸೂಯೇ ।೨೧೦॥ ಆಣಿ ಭಜಿನ್ನಲಿ ಯಾಸವೇ । ತೋ ವಿಷೋ ಜರೀ ನ ಪಾವೇ । ತರೀ ಸಾಂಡೀ ಮ್ಹಣೇ ಆಘವೇ । ಟವಾಳ ಹೇ ।೨೧೧॥ ಕುಣಬಟ ಕುಳವಾಡೀ । ತೈಸಾ ಆನ ಆನ ದೇವ ಮಾಂಡೀ । ಆದಿಲಾಚೀ ಪರವಡೀ । ಕರೀ ತಯಾ ।೨೧೨॥ ತಯಾ ಗುರುಮಾರ್ಗಾ ಟೇಂಕೇ । ಜಯಾಚಾ ಸುಗರವಾ ದೇಖೇ । ತರೀ ತಯಾಚಾ ಮಂತ್ರ ಶಿಕೇ । ಏರು ನೇಘೇ ।೨೧೩॥ ಪ್ರಾಣಿಜಾತೇಸೀ ನಿಷ್ಠುರು । ಸ್ಥಾವರೀ ಬಹು ಭರು । ತೇವೀಂಚೀ ನಾಹೀ ಏಕಸರು । ನಿರ್ವಾಹೋ ಜಯಾ ।೨೧೪॥ ಮಾಝೀ ಮೂರ್ತಿ ನಿಫಜವೀ । ತೇ ಘರಾಚೇ ಕೋನೀ ಬೈಸವೀ । ಆಪಣ ದೇವ್ಹೋ ದೇವೀ । ಯಾತ್ರೇ ಜಾಯ ।೨೧೫॥ ನಿತ್ಯ ಆರಾಧನ ಮಾಝೇ । ಕಾಜೀ ಕುಳದೈವತಾ ಭಜೇ । ಪರ್ವವಿಶೇಷೇ ಕೀಜೇ । ಪೂಜಾ ಆನಾ ।೨೧೬॥ ಮಾಝೇ ಅಧಿಷ್ಠಾನ ಘರೀ । ಆಣೀ ವ್ಹೋವಸೇ ಆನಾಚೇ ಕರೀ । ಪಿತೃಕಾರ್ಯಾವಸರೀ । ಪಿತರಾಂಚಾ ಹೋಯ ।೨೧೭॥ ಏಕಾದಶೀಚ್ಯಾ ದಿವಶೀ । ಜೇತುಲಾ ಪಾಡು ಆಮ್ಹಾಂಸೀ । ತೇತುಲಾಚೀ ನಾಗಾಂಸೀ । ಪಂಚಮೀಚ್ಯಾ ದಿವಶೀ ।೨೧೮॥ ಚೌಥ ಮೋಟಕೀ ಪಾಹೇ । ಆಣಿ ಗಣೇಶಾಚಾಚೀ ಹೋಯೇ । ಚವದಾಸೀ ಮ್ಹಣೇ ಮಾಯೇ । ತುಝೀಚೀ ವ್ಹೋ ದುರ್ಗೇ ।೨೧೯॥ ನಿತ್ಯ ನೈಮಿತ್ತಿಕೇ ಕರ್ಮೇ ಸಾಂಡೀ । ಮಗ ಬೈಸೇ ನವಚಂಡೀ । ಆದಿತ್ಯವಾರೀ ವಾಢೀ । ಬಹಿರವಾ ಪಾತ್ರೇ ।೨೨೦॥ ಪಾಠೀ ಸೋಮವಾರ ಪಾವೇ । ಆಣಿ ಬೇಲೇಸೀ ಲಿಂಗಾ ಧಾಂವೇ । ಐಸಾ ಏಕಲಾಚಿ ಆಘವೇ । ಜೋಗಾವೀ ಜೋ ।೨೨೧॥ ಐಸಾಅಖಂಡ ಭಜನ ಕರೀ। ಉಗಾ ನೋಹೇ ಕ್ಷಣಭರೀ । ಅವಘೇನ ಗಾಂವದ್ವಾರೀ । ಅಹೇವ ಜೈಸೀ ।೨೨೨॥ ಐಸೇನಿ ಜೋ ಭಕ್ತು । ದೇಖಸೀ ಸೈರಾ ಧಾವಂತು । ಜಾಣ ಅಜ್ಞಾನಾಚಾ ಮೂರ್ತು । ಅವತಾರ ತೋ ।೨೨೩॥ ಆಣಿ ಏಕಾಂತೇ ಚೋಖಟೇ । ತಪೋವನೇ ತೀರ್ಥೇ ತಟೇ । ದೇಖೋನೀ ಜೋ ಗಾ ವಿಟೇ । ತೋಹಿ ತೋಚೀ ।೨೨೪॥ ಜಯಾ ಜನಪದೀ ಸುಖ । ಗಜಬಜೇಚೇ ಕವತಿಕ । ವಾನೂ ಆವಡೇ ಲೌಕಿಕ । ತೋಹಿ ತೋಚೀ ।೨೨೫॥ ಆಣಿ ಆತ್ಮಾ ಗೋಚರು ಹೋಯೇ । ಐಸೀ ಜೇ ವಿದ್ಯಾ ಆಹೇ । ತೇ ಆಇಕೋನಿ ಡೌರ ವಾಹೇ । ವಿದ್ವಾಂಸು ಜೋ ।೨೨೬॥

ಅಥವಾ ವ್ಯಭಿಚಾರಿ ಸ್ತ್ರೀಯು ತನ್ನ ಜಾರ ಕರ್ಮವನ್ನು ಮುಚ್ಚಿಕೊಳ್ಳಲು ತನ್ನ ಪತಿಯನ್ನು ತೋರಿಕೆಯಲ್ಲಿ ಆತನ ಮರ್ಜಿಯನ್ನು ಕಾಯುವಳೋ ॥೮೦೯॥

ಅದರಂತೆ ಕಿರೀಟಿಯೇ, ನನ್ನಲ್ಲಿ ಭಕ್ತಿಯಿದೆ ಎನ್ನುವಂತೆ ತೋರಿಸುತ್ತ ಇವನು ವಿಷಯಗಳಲ್ಲಿ ದೃಷ್ಟಿಯನ್ನು ಇಡುವನು ॥೮೧೦॥

ಮತ್ತು ವಿಷಯಪ್ರಾಪ್ತಿಗಾಗಿ ನನ್ನ ಭಕ್ತಿ ಮಾಡಿ, ಒಂದು ವೇಳೆ ಅದು ಸಿಗದಿದ್ದರೆ ನನ್ನ ಭಕ್ತಿಯನ್ನು ಬಿಟ್ಟು ಬಿಡುವುದಲ್ಲದೇ, ಇದೆಲ್ಲ ಸುಳ್ಳು ಎಂದು ಅಪಪ್ರಚಾರ ಮಾಡುವನು ॥೮೧೧॥

ಒಕ್ಕಲಿಗನು ತನ್ನ ಹೊಲದಲ್ಲಿ ಬೇರೆ ಬೇರೆ ಬೆಳೆಗಳನ್ನು ಬೆಳೆಸುವಂತೆ, ಇವನು ಅನೇಕ ದೇವರನ್ನು ಭಜಿಸುವನು ಮತ್ತು ಮೊದಲಿನ ದೇವರಂತೆಯೇ ಇನ್ನೊಂದಕ್ಕೆ ಮನ್ನಿಸುವನು ॥೮೧೨॥

ವಿಶೇಷವಾಗಿ ಆಡಂಬರದಿಂದ ಇರುವ ಗುರುಗಳಲ್ಲಿ ಭಕ್ತಿ ಇಡುವನು. ಆತನಿಂದ ಗುರುಮಂತ್ರವನ್ನು ಪಡೆಯುವನು ಮತ್ತು ಬೇರೆಯವರಿಗೆ ವಿಚಾರಿಸುವುದಿಲ್ಲ ॥೮೧೩॥

ಪ್ರಾಣಿಮಾತ್ರರಲ್ಲಿ ಕಠಿಣ ಶಬ್ದಗಳಿಂದ ಮಾತನಾಡಿ ಅವರನ್ನು ತಿರಸ್ಕರಿಸುವನು ಮತ್ತು ಕಲ್ಲಿನ ಮೂರ್ತಿಗಳಲ್ಲಿ ವಿಶೇಷವಾಗಿ ಪ್ರೇಮ ಮಾಡುವನು. ಆದರೆ ಏಕನಿಷ್ಠ ನಿರುವುದಿಲ್ಲ ॥೮೧೪॥

ನನ್ನ ಮೂರ್ತಿಯನ್ನು ಸಿದ್ಧಪಡಿಸಿ ಅದನ್ನು ಮನೆಯ ಒಂದು ಮೂಲೆಯಲ್ಲಿ ಸ್ಥಾಪನೆ ಮಾಡುವನು ಮತ್ತು ತಾನು ಇತರ ದೇವರುಗಳ ಯಾತ್ರೆಗಳನ್ನು ಮಾಡುವನು ॥೮೧೫॥

ದಿನಾಲೂ ನನ್ನ ಪೂಜೆಯನ್ನು ಮಾಡುವನು, ಕಾರ್ಯಪ್ರಾಪ್ತಿಗಾಗಿ ಕುಲದೇವತೆಯ ಪೂಜೆಯನ್ನು ಮಾಡುವನು ಮತ್ತು ಪರ್ವಕಾಲದಲ್ಲಿ ಮೂರನೆಯ ದೇವತೆಯ ಪೂಜೆ ಮಾಡುವನು ॥೮೧೬॥

ನಾನು ಮನೆಯಲ್ಲಿದ್ದಾಗಲೇ ಬೇರೆ ದೇವರ ಹರಕೆ ಹೊರುವನು, ಅದರಂತೆ ನಡೆಯುವನು ಮತ್ತು ಶ್ರಾದ್ಧ ಕಾಲದಲ್ಲಿ ಪಿತರರ ಪೂಜೆಯನ್ನು ಮಾಡುವನು॥೮೧೭॥

ಏಕಾದಶಿ ದಿನದಲ್ಲಿ ಹೇಗೆ ನನ್ನ ಭಕ್ತಿಯನ್ನು ಮಾಡುವನೋ, ಅದರಂತೆಯೇ ನಾಗಪಂಚಮಿಯ ದಿನದಲ್ಲಿ ನಾಗದೇವತೆಯನ್ನು ಭಜಿಸುವನು ॥೮೧೮॥

ಚೌತಿಯ ದಿನದಂದು ಗಣಪತಿಯ ಪೂರ್ಣ ಭಕ್ತಿ ಮಾಡುವನು ಮತ್ತು ಚತುರ್ದಶಿಯ ದಿನದಲ್ಲಿ ದೇವಿಯ ಪೂಜೆಯನ್ನು ಮಾಡಿ ''ಹೇ ಅಂಬೆಯೇ ನಾನು ನಿನ್ನವನಿರುವೆ'' ಎಂದು ಆಕೆಯನ್ನು ಪ್ರಾರ್ಥಿಸುವನು ॥೮೧೯॥

ನಿತ್ಯನೈಮಿತ್ತಕ ಕರ್ಮಗಳನ್ನು ಬಿಡುವನು, ನವರಾತ್ರಿಯಲ್ಲಿ ನವಚಂಡಿಯ ಪಾಠವನ್ನು ಒಂದೇ ಸ್ಥಳದಲ್ಲಿ ಕುಳಿತು ಮಾಡುವನು. ರವಿವಾರ ಬಂದಿತೆಂದರೆ ಭೈರವನ ಹೆಸರಿನಿಂದ ಖಿಚಡಿ ಪ್ರಸಾದ ಹಂಚುವನು॥೮೨೦॥

ಮುಂದೆ ಸೋಮವಾರ ಬಂದಿತೆಂದರೆ ಬಿಲ್ವದಳಗಳನ್ನು ತಂದು ಶಂಕರನಿಗೆ ಏರಿಸುವನು ಮತ್ತು ಒಬ್ಬನೇ ತಾನು ಎಲ್ಲ ದೇವತೆಗಳ ಸೇವೆಯನ್ನು ಮಾಡುವನು ॥೮೨೧॥

ಯಾವ ಪ್ರಕಾರವಾಗಿ ಊರಲ್ಲಿನ ವೇಶ್ಯೆಯು ತನ್ನ ಪ್ರೀತಿಯನ್ನು ತೋರಿಸುತ್ತ ಎಲ್ಲರ ಮನಸ್ಸನ್ನು ಆಕರ್ಷಿಸುವಂತೆ, ಈತನು ಕ್ಷಣಹೊತ್ತು ಸುಮ್ಮನೇ ಇರದೇ ವಿಷಯಪ್ರಾಪ್ತಿಗಾಗಿ ಎಲ್ಲ ದೇವತೆಗಳ ಪೂಜೆಯನ್ನು ಮಾಡುವನು ॥೮೨೨॥

ಈ ಪ್ರಕಾರವಾಗಿ ಯಾವನು ದೇವತೆಗಳ ಭಕ್ತಿಯನ್ನು ಮಾಡುತ್ತ ನಾಲ್ಕೂಕಡೆಗೆ ಧಾವಿಸುತ್ತಿರುವನೋ, ಅವನು ಅಜ್ಞಾನದ ಅವತಾರಿಯೇ ಹೌದು ॥೮೨೩॥

ಮತ್ತು ಉತ್ತಮವಾದ ಏಕಾಂತ ಸ್ಥಾನಗಳನ್ನು, ತಪೋವನಗಳನ್ನು, ತೀರ್ಥಕ್ಷೇತ್ರಗಳನ್ನು ಕಂಡು ಯಾವನ ಮನಸ್ಸಿಗೆ ಬೇಸರವಾಗುವುದೋ, ಅವನು ಸಹ ಕೇವಲ ಅಜ್ಞಾನದ ರೂಪವೇ ನಿಜ ॥೮೨೪॥

ಯಾವನಿಗೆ ದೊಡ್ಡ ಪಟ್ಟಣಗಳಲ್ಲಿ ಇರಲು ಸುಖವಾಗುವುದು, ಬಹಳಷ್ಟು ಜನರಲ್ಲಿ ಇರುವುದು ಹಿಡಿಸುವುದು ಮತ್ತು ಲೌಕಿಕದಲ್ಲಿನ ಮಾತನಾಡಲು ಬಹಳ ಹುರುಪು ಬರುವುದು. ಹೀಗಿರುವವನು ಕೇವಲ ಅಜ್ಞಾನಿಯು ॥೮೨೫॥

ಯಾವ ವಿದ್ಯೆಯಿಂದ ಆತ್ಮದ ಪ್ರಾಪ್ತಿಯಾಗುವುದೋ, ಅದನ್ನು ಹೇಳಿದರೆ ತಿರಸ್ಕರಿಸಿ ಅದನ್ನು ಕಿವಿಗೆ ಬೀಳಿಸಿಕೊಡುವುದಿಲ್ಲ ॥೮೨೬॥

ಉಪನಿಷದಾಂಕಡೇ ನ ವಚೇ । ಯೋಗಶಾಸ್ತ್ರ ನ ರುಚೇ । ಅಧ್ಯಾತ್ಮಜ್ಞಾನೀ ಜಯಾಚೇ । ಮನಚಿ ನಾಹೀ ॥೮೨೭॥ ಆತ್ಮಚರ್ಚಾ ಏಕೀ ಆಥೀ । ಐಸಿಯೇ ಬುದ್ಧೀಚೀ ಭಿಂತೀ । ಪಾಡೂನಿ ಜಯಾಚೀ ಮತೀ । ವೋಢಾಳ ಜಾಹಲೀ ॥೮೨೮॥ ಕರ್ಮಕಾಂಡ ತರೀ ಜಾಣೇ । ಮುಖೋದ್ಗತ ಪುರಾಣೇ । ಜ್ಯೋತಿಷೀ ತೋ ಮ್ಹಣೇ । ತೈಸೇಚಿ ಹೋಯ ॥೮೨೯॥ ಶಿಲ್ಪೀ ಅತಿ ನಿಪುಣ । ಸೂಪಕರ್ಮೀಹೀ ಪ್ರವೀಣ । ವಿಧೀ ಆಥರ್ವಣ । ಹಾತೀ ಆಥೀ ॥೮೩೦॥ ಕೋಕೀ ನಾಹೀ ಠೇಲೇ । ಭಾರತ ಕರೀ ಮ್ಹಣಿತಲೇ । ಆಗಮ ಆಘಾವಿಲೇ । ಮೂರ್ತ ಹೋತೀ ॥೮೩೧॥ ನೀತಿಜಾತ ಸುಝೇ । ವೈದ್ಯಕಹೀ ಬುಝೇ । ಕಾವ್ಯನಾಟಕೀ ದುಜೇ । ಚತುರ ನಾಹೀ ॥೮೩೨॥ ಸ್ಮೃತೀಂಚೀ ಚರ್ಚಾ । ದಂಶು ಜಾಣೇ ಗಾರುಡಿಯಾಚಾ । ನಿಘಂಟು ಪ್ರಜ್ಞೇಚಾ । ಪಾಇಕೀ ಕರೀ ॥೮೩೩॥ ಪೈ ವ್ಯಾಕರಣೀ ಚೋಖಡಾ । ತರ್ಕೀ ಅತಿಗಾಢಾ । ಪರೀ ಏಕ ಆತ್ಮಜ್ಞಾನೀ ಪುಡಾ । ಜಾತ್ಯಂಧು ಜೋ ॥೮೩೪॥ ತೇ ಏಕವಾಂಚೂನಿ ಆಘವಾ ಶಾಸ್ತ್ರೀ । ಸಿದ್ಧಾಂತ ನಿರ್ಮಾಣಧಾತ್ರೀ । ಪರೀ ಜಳೋ ತೇ ಮೂಳನಕ್ಷತ್ರೀ । ನ ಪಾಹೇ ಗಾ ॥೮೩೫॥ ಮೋರಾ ಆಂಗೀ ಅಶೇಷೇ । ಪಿಸೇ ಅಸತೀ ಡೋಳಸೇ । ಪರೀ ಏಕಲೀ ದೃಷ್ಟೀ ನಸೇ । ತೈಸೇ ತೇ ಗಾ ॥೮೩೬॥ ಜರೀ ಪರಮಾಣೂ ಏವಢೇ । ಸಂಜೀವನೀ ಮೂಳ ಜೋಡೇ । ತರೀ ಬಹು ಕಾಯ ಗಾಡೇ । ಭರಣೇ ಏರೇ? ॥೮೩೭॥ ಆಯುಷ್ಯೇವೀಣ ಲಕ್ಷಣೇ । ಪಿಸೇವೀಣ ಅಳಂಕರಣೇ । ವೋಹರೇವೀಣ ವಾಧಾವಣೇ । ತೋ ವಿಟಂಬು ಗಾ ॥೮೩೮॥ ತೈಸೇ ಶಾಸ್ತ್ರಜಾತ ಜಾಣ । ಆಘವೇಂಚಿ ಅಪ್ರಮಾಣ । ಪಾರ್ಥಾ ಅಧ್ಯಾತ್ಮಜ್ಞಾನೇವೀಣ । ಏಕಲೇನೀ ॥೮೩೯॥ ಯಾಲಾಗೀ ಅರ್ಜುನಾ ಪಾಹೀ । ಅಧ್ಯಾತ್ಮಜ್ಞಾನಾಚ್ಯಾ ಠಾಯೀ । ಜಯಾ ನಿತ್ಯಬೋಧು ನಾಹೀ । ಶಾಸ್ತ್ರಮೂಢಾ ॥೮೪೦॥ ತಯಾ ಶರೀರ ಜೇ ಜಾಲೇ । ತೇ ಅಜ್ಞಾನಾಚೇ ಬೀ ವಿರೂಢಲೇ । ತಯಾಚೇ ವ್ಯುತ್ಪನ್ನತ್ವ ಗೇಲೇ । ಅಜ್ಞಾನವೇಲೀ ॥೮೪೧॥ ತೋ ಜೇ ಜೇ ಬೋಲೇ । ತೇ ಅಜ್ಞಾನಚಿ ಫುಲಲೇ । ತಯಾಚೇ ಪುಣ್ಯ ಜೇ ಫಳಲೇ । ತೇ ಅಜ್ಞಾನ ಗಾ ॥೮೪೨॥ ಆಣಿ ಅಧ್ಯಾತ್ಮಜ್ಞಾನ ಕಾಂಹೀ । ಜೇಣೇ ಮಾನಿಲೇಂಚಿ ನಾಹೀ । ತೋ ಜ್ಞಾನಾರ್ಥು ನ ದೇಖೇ ಕಾಈ । ಹೇ ಬೋಲಾವೇ ಅಸೇ? ॥೮೪೩॥ ಐಲೀಚಿ ಥಡೀ ನ ಪವತಾ । ಪಳೇ ಜೋ ಮಾಘೌತಾ । ತಯಾ ಪೈಲದ್ವೀಪಿಂಚೀ ವಾರ್ತಾ । ಕಾಯ ಹೋಯ? ॥೮೪೪॥

ಉಪನಿಷತ್‌ಗಳನ್ನು ನೋಡುವುದಿಲ್ಲ, ಯೋಗ ಶಾಸ್ತ್ರಗಳಂತೂ ಹಿಡಿಸುವುದಿಲ್ಲ ಮತ್ತು ಅಧ್ಯಾತ್ಮ ಜ್ಞಾನದಲ್ಲಿ ಆತನ ಲಕ್ಷವು ಹೋಗುವುದೇ ಇಲ್ಲ ।।೮೨೭।।

ಯಾವ ಬುದ್ಧಿಯಿಂದ ಆತ್ಮಾನಾತ್ಮ ನಿರೂಪಣೆಯಾಗುವುದೋ, ಆ ಬುದ್ಧಿಯನ್ನು ಬಿಟ್ಟು ಆತನ ಮನಸ್ಸು ಇತರ ಶಾಸ್ತ್ರಗಳ ಕಡೆಗೆ ಹೋಗುವುದು ।।೮೨೮।।

ಇವನು ಕರ್ಮಕಾಂಡವನ್ನು ಪೂರ್ಣವಾಗಿ ತಿಳಿದಿರುತ್ತಾನೆ. ಇವನಿಗೆ ಪುರಾಣಗಳು ಮುಖೋದ್ಗತವಾಗಿವೆ. ಜೋತಿಷ್ಯದಲ್ಲಿ ಮಾತ್ರ ಅತಿ ನಿಪುಣನಿದ್ದು, ಹೇಳಿದಂತೆಯೇ ಆಗುತ್ತವೆ ।।೮೨೯।।

ಇವನು ಕಲಾಕೌಶಲ್ಯ ಶಾಸ್ತ್ರಗಳಲ್ಲಿ ಅತಿ ನಿಪುಣನು, ಪಾಕಶಾಸ್ತ್ರಗಳಲ್ಲಿ ಪ್ರವೀಣನು. ಜಾರಣ, ಮಾರಣ, ಉಚ್ಚಾಟನ ಮತ್ತು ವಶೀಕರಣ ಇವುಗಳೆಂದರೆ ಅವನ ಕೈಯಲ್ಲಿ ಇದ್ದಂತೆ ।।೮೩೦।।

ಕಾಮಶಾಸ್ತ್ರದಲ್ಲಿ ಪರಿಪೂರ್ಣನು, ಇದರ ವಿಷಯದಲ್ಲಿ ಮಹಾಭಾರತದಂತೆ ವ್ಯಾಖ್ಯಾನ ಮಾಡುವನು ಮತ್ತು ಶಾಸ್ತ್ರಗಳು ಆತನ ಮುಂದೆ ಮೂರ್ತಿಮಂತವಾಗಿ ನಿಂತಿರುವುವು ।।೮೩೧।।

ಇವನು ನೀತಿಶಾಸ್ತ್ರಗಳನ್ನು ಬಹಳ ಉತ್ತಮವಾಗಿ ಅರಿತಿರುವನು. ವೈದ್ಯಶಾಸ್ತ್ರಗಳಲ್ಲಿ ನಿಪುಣನಿರುವನು ಮತ್ತು ಕಾವ್ಯ, ನಾಟಕಗಳಲ್ಲಿ ಇವನ ಕೈಯನ್ನು ಯಾರೂ ಹಿಡಿಯುವಂತಿಲ್ಲ ।।೮೩೨।।

ಸ್ಮೃತಿಗಳ ಚರ್ಚೆ ಮಾಡುವನು, ಗಾರುಡಿಯ ಮಂತ್ರ ವಿದ್ಯೆಗಳನ್ನು ಅರಿತಿರುವನು. ವೇದಾಂತದೊಳಗಿನ ಶಬ್ದ ಕೋಶಗಳು ಈತನ ಸೇವಕರಾಗಿರುವರು ।।೮೩೩।।

ಹಾಗೆಯೇ ವ್ಯಾಕರಣದಲ್ಲಿಯೂ ನಿಪುಣನಿರುವನು ಮತ್ತು ನ್ಯಾಯಶಾಸ್ತ್ರದಲ್ಲಿ ಈತನ ಮತಿಯು ಗಹನವಾಗಿರುವುದು. ಆದರೆ ಒಂದೇ ಒಂದು ಆತ್ಮಜ್ಞಾನ ವಿಷಯಕ್ಕೆ ಹುಟ್ಟು ಕುರುಡನಾಗಿರುವನು ।।೮೩೪।।

ಇವನು ಆತ್ಮಜ್ಞಾನದ ಹೊರತಾಗಿ ಇತರ ಎಲ್ಲ ಶಾಸ್ತ್ರಗಳ ಸಿದ್ಧಾಂತಗಳಲ್ಲಿ ಆಧಾರಭೂತನಾಗಿರಬಹುದು. ಆದರೆ ಆ ಎಲ್ಲ ಜ್ಞಾನಗಳನ್ನು ಸುಡಬೇಕು. ಅದು ಮೂಲಾನಕ್ಷತ್ರಕ್ಕೆ ಹುಟ್ಟಿದ ಕೂಸಿನಂತೆ ಇದ್ದು, ನೀನು ಅದರ ಕಡೆಗೆ ಲಕ್ಷ ಕೊಡಬೇಡ ।।೮೩೫।।

ನವಿಲಿನ ಶರೀರ ತುಂಬ ಪುಚ್ಛಗಳಲ್ಲಿ ಕಣ್ಣುಗಳು ಇರುವುವು. ಆದರೆ ಅದಕ್ಕೆ ನಿಜವಾದ ದೃಷ್ಟಿ ಇಲ್ಲದಿದ್ದರೆ ಹೇಗೋ, ಅದರಂತೆ ಇವನ ವಿದ್ಯೆ ಸಂಪತ್ತಾಗಿದೆ ।।೮೩೬।।

ಸತ್ತವನನ್ನು ಬದುಕಿಸುವ ಗಿಡಮೂಲಿಕೆಯು ಪರಮಾಣುದಷ್ಟು ಸಿಕ್ಕರೆ ಸಾಕು, ಬೇರೆ ಗಿಡಮೂಲಿಕೆಗಳು ಬಂಡಿ ತುಂಬ ಇದ್ದರೂ ಏನು ಉಪಯೋಗ? ।।೮೩೭।।

ಉತ್ತಮ ಲಕ್ಷಣಗಳು ಇದ್ದು, ಅಲ್ಪಾಯುಷಿ ಇದ್ದರೆ, ಇಲ್ಲವೇ ರುಂಡವನ್ನು ಬಿಟ್ಟು ಮುಂಡಕ್ಕೆ ಅಲಂಕಾರಗಳನ್ನು ಧರಿಸಿದರೆ, ಅಥವಾ ವಧು ವರರನ್ನು ಬಿಟ್ಟು ಮೆರವಣಿಗೆಯನ್ನು ತೆಗೆದರೆ ಇವು ಎಲ್ಲವೂ ಅಪಮಾನಕಾರಕವು ।।೮೩೮।।

ಈ ಪ್ರಕಾರವಾಗಿ ಅರ್ಜುನಾ, ಒಂದು ಅಧ್ಯಾತ್ಮ ಜ್ಞಾನದ ಹೊರತಾಗಿ ಇತರ ಎಲ್ಲ ಶಾಸ್ತ್ರಗಳು ಅಪ್ರಮಾಣವಾಗಿರುವುವು ।।೮೩೯।।

ಅದಕ್ಕಾಗಿ ಅರ್ಜುನಾ, ಯಾವ ಕೇವಲ ಓದಿಕೊಂಡಿರುವ ಮೂರ್ಖನಿಗೆ ಆತ್ಮಜ್ಞಾನದ ನಿತ್ಯಬೋಧವಿರುವುದಿಲ್ಲ. ಇದನ್ನು ಧ್ಯಾನದಲ್ಲಿಡು ।।೮೪೦।।

ಆ ಮನುಷ್ಯನ ಶರೀರವೆಂದರೆ ಅಜ್ಞಾನದಿಂದ ಬೆಳೆದ ಬೀಜವೇ ಆಗಿರುವುದು ಮತ್ತು ಆದರ ಉತ್ಪನ್ನತೆಯು ಅಜ್ಞಾನದ ಬಳ್ಳಿಯಾಗಿರುವುದು ।।೮೪೧।।

ಆತನು ಮಾತನಾಡಿದ್ದೆಲ್ಲವೂ ಅಜ್ಞಾನದ ಹೂವುಗಳಾಗಿರುವುವು ಮತ್ತು ಆತನು ಯಾವ ಪುಣ್ಯದ ಆಚರಣೆಗಳನ್ನು ಮಾಡುವನೋ, ಅವು ಅಜ್ಞಾನದ ಫಲಗಳಾಗಿವೆ ।।೮೪೨।।

ಮತ್ತು ಇವನಲ್ಲಿ ಅಧ್ಯಾತ್ಮ ಜ್ಞಾನದಲ್ಲಿ ಶ್ರದ್ಧೆಯು ಇರುವುದಿಲ್ಲ. ಆತನಿಗೆ ಜ್ಞಾನಾರ್ಥ (ತತ್ತ್ವಾರ್ಥ) ಪ್ರಾಪ್ತವಾಗುವುದಿಲ್ಲವೆಂದು ಏಕೆ ಹೇಳಿ ತೋರಿಸಬೇಕು? ।।೮೪೩।।

ನದಿಯ ಈಚೆಯ ದಂಡೆಯವರೆಗೆ ಬಾರದೇ ಹೊರಳಿ ಹೋಗುವವನಿಗೆ ನದಿಯ ಆಚೆಯ ದಂಡೆಯ ವರ್ತಮಾನವು ಹೇಗೆ ತಿಳಿದೀತು? ।।೮೪೪।।

ಕಾ ದಾರವಂಠಾಚಿ ಜಯಾಚೇ । ಶೀರ ರೋವಿಲೇ ಖಾಂಚೇ । ತೋ ಕೇವೀ ಪರಿವರೀಂಚೇ । ಠೇವಿಲೇ ದೇಖೇ? ।।೮೪೫।। ತೇವೀ ಅಧ್ಯಾತ್ಮ ಜ್ಞಾನೀ ಜಯಾ । ಅನೋಳಖ ಧನಂಜಯಾ । ತಯಾ ಜ್ಞಾನಾರ್ಥು ದೇಖಾವಯಾ । ವಿಷೋ ಕಾಈ? ।।೮೪೬।। ಮ್ಹಣೌನಿ ಆತಾ ವಿಶೇಷೇ । ತೋ ಜ್ಞಾನಾಚೇ ತತ್ತ್ವ ನ ದೇಖೇ । ಹೇ ಸಾಂಗಾವೇ ಆಂಖೇಲೇಖೇ । ನ ಲಗೇ ತುಜ ।।೮೪೭।। ಜೇವ್ಹಾ ಸಗರ್ಭೇ ವಾಢಿಲೇ । ತೇವ್ಹಾಂಚಿ ಪೋಟೀಂಚೇ ಧಾಲೇ । ತೈಸೇ ಮಾಗಿಲೇ ಪದೇ ಬೋಲಿಲೇ । ತೇಂಚಿ ಹೋಯ ।।೮೪೮।। ವಾಂಚೂನಿಯಾ ವೇಗಳೇ । ರೂಪ ಕರಣೇ ಹೇ ನ ಮಿಳೇ । ಜೇವಿ ಅವಂತಿಲೇ ಆಂಧಳೇ । ತೇ ದುಜೇನಸೀಯೇ ।।೮೪೯।। ಏವಂ ಇಯೇ ಉಪರತೀ । ಅಜ್ಞಾನಚಿನ್ಹೇ ಮಾಗುತೀ । ಅಮಾನಿತ್ವಾದಿ ಪ್ರಭೃತೀ । ವಾಖಾಣಿಲೀ ।।೮೫೦।। ಜೇ ಜ್ಞಾನಪದೇ ಅಠರಾ । ಕೇಲಿಯಾ ಏರೀ ಮೋಹರಾ । ಅಜ್ಞಾನ ಯಾ ಆಕಾರಾ । ಸಹಜೇ ಯೇತೀ ।।೮೫೧।। ಮಾಗಾ ಶ್ಲೋಕಾಚೇನಿ ಅರ್ಧಾರ್ಧೇ । ಐಸೇ ಸಾಂಗಿತಲೇ ಶ್ರೀಮುಕುಂದೇ । ನಾ ಉಫರಾಟೀ ಇಯೇ ಜ್ಞಾನಪದೇ । ತೇಂಚಿ ಅಜ್ಞಾನ ।।೮೫೨।। ಮ್ಹಣೌನಿ ಇಯಾ ವಾಹಣೇ । ಕೇಲಿ ಮ್ಯಾ ಉಪಲವಣೇ । ವಾಂಚೂನಿ ದೂಧಾ ಮೇಳಳೂನೀ ಪಾಣೀ । ಫಾರ ಕೀಜೇ? ।।೮೫೩।। ತೈಸೇ ಜೇ ನ ಬಡಬಡೀ । ಪದಾಚೀ ಕೋರ ನ ಸಾಂಡೀ । ಮೂಳಧ್ವನೀಂಚಿಯೇ ವಾಢೀ । ನಿಮಿತ್ತ ಜಾಹಲೋ ।।೮೫೪।। ತಂವ ಶ್ರೋತೇ ಮ್ಹಣತೀ ರಾಹೇ । ಕೇ ಪರಿಹಾರಾ ಠಾವೋ ಆಹೇ? । ಬಿಹಿಸೀ ಕಾ ವಾಯೇ । ಕವಿಪೋಷಕಾ? ।।೮೫೫।। ತೂತೇ ಶ್ರೀಮುರಾರೀ । ಮ್ಹಣಿತಲೇ ಪ್ರಗಟ ಕರೀ । ಜೇ ಅಭಿಪ್ರಾಯ ಗವ್ಹರೀ । ಝಾಂಕಿಲೇ ಆಮ್ಹೀ ।।೮೫೬।। ತೇ ದೇವಾಚೇ ಮನೋಗತ । ದಾವಿತ ಆಹಾಸೀ ತೂ ಮೂರ್ತ । ಹೇಹೀ ಮ್ಹಣತಾ ಚಿತ್ತ । ದಾಟೈಲ ತುರೆಘೇ ।।೮೫೭।। ಮ್ಹಣೌನಿ ಅಸೋ ಹೇ ನ ಬೋಲೋ । ಪರಿ ಸಾವಿಯಾ ಗಾ ತೋಷಲೋ । ಜೇ ಜ್ಞಾನತರಿಯೇ ಮೇಳವಿಲೋ । ಶ್ರವಣಸುಖಾಚಿಯೇ ।।೮೫೮।। ಆತಾ ಇಯಾವರೀ । ಜೇ ತೋ ಶ್ರೀಹರೀ । ಬೋಲಿಲಾ ತೇ ಕರೀ । ಕಥನ ವೇಗಾ ।।೮೫೯।। ಇಯಾ ಸಂತವಾಕ್ಯಾಸರಿಸೇ । ಮ್ಹಣಿತಲೇ ನಿವೃತ್ತಿದಾಸೇ । ಜೇ ಅವಧಾರಾ ತರೀ ಐಸೇ । ಬೋಲಿಲೇ ದೇವೇ ।।೮೬೦।। ಮ್ಹಣತೀ ತುವಾ ಪಾಂಡವಾ । ಹಾ ಚಿನ್ಹಸಮುಚ್ಚಯೋ ಆಘವಾ । ಆಯಕಿಲಾ ತೋ ಜಾಣಾವಾ । ಅಜ್ಞಾನಭಾಗು ।।೮೬೧।।

ಅಥವಾ ಮನೆಯ ಹೊಸ್ತಿಲವನ್ನು ದಾಟುವಾಗಲೇ ಶಿರವನ್ನು ಕತ್ತರಿಸಿದರೆ ಆತನು ಮನೆಯೊಳಗಿನ ಇಟ್ಟ ವಸ್ತುಗಳನ್ನು ಹೇಗೆ ನೋಡಲು ಸಾಧ್ಯ? ।೮೪೫॥

ಅದರಂತೆ ಅರ್ಜುನಾ, ಅಧ್ಯಾತ್ಮ ಜ್ಞಾನದ ಮತ್ತು ಈತನ ಪರಸ್ಪರ ಪರಿಚಯವೇ ಇಲ್ಲದಿರುವಾಗ ಈತನಿಗೆ ತತ್ತ್ವಜ್ಞಾನವನ್ನು ನೋಡಲು ಹೇಗೆ ಸಿಗಬೇಕು? ।೮೪೬॥

ಆದ್ದರಿಂದ ಇಂತಹ ಮನುಷ್ಯನಿಗೆ ತತ್ತ್ವದ ಜ್ಞಾನವು ತಿಳಿಯುವುದಿಲ್ಲವೆಂದು ನಿನಗೆ ಬೇರೆ ಗಣಿತ ಮಾಡಿ ಹೇಳುವ ಕಾರಣವಿಲ್ಲ ।೮೪೭॥

ಗರ್ಭಿಣಿ ಸ್ತ್ರೀಯಳಿಗೆ ಊಟ ಬಡಿಸಿದಾಗಲೇ ಆಕೆಯ ಉದರದೊಳಗಿನ ಗರ್ಭಕ್ಕೆ ತೃಪ್ತಿಯಾಗುವುದು. ಅದರಂತೆ ಪೂರ್ವದಲ್ಲಿ ಹೇಳಿದ ಜ್ಞಾನ ಲಕ್ಷಣಗಳ ತದ್ವಿರುದ್ಧವೇ ಅಜ್ಞಾನವು ।೮೪೮॥

ಕುರುಡನಿಗೆ ಊಟಕ್ಕೆ ಆಮಂತ್ರಿಸಿದಾಗ ಆತನೊಂದಿಗೆ ಇನ್ನೊಬ್ಬನು ನಿಶ್ಚಿತವಾಗಿ ಬರುವನು. ಅದರಂತೆ ಜ್ಞಾನದ ಲಕ್ಷಣಗಳನ್ನು ಹೇಳಿದ ನಂತರ ಅಜ್ಞಾನದ ಲಕ್ಷಣಗಳು ತಾವಾಗಿಯೇ ಆಗುವುವು ।೮೪೯॥

ಈ ವಿಚಾರದಿಂದ ಜ್ಞಾನ ಲಕ್ಷಣಗಳನ್ನು (ಅಮಾನಿತ್ವದಿಂದ ತತ್ತ್ವಜ್ಞಾನಾರ್ಥ ಲಕ್ಷಣಗಳವರೆಗೆ) ಹೇಳಿದ ತದ್ವಿರುದ್ಧವಾದ ಅಜ್ಞಾನದ ಲಕ್ಷಣಗಳನ್ನು ಹೇಳಲಾಯಿತು ।೮೫೦॥

ಈ ಜ್ಞಾನದ ಹದಿನೆಂಟು ಲಕ್ಷಣಗಳನ್ನು ತಿರುಗಿ ಹಚ್ಚಿದಾಗ ಅಜ್ಞಾನದ ಆಕಾರ ಲಕ್ಷಣಗಳು ಸಹಜವಾಗಿ ಸಿದ್ಧವಾದವು ।೮೫೧॥

ಹಿಂದಕ್ಕೆ ಹನ್ನೊಂದನೆಯ ಶ್ಲೋಕದ ಉತ್ತರಾರ್ಧದ ಎರಡನೆಯ ಅರ್ಥದಲ್ಲಿ ಶ್ರೀಮುಕುಂದನು ಹೇಳಿದ್ದೇನೆಂದರೆ, ''ಇವು ಈ ಜ್ಞಾನದ ಲಕ್ಷಣಗಳು ಮತ್ತು ಇದರ ವಿರುದ್ಧವಾದ ಲಕ್ಷಣಗಳು ಅಜ್ಞಾನವು'' ।೮೫೨॥

ಆದ್ದರಿಂದಲೇ ಈ ಪ್ರಕಾರದಿಂದ ನಾನು ಅಜ್ಞಾನದ ವಿಚಾರ ಮಾಡಿರುವೆನು. ಇಲ್ಲದಿದ್ದರೆ ಹಾಲಿನಲ್ಲಿ ನೀರು ಕೂಡಿಸಿ ಬೆಳೆಸಿ ಏನು ಮಾಡಬೇಕಾಗಿದೆ? ।೮೫೩॥

ಅದರಂತೆ ಒಂದಕ್ಷರವನ್ನು ಸಹ ಬಿಡದೇ ಮತ್ತು ವ್ಯರ್ಥವಾಗಿ ಬಡಬಡಿಸದೇ ಮೂಲದಲ್ಲಿ ಯಾವ ಅರ್ಥವಿತ್ತೋ, ಅದನ್ನೇ ನಾನು ವಿಸ್ತಾರದಿಂದ ಹೇಳಿರುವೆನು ।೮೫೪॥

ಆಗ ಶ್ರೋತೃಗಳವರು ಹೇಳಿದರು:- ತಡೆಯಿರಿ, ಇಷ್ಟೊಂದು ದೊಡ್ಡ ಪರಿಹಾರ ಕೊಡಲಿಕ್ಕೆ ಯಾವ ಸ್ಥಳವಿರುವುದು? ರಸಾತ್ಮಕ ಕಾವ್ಯದಿಂದ ಪೋಷಣೆ ಮಾಡುವ ಕವಿ ಪೋಷಕನೇ ಯಾವ ಅಪರಾಧಕ್ಕಾಗಿ ಹೆದರುವೆ? ।೮೫೫॥

ನಿನಗೆ ಶ್ರೀ ಮುರಾರಿಯು ತಿಳಿಸಿರುವುದೇನೆಂದರೆ, ''ನಾವೇನು ಯಾವ ಅಭಿಪ್ರಾಯಗಳನ್ನು ಗುಪ್ತ ಸ್ಥಳದಲ್ಲಿ ಮುಚ್ಚಿಟ್ಟಿರುವೆವೋ, ಅದನ್ನು ನೀನು ಪ್ರಗಟಮಾಡು'' ।೮೫೬॥

ಆ ದೇವರ ಮನೋಗತವನ್ನು ನಮಗೆ ನೀನು ಸ್ಪಷ್ಟ ಮಾಡಿ ಹೇಳಿರುವಿ ಎಂದು ನಾವು ಹೇಳಿದರೆ ಅದು ನಿನಗೆ ಅದರಿಂದ ಹೃದಯತುಂಬಿ ಕಂಠ ಬಿಗಿದೀತು ।೮೫೭॥

ಆದ್ದರಿಂದ ನಾವು ಈಗ ಈ ಎಲ್ಲ ಮಾತುಗಳನ್ನು ಬಿಟ್ಟು ಬಿಡುವೆವು. ಆದರೆ ನೀವು ಸಧ್ಯದಲ್ಲಿ ನಮಗೆ ಶ್ರವಣಸುಖದ ಜ್ಞಾನ ನೌಕೆಯನ್ನು ಪ್ರಾಪ್ತಮಾಡಿ ಕೊಟ್ಟಿರುವುದಕ್ಕೆ ನಮಗೆ ಬಹಳ ಸಂತೋಷವಾಗಿದೆ ।೮೫೮॥

ಈಗ ಇನ್ನು ಮುಂದೆ ಶ್ರೀಹರಿಯು ಏನು ಹೇಳಿದನೆಂಬುವುದನ್ನು ಬೇಗನೇ ಕಥನ ಮಾಡಿರಿ ।೮೫೯॥

ಹೀಗೆ ಸಂತರ ವಾಕ್ಯಗಳನ್ನು ಕೇಳಿದೊಡನೆಯೇ, ನಿವೃತ್ತಿದಾಸರಾದ ಜ್ಞಾನೇಶ್ವರರು ಹಾಗಾದರೆ ಕೇಳಿರಿ, ದೇವನು ಹೀಗೆ ಹೇಳಿದನು ।೮೬೦॥

ಏನೇನು ಹೇಳಿದನೆಂದರೆ, ಅರ್ಜುನಾ, ಈ ಯಾವ ಸರ್ವ ಲಕ್ಷಣಗಳನ್ನು ಕೇಳಿರುವಿಯೋ, ಅವೆಲ್ಲವೂ ಅಜ್ಞಾನವೇ ಆಗಿರುವುವು ।೮೬೧॥

ಇಯಾ ಅಜ್ಞಾನವಿಭಾಗಾ । ಪಾಠೀ ದೇಊನಿ ಪೈ ಗಾ । ಜ್ಞಾನವಿಖೀ ಚಾಂಗಾ । ದೃಢಾ ಹೋಈಜೇ ॥೮೬೨॥ ಮಗ ನಿರ್ವಾಳಿಲೇನಿ ಜ್ಞಾನೇ । ಜ್ಞೇಯ ಭೇಟೇಲ ಮನೇ । ತೇ ಜಾಣಾವಯಾ ಅರ್ಜುನೇ । ಆಸ ಕೇಲೀ ॥೮೬೩॥ ತಂವ ಸರ್ವಜ್ಞಾಂಚಾ ರಾವೋ । ಮ್ಹಣೇ ಜಾಣೌನಿ ತಯಾಚಾ ಭಾವೋ । ಪರಿಸೇ ಜ್ಞೇಯಾಚಾ ಅಭಿಪ್ರಾವೋ । ಸಾಂಗೋ ಆತಾ ॥೮೬೪॥

ಜ್ಞೇಯಂ ಯತ್ತತ್ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಽಮೃತಮಶ್ನುತೇ ।
ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥೧೨॥

ತರೀ ಜ್ಞೇಯ ಐಸೇ ಮ್ಹಣಣೇ । ವಸ್ತು ತೇ ಏಣೇಂಚಿ ಕಾರಣೇ । ಜೇ ಜ್ಞಾನೇವಾಂಚೂನಿ ಕವಣೇ । ಉಪಾಯೇ ನಯೇ ॥೮೬೫॥ ಆಣೀ ಜಾಣಿತಲಯಾ ವರೌತೇ । ಕಾಂಹೀಂಚ ಕರಣೇ ನಾಹೀ ಜೇಥೇ । ಜಾಣಣೇಂಚಿ ತನ್ಮಯಾತೇ । ಆಣೀ ಜಯಾಚೇ ॥೮೬೬॥ ಜೇ ಜಾಣಿತಲೇಯಾಸಾಠೀ । ಸಂಸಾರ ಕಾಢೂನಿಯಾ ಕಾಂಠೀ । ಜಿರೋನಿ ಜಾಇಜೇ ಪೋಟೀ । ನಿತ್ಯಾನಂದಾಚ್ಯಾ ॥೮೬೭॥ ತೇ ಜ್ಞೇಯ ಗಾ ಐಸೇ । ಆದಿ ಜಯಾ ನಸೇ । ಪರಬ್ರಹ್ಮ ಆಪೈಸೇ । ನಾಮ ಜಯಾ ॥೮೬೮॥ ಜೇ ನಾಹೀ ಮ್ಹಣೋ ಜಾಇಜೇ । ತಂವ ವಿಶ್ವಾಕಾರೇ ದೇಖಿಜೇ । ಆಣಿ ವಿಶ್ವಚಿ ಐಸೇ ಮ್ಹಣಿಜೇ । ತರೀ ಹೇ ಮಾಯಾ ॥೮೬೯॥ ರೂಪ ವರ್ಣ ವ್ಯಕ್ತೀ । ನಾಹೀ ದೃಶ್ಯ ದೃಷ್ಟಾ ಸ್ಥಿತೀ । ತರೀ ಕೋಣೇ ಕೈಸೇ ಆಥೀ । ಮ್ಹಣಾವೇ ಪಾ ॥೮೭೦॥ ಆಣಿ ಸಾಚಚಿ ಜರೀ ನಾಹೀ । ತರೀ ಮಹದಾದಿ ಕೋಣೇ ಠಾಈ । ಸ್ಫುರತ ಕೈಂಚೇ ಕಾಈ । ತೇಣೇವೀಣ ಅಸೇ? ॥೮೭೧॥ ಮ್ಹಣೌನಿ ಆಥೀ ನಾಥೀ ಹೇ ಬೋಲೀ । ಜೇ ದೇಖೋನಿ ಮುಕೀ ಜಾಹಲೀ । ವಿಚಾರೇಸೀ ಮೋಡಲೀ । ವಾಟ ಜೇಥೇ ॥೮೭೨॥ ಜೈಸೀ ಭಾಂಡಘಟಶರಾವೀ । ತದಾಕಾರೇ ಅಸೇ ಪೃಥ್ವೀ । ತೈಸೇ ಸರ್ವ ಹೋಊನಿಯಾ ಸರ್ವೀ । ಅಸೇ ಜೇ ವಸ್ತು ॥೮೭೩॥

ಸರ್ವತಃಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಮ್ ।
ಸರ್ವತಃಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥೧೩॥

ಆಘವಾಂಚಿ ದೇಶೀ ಕಾಳೀ । ನವ್ಹತಾ ದೇಶಕಾಳಾವೇಗಳೀ । ಜೇ ಕ್ರಿಯಾ ಸ್ಥೂಳಾಸ್ಥೂಳೀ । ತೇಚಿ ಹಾತ ಜಯಾಚೇ ॥೮೭೪॥ ತಯಾತೇ ಯಾಕಾರಣೇ । ವಿಶ್ವಬಾಹು ಐಸೇ ಮ್ಹಣಣೇ । ಜೇ ಸರ್ವಚಿ ಸರ್ವಪಣೇ । ಸರ್ವದಾ ಕರೀ ॥೮೭೫॥

ಈ ಅಜ್ಞಾನ ಭಾಗದ ಕಡೆಗೆ ಲಕ್ಷವನ್ನು ಕೊಡದೇ ನೀನು ಜ್ಞಾನ ಪ್ರಾಪ್ತಿಯ ಕಡೆಗೆ ನಿನ್ನ ನಿಶ್ಚಯವನ್ನು ದೃಢಗೊಳಿಸು ।।೮೬೨।।

ಆಗ ಆ ಶುದ್ಧ ಜ್ಞಾನದ ಯೋಗದಿಂದ ನಿನಗೆ ಜ್ಞೇಯವು ಪ್ರಾಪ್ತವಾಗುವುದು. ಇದನ್ನು ಕೇಳಿದಾಕ್ಷಣ ಅರ್ಜುನನು ಅದನ್ನು ತಿಳಿಯುವುದಕ್ಕಾಗಿ ಮನಃ ಪೂರ್ವಕವಾಗಿ ಇಚ್ಛೆ ಮಾಡಿದನು ।।೮೬೩।।

ಆಗ ಸರ್ವಜ್ಞರ ರಾಜನಾಗಿರುವ ಶ್ರೀಕೃಷ್ಣನು ಅರ್ಜುನನ ಮನಸ್ಸಿನ ಭಾವವನ್ನು ಅರಿತು, ಆತನಿಗೆ ಹೀಗೆ ಹೇಳಿದನು:- ಈಗ ನಿನಗೆ ಜ್ಞೇಯವೆಂದರೆ ಏನೆಂಬುದು ಹೇಳುವೆ ಕೇಳು ।।೮೬೪।।

ಶ್ಲೋಕಾರ್ಥ :- ಯಾವುದನ್ನು ತಿಳಿದರೆ ಮುಕ್ತಿಯಾಗುವುದೋ, ಯಾವುದು ಅನಾದಿಯೋ, ಯಾವು ದು ಪರಬ್ರಹ್ಮವೋ, ಯಾವುದನ್ನು ಸತ್ತೆಯಿಂದಾಗಲೀ, ಅಸತ್ತೆಯಿಂದಾಗಲೀ ಹೇಳಲು ಬರುವುದಿಲ್ಲವೋ, ಆ ಜ್ಞೇಯವನ್ನು ಹೇಳುತ್ತೇನೆ ।।೧೨।।

ಇಲ್ಲಿ ನೋಡು, ಜ್ಞೇಯವೆಂದರೆ ಪರಮಾತ್ಮ ವಸ್ತುವಾ ಗಿರುವುದು. ಇದಕ್ಕೆ ಜ್ಞೇಯ ಎಂದು ಕರೆಯಲು ಕಾರಣವಿಷ್ಟೇ. ಅದು ಜ್ಞಾನದ ಹೊರತಾಗಿ ಬೇರೆ ಯಾವ ಉಪಾಯದಿಂದಲೂ ಪ್ರಾಪ್ತವಾಗುವುದಿಲ್ಲ ।।೮೬೫।।

ಮತ್ತು ಅದನ್ನು ತಿಳಿದ ಮೇಲೆ ಮುಮುಕ್ಷುವಿಗೆ ಯಾವ ಕರ್ತವ್ಯವೂ ಉಳಿಯುವುದಿಲ್ಲ. ಏಕೆಂದರೆ ಆತನ ಜ್ಞಾನವೇ ಮುಮುಕ್ಷುವಿಗೆ ತದ್ರೂಪತೆಗೆ ತರುವುದು ।।೮೬೬।।

ಯಾವುದನ್ನು ತಿಳಿದ ಮೇಲೆ ಮುಮುಕ್ಷುಗಳವರು ಸಂಸಾರದ ತ್ಯಾಗವನ್ನು ಮಾಡಿ ನಿತ್ಯಾನಂದದಲ್ಲಿ ನಿಮಗ್ನರಾಗುವರು ।।೮೬೭।।

ಈ ಜ್ಞೇಯವು ಹೇಗಿದೆ ಎಂದರೆ ಅದಕ್ಕೆ ಆದಿ ಎಂಬುದು ಇಲ್ಲ ಮತ್ತು ಅದಕ್ಕೆ ಸಹಜವಾಗಿಯೇ ಪರಬ್ರಹ್ಮವೆಂದು ಹೆಸರಿರುವುದು ।।೮೬೮।।

ಇದು ಇಲ್ಲವೆನ್ನಬೇಕೆಂದರೆ ವಿಶ್ವದ ರೂಪದಿಂದ ದೃಷ್ಟಿಗೆ ಬೀಳುವುದು ಮತ್ತು ವಿಶ್ವವೇ ಪರಬ್ರಹ್ಮವೆಂದು ಹೇಳಬೇಕೆಂದರೆ ಅದು ಮಾಯೆಯಾಗಿರುವುದು ।।೮೬೯।।

ಇದಕ್ಕೆ ರೂಪ, ವರ್ಣ, ಆಕಾರವಿರುವುದಿಲ್ಲ. ಹಾಗೆಯೇ ಇದು ದೃಷ್ಟಿಗ ಗೋಚರಿಸುವುದಿಲ್ಲ ಮತ್ತು ಅದು ಯಾವುದನ್ನು ನೋಡುವುದಿಲ್ಲ, ಅಂದಮೇಲೆ ''ಅದು ಇದೆ'' ಎಂದು ಯಾರು ಹೇಗೆ ಹೇಳಬೇಕು? ।।೮೭೦।।

ಒಳ್ಳೆಯದು, ಅದು ಇಲ್ಲವೆಂದು ತಿಳಿದು ನಡೆದರೆ, ಈ ಮಹತತ್ತ್ವವು ಎಲ್ಲಿಂದ ಸ್ಫುರಣವಾಯಿತು? ಮತ್ತು ಇದರ ಹೊರತಾಗಿ ಇರುವುದಾದರೂ ಏನು? ।।೮೭೧।।

ಆದ್ದರಿಂದ ಇದರ ವಿಷಯಕ್ಕೆ ''ಇದೆ'' ''ಇಲ್ಲ'' ಹೀಗೆ ಏನೂ ಹೇಳಲು ಬಾರದ್ದಕ್ಕೆ ದೇವರ ವಾಣಿಯೂ ಮೂಕವಾಯಿತು ಮತ್ತು ಅಲ್ಲಿ ವಿಚಾರಗಳು ನಿಂತು ಬಿಟ್ಟವು ।।೮೭೨।।

ಮಣ್ಣಿನಿಂದ ಮಡಿಕೆಗಳಾಗಿ ಅವುಗಳ ಆಕಾರದಂತೆ ಪೃಥ್ವಿಯು ಕಾಣುವುದು. ( ಆದರೆ ಅದರಿಂದ ಬೇರೆ ಇದೆ) ಅದರಂತೆ ಬ್ರಹ್ಮವು ತಾನೇ ಎಲ್ಲ ಜಗವನ್ನು ನಡೆಸಿದ್ದು ಅದರಲ್ಲಿ ಓತಪ್ರೋತವಾಗಿ ತುಂಬಿರುವನು. (ತಥಾಪಿ ಅದು ಅದರಿಂದ ಭಿನ್ನವಿರುವುದು) ।।೮೭೩।।

ಶ್ಲೋಕಾರ್ಥ :- ಆ ಬ್ರಹ್ಮವು ಸರ್ವದಿಕ್ಕುಗಳಲ್ಲಿಯೂ ಕೈ, ಕಾಲು, ಕಣ್ಣು, ತಲೆಗಳು, ಮುಖಗಳು, ಕಿವಿಗಳು ಉಳ್ಳದ್ದಾಗಿ ಲೋಕವನ್ನೆಲ್ಲಾ ಆವರಿಸಿದೆ ।।೧೩।।

ಸರ್ವದೇಶದಲ್ಲಿ, ಸರ್ವ ಕಾಲದಲ್ಲಿ, ಸ್ಥೂಲ, ಸೂಕ್ಷ್ಮ ವಸ್ತುಗಳಿಂದ ಆಗುವ ಕ್ರಿಯೆಯು ಇದರ ಸತ್ತೆಯಿಂದಲೇ ನಡೆಯುವುವು. ಕಾರಣ ಇದು ಸರ್ವತ್ರ ವ್ಯಾಪಕವಾಗಿದ್ದು, ಕ್ರಿಯೆಗೆ ಇದರ ಕೈವಾಡವೇ ಇದೆ ।।೮೭೪।।

ಆ ಬ್ರಹ್ಮಕ್ಕೆ ಇದೇ ಕಾರಣದಿಂದ ''ವಿಶ್ವಬಾಹು'' ಎಂದು ಹೇಳಿದೆ. ಏಕೆಂದರೆ ಇದು ಸರ್ವತ್ರವೂ ಸರ್ವ ಪ್ರಕಾರದಿಂದ ಸರ್ವದಾ ಕ್ರಿಯೆಯನ್ನು ಮಾಡಿಸುತ್ತಿರುವುದು. ಅಂದರೆ ಇದರ ಸತ್ತೆಯಿಂದ ಮಾತ್ರ ಕ್ರಿಯೆಗಳು ನಡೆಯುವುವು ।।೮೭೫।।

ಆಣಿ ಸಮಸ್ತಾ ಹೀ ಠಾಯಾ । ಏಕೇ ಕಾಳೀ ಧನಂಜಯಾ । ಆಲೇ ಅಸೇ ಮ್ಹಣೌನಿ ಜಯಾ । ವಿಶ್ವಾಂಘ್ರಿನಾಮ ।೮೭೬॥ ಪೈ ಸವಿತಯಾ ಆಂಗ ಡೋಳೇ । ನಾಹೀಂತ ವೇಗಳೇ ವೇಗಳೇ । ತೈಸೇ ಸರ್ವದೃಷ್ಟೀ ಸಕಳೇ । ಸ್ವರೂಪೇ ಜೇ ।೮೭೭॥ ಮ್ಹಣೌನಿ ವಿಸ್ವತಶ್ಚಕ್ಷು । ಹಾ ಅಚಕ್ಷೂಚ್ಯಾ ಠಾಯೀ ಪಕ್ಷು । ಬೋಲಾವಯಾ ದಕ್ಷು । ಜಾಹಲಾ ವೇದು ।೮೭೮॥ ಜೇ ಸರ್ವಾಂಚೇ ಶಿರಾವರೀ । ನಿತ್ಯ ನಾಂದೇ ಸರ್ವಾಪರೀ । ಐಸಿಯೇ ಸ್ಥಿತೀವರೀ । ವಿಶ್ವಮೂರ್ಧಾ ಮ್ಹಣಿಪೇ ।೮೭೯॥ ಪೈ ಗಾ ಮೂರ್ತಿ ತೇಂಚಿ ಮುಖ । ಹುತಾಶನಾ ಜೈಸೇ ದೇಖ । ತೈಸೇ ಸರ್ವಪಣೇ ಅಶೇಖ । ಭೋಕ್ತೇ ಜೇ ।೮೮೦॥ ಯಾಲಾಗಿ ತಯಾ ಪಾರ್ಥಾ । ವಿಶ್ವತೋಮುಖ ಹೇ ವ್ಯವಸ್ಥಾ । ಆಲೀ ವಾಕ್ಪಥಾ । ಶ್ರುತೀಚಿಯಾ ।೮೮೧॥ ಆಣೀ ವಸ್ತು ಮಾತ್ರೀ ಗಗನ । ಜೈಸೇ ಅಸೇ ಸಂಲಗ್ನ । ತೈಸೇ ಶಬ್ದ ಜಾತೀ ಕಾನ । ಸರ್ವತ್ರ ಜಯಾ ।೮೮೨॥ ಮ್ಹಣೌನಿ ಆಮ್ಹೀ ತಯಾತೇ । ಮ್ಹಣೋ ಸರ್ವತ್ರ ಆಇಕತೇ । ಏವಂ ಜೇ ಸರ್ವಾಂತೇ । ಆವರೂನಿ ಅಸೇ ।೮೮೩॥ ಏರ್ಹವೀ ತರೀ ಮಹಾಮತೀ । ವಿಶ್ವತಶ್ಚಕ್ಷು ಇಯಾ ಶ್ರುತೀ । ತಯಾಚಿಯೇ ವ್ಯಾಪ್ತೀ । ರೂಪ ಕೇಲೇ ।೮೮೪॥ ವಾಂಚೂನಿ ಹಸ್ತ ನೇತ್ರ ಪಾಯೇ । ಹೇ ಭಾಷ ತೇಥ ಕೇ ಆಹೇ? । ಸರ್ವ ಶೂನ್ಯಾಚಾ ನ ಸಾಹೇ । ನಿಷ್ಕರ್ಷು ಜೇ ।೮೮೫॥ ಪೈ ಕಲ್ಲೋಳಾತೇ ಕಲ್ಲೋಳೇ । ಗ್ರಾಸಿಜತ ಅಸೇ ಐಸೇ ಕಳೇ । ಪರೀ ಗ್ರಸಿತೇ ಗ್ರಾಸಾವೇಗಳೇ । ಅಸೇ ಕಾಈ? ।೮೮೬॥ ತೈಸೇ ಸಾಚಚಿ ಜೇ ಏಕ । ತೇಥ ಕೇ ವ್ಯಾಪ್ಯ ವ್ಯಾಪಕ? । ಪರೀ ಬೋಲಾವಯಾ ನಾವೇಕ । ಕರಾವೇ ಲಾಗೇ ।೮೮೭॥ ಪೈ ಶೂನ್ಯ ಜೈ ದಾವಾವೇ ಜಾಹಲೇ । ತೈ ಬಿಂದುಲೇ ಏಕ ಕೇಲೇ । ತೈಸೇ ಅದ್ವೈತ ಸಾಂಗಾವೇ ಬೋಲೇ । ತೈ ದ್ವೈತ ಕೀಜೇ ।೮೮೮॥ ಏರ್ಹವೀ ತರೀ ಪಾರ್ಥಾ । ಗುರುಶಿಷ್ಯಸತ್ಪಥಾ । ಆಡಳು ಪಡೇ ಸರ್ವಥಾ । ಬೋಲ ಖುಂಟೇ ।೮೮೯॥ ಮ್ಹಣೌನಿ ಗಾ ಶ್ರುತೀ । ದ್ವೈತ ಭಾವೇ ಅದ್ವೈತೀ । ನಿರೂಪಣಾಚೀ ವಾಹತೀ । ವಾಟ ಕೇಲೀ ।೮೯೦॥ ತೇಂಚಿ ಆತಾ ಅವಧಾರೀ । ಇಯೇ ನೇತ್ರಗೋಚರೇ ಆಕಾರೀ । ತೇ ಜ್ಞೇಯ ಗಾ ಜಯಾ ಪರೀ । ವ್ಯಾಪಕ ಅಸೇ ।೮೯೧॥

ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಮ್ ।
ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ।೧೪॥

ತರೀ ತೇ ಗಾ ಕಿರೀಟೀ ಐಸೇ । ಅವಕಾಶೀ ಆಕಾಶ ಜೈಸೇ । ಪಟೀ ಪಟು ಹೋಊನಿ ಅಸೇ । ತಂತು ಜೇವೀ ।೮೯೨॥

ಮತ್ತು ಅರ್ಜುನಾ, ಏಕಸಮಯಾವಚ್ಛೇದದಿಂದ ಇರುವುದರಿಂದ ಇದಕ್ಕೆ ''ವಿಶ್ವಾಂಘ್ರಿ'' ಎಂದು ಹೆಸರು ಬಂದಿರುವುದು ।।೫೭೬।।

ಯಾವ ಪ್ರಕಾರವಾಗಿ ಸೂರ್ಯನಿಗೆ ಶರೀರ ಮತ್ತು ಕಣ್ಣು ಈ ಅವಯವಗಳು ಬೇರೆ ಬೇರೆ ಇರುವುದಿಲ್ಲ. ಎಲ್ಲವನ್ನು ತನ್ನ ಪ್ರಕಾಶದಿಂದಲೇ ನೋಡುವನು ।।೫೭೭।।

ಆದ್ದರಿಂದ ಬ್ರಹ್ಮಕ್ಕೆ ಕಣ್ಣುಗಳಿಲ್ಲ. ಅದಕ್ಕಾಗಿ ವೇದವು ಅದಕ್ಕೆ ಬಹಳ ಬುದ್ಧಿವಂತಿಕೆಯಿಂದ ''ವಿಶ್ವತ ಚಕ್ಷು'' ಎಂದು ಹೇಳಿರುವುದು ।।೫೭೮।।

ಇದು ಎಲ್ಲಕ್ಕಿಂತಲೂ ಎತ್ತರವಾಗಿದೆ ಮತ್ತು ಸರ್ವ ಪ್ರಕಾರಗಳಿಂದ ನಿತ್ಯವಾಗಿದೆ. ಆದ್ದರಿಂದಲೇ ಇದಕ್ಕೆ ''ವಿಶ್ವಮೂರ್ಧ'' ಹೀಗೆ ಹೇಳುವರು ।।೫೭೯।।

ಇಲ್ಲಿ ನೋಡು, ಅಗ್ನಿಯ ಮೂರ್ತಿಯು ಅದೇ ಅದರ ಮುಖವಾಗಿರುವುದು. ಅದರಂತೆ ಯಾವ ಬ್ರಹ್ಮವು ಎಲ್ಲ ವಸ್ತುಗಳ ಉಪಭೋಗ ಭೋಗಿಸುವುದು ।।೫೮೦।।

ಪಾರ್ಥಾ, ಇದೇ ಕಾರಣದಿಂದ ಶ್ರುತಿಯು ಬ್ರಹ್ಮಕ್ಕೆ ''ವಿಶ್ವತೋಮುಖ''ವೆಂದು ಹೇಳಿರುವುದು ।।೫೮೧।।

ಮತ್ತು ಆಕಾಶವು ಯಾವ ಪ್ರಕಾರವಾಗಿ ಎಲ್ಲ ವಸ್ತುಗಳಲ್ಲಿ ಓತಪ್ರೋತವಾಗಿ ತುಂಬಿರುವುದೋ, ಅದರಂತೆ ಶಬ್ದ ಮಾತ್ರ ಸರಿಯಾಗಿ ಅದರ ಶ್ರವಣಗಳಿರುವುವು ।।೫೮೨।।

ಆದ್ದರಿಂದಲೇ ಈ ಬ್ರಹ್ಮಕ್ಕೆ ನಾವು ''ಸರ್ವತ್ರ ಕೇಳುವವನು'' ಎಂದು ಹೇಳುವೆವು. ಕಾರಣ ಇದು ಈ ಜಗದ ಎಲ್ಲೆಡೆಯಲ್ಲಿಯೂ ವ್ಯಾಪಿಸಿರುವುದು ।।೫೮೩।।

ಮಹಾಮತಿಯಾದ ಅರ್ಜುನನೇ, ವಾಸ್ತವಿಕವಾಗಿ ವಿಶ್ವತ ಚಕ್ಷು ಇತ್ಯಾದಿ ಶ್ರುತಿಯು ಪರಮಾತ್ಮನಿಗೆ ಅವಯವಗಳಿವೆ ಎಂದು ಸಿದ್ಧ ಮಾಡಲಿಕ್ಕೆ ಅಲ್ಲ, ಆದರೆ ಪರಮಾತ್ಮನ ವ್ಯಾಪಕತ್ವವನ್ನು ತೋರಿಸುವುದು ಅವುಗಳ ಅಭಿಪ್ರಾಯವಾಗಿದೆ ।।೫೮೪।।

ವಾಸ್ತವಿಕವಾಗಿ ಸರ್ವ ಪದಾರ್ಥಗಳ ಅಭಾವಕ್ಕೂ ಸಹಿಸುವುದಿಲ್ಲ. ಅಲ್ಲಿ ನೇತ್ರ, ಹಸ್ತ, ಪಾದ ಇತ್ಯಾದಿ ಅವಯವಗಳ ಮಾತೇ ಬೇಡ ।।೫೮೫।।

ಈಗ ಜನರ ದೃಷ್ಟಿಯಲ್ಲಿ ದೊಡ್ಡ ತೆರೆಯು ಸಣ್ಣ ತೆರೆಗಳಿಗೆ ನಾಶಮಾಡುವಂತೆ ತೋರುವುದು. ಆದರೆ ಆ ದೊಡ್ಡ ತೆರೆಯು ಸಣ್ಣ ತೆರೆಕ್ಕಿಂತ ನೀರಿನ ದೃಷ್ಟಿಯಿಂದ ಬೇರೆ ಇದೆಯೇ? ।।೫೮೬।।

ಆದ್ದರಿಂದ ವಸ್ತುತಃ ಒಂದೇ ಆಗಿರುವ ವಸ್ತುವಿನಲ್ಲಿ ವ್ಯಾಪ್ತಿ ಮತ್ತು ವ್ಯಾಪಕ ಎಂಬ ಭಾಷೆಗೆ ಅವಕಾಶವುಂಟೇ? ಆದರೆ ಅದರ ವರ್ಣನೆಗಾಗಿ ಅಥವಾ ಬೋಧಕ್ಕಾಗಿ ಕ್ಷಣ ಹೊತ್ತು ಈ ಭೇದವನ್ನು ಗ್ರಹಿಸಬೇಕಾಗುವುದು ।।೫೮೭।।

ಶೂನ್ಯವೆಂದರೆ ಸರ್ವ ಅಭಾವ ಅಥವಾ ಏನೂ ಇಲ್ಲ. ಆದರೆ ಇದನ್ನು ಬೋಧಿಸಬೇಕಾದ ಪ್ರಸಂಗದಲ್ಲಿ ಒಂದು ಚಿಕ್ಕ ವರ್ತುಲವನ್ನು ತೆಗೆಯುವರು. ಅದರಂತೆ ಅದ್ವೈತ ಬೋಧಿಸುವಾಗ ದ್ವೈತವನ್ನು ಆಶ್ರಯಿಸಬೇಕಾಗುವುದು ।।೫೮೮।।

ಇಲ್ಲದಿದ್ದರೆ, ಅರ್ಜುನಾ, ಶುದ್ಧವಾದ ಗುರು ಪರಂಪರೆಯು ನಷ್ಟವಾಗಿ ಅದ್ವೈತ ಚರ್ಚೆಯು ಕಿವಿಗೆ ಬೀಳದಂತಾ ದೀತು ।।೫೮೯।।

ಆದ್ದರಿಂದಲೇ ಶ್ರುತಿಗಳು ದ್ವೈತರೂಪದಿಂದ ಅದ್ವೈತದ ಪ್ರತಿಪಾದನೆಯನ್ನು ಮಾಡುವ ರಾಜಮಾರ್ಗ ಆರಂಭಿಸಿದವು ।।೫೯೦।।

ಅದನ್ನೇ ಈಗ ನಮ್ಮ ಕಣ್ಣುಗಳಿಗೆ ಕಾಣುವ ಆಹಾರಗಳಲ್ಲಿ ಬ್ರಹ್ಮವು ಹೇಗೆ ವ್ಯಾಪಕವಾಗಿದೆ ಎಂಬುವುದನ್ನು ಕೇಳು ।।೫೯೧।।

ಶ್ಲೋಕಾರ್ಥ :- ಇಂದ್ರಿಯ ವ್ಯಾಪಾರಗಳಿಂದ ಪ್ರಕಾಶಿಸುವಂತೆ ಕಂಡರೂ ಮೋಕ್ಷ ದೆಶೆಯಲ್ಲಿ ಸಕಲೇಂದ್ರಿಯ ರಹಿತವಾಗಿದೆ. ಯಾವುದನ್ನೂ ಅಂಟದಿದ್ದರೂ, ಸರ್ವವನ್ನೂ ಧರಿಸದೇ, ಗುರುಣರಹಿತವಾಗಿದ್ದರೂ ಗುಣಗಳನ್ನು ಅನುಭವಿಸುವುದಾಗಿದೆ ।।೧೪।।

ಇಲ್ಲಿ ನೋಡು ಅರ್ಜುನಾ, ಆ ಬ್ರಹ್ಮವೆಂದರೆ, ಯಾವ ಪ್ರಕಾರವಾಗಿ ಪೊಳ್ಳಿನಲ್ಲಿ ಎಲ್ಲ ಆಕಾಶವು ತುಂಬಿರುವುದು ಅಥವಾ ದಾರವು ವಸ್ತ್ರದಲ್ಲಿ ವಸ್ತ್ರ ರೂಪವಾಗಿ ಇರುವುದು ।।೫೯೨।।

ಉದಕ ಹೋಊನಿ ಉದಕೀ । ರಸು ಜೈಸಾ ಅವಲೋಕೀ । ದೀಪಪಣೇ ದೀಪಕೀ । ತೇಜ ಜೈಸೇ ।੯೯೩॥ ಕರ್ಪೂರತ್ವೇ ಕಾಪುರೀ । ಸೌರಭ್ಯ ಅಸೇ ಜಯಾಪರೀ । ಶರೀರ ಹೋಊನಿ ಶರೀರೀ । ಕರ್ಮ ಜೇವೀ ।੯೯೪॥ ಕಿಂಬಹುನಾ ಪಾಂಡವಾ । ಸೋನೇಚಿ ಸೋನಯಾಚಾ ರವಾ । ತೈಸೇ ಜೇ ಯಾ ಸರ್ವಾ । ಸರ್ವಾಂಗೀ ಅಸೇ ।੯೯೫॥ ಪರೀ ರವೇಪಣಾಮಾಜಿವಡೇ । ತಂವ ರವಾ ಐಸೇ ಆವಡೇ । ವಾಂಚೂನಿ ಸೋನೇ ಸಾಂಗಡೇ । ಸೋನಯಾ ಜೇವೀ ।੯೯೬॥ ಪೈ ಗಾ ವೋಘುಚಿ ವಾಂಕುಡಾ । ಪರೀ ವಾಣೀ ಉಜೂ ಸುಹಾಡಾ । ವನ್ಹೀ ಆಲಾ ಲೋಖಂಡಾ । ಲೋಹ ನವ್ಹೇ ಕೀ ।੯੯೭॥ ಘಟಾಕಾರೇ ವೇಂಟಾಳೇ । ತೇಥ ನಭ ಗಮೇ ವಾಟೋಳೇ । ಮಠೀ ತರೀ ಚೌಫಳೇ । ಆಯೇ ದಿಸೇ ।੯੯੮॥ ಪರೀ ತೇ ಅವಕಾಶ ಜೈಸೇ । ನೋಹಿಜತೀಚಿ ಕಾ ಆಕಾಶೇ । ಜೇ ವಿಕಾರ ಹೋಊನಿ ತೈಸೇ । ವಿಕಾರೀ ನೋಹೇ ।੯੯੯॥ ಮನ ಮುಖ್ಯ ಇಂದ್ರಿಯಾ । ಸತ್ವಾದಿ ಗುಣಾ ಯಯಾ । ಸಾರಿಖೇ ಐಸೇ ಧನಂಜಯಾ । ಆವಡೇ ಕೀರ ।੧੦੦੦॥ ಪೈ ಗುಳಾಚೀ ಗೋಡೀ । ನೋಹೇ ಬಾಂಧಯಾ ಸಾಂಗಡೀ । ತೈಸೀ ಗುಣ ಇಂದ್ರಿಯೇ ಫುಡೀ । ನಾಹೀ ತೇಥ ।੧੦੦੧॥ ಅಗಾ ಕ್ಷೀರಾಚಿಯೇ ದಶೇ । ಘೃತ ಕ್ಷೀರಾಕಾರೇ ಅಸೇ । ಪರೀ ಕ್ಷೀರಚಿ ನೋಹೇ ಜೈಸೇ । ಕಪಿಧ್ವಜಾ ।੧੦੦੨॥ ತೈಸೇ ಜೇ ಇಯೇ ವಿಕಾರೀ । ವಿಕಾರ ನೋಹೇ ಅವಧಾರೀ । ಪೈ ಆಕಾರಾ ನಾಮ ಭೋವರೀ । ಏರ ಸೋನೇ ತೇ ಸೋನೇ ।੧੦੦੩॥ ಇಯಾ ಉಘಡ ಮರ್ಹಾಟಿಯಾ । ತೇ ವೇಗಳೇಪಣ ಧನಂಜಯಾ । ಜಾಣ ಗುಣ ಇಂದ್ರಿಯಾ । ಪಾಸೋನಿಯಾ ।੧੦੦੪॥ ನಾಮರೂಪ ಸಂಬಂಧು । ಜಾತಿಕ್ರಿಯಾಭೇದು । ಹಾ ಆಕಾರಾಸೀಚ ಪ್ರವಾದು । ವಸ್ತೂಸಿ ನಾಹೀ ।੧੦੦੫॥ ತೇ ಗುಣ ನವ್ಹೇ ಕಹೀ । ಗುಣಾ ತಯಾ ಸಂಬಂಧು ನಾಹೀ । ಪರೀ ತಯಾಚ್ಯಾಚಿ ಠಾಯೀ । ಆಭಾಸತೀ ।੧੦੦੬॥ ಯೇತುಲೇಯಾಸಾಠೀ । ಸಂಭ್ರಾಂತಾಚ್ಯಾ ಪೋಟೀ । ಐಸೇ ಜಾಯ ಕಿರೀಟೀ । ಜೇ ಹೇಂಚಿ ಧರೀ ।੧੦੦੭॥ ತರೀ ತೇ ಗಾ ಧರಣೇ ಐಸೇ । ಆಭ್ರಾತೇ ಜೇವೀ ಆಕಾಶೇ । ಕಾ ಪ್ರತಿವದನ ಜೈಸೇ । ಆರಸೇನೀ ।੧੦੦੮॥ ನಾತರೀ ಸೂರ್ಯ ಪ್ರತಿಮಂಡಲ । ಜೈಸೇನಿ ಧರೀ ಸಲಿಲ । ಕಾ ರಶ್ಮಿ ಕರೀ ಮೃಗಜಳ । ಧರಿಜೇ ಜೇವೀ ।੧੦੦੯॥ ತೈಸೇ ಗಾ ಸಂಬಂಧೇವಿಣ । ಯಯಾ ಸರ್ವಾಂತೇ ಧರೀ ನಿರ್ಗುಣ । ಪರೀ ತೇ ವಾಯಾ ಜಾಣ । ಮಿಥ್ಯಾ ದೃಷ್ಟೀ ।੧੦੧੦॥

ರಸವು ಉದಕದಲ್ಲಿ ಉದಕರೂಪವಾಗಿರುವುದು. ತೇಜವು ದೀಪದಲ್ಲಿ ದೀಪರೂಪವಾಗಿರುವುದು ||೯೩||

ಸುಗಂಧವು ಕರ್ಪೂರದ ರೂಪದಲ್ಲಿ, ಕರ್ಪೂರದಲ್ಲಿ ತುಂಬಿರುವುದು ಮತ್ತು ಕ್ರಿಯೆಯು ಶರೀರದ ರೂಪದಿಂದ ಶರೀರದಲ್ಲಿ ದೃಷ್ಟಿಗೆ ಗೋಚರವಾಗುವುದು ||೯೪||

ಒಟ್ಟಿನಲ್ಲಿ ಅರ್ಜುನಾ, ಯಾವ ಪ್ರಕಾರವಾಗಿ ಬಂಗಾರದ ತುಕಡಿಯು ಬಂಗಾರದ ರೂಪದಲ್ಲಿಯೇ ದೃಷ್ಟಿಗೆ ಗೋಚರಿಸುವುದೋ, ಅದರಂತೆ ಯಾವ ಈ ಬ್ರಹ್ಮವು ಸರ್ವಜಗದ ಆದಿಕಾರಣವಿದ್ದು, ಸರ್ವದರಲ್ಲಿ ದೃಷ್ಟಿಗೆ ಗೋಚರಿಸುವುದು ||೯೫||

ಬಂಗಾರವು ಕಣದ ರೂಪದಲ್ಲಿ ದೃಷ್ಟಿಗೆ ಬಿದ್ದಾಗ ಅದು ಕಣದಂತೆ ಭಾಸವಾಗುತ್ತದೆ. ಆದರೆ ಬಂಗಾರ ಈ ದೃಷ್ಟಿಯಿಂದ ನೋಡಿದಾಗ ಆ (ರವೆ) ಕಣವು ಬಂಗಾರವೇ ಇರುವುದು ||೯೬||

ಅರ್ಜುನಾ, ನೀರಿನ ಪ್ರವಾಹವು ಡೊಂಕಾಗಿದ್ದರೆ, ನೀರು ಡೊಂಕಾಗಿ ಕಾಣಿಸುತ್ತದೆ. ಆದರೆ ನಿಜವಾಗಿಯೂ ನೀರು ಡೊಂಕಾಗಿರುವುದಿಲ್ಲ. ಕಬ್ಬಿಣವು ಕೆಂಪಾಗಿ ಕಾಯಿಸಿದಾಗ ಅದು ಕಬ್ಬಿಣವೇ ಇದ್ದು, ಅಗ್ನಿಯಲ್ಲ ||೯೭||

ಘಟದ ಆಕಾರದಿಂದ ಅವಕಾಶವನ್ನು ನೋಡಿದರೆ, ಅದು ವರ್ತುಲಾಕಾರವಾಗಿ ಕಾಣುವುದು. ಅದೇ ಆಕಾಶವನ್ನು ಮನೆಯ ಚೌಕಿನಲ್ಲಿ ನೋಡಿದರೆ, ಚೌಕಾಗಿ ಕಾಣುವುದು ||೯೮||

ಆದರೆ, ಅದೇ ಘಟ, ಮಠಗಳು ನಾಶವಾದಾಗ ಆಕಾಶವು ನಾಶವಾಗುವುದಿಲ್ಲ, ಅದರಂತೆ ಯಾವ ಬ್ರಹ್ಮವು ಮಾಯೆಯ ಉಪಾಧಿಯಿಂದ ವಿಶ್ವಮಯವಾಗುವುದು. ಆದರೆ ಮಾಯೆಯಲ್ಲಿ ಇರುವುದಿಲ್ಲ ||೯೯||

ಅರ್ಜುನಾ, ಈ ಬ್ರಹ್ಮವು ಮನಸ್ಸು ಇತ್ಯಾದಿ ಇಂದ್ರಿಯಗಳಂತೆ ಮತ್ತು ಸತ್ವಾದಿ ಗುಣಗಳಂತೆ ಆಕಾರಕ್ಕೆ ಬಂದಂತೆ ಭಾಸವಾಗುತ್ತದೆ ||೯೦೦||

ಆದರೆ, ಯಾವ ಪ್ರಕಾರವಾಗಿ ಬೆಲ್ಲದ ರುಚಿಯು ಬೆಲ್ಲದ ಆಕಾರದಲ್ಲಿ ಇರುವುದಿಲ್ಲವೋ, ಅದರಂತೆ ಇಂದ್ರಿಯಗಳಲ್ಲಿ ಮತ್ತು ಗುಣಗಳಲ್ಲಿ ಬ್ರಹ್ಮವು ಇರುವುದಿಲ್ಲ ||೯೦೧||

ಹೇ ಕಪಿಧ್ವಜನೇ, ಯಾವ ಪ್ರಕಾರವಾಗಿ ಹಾಲಿನ ಅವಸ್ಥೆಯಲ್ಲಿ ತುಪ್ಪವು ಹಾಲಿನ ಆಕಾರದಲ್ಲಿರುವುದು. ಆದರೆ ಹಾಲು ಎಂದರೆ ತುಪ್ಪವಲ್ಲ ||೯೦೨||

ಅದರಂತೆ ಯಾವ ಬ್ರಹ್ಮವು ವಿಶ್ವದಲ್ಲಿ ತುಂಬಿರುವುದು. ಆದರೆ ಅದು ವಿಶ್ವವಲ್ಲ. ಕಾರಣ ಸುವರ್ಣದ ಅಲಂಕಾರಗಳಿಗೆ ನಾವು ಅನೇಕ ಹೆಸರುಗಳನ್ನು ಕೊಡುತ್ತೇವೆ. ಆದರೆ ಸುವರ್ಣ ದೃಷ್ಟಿಯಿಂದ ಅವುಗಳೆಲ್ಲವೂ ಸುವರ್ಣವೇ ಆಗಿರುವುವು ||೯೦೩||

ಈ ಪ್ರಕಾರವಾಗಿ ನಾನು ಬಿಚ್ಚಿ ಮರಾಠಿ ಭಾಷೆಯಲ್ಲಿ ಹೇಳುವೆ. ಅರ್ಜುನಾ, ಬ್ರಹ್ಮವು ಈ ಗುಣಗಳಿಂದ ಮತ್ತು ಇಂದ್ರಿಯಗಳಿಂದ ಭಿನ್ನವಾಗಿದೆ ||೯೦೪||

ನಾಮ, ರೂಪ, ಜಾತಿ, ಕ್ರಿಯೆ, ಈ ಭೇದಗಳು ಎಲ್ಲ ಪ್ರಕಾರವಾಗಿ ಆಕಾರಕ್ಕೆ ಹೊಂದಿಕೊಳ್ಳುವುವು. ಬ್ರಹ್ಮಕ್ಕೆ ಇರುವುದಿಲ್ಲ ||೯೦೫||

ಈ ಬ್ರಹ್ಮವು ಗುಣವಲ್ಲ ಮತ್ತು ಗುಣಕ್ಕೆ ಬ್ರಹ್ಮಕ್ಕೆ ಸಂಬಂಧವಿಲ್ಲ. ಆದರೆ ಬ್ರಹ್ಮನಲ್ಲಿಯೇ ಇವು ಭಾಸವಾಗುತ್ತವೆ ||೯೦೬||

ಈ ಕಾರಣದ ಮೇಲಿಂದ ಅರ್ಜುನಾ, ಗುಣವು ಬ್ರಹ್ಮದ್ದೇ ಇರುವುದೆಂದು ಅಜ್ಞಾನಿಗಳ ಮನದಲ್ಲಿ ಬರುವುದು ||೯೦೭||

ಆದರೆ ಬ್ರಹ್ಮನಲ್ಲಿ ಗುಣವಿದೆ ಎಂದು ತಿಳಿದರೆ ಆಕಾಶದಲ್ಲಿ ಕಾಣುವ ಮೋಡವು ಆಕಾಶದ್ದು ಹಾಗೂ ಕನ್ನಡಿಯಲ್ಲಿ ಕಾಣುವ ರೂಪವು ಕನ್ನಡಿಯದು ಎಂದು ಹೇಳಬೇಕಾದೀತು ||೯೦೮||

ಅಥವಾ ಸೂರ್ಯನ ಪ್ರತಿಬಿಂಬವು ನೀರು ಧರಿಸುವುದು. ಇಲ್ಲವೇ ಸೂರ್ಯರಶ್ಮಿಗಳನ್ನು ಮೃಗಜಲವು ಧಾರಣೆ ಮಾಡುವುದು. ಹೀಗೆ ವಾಸ್ತವಿಕವಾಗಿ ಇರುವುದಿಲ್ಲ, ಆದರೆ ಜನರು ಹೀಗೆ ತಿಳಿಯುವರು ||೯೦೯||

ಗುಣಕ್ಕೂ ಬ್ರಹ್ಮಕ್ಕೂ ಸಂಬಂಧವೇ ಇಲ್ಲದಿರುವಾಗ, ಬ್ರಹ್ಮವು ಗುಣಗಳಿಗೆ ಧಾರಣೆ ಮಾಡುವುದು ಎಂದು ನಿಶ್ಚಯಿಸುವುದು ಭ್ರಾಂತಿಯಿಂದ ಕೂಡಿ ವ್ಯರ್ಥವಾಗಿರುವುದು ||೯೧೦||

ಆಣಿ ಯಾಪರೀ ನಿರ್ಗುಣೇ । ಗುಣಾತೇ ಭೋಗಣೇ । ರಂಕಾ ರಾಜ್ಯ ಕರಣೇ । ಸ್ವಪ್ನೀ ಜೈಸೇ ।।೯೧೧।। ಮ್ಹಣೌನಿ ಗುಣಾಚಾ ಸಂಗು । ಅಥವಾ ಗುಣಭೋಗು । ಹಾ ನಿರ್ಗುಣೀ ಲಾಗು । ಬೋಲೋ ನಯೇ ।।೯೧೨।।

ಬಹಿರಂತಶ್ಚ ಭೂತಾನಾಮ್ ಅಚರಂ ಚರಮೇವ ಚ ।
ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥ ಚಾಂತಿಕೇ ಚ ತತ್ ।।೧೫।।

ಜೇ ಚರಾಚರ ಭೂತಾ । ಮಾಜೀ ಅಸೇ ಪಂಡುಸುತಾ । ನಾನಾ ವನ್ಹೀ ಉಷ್ಣತಾ । ಅಭೇದೇ ಜೈಸೀ ।।೯೧೩।। ತೈಸೇನಿ ಅವಿನಾಶಭಾವೇ । ಜೇ ಸೂಕ್ಷ್ಮದಶೇ ಆಘವೇ । ವ್ಯಾಪೂನಿ ಅಸೇ ತೇ ಜಾಣಾವೇ । ಜ್ಞೇಯ ಏಥ ।।೯೧೪।। ಜೇ ಏಕ ಆಂತುಬಾಹೇರೀ । ಜೇ ಏಕ ಜವಳ ದುರೀ । ಜೇ ಏಕವಾಂಚೂನಿ ಪರೀ । ದುಜೀ ನಾಹೀ ।।೯೧೫।। ಕ್ಷೀರಸಾಗರೀಂಚೀ ಗೋಡೀ । ಮಾಜೀ ಬಹು ಥಡಿಯೇ ಥೋಡೀ । ಹೇ ನಾಹೀ ತಯಾ ಪರವಡೀ । ಪೂರ್ಣ ಜೇ ಗಾ ।।೯೧೬।। ಸ್ವೇದಜಾದಿ ಪ್ರಭೃತೀ । ವೇಗಳಾಲ್ಯಾ ಭೂತೀ । ಜಯಾಚಿಯೇ ಅನುಸ್ಯೂತೀ । ಖೋಮಣೇ ನಾಹೀ ।।೯೧೭।। ಪೈ ಶ್ರೋತೇ ಮುಖಟಿಳಕಾ । ಘಟಸಹಸ್ರಾ ಅನೇಕಾ । ಮಾಜೀ ಬಿಂಬೋನಿ ಚಂದ್ರಿಕಾ । ನ ಭೇದೇ ಜೇವೀ ।।೯೧೮।। ನಾನಾ ಲವಣಕಣಾಚಿಯೇ ರಾಶೀ । ಕ್ಷಾರತಾ ಏಕಚಿ ಜೈಸೀ । ಕಾ ಕೋಡೀ ಏಕೀ ಊಸೀ । ಏಕಚಿ ಗೋಡೀ ।।೯೧೯।।

ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್ ।
ಭೂತಭರ್ತೃ ಚ ತಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ।।೧೬।।

ತೈಸೇ ಅನೇಕೀ ಭೂತಜಾತೀ । ಜೇ ಆಹೇ ಏಕೀ ವ್ಯಾಪ್ತೀ । ವಿಶ್ವಕಾರ್ಯಾ ಸುಮತೀ । ಕಾರಣ ಜೇ ಗಾ ।।೯೨೦।। ಮ್ಹಣೌನಿ ಹಾ ಭೂತಾಕಾರು । ಜೇಥೋನಿ ತೇಂಚಿ ತಯಾ ಆಧಾರು । ಕಲ್ಲೋಳಾ ಸಾಗರು । ಜಿಯಾಪರೀ ।।೯೨೧।। ಬಾಲ್ಯಾದಿ ತಿನ್ಹೀ ವಯಸೀ । ಕಾಯಾ ಏಕಚಿ ಜೈಸೀ । ತೈಸೇ ಆದಿಸ್ಥಿತಿಗ್ರಾಸೀ । ಅಖಂಡ ಜೇ ।।೯೨೨।। ಸಾಯಂ ಪ್ರಾತರ್ಮಧ್ಯಾನ್ಹ । ಹೋತಾ ಜಾತಾ ದಿನಮಾನ । ಜೈಸೇ ಕಾ ಗಗನ । ಪಾಲಟೇನಾ ।।೯೨೩।। ಅಗಾ ಸೃಷ್ಟಿವೇಳೇ ಪ್ರಿಯೋತ್ತಮಾ । ಜಯಾ ನಾಂವ ಮ್ಹಣತೀ ಬ್ರಹ್ಮಾ । ವ್ಯಾಪ್ತಿ ಜೇ ವಿಷ್ಣುನಾಮಾ । ಪಾತ್ರ ಜಾಹಲೇ ।।೯೨೪।। ಮಗ ಆಕಾರು ಹಾ ಹರಪೇ । ತೇವ್ಹಾ ರುದ್ರ ಜೇ ಮ್ಹಣಿಪೇ । ತೇಂಹೀ ಗುಣತ್ರಯ ಜೇವ್ಹಾ ಲೋಪೇ । ತೈ ಜೇ ಶೂನ್ಯ ।।೯೨೫।।

ಯಾವ ಪ್ರಕಾರವಾಗಿ ಒಬ್ಬ ಭಿಕ್ಷುಕನು ಸ್ವಪ್ನದಲ್ಲಿ ರಾಜ್ಯ ಸುಖಭೋಗಗಳನ್ನು ಭೋಗಿಸುವನು. ಆದರೆ ಇದು ಸುಳ್ಳಾಗಿರುವುದು. ಅದರಂತೆ ಬ್ರಹ್ಮವು ಸ್ವತಃ ನಿರ್ಗುಣವಾಗಿದ್ದು, ಗುಣದ ಭೋಗ ಭೋಗಿಸುವುದು ಎಂದು ಹೇಳುವುದು ವ್ಯರ್ಥವು ॥೧೧॥

ಆದ್ದರಿಂದ ಬ್ರಹ್ಮವು ಗುಣದ ಸಂಗತಿಯನ್ನು ಮಾಡುವುದು, ಅಥವಾ ಗುಣದ ಉಪಭೋಗ ಭೋಗಿಸುವುದು, ಹೀಗೆ ಹೇಳಲು ಬರುವುದಿಲ್ಲ ॥೧೨॥

ಶ್ಲೋಕಾರ್ಥ :- ಆ ಬ್ರಹ್ಮವು ಚರಾಚರಗಳಲ್ಲಿ ಹೊರಗೆ ಒಳಗೆ ಇರುತ್ತದೆ. ಅದು ಅತಿ ಸೂಕ್ಷ್ಮವಾದದ್ದು, ಆದುದರಿಂದ ತಿಳಿಯಲು ಅಶಕ್ಯವಾದುದು. (ತಿಳಿಯದವರಿಗೆ) ದೂರವಾಗಿದೆ. (ತಿಳಿದವರಿಗೆ) ತೀರ ಸಮೀಪವಾಗಿದೆ ॥೧೫॥

ಹೇ ಪಂಡುಸುತನೇ, ಅಗ್ನಿಯ ಕೆಂಡಗಳು ಅನೇಕ ಪ್ರಕಾರಗಳಿದ್ದರೂ ಅದರ ಉಷ್ಣತೆಯು ಒಂದೇ ಆಗಿರುವಂತೆ, ಚರಾಚರ ಭೂತಗಳಲ್ಲಿ ಬ್ರಹ್ಮವು ವ್ಯಾಪಕವಾಗಿದೆ ॥೧೩॥

ಈ ಪ್ರಕಾರವಾಗಿ ಯಾವುದು ಅವಿನಾಶಿಯೋ, ಮತ್ತು ಸೂಕ್ಷ್ಮವಾಗಿ ಎಲ್ಲ ಜಗತ್ತನ್ನು ವ್ಯಾಪಿಸಿದೆಯೋ, ಅದು ಜ್ಞೇಯವೆಂದು ತಿಳಿಯಬೇಕು ॥೧೪॥

ಇದು ಶರೀರದ ಒಳಗೆ ಇರುವುದು, ಹೊರಗೆ ಇರುವುದು, ಇದು ಸಮೀಪವಿರುವುದು, ದೂರವಿರುವುದು. ಇದು ಒಂದೇ ಆಗಿದ್ದು ಎರಡನೆಯ ಪ್ರಕಾರವೇ ಇರುವುದಿಲ್ಲ ॥೧೫॥

ಕ್ಷೀರಸಾಗರದ ರುಚಿಯು ಕಂಠಕ್ಕೆ ಸ್ವಲ್ಪ ಮಧ್ಯಭಾಗಕ್ಕೆ ಬಹಳ, ಹೀಗೆ ಇರುವುದಿಲ್ಲ. ಅದರಂತೆ ಅದು ಸರ್ವತ್ರವಾಗಿ ವ್ಯಾಪಕಾಗಿದ್ದು ಪೂರ್ಣವಾಗಿರುವುದು ॥೧೬॥

ಜಾರಜ, ಅಂಡಜ, ಸ್ವೇದಜ,ಮತ್ತು ಉದ್ಭಿಜ ಈ ಎಲ್ಲ ಭಿನ್ನ ಭಿನ್ನ ಭೂತಗಳಲ್ಲಿ ಇದರ ಅಖಂಡವಾದ ವ್ಯಾಪ್ತಿಗೆ ಹಾನಿ ಇಲ್ಲ ॥೧೭॥

ಶ್ರೋತೃಗಳ ಮುಖತಿಲಕನಾದ ಅರ್ಜುನನೇ, ನೀರಿನಿಂದ ತುಂಬಿದ ಸಾವಿರಾರು ಘಟಗಳಲ್ಲಿ ಚಂದ್ರನು ಬಿಂಬಿಸಿರುವನು. ಆತನು ಘಟ ಭೇದದಿಂದ ಭಿನ್ನನಾಗುವುದಿಲ್ಲ ॥೧೮॥

ಉಪ್ಪಿನ ಕಣಗಳ ರಾಶಿಯಲ್ಲಿ ಕ್ಷಾರತ್ವವು ಒಂದೇ ಆಗಿರುವುದು. ಕೋಟ್ಯಾವಧಿ ಕಬ್ಬುಗಳಲ್ಲಿ ಸಿಹಿಯು ಒಂದೇಯಾಗಿರುವುದು ॥೧೯॥

ಶ್ಲೋಕಾರ್ಥ :- ಆ ಬ್ರಹ್ಮವು ಸಕಲ ಪ್ರಾಣಿಗಳಲ್ಲಿ ಅಭೇದವಾಗಿದ್ದರೂ ಉಪಾಧಿ ಭೇದದಿಂದ ಅಜ್ಞಾನಿಗಳಿಗೆ ಬೇರೆ ಬೇರೆಯಾಗಿ ವಿಭಕ್ತವಾದಂತೆ ಇರುತ್ತದೆ. ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣವಾಗಿರುವುದೆಂದು ಆ ಜ್ಞೇಯವನ್ನು ತಿಳಿ ॥೧೬॥

ಅದರಂತೆ ಅನೇಕ ಭೂತಮಾತ್ರರಲ್ಲಿ ಏಕತ್ವದಿಂದ ವ್ಯಾಪಕವಾಗಿರುವುದು ಮತ್ತು ಅರ್ಜುನಾ, ವಿಶ್ವದ ರಚನೆಯಲ್ಲಿ ಇದು ಆದಿಕಾರಣವಾಗಿರುವುದು ॥೨೦॥

ಆದ್ದರಿಂದ ತೆರೆಗಳು ಸಮುದ್ರದಿಂದಲೇ ಉತ್ಪನ್ನವಾಗಿದ್ದು ತೆರೆಗಳಿಗೆ ಸಮುದ್ರವೇ ಆಧಾರವಾಗಿರುವುದು. ಅದರಂತೆ ಪ್ರಾಣಿಮಾತ್ರರ ಉತ್ಪನ್ನಕ್ಕೆ ಹೇತುವಾಗಿ ಆತನೇ ಅದರ ಆಧಾರವಾಗಿರುವನು ॥೨೧॥

ಬಾಲ್ಯ, ತಾರುಣ್ಯ, ವೃದ್ಧಾಪ್ಯ ಈ ಮೂರು ಅವಸ್ಥೆಗಳಿಗೆ ಒಂದೇ ಶರೀರವು ಆಧಾರಭೂತವಾಗಿರುವುದು. ಅದರಂತೆ ಉತ್ಪತ್ತಿ, ಸ್ಥಿತಿ ಮತ್ತು ಲಯಗಳಿಗೆ ಇದು ಆಧಾರಭೂತವಾಗಿದೆ ॥೨೨॥

ಪ್ರಾತಃಕಾಲ, ಮಧ್ಯಾಹ್ನ ಕಾಲ ಮತ್ತು ಸಾಯಂಕಾಲ ಇವು ದಿನದ ಮೂರು ಕಾಲಗಳು ಹೋದರೂ ಆಕಾಶದಲ್ಲಿ ಯಾವ ಬದಲಾವಣೆ ಇರುವುದಿಲ್ಲ ॥೨೩॥

ಹೇ ಪ್ರಿಯೋತ್ತಮನೇ, ಸೃಷ್ಟಿಯ ಉತ್ಪತ್ತಿಯ ಕಾಲದಲ್ಲಿ ಆತನಿಗೆ ಬ್ರಹ್ಮದೇವ ಎನ್ನುತ್ತೇವೆ. ಸ್ಥಿತಿ ಕಾಲದಲ್ಲಿ ಆತನಿಗೆ ನಾವು ವಿಷ್ಣುವೆಂದು ಹೆಸರು ಕೊಡುತ್ತೇವೆ ॥೨೪॥

ತದನಂತರ ಲಯಮಾಡುವಾಗ ನಾವು ಆತನಿಗೆ ರುದ್ರನೆಂದು ಹೇಳುತ್ತೇವೆ ಮತ್ತು ಈ ಮೂರು ಕಾರ್ಯಗಳು ಯಾವ ವೇಳೆಯಲ್ಲಿ ಲೋಪವಾಗುತ್ತವೆಯೋ, ಆಗ ಶೂನ್ಯವೆಂದು ಕರೆಯುತ್ತೇವೆ ॥೨೫॥

ನಭಾಚೇ ಶೂನ್ಯತ್ವ ಗಿಳೂನ । ಗುಣತ್ರಯಾತೇ ನುರಳೂನ । ತೇ ಶೂನ್ಯ ತೇ ಮಹಾಶೂನ್ಯ । ಶ್ರುತಿವಚನಸಂಮತ ।।೯೨೬।।

ಜ್ಯೋತಿಷಾಮಪಿ ತಜ್ಜ್ಯೋತಿ ತಮಸಃ ಪರಮುಚ್ಯತೇ ।
ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್ ।।೧೭।।

ಜೇ ಅಗ್ನೀಚೇ ದೀಪನ । ಜೇ ಚಂದ್ರಾಚೇ ಜೀವನ । ಸೂರ್ಯಾಚೇ ನಯನ । ದೇಖತೀ ಜೇಣೇ ।।೯೨೭।। ಜಯಾಚೇನಿ ಉಜಿಯೇಡೇ । ತಾರಾಂಗಣ ಉಭಡೇ । ಮಹಾತೇಜ ಸುರವಾಡೇ । ರಾಹಾಟೇ ಜೇಣೇ ।।೯೨೮।। ಜೇ ಆದೀಚೇ ಆದೀ । ಜೇ ವೃದ್ಧೀಚೇ ವೃದ್ಧೀ । ಬುದ್ಧೀಚೇ ಜೇ ಬುದ್ಧೀ । ಜೀವಾಚಾ ಜೀವು ।।೯೨೯।। ಜೇ ಮನಾಚೇ ಮನ । ಜೇ ನೇತ್ರಾಚೇ ನಯನ । ಕಾನಾಚೇ ಕಾನ । ವಾಚೇಚೇ ವಾಚಾ ।।೯೩೦।। ಜೇ ಪ್ರಾಣಾಚಾ ಪ್ರಾಣ । ಜೇ ಗತೀಚೇ ಚರಣ । ಕ್ರಿಯೇಚೇ ಕರ್ತೇಪಣ । ಜಯಾಚೇನಿ ।।೯೩೧।। ಆಕಾರು ಜೇಣೇ ಆಕಾರೇ । ವಿಸ್ತಾರು ಜೇಣೇ ವಿಸ್ತಾರೇ । ಸಂಹಾರು ಜೇಣೇ ಸಂಹಾರೇ । ಪಂಡು ಕುಮರಾ ।।೯೩೨।। ಜೇ ಮೇದಿನೀಚೇ ಮೇದಿನೀ । ಜೇ ಪಾಣೇ ಪಿಊನೀ ಅಸೇ ಪಾಣೇ । ತೇಜಾ ದಿವೇಲಾವಣೇ । ಜೇಣೇ ತೇಜೇ ।।೯೩೩।। ಜೇ ವಾಯೂಚಾ ಶ್ವಾಸೋಶ್ವಾಸು । ಜೇ ಗಗನಾಚಾ ಅವಕಾಶು । ಹೇ ಅಸೋ ಆಘವಾಚಿ ಆಭಾಸು । ಆಭಾಸೇ ಜೇಣೇ ।।೯೩೪।। ಕಿಂಬಹುನಾ ಪಾಂಡವಾ । ಜೇ ಆಘವೇಂಚಿ ಅಸೇ ಆಘವಾ । ಜೇಥ ನಾಹೀ ರಿಗಾವಾ । ದ್ವೈತ ಭಾವಾಸೀ ।।೯೩೫।। ಜೇ ದೇಖಿಲಿಯಾಚಿಸವೇ । ದೃಶ್ಯ ದೃಷ್ಟಾ ಹೇ ಆಘವೇ । ಏಕವಾಟ ಕಾಲವೇ । ಸಾಮರಸ್ಯೇ ।।೯೩೬।। ಮಗ ತೇಂಚಿ ಹೋಯ ಜ್ಞಾನ । ಜ್ಞಾತಾ ಜ್ಞೇಯ ಹನ । ಜ್ಞಾನೇ ಗಮಿಜೇ ಸ್ಥಾನ । ತೇಂಹೀ ತೇಂಚೇ ।।೯೩೭।। ಜೈಸೇ ಸರಲಿಯಾ ಲೇಖ । ಆಂಖ ಹೋತೀ ಏಕ । ತೈಸೇ ಸಾಧ್ಯಸಾಧನಾದಿಕ । ಐಕ್ಯಾಸಿ ಯೇ ।।೯೩೮।। ಅರ್ಜುನಾ ಜಿಯೇ ಠಾಯೀ । ನ ಸರೇ ದ್ವೈತಾಚೀ ವಹೀ । ಹೇ ಅಸೋ ಜೇ ಹೃದಯೀ । ಸರ್ವಾಂಚ್ಯಾ ಅಸೇ ।।೯೩೯।।

ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।
ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ।।೧೮।।

ಏವಂ ತುಜಪುಢಾ । ಆದಿ ಕ್ಷೇತ್ರ ಸುಹಾಡಾ । ದಾವಿಲೇ ಫಾಡೋವಾಡಾ । ವಿವಂಚುನೀ ।।೯೪೦।। ತೈಸೇಂಚಿ ಕ್ಷೇತ್ರಾಪಾಠೀ । ಜೈಸೇನಿ ದೇಖಸೀ ದಿಠೀ । ತೇ ಜ್ಞಾನಹೀ ಕಿರೀಟೀ । ಸಾಂಗಿತಲೇ ।।೯೪೧।।

ಆಕಾಶದ ಶೂನ್ಯತ್ವವನ್ನು ನುಂಗಿ ಗುಣತ್ರಯಗಳನ್ನು ಇಲ್ಲದಂತೆ ಮಾಡುವ ಪ್ರಕೃತಿ ಶೂನ್ಯವು ಅದಕ್ಕೆ ಯಾವುದು ಇಲ್ಲದಂತೆ ಮಾಡುವುದೋ, ಅದಕ್ಕೆ ಶ್ರುತಿಯು ಮಹಾ ಶೂನ್ಯವೆಂದು ಹೇಳಿದ್ದು, ಅದುವೇ ಜ್ಞೇಯವಾಗಿರುವುದು ॥೨೬॥

ಶ್ಲೋಕಾರ್ಥ :- ಆ ಬ್ರಹ್ಮವು ಜ್ಯೋತಿಃಸ್ವರೂಪ ಗಳಾದ ಚಂದ್ರಸೂರ್ಯಾದಿಗಳನ್ನು ಸಹ ಪ್ರಕಾಶ ಪಡಿಸುತ್ತದೆ. ಇದು ಅಜ್ಞಾನವಲ್ಲ, ಬೇರೆಯಾದದ್ದು. ಜ್ಞಾನದಿಂದಲೇ ತಿಳಿಯತಕ್ಕದ್ದು, ಜ್ಞಾನಸ್ವರೂಪ ವಾದದ್ದು. ತಿಳಿದುಕೊಂಡೇತೀರಬೇಕಾದದ್ದು, ಸರ್ವಭೂತಗಳ ಹೃದಯದಲ್ಲಿ ಇರುವುದೆಂದು ಹೇಳಲ್ಪಡುತ್ತದೆ ॥೧೭॥

ಯಾವ ಬ್ರಹ್ಮವು ಅಗ್ನಿಯ ದೀಪನವಾಗಿದೆ, ಚಂದ್ರಕ್ಕೆ ಜೀವನವಾಗಿದೆ ಮತ್ತು ಸೂರ್ಯನ ಪ್ರಕಾಶವಾಗಿದೆ (ಕಣ್ಣಾಗಿದೆ) ಅದರಿಂದ ಜಗತ್ತಿಗೆ ದೃಷ್ಟಿ ಬಂದಿದೆ ॥೨೭॥

ಇದರ ತೇಜದಿಂದ ತಾರಾಂಗಣಗಳಿಗೆ ತೇಜವು ಪ್ರಾಪ್ತವಾಗುವುದು. ಹಾಗೆಯೇ ಮಹಾತೇಜವು ಇದರ ತೇಜದಿಂದಲೇ ತೇಜಸ್ವಿಯಾಗುವುದು ॥೨೮॥

ಜಗತ್ತಿನಲ್ಲಿ ಯಾವುದು ಆದಿಯೋ, ಅದಕ್ಕೆ ಆದಿಯಾಗಿರುವುದು ಮತ್ತು ವೃದ್ಧಿಯ ವೃದ್ಧಿಯಾಗಿರುವುದು. ಹಾಗೆಯೇ ಬುದ್ಧಿಯ ಬುದ್ಧಿಯಾಗಿ, ಜೀವದ ಜೀವವಾಗಿ ರುವುದು ॥೨೯॥

ಇದು ಮನಸ್ಸಿನ ಮನವಾಗಿರುವುದು, ಕಣ್ಣುಗಳ ಕಣ್ಣಾ ಗಿರುವುದು, ಕಿವಿಗಳ ಕಿವಿಯಾಗಿರುವುದು, ಮತ್ತು ವಾಣಿಯ ವಾಣಿಯಾಗಿರುವುದು ॥೩೦॥

ಇದು ಪ್ರಾಣಕ್ಕೆ ಜೀವನವಾಗಿರುವುದು. ಗತಿಯ ಚರಣ ವಾಗಿರುವುದು ಮತ್ತು ಇದರಿಂದ ಕ್ರಿಯೆಗೆ ಕರ್ತೃತ್ವವು ಬರುವುದು ॥೩೧॥

ಹೇ ಪಂಡುಕುಮಾರನೇ, ಇದರಿಂದಲೇ ಆಕಾರಕ್ಕೆ ಆಕಾರ ಬರುವುದು, ವಿಸ್ತಾರಕ್ಕೆ ವಿಸ್ತಾರವು ಮತ್ತು ಸಂಹಾರಕ್ಕೆ ಸಂಹಾರತ್ವವು ಪ್ರಾಪ್ತವಾಗುವುದು ॥೩೨॥

ಯಾವ ಪೃಥ್ವಿಯನ್ನು ಧಾರಣೆ ಮಾಡುವವನು, ನೀರಿಗೆ ಜೀವನನಾಗಿರುವವನು ಮತ್ತು ಈತನ ತೇಜದಿಂದಲೇ ತೇಜವು ಪ್ರಕಾಶಮಯವಾಗುವುದು॥೩೩॥

ವಾಯುವಿಗೆ ಬೀಸುವ ಶಕ್ತಿ ಕೊಡುವುದು, ಮತ್ತು ಇದ ರಲ್ಲಿ ಆಕಾಶವು ಕೂಡಿಕೊಳ್ಳುವುದು, ಹೆಚ್ಚಿಗೇನು ಹೇಳ ಬೇಕು? ಯಾವತ್ತು ಭಾಸವಾಗುವ ವಸ್ತುಗಳು ಈತನ ತೇಜ ದಿಂದ ಭಾಸವಾಗುವುವು ॥೩೪॥

ಹೇ ಪಾಂಡವನೇ, ಈ ಎಲ್ಲ ಜಗತ್ತಿನಲ್ಲಿ ಎಲ್ಲ ಪದಾ ರ್ಥಗಳ ರೂಪದಿಂದ ಎಲ್ಲ ರೀತಿಯಿಂದ ಇರುವನು ಮತ್ತು ಈತನಲ್ಲಿ ದ್ವೈತಭಾವದ ಪ್ರವೇಶವೇ ಇರುವುದಿಲ್ಲ ॥೩೫॥

ಈತನ ದರ್ಶನವಾದ ಕೂಡಲೇ ದೃಷ್ಟಾ, ದೃಶ್ಯ ಮತ್ತು ದರ್ಶನ ಈ ತ್ರಿಪುಟಿಯು ಬ್ರಹ್ಮಸ್ವರೂಪದಲ್ಲಿ ಐಕ್ಯಭಾವಕ್ಕೆ ಬರುವುದು ॥೩೬॥

ಆಗ ಅದೇ ಜ್ಞಾತಾ, ಜ್ಞೇಯ, ಮತ್ತು ಜ್ಞಾನ ಇವು ತ್ರಿಪುಟಿಯಾಗಿ ಯಾವುದರಿಂದ ಬ್ರಹ್ಮವು ತಿಳಿಯುವುದೋ, ಅದು ಅದೇ ಆಗಿರುವುದು ॥೩೭॥

ಯಾವ ಪ್ರಕಾರವಾಗಿ ಲೆಕ್ಕದ ಗಣಿತ ಹೊಂದಿದ ಮೇಲೆ ಕಚ್ಚಾ ಕಾಗದದ ಕೆಲಸವು ಮುಗಿಯುವುದೋ, ಅದರಂತೆ ಬ್ರಹ್ಮಪ್ರಾಪ್ತವಾದ ಮೇಲೆ ಸಾಧ್ಯ ಮತ್ತು ಸಾಧಕ ಭಾವಗಳು ಇಲ್ಲದಾಗುವುವು ॥೩೮॥

ಅರ್ಜುನಾ, ಬ್ರಹ್ಮನಲ್ಲಿ ದ್ವೈತದ ಸಂಬಂಧವೇ ಇರುವು ದಿಲ್ಲ, ಅದು ಈಗ ಇರಲಿ. ಬ್ರಹ್ಮವು ಸರ್ವರ ಹೃದಯದಲ್ಲಿ ವಾಸ ಮಾಡುವುದು ॥೩೯॥

ಶ್ಲೋಕಾರ್ಥ :- ಈ ರೀತಿ ಕ್ಷೇತ್ರವನ್ನು, ಜ್ಞಾನ ವನ್ನು, ಜ್ಞೇಯವನ್ನು ಸಂಕ್ಷೇಪವಾಗಿ ಹೇಳಿದೆನು. ನನ್ನ ಭಕ್ತನಾದವನು ಇದನ್ನು ಸರಿಯಾಗಿ ತಿಳಿದುಕೊಂಡು ಬ್ರಹ್ಮತ್ವವನ್ನು ಪಡೆಯಲು ಯೋಗ್ಯನಾಗಿರುತ್ತಾನೆ ॥೧೮॥

ಹೇ ಪ್ರಿಯ ಮಿತ್ರನೇ, ಈ ಪ್ರಕಾರವಾಗಿ ಆರಂಭದಲ್ಲಿ ನಿನಗೆ ಕ್ಷೇತ್ರ ಯಾವುದಕ್ಕೆ ಹೇಳುವರು, ಮತ್ತು ಮಹಾಭೂತ ದಿಂದ ಹಿಡಿದು ಧೃತಿವರೆಗೆ ಪ್ರತ್ಯೇಕ ತತ್ತ್ವವನ್ನು ಬಿಡಿಸಿ ಆಯಾ ಶಬ್ದಗಳ ಅರ್ಥವನ್ನು ವಿವರಿಸಿ ಹೇಳಿರುವೆನು ॥೪೦॥

ಹಾಗೆಯೇ ಕ್ಷೇತ್ರದ ನಂತರ ಯಾವ ರೀತಿಯಲ್ಲಿ ನೀನು ನೋಡಬಹುದೋ, ಅದೇ ಪ್ರಕಾರವಾಗಿ ಅಮಾನಿತ್ವಾದಿ ಯಿಂದ ತತ್ತ್ವಜ್ಞಾನಾರ್ಥ ದರ್ಶನದವರೆಗೆ ಜ್ಞಾನವನ್ನು ಹೇಳಿರುವೆನು ॥೪೧॥

ಅಜ್ಞಾನಾಹೀ ಕೌತುಕೇ । ರೂಪ ಕೇಲೇ ನಿಕೇ । ಜಂವ ಆಯಣೇ ತುಝೀ ಟೇಂಕೇ । ಪುರೇ ಮ್ಹಣೇ ॥೯೪೨॥ ಆಣಿ ಆತಾ ಹೇ ರೋಕಡೇ । ಉಪಪತ್ತೀಚೇನಿ ಪವಾಡೇ । ನಿರೂಪಿಲೇ ಉಘಡೇ । ಜ್ಞೇಯ ಪೈ ಗಾ ॥೯೪೩॥ ಹೇ ಆಘವೀಚ ವಿವಂಚನಾ । ಬುದ್ಧೀ ಭರೋನಿ ಅರ್ಜುನಾ । ಮತ್ಸಿದ್ಧಿಭಾವನಾ । ಮಾಝಿಯಾ ಯೇತೀ ॥೯೪೪॥ ದೇಹಾದಿ ಪರಿಗ್ರಹೀ । ಸಂನ್ಯಾಸು ಕರೂನಿಯಾ ಜಿಹೀ । ಜೀವು ಮಾಝ್ಯಾ ಠಾಈ । ವೃತ್ತಿಕು ಕೇಲಾ ॥೯೪೫॥ ತೇ ಮಾತೇ ಕಿರೀಟೀ । ಹೇಂಚಿ ಜಾಣೌನಿಯಾ ಶೇವಟೀ । ಆಪಣಪಯಾ ಸಾಟೋವಾಟೀ । ಮೀಚಿ ಹೋತೀ ॥೯೪೬॥ ಮೀಚಿ ಹೋತೀ ಪರೀ । ಹೇ ಮುಖ್ಯ ಗಾ ಅವಧಾರೀ । ಸೋಹೋಪೀ ಸರ್ವಾಪರೀ । ರಚಿಲೀ ಆಮ್ಹೀ ॥೯೪೭॥ ಕಡಾ ಪಾಯರೀ ಕೀಜೇ । ನಿರಾಳೀ ಮಾಚು ಬಾಂಧಿಜೇ । ಅಥಾವೀ ಸುಇಜೇ । ತರೀ ಜೈಸೀ ॥೯೪೮॥ ಯೇರ್ಹವೀ ಅವಘೇಂಚಿ ಆತ್ಮಾ । ಹೇ ಸಾಂಗೋ ಜರೀ ವಿರೋತ್ತಮಾ । ಪರೀ ತುಝಿಯಾ ಮನೋಧರ್ಮಾ । ಮಿಳೇಲ ನಾ ॥೯೪೯॥ ಮ್ಹಣೌನಿ ಏಕಚಿ ಸಂಚಲೇ । ಚತುರ್ಧಾ ಆಮ್ಹೀ ಕೇಲೇ । ಜೇ ಅದಳಪಣ ದೇಖಿಲೇ । ತುಝಿಯೇ ಪ್ರಜ್ಞೇ ॥೯೫೦॥ ಪೈ ಬಾಳ ಜೈ ಜೇವವಿಜೇ । ತೈ ಘಾಂಸು ವಿಸಾ ಠಾಯೀ ಕೀಜೇ । ತೈಸೇ ಏಕಚಿ ಹೇ ಚತುರ್ವ್ಯಾಜೇ । ಕಥಿಲೇ ಆಮ್ಹೀ ॥೯೫೧॥ ಏಕ ಕ್ಷೇತ್ರ ಏಕ ಜ್ಞಾನ । ಏಕ ಜ್ಞೇಯ ಏಕ ಅಜ್ಞಾನ । ಹೇ ಭಾಗ ಕೇಲೇ ಅವಧಾನ । ಜಾಣೌನಿ ತುಝೇ ॥೯೫೨॥ ಆಣಿ ಐಸೇನಹೀ ಪಾರ್ಥಾ । ಜರೀ ಹಾ ಅಭಿಪ್ರಾವೋ ತುಜ ಹಾತಾ । ನಯೇ ತರೀ ಹೇ ವ್ಯವಸ್ಥಾ । ಏಕ ವೇಳ ಸಾಂಗೋ ॥೯೫೩॥ ಆತಾ ಚೌಠಾಯೀ ನ ಕರೂ । ಏಕಹೀ ಮ್ಹಣೌನಿ ನ ಸರೂ । ಆತ್ಮಾನಾತ್ಮಯಾ ಧರೂ । ಸರಿಸಾ ಪಾಡು ॥೯೫೪॥ ಪರೀ ತುವಾ ಯೇತುಲೇ ಕರಾವೇ । ಮಾಗೋ ತೇ ಆಮ್ಹಾ ದೇಆವೇ । ಜೇ ಕಾನಾಚೇ ನಾಂವ ಠೇವಾವೇ । ಆಪಣ ಪೈ ಗಾ ॥೯೫೫॥ ಯಾ ಶ್ರೀಕೃಷ್ಣಾಚಿಯಾ ಬೋಲಾ । ಪಾರ್ಥು ರೋಮಾಂಚಿತು ಜಾಹಲಾ । ತೇಥ ದೇವೋ ಮ್ಹಣತೀ ಭಲಾ । ಉಚಂಬಳೇನಾ ॥೯೫೬॥ ಐಸೇನಿ ತೋ ಯೇತಾ ವೇಗು । ಧರೂನಿ ಮ್ಹಣೇ ಶ್ರೀರಂಗು । ಪ್ರಕೃತಿಪುರುಷವಿಭಾಗು । ಪರಿಸೇ ಸಾಂಗೋ ॥೯೫೭॥ಜಯಾ ಮಾರ್ಗಾತೇ ಜಗೀ । ಸಾಂಖ್ಯ ಮ್ಹಣತೀ ಯೋಗೀ । ಜಯಾಚಿಯೇ ಭಾಟಿವೇಲಾಗೀ । ಮೀ ಕಪಿಲ ಜಾಹಲೋ ॥೯೫೮॥

ಜ್ಞಾನದ ಲಕ್ಷಣಗಳು ಮುಗಿದ ನಂತರ ವಿನೋದವಾಗಿ ಅಜ್ಞಾನದ ಯಥಾರ್ಥ ವ್ಯಾಖ್ಯಾನ ಮಾಡಿರುವೆನು. ಅದು ನಿನ್ನ ಬುದ್ಧಿಗೆ ತೃಪ್ತಿಯಾಗಿ ಸಾಕು ಎನ್ನುವಂತೆ ವಿಸ್ತಾರಗೊಂಡಿದೆ ॥೯೪೨॥

ಮತ್ತು ಇದೀಗ ದೃಷ್ಟಾಂತಗಳನ್ನು ಕೊಟ್ಟು ನಿನಗೆ ಜ್ಞೇಯವೆಂದರೆ ಏನೆಂಬುದು ಸ್ಪಷ್ಟಮಾಡಿ ಹೇಳಿರುವೆನು ॥೯೪೩॥

ಅರ್ಜುನಾ, ಈ ಎಲ್ಲ ವಿಷಯಗಳ ವಿಚಾರದೊಂದಿಗೆ ನನ್ನ ಪ್ರಾಪ್ತಿಯ ಇಚ್ಛೆಯನ್ನು ಮಾಡಿ, ನನ್ನ ಭಕ್ತರು ಮದ್ರೂಪರಾಗುವರು ॥೯೪೪॥

ದೇಹಾದಿಕ ಪರಿವಾರವನ್ನು ತ್ಯಾಗ ಮಾಡಿ ಅವರು ನನ್ನಲ್ಲಿ ತಮ್ಮ ಚಿತ್ತವನ್ನು ಒತ್ತಿಯಾಗಿ ಇಡುವರು ॥೯೪೫॥

ಹೇ ಕಿರೀಟೀಯೇ, ಆ ನನ್ನ ಭಕ್ತರು ತಮ್ಮ ಚಿತ್ತವನ್ನು ನನಗೆ ಅರ್ಪಿಸಿ, ನನ್ನ ಚಿತ್ತವನ್ನು ತಮ್ಮಲ್ಲಿ ಸೇರಿಸಿಕೊಂಡು ಮದ್ರೂಪರಾಗುವರು ॥೯೪೬॥

ಈ ಪ್ರಕಾರವಾಗಿ ಮದ್ರೂಪರಾಗುವ ಎಲ್ಲರಿಗೂ ಸುಲಭ ಸಾಧ್ಯವಾಗುವ ಮಾರ್ಗವನ್ನು ನಾನು ಮುಮುಕ್ಷುಗಳವರಿಗಾಗಿ ಸಿದ್ಧ ಮಾಡಿ ಇಟ್ಟಿರುವೆನು ॥೯೪೭॥

ಮೇಲೆ ಹತ್ತಿ ಹೋಗಬೇಕಾದರೆ ಪಾವಟಿಗೆ ಮಾಡಬೇಕಾಗುವುದು. ಅಂತರಾಳದಲ್ಲಿ ಹೋಗಬೇಕಾದರೆ ಮಂಚಿಕೆಯನ್ನು ಕಟ್ಟಬೇಕಾಗುವುದು. ಅಥವಾ ಆಳವಾದ ನೀರಿನಲ್ಲಿ ಹೋಗಬೇಕಾದರೆ ಹಡಗವು ಬೇಕಾಗುವುದು ॥೯೪೮॥

ಇಲ್ಲದಿದ್ದರೆ, ವಿರೋತ್ತಮಾ, ಎಲ್ಲವೂ ಆತ್ಮವೇ ಎಂದು ನಿನಗೆ ವರ್ಣಿಸಿ ಹೇಳಹತ್ತಿದರೆ ಅದು ನಿನಗೆ ಸ್ಪಷ್ಟವಾಗಿ ತಿಳಿಯುವುದಿಲ್ಲ ॥೯೪೯॥

ಆದ್ದರಿಂದ ನಿನ್ನ ಬುದ್ಧಿಯು ಅಸಮರ್ಥವಾಗಿರುವುದನ್ನು ಕಂಡು ಒಂದೇ ಇರುವ ಬ್ರಹ್ಮವನ್ನು ನಾಲ್ಕು ವಿಭಾಗಗಳನ್ನಾಗಿ ಮಾಡಿ ಹೇಳಿರುವೆನು ॥೯೫೦॥

ಯಾವ ಪ್ರಕಾರವಾಗಿ ಚಿಕ್ಕ ಬಾಲಕನಿಗೆ ಒಂದೇ ತುತ್ತನ್ನು ಇಪ್ಪತ್ತು ತುತ್ತು ಮಾಡಿ ತಿನ್ನಿಸುವಂತೆ ಬ್ರಹ್ಮವನ್ನು ನಿನಗೆ ನಾಲ್ಕು ಪ್ರಕಾರವಾಗಿ ಸ್ಪಷ್ಟಮಾಡಿ ತಿಳಿಸಿದೆನು ॥೯೫೧॥

ನಿನ್ನ ಅವಧಾನ ಶಕ್ತಿಯನ್ನು ಕಂಡು ಒಂದು ಕ್ಷೇತ್ರ, ಒಂದು ಜ್ಞಾನ, ಒಂದು ಜ್ಞೇಯ ಮತ್ತು ಒಂದು ಅಜ್ಞಾನ ಹೀಗೆ ಆ ಬ್ರಹ್ಮದ ನಾಲ್ಕು ಭಾಗ ಮಾಡಿ ಹೇಳಿದೆನು ॥೯೫೨॥

ಮತ್ತು ಪಾರ್ಥನೇ, ಇಷ್ಟರಿಂದಲೇ ನಿನಗೆ ಬ್ರಹ್ಮವು ಸರಿಯಾಗಿ ತಿಳಿಯದಿದ್ದರೆ, ನಿನಗೆ ಇನ್ನು ಬೇರೆ ರೀತಿಯಲ್ಲಿ ಇನ್ನೊಂದು ಸಾರೆ ಸ್ಪಷ್ಟ ಮಾಡಿ ತಿಳಿಸುವೆ ॥೯೫೩॥

ಈಗ ಅದರ ನಾಲ್ಕು ಭಾಗಗಳಾಗಿ ಮಾಡದೇ, ಹಾಗೆಯೇ ಅದು ಒಂದೇ ಎಂದು ಹೇಳಲು ಹೋಗದೇ, ಆತ್ಮ ಮತ್ತು ಅನಾತ್ಮ (ಪುರುಷ ಮತ್ತು ಪ್ರಕೃತಿ) ಹೀಗೆ ಎರಡು ಭಾಗ ಮಾಡಿ ನಿನಗೆ ತಿಳಿಸುವೆನು ॥೯೫೪॥

ಆದರೆ ಇದನ್ನು ಮಾತ್ರ ನೀನು ಮಾಡಬೇಕು, ಏನೆಂದರೆ ನಾವು ಕೇಳಿದ್ದು ಕೊಡಬೇಕು. ಅದು ಏನೆಂದರೆ ನಾವು ಹೇಳಿದ್ದನ್ನು ನೀನು ಕಿವಿಗೊಟ್ಟು ಲಕ್ಷದಿಂದ ಕೇಳಬೇಕು ॥೯೫೫॥

ಹೀಗೆ ಶ್ರೀಕೃಷ್ಣನ ವಚನಗಳನ್ನು ಕೇಳಿ, ಪಾರ್ಥನ ಶರೀರದ ಮೇಲೆ ರೋಮಾಂಚಗಳು ಎದ್ದವು. ಆಗ ದೇವನೆಂದನು, ಈತನ ಮನದಲ್ಲಿ ಈ ಮಾತುಗಳು ಪೂರ್ಣವಾಗಿ ಬಿಂಬಿಸಿರುವುವು ॥೯೫೬॥

ಇದೇ ಪ್ರಕಾರವಾಗಿ ಶ್ರೀಕೃಷ್ಣನಿಗೂ ವೇಗವು ಬಂದಿತು. ಆದರೆ ಅದನ್ನು ಆವರಿಸಿಕೊಂಡು ಹೇಳಿದನು:- ಅರ್ಜುನಾ, ನಿನಗೆ ಬ್ರಹ್ಮನ ಪ್ರಕೃತಿ ಮತ್ತು ಪುರುಷ ಹೀಗೆ ಎರಡು ಭಾಗಗಳನ್ನಾಗಿ ಮಾಡಿ ಸ್ಪಷ್ಟವಾಗಿ ಹೇಳುವೆ ಕೇಳು ॥೯೫೭॥

ಪ್ರಕೃತಿ ಮತ್ತು ಪುರುಷ ಹೀಗೆ ಇವುಗಳಲ್ಲಿರುವ ವಿವೇಚನೆಯ ಮಾರ್ಗಕ್ಕೆ ಯೋಗಿಗಳು ''ಸಾಂಖ್ಯ ಮಾರ್ಗ''ವೆಂದು ಹೇಳುವರು. ಅದರ ಪೂರ್ಣ ವರ್ಣನೆ ಮಾಡುವುದಕ್ಕಾಗಿ ನಾನು ಕಪಿಲಾವತಾರ ಧರಿಸಿದೆನು ॥೯೫೮॥

ತೋ ಆಇಕ ನಿರ್ದೋಷು । ಪ್ರಕೃತಿಪುರುಷವಿವೇಕು । ಮ್ಹಣೇ ಆದಿಪುರುಷು । ಅರ್ಜುನಾತೇ ॥೯೫೯॥

ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।
ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಂಭವಾನ್ ॥೧೯॥

ತರೀ ಪುರುಷ ಅನಾದಿ ಆಥೀ । ಆಣಿ ತ್ಯೆಂಚಿ ಲಾಗೋನಿ ಪ್ರಕೃತೀ । ಸಂಸರಿಸೀ ದಿವೋ ರಾತೀ । ದೋನೀ ಜ್ಯೆಸೀ ॥೯೬೦॥ ಕಾ ರೂಪ ನೋಹೇ ವಾಯಾ । ಪರೀ ರೂಪಾ ಲಾಗಲೀ ಛಾಯಾ । ನಿಕಣು ವಾಢೇ ಧನಂಜಯಾ । ಕಣೇಸೀ ಕೋಂಡಾ ॥೯೬೧॥ ತೈಸೀ ಜಾಣ ಜವಟೇ । ದೋನ್ಹೀ ಇಯೇ ಏಕವಟೇ । ಪ್ರಕೃತಿಪುರುಷ ಪ್ರಕಟೇ । ಅನಾದಿಸಿದ್ಧೇ ॥೯೬೨॥ ಪೈ ಕ್ಷೇತ್ರ ಯೇಣೇ ನಾಂವೇ । ಜೇ ಸಾಂಗಿತಲೇ ಆಘವೇ । ತೇಂಚಿ ಏಥ ಜಾಣಾವೇ । ಪ್ರಕೃತಿ ಹೇ ಗಾ ॥೯೬೩॥ ಆಣಿ ಕ್ಷೇತ್ರಜ್ಞು ಐಸೇ । ಜಯಾತೇ ಮ್ಹಣಿತಲೇ ಅಸೇ । ತೋ ಪುರುಷ ಹೇ ಅನಾರಿಸೇ । ನ ಬೋಲೋ ಘೇಈ ॥೯೬೪॥ ಇಯೇ ಆನಾನೇ ನಾಂವೇ । ಪರಿ ನಿರೂಪ್ಯ ಆನ ನೋಹೇ । ಹೇ ಲಕ್ಷಣ ನ ಚುಕಾವೇ । ಪುಢತಪುಢತೀ ॥೯೬೫॥ ತರೀ ಕೇವಳ ಜೇ ಸತ್ತಾ । ತೋ ಪುರುಷು ಗಾ ಪಂಡುಸುತಾ । ಪ್ರಕೃತಿತೇ ಸಮಸ್ತಾ । ಕ್ರಿಯಾ ನಾಮ ॥೯೬೬॥ ಬುದ್ಧಿ ಇಂದ್ರಿಯೇ ಅಂತಃಕರಣ । ಇತ್ಯಾದಿ ವಿಕಾರಭರಣ । ಆಣಿ ತೇ ತಿನ್ಹೀ ಗುಣ । ಸತ್ತ್ವಾದಿಕ ॥೯೬೭॥ ಹಾ ಆಘವಾಚಿ ಮೇಳಾವಾ । ಪ್ರಕೃತೀ ಜಾಹಲಾ ಜಾಣಾವಾ । ಹೇಚಿ ಹೇತು ಸಂಭವಾ । ಕರ್ಮಾಚಿಯಾ ॥೯೬೮॥

ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।
ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥೨೦॥

ತೇಥ ಇಚ್ಛಾ ಆಣಿ ಬುದ್ಧಿ । ಘಡವೀ ಅಹಂಕಾರೇಸೀ ಆಧೀ । ಮಗ ತಿಯಾ ಲಾವಿತೀ ವೇಧೀ । ಕಾರಣಾಚ್ಯಾ ॥೯೬೯॥ ತೇಂಚಿ ಕಾರಣ ಠಾಕಾವಯಾ। ಜೇ ಸೂತ್ರ ಧರಣೇ ಉಪಾಯಾ । ತಯಾ ನಾಂವ ಧನಂಜಯಾ । ಕಾರ್ಯ ಪೈ ಗಾ ॥೯೭೦॥ ಆಣಿ ಇಚ್ಛಾ ಮದಾಚ್ಯಾ ಥಾವೀ । ಲಾಗಲೀ ಮನಾತೇ ಉಠವೀ । ತೇ ಇಂದ್ರಿಯೇ ರಾಹಾಟವೀ । ಹೇ ಕರ್ತೃತ್ವ ಪೈ ಗಾ ॥೯೭೧॥ ಮ್ಹಣೌನಿ ತೀನ್ಹೀ ಯಾ ಜಾಣಾ । ಕಾರ್ಯಕರ್ತೃತ್ವಕಾರಣಾ । ಪ್ರಕೃತಿ ಮೂಳ ಹೇ ರಾಣಾ । ಸಿದ್ಧಾಂಚಾ ಮ್ಹಣೇ ॥೯೭೨॥

ಆ ಪ್ರಕೃತಿ ಮತ್ತು ಪುರುಷರ ವಿಷಯಕ್ಕೆ ನಿರ್ದೋಷವಾದ ವಿಚಾರವನ್ನು ಕೇಳು. ಹೀಗೆ ಶ್ರೀಕೃಷ್ಣ ಪರಮಾತ್ಮನು ಅರ್ಜುನನಿಗೆ ಹೇಳಿದನು ।೯೫೯॥

ಶ್ಲೋಕಾರ್ಥ :- ಪ್ರಕೃತಿ ಪುರುಷರಿಬ್ಬರಿಗೂ ಆದಿಯಿಲ್ಲ. ಅವು ಅನಾದಿ ತತ್ತ್ವಗಳು ಆದರೂ ರಾಗ ದ್ವೇಷಾದಿ ವಿಕಾರಗಳು ಸಾತ್ತ್ವಿಕಾದಿ ಗುಣಗಳು, ಪ್ರಕೃತಿಯಿಂದ ಹುಟ್ಟಿದವುಗಳೆಂದು ತಿಳಿ ।೧೯॥

ಹಗಲು ಮತ್ತು ರಾತ್ರಿ ಇವು ಜೋಡಿಯಾಗಿರುವಂತೆ ಪುರುಷನು ಅನಾದಿಯಾಗಿದ್ದು, ಆಗಿನಿಂದಲೂ ಪ್ರಕೃತಿಯು ಅದಕ್ಕೆ ಹತ್ತಿಕೊಂಡೇ ಇರುವುದು ।೯೬೦॥

ಛಾಯೆಯು ರೂಪವಲ್ಲ, ಆದರೆ ಅದು ರೂಪದ ಜೊತೆಗೆ ಇರುವುದು. ಅದರಂತೆಯೇ ಧನಂಜಯನೇ, ಬೀಜ ಬಿತ್ತಿದಾಗ ಯಾವ ಪ್ರಕಾರವಾಗಿ ಬೀಜ ಮತ್ತು ಅದರ ಸಿಪ್ಪೆಯೂ ಹುಟ್ಟುವುದೋ ।೯೬೧॥

ಅದರಂತೆ ಪ್ರಕೃತಿ ಮತ್ತು ಪುರುಷ ಇವರ ಜೋಡಿಯು ಅನಾದಿಸಿದ್ಧವಾಗಿರುವುದು, ಪ್ರಸಿದ್ಧವಾಗಿದೆ ।೯೬೨॥

ಆದರೆ ಕ್ಷೇತ್ರವೆಂಬ ಹೆಸರಿನಿಂದ ನಿನಗೆ ಈಗಾಗಲೇ ಹೇಳಿರುವುದು. ಅದಕ್ಕೇನೇ ಇಲ್ಲಿ ಪ್ರಕೃತಿ ಎಂದು ತಿಳಿಯಬೇಕು ।೯೬೩॥

ಮತ್ತು ಕ್ಷೇತ್ರಜ್ಞವೆಂದು ಯಾವುದಕ್ಕೆ ಹೇಳುವರೋ, ಅದೇ ಪುರುಷವೆಂದು ನಾವು ನಿಃಸಂಶಯವಾಗಿ ಹೇಳುತ್ತೇವೆ ।೯೬೪॥

ಇವುಗಳ ಹೆಸರು ಭಿನ್ನ ಭಿನ್ನವಾಗಿದ್ದರೂ ಅವುಗಳ ವಿಷಯಕ್ಕೆ ನಿರೂಪಣವು ಭಿನ್ನವಾಗಿರುವುದಿಲ್ಲ. ಈ ಮಾತನ್ನು ನೀನು ಮೇಲಿಂದ ಮೇಲೆ ಪೂರ್ಣವಾಗಿ ಲಕ್ಷದಲ್ಲಿಡು ।೯೬೫॥

ಹೇ ಪಂಡುಸುತನೇ, ಯಾವ ಸತ್ತೆಗೆ ಎಂದೂ ನಾಶವಿಲ್ಲವೋ, ಅದಕ್ಕೆ ಪುರುಷವೆಂದು ತಿಳಿಯಬೇಕು ಮತ್ತು ಸತ್ತೆಯ ಯೋಗದಿಂದ ಯಾವ ಕ್ರಿಯೆಯು ನಿರ್ಮಾಣವಾಗುತ್ತದೆಯೋ ಅದಕ್ಕೆ ಪ್ರಕೃತಿ ಎಂದು ಹೇಳುವರು ।೯೬೬॥

ಬುದ್ಧಿ, ಇಂದ್ರಿಯಗಳು, ಅಂತಃಕರಣಗಳು ಇತ್ಯಾದಿ ಯಾವುದರಿಂದ ವಿಕಾರಗೊಳ್ಳುವುವೋ, ಮತ್ತು ಸತ್ತ್ವ, ರಜ, ತಮ ಈ ಮೂರು ಗುಣಗಳು ।೯೬೭॥

ಇವುಗಳೆಲ್ಲವು ಪ್ರಕೃತಿಯಿಂದಲೇ ಉತ್ಪತ್ತಿಯಾಗುವುವು ಮತ್ತು ಇವುಗಳಿಂದ ಎಲ್ಲ ಕರ್ಮಗಳು ಆಗುವುವು ।೯೬೮॥

ಶ್ಲೋಕಾರ್ಥ :- ಪ್ರಕೃತಿಯೇ ದೇಹೇಂದ್ರಿಯಗಳಿಗೆ ಕಾರಣಕರ್ತ. ಪುರುಷನು ಸುಖದುಃಖಗಳನ್ನು ಅನುಭವಿಸುವವನು ।೨೦॥

ಈ ಪ್ರಕೃತಿಯಿಂದ ಮೊದಲು ಇಚ್ಛೆ, ಬುದ್ಧಿ, ಅಹಂಕಾರಗಳು ಉತ್ಪನ್ನವಾದವು. ಈ ಇಚ್ಛಾ ಬುದ್ಧಿಗಳು ಫಲಪ್ರಾಪ್ತಿಗಾಗಿ ಇಂದ್ರಿಯಗಳಿಗೆ ಕರ್ಮಗಳನ್ನು ಮಾಡುವ ಹವ್ಯಾಸ ಹಚ್ಚುವುವು ।೯೬೯॥

ಅದೇ ಫಲಪ್ರಾಪ್ತಿಯಾಗುವುದಕ್ಕಾಗಿ ಯಾವ ಉಪಾಯ ಮಾಡಬೇಕೋ ಅದಕ್ಕೆ ಧನಂಜಯನೇ, ಕಾರ್ಯವೆಂದು ಹೇಳುವರು ।೯೭೦॥

ಇದೇ ಇಚ್ಛೆಯು ಪ್ರಬಲವಾಗಿ ಮನಸ್ಸು ಇಂದ್ರಿಯಗಳಿಗೆ ಜಾಗ್ರತೆ ಮಾಡುವುದು ಮತ್ತು ಅವುಗಳಿಂದ ಎಲ್ಲ ವ್ಯವಹಾರಗಳನ್ನು ಮಾಡಿಸುವುದು ।೯೭೧॥

ಆದ್ದರಿಂದ ಕಾರ್ಯ, ಕರ್ತೃತ್ವ, ಮತ್ತು ಕಾರಣ ಈ ತ್ರಿಪುಟಿಗೆ ಪ್ರಕೃತಿಯೇ ಮೂಲ ಕಾರಣವಾಗಿರುವುದು. ಹೀಗೆ ಸಿದ್ಧಾಂತದ ರಾಜನಾದ ಶ್ರೀಕೃಷ್ಣನು ಹೇಳಿದನು ।೯೭೨॥

ಏವಂ ತಿಹೀಂಚೇನಿ ಸಮವಾಯೇ । ಪ್ರಕೃತಿ ಕರ್ಮರೂಪ ಹೋಯೇ । ಪರೀ ಜಯಾ ಗುಣಾ ವಾಢೇ ತ್ರಾಯೇ । ತ್ಯಾಚಿ ಸಾರಿಖೀ ॥೯೭೩॥ ಜೇ ಸತ್ತ್ವಗುಣೇ ಅಧಿಷ್ಠಿಜೇ । ತೇ ಸತ್ಕರ್ಮ ಮ್ಹಣಿಜೇ । ರಜೋಗುಣೇ ನಿಫಜೇ । ಮಧ್ಯಮ ತೇ ॥೯೭೪॥ ಜೇ ಕಾ ಕೇವಳ ತಮೇ । ಹೋತೀ ಜಿಯೇ ಕರ್ಮೇ । ನಿಷಿದ್ಧೇ ಅಧರ್ಮೇ । ಜಾಣ ತಿಯೇ ॥೯೭೫॥ ಐಸೇನಿ ಸಂತಾಸಂತೇ । ಕರ್ಮೇ ಪ್ರಕೃತೀಸ್ತವ ಹೋತೇ । ತಯಾಪಾಸೋನಿ ನಿರ್ವಾಳತೇ । ಸುಖದುಃಖ ಗಾ ॥೯೭೬॥ ಅಸಂತೀ ದುಃಖ ಉಪಜೇ । ಸತ್ಕರ್ಮೀ ಸುಖ ನಿಫಜೇ । ತಯಾ ದೋಹೀಂಚಾ ಬೋಲಿಜೇ । ಭೋಗು ಪುರುಷಾ ॥೯೭೭॥ ಸುಖದುಃಖೇ ಜಂವವರೀ । ನಿಫಜತೀ ಸಾಚೋಕಾರೀ । ತಂವ ಪ್ರಕೃತಿ ಉದ್ಯಮು ಕರೀ । ಪುರುಷು ಭೋಗೀ ॥೯೭೮॥ ಪ್ರಕೃತಿ ಪುರುಷಾಂಚೀ ಕುಳವಾಡೀ । ಸಾಂಗತಾ ಅಸಂಗಡೀ । ಜೇ ಆಂಬುಲೀ ಜೋಡೀ । ಆಂಬುಲಾ ಖಾಯ ॥೯೭೯॥ ಆಂಬುಲಾ ಆಂಬುಲಿಯೇ । ಸಂಗತೀ ನಾ ಸೋಯೇ । ಕೀ ಆಂಬುಲೀ ಜಗ ವಿಯೇ । ಚೋಜ ಐಕಾ ॥೯೮೦॥

ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್ ।<br>ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು ॥೨೧॥

ಜೇ ಅನಂಗು ತೋ ಪೇಂಧಾ । ನಿಕವಡಾ ನುಸಧಾ । ಜೀರ್ಣು ಅತಿವೃದ್ಧಾ । ಪಾಸೋನಿ ವೃದ್ಧು ॥೯೮೧॥ ತಯಾ ಆಡನಾಂವ ಪುರುಷು । ಯೇರ್ಹವೀ ಸ್ತ್ರೀ ನಾ ನಪುಂಸಕು । ಕಿಂಬಹುನಾ ಏಕು । ನಿಶ್ಚಯೋ ನಾಹೀ ॥೯೮೨॥ ತೋ ಅಚಕ್ಷು ಅಶ್ರವಣು । ಅಹಸ್ತು ಅಚರಣು । ರೂಪ ನಾ ವರ್ಣು । ನಾಮ ಆಥೀ ॥೯೮೩॥ ಅರ್ಜುನಾ ಕಾಂಹೀಂಚಿ ಜೇಥ ನಾಹೀ । ತೋ ಪ್ರಕೃತೀಚಾ ಭರ್ತಾ ಪಾಹೀ । ಕೀ ಭೋಗಣೇ ಐಸಯಾಹೀ । ಸುಖದುಃಖಾಚೇ ॥೯೮೪॥ ತೋ ತರೀ ಅಕರ್ತಾ । ಉದಾಸು ಅಭೋಕ್ತಾ । ಪರೀ ಇಯಾ ಪತಿವ್ರತಾ ಭೋಗವಿಜೇ ॥೯೮೫॥ ಜಿಯೇತೇ ಅಳುಮಾಳು । ರೂಪಾ ಗುಣಾಚಾ ಚಾಳಢಾಳು । ತೇ ಭಲತ್ಯೈಸಾಹೀ ಖೇಳು । ಲೇಖಾ ಆಣೀ ॥೯೮೬॥ ಮಾ ಇಯೇ ಪ್ರಕೃತೀ ತಂವ । ಗುಣಮಯೀ ಹೇಂಚಿ ನಾಂವ । ಕಿಂಬಹುನಾ ಸಾವೇವ । ಗುಣ ತೇಚಿ ಹೇ ॥೯೮೭॥ ಹೇ ಪ್ರತಿಕ್ಷಣೇ ನಿತ್ಯ ನವೀ । ರೂಪಾ ಗುಣಾಚೀಚ ಆಘವೀ । ಜಡಾತೇಂಹೀ ಮಾಜವೀ । ಇಯೇಚಾ ಮಾಜು ॥೯೮೮॥

ಈ ಪ್ರಕಾರವಾಗಿ ಮೂರೂ ಒಂದಾದಾಗ ಪ್ರಕೃತಿಯು ಕ್ರಿಯಾರೂಪವಾಗುವುದು. ಆದರೆ ಯಾವ ಗುಣದ ವಿಶೇಷವಾಗುವುದೋ, ಆ ಗುಣದಂತೆ ಕ್ರಿಯೆಯು ನಡೆಯುವುದು ।।೯೭೩।।

ಯಾವ ಕರ್ಮವು ಸತ್ತ್ವಗುಣದಿಂದ ಉತ್ಪನ್ನವಾಗುವುದೋ, ಅದು ಸತ್ಕರ್ಮವಾಗುವುದು. ರಜೋಗುಣದಿಂದ ಉತ್ಪನ್ನವಾಗುವುದೋ, ಅದು ಮಧ್ಯಮವು ।।೯೭೪।।

ಮತ್ತು ಯಾವ ಕರ್ಮಗಳು ಕೇವಲ ತಮೋಗುಣದಿಂದ ಉತ್ಪನ್ನವಾಗುವುವೋ, ಅವು ನಿಷಿದ್ಧವಾಗಿವೆ. ಅಂದರೆ ಧರ್ಮವಿರುದ್ಧ ಕರ್ಮಗಳಾಗಿವೆ ।।೯೭೫।।

ಈ ಪ್ರಕಾರವಾಗಿ ಪ್ರಕೃತಿಯಿಂದ ಉತ್ತಮ ಮತ್ತು ಕೆಟ್ಟ ಕರ್ಮಗಳು ಆಗುತ್ತವೆ ಮತ್ತು ಈ ಕರ್ಮಗಳಿಂದ ಸುಖದುಃಖಗಳು ಪ್ರಾಪ್ತವಾಗುತ್ತವೆ ।।೯೭೬।।

ಕೆಟ್ಟ ಕರ್ಮಗಳಿಂದ ದುಃಖವು ಉತ್ಪನ್ನವಾಗುವುದು ಮತ್ತು ಸತ್ಕರ್ಮಗಳಿಂದ ಸುಖವು ಉತ್ಪನ್ನವಾಗುವುದು. ಹಾಗೂ ಈ ಎರಡರ ಉಪಭೋಗವನ್ನು ಪುರುಷನಿಗೆ ಸ್ವೀಕರಿಸಬೇಕಾಗುವುದು।।೯೭೭।।

ಎಲ್ಲಿಯವರೆಗೆ ಸುಖ ಮತ್ತು ದುಃಖಗಳು ಸತ್ಯತ್ತ್ವದಿಂದ ಉತ್ಪನ್ನವಾಗುವುವೋ, ಅಲ್ಲಿಯವರೆಗೆ ವ್ಯಾಪಾರವು ಪ್ರಕೃತಿಯದ್ದಾಗಿ ಭೋಗವು ಪುರುಷದ್ದಾಗುವುದು ।।೯೭೮।।

ಪ್ರಕೃತಿ ಪುರುಷರ ವ್ಯಾಪಾರವು ವಿಸಂಗತವಾಗಿದೆ. ಹೇಗೆಂದರೆ ಸ್ತ್ರೀಯು ದುಡಿಯಬೇಕು, ಮತ್ತು ಪತಿಯು ಸ್ವಸ್ಥವಾಗಿ ಕುಳಿತು ತಿನ್ನಬೇಕು ।।೯೭೯।।

ಎಷ್ಟೊಂದು ಚಮತ್ಕಾರವಿದೆ ನೋಡಿರಿ! ಈ ಸ್ತ್ರೀ ಪುರುಷರ ಎಂದೂ ಸಂಗವಾಗದೇ ಸ್ತ್ರೀಯಿಂದ ಜಗದ ಉತ್ಪತ್ತಿಯಾಗುವುದು ।।೯೮೦।।

**ಶ್ಲೋಕಾರ್ಥ :–** ಪ್ರಕೃತಿಯಲ್ಲಿ ಸೇರಿದ ಪುರುಷನು ಪ್ರಕೃತಿಯಿಂದ ಹುಟ್ಟಿದ ಗುಣಗಳನ್ನು ಅನುಭವಿಸುತ್ತಾನೆ. ಅವನು ಒಳ್ಳೆಯ ಕೆಟ್ಟ ಜನ್ಮಗಳನ್ನು ಎತ್ತುವುದಕ್ಕೆ ಗುಣಸಂಗವೇ ಕಾರಣವಾಗಿದೆ ।।೨೧।।

ಯಾವ ಪುರುಷ ಬ್ರಹ್ಮ ನಿರಾಕಾರನಿದ್ದು ಉದಾಸೀನನಾಗಿರುವನು. ನಿರ್ಧನನು ಕೇವಲ ಒಬ್ಬನಿರುವನು ಮತ್ತು ಜೀರ್ಣನಿದ್ದು, ಯಾವುದು ಅತೀ ವೃದ್ಧವೋ ಅದಕ್ಕಿಂತಲೂ ವೃದ್ಧನಿರುವನು ।।೯೮೧।।

ಈತನಿಗೆ ಅಡ್ಡ ಹೆಸರು ಪುರುಷನೆಂದು ಇದೆ. ಇಲ್ಲದಿದ್ದರೆ ಆತನು ಸ್ತ್ರೀ ಅಥವಾ ನಪುಂಸಕ ಇವೆರಡರಲ್ಲಿ ನಿಶ್ಚಯವಾಗಿ ಯಾರಿಗೂ ಹೇಳಲು ಬರುವುದಿಲ್ಲ ।।೯೮೨।।

ಈತನಿಗೆ ಕಣ್ಣುಗಳು, ಕಿವಿಗಳು, ಹಸ್ತಗಳು, ಪಾದಗಳು, ರೂಪ, ವರ್ಣ ಮತ್ತು ಹೆಸರು ಇವು ಯಾವ ಒಂದೂ ಇರುವುದಿಲ್ಲ ।।೯೮೩।।

ಅರ್ಜುನಾ, ಯಾರಿಗೆ ಯಾವ ಅವಯವಗಳೂ ಇಲ್ಲ, ಇಂಥವನಾದ ಈತನು ಪ್ರಕೃತಿಯ ಪತಿಯಾಗಿ ಈತನಿಗೂ ಸುಖದುಃಖವನ್ನು ಭೋಗಿಸಬೇಕಾಗುವುದು ।।೯೮೪।।

ಆತನು ಕರ್ಮವನ್ನು ಮಾಡಲಾರದವನು, ಉದಾಸೀನನು ಮತ್ತು ಉಪಭೋಗ ತೆಗೆದು ಕೊಳ್ಳದವನಾಗಿದ್ದರೂ ಈ ಪತಿವ್ರತೆ ಪ್ರಕೃತಿಯು ಆತನಿಗೆ ಉಪಭೋಗವನ್ನು ತೆಗೆದು ಕೊಳ್ಳಲು ಹಚ್ಚುವಳು ।।೯೮೫।।

ಯಾವ ಪ್ರಕೃತಿಯು ತನ್ನ ಗುಣದ ಮತ್ತು ರೂಪದ ಅನುರೋಧದಿಂದ ವಿಲಕ್ಷಣವಾದ ಆಟವನ್ನು ಆಡಿ ತೋರಿಸುವಳು ।।೯೮೬।।

ಆದ್ದರಿಂದ ಈ ಪ್ರಕೃತಿಗೆ ಗುಣಮಯೀ ಎಂದು ಹೆಸರು ಕೊಟ್ಟಿದೆ. ಹೆಚ್ಚಿಗೇನು ಹೇಳಬೇಕು? ಈಕೆಯು ಮೂರ್ತಿಮಂತ ಗುಣವೇ ಆಗಿರುವಳು ।।೯೮೭।।

ಈಕೆಯು ಕ್ಷಣಕ್ಷಣಕ್ಕೆ ನಿತ್ಯನೂತನಳಾಗಿದ್ದು, ರೂಪ ಮತ್ತು ಗುಣದಿಂದ ಯುಕ್ತಳಾಗಿದ್ದಾಳೆ ಮತ್ತು ಜಡವಸ್ತುವಿನಿಂದ ಚಮತ್ಕಾರವಾಗಿ ಕರ್ಮವನ್ನು ಮಾಡಿಸುವಳು ।।೯೮೮।।

ನಾಮೇ ಇಯೇ ಪ್ರಸಿದ್ಧೇ । ಸ್ನೇಹೋ ಇಯಾ ಸ್ನಿಗ್ಧೇ । ಇಂದ್ರಿಯೇ ಪ್ರಬುದ್ಧೇ । ಇಯೇ ಚೇನಿ ।।೯೮೯।। ಕಾಯಿ ಮನ ಹೇ ನಪುಂಸಕ । ಕೀ ತೇ ಭೋಗವೀ ತಿನ್ಹೀ ಲೋಕ । ಐಸೇ ಐಸೇ ಅಲೌಕಿಕ । ಕರಣೇ ಇಯೇಚೇ ।।೯೯೦।। ಹೇ ಭ್ರಮಾಚೇ ಮಹಾದ್ವೀಪ । ಹೇ ವ್ಯಾಪ್ತಿ ಚೇ ರೂಪ । ವಿಕಾರ ಉಮಪ । ಇಯಾ ಕೇಲೇ ।।೯೯೧।। ಹೇ ಕಾಮಾಚೀ ಮಾಂಡವೀ । ಹೇ ಮೋಹವನೀಂಚೀ ಮಾಧವೀ । ಇಯೇ ಪ್ರಸಿದ್ಧ ಚಿ ದೈವೀ । ಮಾಯಾ ಹೇ ನಾಮ ।।೯೯೨।। ಹೇ ವಾಙ್ಮಯಾಚೀ ವಾಢೀ । ಹೇ ಸಾಕಾರಪಣಾಚೀ ಜೋಡೀ । ಪ್ರಪಂಚಾಚೀ ಧಾಡೀ । ಅಭಂಗ ಹೇ ।।೯೯೩।। ಕಳಾ ಏಥೂನಿ ಜಾಲಿಯಾ । ವಿದ್ಯಾ ಇಯೇಚ್ಯಾ ಕೇಲಿಯಾ । ಇಚ್ಛಾ ಜ್ಞಾನ ಕ್ರಿಯಾ । ವಿಯಾಲೀ ಹೇ ।।೯೯೪।। ಹೇ ನಾದಾಚೀ ಟಾಂಕಸಾಳ । ಹೇ ಚಮತ್ಕಾರಾಚೇ ವೇಳಾಉಳ । ಕಿಂಬಹುನಾ ಸಕಳ । ಖೇಳು ಇಯೇಚಾ ।।೯೯೫।। ಜೇ ಉತ್ಪತ್ತೀ ಪ್ರಲಯೋ ಹೋತ । ತೇ ಇಯೇಚೇ ಸಾಯಂಪ್ರಾತ । ಹೇ ಅಸೋ ಅದ್ಭುತ । ಮೋಹನ ಹೇ ।।೯೯೬।। ಹೇ ಅದ್ವಯಾಚೇ ದುಸರೇ । ಹೇ ನಿಃಸಂಗಾಚೇ ಸೋಯರೇ । ಹೇ ನಿರಾಳೇಸೀ ಘರೇ । ನಾಂದತ ಅಸೇ ।।೯೯೭।। ಇಯೇತೇ ಏತುಲಾವರೀ । ಸೌಭಾಗ್ಯ ವ್ಯಾಪ್ತೀಚೇ ಥೋರೀ । ಮ್ಹಣೌನಿ ತಯಾ ಆವರೀ । ಅನಾವರಾತೇ ।।೯೯೮।। ತಯಾಚ್ಯಾ ತಂವ ಠಾಯೀ । ನಿಪಟೂನಿ ಕಾಂಹೀಂಚಿ ನಾಹೀ । ಕೀ ತಯಾ ಆಘವೇಹೀ । ಆಪಣಚಿ ಹೋಯ ।।೯೯೯।। ತಯಾ ಸ್ವಯಂಭಾಚೀ ಸಂಭೂತೀ । ತಯಾ ಅಮೂರ್ತಾಚೀ ಮೂರ್ತೀ । ಆಪಣ ಹೋಯ ಸ್ಥಿತೀ । ಠಾವೋ ತಯಾ ।।೧೦೦೦।। ತಯಾ ಅನಾರ್ತಾಚೀ ಆರ್ತೀ । ತಯಾ ಪೂರ್ಣಾಚೀ ತೃಪ್ತೀ । ತಯಾ ಅಕುಳಾಚೀ ಜಾತೀ । ಗೋತ ಹೋಯ ।।೧೦೦೧।। ತಯಾ ಅಚರ್ಚಾಚೇ ಚಿನ್ಹ । ತಯಾ ಅಪಾರಾಚೇ ಮಾನ । ತಯಾ ಅಮನಸ್ಕಾಚೇ ಮನ । ಬುದ್ಧೀಹೀ ಹೋಯ ।।೧೦೦೨।। ತಯಾ ನಿರಾಕಾರಾಚಾ ಆಕಾರು । ತಯಾ ನಿರ್ವ್ಯಾಪಾರಾಚಾ ವ್ಯಾಪಾರು । ನಿರಹಂಕಾರಾಚಾ ಅಹಂಕಾರು । ಹೋಊನಿ ಠಾಕೇ ।।೧೦೦೩।। ತಯಾ ಅನಾಮಾಚೇ ನಾಮ । ತಯಾ ಅಜಾಚೇ ಜನ್ಮ । ಆಪಣ ಹೋಯ ಕರ್ಮ । ಕ್ರಿಯಾ ತಯಾ ।।೧೦೦೪।। ತಯಾ ನಿರ್ಗುಣಾಚೇ ಗುಣ । ತಯಾ ಅಚರಣಾಚೇ ಚರಣ । ತಯಾ ಅಶ್ರವಣಾಚೇ ಶ್ರವಣ । ಅಚಕ್ಷೂಚೇ ಚಕ್ಷು ।।।೧೦೦೫।। ತಯಾ ಭಾವಾತೀತಾಚೇ ಭಾವ । ತಯಾ ನಿರವಯ ವಾಚೇ ಅವಯವ । ಕಿಂಬಹುನಾ ಹೋಯ ಸರ್ವ । ಪುರುಷಾಚೇ ಹೇ ।।೧೦೦೬।।

ಈ ಪ್ರಕೃತಿಯಿಂದ ಎಲ್ಲ ಹೆಸರುಗಳು ಪ್ರಸಿದ್ಧಗೊಂಡಿರುವುವು. ಈಕೆಯಿಂದಲೇ ಪ್ರೀತಿಯು ಪ್ರೇಮಯುಕ್ತವಾಗಿದೆ ಮತ್ತು ಇಂದ್ರಿಯಗಳು ಜಾಗ್ರತೆಯಾಗಿರುವುವು ।೯೮೯॥

ನೋಡಲು ಹೋದರೆ ಮನಸ್ಸು ನಪುಂಸಕವಾಗಿದ್ದರೂ, ಈಕೆಯು ಮೂರು ಲೋಕಗಳಲ್ಲಿಯೂ ತಿರುಗಾಡಿಸುವಳು. ಹೀಗೆ ಈಕೆಯ ಅಲೌಕಿಕ ಕಾರ್ಯವಾಗಿರುವುದು ।೯೯೦॥

ಈಕೆಯು ಭ್ರಮೆಯ ಕೇವಲ ಮಹಾದ್ವೀಪವಾಗಿರುವಳು. ಸ್ವಯಂಮೇವ ವ್ಯಾಪ್ತಿ ಮಾಡುವಾಕೆಯು ಮತ್ತು ಅಮರ್ಯಾದ ವಿಕಾರಗಳನ್ನು ಹುಟ್ಟಿಸುವವಳು ಆಗಿರುವಳು ।೯೯೧॥

ಈಕೆಯು ಕಾಮರೂಪ ಬಳ್ಳಿಯ ಹಂದರವಾಗಿರುವಳು. ಮೋಹರೂಪ ವನದ ವಸಂತರೂಪಳಾಗಿರುವಳು. ದೈವೀ ಮಾಯಾ ಈ ಹೆಸರುಗಳಿಂದ ಪ್ರಸಿದ್ಧಳಾಗಿದ್ದಾಳೆ ।೯೯೨॥

ಈಕೆಯು ಶಬ್ದಮಯ ಶಾಸ್ತ್ರದ ಬೆಳವಣಿಗೆಯಾಗಿದ್ದಾಳೆ. ಈಕೆಯು ನಿರಾಕಾರಕ್ಕೆ ಆಕಾರವನ್ನು ಕೊಡುವವಳಾಗಿದ್ದಾಳೆ ಮತ್ತು ಪ್ರಪಂಚದ ಮೇಲೆ ಸತತವಾಗಿ ಆಪತ್ತು ತರುವವಳಾಗಿದ್ದಾಳೆ ।೯೯೩॥

ಎಲ್ಲ ಕಲೆಗಳು ಈಕೆಯಿಂದಲೇ ಉತ್ಪನ್ನವಾಗಿರುವುದರಿಂದ ಎಲ್ಲ ವಿದ್ಯೆಗಳನ್ನು ಈಕೆಯೇ ಮಾಡಿರುವಳು ಮತ್ತು ಇಚ್ಛಾ, ಜ್ಞಾನ ಮತ್ತು ಕ್ರಿಯೆಗಳಿಗೆ ಈಕೆಯೇ ಜನ್ಮ ಕೊಟ್ಟಿರುವಳು ।೯೯೪॥

ಈಕೆಯು ಅಭಿರುಚಿಯ ಟಂಕಸಾಲೆಯಾಗಿರುವಳು, ಈಕೆಯು ಚಮತ್ಕಾರಗಳ ಮನೆಯಾಗಿರುವಳು. ಹೆಚ್ಚಿಗೇನು ಹೇಳಬೇಕು? ಈ ಎಲ್ಲ ಆಟವು ಈಕೆಯದೇ ಆಗಿದೆ ।೯೯೫॥

ಜಗತ್ತಿನ ಉತ್ಪತ್ತಿ ಪ್ರಳಯವಾಗುವುದು ಈಕೆಯಿಂದಲೇ, ಈಕೆಯಿಂದ ಪ್ರಾತಃಕಾಲ, ಸಾಯಂಕಾಲಗಳಾಗಿವೆ. ಇದು ಇರಲಿ, ಈಕೆಯು ಜಗತ್ತಿಗೆ ಅದ್ಭುತ ಮೋಹವನ್ನು ಹಾಕುವವಳಾಗಿದ್ದಾಳೆ ।೯೯೬॥

ಈಕೆಯು ಅದ್ವಯದ ಎರಡನೆಯ ಮೂರ್ತಿಯಾಗಿರುವಳು. ಈಕೆಯು ಸಂಗರಹಿತರ ಜತೆಗಾರ್ತಿಯಾಗಿರುವಳು. ಈಕೆಯ ವಾಸ್ತವ್ಯವು ಶೂನ್ಯದಲ್ಲಿದ್ದು, ಅಲ್ಲಿಯೂ ಬಾಳು ನಡೆಸುವಳು ।೯೯೭॥

ಈ ಪ್ರಕಾರವಾಗಿ ಈಕೆಯ ಸೌಭಾಗ್ಯದ ಮಹಿಮೆಯಾಗಿದೆ. ಆದ್ದರಿಂದಲೇ ಅನಾವರವಾಗಿರುವ ಬ್ರಹ್ಮಕ್ಕೂ ಆವರಿಸುವಳು ।೯೯೮॥

ವಸ್ತುತಃ ಆತ್ಮನಲ್ಲಿ ಯಾವ ವಿಕಾರಗಳು ಇರುವುದಿಲ್ಲ. ಆದರೆ ಆತನಲ್ಲಿ ಈಕೆಯು ಸ್ವತಃ ತಾನು ವಿಕಾರವಾಗುವಳು ।೯೯೯॥

ಆ ಸ್ವಯಂಭೂಗೆ ಉತ್ಪತ್ತಿಯನ್ನು, ಆ ನಿರಾಕಾರನಿಗೆ ಆಕಾರವನ್ನು, ಸ್ಥಿತಿ ಸ್ಥಾನಗಳನ್ನು ತಾನೇ ಆಗುವಳು ।೧೦೦೦॥

ಆ ಇಚ್ಛೆರಹಿತನ ಇಚ್ಛೆಯನ್ನು, ಆ ಪೂರ್ಣನ ತೃಪ್ತಿಯನ್ನು, ಆ ಕುಲರಹಿತನ ಜಾತಿ, ಗೋತ್ರಗಳನ್ನು ತಾನೇ ಆಗುವಳು ।೧೦೦೧॥

ಆ ಅನಿರ್ವಚನೀಯ ಲಕ್ಷಣಗಳನ್ನು, ಅಪಾರನ ಪ್ರಮಾಣವನ್ನು ಮತ್ತು ಅಮನಸ್ಕನ ಮನಸ್ಸು ಮತ್ತು ಬುದ್ಧಿಯನ್ನು ತಾನಾಗುವಳು ।೧೦೦೨॥

ಆ ನಿರಾಕಾರನ ಆಕಾರವನ್ನು, ನಿರ್ವ್ಯಾಪಾರನ ವ್ಯಾಪಾರವನ್ನು, ನಿರಹಂಕಾರನ ಅಹಂಕಾರವನ್ನು ತಾನೇ ಆಗುವಳು ।೧೦೦೩॥

ಆ ಅನಾಮನ ನಾಮವನ್ನು, ಅಜನ್ಮನ ಜನ್ಮವನ್ನು ಮತ್ತು ಕರ್ಮ ಹಾಗೂ ಕ್ರಿಯೆಗಳನ್ನು ತಾನೇ ಆಗಿರುವಳು ।೧೦೦೪॥

ಆ ನಿರ್ಗುಣನ ಗುಣವನ್ನು, ಆ ಅಚರಣನ ಚರಣವನ್ನು, ಆ ಅಶ್ರವಣದ ಶ್ರವಣವನ್ನು ಮತ್ತು ಅಚಕ್ಷುವಿನ ಚಕ್ಷುವನ್ನು ತಾನೇ ಆಗಿ ಇರುವಳು ।೧೦೦೫॥

ಭಾವಾತೀತನ ಭಾವವನ್ನು, ನಿರವಯನ ಅವಯವಗಳನ್ನು, ಒಟ್ಟಿನಲ್ಲಿ ಮಾಯೆಯು ತಾನು ಸ್ವತಃವೇ ಪುರುಷನ ಸರ್ವ ವಿಕಾರಗಳನ್ನು ಆಗುವಳು ।೧೦೦೬॥

ಏಸೇನಿ ಇಯಾ ಪ್ರಕೃತೀ । ಆಪುಲಿಯಾ ಸರ್ವ ವ್ಯಾಪ್ತೀ । ತಯಾ ಅವಿಕಾರಾತೇ ವಿಕೃತೀ । ಮಾಜೀ ಕೀಜೆ ।।೧೦೦೭।। ತೇಥ ಪುರುಷತ್ವ ಜೇ ಅಸೇ । ತೇ ಯೇ ಇಯೇ ಪ್ರಕೃತಿದಶೇ । ಚಂದ್ರಮಾ ಅಂವಸೇ । ಪಡಿಲಾ ಜೈಸಾ ।।೧೦೦೮।। ವಿದಳ ಬಹು ಚೋಖಾ । ಮೀನಲಿಯಾ ವಾಲಾ ಏಕಾ । ಕಸು ಹೋಯ ಪಾಂಚಕಾ । ಜಯಾಪರೀ ।।೧೦೦೯।। ಕಾ ಸಾಧೂತೇ ಗೋಂಧಳೀ । ಸಂಚರೋನಿ ಸುಯೇ ಮೈಳೀ । ನಾನಾ ಸುದಿನಾಚಾ ಆಭಾಳೀ । ದುರ್ದಿನು ಕೀಜೆ ।।೧೦೧೦।। ಜೇವೀ ಪಯ ಪಶೂಚ್ಯಾ ಪೋಟೀ । ಕಾ ವನ್ಹಿ ಜೈಸಾ ಕಾಷ್ಠೀ । ಗುಂಡೂನಿ ಘೇತಲಾ ಪಟೀ । ರತ್ನದೀಪು ।।೧೦೧೧।। ರಾಜಾ ಪರಾಧೀನು ಜಾಹಲಾ । ಕೀ ಸಿಂಹು ರೋಗೇ ರುಂಧಲಾ । ತೈಸಾ ಪುರುಷ ಪ್ರಕೃತಿ ಆಲಾ । ಸ್ವತೇಜಾ ಮುಕೇ ।।೧೦೧೨।। ಜಾಗತಾ ನರು ಸಹಸಾ। ನಿದ್ರಾ ಪಾಡೂನಿ ಜೈಸಾ । ಸ್ವಪ್ನೀಂಚಿಯಾ ಸೋಸಾ । ವಶ್ಯ ಕೀಜೆ ।।೧೦೧೩।। ತೈಸೇ ಪ್ರಕೃತಿ ಜಾಲೇಪಣೇ । ಪುರುಷಾ ಗುಣ ಭೋಗಣೇ । ಉದಾಸ ಅಂತುರೀಗುಣೇ । ಆತುಡೇ ಜೇವೀ ।।೧೦೧೪।। ತೈಸೇ ಅಜಾ ನಿತ್ಯಾ ಹೋಯೇ । ಆಂಗೀ ಜನ್ಮಮೃತ್ಯೂಚೇ ಘಾಯೇ । ವಾಜತೀ ಜೈ ಲಾಹೇ । ಗುಣಸಂಗಾತೇ ।।೧೦೧೫।। ಪರೀ ತೇ ಐಸೇ ಪಂಡುಸುತಾ । ತಾತಲೇ ಲೋಹ ಪಿಟಿತಾ । ಜೇವೀ ವನ್ಹಿ ಸೀಚಿ ಘಾತಾ । ಬೋಲತೀ ತಯಾ ।।೧೦೧೬।। ಕಾ ಆಂದೋಳಲಿಯಾ ಉದಕ । ಪ್ರತಿಭಾ ಹೋಯ ಅನೇಕ । ತೇ ನಾನಾತ್ವ ಮ್ಹಣತೀ ಲೋಕ । ಚಂದ್ರೀ ಜೇವೀ ।।೧೦೧೭।। ದರ್ಪಣಾಚಿಯಾ ಜವಳಿಕಾ । ದುಜೇಪಣ ಜೈಸೇ ಯೇ ಮುಖಾ । ಕಾ ಕುಂಕುಮೇ ಸ್ಫಟಿಕಾ । ಲೋಹಿತತ್ವ ಯೇ ।।೧೦೧೮।। ತೈಸಾ ಗುಣಸಂಗಮೇ । ಅಜನ್ಮಾ ಹಾ ಜನ್ಮೇ । ಪಾವತು ಐಸಾ ಗಮೇ । ಏರ್ಹವೀ ನಾಹೀ ।।೧೦೧೯।। ಅಧಮೋತ್ತಮಾ ಯೋನೀ । ಯಾಸಿ ಐಸಿಯಾ ಮಾನೀ । ಜೈಸಾ ಸಂನ್ಯಾಸೀ ಹೋಯ ಸ್ವಪ್ನೀ । ಅಂತ್ಯಜಾದಿ ಜಾತೀ ।।೧೦೨೦।। ಮ್ಹಣೌನಿ ಕೇವಳಾ ಪುರುಷಾ । ನಾಹೀ ಹೋಣೇ ಭೋಗಣೇ ದೇಖಾ । ಯೇಥ ಗುಣಸಂಗುಚಿ ಅಶೇಖಾ । ಲಾಗೀ ಮೂಳ ।।೧೦೨೧।।

ಉಪದ್ರಷ್ಟಾನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।
ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ।।೨೨।।

ಈ ಪ್ರಕಾರವಾಗಿ ಪ್ರಕೃತಿಯು ತನ್ನ ಸಾಮರ್ಥ್ಯದಿಂದ ಆ ಅವಿಕಾರಿ ಬ್ರಹ್ಮನಿಗೆ ವಿಕಾರವಶನನ್ನಾಗಿ ಮಾಡುವವಳು ।।೧೦೦೭।।

ಯಾವ ಪ್ರಕಾರವಾಗಿ ಅಮವಾಸ್ಯೆಯ ದಿನದಂದು ಚಂದ್ರನ ತೇಜವು ಲೋಪವಾಗುವುದೋ, ಅದರಂತೆ ಬ್ರಹ್ಮನ ತೇಜವು ಈ ಪ್ರಕೃತಿಯ ಮುಂದೆ ಬೀಳುವುದಿಲ್ಲ ।।೧೦೦೮।।

ಉತ್ತಮ ಪ್ರಕಾರದ ಬಂಗಾರಕ್ಕೆ ಸ್ವಲ್ಪ ಅನ್ಯಧಾತು ಕೂಡಿಸಿದರೆ ಆಗ ಆ ಬಂಗಾರದ ಒರಿಯು ಕಡಿಮೆಯಾಗುವುದು ।।೧೦೦೯।।

ಅಥವಾ ಸದಾಚಾರಿ ಮನುಷ್ಯನಿಗೆ ಪಿಶಾಚ ಬಾಧೆಯಾಗಲು ಆತನು ದುರಾಚಾರಿಯಾಗಿ ಹುಚ್ಚನಂತಾಗುವನು. ಅಥವಾ ದಟ್ಟವಾದ ಮೋಡಗಳು ಹಗಲಿನಲ್ಲಿಯೇ ಅಂಧಕಾರವನ್ನು ಮಾಡಿ ಸುದಿನದ ದುರ್ದಿನ ಮಾಡುವುವು ।।೧೦೧೦।।

ಯಾವ ಪ್ರಕಾರವಾಗಿ ಆಕಳ ಹೊಟ್ಟೆಯೊಳಗಿನ ಹಾಲು, ಅಥವಾ ಕಟ್ಟಿಗೆಯೊಳಗಿನ ಅಗ್ನಿಯು ಅಥವಾ ಉತ್ತಮವಾದ ರತ್ನದ ತೇಜವು ಅರಿವೆಯಲ್ಲಿ ಸುತ್ತಿದಾಗ ಅದರ ತೇಜವು ಹೊರಬೀಳುವುದಿಲ್ಲವೋ? ।।೧೦೧೧।।

ರಾಜನು ಪರಾಧೀನನಾಗಲು ಅಥವಾ ಸಿಂಹವು ರೋಗಗ್ರಸ್ತವಾಗಲು ಯಾವ ಪ್ರಕಾರವಾಗಿ ಅವುಗಳ ತೇಜವು ಲೋಪವಾಗುವುದೋ, ಅದರಂತೆ ಪುರುಷನು ಪ್ರಕೃತಿಯ ಅಧೀನನಾದಾಗ ಆತನ ತೇಜವು ಹೊರಬೀಳುವುದಿಲ್ಲ ।।೧೦೧೨।।

ನಿದ್ರೆಯು ಹೇಗೆ ಜಾಗೃತನಾಗಿರುವ ಮನುಷ್ಯನನ್ನು ಆತನು ಮಲಗಿಕೊಂಡಾಗ ಸಹಜವಾಗಿ ಸ್ವಪ್ನದಲ್ಲಿನ ಸುಖದುಃಖಗಳನ್ನು ಭೋಗಿಸಲು ಹಚ್ಚುವುದೋ ।।೧೦೧೩।।

ಅದೇ ಪ್ರಕಾರವಾಗಿ ಪ್ರಕೃತಿಯ ಅಧೀನನಾಗಿದ್ದಕ್ಕೆ ಪುರುಷನಿಗೆ ಗುಣಗಳನ್ನು ಭೋಗಿಸಬೇಕಾಗುವುದು. ಉದಾಸೀನ ಮನುಷ್ಯನಿಗೂ ಸ್ತ್ರೀಯಳ ಅಧೀನನಾದಾಗ್ಗೆ ಆಕೆಯ ಛಂದದಿಂದ ಹುಚ್ಚನಂತಾಗುವನು ।।೧೦೧೪।।

ಇದೇ ಪ್ರಕಾರವಾಗಿ ಯಾವ ಬ್ರಹ್ಮವು ಅಜ ಮತ್ತು ನಿತ್ಯವಾಗಿದ್ದರೂ ಪ್ರಕೃತಿಯ ಅಧೀನವಾಗಿ ಆತನಿಗೆ ಗುಣಸಂಗವಾಯಿತೆಂದರೆ ಜನ್ಮ ಮರಣದ ಪೆಟ್ಟು ತಿನ್ನಬೇಕಾಗುವುದು ।।೧೦೧೫।।

ಆದರೆ ಅರ್ಜುನಾ, ಇದು ಹೇಗಿದೆ ಎಂದರೆ, ಕಾದ ಕಬ್ಬಿಣಕ್ಕೆ ಪೆಟ್ಟು ಹಾಕಿದಾಗ ಆ ಪೆಟ್ಟು ಅಗ್ನಿಯ ಮೇಲೆ ಬೀಳುವುದು ಎಂದು ಜನರೆನ್ನುವರು ।।೧೦೧೬।।

ಅಥವಾ ನೀರು ಅಲುಗಾಡಿದಾಗ ಅದರಲ್ಲಿ ಅನೇಕ ಚಂದ್ರರ ಬಿಂಬವು ಕಾಣಿಸುವುದು. ಅದರಿಂದ ಜನರು ಚಂದ್ರನಲ್ಲಿ ಅನೇಕತ್ವ ಹಚ್ಚುವರು ।।೧೦೧೭।।

ಕನ್ನಡಿಯ ಮುಂದೆ ಹೋದರೆ, ಒಂದೇ ಮುಖವು ಎರಡಾಗುವುದು. ಅಥವಾ ಕುಂಕುಮದ ಮೇಲೆ ಸ್ಫಟಿಕಮಣಿಯನ್ನು ಇಡಲು, ಅದು ಹೇಗೆ ಕೆಂಪಾಗಿ ಕಾಣುವುದೋ ।।೧೦೧೮।।

ಅದರಂತೆ ಗುಣದ ಸಂಗತಿಯಿಂದ ಜನ್ಮರಹಿತನಾದ ಪುರುಷನು ಜನ್ಮ ಧರಿಸುವಂತೆ ಕಾಣುವನು. ಆದರೆ ನಿಜವಾಗಿ ನೋಡಲು ಹೋದರೆ ಹಾಗೆ ಇದಿರುವುದಿಲ್ಲ ।।೧೦೧೯।।

ಸಂನ್ಯಾಸಿಯು ಸ್ವಪ್ನದಲ್ಲಿ ಅಂತ್ಯಜ ಜಾತಿಯಲ್ಲಿ ಕೂಡಿಕೊಂಡವನಾಗಿ ಕಾಣುವಂತೆ ಆ ಪುರುಷನ ಉತ್ತಮ ಅಥವಾ ಅಧಮ ಯೋನಿಗಳಿವೆ ಎಂದು ನೀನು ತಿಳಿದುಕೊ ।।೧೦೨೦।।

ಆದ್ದರಿಂದ ಕೇವಲ (ಪ್ರಕೃತಿರಹಿತ) ಪುರುಷನಿಗೆ ಜನ್ಮ ಮರಣ ಮತ್ತು ಸುಖದುಃಖಗಳು ಇವು ಯಾವುವೂ ಇಲ್ಲ, ಈ ಎಲ್ಲಕ್ಕೂ ಮೂಲ ಪ್ರಕೃತಿಯ ಗುಣ ಮೇಲಿನ ಆಸಕ್ತಿಯಾಗಿದೆ ।।೧೦೨೧।।

ಶ್ಲೋಕಾರ್ಥ :- ಅಂಟಿಯೂ ಅಂಟದ ಈ ಶರೀರದಲ್ಲಿ ಇರುವ ಪುರುಷನನ್ನು ಸಾಕ್ಷಿಯೆಂದೂ, ಅನುಮೋದಕನೆಂದೂ, ಭರ್ತನೆಂದೂ, ಭೋಕ್ತನೆಂದೂ, ಮಹೇಶ್ವರನೆಂದೂ, ಪರಮಾತ್ಮನೆಂದೂ ಸಹ ಹೇಳುತ್ತಾರೆ ।।೨೨।।

ಹಾ ಪ್ರಕೃತಿಮಾಜೀ ಉಭಾ । ಪರೀ ಜುಈ ಜೈಸಾ ವೋಥಂಬಾ । ಇಯಾ ಪ್ರಕೃತಿ ಪೃಥ್ವೀನಭಾ । ತೇತುಲಾ ಪಾಡು ।।೧೦೨೨।। ಪ್ರಕೃತಿಸರಿತೇಚ್ಯಾ ತಟೀ । ಮೇರು ಹೋಯ ಹಾ ಕಿರೀಟೀ । ಮಾಜೀ ಬಿಂಬೇ ಪರೀ ಲೋಟೀ । ಲೋಟೋ ನೇಣೇ ।।೧೦೨೩।। ಪ್ರಕೃತಿ ಹೋಯ ಜಾಯೇ । ಹಾ ತೋ ಅಸತುಚಿ ಆಹೇ । ಮ್ಹಣೌನಿ ಆಬ್ರಹ್ಮಾಚೇ ಹೋಯೇ । ಶಾಸನ ಹಾ ।।೧೦೨೪।। ಪ್ರಕೃತಿ ಯೇಣೇ ಜಿಯೇ । ಯಾಚಿಯಾ ಸತ್ತಾ ಜಗ ವಿಯೇ । ಇಯಾಲಾಗೀ ಇಯೇ । ವರಯೇತು ಹಾ ।।೧೦೨೫।। ಅನಂತೇ ಕಾಳೇ ಕಿರೀಟೀ । ಜಿಯಾ ಮಿಳತೀ ಇಯಾ ಸೃಷ್ಟೀ । ತಿಯಾ ರಿಗತೀ ಯಯಾಚ್ಯಾ ಪೋಟೀ । ಕಲ್ಪಾಂತಸಮಯೀ ।।೧೦೨೬।। ಹಾ ಮಹದ್‌ಬ್ರಹ್ಮಗೋಸಾವೀ । ಬ್ರಹ್ಮಗೋಳ ಲಾಘವೀ । ಅಪಾರಪಣೇ ಮವೀ। ಪ್ರಪಂಚಾತೇ ।।೧೦೨೭।। ಪೈ ಯಾ ದೇಹಾಮಾಝಾರೀ । ಪರಮಾತ್ಮಾ ಐಸೀ ಜೇ ಪರೀ । ಬೋಲಿಜೇ ತೇ ಅವಧಾರೀ। ಯಯಾತೇಂಚಿ ।।೧೦೨೮।। ಅಗಾ ಪ್ರಕೃತಿ ಪರೌತಾ । ಏಕು ಆಥೀ ಪಂಡುಸುತಾ । ಐಸಾ ಪ್ರವಾದು ತೋ ತತ್ತ್ವತಾ । ಪುರುಷ ಹಾ ಪೈ ।।೧೦೨೯।।

ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ ।
ಸರ್ವಥಾ ವರ್ತಮಾನೋऽಪಿ ನ ಸ ಭೂಯೋऽಭಿಜಾಯತೇ ।।೨೩।।

ಜೋ ನಿಖಳಪಣೇ ಯೇಣೇ । ಪುರುಷಾ ಯಯಾ ಜಾಣೇ । ಆಣೀ ಗುಣಾಂಚೇ ಕರಣೇ । ಪ್ರಕೃತೀಚೇ ತೇ ।।೧೦೩೦।। ಹೇ ರೂಪ ಹೇ ಛಾಯಾ । ಪೈಲ ಜಳ ಹೇ ಮಾಯಾ । ಐಸಾ ನಿವಾಡು ಧನಂಜಯಾ । ಜೇವೀ ಕೀಜೇ ।।೧೦೩೧।। ತೇಣೇ ಪಾಡೇ ಅರ್ಜುನಾ । ಪ್ರಕೃತಿಪುರುಷವಿವಂಚನಾ ।ಜಯಾಚಿಯಾ ಮನಾ। ಗೋಚರ ಜಾಹಲೀ ।।೧೦೩೨।। ತೋ ಶರೀರಾಚೇನಿ ಮೇಳೇ । ಕರೂ ಕಾ ಕರ್ಮೇ ಸಕಳೇ । ಪರೀ ಆಕಾಶ ಧುಈ ನ ಮೈಳೇ । ತೈಸಾ ಅಸೇ ।।೧೦೩೩।। ಆಥಿಲೇನಿ ದೇಹೇ । ಜೋ ನ ಘೇಪೇ ದೇಹಮೋಹೇ । ದೇಹ ಗೇಲಿಯಾ ನೋಹೇ । ಪುನರಪಿ ತೋ ।।೧೦೩೪।। ಐಸಾ ತಯಾ ಏಕು । ಪ್ರಕೃತಿ ಪುರುಷವಿವೇಕು । ಉಪಕಾರು ಅಲೌಕಿಕು । ಕರೀ ಪೈ ಗಾ ।।೧೦೩೫।। ಪರೀ ಹಾಚಿ ಅಂತರೀ । ವಿವೇಕ ಭಾನೂಚಿಯಾ ಪರೀ । ಉದ್ಯೈಜೇ ತೇ ಅವಧಾರೀ । ಉಪಾಯ ಬಹುತ ।।೧೦೩೬।।

ಈ ಪುರುಷನು ಪ್ರಕೃತಿಯಲ್ಲಿ ಇರುವನು. ಆದರೆ ಜಾಜಿ ಮಲ್ಲಿಗೆಯ ಬಳ್ಳಿ ನಿಲ್ಲಲು ಕೊಟ್ಟ ಆಧಾರ ಕಂಭದಂತಿದ್ದು, ಅಲಿಪ್ತನಾಗಿರುವನು. ಪ್ರಕೃತಿ ಮತ್ತು ಪುರುಷರಲ್ಲಿ ಭೂಮಿ ಆಕಾಶದಷ್ಟು ಅಂತರವಿರುವುದು ।।೧೦೨೨।।

ಅರ್ಜುನಾ, ಪುರುಷನು ಪ್ರಕೃತಿರೂಪ ನದಿದಡದಲ್ಲಿ ಮೇರುಪರ್ವತದಂತೆ ಅಚಲನಾಗಿ ನಿಂತಿರುವನು. ಆತನ ಪ್ರತಿಬಿಂಬವು ನದಿಯಲ್ಲಿ ಬಿದ್ದಾಗ, ಆತನು ಪ್ರವಾಹದಲ್ಲಿ ತೇಲಿಹೋಗುವುದಿಲ್ಲ ।।೧೦೨೩।।

ಪ್ರಕೃತಿಯು ಉತ್ಪನ್ನವಾಗುವುದು, ಮತ್ತು ಲಯವೂ ಆಗುವುದು. ಆದಾಗ್ಯೂ ಪುರುಷನು ಶಾಶ್ವತನಾಗಿರುವನು. ಆದ್ದರಿಂದ ಸರ್ವ ಜಗತ್ತಿನ (ಶಾಸ್ತಾ) ಅಧಿಕಾರಿಯಾಗಿರುವನು ।।೧೦೨೪।।

ಪ್ರಕೃತಿಯು ಈತನಿಂದ ಬದುಕುವಳು. ಈತನ ಸತ್ತೆಯಿಂದ ಈಕೆಯು ಜಗತ್ತು ನಿರ್ಮಿಸುವಳು. ಆದ್ದರಿಂದ ಈತನು ಪ್ರಕೃತಿಯ ಪತಿಯಾಗಿರುವನು ।।೧೦೨೫।।

ಹೇ ಕಿರೀಟೀಯೇ, ಅನಂತ ಕಾಲಗಳಿಂದ ನಡೆದು ಬಂದ ಸೃಷ್ಟಿಯು ಕಲ್ಪಾಂತದಲ್ಲಿ ಈತನಲ್ಲಿ ಲಯಗೊಳ್ಳುವುದು ।।೧೦೨೬।।

ಈತನು ಪ್ರಕೃತಿಯ ಸ್ವಾಮಿಯಾಗಿರುವನು ಮತ್ತು ಈ ಬ್ರಹ್ಮಾಂಡದ ಸೂತ್ರಧಾರನಾಗಿರುವನು ಮತ್ತು ತನ್ನ ಸಾಮರ್ಥ್ಯದಿಂದ ಪ್ರಪಂಚಕ್ಕೆ ಅಧಿಕಾರಿಯಾಗಿರುವನು ।।೧೦೨೭।।

ಮತ್ತು ಈ ದೇಹದಲ್ಲಿ ಪರಮಾತ್ಮ ಎಂದು ಯಾವುದಕ್ಕೆ ಹೇಳುವರೋ, ಅದು ಈತನೇ ಆಗಿರುವನು, ಹೀಗೆ ತಿಳಿ ।।೧೦೨೮।।

ಹೇ ಪಂಡುಸುತನೇ, ಪ್ರಕೃತಿಯ ಆಚೆ ಭಾಗದಲ್ಲಿ ಒಬ್ಬ ಪುರುಷನಿರುವನು ಎಂದು ಯಾವುದಕ್ಕೆ ಹೇಳುವರೋ, ಅದುನಿಜವಾಗಿಯೂ ಈತನೇ ಇರುವನು ।।೧೦೨೯।।

ಶ್ಲೋಕಾರ್ಥ :– ಈ ವಿಧವಾಗಿ ಕ್ಷೇತ್ರಜ್ಞ ಪುರುಷನನ್ನು ಕುರಿತು, ಗುಣಸಹಿತವಾದ ಕ್ಷೇತ್ರ ಪ್ರಕೃತಿಯ ವಿಷಯವಾಗಿಯೂ ಸರಿಯಾಗಿ ತಿಳಿದು ಕೊಂಡವನು ಯಾವ ವಿಧವಾಗಿ ಪ್ರವರ್ತಿಸಿದರೂ ಪುನಃ ಹುಟ್ಟಲಾರನು ।।೨೩।।

ಯಾವನು ಈ ಪುರುಷನಿಗೆ ಈ ಪ್ರಕಾರ ಪೂರ್ಣವಾಗಿ ತಿಳಿಯುವನೋ, ಮತ್ತು ಹಾಗೆಯೇ ಸರ್ವ ಗುಣಗಳು ಮತ್ತು ಕರ್ಮಗಳು ಇವು ಪ್ರಕೃತಿಯವು ಎಂದು ತಿಳಿಯುವನೋ ।।೧೦೩೦।।

ಹೇ ಧನಂಜಯನೇ, ಇದು ರೂಪ, ಅದು ಛಾಯೆ, ಇದು ಜಲ, ಅದು ಮೃಗಜಲ ಹೀಗೆ ನಿರ್ಣಯವನ್ನು ಯಾವ ಬುದ್ಧಿವಂತನು ಮಾಡುವನೋ ।।೧೦೩೧।।

ಅದರಂತೆ ಅರ್ಜುನಾ, ಪ್ರಕೃತಿ ಮತ್ತು ಪುರುಷ ಇವರ ಸ್ವರೂಪದ ಯಥಾರ್ಥ ವಿಚಾರವು ಯಾರ ಮನಸ್ಸಿಗೆ ತಿಳಿದಿದೆಯೋ ।।೧೦೩೨।।

ಆತನು ಶರೀರದಿಂದ ಎಲ್ಲ ಕರ್ಮಗಳನ್ನು ಮಾಡುತ್ತಿದ್ದರೂ ಆಕಾಶವು ಧೂಳಿನಿಂದ ಮಲಿನಗೊಳ್ಳಲಾರದಂತೆ, ಪ್ರಕೃತಿಯ ಕರ್ಮಗಳಿಂದ ಲಿಪ್ತನಾಗುವುದಿಲ್ಲ ।।೧೦೩೩।।

ಜೀವಂತನಿದ್ದಾಗ ಯಾವನು ದೇಹದ ಮೋಹದಲ್ಲಿ ಸಿಲುಕಿ ಪ್ರಕೃತಿಯ ಅಧೀನನಾಗುವುದಿಲ್ಲವೋ, ಆತನು ದೇಹ ಬಿಟ್ಟ ಮೇಲೆ ಪುನಃ ಹುಟ್ಟುವುದಿಲ್ಲ ।।೧೦೩೪।।

ಈ ರೀತಿಯಲ್ಲಿ ಅಲೌಕಿಕ ಉಪಕಾರವು ಪ್ರಕೃತಿ ಪುರುಷರ ಯಥಾರ್ಥ ವಿಚಾರಗಳಿಂದ ಆಗುವುದು ।।೧೦೩೫।।

ಈಗ ಅಂತಃಕರಣದಲ್ಲಿ ಇದೇ ವಿಚಾರಗಳು ಸೂರ್ಯನಂತೆ ಉದಯ ಮಾಡಿಕೊಡುವಂತಹ ಉಪಾಯಗಳು ಬಹಳಷ್ಟಿವೆ. ಅದನ್ನು ಕೇಳು ।।೧೦೩೬।।

ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ ।
ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥೨೪॥

ಕೋಣೀ ಏಕು ಸುಭಟಾ । ವಿಚಾರಾಚಾ ಆಗಿಟಾ । ಆತ್ಮಾ ನಾತ್ಮ ಕಿಟಾ । ಪುಟೀ ದೇಉನೀ ॥೧೦೩೭॥ ಛತ್ತೀಸಹೀ ವಾನೀ ಭೇದ । ತೋಡೋನಿಯಾ ನಿರ್ವಿವಾದ । ನಿವಡಿತೀ ಶುದ್ಧ । ಆಪಣಪೇ ॥೧೦೩೮॥ ತಯಾ ಆಪಣಪಯಾಚ್ಯಾ ಪೋಟೀ । ಆತ್ಮಧ್ಯಾನಾಚಿಯಾ ದಿಠೀ । ದೇಖತೀ ಗಾ ಕಿರೀಟೀ । ಆಪಣಪೇಂಚಿ ॥೧೦೩೯॥ ಆಣೀಕ ಪೈ ದೈವಬಗೇ । ಚಿತ್ತ ದೇತೀ ಸಾಂಖ್ಯಯೋಗೇ । ಏಕ ತೇ ಅಂಗಲಗೇ । ಕರ್ಮಾಚೇನಿ ॥೧೦೪೦॥

ಅನ್ಯೇ ತ್ವೇವಮಜಾನಂತಃ ಶ್ರುತ್ವಾಽನ್ಯೇಭ್ಯ ಉಪಾಸತೇ ।
ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥೨೫॥

ಯೇಣೇ ಯೇಣೇ ಪ್ರಕಾರೇ । ನಿಸ್ತರತೀ ಸಾಚೋಕಾರೇ । ಹೇ ಭವ ಭೇಉರೇ । ಆಘವೇಂಚಿ ॥೧೦೪೧॥ ಪರೀ ತೇ ಕರಿತೀ ಐಸೇ । ಅಭಿಮಾನು ದವಡೂನಿ ದೇಶೇ । ಏಕಾಚಿಯಾ ವಿಶ್ವಾಸೇ । ಟೇಂಕತೀ ಬೋಲಾ ॥೧೦೪೨॥ ಜೇ ಹಿತಾಹಿತ ದೇಖತೀ । ಹಾನಿ ಕವಣಾ ಘೇಪತೀ । ಪುಸೋನಿ ಶಿಣು ಹರಿತೀ । ದೇತೀ ಸುಖ ॥೧೦೪೩॥ ತಯಾಂಚೇನಿ ಮುಖೇ ಜೇ ನಿಘೇ । ತೇತುಲೇ ಆದರೇ ಚಾಂಗೇ । ಐಕೋನಿಯಾ ಆಂಗೇ । ಮನೇ ಹೋತೀ ॥೧೦೪೪॥ ತಯಾ ಐಕಣೇಯಾಚಿ ನಾಂವೇ । ಠೇವಿತೀ ಗಾ ಆಘವೇ । ತಯಾ ಅಕ್ಷರಾಂಸೀ ಜೀವೇ । ಲೋಣ ಕರಿತೀ ॥೧೦೪೫॥ ತೇಹೀ ಅಂತೀ ಕಪಿಧ್ವಜಾ । ಇಯಾ ಮರಣಾರ್ಣವಸಮಾಜಾ । ಪಾಸೂನಿ ನಿಘತೀ ವೋಜಾ । ಗೋಮಟಿಯಾ ॥೧೦೪೬॥ ಐಸೇಸೇ ಹೇ ಉಪಾಯೇ । ಬಹುವಸ ಏಥೇ ಪಾಹೇ । ಜಾಣಾವಯಾ ಹೋಯೇ । ಏಕೀ ವಸ್ತು ॥೧೦೪೭॥ ಆತಾ ಪುರೇ ಹೇ ಬಹುತ । ಪೈ ಸರ್ವಾರ್ಥಾಚೇ ಮಥಿತ । ಸಿದ್ಧಾಂತನವನೀತ । ದೇಊ ತುಜ ॥೧೦೪೮॥ ಯೇತುಲೇನಿ ಪಂಡುಸುತಾ । ಅನುಭವ ಲಾಹಾಣಾ ಆಯಿತಾ । ಯೇರ ತಂವ ತುಜ ಹೋತಾ । ಸಾಯಾಸ ನಾಹೀ ॥೧೦೪೯॥ ಮ್ಹಣೌನಿ ತೇ ಬುದ್ಧಿ ರಚೂ । ಮತವಾದ ಹೇ ಖಾಂಚೂ । ಸೋಲೀವ ನಿರ್ವಚೂ । ಫಲಿತಾರ್ಥುಚೇ॥೧೦೫೦॥

ಯಾವತ್ಸಂಜಾಯತೇ ಕಿಂಚಿತ್ ಸತ್ತ್ವಂ ಸ್ಥಾವರಜಂಗಮಮ್ ।
ಕ್ಷೇತ್ರಕ್ಷೇತ್ರಜ್ಞ ಸಂಯೋಗಾತ್ ತದ್ವಿದ್ಧಿ ಭರತರ್ಷಭ! ॥೨೬॥

ಶ್ಲೋಕಾರ್ಥ :- ದೇಹದಲ್ಲಿ ಇರುವ ಈ ಆತ್ಮನನ್ನು ಶುದ್ಧಬುದ್ಧಿಯ ಸಹಾಯದಿಂದ ಕೆಲವರು ಧ್ಯಾನ ದ್ವಾರ ದರ್ಶಿಸುತ್ತಾರೆ. ಕೆಲವರು ಜ್ಞಾನಯೋಗದಿಂದಲೂ, ಮತ್ತೆ ಕೆಲವರು ಕರ್ಮಯೋಗದಿಂದಲೂ ದರ್ಶಿಸುತ್ತಾರೆ ।೨೪॥

ಹೇ ಸುಭಟನೇ, ಕೆಲವರು ವಿಚಾರರೂಪ ಅಗ್ನಿಯಲ್ಲಿ ಶ್ರವಣ ಮನನ ನಿಧಿಧ್ಯಾಸರೂಪದ ಪುಟಕೊಟ್ಟು ಆತ್ಮನಲ್ಲಿ ಅನಾತ್ಮರೂಪ ಕಿಟ್ಟವನ್ನು ತೆಗೆದು ಆತ್ಮರೂಪ ಬಂಗಾರವನ್ನು ಶುದ್ಧಗೊಳಿಸುವರು ।೧೦೩೭॥

ಮೂವತ್ತಾರು ಭೇದರೂಪ ಮಿಶ್ರಿತವನ್ನು ಸುಟ್ಟು ಶುದ್ಧ ತತ್ತ್ವವನ್ನು ಆರಿಸಿ ತೆಗೆದುಕೊಳ್ಳುವರು ।೧೦೩೮॥

ಆಗ ಅರ್ಜುನನೇ, ಈ ಆತ್ಮರೂಪದ ಹೊಟ್ಟೆಯಲ್ಲಿ ಆತ್ಮಜ್ಞಾನದ ದೃಷ್ಟಿಯಿಂದ ಆತ್ಮರೂಪವನ್ನೇ ನೋಡುವರು ।೧೦೩೯॥

ಮತ್ತು ಕೆಲವರು ಭಕ್ತಿಮಾರ್ಗದಿಂದ, ಕೆಲವರು ಸಾಂಖ್ಯಯೋಗ ವಿಚಾರದಿಂದ, ಮತ್ತು ಕೆಲವರು ಕರ್ಮ ಯೋಗದ ಆಧಾರದಿಂದ ಆತ್ಮಸ್ವರೂಪದ ತಿಳುವಳಿಕೆ ಮಾಡಿ ಕೊಳ್ಳುವರು ।೧೦೪೦॥

ಶ್ಲೋಕಾರ್ಥ :- ಈ ವಿಧವಾಗಿ ಅನುಷ್ಠಾನ ಮಾ ಡುವುದಕ್ಕೆ ಅಸಮರ್ಥರಾದವರು ತಿಳಿದ ಮಹನೀಯರಿಂದ ಕೇಳಿ ಉಪಾಸಿಸಬಹುದು. ಆ ವೇದಾಂತ ಶ್ರವಣ ತತ್ಪರರಾದವರೂ ತಪ್ಪದೇ ಮೃತ್ಯುರೂಪ ಸಂಸಾರ ವನ್ನು ದಾಟಬಲ್ಲರು ।೨೫॥

ಈ ಎಲ್ಲ ಪ್ರಕಾರಗಳಿಂದ ನಿಜವಾಗಿಯೂ ಈ ಸಂಸಾರ ರೂಪ ಸಾಗರದಿಂದ ಎಲ್ಲರೂ ದಾಟಿ ಹೋಗುವರು ।೧೦೪೧॥

ಆದರೆ ಅವರು ಹೀಗೆ ಮಾಡುವರು; ಕೆಲವರು ಅಭಿ ಮಾನವನ್ನು ತ್ಯಾಗ ಮಾಡಿ ಶ್ರದ್ಧೆಯಿಂದ ಒಬ್ಬನ ಮಾತಿನ ಮೇಲೆ ವಿಶ್ವಾಸವಿಡುವರು ।೧೦೪೨॥

ಯಾವ ಪುರುಷನು ಪ್ರಾಣಿಮಾತ್ರರ ಹಿತಾಹಿತಗಳನ್ನು ಯಥಾರ್ಥವಾಗಿ ತಿಳಿದಿರುವನೋ, ಮತ್ತು ಯಾವುದರಲ್ಲಿ ಹಾನಿ ಇದೆ ಎಂಬುವುದು ತಿಳಿದು ಕಳಕಳಿಯಿಂದ ತಾನೇ ಕೇಳಿ ಅದನ್ನು ನಿವಾರಿಸಿ ಸುಖವನ್ನು ಕೊಡುವನೋ ।೧೦೪೩॥

ಅಂತಹ ಪುರುಷನ ಮುಖದಿಂದ ಹೊರಟ ಶಬ್ದಗಳನ್ನು ಉತ್ತಮ ರೀತಿಯಲ್ಲಿ ಆದರದಿಂದ ಶ್ರವಣಮಾಡಿ ತಮ್ಮ ತನು ಮನಗಳನ್ನು ಆತನಲ್ಲಿ ಅರ್ಪಿಸುವನು ।೧೦೪೪॥

ಆ ಶ್ರವಣದ ಹೆಸರಿನಲ್ಲಿ ತಮ್ಮ ಸರ್ವಸ್ವವನ್ನು ಅರ್ಪಿಸು ವರು.(ಶ್ರವಣವು ಧನ, ಕರ್ತವ್ಯ, ಪ್ರಾಪ್ತವ್ಯ, ಜ್ಞಾತವ್ಯ ಎಂದು ತಿಳಿಯುವರು) ಮತ್ತು ಅವರ ಮುಖದಿಂದ ಬರುವ ಅಕ್ಷರಗಳಿಗೆ ತಮ್ಮ ಜೀವವನ್ನೇ ನಿವಾಳಿಸಿ ಒಗೆಯುವರು ।೧೦೪೫॥

ಹೇ ಕಪಿಧ್ವಜನೇ, ಈ ಪ್ರಕಾರವಾಗಿ ಯಾರು ನಡೆಯು ವರೋ, ಅವರು ಕೊನೆಗೆ ಈ ಮಾಯಾರೂಪ ಸಮುದ್ರದಿಂದ ಉತ್ತಮ ರೀತಿಯಲ್ಲಿ ಪಾರಾಗುವರು ।೧೦೪೬॥

ಈ ಪ್ರಕಾರವಾಗಿ ಒಂದು ಆತ್ಮವಸ್ತುವನ್ನು ತಿಳಿದುಕೊ ಳ್ಳುವುದಕ್ಕಾಗಿ ಹೀಗೆ ಅನೇಕ ಉಪಾಯಗಳು ಇವೆ. ಹೀಗೆ ನೀನು ತಿಳಿದುಕೊ ।೧೦೪೭॥

ಆದರೆ, ಈಗ ಈ ಅನೇಕ ಉಪಾಯಗಳಿರಲಿ, ಆ ಎಲ್ಲ ಉಪಾಯಗಳ ಮಂಥನ ಮಾಡಿ ಸಿದ್ಧಾಂತರೂಪ ಬೆಣ್ಣೆಯನ್ನು ನಿನಗೆ ಕೊಡುವೆನು ।೧೦೪೮॥

ಅದರಿಂದ ಅರ್ಜುನಾ, ನಿನಗೆ ಸಹಜವಾಗಿ ಅನುಭವ ಪ್ರಾಪ್ತವಾಗಿ ಬ್ರಹ್ಮರೂಪನಾಗಲು ಶ್ರಮವಾಗುವುದಿಲ್ಲ ।೧೦೪೯॥

ಆದ್ದರಿಂದ ಮತವಾದಿಗಳ ಮತಗಳನ್ನು ಖಂಡಿಸಿ, ಸಿದ್ಧಾಂತವನ್ನು ಮಂಡಿಸಿ ಕೇವಲ ಶುದ್ಧ ತತ್ತ್ವವನ್ನು ನಿನಗೆ ಹೇಳುವೆನು ।೧೦೫೦॥

ಶ್ಲೋಕಾರ್ಥ :- ಭರತಶ್ರೇಷ್ಠಾ! ಸ್ಥಾವರ ಜಂಗ ಮ ರೂಪವಾದ ಸರ್ವ ಜೀವರಾಶಿಗಳೆಲ್ಲವೂ ಕ್ಷೇತ್ರ ಕ್ಷೇತ್ರಜ್ಞ ಸಂಯೋಗದಿಂದ ಹುಟ್ಟಿರುವುವೆಂದು ತಿಳಿ ।೨೬॥

ತರೀ ಕ್ಷೇತ್ರಜ್ಞ ಯೇಣೇ ಬೋಲೇ । ತುಜ ಆಪಣಪೇ ಜೇ ದಾವಿಲೇ । ಆಣಿ ಕ್ಷೇತ್ರಹೀ ಸಾಂಗಿತಲೇ । ಆಘವೇ ಜೇ ॥೧೦೫೧॥ ತಯಾ ಯೇರಯೇರಾಂಚ್ಯಾ ಮೇಳೀ । ಹೋಈಜೇ ಭೂತೀ ಸಕಳೀ । ಅನಿಲಸಂಗೇ ಸಲಿಲೀ । ಕಲ್ಲೋಳ ಜೈಸೇ ॥೧೦೫೨॥ ಕಾ ತೇಜಾ ಆಣಿ ಉಖರಾ । ಭೇಟೀ ಜಾಲಿಯಾ ವೀರಾ । ಮೃಗಜಳಾಚಿಯಾ ಪೂರಾ ।ರೂಪ ಹೋಯ ॥೧೦೫೩॥ ನಾನಾ ಧಾರಾಧರಧಾರೀ । ಝಳಂಬಲಿಯಾ ವಸುಂಧರೀ । ಉಠಿಜೇ ಜೇವೀ ಅಂಕುರೀ । ನಾನಾವಿಧೀ ॥೧೦೫೪॥ ತೈಸೇ ಚರಾಚರ ಆಘವೇ । ಜೇ ಕಾಂಹೀ ಜೇವು ನಾಂವೇ । ತೇ ತೋ ಉಭಯಯೋಗೇ ಸಂಭವೇ । ಐಸೇ ಜಾಣ ॥೧೦೫೫॥ ಇಯಾಲಾಗೀ ಅರ್ಜುನಾ । ಕ್ಷೇತ್ರಜ್ಞಾ ಪ್ರಧಾನಾ । ಪಾಸೂನಿ ನ ಹೋತೀ ಭಿನ್ನಾ । ಭೂತವ್ಯಕ್ತೀ ॥೧೦೫೬॥

ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಮ್ ।
ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ॥೨೭॥

ಪೈ ಪಟತ್ವ ತಂತು ನವ್ಹೇ । ತರೀ ತಂತೂಸೀಚಿ ತೇ ಆಹೇ । ಐಸೇ ಖೋಲೀ ಡೋಳಾ ಪಾಹೇ । ಐಕ್ಯ ಹೇ ಗಾ ॥೧೦೫೭॥ ಭೂತೇ ಆಘವೀಂಚಿ ಹೋತೀ । ಏಕಾಚೀ ಏಕ ಆಹಾತೀ । ಪರೀ ತೂ ಪ್ರತೀತೀ । ಯಾಂಚೀ ಘೇ ಪಾ ॥೧೦೫೮॥ ಯಾಂಚೀ ನಾಮೇಹೀ ಆನಾನೇ । ಅನಾರಿಸೀ ವರ್ತನೇ । ವೇಷಹೀ ಸಿನಾನೇ । ಆಘವೇಯಾಂಚೇ ॥೧೦೫೯॥ ಐಸೇ ದೇಖೋನಿ ಕಿರೀಟೀ । ಭೇದ ಸೂಸೀ ಹನ ಪೋಟೀ । ತರೀ ಜನ್ಮಾ ಚಿಯಾ ಕೋಟೀ । ನ ಲಾಹಸೀ ನಿಘೋ ॥೧೦೬೦॥ ಪೈ ನಾನಾಪ್ರಯೋಜನಶೀಳೇ । ದೀರ್ಘೇ ವಕ್ತ್ರೇ ವರ್ತುಳೇ । ಹೋತೀ ಏಕೀಚೀಂಚ ಫಳೇ । ತುಂಬಿಣೀಯೇಚೀ ॥೧೦೬೧॥ ಹೋತು ಕಾ ಉಜೂ ವಾಂಕುಡೇ । ಪರೀ ಬೋರೀಚೇ ಹೇ ನ ಮೋಡೇ । ತೈಸೀ ಭೂತೇ ಅವಘಡೇ । ಪರೀ ವಸ್ತು ಉಜೂ ॥೧೦೬೨॥ ಅಂಗಾರಕಣೀ ಬಹುವಸೀ । ಉಷ್ಣತಾ ಸಮಾನ ಜೈಶೀ । ತೈಸಾ ನಾನಾ ಜೀವ ರಾಶೀ । ಪರೇಶು ಅಸೇ ॥೧೦೬೩॥ ಗಗನಭರೀ ಧಾರಾ । ಪರೀ ಪಾಣೀ ಏಕಚಿ ವೀರಾ । ತೈಸಾ ಯಾ ಭೂತಾಕಾರು । ಸರ್ವಾಂಗೀ ತೋ ॥೧೦೬೪॥ ಹೇ ಭೂತ ಗ್ರಾಮ ವಿಷಮ । ಪರೀ ವಸ್ತು ತೇ ಏಥ ಸಮ । ಘಟಮಠೀ ವ್ಯೋಮ । ಜಿಯಾ ಪರೀ ॥೧೦೬೫॥

"ಕ್ಷೇತ್ರಜ್ಞ" ಈ ಶಬ್ದದಿಂದ ನಿನಗೆ ನಾವು ಇದೆಲ್ಲ ಹೇಳಿದೆವು ಮತ್ತು "ಕ್ಷೇತ್ರ" ವೆಂಬುವುದಕ್ಕೆ ಯಾವ ಸರ್ವ ವಿಷಯಗಳನ್ನು ಹೇಳಿದೆವು ।।೧೦೫೧।।

ಈ ಪರಸ್ಪರರ ಐಕ್ಯದಿಂದ ಈ ಸರ್ವ ಸೃಷ್ಟಿಯ ಉತ್ಪತ್ತಿಯಾಗುವುದು. ಗಾಳಿಯ ಸಂಯೋಗದಿಂದ ಯಾವ ಪ್ರಕಾರವಾಗಿ ತೆರೆಗಳು ಹುಟ್ಟುತ್ತವೆಯೋ ।।೧೦೫೨।।

ಅಥವಾ ಹೇ ವೀರನೇ, ಬೈಲು ಭೂಮಿಯಲ್ಲಿ ಕಿರಣಗಳು ಬಿದ್ದಾಗ ಹೇಗೆ ಮೃಗಜಲದ ತೆರೆಗಳ ಮೇಲೆ ತೆರೆಗಳು ನಿರ್ಮಾಣವಾಗುವುವೋ ।।೧೦೫೩।।

ಅಥವಾ ಮಳೆಯ ಧಾರೆಯು ಪೃಥ್ವಿಯ ಮೇಲೆ ಬಿದ್ದಾಗ ಕೋಟ್ಯಾವಧಿ ಅಂಕುರಗಳು ನೆಲದ ಮೇಲೆ ಉದ್ಭವಿಸುವುವೋ ।।೧೦೫೪।।

ಆದರಂತೆ, ಎಲ್ಲ ಚರಾಚರವು ಜೀವವೆನ್ನುವ ಎಲ್ಲವೂ ಈ ಇಬ್ಬರ ಸಂಯೋಗದಿಂದ ಉತ್ಪನ್ನವಾಗುವುವು. ಹೀಗೆ ತಿಳಿ ।।೧೦೫೫।।

ಆದಕ್ಕಾಗಿ ಅರ್ಜುನಾ, ಪುರುಷ ಮತ್ತು ಪ್ರಕೃತಿ ಇವುಗಳಲ್ಲಿ ಭೂತ ವ್ಯಕ್ತಿಗಳು ಭಿನ್ನವಾಗಿಲ್ಲ ।।೧೦೫೬।।

ಶ್ಲೋಕಾರ್ಥ :- ನಾಶವಾಗುವ ಈ ಸಮಸ್ತ ಭೂತಗಳಲ್ಲಿ ತಾನು ಮಾತ್ರ ನಾಶವಾಗದೆ, ಸಮವಾಗಿ ಇರುವ ಪರಮೇಶ್ವರನನ್ನು ನೋಡುವವನೇ ನಿಜವನ್ನು ನೋಡುವನು ।।೨೭।।

ಇಲ್ಲಿ ನೋಡು, ವಸ್ತ್ರವು ನೂಲು ಅಲ್ಲದಿದ್ದರೂ ಅದು ನೂಲಿನಿಂದಲೇ ಮಾಡಿರುವುದು. ಆದರಂತೆ ಪೂರ್ಣ ದೃಷ್ಟಿ ಇಟ್ಟು ಪುರುಷ ಮತ್ತು ಪ್ರಕೃತಿ ಇವರ ನಡುವೆ ಐಕ್ಯ ಕಾಣಬೇಕು ।।೧೦೫೭।।

ಈ ಎಲ್ಲ ಭೂತಗಳು ಒಂದರಿಂದ ಒಂದು ನಿರ್ಮಾಣವಾಗುವುವು. ಆದರೆ ನೀನು ಇದರ ಅನುಭವವನ್ನು ಹೀಗೆ ತಿಳಿದುಕೊ ।।೧೦೫೮।।

ಆದರಂತೆ ಇವುಗಳ ಹೆಸರು ಭಿನ್ನ ಭಿನ್ನಗಳಾಗಿವೆ. ಆಚರಣೆಗಳು ಭಿನ್ನ ಭಿನ್ನಗಳಾಗಿವೆ ಮತ್ತು ಎಲ್ಲರ ವೇಶಗಳೂ ಭಿನ್ನ ಭಿನ್ನಗಳಾಗಿವೆ ।।೧೦೫೯।।

ಹೀಗೆ ನೋಡಿ ನೀನು ಮನದಲ್ಲಿ ಆತ್ಮ ಮತ್ತು ಭೂತಗಳಲ್ಲಿ ಭೇದವಿದೆ ಎಂದು ತಿಳಿದರೆ ಅರ್ಜುನಾ, ನೀನು ಈ ಸಂಸಾರದಿಂದ ಕೋಟ್ಯಾವಧಿ ಜನ್ಮದವರೆಗೂ ಪಾರಾಗುವುದಿಲ್ಲ ।।೧೦೬೦।।

ಯಾವ ಪ್ರಕಾರವಾಗಿ ಒಂದೇ ಕುಂಬಳಕಾಯಿಗೆ ಬಳ್ಳಿಯು ಹೇಗೆ ಹೇಗೆ ಆಧಾರವಿರುವುದೋ, ಹಾಗೆ ಹಾಗೆ ಉದ್ದ, ದಪ್ಪ, ಡೊಂಕ ಕುಂಬಳಕಾಯಿಗಳು ಬರುವುವು ।।೧೦೬೧।।

ಬಾರಿಯ ಗಿಡದ ಟೊಂಗೆಗಳು ಸರಳವಿರಲಿ ಅಥವಾ ಅಂಕುಡೊಂಕಾಗಿರಲಿ ಅದಕ್ಕೆ ಬಾರಿಗಿಡವೆಂದೇ ಕರೆಯುವರು. ಆದರಂತೆ ಜೀವಮಾತ್ರರು ಹೆಚ್ಚು ಕಡಿಮೆ ಭಿನ್ನರಿದ್ದರೂ ಅವರಲ್ಲಿಯ ಆತ್ಮನು ಸರಳವಾಗಿಯೇ ಇರುವನು ।।೧೦೬೨।।

ಬೇಕಾದಷ್ಟು ಕೆಂಡವಿರಲಿ ಅದರಲ್ಲಿಯ ಉಷ್ಣತೆಯು ಒಂದೇ ಇರುವುದು. ಆದರಂತೆ ಎಷ್ಟೋ ಜೀವರಾಶಿಗಳಿದ್ದರೂ ಅವುಗಳಲ್ಲಿಯ ಪರಮಾತ್ಮನು ಒಬ್ಬನೇ ಇರುವನು ।।೧೦೬೩।।

ವೀರನಾದ ಅರ್ಜುನನೇ, ಆಕಾಶದ ತುಂಬ ಮಳೆಯ ಧಾರೆಯು ಬೀಳುತ್ತಿದ್ದರೂ ಅವುಗಳಲ್ಲಿಯ ನೀರು ಒಂದೇ ಇರುವುದು. ಆದರಂತೆ ಎಲ್ಲ ಭೂತಗಳ ಶರೀರಗಳಲ್ಲಿ ಆತ್ಮವು ಒಂದೇ ಇರುವುದು ।।೧೦೬೪।।

ಘಟ ಮತ್ತು ಮಠಗಳಲ್ಲಿ ಆಕಾಶವು ಭಿನ್ನ ಆಕಾರಗಳಾಗಿ ಕಂಡರೂ, ಅದು ಆಕಾಶ ರೂಪದಲ್ಲಿ ಒಂದೇ ಆಗಿರುವಂತೆ ಭೂತಗಳು ಭಿನ್ನ ಭಿನ್ನವಾಗಿದ್ದರೂ, ಆತ್ಮ ವಸ್ತುವು ಒಂದೇ ಆಗಿರುವುದು ।।೧೦೬೫।।

ಹಾ ನಾಶತಾ ಭೂತಾಭಾಸು । ಏಥ ಆತ್ಮಾ ತೋ ಅವಿನಾಶು । ಜೈಸಾ ಕೇಯುರಾಧಿಕೀ ಕಸು । ಸುವರ್ಣಾಚಾ ।।೧೦೬೬।। ಏವಂ ಜೀವಧರ್ಮಹೀನು । ಜೋ ಜೀವೇಸೀ ಅಭಿನ್ನು । ದೇಖೇ ತೋ ಸುನಯನು । ಜ್ಞಾನಿಯಾಮಾಜೀ ।।೧೦೬೭।। ಜ್ಞಾನಾಚಾ ಡೋಳಾ ಡೋಳಸಾ । ಮಾಜೀ ಡೋಳಸು ತೋ ವೀರೇಶಾ । ಹೇ ಸ್ತುತಿ ನೋಹೇ ಬಹುವಸಾ । ಭಾಗ್ಯಾಚಾ ತೋ ।।೧೦೬೮।।

ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ ।
ನ ಹಿನಸ್ತ್ಯಾತ್ಮನಾऽऽತ್ಮಾನಂ ತತೋ ಯಾತಿ ಪರಾಂ ಗತಿಮ್ ।।೨೮।।

ಹೇ ಗುಣೇಂದ್ರಿಯ ಧೋಕೋಟೀ । ದೇಹ ಧಾತೂಂಚೀ ತ್ರಿಕುಟೀ । ಪಾಂಚ ಮೇಳಾವಾ ವೋಖಟೀ । ದಾರುಣ ಹೇ ।।೧೦೬೯।। ಹೇ ಉಘಡ ಪಾಂಚವೇಉಲೀ । ಪಂಚಧಾ ಆಗೀ ಲಾಗಲೀ । ಜೀವಪಂಚಾನನಾ ಸಾಂಪಡಲೀ । ಹರಿಣಕುಟೀ ಹೇ ।।೧೦೭೦।। ಐಸಾ ಅಸೋನಿ ಇಯೇ ಶರೀರೀ । ಕೋಣ ನಿತ್ಯಬುದ್ಧೀಚೀ ಸುರೀ । ಅನಿತ್ಯಭಾವಾಚ್ಯಾ ಉದರೀ । ದಾಟೀಚಿನಾ ।।೧೦೭೧।। ಪರೀ ಇಯೇ ದೇಹೀ ಅಸತಾ। ಜೋ ನಯೇಚಿ ಆಪಣಯಾ ಘಾತಾ । ಆಣೀ ಶೇಖೀ ಪಂಡುಸುತಾ । ತೇಥೇಂಚಿ ಮಿಳೇ ।।೧೦೭೨।। ಜೇಥ ಯೋಗ ಜ್ಞಾನಾಚಿಯಾ ಪ್ರೌಢೀ । ವೋಲಾಂಡೂ ನಿಯಾ ಜನ್ಮ ಕೋಡೀ । ನ ನಿಗೋ ಇಯಾ ಭಾಷಾ ಬುಡೀ । ದೇತೀ ಯೋಗೀ ।।೧೦೭೩।। ಜೇ ಆಕಾರಾಚೇ ಪೈಲ ತೀರ । ಜೇ ನಾದಾಚೇ ಪೈಲ ಮೇರ । ತುರ್ಯೇಚೇ ಮಾಜಘರ । ಪರಬ್ರಹ್ಮ ಜೇ ।।೧೦೭೪।। ಮೋಕ್ಷಾಸಕಟ ಗತೀ । ಜೇಥೇ ಯೇತೀ ವಿಶ್ರಾಂತೀ । ಗಂಗಾದಿ ಆಪಾಂಪತೀ । ಸರಿತಾ ಜೇವೀ ।।೧೦೭೫।। ತೇ ಸುಖ ಯೇಣೇಂಚಿ ದೇಹೇ । ಪಾಯ ಪಾಖಾಳಣಿಯಾ ಲಾಹೇ । ಜೋ ಭೂತ ವೈಷಮ್ಯೇ ನೋಹೇ । ವಿಷಮಬುದ್ಧೀ।।೧೦೭೬।। ದೀಪಾಂಚಿಯಾ ಕೋಡೀ ಜೈಸೇ । ಏಕಚಿ ತೇಜ ಸರಿಸೇ । ತೈಸಾ ಜೋ ಅಸತುಚಿ ಅಸೇ । ಸರ್ವತ್ರ ಈಶು ।।೧೦೭೭।। ಐಸೇನಿ ಸಮತ್ವೇ ಪಂಡುಸುತಾ । ಜಿಯೇ ಜೋ ದೇಖತ ಸಾತಾ । ತೋ ಮರಣ ಆಣಿ ಜೀವಿತಾ । ನಾಗವೇ ಪುಡಾ ।।೧೦೭೮।। ಮ್ಹಣೌನಿ ತೋ ದೈವಾಗಳಾ । ವಾನೀತ ಅಸೋ ವೇಳೋವೇಳಾ । ಜೇ ಸಾಮ್ಯಸೇಜೇ ಡೋಳಾ । ಲಾಗಲಾ ತಯಾ ।।೧೦೭೯।।

ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।
ಯಃ ಪಶ್ಯತಿ ತಥಾऽऽತ್ಮಾನಮ್ ಅಕರ್ತಾರಂ ಸ ಪಶ್ಯತಿ ।।೨೯।।

ಬಂಗಾರದ ಒಡವೆಗಳು ಅನೇಕ ಪ್ರಕಾರದವುಗಳಿದ್ದರೂ ಅವುಗಳಲ್ಲಿನ ಬಂಗಾರವು ಒಂದೇ ಇರುವುದು. ಭೂತಗಳು ನಾಶವಂತವಿದ್ದರೂ ಅವುಗಳಲ್ಲಿಯ ಆತ್ಮವು ಅವಿನಾಶಿಯಾಗಿರುವುದು ॥೧೦೬೬॥

ಈ ಪ್ರಕಾರವಾಗಿ ವ್ಯವಹಾರಿಕ ಜೀವಧರ್ಮದಿಂದ ಭಿನ್ನನು ಮತ್ತು ಪಾರಮಾರ್ಥಿಕ ಜೀವಧರ್ಮದಿಂದ ಅಭಿನ್ನನು ಹೀಗೆ ಪರಮಾತ್ಮನು ಇರುವನೆಂದು ಜ್ಞಾನಿಯವರಲ್ಲಿ ಕಾಣುವನೋ, ಅವನೇ ಉತ್ತಮ (ವಿಚಾರ) ಕಣ್ಣುಗಳಿದ್ದವನು ॥೧೦೬೭॥

ಜ್ಞಾನದ ಕಣ್ಣುಗಳಿಂದ ಯಾರು ಕಾಣುವವರಾಗಿರುವರೋ, ಅವರಿಗಿಂತಲೂ ಈತನು ಮುಖ್ಯವಾಗಿ ಕಣ್ಣಿದ್ದವನು. ಅರ್ಜುನಾ, ಇದು ಆತನ ಸ್ತುತಿ ಮಾಡುತ್ತಿರುವೆ ಎಂದು ತಿಳಿಯಬೇಡ, ಅವನು ನಿಜವಾಗಿಯೂ ಭಾಗ್ಯಶಾಲಿಯು ॥೧೦೬೮॥

ಶ್ಲೋಕಾರ್ಥ :- ಎಲ್ಲೆಲ್ಲಿಯೂ ಸಮಾನವಾಗಿರುವ ಪರಮೇಶ್ವರನನ್ನು ನೋಡುವವನು ಆತ್ಮ ಹತ್ಯೆಯನ್ನು ಮಾಡಿಕೊಳ್ಳಲಾರನು, ಅಂಥವನು ಪರ ಮಗತಿಯನ್ನು ಪಡೆಯುತ್ತಾನೆ ॥೨೮॥

ಈ ಶರೀರವೆಂದರೆ ಗುಣ ಮತ್ತು ಇಂದ್ರಿಯಗಳ ಚೀಲವಾಗಿರುವುದು. ವಾತ, ಪಿತ್ತ, ಮತ್ತು ಕಫ ಈ ಧಾತುಗಳಿಂದ ತುಂಬಿರುವುದು. ಕೆಡಕಾದ ಮತ್ತು ಬಲವಾದ ಈ ಶರೀರವು ಪಂಚತತ್ತ್ವಗಳಿಂದ ಸಿದ್ಧಗೊಂಡಿದೆ ॥೧೦೭೯॥

ಈ ಶರೀರವು ಪ್ರತ್ಯಕ್ಷವಾಗಿ (ಪಂಚಕರ್ಮೇಂದ್ರಿಯ ರೂಪದಿಂದ) ಐದು ಕೊಂಡೆಯ ಚೇಳಾಗಿದೆ ಮತ್ತು ಇದಕ್ಕೆ (ಪಂಚಜ್ಞಾನೇಂದ್ರಿಯ ರೂಪದಿಂದ) ಐದು ಕಡೆ ಅಗ್ನಿಯು ಹತ್ತಿರುವುದು ಮತ್ತು ಜೀವರೂಪ ಸಿಂಹಕ್ಕೆ ಶರೀರರೂಪ ಚಿಗರೆಯ ಮನೆಯಾಗಿದೆ ॥೧೦೭೦॥

ಈ ಪ್ರಕಾರದ ಶರೀರದಲ್ಲಿ ಈ ಜೀವವು ಅಭಂಗ, ನಿತ್ಯ, ಶುದ್ಧ, ಬುದ್ಧ ಮತ್ತು ಸ್ವತಂತ್ರವಿದ್ದರೂ ನಾನು ನಿತ್ಯನು ಎಂಬ ಬುದ್ಧಿರೂಪ ಶಸ್ತ್ರವನ್ನು ಅನಿತ್ಯ ಭಾವದ ಹೊಟ್ಟೆಯಲ್ಲಿ ಏಕೆ ಹಾಕಬಾರದು? (ಇದು ಆಶ್ಚರ್ಯವಲ್ಲವೇ?) ॥೧೦೭೧॥

ಆದಾಗ್ಯೂ ಅರ್ಜುನಾ, ಜ್ಞಾನಿಯಾದವನು ಈ ದೇಹದಲ್ಲಿದ್ದರೂ ತನ್ನ ಘಾತವನ್ನು ಮಾಡಿಕೊಳ್ಳದೇ ಕೊನೆಗೆ ಬ್ರಹ್ಮಪದಕ್ಕೆ ಬಂದು ಕೂಡುವನು ॥೧೦೭೨॥

ಯೋಗಿಯು ಜ್ಞಾನ ಧ್ಯಾನಗಳ ಬಲದಿಂದ ಕೋಟ್ಯಾವಧಿ ಜನ್ಮಗಳನ್ನು ದಾಟಿ "ಪುನಃ ಜನ್ಮಕ್ಕೆ ಬರಲಾರೆ" ಎಂದು ಬ್ರಹ್ಮಸರೋವರದಲ್ಲಿ ಮುಳುಗಿರುವನು ॥೧೦೭೩॥

ಇದು ವಿಶ್ವಾಕಾರದ ಆ ಕಡೆಯ ದಂಡೆಯಾಗಿದೆ. ಇದು ಪರಾವಾಣಿಯ ಕೊನೆಯ ಸೀಮೆಯಾಗಿದೆ ಮತ್ತು ತುರ್ಯೆಯ ನಡುಮನೆಯಾಗಿದೆ. ಇದಕ್ಕೆ ಪರಬ್ರಹ್ಮವೆನ್ನುವರು ॥೧೦೭೪॥

ಮತ್ತು ಯಾವ ಪ್ರಕಾರವಾಗಿ ಗಂಗಾದಿ ನದಿಗಳು ಸಮುದ್ರಕ್ಕೆ ಹೋಗಿ ಕೂಡುವವೋ ಅದರಂತೆ ಮೋಕ್ಷ ಸಹ ಎಲ್ಲ ಗತಿಗಳು ಅಲ್ಲಿ ವಿಶ್ರಾಂತಿಗೆ ಬರುವುವು ॥೧೦೭೫॥

ಯಾರಿಗೆ ಭೂತ ವೈಷಮ್ಯದಿಂದ ವಿಷಮ ಬುದ್ಧಿಯಾಗುವುದಿಲ್ಲವೋ, ಆತನಿಗೆ ಸುಖವು ಇದೇ ದೇಹದಲ್ಲಿ ಕಾಲೊಳಗೆ ತುಳಿಯಲು ಸಿಗುವುದು. (ಸುಖವು ತಾನಾಗಿಯೇ ಚರಣದಲ್ಲಿ ಬರುವುದು) ॥೧೦೭೬॥

ಎಷ್ಟೋ ದೀಪಗಳಿದ್ದರೂ ಆ ಎಲ್ಲ ದೀಪಗಳ ಬೆಳಕು ಒಂದೇ ಆಗಿರುವುದು. ಅದರಂತೆ ಪೂರ್ವದಿಂದಲೂ ಅನಾದಿಯಾಗಿರುವ ಪರಮಾತ್ಮನು ಎಲ್ಲ ಕಡೆಯಲ್ಲಿ ತುಂಬಿರುವನು ॥೧೦೭೭॥

ಹೇ ಪಂಡುಸುತನೇ, ಈ ಪ್ರಕಾರವಾಗಿ ಯಾವಾತನ ಜೀವ ಮತ್ತು ಆತ್ಮ ಈ ವಿಷಯಕ್ಕೆ ಸಮತ್ವವಿರುವುದೋ, ಆತನು ಜನ್ಮ ಮರಣದಲ್ಲಿ ಸಿಲುಕುವುದಿಲ್ಲ ॥೧೦೭೮॥

ಆ ಭಾಗ್ಯವಾನನು ಎಲ್ಲರಕ್ಕಿಂತಲೂ ಶ್ರೇಷ್ಠನಿರುವನು. ಆದ್ದರಿಂದ ನಾನು ಆತನ ವರ್ಣನೆಯನ್ನು ಮೇಲಿಂದ ಮೇಲೆ ಮಾಡುತ್ತಿರುವೆನು. ಕಾರಣ, ಸಾಮ್ಯದ ಹಾಸಿಗೆಯಲ್ಲಿ ಆತನು ಮಲಗಿದ್ದು, ಆತನಿಗೆ ಸಾಮ್ಯ ಸುಖದ ನಿದ್ರೆ ಹತ್ತಿರುವುದು ॥೧೦೭೯॥

ಶ್ಲೋಕಾರ್ಥ :- ಜರುಗುವ ಕರ್ಮಕಲಾಪವೆಲ್ಲವೂ ಪ್ರಕೃತಿಯ ಚೇಷ್ಟಾವಿಲಾಸವೆಂದೂ, ಆತ್ಮ ಯಾವುದಕ್ಕೂ ಕರ್ತನಲ್ಲವೆಂದೂ ನೋಡುವವನು ನಿಜವಾಗಿ ನೋಡುವವನು ॥೨೯॥

ಆಣಿ ಮನೋಬುದ್ಧಿಪ್ರಮುಖೇ । ಕರ್ಮೇಂದ್ರಿಯೇ ಅಶೇಖೇ । ಕರೀ ಪ್ರಕೃತೀಚಿ ಹೇ ದೇಖೇ । ಸಾಚೇ ಜೋ ಗಾ ।।೧೦೮೦।। ಘರೀಂಚಿ ರಾಹಟತೀ ಘರೀ । ಘರ ಕಾಂಹೀ ನ ಕರೀ । ಅಭ್ರ ಧಾಂವೇ ಅಂಬರೀ । ಅಂಬರ ತೇ ಉಗೇ ।।೧೦೮೧।। ತೈಸೀ ಪ್ರಕೃತಿ ಆತ್ಮಪ್ರಭಾ । ಖೇಳೇ ಗುಣೀ ವಿವಿಧಾರಂಭಾ । ಯೇಥ ಆತ್ಮಾ ತೋ ವೋಥಂಬಾ । ನೇಣೇ ಕೋಣ ।।೧೦೮೨।। ಐಸೇನಿ ಯೇಣೇ ನಿವಾಡೇ । ಜಯಾಚ್ಯಾ ಜೀವೀ ಉಜಿವಡೇ । ಅಕರ್ತಯಾತೇ ಫುಡೇ । ದೇಖಿಲೇ ತೇಣೇ ।।೧೦೮೩।।

ಯದಾ ಭೂತಪೃಥಗ್ಭಾವಮ್ ಏಕಸ್ಥಮನುಪಶ್ಯತಿ ।
ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ।।೩೦।।

ಯೇರ್ಹವೀ ತೈಂಚಿ ಅರ್ಜುನಾ । ಹೋಈಜೇ ಬ್ರಹ್ಮಸಂಪನ್ನಾ । ಜೈ ಯಾ ಭೂತಾಕೃತೀ ಭಿನ್ನಾ । ದಿಸತೀ ಏಕೀ ।।೧೦೮೪।। ಲಹರೀ ಜೈಸಿಯಾ ಜಳೀ । ಪರಮಾಣುಕಣಿಕಾ ಸ್ಥಳೀ । ರಶ್ಮಿಕರಮಂಡಳೀ । ಸೂರ್ಯಾಚ್ಯಾ ಜೇವೀ ।।೧೦೮೫।। ನಾತರೀ ದೇಹೀ ಅವೇವ । ಮನೀ ಆಘವೇಚಿ ಭಾವ । ವಿಸ್ಫುಲಿಂಗ ಸಾವೇವ । ವನ್ಹೀ ಏಕೀ ।।೧೦೮೬।। ತೈಸೇ ಭೂತಾಕಾರ ಏಕಾಚೇ । ಹೇ ದಿಠೀ ರಿಗೇ ಜೈ ಸಾಚೇ । ತೈಂಚಿ ಬ್ರಹ್ಮಸಂಪತ್ತೀಚೇ । ತಾರೂ ಲಾಗೇ ।।೧೦೮೭।। ಮಗ ಜಯಾ ತಯಾ ಕಡೇ । ಬ್ರಹ್ಮೇಚಿ ದಿಠೀ ಉಘಡೇ । ಕಿಂಬಹುನಾ ಜೋಡೇ । ಅಪಾರ ಸುಖ ।।೧೦೮೮।। ಯೇತುಲೇನಿ ತುಜ ಪಾರ್ಥಾ । ಪ್ರಕೃತಿಪುರುಷವ್ಯವಸ್ಥಾ । ಠಾಯೇ ಠಾವೋ ಪ್ರತಿಪಥಾ । ಮಾಜೀ ಜಾಹಲೀ? ।।೧೦೮೯।। ಅಮೃತ ಜೈಸೇ ಯೇ ಚುಳಾ । ಕಾ ನಿಧಾನ ದೇಖಿಜೇ ಡೋಳಾ । ತೇತುಲಾ ಜಿವ್ಹಾಳಾ । ಮಾನಾವಾ ಹಾ ।।೧೦೯೦।। ಜೇ ಜಾಹಲಿಯೇ ಪ್ರತೀತೀ । ಘರ ಬಾಂಧಣೇ ಜೇ ಚಿತ್ತೀ । ತೇ ಆತಾ ನಾ ಸುಭದ್ರಾಪತೀ । ಇಯಾವರೀ ।।೧೦೯೧।। ತರೀ ಏಕ ದೋನ್ಹೀ ತೇ ಬೋಲ । ಬೋಲಿಜತೀ ಸಖೋಲ । ದೇಈ ಮನಾತೇ ವೋಲ । ಮಗ ತೇ ಘೇಈ ।।೧೦೯೨।। ಐಸೇ ದೇವೇ ಮ್ಹಣಿತಲೇ । ಮಗ ಬೋಲೋ ಆದರಿಲೇ । ತೇಥೇ ಅವಧಾನಾಚೇಚಿ ಕೇಲೇ । ಸರ್ವಾಂಗ ಯೇರೇ ।।೧೦೯೩।।

ಅನಾದಿತ್ವಾನ್ನಿರ್ಗುಣತ್ವಾತ್ ಪರಮಾತ್ಮಾಯಮವ್ಯಯಃ ।
ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ ।।೩೧।।

ಮತ್ತು ಮನ, ಬುದ್ಧಿ ಇತ್ಯಾದಿ ಐದು ಕರ್ಮೇಂದ್ರಿಯಗಳು ಮತ್ತು ಇವುಗಳಿಂದ ಆಗುವ ಕರ್ಮಗಳು ಇವು ಪ್ರಕೃತಿಯ ಕರ್ಮಗಳಾಗಿವೆ ಎಂದು ಪೂರ್ಣವಾಗಿ ತಿಳಿದಿರುತ್ತಾನೆ ॥೧೦೮೦॥

ಮನೆಯಲ್ಲಿರುವ ಜನರು ಎಲ್ಲ ವ್ಯವಹಾರಗಳನ್ನು ಮಾಡುವರು. ಆದರೆ ಮನೆಯು ಯಾವುದೂ ಒಂದೂ ಮಾಡುವುದಿಲ್ಲ. ಹಾಗೆಯೇ ಆಕಾಶದಲ್ಲಿ ಮೋಡಗಳು ಧಾವಿಸುವುದು ದೃಷ್ಟಿಗೆ ಬೀಳುವುದು, ಆಕಾಶವು ಸ್ಥಿರವಾಗಿರುವುದು ॥೧೦೮೧॥

ಅದರಂತೆ ಪ್ರಕೃತಿಯು ಆತ್ಮದ ಪ್ರಕಾಶದಿಂದ, ಗುಣಗಳಿಂದ ಯುಕ್ತವಾಗಿ ಬಹಳಷ್ಟು ಆಟಗಳನ್ನು ಆಡುವುದು. ಆದಾಗ್ಯೂ ಆತ್ಮವು ಕಂಭದಂತೆ ಅಚಲವಾಗಿರುವುದು. ಆದರೆ ಇದನ್ನು ಯಾರೂ ತಿಳಿದಿಲ್ಲ ॥೧೦೮೨॥

ಈ ಪ್ರಕಾರವಾಗಿ ಅನುಭವವನ್ನು ಪಡೆದು ಯಾವಾತನ ಹೃದಯದಲ್ಲಿ ಪ್ರಕಾಶವಾಗಿದೆಯೋ, ಆತನು ಅಕರ್ತ ಆತ್ಮನನ್ನು ಪೂರ್ಣವಾಗಿ ತಿಳಿದಿರುವನು ಎಂದು ತಿಳಿ ॥೧೦೮೩॥

ಶ್ಲೋಕಾರ್ಥ :- ನಾನಾ ವಿಧಗಳಾದ ಈ ಭೂತ ಜಾಲಗಳೆಲ್ಲವೂ ಒಬ್ಬ ಪರಮಾತ್ಮನಲ್ಲಿಯೇ ಇರುವುವೆಂದೂ, ಆತನಿಂದಲೇ ಇದೆಲ್ಲಾ ಪ್ರಕಟವಾಗಿದೆ ಎಂದೂ ಮನುಷ್ಯನು ತಿಳಿದು ಕೊಂಡಾಗ ಬ್ರಹ್ಮಸಿದ್ಧಿಯನ್ನು ಪಡೆಯಬಲ್ಲನು ॥೩೦॥

ಅರ್ಜುನಾ, ಭಿನ್ನ ಭಿನ್ನವಾಗಿರುವ ಭೂತಗಳನ್ನು ಒಂದೇ ರೂಪದಿಂದ ಎಂದು ನೋಡುವನೋ, ಆಗ ಆತನು ಬ್ರಹ್ಮಸಂಪನ್ನನಾಗಿರುವನೆಂದು ಹೇಳಬೇಕು ॥೧೦೮೪॥

ಯಾವ ಪ್ರಕಾರವಾಗಿ ನೀರಿನ ಮೇಲಿನ ತೆರೆಗಳು ಇಲ್ಲವೇ ಭೂಮಿ ಮೇಲಿನ ಪರಮಾಣುಗಳ ಕಣಗಳು ಅಥವಾ ಸೂರ್ಯಮಂಡಲದಲ್ಲಿನ ಸೂರ್ಯಕಿರಣಗಳು ॥೧೦೮೫॥

ಅಥವಾ ದೇಹದೊಳಗಿನ ಅವಯವಗಳು, ಮನದಲ್ಲಿನ ಎಲ್ಲ ಭಾವಗಳು, ಬೆಂಕಿಯ ಎಲ್ಲ ಕಿಡಿಗಳು ಇವು ಎಲ್ಲವೂ ತನ್ನ ಉತ್ಪತ್ತಿ ಸ್ಥಾನದಿಂದ ಭಿನ್ನವಾಗಿ ಕಂಡರೂ ಸಾಮ್ಯತ್ವದಿಂದ ಇರುವುವು ॥೧೦೮೬॥

ಇದರಂತೆ ಪ್ರಾಣಿಮಾತ್ರರು ಒಬ್ಬ ಆತ್ಮನಿಂದಲೇ ಉತ್ಪನ್ನರಾಗಿರುವರು ಎಂದು ಹೀಗೆ ಯಾರ ಮನದಲ್ಲಿ ನಿಜವಾಗಿಯೂ ನಿಶ್ಚಯವಿರುವುದೋ, ಆತನಿಗೆ ಬ್ರಹ್ಮ ಸಂಪತ್ತಿನ ಹಡಗವೇ ಸಿಕ್ಕಿದೆ ಎಂದು ಹೇಳಬಹುದು ॥೧೦೮೭॥

ಆಗ ಆತನಿಗೆ ಎಲ್ಲಿ ನೋಡಿದಲ್ಲಿ ಬ್ರಹ್ಮವೇ ಕಾಣುವುದು. ಹೆಚ್ಚಿಗೇನು ಹೇಳಬೇಕು? ಆತನಿಗೆ ಅಪಾರವಾದ ಸುಖ ದೊರೆಯುವುದು ॥೧೦೮೮॥

ಪಾರ್ಥಾ, ಈ ಪ್ರಕಾರವಾಗಿ ನಿನಗೆ ಪ್ರಕೃತಿ ಮತ್ತು ಪುರುಷ ಇವರ ವ್ಯವಸ್ಥೆಯನ್ನು ಅನುಭವಸಿದ್ಧ ದಾಖಲೆಗಳನ್ನು ಕೊಟ್ಟು ಹೇಳಿದ್ದು ತಿಳಿಯಿತಲ್ಲವೇ? ॥೧೦೮೯॥

ಇದು ಅಮೃತವು ಕೈಗೆ ಸಿಕ್ಕಂತೆ, ಇಲ್ಲವೇ ದ್ರವ್ಯ ನಿಧಿಯು ದೃಷ್ಟಿಗೆ ಗೋಚರಿಸಿದಂತೆ ಈ ಯೋಗ್ಯತೆಯ ಈ ಲಾಭವಿರುವುದು, ಹೀಗೆ ತಿಳಿ ॥೧೦೯೦॥

ಹೇ ಸುಭದ್ರಾಪತಿಯೇ, ಈಗ ಬಂದಿರುವ ಅನುಭವದಿಂದ ನೀನು ನಿನ್ನ ಮನದಲ್ಲಿ ಒಂದು ನಿಶ್ಚಿತ ವಿಚಾರ ಮಾಡುವುದಿದ್ದರೆ, ಈಗಲೇ ಅದು ಬೇಡ. ಕಾರಣ ಇನ್ನು ಮೇಲೆ ॥೧೦೯೧॥

ನಿನಗೆ ಇನ್ನೂ ಒಂದೆರಡು ಗಹನವಾದ ವಿಚಾರಗಳನ್ನು ನಾನು ಹೇಳುವವನಿದ್ದೇನೆ. ಅದನ್ನು ನೀನು ನಿನ್ನ ಮನಸ್ಸನ್ನು ನನ್ನಲ್ಲಿ ಒತ್ತಿ ಇಟ್ಟಾಗ ಹೇಳುವೆ ॥೧೦೯೨॥

ಈ ಪ್ರಕಾರವಾಗಿ ಭಗವಂತನು ತಿಳಿಸಿ ಹೇಳಲು ಆರಂಭಿಸಿದನು. ಅರ್ಜುನನು ತನ್ನ ಸರ್ವಾಂಗವನ್ನು ಏಕಾಗ್ರ ಲಕ್ಷ ಮಾಡಿ ಕೇಳಲು ಸಿದ್ಧನಾದನು ॥೧೦೯೩॥

ಶ್ಲೋಕಾರ್ಥ :- ಹೇ ಕುಂತಿಪುತ್ರನೇ, ಅನಾದಿಯೂ, ನಿರ್ಗುಣವೂ, ಪರಮಾತ್ಮವೂ, ಅವ್ಯಯವೂ ಆದ ಆತ್ಮವು ಶರೀರದಲ್ಲಿದ್ದರೂ ಯಾವುದನ್ನೂ ಮಾಡುವುದಿಲ್ಲ; ಯಾವುದಕ್ಕೂ ಅಂಟುವುದೂ ಇಲ್ಲ ॥೩೧॥

ತರೀ ಪರಮಾತ್ಮಾ ಮ್ಹಣಿಪೇ । ತೋ ಐಸಾ ಜಾಣ ಸ್ವರೂಪೇ । ಜಳೀ ಜಳೇ ನ ಲಿಂಪೇ । ಸೂರ್ಯು ಜೈಸಾ ।।೧೯೪।। ಕಾ ಜೇ ಜಳಾ ಆದೀ ಪಾಠೀ । ತೋ ಅಸತುಚಿ ಅಸೇ ಕಿರೀಟೀ । ಮಾಜೀ ಬಿಂಬೇ ತೇ ದೃಷ್ಟೀ । ಆಣಿಕಾಂಚಿಯೇ ।।೧೯೫।। ತೈಸಾ ಆತ್ಮಾ ದೇಹೀ । ಆಥೀ ಮ್ಹಣಿಪೇ ಹೇ ಕಾಂಹೀ । ಸಾಚೇ ತರೀ ನಾಹೀ । ತೋ ಜೇಥೀಂಚಾ ತೇಥೇ ।।೧೯೬।। ಆರಿಸಾ ಮುಖ ಜೈಸೇ । ಬಿಂಬಲಿಯಾ ನಾಮ ಅಸೇ ।ದೇಹೀ ವಸಣೇ ತೈಸೇ । ಆತ್ಮತತ್ತ್ವಾ ।।೧೯೭।। ತಯಾ ದೇಹಾ ಮ್ಹಣತೀ ಭೇಟೀ । ಹೇ ಸಪಾಯೀ ನಿರ್ಜೀವ ಗೋಠೀ । ವಾರಿಯಾ ವಾಳುವೇ ಗಾಂಠೀ । ಕೇಂಹೀ ಆಹೇ? ।।೧೯೮।। ಆಗೀ ಆಣಿ ಕಾಪುಸಾ । ದೋರಾ ಸುವಾವಾ ಕೈಸಾ । ಕೇಉತಾ ಸಾಂದಾ ಆಕಾಶಾ । ಪಾಷಾಣೇಸೀ? ।।೧೯೯।। ಏಕ ನಿಘೇ ಪೂರ್ವೇಕಡೇ ।ಏಕ ತೇ ಪಶ್ಚಿಮೇಕಡೇ । ತಿಯೇ ಭೇಟೀಚೇನಿ ಪಾಡೇ । ಸಂಬಂಧು ಹಾ ।।೧೦೦೦।। ಉಜಿಯೇಡಾ ಆಣಿ ಅಂಧಾರೇಯಾ । ಜೋ ಪಾಡು ಮೃತಾ ಉಭಯಾ । ತೋಚಿ ಗಾ ಆತ್ಮಯಾ । ದೇಹಾ ಜಾಣ ।।೧೦೦೧।। ರಾತ್ರಿ ಆಣಿ ದಿವಸಾ । ಕನಕಾ ಆಣಿ ಕಾಪುಸಾ। ಅಪಾಡು ಕಾ ಜೈಸಾ । ತೈಸಾಚಿ ಯಾಸೀ ।।೧೦೦೨।। ದೇಹ ತಂವ ಪಾಂಚಾಂಚೇ ಜಾಲೇ । ಹೇ ಕರ್ಮಾಚೇ ಗುಣೇ ಗುಂಥಲೇ । ಭಂವತಸೇ ಚಾಕೀ ಸೂದಲೇ । ಜನ್ಮಮೃತ್ಯೂಚ್ಯಾ ।।೧೦೦೩।। ಹೇ ಕಾಳಾನಳಾಚ್ಯಾ ತೋಂಡೀ । ಘಾತಲೀ ಲೋಣಿಯಾಚೀ ಉಂಡೀ । ಮಾಶೀ ಪಾಂಖು ಪಾಖಡೀ । ತಂವ ಹೇ ಸರೇ ।।೧೦೦೪।। ಹೇ ವಿಪಾಯೇ ಆಗೀಂತ ಪಡೇ । ತರೀ ಭಸ್ಮ ಹೋಊನೀ ಉಡೇ । ಜಾಹಲೇ ಶ್ವಾನಾ ವರಪಡೇ । ತರೀ ತೇ ವಿಷ್ಠಾ ।।೧೦೦೫।। ಯಾ ಚುಕೇ ದೋಹೀ ಕಾಜಾ । ತರೀ ಹೋಯ ಕೃಮೀಂಚಾ ಪುಂಜಾ । ಹಾ ಪರಿಣಾಮು ಕಪಿಧ್ವಜಾ । ಕಶ್ಮಲು ಗಾ ।।೧೦೦೬।। ಯಾ ದೇಹಾಚೀ ಹೇ ದಶಾ । ಆಣಿ ಆತ್ಮಾ ತೋ ಏಥ ಐಸಾ । ಪೈ ನಿತ್ಯ ಸಿದ್ಧ ಆಪೈಸಾ । ಅನಾದಿಪಣೇ ।।೧೦೦೭।। ಸಕಳು ನಾ ನಿಷ್ಕಳು । ಅಕ್ರಿಯು ನಾ ಕ್ರಿಯಾಶೀಳು । ಕೃಶ ನಾ ಸ್ಥೂಳು । ನಿರ್ಗುಣಪಣೇ ।।೧೦೦೮।। ಆಭಾಸು ನಾ ನಿರಾಭಾಸು । ಪ್ರಕಾಶು ನಾ ಅಪ್ರಕಾಶು । ಅಲ್ಪ ನಾ ಬಹುವಸು । ಅರೂಪಪಣೇ ।।೧೦೦೯।। ರಿತಾ ನಾ ಭರಿತು । ರಹಿತು ನಾ ಸಹಿತು । ಮೂರ್ತು ನಾ ಅಮೂರ್ತು । ಶೂನ್ಯಪಣೇ ।।೧೦೧೦।। ಆನಂದು ನಾ ನಿರಾನಂದು । ಏಕು ನಾ ವಿವಿಧು । ಮುಕ್ತ ನಾ ಬದ್ಧು । ಆತ್ಮಪಣೇ ।।೧೦೧೧।।

ಸೂರ್ಯನ ಪ್ರತಿಬಿಂಬವು ನೀರಿನಲ್ಲಿ ಬಿದ್ದರೂ ಅದರಿಂದ ಅಲಿಪ್ತವಾಗಿರುವುದು. ಅದರಂತೆ ಪರಮಾತ್ಮನು ಶರೀರದಲ್ಲಿದ್ದರೂ ಶುದ್ಧ ಸ್ವರೂಪನಾಗಿಯೇ ಇರುವನು, ಹೀಗೆ ತಿಳಿ ||೧೯೪||

ಹೇ ಕಿರೀಟೀಯೇ, ಸೂರ್ಯನು ನೀರು ಇರುವದಕ್ಕಿಂತ ಮುಂಚಿತವಾಗಿ ಮತ್ತು ತದನಂತರ ಪೂರ್ವದಂತೆಯೇ ಸ್ಥಿರವಾಗಿರುವನು. ಆದರೆ ಅಜ್ಞಾನ ಜನರ ದೃಷ್ಟಿಯಲ್ಲಿ ನೀರಿನಲ್ಲಿ ನೋಡಿದಾಗ ಅದರ ಪ್ರತಿಬಿಂಬಕ್ಕೆ ಸೂರ್ಯನೆಂದು ಭಾಸವಾಗುವುದು ||೧೯೫||

ಅದರಂತೆ ಆತ್ಮನು ದೇಹದಲ್ಲಿ ಇರುವನೆಂದು ಹೇಳುವುದು ನಿಜವಲ್ಲ. ದೇಹ ಉತ್ಪನ್ನವಾಗುವುದಕ್ಕಿಂತ ಮುಂಚಿತವಾಗಿ ಆತ್ಮವು ಇದ್ದಲ್ಲಿಯೇ ಇರುವುದು ||೧೯೬||

ಯಾವ ಪ್ರಕಾರವಾಗಿ ಕನ್ನಡಿಯಲ್ಲಿ ತನ್ನ ಸ್ವರೂಪವಿರುವುದು ಭಾಸವಾಗುವುದೋ, ಅದರಂತೆ ಆತ್ಮವು ತನ್ನ ದೇಹದಲ್ಲಿ ವಾಸಮಾಡುವುದೆಂದು ಹೇಳುವುದು ಮಿಥ್ಯೆಯಾಗಿರುವುದು ||೧೯೭||

ಈ ದೇಹದ ಮತ್ತು ಆತ್ಮದ ಸಂಬಂಧವಿರುವುದೆಂದು ಹೇಳುವುದು ಸರ್ವಥೈವ ವ್ಯರ್ಥವಾಗಿರುವುದು. ಇಲ್ಲಿ ನೋಡು, ಗಾಳಿ ಮತ್ತು ಉಸುಕು ಇವುಗಳ ಗಂಟು ಹಾಕಲು ಬಂದೀತೇ? ||೧೯೮||

ಹಾಗೆಯೇ ಅಗ್ನಿ ಮತ್ತು ಅರಳೆ ಈ ಎರಡನ್ನೂ ಒಂದೇ ದಾರದಲ್ಲಿ ಹೇಗೆ ಪೋಣಿಸಲು ಬರುವುದು? ಕಲ್ಲು ಮತ್ತು ಆಕಾಶ ಇವುಗಳನ್ನು ಜೋಡಿಯಾಗಿ ಹೇಗೆ ಕೂಡ್ರಿಸಲು ಬರುವುದು? ||೧೯೯||

ಒಂದೇ ಸ್ಥಳದಿಂದ ಒಬ್ಬನು ಪೂರ್ವದಕಡೆಗೆ ಹೊರಟನು, ಇನ್ನೊಬ್ಬನು ಪಶ್ಚಿಮದಕಡೆಗೆ ಹೊರಟನು. ಆಗ ಅವರು ಕೂಡಬೇಕು ಎನ್ನುವಂತೆ ಈ ಸಂಬಂಧವಿರುವುದು ||೧೧೦೦||

ಬೆಳಕು, ಕತ್ತಲು, ಜೀವಂತವಿರುವ ಸತ್ತವ, ಇವುಗಳ ಒಂದಕ್ಕೊಂದು ಸಾಮ್ಯವಿಲ್ಲವೋ, ಅದರಂತೆ ಆತ್ಮ ಮತ್ತು ಶರೀರಗಳ ಸಂಬಂಧವಿಲ್ಲವೆಂದು ತಿಳಿದುಕೋ ||೧೧೦೧||

ರಾತ್ರಿ ಮತ್ತು ಹಗಲು, ಬಂಗಾರ ಮತ್ತು ಅರಳಿ, ಇವುಗಳ ಹೇಗೆ ಸಾಮ್ಯವಿಲ್ಲವೋ, ಅದರಂತೆ ಆತ್ಮ ಮತ್ತು ದೇಹಗಳ ಸಾಮ್ಯವಿರುವುದಿಲ್ಲ ||೧೧೦೨||

ನೋಡಲು ಹೋದಾಗ, ಶರೀರವು ಇದು ಪಂಚತತ್ತ್ವಗಳಿಂದ ಸಿದ್ಧಗೊಂಡಿದೆ, ಕರ್ಮದ ಎಳೆಯಲ್ಲಿ ಪೋಣಿಸಿದೆ, ಮತ್ತು ಜನ್ಮ ಮರಣದ ಭವ ಚಕ್ರದಲ್ಲಿ ತಿರುಗುತ್ತಿರುತ್ತದೆ ||೧೧೦೩||

ಕಾಳರೂಪ ಅಗ್ನಿಯ ಮುಖದಲ್ಲಿ ಬೆಣ್ಣೆಯ ಉಂಡಿಯನ್ನು ಹಾಕಿದಂತಾಗಿದೆ, ನೊಣದ ರೆಕ್ಕೆಯು ಅಲುಗಾಡಲು ಎಷ್ಟು ಸಮಯ ಬೇಕೋ, ಅಷ್ಟೇ ಅತ್ಯಲ್ಪ ಸಮಯದಲ್ಲಿಯೇ ಇದು ಇಲ್ಲದಂತೆ ಆಗುತ್ತದೆ ||೧೧೦೪||

ಈ ದೇಹವು ಕದಾಚಿತ್ ಅಗ್ನಿಯಲ್ಲಿ ಬಿದ್ದರೆ ಸುಟ್ಟು ಬೂದಿಯಾಗುವುದು ಮತ್ತು ನಾಯಿಯ ಬಾಯಲ್ಲಿ ಸಿಕ್ಕರೆ ಅದರ ವಿಷ್ಟಾ (ಮಲ)ವಾಗುವುದು ||೧೧೦೫||

ಕಪಿಧ್ವಜನೇ, ಈ ಎರಡರಿಂದ ತಪ್ಪಿದಾಗ, ಈ ದೇಹವು ಬಿದ್ದಲ್ಲೇ ಬಿದ್ದಾಗ ಇದರಲ್ಲಿ ಹುಳ, ಕ್ರಿಮಿಗಳು ರಾಶಿರಾಶಿಯಾಗಿ ಕಾಣುವುವು. ಈ ಪ್ರಕಾರದ ಇದರ ಕೆಟ್ಟ ಪರಿಣಾಮವಾಗಿರುವುದು ||೧೧೦೬||

ಈ ದೇಹದ ಈ ಸ್ಥಿತಿಯಾಗುವುದು. ಆದರೆ ಆತ್ಮವು ನಿತ್ಯನು, ಸಿದ್ಧನು, ಮತ್ತು ಅನಾದಿತ್ವದಿಂದ ಸಹಜವಾಗಿರುವನು ||೧೧೦೭||

ಆತನು ನಿರ್ಗುಣನಾಗಿರುವುದರಿಂದ ಪೂರ್ಣನು ಅಲ್ಲ, ಅಪೂರ್ಣನೂ ಅಲ್ಲ, ಕ್ರಿಯೆ ಮಾಡುವವನು ಅಲ್ಲ. ಕ್ರಿಯೆ ಮಾಡಲಾರದವನೂ ಅಲ್ಲ, ಹಾಗೆಯೇ ಬಡಕನು ಅಲ್ಲ, ಸ್ಥೂಲನೂ ಅಲ್ಲ ||೧೧೦೮||

ಆತನು ನಿರಾಕಾರನಾಗಿರುವುದರಿಂದ, ದೃಶ್ಯನು ಅಲ್ಲ, ಅದೃಶ್ಯನೂ ಅಲ್ಲ, ಆತನು ಪ್ರಕಾಶಮಾನನು ಅಲ್ಲ, ನಿಸ್ತೇಜನೂ ಅಲ್ಲ, ಅಲ್ಪನು ಅಲ್ಲ, ಬಹಳನೂ ಅಲ್ಲ ||೧೧೦೯||

ಆತನು ಶೂನ್ಯನಾಗಿರುವುದರಿಂದ ಬರಿದು ಅಲ್ಲ, ತುಂಬಿದವನೂ ಅಲ್ಲ, ರಹಿತನು ಅಲ್ಲ, ಸಹಿತನೂ ಅಲ್ಲ, ಮತ್ತು ಆತನು ಸಾಕಾರನು ಅಲ್ಲ, ನಿರಾಕಾರನೂ ಅಲ್ಲ ||೧೧೧೦||

ಆತನು ಆತ್ಮರೂಪದಿಂದ ಇರುವುದರಿಂದ ಆತನಿಗೆ ಆನಂದವು ಇಲ್ಲ, ದುಃಖವೂ ಇಲ್ಲ, ಆತನು ಒಂದೂ ಅಲ್ಲ, ಮತ್ತು ಅನೇಕನೂ ಅಲ್ಲ, ಮತ್ತು ಆತನು ಮುಕ್ತನು ಅಲ್ಲ, ಬದ್ಧನೂ ಅಲ್ಲ ||೧೧೧೧||

ಯೇತುಲಾ ನಾ ತೇತುಲಾ । ಆಇತಾ ನಾ ರಚಿಲಾ । ಬೋಲತಾ ನಾ ಉಗಲಾ । ಅಲಕ್ಷ ಪಣೇ ॥೧೧೧೨॥ ಸೃಷ್ಟೀಚಾ ಹೋಣಾ ನ ರಚೇ । ಸರ್ವಸಂಹಾರೇ ನ ವೇಂಚೇ । ಆಥೀ ನಾಥೀ ಯಾ ದೋಹೀಂಚೇ । ಪಂಚತ್ವ ತೋ ॥೧೧೧೩॥ ಮವೇ ನಾ ಚರ್ಚೇ । ವಾಢೇ ನಾ ಖಾಂಚೇ । ವಿಟೇ ನಾ ವೇಂಚೇ । ಅವ್ಯಯಪಣೇ ॥೧೧೧೪॥ ಏವಂ ರೂಪ ಪೈ ಆತ್ಮಾ । ದೇಹೀ ಜೇ ಮ್ಹಣತೀ ಪ್ರಿಯೋತ್ತಮಾ । ತೇ ಮಠಾಕಾರೇ ವ್ಯೋಮಾ । ನಾಮ ಜೈಸೇ ॥೧೧೧೫॥ ತೈಸೇ ತಯಾಚಿಯೇ ಅನುಸ್ಯೂತೀ । ಹೋತೀ ಜಾತೀ ದೇಹಾಕೃತೀ । ತೋ ಘೇ ನಾ ಸಾಂಡೀ ಸುಮತೀ । ಜೈಸಾ ತೈಸಾ ॥೧೧೧೬॥ ಅಹೋರಾತ್ರೇ ಜೈಶೀ । ಯೇತೀ ಜಾತೀ ಆಕಾಶೀ । ಆತ್ಮಸತ್ತೇ ತೈಸೀ । ದೇಹೇ ಜಾಣ ॥೧೧೧೭॥ ಮ್ಹಣೌನಿ ಇಯೇ ಶರೀರೀ । ಕಾಂಹೀ ಕರವೀ ನಾ ಕರೀ । ಆಯತಾಹೀ ವ್ಯಾಪಾರೀ । ಸಜ್ಜ ನ ಹೋಯ ॥೧೧೧೮॥ ಯಾಲಾಗೀ ಸ್ವರೂಪೇ । ಉಣಾ ಪುರಾ ನ ಘೇಪೇ । ಹೇ ಅಸೋ ತೋ ನ ಲಿಂಪೇ । ದೇಹೀ ದೇಹಾ ॥೧೧೧೯॥

ಯಥಾ ಸರ್ವಗತಂ ಸೌಕ್ಷ್ಮ್ಯಾತ್ ಆಕಾಶಂ ನೋಪಲಿಪ್ಯತೇ ।
ಸರ್ವತ್ರಾವಸ್ಥಿತೋ ದೇಹೇ ತಥಾಽತ್ಮಾ ನೋಪಲಿಪ್ಯತೇ ॥೩೨॥

ಅಗಾ ಆಕಾಶ ಕೇ ನಾಹೀ? । ಹೇ ನ ರಿಘೇಚಿ ಕವಣೇ ಠಾಯೀ? । ಪರೀ ಕಾಯಿಸೇನೀ ಕಹೀ । ಗಾದಿಜೇನಾ ॥೧೧೨೦॥ ತೈಸಾ ಸರ್ವತ್ರ ಸರ್ವ ದೇಹೀ । ಆತ್ಮಾ ಅಸತುಚಿ ಅಸೇ ಪಾಹೀ । ಪರೀ ಸಂಗದೋಷೇ ಏಕೇಹೀ । ಲಿಪ್ತ ನೋಹೇ ॥೧೧೨೧॥ ಪುಢತಪುಢತೀ ಏಥೇ । ಹೇಂಚಿ ಲಕ್ಷಣ ನಿರುತೇ । ಜೇ ಜಾಣಾವೇ ಕ್ಷೇತ್ರಜ್ಞಾತೇ । ಕ್ಷೇತ್ರವಿಹಿನಾ ॥೧೧೨೨॥ ಸಂಸರ್ಗೇ ಚೇಷ್ಟಿಜೇ ಲೋಹೇ । ಪರೀ ಲೋಹ ಭ್ರಾಮಕು ನೋಹೇ । ಕ್ಷೇತ್ರಕ್ಷೇತ್ರಜ್ಞಾ ಆಹೇ । ತೇತುಲಾ ಪಾಡು ॥೧೧೨೩॥ ದೀಪಕಾಚೇ ಅರ್ಚೇ । ರಹಾಟೇ ವಾಹೇ ಘರೀಂಚೇ । ಪರೀ ವೇಗಳೀಕ ಕೋಡೀಚೇ । ದೀಪಾ ಆಣಿ ಘರಾ ॥೧೧೨೪॥ ಪೈ ಕಾಷ್ಟಾಚ್ಯಾ ಪೋಟೀ । ವನ್ಹಿ ಅಸೇ ಕಿರೀಟೀ । ಪರೀ ಕಾಷ್ಟ ನೋಹೇ ಯಾ ದೃಷ್ಟೀ । ಪಾಹಿಜೇ ಹಾ ॥೧೧೨೫॥ ಅಪಾಡು ನಭಾ ಆಭಾಳಾ । ರವಿ ಆಣಿ ಮೃಗಜಳಾ । ತೈಸಾಚಿ ಹಾಹೀ ಡೋಳಾ । ದೇಖಸೀ ಜರೀ ॥೧೧೨೬॥

ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ ।
ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥೩೩॥

ಆತನು ಲಕ್ಷಣರಹಿತನಾಗಿರುವುದರಿಂದ ಇಷ್ಟು ಅಲ್ಲ, ಅಷ್ಟು ಅಲ್ಲ, ಸಹಜನು ಅಲ್ಲ, ಮಾಡಿದವನೂ ಅಲ್ಲ, ಅಥವಾ ಮಾತನಾಡುವವನು ಅಲ್ಲ, ಮೂಕನೂ ಅಲ್ಲ ।।೧೧೧೨।।

ಸೃಷ್ಟಿಯಾದಾಗ ಈತನು ಆಗುವುದಿಲ್ಲ, ಸೃಷ್ಟಿಯು ಲಯಗೊಂಡಾಗ ಹೋಗುವುದಿಲ್ಲ (ಲಯವಾಗುವುದಿಲ್ಲ) ಮತ್ತು ಈತನು ಇರುವುದು ಮತ್ತು ಇಲ್ಲದಿರುವುದು ಈ ಎರಡೂ ಸ್ಥಿತಿಗಳ ಲಯಸ್ಥಾನವಾಗಿರುವನು ।।೧೧೧೩।।

ಈತನು ಅವ್ಯಯ ಇರುವುದರಿಂದ ಎಣಿಸಲು ಬರುವುದಿಲ್ಲ, ಮತ್ತು ವರ್ಣಿಸಲೂ ಬರುವುದಿಲ್ಲ. ಈತನು ಬೆಳೆಯುವುದಿಲ್ಲ, ಕಡಿಮೆಯೂ ಆಗುವುದಿಲ್ಲ, ಈತನು ಹಳಿಸುವುದಿಲ್ಲ, ಮತ್ತು ಖರ್ಚಾಗುವುದಿಲ್ಲ ।।೧೧೧೪।।

ಹೇ ಪ್ರಿಯೋತ್ತಮನೇ, ಹೀಗೆ ಈ ಆತ್ಮನ ಸ್ವರೂಪವಾಗಿದೆ. ಈತನು ಶರೀರದಲ್ಲಿರುವನು ಎಂದರೆ ಮಠದಲ್ಲಿ ಆಕಾಶವೂ ಇದೆ ಎಂದಂತಾಗುವುದು ।।೧೧೧೫।।

ಹಾಗೆಯೇ ಆತ್ಮನ ವ್ಯಾಪಕ ಸ್ಥಿತಿಯಲ್ಲಿ ದೇಹಾಕೃತಿಗಳು ಹುಟ್ಟುವುವು. ನಾಶವಾಗುವುವು. ದೇಹವು ಹುಟ್ಟಿತೆಂದು ಆತನು ದೇಹಧಾರಣೆ ಮಾಡುವುದಿಲ್ಲ, ನಾಶವಾದಾಗ ಆತನು ದೇಹವನ್ನು ಬಿಡುವುದಿಲ್ಲ ।।೧೧೧೬।।

ಯಾವ ಪ್ರಕಾರವಾಗಿ ಆಕಾಶದಲ್ಲಿ ಹಗಲು ರಾತ್ರಿಗಳು ಬಂದು ಹೋಗುವುವೋ, ಅದರಂತೆ ಆತ್ಮದ ಆಶ್ರಯದಲ್ಲಿ ದೇಹಗಳು ಬರುವುವು, ಹೋಗುವುವು. ಆದರೆ ಇವುಗಳಿಂದ ಈತನು ಲಿಪ್ತನಾಗುವುದಿಲ್ಲ ।।೧೧೧೭।।

ಆದ್ದರಿಂದ ಈತನು ಶರೀರದಲ್ಲಿ ಏನೂ ಮಾಡುವುದಿಲ್ಲ, ಮತ್ತು ಏನೂ ಮಾಡಿಸುವುದಿಲ್ಲ, ಶರೀರದ ಯಾವುದೇ ವ್ಯವಹಾರಗಳಲ್ಲಿ ಕರ್ತೃತ್ವದಿಂದ ಸಿದ್ಧನಾಗುವುದಿಲ್ಲ ।।೧೧೧೮।।

ಈ ಕಾರಣದಿಂದ ಈತನ ಸ್ವರೂಪದಲ್ಲಿ ಹೆಚ್ಚು ಕಡಿಮೆಯಾಗುವುದಿಲ್ಲ, ಇಷ್ಟೇ ಅಲ್ಲ, ಈತನು ದೇಹದಲ್ಲಿ ಇದ್ದೂ ದೇಹದ ಸರ್ವವ್ಯವಹಾರಗಳಿಂದ ಅಲಿಪ್ತನಾಗಿರುವನು ।।೧೧೧೯।।

ಶ್ಲೋಕಾರ್ಥ :- ಸೂಕ್ಷ್ಮವಾದ ಆಕಾಶವು ಸರ್ವತ್ರ ವ್ಯಾಪಿಸಿದ್ದರೂ ಯಾವುದಕ್ಕೂ ಅಂಟದಂತೆ, ದೇಹದಲ್ಲೆಲ್ಲಾ ಆತ್ಮ ತುಂಬಿದ್ದರೂ ಅದಕ್ಕೆ ಅಂಟುವುದಿಲ್ಲ ।।೩೨।।

ಅರ್ಜುನಾ, ಆಕಾಶವು ಎಲ್ಲಿ ಇಲ್ಲ? ಮತ್ತು ಎಲ್ಲಿ ಪ್ರವೇಶವಾಗುವುದಿಲ್ಲ? ಅಂದರೆ ಅದು ಎಲ್ಲೆಲ್ಲಿಯೂ ಇದೆ. ಆದರೆ ಅದಕ್ಕೆ ಯಾವುದರಿಂದಲೂ ಪೀಡೆಯಾಗುವುದಿಲ್ಲ ।।೧೧೨೦।।

ಅದರಂತೆ, ಸರ್ವತ್ರ ಸರ್ವ ಶರೀರಗಳಲ್ಲಿ ಆತ್ಮನು ಇದ್ದರೂ, ಆ ಶರೀರದ ಯಾವುದೇ ಉಪಾಧಿಗಳಿಂದ ಆತನು ಲಿಪ್ತನಾಗುವುದಿಲ್ಲ ।।೧೧೨೧।।

ಅದಕ್ಕಾಗಿ ಮೇಲಿಂದ ಮೇಲೆ ಶುದ್ಧ ತತ್ತ್ವದ ಇದೇ ಲಕ್ಷಣಗಳನ್ನು ನೀನು ಧ್ಯಾನದಲ್ಲಿಡು. ಕ್ಷೇತ್ರವೆಂದರೆ ಶರೀರವು ಅಥವಾ ಧರ್ಮವು, ಇದರಿಂದ ಕ್ಷೇತ್ರಜ್ಞವೆಂದರೆ ಆತ್ಮನು ಪೂರ್ಣವಾಗಿ ಭಿನ್ನನಾಗಿರುವನು ।।೧೧೨೨।।

ಆತ್ಮನ ಸಂಬಂಧದಿಂದ ಶರೀರಾದಿಕಗಳಲ್ಲಿ ಚೇಷ್ಟೆಗಳು ಕಂಡರೂ ದೇಹವು ಆತ್ಮನಲ್ಲಿ ಲೋಹಚುಂಬಕದ ಸಂಸರ್ಗದಿಂದ ಕಬ್ಬಿಣವು ಚಲಿಸುವುದು. ಆದರೆ ಕಬ್ಬಿಣವು ಲೋಹಚುಂಬಕವಲ್ಲ ।।೧೧೨೩।।

ದೀಪದ ಬೆಳಕಿನಲ್ಲಿ, ಮನೆಯಲ್ಲಿ ಎಲ್ಲ ವ್ಯವಹಾರಗಳನ್ನು ಮಾಡಲು ಬರುವುದು. ಆದರೆ ಬೆಳಕು ಮತ್ತು ಮನೆ ಇವುಗಳಲ್ಲಿ ಕೋಟಿಶಃ ಅಂತರವಿರುವುದು ।।೧೧೨೪।।

ಕಿರೀಟೀಯೇ, ಕಟ್ಟಿಗೆಯ ಗರ್ಭದಲ್ಲಿ ಅಗ್ನಿಯು ಇರುವುದು. ಆದರೆ ಅಗ್ನಿಯು ಎಂದೂ ಕಟ್ಟಿಗೆಯಾಗಲಾರದು, ಈ ದೃಷ್ಟಿಯಿಂದ (ಕ್ಷೇತ್ರ, ಕ್ಷೇತ್ರಜ್ಞರನ್ನು) ನೋಡಬೇಕು ।।೧೧೨೫।।

ಆಕಾಶ ಮತ್ತು ಮೋಡಗಳು ಅಥವಾ ಸೂರ್ಯ ಮತ್ತು ಮೃಗಜಲ ಇವುಗಳಲ್ಲಿ ಯಾವ ದೃಷ್ಟಿಯಿಂದ ಅಂತರವಿದೆಯೋ, ಅದೇ ಪ್ರಕಾರವಾಗಿ ದೇಹ ಮತ್ತು ಆತ್ಮ ಇವುಗಳ ನಡುವೆ ಅಂತರವಿರುವುದು ।।೧೧೨೬।।

ಶ್ಲೋಕಾರ್ಥ :- ಭಾರತಾ! ಒಬ್ಬನೇ ಸೂರ್ಯನು ಈ ಸಮಸ್ತ ಲೋಕವನ್ನು ಬೆಳಗಿಸುವಂತೆ ಕ್ಷೇತ್ರಜ್ಞನಾದ ಆತ್ಮದೇವನು ಶರೀರಗಳನ್ನೆಲ್ಲ ಪ್ರಕಾಶಿಸುತ್ತಾನೆ ।।೩೩।।

ಹೇ ಆಘವೇಂಚಿ ಅಸೋ ಏಕು । ಗಗನೌನಿ ಜೈಸಾ ಅರ್ಕು । ಪ್ರಗಟವೀ ಲೋಕು । ನಾಂವೇ ನಾಂವೇ ।।೧೧೨೭।। ಏಥ ಕ್ಷೇತ್ರಜ್ಞು ತೋ ಐಸಾ । ಪ್ರಕಾಶಕು ಕ್ಷೇತ್ರಾಭಾಸಾ । ಯಾವರುತೇ ಹೇ ನ ಪುಸಾ । ಶಂಕಾ ನೇಘಾ ।।೧೧೨೮।।

ಕ್ಷೇತ್ರಕ್ಷೇತ್ರಜ್ಞಯೋರೇವಂ ಅಂತರಂ ಜ್ಞಾನಚಕ್ಷುಷಾ ।
ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಮ್ ।।೩೪।।

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಕ್ಷೇತ್ರಜ್ಞಕ್ಷೇತ್ರವಿಭಾಗಯೋಗೋ ನಾಮ ತ್ರಯೋದಶೋಽಧ್ಯಾಯಃ

ಶಬ್ದತತ್ತ್ವಸಾರಜ್ಞಾ । ಪೈ ದೇಖಣೇ ತೇಚಿ ಪ್ರಜ್ಞಾ । ಜೇ ಕ್ಷೇತ್ರಕ್ಷೇತ್ರಜ್ಞಾ । ಅಪಾಡು ದೇಖೇ ।।೧೧೨೯।। ಇಯಾ ದೋಹೀಂಚೇ ಅಂತರ । ದೇಖಾವಯಾ ಚತುರ । ಜ್ಞಾನಿಯಾಂಚೇ ದ್ವಾರ । ಆರಾಧಿತೀ ।।೧೧೩೦।। ಯಾಚಿಲಾಗೀ ಸುಮತೀ । ಜೋಡಿತೀ ಶಾಂತಿಸಂಪತ್ತೀ । ಶಾಸ್ತ್ರಾಂಚೀ ದುಭತೀ । ಪೋಸಿತೀ ಘರೀ ।।೧೧೩೧।। ಯೋಗಾಚಿಯಾ ಆಕಾಶಾ । ವಳಘಿಜೇ ಯೇವಢಾಚಿ ಧಿಂವಸಾ । ಯಾಚಿಯಾಚಿ ಆಶಾ । ಪುರುಷಾಸಿ ಗಾ ।।೧೧೩೨।। ಶರೀರಾದಿ ಸಮಸ್ತ । ಮಾನಿತಾತಿ ತೃಣವತ । ಜೀವೇ ಸಂತಾಂಚೇ ಹೋತ । ವಾಹಣಧರು ।।೧೧೩೩।। ಐಸೈಸಿಯಾಪರೀ । ಜ್ಞಾನಾಚಿಯಾ ಭರೋವರೀ । ಕರೂನಿಯಾ ಅಂತರೀ । ನಿರುತೇ ಹೋತೀ ।।೧೧೩೪।। ಮಗ ಕ್ಷೇತ್ರಕ್ಷೇತ್ರಜ್ಞಾಂಚೇ । ಜೇ ಅಂತರ ದೇಖತೀ ಸಾಚೇ । ಜ್ಞಾನೇ ಉನ್ಮೇಖ ತಯಾಂಚೇ । ವೋವಾಳೂ ಆಮ್ಹೀ ।।೧೧೩೫।। ಆಣಿ ಮಹಾ ಭೂತಾದಿಕೀ । ಪ್ರಭೇದಲೀ ಅನೇಕೀ । ಪಸರಲೀಸೆ ಲಟಿಕೀ । ಪ್ರಕೃತಿ ಜೇ ಹೇ ।।೧೧೩೬।। ಜೇ ಶುಕನಳಿಕಾನ್ಯಾಯೇ । ನ ಲಗತೀ ಲಾಗಲೀ ಆಹೇ । ಹೇ ಜೈಸೇ ತೈಸೇ ಹೋಯೇ । ಠಾಉವೇ ಜಯಾ ।।೧೧೩೭।। ಜೈಸೀ ಮಾಳಾ ತೇ ಮಾಳಾ । ಐಸೀಚಿ ದೇಖಿಜೇ ಡೋಳಾ । ಸರ್ಪಬುದ್ಧಿ ಟವಾಳಾ । ಉಖೀ ಹೋಉನೀ ।।೧೧೩೮।। ಕಾ ಶುಕ್ತಿ ತೇ ಶುಕ್ತೀ । ಹೇ ಸಾಚ ಹೋಯ ಪ್ರತೀತೀ । ರುಪೇಯಾಚೀ ಭ್ರಾಂತೀ । ಜಾಊನಿಯಾ ।।೧೧೩೯।। ತೈಸೀ ವೇಗಳೀ ವೇಗಳೇಪಣೇ । ಪ್ರಕೃತಿ ಜೇ ಅಂತಃಕರಣೇ । ದೇಖತೀ ತೇ ಮೀ ಮ್ಹಣೇ । ಬ್ರಹ್ಮ ಹೋತಿ ।।೧೧೪೦।। ಜೇ ಆಕಾಶಾಹೂನೀ ವಾಡ । ಜೇ ಅವ್ಯಕ್ತಾಚೀ ಪೈಲ ಕಡ । ಜೇ ಭೇಟಲಿಯಾ ಅಪಾಡಾ ಪಾಡ । ಪಡೋ ನೇದೀ ।।೧೧೪೧।। ಆಕಾರು ಜೇಥ ಸರೇ । ಜೀವತ್ವ ಜೇಥೇ ವಿರೇ । ದ್ವೈತ ಜೇಥ ನುರೇ । ಅದ್ವಯ ಜೇ ।।೧೧೪೨।।

ಆಕಾಶದಲ್ಲಿ ಸೂರ್ಯನು ಒಬ್ಬನೇ ಇದ್ದು, ಯಾವ ಪ್ರಕಾರವಾಗಿ ಬೇರೆ ಬೇರೆ ಎಲ್ಲ ಲೋಕಗಳಿಗೂ ಪ್ರಕಾಶ ಮಾಡುವನೋ ॥೧೧೨೭॥

ಅದರಂತೆ ಆತ್ಮನು ಈ ಎಲ್ಲ ದೇಹಗಳಲ್ಲಿಯೂ ಪ್ರಕಾಶ ವನ್ನು ಮಾಡುವವನಿದ್ದಾನೆ, ಹೀಗೆ ತಿಳಿದು ಬರುವುದು. ಇನ್ನು ಮುಂದೆ ಆತ್ಮ ಮತ್ತು ದೇಹ ಈ ವಿಷಯಕ್ಕೆ ಪುನಃ ಅನು ಮಾನಿಸಿಕೊಂಡು ಕೇಳಬೇಡ ॥೧೧೨೮॥

ಶ್ಲೋಕಾರ್ಥ :- ಯಾರು ಜ್ಞಾನನೇತ್ರವನ್ನು ಪಡೆದು, ಕ್ಷೇತ್ರಕ್ಷೇತ್ರಜ್ಞರ ವಿಲಕ್ಷಣತ್ವವನ್ನೂ, ಪ್ರಾಣಿಗಳಿಗೆ ಪ್ರಕೃತಿ ಬಂಧವು ತೊಲಗುವ ಮಾರ್ಗವನ್ನೂ ತಿಳಿದುಕೊಳ್ಳು ತ್ತಾರೋ, ಅವರು ಉತ್ತಮ ಗತಿಯನ್ನು ಪಡೆಯುತ್ತಾನೆ ॥೩೪॥

ಇಲ್ಲಿಗೆ ಉಪನಿಷತ್ತೂ, ಬ್ರಹ್ಮವಿದ್ಯೆಯೂ, ಯೋಗ ಶಾಸ್ತ್ರವೂ, ಶ್ರೀಕೃಷ್ಣಾರ್ಜುನ ಸಂವಾದವೂ ಆದ ಶ್ರೀಮದ್ಭಗ ವದ್ಗೀತೆಯಲ್ಲಿ ಕ್ಷೇತ್ರಕ್ಷೇತ್ರಜ್ಞ ವಿಭಾಗ ಯೋಗವೆಂಬ ಹೆಸರಿನ ಹದಿಮೂರನೆಯ ಅಧ್ಯಾಯವು ಮುಗಿದುದು.

ಹೇ ಶಬ್ದತತ್ತ್ವಜ್ಞ ಅರ್ಜುನನೇ, ಶರೀರ ಮತ್ತು ಆತ್ಮ ಈ ಎರಡರಲ್ಲಿರುವ ಅಂತರವನ್ನು ತಿಳಿಯಲ್ಪಡುವ ಬುದ್ಧಿ ಯೇ ತಿಳುವಳಿಕೆಯ ಬುದ್ಧಿಯಾಗಿದೆ ॥೧೧೨೯॥

ಈ ಎರಡರಲ್ಲಿರುವ ಅಂತರವನ್ನು ತಿಳಿಯುವುದಕ್ಕಾಗಿ ಚತುರರು (ಮುಮುಕ್ಷುಗಳು) ಜ್ಞಾನಿ ಪುರುಷರ ಮನೆಯ ಬಾಗಿಲನ್ನು ಆರಾಧಿಸುವರು. (ಸೇವೆ ಮಾಡುವರು) ॥೧೧೩೦॥

ಅರ್ಜುನಾ, ಇದನ್ನೇ ತಿಳಿದುಕೊಳ್ಳುವುದಕ್ಕಾಗಿ ಶಾಂತಿ ರೂಪ ಸಂಪತ್ತನ್ನು ಸ್ವಾಧೀನಗೊಳಿಸಿ, ಶಾಸ್ತ್ರರೂಪ ಹಿಂಡುವ ಆಕಳನ್ನು ಮನೆಯಲ್ಲಿ ಸಾಕುವರು. (ಯಾವಾಗಲೂ ಶಾಸ್ತ್ರಾಭ್ಯಾಸ ಮಾಡುವರು) ॥೧೧೩೧॥

ಇದನ್ನೇ ತಿಳಿದುಕೊಳ್ಳುವುದಕ್ಕಾಗಿ ಪುರುಷರು ಯೋಗ ರೂಪ ಆಕಾಶವನ್ನು ಏರುವುದಕ್ಕಾಗಿ ಮನದಲ್ಲಿ ಹಂಬಲಿ ಸುವರು ॥೧೧೩೨॥

ಶರೀರವನ್ನು ಮೊದಲು ಮಾಡಿ ಎಲ್ಲವನ್ನೂ ಹುಲ್ಲಿ ನಂತೆ ತಿಳಿಯುತ್ತಾರೆ ಮತ್ತು ಸಂತರ ಪಾದುಕೆಗಳನ್ನು ತಮ್ಮ ಮಸ್ತಕದ ಮೇಲೆ ಧರಿಸುತ್ತಾರೆ ॥೧೧೩೩॥

ಈ ಪ್ರಕಾರದ ಅನೇಕ ಜ್ಞಾನದ ಸಾಧನೆಗಳನ್ನು ಮಾಡಿ ಅಂತರ್ಯಾಮಿಯನ್ನು ಮನಸ್ಸಿಗೆ ಖಾತ್ರಿ ಮಾಡಿಕೊಳ್ಳುವರು ॥೧೧೩೪॥

ನಂತರ (ಕ್ಷೇತ್ರಕ್ಷೇತ್ರಜ್ಞ) ಶರೀರ ಮತ್ತು ಆತ್ಮ ಇವರ ಲ್ಲಿರುವ ನಿಜವಾದ ಅಂತರವನ್ನು ಕಾಣುವರು. ಆಗ ಭಗವಾ ನನು ಹೇಳುವನು; ನಾವು ನಮ್ಮ ಜ್ಞಾನವನ್ನು ಅವರ ಜ್ಞಾನದ ಮೇಲೆ ನಿವಾಳಿಸಿ ಒಗೆಯುವೆವು ॥೧೧೩೫॥

ಮತ್ತು ಈ ಪೃಥ್ವಿಯ ಮೇಲೆ ಪ್ರಾಣಿಗಳ ಭಿನ್ನ ಭಿನ್ನ ರೂಪದಿಂದ ಮಿಥ್ಯಾ ಮಾಯೆಯು ಹರಡಿಕೊಂಡಿರುವುದು ॥೧೧೩೬॥

ಇದು ಶುಕನಳಿಕೆ ನ್ಯಾಯದಂತೆ ಜೀವಗಳ ಹಿಂದೆ ಹತ್ತ ದೇ ಹತ್ತಿದಂತೆ ಕಾಣಿಸುವುದು. ಹೀಗೆ ವಸ್ತುಸ್ಥಿತಿಯು ಯಾರಿಗೆ ಪೂರ್ಣವಾಗಿ ತಿಳಿದಿರುವುದೋ ॥೧೧೩೭॥

ಯಾವ ಪ್ರಕಾರವಾಗಿ ಹಾರದಲ್ಲಿ ಸರ್ಪ ಬುದ್ಧಿಯು ನಷ್ಟವಾಯಿತೆಂದರೆ ಹಾರವು ಹಾರವಾಗಿಯೇ ಕಾಣಿಸು ವುದೋ ॥೧೧೩೮॥

ಅಥವಾ ಕಪ್ಪೆಚಿಪ್ಪಿನಲ್ಲಿ ಚಕಚಕ ಹೊಳೆಯುವ ಅದರ ಲ್ಲಿನ ಬೆಳ್ಳಿಯ ಭಾಗವು ಹೋಯಿತೆಂದರೆ ಆಗ ಕೇವಲ ಕಪ್ಪೆ ಚಿಪ್ಪೆ ಇರುವುದೆಂದು ತಿಳುವಳಿಕೆಯಲ್ಲಿ ಬರುವುದೋ ॥೧೧೩೯॥

ಅದರಂತೆ ಆತ್ಮದಿಂದ ಪ್ರಕೃತಿಯು ಬೇರೆಯಾಗಿದೆ ಎಂದು ಯಾರು ತಮ್ಮ ಅಂತಃಕರಣದಲ್ಲಿ ನೋಡುವರೋ, ಅವರು ಬ್ರಹ್ಮರೂಪರಾಗುವರೆಂದು ನಾನು ಹೇಳುವೆ ॥೧೧೪೦॥

ಯಾವ ಬ್ರಹ್ಮವು ಆಕಾಶಕ್ಕಿಂತಲೂ ವ್ಯಾಪಕವಾಗಿದೆ, ಇದು ಪ್ರಕೃತಿಯ ಆಚೆಯ ದಂಡೆಯಾಗಿದೆ. ಯಾವುದು ಪ್ರಾಪ್ತವಾದ ಮೇಲೆ ತನ್ನಿಂದ ದೂರ ಮಾಡುವುದಿಲ್ಲ ॥೧೧೪೧॥

ಸ್ಥೂಲ, ಸೂಕ್ಷ್ಮ ಆಕಾರಗಳು ಅಲ್ಲಿ ಮುಗಿಯುವುವು. ಜೀವತ್ತ್ವವು ಅಲ್ಲಿ ಕರಗಿ ಹೋಗುವುದು. ದ್ವೈತವು ಅಲ್ಲಿ ಉಳಿಯುವುದಿಲ್ಲ. ಹೀಗೆ ಅದು ಅದ್ವಯವಾಗಿರುವುದು ॥೧೧೪೨॥

ತೇ ಪರಮ ತತ್ತ್ವ ಪಾರ್ಥಾ । ಹೋತೀ ತೇ ಸರ್ವಥಾ । ಜೇ ಆತ್ಮಾ ನಾತ್ಮ ವ್ಯವಸ್ಥಾ । ರಾಜ ಹಂಸು ।।೧೧೪೩।। ಐಸಾ ಹಾ ಜೀ ಆಘವಾ । ಶ್ರೀಕೃಷ್ಣೇ ತಯಾ ಪಾಂಡವಾ । ಉಗಾಣಾ ದಿಧಲಾ ಜೀವಾ । ಜೀವಾಚಿಯಾ ।।೧೧೪೪।। ಯೇರ ಕಲಶೀಂಚೇ ಯೇರೀ । ರಿಚವಿಜೇ ಜಯಾಪರೀ । ಆಪಣಪೇ ತಯಾ ಶ್ರೀಹರೀ । ದಿಧಲೇ ತೈಸೇ ।।೧೧೪೫।। ಆಣಿ ಕೋಣಾ ದೇತಾ ಕೋಣ । ತೋ ನರ ತೈಸಾ ನಾರಾಯಣ । ವರೀ ಅರ್ಜುನಾತೇ ಶ್ರೀಕೃಷ್ಣ । ಹಾ ಮೀ ಮ್ಹಣೇ ।।೧೧೪೬।। ಪರೀ ಅಸೋ ತೇ ನಾಥಿಲೇ । ನ ಪುಸತಾ ಕಾ ಮೀ ಬೋಲೇ । ಕಿಂಬಹುನಾ ದಿಧಲೇ । ಸರ್ವಸ್ವ ದೇವೇ ।।೧೧೪೭।। ಕೀ ತೋ ಪಾರ್ಥು ಜೀ ಮನೀ । ಅಝುನೀ ತೃಪ್ತೀ ನ ಮನೀ । ಅಧಿಕಾಧಿಕ ಉತಾನ್ಹೀ । ವಾಢವೀತು ಅಸೇ ।।೧೧೪೮।। ಸ್ನೇಹಾಚಿಯಾ ಭರೋವರೀ । ಆಂಬುಥಿಲಾ ದೀಪು ಘೇ ಥೋರೀ । ಚಾಡ ಅರ್ಜುನಾ ಅಂತರೀ । ಪರಿಸತಾ ತೈಸೀ ।।೧೧೪೯।। ತೇಥ ಸುಗರಿಣೇ ಆಣಿ ಉದಾರೇ । ರಸಜ್ಞ ಆಣಿ ಜೇವಣಾರೇ । ಮಿಳತೀ ಮಗ ಅವತರೇ । ಹಾತು ಜೈಸಾ ।।೧೧೫೦।। ತೈಸೇ ಜೀ ಹೋತಸೇ ದೇವಾ । ತಯಾ ಅವಧಾನಾಚಿಯಾ ಲವಲವಾ । ಪಾಹಾತಾ ವ್ಯಾಖ್ಯಾನ ಚಢಲೇ ಥಾಂವಾ । ಚೌಗುಣೇ ವರೀ ।।೧೧೫೧।। ಸುವಾಯೇ ಮೇಘು ಸಾಂವರೇ । ಜೈಸಾ ಚಂದ್ರೇ ಸಿಂಧು ಭರೇ । ತೈಸಾ ವಾತಲಾ ರಸು ಆದರೇ । ಶ್ರೋತಯಾಂಚೇನಿ ।।೧೧೫೨।। ಆತಾ ಆನಂದಮಯ ಆಘವೇ । ವಿಶ್ವ ಕೀಜೇಲ ದೇವೇ । ತೇ ರಾಯೇ ಪರಿಸಾವೇ । ಸಂಜಯೋ ಮ್ಹಣೇ ।।೧೧೫೩।। ಏವಂ ಜೇ ಮಹಾಭಾರತೀ । ಶ್ರೀವ್ಯಾಸೇ ಅಪ್ರಾಂತಮತೀ । ಭೀಷ್ಮ ಪರ್ವಿಸಂಗತೀ । ಮ್ಹಣಿತಲೀ ಕಥಾ ।।೧೧೫೪।। ತೋ ಶ್ರೀಕೃಷ್ಣಾರ್ಜುನಸಂವಾದು । ನಾಗರೀ ಬೋಲೀ ವಿಶದು । ಸಾಂಗೋನಿ ದಾಊ ಪ್ರಬಂಧು । ವೋವಿಯೇಚಾ ।।೧೧೫೫।। ನುಸಧೀಚಿ ಶಾಂತಿಕಥಾ । ಆಣಿಜೇಲ ಕೀರ ವಾಕ್ಪಥಾ । ಜೇ ಶೃಂಗಾರಾಚ್ಯಾ ಮಾಥಾ । ಪಾಯ ಠೇವೀ ।।೧೧೫೬।। ದಾಊ ವೇಲ್ಹಾಳೇ ದೇಶೀ ನವೀ । ಜೇ ಸಾಹಿತ್ಯಾತೇ ವೋಜಾವೀ । ಅಮೃತಾತೇ ಚುಕೀ ಠೇವೀ । ಗೋಡಿಸೇಪಣೇ ।।೧೧೫೭।। ಬೋಲ ಓಲ್ಹಾವತೇನಿ ಗುಣೇ । ಚಂದ್ರಾಸಿ ಘೇ ಉಮಾಣೇ । ರಸರಂಗೀ ಭುಲವಣೇ । ನಾದು ಲೋಪೀ ।।೧೧೫೮।। ಖೇಚರಾಂಚಿಯಾಹೀ ಮನಾ । ಆಣೀ ಸಾತ್ತ್ವಿಕಾಚಾ ಪಾನ್ಹಾ । ಶ್ರವಣಾಸವೇ ಸುಮನಾ । ಸಮಾಧಿ ಜೋಡೇ ।।೧೧೫೯।।

ಪಾರ್ಥಾ, ರಾಜಹಂಸವು ಹಾಲು ಮತ್ತು ನೀರನ್ನು ಬೇರ್ಪಡಿಸುವಂತೆ, ಯಾರು ಆತ್ಮ ಮತ್ತು ಪ್ರಕೃತಿಯನ್ನು ಬೇರ್ಪಡಿಸುವರೋ, ಅವರೇ ಪರಮತತ್ತ್ವ ಪುರುಷರಾಗುವರು ।।೧೧೪೩।।

ಜ್ಞಾನೇಶ್ವರರು ಹೇಳುವರು:- ಈ ಪ್ರಕಾರವಾಗಿ ಶ್ರೀಕೃಷ್ಣನು ಅರ್ಜುನನಿಗೆ ಪ್ರಕೃತಿ ಮತ್ತು ಆತ್ಮದ ಅನುಭವವನ್ನು ತಂದುಕೊಟ್ಟನು ।।೧೧೪೪।।

ಯಾವ ಪ್ರಕಾರವಾಗಿ ಒಂದು ಪಾತ್ರೆಯಲ್ಲಿನ ನೀರನ್ನು ಇನ್ನೊಂದು ಪಾತ್ರೆಯಲ್ಲಿ ಸುರುವಿದಂತೆ ಶ್ರೀಹರಿಯು ತನ್ನ ಹೃದಯದಲ್ಲಿರುವ ಆ ಜ್ಞಾನವನ್ನು ಅರ್ಜುನನ ಹೃದಯದಲ್ಲಿ ಸುರುವಿದನು ।।೧೧೪೫।।

ಅದರಲ್ಲಿ ವಿಶೇಷವಾದರೂ ಏನಾಗಿದೆ? ಕಾರಣ ಯಾರು ನರನೋ, ಆತನೇ ನಾರಾಯಣನು. ಅಂದಮೇಲೆ ಜ್ಞಾನವನ್ನು ಯಾರು ಯಾರಿಗೆ ಕೊಟ್ಟರು? ಶ್ರೀಕೃಷ್ಣನು ಅರ್ಜುನನ ಕಡೆ ಬಟ್ಟು ಮಾಡಿ "ಅವನು ನಾನೇ ಇರುವೆ" ಹೀಗೆ ಹೇಳಿರುವನು ।।೧೧೪೬।।

ಆದರೆ ಈ ಮಾತು ನನಗೆ ಯಾರೂ ಕೇಳದ ಹೊರತು ಹೇಳುವ ಪ್ರಸಂಗವಾದರೂ ಏನಿದೆ? ಒಟ್ಟಿನಲ್ಲಿ ದೇವನು ಅರ್ಜುನನಿಗೆ ತನ್ನ ಸರ್ವಸ್ವವನ್ನು ಕೊಟ್ಟನು ।।೧೧೪೭।।

ಆದರೆ ಭಗವಂತನು ಇಷ್ಟೊಂದು ಹೇಳಿದಾಗ್ಯೂ ಅರ್ಜುನನು ತನ್ನ ಮನದಲ್ಲಿ ತೃಪ್ತನಾಗದೇ, ಇನ್ನೂ ಅಧಿಕವಾಗಿ ಕೇಳಬೇಕೆಂಬ ಅಪೇಕ್ಷೆ ಮಾಡಹತ್ತಿದನು ।।೧೧೪೮।।

ದೀಪದಲ್ಲಿ ಎಣ್ಣೆಯನ್ನು ಹಾಕಿದಂತೆಲ್ಲ ಅದು ಹೆಚ್ಚೆಚ್ಚು ಪ್ರಕಾಶ ಕೊಡಹತ್ತುವುದೋ, ಅದರಂತೆ ಶ್ರೀಕೃಷ್ಣನು ಹೆಚ್ಚೆಚ್ಚಿಗೆ ಹೇಳಿದಂತೆಲ್ಲ ಅರ್ಜುನನ ಮನಸ್ಸಿನಲ್ಲಿ ಕೇಳುವ ಅಧಿಕ ಇಚ್ಛೆಯು ಬೆಳೆಯಹತ್ತಿತು ।।೧೧೪೯।।

ಅಡುಗೆಯಲ್ಲಿ ಚತುರಳು ಮತ್ತು ನೀಡುವುದರಲ್ಲಿ ಉದಾರಳು ಹೀಗೆ ಸ್ತ್ರೀ ಇದ್ದಾಗ, ರುಚಿಬಲ್ಲ ಸರಿಯಾಗಿ ಉಣ್ಣುವವರು ಊಟಕ್ಕೆ ಕುಳಿತುಕೊಂಡಾಗ, ಪುನಃ ಪುನಃ ನೀಡುವ ಕೈಯು ಮುಂದೆ ಸರಿಯುವುದು ಮತ್ತು ಊಟ ಮಾಡುವವರ ಕೈಯು ಪುನಃ ಪುನಃ ಉಣ್ಣಲು ಮುಂದೆ ಸರಿಯುವುದು ।।೧೧೫೦।।

ಈ ಪ್ರಕಾರವಾಗಿ ಅರ್ಜುನನ ಕೇಳುವ ಉತ್ಸುಕತೆಯನ್ನು ಕಂಡು, ದೇವನಿಗೂ ಉತ್ಸಾಹ ಬಂದು ಆತನ ವ್ಯಾಖ್ಯಾನವು ನಾಲ್ಕುಪಟ್ಟು ಬೆಳೆಯಿತು ।।೧೧೫೧।।

ಅನುಕೂಲವಾದ ಗಾಳಿಯಿಂದ ಮೇಘವು ವೃಷ್ಟಿಯಾಗುವಂತೆ, ಚಂದ್ರೋದಯವಾದಂತೆಯೇ ಸಮುದ್ರಕ್ಕೆ ಭರತಿ ಬರುವಂತೆ, ಕೇಳುವವರ ಆದರ ಬುದ್ಧಿಯಿಂದ ಹೇಳುವಾತನಿಗೆ ಸ್ಫುರಣ ಬರುವುದು ।।೧೧೫೨।।

ಸಂಜಯನು ಹೇಳುವನು:- ಧೃತರಾಷ್ಟ್ರನೇ, ಈ ಪ್ರಕಾರವಾಗಿ ಅರ್ಜುನನ ಕೇಳುವ ಇಚ್ಛೆ ಕಂಡು, ದೇವನು ತನ್ನ ವಕ್ತೃತ್ವದಿಂದ ಎಲ್ಲ ವಿಶ್ವವನ್ನು ಆನಂದಭರಿತವಾಗಿ ಮಾಡುವನು, ಅದನ್ನು ಕೇಳು ।।೧೧೫೩।।

ಈ ಪ್ರಕಾರವಾಗಿ ಮಹಾಭಾರತದ ಭೀಷ್ಮ ಪರ್ವದ ಸಂಗತಿಯಲ್ಲಿ ಶ್ರೀವ್ಯಾಸಮುನಿಯು ತನ್ನ ಅಮರ್ಯಾದ ಬುದ್ಧಿಯಿಂದ ಯಾವ ಕಥೆಯನ್ನು ಹೇಳಿದನೋ ।।೧೧೫೪।।

ಆ ಕೃಷ್ಣಾರ್ಜುನರ ಸಂವಾದವನ್ನು ಉತ್ತಮವಾದ ಮರಾಠಿ ಭಾಷೆಯಲ್ಲಿ ಓವಿ ಛಂದದಲ್ಲಿ ಹೇಳುವೆನು ।।೧೧೫೫।।

ನಾನೀಗ ಕೇವಲ ಶಾಂತಿರಸ ಕಥೆಯನ್ನು ಹೇಳುವೆನು. ಆದರೆ ಶೃಂಗಾರಾದಿ ರಸಗಳು ಉಕ್ಕೇರಿ ಬರುವುವು ।।೧೧೫೬।।

ಇದು ದೇಶಭಾಷೆ ಸಾಹಿತ್ಯಕ್ಕೆ ಕಲಿಸುವುದಾಗಿದ್ದು ಹಾಗೂ ಸಿಹಿಯಾದ ಅಮೃತವನ್ನು ಸಹ ಸಪ್ಪಗಾಗಿ ಮಾಡುವುದು ।।೧೧೫೭।।

ಯಾವ ಚಂದ್ರೋದಯದಿಂದ ಚಂದ್ರಕಾಂತ ಮಣಿಗೆ ದ್ರವ ಹುಟ್ಟುವುದೋ, ಆ ಚಂದ್ರನಿಗೂ ನನ್ನ ಮಾತಿನಿಂದ ದ್ರವ ಹುಟ್ಟುವುದು, ಹಾಗೆಯೇ ನನ್ನ ವಾಕ್ಯಗಳ ರಸದಿಂದ ನಾದಬ್ರಹ್ಮವೂ ಲೋಪವಾಗುವುದು ।।೧೧೫೮।।

ಅಜ್ಞಾನಿಗಳ ಮಾನಸವೂ ಸಹ ಸಾತ್ವಿಕತೆಯ ದ್ರವ ಬಿಡುವುದು ಮತ್ತು ಅಧಿಕಾರಿಗೆ ಮಾತ್ರ ಇದನ್ನು ಕೇಳಿದಾಕ್ಷಣವೇ ಸಮಾಧಿ ಹತ್ತೀತು ।।೧೧೫೯।।

ತೈಸಾ ವಾಗ್ವಿಲಾಸ ವಿಸ್ತಾರೂ । ಗೀತಾರ್ಥೇಸೀ ವಿಶ್ವ ಭರೂ । ಆನಂದಾಚೇ ಆವಾರೂ । ಮಾಂಡೂ ಜಗಾ ।।೧೧೬೦।। ಫಿಟೋ ವಿವೇಕಾಚೀ ವಾಣೀ । ಹೋ ಕಾನಾಮನಾಚೀ ಜಿಣೀ । ದೇಖೋ ಆವಡೇ ತೋ ಖಾಣೀ । ಬ್ರಹ್ಮವಿದ್ಯೇಚೀ ।।೧೧೬೧।। ದಿಸೋ ಪರತತ್ತ್ವ ಡೋಳಾ । ಪಾಹೋ ಸುಖಾಚಾ ಸೋಹಳಾ । ರಿಘೋ ಮಹಾಬೋಧ ಸುಕಾಳಾ । ಮಾಜೀ ವಿಶ್ವ ।।೧೧೬೨।। ಹೇ ನಿಫಜೇಲ ಆತಾ ಆಘವೇ । ಐಸೇ ಬೋಲಿಜೇಲ ಬರವೇ । ಜೇ ಅಧಿಷ್ಟಿಲಾ ಅಸೇ ಪರಮದೇವೇ । ಶ್ರೀನಿವೃತ್ತೀ ಮೀ ।।೧೧೬೩।। ಮ್ಹಣೌನಿ ಅಕ್ಷರೀ ಸುಭೇದೀ । ಉಪಮಾ ಶ್ಲೋಕ ಕೋಂದಾಕೋಂದೀ । ಝಾಡಾ ದೇಈನ ಪ್ರತಿಪದೀ । ಗ್ರಂಥಾರ್ಥಾಸೀ ।।೧೧೬೪।। ಹಾ ತಾವೋವರೀ ಮಾತೇ । ಪುರತಯಾ ಸಾರಸ್ವತೇ । ಕೇಲೇ ಅಸೇ ಶ್ರೀಮಂತೇ । ಶ್ರೀಗುರೂರಾಯೇ ।।೧೧೬೫।। ತೇಣೇ ಜೇ ಕೃಪಾಸಾವಾಯೇ । ಮೀ ಬೋಲಲೇ ತೇತುಲೇ ಸಾಮಾಯೇ । ಆಣಿ ತುಮಚಿಯೇ ಸಭೇ ಲಾಹೇ । ಗೀತಾ ಮ್ಹಣೋ ।।೧೧೬೬।। ವರೀ ತುಮ್ಹಾ ಸಂತಾಂಚೇ ಪಾಯೇ । ಆಜಿ ಮೀ ಲಾಧಲೋ ಆಹೇ । ಮ್ಹಣೌನಿ ಜೇ ನೋಹೇ । ಅಟಕು ಕಾಂಹೀ ।।೧೧೬೭।। ಪ್ರಭು ಕಾಶ್ಮಿರೀ ಮುಕೇ । ನುಪಜೇ ಹೇ ಕಾಯ ಕೌತುಕೇ । ನಾಹೀ ಉಣೇ ಸಾಮುದ್ರಿಕೇ । ಲಕ್ಷ್ಮೀಯೇಸೀ ।।೧೧೬೮।। ತೈಸೀ ತುಮ್ಹಾ ಸಂತಾಪಾಸೀ। ಅಜ್ಞಾನಾಚೀ ಗೋಠೀ ಕಾಯಸೀ । ಯಾಲಾಗೀ ನವರಸೀ । ವರುಷೇನ ಮೀ ।।೧೧೬೯।। ಕಿಂಬಹುನಾ ಆತಾ ದೇವಾ । ಅವಸರು ಮಜ ದೇಯಾವಾ । ಜ್ಞಾನದೇವ ಮ್ಹಣೇ ಬರವಾ । ಸಾಂಗೇನ ಗ್ರಂಥು ।।೧೧೭೦।।

---

ಇತಿ ಶ್ರೀ ಜ್ಞಾನದೇವ ವಿರಚಿತಾಯಾಂ ಭಾವಾರ್ಥದೀಪಿಕಾಯಾಂ ತ್ರಯೋದಶೋಽಧ್ಯಾಯಃ ।।೧೩।।
ಶ್ಲೋಕ:೩೪ ವೋವಿ:೧೧೭೦

ಗೀತೆಯ ಅರ್ಥವನ್ನು ಹೀಗೆ ಹೇಳುವೆನು. ಅದು ಎಲ್ಲ ಜಗತ್ತಿನ ತುಂಬ ಹರಡಿ ಎಲ್ಲ ಜಗತ್ತಿಗೆ ಆನಂದದಾಯಕ ವಾಗಿ ಮಾಡುವುದು ।।೧೧೬೦।।

ಇದರಿಂದ ದೀನರ ದೈನ್ಯವು ಮುಗಿದು ಮನಸ್ಸು ಮತ್ತು ಶ್ರವಣವು ಬದುಕುವುವು. ಹೆಚ್ಚಿಗೇನು ಹೇಳಬೇಕು? ಇಂದು ಯಾರು ಬೇಕಾದರೂ ಬ್ರಹ್ಮವಿದ್ಯೆಯ ಖಣಿಯನ್ನೇ ಕಾಣ ಬಹುದು ।।೧೧೬೧।।

ಬ್ರಹ್ಮವನ್ನು ಕಣ್ಣಿನಿಂದ ಕಂಡು ಸುಖದ ವೈಭವವು ದೃಷ್ಟಿಗೆ ಬೀಳಬೇಕು ಮತ್ತು ಸರ್ವಜಗತ್ತಿಗೆ ಆತ್ಮಜ್ಞಾನದ ಸುಕಾಳವಾಗಬೇಕು ।।೧೧೬೨।।

ನನ್ನ ಮೇಲೆ ಶ್ರೀಗುರುನಿವೃತ್ತಿನಾಥರ ಅನುಗ್ರಹ ಇರು ವುದರಿಂದ ನಿಮಗೆಲ್ಲರಿಗೂ ಅನುಭವ ಬರುವಂತೆ ನಾನು ಭಾಷಣವನ್ನು ಮಾಡುವೆನು ।।೧೧೬೩।।

ಪ್ರತ್ಯೇಕ ಅಕ್ಷರದಲ್ಲಿ ಕವಿತ್ವ ಮತ್ತು ದೃಷ್ಟಾಂತಗಳ ಗದ್ದಲ ಮಾಡಿಬಿಡುವೆನು ಮತ್ತು ಗ್ರಂಥದ ಪ್ರತಿಯೊಂದು ಪದಗಳಲ್ಲಿ ಅರ್ಥದ ಹುಡುಕುವಿಕೆ ಹುಟ್ಟಿಸುವೆನು ।।೧೧೬೪।।

ಇಲ್ಲಿಯವರೆಗೆ ನನ್ನನ್ನು ನಮ್ಮ ಶ್ರೀಮಂತರಾಗಿರುವ ಶ್ರೀಗುರುಗಳ ಸರ್ವಶಾಸ್ತ್ರಗಳಲ್ಲಿ ನಿಪುಣನನ್ನಾಗಿ ಮಾಡಿರು ವರು ।।೧೧೬೫।।

ಮತ್ತು ನಾನು ಹೇಳಿದ್ದನ್ನೆಲ್ಲ ನೀವು ಮಾನ್ಯ ಮಾಡಿ ರುವಿರಿ ಮತ್ತು ತಮ್ಮಂತಹ ಸಂತಮಂಡಳಿಯವರ ಸಭೆ ಯಲ್ಲಿ ಗೀತೆಯ ಅರ್ಥವನ್ನು ಹೇಳುವ ಯೋಗ್ಯತೆಯು ಬಂದಿರುವುದು. ಅದು ಅವರ ಕೃಪೆಯ ಐಶ್ವರ್ಯವಾಗಿದೆ ।।೧೧೬೬।।

ಅದರಲ್ಲಿ ನಿಮ್ಮಂತಹ ಸಂತರ ಚರಣಗಳು ನನ್ನ ದೃಷ್ಟಿಗೆ ಕಂಡಿರುವುದರಿಂದ ನನಗೆ ಯಾವ ಪ್ರಕಾರಗಳ ಅಡಚಣೆ ಬರಲಾರವು ।।೧೧೬೭।।

ಪ್ರಭುಗಳೇ. ಸರಸ್ವತಿಯು ಎಲ್ಲರಿಗೂ ಮಾತನಾಡುವ ಶಕ್ತಿಕೊಡುವಳು. ಆಕೆಗೆ ಮೂಕ ಮಕ್ಕಳು ಹುಟ್ಟಲಾರವು. ಇದರಲ್ಲೇನು ಕೌತುಕವಿದೆ? ಲಕ್ಷ್ಮೀಯ ಹಸ್ತದಲ್ಲಿ ಸಾಮುದ್ರಿಕ ಚಿನ್ಹದ ಕೊರತೆ ಇರಲು ಸಾಧ್ಯವೇ ಇಲ್ಲ ।।೧೧೬೮।।

ಅದರಂತೆ ನಿಮ್ಮಂತಹ ಸಂತರ ಮುಂದೆ ಯಾರೇ ಅಜ್ಞಾನಿಗಳು ಬಂದರೂ ಅವರು ಅಜ್ಞಾನಿಗಳಾಗಿ ಉಳಿಯುವ ಮಾತು ಹೇಗಾದೀತು? ಈಗ ನಾನು ಹೇಳುವುದರಲ್ಲಿ ನವ ರಸಗಳ ಮಳೆಗೆರೆಯುವೆನು ।।೧೧೬೯।।

ಆದರೆ ಪ್ರಭುಗಳೇ, ಈಗ ನನಗೆ ಸ್ವಲ್ಪ ವೇಳೆಯನ್ನು ಕೊಡಿರಿ. ಅಂದರೆ ನಾನು ಉತ್ತಮ ರೀತಿಯಲ್ಲಿ ಕಥೆಯನ್ನು ಹೇಳುವೆನು ಎಂದು ಜ್ಞಾನೇಶ್ವರರು ಹೇಳುವರು ।।೧೧೭೦।।

ಶ್ರೀಜ್ಞಾನೇಶ್ವರ ಮಹಾರಾಜರಿಂದ ರಚಿತವಾದ ಭಾವಾರ್ಥ ದೀಪಿಕೆಯ ಹದಿಮೂರನೆಯ ಅಧ್ಯಾಯದ ವಿವರಣೆ ಸಮಾಪ್ತವು

# ಸಾರ್ಥ ಶ್ರೀಜ್ಞಾನೇಶ್ವರೀ

## ಅಧ್ಯಾಯ ಚೌದಾವಾ

ಶ್ರೀ ಗಣೇಶಾಯ ನಮಃ

ಜಯ ಜಯ ಆಚಾರ್ಯಾ । ಸಮಸ್ತಸುರವರ್ಯಾ । ಪ್ರಜ್ಞಾಪ್ರಭಾಸೂರ್ಯಾ । ಸುಖೋದಯಾ॥೧॥ ಜಯ ಜಯ ಸರ್ವವಿಸಾಂವಯಾ । ಸೋಹಂಭಾವ ಸುಹಾವಯಾ । ನಾನಾ ಲೋಕ ಹೇಲಾವಯಾ । ಸಮುದ್ರಾ ತೂ ॥೨॥ ಆಇಕೇ ಗಾ ಆರ್ತಬಂಧೂ । ನಿರಂತರಕಾರುಣ್ಯಸಿಂಧೂ । ವಿಶದವಿದ್ಯಾವಧೂ । ವಲ್ಲಭಾ ಜೇ ॥೩॥ ತೂ ಜಯಾಪ್ರತಿ ಲಪಸೀ । ತಯಾ ವಿಶ್ವ ಹೇ ದಾವಿಸೀ । ಪ್ರಕಟ ತೈ ಕರಿಸೀ । ಆಘವೇಂಚಿ ತೂ ॥೪॥ ಕೀ ಪುಢಿಲಾಚೀ ದೃಷ್ಟಿ ಚೋರಿಜೇ । ಹಾ ದೃಷ್ಟಿಬಂಧು ನಿಫಜೇ । ಪರೀ ನವಲ ಲಾಘವ ತುರ್ಝೇ । ಜೇ ಆಪಣಪೇ ಚೋರೇ ॥೫॥ ಜೇ ತೂಂಚಿ ತೂ ಸರ್ವಾ ಯಯಾ । ಮಾ ಕೋಣಾ ಬೋಧು ಕೋಣಾ ಮಾಯಾ । ಐಸಿಯಾ ಆಪೇಆಪ ಲಾಘವಿಯಾ । ನಮೋ ತುಜ ॥೬॥ ಜಾಣೋ ಜಗೀ ಆಪ ವೋಲೇ । ತೇ ತುಝಿಯಾ ಬೋಲಾ ಸುರಸ ಜಾಲೇ । ತುರ್ಝೇನಿ ಕ್ಷಮತ್ವ ಆಲೇ । ಪೃಥ್ವೀಯೇಸೀ ॥೭॥ ರವಿಚಂದ್ರಾದಿ ಶುಕ್ತೀ । ಉದಯ ಕರಿತೀ ತ್ರಿಜಗತೀ। ತೇ ತುಝಿಯಾ ದೀಪ್ತೀ । ತೇಜ ತೇಜಾ ॥೮॥ ಜೇ ಚಳವಳೀಚೇ ಅನಿಳೇ । ತೇ ದೈವಿಕೇನಿ ಜೇ ನಿಜಬಳೇ। ನಭ ತುಜಮಾಜೀ ಖೇಳೇ । ಲಪಿಥಪೀ ॥೯॥ ಕಿಂಬಹುನಾ ಮಾಯಾ ಅಸೋಸ । ಜ್ಞಾನ ಜೇ ತುರ್ಝೇನಿ ಡೋಳಸ । ಅಸೋ ವಾನಣೇ ಸಾಯಾಸ । ಶ್ರುತೀಸೀ ಹೇ ॥೧೦॥ ವೇದ ವಾನೂನಿ ತಂವಚಿ ಚಾಂಗ । ಜಂವ ನ ದಿಸೇ ತುರ್ಝೇ ಆಂಗ । ಮಗ ಆಮ್ಹಾ ತಯಾ ಮೂಗ । ಏಕೇ ಪಾಂತೀ ॥೧೧॥ ಜೇ ಏಕಾರ್ಣವಾಚೇ ಠಾಈ । ಪಾಹತಾ ಥೇಂಬಾಚಾ ಪಾಡು ನಾಹೀ । ಮಾ ಮಹಾನದೀ ಕಾಈ । ಜಾಣಿಜತೀ ॥೧೨॥ ಕಾ ಉದಯಲಿಯಾ ಭಾಸ್ವತು । ಚಂದ್ರ ಜೈಸಾ ಖದ್ಯೋತು । ಆಮ್ಹಾ ಶ್ರುತಿ ತುಜ ಆಂತು । ತೋ ಪಾಡು ಅಸೇ ॥೧೩॥ ಆಣಿ ದುಜಯಾ ಥಾಂವೋ ಮೋಡೇ । ಜೇಥ ಪರೇಶೀ ವೈಖರೀ ಬುಡೇ । ತೋ ತೂ ಮಾ ಕೋಣೇ ತೋಂಡೇ । ವಾನಾವಾಸೀ ॥೧೪॥

# ಸಾರ್ಥ ಶ್ರೀಜ್ಞಾನೇಶ್ವರೀ

## ಹದಿನಾಲ್ಕನೆಯ ಅಧ್ಯಾಯ

ಹೇ, ಶ್ರೀಗುರುವೇ, ನೀವು ಸಕಲ ದೇವತೆಗಳಲ್ಲಿ ಶ್ರೇಷ್ಠರಿದ್ದು, ಆನಂದ ಮತ್ತು ಬುದ್ಧಿ ರೂಪ ಪ್ರಭೆಯನ್ನು ಉದಯಗೊಳಿಸುವ ಸೂರ್ಯನಾಗಿರುವಿರಿ, ನಿಮಗೆ ಜಯಜಯಕಾರವು ಇರಲಿ ।೧॥

ನೀವು ಎಲ್ಲರ ವಿಶ್ರಾಂತಿಸ್ಥಾನರಾಗಿದ್ದು, ಎಲ್ಲರ ಹೃದಯದಲ್ಲಿ ''ಅಹಂ ಬ್ರಹ್ಮ'' ಈ ತತ್ತ್ವವನ್ನು ನೀಡುವವರಿರುವಿರಿ ಹಾಗೂ ನೀವು ಸಮುದ್ರರೂಪರು, ನಿಮ್ಮಲ್ಲಿ ಹದಿನಾಲ್ಕು ಲೋಕಗಳೆಂಬ ತೆರೆಗಳು ಎಡತಾಕುವುವು. ನಿಮಗೆ ಜಯಜಯಕಾರವು ಇರಲಿ ।೨॥

ನೀವು ದೀನದಯಾಳುಗಳಾಗಿದ್ದು, ನಿರಂತರವಾಗಿ ಕರುಣೆಯ ಸಾಗರರಾಗಿರುವಿರಿ ಮತ್ತು ಅನುಭವದಿಂದ ಪ್ರೌಢವಾಗಿರುವ ಬ್ರಹ್ಮ ವಿದ್ಯಾರೂಪ ವಧುವಿಗೆ ಪ್ರಿಯಪತಿಯಾಗಿರುವವರೇ ಕೇಳಿರಿ ।೩॥

ನೀವು ಯಾವ ಜೀವಿಗಳಿಗಾಗಿ ಅಜ್ಞಾನದ ಆವರಣದಲ್ಲಿ ಅಡಗುವಿರೋ, ಅವರಿಗೆ ನೀವು ನಿಮ್ಮ ಸ್ವರೂಪದಲ್ಲಿ ಇಲ್ಲದ ಜಗತ್ತನ್ನು ತೋರಿಸುವಿರಿ ಮತ್ತು ಜ್ಞಾನಿಯರಿಗಾಗಿ ನೀವು ನಿಮ್ಮ ಸ್ವರೂಪವನ್ನು ಪ್ರಕಟಗೊಳಿಸುವಿರಿ. ಆಗ ಜಗದ ಪ್ರತೀತಿ ಅಸ್ತವಾಗಿ ನೀವೇ ಎಲ್ಲವೂ ಆಗುವಿರಿ ।೪॥

ಕಣ್ಣುಕಟ್ಟು ಆಟದಲ್ಲಿ ಗಾರುಡಿಯು ಬೇರೆಯವರ ದೃಷ್ಟಿಯನ್ನು ಹರಣಮಾಡಿದಂತೆ ಕಾಣುತ್ತದೆ, ಆದರೆ ಆತನಿಗೆ ಸ್ವತಃ ಅಡಗಲು ಬರುವುದಿಲ್ಲ. ಆದರೆ ನೀವು ಸ್ವತಃ ಅಡಗಿಕೊಳ್ಳುವ ನಿಮ್ಮ ಚಾತುರ್ಯವು ವಿಲಕ್ಷಣವಾಗಿದೆ ।೫॥

ಜೀಯಾ, ಈ ಸರ್ವ ಜಗತ್ತಿನಲ್ಲಿ ನೀವು ಕೆಲವರಿಗೆ ಜ್ಞಾನದ ಬೋಧ ಮಾಡುವಿರಿ ಮತ್ತು ಕೆಲವರಿಗೆ ಮಾಯೆಯ ಲೀಲೆಯಲ್ಲಿ ತೊಡಗಿಸುವಿರಿ. ಹೀಗೆ ನಿಮ್ಮ ಸಹಜವಾದ ಲೀಲೆಯಾಗಿರುವ ನಿಮಗೆ ನಮಸ್ಕಾರಗಳು ।೬॥

ಜಗತ್ತಿನಲ್ಲಿ ನೀರಿಗೆ ನಿಮ್ಮಿಂದಲೆ ಅದಕ್ಕೆ ರುಚಿ ಬಂದಿದೆ, ಮತ್ತು ಪೃಥ್ವಿಗೆ ಸಹಿಸುವ ಶಕ್ತಿ ಇರುವುದು, ಅದು ನಿಮ್ಮ ಶಕ್ತಿ ಕಾರಣವಾಗಿರುವುದು ।೭॥

ಚಂದ್ರ ಮತ್ತು ಸೂರ್ಯರು ಕೇವಲ ದೊಡ್ಡ ಸಿಂಪಿಯಂತೆ ನಿಸ್ತೇಜರಾಗಿರುವರು. ಆದರೆ ಅವರಿಂದ ಮೂರು ಲೋಕಗಳಿಗೂ ಪ್ರಕಾಶ ಬೀಳುವುದು, ಅದು ನಿಮ್ಮ ತೇಜಶಕ್ತಿಯ ಪ್ರಭಾವವಾಗಿರುವುದು ।೮॥

ಎಲ್ಲ ಕಡೆ ಬೀಸುವ ವಾಯುವು ನಿಮ್ಮ ಶಕ್ತಿಯಿಂದಲೇ ಚಲಿಸುವುದು. ಆಕಾಶವು ದೊಡ್ಡದಾಗಿ ಕಂಡರೂ, ಅದರ ಸಮಾವೇಶವೂ ನಿಮ್ಮಲ್ಲಿಯೇ ಆಗಿದ್ದು, ನಿಮ್ಮ ಒಂದು ಮೂಲೆಯಲ್ಲಿ ಅಡಗುವುದು ।೯॥

ಹೆಚ್ಚಿಗೇನು ಹೇಳಬೇಕು ? ಎಲ್ಲ ಮಾಯೆಯು ನಿಮ್ಮಲ್ಲಿದ್ದು, ಜ್ಞಾನವೂ ನಿಮ್ಮ ಶಕ್ತಿಯಿಂದ ಎಲ್ಲ ಕಡೆ ನೋಡುವುದು. ಇಷ್ಟೇ ಅಲ್ಲ, ನಿಮ್ಮ ಸ್ವರೂಪದ ಅಂತ ಕಾಣದೇ ಶ್ರುತಿಗಳಿಗೆ ವರ್ಣಿಸುವ ಶ್ರಮವಾಯಿತು ।೧೦॥

ವೇದವು ವರ್ಣಿಸುವುದರಲ್ಲಿ ಚತುರವು ನಿಜ, ಆದರೆ ನಿಮ್ಮ ದರ್ಶನವಾಗದವರೆಗೆ ನಿಮ್ಮ ವರ್ಣನೆ ಮಾಡಬಲ್ಲದು. ಆದರೆ ನಿಮ್ಮ ದರ್ಶನವಾದರೆ ಅದರ ಮತ್ತು ನಮ್ಮ ಗತಿಯು ಒಂದೇ ಆಗಿ ಸುಮ್ಮನೇ ಕುಳಿತುಕೊಳ್ಳಬೇಕಾಗುವುದು ।೧೧॥

ಎಲ್ಲವೂ ಜಲಮಯವಾದಾಗ ಹನಿಯ ಗಣತಿ ಮಾತ್ರ ಇರುವುದೇ ಇಲ್ಲ. ಹೋಗಲಿ, ದೊಡ್ಡ ನದಿಗಳನ್ನಾದರೂ ಕಂಡು ಹಿಡಿಯಲು ಬರುವುದೇ ? ।೧೨॥

ಅಥವಾ ಸೂರ್ಯೋದಯವಾದಾಗ ಚಂದ್ರನು ಬೆಂಕಿಹುಳ ಸಮನಾಗುವನು. ಅಂದಮೇಲೆ ಅದರಂತೆ ನನ್ನ ಮತ್ತು ಶ್ರುತಿಯ ಬೆಲೆ ಒಂದೇಯಾಗಿದೆ ।೧೩॥

ಮತ್ತು ಅಲ್ಲಿ ದ್ವೈತವು ಇಲ್ಲದಾಗಿ ಪರಾ ಸಹ ವೈಖರಿವಾಣಿಯೂ ಸ್ತಬ್ಧಗೊಳ್ಳುವುದು. ಆ ನಿಮ್ಮ ವರ್ಣನೆಯನ್ನು ಯಾವ ಮುಖದಿಂದ ಮಾಡಬೇಕು? ।೧೪॥

ಯಾಲಾಗೀ ಆತಾ । ಸ್ತುತಿ ಸಾಂಡೂನಿ ನಿವಾಂತಾ । ಚರಣೀ ಠೇವಿಜೇ ಮಾಥಾ । ಹೇಂಚಿ ಭಲೇ ।೧೫॥ ತರೀ ತೂ ಜೈಸಾ ಆಹಾಸಿ ತೈಸಿಯಾ । ನಮೋ ಜೀ ಶ್ರೀಗುರುರಾಯಾ । ಮಜ ಗ್ರಂಥೋದ್ಯಮು ಫಳಾವಯಾ । ವೇವ್ಹಾರಾ ಹೋಈ ।೧೬॥ ಆತಾ ಕೃಪಾಭಾಂಡ ವಲ ಸೋಡೀ । ಭರೀ ಮತಿ ಮಾಝೀ ಪೋತಡೀ । ಕರೀ ಜ್ಞಾನಪದ್ಯ ಜೋಡೀ । ಥೋರಾ ಮಾತೇ ।೧೭॥ ಮಗ ಮೀ ಸಂಸರೇನ ತೇಣೇ । ಕರೀನ ಸಂತಾಸೀ ಕರ್ಣಭೂಷಣೇ । ಲೇ ವವೀನ ಸುಲಕ್ಷಣೇ । ವಿವೇಕಾಚೀ ।೧೮॥ ಜೀ ಗೀತಾರ್ಥನಿಧಾನ । ಕಾಢೂ ಮಾಝೇ ಮನ । ಸುಯೀ ಸ್ನೇಹಾಂಜನ । ಆಪಲೇ ತೂ ।೧೯॥ ಹೇ ವಾಕ್ಸೃಷ್ಟಿ ಏಕೇ ವೇಳೇ । ದೇಖತು ಮಾಝೇ ಬುದ್ಧೀಚೇ ಡೋಳೇ । ತೈಸಾ ಉದ್ಯೆಜೋ ಜೀ ನಿರ್ಮಳೇ । ಕಾರುಣ್ಯ ಬಿಂಬೇ ।೨೦॥ ಮಾಝೀ ಪ್ರಜ್ಞಾವೇಲೀ ವೇಲ್ಹಾಳ । ಕಾವ್ಯೇಹೋಯ ಸಫಳ । ತೋ ವಸಂತು ಹೋಈ ಸ್ನೇಹಾಳ । ಶಿರೋಮಣೀ ।೨೧॥ ಪ್ರಮೇಯ ಮಹಾಪೂರೇ । ಹೇ ಮತಿಗಂಗಾ ಯೇ ಥೋರೇ । ತೈಸಾ ವರಿಷ ಉದಾರೇ । ದಿಠೀವೇನೀ ।೨೨॥ ಅಗಾ ವಿಶ್ವೈಕ ಧಾಮಾ । ತುಝಾ ಪ್ರಸಾದ ಚಂದ್ರಮಾ । ಕರೂ ಮಜ ಪೂರ್ಣಿಮಾ । ಸ್ಫೂರ್ತೀಚೀ ಜೀ ।೨೩॥ ಜೀ ಅವಲೋಕಿಲಿಯಾ ಮಾತೇ । ಉನ್ಮೇಷಸಾಗರೀ ಭರಿತೇ । ವೋಸಂಡೇಲ ಸ್ಫೂರ್ತೀತೇ । ರಸವೃತ್ತೀಚೇ ।೨೪॥ ತಂವ ಸಂತೋಷೋನಿ ಶ್ರೀಗುರುರಾಜೇ । ಮ್ಹಣಿತಲೇ ವಿನತಿವ್ಯಾಜೇ । ಮಾಂಡಿಲೇ ದೇಖೋನಿ ದುಜೇ । ಸ್ತವನಮಿಷೇ ।೨೫॥ ಹೇ ಅಸೋ ಆತಾ ವಾಂಜಟಾ । ತೋ ಜ್ಞಾನಾರ್ಥ ಕರೂನಿ ಗೋಮಟಾ । ಗ್ರಂಥು ದಾವೀ ಉತ್ಕಂಠಾ । ಭಂಗೋ ನೇದೀ ।೨೬॥ ಹೋ ಕಾ ಜೀ ಸ್ವಾಮೀ । ಹೇಂಚಿ ಪಾಹತ ಹೋತೋ ಮೀ । ಜೇ ಶ್ರೀಮುಖೇ ಮ್ಹಣಾ ತುಮ್ಹೀ । ಗ್ರಂಥು ಸಾಂಗ ।೨೭॥ ಸಹಜೇ ದುರ್ವೇಚಾ ಡಿರು । ಆಂಗೇಂಚಿ ತಂವ ಅಮರು । ವರೀ ಆಲಾ ಪೂರು । ಪೀಯೂಷಾಚಾ ।೨೮॥ ತರೀ ಆತಾ ಯೇಣೇ ಪ್ರಸಾದೇ । ವಿನ್ಯಾಸೇ ವಿದಗ್ಧೇ । ಮೂಳಶಾಸ್ತ್ರಪದೇ । ವಾಖಾಣೇನ ।೨೯॥ ಪರೀ ಜೀವಾ ಆಂತುಲೀಕಡೇ । ಜೈಸೀ ಸಂದೇಹಾಚೀ ಡೋಣೀ ಬುಡೇ । ನಾ ಶ್ರವಣೀ ತರೀ ಚಾಡೇ । ವಾಡೀ ದಿಸೇ ।೩೦॥ ತೈಸೀ ಬೋಲೀ ಸಾಚಾರೀ । ಅವತರೋ ಮಾಝೀ ಮಾಧುರೀ । ಮಾಲೇ ಮಾಗೂನಿ ಘರೀ । ಗುರುಕೃಪೇಚ್ಯಾ ।೩೧॥

ಆದ್ದರಿಂದ ಈಗ ನಿಮ್ಮ ಸ್ತುತಿ ಮಾಡುವುದನ್ನು ಬಿಟ್ಟು, ಮೂಕನಾಗಿ ನಿಮ್ಮ ಚರಣಗಳ ಮೇಲೆ ಮಸ್ತಕವಿಡುವುದು ಇದೇ ಉತ್ತಮ ಉಪಾಯವಾಗಿದೆ ।೧೫॥

ಅದಕ್ಕಾಗಿ ಹೇ ಗುರುರಾಯನೇ, ನೀವು ಹೇಗೆ ಇರುವಿರೋ, ಹಾಗೆಯೇ ನಾನು ನಿಮಗೆ ನಮಸ್ಕಾರ ಮಾಡುವೆನು. ನೀವು ನನ್ನ ಗೀತಾರ್ಥ ಕಥನರೂಪ ವ್ಯವಹಾರದಲ್ಲಿ ನನಗೆ ಲಾಭವಾಗುವಂತೆ, ನನ್ನ ಸಾಹುಕಾರರಾಗಿರುವಿರಿ ।೧೬॥

ಈಗ ನಿಮ್ಮ ಕೃಪೆರೂಪ ಭಾಂಡವಲ ಚೀಲವನ್ನು ಬಿಚ್ಚಿ, ನನ್ನ ಮತಿರೂಪ ಕೋಶದಲ್ಲಿ ತುಂಬಿರಿ ಮತ್ತು ನೀವು ದೊಡ್ಡವರು, ನನಗೆ ಜ್ಞಾನಪದದ ಲಾಭ ಮಾಡಿಕೊಡಿರಿ ।೧೭॥

ಆಗ ನಾನು ಈ ವ್ಯಾಪಾರದಲ್ಲಿ ಸಂಚರಿಸಿ ಸಂತರ ಕರ್ಣಗಳಲ್ಲಿ ಸುಂದರವಾದ ವಿವೇಕರೂಪ ಕರ್ಣಭೂಷಣಗಳನ್ನು ಸಿದ್ಧ ಮಾಡಿ ತೊಡಿಸುವೆನು ।೧೮॥

ಮಹಾರಾಜರೇ, ಗೀತಾರ್ಥರೂಪ ನಿಧಿಯನ್ನು ಹೊರಗೆ ತೆಗೆಯಬೇಕೆಂದು ನನ್ನ ಮನದಲ್ಲಿ ಇಚ್ಛೆಯಾಗಿದೆ. ಅದು ಸಿದ್ಧಿಗೊಳ್ಳಲು ನೀವು ನಿಮ್ಮ ಸ್ನೇಹರೂಪ ಅಂಜನವನ್ನು ನನ್ನ ಕಣ್ಣಿನಲ್ಲಿ ಹಾಕಿರಿ ।೧೯॥

ನನ್ನ ಬುದ್ಧಿರೂಪ ಕಣ್ಣುಗಳಿಗೆ ಒಂದು ಸಲ ಶಬ್ದಮಯ ಸೃಷ್ಟಿಯನ್ನು ಸ್ಪಷ್ಟವಾಗಿ ಕಾಣಿಸುವಂತೆ ನಿಮ್ಮ ಕಾರುಣ್ಯರೂಪ ಸೂರ್ಯಬಿಂಬದ ನಿರ್ಮಲವಾದ ಪ್ರಕಾಶ ಮಾಡಿರಿ ।೨೦॥

ನನ್ನ ಬುದ್ಧಿರೂಪ ಬಳ್ಳಿಯು ಬಹಳ ಬೆಳೆದು ಅದಕ್ಕೆ ಕಾವ್ಯರೂಪ ಫಲಗಳು ಬರಲು ಬಳ್ಳಿಗೆ ಪ್ರಫುಲ್ಲಿತವಾಗುವಂತೆ ಕೃಪೆ ಮಾಡುವುದರಲ್ಲಿ ಶ್ರೇಷ್ಠವಾದ ವಸಂತ ಋತು ನೀವಾಗಿರಿ ।೨೦॥

ನನ್ನ ಬುದ್ಧಿರೂಪ ಗಂಗಾನದಿಗೆ ಅರ್ಥ (ಸಿದ್ಧಾಂತ) ರೂಪ ಮಹಾಪೂರ ಬರುವಂತೆ,ನಿಮ್ಮ ಕೃಪಾದೃಷ್ಟಿ ಔದಾರ್ಯದ ಮಳೆಗರೆಯಿರಿ ।೨೨॥

ಹೇ ವಿಶ್ವೈಕಧಾಮನೇ,ನಿಮ್ಮ ಪ್ರಸಾದ ಚಂದ್ರಮನು ನನಗೆ ಸ್ಫೂರ್ತಿಯ ಪೌರ್ಣಿಮೆ ಮಾಡಲಿ. (ಪೂರ್ಣ ಚಂದ್ರೋದಯದಿಂದ ಪೌರ್ಣಿಮೆಯು ಶೋಭಿಸುವುದು ಅದರಂತೆ ನಿಮ್ಮ ಕೃಪೆಯಿಂದ ನನಗೆ ಪೂರ್ಣ ಸ್ಫೂರ್ತಿ ಬರಲಿ) ।೨೩॥

ಈ ಪೌರ್ಣಿಮೆಯನ್ನು ನಾನು ಅವಲೋಕನ ಮಾಡಿದರೆ, (ನಿಮ್ಮ ಕೃಪಾಪ್ರಸಾದವಾದರೆ) ಆಗ ನನ್ನ ಜ್ಞಾನ ಸಮುದ್ರಕ್ಕೆ ಭರತಿ ಬಂದೀತು, ಮತ್ತು ನವರಸಗಳಿಗೆ ಸ್ಫೂರ್ತಿ ಬಂದು ತುಂಬಿ ಚೆಲ್ಲ ಹತ್ತುವುವು ।೨೪॥

ಹೀಗೆ ಜ್ಞಾನೇಶ್ವರರ ಭಾಷಣವನ್ನು ಕೇಳಿ, ಶ್ರೀ ನಿವೃತ್ತಿನಾಥರು (ಗುರುರಾಜರು) ಸಂತೋಷಪಟ್ಟು ಹೇಳಿದರು:- ನೀನು ವಿನಂತಿ ಮತ್ತು ಸ್ತುತಿಯ ನಿಮಿತ್ತದಿಂದ ದ್ವೈತವನ್ನು ವ್ಯರ್ಥವಾಗಿ ಬೆಳೆಸುವೆ ।೨೫॥

ಆದರೆ, ಈಗ ಈ ವ್ಯರ್ಥವಾದ ಸ್ತುತಿ ಇರಲಿ, ಯಾವುದು ತಿಳಿಯುವ ವಿಷಯವಿದೆಯೋ, ಅದನ್ನು ಉತ್ತಮವಾಗಿ ಸಿದ್ಧ ಮಾಡಿ ಗ್ರಂಥವನ್ನು ಹೇಳು, ಉತ್ಕಂಠದ ಭಂಗವನ್ನು ಮಾಡದಿರು ।೨೬॥

ಆಗ ಜ್ಞಾನೇಶ್ವರರು ಹೇಳಿದರು:- ಸ್ವಾಮೀ, ನಿಮ್ಮ ಮುಖದಿಂದ ಗ್ರಂಥವನ್ನು ಹೇಳು ಎಂಬುವುದನ್ನೇ ನಾನು ದಾರಿ ಕಾಯುತ್ತಿದ್ದೆ ।೨೭॥

ಮೊದಲೇ ಕರಕಿಯ ಬೇರು ಅಮರವಾಗಿರುವುದು. ಅದರಲ್ಲಿ ಅದರ ಮೇಲೆ ಅಮೃತದ ಮಳೆಯಾದರೆ, ಆಗ ಏನು ಕೇಳುವುದು? ।೨೮॥

ಈಗ ಗುರುಪ್ರಸಾದವಾಗಿದ್ದಕ್ಕೆ ಗೀತೆಯಲ್ಲಿನ ಮೂಲ ಶಾಸ್ತ್ರದ ಪ್ರತ್ಯೇಕ ಪದವನ್ನು ಸವಿಸ್ತಾರವಾಗಿ ಮತ್ತು ಸ್ಪಷ್ಟವಾಗಿ ವರ್ಣನೆ ಮಾಡುವೆನು ।೨೯॥

ಇದನ್ನು ಕೇಳುವುದರಿಂದ ಮನದಲ್ಲಿನ ಎಲ್ಲ ಸಂಶಯಗಳು ಇಲ್ಲದಾಗುವುವು ಮತ್ತು ಶ್ರವಣದ ಇಚ್ಛೆಯು ಎರಡರಷ್ಟಾಗುವುದು ।೩೦॥

ನನ್ನ ವಾಣಿಯಿಂದ ಮಧುರವಾದ ಉತ್ತಮ ಶಬ್ದಗಳು ಹೊರಡಬೇಕು, ಇಷ್ಟೇ ನನ್ನ ಗುರುಗಳಲ್ಲಿ ಬೇಡಿಕೆಯಾಗಿರುವುದು ।೩೧॥

ತರೀ ಮಾಗಾ ತ್ರಯೋದಶೀ । ಅಧ್ಯಾಯೀ ಗೋಠೀ ಐಸೀ । ಶ್ರೀಕೃಷ್ಣ ಅರ್ಜುನೇಸೀ । ಚಾವಳಲೇ ।೩೨॥ ಜೇ ಕ್ಷೇತ್ರಕ್ಷೇತ್ರಜ್ಞ ಯೋಗೇ । ಹೋಈಜೇ ಯೇಣೇ ಜಗೇ । ಆತ್ಮಾ ಗುಣಸಂಗೇ । ಸಂಸಾರಿಯಾ ।೩೩॥ ಆಣಿ ಹಾಚಿ ಪ್ರಕೃತಿಗತು । ಸುಖದುಃಖ ಭೋಗೀ ಹೇತು । ಅಥವಾ ಗುಣಾತೀತು । ಕೇವಳು ಹಾ ।೩೪॥ ತರೀ ಕೈಸಾ ಪಾ ಅಸಂಗಾ ಸಂಗು । ಕೋಣ ತೋ ಕ್ಷೇತ್ರಕ್ಷೇತ್ರಜ್ಞಯೋಗು । ಸುಖದುಃಖಾದಿ ಭೋಗು । ಕೇವೀ ತಯಾ? ।೩೫॥ ಗುಣ ತೇ ಕೈಸೇ ಕಿತೀ । ಬಾಂಧತೀ ಕವಣೇ ರೀತೀ । ನಾತರೀ ಗುಣಾತೀತೀ । ಚಿನ್ಹೇ ಕಾಈ? ।೩೬॥ ಏವಂ ಇಯಾ ಆಘವೇಯಾ । ಅರ್ಥಾ ರೂಪ ಕರಾವಯಾ । ವಿಷೋ ಏಥ ಚೌದಾವಿಯಾ । ಅಧ್ಯಾಯಾಸೀ ।೩೭॥ ತರೀ ತೋ ಆತಾ ಐಸಾ । ಪ್ರಸ್ತುತ ಪರಿಯೇಸಾ । ಅಭಿಪ್ರಾಯೋ ವಿಶ್ವೇಶಾ । ವೈಕುಂಠಾಚಾ ।೩೮॥ ತೋ ಮ್ಹಣೇ ಗಾ ಅರ್ಜುನಾ । ಅವಧಾನಾಚೀ ಸರ್ವ ಸೇನಾ । ಮೇಳಊನಿ ಇಯಾ ಜ್ಞಾನಾ । ಝೋಂಬಾವೇ ಹೋ ! ।೩೯॥ ಆಮ್ಹೀ ಮಾಗಾ ತುಜ ಬಹುತೀ । ದಾವಿಲೇ ಹೇ ಉಪಪತ್ತೀ । ತರೀ ಆಝುನೀ ಪ್ರತೀತೀ । ಕುಶೀ ನ ನಿಘೇ ।೪೦॥

ಶ್ರೀಭಗವಾನುವಾಚ:-
ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್ ।
ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ ।೧॥

ಮ್ಹಣೌನಿ ಗಾ ಪುಢತೀ । ಸಾಂಗಿಜೈಲ ತುಜಪ್ರತೀ । ಪರ ಮ್ಹಣ ಮ್ಹಣೌನಿ ಶ್ರುತೀ । ಡಾಹಾರಿಲೇ ಜೇ ।೪೧॥ ಯೇರ್ಹವೀ ಜ್ಞಾನ ಹೇ ಆಪುಲೇ । ಪರೀ ಪರ ಐಸೇನಿ ಜಾಲೇ । ಜೇ ಆವಡೋನಿ ಘೇತಲೇ । ಭವಸ್ವರ್ಗಾದಿಕ ।೪೨॥ ಅಗಾ ಯಾಚಿ ಕಾರಣೇ । ಹೇ ಉತ್ತಮ ಸರ್ವಾಪರೀ ಮೀ ಮ್ಹಣೇ । ಜೇ ವನ್ಹಿ ಹೇ ತೃಣೇ । ಯೇರೇ ಜ್ಞಾನೇ ।೪೩॥ ಜಿಯೇ ಭವಸ್ವರ್ಗಾತೇ ಜಾಣತೀ । ಯಾಗಚಿ ಚಾಂಗ ಮ್ಹಣತೀ । ಪಾರಖೀ ಪುಢೀ ಆಥೀ । ಭೇದೀ ಜಯಾ ।೪೪॥ ತಿಯೇ ಆಘವೀಂಚಿ ಜ್ಞಾನೇ । ಕೇಲೀ ಏಣೇ ಸ್ವಪ್ನೇ । ಜೈಸಾ ವಾತೋರ್ಮೀ ಗಗನೇ । ಗಿಳಿಜತೀ ಅಂತೀ ।೪೫॥ ಕಾ ಉದಿತೇ ರಶ್ಮೀರಾಜೇ । ಲೋಪಿಲೀ ಚಂದ್ರಾದಿ ತೇಜೇ । ನಾನಾ ಪ್ರಳಯಾಂಬುಮಾಜೇ । ನದೀ ನದ ।೪೬॥ ತೈಸೇ ಯೇಣೇ ಪಾಹಲೇಯಾ । ಜ್ಞಾನಜಾತ ಜಾಯ ಲಯಾ । ಮ್ಹಣೌನಿಯಾ ಧನಂಜಯಾ । ಉತ್ತಮ ಹೇ ।೪೭॥

ಇರಲಿ, ಹಿಂದಿನ ಹದಿಮೂರನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಈ ರೀತಿಯಲ್ಲಿ ಕಥೆಯನ್ನು ಹೇಳಿದನು ।೩೨॥

ಅದೇನೆಂದರೆ, ಆತ್ಮ ಮತ್ತು ಪ್ರಕೃತಿ ಇವುಗಳ ಸಂಯೋಗದಿಂದ ಜಗವು ನಿರ್ಮಾಣವಾಗುತ್ತದೆ ಮತ್ತು ಗುಣಗಳ ಅನುರೋಧದಿಂದ ಆತ್ಮವು ಸಂಸಾರದಲ್ಲಿ ನಿಮಗ್ನ ವಾಗುವುದು ।೩೩॥

ಮಾಯೋಪಾಧಿಯಿಂದ ಇದಕ್ಕೆ ಸುಖದುಃಖ ಭೋಗಿಸ ಬೇಕಾಗುವುದು ಮತ್ತು ಅದುವೇ ಗುಣಸಂಗ ರಹಿತವಾದಾಗ ಮುಕ್ತವಾಗುವುದು ।೩೪॥

ಆದರೆ ಸಂಗರಹಿತ ಆತ್ಮನಿಗೆ ಪ್ರಕೃತಿಯ ಸಂಗ ಹೇಗಾ ಗುವುದು? ಆತ್ಮ ಮತ್ತು ಪ್ರಕೃತಿಯ ಸಂಯೋಗವಾಗುವುದು ಅದು ಯಾವುದು? ಆತನಿಗೆ ಸುಖ ದುಃಖಾದಿ ಭೋಗವು ಹೇಗಾಗುವುದು? ।೩೫॥

ಆ ಗುಣಗಳು ಹೇಗಿವೆ? ಮತ್ತು ಎಷ್ಟಿವೆ? ಆ ಗುಣಗಳ ಬಾಧೆಯು ಯಾವ ಪ್ರಕಾರವಾಗಿ ಆಗುವುವು? ಮತ್ತು ಪುರುಷನು ಗುಣಾತೀತನಾದರೆ ಆತನ ಲಕ್ಷಣಗಳೇನು? ।೩೬॥

ಈ ಪ್ರಕಾರವಾಗಿ ಈ ಎಲ್ಲ ಮಾತುಗಳ ವರ್ಣನೆ ಮಾ ಡುವುದೇ, ಈ ಹದಿನಾಲ್ಕನೆಯ ಅಧ್ಯಾಯವಾಗಿದೆ ।೩೭॥

ಆದರೆ ಈಗ ಈ ವೈಕುಂಠವಾಸಿ ವಿಶ್ವೇಶನ ಅಭಿಪ್ರಾಯ ವು ಏನಿದೆ ಎಂಬುವುದನ್ನು ಕೇಳಿರಿ ।೩೮॥

ಆತನು ಅಂದನು:- ಅರ್ಜುನಾ, ಶ್ರವಣ ಮಾಡುವ ಎಲ್ಲ ಸಾಮಗ್ರಿಗಳನ್ನು ಕೂಡಿಸಿ ನೀನು ಈ ಜ್ಞಾನಕ್ಕೆ ಅಪ್ಪಿ ಕೊಳ್ಳಬೇಕು. ಅಪ್ಪಾ! ।೩೯॥

ನಾವು ಈ ಹಿಂದೆ ನಿನಗೆ ಬಹಳ ಯುಕ್ತಿ ಪ್ರಯುಕ್ತಿ ಗಳಿಂದ ಈ ಜ್ಞಾನವನ್ನು ಸ್ಪಷ್ಟ ಮಾಡಿ ತೋರಿಸಿರುವೆವು. ಆದರೆ ಇನ್ನೂ ಅದು ನಿನ್ನ ಅನುಭವದ ಹೊಟ್ಟೆಯಲ್ಲಿ ಪ್ರವೇ ಶವಾಗಿಲ್ಲ ।೪೦॥

ಶ್ಲೋಕಾರ್ಥ :- ಭಗವಂತನು ಹೀಗೆಂದನು:- ಅರ್ಜುನಾ! ವಿಚಾರಪರರಾದ ಮುನಿಗಳು ಯಾವುದನ್ನು ತಿಳಿದು ಮೋಕ್ಷ ಸಿದ್ಧಿಯನ್ನು ಪಡೆದರೋ, ಜ್ಞಾನಗಳಲ್ಲಿ ಉತ್ತಮವಾದ ಆ ಜ್ಞಾನವನ್ನು ನಿನಗೆ ಪುನಃ ಹೇಳುತ್ತೇನೆ ಕೇಳು ।೧॥

ಆದ್ದರಿಂದ ಅಪ್ಪಾ, ''ಪರ'' ಈ ಶಬ್ದದ ಮಹಿಮೆ ಯನ್ನು ಶ್ರುತಿಯು ವರ್ಣನೆ ಮಾಡಿರುವುದು, ಅದನ್ನು ನಾವು ನಿನಗೆ ಪುನಃ ಹೇಳುವೆವು ।೪೧॥

ತನ್ನದೇ ಆತ್ಮಜ್ಞಾನಕ್ಕೆ ''ಪರ''ವೆಂದು ಹೇಳುವ ಕಾರಣ ವೇನೆಂದರೆ, ಸಂಸಾರ ಮತ್ತು ಸ್ವರ್ಗ, ಇವೇ ತಮಗೆ ಸ್ವರೂಪ ದಂತೆ ಪ್ರಿಯವಾಗಿವೆ ।೪೨॥

ಅರೇ, ಇದೇ ಕಾರಣಕ್ಕಾಗಿ ಆತ್ಮಜ್ಞಾನವು ಎಲ್ಲದ ಕ್ಕಿಂತಲೂ ಉತ್ತಮವಾಗಿದೆ ಎಂದು ನಾನು ಹೇಳುವೆನು. ಕಾರಣ ಇದು ಅಗ್ನಿರೂಪವಾಗಿದ್ದು, ಇತರ ಜ್ಞಾನಗಳು ಇದರ ಮುಂದೆ ಹುಲ್ಲಿನಂತಿರುವುವು ।೪೩॥

ಈ ಜ್ಞಾನವು ಮೃತ್ಯುಲೊಕ, ಸ್ವರ್ಗಲೊಕದ ಭೋಗಗ ಳನ್ನು ತಿಳಿಯುವುದು ಮತ್ತು ಯಜ್ಞಯಾಗಗಳು ಸರ್ವ ಭೋಗಕ್ಕಾಗಿ ಉತ್ತಮವೆನ್ನುವುವು ಮತ್ತು ಈ ಜ್ಞಾನವು ಭೇದ ವಿಷಯಕ್ಕೆ ಉತ್ತಮ ಪರೀಕ್ಷೆಯಾಗಿರುವುದು ।೪೪॥

ಈ ಎಲ್ಲ ಜ್ಞಾನಗಳು ಆತ್ಮಜ್ಞಾನದ ಮುಂದೆ ಸ್ವಪ್ನ ದಂತೆ ಭಾಸವಾಗುವುವು. ಗಗನದಲ್ಲಿ ಹುಟ್ಟಿದ ವಾಯುವು ಅದೆಷ್ಟು ದೊಡ್ಡದಾಗಿದ್ದರೂ, ಅದರ ಲಯವು ಅದರಲ್ಲಿಯೇ ಆಗುವುದು ।೪೫॥

ಅಥವಾ ಸೂರ್ಯನು ಉದಯನಾದ ಮೇಲೆ ಚಂದ್ರಾದಿ ನಕ್ಷತ್ರಗಳ ತೇಜವು ಲೋಪವಾಗುವುದು, ಹಾಗೂ ಪ್ರಳ ಯಕಾಲದ ಜಲವು ಬೆಳೆದಾಗ ಚಿಕ್ಕದೊಡ್ಡ ನದಿಗಳ ಭೇದವಿ ರುವುದಿಲ್ಲ ।೪೬॥

ಇದರಂತೆ ಆತ್ಮಜ್ಞಾನದ ಉದಯವಾಯಿತೆಂದರೆ ಇತರ ಎಲ್ಲ ಜ್ಞಾನಗಳು ಲಯಗೊಳ್ಳುವುವು. ಆದ್ದರಿಂದ ಅರ್ಜು ನಾ, ಇದಕ್ಕೆ ನಾವು ''ಉತ್ತಮ''ವೆಂದು ಹೇಳುವೆವು ।೪೭॥

ಅನಾದಿ ಜೇ ಮುಕ್ತತಾ । ಆಪುಲೀ ಅಸೇ ಪಂಡುಸುತಾ । ತೋ ಮೋಕ್ಷು ಹಾತಾ ಯೇತಾ । ಹೋಯ ಜೇಣೇ ।೪೮॥ ಜಯಾಚಿಯಾ ಪ್ರತೀತೀ । ವಿಚಾರವೀರೀ ಸಮಸ್ತೀ । ನೇದಿ ಜೇಚಿ ಸಂಸ್ಕೃತೀ । ಮಾಥಾ ಉಧಲೂ ।೪೯॥ ಮನೇ ಮನ ಘಾಲೂನಿ ಮಾಗೇ । ವಿಶ್ರಾಂತಿ ಜಾಲಿಯಾ ಆಂಗೇ । ತೇ ದೇಹೀ ದೇಹಾಜೋಗೇ । ಹೋತೀಚಿ ನಾ ।೫೦॥ ಮಗ ತೇ ದೇಹಾಚೇ ಬೇಳೇ । ವೋಲಾಂಡೂನಿ ಏಕೇಚಿ ವೇಳೇ । ಸಂವತುಕೀ ಕಾಂಟಾಳೇ । ಮಾಝೇ ಜಾಲೇ ।೫೧॥

ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।
ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ।೨॥

ಜೇ ಮಾಝಿಯಾ ನಿತ್ಯತಾ । ತೇಣೇ ನಿತ್ಯ ತೇ ಪಂಡುಸುತಾ । ಪರಿಪೂರ್ಣ ಪೂರ್ಣತಾ । ಮಾಝಿಯಾಚೇ ।೫೨॥ ಮೀ ಜೈಸಾ ಅನಂತಾನಂದು । ಜೈಸಾಚಿ ಸತ್ಯಸಿಂಧು । ತೈಸೇಚಿ ತೇ ಭೇದು । ಉರೇಚಿ ನಾ ।೫೩॥ ಜೇ ಮೀ ಜೇವಢೇ ಜೈಸೇ । ತೇಂಚಿ ತೇ ಜಾಲೇ ತೈಸೇ । ಘಟಭಂಗೀ ಘಟಾಕಾಶೇ । ಆಕಾಶ ಜೇವೀ ।೫೪॥ ನಾತರೀ ದೀಪಮೂಳಕೀ । ದೀಪಶಿಖಾ ಅನೇಕೀ । ಮೀನಲಿಯಾ ಅವಲೋಕೀ । ಹೋಯ ಜೈಸೇ ।೫೫॥ ಅರ್ಜುನಾ ತಯಾಪರೀ । ಸರಲೀ ದ್ವೈತಾಚೀ ವಾರೀ । ನಾಂದೇ ನಾಮಾರ್ಥ ಏಕಾಹಾರೀ । ಮೀತೂವಿಣ ।೫೬॥ ಯೇಣೇಂಚಿ ಪೈ ಕಾರಣೇ । ಜೈ ಪಹಿಲೇ ಸೃಷ್ಟೀಚೇ ಜುಂಪಣೇ । ತೇಂಹೀ ತಯಾ ಹೋಣೆ ಪಡೇಚಿನಾ।೫೭॥ ಸೃಷ್ಟೀಚಿಯೇ ಸರ್ವಾದೀ । ಜಯಾ ದೇಹಾಚೀ ನಾಹೀ ಬಾಂಧೀ । ತೇ ಕೈಚೇ ಪ್ರಳಯಾವಧೀ । ನಿಮತೀಲ ಪಾ? ।೫೮॥ ಮ್ಹಣೌನಿ ಜನ್ಮಕ್ಷಯಾ । ಅತೀತ ತೇ ಧನಂಜಯಾ । ಮೀ ಜಾಲೇ ಜ್ಞಾನಾ ಇಯಾ ! ಅನುಸರೋನೀ ।೫೯॥ ಐಸೀ ಜ್ಞಾನಾಚೀ ವಾಢೀ । ವಾನಿಲೀ ದೇವೇ ಆವಡೀ । ತೇವೀಂಚಿ ಪಾರ್ಥಾಹೀ ಗೋಡೀ । ಲಾವಾವಯಾ ।೬೦॥ ತಂವ ತಯಾ ಜಾಲೇ ಆನ । ಸರ್ವಾಂಗೀ ನಿಘಾಲೇ ಕಾನ । ಸಪಾಈ ಅವಧಾನ । ಆತಲಾ ಪಾ ।೬೧॥ ಆತಾ ದೇವಾಚಿಯಾ ಐಸೇ । ಜಾಕಳೀಜತ ಅಸೇ ವೋರಸೇ । ಜೇ ನಿರೂಪಣ ಆಕಾಶೇ । ವೇಂಟಾಳೇನಾ ।೬೨॥ ಮಗ ಮ್ಹಣೇ ಗಾ ಪ್ರಜ್ಞಾಕಾಂತಾ । ಉಜವಲೀ ಆಜಿ ವಕ್ತೃತ್ವತಾ । ಜೇ ಬೋಲಾಯೇವಢಾ ಶ್ರೋತಾ । ಜೋಡಲಾಸೀ ।೬೩॥ ತರೀ ಏಕು ಮೀ ಅನೇಕೀ । ಗೋವಿಜೇ ದೇಹಪಾಶಕೀ । ತ್ರಿಗುಣೇ ಲುಬ್ಧಕೀ । ಕವಣೇಪರೀ ।೬೪॥

ಹೇ ಪಂಡುಸುತನೇ, ಅನಾದಿ ಕಾಲದಿಂದಲೂ ತನ್ನಲ್ಲಿ ಸಹಜವಾಗಿರುವ ತನ್ನ ಮುಕ್ತತೆ ಅಥವಾ ಮೋಕ್ಷವು ಈ ಜ್ಞಾನದ ಪ್ರಾಪ್ತಿಯಿಂದ ತನ್ನ ಹಸ್ತಗತವಾಗುವುದು ।೪೮॥

ಇದರ ಅನುಭವ ಬಂದರೆ ಎಲ್ಲ ಜ್ಞಾನಿಗಳು ಸಂಸಾರಕ್ಕೆ ತಲೆಯನ್ನು ಮೇಲಕ್ಕೆ ಎತ್ತಿ ನೋಡುವುದಿಲ್ಲ ।೪೯॥

ತನ್ನ ಮನವು ವಿಷಯದತ್ತ ಹರಿದಾಡುವುದನ್ನು ಹಿಂದಕ್ಕೆ ಸರಿಸಿ ಅದನ್ನು ಇದ್ದಲ್ಲಿಯೇ ಕೂಡ್ರಿಸುವುದರಿಂದ ವಿಶ್ರಾಂತಿಯು ಪ್ರಾಪ್ತವಾಗುವುದು. ಹೀಗಾದ ಮೇಲೆ ಆತನು ದೇಹದಲ್ಲಿದ್ದರೂ ಇಲ್ಲದಂತಾಗುವನು ।೫೦॥

ತದನಂತರ ಸ್ಥೂಲ ಸೂಕ್ಷ್ಮಗಳೆಂಬ ದೇಹದ್ವಯಗಳ ಕವಲುಗಳನ್ನು ಒಮ್ಮಿಂದೊಮ್ಮೆಲೆ ದಾಟಿ ನನ್ನದೇ ಯೋಗ್ಯತೆಗೆ ಪ್ರಾಪ್ತರಾಗುವರು ।೫೧॥

ಶ್ಲೋಕಾರ್ಥ :- ಈ ಜ್ಞಾನವನ್ನು ಆಶ್ರಯಿಸಿ ನನ್ನ ಸಮಾನತ್ವವನ್ನು ಪಡೆದ ಆ ಮುನಿಗಳು ಸೃಷ್ಟಿಯಲ್ಲಿ ಹುಟ್ಟುವುದಿಲ್ಲ; ಪ್ರಳಯದಲ್ಲಿ ಸಾಯುವುದಿಲ್ಲ ।೨॥

ಕಾರಣ ಅರ್ಜುನಾ, ಇವರು ನನ್ನ ನಿತ್ಯತೆಯಿಂದ ನಿತ್ಯರಾಗಿರುವರು ಮತ್ತು ನನ್ನ ಪರಿಪೂರ್ಣತೆಯಿಂದ ಪೂರ್ಣರಾಗಿರುವರು ।೫೨॥

ಮತ್ತು ಯಾವ ಪ್ರಕಾರವಾಗಿ ನಾನು ಯಾವ ರೀತಿಯಲ್ಲಿ ಸದಾವಕಾಲದಲ್ಲಿ ಅನಂತನಾಗಿದ್ದು, ಆನಂದ ರೂಪನಾಗಿರುವೆನೋ, ಮತ್ತು ಸತ್ಯಸಿದ್ಧನಾಗಿರುವೆನೋ, ಹಾಗೆಯೇ ಅವರು ಇರುವರು. ಅವರಲ್ಲಿ ಮತ್ತು ನನ್ನಲ್ಲಿ ಮೂಲತಃ ಭೇದವಿರುವುದಿಲ್ಲ ।೫೩॥

ಯಾವ ಪ್ರಕಾರವಾಗಿ ಘಟದ ನಾಶವಾದ ಮೇಲೆ ಘಟಾಕಾಶವು ಮಹಾಕಾಶರೂಪವಾಗುವುದೋ, ಅದರಂತೆ ನಾನು ಹೇಗೆ, ಎಷ್ಟಿರುವೆನೋ, ಅವರು ಹಾಗೆಯೇ ಆಗುವರು ।೫೪॥

ಅಥವಾ ಮೂಲ ದೀಪದಿಂದ ಹಚ್ಚಿದ ಅನೇಕ ದೀಪದ ಬತ್ತಿಗಳನ್ನು ಒಂದೆಡೆ ಸೇರಿಸಿದರೆ ಅವುಗಳ ತೇಜವು ಮೂಲ ದೀಪದಲ್ಲಿಯೇ ಕೂಡುವುದು ।೫೫॥

ಅದರಂತೆ ಅರ್ಜುನಾ, ದ್ವೈತಭಾವವು ಇಲ್ಲದಂತಾಗಿ ನಾನು ಮತ್ತು ನೀನು ಎಂಬ ಈ ಭೇದವು ಒಂದೇ ಪಂಕ್ತಿಯಲ್ಲಿ ಕುಳಿತುಕೊಂಡು ಒಂದೆಡೆ ವ್ಯವಹರಿಸುವುವು ।೫೬॥

ಇದೇ ಕಾರಣದಿಂದ, ಯಾವ ವೇಳೆಯಲ್ಲಿ ಸೃಷ್ಟಿಯ ಆರಂಭವಾಗುವುದೋ, ಆಗ ಆತನಿಗೆ ಜನ್ಮವನ್ನು ಧರಿಸಬೇಕಾಗುವುದಿಲ್ಲ ।೫೭॥

ಅಂದಮೇಲೆ ಯಾರಿಗೆ ಸೃಷ್ಟಿಯ ಉತ್ಪತ್ತಿಯ ಸಂಗಡ ಜನ್ಮವನ್ನು ಎತ್ತಬೇಕಾಗಿಲ್ಲವೋ, ಅವರಿಗೆ ಪ್ರಳಯಕಾಲದಲ್ಲಿ ನಾಶವೆಲ್ಲಾಗಬೇಕು? ।೫೮॥

ಆದ್ದರಿಂದ ಧನಂಜಯನೇ, ಯಾರು ಆತ್ಮಜ್ಞಾನಕ್ಕೆ ಅನುಸರಿಸಿಕೊಂಡು ಮದ್ರೂಪರಾಗಿರುವರೋ, ಅವರು ಜನ್ಮ ಮರಣಾತೀತರಾಗಿರುವರು ।೫೯॥

ಈ ಪ್ರಕಾರವಾಗಿ ಆತ್ಮಜ್ಞಾನದ ಹಿರಿಮೆಯನ್ನು ದೇವನು ತನ್ನ ಪ್ರೀತಿಯಿಂದ ವರ್ಣಿಸಿದನು ಮತ್ತು ಅರ್ಜುನನಿಗೂ ಆ ಜ್ಞಾನದ ಇಚ್ಛೆ ಹುಟ್ಟಬೇಕೆಂದು ತಿಳಿದು ಇದರ ಮಹಿಮೆಯನ್ನು ವರ್ಣಿಸಿದನು ।೬೦॥

ಆಗ ಅರ್ಜುನನ ಸ್ಥಿತಿಯು ಹೇಗಾಯಿತೆಂದರೆ, ಆತನ ಸರ್ವಾಂಗಕ್ಕೂ ಕಿವಿಗಳು ಹುಟ್ಟಿಕೊಂಡವು. ಅಂದರೆ ನಖಶಿಖಾಂತದಲ್ಲಿ ಅವಧಾನ ರೂಪನಾದನು ।೬೧॥

ಆಕಾಶವೂ ಆವರಿಸಲಾರದಂತಹ ತನ್ನ ಮಾತುಗಳನ್ನು ಅರ್ಜುನನು ಧಾರಣೆ ಮಾಡುತ್ತಿರುವುದನ್ನು ಕಂಡು ದೇವನಿಗೂ ಪ್ರೇಮವು ಉಕ್ಕೇರಿ ಬಂದಿತು ।೬೨॥

ಆಗ ದೇವನೆಂದನು:- ಅರ್ಜುನಾ, ನನ್ನ ವಕ್ತೃತ್ವ ರೂಪದ ಕನ್ಯೆಗೆ ನೀನು ಬುದ್ಧಿರೂಪ ವರ ಸಿಕ್ಕಿದ್ದಕ್ಕೆ ಅದು ಇಂದು ಬೆಳಗಿತು. ಕಾರಣ ನನ್ನ ಹೇಳುವಿಕೆಯ ಉತ್ಸಾಹದಂತೆ ನೀನು ಉತ್ತಮ ಶ್ರೋತೃ ಸಿಕ್ಕಿರುವೆ ।೬೩॥

ಹಾಗಾದರೆ ಈಗ ನಾನು ಒಬ್ಬನೇ ಇದ್ದು, ತ್ರಿಗುಣ ರೂಪ ಬೇಟೆಗಾರನು ದೇಹರೂಪವಾದ ಬಲೆಯನ್ನು ಹಾಕಿ ನನಗೆ ಅನೇಕ ರೂಪಗಳನ್ನು ಧರಿಸಲು ಹೇಗೆ ಹಚ್ಚುವನು? ।೬೪॥

ಕೈಸಾ ಕ್ಷೇತ್ರಯೋಗೇ। ವಿಯೇ ಇಯೇ ಜಗೇ । ತೇ ಪರಿಸ ಸಾಂಗೇ । ಕವಣೇಪರೀ ।೬೫॥ ಪೈ ಕ್ಷೇತ್ರ ಯೇಣೇ ವ್ಯಾಜೇ । ಯಾಲಾಗೀ ಹೇ ಬೋಲಿಜೇ । ಜೇ ಮತ್ಸಂಗಬೀಜೇ । ಭೂತೀ ಪಿಕೇ ।೬೬॥

ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ ।
ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ।೩॥

ಯೇರ್ಧ್ವವೀ ತರೀ ಮಹದ್‌ಬ್ರಹ್ಮ । ಯಾಲಾಗೀ ಹೇ ಐಸೇ ನಾಮ । ಜೇ ಮಹದಾದಿ ವಿಶ್ರಾಮ । ಶಾಲಿಕಾ ಹೇ ।೬೭॥ ವಿಕಾರಾ ಬಹುವಸ ಥೋರೀ । ಅರ್ಜುನಾ ಹೇಂಚಿ ಕರೀ । ಮ್ಹಣೌನಿ ಅವಧಾರೀ । ಮಹದ್‌ಬ್ರಹ್ಮ ।೬೮॥ ಅವ್ಯಕ್ತ ವಾದಮತೀ । ಅವ್ಯಕ್ತ ಐಸಿ ವದಂತೀ । ಸಾಂಖ್ಯಾಚಿಯಾ ಪ್ರತೀತೀ । ಪ್ರಕೃತಿ ಹೇಚಿ ।೬೯॥ ವೇದಾಂತೀ ಇಯೇ ತೇ ಮಾಯಾ । ಐಸೇ ಮ್ಹಣಿಜೇ ಪ್ರಾಜ್ಞರಾಯಾ । ಅಸೋ ಕಿತೀ ಬೋಲೋ ವಾಯಾ । ಅಜ್ಞಾನ ಹೇ ।೭೦॥ ಆಪಲಾ ಆಪಣಪೇಯಾ । ವಿಸರು ಜೋ ಧನಂಜಯಾ । ತೇಂಚಿ ರೂಪ ಯಯಾ । ಅಜ್ಞಾನಾಸೀ ।೭೧॥ ಆಣಿಕಹೀ ಏಕ ಅಸೇ । ಜೇ ವಿಚಾರಾವೇಳೀ ನ ದಿಸೇ । ವಾತೀ ಪಾಹತಾ ಜೈಸೇ । ಅಂಧಾರೇ ಕಾ ।೭೨॥ ಹಾಲವಿಲಿಯಾ ಜಾಯ । ನಿಶ್ಚಳೀ ತರೀ ಹೋಯ। ದುಧೀ ಜೈಸೀ ಸಾಯ । ದುಧಾಚೀ ತೇ ।೭೩॥ ಪೈ ಜಾಗರು ನಾ ಸ್ವಪ್ನ । ನಾ ಸ್ವರೂಪ ಅವಸ್ಥಾನ । ತೇ ಸುಷುಪ್ತೀ ಕಾ ಘನ । ಜೈಸೀ ಹೋಯ ।೭೪॥ ಕಾ ನ ವಿಯತಾ ವಾಯೂತೇ । ವಾಂಝೋ ಆಕಾಶ ರಿತೇ । ತಯಾ ಐಸೇ ನಿರುತೇ । ಅಜ್ಞಾನ ಗಾ ।೭೫॥ ಪೈಲ ಖಾಂಬ ಕಾ ಪುರುಖು । ಐಸಾ ನಿಶ್ಚಯೋ ನಾಹೀ ಏಕು । ಪರಿ ಕಾಯ ನೇಣೋ ಆಲೋಕು । ದಿಸತ ಅಸೇ ।೭೬॥ ತೇವೀ ವಸ್ತು ಜೈಸೀ ಅಸೇ । ತೈಸೀ ಕೀರ ನ ದಿಸೇ । ಪರೀ ಕಾಂಹೀ ಅನಾರಿಸೇ । ದೇಖಿಜೇನಾ ।೭೭॥ ನಾ ರಾತೀ ನಾ ತೇಜ । ತೇ ಸಂಧಿ ಜೇವೀ ಸಾಂಜ । ತೇವೀ ವಿರುದ್ಧ ನಾ ನಿಜ । ಜ್ಞಾನ ಆಥೀ ।೭೮॥ ಐಸೀ ಕೋಣ್ಹೀ ಏಕೀ ದಶಾ । ತಿಯೇ ವಾದು ಅಜ್ಞಾನ ಐಸಾ । ತಯಾ ಗುಂಡಲಿಯಾ ಪ್ರಕಾಶಾ । ಕ್ಷೇತ್ರಜ್ಞು ನಾಮ ।೭೯॥ ಅಜ್ಞಾನ ಥೋರಿಯೇ ಆಣಿಜೇ । ಆಪಣಪೇ ತರೀ ನೇಣಿಜೇ । ತೇ ರೂಪ ಜಾಣಿಜೇ । ಕ್ಷೇತ್ರಜ್ಞಾಚೇ ।೮೦॥ ಹಾಚಿ ಉಭಯ ಯೋಗು । ಬುಝೋ ಬಾಪಾ ಚಾಂಗು । ಸತ್ತೇಚಾ ನೈಸರ್ಗು । ಸ್ವಭಾವೋ ಹಾ ।೮೧॥ ಆತಾ ಅಜ್ಞಾನಾಸಾರಿಖೇ । ವಸ್ತು ಆಪಣಪಾಂಚಿ ದೇಖೇ । ಪರೀ ರೂಪೇ ಅನೇಕೇ । ನೇಣೋ ಕೋಣೇ ।೮೨॥

ಮತ್ತು ಮಾಯೆಯ ಉಪಾಧಿಯಿಂದ ನನ್ನಿಂದ ಈ ಜಗತ್ತು ಹೇಗೆ ಉತ್ಪನ್ನವಾಗುತ್ತದೆ, ಎಂಬುವುದನ್ನು ಹೇಳುವೆ ಕೇಳು ।೬೫॥

ಇಲ್ಲಿ ನೋಡು, ನನ್ನ ಸಂಗರೂಪ ಬೀಜದಿಂದ ಪ್ರಾಣಿ ಮಾತ್ರರು ಉತ್ಪನ್ನರಾಗುವರು. ಇದೇ ಕಾರಣದಿಂದ ಪ್ರಕೃತಿ ಗೆಕ್ಷೇತ್ರವೆಂದು ಹೇಳಬೇಕಾಯಿತು ।೬೬॥

ಶ್ಲೋಕಾರ್ಥ :- ಹೇ ಅರ್ಜುನಾ! ಪ್ರಕೃತಿ ನನಗೆ ಪ್ರವೇಶಸ್ಥಾನ, ಅದರಲ್ಲಿ ನಾನು ಗರ್ಭ ಬೀಜವನ್ನು ಇಡುತ್ತೇನೆ. ಅದರಿಂದ ಸಮಸ್ತ ಭೂತಗಳೂ ಉತ್ಪನ್ನ ವಾಗುತ್ತವೆ ।೩॥

ಸಾಮಾನ್ಯವಾಗಿ ಈ ಮಾಯೆಗೆ ''ಮಹದ್‌ಬ್ರಹ್ಮ'' ಹೀಗೆ ಹೆಸರು. ಏಕೆಂದರೆ ಮಾಯಾ ಮಹತತ್ತ್ವ, ಅಹಂಕಾರ, ಪಂಚತನ್ಮಾತ್ರೆ, ಪಂಚಭೂತಗಳು, ಇವುಗಳೆಲ್ಲವೂ ವಿಶ್ರಾಂತಿ ಪಡೆಯುವ ದೊಡ್ಡ ವಿಸ್ತಾರವಾದ ಧರ್ಮಶಾಲೆಯಾಗಿದೆ ।೬೭॥

ಹಾಗೆಯೇ ಅರ್ಜುನಾ, ಇದರಿಂದ ವಿಕಾರಗಳು ಮತ್ತು ಗುಣಗಳು ವೃದ್ಧಿಯಾಗುವುವು. ಆದ್ದರಿಂದ ಇದು ''ಮಹದ್ ಬ್ರಹ್ಮ''ವೆಂದು ಕರೆಯಲ್ಪಟ್ಟದೆ ।೬೮॥

ಅವ್ಯಕ್ತ ಮತವಾದಿಗಳ ಮತದಂತೆ ಇದಕ್ಕೆ ''ಅವ್ಯಕ್ತ'' ವೆಂದು ಹೆಸರಿದೆ ಮತ್ತು ಸಾಂಖ್ಯಮತವಾದಿಗಳು ಇದಕ್ಕೆ ''ಪ್ರಕೃತಿ'' ಎನ್ನುವರು ।೬೯॥

ಹೇ ಪ್ರಾಜ್ಞ ಶಿರೋಮಣಿಯೇ, ವೇದಾಂತಿಯರು ಇದಕ್ಕೆ ''ಮಾಯಾ'' ಎಂದು ಕರೆಯುವರು. ಇರಲಿ, ಸುಮ್ಮನೇ ಹೆಚ್ಚಿಗೇನು ಹೇಳಬೇಕು? ಅಜ್ಞಾನವು ಇದೇಯಾಗಿದೆ ।೭೦॥

ಹೇ ಧನಂಜಯನೇ, ತನ್ನ ಆತ್ಮಸ್ವರೂಪದ ಮರುವು ತನಗೆ ಆಗುವುದೇ ಈ ಅಜ್ಞಾನದ ರೂಪವು ।೭೧॥

ಇನ್ನೊಂದು ಏನಿದೆಯೆಂದರೆ, ಕೈಯಲ್ಲಿ ದೀಪವನ್ನು ಹಿಡಿದು ಕತ್ತಲೆಯನ್ನು ಶೋಧಿಸಹತ್ತಿದರೆ, ಅದು ಕಾಣಿಸು ವುದಿಲ್ಲ. ಅದರಂತೆ ಆತ್ಮಸ್ವರೂಪದ ವಿಚಾರ ಮಾಡಿದಲ್ಲಿ ಅದು (ಮಾಯೆ) ಕಾಣಿಸದಾಗುವುದು ।೭೨॥

ಹಾಲನ್ನು ತಿರುವುತ್ತ ಕುಳಿತರೆ ಅದರಲ್ಲಿ ಕೆನೆಯು ಬರಲಾರದು. ಅದನ್ನೇ ತಿರುವುದನ್ನು ಬಿಟ್ಟಲ್ಲಿ ಅದರ ಮೇಲೆ ಕೆನೆಯು ಬರುವುದು ।೭೩॥

ಅಥವಾ ಮನುಷ್ಯನು ಜಾಗೃತಾವಸ್ಥೆ ಅಲ್ಲದ, ಸ್ವಪ್ನಾವಸ್ಥೆ ಅಲ್ಲದ ಇಲ್ಲವೇ ಸಮಾಧಿ ಅವಸ್ಥೆ ಅಲ್ಲದ ವೇಳೆಯಲ್ಲಿ ಆತನಿಗೆ ಗಾಢವಾದ ನಿದ್ರೆ ಹತ್ತುವುದು ।೭೪॥

ಅಥವಾ ವಾಯುವು ಉತ್ಪನ್ನವಾಗದಿದ್ದಲ್ಲಿ ಯಾವ ಪ್ರಕಾರವಾಗಿ ಆಕಾಶವು ಮಾತ್ರ ಒಂದೇ ಇರುವುದೋ, ಅದರಂತೆ ಇತರ ಅವಸ್ಥೆಗಳ ಹೊರತಾದ ಸ್ವಸ್ಥವಾದ ನಿದ್ರಾವಸ್ಥೆಯು ಇದೇ ಅಜ್ಞಾನವಾಗಿರುವುದು ।೭೫॥

ಆಚೆಯಲ್ಲಿ ಕಾಣುವ ವಸ್ತುವು ಕಂಭವೋ ಅಥವಾ ಪುರುಷನೋ, ಯಾವುದೂ ಸರಿಯಾಗಿ ಕಾಣಿಸುವುದಿಲ್ಲ, ಆದರೆ ಏನಾದರೊಂದು ಕಾಣಿಸುತ್ತದೆ. ಹೀಗೆ ಭಾಸವಾಗು ವುದು ।೭೬॥

ಅದರಂತೆ ಆತ್ಮದ ನಿಪ್ಪಳ ಸ್ವರೂಪವು ಯಾವ ವೇಳೆ ಯಲ್ಲಿ ನಿಜವಾಗಿಯೂ ಕಾಣಿಸುವುದಿಲ್ಲ ಮತ್ತು ಬೇರೆ ಯಾವು ದಾದರೂ ಇದೆ ಎನ್ನುವುದಾದರೂ ನಿಶ್ಚಯವಾಗುವುದಿಲ್ಲ ।೭೭॥

ರಾತ್ರಿಯೂ ಅಲ್ಲ, ಹಗಲೂ ಅಲ್ಲ, ಈ ಎರಡರ ಸಂಧಿ ಯಲ್ಲಿ ಹೇಗೆ ಸಾಯಂಕಾಲವೆನ್ನುವರೋ, ಅದರಂತೆ ಆತ್ಮ ಮತ್ತು ಜಗತ್ ಇವುಗಳ ಜ್ಞಾನದ ಅಭಾವದ ಸ್ಥಿತಿಗೆ ಅಜ್ಞಾನವೆಂದು ಹೇಳುವರು ।೭೮॥

ಹೀಗೆ ಈ ಒಂದು, ಎರಡರ ಮಧ್ಯದ ಅನಿರ್ವಚನೀಯ ಸ್ಥಿತಿಗೆ ''ಅಜ್ಞಾನ''ವೆಂದು ಹೇಳುತ್ತಾರೆ ಮತ್ತು ಈ ಅಜ್ಞಾನದಿಂದ ಆವರಿಸಿದ ಚೈತನ್ಯಕ್ಕೆ ''ಕ್ಷೇತ್ರಜ್ಞ''ವೆಂದು ಹೇಳುತ್ತಾರೆ ।೭೯॥

ತನ್ನ ಶುದ್ಧ ಸ್ವರೂಪವನ್ನು ತಿಳಿಯದೇ ಯಾವ ಅಜ್ಞಾನವು ಬೆಳೆಯುವುದೋ, ಅದು ಕ್ಷೇತ್ರಜ್ಞ (ಜೀವಾತ್ಮಾ) ರೂಪವಾಗಿರುವುದು ।೮೦॥

ಈ ಮಾಯೆ ಮತ್ತು ಚೈತನ್ಯ ಇವುಗಳನ್ನು ಸರಿಯಾಗಿ ಲಕ್ಷದಲ್ಲಿ ತರಬೇಕು. ಕಾರಣ ಮೂಲಸ್ವರೂಪದಲ್ಲಿ ಮಾಯೆಯ ಸ್ವಭಾವವೇ ಹೀಗಿರುವುದು ।೮೧॥

ಈಗ ವಸ್ತು (ತಾನು) ತನ್ನ ಅಜ್ಞಾನದಂತೆ (ಅಂದರೆ ದೃಶ್ಯತ್ವದಿಂದ ಮತ್ತು ನಾನಾತ್ವದಿಂದ) ನೋಡುವನು. ಆದರೆ ಯಾವುದು (ಎಷ್ಟು) ಅನೇಕ ರೂಪದಿಂದ ನೋಡುವನೋ ತಿಳಿಯದು ।೮೨॥

ಜೈಸಾ ರಂಕು ಭ್ರಮಲಾ । ಮ್ಹಣೇ ಜಾರೇ ಮೀ ರಾವೋ ಆಲಾ । ಕಾ ಮೂರ್ಛಿತು ಗೇಲಾ । ಸ್ವರ್ಗಲೋಕಾ ।೮೩॥ ತೇವಿ ಲಚಕಲಿಯಾ ದಿಠೀ । ಮಗ ದೇಖಣೇ ಜೇ ಜೇ ಉಠೀ । ತಯಾ ನಾಮ ಸೃಷ್ಟೀ । ಮೀಚಿ ವಿಯೇ ಪೈ ಗಾ ।೮೪॥ ಜೈಸೇ ಕಾ ಸ್ವಪ್ನ ಮೋಹಾ । ತೋ ಏಕಾಕೀ ದೇಖೇ ಬಹುವಾ । ತೋಚಿ ಪಾಡು ಆತ್ಮ ಯಾ । ಸ್ಮರಣೇವೀಣ ಅಸೇ ।೮೫॥ ಹೇಂಚಿ ಅನಿಭ್ರಾಂತೀ । ಪ್ರಮೇಯ ಉಪಲವೂ ಪುಢತೀ । ಪರೀ ತೂ ಪ್ರತೀತೀ । ಯಾಚಿ ಘೇ ಪಾ ।೮೬॥ ತರೀ ಮಾಝೀ ಹೇ ಗೃಹಿಣೀ । ಅನಾದಿ ತರುಣೀ । ಅನಿರ್ವಾಚ್ಯಗುಣೀ । ಅವಿದ್ಯಾ ಹೇ ।೮೭॥ ಇಯೇ ನಾಹೀ ಹೇಂಚಿ ರೂಪ । ಠಾಣೀ ಹೇ ಅತಿ ಉಮಪ । ಹೇ ನಿದ್ರಿತಾ ಸಮೀಪ । ಚೇತಾ ದುರೀ ।೮೮॥ ಪೈ ಮಾಝೀನಿಚೀ ಆಂಗೇ । ಪಹುಡಲ್ಯಾ ಹೇ ಜಾಗೇ । ಆಣಿ ಸತ್ತಾಸಂಭೋಗೇ । ಗುರ್ವಿಣೀ ಹೋಯ ।೮೯॥ ಮಹದ್‍ಬ್ರಹ್ಮ ಉದರೀ । ಪ್ರಕೃತಿ ಆಠೈ ವಿಕಾರೀ । ಗರ್ಭಾಚೇ ಕರೀ । ಪೇಲೋವೇಲೀ ।೯೦॥ ಉಭಯಸಂಗು ಪಹಿಲೇ । ಬುದ್ಧಿತತ್ತ್ವ ಪ್ರಸವಲೇ । ಬುದ್ಧಿತತ್ತ್ವೇ ಭಾರೈಲೇ । ಹೋಯ ಮನ ।೯೧॥ ತರುಣೀ ಮಮತಾ ಮನಾಚೀ । ತೇ ಅಹಂಕಾರ ತತ್ತ್ವ ರಚೀ । ತೇಣೇ ಮಹಾಭೂತಾಂಚೀ । ಅಭಿವ್ಯಕ್ತಿ ಹೋಯ ।೯೨॥ ಆಣಿ ವಿಷಯೇಂದ್ರಿಯಾ ಗೌಸೀ । ಸ್ವಭಾವೇ ತಂವ ಭೂತಾಂಸೀ । ಮ್ಹಣೌನಿ ಯೇತೀ ಸರಿಸೀ । ತಿಯೇಂಹೀ ರೂಪಾ ।೯೩॥ ಜಾಲೇನಿ ವಿಕಾರಕ್ಷೋಭೇ । ಪಾಠೀ ತ್ರಿಗುಣಾಚೇ ಉಭೇ । ತೇವ್ಹಾ ಯೇ ವಾಸನಾಗರ್ಭೇ । ಠಾಯೇಠಾವೋ ।೯೪॥ ರುಖಾಚಾ ಆವಾಂಕಾ । ಜೈಸೀ ಬೀಜಕಣಿಕಾ । ಜೇವೀ ಬಾಂಧೇ ಉದಕಾ । ಭೇಟತಖೇವೋ ।೯೫॥ ತೈಸಿ ಮಾಝೇನಿ ಸಂಗೇ । ಅವಿದ್ಯಾ ನಾನಾ ಜಗೇ । ಆರಫೇವೋ ಲಾಗೇ । ಆಣಿಯಾಚೀ ।೯೬॥ ಮಗ ಗರ್ಭ ಗೋಳಾ ತಯಾ । ಕೈಸೇ ರೂಪ ತೈ ಯೇ ಆಯಾ । ತೇ ಪರಿಯೇಸೇ ರಾಯಾ । ಸುಜನಾಂಚಿಯಾ ।೯೭॥ ಪೈ ಮಣಿಜ ಸ್ವೇದಜ । ಉದ್ಭಿಜ ಜಾರಜ । ಉಮಟತೀ ಸಹಜ । ಅವಯವ ಹೇ ।೯೮॥ ವ್ಯೋಮವಾಯುವಶೇ । ವಾಢಲೇನಿ ಗರ್ಭರಸೇ । ಮಣಿಜು ಉಪಸೇ । ಅವಯವ ತೋ ।೯೯॥ ಪೋಟೀ ಸೂನಿ ತಮರಜೇ । ಆಗಳಿಕಾ ತೋಯ ತೇಜೇ । ಉಠಿತಾ ನಿಪಜೇ । ಸ್ವೇದಜು ಗಾ ।೧೦೦॥ ಆಪಪೃಥ್ವೀ ಉತ್ಕಟೇ । ಆಣಿ ತಮೋಮಾತ್ರೇ ನಿಕೃಷ್ಟೇ । ಸ್ಥಾವರು ಉಮಟೇ । ಉದ್ಭೀಜು ಹಾ ।೧೦೧॥ ಪಾಂಚಾ ಪಾಂಚಹೀ ವಿರಜೇ । ಹೋತೀ ಮನಬುದ್ಧ್ಯಾದಿ ಸಾಜೇ । ಹೀ ಹೇತು ಜಾರಜೇ । ಐಸೇ ಜಾಣ ।೧೦೨॥

ಒಬ್ಬ ದರಿದ್ರನು ಭ್ರಮಿಷ್ಟನಾದಾಗ್ಗೆ ''ಹೋಗಲೇ ಹೋಗು, ನಾನು ರಾಜನು ಬಂದಿರುವೆನು'' ಎನ್ನುವನು. ಅಥವಾ ಮೂರ್ಛೆ ಹೋದ ಮನುಷ್ಯನು ಭ್ರಮದಿಂದ ತಾನು ಸ್ವರ್ಗಕ್ಕೆ ಹೋಗಿರುವೆನೆಂದು ತಿಳಿಯುವನು ।೮೩॥

ಇದರಂತೆ ಒಂದು ಸಾರೆ ದೃಷ್ಟಿಯು ಆತ್ಮಸ್ವರೂಪದಿಂದ ಜಾರಿತೆಂದರೆ ಯಾವ ಯಾವ ಕಲ್ಪನೆಗಳು ಉತ್ಪನ್ನವಾಗುವುವೋ, ಅವಕ್ಕೆ ಸೃಷ್ಟಿ ಎನ್ನುವರು. ಅದು ನನ್ನಿಂದಲೇ ಉತ್ಪನ್ನವಾಗುವುದು ।೮೪॥

ಮನುಷ್ಯನು ಒಬ್ಬನೇ ಇದ್ದು, ಸ್ವಪ್ನದಲ್ಲಿ ಭ್ರಾಂತಿಯಿಂದ ಅನೇಕ ವಸ್ತುಗಳನ್ನು ಕಾಣುವನು. ಅದೇ ಪ್ರಕಾರವಾಗಿ ಆತ್ಮದ ಸ್ವರೂಪದ ಮರೆವು ಆಗುವುದು ।೮೫॥

ಇದೇ ಭ್ರಾಂತಿಯು ಪುನಃ ಶುದ್ಧ ಸ್ವರೂಪದಲ್ಲಿ ಬಂದಿರುವುದನ್ನು ಬೇರೆ ಪ್ರಕಾರದಿಂದ ನಿನಗೆ ಮುಂದೆ ಹೇಳುವೆನು. ಆದರೆ ಮೂಲಸ್ವರೂಪದಲ್ಲಿ ಈ ಮಾಯೆಯ ರೂಪ ಇದೆ ಎಂಬ ಮಾತನ್ನು ನೀನು ಮರೆಯದಿರು ।೮೬॥

ಆದರೆ ಮಾಯೆಯು ತನ್ನ ಪತ್ನಿಯಾಗಿದ್ದು, ಆದಿ, ಅಂತ್ಯರಹಿತಳೂ, ತರುಣಿಯೂ, ಅಲೌಕಿಕಳೂ ಮತ್ತು ಗುಣವತಿಯೂ ಆಗಿರುವಳು ।೮೭॥

ಈಕೆಯ ರೂಪವನ್ನು ನೋಡಲು ಹೋದರೆ, ಏನೂ ಇಲ್ಲವೆಂಬುವುದೇ ರೂಪವಾಗಿದೆ. ಈಕೆಯ ಆಕೃತಿಯು ಬಹಳ ವ್ಯಾಪಕವಾಗಿರುವುದು. ಈಕೆಯು ಅಜ್ಞಾನದ ಸನ್ನಿಧಿಯಲ್ಲಿರುವಳು ಮತ್ತು ಜ್ಞಾನದಿಂದ ದೂರ ಇರುವಳು ।೮೮॥

ಆದರೆ ಈ ಮಾಯೆಯು ನನ್ನ ಆತ್ಮಸ್ವರೂಪದಲ್ಲಿ ಮಲಗಿಕೊಂಡಿದ್ದಕ್ಕೆ ಆತ್ಮ ಸತ್ತೆಯ ಸಂಭೋಗದಿಂದ ಗರ್ಭವನ್ನು ಧರಿಸುವಳು ।೮೯॥

ಆಗ ಜೀವಭೂತ ಪ್ರಕೃತಿಯ ಉದರದಲ್ಲಿ ಪ್ರಾಕೃತ, ಅಷ್ಟವಿಕಾರರೂಪ ಗರ್ಭದ ವೃದ್ಧಿಯನ್ನು ಈಕೆ ಮಾಡುವಳು ।೯೦॥

ಆತ್ಮ ಮತ್ತು ಪ್ರಕೃತಿ ಇವರ ಸಂಯೋಗದಿಂದ ಪ್ರಥಮವಾಗಿ ಬುದ್ಧಿ ತತ್ತ್ವವು ಉತ್ಪನ್ನವಾಗುವುದು ಮತ್ತು ಅದೇ ಬುದ್ಧಿತತ್ತ್ವದಿಂದ ಮುಂದೆ ಮನಸ್ಸಾಗುವುದು ।೯೧॥

ಮನದ ತರುಣ ಸ್ತ್ರೀಯಾದ ಮಮತೆಯು, ಈಕೆಯಿಂದ ಅಹಂಕಾರವು ಉತ್ಪನ್ನವಾಗುವುದು ಮತ್ತು ಇದರಿಂದ ಪಂಚ ಮಹಾಭೂತಗಳ ಉತ್ಪತ್ತಿಯಾಗುವುದು ।೯೨॥

ಮತ್ತು ವಿಷಯ ಮತ್ತು ಇಂದ್ರಿಯಗಳು, ಇವುಗಳ ಭೂತಗಳಲ್ಲಿನ ಸಂಬಂಧದಿಂದ ಇವುಗಳ ಜೊತೆಯಲ್ಲಿಯೇ ಆಕಾರಕ್ಕೆ ಬರುವುವು ।೯೩॥

ವಿಷಯ ಮತ್ತು ಇಂದ್ರಿಯಗಳು, ಇವುಗಳ ಕ್ಷೋಭೆಯಾಗಲು, ಕೂಡಲೇ ಸತ್ತ್ವ, ರಜ ಮತ್ತು ತಮ ಈ ಮೂರು ಗುಣಗಳು ಎದ್ದು ನಿಲ್ಲುವುವು. ಆದರಿಂದ ವಾಸನೆ ಹುಟ್ಟುವುದು. ಈ ಪ್ರಕಾರವಾಗಿ ಜೀವವು ನಿಂತ ನಿಂತಲ್ಲಿಯೇ ಜನ್ಮ ಧರಿಸುವುದು ।೯೪॥

ಯಾವ ಪ್ರಕಾರವಾಗಿ ಬೀಜ ಮತ್ತು ನೀರಿನ ಗಂಟು ಬಿದ್ದಾಗ ಅದಕ್ಕೆ ಅಂಕುರವು ಹೇಗೆ ಹುಟ್ಟಿ ಗಿಡದ ಆಕಾರವಾಗುವುದೋ ।೯೫॥

ಆದರಂತೆ ನನ್ನ ಸಂಗದಿಂದ ಮಾಯೆಗೆ ಅನೇಕ ಪ್ರಕಾರಗಳ ವಿಶ್ವಾಂಕುರಗಳು ಹುಟ್ಟುವುವು ।೯೬॥

ಹೇ ಸುಜನ ಶ್ರೇಷ್ಠನೇ, ಆಗ ಆ ಗರ್ಭಕ್ಕೆ ಹೇಗೆ ರೂಪ ಬರುವುದು ಎಂಬುದನ್ನು ಕೇಳು ।೯೭॥

ಇಲ್ಲಿ ನೋಡು, ಅಂಡಜ, ಸ್ವೇದಜ, ಉದ್ಭಿಜ ಮತ್ತು ಜಾರಜ ಹೀಗೆ ಅಂಕುರಗಳು ಆಕೆಗೆ ಸಹಜವಾಗಿ ಮೂಡುವುವು ।೯೮॥

ಆಕಾಶ ಮತ್ತು ವಾಯು ಇವುಗಳ ಸಂಬಂಧದಿಂದ ಗರ್ಭಕ್ಕೆ ಪೋಷಕರಸವು ಬೆಳೆದು ಅದು ''ಅಂಡಜ''ವೆಂಬ ಅವಯವವು ಶ್ವಾಸೋಚ್ಛ್ವಾಸದಿಂದ ಜೀವವು ಬರುವುದು ।೯೯॥

ತಮೋಗುಣ ಮತ್ತು ರಜೋಗುಣ ಇವುಗಳನ್ನು ಹೊಟ್ಟೆಯಲ್ಲಿ ಹಾಕಿ ನೀರು ಮತ್ತು ಅಗ್ನಿ ಇವುಗಳ ಆಧಿಕ್ಯದಿಂದ ''ಸ್ವೇದಜ''ವೆಂಬ ಜೀವ ಹುಟ್ಟುವುದು ।೧೦೦॥

ಜಲ ಮತ್ತು ಪೃಥ್ವಿ ಇವುಗಳ ವಿಶೇಷ ಅಂಶವಿದ್ದು, ಯಾವುದರಲ್ಲಿ ಕೇವಲ ತಮೋಗುಣವು ದೃಷ್ಟಿಗೆ ಬೀಳುವುದೋ, ಅದು ಉದ್ಭಿಜವಾಗುವುದು ।೧೦೧॥

ಪಂಚ ಜ್ಞಾನೇಂದ್ರಿಯಗಳು ಮತ್ತು ಪಂಚ ಕರ್ಮೇಂದ್ರಿಯಗಳು ಹಾಗೂ ಮನಸ್ಸು ಮತ್ತು ಬುದ್ಧಿ ಇವು ಯಾವುದಕ್ಕೆ ಜೋಡಣೆಯಾಗಿರುವುದೋ, ಅದು ಜಾರಜವಾಗುವುದು ।೧೦೨॥

ಐಸೇ ಚಾರೀ ಹೇ ಸರಳ । ಕರಚರಣತಳ । ಮಹಾಪ್ರಕೃತಿ ಸ್ಥೂಳ । ತೇಂಚಿ ಶಿರ ।।೧೦೩।। ಪ್ರವೃತ್ತೀ ಪೇಲಲೇ ಪೋಟ । ನಿವೃತ್ತಿ ತೇ ಪಾಠೀ ನೀಟ । ಸುರಯೋನೀ ಆಂಗೇ ಆಠ । ಊರ್ಧ್ವಾಚೇ ।।೧೦೪।। ಕಂಠು ಉಲ್ಹಾಸತಾ ಸ್ವರ್ಗು । ಮೃತ್ಯುಲೋಕು ಮಧ್ಯಭಾಗು । ಅಧೋದೇಶು ಚಾಂಗು । ನಿತಂಬು ತೋ ।।೧೦೫।। ಐಸೇ ಲೇಕರೂ ಏಕ । ಪ್ರಸವಲೀ ಹೇ ದೇಖ । ಜಯಾಚೇ ತಿನ್ಹೀ ಲೋಕ । ಬಾಳಸೇ ಗಾ ।।೧೦೬।। ಚೌರ್‍ಯಾಂಯಶೀ ಲಕ್ಷ ಯೋನೀ । ತಿಯೇ ಕಾಂಡಾ ಪೇರಾ ಸಾಂದಣೀ । ವಾಢೇ ಪ್ರತಿದಿನೀ । ಬಾಳಕ ಹೇ ।।೧೦೭।। ನಾನಾ ದೇಹ ಅವಯವೀ । ನಾಮಚೀ ಲೇಣೀ ಲೇವವೀ । ಮೋಹಸ್ತನ್ಯೇ ವಾಢವೀ । ನಿತ್ಯ ನವೇ ।।೧೦೮।। ಸೃಷ್ಟೀ ವೇಗವೇಗಳೀಯಾ । ತಿಯಾ ಕರಾಂಘ್ರೀ ಆಂಗೋಳಿಯಾ । ಭಿನ್ನಾಭಿಮಾನ ಸೂದಲಿಯಾ । ಮುದಿಯಾ ತೇಥೇ ।।೧೦೯।। ಹೇ ಏಕೋಲತೇ ಚರಾಚರ । ಅವಿಚಾರಿತ ಸುಂದರ । ಪ್ರಸವೋನಿ ಥೋರ । ಥೋರಾವಲೀ ।।೧೧೦।। ಪೈ ಬ್ರಹ್ಮಾ ಪ್ರಾತಃಕಾಳು । ವಿಷ್ಣು ತೋ ಮಧ್ಯಾಹ್ನ ವೇಳು । ಸದಾಶಿವ ಸಾಯಂಕಾಳು । ಬಾಳಾ ಯಯಾ ।।೧೧೧।। ಮಹಾಪ್ರಳಯಸೇಜೇ । ಖೇಳೋನಿ ನಿವಾಂತ ನಿಜೇ । ವಿಷಮಜ್ಞಾನೇ ಉಮಜೇ । ಕಲ್ಪೋದಯೀ ।।೧೧೨।। ಅರ್ಜುನಾ ಇಯಾಪರೀ । ಮಿಥ್ಯಾದೃಷ್ಟೀಚ್ಯಾ ಘರೀ । ಯುಗಾನುವೃತ್ತೀಚೇ ಕರೀ । ಚೋಜ ಪಾಉಲೇ ।।೧೧೩।। ಸಂಕಲ್ಪು ಜಯಾಚಾ ಇಷ್ಟು । ಅಹಂಕಾರು ತೋ ವಿನಟು । ಐಸಿಯಾ ಹೋಯ ಶೇವಟು । ಜ್ಞಾನೇ ಯಯಾ ।।೧೧೪।। ಆತಾ ಅಸೋ ಹೇ ಬಹು ಬೋಲೀ । ಐಸೇ ವಿಶ್ವ ಮಾಯಾ ವ್ಯಾಲೀ । ತೇಥ ಸಾಹ್ಯ ಜಾಲೀ । ಮಾಝೀ ಸತ್ತಾ ।।೧೧೫।।

ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ ।
ತಾಸಾಂ ಬ್ರಹ್ಮ ಮಹದ್ಯೋನಿಃ ಅಹಂ ಬೀಜಪ್ರದಃ ಪಿತಾ ।।೪।।

ಯಾ ಕಾರಣೇ ಮೀ ಪಿತಾ । ಮಹದ್‌ಬ್ರಹ್ಮ ಹೇ ಮಾತಾ । ಅಪತ್ಯ ಪಂಡುಸುತಾ । ಜಗಡಂಬರು ।।೧೧೬।। ಆತಾ ಶರೀರೇ ಬಹುತೇ । ದೇಖೋನಿ ನ ಭೇದೇ ಹೋ ಚಿತ್ತೇ । ಜೇ ಮನಬುದ್ಧ್ಯಾದಿ ಭೂತೇ । ಏಕೇಚಿ ಏಥೇ ।।೧೧೭।। ಹಾ ಗಾ ಏಕಚಿ ದೇಹೀ । ಕಾಯ ಅನಾರಿಸೇ ಅವಯವ ನಾಹೀ? । ತೇವೀ ವಿಚಿತ್ರ ವಿಶ್ವಪಾಹೀ । ಏಕಚಿ ಹೇ ।।೧೧೮।।

ಈ ಪ್ರಕಾರವಾಗಿ ಈ ಜಾರಜ, ಅಂಡಜ, ಸ್ವೇದಜ ಮತ್ತು ಉದ್ಭಿಜಗಳಾದ ಈ ನಾಲ್ಕು ದೇಹಗಳೆಂದರೆ ಎರಡು ಹಸ್ತ ಎರಡು ಚರಣಗಳಾಗಿದ್ದು, ಅಷ್ಟಧಾ ಪ್ರಕೃತಿಯು ಇದು ಅದರ ಶಿರವಾಗಿದೆ ।।೧೦೩।।

ಪ್ರಪಂಚವು ಇದರ ದೊಡ್ಡ ಹೊಟ್ಟೆಯಾಗಿದ್ದು, ನಿವೃತ್ತಿ ಯು ಅದರ ಬೆನ್ನು ಆಗಿದೆ, ಮತ್ತು ಹೊಕ್ಕಳ ಮೇಲಿನ ಭಾಗ ದಲ್ಲಿ ಎಂಟು ದೇವಯೋನಿಗಳಾಗಿವೆ ।।೧೦೪।।

ದೇದಿಪ್ಯಮಾನವಾದ ಸ್ವರ್ಗಲೋಕವು ಆ ಗರ್ಭದ ಕಂಠವಾಗಿದೆ. ಮೃತ್ಯುಲೋಕವು ನಡದ ಮಧ್ಯಭಾಗವಾಗಿದೆ, ಮತ್ತು ಪಾತಾಳಲೋಕವು ಮಾಂಸಮಯ ಪೃಷ್ಠಭಾಗ ವಾಗಿದೆ ।।೧೦೫।।

ಹೀಗೆ ಒಂದು ಮಗುವನ್ನು ಈ ಮಾಯೆಯು ಹೆತ್ತಳು. ಮೂರು ಲೋಕಗಳ ವಿಸ್ತಾರವು ಈ ಮಗುವಿನ ಮಾಂಸದ ಗಾತ್ರವಾಗಿದೆ ।।೧೦೬।।

ಎಂಬತ್ನಾಲ್ಕು ಲಕ್ಷ ಜೀವಯೋನಿಗಳು ಈ ಕೂಸಿನ ಶರೀರದ ಎಲುಬುಗಳು, ಬಟ್ಟುಗಳ ಗಣಿಕೆಗಳು, ಸಂಧಿಗಳಾಗಿವೆ. ಈ ಕೂಸು ಪ್ರತಿದಿನ ಬೆಳೆಯುತ್ತಿದೆ ।।೧೦೭।।

ನಾನಾ ಪ್ರಕಾರದ ದೇಹಗಳನ್ನು, ಅವಯವಗಳನ್ನು, ಮತ್ತು ನಾಮಗಳನ್ನು ಇವು ಅಲಂಕಾರಗಳನ್ನಾಗಿ ಮಾಡಿ ಮಾಯೆಯು ಈ ಕೂಸಿಗೆ ಹಾಕಿ ಮೋಹರೂಪ ಸ್ತನಪಾನ ಮಾಡಿಸಿ ಬೆಳೆಸುವಳು ।।೧೦೮।।

ತರಹತರಹದ ಸೃಷ್ಟಿಯು ಈ ಕೂಸಿನ ಕೈ ಬೆರಳು, ಕಿರು ಬೊಟ್ಟುಗಳಾಗಿ ತರಹತರಹದ ದೇಹಗಳು ಆ ಬೊಟ್ಟು ಗಳಲ್ಲಿನ ಉಂಗುರಗಳಾಗಿವೆ ।।೧೦೯।।

ಹೀಗೆ ಒಂದೇ ಒಂದಾದ ವಿಶ್ವರೂಪ ಕೂಸು ಅಜ್ಞಾನ ರೂಪ ಪ್ರಕೃತಿಗೆ ಹುಟ್ಟಿರುವುದರಿಂದ ನಾನು ಭಾಗ್ಯವಂತ ಳೆಂದು ಆಕೆಗೆ ಅನಿಸುವುದು ।।೧೧೦।।

ಬ್ರಹ್ಮನು ಈ ಕೂಸಿನ ಪ್ರಾತಃಕಾಲನು, ವಿಷ್ಣು ಈತನು ಮಧ್ಯಾಹ್ನ ಕಾಲನು ಮತ್ತು ಸದಾಶಿವನು ಸಾಯಂಕಾಲನು, ಅಂದರೆ ಉತ್ಪತ್ತಿ, ಸ್ಥಿತಿ ಮತ್ತು ಲಯಕಾಲಗಳಾಗಿವೆ ।।೧೧೧।।

ಮತ್ತು ಮಹಾಪ್ರಳಯವು ಇದೇ ಅದರ ಹಾಸಿಗೆಯಾಗಿ ರುವುದು. ಅದರ ಮೇಲೆ ಆಟಗಳನ್ನು ಆಡಿ ಸ್ವಸ್ಥವಾಗಿ ಮಲ ಗುವುದು ಮತ್ತು ಉದಯವಾದಾಗ ವಿಪರೀತ ಜ್ಞಾನದಿಂದ ಎಚ್ಚರಾಗುವುದು ।।೧೧೨।।

ಅರ್ಜುನಾ, ಈ ಪ್ರಕಾರವಾಗಿ ಮಿಥ್ಯಾ ಜ್ಞಾನದ ವ್ಯವ ಹಾರಗಳಲ್ಲಿ ಕಾಲಗತಿಯ ಯೋಗದಿಂದ ಈ ಕೂಸು ಹೆಜ್ಜೆ ಇಡಲು ಆರಂಭಿಸುವುದು ।।೧೧೩।।

ಅದರ ಸಂಕಲ್ಪವು ಪ್ರೀತಿಯ ಸ್ನೇಹವಾಗಿದ್ದು, ಅಹಂ ಕಾರವು ಶೋಭೆಯಾಗಿರುವುದು. ಹೀಗೆ ಈ ಬಾಲಕನಿಗೆ ಆತ್ಮ ಜ್ಞಾನವೆಂದರೆ ಮರಣ ಬರುವುದು ।।೧೧೪।।

ಇರಲಿ, ಈಗ ವಿಶೇಷವಾಗಿ ವರ್ಣಿಸದೇ ಇಷ್ಟೇ ಹೇಳು ವುದೇನೆಂದರೆ, ಈ ಪ್ರಕಾರವಾಗಿ ಮಾಯೆಯಿಂದ ಈ ವಿಶ್ವವು ನನ್ನ ಸತ್ತೆಯಿಂದ ಉತ್ಪನ್ನವಾಯಿತು ।।೧೧೫।।

**ಶ್ಲೋಕಾರ್ಥ :-** ಕುಂತೀಪುತ್ರಾ! ವಿವಿಧ ಯೋನಿ ಗಳಲ್ಲಿ ಹುಟ್ಟುವ ರೂಪಗಳಿಗೆಲ್ಲ ಪ್ರಕೃತಿಯೇ ತಾಯಿ. ನಾನು ಬೀಜದಾತನಾದ ತಂದೆ ।೪।।

ಈ ಕಾರಣದಿಂದ ಅರ್ಜುನಾ, ನಾನು ತಂದೆಯು, ಮಾಯೆ ತಾಯಿಯು, ಮತ್ತು ಈ ಜಗತ್ತು ನಮ್ಮ ಕೂಸಾಗಿದೆ ।।೧೧೬।।

ಈ ಜಗತ್ತಿನಲ್ಲಿ ಅನೇಕ ಶರೀರಗಳು ಕಾಣುವುದರಿಂದ ಜಗತ್ತು ನನ್ನ ಕೂಸಾಗಿದ್ದು, ನನ್ನ ಮತ್ತು ಅದರ ಐಕ್ಯವಿಲ್ಲ ವೆಂದು ಹೀಗೆ ಅನುಮಾನವನ್ನು ಮನದಲ್ಲಿ ತರದಿರು. ಕಾರಣ ಮನ, ಬುದ್ಧಿ ಆದಿಭೂತಗಳು ಇಲ್ಲಿ ಪ್ರಕೃತಿರೂಪದಿಂದ ಒಂದೇ ಇರುವುವು ।।೧೧೭।।

ಅರೇ, ಒಂದೇ ದೇಹದಲ್ಲಿ ಬೇರೆ ಬೇರೆ ಅವಯವಗಳು ಇರುವುದಿಲ್ಲವೇ? ಹೀಗೆ ಈ ವಿಶ್ವವು ಭಿನ್ನ ಭಿನ್ನ ರೂಪದಿಂದ ಕೂಡಿದ್ದರೂ ಒಂದೇಯಾಗಿದೆ ।।೧೧೮।।

ಪೈ ಉಂಚಾ ನೀಚಾ ಡಾಹಾಳಿಯಾ । ವಿಷಮಾ ವೇಗಳಾಲಿಯಾ । ಯೇಕಾಚಿ ಜೇವೀ ಜಾಲಿಯಾ । ಬೀಜಾಚಿಯಾ ।೧೯೯॥ ಆಣಿ ಸಂಬಂಧು ತೋಹೀ ಐಸಾ । ಮೃತ್ತಿಕೇ ಘಟು ಲೇಕು ಜೈಸಾ । ಕಾ ಪಟತ್ವ ಕಾಪುಸಾ । ನಾತೂ ಹೋಯ ।೧೨೦॥ ನಾನಾ ಕಲ್ಲೋಳ ಪರಂಪರಾ । ಸಂತತೀ ಜೈಸೀ ಸಾಗರಾ । ಆಮ್ಹಾ ಆಣಿ ಚರಾಚರಾ । ಸಂಬಂಧು ತೈಸಾ ।೧೨೧॥ ಮ್ಹಣೌನಿ ವನ್ಹಿ ಆಣಿ ಜ್ವಾಳ । ದೋನ್ಹೀ ವನ್ಹಿಚಿ ಕೇವಳ । ತೇವೀ ಮೀ ಗಾ ಸಕಳ । ಸಂಬಂಧು ವಾವೋ ।೧೨೨॥ ಜಾಲೇನಿ ಜಗೇ ಮೀ ಝಾಂಕೇ । ತರೀ ಜಗತ್ವೇ ಕೋಣ ಫಾಂಕೇ? । ಕಿಳೇವರೀ ಮಾಣಿಕೇ । ಲೋಪಿಜೇ ಕಾಈ? ।೧೨೩॥ ಅಳಂಕಾರಾತೇ ಆಲೇ । ತರೀ ಸೋನೇಪಣ ಕಾಈ ಗೇಲೇ? । ಕೀ ಕಮಳ ಫಾಂಕಲೇ । ಕಮಳತ್ವಾ ಮುಕೆ? ।೧೨೪॥ ಸಾಂಗ ಪಾ ಧನಂಜಯಾ । ಅವಯವೀ ಅವಯವಿಯಾ । ಆಚ್ಛಾದಿಜೇ ಕೀ ತಯಾ । ತೇಂಚಿ ರೂಪ? ।೧೨೫॥ ಕೀ ವಿರೂಢಲಿಯಾ ಜೋಂಧಳಾ । ಕಣಿಸಾಚಾ ನಿರ್ವಾಳಾ । ವೇಚಂಲಾ ಕೀ ಆಗಳಾ । ದಿಸತಸೇ ।೧೨೬॥ ಮ್ಹಣೌನಿ ಜಗ ಪರೌತೇ । ಸಾರೂನಿ ಪಾಹಿಜೇ ಮಾತೇ । ತೈಸಾ ನೋಹೇ ಉಖಿತೇ । ಆಘವೇ ಮೀಚಿ ।೧೨೭॥ ಹಾ ತೂ ಸಾಚೋಕಾರಾ । ನಿಶ್ಚಯಾಚಾ ಖರಾ । ಗಾಂಠೀ ಬಾಂಧ ವೀರಾ । ಜೀವಾಚಿಯೇ ।೧೨೮॥ ಆತಾ ಮಿಯಾ ಮಜ ದಾವಿಲಾ । ಶರೀರೀ ವೇಗಳಾಲಾ । ಗುಣೀ ಮೀಚಿ ಬಾಂಧಿಲಾ । ಐಸಾ ಆವಡೇ ।೧೨೯॥ ಜೈಸೇ ಸ್ವಪ್ನೀ ಆಪಣ । ಉಠೂನಿಯಾ ಆತ್ಮಮರಣ । ಭೋಗಿಜೇ ಗಾ ಜಾಣ । ಕಪಿಧ್ವಜಾ ।೧೩೦॥ ಕಾ ಕಾವಳಾತೇ ಡೋಳೇ । ಪ್ರಕಾಶೂನಿ ಪಿಂವಳೇ । ದೇಖತೀ ತೇಹೀ ಕಳೇ । ತಯಾಂಸೀಚಿ ।೧೩೧॥ ನಾನಾ ಸೂರ್ಯಪ್ರಕಾಶೇ । ಪ್ರಕಟಿತೈ ಅಭ್ರಭಾಸೇ । ತೋ ಲೋಪಲಾ ಹೇಹೀ ದಿಸೇ । ಸೂರ್ಯೇಚಿ ಕೀ ।೧೩೨॥ ಪೈ ಆಪಣಪೇನಿ ಜಾಲಿಯಾ । ಛಾಯಾ ಗಾ ಆಪುಲಿಯಾ । ಬಿಹೋನಿ ಬಿಹಾಲಿಯಾ । ಆನ ಆಹೇ ? ।೧೩೩॥ ತೈಸೀ ಇಯೇ ನಾನಾ ದೇಹೇ । ದಾಊನಿ ಮೀ ನಾನಾ ಹೋಯೇ । ತೇಥ ಐಸಾ ಜೋ ಬಂಧು ಆಹೇ । ತೇಂಹೀ ದೇಖೇ ।೧೩೪॥ ಬಂಧು ಕಾ ನ ಬಂಧಿಜೇ । ಹೇ ಜಾಣಣೇ ಮಜ ಮಾಝೇ । ನೇಣಣೇನಿ ಉಪಜೇ । ಆಪಲೇನಿ ।೧೩೫॥ ತರೀ ಕೋಣೇ ಗುಣೇ ಕೈಸಾ । ಮಜಚಿ ಮೀ ಬಂಧು ಐಸಾ । ಆವಡೇ ತೇ ಪರಿಯೇಸಾ । ಅರ್ಜುನ ದೇವಾ ।೧೩೬॥ ಗುಣ ತೇ ಕಿತೀ ಕಿಂಧರ್ಮ । ಕಾಯಿ ಯಯಾ ರೂಪನಾಮ । ಕೇ ಜಾಲೇ ಹೇ ವರ್ಮ । ಅವಧಾರೀ ಪಾ ।೧೩೭॥

ಗಿಡಗಳ ಟೊಂಗೆಗಳು ಕೆಲವು ಉದ್ದ, ಕೆಲವು ಅಡ್ಡ, ಕೆಲವು ಅಂಕಡೊಂಕ, ಹೀಗೆ ಪರಸ್ಪರ ಭಿನ್ನವಾಗಿ ಕಾಣುವುವು. ಆದರೆ ಅವು ಒಂದೇ ಬೀಜದಿಂದ ಆಗಿರುವುವು ।।೧೯।।

ಆದ್ದರಿಂದ ಜಗತ್ತಿನ ನನ್ನ ಸಂಬಂಧ ಹೇಗಿದೆ ಎಂದರೆ, ಮಣ್ಣಿನಿಂದ ಉತ್ಪನ್ನವಾದ ಮಡಿಕೆಯು ಮಗನಾಗುವನು ಮತ್ತು ಅರಳೆಯಿಂದ ತಯಾರಿಸಿದ ವಸ್ತ್ರವು ಮೊಮ್ಮಗನಾಗುವನು. (ಅರಳೆಯಿಂದ ಎಳೆ, ಎಳೆಯಿಂದ ವಸ್ತ್ರ) ।।೨೦।।

ಅಥವಾ ಸಮುದ್ರದ ಮೇಲೆ ಉತ್ಪನ್ನವಾಗುವ ಅಸಂಖ್ಯ ತೆರೆಗಳು ಅವು ಸಮುದ್ರದ ಸಂತತಿಯಾಗಿರುವಂತೆ ನನ್ನ ಹಾಗೂ ಚರಾಚರರ ಸಂಬಂಧವಿರುವುದು ।।೨೧।।

ಆದ್ದರಿಂದ ಅಗ್ನಿ ಮತ್ತು ಜ್ವಾಲೆಯು ಹೇಗೆ ಒಂದೇ ಸ್ವರೂಪವೋ, ಅದರಂತೆ ನಾನು ಮತ್ತು ಜಗತ್ತು ಈ ಎರಡೂ ಒಂದೇ ಸ್ವರೂಪಗಳಾಗಿದ್ದು, ನನ್ನಿಂದ ಜಗದ ಉತ್ಪತ್ತಿ, ಹೀಗೆ ಸಂಬಂಧ ಹಚ್ಚುವುದು ವ್ಯರ್ಥವು ।।೨೨।।

ಜಗತ್ತಿನ ಉತ್ಪತ್ತಿಯಿಂದ ತನ್ನ ತೇಜವು ಲೋಪವಾಗುವುದೆಂದರೆ ಜಗತ್ತು ಯಾರ ತೇಜದಿಂದ ಬೆಳಗುವುದು? ಇಲ್ಲಿ ನೋಡು, ಮಾಣಿಕ್ಯದ ತೇಜದಿಂದ ಮಾಣಿಕ್ಯವು ಮುಚ್ಚಲ್ಪಡುವುದೇ ? ।।೨೩।।

ಹಾಗೆಯೇ ಬಂಗಾರದಿಂದ ಅಲಂಕಾರಗಳನ್ನು ಮಾಡಿದಾಗ ಅದರಲ್ಲಿ ಬಂಗಾರತ್ವವು ಇಲ್ಲದಂತಾಗುವುದೇ? ಅಥವಾ ಕಮಲವು ಅರಳಿದಾಗ ಅದರಲ್ಲಿನ ಕಮಲತ್ವವು ಇಲ್ಲದಾಗುವುದೇ ? ।।೨೪।।

ಅರ್ಜುನಾ, ಅವಯವಗಳಿಂದ ಶರೀರವು ಮುಚ್ಚಲ್ಪಡುವುದೋ? ಅಥವಾ ಅವಯವಗಳಿಂದ ಶರೀರಕ್ಕೆ ಶೋಭೆ ಬರುವುದೋ? ನೀನೇ ಹೇಳು ನೋಡೋಣ ।।೨೫।।

ಜೋಳದ ಕಾಳು ಬಿತ್ತಿದ್ದಕ್ಕೆ ಅದಕ್ಕೆ ತೆನೆಗಳು ಹುಟ್ಟಿದಾಗ ಆ ಬೀಜವು ಕಡಿಮೆ ಆಯಿತೆನ್ನಬೇಕೋ? ಅಥವಾ ಬೆಳೆಯಿತೆನ್ನಬೇಕೋ? ।।೨೬।।

ಆದ್ದರಿಂದ ಜಗತ್ತನ್ನು ಬೇರೆ ಸರಿಸಿ ನನ್ನನ್ನು ನೋಡುವೆ ಎಂದರೆ ನಾನು ಬೇರೆಯಾಗಿ ಕಾಣಲಾರೆನು. ಕಾರಣ ನಾನೇ ಸರ್ವ ಜಗದ್ರೂಪನಾಗಿರುವೆ ।।೨೭।।

ಹೇ ವೀರನೇ, ಈ ಸಿದ್ಧಾಂತವನ್ನು ನೀನು ನಿನ್ನ ಮನದಲ್ಲಿ ನಿಜವಾಗಿಯೂ ಪೂರ್ಣವಾಗಿ ಗಂಟುಕಟ್ಟಿ ಇಡು ।।೨೮।।

ಈಗ ನಾನು ಅನೇಕ ಶರೀರಗಳಿಂದ ದೃಷ್ಟಿಗೆ ಗೋಚರಿಸಿದರೂ ಸರ್ವ ಶರೀರಗಳು ಒಂದೇ ಗುಣದಿಂದ ಕಟ್ಟಲ್ಪಟ್ಟವೆ ಎಂದು ತಿಳಿ ।।೨೯।।

ಹೇ ಕಪಿಧ್ವಜನೇ, ಯಾವ ಪ್ರಕಾರವಾಗಿ ಒಬ್ಬ ಮನುಷ್ಯನು ಸ್ವಪ್ನದಲ್ಲಿ ತಾನು ಸತ್ತಿರುವನಂತೆ ಕಲ್ಪನೆಯನ್ನು ಮಾಡುವನು ।।೩೦।।

ಅಥವಾ ಕಾಮಣೆಯಾದವನ ಕಣ್ಣುಗಳು ಹಳದಿಯಾಗಿ ಆತನು ಯಾವ ಯಾವ ವಸ್ತುಗಳನ್ನು ನೋಡುವನೋ, ಅವೆಲ್ಲ ಆತನಿಗೆ ಹಳದಿಯಾಗಿ ಕಾಣುವುವು ।।೩೧।।

ಅಥವಾ ಸೂರ್ಯನ ಪ್ರಕಾಶದಿಂದ ಮೋಡವು ಕಾಣಿಸುತ್ತದೆ ಮತ್ತು ಸೂರ್ಯನು ಮೋಡದಿಂದ ಮುಸುಕಿದ್ದು ಆತನ ತೇಜದಿಂದಲೇ ಕಾಣಿಸುವುದು ।।೩೨।।

ಅಥವಾ ಇಲ್ಲಿ ನೋಡು, ತನ್ನದೇ ಆದ ನೆರಳನ್ನು ಕಂಡು ಯಾವಾತನು ಹೆದರುವನೋ, ಅವನು ಆ ನೆರಳಿನಿಂದ ಭಿನ್ನನಾಗಿರುವನೇ ? ।।೩೩।।

ಅದರಂತೆ ಜಗತ್ತಿನಲ್ಲಿ ನಾನಾ ದೇಹಗಳು ದೃಷ್ಟಿಗೆ ಗೋಚರಿಸಿದರೂ ಅಷ್ಟೊಂದು ಅನಂತ ರೂಪದಲ್ಲಿ ನಾನೇ ಆಗಿರುವೆನು. ಅಲ್ಲಿರುವ ಅನೇಕತ್ವದ ಬಂಧನವನ್ನು ನಾನೇ ತಿಳಿಯುವೆ ।।೩೪।।

ಬಂಧ ಅಥವಾ ಮೋಕ್ಷ ಇವುಗಳನ್ನು ನನ್ನಲ್ಲಿಯೇ ಮದ್ರೂಪದಿಂದ ತಿಳಿಯಬೇಕಾಗಿದೆ. ಅಜ್ಞಾನಿಗೆ ತನ್ನ ಸ್ವರೂಪ ತಿಳಿಯದ್ದಕ್ಕೆ ಬಂಧ ಮೋಕ್ಷಗಳು ಆತನಲ್ಲಿ ಕಾಣುವುವು ।।೩೫।।

ಅಹೋ ಅರ್ಜುನ ದೇವಾ, ಯಾವ ಗುಣದಿಂದ ನನಗೆ ಹೇಗೆ ಬಂಧವಿದೆ? ಮತ್ತು ನಾನೇ ಬದ್ಧನಾಗಿರುವೆ ಎಂದು ಏಕೆ ಭಾಸವಾಗುವುದು? ಅದನ್ನು ಕೇಳು ।।೩೬।।

ಗುಣಗಳು ಎಷ್ಟಿವೆ? ಅವುಗಳ ಧರ್ಮ ಯಾವುವು? ಅವುಗಳ ನಾಮರೂಪ ಯಾವುವು ? ಆ ಗುಣಗಳು ಯಾರಿಂದ ಆದವು? ಈ ಮರ್ಮವನ್ನು ಲಕ್ಷಕೊಟ್ಟು ಕೇಳು ।।೩೭।।

ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ।
ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ।೫॥

ತರೀ ಸತ್ತ್ವರಜತಮ । ತಿಘಾಂಸಿ ಹೇ ನಾಮ । ಆಣಿ ಪ್ರಕೃತಿ ಜನ್ಮ । ಭೂಮಿಕಾಯಯಾ ।೧೩೮॥ ಯೇಥ ಸತ್ವ ತೇ ಉತ್ತಮ । ರಜ ತೇ ಮಧ್ಯಮ । ತಿಹೀಮಾಜೀ ತಮ । ಸಾವಿಯಾ ಧಾರೇ ।೧೩೯॥ ಹೇ ಏಕೇಚಿ ವೃತ್ತೀಚ್ಯಾ ಠಾಯೀ । ತ್ರಿಗುಣತ್ವ ಆವಡೇ ಪಾಹೀ । ವಯಸಾ ತ್ರಯ ದೇಹೀ । ಯೇಕೀ ಜೇವೀ ।೧೪೦॥ ಕಾ ಮೀನಲೇನಿ ಕೀಡೇ । ಜಂವ ಜಂವ ತೂಕ ವಾಢೇ । ತಂವ ತಂವ ಸೋನೇ ಹೀನ ಪಡೇ । ಪಾಂಚಿಕಾ ಕಸೀ ।೧೪೧॥ ಪೈ ಸಾವಧ ಪಣ ಜೈಸೇ । ವಾಹವಿಲೇ ಆಳಸೇ । ಸುಷುಪ್ತಿ ಬೈಸೇ । ಘಣಾವೋನೀ ।೧೪೨॥ ತೈಸೀ ಅಜ್ಞಾನಾಂಗಿಕಾರೇ । ನಿಘಾಲೀ ವೃತ್ತಿ ವಿಖುರೇ । ತೇ ಸತ್ತ್ವರಜದ್ವಾರೇ । ತಮಹೀ ಹೋಯೇ ।೧೪೩॥ ಅರ್ಜುನಾ ಗಾ ಜಾಣ । ಯಯಾ ನಾಮ ಗುಣ । ಆತಾ ದಾಖಿಲೂ ಖೂಣ । ಬಾಂಧಿತೀ ತೇ ।೧೪೪॥ ತರೀ ಕ್ಷೇತ್ರಜ್ಞದಶೇ । ಆತ್ಮಾ ಮೋಟಕಾ ಪೈಸೇ । ಹೇ ದೇಹ ಮೀ ಐಸೇ । ಮುಹೂರ್ತ ಕರೀ ।೧೪೫॥ ಆಜನ್ಮ ಮರಣಾಂತೀ । ದೇಹಧರ್ಮೀ ಸಮಸ್ತೀ । ಮಮತ್ವಾಚೀ ಸೂತೀ । ಘೇ ನಾ ಜಂವ ।೧೪೬॥ ಜೈಸೀ ಮೀನಾಚ್ಯಾ ತೋಂಡೀ । ಪಡೇನಾ ಜಂವ ಉಂಡೀ । ತಂವ ಗಳ ಆಸುಡೀ । ಜಳಪಾರಧೀ ।೧೪೭॥

ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಮ್ ।
ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ।೬॥

ತೇವೀ ಸತ್ತ್ವೇ ಲುಬ್ಧಕೇ । ಸುಖಜ್ಞಾನಾಚೀ ಪಾಶಕೇ । ವೋಢಿಜತೀ ಮಗ ಖಿಡಕೇ । ಮೃಗು ಜೈಸಾ ।೧೪೮॥ ಮಗ ಜ್ಞಾನೇ ಚಡಫಡೀ । ಜಾಣಿವೇಚೇ ಖುರಖೋಡೀ । ಸ್ವಯಂ ಸುಖ ಹೇ ಧಾಡೀ । ಹಾತೀಂಚೇ ಗಾ ।೧೪೯॥ ತೇವ್ಹಾ ವಿದ್ಯಾಮಾನೇ ತೋಖೇ । ಲಾಭ ಮಾತ್ರೇ ಹರಿಖೇ । ಮೀ ಸಂತುಷ್ಟ ಹೇಹೀ ದೇಖೇ । ಶ್ಲಾಘೋ ಲಾಗೇ ।೧೫೦॥ ಮ್ಹಣೇ ಭಾಗ್ಯ ನಾ ಮಾಝೇ? । ಆಜಿ ಸುಖಿಯೇ ನಾಹೀ ದುಜೇ । ವಿಕಾರಾಷ್ಟಕೇ ಫುಂಜೇ । ಸಾತ್ತ್ವಿಕಾಚೇನಿ ।೧೫೧॥ ಆಣಿ ಯೇಣೇಹೀ ನ ಸರೇ । ಲಾಂಕಣ ಲಾಗೇ ದುಸರೇ । ಜೇ ವಿದ್ವತ್ತೇಚೇ ಭರೇ । ಭೂತ ಆಂಗೀ ।೧೫೨॥ ಆಪಣಚಿ ಜ್ಞಾನಸ್ವರೂಪ ಆಹೇ । ತೇ ಗೇಲೇ ಹೇ ದುಃಖ ನ ವಾಹೇ । ಕೀ ವಿಷಯಜ್ಞಾನೇ ಹೋಯೇ । ಗಗನಾಯೇವಢಾ ।೧೫೩॥

ಶ್ಲೋಕಾರ್ಥ :- ಹೇ ಮಹಾಬಾಹೋ! ಪ್ರಕೃತಿಯಿಂದ ಉಂಟಾದ ಸತ್ತ್ವ ರಜಸ್ತಮಗಳೆಂಬ ಗುಣಗಳು ನಿರ್ವಿಕಾರವಾದ ಜೀವಾತ್ಮನನ್ನು ದೇಹದಲ್ಲಿ ಬಂಧಿಸುತ್ತವೆ ।।೫।।

ಸತ್ತ್ವ, ರಜ, ತಮ ಹೀಗೆ ಗುಣಗಳ ಮೂರು ಹೆಸರಿವೆ, ಮತ್ತು ಅವು ಮಾಯೆಯಿಂದ ಉತ್ಪನ್ನವಾಗಿರುವುವು ।।೧೩೮।।

ಅವುಗಳಲ್ಲಿ ಸತ್ತ್ವಗುಣವು ಉತ್ತಮವಾಗಿದೆ. ರಜೋಗುಣವು ಮಧ್ಯಮವಾಗಿದೆ ಮತ್ತು ತಮೋಗುಣವು ಕನಿಷ್ಟವಾಗಿದೆ ।।೧೩೯।।

ಒಂದೇ ಅಂತಃಕರಣ ವೃತ್ತಿಯಲ್ಲಿ ಈ ಮೂರು ಗುಣಗಳು ಇವೆ ಎಂದು ಅನುಭವಕ್ಕೆ ಬರುವುದು. ಹೇಗೆಂದರೆ, ಒಂದೇ ದೇಹದಲ್ಲಿ ಬಾಲ್ಯ, ತಾರುಣ್ಯ, ವಾರ್ಧಕ್ಯ ಹೀಗೆ ಮೂರು ಅವಸ್ಥೆಗಳು ಇರುವುವು ।।೧೪೦।।

ಬಂಗಾರದಲ್ಲಿ ಇತರ ಧಾತುಗಳ ಮಿಶ್ರಣ ಮಾಡಿದಂತೆ ಅದರ ತೂಕವು ಬೆಳೆಯುವುದು. ಆದರೆ ಆ ಬಂಗಾರವು ''ಹದಿನೈದು ರೂಪಾಯಿಗೆ ತೊಲೆ'' ಇದ್ದದ್ದು, ಒರೆಯು ಕಡಿಮೆಯಾದದ್ದಕ್ಕೆ ಐದು ರೂಪಾಯಿ ಬೆಲೆಯಾಗುವುದು ।।೧೪೧।।

ಯಾವ ಪ್ರಕಾರವಾಗಿ ಆಲಸ್ಯವು ಬಂದ ಮೇಲೆ ಜಾಗ್ರತೆಯು ನಷ್ಟವಾಗಿ ನಿದ್ರೆಯು ಹೇಗೆ ಬೆಳೆಯುವುದೋ ।।೧೪೨।।

ಅದರಂತೆ ಅಜ್ಞಾನವು ಸ್ವೀಕಾರ ಮಾಡಿದ ಮೇಲೆ ಯಾವ ವೃತ್ತಿಯು ಬೆಳೆಯುವುದೋ, ಅದಕ್ಕೆ ಸತ್ತ್ವ, ರಜ, ತಮ ಹೀಗೆ ಹೇಳುವರು ।।೧೪೩।।

ಅರ್ಜುನಾ, ಇವರಿಂದ ವೃತ್ತಿಗಳು ಬೇರೆ ಬೇರೆ ಪ್ರಕಾರಗಳಾಗಿ ಆಗುವುವು. ಅವುಗಳಿಗೆ ಗುಣವೆಂದು ಹೇಳುವರು. ಈಗ ಅವು ಆತ್ಮಕ್ಕೆ ಹೇಗೆ ಬಂಧನ ಮಾಡುವುವು ಎಂಬುದನ್ನು ಹೇಳುವೆನು ।।೧೪೪।।

ಜೀವಾತ್ಮನು ಯಾವ ವೇಳೆಯಲ್ಲಿ ದೇಹದ ಅಭಿಮಾನವನ್ನು ಧಾರಣ ಮಾಡುವನೋ, ಅದೇ ವೇಳೆಗೆ ಅದಕ್ಕೆ ಕೆಟ್ಟ ಶಕುನವಾಯಿತೆಂದು ತಿಳಿ ।।೧೪೫।।

ಇದು ಹೇಗೆಂದರೆ, ದೇಹದಲ್ಲಿ ''ಈ ದೇಹವು ನನ್ನದಿದೆ'' ಇಷ್ಟು ಮಾತ್ರ ಅಭಿಮಾನ ಧರಿಸಿದ ಕೂಡಲೇ ಜನ್ಮಧಾರಣೆಯಿಂದ ಹಿಡಿದು ಮರಣವಾಗುವವರೆಗೆ ಎಲ್ಲ ದೇಹಧರ್ಮದ ದುಃಖಗಳನ್ನು ಭೋಗಿಸುವ ಪ್ರಸಂಗ ಒದಗುವುದು ।।೧೪೬।।

ಯಾವ ಪ್ರಕಾರವಾಗಿ ಮೀನಿನ ಬಾಯಿಯಲ್ಲಿ ಮಾಂಸದ ಉಂಡಿಯು ಬೀಳುವುದೊಂದೇ ತಡ, ಆಗ ತಕ್ಷಣವಾಗಿ ಬೇಟೆಗಾರನು ಅದಕ್ಕೆ ಹೊರಗೆಳೆದು ಪ್ರಾಣ ತೆಗೆಯುವನು ।।೧೪೭।।

ಶ್ಲೋಕಾರ್ಥ :- ಪಾಪರಹಿತ ಅರ್ಜುನಾ! ಅವುಗಳಲ್ಲಿ ಸತ್ತ್ವಗುಣವು ನಿರ್ಮಲವಾದುದು. ಪ್ರಕಾಶವಾದುದು, ನಿರ್ದೋಷವಾದುದು ಇದು ತಿಳಿಯಿತೆಂಬ ಅಭಿಮಾನದಿಂದಲೂ, ಸುಖಿಯೆಂಬ ಅಭಿಮಾನದಿಂದಲೂ ಕಟ್ಟಿ ಹಾಕುವುದು ।।೬।।

ಅದರಂತೆ ಸತ್ತ್ವಗುಣರೂಪ ಬೇಟೆಗಾರನಿಂದ ಸುಖ-ಜ್ಞಾನದ ಪಾಶವು ಹಾಕಲ್ಪಡುವುದು. ಆಗ ಚಿಗರೆಯು ಬಲೆಯಲ್ಲಿ ಬೀಳುವಂತೆ, ಜೀವನು ಈ ಪಾಶದಲ್ಲಿ ಸಿಲುಕುವನು ।।೧೪೮।।

ಈ ಪ್ರಕಾರವಾಗಿ ಜೀವನು ಸತ್ತ್ವಗುಣದ ಬಲೆಯಲ್ಲಿ ಸಿಕ್ಕಿಕೊಂಡಾಗ ನಾನು ಜ್ಞಾನಿಯಾಗಿರುವೆ ಎಂದು ಬಡಬಡಿಸುವನು ಮತ್ತು ನನ್ನಂತೆ ಜಗತ್ತಿನಲ್ಲಿ ಜ್ಞಾನಿ ಯಾರೂ ಇಲ್ಲವೆಂದು ಗರ್ವಿಷ್ಠನಾಗುವನು. ಇದರಿಂದ ಆತ್ಮಸುಖದ ಲಾಭವನ್ನು ತಾನೇ ಕಳೆದುಕೊಳ್ಳುವನು ।।೧೪೯।।

ಆಗ ವಿದ್ವಾನನು ಎಂದು ಯಾರಾದರೂ ತನಗೆ ಸನ್ಮಾನಿಸಿದರೆ ಆನಂದಪಡುವನು ಮತ್ತು ಸ್ವಲ್ಪ ಲಾಭವಾದರೂ ಸಂತೋಷಪಡುವನು ।।೧೫೦।।

ನನ್ನ ಹಾಗೆ ಈ ಜಗದಲ್ಲಿ ಸುಖಿಗಳಾರೂ ಇಲ್ಲ, ಎಷ್ಟೊಂದು ಭಾಗ್ಯ ನನ್ನದು? ಹೀಗೆ ತಿಳಿದು ಅಷ್ಟೇ ಸಾತ್ತ್ವಿಕ ಭಾವಗಳಿಂದ ಉಬ್ಬುವನು ।।೧೫೧।।

ಮತ್ತು ಇಷ್ಟರಿಂದಲೇ ಅದು ಮುಗಿಯುವುದಿಲ್ಲ. ಹೇಗೆಂದರೆ, ಜಗತ್ತಿನಲ್ಲಿ ನಾನು ಎಂತಹ ವಿದ್ವಾನನು ಎಂಬ ಅಹಂಕಾರದ ಭೂತವು ಆತನಿಗೆ ಬೆನ್ನು ಹತ್ತುವುದು ।।೧೫೨।।

ತಾನು ಸ್ವತಃ ಜ್ಞಾನಸ್ವರೂಪನೆಂಬ ಜ್ಞಾನವು ಇರದೇ ಇರುವ ದುಃಖವು ಆತನಿಗೆ ಆಗುವುದೇ ಇಲ್ಲ. ಆದರೆ ಪ್ರತಿಯಾಗಿ ವಿಷಯ ಜ್ಞಾನದ ಭರಭರಾಟೆಯಲ್ಲಿ ಆಕಾಶದಷ್ಟು ಉಬ್ಬುವನು ।।೧೫೩ ।।

ರಾವೋ ಜೈಸಾ ಸ್ವಪ್ನೀ । ರಂಕಪಣೇ ರಿಘೇ ಧಾನೀ । ತೋ ದೋ ದಾಣಾ ಮಾನೀ । ಇಂದ್ರು ನಾ ಮೀ ।।೧೫೪।। ತೈಸೇ ಗಾ ದೇಹಾತೀತಾ । ಜಾಲೇಯಾ ದೇಹವಂತಾ । ಹೋ ಲಾಗೇ ಪಂಡುಸುತಾ । ಬಾಹ್ಯಜ್ಞಾನೇ ।।೧೫೫।। ಪ್ರವೃತ್ತಿ ಶಾಸ್ತ್ರ ಬುಝೇ । ಯಜ್ಞವಿದ್ಯಾ ಉಮಜೇ । ಕಿಂಬಹುನಾ ಸುಝೇ । ಸ್ವರ್ಗವರೀ ।।೧೫೬।। ಆಣಿ ಮ್ಹಣೇ ಆಜಿ ಆನ । ಮೀವಾಂಚೂನಿ ನಾಹೀ ಸಜ್ಞಾನ । ಚಾತುರ್ಯ ಚಂದ್ರಾ ಗಗನ । ಚಿತ್ತ ಮಾಝೇ ।।೧೫೭।। ಐಸೇ ಸತ್ತ್ವ ಸುಖಜ್ಞಾನೀ । ಜೀವಾಸಿ ಲಾವೂನಿ ಕಾನೀ । ಬೈಲಾಚೀ ಕರೀ ವಾನೀ । ಪಾಂಗುಳಾಚಿಯಾ ।।೧೫೮।। ಆತಾ ಹಾಚಿ ಶರೀರೀ । ರಜೇ ಜಿಯಾಪರೀ । ಬಾಂಧಿಜೇ ತೇ ಅವಧಾರೀ । ಸಾಂಗಿಜೈಲ ।।೧೫೯।।

ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಮ್ ।
ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಮ್ ।।೭।।

ಹೇ ರಜ ಯಾಚಿ ಕಾರಣೇ । ಜೀವಾತೇ ರಂಜಊ ಜಾಣೇ । ಹೇ ಅಭಿಲಾಖಾಚೇ ತರುಣೇ । ಸದಾಚಿ ಗಾ ।।೧೬೦।। ಹೇ ಜೀವೀ ಮೋಟಕೇ ರಿಗೇ । ಆಣಿ ಕಾಮಾಚ್ಯಾ ಮದೀ ಲಾಗೇ । ಮಗ ವಾರಯಾ ವಳಘೇ । ತೃಷ್ಣೇಚಿಯಾ ।।೧೬೧।। ಘೃತೇ ಆಂಬುಖೂನಿ ಆಗಿಯಾಳೇ । ವಜ್ರಾಗ್ನೀಚೇ ಸಾದುಕಲೇ । ಆತಾ ಬಹುಥೇಂಕುಲೇ । ಆಹೇ ತೇಥ? ।।೧೬೨।। ತೈಸೀ ಖವಳೇ ಚಾಡ । ಹೋಯ ದುಃಖಾ ಸಕಟ ಗೋಡ । ಇಂದ್ರಶ್ರೀಹಿ ಸಾಂಕಡ । ಗಮೋ ಲಾಗೇ ।।೧೬೩।। ತೈಸೀ ತೃಷ್ಣಾ ವಾಢಿನಲಿಯಾ । ಮೇರುಹೀ ಹಾತಾ ಆಲಿಯಾ । ತರ್ಹೀ ಮ್ಹಣೇ ಏಖಾದಿಯಾ । ದಾರುಣಾ ವಳಘೋ ।।೧೬೪।। ಜೀವಿತಾಚೀ ಕುರೋಂಡೀ । ವೋವಾಳೂ ಲಾಗೇ ಕವಡೀ । ಮಾನೀ ತೃಣಾಚಿಯೇ ಜೋಡೀ । ಕೃತಕೃತ್ಯತಾ ।।೧೬೫।। ಆಜಿ ಅಸತೇ ವೇಂಚಿಜೇಲ । ಪರೀ ಪಾಹೇ ಕಾಯ ಕೀಜೇಲ । ಐಸಾ ಪಾಂಗೀ ವಡೀಲ । ವ್ಯವಸಾಯ ಮಾಂಡೀ ।।೧೬೬।। ಮ್ಹಣೇ ಸ್ವರ್ಗಾ ಹನ ಜಾವೇ । ತರೀ ಕಾಯ ತೇಥೇ ಖಾವೇ । ಇಯಾಲಾಗೀ ಧಾಂವೇ । ಯಾಗ ಕರು ।।೧೬೭।। ವ್ರತಾಪಾಠೀ ವ್ರತೇ । ಆಚರೇ ಇಷ್ಟಾಪೂರ್ತೇ । ಕಾಮ್ಯಾವಾಂಚೂನಿ ಹಾತೇ । ಶಿವಣೇ ನಾಹೀ ।।೧೬೮।। ಪೈ ಗ್ರೀಷ್ಮಾಂತೀಚಾ ವಾರಾ । ವಿಸಾಂವೋ ನೇಣೇ ವೀರಾ । ತೈಸಾ ನ ಮ್ಹಣೇ ವ್ಯಾಪಾರಾ । ರಾತ್ರ ದಿವಸ ।।೧೬೯।। ಕಾಯ ಚಂಚಳು ಮಾಸಾ? । ಕಾಮಿನೀಕಟಾಕ್ಷು ಜೈಸಾ । ಲವಲಾಹೋ ತೈಸಾ । ವಿಜೂಹೀ ನಾಹೀ ।।೧೭೦।।

ರಾಜನು ಸ್ವಪ್ನದಲ್ಲಿ ಭಿಕ್ಷುಕನಾಗಿ ಭಿಕ್ಷೆ ಬೇಡುತ್ತಿರುವಾಗ್ಗೆ ಬೇರೆಯವರಿಗಿಂತ ತನಗೆ ಸ್ವಲ್ಪ ಭಿಕ್ಷೆಯು ಹೆಚ್ಚಿಗೆ ದೊರೆತಾಗ ಇಂದ್ರನಾದೆನು ಎಂದು ತಿಳಿಯುವುದಿಲ್ಲವೇ? ॥೧೫೪॥

ಅದರಂತೆ ಅರ್ಜುನಾ, ಜೀವಾತ್ಮನು ದೇಹದ ಅಭಿಮಾನ ಹಿಡಿದ ಮೇಲೆ ಬಾಹ್ಯ ಜ್ಞಾನದಿಂದ ಈತನ ಸ್ಥಿತಿಯು ಹೀಗಾಗುವುದು ॥೧೫೫॥

ಪ್ರವೃತ್ತಿ ಶಾಸ್ತ್ರಗಳಲ್ಲಿ ನಿಪುಣನಾಗುವನು. ಯಜ್ಞವಿದ್ಯೆಗಳಲ್ಲಿ ನಿಷ್ಣಾತನಾಗುವನು. ಇಷ್ಟೇ ಅಲ್ಲ, ಸ್ವರ್ಗದಲ್ಲಿನ ಸಮಾಚಾರಗಳನ್ನು ಅರಿಯುವನು ॥೧೫೬॥

ಮತ್ತು ನನ್ನ ಹೊರತಾಗಿ ಜಗತ್ತಿನಲ್ಲಿ ಬೇರೆ ಯಾರೂ ಜ್ಞಾನಸಂಪನ್ನರು ಇರುವುದಿಲ್ಲ ಮತ್ತು ಚಾತುರ್ಯರೂಪ ಚಂದ್ರನಿಗೆ ಪ್ರಕಾಶಗೊಳಿಸಲು ನನ್ನ ಚಿತ್ತವು ಗಗನರೂಪವಾಗಿದೆ ಎಂದು ತಿಳಿಯುತ್ತಾನೆ ॥೧೫೭॥

ಈ ಪ್ರಕಾರವಾಗಿ ಸತ್ತ್ವಗುಣವು ಈ ಜೀವಕ್ಕೆ ಸುಖ ಮತ್ತು ಜ್ಞಾನ ಇವುಗಳ ಕಿವಿಗಳಿಗೆ ಎಂದರೆ ಹಗ್ಗ ಬಿಗಿದು ಎತ್ತಿನ ಮೇಲೆ ಕುಳಿತು ಭಿಕ್ಷೆ ಬೇಡುವ ಕುಂಟನ ಎತ್ತಿನಂತೆ ಮಾಡುವುದು ॥೧೫೮॥

ಈಗ ಅದೇ ಆತ್ಮನು ದೇಹದೊಳಗೆ ರಜೋಗುಣದಿಂದ ಯಾವ ಪ್ರಕಾರವಾಗಿ ಬಂಧಿಸಲ್ಪಡುವನೆಂಬುದನ್ನು ಹೇಳುವೆ ಕೇಳು ॥೧೫೯॥

ಶ್ಲೋಕಾರ್ಥ :- ಅರ್ಜುನಾ! ರಜೋಗುಣವು ಅನುರಾಗ ರೂಪವಾದುದು. ಅದು ಆಸೆಯನ್ನು, ಆಸಕ್ತಿಯನ್ನು ಉಂಟು ಮಾಡಿ, ಕರ್ಮಫಲಾಸಕ್ತಿಯಿಂದ ಜೀವನನ್ನು ಕಟ್ಟಿಹಾಕುತ್ತದೆ ॥೭॥

ಈ ಗುಣದಿಂದ ಜೀವವು ಸದಾವಕಾಲದಲ್ಲಿ ರಂಜಿಸುವುದು. ಕಾಮವಾಸನೆಯು ಸದೈವ ಜಾಗೃತವಾಗಿರುವುದು. ಆದುದರಿಂದ ಇದಕ್ಕೆ ರಜೋಗುಣವೆನ್ನುವರು ॥೧೬೦॥

ಜೀವನಲ್ಲಿ ಸ್ವಲ್ಪಾದರೂ ಒಳಪ್ರವೇಶಿಸಿದಾಗಲೇ ಇದು ಅದಕ್ಕೆ ಕಾಮನಲ್ಲಿ ಲಕ್ಷ ಹಚ್ಚುವುದು. ಆಗ ಮನಸ್ಸಿನ ಬೇಡಿಕೆಗಳು ಗಾಳಿಯಂತೆ ಹರಿಯತೊಡಗುವುವು ॥೧೬೧॥

ಆಗ ಅಗ್ನಿಕುಂಡದಲ್ಲಿ ತುಪ್ಪವನ್ನುಸುರುವಿದಾಗ ವಜ್ರಾಗ್ನಿಯು ಭಡಕಾಯಿಸುವಂತೆ ಅದಕ್ಕೆ ಸಣ್ಣ ದೊಡ್ಡ ವಸ್ತುಗಳ ಭಾವವಿರದೇ ಎಲ್ಲವನ್ನು ಸುಟ್ಟುಹಾಕುವುದು ॥೧೬೨॥

ಈ ಪ್ರಕಾರವಾಗಿ ಇದರ ಇಚ್ಛೆಯು ಪ್ರಬಲ ದುಃಖದಾಯಕ ವಿಷಯಗಳೂ ಆತನಿಗೆ ಸುಖದಾಯಕವಾಗಿ ಅನಿಸುವುವು. ಇಂದ್ರಲೋಕವು ಪ್ರಾಪ್ತವಾದರೂ ಈತನಿಗೆ ತೃಪ್ತಿಯಾಗುವುದಿಲ್ಲ ॥೧೬೩॥

ಈ ಪ್ರಕಾರವಾಗಿ ವಿಷಯವಾಸನೆಯು ಬೆಳೆದು ನಿಂತಾಗ ಮೇರುಪರ್ವತವೂ ಈತನಿಗೆ ಹಸ್ತಗತವಾದರೂ ಇದಕ್ಕಿಂತಲೂ ದೊಡ್ಡವಸ್ತು ಪ್ರಾಪ್ತವಾಗಬೇಕೆನ್ನುವನು ॥೧೬೪॥

ಒಂದು ಕವಡೆಯ ಮೇಲಾದರೂ ಆತನು ತನ್ನ ಜೀವಿತವನ್ನು ನಿವಾಳಿಸಿ ಒಗೆಯಲು ಹಿಂದು ಮುಂದು ನೋಡುವುದಿಲ್ಲ. ತೃಣದಷ್ಟು ವಸ್ತುವು ಪ್ರಾಪ್ತವಾದರೂ ತನಗೆ ಧನ್ಯನೆನ್ನುವನು ॥೧೬೫॥

ತನ್ನಲ್ಲಿರುವ ದ್ರವ್ಯವು ಇಂದು ಮುಗಿದರೆ ನಾಳಿನ ನನ್ನ ಗತಿಯೇನು? ಎಂದು ತೃಷ್ಣೆಯ ಬಲದಿಂದ ದೊಡ್ಡ ದೊಡ್ಡ ಉದ್ಯೋಗ ಆರಂಭಿಸುವನು ॥೧೬೬॥

ಮತ್ತು ಹೇಳುವುದೇನೆಂದರೆ, ತನಗೆ ಸ್ವರ್ಗ ಪ್ರಾಪ್ತಿಯಾದರೂ ಅಲ್ಲಿ ತಿನ್ನಲು ಏನು ಸಿಗುವುದು? ಅದಕ್ಕಾಗಿ ಯಜ್ಞಯಾಗಗಳನ್ನು ಮಾಡುವನು ॥೧೬೭॥

ವ್ರತಗಳ ಮೇಲೆ ವ್ರತಗಳನ್ನು ಆಚರಿಸುವನು, ಇಷ್ಟಾಪೂರ್ತಿ (ಕೆರೆ ಬಾವಿಗಳನ್ನು ಕಟ್ಟುವುದು, ಯಜ್ಞ ಯಾಗ ಮಾಡುವುದು) ಈ ಕರ್ಮಗಳನ್ನು ಮಾಡುವನು. ಕಾಮ್ಯ ವ್ರತ ಹೊರತಾಗಿ ಇತರ ವ್ರತಗಳನ್ನು ಮಾಡುವುದಿಲ್ಲ ॥೧೬೮॥

ಗ್ರೀಷ್ಮ ಋತುವಿನ ಅಂತ್ಯದಲ್ಲಿ ಗಾಳಿಯು ಹಗಲು ರಾತ್ರಿ ಸತತವಾಗಿ ಬೀಸುವಂತೆ ಅರ್ಜುನಾ, ಈ ಪ್ರಕಾರದ ವ್ಯವಹಾರದಲ್ಲಿ ಈತನು ವ್ಯವಹರಿಸುವನು ॥೧೬೯॥

ಮೀನಿನ ಅಥವಾ ಕಾಮಿನಿಸ್ತ್ರೀಯ ನೇತ್ರ ಕಟಾಕ್ಷವು ಚಂಚಲವಿರುವುದು ಮತ್ತು ಮಿಂಚಿಗೆ ಅತಿಹೆಚ್ಚು ಚಂಚಲವೆನ್ನುವರು. ಆದರೆ ರಜೋಗುಣದ ಚಂಚಲಕ್ಕೆ ತುಲನೆ ಮಾಡಿದರೆ ಅವು ಕಡಿಮೆಯಾಗುವುವು ॥೧೭೦॥

ತೇತುಲೇನಿ ಗಾ ವೇಗೇ । ಸ್ವರ್ಗಸಂಸಾರಪಾಂಗೇ । ಆಗೀಮಾಜೀ ರಿಗೇ । ಕ್ರಿಯಾಂಚಿಯೇ ।।೧೭೧।। ಐಸಾ ದೇಹೀ ದೇಹಾವೇಗಳಾ । ಲೇ ತೃಷ್ಣೇಚಿಯಾ ಸಾಂಖಳಾ । ಖಟಾಟೋಪು ವಾಹೇ ಗಳಾ । ವ್ಯಾಪಾರಾಚಾ ।।೧೭೨।। ಹೇ ರಜೋಗುಣಾಚೇ ದಾರುಣ । ದೇಹೀ ದೇಹಿಯಾಸೀ ಬಂಧನ । ಪರಿಸ ಆತಾ ವಿಂದಾಣ । ತಮಾಚೇ ತೇ ।।೧೭೩।।

ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್ ।
ಪ್ರಮಾದಾಲಸ್ಯನಿದ್ರಾಭಿಃ ತನ್ನಿಬಧ್ನಾತಿ ಭಾರತ ।।೮।।

ವ್ಯವಹಾರಾಚೇಹಿ ಡೋಳೇ । ಮಂದ ಜೇಣೇ ಪಡಳೇ । ಮೋಹರಾತ್ರೀಚೇ ಕಾಳೇ । ಮೇಹುಡೇ ಜೇ ।।೧೭೪।। ಅಜ್ಞಾನಾಚೇ ಜಿಯಾಲೇ । ಜಯಾ ಏಕಾಲಾಗಲೇ । ಜೇಣೇ ವಿಶ್ವ ಭುಲಲೇ । ನಾಚತ ಅಸೇ ।।೧೭೫।। ಅವಿವೇಕಮಹಾಮಂತ್ರ । ಜೇ ಮೌಢ್ಯಮದ್ಯಾಚೇ ಪಾತ್ರ । ಹೇ ಅಸೋ ಮೋಹನಾಸ್ತ್ರ । ಜೀವಾಂಸಿ ಜೇ ।।೧೭೬।। ಪಾರ್ಥಾ ತೇ ಗಾ ತಮ । ರಚೂನಿ ಐಸೇ ವರ್ಮ । ಚೌಖಿರೀ ದೇಹಾತ್ಮ । ಮಾನಿಯಾತೇ ।।೧೭೭।। ಹೇ ಏಕಚಿ ಕೀರ ಶರೀರೀ । ಮಾಜೋ ಲಾಗೇ ಚರಾಚರೀ । ಆಣಿ ತೇಥ ದುಸರೀ । ಗೋಠೀ ನಾಹೀ ।।೧೭೮।। ಸರ್ವೇಂದ್ರಿಯಾ ಜಾಡ್ಯ । ಮನಾಮಾಜೀ ಮೌಢ್ಯ । ಮಾಲ್ಹಾತೀ ಜೇ ದಾರ್ಢ್ಯ । ಆಲಸ್ಯಾಚೇ ।।೧೭೯।। ಆಂಗೇ ಆಂಗ ಮೋಡಾಮೋಡೀ । ಕಾರ್ಯಜಾತೀ ಅನಾವಡೀ । ನುಸತೀ ಪರವಡೀ । ಜಾಂಭಯಾಂಚೀ ।।೧೮೦।। ಉಘಡಿಯಾಚೀ ದಿಠೀ । ದೇಖಣೇ ನಾಹೀ ಕಿರೀಟೀ । ನಾಳವಿತಾಂಚಿ ಉಠೀ । ವೋ ಮ್ಹಣೌನಿ ।।೧೮೧।। ಪಡಲಿಯೇ ಧೋಂಡೀ । ನೇಣೇ ಕಾನೀ ಮುರಡೀ । ತಯಾಚಿ ಪರೀ ಮುರಕುಂಡೀ । ಉಕಲೂ ನೇಣೇ ।।೧೮೨।। ಪೃಥ್ವೀ ಪಾತಾಳೀ ಜಾವೋ । ಕಾ ಆಕಾಶಹೀ ವರೀ ಯೇವೋ । ಪರೀ ಉಠಣೇ ಹಾ ಭಾವೋ । ಉಪಜೋ ನೇಣೇ ।।೧೮೩।। ಉಚಿತಾನುಚಿತ ಆಘವೇ । ಝೂಂಸುರತಾ ನಾಠವೇ ಜೀವೇ । ಜೇಥೀಂಚಾ ತೇಥ ಲೋಳಾವೇ । ಐಸೀ ಮೇಧಾ ।।೧೮೪।। ಉಭಊನಿ ಕರತಳೇ । ಪಡಿ ಘಾಯೇ ಕಪೋಳೇ । ಪಾಯಾಚೇ ಶಿರಿಯಾಳೇ । ಮಾಂಡೂ ಲಾಗೇ ।।೧೮೫।। ಆಣಿ ನಿದ್ರೇ ವಿಷಯೀ ಚಾಂಗು । ಜೀವೀ ಆಥೀ ಲಾಗು । ಝೋಪೀ ಜಾತಾ ಸ್ವರ್ಗು । ವಾವೋ ಮ್ಹಣೇ ।।೧೮೬।। ಬ್ರಹ್ಮಾಯು ಹೋಈಜೇ । ಮಾ ನಿಜೇಲಿಯಾಚಿ ಅಸಿಜೇ । ಹೇವಾಂಚೂನಿ ದುಜೇ । ವ್ಯಸನ ನಾಹೀ ।।೧೮೭।।

ಹೀಗೆ ಅತಿ ವೇಗದಿಂದ ಸ್ವರ್ಗ ಮತ್ತು ಸಂಸಾರಗಳ ಪ್ರಾಪ್ತಿಗಾಗಿ ಈತನು ಕರ್ಮದ ಅಗ್ನಿಯಲ್ಲಿ ಹಾರಿ ಬೀಳುವನು ॥೧೭೧॥

ಈ ಪ್ರಕಾರವಾಗಿ ದೇಹದಲ್ಲಿರುವ ಆತ್ಮನು ದೇಹದಿಂದ ಬೇರೆ ಇದ್ದರೂ, ತೃಷ್ಣೆಯ ಬೇಡಿಯನ್ನು ಕಾಲಿನಲ್ಲಿ ಹಾಕಿಕೊಳ್ಳುವನು ಮತ್ತು ಪ್ರಯಾಸವೆಂಬ ಕೊರಳಗುದ್ದಿಯನ್ನು ಕೊರಳಲ್ಲಿ ಹಾಕಿಕೊಳ್ಳುವನು ॥೧೭೨॥

ಈ ರೀತಿಯಲ್ಲಿ ದೇಹದಲ್ಲಿರುವ ಜೀವಕ್ಕೆ ರಜೋಗುಣದ ಬಲವಾದ ಬಂಧನವಿರುತ್ತದೆ. ಈಗ ತಮೋಗುಣದ ಲಕ್ಷಣಗಳನ್ನು ಕೇಳು ॥೧೭೩॥

ಶ್ಲೋಕಾರ್ಥ :- ಭಾರತಾ! ಅಜ್ಞಾನದಿಂದ ಹುಟ್ಟಿದ ತಮೋಗುಣವು ಮೋಹವನ್ನುಂಟು ಮಾಡಿ, ಪ್ರಮಾದ, ಸೋಮಾರಿತನ, ನಿದ್ರೆಗಳೊಂದಿಗೆ ಜೀವನನ್ನು ಬಂಧಿಸುತ್ತದೆ ॥೮॥

ಯಾವುದರ ಪರದೆಯಿಂದ ಮನುಷ್ಯನ ವ್ಯವಹಾರದ ದೃಷ್ಟಿಯು ಮಂದವಾಗುವುದು ಮತ್ತು ಮೋಹರೂಪ ರಾತ್ರಿಯ ಗಾಢ ಕತ್ತಲೆಯಾಗುವುದು ॥೧೭೪॥

ಯಾವ ತಮೋಗುಣವು ಅಜ್ಞಾನದಿಂದ ಬೆಳೆಯುತ್ತದೆ, ಅದು ತನ್ನ ಎಲ್ಲ ವಿಶ್ವಾಸವನ್ನು ಅಜ್ಞಾನದಲ್ಲಿ ಬೀಳಿಸಿ ಕುಣಿಸುವುದು ॥೧೭೫॥

ಈ ತಮೋಗುಣವು ಅವಿಚಾರದ ಮಹಾಮಂತ್ರವಾಗಿದೆ ಮತ್ತು ಅಜ್ಞಾನರೂಪ ಮದ್ಯದ ಪಾತ್ರೆಯಾಗಿದೆ. ಹೆಚ್ಚಿಗೇನು ಹೇಳಬೇಕು? ಜೀವಕ್ಕೆ ಮೋಹಗೊಳಿಸುವ ಇದೊಂದು ಅಸ್ತ್ರವಾಗಿದೆ ॥೧೭೬॥

ಪಾರ್ಥಾ, ಈ ತಮೋಗುಣವು ಈ ರೀತಿ ಕಪಟವಾದ ಮರ್ಮವನ್ನು ರಚಿಸಿ, ಜೀವಕ್ಕೆ ನಾಲ್ಕು ಕೊಳಗಗಳುಳ್ಳ ಪಶುವನ್ನಾಗಿ ಮಾಡುವುದು ॥೧೭೭॥

ಈ ತಮೋಗುಣವು ಒಂದೇ ಚರಾಚರದ ಶರೀರದಲ್ಲಿ ಬೆಳೆಯ ಹತ್ತಿದರೆ ಅಲ್ಲಿ ಬೇರೆ ಯಾರನ್ನೂ ಪ್ರವೇಶ ಮಾಡಿಕೊಡುವುದಿಲ್ಲ ॥೧೭೮॥

ಇದು ಎಲ್ಲ ಇಂದ್ರಿಯಗಳಿಗೆ ಜಡತ್ವವನ್ನು ತರುವುದು. ಮನಸ್ಸಿಗೆ ಮೂಢತ್ವವನ್ನು ತರುವುದು, ಮತ್ತು ಇದರಿಂದ ಆಲಸ್ಯವು ಬರುವುದು ॥೧೭೯॥

ಇದರಿಂದ ಮನುಷ್ಯನು ಯಾವಾಗಲೂ ಮೈ ಮುರಿಯುವನು, ಕೆಲಸ ಮಾಡುವ ಹುಮ್ಮಸ್ಸು ಇರುವುದಿಲ್ಲ, ಮತ್ತು ಆಕಳಿಕೆಗಳು ಮೇಲಿಂದ ಮೇಲೆ ಬರುವುವು ॥೧೮೦॥

ಅರ್ಜುನಾ, ಈ ಮನುಷ್ಯನ ಕಣ್ಣು ತೆರೆದಿದ್ದರೂ ಆತನಿಗೆ ಮುಂದಿರುವ ವಸ್ತುಗಳು ಕಾಣಿಸುವುದಿಲ್ಲ ಮತ್ತು ಒದರಿ ಕರೆಯುವುದಕ್ಕಿಂತ ಮುಂಚೆಯೇ ಹಾಸಿಗೆಯಿಂದ "ಓ" ಎಂದು ಏಳುವನು ॥೧೮೧॥

ದೊಡ್ಡದಾದ ಕಲ್ಲು ಕೆಳಗೆ ಬಿದ್ದರೆ ಅದು ಸ್ಥಳಾಂತರವಾಗದಂತೆ, ಈತನು ಮಡಚಿಕೊಂಡು ಒಂದು ಮಗ್ಗಲು ಮಲಗಿ ದನೆಂದರೆ ಇನ್ನೊಂದು ಮಗ್ಗಲು ಆಗುವುದಿಲ್ಲ ॥೧೮೨॥

ಪೃಥ್ವಿಯು ಪಾತಾಳಕ್ಕೆ ಹೋಗಲಿ, ಅಥವಾ ಆಕಾಶವು ಕಳಚಿ ಬೀಳಲಿ, ಆದರೆ ಆತನ ಮನಸ್ಸಿನಲ್ಲಿ ಏಳುವ ಭಾವನೆ ಬರುವುದಿಲ್ಲ ॥೧೮೩॥

ಈತನು ಸ್ವಸ್ಥನಾಗಿ ಮಲಗಿಕೊಂಡಾಗ ತನ್ನ ಉಚಿತಾನುಚಿತ ಕಾರ್ಯಗಳು ಈತನಿಗೆ ನೆನಪು ಸಹ ಇರುವುದಿಲ್ಲ. ಹಾಸಿಗೆಯಲ್ಲಿಯೇ ಉರುಳುವ ಈತನ ಬಲವಾದ ಬುದ್ಧಿ ಇರುವುದು ॥೧೮೪॥

ಕೈ ಮೇಲೆ ಮಾಡಿ ಬಟ್ಟುಗಳನ್ನು ಬಟ್ಟುಗಳಲ್ಲಿ ತೊಡಗಿಸಿ ಅವುಗಳನ್ನು ತಲೆಯ ಮೇಲಿಟ್ಟು, ಮೊಣಕಾಲುಗಳಲ್ಲಿ ತಲೆಯನ್ನು ಸೇರಿಸಿ ಕೂಡ್ರುವನು ॥೧೮೫॥

ಮತ್ತು ಮನಸ್ಸಿನಲ್ಲಿ ನಿದ್ರೆಗಾಗಿ ಸಂಪೂರ್ಣ ಅಪೇಕ್ಷಿಸುವನು. ನಿದ್ರೆ ಹತ್ತಿದಾಗ ಅದರ ಮುಂದೆ ಸ್ವರ್ಗವನ್ನಾದರೂ ತುಚ್ಛವೆನ್ನುವನು ॥೧೮೬॥

ನನಗೆ ಬ್ರಹ್ಮದೇವನ ಆಯುಷ್ಯವು ಸಿಗಬೇಕು ಮತ್ತು ನಾನು ಹೀಗೆಯೇ ಮಲಗಿಕೊಂಡಿರಬೇಕು ಎನ್ನುವ ಹೊರತಾಗಿ ಈತನಿಗೆ ಬೇರೆ ವ್ಯಸನವು ಯಾವುದೂ ಇರುವುದಿಲ್ಲ ॥೧೮೭॥

ಕಾ ವಾಟೇ ಜಾತಾ ಪೋಫೇ । ಕಲ್ಹಾತಾಂಹೀ ಡೋಲೋ ಲಾಗೇ । ಅಮೃತಹೀ ಪರೀ ನೇಘೇ । ಜರೀ ನೀದ ಆಲೀ ।।೧೮೮।। ತೇವೀಂಚಿ ಆಕ್ರೋಶ ಬಳೇ । ವ್ಯಾಪಾರೇ ಕೋಣೇ ಏಕೇ ವೇಳೇ । ನಿಗಾಲೇ ತರೀ ಆಂಧಳೇ । ರೋಷೇ ಜೈಸೇ ।।೧೮೯।। ಕೇಧವಾ ಕೈಸೇ ರಾಹಾಟಾವೇ । ಕೋಣೆಸೀ ಕಾಯ ಬೋಲಾವೇ । ಹೇ ಠಾಕತೇ ಕೀ ನಾಗವೇ । ಹೇಹೀ ನೇಣೇ ।।೧೯೦।। ವಣವಾ ಮಿಯಾ ಆಘವಾ । ಪಾಂಖೇ ಪುಸೋ ನಿಘೇಯಾವಾ । ಪತಂಗು ಪಾ ಹಾಂವಾ । ಘಾಲೀ ಜೇವೀ ।।೧೯೧।। ತೈಸಾ ವಳಘೇ ಸಾಹಸಾ । ಅಕರಣೇಂಚಾ ಧಿಂವಸಾ । ಕಿಂಬಹುನಾ ಐಸಾ । ಪ್ರಮಾದು ರುಚೇ ।।೧೯೨।। ಏವಂ ನಿದ್ರಾಲಸ್ಯಪ್ರಮಾದೀ । ತಮ ಇಯಾ ತ್ರಿಬಂಧೀ । ಬಾಂಧೇ ನಿರುಪಾಧೀ । ಚೋಖಟಾತೇ ।।೧೯೩।। ಜೈಸಾ ವನ್ಹೀ ಕಾಷ್ಟೀ ಭರೇ । ತೈ ದಿಸೇ ಕಾಷ್ಟಾಕಾರೇ । ವ್ಯೋಮ ಘಟೇ ಆವರೇ । ತೇ ಘಟಾಕಾಶ ।।೧೯೪।। ನಾನಾ ಸರೋವರ ಭರಲೇ । ತೈ ಚಂದ್ರತ್ವ ತೇಥೇ ಬಿಂಬಲೇ । ತೈಸೇ ಗುಣಾಭಾಸೀ ಬಾಂಧಲೇ । ಆತ್ಮತ್ವ ಗಮೇ ।।೧೯೫।।

ಸತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ ।
ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ।।೯।।

ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ ।
ರಜಸ್ಸತ್ತ್ವಂ ತಮಶ್ಚೈವ ತಮಸ್ಸತ್ತ್ವಂ ರಜಸ್ತಥಾ ।।೧೦।।

ಪೈ ಹರೂನಿ ಕಫವಾತ । ಜೈ ದೇಹೀ ಆಟೋಪೇ ಪಿತ್ತ । ತೈ ಕರೀ ಸಂತಪ್ತ । ದೇಹ ಜೇವೀ ।।೧೯೬।। ಕಾ ವರಿಷ ಆತಪ ಜೈಸೇ । ಜಿಣೌನಿ ಶೀತಚಿ ದಿಸೇ । ತೇವ್ಹಾ ಹೋಯ ಹಿಂವ ಐಸೇ । ಆಕಾಶ ಹೇ ।।೧೯೭।। ನಾನಾ ಸ್ವಪ್ನ ಜಾಗೃತೀ । ಲೋಪೂನಿ ಯೇ ಸುಷುಪ್ತೀ । ತೈ ಕ್ಷಣು ಏಕ ಚಿತ್ತವೃತ್ತೀ । ತೇಚಿ ಹೋಯ ।।೧೯೮।। ತೈಸೀ ರಜತಮೇ ಹಾರವೀ । ಜೈ ಸತ್ತ್ವ ಮಾಜು ಮಿರವೀ । ತೈ ಜೀವಾಕರವೀ ಮ್ಹಣವೀ । ಸುಖಿಯಾ ನಾ ಮೀ? ।।೧೯೯।। ತೈಸೇಂಚಿ ಸತ್ವರಜ । ಲೋಪೂನಿ ತಮಾಚೇ ಭೋಜ । ವಳಘೇ ತೈ ಸಹಜ । ಪ್ರಮಾದೀ ಹೋಯ ।।೨೦೦।। ತಯಾಚಿ ಗಾ ಪರಿಪಾಠೀ । ಸತ್ತ್ವ ತಮಾತೇ ಪೋಟೀ । ಘಾಲೂನಿ ಜೇವ್ಹಾ ಉಠೀ । ರಜೋಗುಣ ।।೨೦೧।। ತೇವ್ಹಾ ಕರ್ಮಾವಾಂಚೂನಿ ಕಾಂಹೀ । ಆನ ಗೋಮಟೇ ನಾಹೀ । ಐಸೇ ಮಾನೀ ದೇಹೀ । ದೇಹರಾಜು ।।೨೦೨।।

ದಾರಿ ನಡೆಯುವಾಗ ಜಾರಿ ಬಿದ್ದರೆ ಅಲ್ಲಿಯೇ ಆತನಿಗೆ ನಿದ್ರೆ ಹತ್ತುವುದು ಮತ್ತು ನಿದ್ರೆ ಹತ್ತುವಾಗ ಯಾರಾದರೂ ಅಮೃತವನ್ನು ಕೊಡಲು ಬಂದರೆ ಅದನ್ನು ತಿರಸ್ಕರಿಸುವನು ॥೧೮೮॥

ಈತನಿಗೆ ಯಾರಾದರೂ ಸಿಟ್ಟು ಮಾಡಿ ಅಥವಾ ಬಲಾತ್ಕಾರದಿಂದ ವ್ಯವಹಾರವನ್ನು ಮಾಡಲು ಹಚ್ಚಿದರೆ ಕುರುಡನು ನಡೆದಂತೆ ಆತನ ವ್ಯಾಪಾರವು ಜ್ಞಾನ ಶೂನ್ಯವಾಗಿರುತ್ತದೆ ॥೧೮೯॥

ಕಾರಣ, ಯಾವ ವೇಳೆಯಲ್ಲಿ ಹೇಗೆ ನಡೆದುಕೊಳ್ಳಬೇಕು, ಯಾರಲ್ಲಿ ಹೇಗೆ ಮಾತನಾಡಬೇಕು, ಹಾಗೆಯೇ ಉದ್ಯೋಗದಲ್ಲಿ ತನಗಾಗುವ ಲಾಭ, ಹಾನಿ ಇದಾವುದೂ ಆತನಿಗೆ ತಿಳಿಯುವುದಿಲ್ಲ ॥೧೯೦॥

ಸಂಪೂರ್ಣವಾಗಿ ಹೊತ್ತಿಕೊಂಡ ಅಗ್ನಿಯನ್ನು ನನ್ನ ರೆಕ್ಕೆಗಳಿಂದ ಆರಿಸಿಬಿಡುವೆನು ಎಂದು ಪತಂಗ ಹುಳವು ಅಪೇಕ್ಷಿಪಟ್ಟು ಅಗ್ನಿಯ ಮೇಲೆ ಹೇಗೆ ಹಾರುವುದೋ ॥೧೯೧॥

ಅದರಂತೆ ಸಾಹಸ ಮಾಡಲು ಪ್ರವೃತ್ತನಾಗಿ ಅಯೋಗ್ಯ ಮತ್ತು ಅಶಕ್ಯ ಕಾರ್ಯಗಳಿಗೆ ಧೈರ್ಯ ಮಾಡುವನು. ಹೆಚ್ಚಿಗೇನು ಹೇಳಬೇಕು? ಹೀಗೆ ಪ್ರಮಾದ ಮಾಡುವುದೇ ಆತನಿಗೆ ಪ್ರಿಯವು ॥೧೯೨॥

ಈ ಪ್ರಕಾರವಾಗಿ ತಮೋಗುಣವು ನಿದ್ರೆ, ಆಲಸ್ಯ ಮತ್ತು ಪ್ರಮಾದ ಈ ಮೂರು ಪ್ರಕಾರಗಳಿಂದ ಶುದ್ಧ ನಿರುಪಾಧಿಕ ಜೀವನನ್ನು ಬಂಧಿಸುವುದು ॥೧೯೩॥

ಅಗ್ನಿಯು ಕಟ್ಟಿಗೆಯಲ್ಲಿ ಸಂಚರಿಸಿದಾಗ ಅದು ಕಟ್ಟಿಗೆಯ ಆಕಾರದಂತೆ ಕಾಣುವುದು, ಅಥವಾ ಆಕಾಶವು ಮಡಿಕೆಯಲ್ಲಿ ವ್ಯಾಪಿಸಿರುವುದರಿಂದ ಅದಕ್ಕೆ 'ಘಟಾಕಾಶ' ವೆನ್ನುವರು ॥೧೯೪॥

ಅಥವಾ ತುಂಬಿದ ಸರೋವರದಲ್ಲಿ ಚಂದ್ರನ ಬಿಂಬವು ಕಾಣಿಸುವಂತೆ ಜೀವನು ಗುಣಪಾಶದಿಂದ ಬದ್ಧನಾಗಿದ್ದಕ್ಕೆ ಗುಣದ ಲಕ್ಷಣದಂತೆ ಕಾಣುವನು ॥೧೯೫॥

ಶ್ಲೋಕಾರ್ಥ :- ಸತ್ತ್ವಗುಣವು ಜೀವನನ್ನು ಸುಖಾಸಕ್ತಿಯಿಂದ ಕಟ್ಟಿಹಾಕುತ್ತದೆ. ರಜೋಗುಣವು ಕರ್ಮಗಳಲ್ಲಿ ಬದ್ಧನನ್ನಾಗಿ ಮಾಡುತ್ತದೆ. ತಮೋಗುಣವು ಜ್ಞಾನವನ್ನು ಆವರಿಸಿ ಪ್ರಮಾದದಲ್ಲಿ ಹಾಕುವುದು ॥೯॥

ಶ್ಲೋಕಾರ್ಥ :- ಅರ್ಜುನಾ! ರಜೋಗುಣ ತಮೋಗುಣಗಳನ್ನು ಹತ್ತಿಟ್ಟು ಸತ್ತ್ವಗುಣವೂ, ಅದರಂತೆ ರಜೋಗುಣವನ್ನೂ, ಸತ್ತ್ವಗುಣವನ್ನೂ, ಹಿಮ್ಮೆಟ್ಟಿಸಿ ತಮೋಗುಣವೂ ಮತ್ತು ತಮೋಗುಣವನ್ನೂ ಸತ್ತ್ವಗುಣವನ್ನೂ ಕಳೆಗುಂದಿಸಿ ರಜೋಗುಣವು ಎದ್ದು ಕಾಣುವುವು ॥೧೦॥

ಇಲ್ಲಿ ನೋಡು, ಕಫ ಮತ್ತು ವಾತಗಳನ್ನು ಹಿಂದಕ್ಕೆ ಸರಿಸಿ ದೇಹದಲ್ಲಿ ಪಿತ್ತವು ಬೆಳೆದಾಗ ಅದು ಶರೀರಕ್ಕೆ ತಪ್ತನನ್ನಾಗಿ ಮಾಡುವುದು ॥೧೯೬॥

ಅಥವಾ ಬೇಸಿಗೆಕಾಲ ಮತ್ತು ಮಳೆಗಾಲ ಹೊರಟು ಹೋದಾಗ ಚಳಿಯು ಬಿದ್ದಾಗ ಆಕಾಶವು ನಾಲ್ಕೂ ಕಡೆಯಿಂದ ಶೀತವಾಗಿ ಬಿಡುವುದು ॥೧೯೭॥

ಅಥವಾ ಜಾಗ್ರತ ಮತ್ತು ಸ್ವಪ್ನ ಈ ಅವಸ್ಥೆಗಳು ಇಲ್ಲದಾಗಿ ಗಾಢವಾದ ನಿದ್ರೆ ಹತ್ತಿದಾಗ ಕ್ಷಣಕಾಲ ಚಿತ್ತ ಹೇಗೆ ಆಗುವುದೋ ॥೧೯೮॥

ಅದರಂತೆ ರಜ ಮತ್ತು ತಮ ಇವುಗಳಿಗಿಂತ ಸತ್ತ್ವಗುಣವು ಅಧಿಕ ಬೆಳೆದಾಗ "ನಾನು ಸುಖಿಯಾಗಿರುವೆ' ಹೀಗೆ ಆ ಜೀವಕ್ಕೆ ಹೇಳಲು ಹಚ್ಚುವುದು ॥೧೯೯॥

ಅದರಂತೆಯೇ ಸತ್ತ್ವ ಮತ್ತು ರಜಗುಣಗಳ ಲೋಪವಾಗಿ ತಮದ ಪ್ರಾಬಲ್ಯವಾಗುವಾಗ ಸಹಜವಾಗಿ ಪ್ರಮಾದಗಳು ನಡೆಯುವುವು ॥೨೦೦॥

ಇದೇ ರೀತಿಯಲ್ಲಿ ಸತ್ತ್ವ ಮತ್ತು ತಮ ಈ ಗುಣಗಳನ್ನು ಹತ್ತಿಕ್ಕಿ ರಜೋಗುಣವು ಬಲಿಯುವುದು ॥೨೦೧॥

ಆಗ ದೇಹದಲ್ಲಿರುವ ದೇಹದ ರಾಜನಾದ ಜೀವಾತ್ಮನು ಈತನಿಗೆ ಕರ್ಮದ ಹೊರತಾಗಿ ಉಳಿದ ಯಾವುವೂ ಉತ್ತಮವಾಗಿ ಕಾಣಿಸುವುದಿಲ್ಲ ॥೨೦೨॥

ತ್ರಿಗುಣ ವೃದ್ಧಿ ನಿರೂಪಣ । ತೀ ಶ್ಲೋಕೀ ಸಾಂಗಿತಲೇ ಜಾಣ । ಆತಾ ಸತ್ತ್ವಾದಿ ವೃದ್ಧಿ ಲಕ್ಷಣ । ಸಾದರ ಪರಿಯೇಸೀ ॥೨೦೩॥

ಸರ್ವದ್ವಾರೇಷು ದೇಹೇಽಸ್ಮಿನ್ ಪ್ರಕಾಶ ಉಪಜಾಯತೇ ।
ಜ್ಞಾನಂ ಯದಾ ತದಾ ವಿದ್ಯಾತ್ ವಿವೃದ್ಧಂ ಸತ್ತ್ವಮಿತ್ಯುತ ॥೧೧॥

ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ ।
ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ ॥೧೨॥

ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ ।
ತಮಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನಂದನ ॥೧೩॥

ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್ ।
ತದೋತ್ತಮವಿದಾಂ ಲೋಕಾನ್ ಅಮಲಾನ್ ಪ್ರತಿಪದ್ಯತೇ ॥೧೪॥

ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ ।
ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ ॥೧೫॥

ಪೈ ರಜತಮವಿಜಯೇ । ಸತ್ತ್ವ ಗಾ ದೇಹೀ ಇಯೇ । ವಾಢತಾ ಚಿನ್ಹೇ ತಿಯೇ । ಐಸೀ ಹೋತೀ ॥೨೦೪॥ ಜೇ ಪ್ರಜ್ಞಾ ಆಂತುಲೀಕಡೇ । ನ ಸಮಾತೀ ಬಾಹೇರೀ ವೋಸಂಡೇ । ವಸಂತೀ ಪದ್ಮ ಖಂಡೇ । ದೃತೀ ಜೈಸೀ ॥೨೦೫॥ ಸರ್ವೇಂದ್ರಿಯಾಂಚ್ಯಾ ಆಂಗಣೇ । ವಿವೇಕ ಕರೀ ರಾಬಣೇ । ಸಾಚಚಿ ಕರಚರಣೇ । ಹೋತೀ ಡೋಳೇ ॥೨೦೬॥ ರಾಜಹಂಸಾಪುಢೇ । ಚಾಂಚೂಚೇ ಆಗರಡೇ । ತೋಡಿ ಜೇವೀ ಝುಗಡೇ । ಕ್ಷೀರನೀರಾಚೇ ॥೨೦೭॥ ತೇವೀ ದೋಷಾದೋಷ ವಿವೇಕೀ । ಇಂದ್ರಿಯೇಂಚಿ ಹೋತೀ ಪಾರಖೀ । ನಿಯಮು ಬಾರೇ ಪಾಯಿಕೀ । ವೋಳಗೇ ತೈ ॥೨೦೮॥ ನಾಯಿಕಣೇ ತೇ ಕಾನಚಿ ವಾಳೀ । ನ ಪಹಾಣೇ ತೇ ದಿಠೀಚಿ ಗಾಳೀ । ಅವಾಚ್ಯ ತೇ ಟಾಳೀ । ಜೀಭಚಿ ಗಾ ॥೨೦೯॥ ವಾತೀ ಪುಢಾ ಜೈಸೇ । ಪಳೋಲಾಗೇ ಕಾಳವಸೇ । ನಿಷಿದ್ಧ ಇಂದ್ರಿಯಾ ತೈಸೇ । ಸಮೋರ ನೋಹೇ ॥೨೧೦॥ ಧಾರಾಧರಕಾಳೇ । ಮಹಾನದೀ ಉಚಂಬಳೇ । ತೈಸೀ ಬುದ್ಧಿ ಪಘಳೇ । ಶಾಸ್ತ್ರಜಾತೀ ॥೨೧೧॥ ಅಗಾ ಪುನವೇಚ್ಯಾ ದಿವಶೀ । ಚಂದ್ರಪ್ರಭಾ ಧಾಂವೇ ಆಕಾಶೀ। ಜ್ಞಾನೀ ವೃತ್ತಿ ತೈಸೀ । ಫಾಂಕೇ ಸೈಂಘ ॥೨೧೨॥ ವಾಸನಾ ಏಕವಟೇ । ಪ್ರವೃತ್ತಿ ವೋಹಟೇ । ಮಾನಸ ವಿಟೇ । ವಿಷಯಾಂವರೀ ॥೨೧೩॥

ಈ ಪ್ರಕಾರವಾಗಿ ತ್ರಿಗುಣವೃದ್ಧಿ ನಿರೂಪಣೆಯನ್ನು ಮೂರು ಶ್ಲೋಕಗಳಿಂದ ಮಾಡಲಾಗಿದೆ. ಈಗ ಸತ್ತ್ವಗುಣದ ವೃದ್ಧಿಯ ಲಕ್ಷಣಗಳನ್ನು ಸಾದರ ಪೂರ್ವಕವಾಗಿ ಕೇಳು ।।೨೦೩।।

ಶ್ಲೋಕಾರ್ಥ :- ದೇಹದಲ್ಲಿ ಅವಯವ ದ್ವಾರಗಳಲ್ಲೆಲ್ಲಾ ಜ್ಞಾನಪ್ರಕಾಶವು ಪ್ರಕಟವಾಗುತ್ತಿದ್ದರೆ, ಅಂತರ್ಯದಲ್ಲಿ ಸತ್ತ್ವಗುಣವು ಅತಿಶಯವಾಗಿದೆ ಎಂದು ತಿಳಿಯಬೇಕು ।।೧೧।।

ಶ್ಲೋಕಾರ್ಥ :- ರಜೋಗುಣವು ವೃದ್ಧಿಯಾದರೆ ಲೋಭವೂ, ಪ್ರವೃತ್ತಿಶೀಲತೆಯೂ, ಕಾರ್ಯಲಂಪಟತೆಯೂ ಅಶಾಂತಿಯೂ, ಅತ್ಯಾಸೆಯೂ ಉತ್ಪತ್ತಿಯಾಗುವುವು ।।೧೨।।

ಶ್ಲೋಕಾರ್ಥ :- ಕುರುನಂದನಾ! ತಮೋಗುಣವು ಹೆಚ್ಚಾದರೆ ಮಂದತ್ವ ಕರ್ತವ್ಯಗಳಲ್ಲಿ ಅಪ್ರವೃತ್ತಿ ಪ್ರಮಾದ ಮೋಹ ಮೂಢತ್ವಗಳು ಎದ್ದು ಕಾಣುತ್ತವೆ ।।೧೩।।

ಶ್ಲೋಕಾರ್ಥ :- ಸತ್ತ್ವಗುಣವು ಅಭಿವೃದ್ಧಿಯಾದಾಗ ದೇಹವನ್ನು ಬಿಟ್ಟ ದೇಹಿಯು ಉತ್ತಮರಿಗೆ ಯೋಗ್ಯವಾದ ಪುಣ್ಯಲೋಕವನ್ನು ಪಡೆಯುತ್ತಾನೆ ।।೧೪।।

ಶ್ಲೋಕಾರ್ಥ :- ರಜೋಗುಣವು ವೃದ್ಧಿಯಾದಾಗ ಸತ್ತರೆ ಕರ್ಮಾಸಕ್ತರ ವಂಶದಲ್ಲಿ ಹುಟ್ಟುತ್ತಾನೆ. ತಮೋಗುಣವು ಅಧಿಕವಾದಾಗ ಸತ್ತವನು ಪಶುಪಕ್ಷಿ ಸ್ಥಾವರಾದಿ ಮೂಢ ಜನ್ಮಗಳಲ್ಲಿ ಹುಟ್ಟುತ್ತಾನೆ ।।೧೫।।

ರಜ ಮತ್ತು ತಮ ಈ ಗುಣಗಳನ್ನು ಗೆದ್ದು ಸತ್ತ್ವಗುಣವು ಈ ದೇಹದಲ್ಲಿ ಬೆಳೆಯುವುದೋ, ಆಗ ಆಗುವ ಲಕ್ಷಣಗಳು ಹೀಗಿರುತ್ತವೆ ।।೨೦೪।।

ವಸಂತ ಋತುವಿನಲ್ಲಿ ಕಮಲದ ಹೂವುಗಳು ಅರಳಿದಾಗ ಅವುಗಳ ಸುಗಂಧವು ನಾಲ್ಕು ಕಡೆಗೆ ಪಸರಿಸುವಂತೆ ಜ್ಞಾನವು ಅಂತರ್ಯಾಮಿಯಲ್ಲಿ ಓತಪ್ರೋತ ತುಂಬಿ ಹೊರಗೆ ಬೀಳುವುದು ।।೨೦೫।।

ಎಲ್ಲ ಇಂದ್ರಿಯಗಳಲ್ಲಿ ವಿಚಾರವಿರುವುದು ಮತ್ತು ನಿಜವಾಗಿಯೂ ಕೈಕಾಲುಗಳಿಗೆ ಕಣ್ಣುಗಳು ಬರುವುವು. ಸತ್ಕರ್ಮ, ದುಷ್ಕರ್ಮ ಇವು ಇವರಿಗೆ ಮಾತ್ರ ತಿಳಿಯುವುವು ।।೨೦೬।।

ರಾಜಹಂಸ ಪಕ್ಷಿಯ ಮುಂದೆ ಹಾಲು ನೀರು ಕೂಡಿಸಿ ಇಟ್ಟರೆ ಅದು ತನ್ನ ಚುಂಚುವಿನಿಂದ ನೀರನ್ನು ಬಿಟ್ಟು ಹಾಲು ಮಾತ್ರ ಸೇವಿಸುವುದು ।।೨೦೭।।

ಅದರಂತೆ ಇಂದ್ರಿಯಗಳು ಒಳ್ಳೆಯ ಕೆಟ್ಟ ಕರ್ಮಗಳ ಪರೀಕ್ಷೆ ಮಾಡುವುವು ಮತ್ತು ನಿಯಮವು ಇವರ ಸೇವೆಯನ್ನು ಮಾಡುವುದು ।।೨೦೮।।

ಕೇಳಬಾರದ ಮಾತುಗಳನ್ನು ಆತನ ಕಿವಿಗಳು ಕೇಳುವುದಿಲ್ಲ, ನೋಡಬಾರದ ವಸ್ತುಗಳನ್ನು ಆತನ ಕಣ್ಣುಗಳು ನೋಡುವುದಿಲ್ಲ, ಆಡಬಾರದ ಮಾತುಗಳನ್ನು ಆತನ ನಾಲಿಗೆಯು ಮಾತಾನಾಡುವುದಿಲ್ಲ ।।೨೦೯।।

ಕಾಡಿಗೆ ದೀಪದ ಮುಂದಿರದೇ ಹೊರಗೆ ಹೋಗುವುದು. ಅದರಂತೆ ನಿಷಿದ್ಧ ವ್ಯವಹಾರಗಳು ಈತನ ಇಂದ್ರಿಯಗಳ ಎದುರು ಬರುವುದೇ ಇಲ್ಲ ।।೨೧೦।।

ನದಿಯು ಮಳೆಗಾಲದಲ್ಲಿ ನೀರಿನಿಂದ ತುಂಬಿ ಹರಿಯುವುದು. ಅದರಂತೆ ಈತನ ಬುದ್ಧಿಯು ಎಲ್ಲ ಶಾಸ್ತ್ರಗಳಲ್ಲಿಯೂ ಬೆಳೆಯುವುದು ।।೨೧೧।।

ಯಾವ ಪ್ರಕಾರವಾಗಿ ಪೌರ್ಣಿಮೆಯ ದಿನ ಆಕಾಶದ ತುಂಬ ಚಂದ್ರನ ಪ್ರಕಾಶವೂ ಪಸರಿಸಿರುವಂತೆ, ಈತನ ವೃತ್ತಿಯು ಎಲ್ಲ ಜ್ಞಾನಗಳಲ್ಲಿ ಬೆಳಗುವುದು ।।೨೧೨।।

ಆತನ ಎಲ್ಲ ವಾಸನೆಗಳು ಒಂದುಗೂಡಿ ಪ್ರವೃತ್ತಿ ಮಾರ್ಗದತ್ತ ಆತನ ಮನಸ್ಸು ಹೋಗುವುದಿಲ್ಲ. ಅದರಂತೆ ಆತನ ಮನಸ್ಸಿಗೆ ವಿಷಯದ ಬೇಸರವಾಗುವುದು ।।೨೧೩।।

ಏವಂ ಸತ್ತ್ವ ವಾಢೇ । ತೈ ಹೇ ಚಿನ್ಹ ಪುಡೇ । ಆಣಿ ನಿಧನಹೀ ಘಡೇ । ತೇವ್ಹಾಂಚಿ ಜರೀ ।೨೧೪॥ ಕಾ ಪಾಹಾಲೇನಿ ಸುಯಾಣೇ । ಜಾಲಯಾ ಪರಗುಣೇ । ಪಢಿಯಂತೇ ಪಾಹುಣೇ । ಸ್ವರ್ಗೌನಿಯಾ ।೨೧೫॥ ತರೀ ಜೈಸೀಚಿ ಘರೀಂಚೀ ಸಂಪತ್ತೀ । ಆಣೀ ತೈಸೀಚಿ ಔದಾರ್ಯ ಧೈರ್ಯವೃತ್ತೀ । ಮಾ ಪರತ್ರಾ ಆಣಿ ಕೀರ್ತೀ । ಕಾ ನೋಹಾವೇ? ।೨೧೬॥ ಮಗ ಗೋಮಟೇಯಾ ತಯಾ । ಜಾವಳೀ ಅಸೇ ಧನಂಜಯಾ । ತೇವೀ ಸತ್ತ್ವೀ ಜಾಣೇ ದೇಹಾ । ಕೇ ಆಥೀ ಗಾ? ।೨೧೭॥ ಜೇ ಸ್ವಗುಣೇ ಉದ್ಭಟ । ಘೇಊನೀ ಸತ್ವ ಚೋಖಟ । ನಿಗೇ ಸಾಂಡೂನಿ ಕೋಪಟ । ಭೋಗಕ್ಷೇಮ ಹೇ ।೨೧೮॥ ಅವಚಟೇ ಐಸಾ ಜೋ ಜಾಯೇ । ತೋ ಸತ್ತ್ವಾಚಾಚಿ ನವಾ ಹೋಯೇ । ಕಿಂಬಹುನಾ ಜನ್ಮ ಲಾಹೇ । ಜ್ಞಾನಿಯಾಮಾಜೀ ।೨೧೯॥ ಸಾಂಗ ಪಾ ಧನುರ್ಧರಾ । ರಾವೋ ರಾಯಪಣೇ ಡೋಂಗರಾ । ಗೇಲಿಯಾ ಅಪುರಾ । ಹೋಯ ಕಾಈ? ।೨೨೦॥ ನಾತರೀ ಯೇಥೀಂಚಾ ದಿವಾ । ನೇಲಿಯಾ ಸೇಜಿಯಾ ಗಾಂವಾ ।ತೋ ತೇಥೇ ತರೀ ಪಾಂಡವಾ । ದೀಪಚಿ ಕೀ ।೨೨೧॥ ತೈಸೀ ತೇ ಸತ್ತ್ವಶುದ್ಧೀ । ಆಗಳೀ ಜ್ಞಾನೇಂಸೀ ವೃದ್ಧೀ । ತರಂಗಾವೋ ಲಾಗೇ ಬುದ್ಧೀ । ವಿವೇಕಾವರೀ ।೨೨೨॥ ಪೈ ಮಹದಾದಿ ಪರಿಪಾಠೀ । ವಿಚಾರೂನಿ ಶೇವಟೀ । ವಿಚಾರಾಸಕಟ ಪೋಟೀ । ಜಿರೋನಿ ಜಾಯ ।೨೨೩॥ ಛತ್ತಿಸಾ ಸದತಿಸಾವೇ । ಚೋವಿಸಾ ಪಂಚವಿಸಾವೇ । ತಿನ್ಹೀ ನುರೋನಿ ಸ್ವಭಾವೇ । ಚತುರ್ಥ ಜೇ ।೨೨೪॥ ಐಸೇ ಸರ್ವ ಜೇ ಸರ್ವೋತ್ತಮ । ಜಾಲೇ ಅಸೇ ಜಯಾ ಸುಗಮ । ತಯಾಸವೇ ನಿರುಪಮ । ಲಾಹೇ ದೇಹ ।೨೨೫॥ ಇಯಾಚಿ ಪರೀ ದೇಖ । ತಮಸತ್ತ್ವ ಅಧೋಮುಖ । ಬೈಸೋನಿ ಜೈ ಆಗಳೀಕ । ಧರೀ ರಜ ।೨೨೬॥ ಆಪುಲಿಯಾ ಕಾರ್ಯಾಚಾ । ಧುಮಾಡ ಗಾಂವೀ ದೇಹಾಚಾ । ಮಾಜವೀ ತೈ ಚಿನ್ಹಾಂಚಾ । ಉದಯೋ ಐಸಾ ।೨೨೭॥ ಪಾಂಜರಲೀ ವಾಹಟುಳೀ । ಕರೀ ವೇಗಳ ವೇಂಟಾಳೀ । ತೈಸೀ ವಿಷಯೀ ಸರಳೀ । ಇಂದ್ರಿಯಾ ಹೋಯ ।೨೨೮॥ ಪರದಾರಾದಿ ಪಡೇ । ಪರೀ ವಿರುದ್ಧ ಐಸೇ ನಾವಡೇ । ಮಗ ಶೇಳಿಯೇಚೇನಿ ತೋಂಡೇ । ಸೈಂಘ ಚಾರೀ ।೨೨೯॥ ಹಾ ಠಾಯವರೀ ಲೋಭು । ಕರೀ ಸ್ವೈರತ್ವಾಚಾ ರಾಬು । ವೇಂಟಾಳಿತಾ ಅಲಾಭು । ತೇ ತೇ ಉರೇ ।೨೩೦॥ ಆಣಿ ಆಡ ಪಡಲಿಯಾ । ಉದ್ಯಮ ಜಾತೀ ಭಲತಿಯಾ । ಪ್ರವೃತ್ತಿ ಧನಂಜಯಾ । ಹಾತು ನ ಕಾಢೀ ।೨೩೧॥

ಈ ಪ್ರಕಾರವಾಗಿ ಸತ್ತ್ವಗುಣಗಳು ಬೆಳೆದು ಆತನಲ್ಲಿ ಕಾಣಿಸುತ್ತಿರುವಾಗ ಒಂದು ವೇಳೆ ಆತನು ಮರಣನಾದರೆ ।।೨೧೪।।

ಧನ ಧಾನ್ಯದ ಸಮೃದ್ಧ ಕಾಲದಲ್ಲಿ ಹಬ್ಬದ ಪ್ರಸಂಗ ಬಂದು ಪಂಚ ಪಕ್ವಾನ್ನದ ಅಡುಗೆ ಸಿದ್ಧಗೊಂಡಾಗ, ಸತ್ತು ಸ್ವರ್ಗದಲ್ಲಿರುವ ಪ್ರಿಯ ಬಂಧು ಬಳಗದವರು ಬಂದರೆ ।।೨೧೫।।

ಮನೆಯಲ್ಲಿ ಹೇರಳವಾಗಿ ಧನಸಂಪತ್ತು ಇದ್ದು, ಮೇಲಾಗಿ ಉದಾರತನವೂ, ಧೀರತನವೂ ಇದ್ದಾಗ ಈತನ ಕೀರ್ತಿಯು ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಏಕೆ ಬೆಳೆಯಬಾರದು? ।।೨೧೬।।

ಆಗ ಅರ್ಜುನಾ, ಆ ಒಳ್ಳೆಯ ಪ್ರಸಂಗಕ್ಕೆ ಉಪಮೆ ಇದೆಯೇ? ಅದರಂತೆ ಸತ್ತ್ವಗುಣ ದೇಹಕ್ಕೆ ಮರಣ ವಾದಾಗ ಆತನು ಬೇರೆ ಭಾಗಕ್ಕೆ ಹೇಗೆ ಹೋದಾನು? ।।೨೧೭।।

ಕಾರಣ, ಉತ್ತಮ ಆಚರಣೆಗಳನ್ನು ಮಾಡುವವನು, ಭೋಗ ಭೋಗಿಸುವ ಶರೀರವನ್ನು ಬಿಟ್ಟು ಶುದ್ಧ ಸತ್ತ್ವ ಗುಣವನ್ನು ಜೊತೆಗೆ ಒಯ್ಯುವನು ।।೨೧೮।।

ಈ ಪ್ರಕಾರವಾಗಿ ದೇಹವನ್ನು ಬಿಟ್ಟವನು ಕೇವಲ ಸತ್ತ್ವದ ಮೂರ್ತಿಯಾಗಿ ಜ್ಞಾನಿಯರಲ್ಲಿ ಜನ್ಮ ಧರಿಸುವನು ।।೨೧೯।।

ಧನುರ್ಧರಾ, ಗಾದಿಯಲ್ಲಿ ಕುಳಿತ ರಾಜನು ಒಂದು ವೇಳೆ ಗುಡ್ಡಕ್ಕೆ ಹೋದರೆ ಅಲ್ಲಿಯೂ ಆತನಿಗೆ ಏನಾದರೂ ಕೊರತೆ ಬೀಳಬಹುದೇ? ಹೇಳು ನೋಡೋಣ ।।೨೨೦।।

ಹೇ ಪಾಂಡವನೇ, ಊರಿಂದ ಊರಿಗೆ ಒಯ್ದ ದೀಪದ ಬೆಳಕು ಒಂದೇ ಸಮವಾಗಿ ಬೀಳುವುದು ।।೨೨೧।।

ಅದರಂತೆ ಸತ್ತ್ವಗುಣದ ವೃದ್ಧಿಯಾದ ಮೇಲೆ ಜ್ಞಾನವು ಅಧಿಕವಾಗಿ ಬೆಳೆಯುವುದು, ಮತ್ತು ಬುದ್ಧಿಯು ವಿವೇಕದಲ್ಲಿ ನೋಡುತ್ತಿರುವುದು ।।೨೨೨।।

ತದನಂತರ ಮಹತ್ ತತ್ತ್ವಾದಿ ಅನಾತ್ಮಕ ಪದಾರ್ಥಗಳ ವಿಚಾರ ಮಾಡಿ ಆತನು ಆ ವಿಚಾರ ಸಹ ಆತ್ಮಸ್ವರೂಪದಲ್ಲಿ ನಿಮಗ್ನನಾಗುವನು ।।೨೨೩।।

(ಹದಿಮೂರನೆಯ ಅಧ್ಯಾಯದಲ್ಲಿ ವರ್ಣಿಸಿದಂತೆ) ಮೂವತ್ತಾರು ತತ್ತ್ವದಿಂದ ಮೂವತ್ತೇಳನೆಯ, ಸಾಂಖ್ಯ ಮತದಂತೆ ಇಪ್ಪತ್ನಾಲ್ಕರಿಂದ ಇಪ್ಪತ್ತೈದನೆಯ ಮತ್ತು ಮೂರು ಗುಣಗಳಿಂದ ಬೇರೆಯಾಗಿರುವ ನಾಲ್ಕನೆಯದಾದ ।।೨೨೪।।

ಎಲ್ಲಕ್ಕಿಂತಲೂ ಉತ್ತಮವಾದ ಬ್ರಹ್ಮವು ಇದು ಯಾರಿಗೆ ಪ್ರಾಪ್ತಿಯಾಗಿರುವುದೋ, ಅವರ ಕುಲದಲ್ಲಿ ಸರ್ವೋತ್ಕೃಷ್ಟ ದೇಹ ಪ್ರಾಪ್ತಿಯಾಗುವುದು ।।೨೨೫।।

ಇದರಂತೆಯೇ ಇಲ್ಲಿ ನೋಡು, ತಮೋಗುಣ ಮತ್ತು ಸತ್ವಗುಣ ಇವುಗಳಿಗೆ ಹತ್ತಿಕ್ಕಿ ಯಾವ ವೇಳೆಯಲ್ಲಿ ರಜೋ ಗುಣವು ಬೆಳೆಯುವುದೋ ।।೨೨೬।।

ಮತ್ತು ಯಾವ ವೇಳೆಯಲ್ಲಿ ಆತನು ಶರೀರರೂಪ ಗ್ರಾಮದಲ್ಲಿ ತನ್ನ ಕೃತಿಗಳನ್ನು ನಾಲ್ಕು ಕಡೆಯಲ್ಲಿ ಪ್ರಕಟಿಸುವನೋ, ಆಗ ಆತನ ಲಕ್ಷಣಗಳು ಹೀಗಿರುವುವು ।।೨೨೭।।

ಬಿರುಗಾಳಿ ಬಿಟ್ಟಾಗ ಅದು ಎಲ್ಲ ದಿನಸುಗಳನ್ನು ಒಂದು ಮಾಡಿ ಮೇಲೆ ಹಾರಿಸಿ ಬಿಡುವಂತೆ ಇಂದ್ರಿಯಗಳು ವಿಷಯಗಳತ್ತ ನೇರವಾಗಿ ಹೋಗುವುವು ।।೨೨೮।।

ಪರಸ್ತ್ರೀಯು ದೃಷ್ಟಿಗೆ ಬಿದ್ದರೆ ಆಕೆಯ ಭೋಗವನ್ನು ಭೋಗಿಸಲು ಆತನಿಗೆ ನಿಷಿದ್ಧವಾಗಿ ಕಾಣುವುದಿಲ್ಲ. ಆಡು ಮೇಯುವಂತೆ ಯಥೇಚ್ಛವಾಗಿ ಭೋಗಿಸುವನು ।।೨೨೯।।

ಲೋಭವು ಎಷ್ಟೊಂದು ಬೆಳೆದಿರುವುದೆಂದರೆ, ಯಾವ ವಸ್ತುವು ಆತನ ದೃಷ್ಟಿಗೆ ಬೀಳದೇ ಇದೆಯೋ, ಅಷ್ಟು ಮಾತ್ರ ಆತನಿಂದ ಬೇರೆ ಇರುವುದು ।।೨೩೦।।

ಅರ್ಜುನಾ, ಯಾವುದೇ ಉದ್ಯೋಗವು ಈತನ ಮುಂದೆ ಬಂದರೆ ಅದನ್ನು ಮಾಡುವುದಕ್ಕೆ ಹಿಂಜರಿಯುವುದಿಲ್ಲ ।।೨೩೧।।

ತೇವೀಂಚಿ ಏಖಾದಾ ಪ್ರಾಸಾದು । ಕಾ ಕರಾವಾ ಅಶ್ವಮೇಧು । ಐಸಾ ಅಚಾಟ ಛಂದು । ಘೇಊನಿ ಉಠೀ ।೮೩೨॥ ನಗರೇಂಚಿ ರಚಾವೀ । ಜಲಾಶಯೇ ನಿರ್ಮಾವೀ । ಮಹಾವನೇ ಲಾವಾವೀ । ನಾನಾ ವಿಧೇ ।೮೩೩॥ ಐಸೈಸಾ ಅಫಾಟೀ ಕರ್ಮೀ । ಸಮಾರಂಭು ಉಪಕ್ರಮೀ । ಆಣಿ ದೃಷ್ಟಾದೃಷ್ಟಕಾಮೀ । ಪುರೇ ನ ಮ್ಹಣೇ ।೮೩೪॥ ಸಾಗರುಹೀ ಸಾಂಡೀ ಪಡೇ । ಆಗೀ ನ ಲಾಗೇ ತೀನ ಕವಡೇ । ಐಸೇ ಅಭಿಲಾಷೀ ಜೋಡೇ । ದುರ್ಭರತ್ವ ।೮೩೫॥ ಸ್ಪೃಹಾ ಮನಾ ಪುಢಾ ಪುಢಾ । ಆಶೇಚಾ ಘೇ ದವಡಾ । ವಿಶ್ವ ಘಾಪೇ ಚಾಡಾ । ಪಾಯಾ ತಳೀ ।೮೩೬॥ ಇತ್ಯಾದಿ ವಾಢತಾ ರಜೀ । ಇಯೇ ಚಿನ್ಹೇ ಹೋತೀ ಸಾಜೀ । ಆಣಿ ಐಸಾ ಸಮಾಜೀ । ವೇಚೇ ಜರೀ ದೇಹ ।೮೩೭॥ ತರೀ ಆಘವಾಚಿ ಇಹೀ । ಪರಿವಾರಲಾ ಆನೀ ದೇಹೀ । ರಿಗೇ ಪರೀ ಯೋನಿಹೀ । ಮಾನುಷಿಚೀ ।೮೩೮॥ ಸುರವಾಡೇಂಸಿ ಭಿಕಾರೀ । ವಸೋ ಪಾ ರಾಜಮಂದಿರೀ । ತರೀ ಕಾಯ ಅವಧಾರೀ । ರಾವೋ ಹೋಈಲ ? ।೮೩೯॥ ಬೈಲ ತೇಥೇ ಕರಬಾಡೇ । ಹೇ ನ ಚುಕೇ ಗಾ ಪುಡೇ । ನೇಇಜೋ ಕಾ ವರ್ಹಾಡೇ । ಸಮರ್ಥಾಚೇನಿ ।೮೪೦॥ ಮ್ಹಣೌನಿ ವ್ಯಾಪಾರಾ ಹಾತೀ । ಉಸಂತು ದಿಹಾ ನಾ ರಾತೀ । ತೈಸಯಾಚಿಯೇ ಪಾಂತೀ । ಜುಂಪಿಜೇ ತೋ ।೮೪೧॥ ಕರ್ಮಜಡಾಚ್ಯಾ ಠಾಯೀ । ಕಿಂಬಹುನಾ ಹೋಯ ದೇಹೀ । ಜೋ ರಜೋವೃತೀಚ್ಯಾ ಡೋಹೀ । ಬುಡೋನಿ ನಿಮೇ ।೮೪೨॥ ಮಗ ತೈಸಾಚಿ ಪುಢತೀ । ರಜಸತ್ತ್ವವೃತ್ತೀ । ಗಿಳೂನಿ ಯೇ ಉನ್ನತೀ । ತಮೋಗುಣ ।೮೪೩॥ ತೈಂಚಿ ಜಿಯೇ ಲಿಂಗೇ । ದೇಹೀಂಚೀ ಸಬಾಹ್ಯ ಸಾಂಗೇ । ತಿಯೇ ಪರಿಸ ಚಾಂಗೇ । ಶ್ರೋತ್ರಬಳೇ ।೮೪೪॥ ತರೀ ಹೋಯ ಐಸೇ ಮನ । ಜೈಸೇ ರವಿಚಂದ್ರಹೀನ । ರಾತ್ರೀಚೇ ಕಾ ಗಗನ । ಅಂವಸೇಚಿಯೇ ।೮೪೫॥ ತೈಸೇ ಅಂತರ ಅಸೋಸ । ಹೋಯ ಸ್ಫೂರ್ತಿಹೀನ ಉದ್ವಸ । ವಿಚಾರಾಚೇ ಭಾಷ । ಹಾರಪೇ ತೈ ।೮೪೬॥ ಬುದ್ಧಿ ಮೇಚವೇನಾ ಧೋಂಡೀ । ಹಾ ಠಾಯವರೀ ಮವಾಳೇ ಸಾಂಡೀ । ಆಠವೋ ದೇಶಧಡೀ । ಜಾಲಾ ದಿಸೇ ।೮೪೭॥ ಅವಿವೇಕಾಚೇನಿ ಮಾಜೇ । ಸಬಾಹ್ಯ ಶರೀರ ಗಾಜೇ । ಏಕಲೇನಿ ಘೇಪೇ ದೀಜೇ । ಮೌಢ್ಯ ತೇಥ ।೮೪೮॥ ಆಚಾರಭಂಗಾಚೀ ಹಾಡೇ । ರೂಪತೀ ಇಂದ್ರಿಯಾ ಪುಢೇ । ಮರೆ ಜರೀ ತೇಣೇ ಕಡೇ । ಕ್ರಿಯಾ ಜಾಯ ।೮೪೯॥ ಪೈ ಆಣಿಕಹೀ ಏಕ ದಿಸೇ ।ಜೇ ದುಷ್ಕೃತೀ ಚಿತ್ತ ಉಲ್ಹಾಸೇ । ಆಂಧಾರೀ ದೇಖಣೇ ಜೈಸೇ । ಡುಡುಳಾಚೇ ।೮೫೦॥

ಅದರಂತೆ ದೊಡ್ಡ ಪ್ರಮಾಣದ ಮಠ ಮಂದಿರಗಳನ್ನು ಕಟ್ಟಿಸುವುದು ಅಥವಾ ಅಶ್ವಮೇಧಯಾಗ ಮಾಡುವುದು ಇಂತಹ ಅಗಾಧ ಆಸಕ್ತಿಯ ಬೆನ್ನು ಹತ್ತುವನು ।।೭೩೨।।

ನಗರಗಳನ್ನು ರಚಿಸಬೇಕು ಅಥವಾ ದೊಡ್ಡ ಕೆರೆ (ಆಣೆ ಕಟ್ಟು) ಕಟ್ಟಬೇಕು, ಅಥವಾ ವಿಸ್ತೀರ್ಣ ಅರಣ್ಯದಲ್ಲಿ ತೋಟ ನಿರ್ಮಿಸಬೇಕು ।।೭೩೩।।

ಈ ಪ್ರಕಾರವಾಗಿ ವಿಲಕ್ಷಣವಾದ ದೊಡ್ಡ ಕಾರ್ಯಗಳನ್ನು ಕೈಗೆತ್ತಿಕೊಳ್ಳುವನು ಮತ್ತು ಇಹಪರ ಲೋಕದ ಪ್ರಾಪ್ತಿಯ ಇಚ್ಛೆಯು ಈತನಿಗೆ ಎಂದೂ ಕಡಿಮೆಯಾಗುವುದಿಲ್ಲ ।।೭೩೪।।

(ಎಷ್ಟು ನದಿಗಳು ಕೂಡಿದರೂ ಹೊಟ್ಟೆ ತುಂಬದ) ಸಮುದ್ರವು ರಜೋಗುಣದ ಮನುಷ್ಯನ ಎದುರು ಮೂಲಿ ಗುಂಪಾಗುವುದು. (ಎಷ್ಟು ಕಟ್ಟಿಗೆ ಹಾಕಿದರೂ ತೃಪ್ತವಾಗದ) ಅಗ್ನಿಗೆ ಈತನಲ್ಲಿ ಮೂರು ಕವಡಿಯ ಬೆಲೆ ಸಿಗುವುದಿಲ್ಲ. ಈತನಲ್ಲಿ ಇಷ್ಟೊಂದು ದುರ್ಭರತ್ವ, ಅತೃಪ್ತಿ ತುಂಬಿರುವುದು ।।೭೩೫।।

ಈತನ ಇಚ್ಛೆಯ ಓಟವು ಮನಸ್ಸಿನ ಮುಂದೆ ಇರುವುದು ಮತ್ತು ಎಲ್ಲ ವಿಶ್ವವು ಈತನಿಗೆ ಓಡಾಡಲು ಸಾಲುವುದಿಲ್ಲ ।।೭೩೬।।

ಈ ಪ್ರಕಾರವಾಗಿ ರಜೋಗುಣವು ಬೆಳೆದು ಅದರ ಲಕ್ಷಣಗಳು ತೋರುವುವು ಮತ್ತು ಇಂತಹ ಸ್ಥಿತಿಯಲ್ಲಿ ಆತನು ದೇಹವನ್ನು ಬಿಟ್ಟರೆ ।।೭೩೭।।

ಆಗ ಬೇರೆ ದೇಹದಲ್ಲಿ ಯಾದರೂ ಇದೇ ಗುಣಗಳಿಂದ ಕೂಡಿದವನಾಗಿ ಮನುಷ್ಯ ದೇಹದಲ್ಲಿಯೇ ಜನ್ಮ ಧರಿಸುವನು ।।೭೩೮।।

ಒಂದುವೇಳೆ, ಭಿಕ್ಷುಕನು ಎಲ್ಲ ಸುಖದೊಂದಿಗೆ ರಾಜಭುವನದಲ್ಲಿ ಕುಳಿತುಕೊಂಡರೆ, ಆತನು ರಾಜನಾಗಬಲ್ಲನೇ? ।।೭೩೯।।

ಎತ್ತು ಒಂದುವೇಳೆ ದೊಡ್ಡ ಶ್ರೀಮಂತ ಗೃಹಸ್ಥನ ಲಗ್ನದ ಪರಿವಾರದೊಂದಿಗೆ ಹೋದರೆ, ಅಲ್ಲಿ ಅದಕ್ಕೆ ತಿನ್ನಲು ದಿನದಂತೆ ಮೇವು ಮಾತ್ರ ಸಿಗುವುದು ।।೭೪೦।।

ಆದ್ದರಿಂದ ಯಾವ ವ್ಯಾಪಾರದಲ್ಲಿ ಹಗಲು ರಾತ್ರಿ ವಿಶ್ರಾಂತಿ ಇಲ್ಲವೋ, ಇವನು ಆ ಪಂಕ್ತಿಗೆ ಹೋಗಿ ಕೂಡುವನು ।।೭೪೧।।

ಯಾವನು ರಜೋತ್ಪತ್ತಿಯ ಮಡುವಿನಲ್ಲಿ ಬಿದ್ದು ಸಾಯುವನೋ, ಆ ಕಾಮ್ಯ ಕರ್ಮವನ್ನು ಮಾಡುವವನ ಮನೆತನದಲ್ಲಿ ಜನ್ಮ ಧರಿಸುವನು ।।೭೪೨।।

ಇದರಂತೆ ಮುಂದೆ ರಜ ಮತ್ತು ಸತ್ತ್ವಗುಣ ಇವುಗಳನ್ನು ಇಲ್ಲದಂತೆ ಮಾಡಿ ತಮೋಗುಣ ವೃತ್ತಿಯು ಹೆಚ್ಚಿಗೆ ಬೆಳೆಯುವುದು ।।೭೪೩।।

ಆ ವೇಳೆಯಲ್ಲಿ ದೇಹದೊಳಗೆ ಮತ್ತು ಬಾಹ್ಯದಲ್ಲಿ ಯಾವ ಚಿನ್ಹೆಗಳು ಕಾಣುವುವು ಎಂಬುದನ್ನು ಸರಿಯಾಗಿ ಕಿವಿಗೊಟ್ಟು ಕೇಳು ।।೭೪೪।।

ಚಂದ್ರ ಸೂರ್ಯರಿಬ್ಬರೂ ಇಲ್ಲದ ಅಮವಾಸ್ಯೆಯ ರಾತ್ರಿಯಂತೆ ಇವನ ಮನಸ್ಸು ಅಜ್ಞಾನದಿಂದ ತುಂಬಿಕೊಂಡಿರುವುದು ।।೭೪೫।।

ಹಾಗೆಯೇ ಅವನ ಅಂತಃಕರಣವು ಉತ್ಸಾಹ ಶೂನ್ಯ, ಪ್ರತಿಭೆಶೂನ್ಯ ಮತ್ತು ಉದಾಸವಾಗಿರುವುದು, ಯಾವುದೇ ಪ್ರಕಾರದ ವಿಚಾರದ ಮಾತೇ ಕಳೆದುಹೋಗಿರುವುದು ।।೭೪೬।।

ಇವನ ಬುದ್ಧಿಯ ಕಠಿಣತನದಲ್ಲಿ ಕಲ್ಲಿಗೂ ಹಿಂದೆ ಬೀಳಿಸುವುದು ಮತ್ತು ಸ್ಮರಣಶಕ್ತಿಯು ಮಾತ್ರ ದೇಶಾಂತರಕ್ಕೆ ಹೋದಂತೆ ಕಾಣಿಸುತ್ತದೆ ।।೭೪೭।।

ಈತನ ಶರೀರವು ಒಳಗೂ ಹೊರಗೂ ಅವಿವೇಕದಿಂದ ತುಂಬಿದ್ದು ಕಾಣುವುದು ಮತ್ತು ಅವನ ಎಲ್ಲ ವ್ಯಾಪಾರಗಳು ಮೂರ್ಖತನದಿಂದ ಕೂಡಿರುವುದು ।।೭೪೮।।

ಇವನ ಇಂದ್ರಿಯಗಳ ಮುಂದೆ ಅನಾಚಾರಗಳು ನಿಂತುಕೊಂಡಿರುವುವು. ಸತ್ತರೂ ಚಿಂತೆಯಿಲ್ಲ, ಅನಾಚಾರ ಕ್ರಿಯೆಗಳನ್ನೇ ಮಾಡುವನು ।।೭೪೯।।

ಯಾವ ಪ್ರಕಾರವಾಗಿ ಗೂಬೆಗೆ ರಾತ್ರಿಯ ಕತ್ತಲೆಯು ಸ್ವಚ್ಛವಾಗಿ ಕಾಣಿಸುವುದೋ, ಅದರಂತೆ ಇತರ ಜನರಕ್ಕಿಂತ ಕೆಟ್ಟ ಕೆಲಸ ಮಾಡಲು ಇವನ ಮನಸ್ಸಿಗೆ ಬಹಳ ಉತ್ಸಾಹ ಬರುವುದು ।।೭೫೦।।

ತೈಸೇ ನಿಷಿದ್ಧಾಚೇನಿ ನಾಂವೇ । ಭಲತೇಹೀ ಭರೇ ಹಾಂವೇ । ತಿಯೇವಿಷಯೀ ಧಾಂವೇ । ಘೇತೀ ಕರಣೇ ।೨೫೧॥ ಮದಿರಾ ನ ಘೇತಾ ಡುಲೇ । ಸನ್ನಿಪಾತೇವೀಣ ಬರಳೇ । ನಿಷ್ಪ್ರೇಮೇಂಚಿ ಭುಲೇ । ಪಿಸೇ ಜೈಸೇ ।೨೫೨॥ ಚಿತ್ತ ತರೀ ಗೇಲೇ ಆಹೇ । ಪರೀ ಉನ್ಮನೀ ತೇ ನೋಹೇ । ಐಸೇ ಮಾಲ್ಹಾತಿಜೇ ಮೋಹೇ । ಮಾಜಿರೇನಿ ।೨೫೩॥ ಕಿಂಬಹುನಾ ಐಸೈಸೀ । ಇಯೇ ಚಿನ್ಹೇ ತಮ ಪೋಷೀ । ಜೈ ವಾಢೇ ಆಯಿತೀಸೀ । ಆಪುಲಿಯಾ ।೨೫೪॥ ಆಣಿ ಹೇಂಚಿ ಹೋಯ ಪ್ರಸಂಗೇ । ಮರಣಾಚೇ ಜರೀ ಪಡೇ ಖಾಗೇ । ತರೀ ತೇತುಲೇನಿ ನಿಗೇ । ತಮೇಸೀ ತೋ ।೨೫೫॥ ರಾಈ ರಾಈಪಣ ಬೀಜೇ । ಸಾಂಠವೂನಿಯಾ ಅಂಗ ತ್ಯಜೇ । ಮಗ ವಿರೂಢೇ ತೈ ದುಜೇ । ಗೋಠೀ ಆಹೇ? ।೨೫೬॥ ಪೈ ಹೋಊನಿ ದೀಪಕಲಿಕಾ । ಯೇರು ಆಗೀ ವಿಝೋ ಕಾ । ಕಾ ಜೇಥ ಲಾಗೇ ತೇಥ ಅಸಕಾ । ತೋಚಿ ಆಹೇ ।೨೫೭॥ ಮ್ಹಣೌನಿ ತಮಾಚಿಯೇ ಲೋಥೇ । ಬಾಂಧೋನಿಯಾ ಸಂಕಲ್ಪಾತೇ । ದೇಹ ಜಾಯ ತೈ ಮಾಗೌತೇ । ತಮಾಚೇಚಿ ಹೋಯ ।೨೫೮॥ ಆತಾ ಕಾಯ ಯೇಣೇ ಬಹುವೇ । ಜೋ ತಮೋವೃದ್ಧಿ ಮೃತ್ಯು ಲಾಹೇ । ತೋ ಪಶು ಕಾ ಪಕ್ಷೀ ಹೋಯೇ । ಝಾಡ ಕಾ ಕೃಮೀ ।೨೫೯॥

ಕರ್ಮಣಃ ಸುಕೃತಸ್ಯಾಹುಃ ಸಾತ್ತ್ವಿಕಂ ನಿರ್ಮಲಂ ಫಲಮ್ ।<br>ರಜಸಸ್ತು ಫಲಂ ದುಃಖಮ್ ಅಜ್ಞಾನಂ ತಮಸಃ ಫಲಮ್ ।೧೬॥

ಯೇಣೇಂಚಿ ಪೈ ಕಾರಣೇ । ಜೇ ನಿಪಜೇ ಸತ್ತ್ವಗುಣೇ । ತೇ ಸುಕೃತ ಐಸೇ ಮ್ಹಣೇ । ಶ್ರೌತಸಮೋ ।೨೬೦॥ ಮ್ಹಣೌನಿ ತಯಾ ನಿರ್ಮಳಾ । ಸುಖಜ್ಞಾನೀ ಸರಳಾ । ಅಪೂರ್ವ ಯೇ ಫಳಾ । ಸಾತ್ತ್ವಿಕ ತೇ ।೨೬೧॥ ಮಗ ರಾಜಸಾ ಜಿಯಾ ಕ್ರಿಯಾ । ತಯಾ ಇಂದ್ರಾವಣೀ ಫಳಲಿಯಾ । ಜೇ ಸುಖೇ ಚಿತಾರೂನಿಯಾ । ಫಳತೀ ದುಃಖೇ ।೨೬೨॥ ಕಾ ನಿಂಬೋಳಿಯೇಚೇ ಪಿಕ । ವರಿ ಗೋಡ ಆಂತ ವಿಖ । ತೈಸೇ ತೇ ರಾಜಸ ದೇಖ । ಕ್ರಿಯಾಫಳ ।೨೬೩॥ ತಾಮಸ ಕರ್ಮ ಜಿತುಕೇ । ಅಜ್ಞಾನ ಫಳೇಂಚಿ ಪಿಕೇ । ವಿಷಾಂಕುರ ವಿಖೇ । ಜಿಯಾಪರೀ ।೨೬೪॥

ಸತ್ತ್ವಾತ್ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ ।<br>ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ ।೧೭॥

ಮ್ಹಣೌನಿ ಬಾರೇ ಅರ್ಜುನಾ । ಯೇಥ ಸತ್ತ್ವಚಿ ಹೇತು ಜ್ಞಾನಾ । ಜೈಸಾ ಕಾ ದಿನಮಾನಾ । ಸೂರ್ಯ ಹಾ ಪೈ ।೨೬೫॥

ಅದರಂತೆ ನಿಷಿದ್ಧ ಕರ್ಮಗಳನ್ನು ಮಾಡುವ ಬಲವಾದ ಅಪೇಕ್ಷೆ ಇದ್ದು ಅವನ ಇಂದ್ರಿಯಗಳ ಜಗ್ಗಾಟವೂ ಅದರ ಕಡೆಗೆ ಇರುವುದು ॥೨೫೧॥

ಇವನು ಸೆರೆ ಕುಡಿಯದೇ ಜೋಲಿ ಹೊಡೆಯುವನು, ಸನ್ನಿಪಾತವಾಗದೆಯೇ ಬಡಬಡಿಸುವನು ಮತ್ತು ಪ್ರೇಮವಿಲ್ಲದೇ ಹುಚ್ಚನಂತೆ ಅಳುವನು ॥೨೫೨॥

ಅವನ ಚಿತ್ತವು ಸ್ಥಿತಿಯಲ್ಲಿರುವುದೇ ಇಲ್ಲ, ಆದರೆ ಸಮಾಧಿಸ್ಥನಲ್ಲ. ಇದರಂತೆ ಮೋಹದ ಬೆಳವಣಿಗೆಯಿಂದ ಜ್ಞಾನಶೂನ್ಯನಾಗಿರುವನು ॥೨೫೩॥

ಒಟ್ಟಿನಲ್ಲಿ, ತನ್ನ ಎಲ್ಲ ಸಾಮಗ್ರಿಯೊಡನೆ ತಮೋಗುಣವು ಬೆಳೆದಾಗ ಈ ಪ್ರಕಾರದ ಲಕ್ಷಣಗಳು ಎದ್ದು ಕಾಣುವುವು ॥೨೫೪॥

ಮತ್ತು ಪ್ರಸಂಗಾನುಸಾರವಾಗಿ ಇದೇ ಸ್ಥಿತಿಯಲ್ಲಿ ಇವನಿಗೆ ಮರಣವಾದರೆ, ಬೇರೆ ಜನ್ಮವು ಅವನಿಗೆ ತಮೋಗುಣದಲ್ಲಿಯೇ ಪ್ರಾಪ್ತವಾಗುವುದು ॥೨೫೫॥

ಸಾಸ್ವಿಕಾಳು ಬಿತ್ತಿದಾಗ ಅದು ತನ್ನ ರೂಪವನ್ನು ಬಿಟ್ಟು ಗಿಡವಾಗುವುದು. ಆಗ ಅದಕ್ಕೆ ಬರುವ ಫಲವು ಸಾಸ್ವಿ ಹೊರತಾದ ಬೇರೆ ಫಲ ಹೇಗೆ ಬಂದೀತು? ॥೨೫೬॥

ಇದೇ ರೀತಿಯಾಗಿ ದೀಪವು ಹತ್ತಲಿ ಇಲ್ಲವೇ ಆರಲಿ, ಆದರೆ ಅಗ್ನಿಯು ಎಲ್ಲಿಯೇ ಹತ್ತಲಿ, ಅಲ್ಲಿ ಅದು ಅಗ್ನಿರೂಪವಾಗಿಯೇ ಇರುವುದು ॥೨೫೭॥

ಆದ್ದರಿಂದ ತನ್ನ ಸಂಕಲ್ಪದಲ್ಲಿ ತಮದ ಗಂಟು ಕಟ್ಟಿಕೊಂಡು ದೇಹಬಿಟ್ಟಾಗ ಪುನಃ ಅವನು ತಮೋಗುಣದಲ್ಲಿಯೇ ಹುಟ್ಟುವನು ॥೨೫೮॥

ಹೆಚ್ಚಿಗೇನು ಹೇಳಬೇಕು? ತಮೋಗುಣವು ಹೆಚ್ಚಿಗೆ ಬೆಳೆದಾಗ ಅವನು ಸತ್ತರೆ ಪುನಃ ಅವನು ಪಶು ಇಲ್ಲವೆ ಪಕ್ಷಿ ಅಥವಾ ಗಿಡಗಂಟಿ ಇಲ್ಲವೆ ಹುಳವಾಗಿ ಹುಟ್ಟುವನು ॥೨೫೯॥

ಶ್ಲೋಕಾರ್ಥ :- ಸಾತ್ತ್ವಿಕವಾದ ಒಳ್ಳೇ ಕೆಲಸಗಳಿಗೆ ನಿರ್ಮಲವಾದ ಫಲವಾಗುತ್ತದೆ. ರಾಜಸಿಕ ಕರ್ಮಗಳಿಗೆ ದುಃಖವೇ ಗಟ್ಟಿ. ತಾಮಸಿಕ ಕರ್ಮಗಳಿಗೆ ಅಜ್ಞಾನವೇ ಫಲ ॥೧೬॥

ಇದೇ ಕಾರಣದಿಂದ ಸತ್ತ್ವಗುಣದಿಂದ ಯಾವುದು ಉತ್ಪನ್ನವಾಗುವುದೋ, ಅದಕ್ಕೆ ''ಸುಕೃತ''ವೆಂದು ಶ್ರುತಿ ಸಮುದಾಯಗಳು ಹೇಳುವುವು ॥೨೬೦॥

ಆದ್ದರಿಂದ ಸತ್ತ್ವಗುಣದಿಂದ ಸಹಜವಾಗಿ ಸುಖ ಮತ್ತು ಜ್ಞಾನವು ಅಪೂರ್ವ ಫಲಕ್ಕೆ ಬರುವುದು. ಅದಕ್ಕಾಗಿ ಇದಕ್ಕೆ ಸಾತ್ತ್ವಿಕ (ಸತ್ಕರ್ಮ) ಫಲವೆನ್ನುತ್ತಾರೆ ॥೨೬೧॥

ಈಗ ರಜೋಗುಣದಿಂದ ಯಾವ ಕ್ರಿಯೆಗಳು ಉತ್ಪನ್ನವಾಗುವುವೋ, ಅವು ಇಂದ್ರಾವಣೆ ಫಲದಂತಿರುವುವು. ಇವು ನೋಡಲು ಸುಂದರವಾಗಿ ಸುಖ ಸಮಾಧಾನವಾಗುವುದು, ತಿಂದರೆ ವಿಷವಾಗಿ ದುಃಖವಾಗುವುದು ॥೨೬೨॥

ಅಥವಾ ಬೇವಿನ ಹಣ್ಣುಗಳು ಮೇಲ್ನೋಟಕ್ಕೆ ಹಳದಿ ಬಣ್ಣದಿಂದ ಮೆರಗುತ್ತ ಉತ್ತಮ ಕಾಣಿಸುವುವು. ಒಳಗೆ ವಿಷದಂತೆ ಕಹಿಯಾಗಿರುವುವು. ಅದರಂತೆ ರಜೋಗುಣದ ಫಲವಾಗಿರುವುದು ॥೨೬೩॥

ವಿಷದ ಗಡ್ಡಿ ಹಚ್ಚಿದರೆ ಅದಕ್ಕೆ ವಿಷದ ಅಂಕುರವೇ ಹುಟ್ಟುವುದು. ಅದರಂತೆ ತಮೋಗುಣದಿಂದ ಆಗುವ ಕ್ರಿಯೆಗಳು ಅಜ್ಞಾನಮಯಗಳಾಗಿರುವುವು ॥೨೬೪॥

ಶ್ಲೋಕಾರ್ಥ :- ಸತ್ತ್ವಗುಣದಿಂದ ಜ್ಞಾನ ಉದಯಿಸುತ್ತದೆ. ರಜೋಗುಣದಿಂದ ಲೋಭವು ಏರ್ಪಡುತ್ತದೆ. ತಮೋಗುಣದಿಂದ ಅಜ್ಞಾನ, ಪ್ರಮಾದ, ಮೋಹಗಳು ಸಂಭವಿಸುತ್ತವೆ ॥೧೭॥

ಆದ್ದರಿಂದ ಅಪ್ಪಾ ಅರ್ಜುನಾ, ಯಾವ ಪ್ರಕಾರವಾಗಿ ಹಗಲಿಗೆ ಸೂರ್ಯನು ಕಾರಣನೋ, ಅದರಂತೆ ಜ್ಞಾನಕ್ಕೆ ಸತ್ತ್ವಗುಣವೇ ಕಾರಣವಾಗಿರುವುದು ॥೨೬೫॥

ಆಣಿ ತೈಸೇಂಚಿ ಹೇ ಜಾಣ । ಲೋಭಾಸಿ ರಜ ಕಾರಣ । ಆಪಲೇ ವಿಸ್ಮರಣ । ದ್ವೈತಾ ಜೇವೀ ।೮೬೬॥ ಮೋಹ ಅಜ್ಞಾನ ಪ್ರಮಾದಾ । ಯಯಾ ಮೈಳೇಯಾ ದೋಷವೃಂದಾ । ಪುಢತೀ ಪುಢತೀ ಪ್ರಬುದ್ಧಾ । ತಮಚಿ ಮೂಳ ।೮೬೭॥ ಐಸೇ ವಿಚಾರಾಚ್ಯಾ ಡೋಳಾ । ತಿನ್ಹೀ ಗುಣ ವೇಗಳವೇಗಳಾ ।ದಾವಿಲೇ ಜೈಸಾ ಆಂವಳಾ । ತಳಹಾತೀಂಚಾ ।೮೬೮॥ ತಂವ ರಜತಮೋ ದೋನ್ಹೀ । ದೇಖಿಲೀ ಪ್ರೌಢಪತನೀ । ಸತ್ತ್ವಾಂಚೂನಿ ನಾಣೀ । ಜ್ಞಾನಾಕಡೇ ।೮೬೯॥ ಮ್ಹಣೌನಿ ಸಾತ್ತ್ವಿಕವೃತ್ತೀ । ಏಕ ಜಾಲೇ ಗಾ ಜನ್ಮವೃತ್ತೀ । ಸರ್ವತ್ಯಾಗೇ ಚತುರ್ಥೀ । ಭಕ್ತಿ ಜೈಸೀ ।೮೭೦॥

ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾಃ ಮಧ್ಯೇ ತಿಷ್ಠಂತಿ ರಾಜಸಾಃ ।
ಜಘನ್ಯಗುಣವೃತ್ತಿಸ್ಥಾಃ ಅಧೋ ಗಚ್ಛಂತಿ ತಾಮಸಾಃ ।೧೮॥

ತೈಸೇ ಸತ್ತ್ವಾಚೇನಿ ನಟನಾಚೇ । ಅಸಣೇ ಜಾಣೇ ಜಯಾಂಚೇ । ತೇ ತನುತ್ಯಾಗೀ ಸ್ವರ್ಗೀಚೇ । ರಾಯ ಹೊತೀ ।೮೭೧॥ ಇಯಾಚಿ ಪರೀ ರಜೇ । ಜಿಹೀ ಕಾ ಜೀಜೇ ಮರಿಜೇ । ತಿಹೀ ಮನುಷ್ಯ ಹೋಇಜೇ । ಮೃತ್ಯುಲೋಕೀ ।೮೭೨॥ ತೇಥ ಸುಖದುಃಖಾಚೇ ಖಿಚಟೇ । ಜೇವಿಜೇ ಏಕೇಚಿ ತಾಟೇ । ಜೇಥ ಇಯೇ ಮರಣವಾಟೇ । ಪಡಿಲೇ ನುರೀ ।೮೭೩॥ ಆಣಿ ತಯಾಚಿ ಸ್ಥಿತಿ ತಮೀ । ಜೇ ವಾಢೋನಿ ನಿಮತೀ ಭೋಗಕ್ಷಮೀ । ತೇ ಘೇತೀ ನರಕಭೂಮೀ । ಮೂಳಪತ್ರ ।೮೭೪॥ ಏವಂ ವಸ್ತೂಚಿಯಾ ಸತ್ತಾ । ತ್ರಿಗುಣಾಸೀ ಪಂಡುಸುತಾ । ದಾವಿಲೀ ಸಕಾರಣತಾ । ಆಘವೀಚೀ ।೮೭೫॥ ಪೈ ವಸ್ತು ವಸ್ತುತ್ವೇ ಅಸಿಕೇ । ತೇ ಆಪಣಪೇ ಗುಣಸಾರಿಕೇ । ದೇಖೋನಿ ಕಾರ್ಯವಿಶೇಖೇ । ಅನುಕರೇ ಗಾ ।೮೭೬॥ ಜೈಸೇ ಕಾ ಸ್ವಪ್ನೀಂಚೇನಿ ರಾಜೇ । ಜೈ ಪರಚಕ್ರ ದೇಖಿಜೇ । ತೈ ಹಾರೀ ಜೈತ ಹೋಇಜೇ । ಆಪಣಪಾಂಚಿ ।೮೭೭॥ ತೈಸೇ ಮಧ್ಯೋರ್ಧ್ವ ಅಧ । ಹೇ ಜೇ ಗುಣವೃತ್ತಿ ಭೇದ । ತೇ ದೃಷ್ಟೀ ವಾಂಚೂನಿ ಶುದ್ಧ । ವಸ್ತುಚಿ ಅಸೇ ।೮೭೮॥

ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ ।
ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ।೧೯॥

ಪರೀ ಹೇ ವಾಹಣೇ ಅಸೋ । ತರೀ ತುಜ ಆನ ನ ದಿಸೋ । ಪರಿಸೇ ತೇ ಸಾಂಗತಸೋ । ಮಾಗಿಲ ಗೋಠೀ ।೮೭೯॥

ಮತ್ತು ಯಾವ ಪ್ರಕಾರವಾಗಿ ಅದ್ವೈತವಾಗಲು ತನ್ನ ಸ್ವತಃದ ವಿಸ್ಮರಣೆಯಾಗಬೇಕಾಗುವುದೋ, ಅದರಂತೆ ಲೋಭ ಉತ್ಪನ್ನವಾಗಲು ರಜೋಗುಣವು ಕಾರಣ ವಾಗಿರುವುದು ।।೮೬೬।।

ಹೇ ಜ್ಞಾನಿಯೇ; ಮೋಹ, ಅಜ್ಞಾನ ಮತ್ತು ಪ್ರಮಾದ ಈ ತ್ರಿದೋಷ ಸಮುದಾಯಕ್ಕೆ ತಮೋಗುಣವು ಕಾರಣವಾಗಿ ರುವುದು ।।೮೬೭।।

ಅಂಗೈಯಲ್ಲಿ ನೆಲ್ಲಿಕಾಯಿಯಂತೆ, ವಿಚಾರವಂತ ಮನು ಷ್ಯನಿಗೆ ವಿಚಾರ ಮಾಡಲು ಮೂರು ಗುಣಗಳನ್ನು ಬೇರೆ ಬೇರೆ ಯಾಗಿ ಸ್ಪಷ್ಟಮಾಡಿ ಹೇಳಿರುವೆನು ।।೮೬೮।।

ಅಂದಮೇಲೆ ರಜ ಮತ್ತು ತಮೋಗುಣಗಳು ನರಕದ ದೊಡ್ಡ ಸಾಧನೆಗಳಾಗಿ ಸಿದ್ಧಗೊಂಡಿವೆ ಮತ್ತು ಜ್ಞಾನದ ಪ್ರಾಪ್ತಿಯು ಸತ್ತ್ವಗುಣದ ಹೊರತಾಗಿ ಆಗುವುದಿಲ್ಲ ।।೮೬೯।।

ಆದ್ದರಿಂದ ಇತರ ಭಕ್ತಿಗಳನ್ನು ಬಿಟ್ಟು ಜ್ಞಾನಿಯು ನಾಲ್ಕನೆಯ ಭಕ್ತಿಯನ್ನು ಸ್ವೀಕರಿಸುವಂತೆ ಕೆಲವರು ಆ ಜನ್ಮ ಸಾತ್ತ್ವಿಕ ವೃತ್ತಿಯನ್ನು ಧಾರಣೆ ಮಾಡುವರು ।।೮೭೦।।

ಶ್ಲೋಕಾರ್ಥ :- ಸಾತ್ತ್ವಿಕರಿಗೆ ಉತ್ತಮ ಲೋಕ ಪ್ರಾಪ್ತಿ, ರಾಜಸರು ಮಧ್ಯಲೋಕವನ್ನು ಸೇರಿ ಮಾನವ ರಾಗುತ್ತಾರೆ. ತಾಮಸರು ಅಧೋಲೋಕವನ್ನು ಸೇರಿ ನೀಚ ಜನ್ಮದಲ್ಲಿ ಹುಟ್ಟುತ್ತಾರೆ ।।೧೮।।

ಈ ಪ್ರಕಾರವಾಗಿ ಯಾರು ಸಾತ್ತ್ವಿಕ ವೃತ್ತಿಗಳನ್ನು ಯಾವಾಗಲೂ ಆಚರಿಸುವರೋ, ಅವರು ದೇಹ ಬಿಟ್ಟ ಮೇಲೆ ಸ್ವರ್ಗದಲ್ಲಿ ವಾಸಿಸುವರು ।।೮೭೧।।

ಅದರಂತೆ ಯಾರು ರಾಜಸ ವೃತ್ತಿಗಳನ್ನು ಯಾವಾಗಲೂ ಆಚರಿಸುವರೋ, ಅವರು ದೇಹಬಿಟ್ಟಾಗ ಮೃತ್ಯುಲೋಕ ದಲ್ಲಿ ಮನುಷ್ಯರಾಗಿ ಹುಟ್ಟುವರು ।।೮೭೨।।

ಈ ಮೃತ್ಯುಲೋಕದಲ್ಲಿ ಸುಖ ಮತ್ತು ದುಃಖ ಇದರ ಕಿಚಡಿಯನ್ನು ಒಂದೇ ತಾಟಿನಲ್ಲಿ ತಿನ್ನಬೇಕಾಗುವುದು ಮತ್ತು ಅಲ್ಲಿ ಏನು ಮಾಡಿದರೂ ಮೃತ್ಯುವಿನಿಂದ ಬಿಡುಗಡೆಯಾಗು ವುದಿಲ್ಲ ।।೮೭೩।।

ಅದರಂತೆ ಯಾರು ತಮೋಗುಣದ ಆಚರಣೆ ಮಾಡು ವರೋ, ಅವರು ಈ ದೇಹದಿಂದ ನರಕ ಭೂಮಿಯಲ್ಲಿ ಹೋಗುವ ವಿಶೇಷ ಅಧಿಕಾರ ಪಡೆಯುವರು ।।೮೭೪।।

ಅರ್ಜುನಾ, ಈ ಪ್ರಕಾರವಾಗಿ ವಸ್ತುವಿನ ಸತ್ತೆಯಿಂದ ಬೆಳೆಯುವ ಮೂರೂ ಗುಣಗಳನ್ನು ಅವುಗಳ ಲಕ್ಷಣಗ ಳೊಂದಿಗೆ ನಿನಗೆ ಸ್ಪಷ್ಟವಾಗಿ ಹೇಳಿರುವೆನು ।।೮೭೫।।

ಆದರೆ ವಸ್ತುವಿನ ಸ್ವರೂಪದಲ್ಲಿ ಬದಲಾವಣೆಯಾ ಗದೇ, ಅದು ಗುಣದ ಉಪಾಧಿಯಿಂದ ತಾನೇ ಗುಣಲಕ್ಷಣ ದಂತೆ ಕಾರ್ಯ ಮಾಡುವುದು ।।೮೭೬।।

ನಾನು ರಾಜನಾಗಿರುವೆ, ಮತ್ತು ನನ್ನ ಮೇಲೆ ಪರಚಕ್ರ ದಾಳಿ ಮಾಡುವರು, ಹೀಗೆ ಸ್ವಪ್ನ ಕಾಣುವ ಮನುಷ್ಯನು ತನ್ನ ಜಯ ಅಪಜಯವನ್ನು ತನ್ನಲ್ಲಿಯೇ ಕಾಣುವನು ।।೮೭೭।।

ಅದರಂತೆ ಸ್ವರ್ಗ, ಮೃತ್ಯು, ಪಾತಾಳ ಇವು ಗುಣಗಳ ವೃತ್ತಿಯಿಂದ ಭೇದವಾಗಿವೆ, ಗುಣದೃಷ್ಟಿ ಬಿಟ್ಟು ನೋಡಿ ದಲ್ಲಿ, ಅದು ಶುದ್ಧ ವಸ್ತುವೇ ಆಗಿರುವುದು ।।೮೭೮।।

ಶ್ಲೋಕಾರ್ಥ :- ಗುಣಗಳ ವಿನಾ ಬೇರೆ ಕರ್ತರಿಲ್ಲ ವೆಂದೂ, ತಾನು ಗುಣಗಳಿಗೆ ಸಾಕ್ಷಿಯೆಂದೂ, ತಿಳಿದವನು ನನ್ನ ಸ್ವರೂಪವನ್ನು ಪಡೆಯುತ್ತಾನೆ ।।೧೯।।

ಆದರೆ, ಈಗ ಈ ಮಾತುಗಳು ಇರಲಿ, ನೀನು ಮಾತ್ರ ವಸ್ತು ಹೊರತಾದ ಇನ್ನೊಂದು ಏನೂ ಇಲ್ಲವೆಂಬುದು ಲಕ್ಷ ದಲ್ಲಿಡು. ಈಗ ನಿನಗೆ ಹಿಂದಿನ ಮಾತು ಹೇಳುವೆ, ಕೇಳು ।।೮೭೯।।

ತರೀ ಐಸೇ ಜಾಣಿಜೇ । ಸಾಮರ್ಥ್ಯೇ ತಿನ್ಹೀ ಸಹಜೇ । ಹೋತೀ ದೇಹವ್ಯಾಜೇ । ಗುಣಚಿ ಹೇ ।೨೮೦॥ ಇಂಧನಾಚೇನಿ ಆಕಾರೇ । ಅಗ್ನಿ ಜೈಸಾ ಅವತರೇ । ಕಾ ಆಂಗವೇ ತರುವರೇ । ಭೂಮಿರಸು ।೨೮೧॥ ನಾನಾ ದಹಿಯಾಂಚೇನಿ ಮಿಸೇ । ಪರಿಣಮೇ ದೂಧಚಿ ಜೈಸೇ । ಕಾ ಮೂರ್ತ ಹೋಯ ಉಸೇ । ಗೋಡೀ ಜೇವೀ ।೨೮೨॥ ತೈಸೇ ಹೇ ಸ್ವಾಂತಃಕರಣ । ದೇಹಚಿ ಹೋತೀ ತ್ರಿಗುಣ । ಮ್ಹಣೌನಿ ಬಂಧಾಸಿ ಕಾರಣ । ಘಡೇ ಕೀರ ।೨೮೩॥ ಪರೀ ಚೋಜ ಹೇ ಧನುರ್ಧರಾ । ಜೇ ಏವಢಾ ಹಾ ಗುಂಫಿರಾ । ಮೋಕ್ಷಾಚಾ ಸಂಸಾರಾ । ಉಣಾ ನೋಹೇ ।೨೮೪॥ ತ್ರಿಗುಣ ಆಪುಲಾಲೇನಿ ಧರ್ಮೇ । ದೇಹೀಂಚೇ ಮಥಿತ ಸಾಉಮೇ । ಚಾಳಿತಾಂಹೀ ನ ಖೋಮೇ । ಗುಣಾತೀತತಾ ।೨೮೫॥ ಐಸೀ ಮುಕ್ತಿ ಅಸೇ ಸಹಜ । ತೇ ಆತಾ ಪರಿಸಊ ತುಜ । ತೇ ತೂ ಜ್ಞಾನಾಂಬುಜ । ದ್ವಿರೇಫು ಕೀ ।೨೮೬॥ ಆಣಿ ಗುಣೀ ಗುಣಾಜೋಗೇ । ಚೈತನ್ಯ ನೋಹೇ ಮಾಗೇ । ಬೋಲಿಲೋ ತೇ ಖಾಗೇ । ತೇವಿಂಚಿ ಹೇ ।೨೮೭॥ ತರೀ ಪಾರ್ಥಾ ಜೈ ಐಸೇ ।ಬೋಧಲೇನಿ ಜೇವೇ ದಿಸೇ । ಸ್ವಪ್ನ ಕಾ ಜೈಸೇ । ಚೇಇಲೇನೀ ।೨೮೮॥ ನಾತರೀ ಆಪಣ ಜಳೀ । ಬಿಂಬಲೋ ತೀರೋನೀ ಕಳೀ । ಚಳಣ ಹೋತಾ ಕಲ್ಲೋಳೀ । ಅನೇಕಧಾ ।೨೮೯॥ ಕಾ ನಟಲೇನಿ ಲಾಘವೇ । ನಟು ಜೈಸಾ ನ ಝಕವೇ । ತೈಸೇ ಗುಣಜಾತ ದೇಖಾವೇ । ನಹೋನಿಯಾ ।೨೯೦॥ ಪೈ ಋತುತ್ರಯ ಆಕಾಶೇ । ಧರೂನಿಯಾಂಹಿ ಜೈಸೇ । ನೇದಿಜೇಚಿಯೇ ವೋವಸೇ । ವೇಗಳೇಪಣಾ ।೨೯೧॥ ತೈಸೇ ಗುಣೀ ಗುಣಾಪರೌತೇ । ಜೇ ಆಪಣಪೇ ಅಸೇ ಆಯಿತೇ । ತಿಯೇ ಅಹಂ ಬೈಸೇ ಅಹಂತೇ । ಮೂಳಕೇಚಿಯೇ ।೨೯೨॥ ಪೈ ತೇಥೂನಿ ಮಗ ಪಾಹತಾ । ಮ್ಹಣೇ ಸಾಕ್ಷೀ ಮೀ ಅಕರ್ತಾ । ಹೇ ಗುಣಚಿ ಕ್ರಿಯಾಜಾತಾ । ನಿಯೋಜಿತ ।೨೯೩॥ ಸತ್ವರಜತಮಾಂಚಾ । ಭೇದೀ ಪಸರು ಕರ್ಮಾಚಾ । ಹೋತ ಅಸೇ ತೋ ಗುಣಾಂಚಾ । ವಿಕಾರು ಹಾ ।೨೯೪॥ ಯಯಾಮಾಜೀ ಮೀ ಐಸಾ । ವನೀ ಕಾ ವಸಂತು ಜೈಸಾ । ವನಲಕ್ಷ್ಮೀವಿಲಾಸಾ । ಹೇತುಭೂತ ।೨೯೫॥ ಕಾ ತಾರಾಂಗಣೀ ಲೋಪಾವೇ । ಸೂರ್ಯಕಾಂತೀ ಉದ್ದೀಪಾವೇ । ಕಮಳೀ ವಿಕಾಸಾವೇ । ಜಾವೇ ತಮೇ ।೨೯೬॥ ಯೇ ಕೋಣಾಚೀ ಕಾಜೇ ಕಹೀ । ಸವಿತಿಯಾ ಜೈಸೀ ನಾಹೀ । ತೈಸಾ ಅಕರ್ತಾ ಮೀ ದೇಹೀ । ಸತ್ತಾರೂಪ ।೨೯೭॥

ವಸ್ತುವಿನ ಸಾಮರ್ಥ್ಯದಿಂದ ಈ ಮೂರೂ ಗುಣಗಳು ಸಹಜವಾಗಿ ದೇಹದ ನಿಮಿತ್ತದಿಂದ ಉತ್ಪನ್ನವಾಗುವುವು ಎಂಬುದನ್ನು ನಿಶ್ಚಯವಾಗಿ ತಿಳಿ ।।೨೮೦।।

ಕಟ್ಟಿಗೆಯು ಹೊತ್ತಿಕೊಂಡಾಗ ಅಗ್ನಿಯು ಅದರ ಆಕಾರದಂತೆ ಕಾಣುವುದು, ಅಥವಾ ಭೂಮಿ ಮತ್ತು ನೀರು ಇವುಗಳ ರಸವೇ ಗಿಡದ ಆಕಾರವಾಗಿ ಕಾಣುವುದು ।।೨೮೧।।

ಅಥವಾ ಹಾಲು ಹೆಪ್ಪುಗಟ್ಟಿದರೆ ಮೊಸರಿನ ಆಕಾರದಿಂದ ಕಾಣುವುದು. ಅಥವಾ ಕಬ್ಬಿನ ಆಕಾರದಿಂದ ಸಿಹಿಯು ವ್ಯಕ್ತವಾಗುವುದು।।೨೮೨।।

ಅದರಂತೆ, ಅಂತಃಕರಣ ಸಹ ಸೂಕ್ಷ್ಮ ದೇಹವು ಈ ಮೂರು ಗುಣವಾಗುತ್ತದೆ. ಆದ್ದರಿಂದ ಇದರಲ್ಲಿ ಅದು ಬಂಧಿಸುವುದು ।।೨೮೩।।

ಆದರೂ ಅರ್ಜುನಾ, ಇದು ಎಷ್ಟು ಆಶ್ಚರ್ಯಕರವಾಗಿದೆ ಎಂದರೆ, ಸೂಕ್ಷ್ಮ ದೇಹ ಮತ್ತು ಗುಣಗಳು ಇಷ್ಟೊಂದು ಕೂಡಿಕೊಂಡಿದ್ದರೂ ಜ್ಞಾನಿಗಳಿಗೆ ಮೋಕ್ಷದ ವ್ಯವಹಾರವು ಕಡಿಮೆ ಬೀಳುವುದಿಲ್ಲ ।।೨೮೪।।

ಮೂರು ಗುಣಗಳು ತಮ್ಮ ತಮ್ಮ ಧರ್ಮಗಳಂತೆ ದೇಹದಲ್ಲಿ ಸಂಪೂರ್ಣವಾಗಿ ವ್ಯವಹಾರ ಮಾಡುವುವು. ಆದಾಗ್ಯೂ ಗುಣಾತೀತತನಕ್ಕೆ ಕಡಿಮೆತನ ಬರುವುದಿಲ್ಲ ।।೨೮೫।।

ಈ ಪ್ರಕಾರದ ಸಹಜವಾಗಿರುವ ಮುಕ್ತಿಯನ್ನು ಈಗ ನಿನಗೆ ತಿಳಿಸುವೆ. ಕಾರಣ ನೀನು ಜ್ಞಾನ ಕಮಲದ ಮೇಲಿನ ಭ್ರಮರನಾಗಿರುವಿ. ಅಂದರೆ ಕೇಳಲು ಯೋಗ್ಯನಿರುವಿ ।।೨೮೬।।

ಮತ್ತು ಚೈತನ್ಯವು ಗುಣಪ್ರಮಾಣದಂತೆ ಆಗದೇ ಅವುಗಳಿಂದ ಅಲಿಪ್ತವಾಗಿರುವುದು. ಈ ತತ್ತ್ವವನ್ನು ನಿನಗೆ ಈ ಹಿಂದೆ ಹೇಳಿದ್ದಾಗಿದೆ ।।೨೮೭।।

ಆದರೆ ಪಾರ್ಥಾ, ಜ್ಞಾನದ ಬೋಧೆಯಾದ ಮೇಲೆ ಗುಣಗಳಿಂದ ಚೈತನ್ಯವು ಬೇರೆಯಾಗಿದೆ ಎಂದು ಹೀಗೆ ಕಾಣುವುದು. ಹೇಗೆಂದರೆ ಎಚ್ಚರವಾದ ಮೇಲೆ ಸ್ವಪ್ನದಂತೆ ।।೨೮೮।।

ಇಲ್ಲವೇ, ನದಿಯ ದಂಡೆಯ ಮೇಲೆ ನಿಂತಿರುವ ಒಬ್ಬ ಮನುಷ್ಯನು ತನ್ನ ಪ್ರತಿಬಿಂಬವನ್ನು ನೀರಿನಲ್ಲಿ ನೋಡುವನು. ಅದೇ ನೀರನ್ನು ಅಲುಗಾಡಿಸಲು ಅದೇ ಪ್ರತಿಬಿಂಬವು ಅನೇಕ ಕಡೆಯಲ್ಲಿ ಕಾಣಿಸುವುದು ।।೨೮೯।।

ಅಥವಾ ಒಬ್ಬ ನಟನು ಸ್ತ್ರೀವೇಶ ಧರಿಸಿದ ಮೇಲೆ ಸ್ತ್ರೀ ಗುಣಗಳಿಂದ ಮಾರುಹೋಗುವುದಿಲ್ಲ. ತಾನು ಪುರುಷನೆಂಬುದನ್ನು ಮರೆಯುವುದಿಲ್ಲ. ಅದರಂತೆ ಸ್ವರೂಪದಲ್ಲಿ ಸತ್ಯಬುದ್ಧಿಯನ್ನಿಟ್ಟು, ಗುಣಗಳನ್ನು ಕೇವಲ ನೋಡುತ್ತಿರಬೇಕು ।।೨೯೦।।

ಯಾವ ಪ್ರಕಾರವಾಗಿ ಆಕಾಶದಲ್ಲಿ ಮೂರು ಋತುಗಳು ಬರುವುವು ಹೋಗುವುವು. ಆದರೆ ಅವುಗಳಿಂದ ಆಕಾಶವು ಅಲಿಪ್ತವಾಗಿರುವುದು ।।೨೯೧।।

ಗುಣಗಳ ವ್ಯವಹಾರಗಳು ನಡೆಯುತ್ತಿದ್ದರೂ ಗುಣಗಳಿಂದ ಹೊರತಾಗಿ ಆತ್ಮರೂಪವು ಸ್ವತಃ ಸಿದ್ಧವಾಗಿದೆ. ಆ ಮೂಲವಾದ ಆತ್ಮಸ್ವರೂಪದ ಮೇಲೆ ಆತನ ಅಹಂಕಾರವು ಹೋಗಿ ಕುಳಿತುಕೊಳ್ಳುವುದು ।।೨೯೨।।

ಆಗ ಆ ಸ್ಥಾನದಿಂದ ನೋಡುತ್ತಿದ್ದಾಗ ಆತನು ಹೇಳುವುದೇನೆಂದರೆ, ನಾನು ಕರ್ಮಕರ್ತನಿರದೇ ಕೇವಲ ಸಾಕ್ಷಿಭೂತನಾಗಿರುವೆ ಮತ್ತು ಎಲ್ಲ ಕ್ರಿಯೆಗಳು ಗುಣಗಳೇ ಉತ್ಪನ್ನ ಮಾಡುವುವು ।।೨೯೩।।

ಸತ್ತ್ವ, ರಜ ಮತ್ತು ತಮ ಈ ಗುಣಗಳಿಂದ ಬೇರೆ ಬೇರೆ ಕರ್ಮಗಳು ಆಗುವುದೆಲ್ಲ ನಾನು ಮಾಡದೇ ಅವುಗಳಿಗೆ ಗುಣಗಳೇ ಕಾರಣವಾಗಿರುವುವು ।।೨೯೪।।

ವನಶೋಭೆಗೆ ವಸಂತ ಋತು ಹೇಗೆ ಕಾರಣವಾಗಿದ್ದು ಅಲಿಪ್ತವಾಗಿರುವುದೋ, ಅದರಂತೆ ನಾನು ಎಲ್ಲ ಕ್ರಿಯೆಗಳನ್ನು ಮಾಡುತ್ತಿದ್ದರೂ ಅಲಿಪ್ತನಾಗಿರುವೆನು ।।೨೯೫।।

ಅಥವಾ ನಕ್ಷತ್ರಗಳು ಲೋಪವಾಗುವುವು, ಸೂರ್ಯಕಾಂತ ಮಣಿಯು ಅಗ್ನಿ ಹುಟ್ಟಿಸುವುದು, ಕಮಲದ ಹೂವು ವಿಕಾಸಗೊಳ್ಳುವುದು, ಕತ್ತಲು ನಾಶವಾಗುವುದು ಈ ಎಲ್ಲವೂ ಒಂದು ಸೂರ್ಯೋದಯದಿಂದಾಗುವುದು ।।೨೯೬।।

ಆದಾಗ್ಯೂ ಸೂರ್ಯನು ಅವುಗಳನ್ನು ನೋಡುವುದಿಲ್ಲ. ಅದರಂತೆ ನನ್ನದೇ ಸತ್ತೆಯಿಂದ ಕರ್ಮಗಳು ನಡೆಯುತ್ತಿದ್ದರೂ, ನಾನು ಈ ದೇಹದಲ್ಲಿ ಸತ್ತಾರೂಪ ಮಾತ್ರನಾಗಿದ್ದು, ಅಕರ್ತನಾಗಿರುವೆ ।।೨೯೭।।

ಮೀ ದಾಊನಿ ಗುಣದೇಖೇ । ಗುಣತಾ ಹೇ ಮಿಯಾ ಪೋಖೇ । ಯಯಾಚೇನಿ ನಿಃಶೇಖೇ । ಉರೇ ತೇ ಮೀ ।೨೯೮॥ ಐಸೇನಿ ವಿವೇಕೇ ಜಯಾ । ಉದೋ ಹೋಯ ಧನಂಜಯಾ । ಯೇ ಗುಣಾತೀತತ್ವ ತಯಾ । ಅರ್ಥಪಂಥೇ ।೨೯೯॥

ಗುಣಾನೇತಾನತೀತ್ಯ ತ್ರೀನ್ ದೇಹೀ ದೇಹಸಮುದ್ಭವಾನ್।
ಜನ್ಮ ಮೃತ್ಯುಜರಾದುಃಖೈಃ ವಿಮುಕ್ತೋಽಮೃತಮಶ್ನುತೇ ।೨೦॥

ಆತಾ ನಿರ್ಗುಣ ಅಸೇ ಆಣಿಕ । ತೇ ತೋ ಜಾಣೇ ಅಚುಕ । ಜೇ ಜ್ಞಾನೇ ಕೇಲೇ ಟೀಕ । ತಯಾಚಿವರೀ ।೩೦೦॥ ಕಿಂಬಹುನಾ ಪಂಡುಸುತಾ । ಐಸೀ ತೋ ಮಾಜೀ ಸತ್ತಾ । ಪಾವೇ ಜೈಸೀ ಸರಿತಾ । ಸಿಂಧುತ್ವ ಗಾ ।೩೦೧॥ ನಳಿಕೇವರೂನಿ ಉಠಿಲಾ । ಜೈಸಾ ಶುಕ ಶಾಖೇ ಬೈಸಲಾ । ತೈಸಾ ಮೂಳಅಹಂತೇ ವೇಠಿಲಾ । ತೋ ಮೀ ಮ್ಹಣೌನಿ ।೩೦೨॥ ಅಗಾ ಅಜ್ಞಾನಾಚಿಯಾ ನಿದಾ । ಜೋ ಘೋರತ ಹೋತಾ ಬದಬದಾ । ತೋ ಸ್ವಸ್ವರೂಪೀ ಪ್ರಬುದ್ಧಾ । ಚೇಇಲಾ ಕೀ ।೩೦೩॥ ಪೈ ಬುದ್ಧಿಭೇದಾಚಾ ಆರಿಸಾ । ತಯಾ ಹಾತೋನಿ ಪಡಿಲಾ ವೀರೇಶಾ । ಮ್ಹಣೌನಿ ಪ್ರತಿಮುಖಾಭಾಸಾ । ಮುಕಲಾ ತೋ ।೩೦೪॥ ದೇಹಾಭಿಮಾನಾಚಾ ವಾರಾ । ಆತಾ ವಾಜೋ ಠೇಲಾ ವೀರಾ । ತೈ ಐಕ್ಯ ವೀಚಿಸಾಗರಾ । ಜೀವೇಶಾ ಹೇ ।೩೦೫॥ ಮ್ಹಣೌನಿ ಮದ್ಭಾವೇಸೀ । ಪ್ರಾಪ್ತಿ ಪಾವಿಜೇ ತೇಣೇಸರಿಸೀ । ವರ್ಷಾಂತೀ ಆಕಾಶೀ । ಘನಜಾತ ಜೇವೀ ।೩೦೬॥ ತೇವೀ ಮೀ ಹೋಊನಿ ನಿರುತಾ । ಮಗ ದೇಹೀಂಚಿಯೇ ಅಸತಾ । ನಾಗವೇ ದೇಹಸಂಭೂತಾ । ಗುಣಾಂಸಿ ತೋ ।೩೦೭॥ ಜೈಸಾ ಭಿಂಗಾಚೇನಿ ಘರೇ । ದೀಪಪ್ರಕಾಶು ನಾವರೇ । ಕಾ ನ ವಿರ್ಝೇನಿ ಸಾಗರೇ । ವಡವಾನಳು ।೩೦೮॥ ತೈಸಾ ಆಲಾಗೇಲಾ ಗುಣಾಂಚಾ । ಭೋಧು ನ ಮೈಳೆ ತಯಾಚಾ । ತೋ ದೇಹೀ ಜೈಸಾ ವ್ಯೋಮೀಂಚಾ । ಚಂದ್ರ ಜಳೀ ।೩೦೯॥ ತಿನ್ಹೀ ಗುಣ ಆಪುಲಾಲಿಯೇ ಪ್ರೌಢಿ । ದೇಹೀ ನಾಚವಿತೀ ಬಾಗಡೀ । ತೋ ಪಾಹೋಹೀ ನ ಧಾಡೀ । ಅಹಂತೇತೇ ।೩೧೦॥ ಹಾ ಠಾಯವರೀ । ನೆಹಟೋನಿ ಠೇಲಾ ಅಂತರೀ । ಆತಾ ಕಾಯ ವರ್ತೇ ಶರೀರೀ । ಹೇಹೀ ನೇಣೇ ।೩೧೧॥ ಸಾಂಡೂನಿ ಆಂಗೀಂಚೀ ಖೋಳೀ । ಸರ್ಪ ರಿಗಾಲಿಯಾ ಪಾತಾಳೀ । ತೇ ತ್ವಚಾ ಕೋಣ ಸಾಂಭಾಳೀ । ತೈಸೇ ಜಾಳೇ ।೩೧೨॥

ನಾನು ತೋರಿಸಿದಾಗ ಗುಣಗಳು ದೃಷ್ಟಿಗೆ ಬೀಳುವುವು, ನನ್ನ ಸತ್ತೆಯಿಂದಲೇ ಗುಣಗಳು ಬೆಳೆಯುವುವು ಮತ್ತು ಅವು ಇಲ್ಲದಾಗಲು ಉಳಿದದ್ದು ನಾನೇ ಇರುವೆನು ।೨೯೮॥

ಧನಂಜಯನೇ, ಈ ಪ್ರಕಾರವಾಗಿ ಯಾರ ಹೃದಯದಲ್ಲಿ ಜ್ಞಾನದ ಉದಯವಾಗಿರುವುದೋ, ಆತನು ಅರ್ಥಾತ್ ಗುಣಾತೀತನಾಗಿರುವನು ।೨೯೯॥

ಶ್ಲೋಕಾರ್ಥ :- ಜನ್ಮದ ಗುಣಕಾರಣಗಳಾದ ಈ ಮೂರು ಗುಣಗಳನ್ನು ಅತ್ರಿಕಮಿಸಿದ ಜೀವನು ಜನ್ಮ, ಮೃತ್ಯು, ವಾರ್ಧಿಕ್ಯ ದುಃಖಗಳಿಂದ ಬಿಡಲ್ಪಟ್ಟು, ಮೋಕ್ಷವನ್ನು ಪಡೆಯುತ್ತಾನೆ ।೨೦॥

ಆಗ ಆತನು ನಿರ್ಗುಣವಾದ ಬ್ರಹ್ಮವನ್ನು ತಪ್ಪದೇ ತಿಳಿಯುವನು. ಕಾರಣ ಜ್ಞಾನದ ಯೋಗದಿಂದ ಅಲ್ಲಿಯೇ ಆತನು ಸ್ಥಿತನಾಗಿರುವನು ।೩೦೦॥

ಹೆಚ್ಚಿಗೇನು ಹೇಳಬೇಕು? ನದಿಯು ಯಾವ ಪ್ರಕಾರವಾಗಿ ಸಮುದ್ರತ್ವವನ್ನು ಹೊಂದುವುದೋ, ಅದರಂತೆ ಆತನು ತನ್ನ ಸತ್ತೆಯನ್ನೇ ಪಡೆಯುವನು ।೩೦೧॥

ಯಾವ ಪ್ರಕಾರವಾಗಿ ನಳಿಕೆಯಿಂದ ಎದ್ದು ಗಿಡದ ಬೇರೆ ಟೊಂಗೆಯಲ್ಲಿ ಕುಳಿತಾಗ ಗಿಳಿಯು ಬಂಧರಹಿತವಾಗುವಂತೆ ಗುಣಾತೀತನಾದವನು ಗುಣಸಂಗದಲ್ಲಿ ಕೂಡದೇ ನಾನೇ ಬ್ರಹ್ಮನೆನ್ನುವನು ।೩೦೨॥

ಹೇ ಬುದ್ಧಿವಂತ ಅರ್ಜುನನೇ, ಯಾವ ಅಜ್ಞಾನರೂಪ ನಿದ್ರೆಯಲ್ಲಿ ದೊಡ್ಡ ಧ್ವನಿಯ ಗೊರಕೆ ಹೊಡೆಯುತ್ತ ಮಲಗಿದವನು ಸ್ವರೂಪದಲ್ಲಿ ಎಚ್ಚರವಾಗುವನು।೩೦೩॥

ಇಲ್ಲಿ ನೋಡು ಅರ್ಜುನಾ, ಆತನ ಕೈಯಿಂದ ಬುದ್ಧಿರೂಪ ಕನ್ನಡಿಯು ಕೆಳಗೆ ಬೀಳುವುದರಿಂದ ಅದರಲ್ಲಿ ಕಾಣುವ ಸುಖದುಃಖರೂಪ ಪ್ರತಿಬಿಂಬದಿಂದ ಮುಕ್ತನಾಗುವನು ।೩೦೪॥

ಆಗ ವೀರನೇ, ದೇಹಾಭಿಮಾನರೂಪ ಗಾಳಿ ಬೀಸುವುದು ನಿಂತಾಗ ಜೀವ ಮತ್ತು ಶಿವ ರೂಪಗಳ ತೆರೆಗಳು ಆತ್ಮಸ್ವರೂಪ ರೂಪಸಾಗರದಲ್ಲಿ ಕೂಡಿಕೊಳ್ಳುವುವು ।೩೦೫॥

ಆದ್ದರಿಂದ, ಹೀಗಾಗಿ ಅವರು ಮದ್ರೂಪರಾಗುವರು. ಮಳೆಗಾಲ ಮುಗಿದ ನಂತರ ಆಕಾಶದಲ್ಲಿನ ಮೋಡಗಳು ಮಳೆಗರೆಯದೇ ಆಕಾಶದಲ್ಲಿಯೇ ಲಯವಾಗುವುವು ।೩೦೬॥

ಇದೇ ಪ್ರಕಾರವಾಗಿ ಮದ್ರೂಪನಾದ ಮೇಲೆ ಆತನು ದೇಹದಲ್ಲಿದ್ದರೂ ಗುಣಗಳಿಂದ ಲಿಪ್ತನಾಗುವುದಿಲ್ಲ ।೩೦೭॥

ಅಭ್ರಕದ ಮನೆಯಲ್ಲಿ ದೀಪದ ಪ್ರಕಾಶವನ್ನು ಮುಚ್ಚಿಡಲು ಆಗುವುದಿಲ್ಲ, ಅಥವಾ ವಡವಾನಳವು ಸಾಗರದಿಂದ ಆರಿಸಲು ಬರುವುದಿಲ್ಲ ।೩೦೮॥

ಅದರಂತೆ ಗುಣಗಳು ಹೋಗಲಿ, ಬರಲಿ, ಇದರಿಂದ ಈತನ ಶುದ್ಧ ಜ್ಞಾನವು ಮಲೀನವಾಗುವುದಿಲ್ಲ ಮತ್ತು ಆಕಾಶದಲ್ಲಿನ ಚಂದ್ರನ ಬಿಂಬವು ನೀರಿನಲ್ಲಿ ಬಿದ್ದಾಗ ಅದು ನೀರಿನಿಂದ ಬೇರೆಯಾಗಿರುವುದು ।೩೦೯॥

ಈ ಮೂರುಗುಣಗಳು ತಮ್ಮ ಹಿರಿಮೆಗಳಿಂದ ದೇಹದ ರಂಗಭೂಮಿಯ ಮೇಲೆ ಸ್ವಚ್ಛಂದವಾಗಿ ಕುಣಿಯುತ್ತವೆ. ಆ ನೃತ್ಯ ನೋಡಲು ಸಹ ಆ ಜ್ಞಾನಿಯು ಅಹಂತೆಗೆ ಸ್ವರೂಪದಿಂದ ದೇಹದ ಕಡೆ ಕಳಿಸುವುದಿಲ್ಲ ।೩೧೦॥

ಈ ಸ್ಥಿತಿವರೆಗೆ ಆ ಜ್ಞಾನಿಯು ಅಂತಃಕರಣದಲ್ಲಿ ಬಲವಾದ ನಿಶ್ಚಯಮಾಡಿ ಸ್ಥಿರನಾಗಿರುವನು. ಈಗ ದೇಹದಿಂದ ಏನೇನು ನಡೆಯುತ್ತದೆ ಎನ್ನುವುದೂ ಸಹ ಅರಿಯುವುದಿಲ್ಲ ।೩೧೧॥

ಸರ್ಪವು ತನ್ನ ಪರಿಯನ್ನು ಕಳಚಿ ಹುತ್ತಿನಲ್ಲಿ ಹೋಗುವುದು. ಆಗ ಅದು ತನ್ನ ಆತ್ವಚೆಯ ಗತಿ ಏನಾಗುವುದೆಂದು ಅದಕ್ಕೆ ಲಕ್ಷ್ಯಕೊಡದಂತೆ ಜ್ಞಾನಿಯು ತನ್ನ ಶರೀರ ವಿಷಯಕ್ಕೆ ನಿಷ್ಕಾಳಜಿ ಇರುವನು ।೩೧೨॥

ಕಾ ಸೌರಭ್ಯ ಜೇಣ್ರ್ಯ ಜೈಸಾ । ಅಮೋದು ಮಿಳೋನಿ ಜಾಯ ಆಕಾಶಾ । ಮಾಘಾರಾ ಕಮಳಕೋಶಾ । ನಯೇಚಿ ತೋ ।೩೧೩॥ ಪೈ ಸ್ವರೂಪಸಮರಸೇ । ಐಕ್ಯ ಗಾ ಜಾಲೇ ತೈಸೇ । ತೇಥ ಕೀ ಧರ್ಮ ಹೇ ಕೈಸೇ । ನೇಣೇ ದೇಹ ।೩೧೪॥ ಮ್ಹಣೌನಿ ಜನ್ಮ ಜರಾಮರಣ । ಇತ್ಯಾದಿ ಜೇ ಸಾಹೀ ಗುಣ । ತೇ ದೇಹೀಂಚಿ ಠೇಲೇ ಕಾರಣ । ನಾಹೀ ತಯಾ ।೩೧೫॥ ಘಟಾಚಿಯಾ ಖಾಪರಿಯಾ । ಘಟಭಂಗೀ ಫೇಡಿಲಿಯಾ । ಮಹದಾಕಾಶ ಅಪೈಸಯಾ । ಜಾಲೇಂಚಿ ಅಸೇ ।೩೧೬॥ ತೈಸೀ ದೇಹಬುದ್ಧಿ ಜಾಯೇ । ಜೈ ಆಪಣಪಾ ಆಠೌ ಹೋಯೇ । ತೈ ಆನ ಕಾಂಹೀ ಆಹೇ । ತೇವಾಂಚುನೀ? ।೩೧೭॥ ಯೇಣೇ ಥೋರ ಬೋಧಲೇಪಣೇ । ತಯಾಸಿ ಗಾ ದೇಹೀ ಅಸಣೇ । ಮ್ಹಣೂನಿ ತೋ ಮೀ ಮ್ಹಣೇ । ಗುಣಾತೀತ ।೩೧೮॥ ಯಯಾ ದೇವಾಚಿಯಾ ಬೋಲಾ । ಪಾರ್ಥು ಅತಿ ಸುಖಾವಲಾ । ಮೇಘೇ ಸಂಬೋಖಿಲಾ । ಮೋರು ಜೈಸಾ ।೩೧೯॥

ಅರ್ಜುನ ಉವಾಚ:-
ಕೈರ್ಲಿಂಗೈಸ್ತ್ರೀನ್ ಗುಣಾನೇತಾನ್ ಅತೀತೋ ಭವತಿ ಪ್ರಭೋ ।
ಕಿಮಾಚಾರಃ ಕಥಂ ಚೈತಾನ್ ತ್ರೀನ್ ಗುಣಾನತಿವರ್ತತೇ ।೨೧॥

ತೇಣೇ ತೋಷೇ ವೀರ ಪುಸೇ । ಜೇ ಕೋಣ್ಹೇ ಚಿನ್ಹೀ ತೋ ದಿಸೇ । ಜಯಾಮಾಜೀ ವಸೇ । ಐಸಾ ಬೋಧು ।೩೨೦॥ ತೋ ನಿರ್ಗುಣ ಕಾಯ ಆಚರೇ । ಕೈಸೇನಿ ಗುಣ ನಿಸ್ತರೇ । ಹೇ ಸಾಂಗಿಜೋ ಮಾಹೇರೇ । ಕೃಪೇಚೇನಿ ।೩೨೧॥ ಯಯಾ ಅರ್ಜುನಾಚಿಯಾ ಪ್ರಶ್ನಾ । ತೋ ಷಡ್‌ಗುಣಾಂಚಾ ರಾಣಾ । ಪರಿಹಾರು ಆಕರ್ಣಾ । ಬೋಲತು ಅಸೇ ।೩೨೨॥ ಮ್ಹಣೇ ಪಾರ್ಥಾ ತುಝೀ ನವಾಈ । ಹೇ ಯೇತುಲೇಂಚಿ ಪುಸಸೀ ಕಾಈ । ತೇ ನಾಮಚಿ ತಯಾ ಪಾಹೀ । ಸತ್ಯ ಲಟಿಕೇ ।೩೨೩॥ ಗುಣಾತೀತ ಜಯಾ ನಾಂವೇ । ತೋ ಗುಣಾಧೀನ ತರೀ ನವ್ಹೇ । ನಾ ಹೋಯ ತರೀ ನಾಗವೇ । ಗುಣಾ ಯಯಾ ।೩೨೪॥ ಪರೀ ಅಧೀನ ಕಾ ನಾಗವೇ । ಹೇಂಚಿ ಕೈಸೇನಿ ಜಾಣಾವೇ । ಗುಣಾಂಚಿಯೇ ರವರವೇ । ಮಾಜೀ ಅಸತಾ ।೩೨೫॥ ಹಾ ಸಂದೇಹಜರೀ ವಾಹಸೀ । ತರೀ ಸುಖೇ ಪುಸೋ ಲಾಹಸೀ । ಪರಿಸ ಆತಾ ತಯಾಸೀ । ರೂಪ ಕರೂ ।೩೨೬॥

ಅಥವಾ ಕಮಲದ ಹೂವು ಅರಳಿದಾಗ ಅದರ ಸುವಾಸನೆಯು ಆಕಾಶದಲ್ಲಿ ಹೋದ ಮೇಲೆ ಪುನಃ ಅದು ಕಮಲ ಕೋಶದಲ್ಲಿ ಹೇಗೆ ಬರುವುದಿಲ್ಲವೋ ।೩೧೩॥

ಅದರಂತೆ ಆತ್ಮಸ್ವರೂಪದಲ್ಲಿ ಐಕ್ಯವಾದ ಮೇಲೆ ಈ ದೇಹವು ಯಾವ ಧರ್ಮದಿಂದ ನಡೆಯುತ್ತದೆ ಎನ್ನುವುದನ್ನು ಆತನು ನೋಡುವುದಿಲ್ಲ ।೩೧೪॥

ಆದ್ದರಿಂದ ಜನ್ಮ, ಜರಾ, ಮರಣ ಇತ್ಯಾದಿ ಯಾವ ಆರು ಗುಣಗಳ ಸಂಬಂಧವು ದೇಹದಲ್ಲಿರುವುದು. ಆದರೆ ಜ್ಞಾನಿಗೆ ಆತ್ಮಸ್ವರೂಪದಲ್ಲಿ ಅವು ಇರುವುದಿಲ್ಲ ।೩೧೫॥

ಘಟವು ಒಡೆದು ತುಂಡು ತುಂಡಾದಾಗ ಅದರಲ್ಲಿನ ಘಟಾಕಾಶವು ಯಾವ ಪ್ರಕಾರವಾಗಿ ಮಹದಾಕಾಶದಲ್ಲಿ ಕೂಡುವುದೋ ।೩೧೬॥

ಅದರಂತೆ ದೇಹಬುದ್ಧಿಯು ಇಲ್ಲದಾಗಲು ಮತ್ತು ಆತ್ಮಸ್ವರೂಪದ ಜ್ಞಾನವಾಗುವುದೋ, ಆಗ ಈ ಸ್ಥಿತಿಯಲ್ಲಿ ಆತ್ಮಸ್ವರೂಪದ ಹೊರತು ಬೇರೆ ಯಾವುದರ ಸ್ಮರಣೆಯಾಗುವುದು ? ।೩೧೭॥

ಹೀಗೆ ಮಹಾ ಬೋಧೆಯಿಂದ ಆತನದೇಹದಲ್ಲಿ ವಾಸ್ತವ್ಯ ಇರುವುದು. ಆದ್ದರಿಂದ ನಾನು ಆತನಿಗೆ "ಗುಣಾತೀತ" ಎನ್ನುವೆನು ।೩೧೮॥

ಮೇಘ ಗರ್ಜನೆಯಿಂದ ನವಿಲಿಗೆ ಆನಂದವಾಗುವಂತೆ ಶ್ರೀಕೃಷ್ಣನ ಭಾಷಣದಿಂದ ಪಾರ್ಥನಿಗೆ ಬಹಳ ಆನಂದವಾಯಿತು ।೩೧೯॥

ಶ್ಲೋಕಾರ್ಥ :- ಅರ್ಜುನನು ಹೀಗೆಂದನು:- ದೇವಾ! ಈ ಮೂರು ಗುಣಗಳನ್ನು ದಾಟಿದವನ ಲಕ್ಷಣವೇನು? ಅವನ ಆಚಾರವು ಹೇಗಿರುತ್ತದೆ? ಈ ಗುಣಗಳನ್ನು ದಾಟುವ ವಿಧಾನ ಯಾವುದು? ।೨೧॥

ಹೀಗೆ ಹರ್ಷಯುಕ್ತ ಅಂತಃಕರಣದಿಂದ ವೀರನಾದ ಅರ್ಜುನನು ಶ್ರೀಕೃಷ್ಣನಿಗೆ ಕೇಳಿದನು:- ಯಾರ ಅಂತಃಕರಣದಲ್ಲಿ ಈ ಬೋಧೆಯಾಗಿದೆಯೋ, ಆತನ ಲಕ್ಷಣಗಳೇನು? ।೩೨೦॥

ಆ ಗುಣಾತೀತನು ಯಾವ ರೀತಿಯಲ್ಲಿ ಆಚರಿಸುವನು? ಮತ್ತು ಗುಣಗಳ ನಿವಾರಣೆಯನ್ನು ಹೇಗೆ ಮಾಡುವನು? ಹೇ ದೇವನೇ, ನೀನು ಕೃಪೆಯ ತವರು ಮನೆಯಾಗಿರುವೆ, ಆದುದರಿಂದ ಈ ಎಲ್ಲವನ್ನೂ ನನಗೆ ಸ್ಪಷ್ಟಮಾಡಿ ತಿಳಿಸು ।೩೨೧॥

ಈ ಅರ್ಜುನನ ಪ್ರಶ್ನೆಗೆ ಷಡ್‌ಗುಣೈಶ್ವರ್ಯ ಸಂಪನ್ನನಾದ ಶ್ರೀಕೃಷ್ಣ ಪರಮಾತ್ಮನು ಹೇಗೆ ಉತ್ತರಿಸುವನೆಂಬುದನ್ನು ಕೇಳಿರಿ ।೩೨೨॥

ದೇವನೆಂದನು:- ಪಾರ್ಥಾ, ಇದು ಯಾವ ನಿನ್ನ ಪ್ರಶ್ನೆ? ಕಾರಣ, ಗುಣಾತೀತನೆಂದು ಈ ಹೆಸರು ಉಚ್ಚಾರ ಮಾಡಿದಾಕ್ಷಣವೇ ಆತನ ಆಚರಣೆವೇನೆಂಬುವ ಪ್ರಶ್ನೆಯು ಸಂಭವಿಸುವುದಿಲ್ಲ ।೩೨೩॥

ಏಕೆಂದರೆ, ಗುಣಾತೀತವೆನ್ನುವವನು ಗುಣಾಧೀನನಾಗಿರುವುದೇ ಇಲ್ಲ. ಅಥವಾ ಗುಣದಲ್ಲಿ ನಡೆಯುತ್ತಿದ್ದರೂ ಆತನು ಗುಣಗಳ ಅಧೀನನಾಗುವುದಿಲ್ಲ ।೩೨೪॥

ಆದರೆ, ಈತನು ಗುಣದ ಸಂಬಂಧ ಇಟ್ಟುಕೊಂಡಾಗ ಗುಣದ ಆಧೀನನೋ, ಅಥವಾ ಅಲ್ಲವೆಂಬುದು ಹೇಗೆ ತಿಳಿದುಕೊಳ್ಳಬೇಕು? ।೩೨೫॥

ಇದೇ ಶಂಕೆಯು ಬಹುತೇಕವಾಗಿ ನಿನ್ನ ಮನದಲ್ಲಿ ರಬಹುದು. ಆದ್ದರಿಂದ ಸುಖವಾಗಿ (ಬಿಚ್ಚು ಮನಸ್ಸಿನಿಂದ) ವಿಚಾರಿಸು, ಆತನ ಲಕ್ಷಣಗಳನ್ನು ಹೇಳುವೆ, ಕೇಳು ।೩೨೬॥

ಶ್ರೀ ಭಗವಾನುವಾಚ :-
ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ ।
ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ।೨೨॥

ತರೀ ರಜಾಚೇನಿ ಮಾಜೇ । ದೇಹೀ ಕರ್ಮಾಚೇ ಆಣೋಜೇ । ಪ್ರವೃತ್ತಿ ಜೈ ಫೇಈಜೇ । ವೇಂಟಾಳುನಿ ।೩೨೭॥ ತೈ ಮೀಚಿ ಕಾ ಕರ್ಮಠ । ಐಸಾ ನಯೇ ಶ್ರೀಮಾಠ । ಕಾ ದರಿದ್ರ ಲಿಯೇ ಬುದ್ಧಿ ವೀಟ । ತೋಹೀ ನಾಹೀ ।೩೨೮॥ ಅಥವಾ ಸತ್ತ್ವೇಂಚಿ ಅಧಿಕೇ । ಜೈ ಸರ್ವೇಂದ್ರಿಯೀ ಜ್ಞಾನ ಫಾಂಕೇ । ತೈ ಸುವಿದ್ಯತಾ ತೋಖೇ । ಉಭಜೇಹೀ ನಾ।೩೨೯॥ ಕಾ ವಾಢಿನ್ನಲೇನಿ ತಮೇ । ನ ಗಿಳಿಜೇಚಿ ಮೋಹಭ್ರಮೇ । ತೈ ಅಜ್ಞಾನತ್ವೇ ನ ಶ್ರಮೇ । ಘೇಣೇಂಹೀ ನಾಹೀ ।೩೩೦॥ ಪೈ ಮೋಹಾಚ್ಯಾ ಅವಸರೀ । ಜ್ಞಾನಾಚೇ ಚಾಡ ನ ಧರೀ । ಜ್ಞಾನೇ ಕರ್ಮೇ ನಾದರೀ । ಹೋತಾ ನ ದುಃಖೀ ।೩೩೧॥ ಸಾಯಂಪ್ರಾತರ್ಮಧ್ಯಾನ್ಹಾ । ಯಾ ತಿನ್ಹೀ ಕಾಳಾಂಚೀ ಗಣನಾ । ನಾಹೀ ಜೇವೀ ತಪನಾ । ತೈಸಾ ಅಸೇ ।೩೩೨॥ ತಯಾ ವೇಗಳಾಚಿ ಕಾಯ ಪ್ರಕಾಶೇ । ಜ್ಞಾನಿತ್ವ ಯಾವೇಅಸೇ । ಕಾಯಿ ಜಳಾರ್ಣವ ಪಾಉಸೇ । ಸಾಜಾ ಹೋಯ? ।೩೩೩॥ ನಾ ಪ್ರವರ್ತಲೇನಿ ಕರ್ಮೇ । ಕರ್ಮಠತ್ವ ತಯಾ ಕಾ ಗಮೇ । ಸಾಂಗೇ ಹಿಮವಂತು ಹಿಮೇ । ಕಾಂಪೇ ಕಾಯೀ? ।೩೩೪॥ ನಾತರೀ ಮೋಹ ಆಲಿಯಾ । ಕಾಈ ಪಾ ಜ್ಞಾನಾ ಮುಕಿಜೈಲ ತಯಾ । ಹೋ ಮಾ ಆಗೀತೇ ಉನ್ಹಾಳೇಯಾ । ಜಾಳವತ ಅಸೇ? ।೩೩೫॥

ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ ।
ಗುಣಾ ವರ್ತಂತ ಇತ್ಯೇವ ಯೋऽವತಿಷ್ಠತಿ ನೇಂಗತೇ।೨೩॥

ತೈಸೇ ಗುಣಾಗುಣಕಾರ್ಯ ಹೇ । ಆಘವೇಂಚಿ ಆಪಣ ಆಹೇ । ಮ್ಹಣೌನಿ ಏಕೇಕಾ ನೋಹೇ । ತಡಾತೋಡೀ ।೩೩೬॥ ಯೇವಢೇಯಾ ಗಾ ಪ್ರತೀತೀ । ತೋ ದೇಹಾ ಆಲಾಸೇ ವಸ್ತೀ । ವಾಟೇ ಜಾತಾ ಗುಂತೀ । ಮಾಜೇ ಜೈಸಾ ।೩೩೭॥ ತೋ ಜಿಣತಾ ನಾ ಹಾರವೀ । ತೈಸಾ ಗುಣ ನವ್ಹೇ ನಾ ಕರವೀ। ಜೈಸೀ ಕಾ ಶ್ರೋಣವೀ । ಸಂಗ್ರಾಮೀಂಚೀ ।೩೩೮॥ ಕಾ ಶರೀರಾಆಂತೀಲ ಪ್ರಾಣು। ಘರೀ ಆತಿಥ್ಯಾಚಾ ಬ್ರಾಹ್ಮಣು । ನಾನಾ ಚೋಹ ಟಾಂಚಾ ಸ್ಥಾಣು । ಉದಾಸು ಜೈಸಾ ।೩೩೯॥ ಆಣಿ ಗುಣಾಚಾ ಯಾವಾಜಾವಾ । ಢಳೇ ಚಳೇ ನಾ ಪಾಂಡವಾ । ಮೃಗಜಳಾಚಾ ಹೇಲಾವಾ। ಮೇರುಜೈಸಾ ।೩೪೦॥

ಶ್ಲೋಕಾರ್ಥ :- ಭಗವಂತನು ಹೀಗೆಂದನು:- ಪಾಂಡುಕುಮಾರಾ! ಪ್ರಕಾಶರೂಪವಾದ ಸತ್ತ್ವ ಗುಣವೇ ಆಗಲಿ, ಪ್ರವೃತ್ತಿ ರೂಪವಾದ ರಜೋಗುಣವೇ ಆಗಲಿ ಸಂಪ್ರಾಪ್ತವಾದಾಗ ತ್ರಿಗುಣಾತೀತನಾದವನು ದ್ವೇಷಿಸುವುದಿಲ್ಲ. ಅವು ಪ್ರಾಪ್ತವಾಗದಿದ್ದರೆ ಬಯಸನು ।೨೨॥

ಈಗ ರಜೋಗುಣದ ಬಲವು ಹೆಚ್ಚಾಗಿ ದೇಹದಲ್ಲಿ ಕರ್ಮದಲ್ಲಿ, ಕರ್ಮದ ಅಂಕುರ ಉದ್ಭವವಾಗಿ ಆತನು ಪ್ರವೃತ್ತಿಮಾರ್ಗದಲ್ಲಿ ಮುಳುಗಿಬಿಡುವನು ।೩೨೬॥

ಆದರೂ ನಾನೇ ಕರ್ಮ ಮಾಡುವವನು ಎಂಬ ಅಭಿಮಾನವು ಆತನಿಗೆ ಹುಟ್ಟುವುದಿಲ್ಲ, ಅಥವಾ ಕರ್ಮವು ಇಲ್ಲದಂತಾಗಲು ಆತನ ಬುದ್ಧಿಗೆ ಕೆಟ್ಟೆನಿಸುವುದಿಲ್ಲ ।೩೨೭॥

ಅಥವಾ ಸತ್ತ್ವಗುಣವು ಬೆಳದಾಗ ಇಂದ್ರಿಯಗಳಲ್ಲಿ ಜ್ಞಾನ ಪ್ರಕಾಶವಾಗುವುದು. ಆಗ ಆತನು ನನ್ನಂತಹ ವಿದ್ವಾನನು ಬೇರೆ ಯಾರೂ ಇಲ್ಲವೆಂಬ ಸಂತೋಷದಲ್ಲಿ ಮುಳುಗುವುದಿಲ್ಲ ।೩೨೮॥

ಅಥವಾ ತಮೋಗುಣವು ಬೆಳೆದಾಗ ಆತನು ಮೋಹ ಭ್ರಮದಲ್ಲಿ ಲಿಪ್ತನಾಗುವುದಿಲ್ಲ ಮತ್ತು ಅಜ್ಞಾನದಿಂದ ಮನಸ್ಸಿಗೆ ಖೇದ ಮಾಡಿಕೊಳ್ಳುವುದಿಲ್ಲ ।೩೨೯॥

ಅಥವಾ ಮೋಹ ಉತ್ಪನ್ನವಾದಾಗ ಜ್ಞಾನದ ಇಚ್ಛೆಯನ್ನು ಮಾಡುವುದಿಲ್ಲ. ಅದರಂತೆ ಜ್ಞಾನ ಉತ್ಪನ್ನವಾದಾಗ ಕರ್ಮದ ಆದರವನ್ನು ಮಾಡುವುದಿಲ್ಲ. ಅಥವಾ ಕರ್ಮಗಳು ನಡೆದರೂ ದುಃಖಪಡುವುದಿಲ್ಲ ।೩೩೦॥

ಮುಂಜಾನೆ, ಮಧ್ಯಾಹ್ನ ಮತ್ತು ಸಾಯಂಕಾಲ ಇವು ಸೂರ್ಯನ ಗಣನೆಯಲ್ಲಿ ಬರುವುದಿಲ್ಲ. ಅದರಂತೆ ಈತನು ದೇಹದಲ್ಲಿ ಉತ್ಪನ್ನವಾಗುವ ಗುಣಗಳತ್ತ ಚಿತ್ತ ಕೊಡುವುದಿಲ್ಲ।೩೩೧॥

ಹೀಗಿರುವ ಜ್ಞಾನಿಯು ಆತನಿಗೆ ಬೇರೆಯವರ ಜ್ಞಾನದಿಂದ ಜ್ಞಾನಿಯಾಗಬೇಕಾಗಿದೆಯೇ? ಇಲ್ಲಿ ನೋಡು, ಸಮುದ್ರವು ಮಳೆಯ ನೀರಿನಿಂದ ಪರಿಪೂರ್ಣವಾಗಿದೆಯೇ? ।೩೩೨॥

ಅಥವಾ ಕರ್ಮಗಳನ್ನು ಮಾಡುವಾಗ ನಾನು ಕರ್ಮ ಮಾಡುವವನೆಂಬ ಅಭಿಮಾನವಾಗಬಹುದೇ? ಇಲ್ಲಿ ನೋಡು, ಹಿಮಾಲಯ ಪರ್ವತವು ತನಗೆ ಚಳಿಯಾದೀತೆಂದು ಭಯಪಡುವುದೇ?।೩೩೩॥

ಇಲ್ಲವೇ ಮೋಹ ಉತ್ಪನ್ನವಾದಾಗ ಆತನ ಜ್ಞಾನವು ನಷ್ಟವಾದೀತೇ? ಇಲ್ಲಿ ನೋಡು, ಅಗ್ನಿಯು ಬೇಸಿಗೆಯ ತಾಪದಿಂದ ಸುಡುವುದೇ? ।೩೩೪॥

ಶ್ಲೋಕಾರ್ಥ :- ಗುಣಗಳ ಕುಣಿದಾಟದಲ್ಲಿ ಉದಾಸೀನನಂತೆ ಇದ್ದು ಯಾವನು ಚಲಿಸುವುದಿಲ್ಲವೋ, ಇವೆಲ್ಲವೂ ಗುಣಗಳ ವ್ಯಾಪಾರವೇ ಎಂದು ತಿಳಿದು ಯಾವನು ಸ್ಥಿರವಾಗಿರುವನೋ ।೨೩॥

ಅದರಂತೆ ಗುಣ ಮತ್ತು ಶರೀರವು ತಾನೇ ಇರುವುದರಿಂದ ಅವು ಬಂದರೇನು? ಹೋದರೇನು? ಅವುಗಳಿಂದ ಸುಖ ದುಃಖವಾಗುವುದಿಲ್ಲ ।೩೩೫॥

ಹೀಗೆ ಯಾರ ದೃಢವಾದ ತಿಳುವಳಿಕೆ ಇದೆಯೋ, ಆತನು ದಾರಿಹೋಕನಿಗೆ ಪ್ರತಿಬಂದವಾದಾಗ್ಗೆ ಮುಕ್ಕಾಮಿಗಾಗಿ ಮಾತ್ರ ಆತನು ಅಲ್ಲಿರುವಂತೆ ಉದಾಸೀನ ವೃತ್ತಿಯಿಂದ ದೇಹದಲ್ಲಿ ವಾಸಮಾಡುವನು।೩೩೬॥

ರಣಭೂಮಿಯಲ್ಲಿ ಜಯವು ಯಾರದೇ ಆಗಲಿ, ಅಥವಾ ಅಪಜಯ ಯಾರದೇ ಆಗಲಿ ಅಲ್ಲಿನ ಭೂಮಿಗೆ ಹರ್ಷ ಶೋಕವಾಗುವುದಿಲ್ಲ. ಅದರಂತೆ ಈತನು ಗುಣಗಳ ಸ್ವಾಧೀನನಾಗಿ ಯಾವ ಕರ್ಮಗಳನ್ನು ಮಾಡುವುದಿಲ್ಲ ।೩೩೭॥

ಅಥವಾ ಶರೀರದಲ್ಲಿನ ಪ್ರಾಣದಂತೆ, ಅತಿಥಿಯಾದ ಬ್ರಾಹ್ಮಣನಂತೆ ದಾರಿಕೂಟದಲ್ಲಿ ಕಂಭದಂತೆ ಕ್ರಮವಾಗಿ ಶರೀರದಲ್ಲಿ, ಮನೆಯಲ್ಲಿ, ದಾರಿಕೂಟದಲ್ಲಿ ಊರಿಂದ ನಡೆಯುವ ಎಲ್ಲ ವ್ಯವಹಾರಗಳಿಗೆ ಉದಾಸತನವಿರುವುದೋ ।೩೩೮॥

ಅದರಂತೆ ಅರ್ಜುನಾ, ತ್ರಿಗುಣಗಳ ಬರುವಿಕೆ, ಹೋಗುವಿಕೆಗೆ ಗುಣಾತೀತನು ವಿಚಲಿತನಾಗುವುದಿಲ್ಲ. ಮೃಗ ಜಲದ ಅಪ್ಪಳಿಕೆಯಿಂದ ಮೇರು ಪರ್ವತವು ಅಲುಗಾಡುವುದಿಲ್ಲ ।೩೪೦॥

ಹೇ ಬಹುತ ಕಾಯಿ ಬೋಲಿಜೇ । ವ್ಯೋಮ ವಾರೇನಿ ನ ವಚಿಜೇ । ಕಾ ಸೂರ್ಯ ನಾ ಗಿಳಿಜೇ । ಅಂಧಕಾರೇ? ।।೩೪೧।। ಸ್ವಪ್ನ ಕಾ ಗಾ ಜಿಯಾಪರೀ । ಜಾಗತಯಾತೇ ನ ಸಿಂತರೀ । ಗುಣೀ ತೈಸಾ ಅವಧಾರೀ । ನ ಬಂಧಿಜೇ ತೋ ।।೩೪೨।। ಗುಣಾಂಸಿ ಕೀರ ನಾತುಡೇ । ಪರೀ ದುರೂನಿ ಜೈ ಪಾಹೇ ಕೋಡೇ । ತೈ ಗುಣದೋಷ ಸಾಯಿಖಡೇ । ಸಭ್ಯು ಜೈಸಾ ।।೩೪೩।। ಸತ್ಕರ್ಮೇ ಸಾತ್ವಿಕೀ । ರಜ ತೇ ರಜೋವಿಷಯಕೀ । ತಮ ಮೋಹಾದಿಕೀ । ವರ್ತತ ಅಸೇ ।।೩೪೪।। ಪರಿಸ ತಯಾಚಿಯಾ ಗಾ ಸತ್ತಾ । ಹೋತೀ ಗುಣಕ್ರಿಯಾ ಸಮಸ್ತಾ । ಹೇ ಫುಡೇ ಜಾಣೇ ಸವಿತಾ । ಲೌಕಿಕಾ ಜೇವೀ ।।೩೪೫।। ಸಮುದ್ರ ಚಿ ಭರತೀ । ಸೋಮಕಾಂತಚಿ ದ್ರವತೀ । ಕುಮುದೇ ವಿಕಾಸತೀ । ಚಂದ್ರು ತೋ ಉಗಾ ।।೩೪೬।। ಕಾ ವಾರಾಚಿ ವಾಜೇ ವಿರ್ಘೇ । ಗಗನೇ ನಿಶ್ಚಳ ಅಸಿಜೇ । ತೈಸಾ ಗುಣಾಚಿಯೇ ಗಜಬಜೇ । ಡೋಲೇನಾ ಜೋ ।।೩೪೭।। ಅರ್ಜುನಾ ಯೇಣೇ ಲಕ್ಷಣೇ । ತೋ ಗುಣಾತೀತು ಜಾಣಣೇ । ಪರಿಸ ಆತಾ ಆಚರಣೇ । ತಯಾಚೇ ಜೇ ।।೩೪೮।।

ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ ।
ತುಲ್ಯಪ್ರಿಯಾಪ್ರಿಯೋ ಧೀರಃ ತುಲ್ಯನಿಂದಾತ್ಮಸಂಸ್ತುತಿಃ ।।೨೪।।

ತರೀ ವಸ್ತ್ರಾಸಿ ಪಾಠೀ ಪೋಟೀ । ನಾಹೀ ಸುತಾವಾಂಚೂನಿ ಕಿರೀಟೀ । ಐಸೇ ಸುಯೇ ದಿಠೀ । ಚರಾಚರ ಮದ್ರೂಪೇ ।।೩೪೯।। ಮ್ಹಣೌನಿ ಸುಖದುಃಖಾಸರಿಸೇ । ಕಾಂಟಾಳೇ ಆಚಾರೇ ಐಸೇ । ರಿಪುಭಕ್ತಾ ಜೈಸೇ । ಹರೀಚೇ ದೇಣೇ ।।೩೫೦।। ಯೇರ್ಹ್ವಿ ತರೀ ಸಹಜೇ । ಸುಖದುಃಖ ತೈಂಚಿ ಸೇವಿಜೇ । ದೇಹಜಳೀ ಹೋಈಜೇ । ಮಾಸೋಳೀ ಜೈ ।।೩೫೧।। ಆತಾ ತೇ ತಂವ ತೇಣೇ ಸಾಂಡಿಲೇ । ಆಹೇ ಸ್ವಸ್ವರೂಪೇಸೀಚಿ ಮಾಂಡಿಲೇ । ಸಸ್ಯಾಂತೀ ನಿವಡಿಲೇ । ಬೀಜ ಜೈಸೇ ।।೩೫೨।। ಕಾ ವೋಘು ಸಾಂಡೂನಿ ಗಾಂಗ । ರಿಘೋನಿ ಸಮುದ್ರಾಚೇ ಆಂಗ । ನಿಸ್ತರಲೀ ಲಗಬಗ । ಖಳಾಳಾಚೀ ।।೩೫೩।। ತೇವೀ ಆಪಣಪಾಂಚಿ ಜಯಾ । ವಸ್ತೀ ಜಾಲೀ ಗಾ ಧನಂಜಯಾ । ತಯಾ ದೇಹೀ ಆಪ್ಪೈಸಯಾ । ಸುಖ ತೈಸೇ ದುಃಖ ।।೩೫೪।। ರಾತ್ರಿ ತೈಸೇ ಪಾಹಲೇ । ಹೇ ಧಾರಣಾ ಜೇವೀ ಏಕ ಜಾಲೇ । ಆತ್ಮಾರಾಮ ದೇಹೀ ಆತಲೇ । ದ್ವಂದ್ವ ತೈಸೇ ।।೩೫೫।।

ಇದಕ್ಕೆ ಹೆಚ್ಚಿಗೇನು ಹೇಳಬೇಕು? ಆಕಾಶವು ಗಾಳಿಯಿಂದ ಎಲ್ಲಿಯಾದರೂ ಸರಿಯಬೇಕಾಗಿದೆಯೇ? ಅಥವಾ ಕತ್ತಲವು ಸೂರ್ಯನನ್ನು ನುಂಗಬಹುದೇ? ।೩೪೧॥

ಸ್ವಪ್ನವು ಜಾಗ್ರತ ಮನುಷ್ಯನಿಗೆ ಭ್ರಮಿಸಲಾರದು. ಅದರಂತೆ ಆತನು ಗುಣಗಳಿಂದ ಬಂಧಿಸಲಾರನು. ಇದನ್ನು ಲಕ್ಷದಲ್ಲಿಡು ।೩೪೨॥

ಗುಣಗಳಿಂದ ಆತನು ನಿಶ್ಚಯವಾಗಿ ಬಂಧಿತನಾಗುವುದಿಲ್ಲ. ಆದರೆ ಸಭೆಯಲ್ಲಿನ ಚಿತ್ರಗೊಂಬೆಗಳ ಆಟವನ್ನು ಪ್ರೇಕ್ಷಕನು ದೂರದಿಂದ ನೋಡುವಂತೆ ಈತನು ಗುಣಗಳನ್ನು ಉದಾಸೀನನಾಗಿ ದೂರದಿಂದ ನೋಡುವನು ।೩೪೩॥

ಆಗ ಸಾತ್ತ್ವಿಕಗುಣವು ಸತ್ಕರ್ಮ ಮಾಡಲಿ, ರಜೋಗುಣವು ವಿಷಯಗಳ ಆಶೆ ಮಾಡಲಿ, ಅಥವಾ ತಮೋಗುಣವು ಮೋಹಾದಿಕ ಅಜ್ಞಾನದಲ್ಲಿ ಮುಳಗಲಿ ಆತನಿಗೆ ಯಾವ ಬಾಧೆಯಾಗುವುದಿಲ್ಲ ।೩೪೪॥

ಇಲ್ಲಿ ಕೇಳು, ತನ್ನ ಸತ್ತೆಯಿಂದಲೇ ಈ ಎಲ್ಲ ಗುಣಗಳ ಕಾರ್ಯವಾಗಿದೆ ಎಂದು ಯಾವಾತನು ತಿಳಿಯುವನೋ, ಆತನು ಸೂರ್ಯನಂತೆ ಲೋಕ ವ್ಯವಹಾರಗಳಿಗೆ ಸಾಕ್ಷಿಭೂತನಾಗಿ ಅಲಿಪ್ತನಾಗಿರುವನು ।೩೪೫॥

ಸಮುದ್ರಕ್ಕೆ ಭರತಿ ಬರುವುದು, ಸೋಮಕಾಂತ ಮಣಿಯು ದ್ರವಿಸುವುದು, ಚಂದ್ರವಿಕಾಸಿನಿ ಕಮಲಗಳು ಅರಳುವುದು. ಈ ಎಲ್ಲ ಕ್ರಿಯೆಗಳು ಚಂದ್ರನಿಂದಲೇ ಆಗುತ್ತಿದ್ದರೂ, ಚಂದ್ರನು ಅಲಿಪ್ತನಾಗಿರುವನು ।೩೪೬॥

ಆಕಾಶದಲ್ಲಿ ಗಾಳಿಯು ಬಹಳಷ್ಟು ಬೀಸಿದರೂ ಅಥವಾ ಇಲ್ಲದಂತಾದರೂ, ಆಕಾಶವು ನಿಶ್ಚಳವಾಗಿರುವುದು. ಅದರಂತೆ ಗುಣಗಳು ಎಷ್ಟೊಂದು ಗಡಬಡಿಸಿದರೂ ಅವುಗಳ ಅಧೀನನಾಗುವುದಿಲ್ಲ ।೩೪೭॥

ಅರ್ಜುನಾ, ಈ ಪ್ರಕಾರವಾಗಿ ಗುಣಾತೀತನ ಲಕ್ಷಣಗಳನ್ನು ನಿನಗೆ ಹೇಳಿದೆನು. ಈಗ ಅವರ ಆಚರಣೆಗಳು ಹೇಗಿರುವುವು ಎನ್ನುವುದಕ್ಕೆ ಹೇಳುವೆನು ಕೇಳು ।೩೪೮॥

ಶ್ಲೋಕಾರ್ಥ :- ಯಾವನಿಗೆ ಸುಖ ದುಃಖಗಳು ಸಮಾನವೋ, ಯಾವನು ಸ್ವರೂಪದಲ್ಲಿ ಸ್ಥಿತನಾಗಿರುವನೋ, ಮಣ್ಣು, ಕಲ್ಲು, ಬಂಗಾರಗಳಲ್ಲಿ ಯಾವನಿಗೆ ವಿಷಮಬುದ್ಧಿ ಇರುವುದಿಲ್ಲವೋ, ಯಾವನು ಧೀರನೋ ಪ್ರಿಯಾಪ್ರಿಯಗಳಲ್ಲಿ, ನಿಂದಾಸ್ತುತಿಗಳಲ್ಲಿ ।೨೪॥

ಅರ್ಜುನಾ, ವಸ್ತ್ರದಲ್ಲಿ ಒಳಹೊರಗೆ ನೂಲಿನ ಹೊರತಾಗಿ ಏನೂ ಇರುವುದಿಲ್ಲ. ಅದರಂತೆ ಮದ್ರೂಪನಾದವನಿಗೆ ಚರಾಚರಗಳಲ್ಲಿ ನನ್ನ ಹೊರತಾಗಿ ಏನೂ ಕಾಣಿಸುವುದಿಲ್ಲ ।೩೪೯॥

ಈಶ್ವರನು ತನ್ನ ಶತ್ರುವಿಗೂ, ಭಕ್ತನಿಗೂ ಒಂದೇ ಮುಕ್ತಿಯನ್ನು ಕೊಡುವನು. ಅದರಂತೆ ಸುಖ ದುಃಖಗಳು ಪ್ರಾಪ್ತವಾದರೆ ಆತನ ಮನವು ತಕ್ಕಡಿಯಂತೆ ಸಮತೋಲವಾಗಿರುವುದು ।೩೫೦॥

ಇದರ ಹೊರತಾಗಿ, ದೇಹರೂಪ ಜಲದಲ್ಲಿ ಮನರೂಪ ಮೀನವು ಆಡುತ್ತಿದ್ದರೆ ಇದರಿಂದ ಸುಖ ದುಃಖಗಳು ಸಹಜವಾಗಿ ಬಾಧೆಯಾಗುವುವು ।೩೫೧॥

ಈಗ ಆತನು ದೇಹಾಭಿಮಾನವನ್ನು ಬಿಟ್ಟು ಆತ್ಮರೂಪನಾದ್ದರಿಂದ ಬೀಜ ಬಿತ್ತಿ ಧಾನ್ಯ ಬಂದಾಗ ಅದರಲ್ಲಿ ಬೀಜದ ಪರಿಶುದ್ಧತೆಯಾಗುವುದು ।೩೫೨॥

ಅಥವಾ ಗಂಗಾನದಿಯು ತನ್ನ ಪ್ರವಾಹ ಬಿಟ್ಟು ಸಮುದ್ರನನ್ನು ಸೇರಿದಾಗ ತನ್ನ ಭೋರ್ಗರೆಯತನ ತನ್ನಷ್ಟಕ್ಕೆ ತಾನೇ ನಿಲ್ಲುವುದು ।೩೫೩॥

ಅದರಂತೆ ಅರ್ಜುನಾ, ಯಾರು ತನ್ನ ಸ್ವರೂಪದಲ್ಲಿ ಕೂಡಿಕೊಂಡಿರುವನೋ, ಆತನು ದೇಹದಲ್ಲಿದ್ದರೂ ಸುಖ ದುಃಖಗಳನ್ನು ಸಮವಾಗಿ ಕಾಣುವನು ।೩೫೪॥

ಮನೆಯ ಕಂಭಕ್ಕೆ ರಾತ್ರಿ ಅಥವಾ ಹಗಲು ಎರಡೂ ಸಮವು. ಅದರಂತೆ ದೇಹದಲ್ಲಿನ ಆತ್ಮಕ್ಕೆ ಸುಖ ಮತ್ತು ದುಃಖ ಈ ಎರಡೂ ಸಮವು. ಯಾಕೆಂದರೆ ಆತನು ಗುಣಗಳಿಂದ ಅಲಿಪ್ತನಾಗಿರುವನು ।೩೫೫॥

ಪೈ ನಿದ್ರಿತಾಚೇನಿ ಆಂಗೇಶೀ । ಸಾಪ ತೈಶೀ ಉರ್ವಶೀ । ತೇವೀ ಸ್ವರೂಪಸ್ಥಾ ಸರಿಶೀ । ದೇಹೀ ದ್ವಂದ್ವೇ ॥೩೫೬॥ ಮ್ಹಣೌನಿ ತಯಾಚ್ಯಾ ಠಾಯೀ । ಶೇಣಾ ಸೋನಯಾ ವಿಶೇಷ ನಾಹೀ । ರತ್ನಾ ಗುಂಡೇಯಾ ಕಾಂಹೀ । ನೇಣಿಜೇ ಭೇದು ॥೩೫೭॥ ಘರಾ ಯೇವೋ ಪಾಸ್ವರ್ಗ । ಕಾ ವರಪಡೋ ವಾಘು । ಪರೀ ಆತ್ಮ ಬುದ್ಧೀಸೀ ಭಂಗ । ಕದಾ ನೋಹೇ ॥೩೫೮॥ ನಿವಟಲೇ ನ ಉಪವಡೇ । ಜಳಿನಳೇ ನ ವಿರೂಢೇ । ಸಾಮ್ಯಬುದ್ಧಿ ನ ಮೋಡೇ । ತಯಾಪರೀ ॥೩೫೯॥ ಹಾ ಬ್ರಹ್ಮಾ ಐಸೇನಿ ಸ್ತವಿಜೋ । ಕಾ ನೀಚ ಮ್ಹಣೌನಿ ನಿಂದಿಜೋ । ಪರೀ ನೇಣೇ ಜಳೋ ವಿರ್ಘೋ । ರಾಖೋಂಡೀ ಜೈಸೀ ॥೩೬೦॥ ತೈಸೀ ನಿಂದಾ ಆಣಿ ಸ್ತುತಿ । ನಯೇ ಕೋಣ್ಹೇಚಿ ವ್ಯಕ್ತೀ । ನಾಹೀ ಅಂಧಾರೇ ಕಾ ವಾತೀ । ಸೂರ್ಯಾ ಘರೀ ॥೩೬೧॥

ಮಾನಾಪಮಾನಯೋಸ್ತುಲ್ಯಃ ತುಲ್ಯೋ ಮಿತ್ರಾರಿಪಕ್ಷಯೋಃ ।
ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ॥೨೫॥

ಈಶ್ವರು ಮ್ಹಣೌನಿ ಪೂಜಿಲಾ । ಕಾ ಚೋರು ಮ್ಹಣೌನಿ ಗಾಂಜಿಲಾ । ವೃಷಗಜೀ ವೇಢಿಲಾ । ಕೇಲಾರಾವೋ ॥೩೬೨॥ ಕಾ ಸುಹೃದ ಪಾಸೀ ಆಲೇ । ಅಥವಾ ವೈರೀ ವರಪಡೇ ಜಾಲೇ । ಪರೀ ನೇಣೇ ರಾತೀ ಪಾಹಾಲೇ । ತೇಜ ಜೇವೀ ॥೩೬೩॥ ಸಾಹೀ ಋತು ಯೇತಾ ಆಕಾಶೇ । ಲಿಂಪಿಜೇಚಿ ನಾ ಜೈಸೇ । ತೇವೀ ವೈಷಮ್ಯ ಮಾನಸೇ । ಜಾಣಿಜೇನಾ ॥೩೬೪॥ ಆಣೀಕಹೀ ಏಕು ಪಾಹೀ । ಆಚಾರು ತಯಾಚ್ಯಾ ಠಾಯೀ । ತರೀ ವ್ಯಾಪಾರಾಸಿ ನಾಹೀ । ಜಾಲೇ ದಿಸೇ ॥೩೬೫॥ ಸರ್ವಾರಂಭಾ ಉಟಕಲೇ । ಪ್ರವೃತ್ತೀಚೇ ತೇಥ ಮಾವಳಲೇ । ಜಳತೀ ಗಾ ಕರ್ಮಫಳೇ । ತೇ ತೋ ಆಗೀ ॥೩೬೬॥ ದೃಷ್ಟಾದೃಷ್ಟಾಚೇನಿ ನಾಂವೇ । ಭಾವಚಿ ಜೇವೀ ನುಗವೇ । ಸೇವೀ ಜೇ ಕಾ ಸ್ವಭಾವೇ । ಪೈಠೇ ಹೋಯ ॥೩೬೭॥ ಸುಖೇ ನಾಶಿಣೇ । ಪಾಷಾಣೂ ಕಾ ಜೇಣೇ ಮಾನೇ । ತೈಸೀ ಸಾಂಡೀಮಾಂಡೀ ಮನೇ । ವರ್ಜಿಲೀ ಅಸೇ ॥೩೬೮॥ ಆತಾ ಕಿತೀ ಹಾ ವಿಸ್ತಾರು । ಜಾಣೇ ಐಸಾ ಆಚಾರು । ಜಯಾತೇ ತೋಚಿ ಸಾಚಾರು । ಗುಣಾತೀತು ॥೩೬೯॥ ಗುಣಾಂತೇ ಅತಿಕ್ರಮಣೇ । ಘಡೇ ಉಪಾಯೇ ಜೇಣೇ । ತೋ ಆತಾ ಆಈಕ ಮ್ಹಣೇ । ಶ್ರೀಕೃಷ್ಣನಾಥು ॥೩೭೦॥

ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।
ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ॥೨೬॥

ಮಲಗಿಕೊಂಡವನ ಒಂದು ಮಗ್ಗಲಲ್ಲಿ ಸರ್ಪವು, ಇನ್ನೊಂದು ಮಗ್ಗಲಲ್ಲಿ ಊರ್ವಶಿಯು, ಹೀಗಿದ್ದಾಗ ಈ ಎರಡರ ಯೋಗ್ಯತೆಯು ಒಂದೇ ಆಗುವುದು. ಅದರಂತೆ ಆತ್ಮ ಸ್ವರೂಪದಲ್ಲಿ ಲೀನವಾದವರಿಗೆ ಸುಖ ದುಃಖಗಳು ಸಮವಾಗಿರುವುವು ।ಖ.೫೬॥

ಆದ್ದರಿಂದ ಆತನಲ್ಲಿ ಸಗಣಿ ಮತ್ತು ಸುವರ್ಣ ಇವುಗಳಿಗೆ ಸಮಾನ ಬೆಲೆ ಇರುವುದು ಮತ್ತು ರತ್ನ ಮತ್ತು ಕಲ್ಲು ಇವುಗಳಲ್ಲಿ ಯಾವ ಭೇದವನ್ನು ಅರಿಯನು ।ಖ.೫೭॥

ಸ್ವರ್ಗ ಸುಖವು ನಡೆಯುತ್ತ ಮನೆಗೆ ಬರಲಿ, ಇಲ್ಲವೇ ತನ್ನನ್ನು ಕೊಲ್ಲಲು ಹುಲಿಯು ಮೈಮೇಲೆ ಬರಲಿ, ಆದರೆ ಆತನ ಆತ್ಮಸ್ವರೂಪದ ಬುದ್ಧಿಯು ಎಂದೂ ಭಂಗವಾಗುವುದಿಲ್ಲ ।ಖ.೫೮॥

ಸತ್ತಿದ್ದು ಹೇಗೆ ಬದುಕುವುದಿಲ್ಲವೋ ಅಥವಾ ಸುಟ್ಟಿದ್ದು ಹೇಗೆ ಹುಟ್ಟುವುದಿಲ್ಲವೋ, ಅದರಂತೆ ಆತನ ಆತ್ಮಸ್ವರೂಪ ವಿಷಯದಲ್ಲಿ ಆಗಿರುವ ಸಾಮ್ಯಬುದ್ಧಿಯನ್ನು ಯಾವುದರಿಂದಲೂ ಭಂಗವಾಗುವುದಿಲ್ಲ ।ಖ.೫೯॥

"ಈತನು ಬ್ರಹ್ಮದೇವನು" ಎಂದು ಯಾರಾದರೂ ಸ್ತುತಿ ಮಾಡಲಿ, ಅಥವಾ "ನೀಚನಿರುವನು" ಎಂದು ಯಾರಾದರೂ ನಿಂದೆ ಮಾಡಲಿ, ಆದರೆ ಬೂದಿಯಾದ ಮೇಲೆ ಅದಕ್ಕೆ ಹೊತ್ತುವ, ಆರುವ ಭಯವಿರುವುದಿಲ್ಲ ।ಖ.೬೦॥

ಅದರಂತೆ ನಿಂದೆ ಅಥವಾ ಸ್ತುತಿ ಮಾಡಿದಾಗ ಅದರಿಂದ ಆತನಿಗೆ ದುಃಖಾನಂದವಾಗುವುದಿಲ್ಲ. ಸೂರ್ಯನ ಮನೆಯಲ್ಲಿ ಕತ್ತಲು ಬೆಳಕು ಇರದೇ ಯಾವಾಗಲೂ ಸ್ವಯಂ ಪ್ರಕಾಶವೇ ಇರುವುದು ।ಖ.೬೧॥

ಶ್ಲೋಕಾರ್ಥ :- ಮಾನಾಪಮಾನಗಳಲ್ಲಿ, ಶತ್ರುಮಿತ್ರರಲ್ಲಿ ಯಾವನು ಸಮಾನ ದೃಷ್ಟಿಯುಳ್ಳವನೋ, ಯಾವನು ಸರ್ವಸಂಗ ಪರಿತ್ಯಾಗಿಯೋ ಅಂಥವನೇ ಗುಣಾತೀತನು ।೨೫॥

ಈಶ್ವರನೆಂದು ತಿಳಿದು ಈತನಿಗೆ ಪೂಜಿಸಲಿ, ಅಥವಾ ಕಳ್ಳನೆಂದು ತಿಳಿದು ಈತನಿಗೆ ಹೊಡೆಯಲಿ, ಅಥವಾ ಆನೆ, ಕುದುರೆ, ರಥಗಳನ್ನು ಕೊಟ್ಟು, ಈತನಿಗೆ ರಾಜನಾಗಿ ಮಾಡಲಿ ।ಖ.೬೨॥

ಅಥವಾ ಆಪ್ತನು ಸಮೀಪ ಬರಲಿ ಅಥವಾ ವೈರಿ ಸಮೀಪ ಬರಲಿ ಆದಾಗ್ಯೂ, ಆತನಿಗೆ ಎಲ್ಲವೂ ಸಮಾನವಾಗಿವೆ. ಸೂರ್ಯನ ಪ್ರಕಾಶಕ್ಕೆ ರಾತ್ರಿ ಹಗಲು ಗೊತ್ತಿರುವುದಿಲ್ಲ ।ಖ.೬೩॥

ಆಕಾಶದಲ್ಲಿ ಆರು ಋತುಗಳು ಬಂದು ಹೋದರೂ ಅದು ಯಾವ ಪ್ರಕಾರವಾಗಿ ಅಲಿಪ್ತವಾಗಿರುವುದೋ, ಅದರಂತೆ ಆತನ ಬುದ್ಧಿಗೆ ವಿಷಮತೆಯೂ ಎಂದೂ ಗೊತ್ತಿಲ್ಲ ।ಖ.೬೪॥

ಆತನಲ್ಲಿ ಇನ್ನೊಂದು ಕಾಣುವುದೇನೆಂದರೆ ಆತನು ಯಾವುದೇ ವ್ಯವಹಾರಗಳನ್ನು ಮಾಡುವುದಿಲ್ಲ ।ಖ.೬೫॥

ಆತನು ಯಾವ ಕಾರ್ಯಗಳನ್ನೂ ಆರಂಭಿಸುವುದಿಲ್ಲ. ಪ್ರವೃತ್ತಿ ಮಾರ್ಗದಿಂದ ದೂರವಿರುವನು ಮತ್ತು ಆತನು ಜ್ಞಾನವಂತನಾಗಿರುವುದರಿಂದ ಆತನ ಕರ್ಮದ ಫಲಗಳು ಸುಟ್ಟು ಹೋಗುವುವು ।ಖ.೬೬॥

ಇಹಲೋಕ ಅಥವಾ ಪರಲೋಕ ಇವುಗಳ ವಿಷಯವಾಗಿ ಈತನ ಮನಸ್ಸಿನಲ್ಲಿ ಯಾವ ವಿಚಾರವೇ ಬರುವುದಿಲ್ಲ. ಸಹಜಾನುಸಾರವಾಗಿ ಪ್ರಾಪ್ತವಾಗುವುದನ್ನೆಲ್ಲ ಸೇವಿಸುವನು ।ಖ.೬೭॥

ಕಲ್ಲಿನಂತೆ ಈತನ ಮನಸ್ಸು ಕಠಿಣವಾಗಿರುವುದು. ಈತನು ಸುಖವಾದಾಗ ಆನಂದಪಡುವುದಿಲ್ಲ ಮತ್ತು ದುಃಖವಾದಾಗ ತ್ರಾಸು ಮಡಿಕೊಳ್ಳುವುದಿಲ್ಲ. ಹಾಗೆಯೇ ಆತನು ಮನಸ್ಸಿನಿಂದ ಯಾವ ವ್ಯಾಪಾರವನ್ನೂ ಮಾಡುವುದಿಲ್ಲ ।ಖ.೬೮॥

ಮತ್ತೇನು ನಿನಗೆ ಎಷ್ಟೊಂದು ಸ್ಪಷ್ಟ ಹೇಳಲಿ ? ಅದಕ್ಕಾಗಿ ಈ ಪ್ರಕಾರವಾಗಿ ಯಾರ ಆಚರಣೆ ಇದೆಯೋ, ಆತನೇ ಗುಣಾತೀತನೆಂದು ತಿಳಿ ।ಖ.೬೯॥

ಶ್ರೀಕೃಷ್ಣ ಒಡೆಯನು ಹೇಳುವನು:- ಆ ಗುಣಗಳು ಅಥವಾ ಗುಣಗಳ ಧರ್ಮವು ಈತನಿಗೆ ಯಾವ ಉಪಾಯದಿಂದ ದಾಟಿ ಹೋಗುವುವೋ, ಆ ಉಪಾಯಗಳನ್ನು ಹೇಳುವೆ ಕೇಳು ।ಖ.೭೦॥

ಶ್ಲೋಕಾರ್ಥ :- ವ್ಯಭಿಚಾರವಿಲ್ಲದ ಭಕ್ತಿಯೋಗದಿಂದ ನನ್ನನ್ನು ಸೇವಿಸುವವನು ಗುಣಗಳನ್ನು ದಾಟಿ ಬ್ರಹ್ಮಸ್ವರೂಪವನ್ನು ಪಡೆಯುತ್ತಾನೆ ।೨೬॥

ತರೀ ವ್ಯಭಿಚಾರರಹಿತ ಚಿತ್ತೇಂ । ಭಕ್ತಿಯೋಗೇಂ ಮಾತೇಂ । ಸೇವೀ ತೋ ಗುಣಾತೇಂ । ಜಾಳೂ ಶಕೇ ।।೩೮೧।। ತರೀ ಕೋಣ ಮೀ ಕೈಸೀ ಭಕ್ತೀ । ಅವ್ಯಭಿಚಾರಾ ಕಾಯ ವ್ಯಕ್ತೀ । ಹೇಂ ಆಘವೀಂಚಿ ನಿರುತೀಂ । ಹೋಆವೀ ಲಾಗೇ ।।೩೮೨।। ತರೀ ಪಾರ್ಥಾ ಪರಿಯೇಸಾ । ಮೀ ತಂವ ಯೇಥ ಐಸಾ । ರತ್ನೀಂ ಕಿಳಾವೋ ಜೈಸಾ । ರತ್ನ ಚಿ ಕೀ ತೋ ।।೩೮೩।। ಕಾ ದ್ರವಪಣಚಿ ನೀರ । ಅವಕಾಶಚಿ ಅಂಬರ । ಗೋಡೀ ತೇಚಿ ಸಾಖರ । ಆನ ನಾಹೀಂ ।।೩೮೪।। ವನ್ಹೀ ತೇಚಿ ಜ್ವಾಳ । ದಳಾಚಿ ನಾಂವ ಕಮಳ । ರುಖ ತೇಂಚಿ ಡಾಳ । ಫಳಾದಿಕ ।।೩೮೫।। ಅಗಾ ಹಿಮ ಜೇಂ ಆಕರ್ಷಲೇಂ । ತೇಂಚಿ ಹಿಮವಂತ ಜೇವೀ ಜಾಲೇಂ । ನಾನಾ ದೂಧ ಮುರಾಲೇಂ । ತೇಂಚಿದ ಹೀ ।।೩೮೬।। ತೈಸೇಂ ವಿಶ್ವ ಯೇಣೇಂ ನಾಂವೇಂ । ಹೇಂ ಮೀಚಿ ಪೈ ಆಘವೇಂ । ಘೇಈ ಚಂದ್ರಬಿಂಬ ಸೋಲಾವೇಂ । ನ ಲಗೇ ಜೇವೀ ।।೩೮೭।। ಘೃತಾಚೇಂ ಥಿಜಲೇಪಣ । ನ ಮೋಡಿತಾ ಘೃತಚಿ ಜಾಣ । ಕಾ ನಾಟಿತಾ ಕಾಂಕಣ । ಸೋನೇಂಚಿ ತೇಂ ।।೩೮೮।। ನ ಉಕಲಿತಾ ಪಟು । ತಂತುಚಿ ಅಸೇ ಸ್ಪಷ್ಟು । ನ ವಿರವಿತಾ ಘಟು । ಮೃತ್ತಿಕಾ ಜೇವೀ ।।೩೮೯।। ಮ್ಹಣೌನಿ ವಿಶ್ವಪಣ ಜಾವೇ । ಮಗ ತೈ ಮಾತೇಂ ಘೇಯಾವೇಂ । ತೈಸಾ ನವ್ಹೇ ಆಘವೇಂ । ಸಕಟಚಿ ಮೀ ।।೩೯೦।। ಐಸೇನಿ ಮಾತೇಂ ಜಾಣಿಜೇ । ತೇ ಅವ್ಯಭಿಚಾರೀ ಭಕ್ತಿ ಮ್ಹಣಿಜೇ । ಯೇಥ ಭೇದ ಕಾಂಹೀ ದೇಖಿಜೇ । ತರೀ ವ್ಯಭಿಚಾರು ತೋ ।।೩೯೧।। ಯಾಕಾರಣೇಂ ಭೇದಾತೇಂ । ಸಾಂಡೂನಿ ಅಭೇದೇಂ ಚಿತ್ತೇಂ । ಆಪಣಯಾಸಕಟ ಮಾತೇಂ । ಜಾಣಾವೇಂ ಗಾ ।।೩೯೨।। ಪಾರ್ಥಾ ಸೋನಯಾಚೀ ಟಿಕಾ । ಸೋನಯಾಸೀ ಲಾಗಲೀ ದೇಖಾ । ತೈಸೇ ಆಪಣಪೇಂ ಆಣಿಕಾ । ಮಾನಾವೇ ನಾ ।।೩೯೩।। ತೇಜಾಚಾ ತೇಜೌನಿ ನಿಘಾಲಾ । ಪರೀ ತೇಜೇಂಚಿ ಅಸೇ ಲಾಗಲಾ । ತಯಾ ರಶ್ಮೀ ಐಸಾ ಭಲಾ । ಬೋಧು ಹೋಆವಾ ।।೩೯೪।। ಪೈ ಪರಮಾಣು ಭೂತಳೀಂ । ಹಿಮಕಣು ಹಿಮಾಚಳೀಂ । ಮಜಮಾಜೀ ನ್ಯಾಹಾಳೀಂ । ಅಹಂ ತೈಸೇಂ ।।೩೯೫।। ಹೋ ಕಾ ತರಂಗು ಲಹಾನು । ಪರೀ ಸಿಂಧೂಸೀ ನಾಹೀಂ ಭಿನ್ನು । ತೈಸಾ ಈಶ್ವರೀಂ ಮೀ ಅನು । ನೋಹೇಚಿ ಮಾ ।।೩೯೬।। ಐಸೇನಿ ಬಾ ಸಮರಸೇಂ । ದೃಷ್ಟಿ ಜೇ ಉಲ್ಹಾಸೇ । ತೇ ಭಕ್ತಿ ಪೈ ಐಸೇಂ । ಆಮ್ಹೀ ಮ್ಹಣೋ ।।೩೯೭।। ಆಣಿ ಜ್ಞಾನಾಚೇ ಚಾಂಗಾವೇಂ । ಇಯೇಚಿ ದೃಷ್ಟಿ ನಾಂವೇಂ । ಯೋಗಾಚೇಂಹೀ ಆಘವೇಂ । ಸರ್ವಸ್ವ ಹೇಂ ।।೩೯೮।।

ಯಾವನು ಅಭೇದ ಬುದ್ಧಿಯಿಂದ ನನ್ನ ಭಕ್ತಿಯನ್ನು ಮಾಡುವನೋ ಅವನು ಈ ಗುಣಗಳ ನಾಶ ಮಾಡಬಲ್ಲನು ।।೩೭೧।।

ಆದರೆ ನಾನು ಯಾರು? ನನ್ನ ಭಕ್ತಿಯನ್ನು ಹೇಗೆ ಮಾಡ ಬೇಕು? ಅವ್ಯಭಿಚಾರ ಭಕ್ತಿ ಎಂದರೇನು? ಈ ಎಲ್ಲ ವಿಷಯ ಗಳನ್ನು ನಿನಗೆ ಸ್ಪಷ್ಟ ಮಾಡಿ ಹೇಳಬೇಕಾಗಿದೆ ।।೩೭೨।।

ಆದ್ದರಿಂದ ಅರ್ಜುನಾ, ಕೇಳು. ನಾನು ಈ ಜಗತ್ತಿನಲ್ಲಿ ರತ್ನದ ತೇಜ ಮತ್ತು ರತ್ನ ಇವೆರಡೂ ಒಂದೇ ಇರುವಂತೆ ಇರು ವೆನು ।।೩೭೩।।

ಅಥವಾ ತಿಳುವುತನ ಮತ್ತು ನೀರು, ಆಕಾಶ ಮತ್ತು ಅವ ಕಾಶ, ಸಿಹಿ ಮತ್ತು ಸಕ್ಕರೆ ಇವು ಭಿನ್ನವಿರದೇ ಒಂದಾಗಿರು ವಂತೆ ಇರುವೆನು ।।೩೭೪।।

ಅಗ್ನಿ ಮತ್ತು ಜ್ವಾಲೆಯು ಒಂದೇ ಆಗಿರುವುದು. ಕಮಲದ ದಳಗಳು ಇವೇ ಕಮಲದ ಹೂವು, ಗಿಡ ಮತ್ತು ಟೊಂಗೆಗಳು, ಫಲಗಳು ಮತ್ತು ಎಲೆಗಳು ।।೩೭೫।।

ಮತ್ತು ಯಾವ ಪ್ರಕಾರವಾಗಿ ಚಳಿ ಮತ್ತು ಚಳಿ ವಾಸಿ ಸುವ ಹಿಮಾಲಯ ಪರ್ವತವು ಇವೆರಡು ಒಂದೇ ಇರುವುವು, ಹಾಲು ಹೆಪ್ಪುಗಟ್ಟಿತೆಂದರೆ ಅದಕ್ಕೇನೇ ಹೇಗೆ ಮೊಸರು ಎನ್ನುವರೋ ।।೩೭೬।।

ಅದರಂತೆ ವಿಶ್ವ ಎಂದ ಮೇಲೆ ಅದೆಲ್ಲವೂ ನನ್ನ ರೂಪ ವೇ ಆಗಿರುವುದು. ಇಲ್ಲಿ ನೋಡು, ಚಂದ್ರನ ಕಲೆ ನೋಡಬೇ ಕಾದರೆ ಚಂದ್ರನಿಂದ ಅದನ್ನು ಸುಲಿದು ತೆಗೆಯ ಬೇಕಾಗಿಲ್ಲ, ಏಕೆಂದರೆ ಅವೆರಡೂ ಒಂದೇ ಇರುವುವು ।।೩೭೭।।

ತುಪ್ಪವು ಹೆಪ್ಪುಗಟ್ಟಿತೆಂದರೆ ಆಗ ಆ ಸ್ಥಿತಿಯಲ್ಲಿಯೂ ಅದು ತುಪ್ಪವಾಗಿಯೇ ಇರುವುದು. ಅಥವಾ ಬಳೆಯನ್ನು ಕರ ಗಿಸಿಗಟ್ಟಿಯನ್ನು ಮಾಡದಿದ್ದರೂ ಅದು ಬಂಗಾರವೇ ಆಗಿರುವುದು ।।೩೭೮।।

ವಸ್ತ್ರವನ್ನು ಹರೆದು ಅದರಲ್ಲಿನ ನೂಲುಗಳನ್ನು ಬೇರೆ ಮಾಡದಿದ್ದರೆ ಅದು ಕೇವಲ ನೂಲುಗಳಿಂದಲೇ ಕೂಡಿರು ವುದು. ಹಸಿಮಡಿಕೆ, ಮಣ್ಣು ಒಂದೇ ಆಗಿರುವುವು ।।೩೭೯।।

ಅದರಂತೆ ವಿಶ್ವವನ್ನು ಮಗ್ಗಲು ಸರಿಸಿ ನಾನು ಬೇರೆಯಾ ಗಿರುವುದಿಲ್ಲ. ಎಲ್ಲ ವಿಶ್ವವೂ ನಾನೇ ಆಗಿರುವೆನು ।।೩೮೦।।

ಹೀಗೆ ನನ್ನನ್ನು ಐಕ್ಯ ಬುದ್ಧಿಯಿಂದ ತಿಳಿಯುವುದಕ್ಕೆ ಅದುವೇ ನನ್ನ ಅವ್ಯಭಿಚಾರ ಅಂದರೆ ಅಭೇದ ಭಕ್ತಿ ಎನ್ನುವರು ಮತ್ತು ನಾನು ಮತ್ತು ವಿಶ್ವ ಇದರಲ್ಲಿ ಕಿಂಚಿತವಾದರೂ ಭೇದ ಬುದ್ಧಿ ಮಾಡಿದರೆ ಅದುವೇ ವ್ಯಭಿಚಾರ ಭಕ್ತಿಯಾಗುವುದು ।।೩೮೧।।

ಈ ಕಾರಣದಿಂದ ನೀನು ಭೇದವನ್ನು ಮಾಡದೇ ಏಕನಿಷ್ಠ ಚಿತ್ತದಿಂದ ನಿನ್ನ ಸ್ವರೂಪವು ಸಹ ನಾನೇ ಇರುವೆನೆಂದು ತಿಳಿ ।।೩೮೨।।

ಪಾರ್ಥಾ, ಬಂಗಾರದ ಆಭರಣವನ್ನು ಮಾಡಿ ಅದನ್ನು ಬಂಗಾರದ ಮೇಲೆ ಇಟ್ಟರೆ ಆ ಎರಡರಲ್ಲಿ ಭೇದವು ಇರದಂತೆ, ನನ್ನಿಂದ ವಿಶ್ವವು ಬೇರೆಯಾಗಿದೆ ಎಂದು ತಿಳಿಯಬೇಡ ।।೩೮೩।।

ಸೂರ್ಯನಿಂದ ಹೊರಟ ಕಿರಣಗಳು ತೇಜೋಮಯ ವಾಗಿದ್ದು, ಅವು ಸೂರ್ಯನಿಂದ ಬೇರೆಯಾಗಿರುವುದಿಲ್ಲ. ಹೀಗೆ ನಾನು ಮತ್ತು ವಿಶ್ವ ಇವುಗಳಲ್ಲಿ ಐಕ್ಯ ಬೋಧವಾಗ ಬೇಕು ।।೩೮೪।।

ಭೂಮಿಯ ಮೇಲಿನ ರಜಃಕಣವು ಮತ್ತು ಹಿಮಾಲಯ ಮೇಲಿನ ಹಿಮಕಣವು ಇವು ಭಿನ್ನವಾಗಿರುವುದಿಲ್ಲ. ಅದರಂತೆ ನನ್ನಲ್ಲಿ ಎಲ್ಲ ವಿಶ್ವವಿರುವುದು ಹೀಗೆ ತಿಳಿ ।।೩೮೫।।

ತೆರೆಯು ಎಷ್ಟು ಚಿಕ್ಕದಾದರೂ ಅದು ಸಮುದ್ರದಿಂದ ಭಿನ್ನವಾಗಿರುವುದಿಲ್ಲ ಅದರಂತೆ ಈಶ್ವರನಿಂದ ನಾನು ಭಿನ್ನನಾಗಿರುವುದಿಲ್ಲ ।।೩೮೬।।

ಈ ಪ್ರಕಾರವಾಗಿ ಎಲ್ಲ ಕಡೆಯಲ್ಲಿಯೂ ಐಕ್ಯವಿದೆ ಎಂದು ಯಾವ ದೃಷ್ಟಿಯು ಬೆಳಗುವುದೋ, ಅದಕ್ಕೆ ನಾವು ಭಕ್ತಿ ಎಂದು ಕರೆಯುವೆವು ।।೩೮೭।।

ಮತ್ತು ಇದೇ ದೃಷ್ಟಿಯ ಜ್ಞಾನಕ್ಕೆ ನಾವು ಎಲ್ಲಕ್ಕೂ ಉತ್ತಮವೆಂದು ತಿಳಿಯುವೆವು ಮತ್ತು ಯೋಗದ ಸಾರವೂ ಇದೇಯಾಗಿರುವುದು ।।೩೮೮।।

ಸಿಂಧೂ ಆಣಿ ಜಳಧರಾ । ಮಾಜೀ ಲಾಗಲೀ ಅಖಂಡ ಧಾರಾ । ತೈಸೀ ವೃತ್ತಿ ವೀರಾ । ಪ್ರವರ್ತತೇ ತೇ ।೩೮೯॥ ಕಾ ಕುಹೇಸೀ ಆಕಾಶಾ । ತೋಂಡೀ ಸಾಂದಾ ನಾಹೀ ಜೈಸಾ । ತೋ ಪರಮಪುರುಷೀ ತೈಸಾ । ಏಕವಟೇ ಗಾ ।೩೯೦॥ ಪ್ರತಿಬಿಂಬೌನಿ ಬಿಂಬವರೀ । ಪ್ರಭೇಚೀ ಜೈಸೀ ಉಜರೀ । ತೇ ಸೋಹಂವೃತ್ತೀ ಅವಧಾರೀ । ತೈಸೀ ಹೋಯ ।೩೯೧॥ ಐಸೇನಿ ಮಗ ಪರಸ್ಪರೇ । ತೇ ಸೋಹಂ ವೃತ್ತಿ ಜೈ ಅವತರೇ । ತೈ ತಿಯೇಹಿ ಸಕಟ ಸರೇ । ಅಪೈಸಯಾ ।೩೯೨॥ ಜೈಸಾ ಸೈಂಧವಾಚಾ ರವಾ । ಸಿಂಧೂಮಾಜೀ ಪಾಂಡವಾ । ವಿರಾಲೇಯಾ ವಿರವಾವಾ । ಹೇಹೀ ಠಾಕೇ ।೩೯೩॥ ನಾತರೀ ಜಾಳೂನಿ ತೃಣ । ವನ್ಹಿ ಹೀ ವಿಝೇ ಆಪಣ । ತೈಸೇ ಭೇದು ನಾಶೂನಿ ಜಾಣ । ಜ್ಞಾನಹೀ ನುರೇ ।೩೯೪॥ ಮಾಝೇ ಪೈಲಪಣ ಜಾಯೇ । ಭಕ್ತ ಹೇ ಐಲಪಣ ಠಾಯೇ । ಅನಾದಿ ಐಕ್ಯ ಜೇ ಆಹೇ । ತೇಂಚಿ ನಿವಡೇ ।೩೯೫॥ ಆತಾ ಗುಣಾತೇ ತೋ ಕಿರೀಟೀ । ಜಿಣೇ ಯಾ ನವ್ಹತೀ ಗೋಷ್ಟೀ । ಜೇ ಏಕಪಣಾಹೀ ಮಿಠೀ । ಪಡೋ ಸರಲೀ ।೩೯೬॥ ಕಿಂಬಹುನಾ ಐಸೀ ದಶಾ । ತೇ ಬ್ರಹ್ಮತ್ವ ಗಾ ಸುದಂಶಾ । ಹೇ ತೋ ಪಾವೇ ಜೋ ಐಸಾ । ಮಾತೇ ಭಜೇ ।೩೯೭॥ ಪುಢತೀ ಇಹೀ ಲಿಂಗೀ । ಭಕ್ತು ಜೋ ಮಾಝಾ ಜಗೀ । ಹೇ ಬ್ರಹ್ಮತಾ ತಯಾಲಾಗೀ । ಪತಿವ್ರತಾ ।೩೯೮॥ ಜೈಸೇ ಗಂಗೇಚೇನಿ ವೋಘೇ । ಡಳಮಳೀತ ಜಳ ಜೇ ನಿಘೇ । ಸಿಂಧುಪದ ತಯಾಜೋಗೇ । ಆನ ನಾಹೀ ।೩೯೯॥ ತೈಸಾ ಜ್ಞಾನಾಚಿಯಾ ದಿಠೀ । ಜೋ ಮಾತೇ ಸೇವೀ ಕಿರೀಟೀ । ತೋ ಹೋಯ ಬ್ರಹ್ಮ ತೇಚ್ಯಾ ಮುಕುಟೀ । ಚೂಡಾರತ್ನ ।೪೦೦॥ ಯಯಾ ಬ್ರಹ್ಮತ್ವಾಸೀಚಿ ಪಾರ್ಥಾ । ಸಾಯುಜ್ಯ ಐಸೀ ವ್ಯವಸ್ಥಾ । ಯಾಚಿ ನಾಂವೇ ಚೌಥಾ । ಪುರುಷಾರ್ಥು ಗಾ ।೪೦೧॥ ಪರೀ ಮಾಝೇ ಆರಾಧನ । ಬ್ರಹ್ಮತ್ವೀ ಹೋಯ ಸೋಪಾನ । ತೇಥ ಮೀ ಹನ ಸಾಧನ । ಗಮೇನ ಹೋ ।೪೦೨॥ ತರೀ ಝಣೇ ಐಸೇ । ತುಝ್ಯಾ ಚಿತ್ತೀ ಪೈಸೇ । ಪೈ ಬ್ರಹ್ಮ ಆನ ನಸೇ । ಮೀವಾಂಚೂನೀ ।೪೦೩॥

ಬ್ರಹ್ಮಣೋ ಹಿ ಪ್ರತಿಷ್ಠಾಽಹಮ್ ಅಮೃತಸ್ಯಾವ್ಯಯಸ್ಯ ಚ ।
ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ।೨೭॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಗುಣತ್ರಯವಿಭಾಗಯೋಗೋ ನಾಮ ಚತುರ್ದಶೋಽಧ್ಯಾಯಃ

ಸಮುದ್ರ ಮತ್ತು ಮೋಡ ಇವುಗಳ ಮಧ್ಯ ಮಳೆಯಾಗು ವಾಗ ಅಖಂಡ ಧಾರೆಗಳು ಬೀಳುತ್ತಿರುವಂತೆ, ಅರ್ಜುನಾ, ಭಕ್ತಿ, ಭಕ್ತ ಮತ್ತು ಭಜನ ಈ ತ್ರಿಪುಟಿಯಲ್ಲಿ ಪರಮಾತ್ಮನು ತುಂಬಿರುವನು ।೩೯೯॥

ಬಾವಿಯಲ್ಲಿರುವ ಆಕಾಶವನ್ನು ಮತ್ತು ಮಹದಾಕಾಶ ವನ್ನು ಬಾವಿಯ ಮುಖದಲ್ಲಿ ಎರಡನ್ನು ಜೋಡಿಸಿರುವು ದಿಲ್ಲ. ಅದರಂತೆ ಯಾವಾತನು ತನ್ನಲ್ಲಿ ಮತ್ತು ಪರಮಾತ್ಮ ಸ್ವರೂಪದಲ್ಲಿ ಭೇದ ತಿಳಿಯದೇ ಐಕ್ಯವಾಗಿದೆ ಎಂದು ತಿಳಿಯು ವನೋ ।೩೯೦॥

ಪ್ರತಿಬಿಂಬದಿಂದ ಬಿಂಬದವರೆಗೆ ಪ್ರಭೆಯು ಒಂದೇ ಯಾಗಿರುವುದು. ಅದರಂತೆ "ಅಹಂಬ್ರಹ್ಮ" ಹೀಗೆ ವೃತ್ತಿ ಯಾ ದಾಗ ಬ್ರಹ್ಮ, ವಿಶ್ವ ಇವುಗಳಲ್ಲಿ ಅಂತರ ಕಾಣಿಸುವುದಿಲ್ಲ ।೩೯೧॥

ಈ ಪ್ರಕಾರವಾಗಿ ಅಹಂಬ್ರಹ್ಮ ಹೀಗೆ ಮನದ ವೃತ್ತಿ ಯಾದ ಮೇಲೆ ಅದೂ ಸಹ ಮುಂದೆ ತಾನೇ ಲಯವಾಗು ವುದು ।೩೯೨॥

ಹೇ ಪಾಂಡವನೇ, ಉಪ್ಪಿನ ಹರಳನ್ನು ಸಮುದ್ರದಲ್ಲಿ ಒಗೆದಾಗ ಅದು ಅಲ್ಲಿ ಕರಗುತ್ತದೆ. ಮುಂದೆ ಅದಕ್ಕೆ ಕರಗುವ ಕಾರ್ಯವಿರುವುದಿಲ್ಲ ।೩೯೩॥

ಹುಲ್ಲು ಸುಟ್ಟ ದ ಮೇಲೆ ಅದರಲ್ಲಿನ ಅಗ್ನಿಯೂ ಆರಿ ಹೋಗುವುದು. ಅದರಂತೆ ಯಾವ ಜ್ಞಾನದಿಂದ ಬ್ರಹ್ಮನ ಐಕ್ಯ ವಾಗುವುದೋ, ಆ ಜ್ಞಾನವು ಆಮೇಲೆ ಇಲ್ಲದಾಗುವುದು ।೩೯೪॥

ನಾನು ಮಾಯೆಯ ಆಚೆಗಿರುವೆನು ಮತ್ತು ಭಕ್ತನು ಮಾಯೆಯ ಈಚೆಗಿರುವನು ಎನ್ನುವ ನನ್ನ ಮತ್ತು ಭಕ್ತನಲ್ಲಿ ರುವ ಆಚೆ, ಈಚೆ ಎಂಬ ಭೇದವು ಇಲ್ಲದಾಗುವುದು ಮತ್ತು ನನ್ನ ಮತ್ತು ಭಕ್ತನಲ್ಲಿರುವ ಅನಾದಿ ಐಕ್ಯವು ಪ್ರಕಟವಾಗು ವುದಿಲ್ಲ ।೩೯೫॥

ಹೇ ಕಿರೀಟಿಯೇ, ಈ ಸ್ಥಿತಿಯಲ್ಲಿ ಐಕ್ಯವಿರುವುದು ಎಂದು ಹೇಳುವುದೂ ಸಂಭವಿಸುವುದಿಲ್ಲ. ಅಲ್ಲಿ ಆತನು ಗುಣಗಳನ್ನು ಗೆಲ್ಲುವನು ಎಂಬುವುದೂ ಉಳಿಯುವುದಿಲ್ಲ ।೩೯೬॥

ಹೇ ಮರ್ಮಜ್ಞನೇ, ಹೆಚ್ಚಿಗೇನು ಹೇಳಬೇಕು? ಇದೇ ಸ್ಥಿತಿಯನ್ನು ಬ್ರಹ್ಮತ್ವವೆಂದು ಹೇಳುವರು ಮತ್ತು ಯಾರು ನನ್ನ ಅವ್ಯಭಿಚಾರ ಭಕ್ತಿಯನ್ನು ಮಾಡುವನೋ, ಆತನಿಗೆ ಮಾತ್ರ ಬ್ರಹ್ಮತ್ವವು ಪ್ರಾಪ್ತವಾಗುವುದು ।೩೯೭॥

ಈ ಲಕ್ಷಣಗಳಿಂದ ಕೂಡಿದ ಈ ಜಗತ್ತಿನಲ್ಲಿ ನನ್ನ ಭಕ್ತನಾದವನು, ಆತನ ಬ್ರಹ್ಮತೆಯು ಪತಿವ್ರತೆಯಾಗಿರು ವುದು ।೩೯೮॥

ಯಾವ ಪ್ರಕಾರವಾಗಿ ಗಂಗಾನದಿಯು ಹರಿಯುತ್ತ ನಡೆದಾಗ ಅದಕ್ಕೆ ಸಮುದ್ರವನ್ನು ಕೂಡುವ ಹೊರತಾಗಿ ಅನ್ಯಮಾರ್ಗವೇ ಇಲ್ಲ ।೩೯೯॥

ಅದರಂತೆ ಅರ್ಜುನಾ, ಜ್ಞಾನದ ದೃಷ್ಟಿಯಿಂದ ಯಾವ ನು ನನ್ನ ಸೇವೆಯನ್ನು ಮಾಡುವನೋ, ಅವನು ಬ್ರಹ್ಮತ್ವದ ಮುಕುಟಮಣಿಯಾಗುವನು ।೪೦೦॥

ಪಾರ್ಥಾ, ಈ ಬ್ರಹ್ಮಪ್ರಾಪ್ತಿಯನ್ನು ಸಾಯುಜ್ಯ ಮುಕ್ತಿ ಎಂದು ಹೇಳುವರು. ಇದಕ್ಕೆ ನಾಲ್ಕನೆಯ ಪುರುಷಾರ್ಥ ಮೋಕ್ಷವೆಂದು ಕರೆಯುವರು ।೪೦೧॥

ಆದರೆ, ಬ್ರಹ್ಮತ್ವವನ್ನು ಪಡೆಯುವುದಕ್ಕೆ ನನ್ನ ಆರಾಧನೆಯು ಮೆಟ್ಟಿಲುಗಳಾಗಿವೆ. ಬ್ರಹ್ಮವು ಪ್ರಾಪ್ತವಾದ ಮೇಲೆ ನಾನು ಮತ್ತು ನನ್ನ ಪ್ರಾಪ್ತಿಯ ಸಾಧನೆ ಇವು ಎರಡು ಭಿನ್ನವೆಂದು ತಿಳಿಯಬೇಡಪ್ಪ ।೪೦೨॥

ಅದಕ್ಕಾಗಿ ನನ್ನಿಂದ ಬ್ರಹ್ಮವು ಬೇರೆಯಾಗಿ ಇರುವು ದೆಂದು ನಿನ್ನ ಮನದಲ್ಲಿ ಕಲ್ಪನೆ ಸಹ ಬರಗೊಡಬೇಡ।೪೦೩॥

ಶ್ಲೋಕಾರ್ಥ :- ಅಮರವೂ, ಅವ್ಯಯವೂ, ಶಾಶ್ವ ತವೂ, ಧರ್ಮವೂ, ನಿರತಿಶಯ ಸುಖವೂ, ಆದ ಬ್ರಹ್ಮಕ್ಕೆ ನಾನೇ ಆಶ್ರಯಸ್ಥಾನವು ।೨೭॥

ಇಲ್ಲಿಗೆ ಉಪನಿಷತ್ತೂ, ಬ್ರಹ್ಮವಿದ್ಯೆಯೂ, ಯೋಗ ಶಾಸ್ತ್ರವೂ ಶ್ರೀಕೃಷ್ಣಾರ್ಜುನ ಸಂವಾದವೂ ಆದ ಶ್ರೀಮದ್ಭಗ ವದ್ಗೀತೆಯಲ್ಲಿ ಗುಣತ್ರಯವಿಭಾಗ ಯೋಗವೆಂಬ ಹೆಸರಿನ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

ಅಗಾ ಬ್ರಹ್ಮ ಯಾ ನಾಂವಾ । ಅಭಿಪ್ರಾಯೋ ಮೀ ಪಾಂಡವಾ । ಮೀಂಚಿ ಬೋಲಿಜೇ ಆಘವಾ । ಶಬ್ದೀ ಇಹೀ ॥೪೦೪॥ ಪೈ ಮಂಡಳ ಆಣಿ ಚಂದ್ರಮಾ । ದೋನ್ಹೀ ನವ್ಹತೀ ಸುವರ್ಮಾ । ತೈಸಾ ಮಜ ಆಣಿ ಬ್ರಹ್ಮಾ । ಭೇದು ನಾಹೀ ॥೪೦೫॥ ಅಗಾ ನಿತ್ಯ ಜೇ ನಿಷ್ಕಂಪ । ಅನಾವೃತ ಧರ್ಮರೂಪ । ಸುಖ ಜೇ ಉಮಪ । ಅದ್ವಿತೀಯ ॥೪೦೬॥ ವಿವೇಕು ಆಪಲೇ ಕಾಮ । ಸಾರೂನಿ ಠಾಕೀ ಜೇ ಧಾಮ । ನಿಷ್ಕರ್ಷಾಚೇ ನಿಃಸೀಮ । ಕಿಂಬಹುನಾ ಮೀ ॥೪೦೭॥ ಐಸೇಸೇ ಹೋ ಅವಧಾರಾ । ತೋ ಅನನ್ಯಾಚಾ ಸೋಯರಾ। ಸಾಂಗತಸೇ ವೀರಾ । ಪಾರ್ಥಾಸೀ ಪೈ ॥೪೦೮॥ ಯೇಥ ಧೃತರಾಷ್ಟ್ರ ಮ್ಹಣೇ । ಸಂಜಯಾ ಹೇ ತೂತೇ ಕೋಣೇ । ಪುಸಲೇನಿವಿಣ ವಾಯಾಣೇ । ಕಾ ಬೋಲಸೀ? ॥೪೦೯॥ ಮಾಝೀ ಅವಸರೀ ತೇ ಘೇಡೀ । ವಿಜಯಾಚೀ ಸಾಂಗೇ ಗುಢೀ । ಯೇರು ಜೇವೀ ಮ್ಹಣೇ ಸಾಂಡೀ । ಗೋಠೀ ಯಿಯಾ ॥೪೧೦॥ ಸಂಜಯೋ ವಿಸ್ಮಯೋ ಮಾನಸೀ । ಆಹಾ ಕರೂನಿ ರಸರಸೀ । ಮ್ಹಣೇ ಕೈಸೇ ಪಾ ದೈವೇಂಸೀ । ದ್ವಂದ್ವ ಯಯಾ? ॥೪೧೧॥ ತರೀ ಕೃಪಾಳು ತೋ ತುಷ್ಟೋ । ಯಯಾ ವಿವೇಕು ಹಾ ಘೋಂಟೋ । ವೋಹಾಚಾ ಫಿಟೋ । ಮಹಾರೋಗು ॥೪೧೨॥ ಸಂಜಯೋ ಐಸೇ ಚಿಂತಿತಾ । ಸಂವಾದು ತೋ ಸಾಂಭಾಳಿತಾ । ಹರಿಖಾಚಾ ಯೇತು ಚಿತ್ತಾ । ಮಹಾಪೂರ ॥೪೧೩॥ ಮ್ಹಣೌನಿ ಆತಾ ಯೇಣೇ । ಉತ್ಸಾಹಾಚೇನಿ ಅವತರಣೇ । ಶ್ರೀಕೃಷ್ಣಾಚೇ ಬೋಲಣೇ । ಸಾಂಗಿಜೈಲ ॥೪೧೪॥ ತಯಾ ಅಕ್ಷರಾ ಆಂತೀಲ ಭಾವೋ । ಪಾವವೀನ ಮೀ ತುಮಚಾ ಠಾವೋ । ಆಇಕಾ ಮ್ಹಣೇ ಜ್ಞಾನದೇವೋ । ನಿವೃತ್ತೀಚಾ ॥೪೧೫॥

---

ಇತಿ ಶ್ರೀ ಜ್ಞಾನದೇವ ವಿರಚಿತಾಯಾಂ ಭಾವಾರ್ಥದೀಪಿಕಾಯಾಂ ಚತುರ್ದಶೋಽಧ್ಯಾಯಃ ॥೧೪॥
ಶ್ಲೋಕ:೨೭ ವೋವಿ:೪೧೫

ಅರ್ಜುನಾ, ''ಬ್ರಹ್ಮ''ವೆಂದು ಯಾವುದು ಪ್ರಸಿದ್ಧವಾಗಿದೆಯೋ, ಅದು ''ನಾನು'' ಎಂದು ಅಭಿಪ್ರಾಯವಿರುವುದು ಮತ್ತು ಶ್ರುತಿಗಳು ವರ್ಣನೆ ಮಾಡುವುದೆಲ್ಲವೂ ನಾನೇ ಆಗಿರುವೆನು ।೪೦೪॥

ಅಥವಾ ಚಂದ್ರನು ಮತ್ತು ಚಂದ್ರ ಮಂಡಲವು ಇವುಗಳಲ್ಲಿ ಹೇಗೆ ಭೇದವಿರುವುದಿಲ್ಲವೋ, ಅದರಂತೆ ನಾನು ಮತ್ತು ಬ್ರಹ್ಮ ಇವುಗಳಲ್ಲಿಯೂ ಭೇದವಿಲ್ಲ ।೪೦೫॥

ಆ ಬ್ರಹ್ಮವು ನಿತ್ಯ, ನಿಷ್ಕಂಪ, ಅನಾವೃತ, ಧರ್ಮರೂಪ ಮತ್ತು ಅಪಾರವಾದ ಸುಖ ಕೊಡುವ, ಹೀಗೆ ಅದ್ವಿತೀಯವಾಗಿದೆ ।೪೦೬॥

ಅಜ್ಞಾನದ ನಾಶ ಮಾಡಿ ಜ್ಞಾನವು ಯಾವ ಸ್ವರೂಪದಲ್ಲಿ ಲಯವಾಗುವುದೋ, ಅದು ಸಿದ್ಧಾಂತಗಳಿಂದ ನಿಶ್ಚಯಿಸಿದ ಕೊನೆಯದಾದ ಸ್ವರೂಪವು ನಾನೇ ಆಗಿರುವೆನು ।೪೦೭॥

ಏಕನಿಷ್ಠ ಭಕ್ತರ ಪ್ರಿಯನಾದ ಪರಮಾತ್ಮನು ಶೂರನಾದ ಪಾರ್ಥನಿಗೆ ಈ ಪ್ರಕಾರವಾಗಿ ಹೇಳಿದನು ।೪೦೮॥

ಆಗ ಧೃತರಾಷ್ಟ್ರನು ಸಂಜಯನಿಗೆ ಹೇಳಿದನು:- ಈ ಮಾತುಗಳನ್ನು ನಿನಗೆ ಯಾರು ಕೇಳಿರುವರು? ಮತ್ತು ನೀನು ಅದನ್ನು ವ್ಯರ್ಥವಾಗಿ ನನಗೇಕೆ ಹೇಳುತ್ತಿರುವೆ? ।೪೦೯॥

ನನ್ನ ಮಕ್ಕಳ ವಿಜಯದ ಮಾತುಗಳನ್ನು ನನಗೆ ಹೇಳಿ ನನ್ನ ಅನುಮಾನವನ್ನು ಬಿಡಿಸು. ಈ ನಿನ್ನ ಪಾರಮಾರ್ಥದ ಮಾತುಗಳು ಈಗ ಸಾಕು ಮಾಡು ।೪೧೦॥

ಸಂಜಯನು ತನ್ನ ಮನದಲ್ಲಿ ವಿಸ್ಮಯಗೊಂಡು ಅತಿ ಕಳವಳದಿಂದ, ಅರೇ ರೇ ರೇ, ಈತನ ದೈವಗತಿಯು ಎಂತಹ ವಿಚಿತ್ರವಾಗಿದೆ? ಈತನಿಗೆ ಈಗಲೂ ವಿರೋಧವೇ ತೋರುತ್ತಿದೆಯಲ್ಲಾ !! ।೪೧೧॥

ಆದರೂ ಕೃಪಾಳುವಾದ ಪರಮಾತ್ಮನು ಸಂತುಷ್ಟನಾಗಿ ಈತನ ಮನದಲ್ಲಿ ವಿವೇಕರೂಪ ಔಷಧವನ್ನು ಹಾಕಿ, ಈತನ ಮೋಹರೂಪ ಮಹಾರೋಗವನ್ನು ಇಲ್ಲದಂತೆ ಮಾಡಲಿ ।೪೧೨॥

ಸಂಜಯನು ಈ ಪ್ರಕಾರವಾಗಿ ಮನದಲ್ಲಿ ವಿಚಾರ ಮಾಡುತ್ತಿರುವನು. ಇಷ್ಟರಲ್ಲಿಯೇ ಕೃಷ್ಣಾರ್ಜುನರ ಸಂವಾದದ ಕಡೆಗೆ ಲಕ್ಷ ಹೋಗಿ ಆತನ ಚಿತ್ತದಲ್ಲಿ ಆನಂದದ ಮಹಾಪೂರ ಬಂದಿತು ।೪೧೩॥

ಆದ್ದರಿಂದ ಆತನು ಮನದಲ್ಲಿ ಹರ್ಷಯುಕ್ತನಾಗಿ ಶ್ರೀಕೃಷ್ಣನು ಹೇಳುವುದನ್ನೇ ಹೇಳುವನು ।೪೧೪॥

ಆತನ ಅಕ್ಷರಗಳಲ್ಲಿನ ಎಲ್ಲ ಭಾವಗಳನ್ನು ನಾನು ನಿಮ್ಮ ಹೃದಯದಲ್ಲಿ ಮೂಡಿಸುವೆನು ಎಂದು ನಿವೃತ್ತಿ ದಾಸರಾದ ಜ್ಞಾನೇಶ್ವರರು ಹೇಳುವರು ।೪೧೫॥

ಶ್ರೀ ಜ್ಞಾನೇಶ್ವರ ಮಹಾರಾಜರಿಂದ ರಚಿತವಾದ ಭಾವಾರ್ಥ ದೀಪಿಕೆಯ ಹದಿನಾಲ್ಕನೆಯ ಅಧ್ಯಾಯದ ವಿವರಣೆ ಸಮಾಪ್ತವು

# ಸಾರ್ಥ ಶ್ರೀಜ್ಞಾನೇಶ್ವರೀ

## ಅಧ್ಯಾಯ ಪಂಧರಾವಾ

ಶ್ರೀ ಗಣೇಶಾಯ ನಮಃ

ಆತಾ ಹೃದಯ ಹೇ ಆಪುಲೇ । ಚೌಫಾಳೂನಿಯಾ ಭಲೇ । ವರೀ ಬೈಸಲೂ ಪಾಉಲೇ । ಶ್ರೀಗುರೂಂಚೀ ॥೧॥ ಐಕ್ಯಭಾವಾಚೀ ಅಂಜುಳೀ । ಸರ್ವೇಂದ್ರಿಯ ಕುಡಮುಳೀ । ಭರೂನಿಯಾ ಪುಷ್ಪಾಂಜುಳೀ । ಅರ್ಘ್ಯ ದೇವೋ ॥೨॥ ಅನನ್ಯೋದಕೇ ಧುವಟ ।ವಾಸನಾ ಜೇ ತನ್ನಿಷ್ಠ । ತೇ ಲಾಗಲೇಸೇ ಅಬೋಟ । ಚಂದನಾಚೇ ॥೩॥ ಪ್ರೇಮಾಚೇನಿ ಭಾಂಗಾರೇ । ನಿರ್ವಾಳೂನಿ ನೂಪುರೇ । ಲೇವಲೂ ಸುಕುಮಾರೇ । ಪದೇ ತಿಯೇ ॥೪॥ ಘಣಾವಲೀ ಆವಡೀ । ಅವ್ಯಭಿಚಾರೇ ಚೋಖಡೀ । ತಿಯೇ ಘಾಲೂ ಜೋಡೀ । ಆಂಗೋಳಿಯಾ ॥೫॥ ಆನಂದಾಮೋದಬಹಳ । ಸಾತ್ತ್ವಿಕಾಚೇ ಮುಕುಳ । ತೇ ಉಮಲಲೇ ಅಷ್ಟದಳ । ಠೇಊ ವರೀ ॥೬॥ ತೇಥೇ ಅಹಂ ಹಾ ಧೂಪ ಜಾಳೂ । ನಾಹಂ ತೇಜೇ ವೋವಾಳು । ಸಾಮರಸ್ಯೇ ಪೋಟಾಳೂ । ನಿರಂತರ ॥೭॥ ಮಾಝೀ ತನು ಆಣಿ ಪ್ರಾಣ । ಇಯಾ ದೋನೀ ಪಾಉಲಾ ಲೇಊ ಶ್ರೀಗುರುಚರಣ । ಕರೂ ಭೋಗಮೋಕ್ಷ ನಿಂಬಲೋಣ । ಪಾಯಾ ತಯಾ ॥೮॥ ಇಯಾ ಶ್ರೀಗುರುಚರಣಸೇವಾ । ಹೋ ಪಾತ್ರ ತಯಾ ದೈವಾ । ಜೇ ಸಕಳಾರ್ಥ ಮೇಳಾವಾ । ಪಾಟು ಬಾಂಧೇ ॥೯॥ ಬ್ರಹ್ಮೀಚೇ ವಿಸವಣೇವರೀ । ಉನ್ಮೇಖ ಲಾಹೇ ಉಜರೀ । ಜೇ ವಾಚೇತೇ ಇಯೇ ಕರೀ । ಸುಧಾಸಿಂಧೂ ॥೧೦॥ ಪೂರ್ಣಚಂದ್ರಾಚಿಯಾ ಕೋಡೀ । ವಕ್ತೃತ್ವಾ ಘಾಪೇ ಕುರೋಂಡೀ । ತೈಸೀ ಆಣೇ ಗೋಡೀ । ಅಕ್ಷರಾಂತೇ ॥೧೧॥ ಸೂರ್ಯೇ ಅಧಿಷ್ಠಿಲೀ ಪ್ರಾಚೀ । ಜಗಾ ರಾಣೀವ ದೇ ಪ್ರಕಾಶಾಚೀ । ತೈಸೀ ವಾಚಾ ಶ್ರೋತಯಾ ಜ್ಞಾನಾಚೀ । ದಿವಾಳೀ ಕರೀ ॥೧೨॥ ನಾದಬ್ರಹ್ಮ ಖುಜೇ । ಕೈವಲ್ಯಹೀ ತೈಸೇ ನ ಸಜೇ । ಐಸಾ ಬೋಲು ದೇಖಿಜೇ । ಜೇಣೇ ದೈವೇ ॥೧೩॥ ಶ್ರವಣಸುಖಾಚ್ಯಾ ಮಾಂಡವಿ । ವಿಶ್ವ ಭೋಗೀ ಮಾಧವೀ । ತೈಸೀ ಸಾಸಿನ್ನಲೀ ಬರವೀ । ವಾಚಾವಲ್ಲೀ ॥೧೪॥

# ಸಾರ್ಥ ಶ್ರೀಜ್ಞಾನೇಶ್ವರೀ

## ಹದಿನೈದನೆಯ ಅಧ್ಯಾಯ

ಈಗ ನಾನು ನನ್ನ ಹೃದಯವನ್ನು ಉತ್ತಮವಾಗಿ ಸ್ವಚ್ಛಗೊಳಿಸಿ ಅದರ ಮೇಲೆ ಶ್ರೀಗುರುಗಳವರ ಪಾದುಕೆಗಳನ್ನು ಸ್ಥಾಪಿಸುವೆನು ॥೧॥

ತದನಂತರ ಒಂದೇ ಭಾವದ ಬೊಗಸೆಯಲ್ಲಿ ಸರ್ವೇಂದ್ರಿಯ ರೂಪ ಹೂವು ಮಗ್ಗಿಗಳನ್ನು ತುಂಬಿಕೊಂಡು, ಶ್ರೀ ಗುರುಗಳವರಿಗೆ ಪುಷ್ಪಾಂಜಲಿಯ ಅರ್ಘ್ಯ ನೀಡುವೆನು ॥೨॥

ಅನನ್ಯ ಭಾವರೂಪ ಶುದ್ಧವಾದ ಉದಕದಿಂದ ಸ್ನಾನ ಮಾಡಿಸಿ, ಅವರಲ್ಲಿಯೇ ಇಟ್ಟಿರುವ ಏಕನಿಷ್ಠ ವಾಸನಾರೂಪ ಚಂದನದಿಂದ ಶ್ರೀಗುರುಗಳವರಿಗೆ ಅನಾಮಿಕದಿಂದ ಗಂಧವನ್ನು ಹಚ್ಚುವೆನು ॥೩॥

ಪ್ರೇಮರೂಪ ಶುದ್ಧ ಬಂಗಾರದ ಪೈಂಜಣ ಮಾಡಿಸಿ, ಶ್ರೀಗುರುಗಳ ಸುಕುಮಾರ ಚರಣಗಳಲ್ಲಿ ಹಾಕುವೆನು ॥೪॥

ಶ್ರೀಗುರುಗಳಲ್ಲಿರುವ ಏಕನಿಷ್ಠ ಮತ್ತು ಸರ್ವೋತ್ತಮ ದೃಢವಾದ ಪ್ರೀತಿಯ (ರಣ ಜೋಡವಿ) ಕಾಲುಂಗುರವನ್ನು ಗುರುಗಳ ಹೆಬ್ಬೆರಳಿಗೆ ಹಾಕುವೆನು ॥೫॥

ಅಷ್ಟಭಾವರೂಪ ಅರಳಿದ ದಳಗಳುಳ್ಳ ಸಾತ್ತ್ವಿಕ ಭಾವರೂಪ ಕಮಲದ ಹೂವನ್ನು ಆನಂದರೂಪ ಪರಿಮಳದೊಂದಿಗೆ ಅವರ ಚರಣಗಳಿಗೆ ಏರಿಸುವೆನು ॥೬॥

ಆ ಚರಣಗಳ ಮುಂದೆ ಅಹಂಕಾರದ ಧೂಪಹಾಕಿ ನಿರಾಭಿಮಾನ ದೀಪವನ್ನು ಬೆಳಗಿಸುವೆನು ಮತ್ತು ನಿರಂತರವಾಗಿರುವ ಐಕ್ಯಭಾವದಿಂದ ಗುರುಗಳಿಗೆ ಆಲಿಂಗನ ಕೊಡುವೆನು ॥೭॥

ನನ್ನ ಶರೀರ ಮತ್ತು ಪ್ರಾಣ ಈ ಎರಡರ ಎರಡು ಪಾದುಕೆಗಳನ್ನು ಮಾಡಿ, ಶ್ರೀಗುರುಗಳವರ ಚರಣಗಳಿಗೆ ತೊಡಿಸುವೆನು ಮತ್ತು ಗುರುಗಳ ಚರಣಗಳಲ್ಲಿ ಭೋಗ ಮೋಕ್ಷಗಳನ್ನು ನಿವಾಳಿಸುವೆನು ॥೮॥

ಈ ಪ್ರಕಾರದ ಶ್ರೀಗುರುಗಳ ಚರಣ ಸೇವೆಗೆ ಯಾರು ಪರಮ ಭಾಗ್ಯಶಾಲಿಗಳಾಗಿರುವರೋ, ಅವರಿಗೆ ಮಾತ್ರ ಇದು ಲಭ್ಯವಾದೀತು. ಈ ಸೇವೆಯ ಫಲವು ಮೋಕ್ಷ ಸಹ, ಎಲ್ಲ ಪುರುಷಾರ್ಥಗಳ ಯಥೇಚ್ಛ ಪ್ರಾಪ್ತಿ ಮಾಡಿಕೊಡುವುದು ॥೯॥

ಆ ಶ್ರೀಗುರು ಉಪಾಸಕನು ಬ್ರಹ್ಮಸ್ವರೂಪ ಸ್ಥಿತನಾಗಿರುವವರೆಗೂ ಆತನ ಜ್ಞಾನದ ಪರಿಪಕ್ವತೆಯಾಗುವುದು ಮತ್ತು ಆತನ ವಾಣಿಯು ಅಮೃತದ ಸಾಗರವೇ ಆಗುವುದು ॥೧೦॥

ಹೆಚ್ಚಿಗೇನು ಹೇಳಬೇಕು? ಈತನ ವಕ್ತೃತ್ವಕ್ಕೆ ಎಷ್ಟೊಂದು ಮಾಧುರ್ಯವು ಬರುವುದೆಂದರೆ, ಆಹ್ಲಾದವನ್ನು ಕೊಡುವ ಪೌರ್ಣಿಮೆಯ ಕೋಟ್ಯಾವಧಿ ಚಂದ್ರರನ್ನು ಆ ಮಾಧುರ್ಯದ ಮುಂದೆ ನಿವಾಳಿಸಿ ಒಗೆಯಬೇಕು ॥೧೧॥

ಹಾಗೆಯೇ ಪೂರ್ವಕ್ಕೆ ಸೂರ್ಯನು ಉದಯವಾದ ಕೂಡಲೇ ಸರ್ವ ಜಗತ್ತಿನಲ್ಲಿ ಪ್ರಕಾಶವು ಬೀಳುವಂತೆ, ಇವರ ಮುಖದಿಂದ ಹೊರಡುವ ವಚನಗಳಿಂದ ಶ್ರೋತೃಗಳವರಿಗೆ ಜ್ಞಾನದ ದೀಪಾವಳಿಯಾಗುವುದು ॥೧೨॥

ಈತನ ವಚನ ಮಾಧುರ್ಯಕ್ಕೆ ನಾದಬ್ರಹ್ಮವು ಸಪ್ಪಗಾಗುವುದು ಮತ್ತು ಮೋಕ್ಷ ಸುಖವೂ ಅದರ ಯೋಗ್ಯತೆ ಹೊಂದುವುದಿಲ್ಲ, ಇಂತಹ ಉತ್ಕೃಷ್ಟ ವಚನವು ಭಾಗ್ಯದಿಂದಲೇ ದೊರಕುವುದು ॥೧೩॥

ಶ್ರವಣ ಸುಖರೂಪ ಮಂಟಪದಲ್ಲಿ ವಸಂತ ಋತುವಿನಲ್ಲಿ ನಾಲ್ಕುಕಡೆಯಲ್ಲಿಯೂ ಗಿಡಗಂಟಿಗಳು ಪ್ರಫುಲ್ಲಿತವಾಗಿ ಕಾಣುವಂತೆ, ವಾಣಿರೂಪ ಬಳ್ಳಿಯು ನಾಲ್ಕು ಕಡೆಗಳಲ್ಲಿಯೂ ಪಸರಿಸುವುದು ॥೧೪॥

ಠಾವೋ ನ ಪವತಾ ಜಯಾಂಚಾ । ಮನೇಂಸೀ ಮುರಡಲೀ ವಾಚಾ । ತೋ ದೇವೋ ಹೋಯ ಶಬ್ದಾ ಚಾ । ಚಮತ್ಕಾರು ।।೧೫।। ಜೇ ಜ್ಞಾನ ನಾಸೀ ನ ಚೋಜವೇ । ಧ್ಯಾನಾಸಿಹೀ ಜೇ ನಾಗವೇ । ತೇ ಅಗೋಚರ ಘಾವೇ । ಗೋಠೀಮಾಜೀ ।।೧೬।। ಯೇವಡೇ ಏಕ ಸೌಭಗ । ವಳಘೇ ವಾಚೇಚೇ ಆಂಗ । ಶ್ರೀಗುರುಪಾದಪದ್ಮ ಪರಾಗ । ಲಾಹೇ ಜೈ ಕಾ ।।೧೭।। ತರೀ ಬಹು ಬೋಲೂ ಕಾಈ । ಆಜಿ ತೇ ಆನೀ ಠಾಈ । ಮಾತೇವಾಂಚೂನಿ ನಾಹೀ । ಜ್ಞಾನ ದೇವೋ ಮ್ಹ ಣೇ ।।೧೮।। ಜೇ ತಾನ್ಹೇ ನಿ ಮಿಯಾ ಆಪತ್ಯೇ । ಆಣಿ ಮಾರ್ಝೇ ಗುರು ಏಕ ಲೌತೇ । ಮ್ಹ ಣೌನಿ ಕೃಪೇಂಸಿ ಏಕಹಾತೇ । ಜಾಲೇ ತಿಯೇ ।।೧೯।। ಪಾಹಾ ಪಾ ಭರೋ ವರೀ ಆಘವೀ । ಮೇಘ ಚಾತಕಾಂಸೀ ರಿಚವೀ । ಮಜಲಾಗೀ ಗೋಸಾವೀ । ತೈಸೇ ಕೇಲೇ ।।೨೦।। ಮ್ಹ ಣೌನಿ ರಿಕಾಮೇ ತೋಂಡ । ಕರೂ ಗೇಲೇ ಬಡಬಡ । ಕೀ ಗೀತಾ ಐಸೇ ಗೋಡ । ಆತುಡಲೇ ।।೨೧।। ಹೋಯ ಅದೃಷ್ಟ ಆಪೈತೇ । ತೈ ವಾಳೂಚಿ ರತ್ನೇ ಪರತೇ । ಉಜೂ ಆಯುಷ್ಯ ತೈ ಮಾರಿತೇ । ಲೋಭು ಕರೀ ।।೨೨।। ಆಧಣೇ ಘಾತಲಿಯಾ ಹರಳ । ಹೋತೀ ಅಮೃತಾಚೇ ತಾಂದುಳ । ಜರೀ ಭುಕೇಚೀ ರಾಖೇ ವೇಳ । ಶ್ರೀಜಗನ್ನಾಥು ।।೨೩।। ತಯಾ ಪರೀ ಶ್ರೀಗುರು । ಕರಿತೀ ಜೈ ಅಂಗಿಕಾರು । ತೈ ಹೋಊನಿ ಠಾಕೇ ಸಂಸಾರು । ಮೋಕ್ಷ ಮಯ ಆಘವಾ ।।೨೪।। ಪಾಹಾ ಪಾ ಶ್ರೀನಾರಾಯಣೇ । ತಯಾ ಪಾಂಡವಾಂಚೇ ಉಣೇ । ಕೀಜೇಚಿ ನಾ ಪುರಾಣೇ । ವಿಶ್ವವಂದ್ಯೇ? ।।೨೫।। ತೈಸೇ ಶ್ರೀನಿವೃತ್ತಿರಾಜೇ । ಅಜ್ಞಾನಪಣ ಹೇ ಮಾರ್ಝೇ । ಆಣಿಲೇ ವೋಜೇ । ಜ್ಞಾನಾಚಿಯೇ ।।೨೬।। ಪರೀ ಹೇ ಅಸೋ ಆತಾ । ಪ್ರೇಮ ರುಳತಸೇ ಬೋಲತಾ । ಕೇ ಗುರುಗೌರವ ವರ್ಣಿತಾ । ಉನ್ಮೇಷ ಅಸೇ? ।।೨೭।। ಆತಾ ತೇಣೇಂಚಿ ಪಸಾಯೇ । ತುಮ್ಹಾ ಸಂತಾಂಚೇ ಮೀ ಪಾಯೇ । ವೋಳಗೇನ ಅಭಿಪ್ರಾಯೇ । ಗೀತೇಚೇನಿ ।।೨೮।। ತರೀ ತೋಚಿ ಪ್ರಸ್ತುತೀ । ಚೌದಾವಿಯಾ ಅಧ್ಯಾಯಾಚ್ಯಾ ಅಂತೀ । ನಿರ್ಣಯೋ ಕೈವಲ್ಯಪತೀ । ಐಸಾ ಕೇಲಾ ।।೨೯।। ಜೇ ಜ್ಞಾನ ಜಯಾಚ್ಯಾ ಹಾತೀ । ತೋಚಿ ಸಮರ್ಥು ಮುಕ್ತೀ । ಜೈಸಾ ಶತಮಖ ಸಂಪತ್ತೀ । ಸ್ವರ್ಗೀಚಿಯೇ ।।೩೦।। ಕಾ ಶತ ಏಕ ಜನ್ಮಾ । ಜೋ ಜನ್ಮೋನಿ ಬ್ರಹ್ಮ ಕರ್ಮಾ । ಕರೀ ತೋಚಿ ಬ್ರಹ್ಮಾ । ಅನು ನೋಹೇ? ।।೩೧।। ನಾನಾ ಸೂರ್ಯಾಚಾ ಪ್ರಕಾಶು । ಲಾಹೇ ಜೇವೀ ಡೋಳಸು । ತೇವೀ ಜ್ಞಾನೇಂಚಿ ಸೌರಸು । ಮೋಕ್ಷಾ ಚಾ ತೋ ।।೩೨।।

ಇದೆಂತಹ ಚಮತ್ಕಾರವು! ಪರಮಾತ್ಮನ ಅಂತಕಾಣದೆ ಮನಸಹಿತ ವಾಣಿಯು ಹಿಂದಿರುಗುವುದು, ಅಂತಹ ಪರಮಾತ್ಮನು ಗುರುಚರಣ ಉಪಾಸಕನ ಮುಖದಿಂದ ಹೊರಡುವ ಅಕ್ಷರದ ಆ ಶಬ್ದಗಳಂತೆ ಕುಣಿಯಹತ್ತುವನು ।೧೫।।

ಜ್ಞಾನಕ್ಕೂ ತಿಳಿಯದ, ಧ್ಯಾನಕ್ಕೂ ಸಿಗದ, ಅಗೋಚರನಾದ ಆ ಪರಮಾತ್ಮನು ಆತನ ಸಹಜವಾದ ಮಾತಿನಲ್ಲಿ ಸಿಕ್ಕಿಕೊಳ್ಳುವನು ।೧೬।।

ಇಷ್ಟೊಂದು ವಾಣಿಗೆ ಐಶ್ವರ್ಯ ಪ್ರಾಪ್ತವಾಗಬೇಕಾದರೆ, ಅದು ಕೇವಲ ಶ್ರೀಗುರು ಪಾದಕಮಲ ಪರಾಗದ ಪ್ರಾಪ್ತಿಯಿಂದ ಮಾತ್ರ ಸಾಧ್ಯವಾಗುವುದು ।೧೭।।

ಶ್ರೀಜ್ಞಾನೇಶ್ವರ ಮಹಾರಾಜರು ಸದ್ಗದಿತರಾಗಿ ಹೇಳುವರು. ಹೆಚ್ಚಿಗೇನು ಹೇಳಬೇಕು? ಈ ಪ್ರಕಾರದ ಭಾಗ್ಯವು ಇಂದು ನನ್ನ ಹೊರತಾಗಿ ಬೇರೆ ಎಲ್ಲಿಯೂ ಇಲ್ಲವೇ ಇಲ್ಲ ।೧೮।।

ಕಾರಣವೇನೆಂದರೆ, ನಾನು ಗುರುಗಳ ಒಬ್ಬನೇ ಒಬ್ಬ ಪ್ರೀತಿಯ ಕಂದನಾಗಿರುವುದರಿಂದ, ಆತನ ಕೃಪೆಗೆ ಬೇರೆ ಕಡೆ ಹೋಗಲು ಸ್ಥಳವೇ ಇಲ್ಲದ್ದಕ್ಕೆ ನಾನೊಬ್ಬನೇ ಪಾತ್ರನಾದೆನು ।೧೯।।

ಹೀಗಿದೆ ನೋಡು, ಮೇಘವು ಚಾತಕ ಪಕ್ಷಿಗಳಿಗೆ ನೀರು ಸಿಗಬೇಕೆಂದು ಮಳೆಗರೆಯುವುದು. (ಅದರಿಂದ ಸಹಜವಾಗಿ ಜಗದ ಕಲ್ಯಾಣವಾಗುವುದು) ಅದರಂತೆ ಶ್ರೀಗುರುಗಳು ನನ್ನ ಮೇಲೆ ಕೃಪೆ ಮಾಡಿದರು ।೨೦।।

ಆದ್ದರಿಂದ ನನ್ನ ಬರಿದಾದ ಮುಖವು ಸಹಜವಾಗಿ ಬಡಬಡಿಸಲು, ಅದರಲ್ಲಿ ಗೀತೆಯಂತಹ ರುಚಿಕಟ್ಟಾದ ವ್ಯಾಖ್ಯಾನವು ದೊರಕಿತು ।೨೧।।

(ಇದರಲ್ಲಿ ಯಾವ ಆಶ್ಚರ್ಯ!) ಪ್ರಾರಬ್ಧವು ಅನುಕೂಲವಿದ್ದರೆ ಉಸುಕು ಕೈಯಲ್ಲಿ ಹಿಡಿದರೆ ಅದೇ ರತ್ನವಾಗುವುದು ಮತ್ತು ಆಯುಷ್ಯವು ಗಟ್ಟಿಯಾಗಿದ್ದರೆ, ಆತನಿಗೆ ಕೊಲ್ಲುವವನೂ ಪ್ರೀತಿಸುವನು ।೨೨।।

ಯಾವ ವೇಳೆಯಲ್ಲಿ ಶ್ರೀಜಗನ್ನಾಥನ ಮನದಲ್ಲಿ ಹಸಿದವನಿಗೆ ಅನ್ನಕೊಟ್ಟು ಬದುಕಿಸುವ ಇಚ್ಛೆಯಾದರೆ ಕುದಿಯುವ ನೀರಿನಲ್ಲಿ ಉಸುಕಿನ ಹರಳುಗಳನ್ನು ಹಾಕಿದರೂ ಅವು ಅಮೃತಸಮಾನ ಅಕ್ಕಿಗಳಾಗುವುವು ।೨೩।।

ಅದರಂತೆ ಯಾರನ್ನು ಶ್ರೀಗುರುಗಳು ಅಂಗೀಕರಿಸುವರೋ, ಆತನ ಸರ್ವದುಃಖರೂಪ ಸಂಸಾರವೇ ಮೋಕ್ಷರೂಪ ಅಂದರೆ ಆನಂದರೂಪವಾಗುವುದು ।೨೪।।

ನೋಡಿರಿ, ಪಾಂಡವರದು ಎಲ್ಲ ಪ್ರಕಾರಗಳಿಂದ ದೋಷಿಗಳಾಗಿದ್ದರೂ, ಶ್ರೀಕೃಷ್ಣನು ಅವರ ನಿಂದ್ಯ ಕಥೆಯನ್ನು ಪುರಾಣದ ಯೋಗ್ಯತೆಗೆ ತಂದು ಸರ್ವ ಜಗತ್ತಿಗೆ ವಂದ್ಯವನ್ನಾಗಿ ಮಾಡಲಿಲ್ಲವೇ? ।೨೫।।

ಅದರಂತೆ ಶ್ರೀನಿವೃತ್ತಿ ಮಹಾರಾಜರು ನನ್ನ ಅಜ್ಞಾನಕ್ಕೆ ಜ್ಞಾನದ ಯೋಗ್ಯತೆಗೆ ತಂದು ಕೊಟ್ಟರು ।೨೬।।

ಆದರೆ ಅದು ಇರಲಿ, ಈ ರೀತಿ ಹೇಳುವುದರಿಂದ ಪ್ರೇಮವು ಹೆಚ್ಚಾಗಿಯೇ ಬೆಳೆಯುತ್ತ ಹೋಗುವುದು ಮತ್ತು ನನಗಾದರೂ ಶ್ರೀಗುರುಗಳ ಗೌರವ ವರ್ಣಿಸುವ ಜ್ಞಾನವಾದರೂ ಎಲ್ಲಿದೆ? ।೨೭।।

ಆದ್ದರಿಂದ ಈಗ ಗುರುಗಳ ಪ್ರಸಾದದಿಂದ ಮತ್ತು ನಿಮ್ಮೆಲ್ಲರ ಸಂತರ ಚರಣದರ್ಶನದಿಂದ ಗೀತೆಯ ಅಭಿಪ್ರಾಯವನ್ನು ವರ್ಣಿಸಲು ಪ್ರವರ್ತನಾಗುವೆನು ।೨೮।।

ಹದಿನಾಲ್ಕನೆಯ ಅಧ್ಯಾಯದ ಕೊನೆಯಲ್ಲಿ ಮೋಕ್ಷದಾತನಾದ ಶ್ರೀಕೃಷ್ಣ ಪರಮಾತ್ಮನು ನಿರ್ಣಯ ಕೊಟ್ಟಿರುವುದೇನೆಂದರೆ ।೨೯।।

ಯಾರಿಗೆ ಬ್ರಹ್ಮ ಪ್ರಾಪ್ತಿಯಾಗಿರುವುದೋ, ಅವರಿಗೆ ಮಾತ್ರ ಮೋಕ್ಷ ಪ್ರಾಪ್ತಿಯಾಗುವುದು. ಯಾವ ಪ್ರಕಾರವಾಗಿ ನೂರುಯಜ್ಞ ಮಾಡಿದವನಿಗೆ ಸ್ವರ್ಗದ ಸಂಪತ್ತು (ಇಂದ್ರ ಪದ) ಪ್ರಾಪ್ತಿ ಆಗುವುದೋ ।೩೦।।

ಅಥವಾ ಯಾರು ನೂರು ಜನ್ಮಗಳಲ್ಲಿ ಬ್ರಹ್ಮ ಕರ್ಮವನ್ನು ಮಾಡುವನೋ, ಆತನೇ ನಿಃಸಂಶಯವಾಗಿ ಬ್ರಹ್ಮದೇವನ ಸ್ಥಾನವನ್ನು ಹೇಗೆ ಪಡೆಯುವನೋ ।೩೧।।

ಇಲ್ಲವೇ ಸೂರ್ಯನ ಉಪಯೋಗವು ಕೇವಲ ಕಣ್ಣಿದ್ದವರಿಗೆ ಮಾತ್ರ ಹೇಗೆ ಆಗುವುದೋ, ಅದರಂತೆ ಯಾರು ಜ್ಞಾನಿಯಾಗಿರುವನೋ, ಅವನಿಗೆ ಮಾತ್ರ ಮೋಕ್ಷಪ್ರಾಪ್ತಿಯ ಸುಖ ದೊರೆಯುವುದು ।೩೨।।

ತರೀ ತಯಾ ಜ್ಞಾನಾಲಾಗೀ । ಕವಣಾ ಪಾ ಯೋಗ್ಯತಾ ಆಂಗೀ। ಹೇ ಪಾಹತಾ ಜಗೀ । ದೇಖಿಲಾ ಏಕು ।೩೩॥ ಜೇ ಪಾತಾಳೀಂಚೇಂಹೀ ನಿಧಾನ । ದಾವಿಲ ಕೀರ ಅಂಜನ । ಪರೀ ಹೋಆವೇ ಲೋಚನ । ಪಾಯಾಳಾಚೇ ।೩೪॥ ತೈಸೇ ಮೋಕ್ಷ ದೇಈಲ ಜ್ಞಾನ । ಯೇಥೇ ಕೀರ ನಾಹೀ ಆನ। ಪರೀ ತೇಂಚಿ ಥಾರೇ ಐಸೇ ಮನ । ಶುದ್ಧ ಹೋಆವೇ ।೩೫॥ ತರೀ ವಿರಕ್ತೀವಾಂಚೂನಿ ಕಹೀ । ಜ್ಞಾನಾಸೀ ತಗಣೇಂಚಿ ನಾಹೀ । ಹೇ ವಿಚಾರೂನಿ ಠಾಈ । ಠೇವಿಲೇ ದೇವೇ ।೩೬॥ ಆತಾ ವಿರಕ್ತೀಚೀ ಕವಣ ಪರೀ । ಜೇ ಯೇಊನಿ ಮನಾತೇ ವರೀ । ಹೇಹೀ ಸರ್ವಜ್ಞೀ ಶ್ರೀಹರೀ । ದೇಖಿಲೇ ಅಸೇ ।೩೭॥ ಜೇ ವಿಷೇ ರಾಂಧಿಲೀ ರಸಸೋಯೇ । ಜೈ ಜೇವಣಾರಾ ಠಾಉವೀ ಹೋಯೇ । ತೈ ತೋ ತಾಟಚಿ ಸಾಂಡೂನಿ ಜಾಯೇ । ಜಯಾಪರೀ ।೩೮॥ ತೈಸೀ ಸಂಸಾರಾ ಯಾ ಸಮಸ್ತಾ । ಜಾಣಿಜೇ ಜೈ ಅನಿತ್ಯತಾ । ತೈ ವೈರಾಗ್ಯ ದವಡಿತಾ । ಪಾಠೀ ಲಾಗೇ।೩೯॥ ಆತಾ ಅನಿತ್ಯತ್ವ ಯಾ ಕೈಸೇ । ತೇಂಚಿ ವೃಕ್ಷಾಕಾರಮಿಷೇ । ಸಾಂಗಿಜತ ಅಸೇ ವಿಶ್ವೇಶೇ । ಪಂಚದಶೀ ।೪೦॥ ಉಪಡಿಲೇ ಕವತಿಕೇ । ಝಾಡ ಯೇರಿಮೋಹರಾ ಠಾಕೇ । ತೇ ವೇಗೇ ಜೈಸೇ ಸುಕೇ । ತೈಸೇ ಹೇ ನೋಹೇ ।೪೧॥ ಯಾತೇ ಏಕೇಪರೀ । ರೂಪಕಾಚಿಯಾ ಕುಸರೀ । ಸಾರಿತಸೇ ವಾರೀ । ಸಂಸಾರಾಚೇ ।೪೨॥ ಕರೂನಿ ಸಂಸಾರ ವಾವೋ । ಸ್ವರೂಪೀ ಅಹಂತೇ ಠಾವೋ । ಹೋಆವಯಾ ಅಧ್ಯಾವೋ । ಪಂಧರಾವಾ ಹಾ ।೪೩॥ ಆತಾ ಹೇಂಚಿ ಆಘವೇ । ಗ್ರಂಥಗರ್ಭೀಚೇ ಚಾಂಗಾವೇ । ಉಪಲವಿಜೇಲ ಜೀವೇ । ಆಕರ್ಣಿಜೇ ।೪೪॥ ತರೀ ಮಹಾನಂದ ಸಮುದ್ರ । ಜೋ ಪೂರ್ಣ ಪೂರ್ಣಿಮಾ ಚಂದ್ರ । ತೋ ದ್ವಾರಕೇಚಾ ನರೇಂದ್ರ । ಐಸೇ ಮ್ಹಣೇ ।೪೫॥ ಅಗಾ ಪೈ ಪಂಡುಕುಮರಾ । ಯೇತಾ ಸ್ವರೂಪಾಚಿಯಾ ಘರಾ । ಕರೀತಸೇ ಆಡವಾರಾ । ವಿಶ್ವಾಭಾಸು ಜೋ ।೪೬॥ ತೋ ಹಾ ಜಗಡಂಬರು । ನೋಹೇ ಯೇಥ ಸಂಸಾರು । ಹಾ ಜಾಣಿಜೇ ಮಹಾತರು ।ಥಾಂವಲಾ ಅಸೇ ।೪೭॥ ಪರೀ ಯೇರಾ ರುಖಾ ಸಾರಿಖಾ । ಹಾ ತಳೀ ಮುಳೇ ವರೀ ಶಾಖಾ । ತೈಸಾ ನೋಹೇ ಮ್ಹಣೌನಿ ಲೇಖಾ । ನಯೇಚಿ ಕವಣಾ ।೪೮॥ ಆಗೀ ಕಾ ಕುರ್ಹಾಡೀ । ಹೋಯ ರಿಗಾವಾ ಜರೀ ಬುಡಿ । ತರೀ ಹೋ ಕಾ ಭಲತೇವಢೀ । ವರಿಚೀಲ ವಾಢೀ ।೪೯॥ ಜೇ ತುಟಲಿಯಾ ಮುಳಾಪಾಶೀ । ಉಲಂಡೇಲ ಕಾ ಶಾಖಾಂಶೀ । ಪರೀ ತೈಶೀ ಗೋಠೀ ಕಾಯಶೀ । ಹಾ ಸೋಪಾ ನವ್ಹೇ ।೫೦॥

ಆದರೆ ಈ ಜ್ಞಾನವನ್ನು ಒದಗುವ ಯೋಗ್ಯತೆಯು ಯಾರಲ್ಲಿದೆ? ಎಂದು ಶೋಧಿಸಲು ಜಗತ್ತಿನಲ್ಲಿ ಕೇವಲ ಒಬ್ಬ ಪುರುಷನು ಮಾತ್ರ ದೃಷ್ಟಿಗೆ ಬೀಳುವನು ।೩೩॥

ಯಾವ ಪ್ರಕಾರವಾಗಿ ಭೂಮಿಗತ ದ್ರವ್ಯವು ಅಂಜನ ಹಾಕಿದಾಗ ದೃಷ್ಟಿಗೆ ಬೀಳುವುದು. ಆದರೆ ಆ ಅಂಜನ ಹಾಕಲು ಕಾಲು ಮುಂದೆ ಮಾಡಿ ಹುಟ್ಟಿದವನಿಗೆ ಮಾತ್ರ ಅಧಿಕಾರ ವಿರುವುದು ।೩೪॥

ಅದರಂತೆ, ಜ್ಞಾನವು ಮೋಕ್ಷವನ್ನು ಕೊಡುವುದರಲ್ಲಿ ಯಾವ ಅನುಮಾನವಿಲ್ಲ. ಆದರೆ, ಆ ಜ್ಞಾನವು ಸ್ಥಿರಗೊಳ್ಳಲು ಅಂತಃಕರಣದ ಭೂಮಿಕೆಯು ಪರಿಶುದ್ಧವಾಗಿರಬೇಕು ।೩೫॥

ಇದರ ಸ್ಪಷ್ಟ ಅರ್ಥವೇನೆಂದರೆ, ವೈರಾಗ್ಯದ ಹೊರತಾಗಿ ಜ್ಞಾನವು ಇರುವುದೇ ಇಲ್ಲ. ಹೀಗೆ ವೇದವು ವಿಚಾರವನ್ನು ಮಾಡಿ ನಿಶ್ಚಯ ಮಾಡಿರುವುದು ।೩೬॥

ಈಗ ವೈರಾಗ್ಯವು ತಾನಾಗಿಯೇ ಮನದಲ್ಲಿ ಹೇಗೆ ಪ್ರವೇಶಿಸಬಹುದೆಂಬುದಕ್ಕೆ ಸರ್ವಜ್ಞ ಶ್ರೀಹರಿಯು ವಿಚಾರ ಮಾಡಿರುವನು ।೩೭॥

ಯಾವ ಪ್ರಕಾರವಾಗಿ ಒಬ್ಬ ಮನುಷ್ಯನು ಊಟಕ್ಕೆ ಕುಳಿತುಕೊಂಡಾಗ ಅನ್ನದಲ್ಲಿ ವಿಷ ಹಾಕಿದೆ ಎಂದು ತಿಳಿಯುತ್ತಲೇ, ಆತನು ತಾಟನ್ನು ಒಗೆದು ಎದ್ದು ಹೋಗುವನೋ ।೩೮॥

ಅದರಂತೆ, ಸರ್ವ ಸಂಸಾರವು ಅನಿತ್ಯ (ಮಿಥ್ಯಾ) ಇದೆ ಎಂದು ಯಾವಾಗ್ಗೆ ದೃಢ ನಿಶ್ಚಯವಾಗುವುದೋ, ಆ ವೇಳೆಯಲ್ಲಿ ವೈರಾಗ್ಯವು ಬೇಡವೆಂದರೂ ಅಂತಃಕರಣದಲ್ಲಿ ಬಲಾತ್ಕಾರದಿಂದ ಪ್ರವೇಶ ಮಾಡುವುದು ।೩೯॥

ಈಗ ಸಂಸಾರಕ್ಕೆ ಮಿಥ್ಯತ್ವವು ಹೇಗೆ ಇದೆ ಎಂಬುದನ್ನು ಈ ಹದಿನೈದನೆಯ ಅಧ್ಯಾಯದಲ್ಲಿ ವೃಕ್ಷದ ರೂಪಕದಿಂದ ಪರಮಾತ್ಮನು ಹೇಳುತ್ತಿರುವನು ।೪೦॥

ಇತರ ವೃಕ್ಷಗಳು ಸ್ವಭಾವತಃ ಬಿದ್ದಾಗ ಅವುಗಳ ಬೇರುಗಳು ಮೇಲೆ ಬಂದು ಒಣಗುವಂತೆ, ಈ ಸಂಸಾರ ವೃಕ್ಷವು ಒಣಗುವುದಿಲ್ಲ ।೪೧॥

ಈ ಪ್ರಕಾರವಾಗಿ ಸಂಸಾರ ವಿಷಯಕ್ಕೆ ವೃಕ್ಷದ ರೂಪಕವನ್ನು ಕುಶಲತೆಯಿಂದ ಮಾಡಿ ಶ್ರೀಕೃಷ್ಣ ಪರಮಾತ್ಮನು ಮುಮುಕ್ಷುಗಳಿಗೆ ಜನ್ಮ ಮರಣದ (ಬರ ಹೋಗುವುದರ) ವಾರಿಯನ್ನು ಬಿಡಿಸುವನು ।೪೨॥

ಸಂಸಾರಕ್ಕೆ ಮಿಥ್ಯತ್ವವನ್ನು ನಿಶ್ಚಯಿಸಿ ಬ್ರಹ್ಮವು ನಾನಿದ್ದೇನೆ ಎಂದು ದೃಢಪಡಿಸಿಕೊಳ್ಳುವುದೇ ಈ ಅಧ್ಯಾಯದ ವಿಷಯವಾಗಿದೆ ।೪೩॥

ಇದೇ ಉತ್ತಮವಾದ ವಿಷಯವು ಗೀತಾಶಾಸ್ತ್ರದಲ್ಲಿನ ಈ ಅಧ್ಯಾಯದಲ್ಲಿದೆ, ಅದನ್ನು ನಾನು ಬಿಚ್ಚಿ ಹೇಳುವೆನು. ನೀವು ಮನಃಪೂರ್ವಕವಾಗಿ ಕೇಳಿರಿ ।೪೪॥

ಮಹಾನಂದದ ಸಮುದ್ರನಾದ, ಸಿದ್ಧಾಂತದ ಪೂರ್ಣಚಂದ್ರನಾದ ಮತ್ತು ದ್ವಾರಕೆಯ ರಾಜನಾದ ಶ್ರೀಕೃಷ್ಣಪರಮಾತ್ಮನು ಅರ್ಜುನನಿಗೆ ಏನು ಹೇಳಿದನೆಂದರೆ, ।೪೫॥

ಅರೇ ಅರ್ಜುನಾ, ಆತ್ಮಸ್ವರೂಪದ ಮನೆಗೆ ಅಂದರೆ ಸ್ವರೂಪ ರೂಪ ಪ್ರಾಪ್ತಿಗೆ ಬರುವಾಗ್ಗೆ ಮಧ್ಯದಲ್ಲಿ ವಿಶ್ವಾಭಾಸ ಅಂದರೆ ಪ್ರಪಂಚವು ಅಡ್ಡಾಗುವುದು ।೪೬॥

ಈ ವಿಶ್ವಾಭಾಸವೆಂದರೆ ಪ್ರಪಂಚವಲ್ಲದೇ ದೊಡ್ಡದಾದ ಬಲಿಷ್ಠವಾದ ಅದೊಂದು ವೃಕ್ಷವಾಗಿದೆ ಎಂದು ಕಲ್ಪನೆಯನ್ನು ಮಾಡು ।೪೭॥

ಆದರೆ ಇತರ ವೃಕ್ಷಗಳಂತೆ ಬೇರುಗಳು ಕೆಳಗೆ ಇದ್ದು ಮೇಲೆ ಟೊಂಗೆಗಳು ಇರುವಂತೆ ಇದು ಇರುವುದಿಲ್ಲ. ಆದ್ದರಿಂದ ಇದರ ವರ್ಣನೆಯನ್ನು ಯಾರಿಗೂ ಮಾಡಲು ಬರುವುದಿಲ್ಲ ।೪೮॥

ಸಾಮಾನ್ಯ ವೃಕ್ಷಕ್ಕೆ ಮೇಲೆ ಕೊಡಲಿಪೆಟ್ಟು ಹಾಕಿದರೆ, ಅಥವಾ ಅಗ್ನಿ ಹತ್ತಿದರೆ ಆ ವೃಕ್ಷದ ವಿಸ್ತಾರವು ಮೇಲೆ ಎಷ್ಟೇ ಇರಲಿ ।೪೯॥

ಆ ಬೇರಿನ ಭಾಗ ಮುರಿದಾಗ ಟೊಂಗೆಗಳೊಂದಿಗೆ ಉರುಳಿ ಬೀಳುವುದು. ಅದರಂತೆ ಉರುಳಿ ಬೀಳುವಂತಹ ಹಗುರವಾದ ಈ ವೃಕ್ಷವಲ್ಲ ।೫೦॥

ಅರ್ಜುನಾ ಹೇ ಕವತಿಕ । ಸಾಂಗತಾ ಅಸೇ ಅಲೌಕಿಕ । ಜೇ ವಾಢೀ ಅಧೋಮುಖ । ರುಖಾ ಯಯಾ ।೫೧॥ ಜೈಸಾ ಭಾನು ಉಂಚೀ ನೇಣೋ ಕೇ । ರಶ್ಮಿ ಜಾಳ ತಳೀ ಫಾಂಕೇ । ಸಂಸಾರ ಹೇ ಕಾವರುಖೇ । ಝಾಡ ತೈಸೇ ।೫೨॥ ಆಣಿ ಅಥೀ ನಾಥೀ ತಿತುಕೇ । ರುಂಧಲೇ ಅಸೇ ಯೇಣೇಂಚಿ ಏಕೇ । ಕಲ್ಪಾಂತೀಚೇನಿ ಉದಕೇ । ವ್ಯೋಮ ಜೈಸೇ ।೫೩॥ ಕಾ ರವೀಚ್ಯಾ ಅಸ್ತಮಾನೀ । ಆಂಧಾರೇನಿ ಕೋಂದೇ ರಜನೀ । ತೈಸಾ ಹಾಚಿ ಗಗನೀ । ಮಾಂಡಲಾ ಅಸೇ ।೫೪॥ ಯಯಾ ಫಳ ನಾ ಚುಂಬಿತಾ । ಫೂಲ ನಾ ತುರಂಬಿತಾ । ಜೇ ಕಾಂಹೀ ಪಂಡುಸುತಾ । ತೇ ರುಖಚಿ ಹಾ ।೫೫॥ ಹಾ ಊರ್ಧ್ವಮೂಳ ಆಹೇ । ಪರೀ ಉನ್ಮೂಳಿಲಾ ನೋಹೇ । ಯೇಣೇಂಚಿ ಹಾ ಹೋಯೇ । ಶಾಡ್ವಳು ಗಾ ।೫೬॥ ಆಣಿ ಊರ್ಧ್ವಮೂಳ ಐಸೇ । ನಿಗದಿಲೇ ಕೀರ ಅಸೇ । ಪರೀ ಅಧೀಂಹೀ ಅಸೋಸೇ । ಮೂಳೇ ಯಯಾ ।೫೭॥ ಪ್ರಬಳಲಾ ಚೌಮೇರೀ । ಪಿಂಪಳ ಕಾ ವಡಾಚಿಯಾ ಪರೀ । ಜೇ ಪಾರಂಬಿಯಾ ಮಾರ್ಝಾರೀ । ಡಹಾಳಿಯಾ ಅಸತಿ ।೫೮॥ ತೇವೀಂಚಿ ಗಾ ಧನಂಜಯಾ । ಸಂಸಾರತರು ಯಯಾ । ಆಧೀಂಚೇ ಅಥೀ ಖಾಂದಿಯಾ । ಹೇಹೀ ನಾಹೀ ।೫೯॥ ತರೀ ಊರ್ಧ್ವಾಹೀಕಡೇ । ಶಾಖಾಂಚೇ ಮಾಂದೋಡೇ । ದಿಸತಾತಿ ಅಪಾಡೇ । ಸಾಸಿನ್ನಲೇ ।೬೦॥ ಜಾಲೇ ಗಗನಚಿ ಪಾವೇಲಿಯೇ । ಕಾ ವಾರಾ ಮಾಂಡಲಾ ರುಖಾಚೇನಿ ಆಯೇ । ನಾನಾ ಅವಸ್ಥಾತ್ರಯೇ । ಉದಯಲಾ ಅಸೇ ।೬೧॥ ಐಸಾ ಹಾ ಏಕು । ವಿಶ್ವಾಕಾರು ವಿಟಂಕು । ಉದಯಲಾ ಜಾಣ ರುಖು । ಊರ್ಧ್ವಮೂಳು ।೬೨॥ ಆತಾ ಊರ್ಧ್ವ ಯಾ ಕವಣ । ಯೇಥೇ ಮೂಳ ತೇ ಕೀ ಲಕ್ಷಣ । ಕಾ ಅಧೋಮುಖಪಣ । ಶಾಖಾ ಕೈಸಿಯಾ ।೬೩॥ ಅಥವಾ ದ್ರುಮಾ ಯಯಾ । ಆಧೀ ಜಿಯಾ ಮೂಳಿಯಾ । ತಿಯಾ ಕೋಣ ಕೈಸಿಯಾ । ಊರ್ಧ್ವ ಶಾಖಾ ।೬೪॥ ಆಣಿ ಅಶ್ವತ್ಥು ಹಾ ಐಸೀ । ಪ್ರಸಿದ್ಧಿ ಕಾಯಸೀ । ಆತ್ಮವಿದವಿಲಾಸೀ । ನಿರ್ಣಯೋ ಕೇಲಾ ।೬೫॥ ಹೇ ಆಘವೇಂಚಿ ಬರವೇ । ತುಝಿಯೇ ಪ್ರತೀತೀಸಿ ಫಾವೇ । ತೈಸೇನಿ ಸಾಂಗೋ ಸೋಲಿಂವೇ । ವಿನ್ಯಾಸೇ ಗಾ ।೬೬॥ ಪರೀ ಐಕೇ ಗಾ ಸುಭಗಾ । ಹಾ ಪ್ರಸಂಗು ಅಸೇ ತುಜಚಿ ಜೋಗಾ । ಕಾನಚಿ ಕರೀ ಹೋ ಸರ್ವಾಂಗಾ । ಹಿಯೇ ಆಥಿಲಿಯಾ ।೬೭॥ ಐಸೇ ಪ್ರೇಮರಸೇ ಸುರಪುರೇ । ಬೋಲಿಲೇ ಜಂವ ಯಾದವವೀರೇ । ತಂವ ಅವಧಾನ ಅರ್ಜುನಾಕಾರೇ । ಮೂರ್ತ ಜಾಲೇ ।೬೮॥

ಈ ವೃಕ್ಷದ ಕೌತುಕವೇನೆಂದು ಹೇಳಬೇಕು? ಇದರ ಬೇರು ಮೇಲು ಭಾಗಕ್ಕೆ ಇದ್ದು, ವೃಕ್ಷದ ಬೆಳವಣಿಗೆಯು ಕೆಳಭಾಗಕ್ಕೆ ಇರುವುದು ।೫೧॥

ಸೂರ್ಯನು ಎಷ್ಟು ಎತ್ತರದಲ್ಲಿದ್ದಾನೆ ಎಂಬುದು ತಿಳಿಯುವುದಿಲ್ಲ. ಆದರೆ ಆತನ ಕಿರಣಗಳು ಕೆಳಭಾಗಕ್ಕೆ ಪಸರಿಸುವುವು. ಇದರಂತೆ ಈ ಸಂಸಾರ ವೃಕ್ಷವು ಚಮತ್ಕಾರವಾಗಿದೆ ।೫೨॥

ಮತ್ತು ಈ ಜಗತ್ತಿನಲ್ಲಿ ಏನಿದೆ, ಏನಿಲ್ಲವೋ, ಅದೆಲ್ಲವೂ ಈ ವೃಕ್ಷದ ಉದರದಲ್ಲಿದೆ. ಯಾವ ಪ್ರಕಾರವಾಗಿ ಕಲ್ಪಾಂತ್ಯದ ಸಮಯಕ್ಕೆ ಉದಕವು ಸರ್ವ ಆಕಾಶವನ್ನು ವ್ಯಾಪಿಸುವುದೋ ।೫೩॥

ಅಥವಾ ಸೂರ್ಯನು ಅಸ್ತನಾದಾಗ ರಾತ್ರಿಯು ಕತ್ತಲವನ್ನು ಆವರಿಸುವುದೋ, ಅದರಂತೆ ಈ ವೃಕ್ಷವು ಸರ್ವ ಆಕಾಶಕ್ಕೆ ತುಂಬಿಕೊಂಡಿರುವುದು ।೫೪॥

ಚೀಪಬೇಕೆಂದರೆ ಇದಕ್ಕೆ ಫಲವಿಲ್ಲ, ಮೂಸಬೇಕೆಂದರೆ ಇದಕ್ಕೆ ಹೂವಿಲ್ಲ, ಯಾವುದು ಇದೆಯೋ, ಅದೆಲ್ಲವೂ ಈ ವೃಕ್ಷವೇ ।೫೫॥

ಇದರ ಮೂಲವು (ಬೇರು) ಮೇಲಿದೆ. ಆದಾಗ್ಯೂ ಇದನ್ನು ಕಿತ್ತು ಒಗೆದಿಲ್ಲ. ಅರ್ಜುನಾ, ಇದೇ ಕಾರಣದಿಂದ ಇದು ಯಾವಾಗಲೂ ಪ್ರಫುಲ್ಲಿತವಾಗಿರುವುದು ।೫೬॥

ಮತ್ತು ಇದರ ಮೂಲವು ಮೇಲೆ ಇದೆ ಎಂದು ಹೀಗೆ ಹೇಳಿದರೂ, ಇದರ ಕೆಳಗೂ ಇದಕ್ಕೆ ಸಾಕಷ್ಟು ಮೂಲಗಳು (ಬೇರುಗಳು) ಇವೆ ।೫೭॥

ಇದು ಅರಳೆ ಅಥವಾ ಆಲದ ವೃಕ್ಷದಂತೆ ಸುತ್ತಲೂ ಹಬ್ಬಿದೆ ಮತ್ತು ವೃಕ್ಷದ ಟೊಂಗೆಗಳಿಗೆ ಬಿಟ್ಟ ಬೇರುಗಳಿಗೂ ಟೊಂಗೆಗಳಿವೆ ।೫೮॥

ಅದರಂತೆ ಅರ್ಜುನಾ, ಸಂಸಾರರೂಪ ವೃಕ್ಷಕ್ಕೆ ಕೆಳಗೆ ಮಾತ್ರ ಟೊಂಗೆಗಳಿವೆಂಬುವುದು ಏನೂ ಇಲ್ಲ ।೫೯॥

ಆದರೆ ಮೇಲೆಯೂ ಇದಕ್ಕೆ ಅಪಾರ ಟೊಂಗೆಗಳಿದ್ದು, ಸಾಕಷ್ಟು ವಿಸ್ತಾರವಾಗಿದೆ ।೬೦॥

ಆಕಾಶವೇ ಈ ವೃಕ್ಷದ ಬಳ್ಳಿಯಾಗಿರುವುದು, ಗಾಳಿಯ ರೂಪದಿಂದಲೇ ಈ ವೃಕ್ಷವಿರುವುದು. ಅಥವಾ ಅವಸ್ಥೆಗಳೆಂದರೆ, ಜಾಗೃತ, ಸ್ವಪ್ನ, ಸುಷುಪ್ತಿ ಅಥವಾ ಉತ್ಪತ್ತಿ, ಸ್ಥಿತಿ, ಲಯ ಇವುಗಳಿಗೆ ಆಶ್ರಯ ರೂಪದಿಂದ ಉತ್ಪನ್ನವಾಗಿದೆ ।೬೧॥

ಈ ಪ್ರಕಾರವಾಗಿ ಇದು ವಿಶ್ವದ ಆಕಾರದಿಂದ ಮೇಲ್ಭಾಗದಲ್ಲಿ ಮೂಲವು ಮತ್ತು ಕೆಳಭಾಗಕ್ಕೆ ಶಾಖೆಗಳು, ಹೀಗೆ ವಿಲಕ್ಷಣವಾದ ವೃಕ್ಷವು ಉದಯಕ್ಕೆ ಬಂದಿರುವುದು ।೬೨॥

ಈಗ ಇದರ ಊರ್ಧ್ವ ಯಾವುದು? ಮೂಲದ ಲಕ್ಷಣಗಳೇನು? ಮತ್ತು ಕೆಳಭಾಗದ ಶಾಖೆಗಳು ಯಾವುವು? ।೬೩॥

ಅಥವಾ ಈ ವೃಕ್ಷಕ್ಕೆ ಕೆಳಭಾಗಕ್ಕೆ ಇರುವ ಮೂಲಗಳಿಗೆ ಇರುವ ಟೊಂಗೆಗಳು ಯಾವುವು? ಮತ್ತು ಹೇಗೆ ಉತ್ಪನ್ನವಾಗುವುವು? ।೬೪॥

ಮತ್ತು ಈ ವೃಕ್ಷಕ್ಕೆ "ಅಶ್ವತ್ಥ" ಈ ಹೆಸರು ಏಕೆ ಪ್ರಾಪ್ತವಾಯಿತು? ಈ ಎಲ್ಲ ನಿರ್ಣಯವನ್ನು ಮಾಡಿ, ಎಲ್ಲ ಆತ್ಮವೇತ್ತಾರರಿಗೆ ವಿಲಾಸ ಮಾಡುವ ಶ್ರೀಕೃಷ್ಣ ಪರಮಾತ್ಮನು ಅರ್ಜುನನಿಗೆ ಹೇಳುವನು ।೬೫॥

ಇದೆಲ್ಲವೂ ನಿನ್ನ ಪ್ರತೀತಿಗೆ ಉತ್ತಮ ರೀತಿಯಲ್ಲಿ ಬರುವಂತೆ, ನಾನು ನಿನಗೆ ಸ್ವಚ್ಛವಾಗಿ ವಿಸ್ತಾರವಾಗಿ ಹೇಳುವೆನು ।೬೬॥

ಹೇ ಭಾಗ್ಯವಂತನೇ, ಈ ನಿರೂಪಣೆಯನ್ನು ಕೇಳಲು ಅಧಿಕಾರ ಸಂಪನ್ನನು ನೀನೇ ಇರುವಿ. ಅದಕ್ಕಾಗಿ ಧೈರ್ಯವಂತನೇ, ಇಡೀ ಶರೀರವನ್ನು ಕಿವಿಯಾಗಿ ಮಾಡು ।೬೭॥

ಯಾದವ ವೀರನಾದ ಶ್ರೀಕೃಷ್ಣ ಪರಮಾತ್ಮನು, ಈ ಪ್ರಕಾರವಾಗಿ ಪ್ರೇಮರಸದಿಂದ ತುಂಬಿರುವ ವಚನಗಳನ್ನು ಹೇಳಿದಾಗ ಅರ್ಜುನನಲ್ಲಿ ಅವಧಾನವು ಮೂರ್ತಿಮಂತವಾಗಿ ಕಾಣಹತ್ತಿತು ।೬೮॥

ದೇವ ನಿರೂಪಿತೀ ತೇ ಥೇಂಕುಲೇ । ಯೇವಢೇ ಶ್ರೋತೇಪಣ ಫಾಂಕಲೇ । ಜೈಸೇ ಆಕಾಶಾ ಖೇಂವ ಪಸರಿಲೇ । ದಾಹೀ ದಿಶೀ ।೮೯। ಶ್ರೀಕೃಷ್ಣೋಕ್ತಿ ಸಾಗರಾ । ಹಾ ಅಗಸ್ತೀಚಿ ದುಸರಾ । ಮ್ಹಣೌನಿ ಪೋಟು ಭರೋ ಪಾಹೇ ಏಕಸರಾ । ಅವಘೇಯಾಚಾ ।೯೦। ಐಸೀ ಸೋಯ ಸಾಂಡೂನೀ ಖವಳಿಲೀ । ಆವಡೀ ಅರ್ಜುನೀ ದೇವೇ ದೇಖಿಲೀ । ತೇಥ ಜಾಲೇನಿ ಸುಖೇ ಕೇಲೀ । ಕುರವಂಡೀ ತಯಾ ।೯೧।

ಶ್ರೀಭಗವಾನುವಾಚ:-<br>ಊರ್ಧ್ವಮೂಲಮಧಃಶಾಖಮ್ ಅಶ್ವತ್ಥಂ ಪ್ರಾಹುರವ್ಯಯಮ್ ।<br>ಛಂದಾಂಸಿ ಯಸ್ಯಪರ್ಣಾನಿ ಯಸ್ತಂ ವೇದ ಸ ವೇದವಿತ್ ।೧।

ಮಗ ಮ್ಹಣೇ ಧನಂಜಯಾ । ತೇ ಊರ್ಧ್ವ ಗಾ ತರೂ ಯಯಾ । ಯೇಣೇ ರುಖೇಂಚಿ ಕಾ ಜಯಾ । ಊರ್ಧ್ವತಾ ಗಮೇ ।೯೨। ಯೇರ್ಹವೀ ಮಧ್ಯೋರ್ಧ್ವ ಅಧ । ಹೇ ನಾಹೀ ಜೇಥ ಭೇಧ । ಅದ್ವಯಾಸೀ ಏಕವದ । ಜಯಾ ಠಾಯೀ ।೯೩। ಜೋ ನಾಇಕಿಜತಾ ನಾದು । ಜೋ ಅಸೌರಭ್ಯ ಮಕರಂದು । ಜೋ ಆಂಗಾಥಿಲಾ ಆನಂದು । ಸುರತೇವಿಣ ।೯೪। ಜಯಾ ಜೇ ಆರ್ತಾ ಪರೌತೇ । ಜಯಾ ಜೇ ಪುಢೇ ಮಾಗೌತೇ । ದಿಸತೇನವಿಣ ದಿಸತೇ । ಅದೃಶ್ಯ ಜೇ ।೯೫। ಉಪಾಧೀಚಾ ದುಸರಾ । ಫಾಲಿತಾ ವೋಪಸರಾ । ನಾಮರೂಪಾಚಾ ಸಂಸಾರಾ । ಹೋಯ ಜಯಾತೇ ।೯೬। ಜ್ಞಾತೃಜ್ಞೇಯಾವಿಹೀನ । ನುಸಧೇಂಚಿ ಜೇ ಜ್ಞಾನ । ಸುಖಾ ಭರಲೇ ಗಗನ । ಗಾಳೀವ ಜೇ ।೯೭। ಜೇ ಕಾರ್ಯ ನಾ ಕಾರಣ । ಜಯಾ ದುಜೇ ನಾ ಏಕಪಣ । ಆಪಣಯಾ ಜೇ ಜಾಣ । ಆಪಣಚೀ ।೯೮। ಐಸೇ ವಸ್ತು ಜೇ ಸಾಚೇ । ತೇ ಊರ್ಧ್ವಗಾ ಯಯಾ ತರೂಚೇ । ತೇಥ ಆರ ಫೇಣೇ ಮೂಳಾಚೇ । ತೇ ಐಸೇ ಅಸೇ ।೯೯। ತರೀ ಮಾಯಾ ಐಸೀ ಖ್ಯಾತೀ । ನಸತೀಚ ಯಯಾ ಆಥೀ । ಕಾ ವಾಂಝ್ಯೇಚಿ ಸಂತತೀ । ವಾನಣೇ ಜೈಸೀ ।೧೦೦। ತೈಸೀ ಸತ್ ನಾ ಅಸತ್ ಹೋಯೇ । ಜೇ ವಿಚಾರಾಚೇ ನಾಮ ನ ಸಾಹೇ । ಐಸೇಯಾ ಪರೀಚೀ ಆಹೇ । ಅನಾದಿ ಮ್ಹಣತೀ ।೧೦೧। ಜೇ ನಾನಾತತ್ತ್ವಾಂಚೀ ಮಾಂದುಸ । ಜೇ ಜಗದಭ್ರಾಚೇ ಆಕಾಶ । ಜೇ ಆಕಾರಜಾತಾಚೇ ದುಸ । ಘಡೀ ಕೇಲೇ ।೧೦೨। ಜೇ ಭವದ್ರುಮ ಬೀಜಿಕಾ । ಜೇ ಪ್ರಪಂಚಚಿತ್ರ ಭೂಮಿಕಾ । ವಿಪರೀತ ಜ್ಞಾನದೀಪಿಕಾ । ಸಾಂಚಲೀ ಜೇ ।೧೦೩। ತೇ ಮಾಯಾ ವಸ್ತೂಚ್ಯಾ ಠಾಯೀ । ಅಸೇ ಜೈಸೇನಿ ನಾಹೀ । ಮಗ ವಸ್ತುಪ್ರಭಾಚಿ ಪಾಹೀ । ಪ್ರಗಟ ಹೋಯ ।೧೦೪।

ಅದರಂತೆ ಆಕಾಶವು ದೊಡ್ಡದಿದ್ದರೂ, ಅದಕ್ಕೆ ದಶ ದಿಕ್ಕುಗಳು ಆಲಂಗಿಸಿರುವುವು. ಅದರಂತೆ ಅರ್ಜುನನ ಶ್ರೋತೃತ್ವವು ಎಷ್ಟು ಬೆಳೆದಿದೆ ಎಂದರೆ ದೇವನು ಎಷ್ಟೇ ನಿರೂಪಣೆ ಮಾಡಿದರೂ, ಆತನಿಗೆ ಅದು ಸ್ವಲ್ಪೇ ಆಗುವುದು ॥೯॥

ಶ್ರೀಕೃಷ್ಣ ವಚನರೂಪ ಸಾಗರವನ್ನು ಕುಡಿದೇ ಬಿಡುವ ಈ ಅರ್ಜುನನು ಅಗಸ್ತ್ಯನೇ ಆಗಿರುವನು. ಆದ್ದರಿಂದ ಶ್ರೀಕೃಷ್ಣನು ಮಾಡುತ್ತಿರುವ ಸಂಪೂರ್ಣ ವ್ಯಾಖ್ಯಾನವನ್ನು ಒಂದೇ ಗುಟುಕಿನಲ್ಲಿ ಕುಡಿಯುವ ಹೊಂಚಿನಲ್ಲಿರುವನು ॥೭೦॥

ಅರ್ಜುನನಲ್ಲಿ ಕೇಳುವ ಇಂತಹ ಅಪರಿಮಿತ ಇಚ್ಛೆಯನ್ನು ಕಂಡು ಶ್ರೀಕೃಷ್ಣನು ತನಗಾದ ಸಮಾಧಾನವನ್ನು ಆತನ ಮೇಲಿಂದ ನಿವಾಳಿಸಿ ಒಗೆದನು ॥೭೧॥

ಶ್ಲೋಕಾರ್ಥ :- ಭಗವಂತನು ಹೀಗೆಂದನು:- ಮೇಲೆ ಬುಡವುಳ್ಳ, ಕೆಳಗೆ ಶಾಖೆಗಳುಳ್ಳ ಅಶ್ವತ್ಥ ವೃಕ್ಷವು ಅವ್ಯಯವಾಗಿರುವುದೆಂದು, ಅದರ ಎಲೆಗಳು ಛಂದಸ್ಸುಗಳು, ಅದನ್ನು ಯಾವನು ತಿಳಿಯುತ್ತಾನೆಯೋ, ಅವನು ವೇದವನ್ನು ತಿಳಿದವನು ॥೧॥

ಆಗ ಶ್ರೀಕೃಷ್ಣ ಪರಮಾತ್ಮನು ಅರ್ಜುನನಿಗೆ ಹೇಳಿದನು:- ಧನಂಜಯಾ, ಬ್ರಹ್ಮವು ಈ ಸಂಸಾರ ವೃಕ್ಷದ ಮೇಲಿರುವುದು. (ಊರ್ಧ್ವ ಅಂದರೆ ಎತ್ತರ, ಶ್ರೇಷ್ಠ, ಸರ್ವೋತ್ತಮ, ಬ್ರಹ್ಮವು) ಮತ್ತು ಈ ವೃಕ್ಷದಿಂದಲೇ ಈತನಿಗೆ ಊರ್ಧ್ವತ್ವವು ಬಂದಿತೆಂದು ಹೇಳಬೇಕಾಗುವುದು ॥೭೨॥

ಇಲ್ಲದಿದ್ದರೆ ಈತನಲ್ಲಿ ಏಕತ್ವವು ಲಯಗೊಳ್ಳುವುದು. ಅಂದಮೇಲೆ ಮಧ್ಯ, ಊರ್ಧ್ವ ಮತ್ತು ಅಧ ಈ ಭೇದವು ಎಲ್ಲಿಂದ ಇರಬೇಕು? ॥೭೩॥

ಯಾವುದು ಕಿವಿಗೆ ವಿಷಯವಾಗದ ನಾದವು ಮತ್ತು ಮೂಗಿನಿಂದ ಸುವಾಸನೆಯನ್ನು ತೆಗೆದುಕೊಳ್ಳಲು ಬಾರದ ಮಕರಂದವು ಮತ್ತು ಮೈಥುನಾದಿ ಸಾಧನಗಳಿಲ್ಲದೇ ಪ್ರಾಪ್ತವಿರುವ ಮೂರ್ತಿಮಂತ ಆನಂದವಾಗಿರುವುದು ॥೭೪॥

ಈತನಿಗೆ, ಈಕಡೆ, ಆಕಡೆ ಮತ್ತು ಮುಂದೆ ಹಿಂದೆ, ಹೀಗೆ ಮೇರೆ ಇರುವುದಿಲ್ಲ ಮತ್ತು ನೋಡುವವನ ಹೊರತಾಗಿ ಸ್ವಯಂಪ್ರಕಾಶನು ಮತ್ತು ಅದೃಶ್ಯನಾಗಿರುವನು ॥೭೫॥

ಯಾವ ಬ್ರಹ್ಮನಲ್ಲಿ ಮಾಯೋಪಾಧಿಯ ಎರಡನೆಯ ಸಂಬಂಧ ಕಲ್ಪಿಸಿದ್ದು ಎಂದರೆ ನಾಮಸ್ವರೂಪದ ವ್ಯವಹಾರವಾಗುವುದು ॥೭೬॥

ಯಾವ ಬ್ರಹ್ಮವು ಜ್ಞಾತಾ ಮತ್ತು ಜ್ಞೇಯ ಹೊರತಾಗಿ ಕೇವಲ ಜ್ಞಾನಮಾತ್ರವಾಗಿದೆ ಮತ್ತು ಈ ಬ್ರಹ್ಮವು ಆಕಾಶದಿಂದ ಸೋಸಿದ ಆಕಾಶಕ್ಕಿಂತಲೂ ಸೂಕ್ಷ್ಮವಾಗಿದ್ದು ಸುಖದಿಂದ ತುಂಬಿಕೊಂಡಿದೆ ॥೭೭॥

ಹಾಗೆಯೇ ಯಾರಿಂದಲೂ ಆಗಿರುವುದಿಲ್ಲ ಮತ್ತು ಇದರಿಂದ ಏನೂ ಆಗುವುದಿಲ್ಲ. ಇದಕ್ಕೆ ಎರಡನೆಯದೆಂಬುದು ಇಲ್ಲ, ಮತ್ತು ಒಂದೆಂಬುದೂ ಇಲ್ಲ ಮತ್ತು ತನ್ನನ್ನು ತಾನೇ ಪ್ರಕಾಶಗೊಳ್ಳುವುದು ॥೭೮॥

ಈ ಪ್ರಕಾರದ ಯಾವ ತತ್ತ್ವವು ಅದು ಬ್ರಹ್ಮವು ಮತ್ತು ಇದು ವೃಕ್ಷದ ಮೂಲವಾಗಿರುವುದು. ಊರ್ಧ್ವದಲ್ಲಿ ಈ ವೃಕ್ಷದ ಮೂಲವಾದ ಯಾವ ಮಾಯೆಯ ಆರಂಭವನ್ನು ಮುಂದೆ ಹೇಳುವೆ, ಅದು ಹೀಗಿದೆ ॥೭೯॥

ಈಗ ಮಾಯೆ ಎಂದು ಹೇಳುವುದು ಅದು ನಿಜವಾಗಿ ಇರದೇ, ಇದೆ ಎಂದು ಪ್ರಸಿದ್ಧಿ ಇದೆ. ಉಳಿದದ್ದು ಕೇವಲ ಪೊಳ್ಳು ಮಾತಾಗಿರುವುವು. ಬಂಜೆಯ ಸಂತತಿಯ ವರ್ಣನೆಯು ವ್ಯರ್ಥವಾಗಿರುವುದು ॥೮೦॥

ಮಾಯೆಯು ವಿಚಾರಗಳಿಂದ ನಾಶವಾಗುವುದು. ಆದ್ದರಿಂದ ಸತ್ ಅಲ್ಲ. ಜಗತ್ ಕಾರ್ಯರೂಪದಿಂದ ಪ್ರತೀತವಾಗಿದೆ, ಆದ್ದರಿಂದ ಅಸತ್ ಅಲ್ಲ. ಈ ಪ್ರಕಾರವಾಗಿ ಸತ್ತಾಸತ್ತದಿಂದ ವಿಲಕ್ಷಣವಿದ್ದು ಅನಾದಿಯಾಗಿರುವುದು ॥೮೧॥

ಅಲ್ಲದೇ ಯಾವ ಪಂಚಭೂತಾದಿ ತತ್ತ್ವಗಳ ಪೆಟ್ಟಿಗೆಯಾಗಿದೆ. ಜಗದ್ರೂಪ ಮೋಡಕ್ಕೆ ಆಕಾಶವಾಗಿದೆ ಮತ್ತು ವಿಶ್ವಾಕಾರ ರೂಪದ ವಸ್ತ್ರದ ಗಳಿಗೆಯಾಗಿರುವುದು ॥೮೨॥

ಯಾವ ಸಂಸಾರರೂಪ ವೃಕ್ಷದ ಬೀಜವು ಯಾವ ಪ್ರಪಂಚರೂಪ ಚಿತ್ರ ಬರೆಯುವ ಭೂಮಿಕೆಯು ಮತ್ತು ಪರಬ್ರಹ್ಮ ಜ್ಞಾನದ ಹೊರತಾಗಿ ಇತರ ಜ್ಞಾನಪ್ರಕಾಶದಿಂದ ತುಂಬಿಕೊಂಡಿದೆ ॥೮೩॥

ಈ ಪ್ರಕಾರವಾಗಿ ವರ್ಣಿಸಿರುವ ಮಾಯೆಯು ಬ್ರಹ್ಮವಸ್ತುವಿನಲ್ಲಿ ಇಲ್ಲದಂತೆ ಇರುವುದು. ನಂತರ ಎಷ್ಟು ಜ್ಞಾನದ ವ್ಯವಹಾರ ಕಾಣಿಸುವುದೋ, ಅಷ್ಟೇ ಪರಮಾತ್ಮವಸ್ತುವಿನ ಪ್ರಕಾಶವು ಪ್ರಕಟವಾಗುವುದು. ಹೀಗೆ ತಿಳಿ ॥೮೪॥

ಜೆವ್ಹಾ ಆಪಣಯಾ ಆಲೀ ನಿದ । ಕರೀ ಆಪಣಪೇ ಜೇವೀ ಮುಗ್ಧ । ಕಾ ಕಾಜಳೀ ಆಣಿ
ಮಂದ । ಪ್ರಭಾ ದೀಪೀ ॥೮೫॥ ಸ್ವಪ್ನೀ ಪ್ರಿಯಾಪುಢೇ ತರುಣಾಂಗೀ । ನಿದೇಲೀ ಚೇವ
ವೂನೀ ವೇಗೀ । ಆಲಿಂಗಿಲೇನಿವೀಣ ಆಲಿಂಗೀ । ಸಕಾಮು ಕರೀ ॥೮೬॥ ತೈಸೀ ಸ್ವರೂಪೀ
ಜಾಲೀ ಮಾಯಾ । ಆಣಿ ಸ್ವರೂಪ ನೇಣೇ ಧನಂಜಯಾ । ತೇಂಚಿ ರುಖಾ ಯಯಾ ।
ಮೂಳ ಪಹಿಲೇ ॥೮೭॥ ವಸ್ತೂಸೀ ಆಪುಲಾ ಜೋ ಅಬೋಧು । ತೋ ಊರ್ಧ್ವೀ
ಆರುಳ್ವೆಜೇ ಕಂದು । ವೇದಾಂತೀ ಹಾಚಿ ಪ್ರಸಿದ್ಧು । ಬೀಜಭಾವೋ ॥೮೮॥ ಘನ ಅಜ್ಞಾನ
ಸುಷುಪ್ತೀ । ತೋ ಬೀಜಾಂಕುರಭಾವೋ ಮ್ಹಣತೀ । ಯೇರ ಸ್ವಪ್ನ ಹನ ಜಾಗೃತೀ । ಹಾ
ಫಳಭಾವೋ ತಿಯೇಚಾ ॥೮೯॥ ಐಸೀ ಯಯಾ ವೇದಾಂತೀ । ನಿರೂಪಣ ಭಾಷಾ ಪ್ರತೀತೀ
। ಪರೀ ತೇ ಅಸೋ ಪ್ರಸ್ತುತೀ । ಅಜ್ಞಾನ ಮೂಳ ॥೯೦॥ ತೇ ಊರ್ಧ್ವ ಆತ್ಮಾ ನಿರ್ಮಳೇ
। ಅಧೋರ್ಧ್ವ ಸೂಚಿತೀ ಮೂಳೇ । ಬಳಿಯಾ ಬಾಂಧೋನಿ ಆಳೇ । ಮಾಯಾಯೋಗಾಚೇ
॥೯೧॥ ಮಗ ಆಧಿಲೀ ಸದೇಹಾಂತರೇ । ಉಠತೀ ಜಿಯೇ ಅಪಾರೇ । ತೇ ಚೌಪಾಸೀ
ಘೇಊನಿ ಆಗಾರೇ । ಖೋಲಾವತಿ ॥೯೨॥ ಐಸೇ ಭವದ್ರುಮಾಚೇ ಮೂಳ । ಹೇ
ಊರ್ಧ್ವೀ ಕರೀ ಬಳ । ಮಗ ಆಣಿಯಾಂಚೇ ಬೇಂಚಳ । ಅಧೀ ದಾವೀ ॥೯೩॥ ತೇಥ
ಚಿದ್‌ವೃತ್ತೀ ಪಹಿಲೇ । ಮಹತ್ತತ್ತ್ವ ಉಮಲಲೇ । ತೇ ಪಾನ ವಾಲ್ಹೇದುಲ್ಹೇ । ಏಕ
ನಿಘೇ ॥೯೪॥ ಮಗ ಸತ್ತ್ವರಜ ತಮಾತ್ಮಕು । ತ್ರಿವಿಧ ಅಹಂಕಾರು ಜೋ ಏಕು । ತೋ
ತಿವಣಾಅಧೋಮುಖು । ಡಿರು ಫುಟೇ ॥೯೫॥ ತೋ ಬುದ್ಧೀಚೇ ಘೇಊನಿ ಆಗಾರೀ ।
ಭೇದಾಚೇ ವೃದ್ಧಿ ಕರೀ । ತೇಥ ಮನಾಚೇ ಢಾಳ ಧರೀ । ಸಾಜೇಪಣೇ ॥೯೬॥ ಐಸಾ
ಮೂಳಾಚಿಯಾ ಗಾಢಿಕಾ । ವಿಕಲ್ಪರಸ ಕೋವಳಿಕಾ । ಚಿತ್ತಚತುಷ್ಟಯ ಡಾಹಾಳಿಕಾ ।
ಕೋಂಭೈಜೇ ತೋ ॥೯೭॥ ಮಗ ಆಕಾಶ ವಾಯು ದ್ಯೋತಕ । ಆಪ ಪೃಥ್ವೀ ಹೇ ಪಾಂಚ
ಫೋಂಕ । ಮಹಾಭೂತಾಂತೇ ಸರೋಖ । ಸರಳೇ ಹೋತೀ ॥೯೮॥ ತೈಸೀ ಶ್ರೋತ್ರಾದಿ
ತನ್ಮಾತ್ರೇ । ತಿಯೇ ಅಂಗವಸಾ ಗರ್ಭಪತ್ರೇ । ಲುಳಲುಳಿತೇ ವಿಚಿತ್ರೇ । ಉಮಳತೀ ಗಾ
॥೯೯॥ ತೇಥ ಶಬ್ದಾಂಕುರ ವರಿಪಡೀ । ಶ್ರೋತ್ರಾ ವಾಢೀ ದೇವ್ಹಡೀ । ಹೋತಾ ಕರಿತ
ಕಾಂಡೀ । ಆಕಾಂಕ್ಷೇಚೇ ॥೧೦೦॥ ಅಂಗತ್ವಚೇಚೇ ವೇಲ ಪಲ್ಲವ । ಸ್ಪರ್ಶಾಂಕುರೀ ಘೇತೀ
ಧಾಂವ । ತೇಥ ಬಾಂಬಳ ಪಡೇ ಅಭಿನವ । ವಿಕಾರಾಂಚೇ ॥೧೦೧॥

ಜ್ಞಾನವೇಕೆ ಆಗುವುದಿಲ್ಲವೆಂದು ಕೇಳಿದರೆ, ಜಾಗೃತಿಯಲ್ಲಿರುವ ಮನುಷ್ಯನಿಗೆ ನಿದ್ರೆ ಬಂದರೆ ಆಗಾತನು ಅಲ್ಲಿಯೇ ಜ್ಞಾನಶೂನ್ಯನಾಗುವನು. ಅಥವಾ ದೀಪದ ಆಶ್ರಯದಲ್ಲಿರುವ ಅದರ ಕುಡಿಯು ದೀಪದ ಪ್ರಭೆಯನ್ನು ಮಂದಗೊಳಿಸುವುದು ।೮೫॥

ಅಥವಾ ಸ್ವಪ್ನದಲ್ಲಿ ಒಬ್ಬ ಮನುಷ್ಯನಿಗೆ ತರುಣ ಸ್ತ್ರೀಯು ಮಲಗಿದವನಿಗೆ ಎಚ್ಚರಿಸಿ, ಆಲಿಂಗನವಿಲ್ಲದೇ ಆಲಿಂಗನಕೊಟ್ಟು ಸಕಾಮನನ್ನಾಗಿ ಮಾಡುವಳು ।೮೬॥

ಅದರಂತೆ ಅರ್ಜುನಾ, ಬ್ರಹ್ಮಸ್ವರೂಪದಲ್ಲಿ ಮಾಯೆಯಿದ್ದು, ಅದು ಬ್ರಹ್ಮಸ್ವರೂಪಕ್ಕೆ ಆಚ್ಛಾದನೆ ಮಾಡಲು ಕಾರಣವಾಗಿದೆ. ಆಗ ಇದಕ್ಕೆ ಅಜ್ಞಾನವೆನ್ನುವರು. ಈ ಅಜ್ಞಾನವೇ ಸಂಸಾರ ವೃಕ್ಷದ ಊರ್ಧ್ವಕ್ಕೆ ಮೊದಲನೆಯ ಮೂಲವಾಗಿದೆ ।೮೭॥

ಬ್ರಹ್ಮ ವಸ್ತುವಿಗೆ ಯಾವ ತನ್ನ ಅಜ್ಞಾನವಿದೆಯೋ, ಅದೇ ಈ ಸಂಸಾರ ವೃಕ್ಷದ ಬ್ರಹ್ಮವಸ್ತುವಿನಲ್ಲಿ ಕಟ್ಟಿದ ಕಂದವಾಗಿದೆ ಮತ್ತು ವೇದಾಂತದಲ್ಲಿಯೂ ಇದಕ್ಕೆ ಬೀಜಭಾವವೆಂದು ಪ್ರಸಿದ್ಧ ಹೆಸರಾಗಿರುವುದು ।೮೮॥

ನಿಬಿಡವಾದ ಅಜ್ಞಾನವೆಂದರೆ ಸುಷುಪ್ತಿಯು. ಇದಕ್ಕೆ ಬೀಜಾಂಕುರ ಭಾವವೆನ್ನುವರು ಮತ್ತು ಇದರ ಪರಿಣಾಮವೇ ಸ್ವಪ್ನ ಮತ್ತು ಜಾಗೃತ. ಈ ಎರಡು ಅವಸ್ಥೆಗಳಿಗೆ ಫಲಭಾವವೆನ್ನುವರು ।೮೯॥

ಈ ಪ್ರಕಾರವಾಗಿ ಮಾಯೆಯ ವರ್ಣನೆಯು ಭಿನ್ನ ಭಿನ್ನ ರೀತಿಯಲ್ಲಿ ವೇದಾಂತ ಶಾಸ್ತ್ರದಲ್ಲಿ ಮಾಡಿರುವ ಅನುಭವವಿದೆ. ಆದರೆ ಅದಿರಲಿ, ಸದ್ಯಕ್ಕೆ ಸಂಸಾರರೂಪ ವೃಕ್ಷಕ್ಕೆ ಮೂಲ ಅಜ್ಞಾನವಿರುವುದು. ಹೀಗೆ ತಿಳಿ ।೯೦॥

ನಿರ್ಮಲವಾದ ಬ್ರಹ್ಮರೂಪ ಆತ್ಮನಲ್ಲಿ ಸಹಜವಾಗಿ ಇರುವ ಮಾಯೆಗೆ ಕೆಳಗೆ ಮೇಲೆ ಬೇರುಗಳು ಹುಟ್ಟಿ, ಅವುಗಳಿಗೆ ಮಾಯಾರೂಪ ( ಆಳಿ) ಮಡಿ ಯಲ್ಲಿ ನೀರು ಕೂಡಿಸಿ ಆ ಬೇರುಗಳು ಗಟ್ಟಿಯಾಗುವುವು ।೯೧॥

ಆಗ ಕೆಳಭಾಗಕ್ಕೆ ಅನಂತ ದೇಹಗಳು ಉತ್ಪನ್ನವಾಗುವುವು. ಅವು ನಾಲ್ಕು ಪ್ರಕಾರದ ಅಂಕುರಗಳನ್ನು ತೆಗೆದುಕೊಂಡು ಬಲಿಷ್ಠವಾಗುವುವು ।೯೨॥

ಈ ಪ್ರಕಾರವಾಗಿ ಸಂಸಾರರೂಪ ವೃಕ್ಷದ ಮೂಲವು ಬ್ರಹ್ಮನಲ್ಲಿ ಬಲಿಷ್ಠವಾಗಿ ತದನಂತರ ತೀವ್ರವಾಗಿ ಅಂಕುರಗಳಿಗೆ ಬಲ ಬರುವುದು ।೯೩॥

ಆ ಅಂಕುರಗಳಲ್ಲಿ ಜ್ಞಾನರೂಪ ವೃತ್ತಿಯು ಅಂತಃಕರಣದಲ್ಲಿ ಉತ್ಪನ್ನವಾಗಿ ಅವು ಪ್ರಥಮದಲ್ಲಿ ಒಂದು ಕೋಮಲವಾದ ಎಲೆಯು ಹೊರಡುವುದು ।೯೪॥

ನಂತರ ಸತ್ತ್ವ, ರಜ ತಮಾತ್ಮಕವಾದ ಯಾವ ಅಹಂಕಾರ, ಅಲ್ಲಿ ಒಂದು ಮೂರು ಎಲೆಗಳ ಅಂಕುರವು ಕೆಳಭಾಗಕ್ಕೆ ಮೂಡುವುದು ।೯೫॥

ಅದಕ್ಕೇನೆ ಬುದ್ಧಿರೂಪ ಬೇರೊಂದು ಶಾಖೆಯೊಡೆದು ಭೇದದ ವೃದ್ಧಿಯಾಗುವುದು. ಅದರಿಂದ ಮನೋರೂಪ ಶಾಖೆಗೆ ನೀರು ದೊರಕಿ ಪ್ರಫುಲ್ಲಿತಗೊಳ್ಳುವುದು ।೯೬॥

ಈ ಪ್ರಕಾರವಾಗಿ ಮೂಲವು ದೃಢಗೊಳ್ಳಲು ವಿಕಲ್ಪರೂಪ ರಸದಿಂದ ಚಿತ್ತ ಚತುಷ್ಪಯಗಳೆಂಬ ನಾಲ್ಕು ಕೋಮಲವಾದ ಶಾಖೆಗಳುಂಟಾಗುವುವು ।೯೭॥

ನಂತರ ಆಕಾಶ, ವಾಯು, ತೇಜ, ಜಲ ಮತ್ತು ಪೃಥ್ವಿ ಈ ಪಂಚಭೂತಗಳ ಐದು ಚಿಕ್ಕ ಟೊಂಗೆಗಳು ವೇಗವಾಗಿ ನೀಟಾಗಿ ಹುಟ್ಟುವುವು ।೯೮॥

ಅದರಂತೆಯೇ ಆ ಟೊಂಗೆಗಳಿಗೆ ಶ್ರೋತ್ರಾದಿ ಪಂಚ ಜ್ಞಾನೇಂದ್ರಿಯಗಳು ಮತ್ತು ಅವುಗಳ ವಿಷಯಗಳು ಇವು ಕೋಮಲವಾದ ವಿಚಿತ್ರ ಎಲೆಗಳು ಹುಟ್ಟುವುವು ।೯೯॥

ಮತ್ತು ಶಬ್ದರೂಪ ಅಂಕುರವು ಕಿವಿಯ ವ್ಯಾಪ್ತಿಯಲ್ಲಿ ಹುಟ್ಟಿಕೊಂಡು ಕೇಳುವ ಇಚ್ಛೆಯನ್ನು ಪೂರ್ಣಗೊಳಿಸುವುದು ।೧೦೦॥

ತರುವಾಯ ಅಂಗ ಮತ್ತು ತ್ವಚ ಈ ಬಳ್ಳಿಗಳು ಮತ್ತು ಎಲೆಗಳು ಹುಟ್ಟಿ ಅದಕ್ಕೆ ಸ್ಪರ್ಶರೂಪ ಅಂಕುರ ಬರುವುದು ಮತ್ತು ನಾನಾ ಪ್ರಕಾರದ ವಿಕಾರಗಳು ಬೆಳೆಯುವುವು ।೧೦೧॥

ಪಾಠೀ ರೂಪಪತ್ರ ಪಾಲೋವೇಲೀ । ಚಕ್ಷು ಲಾಂಬ ತೇ ಕಾಂಡೇ ಘಾಲೀ । ತೇ ವೇಳೀ ವ್ಯಾಮೋಹತಾ ಭಲೀ । ಪಾಹಾಳೀ ಜಾಯ ॥೧೦೨॥ ಆಣಿ ರಸಾಚೇ ಆಂಗವಸೇ । ವಾಢತಾ ವೇಗೇ ಬಹುವಸೇ । ಜಿವ್ಹೇ ಆರ್ತೀಚೇ ಅಸೋಸೇ । ನಿಘತೀ ಬೇಂಚೇ ॥೧೦೩॥ ತೈಸೇಂಚಿ ಕೋಂಭೈಲೇನಿ ಗಂಧೇ । ಘ್ರಾಣಾಚೇ ಡಿರೀ ಥಾಂವು ಬಾಂಧೇ । ತೇಥ ತಳು ಘೇ ಸ್ವಾನಂದೇ । ಪ್ರಲೋಭಾಚಾ ॥೧೦೪॥ ಏವಂ ಮಹದಹಂ ಬುದ್ಧೀ । ಮನೇ ಮಹಾಭೂತ ಸಮೃದ್ಧೀ । ಇಯೇ ಸಂಸಾರಾಚಿಯಾ ಅವಧೀ । ಶಾಸನ ಜೇ ॥೧೦೫॥ ಕಿಂಬಹುನಾ ಇಹೀ ಆಠೇ । ಆಂಗೀ ಹಾ ಅಧಿಕ ಫಾಂಟೇ । ಪರೀ ಶಿಂಪೀಚಿಯೇವಢೇ ಉಮಟೇ । ರೂಪೇ ಜೇವೀ ॥೧೦೬॥ ಕಾ ಸಮುದ್ರಾಚೇನಿ ಪೈಸಾರೇ । ವರೀ ತರಂಗತಾ ಅಸಾರೇ । ತೈಸೇ ಬ್ರಹ್ಮಚೀ ಹೋಯ ವೃಕ್ಷಾಕಾರೇ । ಅಜ್ಞಾನಮೂಲ ॥೧೦೭॥ ಆತಾ ಯಾಚಾ ಹಾಚಿ ವಿಸ್ತಾರು । ಹಾಚಿ ಯಯಾ ಪೈಸಾರು । ಜೈಸಾ ಆಪಣಪೇ ಸ್ವಪ್ನೀ ಪರಿವಾರು । ಯೇಕಾಕಿಯಾ ॥೧೦೮॥ ಪರೀ ತೇ ಅಸೋ ಹೇ ಐಸೇ । ಕಾವರೇ ಝಾಡ ಉಸಸೇ । ಯಯಾ ಮಹಾದಾದಿ ಆರವಸೇ । ಅಧೋಶಾಖಾ ॥೧೦೯॥ ಆಣಿ ಅಶ್ವತ್ಥು ಐಸೇ ಯಯಾತೇ । ಮ್ಹಣತೀ ಜೇ ಜಾಣತೇ । ತೇಹೀ ಪರಿಸ ಹೋ ಏಥೇ । ಸಾಂಗಿಜೈಲ ॥೧೧೦॥ ತರಿ ಶ್ವಃ ಮ್ಹಣಿಜೇ ಉಖಾ । ತೋವರೀ ಏಕಸಾರಿಖಾ । ನಾಹೀ ನಿರ್ವಾಹೋ ಯಯಾ ರುಖಾ । ಪ್ರಪಂಚ ರೂಪಾ ॥೧೧೧॥ ಜೈಸಾ ನ ಲೋಟತಾ ಕ್ಷಣು । ಮೇಘು ಹೋಯ ನಾನಾ ವರ್ಣು । ಕಾ ವಿಜು ನಸೇ ಸಂಪೂರ್ಣು । ನಿಮೇಷಭರೀ ॥೧೧೨॥ ನಾ ಕಾಂಪತಯಾ ಪದ್ಮದಳಾ । ವರೀಲಿಯಾ ಬೈಸಕಾ ನಾಹೀ ಜಳಾ । ಕಾ ಚಿತ್ತ ಜೈಸೇ ವ್ಯಾಕುಳಾ । ಮಾಣುಸಾಚೇ ॥೧೧೩॥ ತೈಸೀಚಿ ಯಯಾಚೀ ಸ್ಥಿತೀ । ನಾಸತ ಜಾಯ ಕ್ಷಣಕ್ಷಣಾಪ್ರತಿ । ಮ್ಹಣೌನಿ ಯಯಾತೇ ಮ್ಹಣತೀ । ಅಶ್ವತ್ಥು ಹಾ ॥೧೧೪॥ ಆಣಿ ಆಶ್ವತ್ಥು ಯೇಣೇ ನಾಂವೇ । ಪಿಂಪಳು ಮ್ಹಣತೀ ಸ್ವಭಾವೇ । ಪರೀ ತೋ ಅಭಿಪ್ರಾಯ ನೋಹೇ । ಶ್ರೀಹರೀಚಾ ॥೧೧೫॥ ಯೇರ್ಹವೀ ಪಿಂಪಳು ಮ್ಹಣತಾ ವಿಖೀ । ಮಿಯಾ ಗತಿ ದೇಖಿಲೀ ಅಸೇ ನಿಕೀ । ಪರೀ ತೇ ಅಸೋ ಕಾಯ ಲೌಕಿಕೀ । ಹೇತು ಕಾಜ ॥೧೧೬॥ ಮ್ಹಣೌನಿ ಹಾ ಪ್ರಸ್ತುತು । ಅಲೌಕಿಕು ಪರಿಯೇಸಾ ಗ್ರಂಥು । ತರೀ ಕ್ಷಣಿಕತ್ವೇಂಚಿ ಅಶ್ವತ್ಥು । ಬೋಲಿಜೇ ಹಾ ॥೧೧೭॥ ಆಣೇಕುಹೀ ಏಕು ಥೋರು । ಯಯಾ ಅವ್ಯಯತ್ವಾಚಾ ಡಗರು । ಆಥೀ ಪರಿ ತೋ ಭೀತರು । ಐಸಾ ಆಹೇ ॥೧೧೮॥

ಮುಂದೆ ರೂಪ ಎಂಬ ಎಲೆ ಹುಟ್ಟಿದಾಗ ಕಣ್ಣುಗಳು ಭ್ರಮೆಯಿಂದ ಅದರ ಆನಂದ ಭೋಗಿಸಲು ಧಾವಿಸುವುವು ॥೧೦೨॥

ಮತ್ತು ರಸರೂಪ ಶಾಖೆಯು ವೇಗದಿಂದ ಬೆಳೆದು ನಾಲಿಗೆಗೆ ಅಪಾರವಾದ ಇಚ್ಛೆಯನ್ನು ಉತ್ಪನ್ನ ಮಾಡುವುದು ॥೧೦೩॥

ಅದರಂತೆ ಗಂಧರೂಪ ಅಂಕುರ ಹುಟ್ಟಿ, ಮೂಗಿನ ಇಚ್ಛೆಯು ಪ್ರಬಲವಾಗಿ ಲೋಭವು ಉತ್ಪತ್ತಿಯಾಗುವುದು ॥೧೦೪॥

ಈ ಪ್ರಕಾರವಾಗಿ ಮನ, ಬುದ್ಧಿ ಮತ್ತು ಅಹಂಕಾರ ಮತ್ತು ಪಂಚಮಹಾಭೂತಗಳು, ಹೀಗೆ ಯಾವ ಅಷ್ಟಧಾ ಪ್ರಕೃತಿಯು ಈ ಮಾಯೆಯಿಂದ ಪ್ರಪಂಚದ ಕೊನೆಯವರೆಗೆ ಸಿದ್ಧಗೊಳ್ಳುವುದು ॥೧೦೫॥

ಹೆಚ್ಚಿಗೇನು ಹೇಳಬೇಕು? ಈ ವೃಕ್ಷವು ಈ ಎಂಟು ಪ್ರಕಾರಗಳಿಂದ ಅಧಿಕವಾಗಿ ಬೆಳೆಯುವುದು. ಆದರೆ ಕಪ್ಪೆ ಚಿಪ್ಪಿನಲ್ಲಿ ಭಾಸವಾಗುವ ಬೆಳ್ಳಿಯು ಕಪ್ಪೆ ಚಿಪ್ಪಿನ ಆಕಾರದಷ್ಟೇ ಇರುವುದು ॥೧೦೬॥

ಅಥವಾ ಸಮುದ್ರದ ಮೇಲೆ ಹುಟ್ಟುವ ತೆರೆಗಳು ಸಮುದ್ರದಷ್ಟೇ ಇದ್ದು ಪೊಳ್ಳಾಗಿರುವುವು. ಅದರಂತೆ ಅಜ್ಞಾನ ಮೂಲಕ ಯಾವ ಜಗದ್ರೂಪವಾದ ವೃಕ್ಷವು ಅದು ಬ್ರಹ್ಮವೇ ಆಗುವುದು ॥೧೦೭॥

ಆದ್ದರಿಂದ ಈ ಎಲ್ಲ ಜಗವು ಅಜ್ಞಾನದ ವಿಸ್ತಾರವಾಗಿ ಇದ್ದು ಆದರ ಮೇಲೆ ಆದರ (ಬ್ರಹ್ಮನ) ವಿಸ್ತಾರವು ಭಾಸವಾಗುವುದು. ಸ್ವಪ್ನದಲ್ಲಿ ಮನುಷ್ಯನು ಒಬ್ಬನೇ ಇದ್ದು, ಅಲ್ಲಿ ಕಾಣುವ ಎಲ್ಲವನ್ನು ತಾನೇ ಆಗಿರುವನು ॥೧೦೮॥

ಆದರೆ ಈ ಎಲ್ಲ ಮಾತುಗಳನ್ನು ಬದಿಗಿರಿಸು, ಈ ಪ್ರಕಾರವಾಗಿ ಈ ಆಶ್ಚರ್ಯಕಾರಕ ವೃಕ್ಷವು ಬೆಳೆಯವುದು ಮತ್ತು ಇದಕ್ಕೆ ಮಹತ್‌ತತ್ತ್ವಾದಿ ಅಂಕುರಗಳು ಕೆಳಭಾಗಕ್ಕೆ ಹುಟ್ಟುವುವು ॥೧೦೯॥

ಮತ್ತು ಈ ವೃಕ್ಷಕ್ಕೆ ಜ್ಞಾನಿ ಜನರು "ಅಶ್ವತ್ಥ"ವೆಂದು ಹೇಳುವರು. ಅದರ ವಿಷಯಕ್ಕೂ ನಿನಗೆ ಹೇಳುವೆನು. ಅದನ್ನು ಕೇಳು ॥೧೧೦॥

"ಶ್ವ" ಇದರರ್ಥವು "ನಾಳೆ" ಹೀಗೆ ಅನ್ನುವವರೆಗೂ ಈ ಪ್ರಪಂಚರೂಪ ವೃಕ್ಷದ ಒಂದು ಸ್ವರೂಪವೂ ಇರುವುದಿಲ್ಲ. ಆದ್ದರಿಂದ ಇದಕ್ಕೆ "ಅಶ್ವತ್ಥ"ವೆಂದು ಹೇಳುವರು ॥೧೧೧॥

ಯಾವ ಪ್ರಕಾರವಾಗಿ ಒಂದೇ ಕ್ಷಣದಲ್ಲಿ ಮೇಘದ ನಾನಾ ಬಣ್ಣಗಳು ಬದಲಾಗುವುವು. ಅಥವಾ ಮಿಂಚು ಒಂದು ಕ್ಷಣವೂ ಪೂರ್ಣವಾಗಿ ನಿಲ್ಲುವುದಿಲ್ಲ ॥೧೧೨॥

ಅಲುಗಾಡುವ ಕಮಲದ ಎಲೆಯ ಮೇಲೆ ನೀರು ನಿಲ್ಲುವುದಿಲ್ಲ ಮತ್ತು ವ್ಯಾಕುಲಗೊಂಡ ಮನುಷ್ಯನ ಮನವು ಸ್ಥಿರವಾಗಿ ಇರುವುದಿಲ್ಲ ॥೧೧೩॥

ಅದರಂತೆ ಈ ಸಂಸಾರರೂಪ ವೃಕ್ಷದ ಸ್ಥಿತಿ ಇದ್ದು, ಪ್ರತ್ಯೇಕ ಕ್ಷಣದಲ್ಲಿ ಇದರ ನಾಶವಾಗುವುದು. ಆದ್ದರಿಂದಲೇ ಇದಕ್ಕೆ ಅಶ್ವತ್ಥವೆಂದು ಹೇಳುವರು ॥೧೧೪॥

ಮತ್ತು ವ್ಯವಹಾರದಲ್ಲಿ ಅಶ್ವತ್ಥವೆಂದರೆ ಅರಳಿ ಮರವೆಂದು ಹೇಳುವರು. ಆದರೆ ಶ್ರೀಹರಿಯ ಅಭಿಪ್ರಾಯವು ಇಲ್ಲಿ ಹಾಗಿರುವುದಿಲ್ಲ ॥೧೧೫॥

ಬೇರೆ ರೀತಿಯಲ್ಲಿ ಈ ವೃಕ್ಷಕ್ಕೆ ಅರಳಿಮರವೆಂದು ಲೌಕಿಕ ದೃಷ್ಟಿಯಿಂದ ಒಳ್ಳೆಯದು ಎಂದು ನನಗೆ ಅನಿಸಿತು. ಆದರೆ ಲೌಕಿಕ ಅರ್ಥ ಪ್ರತಿಪಾದನೆ ಮಾಡುವ ಕಾರಣವಿಲ್ಲ ॥೧೧೬॥

ಆದ್ದರಿಂದ ಸಧ್ಯಕ್ಕೆ ಈ ಅಲೌಕಿಕ ಗ್ರಂಥವನ್ನು ಕೇಳಿರಿ. ಏನೆಂದರೆ ಸಂಸಾರರೂಪ ಈ ವೃಕ್ಷವು ಕ್ಷಣಿಕವಾಗಿರುವುದು. ಆದ್ದರಿಂದಲೇ ಇದಕ್ಕೆ "ಅಶ್ವತ್ಥ" ಎಂದು ಹೇಳುವರು ॥೧೧೭॥

ಇನ್ನೊಂದು ಈ ವೃಕ್ಷಕ್ಕೆ ಅನ್ವಯವೆಂದರೆ ನಿತ್ಯ, ಈ ಹೆಸರಿನಿಂದ ಪ್ರಸಿದ್ಧವಿದೆ. ಆದರೆ ಇದರ ಗರ್ಭಿತ ಅರ್ಥ ಹೇಗಿದೆ ಎಂದರೆ ॥೧೧೮॥

ಜೈಸಾ ಮೇಘಾಂಚೇನಿ ತೋಂಡೇಂ । ಸಿಂಧು ಏಕೇ ಆಂಗೇ ಕಾಢೇ । ಆಣಿ ನದೀ ಯೇರೀಕಡೇ । ಭರಿತೀಚ ಅಸತಿ ॥೧೧೯॥ ತೇಥ ವೋಹಟೇ ನಾ ಚಢೇ । ಐಸಾ ಪರಿಪೂರ್ಣುಚಿ ಆವಡೇ । ಪರೀ ತೇ ಫುಲೀ ಜಂವ ನುಘಡೇ । ಮೇಘಾನದೀಂಚೀ ॥೧೨೦॥ ಐಸೇ ಯಾ ರುಖಾಚೇ ಹೋಣೇ ಜಾಣೇ । ನ ತರ್ಕೇ ಹೋತೇನಿ ವಹಿಲೇಪಣೇ । ಮ್ಹಣೌನಿ ಯಯಾತೇ ಲೋಕು ಮ್ಹಣೇ । ಅವ್ಯಯು ಹಾ ॥೧೨೧॥ ಯೇರ್ಹವೀ ದಾನಶೀಳು ಪುರುಷು । ವೇಂಚಕಪಣೇಂಚಿ ಸಂಚಕು । ತೈಸಾ ವ್ಯಯೇಂಚಿ ಹಾ ರುಖು । ಅವ್ಯಯೋ ಗಮೇ ॥೧೨೨॥ ಜಾತಾ ವೇಗೇ ಬಹುವಸೇ । ನ ವಚೇ ಕಾ ಭೂಮೀ ರುತಲೇ ಅಸೇ । ರಥಾಚೇ ಚಕ್ರ ದಿಸೇ । ಜಿಯಾಪರೀ ॥೧೨೩॥ ತೈಸೇ ಕಾಳಾತಿಕ್ರಮೇ ಜೇ ವಾಳೇ । ತೇ ಭೂತಶಾಖಾ ಜೇಥ ಗಳೇ । ತೇಥ ಕೋಡೀವರೀ ಉಮಾಳೇ । ಉಠತೀ ಆಣಿಕ ॥೧೨೪॥ ಪರೀ ಯೇಕೀ ಕೇಧವಾ ಗೇಲೀ । ಶಾಖಾಕೋಡೀ ಕೇಧವಾ ಜಾಲೀ । ಹೇ ನೇಣವೇ ಜೇವೀ ಉಮಲಲೀ । ಆಷಾಢಅಭ್ರೇ ॥೧೨೫॥ ಮಹಾಕಲ್ಪಾಂಚ್ಯಾ ಶೇವಟೀ । ಉದೇಲಿಯಾ ಉಮಳತೀ ಸೃಷ್ಟೀ । ತೈಸೇಂಚಿ ಆಣಿಖೀಚೇ ದಾಂಗ ಉಠೀ । ಸಾಸಿನ್ನಲೇ ॥೧೨೬॥ ಸಂಹಾರವಾತೇ ಪ್ರಚಂಡೇ । ಪಡತಿ ಪ್ರಳಯಾಂತೀಚೀ ಸಾಲಡೇ । ತಂವ ಕಲ್ಪಾದೀಚೀ ಜುಂಬಾಡೇ । ಪಾಲ್ಹೇಜತಿ ॥೧೨೭॥ ರಿಗೇ ಮನ್ವಂತರ ಮನುಪುಢೇ । ವಂಶಾವರೀ ವಂಶಾಚೇ ಮಾಂಡೇ । ಜೈಸೀ ಇಕ್ಷುವೃದ್ಧೀ ಕಾಂಢೇನಕಾಂಡೇ । ಜಂಕೇ ಜೇವೀ ॥೧೨೮॥ ಕಲಿಯುಗಾಂತೀ ಕೋರಡೀ । ಚಹೂ ಯುಗಾಂಚೀ ಸಾಲೇ ಸಾಂಡೀ । ತಂವ ಕೃತಯುಗಾಚೀ ಪೇಲೀ ದೇವ್ಹಡೀ । ಪಡೇ ಪುಢತೀ ॥೧೨೯॥ ವರ್ತತೇ ವರ್ಷ ಜಾಯೇ । ತೇ ಪುಢಿಲಾ ಮುಳಹಾರೀ ಹೋಯೇ । ಜೈಸಾ ದಿವಸು ಜಾತ ಕೀ ಯೇತ ಆಹೇ । ಹೇ ಚೋಜವೇನಾ ॥೧೩೦॥ ಜೈಶಾ ವಾರಿಯಾಚಾ ಝುಳಕಾ । ಸಾಂದಾ ಠಾವುವಾ ನವ್ಹೇ ದೇಖಾ । ತೈಸಿಯಾ ಉಠತೀ ಪಡತಿ ಶಾಖಾ । ನೇಣೋ ಕಿತೀ ॥೧೩೧॥ ಏಕೀ ದೇಹಾಚೀ ಡಿರೀ ತುಟೇ । ತಂವ ದೇಹಾಂಕುರೀ ಬಹುವೀ ಫುಟೇ । ಐಸೇನಿ ಭವತರು ಹಾ ವಾಟೇ । ಅವ್ಯಯೋ ಐಸಾ ॥೧೩೨॥ ಜೈಸೇ ವಾಹತೇ ಪಾಣೀ ಜಾಯ ವೇಗೇ । ತೈಸೇಂಚಿ ಆಣಿಕ ಮಿಳೇ ಮಾಗೇ । ಯೇಥ ಅಸಂತಚಿ ಅಸಿಜೇ ಜಗೇ । ಮಾನಿಜೇ ಸಂತ ॥೧೩೩॥ ಕಾ ಲಾಗೋನಿ ಡೋಳಾ ಉಘಡೇ । ತಂವ ಕೋಡೀವರೀ ಘಡೇ ಮೋಡೇ । ನೇಣತಯಾ ತರಂಗು ಆವಡೇ । ನಿತ್ಯು ಐಸಾ ॥೧೩೪॥

ಸಮುದ್ರವು ಒಂದು ಕಡೆಯಿಂದ ಮೇಘದ ಮುಖದಿಂದ ಇಂಗುತ್ತಿರುವುದು. ಇನ್ನೊಂದು ಕಡೆಯಿಂದ ನದಿಗಳಿಂದ ಒಂದೇ ಸವನೆ ತುಂಬುತ್ತಿರುವುದು ।।೧೯।।

ಸಮುದ್ರವು ಇಂಗುವುದೂ ಇಲ್ಲ ಮತ್ತು ಬೆಳೆಯುವುದೂ ಇಲ್ಲ. ಆದ್ದರಿಂದ ಪರಿಪೂರ್ಣದಂತೆ ಕಾಣಿಸುವುದು. ಆದರೆ ಆಕಾಶದ ಶೋಷಣೇ, ನದಿಗಳ ಕೂಡುವಿಕೆ ಇವುಗಳಲ್ಲಿ ಒಂದನ್ನು ತಪ್ಪುವವರೆಗೆ ಅದು ಪರಿಪೂರ್ಣವೇ ಸರಿ ।।೨೦।।

ಅದರಂತೆ ಈ ವೃಕ್ಷದ ಉತ್ಪತ್ತಿ ಮತ್ತು ಲಯ ಇವು ಅತೀತ್ವರೆಯಿಂದ ಆಗುವುವು. ಆದ್ದರಿಂದ ಇದರ ತರ್ಕವನ್ನು ಮಾಡಲು ಬರುವುದಿಲ್ಲ. ಅದಕ್ಕಾಗಿ ಲೋಕದ ಜನರು ಇದಕ್ಕೆ "ಅವ್ಯಯ" ಎಂದು ಹೇಳುವರು ।।೨೧।।

ದಾನಶೀಲ ಪುರುಷನು ಧರ್ಮ ಮಾಡುತ್ತ ಎಲ್ಲ ಧನವನ್ನು ಕಳೆದುಕೊಂಡವನಂತೆ ಕಂಡರೂ, ಆತನು ಪುಣ್ಯವನ್ನು ಸಂಚಯ ಮಾಡಿರುವನು. ಅದರಂತೆ, ಈ ವೃಕ್ಷವು ಅತಿ ವೇಗದಿಂದ ಉತ್ಪತ್ತಿ, ಸ್ಥಿತಿ, ಲಯಗೊಳ್ಳುವುದರಿಂದ ಜನರಿಗೆ ನಿತ್ಯವೆಂದು ಭಾಸವಾಗುವುದು ।।೨೨।।

ರಥದ ಚಕ್ರವು ಭೂಮಿಯ ಮೇಲೆ ನಿಲ್ಲದಂತೆ ಅತಿ ವೇಗದಿಂದ ಚಲಿಸುತ್ತಿರಲು ಅದು ಸ್ಥಿರವಾಗಿದೆ ಎನ್ನುವಂತೆ ಕಾಣುವುದು ।।೨೩।।

ಅದರಂತೆ, ಕಾಲಕ್ರಮದಂತೆ ಈ ವೃಕ್ಷದ ಯಾವ ಪ್ರಾಣಿರೂಪ ಶಾಖೆಗಳು ಉದುರಿ ಬೀಳುತ್ತವೆ. ಅವೇ ಪುನಃ ಕೋಟ್ಯಾವಧಿ ಅಂಕುರಗಳನ್ನು ಬಿಡುತ್ತವೆ ।।೨೪।।

ಆಷಾಢ ಮಾಸದಲ್ಲಿ ಮೋಡದ ಮೇಲೆ ಮೋಡಗಳು ಬರುತ್ತಿರಲು ಯಾವುದು ಬಂದಿತು? ಯಾವುದು ಹೋಯಿತು? ಇದು ತಿಳಿಯುವುದೇ ಇಲ್ಲ. ಅದರಂತೆ ಒಂದು ಟೊಂಗೆ ಎಂದು ಉದುರಿತು? ಕೋಟ್ಯಾವಧಿ ಟೊಂಗೆಗಳು ಎಂದು ಮೂಡಿದವು? ಇದು ತಿಳಿಯುವುದೇ ಇಲ್ಲ ।।೨೫।।

ಅದರಂತೆ ಪ್ರಳಯಕಾಲದ ಕೊನೆಯಲ್ಲಿ ಈ ಸಂಸಾರರೂಪ ವೃಕ್ಷದ ದೇಹರೂಪಿ ಶಾಖೆಗಳು ಉದುರಿ ಬೀಳುವುವು. ಪುನಃ ಜಗದೋತ್ಪತ್ತಿಯ ಕಾಲದಲ್ಲಿ ಹೊಸದಾಗಿ ಹುಟ್ಟುವುವು ।।೨೬।।

ಸಂಹಾರ ಕಾಲದ ಪ್ರಚಂಡ ವಾಯುವಿನಿಂದ ಪ್ರಳಯದ ಕೊನೆಯಲ್ಲಿ ಶರೀರಗಳು ಬೀಳುವುವು ಮತ್ತು ಇವೇ ಕಲ್ಪದ ಆರಂಭಕ್ಕೆ ಪುನಃ ಗುಂಪುಗುಂಪಾಗಿ ಏಳುವುವು ।।೨೭।।

ನಂತರ ಒಂದು ಮನ್ವಂತರ ಮುಂದೆ ಎರಡನೆಯ ಮನ್ವಂತರವು ಹೀಗೆ ಸೂರ್ಯವಂಶ, ಚಂದ್ರವಂಶ ಹೀಗೆ ವಿಸ್ತಾರವಾಗುವುದು ಮತ್ತು ಕಬ್ಬುಗಳು ಕಾಂಡದಿಂದ ಕಾಂಡಗಳು ಬೆಳೆದಂತೆ ಈ ಸರ್ವ ವಿಶ್ವವು ಬೆಳೆಯುವುದು ।।೨೮।।

ಕಲಿಯುಗದ ಅಂತ್ಯಕ್ಕೆ ನಾಲ್ಕು ಯುಗಗಳ ಶರೀರಗಳು ಕೆಳಗೆ ಬೀಳುವುವು. ಇಷ್ಟರಲ್ಲಿಯೇ ಕೃತ ಯುಗವು ಆರಂಭಗೊಂಡಾಗ ಅವುಗಳ ಪುನಃ ಉತ್ಪತ್ತಿಯಾಗಿ ಅವು ಹೆಚ್ಚಾಗಿ ಬೆಳೆಯುವುವು ।।೨೯।।

ನಡೆಯುತ್ತಿರುವ ವರ್ಷವು ಮುಗಿಯುತ್ತಲೇ ಅದು ಮುಂದಿನ ವರ್ಷಕ್ಕೆ ಆಮಂತ್ರಿಸುವುದು. ಅಥವಾ ಹಗಲು ಬರುವುದು, ಹೋಗುವುದು. ಇದರ ನಿತ್ಯ ಬರುವ ಹೋಗುವುದು ತಿಳಿಯುವುದಿಲ್ಲ ।।೩೦।।

ಗಾಳಿಯ ಬೀಸುವಿಕೆಯು ಒಂದರ ಮೇಲೊಂದು ಬರಹತ್ತಲು ಯಾವ ಬೀಸುವಿಕೆ ಬಂದಿತು ಮತ್ತು ಯಾವ ಬೀಸುವಿಕೆ ಹೋಯಿತು, ಇದು ತಿಳಿಯುವುದೇ ಇಲ್ಲ. ಅದರಂತೆ ಎಷ್ಟು ಶರೀರಗಳು ಹುಟ್ಟಿದವು ಮತ್ತು ಎಷ್ಟು ಲಯಗೊಂಡವು ಎನ್ನುವುದು ತಿಳಿಯುವುದಿಲ್ಲ ।।೩೧।।

ಒಂದು ದೇಹದ ಅಂಕುರವು ಮುರಿದು ಬೀಳುವುದೊಂದೇ ತಡ, ಬೇರೆ ನೂರಾರು ಅಂಕುರಗಳು ಹುಟ್ಟುವುವು. ಆದ್ದರಿಂದ ಈ ಭವರೂಪ ವೃಕ್ಷವು ನಿತ್ಯವಾಗಿದೆ ಎಂದು ಭಾಸವಾಗುವುದು ।।೩೨।।

ನದಿಯ ನೀರು ಹರಿಯುತ್ತ ಮುಂದೆ ಸಾಗಿದಂತೆ, ಹಿಂದಿನ ನೀರು ಹಾಗೆಯೇ ಬರುತ್ತಿರುತ್ತದೆ. ಆದ್ದರಿಂದ ಅದು ಸ್ಥಿರದಂತೆ ಕಾಣುವುದು. ಅದರಂತೆ ಈ ಜಗವು ನಾಶಿವಂತವಿದ್ದರೂ ಇದಕ್ಕೆ ಸ್ಥಿರವೆಂದು ತಿಳಿಯುವರು ।।೩೩।।

ಕಣ್ಣು ಮುಚ್ಚಿ ತೆರೆಯುವುದರೊಳಗೆ ಕೋಟಿಗಟ್ಟಲೆ ಪ್ರಾಣಿಗಳ ಹುಟ್ಟು ಸಾವುಗಳಾಗುವುವು. ಸಮುದ್ರದ ತೆರೆಗಳ ಮೇಲೆ ತೆರೆಗಳು ಬರುತ್ತಿರುವುದರಿಂದ ಅದು ನಿತ್ಯದಂತೆ ಕಾಣುವುದು. ಅದರಂತೆ ಅಜ್ಞಾನಿಗಳಿಗೆ ಸಂಸಾರವು ನಿತ್ಯದಂತೆ ಕಾಣುವುದು ।।೩೪।।

ವಾಯಸಾ ಏಕೇ ಬುಬುಳೇ ದೋಹೀಕಡೇ । ಡೋಳಾ ಚಾಳಿತಾ ಅಪಾಡೇ । ದೋನ್ಹೀ ಆಥೀ ಐಸಾ ಪಡೇ । ಭ್ರಮು ಜೇವೀ ಜಗಾ ।೧೩೫॥ ಪೈ ಭಿಂಗೋರೀ ನಿಧಿಯೇ ಪಡಲೀ । ತೇ ಗಮೇ ಭೂಮೀಸೀ ಜೈಸೀ ಜಡಲೀ । ಐಸಾ ವೇಗಾತಿಶಯೋ ಭುಲೀ । ಹೇತು ಹೋಯ ।೧೩೬॥ ಹೇ ಬಹು ಅಸೋ ಝುಡತೀ । ಆಂಧಾರೇ ಭೋವಂಡಿತಾ ಕೋಲತೀ । ತೇ ದಿಸೇ ಜೈಸೀ ಆಯತೀ । ಚಕ್ರಾಕಾರ ।೧೩೭॥ ಹಾ ಸಂಸಾರವೃಕ್ಷು ತೈಸಾ । ಮೋಡತು ಮಾಂಡತು ಸಹಸಾ । ನ ದೇಖೋನಿ ಲೋಕು ಪಿಸಾ । ಅವ್ಯಯೋ ಮಾನೀ ।೧೩೮॥ ಪರೀ ಯಯಾಚಾ ವೇಗು ದೇಖೇ । ಜೋ ಹಾ ಕ್ಷಣಿಕ ಐಸಾ ವೋಳಖೇ । ಜಾಣೇ ಕೋಡಿವೇಳಾ ನಿಮಿಖೇ । ಹೋತ ಜಾತ ।೧೩೯॥ ನಾಹೀ ಅಜ್ಞಾನಾವಾಂಚೂನಿ ಮೂಳ । ಯಯಾಚೇ ಅಸಿಲೇಪಣ ಟವಾಳ । ಐಸೇ ಝಾಡಚಿ ಸಿನಸಾಳ । ದೇಖಿಲೇ ಜೇಣೇ ।೧೪೦॥ ತಯಾತೇ ಗಾ ಪಂಡುಸುತಾ ।ಮೀ ಸರ್ವಜ್ಞುಹೀ ಮ್ಹಣೇ ಜಾಣತಾ । ಪೈ ವಾಗ್ಬ್ರಹ್ಮ ಸಿದ್ಧಾಂತಾ । ವಂದ್ಯು ತೋಚೀ ।೧೪೧॥ ಯೋಗಜಾತಾಚೇ ಜೋಡಲೇ । ತಯಾ ಏಕಾಸೀಚಿ ಉಪೇಗಾ ಗೇಲೇ । ಕಿಂಬಹುನಾ ಜಿಯಾಲೇ । ಜ್ಞಾನಹೀ ತ್ಯಾಚೇನಿ ।೧೪೨॥ ಹೇ ಅಸೋ ಬಹು ಬೋಲಣೇ । ವಾನಿಜೈಲ ತೋ ಕವಣೇ । ಜೋ ಭವರುಖು ಜಾಣೇ । ಉಖಿ ಐಸಾ ।೧೪೩॥

ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾಃ ಗುಣಪ್ರವೃದ್ಧಾ ವಿಷಯಪ್ರವಾಲಾಃ ।
ಅಧಶ್ಚ ಮೂಲಾನ್ಯನುಸಂತತಾನಿ ಕರ್ಮಾನುಬಂಧೀನಿ ಮನುಷ್ಯಲೋಕೇ ।೨॥

ಮಗ ಯಯಾಚಿ ಪ್ರಪಂಚರೂಪಾ । ಅಧೋಶಾಖಿಯಾ ಪಾದಪಾ । ಡಾಹಾಳಿಯಾ ಜಾತೀ ಉಮಪಾ । ಊರ್ಧ್ವಾಹೀ ಉಜೂ ।೧೪೪॥ ಆಣಿ ಅಧೀಫಾಂಕಲೀ ಡಾಳೇ । ತಿಯೇ ಹೋತೀ ಮೂಳೇ । ತಯಾಂಹೀ ತಳೀ ಪಘಳೇ । ವೇಲ ಪಾಲವೂ ।೧೪೫॥ ಐಸೇ ಜೇ ಆಮ್ಹೀ । ಮ್ಹಣಿತಲೇ ಉಪಕ್ರಮೀ । ತೇಹೀ ಪರಿಸೇ ಸುಗಮೀ । ಬೋಲೀ ಸಾಂಗೋ ।೧೪೬॥ ತರೀ ಬದ್ಧಮೂಳ ಅಜ್ಞಾನೇ । ಮಹದಾದಿಕೀ ಶಾಸನೇ । ವೇದಾಂಚೀ ಥೋರವನೇ । ಫೇಲೂನಿಯಾ ।೧೪೭॥ ಪರೀ ಆಧೀ ತಂವ ಸ್ವೇದಜ । ಜಾರಜ ಉದ್ಭಿಜ ಅಂಡಜ । ಹೇ ಬುಡೌನಿ ಮಹಾಭುಜ । ಉಠತೀ ಚಾರೀ ।೧೪೮॥ ಯಯಾ ಏಕೈಕಾಚೇನಿ ಆಂಗವಟೇ । ಚೌರ್ಯಾಂಶೀ ಲಕ್ಷಧಾ ಫುಟೇ । ತೇ ವೇಳೀ ಜೀವಶಾಖೀ ಫಾಂಟೇ । ಸೈಂಘಚಿ ಹೋತೀ ।೧೪೯॥

ಕಾಗೆಯು ತನ್ನ ಒಂದು ಕಣ್ಣು ಗುಡ್ಡೆಯನ್ನು ಕ್ಷಣದಲ್ಲಿಯೇ ಎರಡೂ ಕಣ್ಣುಗಳಲ್ಲಿ ಹೊರಳಿಸುವುದು. ಆದುದರಿಂದ ಅದಕ್ಕೆ ಒಂದೇ ಕಣ್ಣಿದ್ದರೂ ಎರಡೂ ಕಣ್ಣುಗಳಿದ್ದಂತೆ ಜನರಿಗೆ ಭಾಸವಾಗುವುದು ।೧೩೫॥

ಅಥವಾ ಬಗರಿಯು ಅತಿವೇಗದಿಂದ ತಿರುಗುತ್ತಿರಲು ಅದು ತಿರುಗುತ್ತಿದ್ದರೂ, ಸ್ಥಿರವಾದಂತೆ ಕಾಣುವುದು. ಅದರಂತೆ ಈ ಜಗತ್ತಿನ ಪ್ರಕಾರವಾಗಿರುವುದು ।೧೩೬॥

ಈ ಅನೇಕ ದಾಖಲೆಗಳು ಇರಲಿ, ಒಬ್ಬ ಮನುಷ್ಯನು ಕತ್ತಲಿನಲ್ಲಿ ದೀವಟಿಗೆ (ಉರಿಗೋಲು) ತಗೆದುಕೊಂಡು ತನ್ನ ಸುತ್ತು ತೀವ್ರ ತಿರುಗಿಸಿದಾಗ ಅದು ದೊಡ್ಡ ಚಕ್ರದಂತೆ ಸ್ಥಿರವಾಗಿ ಕಾಣುವುದು ।೧೩೭॥

ಅದರಂತೆ ಸಂಸಾರ ವೃಕ್ಷವು ಯಾವಾಗಲೂ ನಾಶವಾಗುತ್ತದೆ ಮತ್ತು ಉತ್ಪನ್ನವಾಗುತ್ತದೆ. ಇದನ್ನು ಅರಿಯದೇ ಹುಚ್ಚುತನದಿಂದ ಜನರು ಇದಕ್ಕೆ ನಿತ್ಯವೆಂದು ತಿಳಿಯುವರು ।೧೩೮॥

ಆದರೆ ಈ ಸಂಸಾರರೂಪ ವೃಕ್ಷದ ವೇಗವನ್ನು ತಿಳಿದು ಇದು ಕ್ಷಣಿಕವಾಗಿರುವುದು ಮತ್ತು ಇದು ಒಂದು ನಿಮಿಷದಲ್ಲಿ ಕೋಟ್ಯಾವಧಿ ಸಾರೆ ಉತ್ಪನ್ನವಾಗುವುದು ಮತ್ತು ಲಯವಾಗುವುದು ।೧೩೯॥

ಮತ್ತು ಇದಕ್ಕೆ ಅಜ್ಞಾನದ ಹೊರತು ಬೇರೆ ಕಾರಣವಿರುವುದಿಲ್ಲ. ಇದರ ಅಸ್ತಿತ್ವವು ಸುಳ್ಳಾಗಿರುವುದು. ಈ ಪ್ರಕಾರವಾಗಿ ಯಾರು ಈ ವೃಕ್ಷದ ಮೂಲದಿಂದ ಕೊನೆಯವರೆಗೆ ಯಾರು ತಿಳಿಯುವರೋ ।೧೪೦॥

ಅರ್ಜುನಾ, ಆತನಿಗೆ ಮಾತ್ರ ನಾನು ಸರ್ವಜ್ಞನು ತಿಳಿದಾತನು ಎಂದು ಹೇಳುವೆನು ಮತ್ತು ವೈದಿಕ ಸಿದ್ಧಾಂತಕ್ಕೂ ಆತನೇ ಪೂಜ್ಯನಿರುವನು ।೧೪೧॥

ಯೋಗದಿಂದ ಸಿಗುವ ಫಲವು ಈತನಿಗೆ ಮಾತ್ರ ದೊರೆಯವುದು. ಹೆಚ್ಚಿಗೇನು ಹೇಳಬೇಕು? ಈತನಿಂದಲೇ ಜ್ಞಾನಕ್ಕೆ ಜೀವನವು ದೊರೆಯುವುದು ।೧೪೨॥

ಈ ಬಾಹ್ಯ ಭಾಷಣವಿರಲಿ, ಈ ಪ್ರಕಾರವಾಗಿ ಈ ಸಂಸಾರರೂಪ ವೃಕ್ಷವು ಅನಿತ್ಯವಾಗಿರುವುದು ಎಂದು ಯಾವನು ತಿಳಿದಿರುವನೋ, ಅವನ ವರ್ಣನೆಯನ್ನು ಯಾರಿಂದಲೂ ಮಾಡಲು ಬರುವುದಿಲ್ಲ ।೧೪೩॥

**ಶ್ಲೋಕಾರ್ಥ :-** ಗುಣಗಳಿಂದ ಬೆಳೆದು ಕೊಂಡಿರುವ, ವಿಷಯಗಳೆಂಬ ಚಿಗುರುಗಳುಳ್ಳ ಅದರ ಶಾಖೆಗಳು ಕೆಳಕ್ಕೂ ಮೇಲಕ್ಕೂ ಹರಡಿಕೊಂಡಿವೆ; ಮನುಷ್ಯ ಲೋಕದಲ್ಲಿ ಕರ್ಮದ ಸಂಬಂಧವುಳ್ಳ ಬೇರುಗಳು ಕೆಳಗಡೆ ಹರಡಿಕೊಂಡಿವೆ ।೨॥

ನಂತರ ಈ ಪ್ರಪಂಚರೂಪ ವೃಕ್ಷಕ್ಕೆ ಕೆಳಭಾಗಕ್ಕೆ ಶಾಖೆಗಳು ಬಂದು ಅವು ಭೂಮಿಯಲ್ಲಿ ಹೋದಾಗ್ಗೆ ಪುನಃ ಅವುಗಳಿಗೆ ಶಾಖೆಗಳು ಉತ್ಪನ್ನವಾಗಿ ಸರಳ ಶಾಖೆಗಳು ಹುಟ್ಟುವುವು ।೧೪೪॥

ಕೆಳಗೆ ಪಾರಂಬಿಗಳು ಒಡೆದು ಬೇರಿನಂತಾಗುವುವು. ಅವುಗಳಿಗೂ ಬುಡದಲ್ಲಿ ಬಳ್ಳಿ ಮತ್ತು ಎಲೆಗಳು ಒಡೆಯುವುವು ।೧೪೫॥

ಈ ಪ್ರಕಾರವಾಗಿ ಆರಂಭದಲ್ಲಿಯೇ ಹೇಳಲಾಗಿದೆ. ಅದನ್ನೇ ಈಗ ಹೆಚ್ಚಾಗಿ ಸ್ಪಷ್ಟಮಾಡಿ ಹೇಳುವೆನು, ಕೇಳು ।೧೪೬॥

ಅಧಿಷ್ಠಾನ ಬ್ರಹ್ಮನಲ್ಲಿ ಬಿಗಿಯಾದ ಮೂಲ ಅಜ್ಞಾನದಿಂದ ಮಹತತ್ತ್ವಾದಿ ಪದಾರ್ಥ ಮತ್ತು ವೇದಗಳ ವಿಧಿನಿಷೇಧಾತ್ಮಕ ಶಾಸನಗಳು ಸ್ವೀಕರಿಸಿಯೇ ಪ್ರಪಂಚದ ದೊಡ್ಡ ಅರಣ್ಯ ಮಾಡಿರುವುದು ।೧೪೭॥

ಆದರೆ, ಪ್ರಥಮದಲ್ಲಿ ಸ್ವೇದಜ, ಜಾರಜ, ಉದ್ಭೀಜ ಮತ್ತು ಅಂಡಜ ಹೀಗೆ ನಾಲ್ಕು ದೊಡ್ಡ ಶಾಖೆಗಳು ಬುಡದಿಂದ ನಿರ್ಮಾಣವಾಗುವುವು ।೧೪೮॥

ಇವುಗಳಲ್ಲಿ ಒಂದೊಂದು ಶಾಖೆಯು ಬಲಿಷ್ಠವಾಯಿತೆಂದರೆ ಅದರಲ್ಲಿ ಎಂಬತ್ತಾಲ್ಕು ಲಕ್ಷ ಯೋನಿ ರೂಪ ಶಾಖೆಗಳು ಹುಟ್ಟುವುವು ಮತ್ತು ಶಾಖೆಗಳಿಗೆ ಜೀವರೂಪ ಉಪಶಾಖೆಗಳು ಹುಟ್ಟುವುವು ।೧೪೯॥

ಪ್ರಸವತೀ ಶಾಖಾ ಸರಳಿಯಾ । ನಾನಸೃಷ್ಟೀ ಡಾಹಾಳಿಯಾ । ಆಡ ಫುಟತೀ ಮಾಳಿಯಾ । ಜಾತಿಚಿಯಾ ।।೧೫೦।। ಸ್ತ್ರೀ ಪುರುಷ ನಪೂಂಸಕೇ । ಹೇ ವ್ಯಕ್ತಿ ಭೇದಾಂಚೇ ಟಕೇ । ಆಂದೋಳತೀ ಆಂಗಿಕೇ । ವಿಕಾರಭಾರೇ ।।೧೫೧।। ಜೈಸಾ ವರ್ಷಾಕಾಳು ಗಗನೀ। ಪಾಲ್ಹೇಜೇ ನವಘನೀ । ತೈಸೇ ಆಕಾರಜಾತ ಅಜ್ಞಾನೀ । ವೇಲೀ ಜಾಯ ।।೧೫೨।। ಮಗ ಶಾಖಾಂಚೇನಿ ಆಂಗಭಾರೇ । ಲವೋನಿ ಗುಂಫಿತೀ ಪರಸ್ಪರೇ । ಗುಣಕ್ಷೋಭಾಚೇ ವಾರೇ । ಉದಯಜತೀ ।।೧೫೩।। ತೇಥ ತೇಣೇ ಅಚಾಟೇ । ಗುಣಾಂಚೇನಿ ಝಡಝಡಾಟೇ । ತಿಹೀ ಠಾಯೀ ಹಾ ಫಾಂಟೇ । ಊರ್ಧ್ವಮೂಳ ।।೧೫೪।। ಐಸಾ ರಜಾಚಿಯಾ ಝುಳುಕಾ । ಝಡಾಡಿತಾ ಆಗಳಿಕಾ । ಮನುಷ್ಯಜಾತೀ ಶಾಖಾ । ಥೋರಾವತೀ ।।೧೫೫।। ತಿಯಾ ಊರ್ಧ್ವೀ ನಾ ಅಧೀ । ಮಾಝಾರೀಂಚಿ ಕೋಂದಾಕೋಂದೀ । ಆಡ ಫುಟತೀ ಖಾಂದೀ । ಚತುರ್ವರ್ಣಾಂಚ್ಯಾ ।।೧೫೬।। ತೇಥ ವಿಧಿನಿಷೇಧ ಸಪಲ್ಲವ । ವೇದವಾಕ್ಯಾಂಚೇ ಅಭಿನವ । ಪಾಲವ ಡೋಲತೀ ಬರವ । ನೀಚ ನವೇ ।।೧೫೭।। ಅರ್ಥು ಕಾಮು ಪಸರೇ । ಅಗ್ರವನೇ ಘೇತೀ ಥಾರೇ । ತೇಥ ಕ್ಷಣಿಕೇ ಪದಾಂತರೇ । ಇಹಭೋಗಾಚೇ ।।೧೫೮।। ತೇಥ ಪ್ರವೃತ್ತೀಚೇನಿ ವೃದ್ಧಿಲೋಭೇ । ಖಾಂಕರೇಜತೀ ಶುಭಾಶುಭೇ । ನಾನಾಕರ್ಮಾಂಚೇ ಖಾಂಬೇ । ನೇಣೋ ಕಿತೀ ।।೧೫೯।। ತೇವೀಂಚಿ ಭೋಗಕ್ಷೀಣೇ ಮಾಗಿಲೇ । ಪಡತೀ ದೇಹಾಂತೀಚೇ ಬುಡಸಳೇ । ತಂವ ಪುಢಾ ವಾಢೀ ಪೇಲೇ । ನವೇಯಾ ದೇಹಾಂಚೇ ।।೧೬೦।। ಆಣಿ ಶಬ್ದಾದಿಕ ಸುಹಾವೇ । ಸಹಜ ರಂಗೇ ಹವಾವೇ। ವಿಷಯಪಲ್ಲವ ನವೇ । ನಿತ್ಯ ಹೋತೀ ।।೧೬೧।। ಐಸೇ ರಜೋವಾತೇ ಪ್ರಚಂಡೇ । ಮನುಷ್ಯ ಶಾಖಾಂಚೇ ಮಾಂದೋಡೇ । ವಾಢತೀ ತೋ ಯೇಥ ರೂಢೇ । ಮನುಷ್ಯಲೋಕು ।।೧೬೨।। ತೈಸಾಚಿ ತೋ ರಜಾಚಾ ವಾರಾ । ನಾವೇಕ ಧರೀ ವೋಸರಾ । ಮಗ ವಾಜೋ ಲಾಗೇ ಘೋರಾ । ತಮಾಚಾ ತೋ ।।೧೬೩।। ತೇಧವಾ ಯಾಚಿ ಮನುಷ್ಯ ಶಾಖಾ । ನೀಚ ವಾಸನಾ ಅಧೀ ದೇಖಾ । ಪಾಲ್ಹೇಜತೀ ಡಾಹಾಳಿಕಾ । ಕುಕರ್ಮಾಚಿಯಾ ।।೧೬೪।। ಅಪ್ರವೃತ್ತೀಂಚೇ ಖಿಣುವಾಳೇ । ಕೋಂಭ ನಿಘತೀ ಸರಳೇ । ಘೇತ ಪಾನ ಪಾಲವ ಡಾಳೇ । ಪ್ರಮಾದಾಚೇ ।।೧೬೫।। ಬೋಲತೀ ನಿಷೇಧ ನಿಯಮೇ । ಜಿಯಾ ಋಚಾ ಯಜುಃ ಸಾಮೇ । ತೋ ಪಾಲಾ ತಯಾ ಘುಮೇ । ಟಕೇಯಾವರೀ ।।೧೬೬।। ಪ್ರತಿಪಾದಿತೀ ಅಭಿಚಾರ । ಆಗಮ ಜೇ ಪರಮಾರ । ತಿಹೀ ಪಾನೀ ಘೇತೀ ಪ್ರಸರ । ವಾಸನಾ ವೇಲೀ ।।೧೬೭।।

ಬುಡದಿಂದ ಹೊರಟ ನೀಟಾದ ಶಾಖೆಗಳಿಗೆ ಅನಂತ ಸೃಷ್ಟಿರೂಪದ ಟೊಂಗೆಗಳು ಒಡೆಯುವುವು. ಅವುಗಳಿಗೆ ಅಡ್ಡ ವಾಗಿ ಸೀಳಿದ ಕವಲುಗಳೆಂದರೆ ಹಲವು ವಿಧ ಜಾತಿಗಳು ।।೧೫೦।।

ನಂತರ ಸ್ತ್ರೀ, ಪುರುಷ ಮತ್ತು ನಪುಂಸಕ ಹೀಗೆ ವ್ಯಕ್ತಿ ಭೇದ ಉತ್ಪನ್ನವಾಗಿ ಆ ತಮ್ಮಲ್ಲಿನ ವಿಕಾರಗಳಿಂದ ಒಂದ ಕ್ಕೊಂದು ಸಂಬಂಧವಾಗುವುವು ।।೧೫೧।।

ಮಳೆಗಾಲದ ಆಕಾಶದಲ್ಲಿ ಮೋಡಗಳು ಉತ್ಪನ್ನವಾಗು ವಂತೆ, ಅಜ್ಞಾನದಿಂದ ಅನೇಕ ಜಾತಿಗಳ ಶರೀರ ರೂಪ ಬಳ್ಳಿ ಗಳು ಉತ್ಪನ್ನವಾಗುವುವು ।।೧೫೨।।

ತದನಂತರ ತ್ರಿಗುಣಾತ್ಮಕ ಗಾಳಿ ಬಿಟ್ಟಾಗ ಟೊಂಗೆಗಳು ತಮ್ಮ ತಮ್ಮ ಭಾರದಿಂದ ಬಾಗಿ ಒಂದರಲ್ಲೊಂದು ಸೇರತೊಡ ಗುವುವು ।।೧೫೩।।

ಈ ಗುಣಗಳು ಅತಿಯಾಗಿ ಬೆಳೆದಿದ್ದರಿಂದ ಆ ಊರ್ಧ್ವ ಮೂಲ ವೃಕ್ಷದ ಕೆಳಗೆ ಮೇಲೆ ಮತ್ತು ಮಧ್ಯ ಹೀಗೆ ಮೂರು ಭೇದಗಳಾಗಿ ಶಾಖೆಗಳು ಹುಟ್ಟುವುವು ।।೧೫೪।।

ಇದರಂತೆ ರಜೋಗುಣದ ಗಾಳಿಯು ಹೆಚ್ಚು ಭರದಿಂದ ಬೀಸಲು ಮನುಷ್ಯಜಾತಿ ರೂಪದ ಟೊಂಗೆಗಳು ಭರದಿಂದ ಬೆಳೆಯುವುವು ।।೧೫೫।।

ಆ ಶಾಖೆಯು ಮೇಲೆ ಕೆಳಗೆ ಬೆಳೆಯದೇ ನಡುವೆಯೇ ದಟ್ಟವಾಗುವುದು. ಅದಕ್ಕೆ ನಾಲ್ಕು ವರ್ಣದ ನಾಲ್ಕು ಶಾಖೆ ಗಳು ಜೋರಾಗಿ ಹುಟ್ಟುವುವು ।।೧೫೬।।

ಈ ಶಾಖೆಗಳಿಗೆ ವಿಧಿನಿಷೇಧರೂಪ ಎಲೆಗಳು ಮತ್ತು ವೇದವಾಕ್ಯ ರೂಪದ ಹೊಸ ಕೋಮಲ ಎಲೆಗಳು ಅಲ್ಲಾಡು ವಾಗ ಶೋಭಾಯಮಾನವಾಗಿ ಕಾಣುವುವು ।।೧೫೭।।

ಬಳಿಕ ದ್ರವ್ಯ ಮತ್ತು ಕಾಮ ಇವುಗಳ ವಿಸ್ತಾರವಾಗಿ ಇಹ ಲೋಕದ ಕ್ಷಣಿಕ ಸುಖದ ಮೊಳಕೆ ಬರುವುವು ।।೧೫೮।।

ತದನಂತರ ಪ್ರವೃತ್ತಿ ಮಾರ್ಗ ಬೆಳೆಯಲು ಶುಭಾ ಶುಭ ಕರ್ಮಗಳ ಶಾಖೆಗಳು ಲೆಕ್ಕವಿಲ್ಲದಷ್ಟು ಬೆಳೆದದ್ದು ತಿಳಿಯು ವುದೇ ಇಲ್ಲ ।।೧೫೯।।

ಅದರಂತೆ ಭೋಗದ ಕ್ಷಯವಾದ ಮೇಲೆ ಹಿಂದಿನ ದೇಹವು ಒಣಗಿ ಕೆಳಗೆ ಉದುರುವುದು, ಅದೇ ಬೇರೆ ಕಡೆ ಯಲ್ಲಿ ಹೊಸ ದೇಹದ ಶಾಖೆಗಳು ಹುಟ್ಟುವುವು ।।೧೬೦।।

ಮತ್ತು ಶಬ್ದಾದಿಕ ಪಂಚ ವಿಷಯಗಳ ಸಹಾಯದಿಂದ ಇಚ್ಛೆಯು ಉತ್ಪನ್ನವಾಗಿ ವಿಷಯರೂಪದ ಹೊಸ ಹೊಸ ಎಲೆ ಗಳು ಪ್ರತಿನಿತ್ಯ ಬರುವುವು (ಹುಟ್ಟುವುವು) ।।೧೬೧।।

ಈ ಪ್ರಕಾರವಾಗಿ ರಜೋಗುಣದ ದೊಡ್ಡ ಗಾಳಿಯು ಬೀಸಿದಾಗ ಮನುಷ್ಯರೂಪ ಶಾಖೆಗಳ ಸಮುದಾಯವು ಬೆಳೆ ಯುವ ಸ್ಥಾನಕ್ಕೆ ''ಮೃತ್ಯುಲೋಕ''ವೆನ್ನುವರು ।।೧೬೨।।

ಅದರಂತೆ ರಜೋಗುಣರೂಪ ಗಾಳಿಯು ಕ್ಷಣಹೊತ್ತು ನಿಂತಾಗ ತಮೋಗುಣರೂಪ ಗಾಳಿಯು ದೊಡ್ಡ ಬಿರುಗಾಳಿ ಯಂತೆ ಬೀಸಹತ್ತುವುದು ।।೧೬೩।।

ತದನಂತರ ಇದೇ ಮನುಷ್ಯರೂಪ ಶಾಖೆಗಳಿಗೆ ಕೆಟ್ಟ ವಾಸನೆಗಳು ಉತ್ಪನ್ನವಾಗಿ, ಕುಕರ್ಮಗಳ ಮೊಳಕೆಗಳು ಗುಂಪುಗುಂಪಾಗಿ ಹುಟ್ಟುವುವು ।।೧೬೪।।

ಅಪ್ರವೃತ್ತಿಯ (ಕೆಟ್ಟಮಾರ್ಗದ) ಬಲವಾದ ನೆಟ್ಟಗೆ ಟೊಂಗೆಯು ಹೊರಟು ಅದರಲ್ಲಿ ಪ್ರಮಾದ ರೂಪ ಮುಗುಳು ಪಲ್ಲವಗಳು ಒಡೆಯುವುವು ।।೧೬೫।।

ಋಗ್ವೇದ, ಯಜುರ್ವೇದ ಮತ್ತು ಸಾಮವೇದಗಳ ಋಚಗಳಲ್ಲಿ ನಿಷಿದ್ಧವೆಂದು ನಿಶ್ಚಯಿಸಲಾದ ಕರ್ಮಗಳು ಎಲೆ ಗಳ ರೂಪದಿಂದ ತುದಿಗಳಲ್ಲಿ ಒಡೆಯುವುವು ।।೧೬೬।।

ಜಾರಣ, ಮಾರಣ, ಸ್ತಂಭನ, ಮೋಹನ, ಉಚ್ಚಾಟನ, ವಶೀಕರಣ ಇತ್ಯಾದಿ ಅಭಿಚಾರ ಕರ್ಮಗಳನ್ನು ಆಗಮ ಗ್ರಂಥ ಗಳು ಹೇಳಿರುವುವು. ಅದನ್ನೂ ಮಾಡುವ ಇಚ್ಛಾರೂಪ ಬಳ್ಳಿ ಯು ಎಲೆಗಳಿಂದ ಹಬ್ಬುವುದು ।।೧೬೭।।

ತಂವ ತಂವ ಹೋತೀ ಥೋರಾಡೇ । ಅಕರ್ಮಾಚೇ ತಳಬುಡೇ । ಆಣಿ ಜನ್ಮ ಶಾಖಾ ಪುಢೇಪುಢೇ । ಫೇತೀ ಧಾಂವ ॥೧೬೮॥ ತೇಥ ಚಾಂಡಾಳಾದಿ ನಿಕೃಷ್ಟಾ । ದೋಷಜಾತೀಚಾ ಥೋರ ಫಾಂಟಾ । ಜಾಳ ಪಡೇ ಕರ್ಮಭ್ರಷ್ಟಾ । ಭುಲೋನಿಯಾ ॥೧೬೯॥ ಪಶು ಪಕ್ಷೀ ಸೂಕರ । ವ್ಯಾಘ್ರ ವೃಶ್ಚಿಕ ವಿಖಾರ । ಹೇ ಆಡಶಾಖಾಪ್ರಕಾರ । ಪೈಸು ಫೇತೀ ॥೧೭೦॥ ಪರೀ ಐಶಾ ಶಾಖಾ ಪಾಂಡವಾ । ಸರ್ವಾಂಗೀಹೀ ನಿತ್ಯ ನವಾ । ನಿರಯಭೋಗ ಯಾವಾ । ಫಳಾಚಾ ತೋ ॥೧೭೧॥ ಆಣಿ ಹಿಂಸಾವಿಷಯ ಪುಢಾರೀ । ಕುಕರ್ಮಸಂಗೇ ಧುರ ಧರೀ । ಜನ್ಮ ವರೀ ಆಗಾರೀ । ವಾಢತೀಚಿ ಅಸೇ ॥೧೭೨॥ ಐಸೇ ಹೋತೀ ತರು ತೃಣ । ಲೋಹ ಲೋಷ್ಟ ಪಾಷಾಣ । ಇಯಾ ಖಾಂದಿಯಾ ತೇವೀ ಜಾಣ । ಫಳೇಂಹೀ ಹೇಂಚೀ ॥೧೭೩॥ ಅರ್ಜುನಾ ಗಾ ಅವಧಾರೀ । ಮನುಷ್ಯಾಲಾಗೋನಿ ಇಯಾಪರೀ । ವೃದ್ಧಿ ಸ್ಥಾವರಾಂತವರೀ । ಅಧೋಶಾಖಾಂಚೀ ॥೧೭೪॥ ಮ್ಹಣೌನಿ ಜೇ ಮನುಷ್ಯಡಾಳೇ । ತಿಯೇ ಜಾಣಾವೀ ಅಧೀಂಚಿ ಮೂಳೇ । ಜೇ ಏಥೂನಿ ಹಾ ಪಘಳೇ । ಸಂಸಾರ ತರು ॥೧೭೫॥ ಯೇರ್ಹವೀ ಊರ್ಧ್ವೀಂಚೇ ಪಾರ್ಥಾ । ಮುದ್ದಲ ಮೂಳ ಪಾಹಾತಾ । ಅಧೀಂಚಿಯಾ ಮಧ್ಯಸ್ಥಾ । ಶಾಖಾ ಇಯಾ॥೧೭೬॥ ಪರೀ ತಾಮಸೀ ಸಾತ್ತ್ವಿಕೀ । ಸುಕೃತದುಷ್ಕೃತಾತ್ಮಕೀ । ವಿರೂಢತೀ ಯಾ ಶಾಖೀ । ಅಧೋರ್ಧ್ವೀಂಚಿಯಾ ॥೧೭೭॥ ಆಣಿ ವೇದತ್ರಯೀಚಿಯಾ ಪಾನಾ । ನಯೇ ಅನ್ಯತ್ರ ಲಾಗೋ ಅರ್ಜುನಾ । ಜೇ ಮನುಷ್ಯಾವಾಂಚೂನಿ ವಿಧಾನಾ ।ವಿಷಯ ನಾಹೀ ॥೧೭೮॥ ಮ್ಹಣೌನಿ ತನು ಮಾನುಷಾ । ಇಯಾ ಊರ್ಧ್ವಮೂಳೌನಿ ಜರೀ ಶಾಖಾ । ತರೀ ಕರ್ಮವೃದ್ಧೀಸಿ ದೇಖಾ । ಇಯೇಂಚಿ ಮೂಳೇ ॥೧೭೯॥ ಆಣಿ ಆನೀತರೀ ಝಾಡೀ । ಶಾಖಾ ವಾಢತಾ ಮೂಳೇ ಗಾಢೀ । ಮೂಳ ಗಾಢೇ ತಂವ ವಾಢೀ । ಪೈಸ ಆಥೀ ॥೧೮೦॥ ತೈಸೇಂಚಿ ಇಯಾ ಶರೀರಾ । ಕರ್ಮ ತಂವ ದೇಹಾ ಸಂಸಾರಾ । ಆಣಿ ದೇಹ ತಂವ ವ್ಯಾಪಾರಾ । ನಾ ಮ್ಹಣೋಂಚಿ ನಯೇ ॥೧೮೧॥ ಮ್ಹಣೌನಿ ದೇಹೇ ಮಾನುಷೇ । ಇಯೇ ಮೂಳೇ ಹೋತೀ ನ ಚುಕೇ । ಐಸೇ ಜಗಜ್ಜನಕೇ ।ಬೋಲಿಲೇ ತೇಣೇ ॥೧೮೨॥ ಮಗ ತಮಾಚೇ ತೇ ದಾರುಣ । ಸ್ಥಿರಾವಲೇಯಾ ವಾಉಧಾಣ । ಸತ್ತ್ವಾಚೇ ಸುಟೇ ಸತ್ರಾಣ । ವಾಹುಟಳೀ ॥೧೮೩॥ ತೈ ಯಾಚಿ ಮನುಷ್ಯಾಕಾರಾ । ಮುಳೀ ಸುವಾಸನಾ ನಿಘತೀ ಆರಾ । ಫೇಊನಿ ಪುಟತೀ ಕೋಂಬಾರಾ । ಸುಕೃತಾಂಕುರೀ ॥೧೮೪॥

ತದನಂತರ ಕೆಟ್ಟ ಕರ್ಮಗಳ ಬೇರುಗಳು ಗಡುತರವಾಗಿ ಅವುಗಳಿಗೆ ಜನ್ಮ ರೂಪ ಶಾಖೆಗಳು ಬಹಳಷ್ಟು ಹುಟ್ಟುವುವು ॥೧೬೮॥

ಈ ಕೆಟ್ಟ ಕರ್ಮಗಳಿಗೆ ರಮಿಸಿರುವುದರಿಂದ ಅದಕ್ಕೆ ಚಾಂಡಾಲಾದಿ ನೀಚಯೋನಿಗಳ ದೊಡ್ಡ ಟೊಂಗೆ ಒಡೆದು ಕರ್ಮಭ್ರಷ್ಟದ ಜಾತಿಯಲ್ಲಿ ಹುಟ್ಟಬೇಕಾಗುವುದು ॥೧೬೯॥

ಪಶು, ಪಕ್ಷಿ, ಹಂದಿ, ಹುಲಿ,ಚೇಳು, ಸರ್ಪ ಈ ಪ್ರಕಾರದ ಅಡ್ಡ ಟೊಂಗೆಗಳು ಸಾಕಷ್ಟು ಹುಟ್ಟಿಕೊಳ್ಳುವುವು ॥೧೭೦॥

ಅರ್ಜುನಾ, ಈ ಪ್ರಕಾರವಾಗಿ ಆ ವೃಕ್ಷದ ಸರ್ವಾಂಗದಲ್ಲಿ ಶಾಖೆಗಳು ನಿತ್ಯನೂತನವಾಗಿ ಹುಟ್ಟಿಕೊಂಡು ಅವುಗಳಿಗೆ ನರಕ ಭೋಗಿಸುವ ಪ್ರಾಪ್ತಿಯಾಗುವುದು ॥೧೭೧॥

ಮತ್ತು ಹಿಂಸೆ ವಿಷಯವನ್ನು ಮುಂದುಮಾಡಿ ಕೆಟ್ಟ ಸಂಗತಿಯ ಯೋಗದಿಂದ ಅನೇಕ ಜನ್ಮಗಳನ್ನು ಪಡೆಯಬೇಕಾಗುವುದು ॥೧೭೨॥

ಈ ಪ್ರಕಾರವಾಗಿ ಗಿಡಗಳು,ಹುಲ್ಲು,ಕಬ್ಬಿಣ,ಮಣ್ಣು ಮತ್ತು ಕಲ್ಲು ಈ ಶಾಖೆಗಳಿಗೂ ಅಂತಹವೇ ಫಲಗಳು ಬರುವುವು ॥೧೭೩॥

ಅರ್ಜುನಾ, ಮನುಷ್ಯನಿಂದ ಹಿಡಿದು ಸ್ಥಾವರದವರೆಗೆ ಎಲ್ಲ ಶಾಖೆಗಳ ಬೆಳವಣಿಗೆಯು ಕೆಳಭಾಗದಲ್ಲಿಯೇ ಇರುವುದು ॥೧೭೪॥

ಆದ್ದರಿಂದ ಮನುಷ್ಯರೂಪ ಶಾಖೆಯೇ ಕೆಳಗೆ ಹೋಗುವ ಶಾಖೆಗಳ ಮೂಲವಾಗಿದೆ ಮತ್ತು ಇಲ್ಲಿಂದಲೇ ಸಂಸಾರ ವೃಕ್ಷವು ಬೆಳೆಯುವುದು ॥೧೭೫॥

ಪಾರ್ಥಾ, ಮೇಲೆ ಹೋಗುವ ಶಾಖೆಯ ಮೂಲವನ್ನು ನೋಡಲು ಹೋದರೆ,ಮೇಲೆ ಮತ್ತು ಕೆಳಗೆ ಇವುಗಳ ಮಧ್ಯವಿರುವ ಶಾಖೆಯೇ ಮನುಷ್ಯ ಜನ್ಮವಾಗಿರುವುದು ॥೧೭೬॥

ಆದರೆ, ತಮೋಗುಣ ಮತ್ತು ಸತ್ತ್ವಗುಣ ಇವುಗಳ ದುಷ್ಕರ್ಮ ಮತ್ತು ಸತ್ಕರ್ಮಗಳಿಂದ ತುಂಬಿದ ಶಾಖೆಗಳು ಈ ನಡುವಿನ ಶಾಖೆಯಿಂದ ಕೆಳಗೆ ಮೇಲೆ ಹೋಗುವುವು ॥೧೭೭॥

ಅರ್ಜುನಾ, ವೇದತ್ರಯರೂಪ ಎಲೆಗಳು ಬೇರೆ ಯಾರಿಗೂ ಸರಿಸಾಟಿಯಾಗದೇ, ಅವುಗಳಲ್ಲಿಯ ವಿಧಿಗಳು ಕೇವಲ ಮನುಷ್ಯ ಯೋನಿಗೆ ಮಾತ್ರ ವಿಷಯವಾಗಿರುವುದು ॥೧೭೮॥

ಆದ್ದರಿಂದ ಮನುಷ್ಯರೂಪ ಶಾಖೆಯು ಇದು ಮೇಲಿನ ಬೇರುಗಳಿಂದ ಕೆಳಗೆ ಬೆಳೆದಿದ್ದರೂ, ಕರ್ಮ ಸಿದ್ಧಿ ರೂಪ ಶಾಖೆಗಳು ಇಲ್ಲಿಂದಲೇ ಉತ್ಪನ್ನವಾಗುವುವು ॥೧೭೯॥

ಮತ್ತು ಬೇರೆ ವೃಕ್ಷಗಳ ಸ್ಥಿತಿಯೂ ಹೀಗೆಯೇ ಇರುವುದು. ಏನೆಂದರೆ, ಶಾಖೆಗಳು ಬೆಳೆದಂತೆ ಬೇರುಗಟ್ಟಿಯಾದವು ಮತ್ತು ಬೇರುಗಳು ಗಟ್ಟಿಯಾದಂತೆ ಶಾಖೆಗಳ ವಿಸ್ತಾರವಾಗುವುದು ॥೧೮೦॥

ಇದೇ ಪ್ರಕಾರವಾಗಿ ಈ ಶರೀರದ ಮಾತಾಗಿದೆ. ಕರ್ಮಶೇಷದವರೆಗೆ ಶರೀರವು ಇರುವುದು. ಶರೀರ ಇರುವವರೆಗೂ ಕರ್ಮ ಮಾಡುವುದಿಲ್ಲವೆನ್ನುವುದಕ್ಕೆ ಮಾರ್ಗವೇ ಇಲ್ಲ ॥೧೮೧॥

ಆದ್ದರಿಂದ ಮನುಷ್ಯ ದೇಹವು ಅನ್ಯ ಕರ್ಮರೂಪ ಶಾಖೆಯು ಮೂಲವಾಗಿದೆ. ಇದರಲ್ಲಿ ಯಾವ ಸಂಶಯವಿಲ್ಲ. ಹೀಗೆ ಜಗಜ್ಜನಕನಾದ ಶ್ರೀಕೃಷ್ಣನು ಹೇಳಿದನು ॥೧೮೨॥

ನಂತರ ತಮೋಗುಣದ ಬಿರುಗಾಳಿಯು ಸ್ಥಿರವಾದಾಗ ಸತ್ತ್ವಗುಣದ ಬಿರುಗಾಳಿಯು ಜೋರಾಗಿ ಬೀಸುವುದು ॥೧೮೩॥

ಆಗ ಮಾತ್ರ ಮನುಷ್ಯಕಾರದ ಬೇರಿಗೆ ಸದ್ವಾಸನೆ ರೂಪ ಮುಗುಳುಗಳು ಒಡೆದು ಅವುಗಳಿಗೆ ಸುಕೃತ ರೂಪ ಅಂಕುರಗಳು ಬರುವುವು ॥೧೮೪॥

ಉಕಲತೇನಿ ಉನ್ಮೇಖೇ । ಪ್ರಜ್ಞಾಕುಶಲತೇಂಚಿ ತಿಖೇ । ಡಿರಿಯಾ ನಿಘತೀ ನಿಮಿಖೇ । ಬಾಬಳ್ಳೈಜುನೀ ।೧೮೫॥ ಮತೀಚೇ ಸೋಟ ವಾವೇ । ಫಾಲಿತೀ ಸ್ಫೂರ್ತೀಚೇನಿ ಥಾಂವೇ । ಬುದ್ಧಿಪ್ರಕಾಶ ಫೇ ಧಾಂವೇ । ವಿವೇಕಾವರೀ ।೧೮೬॥ ತೇಥ ಮೇಧಾರಸೇ ಸಗರ್ಭ । ಆಸ್ಥಾಪತ್ರೀ ಸಬೋಂಬ । ಸರಳ ನಿಘತೀ ಕೋಂಭ । ಸದ್ವೃತ್ತೀಚೇ ।೧೮೭॥ ಸದಾಚಾರಾಚಿಯಾ ಸಹಸಾ । ಟಕಾ ಉಠತೀ ಬಹುವಸಾ । ಘುಮಘುಮಿತೀ ಘೋಷಾ । ವೇದಪದ್ಯಾಚ್ಯಾ ।೧೮೮॥ ಶಿಷ್ಟಾಗಮವಿಧಾನೇ । ವಿವಿಧಯಾಗವಿತಾನೇ । ಇಯೇ ಪಾನಾವರೀ ಪಾನೇ। ಪಾಲೇಜತೀ ।೧೮೯॥ ಐಶಾಸ ಯಮದಮೀ ಘೋಸಾಳಿಯಾ । ಉಠತೀ ತಪಾಚಿಯಾ ಡಾಹಾಳಿಯಾ । ದೇತೀ ವೈರಾಗ್ಯಶಾಖಾ ಕೋವಳಿಯಾ । ವೇಲ್ಹಾಳಪಣೇ ।೧೯೦॥ ವಿಶಿಷ್ಟಾ ವ್ರತಾಂಚೇ ಫೋಕ । ಧೀರಾಚ್ಯಾ ಅಣಗಟೀ ತಿಖ । ಜನ್ಮ ವೇಗೇ ಊರ್ಧ್ವಮುಖ । ಉಂಚಾವತೀ ।೧೯೧॥ ಮಾಜೀ ವೇದಾಚಾ ಪಾಲಾ ದಾಟ । ತೋ ಕರೀ ಸುವಿದ್ಯೇಚಾ ಝುಡಝುಡಾಟ । ಜಂವ ವಾಜೇ ಅಚಾಟ । ಸತ್ತ್ವಾನಿಳು ತೋ ।೧೯೨॥ ತೇಥ ಧರ್ಮಡಾಳ ಬಾಹಾಳೀ । ದಿಸತೀ ಜನ್ಮಶಾಖಾ ಸರಳೀ । ತಿಯಾ ಆಡ ಫುಟತೀ ಫಳೀ । ಸ್ವರ್ಗಾದಿಕೀ ।೧೯೩॥ ಪುಢಾ ಉಪರತಿ ರಾಗೇ ಲೋಹಿವೀ ।ಧರ್ಮ ಮೋಕ್ಷಾಚೀ ಶಾಖಾ ಪಾಲವೀ । ಪಾಲ್ಹಾಜತ ನಿತ್ಯ ನವೀ । ವಾಢತೀಚಿ ಅಸೇ ।೧೯೪॥ ಪೈ ರವಿಚಂದ್ರಾದಿ ಗ್ರಹವರ । ಪಿತೃ ಋಷಿ ವಿದ್ಯಾಧರ । ಹೇ ಆಡಶಾಖಾ ಪ್ರಕಾರ । ಪೈಸು ಘೇತೀ ।೧೯೫॥ ಯಾಹೀಪಾಸೂನ ಉಂಚವಡೇ । ಗುಢಲೇ ಫಳಾಚೇನಿ ಬುಡೇ । ಇಂದ್ರಾದಿಕ ತೇ ಮಾಂದೋಡೇ । ಥೋರ ಶಾಖಾಂಚೇ ।೧೯೬॥ ಮಗ ತಯಾಂಹೀ ಉಪರೀ ಡಾಹಾಳಿಯಾ । ತಪೋಜ್ಞಾನೀ ಉಂಚಾವಲಿಯಾ । ಮರೀಚಿ ಕಶ್ಯಪಾದಿ ಇಯಾ । ಉಪರೀ ಶಾಖಾ ।೧೯೭॥ ಏವಂ ಮಾಳೋವಾಳೀ ಉತ್ತರೋತ್ತರು । ಊರ್ಧ್ವಶಾಖಾಂಚಾ ಪೈಸಾರು । ಬುಡೀ ಸಾನಾ ಅಗ್ರೀ ಥೋರು । ಫಳಾಢ್ಯಪಣೇ ।೧೯೮॥ ವರೀ ಉಪರಿ ಶಾಖಾಹೀ ಪಾರೀ । ಯೇತಿ ಫಳಭಾರ ಜೇ ಕಿರೀಟೀ । ತೇ ಬ್ರಹ್ಮೇಶಾಂತ ಅಣಗಟೀ । ಕೋಂಭ ನಿಘತೀ ।೧೯೯॥ ಫಳಾಚೇನಿ ವೋಝೇಪಣೇ । ಊರ್ಧ್ವೀ ವೋವಾಂಡೇ ದುಣೇ । ಜಂವ ಮಾಘಾರೌತೇ ಬೈಸಣೇ । ಮೂಳೀಂಚಿ ಹೋಯ ।೨೦೦॥ ಪ್ರಾಕೃತಾಹೀ ತರೀ ರುಖಾ । ಜೇ ಫಳೇ ದಾಟಲೀ ಹೋಯ ಶಾಖಾ । ತೇ ವೋವಾಂಡಲೀ ದೇಖಾ । ಬುಡಾಸಿ ಯೇ ।೨೦೧॥

ತದನಂತರ ಜ್ಞಾನ ಯೋಗದಿಂದ ತಿಳುವಳಿಕೆಯು ತೀಕ್ಷ್ಣವಾದಾಗ ತೀವ್ರಗತಿಯಿಂದ ಕ್ಷಣಮಾತ್ರದಲ್ಲಿ ಬುದ್ಧಿಗೆ ಎಸಳುಗಳು ಮೂಡುವುವು ।।೧೮೫।।

ಆಮೇಲೆ ಬುದ್ಧಿರೂಪ ಸಣ್ಣ ಟೊಂಗೆಯು ವಿಸ್ತಾರ ವಾಗಿ ಸ್ಫೂರ್ತಿಯ ಶಾಖೆಗಳು ಹುಟ್ಟುವುವು. ಇದರಿಂದ ಬುದ್ಧಿಗೆ ವಿಚಾರವು ತೋಚುವುದು ।।೧೮೬।।

ಅಲ್ಲಿ ಮೇಧಾರಸದಿಂದ ತುಂಬಿದ ನಿಷ್ಠರೂಪದ ಎಲೆಗಳು ಸುಶೋಭಿತವಾಗಿ ಕಾಣುತ್ತ, ಸತ್ತ್ವ ವೃತ್ತಿಯ ''ಮೊಳಕೆಯು'' ನೀಟಾಗಿ ಹೊರಡುವುದು ।।೧೮೭।।

ಸದಾಚಾರರೂಪ ಅನೇಕ ಅಂಕುರಗಳು ಸಹಜವಾಗಿ ಹುಟ್ಟಿಕೊಂಡು ಅದರಿಂದ ನಾಲ್ಕೂ ಕಡೆಯಲ್ಲಿಯೂ ವೇದ ಘೋಷಗಳು ನಡೆಯುವುವು ।।೧೮೮।।

ಶಿಷ್ಟಾಚಾರಗಳು, ವೇದೋಕ್ತ ಆಚರಣೆಗಳು ಮತ್ತು ನಾನಾ ಪ್ರಕಾರದ ಯಜ್ಞ ಯಾಗಾದಿ ಕರ್ಮಗಳು ಹೀಗೆ ಎಲೆಗಳ ಮೇಲೆ ಎಲೆಗಳು ಹುಟ್ಟುವುವು ।।೧೮೯।।

ಈ ಪ್ರಕಾರವಾಗಿ ಯಮದಮರೂಪ ಗೊಂಚಲಗಳು ಮತ್ತು ತಪದ ಟೊಂಗೆಗಳು ಹುಟ್ಟುವುವು ಮತ್ತು ವೈರಾಗ್ಯ ರೂಪ ಅನೇಕ ಕೋಮಲ ಶಾಖೆಗಳು ಹುಟ್ಟುವುವು ।।೧೯೦।।

ವಿಶಿಷ್ಟ ವ್ರತಗಳ ಮೊಳಕೆ ಮತ್ತು ಧೈರ್ಯದ ಮೊನೆಗಳು ಒಡೆದು ಜನ್ಮವೇಗದಿಂದ ಮೇಲೆ ಹೋಗುವುವು ।।೧೯೦।।

ನಡುವೆ ವೇದರೂಪ ದಟ್ಟವಾದ ಎಲೆಗಳು ಹುಟ್ಟಿಕೊಂಡು, ಅದರಿಂದ ಸತ್ತ್ವರೂಪ ಪ್ರಚಂಡವಾದ ಗಾಳಿ ಬೀಸುವವರೆಗೆ ಸುವಿದ್ಯೆಯ ನಾಲ್ಕು ಕಡೆಯಲ್ಲಿ ಪ್ರಸಾರವಾಗುವುದು ।।೧೯೨।।

ತದನಂತರ ಧರ್ಮರೂಪ ಒಂದು ಸರಳವಾದ ಶಾಖೆಯು ಹೊರಟು ಅದಕ್ಕೆ ಸ್ವರ್ಗಾದಿಕ ಫಲದ ಅಡ್ಡ ಟೊಂಗೆಗಳು ಹುಟ್ಟುವುವು ।।೧೯೩।।

ಎರಡನೆಯದಾಗಿ ಉಪರತಿರೂಪ ಕೆಂಪು ಶಾಖೆಯು ಹುಟ್ಟಿಕೊಂಡು ಅದಕ್ಕೆ ಮೋಕ್ಷರೂಪ ಹೊಸ ಹೊಸ ಎಲೆಗಳು ಹುಟ್ಟುತ್ತಲೇ ಇರುವುವು ।।೧೯೪।।

ಮುಂದೆ ರವಿ, ಚಂದ್ರ, ಇತ್ಯಾದಿ ಗ್ರಹಗಳು ಮತ್ತು ಪಿತರ, ಋಷಿಗಳು, ವಿದ್ಯಾಧರ ಈ ರೂಪಗಳ ಅಡ್ಡ ಟೊಂಗೆಗಳು ಹುಟ್ಟುವುವು ।।೧೯೫।।

ಈ ಟೊಂಗೆಗಿಂತಲೂ ಎತ್ತರವಾದ ಎರಡನೆಯ ಶಾಖೆಯು ಹುಟ್ಟಿ ಅದಕ್ಕೆ ಇಂದ್ರಾದಿಕ ಲೋಕರೂಪ ಫಲಗಳು ಬಹಳಷ್ಟು ಬರುವುವು ।।೧೯೬।।

ತದನಂತರ ಆ ಟೊಂಗೆಯ ಮೇಲೆ ತಪಸ್ಸಿನಲ್ಲಿ ಮತ್ತು ಜ್ಞಾನದಲ್ಲಿ ಶ್ರೇಷ್ಠರಾದ ಮರೀಚಿ, ಕಶ್ಯಪ ಇತ್ಯಾದಿರೂಪ ಬೇರೆ ಎತ್ತರದ ಟೊಂಗೆಗಳು ಇರುವುವು ।।೧೯೭।।

ಈ ಪ್ರಕಾರವಾಗಿ ಶ್ರೇಣಿ ಹತ್ತಿದಾಗ ಮೇಲಿನ ಶಾಖೆಗಳ ವಿಸ್ತಾರವಾಗಿ ಈ ವೃಕ್ಷವು ಕೆಳಗೆ ಚಿಕ್ಕದಿದ್ದರೂ, ಇದಕ್ಕೆ ಮೇಲ್ಭಾಗಗಳಲ್ಲಿ ದೊಡ್ಡ ದೊಡ್ಡ ಫಲಗಳು ಬರುವುವು ।।೧೯೮।।

ಇದರ ಮೇಲೆಯೂ ಬೇರೆ ಟೊಂಗೆಗಳು ಮೂಡುವುವು. ಅರ್ಜುನಾ, ಇವುಗಳಿಗೆ ಬ್ರಹ್ಮದೇವ ಮತ್ತು ಶಿವ, ಇಲ್ಲಿಯವರೆಗೂ ಮೇಲೆ ಶಾಖೆಗಳು ಹುಟ್ಟುವುವು ।।೧೯೯।।

ಫಲಗಳ ಭಾರದಿಂದ ಮೇಲಿನ ಟೊಂಗೆಗಳು ಕೆಳಗೆ ಬಾಗಿ ಬೇರುಗಳಿಗೆ ಹತ್ತಿಕೊಳ್ಳುವುವು ।।೨೦೦।।

ಬೇರೆ ವೃಕ್ಷಗಳ ಗತಿಯೂ ಹೀಗೆಯೇ ಇರುವುದು ಏನೆಂದರೆ, ಟೊಂಗೆಗಳಿಗೆ ಬಹಳಷ್ಟು ಫಲಗಳು ಬಂದರೆ ಅವು ಬಾಗಿ ಕೆಳಗೆ ಹತ್ತಿಕೊಳ್ಳುವುವು ।।೨೦೧।।

ತೈಸೇ ಜೇಥೂನಿ ಹಾ ಆಥವಾ । ಸಂಸಾರತರೂಚಾ ಉಠಾವಾ । ತಿಯೇ ಮೂಳೀ ಟೇಂಕತೀ ಪಾಂಡವಾ । ವಾಢತೇನಿ ಜ್ಞಾನೇ ।೨೦೨॥ ಮ್ಹಣೌನಿ ಬ್ರಹ್ಮೇಶಾನಾಪರೌತೇ । ವಾಢಣೇ ನಾಹೀ ಜೀವಾತೇ । ತೇಥೂನಿ ಮಗ ವರೌತೇ । ಬ್ರಹ್ಮಚಿ ಕೀ ।೨೦೩॥ ಪರೀ ಹೇ ಅಸೋ ಐಸೇ । ಬ್ರಹ್ಮಾದಿಕ ತೇ ಆಂಗವಸೇ । ಊರ್ಧ್ವಮೂಳಾಸರಿಸೇ । ನ ತುಕತೀ ಗಾ ।೨೦೪॥ ಆಣೀಕಹೀ ಶಾಖಾ ಉಪರತಾ । ಜಿಯಾ ಸನಕಾದಿಕ ನಾಮೇ ವಿಖ್ಯಾತಾ । ತಿಯಾ ಫಳೀ ಮೂಳೀ ನಾಡಳತಾ । ಭರಲಿಯಾ ಬ್ರಹ್ಮೀ ।೨೦೫॥ ಐಸೀ ಮನುಷ್ಯಾಪಾಸೂನಿ ಜಾಣಾವೀ । ಊರ್ಧ್ವೀ ಬ್ರಹ್ಮಾದಿಶೇಷ ಪಾಲವೀ । ಶಾಖಾಂಚೀ ವಾಢೀ ಬರವೀ । ಊಂಚಾವೇ ಪೈ ।೨೦೬॥ ಪಾರ್ಥಾ ಊರ್ಧ್ವೀಚಿಯಾ ಬ್ರಹ್ಮಾದಿ । ಮನುಷ್ಯತ್ವಚಿ ಹೋಯ ಆದೀ । ಮ್ಹಣೌನಿ ಇಯೇ ಆಧೀ । ಮ್ಹಣಿತಲೀ ಮೂಳೇ ।೨೦೭॥ ಏವಂ ತುಜ ಅಲೌಕಿಕು । ಹಾ ಅಧೋರ್ಧ್ವಶಾಖು । ಸಾಂಗಿತಲಾ ಭವರುಖು । ಊರ್ಧ್ವ ಮೂಳು ।೨೦೮॥ ಆಣಿ ಅಧೀಂಚೀ ಹೀ ಮೂಳೇ । ಉಪಪತ್ತೀ ಪರಿಸವಿಲೀ ಸವಿವಳೇ । ಆತಾ ಪರಿಸ ಉನ್ಮೂಳೇ । ಕೈಸೇನಿ ಹಾ ।೨೦೯॥

ನ ರೂಪಮಸ್ಯೇಹ ತಥೋಪಲಭ್ಯತೇ ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ ।<br>ಅಶ್ವತ್ಥಮೇನಂ ಸುವಿರೂಢಮೂಲಮ್ ಅಸಂಗಶಸ್ತ್ರೇಣ ದೃಢೇನ ಛಿತ್ವಾ ।೩॥

ಪರೀ ತುರ್ಝ್ಯಾ ಹನ ಪೋಟೀ । ಐಸೇ ಗಮೇಲ ಕಿರೀಟೀ ।ಜೇ ಯೇವಢೇ ಝಾಡ ಉತ್ಪಾಟೀ । ಐಸೇ ಕಾಯಿ ಅಸೇ? ।೨೧೦॥ ಕೀ ಬ್ರಹ್ಮಯಾಚ್ಯಾ ಶೇವಟವರೀ । ಊರ್ಧ್ವ ಶಾಖಾಂಚೀ ಥೋರೀ । ಆಣಿ ಮೂಳ ತಂವ ನಿರಾಕಾರೀ । ಊರ್ಧ್ವೀ ಅಸೇ ।೨೧೧॥ ಹಾ ಸ್ಥಾವರಾಹೀ ತಳೀ । ಫಾಂಕತ ಅಸೇ ಅಧೀಂಚ್ಯಾ ಡಾಳೀ । ಮಾಜೀ ಧಾಂವತಸೇ ದುಜಾ ಮುಳೀ । ಮನುಷ್ಯರೂಪೀ ।೨೧೨॥ ಐಸಾ ಗಾಢಾ ಆಣಿ ಅಫಾಟು । ಆತಾ ಕೋಣ ಕರೀ ಯಯಾ ಶೇವಟು । ತರೀ ಝಣೀ ಹಾ ಹಳುವಟು । ಧರಿಸೀ ಭಾವೋ ।೨೧೩॥ ತರೀ ಹಾ ಉನ್ಮೂಳಾವಯಾ ದೋಷೇ । ಯೇಥ ಸಾಯಾಸಚಿ ಕಾಯಿಸೇ । ಕಾಯ ಬಾಳಾ ಬಾಗುಲ ದೇಶೇ । ದವಡಾವಾ ಆಹೇ? ।೨೧೪॥ ಗಂಧರ್ವದುರ್ಗ ಕಾಯೀ ಪಾಡಾವೇ । ಕಾಯ ಶಶವಿಷಾಣ ಮೋಡಾವೇ । ಹೋಆವೇ ಮಗ ತೋಡಾವೇ । ಖಪುಷ್ಪ ಕೀ? ।೨೧೫॥ ತೈಸಾ ಸಂಸಾರು ಹಾ ವೀರಾ । ರುಖು ನಾಹೀ ಸಾಚೋಕಾರಾ । ಮಾ ಉನ್ಮೂಳಣೀ ದರಾರಾ । ಕಾಯಿಸಾ ತರೀ ।೨೧೬॥

ಅದರಂತೆ ಅರ್ಜುನಾ, ಈ ಎಲ್ಲ ಸಂಸಾರ ವೃಕ್ಷವು ಹುಟ್ಟುವ ಸ್ಥಾನವನ್ನೇ ಜ್ಞಾನದ ಬೆಳೆಯುವಿಕೆಯಿಂದ ಇಲ್ಲವೆ ಉತ್ಕರ್ಷದಿಂದ ಮುಟ್ಟುವುದು ।೨೦೨॥

ಆದ್ದರಿಂದ ಬ್ರಹ್ಮಲೋಕ, ಶಿವಲೋಕಗಳಿಂದ ಆಚೆಗೆ ಜೀವದ ಬೆಳವಣಿಗೆ ಇಲ್ಲದಾಗಿ, ಅಲ್ಲಿಂದ ಮುಂದೆ ಮೇಲ್ಭಾಗದಲ್ಲಿ ಬ್ರಹ್ಮವೇ ಇರುವುದು ।೨೦೩॥

ಇನ್ನು ಇದಿರಲಿ, ಬ್ರಹ್ಮಾದಿಕ ಟೊಂಗೆಗಳು ಊರ್ಧ್ವ, ಮೂಲ ಯಾವ ಬ್ರಹ್ಮವನ್ನು ಅದರ ಸರಾಸರಿ ಮಾಡಲು ಸಾಧ್ಯವಿಲ್ಲ ।೨೦೪॥

ಮತ್ತೊಂದು ನಿವೃತ್ತಿ ಮಾರ್ಗದ ಮೇಲ್ಭಾಗದಲ್ಲಿ ಸನಕಾದಿಕ ರೂಪ ಶಾಖೆಗಳು ಇರುವುವು. ಅವುಗಳಿಗೆ ಫಲಗಳೂ, ಮೂಲಗಳು ಇಲ್ಲದೇ ಬ್ರಹ್ಮರೂಪವೇ ಆಗಿರುವುವು ।೨೦೫॥

ಈ ಪ್ರಕಾರವಾಗಿ ಮನುಷ್ಯರೂಪ ಶಾಖೆಯಿಂದ ಹಿಡಿದು, ಮೇಲ್ಭಾಗಕ್ಕೆ ಬ್ರಹ್ಮಾದಿಕರೂಪ ಟೊಂಗೆಗಳು ಬಹಳ ಎತ್ತರ ಹೋಗುವುವು ।೨೦೬॥

ಪಾರ್ಥಾ, ಈ ಬ್ರಹ್ಮಾದಿಕ ರೂಪ ಇರುವ ಟೊಂಗೆಗಳು ಬಹಳ ಎತ್ತರವಾಗಿದ್ದು ಅವು ಮನುಷ್ಯ ರೂಪ ಟೊಂಗೆಯಿಂದಲೇ ಉತ್ಪನ್ನವಾಗಿರುತ್ತವೆ. ಅದಕ್ಕಾಗಿ ನಾವು ಅವುಗಳಿಗೆ ಮೇಲಿನ ಟೊಂಗೆಗಳ ಮೂಲವು ಎಂದು ಹೇಳಿದ್ದೇವೆ ।೨೦೭॥

ಈ ಪ್ರಕಾರವಾಗಿ ಯಾವ ಅಲೌಕಿಕ ಸಂಸಾರ ರೂಪ ವೃಕ್ಷವು ಊರ್ಧ್ವ ಮೂಲವಾಗಿದ್ದು, ಅದಕ್ಕೆ ಕೆಳಗೆ ಮತ್ತು ಮೇಲೆ ಶಾಖೆಗಳು ಹುಟ್ಟಿಕೊಂಡಿರುವುವು. ಇದರ ವರ್ಣನೆಯನ್ನು ನಿನಗೆ ಹೇಳಿದೆನು ।೨೦೮॥

ಈ ರೀತಿಯಾಗಿ ವೃಕ್ಷಕ್ಕೆ ಕೆಳಗೆ ಮೇಲೆ ಬೇರುಗಳಿದ್ದು, ಇದರ ವಿಷಯಕ್ಕೆ ಎಲ್ಲ ವಿವೇಚನೆಯನ್ನು ನಿನಗೆ ಹೇಳಿರುವೆನು. ಈಗ ಈ ಯಾವ ಬಲಿಷ್ಠವಾದ ವೃಕ್ಷವನ್ನು ಯಾವ ಉಪಾಯದಿಂದ ಕಿತ್ತೊಗೆಯಲು ಬರುವುದೆಂಬುದನ್ನು ಕೇಳು ।೨೦೯॥

ಶ್ಲೋಕಾರ್ಥ :- ಈ ಸಂಸಾರ ವೃಕ್ಷದ ಸ್ವರೂಪವು ತಿಳಿಯಬರುವುದಿಲ್ಲ. ಇದಕ್ಕೆ ಆದಿಮಧ್ಯಾಂತಗಳು ಕಂಡು ಬರುವುದಿಲ್ಲ, ಸ್ಥಿರವಾದ ಈ ಅಶ್ವತ್ಥ ವೃಕ್ಷವನ್ನು ವೈರಾಗ್ಯವೆಂಬ ಆಯುಧದಿಂದ ಕತ್ತರಿಸಿ ಹಾಕಬೇಕು ।೩॥

ಆದರೆ ಅರ್ಜುನಾ, ಈ ಪ್ರಕಾರದ ಇಂತಹ ಪ್ರಚಂಡವಾಗಿ ಬೆಳೆದ ಯಾವ ಸಂಸಾರರೂಪ ವೃಕ್ಷವನ್ನು ಕಿತ್ತೊಗೆಯುವ ಸಾಧನವಾದರೂ ಯಾವುದಿರಬಹುದೆಂಬ ಅನುಮಾನವು ನಿನ್ನ ಮನದಲ್ಲಿ ಬರಬಹುದು ।೨೧೦॥

ಕಾರಣ ಅದರ ಮೇಲ್ಭಾಗದ ಶಾಖೆಗಳ ಬೆಳೆವಣಿಗೆಯು ಬ್ರಹ್ಮಲೋಕದವರೆಗೂ ಇದ್ದು ಅದರ ಬೇರುಗಳು ನಿರಾಕಾರ ಬ್ರಹ್ಮನಲ್ಲಿ ಇರುವುವು ।೨೧೧॥

ಈ ವೃಕ್ಷದ ಕೆಳಗೆ ಬರುವ ಟೊಂಗೆಗಳು ಸ್ಥಾವರ ಜಂಗಮದ ತಳದಲ್ಲಿ ಸೇರಿಕೊಂಡು ಇದರ ಮಧ್ಯಭಾಗದಲ್ಲಿ ಮೃತ್ಯುಲೋಕವು ತುಂಬಿಕೊಂಡಿದೆ ।೨೧೨॥

ಈ ಪ್ರಕಾರವಾಗಿ ಈ ವೃಕ್ಷವು ಅತಿ ಬಲಿಷ್ಠ ಹಾಗೂ ಅತಿ ದೊಡ್ಡದಾಗಿದ್ದು ಇದರ ನಾಶವನ್ನು ಯಾರಿಂದ ಮಾಡಿಸಬೇಕೆಂದು ಇಂತಹ ಕ್ಷುದ್ರಭಾವನೆಯನ್ನು ಕದಾಚಿತ್ ಮನದಲ್ಲಿ ತರಬೇಡ ।೨೧೩॥

ಹಾಗಾದರೆ ಇಲ್ಲಿ ನೋಡು, ಈ ವೃಕ್ಷವನ್ನು ಕಿತ್ತೊಗೆಯಲು ಅದಾವ ಶ್ರಮಪಡಬೇಕಾಗಿದೆ? ಚಿಕ್ಕ ಮಕ್ಕಳಿಗೆ ಬೆದರಿಸಲು ತೋರಿಸುವ ''ಬಾಗುಲ ಬೋವಾ'' ನನ್ನು ಎಲ್ಲಿಯಾದರೂ ಓಡಿಸಬೇಕಾಗಿದೆಯೇ? ।೨೧೪॥

ಆಕಾಶದಲ್ಲಿ ಕಾಣುವ ಕೋಟೆಗಳನ್ನು ಕೆಡುವ ಬೇಕಾಗುವುದೇ? ಹಾಗೆಯೇ ಮೊಲದ ಕೊಂಬುಗಳನ್ನು ಮುರಿಯಬೇಕಾಗಿದೆಯೇ? ಆಕಾಶದಲ್ಲಿ ಹೂವುಗಳಿದ್ದರಲ್ಲವೇ, ಅವುಗಳನ್ನು ಬಿಡಿಸಿಕೊಳ್ಳುವ ಶ್ರಮ ।೨೧೫॥

ಅದರಂತೆ ಅರ್ಜುನಾ, ನಿನಗೆ ಹೇಳಿರುವ ಈ ವೃಕ್ಷವು ನಿಜವಲ್ಲ. ಅಂದಮೇಲೆ ಅದನ್ನು ಕಿತ್ತೊಗೆಯಲು ಯಾವ ಭಯವಿರುವುದು? ।೨೧೬॥

ಆಮ್ಹೀ ಸಾಂಗಿತಲೀ ಜೇ ಪರೀ । ಮೂಳಡಾಳಾಂಚೇ ಉಜರೀ । ತೇ ವಾಂಝೋಚೇ ಘರಭರೀ । ಲೇಕುರೇ ಜೈಶೀ ।।೨೧೭।। ಕಾಯ ಕೀಜತೀ ಚೇಇಲೇಪಣೇ । ಸ್ವಪ್ನೀಂಚೇ ತಿಯೇ ಬೋಲಣೇ । ತೈಶೀ ಜಾಣ ತೇ ಕಾಹಾಣೀ । ದುಗಳೀಂಚಿ ತೇ ।।೨೧೮।। ವಾಂಚೂನಿ ಆಮ್ಹೀ ನಿರೂಪಿಲೇ ಜೈಸೇ । ಯಯಾಚೇ ಅಚಳ ಮೂಳ ಅಸೇ ತೈಸೇ । ಆಣಿ ತೈಸಾಚಿ ಜರೀ ಹಾ ಅಸೇ । ಸಾಚೋಕಾರಾ ।।೨೧೯।। ತರೀ ಕೋಣಾಚೇನಿ ಸಂತಾನೇ । ನಿಪಜತೀ ತಯಾ ಉನ್ಮೂಳಣೇ । ಕಾಯ ಫುಂಕಿಲಿಯಾ ಗಗನೇ । ಜಾಇಜೇಲ ಗಾ! ।।೨೨೦।। ಮ್ಹಣೌನಿ ಪೈ ಧನಂಜಯಾ । ಆಮ್ಹೀ ವಾನಿಲೇ ರೂಪ ತೇ ಮಾಯಾ । ಕಾಸವೀಚೇನಿ ತುಪೇ ರಾಯಾ । ವೋಗರಿಲೇ ಜೈಸೇ ।।೨೨೧।। ಮೃಗಜಳಾಚೀ ಗಾ ತಳೀ । ತಿಯೇ ದಿಠೀ ದುರೂನಿ ವ್ಯಾಹಾಳೀ । ವಾಂಚೂನಿ ತೇಣೇ ಪಾಣಿಯೇ ಸಾಳೀ ಕೇಳೀ । ಲಾವಿಸೀ ಕಾಈ? ।।೨೨೨।। ಮೂಳ ಅಜ್ಞಾನಚಿ ತಂವ ಲಟಿಕೇ । ಮಾ ತಯಾಚೇ ಕಾರ್ಯ ಹೇ ಕೇತುಕೇ । ಮ್ಹಣೌನಿ ಸಂಸಾರ ರುಖ ಸತುಕೇ । ವಾವೋಚಿ ಗಾ ।।೨೨೩।। ಆಣಿ ಅಂತು ಯಯಾ ನಾಹೀ । ಐಸೇ ಬೋಲಿಜೇ ಜೇ ಕಾಂಹೀ । ತೇಂಹೀ ಸಾಚಚಿ ಪಾಹೀ । ಯೇಕೇ ಪರೀ ।।೨೨೪।। ತರೀ ಪ್ರಬೋಧು ಜಂವ ನೋಹೇ । ಕೀ ರಾತ್ರೀ ನ ಸರೆ ತಂವ ನ ಪಾಹೇ । ತಂವ ನಿದ್ರೇ ಕಾಯ ಅಂತು ಆಹೇ? । ತಯಾ ಆರೌತೇ? ।।೨೨೫।। ತೈಸಾ ಜಂವ ಪಾರ್ಥಾ । ವಿವೇಕು ನುಧವೀ ಮಾಥಾ । ತಂವ ಅಂತು ನಾಹೀ ಅಶ್ವತ್ಥಾ । ಭವರೂಪಾ ಯಾ ।।೨೨೬।। ವಾಜತೇ ವಾರೇ ನಿವಾಂತ । ಜಂವ ನ ರಾಹೇ ಜೇಥೀಂಚೇ ತೇಥ । ತಂವ ತರಂಗತಾ ಅನಂತ । ಮ್ಹಣಾವೀಚಿ ಕೀ ।।೨೨೭।। ಮ್ಹಣೌನಿ ಸೂರ್ಯು ಜೈ ಹಾರಪೇ । ತೈ ಮೃಗಜಳಾಭಾಸು ಲೋಪೇ । ಕಾ ಪ್ರಭಾ ಜಾಯ ದೀಪೇ । ಮಾಲವಲೇನೀ ।।೨೨೮।। ತೈಸೇ ಮೂಳ ಅವಿದ್ಯಾ ಖಾಯೇ । ತೇ ಜ್ಞಾನ ಜೈ ಉಭೇ ಹೋಯೇ । ತೈಂಚಿ ಯಯಾ ಅಂತು ಆಹೇ । ಯೇರ್ಹವೀ ನಾಹೀ ।।೨೨೯।। ತೇವೀಂಚಿ ಹಾ ಅನಾದೀ । ಐಸೀ ಹೀ ಆಥೀ ಶಾಬ್ದೀ । ತೋ ಆಳು ನೋಹೇ ಅನುರೋಧೀ । ಬೋಲಾತೇ ಯಾ ।।೨೩೦।। ಜೇ ಸಂಸಾರವೃಕ್ಷಾಚ್ಯಾ ಠಾಯೀ । ಸಾಚೋಕಾರ ತಂವ ನಾಹೀ । ಮಾ ನಾಹೀ ತಯಾ ಆದಿ ಕಾಈ । ಕೋಣ ಹೋಈಲ? ।।೨೩೧।। ಜೋ ಸಾಚ ಜೇಥೂನಿ ಉಪಜೇ । ತಯಾತೇ ಆದಿ ಹೇ ಸಾಜೇ । ಆತಾ ನಾಹೀಂಚಿ ತೋ ಮ್ಹಣಿಜೇ । ಕೋಠೂನಿಯಾ? ।।೨೩೨।।

ನಾವು ಈ ವೃಕ್ಷದ ಬೇರುಗಳ ಟೊಂಗೆಗಳ ವಿಷಯಕ್ಕೆ ಹೇಳಿದ್ದೆಲ್ಲವೂ ಬಂಜೆಯ ಮನೆತುಂಬ ಮಕ್ಕಳಿರುವರೆಂದು ಹೇಳಿದಂತೆ ನೋಡು ।।೨೧೭।।

ಸ್ವಪ್ನದಲ್ಲಿ ಭಾಷಣಗಳನ್ನು ಮಾಡುತ್ತೇವೆ, ಎಚ್ಚರಾದ ಮೇಲೆ ಅದು ನಿಜವೆಂದು ಅನುಭವಕ್ಕೆ ಬರುವುದೇ? ಅದೇ ಪ್ರಕಾರ ಈ ಸಂಸಾರರೂಪ ವೃಕ್ಷದ ಕಥೆಯಾಗಿ, ಸ್ವಪ್ನದ ಅಣ್ಣನಾಗಿರುವುದು ।।೨೧೮।।

ಇಲ್ಲದಿದ್ದರೆ, ನಾವು ವರ್ಣನೆ ಮಾಡಿದಂತೆ ಈ ವೃಕ್ಷದ ಬೇರುಗಳು ತುಂಬಿಕೊಂಡು ಪರಿಪೂರ್ಣ ವಿಸ್ತಾರವಾಗಿದ್ದು ನಿಜವಾಗಿದ್ದರೇ ।।೨೧೯।।

ಇದನ್ನು ಕಿತ್ತೊಗೆಯಲು ಅವನು ಯಾವ ತಾಯಿಯ ಹೊಟ್ಟೆಯಲ್ಲಿ ಹುಟ್ಟಬೇಕಾದೀತು? ಇಲ್ಲಿ ನೋಡು, ಜಿಗಿದೂದಿದರೆ ಆಕಾಶವು ಹಾರಿ ಹೋಗುವುದೇ ? ।।೨೨೦।।

ಆದ್ದರಿಂದ ಹೇ ಧನಂಜಯನೇ, ರಾಜನ ಭೋಜನ ಸಮಾರಂಭದಲ್ಲಿ ಆಮೆಯ ತುಪ್ಪವನ್ನು ಬಡಿಸುವುದು ಹೇಗೆ ಅಸಂಭವವೋ, ಅದರಂತೆ ನಾವು ಈ ಸಂಸಾರರೂಪ ವೃಕ್ಷದ ಸ್ವರೂಪ ವರ್ಣನೆ ಮಾಡಿರುವುದು ಎಲ್ಲವೂ ಸುಳ್ಳಾಗಿರುವುದು ।।೨೨೧।।

ಮೃಗಜಲದ ಸರೋವರವನ್ನು ದೂರಿನಿಂದ ನೋಡಲು ಯೋಗ್ಯವು. ಅದರ ಹೊರತಾಗಿ ಅದರಿಂದ ಭತ್ತ, ಬಾಳೆಯ ಬೆಳೆಯನ್ನು ಬೆಳೆಯಬಹುದೇ ? ।।೨೨೨।।

ಮೊದಲೇ ಅಜ್ಞಾನವು ಸುಳ್ಳಾಗಿರುವುದು. ಅಂದಮೇಲೆ ಅದರಿಂದಾಗುವ ಕಾರ್ಯಗಳಿಗೆ ಯಾವ ಬೆಲೆ? ಆದ್ದರಿಂದ ಸಂಸಾರರೂಪ ವೃಕ್ಷವು ಎಲ್ಲವೂ ಸುಳ್ಳಾಗಿರುವುದು ।।೨೨೩।।

ಮತ್ತು ಈ ವೃಕ್ಷಕ್ಕೆ ಅಂತ್ಯವಿಲ್ಲ ಎಂಬುವುದು ಇದೂ ಸಹ ಒಂದು ದೃಷ್ಟಿಯಿಂದ ನಿಜವಿದೆ ।।೨೨೪।।

ಆದರೆ, ಎಲ್ಲಿಯವರೆಗೆ ಮನುಷ್ಯನು ಎಚ್ಚರನಾಗಿಲ್ಲವೋ ಅಲ್ಲಿಯವರೆಗೆ ನಿದ್ರೆಗೆ ಕೊನೆ ಇದೆಯೇ? ಅಥವಾ ರಾತ್ರಿ ಮುಗಿಯದೇ ಹಗಲಾಗುವುದಿಲ್ಲ ।।೨೨೫।।

ಅದರಂತೆ ಪಾರ್ಥಾ, ಎಲ್ಲಿಯವರೆಗೆ ಬ್ರಹ್ಮಜ್ಞಾನವು ಉತ್ಪನ್ನವಾಗಿಲ್ಲವೋ, ಅಲ್ಲಿಯವರೆಗೆ ಈ ಸಂಸಾರರೂಪ "ಅಶ್ವತ್ಥ"ಕ್ಕೆ ಅಂತ್ಯವಿಲ್ಲ ।।೨೨೬।।

ಎಲ್ಲಿಯವರೆಗೆ ಗಾಳಿಯು ಬೀಸುತ್ತಿರುವುದೋ, ಅಲ್ಲಿಯವರೆಗೆ ಸಮುದ್ರದ ಮೇಲೆ ತೆರೆಗಳು ಇದ್ದೇ ಇರುವುವು ಎಂದು ಹೇಳಲೇಬೇಕಾಗುವುದು ।।೨೨೭।।

ಆದ್ದರಿಂದ, ಸೂರ್ಯನು ಅಸ್ತನಾದಾಗ ಮೃಗಜಲದ ಭಾಸವು ಇಲ್ಲದಾಗುವುದು. ಅಥವಾ ದೀಪದ ಪ್ರಕಾಶವು ದೀಪ ಆರಿದ ಮೇಲೆ ಇಲ್ಲದಾಗುವುದು ।।೨೨೮।।

ಅದರಂತೆ ಈ ಸಂಸಾರರೂಪದ ವೃಕ್ಷದ ಮೂಲವು ಅಜ್ಞಾನವಾಗಿದ್ದು, ಅದು ಬ್ರಹ್ಮಜ್ಞಾನ ಉದಯವಾಗದ ಹೊರತು ಇಲ್ಲದಾಗುವುದಿಲ್ಲ ।।೨೨೯।।

ಅದರಂತೆ ಇದಕ್ಕೆ ಅನಾದಿ ಎಂದು ಜನರು ಹೇಳುವರು. ಆದರೆ ನಿಜವಾಗಿ ನೋಡಿದರೆ, ಇದು ಅದರ ಮೇಲೆ ನೆಪ ಮಾತ್ರ ಇರದೇ, ಈ ಮಾತು ಅದರ ಲಕ್ಷಣಗಳನ್ನು ಅನುಸರಿಸಿಕೊಂಡೇ ಇರುವುದು ।।೨೩೦।।

ಕಾರಣ, ಸಂಸಾರ ವೃಕ್ಷದಲ್ಲಿ ಸತ್ಯತ್ವವೇ ಇಲ್ಲ, ಅಂದ ಮೇಲೆ ಅದು ಮೂಲದಲ್ಲಿಯೇ ಇಲ್ಲ. ಹಾಗಾದರೆ ಅದರ ಆರಂಭ ಯಾರಾಗುವರು? ।।೨೩೧।।

ಯಾವುದು ನಿಜವಾಗಿಯೂ ಒಂದು ಸ್ಥಾನದಿಂದ ಉತ್ಪನ್ನವಾಗುವುದೋ, ಅದಕ್ಕೆ ಆದಿ ಎಂದು ಹೇಳುವುದು ಶೋಭಿಸುವುದು. ಆದರೆ ಯಾವುದು ವಸ್ತುತಃ ಇಲ್ಲವೇ ಇಲ್ಲವೆಂದಾಗ ಅದು ಆದಿ ಎಲ್ಲಿಂದಿರಬೇಕು? ।।೨೩೨।।

ಮ್ಹಣೌನಿ ಜನ್ಮೇ ನಾ ಆಹೇ । ಐಸಿಯಾ ಸಾಂಗೋ ಕವಣ ಮಾಯೇ । ಯಾಲಾಗೀ ನಾಹೀ ಪಣೇಂಚಿ ಹೋಯೇ । ಅನಾದಿ ಹಾ ।೨೩೩॥ ವಾಂಝೋಚಿಯಾ ಲೇಕಾ । ಕೈಂಚೀ ಜನ್ಮ ಪತ್ರಿಕಾ । ನಭೀ ನಿಳೀ ಭೂಮಿಕಾ । ಕೇ ಕಲ್ಪೂ ಪಾ? ।೨೩೪॥ ವ್ಯೋಮಕುಸುಮಾಂಚಾ ಪಾಂಡವಾ । ಕವಣೇ ದೇಠು ತೋಡಾವಾ । ಮ್ಹಣೌನಿ ನಾಹೀ ಐಸಿಯಾ ಭವಾ । ಆದಿ ಕೈಂಚೀ? ।೨೩೫॥ ಜೈಸೇ ಘಟಾಚೇ ನಾಹೀಪಣ । ಅಸತಚಿ ಅಸೇ ಕೇಲೇನಿವೀಣ । ತೈಸಾ ಸಮೂಳ ವೃಕ್ಷು ಜಾಣ । ಅನಾದಿ ಹಾ ।೨೩೬॥ ಅರ್ಜುನಾ ಐಸೇನಿ ಪಾಹೀ । ಆದ್ಯಂತು ಯಯಾಸಿ ನಾಹೀ । ಮಾಜೀ ಸ್ಥಿತೀ ಆಭಾಸೇ ಕಾಂಹೀ । ಪರೀ ಟವಾಳ ತೇ ಗಾ ।೨೩೭॥ ಬ್ರಹ್ಮಗಿರೀಹೂನಿ ನ ನಿಗೇ । ಆಣಿ ಸಮುದ್ರೀಂಹೀ ಕೀರ ನ ರಿಗೇ । ಮಾಜೀ ದಿಸೇ ವಾಉಗೇ । ಮೃಗಾಂಬು ಜೈಸೇ ।೨೩೮॥ ತೈಸಾ ಆದ್ಯಂತೀ ಕೀರ ನಾಹೀ । ಆಣೀ ಸಾಚಚಿ ನೋಹೇ ಕಹೀ । ಪರೀ ಲಟಿಕೇಪಣಾಚೀ ನವಾಈ । ಪಡಿಭಾಸೇ ಗಾ ।೨೩೯॥ ನಾನಾ ರಂಗೀ ಗಜಬಜೇ । ಜೈಸೇ ಇಂದ್ರಧನುಷ್ಯ ದೇಖಿಜೇ । ತೈಸಾ ನೇಣತಯಾ ಆಪಜೇ । ಆಹೇ ಐಸಾ ।೨೪೦॥ ಐಸೇನಿ ಸ್ಥಿತೀಚಿಯೇ ವೇಳೇ । ಭುಲವೀ ಅಜ್ಞಾನಾಚೇ ಡೋಳೇ । ಲಾಘವೀ ಹರೀ ಮೇಖಳೇ । ಲೋಕು ಜೈಸಾ ।೨೪೧॥ ಆಣಿ ನಸತೀಚಿ ಶ್ಯಾಮಿಕಾ । ವ್ಯೋಮೀ ದಿಸೇ ತೈಸೀ ದಿಸೋ ಕಾ । ತರೀ ದಿಸಣೇಂಹೀ ಕ್ಷಣಾ ಏಕಾ । ಹೋಯ ಜಾಯ ।೨೪೨॥ ಸ್ವಪ್ನೀಹೀ ಮಾನಿಲೇ ಲಟಿಕೇ । ತರೀ ನಿರ್ವಾಹೋ ಕಾ ಏಕಾಸಾರಿಖೇ । ತೇವೀ ಆಭಾಸು ಹಾ ಕ್ಷಣಿಕೇ । ರಿತಾಚಿ ಗಾ ।೨೪೩॥ ದೇಖತಾ ಆಹೇ ಆವಡೇ । ಫೇಊ ಜಾಇಜೇ ತರೀ ನಾತುಡೇ । ಜೈಸಾ ಟಿಕು ಕೀಜೇ ಮಾಕಡೇ । ಜಳಾಮಾಜೀ ।೨೪೪॥ ತರಂಗಭಂಗು ಸಾಂಡೀ ಪಡೇ । ವಿಜೂಹೀ ನ ಪುರೇ ಹೋಡೇ । ಆಭಾಸಾಸಿ ತೇಣೇ ಪಾಡೇ । ಹೋಣೇ ಜಾಣೇ ಗಾ ।೨೪೫॥ ಜೈಸಾ ಗ್ರೀಷ್ಮಶೇಷೀಂಚಾ ವಾರಾ । ನೇಣಿಜೇ ಸಮೋರ ಕೀ ಪಾಠೀ ಮೋರಾ । ತೈಸೀ ಸ್ಥಿತೀ ನಾಹೀ ತರುವರಾ । ಭವರೂಪ ಯಯಾ ।೨೪೬॥ಏವಂ ಆದಿ ನಾ ಅಂತುಸ್ಥಿತೀ । ನಾ ರೂಪ ಯಯಾಸಿ ಆಥೀ । ಆತಾ ಕಾಯಸೀ ಕುಂಥಾಕುಂಥೀ । ಉನ್ಮೂಳಣೇ ಗಾ ।೨೪೭॥ ಆಪುಲಿಯಾ ಅಜ್ಞಾನಾಸಾಠೀ । ನವ್ಢತಾ ಥಾಂವಲಾ ಕಿರೀಟೀ । ತರೀ ಆತಾ ಆತ್ಮಜ್ಞಾನಾಚ್ಯಾ ಲೋಟೀ । ಖಾಂಡೇನಿ ಗಾ ।೨೪೮॥ ವಾಂಚೂನಿ ಜ್ಞಾನೇವೀಣ ಏಕೇ । ಉಪಾಯ ಕರಿಸೀ ಜಿತುಕೇ । ತಿಹೀ ಗುಂಫಸಿ ಅಧಿಕೇ । ರುಖೀ ಇಯೇ ।೨೪೯॥

ಆದ್ದರಿಂದ ಯಾವುದಕ್ಕೆ ಜನ್ಮವೇ ಇಲ್ಲದಾಗ ಅದಕ್ಕೆ ತಾಯಿ ಯಾರು ಎಂದು ಹೇಳಬೇಕು? ಅದಕ್ಕಾಗಿ ಈ ವೃಕ್ಷವು ಅಭಾವರೂಪದಿಂದ ಅಂದರೆ ಇಲ್ಲವೆಂತಲೇ ಇದೆ. ಆದ್ದರಿಂದ ಇದಕ್ಕೆ ಅನಾದಿ ಅಂದಿರುವುದಷ್ಟೇ! ।।೨೩೩।।

ಬಂಜೆಯ ಮಗುವಿನ ಜನ್ಮ ಪತ್ರಿಕೆಯು ಎಲ್ಲಿಂದ ಬರ ಬೇಕು? ಅದರಂತೆ ಆಕಾಶದ ಬಣ್ಣವು ನೀಲಿಯಾಗಿದೆ ಎಂದು ಹೀಗೆ ಕಲ್ಪನೆ ಹೇಗೆ ಮಾಡಲು ಬರಬಹುದು? ।।೨೩೪।।

ಅರ್ಜುನಾ, ಆಕಾಶದಲ್ಲಿನ ಹೂವುಗಳ ತುಂಬುಗಳನ್ನು ಯಾರಿಗೆ ಮುರಿಯಲು ಬರಬಹುದು? ಆದ್ದರಿಂದ ಈ ಸಂಸಾರರೂಪ ವೃಕ್ಷಕ್ಕೆ ಅಸ್ತಿತ್ವವು ಇಲ್ಲ. ಅಂದಮೇಲೆ ಅದಕ್ಕೆ ಮೂಲಾರಂಭ ಎಲ್ಲಿಂದ ಬರಬೇಕು? ।।೨೩೫।।

ಘಟೋತ್ಪತ್ತಿಯ ಪೂರ್ವದಲ್ಲಿ ಘಟದ ಅಭಾವವು, ಯಾರಾದರೂ ಮಾಡದ ಹೊರತು ಅನಾದಿಯೇ ಆಗಿದೆ. ಅದರಂತೆ ಸಂಸಾರವೃಕ್ಷದ ಮೂಲವಾದ ಮಾಯೆಯು ಇದರ ಸಹ ವರ್ತಮಾನ ಈ ಸಂಸಾರವು ಅಭಾವರೂಪದಿಂದ ಅನಾದಿಯಾಗಿರುವುದು ।।೨೩೬।।

ಅರ್ಜುನಾ, ಈ ಪ್ರಕಾರ ಅನುಭವವಿದೆ. ಆದ್ದರಿಂದ ಇದಕ್ಕೆ ಆದಿಯೂ ಇಲ್ಲ, ಅಂತವೂ ಇಲ್ಲ. ಹೀಗಿದ್ದರೂ ವ್ಯವಹಾರದಲ್ಲಿ ಇದು ಪ್ರತ್ಯಕ್ಷವಾಗಿ ತೋರುವುದು. ಈ ತೋರುವಿಕೆಯು ಮೃಗಜಲದಂತೆ ವ್ಯರ್ಥವಾಗಿರುವುದು ।।೨೩೭।।

ಮೃಗಜಲವು ಬ್ರಹ್ಮಗಿರಿಯಿಂದ ಉಗಮವಾಗುವು ದಿಲ್ಲ, ಅಥವಾ ಸಮುದ್ರಕ್ಕೆ ಬಂದು ಕೂಡುವುದೂ ಇಲ್ಲ. ಹೀಗಿದ್ದರೂ ಮಧ್ಯಂತರದಲ್ಲಿ ಕಾಣುವುದು ।।೨೩೮।।

ಅದರಂತೆ ಈ ಸಂಸಾರ ವೃಕ್ಷವು ಆದಿಕಾಲದಲ್ಲಿಲ್ಲ, ಕೊನೆಗೂ ಇಲ್ಲ. ನಡುವೆ ಕಂಡರೆ ಅದು ಅಲ್ಲವೇ ಅಲ್ಲ. ಆದರೆ ಈ ಸುಳ್ಳಿನ ಚಮತ್ಕಾರವೇನೆಂದರೆ ಇಲ್ಲದಿದ್ದರೂ ಇದ್ದಂತೆ ಭಾಸವಾಗುವುದು ।।೨೩೯।।

ಇಂದ್ರ ಧನುಷ್ಯವು (ಕಾಮನಬಿಲ್ಲು) ಯಾವ ಪ್ರಕಾರ ವಾಗಿ ನಾನಾ ಬಣ್ಣಗಳಿಂದ ತುಂಬಿಕೊಂಡಂತೆ ಕಾಣಿಸು ವುದೋ, ಅದರಂತೆ ಅಜ್ಞಾನಿಗಳಿಗೆ ಮಾತ್ರ ಈ ಸಂಸಾರರೂಪ ವೃಕ್ಷವು ಇದೆ ಎನ್ನುವಂತೆ ಕಾಣುವುದು ।।೨೪೦।।

ಹೇಗೆಂದರೆ, ವೇಷಗಾರನು ಜನರ ಕಣ್ಣಿಗೆ ತನ್ನ ಚಾತು ರ್ಯದಿಂದ ಭ್ರಮೆ ತರುವಂತೆ, ಸಂಸಾರವು ತನ್ನ ಸ್ಥಿತಿಯಲ್ಲಿ ಅಜ್ಞಾನಿಗಳ ಕಣ್ಣಿಗೆ ತನ್ನ ಸತ್ಯತ್ವದ ಭ್ರಮೆ ತರುವುದು ।।೨೪೧।।

ಮತ್ತು ಆಕಾಶದಲ್ಲಿ ಇಲ್ಲದೆಯೇ ನೀಲಿ ಬಣ್ಣದಂತೆ ಕಾಣುವುದು. ಅದರಲ್ಲಿ ಸತ್ಯತ್ವವು ಇದೆಯೇ? ಅದು ಸಹ ಕ್ಷಣದಲ್ಲಿ ನಷ್ಟವಾಗುವುದು? ।।೨೪೨।।

ಸ್ವಪ್ನದಲ್ಲಿನ ಪದಾರ್ಥಗಳು ಸುಳ್ಳಾಗಿದ್ದು, ಸತ್ಯವೆಂದು ತಿಳಿದರೆ ಅವುಗಳಿಂದ ಉಪಜೀವನವಾಗುವುದೇ? ಅದರಂತೆ, ಇದು ಆಭಾಸ ಮಾತ್ರ ಸಂಸಾರವು, ವಸ್ತುತಃ ಇಲ್ಲ. ಕಂಡರೂ ಅದು ಕ್ಷಣಕಾಲವೂ ಒಂದೇ ರೂಪದಿಂದ ಇರುವುದಿಲ್ಲ ।।೨೪೩।।

ಜಲದಲ್ಲಿ ತೋರುವ ತನ್ನ ಪ್ರತಿಬಿಂಬವನ್ನು ಮಂಗವು ಹಿಡಿಯಲು ಪ್ರಯತ್ನಿಸಿದಂತೆ ಸತ್ಯವೆಂದೆನಿಸುವ ಈ ಸಂಸಾರಕ್ಕೆ ಹಿಡಿಯಲು ಹೋದರೆ ಏನೂ ಸಿಗುವುದಿಲ್ಲ ।।೨೪೪।।

ತೆರೆಗಳು ಒಂದರಿಂದ ಒಂದು ಬರುವ ತೀವ್ರತೆ, ಮಿಂಚಿನ ತೀವ್ರತೆ, ಇವುಗಳಿಗಿಂತಲೂ ವಿಶ್ವಾಭಾಸದ ಈ ವೃಕ್ಷದ ಆಗುಹೋಗುಗಳು ಅತಿ ತೀವ್ರವಾಗಿವೆ ।।೨೪೫।।

ಗ್ರೀಷ್ಮ ಋತುವಿನ ಕೊನೆಯ ಗಾಳಿಯು ಹಿಂದೆ ಬೀಸು ವುದೋ ಅಥವಾ ಮುಂದೆ ಬೀಸುವುದೋ ಎಂಬುದು ತಿಳಿಯ ದಂತೆ, ಈ ಇಲ್ಲದ ಸಂಸಾರರೂಪ ವೃಕ್ಷದ ಸ್ಥಿತಿಯಾಗಿರು ವುದು ।।೨೪೬।।

ಈ ಪ್ರಕಾರವಾಗಿ ಈ ವೃಕ್ಷಕ್ಕೆ ಆದಿ, ಅಂತ, ಸ್ಥಿತಿ ಮತ್ತು ರೂಪ ಇವು ಯಾವುವು ಇಲ್ಲದಿರುವಾಗ ಇದನ್ನು ಕಿತ್ತೊಗೆ ಯಲು ಯಾತರ ಖಟಪಟ? ।।೨೪೭।।

ಅರ್ಜುನಾ, ಆತ್ಮಸ್ವರೂಪದ ಅಜ್ಞಾನದಿಂದ ಈ ಇಲ್ಲದ ವೃಕ್ಷವು ಬಲಾಢ್ಯವಾಗಿದೆ. ಅದಕ್ಕಾಗಿ ಈಗ ಆತ್ಮ ಜ್ಞಾನ ರೂಪ ಶಸ್ತ್ರದಿಂದ ಅದನ್ನು ಮುರಿದೊಗೆದರೆ ಸಾಕು ।।೨೪೮।।

ಕಾರಣ, ಒಂದು ಬ್ರಹ್ಮಜ್ಞಾನದ ಹೊರತಾಗಿ ಇದನ್ನು ಛೇದಗೊಳಿಸಲು ಎಷ್ಟು ಅಸುರೀ ಉಪಾಯಗಳನ್ನು ಮಾಡು ವಿಯೋ, ಅಷ್ಟೇ ನೀನು ಈ ವೃಕ್ಷದಲ್ಲಿ (ಸಂಸಾರದಲ್ಲಿ) ಹೆಚ್ಚು ಹೆಚ್ಚಾಗಿ ಸಿಲುಕಿ ಬೀಳುವೆ ।।೨೪೯।।

ಮಗ ಕಿತೀ ಖಾಂದೋಖಾಂದೀ । ಯಯಾ ಹಿಂಡಾವೇ ಊರ್ಧ್ವಿ ಅಧೀ । ಮ್ಹಣೌನಿ ಮೂಳಚಿ ಅಜ್ಞಾನ ಛೇದೀ । ಸಮ್ಯಕ್‌ಜ್ಞಾನೇ ।೮೫೦॥ ಯೇರ್ಹವೀ ದೋರಿಚಿಯಾ ಉರಗಾ । ಡಾಂಗಾ ಮೇಳವಿತಾ ಪೈ ಗಾ । ತೋ ಶಿಣುಚಿ ವಾಉಗಾ । ಕೇಲಾ ಹೋಯ ।೮೫೧॥ ತರಾವಯಾ ಮೃಗಜಳಾಚೀ ಗಂಗಾ । ಡೋಣೀಲಾಗೀ ಧಾಂವತಾ ದಾಂಗಾ । ಮಾಜೀ ವೋಹಳೇ ಬುಡಿಜೇ ಪೈ ಗಾ । ಸಾಚ ಜೇವೀ ।೮೫೨॥ ತೇವೀ ನಾಥಿಲಿಯಾ ಸಂಸಾರಾ । ಉಪಾಈ ಜಾಚತಯಾ ವೀರಾ । ಆಪಣಪೇ ಲೋಪೇ ವಾರಾ । ವಿಕೋಪೀ ಜಾಯ ।೮೫೩॥ ಮ್ಹಣೌನಿ ಸ್ವಪ್ನೀಂಚಿಯಾ ಘಾಯಾ । ವೋಖದ ಚೇವೋಚಿ ಧನಂಜಯಾ । ತೇವೀ ಅಜ್ಞಾನ ಮೂಳಾ ಯಯಾ । ಜ್ಞಾನಚಿ ಖಡ್ಗ ।೮೫೪॥ ಪರೀ ತೇಚಿ ಲೀಲಾ ಪರಜವೇ । ತೈಸೇ ವೈರಾಗ್ಯಾಚೇ ನವೇ । ಅಭಂಗಬಳ ಹೋಆವೇ । ಬುದ್ಧೀಸಿ ಗಾ ।೮೫೫॥ ಉಠಿಲೇನಿ ವೈರಾಗ್ಯೇ ಜೇಣೇ । ಹಾ ತ್ರಿವರ್ಗು ಐಸಾ ಸಾಂಡಣೇ । ಜೈಸೇ ವಮುನಿಯಾ ಸುಣೇ । ಆತಾಂಚಿ ಗೇಲೇ ।೮೫೬॥ ಹಾ ಠಾಯಪರೀ ಪಾಂಡವಾ । ಪದಾರ್ಥಜಾತೀ ಆಘವಾ । ವಿಟವೀ ತೋ ಹೋಆವಾ । ವೈರಾಗ್ಯ ಲಾಠು ।೮೫೭॥ ಮಗ ದೇಹಾಹಂತೇಚೇ ದಳೇ । ಸಾಂಡೂನಿ ಏಕೇಚಿ ವೇಳೇ । ಪ್ರತ್ಯಕ್‌ಬುದ್ಧಿ ಕರತಳೇ । ಹಾತವಸಾವೇ ।೮೫೮॥ ನಿಸಳೇ ವಿವೇಕಸಾಹಣೇ । ಜೇ ಬ್ರಹ್ಮಾಹಮಸ್ಮಿ ಬೋಧೇ ಸಣಾಣೇ । ಮಗ ಪುರತೇನಿ ಬೋಧೇ ಉಟಣೇ । ಏಕಲೇಚಿ ।೮೫೯॥ ಪರೀ ನಿಶ್ಚಯಾಚೇ ಮುಷ್ಟಿ ಬಳ । ಪಾಹಾವೇ ಏಕದೋನೀ ವೇಳ । ಮಗ ತುಳಾವೇ ಅತಿ ಚೋಖಾಳ । ಮನನವರೀ ।೮೬೦॥ ಪಾಠೀ ಹತಿಯೇರಾ ಆಪಣಯಾ । ನಿದಿಧ್ಯಾಸೇ ಏಕ ಜಾಲಿಯಾ । ಪುಢೇ ದುಜೇ ನುರೇಲ ಘಾಯಾ । ಪುರತೇ ಗಾ ।೮೬೧॥ ತೇ ಆತ್ಮಜ್ಞಾನಾಚೇ ಖಾಂಡೇ । ಅದ್ವೈತ ಪ್ರಭೇಚೇನಿ ವಾಡೇ । ನೇದೀಲ ಊರೋ ಕವಣೇಕಡೇ । ಭವವೃಕ್ಷಾಸೀ ।೮೬೨॥ ಶರದಾಗಮೀಂಚಾ ವಾರಾ । ಜೈಸಾ ಕೇರು ಫೇಡೀ ಅಂಬರಾ । ಕಾ ಉದಯಲಾ ರವೀ ಆಂಧಾರಾ । ಫೋಂಟು ಭರೀ ।೮೬೩॥ ನಾನಾ ಉಪವಢ ಹೋತಾ ಖೇಂವೋ । ನುರೇ ಸ್ವಪ್ನಸಂಭ್ರಮಾಚಾ ಠಾವೋ । ಸ್ವಪ್ರತೀತಿಧಾರೇಚಾ ವಾಹೋ । ಕರೀಲ ತೈಸೇ ।೮೬೪॥ ತೇವ್ಹಾ ಊರ್ಧ್ವೀಚೇ ಮೂಳ । ಕಾ ಅಧೀಂಚೇ ಹನ ಶಾಖಾಜಾಳ । ತೇ ಕಾಂಹೀಚಿ ನ ದಿಸೇ ಮೃಗಜಳ । ಚಾಂದಿಣಾಜೇವೀ ।೮೬೫॥

ತದನಂತರ ನೀನು ಟೊಂಗೆಗಳಿಂದ ಟೊಂಗೆಗೆ ಮೇಲೆ ಕೆಳಗೆ ಎಷ್ಟೊಂದು ಅಗಣಿತ ಟೊಂಗೆಗಳ ಮೇಲೆ ನಡೆಯುವಿಯೋ ತಿಳಿಯುವುದೇ ಇಲ್ಲ. ಅದಕ್ಕಾಗಿ ಇದರ ಮೂಲವಾದ ಅಜ್ಞಾನವನ್ನು ಜ್ಞಾನದಿಂದ ಛೇದಿಸು ।।೨೫೦।।

ಇಲ್ಲದಿದ್ದರೆ ಹಗ್ಗದಂತೆ ಭಾಸವಾದ ಸರ್ಪವನ್ನು ಕೊಲ್ಲಲು ಅನೇಕ ಬಡಿಗೆ ಕೋಲುಗಳನ್ನು ಸಂಗ್ರಹಿಸುವ ಶ್ರಮವು ವ್ಯರ್ಥವಾದಂತೆ ಆಗುವುದು ।।೨೫೧।।

ಮೃಗಜಲದ ದೊಡ್ಡ ಹೊಳೆಯನ್ನು ದಾಟ ಹೋಗಲು ಡೋಣಿಗಾಗಿ ಧಾವಿಸಿ ಹುಡುಕುತ್ತ ಅರಣ್ಯದ ನಿಜವಾದ ಹಳ್ಳದಲ್ಲಿ ಮುಳುಗಿದಂತೆ ।।೨೫೨।।

ಅದಕ್ಕಾಗಿ ವೀರನೇ, ಈ ಸುಳ್ಳು ಸಂಸಾರದ ನಿವೃತ್ತಿಯ ಉಪಾಯ ಮಾಡುವಾಗ ಮನುಷ್ಯನು ಭ್ರಮೆ ಹೊಂದುವನು ಮತ್ತು ತನ್ನ ನಿಜ ಜ್ಞಾನದ ಲೋಪವಾಗಿರುವುದಕ್ಕೆ ಆತನ ಸಂಸಾರವು ಸತ್ಯವೆಂಬ ಗಾಳಿಯು ತುಂಬಿ ಅದು ಅಧಿಕಗೊಳ್ಳುವುದು ।।೨೫೩।।

ಹೇ ಧನಂಜಯನೇ, ಸ್ವಪ್ನದಲ್ಲಿ ಖಡ್ಗದ ಘಾಯವಾಗಲು ಅದಕ್ಕೆ ಎಚ್ಚರಾಗುವುದೇ ಔಷಧವು. ಅದರಂತೆ ಅಜ್ಞಾನ ಮೂಲವಾದ ಈ ಸಂಸಾರವೃಕ್ಷಕ್ಕೆ ಜ್ಞಾನ ಖಡ್ಗ ಬೇಕಾಗುವುದು ।।೨೫೪।।

ಆದರೆ ಅದೇ ಜ್ಞಾನಖಡ್ಗವನ್ನು ಸಹಜವಾಗಿ ಧರಿಸಲು ಬರಬೇಕಾದರೆ ಬುದ್ಧಿಗೆ ವೈರಾಗ್ಯದ ಬಲವು ಬೇಕಾಗುವುದು ।।೨೫೫।।

ಆ ವೈರಾಗ್ಯವು ಹೇಗಿರಬೇಕೆಂದರೆ, ನಾಯಿಯ ವಾಂತಿಯನ್ನು ನೋಡಿದಾಗ ಎಷ್ಟು ಹೇಸಿಗೆಯಾಗುವುದೋ, ಅಷ್ಟೇ ಹೇಸಿಗೆಯು ತ್ರೈಲೋಕ್ಯದ ಭೋಗದ ಮೇಲೆ ಆಗಬೇಕು ।।೨೫೬।।

ಅರ್ಜುನಾ, ಪದಾರ್ಥ ಮಾತ್ರದಲ್ಲಿ ಈ ಪ್ರಕಾರದ ಹೇಸಿಗೆಯನ್ನುಂಟು ಮಾಡುವ ವೈರಾಗ್ಯದ ಬಲವು ಇರಬೇಕಾಗುವುದು ।।೨೫೭।।

ನಂತರ ದೇಹದ ಅಹಂತೆರೂಪ ಒರೆಯಿಂದ ವೈರಾಗ್ಯರೂಪ ಖಡ್ಗವನ್ನು ಒಮ್ಮೆಲೆ ಹಿರಿದು ಅದನ್ನು ವಿಚಾರವಂತ ಬುದ್ಧಿರೂಪ ಕೈಯಲ್ಲಿ ಕೊಡಬೇಕು ।।೨೫೮।।

ಆಗ ಆ ಖಡ್ಗವನ್ನು ವಿವೇಕರೂಪ ಸಾಣೀಕಲ್ಲಿನ ಮೇಲೆ ಮಸೆದು ''ಅಹಂಬ್ರಹ್ಮ'' ಈ ಬೋಧದ ತೀಕ್ಷ್ಣವಾದ ಧಾರೆ ಹಚ್ಚಬೇಕು ಮತ್ತು ಅದಕ್ಕೆ ಅದ್ವೈತ ರೂಪ ನೀರನ್ನು ಕುಡಿಸಬೇಕು ।।೨೫೯।।

ಇಷ್ಟಾದ ಮೇಲೆ ನಿಶ್ಚಯರೂಪ ಮುಷ್ಟಿಯಲ್ಲಿ ಹಿಡಿದುಕೊಂಡು ಒಂದೆರಡು ಸಲ ಬಲ ಉಂಟೆಂಬುದನ್ನು ಪರೀಕ್ಷಿಸಿ ನೋಡಬೇಕು ।।೨೬೦।।

ನಂತರ ಜ್ಞಾನಖಡ್ಗದ ಮತ್ತು ತನ್ನ ನಿಧಿಧ್ಯಾಸದ ಐಕ್ಯವಾದ ಮೇಲೆ ಆ ದ್ವೈತರೂಪ ವೃಕ್ಷವು ಒಂದು ಸಲ ಪೆಟ್ಟು ಹಾಕಬೇಕೆನ್ನುವಷ್ಟು ಸಹ ಉಳಿಯುವುದಿಲ್ಲ ।।೨೬೧।।

ಈ ಆತ್ಮಜ್ಞಾನರೂಪ ಶಸ್ತ್ರವು ಅದ್ವೈತ ಪ್ರಮೇಯ ತೇಜದಿಂದ ಭವರೂಪ ವೃಕ್ಷಕ್ಕೆ ಎಲ್ಲಿಯೂ ಉಳಿಯಗೊಡುವುದಿಲ್ಲ ।।೨೬೨।।

ಶರದ್ ಋತುವಿನ ಆರಂಭದ ಗಾಳಿಯು ಆಕಾಶದಲ್ಲಿ ಎಲ್ಲ ಮೋಡಗಳನ್ನು ಇಲ್ಲದಂತೆ ಮಾಡುವುದು. ಅಥವಾ ಸೂರ್ಯೋದಯವಾದ ಮೇಲೆ ಎಲ್ಲ ಕತ್ತಲೆಯು ಇಲ್ಲದಂತಾಗುವುದು ।।೨೬೩।।

ಅಥವಾ ಎಚ್ಚರಾದಾಗಲೇ ಸ್ವಪ್ನದಲ್ಲಿನ ಸಂಭ್ರಮಗಳು ನಾಶವಾಗುವುವು. ಅದರಂತೆ ಆತ್ಮಜ್ಞಾನಾನುಭವರೂಪ ಖಡ್ಗಧಾರೆಯ ಹರಿತದಿಂದ ಸಂಸಾರರೂಪ ವೃಕ್ಷದ ನಾಶವಾಗುವುದು ।।೨೬೪।।

ಆಗ ಬೆಳದಿಂಗಳು ಬಿದ್ದಾಗ ಮೃಗಜಲವು ಕಾಣಿಸದಂತೆ, ಸಂಸಾರರೂಪ ವೃಕ್ಷದ ಮೇಲ್ಭಾಗ, ಕೆಳಭಾಗ ಮತ್ತು ಎಲ್ಲ ಕಡೆ ಬೆಳೆದ ವಿಸ್ತಾರವು ಯಾವುದೂ ಕಾಣಿಸುವುದಿಲ್ಲ ।।೨೬೫।।

ಐಸೇನಿ ಗಾ ವೀರಾನಾಥಾ । ಆತ್ಮ ಜ್ಞಾನಾಚಿಯಾ ಖಡ್ಗ ಲತಾ । ಛೇದೂನಿಯಾ ಭವಾಶ್ವತ್ಥಾ । ಊರ್ಧ್ವಮೂಳಾತೇ ।।೨೬೬।।

ತತಃ ಪದಂ ತತ್ಪರಿಮಾರ್ಗಿತವ್ಯಂ ಯಸ್ಮಿನ್ ಗತಾ ನ ನಿವರ್ತಂತಿ ಭೂಯಃ ।
ತಮೇವ ಚಾದ್ಯಂ ಪುರುಷಂ ಪ್ರಪದ್ಯೇ ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ।೪।।

ಮಗ ಇದಂತೇಸಿ ವಾಳಲೇ । ಜೇ ಮೀಪಣೇವೀಣ ಡಾಹಾರಲೇ । ತೇ ರೂಪ ಪಾಹಿಜೇ ಆಪಲೇ । ಆಪಣಚೇ ।।೨೬೭।। ಪರೀ ದರ್ಪಣಾಚೇನಿ ಆಧಾರೇ । ಏಕಚಿ ಕರೂನಿ ದುಸರೇ । ಮುಖ ಪಾಹಾತೀ ಗವ್ಹಾರೇ । ತೈಸೇ ನಕೋ ಹೋ! ।।೨೬೮।। ಹೇ ಪಾಹಾಣೇ ಐಸೇ ಅಸೇ ವೀರಾ । ಜೈಸಾ ನ ಬೋಡಲಿಯಾ ವಿಹಿರಾ । ಮಗ ಆಪಲಿಯಾ ಉಗಮೀ ಝರಾ । ಭರೋನಿ ಠಾಕೇ ।।೨೬೯।। ನಾತರೀ ಆಟಲಿಯಾ ಅಂಭ । ನಿಜಬಿಂಬೀ ಪ್ರತಿಬಿಂಬ । ನಿಹಟೇ ಕಾ ನಭೀನಭ । ಘಟಾಭಾವೀ ।।೨೭೦।। ನಾನಾ ಇಂಧನಾಂಶು ಸರಲೇಯಾ । ವಹ್ನಿ ಪರತೇ ಜೇವೀ ಆಪಣಪಯಾ । ತೈಸೇ ಆಪೇಆಪ ಧನಂಜಯಾ । ನ್ಯಾಹಾಳಣೇ ಜೇ ಗಾ ।।೨೭೧।। ಜಿವ್ಹೇ ಆಪಲೀ ಚವೀ ಚಾಖಣೇ । ಚಕ್ಷು ನಿಜ ಬುಬುಳ ದೇಖಣೇ । ಆಹೇ ತಯಾ ಐಸೇ ನಿರೀಕ್ಷಣೇ । ಆಪುಲೇ ಪೈ ।।೨೭೨।। ಕಾ ಪ್ರಭೇಸಿ ಪ್ರಬಾ ಮಿಳೇ । ಗಗನ ಗಗನಾವರೀ ಲೋಳೇ । ನಾನಾ ಪಾಣೀ ಭರಲೇ ಖೋಳೇ । ಪಾಣಿಯಾಚಿಯೇ ।।೨೭೩।। ಆಪಣೇಂಚಿ ಆಪಣ ಯಾತೇ । ಪಾಹಿಜೇ ಜೇ ಅದ್ವೈತೇ । ತೇ ಐಸೇ ಹೋಯ ನಿರುತೇ । ಬೋಲಿಜತು ಅಸೇ ।।೨೭೪।। ಜೇ ಪಾಹಿಜತೇನವೀಣ ಪಾಹಿಜೇ । ಕಾಂಹೀ ನೇಣಣಾಚಿ ಜಾಣಿಜೇ । ಆದ್ಯಪುರುಷ ಕಾ ಮ್ಹಣಿಜೇ । ಜಯಾ ಠಾಯಾತೇ ।।೨೭೫।। ತೇಥಹೀ ಉಪಾಧೀಚಾ ವೋಥಂಬಾ । ಘೇಊನಿ ಶ್ರುತಿ ಉಭವಿತೀ ಜಿಭಾ । ಮಗ ನಾಮರೂಪಾಚಾ ವಡಂಬಾ । ಕರಿತೀ ವಾಯಾ ।।೨೭೬।। ಪೈ ಭವಸ್ವರ್ಗಾ ಉಬಗಲೇ । ಮುಮುಕ್ಷು ಯೋಗಜ್ಞಾನಾ ವಳಘಲೇ । ಪುಢತೀ ನಯೋ ಇಯಾ ನಿಗಾಲೇ । ಪೈಜಾ ಜೇಥ ।।೨೭೭।। ಸಂಸಾರಾಚಿಯಾ ಪಾಯಾ ಪುಢಾ । ಪಳತೀ ವೀತರಾಗ ಹೋಡಾ । ಓಲಾಂಡೋನಿ ಬ್ರಹ್ಮಪದಾಚಾ ಕರ್ಮ ಕಡಾ । ಘಾಲಿತೀ ಮಾಗಾ ।।೨೭೮।। ಅಹಂತಾದಿಭಾವಾ ಆಪುಲಿಯಾ । ರಘಾಡಾ ದೇಊನಿ ಆಘವೇಯಾ । ಪತ್ರ ಘೇತೀ ಜ್ಞಾನಿಯೇ ಜಯಾ । ಮೂಳಘರಾಸೀ ।।೨೭೯।। ಪೈ ಜೇಥುನೀ ಹೇ ಏವಢೀ । ವಿಶ್ವಪರಂಪರೇಚೀ ವೇಲಾಂಡೀ । ವಾಢತೀ ಆಶಾ ಜೈಸೀ ಕೋರಡೀ । ನಿದ್ರೈವಾಚೀ ।।೨೮೦।।

ಈ ಪ್ರಕಾರವಾಗಿ ಹೇ ವಿರೋತ್ತಮನೇ, ಆತ್ಮಜ್ಞಾನ ರೂಪ ಖಡ್ಗದಿಂದ ಈ ಸಂಸಾರರೂಪ ಅಶ್ವತ್ಥ ವೃಕ್ಷವನ್ನು ಸಮೂಲವಾಗಿ ಛೇದಿಸಿಬಿಡು ।।೨೬೬।।

ಶ್ಲೋಕಾರ್ಥ :- ಅನಂತರ ಯಾವನಿಂದ ಈ ಅನಾದಿಯಾದ ಸೃಷ್ಟಿಚಕ್ರವು ಚಲಾಯಮಾನ ವಾಗಿರುವುದೋ, ಆ ಆದಿ ಪುರುಷನನ್ನು ಶರಣು ಹೊಂದಿ ಪುನರಾ ವೃತ್ತಿ ರಹಿತವಾದ ಬ್ರಹ್ಮಪದವನ್ನು ಹುಡುಕಬೇಕು ।।೪।।

ಅಂದಾಗ ''ಇದಂ'' ಎಂಬ ಸರ್ವನಾಮದಿಂದ ತಿಳಿಯಲಾರದ ''ಅಹಂ'' ಎಂಬ ವೃತ್ತಿಗೂ ವಿಷಯವಾಗದ ಯಾವ ಆತ್ಮ ರೂಪವನ್ನು ತಾನೇ ನೋಡಬೇಕು ।।೨೬೭।।

ಆದರೆ ಹುಚ್ಚ ಜನರು ತಮ್ಮದೇ ಮುಖವನ್ನು ಕನ್ನಡಿಯಲ್ಲಿ ಪ್ರತಿಬಿಂಬ ಮಾಡಿ, ಅಂದರೆ ಬೇರೆ ಮಾಡಿ ನೋಡುವರು. ಅದರಂತೆ ಆತ್ಮನಲ್ಲಿ ಎರಡನ್ನು ಮಾಡಿ ನೋಡಬೇಡಿರಿ ।।೨೬೮।।

ಹೇ ವೀರನೇ, ಆತ್ಮಸ್ವರೂಪವನ್ನು ನೋಡುವುದು ಹೀಗಿದೆ. ಬಾವಿಯನ್ನು ತೋಡುವಾಗ ಅದರ ಸೆಲೆಯು ತನ್ನ ಉಗಮದಲ್ಲಿ ತುಂಬಿಕೊಂಡೇ ಇರುವುದು ।।೨೬೯।।

ಅಥವಾ ನೀರು ಇಂಗಿದ ಮೇಲೆ ಅದರಲ್ಲಿನ ಪ್ರತಿಬಿಂಬವು ನಿಜಬಿಂಬದಲ್ಲಿ ಐಕ್ಯವಾಗುವುದು ಅಥವಾ ಘಟವು ಒಡೆದರೆ ಘಟದಲ್ಲಿನ ಆಕಾಶವು ಮಹಾದಾಕಾಶಕ್ಕೆ ಕೂಡುವುದು ।।೨೭೦।।

ಕಟ್ಟಿಗೆಗಳು ಇಲ್ಲದಾಗಲು ಅವುಗಳಲ್ಲಿನ ಅಗ್ನಿಯು ತನ್ನ ಸ್ವರೂಪದಲ್ಲಿ ಲಯಗೊಳ್ಳುವುದು. ಅದರಂತೆ ಧನಂಜಯನೇ, ತನ್ನ ಸ್ವರೂಪವನ್ನು ತನ್ನ ಸ್ವರೂಪದಲ್ಲಿಯೇ ಕಾಣಬೇಕಾಗುವುದು ।।೨೭೧।।

ನಾಲಿಗೆಯು ತನ್ನ ರುಚಿಯನ್ನು ನೋಡಿದಂತೆ, ಕಣ್ಣುಗಳು ತಮ್ಮ ಗುಡ್ಡೆಗಳನ್ನು ನೋಡಿದಂತೆ ತನ್ನ ಸ್ವರೂಪವನ್ನು ತಾನೇ ನೋಡಬೇಕು ।।೨೭೨।।

ಪ್ರಭೆಯು ಪ್ರಭೆಗೆ ಕೂಡುವುದು, ಆಕಾಶವು ಆಕಾಶದ ಮೇಲೆ ಇರುವುದು ಮತ್ತು ಜಲವನ್ನು ಜಲಾಶಯದಲ್ಲಿ ತುಂಬಿರುವುದು ।।೨೭೩।।

ಈ ಪ್ರಕಾರವಾಗಿ ಅದ್ವೈತ ದೃಷ್ಟಿಯಿಂದ ತನ್ನ ಸ್ವರೂಪವನ್ನು ತಾನೇ ನೋಡುವ ರೀತಿಯಾಗಿರುವುದು. ಇದನ್ನು ನಿನಗೆ ನಿಶ್ಚಯಪೂರ್ವಕವಾಗಿ ಹೇಳುವೆನು ।।೨೭೪।।

ಇದನ್ನು ದ್ರಷ್ಟಾ ಹೊರತಾಗಿ ನೋಡಬೇಕು. ಯಾವುದಕ್ಕೆ ಯಾವ ಪ್ರಕಾರದ ವೃತ್ತಿಜ್ಞಾನಕ್ಕೆ ವಿಷಯ ಮಾಡದೇ ತಿಳಿಯಬೇಕು. ಯಾವುದು ಜಗದಾರಂಭದಲ್ಲಿ ಸದ್‌ರೂಪದಿಂದಿದೆ ಮತ್ತು ಶರೀರಪುರದಲ್ಲಿ ಇರುವುದಾಗಿದೆ. ಆದ್ದರಿಂದ ಇದಕ್ಕೆ '' ಆದ್ಯಪುರುಷ'' ಎನ್ನುವರು ।।೨೭೫।।

ಇದರಲ್ಲಿ ಉಪಾಧಿಯ ಆಶ್ರಯ ಮಾಡಿ ಶ್ರುತಿಗಳು ತಮ್ಮ ಉದ್ದ ಉದ್ದ ನಾಲಿಗೆಗಳಿಂದ ನಾಮರೂಪಗಳ ವ್ಯರ್ಥವಾಗಿ ಬಡಬಡಿಸುವುವು. ಇರಲಿ ।।೨೭೬।।

ಆದರೆ, ಇಂತಹ ಸ್ವರೂಪವನ್ನು ಪ್ರಾಪ್ತಿ ಮಾಡಿಕೊಳ್ಳಲು ಸ್ವರ್ಗ ಮತ್ತು ಸಂಸಾರ ಇವುಗಳಿಗೆ ಬೇಸತ್ತು ಮುಮುಕ್ಷುಗಳು ಪುನಃ ಹಿಂದಕ್ಕೆ ಬಾರದ ಜಿದ್ದಿನಿಂದ ಯೋಗಜ್ಞಾನದತ್ತ ಹೊರಟರು ।।೨೭೭।।

ಸಂಸಾರವು ಅವರ ಬೆನ್ನು ಹತ್ತಿದರೂ, ಅದಕ್ಕಿಂತಲೂ ವೇಗವಾಗಿ ಕಾಲುಹಾಕುತ್ತ ಪುನಃ ಸಂಸಾರದ ಕೈಗೆ ಸಿಗುವುದಿಲ್ಲ. ಈ ನಿಶ್ಚಯದಿಂದ ವೈರಾಗ್ಯಶೀಲ ಮುಮುಕ್ಷುಗಳು ಓಡಿದಾಗ, ಸಕಾಮ ಕರ್ಮದ ಫಲವಾದ ಕೊನೆಯ ಬ್ರಹ್ಮಲೋಕವನ್ನು ದಾಟಿ ಸಂಸಾರಕ್ಕೆ ಹಿಂದೆ ಹಾಕುವರು ।।೨೭೮।।

ಈ ಸ್ಥಿತಿಯಲ್ಲಿ ನಾನು ಇಂತಹ ವೈರಾಗ್ಯಜ್ಞಾನ ಸಂಪನ್ನನು ಎಂಬ ಸೂಕ್ಷ್ಮ ಅಭಿಮಾನವಾಗುವ ಸಂಭವವಿದೆ. ಆಗ ಅದನ್ನು ಸಹ ತ್ಯಾಗ ಮಾಡಿ ವಿಚಾರಿ ಮುಮುಕ್ಷು ತನ್ನ ನಿಜ ಸ್ವರೂಪಕ್ಕೆ ಮುಟ್ಟುವ ದಾಖಲೆ ಪಡೆಯುವನು ।।೨೭೯।।

ಈ ನಿಜಸ್ವರೂಪದಲ್ಲಿ ಇಷ್ಟೊಂದು ವಿಶ್ವ ಪರಂಪರೆಯ ಬಳ್ಳಿಯು ಹಬ್ಬಿದೆ ಎಂದು ಸಾಮಾನ್ಯ ಶಾಸ್ತ್ರಗಳು, ಜನರು ಹೇಳುವರು. ಆದರೆ ಈ ಹೇಳಿಕೆ ವ್ಯರ್ಥವು. ಭಾಗ್ಯಹೀನನ ಆಶೆಯು ಬೆಳೆಯುವಂತೆ ಇದಾಗಿದೆ ।।೨೮೦।।

ಜಿಯೇ ಕಾ ವಸ್ತೂಚೇ ನೇಣಣೇ । ಆಣಿಲೇ ಥೋರ ಜಗಾ ಜಾಣಣೇ । ನಾಹೀ ತೇ ನಾಂದ ವಿಲೇ ಜೇಣೇ । ಮೀ ತೂ ಜಗೀ ।೨೮೧॥ ಪಾರ್ಥಾ ತೇ ವಸ್ತು ಪಹಿಲೇ । ಆಪಣ ಪೈ ಆಪುಲೇ । ಪಾಹಿಜೇ ಜೈಸೇ ಹಿಂವಲೇ । ಹಿಂವ ಹಿಂವೇ ।೨೮೨॥ ಆಣೀಕಹೀ ಏಕ ತಯಾ । ವೋಳಖಣ ಅಸೇ ಧನಂಜಯಾ । ತರೀ ಜಯಾ ಕಾ ಭೇಟಲಿಯಾ । ಯೇಣೇಂಚಿ ನಾಹೀ ।೨೮೩॥ ಪರೀ ತಯಾ ಭೇಟತೀ ಐಸೇ । ಜೇ ಜ್ಞಾನೇ ಸರ್ವತ್ರ ಸರಿಸೇ । ಮಹಾಪ್ರಳಯಾಂ ಬೂಚೇ ಜೈಸೇ । ಭರಲೇಪಣ ।೨೮೪॥

ನಿರ್ಮಾನಮೋಹಾ ಜಿತಸಂಗದೋಷಾ ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ।
ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈಃ ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ।೫॥

ಜಯಾ ಪುರುಷಾಂಚೇ ಕಾ ಮನ । ಸಾಂಡೋನಿ ಗೇಲೇ ಮೋಹ ಮಾನ । ವರ್ಷಾಂತೀ ಜೈಸೇ ಘನ । ಆಕಾಶಾತೇ ।೨೮೫॥ ನಿಕವಡ್ಯಾ ನಿಷ್ಠುರಾ । ಉಬಗಿಜೇ ಜೇವಿ ಸೋಯರಾ । ತೈಸೇ ನಾಗವತೀ ವಿಕಾರಾ । ವೇಟಾಳೂ ಜೇ ।೨೮೬॥ ಫಳಲೀ ಕೇಳೀ ಉನ್ಮೂಳೇ । ತೈಸೀ ಆತ್ಮಲಾಭೇ ಪ್ರಬಳೇ । ತಯಾಚೀ ಕ್ರಿಯಾ ಢಾಳೇಢಾಳೇ । ಗಳತೀ ಆಹೇ ।೨೮೭॥ ಆಗೀ ಲಾಗಲಿಯಾ ರುಖೀ । ದೇಖೋನಿ ಸೈರಾ ಪಳತೀ ಪಕ್ಷೀ । ತೈಸೇ ಸಾಂಡಿಲೇ ಅಶೇಖೀ । ವಿಕಲ್ಪೀ ಜೇ ।೨೮೮॥ ಆಇಕೇ ಸಕಳ ದೋಷತೃಣೇ । ಅಂಕುರಿಜತೀ ಜಿಯೇ ಮೇದಿನೀ । ತಿಯೇ ಭೇದಬುದ್ಧೀಚೀ ಕಾಹಾಣೀ । ನಾಹೀ ಜಯಾತೇ ।೨೮೯॥ ಸೂರ್ಯೋದಯಾ ಸರಿಸಿ । ರಾತ್ರೀ ಪಳೋನಿ ಜಾಯ ಅಪೈಸೀ । ಗೇಲೀ ದೇಹಅಹಂತಾ ತೈಸೀ । ಅವಿದ್ಯೇಸವೇ ।೨೯೦॥ ಪೈ ಆಯುಷ್ಯಹೀನಾ ಜೀವಾತೇ । ಶರೀರ ಸಾಂಡೀ ಜೇವಿ ಅವಚಿತೇ । ತೇವಿ ನಿದಸುರೇ ದ್ವೈತೇ । ಸಾಂಡಿಲೇ ಜೇ ।೨೯೧॥ ಲೋಹಾಚೇ ಸಾಂಕಡೇ ಪರಿಸಾ । ನ ಜೋಡೇ ಅಂಧಾರು ರವೀ ಜೈಸಾ । ದ್ವೈತಬುದ್ಧೀಚಾ ತೈಸಾ । ಸದಾ ದುಕಾಳ ಜಯಾ ।೨೯೨॥ ಅಗಾ ಸುಖದುಃಖಕಾರೇ । ದ್ವಂದ್ವೇ ದೇಹೀ ಜಿಯೇ ಗೋಚರೇ । ತಿಯೇ ಜಯಾ ಕಾ ಸಮೋರೇ । ಹೋತೀಚಿನಾ ।೨೯೩॥ ಸ್ವಪ್ನೀಂಚೇ ರಾಜ್ಯ ಕಾ ಮರಣ । ನೋಹೇ ಹರ್ಷ ಶೋಕಾಂಸಿ ಕಾರಣ । ಉಪವಢಲಿಯಾ ಜಾಣ । ಜಿಯಾಪರೀ ।೨೯೪॥ ತೈಸೇ ಸುಖದುಃಖ ರೂಪೀ । ದ್ವಂದ್ವೀ ಜೇ ಪುಣ್ಯಪಾಪೀ । ನ ಘೇಪಿಜತೀ ಸರ್ಪೀ । ಗರುಡ ಜೈಸೇ ।೨೯೫॥

ಪರಮಾತ್ಮ ವಸ್ತುವಿನ ತಿಳಿಯುವ ಅಜ್ಞಾನವೇ ಜ್ಞಾನಕ್ಕೆ ದೊಡ್ಡಸ್ತಿಕೆ ತಂದಿದೆ. ಈ ಅಜ್ಞಾನವೇ ಕಾಲತ್ರಯಕ್ಕೂ ಇಲ್ಲದ, ನಾನು ನೀನು ಎಂಬುವುದನ್ನು ಜಗತ್ತಿನಲ್ಲಿ ವ್ಯವಹರಿಸಿರುವುದು ।೨೮೧॥

ಪಾರ್ಥಾ, ಈ ರೀತಿಯಾಗಿ ವಿಶ್ವದ ಪೂರ್ವದಲ್ಲಿರುವ ಬ್ರಹ್ಮವು, ಅದೇ ತನ್ನ ನಿಜ ಸ್ವರೂಪವಿದೆ ಎಂದು ನೋಡಬೇಕಾಗಿದೆ. ಥಂಡಿಯಿಂದ ಥಂಡಿಗೆ ವಿಷಯವನ್ನಾಗಿ ಮಾಡಬೇಕು ।೨೮೨॥

ಹೇ ಧನಂಜಯನೇ, ಯಾವ ನಿಜಪದವನ್ನು ಅರಿಯುವ ಇನ್ನೊಂದು ಲಕ್ಷಣವೇನೆಂದರೆ, ಯಾವ ಸ್ವರೂಪದ ಪ್ರಾಪ್ತಿಯಾದ ಮೇಲೆ ಅಲ್ಲಿಂದ ಪುನಃ ತಿರುಗಿ ಬರುವಂತಿಲ್ಲ ।೨೮೩॥

ಮಹಾಪ್ರಳಯ ಕಾಲದಲ್ಲಿ ಎಲ್ಲವೂ ಜಲಮಯವಾಗುವಂತೆ, ಜ್ಞಾನದ ಯೋಗದಿಂದ ಎಲ್ಲವೂ ಸಚ್ಚಿದಾನಂದ ಪರಬ್ರಹ್ಮ ಆತ್ಮಸ್ವರೂಪವೇ ಆಗುವುದು ।೨೮೪॥

**ಶ್ಲೋಕಾರ್ಥ** :- ಅಭಿಮಾನ ಮೋಹವಿಲ್ಲದವರು, ಆಸಕ್ತಿಯೆಂಬ ದೋಷವನ್ನು ಜಯಿಸಿದವರು, ಅಧ್ಯಾತ್ಮ ಜ್ಞಾನದಲ್ಲಿ ಮುಳುಗಿದವರು, ಬಯಕೆಗಳನ್ನು ಬಿಟ್ಟವರು, ಸುಖದುಃಖ ರೂಪವಾದ ದ್ವಂದ್ವಗಳನ್ನು ದಾಟಿದವರು, ಇಂಥ ಪಂಡಿತರು ಈ ಅವ್ಯಯಪದ ವನ್ನು ಪಡೆದುಕೊಳ್ಳುತ್ತಾರೆ ।೫॥

ಮಳೆಗಾಲವು ಮುಗಿದ ಮೇಲೆ ಮೋಡಗಳು ಆಕಾಶವನ್ನು ಬಿಟ್ಟು ಹೋಗುವಂತೆ, ಆ ಪುರುಷನ ಮನಸ್ಸಿನಿಂದ ಮೋಹ ಮತ್ತು ಅಭಿಮಾನಗಳು ತಾವೇ ಬಿಟ್ಟು ಹೋಗುವುವು ।೨೮೫॥

ನಿರ್ಧನ (ಬಡವ) ಮತ್ತು ನಿಷ್ಠುರ ಮನುಷ್ಯನಿಗೆ ಆತನ ಆಪ್ತರು ದೂರಾಗುವಂತೆ, ಈತನು ವಿಕಾರಗಳಲ್ಲಿ ಸಿಲುಕಿಕೊಳ್ಳುವುದಿಲ್ಲ ।೨೮೬॥

ಫಲವನ್ನು ಕೊಟ್ಟ ಬಾಳೆಗಿಡವು ಮುರಿದು ಬೀಳುವಂತೆ ಆತ್ಮಸ್ವರೂಪದ ಲಾಭದ ಮಹಾಬಲದಿಂದ ಆತನ ಕ್ರಿಯೆಗಳು ಮೆಲ್ಲಮೆಲ್ಲನೆ ನಿಲ್ಲಹತ್ತುವುವು ।೨೮೭॥

ಮರಕ್ಕೆ ಬೆಂಕಿಹತ್ತಿದಾಗ ಅದರ ಮೇಲೆ ಕುಳಿತಿರುವ ಎಲ್ಲ ಪಕ್ಷಿಗಳು ಮರವನ್ನು ಬಿಟ್ಟುಹೋಗುವುವು ।೨೮೮॥

ಯಾವ ಭೇದ ಬುದ್ಧಿರೂಪ ಪೃಥ್ವಿಯ ಮೇಲೆ ದೋಷ ರೂಪ ತೃಣಗಳ ಮೊಳಕೆಗಳು ಒಡೆಯುವುವು. ಆದರೆ ಈತನಿಗೆ ಈ ಭೇದ ಬುದ್ಧಿಯ ಮಾತೇ ಗೊತ್ತಿಲ್ಲ ।೨೮೯॥

ಸೂರ್ಯೋದಯವಾದಾಕ್ಷಣವೇ ರಾತ್ರಿಯು ಹೇಗೆ ತನ್ನಷ್ಟಕ್ಕೆ ತಾನೇ ಇಲ್ಲದಾಗುವುದೋ, ಹಾಗೆಯೇ ಆತ್ಮ ಸ್ವರೂಪದ ಲಾಭವಾದಾಗ ದೇಹಾಭಿಮಾನವು ಅಜ್ಞಾನ ಸಹ ನಷ್ಟವಾಗುವುದು ।೨೯೦॥

ಇಲ್ಲಿ ನೋಡು, ಆಯುಷ್ಯ ಹೀನ ಜೀವಕ್ಕೆ ಶರೀರವು ಆಕಸ್ಮಾತಾಗಿ ಬಿಡುವಂತೆ, ಮೋಹವನ್ನು ಹುಟ್ಟಿಸುವ ದ್ವೈತವು ಅವರನ್ನು ಬಿಟ್ಟು ಹೋಗುವುದು ।೨೯೧॥

ಪರಿಸಮಣಿಗೆ ಕಬ್ಬಿಣ ದೊರಕುವುದು ದುರ್ಲಭವು, ಅಥವಾ ಸೂರ್ಯನಿಗೆ ಕತ್ತಲೆಯು ಎಂದೂ ಸಿಗುವುದಿಲ್ಲ. ಅದರಂತೆ ಇವರಿಗೆ ದ್ವೈತಬುದ್ಧಿಯ ಸದಾವಕಾಲ ದುಷ್ಕಾಳವಿದೆ ।೨೯೨॥

ಅರೇ, ಈ ದೇಹದ ಅಭಿಮಾನವನ್ನು ಹಿಡಿದಾಗ ಸುಖ ದುಃಖಕಾರಕ ದ್ವೈತ (ದ್ವಂದ್ವ) ವು ಕಾಣುವುದು. ಆದರೆ ಇದು ಆತನ ಮುಂದೆ ಸಹ ಹಾಯುವುದಿಲ್ಲ ।೨೯೩॥

ಯಾವ ಪ್ರಕಾರವಾಗಿ ಎಚ್ಚರವಾದಾಗ್ಗೆ ಸ್ವಪ್ನದಲ್ಲಿ ಸಿಕ್ಕ ರಾಜ್ಯವು ಅಥವಾ ಪ್ರಾಪ್ತವಾದ ಮರಣವು ಇವುಗಳಿಂದಾಗುವ ಹರ್ಷ, ಶೋಕಗಳು ಆಗುವುದಿಲ್ಲ ।೨೯೪॥

ಯಾವ ಪ್ರಕಾರವಾಗಿ ಗರುಡನ ಮುಂದೆ ಸರ್ಪವು ಬರುವುದಿಲ್ಲವೋ, ಅದರಂತೆ ಸುಖದುಃಖರೂಪ ಪುಣ್ಯ ಮತ್ತು ಪಾಪಗಳನ್ನು ಹುಟ್ಟಿಸುವ ದ್ವೈತವು ಇವರನ್ನು ಗೆಲ್ಲಲಾರದು ।೨೯೫॥

ಆಣಿ ಅನಾತ್ಮ ವರ್ಗನೀರ । ಸಾಂಡೂನಿ ಆತ್ಮ ರಸಾಚೇ ಕ್ಷೀರ । ಚರತಾತೀ ಜೇ ಸವಿಚಾರ । ರಾಜಹಂಸು ।೯೯೬॥ ಜೈಸಾ ವರ್ಷೋನಿ ಭೂತಳೀ । ಆಪಲಾ ರಸು ಅಂಶುಮಾಳೀ । ಮಾಘೌತಾ ಆಣಿ ರಶ್ಮಿ ಜಾಳೀ । ಬಿಂಬಾಸೀಚೇ ।೯೯೭॥ ತೈಸೇ ಆತ್ಮ ಭ್ರಾಂತೀಸಾರೀ । ವಸ್ತು ವಿಖುರಲೀ ಬಾರಾವಾಟೀ । ತೇ ಏಕವಟತೀ ಜ್ಞಾನ ದೃಷ್ಟೀ । ಅಖಂಡ ಜೇ ।೯೯೮॥ ಕಿಂಬಹುನಾ ಆತ್ಮ ಯಾಚಾ । ನಿರ್ಧಾರೀ ವಿವೇಕು ಜಯಾಂಚಾ । ಬುಡಾಲಾ ವೋಘು ಗಂಗೇಚಾ । ಸಿಂಧೂಮಾಜೀ ಜೈಸಾ ।೯೯೯॥ ಪೈ ಆಘವೇಂಚಿ ಆಪುಲೇಪಣೇ । ನುರೇಚಿ ಜಯಾ ಅಭಿಲಾಷಣೇ । ಜೈಸೇ ಏಥೂನಿ ಪರ್ತ್ತಾ ಜಾಣೇ । ಆಕಾಶಾ ನಾಹೀ ।೩೦೦॥ ಜೈಸಾ ಅಗ್ನೀಚಾ ಡೋಂಗರು । ನೇಘೇ ಕೋಣೇ ಬೀಜ ಅಂಕುರು । ತೈಸಾ ಮನೀ ಜಯಾ ವಿಕಾರು । ಉದ್ಯೈಜೇನಾ ।೩೦೧॥ ಜೈಸಾ ಕಾಢಿಲಿಯಾ ಮಂದರಾಚಳು । ರಾಹೇ ಕ್ಷೀರಾಬ್ಧಿ ನಿಶ್ಚಳು । ತೈಸಾ ನುಠೀ ಜಯಾ ಸಳೂ । ಕಾಮೋರ್ಮೀಚಾ ।೩೦೨॥ ಚಂದ್ರಮಾ ಕಳೀ ಧಾಲಾ । ನ ದಿಸೇ ಕೋಣೇ ಆಂಗೀ ವೋಸಾವಲಾ । ತೇವೀ ಅಪೇಕ್ಷೀಚಾ ಅವಖಳಾ । ನ ಪಡೇ ಜಯಾ ।೩೦೩॥ ಹೇ ಕಿತೀ ಬೋಲು ಅಸಾಂಗಡೇ । ಜೇವೀ ಪರಮಾಣು ನುರೇ ವಾಯೂಪುಢೇ । ತೈಸೇ ವಿಷಯಾಂಚೇ ನಾವಡೇ । ನಾಂವಚಿ ಜಯಾ ।೩೦೪॥ ಏವಂ ಜೇ ಜೇ ಕೋಣೇ ಐಸೇ । ಕೇಲೇ ಜ್ಞಾನಾಗ್ನಿ ಹುತಾಸೇ । ತೇ ತೇಥ ಮಿಳತೀ ಜೈಸೇ । ಹೇಮೀ ಹೇಮ ।೩೦೫॥ ತೇಥ ಮ್ಹಣಿಜೇ ಕವಣೇ ಠಾಈ । ಐಸೇಹೀ ಪುಸಸೀ ಕಾಂಹೀ । ತರೀ ತೇ ಪದ ಗಾ ನಾಹೀ । ವೇಂಚು ಜಯಾ ।೩೦೬॥ ದೃಶ್ಯಪಣೇ ದೇಖಿಜೇ । ಕಾ ಜ್ಞೇಯತ್ವೇ ಜಾಣಿಜೇ । ಅಮುಕೇ ಐಸೇ ಮ್ಹಣಿಜೇ । ತೇ ಜೇ ನವ್ಹೇ ।೩೦೭॥

ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।
ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ।೬॥

ಪೈ ದೀಪಾಚಿಯಾ ಬಂಬಾಳೀ । ಕಾ ಚಂದ್ರ ಹನ ಜೇ ಉಜಳೀ । ಹೇ ಕಾಯ ಬೋಲೊ ಅಂಶುಮಾಳೀ । ಪ್ರಕಾಶೀ ಜೇ ।೩೦೮॥ ತೇ ಆಘವೇಂಚಿ ದಿಸಣೇ । ಜಯಾಚೇ ಕಾ ನ ದೇಖಣೇ । ವಿಶ್ವ ಭಾಸತಸೇ ಜೇಣೇ । ಲಪಾಲೇನಿ ।೩೦೯॥ ಜೈಸೇ ಶಿಂಪೀಪಣ ಹಾರಪೇ । ತಂವ ತಂವ ಖರೇ ಹೋಯ ರುಪೇ । ಕಾ ದೋರೀ ಲೋಪತಾ ಸಾಪೇ । ಥಾರ ಹೋಇಜೇ ।೩೧೦॥ ತೈಸೀ ಚಂದ್ರಸೂರ್ಯಾದಿ ಥೋರೇ । ಇಯೇ ತೇಜೇ ಜಿಯೇ ಫಾರೇ । ತಿಯೇ ಜಯಾಚೇನಿ ಆಂಧಾರೇ । ಪ್ರಕಾಶತೀ ।೩೧೧॥

ಮತ್ತು ವಿಚಾರವಂತ ರಾಜಹಂಸ ಪಕ್ಷಿಯು ದೇಹಾದಿ ಅನಾತ್ಮ ಸಮೂಹರೂಪ ನೀರನ್ನು ಬಿಟ್ಟು ಆತ್ಮಾನಂದದ ಹಾಲನ್ನು ಸೇವಿಸುವುದು ।೪೯೬॥

ಯಾವ ಪ್ರಕಾರವಾಗಿ ಸೂರ್ಯನು ಪೃಥ್ವಿಯ ಮೇಲೆ ಮಳೆಗರೆದು ಅದೇ ನೀರನ್ನು ತನ್ನ ಕಿರಣಗಳಿಂದ ತನ್ನಲ್ಲಿಯೇ ಶೋಷಣೆ ಮಾಡಿಕೊಳ್ಳುವನೋ ।೪೯೭॥

ಅದರಂತೆ, ಆತ್ಮಸ್ವರೂಪದ ಭ್ರಾಂತಿಯಾಗಿರುವುದರಿಂದ ಬ್ರಹ್ಮವು ನಾಲ್ಕೂ ಕಡೆಗಳಲ್ಲಿ ಹಬ್ಬಿರುವುದನ್ನು ಜ್ಞಾನ ದೃಷ್ಟಿ ಪ್ರಾಪ್ತವಾದಾಗ್ಗೆ ತನ್ನ ಸ್ವರೂಪದಲ್ಲಿ ಯಾವಾಗಲೂ ಐಕ್ಯವಾಗುವುದು ।೪೯೮॥

ಹೆಚ್ಚಿಗೇನು ಹೇಳಬೇಕು? ಗಂಗೆಯ ಪ್ರವಾಹವು ಸಮುದ್ರಕ್ಕೆ ಕೂಡಿದಾಗ ಇಲ್ಲದಾಗುವುದು. ಅದರಂತೆ ಆತ್ಮಸ್ವರೂಪದ ನಿರ್ಧಾರ ಮಾಡುವವನ ವಿವೇಕವು ಆತ್ಮಸ್ವರೂಪದಲ್ಲಿಯೇ ಲೀನವಾಗುವುದು ।೪೯೯॥

ಆಕಾಶದ ಸರ್ವತ್ರ ವ್ಯಾಪ್ತಿ ಇರುವುದರಿಂದ ಅದಕ್ಕೆ ಒಂದೂರಿನಿಂದ ಇನ್ನೊಂದೂರಿಗೆ ಹೋಗಬೇಕಾಗಿಲ್ಲ. ಅದರಂತೆ ಸರ್ವವೂ ತನ್ನ ರೂಪವೇ ಆಗಿರುವುದರಿಂದ ಯಾವುದೇ ಒಂದು ಪದಾರ್ಥದ ಅಭಿಲಾಷೆ ಇದೆ ಎಂಬುದು ಉಳಿಯುವುದಿಲ್ಲ ।೫೦೦॥

ಅಗ್ನಿಯ ಪರ್ವತದ ಮೇಲೆ ಯಾವ ಬೀಜ ಬಿತ್ತಿದರೂ ಅದು ಹುಟ್ಟುವುದಿಲ್ಲ. ಅದರಂತೆ ಯಾರಿಗೆ ಜ್ಞಾನೋದಯವಾಗಿದೆಯೋ, ಅಲ್ಲಿ ಯಾವುದೇ ವಿಕಾರಗಳು ಉದ್ಭವಿಸುವುದಿಲ್ಲ ।೫೦೧॥

ಸಮುದ್ರ ಮಂಥನ ಸಮಯದಲ್ಲಿ ಕ್ಷೀರಸಮುದ್ರದಲ್ಲಿ ಹಾಕಿದ ಮಂದರಾಚಲ ಪರ್ವತವನ್ನು ತೆಗೆದ ನಂತರ ಸಮುದ್ರವು ಸ್ಥಿರಗೊಂಡಿತು. ಅದರಂತೆ ಆತ್ಮ ಪ್ರಾಪ್ತಿಯಿಂದ ಆತನ ಮನದಲ್ಲಿ ಕಾಮವಾಸನೆ ಹುಟ್ಟುವುದಿಲ್ಲ ।೫೦೨॥

ಚಂದ್ರನು ಹದಿನಾರು ಕಲೆಗಳಿಂದ ತುಂಬಿಕೊಂಡಾಗ ಆತನಲ್ಲಿ ಎಲ್ಲಿಯೂ ಕಡಿಮೆ ಕಾಣಿಸುವುದಿಲ್ಲ. ಅದರಂತೆ ಇವರ ಮನದಲ್ಲಿ ಯಾವ ಅಪೇಕ್ಷೆಯೂ ಇರುವುದಿಲ್ಲ ।೫೦೩॥

ಹೀಗೆ ನಿರುಪಮ ಮಾತುಗಳನ್ನು ನಿನಗೆ ಎಷ್ಟೆಂದು ಹೇಳಲಿ? ಗಾಳಿಯ ಮುಂದೆ ಪರಮಾಣುಗಳು ನಿಲ್ಲದಂತೆ ಈತನಿಗೆ ವಿಷಯಗಳ ವಾರ್ತೆಯೂ ಹಿಡಿಸುವುದಿಲ್ಲ ।೫೦೪॥

ಈ ಪ್ರಕಾರವಾಗಿ ಬಲಿಯನ್ನು ಭಕ್ಷಿಸುವ ಜ್ಞಾನಾಗ್ನಿಯಲ್ಲಿ ಇವರು ಎಲ್ಲ ವಿಷಯಗಳನ್ನು ಸುಟ್ಟು ಹಾಕಿದರು. ಇದರಿಂದ ಇವರು ಬಂಗಾರದಲ್ಲಿ ಬಂಗಾರವನ್ನು ಕೂಡಿಸಿದಂತೆ ಅಲ್ಲಿ ಪ್ರಾಪ್ತರಾಗುವರು ।೫೦೫॥

ಅಲ್ಲಿ ಎಂದರೆ ಎಲ್ಲಿ ಎಂದು ನೀನು ಕೇಳಿದರೆ, ಯಾವ ಸ್ಥಾನವು ಎಂದೂ ನಾಶವಾಗುವುದಿಲ್ಲವೋ, ಅಂತಹ ಪರಮಾತ್ಮ ವಸ್ತುವಿನಲ್ಲಿ ಇವರು ಪ್ರಾಪ್ತರಾಗುವರು ।೫೦೬॥

ದೃಶ್ಯತ್ವದಿಂದ ನೋಡುವುದು, ಜ್ಞೇಯತ್ವದಿಂದ ತಿಳಿಯುವುದು, ಅಥವಾ ಇದು ಹೀಗೇ ಇದೆ ಎಂದು ಹೇಳುವುದು ಇತ್ಯಾದಿ ವ್ಯವಹಾರಗಳು ಎಲ್ಲಿ ಆಗುವುವೋ ಅದು ಬ್ರಹ್ಮವಲ್ಲ ।೫೦೭॥

**ಶ್ಲೋಕಾರ್ಥ** :- ಯಾವುದನ್ನು ಪಡೆದರೆ ತಿರುಗಿ ಬರಬೇಕಾದ ಅವಶ್ಯಕತೆ ಇರುವುದಿಲ್ಲವೋ, ಅದೇ ನನ್ನ ಪರಮಧಾಮ. ಸ್ವಯಂಪ್ರಕಾಶವಾದ ಅದನ್ನು ಸೂರ್ಯ ಚಂದ್ರರೂ, ಅಗ್ನಿಯೂ ಪ್ರಕಾಶಪಡಿಸಲಾರರು ।೬॥

ಆದರೆ, ದೀಪದ ದೊಡ್ಡ ಬೆಳಕಿನಿಂದ, ಅಥವಾ ಚಂದ್ರನ ಪ್ರಕಾಶದಿಂದ, ಇಷ್ಟೇ ಏಕೇ? ಸರ್ವ ಜಗತ್ತನ್ನು ಬೆಳಗುವ ಸೂರ್ಯ ಪ್ರಕಾಶದಿಂದ ।೫೦೮॥

ಈ ಎಲ್ಲ ಪ್ರಕಾಶಗಳಿಂದ ಯಾವುದು ದೃಷ್ಟಿಗೆ ಗೋಚರಿಸುವುದೋ, ಇಷ್ಟೇ ಅಲ್ಲ; ಎಲ್ಲ ವಿಶ್ವವು ಪರಮಾತ್ಮ ಸ್ವರೂಪದ ಅಜ್ಞಾನದಲ್ಲಿ, ಅಜ್ಞಾನದಿಂದಲೇ ದೃಷ್ಟಿಗೆ ಬೀಳುವುದು ।೫೦೯॥

ಕಪ್ಪೆಚಿಪ್ಪಿನ ಯಥಾರ್ಥವು ಲೋಪವಾದಂತೆಲ್ಲ ಬೆಳ್ಳಿಯ ಭಾಸವು ಬೆಳೆಯುವುದು, ಅಥವಾ ಹಗ್ಗದ ಯಥಾರ್ಥವು ಲೋಪವಾದಂತೆಲ್ಲ ಸರ್ಪದ ಭಾಸವು ಬರಲಾರಂಭಿಸುವುದು ।೫೧೦॥

ಅದರಂತೆ ಚಂದ್ರ, ಸೂರ್ಯ ಇತ್ಯಾದಿ ದೊಡ್ಡ ದೊಡ್ಡ ಪ್ರಕಾಶಗಳು ಆತ್ಮ ವಸ್ತುವಿನ ಅಜ್ಞಾನದೊಳಗೆ ಪ್ರಕಾಶ ಮಾಡುವುವು ।೫೧೧॥

ತೇ ವಸ್ತು ಕೀ ತೇಜೋರಾಶೀ । ಸರ್ವ ಭೂತಾತ್ಮಕ ಸರಿಸೀ । ಚಂದ್ರ ಸೂರ್ಯಾಂಚ್ಯಾ ಮಾನಸೀ । ಪ್ರಕಾಶೇ ಜೇ ।೩೧೨॥ ಮ್ಹಣೌನಿ ಚಂದ್ರಸೂರ್ಯ ಕಡವಸಾ । ಪಡತೀ ವಸ್ತೂಚ್ಯಾ ಪ್ರಕಾಶಾ । ಯಾಲಾಗೀ ತೇಜ ಜೇ ತೇಜಸಾ । ತೇ ವಸ್ತುಚೇ ಆಂಗ ।೩೧೩॥ ಆಣಿ ಜಯಾಚ್ಯಾ ಪ್ರಕಾಶೀ । ಜಗ ಹಾರಪೇ ಚಂದ್ರಾರ್ಕೇಂಸಿ । ಸಚಂದ್ರ ನಕ್ಷತ್ರೇ ಜೈಸೀ । ದಿನೋದಯೀ ।೩೧೪॥ ನಾತರೀ ಪ್ರಬೋಧಲಿಯೇ ವೇಳೇ । ತೇ ಸ್ವಪ್ನೀಂಚೇ ಡಿಂಡಿಮಾ ಮಾವಳೇ । ಕಾ ನುರೇಚಿ ಸಾಂಜವೇಳೇ । ಮೃಗತೃಷ್ಣಿಕಾ ।೩೧೫॥ ತೈಸಾ ಜಿಯೇ ವಸ್ತೂಚ್ಯಾ ಠಾಯೀ । ಕೋಣ್ಹೀಂಚ ಕಾ ಆಭಾಸು ನಾಹೀ । ತೇ ಮಾಝೇ ನಿಜಧಾಮ ಪಾಹೀ । ಪಾಟಾಚೇ ಗಾ ।೩೧೬॥ ಪುಢತೀ ಜೇ ತೇಥ ಗೇಲೇ । ತೇ ನ ಘೇತೀಚ ಮಾಘಾರೌತೀ ಪಾಉಲೇ । ಮಹೋದಧೀ ಕಾ ಮಿನಲೇ । ಸ್ರೋತ ಜೈಸೇ ।೩೧೭॥ ಕಾ ಲವಣಾಚೀ ಕುಂಜರೀ । ಸೂದಲಿಯಾ ಲವಣಸಾಗರೀ । ಹೋಯಚಿ ನಾ ಮಾಘಾರೀ । ಪರತೀ ಜೈಸೀ ।೩೧೮॥ ನಾನಾ ಗೇಲಿಯಾ ಅಂತರಾಳಾ । ನ ಯೇತೀಚಿ ವನ್ಹಿಜ್ವಾಳಾ । ನಾಹೀ ತಪ್ತಲೋಹೌನಿ ಜಳಾ । ನಿಘಣೇ ಜೇವೀ ।೩೧೯॥ ತೇವೀ ಮಜಸೀ ಏಕವಟ । ಜೇ ಜಾಲೇ ಜ್ಞಾನೇ ಚೋಖಟ । ತಯಾ ಪುನರಾವೃತ್ತೀಚೇ ವಾಟ । ಮೋಡಲೀ ಗಾ ।೩೨೦॥ ತೇಥ ಪ್ರಜ್ಞಾಪೃಥ್ವೀಚಾ ರಾವೋ । ಪಾರ್ಥು ಮ್ಹಣೇ ಜೇ ಜೇ ಪಸಾವೋ । ಪರೀ ವಿನಂತೀ ಏಕೀ ದೇವೋ । ಚಿತ್ತ ದೇತು ।೩೨೧॥ ತರೀ ದೇವೇಂಸಿ ಸ್ವಯೇ ಏಕ ಹೋತೀ । ಮಗ ಮಾಘಾರೌತೇ ಜೇ ನ ಯೇತೀ । ತೇ ದೇವೇಂಸಿ ಭಿನ್ನ ಆಥೀ । ಕೀ ಅಭಿನ್ನ ಜೇ ।೩೨೨॥ ಜರೀ ಭಿನ್ನಚಿ ಅನಾದಿ ಸಿದ್ಧ । ತರೀ ನ ಯೇತೀ ಹೇ ಅಸಂಬದ್ಧ । ಜೇ ಫುಲಾ ಗೇಲೇ ಷಟ್‌ಪದ । ತೇ ಫುಲೇಚಿ ಹೋತೀ ಪಾ? ।೩೨೩॥ ಪೈ ಲಕ್ಷಾಹೂನಿ ಅನಾರಿಸೇ । ಬಾಣ ಲಕ್ಷ್ಮೀ ಶಿವೋನಿ ಜೈಸೇ । ಮಾಗುತೇ ಪಡತೀ ತೈಸೇ । ಯೇತೀಚಿ ತೇ ।೩೨೪॥ ನಾತರೀ ತೂಂಚಿ ತೇ ಸ್ವಭಾವೇ । ತರೀ ಕೋಣೇ ಕೋಣಾಸಿ ಮಿಳಾವೇ । ಆಪಣ ಯಾಸೀ ಆಪಣ ರುಪಾವೇ । ಶಸ್ತ್ರೇ ಕೇವೀ? ।೩೨೫॥ ಮ್ಹಣೌನಿ ತುಜಸೀ ಅಭಿನ್ನಾ ಜೀವಾ । ತುಝ್ಯಾ ಸಂಯೋಗವಿಯೋಗು ದೇವಾ । ನಯೇ ಬೋಲೋ ಅವಯವಾ । ಶರೀರೇಸೀ ।೩೨೬॥ ಆಣಿ ಜೇ ಸದಾ ವೇಗಳೇ ತುಜಸೀ । ತಯಾ ಮಿಳಣೇ ನಾಹೀ ಕೋಣೇ ದಿವಶೀ । ಮಾ ಯೇತೀ ನ ಯೇತೀ ಹೇ ಕಾಯಸೀ । ವಾಯುಬುದ್ಧಿ? ।೩೨೭॥

ಈ ಯಾವ ವಸ್ತು, ಅತಿ ತೇಜಸ್ವಿಯಾಗಿದ್ದು ಸರ್ವಭೂತಗಳನ್ನು ವ್ಯಾಪಿಸಿದ್ದು, ಚಂದ್ರ ಮತ್ತು ಸೂರ್ಯರಿಗೂ ಪ್ರಕಾಶವನ್ನು ಕೊಡುವುದು ।೩೧೨॥

ಆದ್ದರಿಂದ ಈ ವಸ್ತುವಿನ ಪ್ರಕಾಶದ ಮುಂದೆ ಸೂರ್ಯ ಚಂದ್ರರ ಪ್ರಕಾಶವು ಒಂದು ಸಣ್ಣ ಕಿರಣದಂತಾಗುವುದು. ಅದಕ್ಕಾಗಿ ಎಲ್ಲ ತೇಜಸ್ವಿ ವಸ್ತುಗಳಿಗೆ ತೇಜವನ್ನು ಕೊಡುವ ತೇಜಃಪುಂಜವಾಗಿರುವ ಇದು ಬ್ರಹ್ಮನ ಅಂಗವಾಗಿದೆ ।೩೧೩॥

ಮತ್ತು ಸೂರ್ಯನು ಉದಯಿಸಿದನೆಂದರೆ ನಕ್ಷತ್ರಗಳ ಸಮೇತವಾಗಿ ಚಂದ್ರನು ನಿಸ್ತೇಜನಾಗುವಂತೆ, ಈ ವಸ್ತುವಿನ (ಜ್ಞಾನದ) ಪ್ರಕಾಶವಾಯಿತೆಂದರೆ ಸೂರ್ಯ ಚಂದ್ರ ಸಮೇತವಾಗಿ ಜಗವು ಲೋಪಗೊಳ್ಳುವುದು ।೩೧೪॥

ಅಥವಾ ಎಚ್ಚರಾದ ಮೇಲೆ ಸ್ವಪ್ನದಲ್ಲಿ ಭಾಸವಾಗಿರುವ ಎಲ್ಲ ವ್ಯವಹಾರಗಳು ಅಸ್ತವಾಗುವುವು. ಅಥವಾ ಸಾಯಂಕಾಲವಾಯಿತೆಂದರೆ, ಮೃಗಜಲವು ತನ್ನಷ್ಟಕ್ಕೆ ತಾನೇ ಇಲ್ಲದಾಗುವುದು ।೩೧೫॥

ಅದರಂತೆ ಯಾವ ವಸ್ತುವಿನಲ್ಲಿ ಯಾವುದೇ ಭಾಸವಿರುವುದಿಲ್ಲವೋ, ಅದು ನನ್ನ ಮುಖ್ಯ ಸ್ಥಾನವಾಗಿರುವುದು ।೩೧೬॥

ಅಲ್ಲಿ ಹೋದವರೆಲ್ಲ ಯಾವ ಪ್ರಕಾರವಾಗಿ ಸಮುದ್ರದಲ್ಲಿ ಕೂಡಿದ ಮೇಲೆ ನೀರಿನ ಪ್ರವಾಹವು ಹೇಗೆ ಹೊರಳಿ ಬರುವುದಿಲ್ಲವೋ, ಅದರಂತೆ ಸಂಸಾರದತ್ತ ಹೊರಳಿ ಬರುವುದಿಲ್ಲ ।೩೧೭॥

ಅಥವಾ ಉಪ್ಪಿನಿಂದ ತಯಾರಿಸಿದ ಆನೆಯನ್ನು ಸಮುದ್ರದಲ್ಲಿ ಮುಳುಗಿಸಿದಾಗ ಅದು ಮರಳಿ ಬರುವುದಿಲ್ಲ ।೩೧೮॥

ಅಥವಾ ಆಕಾಶದಲ್ಲಿ ಹೋದ ಅಗ್ನಿಯ ಜ್ವಾಲೆಯು ಕೆಳಗೆ ಮರಳಿ ಬರುವುದಿಲ್ಲ, ಅಥವಾ ಕಾದ ಹಂಚಿನಲ್ಲಿ ನೀರು ಇಲ್ಲದಾಗುವುದು (ಹೊರಳಿ ಬರುವುದಿಲ್ಲ) ।೩೧೯॥

ಅದರಂತೆ ಶುದ್ಧ ಜ್ಞಾನವಾಗಿರುವುದರಿಂದ ಅವರು ನನ್ನಲ್ಲಿ ಐಕ್ಯ ಹೊಂದುವರು, ಅವರು ಪುನರ್ಜನ್ಮದಿಂದ ಮುಕ್ತರಾಗುವರು ।೩೨೦॥

ಆಗ ಬುದ್ಧಿರೂಪ ಪೃಥ್ವಿಯ ರಾಜನಾದ ಅರ್ಜುನನು ಹೇಳಿದನು:- ಪ್ರಭೋ, ನಿಮ್ಮ ಪ್ರಸಾದವು ಇಂದು ನನಗೆ ದೊರಕಿತು, ಆದರೆ ನನ್ನದೊಂದು ವಿನಂತಿ ಇದೆ, ಅದಕ್ಕೆ ಲಕ್ಷ ಕೊಡಿರಿ ।೩೨೧॥

ಯಾರು ದೇವರ ಸ್ವರೂಪದಲ್ಲಿ ಕೂಡಿದಾಗ ಮರಳಿ ಬರುವುದಿಲ್ಲ ನಿಜ. ಆದರೆ ಅವರು ಪೂರ್ವದಲ್ಲಿ ದೇವರ ಸ್ವರೂಪದಿಂದ ಬಿನ್ನರಿದ್ದರೊ? ಅಥವಾ ಏಕರೂಪ ರಿದ್ದರೋ? ।೩೨೨॥

ಒಂದುವೇಳೆ ಅವರು ಅನಾದಿಸಿದ್ಧಕ್ಕೆ ಭಿನ್ನರಾಗಿದ್ದರೆ ಮರಳಿ ಬರುವುದಿಲ್ಲವೆಂದು ಹೇಳುವುದು ಅಸಂಭವವು. ಕಾರಣವೇನೆಂದರೆ ಭ್ರಮರವು ಹೂವಿನೊಳಗಿನ ಮಕರಂದ ಸೇವನೆಗೆ ಹೋದಾಗ್ಗೆ ಅದು ಅಲ್ಲಿ ಹೂವೇ ಆಗುವುದೇ? ।೩೨೩॥

ಇನ್ನು ಎರಡನೆಯ ಮಾತೆಂದರೆ, ಗುರಿಯಿಂದ ಭಿನ್ನವಾಗಿರುವ ಬಾಣವು ಗುರಿಗೆ ತಾಗಿ, ಬಳಿಕ ಕೆಳಗೆ ಬೀಳುವುದು. ಅದರಂತೆ ಅವರು ಮರಳಿ ಬರಲೇಬೇಕು ।೩೨೪॥

ಇಲ್ಲದಿದ್ದರೆ, ನೀವು ಅವರೇ, ಅವರೇ ಅದೇ, ಹೀಗೆ ವಸ್ತುತಃ ಇದ್ದರೆ, ಯಾರು ಯಾರನ್ನು ಕೂಡಬೇಕು? ।೩೨೫॥

ಆದ್ದರಿಂದ ದೇವನೇ, ನಿಮ್ಮ ಸ್ವರೂಪದಲ್ಲಿ ಯಾರ ಐಕ್ಯವಿದೆಯೋ, ಅವರಿಗೆ ನಿಮ್ಮ ಸಂಯೋಗ ವಿಯೋಗವಾಗುವುದೆಂದು ಹೇಳಲು ಬರಬಹುದೇ? ಅವಯವ, ಶರೀರ ಇವು ಒಂದರಿಂದ ಒಂದು ಭಿನ್ನವಾಗಿವೆ ಎಂದು ಹೇಳಲು ಬರುವುದಿಲ್ಲ ।೩೨೬॥

ಮತ್ತು ಯಾರು ಯಾವಾಗಲೂ ನಿಮ್ಮ ಸ್ವರೂಪದಿಂದ ಭಿನ್ನರಿರುವರು, ಅವರು ಎಂದೂ ನಿಮ್ಮ ಸ್ವರೂಪದಲ್ಲಿ ಐಕ್ಯರಾಗುವುದಿಲ್ಲ. ಆದರೆ ಅವರು ಮರಳಿ ಬರುವರು. ಇಲ್ಲವೇ ಬರುವುದಿಲ್ಲ. ಈ ವ್ಯರ್ಥವಾದ ಮಾತುಗಳು ಏಕೆ ಬೇಕು? ।೩೨೭॥

ತರೀ ಕೋಣ ಗಾ ತೇ ತೂಂತೇ । ಪಾವೋನಿ ನ ಯೇತೀ ಮಾಘಾರೌತೇ । ಹೇ ವಿಶ್ವತೋ ಮುಖಾ ಮಾತೇ । ಬುಝಾವೀ ಜೇ ।೩೨೮।। ಇಯೇ ಆಕ್ಷೇಪೀ ಅರ್ಜುನಾಚ್ಯಾ । ತೋ ಶಿರೋಮಣೀ ಸರ್ವಜ್ಞಾಂಚಾ । ತೋಷಲಾ ಬೋಧ ಶಿಷ್ಯಾಚಾ । ದೇಖೋನಿಯಾ ।೩೨೯।। ಮಗ ಮ್ಹಣೇ ಗಾ ಮಹಾಮತೀ । ಮಾತೇ ಪಾವೋನಿ ನ ಯೇತೀ ಪುಢತೀ । ತೇ ಭಿನ್ನಾಭಿನ್ನ ರೀತೀ । ಆಹಾತೀ ದೋನೀ ।೩೩೦।। ಜೈ ವಿವೇಕೇ ಖೋಲೇ ಪಾಹಿಜೇ । ತರೀ ಮೀ ತೇಚಿ ತೇ ಸಹಜೇ । ನಾ ಆಹಾಚವಾಹಾಚ ತರೀ ದುಜೇ । ಐಸೇಹೀ ಗಮತೀ ।೩೩೧।। ಜೈಸೇ ಪಾಣಿಯಾವರೀ ವೇಗಳ । ತಳಪತಾ ದಿಸತೀ ಕಲ್ಲೋಳ । ಯೇರ್ಹವೀ ತರೀ ನಿಖಿಳ । ಪಾಣೀಚಿ ತೇ ।೩೩೨।। ಕಾ ಸುವರ್ಣಾಹುನಿ ಆನೇ । ಲೇಣೀ ಗಮತೀ ಭಿನ್ನೇ । ಮಗ ಪಾಹಿಜೇ ತಂವ ಸೋನೇ । ಅವಘೇಂಚಿ ತೇ ।೩೩೩।। ತೈಸೇ ಜ್ಞಾನಾಚಿಯೇ ದಿಠೀ । ಮಜಸೀ ಅಭಿನ್ನಚಿ ತೇ ಕಿರೀಟೀ । ಯೇರ ಭಿನ್ನಪಣ ತೇ ಉಠೀ । ಅಜ್ಞಾನಾಸ್ತವ ।೩೩೪।। ಆಣಿ ಸಾಚೋಕಾರೇನಿ ವಸ್ತುವಿಚಾರೇ । ಕೈಂಚೇ ಮಜ ಏಕಾಸಿ ದುಸರೇ । ಜೇ ಭಿನ್ನಾಭಿನ್ನವ್ಯವಹಾರೇ । ಉಮಸಿಜೇಲ ।೩೩೫।। ಆಘವೇಚಿ ಆಕಾಶ ಸೂನಿ ಪೋಟೀ । ಬಿಂಬಚಿ ಜೈ ಆತೇ ಖೋಟೀ । ತೈ ಪ್ರತಿಬಿಂಬ ಕೇ ಉಠೀ । ಕೇ ರಶ್ಮೀ ಶಿರೇ? ।೩೩೬।। ಕಾ ಕಲ್ಪಾಂತೀಚಿಯಾ ಪಾಣಿಯಾ । ಕಾಯ ವೋತ ಭರಿತೀ ಧನಂಜಯಾ? । ಮ್ಹಣೌನಿ ಕೈಂಚೇ ಅಂಶ ಅವಿಕ್ರಿಯಾ । ಏಕಾ ಮಜ ।೩೩೭।। ಪರೀ ವೋಘಾಚೇನಿ ಮೇಳೇ । ಪಾಣೀ ಉಜೂ ಪರೀ ವಾಂಕುಡೇ ಜಾಲೇ । ರವೀ ದುಜೇಪಣ ಆಲೇ । ತೋಯಬಗೇ ।೩೩೮।। ವ್ಯೋಮ ಚೌಘಳೇ ಕೀ ವಾಟೋಳೇ । ಹೇ ಐಸೇ ಕಾಯಿಸಯಾಹೀ ಮಿಳೇ । ಪರೀ ಘಟಮಠೀ ವೇಂಟಾಳೇ । ತೈಸೇಹೀ ಆಥೀ ।೩೩೯।। ಹಾ ಗಾ ನಿದ್ರೇಚೇನಿ ಆಧಾರೇ । ಕಾಯ ಏಕಲೇನಿ ಜಗ ನ ಭರೇ? । ಸ್ವಪ್ನೀಂಚೇನಿ ಜೈ ಅವತರೇ । ರಾಯಪಣೇ ।೩೪೦।। ಕಾ ಮಿನಲೇನಿ ಕಿಡಾಳೇ । ವಾನಿಭೇದಾಸಿ ಯೇ ಸೋಳೇ । ತೈಸಾ ಸ್ವಮಾಯೇ ವೇಂಟಾಳೇ । ಶುದ್ಧ ಜೈ ಮೀ ।೩೪೧।। ತೈ ಅಜ್ಞಾನ ಏಕ ರೂಢೇ । ತೇಣೇ ಕೋಹಂವಿಕಲ್ಪಾಚೇ ಮಾಂಡೇ । ಮಗ ವಿವರೂನಿ ಕೀಜೇ ಪುಡೇ । ದೇಹೋ ಮೀ ಐಸೇ ।೩೪೨।।

ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।
ಮನಃಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ।।೭।।

ಅದಕ್ಕಾಗಿ ಶ್ರೀಕೃಷ್ಣನೇ, ನಿಮಗೆ ಎಲ್ಲೆಲ್ಲಿಯೂ ಮುಖಗಳಿರುವುವು. ಆ ನಿಮ್ಮ ಸ್ವರೂಪದಲ್ಲಿ ಕೂಡಿದಾಗ ಯಾರೂ ಮರಳಿ ಬರುವುದಿಲ್ಲ, ಅದನ್ನು ನನಗೆ ಸರಿಯಾಗಿ ತಿಳಿಸಿ ಹೇಳಿರಿ ।೩೨೮॥

ಅರ್ಜುನನ ಈ ಆಕ್ಷೇಪ (ಸಂಶಯ) ಕೇಳಿ, ತಾನು ಹೇಳಿದ್ದನ್ನು ಆತನ ಮನದಲ್ಲಿ ಪೂರ್ಣವಾಗಿ ಬಿಂಬಿಸಿದೆ ಎಂದು ತಿಳಿದು ಸರ್ವಜ್ಞ ಶಿರೋಮಣಿ ಶ್ರೀಕೃಷ್ಣನಿಗೆ ಸಂತೋಷವಾಯಿತು ।೩೨೯॥

ಆಗ ಭಗವಂತನು ಹೇಳುವನು:- ಹೇ ಮಹಾಮತಿಯೇ, ನನ್ನನ್ನು ಪ್ರಾಪ್ತಮಾಡಿದ ನಂತರ ಜೀವವು ಮರಳಿ ಬರುವುದಿಲ್ಲ. ಅದನ್ನು ನನ್ನ ಸ್ವರೂಪಕ್ಕೆ ಅಭಿನ್ನವೂ ಎಂದು ಹೇಳಬಹುದು ಮತ್ತು ಭಿನ್ನವೂ ಎಂದು ಹೇಳಬಹುದು ।೩೩೦॥

ವಿಚಾರ ದೃಷ್ಟಿಯಿಂದ ಪೂರ್ಣ ಲಕ್ಷಗೊಟ್ಟು ನೋಡಿದಲ್ಲಿ ನನ್ನ ಮತ್ತು ಅವರ ಸ್ವರೂಪದಲ್ಲಿ ಸ್ವಭಾವತಃ ಐಕ್ಯವಿರುವುದು ಮತ್ತು ಮೇಲ್ನೋಟಕ್ಕೆ ವಿಚಾರಿಸಿ ನೋಡಲು ಅವರು ನನ್ನಿಂದ ಭಿನ್ನರಾಗಿರುವರೆಂದು ಹೀಗೂ ತೋರುವುದು ।೩೩೧॥

ನೀರು ಅಲುಗಾಡಲು ಅದರ ಮೇಲೆ ಬರುವ ತೆರೆಗಳು ನೀರಿನಿಂದ ಬೇರೆಯಾಗಿ ಕಾಣುವುವು. ಆದರೆ ವಸ್ತುತಃ ಅವು ಕೇವಲ ನೀರೇ ಆಗಿರುವುವು ।೩೩೨॥

ಅಥವಾ ಬಂಗಾರದ ಒಡವೆಗಳು ಬಂಗಾರದಿಂದ ಭಿನ್ನವಾಗಿ ಕಾಣುವುವು. ಆದರೆ ವಿಚಾರದಿಂದ ನೋಡಲು ಅವು ಎಲ್ಲವೂ ಬಂಗಾರವೇ ಆಗಿರುವುವು ।೩೩೩॥

ಹೇ ಕಿರೀಟಿಯೇ, ಅದರಂತೆ ಜ್ಞಾನದೃಷ್ಟಿಯಿಂದ ನೋಡಲು ಮದ್ರೂಪರಾಗಿಯೇ ಇರುವರು. ಸಾಮಾನ್ಯವಾಗಿ ಅವರಲ್ಲಿ ಮತ್ತು ನನ್ನಲ್ಲಿ ಭಿನ್ನತೆಯು ಅಜ್ಞಾನದಿಂದ ಕಾಣುತ್ತಿರುವುದು ।೩೩೪॥

ಮತ್ತು ನಿಜವಾಗಿ ನೋಡಿದರೆ ಪರಮಾತ್ಮ ದೃಷ್ಟಿಯಿಂದ ಭಿನ್ನಾಭಿನ್ನವು ಉದ್ಭವಿಸಿದ ಪ್ರಶ್ನೆಯಂತೆ ನನ್ನಲ್ಲಿ ಆ ದ್ವೈತವು ಎಲ್ಲಿಂದ ಬರಬೇಕು? ।೩೩೫॥

ಸೂರ್ಯಬಿಂಬವೇ ಎಲ್ಲ ಆಕಾಶವನ್ನು ವ್ಯಾಪಿಸಿ ಹೊಟ್ಟೆಯಲ್ಲಿ ಹಾಕಿಕೊಂಡರೆ, ಪ್ರತಿಬಿಂಬಕ್ಕೆ ಸ್ಥಳವೆಲ್ಲಿಯದು? ಹಾಗೂ ಕಿರಣಗಳು ಸಹ ಎಲ್ಲಿ ಬೀಳಬೇಕು? ।೩೩೬॥

ಕಲ್ಪಾಂತದ ನೀರಿನಿಂದ ಎಲ್ಲವೂ ಜಲಮಯವಾಗಲು ಆಗ ಹಳ್ಳಗಳು ತುಂಬಿದವು ಎಂಬ ಮಾತು ಸರಿಯೇ? ಆದ್ದರಿಂದ ಅವಿಕ್ರಿಯ ಏಕರಸನಾದ ನನಗೆ ಅಂಶವು ಎಲ್ಲಿಂದ ಇರಬೇಕು? ।೩೩೭॥

ಓಘದ ಸಂಬಂಧದಿಂದ ನೀರು ಸರಳವಾಗಿದ್ದರೂ ಅದು ಡೊಂಕಾಗಿ ಕಾಣುವುದು ಹಾಗೂ ನೀರಿನ ಉಪಾಧಿಯಿಂದ ಸೂರ್ಯನ ಬಿಂಬಕ್ಕೆ ಪ್ರತಿಬಿಂಬದಿಂದ ಭಿನ್ನತ್ವವು ಬರುವುದು ।೩೩೮॥

ಆಕಾಶವು ಇದು ಚೌಕಾಗಿದೆ ಅಥವಾ ವರ್ತುಲಾಕಾರವಾಗಿದೆ ಎಂದು ನಿರ್ಣಯಿಸಲು ಬರುವುದಿಲ್ಲ. ಆದಾಗ್ಯೂ, ಅದೇ ಆಕಾಶವು ಘಟ ಮತ್ತು ಮಠ ಇವುಗಳ ಉಪಾಧಿಯಿಂದ ಹಾಗೆ ಕಾಣುವುದು ।೩೩೯॥

ಆರೇ, ಇಲ್ಲಿ ನೋಡು, ನಿದ್ರೆಯ ಉಪಾಧಿಯಿಂದ ಸ್ವಪ್ನದಲ್ಲಿ ಒಬ್ಬನು ರಾಜ್ಯ ಪದಾಧಿಕಾರಿಯಾಗುವನು. ಆಗ ರಾಜ, ಪ್ರಜೆ ಇತ್ಯಾದಿ ಎಲ್ಲ ಜಗವನ್ನು ಅವನೊಬ್ಬನೇ ವ್ಯಾಪನಾಗುವುದಿಲ್ಲವೇ? ।೩೪೦॥

ಅಥವಾ ಹದಿನಾರು ರೂಪಾಯಿ ಬೆಲೆಯ ಶುದ್ಧ ಬಂಗಾರದಲ್ಲಿ ದೂಷಿತವು ಕೂಡಿದಾಗ ಅದು ಒರೆಗೆ ಕಡಿಮೆಯಾಗುವುದು. ಅದರಂತೆ ಶುದ್ಧನಾದ ನನಗೆ ಮಾಯೆಯ ಉಪಾಧಿಯಿಂದ ಜೀವ ಈಶ್ವರಭಾವ ಉತ್ಪನ್ನವಾಗುವುದು ।೩೪೧॥

ಆಗ ಎಲ್ಲ ಕಡೆಗಳಲ್ಲಿಯೂ ಒಂದು ಅಜ್ಞಾನವೇ ರೂಢವಾಗುವುದು. ಅದರಿಂದ ನಾನು ಯಾರು ಎಂಬ ವಿಕಲ್ಪ ಉತ್ಪನ್ನವಾಗಿ ದೇಹವೇ ನಾನಿದ್ದೇನೆ ಎಂದು ವಿಚಾರದಲ್ಲಿ ನಿಶ್ಚಯವಾಗುವುದು ।೩೪೨॥

**ಶ್ಲೋಕಾರ್ಥ** :- ಸನಾತನವಾದ ನನ್ನ ಅಂಶವೇ ಮಾನವ ಲೋಕದಲ್ಲಿ ಜೀವನೆನಿಸಿಕೊಳ್ಳುತ್ತದೆ. ಆ ಜೀವನು ಪ್ರಕೃತಿಯಲ್ಲಿಯ ಆರು ಇಂದ್ರಿಯಗಳನ್ನು ಆಕರ್ಷಿಸುತ್ತಾನೆ ।೭॥

ಐಸೇ ಶರೀರಾಚಿ ಯೇವಢೇ । ಜೈ ಆತ್ಮಜ್ಞಾನ ವೇಗಳೆ ಪಡೇ । ತೈ ಮಾಝಾ ಅಂಶು ಐಸೇ ಆವಡೇ । ಥೋಡೇಪಣೇ ।೩೪೩॥ ಸಮುದ್ರ ಕಾ ವಾಯುವಶೇ । ತರಂಗಾಕಾರ ಉಲ್ಲಸೇ । ತೋ ಸಮುದ್ರಾಂಶು ಐಸಾ ದಿಸೇ । ಸಾನಿವಾ ಜೇವಿ ।೩೪೪॥ ತೇವೀ ಜಡಾತೇ ಜೀವವಿತಾ । ದೇಹಅಹಂತಾ ಉಪಜವಿತಾ । ಮೀ ಜೀವ ಗಮೇ ಪಂಡುಸುತಾ । ಜೀವ ಲೋಕೀ ।೩೪೫॥ ಪೈ ಜೀವಾಚಿಯಾ ಬೋಧಾ । ಗೋಚರು ಜೋ ಹಾ ಧಾಂದಾ । ತೋ ಜೀವ ಲೋಕಶಬ್ದಾ । ಅಭಿಪ್ರಾವೋ ।೩೪೬॥ ಅಗಾ ಉಪಜಣೇ ನಿಮಣೇ । ಹೇ ಸಾಚಚಿ ಜೇ ಕಾ ಮಾನಣೇ । ತೋ ಜೀವಲೋಕು ಮೀ ಮ್ಹಣೇ । ಸಂಸಾರು ಹನ ।೩೪೭॥ ಏವಂ ವಿಧ ಜೀವಲೋಕೀ । ತೂ ಮಾತೇ ಐಸಾ ಅವಲೋಕೀ । ಜೈಸಾ ಚಂದ್ರು ಕಾ ಉದಕೀ । ಉದಕಾತೀತ ।೩೪೮॥ ಪೈ ಕಾಶ್ಮೀರಾಚಾ ರವಾ । ಕುಂಕುಮಾವರೀ ಪಾಂಡವಾ । ಆಣಿಕಾ ಗಮೇ ಲೋಹಿವಾ । ತೋ ತರೀ ನವ್ಹೇ ।೩೪೯॥ ತೈಸೇ ಅನಾದಿಪಣ ನ ಮೋಡೇ । ಮಾಝೀ ಅಕ್ರಿಯತ್ವ ನ ಖಂಡೇ । ಪರೀ ಕರ್ತಾ ಭೋಕ್ತಾ ಐಸೇ ಆವಡೇ । ತೇ ಜಾಣ ಗಾ ಭ್ರಾಂತೀ ।೩೫೦॥ ಕಿಂಬಹುನಾ ಆತ್ಮಾ ಚೋಖಟು । ಹೋಊನಿ ಪ್ರಕೃತೀಸೀ ಏಕವಟು । ಬಾಂಧೇ ಪ್ರಕೃತಿ ಧರ್ಮಾಚಾ ಪಾಟು । ಆಪಣಪಯಾ ।೩೫೧॥ ಪೈ ಮನಾದಿ ಸಾಹೀ ಇಂದ್ರಿಯೇ । ಶ್ರೋತ್ರಾದಿ ಪ್ರಕೃತಿಕಾರ್ಯೇ । ತಿಯೇ ಮಾಝೀ ಮ್ಹಣೌನಿ ಹೋಯೇ । ವ್ಯಾಪಾರರೂಢ ।೩೫೨॥ ಜೈಸೇ ಸ್ವಪ್ನೀ ಪರಿವ್ರಾಜೇ । ಆಪಣಪಯಾ ಆಪಣ ಕುಟುಂಬ ಹೋಊಜೇ । ಮಗ ತಯಾಚೇನಿ ಧಾಂವಿಜೇ । ಮೋಹೇ ಸೈರಾ ।೩೫೩॥ ತೈಸಾ ಆಪಲಿಯಾ ವಿಸ್ಮೃತೀ । ಆತ್ಮಾ ಆಪಣಚಿ ಪ್ರಕೃತೀ । ಸಾರಿಖಾ ಗಮೋನಿ ಪುಢತೀ । ತಿಯೇಸೀಚಿ ಭಜೇ ।೩೫೪॥ ಮನಾಚ್ಯಾ ರಥೀ ವಳಘೇ । ಶ್ರವಣಾಚ್ಯಾ ದ್ವಾರೇ ನಿಘೇ । ಮಗ ಶಬ್ದಾಚಿಯಾ ರಿಘೇ । ರಾನಾಮಾಜೀ ।೩೫೫॥ ತೋಚಿ ಪ್ರಕೃತೀಚಾ ವಾಗೋರಾ । ಕರೀ ತ್ವಚೇಚಿಯಾ ಮೋಹರಾ । ಆಣಿ ಸ್ಪರ್ಶಾಚಿಯಾ ಘೋರಾ । ವನಾ ಜಾಯ ।೩೫೬॥ ಕೋಣೇ ಏಕೇ ಅವಸರೀ । ರಿಘೋನಿ ನೇತ್ರಾಚ್ಯಾ ದ್ವಾರೀ । ಮಗ ರೂಪಾಚ್ಯಾ ಡೋಂಗರೀ । ಸೈರಾ ಹಿಂಡೇ ।೩೫೭॥ ಕಾ ರಸನೇಚಿಯಾ ವಾಟಾ । ನಿಘೋನಿ ಗಾ ಸುಭಟಾ । ರಸಾಚಾ ದರಕುಟಾ । ಭರೋಚಿ ಲಾಗೇ ।೩೫೮॥ ನಾತರೀ ಯೇಣೇಂಚಿ ಘ್ರಾಣೇ । ಜೈ ದೇಹಾಂಶು ಕರೀ ನಿಘಣೇ । ಮಗ ಗಂಧಾಚೇ ದಾರುಣೇ । ಆಡವೇ ಲಂಘೀ ।೩೫೯॥

ಈ ಪ್ರಕಾರವಾಗಿ ಶರೀರದ ಆಕಾರದಷ್ಟೇ ಆತ್ಮ ಇರುವು ದೆಂಬ ಮರ್ಯಾದಿತ ಆತ್ಮಜ್ಞಾನವು, ಇದು "ಆತ್ಮವು ಬ್ರಹ್ಮವು" ಎಂಬ ವ್ಯಾಪಕ ಜ್ಞಾನಕ್ಕಿಂತಲೂ ಭಿನ್ನವಾಗಿದೆ. ಆದ್ದರಿಂದ ಜೀವವು ನನ್ನ ಅಂಶವಿದೆ ಎಂದು ಭಾಸ ವಾಗುತ್ತದೆ ।೩೪೩॥

ಗಾಳಿ ಬೀಸುವ ಸಂಬಂಧದಿಂದ ಸಮುದ್ರವು ತೆರೆಗಳ ಆಕಾರದಿಂದ ಪ್ರಕಟವಾಗುವುದು. ಆಗ ಆ ತರಂಗಗಳು ಸಮುದ್ರದ ಒಂದು ಸಣ್ಣ ಅಂಶವೆಂದು ಕಾಣುವುದು ।೩೪೪॥

ಅದರಂತೆ ಪಂಡುಸುತನೇ, ದೇಹದ ಅಹಂಕಾರ ಉತ್ಪನ್ನವಾದಾಗ ಆ ಜಡ ದೇಹದ ಚಾಲಕನಾದ ನಾನು ಈ ಮೃತ್ಯುಲೋಕದಲ್ಲಿ ಜೀವರೂಪನಾಗಿರುವುದು ನಾನೇ ।೩೪೫॥

ಅದೇ ಜೀವದ ದೃಷ್ಟಿಯಿಂದ ಯಾವ ಈ ಅಖಂಡ ವ್ಯವಹಾರವು ನಡೆಯುವುದೋ, ಅದಕ್ಕೆ "ಜೀವ ಲೋಕ ಸೃಷ್ಟಿ" ಎಂದು ಹೇಳುವರು ।೩೪೬॥

ಅರೇ, ಎಲ್ಲಿ ಜನ್ಮ ಮತ್ತು ಮೃತ್ಯು ಇವು ನಿಜವೆಂದು ತಿಳಿಯಲ್ಪಡುವುವೋ, ಅದಕ್ಕೆ ನಾನು ಜೀವ ಲೋಕ ಅಥವಾ ಸಂಸಾರವೆಂದು ಹೇಳುವೆನು ।೩೪೭॥

ಈ ಪ್ರಕಾರದ ಜೀವಲೋಕದಲ್ಲಿ, ಯಾವ ಪ್ರಕಾರ ವಾಗಿ ಚಂದ್ರನು ನೀರಿನಿಂದ ಬೇರೆ ಇದ್ದರೂ ನೀರಿನಲ್ಲಿ ಪ್ರತಿ ಬಿಂಬವು ಬಿದ್ದಿರುವುದರಿಂದ ಅದರಲ್ಲಿರುವನಂತೆ ಕಾಣು ವನೋ, ಅದರಂತೆ ನಾನಿರುವೆ ।೩೪೮॥

ಅರ್ಜುನಾ, ಸ್ಫಟಿಕಮಣಿಯನ್ನು ಕುಂಕುಮದ ಮೇಲಿ ಟ್ಟಾಗ ಅದು ನೋಡುವವರಿಗೆ ಕೆಂಪಾಗಿ ಕಾಣಿಸುವುದು. ಹಾಗೆ ಕಂಡರೂ ಅದು ಕೆಂಪು ಇರುವುದಿಲ್ಲ ।೩೪೯॥

ಅದರಂತೆ ನನ್ನ ಅನಾದಿತ್ವವು ನಷ್ಟವಾಗುವುದಿಲ್ಲ ಮತ್ತು ಅಕ್ರಿಯತ್ವವು ಭಂಗಗೊಳ್ಳುವುದಿಲ್ಲ. ಆದಾಗ್ಯೂ, ಆತನು ಕರ್ತನು, ಭೋಕ್ತನು ಹೀಗೆಂದು ಹೇಳುವುದು ಅವರ ಭ್ರಾಂತಿಯೇ ಆಗಿರುವುದು ।೩೫೦॥

ಹೆಚ್ಚಿಗೇನು ಹೇಳಬೇಕು? ಶುದ್ಧವಾಗಿರುವ ಆತ್ಮನು ಪ್ರಕೃತಿಯಲ್ಲಿ ಐಕ್ಯಹೊಂದಿ ಪ್ರಕೃತಿಯ ಉಪಾಧಿಯಿಂದ ಅದರ ಧರ್ಮದ ಓಘದಲ್ಲಿ ತನ್ನನ್ನು ಬಂಧಿಸಿಕೊಳ್ಳುವನು ।೩೫೧॥

ನಂತರ ಪ್ರಕೃತಿಜನ್ಯ ಮನಸ್ಸು ಮತ್ತು ಶ್ರೋತ್ರಾದಿ ಐದು ಇಂದ್ರಿಯಗಳು ಇವು ನನ್ನವು ಎಂದು ಹೇಳಿ ವ್ಯವಹಾರ ಮಾಡಲು ಹತ್ತುವನು ।೩೫೨॥

ಯಾವ ಪ್ರಕಾರವಾಗಿ ಸಂನ್ಯಾಸಿಯ ಸ್ವಪ್ನದಲ್ಲಿ ತಾನೇ ತನ್ನ ಕುಟುಂಬವಾಗಿ ಸಂಸಾರ ನಡೆಸಿ ಮತ್ತು ಅದರ ಮೋಹ ದಿಂದ ಮನಬಂದಂತೆ ಧಾವಿಸುವನೋ ।೩೫೩॥

ಅದರಂತೆ ತನ್ನ ವಿಸ್ಮೃತಿಯಾಗಿರುವುದರಿಂದ ಆತ್ಮವು ತನ್ನ ಸ್ವರೂಪವನ್ನು ಪ್ರಕೃತಿಯಂತೆಯೇ ಇದೆ ಎಂದು ತಿಳಿದು ಅದರಂತೆ ಅದರ ಕಾರ್ಯಗಳನ್ನು ಮಾಡುವನು ।೩೫೪॥

ಮನರೂಪ ರಥದಲ್ಲಿ ಆರೂಢನಾಗಿ ಶ್ರವಣ ದ್ವಾರ ದಿಂದ ಹೊರಬಿದ್ದು ಶಬ್ದರೂಪ ಅರಣ್ಯದಲ್ಲಿ ಸಂಚರಿಸುವನು ।೩೫೫॥

ಆತನೇ ಪ್ರಕೃತಿಯ ಕಡಿವಾಣವನ್ನು ಕೈಯಲ್ಲಿ ಹಿಡಿದು ತ್ವಚೆಯ ದ್ವಾರದಿಂದ ಸ್ಪರ್ಶರೂಪ ಘೋರಾರಣ್ಯದಲ್ಲಿ ಹೋಗುವನು ।೩೫೬॥

ಒಂದು ಸಲ ಕಣ್ಣಿನ ಬಾಗಿಲದಿಂದ ಹೊರಬಿದ್ದು ರೂಪ ದೀಕ್ಷೆಯ ಪರ್ವತದ ಮೇಲೆ ಸ್ವಚ್ಛಂದವಾಗಿ ಅಲೆದಾಡುವನು ।೩೫೭॥

ಅಥವಾ ನಾಲಿಗೆಯ ಬಾಗಿಲದಿಂದ ಹೊರಬಿದ್ದು ರಸದ ಗುಹೆಯನ್ನು (ಹೊಟ್ಟೆಯನ್ನು) ತುಂಬ ಹತ್ತುವನು ।೩೫೮॥

ಅಥವಾ ನನ್ನ ಅಂಶನಾದ ಜೀವನು ಮೂಗಿನ ಬಾಗಿಲ ದಿಂದ ಹೊರಬಿದ್ದು ಸುಗಂಧದ ಅರಣ್ಯದಲ್ಲಿ ಅಲೆದಾಡುವನು ।೩೫೯॥

ಐಸೇನಿ ದೇಹೇಂದ್ರಿಯನಾಯಕೇ । ಧರೂನಿ ಮನ ಜವಳಿಕೇ । ಭೋಗಿಜತೀ ಶಬ್ದಾದಿಕೇ । ವಿಷಯಭರಣೇ ।೩೬೦॥

ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।
ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ।೮॥

ಪರೀ ಕರ್ತಾ ಭೋಕ್ತಾ ಐಸೇ । ಹೇ ಜೀವಾಚೇ ತೈಂಚಿ ದಿಸೇ । ಜೇ ಶರೀರೀ ಕಾ ಪೈಸೇ । ಯೇಕಾಧಿಯೇ ।೩೬೧॥ ಜೈಸಾ ಆಥಿಲಾ ಆಣಿ ವಿಲಾಸಿಯಾ । ತೈಂಚಿ ವೋಳಖೋ ಯೇ ಧನಂಜಯಾ । ಜೈ ರಾಜಸೇವ್ಯಾ ಠಾಯಾ । ವಸ್ತಿ ೀಸಿ ಯೇ ।೩೬೨॥ ತೈಸಾ ಅಹಂಕರ್ತೃತ್ವಾಚಾ ವಾಢು । ಕಾ ವಿಷಯೇಂದ್ರಿಯಾಂಚಾ ಧುಮಾಡು । ಹಾ ಜಾಣೆ ಜೇ ತೈ ನಿವಾಡು । ಜೈ ದೇಹ ಪಾವಿಜೇ ।೩೬೩॥ ಅಥವಾ ಶರೀರಾತೇ ಸಾಂಡೀ । ತರ್ಹಿ ೀ ಇಂದ್ರಿಯಾಂಚೀ ತಾಂಡೀ । ಹೇ ಆಪಣಯಾಂಸವೇ ಕಾಢೀ । ಘೇಊನಿ ಜಾಯ ।೩೬೪॥ ಜೈಸಾ ಅಪಮಾನಿಲಾ ಅತಿಥಿ । ನೇ ಸುಕೃತಾಚೀ ಸಂಪತ್ತಿ । ಕಾ ಸಾಇಖಡೇ ಯಾಚೀ ಗತೀ । ಸೂತ್ರತಂತೂ ।೩೬೫॥ ನಾನಾ ಮಾವಳತೇನಿ ತಪನೇ । ನೇಇಜತೀ ಲೋಕಾಂಚೀ ದರ್ಶನೇ । ಹೇ ಅಸೋದ್ರುತೀ ಪವನೇ । ನೇಈಜೇ ಜೈಸೀ ।೩೬೬॥ ತೇವೀ ಮನಃಷಷ್ಠಾ ಯಯಾ । ಇಂದ್ರಿಯಾಂತೇ ಧನಂಜಯಾ । ದೇಹರಾಜು ನೇ ದೇಹಾ । ಪಾಸೂನಿ ಗೇಲಾ ।೩೬೭॥

ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।
ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ।೯॥

ಮಗ ಯೇಥ ಅಥವಾ ಸ್ವರ್ಗೀ । ಜೇಥ ಜೇ ದೇಹ ಆಪಂಗೀ । ತೇಥ ತೈಸೇಂಚಿ ಪುಢತೀ ಪಾಂಗೀ । ಮನಾದಿಕ ।೩೬೮॥ ಜೈಸಾ ಮಾಲವಲಿಯಾ ದಿವಾ । ಪ್ರಭೇಸೀ ಜಾಯ ಪಾಂಡವಾ । ಮಗ ಉಜಳಿಜೇ ತೇಥ ತೇಧವಾ । ತೈಸಾಚಿ ಘಾಂಕೇ ।೩೬೯॥ ಪರೀ ಐಸ್ಸೆಸಿಯಾ ರಾಹಾಟೀ । ಅವಿವೇಕಿಯಾಂಚೀ ದಿಠೀ । ಯೇತುಲೇ ಹೇ ಕಿರೀಟೀ । ಗಮೇಚಿ ಗಾ ।೩೭೦॥ ಜೇ ಆತ್ಮಾ ದೇಹಾಸಿ ಆಲಾ । ಆಣಿ ವಿಷಯೋ ಯೇಣೇಂಚಿ ಭೋಗಿಲಾ । ಅಥವಾ ದೇಹೋನಿ ಗೇಲಾ । ಹೇ ಸಾಚಚಿ ಮಾನಿತೀ ।೩೭೧॥ ಯೇರ್ಹವೀ ಯೇಣೇ ಆಣಿ ಜಾಣೇ । ಕಾ ಕರಣೇ ಹನ ಭೋಗಣೇ । ಹೇ ಪ್ರಕೃತೀಚೇ ತೇಣೇ । ಮಾನಿಯೇಲೇ ।೩೭೨॥

ಈ ಪ್ರಕಾರವಾಗಿ ದೇಹ ಮತ್ತು ಪಂಚೇಂದ್ರಿಯ ನಾಯಕನಾದ ಮನಸ್ಸನ್ನು ಹಿಡಿದುಕೊಂಡು ಪಂಚೇಂದ್ರಿಯ ಗಳ ವಿಷಯವಾದ ಶಬ್ದಾದಿಕಗಳನ್ನು ಉಪಭೋಗಿಸುವನು ।೩೬೦॥

ಶ್ಲೋಕಾರ್ಥ :- ದೇಹಕ್ಕೆ ಪ್ರಭುವಾದ ಜೀವನು ಈ ಶರೀರವನ್ನು ಪ್ರವೇಶಿಸುವಾಗಲೂ ಮತ್ತು ಬಿಡು ವಾಗಲೂ ವಾಯು-ಪುಷ್ಪಗರ್ಭದಲ್ಲಿಯ ಗಂಧವನ್ನು ಸೆಳೆದುಕೊಂಡು ಹೋಗುವಂತೆ, ಆ ಇಂದ್ರಿಯಗಳನ್ನು ಸೆಳೆದುಕೊಂಡು ಹೋಗುತ್ತಾನೆ ।೮॥

ಆದರೆ ಜೀವದ ಕರ್ತೃತ್ವವು ಅಥವಾ ಭೋಕ್ತೃತ್ವವು ಅದು ಒಂದು ಶರೀರದಲ್ಲಿ ಪ್ರವೇಶ ಮಾಡಿದಾಗ ದೃಷ್ಟಿಗೆ ಗೋಚರಿಸುವುದು ।೩೬೧॥

ಶ್ರೀಮಂತ ಹಾಗೂ ವಿಲಾಸಿ ಪುರುಷನ ಐಶ್ವರ್ಯವು ಅದು ಒಂದು ಸಲ ಆತನು ರಾಜವಾಡೆಯಲ್ಲಿ ಇರಲು ಬಂದಾಗ ದೃಷ್ಟಿಗೆ ಗೋಚರಿಸುವುದು ।೩೬೨॥

ಅದರಂತೆಯೇ ಜೀವವು ದೇಹಧಾರಣೆ ಮಾಡಿದಾಗ ಆ ವೇಳೆಯಲ್ಲಿ ಜೀವದ ಅಹಂಕಾರದ ವೃದ್ಧಿಯು ಅಥವಾ ವಿಷಯೇಂದ್ರಿಯಗಳ ಧೂಮಧಾಮವು ದೃಷ್ಟಿಗೆ ಗೋಚರಿ ಸುವುದು ।೩೬೩॥

ಅಥವಾ ಶರೀರ ಬಿಟ್ಟಾಗ ಜೀವವು ತನ್ನ ಸಂಗಡ ಯಾವಾಗಲೂ ಇರುವ ಮನಸ್ಸು ಮತ್ತು ಇಂದ್ರಿಯಗಳ ತಂಡ ವಾದ ತನ್ನ ಸಂಪತ್ತನ್ನು ತೆಗೆದುಕೊಂಡು ಹೋಗುವುದು ।೩೬೪॥

ಭೋಜನಕ್ಕೆ ಬಂದ ಅತಿಥಿಯು ಅಪಮಾನಿತನಾದರೆ, ಆತನು ಆ ಮನೆಯ ಯಜಮಾನನ ಪುಣ್ಯವನ್ನು ಒಯ್ಯುವಂತೆ ಅಥವಾ ಕಟ್ಟಿದ ದಾರವು ಹರಿದಾಗ ಸೂತ್ರಗೊಂಬೆಯ ಚಲನವಲನೆಯು ನಿಲ್ಲುವುದು ।೩೬೫॥

ಅಥವಾ ಅಸ್ತನಾಗುವ ಸೂರ್ಯನಿಂದ ಜನರ ದೃಷ್ಟಿಯು ಒಯ್ಯಲಾಗುವುದು, ಗಾಳಿಯಿಂದ ಹೂವುಗಳ ಗಂಧವನ್ನು ಒಯ್ಯಲಾಗುವುದು. ಈಗ ಇದಿರಲಿ ।೩೬೬॥

ಹೇ ಧನಂಜಯನೇ, ಅದರಂತೆಯೇ ಜೀವನು ದೇಹವನ್ನು ಬಿಟ್ಟು ಹೋಗುವಾಗ ತನ್ನ ಜೊತೆಯಲ್ಲಿ ಐದು ಜ್ಞಾನೇಂದ್ರಿಯಗಳನ್ನು ಹಾಗೂ ಆರನೆಯ ಮನಸ್ಸನ್ನು ಒಯ್ಯುವನು ।೩೬೭॥

ಶ್ಲೋಕಾರ್ಥ :- ಕಿವಿ, ಕಣ್ಣು, ಚರ್ಮ, ರಸ ನೇಂದ್ರಿಯ, ಮೂಗು ಎಂಬ ಬಾಹ್ಯೇಂದ್ರಿಯಗಳನ್ನೂ ಮತ್ತು ಮನಸ್ಸನ್ನು ಸಹಾಯವಾಗಿ ತೆಗೆದುಕೊಂಡು ಅವನು ಶಬ್ದಾದಿ ವಿಷಯಗಳನ್ನು ಅನುಭವಿಸುತ್ತಾನೆ ।೯॥

ತದನಂತರ ಇಲ್ಲಿ ಅಥವಾ ಸ್ವರ್ಗಲೋಕದಲ್ಲಿ ಹೋದ ಲ್ಲೆಲ್ಲ ಯಾವ ಯಾವ ದೇಹಧಾರಣೆ ಮಾಡುವನೋ, ಅಲ್ಲೆಲ್ಲ ಮನಾದಿಕ ಆರು ಇಂದ್ರಿಯಗಳ ವ್ಯವಹಾರ ನಡೆಸು ವನು ।೩೬೮॥

ಅರ್ಜುನಾ, ದೀಪವು ಆರಿತೆಂದರೆ ಅದು ತನ್ನ ಬೆಳಕಿ ನೊಂದಿಗೆ ಇಲ್ಲದಾಗುವುದು. ಅದೇ ದೀಪವನ್ನು ಪುನಃ ಹಚ್ಚಿದರೆ ಬೆಳಕಿನೊಂದಿಗೆ ಪ್ರಕಾಶಿಸುವುದು ।೩೬೯॥

ಆದರೆ ಕಿರೀಟಿಯೇ, ಈ ಪ್ರಕಾರದ ವ್ಯವಹಾರದಲ್ಲಿ ಅಜ್ಞಾನಿಗಳವರ ದೃಷ್ಟಿಯಲ್ಲಿ ಮುಂದೆ ಹೇಳುವಂತೆ ಅನಿಸಿಕೆ ಯಾಗುವುದು ।೩೭೦॥

ಆತ್ಮನೇ ಈ ದೇಹದಲ್ಲಿ ಬಂದನು ಮತ್ತು ಈತನೇ ವಿಷಯಗಳ ಉಪಭೋಗಗಳನ್ನು ಭೋಗಿಸಿದನು. ಅಥವಾ ಈತನೇ ಈ ದೇಹವನ್ನು ಬಿಟ್ಟು ಹೋದನು. ಇದೇ ನಿಜ ವೆಂದು ತಿಳಿಯುವರು ।೩೭೧॥

ವಸ್ತುತಃ ಜನ್ಮಕ್ಕೆ ಬರುವುದು ಅಥವಾ ಮರಣವಾಗು ವುದು ಅಥವಾ ವಿಷಯಗಳ ಉಪಭೋಗಿಸುವುದು, ಇದು ನಿಜವಾಗಿಯೂ ಪ್ರಕೃತಿಯ ಧರ್ಮವಾಗಿದ್ದು ಅವರು ಇದನ್ನು ಆತ್ಮದ್ದು ಎಂದು ತಿಳಿದಿದ್ದಾರೆ ।೩೭೨॥

ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಮ್ ।
ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥೧೦॥

ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಮ್ ।
ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯಚೇತಸಃ ॥೧೧॥

ಪರೀ ದೇಹಾಚೇ ಮೋಟಕೇ ಉಭೇ । ಆಣಿ ಚೇತನಾ ತೇಥ ಉಪಲಭೇ । ತಿಯೇ ಚಳವಳೀಚೇನಿ ಲೋಭೇ । ಆಲಾ ಮ್ಹಣತೀ ॥೩೭೩॥ ತೈಸೇಂಚಿ ತಯಾ ಸಂಗತೀ । ಇಂದ್ರಿಯೇ ಆಪಲಾಲಾ ಅರ್ಥೀ ವರ್ತತೀ । ತಯಾ ನಾಂವ ಸುಭದ್ರಾಪತೀ । ಭೋಗಣೇ ಜಯಾ ॥೩೭೪॥ ಪಾಠೀ ಭೋಗಕ್ಷೀಣ ಆಪೈಸೇ । ದೇಹ ಗೇಲಿಯಾ ತೇ ನ ದಿಸೇ । ತೇಥೇ ಗೇಲಾ ಗೇಲಾ ಐಸೇ । ಬೋಭಾತೀ ಗಾ ॥೩೭೫॥ ಪೈ ರುಖು ಡೋಲತು ದೇಖಾವಾ । ತರೀ ವಾರಾ ವಾಜತು ಮಾನಾವಾ । ರುಖ ನಸೇ ತೇಥೇ ಪಾಂಡವಾ । ನಾಹೀ ತೋ ಗಾ? ॥೩೭೬॥ ಕಾ ಆರಸಾ ಸಮೋರ ಠೇವಿಜೇ । ಆಣಿ ಆಪಣಪೇ ತೇಥ ದೇಖಿಜೇ । ತರೀ ತೇಧವಾಂಚಿ ಜಾಲೇ ಮಾನಿಜೇ । ಕಾಯ ಆಧೀ ನಾಹೀ? ॥೩೭೭॥ ಕಾ ಪರತಾ ಕೇಲಿಯಾ ಆರಿಸಾ । ಲೋಪು ಜಾಲಾ ತಯಾ ಆಭಾಸಾ । ತರೀ ಆಪಣಪೇ ನಾಹೀ ಐಸಾ । ನಿಶ್ಚಯೋ ಕರಾವಾ? ॥೩೭೮॥ ಶಬ್ದ ತರೀ ಆಕಾಶಾಚಾ । ಪರೀ ಕಪಾಳೀ ಪಿಟೇ ಮೇಘಾಚಾ । ಕಾ ಚಂದ್ರೀ ವೇಗು ಅಭ್ರಾಚಾ । ಆರೋಪಿಜೇ ॥೩೭೯॥ ತೈಸೇ ಹೋಇಜೇ ಜಾಇಜೇ ದೇಹೇ । ತೇ ಆತ್ಮಸತ್ತೇ ಅವಿಕ್ರಿಯೇ । ನಿಷ್ಟಂಕಿತೀ ಗಾ ಮೋಹೇ । ಆಂಧಳೇ ತೇ ॥೩೮೦॥ ಯೇಥ ಆತ್ಮಾ ಆತ್ಮಯಾಚ್ಯಾ ಠಾಯೀ । ದೇಖಿಜೇ ದೇಹೀಂಚಾ ಧರ್ಮು ದೇಹೀ । ಐಸೇ ದೇಖಣೇ ತೇ ಪಾಹೀ । ಆನ ಆಹಾತೀ ॥೩೮೧॥ ಜ್ಞಾನೇ ಕಾ ಜಯಾಚೇ ಡೋಳೇ । ದೇಖೋನಿ ನ ರಾಹತೀ ದೇಹೀಂಚೇ ಖೋಳೇ । ಸೂರ್ಯರಶ್ಮೀ ಆಣೆಯಾಳೇ । ಗ್ರೀಷ್ಮೀ ಜೈಸೇ ॥೩೮೨॥ ತೈಸೀ ವಿವೇಕಾಚೇನಿ ಪೈಸೇ । ಜಯಾಂಚೀ ಸ್ಫೂರ್ತಿ ಸ್ವರೂಪೀ ಬೈಸೇ । ತೇ ಜ್ಞಾನಿಯೇ ದೇಖತೀ ಐಸೇ । ಆತ್ಮಯಾತೇ ॥೩೮೩॥ ಜೈಸೇ ತಾರಂಗಣೇ ಭರಲೇ । ಗಗನ ಸಮುದ್ರೀ ಬಿಂಬಲೇ । ಪರೀ ತೇ ತುಟೋನಿ ನಾಹೀ ಪಡಲೇ । ಐಸೇ ನಿವಡೇ ॥೩೮೪॥ ಗಗನ ಗಗನೀಂಚಿ ಆಹೇ । ಹೇ ಆಭಾಸೇ ತೇ ವಾಯೇ । ತೈಸಾ ಆತ್ಮಾ ದೇಖತೀ ದೇಹೇ । ಗಂವಸಿಲಾಹೀ ॥೩೮೫॥

ಶ್ಲೋಕಾರ್ಥ :- ದೇಹಬಿಡುತ್ತಿದ್ದರೂ, ದೇಹದಲ್ಲಿ ಇರುತ್ತಿದ್ದರೂ, ಗುಣಗಳೊಡನೆ ಸೇರಿ ವಿಷಯವನ್ನು ಅನುಭವಿಸುತ್ತಿದ್ದರೂ, ಈ ಜೀವಾತ್ಮನು ಮೂಢರಿಗೆ ಅಗೋಚರವಾಗಿಯೇ ಇರುತ್ತಾನೆ. ಜ್ಞಾನಿಗಳು ಮಾತ್ರ ಅದನ್ನು ತಿಳಿದುಕೊಳ್ಳುತ್ತಾರೆ ।೧೦॥

ಶ್ಲೋಕಾರ್ಥ :- ಪ್ರಯತ್ನ ಮಾಡಿ ಯೋಗಿಗಳು ತಮ್ಮಲ್ಲಿಯ ಆತ್ಮನನ್ನು ನೋಡಬಲ್ಲರು. ಚಿತ್ತಶುದ್ಧಿಯಿಲ್ಲದ ಜನರು ಎಷ್ಟು ಪ್ರಯತ್ನ ಮಾಡಿದರೂ ನೋಡಲಾರರು ।೧೧॥

ಹಾಗೆಯೇ, ದೇಹವು ಉತ್ಪನ್ನವಾಗಿ ಅದರಲ್ಲಿ ಚಲನವಲನೆಯು ಕಂಡಾಗ ಅದರಿಂದ ಆತ್ಮನು ಬಂದನು ಎಂದೆನ್ನುವರು ।೨೭೩॥

ಅದರಂತೆಯೇ ಹೇ ಸುಭದ್ರಾಪತಿಯೇ, ಅದರ ಸಂಗತಿಯಿಂದ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳನ್ನು ಸೇವಿಸುತ್ತಿರುವಾಗ ಆತ್ಮನು ಉಪಭೋಗಿಸಿದನು ಎಂದೆನ್ನುವರು ।೨೭೪॥

ಅರೇ, ಶರೀರವು ಕ್ಷೀಣವಾಗಿ ಭೋಗ ಭೋಗಿಸುವುದು ತಾನಾಗಿಯೇ ನಿಂತಮೇಲೆ ದೇಹವು ಬಿದ್ದು ಇಲ್ಲದಾಗಲು "ಆತ್ಮನು ಹೋದನು, ಹೋದನು" ಎಂದು ಒದರಾಡುವರು ।೨೭೫॥

ಹೇ ಪಾಂಡವನೇ, ಗಿಡವು ಅಲುಗಾಡಿತೆಂದರೆ ಗಾಳಿ ಬೀಸುತ್ತಿದೆ ಎಂದೆನ್ನಬೇಕು ಮತ್ತು ಅಲ್ಲಿ ಗಿಡವೇ ಇಲ್ಲದಿರುವಾಗ ಗಾಳಿಯೇ ಇಲ್ಲವೆಂದು ಹೇಳಬೇಕೇ? ।೨೭೬॥

ಅಥವಾ ಕನ್ನಡಿಯನ್ನು ಮುಂದಿಟ್ಟು ಅದರಲ್ಲಿ ತನ್ನ ರೂಪವು ಕಂಡಾಗ ಆಗ ಮಾತ್ರ ತಾನಿದ್ದು ಅದಕ್ಕೂ ಮುಂಚಿತವಾಗಿ ತಾನಿರಲಿಲ್ಲವೇ? ।೨೭೭॥

ಆಗ ಕನ್ನಡಿಯನ್ನು ಬದಿಗೆ ಸರಿಸಿದಾಗ ತನ್ನ ರೂಪವು ಲೋಪವಾಯಿತೆಂದು ನಿಶ್ಚಯಿಸಬೇಕೇ? ಆದ್ದರಿಂದ ತಾನಿರುವುದು, ಇಲ್ಲದಿರುವುದು ಕನ್ನಡಿಯ ಪ್ರತಿಬಿಂಬ ಮಾತ್ರ ತಾನಲ್ಲ ।೨೭೮॥

ಗುಡು ಗುಡು ಶಬ್ದವು ಆಕಾಶದಿದ್ದು ಅದನ್ನು ಮೋಡಗಳ ಮೇಲೆ ಹೊರಿಸುವರು, ಅಥವಾ ಮೋಡಗಳು ಓಡಾಡುತ್ತಿರುವಾಗ ಚಂದ್ರನು ಓಡುತ್ತಿರುವನು ಎನ್ನುವರು ।೨೭೯॥

ಅದರಂತೆ ಮೋಹದಿಂದ ಕುರುಡರಾದ ಜನರು ದೇಹದ ಆಗುಹೋಗುಗಳ ಅವಿಕ್ರಿಯಾಕ್ಕೆ ಆತ್ಮನೇ ಬರುವನು ಹೋಗುವನು ಎಂದು ನಿಶ್ಚಯಿಸುವರು ।೨೮೦॥

ಈ ವಿಷಯದಲ್ಲಿ ಆತ್ಮನು ಆತ್ಮನಂತಿದ್ದು ಕರ್ತೃತ್ವ ಭೋಕ್ತೃತ್ವದ ಧರ್ಮವು ದೇಹದ್ದೇ ಆಗಿದೆ. ಹೀಗೆ ಕಾಣುವ ವಿಚಾರವಂತರು ವಿರಳರು ।೨೮೧॥

ಕಣ್ಣಿನಿಂದ ದೇಹವನ್ನು ಕಂಡರೂ ಜ್ಞಾನದಿಂದ ದೇಹರೂಪ ಚೀಲದಿಂದ ಆತ್ಮನು ಬೇರೆಯಾಗಿರುವನೆಂದು ಕಾಣುವರು. ಗ್ರೀಷ್ಮ ಋತುವಿನಲ್ಲಿ ಅನೇಕ ಮೋಡಗಳು ಇದ್ದರೂ ಸೂರ್ಯಕಿರಣಗಳು ಹೊರಗೆ ಬಂದೇ ಬರುವುವು ।೨೮೨॥

ಅದರಂತೆಯೇ ಜ್ಞಾನದ ಪ್ರಭೆಯಿಂದ ಅವರ ಸ್ಫೂರ್ತಿಯು ಸ್ವರೂಪದವರೆಗೂ ಮುಟ್ಟಿರುವುದು. ಆ ಜ್ಞಾನಿಗಳು ಆತ್ಮನು ಅಕರ್ತನು ಎಂದೆನ್ನುವರು ।೨೮೩॥

ಆಕಾಶವು ನಕ್ಷತ್ರಗಳಿಂದ ತುಂಬಿಕೊಂಡಿದ್ದು ಸಮುದ್ರದಲ್ಲಿ ಅವುಗಳ ಪ್ರತಿಬಿಂಬಗಳು ಕಾಣುವುವು. ಆಗ ಅವು ಆಕಾಶದಿಂದ ಉದುರಿ ಬಿದ್ದಿಲ್ಲವೆಂಬುದು ಖಚಿತವಾಗಿದೆ ।೨೮೪॥

ಆಕಾಶವು ಆಕಾಶದಲ್ಲಿಯೇ ಇರುವುದು. ಆದರೆ ಅದು ಸಮುದ್ರದಲ್ಲಿ ಕಾಣುವುದು. ಆ ಪ್ರತಿಬಿಂಬವು ಸುಳ್ಳಾಗಿರುವುದು. ಅದರಂತೆ ಆತ್ಮನು ದೇಹದಲ್ಲಿ ಕರ್ತನು, ಭೋಕ್ತನು ಎಂದು ಕಂಡರೂ ಆತ್ಮಸ್ವರೂಪದಿಂದಲೇ ಇರುವನು ।೨೮೫॥

ಖಳಾಳಾಚ್ಯಾ ಲಗಬಗೀ । ಫೇಡೂನಿ ಖಳಾಳಾಚ್ಯಾ ಭಾಗೀ । ದೇಖಿಜೇ ಚಂದ್ರಿಕಾ ಕಾ ಉಗೀ । ಚಂದ್ರೀ ಜೇವೀ ।೩೮೬॥ ಕಾ ನಾಡರಚಿ ಭರೇ ಶೋಷೇ । ಸೂರ್ಯು ತೋ ಜೈಸಾ ತೈಸಾಚಿ ಅಸೇ । ದೇಹ ಹೋತಾ ಜಾತಾ ತೈಸೇ । ದೇಖತೀ ಮಾತೇ ।೩೮೭॥ ಘಟು ಮಠು ಘಡಲೇ । ತೇಚಿ ಪಾಠೀ ಮೋಡಲೇ । ಪರೀ ಆಕಾಶ ತೇ ಸಂಚಲೇ । ಅಸತಚಿ ಅಸೇ ।೩೮೮॥ ತೈಸೇ ಅಖಂಡೇ ಆತ್ಮಸತ್ತೇ । ಅಜ್ಞಾನದೃಷ್ಟೀ ಕಲ್ಪಿತೇ । ಹೇ ದೇಹಚಿ ಹೋತೇ ಜಾತೇ । ಜಾಣತೀ ಫುಡೇ ।೩೮೯॥ ಚೈತನ್ಯ ಚಢೇ ನಾ ವೋಹಟೇ । ಚೇಷ್ಟವೀ ನಾ ಚೇಷ್ಟೇ । ಐಸೇ ಆತ್ಮಜ್ಞಾನೇ ಚೋಖಟೇ । ಜಾಣತೀ ತೇ ।೩೯೦॥ ಆಣಿ ಜ್ಞಾನಹೀ ಆಪೈತೇ ಹೋಈಲ । ಪ್ರಜ್ಞಾ ಪರಮಾಣುಹೀ ಉಗಾಣಾ ಫೇಈಲ । ಸಕಳ ಶಾಸ್ತ್ರಾಂಚೇ ಯೇಈಲ । ಸರ್ವಸ್ವ ಹಾತಾ ।೩೯೧॥ ಪರೀ ತೇ ವ್ಯುತ್ಪತ್ತಿ ಐಸೀ । ಜರೀ ವಿರಕ್ತಿ ನ ರಿಗೆ ಮಾನಸೀ । ತರೀ ಸರ್ವಾತ್ಮಕಾ ಮಜಸೀ । ನವ್ಹೇಚಿ ಭೇಟೀ ।೩೯೨॥ ಪೈ ತೋಂಡ ಭರೋ ಕಾ ವಿಚಾರಾ । ಆಣಿ ಅಂತಃಕರಣೀ ವಿಷಯಾಂಸೀ ಥಾರಾ । ತರೀ ನಾತುಡೇ ಧನುರ್ಧರಾ । ತ್ರಿಶುದ್ಧೀ ಮೀ ।೩೯೩॥ ಹಾ ಗಾ ವೋಸಣತಯಾಚ್ಯಾ ಗ್ರಂಥೀ । ಕಾಈ ತುಟತೀ ಸಂಸಾರಗುಂತೀ? । ಕೀ ಪರಿವಸಲಿಯಾ ಪೋಥೀ । ವಾಚಿಲೀ ಹೋಯ? ।೩೯೪॥ ನಾನಾ ಬಾಂಧೋನಿಯಾ ಡೋಳೇ । ಘ್ರಾಣೇ ಲಾವಿಜತೀ ಮುಕ್ತಾಫಳೇ । ತರೀ ತಯಾಂಚೇ ಕಾಯ ಕಳೇ । ಮೋಲ ಮಾನ? ।೩೯೫॥ ತೈಸಾ ಚಿತ್ತೀ ಅಹಂತೇ ಠಾವೋ । ಆಣಿ ಜಿಭೇ ಸಕಳಶಾಸ್ತ್ರಾಂಚಾ ಸರಾವೋ । ಐಸೇನಿ ಕೋಡಿ ಏಕ ಜನ್ಮ ಜಾವೋ । ಪರೀ ನ ಪವಿಜೇ ಮಾತೇ ।೩೯೬॥ ಜೋ ಏಕ ಮೀ ಕಾ ಸಮಸ್ತೀ । ವ್ಯಾಪಕು ಅಸೇ ಭೂತಜಾತೀ । ಏಕ ತಿಯೇ ವ್ಯಾಪ್ತೀ । ರೂಪ ಕರೂ ।೩೯೭॥

ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ।೧೨॥

ತರೀ ಸೂರ್ಯಾಸಕಟ ಆಘವೀ । ಹೇ ವಿಶ್ವರಚನಾ ಜೇ ದಾವೀ । ತೇ ದೀಪ್ತಿ ಮಾಝೀ ಜಾಣಾವೀ । ಆದ್ಯಂತೀ ಆಹೇ ।೩೯೮॥ ಜಲ ಶೋಷೂನಿ ಗೇಲಿಯಾ ಸವಿತಾ । ಓಲಾಂಸ ಪುರವೀತಸೇ ಜೇ ಮಾಘೌತಾ । ತೇ ಚಂದ್ರೀ ಪಂಡುಸುತಾ । ಜ್ಯೋತ್ಸ್ನಾ ಮಾಝೀ ।೩೯೯॥ ಆಣಿ ದಹನ ಪಾಚನಸಿದ್ಧೀ । ಕರೀತಸೇ ಜೇ ನಿರವಧೀ । ತೇ ಹುತಾಶೀ ತೇಜೋವೃದ್ಧೀ । ಮಾಝೀಚಿ ಗಾ ।೪೦೦॥

ಧೋ ಧೋ ಎಂದು ಹರಿಯುವ ನೀರಿನಲ್ಲಿಯೇ ಚಂಚಲತೆಯು ಇರುವುದು. ಆದರೆ ಅದರಲ್ಲಿ ಕಾಣುವ ಚಂದ್ರನು ಚಂಚಲನಂತೆ ಕಂಡರೂ ಚಂದ್ರನು ಸ್ಥಿರವಾಗಿರುವನು ।೨೮೬॥

ಚಿಕ್ಕ ಗುಂಡಿಯಲ್ಲಿ ನೀರು ಕೂಡಿದಾಗ ಅದರಲ್ಲಿ ಸೂರ್ಯನು ಕಾಣುವನು. ಅದು ಒಣಗಿದಾಗ ಕಾಣುವುದಿಲ್ಲ. ಸೂರ್ಯನು ಇದ್ದಕ್ಕಿದ್ದಂತೆಯೇ ಇರುವನು. ಅದರಂತೆ ದೇಹದ ಆಗುಹೋಗುಗಳಲ್ಲಿ ನಾನಿರದೇ ನಾನು ಅವಿನಾಶಿಯಾಗಿಯೇ ಇರುವೆನು ।೨೮೭॥

ಮಣ್ಣಿನ ಘಟ ಅಥವಾ ಮಠಗಳನ್ನು ಸಿದ್ಧಮಾಡಿ ಪುನಃ ಕೆಡಿಸಿದರೆ ಘಟ, ಮಠಗಳಲ್ಲಿ ಕಾಣುವ ಆಕಾಶವು ಇದ್ದಕ್ಕಿದ್ದಂತೆಯೇ ಯಾವಾಗಲೂ ಇರುವುದು ।೨೮೮॥

ಅದರಂತೆ ಅಖಂಡವಾದ ಆತ್ಮಸತ್ತೆಯ ಆಧಾರದಿಂದ ಅಜ್ಞಾನದೃಷ್ಟಿಯಲ್ಲಿ ಕಲ್ಪಿತವಾದ ದೇಹಗಳು ಆಗುವುವು ಮತ್ತು ಹೋಗುವುವು. ಹೀಗೆ ಸ್ಪಷ್ಟವಾಗಿ ತಿಳಿಯುವರು ।೨೮೯॥

ಆತ್ಮವು ಬೆಳೆಯುವುದಿಲ್ಲ, ಕುಗ್ಗುವುದಿಲ್ಲ, ಚೇಷ್ಟೇ ಮಾಡುವುದಿಲ್ಲ, ಮಾಡಿಸುವುದಿಲ್ಲ. ಈ ಯಥಾರ್ಥ ಜ್ಞಾನವು ಆದವರೇ ಇದನ್ನು ತಿಳಿಯುವರು ।೨೯೦॥

ಇಂತಹ ಜ್ಞಾನವು ಪ್ರಾಪ್ತಿಯಾಗಿರಬಹುದು, ವಿಶ್ವದ ಪರಮಾಣುಗಳನ್ನು ಎಣಿಸುವಷ್ಟು ಬುದ್ಧಿವಂತನಿರಬಹುದು ಮತ್ತು ಆತನು ಎಲ್ಲ ಶಾಸ್ತ್ರಗಳಲ್ಲಿ ನಿಪುಣನಾಗಿರಬಹುದು ।೨೯೧॥

ಆದರೆ ಆತನಿಗೆ ಇಷ್ಟೆಲ್ಲ ಇದ್ದೂ, ಒಂದುವೇಳೆ ಆತನಲ್ಲಿ ವೈರಾಗ್ಯದ ಲೇಶವಿಲ್ಲದಿದ್ದರೆ, ಸರ್ವವ್ಯಾಪಕನಾದ ನನ್ನ ದರ್ಶನವು ಆತನಿಗೆ ಆಗಲಾರದು ।೨೯೨॥

ಅದರಂತೆ ಸರ್ವಶಾಸ್ತ್ರಗಳ ಮುಖೋದ್ಗತವಿದ್ದರೂ, ಅಂತಃಕರಣದಲ್ಲಿ ಒಂದುವೇಳೆ ವಿಷಯಗಳ ಚಿಂತನೆ ಇದ್ದರೆ ಅರ್ಜುನಾ, ಖಚಿತವಾಗಿ, ಖಚಿತವಾಗಿ, ಖಚಿತವಾಗಿ ಆತನಿಗೆ ನನ್ನ ಪ್ರಾಪ್ತಿಯಾಗುವುದೇ ಇಲ್ಲ ।೨೯೩॥

ಅರೇ ನೋಡು, ಸ್ವಪ್ನದಲ್ಲಿ ಎಲ್ಲ ಗ್ರಂಥಗಳು ಮುಖೋದ್ಗತವಾದರೂ ಸಂಸಾರದಿಂದ ಮುಕ್ತನಾಗಲು ಬರುವುದೇ? ಅಥವಾ ಪಿತ್ರಾರ್ಜಿತ ಗ್ರಂಥಗಳನ್ನು ಜೋಪಾನವಾಗಿ ಇಟ್ಟರೆ ಗ್ರಂಥ ಪಾರಾಯಣ ಮಾಡಿದಂತಾಗುವುದೇ? ।೨೯೪॥

ಅಥವಾ ಕಣ್ಣುಗಳನ್ನು ಮುಚ್ಚಿಕೊಂಡು ಮುತ್ತನ್ನು ಮೂಗಿಗೆ ಹಾಕಿಕೊಂಡರೆ ಅದರ ಬೆಲೆ (ಹೊಳಪು) ತಿಳಿಯಬಹುದೇ? ।೨೯೫॥

ಅದರಂತೆ ಚಿತ್ತದಲ್ಲಿ ಅಭಿಮಾನ (ಅಹಂಕಾರ) ವನ್ನು ಧರಿಸಿ ಮುಖದಿಂದ ಎಲ್ಲ ಶಾಸ್ತ್ರಗಳನ್ನು ಹೇಳುತ್ತಿದ್ದರೂ ಸಹ ಇಂತಹ ಕೋಟಿಗಟ್ಟಲೇ ಜನ್ಮ ಕಳೆದರೂ ಆತನಿಗೆ ನನ್ನ ಪ್ರಾಪ್ತಿಯು ಆಗುವುದೇ ಇಲ್ಲ ।೨೯೬॥

ನಾನು ಒಬ್ಬನೇ ಇದ್ದು, ಪ್ರಾಣಿಮಾತ್ರರಲ್ಲಿ ವ್ಯಾಪಿಸಿರುವೆನು. ಆ ನನ್ನ ಪ್ರಾಪ್ತಿಯು ಹೇಗಿದೆ ಎಂಬುದನ್ನು ನಿನಗೆ ಸ್ಪಷ್ಟಮಾಡಿ ಹೇಳುವೆ ಕೇಳು ।೨೯೭॥

**ಶ್ಲೋಕಾರ್ಥ :-** ಸೂರ್ಯನಲ್ಲಿರುವ, ಚಂದ್ರನಲ್ಲಿರುವ, ಅಗ್ನಿಯಲ್ಲಿರುವ ಲೋಕವನ್ನೆಲ್ಲ ಬೆಳಗುವ ಬೆಳಕೆಲ್ಲವೂ ನನ್ನದೇ ।೧೨॥

ಯಾವ ಸೂರ್ಯನ ತೇಜದಿಂದ ಎಲ್ಲ ವಿಶ್ವರಚನೆಯು ದೃಷ್ಟಿಗೆ ಗೋಚರಿಸುವುದು. ಆ ತೇಜವು ಸೂರ್ಯ ಸಮೇತವಾಗಿ ನನ್ನದಿರುವುದು, ಹೀಗೆ ತಿಳಿ ।೨೯೮॥

ಹೇ ಪಂಡುಸುತನೇ, ಸೂರ್ಯನ ತೇಜದಿಂದ ನೀರನ್ನು ಶೋಷಣೆ ಮಾಡಿದ ನಂತರ ಪುನಃ ಪೃಥ್ವಿಗೆ ತೇವನ್ನು ತಂದು ಕೊಡುವ ಚಂದ್ರನ ಪ್ರಕಾಶವು ನನ್ನದಿರುವುದು ।೨೯೯॥

ಮತ್ತು ದಹಿಸುವಿಕೆ ಮತ್ತು ಪಚನ ಮಾಡುವಿಕೆಯಲ್ಲಿರುವ ಅಗ್ನಿಯ ತೇಜೋವೃದ್ಧಿಯು ನನ್ನದೇ ಇರುವುದು ।೩೦೦॥

ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।
ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ।।೧೩।।

ಮೀ ರಿಗಾಲೋ ಅಸೇ ಭೂತಳೀ । ಮ್ಹಣೌನಿ ಸಮುದ್ರ ಮಹಾಜಳೀ । ಹೇ ಪಾಂಸೂಚಿ ಢೇಂಪುಳೀ । ವಿರೇಚಿನಾ ।।೪೦೧।। ಆಣಿ ಭೂತೇಂಹೀ ಚರಾಚರೇ । ಹೇ ಧರಿತಸೇ ಜಿಯೇ ಅಪಾರೇ । ತಿಯೇ ಮೀಚಿ ಧರೀ ಧರೇ । ರಿಗೋನಿಯಾ ।।೪೦೨।। ಗಗನೀ ಮೀ ಪಂಡುಸುತಾ । ಚಂದ್ರಾಚೇನಿ ಮಿಸೇ ಅಮೃತಾ । ಭರಲಾ ಜಾಲೋ ಚಾಲತಾ । ಸರೋವರು ।।೪೦೩।। ತೇಥೂನಿ ಫಾಂಕತೀ ರಶ್ಮಿ ಕರ । ತೇ ಪಾಟ ಪೇಲೂನಿ ಅಪಾರ । ಸರ್ವೌಷಧೀಂಚೇ ಆಗರ । ಭರಿತು ಅಸೇ ಮೀ ।।೪೦೪।। ಐಸೇನಿ ಸಸ್ಯಾದಿಕಾ ಸಕಳಾ । ಕರೀ ಧಾನ್ಯಜಾತೀ ಸುಕಾಳಾ । ದೇ ಅನ್ನದ್ವಾರಾ ಜಿವ್ಹಾಳಾ । ಭೂತಜಾತಾ ।।೪೦೫।। ಆಣಿ ನಿಪಜವಿಲೇ ಅನ್ನ । ತರೀ ತೈಸೇ ಕೈಂಚೇ ದೀಪನ । ಜೇಣೇ ಜಿರೂನಿ ಸಮಾಧಾನ । ಭೋಗಿತೀ ಜೀವ ।।೪೦೬।।

ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।
ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ।।೧೪।।

ಮ್ಹಣೌನಿ ಪ್ರಾಣಿಜಾತಾಂಚ್ಯಾ ಘಟೀ । ಕರೂನಿ ಕಂದಾವರೀ ಆಗಿಠೀ । ದೀಪ್ತಿ ಜಠರೀಂಹೀ ಕಿರೀಟೀ । ಮೀಚಿ ಜಾಲೋ ।।೪೦೭।। ಪ್ರಾಣಾಪಾನಾಚ್ಯಾ ಜೋಡಭಾತೀ । ಫುಂಕ ಫುಂಕೋನಿಯಾ ಅಹೋರಾತೀ । ಆಟಿತಸೇ ನೇಣೋ ಕಿತೀ । ಉದರಾಮಾಜೀ ।।೪೦೮।। ಶುಷ್ಕೇ ಅಥವಾ ಸ್ನಿಗ್ಧೇ । ಸುಪಕ್ಕೇ ಕಾ ವಿದಗ್ಧೇ । ಪರೀ ಮೀಚಿ ಗಾ ಚತುರ್ವಿಧೇ । ಅನ್ನೇ ಪಚೀ ।।೪೦೯।। ಏವಂ ಮೀಚಿ ಆಘವೇ ಜನ । ಜನಾ ನಿರವಿತೇ ಮೀಚಿ ಜೀವನ । ಜೀವನೀ ಮುಖ್ಯಸಾಧನ । ವನ್ಹಿ ಹೀ ಮೀಚಿ ।।೪೧೦।। ಆತಾ ಐಸಿಯಾಹೀವರೀ ಕಾಈ । ಸಾಂಗೋ ವ್ಯಾಪ್ತೀಚೀ ನವಾಈ । ಯೇಥ ದುಜೇ ನಾಹೀಂಚಿ ಫೇಈ । ಸರ್ವತ್ರ ಮೀ ಗಾ ।।೪೧೧।। ತರೀ ಕೈಸೇನಿ ಪಾ ವೇಖೇ । ಸದಾ ಸುಖಿಯೇ ಏಕೇ । ಏಕೇ ತಿಯೇ ಬಹುದುಃಖೇ । ಕ್ರಾಂತ ಭೂತೇ ।।೪೧೨।। ಜೈಸೀ ಸಗಳಿಯೇ ಪಾಟಣೇ । ಏಕೇಂಚಿ ದೀಪೇ ದಿವೇಲಾವಣೇ । ಜಾಲಿಯಾ ಕಾ ನ ದೇಖಣೇ । ಉರಲೀ ಏಕೇ ।।೪೧೩।। ಐಸೀ ಹನ ಉಖಿವಿಖೀ । ಕರಿತ ಆಹಾಸೀ ಮಾನಸೀ ಕೀ । ತರೀ ಪರಿಸ ತೇಹೀ ನಿಕೀ । ಶಂಕಾ ಫೇಡೂ ।।೪೧೪।।

ಶ್ಲೋಕಾರ್ಥ :- ನಾನು ಭೂಮಿಯಲ್ಲಿ ಪ್ರವೇಶಿಸಿ ನನ್ನ ಸಾಮರ್ಥ್ಯದಿಂದ ಭೂತರಾಶಿಯನ್ನು ಧರಿಸುತ್ತೇನೆ. ಅಮೃತ ಕಿರಣವುಳ್ಳ ಚಂದ್ರನಾಗಿ ಪೈರುಗಳನ್ನು ಬೆಳೆಯಿಸುತ್ತೇನೆ ॥೧೩॥

ನಾನು ಪೃಥ್ವಿಯಲ್ಲಿ ಪ್ರವೇಶಿಸಿ ಅದಕ್ಕೆ ಆಧಾರಭೂತನಾಗಿರುವೆನು. ಆದ್ದರಿಂದಲೇ ಇದು ರಜಃಕಣಗಳಿಂದ ಸಿದ್ಧಗೊಂಡ ದೊಡ್ಡ ಹೆಂಟೆಯಾಗಿದ್ದರೂ ಸಮುದ್ರದ ಅಪಾರವಾದ ನೀರಿನಿಂದ ಕರಗುವುದಿಲ್ಲ ॥೪೦೧॥

ಮತ್ತು ಅದು ತನ್ನ ಮೇಲ್ಭಾಗದಲ್ಲಿ ಅಪರಿಮಿತವಾದ ಚರಾಚರ ಭೂತಗಳನ್ನು ಧಾರಣೆ ಮಾಡುವುದನ್ನು ನಾನೇ ಪೃಥ್ವಿಯಲ್ಲಿ ಪ್ರವೇಶಿಸಿ ಎಲ್ಲವನ್ನೂ ಧಾರಣೆ ಮಾಡುವೆನು ॥೪೦೨॥

ಹೇ ಪಂಡುಸುತನೇ, ನಾನು ಆಕಾಶದಲ್ಲಿ ಚಂದ್ರನ ರೂಪದಲ್ಲಿ ನಡೆಯುವ ಅಮೃತದ ಸರೋವರವೇ ಆಗಿರುವೆನು ॥೪೦೩॥

ಮತ್ತು ಅಲ್ಲಿಂದಲೇ ಚಂದ್ರನ ಕಿರಣರೂಪ ಓಘದಿಂದ ಎಲ್ಲ ವನಸ್ಪತಿಗಳ ಪೋಷಣೆಯನ್ನು ನಾನೇ ಮಾಡುವೆನು ॥೪೦೪॥

ಈ ಪ್ರಕಾರವಾಗಿ ಎಲ್ಲ ಧಾನ್ಯಾದಿಕಗಳ ಪೋಷಣೆಯನ್ನು ಮಾಡಿ ನಾನಾ ಪ್ರಕಾರಗಳ ಎಲ್ಲ ಧಾನ್ಯಗಳ ಸಮೃದ್ಧಿಯನ್ನು ಮಾಡಿ, ಅನ್ನದಿಂದ ಎಲ್ಲ ಪ್ರಾಣಿಗಳ ರಕ್ಷಣೆಯನ್ನು ನಾನೇ ಮಾಡುವೆನು ॥೪೦೫॥

ಮತ್ತು ಅನ್ನವನ್ನು ಉತ್ಪನ್ನ ಮಾಡಿದ ಮೇಲೆ ಅದು ಪ್ರಾಣಿಮಾತ್ರರಲ್ಲಿ ಹೇಗೆ ಪಚನವಾಗಿ ಆದರಿಂದ ಎಲ್ಲ ಜೀವಗಳಿಗೆ ಸಮಾಧಾನವಾದೀತು ॥೪೦೬॥

ಶ್ಲೋಕಾರ್ಥ :- ನಾನು ಜಠರಾಗ್ನಿಸ್ವರೂಪದಿಂದ ಪ್ರಾಣಿಗಳ ಶರೀರಗಳಲ್ಲಿ ಇದ್ದು ಪ್ರಾಣಾಪಾನಗಳ ಸಹಾಯದಿಂದ ಚತುರ್ವಿಧವಾದ ಆಹಾರಗಳನ್ನು ಜೀರ್ಣಿಸುತ್ತೇನೆ ॥೧೪॥

ಆದಕ್ಕಾಗಿ ಅರ್ಜುನನೇ, ಪ್ರಾಣಿಮಾತ್ರರ ಶರೀರಗಳಲ್ಲಿ ಹೊಕ್ಕಳದ ಸ್ಥಾನದ ಮೇಲೆ ಅಗ್ಗಿಷ್ಟಿಗೆಯನ್ನು ಹೊತ್ತಿಸಿ ಜಠರದಲ್ಲಿ ನಾನೇ ಪ್ರದೀಪ್ತನಾದೆನು! ॥೪೦೭॥

ಪ್ರಾಣ ಮತ್ತು ಅಪಾನ ಈ ವಾಯುಗಳ ಜೋಡು ತಿದಿಯಿಂದ ಹಗಲಿರುಗಳು ಊದಿ ಊದಿ ಜಠರಾಗ್ನಿಯನ್ನು ಹೊತ್ತಿಸಿ ಈ ಉದರದಲ್ಲಿ ಅದೆಷ್ಟು ಅನ್ನವು ಅರಗುವುದೋ ಲೆಕ್ಕವೇ ಇಲ್ಲ ॥೪೦೮॥

ಒಣಗಿದ, ಜಿಗಟಾದ, ಕುದ್ದಿದ ಮತ್ತು ಹಸಿಯಾದ ಹೀಗೆ ನಾಲ್ಕು ಪ್ರಕಾರದ ಅನ್ನಗಳನ್ನು ನಾನೇ ಪಚನ ಮಾಡುವೆನು ॥೪೦೯॥

ಈ ಪ್ರಕಾರವಾಗಿ ಎಲ್ಲ ಜಗವು ನಾನು, ಜಗತ್ತಿನ ನಿರ್ವಹಣೆ ಮಾಡುವ ಧಾನ್ಯವು ನಾನು, ಮತ್ತು ಜೀವನದ ಮುಖ್ಯ ಸಾಧನವಾಗಿರುವ ಜಠರಾಗ್ನಿಯೂ ನಾನೇ ಆಗಿರುವೆನು ॥೪೧೦॥

ಈಗ ಇದಕ್ಕಿಂತಲೂ ಹೆಚ್ಚಿಗೆ ನನ್ನ ವ್ಯಾಪಕತ್ವದ ಚಮತ್ಕಾರವನ್ನು ನೀನಗೇನು ಹೇಳಲಿ? ಆದ್ದರಿಂದ ಈ ಜಗತ್ತಿನಲ್ಲಿ ಇನ್ನೊಂದಿಲ್ಲವೆಂದು ನಿಶ್ಚಯವಾಗಿ ಲಕ್ಷದಲ್ಲಿಡು. ಎಲ್ಲೆಲ್ಲಿಯೂ ನಾನೇ ತುಂಬಿಕೊಂಡಿದ್ದೇನೆ ॥೪೧೧॥

ಹಾಗಾದರೆ, ಈ ಜಗತ್ತಿನಲ್ಲಿ ಕೆಲವು ಪ್ರಾಣಿಗಳು ಯಾವಾಗಲೂ ಸುಖವಾಗಿರುವುದು ಕಾಣುವುದು ಮತ್ತು ಕೆಲವರು ದುಃಖದಿಂದ ಪೂರ್ಣ ವ್ಯಾಪ್ತರಾದದ್ದು ಕಾಣುವುದು. ಇದು ಏಕೆ? ॥೪೧೨॥

ಪಟ್ಟಣದಲ್ಲಿ ಒಂದೇ ದೀಪದಿಂದ ಎಲ್ಲ ದೀಪಗಳನ್ನು ಹಚ್ಚಲಾಗುವುದು. ಆದರೆ, ಅವುಗಳಲ್ಲಿ ಕೆಲವು ಬಹಳ ಪ್ರಕಾಶ ಮಾಡುವುವು, ಇನ್ನು ಕೆಲವು ಮಾಡುವುದಿಲ್ಲ. ಹೀಗೇಕೆ? ॥೪೧೩॥

ಈ ಪ್ರಕಾರದ ತರ್ಕ ವಿತರ್ಕಗಳನ್ನು ಒಂದುವೇಳೆ ನೀನು ಮನದಲ್ಲಿ ಮಾಡುತ್ತಿರಬಹುದು, ಅದಕ್ಕೂ ಉತ್ತಮವಾಗಿ ನಿವಾರಣೆ ಮಾಡುವೆ, ಕೇಳು ॥೪೧೪॥

ಪೈ ಆಘವಾ ಮೀಚಿ ಅಸೇ । ಯೇಥ ನಾಹೀ ಕೀರ ಅನಾರಿಸೇ । ಪರೀ ಪ್ರಾಣಿಯಾಂಚಿಯಾ ಉಲ್ಲಾಸೇ । ಬುದ್ಧಿ ಐಸಾ ॥೪೧೫॥ ಜೈಸೇ ಏಕಚಿ ಆಕಾಶ ಧ್ವನೀ । ವಾದ್ಯವಿಶೇಷೀ ಆನಾನೀ । ವಾಜಾವೇ ಪಡೇ ಭಿನ್ನೀ । ನಾದಾಂತರೀ ॥೪೧೬॥ ಕಾ ಲೋಕಚೇಷ್ಟೀ ವೇಗಳಾಲಾ । ಜೋ ಹಾ ಏಕುಚಿ ಭಾನು ಉದ್ಯೆಲಾ । ತೋ ಆನಾನೀ ಪರೀ ಗೇಲಾ । ಉಪಯೋಗಾಸೀ ॥೪೧೭॥ ನಾನಾ ಬೀಜಧರ್ಮಾನುರೂಪ । ಠಝಾಡೀ ಉಪಜವಿಲೇ ಆಪ । ತೈಸೇ ಪರಿಣಮಲೇ ಸ್ವರೂಪ । ಮಾಝೇಂ ಜೀವಾ ॥೪೧೮॥ ಅಗಾ ನೇಣಾ ಆಣಿ ಚತುರಾ । ಪುಢಾ ನಿಳಯಾಂಚಾ ದುಸರಾ । ನೇಣಾ ಸರ್ಪತ್ವೇಂ ಜಾಲಾ ಯೇರಾ । ಸುಖಾಲಾಗಿ ॥೪೧೯॥ ಹೇ ಅಸೋ ಸ್ವಾತೀಚೇಂ ಉದಕ । ಶುಕ್ತೀ ಮೋತೀ ವ್ಯಾಳೀ ವಿಖ । ತೈಸಾ ಸಜ್ಞಾನಾಂಸೀ ಮೀ ಸುಖ । ದುಃಖ ತೋ ಅಜ್ಞಾನಾಂಸೀ ॥೪೨೦॥

ಸರ್ವಸ್ಯ ಚಾಹಂ ಹೃದಿ ಸಂನಿವಿಷ್ಟೋ ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।
ವೇದೈಶ್ಚ ಸರ್ವೈರಹಮೇವ ವೇದ್ಯೋ ವೇದಾಂತಕೃದ್ವೇದವಿದೇವ ಚಾಹಮ್ ॥೧೫॥

ಯೇರ್ಹ್ವೀ ಸರ್ವಾಂಚ್ಯಾ ಹೃದಯದೇಶೀ । ಮೀ ಅಮುಕಾ ಆಹೇ ಐಸೀ । ಜೇ ಬುದ್ಧಿ ಸ್ಫುರೇ ಅಹರ್ನಿಶೀ । ತೇ ವಸ್ತು ಗಾ ಮೀ ॥೪೨೧॥ ಪರೀ ಸಂತಾಸವೇ ವಸತಾ । ಯೋಗಜ್ಞಾನೀ ಪೈಸತಾ । ಗುರುಚರಣ ಉಪಾಸಿತಾ । ವೈರಾಗ್ಯೇಂಸೀ ॥೪೨೨॥ ಯೇಣೇಂಚಿ ಸತ್ಕರ್ಮೇ । ಅಶೇಷಹೀ ಅಜ್ಞಾನ ವಿರಮೇ । ಜಯಾಂಚೇ ಅಹಂ ವಿಶ್ರಾಮೇ । ಆತ್ಮರೂಪೀ ॥೪೨೩॥ ತೇ ಆಪೇಆಪ ದೇಖೋನಿ ದೇಖೀ । ಮಿಯಾ ಆತ್ಮೇನಿ ಸದಾ ಸುಖೀ । ಯೇಥೇ ಮೀ ವಾಂಚೂನ ಅವಲೋಕೀ । ಆನಹೇತು ಅಸೇ? ॥೪೨೪॥ ಅಗಾ ಸೂರ್ಯೋದಯೋ ಜಾಲಿಯಾ । ಸೂರ್ಯೇ ಸೂರ್ಯಚಿ ಪಹಾವಾ ಧನಂಜಯಾ । ತೇವೀ ಮಾತೇ ಮಿಯಾ ಜಾಣಾವಯಾ । ಮೀಚಿ ಹೇತು ॥೪೨೫॥ ನಾ ಶರೀರಪರಾತೇ ಸೇವಿತಾ । ಸಂಸಾರಗೌರವಚಿ ಐಕತಾ । ದೇಹೀ ಜಯಾಂಚೇ ಅಹಂತಾ । ಬುಡೋನಿ ಠೇಲೀ ॥೪೨೬॥ ತೇ ಸ್ವರ್ಗಸಂಸಾರಾ ಲಾಗೀ । ಧಾಂವತಾ ಕರ್ಮಮಾರ್ಗೀ । ದುಃಖಾಚ್ಯಾ ಸೇಲಭಾಗೀ । ವಿಭಾಗೀ ಹೋತೀ ॥೪೨೭॥ ಪರೀ ಹೇಂಹೀ ಹೋಣೇ ಅರ್ಜುನಾ । ಮಜಚಿಸ್ತವ ತಯಾ ಅಜ್ಞಾನಾ । ಜೈಸಾ ಜಾಗತಾಚಿ ಹೇತು ಸ್ವಪ್ನಾ । ನಿದ್ರೇತೇ ಹೋಯ ॥೪೨೮॥

ಇಲ್ಲಿ ನೋಡು, ಎಲ್ಲ ಕಡೆಗೂ ನಾನೇ ತುಂಬಿರುವೆನು. ಈ ಮಾತು ಮಾತ್ರ ಪೂರ್ಣವಾಗಿ ನಿರ್ವಿವಾದವಾಗಿದೆ. ಆದರೆ, ಪ್ರಾಣಿಗಳ ಬುದ್ಧಿಯ ಕಲ್ಪನೆಯಂತೆ ನಾನು ಅವರಿಗೆ ಕಾಣಿಸುವೆನು ।೪೧೫॥

ಯಾವ ಪ್ರಕಾರವಾಗಿ ಒಂದೇ ಆಕಾಶ ಧ್ವನಿಯ ಭಿನ್ನ ಭಿನ್ನ ವಾದ್ಯಗಳ ಅನುರೋಧದಿಂದ ಭಿನ್ನ ಭಿನ್ನ ನಾದಗಳು ಕೇಳಲು ಬರುವುವೋ ।೪೧೬॥

ಅಥವಾ ಸೂರ್ಯನು ಒಬ್ಬನೇ ಇದ್ದು, ಆತನು ಉದಯನಾದ ಮೇಲೆ ಜನರ ವ್ಯವಹಾರದಲ್ಲಿ ಭಿನ್ನ ಭಿನ್ನವಾಗಿ ಹೇಗೆ ಉಪಯೋಗವಾಗುವುದೋ ।೪೧೭॥

ಅಥವಾ ನೀರು ಒಂದೇ ಇದ್ದು, ಬೀಜಗಳ ಭಿನ್ನ ಭಿನ್ನ ಧರ್ಮದಂತೆ ಗಿಡಗಳಲ್ಲಿ ಉತ್ಪನ್ನವಾಗುವುದು. ಅಂದರೆ ಹೇಗೆ ಬೇರೆ ಬೇರೆ ಗಿಡಗಳಾಗುವುವೋ, ಅದರಂತೆ ನಾನೊಬ್ಬನೇ ಇದ್ದು, ಬೇರೆ ಬೇರೆ ಪ್ರಾಣಿಗಳಲ್ಲಿ ನನ್ನ ಸ್ವರೂಪವು ಪರಿಣಾಮ ಹೊಂದಿದೆ ।೪೧೮॥

ಅರೇ, ನೀಲಮಣಿಯ ಎರಡು ಸುತ್ತಿನ ಹಾರವು ಒಬ್ಬ ಅಜ್ಞಾನಿ ಇನ್ನೊಬ್ಬ ಚತುರ ಇವರಿಬ್ಬರಿಗೂ ಒಂದೇ ಕಾಲಕ್ಕೆ ಕಂಡಾಗ ಅಜ್ಞಾನಿಯು ಹಾವು ಎಂದು ತಿಳಿದು ಭಯ ಪಡುವನು, ಇನ್ನೊಬ್ಬನು ಹಾರವೆಂದು ತಿಳಿದು ಸುಖಿಯಾಗುವನು ।೪೧೯॥

ಇದು ಇರಲಿ, ಸ್ವಾತಿ ಮಳೆಯ ಹನಿಗಳಿಂದ ಕಪ್ಪೆ ಚಿಪ್ಪಿನಲ್ಲಿ ಮುತ್ತುಗಳಾಗುವುವು ಮತ್ತು ಹಾವಿನ ಬಾಯಿಯಲ್ಲಿ ವಿಷವಾಗುವುದು. ಅದರಂತೆ ಜ್ಞಾನಿಗಳಿಗೆ ನನ್ನಿಂದ ಸುಖವಾಗುವುದು, ಅಜ್ಞಾನಿಗಳಿಗೆ ದುಃಖವಾಗುವುದು ।೪೨೦॥

ಶ್ಲೋಕಾರ್ಥ :- ಎಲ್ಲರ ಹೃದಯದಲ್ಲಿ ನಾನೇ ಇದ್ದೇನೆ. ನನ್ನಿಂದಲೇ ಎಲ್ಲರಿಗೂ ಅರಿವು ಮರೆವು ಉಂಟಾಗುತ್ತದೆ. ವೇದಗಳಿಂದ ತಿಳಿಯಲ್ಪಡುವವನು ನಾನೇ, ವೇದಾಂತಕರ್ತನೂ, ವೇದವೇತ್ತನೂ ಸಹ ನಾನೇ ।೧೫॥

ಸಾಮಾನ್ಯವಾಗಿ ಎಲ್ಲ ಪ್ರಾಣಿಗಳ ಹೃದಯದಲ್ಲಿ "ನಾನು ಇಂತಹವನು ಇದ್ದೇನೆ" ಎಂದು ಯಾವುದು ಬುದ್ಧಿಯಲ್ಲಿ ಹಗಲು ರಾತ್ರಿ ಸ್ಫುರಣವಾಗುವುದೋ, ಅದು ನಾನಾಗಿರುವೆನು ।೪೨೧॥

ಆದರೆ, ಸಾಧು ಸಮಾಗಮದಿಂದ ಬ್ರಹ್ಮಾತ್ಮೈಕ್ಯ ಜ್ಞಾನದ ಅಭ್ಯಾಸದಿಂದ ಮತ್ತು ವೈರಾಗ್ಯದೊಂದಿಗೆ ಗುರುಚರಣ ಸೇವೆಯಿಂದ ।೪೨೨॥

ಈ ಎಲ್ಲ ಸದಾಚಾರ ವರ್ತನೆಯಿಂದ ಎಲ್ಲ ಅಜ್ಞಾನವು ಇಲ್ಲದಂತಾಗಿ ಆತನ "ನಾನು" ಎಂಬುವುದು ಆತ್ಮಸ್ವರೂಪದಲ್ಲಿ ಲೀನವಾಗುವುದು ।೪೨೩॥

ತದನಂತರ ಆತ್ಮಸ್ವರೂಪದತ್ತ ದೃಷ್ಟಿಬಿದ್ದು ನನ್ನ ಆತ್ಮದ ಯೋಗದಿಂದ ಆತನು ಸದಾಸುಖಿಯಾಗುವನು. ಈ ಸ್ಥಿತಿ ಹೊಂದಲು ನನ್ನ ಹೊರತಾಗಿ ಬೇರೆ ಯಾರಾದರೂ ಕಾರಣಿಭೂತರಾಗುವರೇ? ।೪೨೪॥

ಹೇ ಧನಂಜಯನೇ, ಸೂರ್ಯೋದಯವಾಗಲು ಸೂರ್ಯನ ತೇಜದಿಂದಲೇ ಸೂರ್ಯನನ್ನು ಕಾಣಬೇಕಾಗುವುದು. ಅದರಂತೆ ನನ್ನನ್ನು ತಿಳಿಯಲು ನಾನೇ ಕಾರಣನಾಗಿದ್ದೇನೆ ।೪೨೫॥

ವ್ಯವಹಾರಿಕ ಜನರ ಸೇವೆ ಮಾಡಿ ಸಂಸಾರದ ಸೊಬಗನ್ನು ಕೇಳಿದಾಗ ದೇಹದಲ್ಲಿಯೇ ಅಹಂಬುದ್ಧಿಯು ಇವರಿಗೆ ಮುಳುಗಿ ಹೋಗಿರುವುದು।೪೨೬॥

ಇವರು ಸ್ವರ್ಗ ಮತ್ತು ಸಂಸಾರ, ಈ ಸುಖದ ಪ್ರಾಪ್ತಿಗಾಗಿ ಕರ್ಮಮಾರ್ಗದ ಆಚರಣೆಯನ್ನು ಮಾಡುವರು. ಇದರಿಂದ ಇವರು ತಮ್ಮ ಪಾಲಿಗೆ ದುಃಖವನ್ನೇ ಆರಿಸಿಕೊಂಡಂತಾಗುವುದು ।೪೨೭॥

ಆದರೆ ಅರ್ಜುನಾ, ಈ ಸ್ಥಿತಿಯೂ ಆ ಅಜ್ಞಾನಿ ಜನರಿಗೆ ಪ್ರಾಪ್ತವಾಗಲು ನಾನೇ ಕಾರಣನಾಗಿರುವೆನು. ಜಾಗೃತನಾಗಿರುವ ಮನುಷ್ಯನೇ ಸ್ವಪ್ನಕ್ಕೂ ನಿದ್ರೆಗೂ ಕಾರಣನಾಗುತ್ತಾನೆ ।೪೨೮॥

ಪೈ ಅಭ್ರೀ ದಿವಸು ಹರಪಲಾ । ತೋಹಿ ದಿವಸೇಂಚಿ ಜಾಣೋ ಆಲಾ । ತೇವೀ ಮೀ ನೇಣೋನಿ ವಿಷಯೋ ದೇಖಿಲಾ । ಮಜಚಿಸ್ತವ ಭೂತೀ ॥೪೨೯॥ ಏವಂ ನಿದ್ರಾ ಕಾ ಜಾಗಣಿಯಾ । ಪ್ರಬೋಧುಚಿ ಹೇತು ಧನಂಜಯಾ । ತೇವೀ ಜ್ಞಾನಾ ಅಜ್ಞಾನಾ ಜೀವಾಂಚಿಯಾ । ಮೀಚಿ ಮೂಳ ॥೪೩೦॥ ಜೈಸೇ ಸರ್ಪತ್ವಾ ಕಾ ದೋರಾ । ದೋರುಚಿ ಮೂಳ ಧನುರ್ಧರಾ । ತೈಸಾ ಜ್ಞಾನಾಅಜ್ಞಾನಾಚಿಯಾ ಸಂಸಾರಾ । ಮಿಯಾಂಚಿ ಸಿದ್ಧು ॥೪೩೧॥ ಮ್ಹಣೌನಿ ಜೈಸಾ ಅಸೇ ತೈಸಿಯಾ । ಮಾತೇ ನೇಣೋನಿ ಧನಂಜಯಾ । ವೇದು ಜಾಣೊ ಗೇಲಾ ತಂವ ತಯಾ । ಜಾಲಿಯಾ ಶಾಖಾ ॥೪೩೨॥ ತರೀ ತಿಹೀ ಶಾಖಾಭೇದೀ । ಮೀಚಿ ಜಾಣಿಜೇ ತ್ರಿಶುದ್ಧೀ । ಜೈಸಾ ಪೂರ್ವಾಪರಾ ನದೀ । ಸಮುದ್ರುಚಿ ಠೀ ॥೪೩೩॥ ಆಣಿ ಮಹಾಸಿದ್ಧಾಂತಾಪಾಸೀ । ಶ್ರುತಿ ಹಾರಪತೀ ಶಬ್ದೇಂಸೀ । ಜೈಸಿಯಾ ಸುಗಂಧಾ ಆಕಾಶೀ ವಾತಲಹರೀ ॥೪೩೪॥ ತೈಸೇ ಸಮಸ್ತ ಹೀ ಶ್ರುತಿಜಾತ । ಠಾಕೇ ಲಾಜಿಲೇ ಐಸೇ ನಿವಾಂತ । ತೇ ಮೀಚಿ ಕರೀ ಯಥಾವತ । ಪ್ರಕಟೋನಿಯಾ ॥೪೩೫॥ ಪಾಠೀ ಶ್ರುತಿಸಹಿತ ಅಶೇಷ । ಜಗ ಹಾರಪೇ ಜೇಥ ನಿಃಶೇಷ । ತೇ ನಿಜಜ್ಞಾನಹೀ ಚೋಖ । ಜಾಣತಾ ಮೀಚಿ ॥೪೩೬॥ ಜೈಸೇ ನಿದೇಲಿಯಾ ಜಾಗಿಜೇ । ತೇವ್ಹಾ ಸ್ವಪ್ನೀಚೇ ಕೀರ ನಾಹೀ ದುಜೇ । ಪರೀ ಏಕತ್ವಹೀ ದೇಖೋ ಪಾವಿಜೇ । ಆಪಲೇಂಚೇ ॥೪೩೭॥ ತೈಸೇ ಆಪಲೇ ಅದ್ವಯಪಣ । ಮೀ ಜಾಣತಸೇ ದುಜೇನವೀಣ । ತಯಾಹೀ ಬೋಧಾಕಾರಣ । ಜಾಣತಾ ಮೀಚಿ ॥೪೩೮॥ ಮಗ ಆಗೀ ಲಾಗಲಿಯಾ ಕಾಪುರಾ । ನಾ ಕಾಜಳೀ ನಾ ವೈಶ್ವಾನರಾ । ಉರಣೇ ನಾಹೀ ವೀರಾ । ಜಯಾಪರೀ ॥೪೩೯॥ ತೇವೀ ಸಮೂಳ ಅವಿದ್ಯಾ ಖಾಯೇ । ಆಣಿ ನ ಸಾಹೇ ಅಸಣೇಹೀ ॥೪೪೦॥ ಪೈ ವಿಶ್ವ ಘೇಊನಿ ಗೇಲಾ ಮಾಗೇಸೀ । ತಯಾ ಚೋರಾತೇ ಕವಣ ಕೇ ಗಿವಸೀ? । ಜೇ ಕೋಣೇ ಏಕೀ ದಶಾ ಐಸೀ । ಶುದ್ಧ ತೇ ಮೀ ॥೪೪೧॥ ಐಸೀ ಜಡಾಜಡ ವ್ಯಾಪ್ತೀ । ರೂಪ ಕರಿತಾ ಕೈವಲ್ಯಪತೀ । ಠೀ ಕೇಲೀ ನಿರೂಪಹಿತೀ । ಆಪುಲ್ಯಾ ರೂಪೀ ॥೪೪೨॥ ತೋ ಆಘವಾಚಿ ಬೋಧು ಸಹಸಾ । ಅರ್ಜುನೀ ಉಮಟಲಾ ಕೈಸಾ । ವ್ಯೋಮೀ ಂಚಾ ಚಂದ್ರೋದಯೋ ಜೈಸಾ । ಕ್ಷೀರಾರ್ಣವೀ ॥೪೪೩॥

ಹೇಗೆಂದರೆ, ಹಗಲು ಮೋಡಗಳಿಂದ ಆಕಾಶವು ವ್ಯಾಪಿಸಿಕೊಂಡಾಗ ಬೆಳಕು ಕಡಿಮೆಯಾಗುವುದು. ಇದು ಸಹ ಹಗಲಿನ ಬೆಳಕಿನಿಂದಲೇ ತಿಳಿಯುವುದು. ಅದರಂತೆ ನನ್ನನ್ನು ಅರಿಯದೇ ಪ್ರಾಣಿಗಳು ವಿಷಯಗಳ ಸೇವನೆ ಮಾಡುವುದು ನನ್ನ ಸತ್ತೆಯಿಂದಲೇ ।೫೨೯॥

ಇದರಂತೆ ಹೇ ಅರ್ಜುನಾ, ನಿದ್ರೆಗೆ ಅಥವಾ ಜಾಗ್ರತೆಗೆ ಯಾವ ಪ್ರಕಾರವಾಗಿ ಮೂಲತಃ ಜ್ಞಾನವೇ ಕಾರಣವಾಗಿರುವಂತೆ, ಈ ಜ್ಞಾನಿ ಮತ್ತು ಅಜ್ಞಾನಿ ಜೀವಿಗಳಿಗೆ ನಾನೇ ಮೂಲನಾಗಿರುತ್ತೇನೆ ।೫೩೦॥

ಹೇ ಧನುರ್ಧರನೇ, ಸರ್ಪ ಅಥವಾ ಹಗ್ಗದ ಭಾಸಕ್ಕೆ ಮೂಲತಃ ಹಗ್ಗವೇ ಕಾರಣವಾಗಿರುವಂತೆ, ಜ್ಞಾನ ಅಥವಾ ಅಜ್ಞಾನದ ವ್ಯವಹಾರಗಳಿಗೆ ನಾನೇ ಕಾರಣನಾಗಿರುವುದು ಸಿದ್ಧವಾಗಿದೆ ।೫೩೧॥

ಆದ್ದರಿಂದ ಹೇ ಧನಂಜಯನೇ, ನನ್ನ ನಿಜ ಸ್ವರೂಪವನ್ನು ತಿಳಿಯಲಾರದ್ದಕ್ಕೆ ವೇದವು ನನ್ನನ್ನರಿಯಲು ಶ್ರಮಪಟ್ಟು ಅದರ ಶಾಖೆಗಳಾದವು ।೫೩೨॥

ಆದಾಗ್ಯೂ, ಆ ವೇದದ ಮೂರು ಶಾಖೆಗಳು (ಋಕ್, ಯಜುಷ್ ಮತ್ತು ಸಾಮ) ನನ್ನ ವರ್ಣನೆಯನ್ನೇ ಮಾಡಿರುವುವು. ಪೂರ್ವ ಪಶ್ಚಿಮ ವಾಹಿನಿ ನದಿಗಳಿಗೆ ಸಮುದ್ರವೇ ಪ್ರಾಪ್ಯಸ್ಥಾನವಾಗಿರುವಂತೆ ।೫೩೩॥

ಮತ್ತು ಮಹಾಸಿದ್ಧಾಂತದಲ್ಲಿ (ಬ್ರಹ್ಮನಲ್ಲಿ) ಶ್ರುತಿಗಳು ತಮ್ಮ ಶಬ್ದಗಳೊಂದಿಗೆ ಲಯಗೊಳ್ಳುವುವು. ವಾಯು ಲಹರಿಗಳು ಗಂಧದೊಂದಿಗೆ ಆಕಾಶದಲ್ಲಿ ಲಯಗೊಳ್ಳುವುವು ।೫೩೪॥

ಈ ಪ್ರಕಾರವಾಗಿ ಎಲ್ಲ ಶ್ರುತಿಗಳು ಎಲ್ಲಿ ನಾಚಿಕೆಪಟ್ಟು ಸ್ತಬ್ಧವಾಗುವುವೋ, ಆ ಬ್ರಹ್ಮಸ್ವರೂಪವನ್ನು ನಾನೇ ಯಥಾರ್ಥವಾಗಿ ಪ್ರಕಟಮಾಡುವೆನು ।೫೩೫॥

ತದನಂತರ ಶ್ರುತಿಗಳೊಂದಿಗೆ ಸಹ ಎಲ್ಲ ಜಗವು ಎಲ್ಲಿ ಲಯಗೊಳ್ಳುವುದೋ, ಆ ಶುದ್ಧ ಆತ್ಮಜ್ಞಾನವನ್ನು ಅರಿಯಲು ನಾನೇ ಇರುವೆನು ।೫೩೬॥

ಮಲಗಿರುವ ಮನುಷ್ಯನು ಎಚ್ಚರಾದಾಗ ಸ್ವಪ್ನದಲ್ಲಿ ಕಂಡ ಎಲ್ಲವೂ ನಾನಾಗಿದ್ದೆನು ಎಂದು ಅರಿಯುವಂತೆ ಜಾಗೃತಾವಸ್ಥೆಯಲ್ಲಿಯೂ ತಾನೊಬ್ಬನೇ ಇರುವೆನೆಂದು ಆತನೇ ಅರಿಯುವನು ।೫೩೭॥

ಅದರಂತೆ ನನ್ನ ಆತ್ಮಸ್ವರೂಪದ ಬೋಧವಾಗಲು ಇತರರ ಹೊರತಾಗಿ ನಾನೇ ಕಾರಣನಾಗಿರುತ್ತೇನೆ. ಆ ಆತ್ಮಸ್ವರೂಪವನ್ನು ಅರಿಯುವವನು ನಾನೇ ಇರುವೆನು ।೫೩೮॥

ಹೇ ವೀರನೇ, ಕರ್ಪೂರವು ಸುಟ್ಟನಂತರ ಅದರ ಕಾಡಿಗೆಯೂ ಉಳಿಯುವುದಿಲ್ಲ ಮತ್ತು ಅಗ್ನಿಯೂ ಇರುವುದಿಲ್ಲ ।೫೩೯॥

ಅದರಂತೆ ಸಂಪೂರ್ಣವಾಗಿ ಅವಿದ್ಯೆಯನ್ನು ಇಲ್ಲದಂತೆ ಮಾಡುವ ಯಾವ ಜ್ಞಾನವು ಅದು ಸಹ ಇಲ್ಲದಂತಾಗಲು ಆಗ ಇಲ್ಲವೆಂಬುವುದು ನಿಜವಾಗಿಯೂ ಇಲ್ಲ. ಆದರೆ ಇದೆ ಎಂಬುವುದೂ ಸಹ ಸಹಿಸದಾಗದು ।೫೪೦॥

ಇಲ್ಲಿ ನೋಡು, ವಿಶ್ವದ ಕಾರಣವಾದ ಅಜ್ಞಾನದೊಂದಿಗೆ ಎಲ್ಲ ವಿಶ್ವದ ನಾಶಮಾಡುವ ಆ ವಿಶ್ವಾಂತರ್ಗತ ಸಾಧನೆಗಳಿಂದ ಯಾರು ಎಲ್ಲಿ ಪತ್ತೆ ಹಚ್ಚಬೇಕು? ಇಂತಹ ವಿಶೇಷ ಸ್ಥಿತಿಯು ನನ್ನ ಶುದ್ಧ ಸ್ವರೂಪವಾಗಿರುವುದು ।೫೪೧॥

ಕೈವಲ್ಯಪತಿಯಾದ ಭಗವಾನನು ಜಡಾಜಡ ಪದಾರ್ಥಗಳಲ್ಲಿ ತನ್ನ ವ್ಯಾಪ್ತಿಯ ರೂಪವನ್ನು ಮಾಡುತ್ತ ಮಾಡುತ್ತ ತನ್ನ ನಿರುಪಾಧಿಕ ಸ್ವರೂಪದಲ್ಲಿ ಆ ವ್ಯಾಖ್ಯಾನಗಳ ಪರ್ಯಾವಸಾನವನ್ನು ಮಾಡಿದನು ।೫೪೨॥

ಆಕಾಶದಲ್ಲಿ ಚಂದ್ರೋದಯವಾಗಲು ಕ್ಷೀರ ಸಾಗರದಲ್ಲಿ ಅದರ ಪೂರ್ಣ ಪ್ರತಿಬಿಂಬವು ಕಾಣಿಸುವುದು. ಅದರಂತೆ ಶ್ರೀಕೃಷ್ಣನು ಮಾಡಿದ ಈ ಎಲ್ಲ ಬೋಧವು ಅರ್ಜುನನ ಮನದಲ್ಲಿ ಪ್ರತಿಬಿಂಬವಾಯಿತು ।೫೪೩॥

ಕಾ ಪ್ರತಿಭಿಂತೀ ಚೋಖಟೇ । ಸಮೋರೀಲ ಚಿತ್ರ ಉಮಟೇ । ತೈಸಾ ಅರ್ಜುನೇ ಆಣಿ ವೈಕುಂಠೇ । ನಾಂದತಸೇ ಬೋಧು ।।೪೪೪।। ತರೀ ಬಾಪ ವಸ್ತು ಸ್ವಭಾವೋ । ಫಾವೇ ತಂವ ತಂವ ಗೋಡಿಯೇ ಥಾಂವೋ । ಮ್ಹಣೌನಿ ಅನುಭವಿಯಾಂಚಾ ರಾವೋ । ಅರ್ಜುನ ಮ್ಹಣೇ ।।೪೪೫।। ಜೇ ವ್ಯಾಪಕಪಣ ಬೋಲತಾ । ನಿರೂಪಾಧಿಕ ಜೇ ಆತಾ । ಸ್ವರೂಪ ಪ್ರಸಂಗತಾ । ಬೋಲಿಲೇ ದೇವೋ ।।೪೪೬।। ತೇ ಏಕ ವೇಳ ಅವ್ಯಂಗವಾಣೇ । ಕೀಜೋ ಕಾ ಮಜಕಾರಣೇ । ತೇಥ ದ್ವಾರಕೇಚಾ ನಾಥು ಮ್ಹಣೇ । ಭಲೇ ಕೇಲೇ ।।೪೪೭।। ಪೈ ಅರ್ಜುನಾ ಆಮ್ಹಾಂಹಿ ವಾಡೇಕೋಡೇ । ಅಖಂಡ ಬೋಲಿಲೋ ಆವಡೇ । ಪರೀ ಕಾಯ ಕೀಜೇ ನ ಜೋಡೇ । ಪುಸತೇ ಐಸೇ ।।೪೪೮।। ಆಜಿ ಮನೋರಥಾಂಸಿ ಫಳ । ಜೋಡಲಾಸಿ ತೂ ಕೇವಳ । ಜೇ ತೋಂಡ ಭರೂನಿ ನಿಖಳ । ಆಲಾಸಿ ಪುಸೋ ।।೪೪೯।। ಜೇ ಅದ್ವೈತಾಹೀವರೀ ಭೋಗಿಜೇ । ತೇ ಅನುಭವೀಂಚ ತೂ ವಿರಜೇ । ಪುಸೋನಿ ಮಜ ಮಾಝೇ । ದೇತಾಸಿ ಸುಖ ।।೪೫೦।। ಜೈಸಾ ಆರಿಸಾ ಆಲಿಯಾ ಜವಳಾ । ದಿಸೇ ಆಪಣಪೇ ಆಪಲಾ ಡೋಳಾ । ತೈಸಾ ಸಂವಾದಿಯಾ ತೂ ನಿರ್ಮಳಾ । ಶಿರೋಮಣೀ ।।೪೫೧।। ತುವಾ ನೇಣೋನಿ ಪುಸಾವೇ । ಮಗ ಆಮ್ಹೀ ಪರಿಸಲೂ ಬೈಸಾವೇ । ತೋ ಗಾ ಹಾ ಪಾಡು ನವ್ಹೇ । ಸೋಯರೇಯಾ ।।೪೫೨।। ಐಸೇ ಮ್ಹಣೌನಿ ಆಲಿಂಗಿಲೇ । ಕೃಪಾದೃಷ್ಟೀ ಅವಲೋಕಿಲೇ । ಮಗ ದೇವೋ ಕಾಯ ಬೋಲಿಲೇ । ಅರ್ಜುನೇಸೀ ।।೪೫೩।। ಪೈ ದೋಹೀ ವೋಠೀ ಏಕ ಬೋಲಣೇ । ದೇಹೀ ಚರಣೀ ಏಕ ಚಾಲಣೇ । ತೈಸೇ ಪುಸಣೇ ಸಾಂಗಣೇ । ತುಝೇ ಮಾಝೇ ।।೪೫೪।। ಏವಂ ಆಮ್ಹೀ ತುಮ್ಹೀ ಯೇಥೇ । ದೇಖಾವೇ ಏಕಾ ಅರ್ಥಾತೇ । ಸಾಂಗತೇ ಪುಸತೇ ಯೇಥೇ । ದೋನ್ಹೀ ಏಕ ।।೪೫೫।। ಐಸಾ ಬೋಲತ ದೇವೋ ಭುಲಲಾ ಮೋಹೇ । ಅರ್ಜುನಾತೇ ಆಲಿಂಗೂನಿ ಠಾಯೇ । ಮಗ ಬಿಹಾಲಾ ಮ್ಹಣೇ ನೋಹೇ । ಆವಡೀ ಹೇ ।।೪೫೬।। ಜಾಲೇ ಇಕ್ಷುರಸಾಚೇ ಢಾಳ । ತರೀ ಲವಣ ದೇಣೇ ಕಿಡಾಳ । ಜೇ ಸಂವಾದಸುಖಾಚೇ ರಸಾಳ । ನಾಸೇಲ ಥಿತೇ ।।೪೫೭।। ಆಧೀಂಚ ಆಮ್ಹಾ ಯಯಾ ಕಾಂಹೀ । ನರನಾರಾಯಣಾಸೀ ಭಿನ್ನ ನಾಹೀ । ಪರಿ ಆತಾ ಜಿರೋ ಮಾಝ್ಯಾ ಠಾಈ । ವೇಗು ಹಾ ಮಾಝಾ ।।೪೫೮।। ಇಯಾ ಬುದ್ಧೀ ಸಹಸಾ । ಶ್ರೀಕೃಷ್ಣ ಮ್ಹಣೇ ವೀರೇಶಾ । ಪೈ ಗಾ ತೋ ತುವಾ ಕೈಸಾ । ಪ್ರಶ್ನ ಕೇಲಾ? ।।೪೫೯।।

ಚಿತ್ರಗಳನ್ನು ತೆಗೆದಿರುವ ಗೋಡೆಯ ಎದುರಿನ ಗೋಡೆಯನ್ನು ಸಂಪೂರ್ಣವಾಗಿ ತಿಕ್ಕಿ ಕನ್ನಡಿಯಂತೆ ಮಾಡಲು ಅದರಲ್ಲಿ ಎದುರಿನ ಚಿತ್ರಗಳು ಮೂಡುವಂತೆ, ವೈಕುಂಠ ನಾಯಕ ಶ್ರೀಕೃಷ್ಣನ ಮನದಲ್ಲಿನ ಬೋಧವು ಅರ್ಜುನನ ಶುದ್ಧ ಅಂತಃಕರಣದಲ್ಲಿ ಪ್ರತಿಬಿಂಬಿತವಾಯಿತು ॥೪೪೪॥

ಧನ್ಯ ಧನ್ಯ! ಪರಮಾತ್ಮನ ಸ್ವಭಾವ!! ಹೇಗೆ ಹೇಗೆ ಈತನ ಪ್ರಾಪ್ತಿಯಾಗುವುದೋ, ಅದರಂತೆ ಆನಂದದ ಪ್ರಾಪ್ತಿಯೂ ಬೆಳೆಯುವುದು. ಈ ಅನುಭವದ ರಾಜನಾದ ಅರ್ಜುನನು ಪುನಃ ದೇವನಿಗೆ ಕೇಳುವನು ॥೪೪೫॥

ದೇವಾ, ನಿಮ್ಮ ವ್ಯಾಪಕತ್ವದ ವರ್ಣನೆ ಮಾಡುವಾಗ ನೀವು ಪ್ರಸಂಗಾನುಸಾರವಾಗಿ ನಿರುಪಾಧಿಕ ಸ್ವರೂಪದ ವರ್ಣನೆಯನ್ನು ಮಾಡಿರುವಿರಿ ॥೪೪೬॥

ಆ ನಿರುಪಾಧಿಕ ಸ್ವರೂಪವನ್ನು ಒಂದು ಸಾರೆ ನನಗಾಗಿ ಸ್ಪಷ್ಟವಾಗಿ ತಿಳಿಸಿರಿ ಎಂದಾಗ, ದ್ವಾರಕಾನಾಥ ಶ್ರೀಕೃಷ್ಣನು ಹೇಳಿದನು, ''ಬಹಳ ಒಳ್ಳೆಯದನ್ನು ಕೇಳಿರುವಿ'' ॥೪೪೭॥

ಇಲ್ಲಿ ನೋಡು, ಅರ್ಜುನಾ, ನಮಗೂ ಪ್ರೇಮ ಕೌತುಕದಿಂದ ಯಾವಾಗಲೂ ಇದನ್ನೇ ಹೇಳಬೇಕೆಂದೆನಿಸುತ್ತದೆ. ಆದರೆ ಏನು ಮಾಡುವುದು? ಯಾರೂ ಇದನ್ನು ಕೇಳುವವರೇ ಸಿಗುವುದಿಲ್ಲ ॥೪೪೮॥

ಇಂದು ನೀನು ಇದನ್ನು ಬಾಯಿತುಂಬ ಕೇಳಿರುವುದಕ್ಕೆ ಬಹಳ ದಿನಗಳಿಂದ ಇದ್ದ ನನ್ನ ಮನೋರಥವು ಫಲದ್ರೂಪವಾಯಿತು ॥೪೪೯॥

ಅದ್ವೈತ ಅನುಭವದ ನಂತರ ಯಾವ ಸುಖದ ಉಪಭೋಗ ಭೋಗಿಸಬೇಕೋ, ಅದನ್ನು ಭೋಗಿಸಲು ನೀನು ಸಹಾಯ ಮಾಡಿದಂತಾಯಿತು. ನೀನು ನಿರುಪಾಧಿಕ ಸ್ವರೂಪವನ್ನು ಹೇಳಿರಿ ಎಂದು ಕೇಳಿ, ನನಗೆ ಸುಖವನ್ನು ತಂದು ಕೊಟ್ಟಿರುವಿ ॥೫೫೦॥

ಕನ್ನಡಿಯಲ್ಲಿ ತನ್ನ ಸ್ವರೂಪವು ತನ್ನ ನೇತ್ರಗಳಿಂದ ಕಾಣುವುದು. ಅದರಂತೆ ನಿನ್ನಲ್ಲಿ ಸಂವಾದದಿಂದ ನನಗೆ ಸುಖವಾಗಿದೆ. ಅದಕ್ಕಾಗಿ ನೀನು ಸಂವಾದ ಮಾಡುವುದರಲ್ಲಿ ಶಿರೋಮಣಿಯಾಗಿರುವೆ ॥೫೫೧॥

ಮಿತ್ರನಾದ ಅರ್ಜುನನೇ, ನನಗೆ ತಿಳಿಯುವುದಿಲ್ಲವೆಂದು ನನಗೆ ನೀನು ಕೇಳುವುದು ಮತ್ತು ನಾವು ನಿನ್ನನ್ನು ತಿಳಿಸಿ ಹೇಳಬೇಕು ಎನ್ನುವಹಾಗೆ ನಿನ್ನ ಯೋಗ್ಯತೆ ಇರುವುದಿಲ್ಲ ॥೫೫೨॥

ಹೀಗೆ ಹೇಳಿ ದೇವನು ಆನಂದಾತಿಶಯದಿಂದ ಅರ್ಜುನನಿಗೆ ಆಲಿಂಗಿಸಿ, ಕೃಪಾದೃಷ್ಟಿಯಿಂದ ಅವಲೋಕಿಸಿ ತದನಂತರ ಶ್ರೀಕೃಷ್ಣನು ಅರ್ಜುನನಿಗೆ ಹೀಗೆ ಹೇಳಿದನು ॥೫೫೩॥

ತುಟಿಗಳು ಎರಡಿದ್ದರೂ ಮಾತನಾಡುವುದು ಒಂದೇ, ಎರಡು ಕಾಲುಗಳಿದ್ದರೂ ನಡೆಯುವುದು ಒಂದೇ. ಅದರಂತೆ ನನ್ನ ನಿನ್ನ ಹೇಳಿಕೆ, ಕೇಳಿಕೆ ಒಂದೇ ಇರುವುದು ॥೫೫೪॥

ಈ ಪ್ರಕಾರವಾಗಿ ನಿನ್ನ ಮತ್ತು ನನ್ನ ಸ್ವರೂಪವು ಒಂದೇಯಾಗಿದೆ, ಹೀಗೆ ತಿಳಿ ಮತ್ತು ನಾನು ಹೇಳುವವ ಮತ್ತು ನೀನು ಕೇಳುವವ ಈ ಇಬ್ಬರು ನಾವು ಒಂದೇ ಇರುವೆವು ॥೫೫೫॥

ಹೀಗೆ ಹೇಳುತ್ತ, ಹೇಳುತ್ತ ಮೋಹದಿಂದ ಮೈಮರೆತು ಅರ್ಜುನನಿಗೆ ಆಲಿಂಗಿಸಿ ಸ್ತಬ್ಧನಾದನು. ಇಷ್ಟರಲ್ಲಿ ಪುನಃ ಚಕಿತಗೊಂಡು ಇಷ್ಟೊಂದು ಪ್ರೀತಿಸುವುದು ಒಳ್ಳೆಯದಲ್ಲವೆಂದನು ॥೫೫೬॥

ಕಬ್ಬಿನ ರಸದಿಂದ ಬೆಲ್ಲ ತಯಾರಿಸುವಾಗ್ಗೆ, ಅದರಲ್ಲಿ ಹೀನವಾದ ಕ್ಷಾರವನ್ನು ಹೊರಹಾಕಬೇಕಾಗುವುದು. ಅದರಂತೆ ನಮ್ಮ ಸಂವಾದರೂಪ ಸುಖದಲ್ಲಿ ದ್ವೈತವನ್ನು ಹುಟ್ಟಿಸದಿದ್ದರೆ ಬಂದ ಪ್ರೇಮವು ಇಲ್ಲದಂತಾಗುವುದು ॥೫೫೭॥

ಅರ್ಜುನನು ನರನು ಮತ್ತು ನಾನು ನಾರಾಯಣನು, ಹೀಗಿರುವುದರಿಂದ ನಮ್ಮಿಬ್ಬರಲ್ಲಿ ಮೊದಲೇ ಭೇದವಿಲ್ಲ. ಆದರೆ ನನಗೆ ಬಂದಿರುವ ಈ ಪ್ರೇಮವು ಈಗ ನನ್ನಲ್ಲಿಯೇ ಜೀರ್ಣವಾಗಲಿ ॥೫೫೮॥

ಈ ಪ್ರಕಾರವಾಗಿ ಬುದ್ಧಿಯನ್ನು ಸ್ಥಿರಗೊಳಿಸಿ ಶ್ರೀಕೃಷ್ಣ ಪರಮಾತ್ಮನು ಹೇಳಿದನು:- ಹೇ ವೀರಶ್ರೇಷ್ಠನೇ, ನೀನು ನನಗೆ ಯಾವ ಪ್ರಶ್ನೆ ಕೇಳಿರುವೆ ॥೫೫೯॥

ಜೋ ಅರ್ಜುನ ಶ್ರೀಕೃಷ್ಣೀ ವಿರತ ಹೋತಾ । ತೋ ಪರತೋನಿಯಾ ಮಾಗುತಾ । ಪ್ರಶ್ನಾವಳೀಚೀ ಕಥಾ । ಐಕೋ ಆಲಾ ॥೪೬೦॥ ತೇಥ ಸದ್ಗದೇ ಬೋಲೇ । ಅರ್ಜುನೇ ಜೀ ಜೀ ಮ್ಹಣಿತಲೇ । ನಿರುಪಾಧಿಕ ಆಪುಲೇ । ರೂಪ ಸಾಂಗಾ ॥೪೬೧॥ ಯಯಾ ಬೋಲಾ ಶಾರ್ಙ್ಗೀ । ತೇಚಿ ಸಾಂಗಾವಯಾಲಾಗೀ । ಉಪಾಧೀ ದೋಹೀ ಭಾಗೀ । ನಿರೂಪೀತ ಅಸೇ ॥೪೬೨॥ ಪುಸಿಲಿಯಾ ನಿರೂಪಹಿತ । ಉಪಾಧಿ ಕಾ ಸಾಂಗೇ ಯೇಥ । ಹೇ ಕೋಣ್ಹಾ ಹೀ ಪ್ರಸ್ತುತ । ಗಮೇ ಜರೀ ॥೪೬೩॥ ತರೀ ತಾಕಾಚೇ ಅಂಶ ಫೇಡಣೇ । ಯಾಚೀ ನಾಂವ ಲೋಣೀ ಕಾಢಣೇ । ಚೋಖಾಚಿಯೇ ಶುದ್ಧೀ ತೋಡಣೇ । ಕೀಡಚಿ ಜೇವೀ ॥೪೬೪॥ ಬಾಬುಳೀಚಿ ಸಾರಾವೀ ಹಾತೇ । ಪರೀ ಪಾಣೀ ತಂವ ಅಸೇ ಆಇತೇ । ಅಭ್ರಚಿ ಜಾವೇ ಗಗನ ತೇ । ಸಿದ್ಧಚಿ ಕೀ ॥೪೬೫॥ ವರೀಲ ಕೋಂಡಿಯಾಚಾ ಗುಂಡಾಳಾ । ರಝಾಡೂನಿ ಕೇಲಿಯಾ ವೇಗಳಾ । ಕಣು ಫೇತಾ ವಿರಂಗೋಳಾ । ಅಸೇ ಕಾಈ? ॥೪೬೬॥ ತೈಸಾ ಉಪಾಧಿ ಉಪಹಿತಾ । ಶೇವಟು ಜೇಥ ವಿಚಾರಿತಾ । ತೇ ಕೋಣಾತೇಹೀ ನ ಪುಸತಾ । ನಿರುಪಾಧಿಕ ॥೪೬೭॥ ಜೈಸೇ ನ ಸಾಂಗಣೇವರೀ । ಬಾಳಾ ಪತೀಸೀ ರೂಪ ಕರೀ । ಬೋಲ ನಿಮಾಲೇಪಣೇ ವಿವರೀ । ಅಚರ್ಬಾತೇ ॥೪೬೮॥ ಪೈ ಸಾಂಗಣೇಯಾ ಜೋಗೇ ನವ್ಹೇ । ತೇಥೀಂಚೇ ಸಾಂಗಣೇ ಐಸೇ ಆಹೇ । ಮ್ಹಣೌನಿ ಉಪಾಧಿ ಲಕ್ಷ್ಮೀ ನಾಹೇ । ಬೋಲಿಜೇ ಆದೀ ॥೪೬೯॥ ಪಾಡಿವ್ಯಾಚೀ ಚಂದ್ರರೇಖಾ । ನಿರುತೀ ದಾವಾವಯಾ ಶಾಖಾ । ದಾವಿಜೇ ತೇವಿ ಔಪಾಧಿಕಾ । ಬೋಲೀ ಇಯಾ ॥೪೭೦॥

ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।
ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥೧೬॥

ಮಗ ತೋ ಮ್ಹಣೇ ಗಾ ಸವ್ಯಸಾಚೀ । ಪೈ ಇಯೇ ಸಂಸಾರಪಾಟಣೀಂಚೀ । ವಸ್ತೀ ಸಾವಿಯಾ ಟಾಂಚೀ । ದುಪುರುಷೀ ॥೪೭೧॥ ಜೈಸೀ ಆಘವಾಂಚಿ ಗಗನೀ । ನಾಂದತ ದಿವೋರಾತ್ರೀ ದೋನ್ಹೀ । ತೈಸೇ ಸಂಸಾರರಾಜಧಾನೀ । ದೋನ್ಹೀಚಿ ಹೇ ॥೪೭೨॥ ಆಣಿ ಕಹೀ ತಿಜಾ ಪುರುಷು ಆಹೇ । ಪರೀ ತೋ ಯಾ ದೋಹೀಂಚೇ ನಾಂವ ನ ಸಾಹೇ । ಜೋ ಉದೇಲಾ ಗಾಂವೇಸೀ ಖಾಯೇ । ದೋಹೀತೇ ಯಯಾ ॥೪೭೩॥ ಪರೀ ತೇ ತಂವ ಗೋಠೀ ಅಸೋ । ಆಧೀ ದೋಹೀಂಚೀ ಹೇ ಪರಿಯೇಸೋ । ಜೇ ಸಂಸಾರಗ್ರಾಮಾ ವಸೋ । ಆಲೇ ಅಸತೀ ॥೪೭೪॥

ಈ ಕಡೆ ಅರ್ಜುನನು ಶ್ರೀಕೃಷ್ಣನ ಸ್ವರೂಪದಲ್ಲಿ ಲೀನವಾಗುವವನಿದ್ದನು. ಹಾಗೆಯೇ ಆತನು ದೇಹದ ಎಚ್ಚರಿಕೆಯಲ್ಲಿ ಬಂದು ತನ್ನ ಪ್ರಶ್ನೆಯ ಉತ್ತರವನ್ನು ಕೇಳಲು ಸಿದ್ಧನಾದನು ।೪೬೦॥

ಆಗ ಸದ್ಗದಿತ ವಾಣಿಯಿಂದ ಅರ್ಜುನನು ಹೇಳಿದನು:- ಹೇ ಜೀಯಾ, ನಿಮ್ಮ ನಿರುಪಾಧಿಕ ರೂಪ ಯಾವುದು? ಅದನ್ನು ಹೇಳಿರಿ? ।೪೬೧॥

ಅರ್ಜುನನ ಈ ಮಾತುಗಳನ್ನು ಕೇಳಿ ಆ ನಿರುಪಾಧಿಕ ಸ್ವರೂಪವನ್ನು ಹೇಳಲು ಶ್ರೀಕೃಷ್ಣನು ಮೊದಲು ಎರಡು ಪ್ರಕಾರದಿಂದ ಉಪಾಧಿಗಳ ವರ್ಣನೆಯನ್ನು ಮಾಡುವನು ।೪೬೨॥

ತನ್ನ ನಿರುಪಾಧಿಕ ಸ್ವರೂಪವನ್ನು ಹೇಳಿರೆಂದು ಕೇಳಿದಾಗ ಉಪಾಧಿಗಳ ವಿಷಯಕ್ಕೆ ಭಗವಂತನು ಮೊದಲೇಕೆ ವರ್ಣಿಸುವನೆಂದು ಯಾರಿಗಾದರೂ ಶಂಕೆ ಹುಟ್ಟಬಹುದು ।೪೬೩॥

ಹಾಗಾದರೆ ಹೀಗಿದೆ ನೋಡಿರಿ, ಯಾರೋ ಬೆಣ್ಣೆ ಕೇಳಿದರೆ ಮೊದಲು ಮಜ್ಜಿಗೆ ಮಾಡಿ ಅದರಿಂದ ಬೆಣ್ಣೆಯನ್ನು ಕೊಡಬೇಕಾಗುವುದು. ಅಥವಾ ಚೊಕ್ಕ ಚಿನ್ನವುಬೇಕೆಂದಾಗ ಅದರಲ್ಲಿನ ಹೊಲಸನ್ನು ಮೊದಲು ಕಾಸಿ ತೆಗೆಯಬೇಕಾಗುವುದು ।೪೬೪॥

ನೀರ ಮೇಲಿನ ನೀರ ಹಾವಸೆಯನ್ನು ತೆಗೆದರೆ, ಆಗ ನೀರು ಶುದ್ಧವಾಗಿಯೇ ಇದೆ. ಅಥವಾ ಮೋಡಗಳು ಇಲ್ಲದಾಗಲು ಆಕಾಶವು ಸ್ವಚ್ಛವಾಗಿಯೇ ಇದೆ ।೪೬೫॥

ಅಕ್ಕಿಯ ಮೇಲಿರುವ ಸಿಪ್ಪೆಯನ್ನು ತೆಗೆದೊಗೆದಾಗ ಅಕ್ಕಿಯು ಕೈಗೆ ಬರಲು ಏನಾದರೂ ತೊಂದರೆ ಇರುವುದೇನು? ।೪೬೬॥

ಅದರಂತೆ ಸ್ವರೂಪದ ಮೇಲಿರುವ ಉಪಾಧಿಯನ್ನು ತೆಗೆದೊಗೆದಾಗ ವಿಚಾರ ಮಾಡಿ ನೋಡಿದಲ್ಲಿ ಉಳಿಯುವ ಅದುವೇ ಶಬ್ದ ಸ್ವರೂಪವು. ಇದನ್ನು ಯಾರಿಗೂ ಹೇಳಬೇಕಾಗಿಲ್ಲ ।೪೬೭॥

ಚಿಕ್ಕ ಹುಡುಗಿಗೆ ಆಕೆಯ ಗಂಡನ ಹೆಸರು ಏನೆಂದು ಕೇಳುತ್ತ, ಆತನ ಹೆಸರು ಎತ್ತಲು ಆಗಾಕೆ ಸುಮ್ಮನಾಗುವಳು. ಅದೇ ಆಕೆಯ ಗಂಡನ ಹೆಸರೆಂದು ತಿಳಿಯಬೇಕು. ಅದರಂತೆ ಎಲ್ಲಿ ಶಬ್ದವು ಕುಂಠಿತವಾಗುವುದೋ, ಅದೇ ನಿರುಪಾಧಿಕ ಶುದ್ಧ ಸ್ವರೂಪವಾಗಿದೆ ।೪೬೮॥

ಆದ್ದರಿಂದ ಯಾವುದರ ಸ್ವರೂಪವನ್ನು ಶಬ್ದಗಳಿಂದ ಹೇಳಲು ಬರುವುದಿಲ್ಲದಂತಿರುವಾಗ ಅದರ ಸ್ವರೂಪದ ವರ್ಣನೆಯನ್ನು ಅದರ ಮಗ್ಗಲು ಮಾತಿನಿಂದ ಮಾಡಬೇಕಾಗುವುದು. ಆದುದರಿಂದ ಲಕ್ಷ್ಮೀ ಪತಿಯು ಮೊದಲು ಉಪಾಧಿಯನ್ನು ಹೇಳಹತ್ತಿದನು ।೪೬೯॥

ಬೆಳಿಗ್ಗೆ ಪ್ರತಿಪದವಿದ್ದು, ಸಾಯಂಕಾಲ ಬಿದಿಗಿ ಚಂದ್ರನ ಬಿಂಬವನ್ನು ತೋರಿಸುವಾಗ ಯಾವುದಾದರೂ ಗಿಡದ ಟೊಂಗೆಯ ಆಧಾರದಿಂದ ತೋರಿಸಬೇಕಾಗುವುದು. ಅದರಂತೆ ನಿರುಪಾಧಿಕ ಸ್ವರೂಪದ ಲಕ್ಷಣಗಳನ್ನು ಹೇಳುವಾಗ್ಗೆ ಉಪಾಧಿಯ ಸ್ವರೂಪವನ್ನು ಹೇಳಬೇಕಾಗುವುದು ।೪೭೦॥

ಶ್ಲೋಕಾರ್ಥ :- ಈ ಲೋಕದಲ್ಲಿ ಕ್ಷರ ಪುರುಷನೆಂದೂ, ಅಕ್ಷರ ಪುರುಷನೆಂದೂ ಇಬ್ಬರು ಪುರುಷರಿರುತ್ತಾರೆ. ನಾಶವಾಗುವ ಈ ಸರ್ವಭೂತಗಳೇ ಕ್ಷರ ಪುರುಷ. ನಾಶವಾಗದ ಕೂಟಸ್ಥ ಮಾಯಾ ಶಕ್ತಿಯನ್ನು ಅಕ್ಷರ ಪುರುಷನೆನ್ನುತ್ತಾರೆ ।೧೬॥

ಆಗ ಶ್ರೀಕೃಷ್ಣನು ಹೇಳಿದನು:- ಹೇ ಸವ್ಯಸಾಚಿಯೇ, ಈ ಸಂಸಾರರೂಪ ನಗರದಲ್ಲಿ ಎರಡೇ ಎರಡು ಪುರುಷರ ವಸತಿ ಇರುವುದು ।೪೭೧॥

ಯಾವ ಪ್ರಕಾರವಾಗಿ ಆಕಾಶದಲ್ಲಿ ಹಗಲು ರಾತ್ರಿಗಳು ಎರಡೇ ವ್ಯವಹರಿಸುವುವೋ, ಅದರಂತೆ ಸಂಸಾರರೂಪ ರಾಜಧಾನಿಯಲ್ಲಿ ಇವರಿಬ್ಬರೇ ಇರುವರು ।೪೭೨॥

ಇನ್ನೊಬ್ಬನು ಮೂರನೆಯವ ಪುರುಷನಿರುವನು. ಆದರೆ ಈತನಿಗೆ ಈ ಇಬ್ಬರ ಹೆಸರು ಸಹ ಸಹಿಸುವುದಾಗುವುದಿಲ್ಲ. ಕಾರಣವೇನೆಂದರೆ, ಈತನು ಇಲ್ಲಿಗೆ ಬಂದನೆಂದರೆ ನಗರ ಸಮೇತವಾಗಿ ಈ ಇಬ್ಬರ ನಾಶ ಮಾಡುವನು ।೪೭೩॥

ಆದರೆ ಈ ಮೂರನೆಯವನ ಮಾತು ಈಗಿರಲಿ, ಮೊದಲು ಈ ಸಂಸಾರರೂಪ ನಗರದಲ್ಲಿ ವಸತಿ ಮಾಡಲು ಬಂದಿರುವ ಆ ಇಬ್ಬರ ವಿಷಯಕ್ಕೆ ಹೇಳುವೆನು ಕೇಳು ।೪೭೪॥

ಏಕ ಆಂಧಳಾ ವೇಡಾ ಪಂಗು । ಯೇರ ಸರ್ವಾಂಗೇ ಪುರತಾ ಚಾಂಗು । ಪರೀ ಗ್ರಾಮಗುಣೇ ಸಂಗು । ಘಡಲಾ ದೋಘಾ ।೪೭೫॥ ತಯಾ ಏಕಾ ನಾಮ ಕ್ಷರು । ಯೇರಾತೇ ಮ್ಹಣತೀ ಅಕ್ಷರು । ಇಹೀ ದೋಹೀಂಚಿ ಪರೀ ಸಂಸಾರು । ಕೋಂದಲಾ ಅಸೇ ।೪೭೬॥ ಆತಾ ಕ್ಷರು ತೋ ಕವಣು । ಅಕ್ಷರು ತೋ ಕೀ ಲಕ್ಷಣು । ಹಾ ಅಭಿಪ್ರಾವೋ ಸಂಪೂರ್ಣು । ವಿವಂಚೂ ಗಾ ।೪೭೭॥ ತರೀ ಮಹದಹಂಕಾರಾ । ಲಾಗುನಿಯಾ ಧನುರ್ಧರಾ । ತೃಣಾಂತೀಚಾ ಪಾಂಗೋರಾ । ವರೀ ಪೈ ಗಾ ।೪೭೮॥ ಜೇ ಕಾಂಹೀ ಸಾನೇ ಥೋರ । ಚಾಲತೇ ಅಥವಾ ಸ್ಥಿರ । ಕಿಂಬಹುನಾ ಗೋಚರ । ಮನಬುದ್ಧೀಂಸಿ ಜೇ ।೪೭೯॥ ಜೇತುಲೇ ಪಾಂಚಭೌತಿಕ ಘಡತೇ । ಜೇ ನಾಮರೂಪಾ ಸಾಂಪಡತೇ । ಗುಣತ್ರಯಾಚ್ಯಾ ಪಡತೇ । ಕಾಮಠಾ ಜೇ ।೪೮೦॥ ಭೂತಾಕೃತೀಚೇ ನಾಣೇ । ಘಡತ ಭಾಂಗಾರೇ ಜೇಣೇ । ಕಾಳಾಸಿ ಜೂ ಖೇಳಣೇ । ಜಿಹೀ ಕವಡಾ ।೪೮೧॥ ಜಾಣಣೇಂಚಿ ವಿಪರೀತೇ । ಜೇ ಜೇ ಕಾಂಹೀ ಜಾಣಿಜೇತೇ । ಜೇ ಪ್ರತಿಕ್ಷಣೀ ನಿಮತೇ । ಹೋಊನಿಯಾ ।೪೮೨॥ ಅಗಾ ಕಾಢೂನಿ ಭ್ರಾಂತೀಚೇ ದಾಂಗ । ಉಭವೀ ಸೃಷ್ಟೀಚೇ ಆಂಗ । ಹೇ ಅಸೋ ಬಹು ಜಗ । ಜಯಾ ನಾಮ ।೪೮೩॥ ಪೈ ಅಷ್ಟಧಾ ಭಿನ್ನ ಐಸೇ । ಜೇ ದಾವಿಲೇ ಪ್ರಕೃತಿಮಿಸೇ । ಜೇ ಕ್ಷೇತ್ರ ದ್ವಾರಾ ಛತ್ತಿಸೇ । ಭಾಗೀ ಕೇಲೇ ।೪೮೪॥ ಹೇ ಮಾಗೀಲ ಸಾಂಗೋ ಕಿತೀ । ಅಗಾ ಆತಾಂಚಿ ಜೇ ಪ್ರಸ್ತುತೀ । ವೃಕ್ಷಾಕಾರ ರೂಪಾಕೃತೀ । ನಿರೂಪಿಲೇ ।೪೮೫॥ ತೇ ಆಘವೇಂಚಿ ಸಾಕಾರೇ । ಕಲ್ಪುನೀ ಆಪಣಪಯಾ ಪುರೇ । ಜಾಲೇ ಅಸೇ ತದನುಸಾರೇ । ಚೈತನ್ಯಚೀ ।೪೮೬॥ ಜೈಸಾ ಕುಹಾ ಆಪಣಚಿ ಬಿಂಬೇ । ಸಿಂಹ ಪ್ರತಿಬಿಂಬ ಪಾಹತಾ ಕ್ಷೋಭೇ । ಮಗ ಕ್ಷೋಭಲಾ ಸಮಾರಂಭೇ । ಘಾಲೀ ತೇಥ ।೪೮೭॥ ಕಾ ಸಲಿಲೀ ಅಸತಚಿ ಅಸೇ । ವ್ಯೋಮಾವರೀ ವ್ಯೋಮ ಬಿಂಬೇ ಜೈಸೇ । ಅದ್ವೈತ ಹೋಊನಿ ತೈಸೇ । ದ್ವೈತ ಘೇಪೇ ।೪೮೮॥ ಅರ್ಜುನಾ ಗಾ ಯಾಪರೀ । ಸಾಕಾರ ಕಲ್ಪೂನಿ ಪುರೀ । ಆತ್ಮಾ ವಿಸ್ಮೃತೀಚಿ ಕರೀ । ನಿದ್ರಾ ತೇಥ ।೪೮೯॥ ಪೈ ಸ್ವಪ್ನೀ ಸೇಜಾರ ದೇಖಿಜೇ । ಮಗ ಪಹುಡಣೇ ಜೈಸೇ ತೇಥ ಕೀಜೇ । ತೈಸೇ ಪುರೀ ಶಯನ ದೇಖಿಜೇ । ಆತ್ಮ ಯಾಸೀ ।೪೯೦॥ ಪಾಠೀ ತಿಯೇ ನಿದ್ರೇಚೇನಿ ಭರೇ । ಮೀ ಸುಖೀ ದುಃಖೀ ಮ್ಹಣತ ಘೋರೇ । ಅಹಂಮಮತೇಚೇನಿ ಥೋರೇ । ವೋಸಣಾಯೇ ಸಾದೇ ।೪೯೧॥

ಇವರಲ್ಲಿ ಒಬ್ಬನು ಕುರುಡ, ಹುಚ್ಚ ಮತ್ತು ಕುಂಟನಾಗಿರುವನು ಮತ್ತು ಇನ್ನೊಬ್ಬನು ಎಲ್ಲ ಅವಯವಗಳಿಂದ ಪರಿಪೂರ್ಣನಿರುವನು. ಆದಾಗ್ಯೂ ಈ ಇಬ್ಬರೂ ಒಂದೇ ಊರಲ್ಲಿರುವುದರಿಂದ ಪರಸ್ಪರರಲ್ಲಿ ಪ್ರೇಮವು ನಟ್ಟಿರುವುದು ।೫೭೫॥

ಅವರಲ್ಲಿ ಒಬ್ಬನ ಹೆಸರು ''ಕ್ಷರ'' ಇನ್ನೊಬ್ಬನ ಹೆಸರು ''ಅಕ್ಷರ'' ಎಂದಿದೆ. ಇವರಿಬ್ಬರೇ ಈ ಸಂಸಾರ ರೂಪ ನಗರವನ್ನು ವ್ಯಾಪಿಸಿಕೊಂಡಿರುವರು ।೫೭೬॥

ಈಗ ''ಕ್ಷರ'' ಎಂದು ಇರುವವರು ಯಾರು? ಮತ್ತು ''ಅಕ್ಷರ'' ಎಂದು ಹೇಳುವುದರ ಲಕ್ಷಣಗಳೇನು? ಇದೆಲ್ಲವನ್ನೂ ನಿನಗೆ ಒಡೆದು ಹೇಳುವೆನು ।೫೭೭॥

ಹೇ ಧನುರ್ಧರನೇ, ಮಹದಂಕಾರ (ಮಹತ್ತತ್ವ) ದಿಂದ ಹಿಡಿದು ಹುಲ್ಲಿನ ಕಡ್ಡಿಯವರೆಗೆ ಎಲ್ಲವೂ ।೫೭೮॥

ಯಾವ ಕೆಲವೊಂದು ಸಣ್ಣ ಹಾಗೂ ದೊಡ್ಡ, ನಡೆಯುವ ಅಥವಾ ಸ್ಥಿರವಾಗಿರುವ ಅಥವಾ ಮನಬುದ್ಧಿಗಳಿಗೆ ತಿಳಿಯುವ ।೫೭೯॥

ಯಾವ ಪಂಚಮಹಾಭೂತಗಳಿಂದ ನಿರ್ಮಿಸಿದ, ನಾಮರೂಪದಲ್ಲಿ ಬರುವ, ಮತ್ತು ಸತ್ತ್ವ, ರಜ ಮತ್ತು ತಮ ಈ ಮೂರು ಗುಣಗಳ ಟಂಕಸಾಲೆಯಲ್ಲಿ ಬಂದಿರುವ ।೫೮೦॥

ಯಾವ ಬಂಗಾರದ ಅಂದರೆ ಪಂಚಮಹಾಭೂತಗಳಿಂದ ಭೂತಾಕೃತಿಯ ನಾಣ್ಯಗಳು ತಯಾರಾಗುವುವು ಮತ್ತು ಯಾವ ಶರೀರರೂಪ ಕವಡೆಗಳಿಂದ ಕಾಳನ ಜತೆಯಲ್ಲಿ ಜೂಜು ಆಡಲು ಬರುವುದು ।೫೮೧॥

ಯಾವುದು ವಿಪರೀತ ಜ್ಞಾನದಿಂದ ತಿಳಿಯಲ್ಪಡುವುದು, ಮತ್ತು ಯಾವುದು ಪ್ರತಿ ಕ್ಷಣದಲ್ಲಿ ಉತ್ಪನ್ನವಾಗಿ ಲಯಗೊಳ್ಳುವುದು ।೫೮೨॥

ಅರೇ, ಭ್ರಾಂತಿರೂಪ ಅರಣ್ಯದಲ್ಲಿ (ಮಾಯೆಯಲ್ಲಿ) ಪ್ರವೇಶಿಸಿ ಸೃಷ್ಟಿರೂಪ ಅವಯವಗಳು ಉತ್ಪನ್ನ ಮಾಡುವುದು. ಹೆಚ್ಚಿಗೇನು ಹೇಳಬೇಕು? ಅದಕ್ಕೆ ಜಗವೆಂದು ಕರೆಯುವರು ।೫೮೩॥

ಯಾವುದು (ಏಳನೆಯ ಅಧ್ಯಾಯದಲ್ಲಿ) ಎಂಟು ಪ್ರಕಾರದ ಪ್ರಕೃತಿಯ ವರ್ಣನೆ ಮಾಡಿದೆ ಮತ್ತು (ಹದಿಮೂರನೆಯ ಅಧ್ಯಾಯದಲ್ಲಿ) ಮೂವತ್ತಾರು ಪ್ರಕಾರದಿಂದ ಕ್ಷೇತ್ರರೂಪದಿಂದ ವರ್ಣನೆ ಮಾಡಿರುವುದು ।೫೮೪॥

ಈ ಹಿಂದಿನ ಮಾತೇಕೆ ಬೇಕು? ಅರೇ ಈಗ ತಾನೇ ಇದೇ ಅಧ್ಯಾಯದಲ್ಲಿ ವೃಕ್ಷಾಕಾರರೂಪದ ಕಲ್ಪನೆ ಮಾಡಿ ನಿನಗೆ ಹೇಳಿರುವೆ ।೫೮೫॥

ಈ ಎಲ್ಲ ಸಾಕಾರ ಪದಾರ್ಥಗಳು ತಮ್ಮ ಇರುವ ಊರುಗಳಾಗಿವೆ. ಹೀಗೆ ಕಲ್ಪಿಸಿ, ಅದರಲ್ಲಿ ವ್ಯಾಪ್ತಗೊಂಡು ಆ ಆಕಾರಗಳಿಂದ ಚೈತನ್ಯವೇ ಆಗಿರುವುವು ।೫೮೬॥

ಬಾವಿಯಲ್ಲಿನ ತನ್ನ ಪ್ರತಿಬಿಂಬವನ್ನು ನೋಡಿ, ಬೇರೆ ಇನ್ನೊಂದು ಸಿಂಹವಿದೆ ಎಂದು ತಿಳಿದು ಸಿಟ್ಟಿನಿಂದ ಅದರ ನಾಶಮಾಡಲು ಸಿಂಹವು ಬಾವಿಯಲ್ಲಿ ಹಾರಿಕೊಳ್ಳುವುದು ।೫೮೭॥

ಅಥವಾ ನೀರಿನಲ್ಲಿ ಆಕಾಶದ ವ್ಯಾಪ್ತಿ ಇದ್ದು, ಪುನಃ ಅದರ ಮೇಲೆ ಆಕಾಶದ ಪ್ರತಿಬಿಂಬವು ಕಾಣಿಸುವುದು. ಅದರಂತೆ ಚೈತನ್ಯವು ತಾನು ಸ್ವತಃ ಅದ್ವೈತವಿದ್ದು, ಉಪಾಧಿಯ ಯೋಗದಿಂದ ದ್ವೈತರೂಪವಾಗುವುದು ।೫೮೮॥

ಅರ್ಜುನಾ, ಈ ಪ್ರಕಾರವಾಗಿ ಆಕಾರಯುಕ್ತ ನಗರದ ಕಲ್ಪನೆ ಮಾಡಿ, ಅಲ್ಲಿ ಆತ್ಮವು ತನ್ನ ಸ್ವರೂಪದ ವಿಸ್ಮೃತಿಯ ನಿದ್ರೆ ಮಾಡುವುದು ।೫೮೯॥

ತದನಂತರ ಸ್ವಪ್ನದಲ್ಲಿ ಒಬ್ಬ ಮನುಷ್ಯನು ಹಾಸಿಗೆ ಕಂಡು ಅದರ ಮೇಲೆ ಮಲಗುವಂತೆ, ಆತ್ಮವು ಈ ಜಗತ್ತಿನಲ್ಲಿ ಸುಖವಾಗಿ ನಿದ್ರೆ ಮಾಡುವುದು ।೫೯೦॥

ಆಗ ಆ ನಿದ್ರೆಯ ಭರದಲ್ಲಿ ನಾನು ಸುಖಿಯಾಗಿರುವೆ, ನಾನು ದುಃಖಿಯಾಗಿರುವೆ. ಹೀಗೆ ಗೊರಕೆ ಹೊಡೆಯುತ್ತ ಮಲಗಿರುವುದು ಮತ್ತು ಅಹಂಕಾರ, ಮಮಕಾರಗಳಲ್ಲಿ ಸಿಕ್ಕಿ ಬೀಳುವುದು ।೫೯೧॥

ಹಾ ಜನಕು ಹೇ ಮಾತಾ । ಹಾ ಮೀ ಗೌರ ಹೀನ ಪುರತಾ । ಪುತ್ರ ವಿತ್ತ ಕಾಂತಾ । ಮಾಝೀ ಹೇ ನಾ ।೯೯೨॥ ಐಸಿಯಾ ವೇಂಘೋನಿ ಸ್ವಪ್ನಾ । ಧಾಂವತ ಭವಸ್ವರ್ಗಾಚಿಯಾ ರಾನಾ । ತಯಾ ಚೈತನ್ಯಾ ನಾಮ ಅರ್ಜುನಾ । ಕ್ಷರ ಪುರುಷು ಗಾ ।೯೯೩॥ ಆತಾ ಐಕ ಕ್ಷೇತ್ರಜ್ಞು ಯೇಣೇ । ನಾಮೇ ಜಯಾತೇ ಬೋಲಣೇ । ಜಗ ಜೀವು ಕಾ ಮ್ಹಣೇ । ಜಿಯೇ ದಶೇತೇ ।೯೯೪॥ ಜೋ ಆಪುಲೇನಿ ವಿಸರೇ । ಸರ್ವ ಭೂತತ್ವೇ ಅನುಕರೇ । ತೋ ಆತ್ಮಾ ಬೋಲಿಜೇ ಕ್ಷರೇ । ಪುರುಷ ನಾಮೇ ।೯೯೫॥ ಜೇ ತೋ ವಸ್ತುಸ್ಥಿತೀ ಪುರತಾ । ಮ್ಹಣೌನಿ ಆಲೀ ಪುರುಷತಾ । ವರೀ ದೇಹಪುರೀ ನಿದ್ರೈಜತಾ । ಪುರುಷನಾಮೇ ।೯೯೬॥ ಆಣಿ ಕ್ಷರಪಣಾಚಾ ನಾಥಿಲಾ । ಆಳು ಯಯಾ ಐಸೇನಿ ಆಲಾ । ಜೇ ಉಪಾಧೀಂಚಿ ಆತಲಾ । ಮ್ಹಣೌನಿಯಾ ।೯೯೭॥ ಜೈಸೀ ಖಳಾಳೀಚಿಯಾ ಉದಕಾ । ಸರಸೀ ಆಂದೋಳೇ ಚಂದ್ರಿಕಾ । ತೈಸಾ ವಿಕಾರಾ ಔಪಾಧಿಕಾ । ಐಸಾಚಿ ಗಮೇ ।೯೯೮॥ ಕಾ ಖಳಾಳು ಮೋಟಕಾ ಶೋಷೇ । ಆಣಿ ಚಂದ್ರಿಕಾ ತೈ ಸರಶೀಂಚ ಭ್ರಂಶೇ । ತೈಸಾ ಉಪಾಧಿನಾಶೀ ನ ದಿಸೇ । ಉಪಾಧಿಕು ।೯೯೯॥ ಐಸೇ ಉಪಾಧಿಚೇನಿ ಪಾಡೇ । ಕ್ಷಣಿಕತ್ವ ಯಾತೇ ಜೋಡೇ । ತೇಣೇ ಖೋಂಕರಪಣೇ ಘಡೇ । ಕ್ಷರ ಹೇ ನಾಮ ।೧೦೦೦॥ ಏವಂ ಜೀವಚೈತನ್ಯ ಆಘವೇ । ಹೇ ಕ್ಷರ ಪುರುಷ ಜಾಣಾವೇ । ಆತಾ ರೂಪ ಕರೂ ಬರವೇ । ಅಕ್ಷರಾಸೀ ।೧೦೦೧॥ ತರೀ ಅಕ್ಷರು ಜೋ ದುಸರಾ । ಪುರುಷು ಪೈ ಧನುರ್ಧರಾ । ತೋ ಮಧ್ಯಸ್ತು ಗಾ ಗಿರಿವರಾ । ಮೇರು ಜೈಸಾ ।೧೦೦೨॥ ಜೇ ತೋ ಪೃಥ್ವೀ ಪಾತಾಳ ಸ್ವರ್ಗೀ । ಇಹೀ ನ ಭೇದೇ ತಿಹೀ ಭಾಗೀ । ತೈಸಾ ದೋಹೀ ಜ್ಞಾನಾಜ್ಞಾನಾಂಗೀ । ಪಡೇನಾ ಜೋ ।೧೦೦೩॥ ನಾ ಯಥಾರ್ಥಜ್ಞಾನೇ ಏಕೇ ಹೋಣೇ । ನಾ ಅನ್ಯಥಾತ್ವೇ ದುಜೇ ಘೇಣೇ । ಐಸೇ ನಿಖಿಳ ಜೇ ನೇಣಣೇ । ತೇಂಚಿ ತೇ ರೂಪ ।೧೦೦೪॥ ಪಾಂಸುತಾ ನಿಃಶೇಷ ಜಾಯೇ । ನಾ ಘಟಭಾಂಡಾದಿ ಹೋಯೇ । ತಯಾ ಮೃತ್ಪಿಂಡಾ ಐಸೇ ಆಹೇ । ಮಧ್ಯಸ್ಥ ಜೇ ।೧೦೦೫॥ ಪೈ ಆಟೋನಿ ಗೇಲಿಯಾ ಸಾಗರು । ಮಗ ತರಂಗು ನಾ ನೀರು । ತಯಾ ಐಶೀ ಅನಾಕಾರು । ಜೇ ದಶಾ ಗಾ ।೧೦೦೬॥ ಪಾರ್ಥಾ ಜಾಗಣೇ ತರೀ ಬುಡೇ । ಪರೀ ಸ್ವಪ್ನಾಚೇ ಕಾಂಹೀ ನ ಮಾಂಡೇ । ತೈಸಿಯೇ ನಿದ್ರೇ ಸಾಂಗಡೇ । ನ್ಯಾಹಾಳಣೇ ಜೇ ।೧೦೦೭॥ ವಿಶ್ವ ಆಘವೇಂಚಿ ಮಾವಳೇ । ಆಣಿ ಆತ್ಮಬೋಧು ತರೀ ನುಜಳೇ । ತಿಯೇ ಅಜ್ಞಾನದಶೇ ಕೇವಳೇ । ಅಕ್ಷರು ನಾಮ ।೧೦೦೮॥

ಇವನು ನನ್ನ ತಂದೆ, ಈಕೆಯು ನನ್ನ ತಾಯಿಯು, ನಾನು ಬೆಳ್ಳಗಿರುವೆ, ನಾನು ಕಪ್ಪಾಗಿರುವೆ, ನಾನು ಪೂರ್ಣನಾಗಿರುವೆ, ಮಕ್ಕಳು, ಸಂಪತ್ತು ಮತ್ತು ಹೆಂಡತಿ ಇವು ನನ್ನವಲ್ಲವೇ? ।೪೯೨॥

ಈ ಪ್ರಕಾರವಾಗಿ ಸ್ವಪ್ನದ ಆಧಾರದಿಂದ ಸ್ವರ್ಗ ಮತ್ತು ಸಂಸಾರ ಈ ಅರಣ್ಯದಲ್ಲಿ ಧಾವಿಸುತ್ತಿರುವ ಯಾವ ಚೈತನ್ಯವು, ಅರ್ಜುನಾ ಅದಕ್ಕೆ ''ಕ್ಷರ'' ಪುರುಷನೆಂದು ಹೇಳುವರು ।೪೯೩॥

ಈಗ ಅದಕ್ಕೆ ಕ್ಷೇತ್ರಜ್ಞವೆಂದು ಹೇಳುತ್ತಾರೆ ಮತ್ತು ಈ ದಿಶೆಯಲ್ಲಿ ಎಲ್ಲ ಜಗವು ಇದಕ್ಕೆ ಜೀವವೆನ್ನುವರು ।೪೯೪॥

ಮತ್ತು ಯಾವುದು ಆತ್ಮಸ್ವರೂಪದ ವಿಸ್ಮೃತಿಯಿಂದ ಎಲ್ಲ ಭೂತಗಳಲ್ಲಿ ಸಂಚರಿಸುವುದೋ, ಆ ಜೀವಾತ್ಮಕ್ಕೆ ''ಕ್ಷರ'' ಪುರುಷನೆಂದು ಹೇಳುವರು ।೪೯೫॥

ಕಾರಣ, ಅದು ವಸ್ತುತಃ ಸ್ವರೂಪದಿಂದ ಪರಿಪೂರ್ಣ ಇರುವುದರಿಂದ ಅದಕ್ಕೆ ''ಪುರುಷ'' ಈ ಹೆಸರು ಪ್ರಾಪ್ತವಾಗಿದೆ. ಅಲ್ಲದೇ ಅದು ದೇಹದಲ್ಲಿ ವಾಸ ಮಾಡುತ್ತಿರುವುದರಿಂದಲೂ ''ಪುರುಷ''ನೆಂದು ಹೆಸರಿದೆ ।೪೯೬॥

ಮತ್ತು ಉಪಾಧಿಯ ತಾದಾತ್ಮ್ಯ ಸಂಬಂಧದಿಂದ ಅದರ ಮೇಲೆ ಕ್ಷರ ಎಂಬುವ ಸುಳ್ಳು ಆರೋಪ ಬಂದಿರುವುದು ।೪೯೭॥

ಯಾವ ಪ್ರಕಾರವಾಗಿ ಅಳುಗಾಡುತ್ತಿರುವ ನೀರಿನಲ್ಲಿ ಚಂದ್ರನ ಪ್ರತಿಬಿಂಬವು ಅಳುಗಾಡುವ ಹಾಗೆ ಕಾಣುವುದೋ, ಅದರಂತೆ ವಿಕಾರಗಳ ಉಪಾಧಿಯಿಂದ ಆತ್ಮನು ಉಪಾಧಿಯುಕ್ತನಂತೆ ಭಾಸವಾಗುವನು ।೪೯೮॥

ತದನಂತರ ಅದೇ ಅಳುಗಾಡುವ ನೀರು ಇಲ್ಲದಂತಾಗಲು,ಅದರಲ್ಲಿ ಕಾಣುವ ಚಂದ್ರಬಿಂಬವೂ ಇಲ್ಲದಂತಾಗುವುದು. ಅದರಂತೆ ಉಪಾಧಿಯ ನಾಶ ವಾಯಿತೆಂದರೆ ಚೈತನ್ಯವು ಕಾಣದಂತಾಗುವುದು ।೪೯೯॥

ಈ ಪ್ರಕಾರವಾಗಿ ಉಪಾಧಿಯ ಯೋಗದಿಂದ ಚೈತನ್ಯಕ್ಕೆ ಕ್ಷಣಿಕತ್ವವು ಪ್ರಾಪ್ತವಾಗುವುದು ಮತ್ತು ಈ ರೀತಿಯಾಗಿ ಕಡಿಮೆತನ ಬಂದಿದ್ದಕ್ಕೆ ಅದಕ್ಕೆ ''ಕ್ಷರ''ವೆಂದು ಹೇಳುವರು ।೫೦೦॥

ಈ ಪ್ರಕಾರವಾಗಿ ಎಲ್ಲ ಜೀವ ಚೈತನ್ಯಕ್ಕೆ ''ಕ್ಷರ''ವೆಂದು ಹೇಳುವರು. ಈಗ ''ಅಕ್ಷರ''ದ ಲಕ್ಷಣಗಳನ್ನು ಉತ್ತಮ ರೀತಿಯಲ್ಲಿ ತಿಳಿಸುವೆನು ।೫೦೧॥

ಹಾಗಾದರೆ ಅರ್ಜುನಾ, ಎರಡನೆಯದಾದ ಯಾವ ಅಕ್ಷರವು ಅದು ಮಧ್ಯಸ್ಥವಾಗಿದೆ. ಯಾವ ಪ್ರಕಾರವಾಗಿ ಎಲ್ಲ ಪರ್ವತಗಳಲ್ಲಿ ಮೇರುಪರ್ವತವು ಮಧ್ಯಭಾಗದಲ್ಲಿರುವಂತೆ ।೫೦೨॥

ಕಾರಣ, ಆ ಮೇರುಪರ್ವತವು ಪೃಥ್ವಿ, ಪಾತಾಳ ಮತ್ತು ಸ್ವರ್ಗ ಈ ಮೂರು ಲೋಕಗಳಲ್ಲಿ ಸಮವಾಗಿರುವುದು. ಅದರಂತೆ ಯಾವ ಜ್ಞಾನ ಅಥವಾ ಅಜ್ಞಾನ ಕಾರ್ಯಗಳು ಇವರಿಗೆ ಸಮಾನವೇ ಆಗಿವೆ ।೫೦೩॥

ಯಥಾರ್ಥ ಜ್ಞಾನದಿಂದ ಐಕ್ಯವಾಗುವುದು. ಅಥವಾ ವಿಪರೀತ ಜ್ಞಾನದಿಂದ ದ್ವೈತವಾಗುವುದು. ಈ ಎರಡು ಸ್ಥಿತಿಗಳ ಮಧ್ಯದಲ್ಲಿನ ಕೇವಲ ಅಜ್ಞಾನ ಸ್ಥಿತಿಯು ಅದೇ ಅದರ ಸ್ವರೂಪವಾಗಿರುವುದು ।೫೦೪॥

ಮಣ್ಣನ್ನು ನೆನಸಿ ಅದರ ಉಂಡಿಯನ್ನು ಮಾಡಿದಾಗ, ಅದರಿಂದ ಗಡಿಗೆಗಳನ್ನು ತಯಾರಿಸುವ ಪೂರ್ವದಲ್ಲಿ ಅದರ ಮಣ್ಣುತನ ಹೋಗಿರುವುದು, ಮತ್ತು ಅದಕ್ಕೆ ಗಡಿಗೆಗಳ ಆಕಾರವೂ ಆಗಿರುವುದಿಲ್ಲ. ಇದರಂತೆ ಈ ಅಕ್ಷರ ಪುರುಷನ ಮಧ್ಯದ ಸ್ಥಿತಿಯಾಗಿರುವುದು ।೫೦೫॥

ಸಮುದ್ರವು ಇಂಗಿದ ಮೇಲೆ ಅದರಲ್ಲಿ ನೀರೂ ಇರುವುದಿಲ್ಲ ತೆರೆಗಳೂ ಇರುವುದಿಲ್ಲ. ಅದರಂತೆ ಯಾವ ಆಕಾರ ರಹಿತ ಸ್ಥಿತಿಯಾಗಿರುವುದು ।೫೦೬॥

ಹೇ ಪಾರ್ಥನೇ, ಜಾಗೃತಾವಸ್ಥೆ ಹೋಗಿ ಸ್ವಪ್ನಾವಸ್ಥೆಯೂ ಬಂದಿರುವುದಿಲ್ಲ. ಇಂತಹ ನಿದ್ರಾವಸ್ಥೆಯಂತೆ ಇದರ ಸ್ವರೂಪವಾಗಿದೆ ।೫೦೭॥

ಮತ್ತು ಜಗತ್ತಿನ ಭಾಸವು ಇಲ್ಲದಂತಾಗುವಿಕೆ ಮತ್ತು ಆತ್ಮಜ್ಞಾನದ ಬೋಧವಾಗದಿರುವಿಕೆ, ಈ ಎರಡರ ಮಧ್ಯದ ಯಾವ ಕೇವಲ ಅಜ್ಞಾನದ ದಶೆಗೆ ''ಅಕ್ಷರ''ವೆಂದು ಕರೆಯುವರು ।೫೦೮॥

ಸರ್ವಾ ಕಳೀ ಸಾಂಡಿಲೇ ಜೈಸೇ । ಚಂದ್ರಪಣ ಉರೇ ಅಂವಸೇ । ರೂಪ ಜಾಣಾವೇ ತೈಸೇ । ಅಕ್ಷರಾಚೇ ।೫೦೯॥ ಪೈ ಸರ್ವೋಪಾಧಿವಿನಾಶೇ । ಹೇ ಜೀವ ದಶಾ ಜೇಥ ಪೈಸೇ । ಫಳಪಾಕಾಂತ ಜೈಸೇ । ಝಾಡ ಬೀಜೀ ।೫೧೦॥ ತೈಸೇ ಉಪಾಧೀ ಉಪಹಿತ । ಥೋಕೋನಿ ಠಾಕೇ ಜೇಥ । ತಯಾತೇ ಅವ್ಯಕ್ತ । ಬೋಲತೀ ಗಾ ।೫೧೧॥ ಘನ ಅಜ್ಞಾನ ಸುಷುಪ್ತೀ । ತೋ ಬೀಜಭಾವೋ ಮ್ಹಣತೀ । ಯೇರ ಸ್ವಪ್ನ ಹನ ಜಾಗೃತೀ । ಫಳಭಾವೋ ತಯಾಚಾ ।೫೧೨॥ ಜಯಾಸೀ ಕಾ ಬೀಜಭಾವೋ । ವೇದಾಂತೀ ಕೇಲಾ ಐಸಾ ಆವೋ । ತೋ ತಯಾ ಪುರುಷಾ ಠಾವೋ । ಅಕ್ಷರಾಚಾ ।೫೧೩॥ ಜೇಥೂನೀ ಅನ್ಯಥಾ ಜ್ಞಾನ । ಫಾಂಕೋನಿ ಜಾಗೃತಿ ಸ್ವಪ್ನ । ನಾನಾಬುದ್ಧೀಚೇ ರಾನ । ರಿಗಾಲೇ ಅಸೇ ।೫೧೪॥ ಜೀವತ್ವ ಜೇಥುನೀ ಕಿರೀಟೇ । ವಿಶ್ವ ಉಠತಚಿ ಉಠೀ । ತೇ ಉಭಯ ಭೇದಾಂಚೀ ಮಿಠೀ । ಅಕ್ಷರು ಪುರುಷು ।೫೧೫॥ ಯೇರು ಕ್ಷರು ಪುರುಷು ಕಾ ಜನೀ । ಜಿಹೀ ಖೇಳೇ ಜಾಗೃತೀ ಸ್ವಪ್ನೀ । ತಿಯಾ ಅವಸ್ಥಾ ಜೋ ದೋನ್ಹೀ । ವಿಯಾಲಾ ಗಾ ।೫೧೬॥ ಪೈ ಅಜ್ಞಾನಘನಸುಷುಪ್ತೀ । ಐಸೇಸಿ ಜೇ ಕಾ ಖ್ಯಾತೀ । ಯಾ ಉಣೀ ಏಕೀ ಪ್ರಾಪ್ತೀ । ಬ್ರಹ್ಮಾ ಚೀ ಜೇ ।೫೧೭॥ ಸಾಚಚಿ ಪುಢತೀ ವೀರಾ । ಜರೀ ನ ಯೇತಾ ಸ್ವಪ್ನ ಜಾಗರಾ । ತರೀ ಬ್ರಹ್ಮಭಾವೋ ಸಾಚೋಕಾರಾ । ಮ್ಹಣೋ ಯೇತಾ ।೫೧೮॥ ಪರೀ ಪ್ರಕೃತೀಪುರುಷೇ ದೋನೀ । ಅಭ್ರೇ ಜಾಲೀ ಜಿಯೇ ಗಗನೀ । ಕ್ಷೇತ್ರಕ್ಷೇತ್ರಜ್ಞು ಸ್ವಪ್ನೀ । ದೇಖಿಲಾ ಜಿಯೇ ।೫೧೯॥ ಹೇ ಅಸೋ ಅಧೋಶಾಖಾ । ಯಾ ಸಂಸಾರರೂಪಾ ರುಖಾ । ಮೂಳ ತೇ ರೂಪ ಪುರುಷಾ । ಅಕ್ಷರಾಚೇ ।೫೨೦॥ ಹಾ ಪುರುಷು ಕಾ ಮ್ಹಣಿಜೇ । ಜೇ ಪೂರ್ಣಪಣೇಂಚಿ ನಿಜೇ । ಪೈ ಮಾಯಾಪುರೀ ಪಹುಡಿಜೇ । ತೇಣೇಂಹೀ ಬೋಲೇ ।೫೨೧॥ ಆಣಿ ವಿಕಾರಾಂಚೀ ಜೇ ವಾರೀ । ತೇ ವಿಪರೀತ ಜ್ಞಾನಾಚೀ ಪರೀ । ನೇಣಿಜೇ ಜಿಯೇ ಮಾಝಾರೀ । ತೇ ಸುಷುಪ್ತೀ ಗಾ ಹಾ ।೫೨೨॥ ಮ್ಹಣೌನಿ ಯಯಾ ಆಪೈಸೇ । ಕ್ಷರಣೇ ಪಾ ನಸೇ । ಆಣಿಕೇಂಹೀ ಹಾ ನ ನಾಶೇ । ಜ್ಞಾನಾ ಉಣೇ ।೫೨೩॥ ಯಾಲಾಗೀ ಹಾ ಅಕ್ಷರು । ಐಸಾ ವೇದಾಂತೀ ಡಗರು । ಕೇಲಾ ದೇಶೀ ಥೋರು । ಸಿದ್ಧಾಂತಾಚ್ಯಾ ।೫೨೪॥ ಐಸೇ ಜೀವಕಾರ್ಯ ಕಾರಣ । ಜಯಾ ಮಾಯಾ ಸಂಗುಚಿ ಲಕ್ಷಣ । ಅಕ್ಷರ ಪುರುಷು ಜಾಣ । ಚೈತನ್ಯ ತೇ ।೫೨೫॥

ಅಮಾವಾಸ್ಯದ ದಿನದಂದು ಸರ್ವಕಲೆಗಳು ಇಲ್ಲದ ಚಂದ್ರನ ಸ್ವರೂಪವಾದಂತೆ ಶುದ್ಧ ಜ್ಞಾನ ಮತ್ತು ವಿಪರೀತ ಜ್ಞಾನ ಇದರ ಹೊರತಾದ ಕೇವಲ ಅಜ್ಞಾನವು ಅಕ್ಷರದ ರೂಪವಾಗಿದೆ ।೫೦೯॥

ಇಲ್ಲಿ ನೋಡು, ಎಲ್ಲ ಉಪಾಧಿಗಳ ನಾಶವಾದ ಮೇಲೆ ಈ ಅಜ್ಞಾನದಲ್ಲಿ ಜೀವಾತ್ಮನು ಲಯಗೊಳ್ಳುವನು. ಯಾವ ಪ್ರಕಾರವಾಗಿ ಫಲ ಬಂದ ಮೇಲೆ ಗಿಡವು ಬೀಜರೂಪದಲ್ಲಿ ಇರುವುದೋ ।೫೧೦॥

ಅದರಂತೆ ಉಪಾಧಿ ಮತ್ತು ಉಪಾಧಿಯ ಸ್ವೀಕಾರ ಮಾಡುವವರು ಎಲ್ಲಿ ವಿಶ್ರಾಂತಿಯನ್ನು ಪಡೆಯುವರೋ, ಆ ಸ್ಥಾನಕ್ಕೆ ಅವ್ಯಕ್ತವೆಂದು ಕರೆಯುವರು ।೫೧೧॥

ಪೂರ್ಣ ಅಜ್ಞಾನವು ಯಾವ ನಿದ್ರಾವಸ್ಥೆಯಲ್ಲಿರುವುದೋ, ಅದಕ್ಕೆ ''ಬೀಜಭಾವ'' ಎನ್ನುವರು ಮತ್ತು ಸ್ವಪ್ನ ಜಾಗೃತಿಗಳಿಗೆ ''ಫಲಭಾವ'' ಎನ್ನುವರು ।೫೧೨॥

ವೇದಾಂತ ಶಾಸ್ತ್ರದಲ್ಲಿ ಯಾವ ಸ್ಥಿತಿಗೆ ''ಬೀಜ ಭಾವ'' ಎನ್ನುವರೋ, ಆ ಸ್ಥಿತಿಗೇನೇ ''ಅಕ್ಷರ ಪುರುಷ'' ಎನ್ನುವರು ।೫೧೩॥

ಮತ್ತು ಎಲ್ಲಿಂದ ವಿಪರೀತ ಜ್ಞಾನವು ಉತ್ಪನ್ನವಾಗಿ ಜಾಗೃತ ಮತ್ತು ಸ್ವಪ್ನ ಈ ರೂಪದಿಂದ ಬೆಳಗುವುದು ಮತ್ತು ಅನೇಕ ಬುದ್ಧಿ ತರಂಗರೂಪ ಜ್ಞಾನವು ಎಲ್ಲಿಂದ ಹೊರಡುವುದೋ ।೫೧೪॥

ಅರ್ಜುನಾ,ಜೀವಧರ್ಮವು ಹಾಗೆಯೇ ಅನಂತ ವಿಶ್ವಗಳು ಎಲ್ಲಿ ಉತ್ಪನ್ನವಾಗುವುವೋ, ಮತ್ತು ಜೀವ, ವಿಶ್ವದ ಸಾಮ್ಯಾವಸ್ಥೆಯು ಪ್ರಳಯಕಾಲದಲ್ಲಾ ವುದೋ, ಆ ಅಜ್ಞಾನದಲ್ಲಿ ಇರುವ ಚೈತನ್ಯಕ್ಕೆ ''ಅಕ್ಷರ ಪುರುಷ'' ಎನ್ನುವರು ।೫೧೫॥

ಇದರ ಹೊರತಾದ ''ಕ್ಷರ ಪುರುಷ''ನು ಯಾವ ಜಾಗೃತ ಸಪ್ನಾವಸ್ಥೆಗಳಲ್ಲಿ ಆಡುವನೋ, ಆ ಜಾಗೃತ - ಸ್ವಪ್ನ ಈ ಎರಡು ಅವಸ್ಥೆಗಳು ಯಾರಿಂದ ಉತ್ಪನ್ನವಾಗುವುವೋ ।೫೧೬॥

ಅಥವಾ ಯಾವ ಅವಸ್ಥೆಗೆ ಪೂರ್ಣ ಅಜ್ಞಾನದಿಂದ ತುಂಬಿದ ನಿದ್ರಾವಸ್ಥೆ ಎನ್ನುವರು ಮತ್ತು ಇದಕ್ಕೆ ಬ್ರಹ್ಮಸ್ಥಿತಿ ಎನ್ನಲು ಒಂದೇ ಕೊರತೆಯಾಗಿರುವುದು ।೫೧೭॥

ಹೇ ವೀರನೇ, ನಿಜವಾಗಿಯೂ ಈ ನಿದ್ರಾವಸ್ಥೆಯಿಂದ ಒಂದುವೇಳೆ ಸ್ವಪ್ನ ಅಥವಾ ಜಾಗೃತಿ ಈ ಅವಸ್ಥೆಗಳು ಪ್ರಾಪ್ತವಾಗದಿದ್ದರೆ, ಸುಷುಪ್ತಿಗೆನೇ ಬ್ರಹ್ಮಸ್ಥಿತಿ ಎಂದು ಹೇಳಬೇಕಾಗುತ್ತಿತ್ತು ।೫೧೮॥

ಆದರೆ, ಈ ನಿದ್ರೆ ರೂಪದ ಆಕಾಶದಲ್ಲಿ ಪ್ರಕೃತಿ ಪುರುಷ ರೂಪ ಮೋಡಗಳು ಬಂದು ಕ್ಷೇತ್ರ ಮತ್ತು ಕ್ಷೇತ್ರಜ್ಞ ಹೀಗೆ ಅದರ ಸ್ವಪ್ನದಲ್ಲಿ ಕಾಣುವುವು ।೫೧೯॥

ಇದು ಇರಲಿ, ಕೆಳಭಾಗದಲ್ಲಿ ವಿಸ್ತಾರಗೊಳ್ಳುವ ಸಂಸಾರ ರೂಪ ವೃಕ್ಷದ ಯಾವ ಮೂಲವೆಂದರೆ ಅಜ್ಞಾನವು. ಇದೇ ಈ ಅಕ್ಷರ ಪುರುಷನ ರೂಪವಾಗಿರುವುದು ।೫೨೦॥

ಈತನಿಗೆ ಪುರುಷನೆಂದು ಏಕೆನ್ನಬೇಕೆಂದರೆ, ಈತನು ಪೂರ್ಣವಾಗಿ ನಿದ್ರಿಸುವನೆಂದು ಮತ್ತು ಮಾಯಾರೂಪ ನಗರದಲ್ಲಿ ಶಯನ ಮಾಡುವವನೆಂದು ।೫೨೧॥

ಮತ್ತು ಯಾವ ಗಾಢನಿದ್ರೆಯಲ್ಲಿ ವಿಕಾರಗಳು ಅಥವಾ ವಿಪರೀತ ಜ್ಞಾನವು ಇವುಗಳ ಭಾಸವು ಇರುವುದಿಲ್ಲ, ಅದು ಆತನ ರೂಪವಾಗಿರುವುದು ।೫೨೨॥

ಆದ್ದರಿಂದ ಆತನ ಸ್ವಭಾವತಃ ಜ್ಞಾನದ ಹೊರತಾಗಿ ಬೇರೆ ಯಾವ ಉಪಾಯಗಳಿಂದಲೂ ನಾಶ ಮಾಡುವುದಾಗುವುದಿಲ್ಲ ।೫೨೩॥

ಆದುದರಿಂದಲೇ ವೇದಾಂತ ಶಾಸ್ತ್ರದ ಸಿದ್ಧಾಂತದಲ್ಲಿ ಈತನ ಮೇಲೆ ''ಅಕ್ಷರ''ವೆಂದು ಹೀಗೆ ಆರೋಪ ಮಾಡಲಾಗಿದೆ ।೫೨೪॥

ಈ ಪ್ರಕಾರವಾಗಿ ಜೀವ ಕಾರ್ಯ ಮತ್ತು ಕಾರಣ ಈ ವ್ಯವಹಾರವಾಗಲು ಪರಮಾತ್ಮನಲ್ಲಿ ಮಾಯೆಯ ಸಂಬಂಧದ ಅವಶ್ಯಕತೆ ಇದೆ. ಅದಕ್ಕಾಗಿ ಆ ಮಾಯೆಯ ಸಂಬಂಧವಿದ್ದ ಚೈತನ್ಯಕ್ಕೆ ''ಅಕ್ಷರ'' ಪುರುಷನೆನ್ನುವರು ।೫೨೫॥

ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।
ಯೋ ಲೋಕತ್ರಯಾಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥೧೭॥

ಆತಾ ಅನ್ಯಥಾಜ್ಞಾನೀ । ಯಾ ದೋನೀ ಅವಸ್ಥಾ ಜಯಾ ಜನೀ । ತಯಾ ಹರಪತೀ ಘನೀ । ಅಜ್ಞಾನತತ್ತ್ವೀ ॥೫೨೬॥ ತೇ ಅಜ್ಞಾನ ಜ್ಞಾನೀ ಬುಡಾಲಿಯಾ । ಜ್ಞಾನೇ ಕೀರ್ತಿ ಮುಖತ್ವ ಕೇಲಿಯಾ । ಜೈಸಾ ವನ್ಹಿ ಕಾಷ್ಠ ಜಾಳೂನಿಯಾ । ಸ್ವಯೇ ಜಳೇ ॥೫೨೭॥ ತೈಸೇ ಅಜ್ಞಾನ ಜ್ಞಾನೇ ನೇಲೇ । ಆಪಣ ವಸ್ತು ದೇಊನಿ ಗೇಲೇ । ಐಸೇ ಜಾಣಣೇ ನಿವೀಣ ಉರಲೇ । ಜಾಣತೇ ಜೇ ॥೫೨೮॥ ತೇ ತೋ ಗಾ ಉತ್ತಮ ಪುರುಷು । ಜೋ ತೃತೀಯ ಕಾ ನಿಷ್ಕರ್ಷು । ದೋಹೀಹೂನ ಆಣಿಕು । ಮಾಗಿಲಾ ಜೋ ॥೫೨೯॥ ಸುಷುಪ್ತೀ ಆಣಿ ಸ್ವಪ್ನಾ । ಪಾಸೂನಿ ಬಹುವೇ ಅರ್ಜುನಾ । ಜಾಗಣೇ ಜೈಸೇ ಆನಾ । ಬೋಧಾಚೇಂಚೀ ॥೫೩೦॥ ಕಾ ರಶ್ಮೀ ಹನ ಮೃಗಜಳಾ । ಪಾಸೂನಿ ಅರ್ಕಮಂಡಳಾ । ಅಫಾಟು ತೇವೀ ವೇಗಳಾ । ಉತ್ತಮು ಗಾ ॥೫೩೧॥ ಹೇ ನಾ ಕಾಷ್ಠೀಂಚಾ ಕಾಷ್ಠಾಹುನೀ । ಅನಾರಿಸಾ ಜೈಸಾ ವನ್ಹೀ । ತೈಸಾ ಕ್ಷರಾಕ್ಷರಾಪಾಸುನೀ । ಆನಚಿ ತೋ ॥೫೩೨॥ ಪೈ ಗ್ರಾಸೂನಿ ಆಪಲೀ ಮರ್ಯಾದಾ । ಏಕ ಕರಿತ ನದೀನದಾ । ಉಠೀ ಕಲ್ಪಾಂತೀ ಉದಾವಾದಾ । ಏಕಾರ್ಣವಾಚಾ ॥೫೩೩॥ ತೈಸೇ ಸ್ವಪ್ನ ನಾ ಸುಷುಪ್ತೀ । ನಾ ಜಾಗರಾಚೀ ಗೋಠೀ ಆಥೀ । ಜೈಸಿ ಗಿಳಿಲೀ ದಿವೋರಾತೀ । ಪ್ರಳಯತೇಜೇ ॥೫೩೪॥ ಮಗ ಏಕಪಣ ನಾ ದುಜೇ । ಅಸೇ ನಾಹೀ ಹೇ ನೇಣಿಜೇ । ಅನುಭಊ ನಿರ್ಬುಜೇ । ಬುಡಾಲಾ ಜೇಥೇ ॥೫೩೫॥ ಐಸೇ ಆಥೀ ಜೇ ಕಾಂಹೀ । ತೇ ತೋ ಉತ್ತಮ ಪುರುಷು ಪಾಹೀ । ಜೇ ಪರಮಾತ್ಮಾ ಇಹೀ । ಬೋಲಿಜೇ ನಾಮೀ ॥೫೩೬॥ ತೇಹೀ ಯೇಥ ನ ಮಿಸಳತಾ । ಬೋಲಣೇ ಜೀವತ್ವೇ ಪಂಡುಸುತಾ । ಜೈಸಿ ಬುಡಣೇ ಯಾಚೀ ವಾರ್ತಾ । ಥಡಿಯೇಚಾ ಕೀಜೇ ॥೫೩೭॥ ತೈಸೇ ವಿವೇಕಾಚಿಯೇ ಕಾಂಠೀ । ಉಭೇ ಠಾಕಲಿಯಾ ಕಿರೀಟೀ । ಪರಾವಾರಾಚಿಯಾ ಗೋಠೀ । ಕರಣೇ ವೇದಾ ॥೫೩೮॥ ಮ್ಹಣೌನಿ ಪುರುಷು ಕ್ಷರಾಕ್ಷರು । ದೋನ್ಹೀ ದೇಖೋನಿ ಅವರು । ಯಾತೇ ಮ್ಹಣತೀ ಪರು । ಆತ್ಮರೂಪ ॥೫೩೯॥ ಅರ್ಜುನಾ ಐಸಿಯಾ ಪರೀ । ಪರಮಾತ್ಮಾ ಶಬ್ದವರೀ । ಸೂಚಿಜೇ ಗಾ ಅವಧಾರೀ । ಪುರುಷೋತ್ತಮು ॥೫೪೦॥ ಯೇರ್ಹವೀ ನ ಬೋಲಣೇನಿ ಬೋಲಣೇ । ಜೇಥೀಂಚೇ ಸರ್ವ ನೇಣಿವಾ ಜಾಣಣೇ । ಕಾಂಹೀಂಚ ನ ಹೋನಿ ಹೋಣೇ । ಜೇ ವಸ್ತು ಗಾ ॥೫೪೧॥

ಶ್ಲೋಕಾರ್ಥ :- ಇವರಿಬ್ಬರಲ್ಲದೇ ಮತ್ತೊಬ್ಬ ಉತ್ತಮ ಪುರುಷನಿರುತ್ತಾನೆ. ಆತನನ್ನು ಪರಮಾತ್ಮ ಎನ್ನುತ್ತಾರೆ. ನಾಶರಹಿತನಾದ ಆ ಪ್ರಭುವು ಈ ಮೂರು ಲೋಕಗಳನ್ನು ಪ್ರವೇಶಿಸಿ ಪೋಷಿಸುತ್ತಾನೆ ।೧೭॥

ಈಗ ವಿಪರೀತ ಜ್ಞಾನದಿಂದ ಈ ವಿಶ್ವದಲ್ಲಿ ಉತ್ಪನ್ನವಾಗುವ ಜಾಗೃತ ಮತ್ತು ಸ್ವಪ್ನ ಈ ಅವಸ್ಥೆಗಳು ಯಾವ ಗಾಢ ಅಜ್ಞಾನದಲ್ಲಿ ಲಯಗೊಳ್ಳುವುವು ।೫೨೬॥

ಆ ಅಜ್ಞಾನವು ಜ್ಞಾನದಲ್ಲಿ ಮುಳುಗಿ ಜ್ಞಾನವೂ ಆ ಕಡೆ ಹೋದಾಗ, ಯಾವ ಪ್ರಕಾರವಾಗಿ ಅಗ್ನಿಯು ಕಟ್ಟಿಗೆಯನ್ನು ಸುಟ್ಟು ಕೊನೆಗೆ ತಾನೂ ಇಲ್ಲದಂತಾಗುವುದೋ ।೫೨೭॥

ಆದರಂತೆ,ಜ್ಞಾನದಿಂದ ಅಜ್ಞಾನವು ಇಲ್ಲದಂತೆ ಮಾಡಿ ಮತ್ತು ಬ್ರಹ್ಮಸ್ವರೂಪದ ಪ್ರಾಪ್ತಿ ಮಾಡಿ ಕೊಟ್ಟು ಕೊನೆಗೆ ತಾನೂ ಇಲ್ಲದಂತಾಗುವುದು. ನಂತರ ಹೀಗೆ ಯಾವ ತಿಳಿಯದ ಹೊರತಾಗಿ ತಿಳಿಯುವುದು, ಉಳಿಯುವುದು ।೫೨೮॥

ಅರ್ಜುನಾ, ಅವನೇ ಉತ್ತಮ ಪುರುಷನು, ಯಾವ ಕೊನೆಯ ಮೂರನೆಯವನೆಂದು ಹೇಳಿದ್ದು ಮತ್ತು ಈ ಹಿಂದೆ ಈ ಇಬ್ಬರ ಹೊರತಾದವನೆಂದು ಹೇಳಿದ್ದಾಗಿದೆ ।೫೨೯॥

ಅರ್ಜುನಾ, ನಿದ್ರೆ ಮತ್ತು ಸ್ವಪ್ನ, ಇವುಗಳಿಗಿಂತಲೂ ಜಾಗೃತಾವಸ್ಥೆಯು ಯಾವ ಪ್ರಕಾರವಾಗಿ ಬೇರೆಯೇ ಬೋಧದ್ದಾಗಿರುವುದು ।೫೩೦॥

ಅಥವಾ ಸೂರ್ಯಕಿರಣ ಮತ್ತು ಮೃಗಜಲ ಇವುಗಳಿಗಿಂತ ಸೂರ್ಯಮಂಡಲವು ಪೂರ್ಣವಾಗಿ ಬೇರೆಯಾಗಿರುವಂತೆ, ಈ ಉತ್ತಮ ಪುರುಷನು ಈ ಇಬ್ಬರಿಂದ ಪೂರ್ಣವಾಗಿ ಬೇರೆಯಾಗಿರುವನು ।೫೩೧॥

ಇಷ್ಟೇ ಅಲ್ಲ, ಕಟ್ಟಿಗೆಯಲ್ಲಿರುವ ಅಗ್ನಿಯು ಹೇಗೆ ಕಟ್ಟಿಗೆಯಿಂದ ಬೇರೆಯಾಗಿರುತ್ತದೆಯೋ, ಹಾಗೆಯೇ ಕ್ಷರ ಮತ್ತು ಅಕ್ಷರ ಇವರಿಂದ ಬೇರೆಯಾಗಿರುವನು ।೫೩೨॥

ಕಲ್ಪಾಂತ ಸಮಯಕ್ಕೆ ಸಮುದ್ರದ ಮರ್ಯಾದೆಯು ಇಲ್ಲದಂತಾಗಿ ಸರ್ವತ್ರವು ಜಲಮಯವಾದಾಗ ನದಿ ಹಳ್ಳ ಕೊಳ್ಳಗಳು ಎಲ್ಲವೂ ಒಂದೇ ಆಗುವುವು ।೫೩೩॥

ಪ್ರಳಯಕಾಲದ ತೇಜವು ಹಗಲು ರಾತ್ರಿಗಳನ್ನು ನುಂಗಿ ಬಿಡುವಂತೆ ಸ್ವಪ್ನ ಇಲ್ಲವೆ ಗಾಢನಿದ್ರೆ, ಅಥವಾ ಜಾಗೃತಿ ಇವುಗಳ ಭಾಸವು ಉಳಿಯುವುದಿಲ್ಲ ।೫೩೪॥

ನಂತರ ಅದ್ವೈತ ಅಥವಾ ದ್ವೈತ ಈ ಭಾವವು ಉಳಿಯುವುದಿಲ್ಲ. ಇರುವುದು ಹಾಗೂ ಇಲ್ಲದಿರುವುದು ಇದು ಸಹ ಉಳಿಯುವುದಿಲ್ಲ, ಮತ್ತು ಅಲ್ಲಿ ಅನುಭವವು ಭಯಪಟ್ಟು ನಷ್ಟವಾಗುವುದು ।೫೩೫॥

ಹೀಗಿರುವ ಯಾವ ತತ್ತ್ವವು ಅದುವೇ ಉತ್ತಮ ಪುರುಷನೆಂದು ತಿಳಿ ಮತ್ತು ಈತನಿಗೆ ಮಾತ್ರ ಪರಮಾತ್ಮನೆಂದು ಹೇಳುವರು ।೫೩೬॥

ಆದರೆ ಅರ್ಜುನಾ, ಆ ಉತ್ತಮ ಪುರುಷನ ಸ್ಥಿತಿಯ ಹೊರಗಿರುವ ಜೀವಭಾವವನ್ನು ಕೂಡಿಕೊಂಡೇ ಈ ವರ್ಣನೆಯುಂಟು. ಮುಳುಗಿದವನ ವರ್ತಮಾನವನ್ನು ದಂಡೆಯ ಮೇಲಿರುವವನು ತಿಳಿಸಬಲ್ಲನು. ಮುಳುಗಿದವನು ಹೇಳಲಾರ ।೫೩೭॥

ಅದರಂತೆ ಕಿರೀಟೀಯೇ, ವಿಚಾರರೂಪ ದಂಡೆಯ ಮೇಲೆ ವೇದಗಳು ಎಲ್ಲಿಯವರೆಗೆ ನಿಂತಿರುವುವೋ, ಅಲ್ಲಿಯವರೆಗೆ ಈ ಕಡೆಯ ಹಾಗೂ ಆ ಕಡೆಯ ಮಾತುಗಳನ್ನು ಹೇಳಲು ಶಕ್ತಿ ಇರುವುದು ।೫೩೮॥

ಆದ್ದರಿಂದ ''ಕ್ಷರ'' ಮತ್ತು ''ಅಕ್ಷರ''ಗಳು ಈ ಕಡೆಯದ್ದಾಗಿರುವುವು. ಹೀಗೆ ನೋಡಿ, ಈ ಆತ್ಮ ಸ್ವರೂಪಕ್ಕೆ ಪರಪುರುಷ ಹೀಗೆ ಹೇಳುವರು ।೫೩೯॥

ಈ ಪ್ರಕಾರವಾಗಿ ಅರ್ಜುನಾ,ಪರಮಾತ್ಮ ಈ ಶಬ್ದದಿಂದ ''ಪುರುಷೋತ್ತಮ''ನನ್ನು ತಿಳಿಯಬೇಕು, ಹೀಗೆ ತಿಳಿ ।೫೪೦॥

ಸಾಮಾನ್ಯವಾಗಿ ಎಲ್ಲಿ ಶಬ್ದವು ಮುಳಗುವುದೋ, ಜ್ಞಾನವು ಲೋಪವಾಗುವುದೋ, ಮತ್ತು ಸರ್ವ ವ್ಯಾಪಾರವು ನಿಂತುಬಿಡುವುವೋ, ಇಂತಹ ಆ ವಸ್ತುವಾಗಿರುವುದು ।೫೪೧॥

ಸೋಽಹಂ ತೇಹೀ ಅಸ್ತವಲೇ । ಜೇಥ ಸಾಂಗತೇಂಚಿ ಸಾಂಗಣೇ ಜಾಲೇ । ದ್ರಷ್ಟೃತ್ವೇಸೀ ಗೇಲೇ । ದೃಶ್ಯ ಜೇಥ ।೫೪೨॥ ಆತಾ ಬಿಂಬಾ ಆಣಿ ಪ್ರತಿಬಿಂಬಾ । ಮಾಜೀ ಕೈಂಚೀ ಹೇ ಮ್ಹಣೋ ನಯೇ ಪ್ರಭಾ? । ಜರ್ಹೀ ಕೈಸೇನಿ ಹೇ ಲಾಭಾ । ಜಾಯೇಚಿ ನಾ ।೫೪೩॥ ಕಾ ಘ್ರಾಣಾ ಫುಲಾ ದೋಹೀ । ದ್ರುತೀ ಅಸೇ ಜೇ ಮಾರ್ಝಾರಿಲಾ ಠಾಯೀ । ತೇ ನ ದಿಸೇ ತರೀ ನಾಹೀ । ಐಸೇ ಬೋಲೋ ನಯೇ ।೫೪೪॥ ತೈಸೇ ದೃಷ್ಟಾ ದೃಶ್ಯ ಹೇ ಜಾಯೇ । ಮಗ ಕೋಣ ಮ್ಹಣೇ ಕಾಯ ಆಹೇ । ಹೇಂಚಿ ಅನುಭವೇ ತೇಂಚಿ ಪಾಹೇ । ರೂಪ ತಯಾ ।೫೪೫॥ ಜೋ ಪ್ರಕಾಶ್ಯೇವೀಣ ಪ್ರಕಾಶು । ಜೋ ಈಶಿತವ್ಯೇವೀಣ ಈಶು । ಆಪಣೇನೀಚಿ ಅವಕಾಶು । ವಸವೀತ ಅಸೇ ಜೋ ।೫೪೬॥ ಜೋ ನಾದೇ ಐಕಿಜತಾ ನಾದು । ಸ್ವಾದೇ ಚಾಖಿಜತಾ ಸ್ವಾದು । ಜೋ ಭೋಗಿಜತಸೇ ಆನಂದು । ಆನಂದೇಂಚಿ ।೫೪೭॥ ಜೋ ಪೂರ್ಣತೇಚಾ ಪರಿಣಾಮು । ಪುರುಷು ಗಾ ಪುರುಷೋತ್ತಮು । ವಿಶ್ರಾಂತಿಚಾಹೀ ವಿಶ್ರಾಮು । ವಿರಾಲಾ ಜೇಥೇ ।೫೪೮॥ ಸುಖಾಸಿ ಸುಖ ಜೋಡಿಲೇ । ಜೇ ತೇಜ ತೇಜಾಸಿ ಸಾಂಪಡಲೇ । ಶೂನ್ಯಹೀ ಬುಡಾಲೇ । ಮಹಾಶೂನ್ಯೀ ಜಿಯೇ ।೫೪೯॥ ಜೋ ವಿಕಾಸಾಹೀವರೀ ಉರತಾ । ಗ್ರಾಸಾತೇಂಹೀ ಗ್ರಾಸೂನಿ ಪುರತಾ । ಜೋ ಬಹುತೇ ಪಾಡೇ ಬಹುತಾ । ಪಾಸೂನಿ ಬಹು ।೫೫೦॥ ಪೈ ನೇಣತಯಾಪ್ರತೀ । ರುಪೇಪಣಾಚೀ ಪ್ರತೀತೀ । ರುಪೇ ನ ಹೋನಿ ಶುಕ್ತೀ । ದಾವೀ ಜೇವೀ ।೫೫೧॥ ಕಾ ನಾನಾ ಅಲಂಕಾರದಶೇ । ಸೋನೇ ನ ಲಪತ ಲಪಾಲೇ ಅಸೇ । ವಿಶ್ವ ನಹೋನಿಯಾ ತೈಸೇ । ವಿಶ್ವ ಜೋ ಧರೀ ।೫೫೨॥ ಹೇ ಅಸೋ ಜಲತರಂಗಾ । ನಾಹೀ ಸಿನಾನೇಪಣ ಜೇವೀ ಗಾ । ತೇವೀ ದಿಸತಾ ಪ್ರಕಾಶು ಜಗಾ । ಆಪಣಚಿ ಜೋ ।೫೫೩॥ ಆಪಲಿಯಾ ಸಂಕೋಚವಿಕಾಶಾ । ಆಪಣಚಿ ರೂಪ ವೀರೇಶಾ । ಹಾ ಜಳೀ ಚಂದ್ರ ಹನ ಜೈಸಾ । ಸಮಗ್ರ ಗಾ ।೫೫೪॥ ತೈಸಾ ವಿಶ್ವಪಣೇ ಕಾಂಹೀ ನ ಹೋಯೇ । ವಿಶ್ವಲೋಪೀ ಕಹೀ ನ ಜಾಯೇ । ಜೈಸಾ ರಾತ್ರೀ ದಿವಸೇ ನೋಹೇ । ದ್ವಿಧಾ ರವಿ ।೫೫೫॥ ತೈಸಾ ಕಾಂಹೀಂಚಿ ಕೋಣೇಕಡೇ । ಕಾಯಿಸೇನಿಹಿ ವೇಂಚಿ ನ ಪಡೇ । ಜಯಾಚೇ ಸಾಂಗಡೇ । ಜಯಾಸೀಚಿ ।೫೫೬॥

ಯಸ್ಮಾತ್ ಕ್ಷರಮತೀತೋಽಹಂ ಅಕ್ಷರಾದಪಿ ಚೋತ್ತಮಃ ।
ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ।।೧೮।।

"ಅಹಂಬ್ರಹ್ಮ" ಎಂಬ ಈ ಭಾವವೂ ಅಲ್ಲಿ ಅಡಗಿ ಹೋಗುವುದು. ಹೇಳುವವನೇ ಅಲ್ಲಿ ಹೇಳಿಕೆಯಾಗಿರುವನು ಮತ್ತು ದೃಷ್ಟಾನೊಂದಿಗೆ ದೃಶ್ಯವು ಇಲ್ಲದಾಗುವುದು ।೫೪೨॥

ಈಗ ಬಿಂಬವು ಮತ್ತು ನೀರಿನಲ್ಲಿರುವ ಅದರ ಪ್ರತಿಬಿಂಬವು ಇವುಗಳ ಮಧ್ಯೆ ಇರುವ ಪ್ರಭೆಯು ನಮಗೆ ಕಾಣಿಸದಿದ್ದರೂ ಇಲ್ಲವೆಂದು ಹೇಳಲು ಬರುವುದಿಲ್ಲ ।೫೪೩॥

ಅಥವಾ ಮೂಗು ಮತ್ತು ಹೂವು ಇವುಗಳ ಮಧ್ಯೆ ಇರುವ ಹೂವಿನ ಸುಗಂಧವು ನಮಗೆ ಕಾಣಿಸದಿದ್ದರೂ ಇಲ್ಲವೆಂದು ಹೇಳಲು ಬರುವುದಿಲ್ಲ ।೫೪೪॥

ಅದರಂತೆ ದೃಷ್ಟಾ ಮತ್ತು ದೃಶ್ಯ ಇವು ನಷ್ಟವಾದ ಮೇಲೆ ಇಂತಹ ವಸ್ತು ಇದೆ ಎಂದು ಯಾರು ಹೇಳಬೇಕು? ಆದರೆ ಅದನ್ನೇ ಅನುಭವದಿಂದ ನೋಡುವುದು ಅದೇ ಆತನ ರೂಪವಾಗಿದೆ ।೫೪೫॥

ಯಾವ ಪ್ರಕಾಶ ಕೊಡುವ ವಸ್ತುವಿನ ಹೊರತಾಗಿ ಪ್ರಕಾಶನು, ಮತ್ತು ಯಾವ ನಿಯಮನ ಪದಾರ್ಥ ಹೊರತಾಗಿ ನಿಯಮನಗೊಳಿಸುವನು. ಆ ಈಶ್ವರನು ತನ್ನ ಸ್ವರೂಪದಲ್ಲಿಯೇ ತಾನಿರುವನು ।೫೪೬॥

ಯಾವ ನಾದಬ್ರಹ್ಮಕ್ಕೆ ಕೇಳುವ ಶಕ್ತಿ ಕೊಡುವ ನಾದವು, ಸ್ವಾದಕ್ಕೆ ಸ್ವಾದಶಕ್ತಿ ಕೊಡುವ ಮೂಲ ಸ್ವಾದವು, ಮತ್ತು ಯಾವ ಬ್ರಹ್ಮಾನಂದಕ್ಕೆ ಆನಂದದ ಶಕ್ತಿ ಕೊಡುವ ಆನಂದವು ।೫೪೭॥

ಯಾವ ಪೂರ್ಣತ್ವದ ತುದಿಯಾಗಿರುವನು ಮತ್ತು ಎಲ್ಲ ಪುರುಷರಲ್ಲಿ ಶ್ರೇಷ್ಠ ಪುರುಷನು ಮತ್ತು ವಿಶ್ರಾಂತಿಗೆ ವಿಶ್ರಾಂತಿ ಸ್ಥಾನನು ।೫೪೮॥

ಯಾವ ಸುಖಕ್ಕೆ ಸುಖವೇ ದೊರಕಿತು, ತೇಜಕ್ಕೆ ತೇಜವು ಪ್ರಾಪ್ತವಾಯಿತು ಮತ್ತು ಶೂನ್ಯವು ಮಹಾ ಶೂನ್ಯದಲ್ಲಿ ಲಯಗೊಂಡಿತು ।೫೪೯॥

ಯಾವುದು ಉದಯ (ವಿಸ್ತಾರ) ವಾದಾಗಲೂ ಅದರಿಂದ ದೂರವಿರುವುದು ಮತ್ತು ಲಯಗೊಂಡಾಗಲು ಅದರಾಚೆಗೆ ಇರುವುದು. ಹೆಚ್ಚಿಗೇನು ಹೇಳಬೇಕು? ಇದು ಎಲ್ಲರಿಂದಲೂ ದೂರ ಇರುವುದು ।೫೫೦॥

ಯಾವ ಪ್ರಕಾರವಾಗಿ ಕಪ್ಪೆಚಿಪ್ಪು ತಾನು ಬೆಳ್ಳಿಯಾಗಿರದೇ, ಅಜ್ಞಾನಿಗಳವರಿಗೆ ಬೆಳ್ಳಿಯ ಭಾಸ ಮಾಡುವುದು ।೫೫೧॥

ಅಥವಾ ಅಲಂಕಾರ ರೂಪಗಳಿಂದ ಬಂಗಾರವು ಇಲ್ಲದಂತೆ ಆಗದೇ ಇಲ್ಲದಂತೆ ಭಾಸವಾಗುವುದು. ಅದರಂತೆ ತಾನು ವಿಶ್ವನಾಗದೇ ವಿಶ್ವವನ್ನು ಧಾರಣೆ ಮಾಡುವನು ।೫೫೨॥

ಇದು ಇರಲಿ, ನೀರು ಮತ್ತು ತೆರೆಗಳಲ್ಲಿ ಏನಾದರೂ ಭೇದ ಇದೆಯೇ? ಅದರಂತೆ ಜಗತ್ತು ಮತ್ತು ಪರಮಾತ್ಮ ಸ್ವರೂಪವು ಬೇರೆ ಇಲ್ಲ ।೫೫೩॥

ಹೇ ವೀರೇಶನೇ, ಜಗತ್ತಿನ ಸಂಕೋಚಕ್ಕೂ ಮತ್ತು ವಿಸ್ತಾರಕ್ಕೂ ಯಾವನು ಕಾರಣನಾಗಿರುವನು, ಯಾವ ಪ್ರಕಾರವಾಗಿ ನೀರಿನಲ್ಲಿರುವ ಪ್ರತಿಬಿಂಬಕ್ಕೆ ಚಂದ್ರನೇ ಪೂರ್ಣ ಕಾರಣನಾಗಿರುವನು ।೫೫೪॥

ಅದರಂತೆ, ಜಗದ ಉತ್ಪತ್ತಿಯಾಗಲು ಆತನಲ್ಲಿ ಯಾವ ವ್ಯತ್ಯಾಸವಾಗುವುದಿಲ್ಲ ಮತ್ತು ಲಯಗೊಂಡಾಗ ಆತನು ಎಲ್ಲಿಯೂ ಹೋಗುವುದಿಲ್ಲ ।೫೫೫॥

ಅದರಂತೆ ಆತನು ಯಾವುದರಲ್ಲಿಯೂ ಇರುವುದಿಲ್ಲ, ಯಾವುದರಿಂದಲು ನಾಶವಾಗುವುದಿಲ್ಲ ಮತ್ತು ಆತನ ತುಲನೆ ಮಾಡಲು ಆತನೇ ಯೋಗ್ಯನಾಗುವನು ।೫೫೬॥

ಶ್ಲೋಕಾರ್ಥ :– ಕ್ಷರ ಭೂತಗಳಿಗೆ ಬೇರೆಯಾಗಿ, ಅಕ್ಷರ ಪ್ರಕೃತಿಗಿಂತ ಉತ್ತಮವಾಗಿರುವುದರಿಂದ ನನ್ನನ್ನು ಲೋಕದಲ್ಲಿಯೂ, ವೇದಗಳಲ್ಲಿಯೂ ಪುರುಷೋತ್ತಮನೆಂದು ಹೇಳುತ್ತಾರೆ ।೧೮॥

ಜೋ ಆಪಣಪೇಂಚಿ ಆಪಣಯಾ । ಪ್ರಕಾಶೀತಸೇ ಧನಂಜಯಾ । ಕಾಯಬಹು ಬೋಲೋ ಜಯಾ । ನಾಹೀ ದುಜೇ ।೫೫೭॥ ತೋ ಗಾ ಮೀ ನಿರುಪಾಧಿಕು । ಕ್ಷರಾಕ್ಷರೋತ್ತಮು ಏಕು । ಮ್ಹಣೌನಿ ಮ್ಹಣೇ ವೇದ ಲೋಕು । ಪುರುಷೋತ್ತಮು ।೫೫೮॥

ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಮ್ ।
ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ।೧೯॥

ಪರೀ ಹೇ ಅಸೋ ಐಸಿಯಾ । ಮಜ ಪುರುಷೋತ್ತಮಾತೇ ಧನಂಜಯಾ । ಜಾಣೇ ಜೋ ಪಾಹಲೇಯಾ । ಜ್ಞಾನಮಿತ್ರೇ ।೫೫೯॥ ಚೇಇಲಿಯಾ ಆಪುಲೇ ಜ್ಞಾನ । ಜೈಸೇ ನಾಹೀಂಚಿ ಹೋಯ ಸ್ವಪ್ನ । ತೈಸೇ ಸ್ಫುರತೇ ತ್ರಿಭುವನ । ವಾವೋ ಜಾಲೇ ।೫೬೦॥ ಕಾಹಾತೀ ಘೇತಲಿಯಾ ಮಾಳಾ । ಫಿಟೇ ಸರ್ಪಾಭಾಸಾಚಾ ಕಾಂಟಾಳಾ । ತೈಸಾ ಮಾಝ್ಯೇನಿ ಬೋಧೇ ಟವಾಳಾ । ನಾಗವೇ ತೋ ।೫೬೧॥ ಲೇಣೇ ಸೋನೇಂಚಿ ಜೋ ಜಾಣೇ । ತೋ ಲೇಣೇಪಣ ತೇ ವಾವೋ ಮ್ಹಣೇ । ತೇವೀ ಮೀ ಜಾಣೋನಿ ಜೇಣೇ । ವಾಳಿಲಾ ಭೇದು।೫೬೨॥ ಮಗ ಮ್ಹಣೇ ಸರ್ವತ್ರ ಸಚ್ಚಿದಾನಂದು । ಮೀಚಿ ಏಕು ಸ್ವತಃಸಿದ್ಧು । ಜೋ ಆಪಣೇನಸೀ ಭೇದು । ನೇಣೋನಿಯಾ ಜಾಣೇ ।೫೬೩॥ ತೇಣೇಂಚಿ ಸರ್ವ ಜಾಣಿತಲೇ । ಹೇಹೀ ಮ್ಹಣಣೇ ಥೇಂಕುಲೇ । ಜೇ ತಯಾ ಸರ್ವ ಉರಲೇ । ದ್ವೈತ ನಾಹೀ ।೫೬೪॥ ಮ್ಹಣೌನಿ ಮಾಝಿಯಾ ಭಜನಾ । ಉಚಿತು ತೋಚಿ ಅರ್ಜುನಾ । ಗಗನ ಜೈಸೇ ಆಲಿಂಗನಾ । ಗಗನಾಚಿಯಾ ।೫೬೫॥ ಕ್ಷೀರಸಾಗರಾ ಪರಗುಣೇ । ಕೀಜೇ ಕ್ಷೀರಸಾಗರಪಣೇ । ಅಮೃತಚಿ ಹೋಊನಿ ಮಿಳಣೇ । ಅಮೃತೀ ಜೇವೀ ।೫೬೬॥ ಸಾಡೇಪಂಧರಾ ಮಿಸಳಾವೇ । ತೈ ಸಾಡೇಪಂಧರೇಂಚಿ ಹೋಆವೇ । ತೇವೀ ಮೀ ಜಾಲಿಯಾ ಸಂಭವೇ । ಭಕ್ತಿ ಮಾಝೀ ।೫೬೭॥ ಹಾ ಗಾ ಸಿಂಧುಸಿ ಆನೀ ಹೋತೀ । ತರೀ ಗಂಗಾ ಕೈಸೇನಿ ಮಿಳತೀ? । ಮ್ಹಣೌನಿ ಮೀ ನ ಹೋತಾ ಭಕ್ತೀ । ಅನ್ವಯೋ ಆಹೇ? ।೫೬೮॥ ಐಸಿಯಾಲಾಗೀ ಸರ್ವ ಪ್ರಕಾರೀ । ಜೈಸಾ ಕಲ್ಲೋಳು ಅನನ್ಯುಸಾಗರೀ । ತೈಸಾ ಮಾತೇ ಅವಧಾರೀ । ಭಜಿನ್ನಲಾ ಜೋ ।೫೬೯॥ ಸೂರ್ಯಾ ಆಣಿ ಪ್ರಭೇ । ಏಕವಂಕೀ ಜೇಣೇ ಲೋಭೇ । ತೋ ಪಾಡು ಮಾನೂ ಲಾಭೇ । ಭಜನಾ ತಯಾ ।೫೭೦॥

ಹೇ ಧನಂಜಯನೇ, ಆತನು ತಾನೇ ತನಗೆ ಪ್ರಕಾಶಿತ ಮಾಡುವನು. (ಸ್ವಯಂ ಪ್ರಕಾಶಕನಿರುವನು) ಹೆಚ್ಚಿಗೇನು ಹೇಳಬೇಕು? ಆತನಲ್ಲಿ ದ್ವೈತಸಂಬಂಧವೇ ಇಲ್ಲ ।೫೫೭॥

ಅದು ನನ್ನ ನಿರುಪಾಧಿಕ ರೂಪವಿದ್ದು, ಕ್ಷರ ಮತ್ತು ಅಕ್ಷರ ಇವುಗಳನ್ನು ಮೀರಿ ನಾನಿರುವೆನು. ಆದ್ದರಿಂದ ನನಗೆ ವೇದವು ಮತ್ತು ಜನರು ''ಪುರುಷೋತ್ತಮ'' ಎಂದು ಹೇಳುವರು ।೫೫೮॥

ಶ್ಲೋಕಾರ್ಥ :- ಮೂಢ ಬುದ್ಧಿಯನ್ನು ಬಿಟ್ಟು, ನನ್ನನ್ನು ಈ ರೀತಿ ಪುರುಷೋತ್ತಮನನ್ನಾಗಿ ತಿಳಿದು ಕೊಂಡವನು, ಎಲ್ಲವನ್ನೂ ತಿಳಿದವನಾಗಿ, ಅರ್ಜುನಾ! ಎಲ್ಲಾ ವಿಧದಿಂದಲೂ ನನ್ನನ್ನು ಸೇವಿಸುವವನಾಗುತ್ತಾನೆ ।೧೯॥

ಆದರೆ ಅದಿರಲಿ, ಧನಂಜಯಾ, ಯಾರಿಗೆ ಜ್ಞಾನರೂಪ ಸೂರ್ಯನ ಪ್ರಕಾಶವಾಗಿರುವುದೋ, ಆ ಪುರುಷನು ಮಾತ್ರ ಈ ನನ್ನ ಪುರುಷೋತ್ತಮನನ್ನು ತಿಳಿಯುವನು ।೫೫೯॥

ತನ್ನ ಜಾಗೃತದ ಜ್ಞಾನವು ಎಚ್ಚರಾದ ಮೇಲೆ ಸ್ವಪ್ನವು ಇಲ್ಲದಂತಾಗುವುದು. ಅದರಂತೆ ಈ ಭಾಸವಾಗುವ ತ್ರಿಭುವನವು ತನ್ನ ಆತ್ಮಸ್ವರೂಪದ ಜ್ಞಾನದ ಯೋಗದಿಂದ ಮಿಥ್ಯವಾಗಿದೆ ।೫೬೦॥

ಅಥವಾ ಮಾಲೆಯು ಕೈಯಲ್ಲಿ ಹಿಡಿದಾಗ ಅದರ ಮೇಲಿನ ಸರ್ಪದ ಭಾಸವು ಇಲ್ಲದಂತಾಗುವುದು. ಅದರಂತೆ ನನ್ನ ಸ್ವರೂಪದ ಜ್ಞಾನದಿಂದ ಜಗತ್ತಿನ ಮಿಥ್ಯಾಭಾಸವು ಇಲ್ಲದಂತಾಗುವುದು ।೫೬೧॥

ಯಾರು ಬಂಗಾರದ ಒಡವೆಗಳನ್ನು ಬಂಗಾರದ ದೃಷ್ಟಿ ಯಿಂದ ನೋಡುವನೋ, ಆತನು ಒಡವೆಗಳನ್ನು ವ್ಯರ್ಥ ವೆಂದು ತಿಳಿಯುವನು. ಅದರಂತೆ ಆತನು ನನ್ನನ್ನು ತಿಳಿದು ಭೇದವನ್ನು ಬಿಟ್ಟನು ।೫೬೨॥

ನಂತರ ಹೇಳುವನು:- ''ನಾನೇ ಒಬ್ಬ ಸ್ವತಃಸಿದ್ಧ ಸಚ್ಚಿ ದಾನಂದ ಸರ್ವತ್ರನಿರುವೆನು'' ಈ ರೀತಿ ಅದ್ವೈತ ದೃಷ್ಟಿ ಯಿಂದ ತನ್ನದು ಸಹ ಭೇದವಿಡದೇ ನನ್ನನ್ನು ತಿಳಿಯುವನು ।೫೬೩॥

ಆತನೇ ಎಲ್ಲವನ್ನೂ ತಿಳಿದವನೆಂದು ಹೇಳುವುದು ಸಹ ಶೋಭಿಸುವುದಿಲ್ಲ. ಕಾರಣ, ಆತನಿಗೆ ಎಲ್ಲ ಶಬ್ದಗಳ ವಿಷಯ ವಾದ ದ್ವೈತವು ಸಹ ಉಳಿದಿರುವುದಿಲ್ಲ ।೫೬೪॥

ಆದ್ದರಿಂದ ಅರ್ಜುನಾ, ಆತನೇ ನನ್ನ ಭಜನೆ ಮಾಡಲು ಅಧಿಕಾರಿಯಾಗಿರುವನು. ಯಾವ ಪ್ರಕಾರವಾಗಿ ಆಕಾಶಕ್ಕೆ ಆಲಿಂಗಿಸಲು ಆಕಾಶವೇ ಯೊಗ್ಯವಾಗಿರುವುದು ।೫೬೫॥

ಕ್ಷೀರಸಾಗರಕ್ಕೆ ಕ್ಷೀರಸಾಗರವೇ ಉಪಚರಿಸಲು ಯೋಗ್ಯವಾಗಿರುವುದು. ಅಥವಾ ಅಮೃತರೂಪವಾಗಿಯೇ ಅಮೃತಕ್ಕೆ ಕೊಡಬೇಕಾಗುವುದು ।೫೬೬॥

ಉತ್ತಮ ಬಂಗಾರದಲ್ಲಿ ಉತ್ತಮ ಬಂಗಾರವನ್ನು ಕೂಡಿಸಿದರೆ ಅದು ಒಂದೇ ಬೆಲೆ ಬಾಳುತ್ತದೆ. ಅದರಂತೆ ಮದ್ರೂಪರಾದಾಗಲೇ ನನ್ನ ಭಕ್ತಿ ಮಾಡಲು ಆ ಪುರುಷನು ಯೋಗ್ಯನಾಗುವನು ।೫೬೭॥

ಹೀಗಿದೆ ನೋಡು, ಸಮುದ್ರಕ್ಕಿಂತ ನದಿಯು ಭಿನ್ನವಾಗಿ ಇದ್ದರೆ ಅದು ಸಮುದ್ರಕ್ಕೆ ಏಕೆ ಕೂಡುತ್ತಿತ್ತು? ಆದ್ದರಿಂದ ಮದ್ರೂಪನಾಗದ ಹೊರತು ನನ್ನ ಭಕ್ತಿ ಮಾಡಲು ಶಕ್ಯವಿ ದೆಯೇ? ।೫೬೮॥

ಯಾವ ಪ್ರಕಾರವಾಗಿ ಸಮುದ್ರದ ಎಲ್ಲ ತೆರೆಗಳು ಸಮುದ್ರದಿಂದ ಹೇಗೆ ಭಿನ್ನವಿಲ್ಲವೋ, ಅದರಂತೆ ಯಾರು ನನ್ನ ಭಜನೆಯನ್ನು ಮಾಡುವರೋ ಅವರಲ್ಲಿ, ನನ್ನಲ್ಲಿ ದ್ವೈತವಿರುವುದಿಲ್ಲ ।೫೬೯॥

ಸೂರ್ಯ ಮತ್ತು ಪ್ರಕಾಶವು ಇವರಲ್ಲಿ ಐಕ್ಯವಿರು ವುದು. ಹಾಗೆ ನನ್ನ ಭಜನೆ ಮಾಡಿದಾಗ ನನ್ನಲ್ಲಿ ಮತ್ತು ಭಕ್ತನಲ್ಲಿ ಅಂತರವಿರುವುದಿಲ್ಲ ।೫೭೦॥

ಇತಿ ಗುಹ್ಯತಮಂ ಶಾಸ್ತ್ರಂ ಇದಮುಕ್ತಂ ಮಯಾನಘ ।
ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ॥೨೦॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಪುರುಷೋತ್ತಮಪ್ರಾಪ್ತಿಯೋಗೋ ನಾಮ ಪಂಚದಶೋಽಧ್ಯಾಯಃ

ಏವಂ ಕಥಿಲಯಾದಾರಭ್ಯ । ಹೇ ಜೇ ಸರ್ವ ಶಾಸ್ತ್ರೈ ಕಲಭ್ಯ । ಉಪನಿಷದಾ ಸೌರಭ್ಯ। ಕಮಳದಳಾ ಜೇವೀ ॥೫೭೧॥ ಹೇ ಶಬ್ದಬ್ರಹ್ಮಾ ಚೇ ಮಥಿತೇ । ಶ್ರೀವ್ಯಾಸಪ್ರಜ್ಞೇಚೇನಿ ಹಾತೇ । ಮಥೂನಿ ಕಾಢಿಲೇ ಆಯಿತೇ । ಸಾರ ಆಮ್ಹೀ ॥೫೭೨॥ ಜೇ ಜ್ಞಾನಾಮೃತಾಚೀ ಜಾಹ್ನವೀ । ಜೇ ಆನಂದಚಂದ್ರಿಂಚೀ ಸತರಾವೀ । ವಿಚಾರಕ್ಷೀರಾರ್ಣವೀಂಚೀ ನವೀ । ಲಕ್ಷ್ಮೀ ಜೇ ಹೇ ॥೫೭೩॥ ಮ್ಹಣೌನಿ ಆಪುಲೇನಿ ಪದೇ ವರ್ಣೇ । ಅರ್ಥಾಚೇನಿ ಜೀವೇಪ್ರಾಣೇ । ಮೀವಾಂಚೋನಿ ಹೋ ನೇಣೇ । ಆನ ಕಾಂಹೀ ॥೫೭೪॥ ಕ್ಷರಾಕ್ಷರತ್ವೇ ಸಮೋರ ಜಾಲೇ । ತಯಾಂಚೇ ಪುರುಷತ್ವ ವಾಳಿಲೇ । ಮಗ ಸರ್ವಸ್ವ ಮಜ ದಿಧಲೇ । ಪುರುಷೋತ್ತಮೀ ॥೫೭೫॥ ಮ್ಹಣೌನಿ ಜಗೀ ಗೀತಾ । ಮಿಯಾ ಆತ್ಮೇನಿ ಪತಿವ್ರತಾ । ಜೇ ಹೇ ಪ್ರಸ್ತುತ ತುವಾ ಆತಾ । ಆಕರ್ಣಿಲೀ ॥೫೭೬॥ ಸಾಚಚಿ ಬೋಲಾಚೇ ನವ್ಹೇ ಹೇ ಶಾಸ್ತ್ರ । ಪೈ ಸಂಸಾರು ಜಿಣತೇ ಹೇ ಶಸ್ತ್ರ । ಆತ್ಮಾ ಅವತರವಿತೇ ಮಂತ್ರ । ಅಕ್ಷರೇ ಇಯೇ ॥೫೭೭॥ ಪರೀ ತುಜಪುಢಾ ಸಾಂಗಿತಲೇ । ತೇ ಅರ್ಜುನಾ ಐಸೇ ಜಾಲೇ । ಜೇ ಗೌಪ್ಯಧನ ಕಾಢಿಲೇ । ಮಾಝೋ ಆಜಿ ॥೫೭೮॥ ಮಜ ಚೈತನ್ಯಶಂಭೂಚಾ ಮಾಥಾ । ಜೋ ನಿಕ್ಷೇಪು ಹೋತಾ ಪಾರ್ಥಾ । ತಯಾ ಗೌತಮು ಜಾಲಾಸಿ ಆಸ್ಥಾ । ನಿಧೀ ತೂ ಗಾ ॥೫೭೯॥ ಚೋಖಟಿವಾ ಆಪುಲಿಯಾ । ಪುಡಿಲಾ ಉಗಾಣಾ ಘೇಯಾವಯಾ। ತಯಾ ದರ್ಪಣಾಚೀಚಿ ಪರೀ ಧನಂಜಯಾ । ಕೇಲೀ ಆಮ್ಹಾ ॥೫೮೦॥ ಕಾ ಭರಲೇ ಚಂದ್ರತಾರಾಂಗಣೇ । ನಭ ಸಿಂದೂ ಆಪಣಯಾಮಾಜೀ ಆಣೇ । ತೈಸಾ ಗೀತೇಸೀ ಮೀ ಅಂತಃಕರಣೇ । ಸೂದಲಾ ತುವಾ ॥೫೮೧॥ ಜೇ ತ್ರಿವಿಧಮಳಿಕಟಾ । ತೂ ಸಾಂಡಿಲಾಸಿ ಸುಭಟಾ । ಮ್ಹಣೌನಿ ಗೀತೇಸೀ ಮಜ ವಸೌಟಾ । ಜಾಲಾಸಿ ಗಾ ॥೫೮೨॥ ಪರೀ ಹೇ ಬೋಲೊ ಕಾಯ ಗೀತಾ । ಜೇ ಹೇ ಮಾಝೀ ಉನ್ಮೇಷಲತಾ । ಜಾಣೇ ತೋ ಸಮಸ್ತಾ । ಮೋಹಾ ಮುಕೇ ॥೫೮೩॥ ಸೇವಿಲೀ ಅಮೃತ ಸರಿತಾ । ರೋಗು ದವಡೂನಿ ಪಂಡುಸುತಾ । ಅಮರಪಣ ಉಚಿತಾ ।ದೇಊನಿ ಘಾಲೀ ॥೫೮೪॥ ತೈಸೀ ಗೀತಾ ಜಾಣಿತಲಿಯಾ । ಕಾಯ ವಿಸ್ಮಯೋ ಮೋಹ ಜಾವಯಾ । ಪರೀ ಆತ್ಮಜ್ಞಾನೇ ಆಪಣಪಯಾ । ಮಿಳಿಜೇ ಯೇಥ ॥೫೮೫॥

ಶ್ಲೋಕಾರ್ಥ :- ಭಾರತವೀರಾ! ಅತಿಗೋಪ್ಯವಾ ದ ಈ ಶಾಸ್ತ್ರವನ್ನು ನಿನಗೆ ಹೇಳಿದೆನು. ಇದನ್ನು ತಿಳಿದ ವನೇ ಬುದ್ಧಿವಂತ; ಅವನೇ ಕೃತಾರ್ಥ ।೨೦॥

ಇಲ್ಲಿಗೆ ಉಪನಿಷತ್ತೂ, ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ ಶ್ರೀಕೃಷ್ಣಾರ್ಜುನ ಸಂವಾದವೂ ಆದ ಶ್ರೀ ಮದ್ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗ ವೆಂಬ ಹೆಸರಿನ ಹದಿನೈದನೆಯ ಅಧ್ಯಾಯವು ಮುಗಿದುದು.

ಈ ಪ್ರಕಾರವಾಗಿ ಕಥನ ಮಾಡಿದ ಆರಂಭದಿಂದ, ಎಲ್ಲ ಶಾಸ್ತ್ರಗಳು ಪ್ರಾಪ್ತವಾಗುವಂತಹ ಉಪನಿಷದ್ರೂಪ ಕಮಲದಳಗಳಿಂದ ಗೀತಾರೂಪ ಸುಗಂಧವು ಜಗತ್ತಿನ ತುಂಬ ಹರಡಿದೆ ।೫೭೧॥

ಈ ಗೀತೆಯು ವೇದಗಳ ಮಂಥನ ಮಾಡಿ ಶ್ರೀವ್ಯಾಸ ಮುನಿಗಳ ಜ್ಞಾನರೂಪ ಹಸ್ತದಿಂದ ತೆಗೆದ ಬೆಣ್ಣೆಯಾಗಿದೆ ।೫೭೨॥

ಈ ಗೀತೆಯು ಜ್ಞಾನಾಮೃತದಿಂದ ತುಂಬಿದ ಎರಡನೆಯ ಭಾಗೀರಥಿ ನದಿಯಾಗಿದೆ ಮತ್ತು ಆನಂದ ರೂಪ ಚಂದ್ರನ ಸತರಾವಿ ಕಲೆಯಾಗಿದೆ. ಹಾಗೂ ವಿಚಾರರೂಪ ಕ್ಷೀರಸಾಗರ ಮಂಥನದ ಹೊಸ ಲಕ್ಷ್ಮೀಯಾಗಿದೆ ।೫೭೩॥

ಆದ್ದರಿಂದ ಈ ಗೀತೆಯನ್ನು ತಮ್ಮ ಪದಗಳಿಂದ, ಅಕ್ಷರಗಳಿಂದ, ಅರ್ಥದಿಂದ, ಜೀವ ಪ್ರಾಣಗಳಿಂದ ವರ್ಣಿಸುವವನು ನನ್ನ ಸ್ವರೂಪನಾಗುವನು, ಬೇರೆಯವರನ್ನು ಕೂಡನು ।೫೭೪॥

ಗೀತಾರೂಪ ಲಕ್ಷ್ಮೀಯ ಮುಂದೆ ಕ್ಷರ ಮತ್ತು ಅಕ್ಷರ ಪುರುಷರು ಪ್ರಾಪ್ತವಾದಾಗ ಇವರ ಪುರುಷತ್ವವು ಮನಸ್ಸಿಗೆ ಬಾರದೆ ಆಕೆಯು ತನ್ನ ಸರ್ವಸ್ವವನ್ನು ಪುರುಷೋತ್ತಮನಿಗೆ ಅರ್ಪಿಸಿದಳು ।೫೭೫॥

ಆದ್ದರಿಂದ, ಈಗ ನೀನು ಯಾವ ಗೀತೆಯನ್ನು ಕೇಳಿರುವಿಯೋ, ಆಕೆಯು ನನ್ನನ್ನೇ ವರಿಸಿದ್ದಕ್ಕೆ ಜಗತ್ತಿನಲ್ಲಿ ಆಕೆಯು ಪತಿವ್ರತೆ ಎಂದು ಹೆಸರು ಗಳಿಸಿದಳು ।೫೭೬॥

ನಿಜವಾಗಿಯೂ ಈ ಗೀತೆಯು ಕೇವಲ ಮಾತನಾಡಿ ವರ್ಣನೆ ಮಾಡುವಂತಹ ಶಾಸ್ತ್ರವಿರದೇ ಸಂಸಾರವನ್ನು ಗೆಲ್ಲುವಂತಹ ಒಂದು ಶಸ್ತ್ರವಾಗಿದೆ. ಈ ಅಕ್ಷರಗಳೇ ಆತ್ಮ ಭಾವವನ್ನುಂಟು ಮಾಡುವ ಮಂತ್ರವಾಗಿವೆ. ಆತ್ಮ ಪ್ರಾಪ್ತಿ ಮಾಡಿಕೊಡುವ ಶಕ್ತಿಯಾಗಿದೆ ।೫೭೭॥

ಅರ್ಜುನಾ, ನಿನಗೆ ಹೇಳಿದ ಈ ಗೀತೆಯು ಹೇಗಾಗಿದೆ ಎಂದರೆ, ನನ್ನಲ್ಲಿರುವ ಗುಪ್ತ ನಿಧಿಯನ್ನು ನೀನಿಂದು ಹೊರ ಹಾಕಿದಂತಾಗಿದೆ ।೫೭೮॥

ಚೈತನ್ಯ ಶಂಭುವಾಗಿರುವ ನನ್ನ ಜಡೆಯಿಂದ ಗೀತಾ ರೂಪ ಗಂಗೆಯನ್ನು ಹೊರತೆಗೆಯುವುದರಲ್ಲಿ ಶ್ರದ್ಧಾವಾನ್ ನೀನು ಗೌತಮನಾಗಿರುವೆ. (ಗೌತಮ ಮುನಿಯು ತಪಶ್ಚರ್ಯ ಮಾಡಿ ಶಂಕರನ ಜಡೆಯಿಂದ ಗಂಗೆಯನ್ನು ಹೊರಗೆ ತೆಗೆದಿರುವನು) ।೫೭೯॥

ತನ್ನ ಸೌಂದರ್ಯದ ಅನುಭವ ಪಡೆಯಲು ಎದುರಿಗೆ ಕನ್ನಡಿಯನ್ನು ತೆಗೆದುಕೊಳ್ಳಬೇಕಾಗುವುದು. ಆದರಂತೆ ಧನಂಜಯನೇ, ಆತ್ಮಸ್ವರೂಪವನ್ನು ನೋಡಲು ನೀನು ಈ ಗೀತಾ ರೂಪ ಕನ್ನಡಿಯನ್ನೇ ಮಾಡಿರುವಿ ।೫೮೦॥

ಆಕಾಶದಲ್ಲಿನ ಚಂದ್ರ ನಕ್ಷತ್ರಗಳೆಲ್ಲವೂ ಸಮುದ್ರದಲ್ಲಿ ಪ್ರತಿಬಿಂಬವಾಗುವುವು. ಆದರಂತೆ ಗೀತೇ ಸಹ ನನ್ನನ್ನು ನೀನು ನಿನ್ನ ಅಂತಃಕರಣದಲ್ಲಿ ಪ್ರತಿಬಿಂಬ ಮಾಡಿರುವೆ ।೫೮೧॥

ಅರ್ಜುನಾ, ನಿನ್ನಲ್ಲಿ ತ್ರಿವಿಧ ತಾಪರೂಪ ಹೊಲಸು ನಾಶಗೊಂಡಿದ್ದಕ್ಕೆ ನನ್ನ ವಾಸ ಮಾಡುವ ಸ್ಥಾನವು ನೀನಾಗಿರುವೆ ।೫೮೨॥

ಆದರೆ, ಹೆಚ್ಚಿಗೇನು ಹೇಳಬೇಕು? ಗೀತೆಯು ಇದು ಕೇವಲ ನನ್ನ ಜ್ಞಾನದ ಬಳ್ಳಿಯಾಗಿರುವುದು ಮತ್ತು ಇದನ್ನು ಯಾರು ತಿಳಿಯುವರೋ, ಅವರು ಈ ಸಂಸಾರ ಮೋಹದಿಂದ ಮುಕ್ತರಾಗುವರು ।೫೮೩॥

ಹೇ ಪಂಡುಸುತನೇ, ಯಾವ ಪ್ರಕಾರವಾಗಿ ಅಮೃತ ರೂಪ ನದಿಯ ನೀರು ಕುಡಿದ ಮೇಲೆ ರೋಗವು ಇಲ್ಲದಂತಾಗಿ ಯೋಗ್ಯವಾದ ಅಮರತ್ವವು ಪ್ರಾಪ್ತವಾಗುವುದೋ ।೫೮೪॥

ಆದರಂತೆ ಗೀತೆಯನ್ನು ಪರಿಪೂರ್ಣವಾಗಿ ತಿಳಿದಾಗ ಮೋಹದ ನಾಶವಾಗುವುದರಲ್ಲೇನಾಶ್ಚರ್ಯ! ಆದರೆ ಆತ್ಮಜ್ಞಾನದ ಪ್ರಾಪ್ತಿಯಿಂದ ಆತ್ಮಸ್ವರೂಪದಲ್ಲಿ ಐಕ್ಯವಾಗುವುದು ।೫೮೫॥

ಜಯಾ ಆತ್ಮಜ್ಞಾನಾಚ್ಯಾ ಠಾಯೀ । ಕರ್ಮ ಆಪುಲೇಯಾ ಜೀವಿತಾ ಪಾಹೀ । ಹೋಊನಿಯಾ ಉತರಾಈ । ಲಯಾ ಜಾಯ ।೫೮೬॥ ಹರಪಲೇ ದಾಊನಿ ಜೈಸಾ । ಮಾಗುಸರೇ ವೀರವಿಲಾಸಾ । ಜ್ಞಾನಚಿ ಕಳಸ ವಳಘೇ ತೈಸಾ । ಕರ್ಮ ಪ್ರಾಸಾದಾಚಾ ।೫೮೭॥ ಮ್ಹಣೌನಿ ಜ್ಞಾನಿಯಾ ಪುರುಷಾ । ಕೃತ್ಯ ಕರೂ ಸರಲೇ ದೇಖಾ । ಐಸಾ ಅನಾಥಾಂಚಾ ಸಖಾ । ಬೋಲಿಲಾ ತೋ ।೫೮೮॥ ತೇ ಶ್ರೀಕೃಷ್ಣ ವಚನಾಮೃತ । ಪಾರ್ಥೀ ಭರೋನಿ ಅಸೇ ವೋಸಂಡತ । ಮಗ ವ್ಯಾಸಕೃಪಾ ಪ್ರಾಪ್ತ । ಸಂಜಯಾಸೀ ।೫೮೯॥ ತೋ ಧೃತರಾಷ್ಟ್ರರಾಯಾ । ಸೂತಸೇ ಪಾನಕರಾವಯಾ । ಮ್ಹಣೌನಿ ಜೀವಿತಾ ತಯಾ । ನೋಹೇಚಿ ಭಾರೀ ।೫೯೦॥ ಯೇರ್ಹವೀ ಗೀತಾಶ್ರವಣ ಅವಸರೀ । ಆವಡೋ ಲಾಗತಾ ಅನಧಿಕಾರೀ । ಪರೀ ಶೇಖೀ ತೇಚಿ ಉಜರೀ । ಪಾತಲಾ ಭಲೀ ।೫೯೧॥ ಜೇವ್ಹಾ ದ್ರಾಕ್ಷಿ ಧೂದ ಘಾತಲೇ । ತೇವ್ಹಾ ವಾಯಾ ಗೇಲೇ ಗಮಲೇ । ಪರೀ ಫಳಪಾಕೀ ದುಣಾವಲೇ । ದೇಖಿಜೇ ಜೇವೀ ।೫೯೨॥ ತೈಸೀ ಶ್ರೀಹರೀವಕ್ತ್ರೀಂಚೀ ಅಕ್ಷರೇ । ಸಂಜಯೇ ಸಾಂಗಿತಲೀ ಆದರೇ । ತಿಹೀ ಅಂಧು ತೋಹೀ ಅವಸರೇ । ಸುಖಿಯಾ ಜಾಲಾ ।೫೯೩॥ ತೇಂಚಿ ಮರ್ಹಾಟೇನಿ ವಿನ್ಯಾಸೇ । ಮಿಯಾ ಉನ್ಮೇಷೇ ಠಸೇಠೋಂಬಸೇ । ಜೇ ಜಾಣೇ ನೇಣೇ ತೈಸೇ । ನಿರೋಪಿಲೇ ।೫೯೪॥ ಸೇವಂತೀಯೇ ಅರಿಸಿಕಾಂಹಿ । ಆಂಗ ಪಾಹತಾ ವಿಶೇಷು ನಾಹೀ । ಪರೀ ಸೌರಭ್ಯ ನೇಲೇ ತಿಹೀ । ಭ್ರಮರೀ ಜಾಣಿಜೇ ।೫೯೫॥ ತೈಸೇ ಘಡತೇ ಪ್ರಮೇಯ ಘೇಇಜೇ । ಉಣೇ ತೇ ಮಜ ದೇಇಜೇ । ಜೇ ನೇಣಣೇ ಹೇಂಚಿ ಸಹಜೇ । ರೂಪ ಕೀ ಬಾಳಾ ।೫೯೬॥ ತರೀ ನೇಣತೇ ಜರ್ಹೀ ಹೋಯೇ । ತರ್ಹೀ ದೇಖೋನಿ ಬಾಪ ಕೀ ಮಾಯೇ । ಹರ್ಷ ಕೇಂಹೀ ನ ಸಮಾಯೇ । ಚೋಜ ಕರಿತೀ ।೫೯೭॥ ತೈಸೇ ಸಂತ ಮಾಹೇರ ಮಾಝೇ । ತುಮ್ಹೀ ಮಿನಲಿಯಾ ಮೀ ಲಾಡೈಜೇ । ತೇಂಚಿ ಗ್ರಂಥಾಚೇನಿ ವ್ಯಾಜೇ । ಜಾಣಿಜೋ ಜೇ ।೫೯೮॥ ಆತಾ ವಿಶ್ವಾತ್ಮಕು ಹಾ ಮಾಝಾ । ಸ್ವಾಮೀ ಶ್ರೀನಿವೃತ್ತಿರಾಜಾ । ತೋ ಅವಧಾರು ವಾಕ್‌ಪೂಜಾ । ಜ್ಞಾನದೇವೋ ಮ್ಹಣೇ ।೫೯೯॥

---

ಇತಿ ಶ್ರೀ ಜ್ಞಾನದೇವ ವಿರಚಿತಾಯಾಂ ಭಾವಾರ್ಥದೀಪಿಕಾಯಾಂ ಪಂಚದಶೋಽಧ್ಯಾಯಃ ।೧೫॥

ಶ್ಲೋಕ :೨೦ ಓವಿ :೫೯೯

ಯಾವ ಈ ಆತ್ಮಜ್ಞಾನವು ಪ್ರಾಪ್ತವಾಗುವುದರಿಂದ ಕರ್ಮವೇ ತನ್ನಷ್ಟಕ್ಕೆ ತಾನೇ ನಿಷ್ಕರ್ಮವಾಗುವುದು ಮತ್ತು ಅದು ಜ್ಞಾನದ ಉಪಕಾರಬದ್ಧವಾಗಿ ಲಯವಾಗುವುದು ।೫೮೬॥

ವೀರ ವಿಲಾಸನೇ, ಯಾವ ಪ್ರಕಾರವಾಗಿ ಕಳೆದ ವಸ್ತು ಸಿಕ್ಕ ಮೇಲೆ ಆ ವಸ್ತುವಿನ ಪತ್ತೆ ಹಚ್ಚಬೇಕಾಗುವುದಿಲ್ಲವೋ, ಅದರಂತೆ ಕರ್ಮರೂಪ ಮಂದಿರದ ಕಳಸವು ಜ್ಞಾನವೇ ಆಗಿರುವುದು ।೫೮೭॥

ಆದ್ದರಿಂದ ಜ್ಞಾನವು ಪ್ರಾಪ್ತವಾದ ಪುರುಷನ ಕರ್ಮಗಳು ಮುಗಿಯುವುವು. ಅನಾಥರ ಸಖನಾದ ಶ್ರೀಕೃಷ್ಣ ಪರಮಾತ್ಮನು ಈ ಪ್ರಕಾರವಾಗಿ ಹೇಳಿದನು ।೫೮೮॥

ಈ ರೀತಿಯಲ್ಲಿ ಶ್ರೀಕೃಷ್ಣವನದಲ್ಲಿನ ಅಮೃತರೂಪ ಭಾಷಣವು ಪಾರ್ಥನ ಮನದಲ್ಲಿ ನೆಟ್ಟು, ಮೇಲಕ್ಕೆ ಉಕ್ಕೇರ ಹತ್ತಿತು. ಅದನ್ನೇ ವ್ಯಾಸರ ಕೃಪೆಯಿಂದ ಸಂಜಯನಿಗೆ ಪ್ರಾಪ್ತವಾಯಿತು ।೫೮೯॥

ಈ ಅಮೃತವನ್ನು ಧೃತರಾಷ್ಟ್ರನಿಗೆ ಸಂಜಯನು ಪಾನ ಮಾಡಿಸುತ್ತಿದ್ದನು. ಆದರೆ ಆ ಯೋಗ್ಯತೆ ಈತನಿಗಿದೆ ಎಂದು ಆತನಿಗೆ ಅನಿಸಲಿಲ್ಲ ।೫೯೦॥

ಸಾಮಾನ್ಯವಾಗಿ, ಅನಧಿಕಾರಿ ಧೃತರಾಷ್ಟ್ರನಿಗೆ ಸಹಜವಾಗಿ ಗೀತಾಶ್ರವಣವಾಯಿತು. ಆದ್ದರಿಂದ ಆತನ ಕೊನೆಯ ಗತಿಯು ಒಳ್ಳೆಯದಾಯಿತು ।೫೯೧॥

ದ್ರಾಕ್ಷಿಯ ಬಳ್ಳಿಗೆ ಹಾಲು ಹಾಕಿದಾಗ ವ್ಯರ್ಥವಾಯಿತೆಂದೆನಿಸುವುದು. ಆದರೆ, ಅದರ ಪರಿಪಾಕವಾಗಿ ಉತ್ತಮ ಫಲಪ್ರದವಾದಾಗ ಇಮ್ಮಡಿ ಲಾಭವಾಯಿತೆಂದು ಅನುಭವವುಂಟಾಗುವುದು ।೫೯೨॥

ಅದರಂತೆ ಶ್ರೀಹರಿಯ ಮುಖದಿಂದ ಬಂದ ಅಕ್ಷರಗಳನ್ನು ಸಂಜಯನು ಅತಿ ಆದರದಿಂದ ಧೃತರಾಷ್ಟ್ರನಿಗೆ ಹೇಳಿರುವುದರಿಂದ ಕೆಲವು ಕಾಲದ ನಂತರ ಆತನೂ ಸುಖಿಯಾದನು ।೫೯೩॥

ಇವೇ ಅಕ್ಷರಗಳನ್ನು ನಾನು ಅಬಡಾದುಬಡಾ ಮರಾಠಿ ಭಾಷೆಯಲ್ಲಿ, ನನಗೆ ತಿಳಿದ ರೀತಿಯಲ್ಲಿ ಹೇಳಿರುವೆನು ।೫೯೪॥

ಮುಳ್ಳಿನ ಸೇವಂತಿಗೆಯ ಅಂಗ ನೋಡಿದಾಗ ಅದರಲ್ಲಿ ಅರಸಿಕರಿಗೆ ವಿಶೇಷವೇನೂ ಕಾಣಿಸುವುದಿಲ್ಲ. ಆದರೆ ಅದರಲ್ಲಿನ ವಿಶೇಷವನ್ನು ಸುಗಂಧವನ್ನು ಒಯ್ಯುವ ಭ್ರಮರಗಳು ಮಾತ್ರ ಅರಿಯುವುವು ।೫೯೫॥

ಅದರಂತೆ ನನ್ನ ವಚನಗಳಲ್ಲಿ ಯಾವುದು ಯೋಗ್ಯ ಸಿದ್ಧಾಂತಗಳಿರುವುವೋ, ಅವುಗಳನ್ನೇ ಮಾತ್ರ ಸ್ವೀಕರಿಸಿರಿ ಮತ್ತು ಬೇಡಾದದ್ದು ನನಗೆ ಕೊಡಿರಿ. ಕಾರಣ ಚಿಕ್ಕ ಬಾಲಕನಿಗೆ ಏನೂ ತಿಳಿಯದೇ ಇರುವುದು ಅದೇ ಅದರ ಸ್ವರೂಪವಾಗಿದೆ ।೫೯೬॥

ಆದರೆ, ತಿಳಿಯದ ಬಾಲಕನಾಗಿದ್ದರೂ, ಅದರ ಅಜ್ಞಾನವನ್ನು ಕಂಡು ತಾಯಿ ತಂದೆಯವರಿಗೆ ಅತಿ ಹರ್ಷವಾಗುವುದು ಮತ್ತು ಅವರು ಆತನ ಕೌತುಕ ಮಾಡುವರು ।೫೯೭॥

ಅದರಂತೆ ಸಂತರಾದ ನೀವು ನನ್ನ ತಾಯಿ ತಂದೆಗಳಾಗಿರುವಿರಿ. ನಿಮ್ಮ ಪ್ರಾಪ್ತಿಯಾದಾಗಲೇ ನಾನು ನಿಮ್ಮ ಮುಂದೆ ಕೌತುಕದಿಂದ ನಡಯುವೆ. ಅದೇ ಈ ಗ್ರಂಥವು ಇರುವುದು, ಹೀಗೆ ತಿಳಿಯಿರಿ ।೫೯೮॥

ಈಗ ವಿಶ್ವವ್ಯಾಪಕವಾಗಿರುವ ಯಾವ ನನ್ನ ಗುರುಗಳಾದ ಶ್ರೀನಿವೃತ್ತಿನಾಥರು, ಯಾವ ಈ ನನ್ನ ವಾಕ್‌ರೂಪ ಪೂಜೆಯನ್ನು ಸೇವಿಸಲಿ ಎಂದು ಜ್ಞಾನೇಶ್ವರರು ಹೇಳುವರು ।೫೯೯॥

ಶ್ರೀ ಜ್ಞಾನೇಶ್ವರ ಮಹಾರಾಜರಿಂದ ರಚಿತವಾದ ಭಾವಾರ್ಥ ದೀಪಿಕೆಯ ಹದಿನೈದನೆಯ ಅಧ್ಯಾಯದ ವಿವರಣೆ ಸಮಾಪ್ತವು

# ಸಾರ್ಥ ಶ್ರೀಜ್ಞಾನೇಶ್ವರೀ

## ಅಧ್ಯಾಯ ಸೋಳಾವಾ

ಶ್ರೀ ಗಣೇಶಾಯ ನಮಃ

ಮಾವಳವೀತ ವಿಶ್ವಾಭಾಸು । ನವಲ ಉದಯಲಾ ಚಂಡಾಂಶು । ಅದ್ವಯಾಬ್ಜಿನೀವಿಕಾಶು । ವಂದೂ ಆತಾ ॥೧॥ ಜೋ ಅವಿದ್ಯಾರಾತೀ ರುಸೋನಿಯಾ । ಗಿಳೀ ಜ್ಞಾನಾಜ್ಞಾನಚಾಂದಣಿಯಾ । ಜೋ ಸುದಿನು ಕರೀ ಜ್ಞಾನಿಯಾ । ಸ್ವಬೋಧಾಚಾ ॥೨॥ ಜೇಣೇ ವಿವಳತಿಯೇ ಸವಳೇ । ಲಾಹೋನಿ ಆತ್ಮಜ್ಞಾನಾಚೇ ಡೋಳೇ । ಸಾಂಡಿತೀ ದೇಹಾಹಂತೇಚೀ ಅವಿಸಾಳೇ । ಜೀವಪಕ್ಷೀ ॥೩॥ ಲಿಂಗದೇಹ ಕಮಳಾಚಾ । ಪೋಟೀ ವೇಂಚು ತಯಾ ಚಿದ್‌ಭ್ರಮರಾಚಾ । ಬಂದಿಮೋಕ್ಷು ಜಯಾಚಾ । ಉದೈಲಾ ಹೋಯ ॥೪॥ ಶಬ್ದಾಚಿಯಾ ಆಸಕಡೀ । ಭೇದನದೀಚ್ಯಾ ದೋಹೀ ಥಡೀ । ಆರಡಾತೇ ವಿರಹವೇಡೀ । ಬುದ್ಧಿಬೋಧು ॥೫॥ ತಯಾ ಚಕ್ರವಾಕಾಂಚೇ ಮಿಥುನ । ಸಾಮರಸ್ಯಾಚೇ ಸಮಾಧಾನ । ಭೋಗವೀ ಜೋ ಚಿದ್‌ಗಗನ । ಭುವನದಿವಾ ॥೬॥ ಜೇಣೇ ಪಾಹಾಲಿಯೇ ಪಾಹಾಟೇ । ಭೇದಾಚೀ ಚೋರವೇಳ ಫಿಟೇ । ರಿಘತೀ ಆತ್ಮಾನುಭವವಾಟೇ । ಪಾಂಥಿಕ ಯೋಗೀ ॥೭॥ ಜಯಾಚೇನಿ ವಿವೇಕಕಿರಣಸಂಗೇ । ಉನ್ಮೇಖಸೂರ್ಯಕಾಂತು ಫುಣಗೇ । ದೀಪಲೇ ಜಾಳಿತೀ ದಾಂಗೇ । ಸಂಸಾರಾಚೇ ॥೮॥ ಜಯಾಚಾ ರಶ್ಮಿಪುಂಜು ನಿಬರು । ಹೋತಾ ಸ್ವರೂಪ ಉಖರೀ ಸ್ಥಿರು । ಯೇ ಮಹಾಸಿದ್ಧೀಚಾ ಪೂರು । ಮೃಗಜಳೇ ತೇ ॥೯॥ ಜೋ ಪ್ರತ್ಯಗ್ಬೋಧಾಚಿಯಾ ಮಾಥಯಾ । ಸೋಹಂತೇಚಾ ಮಧ್ಯಾನ್ಹೀ ಆಲಿಯಾ । ಲಪೇ ಆತ್ಮಭ್ರಾಂತಿಛಾಯಾ । ಆಪಣಪಾ ತಳೀ ॥೧೦॥ ತೇ ವೇಳೀ ವಿಶ್ವಸ್ವಪ್ನಾಸಹಿತೇ । ಕೋಣ ಅನ್ಯಥಾಮತೀ ನಿದ್ರೇತೇ । ಸಾಂಭಾಳೀ ನುರೇಚಿ ಜೇಥೇ । ಮಾಯಾರಾತೀ ॥೧೧॥ ಮ್ಹಣೌನಿ ಅದ್ವಯಬೋಧಪಾಟಣೇ । ತೇಥ ಮಹಾನಂದಾಚೇ ದಾಟಣೇ । ಮಗ ಸುಖಾನುಭೂತೀಚೇ ಘೇಣೇ ದೇಣೇ । ಮಂದಾವೋ ಲಾಗತೀ ॥೧೨॥ ಕಿಂಬಹುನಾ ಐಸೈಸೇ । ಮುಕ್ತಕೈವಲ್ಯ ಸುದಿವಸೇ । ಸದಾ ಲಾಹಿಜೇ ಕಾ ಪ್ರಕಾಶೇ । ಜಯಾಚೇನಿ ॥೧೩॥

# ಸಾರ್ಥ ಶ್ರೀಜ್ಞಾನೇಶ್ವರೀ

## ಹದಿನಾರನೆಯ ಅಧ್ಯಾಯ

ವಿಶ್ವದ ಭಾಸವನ್ನು ಇಲ್ಲದಂತೆ ಮಾಡುವ ಮತ್ತು ಅದ್ವೈತರೂಪ ಕಮಲವನ್ನು ಅರಳಿಸುವ, ಹೀಗೆ ಚಮತ್ಕಾರಕ ಸೂರ್ಯೋದಯವಾಗಿರುವುದು. ಆತನಿಗೆ ನನ್ನ ನಮಸ್ಕಾರವು ।೧।।

ಯಾವ ಸೂರ್ಯನು ಉದಯನಾಗಿ ಅಜ್ಞಾನವೆಂಬ ಕತ್ತಲೆಯನ್ನು ನಾಶಮಾಡಿ ಹಾಗೂ ಜ್ಞಾನಾಜ್ಞಾನವೆಂಬ ಬೆಳದಿಂಗಳನ್ನು ಇಲ್ಲದಂತೆ ಮಾಡಿ ಜ್ಞಾನಿಗಳಿಗೆ ಆತ್ಮಬೋಧೆಯ ಸುದಿನವನ್ನು ಮಾಡುವನು ।೨।।

ಈ ಸೂರ್ಯನು ಉದಯಿಸಿರುವುದರಿಂದ ಆತ್ಮಜ್ಞಾನದ ಪ್ರಕಾಶವಾಗಿ ಜೀವರೂಪ ಪಕ್ಷಿಯು ದೇಹಾಭಿಮಾನ ರೂಪದ ಮನೆಯನ್ನು ಬಿಟ್ಟು ಹೋಗುವುದು ।೩।।

ವಾಸನಾತ್ಮಕ ಸೂಕ್ಷ್ಮದೇಹವೆಂಬ ಕಮಲದಲ್ಲಿ ಜೀವ ಚೈತನ್ಯವೆಂಬ ಭ್ರಮರವು ಸಿಕ್ಕಿಕೊಂಡಿರುವುದು. ಅದು ಈ ಸೂರ್ಯನ ಉದಯದಿಂದ ಹೊರಬೀಳುವುದು ।೪।।

ಅನೇಕ ಶಾಸ್ತ್ರಗಳ ಶಬ್ದರೂಪ ಅಡಚಣೆಯಲ್ಲಿ ಸಿಕ್ಕಿಕೊಂಡು ಅಜ್ಞಾನವೆಂಬ ಸಾಯಂಕಾಲವಾದದ್ದಕ್ಕೆ ಬುದ್ಧಿ ಮತ್ತು ಜ್ಞಾನವೆಂಬ ಚಕ್ರವಾಕ ಪಕ್ಷಿಗಳ ಅಗಲುವಿಕೆಯಾಗಿ ಜೀವೇಶ್ವರ ಭೇದವೆಂಬ ನದಿಯ ಎರಡೂ ದಂಡೆಯಲ್ಲಿ ವಿರಹ ದುಃಖದಿಂದ ಒದರುವುವು ।೫।।

ಈ ಬುದ್ಧಿ ಬೋಧವೆಂಬ ಚಕ್ರವಾಕ ಪಕ್ಷಿಗಳ ಜೋಡಿಯು ಬ್ರಹ್ಮವೆಂಬ ಆಕಾಶದಲ್ಲಿ ಈ ಸೂರ್ಯೋದಯದ ಪ್ರಕಾಶದಿಂದ ಒಂದುಗೂಡಿ ಸಮಾಧಾನವಾಗುವುವು ।೬।।

ಯಾವ ಶ್ರೀಗುರುವೆಂಬ ಸೂರ್ಯನ ಉದಯವಾಗಲು ಭೇದಗಳೆಂಬ ಕಳ್ಳರ ಭಯ ಇಲ್ಲದಂತಾಗಿ ಯೋಗಿಗಳು ಇದೇ ಹಾದಿಯಲ್ಲಿ ಆತ್ಮಾನುಭವವೆಂಬ ದಾರಿಯಿಂದ ನಡೆಯಲಾರಂಭಿಸುವರು ।೭।।

ಈ ಸೂರ್ಯನ ವಿವೇಕವೆಂಬ ಕಿರಣಗಳಿಂದ ಸೂರ್ಯಕಾಂತವು ಪ್ರದೀಪ್ತಗೊಂಡು ಸಂಸಾರವೆಂಬ ವನವನ್ನು ಸುಟ್ಟುಹಾಕುವುದು ।೮।।

ಈ ಸೂರ್ಯನ ಪ್ರಖರವಾದ ಕಿರಣಗಳಿಂದ ಬಯಲು ಭೂಮಿಯಲ್ಲಿ ಮೃಗಜಲದಂತೆ ಮಹಾಸಿದ್ಧಿಗಳ ಪೂರ ಬಂದಂತೆ ಕಾಣಿಸುವುದು ।೯।।

ಯಾವ ಆತ್ಮಬೋಧೆಯ ತಲೆಯ ಮೇಲೆ ಸೋಹಂ ವೆಂಬ ಮಧ್ಯಾಹ್ನದ ವೇಳೆಯಲ್ಲಿ "ನಾನು ದೇಹಿ"ವೆಂಬ ಈ ಭ್ರಾಂತಿಯ ನೆರಳು ಕಾಲುಗಳ ಕೆಳಗೆ ಇಲ್ಲದಾಗುವುದು ।೧೦।।

ಆ ವೇಳೆಯಲ್ಲಿ ಮಾಯೆ ಎಂಬ ರಾತ್ರಿಯು ಇಲ್ಲದಂತಾಗಿರಲು ವಿಶ್ವವೆಂಬ ಸ್ವಪ್ನ ಸಮೇತವಾಗಿ ವಿಪರೀತ ಜ್ಞಾನವೆಂಬ ನಿದ್ರೆಯ ನೆನಪು ಸಹ ಎಲ್ಲಿಂದ ಉಳಿಯಬೇಕು? ।೧೧।।

ಆದ್ದರಿಂದ ಅದ್ವಯ ಬೋಧವೆಂಬ ನಗರದಲ್ಲಿ ಮಹಾನಂದದ ದಟ್ಟಣೆಯಾಗಿ ಆನಂದಾನುಭವದ ಕೊಡುಕೊಳ್ಳುವಿಕೆಯು ಮಂದವಾಗುವುದು ।೧೨।।

ಒಟ್ಟಿನಲ್ಲಿ ಈ ಪ್ರಕಾರವಾಗಿ ಮೋಕ್ಷಕೈವಲ್ಯ ಸುದಿನವು ಯಾವಾಗಲೂ ಯಾವ ಸೂರ್ಯನ ತೇಜದಿಂದ ಪ್ರಕಾಶವಾಗುವುದು ।೧೩।।

ಜೋ ನಿಜಧಾಮವ್ಯೋಮೀಂಚಾ ರಾವೋ । ಉದೈಲಾಚಿ ಉದೈಜತ ಖೇವೋ । ಫೇಡೀ ಪೂರ್ವಾದಿ ದಿಶಾಂಸಿ ಠಾವೋ । ಉದೋಅಸ್ತೂಚಾ ॥೧೪॥ ನ ದಿಸಣೇ ದಿಸಣೇನಸೀ ಮಾವಳವೀ । ದೋಹೀ ಝಾಂಕಿಲೇ ತೇ ಸೈಂಘ ಪಾಲವೀ । ಕಾಯ ಬಹು ಬೋಲೋ ತೇ ಆಘವೀ । ಉಖಾಚಿ ಆನೀ ॥೧೫॥ ತೋ ಅಹೋರಾತ್ರಾಂಚಾ ಪೈಲಕಡು । ಕೋಣೇ ದೇಖಾವಾ ಜ್ಞಾನಮಾರ್ತಂಡು । ಜೋ ಪ್ರಕಾಶ್ಯೇವೀಣ ಸುರವಾಡು । ಪ್ರಕಾಶಾಚಾ ॥೧೬॥ ತಯಾ ಚಿತ್ಸೂರ್ಯಾ ಶ್ರೀನಿವೃತ್ತೀ । ಆತಾ ನಮೋ ಮ್ಹಣೋ ಪುಢತಪುಢತೀ । ಜೇ ಬಾಧಕಾ ಯೇಇಜತಸೇ ಸ್ತುತೀ । ಬೋಲಾಚಿಯಾ ॥೧೭॥ ದೇವಾಚೇ ಮಹಿಮಾನ ಪಾಹೋನಿಯಾ । ಸ್ತುತೀ ತರೀ ಯೇಇಜೇ ಚಾಂಗಾವಯಾ । ಜರೀ ಸ್ತವ್ಯಬುದ್ಧೀಸೀ ಲಯಾ । ಜಾಇಜೇ ಕಾ ॥೧೮॥ ಜೋ ಸರ್ವನೇಣಿವಾ ಜಾಣಿಜೇ । ಮೌನಾಚಿಯಾ ಮಿಠೀಯಾ ವಾನಿಜೇ । ಕಾಂಹೀಂಚ ನ ಹೋನಿ ಆಣಿಜೇ । ಆಪಣಪಯಾ ಜೋ ॥೧೯॥ ತಯಾ ತುರ್ಯಿಯಾ ಉದ್ದೇಶಾಸಾಠೀ । ಪಶ್ಯಂತೀ ಮಧ್ಯಮಾ ಪೋಟೀ । ಸೂನಿ ಪರೇಂಸೀಹೀ ಪಾಠೀ । ವೈಖರೀ ವಿರೇ ॥೨೦॥ ತಯಾ ತೂತೇ ಮೀ ಸೇವಕಪಣೇ । ಲೇವೀ ಬೋಲಕೇಯಾ ಸ್ತೋತ್ರಾಚೇ ಲೇಣೇ । ಹೇ ಉಪಸಾಹಾವೇಹೀ ಮ್ಹಣತಾ ಉಣೇ । ಅದ್ವಯಾನಂದಾ ॥೨೧॥ ಪರೀ ರಂಕೇ ಅಮೃತಾಚಾ ಸಾಗರು । ದೇಖಿಲಿಯಾ ಪಡೇ ಉಚಿತಾಚಾ ವಿಸರು । ಮಗ ಕರೂ ಧಾಂವೇ ಪಾಹುಣೇರು । ಶಾಕಾಂಚಾ ತಯಾ ॥೨೨॥ ತೇಥ ಶಾಕುಹೀ ಕೀರ ಬಹುತ ಮ್ಹಣಾವಾ । ತಯಾಚಾ ಹರ್ಷವೇಗುಚಿ ತೋ ಘ್ಯಾವಾ । ಉಜಳೋನಿ ದಿವ್ಯತೇಜಾ ಹಾತಿವಾ । ತೇ ಭಕ್ತೀಚೀ ಪಾಹಾವೀ ॥೨೩॥ ಬಾಳಾ ಉಚಿತ ಜಾಣಣೇ ಹೋಯೇ । ತರೀ ಬಾಳಪಣಚಿ ಕೇ ಆಹೇ? । ಪರೀ ಸಾಚಚಿ ಯೇರೀ ಮಾಯೇ । ಮ್ಹಣೌನಿ ತೋಷೇ ॥೨೪॥ ಹಾ ಗಾ ಗಾವರಸೇ ಭರಲೇ । ಪಾಣೀ ಪಾಠೀ ಪಾಯ ದೇತ ಆಲೇ । ತೇ ಗಂಗಾ ಕಾಯ ಮ್ಹಣಿತಲೇ । ಪರತೇ ಸರ? ॥೨೫॥ ಜೇ ಭೃಗೂಚಾ ಕೈಸಾ ಅಪಕಾರು । ಕೀ ತೋ ಮಾನೂನಿ ಪ್ರಿಯೋಪಚಾರು । ತೋಷೇಚಿನಾ ಶಾರ್ಙ್ಗಧರು । ಗುರುತ್ವಾಸೀ? ॥೨೬॥ ಕೀ ಆಂಧಾರೇ ಖತೇಲೇ ಅಂಬರ । ಝಾಲೇಯಾ ದಿವಸನಾಥಾ ಸಮೋರ । ತೇಣೇ ತಯಾತೇ ಪರ್ಹಾ ಸರ । ಮ್ಹಣಿತಲೇ ಕಾಈ? ॥೨೭॥

ಈ ಸೂರ್ಯನು ಆತ್ಮಸ್ವರೂಪ ಆಕಾಶದ ರಾಜನಾಗಿದ್ದು, ಯಾವಾಗಲೂ ಬೋಧೆಯ ಉದಯವನ್ನು ಮಾಡುವನು. ಈತನು ಪೂರ್ವಾದಿ ದಿಕ್ಕು ಸಮೇತವಾಗಿ ಉದಯ ಅಸ್ತಗಳ ಅಸ್ತಿತ್ವವನ್ನು ಇಲ್ಲದಂತೆ ಮಾಡುವನು ।।೧೪।।

ಜ್ಞಾನಸಮೇತವಾಗಿ ಅಜ್ಞಾನವನ್ನು ಇಲ್ಲದಂತೆ ಮಾಡಿ ಕೊನೆಗೆ ಆತ್ಮಜ್ಞಾನದ ಬೆಳಕನ್ನು ಕೊಡುವನು. ಹೆಚ್ಚಿಗೇನು ಹೇಳಬೇಕು? ಈ ಉದಯವು ಅಲೌಕಿಕವಾಗಿರುವುದು ।।೧೫।।

ಈ ಸೂರ್ಯನ ತೇಜದಿಂದ ಹಗಲು ರಾತ್ರಿಗಳ ಭಾಸವಾಗುವುದಿಲ್ಲ. ಬೇರೆ ಯಾವ ಪ್ರಕಾಶದ ಹೊರತಾಗಿ ಸ್ವಯಂ ಪ್ರಕಾಶಿತವಾಗಿರುವುದು ।।೧೬।।

ಹೀಗಿರುವ ಚೈತನ್ಯರೂಪವಾದ ಶ್ರೀನಿವೃತ್ತಿನಾಥ ಮಹಾರಾಜರಿಗೆ ಮೇಲಿಂದ ಮೇಲೆ ನನ್ನ ನಮಸ್ಕಾರವಿರಲಿ. ಇವರನ್ನು ವಾಣಿಯಿಂದ ಸ್ತುತಿಸುವುದು ಶೋಭಿಸುವುದಿಲ್ಲ ।।೧೭।।

ಯಾವ ವೇಳೆಯಲ್ಲಿ ಸ್ತುತಿ ಮಾಡುವವ, ಸ್ತೋತ್ರ ಮತ್ತು ಸ್ತುತ್ಯ ಈ ತ್ರಿಪುಟಿಗಳು ಇಲ್ಲದಂತಾಗಲು ಆಗ ಮಾತ್ರ ದೇವರ ಯೋಗ್ಯತೆಯ ದೃಷ್ಟಿಯಿಂದ ನಿಜವಾದ ಸ್ತುತಿಯಾಗುವುದು ।।೧೮।।

ಎಲ್ಲ ವಸ್ತುಗಳ ಜ್ಞಾನವಿಲ್ಲದಂತಾಗುವುದೇ ಗುರುಗಳನ್ನು ತಿಳಿಯುವುದಾಗಿದೆ ಮತ್ತು ಮೌನದಿಂದ ಏನೂ ವರ್ಣಿಸದಿರುವುದೇ ಅವರ ವರ್ಣನೆಯಾಗಿರುವುದು ಮತ್ತು ತನ್ನ ಮರುವು ಆದಾಗಾಲೇ ಅವರ ಪ್ರಾಪ್ತಿಯಾಗುವುದು ।।೧೯।।

ನಿನ್ನ ಸ್ವರೂಪವನ್ನು ಸ್ತುತಿಸಲೆತ್ನಿಸುವ ವೈಖರಿ ವಾಣಿಯು ಪಶ್ಯಂತಿ ಮತ್ತು ಮಧ್ಯಮಾ ವಾಣಿಗಳ ಹೊಟ್ಟೆಯಲ್ಲಿ ಸೇರಿ ಕೊನೆಗೆ ಪರಾವಾಣಿಯೊಂದಿಗೆ ಲಯಹೊಂದುವುದು ।।೨೦।।

ಹೇ ಅದ್ವಯಾನಂದರೂಪ ಶ್ರೀಗುರುವೇ, ನಿಮಗೆ ನಾನು ಸೇವಕನಾಗಿ ಸ್ತುತಿರೂಪ ಅಲಂಕಾರವನ್ನು ಹಾಕುವೆನು. ಇದು ನಿಮ್ಮ ಯೋಗ್ಯತೆಗೆ ಸರಿ ಅನಿಸುವುದಿಲ್ಲ. ಆದರೂ ತಾವು ಅದನ್ನು ಸ್ವೀಕರಿಸಿರಿ ।।೨೧।।

ಒಬ್ಬ ದರಿದ್ರನು ಅಮೃತಸಿಂಧು ಕಂಡು ಅದನ್ನು ಅದರ ಯೋಗ್ಯತೆಯಂತೆ ಉಪಚರಿಸುವ ಎಚ್ಚರವಿಲ್ಲದೇ ಅದಕ್ಕೆ ರೊಟ್ಟಿ ಪಲ್ಲೆಯ ಭೋಜನ ಉಪಚಾರ ಮಾಡುವನು ।।೨೨।।

ಇಲ್ಲಿ ತಪ್ಪಲಪಲ್ಲೆಯೇ ಪಕ್ವಾನ್ನವೆಂದು ತಿಳಿದು ಉಪಚರಿಸುವವನ ಪೂರ್ಣ ಇಚ್ಛೆಯನ್ನು ವಿಶೇಷವಾಗಿ ಗಮನಿಸಬೇಕಾಗುವುದು. ಸೂರ್ಯನಿಗೆ ಕಾಕಡಾರತಿಯಿಂದ ದಿವ್ಯ ತೇಜಕ್ಕೆ ಬೆಳಗಿದಾಗ ಅದನ್ನು ಗೌಣವಾಗಿ ತಿಳಿಯದೇ ಆತನ ಭಕ್ತಿಗೆ ವಿಶೇಷವಾಗಿ ಗಮನಿಸಬೇಕಾಗುವುದು ।।೨೩।।

ಚಿಕ್ಕ ಬಾಲಕನಿಗೆ ಯೋಗ್ಯ, ಅಯೋಗ್ಯಗಳು ತಿಳಿದಿದ್ದರೆ ಬಾಲ್ಯಾವಸ್ಥೆ ಏಕೆ? ಆದ್ದರಿಂದ ಆತನ ಯಾವುದೇ ಕಾರ್ಯಗಳಿಂದ ಮಾತೋಶ್ರೀಯು ಕೌತುಕದಿಂದ ಒಪ್ಪಿಕೊಂಡು ಸಂತೋಷಪಡುವಳು ।।೨೪।।

ಇಲ್ಲಿ ನೋಡಿರಿ, ಕಾಲುವೆಯ ನೀರು ಹರಿದು ಗಂಗಾನದಿಯ ನೀರಿನ ಮೇಲೆ ಕಾಲು ಹಾಕಿ ಒಳಗೆ ಹೊಕ್ಕಿಕೊಂಡಾಗ ಆ ಗಂಗಾನದಿಯು ಅದಕ್ಕೆ ಒಳಗೆ ಬರಬೇಡ, ಹೋಗು ಹೊರಗೆ ಎನ್ನುವುದೇ? ।।೨೫।।

ಭೃಗುಋಷಿಯು ಶ್ರೀನಾರಾಯಣನಿಗೆ ಎದೆಗೆ ಒದ್ದದ್ದು ಎಂತಹ ಅನ್ಯಾಯ? ಆದರೆ ಶ್ರೀನಾರಾಯಣನು ಆ ಅಪಕಾರದ ಪ್ರತಿಯಾಗಿ ಅದನ್ನೇ ಅಲಂಕಾರವೆಂದು ತಿಳಿದು ತನ್ನ ಹೃದಯದ ಮೇಲೆ ಗುರುಪ್ರಸಾದವೆಂದು ಶ್ರೀವತ್ಸಲಾಂಛನ ಚಿನ್ಹವನ್ನು ಧರಿಸಿದನು ।।೨೬।।

ಅಥವಾ ಕತ್ತಲೆಯಿಂದ ತುಂಬಿದ ಜಗತ್ತು ಸೂರ್ಯೋದಯವಾದಾಗಲೇ ಬೆಳಕಿನಿಂದ ತುಂಬುವುದು. ಆಗ ಸೂರ್ಯನು ಕತ್ತಲಿಗೆ ಹಿಂದಕ್ಕೆ ಸರಿ ಎಂದು ಹೇಳುವನೇ? ।।೨೭।।

ತೇವಿ ಭೇದಬುದ್ಧೀಚಿಯೇ ತುಳೇ । ಘಾಲೂನಿ ಸೂರ್ಯಶ್ಲೇಷಾಚೇ ಕಾಂಟಾಳೇ । ತುಕಿಲಾಸಿ ತೇ ಏಕೀ ವೇಳೇ । ಉಪಸಾಹಿಜೋ ಜೇ ।೨೮॥ ಜಿಹೀ ಧ್ಯಾನಾಚಾ ಡೋಲಾ ಪಾಹಿಲಾಸೀ । ವೇದಾದಿ ವಾಚಾ ವಾನಿಲಾಸೀ । ಜೇ ಉಪಸಾಹಿಲೇ ತಯಾಂಸೀ । ತೇ ಆಮ್ಹಾಂಹೀ ಕರೀ ।೨೯॥ ಪರೀ ಮೀ ಆಜಿ ತುಝ್ಯಾ ಗುಣೇ । ಲಾಂಚಾವಲೋ ಅಪರಾಧು ನ ಗಣೇ । ಭಲತೇ ಕರೀ ಪರೀ ಅರ್ಧ ಧಣೇ । ನುಠೀ ಕದಾ ।೩೦॥ ಮಿಯಾ ಗೀತಾ ಯೇಣೇ ನಾಂವೇ । ತುಝೋ ಪಸಾಯಾಮೃತ ಸುಹಾವೇ । ವಾನೂ ಲಾಧಲೋ ತೇ ದುಣೇನಥಾವೇ । ದೈವಲೋ ದೈವೇ ।೩೧॥ ಮಾಝಿಯಾ ಸತ್ಯವಾದಾಚೇ ತಪ । ವಾಚಾ ಕೇಲೇ ಬಹುತ ಕಲ್ಪ । ತಯಾ ಫಳಾಚೇ ಹೇ ಮಹಾದ್ವೀಪ । ಪಾತಲೀ ಪ್ರಭು ।೩೨॥ ಪುಣ್ಯೇ ಪೋಶಿಲೀ ಅಸಾಧಾರಣೇ । ತಿಯೇ ತುಝೋ ಗುಣ ವಾನಣೇ । ದೇವೂನಿ ಮಜ ಉತ್ತೀರ್ಣೇ । ಜಾಲೀ ಆಜೀ ।೩೩॥ ಜೇ ಜೀವತ್ವಾಚ್ಯಾ ಆಡವೀ । ಆತುಡಲೋ ಹೋತೋ ಮರಣಗಾಂವೀ । ತೇ ಅವದಸಾಚಿ ಆಘವೀ । ಫೇಡಿಲೀ ಆಜೀ ।೩೪॥ ಜೇ ಗೀತಾ ಯೇಣೇ ನಾಂವೇ ನಾವಾಣಿಗೀ । ಜೇ ಅವಿದ್ಯಾ ಜಿಣೋನಿ ದಾಟುಗೀ । ತೇ ಕೀರ್ತಿ ತುಝೀ ಆಮ್ಹಾ ಜೋಗೀ । ವಾನಾವಯಾ ಜಾಲೀ ।೩೫॥ ಪೈ ನಿರ್ಧನಾ ಘರೀ ವಾನಿವಸೇ । ಮಹಾಲಕ್ಷ್ಮೀ ಯೇಊನಿ ಬೈಸೇ । ತಯಾತೇ ನಿರ್ಧನ ಐಸೇ । ಮ್ಹಣೋ ಯೇ ಕಾಈ? ।೩೬॥ ಕಾ ಅಂಧಕಾರಾಚಿಯಾ ಠಾಯಾ । ದೈವೇ ಸೂರ್ಯು ಆಲಿಯಾ । ತೋ ಅಂಧಾರುಚಿ ಜಗಾ ಯಯಾ । ಪ್ರಕಾಶು ನೋಹೇ? ।೩೭॥ ಜಯಾ ದೇವಾಚೀ ಪಾಹತಾ ಥೋರೀ । ವಿಶ್ವ ಪರಮಾಣುಹೀ ದಶಾ ನ ಧರೀ । ತೋ ಭಾವಾಚಿಯೇ ಸರೋಭರೀ । ನವ್ಹೇಚಿ ಕಾಈ? ।೩೮॥ ತೈಸಾ ಮೀ ಗೀತಾ ವಾಖಾಣೀ । ಹೇ ಖಪುಷ್ಪಾಚೀ ತುರಂಬಣೀ । ಪರೀ ಸಮರ್ಥೇ ತುವಾ ಶಿರಯಾಣೀ । ಫೇಡಿಲೀ ತೇ ।೩೯॥ ಮ್ಹಣೌನಿ ತುಝೇನಿ ಪ್ರಸಾದೇ । ಮೀ ಗೀತಾ ಪದ್ಯೆ ಅಗಾಧೇ । ನಿರೂಪೀನ ಜಿ ವಿಶದೇ । ಜ್ಞಾನದೇವೋ ಮ್ಹಣೇ ।೪೦॥ ತರೀ ಅಧ್ಯಾಯೀ ಪಂಧರಾವಾ । ಶ್ರೀಕೃಷ್ಣೇ ತಯಾ ಪಾಂಡವಾ । ಶಾಸ್ತ್ರಸಿದ್ಧಾಂತು ಆಘವಾ । ಉಗಾಣಿಲಾ ।೪೧॥ ಜೇ ವೃಕ್ಷರೂಪಕ ಪರಿಭಾಷಾ । ಕೇಲೇ ಉಪಾಧಿರೂಪ ಅಶೇಷಾ । ಸದ್ವೈದ್ಯೇ ಜೈಸೇ ದೋಷಾ । ಅಂಗಲೀನಾ ।೪೨॥

ಅದರಂತೆ ನಿಮ್ಮಲ್ಲಿ ಭೇದಬುದ್ಧಿಯ ತಕ್ಕಡಿಯನ್ನು ಮಾಡಿ ನಿಮ್ಮನ್ನು ಸೂರ್ಯನೊಂದಿಗೆ ಪರಡಿಯಲ್ಲಿ ಹಾಕಿ ತೂಗಿ ನೋಡಿದ ಈ ನನ್ನ ಅಪರಾಧಕ್ಕೆ ಹೇ ಗುರುಗಳೇ, ನೀವು ಕ್ಷಮಿಸಿರಿ ।೨೮॥

ಯೋಗಿಗಳು ಧ್ಯಾನವನ್ನು ಮಾಡಿ ನಿಮ್ಮ ಪ್ರಾಪ್ತಿ ಮಾಡಿಕೊಂಡರು ಮತ್ತು ವೇದಗಳು ವಾಣಿಯಿಂದ ನಿಮ್ಮನ್ನು ಸ್ತುತಿಸಿದವು. ಅದನ್ನು ನೀವು ಸಹಿಸಿಕೊಂಡಂತೆ ನಾನು ನಿಮ್ಮ ತುಲನೆ ಮಾಡಿದ್ದನ್ನು ಕ್ಷಮಿಸಿರಿ ।೨೯॥

ಏನೋ ನಿಮ್ಮ ಗುಣಾನುವಾದ ಮಾಡಲು ಪ್ರವೃತ್ತನಾಗಿರುವುದಕ್ಕೆ ಅದು ನನ್ನ ಅಪರಾಧವೆಂದು ತಿಳಿಯದೇ ಏನಾದರೂ ಮಾಡಿರಿ, ಆದರೆ ನಾನು ಮಾತ್ರ ಅರೆಹೊಟ್ಟೆಯಿಂದ ಏಳಲಾರೆ ।೩೦॥

ನಾನು ಗೀತಾರೂಪ ಪ್ರಸಾದಾಮೃತದ ವರ್ಣನೆಯನ್ನು ಪ್ರೀತಿಯಿಂದ ಮಾಡುತ್ತಿರುವುದರಿಂದ ನಿಮ್ಮ ಕೃಪೆಯಿಂದ ನನಗೆ ದುಪ್ಪಟ್ಟು ಬಲ ಬಂದಿತು. ಇದರಿಂದ ನಾನು ಮಹಾಭಾಗ್ಯಶಾಲಿಯಾದೆ ।೩೧॥

ಪ್ರಭುಗಳೇ, ನನ್ನ ವಾಣಿಯಿಂದ ಅನಂತ ಜನ್ಮಗಳಲ್ಲಿ ಸತ್ಯಭಾಷಣ ತಪಶ್ಚರ್ಯವನ್ನು ಮಾಡಿದೆ; ಅದರ ಫಲವೇ ಈ ಗೀತೆ ಎಂಬ ಮಹಾದ್ವೀಪವು ನನಗೆ ದೊರೆಯಿತು ।೩೨॥

ನಾನು ಇಂದಿನವರೆಗೆ ಮಾಡಿದ ಮಹಾಪುಣ್ಯಗಳು ನಿಮ್ಮ ಗುಣಾನುವಾದಗಳನ್ನು ಮಾಡಲು ಹಚ್ಚಿರುವ ಫಲವಾಗಿ ಅವು ನನ್ನಿಂದ ಋಣಮುಕ್ತವಾದವು ।೩೩॥

ನಾನು ದೇಹಸಂಬಂಧದ ಅರಣ್ಯದ ಜನ್ಮಮರಣಗಳಲ್ಲಿ ಸಿಲುಕಿಕೊಂಡಿದ್ದೆನು. ಆ ಎಲ್ಲ ಪೀಡೆಗಳು ಇಂದು ದೂರವಾದವು ।೩೪॥

ಯಾವ "ಗೀತೆ" ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ ಮತ್ತು ಅವಿದ್ಯೆಯ ನಾಶಮಾಡಿ ಬಲಿಷ್ಠವಾಗಿದೆ. ಈ ನಿಮ್ಮ ಕೀರ್ತಿಯು ನಾವು ವರ್ಣಿಸುವಂತಹದ್ದಿದೆ ।೩೫॥

ದರಿದ್ರನ ಮನೆಗೆ ಆಕಸ್ಮಿಕವಾಗಿ ಮಹಾಲಕ್ಷ್ಮೀಯು ಬಂದರೆ, ಆಗ ಆತನಿಗೆ ದರಿದ್ರನು ಎಂದು ಹೇಳಲಿಕ್ಕಾಗುವುದೇ? ।೩೬॥

ಅಥವಾ ಕತ್ತಲದ ಮನೆಗೆ ದೈವಯೋಗದಿಂದ ಸೂರ್ಯನು ಬೀಗನಾಗಿ ಬಂದಾಗ ಅದೇ ಅಂಧಕಾರವು ಜಗತ್ತಿಗೆ ಪ್ರಕಾಶಮಯವಾಗುವುದಿಲ್ಲವೇ? ।೩೭॥

ಯಾವ ಈಶ್ವರನ ಯೋಗ್ಯತೆಯ ಎದುರಿನಲ್ಲಿ ಈ ಜಗವು ಪರಮಾಣುವಿನಷ್ಟು ಸಹ ಆಗಲಾರದು. ಆದರೆ ಆತನು ಭಕ್ತಿಯಿಂದ ಬೇಕಾದ ರೂಪವನ್ನು ಧರಿಸುವುದಿಲ್ಲವೇ? ।೩೮॥

ಅದರಂತೆ ನನ್ನ ಗೀತೆಯ ವ್ಯಾಖ್ಯಾನವೆಂದರೆ ಆಕಾಶದಲ್ಲಿನ ಹೂವಿನಿಂದ ಮೂಸಿ ನೋಡುವಂತೆ ಅಘಟಿತ ಕಾರ್ಯವಾಗಿರುವುದು. ಆದರೂ ನೀವು ಸಮರ್ಥರಿರುವುದರಿಂದ ನನ್ನ ಅಭಿರುಚಿಯು ಪೂರ್ಣಗೊಂಡಿತು ।೩೯॥

ಆದ್ದರಿಂದ ನಿಮ್ಮ ಕೃಪಾ ಪ್ರಸಾದದಿಂದ ನಾನು ಗಂಭೀರವಾದ ಅರ್ಥಗಳಿಂದ ತುಂಬಿದ ಗೀತೆಯೊಳಗಿನ ಶ್ಲೋಕಗಳ ಎಲ್ಲ ಅರ್ಥಗಳನ್ನು ಸ್ಪಷ್ಟವಾಗಿ ವಿವರಿಸಿ ಹೇಳುವೆನು ಎಂದು ಜ್ಞಾನೇಶ್ವರರು ಹೇಳುವರು ।೪೦॥

ಇಲ್ಲಿಯವರೆಗೆ ಹದಿನೈದನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಸರ್ವಶಾಸ್ತ್ರ ಸಿದ್ಧಾಂತಗಳನ್ನು ಸ್ಪಷ್ಟವಾಗಿ ಹೇಳಿರುವನು ।೪೧॥

ಶರೀರದಲ್ಲಿ ಆವರಿಸಿಕೊಂಡ ರೋಗವನ್ನು ಉತ್ತಮ ವೈದ್ಯನು ಚಿಕಿತ್ಸೆಯಿಂದ ಕಂಡುಹಿಡಿಯುವಂತೆ, ಬ್ರಹ್ಮವು ಮಾಯೆಯ ಉಪಾಧಿಯಿಂದ ಜಗದ್ರೂಪ ಧಾರಣೆ ಮಾಡುವುದು ಎಂದು ವೃಕ್ಷವನ್ನಾಗಿ ತುಲನೆ ಮಾಡಿದನು ।೪೨॥

ಆಣಿ ಕೂಟಸ್ಥು ಜೋ ಅಕ್ಷರು । ದಾವಿಲಾ ಪುರುಷಪ್ರಕಾರು । ತೇಣೇ ಉಪಹಿತಾಹೀ ಆಕಾರು । ಚೈತನ್ಯಾ ಕೇಲಾ ।೪೩॥ ಪಾಠೀ ಉತ್ತಮ ಪುರುಷ । ಶಬ್ದಾಚೇ ಕರೂನಿ ಮಿಷ । ದಾವಿಲೇ ಚೋಖ । ಆತ್ಮತತ್ತ್ವ ।೪೪॥ ಆತ್ಮವಿಷಯೀ ಆಂತುವಟ । ಸಾಧನ ಜೇ ಆಂಗದಟ । ಜ್ಞಾನ ಹೇಂಹೀ ಸ್ಪಷ್ಟ । ಚಾವಳಲಾ ।೪೫॥ ಮ್ಹಣೌನಿ ಇಯೇ ಅಧ್ಯಾಯೀ । ನಿರೂಪ್ಯ ನುರೇಚಿ ಕಾಂಹೀ । ಆತಾ ಗುರುಶಿಷ್ಯಾದೋಹೀ । ಸ್ನೇಹೋ ಲಾಹಣಾ ।೪೬॥ ಏವಂ ಇಯೇವಿಷಯೀ ಕೀರ । ಜಾಣತೇ ಬುಝಾವಲೇ ಅಪಾರ । ಪರೀ ಮುಮುಕ್ಷು ಇತರ । ಸಾಕಾಂಕ್ಷ ಜಾಲೇ ।೪೭॥ ತ್ಯಾ ಮಜ ಪುರುಷೋತ್ತಮಾ । ಜ್ಞಾನೇ ಭೇಟೇ ಜೋ ಸುವರ್ಮಾ । ತೋ ಸರ್ವಜ್ಞು ತೋಚಿ ಸೀಮಾ । ಭಕ್ತೀಚೀಹೀ ।೪೮॥ ಐಸೇ ಹೇ ತ್ರೈಲೋಕ್ಯನಾಯಕೇ । ಬೋಲಿಲೇ ಅಧ್ಯಾಯಾಂತ ಶ್ಲೋಕೇ । ತೇಥೇ ಜ್ಞಾನಚಿ ಬಹುತೇಕೇ । ವಾನಿಲೇ ತೋಷೇ ।೪೯॥ ಭರೂನಿ ಪ್ರಪಂಚಾಚಾ ಘೋಂಟು । ಕೀಜೇ ದೇಖತಾಂಚಿ ದೇಖತಯಾ ದೃಷ್ಟು । ಆನಂದಸಾಮ್ರಾಜ್ಯೀ ಪಾಟು । ಬಾಂಧಿಜೇ ಜೀವಾ ।೫೦॥ ಯೇವಢೇಯಾ ಲಾಠೇಪಣಾಚಾ ಉಪಾವೋ । ಆನು ನಾಹೀಂಚಿ ಮ್ಹಣೇ ದೇವೋ । ಹಾ ಸಮ್ಯಕ್ ಜ್ಞಾನಾಚಾ ರಾವೋ । ಉಪಾಯಾಂಮಾಜೀ ।೫೧॥ ಐಸೇ ಆತ್ಮಜಿಜ್ಞಾಸು ಜೇ ಹೋತೇ । ತಿಹೀ ತೋಷಲೇನಿ ಚಿತ್ತೇ । ಆದರೇ ತಯಾ ಜ್ಞಾನಾತೇ । ವೋವಾಳಿಲೇ ಜೀವೇ ।೫೨॥ ಆತಾ ವಾಡೀ ಜೇಥ ಪಡೇ । ತಯಾಚೀ ಅವಸರೀ ಪುಢೇ ಪುಢೇ । ರಿಗೋ ಲಾಗೇ ಹೇ ಘಡೇ । ಪ್ರೇಮ ಐಸೇ ।೫೩॥ ಮ್ಹಣೌನಿ ಜಿಜ್ಞಾಸೂಂಚ್ಯಾ ಪೈಕೀ । ಜ್ಞಾನೀ ಪ್ರತೀತಿ ಹೋಯ ನಾ ಜಂವ ನಿಕೀ । ತಂವ ಯೋಗಕ್ಷೇಮು ಜ್ಞಾನವಿಖೀ । ಸ್ಫುರೇಲಚಿ ಕೀ ।೫೪॥ ಮ್ಹಣೌನಿ ತೇಂಚಿ ಸಮ್ಯಕ್ ಜ್ಞಾನ । ಕೈಸೇನಿ ಹೋಯ ಸ್ವಾಧೀನ । ಜಾಲಿಯಾ ವೃದ್ಧಿಯತ್ನ । ಘಡೇಲ ಕೇವೀ ।೫೫॥ ಕಾ ಉಪಜೋಂಚಿ ಜೇ ನ ಲಾಹೇ । ಜೇ ಉಪಜಲೇಹಿ ಅಪ್ಡಾಂಟಾ ಸೂಯೇ । ತೇ ಜ್ಞಾನೀ ವಿರುದ್ಧ ಕಾಯ ಆಹೇ । ಹೇ ಜಾಣಾವೇ ಕೀ ।೫೬॥ ಮಗ ಜಾಣತಯಾ ಜೇ ವಿರೂ । ತಯಾಚೀ ವಾಟ ವಾಹತೀ ಕರೂ । ಜ್ಞಾನಾಹಿತ ತೇಂಚಿ ವಿಚಾರೂ । ಸರ್ವಭಾವೇ ।೫೭॥ ಐಸಾ ಜ್ಞಾನಜಿಜ್ಞಾಸು ತುಮ್ಹೀ ಸಮಸ್ತೀ । ಭಾವೋ ಜೋ ಧರಿಲಾ ಅಸೇ ಚಿತ್ತೀ । ತೋ ಪುರವಾವಯಾ ಲಕ್ಷ್ಮೀಪತೀ । ಬೋಲಿಜೇಲ ।೫೮॥

ಮತ್ತು ಅವಿನಾಶಿಯಾಗಿರುವ ದೇಹದಲ್ಲಿನ ಜೀವಾತ್ಮನಿಗೆ ಪುರುಷನು ಎಂಬ ಶಬ್ದದಿಂದ ಸ್ಪಷ್ಟ ಮಾಡಿ ಹೇಳಿದನು ।೪೩॥

ತದನಂತರ ಕೇವಲ ಶುದ್ಧವಾದ ಆತ್ಮತತ್ತ್ವವು (ಬ್ರಹ್ಮವು) ಇದಕ್ಕೆ ಉತ್ತಮ ಪುರುಷವೆಂಬ ಶಬ್ದ ಸ್ಪಷ್ಟ ಮಾಡಿದನು ।೪೪॥

ಆತ್ಮಪ್ರಾಪ್ತಿಗಾಗಿ ಬಲವಾದ ಸಾಧನವಾಗಿರುವ ಜ್ಞಾನವನ್ನು ಸಹ ಸ್ಪಷ್ಟೀಕರಣ ಮಾಡಿ ಹೇಳಿದನು ।೪೫॥

ಆದ್ದರಿಂದ ಈ ಅಧ್ಯಾಯದಲ್ಲಿ ನಿರೂಪಣೆ ಮಾಡುವಂತಹದ್ದು ಯಾವುದೂ ಉಳಿದಿರುವುದಿಲ್ಲ. ಆದಾಗ್ಯೂ ಗುರುಶಿಷ್ಯರ ಸ್ನೇಹಾತಿಶಯದಿಂದ ಹೇಳಿದ್ದನ್ನೇ ಪುನಃ ಹೇಳಬೇಕಾಗುವುದು ।೪೬॥

ಈ ಪ್ರಕಾರವಾಗಿ ಹದಿನೈದನೆಯ ಅಧ್ಯಾಯದಲ್ಲಿ ಹೇಳಿರುವ ಎಲ್ಲ ವಿಷಯಗಳು ಜ್ಞಾನಿಗಳಿಗೆ ಪೂರ್ಣವಾಗಿ ತಿಳಿಯಿತು. ಆದರೆ ಇತರ ಮುಮುಕ್ಷುಗಳಿಗೆ ಅವರ ಶಂಕೆಗಳು ದೂರಾಗಲಿಲ್ಲ ।೪೭॥

ಯಾವ ನನ್ನ ಪುರುಷೋತ್ತಮನಿಗೆ ಮರ್ಮವನ್ನು ಅರಿತವನು ಜ್ಞಾನದ ಪ್ರಾಪ್ತಿಯನ್ನು ಮಾಡಿಕೊಂಡು ಕೂಡಿಕೊಳ್ಳುವನು. ಅವನೇ ಸರ್ವಜ್ಞನು, ಮತ್ತು ಅವನೇ ನಿಜವಾದ ಭಕ್ತನು ।೪೮॥

ಹೀಗೆ ಮೂರು ಲೋಕದ ಒಡೆಯನಾದ ಶ್ರೀಕೃಷ್ಣ ಪರಮಾತ್ಮನು ಹದಿನೈದನೆಯ ಅಧ್ಯಾಯದ ಕೊನೆಯ ಶ್ಲೋಕದಲ್ಲಿ ಪರಮ ಸಂತೋಷದಿಂದ ಜ್ಞಾನದ ವಿಶೇಷ ವರ್ಣನೆಯನ್ನು ಮಾಡಿದ್ದಾನೆ ।೪೯॥

ಸಂಸಾರದ ಸರ್ವನಾಶಮಾಡಿ ಬ್ರಹ್ಮನ ದರ್ಶನವಾದೊಡನೆಯೇ ಆತನು ಬ್ರಹ್ಮರೂಪನಾಗಿ ಜೀವಕ್ಕೆ ಆನಂದರೂಪ ರಾಜ್ಯದ ಪಟ್ಟಾಭಿಷೇಕವಾಗುವುದು ।೫೦॥

ಹೀಗೆ ಬ್ರಹ್ಮಪ್ರಾಪ್ತಿಯ ಬೇರೆ ಯಾವ ಬಲವತ್ತರವಾದ ಉಪಾಯವಿಲ್ಲ ಮತ್ತು ಎಲ್ಲ ಉಪಾಯಗಳಲ್ಲಿ ಯಥಾರ್ಥ ಜ್ಞಾನವು ರಾಜನಿರುವುದೆಂದು ಶ್ರೀಕೃಷ್ಣನು ಹೇಳಿದನು ।೫೧॥

ಈ ಪ್ರಕಾರವಾಗಿ ಆತ್ಮಜ್ಞಾನಪ್ರಾಪ್ತಿಯ ಇಚ್ಛೆ ಮಾಡುವವರು ಸಂತೋಷಗೊಂಡು ತಮ್ಮ ಪ್ರಾಣವನ್ನು ಈ ಜ್ಞಾನದ ಮೇಲೆ ನಿವಾಳಿಸಿ ಒಗೆದರು ।೫೨॥

ಈಗ ಯಾವುದಕ್ಕಾಗಿ ಪ್ರೇಮ ಉತ್ಪನ್ನವಾಗುವುದೋ, ಆ ವಸ್ತುವಿಗಾಗಿ ಅಧಿಕಾಧಿಕ ವಿಚಾರಗಳು ಉತ್ಪನ್ನವಾಗುವುವು. ಇದು ಪ್ರೇಮದ ಲಕ್ಷಣವಾಗಿದೆ ।೫೩॥

ಆದ್ದರಿಂದ ಜಿಜ್ಞಾಸುಗಳವರಿಗೆ ಕೇವಲ ಜ್ಞಾನದ ಅನುಭವವಿದ್ದಿಲ್ಲ. ಅವರಿಗೆ ಈ ಜ್ಞಾನವನ್ನು ಪ್ರಾಪ್ತಿಮಾಡಿಕೊಂಡು ಹೇಗೆ ರಕ್ಷಿಸಿಕೊಳ್ಳಬೇಕೆಂಬುವುದಕ್ಕೆ ವಿಚಾರ ಹುಟ್ಟುವುದು ಸಹಜವಾಗಿದೆ ।೫೪॥

ಅದಕ್ಕಾಗಿ ಅದೇ ಅಪರೋಕ್ಷ ಜ್ಞಾನವು ತಮಗೆ ಹೇಗೆ ಪ್ರಾಪ್ತವಾದೀತು ಮತ್ತು ಮುಂದೆ ಅದು ಹೇಗೆ ಬೆಳೆದೀತು ।೫೫॥

ಅಥವಾ ಈ ಜ್ಞಾನವು ಪ್ರಾಪ್ತವಾಗದಂತೆ, ಹಾಗೂ ಪ್ರಾಪ್ತವಾದಾಗಲೂ ಅಡ್ಡಮಾರ್ಗಕ್ಕೆ ಹಚ್ಚುವ, ಹೀಗೆ ಜ್ಞಾನಕ್ಕೆ ವಿಘ್ನಗಳು ಯಾವುದೆಂಬುದು ತಿಳಿಯಬೇಕು ।೫೬॥

ನಂತರ ಜ್ಞಾನ ಪ್ರಾಪ್ತಿಯ ವಿರುದ್ಧವಿದ್ದವುಗಳನ್ನೆಲ್ಲ ಬಿಟ್ಟುಕೊಟ್ಟು, ಜ್ಞಾನಪ್ರಾಪ್ತಿಗೆ ಹಿತಕರವಾದ ಯಾವುದಿದೆ ಎಂಬುದು ಮನೋಭಾವದಿಂದ ಕೇಳಬೇಕು ।೫೭॥

ಈ ಪ್ರಕಾರವಾಗಿ ಜ್ಞಾನಪ್ರಾಪ್ತಿಯ ಇಚ್ಛೆ ಮಾಡುವ ನಿಮಗೆ ಮನದಲ್ಲಿ ಮೂಡಿರುವ ಶಂಕೆಯನ್ನು ನಿರಸನೆ ಮಾಡಲು ಶ್ರೀಕೃಷ್ಣನು ಉಪಾಯವನ್ನು ಹೇಳುವನು ।೫೮॥

ಜ್ಞಾನಾಸಿ ಸುಜನ್ಮ ಜೋಡೇ । ಆಪುಲೀ ವಿಶ್ರಾಂತಿಹೀ ವರೀ ವಾಢೇ । ತೇ ಸಂಪತ್ತೀಚೇ ಪವಾಡೇ । ಸಾಂಗಿಜೇಲ ದೈವೀ ।೮೯॥ ಆಣಿ ಜ್ಞಾನಾಚೇನಿ ಕಾಮಾಕಾರೇ । ಜೇ ರಾಗ ದ್ವೇಷಾಂಸಿ ದೇ ಥಾರೇ । ತಿಯೇ ಆಸುರಿಯೇಹಿ ಘೋರೇ । ಕರೀಲ ರೂಪ ।೬೦॥ ಸಹಜ ಇಷ್ಟಾನಿಷ್ಟಕರಣೇ । ದೋಘೀಚಿ ಇಯಾ ಕವತುಕಿಣೇ । ಹೇ ನವಮಾಧ್ಯಾಯೀ ಉಭಾರಣೇ । ಕೇಲೀ ಹೋತೀ ।೬೧॥ ತೇಥ ಸಾಉಮಾ ಘೇಯಾವಯಾ ಉವಾವೋ । ತಂವ ವೋಡವಲಾ ಆನ ಪ್ರಸ್ತಾವೋ । ತರೀ ತಯಾ ಪ್ರಸಂಗೇ ಆತಾ ದೇವೋ । ನಿರೂಪೀತ ಅಸೇ ।೬೨॥ ತಯಾ ನಿರೂಪಣಾಚೇನಿ ನಾಂವೇ । ಅಧ್ಯಾಯ ಪದ ಸೋಳಾವೇ । ಲಾವಣೀ ಪಾಹತಾ ಜಾಣಾವೇ । ಮಾಗಿಲಾವರೀ ।೬೩॥ ಪರೀ ಹೇ ಅಸೋ ಆತಾ ಪ್ರಸ್ತುತೀ । ಜ್ಞಾನಾಚ್ಯಾ ಹಿತಾಹಿತೀ । ಸಮರ್ಥಾ ಸಂಪತ್ತೀ । ಇಯಾಚಿ ದೋನ್ಹೀ ।೬೪॥ ಜೇ ಮುಮುಕ್ಷು ಮಾರ್ಗೀಚೇ ಬೋಳಾವೀ । ಜೇ ಮೋಹರಾತ್ರೀಚೇ ಧರ್ಮದಿವೀ । ತೇ ಆಧೀ ತಂವ ದೈವೀ । ಸಂಪತ್ತೀ ಐಕಾ ।೬೫॥ ಜೇಥ ಏಕ ಏಕಾತೇ ಪೋಖೀ । ಐಸೇ ಬಹುತ ಪದಾರ್ಥ ಯೇಕೀ । ಸಂಪಾದಿಜತೀ ತೇ ಲೋಕೀ । ಸಂಪತ್ತೀ ಮ್ಹಣಿಜೇ ।೬೬॥ ತೇ ದೈವಿ ಸುಖಸಂಭವೀ । ತೇಥ ದೈವಗುಣೇ ಯೇಕೋಪಜೀವೀ । ಜಾಲೀ ಮ್ಹಣೌನಿ ದೈವೀ । ಸಂಪತ್ತಿ ಹೇ ।೬೭॥

ಶ್ರೀ ಭಗವಾನುವಾಚ :-
ಅಭಯಂ ಸತ್ತ್ವಸಂಶುದ್ಧಿಃ ಜ್ಞಾನಯೋಗವ್ಯವಸ್ಥಿತಿಃ ।
ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ।೧॥

ಆತಾ ತಯಾಚಿ ದೈವಗುಣಾ । ಮಾಜೀ ಧುರೇಚಾ ಬೈಸಣಾ । ಬೈಸೇ ತಯಾ ಆಕರ್ಣಾ । ಅಭಯ ಐಸೇ ।೬೮॥ ತರೀ ನ ಘಾಲೂನಿ ಮಹಾಪುರೀ । ನ ಘೇಪೇ ಬುಡಣಯಾಚೀ ಶಿಯಾರೀ । ಕಾ ರೋಗು ನ ಗಣಿಜೇ ಘರೀ । ಪಥ್ಯಾಚಿಯಾ ।೬೯॥ ತೈಸಾ ಕರ್ಮಾಕರ್ಮಾಚಿಯಾ ಮೋಹರಾ । ಉಠೂ ನೇದೂನಿ ಅಹಂಕಾರಾ । ಸಂಸಾರಾಚಾ ದರಾರಾ । ಸಾಂಡಣೇ ಯೇಣೇ ।೭೦॥ ಅಥವಾ ಐಕ್ಯಭಾವಾಚೇನಿ ಪೈಸೇ । ದುಜೇ ಮಾನೂನಿ ಆತ್ಮಾ ಐಸೇ । ಭಯವಾರ್ತಾ ದೇಶೇ । ದವಡಣೇ ಜೇ ।೭೧॥ ಪಾಣೀ ಬುಡಲೂ ಯೇ ಮಿಠಾತೇ । ತಂವ ಮೀಠಚಿ ಪಾಣೀ ಆತೇ । ತೇವೀ ಆಪಣ ಜಾಲೇನಿ ಅದ್ವೈತೇ । ನಾಶೇ ಭಯ ।೭೨॥

ಜ್ಞಾನದ ಉತ್ತಮ ವೇಳೆಯಲ್ಲಿ ಪ್ರಾಪ್ತಿಯಾಗಿ ಅದರ ಯೋಗದಿಂದ ಸ್ವರೂಪದ ಪ್ರಾಪ್ತಿಯಾದೀತೆಂದು, ಯಾವ ದೈವಿ ಸಂಪತ್ತಿನ ವರ್ಣನೆ ಮಾಡುವರು ।೯೯॥

ಮತ್ತು ಯಾವ ಅಸುರಿ ಸಂಪತ್ತಿನಿಂದ ರಾಗದ್ವೇಷಕ್ಕೆ ಸ್ಥಳಸಿಕ್ಕು ಜ್ಞಾನದ ನಾಶವಾಗುವುದು. ಅದರ ವರ್ಣನೆಯನ್ನು ಮಾಡುವರು ।೬೦॥

ಹೀಗೆ ದೈವೀ ಅಸುರಿ ಸಂಪತ್ತಿನಿಂದ ಇವುಗಳಿಂದ ಇಷ್ಟ ಮತ್ತು ಅನಿಷ್ಟ ಕೃತ್ಯಗಳು ಆಗುವುದನ್ನು ಹೇಳಲು ಒಂಭತ್ತನೆಯ ಅಧ್ಯಾಯದಲ್ಲಿ ಆರಂಭ ಮಾಡಿದ್ದರು ।೬೧॥

ಆಗ ಎಲ್ಲ ವಿಚಾರಗಳನ್ನು ಮಾಡಬೇಕಾಗಿತ್ತು. ಆದರೆ, ಬೇರೆ ಪ್ರಸಂಗ ಉದ್ಭವಿಸಿದ್ದಕ್ಕೆ ಅದು ಹಾಗೆಯೇ ಉಳಿಯಿತು. ಅದಕ್ಕಾಗಿ ಆ ಪ್ರಸಂಗವನ್ನು ಈಗ ದೇವನು ನಿರೂಪಿಸುವನು ।೬೨॥

ಆ ನಿರೂಪಣದ ಸಂಬಂಧದಿಂದ ಹಿಂದೆ ಹದಿನೈದನೆಯ ಅಧ್ಯಾಯವಾಯಿತು. ಈಗ ಅದರ ಮುಂದಿನ ಹದಿನಾರನೆಯ ಅಧ್ಯಾಯವಾಗಿದೆ ।೬೩॥

ಆದರೆ ಅದು ಇರಲಿ, ಈ ಎರಡು ಸಂಪತ್ತುಗಳು (ದೈವಿ ಮತ್ತು ಅಸುರಿ) ಜ್ಞಾನದ ಪ್ರಾಪ್ತಿ ಮತ್ತು ಹಾನಿ ಮಾಡಿಕೊಡಲು ಸಮರ್ಥವಾಗಿವೆ ।೬೪॥

ಯಾವ ದೈವೀ ಸಂಪತ್ತು ಮುಮುಕ್ಷುಗೆ ಮೋಕ್ಷ ಮಾರ್ಗವನ್ನು ಮುಟ್ಟಿಸುವಂತಹದ್ದು ಮತ್ತು ಮೋಹರೂಪ ರಾತ್ರಿಗೆ ಧರ್ಮ ದೀವಟಿಗೆಯಾದದ್ದನ್ನು ಮೊದಲು ವರ್ಣಿಸುವೆನು. ಅದನ್ನು ಕೇಳಿರಿ ।೬೫॥

ಎಲ್ಲಿ ಒಂದಕ್ಕೊಂದು ಸಹಾಯ ಮಾಡುವಂತಹ ಅನೇಕ ಪದಾರ್ಥಗಳು ಒಂದೆಡೆ ಸೇರುವುವೋ, ಅದಕ್ಕೆ ಸಂಪತ್ತು ಎಂದು ಹೇಳುವರು ।೬೬॥

ಹೀಗೆ ಯಾವ ದೈವಯೋಗದಿಂದ ಒಂದೇ ಸ್ಥಳದಲ್ಲಿ ಕೂಡಿರುವ ಎಲ್ಲರಿಗೂ ಸುಖವನ್ನು ಕೊಡುವ, ಇದಕ್ಕೆ ''ದೈವಿ ಸಂಪತ್ತು'' ಎಂದು ಹೇಳುವರು ।೬೭॥

**ಶ್ಲೋಕಾರ್ಥ** :- ಭಗವಂತನು ಹೀಗೆಂದನು:- ಅರ್ಜುನಾ! ೧.ನಿರ್ಭಯತೆ, ೨.ಅಂತಃಕರಣಶುದ್ಧಿ, ೩.ಜ್ಞಾನಯೋಗ ನಿಷ್ಠೆ, ೪.ದಾನ, ೫.ಇಂದ್ರಿಯ ನಿಗ್ರಹ, ೬.ಯಜ್ಞ, ೭.ವೇದಾಧ್ಯಯನ, ೮.ತಪಸ್ಸು, ೯.ಋಜುವರ್ತನೆ ।೧॥

ಈಗ ಆ ಯಾವ ದೈವಗುಣದಲ್ಲಿ ಯಾವುದಕ್ಕೆ ಪ್ರಾಮುಖ್ಯತೆ ದೊರೆಯುವುದೋ, ಅದಕ್ಕೆ ಅಭಯವೆಂದು ಹೇಳುವರು ।೬೮॥

ಯಾವನು ಮಹಾಪೂರದಲ್ಲಿ ಹಾರುವುದಿಲ್ಲವೋ, ಆತನಿಗೆ ಮುಳುಗುವ ಭಯವಿರುವುದಿಲ್ಲ ಮತ್ತು ಯಾವನು ಪಥ್ಯದಿಂದಿರುವನೋ ಆತನಿಗೆ ರೋಗವು ಉತ್ಪನ್ನವಾಗುವುದಿಲ್ಲ ।೬೯॥

ಅದರಂತೆ ಯಾವನು ಯಾವುದೇ ಕರ್ಮ ಮಾಡುವಾಗ್ಗೆ ಅಹಂಕಾರವನ್ನು ಉತ್ಪನ್ನವಾಗಗೊಡುವುದಿಲ್ಲವೋ ಆತನಿಗೆ ಸಂಸಾರದ ಭಯವು ಎಲ್ಲಿಂದಿರಬೇಕು? ।೭೦॥

ಅಥವಾ ಅದ್ವೈತ ಭಾವದ ವಿಸ್ತಾರದಿಂದ ಯಾವ ಎಲ್ಲ ಜಗತ್ತು ಆತ್ಮಸ್ವರೂಪವಾಗಿದೆ ಎಂದು ತಿಳಿದಾಗ ಆತನಿಗೆ ಭಯದ ಮಾತೇ ಕೇಳಲು ಸಿಗುವುದಿಲ್ಲ ।೭೧॥

ನೀರನ್ನು ಉಪ್ಪಿನಲ್ಲಿ ಮುಳುಗಿಸಲು ನೀರೆಲ್ಲ ಉಪ್ಪಾಗುವುದು. ಅದರಂತೆ ತನ್ನ ಅದ್ವೈತ ಭಾವನೆಯಾದಾಗ ಭಯದನಾಶವಾಗುವುದು ।೭೨॥

ಅಗಾ ಅಭಯ ಯೇಣೇ ನಾಂವೇ । ಬೋಲಿಜೇ ತೇ ಹೇ ಜಾಣಾವೇ । ಸಮ್ಯಕ್‌ಜ್ಞಾನಾಚೇ ಆಘವೇ । ಧಾಂವಣೇ ಹೇ ॥೭೩॥ ಆತಾ ಸತ್ತ್ವಶುದ್ಧೀ ಜೇ ಮ್ಹಣಿಜೇ । ತೇ ಐಸಾ ಚಿನ್ಹೀ ಜಾಣಿಜೇ । ತರಿ ಜಳೇ ನಾ ವಿರ್ಝೇ । ರಾಖೋಂಡೀ ಜೈಸೀ ॥೭೪॥ ಕಾ ಪಾಡಿವಾ ವಾಢೀ ನ ಮಗೇ । ಅಂವಸೇ ತುಟೀ ಸಾಂಡೂನಿ ಮಾಗೇ । ಮಾಜೀ ಅತಿಸೂಕ್ಷ್ಮ ಅಂಗೇ । ಚಂದ್ರು ಜೈಸಾ ರಾಹೇ ॥೭೫॥ ನಾತರೀ ವರ್ಷಿಯಾ ನಾಹೀ ಮಾಂಡಿಲೀ । ಗ್ರೀಷ್ಮೀ ನಾಹೀ ಸಾಂಡಿಲೀ । ಮಾಜಿ ನಿಜರೂಪೇ ನಿವಡಲೀ । ಗಂಗಾ ಜೈಸೀ ॥೭೬॥ ತೈಸೀ ಸಂಕಲ್ಪವಿಕಲ್ಪಾಚೀ ವೋಢೀ । ಸಾಂಡೂನಿ ರಜತಮಾಚೀ ಕಾವಡೀ । ಭೋಗಿತಾ ನಿಜಧರ್ಮಾಚೀ ಆವಡೀ । ಬುದ್ಧಿ ಉರೇ ॥೭೭॥ ಇಂದ್ರಿಯವರ್ಗೀ ದಾಖವಿಲಿಯಾ । ವಿರುದ್ಧಾ ಅಥವಾ ಭಲೀಯಾ । ವಿಸ್ಮಯೋ ಕಾಂಹೀ ಕೇಲಿಯಾ । ನುರೀ ಚಿತ್ತೀ ॥೭೮॥ ಗಾಂವಾ ಗೇಲಿಯಾ ವಲ್ಲಭು । ಪತಿವ್ರತೇಚಾ ವಿರಹಕ್ಷೋಭು । ಭಲತೇಸಣೇ ಹಾನಿಲಾಭು । ನ ಮನೀ ಜೇವೀ ॥೭೯॥ ತೇವೀ ಸತ್ತ್ವರೂಪ ರುಚಲೇಪಣೇ । ಬುದ್ಧೀ ಜೇ ಐಸೇ ಅನನ್ಯ ಹೋಣೇ । ತೇ ಸತ್ತ್ವಶುದ್ಧೀ ಮ್ಹಣೇ । ಕೇಶಿಹಂತಾ ॥೮೦॥ ಆತಾ ಆತ್ಮಲಾಭಾವಿಖೀ । ಜ್ಞಾನಯೋಗಾಮಾಜೀ ಏಕೀ । ಜೇ ಆಪುಲಿಯಾ ಠಾಕೀ । ಹಾಂವೇ ಭರೇ ॥೮೧॥ ತೇಥ ಸಗಳಿಯೇ ಚಿತ್ತವೃತ್ತೀ । ತ್ಯಾಗು ಕರಣೇ ಯಾ ರೀತೀ । ನಿಷ್ಕಾಮೇ ಪೂರ್ಣಾಹುತೀ । ಹುತಾಶೀ ಜೈಸೀ ॥೮೨॥ ಕಾ ಸುಕುಳೀನೇ ಆಪುಲೀ । ಆತ್ಮಜಾ ಸತ್ಕುಳೀಂಚಿ ದಿಧಲೀ । ಹೇ ಅಸೋ ಲಕ್ಷ್ಮೀ ಸ್ಥಿರಾವಲೀ । ಮುಕುಂದೀ ಜೈಸೀ ॥೮೩॥ ತೈಸೇ ನಿರ್ವಿಕಲ್ಪಪಣೇ । ಜೇ ಯೋಗಜ್ಞಾನೀಂಚ ಯಾ ವೃತ್ತಿಕ ಹೋಣೇ । ತೋ ತಿಜಾ ಗುಣ ಮ್ಹಣೇ । ಶ್ರೀಕೃಷ್ಣನಾಥು ॥೮೪॥ ಆತಾ ದೇಹ ವಾಚಾಚಿತ್ತೇ । ಯಥಾಸಂಪನ್ನೇ ವಿತ್ತೇ । ವೈರೀ ಜಾಲಿಯಾಹೀ ಆರ್ತಾತೇ । ನ ವಂಚಣೇ ಜೇ ಕಾ ॥೮೫॥ ಪತ್ರ ಪುಷ್ಪ ಛಾಯಾ । ಫಳ ಮೂಳ ಧನಂಜಯಾ । ವಾಟೇಚಾ ನ ಚುಕೇ ಆಲಿಯಾ । ವೃಕ್ಷು ಜೈಸಾ ॥೮೬॥ ತೈಸೇ ಮನೌನಿ ಧನಧಾನ್ಯವರೀ । ವಿದ್ಯಮಾನೇ ಆಲ್ಯಾ ಅವಸರೀ । ಶ್ರಾಂತಾಚಿಯೇ ಮನೋಹಾರೀ । ಉಪಯೋಗಾ ಜಾಣೇ ॥೮೭॥ ತಯಾ ನಾಂವ ಜಾಣ ದಾನ । ಜೇ ಮೋಕ್ಷನಿಧಾನಾಚೇ ಅಂಜನ । ಹೇ ಅಸೋ ಆಇಕ ಚಿನ್ಹ । ದಮಾಚೇ ತೇ ॥೮೮॥ ತರೀ ವಿಷಯೇಂದ್ರಿಯಾ ಮಿಳಣೇ । ಕರೂನಿ ಘಾಪೇ ವಿತುಟಣೆ । ಜೈಸೇ ತೋಡಿಜೇ ಖಡ್‌ಗಪಾಣೀ । ಪಾರಕೇಯಾ ॥೮೯॥

ಅರೇ, ಅಭಯವೆಂದು ಯಾವುದಕ್ಕೆ ಹೇಳುವರೋ, ಅದರ ಲಕ್ಷಣಗಳು ಇವಾಗಿವೆ ಮತ್ತು ಈ ಅಭಯವು ಸಮ್ಯಕ್ ಜ್ಞಾನದ ಇಚ್ಛೆ ಮಾಡುವವರನ್ನು ರಕ್ಷಿಸುವುದು ।।೭೩।।

ಈಗ ಶುದ್ಧ ಬುದ್ಧಿ ಎಂದು ಯಾವುದಕ್ಕೆ ಹೇಳುವರೋ ಅದನ್ನು ಈ ಚಿನ್ಹೆಗಳಿಂದ ತಿಳಿಯಬೇಕು. ಸುಟ್ಟ ಕುಳ್ಳು (ಕರಿಬಟ್ಟು) ಉರಿಯುವುದಿಲ್ಲ. ಆದ್ದರಿಂದ ಅದನ್ನು ನಂದಿಸುವ ಅಗತ್ಯವಿಲ್ಲ ।।೭೪।।

ಅಥವಾ ಪ್ರತಿಪದವು ಆರಂಭದ ಮುಂಚಿತವಾಗಿ ಅಮವಾಸ್ಯವು ಮುಗಿದ ನಂತರ ಈ ನಡುವಿನ ವೇಳೆಯಲ್ಲಿ ಚಂದ್ರನ ರೂಪವು ಅತಿಸೂಕ್ಷ್ಮವಾಗಿರುವುದು ।।೭೫।।

ಅಥವಾ ಗ್ರೀಷ್ಮ ಋತುವಿನ ಕೊನೆಯಲ್ಲಿ ಮತ್ತು ವರ್ಷಾ ಋತುವಿನ ಆರಂಭದಲ್ಲಿ ಗಂಗೆಯ ನೀರಿನ ಸ್ವರೂಪವು ಯಾವ ಪ್ರಕಾರವಾಗಿ ಸ್ವಚ್ಛವಾಗಿರುವುದೋ, ।।೭೬।।

ಅದರಂತೆ ಸಂಕಲ್ಪ ಮತ್ತು ವಿಕಲ್ಪ ಈ ಎರಡೂ ಅಲ್ಲಿ ಉಳಿದಿರುವುದಿಲ್ಲ. ರಜ, ತಮ ಗುಣಗಳೂ ಅಲ್ಲಿ ಇಲ್ಲದಂತಾಗಿರುವುವು ಮತ್ತು ಯಾವ ಬುದ್ಧಿಗೆ ಸ್ವರೂಪದ ಧ್ಯಾನ ಮಾಡುವ ಪ್ರೀತಿ ಹುಟ್ಟಿರುವುದು ।।೭೭।।

ಇಂದ್ರಿಯ ವರ್ಗಗಳಿಗೆ ಬೇಕಾದ ಇಲ್ಲವೇ ಬೇಡಾದ ವಿಷಯಗಳನ್ನು ತೋರಿಸಿದರೂ, ಆ ಬುದ್ಧಿಗೆ ಇಚ್ಛೆಯು ಉತ್ಪನ್ನವಾಗುವುದಿಲ್ಲ ।।೭೮।।

ಪತಿವ್ರತೆಯ ಪತಿಯು ಊರಿಗೆ ಹೋದಾಗ ಆಕೆಯು ವಿರಹ ತಾಪದಿಂದಿರಲು, ಆಕೆಗೆ ಏನೇ ಹಾನಿಯಾಗಲಿ ಅಥವಾ ಲಾಭವಾಗಲಿ ಅದರ ವಾರ್ತೆಯಿಂದ ಆಕೆಯ ಮನಸ್ಸು ಅದರ ಕಡೆಗೆ ಹೋಗುವುದಿಲ್ಲ ।।೭೯।।

ಈ ಪ್ರಕಾರವಾಗಿ ಸ್ವರೂಪದ ಪ್ರೀತಿಯು ಹುಟ್ಟಿಕೊಂಡು ಬುದ್ಧಿಯು ಏಕನಿಷ್ಠವಾಗುವುದಕ್ಕೆ ''ಸತ್ತ್ವಸಂಶುದ್ಧಿ'' ಎಂದು ಹೇಳಿರುವರೆಂದು ಕೇಶಿ ದೈತ್ಯನಿಗೆ ಕೊಂದ ಶ್ರೀಕೃಷ್ಣನು ಹೇಳಿದನು ।।೮೦।।

ಈಗ ಆತ್ಮಲಾಭಕ್ಕಾಗಿ ಜ್ಞಾನ ಅಥವಾ ಯೋಗ ಈ ಎರಡರಲ್ಲಿ ತನ್ನ ಬುದ್ಧಿಯು ಅವುಗಳಲ್ಲಿ ಸ್ಥಿರ ಹೊಂದುವುದು ।।೮೧।।

ಅಲ್ಲಿ ತನ್ನ ಚಿತ್ತವೃತ್ತಿಯನ್ನು ಸ್ಥಿರಗೊಳಿಸಬೇಕು. ಯಾವ ಪ್ರಕಾರವಾಗಿ ಮುಂದೆ ಯಾವುದೂ ಆಹುತಿ ಕೊಡುವುದು ಇಲ್ಲದಾಗ ಪೂರ್ಣಾಹುತಿಯನ್ನು ಕೊಡುವರು ।।೮೨।।

ಅಥವಾ ಕುಲೀನ ಮನುಷ್ಯನು ತನ್ನ ಕನ್ಯೆಯನ್ನು ಉತ್ತಮ ಕುಲಕ್ಕೆ ಅರ್ಪಿಸಿದಾಗ ಆಕೆಯು ಆ ಕುಲದಲ್ಲಿ ಸ್ಥಿರಳಾಗುವಳು. ಅಥವಾ ಲಕ್ಷ್ಮಿಯು ಒಬ್ಬ ವಿಷ್ಣುವಿನಲ್ಲಿ ಸ್ಥಿರವಾದಳು ।।೮೩।।

ಈ ಪ್ರಕಾರವಾಗಿ ವಿಕಲ್ಪರಹಿತನಾಗಿ ಯೋಗ ಇಲ್ಲವೇ ಜ್ಞಾನ ಇವುಗಳಲ್ಲಿ ವ್ಯವಹರಿಸುವುದೇ ಇದು ಮೂರನೆಯದಾದ ಜ್ಞಾನಯೋಗವಾಗಿದೆ ಎಂದು ಶ್ರೀಕೃಷ್ಣ ಒಡೆಯನು ಹೇಳಿದನು ।।೮೪।।

ಈಗ ಶಕ್ತ್ಯಾನುಸಾರವಾಗಿ ಕಾಯಾ, ವಾಚಾ, ಮನದಿಂದ ದಾನವನ್ನು ಮಾಡುವಾಗ ನಿಜವಾಗಿ ತೊಂದರೆಗೀಡಾದ ವೈರಿಯನ್ನು ಸಹ ವಿನ್ಮುಖಗೊಳಿಸಬಾರದು. ಇದೇ ನಿಜವಾದ ದಾನವಾಗಿದೆ ।।೮೫।।

ಧನಂಜಯನೇ, ಯಾವ ಪ್ರಕಾರವಾಗಿ ವೃಕ್ಷವು ತನ್ನ ಹೂವುಗಳು, ಹಣ್ಣುಗಳು, ನೆರಳು, ಬೇರುಗಳು, ಎಲೆಗಳು ಇವುಗಳಲ್ಲಿ ಯಾವುದಾದರೂ ದಾರಿ ನಡೆಯುವವರಿಂದ ಮುಚ್ಚಿಡುವುದಿಲ್ಲವೋ ।।೮೬।।

ಅದರಂತೆ, ಮನಃಪೂರ್ವಕವಾಗಿ ಸಂಪತ್ತಿನವರೆಗೆ ಅಡಚಣೆ ಇದ್ದವರಿಗೆ ಅವರ ಮನೋರಥದಂತೆ ಸಮಾಧಾನ ಪಡಿಸಬೇಕು ।।೮೭।।

ಅದಕ್ಕೇನೇ ''ದಾನ''ವೆಂದು ಹೇಳುವರು ಮತ್ತು ಈ ದಾನವು ಮೋಕ್ಷ ರೂಪ ನಿಧಿಯು ದೃಷ್ಟಿಗೆ ಗೋಚರಿಸುವ ಅಂಜನವಾಗಿದೆ. ಇದು ಇರಲಿ, ಈಗ ದಮದ ಲಕ್ಷಣಗಳನ್ನು ಹೇಳುವೆ ಕೇಳು ।।೮೮।।

ಹೇಗೆ ಶಸ್ತ್ರ ಧರಿಸಿದವನು ಶತ್ರುವಿನ ನಾಶ ಮಾಡುವನೋ, ಅದರಂತೆ ವಿಷಯ ಮತ್ತು ಇಂದ್ರಿಯಗಳ ಐಕ್ಯವನ್ನು ನಾಶಮಾಡುವನು ।।೮೯।।

ತೈಸಾ ವಿಷಯಜಾತಾಂಚಾ ವಾರಾ । ವಾಜೋ ನೇದಿಜೇ ಇಂದ್ರಿಯದ್ವಾರಾ । ಇಯೇ ಬಾಂಧೋನಿ ಪ್ರತ್ಯಾಹಾರಾ । ಹಾತೀ ವೋಪೀ ॥೯೦॥ ಆಂತುಲಾ ಚಿತ್ತಾಚೇ ಅಂಗವರೀ । ಪ್ರವೃತ್ತಿ ಪಳೇ ಪರ ಬಾಹೇರೀ । ಆಗೀ ಸುಯಿಜೇ ದಾಹೀಹೀ ದ್ವಾರೀ । ವೈರಾಗ್ಯಾಚೀ ॥೯೧॥ ಶ್ವಾಸೋಶ್ವಾಸಾಹುನೀ ಬಹುವಸೇ । ವ್ರತೇ ಆಚರೇ ಖರಪುಸೇ । ವೋಸಂತಿತಾ ರಾತ್ರಿ ದಿವಸೇ । ನಾರಾಣುಕ ಜಯಾ ॥೯೨॥ ಪೈ ದಮು ಐಸಾ ಮ್ಹಣಿಪೇ । ತೋ ಹಾ ಜಾಣ ಸ್ವರೂಪೇ । ಯಾಗಾರ್ಥುಹಿ ಸಂಕ್ಷೇಪೇ । ಸಾಂಗೋ ಐಕ ॥೯೩॥ ತರೀ ಬ್ರಾಹ್ಮಣ ಕರೂನಿ ಧುರೇ । ಸ್ತ್ರೀಯಾದಿಕ ಪೈಲ ಮೇರೇ । ಮಾಝಾರೀ ಅಧಿಕಾರೇ । ಆಪುಲಾಲೇನಿ ॥೯೪॥ ಜಯಾ ಜೇ ಸರ್ವೋತ್ತಮ । ಭಜನೀಯ ದೇವತಾಧರ್ಮ । ತೇ ತೇಣೇ ಯಥಾಗಮ । ವಿಧೀ ಯಜಿಜೇ ॥೯೫॥ ಜೈಸಾ ದ್ವಿಜ ಷಟ್ಕರ್ಮೇ ಕರೀ । ಶೂದ್ರ ತಯಾತೇ ನಮಸ್ಕಾರೀ । ಕೀ ದೋಹೀಸಹೀ ಸರೋಭರೀ । ನಿಪಜೇ ಯಾಗು ॥೯೬॥ ತೈಸೇ ಅಧಿಕಾರಪರ್ಯಾಲೋಚೇ । ಹೇ ಯಜ್ಞ ಕರಣೇ ಸರ್ವಾಂಚೇ । ಪರೀ ವಿಷಯ ವಿಷ ಫಳಾಶೇಚೇ । ನ ಘಾಪೇ ಮಾಜೀ ॥೯೭॥ ಆಣಿ ಮೀ ಕರ್ತಾ ಐಸಾ  ಭಾವೋ । ನೇದಿಜೇ ದೇಹಾಚೇನಿ ದ್ವಾರೇ ಜಾವೋ । ನಾ ವೇದಾಜ್ಞೇಸಿ ತರೀ ಠಾವೋ । ಹೋಇಜೇ ಸ್ವಯೇ ॥೯೮॥ ಅರ್ಜುನಾ ಏವಂ ಯಜ್ಞು । ಸರ್ವತ್ರ ಜಾಣ ಸಾಜ್ಞು । ಕೈವಲ್ಯಮಾರ್ಗೀಂಚಾ ಅಭಿಜ್ಞು । ಸಾಂಗಾತೀ ಹಾ ॥೯೯॥ ಆತಾ ಚೇಂಡುವೇ ಭೂಮೀ ಹಾಣಿಜೇ । ನವ್ಹೇ ತೋ ಹಾತಾ ಆಣಿಜೇ । ಕೀ ಶೇತೀ ಬೀ ವಿಖುರಿಜೇ । ಪರೀ ಪಿಕೀ ಲಕ್ಷ ॥೧೦೦॥ ನಾತರೀ ಠೇವಿಲೇ ದೇಖಾವಯಾ । ಆದರ ಕೀಜೇ ದಿವಿಯಾ । ಕಾ ಶಾಖಾ ಫಳೇ ಯಾವಯಾ । ಸಿಂಪಿಜೇ ಮೂಳ ॥೧೦೧॥ ಹೇ ಬಹು ಅಸೋ ಆರಿಸಾ । ಆಪಣಪೇ ದೇಖಾವಯಾ ಜೈಸಾ । ಪುಢತಪುಢತೀ ಬಹುವಸಾ । ಉಟಿಜೇ ಪ್ರೀತೀ ॥೧೦೨॥ ತೈಸಾ ವೇದಪ್ರತಿಪಾದ್ಯು ಜೋ ಈಶ್ವರು । ತೋ ಹೋಆವಯಾಲಾಗೀ ಗೋಚರು । ಶ್ರುತೀಚಾ ನಿರಂತರು । ಅಭ್ಯಾಸು ಕರಣೇ ॥೧೦೩॥ ತೇ ದ್ವಿಜಾಂಸೀಚ ಬ್ರಹ್ಮಸೂತ್ರ । ಯೇರಾ ಸ್ತೋತ್ರ ಕಾ ನಾಮಮಂತ್ರ । ಆವರ್ತವಣೇ ಪವಿತ್ರ । ಪಾವಾವಯಾ ತತ್ತ್ವ ॥೧೦೪॥ ಪಾರ್ಥಾ ಗಾ ಸ್ವಾಧ್ಯಾವೋ । ಬೋಲಿಜೇ ತೋ ಹಾ ಮ್ಹಣೇ ದೇವೋ । ಆತಾ ತಪ ಶಬ್ದಾಭಿಪ್ರಾವೋ । ಆಈಕ ಸಾಂಗೋ ॥೧೦೫॥

ಅದರಂತೆಯೇ ಇಂದ್ರಿಯ ದ್ವಾರದಿಂದ ಬರುವ ವಿಷಯಗಳ ಗಾಳಿ ಸಹ ಬಡಿಸಿಕೊಳ್ಳುವುದಿಲ್ಲ ಮತ್ತು ಎಲ್ಲ ಇಂದ್ರಿಯಗಳನ್ನು ಪ್ರತ್ಯಾಹಾರದ ಸ್ವಾಧೀನದಲ್ಲಿ ಬಂಧಿಸಿ ಬಿಡುವನು ||೯೦||

ಚಿತ್ತದಲ್ಲಿ ಮುಳುಗಿ ಹೋಗಿರುವ ಯಾವ ಪ್ರವೃತ್ತಿಯನ್ನು ಹತ್ತು ಇಂದ್ರಿಯ ಮುಖದಿಂದ ವೈರಾಗ್ಯರೂಪ ಅಗ್ನಿಯಲ್ಲಿ ಹಾಕಿ ಹೊರಗೆ ತೆಗೆಯುವನು ||೯೧||

ಶ್ವಾಸೋಚ್ಛ್ವಾಸವು ನಿಲ್ಲುವಂತೆ ಮಾಡುವ ಯೋಗಿಗಳ ಯಾವ ಅತಿ ಕಠಿಣ ವ್ರತಗಳನ್ನು ಉತ್ತಮ ರೀತಿಯಲ್ಲಿ ಹಗಲು ರಾತ್ರಿ ಆಚರಿಸುವನು ||೯೨||

ಇವು "ದಮ" ಎಂದು ಹೇಳುವ ಅದರ ಲಕ್ಷಣವಾಗಿದೆ. ಈಗ ಯಜ್ಞವೆಂದರೆ ಏನೆಂಬುದಕ್ಕೆ ಸಂಕ್ಷಿಪ್ತವಾಗಿ ಹೇಳುವೆ ಕೇಳು ||೯೩||

ಹಾಗಾದರೆ, ಬ್ರಾಹ್ಮಣರಿಂದ (ಅಗ್ರಭಾಗದಿಂದ) ಹಿಡಿದು ಕೊನೆಗೆ ಸ್ತ್ರೀಯಾದಿಕರವರೆಗೆ ಎಲ್ಲರೂ ತಮ್ಮ ತಮ್ಮ ಅಧಿಕಾರದಂತೆ ||೯೪||

ಯಾರಿಗೆ ಯಾವುದು ಯೋಗ್ಯ ದೈವತಗಳ ಪೂಜೆಗಳನ್ನು ಮತ್ತು ಇರುವ ಧರ್ಮಗಳನ್ನು ಯಥಾಶಾಸ್ತ್ರವಾಗಿ ವಿಧಿಯುಕ್ತವಾಗಿ ಆಚರಿಸಬೇಕು ||೯೫||

ಯಾವ ಪ್ರಕಾರವಾಗಿ ಬ್ರಾಹ್ಮಣನು ಷಟ್‌ಕರ್ಮಗಳ ಆಚರಣೆ ಮಾಡಬೇಕು ಮತ್ತು ಶೂದ್ರನು ಅವುಗಳಿಗೆ ವಂದಿಸಬೇಕು, ಇದೇ ಅವರ ಯಜ್ಞವಾಗಿದೆ ಮತ್ತು ಈ ಇಬ್ಬರಿಗೂ ಯಜ್ಞದ ಒಂದೇ ಫಲ ಸಿಗುವುದು ||೯೬||

ಅದರಂತೆ ಅಧಿಕಾರದಂತೆ ವಿಚಾರ ಮಾಡಿ ಎಲ್ಲರೂ ತಮ್ಮ ತಮ್ಮ ಯಜ್ಞಗಳನ್ನು ಮಾಡಬೇಕು. ಆದರೆ ಫಲದ ಆಶೆ ಎಂಬ ವಿಷವನ್ನು ಅದರಲ್ಲಿ ಹಾಕಕೂಡದು ||೯೭||

ಮತ್ತು ಈ ಯಜ್ಞದ ನಾನು ಕರ್ತನಿರುವೆನೆಂದು ದೇಹದಿಂದ ಮನದಲ್ಲಿ ಭಾವವನ್ನು ಉತ್ಪನ್ನವಾಗಗೊಡಬಾರದು. ಹಾಗೆಯೇ ವೇದಗಳ ಎಲ್ಲ ಆಜ್ಞೆಗಳನ್ನು ಸ್ವತಃ ಪಾಲಿಸಬೇಕು ||೯೮||

ಅರ್ಜುನಾ, ಇದಕ್ಕೇನೇ ಶಾಸ್ತ್ರಯುಕ್ತ 'ಯಜ್ಞ'ವೆಂದು ಹೇಳುವರು. ಹಾಗೂ ಇದು ಮೋಕ್ಷಮಾರ್ಗದ ತಿಳುವಳಿಕೆಯದ್ದಾಗಿ ಜೊತೆಗಾರವೂ ಆಗಿದೆ ||೯೯||

ಚಂಡನ್ನು ನೆಲಕ್ಕೆ ಅಪ್ಪಳಿಸುವುದಲ್ಲದೇ ಅದನ್ನು ಪುನಃ ಕೈಯಲ್ಲಿ ಹಿಡಿಯುತ್ತೇವೆ. ಅಥವಾ ಹೊಲದಲ್ಲಿ ಬಿತ್ತುವ ಬೀಜಗಳನ್ನು ನಾಶಮಾಡಲಲ್ಲದೇ, ಅವುಗಳನ್ನು ಬೆಳೆಯಬೇಕೆಂಬ ಲಕ್ಷದಿಂದ ನೆಲದಲ್ಲಿ ಹಾಕಿದೆ ||೧೦೦||

ಅಥವಾ ಇಷ್ಟ ಪದಾರ್ಥಗಳು ದೃಷ್ಟಿಗೆ ಕಾಣಬೇಕೆಂಬ ಹೇತುವಿನಿಂದ ಕೈಯಲ್ಲಿ ದೀಪವನ್ನು ಹಿಡಿಯುವರು. ಅಥವಾ ಗಿಡದ ಬೇರಿಗೆ, ಅದಕ್ಕೆ ಟೊಂಗೆ, ಫಲಗಳು ಬರಬೇಕೆಂದು ನೀರು ಹಾಕುವರು ||೧೦೧||

ಇಷ್ಟೇ ಅಲ್ಲ; ತನ್ನ ಸ್ವರೂಪವನ್ನು ಕನ್ನಡಿಯಲ್ಲಿ ನೋಡಬೇಕೆಂಬ ಉದ್ದೇಶದಿಂದ ಮನುಷ್ಯನು ಅದನ್ನು ಮೇಲಿಂದ ಮೇಲೆ ಪ್ರೀತಿಯಿಂದ ಸ್ವಚ್ಛ ಮಾಡುವನು ||೧೦೨||

ಅದೇ ಪ್ರಕಾರವಾಗಿ ವೇದಗಳು ಯಾವ ಈಶ್ವರನನ್ನು ವರ್ಣಿಸಿರುವುದನ್ನು ತನಗೆ ಪ್ರಾಪ್ತವಾಗಬೇಕೆಂದು ವೇದಗಳನ್ನು ಸತತವಾಗಿ ಅಭ್ಯಾಸ ಮಾಡುವನು ||೧೦೩||

ಬ್ರಹ್ಮಪ್ರಾಪ್ತಿಗಾಗಿ ಬ್ರಾಹ್ಮಣರು ವೇದದೊಳಗಿನ ಬ್ರಹ್ಮಸೂತ್ರವನ್ನು ಮತ್ತು ಇತರರು ಸ್ತೋತ್ರಗಳನ್ನು ಅಥವಾ ಈಶ್ವರನ ಹೆಸರನ್ನು ಮೇಲಿಂದ ಮೇಲೆ ಹೇಳಬೇಕು ||೧೦೪||

ದೇವನು ಹೇಳುವನು:- ಪಾರ್ಥಾ, ಇದಕ್ಕೆ "ಸ್ವಾಧ್ಯಾಯ"ವೆಂದು ಹೇಳುವರು. ಈಗ ನಿನಗೆ "ತಪ" ಶಬ್ದದ ಅಭಿಪ್ರಾಯವನ್ನು ಹೇಳುವೆ. ಅದನ್ನು ಕೇಳು ||೧೦೫||

ತರೀ ದಾನೇ ಸರ್ವಸ್ವ ದೇಣೇ । ವೇಂಚಣೇ ತೇ ವ್ಯರ್ಥ ಕರಣೇ । ಜೈಸೇ ಫಳೋನಿ ಸ್ವಯೇ ಸುಕಣೇ । ಇಂದ್ರಾವಣೀ ಜೇವೀ ।।೧೦೬।। ನಾನಾ ಧೂಪಾಚಾ ಅಗ್ನಿಪ್ರವೇಶು । ಕನಕೀ ತುಕಾಚಾ ನಾಶು । ಪಿತೃಪಕ್ಷ ಪೋಷಿತಾ ಹಾರಾಸು । ಚಂದ್ರಾಚಾ ಜೈಸಾ ।।೧೦೭।। ತೈಸಾ ಸ್ವರೂಪಾಚಿಯಾ ಪ್ರಸರಾ । ಲಾಗೀ ಪ್ರಾಣೇಂದ್ರಿಯಶರೀರಾ । ಆಟಣೀ ಕರಣೇ ಜೇ ವೀರಾ । ತೇಂಚಿ ತಪ ।।೧೦೮।। ಅಥವಾ ಅನಾರಿಸೇ । ತಪಾಚೇ ರೂಪ ಜರೀ ಅಸೇ । ತರೀ ಜಾಣ ಜೇವೀ ದುಧೀ ಹಂಸೇ । ಸೂದಲೀ ಚಾಂಚೂ ।।೧೦೯।। ತೈಸೇ ದೇಹಜೀವಾ ಚಿಯೇ ಮಿಳಣೀ । ಜೋ ಉದಯಜತ ಸೂಯೇ ಪಾಣೀ । ತೋ ವಿವೇಕ ಅಂತಃಕರಣೀ । ಜಾಗ ವೀಜೇ ।।೧೧೦।। ಪಾಹತಾ ಆತ್ಮ ಯಾಕಡೇ । ಬುದ್ಧೀಚಾ ಪೈಸು ಸಾಂಕಡೇ । ಸನಿದ್ರ ಸ್ವಪ್ನ ಬುಡೇ । ಜಾಗಣೀ ಜೈಸೇ ।।೧೧೧।। ತೈಸಾ ಆತ್ಮಪರ್ಯಾಲೋಚು । ಪ್ರವರ್ತೇ ಜೋ ಸಾಚು । ತಪಾಚಾ ಹಾ ನಿರ್ವೇಚು । ಧನುರ್ಧರಾ ।।೧೧೨।। ಆತಾ ಬಾಳಾಚ್ಯಾ ಹಿತೀ ಸ್ತನ್ಯ । ಜೈಸೇ ನಾನಾ ಭೂತೀ ಚೈತನ್ಯ । ತೈಸೇ ಪ್ರಾಣಿಮಾತ್ರೀ ಸೌಜನ್ಯ । ಆರ್ಜವ ತೇ ।।೧೧೩।।

ಅಹಿಂಸಾ ಸತ್ಯಮಕ್ರೋಧಃ ತ್ಯಾಗಃ ಶಾಂತಿರಪೈಶುನಮ್ ।<br>
ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಮ್ ।।೨।।

ಆಣಿ ಜಗಾಚಿಯಾ ಸುಖೋದ್ದೇಶೇ । ಶರೀರವಾಚಾಮಾನಸೇ । ರಾಹಾಟಣೇ ತೇ ಅಹಿಂಸೇ । ರೂಪ ಜಾಣ ।।೧೧೪।। ಆತಾ ತೀಖ ಹೋಊನಿ ಮವಾಳ । ಜೈಸೇ ಜಾತೀಚೇ ಮುಕುಳ । ಕಾ ತೇಜ ಪರೀ ಶೀತಳ । ಶಶಾಂಕಾಚೇ ।।೧೧೫।। ಶಕೇ ದಾವಿತಾಂಚಿ ರೋಗು ಫೇಡು । ಆಣೀ ಜಿಭೇ ತರೀ ನವ್ಹೇ ಕಡು । ತೇ ವೋಖದು ನಾಹೀ ಮಾ ಘಡು । ಉಪಮಾ ಕೈಂಚೀ ।।೧೧೬।। ತರೀ ಮಊಪಣೇ ಬುಬುಳೇ । ಝಗಡತಾಂಹೀ ಪರೀ ನಾಡಳೇ । ಯೇರ್ಹವೀ ಫೋಡೀ ಕೋರಾಳೇ । ಪಾಣೀ ಜೈಸೇ ।।೧೧೭।। ತೈಸೇ ತೋಡಾವಯಾ ಸಂದೇಹ । ತೀಖ ಜೈಸೇ ಕಾ ಲೋಹ । ಶ್ರಾವ್ಯತ್ವೇ ತರೀ ಮಾಧುರ್ಯ । ಪಾಯೀ ಘಾಲೀ ।।೧೧೮।। ಐಕೋ ಠಾತಾ ಕೌತುಕೇ । ಕಾನಾತೇ ನಿಘತೀ ಮುಖೇ । ಜೇ ಸಾಚಾರಿವೇಚೇನಿ ಬಿಕೇ । ಬ್ರಹ್ಮಹೀ ಭೇದೀ ।।೧೧೯।। ಕಿಂಬಹುನಾ ಪ್ರಿಯಪಣೇ । ಕೋಣಾತೇಂಹೀ ಝಕವೂ ನೇಣೇ । ಯಥಾರ್ಥ ತರೀ ಖುಪಣೇ । ನಾಹೀ ಕವಣಾ ।।೧೨೦।।

ಸತ್ಪಾತ್ರಕ್ಕೆ ಸರ್ವಸ್ವವೂ ಕೊಟ್ಟರೆ ಅದು ದಾನವೆನಿಸುವುದು. ಅದರ ಹೊರತಾಗಿ ಸಿಕ್ಕ ಸಿಕ್ಕಲ್ಲಿ, ಸಿಕ್ಕ ಹಾಗೆ ಖರ್ಚಿಸಿದರೆ ಅದು ವ್ಯರ್ಥವೆನಿಸುವುದು. ಇಂದ್ರಾವಣಿ ಫಲವು ಯಾರಿಗೂ ಉಪಯೋಗವಾಗದೇ ತಾನೇ ಒಣಗಿ ಹೋಗುವುದು ।।೧೦೬।।

ಧೂಪವು ಅಗ್ನಿಯಲ್ಲಿ ಬಿದ್ದು ಸ್ವತಃ ನಾಶಮಾಡಿಕೊಳ್ಳುವುದು. ಆದರೆ ಎಲ್ಲರಿಗೂ ಸುಗಂಧವನ್ನು ಕೊಡುವುದು. ಬಂಗಾರವನ್ನು ಹೆಚ್ಚೆಚ್ಚು ಕಾಯಿಸಿದಂತೆ ತೂಕವು ಕಡಿಮೆಯಾಗಿ ಒರೆಯು ಹೆಚ್ಚುವುದು. ಕೃಷ್ಣಪಕ್ಷ ಬೆಳೆಯಲು ಚಂದ್ರನು ಹ್ರಾಸನಾಗಬೇಕಾಗುವುದು ।।೧೦೭।।

ಅದರಂತೆ ಹೇ ವೀರನೇ, ಬ್ರಹ್ಮಸ್ವರೂಪದ ಪ್ರಾಪ್ತಿಗಾಗಿ ಪ್ರಾಣ, ಇಂದ್ರಿಯಗಳು ಮತ್ತು ಶರೀರ ಇವುಗಳನ್ನು ಸವಿಸುವುದೇ ತಪವೆಂದು ಹೇಳುವರು ।।೧೦೮।।

ಅಥವಾ ಇತರ ಯಾವ ತಪಗಳು ಇದರಂತೆ ಶುದ್ಧವಾಗಿರುವುದಿಲ್ಲ. ಅದಕ್ಕಾಗಿ ಹಂಸಪಕ್ಷಿಯು ಹಾಲಿನಲ್ಲಿ ಚುಂಚು ಹಾಕಿ ಹಾಲು, ನೀರನ್ನು ಹೇಗೆ ಬೇರ್ಪಡಿಸುವುದೋ ।।೧೦೯।।

ಅದರಂತೆ ದೇಹ ಮತ್ತು ಜೀವ ಇವುಗಳ ಐಕ್ಯವನ್ನು ಮುರಿಯುವುದಕ್ಕಾಗಿ ಆತನು ಜನ್ಮತಃ ಕೈ ಹಾಕಿ ವಿವೇಕದಿಂದ ಅಂತಃಕರಣದಲ್ಲಿ ಯಾವಾಗಲೂ ಬೇರ್ಪಡಿಸುವ ವಿಚಾರ ಮಾಡುವನು ।।೧೧೦।।

ಆತ್ಮವಿಚಾರವಾದಾಗ ಬುದ್ಧಿಯ ವಿಷಯಗಳಲ್ಲಿನ ಮಾರ್ಗವು ಕುಂಠಿತವಾಗುವುದು. ಯಾವ ಪ್ರಕಾರವಾಗಿ ಮನುಷ್ಯನು ಎಚ್ಚರವಾದಾಗ ನಿದ್ರೆ ಮತ್ತು ಸ್ವಪ್ನಗಳು ತಾವೇ ಇಲ್ಲದಂತಾಗುವುವೋ ।।೧೧೧।।

ಅದರಂತೆ ಅರ್ಜುನಾ, ಆತ್ಮಪ್ರಾಪ್ತಿಗಾಗಿ ಅಂತಃಕರಣದಲ್ಲಿ ಉತ್ಪನ್ನವಾಗುವ ವಿವೇಕಕ್ಕೆ ''ತಪ''ವೆನ್ನುವರು ।।೧೧೨।।

ಯಾವ ಪ್ರಕಾರವಾಗಿ ಮಗುವಿಗೆ ಹಾಲು ಹಿತಕರವಾಗಿದೆಯೋ ಮತ್ತು ಪ್ರಾಣವು ಎಲ್ಲ ಪ್ರಾಣಿಗಳಲ್ಲಿ ಸಮಾನವಾಗಿ ಇದೆಯೋ, ಅದರಂತೆ ಪ್ರಾಣಿ ಮಾತ್ರರಲ್ಲಿ ಸೌಜನ್ಯವಿರುವುದೇ '' ಆರ್ಜವ'' ವೆಂದು ಹೇಳುವರು ।।೧೧೩।।

ಶ್ಲೋಕಾರ್ಥ :- ೧೦.ಅಹಿಂಸೆ, ೧೧.ಸತ್ಯ, ೧೨.ಕೋಪವಿಲ್ಲದಿರುವುದು, ೧೩.ತ್ಯಾಗಬುದ್ಧಿ, ೧೪.ಶಾಂತತೆ, ೧೫.ಚಾಡಿ ಹೇಳದಿರುವಿಕೆ, ೧೬.ಭೂತ ದಯೆ, ೧೭.ಮೃದು ಸ್ವಭಾವ, ೧೮.ವಿಷಯಲೋಲು ಪ್ತತೆಯಿಲ್ಲದಿರುವುದು. ೧೯.ನಾಚುವುದು, ೨೦.ಚಾಂಚಲ್ಯವಿಲ್ಲದಿರುವುದು ।೨।।

ಮತ್ತು ಕಾಯಾ, ವಾಚಾ, ಮನದಿಂದ ಜಗತ್ತಿಗೆ ಸುಖವಾಗಬೇಕೆಂಬ ಉದ್ದೇಶದಿಂದ ವರ್ತಿಸುವುದೇ ''ಅಹಿಂಸೆ'' ಯ ನಿಜವಾದ ಲಕ್ಷಣವೆಂದು ತಿಳಿ ।।೧೧೪।।

ಈಗ ತೀಕ್ಷ್ಣ ಕಂಡರೂ ಮೃದುವಾಗಿರಬೇಕು. ಹೇಗೆಂದರೆ ಕಮಲದ ಮೊಗ್ಗೆಯು ನೀರನ್ನು ಭೇದಿಸಿ ಮೇಲೆ ಬರುವುದು, ಆದರೆ ಮೃದುವಾಗಿರುವುದು. ಚಂದ್ರನ ತೇಜವು ಶೀತಲವಾಗಿರುವುದು ।।೧೧೫।।

ಕೇವಲ ದರ್ಶನ ಮಾತ್ರದಿಂದ ರೋಗ ನಾಶಗೊಳಿಸುವಂತಹ ಮತ್ತು ನಾಲಿಗೆಗೆ ವಿಷವಾಗದಂತಹ ಔಷಧವೇ ಇಲ್ಲ. ಅಂದಮೇಲೆ ಇದರ ಉಪಮೆ ಹೇಗೆ ಕೊಡಬೇಕು? ।।೧೧೬।।

ಆದರೆ ಮೃದುತನದಲ್ಲಿ ಕಣ್ಣಿನ ಗುಡ್ಡೆಗಳಿಗೂ ಒತ್ತುವುದಿಲ್ಲ ಮತ್ತು ಕಠೋರತನದಲ್ಲಿ ಪರ್ವತದ ದಂಡೆಯನ್ನು ಯಾವ ನೀರು ಸೀಳಿ ಹೊರಬೀಳುವುದು ।।೧೧೭।।

ಅದರಂತೆ ಸಂಶಯ ನಿವೃತ್ತಿ ಮಾಡುವುದರಲ್ಲಿ ಉಕ್ಕಿನಂತೆ ತೀಕ್ಷ್ಣವಾಗಿರುವುದು ಮತ್ತು ಕೇಳಲು ಅದು ಮಾಧುರ್ಯಕ್ಕೆ ತಲೆ ಬಗ್ಗಿಸುವುದು ।।೧೧೮।।

ಕೌತುಕದಿಂದಲಾದರೂ ಕೇಳಿದರೆ ಕಿವಿಗಳಿಗೆ ಮುಖಗಳು ಹುಟ್ಟುವುವು. ಸತ್ಯತ್ವದ ಸಾಮರ್ಥ್ಯವು ಅದು ಬ್ರಹ್ಮವನ್ನೂ ಭೇದಿಸುವುದು ।।೧೧೯।।

ಹೆಚ್ಚಿಗೇನು ಹೇಳಬೇಕು? ಪ್ರೀತಿಯ ವಿಷಯವಾಗಿ ವಿಚಾರಿಸಿದರೆ ಆ ಶಬ್ದಗಳು ಯಾರನ್ನೂ ವಂಚಿಸುವುದಿಲ್ಲ ಮತ್ತು ಅದರ ಅರ್ಥವನ್ನು ವಿಚಾರಿಸಿದರೆ ಅದರಿಂದ ಯಾರ ಮನಸ್ಸಿಗೂ ನೋವು ಆಗದಂತಿರುವುದು ।।೧೨೦।।

ಯೇರ್‍ಹ್ವೀ ಗೋರೀ ಕೀರ ಕಾನಾ ಗೋಡ । ಪರೀ ಸಾಚಾಚಾ ಪಾಖಾಳೀ ಕೀಡ । ಆಗೀಚೇ ಕರಣೇ ಉಘಡ । ಪರೀ ಜಳೋ ತೇ ಸಾಚ ।।೧೨೧।। ಕಾನೀ ಲಾಗತಾ ಮಹೂರ । ಅರ್ಥೇ ವಿಭಾಂಡೀ ಜಿವ್ಹಾರ । ತೇ ವಾಚಾ ನವ್ಹೇ ಸುಂದರ । ಲಾಂವಚಿ ಪಾ ।।೧೨೨।। ಪರೀ ಅಹಿತೀ ಕೋಪೋನಿ ಸೋಪ । ಲಾಲನೀ ಮಲೂ ಜೈಸೇ ಪುಷ್ಪ । ತಿಯೇ ಮಾತೇಚೇ ಸ್ವರೂಪ । ಜೈಸೇ ಕಾ ಹೋಯ ।।೧೨೩।। ತೈಸೇ ಶ್ರವಣಸುಖ ಚತುರ । ಪರಿಣಮೋನಿ ಸಾಚಾರ । ಬೋಲಣೇ ಜೇ ಅವಿಕಾರ । ತೇ ಸತ್ಯ ಯೇಥೇ ।।೧೨೪।। ಆತಾ ಘಾಲಿತಾಂಹೀ ಪಾಣೇ । ಪಾಷಾಣೇ ನ ನಿಘೇ ಆಣೇ । ಕಾ ಮಥಿಲಿಯಾ ಲೋಣೇ । ಕಾಂಜಿ ನೇದೀ ।।೧೨೫।। ತ್ವಚಾ ಪಾಯೇ ಶಿರೀ । ಹಾಲೇಯಾಹೀ ಫಡೇ ನ ಕರೀ । ವಸಂತಿಹೀ ಅಂಬರೀ । ನ ಹೋತೀ ಫುಲೇ ।।೧೨೬।। ನಾನ ರಂಭೇಚೇನಿಹೀ ರೂಪೇ । ಶುಕೀ ನುಠಿಚೇಚಿ ಕಂದರ್ಪೇ । ಕಾ ಭಸ್ಮೀ ವನ್ಹಿ ನ ಉದ್ದೀಪೇ । ಘೃತೇಂಹೀ ಜೇವೀ ।।೧೨೭।। ತೇವೀಂಚಿ ಕುಮಾರು ಕ್ರೋಧೇ ಭರೇ । ತೈಸಿಯಾ ಮಂತ್ರಾಚೀ ಬೀಜಾಕ್ಷರೇ । ತಿಯೇ ನಿಮಿತ್ತೇಹೀ ಅಪಾರೇ । ಮೀನಲಿಯಾ ।।೧೨೮।। ಪೈ ಧಾತಯಾಹೀ ಪಾಯಾ ಪಡತಾ । ನುಠೀ ಗತಾಯು ಪಂಡುಸುತಾ । ತೈಸೀ ನುಪಜೇ ಉಪಜವಿತಾ । ಕ್ರೋಧೋರ್ಮಿ ಗಾ ।।೧೨೯।। ಅಕ್ರೋಧತ್ವ ಐಸೇ । ನಾಂವ ತೇ ಯೇ ದಶೇ । ಜಾಣ ಐಸೇ ಶ್ರೀನಿವಾಸೇ । ಮ್ಹಣಿತಲೇ ತಯಾ ।।೧೩೦।। ಆತಾ ಮೃತ್ತಿ ಕಾತ್ಯಾಗೇ ಘಟು । ತಂತುತ್ಯಾಗೇ ಪಟು । ತ್ಯಜಿಚೇ ಜೇವೀ ವಟು । ಬೀಜತ್ಯಾಗೇ ।।೧೩೧।। ಕಾ ತ್ಯಜೂನಿ ಭಿಂತಿಮಾತ್ರ । ತ್ಯಜಿಚೇ ಆಘವೇಂಚಿ ಚಿತ್ರ । ಕಾ ನಿದ್ರಾತ್ಯಾಗೇ ವಿಚಿತ್ರ । ಸ್ವಪ್ನಜಾಳ ।।೧೩೨।। ನಾನಾ ಜಳತ್ಯಾಗೇ ತರಂಗ । ವರ್ಷಾತ್ಯಾಗೇ ಮೇಘ । ತ್ಯಜಿಜತೀ ಜೈಸೇ ಭೋಗ । ಧನತ್ಯಾಗೇ ।।೧೩೩।। ತೇವೀ ಬುದ್ಧಿಮಂತೀ ದೇಹೀ । ಅಹಂತಾ ಸಾಂಡೂನಿ ಪಾಹೀ । ಸಾಂಡಿಜೇ ಅಶೇಷಹೀ । ಸಂಸಾರಜಾತ ।।೧೩೪।। ತಯಾ ನಾಂವ ತ್ಯಾಗು । ಮ್ಹಣೇ ತೋ ಯಜ್ಞಾಂಗು । ಹೇ ಮಾನೂನಿ ಸುಭಗು । ಪಾರ್ಥು ಪುಸೇ ।।೧೩೫।। ಆತಾ ಶಾಂತೀಚೇ ಲಿಂಗ । ತೇ ವ್ಯಕ್ತ ಮಜ ಸಾಂಗ । ದೇವೋ ಮ್ಹಣತೀ ಚಾಂಗ । ಅವಧಾನ ದೇಈ ।।೧೩೬।। ತರೀ ಗಿಳೋನಿ ಜ್ಞೇಯಾತೇ । ಜ್ಞಾತಾ ಜ್ಞಾನಾಹೀ ಮಾಘಾರೌತೇ । ಹಾರಪೇ ನಿರುತೇ । ತೇ ಶಾಂತಿ ಪೈ ಗಾ ।।೧೩೭।। ಜೈಸಾ ಪ್ರಳಯಾಂಬೂಚಾ ಉಭಡು । ಬುಡವೂನಿ ವಿಶ್ವಾಚಾ ಪವಾಡು । ಹೋಯ ಆಪಣಪೇ ನಿಬಿಡು । ಆಪಣಚೀ ।।೧೩೮।।

ಇದರ ಹೊರತಾಗಿ, ಮೃಗ ಬೇಟೆಗಾರನ ಗಾಯನವು ಕಿವಿಗೆ ಇಂಪಾಗಿ ತೋರುವುದು. ಆದರೆ ನಿಜವಾಗಿ ನೋಡಿದರೆ ಅದು ಮೃಗಗಳಿಗೆ ಘಾತವಾಗಿದೆ. ಅಗ್ನಿಯು ತನ್ನ ಕೃತ್ಯವನ್ನು ಬಹಿರಂಗದಿಂದಲೇ ಮಾಡುವುದು. ಆದರೆ ಅದರ ಸತ್ಯತನಕ್ಕೆ ಬೆಂಕಿ ಹಚ್ಚಬೇಕು!!॥೧೨೧॥

ಕೇಳಲು ಮಧುರವಾಗಿದ್ದರೂ ಅದರ ಅರ್ಥವನ್ನು ವಿಚಾರಿಸಿದಾಗ ಹೃದಯವನ್ನು ಕೊರೆಯುವುದು. ಇದು ಭಾಷಣವಲ್ಲದೇ ಮಾಯಾವಿ ಸುಂದರ ಸ್ತ್ರೀಯಾಗಿರುವುದು ॥೧೨೨॥

ಅಹಿತದಿಂದ ಕಾಪಾಡಲು ತೋರಿಕೆಯಲ್ಲಿ ಕೋಪೋದ್ರೇಕ ಮಾತುಗಳು ಕಂಡರೂ ಅವು ಪೊಳ್ಳಾಗಿದ್ದು ರಕ್ಷಿಸುವುದರಲ್ಲಿ ಹೂವಿನಂತೆ ತಾಯಿಯ ಸ್ವರೂಪವಾಗಿರುವುದು ॥೧೨೩॥

ಅದರಂತೆ ಕೇಳಿದಾಗ ಅದರಿಂದ ಸುಖಪ್ರಾಪ್ತಿಯಾಗಿ ಪರಿಣಾಮವೂ ಒಳ್ಳೆಯದಾಗಿ ಯಾರನ್ನೂ ಮರ್ಮ ಭೇದ ಮಾಡದ ಮಾತುಗಳಿಗೆ ''ಸತ್ಯ'' ಮಾತನಾಡುವುದು ಎಂದು ಹೇಳುವರು ॥೧೨೪॥

ಈಗ, ಕಲ್ಲಿನ ಮೇಲೆ ನೀರು ಸುರವಿದರೂ ಆದಕ್ಕೆ ಅಂಕುರವು ಹುಟ್ಟುವುದಿಲ್ಲ. ಅಥವಾ ಮಜ್ಜಿಗೆಯನ್ನು ಕಡಿದರೆ ಅದರಲ್ಲಿ ಬೆಣ್ಣೆ ಬರುವುದಿಲ್ಲ ॥೧೨೫॥

ಸರ್ಪದ ಪರೆಯ ಹೆಡೆಗೆ ಕಾಲು ತಗಲಿದರೆ ಅದು ಹೆಡೆ ಎತ್ತುವುದೇ? ಹಾಗೂ ವಸಂತ ಋತು ಪ್ರಾಪ್ತವಾದಾಗ್ಯೂ ಆಕಾಶಕ್ಕೆ ಹೂವುಗಳು ಹುಟ್ಟುವುದಿಲ್ಲ ॥೧೨೬॥

ರಂಭೆಯ ರೂಪ ಲಾವಣ್ಯದಿಂದ ಶುಕನಿಗೆ ವಿಷಯ ವಾಸನೆ ಹುಟ್ಟಲಿಲ್ಲ. ಅಥವಾ ಬೂದಿಯಲ್ಲಿ ತುಪ್ಪವನ್ನು ಎರಚಿದರೂ ಅಗ್ನಿಯ ಜ್ವಾಲೆಯು ಹುಟ್ಟುವುದಿಲ್ಲ ॥೧೨೭॥

ಅದರಂತೆ ಚಿಕ್ಕ ಮಕ್ಕಳಿಗೂ ಸಹ ಸಿಟ್ಟು ಬರುವಂತಹ ಅಪಶಬ್ದಗಳನ್ನು (ಬೈಗಳನ್ನು) ಆಡಿದರೂ, ಈ ಪ್ರಕಾರ ಅನೇಕ ಕಾರಣ ಒದಗಿದರೂ ॥೧೨೮॥

ಹೇ ಪಂಡುಸುತನೇ, ಆಯುಷ್ಯ ಮುಗಿದವನಿಗಾಗಿ (ಸತ್ತವನಿಗೆ) ಎಬ್ಬಿಸಲು ಬ್ರಹ್ಮದೇವನ ಕಾಲು ಹಿಡಿದರೂ ಆತನು ಹೇಗೆ ಏಳನೋ, ಅದರಂತೆ ಆತನಲ್ಲಿ ಕ್ರೋಧವು ಏಳುವುದೇ ಇಲ್ಲ ॥೧೨೯॥

ಈ ಪ್ರಕಾರದ ಚಿತ್ತದ ಸ್ಥಿತಿಗೆ ''ಅಕ್ರೋಧತ್ವ''ವೆಂದು ಹೇಳುವರು. ಹೀಗೆ ಶ್ರೀಕೃಷ್ಣನು ಅರ್ಜುನನಿಗೆ ಹೇಳಿದನು ॥೧೩೦॥

ಮಣ್ಣಿನ ತ್ಯಾಗ ಮಾಡಿದರೆ ಮಡಿಕೆಯ ತ್ಯಾಗವು, ನೂಲಿನ ತ್ಯಾಗ ಮಾಡಿದರೆ ವಸ್ತ್ರದ ತ್ಯಾಗವು. ಹಾಗೆಯೇ ಬೀಜದ ತ್ಯಾಗ ಮಾಡಿದರೆ ವೃಕ್ಷದ ತ್ಯಾಗವು ಸಹಜವಾಗಿ ಆಗುವುದು ॥೧೩೧॥

ಅಥವಾ ಗೋಡೆಯ ತ್ಯಾಗ ಮಾಡಿದರೆ ಅದರ ಮೇಲಿರುವ ಎಲ್ಲ ಚಿತ್ರಗಳ ತ್ಯಾಗವು ತಾನೇ ಆಗುವುದು. ಅಥವಾ ನಿದ್ರೆಯ ತ್ಯಾಗದಿಂದ ನಾನಾ ತರಹದ ಸ್ವಪ್ನಗಳ ತ್ಯಾಗವು ತಾನೇ ಆಗುವುದು ॥೧೩೨॥

ನೀರಿನ ತ್ಯಾಗದಿಂದ ತೆರೆಗಳ ತ್ಯಾಗವಾಗುವುದು ಮತ್ತು ಮಳೆಗಾಲದ ತ್ಯಾಗದಿಂದ ಮೋಡಗಳ ತ್ಯಾಗವಾಗುವುದು. ಹಾಗೂ ಧನದ ತ್ಯಾಗದಿಂದ ವಿಷಯೋಪ ಭೋಗಗಳ ತ್ಯಾಗವು ತಾನೇ ಆಗುವುದು ॥೧೩೩॥

ಅದರಂತೆ ಜ್ಞಾನಿಗಳು ತಮ್ಮ ದೇಹಕ್ಕೆ ನಾನು ಎಂಬ ಅಹಂಕಾರದ ತ್ಯಾಗವನ್ನು ಮಾಡಿ, ಎಲ್ಲ ಸಂಸಾರದ ತ್ಯಾಗವನ್ನು ಮಾಡುವರು ॥೧೩೪॥

ಇದಕ್ಕೆ ಮಾತ್ರ ''ತ್ಯಾಗ''ವೆನ್ನುವರು ಎಂದು ಯಜ್ಞಭೋಕ್ತನಾದ ಶ್ರೀಕೃಷ್ಣಪರಮಾತ್ಮನು ಹೇಳಿದ್ದು ಮಾನ್ಯ ಮಾಡಿ ಭಾಗ್ಯವಾನನಾದ ಪಾರ್ಥನು ಪ್ರಶ್ನೆ ಮಾಡಿದನು ॥೧೩೫॥

ಹೇ ಪ್ರಭೋ, ಶಾಂತಿಯ ಲಕ್ಷಣಗಳೇನು? ಅವುಗಳನ್ನು ನನಗೆ ಸ್ಪಷ್ಟವಾಗಿ ತಿಳಿಸಿ ಹೇಳಿರಿ ಎಂದು ಕೇಳಿದಾಗ, ದೇವನೆಂದನು:- ನೀನು ಬಹಳ ಉತ್ತಮವಾದದ್ದನ್ನು ವಿಚಾರಿಸಿರುವಿ, ಹೇಳುವೆ ಲಕ್ಷಕೊಟ್ಟು ಕೇಳು ॥೧೩೬॥

ತಿಳಿಯುವುದನ್ನು ತಿಳಿದ ಮೇಲೆ ತಿಳಿಯುವವನು, ತಿಳಿಯುವುದು ಇವು ಸಹ ಲೋಪವಾಗುವುವು. ಜ್ಞಾತಾ, ಜ್ಞಾನ ಮತ್ತು ಜ್ಞೇಯ ಈ ತ್ರಿಪುಟಗಳು ಎಲ್ಲಿ ನಷ್ಟವಾಗುವುವೋ, ಅದುವೇ ನಿಜವಾದ ಬ್ರಹ್ಮರೂಪ ಶಾಂತಿಯಾಗಿರುವುದು ॥೧೩೭॥

ಯಾವ ಪ್ರಕಾರವಾಗಿ ಪ್ರಳಯಕಾಲದ ಉದಕವು ಬೆಳೆದು ಎಲ್ಲ ವಿಶ್ವವನ್ನು ಮುಳುಗಿಸಿ ತನ್ನ ಸ್ವರೂಪದಲ್ಲಿ ತಾನೇ ಮುಳುಗುವುದು ॥೧೩೮॥

ಮಗ ಉಗಮು ವೋಘು ಸಿಂಧು । ಹಾ ನುರೇಚಿ ವ್ಯವಹಾರ ಭೇದು। ಪರೀ ಜಲೈಕ್ಯಾಚಾ ಬೋಧು । ತೋಹೀ ಕವಣಾ? ॥೯೩೯॥ ತೈಸೀ ಜ್ಞೇಯಾ ದೇತಾ ಮಿಠೀ । ಜ್ಞಾತೃತ್ವಹೀ ಪಡೇ ಪೋಟೀ । ಮಗ ಉರೇ ತೇಂಚಿ ಕಿರೀಟೀ । ಶಾಂತೀಚೇ ರೂಪ ॥೯೪೦॥ ಆತಾ ಕದರ್ಥವೀತ ವ್ಯಾಧೀ । ಬಳೀಕರಣಾಚಿಯಾ ಆಧೀ । ಆಪಪರು ನ ಶೋಧೀ । ಸದ್ವೈದ್ಯು ಜೈಸಾ ॥೯೪೧॥ ಕಾ ಚಿಖಲೀ ರುತಲೀ ಗಾಯೇ । ಧಡಭಾಕಡ ನ ಪಾಹೇ । ಜೋ ತಿಯೇ ಚಿಯಾ ಗ್ಲಾನೀ ಹೋಯೇ । ಕಾಲಾಭುಲಾ ॥೯೪೨॥ ನಾನಾ ಬುಡತಯಾತೇ ಸಕರಣು । ನ ಪುಸೇ ಅಂತ್ಯಜು ಕಾ ಬ್ರಾಹ್ಮಣು । ಕಾಢೂನಿ ರಾಖೇ ಪ್ರಾಣು । ಹೇಂಚಿ ಜಾಣೇ ॥೯೪೩॥ ಕೀ ಮಾಯ ವನೀ ಪಾಪಿಯೇ । ಉಘಡೀ ಕೇಲೀ ವಿಪಾಯೇ । ತೇ ನೇಸವಿಲ್ಯಾವೀಣ ನ ಪಾಹೇ । ಶಿಷ್ಟು ಜೈಸಾ ॥೯೪೪॥ ತೈಸೇ ಅಜ್ಞಾನಪ್ರಮಾದಾದಿಕೀ । ಕಾ ಪ್ರಾಕ್ತಹೀನ ಸದೋಖೀ । ನಿಂದತ್ವಾಚ್ಯಾ ಸರ್ವವಿಖೀ । ಖಿಳಿಲೇ ಜೇ ॥೯೪೫॥ ತಯಾ ಆಂಗೀಕ ಆಪುಲೇ । ದೇಊನಿಯಾ ಭಲೇ । ವಿಸರವಿಜತೀ ಸಲೇ । ಸಲತೀ ತಿಯೇ ॥೯೪೬॥ ಅಗಾ ಪುಢಿಲಾಚಾ ದೋಖು । ಕರೂನಿ ಆಪುಲಿಯೇ ದಿಠೀ ಚೋಖು । ಮಗ ಘಾಪೇ ಅವಲೋಕು । ತಯಾವರೀ ॥೯೪೭॥ ಜೈಸಾ ಪುಜೂನಿ ದೇವೋ ಪಾಹಿಜೇ । ಪೇರೂನಿ ಶೇತಾ ಜಾಇಜೇ । ತೋಷೌನಿ ಪ್ರಸಾದು ಘೇಇಜೇ । ಅತಿಥೀಚಾ ॥೯೪೮॥ ತೈಸೇ ಆಪುಲೇನಿ ಗುಣೇ । ಪುಢಿಲಾಚೇ ಉಣೇ । ಫೇಡೂನಿಯಾ ಪಾಹಣೇ । ತಯಾ ಕಡೇ ॥೯೪೯॥ ವಾಂಚೂನಿ ನ ವಿಂಧಿ ಜೇ ವರ್ಮೀ । ನಾತುಡವಿಜೇ ಅಕರ್ಮೀ । ನ ಬೋಲವಿಜೆ ನಾಮೀ । ಸದೋಷೀ ತಿಹೀ ॥೯೫೦॥ ವರೀ ಕೋಣೇ ಏಕೇ ಉಪಾಯೇ । ಪಡಿಲೇ ತೇ ಉಭೇ ಹೋಯೇ । ತೇಂಚ ಕೀಜೇ ಪರೀ ಘಾಯೇ । ನೇದಾವೇ ವರ್ಮೀ ॥೯೫೧॥ ಪೈ ಉತ್ತಮಾಚಿಯಾಸಾಠೀ । ನೀಚ ಮಾನಿಜೇ ಕಿರೀಟೀ । ಹೇ ವಾಂಚೋನಿ ದಿಠೀ । ದೋಷು ನ ಘೇಪೇ ॥೯೫೨॥ ಅಗಾ ಅಪೈಶೂನ್ಯಾಚೇ ಲಕ್ಷಣ। ಅರ್ಜುನಾ ಹೇ ಪುಡೇ ಜಾಣ । ಮೋಕ್ಷಮಾರ್ಗೀಂಚೇ ಸುಖಾಸನ । ಮುಖ್ಯ ಹೇ ಗಾ ॥೯೫೩॥ ಆತಾ ದಯಾ ತೇ ಐಸೀ । ಪೂರ್ಣ ಚಂದ್ರಿಕಾ ಜೈಸೀ । ನಿವವಿತಾ ನ ಕಡಸೀ । ಸಾನೇ ಥೋರ ॥೯೫೪॥ ತೈಸೇ ದುಃಖಿತಾಚೇ ಶಿಣಣೇ । ಹಿರತಾ ಸಕಣವಪಣೇ । ಉತ್ತಮಮಾಧಮ ನೇಣೇ । ವಿವಂಚೂ ಗಾ ॥೯೫೫॥

ಆಗ ಉಗಮ, ಪ್ರವಾಹ, ಸಮುದ್ರಕ್ಕೆ ಕೂಡುವುದು ಈ ಅವಸ್ಥೆಗಳು ಉಳಿಯುವುದಿಲ್ಲ ಮತ್ತು ಎಲ್ಲವೂ ಜಲ ಮಯವೆಂದು ಯಾರಿಗೆ ಬೋಧೆಯಾಗಬೇಕು? ॥೧೩೯॥

ಅದರಂತೆ ಜ್ಞೇಯದ ಐಕ್ಯವಾಗಲು ಜ್ಞಾತೃತ್ವವೂ ತನ್ನಷ್ಟಕ್ಕೆ ತಾನೇ ಇಲ್ಲದಂತಾಗುವುದು. ಆಗ ಅರ್ಜುನಾ, ಉಳಿದ ಜ್ಞಾನವೇ ಶಾಂತಿರೂಪವಾಗಿರುವುದು ॥೧೪೦॥

ಈಗ ರೋಗವು ರೋಗಿಯನ್ನು ಪೀಡಿಸುವಾಗ ಆತನಿಗೆ ಗುಣಮುಖನಾಗುವ ಚಿಂತೆ ಇರುವುದರಿಂದ ಉತ್ತಮ ವೈದ್ಯನು ತನ್ನವನೋ, ಪರರವನೋ ಎಂದು ವಿಚಾರಿಸು ವುದಿಲ್ಲ ॥೧೪೧॥

ಅಥವಾ ಒಂದು ಆಕಳವು ಕೆಸರಿನಲ್ಲಿ ಸಿಕ್ಕು ಒದ್ದಾಡು ವಾಗ, ಅದು ಹಿಂಡುವ ಆಕಳವೋ, ಬಂಜೆಯೋ ಎಂದು ವಿಚಾರಿಸದೇ ಹೊರಗೆ ತೆಗೆಯುವರು ॥೧೪೨॥

ಅಥವಾ ನೀರಿನಲ್ಲಿ ಮುಳುಗುವವನನ್ನು ನೋಡಿ ಕರುಣೆ ಉತ್ಪನ್ನನಾದವನು ಮುಳುಗುವವನು ಬ್ರಾಹ್ಮ ಣನೋ, ಅಂತ್ಯಜನೋ ಎಂದು ಚೌಕಸಿ ಮಾಡದೇ ಆತನನ್ನು ಹೊರಗೆ ತಂದು ಪ್ರಾಣ ರಕ್ಷಿಸುವನು ॥೧೪೩॥

ಅಥವಾ ಘೋರಾರಣ್ಯದಲ್ಲಿ ದುಷ್ಟರು ಒಬ್ಬ ಸ್ತ್ರೀಯ ಳನ್ನು ವಸ್ತ್ರಹೀನಳಾಗಿ ಮಾಡಿಬಿಟ್ಟಾಗ, ಆಕೆಯು ಒಬ್ಬ ಸಂಭಾವಿತ ಮನುಷ್ಯನ ದೃಷ್ಟಿಗೆ ಬಿದ್ದರೆ, ಆತನು ಮೊದಲು ತನ್ನ ವಸ್ತ್ರವನ್ನು ಒಗೆದು ನಂತರ ವಿಚಾರ ವಿನಿಮಯ ಮಾಡು ವನು ॥೧೪೪॥

ಅದರಂತೆ ಯಾರು ಅಜ್ಞಾನಿಗಳೋ, ದೋಷಿಗಳೋ, ಪೂರ್ವ ಕರ್ಮಾನುಸಾರವಾಗಿ ರೋಗಪೀಡಿತರೋ, ಮತ್ತು ನಿಂದೆಗೆ ಪಾತ್ರರಾಗಿರುವರೋ ॥೧೪೫॥

ಅವರಿಗೆ ತಾನು ಸ್ವತಃ ಸಹಾಯ ಮಾಡಿ ಯಾವ ವ್ಯಾಧಿ ಗಳಿಂದ ದುಃಖಪಡುತ್ತಿರುವರೋ, ಅದರ ವಿಸ್ಮರಣೆ ಮಾಡುವನು ॥೧೪೬॥

ಅರೇ, ಅವರ ಮುಂದಾಗುವ ಮನುಷ್ಯರ ದೋಷ ಗಳನ್ನು ಅವರು ತಮ್ಮ ದೃಷ್ಟಿಯಿಂದ ಇಲ್ಲದಂತೆ ಮಾಡಿ ತದ ನಂತರ ಅವರತ್ತ ಅವಲೋಕಿಸುವರು ॥೧೪೭॥

ಯಥಾವಿಧಿಯಿಂದ ಪೂಜಿಸಿ ದೇವರ ದರ್ಶನ ಪಡೆಯ ಬೇಕು. ಬೀಜಗಳನ್ನು ಬಿತ್ತಿ ಹೊಲಕ್ಕೆ ಹೋಗಬೇಕು. ಹಾಗೂ ಭೋಜನಾದಿಗಳಿಂದ ಸಂತೋಷಗೊಳಿಸಿ ಅತಿಥಿಯರ ಆಶೀರ್ವಾದ ಪಡೆಯಬೇಕು ॥೧೪೮॥

ಅದರಂತೆ ತನ್ನಲ್ಲಿರುವ ಗುಣಗಳಿಂದ ಮುಂದಿರುವ ಮನುಷ್ಯನ ಹೀನಗುಣಗಳನ್ನು ಇಲ್ಲದಂತೆ ಮಾಡಿ, ಆಗ ಆತನ ಕಡೆಗೆ ನೋಡಬೇಕು ॥೧೪೯॥

ಇಷ್ಟೇ ಅಲ್ಲ, ಆತನ ಪಾಪ ಕರ್ಮವನ್ನು ಉಚ್ಚರಿಸಿ ಹೃದಯವನ್ನು ನೋವುಗೊಳಿಸಬಾರದು ಮತ್ತು ಆತನಿಗಾ ಗಿರುವ ರೋಗದ ಹೆಸರೆತ್ತಿ ದೋಷಗಳನ್ನು ಎಣಿಸಬಾರದು ॥೧೫೦॥

ಆದರೆ, ಆತನು ಕೆಟ್ಟ ಸ್ಥಿತಿಯಿಂದ ಬಿಡುಗಡೆಯಾಗಿ ಉತ್ತಮ ಸ್ಥಿತಿಗೆ ಬರುವ ಹಾಗೆ ಉಪಾಯವನ್ನು ಮಾಡ ಬೇಕು. ಆಗ ಆತನ ಮನಸ್ಸು ದುಃಖಿಸಬಾರದು ॥೧೫೧॥

ಅರ್ಜುನಾ, ಉತ್ತಮ ಮನುಷ್ಯನ ದೃಷ್ಟಿಯಿಂದ ಯಾವನು ಇನ್ನೊಬ್ಬನು ಕನಿಷ್ಟವೆನಿಸುವುದಿಲ್ಲ ಮತ್ತು ಆತನ ದೋಷಗಳನ್ನು ಮನದಲ್ಲಿ ತರುವುದಿಲ್ಲ ॥೧೫೨॥

ಇದೇ ''ಅಪೈಶೂನ್ಯ''ದ ನಿಜವಾದ ಲಕ್ಷಣವಾಗಿದೆ ಮತ್ತು ಅರ್ಜುನಾ, ಇದೇ ಮೋಕ್ಷ ಮಾರ್ಗದ ಸುಖಮಯ ಮುಖ್ಯ ಸಾಧನವಾಗಿದೆ ॥೧೫೩॥

ಈಗ ದಯೆ ಹೇಗಿರಬೇಕೆಂದರೆ ಯಾವ ಪ್ರಕಾರವಾಗಿ ಪೌರ್ಣಿಮೆಯ ಚಂದ್ರನು ಶಾಂತಿಯನ್ನು ಕೊಡುವಲ್ಲಿ ಸಣ್ಣ ದೊಡ್ಡವೆಂಬ ಭೇದವಿಡದೇ ಎಲ್ಲರಿಗೂ ಸಮಾನವಾಗಿ ಶಾಂತಿಕೊಡುವನೋ ॥೧೫೪॥

ಅದರಂತೆ ದಯಾಭರಿತ ಅಂತಃಕರಣದಿಂದ ದುಃಖಿತ ಮನುಷ್ಯನ ದುಃಖ ಹರಣ ಮಾಡುವ ಕಾಲಕ್ಕೆ ಆತನು ಅಧಮನೋ, ಉತ್ತಮನೋ ಎಂಬುದನ್ನು ಮನದಲ್ಲಿ ತರುವುದಿಲ್ಲ ॥೧೫೫॥

ಪೈ ಜಗೀ ಜೀವನಾಸಾರಿಖೇ । ವಸ್ತು ಅಂಗವರೀ ಉಪಖೇ । ಪರೀ ಜಾತೇ ಜೀವಿತ ರಾಖೇ । ತೃಣಾಂಚೇಹೀ ।।೧೫೬।। ತೈಸೇ ಪುಢಿಲಾಚೇನಿ ತಾಪೇ । ಕಳವಳಲಿಯೇ ಕೃಪೇ । ಸರ್ವಸ್ವೇಂಸೀ ದಿಧಲೇಂಹೀ ಆಪಣಪೇ । ಥೋಡೇಂಚಿ ಗಮೇ ।।೧೫೭।। ನಿಮ್ನ ಭರಲಿಯಾವಿಣೇ । ಪಾಣೀ ಢಳೋಂಚಿ ನೇಣೇ । ತೇವೀ ಶ್ರಾಂತ ತೋಷೌನಿ ಜಾಣೇ । ಸಾಮೋರೇ ಪಾ ।।೧೫೮।। ಪೈ ಪಾಯೀ ಕಾಂಟಾ ನೇಹಟೇ । ತಂವ ವ್ಯಥಾ ಜೀವೀ ಉಮಟೇ । ತೈಸಾ ಪೋಳೇ ಸಂಕಟೇ । ಪುಢಿಲಾಂಚೇನಿ ।।೧೫೯।। ಕಾ ಪಾವೋ ಶೀತಳತಾ ಲಾಹೇ । ಕೀ ತೇ ಡೋಳ್ಯಾ ಚಿಲಾಗೀ ಹೋಯೇ । ತೈಸಾ ಪರಸುಖೇ ಜಾಯೇ । ಸುಖಾವತು ।।೧೬೦।। ಕಿಂಬಹುನಾ ತೃಷಿತಾಲಾಗೀ । ಪಾಣೀ ಆರಾಯಿಲೇ ಅಸೇ ಜಗೀ । ತೈಸೇ ದುಃಖಿತಾಂಚೇ ಸೇಲಭಾಗೀ । ಜಿಣೇ ಜಯಾಚೇ ।।೧೬೧।। ತೋ ಪುರುಷ ವೀರರಾಯಾ। ಮೂರ್ತಿಮಂತ ಜಾಣ ದಯಾ । ಮೀ ಉದಯಜತಾಂಚಿ ತಯಾ । ಋಣೆಯಾ ಲಾಭೇ ।।೧೬೨।। ಆತಾ ಸೂರ್ಯಾಸಿ ಜೀವೇ । ಅನುಸರಲಿಯಾ ರಾಜೀವೇ । ಪರೀ ತೇ ತೋ ನ ಶಿವೇ । ಸೌರಭ್ಯ ಜೈಸೇ ।।೧೬೩।। ಕಾ ವಸಂತಾಚಿಯಾ ವಾಹಾಣೇ । ಆಲಿಯಾ ವನಶ್ರೀಚ್ಯಾ ಅಕ್ಷೌಹಿಣೀ । ತೇ ನ ಕರೀತುಚಿ ಘೇಣೆ । ನಿಗಾಲಾ ತೋ ।।೧೬೪।। ಹೇ ಅಸೋ ಮಹಾಸಿದ್ಧೀಸೀ । ಲಕ್ಷ್ಮೀಹೀ ಆಲಿಯಾ ಪಾಶೀ । ಪರೀ ಮಹಾವಿಷ್ಣು ಜೈಸೀ । ನ ಗಣೇಚ ತೇ ।।೧೬೫।। ತೈಸೇ ಐಹಿಕೀಂಚೇ ಕಾ ಸ್ವರ್ಗೀಂಚೇ । ಭೋಗ ಪಾಇಕ ಜಾಲಿಯಾ ಇಚ್ಛೇಚೇ । ಪರೀ ಭೋಗಾವೇ ಹೇ ನ ರುಚೇ । ಮನಾಮಾಜೀ ।।೧೬೬।। ಬಹುವೇ ಕಾಯ ಕೌತುಕೀ । ಜೀವ ನೋಹೇ ವಿಷಯಾಭಿಲಾಖೀ । ಅಲೋಲುಪ್ತ್ವ ದಶಾ ಠಾಉಕೀ । ಜಾಣ ತೇ ಹೇ ।।೧೬೭।। ಆತಾ ಮಾಶಿಯಾ ಜೈಸೇ ಮೋಹಳ । ಜಳಚರಾ ಜೀವೀ ಜಳ । ಕಾ ಪಕ್ಷಿಯಾ ಅಂತರಾಳ । ಮೋಕಳೇ ಹೇ ।।೧೬೮।। ನಾತರೀ ಬಾಳಕೋದ್ದೇಶೇ । ಮಾತೇಚೇ ಸ್ನೇಹ ಜೈಸೇ । ಕಾ ವಸಂತೀಚಾ ಸ್ಪರ್ಶೇ । ಮಊ ಮಲಯಾನಿಳು ।।೧೬೯।। ಡೋಳ್ಯಾ ಪ್ರಿಯಾಚೀ ಭೇಟೀ । ಕಾ ಪಿಲಿಯಾ ಕೂರ್ಮೀಚೀ ದಿಠೀ । ತೈಸೀ ಭೂತಮಾತ್ರೀ ರಾಹಟೀ । ಮವಾಳ ತೇ ।।೧೭೦।। ಸ್ಪರ್ಶೇ ಅತಿಮೃದು । ಮುಖೀ ಘೇತಾ ಸುಸ್ವಾದು । ಘ್ರಾಣಾಸಿ ಸುಗಂಧು । ಉಜಾಳು ಆಂಗೇ ।।೧೭೧।। ತೋ ಆವಡೇ ತೇವಢಾ ಘೇತಾ । ವಿರುದ್ಧ ಜರೀ ನ ಹೋತಾ । ತರೀ ಉಪಮೇ ಯೇತಾ । ಕಾಪೂರ ಕೀ ।।೧೭೨।।

ಜಗತ್ತಿನಲ್ಲಿ ನೀರಿನಂತಹ ಬೇರೆ ವಸ್ತುವೇ ಇಲ್ಲ. ಆದರೂ ಅದು ತಾನು ನಾಶಮಾಡಿಕೊಂಡು ಒಣಗಿದ ಹುಲ್ಲನ್ನು ತನ್ನ ತೇವದಿಂದ ರಕ್ಷಿಸುವುದು ।।೧೫೬।।

ಅದರಂತೆ ತನ್ನೆದುರಿಗೆ ದುಃಖಪೀಡಿತ ಮನುಷ್ಯನಿಗಾಗಿ ಕಳವಳ ಅಂತಃಕರಣದಿಂದ ಆತನಿಗೆ ತನ್ನದೆಲ್ಲವನ್ನೂ ಕೊಟ್ಟರೂ ಏನೂ ಕೊಟ್ಟಿಲ್ಲವೆಂಬ ಭಾವನೆ ಧರಿಸುವನು ।।೧೫೭।।

ನೀರು ಹರಿಯುತ್ತಿರುವಾಗ ದಾರಿಯಲ್ಲಿ ತಗ್ಗು ಬಂದರೆ ಅದನ್ನು ತುಂಬಿಸದೆ ಮುಂದೆ ಹೋಗದಂತೆ ತನ್ನೆದುರಿನ ಶ್ರಮಿಸಿದ ಮನುಷ್ಯನನ್ನು ಸಂತೋಷಗೊಳಿಸದೆ ಮುಂದೆ ಹೋಗನು ।।೧೫೮।

ಯಾವ ಪ್ರಕಾರವಾಗಿ ಕಾಲಲ್ಲಿ ಮುಳ್ಳು ಚುಚ್ಚಿದಾಗ ಆಗುವ ಕಳವಳದಂತೆ ಬೇರೆಯವರ ಸಂಕಟ ಕಂಡು ಆತನ ಮನಸ್ಸು ಕಳವಳಿಸುತ್ತದೆ ।।೧೫೯।।

ಅಥವಾ ಅಂಗಾಲಿಗೆ ಶೀತವಸ್ತು ತಿಕ್ಕಿದರೆ ಕಣ್ಣಿಗೆ ತಂಪಾಗುವುದು. ಅದರಂತೆ ಬೇರೆಯವರ ಸುಖ ಕಂಡು ಆತನಿಗೆ ಸುಖವಾಗುವುದು ।।೧೬೦।।

ಹೆಚ್ಚಿಗೇನು ಹೇಳಬೇಕು? ನೀರಡಿಸಿದವನಿಗಾಗಿಯೇ ಜಗತ್ತಿನಲ್ಲಿ ನೀರು ನಿರ್ಮಾಣವಾಗಿರುವಂತೆ, ದುಃಖಿಗಳ ದುಃಖಗಳನ್ನು ದೂರ ಮಾಡುವುದಕ್ಕಾಗಿಯೇ ಆತನು ಈ ಜಗತ್ತಿನಲ್ಲಿರುವನು ।।೧೬೧।।

ಇಂತಹ ಗುಣಗಳಿಂದ ಯುಕ್ತನಾದ ಪುರುಷನು ಕೇವಲ ದಯೆಯ ಮೂರ್ತಿಯಾಗಿರುವನು ಮತ್ತು ಹೇ ವೀರೋತ್ತಮನೇ, ಆತನು ಹುಟ್ಟಿದಾಗಿನಿಂದಲೂ ನಾನು ಆತನ ಋಣಿಯಾಗಿರುವೆನು ।।೧೬೨।।

ಸೂರ್ಯೋದಯದ ಸಂಗಡವೇ ಕಮಲದ ಹೂವು ಅರಳುತ್ತದೆ. ಆದರೆ ಸೂರ್ಯನು ಅದರ ಸುಗಂಧದ ಉಪಭೋಗ ಸ್ವೀಕರಿಸುವುದಿಲ್ಲ ।।೧೬೩।।

ಅಥವಾ ವಸಂತ ಋತುವಿನಿಂದ ವನದಲ್ಲಿ ಅನೇಕ ಗಿಡಗಳು ಪ್ರಫುಲ್ಲಿತವಾಗುವುವು. ಆದಾಗ್ಯೂ ಅವುಗಳಲ್ಲಿನ ಒಂದು ಗಿಡದ ಮಾತ್ರಕ್ಕೂ ಅದರ ಉಪಭೋಗ ಸ್ವೀಕರಿಸದೇ ಮುಂದೆ ನಡೆಯುವುದು ।।೧೬೪।।

ಹೆಚ್ಚಿಗೇನು ಹೇಳಬೇಕು? ಲಕ್ಷ್ಮಿಯು ಮಹಾಸಿದ್ಧಿಗಳೊಂದಿಗೆ ಶ್ರೀಮಹಾವಿಷ್ಣುವಿಗೆ ಪ್ರಾಪ್ತಳಾಗಿದ್ದರೂ ಆತನ ಲಕ್ಷ್ಯವು ಆಕೆಯಲ್ಲಿ ಹೋಗಿರುವುದಿಲ್ಲ ।।೧೬೫।।

ಅದರಂತೆ ತನಗೆ ಹಿಡಿಸುವ ಇಹಲೋಕದ ಅಥವಾ ಪರಲೋಕದ ಭೋಗಗಳು ಸೇವಕರಾಗಿದ್ದರೂ ಆತನ ಮನದಲ್ಲಿ ಅವುಗಳ ಉಪಭೋಗ ಸ್ವೀಕರಿಸಬೇಕೆನ್ನುವುದಿಲ್ಲ ।।೧೬೬।।

ಹೆಚ್ಚಿಗೇನು ಹೇಳಬೇಕು? ಕೌತುಕದಿಂದಲಾದರೂ ವಿಷಯಗಳ ಅಪೇಕ್ಷೆ ಮಾಡಲಾರನು. ಇಂಥ ಸ್ಥಿತಿಗೆ "ಅಲೋಲುಪತ್ವ" ಎಂದು ಹೇಳುವರು ।।೧೬೭।।

ಜೇನುನೊಣಗಳಿಗೆ ಅದರ ಗೂಡು ಸುಖಕರವು, ಜಲಚರಗಳಿಗೆ ನೀರು ಪ್ರಿಯಕರವು. ಅಥವಾ ಪಕ್ಷಿಗಳಿಗೆ ಆಕಾಶವು ಹಾರಾಡಲು ಅನುಕೂಲವಾಗಿರುವುದು ।।೧೬೮।।

ಅಥವಾ ಬಾಲಕನಿಗೆ ಸುಖವಾಗಬೇಕೆಂದು ತಾಯಿಯ ಪ್ರೇಮವು ಅವನ ಮೇಲೆ ಹೇಗೆ ಇರುವುದೋ, ಅಥವಾ ವಸಂತಋತು ಆರಂಭವಾದಾಗ ಮಲಯಪರ್ವತದಿಂದ ಹೇಗೆ ಗಾಳಿಯು ಮಂದ ಸುಗಂಧವಾಗಿ ಬೀಸುವುದೋ ।।೧೬೯।।

ಪ್ರಿಯ ವಸ್ತು ಕಂಡಾಗ ಕಣ್ಣುಗಳಿಗೆ ಸಮಾಧಾನವಾಗುವಂತೆ ಅಥವಾ ಆಮೆಯು ತನ್ನ ಕೃಪಾದೃಷ್ಟಿಯಿಂದ ತನ್ನ ಮರಿಗಳ ಪೋಷಣೆ ಮಾಡುವಂತೆ, ಆತನ ದೃಷ್ಟಿಯು ಭೂತಮಾತ್ರರ ಮೇಲೆ ಪ್ರೇಮಯುಕ್ತವಾಗಿರುವುದು ।।೧೭೦।।

ಸ್ಪರ್ಶಕ್ಕೆ ಅತಿ ಮೃದುವು, ಬಾಯಿಯಲ್ಲಿ ಹಾಕಿದರೆ ಸುಸ್ವಾದವು, ಮೂಗಿಗೆ ಸುಗಂಧವು, ನೋಡಲು ಬೆಳ್ಳಗೆ ಸ್ವಚ್ಛವಾಗಿರುವುದು ।।೧೭೧।।

ಇಂಥ ಯಾವ ಕರ್ಪೂರವನ್ನು ಬೇಕಾದಷ್ಟು ತಿಂದರೂ ಅದರಿಂದ ಬಾಧೆಯಾಗದಿದ್ದರೆ, ಅದು ದೃಷ್ಟಾಂತಕ್ಕೆ ಪ್ರಾಪ್ತವಾಗುತ್ತಿತ್ತು ।।೧೭೨।।

ಪರೀ ಮಹಾಭೂತೇ ಪೋಟೀ ವಾಹೇ । ತೇವೀಂಚಿ ಪರಮಾಣೂಮಾಜೀ ಸಾಮಾಯೇ । ಯಾ ವಿಶ್ವಾಸಾನುಸಾರ ಹೋಯೇ । ಗಗನ ಜೈಸೇ ।೧೭೩॥ ಕಾಯ ಸಾಂಗೋ ಐಸೇ ಜಿಣೇ । ಜೇ ಜಗಾಚೇನಿ ಜೀವೇ ಪ್ರಾಣೇ । ತಯಾ ನಾಂವ ಮ್ಹಣೇ । ಮಾರ್ದವ ಮೀ ।೧೭೪॥ ಆತಾ ಪರಾಜಯೇ ರಾಜಾ । ಜೈಸಾ ಕದರ್ಥಿಜೇ ಲಾಜಾ । ಕಾ ಮಾನಿಯಾ ನಿಸ್ತೇಜಾ । ನಿಕೃಷ್ಟಾಸ್ತವ ।೧೭೫॥ ನಾನಾ ಚಾಂಡಾಳಮಂದಿರಾಶೀ । ಅವಚಟೇ ಆಲಿಯಾ ಸಂನ್ಯಾಸೀ । ಮಗ ಲಾಜ ಹೋಯ ಜೈಸೀ । ಉತ್ತಮಾ ತಯಾ ।೧೭೬॥ ಕ್ಷತ್ರಿಯಾ ರಣೀ ಪಳೋನಿ ಜಾಣೇ । ತೇ ಕೋಣ ಸಾಹೇ ಲಾಜಿರವಾಣೇ । ಕಾ ವೈಧವ್ಯೇ ಪಾಚಾರಣೇ । ಮಾಹಸತಿಯೇತೇ ।೧೭೭॥ ರೂಪಸಾ ಉದಯಲೇ ಕುಷ್ಟ । ಸಂಭಾವಿತಾ ಕುಟೀಚೇ ಬೋಟ । ತಯಾ ಲಾಜಾ ಪ್ರಾಣಾಸಂಕಟ । ಹೋಯ ಜೈಸೇ ।೧೭೮॥ ತೈಸೇ ಔಟಹಾ ತಪಣೇ । ಜೇ ಶವ ಹೋಊನಿ ಜಿಣೇ । ಉಪಜೋ ಉಪಜೋ ಮರಣೇ । ನಾವಾನಾವಾ ।೧೭೯॥ ತಿಯೇ ಗರ್ಭಮೇದಮುಸೇ । ರಕ್ತಮೂತ್ರರಸೇ । ವೋತೀವ ಹೋಊನಿ ಅಸೇ । ತೇ ಲಾಜಿರವಣೇ ।೧೮೦॥ ಹೇ ಬಹು ಅಸೋ ದೇಹಪಣೇ । ನಾಮ ರೂಪಾಸಿ ಯೇಣೇ । ನಾಹೀ ಗಾ ಲಾಜಿರವಾಣೇ । ತಯಾಹೂನೀ ।೧೮೧॥ ಐಸೈಸಿಯಾ ಅವಕಳಾ । ಘೇಪೇ ಶರೀರಾಚಾ ಕಂಟಾಳಾ । ತೇ ಲಾಜ ಪೈ ನಿರ್ಮಳಾ । ನಿಸುಗಾ ಗೋಡ ।೧೮೨॥ ಆತಾ ಸೂತ್ರತಂತು ತುಟಲಿಯಾ । ಚೇಷ್ಟಾಚಿ ಠಾಕೇ ಸಾಯಖಡಿಯಾ । ತೈಸೀ ಪ್ರಾಣಜಯೇ ಕರ್ಮೇಂದ್ರಿಯಾ । ಖುಂಟೇ ಗತೀ ।೧೮೩॥ ಕೀ ಮಾವಳಲಿಯಾ ದಿನಕರು । ಸರೇ ಕಿರಣಾಂಚಾ ಪ್ರಸರು । ತೈಸಾ ಮನೋಜಯೇ ಪ್ರಕಾರು । ಜ್ಞಾನೇಂದ್ರಿಯಾಂಚಾ ।೧೮೪॥ ಏವಂ ಮನಪವನ ನಿಯಮೇ । ಹೋತೀ ದಾಹೀ ಇಂದ್ರಿಯೇ ಅಕ್ಷಮೇ ।ತೇ ಅಚಾಪಲ್ಯ ವರ್ಮೇ । ಯೇಣೇ ಹೋಯ ।೧೮೫॥

ತೇಜಃ ಕ್ಷಮಾ ಧೃತಿಃ ಶೌಚಮ್ ಅದ್ರೋಹೋ ನಾತಿ ಮಾನಿತಾ ।
ಭವಂತಿ ಸಂಪದಂ ದೈವೀಮ್ ಅಭಿಜಾತಸ್ಯ ಭಾರತ ।೩॥

ಆತಾ ಈಶ್ವರಪ್ರಾಪ್ತೀಲಾಗೀ । ಪ್ರವರ್ತತಾ ಜ್ಞಾನಮಾರ್ಗೀ । ಧಿವಂಸೇಯಾಚಿ ಆಂಗೀ । ಉಣೀವ ನೋಹೇ ।೧೮೬॥ ವೋಖಟೇ ಮರಣಾಐಸೇ । ತೇಹೀ ಆಲೇ ಅಗ್ನಿಪ್ರವೇಶೇ । ಪರೀ ಪ್ರಾಣೇಶ್ವರೋದ್ದೇಶೇ । ನ ಗಣೇಚಿ ಸತೀ ।೧೮೭॥

ಆದರೆ ಯಾರ ಹೊಟ್ಟೆಯಲ್ಲಿ ಪಂಚಮಹಾಭೂತಗಳ ಸಮಾವೇಶವಾಗುವುದೋ, ಪರಮಾಣುವಿನಲ್ಲಿ ಸಮಾವೇಶ ವಾಗುವುದೋ, ಆ ಆಕಾಶವು ವಿಶ್ವದ ಆಕಾರದಂತೆ ಆಕಾರಕ್ಕೆ ಬರುವುದು ।।೧೭೩।।

ಹೆಚ್ಚಿಗೇನು ಹೇಳಬೇಕು? ಇವರು ಜಗತ್ತಿನ ಜೀವನ ಕ್ಕಾಗಿಯೇ ಬದುಕುವರು. ಇಂಥ ಸ್ಥಿತಿಗೆ ''ಮಾರ್ಧವ''ವೆಂದು ಹೇಳುವರು ।।೧೭೪।।

ಪರಾಜಿತನಾದ ರಾಜನು ನಾಚಿಕೆಪಟ್ಟು ದುಃಖಿಸುವನು, ಅಥವಾ ಹೀನಸ್ಥಿತಿ ಪ್ರಾಪ್ತವಾದಾಗ ಮಾನವಂತ ಪುರುಷನು ನಿಸ್ತೇಜನಾಗುವನು ।।೧೭೫।।

ಅಥವಾ ಉತ್ತಮ ಸಂನ್ಯಾಸಿಯು ಆಕಸ್ಮಿಕವಾಗಿ ಒಬ್ಬ ಚಾಂಡಾಲ ಸ್ತ್ರೀಯಳ ಮನೆಯಲ್ಲಿ ಹೋದಾಗ ಆತನಿಗೆ ಲಜ್ಜೆಯಾಗುವುದು ।।೧೭೬।।

ಕ್ಷತ್ರಿಯನಿಗೆ ರಣರಂಗದಿಂದ ಓಡಿ ಹೋಗುವ ಪ್ರಸಂಗವು ಒದಗಿದಾಗ ಅದನ್ನು ಸಹಿಸಲು ಆತನಿಗೆ ನಾಚಿಕೆ ಯಾಗುವುದು, ಅಥವಾ ಪತಿವ್ರತಾ ಸ್ತ್ರೀಯಳಿಗೆ ''ಗಂಗಾ ಭಾಗೀರಥಿ'' ಎಂದು ಕರೆದರೆ ಆಕೆಗೆ ದುಃಖವಾಗುವುದು ।।೧೭೭।।

ಸುಂದರವಾದ ಮನುಷ್ಯನಿಗೆ ಕುಷ್ಠರೋಗವಾದರೆ, ಅಥವಾ ಸಂಭಾವಿತನಿಗೆ ಕೆಟ್ಟ ಆರೋಪ ಒದಗಿದರೆ, ಅವರಿಗೆ ನಾಚಿಕೆಯಾಗಿ ಪ್ರಾಣಸಂಕಟವಾಗುವುದು ।।೧೭೮।।

ಅದರಂತೆ ಮೂರುವರೆ ಮೊಳ ಶರೀರವನ್ನು ಧರಿಸಿ ಬೇರೆ ಬೇರೆ ಯೋನಿಗಳಲ್ಲಿ ಮೇಲಿಂದ ಮೇಲೆ ಹುಟ್ಟುವುದು ಮತ್ತು ಸಾಯುವುದು ।।೧೭೯।।

ಮತ್ತು ಗರ್ಭಭೇದರೂಪ ಕುಡಿಕೆಯಲ್ಲಿ ರಕ್ತಮೂತ್ರ ಗಳ ರಸದಿಂದ ತುಂಬಿಕೊಂಡು ಶರೀರವನ್ನು ಧರಿಸುವುದು ಇವರಿಗೆ ನಾಚಿಕೆಯಾಗುವುದು ।।೧೮೦।।

ಹೆಚ್ಚಿಗೇನು ಹೇಳಬೇಕು? ಇವರಿಗೆ ದೇಹವನ್ನು ಧರಿಸಿ ನಾಮರೂಪಕ್ಕೆ ಬರುವುದಕ್ಕಿಂತ ಇನ್ನಾವುದೂ ಹೆಚ್ಚಿನ ನಾಚಿಕೆ ಗೇಡುತನವಿರುವುದಿಲ್ಲ ।।೧೮೧।।

ಈ ಪ್ರಕಾರವಾಗಿ ಸಾಧುಗಳಿಗೆ ಇಂಥ ದುಶ್ಚಿತವಾದ ಶರೀರಧರಿಸುವುದರಲ್ಲಿ ಬೇಸರವು ಉತ್ಪನ್ನವಾಗಿ ನಾಚಿಕೆ ಯಾಗುವುದು. ಆದರೆ ನಾಚಿಕೆ ಇಲ್ಲದ ಇತರ ಜನರಿಗೆ ಶರೀರ ಧಾರಣೆಯು ಪ್ರಿಯವಾಗುವುದು ।।೧೮೨।।

ಸೂತ್ರಗೊಂಬೆಯ ದಾರವು ಹರಿದಾಗ ಅದರ ಚೇಷ್ಟೆಯು ನಿಲ್ಲುವುದು. ಅದರಂತೆ ಪ್ರಾಣದ ಜಯ ಸಾಧಿಸಿರುವುದರಿಂದ ಕರ್ಮೇಂದ್ರಿಯಗಳ ಗತಿಯು ನಿಲ್ಲುವುದು ।।೧೮೩।।

ಅಥವಾ ಸೂರ್ಯನು ಅಸ್ತನಾದಾಗ ಆತನ ಕಿರಣಗಳ ಪ್ರಭೆಯು ಇಲ್ಲವಾಗುವುದು. ಅದರಂತೆ ಮನವನ್ನು ಜಯಿಸಿ ರುವುದರಿಂದ ಜ್ಞಾನೇಂದ್ರಿಯಗಳ ಮತಿಯು ಕುಂಠಿತವಾಗು ವುದು ।।೧೮೪।।

ಈ ಪ್ರಕಾರವಾಗಿ ಮನಸ್ಸು ಮತ್ತು ಪ್ರಾಣಗಳನ್ನು ಜಯಗೊಳಿಸಿರುವುದರಿಂದ ಹತ್ತು ಇಂದ್ರಿಯಗಳು ಕುಂಠಿತ ಗೊಳ್ಳುವುವು. ಅದಕ್ಕೆ ಮಾತ್ರ ಅಚಾಪಲ್ಯವೆಂದು ಹೇಳುವರು ।।೧೮೫।।

ಶ್ಲೋಕಾರ್ಥ :- ೨೧.ತೇಜಸ್ಸು, ೨೨.ಸಹನೆ, ೨೩.ಧೈರ್ಯ, ೨೪.ಪವಿತ್ರತೆ, ೨೫. ದ್ರೋಹರಾಹಿತ್ಯ, ೨೬. ಗರ್ವಶೂನ್ಯತ್ವ ಇವು ದೈವೀಸಂಪತ್ತನ್ನು ಪಡೆದು ಹುಟ್ಟಿದವನ ಲಕ್ಷಣಗಳು ।೩।।

ಈಗ ಈಶ್ವರ ಪ್ರಾಪ್ತಿಗಾಗಿ ಮನಃಪೂರ್ವಕವಾಗಿ ಜ್ಞಾನ ಮಾರ್ಗದ ಅವಲಂಬನೆಯನ್ನು ಹಿಡಿದಾಗ ಆತನಿಗೆ ಧೈರ್ಯದ ಕೊರತೆಯಾಗುವುದಿಲ್ಲ ।।೧೮೬।।

ಪತಿವ್ರತೆ ಸ್ತ್ರೀಯಳು ಪತಿಯ ಮರಣದ ನಂತರ ಅಗ್ನಿಪ್ರವೇಶದಂತಹ ಮರಣದ ಕೆಟ್ಟ ಪ್ರಸಂಗವು ಬಂದು ಸಹಗಮನ ಮಾಡಲು ಹಿಂದು ಮುಂದು ನೋಡುವುದಿಲ್ಲ ।।೧೮೭।।

ತೈಸೇ ಆತ್ಮನಾಥಾಚಿಯಾ ಅಧೀ । ಲಾಊನಿ ವಿಷಯವಿಷಾಚೀ ಬಾಂಧೀ । ಧಾಂವೋ ಆವಡೇ ಪಾಣಧೀ । ಶೂನ್ಯಾಚಿಯೇ ॥೧೮೮॥ ನ ಠಾಕೇ ನಿಷೇಧು ಆಡ । ನ ಪಡೇ ವಿಧೀಚೀ ಭೀಡ । ನುಪಜೇಚಿ ಜೀವೀ ಕೋಡ । ಮಹಾಸಿದ್ಧೀಚೇ ॥೧೮೯॥ ಐಸೇ ಈಶ್ವರಾಕಡೇ ನಿಜ । ಧಾಂವೇ ಆಪಸಯಾ ಸಹಜ । ತಯಾ ನಾಂವ ತೇಜ । ಆಧ್ಯಾತ್ಮಿಕ ತೇ ॥೧೯೦॥ ಆತಾ ಸರ್ವಹೀ ಸಾಹಾತಿಯಾ ಗರಿಮಾ । ಗರ್ವಾ ನ ಯೇ ತೇಂಚಿ ಕ್ಷಮಾ । ಜೈಸೇ ದೇಹ ವಾಹೋನಿ ರೋಮಾ । ವಾಹಣೇ ನೇಣೇ ॥೧೯೧॥ ಆಣಿ ಮಾತಲಿಯಾ ಇಂದ್ರಿಯಾಂಚೇ ವೇಗ । ಕಾ ಪ್ರಾಚೀನೇ ಖವಳಲೇ ರೋಗ । ಅಥವಾ ಯೋಗವಿಯೋಗ । ಪ್ರಿಯಾಪ್ರಿಯಾಂಚೇ ॥೧೯೨॥ ಯಯಾ ಆಘಾವಿಯಾಂಚಾಚಿ ಥೋರು । ಏಕೇ ವೇಳೇ ಆಲಿಯಾ ಪುರು । ತರೀ ಅಗಸ್ತ್ಯ ಕಾ ಹೋಊನಿ ಧೀರು । ಉಭಾ ಠಾಕೇ ॥೧೯೩॥ ಆಕಾಶೀ ಧೂಮಾಚೀ ರೇಖಾ । ಉಠಿಲೀ ಬಹುವಾ ಆಗಳಿಕಾ । ತೇ ಗಿಳೀ ಏಕೀ ಝುಳುಕಾ । ವಾರಾ ಜೇವೀ ॥೧೯೪॥ ತೈಸೇ ಅಧಿಭೂತಾಧಿದೈವಾ । ಆಧ್ಯಾತ್ಮಾದಿ ಉಪದ್ರವಾ । ಪಾತಲೇಯಾ ಪಾಂಡವಾ । ಗಿಳೂನಿ ಘಾಲೀ ॥೧೯೫॥ ಐಸೇ ಚಿತ್ತಕ್ಷೋಭಾಚ್ಯಾ ಅವಸರೀ । ಉಚಲೂನಿ ಧೈರ್ಯಾ ಜೇ ಚಾಂಗಾವೇ ಕರೀ । ಧೃತೀ ಮ್ಹಣಿಪೇ ಅವಧಾರಿ । ತಿಯೇತೇ ಗಾ ॥೧೯೬॥ ಆತಾ ನಿರ್ವಾಳೂನಿ ಕನಕೇ । ಭರಿಲಾ ಗಾಂಗೇ ಪೀಯೂಖೇ । ತಯಾ ಕಲಶಾಚಿಯಾ ಸಾರಿಖೇ । ಶೌಚ ಅಸೇ ॥೧೯೭॥ ಜೇ ಆಂಗೀ ನಿಷ್ಕಾಮ ಆಚಾರು । ಜೀವೀ ವಿವೇಕು ಸಾಚಾರು । ತೋ ಸಬಾಹ್ಯ ಘುಡಲಾ ಆಕಾರು । ಶುಚಿತ್ವಾಚಾಚೀ ॥೧೯೮॥ ಕಾ ಫೇಡಿತ ಪಾಪ ತಾಪ । ಪೋಖಿತ ತೀರೀಂಚೇ ಪಾದಪ । ಸಮುದ್ರಾ ಜಾಯ ಆಪ । ಗಂಗೇಚೇ ಜೈಸೇ ॥೧೯೯॥ ಕಾ ಜಗಾಚೇ ಆಂಧ್ಯ ಫೇಡಿತು । ಶ್ರಿಯೇಚೇ ರಾಉಳೇ ಉಘಡಿತು । ನಿಘೇ ಜೈಸಾ ಭಾಸ್ವತು । ಪ್ರದಕ್ಷಿಣೇ ॥೨೦೦॥ ತೈಸೀ ಬಾಂಧಿಲೀ ಸೋಡಿತಾ । ಬುಡಾಲೀ ಕಾಢಿತಾ । ಸಾಂಕಡೀ ಫೇಡಿತಾ । ಆರ್ತಾಂಚಿಯಾ ॥೨೦೧॥ ಕಿಂಬಹುನಾ ದಿವಸ ರಾತೀ । ಪುಢಿಲಾಂಚೇ ಸುಖ ಉನ್ನತೀ । ಆಣಿತ ಆಣಿತ ಸ್ವಾರ್ಥೀ । ಪ್ರವೇಶಿಜೇ ॥೨೦೨॥ ವಾಂಚೂನಿ ಆಪುಲಿಯೇ ಕಾಜಾಲಾಗಿ । ಪ್ರಾಣಿಜಾತಾಚ್ಯಾ ಅಹಿತಭಾಗೀ । ಸಂಕಲ್ಪಾಚೇಹೀ ಆಡವಂಗೀ । ನ ಕರಣೇ ಜೇ ॥೨೦೩॥ ಪೈ ಅದ್ರೋಹತ್ವ ಐಸಿಯಾ ಗೋಷ್ಟೀ । ಐಕಸೀ ಜಿಯಾ ಕಿರೀಟೀ । ತೇ ಸಾಂಗಿತಲೇ ಹೇ ದಿಠೀ । ಪಾಹೋ ಯೇ ತೈಸೇ ॥೨೦೪॥

ಅದರಂತೆ ಆತನಿಗೆ ಆತ ಚಿಂತನೆ ಹತ್ತಿದ್ದಕ್ಕೆ ವಿಷಯ ಗಳನ್ನು ವಿಷದಂತೆ ತಿಳಿದು, ಆತ್ಮ ಪ್ರಾಪ್ತಿಗಾಗಿ ಸುಷುಮ್ನಾ ನಾಡಿಯಿಂದ ಪ್ರಾಣವಾಯುವನ್ನು ಒಯ್ಯುವಂಥ ಕಠಿಣ ಮಾರ್ಗ ಹಿಡಿಯುವನು ।೧೮೮॥

ಆತನಿಗೆ ಶಾಸ್ತ್ರದಲ್ಲಿ ಹೇಳಿರುವ ವಿಧಿ ನಿಷೇಧಗಳ ಅಡಚಣೆ ಹಾಗೂ ಭಿಡೆ ಇರುವುದಿಲ್ಲ. ಮಹಾಸಿದ್ಧಿಗಳು ಪ್ರಾಪ್ತವಾದರೂ ಅದರ ಕೌತುಕವೂ ಆತನಿಗುಂಟಾಗು ವುದಿಲ್ಲ ।೧೮೯॥

ಈ ಪ್ರಕಾರವಾಗಿ ಆತನ ಮನಸ್ಸು ತಾನಾಗಿಯೇ ಈಶ್ವರನ ಕಡೆಗೆ ಧಾವಿಸುವುದು. ಇದಕ್ಕೇನೇ ಶಾರೀರಿಕ ''ತೇಜ'' ವೆಂದು ಹೇಳುವರು ।೧೯೦॥

ಈಗ ಯಾವ ಪ್ರಕಾರವಾಗಿ ದೇಹವು ತನ್ನ ಎಲ್ಲ ರೋಮಗಳನ್ನು ಹೊತ್ತುಕೊಂಡಿದ್ದರೂ ಅದಕ್ಕಾಗಿ ಗರ್ವ ಪಡುವುದಿಲ್ಲವೋ, ಅದರಂತೆ ಎಲ್ಲವನ್ನೂ ಸಹಿಸುವವನು ನಾನು ಶ್ರೇಷ್ಠನು ಎಂಬ ಗರ್ವವು ಹುಟ್ಟದಿರುವುದೇ ಕ್ಷಮೆ ಎಂದು ಹೇಳುವರು ।೧೯೧॥

ಮತ್ತು ವಿಷಯ ಸೇವನೆಗಳಿಗಾಗಿ ಇಂದ್ರಿಯಗಳ ಅತಿ ಪ್ರವೃತ್ತಿಯು ಅಥವಾ ಪೂರ್ವ ಕರ್ಮದ ರೋಗಗಳ ಪ್ರಾಪ್ತಿಯ ಹಾಗೂ ಪ್ರಿಯ ವಸ್ತುಗಳ ವಿಯೋಗವು ।೧೯೨॥

ಈ ಎಲ್ಲವೂ ಒಂದೇ ಸಮಯಕ್ಕೆ ಒದಗಿ ಬಂದರೂ, ಅಗಸ್ತ್ಯ ಋಷಿಯಂತೆ ಧೈರ್ಯದಿಂದ ಎಲ್ಲವನ್ನೂ ಸಹಿಸು ವನು ।೧೯೩॥

ಆಕಾಶದಲ್ಲಿ ಹೊಗೆಯ ದೊಡ್ಡ ದೊಡ್ಡ ಪ್ರವಾಹಗಳು ಹೋದರೂ ಅವುಗಳನ್ನು ಗಾಳಿಯ ಒಂದೇ ಬೀಸುವಿಕೆ ಯಿಂದ ಎಲ್ಲವೂ ನಷ್ಟವಾಗುವುವು ।೧೯೪॥

ಅದರಂತೆ ಅರ್ಜುನಾ! ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿದೈವಿಕ ಇವುಗಳ ಉಪದ್ರವವು ಒಂದೇ ಕಾಲಕ್ಕೆ ಉಂಟಾಗಿದ್ದರೂ ಎಲ್ಲವನ್ನೂ ನುಂಗಿಬಿಡುವನು ।೧೯೫॥

ಹೀಗೆ ಚಿತ್ತಕ್ಷೋಭದ ಪ್ರಸಂಗದಲ್ಲಿ ಧೈರ್ಯವನ್ನು ಸ್ಥಿರವಾಗಿ ಇಡುವವನು. ಇದಕ್ಕೆ ''ಧೃತಿ'' ಎಂದು ಕರೆಯುವರು ।೧೯೬॥

ಈಗ ಸುವರ್ಣ ಕಲಶವನ್ನು ಸ್ವಚ್ಛಗೊಳಿಸಿ ಅದರಲ್ಲಿ ಗಂಗಾರೂಪ ಅಮೃತವನ್ನು ತುಂಬಿದಾಗ ಅದು ಎಲ್ಲ ದೃಷ್ಟಿ ಯಿಂದ ಶುದ್ಧವಾಗಿರುತ್ತದೆ. ಹೀಗೆ 'ಶೌಚ' ವಿರುವುದು ।೧೯೭॥

ಯಾವ ಮನುಷ್ಯನ ಆಚರಣೆಯು ನಿಷ್ಕಾಮವಾಗಿ ಇರು ವುದು, ಮತ್ತು ಅಂತಃಕರಣದಲ್ಲಿ ವಿವೇಕವು ಜಾಗೃತವಾಗಿ ರುವುದು. ಹೀಗೆ ಒಳಹೊರಗೆ ಶುದ್ಧನಾಗಿದ್ದು ಶುಚಿತ್ವದ ಮೂರ್ತಿಯಾಗಿರುವನು. ಅದರಂತೆ ಶೌಚವಾಗಿರುವುದು ।೧೯೮॥

ಗಂಗಾನದಿಯು ಸಮುದ್ರದತ್ತ ಹೋಗುತ್ತಿರುವಾಗ ದಂಡೆಯ ಮೇಲಿರುವ ಗಿಡಗಂಟಿಗಳನ್ನು ಪೋಷಿಸುತ್ತದೆ, ಮತ್ತು ಸ್ನಾನ ಮಾಡಿದವರ ಪಾಪವನ್ನು ಮತ್ತು ತಾಪವನ್ನು ಕಳೆಯುತ್ತದೆ ।೧೯೯॥

ಅಥವಾ ಸೂರ್ಯನು ನಿತ್ಯದಂತೆ ಪ್ರದಕ್ಷಿಣೆ ಮಾಡಲು ಹೊರಟಾಗ ಅಂಧಕಾರದ ನಾಶಮಾಡುವನು ಮತ್ತು ಜಗತ್ತಿ ನಲ್ಲಿ ಶ್ರೀಮಂತ ಮಂದಿರಗಳನ್ನು ತೆರೆದು ವ್ಯವಹಾರವು ಆರಂಭಗೊಳ್ಳುವುದು ।೨೦೦॥

ಅದರಂತೆ ಬದ್ಧರಿದ್ದವರನ್ನು ಮುಕ್ತರನ್ನಾಗಿ ಮಾಡು ವರು ಮತ್ತು ಸಂಸಾರ ಸಾಗರದಲ್ಲಿ ಮುಳುಗಿದವರನ್ನು ಮೇಲಕ್ಕೆತ್ತುವರು, ಹಾಗೆಯೇ ಪೀಡಿತರನ್ನು ದುಃಖದಿಂದ ಬಿಡಿಸುವರು ।೨೦೧॥

ಹೆಚ್ಚಿಗೇನು ಹೇಳಬೇಕು? ಹಗಲು ರಾತ್ರಿ ತಮ್ಮ ಪ್ರಯತ್ನದಿಂದ ಇತರರ ಸುಖವನ್ನು ಬೆಳೆಸುವರು, ಇತರ ಕಲ್ಯಾಣದ ಜೊತೆಗೆ ತಮ್ಮ (ಸ್ವಾರ್ಥ) ಕಲ್ಯಾಣವನ್ನು ಸಾಧಿಸುವರು ।೨೦೨॥

ಇದರ ಹೊರತಾಗಿ ತಮ್ಮ ಕಾರ್ಯ ಸಾಧಿಸಲು ಇತರರಿಗೆ ಅಹಿತ ಮಾಡುವುದು ಅವರ ಅಂತಃಕರಣದಲ್ಲಿ ಸಂಕಲ್ಪವೂ ಮೂಡುವುದಿಲ್ಲ ।೨೦೩॥

ಇದಕ್ಕೆ ಮಾತ್ರ ''ಅದ್ರೋಹತ್ವ''ವೆಂದು ಹೇಳುವರು. ಅರ್ಜುನಾ, ಇದನ್ನು ನಿನಗೆ ನಿನ್ನ ದೃಷ್ಟಿಗೆ ಪ್ರತ್ಯಕ್ಷವಾಗಿ ಕಾಣು ವಂತೆ ಹೇಳಿರುವೆನು ।೨೦೪॥

ಆಣಿ ಗಂಗಾ ಶಂಭೂಚಾ ಮಾಥಾ । ಪಾವೋನಿ ಸಂಕೋಚೇ ಜೇವೀ ಪಾರ್ಥಾ । ತೇವೀ ಮಾನ್ಯಪಣೇ ಸರ್ವಥಾ । ಲಾಜಣೇ ಜೇ ।೨೦೫॥ ತೇ ಹೇ ಪುಢತಪುಢತೀ । ಅಮಾನಿತ್ವ ಜಾಣ ಸುಮತೀ । ಮಾಗಾ ಸಾಂಗಿತಲೇಸೇ ಕಿತೀ । ತೇಂಚಿ ತೇ ಬೋಲೋ ।೨೦೬॥ ಏವಂ ಇಹೀ ಸವ್ವಿಸೇ । ಬ್ರಹ್ಮಸಂಪದಾ ಹೇ ವಸತ ಅಸೇ । ಮೋಕ್ಷಚಕ್ರವರ್ತೀಚೇ ಜೈಸೇ । ಅಗ್ರಹಾರ ಹೋಯ ।೨೦೭॥ ನಾನಾ ಹೇ ಸಂಪತ್ತಿ ದೈವೀ । ಯಾ ಗುಣಾತೀರ್ಥಾಂಚೀ ನೀಚ ನವೀ । ನಿರ್ವಿಣ್ಣ ಸಗರಾಂಚೀ ದೈವೀ । ಗಂಗಾಚಿ ಆಲೀ ।೨೦೮॥ ಕೀ ಗುಣಕುಸುಮಾಂಚೀ ಮಾಳಾ । ಹೇ ಘೇಊನಿ ಮುಕ್ತಿ ಬಾಳಾ । ವೈರಾಗ್ಯ ನಿರಪೇಕ್ಷಾಚಾ ಗಳಾ । ಗಿಂವಸತ ಅಸೇ ।೨೦೯॥ ಕೀ ಸವ್ವಿಸೇಗುಣಜ್ಯೋತೀ । ಇಹೀ ಉಜಳೂನಿ ಆರತಿ । ಗೀತಾ ಆತ್ಮಯಾ ನಿಪಜತೀ । ನಿರಾಂಜನಾ ಆಲೀ ।೨೧೦॥ ಉಗಳಿತೇ ನಿರ್ಮಳೇ । ಗುಣ ಇಯೇಚೀ ಮುಕ್ತಾಫಳೇ । ದೈವೀ ಶುಕ್ತಿ ಕಳೇ । ಗೀತಾರ್ಣವೀಂಚೀ ।೨೧೧॥ ಕಾಯ ಬಹೂ ವಾನೂ ಐಸೀ । ಅಭಿವ್ಯಕ್ತೀ ಯೇ ಅಪೈಸೀ । ಕೇಲೇ ದೈವೀ ಗುಣರಾಶೀ । ಸಂಪತ್ತಿರೂಪ ।೨೧೨॥ ಆತಾ ದುಃಖಾಚೀ ಆಂತುವಟ ವೇಲೀ । ದೋಷಕಾಟ್ಯಾಂಚೀ ಜರೀ ಭರಲೀ । ತರೀ ನಿಜಾಭಿಧಾನೀ ಫಾಲೀ । ಆಸುರೀ ತೇ ।೨೧೩॥ ಪೈ ತ್ಯಾಜ್ಯ ತ್ಯಜಾವಯಾಲಾಗೀ । ಜಾಣಾವೀ ಜರೀ ಅನುಪಯೋಗೀ । ತರೀ ಐಕಾ ತೇ ಚಾಂಗೀ । ಶ್ರೋತ್ರಶಕ್ತೀ ।೨೧೪॥ ತರೀ ನರಕವ್ಯಥಾ ಥೋರೀ । ಆಣಾವಯಾ ದೋಷೀಘೋರೀ । ಮೇಳೂ ಕೇಲಾ ತೇ ಆಸುರೀ । ಸಂಪತ್ತಿ ಹೇ ।೨೧೫॥ ನಾನಾ ವಿಷವರ್ಗು ಏಕವಟು । ತಯಾ ನಾಂವ ಜೈಸಾ ಬಾಸಟು । ಆಸುರೀ ಸಂಪತ್ತಿ ಹಾ ಖೋಟು । ದೋಷಾಂಚಾ ತೈಸಾ ।೨೧೬॥

ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।
ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್ ।೪॥

ತರೀ ತಯಾಚಿ ಆಸುರಾ । ದೋಷಾಮಾಜೀ ಜಯಾ ವೀರಾ । ವಾಡಪಣಾಚಾ ಡಾಂಗೋರಾ । ತೋ ದಂಭೂ ಐಸಾ ।೨೧೭॥ ಜೈಸೀ ಆಪುಲೀ ಜನನೀ । ನಗ್ನ ದಾವಿಲಿಯಾ ಜನೀ । ತೇ ತೀರ್ಥಚಿ ಪರೀ ಪತನೀ । ಕಾರಣ ಹೋಯ ।೨೧೮॥ ಕಾ ವಿದ್ಯಾ ಗುರುಪದಿಷ್ಟಾ । ಬೋಭಾಇಲಿಯಾ ಚೋಹಟಾ । ತರೀ ಇಷ್ಟದಾಪರೀ ಅನಿಷ್ಟಾ । ಹೇತು ಹೋತೀ ।೨೧೯॥

ಮತ್ತು ಪಾರ್ಥಾ, ಭಗೀರಥನ ಪ್ರಯತ್ನದಿಂದ ಗಂಗೆಯು ಮೃತ್ಯುಲೋಕಕ್ಕೆ ಬಂದಾಗ ಶ್ರೀಶಂಕರನು ಆಕೆಯನ್ನು ತನ್ನ ಜಟೆಯಲ್ಲಿ ಧರಿಸಿದ್ದರಿಂದ ಆಕೆಗೆ ತನ್ನ ವೇಗದ ಗರ್ವವು ಹರಣವಾಗಿ ಲಜ್ಜಿತಳಾದಂತೆ, ಮಾನ್ಯತೆ ದೊರಕಿದಾಗ ಸಂಕೋಚವಾಗುವುದೋ ।೨೦೫॥

ಸುಮತಿ ಅರ್ಜುನನೇ, ಇದಕ್ಕೇನೇ ''ಅಮಾನಿತ್ವ'' ವೆಂದು ಹೇಳುವರು. ಈ ವಿಷಯಕ್ಕೆ ಹಿಂದೆ ನಿನಗೆ ಸಾಕಷ್ಟು ಹೇಳಿದ್ದನ್ನು ಪುನಃ ಎಷ್ಟೆಂದು ಹೇಳಲಿ? ।೨೦೬॥

ಈ ಇಪ್ಪತ್ತಾರು ದೈವೀಗುಣದ ರೂಪದಿಂದ ಬ್ರಹ್ಮ ಸಂಪತ್ತು ಈ ಜಗತ್ತಿನಲ್ಲಿದೆ ಹಾಗೂ ಮೋಕ್ಷ ಚಕ್ರವರ್ತಿಗಳಿಗೆ ಇವುಗಳು ಕೊಟ್ಟ ಇನಾಮುಗಳಾಗಿವೆ ।೨೦೭॥

ಅಥವಾ ಈ ದೈವೀ ಸಂಪತ್ತಾಗಿರುವ, ಇವುಗಳಲ್ಲಿ ಇಪ್ಪತ್ತಾರು ತೀರ್ಥಗಳಿದ್ದು, ವಿರಕ್ತಿರೂಪ ಸಗರಪುತ್ರರ ಉದ್ಧಾರಕ್ಕಾಗಿ ಇವು ಪ್ರತ್ಯಕ್ಷ ಗಂಗೆಯಾಗಿ ಬಂದಿರುವುವು ।೨೦೮॥

ಅಥವಾ ಈ ಗುಣರೂಪ ಹೂವಿನ ಮಾಲೆಯನ್ನು ಕೈಯಲ್ಲಿ ಧರಿಸಿ ಮುಕ್ತಿರೂಪ ಕನ್ನೆಯು ನಿರಪೇಕ್ಷ ವೈರಾಗ್ಯರೂಪ ವರನ ಶೋಧ ಮಾಡುತ್ತಿರುವಳು ।೨೦೯॥

ಅಥವಾ ಈ ಗುಣರೂಪ ದೀಪಗಳನ್ನು ಹಚ್ಚಿ ಗೀತೆಯು ತನ್ನ ಆತ್ಮರೂಪ ಪತಿಗೆ ಬೆಳಗಲು ಆರತಿಯನ್ನು ತಂದಿರುವಳು ।೨೧೦॥

ಅಥವಾ ಗೀತೆರೂಪ ಸಮುದ್ರದಲ್ಲಿ ಈ ಸುಗಣರೂಪ ಮುತ್ತುಗಳು ದೈವೀ ಸಂಪತ್ತು ಎಂಬ ಕಪ್ಪೆಚಿಪ್ಪಿನಲ್ಲಿ ಉತ್ಪನ್ನವಾಗಿರುವುವು ।೨೧೧॥

ಈಗ ಈ ದೈವೀ ಸಂಪತ್ತನ್ನು ಎಷ್ಟೆಂದು ವರ್ಣಿಸಲಿ? ಈ ಇಪ್ಪತ್ತಾರು ಗುಣಗಳ ರಾಶಿಯಾದ ದೈವೀ ಸಂಪತ್ತು ಸಹಜವಾಗಿ ತಿಳಿಯುವಂತೆ ಲಕ್ಷಣಗಳನ್ನು ಹೇಳಿರುವೆ ।೨೧೨॥

ಈಗ ಆಸುರಿ ಸಂಪತ್ತಿಯು ದುಃಖರೂಪ ಬಳ್ಳಿಯಾಗಿದ್ದು, ದೋಷರೂಪ ಮುಳ್ಳಿನಿಂದ ಕೂಡಿರುವುದು. ಆದ್ದರಿಂದ ನೀನು ಅದನ್ನು ಮನಸ್ಸಿನಿಂದ ತಿಳಿದುಕೋ ।೨೧೩॥

ಕಾರಣ, ಹೀಗಿದೆ ನೋಡು, ತನಗೆ ಉಪಯೋಗವಲ್ಲದ ತ್ಯಾಜ್ಯವಸ್ತು ಇರುವುದು ನಿಜ. ಆದರೆ ಅದನ್ನು ತ್ಯಾಗ ಮಾಡುವುದಕ್ಕಾಗಿಯೇ ಬಹಳ ಲಕ್ಷ ಕೊಟ್ಟು ಕೇಳಿಕೋ ।೨೧೪॥

ಇಲ್ಲಿ ನೋಡು, ಜೀವಕ್ಕೆ ಭಯಂಕರವಾದ ನರಕ ಪ್ರಾಪ್ತಿ ಮಾಡಿಕೊಡುವುದಕ್ಕಾಗಿ ಘೋರವಾದ ದೋಷಗಳಿಂದ ತನ್ನ ಒಂದು ಸಂಸ್ಥೆ ಕಟ್ಟಿದೆ. ಅದೇ ಆಸುರಿ ಸಂಪತ್ತಾಗಿದೆ ।೨೧೫॥

ಅಥವಾ ಎಲ್ಲ ವಿಷಗಳನ್ನು ಒಂದೆಡೆ ಸೇರಿಸಿದಾಗ ಅದಕ್ಕೆ ಕಾಳಕೂಟ ವಿಷಯವೆಂದು ಹೇಳಬೇಕು. ಅದರಂತೆ ಆಸುರಿ ಸಂಪತ್ತು ಎಂದರೆ ದೋಷದ ಉಂಡೆಯಾಗಿರುವುದು।೨೧೬॥

ಶ್ಲೋಕಾರ್ಥ :- ಪಾರ್ಥಾ! ದಂಭ, ದರ್ಪ, ಅಭಿಮಾನ, ಕ್ರೋಧ, ಪೌರುಷ, ಅವಿವೇಕ ಇವುಗಳು ಆಸುರೀ ಸಂಪತ್ತಿನಿಂದ ಹುಟ್ಟಿದ ಗುಣಗಳು ।೪॥

ಹೇ ವೀರನೇ, ಈ ಆಸುರಿ ದೋಷದಲ್ಲಿ ಮುಖ್ಯವಾಗಿಯೂ ಪ್ರಸಿದ್ಧವಾಗಿಯೂ ಇರುವುದು ದಂಭವಾಗಿದೆ. ಅದು ಹೀಗಿದೆ ।೨೧೭॥

ತನ್ನ ತಾಯಿಯನ್ನು ನಿಂದಿಸಿ ಆಕೆಯ ದೋಷಗಳನ್ನು ಜನರಲ್ಲಿ ಪ್ರಕಟಮಾಡುವುದರಿಂದ, ಆಕೆಯು ತೀರ್ಥದಂತೆ ತನಗೆ ಪಾವನ ಮಾಡುವವಳಾಗಿದ್ದರೂ ತನ್ನ ಪತನಕ್ಕೆ ಆಕೆಯೇ ಕಾರಣಳಾಗುವಳು ।೨೧೮॥

ಅಥವಾ ಗುರುಗಳಿಂದ ಪ್ರಾಪ್ತಮಾಡಿಕೊಂಡ ಗುಪ್ತ ವಿದ್ಯೆಯನ್ನು ಬಯಲಿಗೆ ತೆರೆದಿಟ್ಟರೆ ಅದು ತನಗೆ ಹಿತಮಾಡುವುದಿದ್ದರೂ, ಅದರಿಂದ ತನ್ನ ಅಹಿತವೇ ಆಗುವುದು ।೨೧೯॥

ಪೈ ಆಂಗೇ ಬುಡತಾ ಮಹಾಪೂರೀ । ಜೇ ವೇಗೇ ಕಾಢೀ ಪೈಲತೀರೀ । ತೇ ನಾವಚಿ ಬಾಂಧಿಲಿಯಾ ಶಿರೀ । ಬುಡವೀ ಜೈಸೀ ।೨೨೦॥ ಕಾರಣ ಜೇ ಜೀವಿತಾ । ತೇ ವಾನಿಲೇ ಜರೀ ಸೇವಿತಾ । ತರೀ ಅನ್ನಚಿ ಪಂಡುಸುತಾ । ಹೋಯ ವಿಷ ।೨೨೧॥ ತೈಸಾ ದೃಷ್ಟಾ ದೃಷ್ಟಾಚಾ ಸಖಾ । ಧರ್ಮು ಜಾಲಾ ತೋ ಫೋಕಾರಿಜೇ ದೇಖಾ । ತರೀ ತಾರಿತಾ ತೋಚಿ ದೋಖಾ । ಲಾಗೀ ಹೋಯ ।೨೨೨॥ ಮ್ಹಣೌನಿ ವಾಚೇಚಾ ಚೌಬಾರಾ । ಘಾತಲಿಯಾ ಧರ್ಮಾಚಾ ಪಸಾರಾ । ಧರ್ಮುಚಿ ತೋ ಅಧರ್ಮು ಹೋಯ ವೀರಾ । ತೋ ದಂಭು ಜಾಣೇ ।೨೨೩॥ ಆತಾ ಮೂರ್ಖಾಚಿಯೇ ಜಿಭೇ । ಅಕ್ಷರಾಂಚಾ ಆಂಬುಖಾ ಸುಭೇ । ಆಣಿ ತೋ ಬ್ರಹ್ಮ ಸಭೇ । ನ ರಿಝೇ ಜೈಸಾ ।೨೨೪॥ ಕಾ ಮಾದುರೀ ಲೋಕಾಂಚಾ ಘೋಡಾ । ಗಜಪತಿಹೀ ಮಾನೀ ಥೋಡಾ । ಕಾ ಕಾಂಟಿಯೇವರೀಲ್ಯಾ ಸರಡಾ । ಸ್ವರ್ಗುಹೀ ನೀಚ ।೨೨೫॥ ತೃಣಾಚೇನಿ ಇಂಧನೇ । ಆಗೀ ಧಾಂವೇ ಗಗನೇ । ಥಿಲ್ಲರಬಳೇ ಮೀನೇ । ಗಣಿಜೇ ಸಿಂಧೂ ।೨೨೬॥ ತೈಸಾ ಮಾಜೇ ಸ್ತ್ರಿಯಾ ಧನೇ । ವಿದ್ಯಾಸ್ತುತೀ ಬಹುತೇ ಮಾನೇ । ಏಕೇ ದಿವಸೀಂಚೇನಿ ಪರಾನ್ನೇ । ಅಲ್ಪಕು ಜೈಸಾ ।೨೨೭॥ ಅಭ್ರಚ್ಛಾಯೇಚಿಯಾ ಜೋಡೀ । ನಿದೈವು ಘರ ಮೋಡೀ । ಮೃಗಾಂಬು ದೇಖೋನಿ ಫೋಡೀ । ಪಾಣಿಯಾಡೇ ಮೂರ್ಖ ।೨೨೮॥ ಕಿಂಬಹುನಾ ಐಸೈಸೇ । ಉತಣೇ ಜೇ ಸಂಪತ್ತಿ ಮಿಸೇ । ತೋ ದರ್ಪು ಗಾ ಅನಾರಿಸೇ । ನ ಬೋಲೇ ಫೇಈ ।೨೨೯॥ ಆಣಿ ಜಗಾ ವೇದೀ ವಿಶ್ವಾಸು । ಆಣಿ ವಿಶ್ವಾಸೀ ಪೂಜ್ಯ ಈಶು । ಜಗೀ ಏಕ ತೇಜಸು । ಸೂರ್ಯುಚಿ ಹಾ ।೨೩೦॥ ಜಗ ಸ್ಪೃಹೇ ಆಸ್ಪದ । ಏಕ ಸಾರ್ವಭೌಮಪದ । ನ ಮರಣೇ ನಿರ್ವಿವಾದ । ಜಗಾ ಪಢಿಯೇ ।೨೩೧॥ ಮ್ಹಣೌನಿ ಜಗ ಉತ್ಸಾಹೇ । ಯಾತೇ ವಾನೂ ಜಾಯೇ । ಕೀ ತೇ ಆಇಕೋನಿ ಮತ್ಸರು ವಾಹೇ । ಫುಗೋ ಲಾಗೇ ।೨೩೨॥ ಮ್ಹಣೇ ಈಶ್ವರಾತೇ ಖಾಯೇ । ತಯಾ ವೇದಾ ವಿಷ ಸೂಯೇ । ಗೌರವಾಮಾಜೀ ತ್ರಾಯೇ । ಭಂಗೀತ ಅಸೇ ।೨೩೩॥ ಪತಂಗಾ ನಾವಡೇ ಜ್ಯೋತೀ । ಖದ್ಯೋತಾ ಭಾನೂಚೀ ಖಂತೀ । ಟಿಟಿಭೇನೇ ಆಪಾಂಪತೀ । ವೈರೀ ಕೇಲಾ ।೨೩೪॥ ತೈಸಾ ಅಭಿಮಾನಾಚೇನಿ ಮೋಹೇ । ಈಶ್ವರಾಚೇಂಹೀ ನಾಮ ನ ಸಾಹೇ । ಬಾಪಾತೇ ಮ್ಹಣೇ ಮಜ ಹೇ । ಸವತೀ ಜಾಲೀ ।೨೩೫॥

ನಾವೆಯು ಸ್ವತಃ ಮಹಾಪೂರದ ನೀರಿನಲ್ಲಿ ಮುಳುಗುವವರಿಗೆ ತ್ವರೆಯಿಂದ ಆಚೆಯ ದಂಡೆಗೆ ಒಯ್ಯುವುದು. ಅದೇ ನಾವೆಯನ್ನು ತನ್ನ ತಲೆಯ ಮೇಲೆ ಇಟ್ಟುಕೊಂಡರೆ ತನ್ನನ್ನು ಅದು ಮುಳುಗಿಸುವುದು ||೨೨೦||

ಹೇ ಪಂಡುಸುತನೇ, ಜೀವದ ರಕ್ಷಣೆ ಮಾಡುವ ಅನ್ನವನ್ನು ಉತ್ತಮವೆಂದು ಅಧಿಕವಾಗಿ ಸೇವಿಸಿದರೆ ಅದೇ ಅನ್ನವು ವಿಷವಾಗಿ ಘಾತಕವಾಗುವುದು ||೨೨೧||

ಅದರಂತೆ ಇಹಪರದ ಸಖನಾದ ಧರ್ಮವನ್ನು ವಾಣಿಯಿಂದ ನುಡಿಯುತ್ತ ಹೋದರೆ ಉದ್ಧಾರಾಗುವ ಪ್ರತಿಯಾಗಿ ಅದರಿಂದ ದೋಷವಾಗುವುದು ||೨೨೨||

ಆದ್ದರಿಂದ ಹೇ ವೀರನೇ, ತಾನು ಮಾಡಿದ ಧರ್ಮವನ್ನು ಎಲ್ಲ ಕಡೆಗೆ ತನ್ನ ಮುಖದಿಂದ ಪ್ರಸಿದ್ಧ ಗೊಳಿಸುವುದರಿಂದ ಧರ್ಮವೇ ಅಧರ್ಮವಾಗುವುದು. ಇದಕ್ಕೆ ''ದಂಭ''ವೆಂದು ಹೇಳುವರು ||೨೨೩||

ಈಗ, ಮೂರ್ಖ ಮನುಷ್ಯನಿಗೆ ನಾಲ್ಕು ಅಕ್ಷರಗಳು ಬಂದಾಕ್ಷಣವೇ ಆತನು ಬ್ರಹ್ಮದೇವನ ಸಭೆಗೆ ತುಚ್ಛ ವೆನ್ನುವನು ||೨೨೪||

ಜಂಬಕೊಟ್ಟುವ ಸಿಪಾಯಿಯ ಕುದುರೆಯು ಐರಾವತವನ್ನೂ ತುಚ್ಛವೆಂದು ಭಾವಿಸುವುದು. ಅಥವಾ ಮುಳ್ಳಿನ ಗಿಡದಲ್ಲಿರುವ ಓತಿಕಾಟವು ತಾನು ಗಿಡದ ತುದಿಗೆ ಹೋಗಿ ಕುಳಿತಾಗ ಅದು ಸ್ವರ್ಗಕ್ಕೂ ನೀಚವೆನ್ನುವುದು ||೨೨೫||

ಹುಲ್ಲಿಗೆ ಅಗ್ನಿ ದೊರಕಿದರೆ ಒಮ್ಮೆಲೇ ಜ್ವಾಲೆಯು ಆಕಾಶವನ್ನು ಮುಟ್ಟುವುದು. ಅಥವಾ ಮಡುವಿನಲ್ಲಿನ ಮೀನವು ಸಮುದ್ರಕ್ಕೆ ತುಚ್ಛವೆನ್ನುವರು ||೨೨೬||

ಅಥವಾ ದರಿದ್ರನಿಗೆ ಒಂದು ದಿನದ ಪಕ್ವಾನ್ನಸಿಕ್ಕರೆ ಅಷ್ಟರಿಂದಲೇ ಉನ್ಮತ್ತನಾಗುವನು. ಅದರಂತೆ ಇವನು ಸ್ತ್ರೀ, ಧನ, ವಿದ್ಯಾ, ಸ್ತುತಿ, ಮತ್ತು ಬಹುಮಾನ ಇವುಗಳಿಂದ ಉನ್ಮತ್ತನಾಗುವನು ||೨೨೭||

ಒಂದು ದಿನ ಮೋಡದ ನೆರಳು ಬಿದ್ದದ್ದು ನೋಡಿ, ಈಗ ನೆರಳಿಗಾಗಿ ಮನೆ ಏಕೆ ಬೇಕೆಂದು ಒಬ್ಬ ದೈವಹೀನ ಮನುಷ್ಯನು ತನ್ನ ಮನೆಯನ್ನೇ ಕೆಡವಿದಂತೆ. ಅಥವಾ ಮೃಗಜಲ ನೋಡಿ ಒಬ್ಬ ಮೂರ್ಖನು ಮನೆಯಲ್ಲಿನ ಜಲಾಶಯಗಳನ್ನು ತೆಗೆದೊಗೆದಂತೆ ||೨೨೮||

ಒಟ್ಟನಲ್ಲಿ ಈ ಪ್ರಕಾರವಾಗಿ ಸಂಪತ್ತಿನ ಯೋಗದಿಂದ ಉನ್ಮತ್ತನಾಗುವುದಕ್ಕೆ ''ದರ್ಪ''ವೆಂದು ಹೇಳುವರು. ಇದನ್ನು ನಾನು ನಿಃಸಂಶಯವಾಗಿ ಹೇಳುವೆ ||೨೨೯||

ಜಗತ್ತಿನ ಎಲ್ಲರೂ ವೇದಗಳಲ್ಲಿ ವಿಶ್ವಾಸವನ್ನಿಟ್ಟಿರುವರು. ಈಶ್ವರನು ಜಗತ್ತಿನ ಎಲ್ಲರಿಗೂ ಪೂಜ್ಯನಿರುವನು ಮತ್ತು ಜಗತ್ತಿನಲ್ಲಿ ಸೂರ್ಯನಂತೆ ತೇಜಸ್ವಿಯು ಇನ್ನಾರೂ ಇಲ್ಲ ||೨೩೦||

ಎಲ್ಲ ಜಗತ್ತಿಗೆ ಒಂದು ಸಾರ್ವಭೌಮಪದದ ಇಚ್ಛೆ ಇರುವುದು. ಹಾಗೂ ತನಗೆ ಮರಣ ಬರಬಾರದೆಂದು ಜಗತ್ತಿನ ಎಲ್ಲರಿಗೂ ಹಿಡಿಸುವುದು. ಇದು ನಿರ್ವಿವಾದವು ||೨೩೧||

ಆದ್ದರಿಂದ ಜನರು ಬಹಳ ಉತ್ಸಾಹದಿಂದ ವೇದದ ಮತ್ತು ಈಶ್ವರನ ವರ್ಣನೆಯನ್ನು ಮಾಡುವರು. ಆದರೆ ಇದನ್ನು ಕೇಳಿದಾಕ್ಷಣವೇ ಇವನ ಮನದಲ್ಲಿ ಮತ್ಸರವು ಉತ್ಪನ್ನವಾಗಿ ಕ್ರೋಧಯುಕ್ತನಾಗುವನು ||೨೩೨||

ಅಲ್ಲದೇ, ನಾನು ಈಶ್ವರನಿಗೆ ತಿಂದುಬಿಡುವೆನು, ವೇದಗಳಿಗೆ ವಿಷಹಾಕಿ ಕೊಲ್ಲುವೆನು ಮತ್ತು ಎಲ್ಲರ ರಕ್ಷಣೆ ಮಾಡುವವನ ಸತ್ತೆಯನ್ನು ಹರಣ ಮಾಡುವೆನು ||೨೩೩||

ಪತಂಗ ಹುಳಕ್ಕೆ ದೀಪದ ಬೆಳಕನ್ನು ಸಹಿಸುವುದಾಗುವುದಿಲ್ಲ, ಮಿಂಚಿನ ಹುಳಕ್ಕೆ ಸೂರ್ಯನ ಬೇಸರವಾಗುವುದು. ಟಿಟಿಭ ಪಕ್ಷಿಯು ಸಮುದ್ರಕ್ಕೆ ವೈರ ಮಾಡುವುದು ||೨೩೪||

ಅದರಂತೆ ಇವನಿಗೆ ಅಭಿಮಾನದ ಮದದಿಂದ ಈಶ್ವರನ ನಾಮವು ಸಹಿಸುವುದಾಗುವುದಿಲ್ಲ. ಪರಮೇಶ್ವರನಿಗೂ ಸಹ ಇವನೊಬ್ಬ ನನಗೆ ಸವತಿಯಾಗಿರುವನು ಎಂದೆನ್ನುವನು ||೨೩೫||

ಐಸಾ ಮಾನ್ಯತೇಚಾ ಪುಷ್ಟಗಂಡು । ತೋ ಅಭಿಮಾನೀ ಪರಮಲಂಡು । ರೌರವಾಚಾ ರೂಢು । ಮಾರ್ಗುಚಿ ಪೈ ।೮೩೬॥ ಆಣಿ ಪುಢಿಲಾಂಚೇ ಸುಖ । ದೇಖಣೆಯಾಂಚೇ ಹೋಯ ಮಿಖ । ಚಢೇ ಕ್ರೋಧಾಗ್ನೀಚೇ ವಿಖ । ಮನೋವೃತ್ತೀ ।೮೩೭॥ ಶೀತಳಾಚಿಯೇ ಭೇಟೀ । ತಾತಲಾ ತೇಲೀ ಆಗೀ ಉಠೀ । ಚಂದ್ರು ದೇಖೋನಿ ಜಳೇ ಪೋಟೀ । ಕೋಲ್ಹಾ ಜೈಸಾ ।೮೩೮॥ ವಿಶ್ವಾಚೇ ಆಯುಷ್ಯ ಜೇಣೇ ಉಜಳೇ । ತೋ ಸೂರ್ಯು ಉದೈಲಾ ದೇಖೋನಿ ಸವಳೇ । ಪಾಪಿಯಾ ಫುಟತೀ ಡೋಳೇ । ಡುಡುಳಾಚೇ ।೮೩೯॥ ಜಗಾಚೇ ಸುಖಪಹಾಂಟ । ಚೋರಾ ಮರಣಾಹೂನಿ ನಿಕೃಷ್ಟ । ದುಧಾಚೇ ಕಾಳಕೂಟ । ಹೋಯ ವ್ಯಾಳೀ ।೮೪೦॥ ಅಗಾಧೇ ಸಮುದ್ರಜಳೇ । ಪ್ರಾಶಿತಾ ಅಧಿಕ ಜಳೇ । ವಡವಾಗ್ನಿ ನ ಮಿಳೇ । ಶಾಂತಿ ಕಹೀ ।೮೪೧॥ ತೈಸಾ ವಿದ್ಯಾವಿನೋದವಿಭವೇ । ದೇಖೇ ಪುಡಿಲಾಂಚೀ ದೈವೇ । ತಂವ ತಂವ ರೋಷು ದುಣಾವೇ । ಕ್ರೋಧು ತೋ ಜಾಣ ।೮೪೨॥ ಆಣಿ ಮನ ಸರ್ಪಾಚೇ ಕುಟೀ । ಡೋಳೇ ನಾರಾಚಾಂಚೀ ಸುಟೀ । ಬೋಲಣೇ ತೇ ವೃಷ್ಟೀ । ಇಂಗಳಾಂಚೀ ।೮೪೩॥ ಯೇರ ಜೇ ಕ್ರಿಯಾಜಾತ । ತೇ ತಿಖಯಾಚೇ ಕರ್ವತ । ಐಸೇ ಸಬಾಹ್ಯ ಖಿಸಾಸಿತ । ಜಯಾಚೇ ಗಾ ।೮೪೪॥ ತೋ ಮನುಷ್ಯಾಂತ ಅಧಮು ಜಾಣ । ಪಾರುಷ್ಯಾಚೇ ಅವತರಣ । ಆತಾ ಆಇಕ ಖೂಣ । ಅಜ್ಞಾನಾಚೇ ।೮೪೫॥ ತರೀ ಶೀತೋಷ್ಣ ಸ್ಪರ್ಶಾ । ನಿವಾಡು ನೇಣೇ ಪಾಷಾಣು ಜೈಸಾ । ಕಾ ರಾತ್ರೀ ಆಣೀ ದಿವಸಾ । ಜಾತ್ಯಂಧು ತೋ ।೮೪೬॥ ಆಗೀ ಉಠಿಲಾ ಆರೋಗಣೇ । ಜೈಸಾ ಖಾದ್ಯಾಖಾದ್ಯ ನ ಮ್ಹಣೇ । ಕಾ ಪರಿಸಾ ಪಾಡು ನೇಣೇ । ಸೋನಯಾ ಲೋಹಾ ।೮೪೭॥ ನಾತರೀ ತೇ ನಾನಾರಸೀ । ರಿಘೋನಿ ದರ್ವೀ ಜೈಸೀ । ಪರೀ ರಸಸ್ವಾದಾಸೀ । ಚಾಖೋ ನೇಣೇ ।೮೪೮॥ ಕಾ ವಾರಾ ಜೈಸಾ ಪಾರಖೀ । ನವ್ಹೇಚಿ ಗಾ ಮಾರ್ಗಾಮಾರ್ಗಾವಿಖೀ । ತೈಸೇ ಕೃತ್ಯಾಕೃತ್ಯ ವಿವೇಕೀ । ಅಂಧಪಣ ಜೇ ।೮೪೯॥ ಹೇ ಚೋಖ ಹೇ ಮೈಳ । ಐಸೇ ನೇಣೋನಿಯಾ ಬಾಳ । ದೇಖೇ ತೇ ಕೇವಳ । ಮುಖೀಂಚಿ ಘಾಲೀ ।೮೫೦॥ ತೈಸೇ ಪಾಪಪುಣ್ಯಾಚೇ ಖಿಚಟೇ । ಕರೋನಿ ಖಾತಾ ಬುದ್ಧಿಚೇಷ್ಟೇ । ಕಡು ಮಧುರ ನ ವಾಟೇ । ಐಸೀ ಜೇ ದಶಾ ।೮೫೧॥ ತಿಯೇ ನಾಮ ಅಜ್ಞಾನ । ಯಾ ಬೋಲಾ ನಾಹೇ ಆನ । ಏವಂ ಸಾಹೀ ದೋಷಾಂಚೇ ಚಿನ್ಹ । ಸಾಂಗಿತಲೇ ।೮೫೨॥

ಈ ಪ್ರಕಾರವಾಗಿ ಅವನ ಅಂಗದಲ್ಲಿ ಮಾನದ ಅತಿಶಯ ಗರ್ವವು ತುಂಬಿರುವುದು. ಅವನೇ ''ಅಭಿಮಾನಿ'' ಯಾಗಿರುವನು. ಈ ಉನ್ಮತ್ತ ಪುರುಷನು ರೌರವ ನರಕದ ರಾಜಮಾರ್ಗನಾಗಿರುವನು ।೨೩೬॥

ಮತ್ತು ಇನ್ನೊಬ್ಬರ ಸುಖವನ್ನು ನೋಡಿದಾಕ್ಷಣವೇ, ಯಾವನ ಮನೋವೃತ್ತಿಗೆ ಕ್ರೋಧರೂಪ ಅಗ್ನಿಯ ವಿಷವೇರುವುದು ।೨೩೭॥

ಕಾದ ಎಣ್ಣೆಯಲ್ಲಿ ತಣ್ಣೀರು ಎರೆಚಿದರೆ ಅದು ಹೆಚ್ಚು ಪ್ರಜ್ವಲಿಸುವುದು. ಚಂದ್ರನನ್ನು ನೋಡಿದಾಕ್ಷಣವೇ ನರಿಯು ಮನದಲ್ಲಿ ತಳಮಳಿಸುವುದು ।೨೩೮॥

ಯಾರ ಯೋಗದಿಂದ ಎಲ್ಲ ವಿಶ್ವದ ವ್ಯವಹಾರಗಳು ಆರಂಭಗೊಳ್ಳುವುವೋ, ಆ ಸೂರ್ಯನು ಬೆಳಿಗ್ಗೆ ಉದಯಿಸಿದ್ದನ್ನು ಪಾಪಿಯಾದ ಗೂಬೆಗೆ ಮಾತ್ರ ಕಣ್ಣುಗಳು ಒಡೆಯುವುವು ।೨೩೯॥

ಬೆಳಗಾದಾಗ ಎಲ್ಲ ಜನರಿಗೂ ಸುಖವಾಗುವುದು. ಆದರೆ ಕಳ್ಳರಿಗೆ ಅದರಿಂದ ಮರಣಕ್ಕಿಂತಲೂ ಹೆಚ್ಚಾದ ದುಃಖವಾಗುವುದು. ಸರ್ಪಕ್ಕೆ ಹಾಲು ಹಾಕಿದರೂ ಅದರಿಂದ ಭಯಂಕರವಾದ ವಿಷವೇ ಆಗುವುದು ।೨೪೦॥

ಅಗಾಧವಾದ ಸಮುದ್ರದ ನೀರನ್ನು ಕುಡಿಯುತ್ತಿರುವಾಗಲೂ ವಡವಾಗ್ನಿಯು ಪ್ರತಿಯಾಗಿ ಇನ್ನೂ ಹೆಚ್ಚಿಗೆ ಪ್ರದೀಪ್ತಗೊಳ್ಳುವುದು ಮತ್ತು ಅದಕ್ಕೆ ಶಾಂತತೆವೆಂಬುದು ಯಾವುದೋ ಏನೋ ।೨೪೧॥

ಆದರಂತೆ ಇನ್ನೊಬ್ಬರ ವಿದ್ಯೆ, ವಿನೋದ, ವೈಭವ ಮತ್ತು ಸಭಾಗ್ಯತೆ ಇವುಗಳನ್ನು ಕಂಡು ಯಾವನು ರೊಚ್ಚಿಗೇಳುವನೋ, ಅದಕ್ಕೆ ''ಕ್ರೋಧ''ವೆಂದು ಹೇಳುವರು ।೨೪೨॥

ಯಾರ ಮನವು ಸರ್ಪದ ಹುತ್ತಿನಂತೆ, ದೃಷ್ಟಿಯು ಬಾಣದ ಮೊನೆಯಂತೆ ತೀಕ್ಷ್ಣವಾಗಿರುವುದು ಮತ್ತು ಆತನ ಮಾತುಗಳು ಅಗ್ನಿಯ ಮಳೆಯಂತೆ ಪ್ರಖರವಾಗಿರುವುವು ।೨೪೩॥

ಮತ್ತು ಯಾವನ ಕ್ರಿಯೆಗಳು ಉಕ್ಕಿನ ಕರಗಸದಂತೆ ಇತರರಿಗೆ ತೊಂದರೆದಾಯಕವಾಗಿರುವುದು. ಈ ಪ್ರಕಾರವಾಗಿ ಯಾವನು ಇನ್ನೊಬ್ಬರ ಮನವನ್ನು ಭೇದಿಸುವ ಕ್ರಿಯೆಗಳಿಂದ ಒಳಹೊರಗೆ ತುಂಬಿಕೊಂಡಿರುವವನು ।೨೪೪॥

ಅವನು ಮನುಷ್ಯನಲ್ಲಿ ಅಧಮನೆಂದು ತಿಳಿ. ಈ ಪ್ರಕಾರವಾಗಿ ''ಪಾರುಷ್ಯಾ''ದ ಲಕ್ಷಣವಾಗಿರುವುದು. ಈಗ ಅಜ್ಞಾನದ ಲಕ್ಷಣಗಳನ್ನು ಹೇಳುವೆ, ಕೇಳು ।೨೪೫॥

ಯಾವ ಪ್ರಕಾರವಾಗಿ ಕಲ್ಲಿಗೆ ಶೀತ, ಉಷ್ಣಗಳ ಸ್ಪರ್ಶಜ್ಞಾನವಿರುವುದಿಲ್ಲ. ಅಥವಾ ಹುಟ್ಟುಕುರುಡನಿಗೆ ಹಗಲು ರಾತ್ರಿಗಳು ತಿಳಿಯುವುದಿಲ್ಲ ।೨೪೬॥

ಅಗ್ನಿಯು ಪ್ರಜ್ವಲಿಸಿದಾಗ ಅದು ಯಾವುದನ್ನು ಸುಡಬೇಕು, ಯಾವುದನ್ನು ಸುಡಬಾರದು ಎಂಬುವುದು ಅರಿಯದು. ಅಥವಾ ಪರಿಸಮಣಿಗೆ ಕಬ್ಬಿಣ ಮತ್ತು ಬಂಗಾರಗಳಲ್ಲಿ ಭೇದ ಕಾಣುವುದಿಲ್ಲ ।೨೪೭॥

ಅಥವಾ ಚಮಚೆಯನ್ನು ನಾನಾ ಪ್ರಕಾರದ ರಸಗಳಲ್ಲಿ ತಿರುವಿದರೂ ಅದಕ್ಕೆ ರಸ, ಸ್ವಾದಗಳ ಸೇವನೆ ಮಾಡಲು ಬರುವುದಿಲ್ಲ ।೨೪೮॥

ಅಥವಾ ಗಾಳಿಯು ಬೀಸಹತ್ತಿದರೆ ಸಣ್ಣ ದೊಡ್ಡ ರಸ್ತೆ ಎನ್ನದೇ ಎಲ್ಲ ಕಡೆಗೂ ಹರಿಯುವುದು. ಆದರಂತೆ ಉತ್ತಮ ಅಥವಾ ಕೆಟ್ಟ ಕೃತಿಗಳ ವಿಚಾರಕ್ಕೆ ಯಾವನು ಕುರುಡನಾಗಿರುವನೋ ।೨೪೯॥

ಇದು ಒಳ್ಳೆಯದೋ, ಅಥವಾ ಕೆಟ್ಟದ್ದೋ ಎಂಬ ವಿಚಾರ ಮಾಡದೇ, ಚಿಕ್ಕ ಮಗುವು ಕಂಡ ವಸ್ತುಗಳನ್ನು ಬಾಯಿಯಲ್ಲಿ ಹಾಕುವುದು ।೨೫೦॥

ಆದರಂತೆ ಪಾಪ ಪುಣ್ಯಗಳ ಖಿಚಡಿಮಾಡಿ ಅವುಗಳ ಸುಃಖದುಃಖಗಳ ಭೋಗ ಭೋಗಿಸುತ್ತ ಯಾವನ ಬುದ್ಧಿಗೆ ಉತ್ತಮ ಅಥವಾ ಅಧಮ ಯಾವುದೂ ಅನಿಸುವುದಿಲ್ಲ. ಇಂಥ ಸ್ಥಿತಿಯನ್ನು ।೨೫೧॥

ಅದಕ್ಕೆ ''ಅಜ್ಞಾನ''ವೆಂದು ಹೇಳುವರು. ಇದರಲ್ಲಿ ಸಂಶಯವೇ ಇಲ್ಲ. ಈ ಪ್ರಕಾರವಾಗಿ ಆರೂ ದೋಷಗಳ ಲಕ್ಷಣಗಳನ್ನು ನಿನಗೆ ಹೇಳಿರುವೆನು ।೨೫೨॥

ಇಹೀಂಚ ಸಾಹೀ ದೋಷಾಂಗೀ । ಹೇ ಆಸುರೀ ಸಂಪತ್ತಿ ದಾಟುಗೀ । ಜೈಸೇ ಘೋರ ವಿಷಯ ಸುಭಗೇ ಅಂಗೀ । ಅಂಗ ಸಾನೇ ।೨೫೩॥ ಕಾ ತಿಘಾ ವನ್ಹೀಂಚ್ಯಾ ಪಾಂತೀ । ಪಾಹತಾ ಥೋಡೇ ಠಾಯ ಗಮತೀ । ಪರೀ ವಿಶ್ವಹೀ ಪ್ರಾಣಾಹುತೀ । ಕರೂ ನ ಪುರೇ ।೨೫೪॥ ಧಾತಯಾಹೀ ಗೇಲಿಯಾ ಶರಣ । ತ್ರಿದೋಷೀ ನ ಚುಕೇ ಮರಣ । ತಯಾ ತಿಹೀಂಚೀ ದುಣೀ ಜಾಣ । ಸಾಹೀ ದೋಷ ಹೇ ।೨೫೫॥ ಇಹೀ ಸಾಹೀ ದೋಷೀ ಸಂಪೂರ್ಣೇ । ಜಾಲೀ ಇಯೇಚೀ ಉಭಾರಣೀ । ಮ್ಹಣೌನಿ ಆಸುರೀ ಉಣೀ । ಸಂಪದಾ ನವ್ಹೇ ।೨೫೬॥ ಪರೀ ಕ್ರೂರಗ್ರಹಾಂಚೀ ಜೈಸೀ । ಮಾಂದೀ ಮಿಳೇ ಏಕೇಚಿ ರಾಶೀ । ಕಾ ಯೇತೀ ನಿಂದಕಾಪಾಸೀ । ಅಶೇಷ ಪಾಪೇ ।೨೫೭॥ ಮರಣಾರಾಚೇ ಆಂಗ । ಪಡಿಘಾತೀ ಅವಘೇಚಿ ರೋಗ । ಕಾ ಕುಮುಹೂರ್ತೀ ದುರ್ಯೋಗ । ಏಕವಟತಿ ।೨೫೮॥ ವಿಶ್ವಾಸಲಾ ಆತುಡವೀಜೇ ಚೋರಾ । ಶಿಣಲಾ ಸುಇಜೇ ಮಹಾಪುರಾ । ತೈಸೇ ದೋಷೀ ಇಹೀ ನರಾ । ಅನಿಷ್ಟ ಕೀಜೇ ।೨೫೯॥ ಕಾ ಆಯುಷ್ಯ ಜಾತಿಯೇ ವೇಳೇ । ಶೇಳಿಯೇ ಸಾತವೇಉಳೀ ಮಿಳೇ । ತೈಸೇ ಸಾಹೀ ದೋಷ ಸಗಳೇ । ಜೋಡತೀ ತಯಾ ।೨೬೦॥ ಮೋಕ್ಷಮಾರ್ಗಾ ಕಡೇ । ಜೈ ಯಯಾಚಾ ಆಂಬುಖಾ ಪಡೇ । ತೈ ನ ನಿಘೇ ಮ್ಹಣೌನಿ ಬುಡೇ । ಸಂಸಾರೀ ಜೋ ।೨೬೧॥ ಅಧಮಾ ಯೋನೀಂಚ್ಯಾ ಪಾಉಟೀ । ಉತರತ ಜೋ ಕಿರೀಟೀ । ಸ್ಥಾವರಾಂಹೀ ತಳವಟೀ । ಬೈಸಣೇ ಘೇ ।೨೬೨॥ ಹೇ ಅಸೋ ತಯಾಚ್ಯಾ ಠಾಯೀ । ಮಿಳೋನಿ ಸಾಹೀ ದೋಷೀ ಇಹೀ । ಆಸುರೀ ಸಂಪತ್ತಿ ಪಾಹೀ । ವಾಢವಿಜೇ ।೨೬೩॥ ಐಸಿಯಾ ಯಾ ದೋನೀ । ಸಂಪದಾ ಪ್ರಸಿದ್ಧಾ ಜನೀ । ಸಾಂಗಿತಲಿಯಾ ಚಿನ್ಹೀ । ವೇಗಳಾಲ್ಯಾ ।೨೬೪॥

ದೈವೀ ಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ ।
ಮಾ ಶುಚಃ ಸಂಪದಂ ದೈವೀಮ್ ಅಭಿಜಾತೋಽಸಿ ಪಾಂಡವ ।೫॥

ಇಯಾ ದೋನ್ಹೀಮಾಜೀ ಪಹಿಲೀ । ದೈವೀ ಜೇ ಮ್ಹಣೆತಲೀ । ತೇ ಮೋಕ್ಷಸೂರ್ಯೇ ಪಾಹಲೀ । ಉಖಾಚಿ ಜಾಣ ।೨೬೫॥ ಯೇರೀ ಜೇ ದುಸರೀ । ಸಂಪತ್ತಿ ಕಾ ಆಸುರೀ । ತೇ ಮೋಹಲೋಹಾಚೀ ಖರೀ । ಸಾಂಖಳೀ ಜೀವಾ ।೨೬೬॥ ಪರಿ ಹೇ ಆಇಕೋನಿ ಝಣೇ । ಭಯ ಘೇಸೀ ಹೋ ಮನೇ । ಕಾಯ ರಾತ್ರೀಚಾ ದಿನೇ । ಧಾಕು ಧರಿಜೇ ।೨೬೭॥

ಈ ಆರೂ ದೋಷಗಳು ಅಂಗದಲ್ಲಿರುವುದರಿಂದ ಈ ಅಸುರಿ ಸಂಪತ್ತು ಬಹಳ ಬಲಾಢ್ಯವಾಗಿರುವುದು. ಸ್ತ್ರೀಯು ನೋಡಲು ತೆಳ್ಳಗಿದ್ದರೂ ಆಕೆಯಲ್ಲಿ ವಿಷಯಗಳು ಅಧಿಕವಾಗಿರುವುವು ।೨೫೩॥

ಪ್ರಳಯಾಗ್ನಿ, ವಿದ್ಯುದಗ್ನಿ ಮತ್ತು ವಡವಾಗ್ನಿ ಈ ಮೂರು ಅಗ್ನಿಗಳ ಸಂಖ್ಯೆಯು ಕಡಿಮೆ ಕಂಡರೂ ಇವು ಪ್ರಜ್ವಲಗೊಂಡಾಗ ಅವುಗಳಿಗೆ ಪ್ರಾಣಾಹುತಿಗಾಗಿ ಈ ವಿಶ್ವವು ಸಾಲುವುದಿಲ್ಲ ।೨೫೪॥

ಬ್ರಹ್ಮದೇವನಿಗೆ ಶರಣು ಹೋದರೂ, ಈ ತ್ರಿದೋಷವಾದವನ ಮರಣವು ತಪ್ಪುವುದಿಲ್ಲ, ಈ ಮೂರೂ ದೋಷಗಳ ದುಪ್ಪಟ್ಟು, ಇವೇ ಆರು ದೋಷಗಳಾಗಿವೆ. ಹೀಗೆ ತಿಳಿ ।೨೫೫॥

ಈ ಸಂಪೂರ್ಣ ಆರು ದೋಷಗಳಿಂದ ಅಸುರಿ ಸಂಪತ್ತು ನಿಂತುಕೊಂಡಿದೆ. ಆದರೆ ಇದರ ಸಂಪತ್ತು ಕಡಿಮೆ ಎಂದು ಭಾವಿಸಲುಬಾರದು ।೨೫೬॥

ಆದರೆ ದುಷ್ಟಗ್ರಹಗಳ ಸಮುದಾಯವು ಒಮ್ಮೆ ಒಂದೇ ರಾಶಿಯಲ್ಲಿ ಕೂಡುವುವು. ಅಥವಾ ನಿಂದೆ ಮಾಡುವವನಿಗೆ ಎಲ್ಲಾ ಪಾಪಗಳು ಹತ್ತಿಕೊಳ್ಳುವುವು ।೨೫೭॥

ಆದರೆ ದುಷ್ಟಗ್ರಹಗಳ ಸಮುದಾಯವು ಸರ್ವರೋಗಗಳು ಕೂಡಿಕೊಳ್ಳುವುವು; ಕುಮುಹೂರ್ತದಲ್ಲಿ ಕುಯೋಗಗಳು ಒಂದಡೆ ಕೂಡಿಕೊಳ್ಳುವುವು ।೨೫೮॥

ಬೇರೆಯವರ ಮೇಲೆ ವಿಶ್ವಾಸವಿಡುವ ಮನುಷ್ಯನು ಕಳ್ಳರ ಕೈಗೆ ಸಿಗಬೇಕು, ಅಥವಾ ದಣಿದುಕೊಂಡ ಮನುಷ್ಯನು ಮಹಾಪೂರದಲ್ಲಿ ಬೀಳಬೇಕು. ಅಂದರೆ ಪರಿಣಾಮಗಳು ಕೆಟ್ಟವಾಗುವುವು. ಅದರಂತೆ ಈ ದೋಷಗಳಿಂದ ಅತಿಶಯ ಅನಿಷ್ಟಗಳು ಒದಗುವುವು ।೨೫೯॥

ಆಯುಷ್ಯವು ಮುಗಿಯುತ್ತಿರುವಾಗ ಆಡಿಗೆ ಏಳು ಕೊಂಡಿಯ ಚೇಳು ಕಡಿಯುವಂತೆ, ಈ ಆರೂ ದೋಷಗಳು ಆ ಮನುಷ್ಯನಿಗೆ ಪ್ರಾಪ್ತವಾಗುವುವು ।೨೬೦॥

ಇವನಿಗೆ ಮೋಕ್ಷ ಮಾರ್ಗಕ್ಕೆ ಹೋಗುವ ಉಪಾಯವು ಅರಿಯದಕ್ಕೆ ಅವನು ಸಂಸಾರಸಾಗರದಲ್ಲಿ ಮುಳುಗಿರುವನು, ಹೊರಗೆ ಹೊರಡುವುದೇ ಇಲ್ಲ ।೨೬೧॥

ಮತ್ತು ಅರ್ಜುನಾ, ಅಧಮ ಯೋನಿಗಳಲ್ಲಿ ಪಾವುಟಿಗೆಗಳಿಂದ ಇಳಿಯುತ್ತ ಇಳಿಯುತ್ತ ಕೊನೆಗೆ ಸ್ಥಾವರ ಯೋನಿಯ ತಳದವರೆಗೆ ಬಂದು ಮುಟ್ಟುವನು ।೨೬೨॥

ಇದು ಇರಲಿ, ಅವನಲ್ಲಿ ಈ ಆರೂ ದೋಷಗಳು ಒಂದೆಡೆ ಸೇರಿ ಅಸುರಿ ಸಂಪತ್ತು ಬೆಳೆಸುವುವು ।೨೬೩॥

ಈ ಪ್ರಕಾರವಾಗಿ ಜಗತ್ತಿನಲ್ಲಿ ಈ ಎರಡು ಸಂಪತ್ತು ಪ್ರಸಿದ್ಧವಾಗಿವೆ. ಅವುಗಳನ್ನು ಬೇರೆ ಬೇರೆಯಾಗಿ ನಿನಗೆ ಹೇಳಿರುವೆನು ।೨೬೪॥

ಶ್ಲೋಕಾರ್ಥ :- ದೈವೀ ಸಂಪತ್ತು, ಮೋಕ್ಷಕ್ಕೂ, ಆಸುರೀ ಸಂಪತ್ತು, ಬಂಧಕ್ಕೂ ಕಾರಣವಾಗಿದೆ. ಅರ್ಜುನಾ! ಚಿಂತಿಸಬೇಡ. ನೀನು ದೈವೀ ಸಂಪತ್ತಿಗೆ ಸೇರಿದವನು ।೫॥

ಈ ಎರಡು ಸಂಪತ್ತುಗಳಲ್ಲಿ ಮೊದಲನೆಯದಾದ ದೈವೀಸಂಪತ್ತು ಮೋಕ್ಷರೂಪ ಸೂರ್ಯನ ಉದಯದಿಂದ ಆಗಿರುವ ಪ್ರಕಾಶವೆಂದು ತಿಳಿ ।೨೬೫॥

ಎರಡನೆಯದಾದ ಯಾವ ಅಸುರಿ ಸಂಪತ್ತು ಜೀವಕ್ಕೆ ಮೋಹರೂಪ ಕಬ್ಬಿಣದ ಬೇಡಿಯಾಗಿದೆ ।೨೬೬॥

ಇದನ್ನು ಕೇಳಿ ಆಕಸ್ಮಿಕವಾಗಿ ನೀನು ಭಯಪಡುವುದೇನಿದೆ? ಇಲ್ಲಿ ನೋಡು, ಸೂರ್ಯನು ರಾತ್ರಿಯ ಕಾಲಕ್ಕಾಗಿ ಏಕೆ ಬೆಟ್ಟ ಬೀಳಬೇಕು? ।೨೬೭॥

ಹೇ ಆಸುರೀ ಸಂಪತ್ತಿ ತಯಾ । ಬಂಧಾಲಾಗೀ ಧನಂಜಯಾ । ಜೋ ಸಾಹೀ ದೋಷಾ ಯಯಾ । ಆಶ್ರಯೋ ಹೋಯ ।೨೬೮॥ ತೂ ತಂವ ಪಾಂಡವಾ । ಸಾಂಗಿತಲೇಯಾ ದೈವಾ ।ಗುಣನಿಧೀ ಬರವಾ । ಜನ್ಮಲಾಸೀ ।೨೬೯॥ ಮ್ಹಣೌನಿ ಪಾರ್ಥಾ ತೂ ಯಾ । ದೈವೀ ಸಂಪತ್ತೀ ಸ್ವಾಮಿಯಾ । ಹೋಊನಿ ಯಾವೇ ಉವಾಯಾ । ಕೈವಲ್ಯಾಚಿಯಾ ।೨೭೦॥

ದ್ವೌ ಭೂತಸರ್ಗೌ ಲೋಕೇऽಸ್ಮಿನ್ ದೈವ ಆಸುರ ಏವ ಚ ।
ದೈವೋ ವಿಸ್ತರಶಃ ಪ್ರೋಕ್ತ : ಆಸುರಂ ಪಾರ್ಥ ಮೇ ಶೃಣು ।೬॥

ಆಣಿ ದೈವಾ ಆಸುರಾ । ಸಂಪತ್ತಿವಂತಾ ನರಾ । ಅನಾದಿಸಿದ್ಧ ಉಜಗರಾ । ರಾಹಾಟೀಚಾ ಆಹೇ ।೨೭೧॥ ಜೈಸೇ ರಾತ್ರೀಚ್ಯಾ ಅವಸರೀ । ವ್ಯಾಪಾರಿಜೇ ನಿಶಾಚರೀ । ದಿವಸಾ ಸುವ್ಯವಹಾರೀ । ಮನುಷ್ಯಾದಿಕೀ ।೨೭೨॥ ತೈಸಿಯಾ ಆಪುಲಾಲಿಯಾ ರಾಹಾಟಿ । ವರ್ತತೀ ದೋನ್ಹೀ ಸೃಷ್ಟೀ । ದೈವೀ ಆಣಿ ಕಿರೀಟೀ । ಆಸುರೀ ಯೇಥ ।೨೭೩॥ ತೇವೀಂಚಿ ವಿಸ್ತಾರೂನಿ ದೈವೀ । ಜ್ಞಾನಕಥನಾದಿ ಪ್ರಸ್ತಾವೀ । ಮಾಗೀಲ ಗ್ರಂಥೀ ಬರವೀ । ಸಾಂಗಿತಲೀ ।೨೭೪॥ ಆತಾ ಆಸುರೀ ಜೇ ಸೃಷ್ಟೀ । ತೇಥೀಂಚೀ ಉಪಲಊ ಗೋಠೀ । ಅವಧಾನಾಚೀ ದಿಠೀ । ದೇಪಾ ನಿಕೀ।೨೭೫॥ ತರೀ ವಾದ್ಯೇವೀಣ ನಾದು । ನೇದೀ ಕವಣಾಹೀ ಸಾದು । ಕಾ ಅಪುಷ್ಪೀ ಮಕರಂದು । ನ ಲಭೇ ಜೈಸಾ ।೨೭೬॥ ತೈಸೀ ಪ್ರಕೃತಿ ಹೇ ಆಸುರ । ಏಕಲೀ ನೋಹೇ ಗೋಚರ । ಜಂವ ಏಕಾಧೇ ಶರೀರ । ಮಾಲ್ಹಾತೀನಾ ।೨೭೭॥ ಮಗ ಆವಿಷ್ಕರಲಾ ಲಾಂಕುಡೇ । ಪಾವಕು ಜೈಸಾ ಜೋಡೇ । ತೈಸೀ ಪ್ರಾಣದೇಹೀ ಸಾಂಪಡೇ । ಆಟೋಪಲೀ ಹೇ ।೨೭೮॥ ತೇ ವೇಳೀ ಜೇ ವಾಢೀ ಉಂಸಾ । ತೇಚಿ ಆಂತುಲಾ ರಸಾ ।ದೇಹಾಕಾರು ಹೋಯ ತೈಸಾ । ಪ್ರಾಣಿಯಾಂಚಾ ।೨೭೯॥ ಆತಾ ತಯಾಚಿ ಪ್ರಾಣಿಯಾ । ರೂಪ ಕರೂ ಧನಂಜಯಾ । ಫುಡಲೇ ಜೇ ಆಸುರೀಯಾ । ದೋಷವೃಂದೀ ।೨೮೦॥

ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।
ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ।೭॥

ತರೀ ಪುಣ್ಯಾಲಾಗೀ ಪ್ರವೃತ್ತೀ । ಕಾ ಪಾಪಾವಿಷಯೀ ನಿವೃತ್ತೀ । ಯಾ ಜಾಣಣೇಯಾಚೀ ರಾತೀ । ತಯಾಚೇ ಮನ ।೨೮೧॥ ನಿಗಣೇಯಾ ಆಣಿ ಪ್ರವೇಶಾ । ಚಿತ್ತ ನೇದಿತು ಆವೇಶಾ । ಕೋಶಕಿಟು ಜೈಸಾ। ಜಾಚಿನ್ನಲಾ ಪೈ ।೨೮೨॥

ಹೇ ಧನಂಜಯನೇ, ಯಾರು ಆರು ದೋಷಗುಣಗಳ ಆಶ್ರಯನಾಗುವನೋ, ಅವನೇ ಈ ಅಸುರೀ ಸಂಪತ್ತಿನಲ್ಲಿ ಸಿಕ್ಕಿ ಬೀಳುವನು ॥೨೬೮॥

ಅರ್ಜುನಾ, ನೀನು ಮಾತ್ರ ಮೇಲೆ ಹೇಳಿದಂತೆ ದೈವೀ ಗುಣಗಳ ಉತ್ತಮವಾದ ಸಂಗ್ರಹವೇ ಆಗಿ ಹುಟ್ಟಿರುವೆ ॥೨೬೯॥

ಆದ್ದರಿಂದ ಪಾರ್ಥಾ, ನೀನು ಈ ದೈವೀ ಸಂಪತ್ತಿನ ಒಡೆಯನಾಗಿ ಮೋಕ್ಷಸುಖಕ್ಕೆ ಪ್ರಾಪ್ತನಾಗು ॥೨೭೦॥

ಶ್ಲೋಕಾರ್ಥ :- ಲೋಕದಲ್ಲಿಯ ಪ್ರಾಣಿಗಳೆಲ್ಲವೂ ಎರಡು ವಿಧವಾಗಿ ಸೃಷ್ಟಿಸಲ್ಪಟ್ಟಿವೆ. ಒಂದು ದೈವೀ ಜಾತಿ, ಮತ್ತೊಂದು ಅಸುರ ಜಾತಿ. ಅರ್ಜುನಾ! ಇಲ್ಲಿಯವರೆಗೆ ದೈವೀಜಾತಿಯನ್ನು ಕುರಿತು ವಿವರಿಸಿದ್ದೇನೆ, ಇನ್ನು ಅಸುರೀ ಜಾತಿಯನ್ನು ವರ್ಣಿಸುತ್ತೇನೆ, ಕೇಳು ॥೬॥

ಮತ್ತು ಈ ಯಾವ ದೈವೀ ಮತ್ತು ಅಸುರಿ ಸಂಪತ್ತಿನಿಂದಯುಕ್ತರಾದ ಜನರು, ಅವರ ಆಚರಣೆಗಳ ಅನಾದಿ ಸಿದ್ಧವಾದ ಮಾರ್ಗವು ನಡೆಯುತ್ತಲೇ ಬಂದಿರುವುದು ॥೨೭೧॥

ಯಾವ ಪ್ರಕಾರವಾಗಿ ರಾತ್ರಿಯಲ್ಲಿ ನಿಶಾಚರರ (ಪಿಶಾಚಿಗಳ) ವ್ಯವಹಾರವು ನಡೆಯುತ್ತಿರುವುದೋ ಮತ್ತು ಹಗಲು ಮನುಷ್ಯಾದಿಕರ ಉತ್ತಮ ವ್ಯವಹಾರ ನಡೆಯುತ್ತಿರುವುದೋ ॥೨೭೨॥

ಅದರಂತೆ ಅರ್ಜುನಾ, ದೈವೀ ಮತ್ತು ಅಸುರೀ ಈ ಎರಡು ಸೃಷ್ಟಿಯು ತನ್ನ ತನ್ನ ಮಾರ್ಗದಿಂದ ಜಗತ್ತಿನಲ್ಲಿ ನಡೆಯುತ್ತಿರುತ್ತದೆ ॥೨೭೩॥

ಅದೇ ಪ್ರಕಾರವಾಗಿ ಜ್ಞಾನವನ್ನು ಹೇಳುವ ಕಾಲಕ್ಕೆ ದೈವೀ ಸಂಪತ್ತಿನ ಬಗ್ಗೆ ಈ ಹಿಂದಕ್ಕೆ ವಿಸ್ತಾರಪೂರ್ವಕವಾಗಿ ಹೇಳಿರುವೆನು ॥೨೭೪॥

ಈಗ ಅಸುರೀ ಸಂಪತ್ತಿನಲ್ಲಿ ನಡೆಯುವ ಜನರ ವಿಷಯಕ್ಕೆ ಹೇಳುವೆನು, ಅದಕ್ಕೆ ನೀನು ನಿನ್ನ ಪೂರ್ಣ ಲಕ್ಷವನ್ನು ಕೊಡು ॥೨೭೫॥

ನಾದವು ವಾದ್ಯಗಳ ಹೊರತಾಗಿ ಯಾರಿಗೂ ಕೇಳಲು ಸಿಗುವುದಿಲ್ಲ, ಹೂವುಗಳ ಹೊರತಾಗಿ ಮಕರಂದವು ದೊರೆಯುವುದಿಲ್ಲ ॥೨೭೬॥

ಅದರಂತೆ ಈ ಅಸುರೀ ಸಂಪತ್ತು ಒಬ್ಬ ಮನುಷ್ಯನ ಆಶ್ರಯ ಹೊಂದದೇ ಅದು ದೃಷ್ಟಿಗೆ ಬೀಳುವುದಿಲ್ಲ ॥೨೭೭॥

ಅಂದರೆ, ಕಟ್ಟಿಗೆಯ ಮೇಲೆ ಕಟ್ಟಿಗೆ ಇಟ್ಟು ತಿಕ್ಕಿದಾಗ ಹೇಗೆ ಅಗ್ನಿಯು ದೃಷ್ಟಿಗೆ ಬೀಳುವುದೋ, ಅದರಂತೆ ಮನುಷ್ಯನ ದೇಹದಲ್ಲಿ ಓತಪ್ರೋತವಾಗಿ ತುಂಬಿರುವುದು ದೃಷ್ಟಿಗೆ ಗೋಚರಿಸುವುದು ॥೨೭೮॥

ಕಬ್ಬು ಬೆಳೆದಂತೆ ಅದರಲ್ಲಿನ ರಸವೂ ಬೆಳೆಯುವಂತೆ, ಪ್ರಾಣಿಗಳ ದೇಹವು ಬೆಳೆದಂತೆ ಅದು ಸಹ ಬೆಳೆಯುವುದು ॥೨೭೯॥

ಈಗ ಅರ್ಜುನಾ, ಅಸುರೀ ಸಂಪತ್ತಿನ ದೋಷಗಳಿಂದ ಯುಕ್ತರಾದ ಪ್ರಾಣಿಗಳು ಹುಟ್ಟಿರುವರು. ಅವರ ಲಕ್ಷಣಗಳನ್ನು ನಿನಗೆ ಹೇಳುವೆನು ॥೨೮೦॥

ಶ್ಲೋಕಾರ್ಥ :- ಅಸುರೀ ಜಾತಿಗೆ ಇದು ಯೋಗ್ಯ, ಇದು ಅಯೋಗ್ಯ ಎಂದು ವಿಚಾರವಿರುವುದಿಲ್ಲ. ಅವರಿಗೆ ಶುಚಿ ಇರುವುದಿಲ್ಲ, ಆಚಾರವಿರುವುದಿಲ್ಲ, ಸತ್ಯವಂತೂ ಕೇಳಲೇ ಬಾರದು ॥೭॥

ಪುಣ್ಯಾಚರಣೆ ವಿಷಯಗಳ ಬಗ್ಗೆ ಪ್ರವೃತ್ತಿಯು ಅಥವಾ ಪಾಪಾಚರಣೆಯಿಂದ ನಿವೃತ್ತಿಯು ಆತನ ಅಂತಃಕರಣದಲ್ಲಿ ಕತ್ತಲಾಗಿರುವುದು ॥೨೮೧॥

ಕೋಶ ಕೀಟಿಯು ಆವೇಶದಿಂದ ತನ್ನ ಗೂಡನ್ನು ಕಟ್ಟುವಾಗ ಒಳಗೆ ಬರಲು ಹೊರಗೆ ಹೋಗಲು ದ್ವಾರವು ಇದೆಯೋ ಇಲ್ಲವೋ ಎಂಬುದನ್ನು ಲಕ್ಷ ಕೊಡದೇ ಸಿಕ್ಕಿ ಬೀಳುವುದು ॥೨೮೨॥

ಕಾ ದಿಧಲೇ ಮಾಗುತೀ ಯೇಈಲ । ಕೀ ನಯೇ ಹೇ ಪುಢೀಲ । ನ ಪಾಹತಾ ದೇ ಭಾಂಡವಲ । ಮೂರ್ಖ ಚೋರಾ ।೨೮೩॥ ತೈಸಿಯಾ ಪ್ರವೃತ್ತಿ ನಿವೃತ್ತಿ ದೋನೀ । ನೇಣಿಜತೀ ಆಸುರೀ ಜನೀ । ಆಣಿ ಶೌಚ ತೇ ಸ್ವಪ್ನೀ । ದೇಖತೀ ನಾ ತೇ ।೨೮೪॥ ಕಾಳಿಮಾ ಸಾಂಡೀಲ ಕೋಳಸಾ । ವರೀ ಚೋಖೀ ಹೋಈಲ ವಾಯಸಾ । ರಾಕ್ಷಸಹೀ ಮಾಂಸಾ । ವಿಟೋ ಶಕೇ ।೨೮೫॥ ಪರೀ ಆಸುರಾ ಪ್ರಾಣಿಯಾ । ಶೌಚ ನಾಹೀ ಧನಂಜಯಾ । ಪವಿತ್ರತ್ವ ಜೇವೀ ಭಾಂಡಿಯಾ । ಮದ್ಯಾಚಿಯಾ ।೨೮೬॥ ವಾಢವಿತೀ ವಿಧೀಚೀ ಆಸ । ಕಾ ಪಾಹತೀ ವಡಿಲಾಂಚೀ ವಾಸ । ಆಚಾರಾಚೇ ಭಾಷ । ನೇಣತೀಚಿ ತೇ ।೨೮೭॥ ಜೈಸೇ ಚರಣೇ ಶೇಳಿಯೇಚೇ । ಕಾ ಧಾಂವಣೇ ವಾರಿಯಾಚೇ । ಜಾಳಣೇ ಆಗೀಚೇ । ಭಲತೇಉತೇ ।೨೮೮॥ ತೈಸೇ ಪುಢಾ ಸೂನಿ ಸ್ವೈರ । ಆಚರತೀ ತೇ ಗಾ ಆಸುರ । ಸತ್ಯೇಂಸಿ ಕೀರ ವೈರ । ಸದಾಚಿ ತಯಾ ।೨೮೯॥ ಜರೀ ನಾಂಗಿಯಾ ಆಪುಲಿಯಾ । ವಿಂಚೂ ಕರೀ ಗುದಗುಲಿಯ । ತರೀ ಸಾಚಾ ಬೋಲೀ ಬೋಲಿಯಾ । ಬೋಲತೀ ತೇ ।೨೯೦॥ ಅಪಾನಾಚೇನಿ ತೋಂಡೇ । ಜರೀ ಸುಗಂಧಾ ಯೇಣೇ ಘಡೇ । ತರೀ ಸತ್ಯ ತಯಾ ಜೋಡೇ । ಆಸುರಾಂತೇ ।೨೯೧॥ ಐಸೇ ತೇ ನ ಕರಿತಾ ಕಾಂಹೀ । ಆಂಗೇಚಿ ವೋಖಟೇ ಪಾಹೀ । ಆತಾ ಬೋಲತೀ ತೇ ನವಾಈ । ಸಾಂಗಿಜೈಲ ।೨೯೨॥ ಯೇರ್ಹವೀ ಕರೇಯಾಚ್ಯಾ ಠಾಯೀ ಚಾಂಗ । ತೇ ತಯಾಸಿ ಕೈಚೇ ನೀಟ ಆಂಗ । ತೈಸಾ ಆಸುರಾಂಚಾ ಪ್ರಸಂಗ । ಪ್ರಸಂಗೇ ಪರಿಸ ।೨೯೩॥ ಉಧವಣೀಚೇ ಜೇವೀ ತೋಂಡ । ಉಭಳೀ ಧುಂವಾಚೇ ಉಭಡ । ಹೇ ಜಾಣಿಜೆ ತೇವೀ ಉಘಡ । ಸಾಂಗೋ ತೇ ಬೋಲ ।೨೯೪॥

ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।
ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಮ್ ।೮॥

ತರೀ ವಿಶ್ವ ಹಾ ಅನಾದಿ ಠಾವೋ । ಯೇಥ ನಿಯಂತಾ । ಈಶ್ವರರಾವೋ । ಚಾವಡಿಯೇ ನ್ಯಾವೋ ಅನ್ಯಾವೋ । ನಿವಡೀ ವೇದು ।೨೯೫॥ ವೇದಿ ಅನ್ಯಾಯೀ ಪಡೇ । ತೋ ನಿರಯಭೋಗೇ ದಂಡೇ । ಸನ್ಯಾಯೀ ತೋ ಸುರವಾಡೇ । ಸ್ವರ್ಗೀ ಜಿಯೇ ।೨೯೬॥ ಐಸೀ ಹೇ ವಿಶ್ವವ್ಯವಸ್ಥಾ । ಅನಾದಿ ಜೇ ಪಾರ್ಥಾ । ಇಯೇತೇ ಮ್ಹಣತೀ ತೇ ವೃಥಾ । ಅವಘೇಂಚಿ ಹೇ ।೨೯೭॥ ಯಜ್ಞಮೂಢ ಠಕಿಲೇ ಯಾಗೀ । ದೇವಪಿಸೇ ಪ್ರತಿಮಾಲಿಂಗೀ । ನಾಗವಲೇ ಭಗವೇ ಯೋಗೀ । ಸಮಾಧಿಭ್ರಮೇ ।೨೯೮॥

ಅಥವಾ ತಾನು ಕೊಟ್ಟ ದ್ರವ್ಯವು ಮರಳಿ ಬರುವುದೋ, ಇಲ್ಲವೋ ಎಂಬುದನ್ನು ಮುಂದಿನ ವಿಚಾರ ಮಾಡದೇ ಕಳ್ಳರಿಗೆ ಸಾಲ ಕೊಡುವುದು ।೨೮೩।।

ಅದರಂತೆ ಅಸುರೀ ಸಂಪತ್ತಿನ ಆಶ್ರಯ ಮಾಡಿರುವ ಜನರು ಪ್ರವೃತ್ತಿ, ನಿವೃತ್ತಿ ಈ ಎರಡೂ ಮಾರ್ಗಗಳನ್ನು ಅರಿಯುವುದಿಲ್ಲ ಮತ್ತು ಶುಚಿತ್ವವೆಂಬುದು ಸ್ವಪ್ನದಲ್ಲಿಯೂ ಅರಿಯರು ।೨೮೪।।

ಇದ್ದಲಿಯು ತನ್ನ ಕಪ್ಪು ಬಣ್ಣ ಬಿಡಬಹುದು, ಕಾಗೆಯು ಬೆಳ್ಳಗಾಗಬಹುದು, ರಾಕ್ಷಸರಿಗೆ ಮಾಂಸ ತಿನ್ನುವುದು ಹೇಸಿಗೆಯಾಗಬಹುದು ।೨೮೫।।

ಆದರೆ ಅರ್ಜುನಾ, ಯಾವ ಪ್ರಕಾರವಾಗಿ ಸೆರೆಪಾತ್ರೆಗೆ ಪವಿತ್ರತೆ ಹೇಗೆ ಬರುವುದಿಲ್ಲವೋ, ಅದರಂತೆ ಅಸುರೀ ಪ್ರಾಣಿಗಳಿಗೆ ಶುಚಿತ್ವ ಬರಲಾರದು ।೨೮೬।।

ಅವರಿಗೆ ಶಾಸ್ತ್ರೋಕ್ತ ಕರ್ಮಗಳ ಇಚ್ಛೆಯು ಇರುವುದಿಲ್ಲ, ಹಿರಿಯರ ಆಜ್ಞೆಯ ದಾರಿ ಕಾಯುವುದಿಲ್ಲ ಮತ್ತು ಆಚಾರಗಳ ಭಾಷೆಯೇ ಅವರಿಗೆ ಗೊತ್ತಿರುವುದಿಲ್ಲ ।೨೮೭।।

ಯಾವ ಪ್ರಕಾರವಾಗಿ ಆಡು ಯಾವುದನ್ನೂ ಬಿಡದೇ ತಪ್ಪಲು ತಿನ್ನುವುದು, ಅಥವಾ ಗಾಳಿಯು ಮನ ಬಂದಂತೆ ಬೀಸುವುದು, ಹಾಗೆಯೇ ಅಗ್ನಿಯು ಪ್ರಜ್ವಲಗೊಂಡಾಗ ಎಲ್ಲ ಪದಾರ್ಥಗಳನ್ನು ಸುಟ್ಟು ಬಿಡುವುದು ।೨೮೮।।

ಅದರಂತೆ ತನ್ನ ಇಚ್ಛೆಯನ್ನು ಮುಂದು ಮಾಡಿ ಅಸುರೀ ಸಂಪತ್ತಿನ ಜನರು ಆಚರಣೆಯನ್ನು ಮಾಡುವರು ಮತ್ತು ಸತ್ಯದ ಜೊತೆಗೆ ಇವರದು ಯಾವಾಗಲೂ ವೈರವಿರುವುದು ।೨೮೯।।

ಒಂದುವೇಳೆ ಚೇಳು ತನ್ನ ಕೊಂಡೆಯಿಂದ ಕಡಿದಾಗ ಜನರಿಗೆ ಕಚಕುಳಿ ಇಟ್ಟಂತಾದರೆ ಮಾತ್ರ ಅವರ ಮಾತಿನಲ್ಲಿ ಸತ್ಯ ಕಾಣಬಹುದು ।೨೯೦।।

(ಗುದದ್ವಾರದಿಂದ ಹೊರಡುವ ಗಾಳಿಯು) ಅಪಾನ ವಾಯುವು ಸುಗಂಧಯುಕ್ತವಾದರೆ ಮಾತ್ರ, ಅಸುರೀ ಸಂಪತ್ತಿನ ಜನರಲ್ಲಿ ಸತ್ಯವು ಸಿಕ್ಕೀತು! ।೨೯೧।।

ಈ ಪ್ರಕಾರವಾಗಿ ಏನೂ ಮಾಡದೆಯೇ ಅವರು ಸ್ವಭಾವತಃವೇ ಕೆಟ್ಟವರಿರುವರು ಹೀಗೆ ತಿಳಿ. ಈಗ ಅವರು ಮಾತನಾಡುವ ಚಮತ್ಕಾರವನ್ನು ನಿನಗೆ ಹೇಳುವೆ ।೨೯೨।।

ಸಾಮಾನ್ಯವಾಗಿ ಒಂಟೆಯ ಅವಯವಗಳನ್ನೆಲ್ಲ ನೋಡಲು, ಅದರ ಯಾವ ಅವಯವಗಳು ನೀಟಾಗಿವೆ ಎಂದು ಹೇಳಲು ಬರುವುದು? ।೨೯೩।।

ಹೊಗೆಗಿಂಡಿಯ ಮುಖದಿಂದ ಯಾವ ಪ್ರಕಾರವಾಗಿ ಕೇವಲ ಹೊಗೆಯ ಪ್ರವಾಹವೇ ಹೊರಗೆ ಹೊರಡುವುದೋ, ಅದರಂತೆ ಅವರ ಮಾತಾಗಿರುವುದು. ಅವರ ಮಾತುಗಳು ಹೇಳುವಂತಹದಲ್ಲವಾದರೂ ನಿನಗೆ ಸ್ಪಷ್ಟವಾಗಿ ಹೇಳುವೆ ।೨೯೪।।

ಶ್ಲೋಕಾರ್ಥ :- ಅವರಿಗೆ ದೇವರು ನಾಸ್ತಿ, ಶಾಸ್ತ್ರವಿರುವುದಿಲ್ಲ. ಸತ್ಯಂವತೂ ಸೊನ್ನೆ. ಸ್ತ್ರೀ - ಪುರುಷರ ಮಿಥುನ ವ್ಯಾಪರವಲ್ಲದೆ ಸೃಷ್ಟಿಗೆ ಬೇರೆ ಕಾರಣವೇ ಇಲ್ಲವೆಂಬುದೇ ಅವರ ಸಿದ್ಧಾಂತ ।೮।।

ವಿಶ್ವವು ಅನಾದಿಯಾಗಿ ನಡೆದು ಬಂದಿದೆ. ಅಲ್ಲಿ ಈಶ್ವರನು ಸರ್ವಶ್ರೇಷ್ಠನಿದ್ದು ನಿಯಂತನಿರುವನು. ಆತನ ಸ್ಥಾನದಲ್ಲಿ ನ್ಯಾಯ, ಅನ್ಯಾಯಗಳ ನಿರ್ಣಯವು ವೇದ ನಿರ್ಣಯವನ್ನು ಅವಲಂಬಿಸಿರುವುದು ।೨೯೫।।

ವೇದವು ಯಾರನ್ನು ಅನ್ಯಾಯೀ ಎಂದು ನಿಶ್ಚಯಿಸುವುದೋ, ಅವರಿಗೆ ನರಕಭೋಗದ ಶಿಕ್ಷೆಯಾಗುವುದು ಮತ್ತು ನ್ಯಾಯೀ ಎಂದು ನಿಶ್ಚಯಿಸುವುದೋ, ಅವರಿಗೆ ಸುಖದಿಂದ ಸ್ವರ್ಗವಾಸ ದೊರಕುವುದು ।೨೯೬।।

ಪಾರ್ಥಾ, ಅನಾದಿಕಾಲದಿಂದಲೂ ನಡೆದು ಬಂದಿರುವ ಈ ವಿಶ್ವದ ವ್ಯವಸ್ಥೆಯನ್ನು ಇವೆಲ್ಲ ಸುಳ್ಳು ಎಂದು ಅವರು ಹೇಳುವರು ।೨೯೭।।

ಯಾರಿಗೆ ಯಜ್ಞದ ಹುಚ್ಚು ಹಿಡಿದಿದೆ ಅವರು ಯಜ್ಞಗಳನ್ನು ಮಾಡಿ ಮೋಸ ಹೋಗುವರು. ಯಾರಿಗೆ ದೇವರ ಪೂಜೆ ಮಾಡುವ ಹುಚ್ಚು ಹಿಡಿದಿದೆ ಅವರು ಮೂರ್ತಿ ಪೂಜೆ ಮಾಡುವರು. ಸಮಾಧಿ ಭ್ರಮೆಯಿಂದ ಕ್ಯಾವಿ ಧರಿಸುವರು ।೨೯೮।।

ಯೇಥ ಆಪುಲೇನಿ ಬಳೇ । ಭೋಗಿಜೇ ಜೇ ಜೇ ವೇಂಟಾಳೇ । ಹೇ ವಾಂಚೋನಿ ವೇಗಳೇ
। ಪುಣ್ಯ ಆಹೇ? ॥೨೯೯॥ ನಾ ಅಶಕ್ತಪಣೇ ಆಂಗಿಕೇ । ವೇಗಳವೇಂಟಾಳೀ ನ ಟಕೇ ।
ಐಸಾ ಗಾದಿಜೇವೀಣ ವಿಷಯಸುಖೇ । ತೇಂಚಿ ಪಾಪ ॥೩೦೦॥ ಪ್ರಾಣ ಘೇಪತೀ ಸಂಪನ್ನಾಂ
ಚೇ । ತೇ ಪಾಪ ಜರೀ ಸಾಚೇ । ತರೀ ಸರ್ವಸ್ವ ಹಾತಾ ಯೇ ತಯಾಂಚೇ । ಹೇ ಪುಣ್ಯಫಳ
ಕೀ? ॥೩೦೧॥ ಬಳೀ ಅಬಳಾತೇ ಖಾಯ । ಹೇಂಚಿ ಬಾಧಿತ ಜರೀ ಹೋಯ । ತರೀ
ಮಾಸಯಾ ಕಾ ನ ಹೋಯ । ನಿಸಂತಾನ? ॥೩೦೨॥ ಆಣಿ ಕುಳೇ ಶೋಧೂನಿ ದೋನ್ಹೀ
। ಕುಮಾರೇಂಚಿ ಶುಭಲಗ್ನೀ । ಮೇಳವೀಜತೀ ಪ್ರಜಾಸಾಧನೀ । ಹೇತು ಜರೀ ॥೩೦೩॥
ತರೀ ಪಶುಪಕ್ಷ್ಯಾದಿ ಜಾತೀ । ಜಯಾ ಮಿತೀ ನಾಹೀ ಸಂತತೀ । ತಯಾ ಕೋಣೇ ಪ್ರತಿಪತ್ತೀ
। ವಿವಾಹ ಕೇಲೇ? ॥೩೦೪॥ ಚೋರಿಯೇಚೇ ಧನ ಆಲೇ । ತರೀ ತೇ ಕೋಣಾಸಿ ವಿಷ
ಜಾಲೇ? । ವಾಲಭೇ ಪರದ್ವಾರ ಕೇಲೇ । ಕೋಢೀ ಕೋಣೇ ಹೋಯ? ॥೩೦೫॥
ಮ್ಹಣೌನಿ ದೇವೋ ಗೋಸಾಂವೀ । ತೋ ಧರ್ಮಾಧರ್ಮು ಭೋಗವೀ । ಆಣಿ ಪರತ್ರಾ
ಚ್ಯಾ ಗಾಂವೀ । ಕರೀ ತೋ ಭೋಗೀ ॥೩೦೬॥ ಪರೀ ಪರತ್ರ ನಾ ದೇವೋ । ನ ದಿಸೇ
ಮ್ಹಣೌನಿ ತೇ ವಾವೋ । ಆಣಿ ಕರ್ತಾ ನಿಮೇ ಮಾ ಠಾವೋ । ಭೋಗ್ಯಾಸಿ ಕವಣು?
॥೩೦೭॥ ಯೇಥ ಊರ್ವಶಿಯಾ ಇಂದ್ರ ಸುಖೀ । ಜೈಸಾ ಕಾ ಸ್ವರ್ಗ ಲೋಕೀ । ತೈಸಾಚಿ
ಕೃಮಿಹೀ ನರಕೀ । ಲೋಳತು ಶ್ಲಾಘೇ ॥೩೦೮॥ ಮ್ಹಣೌನಿ ನರಕ ಸ್ವರ್ಗು । ನವ್ಹೇ
ಪಾಪಪುಣ್ಯಭಾಗು । ಜೇ ದೋಹೀ ಠಾಯೀ ಸುಖ ಭೋಗು । ಕಾಮಾಚಾಚಿ ತೋ ॥೩೦೯॥
ಯಾಕಾರಣೇ ಕಾಮೇ । ಸ್ತ್ರೀಪುರುಷ ಯುಗ್ಮೇ । ಮಿಳತೀ ತೇಥ ಜನ್ಮೇ । ಆಘವೇ ಜಗ
॥೩೧೦॥ ಆಣಿ ಜೇ ಜೇ ಅಭಿಲಾಷೇ । ಸ್ವಾರ್ಥಾಲಾಗೀ ಹೇ ಪೋಷೇ । ಪಾಠೀ ಪರಸ್ಪರ
ದ್ವೇಷೇ । ಕಾಮುಚಿ ನಾಶೀ ॥೩೧೧॥ ಏವಂ ಕಾಮಾವಾಂಚೂನಿ ಕಾಂಹೀ । ಜಗಾ ಮೂಳಚಿ
ಆನ ನಾಹೀ । ಐಸೇ ಬೋಲತೀ ಪಾಹೀ । ಆಸುರ ಗಾ ತೇ ॥೩೧೨॥ ಆತಾ ಅಸೋ ಹೇ
ಕಿಡಾಳ । ಬೋಲೀ ನ ಕರೂ ಪಘಳ । ಸಾಂಗತಾಂಚಿ ಸಪ್ಫೋಲ । ಹೋತಸೇ ವಾಚಾ
॥೩೧೩॥

ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ।
ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥೯॥

ಈ ಜಗತ್ತಿನಲ್ಲಿ ತನ್ನ ಸಾಮರ್ಥ್ಯದಿಂದ ಏನು ಬೇಕಾದರೂ ಭೋಗಿಸಬೇಕು. ಇದರ ಹೊರತಾದ ಬೇರೆ ಪುಣ್ಯ ಇದೆಯೇ? ।೯೯॥

ಮತ್ತು ಅಶಕ್ತತೆಯಿಂದ ಯಾವ ವಿಷಯಗಳ ಭೋಗವನ್ನು ಭೋಗಿಸಲು ಬಾರದಾದರೆ, ಅದೇ ಪಾಪವು ।೧೦೦॥

ಶ್ರೀಮಂತರ ಪ್ರಾಣಹರಣ ಮಾಡುವುದು ನಿಜವಾಗಿಯೂ ಪಾಪವಾದರೆ, ಅವರು ಸರ್ವಧನವು ನಮ್ಮ ಕೈಗೆ ಸಿಗು ವುದು ಪುಣ್ಯದ ಫಲವಲ್ಲವೇ? ।೧೦೧॥

ಯಾವ ಬಲಾಢ್ಯನು ಅಶಕ್ತರ ನಾಶ ಮಾಡುವನು, ಇದನ್ನು ಪಾಪವೆಂದರೆ ದೊಡ್ಡ ಮೀನುಗಳು ಸಣ್ಣ ಮೀನುಗಳಿಗೆ ತಿನ್ನುವುವು. ಹಾಗಾದರೆ ಅವು ನಿಃಸಂತಾನ ಏಕಾಗ ಬಾರದು? ।೧೦೨॥

ಮತ್ತು ಎರಡೂ ಕಡೆಯಿಂದ ಕುಲವನ್ನು ಶೋಧಿಸಿ ಸಂತಾನ ಪ್ರಾಪ್ತಿಗಾಗಿ ವರ ಕನ್ಯೆಗಳ ವಿವಾಹಕ್ಕೆ ಮುಹೂರ್ತ ಬೇಕಾಗುವುದು. ಇದು ಹಾಗೆಯೇ ಇದ್ದರೆ ।೧೦೩॥

ಪಶು ಪಕ್ಷಿಗಳಿಗೆ ಮಿತಿ ಇಲ್ಲದೇ ಸಂತಾನಗಳಾಗುವುವು. ಅವುಗಳಿಗೆ ಮುಹೂರ್ತ ಶೋಧ ಮಾಡಿ ಯಾರು ವಿವಾಹ ಮಾಡಿದರು? ।೧೦೪॥

ಕದ್ದು ತಂದ ಹಣವನ್ನು ಉಪಯೋಗ ಮಾಡಿದಾಗ ಇದು ಯಾರಿಗಾದರೂ ವಿಷವಾಗಿದೆಯೇ? ಅಥವಾ ಪ್ರೀತಿಯಿಂದ (ಪರಸ್ತ್ರೀಯ) ವ್ಯಭಿಚಾರದಿಂದ ಯಾರಿಗಾದರೂ ಕುಷ್ಟರೋಗವಾಗಿದೆಯೇ? ।೧೦೫॥

ಆದ್ದರಿಂದ ಜಗತ್ತಿನ ಸ್ವಾಮಿಯಾಗಿರುವ ಈಶ್ವರನು ಧರ್ಮ, ಅಧರ್ಮದಿಂದ ನಡೆಯುವವರಿಗೆ ಸುಖ ಮತ್ತು ದುಃಖಗಳ ಫಲಗಳನ್ನು ನೀಡುವನು ಮತ್ತು ಈ ಲೋಕದಲ್ಲಿ ಮಾಡಿದ್ದನ್ನೇ ಪರಲೋಕದಲ್ಲಿ ಭೋಗಿಸಬೇಕಾಗುವುದು ।೧೦೬॥

ಈ ಶಾಸ್ತ್ರದ ಮತವನ್ನು ನಿಜವೆಂದು ಮನ್ನಿಸಬೇಕು. ಆದರೆ ಪರಲೋಕವು, ಈಶ್ವರನು ಕಾಣಿಸುವುದಿಲ್ಲವೆಂದು ಅದರ ವಿಷಯಕ್ಕೆ ಹೇಳುವುದು ವ್ಯರ್ಥವು. ಪುಣ್ಯ-ಪಾಪ ಮಾಡಿದವನು ಸತ್ತಾಗ ಅದರ ಫಲ ಭೋಗಿಸಲು ಯಾರು ಉಳಿಯುವರು? ।೧೦೭॥

ಸ್ವರ್ಗಲೋಕದಲ್ಲಿ ಊರ್ವಶಿಯ ಉಪಭೋಗದಿಂದ ಇಂದ್ರನು ಸುಖಿಯಾಗಿರುವಂತೆ, ನರಕದೊಳಗಿನ ಹುಳಗಳೂ ಸಹ ಅದರಲ್ಲಿಯೇ ಸಂತೋಷಪಡುವುವು ।೧೦೮॥

ಆದ್ದರಿಂದ ನರಕ ಅಥವಾ ಸ್ವರ್ಗ ಇವು ಪಾಪ ಪುಣ್ಯ ಕರ್ಮಗಳ ಫಲಗಳಲ್ಲ, ಕಾರಣ ಎರಡೂ ಕಡೆಯಲ್ಲಿ ಕಾಮದ ಸುಖವೇ ಪ್ರಾಪ್ತವಾಗುವುದು ।೧೦೯॥

ಅಲ್ಲದೇ, ಕಾಮದ ಇಚ್ಛೆಯಿಂದ ಸ್ತ್ರೀ ಪುರುಷರು ಕೂಡಿದಾಗಲೇ ಜಗತ್ತಿನ ಉತ್ಪತ್ತಿಯಾಗುವುದು ।೧೧೦॥

ಮತ್ತು ಸ್ವಾರ್ಥದ ಇಚ್ಛೆಯಿಂದ ತಾನು ಏನೇನು ಕೂಡಿಸುವನೋ, ಅದರ ಬೇಸರವಾದಾಗ ಅಥವಾ ದ್ವೇಷ ಹುಟ್ಟಿದಾಗ, ತನ್ನ ಇಚ್ಛೆಯೇ ತನ್ನನ್ನು ನಾಶಪಡಿಸುವುದು ।೧೧೧॥

ಈ ಪ್ರಕಾರವಾಗಿ ಜಗತ್ತಿನ ಉತ್ಪತ್ತಿಗೆ ಕಾಮದ ಹೊರತಾಗಿ ಬೇರೆ ಏನೂ ಇರುವುದಿಲ್ಲ. ಹೀಗೆ ಅಸುರ ಜನರು ಹೇಳುವರು ।೧೧೨॥

ಈಗ ಈ ನಿಂದ್ಯ ಮಾಡಿದ ಹೆಚ್ಚು ವಿಚಾರಗಳು ಬೇಡ. ಕಾರಣ ಈ ವಿಷಯಕ್ಕೆ ಚರ್ಚೆ ಮಾಡುವುದೆಂದರೆ ಕೇವಲ ವ್ಯರ್ಥವೇ ಸರಿ ।೧೧೩॥

ಶ್ಲೋಕಾರ್ಥ :- ಈ ನಾಸ್ತಿಕ ಭಾವವನ್ನು ಅವಲಂಬಿಸಿ ಭ್ರಷ್ಟಾತ್ಮರೂ, ನೀಚಬುದ್ಧಿಯವರೂ, ಕ್ರೂರಕರ್ಮವನ್ನು ಮಾಡುವವರಾದ ಈ ಕಂಟಕರು ಪ್ರಪಂಚದ ಕೆಡುಕಿಗಾಗಿಯೇ ಹುಟ್ಟುತ್ತಾರೆ ।೯॥

ಆಣಿ ಈಶ್ವರಾಚಿಯಾ ಖಂತೀ । ನುಸಧಿಯಾಚಿ ಕರಿತೀ ಚಾಂಥೀ । ಹೇಂಹೀ ನಾಹೀ ಚಿತ್ತೀ । ನಿಶ್ಚಯೋ ಏಕು ।।೩೧೪।। ಕಿಂಬಹುನಾ ಉಘಡ । ಆಂಗೀ ಲಾಊನಿಯಾ ಪಾಖಾಂಡ । ನಾಸ್ತಿಕಪಣಾಚೇ ಹಾಡ । ರೋಂವಿಲೇ ಜೀವೀ ।।೩೧೫।। ತೇ ವೇಳೀ ಸ್ವರ್ಗಾಲಾಗೀ ಆದರು । ಕಾ ನರಕಾಚಾ ಆಡದರು । ಯಾ ವಾಸನಾಂಚಾ ಅಂಕುರು । ಜಳೋನಿ ಗೇಲಾ ।।೩೧೬।। ಮಗ ಕೇವಳ ಯೇ ದೇಹ ಖೋಡಾ । ಅಮೇಧ್ಯೋದಕಾಚಾ ಬುಡಬುಡಾ । ವಿಷಯಪಂಕೀ ಸುಹಾಡಾ । ಬುಡಾಲೇ ಗಾ ।।೩೧೭।। ಜೈ ಆಟಾವೇ ಹೋತೀ ಜಳಚರ । ತೈ ಡೋಹೀ ಮಿಳತೀ ಢೀವರ । ಕಾ ಪಡಾವೇ ಹೋಯ ಶರೀರ । ತೈ ರೋಗಾ ಉದಯೋ ।।೩೧೮।। ಉದೈಜಣೇ ಕೇತೂಚೇ ಜೈಸೇ । ವಿಶ್ವಾ ಅನಿಷ್ಟೋದ್ದೇಶೇ । ಜನ್ಮತೀ ತೇ ತೈಸೇ । ಲೋಕಾ ಆಟು ।।೩೧೯।। ವಿರೂಢಲಿಯಾ ಅಶುಭ । ಫುಟತೀ ತೈ ತೇ ಕೋಂಭ । ಪಾಪಾಚೇ ಕೀರ್ತಿಸ್ತಂಭ । ಚಾಲತೇ ತೇ ।।೩೨೦।। ಆಣಿ ಮಾಗಾಪುಢಾ ಜಾಳಣೇ । ವಾಂಚೂನಿ ಆಗೀ ಕಾಂಹೀ ನೇಣೇ । ತೈಸೇ ವಿರುದ್ಧಚಿ ಏಕ ಕರಣೇ । ಭಲತೇಯಾ ।।೩೨೧।। ಪರೀ ತೇಚಿ ಗಾ ಕರಣೇ । ಆದರಿತೀ ಸಂಭ್ರಮೇ ಜೇಣೇ । ತೋ ಆಇಕ ಪಾರ್ಥಾ ಮ್ಹಣೇ । ಶ್ರೀನಿವಾಸು ।।೩೨೨।।

ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನಮದಾನ್ವಿತಾಃ ।
ಮೋಹಾದ್ಗೃಹೀತ್ವಾಽಸದ್ಗ್ರಾಹಾನ್ ಪ್ರವರ್ತಂತೇಽಶುಚಿವ್ರತಾಃ ।।೧೦।।

ತರೀ ಜಾಳ ಪಾಣಿಯೇ ನ ಭರೇ । ಆಗೀ ಇಂಧನ ನ ಪುರೇ । ತಯಾ ದುರ್ಭರಾಂಚಿಯೇ ಧುರೇ । ಭುಕಾಳು ಜೋ ।।೩೨೩।। ತಯಾ ಕಾಮಾಚಾ ವೋಲಾವಾ । ಜೀವೀ ಧರೂನಿ ಪಾಂಡವಾ । ದಂಭಮಾನಾಚಾ ಮೇಳಾವಾ । ಮೇಳವಿತೀ ।।೩೨೪।। ಮಾತಲಿಯಾ ಕುಂಜರಾ । ಆಗಲೀ ಜಾಲೀ ಮದಿರಾ । ತೈಸಾ ಮದಾಚಾ ತಾಠಾ ತಂವ ಜರಾ । ಚಢತಾ ಆಂಗೀ ।।೩೨೫।। ಆಣಿ ಆಗ್ರಹಾ ತೋಚಿ ಠಾವೋ । ವರೀ ಮೌಢ್ಯಾ ಐಸಾ ಸಾವಾವೋ । ಮಗ ಕಾಯ ವಾಣೂ ನಿರ್ವಾಹೋ । ನಿಶ್ಚಯಾಚಾ ।।೩೨೬।। ಜಿಹೀ ಪರೋಪತಾಪು ಘಡೇ । ಪರಾವಾ ಜೀವು ರಗಡೇ । ತಿಹೀ ಕರ್ಮೀ ಹೋಊನಿ ಗಾಢೇ । ಜನ್ಮವೃತ್ತೀ ।।೩೨೭।। ಮಗ ಆಪುಲೇ ಕೇಲೇ ಫೋಕಾರಿತೀ । ಆಣೇ ಜಗಾತೇ ಧಿಕ್ಕಾರಿತೀ । ದಾಹೀ ದಿಶೀ ಪಸರಿತೀ । ಸ್ಪೃಹಾಜಾಳ ।।೩೨೮।। ಐಸೇನಿ ಗಾ ಆಟೋಪೇ । ಥೋರಿಯೇ ಆಣತೀ ಪಾಪೇ । ಧರ್ಮಧೇನು ಖುರಪೇ । ಸುಟಲೇ ಜೈಸೇ ।।೩೨೯।।

ಮತ್ತು ಈಶ್ವರನ ಬಗ್ಗೆ ಬೇಸರ ಮಾಡಿಕೊಂಡು ಅದರ ವಿಷಯಕ್ಕೆ ಸುಮ್ಮನೇ ಏನೇನೋ ಬಡಬಡಿಸಿದರೂ ಅದೂ ಸಹ ಚಿತ್ತದಲ್ಲಿ ರದೇ ಯಾವುದಕ್ಕೂ ನಿಶ್ಚಯವೇ ಇರುವುದಿಲ್ಲ ।ಊ೧೪॥

ಹೆಚ್ಚಿಗೇನು ಹೇಳಬೇಕು? ಬಹಿರಂಗವಾಗಿಯೇ ತಾವು ನಾಸ್ತಿಕರೆಂದು ತೋರಿಸಿಕೊಳ್ಳುವರು. ಇದು ಅಂತ್ಯಜರ ಓಣಿ ಎಂದು ತಿಳಿಯಲಿಕ್ಕೆ ಎಲುಬುಗಳು ಬಿದ್ದಿರುವುದೇ ಗುರುತಾಗಿರುವಂತೆ, ನಾಸ್ತಿಕತನದ ಎಲುಬುಗಳಾಗಿರುವರು ।ಊ೧೫॥

ಇಂತಹ ಸ್ಥಿತಿಯಲ್ಲಿ ಸ್ವರ್ಗದ ವಿಷಯಕ್ಕೆ ಶ್ರದ್ಧೆಯು ಅಥವಾ ನರಕ ವಿಷಯಕ್ಕೆ ಭಯವು ಈ ಯಾವುದೂ ಅವರ ಮನದಲ್ಲಿ ಒಂದೂ ಬರುವುದಿಲ್ಲ ।ಊ೧೬॥

ಆಗ ಈ ಅಸುರೀ ಸಂಪತ್ತಿನ ಜನರು ದೇಹವೆಂಬ ಕೊಳದಲ್ಲಿ ಸಿಕ್ಕಿಬಿದ್ದು, ಅಪವಿತ್ರ ಜಲದೊಳಗಿನ ನೀರ್ಗುಳ್ಳೆಯಂತೆ ವಿಷಯರೂಪ ರೊಜ್ಜಿನಲ್ಲಿ ಮುಳುಗಿ ಹೋಗುವರು ।ಊ೧೭॥

ಜಲಚರಗಳಿಗೆ ಮೃತ್ಯು ಒದಗಿದಾಗ ಮೀನುಗಾರರು ಆ ಮಡುವನ್ನು ಮುತ್ತುವರು. ಅಥವಾ ಶರೀರ ಪತನದ ಸಮಯ ಒದಗಿದಾಗ ರೋಗಗಳು ಉದ್ಭವಿಸುವುವು ।ಊ೧೮॥

ಅಥವಾ ಪ್ರಜೆಗಳಿಗೆ ಪೀಡೆಯಾಗುವ ಪ್ರಸಂಗವು ಒದಗಿದರೆ, ಆಕಾಶದಲ್ಲಿ ಧೂಮಕೇತು ಮೂಡುವುದು. ಅದರಂತೆ ಜನರು ನಾಶವಾಗುವ ಕಾಲ ಒದಗಿದರೆ, ಅಸುರೀ ಸಂಪತ್ತಿನವರು ಹುಟ್ಟುವರು ।ಊ೧೯॥

ಅಶುಭವು ಬಿತ್ತಿದರೆ ಅಶುಭವೇ ಅಂಕುರವಾಗುವುದು. ಅದರಂತೆ ಈ ಜನರೆಂದರೆ, ಪಾಪದ ಡಂಗುರ ಹೊಡೆಯುವ ಜಾಹೀರಾತಿನ ಕೀರ್ತಿಕಂಭಗಳೇ ಆಗಿರುವರು ।ಊ೨೦॥

ಅಗ್ನಿಗೆ ಹಿಂದೆ ಮುಂದೆ ಬಂದ ವಸ್ತುಗಳನ್ನು ಸುಡುವ ಹೊರತಾದ ಬೇರೆ ಕೆಲಸವೇ ಇಲ್ಲದಂತೆ, ಇವರಲ್ಲಿ ಬಂದವರನ್ನು ಅವರು ಒಳ್ಳೆಯವರಾಗಿರಲಿ, ಕೆಟ್ಟವರಾಗಿರಲಿ ನಾಶ ಮಾಡದೇ ಬಿಡುವುದಿಲ್ಲ ।ಊ೨೧॥

ಆದರೆ ಯಾವ ಸಮಾರಂಭದಿಂದ ಅವರು ತಮ್ಮ ಕೃತ್ಯಗಳನ್ನು ಮಾಡುವರೆಂಬುದಕ್ಕೆ ವರ್ಣಿಸುವೆ, ಅದನ್ನು ಕೇಳು ಎಂದು ಪಾರ್ಥನಿಗೆ ಶ್ರೀನಿವಾಸನು ಹೇಳಿದನು ।ಊ೨೨॥

ಶ್ಲೋಕಾರ್ಥ :- ಮಿತಿ ಇಲ್ಲದ ಕೋರಿಕೆಯುಳ್ಳವರಾಗಿ, ಅಭಿಮಾನ, ದಂಭ, ಮದಗಳಿಗೆ ವಶರಾಗಿ, ಅವಿವೇಕದಿಂದ ಇಲ್ಲ ಸಲ್ಲದ ಕಲ್ಪನೆಗಳಿಂದ ಅನಾಚಾರ ಪರಾಯಣರಾಗಿ ಅವರು ಪ್ರವರ್ತಿಸುತ್ತಾರೆ ।೧೦॥

ಜಾಳಿಗೆಯಲ್ಲಿ ನೀರನ್ನು ಎಂದೂ ಸಂಗ್ರಹಿಸುವುದಾಗುವುದಿಲ್ಲ. ಅಗ್ನಿಗೆ ಕಟ್ಟಿಗೆಗಳು ಎಂದೂ ಸಾಕಾಗುವುದಿಲ್ಲ. ಇಂತಹ ದುರ್ಧರ ವಸ್ತುಗಳಂತೆ ಇವರ ಕ್ಷುಧೆಯು ಎಂದೂ ಶಾಂತವಾಗುವುದಿಲ್ಲ ।ಊ೨೩॥

ಆ ಕಾಮನಿಗೆ ತಮ್ಮ ಮನದಲ್ಲಿ ಆಶ್ರಯವನ್ನು ಕೊಟ್ಟು, ಹೇ ಪಾಂಡವನೇ, ಅದರಲ್ಲಿ ದಂಭ ಮತ್ತು ಮಾನವನ್ನು ಕೂಡಿಸುವರು ।ಊ೨೪॥

ಮದವೇರಿದ ಆನೆಗೆ ಸೆರೆಕುಡಿಸಿದರೆ ಅದು ಅಧಿಕವಾಗಿ ಉನ್ಮತ್ತಾಗುವುದು. ಅದರಂತೆ ಅಂಗದಲ್ಲಿ ಮದವೇರಿದ ಅಸುರೀ ಸಂಪತ್ತಿನ ಜನರು ವೃದ್ಧರಾದಂತೆ ಉನ್ಮತ್ತವು ಅಧಿಕವಾಗುವುದು ।ಊ೨೫॥

ಮೂಲದಲ್ಲಿ ಆಗ್ರಹವುಳ್ಳ ಸ್ವಭಾವದವರು, ಅದರಲ್ಲಿ ಮೂರ್ಖತನದ ಜೋಡು, ಇಂಥ ಸ್ಥಿತಿಯಲ್ಲಿ ದುರಾಗ್ರಹದ ನಿಶ್ಚಯವನ್ನು ಏನೆಂದು ವರ್ಣಿಸಬೇಕು? ।ಊ೨೬॥

ಅನ್ಯರಿಗೆ ಪೀಡೆಯಾಗುವ ಅಥವಾ ಅನ್ಯರಿಗೆ ಪ್ರಾಣಹಾನಿ ಒದಗುವ ಇಂತಹ ಕರ್ಮಗಳಲ್ಲಿಯೇ ಯಾವಾಗಲೂ ನಿರತರಾಗಿರುವರು ।ಊ೨೭॥

ತಾವು ಮಾಡಿದ ಕೃತ್ಯಗಳನ್ನು ನಾಲ್ಕು ಕಡೆ ಪ್ರಸಿದ್ಧಗೊಳಿಸುವರು ಮತ್ತು ಈ ಜಗತ್ತಿಗೆ ತುಚ್ಛವಾಗಿ ಕಾಣುವರು ಮತ್ತು ಅವರ ಬಯಕೆಗಳ ಓಟಕ್ಕೆ ಹತ್ತು ದಿಕ್ಕುಗಳೇ ಸಾಲದಾಗುವುವು ।ಊ೨೮॥

ಗ್ರಾಮದೇವರ ಪ್ರೀತ್ಯರ್ಥವಾಗಿ ಬಿಟ್ಟ ಬಸವಿ ಗೂಳಿಗಳು ಯಾರ ಪ್ರತಿಬಂಧವಿಲ್ಲದೇ ನಿರಾತಂಕವಾಗಿ ಮೇಯುವಂತೆ ಇವರು ಮನಬಂದಂತೆ ಅಭಿಮಾನದಿಂದ ಪಾಪಾಚರಣೆಗಳನ್ನು ಬೆಳೆಸುವರು ।ಊ೨೯॥

ಚಿಂತಾಮಪರಿಮೇಯಾಂ ಚ ಪ್ರಲಯಾಂತಾಮುಪಾಶ್ರಿತಾಃ ।
ಕಾಮೋಪಭೋಗಪರಮಾಃ ಏತಾವದಿತಿ ನಿಶ್ಚಿತಾಃ ॥೧೧॥

ಯಾಚಿ ಏಕಾ ಆಯತೀ । ತಯಾಚಿಯಾ ಕರ್ಮಪ್ರವೃತ್ತೀ । ಆಣಿ ಜಿಣೆಯಾಹೀ ಪರೌತೀ । ವಾಹತೀ ಚಿಂತಾ ॥೩೩೦॥ ಪಾತಾಳಾಹೂನಿ ನಿಮ್ನ । ಜಿಯೇಚಿಯೇ ಉಂಚೀಯೇಸಾನೇ ಗಗನ । ಜೇ ಪಾಹಾತಾ ತ್ರಿಭುವನ । ಅಣುಹೀ ನೋಹೇ ॥೩೩೧॥ ತೇ ಯೋಗಪಟಾಚೀ ಮವಣೇ । ಜೇವೀ ಅನಿಯಮ ಚಿಂತವಣೇ । ಜೇ ಸಾಂಡೂ ನೇಣೇ ಮರಣೇ । ವಲ್ಲಭಾಜೈಸೀ ॥೩೩೨॥ ತೈಸೀ ಚಿಂತಾ ಅಪಾರ । ವಾಢವಿತೀ ನಿರಂತರ । ಜೇವೀ ಸೂನಿ ಅಸಾರ । ವಿಷಯಾದಿಕ ॥೩೩೩॥ ಸ್ತ್ರೀಯಾ ಗಾಇಲೇ ಆಇಕಾವೇ । ಸ್ತ್ರೀರೂಪ ಡೋಳಾ ದೇಖಾವೇ । ಸರ್ವೇಂದ್ರಿಯೇ ಆಲಿಂಗಾವೇ । ಸ್ತ್ರೀಯೇತೇಂಚೀ ॥೩೩೪॥ ಕುರವಂಡೀ ಕೀಜೇ ಅಮೃತೇ । ಐಸೇ ಸುಖ ಸ್ತ್ರಿಯೇಪರೌತೇ । ನಾಹೀಂಚಿ ಮ್ಹಣೌನಿ ಚಿತ್ತೇ । ನಿಶ್ಚಯೋ ಕೇಲಾ ॥೩೩೫॥ ಮಗ ತಯಾಚಿ ಸ್ತ್ರೀಭೋಗಾ । ಲಾಗೀ ಪಾತಾಳ ಸ್ವರ್ಗಾ । ಧಾಂವತೀ ದಿಗ್ವಿಭಾಗಾ । ಪರೌತೇಹೀ ॥೩೩೬॥

ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ ।
ಈಹಂತೇ ಕಾಮಭೋಗಾರ್ಥಮ್ ಅನ್ಯಾಯೇನಾರ್ಥಸಂಚಯಾನ್ ॥೧೨॥

ಆಮಿಷಕವಳು ಥೋರೀ ಆಶಾ । ನ ವಿಚಾರಿತಾ ಗಿಳೀ ಮಾಸಾ । ತೈಸೇ ಕೀಜೇ ವಿಷಯಾಶಾ । ತಯಾಂಸಿ ಗಾ ॥೩೩೭॥ ವಾಂಛಿತ ತಂವ ನ ಪವತಿ । ಮಗ ಕೋರಡಿಯೇಚಿ ಆಶೇಚಿ ಸಂತತೀ । ವಾಢಲೂ ವಾಢಲೂ ಹೋತೀ । ಕೋಶಕೀಡೇ ॥೩೩೮॥ ಆಣಿ ಪಸರಿಲಾ ಅಭಿಲಾಷು । ಅಪೂರ್ಣು ಹೋಯ ತೋಚಿ ದ್ವೇಷು । ಏವಂ ಕಾಮಕ್ರೋಧಾಂಹೂನಿ ಅಧಿಕು । ಪುರುಷಾರ್ಥು ನಾಹೀ ॥೩೩೯॥ ದಿಹಾ ಖೋಲಣೇ ರಾತ್ರೀ ಜಾಗೋವಾ । ಠಾಣಾಂತರಿಯಾ ಜೈಸಾ ಪಾಂಡವಾ । ಅಹೋರಾತ್ರೀಂಹೀ ವಿಸಾಂವಾ । ಭೇಟೇಚಿನಾ ॥೩೪೦॥ ತೈಸೇ ಉಂಚೌನಿ ಲೋಟಿಲೇ ಕಾಮೇ । ನೇಹಟತೀ ಕ್ರೋಧಾಚಿಯೇ ಢೇಮೇ । ತರೀ ರಾಗದ್ವೇಷ ಪ್ರೇಮೇ । ನ ಮಾತೀ ಕೇಂಹೀ ॥೩೪೧॥ ತೇವೀಂಚಿ ಜೀವಿಂಚಿಯಾ ಹಾಂವಾ । ವಿಷಯವಾಸನಾಂಚಾ ಮೇಳಾವಾ । ಕೇಲಾ ಪರೀ ತೋ ಭೋಗಾವಾ । ಅರ್ಥೇಂಕೀ ನಾ? ॥೩೪೨॥ ಮ್ಹಣೌನಿ ಭೋಗಾವಯಾ ಜೋಗಾ । ಪುರತಾ ಅರ್ಥು ಪೈ ಗಾ । ಆಣಾವಯಾ ಜಗಾ । ಝೋಂಬತೀ ಸೈರಾ ॥೩೪೩॥

ಶ್ಲೋಕಾರ್ಥ :- ಅವರು ತುದಿಮೊದಲಲ್ಲದ, ಸತ್ತರೂ ತೀರದ ಊಹಾಪೋಹಗಳಿಂದ ಕೂಡಿ ಕೊಂಡವರಾಗಿ, ಕಾಮೋಪಭೋಗಗಳಿಗಿಂತ ಹೆಚ್ಚಿನ ಪುರುಷಾರ್ಥವೇ ಇಲ್ಲವೆಂದು ನಿಶ್ಚಯಿಸಿರುವರು. ಈ ವಿಷಯಭೋಗದ ದಾರಿಯನ್ನು ಬಿಟ್ಟು ಆತ್ಮಾನುಭವ ಸುಖದ ದಾರಿಯೇ ಅವರಿಗೆ ತಿಳಿಯದು ।೧೧॥

ಶ್ಲೋಕಾರ್ಥ :- ಅಸಂಖ್ಯಾತಗಳಾದ ಆಶಾಪಾತಗಳಿಂದ ಕಟ್ಟಲ್ಪಟ್ಟು ಕಾಮಕ್ರೋಧ ಪರಾಯಣರಾಗಿ, ಅನ್ಯಾಯ ಮಾರ್ಗದಿಂದ ಧನವನ್ನು ಕೂಡಿ ಹಾಕಿಕೊಂಡ ಅವರು ವಿಷಯ ಸುಖಗಳನ್ನು ಅಪೇಕ್ಷಿಸುತ್ತಿರುವರು ।೧೨॥

(ಮಾಂಸದ ಉಂಡೆ) ಆಮಿಷದ ಹಿರಿಯಾಸೆಯಿಂದ ಯಾವುದನ್ನು ವಿಚಾರಿಸದೇ ಮೀನು ಅದನ್ನು ತಿನ್ನಲು ಹೋಗಿ ಮರಣ ಹೊಂದುವಂತೆ, ಇವರು ವಿಷಯಗಳ ಆಸೆಯಿಂದ ಮರಣಾಗುವರು ।೩೩೭॥

ಬಯಸಿದ ವಸ್ತುಗಳಂತೂ ಪ್ರಾಪ್ತವಾಗುವುದೇ ಇಲ್ಲ, ಪ್ರತಿಯಾಗಿ ಒಣ ಆಶೆಗಳನ್ನು ಬೆಳೆಸುತ್ತ ಕೋಶ ಕೀಟದಂತೆ ಬಂಧಿಸಲ್ಪಡುವರು ।೩೩೮॥

ಮತ್ತು ಅಭಿಲಾಷೆಯು ಅಪೂರ್ಣವಾದಲ್ಲಿ ದ್ವೇಷ ಉಂಟಾಗುವುದು. ವಸ್ತು ಲಾಭವೇ ತೃಪ್ತಿ ಎಂದು ಭಾವಿಸಿ, ಸಿಗದಾಗ ಕ್ರೋಧಯುಕ್ತರಾಗುವರು. ಒಟ್ಟಿನಲ್ಲಿ ಕಾಮ ಕ್ರೋಧಕ್ಕಿಂತಲೂ ಹೆಚ್ಚಿನ ಪುರುಷಾರ್ಥವೇ ಇವರಿಗಿರುವುದಿಲ್ಲ ।೩೩೯॥

ಅರ್ಜುನಾ, ಠಾಣೆಯ ಅಮಲದಾರನಿಗೆ ಹಗಲು ಕಾರ್ಯಭಾರ, ರಾತ್ರಿ ಜಾಗರಣೆ, ಹೀಗಾಗಿ ಆತನಿಗೆ ವಿಶ್ರಾಂತಿಯೇ ಸಿಗುವುದಿಲ್ಲ ।೩೪೦॥

ಎತ್ತರದ ಶಿಖರದಿಂದ ಕಾಮವು ಹೆಚ್ಚಾದಾಗ ಕ್ರೋಧದ ದಂಡೆಗೆ ಅಪ್ಪಳಿಸಿದರೂ ಅವರ ಕಾಮ ಕ್ರೋಧ ವಿಷಯಗಳಿಗೆ ಪ್ರೇಮವು ಕಡಿಮೆಯಾಗುವುದಿಲ್ಲ ।೩೪೧॥

ಅದಲ್ಲದೇ, ಮನದಲ್ಲಿ ಹುಟ್ಟಿಕೊಂಡಿರುವ ವಿಷಯಗಳ ಬಯಕೆಗಳನ್ನೆಲ್ಲ ಪೂರ್ಣ ಮಾಡಬೇಕಾದರೆ ಹಣ ಬೇಕಾಗುವುದಿಲ್ಲವೇ? ।೩೪೨॥

ಆದ್ದರಿಂದ ವಿಷಯ ವಾಸನೆಗಳು ಪೂರ್ಣ ಮಾಡಿಕೊಳ್ಳುವುದಕ್ಕಾಗಿ ದ್ರವ್ಯವನ್ನು ಕೂಡಿಸುತ್ತ ಜಗತ್ತಿನ ಜನರಿಗೆ ಅದಕ್ಕಾಗಿ ಪೀಡೆಯನ್ನು ಕೊಡುವರು ।೩೪೩॥

ಇದೊಂದು ಸಾಧನೆಯಿಂದ ಅವರು ತಮ್ಮ ಕರ್ಮಗಳನ್ನು ಮಾಡುವರು ಮತ್ತು ಮರಣವಾದ ನಂತರವೂ ತಮಗೆ ಸುಖಸಿಗಬೇಕೆಂದು ಕಾಳಜಿ ವಹಿಸುವರು ।೩೩೦॥

ಈ ಚಿಂತೆಯು ಪಾತಾಳಕ್ಕಿಂತಲೂ ಆಳವಾಗಿರುವುದು. ಆಕಾಶಕ್ಕಿಂತಲೂ ಎತ್ತರವಾಗಿರುವುದು ಮತ್ತು ಇವುಗಳ ತುಲನೆ ಮಾಡಿದರೆ ತ್ರಿಭುವನವು ಅಣುವಿನಷ್ಟು ಸಹ ಕಾಣಿಸುವುದಿಲ್ಲ ।೩೩೧॥

ಸಂನ್ಯಾಸಿಗೆ ಹಾಕಿಕೊಟ್ಟ ನಿಯಮಗಳಂತೆ ಇವರು ತಮ್ಮ ಜೀವನದಲ್ಲಿ ತಪ್ಪದೇ ಅನಿಯಮಿತ ಚಿಂತೆಗಳನ್ನು ಮಾಡುವರು. ಪತಿವ್ರತೆ ಸ್ತ್ರೀಯು ಸಂಕಟ ಸಮಯದಲ್ಲಿಯೂ ಪತಿಯನ್ನು ಬಿಡದಂತೆ, ಚಿಂತೆಯೂ ಇವರನ್ನು ಬಿಡದು ।೩೩೨॥

ಅದರಂತೆ ಅಸಾರವಾಗಿರುವ ವಿಷಯಾದಿಕ ವಿಷಯಗಳಲ್ಲಿ ಯಾವಾಗಲೂ ಮನದಲ್ಲಿ ಆಶೆಯನ್ನು ಮಾಡುತ್ತ ಅವುಗಳ ಪ್ರಾಪ್ತಿಗಾಗಿ ಅಪಾರ ಚಿಂತೆ ಮಾಡುವರು ।೩೩೩॥

ಸ್ತ್ರೀಯರ ಗಾನವನ್ನು ಸದಾ ಕೇಳಬೇಕು. ಸ್ತ್ರೀಯರ ರೂಪವನ್ನು ಸದಾ ನೋಡಬೇಕು. ಎಲ್ಲ ಇಂದ್ರಿಯಗಳಿಗೆ ಸ್ತ್ರೀಯರ ಆಲಿಂಗನ ಸಿಗಬೇಕು ।೩೩೪॥

ಮತ್ತು ಸ್ತ್ರೀಯರಿಂದ ಸಿಗುವ ಸುಖಕ್ಕೆ ಅಮೃತವನ್ನು ನಿವಾಳಿಸಿ ಒಗೆಯಬೇಕು. ಈ ಪ್ರಕಾರವಾಗಿ ಸ್ತ್ರೀಕ್ಕಿಂತಲೂ ಅಧಿಕವಾದ ಸುಖವು ಬೇರೆ ಯಾವುದೂ ಇಲ್ಲವೆಂದು ಅವರು ಮನದಲ್ಲಿ ನಿಶ್ಚಯ ಮಾಡಿರುವರು ।೩೩೫॥

ಆಮದರಿಂದ ಈ ಸ್ತ್ರೀ ಭೋಗಕ್ಕಾಗಿ, ಸ್ವರ್ಗದಲ್ಲಿ ಪಾತಾಳದಲ್ಲಿ ಅಥವಾ ದಿಶೆಯ ಸೀಮೆಯನ್ನು ಮೀರಿದ ಸ್ಥಳಗಳಲ್ಲಿಯೂ ದಾಟಿ ಹೋಗುವ ಸಿದ್ಧತೆಯಲ್ಲಿರುವರು ।೩೩೬॥

ಏಕಾತೇ ಸಾಧೂನಿ ಮಾರಿತೀ । ಏಕಾಚಿ ಸರ್ವಸ್ವೇ ಹರಿತೀ । ಏಕಾಲಾಗೀ ಉಭಾರಿತೀ । ಅಪಾಯ ಯಂತ್ರೇ ।೩೪೪॥ ಪಾಶಿಕೇ ಪೋತೀ ವಾಗುರಾ । ಸುಣೇ ಸಸಾಣೇ ಚಿಕಾಟೀ ಖೋಂಚಾರಾ । ಘೇಊನಿ ನಿಘತೀ ಡೋಂಗರಾ । ಪಾರಧೀ ಜೈಸೇ ।೩೪೫॥ ತೇ ಪೋಸಾವಯಾ ಪೋಟ । ಮಾರೂನಿ ಪ್ರಾಣಿಯಾಂಚೇ ಸಂಘಾಟ । ಆಣಿತೀ ಐಸೇ ನಿಕೃಷ್ಟ । ತೇಂಹೀ ಕರಿತೀ ।೩೪೬॥ ಪರಪ್ರಾಣಘಾತೇ । ಮೇಳವಿತೀ ವಿತ್ತೇ । ಮಿಳಾಲ್ಯಾ ಚಿತ್ತೇ । ತೋಷಣೇ ಕೈಸೇ ।೩೪೭॥

ಇದಮದ್ಯ ಮಯಾ ಲಬ್ಧಮ್ ಇಮಂ ಪ್ರಾಪ್ಸ್ಯೇ ಮನೋರಥಮ್ ।
ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಮ್ ।೧೩॥

ಮ್ಹಣೇ ಆಜಿ ಮಿಯಾ । ಸಂಪತ್ತಿ ಬಹುತೇಕಾಂಚಿಯಾ । ಆಪುಲ್ಯಾ ಹಾತೀ ಕೇಲಿಯಾ । ಧನ್ಯ ನಾ ಮೀ? ।೩೪೮॥ ಐಸಾ ಶ್ಲಾಘೋ ಜಂವ ಜಾಯೇ । ತಂವ ಮನ ಆಣೇಕಹೀ ವಾಹೇ । ಸವೇಂಚಿ ಮ್ಹಣೇ ಪಾಹೇ । ಆಣಿಕಾಂಚೇಹೀ ಆಣೂ ।೩೪೯॥ ಹೇ ಜೇತುಲೇ ಅಸೇ ಜೋಡಿಲೇ । ತಯಾಚೇನಿ ಭಾಂಡವಲೇ । ಲಾಭಾ ಘೇಈನ ಉರಲೇ । ಚರಾಚರ ಹೇ ।೩೫೦॥ ಐಸೇನಿ ಧನಾ ವಿಶ್ವಾಚಿಯಾ । ಮೀಚಿ ಹೋಈನ ಸ್ವಾಮಿಯಾ । ಮಗ ದಿಠೀ ಪಡೇ ತಯಾ । ಉರೋ ನೇದೀ ।೩೫೧॥

ಅಸೌ ಮಯಾ ಹತಃ ಶತ್ರುಃ ಹನಿಷ್ಯೇ ಚಾಪರಾನಪಿ ।
ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ ।೧೪॥

ಹೇ ಮಾರಿಲೇ ವೈರೀ ಥೋಡೇ । ಆಣೇಕಹೀ ಸಾಧೀನ ಗಾಢೇ । ಮಗ ನಾಂದೇನ ಪವಾಡೇ । ಯೇಕಲಾಚಿ ಮೀ ।೩೫೨॥ ಮಗ ಮಾಝೀ ಹೋತೀಲ ಕಾಮಾರೀ । ತಿಯೇವಾಂಚೂನಿ ಯೇರೇ ಮಾರೀ । ಕಿಂಬಹುನಾ ಚರಾಚರೀ । ಈಶ್ವರು ತೋ ಮೀ ।೩೫೩॥ ಮೀ ಭೋಗಭೂಮೀಚಾ ರಾವೋ । ಆಜಿ ಸರ್ವ ಸುಖಾಸೀ ಠಾವೋ । ಮ್ಹಣೌನಿ ಇಂದ್ರುಹೀ ವಾವೋ । ಮಾತೇ ಪಾಹೂನಿ ।೩೫೪॥ ಮೀ ಮನೇ ವಾಚಾ ದೇಹೇ । ಕರೀ ತೇ ಕೈಸೇ ನೋಹೇ । ಕೇ ಮಜ ವಾಂಚೂನಿ ಆಹೇ । ಆಜ್ಞಾಸಿದ್ಧ ಆನ? ।೩೫೫॥ ತಂವಚಿ ಬಳಿಯಾ ಕಾಳು । ಜಂವ ನ ದಿಸೇ ಮೀ ಅತುರ್ಬಳು । ಸುಖಾಚಾ ಕೀರ ನಿಖಿಳು । ರಾಸಿವಾ ಮೀಚಿ ।೩೫೬॥

ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ।
ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ ।೧೫॥

ಒಬ್ಬನಿಗೆ ಅರಣ್ಯದ ಇಕ್ಕಟ್ಟಿನಲ್ಲಿ ಎದುರಾಗಿ ಕೊಲ್ಲುವರು. ಒಬ್ಬನ ಎಲ್ಲವನ್ನೂ ಹರಣ ಮಾಡುವರು. ಒಬ್ಬನ ನಾಶ ಮಾಡಲು ಇಲ್ಲದ ಯುಕ್ತಿಗಳನ್ನು ಯೋಚಿಸುವರು ।೩೪೪॥

ಬೇಟೆಗಾರರು ಪರ್ವತದಲ್ಲಿ ಬೇಟೆಯಾಡಲು ಹೋಗುವಾಗ್ಗೆ, ತಮ್ಮಲ್ಲಿ ಪಾಶ, ಕೋಲು, ಕವಣೆ, ಬಲೆ, ನಾಯಿ, ಮೊಲ, ಉಡಾ, ಭಾಲೆ ಮುಂತಾದವುಗಳನ್ನು ತೆಗೆದುಕೊಳ್ಳುವರು ।೩೪೫॥

ಮತ್ತು ತಮ್ಮ ಹೊಟ್ಟೆ ತುಂಬಲು ಅನೇಕ ತರಹದ ಪ್ರಾಣಿಗಳ ಸಮೂಹವನ್ನು ಕೊಂದು ತರುವರು. ಅದರಂತೆ ಇವರೂ ಸಹ ಇಂತಹ ಕೆಟ್ಟ ಕರ್ಮಗಳನ್ನು ಮಾಡುವರು ।೩೪೬॥

ಬೇರೆಯವರ ಪ್ರಾಣ ಘಾತ ಮಾಡಿ ಹಣ ಗಳಿಸುವರು ಮತ್ತು ಹಣ ಸಿಕ್ಕಾಗ ಅವರ ಚಿತ್ತಕ್ಕೆ ಹೇಗೆ ಸಂತೋಷವಾಗುವುದೆಂಬುದನ್ನು ಕೇಳಿರಿ ।೩೪೭॥

ಶ್ಲೋಕಾರ್ಥ :– ಈ ಕೋರಿಕೆಯು ನೆರವೇರಿತು. ಇನ್ನು ಆ ಕೋರಿಕೆ ನೆರವೇರಬೇಕು. ಈ ದಿನಕ್ಕೆ ಇದು ಲಭಿಸಿತು. ಅನಂತರ ಈ ಧನವನ್ನು ಸಂಪಾದಿಸಬೇಕು ।೧೩॥

ಅವನು ಹೇಳುವುದೇನೆಂದರೆ, ನಾನು ಇಂದು ಬಹಳಷ್ಟು ಜನರ ಸಂಪತ್ತನ್ನು ನನ್ನ ಸ್ವಾಧೀನಮಾಡಿಕೊಂಡಿರುವೆನು. ಅಂದಮೇಲೆ ನಾನೀಗ ಧನ್ಯನಾಗಿಲ್ಲವೇ? ।೩೪೮॥

ಈ ಪ್ರಕಾರವಾಗಿ ತನ್ನನ್ನು ತಾನೇ ಹೊಗಳಿಕೊಳ್ಳುತ್ತ ಮೆರೆಯುವನು. ಅಲ್ಲದೇ ತಕ್ಷಣ ಇನ್ನೂ ಅನೇಕರ ದ್ರವ್ಯ ಹರಣ ಮಾಡಬೇಕೆಂದು ಇಚ್ಛೆ ಮಾಡುವನು ।೩೪೯॥

ಇಲ್ಲಿಯವರೆಗೆ ಎಷ್ಟೊಂಟು ಸಂಪಾದಿಸಿದೆಯೋ, ಆ ಬಂಡವಾಳದಿಂದ ಶ್ರೀಮಂತರಲ್ಲಿಯ ಚರಾಚರ ಸಂಪತ್ತನ್ನು ಹರಣ ಮಾಡಿ ತರುವೆನು ।೩೫೦॥

ಈ ಪ್ರಕಾರವಾಗಿ ಈ ವಿಶ್ವದಲ್ಲಿ ಎಲ್ಲ ಸಂಪತ್ತಿನ ನಾನೇ ಒಡೆಯನಾಗುವೆನು. ಅಂದಮೇಲೆ ನಾನು ಯಾರ ಮೇಲೆ ಕಣ್ಣು ಹಾಯಿಸುವೆನೋ, ಅವನ ನಾಶವನ್ನೇ ಮಾಡುವೆನು ।೩೫೧॥

ಶ್ಲೋಕಾರ್ಥ :– ಈ ಹಗೆಯನ್ನು ನಾನು ಕೊಂದೆನು, ಉಳಿದವರನ್ನು ಕೊಲ್ಲಬಲ್ಲೆನು. ನಾನು ಒಡೆಯನು, ನಾನು ಸುಸಾಧನಗಳುಳ್ಳವನು. ನಾನು ಸಿದ್ಧನು. ಬಲಿಷ್ಠನು, ಸುಖಿ ।೧೪॥

ಈಗ ಇಲ್ಲಿಯವರೆಗೆ ಕೊಂದಿರುವಂತಹ ಶತ್ರುಗಳು ಕಡಿಮೆಯಾಗಿರುವರು. ಅದಕ್ಕಾಗಿ ಇನ್ನೂ ಬೇರೆ ಉಳಿದ ಬಲಾಢ್ಯರನ್ನು ಗೆಲ್ಲುವೆನು, ಆಗ ನಾನೊಬ್ಬನೇ ದೊಡ್ಡ ಒಡೆಯನಾಗಿ ಮೆರೆಯುವೆನು ।೩೫೨॥

ನನ್ನ ಸೇವಕರಾಗಿ ಇದ್ದವರನ್ನು ಬಿಟ್ಟು ಉಳಿದವರೆಲ್ಲರನ್ನೂ ನಾಶ ಮಾಡುವೆನು. ಹೆಚ್ಚಿಗೇನು ಹೇಳಬೇಕು? ಈ ಎಲ್ಲ ಜಗತ್ತಿನ ಈಶ್ವರನು ನಾನೇ ಇರುವೆನು ।೩೫೩॥

ನಾನು ಭೋಗರೂಪ ಪೃಥ್ವಿಯ ರಾಜನು, ಎಲ್ಲ ಸುಖಗಳ ಉಪಭೋಗದಲ್ಲಿ ನಾನಿರುವೆನು. ನನ್ನ ಐಶ್ವರ್ಯವನ್ನು ಕಂಡು ಇಂದ್ರನೂ ನಾಚಿಕೆಪಡಬೇಕು !! ।೩೫೪॥

ನಾನು ಕಾಯಾ, ವಾಚಾ, ಮನದಿಂದ ಏನು ಮಾಡುವೆನೋ, ಅದು ಏಕೆ ಸಿದ್ಧಿಗೊಳ್ಳುವುದಿಲ್ಲ? ಮತ್ತು ನನ್ನ ಹೊರತಾಗಿ ಆಜ್ಞೆ ಮಾಡುವವರು ಇನ್ನಾರಿದ್ದಾರೆ? ।೩೫೫॥

ಬಲವಾನನಾಗಿರುವ ನಾನು ನನ್ನನ್ನು ನೋಡುವುದಕ್ಕಿಂತ ಮೊದಲು ಮಾತ್ರ ಕಾಲನ ಬಲದ ಪ್ರತಿಷ್ಠೆ ಇರುವುದು. ನಾನು ಮಾತ್ರ ಕೇವಲ ಸುಖದ ರಾಶಿಯೇ ಆಗಿರುವೆನು ।೩೫೬॥

ಶ್ಲೋಕಾರ್ಥ :– ನಾನು ಹಣಗಾರ! ನಾನು ಒಳ್ಳೆಯ ಕುಲದವನು. ನನಗೆ ಸಮಾನರು ಬೇರೆ ಯಾರಿದ್ದಾರೆ? ನಾನು ಯಾಗ ಮಾಡುತ್ತೇನೆ, ದಾನ ಮಾಡುತ್ತೇನೆ, ಆನಂದ ಪಡುತ್ತೇನೆ ಎಂದು ತಪ್ಪು ತಿಳುವಳಿಕೆಯಿಂದ ಅವಿವೇಕವನ್ನು ಹೊಂದಿದ್ದಾರೆ ।೧೫॥

ಕುಬೇರು ಆಥಿಲಾ ಹೋಯೇ । ಪರೀ ತೋ ನೇಣೇ ಮಾಝೀ ಸೋಯೇ । ಸಂಪತ್ತೀ ಮಜಸಮ ನವ್ಹೇ । ಶ್ರೀನಾಥಾಹೀ ॥೩೫೭॥ ಮಾಝಿಯಾ ಕುಳಾಚಾ ಉಜಾಳೂ । ಕಾ ಜಾತಿಗೋತಾಂಚಾ ಮೇಳೂ । ಪಾಹಾತಾ ಬ್ರಹ್ಮಾ ಹೀ ಹಳೂ । ಉಣಾಚಿ ದಿಸೇ ॥೩೫೮॥ ಮ್ಹಣೌನಿ ಮಿರವಿತೀ ನಾಂವೇ । ವಾಯಾ ಈಶ್ವರಾದಿ ಆಘವೇ । ನಾಹೀ ಮಜಸೀ ಸರೀ ಪಾವೇ । ಐಸೇ ಕೋಣ್ಹೀ ॥೩೫೯॥ ಆತಾ ಲೋಪಲಾ ಅಭಿಚಾರು । ತಯಾ ಕರೀನ ಮೀ ಜೀರ್ಣೋದ್ಧಾರು । ಪ್ರತಿಷ್ಠೀನ ಪರಮಾರು । ಯಾಗವರೀ ॥೩೬೦॥ ಮಾತೇ ಗಾತೀ ವಾನಿತೀ । ನಟನಾಚೇ ರಿಝವಿತೀ । ತಯಾ ದೇಈನ ಮಾಗತಿ । ತೇ ತೇ ವಸ್ತು ॥೩೬೧॥ ಮಾಜಿರಾ ಅನ್ನಪಾನೀ । ಪ್ರಮದಾಂಚ್ಯಾ ಆಲಿಂಗನೀ । ಮೀ ಹೋಈನ ತ್ರಿಭುವನೀ । ಆನಂದಾಕಾರು ॥೩೬೨॥ ಕಾಯ ಬಹು ಸಾಂಗೋ ಐಸೇ । ತೇ ಆಸುರೀಪ್ರಕೃತೀ ಪಿಸೇ । ತುರಂಬಿತೀ ಅಸೋಸೇ । ಗಗನೌಳೇ ತಿಯೇ ॥೩೬೩॥

ಅನೇಕಚಿತ್ತವಿಭ್ರಾಂತಾಃ ಮೋಹಜಾಲಸಮಾವೃತಾಃ ।
ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ॥೧೬॥

ಜ್ವರಾಚೇನಿ ಆಟೋಪೇ । ರೋಗೀ ಭಲತ್ಯೈಸೇ ಜಲ್ಪೇ । ಚಾವಳತೀ ಸಂಕಲ್ಪೇ । ಜಾಣ ತೇ ತೈಸೇ ॥೩೬೪॥ ಅಜ್ಞಾನ ಆತುಲೇ ಧುಳೀ । ಮ್ಹಣೌನಿ ಆಶಾ ವಾಹಟುಳೀ । ಭೋವಂಡೀ ಜತೀ ಅಂತರಾಳೀ । ಮನೋರಥಾಂಚ್ಯಾ ॥೩೬೫॥ ಅನಿಯಮ ಆಷಾಢ ಮೇಘು । ಕಾ ಸಮುದ್ರೋರ್ಮೀ ಅಭಂಗ । ತೈಸೇ ಕಾಮಿತೀ ಅನೇಗ । ಅಖಂಡ ಕಾಮ ॥೩೬೬॥ ಮಗ ಪೈ ಕಾಮನಾಚಿ ತಯಾ । ಜಿವೀ ಜಾಲ್ಯಾ ವೇಲರಿಯಾ । ವೋರಪಿಲೀ ಕಾಂಟಿಯಾ । ಕಮಳೇ ಜೈಸೀ ॥೩೬೭॥ ಕಾ ಪಾಷಾಣಾಚಿಯಾ ಮಾಥಾ । ಹಾಂಡೀ ಫುಟಲೀ ಪಾರ್ಥಾ । ಜೇವೀ ತೈಸೇ ಸರ್ವಥಾ । ಕುಟಕೇ ಜಾಲೇ ॥೩೬೮॥ ತೇವ್ಹಾ ಚಢತಿಯೇ ರಜನೀ । ತಮಾಚೀ ಹೋಯ ಪುರವಣೀ । ತೈಸಾ ಮೋಹೋ ಅಂತಃಕರಣೀ । ವಾಢೋಂಚಿ ಲಾಗೇ ॥೩೬೯॥ ಆಣಿ ವಾಢೇ ಜಂವ ಜಂವ ಮೋಹೋ । ತಂವ ತಂವ ವಿಷಯೀ ರೋಹೋ । ವಿಷಯ ತೇಥ ಠಾವೋ । ಪಾತಕಾಸೀ ॥೩೭೦॥ ಪಾಪೇ ಆಪಲೇನಿ ಥಾಂವೇ । ಜಂವ ಕರಿತೀ ಮೇಳಾವೇ । ತಂವ ಜಿತಾಂಚಿ ಆಘವೇ । ಯೇತೀ ನರಕಾ ॥೩೭೧॥ ಮ್ಹಣೌನಿ ಗಾ ಸುಮತಿ । ಜೇ ಕುಮನೋರಥಾ ಪಾಳಿತೀ । ತೇ ಆಸುರ ಯೇತೀ ವಸ್ತೀ । ತಯಾ ಠಾಯಾ ॥೩೭೨॥

ಕುಬೇರನು ಶ್ರೀಮಂತನು ನಿಜ, ಆದರೆ ಆತನು ನನ್ನನ್ನು ಸರಿಗಟ್ಟಲಾರನು ಮತ್ತು ನನ್ನ ಸಂಪತ್ತಿನಂತೆ ಶ್ರೀ ವಿಷ್ಣುವಿನ ಸಂಪತ್ತು ಇರುವುದಿಲ್ಲ ।೩೫೭॥

ನನ್ನ ಕುಲದ ಹೆಸರು ಗೌರವಗಳಿಂದ ಅಥವಾ ಆಪ್ತ ವರ್ಗದ ಸಮುದಾಯದಿಂದ ನೋಡಿದರೆ ಸೃಷ್ಟಿಕರ್ತನಾದ ಬ್ರಹ್ಮದೇವನೂ ಕಿಂಚಿತ್ ಕಡಿಮೆ ಕಾಣಿಸುವನು ।೩೫೮॥

ಆದ್ದರಿಂದ ಜನರು ಯಾವ ಈಶ್ವರಾದಿಕರನ್ನು ಲೌಕಿಕವಾಗಿ ಗುಣಗಾನ ಮಾಡುವುದು ವ್ಯರ್ಥವೇ ಆಗಿರುವುದು. ನನ್ನ ಸರಿಸಮಾನರು ಯಾರೂ ಸಿಗರು ।೩೫೯॥

ಈಗ ಜಾರಣ ಮಾರಣದ ಲೋಪವಾಗಿದೆ, ಅದರ ಜೀರ್ಣೋದ್ಧಾರವನ್ನು ನಾನೇ ಮಾಡುವೆನು ಮತ್ತು ಜನರಿಗೆ ಪೀಡೆ ಕೊಡುವಂತಹ ಯಜ್ಞಯಾಗವನ್ನು ಮಾಡುವೆನು ।೩೬೦॥

ನನ್ನ ಐಶ್ವರ್ಯದ ವರ್ಣನೆ ಮಾಡುವವರನ್ನು, ನನ್ನನ್ನು ಸ್ತುತಿಸುವವರನ್ನು, ಮತ್ತು ನನ್ನ ಮುಂದೆ ನರ್ತನಾದಿ ಮನೋರಂಜನೆಯಿಂದ ಸಂತೋಷಪಡಿಸುವವರನ್ನು ಅವರು ಕೇಳಿದ ವಸ್ತುಗಳನ್ನು ನಾನು ಕೊಡುವೆ ।೩೬೧॥

ಮಾದಕ (ಮಾಂಸಾದಿ) ಅನ್ನವನ್ನು ಭಕ್ಷಿಸಿ, ಮದ್ಯ (ಸೆರೆ) ವಗೈರೆ ಕುಡಿದು, ಸ್ತ್ರೀಯರಿಗೆ ಆಲಿಂಗಿಸುವುದರಲ್ಲಿ ಈ ತ್ರಿಭುವನದಲ್ಲಿ ತಲ್ಲೀನನಾಗುವೆನು ।೩೬೨॥

ಹೀಗೆ ಉಳಿದದ್ದು ಏನೇನೆಂದು ಹೇಳಲಿ? ಯಾರಿಗೆ ಅಸುರೀ ಪ್ರಕೃತಿಯ ಹುಚ್ಚು ಹಿಡಿದಿದೆಯೋ, ಅವರು ಈ ಪ್ರಕಾರದ ಆಕಾಶ ಹೂವುಗಳ ಅಪರಿಮಿತ ಇಚ್ಛೆಯಿಂದ ಮೂಸಿ ನೋಡುವರು! ।೩೬೩॥

ಶ್ಲೋಕಾರ್ಥ :- ಮನಸ್ಸು ಕೆಡಿಸುವ ಲೆಕ್ಕವಿಲ್ಲದಷ್ಟು ಕೆಟ್ಟ ಯೋಚನೆಗಳುಳ್ಳವರಾಗಿ, ಮೋಹವೆಂಬ ಬಲೆಯಲ್ಲಿ ಸುತ್ತುವರಿಯಲ್ಪಟ್ಟು, ವಿಷಯ ಭೋಗಗಳಲ್ಲಿ ಮಿತಿಮೀರಿದ ಆಸಕ್ತಿಯುಳ್ಳವರಾಗಿ, ಅಪವಿತ್ರವಾದ ದುಃಖದ ಹಾಳುಗುಂಡಿಯಲ್ಲಿ ಬೀಳುತ್ತಾರೆ ।೧೬॥

ಸನ್ನಿಪಾತ ಜ್ವರದಿಂದ ಬಳಲುವ ರೋಗಿಯು ಮನ ಬಂದಂತೆ ಬಡಬಡಿಸುವನು. ಅದರಂತೆ ಅಸುರೀ ಸಂಪತ್ತಿನಿಂದ ಹುಚ್ಚರಾದ ಜನರು ಮನ ಬಂದಂತೆ ಕಲ್ಪನೆಗಳನ್ನು ಬೊಗಳುವರು ।೩೬೪॥

ಅಜ್ಞಾನರೂಪ ಧೂಳು, ಆಶಾರೂಪ ಬಿರುಗಾಳಿಗೆ ಸಿಕ್ಕು ಮನೋರಥರೂಪ ಆಕಾಶದಲ್ಲಿ ಗರಗರನೇ ತಿರುಗುತ್ತಿರುವುದು ।೩೬೫॥

ಆಷಾಢಮಾಸದಲ್ಲಿ ಒಂದರಮೇಲೊಂದು ಅನೇಕ ಮೋಡಗಳು ಬರುತ್ತವೆ. ಅಥವಾ ಸಮುದ್ರದಲ್ಲಿ ತೆರೆಗಳ ಮೇಲೆ ತೆರೆಗಳು ಬರುತ್ತಿರುತ್ತವೆ. ಅದರಂತೆ ಇವರು ಅಖಂಡವಾಗಿ ಕಾಮದ ಇಚ್ಛೆ ಮಾಡುವರು ।೩೬೬॥

ಆಗ ಮನೋರೂಪ ಬಳ್ಳಿಯು ಮನದಲ್ಲಿ ಪಸರಿಸಿಕೊಂಡಾಗ, ಮುಳ್ಳಿನ ಮೇಲಿನಿಂದ ಕಮಲದ ಹೂವನ್ನು ಎಳೆದರೆ ಅದು ಹರೆದು ಹೋಗುವಂತೆ ।೩೬೭॥

ಅಥವಾ ಪಾರ್ಥಾ, ಕಲ್ಲಿನ ಮೇಲೆ ಮಣ್ಣಿನ ಹಂಡೆಯನ್ನು ಅಪ್ಪಳಿಸಿದಾಗ ಅದು ಹೇಗೆ ಒಡೆಯುವುದೋ, ಅದರಂತೆ ಇವರ ಮನೋರಥಗಳು ಚೂರು ಚೂರಾಗುವುವು ।೩೬೮॥

ರಾತ್ರಿಯು ಬೆಳೆದಂತೆಲ್ಲ ಕತ್ತಲೆಯು ಹೇಗೆ ಬೆಳೆಯುವುದೋ, ಅದರಂತೆ ಇವರ ಅಂತಃಕರಣದಲ್ಲಿ ಮೋಹವು ಬೆಳೆಯುವುದು ।೩೬೯॥

ಮತ್ತು ಮೋಹವು ಬೆಳೆದಂತೆಲ್ಲ ವಿಷಯ ವಾಸನೆಗಳು ಬೆಳೆಯುವುವು. ವಿಷಯಗಳು ಮಾತ್ರ, ಪಾತಕಗಳಿಗೆ ಕಾರಣೀಭೂತವಾಗಿರುವುವು ।೩೭೦॥

ಪಾಪಗಳನ್ನು ಕಟ್ಟಿಕೊಂಡೇ ಯಾರು ಅವುಗಳನ್ನು ಬೆಳೆಸುತ್ತ ಹೋಗುವರೋ, ಅವರು ಜೀವಂತದಲ್ಲಿಯೇ ನರಕ ಯಾತನೆಗಳನ್ನು ಭೋಗಿಸಬೇಕಾಗುವುದು ।೩೭೧॥

ಆದ್ದರಿಂದ ಬುದ್ಧಿವಂತನೇ, ಯಾರು ಕೆಟ್ಟ ಭಾವನೆಗಳನ್ನು ಮನದಲ್ಲಿ ತರುವರೋ, ಆ ಅಸುರ ವೃತ್ತಿಯವರು ಅಲ್ಲಿ ಬಂದು ವಸತಿ ಮಾಡುವರು ।೩೭೨॥

ಜೇಥ ಅಸಿಪತ್ರತರುವರ । ಖದಿರಾಂಗಾರಾಚೇ ಡೋಂಗರ । ತಾತಲಾ ತೇಲೀ ಸಾಗರ । ಉತತಾತೀ ।೩೭೩॥ ಜೇಥ ಯಾತನಾಂಚೀ ಶ್ರೇಣೀ । ಹೇ ನಿತ್ಯ ನವೀ ಯಮಜಾಚಣೀ । ಪಡತೀ ತಿಯೇ ದಾರುಣೀ । ನರಕಲೋಕೀ ।೩೭೪॥ ಐಸೇ ನರಕಾಚಿಯೇ ಶೇಲೇ । ಭಾಗೀ ಜೇ ಜೇ ಜನ್ಮಲೇ । ತೇಹೀ ದೇಖೋ ಭುಲಲೇ । ಯಜಿತೀ ಯಾಗೀ ।೩೭೫॥ ಯೇರ್ಥ್ವೀ ಯಾಗಾದಿಕ ಕ್ರಿಯಾ । ಆಹಾಣತೇಚಿ ಧನಂಜಯಾ । ಪರೀ ವಿಫಳತೀ ಆಚರೋನಿಯಾ । ನಾಟಕೀ ಜೈಸೀ ।೩೭೬॥ ವಲ್ಲಭಾಚಿಯಾ ಉಜರಿಯಾ । ಆಪಣಯಾಪ್ರತಿ ಕುಸ್ತ್ರಿಯಾ । ಜೋಡೋನಿ ತೋಷಿತೀ ಜೈಸಿಯಾ । ಅಹೇವಪಣೇ ।೩೭೭॥

ಆತ್ಮಸಂಭಾವಿತಾಃ ಸ್ತಬ್ಧಾಃ ದನಮಾನಮದಾನ್ವಿತಾಃ ।
ಯಜಂತೇ ನಾಮಯಜ್ಞೈಸ್ತೇ ದಂಭೇನಾವಿಧಿಪೂರ್ವಕಮ್ ।೧೭॥

ತೈಸೇ ಆಪಣಯಾ ಆಪಣ । ಮಾನಿತಾ ಮಹಂತಪಣ । ಫುಗತೀ ಅಸಾಧಾರಣ । ಗರ್ವೇ ತೇಣೇ ।೩೭೮॥ ಮಗ ಲವೋ ನೇಣತೀ ಕೈಸೇ । ಆಟಿವಾ ಲೋಹಾಚೇ ಖಾಂಬ ಜೈಸೇ । ಕಾ ಉಧವಲೇ ಆಕಾಶೇ । ಶಿಳಾರಾಶೀ ।೩೭೯॥ ತೈಸೇ ಆಪುಲಿಯೇ ಬರವೇ । ಆಪಣಚಿ ರಿಝುತಾ ಜೀವೇ । ತೃಣಾಹೀಹೂನಿ ಆಘವೇ । ಮಾನಿತೀ ನೀಚ ।೩೮೦॥ ವರೀ ಧನಾಚಿಯಾ ಮದಿರಾ । ಮಾಜೂನಿ ಧನುರ್ಧರಾ । ಕೃತ್ಯಾಕೃತ್ಯವಿಚಾರಾ । ಸವತೇ ಕೇಲೇ ।೩೮೧॥ ಜಯಾ ಆಂಗೀ ಆಯತೀ ಐಸಿ । ತೇಥ ಯಜ್ಞಾಚೀ ಗೋಠೀ ಕಾಯಸಿ । ತರೀ ಕಾಯ ಕಾಯ ಪಿಸಿ । ನ ಕರಿತೀ ಗಾ? ।೩೮೨॥ ಮ್ಹಣೌನಿ ಕೋಣೇ ಏಕೇ ವೇಳೇ । ಮೌಢ್ಯಮದ್ಯಾಚೇನಿ ಬಳೇ । ಯಾಗಾಚೇಂಹೀ ಟವಾಳೇ । ಆದರಿತೀ ।೩೮೩॥ ನಾ ಕುಂಡ ಮಂಡಪ ವೇದೀ । ನಾ ಉಚಿತ ಸಾಧನಸಮೃದ್ಧೀ । ಆಣಿ ತಯಾಂಸೀ ತಂವ ವಿಧೀ । ದ್ವಂದ್ವಚಿ ಸದಾ ।೩೮೪॥ ದೇವಾ ಬ್ರಾಹ್ಮಣಾಂಚೇನಿ ನಾಂವೇ । ಆಡವಾರೇನಹಿ ನೋಹಾವೇ । ಐಸೇ ಆಥೀ ತೇಥ ಯಾವೇ । ಲಾಗೇ ಕವಣಾ? ।೩೮೫॥ ಪೈ ವಾಸರುವಾಚಾ ಭೋಕಸಾ । ಗಾಈ ಪುಢೇ ಠೇವೂನಿ ಜೈಸಾ । ಉಗಾಣಾ ಘೇತೀ ಕ್ಷೀರರಸಾ । ಬುದ್ಧಿವಂತ ।೩೮೬॥ ತೈಸೇ ಯಾಗಾಚೇನಿ ನಾಂವೇ । ಜಗ ವಾಊನಿ ಹಾಂವೇ । ನಾಗವಿತೀ ಆಘವೇ । ಅಹೇರಾವಾರೀ ।೩೮೭॥ ಐಶಾ ಕಾಂಹೀ ಆಪುಲಿಯಾ । ಹೋಮಿತೀ ಜೇ ಉಜರಿಯಾ । ತೇಣೇ ಕಾಮಿತೀ ಪ್ರಾಣಿಯಾ । ಸರ್ವನಾಶು ।೩೮೮॥

ಅದು ಹೇಗೇಂದರೆ, ಎಲ್ಲಿ ಖಡ್ಗ ಧಾರೆಯಂತೆ ತೀಕ್ಷ್ಣವಾದ ಎಲೆಗಳುಳ್ಳ ಗಿಡಗಳು, ಬೆಂಕಿಯ ಕೆಂಡಗಳ ಪರ್ವತಗಳು, ಮತ್ತು ಸಮುದ್ರದಂತೆ ಇರುವ ಕಾದ ಎಣ್ಣೆಯು ।೩೭೩॥

ಮತ್ತು ಯಾತನೆಗಳು ಸಾಲುಸಾಲಾಗಿ ಯಮನಿಂದ ನಿತ್ಯ ಘೋರ ಶಿಕ್ಷೆ ಇರುವುದು. ಇಂತಹ ಘೋರವಾದ ನರಕಗಳಲ್ಲಿ ಇವರು ಬೀಳುವರು ।೩೭೪॥

ಇಂಥ ನರಕದ ಕೆಟ್ಟ ಭಾಗದಲ್ಲಿ ಹುಟ್ಟುವವರ ವಿಚಾರ ಮಾಡಿ ನೋಡಿದಾಗ ಅವರು ಸಹ ಯಜ್ಞಾದಿಕ ಕರ್ಮಗಳನ್ನು ಮಾಡುವುದರಲ್ಲಿ ನಿಮಗ್ನರಾಗಿರುವರು ।೩೭೫॥

ಅರ್ಜುನಾ, ಇವರ ಯಜ್ಞಾದಿಕ ಕ್ರಿಯೆಗಳು ಪೊಳ್ಳಾಗಿರುವುವು ಮತ್ತು ಇವರ ಆಚರಣೆಗಳು ನಾಟಕ ಜನರಂತೆ ಇರುವುದರಿಂದ ನಿಷ್ಫಲವಾಗುವುವು ।೩೭೬॥

ವೇಶ್ಯೆಯರು ತಮ್ಮ ಯಜಮಾನರ ಆಶ್ರಯದ ಮೇಲೆ ತಾವು ಸೌಭಾಗ್ಯವತಿಯರೆಂದು ತಿಳಿದು ಸಮಾಧಾನ ಪಡುವರು. ಅದರಂತೆಯೇ ಇವರದಾಗಿದೆ ।೩೭೭॥

**ಶ್ಲೋಕಾರ್ಥ :-** ತಮ್ಮನ್ನು ತಾವೇ ಹೊಗಳಿಕೊಳ್ಳುವವರಾದ, ಮೂರ್ಖರಾದ, ಧನ, ಮಾನ, ಮದಗಳಿಂದ ಕೂಡಿದ ಅವರು ನಿಯಮಗಳನ್ನು ಗಮನಿಸದೆ ಇತರರಿಗೆ ತೋರಿಸಿಕೊಳ್ಳುವುದಕ್ಕಾಗಿ ಮಾತ್ರ ದೀಕ್ಷಿತರೆಂಬ ಹೆಸರನ್ನು ತಂದುಕೊಡುವ ಯಜ್ಞಗಳನ್ನು ನಡೆಸುವರು ।೧೭॥

ಅದರಂತೆ ನಾನು ಎಲ್ಲದರಲ್ಲಿಯೂ ಶ್ರೇಷ್ಠನಾಗಿರುವೆನು ಎಂದು ತನ್ನಷ್ಟಕ್ಕೆ ತಾನೇ ತಿಳಿದುಕೊಂಡು ಅವರ ಅಂಗದಲ್ಲಿ ಗರ್ವದ ಅಭಿಮಾನ ತುಂಬಿರುವುದು ।೩೭೮॥

ಕಬ್ಬಿಣದ ಕಂಭವು ಬಗ್ಗದಂತೆ ಇವರು, ಬಾಗಿ ನಡೆಯುವುದಿಲ್ಲ. ಅಥವಾ ಆಕಾಶದಲ್ಲಿ ಎತ್ತರವಾಗಿ ಬೆಳೆದ ಪರ್ವತದಂತೆ ಯಾವಾಗಲೂ ಸೆಟೆದಿರುವರು ।೩೭೯॥

ಅದರಂತೆಯೇ, ತಾವೇ ತಮ್ಮ ಐಶ್ವರ್ಯದಿಂದ ಮನದಲ್ಲಿ ಸಂತೋಷಪಡುತ್ತ ಇತರರಿಗೆ ತೃಣಸಮಾನವಾಗಿ ಕಾಣುವರು ।೩೮೦॥

ಅರ್ಜುನಾ, ಸಂಪತ್ತಿನ ಮದದಿಂದ ಉನ್ಮತ್ತರಾಗಿ ಯೋಗ್ಯ, ಅಯೋಗ್ಯ ವಿಚಾರಗಳನ್ನು ಬಿಟ್ಟು ನಡೆಯುವರು ।೩೮೧॥

ಈ ಬಗೆಯ ಸ್ಥಿತಿಯನ್ನು ಹೊಂದಿದವರು ಯಜ್ಞಯಾಗಾದಿಗಳ ಬಗ್ಗೆ ಏನು ಹೇಳಬೇಕು? ಹುಚ್ಚು ಹಿಡಿದವರು ಏನೇನು ಮಾಡಲಿಕ್ಕಿಲ್ಲ? ನೀನೇ ಹೇಳು ।೩೮೨॥

ಆದ್ದರಿಂದ ಒಂದು ಪ್ರಸಂಗದಲ್ಲಿ ಮೌಢ್ಯರೂಪ ಮದ್ಯದ ಬಲದಿಂದ ಆಭಾಸ ಮಾತ್ರ ಯಜ್ಞವನ್ನು ಸಹ ಮಾಡಲು ಸಿದ್ಧರಾಗುವರು. ಆ ಯಜ್ಞದ ಪ್ರಕಾರವನ್ನು ಕೇಳಿದರೆ ।೩೮೩॥

ಇವರಿಗೆ ಕುಂಡ, ಮಂಡಪ, ವೇದಿ ಅಥವಾ ಇದಕ್ಕೆ ಬೇಕಾಗುವ ಎಲ್ಲ ವಸ್ತುಗಳ ಅವಶ್ಯಕತೆ ಇರುವುದಿಲ್ಲ ಮತ್ತು ವಿಧಿಯುಕ್ತ ಕಾರ್ಯಗಳು ಸದಾ ಇವರ ವೈರಿಗಳಾಗಿರುವುವು ।೩೮೪॥

ವೇದ ಬ್ರಾಹ್ಮಣರ ಕೇವಲ ಹೆಸರಿನ ಗಾಳಿಯೂ ಸಹ ಇವರ ಕಿವಿಗೆ ಹಿಡಿಸುವುದಿಲ್ಲ. ಹೀಗೆ ಇವರ ಸ್ಥಿತಿ ಇರುವಾಗ, ಅಲ್ಲಿ ವೇದ ಬ್ರಾಹ್ಮಣರು ಏಕೆ ಬಂದಾರು? ।೩೮೫॥

ಆದರೆ ಬುದ್ಧಿವಂತರು ಸತ್ತ ಕರುವಿನ ಹೊಟ್ಟೆಯಲ್ಲಿ ಹುಲ್ಲು ಇತ್ಯಾದಿ ತುಂಬಿ ಅದನ್ನು ಆಕಳ ಮುಂದೆ ನಿಲ್ಲಿಸಿ ಅದರ ಹಾಲನ್ನು ಹಿಂಡಿಕೊಳ್ಳುವರು ।೩೮೬॥

ಅದರಂತೆ ಯಜ್ಞದ ನೆಪಮಾಡಿ ಎಲ್ಲ ಜನರನ್ನು ಆಮಂತ್ರಣ ನೀಡಿ ತನಗೆ ಸಾಕಷ್ಟು ಸಿಗಬೇಕೆಂಬ ಆಶೆಯಿಂದ, ಪ್ರತಿಯಾಗಿ ಅವರಿಂದ ಮುಯ್ಯಗಳನ್ನು ಪಡೆದು ಅವರಿಗೆ ವಂಚಿಸುವರು ।೩೮೭॥

ಈ ಪ್ರಕಾರವಾಗಿ ಯಜ್ಞದ ಡಾಂಭಿಕತನವನ್ನು ಪ್ರದರ್ಶಿಸಿ ಇವರು ಪ್ರಾಣಿಗಳ ನಾಶದ ಇಚ್ಛೆಯನ್ನು ಮಾಡುವರು ।೩೮೮॥

ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ ।
ಮಾಮಾತ್ಮ ಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥೧೮॥

ಮಗ ಪುಢಾ ಭೇರೀ ನಿಶಾಣ । ಲಾಊನೀ ತೇ ದೀಕ್ಷಿತಪಣ । ಜಗಿ ಪ್ರೋಕಾರಿತೀ ಆಣ । ವಾವೋ ವಾವೋ ॥೩೮೯॥ ತೇವ್ಹಾ ಮಹತ್ತ್ವೇ ತೇಣೇ ಅಧಮಾ । ಗರ್ವಾ ಚಢೇ ಮಹಿಮಾ । ಜೈಸೇ ಲೇವೇ ದಿಧಲೇ ತಮಾ । ಕಾಜಳಾಚೇ ॥೩೯೦॥ ತೈಸೇ ಮೌಢ್ಯ ಘಣಾವೇ । ಔದ್ಧತ್ಯ ಉಂಚಾವೇ । ಅಹಂಕಾರು ದುಣಾವೇ । ಅವಿವೇಕುಹೀ ॥೩೯೧॥ ಮಗ ದುಜಯಾಚೇ ಭಾಷ । ನುರವಾವಯಾ ನಿಃಶೇಷ । ಬಳಿಯೇಪಣಾ ಅಧಿಕ । ಹೋಯ ಬಳ ॥೩೯೨॥ ಐಸಾ ಅಹಂಕಾರ ಬಳಾ । ಜಾಲಿಯಾ ಏಕವಳಾ । ದರ್ಪಸಾಗರು ಮರ್ಯಾದವೇಳಾ । ಸಾಂಡೂನಿ ಉತೇ ॥೩೯೩॥ ಮಗ ವ್ರೋಸಂಡಿಲೇನಿ ದರ್ಪೇ । ಕಾಮಾಹೀ ಪಿತ್ತ ಕುರುಪೇ । ತಯಾ ಧಗೀ ಸ್ವೆಂಫು ಪಳಿಪೇ । ಕ್ರೋಧಾಗ್ನಿ ತೋ ॥೩೯೪॥ ತೇಥ ಉನ್ಹಾಳಾ ಆಗೀ ಖರಮರಾ । ತೇಲಾ ತುಪಾಚಿಯಾ ಕೋಠಾರಾ । ಲಾಗಲಾ ಆಣಿ ವಾರಾ । ಸುಟಲಾ ಜೈಸಾ ॥೩೯೫॥ ತೈಸಾ ಅಹಂಕಾರು ಬಳಾ ಆಲಾ । ದರ್ಪು ಕಾಮಕ್ರೋಧೀ ಗೂಢಲಾ । ಯಾ ದೋಹೀಂಚಾ ಮೇಳು ಜಾಲಾ । ಜಯಾಂಚ್ಯಾ ಠಾಯೀ ॥೩೯೬॥ ತೇ ಆಪುಲಿಯಾ ಸವೇಶಾ । ಮಗ ಕೋಣೇ ಕೋಣೇ ಹಿಂಸಾ । ಯಾ ಪ್ರಾಣಿಯಾತೇ ವೀರೇಶಾ । ನ ಸಾಧಿತೀ ಗಾ? ॥೩೯೭॥ ಪಹಿಲೇ ತಂವ ಧನುರ್ಧರಾ । ಆಪುಲಿಯಾ ಮಾಂಸ ರುಧಿರಾ । ವೇಂಚು ಕರಿತೀ ಅಭಿಚಾರಾ । ಲಾಗೋನಿಯಾ ॥೩೯೮॥ ತೇಥ ಜಾಳಿತೀ ಜಿಯೇ ದೇಹೇ । ಯಾಮಾಜೀ ಜೋ ಮೀ ಆಹೇ । ತಯಾ ಆತ್ಮಯಾ ಮಜ ಘಾಯೇ । ವಾಜತೀ ತೇ ॥೩೯೯॥ ಆಣಿ ಅಭಿಚಾರಕೀ ತಿಹೀ । ಉಪದ್ರವಿಜೇ ಜೇತುಲೇ ಕಾಂಹೀ । ತೇಥ ಚೈತನ್ಯ ಮೀ ಪಾಹೀ । ಸೀಣು ಪಾವೇ ॥೪೦೦॥ ಆಣಿ ಅಭಿಚಾರಾವೇಗಳೇ । ವಿಪಾಯೇ ಜೇ ಅವಗಳೇ । ತಯಾ ಟಾಕಿತೀ ಇಟಾಳೇ । ಪೈಶೂನ್ಯಾಚೇ ॥೪೦೧॥ ಸತೀ ಆಣಿ ಸತ್ಪುರುಖ । ದಾನಶೀಳ ಯಾಜ್ಞಿಕ । ತಪಸ್ವೀ ಅಲೌಕಿಕ । ಸಂನ್ಯಾಸೀ ಜೇ ॥೪೦೨॥ ಕಾ ಭಕ್ತ ಹನ ಮಹಾತ್ಮೇ । ಇಯೇ ಮಾಜೀ ನಿಜಾಚೇ ಧಾಮೇ । ನಿರ್ವಾಳಲೀ ಹೋಮಧರ್ಮೇ । ಶ್ರೌತಾದಿಕೇ ॥೪೦೩॥ ತಯಾ ದ್ವೇಷಾಚೇನಿ ಕಾಳಕೂಟೇ । ಬಾಸಟೋನಿ ತಿಖಟೇ । ಕುಬೋಲಾಂಚೇ ಸದಟೇ । ಸೂತಿ ಕಾಂಡೇ ॥೪೦೪॥

ಶ್ಲೋಕಾರ್ಥ :- ಅಹಂಕಾರ, ಪಶುಬಲ, ದರ್ಪ, ಕಾಮ, ಕ್ರೋಧವುಳ್ಳವರಾಗಿ ಅಸೂಯಪರರಾಗಿ, ತಮ್ಮಲ್ಲಿಯೂ, ಇತರರಲ್ಲಿಯೂ ಇರುವ ನನ್ನನ್ನು ತಿರಸ್ಕರಿಸುತ್ತಾರೆ ।।೧೮।।

ತದನಂತರ ತಮ್ಮ ಮುಂದೆ ನಗಾರಿ, ನೌಬತ್ತು, ಧ್ವಜ ಇತ್ಯಾದಿಗಳನ್ನು ಹಿಡಿಸಿಕೊಂಡು, ಯಜ್ಞ ದೀಕ್ಷಿತತೆಯ ಬಗ್ಗೆ ಜನರಲ್ಲಿ ವ್ಯರ್ಥವಾದ ಪ್ರಸಿದ್ಧಿಯನ್ನು ಮಾಡುವರು ।।೮೯।।

ಆಗ ಆ ಅಧಮರಿಗೆ ಇಂಥ ದೀಕ್ಷಿತತನದ ಮಹತ್ತ್ವದಿಂದ ಅಧಿಕವೇ ಗರ್ವವು ಬೆಳೆಯುವುದು. ಯಾವ ಪ್ರಕಾರವಾಗಿ ಕತ್ತಲಿಗೆ ಕಾಡಿಗೆಯ ಪುಟಕೊಟ್ಟರೆ ಅದು ಇನ್ನೂ ಹೇಗೆ ಕಪ್ಪಾಗುವುದೋ ।।೯೦।।

ಅದರಂತೆ ಇವರ ಮೂರ್ಖತನವು ಪುಷ್ಟಿಗೊಂಡು ಉದ್ಧಟತನವು ಬೆಳೆಯುವುದು ಮತ್ತು ಅಹಂಕಾರದಿಂದ ಅಜ್ಞಾನವೂ ಬೆಳೆಯುವುದು ।।೯೧।।

ತದನಂತರ ತನಗಿಂತಲೂ ಜಗತ್ತಿನಲ್ಲಿ ಬಲಾಢ್ಯರು ಇನ್ನಾರೂ ಇಲ್ಲವೆಂದು ಹೀಗೆ ಅವರಿಗೆ ಅನಿಸಿಕೆಯಾಗುವುದು ।।೯೨।।

ಈ ಪ್ರಕಾರವಾಗಿ ಒಮ್ಮೆ ಅಹಂಕಾರವು ಪ್ರಬಲವಾಯಿತೆಂದರೆ, ದರ್ಪರೂಪ ಸಾಗರವು ತನ್ನ ಮರ್ಯಾದೆಯನ್ನು ಬಿಟ್ಟು ಹೊರಹೊಮ್ಮುವುದು ।।೯೩।।

ಆಗ ಈ ಪ್ರಕಾರವಾಗಿ ದರ್ಪವು ಬೆಳೆದಾಗ ಕಾಮದ ಪಿತ್ತವು ಪ್ರಕೋಪಗೊಳ್ಳುವುದು ಮತ್ತು ಇದರ ಕಾವಿನಿಂದ ಕ್ರೋಧಾಗ್ನಿಯು ಹೆಚ್ಚಾಗಿಯೇ ಪ್ರಜ್ವಲಿಸುವುದು ।।೯೪।।

ಆಗ ಬೇಸಿಗೆಯ ಕಾಲದ ಬಿಸಿಲಿನ ಪ್ರಖರದಲ್ಲಿ ಎಣ್ಣೆ - ತುಪ್ಪಗಳ ಗುದಾಮಕ್ಕೆ ಬೆಂಕಿ ಹತ್ತಿ, ಆಗ ಪುನಃ ಬಿರುಸಾದ ಗಾಳಿ ಬಿಟ್ಟತೆಂದರೆ ।।೯೫।।

ಅದು ಹೇಗಾಗುವುದೋ, ಅದರಂತೆ ಅಹಂಕಾರವು ಪ್ರಬಲಗೊಂಡಾಗ ಮತ್ತು ದರ್ಪವು ಕಾಮ ಕ್ರೋಧಗಳಲ್ಲಿ ಕೂಡಿಕೊಂಡಾಗ ಈ ಎರಡರ ಐಕ್ಯವು ಅವರಲ್ಲಿಯೇ ಆಗುವುದು ।।೯೬।।

ಅರ್ಜುನಾ, ಆಗ ಆತನು ಯಾವ ಯಾವ ಪ್ರಾಣಿಗಳನ್ನು ಮನಬಂದಂತೆ ಕೊಲ್ಲುತ್ತ ಹಿಂಸೆಯನ್ನು ಮಾಡಲಿಕ್ಕಿಲ್ಲ? ।।೯೭।।

ಹೇ ಧನುರ್ಧರನೇ, ಪ್ರಥಮವಾಗಿ ಈ ದೀಕ್ಷಿತರು ಅಭಿಚಾರ ಅಂದರೆ ಜಾರಣ ಮಾರಣಕ್ಕಾಗಿ ತಮ್ಮ ತಮ್ಮ ರಕ್ತ ಮಾಂಸಗಳನ್ನು ವ್ಯಯ ಮಾಡುವರು ।।೯೮।।

ಹೀಗೆ, ಅವರ ಶರೀರದಲ್ಲಿ ಆತ್ಮರೂಪವಾಗಿ ನಾನಿರುವಾಗ ತಮ್ಮ ದೇಹಕ್ಕೆ ದುಃಖಕೊಟ್ಟು ನನ್ನನ್ನು ವ್ಯಥೆಗೊಳಿಸುವರು ।।೯೯।।

ಮತ್ತು ಜಾರಣ ಮಾರಣಾದಿ ಕ್ರಿಯೆಗಳಿಂದ ಯಾರ ಯಾರಿಗೆ ಪೀಡಿಸುವರೋ, ಅವರವರವ ಜೀವ ಚೈತನ್ಯಕ್ಕೆ ತ್ರಾಸಾಗುವುದು ।।೪೦೦।।

ಮತ್ತು ಆಕಸ್ಮಿಕವಾಗಿ ಅವರ ಜಾರಣಮಾರಣ ಕ್ರಿಯೆಗಳಲ್ಲಿ ಯಾರಾದರೂ ಅದರಿಂದ ಪಾರಾದರೆ ಪುನಃ ಅವರಿಗೆ ನಿಂದಿಸಿ ಅವರ ಮನಸ್ಸಿಗೆ ನೋವು ಮಾಡುವರು ।।೪೦೧।।

ಸತಿ, ಸತ್ಪುರುಷ, ದಾನಶೀಲ, ಯಾಜ್ಞಿಕ, ಅಲೌಕಿಕ ತಪಶ್ಚರ್ಯಗಳನ್ನು ಮಾಡುವವರು ಮತ್ತು ಸಂನ್ಯಾಸಿ ।।೪೦೨।।

ಅಥವಾ ಭಕ್ತರು, ಮಹಾತ್ಮ ಪುರುಷರು, ಹಾಗೂ ಶ್ರೌತಾದಿ ಹೋಮಧರ್ಮಗಳಿಂದ ಪವಿತ್ರಗೊಂಡ ಮನಗಳು, ಇವುಗಳನ್ನು ನನ್ನ ಪ್ರೀತಿಯ ವಸತಿಯ ಸ್ಥಾನಗಳಾಗಿವೆ ।।೪೦೩।।

ಇವರನ್ನು ದ್ವೇಷರೂಪ ಕಾಳಕೂಟ ವಿಷದಿಂದ ತೀಕ್ಷ್ಣ ಮಾಡಿದ ಶಬ್ದರೂಪ ಬಲವಾದ ಬಾಣಗಳಿಂದ ಹೊಡೆಯುವರು ।।೪೦೪।।

ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।
ಕ್ಷಿಪಾಮ್ಯಜಸ್ರಮಶುಭಾನ್ ಆಸುರೀಷ್ವೇವ ಯೋನಿಷು ॥೧೯॥

ಐಸೇ ಆಘವಾಚಿ ಪರೀ । ಪ್ರವರ್ತಲೇ ಮಾಝ್ಯಾ ವೈರೀ । ತಯಾ ಪಾಪಿಯಾ ಜೇ ಮೀ ಕರೀ । ತೇ ಆಇಕ ಪಾ ॥೪೦೫॥ ತರೀ ಮನುಷ್ಯದೇಹಾಚಾ ತಾಗಾ । ಘೇಊನಿ ರುಸತೀ ಜೇ ಜಗಾ । ತೇ ಪದವೀ ಹಿರೋನಿ ಪೈ ಗಾ । ಐಸೇ ಠೇವೀ ॥೪೦೬॥ ಜೇ ಕ್ಲೇಶಗಾಂವೀಂಚಾ ಉಕರಡಾ । ಭವಪುರೀಂಚಾ ಪಾನವಡಾ । ತೇ ತಮೋಯೋನಿ ತಯಾ ಮೂಢಾ । ವೃತ್ತೀಚೇ ದೇ ॥೪೦೭॥ ಮಗ ಆಹಾರಾಚೇನಿ ನಾಂವೇ । ತೃಣಹೀ ಜೇಥ ನುಗವೇ । ತೇ ವ್ಯಾಘ್ರವೃಶ್ಚಿಕ ಆಡವೇ । ತೈಸಿಯೇ ಕರೀ ॥೪೦೮॥ ತೇಥ ಕ್ಷುಧಾದುಃಖೇ ಬಹುತೇ । ತೋಡೂನಿ ಖಾತೀ ಆಪಣ ಯಾತೇ । ಮರಮರೋ ಮಾಗುತೇ । ಹೋತಚಿ ಅಸತೀ ॥೪೦೯॥ ಕಾ ಆಪುಲಾ ಗರಳಜಾಳೀ । ಜಾಳಿತೀ ಆಂಗಾಚೀ ಪೇಂದಳೀ । ತೇ ಸರ್ಪಚಿ ಕರೀ ಬಿಳೀ । ನಿರುಂಧಲಾ ॥೪೧೦॥ ಪರಿ ಘೇತಲಾ ಶ್ವಾಸು ಘಾಘೇ । ಯೇತುಲೇ ನಹೀ ಮಾಪೇ । ವಿಸಾಂವಾ ತಯಾ ನಾಟೋಪೇ । ದುರ್ಜನಾಂಸೀ ॥೪೧೧॥ ಐಸೇನಿ ಕಲ್ಪಾಂಚಿಯಾ ಕೋಡೀ । ಗಣಿತಾಂಹೀ ಸಂಖ್ಯಾ ಥೋಡೀ । ತೇತುಲಾ ವೇಳು ನ ಕಾಢೀ । ಕ್ಲೇಶೌನಿ ತಯಾ ॥೪೧೨॥ ತರೀ ತಯಾಂಸೀ ಜೇಥ ಜಾಣೇ । ತೇಥೀಂಚೇ ಹೇ ಪಹಿಲೇ ಪೇಣೇ । ತೇ ಪಾವೋನಿ ಯೇರೇ ದಾರುಣೇ । ನ ಹೋತೀ ದುಃಖೇ ॥೪೧೩॥

ಆಸುರೀಂ ಯೋನಿಮಾಪನ್ನಾಃ ಮೂಢಾ ಜನ್ಮನಿ ಜನ್ಮನಿ ।
ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್ ॥೨೦॥

ಹಾ ಠಾಯವರೀ । ಸಂಪತ್ತಿ ತೇ ಆಸುರೀ । ಅಧೋಗತಿ ಅವಧಾರೀ । ಜೋಡಿಲೀ ತಿಹೀ ॥೪೧೪॥ ಪಾಠೀ ವ್ಯಾಘ್ರಾದಿ ತಾಮಸಾ । ಯೋನೀ ತೋ ಅಳುಮಾಳು ಐಸಾ । ದೇಹಾಧಾರಾಚಾ ಉಸಾಸಾ । ಆಥೀ ಜೋಹೀ ॥೪೧೫॥ ತೋಹೀ ಮೀ ವ್ಯೋಲ್ಹಾವಾ ಹಿರೇ । ಮಗ ತಮಚಿ ಹೋತೀ ಏಕಸರೇ । ಜೇಥ ಗೇಲೇ ಆಂಧಾರೇ । ಕಾಳವಂಡೈಜೇ ॥೪೧೬॥ ಜಯಾಂಚೇ ಪಾಪಾ ಚಿಳಸೀ । ನರಕ ಘೇತೀ ವಿವಸೀ । ಶೀಣ ಜಾಯ ಮೂರ್ಚ್ಛೆ । ಶಿಣೇ ಜೇಣೇ ॥೪೧೭॥ ಮಳು ಜೇಣೇ ಮೈಳೇ । ತಾಪು ಜೇಣೇ ಪೋಳೇ । ಜಯಾಚೇನಿ ನಾಂವೇ ಸಳೇ । ಮಹಾಭಯ ॥೪೧೮॥

ಶ್ಲೋಕಾರ್ಥ :- ನನ್ನನ್ನು ಕಂಡರೆ ಆಗದ ಕಲ್ಲು ಮನಸ್ಸಿನಿಂದ ಕೆಟ್ಟ ಕೆಲಸವನ್ನು ಮಾಡುವ ಆ ನೀಚರನ್ನು, ನಾನು ಯಾವಾಗಲೂ ಸಂಸಾರದಲ್ಲಿ ಕೆಟ್ಟ ಸ್ವಭಾವದ ಜನ್ಮಕ್ಕೆ ತಳ್ಳುವೆನು ।೧೯॥

ಈ ಪ್ರಕಾರವಾಗಿ ಎಲ್ಲ ದೃಷ್ಟಿಯಿಂದ ನನ್ನಲ್ಲಿ ವೈರವನ್ನು ಮಾಡಲು ಪ್ರವೃತ್ತರಾಗುವರು. ಆ ಪಾಪಿಗಳನ್ನು ಯಾವ ಶಿಕ್ಷೆಯನ್ನು ಕೊಡುವೆ ಎಂಬುದನ್ನು ಕೇಳು ।೪೦೫॥

ಮನುಷ್ಯ ದೇಹವನ್ನು ಧರಿಸಿ ಇವರು ಈ ಜಗತ್ತಿನಲ್ಲಿ ತಮ್ಮ ಕರ್ತವ್ಯವನ್ನು ಮರೆತಿದ್ದಕ್ಕೆ ಮೊದಲು ಅವರ ಮನುಷ್ಯ ದೇಹರೂಪ ಪದವಿಯನ್ನು ಹರಣ ಮಾಡಿ ಅವರನ್ನು ಹೀಗೆ ಇಡುವೆನು ।೪೦೬॥

ಹೇಗೇಂದರೆ, ಅತ್ಯಂತ ಕ್ಲೇಶಕಾರಕವೂ, ಹೊಲಸಿನಿಂದ ಕೂಡಿದ, ಜನನ ಮರಣರೂಪ ಯಾತನೆಯ ಕಾಲುದಾರಿಯೂ ಅಂಧಃಕಾರಮಯವೂ ಆದ ಯೋನಿಗಳಲ್ಲಿ ಹುಟ್ಟಿಸುವೆನು ।೪೦೭॥

ಆಗ ಹಸಿವೆಯಾಯಿತೆಂದರೆ, ಅವರಿಗೆ ಹುಲ್ಲು ಸಹಿತವಾಗಿ ತಿನ್ನಲು ಬಾರದ ಹಾಗೆ ಅಂತಹ ಹುಲಿ, ಚೇಳು ಇತ್ಯಾದಿ ಅಡವಿಯಲ್ಲಿರುವ ಯೋನಿಗಳಲ್ಲಿ ಹಾಕುವೆನು ।೪೦೮॥

ಅಲ್ಲಿ ಅವುಗಳಿಗೆ ಹಸಿವೆಯಿಂದ ಪೀಡಿತರಾದಾಗ ತಮ್ಮ ಅವಯವಗಳನ್ನೇ ತಿಂದು, ಸತ್ತು ಪುನಃ ಅದೇ ಯೋನಿಗಳಲ್ಲಿ ಅನೇಕ ಸಲ ಹುಟ್ಟುವಂತೆ ಮಾಡುವೆನು ।೪೦೯॥

ಅಥವಾ ತನ್ನ ಶರೀರದೊಳಗಿನ ವಿಷದಿಂದ ಸರ್ವಾಂಗಕ್ಕೂ ದಾಹವಾಗುವಂತಹ ಸರ್ಪವನ್ನಾಗಿ ಮಾಡಿ ಹುತ್ತಿನಲ್ಲಿ ಬಂಧಿಸುವೆನು ।೪೧೦॥

ಆದರೆ ಒಳಗೆ ತೆಗೆದುಕೊಂಡ ಉಸಿರು ಹೊರಗೆ ಬರುವಷ್ಟು ವೇಳೆಯನ್ನು ಸಹ ಆ ದುರ್ಜನರಿಗೆ ನಾನು ವಿಶ್ರಾಂತಿಯನ್ನು ಕೊಡುವುದಿಲ್ಲ ।೪೧೧॥

ಈ ಪ್ರಕಾರವಾಗಿ ಲೆಕ್ಕ ಮಾಡಲು ಬಾರದಷ್ಟು ಹೀಗೆ ಅನೇಕ ಕಲ್ಪಗಳವರೆಗೆ ಇಂಥ ಕ್ಲೇಶದಾಯಕ ಯೋನಿಗಳಲ್ಲಿಯೇ ಇಡುವೆನು ।೪೧೨॥

ಇಷ್ಟೇ ಅಲ್ಲ, ಅವರಿಗೆ ಎಲ್ಲಿ ಹೋಗಬೇಕಾಗಿದೆಯೋ, ಆ ಮಾರ್ಗದ ಇದು ಮೊದಲನೆಯ ಮುಕ್ಕಾಮವಾಗಿರುವುದು. ಅಂದಮೇಲೆ ಮುಂದೆ ಅವರಿಗೆ ಇದಕ್ಕಿಂತಲೂ ಭಯಂಕರ ದುಃಖಗಳು ಆಗುವುದಿಲ್ಲವೇ ? ।೪೧೩॥

ಶ್ಲೋಕಾರ್ಥ :- ಅರ್ಜುನಾ! ಕೆಟ್ಟ ಸ್ವಭಾವದವರ ಬಸಿರನ್ನು ಹೊಕ್ಕು ಅವಿವೇಕಿಗಳು ಪ್ರತಿ ಜನ್ಮದಲ್ಲಿಯೂ ನನ್ನನ್ನು ನೆನೆಯದೇ, ಮತ್ತಷ್ಟು ಕೀಳಾದ ಜನ್ಮವನ್ನು ಪಡೆಯುತ್ತಾರೆ ।೨೦॥

ಈ ಪ್ರಕಾರವಾಗಿ ಯಾವ ಅಸುರೀ ಸಂಪತ್ತಿಯ ಮಹಿಮೆಯಾಗಿರುವುದು ಇದರ ಯೋಗದಿಂದ ಅಧೋಗತಿಯೇ ಪ್ರಾಪ್ತವಾಗುವುದು, ಕೇಳು ।೪೧೪॥

ತದನಂತರ ವ್ಯಾಘ್ರಾದಿ ತಾಮಸ ಯೋನಿಗಳಲ್ಲಿ ದೇಹದ ಆಧಾರದಿಂದ ಏನೋ ಸ್ವಲ್ಪ ಸ್ವಚ್ಛತೆ ಸಿಕ್ಕಂತೆ ಕಾಣುವುದು ।೪೧೫॥

ಅದು ಸಹ ಸ್ವಚ್ಛತೆಯನ್ನು ಕಸಿದುಕೊಂಡು ಕತ್ತಲೆಗಿಂತಲೂ ಹೆಚ್ಚು ಕಪ್ಪಾದ ಕೇವಲ ತಮೋ ಯೋನಿಗಳಲ್ಲಿ ನಾನವರಿಗೆ ಹಾಕುವೆನು ।೪೧೬॥

ಆ ತಮಕ್ಕೆ ಪಾಪವೂ ಹೇಸಿಕೊಳ್ಳಬೇಕು ನರಕವೂ ಅದಕ್ಕೆ ಭಯಪಡಬೇಕು. ಅಲ್ಲಿಯ ಶ್ರಮ ಕಂಡು ಶ್ರಮವೂ ಮೂರ್ಛಿತವಾಗಬೇಕು ।೪೧೭॥

ಯಾವುದರಿಂದ ಮಲವೂ ಮಲಿನವಾಗುವುದು, ಪಾಪಕ್ಕೂ ಪಾಪವು ಅಂಟಿಕೊಳ್ಳುವುದು ಮತ್ತು ಇದರ ಹೆಸರೆತ್ತಿದರೆ ಮಹಾಭಯಕ್ಕೂ ಭಯವಾಗುವುದು ।೪೧೮॥

ಪಾಪಾ ಜಯಾಚಾ ಕಂಟಾಳಾ । ಉಪಜೇ ಅಮಂಗಳ ಅಮಂಗಳಾ । ವಿಟಾಳುಹೀ ವಿಟಾ ಳಾ । ಬಿಹೇ ಜಯಾ ॥೪೧೯॥ ಐಸೇ ವಿಶ್ವಾಚೇ ಯಾ ಓಖಟೇಯಾ । ಅಧಮ ಜೇ ಧನಂಜಯಾ । ತೇ ತೇ ಹೋತೀ ಭೋಗೂನಿಯಾ । ತಾಮಸಾ ಯೋನೀ ॥೪೨೦॥ ಅಹಾ ಸಾಂಗತಾ ವಾಚಾ ರಡೇ । ಆಠವಿತಾ ಮನ ಖಿರಡೇ । ಕಟಾರೇ ಮೂರ್ಖೀ ಕೇವಢೇ । ಜೋಡಿಲೇ ನಿರಯ ॥೪೨೧॥ ಕಾಯಿಸಯಾ ತೇ ಆಸುರ । ಸಂಪತ್ತಿ ಪೋಷಿತೀ ವಾಉರ । ಜಿಯಾ ದಿಧಲೇ ಘೋರ । ಪತನ ಐಸೇ ॥೪೨೨॥ ಮ್ಹಣೌನಿ ತುವಾ ಧನುರ್ಧರಾ । ನೋಹಾವೇ ಗಾ ತಿಯಾ ಮೋಹರಾ । ಜೇಉತಾ ವಾಸು ಆಸುರಾ । ಸಂಪತ್ತಿವಂತಾ ॥೪೨೩॥ ಆಣಿ ದಂಭಾದಿ ದೋಷ ಸಾಹೀ । ಹೇ ಸಂಪೂರ್ಣ ಜಯಾಂಚ್ಯಾ ಠಾಯೀ । ತೇ ತ್ಯಜಾವೇ ಹೇ ಕಾಈ । ಮ್ಹಣೋ ಕೀರ? ॥೪೨೪॥

ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।
ಕಾಮಃ ಕ್ರೋಧಸ್ತಥಾ ಲೋಭಃ ತಸ್ಮಾದೇತತ್ತ್ರಯಂ ತ್ಯಜೇತ್ ॥೨೧॥

ಪರೀ ಕಾಮ ಕ್ರೋಧ ಲೋಭ । ಯಾ ತಿಹೀಂಚೇಚಿ ಥೋಂಬ । ಥಾಂವೇ ತೇಥೇ ಅಶುಭ । ಪಿಕಲೇ ಜಾಣ ॥೪೨೫॥ ಸರ್ವ ದುಃಖಾ ಆಪುಲಿಯಾ । ದರ್ಶನಾ ಧನಂಜಯಾ । ಪಾಢಾಲೂ ಹೇ ಭಲತಯಾ । ದಿಧಲೇ ಆಹಾತೀ ॥೪೨೬॥ ಕಾ ಪಾಪಿಯಾ ನರಕಭೋಗೀ । ಸುವಾವಯಾಲಾಗೀ ಜಗೀ । ಪಾತಕಾಂಚೀ ದಾಟುಗೀ । ಸಭಾಚಿ ಹೇ ॥೪೨೭॥ ತೇ ರೌರವ ಗಾ ತಂವಚಿವರೀ । ಆಇಕಿಜತೀ ಪಟಾಂತರೀ । ಜಂವ ಹೇ ತಿನ್ಹೀ ಅಂತರೀ । ಉಠತೀ ನಾ ॥೪೨೮॥ ಅಪಾಯ ತಿಹೀ ಆಸಲಗ । ಯಾತನಾ ಇಹೀ ಸವಂಗ । ಹಾಣೇ ಹಾಣೇ ನೋಹೇ ಹೇ ತಿಘ । ಹೇಚಿ ಹಾಣೇ ॥೪೨೯॥ ಕಾಯ ಬಹು ಬೋಲೋ ಸುಭಟಾ । ಸಾಂಗಿತಲಿಯಾ ನಿಕೃಷ್ಟಾ । ನರಕಾಚಾ ದಾರವಂಟಾ । ತ್ರಿಶಂಕು ಹಾ ॥೪೩೦॥ ಯಾ ಕಾಮ ಕ್ರೋಧಲೋಭಾ । ಮಾಜೀ ಜೀವೇ ಜೋ ಹೋಯ ಉಭಾ । ತೋ ನಿರಯ ಪುರೀಚೀ ಸಭಾ । ಸನ್ಮಾನು ಪಾವೇ ॥೪೩೧॥ ಮ್ಹಣೌನಿ ಪುಢತ ಪುಢತೀ ಕಿರೀಟೀ । ಹೇ ಕಾಮಾದಿ ದೋಷ ತ್ರಿಪುಟೀ । ತ್ಯಜಾವೀಂಚಿ ಗಾ ಓಖಟಿ । ಆಘವಾ ವಿಷಯೀ ॥೪೩೨॥

ಏತೈರ್ವಿಮುಕ್ತಃ ಕೌಂತೇಯ ತಮೋದ್ವಾರೈಸ್ತ್ರಿಭಿರ್ನರಃ ।
ಆಚರತ್ಯಾತ್ಮನಃ ಶ್ರೇಯಃ ತತೋ ಯಾತಿ ಪರಾಂ ಗತಿಮ್ ॥೨೨॥

ಯಾವ ತಮಕ್ಕೆ ಪಾಪಕ್ಕೂ ಬೇಸರವಾಗುವುದು, ಅಮಂಗಳ ವಸ್ತುಗಳಿಗೂ ಇದರ ಸ್ಪರ್ಶದಿಂದ ಅಮಂಗಲ ಭಾಸವಾಗುವುದು ಮತ್ತು ಮೈಲಿಗೆಯೂ ಇದರ ಮೈಲಿಗೆಯ ಭಯಪಡುವುದು ।೫೯।।

ಧನಂಜಯನೇ, ಈ ಪ್ರಕಾರವಾಗಿ ಎಲ್ಲ ಜಗತ್ತಿನಲ್ಲಿಯ ನಿಕೃಷ್ಟ ಅವಸ್ಥೆಯನ್ನು ಅವರು ಭೋಗಿಸುತ್ತ ಈ ಅಧಮರು ತಾಮಸಯೋನಿಗಳಲ್ಲಿ ಜನ್ಮವೆತ್ತುವರು ।೬೦।।

ಅರೇ, ಈ ಯೋನಿಯ ವರ್ಣನೆ ಮಾಡುವಾಗ ವಾಣಿಗೆ ಕಷ್ಟವಾಗುವುದು ಮತ್ತು ಇದರ ನೆನಪು ಸಹ ತೆಗೆದರೂ ಮನಸ್ಸು ಹಿಂಜರಿಯುವುದು. ಅರೇರೇ!! ಇಂಥ ನರಕವಾಸವನ್ನು ಈ ಮೂರ್ಖರು ಕಟ್ಟಿಕೊಂಡರು!!! ।೬೧।।

ಯಾವ ಅಸುರೀ ಸಂಪತ್ತಿನಿಂದ ಇಂಥ ಘೋರವಾದ ಪತನವು ಪ್ರಾಪ್ತವಾಗುವುದು. ಇದನ್ನು ವ್ಯರ್ಥವಾಗಿ ಏಕೆ ಬೆಳಸಬೇಕು? ।೬೨।।

ಅರ್ಜುನಾ, ಯಾವ ಅಸುರೀ ಸಂಪತ್ತಿನ ಜನರಿಗೆ ಈ ಪ್ರಕಾರದ ನರಕವಾಸವನ್ನು ಭೋಗಿಸಬೇಕಾಗುವುದು. ಆ ಮಾರ್ಗದತ್ತ ನೀನು ಹೋಗದಿರು ।೬೩।।

ಮತ್ತು ಯಾವ ಅಸುರೀ ಸಂಪತ್ತಿನ ಅಂಗದಲ್ಲಿ ದಂಭ ಮೊದಲುಮಾಡಿ ಆರು ದೋಷಗಳು ತುಂಬಿರುವುವು. ಅವುಗಳನ್ನು ನೀನು ತ್ಯಾಗ ಮಾಡು ಎಂದು ಬೇರೆ ಹೇಳಬೇಕಾಗಿದೆಯೇ? ।೬೪।।

ಶ್ಲೋಕಾರ್ಥ :- ನನ್ನ ಹಾನಿಯನ್ನು ಮಾಡುವ ನರಕದ ಬಾಗಿಲು ಕಾಮ, ಕ್ರೋಧ, ಲೋಭಗಳೆಂದು ಮೂರು ಬಗೆ. ಆದುದರಿಂದ ಈ ಮೂರನ್ನು ಬಿಡಬೇಕು ।೨೧।।

ಅದಕ್ಕಾಗಿ ಕಾಮ, ಕ್ರೋಧ ಮತ್ತು ಲೋಭ ಈ ಮೂರರ ಬೇರು ಎಲ್ಲಿ ಬಿಗಿಯಾಗಿರುವುವೋ, ಅಲ್ಲಿ ಅಶುಭಗಳೇ ಹುಟ್ಟುವುವು ಎಂದು ತಿಳಿದುಕೊ ।೬೫।।

ಹೇ ಧನಂಜಯನೇ, ನಮಗೆ ಎಲ್ಲ ದುಃಖಗಳ ಅನಭವ ಬರಲು ಇವರು ದಾರಿಯಲ್ಲಿನ ದಾರಿ ಸಂಗಡಿಗರಾಗಿರುವರು ।೬೬।।

ಅಥವಾ ಪಾಪಿ ಜನರಿಗೆ ನರಕ ಭೋಗವನ್ನು ಪ್ರಾಪ್ತ ಮಾಡಿಕೊಡಲು ಪಾತಕಗಳ ಇದೊಂದು ದೊಡ್ಡ ಸಭೆಯೇ ಆಗಿರುವುದು ।೬೭।।

ರವರವ ನರಕವೆಂದು ಪುರಾಣಗಳಲ್ಲಿ ಅದರ ಖ್ಯಾತಿಯನ್ನು ಕೇಳುತ್ತೇವೆ. ಎಲ್ಲಿಯವರೆಗೆ ಎಂದರೆ ಈ ಮೂರು ದೋಷಗಳು ಅಂತಃಕರಣದಿಂದ ಹೊರಟು ಹೋಗುವವರೆಗೆ ಮಾತ್ರ ।೬೮।।

ಇವರಿಂದ ಅಪಾಯಗಳು ಬಹುಬೇಗ ಪ್ರಾಪ್ತವಾಗುವುವು. ಯಾತನೆಗಳು ಬಹಳ ಸೋವಿಯಾಗುವುವು. ಹಾನಿ ಹಾನಿ ಎಂದು ಕರೆಯುವುದು ಹಾನಿಯಾಗಿರದೇ ಈ ಮೂರು ದೋಷಗಳು ಹಾನಿಯಾಗಿರುವುವು ।೬೯।।

ಅರ್ಜುನಾ, ಇವುಗಳ ಅತಿ ನಿಕೃಷ್ಟ ಅವಸ್ಥೆಗಳನ್ನು ಇಲ್ಲಿಯವರೆಗೆ ಹೇಳಿದೆನು. ಇದಕ್ಕಿಂತಲೂ ಹೆಚ್ಚಿಗೆ ಏನೆಂದು ವರ್ಣಿಸಲಿ? ಹೆಚ್ಚಿಗೇನು ಹೇಳಬೇಕು? ಈ ತ್ರಿದೋಷ ಸಮುದಾಯವೇ ನರಕದ ಬಾಗಿಲಿನ ಹೊಸ್ತಿಲವೇ ಆಗಿದೆ ।೭೦।।

ಕಾಮ, ಕ್ರೋಧ ಮತ್ತು ಲೋಭ ಇವುಗಳಿಗೆ ಯಾರು ಮನಃಪೂರ್ವಕವಾಗಿ ಅನುಕೂಲರಾಗುವರೋ ಅವರು ನರಕಪುರದ ಸಭೆಯಲ್ಲಿ ಸನ್ಮಾನಿಸಲ್ಪಡುವರು ।೭೧।।

ಆದ್ದರಿಂದ ಹೇ ಕಿರೀಟಿಯೇ ಈ ಕಾಮ, ಕ್ರೋಧ ಮತ್ತು ಲೋಭಗಳೆಂಬ ತ್ರಿಪುಟಿಯು ಎಲ್ಲ ವಿಷಯಗಳಲ್ಲಿ ಅತಿ ಕೆಟ್ಟದ್ದಾಗಿದೆ ಎಂದು ನಿನಗೆ ಮೇಲಿಂದ ಮೇಲೆ ಹೇಳುತ್ತ ಬಂದಿರುವೆನು. ಅದಕ್ಕಾಗಿ ಇವುಗಳ ತ್ಯಾಗ ಮಾಡು ।೭೨।।

ಶ್ಲೋಕಾರ್ಥ :- ಕೌಂತೇಯಾ! ನರಕದ್ವಾರಗಳಾದ ಈ ಮೂರನ್ನು ತ್ಯಜಿಸಿದ ನರನು ತನ್ನನ್ನು ತಾನು ರಕ್ಷಿಸಿಕೊಳ್ಳುವವನಾಗಿ ಪರಮ ಗತಿಯಾದ ಮೋಕ್ಷವನ್ನು ಪಡೆಯುತ್ತಾನೆ ।೨೨।।

ಧರ್ಮಾದಿಕಾ ಚೌಂಹೀ ಆಂತು । ಪುರುಷಾರ್ಥಾಚೇ ತೈಂಚಿ ಮಾತು । ಕರಾವೀ ಜೈ ಸಂಘಾತು । ಸಾಂಡೀಲ ಹಾ ।೪೩೩॥ ಹೇ ತಿನ್ಹೀ ಜೇವೀ ಜಂವ ಜಾಗತೀ । ತಂವವರೀ ನಿಕೀಯಾಚೀ ಪ್ರಾಪ್ತೀ । ಹೇ ಮಾರ್ಘೀ ಕಾನ ನಾಇಕತಿ । ದೇವೋಹೀ ಮ್ಹಣೇ ।೪೩೪॥ ಜಯಾ ಆಪಣಪೇ ಪಢಿಯೇ । ಆತ್ಮನಾಶಾ ಜೋ ಬಿಹೇ । ತೇಣೇ ನ ಧರಾವೀ ಹೇ ಸೋಯೇ । ಸಾವಧು ಹೋಇಜೇ ।೪೩೫॥ ಪೋಟೀ ಬಾಂಧೋನಿ ಪಾಷಾಣ । ಸಮುದ್ರೀ ಬಾಹೀ ಆಂಗವಣ । ಕಾ ಜಿಯಾ ವಯಾ ಜೇವಣ । ಕಾಳಕೂಟಾಚೇ ।೪೩೬॥ ಇಹೀ ಕಾಮಕ್ರೋಧಲೋಭೇಂಸೀ । ಕಾರ್ಯಸಿದ್ಧಿ ಜಾಣ ತೈಸೀ । ಮ್ಹಣೌನಿ ಠಾವೋಚಿ ಪುಸೀ । ಯಯಾಂಚಾ ಗಾ ।೪೩೭॥ ಜೈ ಕಹೀ ಅವಚಟೇ । ಹೇ ತಿಕಡೀ ಸಾಂಖಳ ತುಟೇ । ತೈ ಸುಖೇ ಆಪುಲಿಯೇ ವಾಟೇ । ಚಾಲೋ ಲಾಭೇ ।೪೩೮॥ ತ್ರಿದೋಷೀ ಸಾಂಡಿಲೇ ಶರೀರ । ತ್ರಿಕುಟೀ ಫಿಟಲಿಯಾ ನಗರ । ತ್ರಿದಾಹ ನಿವಾಲಿಯಾ ಅಂತರ । ಜೈಸೇ ಹೋಯ ।೪೩೯॥ ತೈಸಾ ಕಾಮಾದಿಕೀ ತಿಘೀ । ಸಾಂಡಿಲಾ ಸುಖ ಪಾವೋನಿ ಜಗೀ । ಸಂಗು ಲಾಹೇ ಮೋಕ್ಷಮಾರ್ಗೀ । ಸಜ್ಜನಾಂಚಾ ।೪೪೦॥ ಮಗ ಸತ್ಸಂಗೇ ಪ್ರಬಳೇ । ಸಚ್ಛಾಸ್ತ್ರಾಚೇನಿ ಬಳೇ । ಜನ್ಮಮೃತ್ಯೂಚೇ ನಿಮಾಳೇ । ನಿಸ್ತರೇ ರಾನೇ ।೪೪೧॥ ತೇ ವೇಳೀ ಆತ್ಮಾನಂದೇ ಆಘವೇ । ಜೇ ಸದಾ ವಸತೇ ಬರವೇ । ತೇ ತೈಸೇಂಚಿ ಪಾಟಣ ಪಾವೇ । ಗುರುಕೃಪೇಚೇ ।೪೪೨॥ ತೇಥ ಪ್ರಿಯಾಚೀ ಪರಮ ಸೀಮಾ । ತೋ ಭೇಟೇ ಮಾಉಲೀ ಆತ್ಮಾ । ತಯೇ ಖೇಂವೀ ಆಟೇ ಡಿಂಡಿಮಾ । ಸಾಂಸಾರಿಕ ಹೇ ।೪೪೩॥ ಐಸಾ ಜೋ ಕಾಮಕ್ರೋಧ ಲೋಭಾ । ಝಾಡೀ ಕರೂನಿ ಠಾಕೇ ಉಭಾ । ತೋಚಿ ಯೇವಢಿಯಾ ಲಾಭಾ । ಗೋಸಾವೀ ಹೋಯ ।೪೪೪॥

ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।
ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ।೨೩॥

ನಾ ಹೇ ನಾವಡೋನಿ ಕಾಂಹೀ । ಕಾಮದಿಕಾಂಚ್ಯಾಚಿ ಠಾಯೀ । ದಾಟಲೀ ಜೇಣೇ ಡೋಈ । ಆತ್ಮಚೋರೇ ।೪೪೫॥ ಜೋ ಜಗೀ ಸಮಾನ ಸಕೃಪು । ಹಿತಾಹಿತ ದಾವಿತಾ ದೀಪು । ತೋ ಅಮಾನ್ಯು ಕೇಲಾ ಬಾಪು । ವೇದು ಜೇಣೇ ।೪೪೬॥ ನ ಧರೀಚಿ ವಿಧೀಚಿ ಭೀಡ । ನ ಕರೀಚಿ ಆಪಲೀ ಚಾಡ । ವಾಢವೀತ ಗೇಲಾ ಕೋಡ । ಇಂದ್ರಿಯಾಂಚೇ ।೪೪೭॥

ಎಂದು ಈ ಕಾಮ, ಕ್ರೋಧ ಮತ್ತು ಲೋಭಗಳ ಸಮುದಾಯವನ್ನು ಬಿಡುವನೋ, ಆಗ ಮಾತ್ರ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಈ ಮಾತು ಆಡಲು ಬರುವುದು ॥೪೩೩॥

ಕಾಮ, ಕ್ರೋಧ ಮತ್ತು ಲೋಭ ಈ ಮೂರು ಅಂತಃಕರಣದಲ್ಲಿ ಎಲ್ಲಿಯವರೆಗೆ ವಾಸ ಮಾಡುವುವೋ, ಅಲ್ಲಿಯವರೆಗೆ ಕಲ್ಯಾಣವಾಗುವ ಮಾತು ನನ್ನ ಕಿವಿಗಳು ಮಾತ್ರ ಕೇಳಲಾರವು ಎಂದು ಶ್ರೀಕೃಷ್ಣನು ಸಹ ಹೇಳುವನು ॥೪೩೪॥

ಯಾರಿಗೆ ಕಲ್ಯಾಣದ ಇಚ್ಛೆ ಇರುವುದೋ ಹಾಗೂ ತನ್ನ ನಾಶವಾದೀತೆಂದು ಭಯವಿರುವುದೋ, ಆತನು ಎಚ್ಚರನಾಗಿ ಈ ಮೂವರ ಸಂಗತಿಯನ್ನು ಮಾಡಬಾರದು ॥೪೩೫॥

ಹೊಟ್ಟೆಗೆ ಕಲ್ಲು ಕಟ್ಟಿಕೊಂಡು ಸಮುದ್ರದಲ್ಲಿ ಈಸಿ ಪಾರಾಗುವುದು, ಇಲ್ಲವೆ ಬದುಕುವುದಕ್ಕಾಗಿ ಕಾಳಕೂಟ ವಿಷವನ್ನು ಸೇವಿಸುವುದು ॥೪೩೬॥

ಇದು ಹೇಗೋ, ಅದರಂತೆ ಈ ಕಾಮ, ಕ್ರೋಧ, ಲೋಭಗಳ ಸಂಗತಿಯಿಂದ ಕಾರ್ಯಸಿದ್ಧಿಯಾಗುವುದು. ಆದ್ದರಿಂದ ಇವುಗಳನ್ನು ಮನಸ್ಸಿನಿಂದ ಹೇಳ ಹೆಸರಿಲ್ಲದಂತೆ ಮಾಡಬೇಕು ॥೪೩೭॥

ಎಂದು ಈ ಮೂರು ಬೇಡಿಗಳು ಕಾಲುಗಳಿಂದ ಮುರಿದು ಬೀಳುವುವೋ, ಆಗ ಮಾತ್ರ ನಮ್ಮ ಹಿತದ ದಾರಿಯು ಸುಗಮವಾಗಿ ಸಾಗುವುದು ॥೪೩೮॥

ಕಫ, ವಾತ, ಪಿತ್ತ ಈ ಮೂರು ದೋಷಗಳಿಂದ ಬಿಡುಗಡೆಯಾದ ಶರೀರ, ಕಳ್ಳತನ, ಚಾಡಿ, ಹಾದರ ಈ ಮೂರರಿಂದ ಮುಕ್ತವಾದ ನಗರ, ಆಧ್ಯಾತ್ಮಿಕ, ಆದಿಭೌತಿಕ, ಆದಿದೈವಿಕ, ಈ ತ್ರಿತಾಪಗಳಿಂದ ಮುಕ್ತವಾದ ಅಂತಃಕರಣ, ಇವು ಸುಖಿಯಾಗುವುವು ॥೪೩೯॥

ಅದರಂತೆ ಕಾಮ, ಕ್ರೋಧ ಮತ್ತು ಲೋಭಗಳನ್ನು ಯಾರು ಬಿಡುವರೋ, ಆತನಿಗೆ ಈ ಜಗತ್ತಿನಲ್ಲಿ ಸುಖ ದೊರೆಯುವುದು ಮತ್ತು ಸಜ್ಜನರ ಸಂಗತಿಯಿಂದ ಮೋಕ್ಷ ಮಾರ್ಗದ ಪ್ರಾಪ್ತಿಯಾಗುವುದು ॥೪೪೦॥

ಆಗ ಅವನು, ಸತ್ಸಂಗತಿಯ ಬಲದಿಂದ ಹಾಗೂ ಸತ್ ಶಾಸ್ತ್ರಗಳ ಯೋಗದಿಂದ ಜನ್ಮ-ಮೃತ್ಯುವೆಂಬ ಅರಣ್ಯದ ಕಠಿಣ ಮಾರ್ಗದಿಂದ ಬಿಡುಗಡೆಯಾಗುವನು ॥೪೪೧॥

ಆಗ ಎಲ್ಲಿ ಆತ್ಮಾನಂದವು ಸದಾ ವಾಸವಾಗಿರುವುದೋ, ಅಂಥ ಗುರುಕೃಪೆಯ ಸ್ಥಾನವು ದೊರಕುವುದು ॥೪೪೨॥

ಪ್ರೀತಿಯ ಆಗರವಾದ ಸ್ಥಾನವಾದ ಆತ್ಮರೂಪ ತಾಯಿಯ ಅಲ್ಲಿ ದರ್ಶನವಾಗುವುದು. ಆಕೆಯ ಆಲಿಂಗನದಿಂದ ಸಂಸಾರ ತಾಪವು ತಾನೇ ತಾನಾಗಿ ಇಲ್ಲದಂತಾಗುವುದು ॥೪೪೩॥

ಈ ಪ್ರಕಾರವಾಗಿ ಯಾರು ಕಾಮ, ಕ್ರೋಧ ಮತ್ತು ಲೋಭಗಳನ್ನು ತ್ಯಾಗ ಮಾಡಿ ಅವುಗಳಿಂದ ಬಿಡುಗಡೆಯಾಗುವನೋ, ಅವನೇ ಆತ್ಮದ ಪ್ರಾಪ್ತಿ ಮಾಡಿಕೊಳ್ಳಲು ಸಮರ್ಥನಾಗುವನು ॥೪೪೪॥

ಶ್ಲೋಕಾರ್ಥ :- ಶಾಸ್ತ್ರವಿಧಿಯನ್ನು ಮೀರಿ ಮನಸ್ಸಿಗೆ ಬಂದಂತೆ, ಪ್ರವರ್ತಿಸುವವನಿಗೆ ಸಿದ್ಧಿಯೂ ಇಲ್ಲ; ಸುಖವೂ ಇಲ್ಲ; ಪರಗತಿಯೂ ಇಲ್ಲ ॥೨೩॥

ಇಲ್ಲದಿದ್ದರೆ, ಆತ್ಮಪ್ರಾಪ್ತಿಯ ಲಾಭವು ಹಿಡಿಸದೇ ಯಾರು ಕಾಮಾದಿಕರಲ್ಲಿ ತಲೆಕೊಟ್ಟು ಇರುವನೋ, ಅವನು ಆತ್ಮಘಾತವನ್ನು ಮಾಡುವನು ॥೪೪೫॥

ಈ ಜಗತ್ತಿನಲ್ಲಿ ಎಲ್ಲರಿಗೂ ಸಮಾನವಾಗಿದ್ದು, ಎಲ್ಲರನ್ನು ಸಮಾನವಾಗಿ ಕೃಪೆ ಮಾಡುವ, ಹಿತ, ಅಹಿತಗಳನ್ನು ತೋರಿಸುವ ದೀಪವೇ ಆಗಿರುವ ಎಲ್ಲರ ಗುರುವಾದ ವೇದಕ್ಕೆ ಇವರು ಮನ್ನಿಸುವುದೇ ಇಲ್ಲ ॥೪೪೬॥

ಯಾವ ಶಾಸ್ತ್ರದಲ್ಲಿ ಹೇಳಿರುವ ವಿಧಿ ನಿಷೇಧಗಳ ಭಿಡೆ ಹಿಡಿಯುವುದಿಲ್ಲ ಮತ್ತು ತನ್ನ ಹಿತವನ್ನು ನೋಡದೇ ಇಂದ್ರಿಯಗಳ ಎಲ್ಲ ಬಯಕೆಗಳನ್ನು ತೀರಿಸುವನು ॥೪೪೭॥

ಕಾಮಕ್ರೋಧಲೋಭಾಂಚೀ ಕಾಸ । ನ ಸೋಡೀಚ ಪಾಳಿಲೀ ಭಾಷ । ಸ್ವೈರಾಚಾರಾಚೇ ಅಸೋಸ । ವಳಘುಲಾ ರಾನ ।೪೪೮॥ ತೋ ಸುಟಕೇಚಿಯಾ ವಾಹೀಣೇ । ಮಗ ಪಿವೋ ನ ಲಾಹೇ ಪಾಣೀ । ಸ್ವಪ್ನೀಂಹೀ ತೇ ಕಾಹಾಣೀ । ದೂರೀಚಿ ತಯಾ ।೪೪೯॥ ಆಣೀ ಪರತ್ರ ತಂವ ಜಾಯೇ । ಹೇ ಕೀರ ತಯಾ ಆಹೇ । ಪರೀ ಐಹೀಕಹೀ ನ ಲಾಹೇ । ಭೋಗ ಭೋಗೂ ।೪೫೦॥ ತರೀ ಮಾಶಾಲಾಗೀ ಭುಲಲಾ । ಬ್ರಾಹ್ಮಣ ಪಾಣಬುಡಾ ರಿಘಾಲಾ । ಕೀ ತೇಥಹೀ ಪಾವಲಾ । ನಾಸ್ತಿಕವಾದು ।೪೫೧॥ ತೈಸೇ ವಿಷಯಾಂಚೇನಿ ಕೋಡೇ । ಜೇಣೇ ಪರತ್ರಾ ಕೇಲೇ ಉಬಡೇ । ತಂವ ತೋಚಿ ಆಣಿಕೀಕಡೇ । ಮರಣೇ ನೇಲಾ ।೪೫೨॥ ಏವಂ ಪರತ್ರ ನಾ ಸ್ವರ್ಗು । ನಾ ಐಹಿಕಹೀ ವಿಷಯಭೋಗು । ತೇಥ ಕೇಉತಾ ಪ್ರಸಂಗು । ಮೋಕ್ಷಾಚಾ ತೋ? ।೪೫೩॥ ಮ್ಹಣೌನಿ ಕಾಮಾಚೇನಿ ಬಳೇ । ಜೋ ವಿಷಯ ಸೇಊ ಪಾಹೇ ಸಳೇ । ತಯಾ ವಿಷಯೋ ನಾ ಸ್ವರ್ಗು ಮಿಳೇ । ನಾ ಉದ್ಧರೇ ತೋ ।೪೫೪॥

ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।
ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ।೨೪॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ದೈವಾಸುರಸಂಪದ್ವಿಭಾಗಯೋಗೋ ನಾಮ ಷೋಡಶೋऽಧ್ಯಾಯಃ

ಯಾ ಕಾರಣೇ ಪೈ ಬಾಪಾ । ಜಯಾ ಆಥೀ ಆಪುಲೀ ಕೃಪಾ । ತೇಣೇ ವೇದಾಂಚಿಯಾ ನಿರೋಪಾ । ಆನ ನ ಕೀಜೇ ।೪೫೫॥ ಪತೀಚಿಯಾ ಮತಾ । ಅನುಸರೋನಿ ಪತಿವ್ರತಾ । ಅನಾಯಾಸೇ ಆತ್ಮಹಿತಾ । ಭೇಟೇಚಿ ತೇ ।೪೫೬॥ ನಾತರೀ ಶ್ರೀಗುರುವಚನಾ । ದಿಠೀ ದೇತು ಜತನಾ । ಶಿಷ್ಯ ಆತ್ಮಭುವನಾ । ಮಾಜೀ ಪೈಸೇ ।೪೫೭॥ ಹೇ ಅಸೋ ಆಪುಲಾ ಠೇವಾ । ಹಾತಾ ಆಥೀ ಜರೀ ಯಾವಾ । ತರೀ ಆದರೇ ಜೇವೀ ದಿವಾ । ಪುಢಾ ಕೀಜೇ ।೪೫೮॥ ತೈಸಾ ಅಶೇಷಾಂಹೀ ಪುರುಷಾರ್ಥಾ । ಜೋ ಗೋಸಾವೀ ಹೋ ಮ್ಹಣೇ ಪಾರ್ಥಾ । ತೇಣೇ ಶ್ರುತಿಸ್ಮೃತಿ ಮಾಥಾ । ಬೈಸಣೇ ಥಾಪೇ ।೪೫೯॥ ಶಾಸ್ತ್ರ ಮ್ಹಣೇಲ ಜೇ ಸಾಂಡಾವೇ । ತೇ ರಾಜ್ಯಹೀ ತೃಣ ಮಾನಾವೇ । ಜೇ ಘೇವವೀ ತೇ ನ ಮ್ಹಣಾವೇ । ವಿಷಹೀ ವಿರು ।೪೬೦॥ ಐಸಿಯಾ ವೇದೈಕನಿಷ್ಠಾ । ಜಾಲಿಯಾ ಜರೀ ಸುಭಟಾ । ತರೀ ಕೇ ಆಹೇ ಅನಿಷ್ಟಾ । ಭೇಟಣೇ ಗಾ? ।೪೬೧॥

ಕಾಮ, ಕ್ರೋಧ ಮತ್ತು ಲೋಭಗಳ ಸಂಗ ಬಿಡುವುದೇ ಇಲ್ಲ, ಅವರಿಗಾಗಿ ಮಾಡಿದ ಪ್ರತಿಜ್ಞೆಯನ್ನು ಮುರಿಯುವುದಿಲ್ಲ ಮತ್ತು ತನ್ನ ಮನಸ್ಸಿಗೆ ಬಂದಂತೆ ವಿಷಯದ ಅರಣ್ಯದಲ್ಲಿ ತಿರುಗುತ್ತಿರುವನು ।೪೪೮॥

ಅವನಿಗೆ ಆವುಗಳ ವ್ಯಾಪದಿಂದ ಕ್ಷಣಹೊತ್ತು ಬಿಡುಗಡೆ ಇಲ್ಲದಂತಾಗಿ, ಸುಖದ ಮಾತು ಮಾತ್ರ ಸ್ವಪ್ನದಲ್ಲಿಯೂ ಆತನಿಂದ ದೂರ ಇರುವುದು ।೪೪೯॥

ಮತ್ತು ಪರಲೋಕವಂತೂ ಕಳೆದುಕೊಳ್ಳುವನು. ಇದರಲ್ಲಿ ಸಂಶಯವೇ ಇಲ್ಲ. ಆದರೆ ಅವನಿಗೆ ಇಹಲೋಕದಲ್ಲಿಯೂ ಭೋಗಗಳು ದೊರಕುವುದಿಲ್ಲ ।೪೫೦॥

ಒಬ್ಬ ಬ್ರಾಹ್ಮಣನು ನದಿದಂಡೆಯಲ್ಲಿ ಸ್ನಾನ ಮಾಡುವಾಗ್ಗೆ ಮೀನಿನ ಮೇಲೆ ಮನಸ್ಸಾಗಿ ಹಿಡಿಯಲು ಹೋದಾಗ ಅದನ್ನು ಕಂಡು ಜನರು ಆತನಿಗೆ ನಾಸ್ತಿಕನೆನ್ನುವರು. (ಮೀನು ಸಿಗಲಿಲ್ಲ, ಬ್ರಾಹ್ಮಣತ್ವವೂ ಉಳಿಯಲಿಲ್ಲ) ।೪೫೧॥

ಅದರಂತೆ ವಿಷಯಗಳ ನಾದಕ್ಕೆ ಬೆನ್ನತ್ತಿ ಪರಲೋಕವನ್ನು ಕಾಣದಾದನು ಮತ್ತು ಇಹಲೋಕವನ್ನೂ ಸಹ ನೋಡಿದರೆ ಮೃತ್ಯುವಿನ ದವಡೆಯಲ್ಲಿ ಸಿಕ್ಕಿಕೊಂಡನು ।೪೫೨॥

ಈ ಪ್ರಕಾರವಾಗಿ ಇವನಿಗೆ ಪರಲೋಕವೂ ಇಲ್ಲ, ಸ್ವರ್ಗವೂ ಇಲ್ಲ! ಮತ್ತು ಇಹಲೋಕದಲ್ಲಿಯೂ ವಿಷಯಭೋಗ ದೊರಕುವುದಿಲ್ಲ. ಅಂದಮೇಲೆ ಮೋಕ್ಷ ಪ್ರಾಪ್ತಿಯ ಮಾತೇಕೇ? ।೪೫೩॥

ಆದ್ದರಿಂದ ಕಾಮದ ಬುದ್ಧಿಯಿಂದ ಯಾವನು ವಿಷಯಗಳ ಸೇವನೆ ಮಾಡಬಯಸುವನೋ, ಅವನಿಗೆ ವಿಷಯಗಳೂ ಇಲ್ಲ, ಸ್ವರ್ಗವೂ ಇಲ್ಲ, ಉದ್ಧಾರವಂತೂ ಆಗುವುದೇ ಇಲ್ಲ ।೪೫೪॥

ಶ್ಲೋಕಾರ್ಥ :- ಆದುದರಿಂದ ಅರ್ಜುನಾ, ಇದನ್ನು ಮಾಡಬೇಕು, ಇದನ್ನು ಮಾಡಬಾರದು ಎಂಬ ನಿರ್ಣಯಕ್ಕೆ ಶಾಸ್ತ್ರವೇ ನಿನಗೆ ಪ್ರಮಾಣವಾಗಿದೆ. ಆದುದರಿಂದ ಶಾಸ್ತ್ರವು ವಿಧಿಸಿದ ಕರ್ಮವನ್ನು ತಿಳಿದು ಮಾಡುವುದು ಯೋಗ್ಯ ।೨೪॥

ಇಲ್ಲಿಗೆ ಉಪನಿಷತ್ತೂ, ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ ಶ್ರೀಕೃಷ್ಣಾರ್ಜುನರ ಸಂವಾದವೂ ಆದ ಶ್ರೀಮದ್ಭಗವದ್ಗೀತೆಯಲ್ಲಿ ದೈವಾಸುರ ಸಂಪದ್ವಿಭಾಗಯೋಗವೆಂಬ ಹೆಸರಿನ ಹದಿನಾರನೆಯ ಅಧ್ಯಾಯವು ಮುಗಿದುದು.

ಅದಕ್ಕಾಗಿ ಅಪ್ಪಾ ಅರ್ಜುನಾ, ಯಾರಿಗೆ ತನ್ನ ಕಲ್ಯಾಣವಾಗಬೇಕೆಂಬ ಇಚ್ಛೆ ಇದೆಯೋ, ಅವರು ವೇದಗಳಲ್ಲಿ ಹೇಳಿರುವ ಆಜ್ಞೆ ಮೀರಬಾರದು ।೪೫೫॥

ಪತಿಯ ಮತದಂತೆ ಪತಿವ್ರತಾ ಸ್ತ್ರೀಯು ಆಚರಿಸಿ ಅನಾಯಾಸವಾಗಿ ತನ್ನ ಹಿತವನ್ನು ಮಾಡಿಕೊಳ್ಳುವಳು ।೪೫೬॥

ಅಥವಾ ಶ್ರೀಗುರುಗಳ ಆಜ್ಞೆಯಲ್ಲಿ ಲಕ್ಷಕೊಟ್ಟು ಯಾರು ನಡೆಯುವರೋ, ಆ ಶಿಷ್ಯನು ಆತ್ಮ ಪ್ರಾಪ್ತಿಯನ್ನು ಮಾಡಿಕೊಳ್ಳುವನು ।೪೫೭॥

ಇದು ಇರಲಿ, ತಾನೇ ಇಟ್ಟಂತಹ ನಿಧಿಯು ಕೈಗೆ ಬರಬೇಕಾದರೆ, ದೀಪದ ಬೆಳಕನ್ನು ಅಗತ್ಯವಾಗಿ ಮುಂದುಮಾಡಬೇಕಾಗುವುದು ।೪೫೮॥

ಅದರಂತೆ ಪಾರ್ಥನೇ, ಎಲ್ಲ ಪುರುಷಾರ್ಥಗಳ ಸ್ವಾಮಿಯಾಗುವ ಇಚ್ಛೆ ಯಾರಿಗಿದೆಯೋ, ಆತನು ಶ್ರುತಿ ಸ್ಮೃತಿಗಳನ್ನು, ಶಿರಸಾವಂದಿಸಿ ಮನ್ನಿಸಬೇಕಾಗುವುದು ।೪೫೯॥

ಶಾಸ್ತ್ರವು ಬೇಡವೆಂದಾಗ ರಾಜ್ಯವನ್ನೂ ಸಹತೃಣಸಮಾನ ಮಾಡಿಬಿಡಬೇಕು, ಸ್ವೀಕರಿಸಬೇಕೆಂದಾಗ ಮಾರಕವಾದ ವಿಷವನ್ನಾದರೂ ಸೇವಿಸಬೇಕು ।೪೬೦॥

ಹೇ ಸುಭಟನೇ, ಈ ಪ್ರಕಾರವಾಗಿ ವೇದದ ಆಜ್ಞೆಯನ್ನು ಏಕನಿಷ್ಠೆಯಿಂದ ಯಾರು ಪಾಲಿಸುವರೋ, ಆಗ ಆತನ ಮತ್ತು ಅನಿಷ್ಠದ ಕೂಟ ಎಲ್ಲಿ ಆಗಬೇಕು? ।೪೬೧॥

ಪೈ ಅಹಿತಾಪಾಸೂನಿ ಕಾಢಿತೀ । ಹಿತ ದೇಊನಿ ವಾಢವಿತೀ । ನಾಹೀ ಗಾ ಶ್ರುತಿಪರೌತೀ । ಮಾಉಲೀ ಜಗಾ ।೪೬೨॥ ಮ್ಹಣೌನಿ ಬ್ರಹ್ಮೇಂಶೀ ಮೇಳವೀ । ತಂವ ಹೇ ಕೋಣೇ ನ ಸಂಡಾವೀ । ಅಗಾ ತುವಾಂಹೀ ಐಸೀಚಿ ಭಜಾವೀ । ವಿಶೇಷೇಂಸೀ ।೪೬೩॥ ಜೇ ಆಜೀ ಅರ್ಜುನಾ ತೂ ಯೇಥೇ । ಕರಾವಯಾ ಸತ್ಯ ಶಾಸ್ತ್ರೇ ಸಾರ್ಥೇ । ಜನ್ಮಲಾಸಿ ಬಳಾರ್ಥೇ । ಧರ್ಮಾಚೇನಿ ।೪೬೪॥ ಆಣಿ ಧರ್ಮಾನುಜ ಹೇ ಐಸೇ । ಓಘೇಂಚಿ ಆಲೇ ಅಪೈಸೇ । ಮ್ಹಣೌನಿ ಅನಾರಿಸೇ । ಕರೂ ನಯೇ ।೪೬೫॥ ಕಾರ್ಯಾಕಾರ್ಯವಿವೇಕೀ । ಶಾಸ್ತ್ರೇಂಚಿ ಕರಾವೀ ಪಾರಖೀ । ಅಕೃತ್ಯ ತೇ ಕುಡೇ ಲೋಕೀ । ವಾಳಾವೇ ಗಾ ।೪೬೬॥ ಮಗ ಕೃತ್ಯಪಣೇ ಖರೇ ನಿಗೇ । ತೇ ತುವಾ ಆಪುಲೇನಿ ಆಂಗೇ । ಆಚಾರೋನಿ ಆದರೇ ಚಾಂಗೇ । ಸಾರಾವೇ ಗಾ ।೪೬೭॥ ಜೇ ವಿಶ್ವಪ್ರಾಮಾಣ್ಯಾಚೀ ಮುದೀ । ಆಜಿ ತುಝ್ಯಾ ಹಾತೀ ಅಸೇ ಸುಬುದ್ಧೀ । ಲೋಕಸಂಗ್ರಹಾಸೀ ತ್ರಿಶುದ್ಧೀ । ಯೋಗ್ಯು ಹೋಸೀ ।೪೬೮॥ ಏವಂ ಆಸುರವರ್ಗು ಆಘವಾ । ಸಾಂಗೋನಿ ತೇಥಿಂಚಾ ನಿಗಾವಾ । ತೋಹೀ ದೇವೇ ಪಾಂಡವಾ । ನಿರೂಪಿಲಾ ।೪೬೯॥ ಇಯಾವರೀ ತೋ ಪಂಡೂಚಾ । ಕುಮರು ಸದ್ಭಾವೋ ಜೀವೀಂಚಾ । ಪುಸೇಲ ತೋ ಚೈತನ್ಯಾಚಾ । ಕಾನೀ ಐಕಾ ।೪೭೦॥ ಸಂಜಯೇ ವ್ಯಾಸಾಚಿಯಾ ನಿರೋಪಾ । ತೋ ವೇಳು ಫೇಡಿಲಾ ತಯಾ ನೃಪಾ । ತೈಸಾ ಮೀಹೀ ನಿವೃತ್ತಿಕೃಪಾ । ಸಾಂಗೇನ ತುಮ್ಹಾ ।೪೭೧॥ ತುಮ್ಹೀ ಸಂತ ಮಾಝಿಯಾ ಕಡಾ । ದಿಠೀಚಾ ಕರಾಲ ಬಹುಡಾ । ತರೀ ತುಮ್ಹಾ ಮಾನೇ ಯೇವಢಾ । ಹೋಈನ ಮೀ ।೪೭೨॥ ಮ್ಹಣೌನಿ ನಿಜ ಅವಧಾನ । ಮಜ ವೋಳಗೇ ಪಸಾಯದಾನ । ದೀಜೋ ಜೇ ಸನಾಥು ಹೋಈನ । ಜ್ಞಾನದೇವೋ ಮ್ಹಣೇ ।೪೭೩॥

---

ಇತಿ ಶ್ರೀ ಜ್ಞಾನದೇವ ವಿರಚಿತಾಯಾಂ ಭಾವಾರ್ಥದೀಪಿಕಾಯಾಂ ಷೋಡಶೋಽಧ್ಯಾಯಃ ।೧೬॥

ಶ್ಲೋಕ : ೨೪ ಓವೀ : ೪೭೩

ಇಲ್ಲಿ ನೋಡು, ಅಹಿತದಿಂದ ಬಿಡಿಸುವ ಹಿತ ಮಾಡಿ ಬೆಳೆಸುವ ಶ್ರುತಿಯಂತೆ ಜಗತ್ತಿನಲ್ಲಿ ಬೇರೆ ತಾಯಿಯೇ ಇಲ್ಲ ।೪೬೨॥

ಆದ್ದರಿಂದ ಆಕೆಯಿಂದ ಬ್ರಹ್ಮಪ್ರಾಪ್ತಿಯಾಗುವುದು. ಯಾವ ಈ ಶ್ರುತಿಯ ಅವಜ್ಞೆಯನ್ನು ಯಾರೂ ಮಾಡಕೂಡದು. ನೀನು ಸಹ ವಿಶೇಷವಾಗಿ ಶ್ರುತಿಯ ಆಜ್ಞೆಯನ್ನು ಪರಿಪಾಲಿಸು ।೪೬೩॥

ಅರ್ಜುನಾ, ಹಿಂದಿನ ಜನ್ಮದಲ್ಲಿ ಧರ್ಮಾಚರಣೆಯನ್ನು ಮಾಡಿದ್ದಕ್ಕೆ ಈ ಜನ್ಮದಲ್ಲಿ ಸಚ್ಛಾಸ್ತ್ರವನ್ನು ಯಥಾರ್ಥ ಮಾಡಲು ನೀನು ಹುಟ್ಟಿರುವೆ ।೪೬೪॥

ಮತ್ತು ನೀನು ಧರ್ಮರಾಜನ ತಮ್ಮನಾಗಿರುವುದಕ್ಕೆ ನಿನಗೆ ಸಹಜವಾಗಿ ಧರ್ಮಾನುಜವೆಂದು ಹೆಸರು ಬಂದಿರುವುದು. ಆದ್ದರಿಂದ ನೀನು ವೇದ ಬಾಹ್ಯದಿಂದ ವರ್ತಿಸಬೇಡ ।೪೬೫॥

ಯಾವುದು ಕಾರ್ಯ, ಯಾವುದು ಅಕಾರ್ಯ ಎಂಬುವುದು ಶಾಸ್ತ್ರದಿಂದಲೇ ನಿರ್ಣಯಿಸಬೇಕು ಮತ್ತು ಶಾಸ್ತ್ರವು ಅಕಾರ್ಯವೆಂದು ನಿರ್ಣಯಿಸಿದ್ದನ್ನು ಅದು ಕೆಟ್ಟದ್ದೆಂದು ತಿಳಿದು ಬಿಟ್ಟು ಬಿಡಬೇಕು ।೪೬೬॥

ತದನಂತರ ನಿಜವಾಗಿಯೂ ಯಾವುದು ಉತ್ತಮ ಕರ್ತವ್ಯವಿರುವುದೋ, ಅದನ್ನು ಸ್ವತಃ ಆದರ ಪೂರ್ವಕವಾಗಿ ಆಚರಿಸಬೇಕು ।೪೬೭॥

ನಿನ್ನ ಆಚರಣೆಯನ್ನು ಜಗತ್ತು ಪ್ರಮಾಣವೆಂದು ಮನ್ನಿಸುವಷ್ಟು ನಿನ್ನ ವ್ಯವಹಾರ ಅಧಿಕಾರವಿರುವುದು. ಆದ್ದರಿಂದ ಲೋಕ ಸಂಗ್ರಹ ದೃಷ್ಟಿಯಿಂದ ನೀನು ನಿಃಸಂಶಯವಾಗಿ ಯೋಗ್ಯನಿರುವಿ ।೪೬೮॥

ಈ ಪ್ರಕಾರವಾಗಿ ಅಸುರ ವರ್ಗದ ಎಲ್ಲ ಲಕ್ಷಣಗಳನ್ನು ಹೇಳಿ, ಅವುಗಳ ನಿರ್ಣಯವನ್ನು ದೇವನು ಪಾಂಡವನಿಗೆ ಹೇಳಿದನು ।೪೬೯॥

ಇನ್ನು ಮೇಲೆ ಅರ್ಜುನನು ಅಂತಃಕರಣದಲ್ಲಿ ಸದ್ಭಾವವನ್ನು ಇಟ್ಟುಕೊಂಡು ಒಂದು ಉತ್ತಮವಾದ ಪ್ರಶ್ನೆಯನ್ನು ಭಗವಂತನಿಗೆ ಕೇಳುವವನಿರುವನು, ಅದನ್ನು ನೀವು ಜೀವದ ಕಿವಿಯಿಂದ ಕೇಳಿರಿ ।೪೭೦॥

ಶ್ರೀವ್ಯಾಸರು ಆಜ್ಞೆ ಮಾಡಿರುವುದರಿಂದ ಸಂಜಯನು ಧೃತರಾಷ್ಟ್ರರಾಜನ ವೇಳೆಯನ್ನು ಕಳೆದನು. ಅದರಂತೆ ಶ್ರೀ ನಿವೃತ್ತಿ ಮಹಾರಾಜರ ಕೃಪೆಯಿಂದ ನಾನೂ ನಿಮಗೆ ಹೇಳುವೆನು ।೪೭೧॥

ನೀವು ಸಂತ ಮಂಡಳಿಯವರು ಒಂದು ವೇಳೆ ನನ್ನ ಮೇಲೆ ಕೃಪಾದೃಷ್ಟಿ ತೋರಿಸಿದರೆ, ನಾನೂ ನಿಮ್ಮಂತೆಯೇ ಆಗುವೆನು ।೪೭೨॥

ಆದ್ದರಿಂದ ನೀವು ನಿಮ್ಮ ಲಕ್ಷವನ್ನು ಕೊಟ್ಟು ಶಿಷ್ಯನಿಗೆ ವರಪ್ರಸಾದವನ್ನು ಕೊಡಿರಿ, ಅಂದರೆ ನಾನು (ಸನಾಥ) ಕೃತಕೃತ್ಯನಾಗುವೆನು ।೪೭೩॥

ಶ್ರೀ ಜ್ಞಾನೇಶ್ವರ ಮಹಾರಾಜರಿಂದ ರಚಿತವಾದ ಭಾವಾರ್ಥ ದೀಪಿಕೆಯ ಹದಿನಾರನೆಯ ಅಧ್ಯಾಯದ ವಿವರಣೆ ಸಮಾಪ್ತವು

# ಸಾರ್ಥ ಶ್ರೀಜ್ಞಾನೇಶ್ವರೀ

## ಅಧ್ಯಾಯ ಸತರಾವಾ

ಶ್ರೀ ಗಣೇಶಾಯ ನಮಃ

ವಿಶ್ವವಿಕಾಸಿತ ಮುದ್ರಾ । ಜಯಾ ಸೋಡೀ ತುಝೀ ಯೋಗನಿದ್ರಾ । ತಯಾ ನಮೋಜೀ ಗಣೇಂದ್ರಾ । ಶ್ರೀಗುರುರಾಯಾ ॥೧॥ ತ್ರಿಗುಣಾತ್ರಿಪುರೀ ವೇಢಿಲಾ । ಜೀವತ್ವದುರ್ಗೀ ಆಡಿಲಾ । ತೋ ಆತ್ಮಶಂಭೂನೇ ಸೋಡವಿಲಾ । ತುಝಿಯಾ ಸ್ಮೃತೀ ॥೨॥ ಮ್ಹಣೌನಿ ಶಿವೇಸೀ ಕಾಂಟಾಳಾ । ಗುರುತ್ವೇ ತೂಂಚಿ ಆಗಳಾ । ತರ್ಹೀ ಹಳು ಮಾಯಾಜಳಾ । ಮಾಜೀ ತಾರೂನೀ ॥೩॥ ಜೇ ತುಝ್ಯಾವಿಖೀ ಮೂಢ । ತಯಾಲಾಗೀ ತೂ ವಕ್ರತುಂಡ । ಜ್ಞಾನಿಯಾಸೀ ತರೀ ಅಖಂಡ । ಉಜೂಚಿ ಆಹಾಸೀ ॥೪॥ ದೈವಿಕೀ ದಿಠೀ ಪಾಹತಾ ಸಾನೀ । ತರೀ ಮೀಲನೋನ್ಮೀಲನೀ । ಉತ್ಪತ್ತಿ ಪ್ರಳಯೋ ದೋನ್ಹೀ । ಲೀಲಾಚಿ ಕರಿಸೀ ॥೫॥ ಪ್ರವೃತ್ತಿ ಕರ್ಣಾಚ್ಯಾ ಚಾಳೀ । ಉಠಿಲೀ ಮದಗಂಧಾನಿಳೀ । ಪೂಜೀಜಸೀ ನೀಲೋತ್ಪಲೀ । ಜೀವಭೃಂಗಾಂಚ್ಯಾ ॥೬॥ ಪಾಠೀ ನಿವೃತ್ತಿ ಕರ್ಣತಾಳೇ । ಆಹಾಳಲೀ ತೇ ಪೂಜಾ ವಿಧುಳೇ । ತೇವ್ಹಾ ಮಿರವಿಸೀ ಮೋಕಳೇ । ಅಂಗಾಚೇ ಲೇಣೇ ॥೭॥ ವಾಮಾಂಗೀಚಾ ಲಾಸ್ಯವಿಲಾಸು । ಜೋ ಹಾ ಜಗದ್ರೂಪ ಆಭಾಸು । ತೋ ತಾಂಡವಮಿಸೇ ಕಳಾಸು । ದಾವಿಸೀ ತೂ ॥೮॥ ಹೇ ಅಸೋ ವಿಸ್ಮೋ ದಾತಾರಾ । ತೂ ಹೋಸೀ ಜಯಾಂಚಾ ಸೋಯರಾ । ಸೋಈರಿಕೇಚಿಯಾ ವ್ಯವಹಾರಾ । ಮುಕೇಚಿ ತೋ ॥೯॥ ಫೇಡಿತಾ ಬಂಧನಾಚಾ ಠಾವೋ । ತೂ ಜಗದ್‌ಬಂಧು ಐಸಾ ಭಾವೋ । ಧರೂ ವೋಳಗೇ ಉವಾವೋ । ತುಝಾಚಿ ಅಂಗೀ ॥೧೦॥ ತಂವ ದುಜಯಾಚೇನೀ ನಾಂವೇ ತಯಾ । ದೇಹಹೀ ನುರೇಚಿ ಪೈ ದೇವರಾಯಾ । ಜೇಣೇ ತೂ ಆಪಣಪಯಾ । ಕೇಲಾಸಿ ದುಜಾ ॥೧೧॥ ತೂತೇ ಕರೂನಿ ಪುಢೇ । ಜೇ ಉಪಾಯೇ ಘೇತೀ ದವಡೇ । ತಯಾ ಠಾಸೀ ಬಹುವೇ ಪಾಡೇ । ಮಾಗಾಂಚಿ ತೂ ॥೧೨॥ ಜೋ ಧ್ಯಾನೇ ಸೂಯೇ ಮಾನಸೀ । ತಯಾಲಾಗೀ ನಾಹೀ ತೂ ತ್ಯಾಚೇ ದೇಶೀ । ಧ್ಯಾನಹೀ ವಿಸರೇ ತೇಣೇಸೀ । ವಾಲಭ ತುಜ ॥೧೩॥

# ಸಾರ್ಥ ಶ್ರೀಜ್ಞಾನೇಶ್ವರೀ

## ಹದಿನೇಳನೆಯ ಅಧ್ಯಾಯ

ಯಾವ ಜೀವನ ಮೇಲೆ ನಿನ್ನ ಸ್ವರೂಪ ಸಮಾಧಿಯ ದರ್ಶನವಾಗದಿರೆ ಆತನಿಗೆ ಈ ಚರಾಚರ ವಿಶ್ವವು ಸತ್ಯವೆನಿಸುವುದು. ಹೀಗಿರುವ ಸರ್ವ ಗುಣಾಧೀಶರೂಪ ಶ್ರೀಗುರುರಾಯನೇ, ನಿನಗೆ ನನ್ನ ಪ್ರಣಾಮವು ।೧॥

ಶ್ರೀಶಂಕರನಿಗೆ ಗಣಪತಿಯ ಸ್ಮರಣೆಯ ನಂತರವೇ ತ್ರಿಪುರಾಸುರನನ್ನು ವಧೆ ಮಾಡಲು ಸಾಧ್ಯವಾಯಿತು. ಅದರಂತೆ ತ್ರಿಗುಣಾತ್ಮಕ ಮಾಯಾರೂಪ ಅಸುರನು ಜೀವದುರ್ಗದಲ್ಲಿ ಆತ್ಮ ರೂಪ ಶಂಕರನನ್ನು ಮುತ್ತಿಕೊಂಡಾಗ ಶಂಕರನು ಗುರುರೂಪ ಗಣೇಶನನ್ನು ಸ್ಮರಿಸಿ ಸಂಕಟದಿಂದ ಪಾರಾದನು ।೨॥

ಆದ್ದರಿಂದ ಶ್ರೀಶಂಕರನ ಸಮಾನ ನಿಮ್ಮನ್ನು ತುಲನೆ ಮಾಡಲು ನಿಮ್ಮ ಯೋಗ್ಯತೆಯು ವಿಶೇಷವಾಗಿದೆ. ನಿಮ್ಮ ತೂಕವು ಹೆಚ್ಚಿದ್ದರೂ ಭವಸಮುದ್ರದಿಂದ ಮುಮುಕ್ಷುಗಳಿಗೆ ಪಾರುಮಾಡಲು ಹಡಗದಂತೆ ನೀವು ಹಗುರಾಗಿರುವಿರಿ ।೩॥

ಯಾರು ನಿಮ್ಮ ವಿಷಯಕ್ಕೆ ತಿಳಿದಿಲ್ಲವೋ ಅವರಿಗೆ ನೀವು ವಕ್ರತುಂಡರಾಗಿರುವಿರಿ ಮತ್ತು ಯಾರು ನಿಮ್ಮ ಸ್ವರೂಪವನ್ನು ಅರಿತಿರುವರೋ, ಅವರಿಗೆ ನೀವು ನಿತ್ಯ ಸರಳ ಮುಖದವರಾಗಿರುವಿರಿ ।೪॥

ನಿಮ್ಮ ಕಣ್ಣುಗಳು ನೋಡಲು ಸಣ್ಣಾಗಿ ಕಾಣಿಸುವುವು. ಆದಾಗ್ಯೂ, ಅವು ಮುಚ್ಚಿ ತೆರೆಯುವಷ್ಟರಲ್ಲಿ ಜಗತ್ತಿನ ಉತ್ಪತ್ತಿ ಮತ್ತು ಲಯ ಇವುಗಳನ್ನು ಸಹಜಲೀಲೆಯಿಂದ ಮಾಡುವಿರಿ ।೫॥

ಪ್ರವೃತ್ತಿರೂಪ ಕಿವಿಯನ್ನು ಅಲುಗಾಡಿಸಲು ಮದೋದಕದ ಸುಗಂಧವು ಸುತ್ತಲೂ ಹಬ್ಬುವುದು. ಅದಕ್ಕೆ ಲುಬ್ಧರಾದ ಜೀವರೂಪ ಭ್ರಮರಗಳು ಗಂಡಸ್ಥಳದ ಮೇಲೆ ಕೂಡುವುವು. ಆಗ ನೀಲಕಮಲಗಳಿಂದ ಪೂಜಿಸಿದಂತೆ ನಿಮ್ಮ ಗಂಡಸ್ಥಳವು ಶೋಭಿಸುವುದು ।೬॥

ಆಗ ಎರಡನೆಯ ನಿವೃತ್ತಿರೂಪ ಕಿವಿಯನ್ನು ಅಲುಗಾಡಿಸಲು ಅಂತಃರ್ಮುಖ ವೃತ್ತಿಯು ಉತ್ಪನ್ನವಾಗಿ ಮಾಡಿರುವ ಪೂಜೆಯು ವಿಸರ್ಜನವಾಗಿ ಆಗ ಶುದ್ಧ ಸ್ವರೂಪವು ಬಹಳ ರಮ್ಯವಾಗಿ ತೋರುವುದು ।೭॥

ನಿಮ್ಮ ಎಡತೊಡೆಯ ಮೇಲೆ ಕುಳಿತಿರುವ ಆದಿ ಶಕ್ತಿಯ ನೃತ್ಯಕ್ರೀಡೆಯು ಜಗತ್ತಿನ ಉತ್ಪನ್ನ ಮಾಡುವುದು ಮತ್ತು ನೃತ್ಯದ ನೆಪದಿಂದ ನೀವು ಎಲ್ಲ ಜಗದ ವ್ಯವಹಾರವನ್ನು ನಡೆಸುವಿರಿ ।೮॥

ಇದು ಇರಲಿ, ಹೇ ಗುರುರಾಯನೇ, ನೀವು ಯಾರ ಆಪ್ತರಾಗಿರುವಿರೋ, ಆತನು ಆಪ್ತತನದಿಂದ ದೂರಾಗುವನು. (ಆತನ ದ್ವೈತಭಾವವು ಇಲ್ಲದಾಗಿ ನಿಮ್ಮ ಸ್ವರೂಪದಲ್ಲಿ ಕೂಡುವನು) ಇದು ಎಂತಹ ಚಮತ್ಕಾರ! ।೯॥

ನೀವು ಜಗತ್ತಿನ ಬಂಧನದಿಂದ ಪೂರ್ಣವಾಗಿ ಬಿಡಿಸುವಿರಿ. ಆದ್ದರಿಂದ ನಿಮಗೆ ಜಗತ್‌ಬಂಧು ಎಂದು ಭಾವವನ್ನು ಧರಿಸಿ ಬಹಳ ಆನಂದದಿಂದ ನಿಮ್ಮನ್ನು ಆತ್ಮಸ್ವರೂಪ ಭಾವದಿಂದ ಶರಣಾಗುವರು ।೧೦॥

ಆತನ ದೇಹವು ಸಹ ದ್ವೈತದಿಂದ ಉಳಿಯುವುದಿಲ್ಲ. ಕಾರಣ ದೇವರಾಯನೇ, ನೀವು ಆತನಿಗೆ ನಿಮ್ಮಂತೆಯೇ ಮಾಡಿಕೊಳ್ಳುವಿರಿ. ಆತನಲ್ಲಿ ಎಲ್ಲವೂ ಒಂದಾದ ಮೇಲೆ ಇನ್ನೊಂದು ಭಾವವು ಎಲ್ಲಿಂದ ಬರಬೇಕು? ।೧೧॥

ನೀವು ಬೇರೆಯಾಗಿರುವಿರಿ ಎಂದು ತಿಳಿದು ನಿಮ್ಮ ಪ್ರಾಪ್ತಿಗೋಸ್ಕರವಾಗಿ ಧಾವಿಸುವರು. ಆದರೆ ನೀವು ಅವರಿಗೆ ಪ್ರಾಪ್ತರಾಗದೇ ಎಲ್ಲ ರೀತಿಯಿಂದಲೂ ಅವರ ಹಿಂದೆಯೇ ಇರುವಿರಿ ।೧೨॥

ಧ್ಯಾನಕ್ಕಾಗಿ ನಿಮ್ಮ ಮೂರ್ತಿಯನ್ನು ಮನದಲ್ಲಿ ತರುವವರಿಗೆ ನೀವು ಅವರಿಗೆ ದೊರಕದೇ, ಅವರ ದೇಶದಲ್ಲಿಯೂ ವಾಸಮಾಡುವುದಿಲ್ಲ. ಆದರೆ ಧ್ಯಾನ ಮೊದಲು ಮಾಡಿ ನಿಮ್ಮಲ್ಲಿ ದ್ವೈತಭಾವವನ್ನು ಬಿಡುವವರನ್ನು ನೀವು ಬಹಳ ಪ್ರೀತಿಸುವಿರಿ ।೧೩॥

ತೂತೇ ಸಿದ್ಧ ಚಿ ಜೋ ನೇಣೇ । ತೋ ನಾಂದೇ ಸರ್ವಜ್ಞ ಪಣೇ । ವೇದಾಂಹೀ ಯೇವಢೇ ಬೋಲಣೇ । ನೇಘುಸೀ ಕಾನೀ ।೧೪॥ ಮೌನ ಗಾ ತುರ್ಝೀ ರಾಶಿ ನಾಂವ । ಆತಾ ಸ್ತೋತ್ರೀ ಕೇ ಬಾಂಧೋ ಹಾಂವ । ದಿಸಸೀ ತೇತುಲೀ ಮಾವ । ಭಜೋ ಕಾಈ ।೧೫॥ ದೈವಿಕೇ ಸೇವಕು ಹೋ ಪಾಹೋ । ತರೀ ಭೇದಿತಾ ದ್ರೋಹೋಂಚಿ ಲಾಹೋ । ಮ್ಹಣೌನಿ ಆತಾ ಕಾಂಹೀ ನೋಹೋ । ತುಜಲಾಗೀ ಜೇ ।೧೬॥ ಜೈ ಸರ್ವಥಾ ಸರ್ವಹೀ ನೋಹಿಜೇ । ತೈ ಅದ್ವಯಾ ತೂತೇ ಲಾಹಿಜೇ । ಹೇ ಜಾಣೇ ಮೀ ವರ್ಮ ತುರ್ಝೀ । ಆರಾಧ್ಯ ಲಿಂಗಾ ।೧೭॥ ತರೀ ನುರೋನಿ ವೇಗಳೇಪಣ । ರಸೀ ಭಜಿನ್ನಲೇ ಲವಣ । ತೈಸೇ ನಮನ ಮಾರ್ಝೀ ಜಾಣ । ಬಹು ಕಾಯ ಬೋಲೋ ।೧೮॥ ಆತಾ ರಿತಾ ಕುಂಭ ಸಮುದ್ರೀ ರಿಗೇ । ತೋ ಉಚಂಬಳತ ಭರೋನಿ ನಿಗೇ । ಕಾ ದಶೀ ದೀಪಸಂಗೇ । ದೀಪುಚಿ ಹೋಯ ।೧೯॥ ತೈಸಾ ತುರ್ಝಿಯಾ ಪ್ರಣಿತೀ । ಮೀ ಪೂರ್ಣು ಜಾಹಲೋ ಶ್ರೀನಿವೃತ್ತೀ । ಆತಾ ಆಣೀನ ವ್ಯಕ್ತೀ । ಗೀತಾರ್ಥು ತೋ ।೨೦॥ ತರೀ ಷೋಡಶಾಧ್ಯಾಯಶೇಖೀ । ತಿಯೇ ಸಮಾಪ್ತೀಚ್ಯಾ ಶ್ಲೋಕೀ । ಜೋ ಐಸಾ ನಿರ್ಣಯೋ ನಿಷ್ಟಂಕೀ । ಠೇವಿಲಾ ದೇವೇ ।೨೧॥ ಜೇ ಕೃತ್ಯಾಕೃತ್ಯ ವ್ಯವಸ್ಥಾ । ಅನುಷ್ಠಾವಯಾ ಪಾರ್ಥಾ । ಶಾಸ್ತ್ರಚಿ ಏಕ ಸರ್ವಥಾ । ಪ್ರಮಾಣ ತುಜ ।೨೨॥ ತೇಥ ಅರ್ಜುನ ಮಾನಸೇ । ಮ್ಹಣೇ ಹೇ ಐಸೇ ಕೈಸೇ । ಜೇ ಶಾಸ್ತ್ರೇಂವೀಣ ನಸೇ । ಸುಟಿಕಾ ಕರ್ಮಾ ।೨೩॥ ತರೀ ತಕ್ಷ ಕಾಚೀ ಘಡೇ । ಠಾಕೋನಿ ಕೈ ತೋ ಮಣಿ ಕಾಢೇ । ಕೈ ನಾಕೀಂಚಾ ಕೇಶು ಜೋಡೇ । ಸಿಂಹಾಚಿಯೇ? ।೨೪॥ ಮಗ ತೇಣೇ ತೋ ವೋವಿಜೇ । ತರೀಚ ಲೇಣೇ ಪಾವಿಜೇ । ಯೇರ್ಥ್ವಿ ಕಾಯ ಅಸಿಜೇ । ರಿಕ್ತ ಕಂಠೀ? ।೨೫॥ ತೈಸೀ ಶಾಸ್ತ್ರಾಂಚೀ ಮೋಕಳೀ । ಯಾ ಕೈ ಕೋಣ ಪಾ ವೇಂಟಾಳೀ । ಏಕವಾಕ್ಯತೇಚ್ಯಾ ಫಳೀ । ಪೈಸಿಜೇ ಕೈ? ।೨೬॥ ಜಾಲಯಾಹೀ ಏಕವಾಕ್ಯತಾ । ಕಾ ಲಾಭೇ ವೇಳು ಅನುಷ್ಠಿತಾ । ಕೈಂಚಾ ಪೈಸಾರು ಜೀವಿತಾ । ಯೇತುಲಾಲಿಯಾ ।೨೭॥ ಆಣಿ ಶಾಸ್ತ್ರೇ ಅರ್ಥೇ ದೇಶೇ ಕಾಳೇ । ಯಾ ಚಹೂಂಹೀ ಜೇ ಏಕ ಫಳೇ । ತೋ ಉಪಾವೋ ಕೇ ಮಿಳೇ । ಆಘುವ ಯಾಂಸೀ? ।೨೮॥ ಮ್ಹಣೌನಿ ಶಾಸ್ತ್ರಾಚೇ ಘಡತೇ । ನೋಹೇ ಪ್ರಕಾರೇ ಬಹುತೇ । ತರೀ ಮೂರ್ಖಾ ಮುಮುಕ್ಷಾ ಯೇಥೇ । ಕಾಯ ಗತೀ ಪಾ? ।೨೯॥ ಹಾ ಪುಸಾವಯಾ ಅಭಿಪ್ರಾವೋ । ಜೋ ಅರ್ಜುನ ಕರೀ ಪ್ರಸ್ತಾವೋ । ತೋ ಸತರಾವಿಯಾ ಠಾವೋ । ಅಧ್ಯಾಯಾ ಯೇಥ ।೩೦॥

ನೀವು ಸಿದ್ಧರು, ನಿಮ್ಮನ್ನು ಅರಿಯದೇ ಇರುವವರನ್ನು ಸರ್ವಜ್ಞರೆನ್ನುವರು. ವೇದವು ನಿಮ್ಮನ್ನು ಎಷ್ಟೋಂದು ವರ್ಣಿಸಿದರೂ ನೀವು ಅದಕ್ಕೆ ಕಿವಿಗೊಡುವುದೇ ಇಲ್ಲ ॥೧೪॥

ನಿಮ್ಮ ರಾಶಿಯಿಂದ ''ಮೌನ''ವೆಂದು ಹೆಸರು ಹೊರಡುವುದು. ಅದಕ್ಕಾಗಿ ನಿಮ್ಮ ಸ್ತುತಿ ಮಾಡುವ ಇಚ್ಛೆಯನ್ನು ಏಕೆ ಮಾಡಬೇಕು? ಈ ಎಲ್ಲ ಭಾಸವಾಗುವ ಜಗವು ನಿಮ್ಮ ಮಾಯೆಯಾಗಿರುವುದರಿಂದ ನಿಮ್ಮ ಭಜನೆ ಮಾಡಲು ಹೇಗೆ ಬರುವುದು? ॥೧೫॥

ನಿಮ್ಮ ಸೇವಕನಾಗಬೇಕೆಂದರೆ, ದ್ವೈತರೂಪ ದ್ರೋಹ ಮಾಡಿದಂತಾಗುವುದು. ಆದ್ದರಿಂದ ನಿಮ್ಮಲ್ಲಿ ಯಾವ ಸಂಬಂಧವೇ ಇರದಂತೆ,ಅಂದರೆ ನಮ್ಮ ನಿಮ್ಮಲ್ಲಿ ದ್ವೈತಭಾವ ಇಡದಂತೆ, ಇರುವುದೇ ಉತ್ತಮವು, ಅದೇ ನಿಮ್ಮ ಪೂಜೆಯು ॥೧೬॥

ಅಂದಮೇಲೆ ನಾನು ಎಲ್ಲ ಪ್ರಕಾರಗಳಿಂದಲೂ ನಿಮ್ಮವನಲ್ಲನೆಂದು ಹೇಳಿದಾಗ ನಿಮ್ಮ ನನ್ನಲ್ಲಿ ಅದ್ವೈತವಾಗುವುದು. ಆದರೆ ಹೇ ಆರಾಧ್ಯ ದೈವತನಾದ ಶ್ರೀಗುರುರಾಯನೇ, ಈ ನಿಮ್ಮ ಮರ್ಮವು ನನಗೆ ತಿಳಿದಿದೆ ॥೧೭॥

ಆದರೆ, ಉಪ್ಪು ನೀರಿನಿಂದ ಬೇರೆ ಇರದಿದ್ದರೂ ಅದು ನೀರಿನಲ್ಲಿ ಕೂಡಿದಾಗ ಮಾತ್ರ ಐಕ್ಯವಾಗುವುದು. ಅದರಂತೆ ನಿಮ್ಮಲ್ಲಿ ದ್ವೈತಭಾವವು ಇರದಿದ್ದರೂ, ನಾನು ನಮಸ್ಕಾರ ಮಾಡುವೆನು. ಇದಕ್ಕಿಂತಲೂ ಹೆಚ್ಚಿಗೆ ಏನು ಹೇಳಲಿ? ॥೧೮॥

ಇಲ್ಲಿ ನೋಡಿರಿ, ಬರಿದಾದ ಕೊಡವು ಸಮುದ್ರದಲ್ಲಿ ಮುಳುಗಿದಾಗ ಅದು ತುಂಬಿ ಮೇಲೆ ಬರುವುದು. ನೂಲಿನ ಬತ್ತಿಯು ದೀಪದ ಸಂಗದಿಂದ ದೀಪದ ಸ್ವರೂಪವಾಗುವುದು ॥೧೯॥

ಅದರಂತೆ ಹೇ, ಗುರುರಾಯಾ ಶ್ರೀ ನಿವೃತ್ತಿನಾಥನೇ, ನಿಮ್ಮನ್ನು ನಮಸ್ಕರಿಸುವುದರಿಂದ ನಾನು ಕೃತಕೃತ್ಯನಾದೆನು. ಈಗ ನಾನು ಗೀತೆಯ ಅರ್ಥವನ್ನು ಸ್ಪಷ್ಟಗೊಳಿಸುವೆನು ॥೨೦॥

ಅದಕ್ಕಾಗಿ, ಹದಿನಾರನೆಯ ಅಧ್ಯಾಯದ ಕೊನೆಯ ಶ್ಲೋಕದಲ್ಲಿ ದೇವನು ನಿಶ್ಚಯ ಪೂರ್ವಕವಾಗಿ ಸಿದ್ಧಾಂತವನ್ನು ಏನೆಂದು ಮಂಡಿಸಿದನೆಂದರೆ ॥೨೧॥

ಪಾರ್ಥಾ, ಒಳ್ಳೆಯ ಅಥವಾ ಕೆಟ್ಟ ವಿಷಯಗಳನ್ನು ಆಚರಿಸಲು ನಿನಗೆ ಶಾಸ್ತ್ರವೇ ಸರ್ವದೃಷ್ಟಿಯಿಂದ ಪ್ರಮಾಣವಾಗಿ ಮನ್ನಿಸಬೇಕಾಗುವುದು ॥೨೨॥

ಇದನ್ನು ಕೇಳಿ ಅರ್ಜುನನು ಮನದಲ್ಲಿ ವಿಚಾರಿಸುವನು:- ಹೀಗಿದ್ದರೆ ಹೇಗೆ? ಯಾವುದೇ ಕರ್ಮವನ್ನು ಆಚರಿಸಲು ಶಾಸ್ತ್ರ ನಿರ್ಣಯ ಹೊರತು ಅದರಿಂದ ಬಿಡುಗಡೆ ಇರುವುದೇ ಇಲ್ಲವೇ ಹೇಗೆ? ॥೨೩॥

ಹಾಗಾದರೆ ಸರ್ಪದ ಹೆಡೆಯಲ್ಲಿ ಕೈಹಾಕಿ ಅದರಲ್ಲಿಯ ಮಣಿಯನ್ನು ಹೇಗೆ ತೆಗೆಯಬೇಕು? ಇಲ್ಲವೇ, ಸಿಂಹದ ಮೂಗಿನ ಮೇಲಿರುವ ಕೂದಲನ್ನು ಯಾರಿಗೆ ಕಿತ್ತು ತರಲು ಸಾಧ್ಯ? ॥೨೪॥

ಅಂದಾಗ, ಇದು ಸಾಧಿಸಿದಾಗ ತಂದ ಆ ಕೂದಲಿನಲ್ಲಿ ಆ ಮಣಿಯನ್ನು ಪೋಣಿಸಿ, ಆ ಭೂಷಣವನ್ನು ಕೊರಳಲ್ಲಿ ಹಾಕಬೇಕು, ಹಾಗಾಗದಿದ್ದರೆ ರಿಕ್ತ ಕೊರಳಿರಬೇಕೆ? ॥೨೫॥

ಅದರಂತೆ ಭಿನ್ನ ಭಿನ್ನವಾಗಿರುವ ಶಾಸ್ತ್ರಗಳನ್ನು ಯಾರು ಒಂದೆಡೆ ತರಬೇಕು? ಮತ್ತು ಅದರ ಏಕವಾಕ್ಯತೆ ಮಾಡಿ ಅದರ ಉಪಯೋಗವನ್ನು ಯಾರು ಮಾಡಿಕೊಳ್ಳಬೇಕು? ॥೨೬॥

ಒಳ್ಳೆಯದು, ಏಕವಾಕ್ಯತೆಯನ್ನು ಯಾರಾದರೂ ಮಾಡಬಹುದು. ಅದರಂತೆ ಆಚರಿಸಲಿಕ್ಕೆ ವೇಳೆಯು ಎಲ್ಲಿಂದ ದೊರಕಬೇಕು? ಮತ್ತು ಇಷ್ಟೊಂದು ಆಯುಷ್ಯವಾದರೂ ಯಾರದಿರುವುದು? ॥೨೭॥

ಮತ್ತು ಶಾಸ್ತ್ರ, ಅರ್ಥ, ದೇವ ಮತ್ತು ಕಾಲ ಇದು ಯಾರಿಗೋ ಒಬ್ಬರಿಗೆ ಪ್ರಾಪ್ತವಾಗಬಹುದು. ಆದರೆ ಇವುಗಳ ಪ್ರಾಪ್ತಿಯು ಎಲ್ಲರಿಗೂ ಎಲ್ಲಿಂದಾಗಬೇಕು? ॥೨೮॥

ಆದ್ದರಿಂದ ಆನೇಕ ದೃಷ್ಟಿಯಿಂದ ವಿಚಾರಿಸಿದಲ್ಲಿ ಶಾಸ್ತ್ರಗಳ ಸಾಧನೆಯು ಈ ಮೃತ್ಯುಲೋಕದಲ್ಲಿ ಎಲ್ಲರಿಗೂ ಪ್ರಾಪ್ತವಾಗಲಾರದು. ಅಂದಮೇಲೆ ಮೂರ್ಖರಾದ ಮುಮುಕ್ಷುಗಳ ಗತಿ ಏನು? ॥೨೯॥

ಈ ಅಭಿಪ್ರಾಯವನ್ನು ಕೇಳುವುದಕ್ಕಾಗಿ ಅರ್ಜುನನು ಮಾಡಿದ ಪ್ರಸ್ತಾವನೆಯು ಈ ಹದಿನೇಳನೆಯ ಅಧ್ಯಾಯದ ಮೂಲ ವಿಷಯವಾಗಿರುವುದು ॥೩೦॥

ತರೀ ಸರ್ವವಿಷಯೀ ವಿತೃಷ್ಣು । ಜೋ ಸಕಳಕಳೀ ಪ್ರವೀಣು । ಕೃಷ್ಣಾ ಹೀ ನವಲ ಕೃಷ್ಣು । ಅರ್ಜುನತ್ವೇ ಜೋ ।೩೧॥ ಶೌರ್ಯಾ ಜೋಡಲಾ ಆಧಾರು । ಜೋ ಸೋಮವಂಶಾಚಾ ಶೃಂಗಾರು । ಸುಖಾದಿ ಉಪಕಾರು । ಜಯಾಚೀ ಲೀಲಾ ।೩೨॥ ಜೋ ಪ್ರಜ್ಞೇಚಾ ಪ್ರಿಯೋತ್ತಮು । ಬ್ರಹ್ಮವಿದ್ಯೇಚಾ ವಿಶ್ರಾಮು । ಸಹಚರು ಮನೋಧರ್ಮು । ದೇವಾಚಾ ಜೋ ।೩೩॥

ಅರ್ಜುನ ಉವಾಚ:-
ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾಽನ್ವಿತಾಃ ।
ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ ।೧॥

ತೋ ಅರ್ಜುನ ಮ್ಹಣೇ ಗಾ ತಮಾಲಶ್ಯಾಮಾ । ಇಂದ್ರಿಯಾ ಘಾಂವಲಿಯಾ ಬ್ರಹ್ಮಾ । ತುಝಾ ಬೋಲು ಆಮ್ಹಾ । ಸಾಕಾಂಕ್ಷು ಪೈ ಜೇ ।೩೪॥ ಜೇ ಶಾಸ್ತ್ರೇ ವಾಂಚೂನಿ ಆಣಿಕೇ । ಪ್ರಾಣಿಯಾ ಸ್ವಮೋಕ್ಷು ನ ದೇಖೇ । ಐಸೇ ಕಾ ಕೈಪಖೇ । ಬೋಲಿಲಾಸೀ ।೩೫॥ ತರೀ ನ ಮಿಳೇಚಿ ತೋ ದೇಶು । ನವ್ಹೇಚಿ ಕಾಳಾ ಅವಕಾಶು । ಜೋ ಕರವೀ ಶಾಸ್ತ್ರಾಭ್ಯಾಸು । ತೋಹೀ ದುರೀ ।೩೬॥ ಆಣಿ ಅಭ್ಯಾಸೀ ವಿರಜಿಯಾ । ಹೋತೀ ಜಿಯಾ ಸಾಮುಗ್ರಿಯಾ । ತ್ಯಾಹೀ ನಾಹೀ ಆಪೈತಿಯಾ । ತಿಯೇ ವೇಳೀ ।೩೭॥ ಉಜೂ ನೋಹೇಚಿ ಪ್ರಾಚೀನ । ನೇದೀಚಿ ಪ್ರಜ್ಞಾ ಸಂವಾಹನ। ಐಸೇ ಠೇಲೇ ಆಪಾದನ । ಶಾಸ್ತ್ರಾಚೇ ಜಯಾ ।೩೮॥ ಕಿಂಬಹುನಾ ಶಾಸ್ತ್ರವಿಖೀ । ಏಕಹೀ ನ ಲಾಹಾತೀಚಿ ನಖೀ । ಮ್ಹಣೌನಿ ಉಖಿವಿಖೀ । ಸಾಂಡಿಲೀ ಜಿಹೀ ।೩೯॥ ಪರೀ ನಿರ್ಧಾರೂನಿ ಶಾಸ್ತ್ರೇ । ಅರ್ಥಾನುಷ್ಠಾನೇ ಪವಿತ್ರೇ । ನಾಂದತಾತಿ ಪರತ್ರೇ । ಸಾಚಾರೇ ಜೇ ।೪೦॥ ತಯಾ ಐಸೇ ಆಮ್ಹೀ ಹೋಆವೇ । ಐಸೀ ಚಾಡ ಬಾಂಧೋನಿ ಜೀವೇ । ಘೇತೀ ತಯಾಂಚೇ ಮಾಗಾವೇ । ಆಚರಾವಯಾ ।೪೧॥ ಧಡ್ಯಾಚಿಯಾ ಆಖರಾ । ತಳೀ ಬಾಳ ಲಿಹೇ ದಾತಾರಾ । ಕಾ ಪುಢಾಂಸೂನಿ ಪರಿಕರಾ । ಅಕ್ಷಮು ಚಾಲೇ ।೪೨॥ ತೈಸೇ ಸರ್ವ ಶಾಸ್ತ್ರನಿಪುಣ । ತಯಾಚೇ ಜೇ ಆಚರಣ । ತೇಂಚಿ ಕರಿತೀ ಪ್ರಮಾಣ । ಆಪಲಿಯೇ ಶ್ರದ್ಧೇ ।೪೩॥ ಮಗ ಶಿವಾದಿಕೇ ಪೂಜನೇ । ಭೂಮ್ಯಾದಿಕೇ ಮಹಾದಾನೇ । ಅಗ್ನಿಹೋತ್ರಾದಿ ಯಜನೇ । ಕರಿತೀ ಜೇ ಶ್ರದ್ಧಾ ।೪೪॥ ತಯಾ ಸತ್ತ್ವರಜತಮಾ । ಮಾಜೀ ಕೋಣ ಪುರುಷೋತ್ತಮಾ । ಗತಿ ಹೋಯ ತೇ ಆಮ್ಹಾ । ಸಾಂಗಿಜೋ ಜೇ ।೪೫॥

ಅಂದಾಗಿ, ಸರ್ವವಿಷಯಗಳಲ್ಲಿ ನಿರಿಚ್ಛನು ಮತ್ತು ಸಕಲ ಕಲೆಗಳಲ್ಲಿ ಪ್ರವೀಣನು ಮತ್ತು ಅರ್ಜುನನ ರೂಪ ದಿಂದ ಶ್ರೀಕೃಷ್ಣನಿಗೆ ಆನಂದಕೊಡುವ ಕೃಷ್ಣನು (ಅರ್ಜು ನನು) ।ಹಿ೧॥

ಯಾವ ಶೌರ್ಯಕ್ಕೆ ಆಧಾರನು, ಯಾವ ಸೋಮ ವಂಶಕ್ಕೆ ಭೂಷಣನು ಮತ್ತು ಯಾವಾತನ ಲೀಲೆಯಿಂದ ದೇವನಿಗೆ ಬಹಳ ಸುಖವಾಗುವುದು ।ಹಿ೨॥

ಯಾವ ಪ್ರಜ್ಞೆಯ ಪ್ರಿಯೋತ್ತಮನು, ಬ್ರಹ್ಮವಿದ್ಯೆಯ ವಿಶ್ರಾಂತಿ ಸ್ಥಾನನು, ಮತ್ತು ಯಾವಾಗಲೂ ಶ್ರೀಕೃಷ್ಣನ ಅಂತಃಕರಣದಲ್ಲಿ ವಿರಾಜಿಸುವವನು ।ಹಿ೩॥

**ಶ್ಲೋಕಾರ್ಥ** :- ಅರ್ಜುನನು ಹೇಳಿದ್ದು:- ಕೃಷ್ಣಾ! ಯಾರು ಶಾಸ್ತ್ರ ನಿಯಮಗಳನ್ನು ಬಿಟ್ಟು ಶ್ರದ್ಧೆಯಿಂದ ಪೂಜಾದಿ ಕರ್ಮಗಳನ್ನು ಮಾಡುವರೋ ಅವರ ನಡವಳಿಕೆ ಏತಕೆ ಸೇರಿದ್ದು? ಸಾತ್ತ್ವಿಕವೋ, ರಾಜಸವೋ, ಅಥವಾ ತಾಮಸವೋ ।೧॥

ಹೀಗಿರುವ ಅರ್ಜುನನು ಹೇಳಿದನು:- ಹೇ ತಮಾಲ ಶ್ಯಾಮಾ, ಎಲ್ಲ ಇಂದ್ರಿಯಗಳಿಗೆ ಪ್ರತ್ಯಕ್ಷವಾಗಿ ಭೋಗಿಸಲು ಬರುವ ಪರಬ್ರಹ್ಮನೇ, ನಿಮ್ಮ ವಚನಗಳು ನನಗೆ ಸಂಶಯ ವಾಗಿ ಕಾಣಿಸುತ್ತಿವೆ ।ಹಿ೪॥

ಪ್ರಾಣಿಮಾತ್ರರಿಗೆ ಶಾಸ್ತ್ರದ ಹೊರತಾಗಿ ಮೋಕ್ಷ ಪ್ರಾಪ್ತಿಯು ಆಗುವುದೇ ಇಲ್ಲವೆಂದು ನೀವು ಏಕಪಕ್ಷವಾಗಿ ಹೇಳಿರುವಿರಿ. ಅದರ ಉದ್ದೇಶವೇನು? ।ಹಿ೫॥

ಹಾಗಾದರೆ, ಯಾವ ದೇಶದಲ್ಲಿ ಶಾಸ್ತ್ರಾಭ್ಯಾಸದ ಅನು ಕೂಲತೆ ಇದ್ದರೂ ಇವರಿಗೆ ಪ್ರಾಪ್ತವಾಗುವುದಿಲ್ಲ ಮತ್ತು ಗುರುಗಳಿಂದ ಶಾಸ್ತ್ರಾಭ್ಯಾಸ ದೊರೆಯುವ ಮಾತು ದೂರವೇ ಉಳಿಯಿತು ।ಹಿ೬॥

ಮತ್ತು ಅಭ್ಯಾಸಕ್ಕೆ ಸಹಾಯ ಮಾಡುವ ಸಾಮಗ್ರಿಗಳು, ಆಗ ಆತನಲ್ಲಿರುವುದಿಲ್ಲ ।ಹಿ೭॥

ಹಾಗೆಯೇ ಪೂರ್ವ ಕ್ರಮವು ಅನುಕೂಲವಿಲ್ಲದ್ದಕ್ಕೆ ಬುದ್ಧಿಯ ಸಹಾಯವೂ ಆತನಿಗೆ ದೊರಕುವುದಿಲ್ಲ. ಈ ಪ್ರಕಾರವಾಗಿ ಇವರ ಶಾಸ್ತ್ರ ಸಂಪಾದನೆಯು ಕುಂಠಿತ ಗೊಂಡಿದೆ ।ಹಿ೮॥

ಹೆಚ್ಚಿಗೇನು ಹೇಳಬೇಕು? ಶಾಸ್ತ್ರದ ಏಕವಾಕ್ಯತೆಯನ್ನು ಮಾಡುವ ಸಾಮರ್ಥ್ಯವಿಲ್ಲದ್ದಕ್ಕೆ ಅವರು ವಾದ ವಿವಾದ ಮಾಡುವುದನ್ನು ಬಿಟ್ಟು ಕೊಟ್ಟಿದ್ದಾರೆ ।ಹಿ೯॥

ಆದರೆ, ಶಾಸ್ತ್ರದ ಅಭ್ಯಾಸವನ್ನು ಮಾಡಿ ಅದರಲ್ಲಿ ಹೇಳಿ ದಂತೆ ಯಥಾವಿಧಿಯಿಂದ ಅನುಷ್ಠಾನಗಳನ್ನು ಮಾಡಿ ಪರ ಲೋಕದಲ್ಲಿ ಆನಂದದಿಂದ ಇರುವರು ।೫೦॥

ಅದರಂತೆಯೇ ನಾವಾಗಬೇಕೆಂದು ಮನದಲ್ಲಿ ಇಚ್ಚೆ ಯನ್ನು ಧರಿಸಿಕೊಂಡು ಅವರದೇ ಮಾರ್ಗದಲ್ಲಿ ಆಚರಣೆ ಗಳನ್ನು ಮಾಡುವರು ।೫೧॥

ಪ್ರಭುವೇ, ಯಾವ ಪ್ರಕಾರವಾಗಿ ಮೇಲೆ ಬರೆದ ಅಕ್ಷರ ಗಳಂತೆ ಸಣ್ಣ ಬಾಲಕನು ಕೆಳಗೆ ಬರೆಯುವನು ಅಥವಾ ಕಣ್ಣಿದ್ದ ವನನ್ನು ಮುಂದು ಮಾಡಿ ಕುರುಡನು ಹಿಂದೆ ನಡೆಯುವನೋ ।೫೨॥

ಅದರಂತೆ ಯಾರು ಸರ್ವ ಶಾಸ್ತ್ರಗಳಲ್ಲಿ ನಿಪುಣರಾದ ವರು, ಅವರ ಆಚರಣೆಗಳನ್ನು ಪ್ರಮಾಣವಾಗಿಟ್ಟುಕೊಂಡು ಅದರಲ್ಲಿ ಶ್ರದ್ಧೆಯನ್ನಿಡುವರು ।೫೩॥

ಮತ್ತು ಶಿವಾದಿಕರ ದೇವರನ್ನು ಪೂಜಿಸುವುದು, ಭೂಮಿ ಇತ್ಯಾದಿ ಮಹಾದಾನ ಮಾಡುವುದು, ಹಾಗೂ ಅಗ್ನಿ ಹೋತ್ರಾದಿ ಯಜ್ಞಗಳನ್ನು ಮಾಡುವುದು, ಈ ಎಲ್ಲ ಕರ್ಮ ಗಳನ್ನು ಶ್ರದ್ಧೆಯಿಂದ ಮಾಡುವರು ।೫೪॥

ಪುರುಷೋತ್ತಮನೇ, ಇವರಿಗೆ ಸತ್ತ್ವ, ರಜ, ಮತ್ತು ತಮ ಇವುಗಳಲ್ಲಿ ಯಾವ ಗತಿಯು ಪ್ರಾಪ್ತವಾಗುವುದು? ಅದನ್ನು ನಮಗೆ ಹೇಳಿರಿ ।೫೫॥

ತಂವ ವೈಕುಂಠಪೀಠೀಂಚೇ ಲಿಂಗ । ಜೋ ನಿಗಮಪದ್ಮಾ ಚಾ ಪರಾಗ । ಜಿಯೇ ಜಯಾಚೇನಿ ಹೇ ಜಗ । ಅಂಗಚ್ಛಾಯಾ ।೪೬॥ ಕಾಳ ಸಾವಿಯಾಚಿ ವಾಢು । ಲೋಕೋತ್ತರ ಪ್ರೌಢು । ಅದ್ವಿತೀಯ ಗೂಢು । ಆನಂದಘನು ।೪೭॥ ಇಯೇ ಶ್ಲಾಘಿಜತೀ ಜೇಣೇ ಬಿಕೇ । ತೇ ಜಯಾಚೇ ಆಂಗೀ ಅಸಿಕೇ । ತೋ ಶ್ರೀಕೃಷ್ಣ ಸ್ವಮುಖೇ । ಬೋಲತ ಅಸೇ ।೪೮॥

ಶ್ರೀಭಗವಾನುವಾಚ:-

ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।
ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ।೨॥

ಮ್ಹಣೇ ಪಾರ್ಥಾ ತುಝಾ ಅತಿಸೋ । ಹೇಂಹೀ ಆಮ್ಹೀ ಜಾಣತಸೋ । ಜೇ ಶಾಸ್ತ್ರಾಭ್ಯಾಸಾಚಾ ಆಡಸೋ । ಮಾನಿತಾಸಿ ಕೀ ।೪೯॥ ನುಸಧಿಯಾಚಿ ಶ್ರದ್ಧಾ । ಝೋಂಬೋ ಪಾಹಸೀ ಪರಮಪದಾ । ತರೀ ತೈಸೇ ಹೇ ಪ್ರಬುದ್ಧಾ । ಸೋಹೋಪೇ ನೋಹೇ ।೫೦॥ ಶ್ರದ್ಧಾ ಮ್ಹಣಿತಲಿಯಾಸಾಠೀ । ಪಾತೇ ಜೋ ನಯೇ ಕಿರೀಟೀ । ಕಾಯ ದ್ವಿಜು ಅಂತ್ಯಜ ಘೃಷ್ಟೀ । ಅಂತ್ಯಜು ನೋಹೇ? ।೫೧॥ ಗಂಗೋದಕ ಜರೀ ಜಾಲೇ । ತರೀ ಮದ್ಯಭಾಂಡಾ ಆಲೇ । ತೇ ಘೇಊ ನಯೇ ಕಾಂಹೀ ಕೇಲೇ । ವಿಚಾರೀ ಪಾ ।೫೨॥ ಚಂದನು ಹೋಯ ಶೀತಳು । ಪರೀ ಅಗ್ನೀಸೀ ಪಾವೇ ಮೇಳು । ತೈ ಹಾತೀ ಧರಿತಾ ಜಾಳು । ನ ಶಕೇ ಕಾಈ? ।೫೩॥ ಕಾ ಕಿಡಾಚಿಯೇ ಆಟತಿಯೇ ಪುಟೀ । ಪಡಿಲೇ ಸೋಳೆ ಕಿರೀಟೀ । ಘೇತಲೇ ಚೋಖಾಸಾಠೀ । ನಾಗವೀನಾ? ।೫೪॥ ತೈಸೇ ಶ್ರದ್ಧೇಚೇ ದಳವಾಡೇ । ಆಂಗೇ ಕೀರ ಚೋಖಡೇ । ಪರೀ ಪ್ರಾಣಿಯಾಚ್ಯಾ ಪಡೇ । ವಿಭಾಗೀ ಜೈ ।೫೫॥ ತೇ ಪ್ರಾಣಿಯೇ ತಂವ ಸ್ವಭಾವೇ । ಅನಾದಿಮಾಯಾಪ್ರಭಾವೇ । ತ್ರಿಗುಣಾಚೇಚಿ ಆಘವೇ । ವಳಿಲೇ ಆಹತೀ ।೫೬॥ ತೇಥಹೀ ದೋನ ಗುಣ ಖಾಂಚತೀ । ಮಗ ಏಕ ಧರೀ ಉನ್ನತೀ । ತೈ ತೈಸಿಯಾಚಿ ಹೋತೀ ವೃತ್ತೀ । ಜೀವಾಂಚಿಯಾ ।೫೭॥ ವೃತ್ತೀ ಐಸೇ ಮನ ಧರಿತೀ । ಮನಾ ಐಸೀ ಕ್ರಿಯಾ ಕರಿತೀ । ಕೇಲಿಯಾ ಐಸೀ ವರಿತೀ । ಮರೋನಿ ದೇಹೇ ।೫೮॥ ಬೀಜ ಮೋಡೇ ಝಾಡ ಹೋಯೇ । ಝಾಡ ಮೋಡೇ ಬೀಜೀ ಸಾಮಾಯೇ । ಐಸೇನಿ ಕಲ್ಪಕೋಡೀ ಜಾಯೇ । ಪರೀ ಜಾತಿ ನ ನಶೇ? ।೫೯॥

ಆಗ ವೈಕುಂಠ ಪೀಠದ ಅಧಿದೈವತನು, ವೇದರೂಪ ಕಮಲದ ಪರಾಗನು, ಯಾರ ಸತ್ತೆಯಿಂದ ಈ ಎಲ್ಲ ಜಗವು ಜೀವಿಸಿದೆ ।೫೬॥

ಯಾವ ಪ್ರತ್ಯಕ್ಷ ಕಾಳರೂಪನು, ಸಹಜವಾಗಿಯೇ ಹಿರಿಯ ಪ್ರೌಢನು, ಲೋಕೋತ್ತರನು, ಅದ್ವಿತೀಯನು ಗೂಢನು ಮತ್ತು ಆನಂದಘನನಾಗಿರುವನು ।೫೭॥

ಮತ್ತು ಈ ಎಲ್ಲ ಗುಣಗಳು ಯಾವ ಶಕ್ತಿಯಿಂದ ವರ್ಣನೀಯವಾಗಿರುವುವೋ, ಆ ಶಕ್ತಿಯು ಯಾರ ಅಂಗದಲ್ಲಿ ಇದೆಯೋ, ಆ ಶ್ರೀಕೃಷ್ಣ ಪರಮಾತ್ಮನು ಸ್ವಮುಖದಿಂದ ಹೇಳುತ್ತಿರುವನು ।೫೮॥

ಶ್ಲೋಕಾರ್ಥ :- ಭಗವಂತನು ಹೇಳಿದ್ದು:- ಅರ್ಜುನಾ! ಮನುಷ್ಯರಲ್ಲಿರುವ ಶ್ರದ್ಧೆ ಸ್ವಾಭಾವಿಕವಾಗಿ ಸಾತ್ತ್ವಿಕ ಶ್ರದ್ಧೆ ಎಂದೂ, ರಾಜಸ ಶ್ರದ್ಧೆ ಎಂದೂ, ತಾಮಸಿಕ ಶ್ರದ್ಧೆ ಎಂದೂ ಮೂರು ವಿಧವಾಗಿರುತ್ತದೆ, ಅದನ್ನು ಹೇಳುತ್ತೇನೆ ಕೇಳು ।೨॥

ದೇವನು ಹೇಳುತ್ತಾನೆ:- ಪಾರ್ಥಾ, ಶಾಸ್ತ್ರಾಭ್ಯಾಸದ ಆಚರಣೆ ಇರುವುದು ಯಾವ ನಿನ್ನ ಮನದಲ್ಲಿ ಮೂಡಿದೆಯೋ, ಅದನ್ನು ನಾನು ಅರಿತಿರುವೆನು ।೫೯॥

ನೀನು ಕೇವಲ ಶ್ರದ್ಧೆಯಿಂದಲೇ ಮೋಕ್ಷ ಪ್ರಾಪ್ತಿಯನ್ನು ಮಾಡಿಕೊಳ್ಳಬೇಕೆಂದು ನೋಡುತ್ತಿರುವೆ. ಆದರೆ ಹೇ ಪ್ರಬುದ್ಧನೇ, ನೀನು ಹೇಳುವಷ್ಟು ಆ ಕಾರ್ಯವು ಸುಲಭವಲ್ಲ ।೬೦॥

ಅರ್ಜುನಾ, ಶ್ರದ್ಧೆಯ ಮೇಲೆ ಕೇವಲ ವಿಶ್ವಾಸವನ್ನು ಇಡಕೂಡದು. ಇಲ್ಲಿ ನೋಡು, ಅಂತ್ಯಜನ ಸಮಾಗಮದಿಂದ ಬ್ರಾಹ್ಮಣನೂ ಅಂತ್ಯಜ ಅಂದರೆ ಭ್ರಷ್ಟನಾಗುವುದಿಲ್ಲವೇ? ।೬೧॥

ಗಂಗೆಯ ಜಲವಿದ್ದರೂ ಅದನ್ನು ಸೆರೆಯ ಪಾತ್ರೆಯಲ್ಲಿ ಹಾಕಿದರೆ, ಅದನ್ನು ಏನು ಮಾಡಿದರೂ ಸ್ವೀಕರಿಸಬಾರದು, ಇದರ ವಿಚಾರವನ್ನು ಮಾಡು ।೬೨॥

ಚಂದನವು ಶೀತಲವಾಗಿರುವುದು ನಿಜ. ಆದರೆ ಅದರ ಸಂಬಂಧವು ಅಗ್ನಿಯೊಡನೆ ಆದಾಗ ಅದು ಕೈಯನ್ನು ಸುಡಲಿಕ್ಕಿಲ್ಲವೇ? ।೬೩॥

ಅಥವಾ ಅರ್ಜುನಾ, ದೋಷಿತ ಬಂಗಾರವನ್ನು ಪುಟದಲ್ಲಿ ಕುದಿಸುವಾಗ ಅದರಲ್ಲಿ ಚೊಕ್ಕ ಬಂಗಾರವು ಬಿದ್ದು ಕೊಂಡರೆ, ಅದನ್ನು ಉತ್ತಮ ಬಂಗಾರವೆಂದು ತಿಳಿದು ಖರೀದಿಸಿದರೆ ಮೋಸ ಹೋದಂತೆ ಆಗುವುದಿಲ್ಲವೇ? ।೬೪॥

ಅದರಂತೆ ಶ್ರದ್ಧೆಯ ಸ್ವರೂಪವು ಮೂಲದಲ್ಲಿ ಶುದ್ಧವಾಗಿರುವುದು. ಆದರೆ ಅದು ಯಾವಾಗ್ಗೆ ಪ್ರಾಣಿಗಳ ಭಾಗಕ್ಕೆ ಬರುವುದೋ ।೬೫॥

ಆಗ ಪ್ರಾಣಿಗಳು ಸ್ವಭಾವತಃವೇ ಅನಾದಿ ಮಾಯೆಯ ಶಕ್ತಿಯಿಂದ ಮೂರು ಗುಣಗಳಿಂದಲೇ ಹೆಣೆದಿರುವರು ।೬೬॥

ಅದರಲ್ಲಿಯೂ ಸಹ ಎರಡು ಗುಣಗಳು ಕ್ಷೀಣವಾಗಿ ಮೂರನೆಯ ಗುಣವು ಹೆಚ್ಚು ಬೆಳೆಯುವುದು. ಆಗ ಆ ಗುಣದ ಹೊಂದಾಣಿಕೆಗಳಿಂದ ಜೀವಗಳ ವೃತ್ತಿಗಳಾಗುವುವು ।೬೭॥

ವೃತ್ತಿಯ ಹೊಂದಾಣಿಕೆಯಿಂದಲೇ ಮನಸ್ಸು (ವಾಸನೆ) ಧಾರಣೆ ಮಾಡುವುದು, ಮನಸ್ಸಿನಂತೆ ಕ್ರಿಯೆಗಳಾಗುವುವು ಮತ್ತು ಸತ್ತನಂತರ ಪುನಃ ತನ್ನ ಕರ್ಮಗಳಂತೆಯೇ ದೇಹಧಾರಣೆಯಾಗುವುದು ।೬೮॥

ಬೀಜವು ಹೋಗಿ ಗಿಡವಾಗುವುದು, ಗಿಡವು ಹೋಗಿ ಬೀಜವಾಗುವುದು. ಈ ಪ್ರಕಾರವಾಗಿ ಕಲ್ಪಗಳು ಉರುಳಿದರೂ ಮೂಲವಾದ ಗಿಡದ ಜಾತಿಯು ನಾಶವಾಗುವುದಿಲ್ಲ ।೬೯॥

ತಿಯಾಪರೀ ಇಯೇ ಅಪಾರೇ । ಹೋತ ಜಾತ ಜನ್ಮಾಂತರೇ । ಪರೀ ತ್ರಿಗುಣತ್ವ ನ ವ್ಯಭಿಚರೇ । ಪ್ರಾಣಿಯಾಂಚೇ ॥೬೦॥ ಮ್ಹಣೌನಿ ಪ್ರಾಣಿಯಾಂಚ್ಯಾ ಪೈಕೀ । ಪಡಿಲೀ ಶ್ರದ್ಧಾ ಅವಲೋಕೀ । ತೇ ಹೋಯ ಗುಣಾಸಾರಿಖೀ । ತಿಹೀ ಯಯಾ ॥೬೧॥ ವಿಪಾಯೇ ವಾಢೇ ಸತ್ತ್ವಶುದ್ಧ । ತೇವ್ಹಾ ಜ್ಞಾನಾಸೀ ಕರೀ ಸಾದ । ಪರೀ ಏಕಾ ದೋಘೇ ವೋಖದ । ಯೇರ ಆಹಾತೀ ॥೬೨॥ ಸತ್ತ್ವಾಚೇನಿ ಆಂಗಲಗೇ । ತೇ ಶ್ರದ್ಧಾ ಮೋಕ್ಷಫಳಾ ರಿಗೇ । ತಂವ ರಜ ತಮ ಉಗೇ । ಕಾ ಪಾ ರಾಹಾತೀ ॥೬೩॥ ಮೋಡೋನಿ ಸತ್ತ್ವಾಚೀ ತ್ರಾಯೇ । ರಜೋಗುಣ ಆಕಾಶೇ ಜಾಯೇ । ತೇವ್ಹಾ ತೇಚಿ ಶ್ರದ್ಧಾ ಹೋಯೇ । ಕರ್ಮಕೇರಸುಣೀ ॥೬೪॥ ಮಗ ತಮಾಚೀ ಉಠೀ ಆಗೀ । ತೇವ್ಹಾ ತೇಚಿ ಶ್ರದ್ಧಾ ಭಂಗೀ । ಹೋ ಲಾಗೇ ಭೋಗಾಲಾಗೀ । ಭಲತೇಯಾ ॥೬೫॥

ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।
ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ ॥೩॥

ಏವಂ ಸತ್ವರಜತಮಾ । ವೇಗಳೀ ಶ್ರದ್ಧಾ ಸುವರ್ಮಾ । ನಾಹೀ ಗಾ ಜೀವ ಗ್ರಾಮಾ । ಮಾಜೀ ಯಯಾ ॥೬೬॥ ಮ್ಹಣೌನಿ ಶ್ರದ್ಧಾ ಸ್ವಾಭಾವಿಕ । ಅಸೇ ಪೈ ತ್ರಿಗುಣಾತ್ಮಕ । ರಜತಮಸಾತ್ತ್ವಿಕ । ಭೇದೀ ಇಹೀ ॥೬೭॥ ಜೈಸೇ ಜೀವನಚಿ ಉದಕ । ಪರೀ ವಿಷೀ ಹೋಯ ಮಾರಕ । ಕಾ ಮಿರಯಾಮಾಜೀ ತೀಖ । ಉಂಸೀ ಗೋಡ ॥೬೮॥ ತೈಸಾ ಬಹುವಸೇ ತಮೇ । ಜೋ ಸದಾಚಿ ಹೋಯ ನಿಮೇ । ತೇಥ ಶ್ರದ್ಧಾ ಪರಿಣಮೇ । ತೇಂಚಿ ಹೋಊನಿ ॥೬೯॥ ಮಗ ಕಾಜಳಾ ಆಣಿ ಮಸೀ । ನ ದಿಸೇ ವಿವಂಚನಾ ಜೈಸೀ । ತೇವೀ ಶ್ರದ್ಧಾ ತಾಮಸೀ । ಸೀನೀನಾಹೀ ॥೭೦॥ ತೈಸೀಚ ರಾಜಸೀ ಜೀವೀ । ರಜೋಮಯ ಜಾಣಾವೀ । ಸಾತ್ತ್ವಿಕೀ ಆಘವೀ । ಸತ್ತ್ವಾಚೀಚ ॥೭೧॥ ಐಸೇನಿ ಹಾ ಸಕಳು । ಜಗಡಂಬರು ನಿಖಿಳು । ಶ್ರದ್ಧೇಚಾಚಿ ಕೇವಳು । ವೋತಲಾ ಅಸೇ ॥೭೨॥ ಪರೀ ಗುಣತ್ರಯವಶೇ । ತ್ರಿವಿಧ ಪಣಾಚೇ ಲಾಸೇ । ಶ್ರದ್ಧೆ ಜೇ ಉಠಿಲೇ ಅಸೇ । ತೇ ವೋಳಖ ತೂ ॥೭೩॥ ತರೀ ಜಾಣಿಜೇ ಝಾಡ ಫುಲೇ । ಕಾ ಮಾನಸ ಜಾಣಿಜೇ ಬೋಲೇ । ಭೋಗೇ ಜಾಣಿಜೇ ಕೇಲೇ । ಪೂರ್ವಜನ್ಮೀಚೇ ॥೭೪॥ ತೈಸೀ ಜಿಹೀ ಚಿನ್ಹೀ । ಶ್ರದ್ಧೇಚೀ ರೂಪೇ ತೀನ್ಹೀ । ದೇಖಿಜತೀ ತೇ ವಾನೀ । ಅವಧಾರೀ ಪಾ ॥೭೫॥

ಇದರಂತೆಯೇ ಜೀವಿಗಳ ಎಷ್ಟೋ ಜನ್ಮಾಂತರಗಳಾದರೂ ಅವುಗಳಲ್ಲಿರುವ ಮೂರು ಗುಣಗಳು ಇಲ್ಲದಂತೆ ಆಗುವುದಿಲ್ಲ ।।೬೦।।

ಆದ್ದರಿಂದ ಪ್ರಾಣಿಗಳಲ್ಲಿರುವ ಯಾವ ಶ್ರದ್ಧೆಯು ಅದು ಗುಣಗಳ ಹೊಂದಾಣಿಕೆಯಿಂದ ಮೂರು ಪ್ರಕಾರಗಳಾಗಿರುವುವು ಎಂದು ತಿಳಿದುಕೋ ।।೬೧।।

ಒಂದು ವೇಳೆ ಶುದ್ಧ ಸತ್ತ್ವಗುಣವು ಬೆಳೆದಾಗ ಆತನು ಜ್ಞಾನದ ಪ್ರಾಪ್ತಿಯನ್ನು ಮಾಡಿಕೊಳ್ಳುವನು. ಆದರೆ ಆತನಿಗೆ ರಜ ಮತ್ತು ತಮ ಈ ಎರಡೂ ಗುಣಗಳು ವಿರುದ್ಧವಾಗಿರುವುವು ।।೬೨।।

ಸತ್ತ್ವಗುಣದ ಹೊಂದಿಕೆಯಿಂದ ಇರುವ ಶ್ರದ್ಧೆಯು ಮೋಕ್ಷಫಲದವರೆಗೂ ಹೋಗುವುದು. ಆದರೆ ರಜ ಮತ್ತು ತಮ ಈ ಎರಡೂ ಗುಣಗಳು ಸುಮ್ಮನೇ ಏಕೆ ಇರುವುವು? ।।೬೩।।

ಸತ್ತ್ವಗುಣದ ಆಶ್ರಯವನ್ನು ಇಲ್ಲದಂತೆ ಮಾಡಿ ರಜೋಗುಣವು ವೃದ್ಧಿಯಾಗುವುದೋ, ಆಗ ಅದೇ ಶ್ರದ್ಧೆಯು ಕರ್ಮರೂಪವಾಗುವುದು ।।೬೪।।

ಆಗ ತಮೋಗುಣದ ಶಕ್ತಿಯು ಬೆಳೆದಾಗ ಆ ಶ್ರದ್ಧೆಯು ಭಂಗವಾಗಿ ಅದೇ ಶ್ರದ್ಧೆಯು ಮನಬಂದಂತೆ ಭೋಗಗಳನ್ನು ಭೋಗಿಸಲು ಸಿದ್ಧವಾಗುವುದು ।।೬೫।।

ಶ್ಲೋಕಾರ್ಥ :- ಅರ್ಜುನಾ! ಎಲ್ಲರ ಶ್ರದ್ಧೆಯೂ ಅವರವರ ಮನಸ್ಸಿನ ಸಂಸ್ಕಾರಕ್ಕೆ ಅನುಗುಣವಾಗಿರುತ್ತದೆ. ಶ್ರದ್ಧೆ ಇಲ್ಲದವನೇ ಇಲ್ಲ, ಆದರೂ ಮನುಷ್ಯ ಅವನ ಶ್ರದ್ಧೆಯಂತೆಯೇ ಆಗುವನು ।।೩।।

ಹೇ ಸುವರ್ಮನೇ, ಈ ಪ್ರಕಾರವಾಗಿ ಈ ಜೀವ ಸಮುದಾಯಗಳಲ್ಲಿ ಸತ್ತ್ವ, ರಜ ಮತ್ತು ತಮ ಇವುಗಳ ಹೊರತಾದ ಬೇರೆ ಶ್ರದ್ಧೆ ಇರುವುದಿಲ್ಲ ।।೬೬।।

ಆದ್ದರಿಂದಲೇ ಸತ್ತ್ವ, ರಜ ಮತ್ತು ತಮ ಈ ಭೇಧಗಳಿಂದ ಸ್ವಭಾವತಃವೇ ಈ ಶ್ರದ್ಧೆಯ ತ್ರಿಗುಣಾತ್ಮವಾಗಿದೆ ।।೬೭।।

ನೀರು ಪ್ರಾಣಿಮಾತ್ರರ ಜೀವನವಾಗಿದೆ. ಆದರೆ ಆ ನೀರಿನಲ್ಲಿ ವಿಷ ಬೆರೆಸಿದರೆ ಮಾರಕವಾಗುವುದು. ಮೆಣಸಿನಪುಡಿ ಕೂಡಿಸಲು ಖಾರವಾಗುವುದು ಮತ್ತು ಕಬ್ಬಿನ ರಸದಲ್ಲಿ ಬೆರೆಸಿದರೆ ಸಿಹಿಯಾಗುವುದು ।।೬೮।।

ಅದರಂತೆ ತಮೋಗುಣವು ಬೆಳೆದಾಗ ಅವನು ಯಾವಾಗಲೂ ಹುಟ್ಟುವನು ಮತ್ತು ಸಾಯುವನು. ಆ ಪ್ರಾಣಿಯಲ್ಲಿ ತಮೋಗುಣದ ಹೊಂದಾಣಿಕೆಯ ಪರಿಣಾಮವಾಗುವುದು ।।೬೯।।

ಕಾಡಿಗೆ ಮತ್ತು ಕಪ್ಪುಮಸಿ ಇವುಗಳಲ್ಲಿ ಭೇದವು ಕಾಣಿಸದಂತೆ ಈ ಯಾವ ತಮೋಗುಣದ ಶ್ರದ್ಧೆಯು ಆ ಮನುಷ್ಯನಿಂದ ಬೇರೆಯಾಗಿ ಕಾಣಿಸುವುದಿಲ್ಲ ।।೭೦।।

ಅದರಂತೆಯೇ, ರಾಜಸ ಪ್ರಾಣಿಗಳವರಲ್ಲಿ ಶ್ರದ್ಧೆಯು ರಜೋಗುಣಮಯವಾಗಿಯೂ ಮತ್ತು ಸಾತ್ತ್ವಿಕರಲ್ಲಿ ಇರುವ ಶ್ರದ್ಧೆಯು ಎಲ್ಲವೂ ಸತ್ತ್ವಗುಣ ಮಯವಾಗಿರುವುದು ।।೭೧।।

ಈ ಪ್ರಕಾರವಾಗಿ ಈ ಎಲ್ಲ ಜಗವು ನಿಜವಾಗಿಯೂ ಶ್ರದ್ಧೆಯಿಂದಲೇ ತುಂಬಿಕೊಂಡಿರುವುದು ।।೭೨।।

ಆದರೆ ತ್ರಿಗುಣಗಳ ಆಧೀನವಾಗಿರುವುದರಿಂದ ಶ್ರದ್ಧೆಯಲ್ಲಿ ಮೂರು ಪ್ರಕಾರಗಳ ಚಿನ್ಹವು ಪ್ರಾಪ್ತವಾಗಿರುವುದು, ಅದನ್ನು ನೀನು ತಿಳಿದುಕೋ ।।೭೩।।

ಹಾಗಾದರೆ ಯಾವ ಪ್ರಕಾರವಾಗಿ ಹೂವುಗಳಿಂದ ಗಿಡವನ್ನು ತಿಳಿಯಬೇಕೋ, ಅಥವಾ ಮಾತಿನಿಂದ ಮನಸ್ಸನ್ನು ಅರಿಯಬೇಕೋ, ಅಥವಾ ಭೋಗಗಳಿಂದ ಪೂರ್ವಜನ್ಮದ ಕರ್ಮಗಳನ್ನು ಗುರುತಿಸಬೇಕೋ ।।೭೪।।

ಅದೇ ಪ್ರಕಾರವಾಗಿ ಯಾವ ಚಿನ್ಹೆಗಳಿಂದ ಶ್ರದ್ಧೆಯ ಮೂರು ಪ್ರಕಾರಗಳನ್ನು ತಿಳಿಯಲು ಬರುವುದೋ ಅವುಗಳ ವಿವರಣೆಗಳನ್ನು ಹೇಳುವೆನು, ಕೇಳು ।।೭೫।।

ಯಜಂತೇ ಸಾತ್ತ್ವಿಕಾ ದೇವಾನ್ ಯಕ್ಷರಕ್ಷಾಂಸಿ ರಾಜಸಾಃ ।
ಪ್ರೇತಾನ್ ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ ॥೪॥

ತರೀ ಸಾತ್ತ್ವಿಕ ಶ್ರದ್ಧಾ । ಜಯಾಂಚಾ ಹೋಯ ಬಾಂಧಾ । ತಯಾ ಬಹುತಕರೂನಿ ಮೇಧಾ । ಸ್ವರ್ಗೀ ಆಥೀ ॥೭೬॥ ತೇ ವಿದ್ಯಾಜಾತ ಪಢತೀ । ಯಜ್ಞ ಕ್ರಿಯೇ ನಿವಡತೀ । ಕಿಂಬಹುನಾ ಪಡತೀ । ದೇವಲೋಕೀ ॥೭೭॥ ಆಣಿ ಶ್ರದ್ಧಾ ರಾಜಸಾ । ಘಡಲೇ ಜೇ ವೀರೇಶಾ । ತೇ ಭಜತೀ ರಾಕ್ಷಸಾ । ಖೇಚರಾ ಹನ ॥೭೮॥ ಶ್ರದ್ಧಾ ಜೇ ಕಾ ತಾಮಸೀ । ತೇ ಮೀ ಸಾಂಗೇನ ತುಜಪಾಶೀ । ಜೇ ಕಾ ಕೇವಳ ಪಾಪರಾಶೀ । ಆತಿಕರ್ಕಶೀ ನಿರ್ದಯತ್ವೇ ॥೭೯॥ ಜೀವವಧೇ ಸಾಧೂನಿ ಬಳೀ । ಭೂತಪ್ರೇತಕುಳೇ ಮೈಳೀ । ಸ್ಮಶಾನೀ ಸಂಧ್ಯಾಕಾಳೀ । ಪೂಜಿತೀ ಜೇ ॥೮೦॥ ತೇ ತಮೋಗುಣಾಚೇ ಸಾರ । ಕಾಢೂನಿ ನಿರ್ಮಿಲೇ ನರ । ಜಾಣ ತಾಮಸಿಯೇಚೇ ಘರ । ಶ್ರದ್ಧೇಚೇ ತೇ ॥೮೧॥ ಐಸೀ ಇಹೀ ತಿಹೀ ಲಿಂಗೀ । ತ್ರಿವಿಧ ಶ್ರದ್ಧಾ ಜಗೀ । ಪೈ ಹೇ ಯಯಾಲಾಗೀ । ಸಾಂಗತು ಅಸೇ ॥೮೨॥ ಜೇ ಹೇ ಸಾತ್ತ್ವಿಕ ಶ್ರದ್ಧಾ । ಜತನ ಕರಾವೀ ಪ್ರಬುದ್ಧಾ । ಯೇರೀ ದೋನೀ ವಿರುದ್ಧಾ । ಸಾಂಡಾವಿಯಾ ॥೮೩॥ ಹೇ ಸಾತ್ತ್ವಿಕಮತಿ ಜಯಾ । ನಿರ್ವಾಹತೀ ಹೋಯ ಧನಂಜಯಾ । ಬಾಗೂಲ ನೋಹೇ ತಯಾ । ಕೈವಲ್ಯ ತೇ ॥೮೪॥ ತೋ ನ ಪಢೋ ಕಾ ಬ್ರಹ್ಮಸೂತ್ರ । ನಾ ಲೋಢೋ ಸರ್ವ ಶಾಸ್ತ್ರ । ಸಿದ್ಧಾಂತ ನ ಹೋತ ಸ್ವತಂತ್ರ । ತಯಾಚ್ಯಾ ಹಾತೀ ॥೮೫॥ ಪರೀ ಶ್ರುತಿಸ್ಮೃತೀಂಚೇ ಅರ್ಥ । ಜೇ ಆಪಣ ಹೋಊನಿ ಮೂರ್ತ । ಅನುಷ್ಠಾನೇ ಜಗಾ ದೇತ । ವಡೀಲ ಜೇ ಹೇ ॥೮೬॥ ತಯಾಂಚೀ ಆಚರತೀ ಪಾಉಲೇ । ಪಾಊನಿ ಸಾತ್ತ್ವಿಕೀ ಶ್ರದ್ಧಾ ಚಾಲೇ । ತೋ ತೇಂಚಿ ಫಳ ಠೇವಿಲೇ । ಐಸೇ ಲಾಹೇ ॥೮೭॥ ಪೈ ಏಕ ದೀಪು ಲಾವೀ ಸಾಯಾಸೇ । ಆಣಿಕ ತೇಥೇ ಲಾಊ ಬೈಸೇ । ತರೀ ತೋ ಕಾಯ ಪ್ರಕಾಶೇ । ವಂಚಿಜೇ ಗಾ? ॥೮೮॥ ಕಾ ಯೇಕೇ ಮೋಲ ಅಪಾರ । ವೇಂಚೋನಿ ಕೇಲೇ ಧವಳಾರ । ತೋ ಸುರವಾಡು ವಸ್ತೀಕರ । ನ ಭೋಗೀ ಕಾಈ? ॥೮೯॥ ಹೇ ಅಸೋ ಜೋ ತಳೇ ಕರೀ । ತೇ ತಯಾಚೀಚ ತೃಷಾ ಹರೀ । ಕೀ ಸು ಆರಾಸೀಚಿ ಅನ್ನ ಘರೀ । ಯೇರಾ ನೋಹೇ? ॥೯೦॥ ಬಹುತ ಕಾಯ ಬೋಲೋ ಪೈ ಗಾ । ಏಕಾ ಗೌತಮಾಸೀಚಿ ಗಂಗಾ । ಯೇರಾ ಸಮಸ್ತಾ ಕಾಯ ಜಗಾ । ವೋಹೋಳ ಜಾಲೀ? ॥೯೧॥

ಶ್ಲೋಕಾರ್ಥ :- ಸತ್ತ್ವಗುಣದವರು ದೇವತೆಗಳನ್ನೂ, ರಜೋಗುಣದವರು ಯಕ್ಷರನ್ನೂ, ರಾಕ್ಷಸರನ್ನೂ ಪೂಜಿಸುತ್ತಾರೆ. ಉಳಿದ ತಮೋ ಗುಣದ ಜನರು ಪಿಶಾಚಿಗಳನ್ನೂ, ಭೂತಗಳನ್ನೂ ಪೂಜಿಸುತ್ತಾರೆ ।।೪।।

ಯಾರ ಅಂತಃಕರಣವು ಸಾತ್ತ್ವಿಕ ಶ್ರದ್ಧೆಯಿಂದ ಕೂಡಿಕೊಂಡಿದೆಯೋ, ಆತನ ಬುದ್ಧಿಯು ಬಹಳ ಮಾಡಿ ಸ್ವರ್ಗ ಪ್ರಾಪ್ತಿಯ ವಿಷಯವೇ ಆಗಿರುವುದು ।।೭೬।।

ಅವರು ಎಲ್ಲ ವಿದ್ಯೆಗಳನ್ನು ಕಲಿಯುವರು. ಯಾವ ಯಜ್ಞವನ್ನು ಮಾಡಿದರೆ ಯೋಗ್ಯವಾದೀತೆಂದು ಅದಕ್ಕಾಗಿ ಹುಡುಕಾಡುವರು. ಹೆಚ್ಚಿಗೇನು ಹೇಳಬೇಕು? ಅವರು ದೇವ ಲೋಕಗಳನ್ನು ಪಡೆಯುವರು ।।೭೭।।

ಮತ್ತು ಹೇ ವೀರಶಿರೋಮಣಿಯೇ, ಯಾರ ಅಂತಃಕರಣವು ರಜೋಗುಣಾತ್ಮಕ ಶ್ರದ್ಧೆಯಿಂದ ಕೂಡಿರುವುದೋ, ಅವರು ರಾಕ್ಷಸ ಪಿಶಾಚಿಗಳನ್ನು ಭಜಿಸುವರು ।।೭೮।।

ಯಾರ ಅಂತಃಕರಣವು ತಮೋಗುಣಾತ್ಮಕವಾಗಿರುವುದೋ, ಅವರ ಬಗ್ಗೆ ಹೇಳಬೇಕೆಂದರೆ ಅವರು ಕೇವಲ ಪಾಪ ರಾಶಿಯಾಗಿದ್ದು ಕಠೋರ ಹಾಗೂ ದಯಾಹೀನರಾಗಿರುತ್ತಾರೆ ।।೭೯।।

ಅವರು ಜೀವಗಳ ಘಾತ ಮಾಡಿ ಬಲಿಯನ್ನು ಕೊಡುವರು ಮತ್ತು ಭೂತ ಪ್ರೇತ ಇತ್ಯಾದಿ ದೈವತಗಳ ಅಮಂಗಳ ಸ್ಮಶಾನದಲ್ಲಿ ಸಾಯಂಕಾಲ ಪೂಜಿಸುವರು ।।೮೦।।

ಅವರು ತಮೋಗುಣದ ಸಾರವನ್ನು ತೆಗೆದು ನಿರ್ಮಿಸಿರುವ ಪುರುಷರು ಎಂದರೆ, ತಾಮಸ ಶ್ರದ್ಧೆಯ ಆಗರವೇ ಆಗಿರುವರು, ಹೀಗೆ ತಿಳಿ ।।೮೧।।

ಈ ಪ್ರಕಾರವಾಗಿ ಸಾತ್ತ್ವಿಕ, ರಾಜಸ ಮತ್ತು ತಾಮಸ ಹೀಗೆ ಮೂರು ಪ್ರಕಾರಗಳ ಶ್ರದ್ಧೆಯು ಜಗತ್ತಿನಲ್ಲಿರುವುದು. ಆದರೆ ನಾನು ನಿನಗೆ ಅದನ್ನು ಇದಕ್ಕಾಗಿ ಹೇಳುತ್ತಿರುವೆನು ।।೮೨।।

ಅದೇನೆಂದರೆ, ಈ ಮೂರರಲ್ಲಿರುವ ಸಾತ್ತ್ವಿಕ ಶ್ರದ್ಧೆಯನ್ನು ಸ್ವೀಕರಿಸಬೇಕು ಮತ್ತು ಹೇ ಬುದ್ಧಿವಂತನೇ, ಉಳಿದ ಎರಡು ರಾಜಸ ಮತ್ತು ತಾಮಸ ಶ್ರದ್ಧೆಗಳನ್ನು ತ್ಯಾಗ ಮಾಡಬೇಕು ।।೮೩।।

ಧನಂಜಯನೇ, ಈ ಸಾತ್ತ್ವಿಕ ಬುದ್ಧಿಯಿಂದ ಆಚರಿಸುವವರಿಗೆ ಮೋಕ್ಷಪ್ರಾಪ್ತಿಯು ಬೆದರು ಗೊಂಬೆಯಾಗಿರುವುದಿಲ್ಲ, ಅಂದರೆ ಕಠಿಣವಾಗಿರುವುದಿಲ್ಲ ।।೮೪।।

ಆ ಮನುಷ್ಯನು ವೇದದ ಪಠಣ ಮಾಡದವನಾಗಿರಲಿ, ಶಾಸ್ತ್ರಾಧ್ಯಯನವನ್ನು ಮಾಡದೇ ಇರಲಿ, ಅಥವಾ ಶಾಸ್ತ್ರಗಳ ಏಕವಾಕ್ಯತೆ ಮಾಡಿ ಯಾವ ಸಿದ್ಧಾಂತವನ್ನು ನಿಶ್ಚಯಿಸದೇ ಇರಲಿ ।।೮೫।।

ಆದರೆ ಯಾರು ಶ್ರುತಿ ಸ್ಮೃತಿಗಳ ಅಧ್ಯಯನವನ್ನು ಮಾಡಿ ಮೂರ್ತಿಮಂತ ವೇದವೇ ಆಗಿರುವರು ಮತ್ತು ಈ ವಿದ್ವಾನರು ತಮ್ಮ ಆಚರಣೆಗಳಿಂದ ಸಿದ್ಧಾಂತವನ್ನು ಜನರ ಮುಂದಿಡುವರು ।।೮೬।।

ಅವರ ಆಚರಣೆಯ ಮಾರ್ಗವನ್ನು ಹಿಡಿದು ಯಾರು ಸಾತ್ತ್ವಿಕ ಶ್ರದ್ಧೆಯಿಂದ ನಡೆಯುವರೋ, ಅವರಿಗೂ ಅವರಿಗೆ ಆದ ಫಲವೇ ದೊರಕುವುದು ।।೮೭।।

ಇಲ್ಲಿ ನೋಡು, ಒಬ್ಬ ಮನುಷ್ಯನು ಬಹಳ ಸಾಯಾಸ ಪಟ್ಟು ಒಂದು ದೀಪವನ್ನು ಹಚ್ಚಿದಾಗ ಇನ್ನೊಬ್ಬನು ಆ ದೀಪದಿಂದ ದೀಪವನ್ನು ಹಚ್ಚಿಕೊಂಡಾಗ ಈ ದೀಪವು ಆತನಿಗೆ ವಂಚಿಸಿ ಬೆಳಕು ಕೊಡಲಿಕ್ಕಿಲ್ಲವೇ? ।।೮೮।।

ಅಥವಾ ಒಬ್ಬ ಮನುಷ್ಯನು ಅಪಾರ ಧನವನ್ನು ಖರ್ಚಿಸಿ ಮನೆಯನ್ನು ಕಟ್ಟಿಸಿದಾಗ ಆ ಮನೆಯಲ್ಲಿ ಇರಲು ಬಂದ ಬೇರೆ ಮನುಷ್ಯನಿಗೆ ಸುಖ ಭೋಗಿಸಲು ಬರುವುದಿಲ್ಲವೇ? ।।೮೯।।

ಇದು ಇರಲಿ, ಯಾವನು ಕೆರೆಯನ್ನು ಕಟ್ಟಿಸುವನೋ ಅವನದೇ ನೀರಡಿಕೆಯು ಈ ನೀರಿನಿಂದ ದೂರಾಗುವುದೇ? ಅಥವಾ ಮನೆಯಲ್ಲಿ ಅಡುಗೆ ಮಾಡಿದವರ ಮಾತ್ರ ಹಸಿವೆ ನೀಗಿ, ಇತರರಿಗೆ ತೃಪ್ತಿಯಾಗುವುದಿಲ್ಲವೇ? ।।೯೦।।

ಸುಮ್ಮನೇ ಬಹಳ ಹೇಳಿ ಮಾಡುವುದೇನು? ಅರೇ, ಗೌತಮ ಋಷಿಯ ದೀರ್ಘ ಪ್ರಯತ್ನದಿಂದ ತಂದ ಗಂಗೆಯು ಆತನಿಗೆ ಮಾತ್ರ ಪವಿತ್ರಗೊಳಿಸಿ ಇತರರಿಗೆ ಹಳ್ಳವಾಗುವಳೇ? ।।೯೦।।

ಮ್ಹಣೌನಿ ಆಪುಲೀಯಾಪರೀ । ಶಾಸ್ತ್ರ ಅನುಷ್ಠಿತೀ ಕುಸರೀ । ಜಾಣೇ ತಯಾತೇ ಶ್ರದ್ಧಾಳೂ ಜೋ ವರೀ । ತೋ ಮೂರ್ಖಿಹೀ ತರೆ ।೯೨॥

ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜನಾಃ ।
ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ।೫॥

ನಾ ಶಾಸ್ತ್ರಾಚೇನಿ ಕೀರ ನಾಂವೇ । ಖಾಕರೋಹೀ ನೇಣತೀ ಜೇವೇ । ಪರೀ ಶಾಸ್ತ್ರಜ್ಞಾಂಹೀ ಶಿವೇ । ಟೇಂಕೋ ನೇದಿತೀ ।೯೩॥ ವಡಿಲಾಂಚಿಯಾ ಕ್ರಿಯಾ । ದೇಖೋನಿ ವಾತೀ ವಾಂಕುಲಿಯಾ । ಪಂಡಿತಾ ಡಾಕುಲಿಯಾ । ವಾಜವಿತೀ ।೯೪॥ ಆಪುಲೇನೀಚಿ ಆಟೋಪೇ । ಧನಿತ್ವಾಚೇನಿ ದರ್ಪೇ । ಸಾಚಚಿ ಪಾಖಂಡಾಚೀ ತಪೇ । ಆದರಿತೀ ।೯೫॥ ಆಪುಲಿಯಾ ಪುಢಿಲಾಂಚಿಯಾ । ಆಂಗೀ ಘಾಲೂನಿ ಕಾತಿಯಾ । ರಗತಮಾಂಸ ಪ್ರಣೀತಯಾ । ಭರ ಭರು ।೯೬॥ ರಿಚವಿತೀ ಜಳತಕುಂಡೀ । ಲಾವಿತೀ ಚೇಡ್ಯಾಚ್ಯಾ ತೋಂಡೀ । ನವಸಿಯಾ ದೇತೀ ಉಂಡೀ । ಬಾಳಕಾಂಚೀ ।೯೭॥ ಆಗ್ರಹಾಚಿಯಾ ಉಜರಿಯಾ । ಕ್ಷುದ್ರ ದೇವತಾ ವರಿಯಾ । ಅನ್ನತ್ಯಾಗೇ ಸಾತರಿಯಾ । ಠಾಕತೀ ಏಕ ।೯೮॥ ಅಗಾ ಆತ್ಮಪರಪೀಡಾ । ಬೀಜ ತಮಕ್ಷೇತ್ರೀ ಸುಹಾಡಾ । ಪೇರಿತೀ ಮಗ ಪುಢಾ । ತೇಂಚಿ ಪಿಕೇ ।೯೯॥ ಬಾಹೂ ನಾಹೀ ಆಪುಲಿಯಾ । ಆಣಿ ನಾವೇತೇಹೀ ಧನಂಜಯಾ । ನ ಧರೀ ಹೋಯ ತಯಾ । ಸಮುದ್ರೀ ಜೈಸೇ ।೧೦೦॥ ಕಾ ವೈದ್ಯಾತೇ ಕರೀ ಸಳಾ । ರಸು ಸಾಂಡೀ ಪಾಯಖೋಳಾ । ತೋ ರೋಗಿಯಾ ಜೇವೀ ಜಿವ್ಹಾಳಾ । ಸವತಾ ಹೋಯ ।೧೦೧॥ ನಾನಾ ಪಡಿಕರಾಚೇನಿ ಸಳೇ । ಕಾಢೀ ಆಪುಲೇಚಿ ಡೋಳೇ । ತೇ ವಾನವಸಾ ಆಂಧಳೇ । ಜೈಸೇ ಠಾಕೇ ।೧೦೨॥ ತೈಸೇ ತಯಾ ಆಸುರಾ ಹೋಯೇ । ಜೇ ನಿಂದೋನಿ ಶಾಸ್ತ್ರಾಂಚೀ ಸೋಯೇ । ಸೈಂಘ ಧಾಂವತಾತೀ ಮೋಹೇ । ಆಡವೀ ಜೇ ಕಾ ।೧೦೩॥ ಕಾಮು ಕರವೀ ತೇ ಕರಿತೀ । ಕ್ರೋಧು ಮಾರವೀ ತೇ ಮಾರಿತೀ । ಕಿಂಬಹುನಾ ಮಾತೇ ಪುರಿತೀ । ದುಃಖಾಚಾ ಗುಂಡಾ ।೧೦೪॥

ಕರ್ಷಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ ।
ಮಾಂ ಚೈವಾಂತಃಶರೀರಸ್ಥಂ ತಾನ್ ವಿದ್ಧ್ಯಾಸುರನಿಶ್ಚಯಾನ್ ।೬॥

ಆಪುಲಾ ಪರಾವಾ ದೇಹೀ । ದುಃಖ ದೇತೀ ಜೇ ಜೇ ಕಾಂಹೀ । ಮಜ ಆತ್ಮಯಾ ತೇತುಲಾಹೀ । ಹೋಯ ಶೀಣು ।೧೦೫॥

ಅದರಂತೆ ಯಾರು ದಕ್ಷತೆಯಿಂದ ಶಾಸ್ತ್ರಗಳ ಅನುಷ್ಠಾನವನ್ನು ಮಾಡುವರೋ, ಅದರಂತೆಯೇ ಶ್ರದ್ಧೆಯುಳ್ಳ ಪುರುಷರು ಆಚರಿಸುವರೋ, ಅವರು ಮೂರ್ಖರಾದರೂ ಉದ್ಧಾರರಾಗುವರು ।೯೨॥

ಶ್ಲೋಕಾರ್ಥ :– ಕಾಮರಾಗಗಳ ಆವೇಶಕ್ಕೆ ಒಳಗಾಗಿ, ಅಹಂಕಾರ ಮತ್ತು ದಂಭದಿಂದ ಕೂಡಿದವರಾಗಿ, ಶಾಸ್ತ್ರಾಜ್ಞೆಯನ್ನು ತಿಳಿಯದೆ ಮೂಢರಾಗಿ ।೫॥

ಹಾಡುವ ಆರಂಭದಲ್ಲಿ ಖೇಕರಿಸಿ ಧ್ವನಿಯನ್ನು ಶುದ್ಧಗೊಳಿಸಲು ಬಾರದವನು ಗಾಯನವನ್ನು ಮಾಡುವದೆಂತು? ಅದರಂತೆ ಶಾಸ್ತ್ರದ ಅಣುಮಾತ್ರವೂ ಜ್ಞಾನವಿಲ್ಲದವನು ಶಾಸ್ತ್ರಜ್ಞರನ್ನು ಕಂಡರೆ ಆಶ್ರಯವನ್ನು ಕೊಡಲಾರನು ।೯೩॥

ಹಿರಿಯರ ಆಚರಣೆಗಳನ್ನು ಕಂಡು ಅಪಹಾಸ್ಯ ಮಾಡುವರು ಮತ್ತು ಪಂಡಿತರ ಸಂವಾದವನ್ನು ಕೇಳಿ ಚಿಟಿಕೆ ಹಾರಿಸುತ್ತ ಗೊಂದಲ ಮಾಡುವರು ।೯೪॥

ಪ್ರತಿಯಾಗಿ ತಮ್ಮ ಜಾಣ್ಮೆ ತೋರಿಸಲು ದ್ರವ್ಯದ ಮದದಿಂದ ಇವರು ನಿಜವಾಗಿಯೂ ಪಾಖಂಡಿಗಳ ತಪದ ಆಚರಣೆಗಳನ್ನು ಮಾಡುವರು ।೯೫॥

ತಮ್ಮ ಮುಂದೆ ಬರುತ್ತಿರುವ ಮನುಷ್ಯನ ಶರೀರಗಳ ಮೇಲೆ ಶಸ್ತ್ರಗಳ ಘಾತ ಮಾಡಿ ಅವರ ರಕ್ತ ಮಾಂಸಗಳಿಂದ ಯಜ್ಞ ಪಾತ್ರೆಗಳನ್ನು ತುಂಬುತ್ತ ।೯೬॥

ಪ್ರದೀಪ್ತವಾದ ಅಗ್ನಿಕುಂಡಗಳಲ್ಲಿ ಚಂಡಿಗಳಿಗೆ ಆಹುತಿ ಕೊಡುವರು ಮತ್ತು ಇವರಿಗೆ ಹರಿಕೆ ಹೊತ್ತು ಬಾಲಕರ ಬಲಿಗಳನ್ನು ಕೊಡುವರು! ।೯೭॥

ಕ್ಷುದ್ರ ದೇವತೆಗಳಿಂದ ವರಪ್ರಾಪ್ತಿಗಾಗಿ ಆಗ್ರಹದಿಂದ ಏಳೇಳು ದಿನಗಳವರೆಗೆ ಅನ್ನವನ್ನು ಸೇವಿಸದೇ ಅನುಷ್ಠಾನಗಳನ್ನು ಮಾಡುವರು ।೯೮॥

ಹೇ ಸೂಜ್ಞನೇ, ಈ ಪ್ರಕಾರವಾಗಿ ಇವರು ತಮ್ಮನ್ನು ಹಾಗೂ ಇತರರನ್ನು ಪೀಡೆಯನ್ನು ಕೊಡುವಂತಹ ಬೀಜವನ್ನು ತಮೋರೂಪ ಭೂಮಿಯಲ್ಲಿ ಬಿತ್ತುವರು. ಆಗ ಅಲ್ಲಿ ತಮೋರೂಪ ಬೆಳೆಯೇ ಬರುವುದು ।೯೯॥

ಅರ್ಜುನಾ, ಯಾವ ಮನುಷ್ಯನಿಗೆ ಸ್ವತಃ ಈಸಲು ಬರುವುದಿಲ್ಲ, ಅವನು ಹಡಗದ ಆಶ್ರಯವನ್ನು ಪಡೆಯದೇ, ಸಮುದ್ರದಲ್ಲಿ ಹೋದನೆಂದರೆ ಆತನಿಗೆ ಯಾವ ಸ್ಥಿತಿಯಾಗುವುದೋ ।೧೦೦॥

ಅಥವಾ ವೈದ್ಯನ ದ್ವೇಷ ಮಾಡುತ್ತ ಔಷಧವನ್ನು ಒದ್ದು ಚೆಲ್ಲುವ ರೋಗಿಯು ಜೀವದಿಂದ ಬೇರೆಯಾಗುವನು, ಅಂದರೆ ಸಾಯುವನು ।೧೦೧॥

ಅಥವಾ ಯಾವನು ಕಣ್ಣಿದ್ದ ಮನುಷ್ಯನನ್ನು ತಿರಸ್ಕರಿಸುವವನು, ಇಲ್ಲವೆ ತನ್ನ ಕಣ್ಣುಗಳನ್ನು ಕಿತ್ತಿ ಒಗೆಯುವವನು, ಮನೆಯಲ್ಲಿ ಮೂಲೆ ಹಿಡಿದು ಕುಳಿತುಕೊಳ್ಳುವ ಪ್ರಸಂಗವು ಆ ಕುರುಡನಿಗೆ ಹೇಗೆ ಬರುವುದೋ ।೧೦೨॥

ಅದರಂತೆ ಈ ಅಸುರಿಗಳ ಸ್ಥಿತಿಯಾಗುವುದು! ಕಾರಣ, ಶಾಸ್ತ್ರಗಳಲ್ಲಿ ಹೇಳಿದ ಮಾರ್ಗಕ್ಕೆ ನಿಂದಿಸುವುದರಿಂದ ಮೋಹರೂಪ ಅರಣ್ಯದಲ್ಲಿ ಮನಬಂದಂತೆ ಧಾವಿಸುತ್ತಿರುವರು ।೧೦೩॥

ಕಾಮದ ಆಧೀನರಾಗಿ ಅದರ ಹೊಂದಾಣಿಕೆಯೊಂದಿಗೆ ಆಚರಿಸುವರು. ಕ್ರೋಧದ ಆಧೀನರಾಗಿ ಸಿಟ್ಟಾದವರನ್ನು ಕೊಲ್ಲುವರು. ಇಷ್ಟೇ ಅಲ್ಲ, ನನ್ನನ್ನೂ ದುಃಖದ ಕಲ್ಲಿನಲ್ಲಿ ಹುಗಿಯುವರು ।೧೦೪॥

ಶ್ಲೋಕಾರ್ಥ :– ಶರೀರೇಂದ್ರಿಯಗಳನ್ನು ಅವುಗಳಲ್ಲಿ ಅಂತರ್ಯಾಮಿಯಾಗಿರುವ ನನ್ನನ್ನೂ ಸೊರಗಿಸುವವರಾದ ಆ ಅವಿವೇಕಿಗಳನ್ನು ಅಸುರರಂಥ ಕಟುಕ ಮನಸ್ಸಿನವರೆಂದು ತಿಳಿ ।೬॥

ಅವರು ತಮ್ಮ ಹಾಗೂ ಇತರರ ಶರೀರಗಳಿಗೆ ಕೊಡುತ್ತಿರುವ ದುಃಖಗಳಿಂದ, ಎಲ್ಲರ ಅಂತರ್ಯಾಮಿಯಾಗಿರುವ ತನ್ನ ಆತ್ಮಕ್ಕೆ ಪೀಡೆಯಾಗುವುದು ।೧೦೫॥

ಪೈ ವಾಚೇಚೇನಿಹೀ ಪಾಲವೇ । ಪಾಪಿಯಾ ತಯಾ ನಾತಳಾವೇ । ಪರೀ ಪಡಿಲೇ ಸಾಂಗಾವೇ । ತ್ಯಜಾವಯಾ ।೧೦೬॥ ಪ್ರೇತ ಬಾಹಿರೇ ಘಾಲಿಜೇ । ಕಾ ಅಂತ್ಯಜು ಸಂಭಾಷಣೇ ತ್ಯಜಿಜೇ । ಹೇ ಅಸೋ ಹಾತೇ ಕ್ಷಾಳಿಜೇ । ಕಶ್ಮಲಾತೇ ।೧೦೭॥ ತೇಥ ಶುದ್ಧೀಚಿಯಾ ಆಶಾ । ತೋ ಲೇಪು ನ ಮನವೇ ಜೈಸಾ । ತಯಾಂತೇ ಸಾಂಡಾವಯಾ ತೈಸಾ । ಅನುವಾದು ಹಾ ।೧೦೮॥ ತರೀ ಅರ್ಜುನಾ ತೂ ತಯಾಂತೇ । ದೇಖಸೀ ತೈ ಸ್ಮರ ಹೋ ಮಾತೇ । ಜೇ ಆನ ಪ್ರಾಯಶ್ಚಿತ್ತ ಯೇಥೇ । ಮಾನೇಲ ನಾ ।೧೦೯॥ ಮ್ಹಣೌನಿ ಶ್ರದ್ಧಾ ಜೇ ಸಾತ್ತ್ವಿಕೀ । ಪುಢತೀ ತೇಚಿ ಪೈ ಯೇಕೀ । ಜತನ ಕರಾವೀ ನಿಕೀ । ಸರ್ವಾಪರೀ ।೧೧೦॥ ತರೀ ಧರಾವಾ ತೈಸಾ ಸಂಗು । ಜೇಣೇ ಪೋಖೇ ಸಾತ್ತ್ವಿಕ ಲಾಗು । ಸತ್ತ್ವವೃದ್ಧೀಚಾ ಭಾಗು । ಆಹಾರು ಘೇಪೇ ।೧೧೧॥ ಯೇರ್ಹವೀ ತರೀ ಪಾಹೀ । ಸ್ವಭಾವವೃದ್ಧೀಚ್ಯಾ ಠಾಯೀ । ಆಹಾರಾವಂಚೂನಿ ನಾಹೀ । ಬಳೀ ಹೇತು ।೧೧೨॥ ಪ್ರತ್ಯಕ್ಷ ಪಾಹೇ ಪಾ ವೀರಾ । ಜೋ ಸಾವಧ ಘೇ ಮದಿರಾ । ತೋ ಹೋಊನಿ ಠಾಕೇ ಮಾಜಿರಾ । ತಿಯೇಚಿ ಕ್ಷಣೇ ।೧೧೩॥ ಕಾ ಜೋ ಸಾವಿಯಾ ಅನ್ನರಸು ಸೇವೀ । ತೋ ವ್ಯಾಪಿಜೇ ವಾತಶ್ಲೇಷ್ಮಸ್ವಭಾವೀ । ಕಾಯ ಜ್ವರು ಜಾಲಿಯಾ ನಿವವೀ । ಪಯಾದಿಕ? ।೧೧೪॥ ನಾತರೀ ಅಮೃತ ಜಯಾಪರೀ । ಘೇತಲಿಯಾ ಮರಣ ವಾರೀ । ಕಾ ಆಪುಲಿಯಾ ಐಸೇ ಕರೀ । ಜೈಸೇ ವಿಷ ।೧೧೫॥ ತೇವೀ ಜೈಸಾ ಘೇಪೇ ಆಹಾರು । ಧಾತು ತೈಸಾಚಿ ಹೋಯ ಆಕಾರು । ಆಣಿ ಧಾತು ಐಸಾ ಅಂತರು । ಭಾವೋ ಪೋಖೇ ।೧೧೬॥ ಜೈಸೇ ಭಾಂಡಿಯಾಚೇನಿ ತಾಪೇ । ಆಂತುಲೇ ಉದಕಹೀ ತಾಪೇ । ತೈಸೀ ಧಾತು ವಶೇ ಆಟೋಪೇ । ಚಿತ್ತವೃತ್ತೀ ।೧೧೭॥ ಮ್ಹಣೌನಿ ಸಾತ್ತ್ವಿಕು ರಸು ಸೇವಿಜೇ । ತೈ ಸತ್ತ್ವಾಚೀ ವಾಢೀ ಪಾವಿಜೇ । ರಾಜಸಾ ತಾಮಸಾ ಹೋಈಜೇ । ಯೇರೀ ರಸೀ ।೧೧೮॥ ತರೀ ಸಾತ್ತ್ವಿಕು ಕೋಣ ಆಹಾರು । ರಾಜಸಾ ತಾಮಸಾ ಕಾಯೀ ಆಕಾರು । ಹೇ ಸಾಂಗೋ ಕರೀ ಆದರು । ಆಕರ್ಣನೀ ।೧೧೯॥

ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ ।
ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ॥೮॥

ಆಣಿ ಏಕಸರೇ ಆಹಾರಾ । ಕೈಸೇನಿ ತಿನೀ ಮೋಹರಾ । ಜಾಲಿಯಾ ತೇಹೀ ವೀರಾ । ರೋಕಡೇ ದಾಊ ।೧೨೦॥

ಇಲ್ಲಿ ನೋಡು, ಇಂಥ ಪಾಪಿಗಳನ್ನು ವಾಣಿಯ ಸೆರಗಿನಿಂದಲು ಸ್ಪರ್ಶಮಾಡಬಾರದು. ಆದರೆ ಅವರ ತ್ಯಾಗ ಮಾಡುವುದಕ್ಕಾಗಿ ಅವರ ಲಕ್ಷಣಗಳನ್ನು ಹೇಳುವ ಪ್ರಸಂಗ ಒದಗಿತು ! ॥೧೦೬॥

ಹೆಣವನ್ನು ಮನೆಯಿಂದ ಹೊರಗೆ ಹಾಕಬೇಕಾಗುವುದು. ಅಂತ್ಯಜನೊಂದಿಗೆ ಸಂಭಾಷಣೆ ಮಾಡಬಾರದು, ಆದರೂ ಎರಡು ಶಬ್ದಗಳಿಂದ ಮಾತನಾಡಿ ಆತನಿಂದ ದೂರಾಗಬೇಕಾಗುವುದು. ಇದಿರಲಿ, ಮಲವನ್ನು ಕೈಯಿಂದಲೇ ತೊಳೆಯಬೇಕಾಗುವುದು ॥೧೦೭॥

ಇಲ್ಲಿ ಕೇವಲ ಶುದ್ಧಿಯ ನಿಮಿತ್ತದಿಂದಲೇ ಅವರನ್ನು ಸ್ಪರ್ಶ ಮಾಡಬೇಕಾಗಿದೆ. ಆದ್ದರಿಂದ ಸ್ಪರ್ಶದ ದೋಷವು ಮನದಲ್ಲಿ ಬಾರದು. ಅದರಂತೆ ಈ ಪಾಪಿಗಳ ತ್ಯಾಗಕ್ಕಾಗಿ ಅವರ ಲಕ್ಷಣಗಳನ್ನು ಹೇಳಲಾಯಿತು ॥೧೦೮॥

ಆದರೆ ಅರ್ಜುನಾ, ಇವರನ್ನು ಕಂಡ ಕೂಡಲೇ ನೀನು ನನ್ನ ಸ್ಮರಣೆಯನ್ನು ಮಾಡು. ಕಾರಣ ಆ ಪಾಪಕ್ಷಾಲನಕ್ಕೆ ಇದರ ಹೊರತು ಬೇರೆ ಪ್ರಾಯಶ್ಚಿತ್ತವು ಉಪಯೋಗವಾಗುವುದಿಲ್ಲ ॥೧೦೯॥

ಆದ್ದರಿಂದ ಸಾತ್ತ್ವಿಕ ಶ್ರದ್ಧೆಯನ್ನು ಮೇಲಿಂದ ಮೇಲೆ ಎಲ್ಲ ಪ್ರಕಾರಗಳಿಂದ ರಕ್ಷಿಸಬೇಕು ॥೧೧೦॥

ಇದಲ್ಲದೇ ಯಾರಿಂದ ಈ ಸಾತ್ತ್ವಿಕ ಶ್ರದ್ಧೆಯು ಬೆಳೆಯುವುದೋ, ಅವರ ಸಂಗತಿಯನ್ನು ಮಾಡಬೇಕು ಮತ್ತು ಯಾವ ಅನ್ನದಿಂದ ಸಾತ್ತ್ವಿಕ ಬುದ್ಧಿಯು ಬೆಳೆಯುವುದೋ, ಅದೇ ಆಹಾರವನ್ನು ಸೇವಿಸಬೇಕು ॥೧೧೧॥

ಇಲ್ಲದಿದ್ದರೆ, ಹೀಗೆ ನೋಡು, ಸ್ವಭಾವ ವೃದ್ಧಿಯಾಗಬೇಕಾದರೆ ಆಹಾರದ ಹೊರತಾಗಿ ಉಳಿದ ಬೇರೆ ಯಾವ ಪ್ರಬಲ ಸಾಧನವು ಇರುವುದಿಲ್ಲ ॥೧೧೨॥

ಹೇ ವೀರನೇ, ಪ್ರತ್ಯಕ್ಷ ಪ್ರಮಾಣ ಹೀಗಿದೆ ನೋಡು, ಯಾವನು ಪರಿಪೂರ್ಣವಾಗಿ ಎಚ್ಚರವಾಗಿ ಇರುವವನು ಸೆರೆಯನ್ನು ಕುಡಿದಾಕ್ಷಣವೇ ಉನ್ಮತ್ತನಾಗುವನು ॥೧೧೩॥

ಅಥವಾ ಯಾವ ಮನುಷ್ಯನು ಯಾವಾಗಲೂ ಅಕ್ಕಿ ಅನ್ನವನ್ನು ಸೇವಿಸುವನೋ, ಅವನಿಗೆ ಸ್ವಭಾವತಃವೇ ವಾತ, ಕಫಗಳ ವಿಕೃತಿಯಾಗುವುದು. ಜ್ವರ ಬಂದಾಗ ಹಾಲಿನಿಂದ ಕಡಿಮೆಯಾದೀತೇ? ॥೧೧೪॥

ಅಥವಾ ಯಾವ ಪ್ರಕಾರವಾಗಿ ಅಮೃತದ ಸೇವನೆಯಿಂದ ಮರಣವು ಇಲ್ಲದಾಗುವುದು. ಇಲ್ಲವೇ ವಿಷದ ಸೇವನೆಯಿಂದ ರಕ್ತ ಮಾಂಸಗಳು ವಿಷವಾಗುವವು (ಮರಣವಾಗುವುದು) ॥೧೧೫॥

ಅದರಂತೆ ಆಹಾರ ಸೇವಿಸಿದಂತೆಯೇ, ರಸ, ರಕ್ತ, ಮಾಂಸ, ಮೇದ, ಅಸ್ಥಿ, ಮಜ್ಜಾ ಮತ್ತು ಶುಕ್ರ ಈ ಧಾತುಗಳ ಆಕಾರವಾಗುವುದು ಮತ್ತು ಧಾತುಗಳಂತೆಯೇ ಅಂತಃಕರಣದಲ್ಲಿ ಭಾವವು ಪುಷ್ಟವಾಗುವುದು ॥೧೧೬॥

ಭಾಂಡೆಯು ಕಾದಂತೆ ಒಳಗಿನ ನೀರು ಸಹ ಕಾಯುವುದು, ಅದರಂತೆ, ಧಾತುಗಳ ಹೊಂದಿಕೆಯಿಂದ ಚಿತ್ತ ವೃದ್ಧಿಯಾಗುವುದು ॥೧೧೭॥

ಆದ್ದರಿಂದ ಸಾತ್ತ್ವಿಕ ಸೇವನೆಯಿಂದ ಸಾತ್ತ್ವಿಕ ಭಾವವೇ ಉತ್ಪನ್ನವಾಗುವುದು ಮತ್ತು ರಾಜಸ ಮತ್ತು ತಾಮಸ ಭಾವಗಳ ಉತ್ಪತ್ತಿಯು ಆಯಾರಸಗಳಿಂದಲೇ ಆಗುವುವು ॥೧೧೮॥

ಅದಕ್ಕಾಗಿ ಸಾತ್ತ್ವಿಕ ಯಾವುದು, ಮತ್ತು ರಾಜಸ ಹಾಗೂ ತಾಮಸ ಆಹಾರಗಳು ಯಾವುವು ಎಂಬುದನ್ನು ನಾನು ಹೇಳುವೆನು. ಆದರದಿಂದ ಲಕ್ಷಕೊಟ್ಟು ಕೇಳು ॥೧೧೯॥

**ಶ್ಲೋಕಾರ್ಥ :-** ಎಲ್ಲರ ಆಹಾರದಲ್ಲಿಯೂ, ಹಾಗೆಯೇ, ಯಜ್ಞ, ತಪಸ್ಸು, ದಾನ ಇವುಗಳಲ್ಲಿಯೂ ಪ್ರಿಯವು ಮೂರು ವಿಧ. ಅವುಗಳ ಭೇದವನ್ನು ಕೇಳು ॥೭॥

ಹೇ ವೀರನೇ, ಸಾರಾಸಗಟವಾಗಿ ಆಹಾರದ ಮೂರು ಪ್ರಕಾರಗಳು ಹೇಗಾದವು ಎಂಬುವುದಕ್ಕೆ ಸ್ಪಷ್ಟವಾಗಿ ಹೇಳುವೆನು ॥೧೨೦॥

ತರೀ ಜೇವಣಾರಾಚಿಯಾ ರುಚೀ । ನಿಷ್ಪತ್ತಿ ಕೀ ಬೋನಿಯಾಂಚೀ । ಆಣಿ ಜೇವಿತಾ ತಂವ ಗುಣಾಂಚೀ । ದಾಸೀ ಯೇಥ ॥೧೨೧॥ ಜೋ ಜೀವ ಕರ್ತಾ ಭೋಕ್ತಾ । ತೋ ಗುಣಾಸ್ತವ ಸ್ವಭಾವತಾ । ಪಾವೋನಿಯಾ ತ್ರಿವಿಧತಾ । ಚೇಷ್ಟೇ ತ್ರಿಧಾ ॥೧೨೨॥ ಮ್ಹಣೌನಿ ತ್ರಿವಿಧು ಆಹಾರು । ಯಜ್ಞುಹೀ ತ್ರಿಪ್ರಕಾರು । ತಪ ದಾನ ಹನ ವ್ಯಾಪಾರು । ತ್ರಿವಿಧಚಿ ತೇ ॥೧೨೩॥ ಪೈ ಆಹಾರ ಲಕ್ಷಣ ಪಹಿಲೇ । ಸಾಂಗೋ ಜೇ ಮ್ಹಣಿತಲೇ । ತೇ ಆಈಕ ಗಾ ಭಲೇ । ರೂಪ ಕರೂ ॥೧೨೪॥

ಆಯುಸ್ಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ।
ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾಃ ಆಹಾರಾಃ ಸಾತ್ತ್ವಿಕಪ್ರಿಯಾಃ ॥೮॥

ತರೀ ಸತ್ತ್ವಗುಣಾಕಡೇ । ಜೈ ದೇವೇ ಭೋಕ್ತಾ ಪಡೇ । ತೈ ಮಧುರೀ ರಸೀ ವಾಢೇ । ಮೋಚು ತಯಾ ॥೧೨೫॥ ಆಂಗೇಂಚಿ ದ್ರವ್ಯೇ ಸುರಸೇ । ಜೇ ಆಂಗೇಂಚಿ ಪದಾರ್ಥ ಗೋಡಸೇ । ಆಂಗೇಂಚಿ ಸ್ನೇಹೇ ಬಹುವಸೇ । ಸುಪಕ್ಕೇ ಜಿಯೇ ॥೧೨೬॥ ಆಕಾರೇ ನವ್ಹತೀ ಡಗಳೇ । ಸ್ಪರ್ಶೇ ಅತಿ ಮವಾಳೇ। ಜಿಭೇಲಾಗೀ ಸ್ನೇಹಾಳೇ । ಸ್ವಾದೇ ಜಿಯೇ ॥೧೨೭॥ ರಸೇ ಗಾಢೀ ವರೀ ಢಿಲೀ । ದ್ರವಭಾವೀ ಆಥಿಲೀ । ಠಾಯೇ ಠಾವೋ ಸಾಂಢಿಲೀ । ಅಗ್ನಿ ತಾಪೇ ॥೧೨೮॥ ಆಂಗೇ ಸಾನೇ ಪರಿಣಾಮೇ ಥೋರು । ಜೈಸೇ ಗುರುಮುಖೀಂಚೇ ಅಕ್ಷರು । ತೈಶೀ ಅಲ್ಪೀ ಜಿಹೀ ಅಪಾರು । ತೃಪ್ತಿ ರಾಹೇ ॥೧೨೯॥ ಆಣಿ ಮುಖೀ ಜೈಸೀ ಗೋಡೇ । ತೈಸೀಚಿಹಿ ತೇ ಆತುಲೇ ಕಡೇ । ತಿಯೇ ಅನ್ನೀ ಪ್ರೀತಿ ವಾಢೇ । ಸಾತ್ತ್ವಿಕಾಂಸೀ ॥೧೩೦॥ ಏವಂ ಗುಣ ಲಕ್ಷಣ । ಸಾತ್ತ್ವಿಕ ಭೋಜ್ಯ ಜಾಣ । ಆಯುಷ್ಯಾಚೇ ತ್ರಾಣ । ನೀಚ ನವೇ ಹೇ ॥೧೩೧॥ ಯೇಣೇ ಸಾತ್ತ್ವಿಕ ರಸೇ । ಜಂವ ದೇಹೀ ಮೇಹೋ ವರಿಷೇ । ತಂವ ಆಯುಷ್ಯನದೀ ಉಸಸೇ । ದಿಹಾಚಿ ದಿಹಾ ॥೧೩೨॥ ಸತ್ತ್ವಾಚಿಯೇ ಕೀರ ಪಾಳತೀ । ಕಾರಣ ಹಾಚಿ ಸುಮತೀ । ದಿವಸಾಚಿಯೇ ಉನ್ನತೀ । ಭಾನು ಜೈಸಾ ॥೧೩೩॥ ಆಣಿ ಶರೀರಾ ಹನ ಮಾನಸಾ । ಬಳಾಚಾ ಪೈ ಕುವಾಸಾ । ಹಾ ಆಹಾರು ತರೀ ದಶಾ । ಕೈಂಚೇ ರೋಗಾ ॥೧೩೪॥ ಹಾ ಸಾತ್ತ್ವಿಕು ಹೋಯ ಭೋಗ್ಯು । ತೈಂಚಿ ಭೋಗಾವಯಾ ಆರೋಗ್ಯು । ಶರೀರಾಸೀ ಭಾಗ್ಯು । ಉದಯಲೇ ಜಾಣೋ ॥೧೩೫॥ ಆಣಿ ಸುಖಾಚೇ ಘೇಣೇ ದೇಣೇ । ನಿಕೇ ಉವಾಯಾ ಯೇ ಯೇಣೇ । ಹೇ ಅಸೋ ವಾಢೇ ಸಾಜಣೇ । ಆನಂದೇಸೀ ॥೧೩೬॥

ಇಲ್ಲಿ ನೋಡು, ಊಟ ಮಾಡುವವನ ರುಚಿ ಪ್ರಕಾರವಾಗಿ ಆಹಾರವನ್ನು ಸಿದ್ಧಗೊಳಿಸಬೇಕಾಗುವುದು ಮತ್ತು ಊಟ ಮಾಡುವವನು ಮಾತ್ರ ಗುಣದ ದಾಸನಾಗಿರುವನು! ।।೧೨೧।।

ಯಾವ ಜೀವನು ಕರ್ತಾ ಹಾಗೂ ಭೋಕ್ತಾ ನಿರುವನು. ಆತನು ಸ್ವಭಾವತಃವೇ ಗುಣಗಳ ಹೊಂದಿಕೆಯಿಂದ ಮೂರು ಪ್ರಕಾರದ ಚಿತ್ತವೃತ್ತಿಯನ್ನು ಧರಿಸಿ ಅದರಂತೆ ನಡೆಯುವನು ।।೧೨೨।।

ಆದ್ದರಿಂದ ಆಹಾರವು ಮೂರು ಪ್ರಕಾರಗಳಾಗಿರುವುವು. ಯಜ್ಞ, ತಪ ಮತ್ತು ದಾನ ಇವು ಸಹ ಮೂರು ಪ್ರಕಾರಗಳಾಗಿರುವುವು ಮತ್ತು ವ್ಯಾಪಾರವೂ ಮೂರು ಪ್ರಕಾರಗಳಾಗಿರುವುವು ।।೧೨೩।।

ಆದರೆ, ಮೊದಲನೆಯದಾಗಿ ಆಹಾರಗಳ ಲಕ್ಷಣಗಳನ್ನು ಹೇಳುವೆನೆಂದು ಹೇಳಿದ್ದಕ್ಕೆ ಅದನ್ನು ಉತ್ತಮ ರೀತಿಯಲ್ಲಿ ಸ್ಪಷ್ಟವಾಗಿ ಹೇಳುವೆನು. ಸರಿಯಾಗಿ ಕೇಳು ।।೧೨೪।।

ಶ್ಲೋಕಾರ್ಥ :- ಆಯುಷ್ಯವನ್ನೂ, ಉತ್ಸಾಹವನ್ನೂ, ಶಕ್ತಿಯನ್ನೂ, ಆರೋಗ್ಯವನ್ನೂ, ಸುಖವನ್ನೂ, ಪ್ರೀತಿಯನ್ನೂ, ಹೆಚ್ಚಿಸುವುದಾಗಿ ರಸದಿಂದಲೂ, ಜಿಡ್ಡಿನಿಂದಲೂ ಕೂಡಿ ಕೆಲವು ಕಾಲ ಶರೀರದಲ್ಲಿ ಉಳಿಯು ವಂಥದ್ದಾಗಿರುವ ಮನೋಹರವಾದ ಆಹಾರಗಳು ಸಾತ್ತ್ವಿಕರಿಗೆ ಬೇಕೆನಿಸುತ್ತದೆ ।।೮।।

ಜೀವವು ದೈವಯೋಗದಿಂದ ಸತ್ತ್ವಗುಣದಿಂದ ಕೂಡಿದರೆ, ಆಗ ಮಧುರವಾದ ಆಹಾರಗಳನ್ನು ಭುಂಜಿಸುವ ವಿಶೇಷ ಪ್ರೀತಿಯು ಆತನಿಗಾಗುವುದು ।।೧೨೫।।

ಯಾವ ಪದಾರ್ಥವು ಸ್ವತಃ ಉತ್ತಮವಾದ ರಸದಿಂದ ಕೂಡಿದ,ಸ್ವತಃ ಸಿಹಿಯಾಗಿರುವ, ಸ್ವತಃ ಸ್ನಿಗ್ಧವಾದ ಮತ್ತು ಪಕ್ವವಾಗಿರುವಂತಹದ್ದು ।।೧೨೬।।

ಯಾವ ಆಕಾರದಿಂದ ಬಹಳ ದೊಡ್ಡದಾಗಿರುವುದಿಲ್ಲ, ಕೈಗೆ ಬಹಳ ಮೃದುವಾಗಿರುವುವು. ನಾಲಿಗೆಯ ಮೇಲೆ ಇಡಲು ಬೇಗನೇ ಕರಗುವುವು, ಹಾಗೂ ರುಚಿಯಾಗಿರುವುವು ।।೧೨೭।।

ಯಾವ ರಸದಿಂದ ಪೂರ್ಣಭರಿತವಾದ್ದು, ರಸ ಹೊರಡಲು ಕಠಿಣವಿರುವುದಿಲ್ಲ. ದ್ರವರೂಪವಿದ್ದು ಈಗಾಗಲೇ ಅಗ್ನಿತಾಪದಿಂದ ಬಿಟ್ಟಿರುವುದು ।।೧೨೮।।

ಶ್ರೀಗುರು ಮುಖದಿಂದ ಅಕ್ಷರಗಳು ಕಡಿಮೆ ಇದ್ದರೂ ಪರಿಣಾಮ ಮಾತ್ರ ಬಹಳ ಹಿರಿಮೆಯಿಂದ ಕೂಡಿರುವುದು. ಅದರಂತೆ ಯಾವ ಪದಾರ್ಥವನ್ನು ಕಡಿಮೆ ಭುಂಜಿಸಿದರೂ ಅದರಿಂದ ಅಪಾರ ತೃಪ್ತಿಯಾಗುವುದು ।।೧೨೯।।

ಮತ್ತು ಭುಂಜಿಸುವಾಗ ಬಾಯಿಗೆ ಹೇಗೆ ರುಚಿಯಾಗುವುದೋ, ಅದರಂತೆ ಒಳಗೂ ಪರಿಣಾಮವು ಉತ್ತಮವಾಗಿರುವುದು. ಇಂಥ ಅನ್ನಕ್ಕಾಗಿ ಸಾತ್ತ್ವಿಕರ ವಿಶೇಷ ಪ್ರೀತಿ ಇರುವುದು ।।೧೩೦।।

ಈ ಪ್ರಕಾರವಾಗಿ ಸಾತ್ತ್ವಿಕ ಮನುಷ್ಯನಿಗೆ ಪ್ರೀತಿಯಾಗಿರುವ ಆಹಾರದ ಲಕ್ಷಣಗಳಾಗಿವೆ. ಇಂಥ ಆಹಾರದ ಸೇವನೆಯಿಂದ ಆಯುಷ್ಯದ ಬಲವು ನಿತ್ಯವೂ ಬೆಳೆಯುವುದು ।।೧೩೧।।

ಹೀಗೆ ಸಾತ್ತ್ವಿಕ ರಸರೂಪ ಮೋಡಗಳ ವೃಷ್ಟಿಯು ಯಾವ ಯಾವ ದೇಹದ ಮೇಲೆ ಆಗುವುದೋ, ಅವು ಆಯುಷ್ಯರೂಪ ನದಿಗೆ ದಿನೇ ದಿನೇ ದೇಹದಲ್ಲಿ ಪೂರ ಬರುವುದು ।।೧೩೨।।

ಹೇ ಸುಮತಿಯೇ, ಯಾವ ಪ್ರಕಾರವಾಗಿ ಹಗಲಿನ ಉನ್ನತಿಗೆ ಹೇಗೆ ಸೂರ್ಯನು ಕಾರಣನೋ, ಅದರಂತೆ ಸತ್ತ್ವದ ರಕ್ಷಣೆ ಮಾಡಲು ಇವೇ ಆಹಾರಗಳು ಯೋಗ್ಯವಾಗಿರುವುವು ।।೧೩೩।।

ಮತ್ತು ಶರೀರ ಹಾಗೂ ಮನಸ್ಸು ಇವುಗಳ ಬಲ ವೃದ್ಧಿಯು ಇದೇ ಆಹಾರಗಳಿಂದಾಗುವುದು. ಅಂದ ಮೇಲೆ ಅಲ್ಲಿ ರೋಗದ ಪ್ರವೇಶವು ಹೇಗಾಗಬೇಕು? ।।೧೩೪।।

ಈ ಸಾತ್ತ್ವಿಕ ಆಹಾರದ ಸೇವನೆಯಿಂದಲೇ ಶರೀರಕ್ಕೆ ಆರೋಗ್ಯವನ್ನು ಭೋಗಿಸಲು ಭಾಗ್ಯವು ಲಭಿಸುವುದು, ಹೀಗೆ ತಿಳಿದುಕೊ ।।೧೩೫।।

ಮತ್ತು ಆತನ ಎಲ್ಲ ಅವ್ಯವಹಾರಗಳ ವಿಸ್ತಾರವು ಸುಖಮಯವಾಗುವುದು. ಇಷ್ಟೇ ಅಲ್ಲ, ಆತನ ಸ್ನೇಹವು ಆನಂದದೊಂದಿಗೆ ಇರುವುದು ।।೧೩೬।।

ಐಸಾ ಸಾತ್ತ್ವಿಕು ಆಹಾರು । ಪರಿಣಮಲಾ ಥೋರು । ಕರೀ ಹಾ ಉಪಕಾರು । ಸಬಾಹ್ಯಾಸೀ ॥೧೩೭॥ ಆತಾ ರಾಜಸಾಸಿ ಪ್ರೀತೀ । ಜಿಹೀ ರಸೀ ಆಥೀ । ಕರೂ ತಯಾಹೀ ವ್ಯಕ್ತೀ । ಪ್ರಸಂಗೇ ಗಾ ॥೧೩೮॥

ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ।
ಆಹಾರಾ ರಾಜಸಸ್ಯೇಷ್ಟಾಃ ದುಃಖಶೋಕಾಮಯಪ್ರದಾಃ॥೯॥

ತರೀ ಮಾರೇ ಉಣೇ ಕಾಳಕೂಟ । ತೇಣೇ ಮಾನೇ ಜೇ ಕಡುವಟ । ಕಾ ಚುನಿಯಾಹೂನಿ ದಾಸಟ । ಆಮ್ಲ ಹನ ॥೧೩೯॥ ಕಣಿಕೀತೇ ಜೈಸೇ ಪಾಣೀ । ತೈಸೀಂಚಿ ಮೀಠ ಬಾಂಧಯಾ ಆಣೀ । ತೇತುಲೀಚ ಮೇಳವಣೀ । ರಸಾಂತರಾಚೀ ॥೧೪೦॥ ಐಸೇ ಖಾರಟ ಅಪಾಡೇ । ರಾಜಸಾ ತಯಾ ಆವಡೇ । ಉನ್ಹಾಚೇನಿ ಮಿಷೇ ತೋಂಡೇ । ಆಗೀಚಿ ಗಿಳೀ ॥೧೪೧॥ ವಾಫೇಚಿಯಾ ಸಿಗೇ । ವಾತೀಹೀ ಲಾವಿಲ್ಯಾ ಲಾಗೇ । ತೈಸೇ ಉನ್ಹ ಮಾಗೇ । ರಾಜಸು ತೋ ॥೧೪೨॥ ವಾವದಳ ಪಾಡೂನಿ ಠಾಯೇ । ಸಾಬಳು ಡಾಹಾರಲಾ ಆಹೇ । ತೈಸೇ ತೀಖ ತೋ ಖಾಯೇ । ಜೇ ಘಾಯೇವೀಣ ರೂಪೇ ॥೧೪೩॥ ಆಣಿ ರಾಕೇಹೂನಿ ಕೋರಡೇ । ಆಂತ ಬಾಹೇರೀ ಯೇಕೇ ಪಾಡೇ । ತೋ ಜಿವ್ಹಾದಂಶು ಆವಡೇ । ಬಹು ತಯಾ ॥೧೪೪॥ ಪರಸ್ಪರೇ ದಾಂತಾ । ಆದಳು ಹೋಯ ಖಾತಾ ।ತೋ ಗಾ ತೋಂಡೀ ಘೇತಾ । ತೋಷೋ ಲಾಗೇ ॥೧೪೫॥ ಆಧೀಂಚ ದ್ರವ್ಯೇ ಚುರಮುರಿ । ವರೀ ಪರವಡಿಜತೀ ಮೋಹರೀ । ಜಿಯೇ ಘೇತಾ ಹೋತೀ ಧುವಾರೀ । ನಾಕೇತೊಂಡೇ ॥೧೪೬॥ ಹೇ ಅಸೋ ಉಗೇ ಆಗೀತೇ । ಮ್ಹಣೇ ತೈಸೇ ರಾಇತೇ । ಪಢಿಯೇ ಪ್ರಾಣಾಪರೌತೇ । ರಾಜಸಾಸಿ ಗಾ ॥೧೪೭॥ ಐಸಾ ನ ಪುರೋನಿ ತೋಂಡಾ । ಜಿಭಾ ಕೇಲಾ ವೇಡಾ । ಅನ್ನಮಿಷೇ ಅಗ್ನಿ ಭಡಭಡಾ । ಪೋಟೀ ಭರೀ ॥೧೪೮॥ ತೈಸಾಚಿ ಲವಂಗಾ ಸುಂಠೇ । ಮಗ ಭುಈ ನಾ ಸೇಜೇ ಖಾಟೇ । ಪಾಣಿಯಾಚೇ ನ ಸುಟೇ । ತೋಂಡೋನಿ ಪಾತ್ರ ॥೧೪೯॥ ತೇ ಆಹಾರ ನವ್ಹತೀ ಘೇತಲೇ । ವ್ಯಾಧಿವ್ಯಾಳ ಜೇ ಸುತಲೇ । ತೇ ಚೇವವಾವಯಾ ಘಾತಲೇ । ಮಾಜವಣ ಪೋಟೀ ॥೧೫೦॥ ತೈಸೇ ಏಕಮೇಕಾ ಸಳೇ । ರೋಗ ಉಠತೀ ಏಕೇ ವೇಳೇ । ಐಸಾ ರಾಜಸು ಆಹಾರು ಫಳೇ । ಕೇವಳ ದುಃಖೇ ॥೧೫೧॥ ಏವಂ ರಾಜಸಾ ಆಹಾರಾ । ರೂಪ ಕೇಲೇ ಧನುರ್ಧರಾ । ಪರಿಣಾಮಾಚಾಹೀ ವಿಸುರಾ । ಸಾಂಗಿತಲಾ ॥೧೫೨॥

ಈ ಪ್ರಕಾರವಾಗಿ ಈ ಸಾತ್ತ್ವಿಕ ಆಹಾರದ ಪರಿಣಾಮವು ದೊಡ್ಡದಾಗಿದ್ದು, ಅದು ಶರೀರಕ್ಕೆ ಒಳಹೊರಗೆ ಸುಖವನ್ನು ಕೊಡುವುದು ।।೧೩೭।।

ಈ ರಾಜಸಗುಣದ ಮನುಷ್ಯನಲ್ಲಿ ಯಾವ ಆಹಾರದ ಮೇಲೆ ಪ್ರೀತಿ ಇರುವುದು ಎಂಬುವುದನ್ನು ನಿನಗೆ ಪ್ರಸಂಗಾನುಸಾರವಾಗಿ ಸ್ಪಷ್ಟಮಾಡಿ ಹೇಳುವೆನು ।।೧೩೮।।

**ಶ್ಲೋಕಾರ್ಥ :-** ಬಹಳ ಖಾರ, ಹುಳಿ, ಉಪ್ಪು, ಬಿಸಿ, ತೀಕ್ಷ್ಣ, ಒಣಗಿರುವಿಕೆ, ಸೀದವುಗಳು ಅಥವಾ ಹುರಿದವುಗಳು, ಒಡನೆ ಆಗುವ ಪೀಡೆಯನ್ನೂ ಆಮೇಲೆ ಆಗುವ ದುಃಖವನ್ನೂ, ರೋಗವನ್ನೂ ಉಂಟು ಮಾಡತಕ್ಕಂಥ ಆಹಾರಗಳು, ಇವು ರಾಜಸರಿಗೆ ಬೇಕೆನಿಸುತ್ತವೆ ।೯।।

ತರುವಾಯ, ಮಾರಕತನದಿಂದ ಮಾತ್ರ ಕಡಿಮೆ ಇದ್ದರೂ ಕಾಳಕೂಟದಂತೆ ವಿಷ ಅಥವಾ ಸುಣ್ಣಕ್ಕಿಂತಲೂ ದಾಹಕವಾಗಿದ್ದು, ಯಾವುದು ಹುಳಿಯಾಗಿರುವುದು ।।೧೩೯।।

ಹಿಟ್ಟು ತೋಯಿಸಲು ಬೇಕಾಗುವಷ್ಟೇ ನೀರಿನಂತೆ ಉಪ್ಪು ಮತ್ತು ಅದರಲ್ಲಿ ಖಾರವಾದ ಪದಾರ್ಥಗಳನ್ನು ಕೂಡಿಸುವುದು ।।೧೪೦।।

ಈ ಪ್ರಕಾರದ ಅತಿಶಯ ಖಾರವಾದ ಪದಾರ್ಥಗಳು ರಾಜಸಗುಣದ ಮನುಷ್ಯರಿಗೆ ಹಿಡಿಸುವುದು ಮತ್ತು ಬಿಸಿ ಬಿಸಿಯಾಗಿ ತಿನ್ನುವುದನ್ನು ನೋಡಿದರೆ, ಅಗ್ನಿಯನ್ನೇ ಭಕ್ಷಿಸುವಂತೆ ಕಾಣುವುದು ।।೧೪೧।।

ಯಾವ ಪದಾರ್ಥಗಳಿಂದ ಎಷ್ಟೊಂದು ಉಗಿಯು ಹೊರಡುವುದೆಂದರೆ ಅದರಲ್ಲಿ ದೀಪದ ಬತ್ತಿಯನ್ನು ಸಹ ಹಚ್ಚಬಹುದು! ಇಂಥ ಬಿಸಿಯಾದ ಪದಾರ್ಥಗಳನ್ನು ರಾಜಸ ಗುಣದ ಮನುಷ್ಯನು ತಿನ್ನಲು ಕೇಳುವನು ।।೧೪೨।।

ಬಿರುಗಾಳಿಗಿಂತಲೂ ಹೆಚ್ಚಾಗಿ ಫಜೀತಿಗೊಳಿಸುವ ಮತ್ತು ಪ್ರಹಾರ ಮಾಡುವ ಖಾರವನ್ನು ರಾಜಸಗುಣದ ಮನುಷ್ಯನು ತಿನ್ನುವನು. ಅದರಿಂದ ಕಾಣಲು ಘಾಯ ವಿಲ್ಲದೇ ಶಸ್ತ್ರದಂತೆ ವೇದನೆಯಾಗುವುದು ।।೧೪೩।।

ಬೂದಿಗಿಂತಲೂ ಒಣದಾಗಿರುವ ಮತ್ತು ಒಳಹೊರಗೆ ಕಟುವಾಗಿರುವ ಇಂಥ ಪದಾರ್ಥಗಳನ್ನು ಬಾಯಿಯಲ್ಲಿ ಹಾಕಲು ಆತನಿಗೆ ಬಹಳ ಪ್ರಿಯವೆನಿಸುವುದು ।।೧೪೪।।

ಯಾವ ಪದಾರ್ಥಗಳನ್ನು ತಿನ್ನುವಾಗ್ಗೆ ಹಲ್ಲುಗಳ ಮೇಲೆ ಹಲ್ಲುಗಳು ಅಪ್ಪಳಿಸುತ್ತಿರುವುವು. ಇಷ್ಟೊಂದು ಕಠಿಣ ಪದಾರ್ಥಗಳನ್ನು ತಿನ್ನುವಾಗ ಆತನಿಗೆ ಆನಂದವಾಗುವುದು ।।೧೪೫।।

ಮೊದಲೇ ಝಣಝಣಿತ ಚುರಮುರೀ ಪದಾರ್ಥವು, ಅದರಲ್ಲಿ ಅವುಗಳಿಗೆ ಜೀರಗಿ, ಸಾಸ್ವಿಯ ಒಗ್ಗರಣೆ ಕೊಡುವುದು, ಕೇಳುವುದೇನು? ಅದನ್ನು ತಿನ್ನುವಾಗ ಮೂಗು, ಬಾಯಿಗಳಿಂದ ಜೊಲ್ಲು ಸೋರುತ್ತಿರುವುದು ।।೧೪೬।।

ಇದು ಇರಲಿ, ಅಗ್ನಿಗೆ ಹಿಂದೋಡಿಸುವಂತಹ ''ರಾಯತ''ವು (ಭಜಿ, ಮಿರ್ಚಿ) ರಾಜಸಗುಣದ ಮನುಷ್ಯನಿಗೆ ಜೀವಕ್ಕಿಂತಲೂ ವಿಶೇಷ ಪ್ರೀತಿಯಾಗಿರುವುದು ।।೧೪೭।।

ಈ ಪ್ರಕಾರವಾಗಿ ಏನು ತಿಂದರೂ ಆತನಿಗೆ ತೃಪ್ತಿಯಾಗುವುದಿಲ್ಲ. ನಾಲಿಗೆಗೆ ಮರುಳಾಗಿ ಅನ್ನದ ರೂಪದಿಂದ ಭರಾಟೆಯಿಂದ ಅಗ್ನಿಯನ್ನೇ ಹೊಟ್ಟೆಗೆ ಹಾಕುವನು ।।೧೪೮।।

ಅದರಂತೆ ಲವಂಗ, ಶುಂಠಿಯನ್ನು ತಿಂದು ಅದರಿಂದ ನೆಲದ ಮೇಲೆ ಉರುಳಾಡುವರು. ಇವರು ಬಾಯಿಯಿಂದ ನೀರಿನ ಪಾತ್ರೆಯನ್ನು ದೂರ ಮಾಡುವುದೇ ಇಲ್ಲ ।।೧೪೯।।

ಆದ್ದರಿಂದ ಇದು ಆಹಾರವಲ್ಲದೇ ಮಲಗಿರುವ ರೋಗ ರೂಪ ಸರ್ಪವನ್ನು ಎಚ್ಚರಿಸಲು ಮಾದಕಗಳನ್ನೇ ತುಂಬಿರುವುದು ಎಂದು ಹೇಳಬಹುದು ।।೧೫೦।।

ಹೀಗಾಗಿ ಒಂದಕ್ಕೊಂದು ಸ್ಪರ್ಧೆಯಿಂದ ರೋಗಗಳು ಒಮ್ಮೆಲೇ ಏಳುವುವು. ಈ ಪ್ರಕಾರವಾಗಿ ರಾಜಸ ಅನ್ನದಿಂದ ಕೇವಲ ದುಃಖವೇ ಫಲವಾಗಿ ದೊರಕುವುದು ।।೧೫೧।।

ಹೇ ಧನುರ್ಧರನೇ, ಈ ಪ್ರಕಾರವಾಗಿ ರಾಜಸ ಆಹಾರದ ವರ್ಣನೆಯನ್ನು ಮಾಡಲಾಯಿತು ಮತ್ತು ಅದರ ಪರಿಣಾಮದ ವಿಚಾರವನ್ನೂ ನಿನಗೆ ತಿಳಿಸಲಾಯಿತು ।।೧೫೨।।

ಆತಾ ತಯಾ ತಾಮಸಾ । ಆವಡೇ ಆಹಾರು ಜೈಸಾ । ತೇಂಹೀ ಸಾಂಗೋ ಚಿಳಸಾ । ಝಣೇ ತುಮ್ಹೀ ।।೧೫೩।। ತರೀ ಕುಹಿಲೇ ಉಷ್ಟೇ ಖಾತಾ । ನ ಮನಿಜೇ ತೇಣೇ ಅನಹಿತಾ । ಜೈಸೇ ಕಾ ಉಪಹಿತಾ । ಮ್ಹೈಸೀ ಖಾಯ ।।೧೫೪।।

ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ ।
ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಮ್ ।।೧೦।।

ನಿಜಪಲೇ ಅನ್ನ ತೈಸೇ । ದುಪಾಹರೀ ಕಾ ಯೇರೇ ದಿವಸೇ । ಅತಿಕರೇ ತೈ ತಾಮಸೇ । ಘೇಈಜೇ ತೇ ।।೧೫೫।। ನಾತರೀ ಅರ್ಧ ಉಕಡಿಲೇ । ಕಾ ನಿಪಟ ಕರಪೋನಿ ಗೇಲೇ । ತೈಸೇಂಹೀ ಖಾಯ ಚುಕಲೇ । ರಸಾ ಜೇ ಯೇವೋ ।।೧೫೬।। ಜಯಾ ಕಾ ಆಥೀ ಪೂರ್ಣ ನಿಷ್ಪತ್ತೀ । ಜೇಥ ರಸು ಧರೀವ್ಯಕ್ತೀ । ತೇ ಅನ್ನ ಐಸೀ ಪ್ರತೀತೀ । ತಾಮಸಾ ನಾಹೀ ।।೧೫೭।। ಐಸೇನಿ ಕಹೀ ವಿಪಾಯೇ । ಸದನ್ನಾ ವರಪಡಾ ಹೋಯೇ । ತರೀ ಘಾಣೇ ಸುಟೇ ತಂವ ರಾಹೇ । ವ್ಯಾಘ್ರು ಜೈಸಾ ।।೧೫೮।। ಕಾ ಬಹುವೇ ದಿವಶೀ ವೋಲಾಂಡಿಲೇ । ಸ್ವಾದಪಣೇ ಸಾಂಡಿಲೇ । ಶುಷ್ಕ ಅಥವಾ ಸಡಲೇ । ಗಾಭಿಣೇಂಹೀ ಹೋ ।।೧೫೯।। ತೇಂಹೀ ಬಾಳಾಚೇ ಹಾತವರೀ । ಚಿವಡಿಲೇ ಜೈಸೀ ರಾಡೀ ಕರೀ । ಕಾ ಸವೇ ಬೈಸೋನಿ ನಾರೀ । ಗೋತಾಂಬೀಲ ಕರೀ ।।೧೬೦।। ಐಸೇನಿ ಕಶ್ಮಳೇ ಜೈ ಖಾಯ । ತೈ ತಯಾ ಸುಖಭೋಜನ ಐಸೇ ಹೋಯ । ಪರೀ ಯೇಣೇಂಹೀ ನ ಧಾಯ । ಪಾಪಿಯಾ ತೋ ।।೧೬೧।। ಮಗ ಚಮತ್ಕಾರು ದೇಖಾ । ನಿಷೇಧಾಚಾ ಆಂಬುಖಾ । ಜಯಾ ಕಾ ಸದೋಖಾ । ಕುದ್ರವ್ಯಾಸೀ ।।೧೬೨।। ತಯಾ ಅಪೇಯಾಂಚ್ಯಾ ಪಾನೀ । ಅಖಾದ್ಯಾಂಚ್ಯಾ ಭೋಜನೀ । ವಾಢವಿಜೇ ಉತಾನ್ಹೀ । ತಾಮಸೇ ತೇಣೇ ।।೧೬೩।। ಏವಂ ತಾಮಸ ಜೇವಣಾರಾ । ಐಸೈಸೀ ಮೇಚು ಹೇ ವೀರಾ । ತಯಾಚೇ ಫಲ ದುಸರಾ । ಕ್ಷಣೇ ನಾಹಿ ।।೧೬೪।। ಜೇ ಜೇವ್ಹಾಂಚಿ ಹೇ ಅಪವಿತ್ರ । ಶಿವೇ ತಯಾಚೇ ವಕ್ತ್ರ । ತೇವ್ಹಾಂಚಿ ಪಾಪಾ ಪಾತ್ರ । ಜಾಲಾ ತೋ ಕೀ ।।೧೬೫।। ಯಾವರತೇ ಜೇ ಜೇವೀ । ತೇ ಜೇವಿತೀ ವೋಜ ನ ಮ್ಹಣಾವೀ । ಪೋಟಭರತೀ ಜಾಣಾವೀ । ಯಾತನಾ ತೇ ।।೧೬೬।। ಶಿರಚ್ಛೇದೇ ಕಾಯ ಹೋಯೇ । ಕಾ ಆಗೀ ರಿಘತಾ ಕೈಸೇ ಆಹೇ । ಹೇ ಜಾಣಾವೇ ಕಾಈ ಪಾಹೇ । ಪರೀ ಸಾಹಾತುಚಿ ಅಸೇ ।।೧೬೭।। ಮ್ಹಣೌನಿ ತಾಮಸಾ ಅನ್ನಾ । ಪರಿಣಾಮು ಗಾ ಸಿನಾನಾ । ನ ಸಾಂಗೋಚಿ ಗಾ ಅರ್ಜುನಾ । ದೇವೋ ಮ್ಹಣೇ ।।೧೬೮।।

ಈಗ ತಮೋಗುಣದ ಮನುಷ್ಯನಿಗೆ ಹಿಡಿಸುವ ಆಹಾರದ ಬಗ್ಗೆ ನಿನಗೆ ತಿಳಿಸುವೆನು. ಆದರೆ ನೀನು ಅದಕ್ಕೆ ಹೇಸಿಕೊಳ್ಳುವಿಯೆನೋ! ॥೧೫೩॥

ಹಳಿಸಿದ, ಎಂಜಲ ಮುಸುರೆಯನ್ನು ತಿನ್ನುವಾಗ ಹುಳಿಯಿರಲಿ, ಕೊಳೆಯಿರಲಿ ಹಿತಾಹಿತವನ್ನು ಲೆಕ್ಕಿಸದೇ ಎಮ್ಮೆಯು ಯಾವ ಪ್ರಕಾರವಾಗಿ ತಿನ್ನುವುದೋ ॥೧೫೪॥

ಶ್ಲೋಕಾರ್ಥ :- ಯಾವುದು ಅರ್ಧ ಬೆಂದಿರುವುದೋ ಅಥವಾ ಬೆಂದು ಒಂದು ಜಾವದ ಮೇಲಾಗಿರುವುದೋ, ಒಣಕಲಾಗಿರುವುದೋ, ದುರ್ಗಂಧದಿಂದ ಕೂಡಿರುವುದೋ, ಬೆಂದಮೇಲೆ ರಾತ್ರಿಯನ್ನು ಕಳೆದಿರುವುದೋ, ಉಂಡು ಮಿಕ್ಕಿರುವುದೋ, ದೇವರಿಗೊಪ್ಪಿಸುವುದಕ್ಕೆ ಯೋಗ್ಯವಿಲ್ಲದ್ದೋ, ಅಂತಹ ಊಟವು ತಾಮಸರಿಗೆ ಬೇಕೆನಿಸುವುದು ॥೧೦॥

ಅದರಂತೆ ಮುಂಜಾನೆ ಕುಚ್ಚಿದ ಆಹಾರ, ಮಧ್ಯಾಹ್ನಕ್ಕೆ ಇಲ್ಲವೇ ಮರುದಿನ ತಿನ್ನುವ ಪ್ರೀತಿಯು ತಾಮಸ ಮನುಷ್ಯರಿಗೆ ಇರುವುದು ॥೧೫೬॥

ಅಥವಾ ಅರ್ಧ ಮರ್ಧ ಬೆಂದ ಅಥವಾ ಕೇವಲ ಸುಟ್ಟು ಕರಕಾದ ಹಾಗೆಯೇ ಅದರಲ್ಲಿಯ ರಸ ಹೊರಟು ಹೋದ ಆಹಾರವನ್ನು ತಾಮಸನು ತಿನ್ನುವನು ॥೧೫೭॥

ಯಾವ ಅನ್ನವು ಪೂರ್ಣವಾಗಿ ಪಕ್ವವಾಗಿದೆ, ರಸಭರಿತವಾಗಿದೆ. ಅದನ್ನು ತಾಮಸ ಮನುಷ್ಯನು ಅನ್ನವೆಂದು ಮನ್ನಿಸುವುದೇ ಇಲ್ಲ ॥೧೫೮॥

ಒಂದು ವೇಳೆ ಇಂಥ ಉತ್ತಮ ಅನ್ನವು ಆತನಿಗೆ ತಿನ್ನಲು ದೊರಕಿದರೆ ಅದನ್ನು ನಾರುವವರೆಗೆ ಹುಲಿಯಂತೆ ಇಟ್ಟು ತಿನ್ನುವನು ॥೧೫೯॥

ಬಹುದಿನಗಳ ತಂಗಳವಾದ, ರುಚಿಗೆಟ್ಟ ಒಣಗಿದ ಅಥವಾ ಕೊಳೆತ ಅಥವಾ ಹುಳಬಿದ್ದ ॥೧೫೯॥

ಮತ್ತು ಅದನ್ನು ಬಾಲಕರ ಕೈಯಿಂದ ಕೆಸರಿನಂತೆ ಕಿವುಚಿದರಾಡಿಯಾದ ಪದಾರ್ಥಗಳನ್ನು ಒಂದೇ ತಾಟಿನಲ್ಲಿ ಹಾಕಿ ಹೆಂಡರು ಮಕ್ಕಳೊಂದಿಗೆ ತಿನ್ನುವನು ॥೧೬೦॥

ಈ ಪ್ರಕಾರವಾಗಿ ಹೊಲಸಾದ ಅನ್ನವನ್ನು ತಿಂದಾಗಲೇ ಆತನಿಗೆ ಸುಖದ ಭೋಜನವಾಗುವುದು. ಇಷ್ಟರಿಂದಲೇ ಆ ಪಾಪಿಯು ತೃಪ್ತನಾಗುವುದಿಲ್ಲ! ॥೧೬೧॥

ಈಗ ಚಮತ್ಕಾರವನ್ನು ನೋಡಿರಿ, ಯಾವ ಕೆಟ್ಟ ಪದಾರ್ಥಗಳ ಮೇಲೆ ಶಾಸ್ತ್ರ ನಿಷೇಧವಾದ (ತಿನ್ನಬಾರದ, ಕುಡಿಯಬಾರದ) ತ್ಯಾಜ್ಯವೆಂದು ನಿರ್ಣಯಿಸಿರುವ ॥೧೬೨॥

ಆ ಯಾವ ಕುಡಿಯಬಾರದ್ದನ್ನು (ಮದ್ಯವನ್ನು) ಕುಡಿಯುವ, ತಿನ್ನಬಾರದ್ದನ್ನು (ಮಾಂಸವನ್ನು) ತಿನ್ನುವ ಈ ತಾಮಸ ಮನುಷ್ಯನ ಅತಿಶಯವಾದ ಇಚ್ಛೆಯಾಗಿರುವುದು ॥೧೬೩॥

ಹೇ ವೀರನೇ, ಈ ಪ್ರಕಾರವಾಗಿ ಆ ತಾಮಸ ಮನುಷ್ಯನ ಇಂಥ ಪದಾರ್ಥವನ್ನು ತಿನ್ನುವ ಯಾವ ಈ ಪ್ರೀತಿ ಇರುವುದು. ಈ ಪ್ರೀತಿಯ ಫಲವು ಆಕ್ಷಣವೇ ದೊರಕುವುದು ॥೧೬೪॥

ಕಾರಣ, ಯಾವ ವೇಳೆಯಲ್ಲಿ ಅವನು ಅಪವಿತ್ರ ಪದಾರ್ಥಗಳ ಸೇವನೆ ಮಾಡುವನೋ, ಅದೇ ಕ್ಷಣದಲ್ಲಿ ಅವನು ಪಾಪಕ್ಕೆ ಪಾತ್ರನಾಗುವನು ॥೧೬೫॥

ಆಗ ಆ ಭೋಜನವು ನಿಜವಾಗಿಯೂ ಭೋಜನವಾಗದೇ, ಅದನ್ನು ಹೊಟ್ಟೆಯಲ್ಲಿ ಯಾತನೆಗಳನ್ನು ತುಂಬಿದಂತೆ ಎಂದು ತಿಳಿದುಕೊಳ್ಳಬೇಕು ॥೧೬೬॥

ಶಿರಚ್ಛೇದನ ಮಾಡಿದಾಗ ಏನಾಗುವುದು? ಅಥವಾ ಅಗ್ನಿಯಲ್ಲಿ ಹೋದರೆ ಯಾವ ಪರಿಣಾಮವಾಗುವುದು? ಇವು ಪ್ರತ್ಯಕ್ಷವಾಗಿ ಅನುಭವ ಪಡೆಯಬೇಕೆ? ಆದರೆ ಇಂತಥ ಪರಿಣಾಮಗಳನ್ನು ಇವನು ಸಹಿಸುವನು ॥೧೬೭॥

ಆದ್ದರಿಂದ ಶ್ರೀಕೃಷ್ಣನು ಹೇಳುವನು:- ಅರ್ಜುನಾ, ತಾಮಸ ಅನ್ನದ ಪರಿಣಾಮವನ್ನು ಇನ್ನೂ ಬೇರೆಯಾಗಿ ಹೇಳಬೇಕಾಗಿಲ್ಲ ॥೧೬೮॥

ಆತಾ ಯಯಾವರೀ । ಆಹಾರಾಚಿಯಾ ಪರೀ । ಯಜ್ಞು ಹೀ ಅವಧಾರೀ । ತ್ರಿಧಾ ಅಸೇ ।।೧೭೯।। ತರೀ ತಿಹೀಮಾಜೀ ಪ್ರಥಮ । ಸಾತ್ತ್ವಿಕ ಯಜ್ಞಾಚೇ ವರ್ಮ । ಆಈಕ ಪಾ ಸುಮಹಿಮ । ಶಿರೋಮಣೀ ।।೧೮೦।।

ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।
ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ತ್ವಿಕಃ ।।೧೧।।

ತರೀ ಏಕು ಪ್ರಿಯೋತ್ತಮು । ವಾಂಚೋನಿ ವಾಢೋ ನೇದೀ ಕಾಮು । ಜೈಸಾ ಕಾ ಮನೋಧರ್ಮು । ಪತಿವ್ರತೇಚಾ ।।೧೮೧।। ನಾನಾ ಸಿಂಧೂತೇ ಠಾಕೋನಿ ಗಂಗಾ । ಪುಢಾರಾ ನ ಕರೀಚಿ ರಿಗಾ । ಕಾ ಆತ್ಮಾ ದೇಖೋನಿ ಉಗಾ । ವೇದು ಠೇಲಾ ।।೧೮೨।। ತೈಸೇ ಜೇ ಆಪುಲ್ಯಾ ಸ್ವಹಿತೀ । ವೇಂಚೂನಿಯಾ ಚಿತ್ತವೃತ್ತೀ । ನುರವಿತೀಚಿ ಅಹಂಕೃತೀ । ಫಳಾಲಾಗೀ ।।೧೮೩।। ಪಾತಲೇಯಾ ಝಾಡಾಚೇ ಮೂಳ । ಮಾಗುತೇ ಸರೋ ನೇಣೇಂಚಿ ಜಳ । ಜಿರಾಲೇ ಕಾ ಕೇವಳ । ತಯಾಚ್ಯಾಚಿ ಆಂಗೀ ।।೧೮೪।। ತೈಸೇ ಮನೇ ದೇಹೀ । ಯಜನ ನಿಶ್ಚಯಾಚ್ಯಾ ಠಾಯೀ । ಹಾರಪೋನಿ ಜೇ ಕಾಂಹೀ । ವಾಂಛಿತೀನಾ ।।೧೮೫।। ತಿಹೀ ಫಳವಾಂಛ್ಯಾತ್ಯಾಗೀ । ಸ್ವಧರ್ಮಾವಾಂಚೂನಿ ವಿರಾಗೀ । ಕೀಜೇ ತೋ ಯಜ್ಞು ಸರ್ವಾಂಗೀ । ಅಳಂಕೃತು ।।೧೮೬।। ಪರೀ ಆರಿಸಾ ಆಪಣಪೇ । ಡೋಳಾ ಜೈಸೇ ಘೇಪೇ । ಕಾ ತಳಹಾತೀಂಚೇ ದೀಪೇ । ರತ್ನ ಪಾಹಿಜೇ ।।೧೮೭।। ನಾನಾ ಉದಿತೇ ದಿವಾಕರೇ । ಗಮಾವಾ ಮಾರ್ಗು ದಿಠೀ ಭರೇ । ತೈಸಾ ವೇದು ನಿರ್ಧಾರೇ । ದೇಖೋನಿಯಾ ।।೧೮೮।। ತಿಯೇ ಕುಂಡೇ ಮಂಡಪ ವೇದೀ । ಆಣೀಕಹೀ ಸಂಭಾರಸಮೃದ್ಧೀ । ತೇ ಮೇಳವಣೀ ಜೈಸೀ ವಿಧೀ । ಆಪಣಪಾ ಕೇಲೀ ।।೧೮೯।। ಸಕಳಾವಯವ ಉಚಿತೇ । ಲೇಣೇ ಪಾತಲೀ ಜೈಸೀ ಆಂಗಾತೇ । ತೈಸೇ ಪದಾರ್ಥ ಜೇಥಿಂಚೇ ತೇಥೇ । ವಿನಿಯೋಗುನೀ ।।೧೯೦।। ಕಾಯ ವಾನೂ ಬಹುತೀ ಬೋಲೀ । ಜೈಸೀ ಸರ್ವಾಭರಣೀ ಭರಲೀ । ತೇ ಯಜ್ಞವಿದ್ಯಾಚಿ ರೂಪಾ ಆಲೀ । ಯಜನಮಿಷೇ ।।೧೯೧।। ತೈಸಾ ಸಾಂಗೋಪಾಂಗು । ನಿಫಜೇ ಜೋ ಯಾಗು । ನುಠಲೂನಿಯಾ ಲಾಗು । ಮಹತ್ತ್ವಾಚಾ ।।೧೯೨।। ಪ್ರತಿಪಾಳು ತರೀ ಪಾಟಾಚಾ । ಝಾಡೀ ಕೀಜೆ ತುಳಸೀಚಾ । ಪರೀ ಫಳಾ ಫುಲಾ ಛಾಯೇಚಾ । ಆಶ್ರಯೋ ನಾಹೀ ।।೧೯೩।। ಕಿಂಬಹುನಾ ಫಳಾಶೇವೀಣ । ಐಸೇಯಾ ನಿಗುತೀ ನಿರ್ಮಾಣ । ಹೋಯ ತೋ ಯಾಗು ಜಾಣ । ಸಾತ್ತ್ವಿಕು ಗಾ ।।೧೯೪।।

ಈಗ, ಇನ್ನು ಮೇಲೆ ಆಹಾರದಂತೆ ಯಜ್ಞವೂ ಸಹ ಮೂರು ಪ್ರಕಾರಗಳಿಂದ ಕೂಡಿದೆ ॥೧೯೯॥

ಆದ್ದರಿಂದ ಉತ್ತಮ ಕೀರ್ತಿಯಲ್ಲಿ ಶ್ರೇಷ್ಠನಾದ ಅರ್ಜುನನೇ, ಈ ಮೂರರಲ್ಲಿ ಸಾತ್ತ್ವಿಕ ಯಜ್ಞದ ಲಕ್ಷಣ ವನ್ನು ಪ್ರಥಮವಾಗಿ ಹೇಳುವೆನು, ಕೇಳು ॥೧೭೦॥

ಶ್ಲೋಕಾರ್ಥ :- ಫಲಾಸಕ್ತಿಯಿಲ್ಲದೇ ಕರ್ತವ್ಯ ಭಾವನೆಯಿಂದ ಸಮಾಧಾನ ಚಿತ್ತದಿಂದ ಶಾಸ್ತ್ರವನ್ನು ಅನುಸರಿಸಿ ಮಾಡುವ ಯಜ್ಞವು ಸಾತ್ತ್ವಿಕ ಯಜ್ಞ ॥೧೧॥

ಯಾವ ಪ್ರಕಾರವಾಗಿ ಪತಿವ್ರತೆ ಸ್ತ್ರೀಯಳ ಮನೋಧರ್ಮವು ತನ್ನ ಪ್ರಿಯ ಪತಿಯ ಹೊರತಾಗಿ ಅನ್ಯ ವಿಷಯದಲ್ಲಿ ಕಾಮವನ್ನು ಬೆಳೆಸಿಕೊಡುವುದಿಲ್ಲ ॥೧೭೧॥

ಅಥವಾ ಗಂಗಾನದಿಯು ಸಮುದ್ರಕ್ಕೆ ಕೂಡಿದ ನಂತರ ಮುಂದೆ ಹೋಗುವ ಪ್ರಯತ್ನವನ್ನು ಮಾಡುವುದಿಲ್ಲ. ಅಥವಾ ಆತ್ಮಸ್ವರೂಪದ ದರ್ಶನವಾಗುತ್ತಲೇ ವೇದವು ಸ್ತಬ್ಧವಾಗುವುದು ॥೧೭೨॥

ಅದರಂತೆ, ತಮ್ಮ ಹಿತಕ್ಕಾಗಿ ಚಿತ್ತದ ವೃತ್ತಿಯನ್ನು ಅರ್ಪಣೆಯನ್ನು ಮಾಡಿ ಯಾವ ಫಲದ ಆಶೆಯಿಂದ ಅಹಂಕಾರವನ್ನು ತಾಳುವುದಿಲ್ಲ ॥೧೭೩॥

ಗಿಡದ ಬೇರಿಗೆ ಮುಟ್ಟಿದ ನೀರು ಹಿಂದಿರುಗುವುದಿಲ್ಲ, ಅದರಲ್ಲಿಯೇ ಇಂಗಿಕೊಂಡು ಅದರ ಪೋಷಣೆಯನ್ನು ಮಾಡುವುದು ॥೧೭೪॥

ಅದರಂತೆ ಮನಸ್ಸಿನಿಂದ ಮತ್ತು ದೇಹದಿಂದ ನಿಶ್ಚಯ ಮಾಡಿ ಯಜ್ಞ ಮಾಡುವುದರಲ್ಲಿ ಮಗ್ನರಾಗುವರು. ಆದರೆ ಅದರಿಂದ ಯಾವ ಫಲದ ಇಚ್ಛೆಯನ್ನು ಮಾಡುವುದಿಲ್ಲ ॥೧೭೫॥

ಫಲದ ಇಚ್ಛೆಯನ್ನು ಬಿಟ್ಟು ಸ್ವಧರ್ಮದ ಹೊರತಾಗಿ ಇತರ ಯಾವುದೇ ಮಾತಿನ ಬಗ್ಗೆ ವಿರಕ್ತರಾಗಿ ಯಾವ ಸರ್ವಾಂಗ, ಪರಿಪೂರ್ಣ ಯಜ್ಞವನ್ನು ಮಾಡುವರು ॥೧೭೬॥

ಆದರೆ, ತನ್ನ ಕೈಯಲ್ಲಿ ಕನ್ನಡಿಯನ್ನು ಹಿಡಿದ ಮೇಲೆ ತನ್ನ ಸ್ವರೂಪವನ್ನು ತನ್ನ ಕಣ್ಣಿನಿಂದ ನೋಡಲು ಬರುವುದು. ಅಥವಾ ಅಂಗೈಯಲ್ಲಿನ ರತ್ನವನ್ನು ದೀಪದ ಬೆಳಕಿನಿಂದ ಸ್ವಚ್ಛವಾಗಿ ಕಾಣುವುದು ॥೧೭೭॥

ಅಥವಾ ಬೆಳಗಾದಾಗ ಮಾರ್ಗವು ಸ್ಪಷ್ಟವಾಗಿ ಕಾಣುವಂತೆ, ವೇದದಲ್ಲಿ ಹೇಳಿದ ಮಾರ್ಗದ ಮೇಲೆ ವಿಶ್ವಾಸವನ್ನಿಟ್ಟು ಯಾವ ಆಚರಣೆಗಳನ್ನು ಮಾಡುವರು ॥೧೭೮॥

ಅವರು ಕುಂಡಗಳನ್ನು, ಮಂಟಪಗಳನ್ನು, ವೇದಿ ಇತ್ಯಾದಿ ಯಜ್ಞದ ಎಲ್ಲ ಸಾಮಗ್ರಿಗಳನ್ನು ವೇದವೇ ಸ್ವತಃ ಬಂದು ತಯಾರಿಸಿದಂತೆ ಉತ್ತಮ ರೀತಿಯಲ್ಲಿ ನಡೆಸುವರು ॥೧೭೯॥

ಸರ್ವ ಅವಯವಗಳಲ್ಲಿ ಯಾವುದಕ್ಕೆ ಯಾವುದು ಆಭರಣಗಳನ್ನು ಹಾಕಿದಾಗ ಹೇಗೆ ಶೋಭಿಸುವುದೋ, ಅದರಂತೆ ಯಜ್ಞದ ಎಲ್ಲ ಪದಾರ್ಥಗಳನ್ನು ಆಯಾ ಸ್ಥಳಗಳಲ್ಲಿ ಸರಿಯಾಗಿ ಇಡುವರು ॥೧೮೦॥

ಮತ್ತೇನು ಅವರನ್ನು ಶಬ್ದದಿಂದ ಎಷ್ಟೆಂದು ವರ್ಣಿಸಲಿ ? ಯಜ್ಞ ಮಂಟಪವನ್ನು ನೋಡಿದಾಕ್ಷಣವೇ, ಮೂರ್ತಿಮಂತ ಯಜ್ಞವಿದ್ಯೆಯು ಯಜ್ಞದ ನಿಮಿತ್ತವಾಗಿ ಇಲ್ಲಿಗೆ ಬಂದಂತೆ ಕಾಣಿಸುವುದು ॥೧೮೧॥

ಈ ಪ್ರಕಾರವಾಗಿ ಯಾವ ಯಜ್ಞವು ವ್ಯವಸ್ಥಿತಗೊಂಡು ಮತ್ತು ಅದರಲ್ಲಿ ಯಾವ ಫಲದ ಇಚ್ಛೆಯು ಇರುವುದಿಲ್ಲ ॥೧೮೨॥

ತುಳಸಿಯ ಗಿಡದಿಂದ ಫಲ, ಪುಷ್ಪ, ನೆರಳು ಇವು ಯಾವುವೂ ದೊರೆಯುವುದಿಲ್ಲ. ಆದಾಗ್ಯೂ ಜನರು ಉತ್ತಮವಾದ ನೀರಿನಿಂದ ಅದರ ಜೋಪಾನ ಮಾಡುವರು ॥೧೮೩॥

ಹೆಚ್ಚಿಗೇನು ಹೇಳಬೇಕು? ಫಲಾಶೆಯ ಹೊರತಾಗಿ ಈ ಪ್ರಕಾರದ ಯಾವ ಯಥಾಸಾಂಗ ಯಜ್ಞವಾಗುವುದೋ, ಅದಕ್ಕೆ ಸಾತ್ತ್ವಿಕ ಯಜ್ಞವೆಂದು ಹೇಳುವರು ॥೧೮೪॥

ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯತ್ ।
ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ॥೧೨॥

ಆತಾ ಯಜ್ಞು ಕೀರ ವೀರೇಶಾ । ಕರೀ ಪೈ ಯಾಚಿಐಸಾ । ಪರೀ ಶ್ರಾದ್ಧಾಲಾಗೀ ಜೈಸಾ । ಅವಂತಿಲಾ ರಾವೋ ॥೧೮೫॥ ಜರೀ ರಾಜಾ ಘರಾಸಿ ಯೇ । ತರೀ ಬಹುತ ಉಪೇಗಾ ಜಾಯೇ । ಆಣಿ ಕೀರ್ತಿೀಹೀ ಹೋಯೇ । ಶ್ರಾದ್ಧ ನ ಠಕೇ ॥೧೮೬॥ ತೈಸಾ ಧರೂನಿ ಆವಾಂಕಾ । ಮ್ಹಣೇ ಸ್ವರ್ಗು ಜೋಡೇಲ ಅಸಿಕಾ । ದೀಕ್ಷಿತು ಹೋಈನ ಮಾನ್ಯ ಲೋಕಾ । ಘಡೇಲ ಯಾಗು ॥೧೮೭॥ ಐಸೀ ಕೇವಳ ಫಳಾಲಾಗೀ । ಮಹತ್ತ್ವ ಪೋಕಾರಾವಯಾ ಜಗೀ । ಪಾರ್ಥಾ ನಿಷ್ಪತ್ತಿ ಜೇ ಯಾಗೀ । ರಾಜಸ ಪೈ ತೇ ॥೧೮೮॥

ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಮ್ ।
ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥೧೩॥

ಆಣಿ ಪಶುಪಕ್ಷಿ ವಿವಾಹೀ । ಜೋಶಿ ಕಾಮಾಪರೌತಾ ನಾಹೀ । ತೈಸಾ ತಾಮಸಾ ಯಜ್ಞಾ ಪಾಹೀ । ಆಗ್ರಹೋಚಿ ಮೂಳ ॥೧೮೯॥ ವಾರಯಾ ವಾಟ ನ ವಾಹೇ । ಕೀ ಮರಣ ಮುಹೂರ್ತ ಪಾಹೇ । ನಿಷಿದ್ಧಾಂಸಿ ಬಿಹೇ । ಆಗೀ ಜರೀ ॥೧೯೦॥ ತರೀ ತಾಮಸಾಚಿಯಾ ಆಚಾರಾ । ವಿಧೀಚಾ ಆಥೀ ವೋಢಾವಾರಾ । ಮ್ಹಣೌನಿ ತೋ ಧನುರ್ಧರಾ । ಉತ್ಸ್ರಂಖಳು ॥೧೯೧॥ ನಾಹೀ ವಿಧೀಚೀ ತೇಥ ಚಾಡ । ನಯೇ ಮಂತ್ರಾದಿಕ ತಯಾಕಡ । ಅನ್ನಜಾತಾ ನ ಸುಯೇ ತೋಂಡ । ಮಾಸಿಯೇ ಜೇವೀ ॥೧೯೨॥ ವೈರಾಚಾ ಬೋಧು ಬ್ರಾಹ್ಮಣಾ । ತೇಥ ಕೇ ರಿಗೇಲ ದಕ್ಷಿಣಾ । ಅಗ್ನಿ ಜಾಲಾ ವಾಉಧಾಣಾ । ವರಪಡಾ ಜೈಸಾ ॥೧೯೩॥ ತೈಸೇ ವಾಯಾಂಚಿ ಸರ್ವಸ್ವ ವೇಂಚೇ । ಮುಖ ನ ದೇಖತಾ ಶ್ರದ್ಧೇಚೇ । ನಾಗವಿಲೇ ನಿಪುತ್ರಿಕಾಚೇ । ಜೈಸೇ ಘರ ॥೧೯೪॥ ಐಸಾ ಜೋ ಯಜ್ಞಾಭಾಸು । ತಯಾ ನಾಮ ಯಾಗು ತಾಮಸು । ಆಇಕೇ ಮ್ಹಣೇ ನಿವಾಸು । ಶ್ರಿಯೇಚಾ ತೋ ॥೧೯೫॥ ಆತಾ ಗಂಗೇಚೇ ಏಕ ಪಾಣೀ । ಪರೀ ನೇಲೇ ಆನಾನೀ ವಾಹಣೇ । ಏಕ ಮಳೀ ಏಕ ಆಣೇ । ಶುದ್ಧತ್ವ ಜೈಸೇ ॥೧೯೬॥ ತೈಸೇ ತಿಹೀ ಗುಣೇ ತಪ । ಯೇಥ ಜಾಹಾಲೇ ಆಹೇ ತ್ರಿರೂಪ । ತೇ ಏಕ ಕೇಲೇ ದೇ ಪಾಪ । ಉದ್ಧರೀ ಏಕ ॥೧೯೭॥ ತರೀ ತೇಂಚಿ ತಿಹೀ ಭೇದೀ । ಕೈಸೇನಿ ಪಾ ಮ್ಹಣೌನಿ ಸುಬುದ್ಧೀ । ಜಾಣೋ ಪಾಹಾಸೀ ತರೀ ಆಧೀ । ತಪಚಿ ಜಾಣ ॥೧೯೮॥

ಶ್ಲೋಕಾರ್ಥ :- ಅರ್ಜುನಾ, ಫಲವನ್ನು ಲಕ್ಷದಲ್ಲಿಟ್ಟುಕೊಂಡು ಜನರ ತೋರಿಕೆಗಾಗಿ ಮಾಡುವ ಯಜ್ಞವು ರಾಜಸಯಜ್ಞವೆಂದು ತಿಳಿ ॥೧೨॥

ಹೇ ವೀರಶ್ರೇಷ್ಠನೇ, ಈಗ ಎರಡನೆಯದಾದ ರಾಜಸ ಯಜ್ಞವನ್ನು ಇದರಂತೆಯೇ ಮಾಡುವರು. ಆದರೆ ಶ್ರಾದ್ಧ, ತಿಥಿ ದಿನದಂದು ಸಹಜವಾಗಿ ರಾಜನಿಗೆ ಆಮಂತ್ರಿಸಿ ಕರೆ ತಂದಂತೆ ॥೧೮೫॥

ಕಾರಣ, ರಾಜನು ಭೋಜನಕ್ಕೆ ಮನೆಗೆ ಬಂದರೆ ಆತನಿಂದ ಅನೇಕ ಉಪಯೋಗ ಪಡೆಯಬಹುದು. ಜಗತ್ತಿನಲ್ಲಿ ಕೀರ್ತಿಯು ಬೆಳೆಯುವುದು ಮತ್ತು ಶ್ರಾದ್ಧವೂ ನಿಲ್ಲುವುದಿಲ್ಲ! ॥೧೮೬॥

ಈ ಪ್ರಕಾರವಾಗಿ ಫಲದ ಆಶೆಯನ್ನು ಹಿಡಿದು ಮನದಲ್ಲಿ ಹೇಳುವುದೇನೆಂದರೆ, ನನಗೆ ಸಹಜವಾಗಿ ಸ್ವರ್ಗ ಪ್ರಾಪ್ತಿಯಾಗುವುದು, ಜನರು ದೀಕ್ಷಿತರು ಎಂದು ಗೌರವಿಸುವರು. ಇಷ್ಟೇ ಅಲ್ಲ ಯಜ್ಞದಂಥ ಮಹತ್ಕಾರ್ಯವು ನನ್ನಿಂದಾಯಿತು ॥೧೮೭॥

ಹೇ ಪಾರ್ಥಾ, ಈ ಪ್ರಕಾರವಾಗಿ ಕೇವಲ ಫಲಾಶೆಯನ್ನು ಹಿಡಿದು ಜಗತ್ತಿನಲ್ಲಿ ಕೀರ್ತಿ ಬೆಳೆಯಬೇಕೆಂದು ಮಾಡುವ ಯಜ್ಞವು ರಾಜಸ ಯಜ್ಞವಾಗಿರುವುದು ॥೧೮೮॥

ಶ್ಲೋಕಾರ್ಥ :- ಶಾಸ್ತ್ರನಿಯಮವೂ, ಅನ್ನದಾನವೂ, ಮಂತ್ರೋಚ್ಚಾರಣೆಯೂ, ದ್ರವ್ಯ ದಾನವೂ, ಶ್ರದ್ಧೆಯೂ ಇಲ್ಲದೆ ಮಾಡುವ ಯಜ್ಞಕ್ಕೆ ತಾಮಸ ಯಜ್ಞವೆನ್ನುತ್ತಾರೆ ॥೧೩॥

ಮತ್ತು ಪಶು ಪಕ್ಷಿಗಳ ವಿವಾಹಕ್ಕೆ ಕಾಮದ ಹೊರತಾಗಿ ಬೇರೆ ಜೋಯಿಸರು ಬೇಕಾಗುವುದಿಲ್ಲವೋ, ಅದರಂತೆ ತಾಮಸ ಯಜ್ಞಕ್ಕೆ ಆಗ್ರಹವೇ ಕಾರಣವಾಗಿರುವುದು ॥೧೮೯॥

ಗಾಳಿಗೆ ಬೀಸಲು ಮಾರ್ಗದ ಅವಶ್ಯಕತೆ ಇರುವುದಿಲ್ಲ, ಅಥವಾ ಮರಣಕ್ಕೆ ಮುಹೂರ್ತವು ಬೇಕಾಗಿರುವುದಿಲ್ಲ. ಅಗ್ನಿಯು ನಿಷಿದ್ಧ ಪದಾರ್ಥಗಳನ್ನು ಸುಡಲು ಅಂಜಿದರೆ ॥೧೯೦॥

ಮಾತ್ರ ತಾಮಸ ಯಜ್ಞಕ್ಕೆ ವಿಧಿಯಮರ್ಯಾದೆ ಇರಬಹುದು! ಆದ್ದರಿಂದ ಹೇ ಧನುರ್ಧರನೇ, ಇದು ಅಮರ್ಯಾದೆಯಿಂದ ಕೂಡಿದೆ ॥೧೯೧॥

ಅದಕ್ಕೆ ವಿಧಿಯ ಅವಶ್ಯಕತೆ ಇರುವುದಿಲ್ಲ. ಮಂತ್ರ ಇತ್ಯಾದಿಗಳ ಕಾರಣವೂ ಇರುವುದಿಲ್ಲ ಮತ್ತು ನೊಣಕ್ಕೂ ಸಹ ಮಂಟಪದಲ್ಲಿ ಒಂದಗಳು ಅನ್ನವೂ ಸಿಗುವುದಿಲ್ಲ ॥೧೯೨॥

ಅಲ್ಲಿ ಬ್ರಾಹ್ಮಣರ ಬಗ್ಗೆ ಪೂರ್ಣ ವೈರಭಾವವು ಇರುವುದು. ಅಂದಮೇಲೆ ದಕ್ಷಿಣದ ವಿಚಾರ ಎಲ್ಲಿಂದ ಬರಬೇಕು? ಮತ್ತು ಅಗ್ನಿಯು ಗಾಳಿಯ ಸಹಾಯದಿಂದ ಕಾಡ ಬೆಂಕಿಯಂತೆ ಪ್ರಜ್ವಲಿಸುತ್ತದೆ ॥೧೯೩॥

ಅಥವಾ ಮಕ್ಕಳಿಲ್ಲದವರ ಮನೆಯನ್ನು ಅವನ ತರುವಾಯ ಯಾರು ಬೇಕಾದವರೂ ಲುಟಾಯಿಸುವರು. ಅದರಂತೆ ಎಲ್ಲ ದ್ರವ್ಯಗಳು ವ್ಯರ್ಥವಾಗಿ ಖರ್ಚಾಗುವುವು. ಅದರಲ್ಲಿ ಶ್ರದ್ಧೆಯು ಲವಲೇಶವೂ ಇರುವುದಿಲ್ಲ ॥೧೯೪॥

ಶ್ರೀನಿವಾಸನು ಹೇಳುತ್ತಾನೆ:- ಹೀಗೆ ಹೊರಗೆ ನೋಡಲು ಡೌಲಾಗಿ ಕಾಣುವ ಇದಕ್ಕೆ ತಾಮಸಯಜ್ಞ ಎಂದು ಹೇಳುವರು. ತಿಳಿದುಕೊಂಡೆಯಾ? ॥೧೯೫॥

ಈಗ ಗಂಗೆಯ ನೀರನ್ನು ಬೇರೆ ಬೇರೆ ಮಾರ್ಗದಿಂದ ಉಪಯೋಗಕ್ಕೆ ತಂದಾಗ ಪವಿತ್ರ ಮತ್ತು ಅಪವಿತ್ರ ಎರಡನ್ನೂ ಕೊಡುವುದು ॥೧೯೬॥

ಅದರಂತೆ ಸತ್ತ್ವ, ರಜ ಮತ್ತು ತಮ ಈ ಮೂರೂ ಗುಣಗಳಿಂದ ತಪಸ್ಸು ಮೂರು ಪ್ರಕಾರಗಳಾಗಿರುವುವು. ಅವುಗಳಲ್ಲಿ ಒಂದರಿಂದ ಮೋಕ್ಷವು ಮತ್ತು ಇನ್ನೊಂದರಿಂದ ಅಧೋಗತಿಯು ಪ್ರಾಪ್ತವಾಗುವುದು॥೧೯೭॥

ಹಾಗಾದರೆ ಅರ್ಜುನಾ, ಈ ತಪಸ್ಸು ಮೂರು ಭಾಗಗಳಾಗಿ ಹೇಗಾದವು ಎಂದು ತಿಳಿದುಕೊಳ್ಳುವ ಇಚ್ಛೆಯು ನಿನಗಾಗಿದ್ದರೆ, ಮೊದಲು ತಪಸ್ಸು ಎಂದರೆ ಏನೆಂಬುದು ತಿಳಿದುಕೊ ॥೧೯೮॥

ಯೇಥ ತಪ ಮ್ಹಣಿಜೇ ಕಾಈ । ತೇ ಸ್ವರೂಪ ದಾಲೂ ಪಾಹೀ । ಮಗ ಭೇದಿಲೇ ಗುಣೀ ತಿಹೀ । ತೇ ಪಾರೀ ಬೋಲೋ ।೧೯೯॥ ತರೀ ತಪ ಜೇ ಕಾ ಸಮ್ಯಕ । ತೇಂಹೀ ತ್ರಿವಿಧ ಆ ಇಕ । ಶಾರೀರ ಮಾನಸಿಕ । ಶಾಬ್ದ ಗಾ ।೨೦೦॥ ಆತಾ ಯಾ ತಿಹೀ ಮಾಝಾರೀ । ಶಾರೀರ ತಂವ ಅವಧಾರೀ । ತರೀ ಶಂಭೂ ಕಾ ಶ್ರೀಹರೀ । ಪಢಿಯಂತಾ ಹೋಯ ।೨೦೧॥

ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।
ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ।೧೪॥

ತಯಾ ಪ್ರಿಯ ದೇವತಾಲಯಾ । ಯಾತ್ರಾದಿಕೇ ಕರಾವಯಾ । ಆಠಹೀ ಪಾಹಾರ ಜೈಸೇ ಪಾಯಾ । ಉಳಿಗ ಘಾಪೇ ।೨೦೨॥ ದೇವಾಂಗಣಮಿರವಣಿಯಾ । ಅಂಗೋಪಚಾರ ಪುರವಣಿಯಾ । ಕರಾವಯಾ ಮ್ಹಣಿಯಾ । ಶೋಭತೀ ಹಾತ ।೨೦೩॥ ಲಿಂಗ ಕಾ ಪ್ರತಿಮಾ ದಿಠೀ । ದೇಖತಖೇಂವೋ ಅಂಗೇಷ್ಟೀ । ಲೋಟಿಜೇ ಕಾ ಕಾಠೀ । ಪಡಲೀ ಜೈಸೀ ।೨೦೪॥ ಆಣಿ ವಿಧಿವಿನಯಾದಿಕೀ । ಗುಣೀ ವಡೀಲ ಜೇ ಲೋಕೀ । ತಯಾ ಬ್ರಾಹ್ಮಣಾಚೀ ನಿಕೀ । ಪಾಇಕೀ ಕೀಜೇ ।೨೦೫॥ ಅಥವಾ ಪ್ರವಾಸೇ ಕಾ ಪೀಡಾ । ಕಾ ಶಿಣಲೇ ಜೇ ಸಾಂಕಡಾ । ತೇ ಜೀವ ಸುರವಾಡಾ । ಆಣಿಜತೀ ।೨೦೬॥ ಸಕಲ ತೀರ್ಥಾಂಚಿಯೇ ಧುರೇ । ಜಿಯೇ ಕಾ ಮಾತಾಪಿತರೇ । ತಯಾ ಸೇವೇಸಿ ಕೀರ ಶರೀರೇ । ಲೋಣ ಕೀಜೇ ।೨೦೭॥ ಆಣಿ ಸಂಸಾರಾ ಐಸಾ ದಾರುಣು । ಜೋ ಭೇಟಲಾಚಿ ಹರೀ ಶೀಣು । ತೋ ಜ್ಞಾನದಾನೀ ಸಕರಣು । ಭಜಿಜೇ ಗುರು ।೨೦೮॥ ಆಣಿ ಸ್ವಧರ್ಮಾಚಾ ಆಗಿಠಾ । ದೇಹ ಜಾಡ್ಯಾಚಿಯಾ ಕಿಟಾ । ಆವೃತ್ತಿ ಪುಟೀ ಸುಭಟಾ । ಝಾಡೀ ಕೀಜೇ ।೨೦೯॥ ವಸ್ತು ಭೂತಮಾತ್ರೀ ನಮಿಜೇ । ಪರೋಪಕಾರೀ ಭಜಿಜೇ । ಸ್ತ್ರೀವಿಷಯೀ ನಿಯಮಿಜೇ । ನಾಂವೇ ನಾಂವೇ ।೨೧೦॥ ಜನ್ಮ ತೇನಿ ಪ್ರಸಂಗೇ । ಸ್ತ್ರೀದೇಹ ಶಿವಣೇ ಆಂಗೇ । ತೇಥೂನಿ ಜನ್ಮ ಆಘವೇ । ಸೋವಳೇ ಕೀಜೇ ।೨೧೧॥ ಭೂತಮಾತ್ರಾಚೇನಿ ನಾಂವೇ । ತೃಣಹೀ ನಾಸುಡಾವೇ । ಕಿಂಬಹುನಾ ಸಾಂಡಾವೇ । ಭೇದ ಭೇದ ।೨೧೨॥ ಐಸೇಸೀ ಜೈ ಶರೀರೀ । ರಾಹಾಟೀಚೇ ಪಡೇ ಉಜರೀ । ತೈ ಶಾರೀರ ತಪ ಘುಮರೀ । ಆಲೇ ಜಾಣ ।೨೧೩॥ ಪಾರ್ಥಾ ಸಮಸ್ತ ಹೀ ಹೇ ಕರಣೇ । ದೇಹಾಚೇನಿ ಪ್ರಧಾನಪಣೇ । ಮ್ಹಣೌನಿ ಯಯಾತೇ ಮೀ ಮ್ಹಣೇ । ಶಾರೀರ ತಪ ।೨೧೪॥

ಅದಕ್ಕಾಗಿ ತಪಸ್ಸೆಂದರೆ ಏನು? ಇದರ ಸ್ವರೂಪವನ್ನು ನಿನಗೆ ತಿಳಿಸುವೆನು. ತದನಂತರ ಗುಣಗಳಿಂದ ಅದರ ಭೇದಗಳು ನಿನಗೆ ತಿಳಿಸುವೆನು, ತದನಂತರ ಗುಣಗಳಿಂದ ಅದರ ಭೇದಗಳು ಹೇಗಾದವು ಎಂಬುದನ್ನು ಆಮೇಲೆ ತಿಳಿಸುವೆನು ।೧೯೯॥

ಇನ್ನು ಅರ್ಜುನಾ, ಉತ್ತಮ ತಪಸ್ಸಿಗೆ ಮೂರು ಪ್ರಕಾರಗಳಿರುವುವು. ಅವು ಕಾಯಿಕ, ವಾಚಿಕ ಮತ್ತು ಮಾನಸಿಕಗಳಾಗಿವೆ ।೨೦೦॥

ಈಗ ಈ ಮೂರರಲ್ಲಿ ಕಾಯಿಕ ತಪಸ್ಸು ಯಾವುದೆನ್ನುವುದನ್ನು ಕೇಳು. ಶಂಕರ ಅಥವಾ ವಿಷ್ಣು ಇವರಲ್ಲಿ ಯಾರಾದರೂ ಭಕ್ತಿ ಇದ್ದುಕೊಂಡು ।೨೦೧॥

ಶ್ಲೋಕಾರ್ಥ :- ದೇವತೆಗಳನ್ನೂ, ಬ್ರಾಹ್ಮಣರನ್ನೂ, ಗುರುಗಳನ್ನೂ, ಹಿರಿಯರನ್ನೂ ಪೂಜಿಸುವಿಕೆ, ಶುಚಿತ್ವ, ಸರಳತನ, ಬ್ರಹ್ಮಚರ್ಯ, ಅಹಿಂಸೆ ಇವು ಶಾರೀರಿಕ ತಪಸ್ಸು ಎನಿಸಿಕೊಳ್ಳುತ್ತವೆ ।೧೪॥

ಆತನು ತನ್ನ ಪ್ರಿಯದೇವನ ಮಂದಿರಕ್ಕೆ ಹೋಗಿ ದರ್ಶನ ಪಡೆಯಲು ಅಥವಾ ಯಾತ್ರಾದಿಗಳನ್ನು ಮಾಡಲು ಆತನಿಗೆ ಎಂಟು ಪ್ರಹರಗಳಲ್ಲಿಯೂ ಆತನ ಕಾಲುಗಳಿಗೆ ವಿಶ್ರಾಂತಿ ದೊರಕುವುದಿಲ್ಲ ।೨೦೨॥

ದೇವರ ಅಂಗಳವನ್ನು ಸುಶೋಭಿತವನ್ನಾಗಿ ಮಾಡುವುದರಲ್ಲಿ, ಪೂಜಾ ಸಾಹಿತ್ಯಗಳನ್ನು ಕೊಡುವುದರಲ್ಲಿ ಹಾಗೂ ದೇವರ ಸೇವೆಯನ್ನು ಮಾಡುವುದರಲ್ಲಿ ಆತನ ಕೈಗಳು ಶೋಭಿಸುವುವು ।೨೦೩॥

ಶಂಕರನ ಲಿಂಗ ಅಥವಾ ವಿಷ್ಣುವಿನ ಮೂರ್ತಿಯು ದೃಷ್ಟಿಗೆ ಬಿದ್ದಾಕ್ಷಣವೇ ಆತನು ದಂಡವತ ಸಾಷ್ಟಾಂಗ ನಮಸ್ಕಾರ ಹಾಕುವನು ।೨೦೪॥

ಮತ್ತು ವಿಧಿ ವಿನಯಾದಿ ಗುಣಗಳಿಂದ ಕೂಡಿದ ಪೂಜ್ಯರಾದ ಬ್ರಾಹ್ಮಣರ ಸೇವೆಯನ್ನು ಮಾಡುವನು ।೨೦೫॥

ಅಥವಾ ಪ್ರವಾಸದಿಂದ ದಣಿದ ಅಥವಾ ಸಂಕಟಗಳಲ್ಲಿ ಸಿಲುಕಿಕೊಂಡಿರುವ ಜೀವಿಗಳನ್ನು ನೋಡಿದರೆ, ಅವರನ್ನು ಸುಖಾವಸ್ಥೆಗೆ ತರುವನು ।೨೦೬॥

ಸರ್ವ ತೀರ್ಥಗಳಲ್ಲಿ ಶ್ರೇಷ್ಠರೆಂದು ಮಾನ್ಯ ಪಡೆದ ತಾಯಿ ತಂದೆಯವರ ಸೇವೆ ಮಾಡುವುದರಲ್ಲಿ ತನ್ನ ಶರೀರವನ್ನು ಅವರ ಮೇಲಿಂದ ನಿವಾಳಿಸಿ ಒಗೆಯುವನು ।೨೦೭॥

ಮತ್ತು ಸಂಸಾರದಂತಹ ದುರ್ಧರವಾದ ವ್ಯಾಧಿಯಿಂದ ತನ್ನ ದರ್ಶನ ಮಾತ್ರಕ್ಕೆ ಮುಕ್ತ ಮಾಡುವ ಮತ್ತು ಜ್ಞಾನಾಮೃತವನ್ನು ಕುಡಿಸಲು ತತ್ಪರರಾಗಿರುವ ಶ್ರೀಗುರುಗಳ ಸೇವೆಯನ್ನು ಮಾಡುವನು ।೨೦೮॥

ಮತ್ತು ಅರ್ಜುನಾ, ದೇಹಾಭಿಮಾನರೂಪ ಕಿಟ್ಟವನ್ನು ಇಲ್ಲದಂತೆ ಮಾಡಲು ಅದನ್ನು ಸ್ವಧರ್ಮರೂಪ ಅಗ್ನಿಯಲ್ಲಿ ವೇದಾಧ್ಯಯನ ರೂಪ ಪುಟವನ್ನು ಕೊಡುವನು ।೨೦೯॥

ಪ್ರಾಣಿಮಾತ್ರರಲ್ಲಿ ಒಬ್ಬನೇ ಆತ್ಮನಿರುವನೆಂದು ಹೀಗೆ ತಿಳಿದು, ಅವರಿಗೆ ನಮಸ್ಕರಿಸುವನು. ಪರೋಪಕಾರವನ್ನು ಮಾಡಲು ತತ್ಪರನಾಗಿರುವನು, ಸ್ತ್ರೀ ವಿಷಯಕ್ಕೆ ಈತನ ನಿಯಮವೆಂದರೆ ಆಕೆಯ ಹೆಸರೇ ಎತ್ತುವುದಿಲ್ಲ ।೨೧೦॥

ಜನ್ಮವಾಗುವ ವೇಳೆಯಲ್ಲಿ ಸ್ತ್ರೀ ಶರೀರದ ಸ್ಪರ್ಶವಾಗಿರುವುದು. ಮುಂದೆ ಈತನು ತನ್ನ ಆಯುಷ್ಯ ತುಂಬ ಸ್ತ್ರೀ ದೇಹದ ಸ್ಪರ್ಶ ಮಾಡದೇ ಪವಿತ್ರನಾಗಿರುವನು ।೨೧೧॥

ಹುಲ್ಲಿಗೂ ಜೀವವಿದೆ ಎಂದು ತಿಳಿದು ಅದನ್ನು ತುಳಿಯುವುದಿಲ್ಲ. ಹೆಚ್ಚಿಗೇನು ಹೇಳಬೇಕು? ಯಾರಿಗೂ ಮುರಿದು, ಒಗೆದು, ಮನನೋಯುವಂತೆ ಮಾತನಾಡುವುದಿಲ್ಲ ।೨೧೨॥

ಈ ಪ್ರಕಾರವಾಗಿ ಶರೀರದಿಂದ ವ್ಯವಹರಿಸುವ ರೂಢಿಯಾಗಿರುವಾಗ ಆತನ ಅಂಗದಲ್ಲಿ ಶಾರೀರಿಕ ತಪಸ್ಸು ಪೂರ್ಣವಾಗಿ ಬಿಂಬಿಸಿದೆ ಎಂದು ತಿಳಿದುಕೊ ।೨೧೩॥

ಪಾರ್ಥಾ, ಈ ಎಲ್ಲ ಕಾರ್ಯಗಳು ದೇಹದ ಪ್ರಾಧಾನ್ಯತೆಯಿಂದ ಹೊಂದಾಣಿಕೆಯಿಂದ ಸಾಧಿಸುವುವು. ಆದ್ದರಿಂದ ನಾನು ಇದಕ್ಕೆ ಶರೀರ ತಪಸ್ಸೆಂದು ಹೇಳುವೆನು ।೨೧೪॥

ಏವಂ ಶಾರೀರ ಜೇ ತಪ । ತಯಾಚೇ ದಾವಿಲೇ ರೂಪ । ಆತಾ ಆಇಕ ನಿಷ್ಪಾಪ । ವಾಙ್ಮಯ ತೇ ।।೨೧೫।।

ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ।।೧೫।।

ತರೀ ಲೋಹಾಚೇ ಅಂಗ ತುಕ । ನ ತೋಡಿತಾಂಚಿ ಕನಕ । ಕೇಲೇ ಜೈಸೇ ದೇಖ । ಪರಿಸೇ ತೇಣೇ ।।೨೧೬।। ತೈಸೇ ನ ದುಖವಿತಾ ಸೇಜೇ । ಜಾವಳಿಯಾ ಸುಖ ನಿಪಜೇ ।ಐಸೇ ಸಾಧುತ್ವ ಕಾ ದೇಖಿಜೇ । ಬೋಲಣಾ ಜಿಯೇ ।।೨೧೭।। ಪಾಣೀ ಮುದಲ ಝಾಡಾ ಜಾಯೇ । ತೃಣ ತೇ ಪ್ರಸಂಗೇಚಿ ಜಿಯೇ । ತೈಸೇ ಏಕಾ ಬೋಲಿಲೇ ಹೋಯೇ । ಸರ್ವಾಹಿ ಹಿತ ।।೨೧೮।। ಜೋಡೇ ಅಮೃತಾಚೀ ಸುರ ಸರೀ । ತೈ ಪ್ರಾಣಾಂತೇ ಅಮರ ಕರೀ । ಸ್ನಾನೇ ಪಾಪ ತಾಪ ವಾರೀ । ಗೋಡೀಹೀ ದೇ ।।೨೧೯।। ತೈಸಾ ಅವಿವೇಕುಹೀ ಫಿಟೇ । ಆಪುಲೇ ಅನಾದಿತ್ವ ಭೇಟೇ । ಆಇಕತಾ ರುಚಿ ನ ವಿಟೇ । ಪೀಯುಷೀ ಜೈಸೀ ।।೨೨೦।। ಜರೀ ಕೋಣೀ ಕರೀ ಪುಸಣೇ । ತರೀ ಹೋಆವೇ ಐಸೇ ಬೋಲಣೇ । ನಾತರೀ ಆವರ್ತಣೇ । ನಿಗಮು ಕಾ ನಾಮ ।।೨೨೧।। ಋಗ್ವೇದಾದಿ ತಿನ್ಹೀ । ಪ್ರತಿಷ್ಠೀಜತೀ ವಾಗ್ಭುವನೀ । ಕೇಲೀ ಜೈಸೀ ವದನೀ । ಬ್ರಹ್ಮಶಾಳಾ ।।೨೨೨।। ನಾತರೀ ಏಕಾಧೇ ನಾಂವ । ತೇಂಚಿ ಶೈವ ಕಾ ವೈಷ್ಣವ । ವಾಚೇ ವಸೇ ತೇ ವಾಗ್ಭವ । ತಪ ಜಾಣಾವೇ ।।೨೨೩।। ಆತಾ ತಪ ಜೇ ಮಾನಸಿಕ । ತೇಹೀ ಸಾಂಗೋ ಆಇಕ । ಮ್ಹಣೇ ಲೋಕನಾಥನಾಯಕ । ನಾಯಕು ತೋ ।।೨೨೪।।

ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।
ಭಾವಸಂಶುದ್ಧಿರಿತ್ಯೇತತ್ ತಪೋಮಾನಸಮುಚ್ಯತೇ ।।೧೬।।

ತರೀ ಸರೋವರ ತರಂಗೀ । ಸಾಂಡಿಲೇ ಆಕಾಶ ಮೇಘೀ । ಕಾ ಚಂದನಾಚೇ ಉರಗೀ । ಉದ್ಯಾನ ಜೈಸೇ ।।೨೨೫।। ನಾನಾ ಕಳಾವೈಷಮ್ಯೇ ಚಂದ್ರು । ಕಾ ಸಾಂಡಿಲಾ ಆಧೀ ನರೇಂದ್ರು । ನಾತರೀ ಕ್ಷೀರಸಮುದ್ರು । ಮಂದರಾಚಳೇ ।।೨೨೬।। ತೈಸೀ ನಾನಾ ವಿಕಲ್ಪ ಜಾಳೇ । ಸಾಂಡೂನಿ ಗೇಲಿಯಾ ಸಕಳೇ । ಮನ ರಾಹೇ ಕಾ ಕೇವಳೇ । ಸ್ವರೂಪೇ ಜೇ ।।೨೨೭।। ತಪನೇವೀಣ ಪ್ರಕಾಶು । ಜಾಡ್ಯೇವೀಣ ರಸೀ ರಸು । ಪೋಕಳೀವೀಣ ಅವಕಾಶು । ಹೋಯ ಜೈಸಾ ।।೨೨೮।।

ಈ ಪ್ರಕಾರವಾಗಿ ಶರೀರ ತಪಸ್ಸಿನ ವಿಷಯಕ್ಕೆ ಅದರ ಲಕ್ಷಣಗಳನ್ನು ತಿಳಿಸಿರುವೆನು. ಈಗ ನಿಷ್ಪಾಪವಾಗಿರುವ ವಾಚಿಕ ತಪಸ್ಸಿನ ಲಕ್ಷಣಗಳನ್ನು ಹೇಳುವೆ ಕೇಳು ।೨೧೫॥

ಶ್ಲೋಕಾರ್ಥ :- ಉದ್ವೇಗಕರವಲ್ಲದ, ಸತ್ಯ, ಪ್ರಿಯ, ಹಿತವಾಗಿರುವ ವಾಕ್ಯಗಳು, ವೇದಾಧ್ಯಯನ, ಇವುಗಳು ವಾಕ್‌ರೂಪವಾದ ತಪಸ್ಸು ಎನಿಸುತ್ತವೆ ।೧೫॥

ಹಾಗಾದರೆ ಇಲ್ಲಿ ನೋಡು, ಪರಿಸಮಣಿಯು ಕಬ್ಬಿಣದ ಆಕಾರ ಹಾಗೂ ತೂಕವನ್ನು ಕಡಿಮೆ ಮಾಡದೇ ಯಾವ ಪ್ರಕಾರವಾಗಿ ಅದಕ್ಕೆ ಬಂಗಾರವನ್ನಾಗಿ ಮಾಡುವುದೋ ।೨೧೬॥

ಅದರಂತೆ ಆತನು ಯಾರಿಗಾದರೂ ಮಾತನಾಡಬೇಕಾದರೆ, ಅವರ ಮಗ್ಗಲದವರಿಗೂ ದುಃಖವಾಗದಂತೆ, ಸಹಜವಾಗಿ ಸುಖವಾಗುವಂತೆ ಆತನಲ್ಲಿ ಮಾತನಾಡುವ ಶಕ್ತಿ ಇರುವುದು ।೨೧೭॥

ವಸ್ತುತಃ ನೀರನ್ನು ಗಿಡಕ್ಕೆ ಹಾಕಲಾಗುವುದು. ಆದರೆ ಅದರಿಂದ ಅದರ ಸಮೀಪದಲ್ಲಿರುವ ಹುಲ್ಲು ಸಹಜವಾಗಿ ಬೆಳೆಯುವುದು. ಅದರಂತೆ ಒಬ್ಬನಿಗೆ ಮಾತನಾಡುವಾಗ ಅದರಿಂದ ಎಲ್ಲರಿಗೂ ಹಿತವಾಗುವುದು ।೨೧೮॥

ಅಮೃತದ ಗಂಗೆಯು ಪ್ರಾಪ್ತವಾದಲ್ಲಿ ಅದು ಪ್ರಾಣಿಗಳಿಗೆ ಪ್ರಾಶನದಿಂದ ಅಮರರನ್ನಾಗಿ ಮಾಡುವುದು. ಸ್ನಾನದಿಂದ ಪಾಪವನ್ನು ಕಳೆಯುವುದು, ಸಂಸಾರ ತಾಪದಿಂದ ಮುಕ್ತನನ್ನಾಗಿ ಮಾಡುವುದು. ರುಚಿಯನ್ನು ಕೊಡುವುದು ।೨೧೯॥

ಅದರಂತೆ ಅಜ್ಞಾನವು ಇಲ್ಲದಂತಾಗಿ ಆತ್ಮಸ್ವರೂಪ ದರ್ಶನವಾಗುವುದು ಮತ್ತು ಅನೇಕ ಸಾರೆ ಕೇಳಿದರೂ, ಅಮೃತದಂತೆ ಅದರ ರುಚಿಯು ಕೆಡುವುದಿಲ್ಲ ।೨೨೦॥

ಯಾರಾದರೂ ಅವರನ್ನು ಪ್ರಶ್ನಿಸಿದರೆ ಇದರಂತೆ ಅವರಲ್ಲಿ ಮಾತನಾಡುವರು. ಇಲ್ಲದಿದ್ದರೆ ವೇದಾಧ್ಯಯನವನ್ನು ಇಲ್ಲವೆ ಹರಿಸ್ಮರಣೆಯನ್ನು ಮಾಡುವರು ।೨೨೧॥

ಋಗ್ವೇದಾದಿ ಮೂರು ವೇದಗಳನ್ನು ವಾಚಾ ರೂಪ ಮಂದಿರದಲ್ಲಿ ಪ್ರಾಣ ಪ್ರತಿಷ್ಠೆಯನ್ನು ಮಾಡುವರು ಮತ್ತು ತಮ್ಮ ವದನವನ್ನು ವೇದಶಾಲೆಯನ್ನಾಗಿ ಮಾಡುವರು ।೨೨೨॥

ಅಥವಾ ಶಿವ ಅಥವಾ ವಿಷ್ಣು ಇವರಲ್ಲಿ ಒಬ್ಬರ ನಾಮಸ್ಮರಣೆಯನ್ನು ಮಾಡುವುದೇ, ವಾಣಿಯಿಂದ ಉತ್ಪನ್ನವಾದ ವಾಚಿಕ ತಪಸ್ಸೆಂದು ತಿಳಿಯಬೇಕು ।೨೨೩॥

ಈಗ ಮಾನಸಿಕ ತಪಸ್ಸಿನ ಲಕ್ಷಣಗಳನ್ನು ಹೇಳುವೆನು ಕೇಳು. ಹೀಗೆ ಲೋಕನಾಯಕರ ನಾಥನಾದ ಶ್ರೀಕೃಷ್ಣಪರಮಾತ್ಮನು ಹೇಳಿದನು ।೨೨೪॥

ಶ್ಲೋಕಾರ್ಥ :- ಪ್ರಸನ್ನತೆ, ಪ್ರಶಾಂತತೆ, ಮೌನ, ಸಂಯಮ, ಹೃದಯಶುದ್ಧಿ ಇವುಗಳು ಮಾನಸಿಕ ತಪಸ್ಸು ಎನಿಸಿಕೊಳ್ಳುತ್ತವೆ ।೧೬॥

ತೆರೆ ರಹಿತ ಸರೋವರವು, ಅಥವಾ ಮೋಡ ರಹಿತ ಸ್ವಚ್ಛವಾಗಿರುವ ಆಕಾಶವು, ಅಥವಾ ಸರ್ಪರಹಿತ ಚಂದನದ ವನವು ।೨೨೫॥

ಅಥವಾ ಪೂರ್ಣಚಂದ್ರನು, ಚಿಂತೆ ರಹಿತ ರಾಜನು, ಅಥವಾ ಮಂದರಾಚಲ ರಹಿತ ಕ್ಷೀರಸಾಗರವು ।೨೨೬॥

ಅದರಂತೆ ಅನೇಕ ಕಲ್ಪನೆಗಳ ತರಂಗಗಳು ಪೂರ್ಣವಾಗಿ ನಿಃಶೇಷವಾಗಿ ಇಲ್ಲದಾಗಲು ಮನವು ಶುದ್ಧರೂಪದಲ್ಲಿ ನಿಮಗ್ನವಾಗಿರುವುದು ।೨೨೭॥

ಉಷ್ಣತೆ ರಹಿತ ಪ್ರಕಾಶವು, ಜಡರಹಿತ ಅನ್ನವು, ಪೊಳ್ಳು ರಹಿತ ವಸ್ತುವು ಇವು ಹೇಗೆ ಇರುವುವೋ ।೨೨೮॥

ತೈಸೀ ಆಪಲೀ ಸೋಯ ದೇಖೇ । ಆಣಿ ಆಪಲಿಯಾ ಸ್ವಭಾವಾ ಮುಕೇ । ಹಿಂವಲೀ ಜೈಸೀ ಆಂಗಿಕೇ । ಹಿವ್ಹೋ ನೇದೀ ನಿಜಾಂಗ ।೨೩೯॥ ನ ಚಲತೇ ಕಳಂಕೇವೀಣ । ಶಶಿಬಿಂಬ ಜೈಸೇ ಪರಿಪೂರ್ಣ । ತೈಸೇ ಚೋಖೀ ಶೃಂಗಾರಪಣ । ಮನಾಚೇ ಜೇ ।೨೪೦॥ ಬುಜಾಲೀ ವೈರಾಗ್ಯಾಚೀ ವ್ಹೋರಪ । ಜಿರಾಲೀ ಮನಾಚೀ ಧಾಂಪಕಾಂಪ । ತೇಥ ಕೇವಳ ಜಾಲೀ ವಾಫ । ನಿಜಬೋಧಾಚೀ ।೨೪೧॥ ಮ್ಹಣೌನಿ ವಿಚಾರಾವಯಾ ಶಾಸ್ತ್ರ । ರಾಹಾಟವಾವೇ ಜೇ ವಕ್ತ್ರ । ತೇ ವಾಚೇಂಚೇಂಹೀ ಸೂತ್ರ । ಹಾತೀ ನ ಧರೀ ।೨೪೨॥ ತೇ ಸ್ವಲಾಭ ಲಾಭಲೇ ಪಣೇ । ಮನ ಮನಪಣಾಹೀ ಧರೂ ನೇಣೇ । ಶಿವತಲೇ ಜೈಸೇ ಲವಣೇ । ಆಪುಲೇ ನಿಜ ।೨೪೩॥ ತೇಥ ಕೇ ಉರಿತೀ ತೇ ಭಾವ । ಜಿಹೀ ಇಂದ್ರಿಯಮಾರ್ಗೀ ಧಾಂವ । ಘೇಊನಿ ಠಾಕಾವೇ ಗಾಂವ । ವಿಷಯಾಂಚೇ ತೇ ।೨೪೪॥ ಮ್ಹಣೌನಿ ತಿಯೇ ಮಾನಸೀ । ಭಾವಶುದ್ಧಿಚಿ ಅಸೇ ಅಪೈಸೀ । ರೋಮಶುಚಿ ಜೈಸೀ । ತಳಹಾತಾಸೀ ।೨೪೫॥ ಕಾಯ ಬಹುಬೋಲೋ ಅರ್ಜುನಾ । ಜೈ ಹೇ ದಶಾ ಯೇ ಮನಾ । ತೈ ಮನಸ್ತಪೋಭಿಧಾನಾ । ಪಾತ್ರ ಹೋಯ ತೀ ।೨೪೬॥ ಪರೀ ತೇ ಅಸೋ ಹೇ ಜಾಣ । ಮಾನಸ ತಪಾಚೇ ಲಕ್ಷಣ । ದೇವೋ ಮ್ಹಣೇ ಸಂಪೂರ್ಣ । ಸಾಂಗಿತಲೇ ।೨೪೭॥ ಏಂವ ದೇಹವಾಚಾಚಿತ್ತೇ । ಜೇ ಪಾತಲೇ ತ್ರಿವಿಧತ್ವಾತೇ । ತೇ ಸಾಮಾನ್ಯ ತಪ ತೂಂತೇ । ಪರಿಸವಿಲೇ ಗಾ ।೨೪೮॥ ಆತಾ ಗುಣತ್ರಯ ಸಂಗೇ । ಹೇಂಚಿ ವಿಶೇಷೀ ತ್ರಿವಿಧೀ ರಿಗೇ । ತೇಹೀ ಆಇಕ ಚಾಂಗೇ । ಪ್ರಜ್ಞಾಬಳೇ ।೨೪೯॥

ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ತ್ರಿವಿಧಂ ನರೈಃ ।
ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ ।೧೭॥

ತರೀ ಹೇಂಚಿ ತಪ ತ್ರಿವಿಧಾ । ಜೇ ದಾವಿಲೇ ತುಜ ಪ್ರಬುದ್ಧಾ । ತೇಂಚಿ ಕರೀ ಪೂರ್ಣ ಶ್ರದ್ಧಾ । ಸಾಂಡೂನಿ ಫಳ ।೨೫೦॥ ಜೈ ಪುರತಿಯಾ ಸತ್ತ್ವಶುದ್ಧೀ । ಆಚರಿಜೇ ಆಸ್ತಿಕ್ಯಬುದ್ಧೀ । ತೈ ತಯಾತೇಂಚಿ ಗಾ ಪ್ರಬುದ್ಧೀ । ಸಾತ್ತ್ವಿಕ ಮ್ಹಣಿಪೇ ।೨೫೧॥

ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್ ।
ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ ।೧೮॥

ನಾತರೀ ತಪಸ್ಥಾಪನೇಲಾಗೀ । ದುಜೇಪಣ ಮಾಂಡೂನಿ ಜಗೀ । ಮಹತ್ತ್ವಾಚ್ಯಾ ಶೃಂಗೀ । ಬೈಸಾವಯಾ ।೨೫೨॥

ಅದರಂತೆ ತನ್ನ ಸ್ವರೂಪವನ್ನು ತಿಳಿದುಕೊಂಡು ಆತನು ತನ್ನ ಸ್ವಭಾವವನ್ನು ಬಿಡುವನು, ಚಳಿಯಿಂದ ಒಮ್ಮೆ ಶರೀರವು ಶೀತಲವಾದಾಗ ಪುನಃ ಚಳಿಯ ಬಾಧೆಯಾಗುವುದಿಲ್ಲ ।೨೨೯॥

ಅಚಲ ಮತ್ತು ಕಲಂಕರಹಿತವಾಗಿರುವ ಚಂದ್ರನ ಬಿಂಬವು ಯಾವ ಪ್ರಕಾರವಾಗಿ ಪೂರ್ಣವಾಗಿರುವುದೋ, ಅದರಂತೆ ಆತ್ಮಸ್ವರೂಪದಲ್ಲಿ ಮನವು ಸ್ಥಿರವಾಗುವುದು ।೨೩೦॥

ವೈರಾಗ್ಯದ ಇಚ್ಛೆಯು ಇಲ್ಲದಾಗಿದೆ ಮತ್ತು ಮನದ ಓಟವು ಹಾಗೂ ಭಯವು ಕಡಿಮೆಯಾಗಿರುವುದರಿಂದ ಅಲ್ಲಿ ಬೋಧರೂಪ ಮನವಾಗುವುದು ।೨೩೧॥

ಆದ್ದರಿಂದ ಶಾಸ್ತ್ರಗಳ ವಿಚಾರ ಮಾಡಲು ಯಾವ ಮುಖಕ್ಕೆ ಶ್ರಮಪಡಬೇಕಾಗಿದ್ದು, ಈಗ ಆ ಮುಖವು ವಾಣಿಯನ್ನೂ ಲನ್ನೂ ಕೈಯಲ್ಲಿ ಹಿಡಿಯುವುದಿಲ್ಲ. ಅಂದರೆ ಮೌನವಾಗಿರುವುದು ।೨೩೨॥

ಆ ಮನುಷ್ಯನಿಗೆ ಆತ್ಮಸ್ವರೂಪದ ಲಾಭವಾಗಿರುವುದಕ್ಕೆ ಉಪ್ಪನ್ನು ತನ್ನ ಮೂಲಸ್ವರೂಪದ ನೀರಿನಲ್ಲಿ ಹಾಕಿದಾಗ ತದ್ರೂಪವಾಗುವಂತೆ ಅದು ಸಂಕಲ್ಪ ವಿಕಲ್ಪಗಳನ್ನು ಬಿಟ್ಟುಬಿಡುವುದು ।೨೩೩॥

ಹೀಗಾದ ವೇಳೆಯಲ್ಲಿ ಮನದಲ್ಲಿ ಇಚ್ಛೆಯು ಹೇಗೆ ಉತ್ಪನ್ನವಾಗಬೇಕು? ಇದರಿಂದ ಇಂದ್ರಿಯಗಳ ಕಡೆ ಲಕ್ಷ ಹೋಗಿ ವಿಷಯಗಳ ಊರಿಗೆ ಹೇಗೆ ಹೋಗಬೇಕು? ।೨೩೪॥

ಆದ್ದರಿಂದ ಅಂಗೈಯು ಕೂದಲ ರಹಿತವಾಗಿ ಶುದ್ಧವಾಗಿರುವಂತೆ, ಸಹಜವಾಗಿ ಅವರ ಮನಸ್ಸು ಭಾವ ಶುದ್ಧವಾಗಿರುವುದು. (ಸಂಕಲ್ಪ ವಿಕಲ್ಪ ರಹಿತವಾಗಿರುವುದು) ।೨೩೫॥

ಅರ್ಜುನಾ, ಹೆಚ್ಚಿಗೇನು ಹೇಳಬೇಕು? ಮನಸ್ಸು ಈ ಯೋಗ್ಯತೆಯನ್ನು ಎಂದು ಪಡೆಯುವುದೋ, ಆಗ ಅದಕ್ಕೆ ಮಾನಸ ತಪಸ್ಸೆಂದು ಹೇಳಲಿಕ್ಕೆ ಪಾತ್ರವಾಗುವುದು ।೨೩೬॥

ದೇವನು ಹೇಳಿದನು:- ಈಗ ಇದು ಇರಲಿ, ಮಾನಸ ತಪಸ್ಸಿನ ಎಲ್ಲ ಲಕ್ಷಣಗಳನ್ನು ನಾನು ನಿನಗೆ ಹೇಳಿದೆನು ।೨೩೭॥

ಈ ಪ್ರಕಾರವಾಗಿ ದೇಹ, ವಾಚಾ, ಚಿತ್ತ ಇವುಗಳ ಯೋಗದಿಂದ ತ್ರಿವಿಧತ್ವವನ್ನು ಹೊಂದಿಕೊಂಡಿರುವ ಈ ಸಾಮಾನ್ಯ ತಪಸ್ಸನ್ನು ನಾನು ನಿನಗೆ ಹೇಳಿದೆನು ।೨೩೮॥

ಈಗ ಮೂರುಗುಣಗಳ ಸಂಗದಿಂದ ಇದೇ ತಪಸ್ಸು ಮೂರು ಪ್ರಕಾರಗಳಾಗುವುದು. ಇದನ್ನು ಬುದ್ಧಿಯ ಬಲದಿಂದ ಚೆನ್ನಾಗಿ ಆಲಿಸು ।೨೩೯॥

ಶ್ಲೋಕಾರ್ಥ :- ಫಲವನ್ನು ಬಯಸದೆ ಸಮಾಧಾನ ಮನಸ್ಸಿನಿಂದ ಮನುಷ್ಯನು ಹೆಚ್ಚಿನ ವಿಶ್ವಾಸದಿಂದ ಮಾಡಿದ ಈ ಮೂರು ಬಗೆಯ ತಪಸ್ಸುಗಳು ಸಾತ್ತ್ವಿಕ ವೆನಿಸುವುವು ।೧೭॥

ಹಾಗಾದರೆ ಹೇ ಪ್ರಬುದ್ಧನೇ, ಈ ಯಾವ ಮೂರು ಪ್ರಕಾರದ ತಪಸ್ಸುಗಳನ್ನು ನಾವು ನಿನಗೆ ಹೇಳಿದ್ದನ್ನು ಪೂರ್ಣ ಶ್ರದ್ಧೆಯಿಂದ ಅವುಗಳನ್ನು ಆಚರಿಸು. ಆದರೆ ಫಲದ ಆಶೆಯನ್ನು ಹಿಡಿಯಬೇಡ ।೨೪೦॥

ಅರೇ, ಮನಸ್ಸನ್ನು ಪೂರ್ಣವಾಗಿ ಶುದ್ಧವಾಗಿಟ್ಟುಕೊಂಡು ಶ್ರದ್ಧೆಯಿಂದ ಈ ತಪಸ್ಸುಗಳ ಆಚರಣೆಯನ್ನು ಮಾಡಿದರೆ, ಇದೇ ತಪಸ್ಸಿಗೆ ತಿಳಿದವರು ಸಾತ್ತ್ವಿಕವೆನ್ನುವರು ।೨೪೧॥

ಶ್ಲೋಕಾರ್ಥ :- ಮಾನ ಮರ್ಯಾದೆಗಳಿಗಾಗಿ, ಕೀರ್ತಿ ಪ್ರತಿಷ್ಠೆಗಳಿಗಾಗಿ, ಆಡಂಬರಕ್ಕಾಗಿ ಮಾಡುವ ತಪಸ್ಸಿಗೆ ರಾಜಸ ತಪಸ್ಸೆನ್ನುತ್ತಾರೆ. ಅದಕ್ಕೆ ಸರಿಯಾದ ಬೆಲೆ ಇಲ್ಲ. ಫಲವೂ ಇಲ್ಲ ।೧೮॥

ಅದಲ್ಲದೇ, ತಪಸ್ಸು ಮಾಡುವ ಉದ್ದೇಶದಿಂದ ಜಗತ್ತಿನಲ್ಲಿ ದ್ವೈತವನ್ನು ಸ್ಥಾಪಿಸಿ ದೊಡ್ಡಸ್ಥಿಕೆಯ ಶಿಖರದ ಮೇಲೆ ಕೂಡುವ ಯಾವ ಇಚ್ಛೆಯನ್ನು ಮಾಡುವರು ।೨೪೨॥

ತ್ರಿಭುವನೀಂಚಿಯಾ ಸನ್ಮಾನಾ । ನ ವಚಾವೇ ಠಾಯಾ ಆನಾ । ಧುರೇಚಿಯಾ ಆಸನಾ । ಭೋಜನಾಲಾಗೀ ।।೨೪೩।। ವಿಶ್ವಾಚಿಯಾ ಸ್ತೋತ್ರಾ । ಆಪಣ ಹೋಆವಯಾ ಪಾತ್ರಾ । ವಿಶ್ವೇ ಆಪಲಿಯಾ ಯಾತ್ರಾ । ಕರಾವಿಯಾ ಯಾವೇ ।।೨೪೪।। ಲೋಕಾಂಚಿಯಾ ವಿವಿಧಾ ಪೂಜಾ । ಆಶ್ರಯೋ ನ ಧರಾವಯಾ ದುಜಾ । ಭೋಗ ಭೋಗಾವೇ ವೋಜಾ । ಮಹತ್ತ್ವಾಚಿಯಾ ।।೨೪೫।। ಅಂಗಬೋಲ ಮಾಖೂನಿ ತಪೇ । ವಿಕಾವಯಾ ಆಪಣಪೇ । ಅಂಗಹೀನ ಪಡಪೇ । ಜಿಯಾಪರೀ ।।೨೪೬।। ಹೇ ಅಸೋ ಧನಮಾನೀ ಆಸ । ವಾಢಉನೀ ತಪ ಕೀಜೇ ಸಾಯಾಸ । ತೈತೇಂಚಿ ತಪ ರಾಜಸ । ಬೋಲಿಜೇ ಗಾ ।।೨೪೭।। ಪರೀ ಪಹು ರಣೇ ಜೇ ದುಹಿಲೇ । ತೈ ತೇ ಗುರೂ ನ ದುಭೇಚಿ ವ್ಯಾಲೇ । ಕಾ ಉಭೇ ಶೇತ ಚಾರಿಲೇ । ಪಿಕಾವಯಾ ನುರೇ ।।೨೪೮।। ತೈಸೇ ಫೋಕಾರಿತಾ ತಪ । ಕೀಜೆ ಜೇ ಸಾಕ್ಷೇಪ । ತೇ ಫಳೀ ತಂವ ಸೋಪ । ನಿಃಶೇಷ ಜಾಯ ।।೨೪೯।। ಐಸೇ ನಿರ್ಫಳ ದೇಖೋನಿ ಕರಿತಾ । ಮಾಝಾರೀ ಸಾಂಡೀ ಪಂಡುಸುತಾ । ಮ್ಹಣೌನಿ ನಾಹೀ ಸ್ಥಿರತಾ । ತಪಾ ತಯಾ ।।೨೫೦।। ಯೇರ್ಹವೀ ತರೀ ಆಕಾಶ ಮಾಂಡೀ । ಜೋ ಗರ್ಜೋನಿ ಬ್ರಹ್ಮಾಂಡ ಫೋಡೀ । ತೋ ಅವಕಾಳು ಮೇಘು ಕಾಯ ಘಡೀ । ರಾಹಾತ ಆಹೇ ? ।।೨೫೧।। ತೈಸೇ ರಾಜಸ ತಪ ಜೇ ಹೋಯೇ । ತೇ ಫಳೀ ಕೀರ ವಾಂಝ ಜಾಯೇ । ಪರೀ ಆಚರಣೇಂಹೀ ನೋಹೇ । ನಿರ್ವಾಹತೇ ಗಾ ।।೨೫೨।। ಆತಾ ತೇಂಚಿ ತಪ ಪುಢತೀ । ತಾಮಸಾಚಿಯಾ ರೀತೀ । ಪೈ ಪರತ್ರಾ ಆಣಿ ಕೀರ್ತೀ । ಮುಕೋನಿ ಕೀಜೇ ।।೨೫೩।।

ಮೂಢಗ್ರಾಹೇಣಾತ್ಮನೋ ಯತ್ ಪೀಡಯಾ ಕ್ರಿಯತೇ ತಪಃ ।
ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಮ್ ।।೧೯।।

ಕೇವಳ ಮೂರ್ಖಪಣಾಚಾ ವಾರಾ । ಜೇವೀ ಘೇಊನಿ ಧನುರ್ಧರಾ । ನಾಮ ಠೇವಿಜೇ ಶರೀರಾ । ವೈರಿಯಾಚೇ ।।೨೫೪।। ಪಂಚಾಗ್ನೀಚೇ ದಡಗೀ । ಖೋಲವೀಜತೀ ಶರೀರಾಲಾಗೀ । ಕಾ ಇಂಧನ ಕೀಜೇ ಹೇ ಆಗೀ । ಆಂತು ಲಾವೀ ।।೨೫೫।। ಮಾಥಾ ಜಾಳಿಜತೀ ಗುಗುಳು । ಪಾಠೀ ಘಾಲಿಜತೀ ಗಳು । ಆಂಗ ಜಾಳಿತೀ ಇಂಗಳು । ಜಳತಭೀತಾ ।।೨೫೬।। ದವಡೋನಿ ಶ್ವಾಸೋಚ್ಛ್ವಾಸ । ಕೀಜತೀ ವಾಯಾಂಚಿ ಉಪವಾಸ । ಕಾ ಘೇಪತೀ ಧೂಮಾಚೇ ಘಾಂಸ । ಅಧೋಮುಖೇ ।।೨೫೭।।

ತ್ರಿಭುವನದಲ್ಲಿ ಎಲ್ಲ ಸನ್ಮಾನಗಳು ಬೇರೆ ಯಾರಿಗೂ ಸಿಗಬಾರದು ಮತ್ತು ಸಭೆಗಳಲ್ಲಿ ಮತ್ತು ಭೋಜನ ಸಮಯ ದಲ್ಲಿ ತನಗೆ ಮಾತ್ರ ಅಗ್ರಭಾಗದ ಮಾನವು ದೊರಕಬೇಕು ।೨೪೩।।

ಎಲ್ಲ ಜಗತ್ತಿನ ಜನರು ತನ್ನ ಸ್ತುತಿಯನ್ನು ಮಾಡು ವಂತೆ ತಾನು ಪಾತ್ರನಾಗಬೇಕು ಮತ್ತು ಜನರು ತನ್ನ ದರ್ಶನ ಕ್ಕೆ ಬರಬೇಕು ।೨೪೪।।

ಲೋಕದ ಜನರು ತನ್ನನ್ನೇ ನಾನಾ ಪ್ರಕಾರವಾಗಿ ಪೂಜೆ ಯನ್ನು ಮಾಡಬೇಕು ಮತ್ತು ಎಲ್ಲ ಮಹತ್ತ್ವದ ಭೋಗಗಳು ತನಗೆ ಮಾತ್ರ ಉಪಭೋಗಿಸಲು ದೊರೆಯಬೇಕು ।೨೪೫।।

ವೃದ್ಧ ವೇಶ್ಯೆಯು ತನ್ನ ವಯಸ್ಸನ್ನು ಮುಚ್ಚಿ ಹಾಕಲು ಮೇಲೆಲ್ಲ ಶೃಂಗರಿಸಿಕೊಂಡು ಸೆಟೆದು ನೀಟಾಗಿ ಕುಳಿತು ಕೊಳ್ಳುವಂತೆ, ತಪಸ್ಸಿನ ಢೋಂಗಿತನದ ತನ್ನ ಸ್ವರೂಪವನ್ನು ಜನರಲ್ಲಿ ಮಾರಿಕೊಳ್ಳುವನು ।೨೪೬।।

ಹೆಚ್ಚಿಗೇನು ಹೇಳಬೇಕು? ಧನಮಾನದ ಪ್ರಾಪ್ತಿಯ ಇಚ್ಛೆಯನ್ನು ಧರಿಸಿಕೊಂಡು ಸಾಯಾಸದಿಂದ ತಪಸ್ಸನ್ನು ಆಚರಿಸುವುದಕ್ಕೆ ರಾಜಸ ತಪ ಎನ್ನುವರು ।೨೪೭।।

ಪಹುರಣಿ ಎಂಬ ಹುಳದಿಂದ ಆಕಳ ಕೆಚ್ಚಲಿನ ಹಾಲು ಅಟ್ಟಿ ಹೋಗುವುದು. ಆ ಆಕಳು ಈದಾಗ್ಯೂ ಅದಕ್ಕೆ ಹಾಲು ಬರುವುದಿಲ್ಲ. ಅಥವಾ ಬೆಳೆದ ಹೊಲವನ್ನು ದನಕರುಗಳು ಮೇಯ್ದರೆ ಅದರಲ್ಲಿ ಪೀಕು ಬರುವುದಿಲ್ಲ ।೨೪೮।।

ಅದರಂತೆ ತನ್ನ ಪ್ರಸಿದ್ಧಿಯಾಗಬೇಕೆಂಬ ಬಯಕೆಯಿಂದ ಮಾಡಿರುವ ತಪಸ್ಸಿನ ಫಲವನ್ನು ನೋಡಲು ಹೋದರೆ ಕೊನೆಗೆ ವ್ಯರ್ಥವಾಗುವುದು ।೨೪೯।।

ಅರ್ಜುನಾ, ತಪಸ್ಸಿನಿಂದ ಫಲ ಪ್ರಾಪ್ತಿ ಇಲ್ಲವೆಂದು ತಿಳಿದಾಕ್ಷಣವೇ ನಡುವೆಯೇ ಅದನ್ನು ಬಿಟ್ಟು ಬಿಡುವನು. ಆದ್ದರಿಂದ ಈ ತಪಸ್ಸಿಗೆ ಸ್ಥಿರತೆ ಇರುವುದಿಲ್ಲ ।೨೫೦।।

ಇಲ್ಲದಿದ್ದರೆ ಹೀಗೆ ನೋಡು, ಆಕಾಶದಲ್ಲಿ ಅಕಾಲದ ಮೋಡಗಳು ಕೂಡಿಕೊಂಡು ಬ್ರಹ್ಮಾಂಡದಲ್ಲಿ ಗರ್ಜಿಸು ವುವು. ಆದರೆ ಅವು ಒಂದು ಘಳಿಗೆಯಾದರೂ ನಿಲ್ಲುವುವೇ? ।೨೫೧।।

ಹೀಗೆ ರಾಜಸ ತಪಸ್ಸಿನ ಫಲವು ನಿಜವಾಗಿಯೂ ಬಂಜೆ ಯಂತೆ ವ್ಯರ್ಥವಾಗಿರುವುದು. ಆದರೆ ಅದರ ಆಚರಣೆಯನ್ನು ಮಾಡಿದರೂ ತಡೆಯುವುದಿಲ್ಲ ।೨೫೨।।

ಈಗ ಇನ್ನು ಮುಂದೆ ತಾಮಸ ತಪಸ್ಸು ಹೀಗೆಯೇ ಇರು ವುದು. ಆದರೆ ಇದರಲ್ಲಿ ಇಲ್ಲಿ ಕೀರ್ತಿಯೂ ಇಲ್ಲ, ಪರಲೋ ಕದ ಪ್ರಾಪ್ತಿಯೂ ಇಲ್ಲ ।೨೫೩।।

ಶ್ಲೋಕಾರ್ಥ :- ತನಗೂ, ಪರರಿಗೂ, ಸಂಕಟವ ನ್ನುಂಟು ಮಾಡುತ್ತ, ದುರಾಗ್ರಹದಿಂದ ಮಾಡುವ ತಪಸ್ಸು, ತಾಮಸಿಕ ತಪಸ್ಸು ।೧೯।।

ಹೇ ಧನುರ್ಧರನೇ, ಮೂರ್ಖತನದ ಅಭಿಮಾನವನ್ನು ಮನದಲ್ಲಿ ಹಿಡಿದು ಯಾವ ತಮ್ಮ ಶರೀರಕ್ಕೂ ಸಹವೈರಿಯಂತೆ ನಡೆದುಕೊಳ್ಳುತ್ತಾರೆ ।೨೫೪।।

ತಮ್ಮ ಶರೀರವನ್ನು ಕಟ್ಟಿಗೆಯನ್ನಾಗಿ ಮಾಡಿ ತಮ್ಮ ಶರೀರದಿಂದ ಪಂಚಾಗ್ನಿಗಳಿಂದ ಅದನ್ನು ಹೊತ್ತಿಸುವರು ।೨೫೫।।

ತಲೆಯ ಮೇಲೆ ಗುಗ್ಗಳ ಉರಿಸುವರು. ಬೆನ್ನಿಗೆ ಮೊಳೆ ಚುಚ್ಚಿಕೊಳ್ಳುವರು. ಸುತ್ತಲೂ ಅಗ್ನಿಯನ್ನು ಹೊತ್ತಿಸಿ ನಡುವೆ ತಮ್ಮ ಶರೀರವನ್ನು ಸುಡುವರು ।೨೫೬।।

ಶ್ವಾಸೋಚ್ಛ್ವಾಸವನ್ನು ಬಂದು ಮಾಡಿ ವ್ಯರ್ಥವಾಗಿ ಉಪವಾಸ ಮಾಡುವರು, ಅಥವಾ ತಲೆ ಕೆಳಗೆ ಮಾಡಿ ಧೂಮ್ರ ಪಾನವನ್ನು ಮಾಡುವರು ।೨೫೭।।

ಹಿಮೋದಕೇ ಆಕಂಠೇ । ಖಡಕೇ ಸೇವಿಜತೀ ತಟೇ । ಜಿತಯಾ ಮಾಂಸಾಚೇ ಚಿಮುಟೇ । ತೋಡಿತೀ ಜೇಥ ।।೨೫೮।। ಐಸೀ ನಾನಾಪರೀ ಹೇ ಕಾಯಾ । ಘಾಯ ಸೂತಾ ಪೈ ಧನಂಜಯಾ । ತಪ ಕೀಜೇ ನಾಶಾವಯಾ । ಪುಢಿಲಾತೇ ।।೨೫೯।। ಆಂಗಭಾರೇ ಸುಟಲಾ ಧೋಂಡಾ । ಆಪಣ ಫುಟೋನಿ ಹೋಯ ಖಂಡಖಂಡಾ । ಕಾ ಆಡ ಜಾಲಿಯಾ ತೇ ರಗಡಾ । ಕರೀ ಜೈಸಾ ।।೨೬೦।। ತೇವೀ ಆಪಲಿಯಾ ಆಟಣಿಯಾ । ಸುಖೇ ಅಸತಯಾ ಪ್ರಾಣಿಯಾ । ಜಿಣಾವಯಾ ಶಿರಾಣಿಯಾ । ಕೀಜತೀ ಗಾ ।।೨೬೧।। ಕಿಂಬಹುನಾ ಹೇ ವ್ರೋಖಟೀ । ಘೇಊನಿ ಕ್ಲೇಶಾಚೀ ಹಾತವಟೀ । ತಪ ನಿಫಜೇ ತೇ ಕಿರೀಟೀ । ತಾಮಸ ಹೋಯ ।।೨೬೨।। ಏವಂ ಸತ್ತ್ವಾದಿಕಾಂಚ್ಯಾ ಆಂಗೀ । ಪಡಿಲೇ ತಪ ತಿಹೀ ಭಾಗೀ । ಜಾಲೇ ತೇಹೀ ತುಜ ಚಾಂಗೀ । ದಾವಿಲೇ ವ್ಯಕ್ತೀ ।।೨೬೩।। ಆತಾ ಬೋಲತಾ ಪ್ರಸಂಗಾ । ಆಲೇ ಮ್ಹಣೌನಿ ಪೈ ಗಾ । ಕರೂ ರೂಪ ದಾನಲಿಂಗಾ । ತ್ರಿವಿಧಾ ತಯಾ ।।೨೬೪।। ಯೇಥ ಗುಣಾಚೇನಿ ಬೋಲೇ । ದಾನಹೀ ತ್ರಿವಿಧ ಅಸೇ ಜಾಲೇ । ತೇಂಚಿ ಆಇಕ ಪಹಿಲೇ । ಸಾತ್ತ್ವಿಕ ಐಸೇ ।।೨೬೫।।

ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।
ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್ ।।೨೦।।

ತರೀ ಸ್ವಧರ್ಮಾ ಆಂತೌತೇ । ಜೇ ಜೇ ಮಿಳೇಲ ಆಪಣಯಾತೇ । ತೇ ತೇ ದೀಜೇ ಬಹುತೇ । ಸನ್ಮಾನಯೋಗೇ ।।೨೬೬।। ಜಾಲಯಾ ಸುಬೀಜಪ್ರಸಂಗು । ಪಡೇ ಕ್ಷೇತ್ರವಾಫೇಚಾ ಪಾಂಗು । ತೈಸಾಚಿ ದಾನಾಚಾ ಹಾ ಲಾಗು । ದೇಖತಸೇ ।।೨೬೭।। ಅನರ್ಘ್ಯರತ್ನ ಹಾತಾ ಚಢೇ । ತೈ ಭಾಂಗಾರಾಚೇ ವ್ರೋಢೀ ಪಡೇ । ದೋನೀ ಜಾಲೀ ತರೀ ನ ಜೋಡೇ । ಲೇತೇ ಆಂಗ ।।೨೬೮।। ಪರೀ ಸಣ ಸುಹೃದ ಸಂಪತ್ತೀ । ಹೇ ತಿನ್ಹೀ ಏಕೀ ಮಿಳತೀ । ಜೈ ಭಾಗ್ಯ ಧರೀ ಉನ್ನತೀ । ಆಪುಲ್ಯಾ ವಿಷಯೀ ।।೨೬೯।। ತೈಸೇ ನಿಫಜವಾವಯಾ ದಾನ । ಜೈ ಸತ್ತ್ವಾಸೀ ಯೇ ಸಂವಾಹನ । ತೈ ದೇಶ ಕಾಳ ಭಾಜನ । ದ್ರವ್ಯಹೀ ಮಿಳೇ ।।೨೭೦।। ತರೀ ಆಧೀ ತಂವ ಪ್ರಯತ್ನೇಂಸೀ । ಹೋಆವೇ ಕುರುಕ್ಷೇತ್ರ ಕಾ ಕಾಶೀ । ನಾತರೀ ತುಕೇ ಜೋ ಇಹೀಂಸೀ । ತೋ ದೇಶುಹೀ ಹೋ ।।೨೭೧।। ತೇಥ ರವಿಚಂದ್ರರಾಹುಮೇಳು । ಹೋತಾ ಪಾಹೇ ಪುಣ್ಯಕಾಳು । ಕಾ ತಯಾಸಾರಿಖಾ ನಿರ್ಮಳು । ಆನುಹೀ ಜಾಲಾ ।।೨೭೨।।

ಚಳಿಯಲ್ಲಿ ತಣ್ಣೀರೊಳಗೆ ಕುತ್ತಿಗೆವರೆಗೆ ಮುಳುಗಿ ನಿಲ್ಲುವರು, ದಂಡೆಗಿರುವ ಬಿಸಿ ಮಳಲಿನಲ್ಲಿ ಕೂಡ್ರುವರು ಮತ್ತು ಜೀವಂತದಲ್ಲಿಯೇ ಚಿಮಟಿಗೆಯಿಂದ ತಮ್ಮ ಶರೀರದ ಮಾಂಸವನ್ನು ಕಿತ್ತಿ ಚೆಲ್ಲುವರು ॥೨೫೮॥

ಹೇ ಧನಂಜಯನೇ, ಈ ರೀತಿಯಲ್ಲಿ ನಾನಾ ಪ್ರಕಾರವಾಗಿ ತಮ್ಮ ಶರೀರಕ್ಕೆ ದುಃಖವನ್ನು ಕೊಟ್ಟು, ಇತರರನ್ನು ನಾಶ ಮಾಡಲು ತಪಸ್ಸನ್ನು ಆಚರಿಸುವರು ॥೨೫೯॥

ಪರ್ವತದ ಮೇಲಿನ ಕಲ್ಲು ಜಾರಿ ಕೆಳಗೆ ಬಿದ್ದಿತೆಂದರೆ ತಾನು ನುಚ್ಚು ನೂರಾಗುವುದು. ಆದರೆ ಕೆಳಗೆ ಉರುಳುವಾಗ ನಡುವೆ ಇದಕ್ಕೆ ಸಿಕ್ಕರೆ ಅದರ ಗತಿಯೂ ಹಾಗೆಯೇ ಆಗುವುದು ॥೨೬೦॥

ಅದರಂತೆ ತಮ್ಮ ಶರೀರಕ್ಕೆ ದುಃಖಕೊಟ್ಟು ಸುಖೀ ಪ್ರಾಣಿಗಳಿಗೆ ಅಥವಾ ಪ್ರಮುಖರಿಗೆ ಗೆಲ್ಲುವ ಉದ್ದೇಶದಿಂದ ತಪಸ್ಸಿನ ಆಚರಣೆಯನ್ನು ಮಾಡುವರು ॥೨೬೧॥

ಅರ್ಜುನಾ, ಹೆಚ್ಚಿಗೇನು ಹೇಳಬೇಕು? ಒಟ್ಟಿನಲ್ಲಿ ಹೀಗೆ ಕೆಟ್ಟ ಮತ್ತು ಕ್ಲೇಶಯುಕ್ತವಾದ ತಪಸ್ಸನ್ನು ಮಾಡುವರು. ಅದಕ್ಕೆ ತಾಮಸ ತಪವೆನ್ನುವರು ॥೨೬೨॥

ಈ ಪ್ರಕಾರವಾಗಿ ಸತ್ತ್ವ, ರಜ ಮತ್ತು ತಮ ಇವುಗಳ ಹೊಂದಿಕೆಯಿಂದ ಯಾವ ತಪಸ್ಸಿನ ಮೂರು ಭಾಗಗಳಿರುವುದನ್ನು ನಿನಗೆ ಸ್ಪಷ್ಟಮಾಡಿ ತೋರಿಸಿದೆ ॥೨೬೩॥

ಈಗ ಹೇಳುವ ಪ್ರಸಂಗ ಬಂದಿರುವುದರಿಂದ ದಾನದ ಮೂರು ಪ್ರಕಾರಗಳು ಹೇಗಾಗುವುವು ಎಂಬುವ ಲಕ್ಷಣಗಳನ್ನು ನಿನಗೆ ಹೇಳುವೆ ॥೨೬೪॥

ಇಲ್ಲಿ ನೋಡು, ಗುಣಗಳ ಹೊಂದಿಕೆಯಿಂದ ದಾನವೂ ಸಹ ಮೂರು ಪ್ರಕಾರಗಳಾಗಿವೆ. ಅದರ ಪೈಕಿ ಮೊದಲನೆಯದಾದ ಸಾತ್ತ್ವಿಕ ದಾನವನ್ನು ಕೇಳು ॥೨೬೫॥

ಶ್ಲೋಕಾರ್ಥ :- ಪ್ರತಿಫಲವನ್ನು ಬಯಸದೆ, ''ದಾನ ಮಾಡುವುದು ನನ್ನ ಕರ್ತವ್ಯ''ವೆಂದು ತಿಳಿದು ದೇಶ ಕಾಲ ಪಾತ್ರಗಳನ್ನು ಗಮನಿಸಿ ಮಾಡುವ ದಾನ ಸಾತ್ತ್ವಿಕ ದಾನ ॥೨೦॥

ತಾನು ಸ್ವಕಷ್ಟದಿಂದ ಹಾಗೂ ಸನ್ಮಾರ್ಗದಿಂದ ಗಳಿಸಿದ ಯಾವ ಧನವನ್ನು ಯಾರು ಆದರಾತಿಥ್ಯದಿಂದ ಇತರರಿಗೆ ಅರ್ಪಿಸುವನು ॥೨೬೬॥

ಒಂದು ವೇಳೆ ಉತ್ತಮವಾದ ಬೀಜ ದೊರಕಿತೆಂದರೆ ಹದವಾದ ಭೂಮಿಯ ಕೊರತೆ ಬೀಳುವುದು. ಅದರಂತೆ ದಾನ ಕೊಡುವ ಇಚ್ಛೆಯಾದಾಗ ದಾನ ಕೊಡಲು ಯೋಗ್ಯ ಮನಷ್ಯನ, ದೇಶದ, ಕಾಲದ ಕೊರತೆಯಾಗುವುದು ॥೨೬೭॥

ಅಮೌಲ್ಯ ರತ್ನವು ದೊರಕಿದಾಗ ಅದಕ್ಕೆ ಬಂಗಾರದ ಕೊರತೆಯಾಗುವುದು. ಒಂದುವೇಳೆ ಬಂಗಾರವೂ ದೊರಕಿದಾಗ ಅಲಂಕಾರ ಹಾಕಲು ಅವಯವಗಳ ಕೊರತೆಯಾಗುವುದು ॥೨೬೮॥

ಆದರೆ ದೀಪಾವಳಿಯಂತಹ ಹಬ್ಬದಲ್ಲಿ ತಮ್ಮ ಆಪ್ತವರ್ಗ ಮತ್ತು ಸಂಪತ್ತು ಇವು ಮೂರು ಯೋಗಗಳು ಒಂದೆಡೆ ಸೇರಬೇಕಾದರೆ ಭಾಗ್ಯ ಕೂಡಿ ಬರಬೇಕಾಗುವುದು ॥೨೬೯॥

ಅದರಂತೆ ತನ್ನಿಂದ ದಾನವಾಗಬೇಕಾದರೆ, ಸತ್ತ್ವಗುಣದ ಸಹಾಯ, ದೇಶ, ಕಾಲ, ಸತ್ಪಾತ್ರಬ್ರಾಹ್ಮಣ ಹಾಗೂ ದ್ರವ್ಯ ಈ ಎಲ್ಲ ಯೋಗವು ಕೂಡಿ ಬರುವುದು ॥೨೭೦॥

ಪ್ರಥಮವಾಗಿ ಆದಷ್ಟು ಪ್ರಯತ್ನದೊಂದಿಗೆ ದಾನ ಮಾಡಲು ಕುರುಕ್ಷೇತ್ರ ಅಥವಾ ಕಾಶಿ ಈ ದೇಶಗಳಿರಬೇಕು. ಇಲ್ಲವೆ ಇದರ ಸಮವಾದ ಬೇರೆ ದೇಶಗಳಿರಬೇಕು ॥೨೭೧॥

ಆ ಪುಣ್ಯ ಕ್ಷೇತ್ರಗಳಲ್ಲಿ ಸೂರ್ಯಗ್ರಣ ಅಥವಾ ಚಂದ್ರಗ್ರಹಣದಂತಹ ಪುಣ್ಯಕಾಲವಿರಬೇಕು. ಅಥವಾ ಅದರ ಯೋಗ್ಯತೆಯ ಬೇರೆ ಕಾಲವಿರಬೇಕು ॥೨೭೨॥

ತೈಸಾ ಕಾಳೀ ತಿಯೇ ದೇಶೀ । ಹೋಆವೀ ಪಾತ್ರ ಸಂಪತ್ತೀ ಐಸೀ । ಮೂರ್ತಿ ಆಹೇ ಧರಿಲೀ ಜೈಸೀ । ಶುಚಿತ್ವೇಂಚಿ ಕಾ ॥೨೭೩॥ ಆಚಾರಾಚೇ ಮೂಳಪೀಠ । ವೇದಾಂಚೀ ಉತಾರಪೇಠ । ತೈಸೇ ದ್ವಿಜರತ್ನ ಚೋಖಟ । ಪಾವೋನಿಯಾ ॥೨೭೪॥ ಮಗ ತಾಯಚ್ಯಾ ಠಾಈ ವಿತ್ತಾ । ನಿವರ್ತವಾವೀ ಸ್ವಸತ್ತಾ । ಪರೀ ಪ್ರಿಯಾಪುಢೇ ಕಾಂತಾ । ರಿಗೇ ಜೈಸೀ ॥೨೭೫॥ ಕಾ ಜಯಾಚೇ ಠೇವಿಲೇ ತಯಾ । ದೇಊನಿ ಹೋಇಜೇ ಉತರಾಇಯಾ । ನಾನಾ ಹಡಪೇ ವಿಡಾ ರಾಯಾ । ದಿಧಲಾ ಜೈಸಾ ॥೨೭೬॥ ತೈಸೇನಿ ನಿಷ್ಕಾಮೇ ಜೀವೇ । ಭೂಮ್ಯಾದಿಕ ಅರ್ಪಾವೇ । ಕಿಂಬಹುನಾ ಹಾಂವೇ । ನೇದಾವೇ ಉರೋ ॥೨೭೭॥ ಆಣಿ ದಾನ ಜಯಾ ದ್ಯಾವೇ । ತಯಾತೇ ಐಸೇಯಾ ಪಾಹಾವೇ । ಜಯಾ ಘೇತಲೇ ನುಮಚವೇ । ಕಾಯಸೇನಹೀ ॥೨೭೮॥ ಸಾದ ಘಾತಲಿಯಾ ಆಕಾಶಾ । ನೇದೀ ಪ್ರತಿಶಬ್ದು ಜೈಸಾ । ಕಾ ಪಾಹಿಲಾ ಆರಸಾ । ಯೇರೀಕಡೇ ॥೨೭೯॥ ನಾತರೀ ಉದಕಾಚಿಯೇ ಭೂಮಿಕೇ । ಆಫಲಿಲೇನಿ ಕಂದುಕೇ । ಉಧಳೌನಿ ಕವತಿಕೇ । ನ ಯೇಇಜೇ ಹಾತಾ ॥೨೮೦॥ ನಾನಾ ವಸೋ ಘಾತಲಾ ಚಾರೂ । ಮಾಥಾ ತುರಂಬಿಲಾ ಬುರೂ । ನ ಕರೀ ಪ್ರತ್ಯುಪಕಾರು । ಜಿಯಾಪರೀ ॥೨೮೧॥ ತೈಸೇ ದಿಧಲೇ ದಾತಯಾಚೇ । ಜೋ ಕೋಣೇಹೀ ಅಂಗೇ ನುಮಚೇ । ಅರ್ಪಿಲಯಾ ಸಾಮ್ಯ ತಯಾಚೇ । ಕೀಜೇ ಪೈ ಗಾ ॥೨೮೨॥ ಐಸಿಯಾ ಜೇ ಸಾಮಗ್ರಿಯಾ । ದಾನ ನಿಫಜೇ ವೀರರಾಯಾ । ತೇ ಸಾತ್ತ್ವಿಕ ದಾನವರ್ಯಾ । ಸರ್ವಾಂಗಹೀ ಜಾಣ ॥೨೮೩॥ ಆಣಿ ತೋಚಿ ದೇಶು ಕಾಳು । ಘಡೇ ತೈಸಾಚಿ ಪಾತ್ರಮೇಳು । ದಾನಭಾಗು ಹೀ ನಿರ್ಮಳು । ನ್ಯಾಯಗತು ॥೨೮೪॥

ಯತ್ತು ಪ್ರತ್ಯುಪಕರಾರ್ಥಂ ಫಲಮುದ್ದಿಶ್ಯ ವಾ ಪುನಃ ।
ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಮ್ ॥೨೧॥

ಪರೀ ಮನೀ ಧರೂನಿ ದುಭತೇ । ಚಾರಿಜೇ ಜೇವೀ ಗಾಈತೇ । ಕಾ ಪೇಂವ ಕರೂನಿ ಆಇತೇ । ಪೇರೂ ಜಾಇಜೇ ॥೨೮೫॥ ನಾನಾ ದಿಠೀ ಘಾಲೂನಿ ಆಹೇರಾ । ಅವಂತು ಜಾಇಜೇ ಸೋಯಿರಾ । ಕಾ ವಾಣ ಧಾಡಿಜೇ ಘರಾ । ವೋವಸೀಯಾಚೇ ॥೨೮೬॥ ಪೈ ಕಳಾಂತರ ಗಾಂಠೀ ಬಾಂಧಿಜೇ । ಮಗ ಪುಢಿಲಾಂಚೇ ಕಾಜ ಕೀಜೇ । ಪೂಜಾ ಘೇಊನಿ ರಸು ದೀಜೇ । ಪೀಡಿತಾಂಸೀ ॥೨೮೭॥

ಅಂಥ ದೇಶದಲ್ಲಿ ಮತ್ತು ಪರ್ವಕಾಲದಲ್ಲಿ ಯೋಗ್ಯ ಸಂಪತ್ತು ಇರಬೇಕು ಮತ್ತು ಪಾತ್ರತೆಯಲ್ಲೂ ಶುಚಿ ಭೂತದ ಸಾಕ್ಷಾತ್ ಮೂರ್ತಿಯೇ ಆಗಿರುವ ।೨೭೩॥

ಆಚರಣೆಯ ಮುಖ್ಯ ಸ್ಥಾನವು ಮತ್ತು ವೇದದ ವಸತಿ ಸ್ಥಾನವು, ಹೀಗೆ ಉತ್ತಮ ಸತ್ಪಾತ್ರ ಬ್ರಾಹ್ಮಣನಾಗಿರಬೇಕು ।೨೭೪॥

ಆ ಬ್ರಾಹ್ಮಣನಿಗೆ ಕೊಡುವ ದಾನವು ಅದರ ಮೇಲಿನ ತನ್ನ ಸತ್ತೆಯನ್ನು ತೆಗೆದು, ಆತನಿಗೆ ಅರ್ಪಿಸಬೇಕು, ಸ್ತ್ರೀಯು ತನ್ನ ಪತಿಯಲ್ಲಿ ಸ್ವಸಂತೋಷದಿಂದ ಹೋಗುವಂತಿರಬೇಕು ।೨೭೫॥

ಅಥವಾ ಒಬ್ಬನು ತನ್ನಲ್ಲಿಟ್ಟ ದ್ರವ್ಯವನ್ನು ಆತನಿಗೆ ಒಪ್ಪಿಸುವಾಗ ಸಂತೋಷದಿಂದ ಹಗುರಾಗುವನು. ಅಥವಾ ರಾಜಸೇವಕನು ರಾಜನಿಗೆ ತಾಂಬೂಲವನ್ನು ಸಮರ್ಪಿಸುವನು ।೨೭೬॥

ಅದರಂತೆ ನಿಷ್ಕಾಮ ಬುದ್ಧಿಯಿಂದ ಭೂಮಿ ಮೊದಲು ಮಾಡಿ ಬ್ರಾಹ್ಮಣರಿಗೆ ದಾನವನ್ನು ಮಾಡಬೇಕು. ಆದರೆ ಆ ದಾನಕ್ಕಾಗಿ ಯಾವ ಫಲದ ಅಪೇಕ್ಷೆಯನ್ನು ಮಾಡಬಾರದು ।೨೭೭॥

ಮತ್ತು ದಾನವನ್ನು ಎಂಥವರಿಗೆ ಕೊಡಬೇಕೆಂದರೆ ಮುಂದೆ ಪ್ರತಿಯಾಗಿ ಆತನಿಂದ ತನಗೆ ಯಾವುದೇ ಲಾಭವಾಗಿರಬಾರದು ।೨೭೮॥

ಆಕಾಶಕ್ಕೆ ಬೇಕಾದಷ್ಟು ಕೂಗಿದರೂ, ಅದರಿಂದ ಪ್ರತಿ ಉತ್ತರ ಬರುವುದಿಲ್ಲ. ಅಥವಾ ಕನ್ನಡಿಯ ಹಿಂದಿನ ಭಾಗದಲ್ಲಿ ನೋಡಲು ಅದರಲ್ಲಿ ಪ್ರತಿಬಿಂಬವು ಕಾಣಿಸುವುದಿಲ್ಲ ।೨೭೯॥

ಅಥವಾ ನೀರಿನ ಮೇಲೆ ಚಂಡನ್ನು ಜಗಿದು ಒಗೆದರೂ ಅದು ಮೇಲೆ ಬಂದು ತನ್ನ ಕೈಗೆ ಸಿಗುವುದಿಲ್ಲ ।೨೮೦॥

ಅಥವಾ ಗೂಳಿಗೆ ಮೇವು ಹಾಕಿದರೂ ಅದು ಉಪಕಾರವೆಂದು ಭಾವಿಸುವುದಿಲ್ಲ. ಅಥವಾ ಯಾವ ಪ್ರಕಾರವಾಗಿ ಕೃತಘ್ನ ಮನುಷ್ಯನಿಗೆ ಮಾಡಿದ ಉಪಕಾರವನ್ನು ಅವನು ತೀರಿಸುವುದಿಲ್ಲವೋ ।೨೮೧॥

ಅದರಂತೆ ದಾನಮಾಡುವವನು, ಯಾವುದೇ ರೀತಿಯಲ್ಲಿ ಪ್ರತಿಯಾಗಿ ಉಪಕಾರ ಮಾಡಿರಬಾರದಂತಹ ಮನುಷ್ಯನಿಗೆ ದಾನವನ್ನು ಕೊಡಬೇಕು ಮತ್ತು ದಾನವನ್ನು ಕೊಟ್ಟ ಬಗ್ಗೆ ಅಭಿಮಾನವನ್ನು ಹಿಡಿಯಬಾರದು ।೨೮೨॥

ಹೇ ವೀರಶ್ರೇಷ್ಠನೇ, ಈ ರೀತಿಯಲ್ಲಿ ಎಲ್ಲ ಸಾಮಗ್ರಿಗಳಿಂದ ಕೂಡಿದ ದಾನವು ಸಾಧಿಸಿದಾಗ, ಅದು ಎಲ್ಲಕ್ಕಿಂತಲೂ ಶ್ರೇಷ್ಠವಾದ ಸಾತ್ತ್ವಿಕ ದಾನವಾಗುವುದೆಂದು ತಿಳಿ ।೨೮೩॥

ಮತ್ತು ಅದುವೇ ದಾನಕ್ಕೆ, ಯೋಗ್ಯ ದೇಶ, ಯೋಗ್ಯ ಕಾಲ, ಪಾತ್ರವೂ ಮುಖ್ಯವಾಗಿರಬೇಕು ಮತ್ತು ದಾನ ಮಾಡುವ ದ್ರವ್ಯವೂ ನಿರ್ಮಲ ಹಾಗೂ ಶಾಸ್ತ್ರಾನುಸಾರವಾಗಿರಬೇಕು ।೨೮೪॥

ಶ್ಲೋಕಾರ್ಥ :- ಪ್ರತ್ಯುಪಕಾರವನ್ನು ಬಯಸಿ ಫಲಾಸಕ್ತಿಯಿಂದ ಮತ್ತು ನಿರ್ಬಂಧದಿಂದ ಮಾಡುವ ದಾನವು ರಾಜಸ ದಾನ ।೨೧॥

ಆದರೆ, ಮನದಲ್ಲಿ ಹಾಲಿನ ಇಚ್ಛೆಯನ್ನು ಧರಿಸಿಕೊಂಡು ಆಕಳಿಗೆ ಉತ್ತಮ ಪ್ರಕಾರವಾಗಿ ಮೇಯಿಸುವುದು, ಅಥವಾ ಹಗೆಯನ್ನು ತಯಾರಿಸಿ ಅದರಲ್ಲಿ ಧಾನ್ಯಗಳನ್ನು ತುಂಬಲು ಹೊಲದಲ್ಲಿ ಶ್ರಮಪಟ್ಟು ಬಿತ್ತುವುದು ।೨೮೫॥

ಅಥವಾ (ಆಹೇರ) ಉಡುಗರೆ ಮೇಲೆ ದೃಷ್ಟಿ ಇಟ್ಟುಕೊಂಡೇ, ಲಗ್ನ ಕಾರ್ಯದಲ್ಲಿ ಬೀಗರು ಬಿಜ್ಜರಿಗೆ ಆಮಂತ್ರಿಸುವುದು. ಅಥವಾ ಸಂಕ್ರಾಂತಿ ಕಾಲದ (ವೋವಸೀ) ಉಡುಗೊರೆಯನ್ನು ಮರಳಿ ಬರುವ ಸ್ಥಳ ನೋಡಿ ಕೊಡುವುದು ।೨೮೬॥

ಅಥವಾ ಲಂಚವನ್ನು ಮೊದಲು ಪದರಿನಲ್ಲಿ ಕಟ್ಟಿಕೊಂಡು ನಂತರ ಬೇರೆಯವರ ಕಾರ್ಯ ಮಾಡಿ ಕೊಡುವುದು. ಅಥವಾ ಹಣವನ್ನು ಪಡೆದು ರೋಗಿಗಳಿಗೆ ಔಷಧವನ್ನು ಕೊಡುವುದು ।೨೮೭॥

ತೈಸೇ ಜಯಾ ಜೇ ದಾನ ದೇಣೇ । ತೋ ತೇಣೇಂಚಿ ಗಾ ಜೀವನೇ । ಪುಢತೀ ಭುಂಜಾವಾ ಭಾವೇ ಯೇಣೇ । ದೀಜೇ ಜೇ ಕಾ ।೮೮೮।। ಅಥವಾ ಕೋಣೇ ವಾಟೇ ಜಾತಾ । ಘೇತಲೇ ಉಮಜೋ ನ ಶಕತಾ । ಮಿಳೇ ಜೈ ಪಂಡುಸುತಾ । ದ್ವಿಜೋತ್ತಮು ।೮೮೯।। ತರೀ ಕವಡ್ಯಾ ಏಕಾಸಾಠೀ । ಅಶೇಷಾ ಗೋತ್ರಾಚೇಂಚ ಕಿರೀಟೀ । ಸರ್ವ ಪ್ರಾಯಶ್ಚಿತ್ತೇ ಸುಯೇ ಮುಠೀ । ತಯಾಚಿಯೇ ।೮೯೦।। ತೇವೀಂಚಿ ಪಾರಲೌಕಿಕೇ । ಫಳೇ ವಾಂಛಿಜತೀ ಅನೇಕೇ । ಆಣಿ ದೀಜೇ ತರೀ ಭುಕೇ । ಯೇಕಾಹೀ ನೋಹೇ ।೮೯೧।। ತೇಂಹೀ ಬ್ರಾಹ್ಮಣು ನೋವ್ಹೋ ಸರೇ । ಕೀ ಹಾಣಿಚೇನಿ ಶಿಣೇ ಝೂಂಸುರೇ । ಸರ್ವಸ್ವ ಜೈಸೇ ಚೋರೇ । ನಾಗಊನಿ ನೇಲೇ ।೮೯೨।। ಕಾಯ ಬಹು ಸಾಂಗೋ ಸುಮತೀ । ಜೇ ದೀಜೆ ಯಾ ಮನೋವೃತ್ತೀ । ತೇ ದಾನ ಗಾ ತ್ರಿಜಗತೀ । ರಾಜಸ ಪೈ ।೮೯೩।।

ಅದೇಶಕಾಲೇ ಯದ್ದಾನಮ್ ಅಪಾತ್ರೇಭ್ಯಶ್ಚ ದೀಯತೇ ।
ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಮ್ ।೨೨।।

ಮಗ ಮ್ಲೇಚ್ಛಾಂಚೇ ವಸೌಟೇ । ದಾಂಗಾಣೇ ಹನ ಕೈಕಟೇ । ಕಾ ಶಿಬಿರೇ ಚೋಹಟೇ । ನಗರೀಂಚೇ ತೇ ।೮೯೪।। ತೇಹೀ ಠಾಈ ಮಿಳಣೇ । ಸಮಯೋ ಸಾಂಜವೇಳು ಕಾ ರಜನೀ । ತೇವ್ಹಾ ಉದಾರ ಹೋಣೇ ಧನೀ । ಚೋರಿಯೇಚ್ಯಾ ।೮೯೫।। ಪಾತ್ರೇ ಭಾಟ ನಾಗಾರೀ । ಸಾಮಾನ್ಯ ಸ್ತ್ರಿಯಾ ಕಾ ಜುವಾರೀ । ಜಿಯೇ ಮೂರ್ತಿಮಂತೇ ಭುರರೀ । ಭುತಲಿಯಾ ।೮೯೬।। ರೂಪಾನೃತ್ಯಾಚೀ ಪುರವಣೀ । ತೇ ಪುಢಾ ಡೋಳೇಭಾರಣೀ । ಗೀತಾಭಾಟೀವ ತೋ ಶ್ರವಣೀ । ಕರ್ಣಜಪು ।೮೯೭।। ತಯಾಹೀವರೀ ಅಳುಮಾಳು । ಜೈ ಘೇ ಫುಲಾಗಂಧಾ ಚಾ ಗುಗುಳು । ತಂವ ಭ್ರಮಾಚಾ ತೋ ವೇತಾಳು । ಅವತರೇ ತೈಸಾ ।೮೯೮।। ತೇಥ ವಿಭಾಂಡೂನಿಯಾ ಜಗ । ಆಣಿಲೇ ಪದಾರ್ಥ ಅನೇಗ । ತೇಣೇ ಘಾಲೂ ಲಾಗೇ ಮಾತಂಗ । ಗವಾದೀ ಜೈಸಿ ।೮೯೯।। ಏವಂ ಐಸೇನಿ ಜೇ ದೇಣೇ । ತೇ ತಾಮಸ ದಾನ ಮೀ ಮ್ಹಣೇ । ಆಣಿ ಘಡೇ ದೈವಗುಣೇ । ಆಣಿಕಹೀ ಐಕ ।೯೦೦।। ವಿಪಾಯೇ ಘುಣಾಕ್ಷರ ಪಡೇ । ಟಾಳಿಯೇ ಕಾಉಳಾ ಸಾಂಪಡೇ । ತೈಸೇ ತಾಮಸಾ ಪರ್ವ ಜೋಡೇ । ಪುಣ್ಯದೇಶೀ ।೯೦೧।। ತೇಥ ದೇಖೋನಿ ತೋ ಆಥಿಲಾ । ಯೋಗ್ಯ ಮಾಗೋಂಹೀ ಆಲಾ । ತೋಹೀ ದರ್ಪಾಚಢಲಾ । ಭಾಂಬಾವೇ ಜರೀ ।೯೦೨।।

ಅದರಂತೆ ದಾನವನ್ನು ಕೊಡುವುದು, ಅವರಿಂದಲೇ ಸಂರಕ್ಷಣೆಯಾಗಿ ಜನರಲ್ಲಿ ಹೊಗಳಿಕೆಯಾಗಿರಬೇಕು. ಈ ಉದ್ದೇಶ ಇಟ್ಟುಕೊಂಡು ದಾನ ಮಾಡುವರು ।೨೮೮।।

ಅಥವಾ ಅರ್ಜುನಾ, ದಾರಿಯಲ್ಲಿ ಹೋಗುವಾಗ್ಗೆ ಯಾರೋ ಒಬ್ಬರು ಉತ್ತಮನಾದ ಬ್ರಾಹ್ಮಣನು ಭೇಟಿಯಾದಾಗ ಆತನಿಂದ ಪ್ರತಿ ಉಪಕಾರವಾಗದಂತೆ ಕಂಡರೆ ।೨೮೯।।

ಹೇ ಕಿರೀಟಿಯೇ, ಆತನಿಗೆ ಒಂದು ಕವಡಿಯನ್ನು ದಾನವಾಗಿ ಕೊಟ್ಟು ತನ್ನ ಎಲ್ಲ ಆಪ್ತವರ್ಗದವರ ಪ್ರಾಯಶ್ಚಿತ್ತದ ಸಂಕಲ್ಪ ಮಾಡಿ ಆತನ ಕೈಮೇಲೆ ನೀರು ಬಿಡುವರು ।೨೯೦।।

ಅದರಂತೆ ಆ ದಾನದಿಂದ ಪರಲೋಕದ ಎಲ್ಲ ಫಲಗಳ ಆಶೆ ಹಿಡಿದು ಕೊಡುವರು. ಅದು ಆ ಬ್ರಾಹ್ಮಣನ ಒಂದು ವೇಳೆಯ ಹಸಿದ ಹೊಟ್ಟೆಗೂ ಸಾಲುವುದಿಲ್ಲ ।೨೯೧।।

ಕೊಟ್ಟಷ್ಟೇ ಬ್ರಾಹ್ಮಣನು ಒಯ್ಯುವಾಗ ಸಂತೋಷ ಪಡದೇ, ಕಳ್ಳರು ಎಲ್ಲವನ್ನೂ ಕದ್ದು ಹಾನಿಯಾದಾಗ ದುಃಖ ಪಡುವಂತೆ ಮರಗುವರು ।೨೯೨।।

ಹೇ ಸುಮತಿ ಅರ್ಜುನನೇ, ಮತ್ತೇನು ಹೇಳಬೇಕು? ಈ ಪ್ರಕಾರದ ಮನೋವೃತ್ತಿಯಿಂದ ಯಾರು ದಾನವನ್ನು ಕೊಡುವರೋ, ಆ ದಾನವು ಮೂರು ಲೋಕದಲ್ಲಿ ರಾಜಸ ದಾನವೆಂದು ತಿಳಿ ।೨೯೩।।

ಶ್ಲೋಕಾರ್ಥ :- ದೇಶ ಕಾಲ ಪಾತ್ರಗಳ ವಿಚಾರವಿಲ್ಲದೆ ಅಯೋಗ್ಯರಿಗೆ ಅನಾದರದಿಂದ ಅಪಮಾನಪೂರ್ವಕವಾಗಿ ಕೊಟ್ಟ ದಾನವು ತಾಮಸ ದಾನವೆನಿಸುವುದು ।೨೨।।

ವೈದಿಕಧರ್ಮ ವಿರೋಧಿ ಮ್ಲೇಂಚ್ಛರ ವಸತಿಯಲ್ಲಿ, ಅಥವಾ ಅರಣ್ಯದಲ್ಲಿ, ಇಲ್ಲವೇ ಅಪವಿತ್ರ ಸ್ಥಳ, ಅಥವಾ ಜನನಿಬಿಡವಿರುವ ನಗರದ ।೨೯೪।।

ಇಂಥ ಸ್ಥಳದಲ್ಲಿ ಕೂಡಿಕೊಂಡು ಸಾಯಂಕಾಲ ಅಥವಾ ರಾತ್ರಿ ಕಳ್ಳತನ ಮಾಡಿ ತಂದ ಹಣವನ್ನು ಉದಾರತನದಿಂದ ದಾನವನ್ನು ಮಾಡುವರು ।೨೯೫।।

ಇವರಿಗೆ ದಾನಮಾಡಲು ಪ್ರಾಪ್ತರು ಯಾರೆಂದರೆ, ಸ್ತುತಿಪಾಠಕರು, ಗಾರುಡಿಯವರು, ವೇಶ್ಯೆಯರು, ಜೂಜುಗಾರರು, ವೇತಾಳ ಸಾಧಕರು ಇತ್ಯಾದಿ ।೨೯೬।।

ಇಂಥ ಜನರು ಇವರ ಮುಂದೆ ನೃತ್ಯ ಗಾಯನವನ್ನು ಮಾಡುವರು. ಅಥವಾ ಸ್ತುತಿಪಾಠಕರು ತಮ್ಮ ಸ್ತುತಿಯನ್ನು ಮಾಡಿದ್ದನ್ನು ಕೇಳಿ ಅದನ್ನೇ ಕಿವಿಯಲ್ಲಿ ಜಪಿಸುವರು ।೨೯೭।।

ಇದರಿಂದ ದಾನಿಗಳು ತಲ್ಲೀನರಾಗಿ, ಹೂವುಗಳ, ಸುಗಂಧ ದ್ರವ್ಯಗಳ ಮಕರಂದವನ್ನು ಸೇವಿಸಿ ಕೇವಲ ಭ್ರಮದ ಮೂರ್ತಿಯಾಗಿ ಮೂರ್ತಿಮಂತ ವೇತಾಳರಾಗುವರು ।೨೯೮।।

ತದನಂತರ ಬೇರೆಯವರಿಂದ ಲುಟಾಯಿಸಿ ತಂದ ಅನೇಕ ಪದಾರ್ಥಗಳನ್ನು ಮಾತಂಗ ಜಾತಿಯವರಿಗೆ ಅನ್ನ ಛತ್ರವನ್ನಿಡುವರು ।೨೯೯।।

ಈ ಪ್ರಕಾರವಾಗಿ ದಾನವನ್ನು ಮಾಡುವುದು ತಾಮಸ ದಾನವೆಂದು ನಾನು ಹೇಳುವೆ ಮತ್ತು ದೈವವಶಾತ್ ಇನ್ನೊಂದು ಪ್ರಕಾರವು ಸಾಧಿಸಿ ಬರುವುದು. ಅದನ್ನು ಕೇಳು ।೩೦೦।।

ಗುಂಗಿಹುಳವು ಕಟ್ಟಿಗೆಯನ್ನು ಕೊರೆಯುವಾಗ ಆಕಸ್ಮಿಕವಾಗಿ ಅದಕ್ಕೆ ಯಾವುದೇ ಅಕ್ಷರದ ಆಕಾರ ಬಂದಂತೆ ಅಥವಾ ಕೈ ಮೇಲೆತ್ತಿ ಚಪ್ಪಾಳೆ ತಟ್ಟುವಾಗ ಕೈಯಲ್ಲಿ ಕಾಗೆ ಸಿಕ್ಕಂತೆ ತಾಮಸದಾನಿಗೆ ಪುಣ್ಯಕ್ಷೇತ್ರ, ಹಾಗೂ ಪರ್ವಕಾಲಗಳು ಕೂಡುವುವು ।೩೦೧।।

ಮತ್ತು ಅಲ್ಲಿ ಈತನ ಐಶ್ವರ್ಯವು ಯೋಗ್ಯ ಅತಿಥಿಯು ಪ್ರಾಪ್ತವಾದನು ಮತ್ತು ಆತನನ್ನು ನೋಡಿ ಮೈಮರೆತು ಆತನಿಗೆ ಏನಾದರೂ ಕೊಡಬೇಕೆಂದು ಮನಸ್ಸಿಗೆ ಬಂದರೆ ।೩೦೨।।

ತರೀ ಶ್ರದ್ಧಾ ನ ಧರೀ ಜೀವೀ । ತಯಾ ಮಾಥಾಹೀ ನ ಖಾಲವೀ । ಸ್ವಯೇ ನ ಕರೀ ನಾ ಕರವೀ । ಅರ್ಘ್ಯಾದಿಕ ।೩೦೩॥ ಆಲಿಯಾ ನ ಘಲೀ ಬೈಸೋ । ತೇಥ ಗಂಧಾಕ್ಷತಾಂಚಾ ಕಾಯ ಅತಿಸೋ । ಹಾ ಅಪ್ರಸಂಗು ಕೀರ ಅಸೋ । ತಾಮಸೀ ನರೀ ।೩೦೪॥ ಪೈ ಬೋಳ ವೀಜೇ ರಿಣಾಇತು । ತೈಸಾ ಝುಕವೀ ತಯಾಚಾ ಹಾತು । ತೂ ಕರಣೇಯಾಚಾ ಬಹುತು । ಪ್ರಯೋಗು ತೇಥ ।೩೦೫॥ ಆಣಿ ಜಯಾ ಜೇ ದೇ ಕಿರೀಟೀ । ತಯಾತೇ ಉಮಾಣೀ ತಯಾಸಾಠೀ । ಮಗ ಕುಬೋಲೇ ಕಾ ಲೋಟಿ । ಅವಜ್ಞೇಚ್ಯಾ ।೩೦೬॥ ಹೇ ಬಹು ಅಸೋ ಯಾಪರೀ । ಮೋಲ ವೇಂಚಣೇ ಜೇ ಅವಧಾರೀ । ತಯಾ ನಾಂವ ಚರಾಚರೀ । ತಾಮಸ ದಾನ ।೩೦೭॥ ಐಸೇ ಆಪುಲಾಲಾ ಚಿನ್ಹೀ । ಅಳಂಕೃತೇ ತಿನ್ಹೀ । ದಾನೇ ದಾವಿಲೇ ಅಭಿಧಾನೀ । ರಜತಮಾಚಿಯಾ ।೩೦೮॥ ತೇಥ ಮೀ ಜಾಣತ ಅಸೇ । ವಿಪಾಯೇ ತೂ ಗಾ ಐಸೇ । ಕಲ್ಪಿಸೀಲ ಮಾನಸೇ । ವಿಚಕ್ಷಣಾ ।೩೦೯॥ ಜೇ ಭವಬಂಧಮೋಚಕ । ಏಕಲೇ ಕರ್ಮ ಸಾತ್ತ್ವಿಕ । ತರೀ ಕಾ ವೇಖಾಸೀ ಸದೋಖ । ಯೇರ ಬೋಲಾವೀ? ।೩೧೦॥ ಪರೀ ನೋಸಂತಿತಾ ವಿವಸೀ । ಭೇಟೀ ನಾಹೀ ನಿಧೀಸೀ । ಕಾ ಧೂ ನಸಾಹತಾ ಜೈಸೀ । ವಾತೀ ನ ಲಗೇ ।೩೧೧॥ ತೈಸೇ ಶುದ್ಧಸತ್ತ್ವ ಆಡ । ಆಹೇ ರಜತಮಾಚೇ ಕವಾಡ । ತೇ ಭೇದಣೇ ಯಾತೇ ಕೀಡ । ಮ್ಹಣಾವೇ ಕಾ? ।೩೧೨॥ ಆಮ್ಹೀ ಶ್ರದ್ಧಾದಿ ದಾನಾಂತ । ಜೇ ಸಮಸ್ತಹೀ ಕ್ರಿಯಾಜಾತ । ಸಾಂಗಿತಲೇ ಕಾ ವ್ಯಾಪ್ತ । ತಿಹೀ ಗುಣೀ ।೩೧೩॥ ತೇಥ ಭರಂವಸೇನಿ ತಿನ್ಹೀ । ನ ಸಾಂಗೋಚಿ ಐಸೇ ಮಾನೀ । ಪರೀ ಸತ್ತ್ವದಾವಾವಯಾ ದೋನ್ಹೀ । ಬೋಲಿಲೋ ಯೇರೇ ।೩೧೪॥ ಜೇ ದೋಹೀಮಾಜೀ ತಿಜೇ ಅಸೇ । ತೇ ದೋನ್ಹೀ ಸಾಂಡಿತಾಂಚಿ ದಿಸೇ । ಅಹೋರಾತ್ರ ತ್ಯಾಗೇ ಜೈಸೇ । ಸಂಧ್ಯಾರೂಪ ।೩೧೫॥ ತೈಸೇ ರಜತಮ ವಿನಾಶೇ । ತಿಜೇ ಜೇ ಉತ್ತಮ ದಿಸೇ । ತೇ ಸತ್ತ್ವ ಹೇ ಆಪೈಸೇ । ಭಾವಾಸಿ ಯೇ ।೩೧೬॥ ಏವಂ ದಾವಾವಯಾ ಸತ್ತ್ವ ತುಜ । ನಿರೂಪಿಲೇ ತಮ ರಜ । ತೇ ಸಾಂಡೂನಿ ಸತ್ತ್ವೇ ಕಾಜ । ಸಾದೀ ಆಪಲೇ ।೩೧೭॥ ಸತ್ತ್ವೇಂಚಿ ಯೇಣೇ ಚೋಖಾಳೇ । ಕರೀ ಯಜ್ಞಾದಿಕೇ ಸಕಳೇ । ಪಾವಸೀ ತೈ ಕರತಳೇ । ಆಪುಲೇ ನಿಜ ।೩೧೮॥ ಸೂರ್ಯೇ ದಾವಿಲೇ ಸಾಂತೇ । ಕಾಯ ಏಕ ನ ದಿಸೇ ತೇಥೇ । ತೇವೀ ಸತ್ತ್ವೇ ಕೇಲೇ ಫಳಾತೇ । ಕಾಯ ನೇದೀ? ।೩೧೯॥

ಆಗ ಆತನಲ್ಲಿ ಪೂಜ್ಯ ಭಾವವಿಡದೇ ಹಾಗೂ ಆತನಿಗೆ ನಮಸ್ಕರಿಸದೇ, ತಾನು ಸ್ವತಃ ಬೇರೆಯವರಿಂದಲೂ ಅರ್ಘ್ಯಾದಿಕವನ್ನು ಸಮರ್ಪಿಸುವುದಿಲ್ಲ ।೩೦೩॥

ಮತ್ತು ಕುಳಿತುಕೊಳ್ಳಲು ಆಸನವೂ ಕೊಡುವುದಿಲ್ಲ. ಅಂದಮೇಲೆ ಗಂಧಾಕ್ಷತೆಗಳಿಂದ ಆತನ ಪೂಜಿಸುವ ಮಾತೇಕೆ? ಈ ಪ್ರಕಾರವಾಗಿ ತಾಮಸೀ ಪುರುಷನು ಅತಿಥಿಯ ಅಪ್ರತಿಷ್ಠೆ ಮಾಡುವನು ।೩೦೪॥

ಆದರೆ ಸಾಲಗಾರನಿಗೆ ಬೀಳ್ಕೊಡುವಂತೆ ಆತನ ಕೈಯಲ್ಲಿ ಏನಾದರೂ ಸ್ವಲ್ಪು ಹಣವಿಟ್ಟು ಹೇಗೋ ಮಾತನಾಡಿ ಅಪಮಾನ ಮಾಡುವರು ।೩೦೫॥

ಮತ್ತು ಅರ್ಜುನಾ, ಆತನಿಗೆ ದಾನ ಕೊಟ್ಟಷ್ಟು ಆತನಿಗೆ ಇಲ್ಲಸಲ್ಲದ ಅವಹೇಳನ ಮಾಡಿ ಕೆಟ್ಟ ಶಬ್ದಗಳಿಂದ ಮರ್ಯಾದೆ ಇಲ್ಲದಂತೆ ಮಾಡುವರು ।೩೦೬॥

ಇಂಥ ಬಹಳ ಮಾತು ಇರಲಿ, ಒಟ್ಟಿನಲ್ಲಿ ಈ ಪ್ರಕಾರದ ದ್ರವ್ಯವನ್ನು ದಾನ ಮಾಡುವುದಕ್ಕೆ ಈ ಜಗತ್ತಿನಲ್ಲಿ ತಾಮಸ ದಾನವೆಂದು ಹೇಳುವರು ।೩೦೭॥

ಈ ಪ್ರಕಾರವಾಗಿ ಅವರವರ ಲಕ್ಷಣಗಳಿಂದ ಕೂಡಿದ ಈ ಸಾತ್ತ್ವಿಕ, ರಾಜಸ ಮತ್ತು ತಾಮಸ ದಾನಗಳ ಬಗ್ಗೆ ನಿನಗೆ ಸ್ಪಷ್ಟವಾಗಿ ಹೇಳಿದೆನು ।೩೦೮॥

ಈ ವಿಷಯಕ್ಕೆ ಅರ್ಜುನಾ, ನನಗೇಕೋ ಹೀಗೆ ಅನಿಸುತ್ತದೆ, ಅದೇನೆಂದರೆ ಒಂದು ವೇಳೆ ನೀನು ನಿನ್ನ ಮನದಲ್ಲಿ ಹೀಗೆ ಸಂಶಯ ಮಾಡುವಿ ಏನೋ ।೩೦೯॥

ಸಂಸಾರ ಬಂಧನದಿಂದ ಬಿಡಿಸುವ ಒಂದು ಸಾತ್ತ್ವಿಕ ಕರ್ಮವಿದೆ. ಅಂದಮೇಲೆ ದೋಷಯುಕ್ತವಾದ ಬೇರೆ ಕರ್ಮಗಳ ವರ್ಣನೆಯನ್ನಾದರೂ ಏಕೆ ಮಾಡಬೇಕು? ।೩೧೦॥

ಹಾಗಾದರೆ, ದ್ರವ್ಯದ ನಿಧಿಯ ಮೇಲೆ ಇರುವ ಸಂಬಂಧಗಳನ್ನು (ಭೂತ, ಸರ್ಪಗಳ ಬಾಧೆ) ದೂರ ಮಾಡದ ಹೊರತು ಆ ನಿಧಿಯು ಕೈಗೆ ಹತ್ತುವುದಿಲ್ಲ. ಅಥವಾ ಹೊಗೆಯನ್ನು ಸೋಸದೇ ಉರಿಯು ಕಾಣದು ।೩೧೧।

ಅದರಂತೆ ಶುದ್ಧ ಸತ್ತ್ವದ ಅಡ್ಡಾಗಿರುವ ರಜತಮ ಗುಣಗಳ ಬಾಗಿಲವಿರುವಾಗ ಅದನ್ನು ಮುರಿಯುವ ಪ್ರಯತ್ನ ಮಾಡಿದರೆ ಅದಕ್ಕೆ ಕೆಟ್ಟದ್ದೆಂದು ಏಕೆ ಹೇಳಬೇಕು? ।೩೧೨॥

ನಾವು ಶ್ರದ್ಧೆಯಿಂದ ಹಿಡಿದು, ದಾನದವರೆಗೆ ಹೇಳಿದ ಕ್ರಿಯೆಗಳೆಲ್ಲವೂ ಮೂರು ಗುಣಗಳಿಂದ ಕೂಡಿರುವುವು ।೩೧೩॥

ಈ ಮೂರು ಗುಣಗಳ ಉಲ್ಲೇಖವನ್ನು ನಾನು ನಿಜವಾಗಿ ಮಾಡುವವನಿದ್ದಿಲ್ಲ. ಆದರೆ ಸತ್ತ್ವಗುಣವನ್ನು ಸ್ಪಷ್ಟ ಮಾಡಿ ತೋರಿಸುವುದಕ್ಕಾಗಿ ಉಳಿದ ಎರಡು ಗುಣಗಳ ವರ್ಣನೆಯನ್ನು ಮಾಡಿದೆ ।೩೧೪॥

ಯಾವುದು ಎರಡರಲ್ಲಿ ಮೂರನೆಯದಿದೆ, ಅದು ಎರಡ ರತ್ಯಾಗ ಮಾಡಿದಾಗಲೇ, ತಾನು ಕಾಣುವುದು. ಯಾವ ಪ್ರಕಾರವಾಗಿ ಹಗಲು ರಾತ್ರಿ ತ್ಯಾಗ ಮಾಡಿದಾಗಲೇ ಸಾಯಂಕಾಲವು ಕಾಣುವುದು ।೩೧೫॥

ಅದರಂತೆ ರಜ ಮತ್ತು ತಮ ಇವುಗಳ ನಾಶ ಮಾಡಿದಾಗ ಮೂರನೆಯದಾದ ಉತ್ತಮವಾದ ಸತ್ತ್ವ ಗುಣವು ಸಹಜವಾಗಿ ಪ್ರಾಪ್ತವಾಗುವುದು ।೩೧೬॥

ಈ ಪ್ರಕಾರವಾಗಿ ಸತ್ತ್ವಗುಣವನ್ನು ತೋರಿಸುವುದಕ್ಕಾಗಿ ನಿನಗೆ ರಜ, ತಮ ಗುಣಗಳ ಲಕ್ಷಣಗಳನ್ನು ಹೇಳಿದೆ. ಅದಕ್ಕಾಗಿ ನೀನು ಅವುಗಳನ್ನು ತ್ಯಾಗ ಮಾಡಿ ಸತ್ತ್ವಗುಣದಿಂದ ನಿನ್ನ ಕಾರ್ಯ ಸಾಧಿಸಿಕೊ ।೩೧೭॥

ಈ ಸತ್ವಗುಣದಿಂದಲೇ ನೀನು ಯಜ್ಞಾದಿ ಎಲ್ಲ ಕಾರ್ಯಗಳ ಕರ್ಮವನ್ನು ಆಚರಿಸು, ಅಂದರೆ ನೀನು ಸ್ವಸ್ವರೂಪಕ್ಕೆ ಸಹಜವಾಗಿ ಪ್ರಾಪ್ತನಾಗುವಿ ।೩೧೮॥

ಸ್ವತಃ ಸೂರ್ಯನು ವಸ್ತುಗಳನ್ನು ತೋರಿಸಲು ಹತ್ತಿದಾಗ ಯಾವ ವಸ್ತುವು ಕಾಣಸಿಲಿಕ್ಕಿಲ್ಲ? ಅದರಂತೆ ಸತ್ತ್ವ ಗುಣದ ಆಚರಣೆಯಿಂದ ಯಾವ ಫಲ ಸಿಗಲಿಕ್ಕಿಲ್ಲ? ।೩೧೯॥

ಹೇ ಕೀರ ಆವಡತಾಂವಿಖೀ । ಶಕ್ತಿ ಸತ್ತ್ವೀ ಆಥೀ ನಿಕೀ । ಪರೀ ಮೋಕ್ಷೀಂಸೀ ಏಕೀ । ಮಿಸಳಣೇ ಜೇ ।೩೨೦॥ ತೇ ಏಕ ಆನಚಿ ಆಹೇ । ತಯಾಚಾ ಸಾವಾವೋ ಜೈ ಲಾಹೇ । ತೈ ಮೋಕ್ಷಾಚಾಹೀ ಹೋಯೇ । ಗಾಂವೀ ಸರತೇ ।೩೨೧॥ ಪೈ ಭಾಂಗಾರ ಜರ್ಹೀ ಪಂಧರೇ । ತರ್ಹೀ ರಾಜಾವಳೀಂಚೀ ಅಕ್ಷರೇ । ಲಾಹೇ ತೈಂಚಿ ಸರೇ । ಜಿಯಾಪರೀ ।೩೨೨॥ ಸ್ವಚ್ಛೇ ಶೀತಳೇ ಸುಗಂಧೇ । ಜಳೇ ಹೋತೀ ಸುಖಪ್ರದೇ । ಪರೀ ಪವಿತ್ರತ್ವ ಸಂಬಂಧೇ । ತೀರ್ಥಾಚೇನಿ ।೩೨೩॥ ನಈ ಹೋ ಕಾ ಭಲತೈಸೀ ಥೋರಿೀ । ಪರೀ ಗಂಗಾ ಜೈ ಅಂಗಿಕಾರೀ । ತೈಂಚಿ ತಿಯೇ ಸಾಗರೀ । ಪ್ರವೇಶು ಗಾ ।೩೨೪॥ ತೈಸೇ ಸಾತ್ತ್ವಿಕಾ ಕರ್ಮಾ ಕಿರೀಟೀ । ಯೇತಾ ಮೋಕ್ಷಾಚಿಯೇ ಭೇಟೀ । ನ ಪಡೆ ಆಡಕಾಠೀ । ತೇ ವೇಗಳೇ ಆಹೇ ।೩೨೫॥ ಹಾ ಬೋಲು ಆಇಕತಖೇವೀ । ಅರ್ಜುನಾ ಆಥಿ ನ ಮಾಯೇ ಜೀವೀ । ಮ್ಹಣೇ ದೇವೇ ಕೃಪಾ ಕರಾವೀ । ಸಾಂಗಾವೇ ತೇ ।೩೨೬॥ ತೇಥ ಕೃಪಾಳುಚಕ್ರವರ್ತೀ । ಮ್ಹಣೇ ಆಈಕ ತಯಾಚೀ ವ್ಯಕ್ತೀ । ಜೇಣೇ ಸಾತ್ತ್ವಿಕ ತೇ ಮುಕ್ತೀ । ರತ್ನ ದೇಖೇ ।೩೨೭॥

ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ ।
ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ।೨೩॥

ತರೀ ಅನಾದಿ ಪರಬ್ರಹ್ಮ । ಜೇ ಜಗದಾದಿ ವಿಶ್ರಾಮಧಾಮ । ತಯಾಚೇ ಏಕ ನಾಮ । ತ್ರಿಧಾ ಪೈ ಅಸೇ ।೩೨೮॥ ತೇ ಕೀರ ಅನಾಮ ಅಜಾತೀ । ಪರೀ ಅವಿದ್ಯಾವರ್ಗಾಚಿಯೇ ರಾತೀ । ಮಾಜೀ ವೋಳಖಾವಯಾ ಶ್ರುತೀ । ಖೂಣ ಕೇಲೀ ।೩೨೯॥ ಉಪಜಲಿಯಾ ಬಾಳಕಾಸೀ । ನಾಂವ ನಾಹೀ ತಯಾಪಾಸೀ । ಠೇವಿಲೇನಿ ನಾಂವೇಂಸೀ । ಓ ದೇತ ಉಠೀ ।೩೩೦॥ ಕಷ್ಟಲೇ ಸಂಸಾರಶಿಣೇ । ಜೇ ದೇವೋ ಯೇತೀ ಗಾರ್ಹಾಣೇ । ತಯಾ ಓ ದೇ ನಾಂವೇ ಜೇಣೇ । ತೋ ಸಂಕೇತು ಹಾ ।೩೩೧॥ ಬ್ರಹ್ಮಾಚಾ ಅಬೋಲಾ ಫಿಟಾವಾ । ಅದ್ವೈತತ್ತ್ವೇ ತೋ ಭೇಟಾವಾ । ಐಸಾ ಮಂತ್ರ ದೇಖಿಲಾ ಕಣವಾ । ವೇದೇ ಬಾಪೇ ।೩೩೨॥ ಮಗ ದಾವಿಲೇನಿ ಜೇಣೇ ಏಕೇ । ಬ್ರಹ್ಮ ಆಳವಿಲೇ ಕವತಿಕೇ । ಮಾಗಾ ಅಸತ ಠಾಕೇ । ಪುಢಾ ಉಭೇ ।೩೩೩॥ ಪರೀ ನಿಗಮಾಚಳಶಿಖರೀ । ಉಪನಿಷದಾರ್ಥನಗರೀ । ಆಹಾತಿ ಜೇ ಬ್ರಹ್ಮಾಚಾ ಯೇಕಾಹಾರೀ । ತಯಾಂಸೀಚ ಕಳೇ ।೩೩೪॥

ಹೀಗೆ ಎಲ್ಲ ರೀತಿಯಿಂದಲೂ ಸತ್ತ್ವಗುಣದಲ್ಲಿ ಸಾಮರ್ಥ್ಯವಿರುವುದು ನಿಜ. ಆದರೆ ಮೋಕ್ಷ ಪ್ರಾಪ್ತಿ ಯಾವುದರಿಂದ ಆಗುವುದೋ ।೩೨೦॥

ಅದು ಒಂದು ಬೇರೆಯೇ ವಸ್ತು ಇರುವುದು ಮತ್ತು ಅದು ಸತ್ತ್ವಗುಣಕ್ಕೆ ಸಹಕರಿಸಿದಾಗ ಮೋಕ್ಷ ಪ್ರಾಪ್ತಿಯ ಯೋಗ್ಯತೆ ಬರುವುದು ।೩೨೧॥

ಇಲ್ಲಿ ನೋಡು, ತೊಲಿ ಒಂದಕ್ಕೆ ಉತ್ತಮ ಬಂಗಾರದ ದರವು ಹದಿನೈದು ರೂಪಾಯಿಗಳಾಗಿದ್ದರೂ, ಅದರ ಮೇಲೆ ರಾಜನ ಮುದ್ರೆ ಇದ್ದರೆ ಮಾತ್ರ ಅದು ಎಲ್ಲ ಕಡೆಯಲ್ಲಿ ನಡೆಯುವುದು ।೩೨೨॥

ಅನೇಕ ಕಡೆಗಳಲ್ಲಿ ಜಲವು ಸ್ವಚ್ಛ, ಶೀತಲ, ಸುಗಂಧಯುಕ್ತ ಹಾಗೂ ಸುಸ್ವಾದ ಇರಬಹುದು. ಆದರೆ ತೀರ್ಥಕ್ಕೆ ಕೂಡದ ಹೊರತಾಗಿ ಆ ಜಲಕ್ಕೆ ಪವಿತ್ರತೆಯು ಬಾರದು ।೩೨೩॥

ಇತರ ಸ್ಥಳಗಳಲ್ಲಿನ ಜಲಕ್ಕೆ ಯಾವುದೇ ಯೋಗ್ಯತೆ ಇರಲಿ, ಆದರೆ ಗಂಗಾನದಿಯು ಅದಕ್ಕೆ ಅಂಗಿಕಾರ ಮಾಡಿದಾಗ ಮಾತ್ರ ಅದರ ಪ್ರವೇಶವು ಸಮುದ್ರದಲ್ಲಾಗುವುದು ।೩೨೪॥

ಅದರಂತೆ ಅರ್ಜುನಾ, ಸಾತ್ತ್ವಿಕ ಕರ್ಮದ ಆಚರಣೆಯಿಂದ ಮೋಕ್ಷದ ಭೇಟಿ ಬರುವಾಗ್ಗೆ ಯಾವುದರಿಂದ ಪ್ರತಿಬಂಧವಾಗುವುದಿಲ್ಲವೋ, ಅದು ಬೇರೆಯೇ ಇದೆ ।೩೨೫॥

ಈ ಮಾತು ಕೇಳಿದಾಕ್ಷಣವೇ ಅರ್ಜುನನ ಮನದಲ್ಲಿ ಅದನ್ನು ಕೇಳುವ ಉತ್ಸುಕತೆ ಉಂಟಾಯಿತು. ಆಗ ಹೇ ದೇವನೇ, ಕೃಪೆ ಮಾಡಿ ಅದನ್ನು ಹೇಳಿರಿ ಎಂದನು ।೩೨೬॥

ಆಗ ಕೃಪಾಳು ಚಕ್ರವರ್ತಿಯಾದ ಶ್ರೀಕೃಷ್ಣನು ಹೇಳಿದನು:- ಯಾವುದರಿಂದ ಸಾತ್ತ್ವಿಕ ಗುಣಕ್ಕೆ ಮೋಕ್ಷರೂಪವಾದ ರತ್ನದ ಲಾಭವಾಗುವುದೋ, ಅದರ ಲಕ್ಷಣಗಳನ್ನು ಕೇಳು ।೩೨೭॥

ಶ್ಲೋಕಾರ್ಥ :- ''ಓಂ-ತತ್-ಸತ್'' ಇವುಗಳು ಬ್ರಹ್ಮವನ್ನು ತೋರಿಸುವ ಮೂರು ಸಂಕೇತಗಳೆಂದು ಜ್ಞಾನಿಗಳು ಹೇಳುತ್ತಾರೆ. ಆದರಿಂದ ಸೃಷ್ಟಿ ಕಾಲದಲ್ಲಿ ಬ್ರಾಹ್ಮಣರೂ, ವೇದಗಳೂ, ಯಜ್ಞಗಳೂ ಸೃಷ್ಟಿಯಾದವು ।೨೩॥

ಯಾವುದು ಅನಾದಿ, ಪರಬ್ರಹ್ಮ ಹಾಗೂ ಯಾವುದು ಜಗತ್ ಆದಿಯಾಗಿ ಎಲ್ಲರ ವಿಶ್ರಾಂತಿ ಸ್ಥಾನವಾಗಿರುವುದು, ಅದರ ಒಂದೇ ಹೆಸರು ಮೂರು ಪ್ರಕಾರಗಳಾಗಿರುವುವು ।೩೨೮॥

ಈ ಬ್ರಹ್ಮವು ನಿಜವಾಗಿಯೂ ನಾಮ, ಜಾತಿ ರಹಿತವಾಗಿರುವುದು. ಆದರೆ ಅಜ್ಞಾನಿ ಜನರಿಗೆ ಅಂಧಕಾರದಲ್ಲಿ ಗುರುತಿಸಲು ವೇದವು ಅದಕ್ಕೆ ಹೆಸರಿಟ್ಟಿದೆ ।೩೨೯॥

ಕೂಸು ಹುಟ್ಟಿದಾಗ ಅದಕ್ಕೆ ಹೆಸರೇ ಇರುವುದಿಲ್ಲ ಆದರೆ ಅದಕ್ಕೆ ಹೆಸರಿಟ್ಟು ಅದೇ ಹೆಸರಿನಿಂದ ಕರೆದಾಗ ಅದು ಓ ಎಂದು ಏಳುವುದು ।೩೩೦॥

ಅದರಂತೆ ಸಂಸಾರದ ಕಷ್ಟದಿಂದ ತ್ರಾಸುಗೊಂಡ ಜೀವರು ವೇದದ ಕಡೆ ತಮ್ಮ ಪಾಪ ತಾಪಗಳನ್ನು ಹೇಳಿಕೊಳ್ಳುವಾಗ ವೇದವು ಅವರಿಗೆ ಓ ಎನ್ನುವುದು, ಅದುವೇ ಈ ಹೆಸರಾಗಿದೆ ।೩೩೧॥

ಬ್ರಹ್ಮನ ಅನಿರ್ವಾಚ್ಯತನವು ದೂರಾಗಬೇಕು, ಹಾಗೂ ಐಕ್ಯರೂಪವಾಗಿ ದರ್ಶನಾಗಬೇಕು, ಹೀಗೆ ವೇದವು ಕೃಪೆಯಿಂದ ಮಂತ್ರಗಳನ್ನು ತೋಧಿಸಿತು ।೩೩೨॥

ಆಗ ಆ ಮಂತ್ರಗಳಿಂದ ಬ್ರಹ್ಮಕ್ಕೆ ಕರೆದಾಗ ಅದು ಸಹಜವಾಗಿ ಹಿಂದಿದ್ದರೂ ಮುಂದೆ ಬಂದು ನಿಲ್ಲುವುದು ।೩೩೩॥

ಆದರೆ ವೇದರೂಪ ಶಿಖರದ ಮೇಲೆ, ಉಪನಿಷತ್ ರೂಪ ನಗರದಲ್ಲಿ ಯಾರು ಬ್ರಹ್ಮನ ಪಂಕ್ತಿಯಲ್ಲಿರುವರೋ, ಅವರಿಗೆ ಮಾತ್ರ ಇದು ತಿಳಿಯುವುದು ।೩೩೪॥

ಹೇಂಹೀ ಅಸೋ ಪ್ರಜಾಪತೀ । ಶಕ್ತಿ ಜೇ ಸೃಷ್ಟಿ ಕರಿತೀ । ತೇ ಜಯಾ ಏಕ ಆವೃತ್ತೀ । ನಾಮಾಚಿಯೇ ।೩೩೫॥ ಪೈ ಸೃಷ್ಟೀಚಿಯಾ ಉಪಕ್ರಮಾ । ಪೂರ್ವಿ ಗಾ ವಿರೋತ್ತಮಾ । ವೇಡಾ ಐಸಾ ಬ್ರಹ್ಮಾ । ಏಕಲಾ ಹೋತಾ ।೩೩೬॥ ಮಜ ಈಶ್ವರಾತೇ ನೋಳಖೇ । ನಾ ಸೃಷ್ಟೀಹೀ ಕರೂ ನ ಶಕೇ । ತೋ ಥೋರು ಕೇಲಾ ಏಕೇ । ನಾಮೇ ಜೇಣೇ ।೩೩೭॥ ಜಯಾಚಾ ಅರ್ಥು ಜೀವೀ ಧ್ಯಾತಾ । ಜೇ ವರ್ಣತ್ರಯಚಿ ಜಪತಾ । ವಿಶ್ವಸೃಜನಯೋಗ್ಯತಾ । ಆಲೀ ತಯಾ ।೩೩೮॥ ತೇಧವಾ ರಚಿಲೇ ಬ್ರಹ್ಮಜನ । ತಯಾ ವೇದ ದಿಧಲೇ ಶಾಸನ । ಯಜ್ಞಾ ಐಸೇ ವರ್ತನ । ಜೀವಿಕೇ ಕೇಲೇ ।೩೩೯॥ ಪಾಠೀ ನೇಣೋ ಕಿತೀ ಯೇರ । ಸ್ರಜಿಲೇ ಲೋಕ ಅಪಾರ । ಜಾಲೇ ಬ್ರಹ್ಮದತ್ತ ಅಗ್ರಹಾರ । ತಿನ್ಹೀ ಭುವನೇ ।೩೪೦॥ ಐಸೇ ನಾಮಮಂತ್ರೇ ಜೇಣೇ । ಧಾತಯಾ ಅಥಂಚ ಕರಣೇ । ತಯಾಚೇ ಸ್ವರೂಪ ಆಇಕ ಮ್ಹಣೇ । ಶ್ರೀಕಾಂತು ತೋ ।೩೪೧॥ ತರೀ ಸರ್ವ ಮಂತ್ರಾಂಚಾ ರಾಜಾ । ತೋ ಪ್ರಣವೋ ಆದಿವರ್ಣು ಬುಝಾ । ಆಣಿ ತತ್ಕಾರು ಜೋ ದುಜಾ । ತಿಜಾ ಸತ್ಕಾರು ।೩೪೨॥ ಏವಂ ಓಂತತ್ಸದಾಕಾರು । ಬ್ರಹ್ಮನಾಮ ಹೇ ತ್ರಿಪ್ರಕಾರು । ಹೇ ಫೂಲ ತುರಂಬೀ ಸುಂದರು । ಉಪನಿಷದಾಚೇ ।೩೪೩॥ ಯೇಣೇಸೀ ಗಾ ಹೋಊನಿ ಏಕ । ಜೈ ಕರ್ಮ ಚಾಲೇ ಸಾತ್ತ್ವಿಕ । ತೈ ಕೈವಲ್ಯಾತೇ ಪಾಇಕ । ಘರೀಂಚೇ ಕರೀ ।೩೪೪॥ ಪರೀ ಕಾಪುರಾಚೇ ಥಳೀಂವ । ಆಣೂನಿ ದೇಈಲ ದೈವ । ಲೇವೋ ಜಾಣಣೇಂಚಿ ಆಡವ । ತೇಥ ಅಸೇ ಬಾಪಾ ।೩೪೫॥ ತೈಸೇ ಆದರಿಜೇಲ ಸತ್ಕರ್ಮ । ಉಚ್ಚರಿಜೇಲ ಬ್ರಹ್ಮನಾಮ । ಪರೀ ನೇಣಿಜೇಲ ಜರೀ ವರ್ಮ । ವಿನಿಯೋಗಾಚೇ ।೩೪೬॥ ತರೀ ಮಹಂತಾಚಿಯಾ ಕೋಡೀ । ಘರಾ ಆಲಿಯಾ ಹೀ ವೋಢೀ । ಮಾನೂ ನೇಣತಾ ಪರವಡೀ । ಮುದ್ದಲ ತುಟೇ ।೩೪೭॥ ಕಾ ಲ್ಯಾವಯಾ ಚೋಖಟ । ಟೀಕ ಭಾಂಗಾರ ಏಕವಟ । ಘಾಲೂನಿ ಬಾಂಧಿಲೀ ಮೋಟ । ಗಳಾ ಜೇವೀ ।೩೪೮॥ ತೈಸೇ ತೋಂಡೀ ಬ್ರಹ್ಮನಾಮ । ಹಾತೀ ತೇ ಸಾತ್ತ್ವಿಕ ಕರ್ಮ । ವಿನಿಯೋಗೇಂ ವೀಣ ಕಾಮ । ವಿಫಳ ಹೋಯ ।೩೪೯॥ ಅಗಾ ಅನ್ನ ಆಣಿ ಭೂಕ । ಪಾಸೀ ಅಸೇ ಪರೀ ದೇಖ । ಜೇಊ ನೇಣತಾ ಬಾಳಕ । ಲಂಘನಚಿ ಕೀ ।೩೫೦॥ ಕಾ ಸ್ನೇಹಸೂತ್ರ ವೈಶ್ವಾನರಾ । ಜಾಲಿಯಾಹೀ ಸಂಸಾರಾ । ಹಾತವಟೀ ನೇಣತಾ ವೀರಾ । ಪ್ರಕಾಶು ನೋಹೇ ।೩೫೧॥

ಹೆಚ್ಚಿಗೇನು ಹೇಳಬೇಕು? ಸೃಷ್ಟಿ ಉತ್ಪನ್ನ ಮಾಡುವ ಬ್ರಹ್ಮದೇವನಿಗೆ ಬಂದಿರುವ ಯಾವ ಈ ಶಕ್ತಿಯು ಈ ಒಂದು ನಾಮದ ಉಚ್ಚಾರದಿಂದಲೇ ಆಗಿರುವುದು ।೩೫॥

ಆದರೆ ಹೇ ವಿರೋತ್ತಮನೇ, ಸೃಷ್ಟಿಯನ್ನು ಉತ್ಪನ್ನ ಮಾಡುವ ಮೊದಲು ಬ್ರಹ್ಮದೇವನು ಒಬ್ಬನೇ ಉತ್ಪನ್ನನಾದಾಗ ಹುಚ್ಚನಂತೆ ಇದ್ದನು ।೩೬॥

ಈತನು ನನ್ನ ಈಶ್ವರತ್ವವನ್ನೂ ಅರಿಯದಾದನು ಮತ್ತು ಸೃಷ್ಟಿಯನ್ನು ಉತ್ಪನ್ನ ಮಾಡಲರಿಯದಾದನು. ಮುಂದೆ ಆತನಿಗೆ ಈ ಯೋಗ್ಯತೆಯು ಒಂದೇ ಒಂದು ನಾಮದ ಉಚ್ಚಾರದಿಂದ ಬಂದಿತು ।೩೭॥

ಅದರ ಅರ್ಥವನ್ನು ಮನದಲ್ಲಿ ತಂದಾಗ ಹಾಗೂ ಆ ಮೂರು ಅಕ್ಷರಗಳ ಜಪ ಮಾಡಿದಾಗ ಸೃಷ್ಟಿ ಉತ್ಪನ್ನ ಮಾಡುವ ಯೋಗ್ಯತೆಯು ಯಾವಾಗ ಬಂದಿತೋ ।೩೮॥

ಆಗ ಬ್ರಾಹ್ಮಣರಿಗೆ ನಿರ್ಮಾಣಮಾಡಿ ಅವರಿಗೆ ವೇದಗಳ ಆಜ್ಞೆಯನ್ನು ಮಾನ್ಯ ಮಾಡಲು ತಿಳಿಸಿ ನಿರ್ವಾಹಾರ್ಥವಾಗಿ ಅವರಿಗೆ ಯಜ್ಞ ಇತ್ಯಾದಿ ಆಚರಣೆಗಳನ್ನು ಆಚರಿಸಲು ಹೇಳಿದನು ।೩೯॥

ತದನಂತರ ಗಣಿತ ಮಾಡಲು ಬಾರದಷ್ಟು ಅಪಾರ ಜನರನ್ನು ಉತ್ಪನ್ನ ಮಾಡಿದನು ಮತ್ತು ಮೂರೂ ಲೋಕಗಳನ್ನು ಬ್ರಹ್ಮದೇವನು ಇವರಿಗೆ ಉಂಬಳಿಯಾಗಿ ಕೊಟ್ಟನು ।೪೦॥

ಶ್ರೀಕಾಂತನು ಹೇಳಿದನು:- ಈ ಪ್ರಕಾರವಾಗಿ ಯಾವ ನಾಮಮಂತ್ರದ ಯೋಗದಿಂದ ಬ್ರಹ್ಮದೇವನು ಶ್ರೇಷ್ಠತ್ವವನ್ನು ಪಡೆದನೋ, ಅದರ ಲಕ್ಷಣಗಳನ್ನು ಕೇಳು ।೪೧॥

ಅದೇನೆಂದರೆ, ಎಲ್ಲ ಮಂತ್ರಗಳಲ್ಲಿ ಶ್ರೇಷ್ಠವಾದ ಓಂಕಾರವು ಮೂಲ ಅಕ್ಷರವಾಗಿದೆ ಮತ್ತು ತತ್‌ಕಾರವು ಎರಡನೆಯ ಅಕ್ಷರವು ಹಾಗೂ ಸತ್‌ಕಾರವು ಮೂರನೆಯ ಅಕ್ಷರವಾಗಿದೆ ।೪೨॥

ಈ ಪ್ರಕಾರವಾಗಿ "ಓಂ ತತ್ ಸತ್" ಎಂದು ಮೂರು ಪ್ರಕಾರದ ಬ್ರಹ್ಮನ ಹೆಸರಿರುವುದು ಮತ್ತು ಉಪನಿಷತ್‌ದ ಈ ನಾಮರೂಪ ಸುಂದರವಾದ ಪುಷ್ಪದ ಸುಗಂಧವನ್ನು ಮೂಸಿಸು ।೪೩॥

ಇವುಗಳೊಂದಿಗೆ ಐಕ್ಯವಾದಾಗ ಸಾತ್ತ್ವಿಕ ಕರ್ಮಗಳ ಆಚರಣೆಗಳನ್ನು ಆಚರಿಸಿದರೆ ಮೋಕ್ಷವು ತನ್ನ ಮನೆಯ ಸೇವಕನಾಗುವುದು ।೪೪॥

ಆದರೆ, ದೈವಯೋಗದಿಂದ ಕರ್ಪೂರದ ಅಲಂಕಾರಗಳು ಪ್ರಾಪ್ತವಾದಾಗ ಅಪ್ಪಾ ಅರ್ಜುನಾ, ಅದನ್ನು ಹೇಗೆ ಬಳಸಬೇಕೆಂದು ತಿಳಿಯುವುದು ಅಡಚಣೆಯಾಗುವುದು ।೪೫॥

ಇದರಂತೆ ಸತ್ಕರ್ಮಗಳ ಆಚರಣೆಯನ್ನು ಮಾಡಿ ಬ್ರಹ್ಮನ ಹೆಸರಿನ ಉಚ್ಚಾರ ಮಾಡಿದಾಗ ಅದರ ವ್ಯವಸ್ಥೆಯ ಮರ್ಮವು ತಿಳಿಯದಿದ್ದಾಗ ।೪೬॥

ಅದು ಹೇಗಾಗುವುದೆಂದರೆ, ಸಾಧು ವೃಂದವು ಮನೆಗೆ ಬಂದಾಗ ಅವರನ್ನು ಸನ್ಮಾನಿಸದೇ ಅಪಮಾನ ಮಾಡಿದರೆ, ನಮ್ಮಲ್ಲಿದ್ದ ಪುಣ್ಯದ ಕ್ಷಯವಾಗುವುದು ।೪೭॥

ಅಥವಾ ಸುಂದರವಾದ ನಾನಾ ಪ್ರಕಾರದ ಆಭರಣಗಳನ್ನು ಒಂದು ಬಟ್ಟೆಯಲ್ಲಿ ಎಲ್ಲವನ್ನೂ ಇಟ್ಟು ಕಟ್ಟಿ ಅದನ್ನು ಕೊರಳಲ್ಲಿ ಹಾಕಿದಂತಾಗುವುದು ।೪೮॥

ಅದರಂತೆ ಮುಖದಿಂದ ಬ್ರಹ್ಮನಾಮದ ಉಚ್ಚಾರ ಮಾಡಿ ಹಾಗೂ ಕೈಯಿಂದ ಸಾತ್ತ್ವಿಕ ಕರ್ಮಗಳ ಆಚರಣೆ ಮಾಡಿದರೂ ಅದರ ವ್ಯವಸ್ಥೆಯ ತಿಳುವಳಿಕೆ ಇರದೇ ಹೋದರೆ, ಎಲ್ಲ ಕರ್ಮಗಳೂ ವ್ಯರ್ಥವಾಗುವುವು ।೪೯॥

ಅರೇ, ಅನ್ನವು ಸಮೀಪವಿದ್ದು, ಹಸಿವೆಯೂ ಆಗಿರುವ ಚಿಕ್ಕ ಮಗುವಿಗೆ ಅದನ್ನು ಊಟ ಮಾಡುವ ತಿಳುವಳಿಕೆ ಇಲ್ಲದ್ದಕ್ಕೆ ಅದಕ್ಕೆ ಉಪವಾಸ ಮಾಡಬೇಕಾಗುವುದು ।೫೦॥

ಅಥವಾ ಹೇ ವೀರನೇ, ಎಣ್ಣೆ, ಬತ್ತಿ ಹಾಗೂ ಅಗ್ನಿ ಇವು ಮೂರೂ ವಸ್ತುಗಳು ಒಂದೆಡೆ ಇದ್ದರೂ, ದೀಪ ಹಚ್ಚುವ ರೀತಿ ತಿಳಿಯದ್ದಕ್ಕೆ ಅಲ್ಲಿ ಬೆಳಕು ಬೀಳದು ।೫೧॥

ತೈಸೇ ವೇಳೇ ಕೃತ್ಯ ಪಾವೇ । ತೇಥಿಂಚಾ ಮಂತ್ರುಹೀ ಆಠವೇ । ಪರೀ ವ್ಯರ್ಥ ತೇ ಆಘವೇ । ವಿನಿಯೋಗೇಂವೀಣ ।೩೫೨॥ ಮ್ಹಣೌನಿ ವರ್ಣತ್ರಯಾತ್ಮಕ । ಜೇ ಹೇ ಪರಬ್ರಹ್ಮ ನಾಮ ಏಕ । ವಿನಿಯೋಗು ತೂ ಆಇಕ । ಆತಾ ಯಾಚಾ ।೩೫೩॥

ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃ ಕ್ರಿಯಾಃ ।
ಪ್ರವರ್ತಂತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಮ್ ।೨೪॥

ತರೀ ಯಾ ನಾಮೀಂಚೀ ಅಕ್ಷರೇ ತಿನ್ಹೀ । ಕರ್ಮಾ ಆದಿಮಧ್ಯನಿದಾನೀ । ಪ್ರಯೋಜಾವೀ ಪೈ ಸ್ಥಾನೀ । ಇಹೀ ತಿನ್ಹೀ ।೩೫೪॥ ಹೇಚಿ ಏಕೀ ಹಾತವಟೀ । ಘೇಊನಿ ಹನ ಕಿರೀಟೀ । ಆಲೇ ಬ್ರಹ್ಮವಿದ ಭೇಟೀ । ಬ್ರಹ್ಮಾಚಿಯೇ ।೩೫೫॥ ಬ್ರಹ್ಮೇಸೀ ಹೋಆವಯಾ ಏಕೀ । ತೇ ನ ವಂಚತೀ ಯಜ್ಞಾದಿಕೀ । ಜೇ ಚಾವಳಲೇ ವೋಳಖೀ । ಶಾಸ್ತ್ರಾಂಚಿಯಾ ।೩೫೬॥ ತೋ ಆದಿ ತಂವ ಓಂಕಾರು । ಧ್ಯಾನೇ ಕರಿತೀ ಗೋಚರು । ಪಾಠೀ ಆಣಿತೀ ಉಚ್ಚಾರು । ವಾಚೇಹೀ ತೋ ।೩೫೭॥ ತೇಣೇ ಧ್ಯಾನೇ ಪ್ರಕಟೇ । ಪ್ರಣವೋಚ್ಚಾರೇ ಸ್ಪಷ್ಟೇ । ಲಾಗತೀ ಮಗ ವಾಟೇ । ಕ್ರಿಯಾಂಚಿಯೇ ।೩೫೮॥ ಆಂಧಾರೀ ಅಭಂಗು ದಿವಾ । ಆಡವೀ ಸಮರ್ಥು ಬೋಳಾವಾ । ತೈಸಾ ಪ್ರಣವೋ ಜಾಣಾವಾ । ಕರ್ಮಾರಂಭೀ ।೩೫೯॥ ಉಚಿತ ದೇವೋದ್ದೇಶೇ । ದ್ರವ್ಯೇ ಧರ್ಮ್ಯೇ ಆಣಿ ಬಹುವಸೇ । ದ್ವಿಜದ್ವಾರಾ ಹನ ಹುತಾಶೇ । ಯಜಿತೀ ಪೈ ತೇ ।೩೬೦॥ ಆಹವನೀಯಾದಿ ವನ್ಹೀ । ನಿಕ್ಷೇಪರೂಪೀ ಹವನೀ । ಯಜಿತೀ ಪೈ ವಿಧಾನೀ । ಪುಡೇ ಹೋಉನೀ ।೩೬೧॥ ಕಿಂಬಹುನಾ ನಾನಾ ಯಾಗ । ನಿಷ್ಪತ್ತೀಚೇ ಘೇಉನಿ ಅಂಗ । ಕರಿತೀ ನಾವಡತೇಯಾ ತ್ಯಾಗ । ಉಪಾಧೀಚಾ ।೩೬೨॥ ಕಾ ನ್ಯಾಯೇ ಜೋಡಲಾ ಪವಿತ್ರೀ । ಭೂಮ್ಯಾದಿಕೀ ಸ್ವತಂತ್ರೀ । ದೇಶಕಾಳ ಶುದ್ಧ ಪಾತ್ರೀ । ದೇತೀ ದಾನೇ ।೩೬೩॥ ಅಥವಾ ಏಕಾಂತರಾ ಕೃಚ್ಛ್ರೀ । ಚಂದ್ರಾಯಣೇ ಮಾಸೋಪವಾಸೀ । ಶೋಷೋನಿ ಗಾ ಧಾತುರಾಶೀ । ಕರಿತೀ ತಪೇ ।೩೬೪॥ ಏವಂ ಯಜ್ಞದಾನ ತಪೇ । ಜಿಯೇ ಗಾಜತೀ ಬಂಧರೂಪೇ । ತಿಹೀಂಚ ಹೋಯ ಸೋಪೇ । ಮೋಕ್ಷಾಚೇ ತಯಾ ।೩೬೫॥ ಸ್ಥಳೀ ನಾವಾ ಜಿಯಾ ದಾಟಿಜೇ । ಜಳೀ ತಿಯಾಂಚಿ ಜೇವೀ ತರಿಜೇ । ತೇವೀ ಬಂಧಕೀ ಕರ್ಮೀ ಸುಟಿಜೇ । ನಾಮೇ ಯೇಣೇ ।೩೬೬॥

ಅದರಂತೆ ಪರ್ವಕಾಲ ಪ್ರಾಪ್ತವಾಗಿ ಹಾಗೂ ಕರ್ಮ ಮಾಡುವ ಇಚ್ಛೆಯಾಗಿ, ಆಗ ಮಂತ್ರವೂ ನೆನಪಾಗಿದ್ದರೂ ಅವುಗಳ ವಿನಿಯೋಗದ ತಿಳುವಳಿಕೆ ಇಲ್ಲದ್ದಕ್ಕೆ ಈ ಎಲ್ಲ ಯೋಗಗಳು ವ್ಯರ್ಥವಾಗುವುವು ।।೩೫೨।।

ಅದಕ್ಕಾಗಿ ಮೂರು ಅಕ್ಷರಗಳ ಯಾವ ಈ ಬ್ರಹ್ಮಾಂಡ ವನ್ನು ಇದರ ವಿನಿಯೋಗವನ್ನು ಹೇಗೆ ಮಾಡಬೇಕೆಂಬುವು ದನ್ನು ಈಗ ಹೇಳುವೆ ಕೇಳು ।।೩೫೩।।

ಶ್ಲೋಕಾರ್ಥ :- ಆದುದರಿಂದ, ಬ್ರಹ್ಮಜ್ಞಾನಿಗಳಾ ದವರು ತಾವು ಮಾಡುವ ಶಾಸ್ತ್ರೋಕ್ತ ತಪಸ್ಸು, ಯಜ್ಞ, ದಾನಾದಿ ಕ್ರಿಯೆಗಳನ್ನು ''ಓಂ'' ಕಾರ ಶಬ್ದೋಚ್ಚಾರಣ ಪೂರ್ವಕವಾಗಿ ಬಿಡದೆ ಆರಂಭಿಸುತ್ತಾರೆ ।।೨೪।।

ಏನೆಂದರೆ, ಈ ಪರಬ್ರಹ್ಮ ನಾಮದ ಯಾವ ಮೂರು ಅಕ್ಷರಗಳನ್ನು ಕರ್ಮದ ಮೊದಲು, ನಡುವೆ, ಮತ್ತು ಕೊನೆಗೆ ಹೀಗೆ ಯೋಜಿಸಬೇಕು ।।೩೫೪।।

ಹೇ ಕಿರೀಟಿಯೇ, ಇದೊಂದೇ ಉಪಾಯದೊಂದಿಗೆ ಬ್ರಹ್ಮವೇತ್ತೆಯವರು ಬ್ರಹ್ಮನ ಭೇಟಿಗಾಗಿ ಬಂದಿರುವರು ।।೩೫೫।।

ಇವರು ಶಾಸ್ತ್ರಗಳನ್ನು ತಿಳಿದುಕೊಂಡಿರುವರು. ಹಾಗೂ ಇವರು ಬ್ರಹ್ಮನಲ್ಲಿ ಐಕ್ಯವಾಗಲು ಯಜ್ಞಾದಿ ಕ್ರಿಯೆಗಳನ್ನು ತ್ಯಾಗ ಮಾಡುವುದಿಲ್ಲ ।।೩೫೬।।

ಇವರು ಪ್ರಥಮವಾಗಿ ಧ್ಯಾನದಿಂದ ಓಂಕಾರವನ್ನು ಸಿದ್ಧಮಾಡಿಕೊಂಡು ತದನಂತರ ವಾಣಿಯಿಂದ ಅದರ ಉಚ್ಚಾರವನ್ನು ಮಾಡುವರು ।।೩೫೭।।

ಈ ಪ್ರಕಾರವಾಗಿ ಧ್ಯಾನವನ್ನು ಮಾಡಿದ ಮೇಲೆ ಪ್ರಣ ವೋಚ್ಚಾರವನ್ನು ಸ್ಪಷ್ಟವಾಗಿ ಮಾಡಿ ತದನಂತರ ಕ್ರಿಯೆ ಗಳನ್ನು ಆಚರಿಸಲು ಆರಂಭಿಸುವರು ।।೩೫೮।।

ಕತ್ತಲೆಯಲ್ಲಿ ಹೋಗುವವರಿಗೆ ದೀಪದಂತೆ ಅಥವಾ ಅರಣ್ಯದಲ್ಲಿ ಹೋಗುವವರಿಗೆ ಒಬ್ಬ ಬಲಿಷ್ಠ ಸಂಗಾತಿಯಂತೆ ಕರ್ಮಾರಂಭದಲ್ಲಿ ಪ್ರಣವೋಚ್ಚಾರವು ಕರ್ಮದ ಸಂಗಾತಿ ಯಾಗಿರುವುದು ।।೩೫೯।।

ಧರ್ಮದಿಂದ ಗಳಿಸಿದ ಹೇರಳವಾದ ಧನವನ್ನು ವೇದ ದಲ್ಲಿ ಹೇಳಿದಂತೆ ದೇವತೆಗಳಿಗೆ ಅರ್ಪಿಸಲು ಬ್ರಾಹ್ಮಣರ ಮುಖಾಂತರ ಅಗ್ನಿಯ ಮುಖದಿಂದ ಯಜ್ಞವನ್ನು ಮಾಡು ತ್ತಾರೆ ।।೩೬೦।।

ಆಹವನೀಯ, ಗಾರ್ಹಪತ್ಯ ಹಾಗೂ ದಕ್ಷಿಣ ಈ ಮೂರನ್ನು ಅಗ್ನಿಯಲ್ಲಿ ಇವರು ಯಥಾವಿಧಿಯಾಗಿ ಹವನವನ್ನು ಮಾಡುವರು ।।೩೬೧।।

ಹೆಚ್ಚಿಗೇನು ಹೇಳಬೇಕು? ನಾನಾ ತರಹದ ಯಜ್ಞದ ನಿಮಿತ್ತದಿಂದ ಅಪ್ರಿಯವಾದ ಅಹಂಕಾರಾದಿ ಸಂಸಾರದ ತ್ಯಾಗವನ್ನು ಮಾಡುವರು ।।೩೬೨।।

ಅಥವಾ ನ್ಯಾಯವಾಗಿ ಗಳಿಸಿರುವ ಪವಿತ್ರವಾದ ದ್ರವ್ಯ ಗಳನ್ನು ಹಾಗೂ ಭೂಮಿ ಮೊದಲು ಮಾಡಿ ಮುಖ್ಯವಾದ ದಾನಗಳನ್ನು ದೇಶ, ಕಾಲಗಳನ್ನು ನೋಡಿ ಪವಿತ್ರರಾದ ಬ್ರಾಹ್ಮಣರಿಗೆ ಕೊಡುವರು ।।೩೬೩।।

ಅಥವಾ ಎರಡು ದಿನಕ್ಕೊಮ್ಮೆ ಊಟ ಮಾಡುವುದು, ಇಲ್ಲವೇ ಕೃಚ್ಛ್ರ, ಚಾಂದ್ರಾಯಣ ವ್ರತ (ಅಮವಾಸ್ಯೆ ದಿನ ಉಪವಾಸ ಇದ್ದು, ಪ್ರತಿದಿನ ಒಂದೊಂದು ತುತ್ತು ಬೆಳೆಸುತ್ತ, ಪೌರ್ಣಿಮೆಗೆ ಹದಿನೈದು ತುತ್ತು ಉಂಡು ಆಗ ಅಮವಾಸ್ಯೆ ವರೆಗೆ ಒಂದೊಂದು ತುತ್ತು ಕಡಿಮೆ ಮಾಡುತ್ತ ಹೋಗುವ ವ್ರತ) ಉಪವಾಸಗಳಿಂದ ಶರೀರದ ಸಪ್ತ ಧಾತುಗಳ ಶೋಷಣೆ ಮಾಡುವ ತಪಸ್ಸು ಮಾಡುವರು ।।೩೬೪।।

ಈ ಪ್ರಕಾರವಾಗಿ ಯಜ್ಞ, ದಾನ, ಮತ್ತು ತಪಸ್ಸು ಈ ಮೂರು ಕರ್ಮಗಳು ಬಂಧರೂಪವೆಂದು ಪ್ರಸಿದ್ಧವಾಗಿದೆ. ಇವುಗಳ ಆರಂಭದಲ್ಲಿ ಪ್ರಣವೋಚ್ಚಾರ ಮಾಡಿದರೆ ಮೋಕ್ಷವು ಸರಳವಾಗುವುದು ।।೩೬೫।।

ನದಿ ದಂಡೆಯಲ್ಲಿರುವ ಹಡಗವನ್ನು ನದಿಯಲ್ಲಿ ಸೇರಿ ಸಲು ಜಡವೆನಿಸುವುದು. ಆದರೆ ಅದರಿಂದಲೇ ನೀರಿನಲ್ಲಿ ದಾಟಲು ಬರುತ್ತದೆ. ಅದರಂತೆ ಸಂಸಾರದಲ್ಲಿ ಪ್ರತಿಬಂಧಕ ವಾದ ಕರ್ಮಗಳಿಂದಲೇ ನಾಮದ ಯೋಗದಿಂದ ಮಾನವನು ಮುಕ್ತನಾಗುವನು ।।೩೬೬।।

ಪರೀ ಹೇ ಅಸೋ ಐಸಿಯಾ । ಯಾ ಯಜ್ಞದಾನಾದಿ ಕ್ರಿಯಾ । ಓಂಕಾರೇ ಸಾಂವಾಯಿಲಿಯಾ । ಪ್ರವರ್ತತೀ ।೩೬೭॥ ತಿಯಾ ಮೋಟಕಿಯಾ ಜೇಥ ಪಳೀ । ರಿಗೋ ಪಾಹಾತೀ ನಿಹಾಳೀ । ಪ್ರಯೋಜಿತೀ ತಿಯೇ ಕಾಳೀ । ತಚ್ಛಬ್ದು ತೋ ।೩೬೮॥

ತದಿತ್ಯನಭಿಸಂಧಾಯ ಫಲಂ ಯಜ್ಞತಪಃಕ್ರಿಯಾಃ।
ದಾನಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ ।೨೫॥

ಜೇ ಸರ್ವಾಂಹೀ ಜಗಾಪರೌತೇ । ಜೇ ಏಕ ಸರ್ವಹೀ ದೇಖತೇ । ಜೇ ತಚ್ಛಬ್ದೇ ಬೋಲಿಜೇ ತೇ । ಪೈಲ ವಸ್ತು ।೩೬೯॥ ತೇ ಸರ್ವಾದಿಕತ್ವೇ ಚಿತ್ತೀ । ತದ್ರೂಪ ಧ್ಯಾವೂನಿಯಾ ಸುಮತೀ । ಉಚ್ಚಾರೇಹೀ ವ್ಯಕ್ತೀ । ಆಣಿತೀಪುಢತೀ ।೩೭೦॥ ಮ್ಹಣತೀ ತದ್ರೂಪಾ ಬ್ರಹ್ಮಾ ತಯಾ । ಫಳೇಸೀ ಕ್ರಿಯಾ ಇಯಾ । ತೇಂಚಿ ಹೋತು ಆಮ್ಹಾ ಭೋಗಾವಯಾ । ಕಾಂಹೀಂಚಿ ನುರೋ ।೩೭೧॥ ಐಸೇನಿ ತದಾತ್ಮಕೇ ಬ್ರಹ್ಮೇ । ತೇಥ ಉಗಾಣೂನಿ ಕರ್ಮೇ । ಆಂಗ ಝಾಡಿತೀ ನ ಮಮೇ । ಯೇಣೇ ಬೋಲೇ ।೩೭೨॥ ಆತಾ ಓಂಕಾರೇ ಆದರಿಲೇ । ತತ್ಕಾರೇ ಸಮರ್ಪಿಲೇ । ಇಯಾ ರಿತೀ ಜಯಾ ಆಲೇ । ಬ್ರಹ್ಮತ್ವ ಕರ್ಮಾ ।೩೭೩॥ ತೇ ಕರ್ಮ ಕೀರ ಬ್ರಹ್ಮಾಕಾರೇ । ಜಾಲೇ ತೇಣೇಂಹೀ ನ ಸರೇ । ಜೇ ಕರೀ ತೇಣೇಂಸೀ ದುಸರೇ । ಆಹೇ ಮ್ಹಣೌನಿ ।೩೭೪॥ ಮೀಠ ಆಂಗೇ ಜಳೀ ವಿರೇ । ಪರೀ ಕ್ಷಾರತಾ ವೇಗಳೀ ಉರೇ । ತೈಸೇ ಕರ್ಮ ಬ್ರಹ್ಮಾಕಾರೇ । ಗರ್ವೇ ತೇ ದ್ವೈತ ।೩೭೫॥ ಆಣಿ ದುಜೇ ಜಂವ ಜಂವ ಘಡೇ । ತಂವ ತಂವ ಸಂಸಾರಭಯ ಜೋಡೇ । ಹೇ ದೇವೋ ಆಪುಲೇನಿ ತೋಂಡೇ । ಬೋಲತೀ ವೇದ ।೩೭೬॥ ಮ್ಹಣೌನಿ ಪರತ್ವೇ ಬ್ರಹ್ಮ ಅಸೇ । ತೇ ಆತ್ಮತ್ವೇ ಪರಿಯವಸೇ । ಸಚ್ಛಬ್ದ ಯಾ ರಿಣಾದೋಷೇ । ಠೇವಿಲಾ ದೇವೇ ।೩೭೭॥ ತರೀ ಓಂಕಾರ ತತ್ಕಾರೀ । ಕರ್ಮ ಕೇಲೇ ಜೇ ಬ್ರಹ್ಮಶರೀರೀ । ಜೇ ಪ್ರಶಸ್ತಾದಿ ಬೋಲವರೀ । ವಾಖಾಣಿಲೇ ।೩೭೮॥ ಪ್ರಶಸ್ತ ಕರ್ಮೀ ತಿಯೇ । ಸಚ್ಛಬ್ದಾ ವಿನಿಯೋಗು ಆಹೇ । ತೋಚಿ ಆಇಕಾ ಹೋಯೇ । ತೈಸಾ ಸಾಂಗೋ ।೩೭೯॥

ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ ಪ್ರಯುಜ್ಯತೇ।
ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ।೨೬॥

ಆದರೆ ಈಗ ಈ ಮಾತುಗಳು ಹಾಗೆಯೇ ಇರಲಿ. ಈ ಯಜ್ಞದಾನಾದಿ ಕ್ರಿಯೆಗಳು ಓಂಕಾರದ ಸಹಾಯದಿಂದ ಯೋಗ್ಯತೆಯನ್ನು ಪಡೆಯುವುವು ।೩೬೭॥

ಈ ಕರ್ಮಗಳು ಫಲದ್ರೂಪವಾಗುವುದನ್ನು ಕಂಡಾಗ ತತ್ ಶಬ್ದದ ಉಪಯೋಗವನ್ನು ಮಾಡುವರು ।೩೬೮॥

ಶ್ಲೋಕಾರ್ಥ :- ಮುಮುಕ್ಷುಗಳು ''ತತ್'' ಎಂಬ ಬ್ರಹ್ಮವಾಚಕವನ್ನು ಉಚ್ಚರಿಸಿ ಫಲಾಪೇಕ್ಷೆಯಿಲ್ಲದವರಾಗಿ ಅನೇಕ ಯಜ್ಞ, ದಾನ, ತಪಸ್ಸುಗಳನ್ನು ಆಚರಿಸುತ್ತಾರೆ ।೨೫॥

ಯಾವುದು ಎಲ್ಲ ಜಗತ್ತಿನ ಆಚೆಕಡೆಗೆ ಇರುವ, ಹಾಗೂ ಯಾವುದು ಒಂದೇ ಎಲ್ಲವನ್ನೂ ನೋಡಬಲ್ಲದು, ಅಂಥ ಪರಬ್ರಹ್ಮವನ್ನು ''ತತ್'' ಶಬ್ದದಿಂದ ಹೇಳುವರು ।೩೬೯॥

ಹೇ ಸುಮತಿಯೇ, ಅದು ಎಲ್ಲದಕ್ಕೂ ಮೊದಲಿನದಾಗಿದೆ ಎಂದು ಲಕ್ಷದಲ್ಲಿಟ್ಟುಕೊಂಡು ಅದರ ರೂಪದ ಧ್ಯಾನವನ್ನು ಮಾಡಿ ಮುಂದೆ ಅದರ ''ತತ್'' ಉಚ್ಚಾರ ಮಾಡುವರು ।೩೭೦॥

ಮತ್ತು ಹೇಗೆ ಹೇಳುತ್ತಾರೆಂದರೆ, ತತ್‌ರೂಪ ಬ್ರಹ್ಮವೇ ನಿನಗೆ ಫಲ ಸಹ ಎಲ್ಲ ಕ್ರಿಯೆಗಳು ಅರ್ಪಣವಿರಲಿ. ನಮಗೆ ಭೋಗಿಸಲು ಏನೂ ಉಳಿಯದಾಗಲಿ ।೩೭೧॥

ಈ ಪ್ರಕಾರವಾಗಿ ತತ್ ಸ್ವರೂಪದ ಬ್ರಹ್ಮಕ್ಕೆ ಕರ್ಮಗಳನ್ನು ಅರ್ಪಿಸಿ ಇವು ''ನನ್ನವು ಅಲ್ಲ'' ಹೀಗೆಂದು ಹೇಳಿ ಮೈಝಾಡಿಸಿ ಬಿಡುಗಡೆಯಾಗುವರು ।೩೭೨॥

ಈಗ ಓಂಕಾರದ ಉಚ್ಚಾರ ಮಾಡಿ ಅದರ ಆರಂಭವನ್ನು ಮಾಡಿದರು ಹಾಗೂ ತತ್ ಇದರ ಉಚ್ಚಾರದಿಂದ ಅದರ ಅರ್ಪಣೆ ಮಾಡಿದರು ಮತ್ತು ಈ ರೀತಿಯಿಂದ ಕರ್ಮಕ್ಕೆ ಬ್ರಹ್ಮತ್ವವು ಪ್ರಾಪ್ತವಾಯಿತು ।೩೭೩॥

ಈ ಕರ್ಮವು ನಿಜವಾಗಿಯೂ ಬ್ರಹ್ಮರೂಪವಾದರೂ ಅದರಿಂದ ಕಾರ್ಯ ಭಾಗವಾಗುವುದಿಲ್ಲ. ಕಾರಣ ಕರ್ಮ ಮಾಡುವವರಲ್ಲಿ ನಾನು ಬೇರೆ ಎಂಬ ಭಿನ್ನ ಭಾವವು ಉಳಿದಿರುವುದು ।೩೭೪॥

ಉಪ್ಪು ನೀರಿನಲ್ಲಿ ಹಾಕಿದಾಗ ಕರಗುವುದು. ಆದರೆ ಅದರ ಕ್ಷಾರತ್ವವು ನೀರಿನಿಂದ ಬೇರೆಯಾಗಿರುವುದು. ಅದರಂತೆ ಕರ್ಮವು ಬ್ರಹ್ಮಾಕಾರವಾಯಿತು ಎಂದು ತಿಳಿಯುವುದೇ ದ್ವೈತಭಾವವಾಗಿದೆ ।೩೭೫॥

ಮತ್ತು ದ್ವೈತವು ಬೆಳೆದಂತೆ ಸಂಸಾರದ ಭಯವೂ ಅಧಿಕವಾಗಿ ಬೆಳೆಯುವುದು. ಇದನ್ನು ಸ್ವತಃ ದೇವನು ತನ್ನ ಸ್ವಮುಖದಿಂದ ಹೇಳುವನು. ವೇದವೂ ಇದನ್ನೇ ಹೇಳುವುದು ।೩೭೬॥

ಆದುದರಿಂದ ಬ್ರಹ್ಮನಲ್ಲಿರುವ ದ್ವೈತವು ಈ ''ಸತ್'' ಶಬ್ದದ ಜ್ಞಾನದಿಂದ ನಿರಸನವಾಗಲು ವೇದವು ''ಸತ್'' ಶಬ್ದದ ಯೋಜನೆ ಮಾಡಿದೆ ।೩೭೭॥

ಅದಕ್ಕಾಗಿ ಓಂಕಾರವನ್ನು ಹಾಗೂ ತತ್‌ಕಾರವನ್ನು ಉಚ್ಚರಿಸುವುದರಿಂದ ಕರ್ಮವು ಬ್ರಹ್ಮರೂಪವಾಗುವುದು. ಅದಕ್ಕೆ ಪ್ರಶಸ್ತ ಕರ್ಮವೆಂದು ಹೇಳುವರು ।೩೭೮॥

ಪ್ರಶಸ್ತ ಕರ್ಮದಲ್ಲಿ ''ಸತ್'' ಶಬ್ದದ ಉಪಯೋಗ ಮಾಡುವರು. ಅದು ಕೇಳುವಂತಹದ್ದಿದೆ, ಅದನ್ನು ಹೇಳುವೆನು ।೩೭೯॥

ಶ್ಲೋಕಾರ್ಥ :- ''ಸತ್'' ಎಂಬ ಪದವು ''ಸತ್ತಾ'' ಎಂದರೆ ಇರುವಿಕೆಯ ವಾಚಕವಾಗಿಯೂ ''ಸಾಧು'' ಅಂದರೆ ಒಳ್ಳೆಯದರ ವಾಚಕವಾಗಿಯೂ ಉಪಯೋಗಿಸಲ್ಪಡುತ್ತದೆ. ಅರ್ಜುನಾ! ಉತ್ತಮ ಕರ್ಮಗಳಿಗೂ, ಪರ್ಯಾಯವಾಗಿಯೂ ಈ ''ಸತ್'' ಶಬ್ದವು ಉಪಯೋಗಿಸಲ್ಪಡುತ್ತದೆ ।೨೬॥

ತರೀ ಸಚ್ಛಬ್ದೇ ಯೇಣೇ । ಆಟೂನಿ ಅಸತಾಚೇ ನಾಣೇ । ದಾವಿಜೇ ಅವ್ಯಂಗ ವಾಣೇ । ಸತ್ತೇಚೇ ರೂಪ ।೩೮೦॥ ಜೇ ಸತ್ ತೇಂಚಿ ಕಾಳೇ ದೇಶೇ । ಹೋಊ ನೇಣೇಚಿ ಅನಾರಿಸೇ । ಆಪಣಪಾ ಆಪಣ ಅಸೇ । ಅಖಂಡಿತ ।೩೮೧॥ ಹೇ ದಿಸತೇ ಜೇತುಲೇ ಆಹೇ । ತೇ ಅಸತಪಣೇ ಜೇ ನೋಹೇ । ದೇಖತಾ ರೂಪೀ ಸೋಯೇ । ಲಾಭೇ ಜಯಾಚೇ ।೩೮೨॥ ತೇಣೇಂಚೇ ಪ್ರಶಸ್ತ ತೇ ಕರ್ಮ । ಜೇ ಜಾಲೇ ಸರ್ವಾತ್ಮಕ ಬ್ರಹ್ಮ । ದೇಖಿಜೇ ಕರೂನಿ ಸಮ । ಐಕ್ಯಬೋಧೇ ।೩೮೩॥ ತರೀ ಓಂಕಾರ ತತ್ಕಾರೇ । ಜೇ ಕರ್ಮ ದಾವಿಲೇ ಬ್ರಹ್ಮಾಕಾರೇ । ತೇ ಗಿಳೂನಿ ಹೋಇಜೆ ಏಕಸರೇ । ಸನ್ಮಾತ್ರಚಿ ।೩೮೪॥ ಐಸಾ ಹಾ ಅಂತರಂಗು । ಸಚ್ಛಬ್ದಾಚಾ ವಿನಿಯೋಗು । ಜಾಣಾ ಮ್ಹಣೇ ಶ್ರೀರಂಗು । ಮೀ ನಾ ಮ್ಹಣೇ ಹೋ ! ।೩೮೫॥ ನಾ ಮೀಚಿ ಜರೀ ಹೋ ಮ್ಹಣೇ । ತರೀ ಶ್ರೀರಂಗೀ ದುಜೇ ಹೇಂಚಿ ಉಣೇ । ಮ್ಹಣೌನಿ ಹೇ ಬೋಲಣೇ । ದೇವಾಚೇಂಚೀ ।೩೮೬॥ ಆತಾ ಆಣಿಕೀಹೀ ಪರೀ । ಸಚ್ಛಬ್ದು ಹಾ ಅವಧಾರೀ । ಸಾತ್ತ್ವಿಕ ಕರ್ಮಾ ಕರೀ । ಉಪಕಾರು ಜೋ ।೩೮೭॥ ತರೀ ಸತ್ಕರ್ಮೇ ಚಾಂಗೇ । ಚಾಲಿಲೀ ಅಧಿಕಾರಬಗೇ । ಪರೀ ಏಕಾಧೇ ಕಾ ಆಂಗೇ । ಹಿಣಾವತೀ ಜೈ ।೩೮೮॥ ತೈ ಉಣೇ ಏಕೇ ಅವಯವೇ । ಶರೀರ ಠಾಕೇ ಆಘವೇ । ಕಾ ಅಂಗಹೀನ ಭಾಂಡಾವೇ । ರಥಾಚೀ ಗತೀ ।೩೮೯॥ ತೈಸೇ ಏಕೇಚಿ ಗುಣೇಂವೀಣ । ಸತಚಿ ಪರೀ ಅಸತಪಣ । ಕರ್ಮ ಧರೀ ಗಾ ಜಾಣ । ಜಿಯೇ ವೇಳೇ ।೩೯೦॥ ತೇವ್ಹಾ ಓಂಕಾರ ತತ್ಕಾರೀ । ಸಾವಾಯಿಲಾ ಹಾ ಚಾಂಗೀ ಪರೀ । ಸಚ್ಛಬ್ದು ಕರ್ಮಾ ಕರೀ । ಜೀರ್ಣೋದ್ಧಾರು ।೩೯೧॥ ತೇ ಅಸಂತಪಣ ಫೇಡೀ । ಆಣಿ ಸದ್ಭಾವಾಚಿಯೇ ರೂಢೀ । ನಿಜಸತ್ತ್ವಾಚಿಯೆ ಪ್ರೌಢೀ । ಸಚ್ಛಬ್ದು ಹಾ ।೩೯೨॥ ದಿವ್ಯೌಷದ ಜೈಸೇ ರೋಗಿಯಾ । ಕಾ ಸಾವಾವೋ ಯೇ ಭಂಗಲಿಯಾ । ಸಚ್ಛಬ್ದು ಕರ್ಮಾ ವ್ಯಂಗಲಿಯಾ । ತೈಸಾ ಜಾಣ ।೩೯೩॥ ಅಥವಾ ಕಾಂಹೀ ಪ್ರಮಾದೇ । ಕರ್ಮ ಆಪುಲಿಯೇ ಮರ್ಯಾದೇ । ಚುಕೋನಿ ಪಡೇ ನಿಷಿದ್ಧೇ । ವಾಟೇ ಹನ ।೩೯೪॥ ಚಾಲತಯಾಚಿ ಮಾರ್ಗು ಸಾಂಡೇ । ಪಾರಖಿಯಾಚೇ ಅಖರೇ ಪಡೇ । ರಾಹಾಟೇ ಮಾಜೇ ನ ಘಡೇ । ಕಾಇ ಕಾಇ? ।೩೯೫॥ ಮ್ಹಣೌನಿ ತೈಸಿ ಕರ್ಮಾ । ರಾಭಸ್ಯೇ ಸಾಂಡೇ ಸೀಮಾ । ಅಸಾಧುತ್ವಾಚಿಯಾ ದುರ್ನಾಮಾ । ಯೇವೋ ಪಾಹೇ ಜೇ ।೩೯೬॥

ಹಾಗಾದರೆ, ಈ ''ಸತ್''ಶಬ್ದದಿಂದ ಅಸತ್‌ರೂಪ ಮಿಥ್ಯಾನಾಣ್ಯಗಳನ್ನು ಕರಗಿಸಿ ''ಸತ್''ದ ಅವ್ಯಂಗರಹಿತ ಸ್ವರೂಪವು ದೃಷ್ಟಿಗೆ ಗೋಚರಿಸುವುದು ।೩೮೦॥

ಈ ''ಸತ್''ಗೆ ದೇಶದಿಂದ ಅಥವಾ ಕಾಲದಿಂದ ಭಿನ್ನ ರೂಪವು ಪ್ರಾಪ್ತವಾಗುವುದಿಲ್ಲ. ಅದು ತನ್ನಲ್ಲಿ ತಾನಿದ್ದಂತೆಯೇ ಅಖಂಡವಾಗಿ ಇರುವುದು ।೩೮೧॥

ಈ ಯಾವ ದೃಶ್ಯಮಯ ಜಗವು ''ಅಸತ್'' ಇರುವುದು. ಸತ್ತೆಯ ರೂಪವಿಲ್ಲ. ಯಾವ ಸತ್ತೆಯ ರೂಪವು ದೃಷ್ಟಿಗೆ ಬೀಳಲು ಆತ್ಮಸ್ವರೂಪದ ಪ್ರಾಪ್ತಿಯಾಗುವುದು ।೩೮೨॥

ಈ ''ಸತ್'' ಶಬ್ದದ ಯೋಗದಿಂದ ಸರ್ವಾತ್ಮಕವಾಗಿ ಬ್ರಹ್ಮರೂಪವಾಗಿರುವ ಯಾವ ಪ್ರಶಸ್ತ ಕರ್ಮವನ್ನು ಮಾಡಿ ಐಕ್ಯಜ್ಞಾನದಿಂದ ಅದನ್ನು ಸಮವಾಗಿ ಕಾಣಬೇಕು ।೩೮೩॥

ತದನಂತರ ಓಂಕಾರ ಮತ್ತು ತತ್‌ಕಾರ ಈ ಎರಡು ಶಬ್ದದಿಂದ ಕರ್ಮವು ಬ್ರಹ್ಮರೂಪವಾಗುವುದೆಂದು ಮೊದಲೇ ತಿಳಿಸಿದೆ. ಕರ್ಮವು ಬ್ರಹ್ಮರೂಪವಾದಾಗಲೂ ಸಂಸ್ಕಾರವು ಉಳಿಯಬಾರದೆಂದು ''ಸತ್'' ಶಬ್ದದ ವಿನಿಯೋಗವಾಗಿರುವುದು ।೩೮೪॥

ಈ ಪ್ರಕಾರವಾಗಿ ಈ ''ಸತ್'' ಶಬ್ದದ ಅಂತರ್ಗತ ವ್ಯವಸ್ಥೆಯನ್ನು ತಿಳಿದುಕೊಳ್ಳಿರಿ, ಎಂದು ಶ್ರೀರಂಗನು ಹೇಳಿದನು (ಶ್ರೀಜ್ಞಾನೇಶ್ವರರು ಹೇಳುವರು) ಅಹೋ! ಇದನ್ನು ನಾನು ಹೇಳುವುದಿಲ್ಲ ।೩೮೫॥

ಅಥವಾ ನಾನೇ ಹೇಳುವೆನು. ದೇವನು ಹೇಳುವುದಿಲ್ಲವೆಂದು ಹೇಳಿದರೆ, ಶ್ರೀರಂಗನಲ್ಲಿ ದ್ವೈತದ ಭಾವವು ಉತ್ಪನ್ನವಾಗಿ ನ್ಯೂನ್ಯತೆ ಬರುವುದು. ಆದ್ದರಿಂದ ನಾನೇನು ಹೇಳುವೆನೋ, ಅದೆಲ್ಲವೂ ದೇವನದೇ ಇರುವುದು ।೩೮೬॥

ಈಗ ''ಸತ್'' ಶಬ್ದವು ಬೇರೆ ಒಂದು ಪ್ರಕಾರದಿಂದ ಸಾತ್ತ್ವಿಕ ಕರ್ಮದ ಮೇಲೆ ಉಪಕಾರ ಮಾಡುವುದು. ಅದನ್ನು ಕೇಳು ।೩೮೭॥

ಹಾಗಾದರೆ, ಸತ್ಕರ್ಮಗಳು ಯಥಾವಿಧಿಯಾಗಿ ಉತ್ತಮ ರೀತಿಯಲ್ಲಿ ನಡೆಯುತ್ತಿರುವಾಗ ಅವುಗಳಲ್ಲಿ ಒಂದು ದೃಷ್ಟಿಯಿಂದ ನ್ಯೂನತೆ ಬಂದಾಗ ।೩೮೮॥

ಶರೀರದ ಒಂದು ಅವಯವವು ಕಡಿಮೆಯಾದಲ್ಲಿ ಶರೀರದ ವ್ಯವಹಾರವು ಕುಂಠಿತವಾಗುವುದು. ಅಥವಾ ರಥದ ಒಂದು ಭಾಗವು ಕಡಿಮೆಯಾದಲ್ಲಿ ರಥದ ಗತಿಯು ಕುಂಠಿತವಾಗುವುದು ।೩೮೯॥

ಅದರಂತೆ ಕರ್ಮವು ಸತ್ (ಉತ್ತಮ) ನಿಜ, ಆದರೆ ಯಾವ ವೇಳೆಯಲ್ಲಿ ಒಂದೇ ಗುಣದ ಅಭಾವದಿಂದಲೂ ಅದು ಅಸತ್‌ವಾಗುವುದು ।೩೯೦॥

ಅಂದಮೇಲೆ ಓಂಕಾರ ಹಾಗೂ ತತ್‌ಕಾರ ಇವುಗಳ ಸಹಾಯದಿಂದ ''ಸತ್'' ಶಬ್ದವು ಆ ಅವ್ಯಂಗ ಕರ್ಮದ ರೀತಿಯಲ್ಲಿ ಜೀರ್ಣೋದ್ಧಾರ ಮಾಡುವುದು ।೩೯೧॥

ಮತ್ತು ತನ್ನ ತೇಜದ ಬಲದಿಂದ ಕರ್ಮದ ಅವ್ಯಂಗವನ್ನು ಇಲ್ಲದಂತೆ ಮಾಡಿ ಅದಕ್ಕೆ ಸದ್ಭಾವದ ಯೋಗ್ಯತೆಗೆ ತರುವುದು ।೩೯೨॥

ದಿವ್ಯ ಔಷಧವು ರೋಗಿಯನ್ನು ಗುಣಪಡಿಸುವಂತೆ ಅಥವಾ ಸೋತವನಿಗೆ ಒಬ್ಬನ ಸಹಾಯ ದೊರಕಿದರೆ, ಆತನಿಗೆ ಶಕ್ತಿ ಬೆಳೆಯುವಂತೆ ''ಸತ್'' ಈ ಶಬ್ದವು ವ್ಯಂಗಕರ್ಮಗಳ ನ್ಯೂನತೆ ಇಲ್ಲದಾಗಿ ಮಾಡುವುದು ಹೀಗೆ ತಿಳಿ ।೩೯೩॥

ಅಥವಾ ಕೆಲವು ಪ್ರಮಾದಗಳಿಂದ ಕರ್ಮವು ತನ್ನ ಮರ್ಯಾದೆಯನ್ನು ಬಿಟ್ಟು ನಿಷಿದ್ಧ ಮಾರ್ಗದಿಂದ ಹೋದರೆ ।೩೯೪॥

ನಡೆಯುವವನೇ ಮಾರ್ಗವನ್ನು ತಪ್ಪುವನು. ಪರೀಕ್ಷಕನೇ ಭ್ರಮಿಸುವನು, ಅಂದಮೇಲೆ ವ್ಯವಹಾರದಲ್ಲಿ ಏನೇನು ಆಗುವುದಿಲ್ಲ? ।೩೯೫॥

ಆದ್ದರಿಂದ ಅಂಥ ಕರ್ಮದ ವಿಚಾರದಿಂದ ಮರ್ಯಾದೆಯನ್ನು ಬಿಟ್ಟು ಅದಕ್ಕೆ ನಿಷಿದ್ಧ ಕರ್ಮದ ಕೆಟ್ಟ ಹೆಸರು ಪ್ರಾಪ್ತವಾದಲ್ಲಿ ।೩೯೬॥

ತೇಥ ಗಾ ಹಾ ಸಚ್ಛಬ್ದು । ಯೇರಾ ದೋಹೀಪರೀಸ ಪ್ರಬುದ್ಧು । ಪ್ರಯೋಜಿಲಾ ಕರೀ ಸಾಧು । ಕರ್ಮಾತೇ ಯಯಾ ॥೩೯೭॥ ಲೋಹಾ ಪರಿಸಾಚೀ ಘೃಷ್ಟೀ । ವೋಹಳಾ ಗಂಗೇಚೀ ಭೇಟೀ । ಕಾ ಮೃತಾ ಜೈಸೀ ವೃಷ್ಟೀ । ಪೀಯೂಷಾಚೀ ॥೩೯೮॥ ಪೈ ಅಸಾಧು ಕರ್ಮಾ ತೈಸಾ । ಸಚ್ಛಬ್ದು ಪ್ರಯೋಗು ವೀರೇಶಾ । ಹೇ ಅಸೋ ಗೌರವುಚಿ ಐಸಾ । ನಾಮಾಚಾ ಯಯಾ ॥೩೯೯॥ ಫೇಲೂನಿ ಯೇಥೀಂಚೇ ವರ್ಮ । ಜೈ ವಿಚಾರಿಸೀ ಹೇ ನಾಮ । ತೈ ಕೇವಳ ಹೇಂಚಿ ಬ್ರಹ್ಮ । ಜಾಣಸೀ ತೂ ॥೪೦೦॥ ಪಾಹೇ ಪಾ ಓಂತತ್ಸತ್ ಐಸೇ । ಹೇ ಬೋಲಣೇ ತೇಥ ನೇತಸೇ । ಜೇಥೂನಿ ಕಾ ಹೇ ಪ್ರಕಾಶೇ । ದೃಶ್ಯಜಾತ ॥೪೦೧॥ ತೇ ತಂವ ನಿರ್ವಿಶಿಷ್ಟ । ಪರಬ್ರಹ್ಮ ಚೋಖಟ । ತಯಾಚೇ ಹೇ ಅಂತುವಟ । ವ್ಯಂಜಕ ನಾಮ ॥೪೦೨॥ ಪರೀ ಆಶ್ರಯೋ ಆಕಾಶಾ । ಆಕಾಶಚಿ ಕಾ ಜೈಸಾ । ಯಾ ನಾಮಾ ನಾಮೀ ಆಶ್ರಯೋ ತೈಸಾ । ಅಭೇದು ಅಸೇ ॥೪೦೩॥ ಉದಯಿಲಾ ಆಕಾಶೀ । ರವೀಚಿ ರವೀತೇ ಪ್ರಕಾಶೀ । ಹೇ ನಾಮವ್ಯಕ್ತೀ ತೈಸೀ । ಬ್ರಹ್ಮಚಿ ಕರೀ ॥೪೦೪॥ ಮ್ಹಣೌನಿ ತ್ರ್ಯಕ್ಷರ ಹೇ ನಾಮ । ನವ್ಹೇ ಜಾಣ ಕೇವಳ ಬ್ರಹ್ಮ । ಯಾಲಾಗೀ ಕರ್ಮ । ಜೇ ಜೇ ಕೀಜೇ ॥೪೦೫॥

ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ ।
ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥೨೭॥

ತೇಯಾಗ ಅಥವಾ ದಾನೇ । ತಪಾದಿಕೇಂಹೀ ಗಹನೇ । ತಿಯೇ ನಿಫಜತು ಕಾ ನ್ಯೂನೇ । ಹೋಊನಿ ಠಾತು ॥೪೦೬॥ ಪರೀ ಪರೀಸಾಚಾ ವರಕಲೀ । ನಾಹೀ ಚೋಖಾಕಿಡಾಚೀ ಬೋಲೀ । ತೈಸೀ ಬ್ರಹ್ಮೀ ಅರ್ಪಿತಾ ಕೇಲೀ । ಬ್ರಹ್ಮಚಿ ಹೋತೀ ॥೪೦೭॥ ಉಣೆಯಾ ಪುರಿಯಾಚೀ ಪರೀ । ನುರೇಚಿ ತೇಥ ಅವಧಾರೀ । ನಿವಡೂ ನ ಯೇತೀ ಸಾಗರೀ । ಜೈಸಿಯಾ ನದೀ ॥೪೦೮॥ ಏವಂ ಪಾರ್ಥಾ ತುಜಪ್ರತೀ । ಬ್ರಹ್ಮನಾಮಾಚೀ ಹೇ ಶಕ್ತೀ । ಸಾಂಗಿತಲೀ ಉಪಪತ್ತೀ । ಡೋಳಸಾ ಗಾ ॥೪೦೯॥ ಆಣಿ ಯೇಕೇ ಕಾಹೀ ಅಕ್ಷರಾ । ವೇಗಳವೇಗಳಾ ವೀರಾ । ವಿನಿಯೋಗು ನಾಗರಾ । ಬೋಲಿಲೋ ರೀತೀ ॥೪೧೦॥ ಏವಂ ಐಸೇ ಸುಮಹಿಮ । ಮ್ಹಣೌನಿ ಹೇ ಬ್ರಹ್ಮ ನಾಮ । ಆತಾ ಜಾಣಿತಲೇ ಕೀ ಸುವರ್ಮ । ರಾಯಾ ತುವಾ? ॥೪೧೧॥

ಆಗ ಬುದ್ಧಿವಂತನು ಓಂ ಹಾಗೂ ತತ್ ಈ ಎರಡಕ್ಕಿಂತಲೂ ಯಾವ ಈ "ಸತ್" ಶಬ್ದದ ಯೋಜನೆಯನ್ನು ಮಾಡಿಕೆಟ್ಟ ಕರ್ಮದ ಒಳ್ಳೆಯ ಕರ್ಮವನ್ನಾಗಿ ಮಾಡುವನು ।೯೭।।

ಕಬ್ಬಿಣಕ್ಕೆ ಪರಿಸದ ಘರ್ಷಣವಾದರೆ, ಹಳ್ಳಕ್ಕೆ ಗಂಗೆಯ ಭೇಟಿಯಾದರೆ, ಅಥವಾ ಸತ್ತ ಮನುಷ್ಯನಿಗೆ ಅಮೃತದ ಮಳೆಗರೆದರೆ ।೯೮।।

ಅದರಂತೆ ಹೇ ವೀರೇಶನೇ, ಸತ್ಕರ್ಮಕ್ಕೆ "ಸತ್" ಈ ಶಬ್ದದ ಪ್ರಯೋಗವಾಗಿರುವುದು. ಹೆಚ್ಚಿಗೇನು ಹೇಳಬೇಕು? "ಸತ್" ಈ ಶಬ್ದದ ಮಹಿಮೆಯೇ ಹೀಗಿರುವುದು ।೯೯।।

ಈ ರೀತಿಯಲ್ಲಿ ಸತ್ ಶಬ್ದದ ಮರ್ಮವನ್ನು ತಿಳಿದು ಈ ನಾಮದ ಉಚ್ಚಾರ ಮಾಡಿದಾಗ ಇದೇ ಕೇವಲ ಬ್ರಹ್ಮವಾಗಿದೆ ಎಂದು ನಿನಗೆ ತಿಳಿಯುವುದು ।೪೦೦।।

ಇಲ್ಲಿ ನೋಡು, "ಓಂತತ್ಸತ್" ಈ ಅಕ್ಷರಗಳು ಯಾವ ಪರಬ್ರಹ್ಮನಿಂದ ದೃಶ್ಯಪದಾರ್ಥಗಳು ಪ್ರಕಾಶಮಯವಾಗುವುವೋ, ಆ ಸ್ಥಳದಲ್ಲಿ ಮುಮುಕ್ಷುಗಳವರನ್ನು ಒಯ್ಯುವುವು ।೪೦೧।।

ಈ ಪರಬ್ರಹ್ಮವು ಸ್ವಚ್ಛವಾಗಿದ್ದು ಅಪರಿಭಿನ್ನವಾಗಿರುವುದು. ಅದರಂತೆ "ಓಂತತ್ಸತ್" ಇದು ಅದರ ಅಂತರ್ಗತ ದರ್ಶಕ ನಾಮವಾಗಿರುವುದು ।೪೦೨।।

ಆದಾಗ್ಯೂ, ಆಕಾಶಕ್ಕೆ ಆಕಾಶವೇ ಆಶ್ರಯವಾಗಿರುವುದು. ಅದರಂತೆ "ಓಂತತ್ಸತ್" ಈ ಅಕ್ಷರಗಳಿಗೆ ಬ್ರಹ್ಮವೇ ಆಶ್ರಯವಾಗಿದೆ ।೪೦೩।।

ಆಕಾಶದಲ್ಲಿ ಉದಯವಾದಾಗ ಸೂರ್ಯನೇ ಸೂರ್ಯನಿಗೆ ಪ್ರಕಾಶಿತಗೊಳಿಸುವನು. ಅದರಂತೆ ಈ ನಾಮದ ಉಚ್ಚಾರದಿಂದ ಬ್ರಹ್ಮದ ಪ್ರಾಪ್ತಿಯಾಗುವುದು ।೪೦೪।।

ಆದ್ದರಿಂದ ಈ ತ್ರ್ಯಕ್ಷರವು ಹೆಸರಾಗಿರದೆ ಕೇವಲ ಬ್ರಹ್ಮವಾಗಿದೆ. ಹೀಗೆ ತಿಳಿ ಮತ್ತು ಇದರ ಪ್ರೀತ್ಯರ್ಥವಾಗಿ ಯಾವ ಯಾವ ಕರ್ಮಗಳನ್ನು ನೀನು ಮಾಡುವಿಯೋ ।೪೦೫।।

**ಶ್ಲೋಕಾರ್ಥ :-** ಯಜ್ಞಕ್ಕೂ, ತಪಸ್ಸಿಗೂ, ದಾನಕ್ಕೂ ಸಂಬಂಧಿಸಿದ ನಿಷ್ಠೆಯನ್ನು ಸಹ "ಸತ್" ಎಂದು ಹೇಳುತ್ತಾರೆ. ಆ ನಿಮಿತ್ತವಾದ ಕರ್ಮಗಳಿಗೂ ಕೂಡಾ "ಸತ್" ಎಂದೇ ಹೇಳುತ್ತಾರೆ ।೨೭।।

ಮತ್ತು ಆ ಕರ್ಮಗಳಲ್ಲಿ ಆರಂಭದಲ್ಲಿಯೇ ಏನಾದರೂ ವ್ಯಂಗ ಉತ್ಪನ್ನವಾಗಲಿ, ಅಥವಾ ಆರಂಭವಾಗಿ ಅಪೂರ್ಣವಾದಲ್ಲಿ, ಯಜ್ಞ, ದಾನಗಳು ಅಥವಾ ಗಹನವಾದ ತಪಸ್ಸುಗಳಿರಲಿ ।೪೦೬।।

ಆದರೆ ಪರಿಸದ ಸ್ಪರ್ಶದಿಂದ ಆಗಿರುವ ಬಂಗಾರದ ಒರೆಯಲ್ಲಿ ಉತ್ತಮ ಹೀನವೆಂಬ ಮಾತೇ ಇರುವುದಿಲ್ಲ. ಅದರಂತೆ ಮಾಡಿರುವ ಕರ್ಮಗಳನ್ನು ಬ್ರಹ್ಮಾರ್ಪಣ ಮಾಡುವುದರಿಂದ ಬ್ರಹ್ಮರೂಪವೇ ಆಗುವುವು ।೪೦೭।।

ಯಾವ ಪ್ರಕಾರವಾಗಿ ಸಮುದ್ರದಲ್ಲಿ ನದಿಗಳನ್ನು ಆರಿಸಲು ಬಾರದಂತೆ ಈ ಕರ್ಮಗಳಲ್ಲಿ ಪೂರ್ಣಾ ಪೂರ್ಣ (ಉತ್ತಮ, ನಿಷಿದ್ಧ) ಈ ಭೇದವು ಉಳಿಯುವುದಿಲ್ಲ. ತಿಳಿಯಿತೇ? ।೪೦೮।।

ಈ ಪ್ರಕಾರವಾಗಿ ಜ್ಞಾನಿಯಾದ ಅರ್ಜುನನೇ, ಬ್ರಹ್ಮನಾಮದ ಶಕ್ತಿಯನ್ನು ನಿನಗೆ ದೃಷ್ಟಾಂತಪೂರ್ವಕವಾಗಿ ಸ್ಪಷ್ಟ ಮಾಡಿ ತಿಳಿಸಿದೆ ।೪೦೯।।

ಮತ್ತು ಹೇ ವೀರನೇ, ಬ್ರಹ್ಮನಾಮದ ಒಂದೊಂದೇ ಅಕ್ಷರಗಳ ಭಿನ್ನ ಭಿನ್ನ ವ್ಯವಸ್ಥೆಯನ್ನು, ನಿನಗೆ ಉತ್ತಮ ರೀತಿಯಲ್ಲಿ ಹೇಳಿದೆನು ।೪೧೦।।

ಈ ಪ್ರಕಾರವಾಗಿ ಅರ್ಜುನಾ, ಬ್ರಹ್ಮನಾಮದ ಈ ಶ್ರೇಷ್ಠತ್ವವು ಹೀಗಿರುವುದು. ಇದರ ಮರ್ಮವು ನಿನಗೆ ತಿಳಿಯಿತೇ? ।೪೧೧।

ತರೀ ಯೇಥೂನಿ ಯಾಚಿ ಶ್ರದ್ಧಾ । ಉಪಲವಿಲೀ ಹೋ ಸರ್ವದಾ । ಜಯಾಚೇ ಜಾಲೇ ಬಂಧಾ । ಉರೋ ನೇದೀ ।೪೧೨॥ ಜಿಯೇ ಕರ್ಮೀ ಹಾ ಪ್ರಯೋಗು । ಅನುಷ್ಠಿಜೇ ಸದ್ವಿನಿಯೋಗು । ತೇಥ ಅನುಷ್ಠಿಲಾ ಸಾಂಗು । ವೇದೂಚಿ ತೋ ।೪೧೩॥

ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।
ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ ।೨೮॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷುತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಶ್ರದ್ಧಾತ್ರಯವಿಭಾಗಯೋಗೋ ನಾಮ ಸಪ್ತದಶೋಽಧ್ಯಾಯಃ

ನಾ ಸಾಂಡೂನಿ ಹೇ ಸೋಯೇ । ಮೋಡೂನಿ ಶ್ರದ್ಧೇಚೇ ಬಾಹೇ । ದುರಾಗ್ರಹಾಚೇ ತ್ರಾಯೇ । ವಾಢಊನಿಯಾ ।೪೧೪॥ ಮಗ ಅಶ್ವಮೇಧ ಕೋಡೀ ಕೀಜೇ । ರತ್ನೇ ಭರೂನಿ ಪೃಥ್ವೀ ದೀಜೇ । ಏಕಾಂಗುಷ್ಠೀಂಹೀ ತಪಿಜೇ । ತಪಸಾಹಸ್ರೀ ।೪೧೫॥ ಜಳಾಶಯಾಚೇನಿ ನಾಂವೇ । ಸಮುದ್ರಹೀ ಕೀಜತೀ ನವೇ । ಪರೀ ಕಿಂಬಹುನಾ ಆಘವೇ । ವೃಥಾಚಿ ತೇ ।೪೧೬॥ ಖಡಕಾವರೀ ವರ್ಷಲೇ । ಜೈಸೇ ಭಸ್ಮೀ ಹವನ ಕೇಲೇ । ಕಾ ಖೇವ ದಿಧಲೇ । ಸಾಉಲಿಯೇ ।೪೧೭॥ ನಾತರೀ ಜೈಸೇ ಚಡಕಣಾ । ಗಗನಾ ಹಾಣಿತಲೇ ಅರ್ಜುನಾ । ತೈಸಾ ಸಮಾರಂಭು ಸುಣಾ । ಗೇಲಾಚಿ ತೋ ।೪೧೮॥ ಘಾಣಾ ಗಾಳಿಲೇ ಗುಂಡೇ । ತೇಥ ತೇಲ ನಾ ಪೇಂಡೀ ಜೋಡೇ । ತೈಸೇ ದರಿದ್ರ ತೇವಢೇ । ಠೇಲೇಂಚಿ ಆಂಗೀ ।೪೧೯॥ ಗಾಂಠೀ ಬಾಂಧಲೀ ಖಾಪರೀ । ಯೇಥೇ ಅಥವಾ ಪೈಲತೀರೀ । ನ ಸರೋನಿ ಜೈಸೀ ಮಾರೀ । ಉಪವಾಸೀ ಗಾ ।೪೨೦॥ ತೈಸೇ ಕರ್ಮಜಾತೇ ತೇಣೇ । ನಾಹೀ ಐಹಿಕೀಂಚೇ ಭೋಗಣೇ । ತೇಥ ಪರತ್ರ ತೇ ಕವಣೇ । ಅಪೇಕ್ಷಾವೇ ।೪೨೧॥ ಮ್ಹಣೌನಿ ಬ್ರಹ್ಮ ನಾಮಶ್ರದ್ಧಾ । ಸಾಂಡೂನಿ ಕೀಜೇ ಜೋ ಧಾಂದಾ । ಹೇ ಅಸೋ ಸಿಣು ನುಸಧಾ । ದೃಷ್ಟಾದೃಷ್ಟೀ ತೋ ।೪೨೨॥ ಐಸೇ ಕಲುಷಕರೀಕೇಸರೀ । ತ್ರಿತಾಪತಿಮಿರತಮಾರೀ । ಶ್ರೀವರ ವೀರ ನರಹರೀ । ಬೋಲಿಲೇ ತೇಣೇ ।೪೨೩॥ ತೇಥ ನಿಜಾನಂದಾ ಬಹುವಸಾ । ಮಾಜೀ ಅರ್ಜುನ ತೋ ಸಹಸಾ । ಹರಪಲಾ ಚಂದ್ರು ಜೈಸಾ । ಚಾಂದಿಣೇನಿ ।೪೨೪॥ ಅಹೋ ಸಂಗ್ರಾಮು ಹಾ ವಾಣಿಯಾ । ಮಾಪೇ ನಾರಾಚಾಂಚಿಯಾ ಆಣಿಯಾ । ಸೂನಿ ಮಾಪ ಘೇ ಮವಣಿಯಾ । ಜೀವಿತೇಂಸೀ ।೪೨೫॥

ಹಾಗಾದರೆ ಇನ್ನು ಮುಂದೆ ಯಾವಾಗಲೂ ಇದೇ ನಾಮದ ಮೇಲೆ ಶ್ರದ್ಧೆಯನ್ನಿಟ್ಟಲ್ಲಿ, ನೀನು ಜನ್ಮ ಮರಣ ದಿಂದ ಮುಕ್ತನಾಗುವಿ ॥೫೧೨॥

ಯಾವುದೇ ಕರ್ಮವನ್ನು ಮಾಡುವಾಗ್ಗೆ (ಓಂತತ್ಸತ್) ಈ ಶಬ್ದದ ಉತ್ತಮ ರೀತಿಯಲ್ಲಿ ಉಪಯೋಗ ಮಾಡಿದಲ್ಲಿ ಆ ಕರ್ಮವು ಪೂರ್ಣಗೊಂಡು ವೇದರೂಪವೇ ಆಗುವುದು ॥೫೧೩॥

ಶ್ಲೋಕಾರ್ಥ :- ಅರ್ಜುನಾ, ಶ್ರದ್ಧೆಯಿಲ್ಲದೆ ಮಾಡಿದ ಹೋಮವೂ, ದಾನವೂ, ತಪಸ್ಸೂ ಮತ್ತು ಮಾಡಿದ್ದೆಲ್ಲವೂ ''ಅಸತ್'' ಎನಿಸುವುವು. ಅಂಥ ಕರ್ಮವು ಪರದಲ್ಲಿಯೂ ಫಲವನ್ನು ಕೊಡುವುದಿಲ್ಲ ॥೨೮॥

ಇಲ್ಲಿಗೆ ಉಪನಿಷತ್ತೂ, ಬ್ರಹ್ಮವಿದ್ಯೆಯೂ, ಯೋಗ ಶಾಸ್ತ್ರವೂ ಶ್ರೀಕೃಷ್ಣಾರ್ಜುನ ಸಂವಾದವೂ ಆದ ಶ್ರೀಮದ್ಭ ಗವದ್ಗೀತೆಯಲ್ಲಿ ಶ್ರದ್ಧಾತ್ರಯ ವಿಭಾಗ ಯೋಗವೆಂಬ ಹೆಸರಿನ ಹದಿನೇಳನೆಯ ಅಧ್ಯಾಯವು ಮುಗಿದುದು.

ಅಥವಾ ಈ ಮಾರ್ಗವನ್ನು ಬಿಟ್ಟು, ಶ್ರದ್ಧೆಯನ್ನು ಇಲ್ಲ ದಂತೆ ಮಾಡಿ ಹಾಗೂ ದುರಾಗ್ರಹದಿಂದ ಬಲವನ್ನು ಬೆಳೆಯಿಸಿ ॥೫೧೪॥

ಆಗ ಕೋಟಿಗಟ್ಟಲೇ ಅಶ್ವಮೇಧ ಯಜ್ಞಗಳನ್ನು ಮಾಡಿದರೂ, ಎಲ್ಲ ಪೃಥ್ವಿಯನ್ನು ರತ್ನಗಳಿಂದ ತುಂಬಿದಾನ ಮಾಡಿದರೂ, ಒಂದೇ ಹೆಬ್ಬಟ್ಟಿನ ಮೇಲೆ ನಿಂತು ಸಾವಿರಾರು ವರ್ಷ ತಪಶ್ಚರ್ಯ ಮಾಡಿದರೂ ॥೫೧೫॥

ಮತ್ತು ಜಲಾಶಯಗಳಂತೆ ಸಿಹಿ ನೀರಿನ ಸಮುದ್ರವನ್ನು ಕಟ್ಟಿದರೂ ಇವೆಲ್ಲವೂ ವ್ಯರ್ಥವಾದವುಗಳು ॥೫೧೬॥

ಕಲ್ಲಿನ ಮೇಲೆ ಮಳೆಗರೆದರೆ, ಅಥವಾ ಭಸ್ಮದಲ್ಲಿ ಆಹು ತಿಯನ್ನು ಕೊಟ್ಟರೆ, ಇಲ್ಲವೆ ನೆರಳಿಗೆ ಆಲಂಗಿಸಿದರೆ ॥೫೧೭॥

ಅಥವಾ ಅರ್ಜುನಾ, ಆಕಾಶಕ್ಕೆ ಚಪ್ಪರಿಸಿ ಹೊಡೆದರೆ, ಇವೆಲ್ಲವೂ ಹೇಗೋ, ಅದರಂತೆ ಈ ಎಲ್ಲ ಸಮಾರಂಭಗಳು ವ್ಯರ್ಥವಾಗಿ ಹೋಗುವುವು ॥೫೧೮॥

ಗಾಣದಲ್ಲಿನ ಕಲ್ಲಿನ ಹರಳುಗಳನ್ನು ಹಾಕಿ ಗಾಣಮಾ ಡಿಸಿದರೆ ಅವುಗಳಿಂದ ಎಣ್ಣೆಯೂ ಬರುವುದಿಲ್ಲ ಅಥವಾ ಹಿಂಡಿಯೂ ಬರುವುದಿಲ್ಲ. ಅದರಂತೆ ಇವುಗಳಿಂದ ದರಿದ್ರವೇ ಪ್ರಾಪ್ತವಾಗುವುದು ॥೫೧೯॥

ಪದರಿನಲ್ಲಿ ಬೋಕಿ ಬಿಲ್ಲೆಗಳನ್ನು ಕಟ್ಟಿಕೊಂಡು ಈ ದೇಶದಲ್ಲಾಗಲೀ ಪರದೇಶದಲ್ಲಾಗಲೀ ಎಲ್ಲಿ ಹೋದರೂ ದ್ರವ್ಯದಂತೆ ನಡೆಯದೇ ಉಪವಾಸವೇ ಸಾಯಬೇಕಾ ಗುವುದು ॥೫೨೦॥

ಅದರಂತೆ ಈ ಎಲ್ಲ ಕರ್ಮಗಳ ಆಚರಣೆಯಿಂದ ಇಹ ಲೋಕದ ಸುಖವು ಸಿಗದಾಗ ಪರಲೋಕ ಸುಖದ ಇಚ್ಛೆ ಯನ್ನು ಏಕೆ ಮಾಡಬೇಕು? ॥೫೨೧॥

ಆದ್ದರಿಂದ ಬ್ರಹ್ಮನಲ್ಲಿ ಶ್ರದ್ಧೆಯನ್ನಿಡದೇ (ಬ್ರಹ್ಮಾ ರ್ಪಣವನ್ನು ಮಾಡದೇ) ಮಾಡುವ ಕರ್ಮಗಳಲ್ಲಿ ಯಾವ ಅರ್ಥವೂ ಇರುವುದಿಲ್ಲ. ಅವು ಇಹಲೋಕದಲ್ಲಿ ಕೇವಲ ಶ್ರಮಗಳಾಗಿವೆ ॥೫೨೨॥

ಹೀಗೆ ಪಾತಕರೂಪ ಆನೆಯನ್ನು ನಾಶ ಮಾಡುವ ಸಿಂಹ ನಾಗಿರುವ, ತ್ರಿತಾಪರೂಪ ಅಂಧಕಾರದ ನಾಶ ಮಾಡುವ ಸೂರ್ಯನಾಗಿರುವ ಲಕ್ಷ್ಮೀಪತಿ ಹಾಗೂ ವೀರರಲ್ಲಿ ಶ್ರೇಷ್ಠ ನಾದ ಶ್ರೀಕೃಷ್ಣನು ಹೇಳಿದನು ॥೫೨೩॥

ಪೌರ್ಣಿಮೆಯ ಬೆಳದಿಂಗಳದಲ್ಲಿ ಚಂದ್ರನು ಮುಳುಗು ವಂತೆ, ಅರ್ಜುನನು ಆತ್ಮಾನಂದದಲ್ಲಿ ಮುಳುಗಿ ದೇಹಭಾವ ವಿಲ್ಲದವನಾದನು ॥೫೨೪॥

ಅಹೋ, ಸಂಗ್ರಾಮವು ಇದೊಂದು ವ್ಯವಹಾರದ ಅಂಗಡಿಯಾಗಿರುವುದು. ಅಲ್ಲಿ ಹದವಾದ ಬಾಣಗಳ ತುದಿ ಯಿಂದ ಪ್ರಾಣಾಂತ್ಯದವರೆಗೆ ಆಳತೆಯನ್ನು ತೆಗೆದುಕೊಳ್ಳಲ್ಪ ಡುವುದು ॥೫೨೫॥

ಐಸಿಯಾ ಸಮಯೀ ಕರ್ಕಶೇ । ಭೋಗೀಜತ ಸ್ವಾನಂದರಾಜ್ಯ ಕೈಸೇ । ಆಜೀ ಭಾಗ್ಯೋದಯೋ ಹಾ ನಸೇ । ಆನೀ ಠಾಈ! ।೪೨೬॥ ಸಂಜಯೋ ಮ್ಹಣೇ ಕೌರವರಾಯಾ । ಗುಣಾ ರಿರ್ಘೋ ಯೇ ರಿಪೂಚಿಯಾ । ಆಣಿ ಗುರುಹೀ ಹಾ ಆಮುಚಿಯಾ । ಸುಖಾಚಾ ಯೇಥ ।೪೨೭॥ ಹಾ ನ ಪುಸತಾ ಹೇ ಗೋಠೀ । ತರೀ ದೇವೋ ಕಾ ಸೋಡಿತೇ ಗಾಂಠೀ । ತರೀ ಕೈಸೇನಿ ಆಮ್ಹಾ ಭೇಟೀ । ಪರಮಾರ್ಥೇಸೀ ! ।೪೨೮॥ ಹೋತೋ ಅಜ್ಞಾನಾಚ್ಯಾ ಆಂಧಾರಾ । ವೋಸಂತೀತ ಜನ್ಮವಾಹರಾ । ತೋ ಆತ್ಮಪ್ರಕಾಶಮಂದಿರಾ । ಆಂತು ಆಣಿಲೇ।೪೨೯॥ ಯೇವಢಾ ಆಮ್ಹಾ ತುಮ್ಹಾ ಥೋರು । ಕೇಲಾ ಯೇಣೇ ಉಪಕಾರು । ಮ್ಹಣೌನಿ ಹಾ ವ್ಯಾಸಸಹೋದರು । ಗುರುತ್ವೇ ಹೋಯ ।೪೩೦॥ ತೇವೀಂಚಿ ಸಂಜಯೋ ಮ್ಹಣೇ ಚಿತ್ತೀ । ಹಾ ಅತಿಶಯೋ ಯಾ ನೃಪತೀ । ಖಿಪೇಲ ಮ್ಹಣೌನಿ ಕಿತೀ । ಬೋಲತ ಅಸೋ ।೪೩೧॥ ಐಸೀ ಹೇ ಬೋಲೀ ಸಾಂಡಿಲೀ । ಮಗ ಯೇರೀಚಿ ಗೋಠೀ ಆದರಿಲೀ । ಜೇ ಪಾರ್ಥೇ ಕಾ ಪುಸಿಲೀ । ಶ್ರೀಕೃಷ್ಣಾತೇ ।೪೩೨॥ ಯಾಚೇ ಜೈಸೇ ಕಾ ಕರಣೇ । ತೈಸೇ ಮೀಹೀ ಕರೀನ ಬೋಲಣೇ । ಐಕಿಜೋ ಜ್ಞಾನದೇವೋ ಮ್ಹಣೇ । ನಿವೃತ್ತೀಚಾ ।೪೩೩॥

---

ಇತಿ ಶ್ರೀ ಜ್ಞಾನದೇವ ವಿರಚಿತಾಯಾಂ ಭಾವಾರ್ಥದೀಪಿಕಾಯಾಂ ಸಪ್ತದಶೋಽಧ್ಯಾಯಃ ।೧೭॥
ಶ್ಲೋಕ :೨೮ ವೋವಿ :೪೩೩

ಇಂಥ ಕಠೋರ ಪ್ರಸಂಗದ ಆತ್ಮಾನಂದದ ಭರದಲ್ಲಿ ಅರ್ಜುನನು ಹೇಗೆ ನಿಮಗ್ನನಾಗಿರುವನು! ಇಂದು ಈತನಂತೆ ಬೇರೆ ಯಾರಿಗೂ ಇಂಥ ಭಾಗ್ಯ ಒದಗಿರುವುದು ಕಾಣುವುದಿಲ್ಲ ।೫೨೬॥

ಸಂಜಯನು ಹೇಳುವನು:- ಹೇ ಕೌರವೇಶ್ವರಾ, ಧೃತರಾಷ್ಟ್ರಾ, ಶತ್ರುವಿನ (ಅರ್ಜುನನ) ಗುಣ ನೋಡಿ ಪ್ರೀತಿಯು ಹುಟ್ಟುವುದು ಮತ್ತು ನಮ್ಮ ಸುಖ ಪ್ರಾಪ್ತಿಗೆ ಈತನೇ ಇಲ್ಲಿ ಗುರುವಾಗಿದ್ದಾನೆ ।೫೨೭॥

ಒಂದುವೇಳೆ ಈತನು ಈ ಮಾತನ್ನು ಕೇಳದಿದ್ದರೆ, ದೇವನು ತನ್ನ ಹೃದ್ಗತವನ್ನು ಏಕೆ ಹೇಳುತ್ತಿದ್ದನು? ಹಾಗೂ ನಮಗೆ ಪರಮಾರ್ಥದ ದರ್ಶನವಾದರೂ ಹೇಗಾಗುತ್ತಿತ್ತು? ।೫೨೮॥

ಅಜ್ಞಾನರೂಪ ಅಂಧಕಾರದಲ್ಲಿ ಜನ್ಮ ಮರಣದ ಚಕ್ರದಲ್ಲಿ ಸಿಲುಕಿಕೊಂಡಿದ್ದೆನು. ಆತನು ಆತ್ಮ ಪ್ರಕಾಶರೂಪ ಮಂದಿರದಲ್ಲಿ ನನಗೆ ತಂದು ಬಿಟ್ಟನು ।೫೨೯॥

ಇಷ್ಟೊಂದು ನನ್ನ ಮೇಲೆ ಹಾಗೂ ನಿನ್ನ ಮೇಲೆ ಉಪಕಾರವನ್ನು ಮಾಡಿರುವನು. ಆದ್ದರಿಂದ ಈತನು ವ್ಯಾಸನಂತೆ ನಮ್ಮ ಗುರು ಆದನು ।೫೩೦॥

ಇಷ್ಟರಲ್ಲಿ ಸಂಜಯನು ತನ್ನ ಮನದಲ್ಲಿ ವಿಚಾರಿಸಿದೇನೆಂದರೆ, ನಾನು ಮಾಡುತ್ತಿರುವ ಅರ್ಜುನನ ಅತಿಶಯ ಸ್ತುತಿಯು ಧೃತರಾಷ್ಟ್ರನಿಗೆ ಸಹಿಸುವುದಾಗುವುದಿಲ್ಲ. ಅದಕ್ಕಾಗಿ ಈಗ ಹೆಚ್ಚಿಗೆ ಹೇಳಬಾರದು ।೫೩೧॥

ಈ ಪ್ರಕಾರವಾಗಿ ಸಂಜಯನು ಈ ಮಾತು ಬಿಟ್ಟು ಅರ್ಜುನನು ಶ್ರೀಕೃಷ್ಣನಿಗೆ ಕೇಳಿದ ಯಾವ ಎರಡನೆಯ ಮಾತುಗಳನ್ನು ಹೇಳಲು ಆರಂಭಿಸಿದನು ॥೫೩೨॥

ನಿವೃತ್ತಿದಾಸರಾದ ಜ್ಞಾನೇಶ್ವರರು ಹೇಳುವರು: ಅರ್ಜುನನು ಹೇಗೆ ಪ್ರಶ್ನೆಯನ್ನು ಮಾಡಿದನೋ, ಅದರಂತೆಯೇ ನಾನೂ ಸಹ ಅದರ ವ್ಯಾಖ್ಯಾನವನ್ನು ಮಾಡುವೆ, ಅದನ್ನು ಕೇಳಿರಿ ।೫೩೩॥

ಶ್ರೀ ಜ್ಞಾನೇಶ್ವರ ಮಹಾರಾಜರಿಂದ ರಚಿತವಾದ ಭಾವಾರ್ಥ ದೀಪಿಕೆಯ ಹದಿನೇಳನೆಯ ಅಧ್ಯಾಯದ ವಿವರಣೆ ಸಮಾಪ್ತವು.

# ಸಾರ್ಥ ಶ್ರೀಜ್ಞಾನೇಶ್ವರೀ

## ಅಧ್ಯಾಯ ಅಠರಾವಾ

ಶ್ರೀ ಗಣೇಶಾಯ ನಮಃ

ಜಯಜಯ ದೇವ ನಿರ್ಮಳ । ನಿಜಜನಾಖಿಲಮಂಗಳ । ಜನ್ಮ ಜರಾಜಲದಜಾಳ । ಪ್ರಭಂಜನ ।೧॥ ಜಯಜಯ ದೇವ ಪ್ರಬಳ । ವಿದಳಿತಾಮಂಗಳಕುಳ । ನಿಗಮಾಗಮದ್ರುಮಫಳ । ಫಲಪ್ರದ ।೨॥ ಜಯಜಯ ದೇವ ಸಕಲ । ವಿಗತವಿಷಯವತ್ಸಲ । ಕಲಿತಕಾಳಕೌತೂಹಲ । ಕಲಾತೀತ ।೩॥ ಜಯಜಯ ದೇವ ನಿಶ್ಚಳ । ಚಲಿತಚಿತ್ತಪಾನತುಂದಿಲ । ಜಗದುನ್ಮೀಲನಾವಿರಲ । ಕೇಲಿಪ್ರಿಯ ।೪॥ ಜಯಜಯ ದೇವ ನಿಷ್ಕಳ । ಸ್ಫುರದಮಂದಾನಂದಬಹಳ । ನಿತ್ಯನಿರಸ್ತಾಖಿಲಮಳ । ಮೂಳಭೂತ ।೫॥ ಜಯಜಯ ದೇವ ಸ್ವಪ್ರಭ । ಜಗದಂಬುದಗರ್ಭನಭ । ಭುವನೋದ್ಭವಾರಂಭಸ್ತಂಭ । ಭವಧ್ವಂಸ ।೬॥ ಜಯಜಯ ದೇವ ವಿಶುದ್ಧ । ವಿದುದಯೋದ್ಯಾನದ್ವಿರದ । ಶಮದಮಮದನಮದಭೇದ । ದಯಾರ್ಣವ ।೭॥ ಜಯಜಯ ದೇವೈಕರೂಪ । ಅತಿಕೃತಕಂದರ್ಪಸರ್ಪದರ್ಪ । ಭಕ್ತಭಾವಭುವನ ದೀಪ । ತಾಪಾಪಹ ।೮॥ ಜಯಜಯ ದೇವ ಅದ್ವಿತೀಯ । ಪರಿಣತೋ ಪರಮೈಕ ಪ್ರಿಯ । ನಿಜಜನಜಿತ ಭಜನೀಯ । ಮಾಯಾಗಮ್ಯ ।೯॥ಜಯಜಯ ದೇವ ಶ್ರೀಗುರೋ । ಅಕಲ್ಪನಾಖ್ಯಕಲ್ಪತರೋ । ಸ್ವಸಂವಿದ್ರುಮಬೀಜಪ್ರರೋ । ಹಣಾವನೀ ।೧೦॥ ಹೇ ಕಾಯ ಏಕೈಕ ಐಸೈಸೇ । ನಾನಾಪರಿಭಾಷಾವಶೇ । ಸ್ತೋತ್ರ ಕರೂ ತುಜೋದ್ದೇಶೇ । ನಿರ್ವಿಶೇಷಾ ।೧೧॥ ಜಿಹೀ ವಿಶೇಷಣೀ ವಿಶೇಷಿಜೇ । ತೇ ದೃಶ್ಯ ನವ್ಹೇ ರೂಪ ತುಝೇ । ಹೇ ಜಾಣೇ ಮೀ ಮ್ಹಣೌನಿ ಲಾಜೇ । ವಾನಣಾ ಇಹೀ ।೧೨॥ ಪರೀ ಮರ್ಯಾದೇಚಾ ಸಾಗರು । ಹಾ ತಂವಚಿ ತಯಾ ಡಗರು । ಜಂವ ನ ದೇಖೇ ಸುಧಾಕರು । ಉದಯಾ ಆಲಾ ।೧೩॥ ಸೋಮಕಾಂತು ನಿಜ ನಿರ್ಝುರೀ । ಚಂದ್ರಾ ಅರ್ಘ್ಯಾದಿಕ ನ ಕರೀ । ತೇ ತೋಚಿ ಅವಧಾರೀ । ಕರವೀ ಕೀ ಜೇ ।೧೪॥

# ಸಾರ್ಥ ಶ್ರೀಜ್ಞಾನೇಶ್ವರೀ

## ಹದಿನೆಂಟನೆಯ ಅಧ್ಯಾಯ

ದೇವಾ, ನೀವು ನಿರ್ಮಲರು, ನಿಮ್ಮ ಭಕ್ತರ ಅಖಿಲ ಮಂಗಳವನ್ನುಂಟು ಮಾಡುವವರು. ಜನ್ಮ, ಜರಾರೂಪ ಮೋಡಗಳನ್ನು ನಾಶಮಾಡುವ ವಾಯುವಾಗಿರುವಿರಿ. ನಿಮಗೆ ಜಯಜಯಕಾರವು ।೧॥

ದೇವಾ, ನೀವು ಎಲ್ಲರಲ್ಲಿಯೂ ಬಲಿಷ್ಠರಿರುವಿರಿ. ದುಃಖವನ್ನು ಸಮೂಲವಾಗಿ ನಾಶ ಮಾಡುವವರು ಹಾಗೂ ವೇದ ಮತ್ತು ಶಾಸ್ತ್ರರೂಪ ವೃಕ್ಷದ ಫಲವಾಗಿ ಲಾಭದಾಯಕವಾಗಿರುವಿರಿ. ನಿಮಗೆ ಜಯಜಯಕಾರವು ।೨॥

ದೇವಾ, ನೀವು ಪೂರ್ಣರು, ವಿಷಯಗಳ ತ್ಯಾಗ ಮಾಡಿರುವವರಿಗೆ ಕೃಪೆ ತೋರುವವರು ಮತ್ತು ಲೀಲೆಯಿಂದ ಕಾಲನ ಕ್ರೀಡೆಗೆ ನೀವು ಕಾರಣರು. ಕಲಾತೀತರು. ನಿಮಗೆ ಜಯಜಯಕಾರವು ।೩॥

ದೇವಾ, ನೀವು ಅಚಲರು ಮತ್ತು ಚಂಚಲ ಚಿತ್ತದ ಪ್ರಾಶನದಿಂದ ನಿಮ್ಮ ಹೊಟ್ಟೆ ಬೆಳೆದಿದೆ ಮತ್ತು ಮೇಲಿಂದ ಮೇಲೆ ಜಗದುತ್ಪತ್ತಿಯನ್ನು ಮಾಡುತ್ತ ಕ್ರೀಡಿಸುವ ನಿಮ್ಮ ಪ್ರೀತಿಯಾಗಿದೆ. ನಿಮಗೆ ಜಯಜಯಕಾರವು ।೪॥

ದೇವಾ, ನೀವು ಕೇವಲ ಶುದ್ಧ ಸ್ವರೂಪರು, ಆನಂದಕ್ಕೆ ಸ್ಫೂರ್ತಿಯನ್ನು ಕೊಡುವವರು ಮತ್ತು ಸರ್ವಪಾಪದ ನಿರಸನೆ ಮಾಡುವವರು. ಹಾಗೂ ಎಲ್ಲ ಜಗಕ್ಕೂ ಕಾರಣೀಭೂತರು. ನಿಮಗೆ ಜಯಜಯಕಾರವು ।೫॥

ದೇವಾ, ನೀವು ಸ್ವಯಂ ಪ್ರಕಾಶಕರು, ಹಾಗೆಯೇ ಜಗದ್ರೂಪ ಮೋಡಗಳನ್ನು ಧರಿಸುವ ಆಕಾಶವಾಗಿರುವಿರಿ. ಜಗದ್ರೂಪ ಉತ್ಪತ್ತಿಯ ಮೂಲಸ್ತಂಭರಾಗಿ ಸಂಸಾರದ ನಾಶ ಮಾಡುವವರು. ನಿಮಗೆ ಜಯಜಯಕಾರವು ।೬॥

ದೇವಾ, ನೀವು ಉಪಾಧಿರಹಿತರು, ಹಾಗೂ ಅವಿದ್ಯಾರೂಪ ತೋಟವನ್ನು ನಾಶ ಮಾಡುವ ಆನೆಯಾಗಿರುವಿರಿ. ಶಮದಮಗಳಿಂದ ಕಾಮ ಮದನದ ನಾಶ ಮಾಡುವವರು, ದಯೆಯ ಸಮುದ್ರವೇ ಆಗಿರುವಿರಿ. ನಿಮಗೆ ಜಯಜಯಕಾರವು ।೭॥

ದೇವಾ, ನೀವು ಒಂದೇ ರೂಪವಿದ್ದವರು, ಕಾಮರೂಪದ ಸರ್ಪದ ದರ್ಪವನ್ನು ಭಂಗಗೊಳಿಸುವವರು. ಭಾವಿಕ ಭಕ್ತರ ಚಿತ್ತರೂಪ ಮಂದಿರದಲ್ಲಿ ದೀಪವಾಗಿರುವಿರಿ ಮತ್ತು ಸಂಸಾರದ ತಾಪವನ್ನು ನಾಶ ಮಾಡುವವರು. ನಿಮಗೆ ಜಯ ಜಯಕಾರವು ।೮॥

ದೇವಾ, ನೀವು ಅದ್ವಿತೀಯರು, ಪೂರ್ಣ ನಮ್ರರಾದವರನ್ನು ಪ್ರೀತಿಸುವವರು. ಭಕ್ತಾಧೀನರು, ಭಜಿಸಲು ಯೋಗ್ಯರು, ಮಾಯೆಗೆ ಅಗಮ್ಯರು. ನಿಮಗೆ ಜಯಜಯಕಾರವು ।೯॥

ದೇವಾ, ಶ್ರೀಗುರುವೇ, ನೀವು ಕಲ್ಪನಾತೀತ ವಸ್ತುವಿನ ಕಲ್ಪವೃಕ್ಷರು, ನಿಮ್ಮ ಜ್ಞಾನವೃಕ್ಷದ ಬೀಜಕ್ಕೆ ಉತ್ಪತ್ತಿಸ್ಥಾನರು. ನಿಮಗೆ ಜಯಜಯಕಾರವು ।೧೦॥

ಈ ಪ್ರಕಾರವಾಗಿ ಅನೇಕ ರೀತಿಗಳಿಂದ ಪ್ರತ್ಯಯಗಳ ವಿಶೇಷಣೆ ಕೊಡುವುದು ಯೋಗ್ಯವಲ್ಲ. ನೀವು ಸರ್ವ ವಿಶೇಷರು, ಭಾವರಹಿತರು, ಹೀಗಿರುವ ನಿಮ್ಮ ಸ್ತುತಿಯನ್ನು ಎಷ್ಟೆಂದು ಮಾಡಲಿ ।೧೧॥

ಯಾವ ವಿಶೇಷಣದಿಂದ ನಿಮ್ಮ ಸ್ತುತಿ ಮಾಡಿದರೂ ಅದು ನಿಮ್ಮ ಸ್ಪಷ್ಟ ರೂಪವಲ್ಲ. ಇದನ್ನು ನಾನು ತಿಳಿದಿರುವೆನು. ಆದ್ದರಿಂದ ಈ ವರ್ಣನೆಯಿಂದ ನನಗೆ ನಾಚಿಕೆಯಾಗುತ್ತಿದೆ ।೧೨॥

ಆದಾಗ್ಯೂ, ಸಮುದ್ರಕ್ಕೆ ಮರ್ಯಾದೆ ರೇಖೆ ಇದೆ ಎಂದು ಜನರು ಹೇಳುವುದು ನಿಜ. ಆದರೆ ಅದು ಚಂದ್ರನ ಉದಯ ಆಗದಾಗ ಮಾತ್ರ ಅಲ್ಲವೇ? ।೧೩॥

ಸೋಮಕಾಂತ ಶಿಲೆಯು ತನ್ನ ಸ್ವತಃದ ಉದಕದಿಂದ ಚಂದ್ರನಿಗೆ ಅರ್ಘ್ಯವನ್ನು ಕೊಡುವುದಿಲ್ಲ. ಆದರೆ ಚಂದ್ರನೇ ಅದರಿಂದ ಮಾಡಿಸುವನು ।೧೪॥

ನೇಣೋ ಕೈಸೀ ವಸಂತಸಂಗೇ । ಅವಚಿತಿಯಾ ವೃಕ್ಷಾಚೇ ಅಂಗೇ । ಫುಟತೀ ತೈ ಹೇ ತಯಾಂಹೀ ಜೋಗೇ । ಧರಣೇ ನೋಹೇ ॥೧೫॥ ಪದ್ಮಿನೀ ರವಿಕಿರಣ । ಲಾಹೇ ಮಗ ಲಾಜೇ ಕವಣ? । ಕಾ ಜಳೇ ಶಿವತಲೇ ಲವಣ । ಆಂಗ ಭುಲೇ ॥೧೬॥ ತೈಸಾ ತೂತೇ ಜೇಥ ಮೀ ಸ್ಮರೇ । ತೇಥ ಮೀಪಣ ಮೀ ವಿಸರೇ । ಮಗ ಜಾಕಳಿಲಾ ಢೇಂಕರೇ । ತೃಪ್ತ ಜೈಸಾ ॥೧೭॥ ಮಜ ತುವಾ ಜೀ ಕೇಲೇ ತೈಸೇ । ಮಾಝೇ ಮೀಪಣ ದವಡೂನಿ ದೇಶೇ । ಸ್ತುತಿಮಿಷೇಂಚ ಪಾ ಪಿಸೇ । ಬಾಂಧಲೇ ವಾಚೇ ॥೧೮॥ ನಾ ಯೇರ್ಹವೀ ತರೀ ಆಠವೀ । ರಾಹೋನಿ ಸ್ತುತಿ ಜೈ ಕರಾವೀ । ತೈ ಗುಣಾಗುಣಿಯಾ ಧರಾವೀ । ಸರೋಭರೀ ಕೀ ॥೧೯॥ ತರೀ ತೂ ಜೀ ಏಕರಸಾಚೇ ಲಿಂಗ । ಕೇವೀ ಕರೂ ಗುಣಾಗುಣೀ ವಿಭಾಗ । ಮೋತೀ ಫೋಡೋನಿ ಸಾಂಧಿತಾ ಚಾಂಗ । ಕೀ ತೈಸೇಂಚಿ ಭಲೇ ॥೨೦॥ ಆಣಿ ಬಾಪ ತೂ ಮಾಯ । ಇಹೀ ಬೋಲೀ ನಾ ಸ್ತುತಿ ಹೋಯ । ಡಿಂಭೋಪಾಧಿಕ ಆಹೇ । ವಿಟಾಳು ತೇಥೇ ॥೨೧॥ ಜೀ ಜಾಲೇನಿ ಪಾಇಕೇ ಆಲೇ । ತೇ ಗೋಸಾವೀಪಣ ಕೇವೀ ಬೋಲೇ? । ಐಸೇ ಉಪಾಧಿ ಉಶಿಟಲೇ । ಕಾಯ ವರ್ಣೂ? ॥೨೨॥ ಜರೀ ಆತ್ಮಾ ತೂ ಏಕಸರಾ । ಹೇಂಹೀ ಮ್ಹಣತಾ ದಾತಾರಾ । ತರೀ ಆಂತುಲ ತೂ ಬಾಹೇರಾ । ಘಾಪತಾಸೀ ॥೨೩॥ ಮ್ಹಣೌನಿ ಸತ್ಯಚಿ ತುಜಲಾಗೀ । ಸ್ತುತಿ ನ ದೇಖೋ ಜೇ ಜಗೀ । ಮೌನಾವಾಂಚೂನಿ ಲೇಣೇ ಆಂಗೀ । ಸುಸೀನಾ ಮಾ ॥೨೪॥ ಸ್ತುತಿ ಕಾಂಹೀ ನ ಬೋಲಣೇ । ಪೂಜಾ ಕಾಂಹೀ ನ ಕರಣೇ । ಸನ್ನಿಧೀ ಕಾಂಹೀ ನ ಹೋಣೇ । ತುಝ್ಯಾ ಠಾಯೀ ॥೨೫॥ ತರೀ ಜಿತಲೇ ಜೈಸೇ ಭುಲೀ । ಪಿಸೇ ಆಲಾಪು ಘಾಲೀ । ತೈಸೇ ವಾನೂ ತೇ ಮಾಉಲೀ । ಉಪಸಾಹಾವೇ ತುವಾ ॥೨೬॥ ಆತಾ ಗೀತಾರ್ಥಾಚೀ ಮುಕ್ತಮುದೀ । ಲಾವೀ ಮಾಝಿಯೇ ವಾಗ್ವೃದ್ಧೀ । ಜೇ ಮಾನೇ ಹೇ ಸಭಾಸದೀ । ಸಜ್ಜನಾಂಚ್ಯಾ ॥೨೭॥ ತೇಥ ಮ್ಹಣಿತಲೇ ಶ್ರೀನಿವೃತ್ತೀ । ನಕೋ ಹೇ ಪುಢತಪುಢತೀ । ಪರಿಸೀ ಲೋಹಾ ಘೃಷ್ಟೀ ಕಿತೀ । ವೇಳವೇಳಾ ಕೀಜೇ ಗಾ? ॥೨೮॥ ತಂವ ವಿನವೀ ಜ್ಞಾನದೇವೋ । ಮ್ಹಣೇ ಹೋ ಕಾ ಜೀ ಪಸಾವೋ । ತರೀ ಅವಧಾನ ದೇತು ದೇವೋ । ಗ್ರಂಥಾ ಆತಾ ॥೨೯॥ ಜೀ ಗೀತಾರತ್ನಪ್ರಾಸಾದಾಚಾ । ಕಳಸು ಅರ್ಥಚಿಂತಾ ಮಣೀಚಾ । ಸರ್ವ ಗೀತಾ ದರ್ಶನಾಚಾ । ಪಾಢಾಊ ಜೋ ॥೩೦॥ ಲೋಕೀ ತರೀ ಆಥೀ ಐಸೇ । ಜೇ ದುರೂನಿ ಕಳಸು ದಿಸೇ । ಆಣೀ ಭೇಟಲೀಚಿ ಹಾತವಸೇ । ದೇವತೇಚೀ ತಿಯೇ ॥೩೧॥

ವಸಂತಋತು ಆರಂಭಗೊಂಡಾಗ ವೃಕ್ಷಗಳಿಗೆ ಒಮ್ಮಿಂದೊಮ್ಮೆಲೆ ಎಲೆಗಳು ಹೇಗೆ ಬಿಡುವುದೆಂಬುದು ತಿಳಿಯುವುದಿಲ್ಲ. ಅದರಂತೆಯೇ ನನ್ನ ಸ್ಥಿತಿಯಾಗಿದೆ ಎಂದು ಏಕೆ ತಿಳಿಯಬಾರದು? ।೧೫॥

ಸೂರ್ಯವಿಕಾಸಿನಿ ಕಮಲವು ಸೂರ್ಯನ ಕಿರಣಗಳು ಬಿದ್ದಾಕ್ಷಣಕ್ಕೆ ನಾಚಿಕೆಯನ್ನು ಬಿಟ್ಟು ಅರಳುವುದು. ಅಥವಾ ಉಪ್ಪು ನೀರಿನಲ್ಲಿ ಹಾಕಿದಾಗ ಅದು ತದ್ರೂಪವಾಗುವುದು ।೧೬॥

ಅದರಂತೆ ನಿಮ್ಮನ್ನು ನಾನು ಸ್ಮರಿಸಿದಾಗ ನಿಮ್ಮ ಸ್ವರೂಪವು ಮರೆತು ಹೋಗುವುದು. ಆಗ ಭೋಜನದಿಂದ ತೃಪ್ತನಾದ ಮನುಷ್ಯನು ಇಚ್ಛೆಯಿಲ್ಲದೆ ತೇಗಿನ ಮೇಲೆ ತೇಗುವನು ।೧೭॥

ಅದರಂತೆ ಹೇ ಗುರುರಾಯನೇ, ನನಗೆ ನಾನೆಂಬುದು ಇಲ್ಲದಂತಾಗಿ ಸ್ತುತಿಯರೂಪದಿಂದ ನನ್ನ ವಾಣಿಗೆ ಮರುಳುತನ ಹಿಡಿದಿದೆ. ಇಂಥ ನನ್ನ ಸ್ಥಿತಿಯಾಗಿದೆ ।೧೮॥

ಅಥವಾ ಒಂದು ವೇಳೆ ನಾನು ನನ್ನ ಸ್ಮರಣೆಯನ್ನು ಇಟ್ಟುಕೊಂಡು ಸ್ತುತಿ ಮಾಡಲು ನಿಮ್ಮ ಹಾಗೂ ನಿಮ್ಮ ಗುಣಗಳನ್ನು ಬೇರೆ ಬೇರೆಯಾಗಿ ಮಾಡಬೇಕಾಗುವುದು ।೧೯॥

ಹಾಗಾದರೆ ಹೇ ಪ್ರಭುವೇ, ನೀವು ಒಂದೇ ರಸದಿಂದ ತಯಾರಿಸಿದ ಲಿಂಗವಾಗಿರುವಿರಿ. ಇಂಥ ನಿಮ್ಮಲ್ಲಿ ಗುಣವನ್ನು ಗುಣದಿಂದ ವಿಭಾಗಿಸುವುದು ಹೇಗೆ ಸಾಧ್ಯ? ಮುತ್ತನ್ನು ಒಡೆದು ಕೂಡ್ರಿಸುವುದಕ್ಕಿಂತ ಹಾಗೆಯೇ ಇಡುವುದು ಒಳ್ಳೆಯದಲ್ಲವೇ? ।೨೦॥

ಮತ್ತು ನೀವು ತಾಯಿ ತಂದೆಯವರು ಎಂದು ಹೇಳಿದರೆ ಇದರಿಂದ ಸ್ತುತಿ ಮಾತ್ರ ಆಗಲಿಕ್ಕಿಲ್ಲ, ಆದರೆ ನನ್ನ ಬಾಲಕತನದ ಉಪಾಧಿಯಿಂದ ತಮ್ಮಲ್ಲಿ ಭೇದದ ಮೈಲಿಗೆಯಾಗಬಹುದು ।೨೧॥

ನಾನು ನಿಮ್ಮ ಸೇವಕನಾಗುವೆನು ಎಂದು ಹೇಳಿದರೆ ನಿಮಗೆ ಯಜಮಾನರು ಎಂದು ಹೇಗೆ ಹೇಳಲಿ? ಈ ಪ್ರಕಾರವಾಗಿ ನಮ್ಮ ಉಪಾಧಿಯಿಂದ ಎಂಜಲಗೊಂಡ ಆ ರೂಪದ ವರ್ಣನೆಯನ್ನು ಹೇಗೆ ಮಾಡಲಿ? ।೨೨॥

ಹೇ ಪ್ರಭುವೇ, ನೀವು ಜಗದಾತ್ಮರು ಎಂದು ನಿಮಗೆ ಒಮ್ಮೆಲೆ ಹೇಳಿಬಿಟ್ಟರೆ ಆಗ ನನ್ನ ಅಂತರ್ಯಾಮಿಯಲ್ಲಿ ವಾಸ ಮಾಡುವ ನಿಮ್ಮನ್ನು ಹೊರಹಾಕಿದಂತಾಗುವುದು ।೨೩॥

ಆದ್ದರಿಂದ ನಿಜವಾಗಿಯೂ ನೋಡಿದರೆ ಈ ಜಗತ್ತಿನಲ್ಲಿ ನಿಮ್ಮ ಸ್ತುತಿಯನ್ನು ಮಾಡಲು ಬರುವುದಿಲ್ಲ ಮತ್ತು ಮೌನದ ಹೊರತಾಗಿ ಇತರ ಆಭರಣಗಳನ್ನು ನಿಮ್ಮ ಶರೀರಕ್ಕೆ ಹಾಕಲು ಬರುವುದಿಲ್ಲ ।೨೪॥

ಅದಕ್ಕಾಗಿ ಏನೂ ಹೇಳದೇ ಇರುವುದು ನಿಮ್ಮ ಸ್ತುತಿಯು. ಏನೂ ಮಾಡದೇ ಇರುವುದು ನಿಮ್ಮ ಪೂಜೆಯು, ಮತ್ತು ಬೇರೆಯಾಗಿ ಉಳಿಯದಿರುವುದೇ ಈ ಮಾತು ನಿಮ್ಮಲ್ಲಿ ಸಂಭವಿಸುವುದು ।೨೫॥

ಆದುದರಿಂದ ಒಬ್ಬ ಮನುಷ್ಯನು ಭ್ರಾಂತಿಗೊಂಡು ಹುಚ್ಚುತನದಿಂದ ಬಡಬಡಿಸುವಂತೆ ನನ್ನ ವರ್ಣನೆಯಾಗಿರುವುದು. ಅದಕ್ಕಾಗಿ ಹೇ ಗುರು ಮಾಉಲಿಯೇ, ನೀವು ಅದನ್ನು ಸಹಿಸಿರಿ ।೨೬॥

ಈಗ ನೀವು ನನ್ನ ವಾಣಿಯಿಂದ ಗೀತಾರ್ಥವು ಸ್ಪಷ್ಟವಾಗುವಂತೆ ಮುದ್ರೆಯನ್ನು ಒತ್ತಿರಿ. ಅಂದರೆ ನಾನು ಹೇಳುವ ಅರ್ಥವು ಈ ಸಜ್ಜನರ ಸಭೆಯಲ್ಲಿ ಮಾನ್ಯವಾಗುವುದು ।೨೭॥

ಆಗ ನಿವೃತ್ತಿ ಮಹಾರಾಜರು ಹೇಳಿದರೇನೆಂದರೆ, ಈ ರೀತಿ ನೀನು ನಮ್ಮ ವಿನಂತಿಯನ್ನು ಮೇಲಿಂದ ಮೇಲೆ ಮಾಡಬೇಡ. ಅರೇ, ಕಬ್ಬಿಣವನ್ನು ಸುವರ್ಣಗೊಳಿಸಲು ಪರಿಸಮಣಿಯು ಮೇಲಿಂದ ಮೇಲೆ ತಿಕ್ಕಬೇಕಾಗುವುದೇ? ।೨೮॥

ಆಗ ಜ್ಞಾನೇಶ್ವರರು ಪ್ರಾರ್ಥಿಸಿದರು. ಮಹಾರಾಜರೇ, ನಾನು ಹೇಳುತ್ತಿರುವ ಗೀತಾರ್ಥದತ್ತ ಕಡೆ ಈಗ ತಮ್ಮ ಲಕ್ಷ ನೀಡುವುದೇ ನನಗೆ ತಮ್ಮ ಪ್ರಸಾದವೆನಿಸುವುದು ।೨೯॥

ಈ ಹದಿನೆಂಟನೆಯ ಅಧ್ಯಾಯವೆಂದರೆ ಗೀತಾರೂಪ ರತ್ನಖಚಿತ ದೇವಾಲಯದ ಅರ್ಥರೂಪ ಚಿಂತಾಮಣಿಯ ಕಳಸವಾಗಿರುವುದು. ಇದರ ದರ್ಶನದಿಂದ ಸಂಪೂರ್ಣ ಗೀತೆಯ ದರ್ಶನದ ಫಲವು ದೊರಕುವುದು ।೩೦॥

ದೂರದಿಂದ ಕಳಸದ ದರ್ಶನ ತೆಗೆದುಕೊಂಡರೆ ದೇವಾಲಯದ ದೇವರ ದರ್ಶನ ಪಡೆದ ಫಲಪ್ರಾಪ್ತಿ ಎಂದು ಜಗತ್ತಿನ ರೂಢಿಯಾಗಿರುವುದು ।೩೧॥

ತೈಸೇಂಚಿ ಏಥಹೀ ಆಹೇ । ಜೇ ಏಕೇಚಿ ಯೇಣೇ ಅಧ್ಯಾಯೇ । ಆಘವಾಚಿ ದೃಷ್ಟ ಹೋಯೇ । ಗೀತಾಗಮು ಹಾ ।೩೨॥ ಮೀ ಕಳಸು ಯಾಚಿ ಕಾರಣೇ । ಅಠರಾವಾ ಅಧ್ಯಾಯೋ ಮ್ಹಣೇ । ಉವಾಇಲಾ ಬಾದರಾಯಣೇ । ಗೀತಾ ಪ್ರಸಾದಾ ।೩೩॥ ನೋಹೇ ಕಳಸಾಪರತೇ ಕಾಂಹೀ । ಪ್ರಾಸಾದೀ ಕಾಮ ನಾಹೀ । ತೇ ಸಾಂಗತಸೇ ಗೀತಾ ಹೀ । ಸಂಪಲೇಪಣೇ ।೩೪॥ ವ್ಯಾಸು ಸಹಜೇ ಸೂತ್ರೀ ಬಳೀ । ತೇಣೇ ನಿಗಮರತ್ನಾಚಳೀ । ಉಪನಿಷದಾರ್ಥಾಚೀ ಮಾಳೀ । ಮಾಜೀ ಖಾಂಡಿಲೀ।೩೫॥ ತೇಥ ತ್ರಿವರ್ಗಾಚಾ ಅಣು ಆರು । ಆಡಳೂ ನಿಘಾಲಾ ಜೋಅಪಾರು । ತೋ ಮಹಾಭಾರತಪ್ರಾಕಾರು । ಭೋಂವತಾ ಕೇಲಾ ।೩೬॥ ಮಾಜೀ ಆತ್ಮ ಜ್ಞಾನಾಚೇ ಏಕವಟ । ದಳವಾಡೇ ಝಾಡೂನಿ ಚೋಖಟ । ಘಡಿಲೇ ಪಾರ್ಥ ವೈಕುಂಠ । ಸಂವಾದ ಕುಸರೀ ।೩೭॥ ನಿವೃತ್ತಿ ಸೂತ್ರ ಸೋಡವಣಿಯಾ । ಸರ್ವ ಶಾಸ್ತ್ರಾರ್ಥ ಪುರವಣಿಯಾ । ಆವೋ ಸಾಧಿಲಾ ಮಾಂಡಣಿಯಾ । ಮೋಕ್ಷ ರೇಖೇಚಾ ।೩೮॥ ಐಸೇನಿ ಕರಿತಾ ಉಭಾರಾ । ಪಂಧರಾ ಅಧ್ಯಾಯಾಂತ ಪಂಧರಾ । ಭೂಮೀ ನಿರ್ವಾಳಲಿಯಾ ಪುರಾ । ಪ್ರಸಾದು ಜಾಹಲಾ ।೩೯॥ ಉಪರಿ ಸೋಳಾವಾ ಅಧ್ಯಾವೋ । ತೋ ಗ್ರೀವಘಂಟೇಚಾ ಆವೋ । ಸಪ್ತದಶು ತೋಚಿ ಠಾವೋ । ಪಡಘಾಣಿಯೇ ।೪೦॥ ತಯಾಹೀವರೀ ಅಷ್ಟಾದಶು । ತೋ ಆಪೈಸಾ ಮಾಂಡಲಾ ಕಳಸು । ಉಪರೀ ಗೀತಾದಿಕೀ ವ್ಯಾಸು । ಧ್ವಜೇ ಲಾಗಲಾ ।೪೧॥ ಮ್ಹಣೌನಿ ಮಾಗೀಲ ಜೇ ಅಧ್ಯಾಯೇ । ತೇ ಚಢತೇ ಭೂಮೀಚೇ ಆಯೇ । ತಯಾಂಚೇ ಪುರೇ ದಾವಿತಾಹೇ । ಆಪುಲ್ಯಾ ಆಂಗೀ ।೪೨॥ ಜಾಲಯಾ ಕಾಮಾ ನಾಹೀ ಚೋರೀ । ತೇ ಕಳಸೇ ಹೋಯ ಉಜರೀ । ತೇವೀ ಅಷ್ಟಾದಶು ವಿವರೀ । ಸಾದ್ಯಂತ ಗೀತಾ ।೪೩॥ ಐಸಾ ವ್ಯಾಸೇ ವಿಂದಾಣಿಯೇ । ಗೀತಾ ಪ್ರಸಾದು ಸೋಡವಣಿಯೇ । ಆಣೂನಿ ರಾಖಿಲೇ ಪ್ರಾಣಿಯೇ । ನಾನಾಪರೀ ।೪೪॥ ಏಕ ಪ್ರದಕ್ಷಿಣಾ ಜಪಾಚಿಯಾ । ಬಾಹೇರೂನಿ ಕರಿತೀ ಯಯಾ । ಏಕ ತೇ ಶ್ರವಣಮಿಷೇ ಛಾಯಾ । ಸೇವಿತೀ ಯಯಾಚೀ ।೪೫॥ ಏಕ ತೇ ಅವಧಾನಾಚಾ ಪುರಾ । ವಿಡಾಪಾಉೂಡ ಭೀತರಾ । ಘೇಉೂನಿ ರಿಘತೀ ಗಾಭಾರಾ । ಅರ್ಥಜ್ಞಾನಾಚ್ಯಾ ।೪೬॥ ತೇ ನಿಜಬೋಧೇ ಉರಾಉರೀ । ಭೇಟತೀ ಆತ್ಮಯಾ ಶ್ರೀಹರೀ । ಪರೀ ಮೋಕ್ಷಪ್ರಾಸಾದೀ ಸರೀ । ಸರ್ವಾಂಹೀ ಆಥೀ ।೪೭॥

ಇಲ್ಲಿಯೂ ಹಾಗೆಯೇ ಇದೆ. ಕಾರಣ, ಗೀತೆಯ ಈ ಹದಿನೆಂಟನೆಯ ಅಧ್ಯಾಯದಿಂದ ಸಂಪೂರ್ಣ ಗೀತಾ ಶಾಸ್ತ್ರ ವನ್ನು ನೋಡಿದಂತೆ ಆಗುವುದು ।೩೨॥

ಇದೇ ಕಾರಣದಿಂದ ನಾನು ಹದಿನೆಂಟನೆಯ ಅಧ್ಯಾಯಕ್ಕೆ ''ಕಳಸ''ವೆಂದು ಹೇಳುತ್ತಿರುವೆನು. ವ್ಯಾಸ ಮಹರ್ಷಿಗಳು ಗೀತಾ ರತ್ನ ಮಂದಿರದ ಮೇಲೆ ಈ ಯಾವ ಪರಿಶುದ್ಧ ಕಳಸವನ್ನು ಏರಿಸಿರುವರು ।೩೩॥

ದೇವಾಲಯದ ಮೇಲೆ ಕಳಸವನ್ನೇರಿಸಲು ಆಗ ಅದರ ಯಾವ ಕಾರ್ಯವನ್ನು ಮಾಡಬೇಕಾಗಿರುವುದಿಲ್ಲ. ಹಾಗೆಯೇ ಈ ಹದಿನೆಂಟನೆಯ ಅಧ್ಯಾಯವು ಗೀತಾ ಗ್ರಂಥದ ಮುಕ್ತಾಯವನ್ನು ತೋರಿಸುವುದು ।೩೪॥

ವ್ಯಾಸರು ಸ್ವಭಾವತಃ ಶ್ರೇಷ್ಠ ಶಿಲ್ಪಕಾರರು. ಇವರು ಅತ್ಯಂತ ಕುಶಲತೆಯಿಂದ ಸೂತ್ರಗಳನ್ನು ಹಿಡಿದು ವೇದರೂಪ ರತ್ನದ ಪರ್ವತದಲ್ಲಿ ಉಪನಿಷತ್ತಿನ ಬೈಲ ಭೂಮಿಯಲ್ಲಿ ಬುನಾದಿ ತೋಡಿದರು ।೩೫॥

ಅಲ್ಲಿ ಧರ್ಮ, ಅರ್ಥ ಹಾಗೂ ಕಾಮರೂಪಗಳಾದ ವಿಭಿನ್ನ ಆಕಾರಗಳ ಅನೇಕ ಕಲ್ಲಿನ ಗುಂಡುಗಳು ಹೊರಟವು. ಆ ಕಲ್ಲುಗಳಿಂದ ಮಹಾಭಾರತರೂಪ ದೇವಾಲಯದ ಸುತ್ತಲೂ ಆವಾರದ ಗೋಡೆಯನ್ನು ಕಟ್ಟಿದರು ।೩೬॥

ಆ ಭೂಮಿಯಲ್ಲಿಯೇ ಆತ್ಮಜ್ಞಾನ ಸ್ವರೂಪ ದೊಡ್ಡದಾದ ಅಖಂಡ ಕಲ್ಲು ಹೊರಟಿತು. ಆತನು ಶ್ರೀಕೃಷ್ಣಾರ್ಜುನ ಸಂವಾದದ ಕೌಶಲ್ಯದಿಂದ ಅದರ ಮೇಲಿರುವ ಭ್ರಮೆ ಸಂಶಯದ ಪದರನ್ನು ಝಾಡಿಸಿ ಮಂದಿರಕ್ಕೆ ಯೋಗ್ಯವಾದ ತುಂಡುಗಳನ್ನು ಮಾಡಿದನು ।೩೭॥

ನಂತರ ನಿವೃತ್ತಿರೂಪ ದಾರದಿಂದ ಅಂಕಣ ಮಾಡಿ ಎಲ್ಲ ಶಾಸ್ತ್ರಗಳ ಭರತಿಯನ್ನು ಹಾಕಿ ಮೋಕ್ಷ ಮರ್ಯಾದೆಯ ಆಯವನ್ನು ಸಾಧಿಸಿದರು ।೩೮॥

ಈ ಪ್ರಕಾರವಾಗಿ ಹದಿನೈದು ಅಧ್ಯಾಯಗಳನ್ನು ಹದಿನೈದು ಥರಗಳಾಗಿ ಕಟ್ಟಿ ಭೂಮಿ ಶುದ್ಧೀಕರಣದಿಂದ ಹಿಡಿದು ಗೀತಾಮಂದಿರದ ಕಾರ್ಯವು ಪೂರ್ಣಗೊಂಡಿತು ।೩೯॥

ಆ ಮಂದಿರದ ಮೇಲೆ ಹದಿನಾರನೆಯ ಅಧ್ಯಾಯವು ಶಿಖರದ ದುಂಡಾದ ಭಾಗವಾಗಿರುವುದು. ಹದಿನೇಳನೆಯ ಅಧ್ಯಾಯವು ಕಳಸ ಕೂಡ್ರಿಸುವ ಸ್ಥಾನವಾಗಿರುವುದು ।೪೦॥

ಆ ಸ್ಥಾನದ ಮೇಲೆ ಹದಿನೆಂಟನೆಯ ಅಧ್ಯಾಯರೂಪ ಕಳಸವನ್ನು ಸಹಜವಾಗಿ ಉತ್ತಮ ರೀತಿಯಲ್ಲಿ ಸ್ಥಾಪಿಸಿ ಅದರ ಮೇಲೆ ಗೀತಾ ಹೆಸರಿನಿಂದ ವ್ಯಾಸರ ಧ್ವಜವನ್ನು ನಿಲ್ಲಿಸಲಾಯಿತು ।೪೧॥

ಆದ್ದರಿಂದ ಈ ಹಿಂದಿನ ಅಧ್ಯಾಯಗಳು ಒಂದರ ಮೇಲೊಂದು ಥರಗಳಾಗಿ ಏರುತ್ತ ಕೊನೆಗೆ ಎಲ್ಲವೂ ಪೂರ್ಣವಾಯಿತೆಂದು ಈ ಹದಿನೆಂಟನೆಯ ಅಧ್ಯಾಯವು ತೋರಿಸುವುದು ।೪೨॥

ಯಾವುದೇ ಪೂರ್ಣಗೊಂಡ ಕಾರ್ಯವನ್ನು ಕದ್ದಿಡಲು ಬಾರದೇ ಕಳಸದ ರೂಪದಲ್ಲಿ ಸ್ಪಷ್ಟವಾಗಿ ದೃಷ್ಟಿಗೆ ಗೋಚರಿಸುವುದು. ಅದರಂತೆ ಹದಿನೆಂಟನೆಯ ಅಧ್ಯಾಯದಲ್ಲಿ ಗೀತೆಯ ಸಾದ್ಯಂತ ವರ್ಣನೆ ಇರುವುದು ।೪೩॥

ಈ ಪ್ರಕಾರವಾಗಿ ವ್ಯಾಸರು ಕುಶಲತೆಯಿಂದ ಗೀತಾರೂಪ ದೇವಾಲಯವನ್ನು ಕಟ್ಟಿ ಪ್ರಾಣಿಮಾತ್ರರ ನಾನಾ ಪ್ರಕಾರಗಳಿಂದ ಉದ್ಧಾರ ಮಾಡಿದರು ।೪೪॥

ಕೆಲವರು ಹೊರಗಿನಿಂದ ಪ್ರದಕ್ಷಿಣೆಯನ್ನು ಮಾಡಿ ಜಪ ಮಾಡುವರು. (ಗೀತೆಯ ಪಾಠ ಮಾಡುವರು) ಕೆಲವರು ಶ್ರವಣರೂಪ ನೆರಳಿನಲ್ಲಿ ದೇವಾಲಯದ ಗೋಡೆಗೆ ಹತ್ತಿ ಕುಳಿತುಕೊಳ್ಳುವರು ।೪೫॥

ಕೆಲವರು ಅವಧಾನರೂಪ ಎಲಿ – ಅಡಿಕೆ ದಕ್ಷಿಣೆ ತೆಗೆದುಕೊಂಡು ಅರ್ಥಜ್ಞಾನರೂಪ ಗರ್ಭಗುಡಿಯಲ್ಲಿ ಪ್ರವೇಶಿಸುವರು ।೪೬॥

ಅವರು ಆತ್ಮ ಬೋಧೆಯ ಯೋಗದಿಂದ ಜಗದಾತ್ಮಾ ಶ್ರೀಹರಿಯ ತೀವ್ರ ದರ್ಶನ ಪಡೆಯುವರು. ಆದಾಗ್ಯೂ, ದೇವಾಲಯದಲ್ಲಿ ಎಲ್ಲರ ಯೋಗ್ಯತೆಯು ಸಮವಾಗಿರುವುದು ।೪೭॥

ಸಮರ್ಥಾಚಿಯೇ ಪಂಕ್ತಿ ಭೋಜನೇ । ತಳಿಲ್ಯಾ ವರಿಲ್ಯಾ ಏಕಚಿ ಪಕ್ವಾನ್ನೇ । ತೇವೀ ಶ್ರವಣೇ ಅರ್ಥೇ ಪಠಣೇ । ಮೋಕ್ಷು ಚಿ ಲಾಭೇ ।೫೮॥ ಐಸಾ ಗೀತಾ ವೈಷ್ಣವಪ್ರಾಸಾದು । ಅಠರಾವಾ ಅಧ್ಯಾಯ ಕಳಸು ವಿಶದು । ಮ್ಯಾ ಮ್ಹಣೆತಲಾ ಹಾ ಭೇದು । ಜಾಣೋನಿಯಾ ।೫೯॥ ಆತಾ ಸಪ್ತದಶಾಪಾಠೀ । ಅಧ್ಯಾಯ ಕೈಸೇನಿ ಉಠೀ । ತೋ ಸಂಬಂಧು ಸಾಂಗೋ ದಿಠೀ । ದಿಸೇ ತೈಸಾ ।೬೦॥ ಕಾ ಗಂಗಾಯಮುನಾ ಉದಕ । ವೋಘಬಗೇ ವೇಗಳಿಕ । ದಾವೀ ಹೋಊನಿ ಏಕ । ಪಾಣೇಪಣೇ ।೬೧॥ ನ ಮೋಡತಾ ದೋನ್ಹೀ ಆಕಾರ । ಘಡಿಲೇ ಏಕ ಶರೀರ । ಹೇ ಅರ್ಧನಾರೀನಟೇಶ್ವರ । ರೂಪೀ ದಿಸೇ ।೬೨॥ ನಾನಾ ವಾಢಿಲೀ ದಿವಸೇ । ಕಳಾ ಬಿಂಬೀ ಪೈಸೇ । ಪರೀ ಸಿನಾನೇ ಲೇವೇ ಜೈಸೇ । ಚಂದ್ರೀ ನಾಹೀ ।೬೩॥ ತೈಸಿ ಸಿನಾನೀ ಚಾರೀ ಪದೇ । ಶ್ಲೋಕ ತೋ ಶ್ಲೋಕಾವಚ್ಛೇದೇ । ಅಧ್ಯಾವೋ ಅಧ್ಯಾಯ ಭೇದೇ । ಗಮೇ ಕೀರ ।೬೪॥ ಪರೀ ಪ್ರಮೇಯಾಚೀ ಉಜರಿ । ಆನಾನ ರೂಪ ನ ಧರೀ । ನಾನಾ ರತ್ನಮಣೇ ದೋರೀ । ಏಕಚಿ ಜೈಸಿ ।೬೫॥ ಮೋತಿಯೇ ಮಿಳೋನಿ ಬಹುವೇ । ಏಕಾವ ಳೀಚಾ ಪಾಡು ಆಹೇ । ಪರೀ ಶೋಭೇ ರೂಪ ಹೋಯೇ । ಏಕಚಿ ತೇಥ ।೬೬॥ ಫುಲಾ ಫುಲಸರಾ ಲೇಖ ಚಢೇ । ಧೃತೀ ದುಜೇ ಅಂಗುಳೀ ನ ಪಡೇ । ಶ್ಲೋಕ ಅಧ್ಯಾಯ ತೇಣೇ ಪಾಡೇ । ಜಾಣಾವೀ ಹೇ ।೬೭॥ ಸಾತ ಶತೇ ಶ್ಲೋಕ । ಅಧ್ಯಾಯಾ ಅಠರಾಂಚೇ ಲೇಖ । ಪರೀ ದೇವೋ ಬೋಲಿಲೇ ಏಕ । ಜೇ ದುಜೇ ನಾಹೀ ।೬೮॥ ಆಣಿ ಮ್ಯಾಂಹೀ ನ ಸಾಂಡೂನಿ ತೇ ಸೋಯೇ । ಗ್ರಂಥ ವ್ಯಕ್ತೀ ಕೇಲೀ ಆಹೇ । ಪ್ರಸ್ತುತ ತೇಣೇ ನಿರ್ವಾಹೇ । ನಿರೂಪಣ ಆಇಕಾ ।೬೯॥ ತರೀ ಸತರಾವಾ ಅಧ್ಯಾವೋ । ಪಾವತಾ ಪುರತಾ ಠಾವೋ । ಜೇ ಸಂಪತಾ ಶ್ಲೋಕೀ ದೇವೋ । ಬೋಲಿಲೇ ಐಸೇ ।೭೦॥ ಅರ್ಜುನಾ ಬ್ರಹ್ಮನಾಮಾಚ್ಯಾ ವಿಖೀ । ಬುದ್ಧಿ ಸಾಂಡೂನಿ ಆಸ್ತಿಕೀ । ಕರ್ಮೇ ಕೀಜತೀ ತಿತುಕೀ । ಅಸಂತೇ ಹೋತೀ ।೭೧॥ ಹಾ ಐಕೋನಿ ದೇವಾಚಾ ಬೋಲು । ಅರ್ಜುನಾ ಆಲಾ ಡೋಲು । ಮ್ಹಣೇ ಕರ್ಮನಿಷ್ಠಾ ಮಳು । ಠೇವಿಲಾ ದೇಖೋ ।೭೨॥ ತೋ ಅಜ್ಞಾನಾಂಧು ತಂವ ಬಾಪುಡಾ । ಈಶ್ವರುಚಿ ನ ದೇಖೇ ಏವಢಾ । ತೇಥ ನಾವೇಕ ಪುಢಾ । ಕಾ ಸುಝೇ ತಯಾ ।೭೩॥ ಆಣಿ ರಜತಮೇ ದೋನ್ಹೀ । ಗೇಲಿಯಾವೀಣ ಶ್ರದ್ಧಾ ಸಾನೀ । ತೇ ಕಾ ಲಾಗೇ ಅಭಿಧಾನೀ । ಬ್ರಹ್ಮಾಚಿಯೆ? ।೭೪॥

ಶ್ರೀಮಂತರ ಮನೆಗೆ ಭೋಜನಕ್ಕೆ ಹೋದಾಗ್ಗೆ ಪಂಕ್ತಿಯಲ್ಲಿ ಮೇಲಿನ, ಕೆಳಗಿನ ಎಲೆಗಳಲ್ಲಿ ಒಂದೇ ಪ್ರಕಾರದ ಪಕ್ವಾನ್ನಗಳು ಇರುವುವು. (ಪಂಕ್ತಿ ಭೇದ ವಿರುವುದಿಲ್ಲ) ಅದರಂತೆ ಶ್ರವಣ, ಪಠಣ, ಅರ್ಥ ತಿಳಿದು ಕೊಳ್ಳುವವರಿಗೆ ಒಂದೇ ಮೋಕ್ಷ ಪ್ರಾಪ್ತವಾಗುವುದು ।೪೮॥

ಇರಲಿ, ಗೀತಾಗ್ರಂಥವು ವಿಷ್ಣು ಮಂದಿರವಾಗಿದ್ದು, ಹದಿನೆಂಟನೆಯ ಅಧ್ಯಾಯವು ಅದರ ಸ್ಪಷ್ಟವಾದ ಕಳಸವಾಗಿರುವುದು. ಈ ಭೇದವನ್ನು ನಾನು ತಿಳಿದುಕೊಂಡೇ ಮಾಡಿರುವೆನು ।೪೯॥

ಈಗ ಹದಿನೇಳನೆಯ ಅಧ್ಯಾಯದವರೆಗೆ ಎಲ್ಲ ಅಧ್ಯಾಯಗಳು ಹೇಗೆ ಉದ್ಭವಿಸಿದವು ಎಂಬುದನ್ನು ನಿಮಗೆ ತಿಳಿಯುವ ರೀತಿಯಲ್ಲಿ ತಿಳಿಸಿ ಹೇಳುವೆನು ।೫೦॥

ಪ್ರಯಾಗದಲ್ಲಿ ಗಂಗಾ ಹಾಗೂ ಯಮುನಾ ಇವುಗಳ ಸಂಗಮದಲ್ಲಿ ಪ್ರವಾಹದಿಂದ ಉದಕವು ಬೇರೆಯಾಗಿ ಕಂಡರೂ ನೀರು ಎಂಬ ಭಾವನೆಯಲ್ಲಿ ಒಂದೇ ಆಗಿರುವುದು ।೫೧॥

ಅರ್ಧನಾರಿನಟೇಶ್ವರನ ರೂಪದಲ್ಲಿ ಸ್ತ್ರೀ ಹಾಗೂ ಪುರುಷ ಇವರ ಆಕಾರವು ಸ್ಥಿರವಾಗಿದ್ದು ಕಂಡು ಯಾವ ಪ್ರಕಾರವಾಗಿ ಒಂದೇ ಶರೀರವು ಇರುವುದು ।೫೨॥

ಶುದ್ಧ ಪಕ್ಷದಲ್ಲಿ ಚಂದ್ರನ ಕಲೆಯು ದಿನೇ ದಿನೇ ಬೆಳೆಯುತ್ತಿರುವುದು ಕಾಣುವುದು. ಆದರೆ ಚಂದ್ರನ ದೃಷ್ಟಿಯಿಂದ ನೋಡಿದರೆ ಆತನು ಯಾವಾಗಲೂ ಪೂರ್ಣನಾಗಿರುವನು. ಬೇರೆ ಬೇರೆ ಲೇಪಗಳಿಲ್ಲ ।೫೩॥

ಅದರಂತೆ ಶ್ಲೋಕವು ನಾಲ್ಕು ಚರಣಗಳಿಂದ ಬೇರೆ ಬೇರೆಯಾಗಿ ಕಾಣುವುದು. ಅಥವಾ ಅಧ್ಯಾಯವು ಅಧ್ಯಾಯಗಳಿಂದ ಬೇರೆಯಾಗಿ ಕಾಣುವುದು ನಿಜ ।೫೪॥

ಆದಾಗ್ಯೂ, ಅರ್ಥದ ದೃಷ್ಟಿಯಿಂದ ಅವುಗಳಲ್ಲಿ ಭೇದವಿಲ್ಲ. ಅನೇಕ ರತ್ನಗಳನ್ನು ಪೋಣಿಸಿದ ದಾರವು ಒಂದೇ ಆಗಿರುವುದು ।೫೫॥

ಅನೇಕ ಮುತ್ತುಗಳನ್ನು ಕೂಡಿಸಿ ಒಂದು ಏಕಾವಳಿಯ ಹಾರವು ಸಿದ್ಧವಾಗುವುದು. ಆದರೆ ಎಲ್ಲ ಮುತ್ತುಗಳ ಕಾಂತಿಯು ಒಂದೇಯಾಗಿರುವುದು ।೫೬॥

ಹಾರದಲ್ಲಿ ಹೂವುಗಳನ್ನು ಪೋಣಿಸಿದಾಗ ಅವುಗಳ ಸಂಖ್ಯೆಯು ಬೆಳೆಯುವುದು. ಆದರೆ ಅವುಗಳ ಸುಗಂಧವನ್ನು ಸೇವಿಸುವಾಗ ಅದರ ಕಡೆ ಬಟ್ಟು ಮಾಡಿ ತೋರಿಸಬೇಕಾಗಿಲ್ಲ. ಅದರಂತೆ ಶ್ಲೋಕ, ಅಧ್ಯಾಯಗಳು ಅನೇಕವಿದ್ದರೂ ಅರ್ಥವು ಒಂದೇ ಆಗಿರುವುದು ।೫೭॥

ಗೀತೆಯ ಶ್ಲೋಕಗಳು ಏಳುನೂರಿದ್ದು, ಅಧ್ಯಾಯಗಳು ಹದಿನೆಂಟು ಇರುವುವು. ಆದರೆ ದೇವನು ಈ ಎಲ್ಲವುಗಳಲ್ಲಿ ಒಂದೇ ತತ್ತ್ವದ ವಿವೇಚನೆ ಮಾಡಿರುವನು. ಬೇರೆ ಏನೂ ಹೇಳಿಲ್ಲ ।೫೮॥

ಮತ್ತು ನಾನೂ ಸಹ ದೇವನ ಮಾರ್ಗವನ್ನು ಬಿಡದೇ ಗ್ರಂಥದ ಸ್ಪಷ್ಟೀಕರಣವನ್ನು ಮಾಡಿರುವೆನು. ಸಧ್ಯಕ್ಕೆ ಇದೇ ತಿಳುವಳಿಕೆಯಿಂದ ನಾನು ಹದಿನೆಂಟನೆಯ ಅಧ್ಯಾಯವನ್ನು ಹೇಳುವೆನು. ಅದನ್ನು ಕೇಳಿರಿ ।೫೯॥

ಹಾಗಾದರೆ, ಹದಿನೇಳನೆಯ ಅಧ್ಯಾಯದ ಕೊನೆಯ ಶ್ಲೋಕದಲ್ಲಿ ದೇವನು ಹೇಳಿದ್ದು ಏನೆಂದರೆ ।೬೦॥

ಅರ್ಜುನಾ, ಬ್ರಹ್ಮನಾಮದ ವಿಷಯಕ್ಕೆ ಶ್ರದ್ಧೆಯನ್ನು ಬಿಟ್ಟು ಎಷ್ಟು ಕರ್ಮ ಮಾಡಿದರೂ ಅವುಗಳು ವ್ಯರ್ಥವಾಗುವುವು ।೬೧॥

ಹೀಗೆ ದೇವನ ಮಾತುಗಳನ್ನು ಕೇಳಿ ಅರ್ಜುನನಿಗೆ ಬಹಳ ಆನಂದವಾಯಿತು ಮತ್ತು ಆತನು ಹೇಳಿದನೇನೆಂದರೆ, ದೇವನು ಕರ್ಮದ ಮೇಲೆ ಶ್ರದ್ಧೆ ಇಡುವವನಿಗೆ ದೋಷವಿಟ್ಟಿದ್ದಾನೆ ।೬೨॥

ಪಾಪ, ಆತನು ಅಜ್ಞಾನದಿಂದ ಕುರುಡನಾಗಿರುವುದರಿಂದ ಎಲ್ಲ ಜಗದಲ್ಲಿ ಈಶ್ವರನು ತುಂಬಿಕೊಂಡಿರುವನೆಂಬುದು ಆತನಿಗೆ ತಿಳಿಯುವುದಿಲ್ಲ. ಅಂದಮೇಲೆ ಪ್ರತ್ಯಕ್ಷವಾಗಿ ಆತನ ಮುಂದಿದ್ದರೂ ಬ್ರಹ್ಮನಾಮ ಶ್ರದ್ಧೆಯ ಮರ್ಮವು ಹೇಗೆ ತಿಳಿದೀತು? ।೬೩॥

ರಜ ಮತ್ತು ತಮಗಳ ನಾಶವಾಗದ ಹೊರತು ಇರುವ ಶ್ರದ್ಧೆಯು, ಬ್ರಹ್ಮನ ಬ್ರಹ್ಮ ಶ್ರದ್ಧೆಯ ನಾಮಕ್ಕೆ ಹೇಗೆ ಪ್ರಾಪ್ತವಾದೀತು? ।೬೪॥

ಮಗ ಕೋತಾ ಖೇಂವ ದೇಣೇ । ವಾರ್ತೇವರೀಲ ಧಾಂವಣೇ । ಸಾಂಡೀಪಡೇ ಖೇಳಣೇ । ನಾಗಿಣೀಚೇ ತೇ ।೬೫।। ತೈಸೀ ಕರ್ಮೇ ದುವಾಡೇ । ತಯಾ ಜನ್ಮಾಂತರಾಚೀ ಕಡೇ । ದುರ್ಮೇಳಾವೇ ಏವಢೇ । ಕರ್ಮಾಮಾಜೀ ।೬೬।। ನಾ ವಿಪಾಯೇ ಹೇ ಉಜೂ ಹೋಯೇ । ತರೀ ಜ್ಞಾನಾಚೀ ಯೋಗ್ಯತಾ ಲಾಹೇ । ಯೇರ್ಹವೀ ಯೇಣೇಂಚಿ ಜಾಯೇ । ನಿರಯಾಲಯಾ ।೬೭।। ಕರ್ಮೀ ಹಾ ಠಾಯವರೀ । ಆಹಾತೀ ಬಹುವಾ ಅವಸರೀ । ಆತಾ ಕರ್ಮತಾ ಕೈ ವಾರೀ । ಮೋಕ್ಷಾಚೀ ಹೇ ।೬೮।। ತರೀ ಫಿಟೋ ಕರ್ಮಾಚಾ ಪಾಂಗು । ಕೀಜೋ ಅವಘಾಚಿ ತ್ಯಾಗು । ಆದರಿಜೋ ಅವ್ಯಂಗು । ಸಂನ್ಯಾಸು ಹಾ ।೬೯।। ಕರ್ಮಬಾಧೇಚೀ ಕಹೀ । ಜೇಥ ಭಯಾಚೀ ಗೋಠೀ ನಾಹೀ । ತೇ ಆತ್ಮಜ್ಞಾನ ಜಿಹೀ । ಸ್ವಾಧೀನ ಹೋಯ ।೭೦।। ಜ್ಞಾನಾಚೇ ಆವಾಹನಮಂತ್ರ । ಜೇ ಜ್ಞಾನಪಿಕತೇ ಸುಕ್ಷೇತ್ರ । ಜ್ಞಾನ ಆಕರ್ಷಿತೇ ಸೂತ್ರ । ತಂತು ಜೇ ಕಾ ।೭೧।। ತೇ ದೋನೀ ಸಂನ್ಯಾಸ ತ್ಯಾಗ । ಅನುಷ್ಠುನಿ ಸುಟೇ ಜಗ । ತರೀ ಹೇಂಚಿ ಆತಾ ಚಾಂಗ । ವ್ಯಕ್ತ ಪುಸೋ ।೭೨।। ಐಸೇ ಮ್ಹಣೌನಿ ಪಾರ್ಥೇ । ತ್ಯಾಗ ಸಂನ್ಯಾಸ ವ್ಯವಸ್ಥೇ । ರೂಪ ಹೋಆವಯಾ ಜೇಥೇ । ಪ್ರಶ್ನು ಕೇಲಾ ।೭೩।। ತೇಥ ಪ್ರತ್ಯುತ್ತರೇ ಬೋಲಿಲೀ । ಶ್ರೀಕೃಷ್ಣೇ ಜೇ ಚಾವಳಿಲೀ । ತಯಾ ವ್ಯಕ್ತೀ ಜಾಲೀ । ಅಷ್ಟಾದಶಾ ।೭೪।। ಏವಂ ಜನ್ಯಜನಕ ಭಾವೇ । ಅಧ್ಯಾವೋ ಅಧ್ಯಾಯಾತೇ ಪ್ರಸವೇ । ಆತಾ ಐಕಾ ಬರವೇ । ಪುಸಿಲೇ ಜೇ ।೭೫।। ತರೀ ಪಂಡುಕುಮರೇ ತೇಣೇ । ದೇವಾಚೇ ಸರತೇ ಬೋಲಣೇ । ಜಾಣೋನಿ ಅಂತಃಕರಣೇ । ಕಾಣೇ ಘೇತಲೀ ।೭೬।। ಯೇರ್ಹವೀ ತತ್ತ್ವವಿಷಯೀ ಭಲಾ । ತೋ ನಿಶ್ಚಿತು ಅಸೇ ಕೀರ ಜಾಹಲಾ । ಪರಿ ದೇವೋ ರಾಹೇ ಉಗಲಾ । ತೇ ಸಾಹಾವೇನಾ ।೭೭।। ವತ್ಸಧಾಲಯಾಹೀ ವರೀ । ಧೇನೂ ನ ವಚಾವೀ ದೂರೀ । ಅನನ್ಯ ಪ್ರೀತೀಚೀ ಪರೀ । ಐಸೀ ಆಹೇ ।೭೮।। ತೇಣೇ ಕಾಜೇವೀಣಹೀ ಬೋಲಾವೇ । ತೇ ದೇಖಿಲೇ ತರೀ ಪಾಹಾವೇ । ಭೋಗಿತಾ ಚಾಡ ದುಣಾವೇ । ಪಢಿಯಂತಯಾಠಾಯೀ ।೭೯।। ಐಸೀ ಪ್ರೇಮಾಚೀ ಹೇ ಜಾತೀ । ಆಣಿ ಪಾರ್ಥ ತಂವ ತೇಂಚಿ ಮೂರ್ತೀ । ಮ್ಹಣೌನಿ ಕರೂ ಲಾಹೇ ಖಂತೀ । ಉಗೇಪಣಾಚೀ ।೮೦।। ಆಣಿ ಸಂವಾದಾಚೇನಿ ಮಿಷೇ । ಜೇ ಅವ್ಯವಹಾರೀ ವಸ್ತು ಅಸೇ । ತೇಂಚಿ ಭೋಗಿಜೇ ಕೀ ಜೈಸೇ । ಆರಿಸಾ ರೂಪ ।೮೧।।

ಅಂದಮೇಲೆ ಶಸ್ತ್ರಕ್ಕೆ ಆಲಿಂಗಿಸುವುದು, ಅಥವಾ ಹಗ್ಗದ ಮೇಲೆ ಓಡುತ್ತ ಹೋಗುವುದು, ಮಿಡಿನಾಗರವನ್ನು ಕೈಯಲ್ಲಿ ಹಿಡಿದು ಆಡುವುದು. ಇವು ಮರಣಕ್ಕೆ ಕಾರಣ ವಾಗುವುವು ।೬೫॥

ಅದರಂತೆ ಕರ್ಮಗಳು ಕಠಿಣವಾಗಿದ್ದು, ಅವು ಜನ್ಮ ಮರಣಕ್ಕೆ ಕಾರಣವಾಗುವುವು. ಈ ಪ್ರಕಾರವಾಗಿ ಕರ್ಮಗಳ ದುಷ್ಟ ಧರ್ಮವಾಗಿರುವುದು ।೬೬॥

ಒಂದುವೇಳೆ ಕರ್ಮಗಳು ಯಥಾ ಸಾಂಗವಾದಲ್ಲಿ ಜ್ಞಾನದ ಯೋಗ್ಯತೆ ಬರುವುದು. ಹಾಗೂ ಅದೇ ಕರ್ಮಗಳು ಯಥಾಸಾಂಗವಾಗದಿದ್ದಲ್ಲಿ, ನರಕ ಪ್ರಾಪ್ತಿಗೆ ಕಾರಣವಾಗು ವುವು ।೬೭॥

ಇಲ್ಲಿಯವರೆಗೆ ಕರ್ಮಗಳನ್ನು ಮಾಡುತ್ತ ಅನೇಕ ಕಾಲ ಗತಿಸಿದರೂ, ಅದರಿಂದ ಮೋಕ್ಷವು ದೊರಕಿಲ್ಲ. ಈಗ ಇನ್ನು ಮುಂದೆ ಕರ್ಮಠರಿಗೆ ಮೋಕ್ಷದ ಸರತಿ ಎಂದು ಬರಬೇಕು? ।೬೮॥

ಅದಕ್ಕಾಗಿ ಕರ್ಮಗಳ ದೈನ್ಯವನ್ನು ಬಿಟ್ಟು ಮತ್ತು ಅವು ಗಳ ಸರ್ವತ್ಯಾಗ ಮಾಡಿ ಅವ್ಯಂಗವಾದ ಕರ್ಮ ಸಂನ್ಯಾಸ ವನ್ನು ಆದರಿಸಬೇಕು ।೬೯॥

ಯಾವುದರ ಯೋಗದಿಂದ ಕರ್ಮಗಳ ಬಾಧೆಯ ಭಯವು ಇರುವುದಿಲ್ಲ. ಹಾಗೂ ಆತ್ಮಜ್ಞಾನವು ಪ್ರಾಪ್ತ ವಾಗುವುದು ।೭೦॥

ಹಾಗೂ ಕರ್ಮಸಂನ್ಯಾಸ ಮತ್ತು ಕರ್ಮತ್ಯಾಗವು ಇವು ಜ್ಞಾನಕ್ಕೆ ಆಮಂತ್ರಿಸುವ ಮಂತ್ರಗಳಾಗಿವೆ. ಅಥವಾ ಜ್ಞಾನವನ್ನು ಬೆಳೆಯುವ ಭೂಮಿಯಾಗಿದೆ. ಜ್ಞಾನಕ್ಕೆ ಆಕರ್ಷಿಸುವ ಸೂತ್ರದ ತಂತುವಾಗಿದೆ ।೭೧॥

ಈ ಎರಡು ಸಂನ್ಯಾಸ ಹಾಗೂ ತ್ಯಾಗ ಇವುಗಳ ಅನು ಷ್ಠಾನವನ್ನು ಮಾಡಿ ಜಗವು ಮುಕ್ತವಾಗ ಬೇಕಾಗುವು ದರಿಂದ ಈಗ ಇದನ್ನೇ ಸ್ಪಷ್ಟವಾಗಿ ಹೇಳಿರೆಂದು ದೇವನಿಗೆ ಕೇಳಬೇಕು? ।೭೨॥

ಹೀಗೆ ಪಾರ್ಥನು ಮನದಲ್ಲಿ ವಿಚಾರಿಸಿಕೊಂಡು ತ್ಯಾಗ ಮತ್ತು ಸಂನ್ಯಾಸ ಇವುಗಳ ಸ್ಪಷ್ಟೀಕರಣವಾಗಬೇಕೆಂದು ಪ್ರಶ್ನೆಯನ್ನು ಮಾಡಿದನು ।೭೩॥

ಆಗ ಶ್ರೀಕೃಷ್ಣನು ಅರ್ಜುನನಿಗೆ ಉತ್ತರ ಕೊಡುವು ದಕ್ಕಾಗಿ ಮಾಡಿದ ವ್ಯಾಖ್ಯಾನದಲ್ಲಿಯೇ ಈ ಹದಿನೆಂಟನೆಯ ಅಧ್ಯಾಯವು ವ್ಯಕ್ತವಾಯಿತು ।೭೪॥

ಈ ಪ್ರಕಾರವಾಗಿ ಕಾರ್ಯ ಕಾರಣ ಭಾವದಿಂದ ಒಂದು ಅಧ್ಯಾಯವು ಎರಡನೆಯ ಅಧ್ಯಾಯಕ್ಕೆ ಕಾರಣೀಭೂತ ವಾಗುವುದು. ಈಗ ಅರ್ಜುನನು ಯಾವ ಪ್ರಶ್ನೆಯನ್ನು ಮಾಡಿದನೆಂಬುದು ಕೇಳಿರಿ ।೭೫॥

ಹದಿನೇಳನೆಯ ಅಧ್ಯಾಯದ ಕೊನೆಯ ಶ್ಲೋಕದಲ್ಲಿ ದೇವನು ಹೇಳಿದ್ದಕ್ಕೆ ಅಂತಃಕರಣದಲ್ಲಿ ಅದರ ಮನನ ಮಾಡಿ ಅರ್ಜುನನು ಹೀಗೆ ಶಂಕೆಯನ್ನು ಮಾಡಿದನು ।೭೬॥

ಇದಲ್ಲದೇ ಆತನಿಗೆ ದೇವನು ಹೇಳಿದ ತತ್ತ್ವವು ಪೂರ್ಣವಾಗಿ ತಿಳಿದಿತ್ತು, ಆದಾಗ್ಯೂ ದೇವನು ಏನೂ ಹೇಳದೇ ಸುಮ್ಮನೇ ಕುಳಿತದ್ದಕ್ಕೆ ಆತನಿಗೆ ಸರಿ ಕಾಣಲಿಲ್ಲ ।೭೭॥

ಕರುವಿನ ಹೊಟ್ಟೆ ತುಂಬಿದರೂ ಆಕಳವು ಅದರಿಂದ ದೂರವಾಗಬಾರದು. ಹೀಗೆ ಏಕನಿಷ್ಠ ಪ್ರೇಮದ ಲಕ್ಷಣ ವಾಗಿದೆ ।೭೮॥

ತನಗೆ ಪ್ರಿಯನಾದ ಮನುಷ್ಯನು ಯಾವ ಕಾರಣ ವಿಲ್ಲದೇ ಮಾತನಾಡುತ್ತಿರಬೇಕು. ನೋಡಿದ್ದರೂ ತನ್ನ ಕಡೆಗೆ ನೋಡುತ್ತಿರಬೇಕು ಎನ್ನುವುದು ಪ್ರೀತಿಯ ಲಕ್ಷಣವಾಗಿದೆ ।೭೯॥

ಹೀಗೆ ಪ್ರೇಮದ ಜಾತಿಯಾಗಿದ್ದು, ಪಾರ್ಥನಾದರೂ ಶ್ರೀಕೃಷ್ಣನ ಪ್ರೇಮದ ಮೂರ್ತಿಯೇ ಆಗಿರುವನು. ಆದ್ದ ರಿಂದ ಭಗವಂತನು ಸುಮ್ಮನಾಗಿದ್ದಕ್ಕೆ ಆತನಿಗೆ ಖೇದವೆನಿಸಿತು ।೮೦॥

ಮತ್ತು ಸಂವಾದದಿಂದ ಪಾರಮಾರ್ಥಿಕ ವಸ್ತುವಾದ ಬ್ರಹ್ಮವು ಕನ್ನಡಿಯಲ್ಲಿ ತನ್ನ ರೂಪವು ಸ್ಪಷ್ಟವಾಗಿ ತೋರು ವಂತೆ ಭೋಗಿಸಲು ಬರುವುದು ।೮೧॥

ಮಗ ಸಂವಾದು ತೋಹೀ ಪಾರುಖೇ । ತರೀ ಭೋಗಿತಾ ಭೋಗಣೇ ಥೋಕೇ । ಹೇ ಕಾ ಸಾಹಾವೇಲ ಸುಖೇ । ಲಾಂಚಾವಲೆಯಾ? ॥೮೨॥ ಯಾಲಾಗೀ ತ್ಯಾಗ ಸಂನ್ಯಾಸ । ಪುಸಾವಯಾಚೇ ಘೇಊನಿ ಮಿಸ । ಮಗ ಉಪಲವಿಲೇ ದುಸ । ಗೀತೇಚೇ ತೇ ॥೮೩॥ ಅಠರಾವಾ ಅಧ್ಯಾವೋ ನೋಹೇ । ಹೇ ಏಕಾಧ್ಯಾಯೀ ಗೀತಾಚಿ ಆಹೇ । ಜೈ ವಾಂಸರುಚಿ ಗಾಯ ದುಹೇ । ತೈ ವೇಳು ಕಾಯಸಾ? ॥೮೪॥ ತೈಸೀ ಸಂಪತಾ ಅವಸರೀ । ಗೀತಾ ಆದರವಿಲೀ ಮಾಘಾರೀ । ಸ್ವಾಮೀ ಭೃತ್ಯಾಚಾ ನ ಕರೀ । ಸಂವಾದು ಕಾಈ? ॥೮೫॥ ಪರೀ ಹೇ ಅಸೋ ಐಸೇ । ಅರ್ಜುನೇ ಪುಸಿಜತ ಅಸೇ । ಮ್ಹಣೇ ವಿನಂತೀ ವಿಶ್ವೇಶೇ । ಅವಧಾರಿಜೋ ॥೮೬॥

ಅರ್ಜುನ ಉವಾಚ:-<br>
ಸಂನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಮ್ ।<br>
ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿನಿಷೂದನ ॥೧॥

ಹಾ ಜೀ ಸಂನ್ಯಾಸು ಆಣಿ ತ್ಯಾಗು । ಇಯಾ ದೋಹೀ ಏಕ ಅರ್ಥೀ ಲಾಗು । ಜೈಸಾ ಸಾಂಘಾತು ಆಣಿ ಸಂಘು । ಸಂಘಾತೇಂಚಿ ಬೋಲಿಜೇ ॥೮೭॥ ತೈಸೇಂಚಿ ತ್ಯಾಗೇ ಆಣಿ ಸಂನ್ಯಾಸೇ । ತ್ಯಾಗುಚಿ ಬೋಲಿಜತು ಅಸೇ । ಆಮಚೇನಿ ತಂವ ಮಾನಸೇ । ಜಾಣಿಜೇ ಹೇಂಚೀ ॥೮೮॥ ನಾ ಕಾಂಹೀ ಆಥೀ ಅರ್ಥಭೇದು । ತೋ ದೇವೋ ಕರೋತು ವಿಶದು । ತೇಥ ಮ್ಹಣತೀ ಶ್ರೀಮುಕುಂದು । ಭಿನ್ನಚಿ ಪೈ ॥೮೯॥ ತರೀ ಅರ್ಜುನಾ ತುಝ್ಯಾ ಮನೀ । ತ್ಯಾಗ ಸಂನ್ಯಾಸ ದೋನೀ । ಏಕಾರ್ಥ ಗಮಲೇ ಹೇ ಮಾನೀ । ಮೀಹೀ ಸಾಚ ॥೯೦॥ ಇಹೀ ದೋಹೀ ಕೀರ ಶಬ್ದೀ । ತ್ಯಾಗುಚಿ ಬೋಲಿಜೇ ತ್ರಿಶುದ್ಧೀ । ಪರೀ ಕಾರಣ ಏಥ ಭೇದೀ । ಏತುಲೇಂಚಿ ॥೯೧॥ ಜೇ ನಿಪಟೂನಿ ಕರ್ಮ ಸಾಂಡಿಜೇ । ತೇ ಸಾಂಡಣೇ ಸಂನ್ಯಾಸು ಮ್ಹಣಿಜೇ । ಆಣಿ ಫಲಮಾತ್ರ ಕಾ ತ್ಯಜಿಜೇ । ತೋ ತ್ಯಾಗು ಗಾ ॥೯೨॥ ತರೀ ಕೋಣಾ ಕರ್ಮಾಚೇ ಫಳ । ಸಾಂಡಿಜೇ ಕೋಣ ಕರ್ಮ ಕೇವಳ । ಹೇಂಹೀ ಸಾಂಗೋ ವಿವಳ । ಚಿತ್ತ ದೇ ಪಾ ॥೯೩॥ ತರೀ ಆಪೈಸೀ ದಾಂಗೇ ಡೋಂಗರ । ಝಾಡೇ ಡಾಳತೀ ಅಪಾರ । ತೈಸೇ ಲಾಂಬೇ ರಾಜಾಗರ । ನುಠಿತೀ ತೇ ॥೯೪॥ ನ ಪೇರಿತಾ ಸೈಂಘ ತೃಣೇ । ಉಠತೀ ತೈಸೇ ಸಾಳೀಚೇ ಹೋಣೇ । ನಾಹೀ ಗಾ ರಾಬಾಉಣೇ । ಜಿಯಾಪರೀ ॥೯೫॥

ಅಂದಮೇಲೆ ಸಂವಾದವು ನಿಂತಾಗ, ಬ್ರಹ್ಮ ಪ್ರಾಪ್ತಿಯೂ ನಿಲ್ಲುವುದು. ಈ ಮಾತು ಸುಖ ಪ್ರಾಪ್ತಿಗೆ ಹೊಂದಿಕೊಂಡ ಅರ್ಜುನನಿಗೆ ಹೇಗೆ ಸಹನೆಯಾದೀತು? ॥೮೨॥

ಆದ್ದರಿಂದ ತ್ಯಾಗ ಹಾಗೂ ಸಂನ್ಯಾಸವೆಂದರೆ ಏನೆಂಬುದು ಕೇಳುವ ನಿಮಿತ್ತದಿಂದ ಗೀತಾರೂಪ ವಸ್ತ್ರದ ಗಳಿಗೆಯನ್ನು ಅರ್ಜುನನು ಪುನಃ ಉಚ್ಚಿದನು ॥೮೩॥

ಅದಕ್ಕಾಗಿ ಇದು ಹದಿನೆಂಟನೆಯ ಅಧ್ಯಾಯವಾಗಿರದೇ ಒಂದೇ ಅಧ್ಯಾಯದ ಗೀತೆಯಾಗಿದೆ. ಆಕಳಿಗೆ ತೊರೆ ಬಿಡಲು ಕಾಲದ ಅವಶ್ಯಕತೆ ಇರುವುದೇ? ॥೮೪॥

ಅದರಂತೆ ಗೀತೆಯು ಮುಗಿಯುವ ಹಂತದಲ್ಲಿ ಪುನಃ ಅರ್ಜುನನು ಗೀತೆಯ ಆರಂಭಕ್ಕೆ ಬಂದನು. ಸೇವಕನು ಪ್ರಶ್ನಿಸಿದಾಗ ಸ್ವಾಮಿಯು ಅದರ ಉತ್ತರವನ್ನು ಏಕೆ ಕೊಡಲಾರನು? ॥೮೫॥

ಆದರೆ ಈ ಮಾತು ಇರಲಿ, ಅರ್ಜುನನು ಶ್ರೀಕೃಷ್ಣನಿಗೆ ವಿನಂತಿಸಿ ಹೇಳಿದನೆಂದರೆ :- ದೇವನೇ ಈಗ ನನ್ನ ವಿನಂತಿಗೆ ಲಕ್ಷವನ್ನು ಕೊಡಿರಿ ॥೮೬॥

ಶ್ಲೋಕಾರ್ಥ :- ಅರ್ಜುನನು ಕೇಳಿದನು:-ಕೃಷ್ಣಾ! ಸಂನ್ಯಾಸವೆಂದರೇನು? ತ್ಯಾಗವೆಂದರೇನು? ಇವುಗಳ ಸ್ವರೂಪವನ್ನು ಬೇರೆ ಬೇರೆಯಾಗಿ ತಿಳಿಸು ॥೧॥

ಹೇ ಪ್ರಭುವೇ, ಸಂನ್ಯಾಸ ಮತ್ತು ತ್ಯಾಗ ಈ ಎರಡರ ಅರ್ಥವು ಒಂದೇ ಆಗುವುದು, ಸಂಘಾತ ಮತ್ತು ಸಂಘ ಈ ಎರಡರ ನಿರ್ದೇಶನವನ್ನು ಸಂಘಾತದಿಂದಲೇ ಮಾಡುವರು ॥೮೭॥

ಅದರಂತೆಯೇ, ತ್ಯಾಗ ಮತ್ತು ಸಂನ್ಯಾಸ ಈ ಎರಡೂ ಶಬ್ದಗಳಿಂದ ತ್ಯಾಗದ್ದೇ ಬೋಧವಾಗುವುದೆಂದು ನಮ್ಮ ಮನಸ್ಸಿಗೆ ಅನಿಸಿಕೆಯಾಗುವುದು ॥೮೮॥

ಅಂದಮೇಲೆ ಒಂದುವೇಳೆ ಅವುಗಳ ಅರ್ಥದಲ್ಲಿ ಏನಾದರೂ ಭೇದವಿದ್ದರೆ, ದೇವನೇ ಸ್ಪಷ್ಟಮಾಡಿ ಹೇಳಿರಿ. ಆಗ ಶ್ರೀಮುಕುಂದನು ಈ ಎರಡು ಶಬ್ದಗಳು ಭಿನ್ನವಾಗಿವೆ ಎಂದನು ॥೮೯॥

ಆದಾಗ್ಯೂ, ಅರ್ಜುನಾ ತ್ಯಾಗ ಮತ್ತು ಸಂನ್ಯಾಸ ಈ ಎರಡು ಶಬ್ದಗಳು ಏಕಾರ್ಥವಾಗಿವೆ ಎಂದು ನಿನ್ನ ಮನಸ್ಸಿಗೆ ಅನಿಸಿಕೆ ಆಗಿರುವುದು ಸರಿಯಾಗಿದೆ ಎಂದು ನಾನೂ ಹೇಳುವೆನು ॥೯೦॥

ನಿಜವಾಗಿ ಈ ಎರಡು ಶಬ್ದಗಳಿಂದ ತ್ಯಾಗದ ಒಂದೇ ನಿರ್ದೇಶನವಾಗುವುದು ನಿಜವಿದೆ. ಆದರೆ ಅವುಗಳ ಅರ್ಥದಲ್ಲಿ ಭೇದವಾಗಲಿಕ್ಕೆ ಇಷ್ಟೇ ಕಾರಣವಾಗಿರುತ್ತದೆ ॥೯೧॥

ಯಾವುದು ಸಂಪೂರ್ಣವಾಗಿ ಕರ್ಮಗಳನ್ನು ಬಿಡುವುದು, ಅದಕ್ಕೆ ಸಂನ್ಯಾಸವೆಂದು ಹೇಳುವರು ಮತ್ತು ಅರ್ಜುನಾ, ಕರ್ಮಕರ್ತೃತ್ವದ ಅಭಿಮಾನವನ್ನು ಮತ್ತು ಫಲವನ್ನು ಬಿಡುವುದಕ್ಕೆ ತ್ಯಾಗವೆನ್ನುವರು ॥೯೨॥

ಹಾಗಾದರೆ ಯಾವ ಕರ್ಮಗಳ ಫಲವನ್ನು ಬಿಡಬೇಕು ಹಾಗೂ ಯಾವ ಕರ್ಮಗಳನ್ನು ಮೂಲತಃ ಬಿಡಬೇಕು, ಇವುಗಳನ್ನು ಸಹ ಸ್ಪಷ್ಟಮಾಡಿ ಹೇಳುವೆ ಲಕ್ಷಕೊಟ್ಟು ಕೇಳು ॥೯೩॥

ಅರಣ್ಯದ ಪರ್ವತದಲ್ಲಿ ಎಷ್ಟೋ ಗಿಡಗಂಟಿಗಳು ತಾವೇ ಹುಟ್ಟಿ ಬೆಳೆಯುವುವು. ಅದರಂತೆ ಗದ್ದೆಯಲ್ಲಿ ಭತ್ತದ ಬೆಳೆಯು, ತೋಟದ ಗಿಡಗಳು ತಾವೇ ಬೆಳೆಯುವುದಿಲ್ಲ ॥೯೪॥

ಬಿತ್ತದೇ ಹುಲ್ಲು ಬೇಕಾದಷ್ಟು ಬೆಳೆಯುವುದು. ಆದರೆ ಹೊಲದಲ್ಲಿ ದುಡಿಯದೇ ಪೈರುಗಳು ಬರುವುದೇ ಇಲ್ಲ ॥೯೫॥

ಕಾ ಅಂಗ ಜಾಹಲೇ ಸಹಜೇ । ಪರೀ ಲೇಣೇ ಉದ್ಯಮೇ ಕೀಜೇ । ನದೀ ಆಪೈಸೀ ಆಪಾದಿಜೇ । ವಿಹಿರೀ ಜೇವೀ ॥೯೬॥ ತೈಸೇ ನಿತ್ಯ ನೈಮಿತ್ತಿಕ । ಕರ್ಮ ಹೋಯ ಸ್ವಾಭಾವಿಕ । ಪರೀ ನ ಕಾಮಿತಾ ಕಾಮಿಕ । ನ ನಿಫಜೇ ಜೇ ॥೯೭॥

ಶ್ರೀಭಗವಾನುವಾಚ:-
ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ।
ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥೨॥

ಕಾ ಕಾಮನೆಚೇಚಿ ದಳವಾಡೇ । ಜೇ ಉಭಾರಾವಯಾ ಘಡೇ । ಅಶ್ವಮೇಧಾದಿಕ ಪುಡೇ । ಯಾಗ ಜೇಥ ॥೯೮॥ ವಾಪೀ ಕೂಪ ಆರಾಮು । ಅಗ್ರಹಾರೇ ಹನ ಮಹಾಗ್ರಾಮು । ಆಣೀಕಹೀ ನಾನಾಸಂಭ್ರಮು । ವ್ರತಾಂಚೇ ತೇ ॥೯೯॥ ಐಸೇ ಇಷ್ಟಾಪೂರ್ತ ಸಕಳ । ಜಯಾ ಕಾಮನಾ ಏಕ ಮೂಳ । ಜೇ ಕೇಲೇ ಭೋಗವೀ ಫಳ । ಬಾಂಧೋನಿಯಾ ॥೧೦೦॥ ದೇಹಾಚಿಯಾ ಗಾಂವಾ ಆಲಿಯಾ । ಜನ್ಮ ಮೃತ್ಯೂಚಿಯಾ ಸೋಹಳಿಯಾ । ನಾ ಮ್ಹಣೋ ನಯೇ ಧನಂಜಯಾ । ಜಿಯಾ ಪರೀ ॥೧೦೧॥ ಕಾ ಲಲಾಟೀಂಚೇ ಲಿಹಿಲೇ । ನ ಮೋಡೇ ಗಾ ಕಾಂಹೀ ಕೇಲೇ । ಕಾಳೇಗೋರೇಪಣ ಧುತಲೇ । ಫೀಟೋ ನೇಣೇ ॥೧೦೨॥ ಕೇಲೇ ಕಾಮ್ಯ ಕರ್ಮ ತೈಸೇ । ಫಳ ಭೋಗಾವಯಾ ಧರಣೇ ಬೈಸೇ । ನ ಫೇಡಿತಾ ಋಣ ಜೈಸೇ । ವೋಸಂಡೀನಾ ॥೧೦೩॥ ಕಾ ಕಾಮನಾಹೀ ನ ಕರಿತಾ । ಅವಸಾಂತ ಘಡೇ ಪಂಡುಸುತಾ । ತರೀ ವಾಯಕಾಂಡೇ ನ ಝುಂಝುತಾ । ಲಾಗೇ ಜೈಸೇ ॥೧೦೪॥ ಗೂಳ ನೇಣತಾ ತೋಂಡೀ । ಘಾತಲಾ ದೇಚಿ ಗೋಡೀ । ಆಗೀ ಮಾನೂನಿ ರಾಖೋಂಡೀ । ಚೇಪಿಲಾ ಪೋಳೀ ॥೧೦೫॥ ಕಾಮ್ಯಕರ್ಮೀ ಹೇ ಏಕ । ಸಾಮರ್ಥ್ಯ ಆಥೀ ಸ್ವಾಭಾವಿಕ । ಮ್ಹಣೌನಿ ನಕೋ ಕೌತುಕ । ಮುಮುಕ್ಷು ಏಥ ॥೧೦೬॥ ಕಿಂಬಹುನಾ ಪಾರ್ಥಾ ಐಸೇ । ಜೇ ಕಾಮ್ಯ ಕರ್ಮ ಗಾ ಅಸೇ । ತೇ ತ್ಯಜಿಜೇ ವಿಷ ಜೈಸೇ । ವೋಕೂನಿಯಾ ॥೧೦೭॥ ಮಗ ತಯಾ ತ್ಯಾಗಾತೇ ಜಗೀ । ಸಂನ್ಯಾಸು ಐಸಿಯಾ ಭಂಗೀ । ಬೋಲಿಜೇ ಅಂತರಂಗೀ । ಸರ್ವದ್ರಷ್ಟಾ ॥೧೦೮॥ ಹೇ ಕಾಮ್ಯಕರ್ಮ ಸಾಂಡಣೇ । ತೇ ಕಾಮನೇತೇಂಚಿ ಉಪಡಣೇ । ದ್ರವ್ಯತ್ಯಾಗೇ ದವಡಣೇ । ಭಯ ಜೈಸೇ ॥೧೦೯॥ ಆಣಿ ಸೋಮಸೂರ್ಯ ಗ್ರಹಣೇ । ಯೇಊನಿ ಕರವಿತೀ ಪಾರ್ವಣೇ । ಕಾ ಮಾತಾಪಿತರಮರಣೇ । ಅಂಕಿತ ಜೇ ದಿವಸ ॥೧೧೦॥

ಅಥವಾ ಶರೀರವು ಸಹಜವಾಗಿ ಆಗಿರುವುದು. ಆದರೆ ಆಭರಣಗಳನ್ನು ಉದ್ಯೋಗ ಮಾಡಿಯೇ ಮಾಡಬೇಕಾಗುವುದು. ಅಥವಾ ನದಿಯ ನೀರು ಸಹಜವಾಗಿ ದೊರಕುವುದು, ಆದರೆ ಬಾವಿಗಾಗಿ ತೋಡಬೇಕಾಗುವುದು ।೯೬॥

ಅದರಂತೆ ನಿತ್ಯ ನೈಮಿತ್ತಿಕ ಕರ್ಮಗಳು ಸ್ವಾಭಾವಿಕವಾಗಿವೆ. ಆದರೆ ಕಾಮ್ಯ ಕರ್ಮಗಳು ಇಚ್ಛೆ ಮಾಡದ ಹೊರತಾಗಿ ಉತ್ಪನ್ನವಾಗುವುದಿಲ್ಲ ।೯೭॥

**ಶ್ಲೋಕಾರ್ಥ** :- ಭಗವಂತನು ಹೇಳಿದನು:- ಅರ್ಜುನಾ! ಸ್ವರ್ಗಾದಿ ಫಲಗಳನ್ನು ಕೊಡುವ ಕಾಮ್ಯ ಕರ್ಮಗಳನ್ನು ತ್ಯಜಿಸುವುದಕ್ಕೆ ಸಂನ್ಯಾಸವೆಂದು ಪಂಡಿತರು ಹೇಳುತ್ತಾರೆ. ಎಲ್ಲಾ ಕರ್ಮಗಳಲ್ಲಿಯೂ ಫಲಾಪೇಕ್ಷೆಯನ್ನು ಬಿಡುವುದಕ್ಕೆ ತ್ಯಾಗವೆಂದು ವಿವೇಕಿಗಳು ಹೇಳುತ್ತಾರೆ ।೨॥

ಫಲಪ್ರಾಪ್ತಿಯಾಗಬೇಕೆಂಬ ಬಯಕೆಗಳ ಸಮುದಾಯದಿಂದ ಕರ್ಮಗಳಾಗುವುವು. ಆ ಕರ್ಮಗಳಲ್ಲಿ ಅಶ್ವಮೇಧಾದಿಕ ಯಾಗಗಳು ಕೂಡಿಕೊಂಡಿವೆ. ಇದಕ್ಕೆ ಇಷ್ಟ ಕರ್ಮವೆನ್ನುವರು ।೯೮॥

ಕೆರೆ, ಬಾವಿ, ಇತ್ಯಾದಿ ಕಟ್ಟುವುದು, ತೋಟ ಮಾಡುವುದು, ಉಂಬಳಿಯಾಗಿ ಭೂಮಿಗಳನ್ನು ಕೊಡುವುದು, ಊರನ್ನು ಕಟ್ಟುವುದು, ಅನೇಕ ತರಹದ ವ್ರತಗಳನ್ನಾಚರಿಸುವುದು ।೯೯॥

ಈ ಪ್ರಕಾರದ ಎಲ್ಲ ಇಷ್ಟಾಪೂರ್ತ ಕರ್ಮಗಳು (ಯಜ್ಞಾದಿ, ಕೆರೆ, ಬಾವಿ, ತೋಟ ಇತ್ಯಾದಿ) ಇವುಗಳಿಗೆ ಕಾಮನೆಯೇ ಮೂಲ ಕಾರಣವಾಗಿರುವುದು ಮತ್ತು ಅವುಗಳ ಆಚರಣೆಯಿಂದ ಫಲಭೋಗ ಪಡೆಯದೇ ಬಿಡುಗಡೆ ಇರುವುದಿಲ್ಲ ।೧೦೦॥

ಅರ್ಜುನಾ, ದೇಹರೂಪ ಊರಿಗೆ ಬಂದ ಮೇಲೆ ಜನ್ಮ ಮರಣಗಳ ಯಾತ್ರೆಗೆ ಒಲ್ಲೆಂದೆನ್ನಲು ಬರುವುದಿಲ್ಲ ।೧೦೧॥

ಅಥವಾ ಹಣೆಯ ಬರಹದಲ್ಲಿ ಬರೆದಿದ್ದು (ದೈವದಲ್ಲಿದ್ದದ್ದು) ಏನು ಮಾಡಿದರೂ ತಪ್ಪದು. ಹಾಗೆಯೇ ಬಿಳಿ, ಕಪ್ಪು ಮೈಬಣ್ಣವು ಎಷ್ಟು ತೊಳೆದರೂ ಹೋಗದು ।೧೦೨॥

ಋಣ ತೀರಿಸದೇ ಗತ್ಯಂತರ ಹೇಗೆ ಇರುವುದಿಲ್ಲವೋ, ಕಾಮ್ಯ ಕರ್ಮಗಳನ್ನು ಮಾಡುವುದರಿಂದ ಫಲ ಭೋಗಗಳು ಬಾಗಿಲದಲ್ಲಿ ಜಡೆಯೂರಿ ಕುಳಿತುಕೊಳ್ಳುವುವು ।೧೦೩॥

ಅಥವಾ ಪಂಡುಸುತನೇ, ಇಚ್ಛೆ ಇಲ್ಲದೇ ಕಾಮ್ಯ ಕರ್ಮಗಳನ್ನು ಮಾಡಿದರೂ ಬಾಧಿಸುವುವು. ಯುದ್ಧವಲ್ಲದೇ ಸುಮ್ಮನೇ ಬಿಟ್ಟ ಬಾಣವು ಎದೆಗೆ ನಾಟಿ ಪ್ರಾಣ ತೆಗೆಯದೇ ಇರುವುದೇ? ।೧೦೪॥

ಬೆಲ್ಲವನ್ನು ತಿಳಿಯದೇ ಬಾಯಿಯಲ್ಲಿ ಹಾಕಿಕೊಂಡರೂ, ಅದು ಸಿಹಿಯೇ ಹತ್ತುವುದು. ಅಥವಾ ಅಗ್ನಿಯನ್ನು ಬೂದಿ ಎಂದು ತಿಳಿದು ಅದರ ಮೇಲೆ ಕಾಲಿಟ್ಟರೆ ಅದು ಸುಡುವುದು ।೧೦೫॥

ಅದರಂತೆ ಕಾಮ್ಯ ಕರ್ಮಗಳಲ್ಲಿ ಫಲಭೋಗಿಸುವ ಸ್ವಾಭಾವಿಕ ಸಾಮರ್ಥ್ಯವಿರುವುದರಿಂಧ ಮುಮುಕ್ಷುಗಳು ಕೌತುಕದಿಂದಲಾದರೂ ಅವುಗಳನ್ನು ಆಚರಿಸಕೂಡದು ।೧೦೬॥

ಹೆಚ್ಚಿಗೇನು ಹೇಳಬೇಕು? ಅಪ್ಪಾ ಅರ್ಜುನಾ, ವಿಷವು ಹೊಟ್ಟೆಯಲ್ಲಿ ಹೋದಾಗ ಅದನ್ನು ವಾಂತಿ ಮಾಡಿಕೊಳ್ಳುವಂತೆ ಕಾಮ್ಯ ಕರ್ಮಗಳನ್ನು ತ್ಯಜಿಸಬೇಕು ।೧೦೭॥

ಆಗ ಅದರ ತ್ಯಾಗಕ್ಕೆ ಜಗತ್ತಿನಲ್ಲಿ ಸಂನ್ಯಾಸವೆಂದು ಹೇಳುವರು ಎಂದು ಯುಕ್ತಿಯಿಂದ ಸರ್ವಾಂತರ ಸಾಕ್ಷಿಯಾದ ಶ್ರೀಕೃಷ್ಣನು ಹೇಳಿದನು ।೧೦೮॥

ತನ್ನಲ್ಲಿದ್ದ ದ್ರವ್ಯಗಳ ತ್ಯಾಗ ಮಾಡಿದಾಗ ಭಯವಿಲ್ಲದಾಗುವಂತೆ ಕಾಮ್ಯ ಕರ್ಮಗಳ ತ್ಯಾಗದಿಂದ ಮನದಲ್ಲಿಯ ವಾಸನೆಗಳ ತ್ಯಾಗ ಮಾಡಿದಂತಾಗುವುದು ।೧೦೯॥

ಮತ್ತು ಚಂದ್ರಗ್ರಹಣ ಹಾಗೂ ಸೂರ್ಯಗ್ರಹಣ ಈ ಪರ್ವಕಾಲದಲ್ಲಿ ಅಥವಾ ತಂದೆ ತಾಯಿಯರ ಶ್ರಾದ್ಧ ತಿಥಿಯಲ್ಲಿ ।೧೧೦॥

ಅಥವಾ ಅತಿಥೀ ಹನ ಪಾವೇ । ಐಸ್ಯೆಸೇ ಪಡೇ ಜ್ಯೆ ಕರಾವೇ । ತ್ಯೆ ತೇ ಕರ್ಮ ಜಾಣಾವೇ । ನೈಮಿತ್ತಿಕ ಗಾ ।।೧೧೧।। ವಾರ್ಷಿಯಾ ಕ್ಷೋಭೇ ಗಗನ । ವಸಂತೇ ದುಣಾವೇ ವನ । ದೇಹಾ ಶೃಂಗಾರೀ ಯೌವನ । ದಶಾ ಜೈಸೀ ।।೧೧೨।। ಕಾ ಸೋಮಕಾಂತು ಸೋಮೇ ಪಘಳೇ । ಸೂರ್ಯೇ ಫಾಂಕತೀ ಕಮಳೇ । ಯೇಥ ಅಸೇ ತೇಂಚಿ ಪಾಲ್ಹಾಳೇ । ಆನ ನಯೇ ।।೧೧೩।। ತೈಸೇ ನಿತ್ಯ ಜೇ ಕಾ ಕರ್ಮ । ತೇಂಚಿ ನಿಮಿತ್ತಾಚೇ ಲಾಹೇ ನಿಯಮು । ಯೇಥ ಉಂಚಾವೇ ತೇಣೇ ನಾಮು । ನೈಮಿತ್ತಿಕ ಹೋಯ ।।೧೧೪।। ಆಣಿ ಸಾಯಂಪ್ರಾತರ್ಮ ಧ್ಯಾಹ್ನೀ । ಜೇ ಕಾ ಕರಣೇಯ ಪ್ರತಿದಿನೀ । ಪರೀ ದೃಷ್ಟಿ ಜೈಸೀ ಲೋಚನೀ । ಅಧಿಕ ನೋಹೇ ।।೧೧೫।। ಕಾ ನಾಪಾದಿತಾ ಗತೀ । ಚರಣೀ ಜೈಸೀ ಆಥೀ । ನಾತರೀ ತೇ ದೀಪ್ತೀ । ದೀಪ ಬಿಂಬೀ ।।೧೧೬।। ವಾಸು ನೇದಿತಾ ಜೈಸೇ । ಚಂದನೀ ಸೌರಭ್ಯ ಅಸೇ । ಅಧಿಕಾರಾಚೇ ತೈಸೇ । ರೂಪಚಿ ಜೇ ।।೧೧೭।। ನಿತ್ಯ ಕರ್ಮ ಐಸೇ ಜನೀ । ಪಾರ್ಥಾ ಬೋಲಿಜೇ ತೇ ಮಾನೀ । ಏವಂ ನಿತ್ಯ ನೈಮಿತ್ತಿಕ ದೋನ್ಹೀ । ದಾವಿಲೀ ತುಜ ।।೧೧೮।। ಹೇಂಚಿ ನಿತ್ಯನೈಮಿತ್ತಿಕ । ಅನುಷ್ಠೇಯ ಅವಶ್ಯಕ । ಮ್ಹಣೌನಿ ಮ್ಹಣೋ ಪಾಹತೀ ಏಕ । ವಾಂಝು ಯಯಾತೇ ।।೧೧೯।। ಪರೀ ಭೋಜನೀ ಜೈಸೇ ಹೋಯೇ । ತೃಪ್ತಿ ಲಾಹೇ ಭೂಕ ಜಾಯೇ । ತೈಸೇ ನಿತ್ಯನೈಮಿತ್ತಿಕೀ ಆಹೇ । ಸರ್ವಾಂಗೀ ಫಳ ।।೧೨೦।। ಕೀಡ ಆಗಿತಾ ಪಡೇ । ತರೀ ಮಳು ತುಟೇ ವಾನೀ ಚಢೇ । ಯಯಾ ಕರ್ಮಾ ತಯಾ ಸಾಂಗಡೇ । ಫಳ ಜಾಣಾವೇ ।।೧೨೧।। ಜೇ ಪ್ರತ್ಯವಾಯ ತಂವ ಗಳೇ । ಸ್ವಾಧಿಕಾರ ಬಹುವೇ ಉಜಳೇ । ತೇಥ ಹಾತೋಫಳಿಯಾ ಮಿಳೇ । ಸದ್ಗತೀಸೀ ।।೧೨೨।। ಯೇವಢೇವರೀ ಢಿಸಾಳ । ನಿತ್ಯನೈಮಿತ್ತಿಕೀ ಆಹೇ ಫಳ । ಪರೀ ತೇ ತ್ಯಜಿಜೇ ಮೂಳ । ನಕ್ಷತ್ರೀ ಜೈಸೇ ।।೧೨೩।। ಲತಾ ಪಿಕೇ ಆಘವೀ । ತಂವ ಚ್ಯೂತ ಬಾಂಧೇ ಪಾಲವೀ । ಮಗ ಹಾತ ನ ಲಾವಿತ ಮಾಧವೀ । ಸೋಡೂನಿ ಘಾಲೀ ।।೧೨೪।। ತೈಸೀ ನೋಲಾಂಡಿತಾ ಕರ್ಮರೇಖಾ । ಚಿತ್ತ ದೀಜೇ ನಿತ್ಯ ನೈಮಿತ್ತಿಕಾ । ಪಾಠೀ ಫಳಾ ಕೀಜೇ ಅಶೇಖಾ । ವಾಂತಾಚೇ ವಾನೀ ।।೧೨೫।। ಯಯಾ ಕರ್ಮಫಳತ್ಯಾಗಾತೇ । ತ್ಯಾಗು ಮ್ಹಣತೀ ಪೈ ಜಾಣತೇ । ಏವಂ ತ್ಯಾಗ ಸಂನ್ಯಾಸ ತೂತೇ । ಪರಿಸವಿಲೇ ।।೧೨೬।। ಹಾ ಸಂನ್ಯಾಸು ಜೈ ಸಂಭವೇ । ತೈ ಕಾಮ್ಯ ಬಾಧೂ ನ ಪಾವೇ । ನಿಷಿದ್ಧ ತಂವ ಸ್ವಭಾವೇ । ನಿಷೇಧೇ ಗೇಲೇ ।।೧೨೭।।

ಅಥವಾ ಕಾಕಬಲಿಯನ್ನು ಒಗೆಯುವ ಸಮಯಕ್ಕೆ ಅತಿಥಿಯು ಪ್ರಾಪ್ತವಾದಲ್ಲಿ, ಮಾಡುವ ಎಲ್ಲ ಕರ್ಮಗಳು ನೈಮಿತ್ತಿಕ ಕರ್ಮಗಳಾಗುವುವು ।।೧೧೧।।

ಮಳೆಗಾಲದಲ್ಲಿ ಆಕಾಶವು ತುಂಬಿ ಮೋಡಗಳ ಗರ್ಜನೆಯಾಗುವುದು. ವಸಂತ ಋತುವಿನಿಂದ ವನದಲ್ಲಿ ಎಲೆಗಳು ಹುಟ್ಟಿ ಎರಡರಷ್ಟು ಶೋಭೆ ಬರುವುದು. ಅಥವಾ ಶರೀರಕ್ಕೆ ಯೌವನವು ಶೋಭೆಯನ್ನು ತರುವುದು ।।೧೧೨।।

ಅಥವಾ ಸೋಮಕಾಂತ ಮಣಿಯು ಚಂದ್ರನ ಕಿರಣಗಳಿಂದ ದ್ರವಿಸುವುದು. ಹಾಗೂ ಸೂರ್ಯಕಿರಣಗಳಿಂದ ಸೂರ್ಯ ವಿಕಾಸಿನಿ ಕರ್ಮಗಳು ಪ್ರಫುಲ್ಲಿತಗೊಳ್ಳುವುವು. ಇಲ್ಲಿ ಮೂಲದಲ್ಲಿದ್ದದ್ದೇ ಬೆಳೆಯುವುದು. ಬೇರೆ ಅಲ್ಲ ।।೧೧೩।।

ಅದರಂತೆ ನಿತ್ಯ ಕರ್ಮಗಳಿಗೆ ನಿಮಿತ್ತದಿಂದ ನಿಯಮಗಳು ಹತ್ತುವುವು. ಆದ್ದರಿಂದ ಇದಕ್ಕೆ ನೈಮಿತ್ತಿಕ ಕರ್ಮವೆಂದು ದೊಡ್ಡ ಹೆಸರು ಬಂದಿರುವುದು ।।೧೧೪।।

ಮತ್ತು ದಿನಾಲೂ ಮುಂಜಾನೆ, ಮಧ್ಯಾಹ್ನ ಹಾಗೂ ಸಾಯಂಕಾಲಗಳಲ್ಲಿ ಯಾವ ಕರ್ಮಗಳನ್ನು ಮಾಡಬೇಕಾಗುವುದು. ಆದರೆ ಕಣ್ಣಿನಲ್ಲಿಯ ದೃಷ್ಟಿಯು ಅಧಿಕವಾಗುವುದಿಲ್ಲವೋ ।।೧೧೫।।

ಅಥವಾ ಗತಿಯ ಸ್ವೀಕಾರವನ್ನು ಮಾಡದೇ ಅದು ಕಾಲುಗಳಲ್ಲಿ ಸಹಜವಾಗಿರುವುದು. ಅಥವಾ ದೀಪದಲ್ಲಿಯೇ ಅದರ ತೇಜವಿರುವುದು ।।೧೧೬।।

ಚಂದನಕ್ಕೆ ಮೇಲಿಂದ ಸುಗಂಧವನ್ನು ಹಚ್ಚದೇ ತನ್ನ ಅಂಗದಲ್ಲಿಯೇ ಸುಗಂಧವಿರುವುದು. ಹಾಗೆ ಅಧಿಕಾರದ ಲಕ್ಷಣವಾಗಿರುವುದು ।।೧೧೭।।

ಈ ಕರ್ಮಗಳಿಗೆ ಪಾರ್ಥಾ, ಜಗತ್ತಿನಲ್ಲಿ ನಿತ್ಯ ಕರ್ಮವೆಂದು ಹೇಳುವರು, ಹೀಗೆ ತಿಳಿ. ಈ ಪ್ರಕಾರವಾಗಿ ನಿನಗೆ ನಿತ್ಯ ಹಾಗೂ ನೈಮಿತ್ತಿಕ ಈ ಎರಡೂ ಕರ್ಮಗಳನ್ನು ತೋರಿಸಲಾಯಿತು ।।೧೧೮।।

ಇದೇ ನೈಮಿತ್ತಿಕ ಕರ್ಮಗಳನ್ನು ಅವಶ್ಯವಾಗಿ ಮಾಡಬೇಕು. ಆದರೆ ಕೆಲವು ಜನರು ಈ ಕರ್ಮಗಳಿಗೆ ನಿಷ್ಫಲ ಕರ್ಮಗಳೆಂದು ತಿಳಿಯುತ್ತಾರೆ ।।೧೧೯।।

ಆದಾಗ್ಯೂ, ಭೋಜನದಿಂದ ಹೇಗೆ ತೃಪ್ತಿಯಾಗಿ ಹಸಿವೆಯೂ ಹೋಗುವುದೋ, ಅದರಂತೆ ಈ ನಿತ್ಯ ನೈಮಿತ್ತಿಕ ಕರ್ಮಗಳಿಂದ ಎಲ್ಲ ಪ್ರಕಾರದ ಫಲಗಳು ಪ್ರಾಪ್ತವಾಗುವುವು ।।೧೨೦।।

ದೂಷಿತ ಬಂಗಾರವನ್ನು ಅಗ್ನಿಯಲ್ಲಿ ಹಾಕಿದಾಗ ಅದರಲ್ಲಿಯ ದೋಷವು ಹೋಗಿ ಒರೆಯು ಬೆಳೆಯುವುದು. ಅದರಂತೆ ನೈಮಿತ್ತಿಕ ಕರ್ಮಗಳಿಂದ ಫಲಪ್ರಾಪ್ತಿಯಾಗುವುದು. (ಚಿತ್ತಶುದ್ಧಿಯಾಗುವುದು) ।।೧೨೧।।

ಕಾರಣ ಈ ಕರ್ಮಗಳ ಆಚರಣೆಯಿಂದ ದೋಷವು ಇಲ್ಲದಂತಾಗಿ ತನ್ನ ಅಧಿಕಾರವು ಹೆಚ್ಚು ಬೆಳೆಯುವುದು ಮತ್ತು ಹೀಗಾದ ಮೇಲೆ ಸಹಜವಾಗಿ ಸದ್ಗತಿಯು ಪ್ರಾಪ್ತವಾಗುವುದು ।।೧೨೨।।

ನಿತ್ಯ ನೈಮಿತ್ತಿಕ ಕರ್ಮಗಳಿಂದ ಇಷ್ಟೊಂದು ದೊಡ್ಡದಾಗಿ ಫಲಪ್ರಾಪ್ತಿಯಾಗುತ್ತಿದ್ದರೂ, ಅದನ್ನು ಮೂಲಾನಕ್ಷತ್ರಕ್ಕೆ ಹುಟ್ಟಿದ ಕೂಸಿನಂತೆ ತ್ಯಾಗ ಮಾಡಬೇಕು ।।೧೨೩।।

ವಸಂತ ಋತುವಿನಿಂದ ಎಲ್ಲ ಬಳ್ಳಿಗಳು ಬೆಳೆಯುವುವು. ಮಾವಿನ ಗಿಡಕ್ಕೆ ಎಲೆಗಳು ಹುಟ್ಟುವುವು. ಆದರೆ ಅದು ಅವುಗಳಿಗೆ ಕೈ ಹಚ್ಚದೇ ಬಿಟ್ಟು ಹೋಗುವುದು ।।೧೨೪।।

ಹಾಗೆ ನಿತ್ಯ ನೈಮತ್ತಿಕ ಕರ್ಮಗಳ ಆಚರಣೆಯನ್ನು ಚಿತ್ತಕೊಟ್ಟು ಯಥಾವಿಧಿಯಾಗಿ ಆಚರಿಸಿ ಅದರಿಂದಾಗುವ ಫಲಗಳನ್ನು ವಾಂತಿಯಂತೆ ತ್ಯಜಿಸಬೇಕು ।।೧೨೫।।

ಈ ಪ್ರಕಾರವಾಗಿ ನಿತ್ಯ ನೈಮಿತ್ತಿಕ ಕರ್ಮಗಳ ಫಲತ್ಯಾಗ ಮಾಡುವುದಕ್ಕೆ ಬುದ್ಧಿವಂತ ಪುರುಷರು ''ತ್ಯಾಗ''ವೆಂದು ಹೇಳುವರು. ಈ ಪ್ರಕಾರವಾಗಿ ತ್ಯಾಗ, ಸಂನ್ಯಾಸಗಳನ್ನು ತಿಳಿಸಿ ಹೇಳಿದ್ದೇನೆ ।।೧೨೬।।

ಈ ಪ್ರಕಾರವಾಗಿ ಸಂನ್ಯಾಸವು ಸಾಧಿಸಿದಾಗ ಕಾಮ್ಯ ಕರ್ಮಗಳಿಂದ ಬಾಧೆಯಾಗುವುದಿಲ್ಲ ಮತ್ತು ನಿಷಿದ್ಧ ಕರ್ಮಗಳು ಮಾತ್ರ ನಿಷೇಧದ ಯೋಗದಿಂದ ಸ್ವಭಾವತಃವೇ ಇಲ್ಲದಾಗುವುವು ।।೧೨೭।।

ಆಣಿ ನಿತ್ಯಾದಿಕ ಜೇ ಅಸೇ । ತೇ ಯೇಣೇ ಫಳತ್ಯಾಗೇ ನಾಸೇ । ಶಿರ ಲೋಟಲಿಯಾ ಜೈಸೇ । ಯೇರ ಆಂಗ ॥೧೨೮॥ ಮಗ ಸಸ್ಯ ಫಳಪಾಕಾಂತ । ತೈಸೇ ನಿಮಾಲಿಯಾ ಕರ್ಮಜಾತ । ಆತ್ಮಜ್ಞಾನ ಗಿವಸಿತ । ಅಪೈಸೇ ಯೇ ॥೧೨೯॥ ಐಸಿಯಾ ನಿಗುತೀ ದೋನೀ । ತ್ಯಾಗ ಸಂನ್ಯಾಸ ಅನುಷ್ಠಾನೀ । ಪಡಲೇ ಗಾ ಆತ್ಮಜ್ಞಾನೀ । ಬಾಂಧತೀ ಪಾಟು ॥೧೩೦॥ ನಾತರೀ ಹೇ ನಿಗುತೀ ಚುಕೇ । ಮಗ ತ್ಯಾಗು ಕೀಜೇ ಹಾತತುಕೇ । ತೈ ಕಾಂಹೀ ನ ತ್ಯಜೇ ಅಧಿಕೇ। ಗೋವೀಂಚಿ ಪಡೇ ॥೧೩೧॥ ಜೇ ಔಷಧ ವ್ಯಾಧೀ ಅನೋಳಖಿ । ತೈ ಘೇತಲಿಯಾ ಪರತೇ ವಿಖ । ಕಾ ಅನ್ನ ನ ಮಾನಿತಾ ಭೂಕ । ಮಾರೀ ನಾ ಕಾಯ? ॥೧೩೨॥ ಮ್ಹಣೌನಿ ತ್ಯಾಜ್ಯ ಜೇ ನೋಹೇ । ತೇಥ ತ್ಯಾಗಾತೇ ನ ಸುವಾವೇ । ತ್ಯಾಜ್ಯಾಲಾಗೀ ನೋಹಾವೇ । ಲೋಭಾಪರಾ ॥೧೩೩॥ ಚುಕಲಿಯಾ ತ್ಯಾಗಾಚೇ ವೇಂಝೇ । ಕೇಲಾ ಸರ್ವ ತ್ಯಾಗುಹೀ ಹೋಯ ವೋಝೇ । ನ ದೇಖತೀ ಸರ್ವತ್ರ ದುಜೇ । ವೀತರಾಗ ತೇ ॥೧೩೪॥

ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ ।
ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ ॥೩॥

ಏಕಾ ಫಳಾಭಿಲಾಷ ನ ಠಕೇ । ತೇ ಕರ್ಮಾಂತೇ ಮ್ಹಣತೀ ಬಂಧಕೇ । ಜೈಸೇ ಆಪಣ ನಗ್ನ ಭಾಂಡಕೇ । ಜಗಾತೇ ಮ್ಹಣೇ ॥೧೩೫॥ ಕಾ ಜಿವ್ಹಾಲಂಪಟ ರೋಗಿಯಾ । ಅನ್ನೇ ದೂಷೀ ಧನಂಜಯಾ । ಆಂಗಾ ನ ರುಸೇ ಕೋಢಿಯಾ। ಮಾಸಿಯಾ ಕೋಪೇ ॥೧೩೬॥ ತೈಸೇ ಫಳಕಾಮ ದುರ್ಬಳ । ಮ್ಹಣತೀ ಕರ್ಮಚಿ ಕಿಡಾಳ । ಮಗ ನಿರ್ಣಯೋ ದೇತೀ ಕೇವಳ । ತ್ಯಜಾವೇ ಐಸಾ ॥೧೩೭॥ ಏಕ ಮ್ಹಣತೀ ಯಾಗಾದಿಕ । ಕರಾವೇಚಿ ಆವಶ್ಯಕ । ಜೇ ಯಾ ವಾಂಚೂನಿ ಶೋಧಕ । ಆನ ನಸೇ ॥೧೩೮॥ ಮನಶುದ್ಧೀಚ್ಯಾ ಮಾರ್ಗೀ । ಜೈ ವಿಜಯೀ ವ್ಹಾವೇ ವೇಗೀ । ತೈ ಕರ್ಮ ಸಬಳಾಲಾಗೀ । ಆಳಸು ನ ಕೀಜೇ ॥೧೩೯॥ ಭಾಂಗಾರ ಆಥಿ ಶೋಧಾವೇ । ತರೀ ಆಗೀ ಜೇವೀ ನುಬಗಾವೇ । ಕಾ ದರ್ಪಣಾಲಾಗೀ ಸಾಂಚಾವೇ । ಅಧಿಕ ರಜ ॥೧೪೦॥ ನಾನಾ ವಸ್ತ್ರೇ ಚೋಖ ಹೋಆವೀ । ಐಸೇ ಆಥೀ ಜರೀ ಜೀವೀ । ತರೀ ಸಂವದಣೇ ನ ಮನಾವೀ । ಮಲಿನ ಜೈಸೀ ॥೧೪೧॥ ತೈಸೀ ಕರ್ಮೇ ಕ್ಲೇಶಕಾರೇ । ಮ್ಹಣೌನಿ ನ ನ್ಯಾವೀ ಅವ್ಹೇರೇ । ಕಾ ಅನ್ನಲಾಭೇ ಅರುವಾರೇ । ರಾಂಧಿತಿಯೇ ಉಣೇ ॥೧೪೨॥

ಮತ್ತು ಯಾವ ಪ್ರಕಾರವಾಗಿ ಶಿರವನ್ನು ಕತ್ತರಿಸಿದಾಗ ಮುಂಡವು ತಾನೇ ನಿರ್ಜೀವವಾಗಿ ಉರುಳುವುದೋ, ಅದರಂತೆ ನಿತ್ಯ ನೈಮಿತ್ತಿಕ ಕರ್ಮಗಳ ಫಲಗಳನ್ನು ಈಗಾಗಲೇ ಹೇಳಿದಂತೆ ತ್ಯಾಗ ಮಾಡಿದಲ್ಲಿ ಅವುಗಳಿಂದ ಬಾಧೆಯಾಗುವುದಿಲ್ಲ ।।೧೨೮।।

ಧಾನ್ಯಗಳು ಪೂರ್ಣಗೊಂಡಾಗ ಬೆಳೆಯ ಬೆಳೆಯು ಕುಂಠಿತವಾಗುವುದು. ಅದರಂತೆ ಸರ್ವ ಕರ್ಮದ ಕ್ಷಯವಾದ ಮೇಲೆ ಆತ್ಮ ಜ್ಞಾನವು ತಾನಾಗಿಯೇ ಶೋಧಿಸುತ್ತ ಬರುವುದು ।।೧೨೯।।

ಹೀಗೆ ಯುಕ್ತಿಯಿಂದ ನಿತ್ಯ ನೈಮಿತ್ತಿಕ ಕರ್ಮಗಳ ಫಲದ ತ್ಯಾಗವನ್ನು ಹಾಗೂ ಕಾಮ್ಯ ಕರ್ಮದ ಸಂನ್ಯಾಸವನ್ನು ಯಾರು ಮಾಡುವರೋ, ಅವರು ಆತ್ಮ ಜ್ಞಾನದ ಪ್ರಾಪ್ತಿಗೆ ಯೋಗ್ಯರಾಗುವರು ।।೧೩೦।।

ಇಲ್ಲವೇ ಈ ಯುಕ್ತಿಯನ್ನು ತಪ್ಪಿ ಒಂದುವೇಳೆ ಯಾರಾದರೂ ಕಲ್ಪನೆಯಿಂದ ತ್ಯಾಗವನ್ನು ಮಾಡಲು ಹೋದರೆ, ಅದು ಕರ್ಮದ ತ್ಯಾಗವಾಗದೇ ಇನ್ನೂ ಹೆಚ್ಚಿಗೆ ಅದರಲ್ಲಿ ಸಿಕ್ಕಿಕೊಳ್ಳುವರು ।।೧೩೧।।

ರೋಗದ ಶೋಧವನ್ನು ಮಾಡದೇ ಯಾವುದೇ ಔಷಧವನ್ನು ಯಾವುದೇ ರೋಗಕ್ಕೆ ಸೇವಿಸಿದರೆ ಅದೇ ಔಷಧವು ವಿಷವಾಗುವುದು. ಅಥವಾ ಅನ್ನದ ತ್ಯಾಗದಿಂದ ಹಸಿವೆಯಿಂದ ಮನುಷ್ಯನು ಸಾಯಲಿಕ್ಕಿಲ್ಲವೇ? ।।೧೩೨।।

ಆದ್ದರಿಂದ ಯಾವುದನ್ನು ತ್ಯಾಗ ಮಾಡಬಾರದೆಂದು ಹೇಳಿದ್ದನ್ನು ತ್ಯಾಗ ಮಾಡಬಾರದು ಮತ್ತು ಯಾವುದನ್ನು ತ್ಯಾಗ ಮಾಡಬೇಕೆಂದು ಹೇಳಿದ್ದನ್ನು ಆಚರಿಸುವ ಲೋಭವನ್ನು ಹಿಡಿಯಬಾರದು ।।೧೩೩।।

ತ್ಯಾಗ ಮಾಡುವ ಯುಕ್ತಿಯನ್ನು ತಪ್ಪಿದರೆ ಕರ್ಮ ತ್ಯಾಗವನ್ನು ಮಾಡಿಯೂ ಮನುಷ್ಯನು ಕರ್ಮ ಬಂಧದಲ್ಲಿ ತೊಡಗುವನು. ಆದ್ದರಿಂದ ವೈರಾಗ್ಯ ಸಂಪನ್ನರು ಯಾವಾಗಲೂ ತ್ಯಾಜ ಕರ್ಮಗಳನ್ನು ಆಚರಿಸುವುದಿಲ್ಲ ।।೧೩೪।।

ಶ್ಲೋಕಾರ್ಥ :- ಕರ್ಮವು ಯಾವುದಾದರೂ ಬಂಧದೋಷವನ್ನುಂಟು ಮಾಡುವುದರಿಂದ ಅದನ್ನು ತ್ಯಜಿಸಬೇಕೆಂಬುದು ಕೆಲವು ಪಂಡಿತರ ತೀರ್ಮಾನ. ಯಜ್ಞ, ದಾನ, ತಪಸ್ಸುಗಳು ಕರ್ಮಗಳೇ ಆಗಿದ್ದರೂ ಅವುಗಳನ್ನು ಬಿಡಬಾರದೆಂಬುದು ಕೆಲವು ಪಂಡಿತರ ಅಂದರೆ ಮೀಮಾಂಸಕರ ತೀರ್ಮಾನ ।੩।।

ಅನೇಕರಿಗೆ ಫಲಾಭಿಲಾಷೆಯನ್ನು ಬಿಡುವುದಾಗುವುದಿಲ್ಲ. ಇವರು ಕರ್ಮವು ಬಂಧನಕಾರಕವೆನ್ನುವರು. (ನಗ್ನ) ಬತ್ತಲೆಯಾಗಿರುವ ಮನುಷ್ಯನನ್ನು ನೋಡಿ ಯಾರಾದರೂ ಆತನಿಗೆ ನಗ್ನನು ಎಂದು ಹೇಳಿದರೆ, ಅವನು ಅವರಿಗೆ ಭಂಡರು ಎಂದು ಹೇಳುವನು ।।೧೩೫।।

ಅಥವಾ ಹೇ ಧನಂಜಯನೇ, ಜಿಂಹ್ವಾ ಲಂಪಟ ರೋಗಿಯು ಮನಬಂದಂತೆ ತಿಂದು ಅನ್ನಕ್ಕೆ ದೂಷಿಸುವನು. ಅಥವಾ ಕುಷ್ಟರೋಗಿಯು ತನ್ನ ಶರೀರಕ್ಕೆ ಕೋಪಿಸಿಕೊಳ್ಳದೆ ಅದರ ಮೇಲೆ ಕೂಡ್ರುವ ನೊಣಗಳಿಗೆ ಕೋಪಿಸುವನು ।।೧೩೬।।

ಅದರಂತೆ ಇವರು ಕರ್ಮಫಲ ತ್ಯಾಗಕ್ಕೆ ಅಶಕ್ತರಾಗಿದ್ದು, ಕರ್ಮವೇ ಕೆಟ್ಟದ್ದು ಎಂದು ಹೇಳುವರು ಮತ್ತು ಅದಲ್ಲದೇ ಕರ್ಮ ತ್ಯಾಗಮಾಡಬೇಕೆಂದು ಸಿದ್ಧಾಂತ ಮಾಡುವರು ।।೧೩೭।।

ಇನ್ನು ಕೆಲವರು ಹೀಗೆ ಹೇಳುವರು:- ಯಜ್ಞ ಯಾಗಾದಿಗಳನ್ನು ಅವಶ್ಯವಾಗಿ ಮಾಡಲೇಬೇಕು. ಕಾರಣ ಅದರ ಹೊರತಾಗಿ ಚಿತ್ತಶುದ್ಧಿಯಾಗಲು ಬೇರೆ ಉಪಾಯವೇ ಇಲ್ಲ ।।೧೩೮।।

ಚಿತ್ತಶುದ್ಧಿಯು ಬಲುಬೇಗವಾಗಬೇಕೆಂಬ ಇಚ್ಛೆ ಇದ್ದರೆ, ಕರ್ಮದ ಆಚರಣೆಯನ್ನು ಮಾಡುವುದರಲ್ಲಿ ಆಲಸ್ಯವನ್ನು ಮಾಡಕೂಡದು ।।೧೩೯।।

ಬಂಗಾರವನ್ನು ಶುದ್ಧ ಮಾಡುವುದಕ್ಕೆ ಅದನ್ನು ಅಗ್ನಿಯಲ್ಲಿ ಹಾಕಲು ಬೇಸರಪಡಬಾರದು. ಅಥವಾ ಕನ್ನಡಿಯಲ್ಲಿ ಮುಖನೋಡಬೇಕಾದರೆ ಅದರ ಮೇಲಿನ ಹೊಲಸು ತೆಗೆಯಲು ಸುಣ್ಣ ಬಳಿದು ಸ್ವಚ್ಛಮಾಡಬೇಕು ।।೧೪೦।।

ಅಥವಾ ವಸ್ತುಗಳು ಸ್ವಚ್ಛವಾಗಬೇಕೆಂದರೆ ಅವುಗಳನ್ನು ಅಗಸನ ಮಲಿನ ಬಟ್ಟೆಯಲ್ಲಿ ಹಾಕಲು ಮನಸ್ಸಿನಲ್ಲಿ ಅನುಮಾನ ಪಡಬಾರದು ।।೧೪೧।।

ಅಥವಾ ಉತ್ತಮವಾದ ಅನ್ನವು ಬೇಕೆಂದರೆ ಅದನ್ನು ಅಡುಗೆ ಮಾಡದ ಹೊರತು ಹೇಗೆ ಸಿಗುವುದು ? ಅದರಂತೆ ಕರ್ಮಗಳು ಕ್ಲೇಶದಾಯಕವೆಂದು ಅವುಗಳ ತಿರಸ್ಕಾರ ಮಾಡಕೂಡದು ।।೧೪೨।।

ಇಹೀ ಇಹೀ ಗಾ ಶಬ್ದೀ । ಏಕ ಕರ್ಮಿಂ ಬಾಂಧಿತೀ ಬುದ್ಧೀ । ಐಸಾ ತ್ಯಾಗು ವಿಸಂವಾದೀ । ಪಡೋನಿ ಠೇಲಾ ।೧೪೩॥ ತರೀ ವಿಸಂವಾದು ತೋ ಫಿಟೇ । ತ್ಯಾಗಾಚಾ ನಿಶ್ಚಯೋ ಭೇಟೇ । ತೈಸೇ ಬೋಲೋ ಗೋಮಟೇ । ಅವಧಾನ ದೇಈ ।೧೪೪॥

ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ ।
ತ್ಯಾಗೋ ಹೀ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ ।೪॥

ತರೀ ತ್ಯಾಗು ಯೇಥೇ ಪಾಂಡವಾ । ತ್ರಿವಿಧು ಪೈ ಜಾಣಾವಾ । ತಯಾ ತ್ರಿವಿಧಾಹೀ ಬರವಾ । ವಿಭಾಗ ಕರು ।೧೪೫॥ ತ್ಯಾಗಾಚೇ ತೀನ್ಹೀ ಪ್ರಕಾರ । ಕೀಜತೀ ಜರೀ ಗೋಚರ । ತರೀ ತೂ ಇತ್ಯರ್ಥಾಚೇ ಸಾರ । ಇತುಲೇ ಜಾಣ ।೧೪೬॥ ಮಜ ಸರ್ವಜ್ಞಾಚಿಯೇ ಬುದ್ಧೀ । ಜೇ ಅಲೋಟ ಮಾನೇ ತ್ರಿಶುದ್ಧೀ । ನಿಶ್ಚಯತತ್ತ್ವ ತೇ ಆಧೀ । ಅವಧಾರೀ ಪಾ ।೧೪೭॥ ತರೀ ಆಪುಲಿಯೇ ಸೋಡವಣೇ । ಜೋ ಮುಮುಕ್ಷು ಜಾಗೋ ಮ್ಹಣೇ । ತಯಾ ಸರ್ವಸ್ವೇಂ ಕರಣೇ । ಹೇಂಚಿ ಏಕ ।೧೪೮॥

ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।
ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ।೫॥

ಜಿಯೇ ಯಜ್ಞದಾನತಪಾದಿಕೇ । ಇಯೇ ಕರ್ಮೇ ಜಿಯೇ ಆವಶ್ಯಕೇ । ತಿಯೇ ನ ಸಾಂಡಾವಿ ಪಾಂಥಿಕೇ । ಪಾಉಲೇ ಜೈಸೀ ।೧೪೯॥ ಹಾರಪಲೇ ನ ದೇಖಿಜೇ । ತಂವ ತಯಾಚಾ ಮಾಗು ನ ಸಾಂಡಿಜೇ । ಕಾ ತೃಪ್ತ ನ ಹೋತಾ ನ ಲೋಟಿಜೇ । ಭಾಣೇ ಜೇವೀ ।೧೫೦॥ ನಾವ ಥಡೀ ನ ಪವತಾ । ನ ಖಾಂಡಿಜೇ ಕೇಳೀ ನ ಫಳತಾ । ಕಾ ಠೇವಿಲೇ ನ ದಿಸತಾ । ದೀಪು ಜೈಸಾ ।೧೫೧॥ ತೈಸೀ ಆತ್ಮಜ್ಞಾನವಿಖೀ । ಜಂವ ನಿಶ್ಚಿತೀ ನಾಹೀ ನಿಕೀ । ತಂವ ನೋಹಾವೇ ಯಾಗಾದಿಕೀ । ಉದಾಸೀನ ।೧೫೨॥ ತರೀ ಸ್ವಾಧಿಕಾರಾನುರೂಪೇ । ತಿಯೇ ಯಜ್ಞದಾನೇ ತಪೇ । ಅನುಷ್ಠಾವೀಂಚಿ ಸಾಕ್ಷೇಪೇ । ಅಧಿಕೇವರ ।೧೫೩॥ ಜೇ ಚಾಲಣೇ ವೇಗಾವತ ಜಾಯೇ । ತೋ ವೇಗು ಬೈಸವಯಾಚಿ ಹೋಯೇ । ತೈಸಾ ಕರ್ಮಾತಿಶಯೋ ಆಹೇ । ನೈಷ್ಕರ್ಮ್ಯಾಲಾಗೀ ।೧೫೪॥ ಅಧಿಕೇ ಜಂವ ಜಂವ ಔಷಧೀ । ಸೇವನೇಚಿ ಮಾಂಡೀ ಬಾಂಧೀ । ತಂವ ತಂವ ಮುಕಿಜೇ ವ್ಯಾಧೀ । ತಯಾಚಿಯೇ ।೧೫೫॥

ಈ ಪ್ರಕಾರವಾಗಿ ಸಿದ್ಧಾಂತ ಮಾಡಿ ಕೆಲವರು ಕರ್ಮಗಳನ್ನು ಮಾಡಲು ಸಿದ್ಧರಾಗುವರು. ಕೆಲವರು ಕರ್ಮಗಳನ್ನು ತ್ಯಾಗ ಮಾಡಬೇಕೆನ್ನುವರು. ಈ ಪ್ರಕಾರವಾಗಿ ಕರ್ಮತ್ಯಾಗ ವಿಷಯಕ್ಕೆ ವಾದ ಬದ್ದಿರುವುದು ।।೧೪೩।।

ಆದ್ದರಿಂದ ಈ ವಾದವನ್ನು ಬಿಡಿಸಿ, ಕರ್ಮದ ತ್ಯಾಗವನ್ನು ಹೇಗೆ ಮಾಡಬೇಕೆಂಬುವುದನ್ನು ನಿನಗೆ ಉತ್ತಮ ರೀತಿಯಲ್ಲಿ ಹೇಳುವೆನು, ಇದರಲ್ಲಿ ಲಕ್ಷವಿಡು ।।೧೪೪।।

ಶ್ಲೋಕಾರ್ಥ :- ಈ ವಿಷಯದಲ್ಲಿ ನನ್ನ ನಿಶ್ಚಯವನ್ನು ಕೇಳು, ಕಿರೀಟೀ! ಸಾತ್ವಿಕ, ರಾಜಸ ಮತ್ತು ತಾಮಸ ತ್ಯಾಗಗಳೆಂದು ಮೂರು ವಿಧವಾಗಿವೆ ।೪।।

ಹಾಗಾದರೆ ಪಾಂಡವನೇ, ಈ ತ್ಯಾಗದಲ್ಲಿ ಮೂರು ಪ್ರಕಾರಗಳು ಇರುವುವು, ತಿಳಿಯಿತೇ? ಈ ಮೂರೂ ಪ್ರಕಾರಗಳನ್ನು ಸರಿಯಾಗಿ ವರ್ಣಿಸಿ ಹೇಳುವೆನು ।।೧೪೫।।

ತ್ಯಾಗದ ಮೂರು ಪ್ರಕಾರಗಳನ್ನು ಸ್ಪಷ್ಟವಾಗಿ ಹೇಳಿದರೂ ಅದರ ತಾತ್ಪರ್ಯ ಇಷ್ಟೇ ಇದೆ ಎಂದು ನೀನು ತಿಳಿದು ಕೋ ।।೧೪೬।।

ನನ್ನ ಸರ್ವಜ್ಞನ ಬುದ್ಧಿಗೆ ಯಾವುದು ನಿಜ ಕಾಣುವುದು ಮತ್ತು ಯಾವ ವಿಷಯಕ್ಕೆ ನನ್ನ ಮನಸ್ಸು ನಿಶ್ಚಯ ಮಾಡಿರುವುದು, ಆ ನಿಶ್ಚಯವು ಯಾವುದೆನ್ನುವುದು ಕೇಳು ।।೧೪೭।।

ಸಂಸಾರದಿಂದ ತನ್ನ ಬಿಡುಗಡೆಯಾಗಬೇಕೆಂಬ ಯಾವ ಮುಮುಕ್ಷು ದಕ್ಷತೆಯಿಂದ ಇರುವನೋ, ಆತನು ಸರ್ವ ಪ್ರಕಾರದಿಂದ ನಿಜಸ್ವರೂಪವನ್ನು ತಿಳಿದು ಆಚರಿಸಬೇಕು ।।೧೪೮।।

ಶ್ಲೋಕಾರ್ಥ :- ಯಜ್ಞ, ದಾನ, ತಪಸ್ಸುಗಳನ್ನು ಬಿಡಕೂಡದು, ಮಾಡಲೇಬೇಕು. ತಿಳಿದವರಿಗೆ ಯಜ್ಞ, ದಾನ, ತಪಸ್ಸುಗಳು ಪವಿತ್ರಗೊಳಿಸುವುವುಗಳಾಗಿರುತ್ತವೆ ।೫।।

ಪಾದಚಾರಿಗೆ ಯಾವ ಪ್ರಕಾರವಾಗಿ ಹೆಜ್ಜೆ ಇಡುವುದು ನಿಲ್ಲಿಸಲು ಬರುವುದಿಲ್ಲವೋ, ಅದರಂತೆ ಯಜ್ಞ, ದಾನ, ಹಾಗೂ ತಪಸ್ಸು ಈ ಅವಶ್ಯಕ ಕರ್ಮಗಳನ್ನು ಬಿಡಲು ಬರುವುದಿಲ್ಲ ।।೧೪೯।।

ಕಳೆದ ವಸ್ತುವು ಸಿಗುವವರೆಗೂ ಶೋಧವನ್ನು ಬಿಡಲು ಬರುವುದಿಲ್ಲ. ಅಥವಾ ಹೊಟ್ಟೆ ತುಂಬದ ಹೊರತು ತನ್ನ ಮುಂದಿದ್ದ ತಾಟನ್ನು ಸರಿಸಲು ಬರುವುದಿಲ್ಲ ।।೧೫೦।।

ಹಡಗವು ನದಿಯ ದಂಡೆಯನ್ನು ಹತ್ತದೇ ನಡುವೆಯೇ ಬಿಡಲು ಬರುವುದಿಲ್ಲ. ಅಥವಾ ಬಾಳೆಫಲ ಸಿಗದ ಹೊರತು ಬಾಳೆಗಿಡ ಕೊಯ್ಯಲು ಬರುವುದಿಲ್ಲ. ಇಟ್ಟ ವಸ್ತು ಸಿಗದ ಹೊರತು ದೀಪವನ್ನು ಆರಿಸಲು ಬರುವುದಿಲ್ಲ ।।೧೫೧।।

ಅದರಂತೆ ಆತ್ಮಜ್ಞಾನದ ವಿಷಯಕ್ಕೆ ದೃಢ ನಿಶ್ಚಯವಾಗದ ಹೊರತಾಗಿ ಯಾಗಾದಿಕ ಕರ್ಮಗಳನ್ನು ಮಾಡುವುದರಲ್ಲಿ ಉದಾಸೀನರಾಗಬಾರದು ।।೧೫೨।।

ಆದುದರಿಂದ ತನ್ನ ಅಧಿಕಾರಕ್ಕೆ ತಕ್ಕಂತೆ ಯಜ್ಞ, ದಾನ ಹಾಗೂ ತಪಸ್ಸನ್ನು ಯಥಾವಿಧಿಯಾಗಿ ಮೇಲಿಂದ ಮೇಲೆ ಆಚರಿಸಲೇಬೇಕು ।।೧೫೩।।

ಯಾವನು ನಡೆಯುವುದರಲ್ಲಿ ತ್ವರೆ ಮಾಡುವನೋ, ಅವನಿಗೆ ಆದೇ ತ್ವರೆಯು ವಿಶ್ರಾಂತಿ ಪಡೆಯಲು ಉಪಯೋಗವಾಗುವುದು. ಅದರಂತೆ ಆಚರಣೆ ಮಾಡುವುದರಿಂದ ಕರ್ಮತ್ಯಾಗಕ್ಕೆ ಉಪಯೋಗವಾಗುವುದು ।।೧೫೪।।

ಒಬ್ಬ ರೋಗಿಯು ಔಷಧ ಸೇವನೆಯಲ್ಲಿ ಹೇಗೆ ಹೆಚ್ಚಿಚ್ಚಾಗಿ ಮನಸ್ಸು ಮಾಡುವನೋ, ಅವನು ಆ ರೋಗದಿಂದ ಅದರಂತೆಯೇ ಮುಕ್ತನಾಗುತ್ತ ಹೋಗುವನು ।।೧೫೫।।

ತೈಸೀ ಕರ್ಮೇ ಹಾತೋಪಾತೀ । ಜೈ ಕೀಜತೀ ಯಥಾನಿಗುತೀ । ತೈ ರಜತಮೇ ಝುಡತೀ । ಝಾಡಾ ದೇಊನೀ ।।೧೫೬।। ಕಾ ಪಾಠೋವಾಟೀ ಪುಟೇ । ಭಾಂಗಾರಾ ಖಾರು ದೇಣೇ ಘಟೇ । ತೈ ಕೀಡ ಝುಡಕರೀ ತುಟೇ । ನಿರ್ವ್ಯಾಜು ಹೋಯ ।।೧೫೭।। ತೈಸೇ ನಿಷ್ಠಾ ಕೇಲೇ ಕರ್ಮ । ತೇ ಝಾಡೀ ಕರೂನಿ ರಜತಮ । ಸತ್ತ್ವಶುದ್ಧೀಚೇ ಧಾಮ । ಡೋಳಾ ದಾವೀ ।।೧೫೮।। ಮ್ಹಣೌನಿಯಾ ಧನಂಜಯಾ । ಸತ್ತ್ವಶುದ್ಧೀ ಗಿಂವಸಿತಯಾ । ತೀರ್ಥೇ ಯೇ ಸಾವಾಯಾ । ಆಲೀ ಕರ್ಮೇ ।।೧೫೯।। ತೀರ್ಥೇ ಬಾಹ್ಯಮಳು ಕ್ಷಾಳೇ । ಕರ್ಮೇ ಅಭ್ಯಂತರ ಉಜಳೇ । ಏವಂ ತೀರ್ಥೇ ಜಾಣ ನಿರ್ಮಳೇ । ಸತ್ಕರ್ಮೇಂಚಿ ।।೧೬೦।। ತೃಷಾರ್ತಾ ಮರುದೇಶೀ । ಝಳೇ ಅಮೃತೇ ವೋಳಲೀ ಜೈಸೀ । ಕೀ ಅಂಧಾಲಾಗೀ ಡೋಳ್ಯಾಂಸೀ । ಸೂರ್ಯು ಆಲಾ ।।೧೬೧।। ಬುಡತಯಾ ನದೀಚ ಧಾವಿನ್ನಲಿ । ಪಡತಯಾ ಪೃಥ್ವೀಚ ಕಳವಳಲೀ । ನಿಮತಯಾ ಮೃತ್ಯೂನೇ ದಿಧಲೀ । ಆಯುಷ್ಯವೃದ್ಧೀ ।।೧೬೨।। ತೈಸೇ ಕರ್ಮೇ ಕರ್ಮಬದ್ಧತಾ । ಮುಮುಕ್ಷು ಸೋಡವಿಲೇ ಪಂಡುಸುತಾ । ಜೈಸಾ ರಸರೀತಿ ಮರತಾ । ರಾಖಿಲಾ ವಿಷೇ ।।೧೬೩।। ತೈಸೀ ಏಕೇ ಹಾತವಟಿಯಾ । ಕರ್ಮೇ ಕೀಜತೀ ಧನಂಜಯಾ । ಬಂಧಕೇಂಚಿ ಸೋಡವಾವಯಾ । ಮುಖ್ಯೇ ಹೋತೀ ।।೧೬೪।। ಆತಾ ತೇಂಚಿ ಹಾತವಟೀ । ತುಜ ಸಾಂಗೋ ಗೋಮಟೀ । ಜಯಾ ಕರ್ಮಾಂತೇ ಕಿರೀಟೀ । ಕರ್ಮಚಿ ರುಸೇ ।।೧೬೫।।

ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ ।<br>
ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ ।।೬।।

ತರೀ ಮಹಾಯಾಗಪ್ರಮುಖೇ । ಕರ್ಮೇ ನಿಫಜತಾಂಹೀ ಅಚುಕೇ । ಕರ್ತೆಪಣಾಚೇ ನ ಠಾಕೇ । ಫುಂಜಣೇ ಆಂಗೀ ।।೧೬೬।। ಜೋ ಮೋಲೇ ತೀರ್ಥಾ ಜಾಯೇ । ತಯಾ ಮೀ ಯಾತ್ರಾ ಕರಿತು ಆಹೇ । ಐಸಿಯೇ ಶ್ಲಾಘ್ಯತೇಚಾ ನೋಹೇ । ತೋಷು ಜೇವೀ ।।೧೬೭।। ಕಾ ಮುದ್ರಾ ಸಮರ್ಥಾಚಿಯಾ । ಜೋ ಏಕವಟು ಝೋಂಬೇ ರಾಯಾ । ತೋ ಮೀ ಜಿಣತಾ ಐಸಿಯಾ । ನಯೇಚೀ ಗರ್ವಾ ।।೧೬೮।। ಜೋ ಕಾಂಸೇ ಲಾಗೋನಿ ತರೇ । ತಯಾ ಪೋಹತೀ ಊರ್ಮೀ ನುರೇ । ಪುರೋಹಿತು ನಾವಿಷ್ಕರೇ । ದಾತೇಪಣೇ ।।೧೬೯।। ತೈಸೇ ಕರ್ತೃತ್ವ ಅಹಂಕಾರೇ । ನೇಘೋನಿ ಯಥಾ ಅವಸರೇ । ಕೃತ್ಯಜಾತಾಂಚೇ ಮೋಹರೇ । ಸಾರೀಜತೀ ।।೧೭೦।।

ಅದರಂತೆ ಯಾವ ಯಾವ ಕರ್ಮಗಳನ್ನು ವಿಧಿ ಪೂರ್ವಕವಾಗಿ ಬೇಗ ಬೇಗ ಮಾಡಿದಂತೆ ಆ ಆ ಕರ್ಮಗಳು ರಜ ಹಾಗೂ ತಮ ಗುಣಗಳನ್ನು ನಾಶ ಮಾಡುವುವು ।೧೫೬॥

ಅಥವಾ ಬಂಗಾರವನ್ನು ಮೇಲಿಂದ ಮೇಲೆ ಪುಟ ಕೊಟ್ಟಂತೆ ಅದರಲ್ಲಿನ ದೋಷಿತವು ನಾಶವಾಗಿ ಶುದ್ಧವಾಗುವುದು ।೧೫೭॥

ಅದರಂತೆ ನಿಷ್ಠೆಯಿಂದ ಕರ್ಮಗಳ ಆಚರಣೆ ಮಾಡುವುದರಿಂದ ಅವು ರಜ ಮತ್ತು ತಮ ಗುಣಗಳನ್ನು ನಾಶ ಮಾಡಿ ಸತ್ತ್ವಶುದ್ಧಿಯ ದರ್ಶನವನ್ನು ಮಾಡಿಸುವುವು ।೧೫೮॥

ಅದಕ್ಕಾಗಿ ಅರ್ಜುನಾ, ಸತ್ತ್ವಶುದ್ಧಿ ಪ್ರಾಪ್ತಿಗಾಗಿ ಸತ್ಕರ್ಮಗಳೇ ತೀರ್ಥದ ಯೋಗ್ಯತೆಯನ್ನು ಪಡೆಯುವುವು ।೧೫೯॥

ತೀರ್ಥದಿಂದ ಬಾಹ್ಯ ಮಲದ ಕ್ಷಾಲನೆಯಾಗುವುದು ಮತ್ತು ಕರ್ಮಗಳಿಂದ ಅಂತರ್ಮಲವು ಶುದ್ಧಿಗೊಳ್ಳುವುದು. ಸತ್ಕರ್ಮಗಳೇ ಚಿತ್ತಶುದ್ಧಿಗೆ ತೀರ್ಥವಾಗಿರುವುವು ।೧೬೦॥

ನೀರಡಿಸಿದ ಮನುಷ್ಯನಿಗೆ ಮಾರವಾಡ ದೇಶದಲ್ಲಿ ಅಮೃತದ ಝುರಿಯು ಹತ್ತಿದರೆ, ಅಥವಾ ಕುರುಡನ ಕಣ್ಣಿನಲ್ಲಿ ಸೂರ್ಯನ ತೇಜವೇ ಬಂದರೆ ।೧೬೧॥

ಮುಳುಗುವವನಿಗೆ ರಕ್ಷಿಸಲು ನದಿಯೇ ಓಡಿ ಬಂದರೆ, ಬೀಳುವವನಿಗೆ ಪೃಥ್ವಿಯೇ ಹಿಡಿದರೆ, ಅಥವಾ ಸಾಯುವವನಿಗೆ ಮೃತ್ಯುವೇ ಆಯುಷ್ಯ ವೃದ್ಧಿ ಮಾಡಿದರೆ ।೧೬೨॥

ಇವು ಹೇಗೋ, ಅದರಂತೆ ಕರ್ಮಗಳಿಂದ ಮುಮುಕ್ಷುಗಳವರಿಗೆ ಆಗುವ ಪೀಡೆಯನ್ನು, ಕರ್ಮಗಳೇ ದೂರ ಮಾಡುವುವು. ಅರ್ಜುನಾ, ರಸಾಯನ ತಯಾರಿಸುವ ಯುಕ್ತಿ ಇದ್ದವನು ವಿಷವನ್ನೇ ಶುದ್ಧಗೊಳಿಸಿ ಅಮೃತದಂತೆ ಸಾಯುವವರನ್ನು ರಕ್ಷಿಸುವನು ।೧೬೩॥

ಅದರಂತೆ ಧನಂಜಯನೇ, ಯುಕ್ತಿಯಿಂದ ಕರ್ಮಗಳನ್ನು ಮಾಡಿದಲ್ಲಿ ಅವು ಬಾಧಕವಾಗಿದ್ದರೂ ಮುಕ್ತರನ್ನು ಮಾಡಲು ಕಾರಣೀಭೂತವಾಗುವುವು ।೧೬೪॥

ಹಾಗಾದರೆ ಕಿರೀಟಿಯೇ, ಕರ್ಮದಿಂದಲೇ ಕರ್ಮದ ನಾಶವಾಗುವ ಯುಕ್ತಿ ಯಾವುದೆಂಬುದನ್ನು ನಿನಗೆ ಉತ್ತಮ ರೀತಿಯಲ್ಲಿ ಹೇಳುವೆನು ।೧೬೫॥

ಶ್ಲೋಕಾರ್ಥ :- ಪಾರ್ಥಾ! ಯಜ್ಞ, ದಾನ ತಪೋರೂಪಗಳಾದ ಆ ಕರ್ಮಗಳನ್ನು ಸಹ ಕರ್ತೃತ್ವ ಸಂಗವನ್ನು ಬಿಟ್ಟು ಫಲ ವ್ಯಾಮೋಹವಿಲ್ಲದೆ ಮಾಡುವುದು ಉತ್ತಮ. ಇದೇ ನನ್ನ ಸಿದ್ಧಾಂತ ।೬॥

ಹಾಗಾದರೆ, ಪಂಚಮಹಾಯಜ್ಞಾದಿ ಪ್ರಮುಖ ಕರ್ಮಗಳು ಯಥಾವಿಧಿಯಾಗಿ ನಡೆಯುತ್ತಿರುವಾಗ ಯಾವನು ಕರ್ತೃತ್ವದ ಅಭಿಮಾನವನ್ನು ಹಿಡಿಯುವುದಿಲ್ಲ ।೧೬೬॥

ಯಾವನು ಬೇರೆಯವರಿಂದ ಹಣ ಪಡೆದು ತೀರ್ಥಯಾತ್ರೆಯನ್ನು ಮಾಡುವನೋ, ಅವನಿಗೆ ನಾನು ಯಾತ್ರೆಯನ್ನು ಮಾಡುತ್ತಿರುವೆ ಎಂಬ ಪ್ರತಿಷ್ಠೆಯ ಹರ್ಷವಾಗುವುದಿಲ್ಲ ।೧೬೭॥

ಅಥವಾ ರಾಜನ ಮುದ್ರೆಯ ಬಲದಿಂದ ಒಬ್ಬನು ರಾಜನಿಗೆ ಹಿಡಿದು ತಂದಾಗ ಆತನಿಗೆ ನಾನು ಈ ರಾಜನನ್ನು ಗೆದ್ದಿರುವೆ ಎಂಬ ಗರ್ವವು ಹುಟ್ಟುವುದಿಲ್ಲ ।೧೬೮॥

ಇನ್ನೊಬ್ಬರ ನಡ ಹಿಡಿದು ನದಿಯನ್ನು ದಾಟಿದವನು ನಾನು ಈಸುವವನು ಎಂದು ಗರ್ವ ಪಡುವುದಿಲ್ಲ. ರಾಜನ ಉಪಾಧ್ಯಾಯನಿಗೆ ರಾಜನಿಗಾಗಿ ತನ್ನ ಕೈಯಿಂದ ಕೊಟ್ಟ ದಾನಕ್ಕೆ ಅಭಿಮಾನವು ಉಂಟಾಗುವುದಿಲ್ಲ ।೧೬೯॥

ಅದರಂತೆ ಕರ್ತೃತ್ವದ ಅಭಿಮಾನವನ್ನು ಹಿಡಿಯದೇ ಯಾವ ಯಾವ ವೇಳೆಯಲ್ಲಿ ಯಾವ ಯಾವ ಕರ್ಮಗಳನ್ನು ಮಾಡಬೇಕಾದದ್ದನ್ನು ಯಥಾವಿಧಿಯಾಗಿ ಮಾಡುವನು ।೧೭೦॥

ಕೇಲ್ಯಾ ಕರ್ಮಾ ಪಾಂಡವಾ । ಜೋ ಆಥೀ ಫಳಾಚಾ ಯಾವಾ । ತಯಾ ಮೋಹರಾ ಹೋ ನೇದಾವಾ । ಮನೋರಥು ॥೧೭೧॥ ಆಧೀಂಚಿ ಫಳೀ ಆಸ ತುಟಿಯಾ । ಕರ್ಮೇ ಆರಂಭಾವೀ ಧನಂಜಯಾ । ಪರಾವೇ ಬಾಳ ಧಾಯಾ । ಪಾಹಿಜೇ ಜೈಸೇ ॥೧೭೨॥ ಪಿಂಪರುವಾಂಚಿಯಾ ಆಶಾ । ನ ಶಿಂಪಿಜೇ ಪಿಂಪಳು ಜೈಸಾ । ತೈಸಿಯಾ ಫಳನಿರಾಶಾ । ಕೀಜತೀ ಕರ್ಮೇ ॥೧೭೩॥ ಸಾಂಡೂನಿ ದುಧಾಚೀ ಟಕಳೀ । ಗೋಂವಾರೀ ಗಾಂವಧೇನು ವೇಂಟಾಳೀ । ಕಿಂಬಹುನಾ ಕರ್ಮ ಫಳೀ । ತೈಸೇ ಕೀಜೇ ॥೧೭೪॥ ಐಸೀ ಹೇ ಹಾತವಟೀ । ಫೇಲೂನಿ ಜೇ ಕ್ರಿಯಾ ಉಠೀ । ಆಪಣ ಆಪುಲಿಯಾ ಗಾಂಠೀ । ಲಾಹೇಚಿ ತೋ ॥೧೭೫॥ ಮ್ಹಣೌನಿ ಫಳೀ ಲಾಗು । ಸಾಂಡೋನಿ ದೇಹಸಂಗು । ಕರ್ಮೇ ಕರಾವೀ ಹಾ ಚಾಂಗು । ನಿರೋಪು ಮಾಝಾ ॥೧೭೬॥ ಜೋ ಜೀವಬಂಧೇ ಶಿಣಲಾ । ಸುಟಕೇ ಜಾಚೇ ಆಪಲಾ । ತೇಣೇ ಪುಢತಪುಢತೀ ಯಾ ಬೋಲಾ । ಆನ ನ ಕೀಜೇ ॥೧೭೭॥

ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ ।
ಮೋಹಾತ್ತಸ್ಯ ಪರಿತ್ಯಾಗಃ ತಾಮಸಃ ಪರಿಕೀರ್ತಿತಃ ॥೭॥

ನಾತರೀ ಆಂಧಾರಾಚೇನಿ ರೋಖೇ । ಜೈಸೀ ಡೋಳಾ ರೋಂವಿಜತೀ ನಖೇ । ತೈಸಾ ಕರ್ಮದ್ವೇಷೇ ಅಶೇಖೇ । ಕರ್ಮೇಂಚಿ ಸಾಂಡೀ ॥೧೭೮॥ ತಯಾಚೇ ಜೇ ಕರ್ಮ ಸಾಂಡಣೇ । ತೇ ತಾಮಸ ಪೈ ಮೀ ಮ್ಹಣೇ । ಶಿಸಾರಾಚೇ ರಾಗೇ ಲೋಟಣೇ । ಶಿರಚಿ ಜೈಸೇ ॥೧೭೯॥ ಹಾ ಗಾ ಮಾರ್ಗು ದುವಾಡು ಹೋಯೇ । ತರೀ ನಿಸ್ತರಿತೀಲ ಪಾಯೇ । ಕೀ ತೇಚಿ ಖಾಂಡಣೇ ಆಹೇ । ಮಾರ್ಗಾಪರಾಧೇ ॥೧೮೦॥ ಭುಕೇಲಿಯಾಪುಢೇ ಅನ್ನ । ಹೋ ಕಾ ಭಲತೈಸೇ ಉಷ್ಣ । ತರೀ ಬುದ್ಧಿ ನ ಘೇತಾ ಲಂಘನ । ಭಾಣೇ ಪಾಪರಾ ಹಾಲಯಾ ॥೧೮೧॥ ತೈಸಾ ಕರ್ಮಾಚಾ ಬಾಧು ಕರ್ಮೇ । ನಿಸ್ತರಿಜೇ ಕರಿತೇನಿ ವರ್ಮೇ । ಹೇ ತಾಮಸು ನೇಣೇ ಭ್ರಮೇ । ಮಾಜವಿಲಾ ॥೧೮೨॥ ಕೀ ಸ್ವಭಾವೇ ಆಲೇ ವಿಭಾಗಾ । ತೇ ಕರ್ಮಚಿ ವೋಸಂಡೀ ಪೈ ಗಾ । ತರೀ ಝಣೇ ಆತಳಾ ತ್ಯಾಗಾ । ತಾಮಸಾ ತಯಾ ॥೧೮೩॥

ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ತ್ಯಜೇತ್ ।
ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ॥೮॥

ಹೇ ಪಾಂಡವನೇ, ಮಾಡಿದ ಕರ್ಮಗಳಿಗೆ ಫಲ ಪ್ರಾಪ್ತಿಯಾಗಬೇಕೆಂಬ ವಿಷಯಕ್ಕೆ ತನ್ನ ಮನದಲ್ಲಿ ಇಚ್ಛೆಯನ್ನು ಉತ್ಪನ್ನವಾಗಗೊಡುವುದಿಲ್ಲ ॥೭೧॥

ಹೇ ಧನಂಜಯನೇ, ಬೇರೆಯವರ ಕೂಸನ್ನು ನೋಡಿ ಒಳಗೆ ಪ್ರೀತಿ ಇರದೇ ಸುಮ್ಮನೇ ಸಂತೋಷ ತೋರಿಸಿದಂತೆ, ಪ್ರಥಮವಾಗಿ ಫಲದ ಆಶೆಯನ್ನು ಬಿಟ್ಟು ನಿಷ್ಕಾಮ ಕರ್ಮವನ್ನು ಆರಂಭಿಸಬೇಕು ॥೭೨॥

ಅರಳೆಯ ಹಣ್ಣಿಗಾಗಿ ಅರಳೆಯ ಮರಕ್ಕೆ ಯಾರೂ ನೀರು ಹಾಕುವುದಿಲ್ಲ. ಅದರಂತೆ ಫಲದ ಆಶೆಯನ್ನು ಬಿಟ್ಟು ಕರ್ಮಗಳನ್ನು ಮಾಡಬೇಕು ॥೭೩॥

ಊರೊಳಗಿನ ಆಕಳುಗಳನ್ನು ಕಾಯುವ ದನ ಕಾಯುವವನಿಗೆ ಹಾಲಿನ ಆಶೆ ಇಲ್ಲದಿರುವಂತೆ ಕರ್ಮದ ಫಲದ ವಿಷಯಕ್ಕೆ ನಿರಿಚ್ಛರಿರಬೇಕು ॥೭೪॥

ಈ ಯುಕ್ತಿಯಿಂದ ಯಾರು ಕರ್ಮದ ಆಚರಣೆಯನ್ನು ಮಾಡುವರೋ, ಅವರಿಗೆ ತಮ್ಮಲ್ಲಿರುವ ಆತ್ಮಸ್ವರೂಪದ ದರ್ಶನವಾಗುವುದು ॥೭೫॥

ಆದ್ದರಿಂದ ಫಲಕ್ಕಾಗಿ ಆಶೆಯನ್ನು ಬಿಟ್ಟು ಹಾಗೂ ನಾನು ಕರ್ತನೆಂಬ ಅಭಿಮಾನವನ್ನು ಬಿಟ್ಟು ಕರ್ಮಗಳನ್ನು ಆಚರಿಸಬೇಕು. ಹೀಗೆ ನನ್ನ ಉತ್ತಮವಾದ ಆಜ್ಞೆಯಾಗಿರು ವುದು ॥೭೬॥

ಯಾರು ಜನ್ಮ ಮರಣದಿಂದ ತ್ರಾಸಾಗಿ ಬೇಸರಪಟ್ಟಿ ರುವರೋ, ಹಾಗೂ ಇದರಿಂದ ಬಿಡುಗಡೆಯಾಗುವ ಚಿಂತೆಯಲ್ಲಿರುವರೋ, ಅವರಿಗೆ ಈ ನನ್ನ ಆಜ್ಞೆಯನ್ನು ಮೀರಬಾರದೆಂದು ಮೇಲಿಂದ ಮೇಲೆ ಹೇಳುವೆನು ॥೭೭॥

ಶ್ಲೋಕಾರ್ಥ :- ಶಾಸ್ತ್ರವು ವಿಧಿಸಿದ ಕರ್ಮಗಳನ್ನು ತ್ಯಜಿಸುವುದು ಉಚಿತವಲ್ಲ. ಮೂಢತ್ವದಿಂದ ತ್ಯಜಿಸಿದರೆ ಆ ತ್ಯಾಗವನ್ನು ತಾಮಸ ತ್ಯಾಗವೆನ್ನುತ್ತಾರೆ ॥೭॥

ಒಬ್ಬ ಮನುಷ್ಯನು ಕತ್ತಲೆಯಲ್ಲಿ ನಡೆಯುವಾಗ ಶರೀರಕ್ಕೆ ಧಕ್ಕೆಯುಂಟಾದ್ದಲ್ಲಿ ಸಿಟ್ಟಿನಂದ ಕಣ್ಣುಗಳಿಗೆ ಉಗುರನ್ನು ಚುಚ್ಚಿದಂತೆ ಕರ್ಮವು ಜನ್ಮ ಬಂಧನಕ್ಕೆ ಕಾರಣವೆಂದು ಅದರ ಮೇಲೆ ಸಿಟ್ಟಾಗಿ ಎಲ್ಲವನ್ನು ಒಗೆಯುವನು ॥೭೮॥

ಆತನ ಕರ್ಮ ತ್ಯಾಗಕ್ಕೆ ನಾನು ತಾಮಸ ತ್ಯಾಗವೆನ್ನು ವೆನು. ಅರ್ಧ ತಲೆಶೂಲಿ ಎದ್ದಾಗ ಯಾರೋ ಒಬ್ಬರು ಸಿಟ್ಟಿನಿಂದ ತನ್ನ ಶಿರವನ್ನೇ ಕೊಯ್ದಂತೆ ॥೭೯॥

ಅರೇ, ಮಾರ್ಗವು ಕೆಟ್ಟದ್ದಾಗಿದ್ದರೂ ಅದನ್ನು ಕಾಲಿನಿಂದ ನಡೆದೇ ಮುಗಿಸಬೇಕಾಗುವುದು. ಅದನ್ನು ಬಿಟ್ಟು, ಕೆಟ್ಟ ದಾರಿಗಾಗಿ ತನ್ನ ಕಾಲುಗಳನ್ನೇ ಮುರಿಯಬೇಕೇ ? ॥೮೦॥

ಪೂರ್ಣ ಹಸಿದ ಮನುಷ್ಯನ ಮುಂದೆ ಅತಿ ಬಿಸಿಯಾದ ಅನ್ನ ಬಡಿಸಿದಾಗ ಆತನು ಬುದ್ಧಿ ಪ್ರಯೋಗಿಸದೆ, ಸಹಿಸದೇ ಅದನ್ನು ಒದ್ದು ಚಲ್ಲಿದರೆ ಉಪವಾಸ ಬೀಳಬೇಕಾಗುವುದು !! ॥೮೧॥

ಅದರಂತೆ ಕರ್ಮಗಳನ್ನು ಯುಕ್ತಿಯಿಂದ ಆಚರಿಸಿದಾಗ ಕರ್ಮಗಳ ದೋಷಗಳು ಇಲ್ಲದಾಗುವುವು. ಇದನ್ನು ತಾಮಸ ಮನುಷ್ಯನು ಭ್ರಮಿಷ್ಟನಾಗಿ ಆತನಿಗೆ ತಿಳಿಯುವುದಿಲ್ಲ ॥೮೨॥

ಆತನು ತನ್ನ ಧರ್ಮದಂತೆ ತಾನು ಮಾಡಬೇಕಾದ ಯಾವ ಕರ್ಮಗಳನ್ನು ಬಿಟ್ಟು ಬಿಡುವನು. ಅದಕ್ಕಾಗಿ ನೀನು ಈ ತಾಮಸ ಮನುಷ್ಯನಂತೆ ಕರ್ಮ ತ್ಯಾಗವನ್ನು ಮಾಡಬೇಡ ॥೮೩॥

ಶ್ಲೋಕಾರ್ಥ :- ಇದನ್ನು ಮಾಡುವುದು ಕಷ್ಟವೆಂದ ಮಾತ್ರದಿಂದ ಕರ್ಮದಿಂದ ಶರೀರಕ್ಕೆ ಆಯಾಸವಾಗುವು ದೆಂದು ಯಾವನು ಬಿಡುತ್ತಾನೋ, ಅವನು ರಜೋಗುಣದಿಂದ ಅದನ್ನು ಬಿಟ್ಟವನಾಗುತ್ತಾನೆ. ಬಿಟ್ಟಿದ್ದರ ಫಲವಾಗಿ ಎಂದಿಗೂ ಅವನಿಗೆ ತ್ಯಾಗ ಫಲವಾದ ಮೋಕ್ಷವು ದೊರೆಯುವುದಿಲ್ಲ ॥೮॥

ಅಥವಾ ಸ್ವಾಧಿಕಾರು ಬುಝೋ । ಆಪಲೇ ವಿಹಿತಹೀ ಸುಜೇ । ಪರೀ ಕರಿತಯಾ ಉಭಜೇ । ನಿಬರಪಣಾ ।।೧೮೪।। ಜೇ ಕರ್ಮಾಚೀ ಐಲೀಕಡ ।ನಾವೇಕ ದಿಸೇ ದುವಾಡ । ಜೇ ವಾಹತಿಯೇ ವೇಳೇ ಜಡ । ಶಿದೋರೀ ಜೈಸೀ ।।೧೮೫।। ಜೈಸಾ ನಿಂಬ ಜಿಭೇ ಕಡವಟು । ಹಿರಡಾ ಪಹಿಲೇ ತುರಟು ।ತೈಸಾ ಕರ್ಮಾ ಐಲಶೇವಟು । ಖಿಣುವಾಳಾ ಹೋಯ ।।೧೮೬।। ಕಾ ಧೇನು ದುವಾಡ ಶಿಂಗ । ಶೇವಂತೀಯೇ ಆಡವ ಆಂಗ । ಭೋಜನಸುಖ ಮಹಾಗ । ಪಾಕು ಕರಿತಾ ।।೧೮೭।। ತೈಸೇ ಪುಢತಪುಢತೀ ಕರ್ಮ । ಆರಂಭೀಚ ಅತಿ ವಿಷಮು । ಮ್ಹಣೌನಿ ತೋ ತೇ ಶ್ರಮ । ಕರಿತಾ ಮಾನೀ ।।೧೮೮।। ಯೇರ್‍ಹವೀ ವಿಹಿತತ್ವೇ ಮಾಂಡೀ । ಪರೀ ಫಾಲಿಯಾ ಅಸುರವಾಡೀ । ತೇಥ ಪೋಳಲಾ ಐಸಾ ಸಾಂಡೀ । ಆದರಿಲೇಂಹೀ ।।೧೮೯।। ಮ್ಹಣೇ ವಸ್ತು ದೇಹಾಸಾರಿಖೀ । ಆಲೀ ಬಹುತೀ ಭಾಗ್ಯವಿಶೇಖೀ । ಮಾ ಜಾಚೂ ಕಾ ಕರ್ಮಾದಿಕೀ । ಪಾಪಿಯಾ ಜೈಸಾ ? ।।೧೯೦।। ಕೀಲೇ ಕರ್ಮೀ ಜೇ ದ್ಯಾವೇ । ತೇ ಝುಣೇ ಮಜ ಹೋಆವೇ । ಆಜಿ ಭೋಗೂ ನಾ ಕಾ ಬರವೇ । ಹಾತೀಂಚೇ ಭೋಗ ? ।।೧೯೧।। ಐಸಾ ಶರೀರಾಚಿಯಾ ಕ್ಲೇಶಾ । ಭೇಣೇ ಕರ್ಮೇ ವೀರೇಶಾ । ಸಾಂಡೀ ತೋ ಪರಿಯೇಸಾ । ರಾಜಸು ತ್ಯಾಗು ।।೧೯೨।। ಯೇರ್‍ಹವೀ ತೇಥಹೀ ಕರ್ಮ ಸಾಂಡೇ । ಪರೀ ತಯಾ ತ್ಯಾಗಫಳ ನ ಜೋಡೇ । ಜೈಸೇ ಉತಲೇ ಆಗೀ ಪಡೇ । ತೇ ನಲಗೇಚಿ ಹೋಮಾ ।।೧೯೩।। ಕಾ ಬುಡೋನಿ ಪ್ರಾಣ ಗೇಲೇ ತೇ ಅರ್ಧೋದಕೀ ನಿಮಾಲೇ । ಹೇ ಮ್ಹಣೋ ನಯೇ ಜಾಹಲೇ । ದುರ್ಮರಣಚಿ ।।೧೯೪।। ತೈಸೇ ದೇಹಾಚೇನಿ ಲೋಭೇ । ಜೇಣೇ ಕರ್ಮಾ ಪಾಣೀ ಸುಭೇ । ತೇಣೇ ಸಾಚ ನ ಲಭೇ । ತ್ಯಾಗಾಚೇ ಫಳ ।।೧೯೫।। ಕಿಂಬಹುನಾ ಆಪುಲೇ । ಜೈ ಜ್ಞಾನ ಹೋಯ ಉದಯಾ ಆಲೇ । ತೈ ನಕ್ಷತ್ರಾತೇ ಪಾಹಲೇ । ಗಿಳೀ ಜೈಸೇ ।।೧೯೬।। ತೈಶಾ ಸಕಾರಣ ಕ್ರಿಯಾ । ಹಾರಪತೀ ಧನಂಜಯಾ । ತೋ ಕರ್ಮತ್ಯಾಗು ಯೇ ಜಯಾ । ಮೋಕ್ಷ ಫಳಾಸೀ ।।೧೯೭।। ತೇ ಮೋಕ್ಷ ಫಳ ಅಜ್ಞಾನಾ । ತ್ಯಾಗಿಯಾ ನಾಹೀ ಅರ್ಜುನಾ । ಮ್ಹಣೌನಿ ತೋ ತ್ಯಾಗು ನ ಮಾನಾ । ರಾಜಸು ಜೋ ।।೧೯೮।। ತರೀ ಕೋಣೇ ಪಾ ಏಥ ತ್ಯಾಗೇ । ತೇ ಮೋಕ್ಷ ಫಳ ಘರ ರಿಘೇ । ಹೇಂಹೀ ಆಇಕ ಪ್ರಸಂಗೇ । ಬೋಲಿಜೇಲ ।।೧೯೯।।

ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ ।
ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ತ್ವಿಕೋ ಮತಃ ।।೯।।

ಅಥವಾ ತನ್ನ ಅಧಿಕಾರವನ್ನು ತಿಳಿಯುವನು, ಹಾಗೂ ತನ್ನ ವಿಹಿತ ಕರ್ಮಗಳು ಯಾವುವು ಎಂಬುವುದು ಅರಿಯುವನು. ಆದರೆ ಆ ಕರ್ಮಗಳನ್ನು ಆಚರಿಸುವಾಗ್ಗೆ ಕ್ಲೇಶಕ್ಕೆ ಹೆದರಿ ಬೇಸರಪಡುವನು ॥೧೮೪॥

ಕರ್ಮದ ಆರಂಭವು ಕ್ಷಣಹೊತ್ತು ಕಠಿಣವೆನಿಸುವುದು ನಿಜ. ಬುತ್ತಿಯನ್ನು ಒಯ್ಯುವಾಗ್ಗೆ ಜಡವೆನಿಸುವುದು ॥೧೮೫॥

ಅದರಂತೆ ಬೇವಿನತಪ್ಪಲು ತಿನ್ನುವಾಗ್ಗೆ ವಿಷವೆನಿಸುವುದು, ಆಳಲೆಕಾಯಿ ಒಗರಾಗುವುದು. ಅದರಂತೆ ಕರ್ಮದ ಆರಂಭದಲ್ಲಿ ಕಠಿಣವೆನಿಸುವುದು ॥೧೮೬॥

ಅಥವಾ ಇರಿಯುವ ಆಕಳು ಇರುವುದು, ಸೇವಂತಿ ಹೂವಿಗೆ ಮುಳ್ಳು ಇರುವುವು ಹಾಗೂ ಅಡುಗೆ ಮಾಡುವಾಗ್ಗೆ ಭೋಜನದ ಸುಖವಿರುವುದಿಲ್ಲ ॥೧೮೭॥

ಅದರಂತೆ ಕರ್ಮಾರಂಭದಲ್ಲಿ ಅತಿ ಕಠೋರವಾಗಿರುವುದು.ಆದ್ದರಿಂದ ಅದನ್ನು ಮಾಡಲು ಶ್ರಮವಾಗುವುದೆಂದು ಹೀಗೆ ತಿಳಿಯುತ್ತಾರೆ ॥೧೮೮॥

ಅದಲ್ಲದೇ ಕರ್ಮದ ಆರಂಭವನ್ನು ಯಥಾವಿಧಿಯಾಗಿ ಆರಂಭಿಸುವನು. ಆದರೆ ಅತಿ ಬಿಸಿಯಾದ ವಸ್ತುವನ್ನು ಕೈಯಲ್ಲಿ ಬಂದಾಗ ಅದನ್ನು ಒಗೆಯುವಂತೆ ಕರ್ಮದಿಂದ ಶ್ರಮವೆನಿಸಿದಾಗ ನಡುವೆಯೇ ಕೈ ಬಿಡುವನು ॥೧೮೯॥

ಮತ್ತು ಹೇಳುವುದೇನೆಂದರೆ, ನನ್ನ ಭಾಗ್ಯದಿಂದ ಉತ್ತಮ ದೇಹ ದೊರಕಿದೆ. ಪಾಪಿಗಳಂತೆ ಕರ್ಮಗಳ ಆಚರಣೆಗಳನ್ನು ಮಾಡುತ್ತ ಶರೀರಕ್ಕೆ ಏಕೆ ತ್ರಾಸ ಕೊಡಬೇಕು ? ॥೧೯೦॥

ಕರ್ಮಗಳ ಆಚರಣೆಯನ್ನು ಮಾಡಿ ಅದರಿಂದ ಸಿಗುವ ಭೋಗಗಳ ಅವಶ್ಯಕತೆ ಇಲ್ಲ. ಈಗ ನಮಗೆ ಪ್ರಾಪ್ತವಾಗಿರುವ ಐಶ್ವರ್ಯವನ್ನು ಏಕೆ ಉಪಭೋಗಿಸಬಾರದು ? ॥೧೯೧॥

ಈ ಪ್ರಕಾರವಾಗಿ ಅರ್ಜುನಾ, ಶರೀರಕ್ಕೆ ಕ್ಲೇಶವಾಗುವ ಭಯದಿಂದ ಯಾವನು ಕರ್ಮ ತ್ಯಾಗ ಮಾಡುವನೋ ಅದಕ್ಕೆ ರಾಜಸ ತ್ಯಾಗವೆನ್ನುವರು ॥೧೯೨॥

ಹೀಗೆ ಇವರು ಕರ್ಮಗಳನ್ನು ತ್ಯಾಗ ಮಾಡಿದರೂ ಕರ್ಮತ್ಯಾಗದ ಫಲವು ದೊರೆಯಲಾರದು. ತುಪ್ಪವು ಉಕ್ಕೇರಿ ಅಗ್ನಿಯಲ್ಲಿ ಬಿದ್ದರೆ ಅದಕ್ಕೆ ಹೋಮದ ಫಲ ದೊರೆಯಲಾರದು ॥೧೯೩॥

ಅಥವಾ ಒಬ್ಬನು ನೀರಿನಲ್ಲಿ ಮುಳುಗಿ ಸತ್ತಾಗ ಆತನಿಗೆ ಜಲಸಮಾಧಿಯನ್ನು ಸ್ವೀಕರಿಸಿದನು ಎಂದು ಹೇಳಲಾಗದು. ಅದಕ್ಕೆ ದುರ್ಮರಣವೆನ್ನ ಬೇಕಾಗುವುದು ॥೧೯೪॥

ಅದರಂತೆ ದೇಹದ ಮೇಲೆ ಪ್ರೀತಿ ಇಟ್ಟು ಕರ್ಮಗಳ ಮೇಲೆ ನೀರು ಬಿಟ್ಟರೆ, ಆತನಿಗೆ ಕರ್ಮ ತ್ಯಾಗದ ಫಲವು ನಿಜವಾಗಿಯೂ ದೊರೆಯದು ॥೧೯೫॥

ಸೂರ್ಯೋದಯದಿಂದ ನಕ್ಷತ್ರಗಳು ಅಡಗುವಂತೆ ಆತ್ಮಜ್ಞಾನದ ಪ್ರಾಪ್ತಿಯಿಂದ ಎಲ್ಲ ಕ್ರಿಯೆಗಳು ನಷ್ಟವಾಗುವುವು ॥೧೯೬॥

ಅದರಂತೆ ಅರ್ಜುನಾ, ಆ ಕರ್ಮತ್ಯಾಗದಿಂದ ಅಜ್ಞಾನ ಸಹ ಕ್ರಿಯೆಗಳ ಲೋಪವಾಗಿ ಅದರಿಂದ ಮೋಕ್ಷ ಪ್ರಾಪ್ತಿಯಾಗುವುದು ॥೧೯೭॥

ಅರ್ಜುನಾ, ಅಜ್ಞಾನದಿಂದ ಕರ್ಮದ ತ್ಯಾಗ ಮಾಡಿದರೆ, ಈ ಮೋಕ್ಷ ಪ್ರಾಪ್ತಿಯು ಆಗುವುದಿಲ್ಲ. ಆದ್ದರಿಂದ ಇದು ನಿಜವಾದ ಕರ್ಮತ್ಯಾಗವಲ್ಲದೇ ರಾಜಸ ತ್ಯಾಗವಾಗಿರುವುದು ॥೧೯೮॥

ಹಾಗಾದರೆ ಯಾವುದರ ತ್ಯಾಗದಿಂದ ಪ್ರಾಪ್ತಿಯು ತನ್ನ ಮನೆಗೆ ನಡೆದು ಬರುವುದೋ, ಅದನ್ನು ಪ್ರಸಂಗಾನುಸಾರದಿಂದ ನಿನಗೆ ಹೇಳುವೆನು, ಅದನ್ನು ಕೇಳು ॥೧೯೯॥

ಶ್ಲೋಕಾರ್ಥ : – ಅರ್ಜುನಾ! ಮಾಡಬೇಕಾದ ವಿಹಿತ ಕರ್ಮಗಳನ್ನು ಮಾಡುತ್ತ, ಆಸಕ್ತಿಯನ್ನೂ, ಫಲವನ್ನೂ, ತ್ಯಜಿಸುವುದು ಸಾತ್ತ್ವಿಕ ತ್ಯಾಗ, ಅದೇ ನನಗೆ ಇಷ್ಟ ॥೯॥

ತರೀ ಸ್ವಾಧಿಕಾರಾಚೇನಿ ನಾಂವೇ । ಜೇ ವಾಂಟಿಯಾ ಆಲೇ ಸ್ವಭಾವೇ । ತೇ ಆಚರೇ ವಿಧಿಗೌರವೇ । ಶೃಂಗಾರೋನಿ ।೨೦೦॥ ಪರೀ ಹೇ ಮೀ ಕರಿತು ಅಸೇ । ಐಸಾ ಆಠವು ತ್ಯಜೀ ಮಾನಸೇ । ತೈಸೇಂಚಿ ಪಾಣೀ ದೇ ಆಶೇ । ಫಳಾಚಿಯೇ ।೨೦೧॥ ಪೈ ಅವಜ್ಞಾ ಆಣಿ ಕಾಮನಾ । ಮಾತೇಚ್ಯಾ ಠಾಯೀ ಅರ್ಜುನಾ । ಕೇಲಿಯಾ ದೋನೀ ಪತನಾ । ಕಾರಣ ಹೋತೀ ।೨೦೨॥ ತರೀ ದೋನೀ ಯೇ ತ್ಯಜಾವೀ । ಮಗ ಮಾತಾಚಿ ತೇ ಭಜಾವೀ । ವಾಂಚೂನಿ ಮುಖಾಲಾಗೀ ವಾಳಾವೀ । ಗಾಯಚಿ ಸಗಳೀ ?।೨೦೩॥ ಆವಡತಿಯೇಹೀ ಫಳೀ । ಅಸಾರೇ ಸಾಲೀ ಆಂಠೋಳೀ । ತ್ಯಾಸಾಠೀ ಅವಗಳೀ । ಫಳಾತೇ ಕೋಣ್ಹೀ ?।೨೦೪॥ ತೈಸಾ ಕರ್ತೃತ್ವಾಚಾ ಮದು । ಆಣಿ ಕರ್ಮಫಳಾಚಾ ಆಸ್ವಾದು । ಯಾ ದೋಹೀಂಚೇ ನಾಂವ ಬಂಧು । ಕರ್ಮಾಚಾ ಕೀ ।೨೦೫॥ ತರೀ ಯಾ ದೋಹೀಂಚ್ಯಾ ವಿಖೀ । ಜೈಸಾ ಬಾಪು ನಾತಳೇ ಲೇಕೀ । ತೈಸಾ ಹೋ ನ ಶಕೇ ದುಃಖೀ । ವಿಹಿತಾ ಕ್ರಿಯಾ ।೨೦೬॥ ಹಾ ತೋ ತ್ಯಾಗ ತರುವರು । ಜೋ ಗಾ ಮೋಕ್ಷ ಫಳೇ ಯೇ ಥೋರು । ಸಾತ್ತ್ವಿಕ ಐಸಾ ಡಗರು । ಯಾಸೀಂಚ ಜಗೀ ।೨೦೭॥ ಆತಾ ಜಾಳೂನಿ ಬೀಜ ಜೈಸೇ । ಝಾಡಾ ಕೀಜೇ ನಿರ್ವಂಶೇ । ಫಳ ತ್ಯಾಗೂನಿ ಕರ್ಮ ತೈಸೇ । ತ್ಯಜಿಲೇ ಜೇಣೇ ।೨೦೮॥ ಲೋಹ ಲಾಗತಖೇಂವೋ ಪರಿಸೀ । ಧಾತೂಚೀ ಗಂಧಿಕಾಳಿಮಾ ಜೈಸೀ । ಜಾತೀ ರಜತಮೇ ತೈಸೀ । ತುಟಲೀ ದೋನ್ಹೀ ।೨೦೯॥ ಮಗ ಸತ್ತ್ವೇ ಚೋಖಾಳೇ । ಉಘಡತೀ ಆತ್ಮಬೋಧಾಚೇ ಡೋಳೇ । ತೇಥ ಮೃಗಾಂಬು ಸಾಂಜವೇಳೇ । ಹೋಯ ಜೈಸೇ ।೨೧೦॥ ತೈಸಾ ಬುದ್ಧ್ಯಾದಿಕಾಂಪುಡಾ । ಅಸತು ವಿಶ್ವಾಭಾಸು ಹಾ ಯೇವಢಾ । ತೋ ನ ದೇಖೇ ಕವಣೇಕಡಾ । ಆಕಾಶ ಜೈಸೇ ।೨೧೧॥

ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।
ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ।೧೦॥

ಮ್ಹಣೌನಿ ಪ್ರಾಚೀನಾಚೇನಿ ಬಳೇ । ಅಲಂಕೃತೇ ಕುಶಲಾಕುಶಲೇ । ತಿಯೇ ವ್ಯೋಮಾಆಂಗೀ ಆಭಾಳೇ । ಜಿರಾಲೀ ಜೈಸೀ ।೨೧೨॥ ತೈಸೀ ತಯಾಚಿಯೇ ದಿಠೀ । ಕರ್ಮೇ ಚೋಖಾಳಲೀ ಕಿರೀಟೀ । ಮ್ಹಣೌನಿ ಸುಖದುಃಖೀ ಉಠೀ । ಪಡೇನಾ ತೋ ।೨೧೩॥ ತೇಣೇ ಶುಭಕರ್ಮ ಜಾಣಾವೇ । ಮಗ ತೇ ಹರ್ಷೇ ಕರಾವೇ । ಕಾ ಅಶುಭಾಲಾಗೀ ಹೋಆವೇ । ದ್ವೇಷಿಯಾ ನಾ ।೨೧೪॥

ತನ್ನ ಅಧಿಕಾರಕ್ಕನುಗುಣವಾಗಿ ಯಾವ ತನ್ನ ಭಾಗಕ್ಕೆ ಬಂದ ಕರ್ಮಗಳನ್ನು ಸಾಹಿತ್ಯದೊಂದಿಗೆ ಯಥಾವಿಧಿಯಾಗಿ ಗೌರವದಿಂದ ಮಾಡುವನು ।೨೦೦॥

ಆದರೆ ಈ ಕರ್ಮಗಳನ್ನು ನಾನು ಮಾಡುತ್ತಿರುವೆ ಎಂದು ತನ್ನ ಮನದಲ್ಲಿ ನೆನಪು ಸಹ ಆಗಗೊಡುವುದಿಲ್ಲ. ಹಾಗೆಯೇ ಫಲದ ಆಶೆಗೂ ನೀರು ಬಿಡುವನು ।೨೦೧॥

ಅರ್ಜುನಾ, ಹೀಗಿದೆ ನೋಡು, ತನ್ನ (ಮಾತೋಶ್ರೀ) ತಾಯಿಯ ಆಜ್ಞೆಯನ್ನು ಮೀರುವುದು ಹಾಗೂ ಆಕೆಯ ವಿಷಯಕ್ಕೆ ಮನದಲ್ಲಿ ಕಾಮವಾಸನೆಯನ್ನು ಉತ್ಪನ್ನ ಮಾಡಿಕೊಳ್ಳುವುದು. ಈ ಎರಡೂ ಸ್ಥಿತಿಯು ನರಕಕ್ಕೆ ಕಾರಣವಾಗುವುವು ।೨೦೨॥

ಅದಕ್ಕಾಗಿ ಈ ಎರಡನ್ನೂ ವರ್ಜಿಸಿ ತಾಯಿಯ ಸೇವೆಯನ್ನು ಮಾಡಬೇಕು. ಆಕಳ ಮುಖವು ಅಪವಿತ್ರವಿರಬಹುದೆಂದು ಅದರ ಸರ್ವಾಂಗವನ್ನು ತ್ಯಾಗ ಮಾಡಬೇಕೆ? ।೨೦೩॥

ತನಗೆ ಪ್ರಿಯವಾದ ಮಾವಿನ ಹಣ್ಣಿನ ಸಿಪ್ಪೆ ಹಾಗೂ ಗೊರಟೆ ಇವುಗಳಲ್ಲಿ ರಸವಿಲ್ಲವೆಂದು ಆ ಹಣ್ಣನ್ನೇ ಯಾರಾದರೂ ಒಗೆಯಬಹುದೇ? ।೨೦೪॥

ಅದರಂತೆ ಕರ್ಮ ಮಾಡಿದ ಅಭಿಮಾನವು ಮತ್ತು ಕರ್ಮಫಲದ ಇಚ್ಛೆಯು, ಈ ಎರಡಕ್ಕೆ ಬಂಧನವೆಂದು ಹೆಸರಿದೆ ।೨೦೫॥

ಆದ್ದರಿಂದ ತಂದೆಯು ತನ್ನ ಮಗಳ ಮೇಲೆ ಹೇಗೆ ಇಚ್ಛೆ ಮಾಡುವುದಿಲ್ಲವೋ, ಅದರಂತೆ ವಿಹಿತ ಕರ್ಮದ ಆಚರಣೆಯನ್ನು ಮಾಡಿ ಈ ಎರಡನ್ನು ಇಚ್ಛಿಸುವುದಿಲ್ಲ. ಆತನಿಗೆ ದುಃಖವಾಗುವುದಿಲ್ಲ ।೨೦೬॥

ಈ ತ್ಯಾಗರೂಪ ವೃಕ್ಷವು ಸರ್ವಶ್ರೇಷ್ಠವಾಗಿದ್ದು ಇದಕ್ಕೆ ಮಾತ್ರ ಮೋಕ್ಷರೂಪ ದೊಡ್ಡ ಫಲಗಳು ಬರುವುವು, ಎಲ್ಲ ಜಗತ್ತಿನಲ್ಲಿ ಈ ಸಾತ್ತ್ವಿಕ ತ್ಯಾಗವು ಹೀಗೆ ಪ್ರಸಿದ್ಧಿಯಾಗಿದೆ ।೨೦೭॥

ಈಗ ಗಿಡದ ಬೀಜವನ್ನು ಸುಟ್ಟು ಗಿಡವನ್ನು ನಿರ್ವಂಶ ಮಾಡುವಂತೆ ಫಲದ ತ್ಯಾಗವನ್ನು ಮಾಡಿ ಯಾವ ಕರ್ಮದ ತ್ಯಾಗ ಮಾಡುವನು ।೨೦೮॥

ಪರಿಸದ ಸ್ಪರ್ಶದಿಂದ ಕಬ್ಬಿಣದ ಕಲಂಕ ಹಾಗೂ ಬಣ್ಣವು ಬದಲಾಗುವುದು. ಅದರಂತೆ ಕರ್ಮದ ಅಭಿಮಾನ, ಫಲದ ಇಚ್ಛೆ ಇವುಗಳ ತ್ಯಾಗದಿಂದ ರಜ, ತಮಗಳು ಇಲ್ಲದಾಗುವುವು ।೨೦೯॥

ತದನಂತರ ಶುದ್ಧ ಸತ್ತ್ವದಿಂದ ಆತ್ಮಬೋಧೆಯ ಪ್ರಕಾಶವಾಗಿ, ಯಾವ ಪ್ರಕಾರವಾಗಿ ಸಾಯಂಕಾಲದಲ್ಲಿ ಮೃಗಜಲವು ತನ್ನಷ್ಟಕ್ಕೆ ತಾನೇ ಇಲ್ಲದಂತಾಗುವುದೋ ।೨೧೦॥

ಅಥವಾ ಆಕಾಶದ ಪೊಳ್ಳು ಎಲ್ಲಿಯೂ ಕಾಣಿಸುವುದಿಲ್ಲವೋ, ಅದರಂತೆ ಜ್ಞಾನಿಯರಲ್ಲಿ ಜಗತ್ತಿನಲ್ಲಿ ದೊಡ್ಡದಾದ ಮಿಥ್ಯಾಭ್ಯಾಸವು ಕಾಣುವುದಿಲ್ಲ ।೨೧೧॥

**ಶ್ಲೋಕಾರ್ಥ :-** ಸಂಶಯವಿಲ್ಲದೆ, ಸತ್ತ್ವಗುಣ ಪೂರ್ಣನಾದ ಮೇಧಾವಿಯ ಕರ್ಮಗಳಲ್ಲಿ ಅನುಕೂಲ ಪ್ರತಿಕೂಲ ಭಾಗವನ್ನು ಇಡುವುದಿಲ್ಲ ।೧೦॥

ಆದ್ದರಿಂದ ಪೂರ್ವ ಕರ್ಮಾನುಸಾರವಾಗಿ ಒಳ್ಳೆಯ ಹಾಗೂ ಕೆಟ್ಟ ಕರ್ಮಗಳು ಪ್ರಾಪ್ತವಾದದ್ದನ್ನು, ಆಕಾಶದಲ್ಲಿ ಮೋಡಗಳು ಉತ್ಪನ್ನವಾಗಿ ಇಲ್ಲದಾಗುವುವೋ ।೨೧೨॥

ಅದರಂತೆ ಅರ್ಜುನಾ, ಆತನ ದೃಷ್ಟಿಯಿಂದ ಎಲ್ಲ ಕರ್ಮಗಳು ನಿರ್ದೋಷವಾಗಿರುವುವು. ಆದ್ದರಿಂದ ಅವುಗಳಿಂದಾಗುವ ಸುಖದುಃಖಗಳ ಪಂಚಾಯತಿ ಮಾಡುವುದಿಲ್ಲ ।೨೧೩॥

ಇದು ಶುಭ ಕರ್ಮವೆಂದು ಅವನು ಹರ್ಷಪಡುವುದಿಲ್ಲ. ಅಥವಾ ಇದು ಅಶುಭ ಕರ್ಮವೆಂದು ಅದರ ದ್ವೇಷ ಮಾಡುವುದಿಲ್ಲ ।೨೧೪॥

ತರೀ ಇಯಾವಿಷಯೀಂಚಾ ಕಾಂಹೀ । ತಯಾ ಏಕುಹೀ ಸಂದೇಹೋ ನಾಹೀ । ಜೈಸಾ ಸ್ವಪ್ನಾಚ್ಯಾ ಠಾಯೀ । ಜಾಗಿನ್ನಲಿಯಾ ।೨೧೫।। ಮ್ಹಣೌನಿ ಕರ್ಮ ಆಣಿ ಕರ್ತಾ । ಯಾ ದ್ವೈತಭಾವಾಚೀ ವಾರ್ತಾ । ನೇಣೇ ತೋ ಪಂಡುಸುತಾ । ಸಾತ್ತ್ವಿಕ ತ್ಯಾಗು ।೨೧೬।। ಐಸೇನಿ ಕರ್ಮೆ ಪಾರ್ಥಾ । ತ್ಯಜಿಲೀ ತ್ಯಜಿತೀ ಸರ್ವಥಾ । ಅಧಿಕೇ ಬಾಂಧಿತೀ ಅನ್ಯಥಾ । ಸಾಂಡಿಲೀ ತರೀ ।೨೧೭।।

ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।
ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ।೧೧।।

ಆಣಿ ಹಾ ಗಾ ಸವ್ಯಸಾಚೀ । ಮೂರ್ತಿ ಲಾಹೋನಿ ದೇಹಾಚೀ । ಖಂತೀ ಕರಿತೀ ಕರ್ಮಾಚೀ । ತೇ ಗಾಂವಢೇ ಗಾ ।೨೧೮।। ಮೃತ್ತಿಕೇಚಾ ವೀಟು । ಘೇಊನಿ ಕಾಯ ಕರೀಲ ಘಟು ? । ಕೇಉತಾ ತಾಥು ಪಟು । ಸಾಂಡೀಲ ತೋ ? ।೨೧೯।। ತೇವೀಂಚಿ ವನ್ಹಿತ್ವ ಆಂಗೀ । ಆಣಿ ಉಬೇ ಉಬಗಣೇ ಆಗೀ । ಕೀ ತೋ ದೀಪು ಪ್ರಭೇಲಾಗೀ ।ದ್ವೇಷು ಕರೀಲ ಕಾಈ ? ।೨೨೦।। ಹಿಂಗು ತ್ರಾಸಿಲಾ ಘಾಣೇ । ತರೀ ಕೈಚೇ ಸುಗಂಧತ್ವ ಆಣೇ ? । ದ್ರವಪಣ ಸಾಂಡೂನಿ ಪಾಣೀ । ಕೇ ರಾಹೇ ತೇ ? ।೨೨೧।। ತೈಸಾ ಶರೀರಾಚೇನಿ ಆಭಾಸೇ । ನಾಂದತು ಜಂವ ಅಸೇ । ತಂವ ಕರ್ಮತ್ಯಾಗಾಚೇ ಪಿಸೇ । ಕಾಇಸೇ ತರೀ ? ।೨೨೨।। ಆಪಣ ಲಾವಿಜೇ ಟಿಳಾ । ಮ್ಹಣೌನಿ ಪುಸೋ ಯೇ ವೇಳೋವೇಳಾ । ಮಾ ಘಾಲೀ ಘೇಡೀ ನಿಡಳಾ । ಕಾ ಕರೂ ಯೇ ಗಾ ? ।೨೨೩।। ತೈಸೇ ವಿಹಿತ ಸ್ವಯೇ ಆದರಿಲೇ । ಮ್ಹಣೌನಿ ತ್ಯಜೂ ಯೇ ತ್ಯಜಿಲೇ । ಪರೀ ಕರ್ಮಚಿ ದೇಹ ಆತಲೇ । ತೇ ಕಾ ಸಾಂಡೀಲ ಗಾ ? ।೨೨೪।। ಜೇ ಶ್ವಾಸೋಚ್ಛ್ವಾಸವರೀ । ಹೋತ ನಿಜೇಲಿ ಯಾಹೀವರೀ । ಕಾಂಹೀ ನ ಕರಣೇಂಚಿ ಪರೀ । ಹೋತೀ ಜಯಾಚೀ ।೨೨೫।। ಯಾ ಶರೀರಾಚೇನಿ ಮಿಸಕೇ । ಕರ್ಮಚಿ ಲಾಗಲೇ ಅಸಿಕೇ । ಜಿತಾ ಮೇಲಯಾ ನ ಠಾಕೇ । ಇಯಾ ರೀತೀ ।೨೨೬।। ಯಯಾ ಕರ್ಮಾತೇ ಸಾಂಡಿತೀ ಪರೀ । ಏಕೀಚಿ ತೇ ಅವಧಾರೀ । ಜೇ ಕರಿತಾ ನ ಜಾಇಜೇ ಹಾರೀ । ಫಳಾಶೇಚಿಯೇ ।೨೨೭।। ಕರ್ಮಫಳ ಈಶ್ವರೀ ಅರ್ಪೇ । ತತ್ಪ್ರಸಾದೇ ಬೋಧು ಉದ್ದೀಪೇ ।ತೇಥ ರಜ್ಜು ಜ್ಞಾನೇ ಲೋಪೇ । ವ್ಯಾಳಶಂಕಾ ।೨೨೮।। ತೇಣೇ ಆತ್ಮಬೋಧೇ ತೈಸೇ । ಅವಿದ್ಯೇಸೀ ಕರ್ಮ ನಾಶೇ । ಪಾರ್ಥಾ ತ್ಯಜಿಜೇ ಜೈ ಐಸೇ । ತೈ ತ್ಯಜಿಲೇ ಹೋಯ ।೨೨೯।।

ನಿದ್ದೆಯಿಂದ ಎಚ್ಚರಾದ ಮೇಲೆ ಸ್ವಪ್ನದಲ್ಲಿ ಕಂಡ ಮಾತಿಗಾಗಿ ಯಾರೂ ಸುಖದುಃಖ ಮಾಡಿಕೊಳ್ಳಲಾರದಂತೆ ಶುಭಾಶುಭ ವಿಷಯಕ್ಕೆ ಇವರ ಮನದಲ್ಲಿ ಸಂಶಯವೇ ಬರುವುದಿಲ್ಲ ।೨೧೫॥

ಆದ್ದರಿಂದ ಪಂಡುಸುತನೇ, ಕರ್ಮ ಮತ್ತು ಕರ್ತನು ಎಂಬ ಈ ದ್ವೈತಭಾವದ ವಾರ್ತೆಯನ್ನೇ ಇವನು ಅರಿಯುವುದಿಲ್ಲ, ಅದಕ್ಕೆ ಸಾತ್ತ್ವಿಕ ತ್ಯಾಗವೆಂದು ಹೇಳುವರು ।೨೧೬॥

ಪಾರ್ಥಾ, ಈ ಪ್ರಕಾರವಾಗಿ ತ್ಯಾಗ ಮಾಡಿದಾಗ ಅದು ಕರ್ಮತ್ಯಾಗವಾಗುವುದು, ಇದರ ಹೊರತಾದ ತ್ಯಾಗಗಳಿಂದ ಪ್ರತಿಯಾಗಿ ಹೆಚ್ಚಿನ ಬಂಧನದಲ್ಲಿ ಬೀಳುವರು ।೨೧೭॥

ಶ್ಲೋಕಾರ್ಥ :- ದೇಹಧಾರಿಯಾದವನು ಕರ್ಮಗಳನ್ನು ಆದ್ಯಂತವಾಗಿ ಬಿಡುವುದು ಶಕ್ಯವಿಲ್ಲ. ಆದುದರಿಂದ ಕರ್ಮಫಲಗಳನ್ನು ತ್ಯಜಿಸಿದವನೇ ನಿಜವಾದ ತ್ಯಾಗಿ ।೧೧॥

ಮತ್ತು ಅರ್ಜುನಾ, ಯಾವ ದೇಹವು ಪ್ರಾಪ್ತವಾಗಿರುವಾಗ ಕರ್ಮ ಮಾಡುವುದಕ್ಕೆ ಬೇಸರ ಪಡುವವರು ಮೂರ್ಖರಾಗಿರುವರು ।೨೧೮॥

ಮಣ್ಣಿನ ಬೇಸರ ಮಾಡಿ ಮಡಿಕೆಯು ಏನು ಮಾಡಿತು? ಮತ್ತು ವಸ್ತ್ರಕ್ಕೆ ನೂಲಿನ ಸಂಬಂಧ ಬಿಡಲು ಹೇಗೆ ಬಂದಿತು? ।೨೧೯॥

ಹಾಗೆಯೇ ಅಗ್ನಿತ್ವವನ್ನು ಅಂಗದಲ್ಲಿರುವ ಬೆಂಕಿಗೆ ಉಷ್ಣತೆಯ ಬೇಸರ ಮಾಡಲು ಬರುವುದೇ? ಅಥವಾ ದೀಪವು ತನ್ನ ಬೆಳಕಿನ ದ್ವೇಷ ಮಾಡೀತೆ? ।೨೨೦॥

ಇಂಗಿಗೆ ತನ್ನ ದುರ್ಗಂಧದ ತ್ರಾಸು ಮಾಡಿಕೊಂಡರೆ, ಅದು ಸುಗಂಧವನ್ನು ಎಲ್ಲಿಂದ ತರಬೇಕು? ಅಥವಾ ದ್ರವತ್ವ ಬಿಟ್ಟು ನೀರು ಎಲ್ಲಿರಬೇಕು? ।೨೨೧॥

ಅದರಂತೆ ಶರೀರದ ಅವಸ್ಥೆಯಲ್ಲಿ ಎಲ್ಲಿಯವರೆಗೆ ಮನುಷ್ಯನು ಇರುವನೋ, ಅಲ್ಲಿಯವರೆಗೆ ಕರ್ಮ ತ್ಯಾಗದ ಹುಚ್ಚು ಯಾವ ಉಪಯೋಗವಾದೀತು? ।೨೨೨॥

ತಾನು ಹಣೆಗೆ ಹಚ್ಚಿಕೊಂಡ ಗಂಧವು ಡೊಂಕಾಗಿದ್ದರೆ ಅದನ್ನು ಮೇಲಿಂದ ಮೇಲೆ ಒರೆಸಬಹುದು. ಆದರೆ ಹಣೆಯೇ ಡೊಂಕಾಗಿದ್ದರೆ ಅದನ್ನು ಹೇಗೆ ಸರಿ ಮಾಡಲು ಬರುವುದು? ।೨೨೩॥

ಅದರಂತೆ ವಿಹಿತ ಕರ್ಮದ ಆದರವನ್ನು ಸ್ವತಃ ತಾನೇ ಮಾಡಿರುವನು, ಅದರ ತ್ಯಾಗ ಮಾಡಲು ಬರಬಹುದು. ಆದರೆ ಶರೀರವು ಕರ್ಮರೂಪವೇ ಇರುವುದರಿಂದ ಕರ್ಮವನ್ನು ಹೇಗೆ ಬಿಡಲು ಸಾಧ್ಯ? ।೨೨೪॥

ಏಕೆಂದರೆ ಮನುಷ್ಯನು ಮಲಗಿಕೊಂಡಿರುವಾಗಲೂ ಶ್ವಾಸೋಚ್ಛ್ವಾಸ ರೂಪದಿಂದ ಕರ್ಮವು ತಾನು ಏನೂ ಮಾಡದಿರುವಾಗಲೂ ನಡದೇ ಇರುವುದು ।೨೨೫॥

ಈ ಶರೀರದ ನಿಮಿತ್ಯದಿಂದ ಈ ಕರ್ಮವು ನಮ್ಮ ಬೆನ್ನು ಹತ್ತಿರುವುದು ಮತ್ತು ಜೀವಂತವಿದ್ದಾಗಲೂ, ಸತ್ತಾಗಲೂ ಕರ್ಮವು ನಿಲ್ಲುವುದಿಲ್ಲ ।೨೨೬॥

ಇಲ್ಲಿ ನೋಡು, ಈ ಕರ್ಮದ ತ್ಯಾಗ ಮಾಡುವುದಕ್ಕೆ ಒಂದೇ ಪ್ರಕಾರವು ಹೇಗಿದೆ ಎಂದರೆ ಕರ್ಮ ಮಾಡುತ್ತಿರುವಾಗ್ಗೆ ಫಲಾಪೇಕ್ಷೆಯ ಅಧೀನನಾಗಬಾರದು ।೨೨೭॥

ಕರ್ಮದ ಫಲವನ್ನು ಈಶ್ವರನಿಗೆ ಅರ್ಪಿಸುವುದರಿಂದ ಆತನ ಪ್ರಸಾದದಿಂದ ಜ್ಞಾನವು ಉತ್ಪನ್ನವಾಗುವುದು. ಹಗ್ಗದ ಜ್ಞಾನವಾದಾಗ್ಗೆ ಸರ್ಪದ ಶಂಕೆಯು ದೂರಾಗುವುದು ।೨೨೮॥

ಅದರಂತೆ ಈ ಆತ್ಮಬೋಧೆಯಿಂದ ಅಜ್ಞಾನ ಸಹ ಕರ್ಮದ ನಾಶವಾಗುವುದು. ಪಾರ್ಥಾ, ಈ ರೀತಿಯ ಕರ್ಮದ ತ್ಯಾಗವು ನಿಜವಾದ ಕರ್ಮವಾಗಿರುವುದು ।೨೨೯॥

ಮ್ಹಣೌನಿ ಇಯಾಪರೀ ಜಗೀ । ಕರ್ಮೇ ಕರಿತಾ ಮಾನೂ ತ್ಯಾಗೀ । ಯೇರ ಮೂರ್ಖನೇ ನಾಂವ ರೋಗೀ । ವಿಸಾಂವಾ ಜೈಸಾ ॥೮೩೦॥ ತೈಸಾ ಕರ್ಮೀ ಶಿಣೇ ಏಕೀ । ತೋ ವಿಸಾಂವೋ ಪಾಹೇ ಆಣಿಕೀ । ದಾಂಡೇಯಾಂಚೇ ಘಾಯ ಬುಕೀ । ಧಾಡಣೇ ಜೈಸೇ ॥೮೩೧॥ ಪರೀ ಹೇ ಅಸೋ ಪುಢತೀ । ತೋಚಿ ತ್ಯಾಗೀ ತ್ರಿಜಗತೀ । ಜೇಣೇ ಫಳ ತ್ಯಾಗೇ ನಿಷ್ಕೃತೀ । ನೇಲೇ ಕರ್ಮ ॥೮೩೨॥

ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್ ।<br>
ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ ॥೧೨॥

ಯೇರ್ಹವೀ ತರೀ ಧನಂಜಯಾ । ತ್ರಿವಿಧಾ ಕರ್ಮಫಳಾ ಗಾ ಯಯಾ । ಸಮರ್ಥ ತೇ ಕೀ ಭೋಗಾವಯಾ । ಜೇ ಸಾಂಡಿತೀಚಿ ಆಶಾ ॥೮೩೩॥ ಆಪಣಚಿ ವಿಊನಿ ದುಹಿತಾ । ಕೀ ನ ಮಮ ಮ್ಹಣೇ ಪಿತಾ । ತೋ ಸುಟೇ ಕೀ ಪ್ರತಿಗ್ರಹಿತಾ । ಜಾಂವಾಈ ಶಿರಕೇ ॥೮೩೪॥ ವಿಷಾಚೇ ಆಗರಹೀ ವಾಹತೀ । ತೇ ವಿಕಿತಾ ಸುಖೇ ಲಾಭೇ ಜಿತೀ । ಯೇರ ನಿಮಾಲೇ ಜೇ ಘೇತೀ । ವೇಂಚೋನಿ ಮೋಲೇ ॥೮೩೫॥ ತೈಸೇ ಕರ್ತಾ ಕರ್ಮ ಕರೂ । ಅಕರ್ತಾ ಫಳಾಶಾ ನ ಧರೂ । ಏಥ ನ ಶಕೇ ಆವರೂ । ದೋಹೀಂತೇ ಕರ್ಮ ॥೮೩೬॥ ವಾಟೇ ಪಿಕಲಿಯಾ ರುಖಾಚೇ । ಫಳ ಅಪೇಕ್ಷೀ ತಯಾಚೇ । ತೇವೀ ಸಾಧಾರಣ ಕರ್ಮಾಂಚೇ । ಫಳ ಘೇ ತಯಾ ॥೮೩೭॥ ಪರೀ ಕರೂನಿ ಫಳ ನೇಘೇ । ತೋ ಜಗಾಚ್ಯಾ ಕಾಮೀ ನ ರಿಘೇ । ಜೇ ತ್ರಿವಿಧ ಜಗ ಅವಘೇ । ಕರ್ಮಫಳ ಹೇ ॥೮೩೮॥ ದೇವ ಮನುಷ್ಯ ಸ್ಥಾವರ । ಯಯಾ ನಾಂವ ಜಗಡಂಬರ । ಆಣಿ ಹೇ ತಂವ ತಿನ್ಹೀ ಪ್ರಕಾರ । ಕರ್ಮಫಳಾಚೇ ॥೮೩೯॥ ತೇಂಚಿ ಏಕ ಗಾ ಅನಿಷ್ಟ । ಏಕ ತೇ ಕೇವಳ ಇಷ್ಟ । ಆಣಿ ಏಕ ಇಷ್ಟಾನಿಷ್ಟ । ತ್ರಿವಿಧ ಐಸೇ ॥೮೪೦॥ ಪರೀ ವಿಷಯಮಂತೀ ಬುದ್ಧೀ । ಆಂಗೀ ಸೂನಿ ಅವಿಧೀ । ಪ್ರವರ್ತತೀ ಜೇ ನಿಷಿದ್ಧೀ । ಕುವ್ಯಾಪಾರೀ ॥೮೪೧॥ ತೇಥ ಕೃಮಿಕೀಟ ಲೋಷ್ಟ । ಹೇ ದೇಹ ಲಾಹತೀ ನಿಕೃಷ್ಟ । ತಯಾ ನಾಮ ತೇ ಅನಿಷ್ಟ । ಕರ್ಮಫಳ ॥೮೪೨॥ ಕಾ ಸ್ವಧರ್ಮಾ ಮಾನು ದೇತಾ । ಸ್ವಾಧಿಕಾರು ಪುಢಾ ಸೂತಾ । ಸುಕೃತ ಕೀಜೆ ಪುಸತಾ । ಆಮ್ನಾಯಾತೇ ॥೮೪೩॥ ತೈ ಇಂದ್ರಾದಿಕ ದೇವಾಂಚೀ । ದೇಹೇ ಲಾಹಿಜತೀ ಸವ್ಯಸಾಚೀ । ತಯಾ ಕರ್ಮಫಳಾ ಇಷ್ಟಾಚೀ । ಪ್ರಸಿದ್ಧಿ ಗಾ ॥೮೪೪॥ ಆಣಿ ಗೋಡ ಆಂಬಟ ಮಿಳೇ । ತೇಥ ರಸಾಂತರ ಫರ ಸಾಳೇ । ಉಠೀ ದೋಹೀ ವೇಗಳೇ । ದೋಹೀ ಜಿಣತೇ ॥೮೪೫॥

ಆದ್ದರಿಂದ ಜಗತ್ತಿನಲ್ಲಿ ಸಾತ್ತ್ವಿಕ ತ್ಯಾಗದ ಯುಕ್ತಿಯಿಂದ ಕರ್ಮ ಮಾಡುವವನಿಗೆ ಮಾತ್ರ ನಾವು ಕರ್ಮತ್ಯಾಗಿ ಎನ್ನುವೆವು. ಇಲ್ಲದಿದ್ದರೆ ಮೂರ್ಛೆ ಬಂದ ರೋಗಿಗೆ ವಿಶ್ರಾಂತಿ ಪಡೆಯುತ್ತಾನೆ ಎಂದಂತಾಗುವುದು ।।೨೩೦।।

ಇನ್ನು ಒಂದು ಕರ್ಮದಿಂದ ಬೇಸತ್ತು ವಿಶ್ರಾಂತಿಗಾಗಿ ಇನ್ನೊಂದು ಕರ್ಮವನ್ನು ಆರಂಭಿಸುವನು. ಇದರಿಂದ ದೊಣ್ಣೆಯಿಂದ ಹೊಡೆದ ಬಾಧೆಗೆ ಗುದ್ದಿ ಕಡಿಮೆ ಮಾಡಲು ಹೋದಂತಾಗುವುದು ।।೨೩೧।।

ಆದರೆ ಇದು ಇರಲಿ, ಯಾವನು ಫಲತ್ಯಾಗವನ್ನು ಮಾಡಿ ಕರ್ಮಕ್ಕೆ ನಿಷ್ಕರ್ಮತ್ವವನ್ನು ತಂದವನೇ ಈ ತ್ರಿಭುವನದಲ್ಲಿ ತ್ಯಾಗಿಯಾಗಿರುವನು ।।೨೩೨।।

ಶ್ಲೋಕಾರ್ಥ :- ಪುಣ್ಯ,ಪಾಪ ಮತ್ತು ಮಿಶ್ರಗಳೆಂಬ ಮೂರು ವಿಧಗಳಾದ ಕರ್ಮಫಲಗಳು ಮರಣಾನಂತರ ಲುಬ್ಧರಾದ ಸಂಸಾರಿಗಳನ್ನು ಪೀಡಿಸುತ್ತವೆ. ಫಲಾಸಕ್ತಿಯನ್ನು ಬಿಟ್ಟ ಸಂನ್ಯಾಸಿಗಳಿಗೆ ಅವು ಅಂಟಲಾರವು ।।೧೨।।

ಇಲ್ಲದಿದ್ದರೆ ಧನಂಜಯನೇ, ಯಾರು ಕರ್ಮದ ಆಶೆಯನ್ನು ಬಿಡುವುದಿಲ್ಲವೋ, ಅವರೇ ಈ ಮೂರು ಪ್ರಕಾರಗಳ ಕರ್ಮಫಲದ ಭೋಗ ಪಡೆಯಲು ಸಮರ್ಥರಿರುವರು ।।೨೩೩।।

ತಾನು ತನ್ನ ಮಗಳಿಗೆ ಜನ್ಮ ಕೊಟ್ಟಿದರೂ ತಂದೆಯು ಕನ್ಯಾದಾನದ ಉದಕವನ್ನು ಬಿಟ್ಟಾಗ ಆಕೆಯ ಮೇಲಿನ ಮಾಯೆಯು ಬಿಟ್ಟು ಪಾಣಿಗ್ರಹಣ ಮಾಡುವ ಅಳಿಯನು ಆಕೆಯ ಮಾಯಾಪಾಶದಲ್ಲಿ ಸಿಲುಕುವನು ।।೨೩೪।।

ವಿಷದ ತೋಟವನ್ನು ಮಾಡಿ ವ್ಯಾಪಾರದೊಂದಿಗೆ ಅದರಿಂದ ಲಾಭ ಪಡೆದು, ತಮ್ಮ ಪ್ರಪಂಚವನ್ನು ಸುಖವಾಗಿ ನಡೆಸುವರು, ಆದರೆ ಹಣ ಖರ್ಚು ಮಾಡಿ ಖರೀದಿಸಿ ಅದರ ಸೇವನೆಯಿಂದ ಸಾಯುವರು! ।।೨೩೫।।

ಅದರಂತೆ ಕರ್ತೃತ್ವದ ಅಭಿಮಾನವನ್ನು ಹಿಡಿದು ಕರ್ಮ ಮಾಡಲಿ ಅಥವಾ ನಾನು ಕರ್ತನು ಅಲ್ಲವೆಂದು ತಿಳಿದು ಫಲದ ಆಶೆಬಿಟ್ಟು ಕರ್ಮ ಮಾಡಲಿ, ಇಬ್ಬರಿಗೂ ಕರ್ಮ ಮಾಡುವುದು ತಪ್ಪುವುದಿಲ್ಲ ।।೨೩೬।।

ದಾರಿಯಲ್ಲಿ ಬೆಳೆದ ವೃಕ್ಷದ ಫಲಗಳ ಆಶೆ ಮಾಡಿದವನಿಗೆ ಅದು ಬಾಧೆಯಾಗುವುದು. ಅದರಂತೆ ಕರ್ಮಫಲದ ಇಚ್ಛೆ ಮಾಡುವವನಿಗೆ ಬಾಧಕವಾಗುವುದು ।।೨೩೭।।

ಆದರೆ ಕರ್ಮವನ್ನು ಮಾಡಿ ಫಲದ ಇಚ್ಛೆ ಮಾಡಲಾರದವನಿಗೆ, ಜಗತ್ತಿನ ವಿಷಯಕ್ಕೆ ಏನೂ ಇಚ್ಛಿಸದವನಿಗೆ ಫಲದ ಭೋಗವು ದೊರೆಯುವುದಿಲ್ಲ. ಕಾರಣ ಎಲ್ಲ ಜಗವು ಮೂರು ಪ್ರಕಾರದ ಕರ್ಮದ ಫಲವಾಗಿರುವುದು ।।೨೩೮।।

ದೇವ, ಮನುಷ್ಯ ಹಾಗೂ ಸ್ಥಾವರ ಇವುಗಳಿಗೆ ಜಗಡಂಬರವೆಂದು ಹೇಳುವರು ಮತ್ತು ಇವು ಮೂರು ಪ್ರಕಾರದ ಕರ್ಮಫಲಗಳಾಗಿರುವುವು ।।೨೩೯।।

ಅದೇ ಕರ್ಮವು ಒಂದು ಅನಿಷ್ಟ (ಪ್ರತಿಕೂಲ), ಒಂದು ಕೇವಲ ಇಷ್ಟ (ಅನುಕೂಲ) ಮತ್ತು ಒಂದು ಇಷ್ಟಾ ನಿಷ್ಟ (ಮಿಶ್ರ) ಹೀಗೆ ಮೂರು ಪ್ರಕಾರದ್ದಾಗಿವೆ ।।೨೪೦।।

ಆದರೆ, ವಿಷಯಾಸಕ್ತರಿದ್ದವರು ಅವಧಿಯ ಅಂಗೀಕಾರವನ್ನು ಮಾಡಿ ನಿಷಿದ್ಧ ಕರ್ಮಗಳಲ್ಲಿ ಪ್ರವೃತ್ತರಾಗುವರು ।।೨೪೧।।

ಇದರಿಂದ ಕ್ರಿಮಿ, ಕೀಟಕ ಅಥವಾ ಮಣ್ಣು, ಹೀಗೆ ಕೆಟ್ಟ ದೇಹಗಳನ್ನು ಪಡೆಯುವರು. ಇದಕ್ಕೆ ಅನಿಷ್ಟ ಕರ್ಮಫಲವೆನ್ನುವರು ।।೨೪೨।।

ಅಥವಾ ಸ್ವಧರ್ಮಕ್ಕೆ ಮಾನ ಕೊಟ್ಟು ತಮ್ಮ ಅಧಿಕಾರ ತಕ್ಕಂತೆ ವೇದದಲ್ಲಿ ಹೇಳಿದ ಪ್ರಕಾರ ಸುಕೃತವನ್ನು ಮಾಡುವರು ।।೨೪೩।।

ಆಗ ಸವ್ಯಸಾಚಿಯೇ, ಅವರಿಗೆ ಇಂದ್ರಾದಿಕ ದೇವತೆಗಳ ದೇಹವು ಪ್ರಾಪ್ತವಾಗುವುದು. ಆ ಕರ್ಮ ಫಲಕ್ಕೆ ಪುಣ್ಯಕರ್ಮವೆಂದು ಹೇಳುವರು ।।೨೪೪।।

ಮತ್ತು ಸಿಹಿ ಮತ್ತು ಹುಳಿಯನ್ನು ಒಂದುಗೂಡಿಸಿದಾಗ ಅದರಿಂದ ಒಂದು ತರಹದ ಬೇರೆ ರುಚಿಯ ಮಧುರವು ಹುಟ್ಟುವುದು ।।೨೪೫।।

ರೇಚಕುಚಿ ಯೋಗವಶೇ । ಹೋಯ ಸ್ತಂಭಾವಯಾದೋಷೇ । ತೇವೀ ಸತ್ಯಾಸತ್ಯ ಸಮರಸೇ । ಸತ್ಯಾಸತ್ಯಚಿ ಜಿಣಿಜೇ ।೨೪೬॥ ವ್ಹಾಣೌನಿ ಸಮಭಾಗೇ ಶುಭಾಶುಭೇ । ಮಿಳೋನಿ ಅನುಷ್ಠಾನಾಚೇ ಉಭೇ । ತೇಣೇ ಮನುಷ್ಯತ್ವ ಲಾಭೇ । ತೇ ಮಿಶ್ರ ಫಳ ।೨೪೭॥ ಐಸೇ ತ್ರಿವಿಧ ಯಯಾ ಭಾಗೀ । ಕರ್ಮಫಳ ಮಾಂಡಲೇಸೇ ಜಗೀ । ಹೇ ನ ಸಾಂಡೀ ತಯಾ ಭೋಗೀ । ಜೇ ಸೂದಲೇ ಆಶಾ ।೨೪೮॥ ಜೇಥೇ ಜಿವ್ಹೇಚಾ ಹಾತು ಫಾಂಟೇ । ತಂವ ಜೇವಿತಾ ವಾಟೇ ಗೋಮಟೇ । ಮಗ ಪರಿಣಾಮೀ ಶೇವಟೇ । ಅವಶ್ಯ ಮರಣ ।೨೪೯॥ ಸಂವಚೋರ ಮೈತ್ರೀ ಚಾಂಗ । ಜಂವ ನ ಪವಿಜೇ ತೇ ದಾಂಗ । ಸಾಮಾನ್ಯಾ ಭಲೀ ಆಂಗ । ನ ಶಿವೇ ತಂವ ।೨೫೦॥ ತೈಸೀ ಕರ್ಮೇ ಕರಿತಾ ಶರೀರೀ । ಲಾಹತೀ ಮಹತ್ವಾಚೀ ಫರಾರೀ । ಪಾಠೀ ನಿಧನೀ ಏಕಸರೀ । ಪಾವತೀ ಫಳೇ ।೨೫೧॥ ಜೈಸಾ ಸಮರ್ಥು ಆಣಿ ಋಣಿಯಾ । ಮಾಗೋ ಆಲಾ ಬಾಇಣಿಯಾ । ನ ಲೋಟೇ ತೈಸಾ ಪ್ರಾಣಿಯಾ । ಪಡೇ ತೋ ಭೋಗು ।೨೫೨॥ ಮಗ ಕಣಿಸೌನಿ ಕಣು ಝಡೇ । ತೋ ವಿರೂಢಲಾ ಕಣಿಸಾ ಚಡೇ । ಪುಢತೀ ಭೂಮೀ ಪಡೇ । ಪುಢತೀ ಉಠೀ ।೨೫೩॥ ತೈಸೇ ಭೋಗೀ ಜೇ ಫಳ ಹೋಯ । ತೇ ಫಳಾಂತರೇ ವೀತ ಜಾಯ । ಚಾಲತಾ ಪಾವೋ ಪಾಯ । ಜಿಣಿಜೇ ಜೈಸಾ ।೨೫೪॥ ಉತಾರಾಚಿಯೇ ಸಾಂಗಡೀ । ಠಾಕೇ ತೇ ಐಲೀಚ ಥಡೀ । ತೇವೀ ನ ಮುಕಿಜತೀ ವೋಢೀ । ಭೋಗ್ಯಾಚಿಯೇ ।೨೫೫॥ ಪೈ ಸಾಧ್ಯಸಾಧನ ಪ್ರಕಾರೇ । ಫಳಭೋಗು ತೋ ಪಸರೇ । ಏವಂ ಗೋವಿಲೇ ಸಂಸಾರೇ । ಅತ್ಯಾಗೀ ತೇ ।೨೫೬॥ ಯೇರ್ಹವೀ ಜಾಈಚಿಯಾ ಫುಲಾ ಫಾಂಕಣೇ । ತ್ಯಾಚಿ ನಾಮ ಜೈಸೇ ಸುಕಣೇ । ತೈಸೇ ಕರ್ಮಮಿಷೇ ನ ಕರಣೇ । ಕೇಲೇ ಜಿಹೀ ।೨೫೭॥ ಬೀಜಚಿ ವರೋಸಿ ವೇಂಚೇ । ತೇಥ ವಾಢತೀ ಕುಳವಾಡೀ ಖಾಂಚೇ । ತೇವೀ ಫಳತ್ಯಾಗೇ ಕರ್ಮಾಚೇ । ಸಾರಿಲೇ ಕಾಮ ।೨೫೮॥ ತೇ ಸತ್ತ್ವಶುದ್ಧೀ ಸಾಹಾಕಾರೇ । ಗುರು ಕೃಪಾಮೃತತುಷಾರೇ । ಸಾಸಿನ್ನಲೇನಿ ಬೋಧೇ ವೋಸರೇ । ದ್ವೈತದೈನ್ಯ ।೨೫೯॥ ತೇವ್ಹಾ ಜಗದಾಭಾಸಮಿಷೇ । ಸ್ಫುರೇ ತೇ ತ್ರಿವಿಧ ಫಳ ನಾಶೇ । ಯೇಥ ಭೋಕ್ತಾ ಭೋಗ್ಯ ಆಪೈಸೇ । ನಿವಾಲೇ ಹೇ ।೨೬೦॥ ಘಡೇ ಜ್ಞಾನಪ್ರಧಾನು ಹಾ ಐಸಾ । ಸಂನ್ಯಾಸು ಜಯಾ ವೀರೇಶಾ । ತೇಚಿ ಫಳಭೋಗ ಸೋಸಾ । ಮುಕಲೇ ಗಾ ।೨೬೧॥

ಅಥವಾ ಪ್ರಾಣವಾಯುವು ಯೋಗಾಭ್ಯಾಸದಿಂದ ಕುಂಭಕವಾಗುವುದು. ಅದರಂತೆ ಸತ್ಯ ಹಾಗೂ ಅಸತ್ಯಗಳ ಐಕ್ಯವಾದಾಗ್ಗೆ ಅವು ಎರಡನ್ನೂ ಗೆಲ್ಲುವ ಕಾರಣವಾಗುವುವು ।೭೪೬॥

ಆದ್ದರಿಂದ ಶುಭ ಮತ್ತು ಅಶುಭ ಕರ್ಮಗಳು ಸಮಭಾಗವಾದಾಗ್ಗೆ ಅದರ ಮನುಷ್ಯ ದೇಹದ ಲಾಭವೇ ಮಿಶ್ರಫಲವಾಗಿರುವುದು ।೭೪೭॥

ಹೀಗೆ ಈ ಜಗತ್ತಿನಲ್ಲಿ ಮೂರು ಪ್ರಕಾರದ ಕರ್ಮ ಫಲಗಳಿರುವುವು ಮತ್ತು ಯಾರನ್ನು ಇಚ್ಛೆಯು ಭೋಗದಲ್ಲಿ ಹಾಕಿರುವುದೋ, ಅವರಿಗೆ ಆ ಕರ್ಮವು ಸುಖದುಃಖದ ಭೋಗಗಳನ್ನು ಕೊಡುವುದು. ಅವರಿಗೆ ಇದು ತಪ್ಪುವುದೇ ಇಲ್ಲ ।೭೪೮॥

ನಾಲಿಗೆಯ ಮೇಲಿನ ಚರ್ಮ ಹರಿಯುವಂತೆ (ಅತಿ ಖಾರ ಪದಾರ್ಥಗಳು) ಅಧಿಕ ಭೋಜನದಲ್ಲಿ ಆನಂದ ವೆನಿಸುವುದು. ಆದರೆ ಪರಿಣಾಮವು ಕೆಟ್ಟದ್ದಾಗಿ ಅವಶ್ಯವಾಗಿ ಸಾಯಬೇಕಾಗುವುದು ।೭೪೯॥

ಎಲ್ಲಿಯವರೆಗೆ ಅರಣ್ಯ ಒದಗಿಲ್ಲವೋ, ಅಲ್ಲಿಯವರೆಗೆ ಸಂಭಾವಿತನಂತಿರುವ ಕಳ್ಳನು ಒಳ್ಳೆಯವನು. ಅಥವಾ ಅಂಗ ಸ್ಪರ್ಶವಾಗದವರೆಗೂ ವೇಶ್ಯೆಯು ಒಳ್ಳೆಯವಳು ।೭೫೦॥

ಅದರಂತೆ ದೇಹದಲ್ಲಿರುವವರೆಗೂ ಕರ್ಮಗಳನ್ನು ಮಾಡುತ್ತಿರುವಾಗ್ಗೆ ದೊಡ್ಡಸ್ಥನದ ಪ್ರಸಿದ್ಧಿಯು ಪ್ರಾಪ್ತ ವಾಗುವುದು. ಆದರೆ ಸತ್ತನಂತರ ಬೇರೆ ಜನ್ಮದಲ್ಲಿ ಆಯುಷ್ಯ ತುಂಬ ಮಾಡಿದ ಕರ್ಮಫಲಗಳು ಪ್ರಾಪ್ತವಾಗುವುವು ।೭೫೧॥

ಬಲಿಷ್ಠ ಸಾಹುಕಾರನು ಸಾಲಗಾರನಲ್ಲಿ ವಾಯದೇ ಮಾಡಿದ ಸಮಯಕ್ಕೆ ಹಣ ಕೇಳಲು ಬಂದಾಗ ಏನು ಮಾಡಿದರೂ ಹಣ ಪಡೆಯದೇ ಇರಲಾರನು. ಅದರಂತೆ ಮಾಡಿದ ಕರ್ಮಗಳ ಫಲವನ್ನು ಭೋಗಿಸಲೇಬೇಕು ।೭೫೨॥

ತೆನೆಯಿಂದ ಧಾನ್ಯವು ಭೂಮಿಯ ಮೇಲೆ ಬಿದ್ದಾಗ ಪುನಃ ಅದು ತೆನೆಯಾಗುವುದು. ಪುನಃ ಬಿದ್ದಾಗ ಪುನಃ ಏಳುವುದು. ಇದು ಹೇಗೆ ನಡೆಯುತ್ತಿರುವುದೋ ।೭೫೩॥

ಅದರಂತೆ ಉಪಭೋಗದ ಫಲವಾದ ಶರೀರವು ಫಲದ ಕೊನೆಗೆ ಜನ್ಮ ಧರಿಸುವುದು. ದಾರಿ ನಡೆಯುವಾಗ ಹಿಂದಿನ ಕಾಲು ಮುಂದೆ, ಮುಂದಿನ ಕಾಲು ಹಿಂದೆ ಹೀಗೆ ನಡೆದು ದಾರಿಯನ್ನು ಗೆಲ್ಲುವನು ।೭೫೪॥

ಹೊಳೆ ದಾಟುವ ನಾವೆಯು ಯಾವ ದಂಡೆಗೆ ಬಂದರೂ ಅದಕ್ಕೆ ಇನ್ನೊಂದು ದಂಡೆ ಇದ್ದೇ ಇರುವುದು. ಅದರಂತೆ ಫಲದ ಭೋಗಕ್ಕೆ ಕೊನೆ ಇಲ್ಲ ।೭೫೫॥

ಇಲ್ಲಿ ನೋಡು, ಇದರಂತೆ ಸಾಧ್ಯ ಸಾಧನ ಕ್ರಮದಿಂದ ಫಲ ಹಾಗೂ ಫಲದ ಭೋಗವು ಬೆಳೆಯುತ್ತಿರುತ್ತವೆ. ಫಲೇಚ್ಛಾ ತ್ಯಾಗ ಮಾಡದವರು ಈ ಪ್ರಕಾರವಾಗಿ ಸಂಸಾರದಲ್ಲಿ ಸಿಲುಕಿಕೊಳ್ಳುವರು ।೭೫೬॥

ಜಾಜಿ ಮಲ್ಲಿಗೆ ಹೂವು ಅರಳುವ ಕ್ಷಣವೇ ಬಾಡುವುದು. ಅದರಂತೆ ಕರ್ಮದ ಆರಂಭ ಮಾಡಿಯೂ ಅಭಿಮಾನವನ್ನು ಬಿಟ್ಟು ಫಲದಿಂದ ಅಲಿಪ್ತರಾಗಿರುವರು ।೭೫೭॥

ಬಿತ್ತಲು ತೆಗೆದಿಟ್ಟ ಕಾಳುಗಳನ್ನು ದಿನಾಲೂ ಹೊಟ್ಟೆಗೆ ತಿಂದರೆ, ಮುಂದೆ ಬಿತ್ತುವ ಪ್ರಸಂಗವು ಬಂದಾಗುವುದು. ಅದರಂತೆ ಫಲದ ತ್ಯಾಗದಿಂದ ಜನ್ಮ ಮರಣವು ಬಂದಾಗುವುದು ।೭೫೮॥

ಶುದ್ಧ ಸತ್ತ್ವದ ಸಹಾಯದಿಂದ ಗುರುಕೃಪಾರೂಪ ಅಮೃತದ ತುಷಾರದಿಂದ ಸಿದ್ಧವಾಗಿರುವ ಆತ್ಮಬೋಧೆ ಯಿಂದ ದ್ವೈತದ ದೈನ್ಯವು ಇಲ್ಲದಾಗುವುದು ।೭೫೯॥

ಆಗ ಮೂರು ಪ್ರಕಾರದ ಫಲದಿಂದ ಉತ್ಪನ್ನವಾಗಿರುವ ಜಗತ್ತು ಸಹಜವಾಗಿ ನಾಶವಾಗಿ ಭೋಕ್ತಾ ಭೋಗ್ಯ ವಸ್ತುಗಳೂ ಲಯಗೊಳ್ಳುವುವು ।೭೬೦॥

ಹೇ ವೀರನೇ, ಯಾರಿಂದ ಈ ಪ್ರಕಾರದ ಕರ್ಮದ ಜ್ಞಾನ ಪ್ರಮುಖ ಸಂನ್ಯಾಸವಾಗುವುದೋ ಅವರಿಗೆ ಮಾತ್ರ ಫಲಭೋಗದಿಂದಾಗುವ ದುಃಖಗಳು ಆಗುವುದಿಲ್ಲ ।೭೬೧॥

ಆಣಿ ಯೇಣೇ ಕೀರ ಸಂನ್ಯಾಸೇ । ಜೈ ಆತ್ಮರೂಪೀ ದಿಠೀ ಪೈಸೇ । ತೈ ಕರ್ಮ ಏಕ ಐಸೇ । ದೇಖಣೇ ಆಹೇ ? ।೨೬೨।। ಪಡೋನಿ ಗೇಲಿಯಾ ಭಿಂತೀ । ಚಿತ್ರಾಂಚೀ ಕೇವಳ ಹೋಯ ಮಾತೀ । ಕಾ ಪಾಹಾಲೇಯಾ ರಾತೀ । ಆಂಧಾರೇ ಉರೇ ? ।೨೬೩।। ಜೈ ರೂಪಚಿ ನಾಹೀ ಉಭೇ । ತೈ ಸಾಉಲೀ ಕಾಹ್ಯಾಚೀ ಶೋಭೇ ? । ದರ್ಪಣೇವೀಣ ಬಿಂಬೇ । ವದನ ಕೇ ಪಾ ? ।೨೬೪।। ಫಿಟಲಿಯಾ ನಿದ್ರೇಚಾ ಠಾವೋ । ಕೈಂಚಾ ಸ್ವಪ್ನಾಸಿ ಪ್ರಸ್ತಾವೋ ? । ಮಗ ಸಾಚ ಕಾ ವಾವೋ । ಕೋಣ ಮ್ಹಣೇ ? ।೨೬೫।। ತೈಸೇ ಗಾ ಸಂನ್ಯಾಸೇ ಯೇಣೇ । ಮೂಳ ಅವಿದ್ಯೆಸೀಚಿ ನಾಹೀ ಜಿಣೇ । ಮಾ ತಿಯೇಚಿ ಕಾರ್ಯ ಕೋಣೇ । ಘೇಪೇ ದೀಜೇ ।೨೬೬।। ಮ್ಹಣೌನಿ ಸಂನ್ಯಾಸಿಯೇ ಪಾಹೀ । ಕರ್ಮಾಚೀ ಗೋಠೀ ಕೀಜೇಲ ಕಾಈ । ಪರಿ ಅವಿದ್ಯಾ ಆಪುಲಾ ದೇಹೀ ಆಹೇ ಜೈ ಕಾ ।೨೬೭।। ಜೈ ಕರ್ತೇಪಣಾಚೇನಿ ಥಾಂವೇ । ಆತ್ಮಾ ಶುಭಾಶುಭೀ ಧಾಂವೇ । ದೃಷ್ಟಿ ಭೇದಾಚಿಯೇ ರಾಣಿವೇ । ರಚಲೀಸೇ ಜೈ ।೨೬೮।। ತೈ ತರಿ ಗಾ ಸುವರ್ಮಾ । ಬಿಜಾವಳೀ ಆತ್ಮಯಾ ಕರ್ಮಾ । ಅಪಾಡೇ ಜೈಸೀ ಪಶ್ಚಿಮಾ । ಪೂರ್ವೇಸಿ ಕಾ ।೨೬೯।। ನಾತರೀ ಆಕಾಶಾ ಕಾ ಆಭಾಳಾ । ಸೂರ್ಯಾ ಆಣೀ ಮೃಗಜಳಾ । ಬಿಜಾವಳೀ ಭೂತಳಾ । ವಾಯೂಸಿ ಜೈಸೀ ।೨೭೦।। ಪಾಂಘುರೌನಿ ನಈಚೇ ಉದಕ । ಅಸೇ ನ ಈಚಿಮಾಜೀ ಖಡಕ । ಪರೀ ಕಾಣಿಜೇ ಕಾ ವೇಗಳಿಕ । ಕೋಡೀಚೇ ತೇ ।೨೭೧।। ಹೋ ಕಾ ಉದಕಾಜವಳೀ । ಪರೀ ಸಿನಾನೀಚಿ ತೇ ಬಾಬುಳೀ । ಕಾಯ ಸಂಗಾಸ್ತವ ಕಾಜಳೀ । ದೀಪು ಮ್ಹಣೋ ಯೇ ? ।೨೭೨।। ಜರೀ ಚಂದ್ರೀ ಜಾಲಾ ಕಲಂಕು । ತರೀ ಚಂದ್ರೇಸೀ ನವ್ಹೇ ಏಕು । ಆಹೇ ದೃಷ್ಟೀ ಡೋಳ್ಯಾ ವಿವೇಕು । ಅಪಾಡು ತೇತುಲಾ ।೨೭೩।। ನಾನಾ ವಾಟಾ ವಾಟೇ ಜಾತಯಾ । ವೋಘಾ ವೋಘೀ ವಾಹಾತಯಾ । ಆರಸಾ ಆರಸಾ ಪಾಹಾತಯಾ । ಆಪಾಡು ಜೇತುಲಾ ।೨೭೪।। ಪಾರ್ಥಾ ಗಾ ತೇತುಲೇನಿ ಮಾನೇ । ಆತ್ಮೇನಿಸೀ ಕರ್ಮ ಸಿನೇ । ಪರೀ ಘೇವವಿಜೇ ಅಜ್ಞಾನೇ । ತೇ ಕೀರ ಐಸೇ ।೨೭೫।। ವಿಕಾಶೇ ರವೀತೇ ಉಪಜವೀ । ದ್ರುತೀ ಆಲೀಕರವೀ ಭೋಗವೀ । ತೇ ಸರೋವರೀ ಕಾ ಬರವೀ । ಅಬ್ಜಿನೀ ಜೈಸೀ ।೨೭೬।। ಪುಢತ ಪುಢತೀ ಆತ್ಮಕ್ರಿಯಾ । ಅನ್ಯಕಾರಣಕಾಚಿ ತೈಶಿಯಾ । ಕರೂ ಪಾಂಚಾಂಹೀ ತಯಾ । ಕಾರಣಾ ರೂಪ ।೨೭೭।।

ಮತ್ತು ಈ ಸಂನ್ಯಾಸದಿಂದ ನಿಜವಾಗಿಯೂ ದೃಷ್ಟಿಯು ಆತ್ಮ ರೂಪಕ್ಕೆ ಮುಟ್ಟಿದಾಗ ಕರ್ಮವು ಬೇರೆಯಾಗಿದೆ ಎಂದು ಕಾಣುವುದೇ ? ।೨೬೨॥

ಚಿತ್ರಗಳನ್ನು ಬರೆದ ಗೋಡೆಯು ಬಿದ್ದಾಗ ಚಿತ್ರಗಳು ಕೇವಲ ಮಣ್ಣಾಗುವುವು. ಅಥವಾ ಬೆಳಗಾದ ಮೇಲೆ ರಾತ್ರಿಯ ಕತ್ತಲು ಕಾಣುವುದೇ ? ।೨೬೩॥

ಆಕೃತಿಯೇ ಇರದಾಗ ಅದರ ನೆರಳು ಎಲ್ಲಿ ಬೀಳಬೇಕು ? ಕನ್ನಡಿಯೇ ಇಲ್ಲದಾಗ ಮುಖವೆಲ್ಲಿ ಕಾಣಬೇಕು ? ।೨೬೪॥

ನಿದ್ರೆಯು ಪೂರ್ಣವಾದಾಗ ಸ್ವಪ್ನವು ಎಲ್ಲಿಂದ ಬೀಳಬೇಕು ? ಆಗ ಅದಕ್ಕೆ (ಸ್ವಪ್ನಕ್ಕೆ) ಸುಳ್ಳು ಅಥವಾ ನಿಜವೆಂದು ಯಾರು ಹೇಳುವರು ? ।೨೬೫॥

ಅದರಂತೆ ಕರ್ಮಫಲದ ಸಂನ್ಯಾಸ ಮಾಡಿದಾಗ ಮೂಲವಾದ ಅವಿದ್ಯೆಗೆ ಸ್ಥಾನವಿಲ್ಲದಾಗಲು ಆಗ ಅದರಿಂದಾಗುವ ಫಲವನ್ನು ಯಾರು ಕೊಡಬೇಕು ? ಯಾರು ತೆಗೆದುಕೊಳ್ಳಬೇಕು ? ।೨೬೬॥

ಆದ್ದರಿಂದ ಸಂನ್ಯಾಸ ಮಾಡಿದ ಮೇಲೆ ಕರ್ಮದ ಮಾತು ಎಲ್ಲಿಂದ ಬರಬೇಕು ? ಆದರೆ ತನ್ನ ದೇಹದಲ್ಲಿ ಅಜ್ಞಾನವು ವಾಸ ಮಾಡುತ್ತಿದ್ದರೆ ।೨೬೭॥

ಆಗ ಕರ್ತೃತ್ವದ ಬಲದಿಂದ ಆತ್ಮವು ಒಳ್ಳೆಯ ಮತ್ತು ಕೆಟ್ಟ ಕರ್ಮಗಳನ್ನು ಮಾಡಲು ಪ್ರವೃತ್ತವಾಗುವುದು. ಹಾಗೂ ದೃಷ್ಟಿಯೂ ಭೇದದ ಐಶ್ವರ್ಯದಿಂದ ಯುಕ್ತವಾದಾಗ ।೨೬೮॥

ಆಗ ಹೇ ಸುವರ್ಮನೇ, ಆತ್ಮ ಹಾಗೂ ಕರ್ಮ ಇವುಗಳಲ್ಲಿ ಪೂರ್ವ ಹಾಗೂ ಪಶ್ಚಿಮದಂತೆ ದ್ವೈತ ವಿಶೇಷವಿರುವುದು ।೨೬೯॥

ಆಕಾಶ ಹಾಗೂ ಮೋಡ, ಸೂರ್ಯ ಮತ್ತು ಮೃಗಜಲ ಹಾಗೂ ಪೃಥ್ವಿ ಮತ್ತು ವಾಯು ಇವುಗಳಲ್ಲಿ ಸಂಬಂಧ ಕಂಡರೂ ಅವು ಬಹಳ ದೂರವಿರುವುವು ।೨೭೦॥

ನದಿಯ ನೀರನ್ನು ಹೊತ್ತುಕೊಂಡು ನದಿಯಲ್ಲಿಯೇ ಕಲ್ಲು ಇರುವುದು. ಆದರೆ ಆ ಎರಡರಲ್ಲಿ ಅತ್ಯಂತ ಭಿನ್ನವಿರುವುದು ।೨೭೧॥

ನೀರಿನಿಂದಲೇ ಬೆಳೆದ ಅಂತರಗಂಗೆಯು ನೀರಿನಿಂದ ಬೇರೆಯಾಗಿರುತ್ತದೆ. ಕಾಡಿಗೆಗೆ ದೀಪದ ಸಂಬಂಧವಿರುವುದು, ಆದರೆ ಕಾಡಿಗೆಗೆ ದೀಪವೆನ್ನಬಹುದೇ ? ।೨೭೨॥

ಚಂದ್ರನಿಗೆ ಕಲಂಕ ಹತ್ತಿದರೂ ಅದು ಚಂದ್ರನಲ್ಲಿ ಐಕ್ಯವಾಗಿರುವುದಿಲ್ಲ. ಹಾಗೆಯೇ ದೃಷ್ಟಿ ಹಾಗೂ ಕಣ್ಣುಗಳಲ್ಲಿ ಭೇದವಿರುವುದು ।೨೭೩॥

ಅಥವಾ ದಾರಿ ಹಾಗೂ ದಾರಿ ನಡೆಯುವವ, ಪ್ರವಾಹ ಮತ್ತು ಅದರಲ್ಲಿ ಹರಿಯುವ ನೀರು. ಕನ್ನಡಿ ಮತ್ತು ಅದರಲ್ಲಿ ನೋಡುವ ಮನುಷ್ಯ ಇವುಗಳಲ್ಲಿಯ ಭೇದವಿರುವುದೆ? ।೨೭೪॥

ಇಷ್ಟೇ ಪ್ರಮಾಣದಲ್ಲಿ ಆತ್ಮದಿಂದ ಕರ್ಮವು ಭಿನ್ನವಾಗಿರುವುದು. ಆದರೆ ಪಾರ್ಥಾ, ಅಜ್ಞಾನದಿಂದ ಈ ಎರಡೂ ಒಂದೇ ಇದೆ ಎಂದು ಅನಿಸುವುದು ।೨೭೫॥

ಸರೋವರದ ಕಮಲವು ತನ್ನ ವಿಕಾಸದಿಂದ ಸೂರ್ಯೋದಯವಾಯಿತೆಂದು ತಿಳಿಸುವುದು. ಹಾಗೂ ತಮ್ಮ ಮಕರಂದದಿಂದ ಭ್ರಮರಗಳಿಗೆ ಉಪಭೋಗ ಕೊಡುವುದು ।೨೭೬॥

ಅದರಂತೆ ಆತ್ಮನಲ್ಲಿ ಇರುವ ಕರ್ಮಗಳು ಅನ್ಯ ಕಾರಣಗಳಿಂದ ಮೇಲಿಂದ ಮೇಲೆ ಆಗುವುವು. ಆ ಕಾರಣಗಳು ಐದು ಇರುವುವು. ಅವುಗಳ ಲಕ್ಷಣವನ್ನು ನಿನಗೆ ಹೇಳುವೆನು ।೨೭೭॥

ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ ।
ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಮ್ ॥೧೩॥

ಆಣಿ ಪಾಂಚಹೀ ಕಾರಣೇ ತಿಯೇ । ತೂಹೀ ಜಾಣಸೀಲ ವಿಪಾಯೇ । ಜೇ ಶಾಸ್ತ್ರೇ ಉಭಊನೀ ಬಾಹೇ । ಬೋಲತೀ ತಯಾಂತೇ ॥೨೭೮॥ ವೇದರಾಯಾಚಿಯಾ ರಾಜಧಾನೀ । ಸಾಂಖ್ಯೇವೇದಾಂತಾಚ್ಯಾ ಭುವನೀ । ನಿರೂಪಣಾಚ್ಯಾ ನಿಶಾಣಧ್ವನೀ । ಗರ್ಜತೀ ಜಿಯೇ ॥೨೭೯॥ ಜೇ ಸರ್ವಕರ್ಮಸಿದ್ಧೀಲಾಗೀ । ಇಯೇಂಚಿ ಮುದ್ದಲೇ ಹೋ ಜಗೀ । ತೇಥ ನ ಸುವಾವಾ ಅಭಂಗೀ । ಆತ್ಮರಾಜು ॥೨೮೦॥ ಇಯಾ ಬೋಲಾಚೀ ಡಾಂಗುರಟೀ । ತಿಯೇ ಪ್ರಸಿದ್ಧೀ ಆಲೀ ಕಿರೀಟೀ । ಮ್ಹಣೌನಿ ತುರ್ಝ್ಯಾ ಹನ ಕರ್ಣಪುಟೀ । ವಸೋ ಹೇ ಕಾಜ ॥೨೮೧॥ ಆಣಿ ಮುಖಾಂತರೀ ಆಇಕಿಜೇ । ತೈಸೇ ಕಾಯಸೇ ಹೇ ಓರ್ಝೇ । ಮೀ ಚಿದ್ರತ್ನ ತುರ್ಝೇ । ಅಸತಾ ಹಾತೀ ॥೨೮೨॥ ದರ್ಪಣು ಪುಢಾ ಮಾಂಡಲೇಯಾ । ಕಾ ಲೋಕಾಂಚಿಯಾ ಡೋಳಯಾ । ಮಾನು ದ್ಯಾವಾ ಪಹಾವಯಾ । ಆಪುಲೇ ನಿಕೇ ॥೨೮೩॥ ಭಕ್ತ ಜೈಸೇನಿ ಜೇಥ ಪಾಹೇ । ತೇಥ ತೇ ತೇಂಚಿ ಹೋತ ಜಾಯೇ । ತೋ ಮೀ ತುರ್ಝೇ ಜಾಹಾಲೋ ಆಹೇ । ಖೇಳಣೇ ಆಜೀ ॥೨೮೪॥ ಐಸೇ ಹೇ ಪ್ರೀತೀಚೇನಿ ವೇಗೇ । ದೇವೋ ಬೋಲತಾಸೇ ನೇಘೇ । ತಂವ ಆನಂದಾಮಾಜೀ ಆಂಗೇ । ವಿರತಸೇ ಯೇರು ॥೨೮೫॥ ಚಾಂದಿಣೆಯಾಚಾ ಪಡಿಭರು । ಹೋತಾ ಸೋಮಕಾಂತಾಚಾ ಡೋಂಗರು । ವಿಘರೋನಿ ಸರೋವರು । ಹೋ ಪಾಹೇ ಜೈಸಾ ॥೨೮೬॥ ತೈಸೇ ಸುಖ ಆಣಿ ಅನುಭೂತೀ । ಯಾ ಭಾವಾಂಚೀ ಮೋಡೂನಿ ಭಿಂತೀ । ಆತಲೇ ಅರ್ಜುನಾಕೃತೀ । ಸುಖಚಿ ಜೇಥ ॥೨೮೭॥ ತೇಥ ಸಮರ್ಥು ಮ್ಹಣೌನಿ ದೇವಾ । ಅವಕಾಶು ಜಾಹಲಾ ಆಠವಾ ।ಮಗ ಬುಡತಯಾಚಾ ಧಾಂವಾ । ಜೀವೇ ಕೇಲಾ ॥೨೮೮॥ ಅರ್ಜುನಾ ಯೇಸಣೇ ಧೇಂಡೇ । ಪ್ರಜ್ಞಾ ಪಸರೇಂಸೀ ಬುಡೇ । ಆಲೇ ಭರತೇ ಏವಢೇ । ತೇ ಕಾಢೂನಿ ಪುಢತೀ ॥೨೮೯॥ ದೇವೋ ಮ್ಹಣೇ ಹಾ ಗಾ ಪಾರ್ಥಾ । ತೂ ಆಪಣಪೇ ದೇಖ ಸರ್ವಥಾ । ತಂವ ಶ್ವಾಸೂನಿ ಯೇರೇ ಮಾಥಾ । ತುಕಿಯೇಲಾ ॥೨೯೦॥ ಮ್ಹಣೇ ಜಾಣಸೀ ದಾತಾರಾ । ಮೀ ತುಜಸೀ ವ್ಯಕ್ತಿಶೇಜಾರಾ । ಉಬಗಲೋ ಆಜೀ ಏಕಾಹಾರಾ । ಯೇವೋ ಪಾಹೇ ॥೨೯೧॥ ತಯಾಹೀ ಹಾ ಐಸಾ । ಲೋಭೇ ದೇತಸಾ ಜರೀ ಲಾಲಸಾ । ತರೀ ಕಾ ಜೇ ಘಾಲೀತಸಾ । ಆಡ ಆಡ ಜೀವಾ ? ॥೨೯೨॥

ಶ್ಲೋಕಾರ್ಥ :- ಮಹಾಬಾಹೋ ! ಯಾವ ಕಾರ್ಯವನ್ನು ನೆರವೇರಿಸಬೇಕಾದರೂ ಐದು ಕಾರಣಗಳು ಅವಶ್ಯವಾಗಿ ಇರಬೇಕೆಂದು ಸಾಂಖ್ಯಶಾಸ್ತ್ರವು ನಿಶ್ಚಯಿಸಿ ಹೇಳಿದೆ. ಅವುಗಳನ್ನು ಹೇಳುತ್ತೇನೆ, ಕೇಳು ।೧೩।।

ಈ ಐದು ಕಾರಣಗಳನ್ನು ನೀನೂ ತಿಳಿದಿರಬಹುದು. ಕಾರಣ ಈ ವಿಷಯಕ್ಕೆ ಶಾಸ್ತ್ರಗಳು ಕೈ ಎತ್ತಿ ವರ್ಣನೆಯನ್ನು ಮಾಡಿರುವುವು ।೭೭೮।।

ಇವು ವೇದರಾಜನ ರಾಜಧಾನಿಯಲ್ಲಿ ಸಾಂಖ್ಯ ವೇದಾಂತರೂಪ ಮಂದಿರದಲ್ಲಿ ನಿರೂಪಣರೂಪ ನೌಬತ್ತುನಿಂದ ಪ್ರಸಿದ್ಧವಾಗಿರುವುವು ।೭೭೯।।

ಕಾರಣ, ಎಲ್ಲ ಕರ್ಮಗಳ ಸಿದ್ಧಿಯಾಗಲು ಈ ಜಗತ್ತಿನ ಇವೇ ಮುಖ್ಯವಾಗಿ ಅವಶ್ಯವಾಗಿವೆ. ಆದರೆ ಇವುಗಳೆಲ್ಲ ಆತ್ಮಕ್ಕೆ ಕಾರಣೀಭೂತವೆಂದು ತಿಳಿಯಬೇಡ ।೭೮೦।।

ಹೇ ಕಿರೀಟಿಯೇ, ಡಂಗುರ ಸಾರಲು ಎಲ್ಲ ಕಡೆಗೂ ಪ್ರಸಿದ್ಧಿಯಾಗಿರುವುದು. ಆದರೂ ನಿನಗೂ ತಿಳಿದಿರಲಿ, ಉಪಯೋಗವಾಗುವುದು ।೭೮೧।।

ಮತ್ತು ನಾನು ಜ್ಞಾನರತ್ನರೂಪನಾಗಿ ನಿನ್ನ ಕೈಯಲ್ಲಿರುವಾಗ ಬೇರೆ ಮುಖದಿಂದ ತಿಳಿಯುವ ತೊಂದರೆಯಾದರೂ ನಿನಗೇಕೆ ಬೇಕು ? ।೭೮೨।।

ತನ್ನ ಮುಂದೆ ಕನ್ನಡಿ ಇರುವಾಗ ನನ್ನ ರೂಪ ಹೇಗೆ ಇದೆ ಹೇಳಿರಿ ಎಂದು ಜನರಿಗೆ ಏಕೆ ವಿನಂತಿಸಿಕೊಳ್ಳಬೇಕು ? ।೭೮೩।।

ಭಕ್ತನು ಯಾವ ಭಾವನೆಯಿಂದ ಎಲ್ಲಿ ನೋಡುವನೋ, ಅಲ್ಲಿ ಅದರಂತೆ ನಾನು ಅವನಿಗೆ ತೋರುವೆನು. ಇಂಥವನಾದ ನಾನು ನಿನ್ನ ಆಟದ ಗೊಂಬೆಯಾಗಿರುವೆನು ।೭೮೪।।

ಹೀಗೆ ಪ್ರೇಮದ ಭರದಲ್ಲಿ ದೇವನು ಹೇಳುತ್ತಿರುವಾಗ ಆತನಿಗೆ ಸ್ಮರಣೆಯು ಉಳಿಯಲಿಲ್ಲ. ಈ ಕಡೆ ಪಾರ್ಥನು ಆನಂದದಲ್ಲಿ ನಿಮಗ್ನನಾಗಿ ಹೋದನು ।೭೮೫।।

ಪೌರ್ಣಿಮೆಯ ಬೆಳದಿಂಗಳಲ್ಲಿ ಸೋಮಕಾಂತ ಮಣಿಯ ಪರ್ವತವೇ ಇದ್ದರೂ ಅದು ದ್ರವಿಸಿ ಸರೋವರವಾಗುವುದು ।೭೮೬।।

ಅದರಂತೆ ಸುಖ ಮತ್ತು ಅದರ ಅನುಭವ ಈ ಭಾವದ ಪರದೆಯು ಇಲ್ಲದಾಗಿ ಸುಖವೇ ಅರ್ಜುನನ ಆಕೃತಿಯಿಂದ ಕಾಣಹತ್ತಿತು ।೭೮೭।।

ಆಗ ದೇವನು ಸಮರ್ಥನಾಗಿರುವುದರಿಂದ ಆತನಿಗೆ ಸ್ಮರಣವಾಗಿ ಸುಖದ ಸಮುದ್ರದಲ್ಲಿ ಮುಳುಗುತ್ತಿರುವ ಅರ್ಜುನನನ್ನು ಮೇಲಕ್ಕೆತ್ತಿದನು ।೭೮೮।।

ಅರ್ಜುನನು ಇಷ್ಟೊಂದು ದೊಡ್ಡ ಪ್ರಜ್ಞಾವಂತನಿದ್ದರೂ, ಬುದ್ಧಿಯ ಪ್ರಸಾರ ಸಹ ಮುಳುಗಹತ್ತಿದನು. ಇಷ್ಟೊಂದು ಪ್ರೇಮದ ಪೂರವು ಬಂದಿದ್ದು, ಅದನ್ನು ಮಗ್ಗಲು ಸರಿಸಿ ।೭೮೯।।

ದೇವನು ಹೇಳಿದನು :- "ಪಾರ್ಥಾ, ನೀನು ಸ್ವರೂಪವನ್ನು ನೋಡಿ ಎಚ್ಚರಾಗು" ಆಗ ನಿಟ್ಟುಸಿರುಬಿಟ್ಟು ಅರ್ಜುನನು ಗೋಣನ್ನು ಅಲ್ಲಾಡಿಸಿದನು ।೭೯೦।।

ಆಗ ಆತನು ಅಂದನು :- ಹೇ ಪ್ರಭುವೇ, ನಾನು ನಿನ್ನ ಸನ್ನಿಧಿಯಲ್ಲಿ ದ್ವೈತಭಾವಕ್ಕೆ ಬೇಸತ್ತು ಇಂದು ನಿಮ್ಮ ಐಕ್ಯದಲ್ಲಿ ಬರಲು ನೋಡುತ್ತಿರುವೆನು ।೭೯೧।।

ನೀವು ನನ್ನನ್ನು ಪ್ರೇಮದಿಂದ ಕೌತುಕವನ್ನು ಮಾಡುತ್ತಿದ್ದರೆ ನನಗೆ ಜೀವದಶೆಗೆ ಏಕೆ ತರುವಿರಿ ? ।೭೯೨।।

ತೇಥ ಶ್ರೀಕೃಷ್ಣ ಮ್ಹಣತೀ ನಿಕೇ । ಅದ್ಯಾಪಿ ನಾಹೀ ಮಾ ಠಾಉಕೇ । ವೇಡ್ಯಾ ಚಂದ್ರಾ ಆಣಿ ಚಂದ್ರಿಕೇ । ನ ಮಿಳಣೇ ಆಹೇ ?।೮೯೩॥ ಆಣಿ ಹಾಹೀ ಬೋಲೋನಿ ಭಾವೋ । ತುಜ ದಾವೂ ಆಮ್ಹೀ ಭಿವೋ । ಜೇ ರುಸತಾ ಬಾಂಧೇ ಥಾಂವೋ । ತೇ ಪ್ರೇಮ ಗಾ ಹೇ ।೮೯೪॥ ಯೇಥ ಏಕಮೇಕಾಂಚಿಯೇ ಖುಣೇ । ವಿಸಂವಾದು ತಂವಚಿ ಜಿಣೇ । ಮ್ಹಣೌನಿ ಅಸೋ ಹೇ ಬೋಲಣೇ । ಇಯೇ ವಿಷಯೀಂಚೇ ।೮೯೫॥ ಮಗ ಕೈಶೀ ಕೈಶೀ ತೇ ಆತಾ ।ಬೋಲತ ಹೋತೋ ಪಂಡುಸುತಾ । ಸರ್ವ ಕರ್ಮಾ ಭಿನ್ನತಾ । ಆತ್ಮೇನಿಸೀ ।೮೯೬॥ ತಂವ ಅರ್ಜುನ ಮ್ಹಣೇ ದೇವೇ । ಮಾಝಿಯೇ ಮನೀಚೇಂಚಿ ಸ್ವಭಾವೇ । ಪ್ರಸ್ತಾವಿಲೇ ಬರವೇ । ಪ್ರಮೇಯ ತೇ ಜೇ ।೮೯೭॥ ಜೇ ಸಕಳ ಕರ್ಮಾಚೇ ಬೀಜ । ಕಾರಣಪಂಚಕ ತುಜ । ಸಾಂಗೇನ ಐಸೀ ಪೈಜ । ಘೇತಲೀ ಕಾ ।೮೯೮॥ ಆಣಿ ಆತ್ಮ ಯಾ ಯೇಥ ಕಾಂಹೀ । ಸರ್ವಥಾ ಲಾಗು ನಾಹೀ । ಹೇ ಪುಢಾರಲಾಸಿ ತೇ ದೇಈ । ಲಾಹಾಣೇ ಮಾಝೋ ।೮೯೯॥ ಯಯಾ ಬೋಲಾ ವಿಶ್ವೇಶೇ । ಮ್ಹಣಿತಲೇ ತೋಷೇ ಬಹುವಸೇ । ಇಯೇವಿಷಯೀ ಧರಣೇ ಬೈಸೇ । ಐಸೇ ಕೇ ಜೋಡೇ ?।೯೦೦॥ ತರೀ ಅರ್ಜುನಾ ನಿರೂಪಿಜೇಲ । ತೇ ಕೀರ ಭಾಷೇ ಆಂತುಲ । ಪರೀ ಮೇಚು ಯೇ ಹೋಇಜೇಲ । ಖುಣೆಯಾ ತುಜ ।೯೦೧॥ ತಂವ ಅರ್ಜುನ ಮ್ಹಣೇ ದೇವೋ । ಕಾಈ ವಿಸರಲೇ ಮಾಗೀಲ ಭಾವೋ ? । ಇಯೇ ಗೋಠೀ ಕೀ ಠಾಖತ ಆಹೋ । ಮೀತೂಂಪಣ ಜೇ ?।೯೦೨॥ ಯೇಥ ಶ್ರೀಕೃಷ್ಣ ಮ್ಹಣತೀ ಹೋ ಕಾ । ಆತಾ ಅವಧಾನಾಚಾ ಪಸರು ನಿಕಾ । ಕರೂನಿಯಾ ಆಇಕಾ । ಪುಢಾರಲೋ ತೇ ।೯೦೩॥ ತರೀ ಸತ್ಯಚಿ ಗಾ ಧನುರ್ಧರಾ । ಸರ್ವ ಕರ್ಮಾಂಚಾ ಉಭಾರಾ । ಹೋತಸೇ ಬಾಹಿರಬಾಹಿರಾ । ಕರಣೇ ಪಾಂಚೇ ।೯೦೪॥ ಆಣಿ ಪಾಂಚ ಕಾರಣ ದಳವಾಡೇ । ಜಿಹೀ ಕರ್ಮಾಕಾರು ಮಾಂಡೇ । ತೇ ಹೇತುಸ್ತವ ಘಡೇ । ಪಾಂಚ ಆಥೀ ।೯೦೫॥ ಯೇರ ಆತ್ಮತತ್ತ್ವ ಉದಾಸೀನ । ತೇ ನಾ ಹೇತು ನಾ ಉಪಾದಾನ । ನಾ ತೇ ಅಂಗೇ ಕರೀ ಸಂವಾಹನ । ಕರ್ಮಸಿದ್ಧೀಚೇ ।೯೦೬॥ ತೇಥ ಶುಭಾಶುಭೀ ಅಂಶೀ । ನಿಫಜತೀ ಕರ್ಮೇ ಐಸೀ । ರಾತೀ ದಿವೋ ಆಕಾಶೀ । ಜಿಯಾಪರೀ ।೯೦೭॥ ತೋಯ ತೇಜ ಧೂಮು । ಯಯಾ ವಾಯೂಸೀ ಸಂಗಮು ।ಜಾಲಿಯಾ ಹೋಯ ಅಭ್ರಾಗಮು । ವ್ಯೋಮ ತೇ ನೇಣೇ ।೯೦೮॥ ನಾನಾ ಕಾಷ್ಠೀ ನಾವ ಮಿಳೇ । ತೇ ನಾವಾಡೇನಿ ಚಳೇ । ಚಾಲವಿಜೇ ಅನಿಳೇ । ಉದಕ ತೇ ಸಾಕ್ಷೀ ।೯೦೯॥

ಆಗ ಶ್ರೀಕೃಷ್ಣನು ಹೇಳಿದನು :- ಅರೇ, ಮೂಢಾ! ನಿಜವಾಗಿಯೂ ಇನ್ನೂ ನಿನಗೆ ಏಕೆ ತಿಳಿದಿರುವುದಿಲ್ಲ ? ಚಂದ್ರ ಮತ್ತು ಅದರ ಪ್ರಭೆಯ ಎಂದಾದರೂ ವಿಯೋಗವಾದೀತೆ? ।೮೯೩।।

ಮತ್ತು ನಾವು ಹೀಗೆಯೇ ಹೇಳುತ್ತ ನಿನಗೆ ಭಯ ಹುಟ್ಟಿಸುವೆವು. ಅದರಿಂದ ನೀನು ಮುನಿಸುಕೊಂಡಾಗ ನಮ್ಮ ಪ್ರೀತಿಗೆ ಬಲ ಬರುವುದು. ಹೀಗೆ ಈ ಪ್ರೀತಿ ಇರುವುದು ।೮೯೪।।

ಇಲ್ಲಿ ಒಬ್ಬರಿಗೊಬ್ಬರು ಸಂಜ್ಞೆಯಿಂದ ಹೇಳುವುದು ನಮ್ಮ ಬದುಕಿಗೆ ಕಾರಣವಾಗಿರುವುದು. ಆದ್ದರಿಂದ ಈಗ ಈ ವಾದ ವಿವಾದವು ಸಾಕು ।೮೯೫।।

ಆಗ ಅರ್ಜುನಾ, ನಾನೇನೋ ಹೇಳುತ್ತಿದ್ದೆನಲ್ಲ ? ಎಲ್ಲ ಕರ್ಮಗಳು ಆತ್ಮನಿಂದ ಭಿನ್ನವಾಗಿರುವುವು ಎಂದು ಅಲ್ಲವೇ ? ।೮೯೬।।

ಆಗ ಅರ್ಜುನನು ಹೇಳಿದನು :- ದೇವಾ, ನನ್ನ ಮನದಲ್ಲಿನ ತಾತ್ಪರ್ಯವನ್ನು ಹೇಳಲು ನೀವಾಗಿಯೇ ಆರಂಭಗೊಳಿಸಿದಿ ।೮೯೭।।

ಸರ್ವ ಕರ್ಮಗಳಿಗೆ ಕಾರಣೀಭೂತವಾಗಿ ಐದು ಕಾರಣಗಳನ್ನು ನಿನಗೆ ಹೇಳುವೆ ಎಂದು ನೀವು ಪ್ರತಿಜ್ಞೆಯನ್ನು ಮಾಡಿರುವಿರಿ ।೮೯೮।।

ಮತ್ತು ಆತ್ಮನಿಗೆ ಕರ್ಮಗಳ ಏನೂ ಸಂಬಂಧವಿಲ್ಲವೆಂದು ನೀವು ಹೇಳುತ್ತಿದ್ದದ್ದನ್ನು ಅದು ನನ್ನ ಪ್ರಿಯವಾದದ್ದು ನನಗೆ ಕೊಡಿರಿ ।೮೯೯।।

ಈ ಮಾತು ಕೇಳಿ ವಿಶ್ವೇಶನು ಅತಿಸಂತೋಷಗೊಂಡು ಹೇಳಿದನು :- ಈ ವಿಷಯ ಕೇಳಲು ನೀನು ಗಟ್ಟಿಯಾಗಿಯೇ ಕುಳಿತಿರುವೆ, ಹೀಗೆ ಕೇಳುವವರು ನನಗೆ ಎಲ್ಲಿ ಸಿಗಬೇಕು ? ।೯೦೦।।

ಅದಕ್ಕಾಗಿ ಅರ್ಜುನಾ, ನಿನಗೆ ನಿಜವಾಗಿಯೂ ಸಿದ್ಧಾಂತವನ್ನು ಹೇಳುವೆ, ಕಾರಣ ನಾನು ನಿನ್ನ ಋಣಿಯಾಗಿರುವುದರಿಂದ ನಾನು ನಿನಗೆ ನಮಿಸುವೆ ।೯೦೧।।

ಆಗ ಅರ್ಜುನನು ಹೇಳಿದನು :- ಹೇ ದೇವನೇ, ನೀವು ಹಿಂದಿನ ಮಾತಿನ ಅಭಿಪ್ರಾಯವನ್ನು ಮರೆತಿರುವಿರಿ ? ನಾನು, ನೀನು ಎಂಬ ಈ ದ್ವೈತವನ್ನು ನಿಮ್ಮ ಮಾತಿನಲ್ಲಿ ಏಕೆ ತರುವಿರಿ ? ।೯೦೨।।

ಆಗ ಶ್ರೀಕೃಷ್ಣನು ಹೇಳಿದನು :- ಒಳ್ಳೆಯದು, ಈಗ ನಾನು ನಿನಗೆ ಹೇಳಬೇಕಾದ ವಿಷಯವನ್ನು ಹೇಳಲು ಆರಂಭಿಸುವೆನು, ಲಕ್ಷ ಕೊಟ್ಟು ಕೇಳು ।೯೦೩।।

ಅರ್ಜುನಾ, ನಿಜವಾಗಿಯೂ ಎಲ್ಲ ಕರ್ಮಗಳ ಸಿದ್ಧಿಯೂ ಈ ಹೊರಗಿನ ಐದು ಕಾರಣಗಳನ್ನೇ ಅವಲಂಬಿಸಿದೆ ।೯೦೪।।

ಮತ್ತು ಯಾವ ಈ ಐದು ಕಾರಣಗಳ ಯೋಗದಿಂದ ಯಾವ ಕರ್ಮಗಳುಂಟಾಗುವುವೋ, ಇವೇ ಐದು ಕಾರಣಗಳು ಕರ್ಮಗಳ ಹೇತುವಾಗಿರುವುವು ।೯೦೫।।

ಇದಲ್ಲದೇ, ಆತ್ಮವು ಉದಾಸೀನವಾಗಿದ್ದು, ಕರ್ಮಕ್ಕೆ ನಿಮಿತ್ತ ಕಾರಣ ಅಥವಾ ಉಪಾದಾನ ಕಾರಣವಿರುವುದಿಲ್ಲ. ಅಥವಾ ಸ್ವತಃ ಅದು ಕರ್ಮಕ್ಕೆ ಸಹಾಯ ಮಾಡುವುದಿಲ್ಲ ।೯೦೬।।

ಇದರಲ್ಲಿ ಶುಭಾಶುಭ ಕರ್ಮಗಳು ಹೇಗಾಗುವುವೆಂದರೆ ರಾತ್ರಿ ಹಾಗೂ ಹಗಲು ಆಕಾಶದಲ್ಲಿ ಉತ್ಪನ್ನವಾದರೂ, ಆಕಾಶವು ಅವುಗಳಿಂದ ಭಿನ್ನವಾಗಿರುವಂತೆ ।೯೦೭।।

ನೀರು ಮತ್ತು ತೇಜವು ಇವುಗಳಿಂದ ಉತ್ಪನ್ನವಾಗುವ ಉಗಿಯ ಸಂಬಂಧವು ವಾಯುವಿನೊಂದಿಗೆ ಆಯಿತೆಂದರೆ ಆಕಾಶದಲ್ಲಿ ಮೋಡಗಳಾಗುವುವು. ಆದರೆ ಇದೆಲ್ಲವೂ ಆಕಾಶವು ಅರಿಯದು ।೯೦೮।।

ಅನೇಕಾನೇಕ ಕಟ್ಟಿಗೆಗಳ ಜೋಡಣೆ ಮಾಡಿ ಸಿದ್ಧಗೊಳಿಸಿದ ಹಡಗವನ್ನು ಅಂಬಿಗನು ವಾಯುವಿನ ಬಲದಿಂದ ನೀರಿನಲ್ಲಿ ನಡೆಸುವನು. ಆದರೆ ಅಲ್ಲಿ ನೀರು ಏನೂ ಮಾಡದೇ ಸಾಕ್ಷಿಭೂತವಾಗಿರುವುದು ।೯೦೯।।

ಕಾ ಕವಣೇ ಏಕೆ ಪಿಂಡೇ । ವೇಂಚಿತಾ ಅವತರೇ ಭಾಂಡೇ । ಮಗ ಭವಂಡೀಜೇ ದಂಡೇ । ಭ್ರಮೇ ಚಕ್ರ ।೩೧೦॥ ಆಣಿ ಕರ್ತೃತ್ವ ಕುಲಾಲಾಚೇ । ತೇಥ ಕಾಯ ತೇ ಪೃಥ್ವಿಯೇಚೇ । ಆಧಾರಾವಾಂಚೂನಿ ವೇಂಚೇ । ವಿಚಾರೀ ಪಾ ?।೩೧೧॥ ಹೇಂಹೀ ಅಸೋ ಲೋಕಾಂಚಿಯಾ । ರಾಹಟೀ ಹೋತಾ ಆಘವಿಯಾ । ಕೋಣ ಕಾಮ ಸವಿತಯಾ । ಆಂಗಾ ಆಲೇ ? ।೩೧೨॥ ತೈಸೇ ಪಾಂಚಹೇತು ಮಿಳಣೀ । ಪಾಂಚೇಂಚಿ ಇಹೀ ಕಾರಣೀ । ಕೀಜೆ ಕರ್ಮಲತಾಂಚೀ ಲಾವಣೀ । ಆತ್ಮಾ ಸಿನಾ ।೩೧೩॥ ಆತಾ ತೇಂಚಿ ವೇಗಳಾಲೀ । ಪಾಂಚಹೀ ವಿವಂಚೂ ಗಾ ಭಲೀ । ತುಕೋನಿ ಘೇತಲೀ । ಮೋತಿಯೇ ಜೈಸೀ ।೩೧೪॥

ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।
ವಿವಿಧಾಶ್ಚ ಪೃಥಕ್ಚೇಷ್ಟಾಃ ದೈವಂ ಚೈವಾತ್ರ ಪಂಚಮಮ್ ।೧೪॥

ತೈಸೀ ಯಥಾ ಲಕ್ಷಣೇ । ಆಇಕೇ ಕರ್ಮಕಾರಣೇ । ತರೀ ದೇಹ ಹೇ ಮೀ ಮ್ಹಣೇ । ಪಹಿಲೇ ಯೇಥ ।೩೧೫॥ ಯಯಾತೇ ಅಧಿಷ್ಠಾನ ಐಸೇ । ಮ್ಹಣಿಜೇ ತೇ ಯಾಚಿ ಉದ್ದೇಶೇ । ಜೇ ಸ್ವಭೋಗ್ಯೇಂಸೀ ವಸೇ । ಭೋಕ್ತಾ ಯೇಥ ।೩೧೬॥ ಇಂದ್ರಿಯಾಂಚ್ಯಾ ದಾಹೇ ಹಾತೀ । ಜಾಚೋನಿಯಾ ದಿವೋರಾತೀ । ಸುಖದುಃಖೇ ಪ್ರಕೃತೀ । ಜೋಡಿಜತೀ ಜಿಯೇ ।೩೧೭॥ ತಿಯೇ ಭೋಗಾವಯಾ ಪುರುಖಾ । ಆನ ಠಾವೋಚಿ ನಾಹೀ ದೇಖಾ । ಮ್ಹಣೌನಿ ಅಧಿಷ್ಠಾನಭಾಖಾ । ಬೋಲಿಜೇ ದೇಹ ।೩೧೮॥ ಹೇ ಚೋವಿಸಾಂಹೀ ತತ್ತ್ವಾಂಚೇ । ಕುಟುಂಬಘರವಸ್ತೀಚೇ । ತುಟೇ ಬಂಧಮೋಕ್ಷಾಚೇ । ಗುಂಥಾಡೇ ಯೇಥ ।೩೧೯॥ ಕಿಂಬಹುನಾ ಅವಸ್ಥಾತ್ರಯಾ । ಹೇ ಅಧಿಷ್ಠಾನ ಧನಂಜಯಾ । ಮ್ಹಣೌನಿ ದೇಹಾ ಯಯಾ । ಹೇಂಚಿ ನಾಮ ।೩೨೦॥ ಆಣಿ ಕರ್ತಾ ಹೇ ದುಜೇ । ಕರ್ಮಾಚೇ ಕಾರಣ ಜಾಣಿಜೇ । ಪ್ರತಿಬಿಂಬ ಮ್ಹಣಿಜೇ । ಚೈತನ್ಯಾಚೇ ಜೇ ।೩೨೧॥ ಆಕಾಶಚಿ ವರ್ಷೇ ನೀರ । ತೇ ತಳವಟೀ ಬಾಂಧೇ ನಾಡರ । ಮಗ ಬಿಂಬೋನಿ ತದಾಕಾರ । ಹೋಯ ಜೇವೀ ।೩೨೨॥ ಕಾ ನಿದ್ರಾಭರೇ ಬಹುವೇ । ರಾಯಾ ಆಪಣಪೇ ಠಾಉವೇ ನವ್ಹೇ । ಮಗ ಸ್ವಪ್ನೀಂಚಿಯೇ ಸಾಮಾವೇ । ರಂಕಪಣೇ ।೩೨೩॥ ತೈಸೇ ಆಪುಲೇನಿ ವಿಸರೇ । ಚೈತನ್ಯಚಿ ದೇಹಾಕಾರೇ । ಆಭಾಸೋನಿ ಆವಿಷ್ಕರೇ । ದೇಹಪಣೇ ಜೇ ।೩೨೪॥ ಜಯಾ ವಿಸರಾಚ್ಯಾ ದೇಶೀ । ಪ್ರಸಿದ್ಧಿ ಗಾ ಜೀವು ಐಸೀ । ಜೇಣೇ ಭಾಷ ಕೇಲೀ ದೇಹೇಂಸೀ । ಆಘವಾವಿಷಯೀ ।೩೨೫॥

ಅಥವಾ ಕುಂಬಾರನು ಮಣ್ಣಿನ ಉಂಡಿಯನ್ನು ತೆಗೆದುಕೊಂಡು ತಿಗುರಿಯ ಮೇಲೆ ಇಟ್ಟು ತಿರುಗಿಸಲು ಅದು ಮಣ್ಣಿನಿಂದ ಪಾತ್ರೆಯಾಗುವುದು ।೩೧೦॥

ಆದರೆ ಇಲ್ಲಿ ಕುಂಬಾರನ ಕಲೆಯ ಹೊರತಾಗಿ ಪಾತ್ರಗೆ ಆಧಾರ ಹೊರತಾದ ಪೃಥ್ವಿಯ ಬೇರೆ ಯಾವ ಸಹಾಯವು ದೊರಕುವುದು ? ಇದರ ವಿಚಾರ ಮಾಡು ।೩೧೧॥

ಇದೂ ಇರಲಿ, ಆದರೆ ಜಗತ್ತಿನಲ್ಲಿ ಜನರ ಎಲ್ಲ ವ್ಯವಹಾರವು ಸೂರ್ಯನ ಪ್ರಕಾಶದಲ್ಲಿ ನಡೆಯುತ್ತಿದ್ದರೂ, ಸೂರ್ಯನು ಇವುಗಳಿಂದ ಅಲಿಪ್ತನಾಗಿರುವನು ।೩೧೨॥

ಅದೇ ಪ್ರಕಾರವಾಗಿ ಐದು ಕಾರಣಗಳು ಕೂಡಿಕೊಳ್ಳುವುದರಿಂದ ಎಲ್ಲ ಕರ್ಮರೂಪ ಬಳ್ಳಿಯು ಹಚ್ಚಲ್ಪಡುವುದು ಮತ್ತು ಆತ್ಮವು ಭಿನ್ನವಾಗಿಯೇ ಇರುವುದು ।೩೧೩॥

ಈಗ ಅವೇ ಐದು ಕಾರಣಗಳನ್ನು ಉತ್ತಮ ಪ್ರಕಾರವಾಗಿ ಬೇರೆ ಬೇರೆಯಾಗಿ ವರ್ಣಿಸಿ ಮುತ್ತುಗಳನ್ನು ತೂಗಿ ನೋಡುವಂತೆ ಹೇಳುವೆನು ।೩೧೪॥

ಶ್ಲೋಕಾರ್ಥ :- ೧. ಶರೀರ, ೨.ಅಹಂಕಾರ, ೩. ಆಯಾ ಇಂದ್ರಿಯಗಳು, ೪. ವಿವಿಧ ವಾಯು ವ್ಯಾಪಾರಗಳು, ೫. ಅಧಿದೇವತಾ ಶಕ್ತಿಗಳು ।೧೪॥

ಅದರಂತೆ ಕರ್ಮದ ಕಾರಣಗಳ ಎಲ್ಲ ಯಥಾರ್ಥ ಲಕ್ಷಣಗಳನ್ನು ನಿನಗೆ ಹೇಳುವೆನು ಕೇಳು. ಇದಕ್ಕೆ ದೇಹವು ಮೊದಲನೆಯ ಕಾರಣವಾಗಿದೆ ಎಂದು ನಾನು ಹೇಳುವೆನು ।೩೧೫॥

ಈ ದೇಹಕ್ಕೆ ಅಧಿಷ್ಠಾನವೆನ್ನುವ ಕಾರಣವಿಷ್ಟೇ, ಭೋಗ್ಯವಾಗಿರುವ ವಿಷಯದ ಭೋಕ್ತಾನು ಇದರಲ್ಲಿರುವನು ।೩೧೬॥

ಇಂದ್ರಿಯಗಳ ಹತ್ತು ಕೈಗಳಿಂದ ಹಗಲು ರಾತ್ರಿ ಕಷ್ಟ ಸೋಸಿ ಪ್ರಕೃತಿಯ ಯೋಗದಿಂದ ಸುಖದುಃಖಗಳು ಹುಟ್ಟುವುವು ।೩೧೭॥

ಇವುಗಳನ್ನು ಭೋಗಿಸಲು ಮನುಷ್ಯನಿಗೆ ಬೇರೆ ಸ್ಥಾನವೇ ಇಲ್ಲ. ಆದ್ದರಿಂದ ದೇಹಕ್ಕೆ ಅಧಿಷ್ಠಾನವೆಂದು ಹೇಳುವರು ।೩೧೮॥

ಇದು ಇಪ್ಪತ್ತಾನ್ಲಲ್ಕು ತತ್ತ್ವವೆಂಬ ಕುಟುಂಬಗಳ ವಸತಿ ಸ್ಥಾನವಾಗಿದ್ದು, ಮೋಕ್ಷ ಹಾಗೂ ಬಂಧನದ ನಿರ್ಣಯವು ಇಲ್ಲಿಯೇ ಆಗುವುದು ।೩೧೯॥

ಹೆಚ್ಚಿಗೇನು ಹೇಳಬೇಕು? ಜಾಗೃತ, ಸ್ವಪ್ನ ಹಾಗೂ ಸುಷುಪ್ತಿಗಳ ಇದು ಮುಖ್ಯ ಸ್ಥಳವಾಗಿರುವುದರಿಂದ, ಧನಂಜಯನೇ, ಈ ದೇಹಕ್ಕೆ ಅಧಿಷ್ಠಾನವೇ ಯೋಗ್ಯವಾದ ಹೆಸರಾಗಿದೆ ।೩೨೦॥

ಮತ್ತು ಕರ್ಮದ ಎರಡನೆಯ ಕಾರಣವು ಕರ್ತಾ ಇದಾಗಿರುವುದು ಮತ್ತು ಇದಕ್ಕೇನೇ, ಚೈತನ್ಯದ ಪ್ರತಿಬಿಂಬ ಎಂದರೆ ಜೀವವೆಂದು ಹೇಳುವರು ।೩೨೧॥

ಆಕಾಶದಿಂದ ಮಳೆ ಬಿದ್ದಾಗ ಭೂಮಿಯಲ್ಲಿ ಅದರ ಹೊಂಡಗಳಾಗುವುವು ಮತ್ತು ಅವುಗಳಲ್ಲಿ ಆಕಾಶದ ಪ್ರತಿಬಿಂಬವು ಬಿದ್ದಾಗ ಅವು ಅದೇ ಆಕಾಶಗಳಾಗಿ ತೋರುವುವು ।೩೨೨॥

ಅಥವಾ ನಿದ್ರೆಯ ಬರದಲ್ಲಿ ರಾಜನು ತನ್ನ ಐಶ್ವರ್ಯವನ್ನು ಮರೆತು ಸ್ವಪ್ನದಲ್ಲಿ ತಾನು ಭಿಕ್ಷುಕನಾಗಿರುವನೆಂದು ತಿಳಿಯುವನು ।೩೨೩॥

ಅದರಂತೆ ಚೈತನ್ಯವು ತನ್ನ ಸ್ವರೂಪವನ್ನು ಮರೆತು, ದೇಹವೇ ನಾನು ಎಂದು ದೇಹರೂಪದಿಂದ ಪ್ರಕಟವಾಗುವುದು ।೩೨೪॥

ಯಾವ ದೇಹದಲ್ಲಿ ಆತ್ಮರೂಪದ ಮದುವೆಯಾಗಿ ಅಲ್ಲಿ ಚೈತನ್ಯವು ಜೀವ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವುದು ಮತ್ತು ಈ ಜೀವವು ದೇಹಕ್ಕೆ ನಿನ್ನ ಅಭಿಮಾನವನ್ನು ನಾನು ಎಂದೂ ಬಿಡುವುದಿಲ್ಲವೆಂದು ವಚನ ಕೊಟ್ಟಿರುವುದು ।೩೨೫॥

ಪ್ರಕೃತಿ ಕರೀ ಕರ್ಮೇ । ತೇ ಮ್ಯಾ ಕೇಲೀ ಮ್ಹಣೇ ಭ್ರಮೇ । ಯೇಥ ಕರ್ತಾ ಯೇಣೇ ನಾಮೇ । ಬೋಲಿಜೇ ಜೀವು ।೩೨೬॥ ಮಗ ಪಾತೇಯಾಂಚ್ಯಾ ಕೇಶೀ । ಏಕೀಚ ಉಠೀ ದಿಠೀ ಜೈಸೀ । ಮೋಕಳೀ ಚವರೀ ಐಸೀ । ಚಿರೀವ ಗಮೇ ।೩೨೭॥ ಕಾ ಘರಾ ಆಂತುಲ ಏಕು । ದೀಪಾಚಾ ತೋ ಅವಲೋಕು । ಗವಾಕ್ಷ ಭೇದೇ ಅನೇಕು । ಆವಡೇ ಜೇವೀ ।೩೨೮॥ ಕಾ ಏಕೇಚಿ ಪುರುಷು ಜೈಸಾ । ಅನುಸರತ ನವಾ ರಸಾ । ನವವಿಧು ಐಸಾ । ಆವಡೋ ಲಾಗೇ ।೩೨೯॥ ತೇವೀ ಬುದ್ಧೀಚೇ ಏಕ ಜಾಣಣೇ । ಶ್ರೋತ್ರಾದಿಭೇದೇ ಯೇಣೇ । ಬಾಹೇರೀ ಇಂದ್ರಿಯಪಣೇ । ಫಾಂಕೇ ಜೇ ಕಾ ।೩೩೦॥ ತೇ ಪೃಥಗ್ವಿಧ ಕರಣ । ಕರ್ಮಾಚೇ ಇಯಾ ಕಾರಣ । ತಿಸರೇ ಗಾ ಜಾಣ । ನೃಪನಂದನಾ ।೩೩೧॥ ಆಣಿ ಪೂರ್ವಪಶ್ಚಿಮ ವಾಹಣೇ । ನಿಘಾಲಿಯಾ ವೋಘಾಚಿಯಾ ಮಿಳಣೇ । ಹೋಯ ನದೀ ನದ ಪಾಣೇ । ಏಕಚಿ ಜೇವೀ ।೩೩೨॥ ತೈಸೀ ಕ್ರಿಯಾಶಕ್ತಿ ಪವನೀ । ಅಸೇ ಜೇ ಅನಪಾಯಿನೀ । ತೇ ಪಡಿಲೀ ನಾನಾಸ್ಥಾನೀ । ನಾನಾ ಹೋಯ ।೩೩೩॥ ಜೈ ವಾಚೇ ಕರೀ ಯೇಣೇ । ತೈ ತೇಂಚಿ ಹೋಯ ಬೋಲಣೇ । ಹಾತಾ ಆಲೀ ತರೀ ಘೇಣೇ । ದೇಣೇ ಹೋಯ ।೩೩೪॥ ಅಗಾ ಚರಣಾಚ್ಯಾ ಠಾಈ । ತರೀ ಗತಿ ತೇಚಿಪಾಹೀ । ಅಧೋದ್ವಾರೀ ದೋಹೀ । ಕ್ಷರಣೇ ತೇಚಿ ।೩೩೫॥ ಕಂದೌನಿ ಹೃದಯವರೀ । ಪ್ರಣವಾಚೇ ಉಜರೀ । ಕರಿತಾ ತೇಚಿ ಶರೀರೀ । ಪ್ರಾಣು ಮ್ಹಣಿಜೇ ।೩೩೬॥ ಮಗ ಊರ್ಧ್ವೀಂಚಿಯಾ ರಿಗಾನಿಗಾ । ಪುಢತೀ ತೇಚಿ ಶಕ್ತಿ ಪೈ ಗಾ । ಉದಾನು ಐಸಿಯಾ ಲಿಂಗಾ । ಪಾತ್ರ ಜಾಹಲೀ ।೩೩೭॥ ಅಧೋರಂಧ್ರಾಚೇನಿ ವಾಹೇ । ಅಪಾನು ಹೇ ನಾಮ ಲಾಹೇ । ವ್ಯಾಪಕಪಣೇ ಹೋಯೇ । ವ್ಯಾನು ತೇಚಿ ।೩೩೮॥ ಆರೋಗಿಲೇನಿ ರಸೇ । ಶರೀರ ಭರೀ ಸರಿಸೇ । ಆಣಿ ನ ಸಾಂಡಿತಾ ಅಸೇ । ಸರ್ವಸಂಧೀ ।೩೩೯॥ ಐಸಿಯಾ ಇಯಾ ರಾಹಟೀ । ಮಗ ತೇಚಿ ಕ್ರಿಯಾ ಪಾಠೀ । ಸಮಾನ ಐಸೀ ಕಿರೀಟೀ । ಬೋಲಿಜೇ ಗಾ ।೩೪೦॥ ಆಣಿ ಜಾಂಭಈ ಶಿಂಕ ಢೇಂಕರ । ಐಸೈಸಾ ಹೋತಸೇ ವ್ಯಾಪಾರ । ನಾಗ ಕೂರ್ಮ ಕೃಕರ । ಇತ್ಯಾದಿ ಹೋಯ ।೩೪೧॥ ಏವಂ ವಾಯೂಚೀ ಹೇ ಚೇಷ್ಟಾ । ಏಕೀಚಿ ಪರೀ ಸುಭಟಾ । ವರ್ತನಾ ಸ್ತವ ಪಾಲಟಾ । ಯೇತಸೇ ಜೇ ।೩೪೨॥ ತೇ ಭೇದಲೀ ವೃತ್ತಿ ಪಂಥೇ । ವಾಯು ಶಕ್ತಿ ಗಾ ಯೇಥೇ । ಕರ್ಮಕಾರಣ ಚೌಥೇ । ಐಸೇ ಜಾಣ ।೩೪೩॥

ದೇಹದಲ್ಲಾಗುವ ಕರ್ಮಗಳಿಗೆಲ್ಲ ನಾನೇ ಮಾಡಿದೆನೆಂಬ ಭ್ರಮೆಯಿಂದ ಹೇಳುವನು. ಆದ್ದರಿಂದ ಜೀವಕ್ಕೆ ಕರ್ಮಗಳ ಕರ್ತನಾಗಿರುವನು ಎಂದು ಹೇಳುವರು ।೩೨೬॥

ದೃಷ್ಟಿಯು ಒಂದೇ ಇದ್ದು, ರೆಪ್ಪೆಯ ಕೂದಲುಗಳು ಚವರಿಯ ಕೂದಲುಗಳಂತೆ ಹೆಚ್ಚಿದಂತೆ ಕಾಣುವುವು ।೩೨೭॥

ಮನೆಯಲ್ಲಿನ ದೀಪವು ಒಂದೇ ಇದ್ದರೂ ಹಲವು ಕಿಂಡಿಗಳಿಂದ ಹಲವು ಪ್ರಕಾರಗಳಾಗಿ ತೋರುವುದು ।೩೨೮॥

ನವರಸಗಳ ಅವಿರ್ಭಾವವನ್ನು ತೋರಿಸುವ ಒಬ್ಬನೇ ಪುರುಷನು ಒಂಬತ್ತು ಪ್ರಕಾರಗಳಾಗಿ ತೋರುವನು ।೩೨೯॥

ಅದರಂತೆ ಬುದ್ಧಿಯ ಒಂದೇ ಜ್ಞಾನವಿದ್ದು, ಅದು ನೇತ್ರಾದಿ ಇಂದ್ರಿಯಗಳ ಭಿನ್ನತ್ವದಿಂದ ಹೊರಗೆ ಬರುವುದು ।೩೩೦॥

ಹೇ ನೃಪನಂದನನೇ, ಈ ಬೇರೆ ಬೇರೆ ಇಂದ್ರಿಯಗಳು ಕರ್ಮದ ಮೂರನೆಯ ಕಾರಣವಾಗಿರುವುದು. ಹೀಗೆ ತಿಳಿ ।೩೩೧॥

ಮತ್ತು ಪೂರ್ವ ಪಶ್ಚಿಮ ವಾಹಿನೀ ನದಿಗಳು ಹರಿಯುತ್ತ ಹರಿಯುತ್ತ ಸಮುದ್ರಕ್ಕೆ ಕೂಡಿಕೊಂಡಾಗ ನೀರಿನ ರೂಪದಿಂದ ಏಕತ್ರವಾಗುವುವು ।೩೩೨॥

ಅದರಂತೆ ಪ್ರಾಣ ವಾಯುವಿನಲ್ಲಿ ನಾಶವಾಗದಂತಹ ನಿತ್ಯವಾಗಿರುವ ಕ್ರಿಯಾಶಕ್ತಿಯು ಅನೇಕ ಇಂದ್ರಿಯಗಳ ಸ್ಥಾನದಲ್ಲಿದ್ದು, ಅನೇಕ ಪ್ರಕಾರಗಳಾಗುವುವು ।೩೩೩॥

ಅದು ವಾಕ್ ದ್ವಾರದಿಂದ ಹೊರಬಿದ್ದಾಗ ಅದಕ್ಕೆ ವಾಣಿ ಎಂದು ಹೇಳುವೆವು. ಹಸ್ತ ದ್ವಾರದಿಂದ ಹೊರಬಿದ್ದಾಗ ಅದಕ್ಕೆ ಕೊಡುವ, ತೆಗೆದುಕೊಳ್ಳುವ ವ್ಯವಹಾರವೆನ್ನುವೆವು ।೩೩೪॥

ಅರೇ ಅದು ಕಾಲಿನಲ್ಲಿ ಬಂದಾಗ್ಗೆ ಅದಕ್ಕೆ ಗತಿ ಎನ್ನುತ್ತಾರೆ ಮತ್ತು ಮಲಮೂತ್ರ ದ್ವಾರದಿಂದ ಹೊರಬಿದ್ದಾಗ ಅದಕ್ಕೆ ವಿಸರ್ಜನೆ ಎನ್ನುತ್ತಾರೆ ।೩೩೫॥

ನಾಭಿಯಿಂದ ಹೃದಯದವರೆಗೆ ಶರೀರದಲ್ಲಿ ಓಂಕಾರದ ವೃದ್ಧಿ ಮಾಡುವುದು. ಇದಕ್ಕೆ ಪ್ರಾಣ ವಾಯು ಎಂದು ಹೇಳುವರು ।೩೩೬॥

ನಂತರ ಮೇಲೆ ಬರುವ ಶ್ವಾಸೋಚ್ಛ್ವಾಸಕ್ಕೆ ಉದಾನ ವೆಂದು (ಕಂಠಸ್ಥ ವಾಯು) ಹೀಗೆ ಹೆಸರು ಪ್ರಾಪ್ತವಾಗಿದೆ ।೩೩೭॥

ಹಾಗೂ ಗುದದ್ವಾರದಿಂದ ಹೊರಗೆ ಬರುತ್ತಿರಲು ಅದಕ್ಕೆ ಅಪಾನ (ಗುದಸ್ಥ ವಾಯು) ವೆಂದು ಹೆಸರು ಬಂದಿದೆ ಮತ್ತು ಎಲ್ಲ ಶರೀರದಲ್ಲಿ ವ್ಯಾಪಕವಾಗಿರುವುದರಿಂದ ವ್ಯಾನ (ಶರೀರಸ್ಥ ವಾಯು) ವೆಂದು ಹೇಳುವರು ।೩೩೮॥

ಭುಂಜಿಸಿದ ರಸಗಳನ್ನು ಶರೀರದಲ್ಲಿ ಪಸರಿಸಿ ಎಲ್ಲ ಮೂಲೆ ಮೂಲೆಗೂ ಬಿಡದೇ ತುಂಬಿಸುವುದು ।೩೩೯॥

ಕಿರೀಟಿಯೇ, ಹೀಗೆ ಎಲ್ಲ ಕ್ರಿಯೆಗಳನ್ನು ಆಗುತ್ತಿರುವ ಈ ಶಕ್ತಿಗೆ ಸಮಾನ (ನಾಭಿಸ್ಥ ವಾಯು) ಎಂದು ಹೇಳುವರು ।೩೪೦॥

ಮತ್ತು ಆಕಳಿಕೆ, ಶೀನು, ತೇಗು ಇತ್ಯಾದಿ ಆಗುವ ವಾಯುವಿನ ವ್ಯವಹಾರಕ್ಕೆ ನಾಗ, ಕೂರ್ಮ, ಕೃಕರ ಇತ್ಯಾದಿ ಉಪಪ್ರಾಣಗಳಾಗಿವೆ ।೩೪೧॥

ಹೇ ಸುಭಟಾ, ಈ ಪ್ರಕಾರವಾಗಿ ಎಲ್ಲವೂ ವಾಯುವಿನ ಚೇಷ್ಟೆಯಾಗಿದ್ದು, ಅದು ಒಂದೇ ಇದ್ದರೂ ವರ್ತನೆಯಿಂದ ಬೇರೆ ಬೇರೆ ಹೆಸರುಗಳಾಗಿವೆ ।೩೪೨॥

ಹೀಗೆ ತಮ್ಮ ತಮ್ಮ ವ್ಯವಹಾರಗಳಿಂದ ವಾಯುವಿನ ಶಕ್ತಿಯು ಬೇರೆ ಬೇರೆಯಾಗುವುದು. ಇದು ಕರ್ಮದ ನಾಲ್ಕನೆಯ ಕಾರಣವಾಗಿದೆ, ಹೀಗೆ ತಿಳಿ ।೩೪೩॥

ಆಣಿ ಋತು ಬರವಾ ಶಾರದು । ಶಾರದೀ ಪುಢತೀ ಚಾಂದು । ಚಂದ್ರೀ ಜೈಸಾ ಸಂಬಂಧು । ಪೂರ್ಣಿಮೇಚಾ ॥೩೪೪॥ ಕಾ ವಸಂತೀ ಬರವಾ ಆರಾಮು । ಆರಾಮೀಂಹೀ ಪ್ರಿಯಸಂಗಮು । ಸಂಗಮೀ ಆಗಮು । ಉಪಚಾರಾಂಚಾ ॥೩೪೫॥ ನಾನಾ ಕಮಳೀ ಪಾಂಡವಾ । ವಿಕಾಸು ಜೈಸಾ ಬರವಾ । ವಿಕಾಸೀಂಹೀ ಯಾವಾ । ಪರಾಗಾಚಾ ತೋ ॥೩೪೬॥ ವಾಚೇ ಬರವೇ ಕವಿತ್ವ । ಕವಿತ್ವೀ ಬರವೇ ರಸಿಕತ್ವ । ರಸಿಕತ್ವೀ ಪರತತ್ತ್ವ । ಸ್ಪರ್ಶು ಜೈಸಾ ॥೩೪೭॥ ತೈಸೀ ಸರ್ವ ವೃತ್ತಿ ವೈಭವೀ । ಬುದ್ಧೀಚಿ ಏಕಲೀ ಬರವೀ । ಬುದ್ಧೀಹೀ ಬರವ ನವೀ । ಇಂದ್ರಿಯ ಪ್ರೌಢೀ ॥೩೪೮॥ ಇಂದ್ರಿಯಪ್ರೌಢೀ ಮಂಡಳಾ । ಶೃಂಗಾರು ಏಕುಚಿ ನಿರ್ಮಳಾ । ಜೈ ಅಧಿಷ್ಠಾತ್ರಿಯಾ ಕಾ ಮೇಳಾ । ದೇವತಾಂಚಾ ಜೋ ॥೩೪೯॥ ಮ್ಹಣೌನಿ ಚಕ್ಷುರಾದಿಕೀ ದಾಹೇ । ಇಂದ್ರಿಯಾ ಪಾಠೀ ಸ್ವಾನುಗ್ರಹೇ । ಸೂರ್ಯಾದಿಕಾ ಕಾಂಆಹೇ । ಸುರಾಂಚೇ ವೃಂದ ॥೩೫೦॥ ತೇ ದೇವವೃಂದ ಬರವೇ । ಕರ್ಮ ಕಾರಣ ಪಾಂಚವೇ । ಅರ್ಜುನಾ ಯೇಥ ಜಾಣಾವೇ । ದೇವೋ ಮ್ಹಣೇ ॥೩೫೧॥ ಏವಂ ಮಾನೇ ತುಝಿಯೇ ಆಯಣೀ । ತೈಸೀ ಕರ್ಮಜಾತಾಂಚಿ ಹೇ ಖಾಣೀ । ಪಂಚವಿಧ ಆಕರ್ಣೀ । ನಿರೂಪಿಲೀ ॥೩೫೨॥ ಆತಾ ಹೇಚಿ ಖಾಣೀ ವಾಢೇ । ಮಗ ಕರ್ಮಾಚೀ ಸೃಷ್ಟಿ ಘಡೇ । ಜಿಹೀ ತೇ ಹೇತುಹೀ ಉಘಡೇ । ದಾಊ ಪಾಂಚ್ಯೈ ॥೩೫೩॥

ಶರೀರವಾಙ್ಮನೋಭಿರ್ಯತ್ ಕರ್ಮ ಪ್ರಾರಭತೇ ನರಃ ।
ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ ॥೧೫॥

ತರೀ ಅವಸಾಂತ ಆಲೀ ಮಾಧವೀ । ತೇ ಹೇತು ಹೋಯ ನವಪಲ್ಲವೀ । ಪಲ್ಲವ ಪುಷ್ಪಪುಂಜ ದಾವೀ । ಪುಷ್ಪ ಫಳಾತೇ ॥೩೫೪॥ ಕಾ ವಾರ್ಷಿಯೇ ಆಣಿಜೇ ಮೇಘು । ಮೇಘೇ ವೃಷ್ಟಿಪ್ರಸಂಗು । ವೃಷ್ಟಿಸ್ತವ ಭೋಗು । ಸಸ್ಯಸುಖಾಚಾ ॥೩೫೫॥ ನಾತರೀ ಪ್ರಾಚೀ ಅರುಣಾತೇ ವಿಯೇ । ಅರುಣೇ ಸೂರ್ಯೋದಯೋ ಹೋಯೇ । ಸೂರ್ಯೇ ಸಗಳಾ ಪಾಹೇ । ದಿವೋ ಜೈಸಾ ॥೩೫೬॥ ತೈಸೇ ಮನ ಹೇತು ಪಾಂಡವಾ । ಹೋಯ ಕರ್ಮಸಂಕಲ್ಪಭಾವಾ । ತೋ ಸಂಕಲ್ಪು ಲಾವೀ ದಿವಾ । ವಾಚೇಚಾ ಗಾ ॥೩೫೭॥ ಮಗ ವಾಚೇಚಾ ತೋ ದಿವಟಾ । ದಾವೀ ಕೃತ್ಯಜಾತಾಂಚಿಯಾ ವಾಟಾ । ತೇವ್ಹಾ ಕರ್ತಾ ರಿಗೇ ಕಾಮಠಾ । ಕರ್ತೃತ್ವಾಚ್ಯಾ ॥೩೫೮॥

ಮತ್ತು ಶರತ್ ಋತುವಿನಂತಹ ಉತ್ತಮವಾದ ಋತುವಿನಲ್ಲಿ ಚಂದ್ರೋದಯವಾಗಬೇಕು. ಪುನಃ ಪೌರ್ಣಿಮೆಯ ಯೋಗ ಕೂಡಿಕೊಳ್ಳಬೇಕು ।೩೪೪॥

ಅಥವಾ ವಸಂತಋತುವಿನಲ್ಲಿ ಉತ್ತಮವಾದ ತೋಟವಿರಬೇಕು. ಅಲ್ಲಿ ಪ್ರೀತಿಯ ಮನುಷ್ಯರ ಸಹ ವಾಸವಾಗಬೇಕು ಮತ್ತು ಅಲ್ಲಿ ಎಲ್ಲ ಉಪಚಾರಗಳ ಅನುಕೂಲ ಇರಬೇಕು ।೩೪೫॥

ಅಥವಾ ಪಾಂಡವನೇ, ಕಮಲವು ಸರಿಯಾಗಿ ವಿಕಾಸಗೊಂಡಿರಬೇಕು ಮತ್ತು ಆ ವಿಕಾಸದಲ್ಲಿ ಸುಗಂಧ ಪರಾಗವು ಹೊರಸೂಸುತ್ತಿರಬೇಕು ।೩೪೬॥

ವಾಣಿಯಿಂದ ಕಾವ್ಯ ಮಾಡುವುದು ಉತ್ತಮ, ಆ ಕಾವ್ಯದಲ್ಲಿ ರಸಿಕತ್ವವಿರುವುದು ಉತ್ತಮ, ಮತ್ತು ಆ ರಸಿಕತ್ವದಲ್ಲಿ ಪರತತ್ತ್ವದ ಸ್ಪರ್ಶವಿರುವುದು ಉತ್ತಮ ।೩೪೭॥

ಹಾಗೆಯೇ ಸರ್ವ ವೃತ್ತಿಯ ಐಶ್ವರ್ಯದ ಬುದ್ಧಿಯು ಉತ್ತಮ. ಅದರಲ್ಲಿ ಎಲ್ಲ ಇಂದ್ರಿಯಗಳು ಅದಕ್ಕೆ ಅನುಕೂಲವಿರುವುದು ಒಳ್ಳೆಯದು ।೩೪೮॥

ಮತ್ತು ಎಲ್ಲ ಇಂದ್ರಿಯಗಳಿಗೆ ಭೂಷಣ ಕೊಡುವ ಆ ಇಂದ್ರಿಯಗಳ ದೇವತೆಗಳ ಸಮೂಹವು ಸಹ ಇವುಗಳಿಗೆ ಅನುಕೂಲವಾಗಿರಬೇಕು ।೩೪೯॥

ಆದ್ದರಿಂದ ಚಕ್ಷುರಾದಿ ಹತ್ತು ಇಂದ್ರಿಯಗಳಲ್ಲಿ ಸೂರ್ಯಾದಿ ದೇವತೆಗಳ ಸಾಮುದಾಯಿಕ ಅನುಗ್ರಹ ।೩೫೦॥

ಇದೇ ದೈವ ಎಂದರೆ ದೇವತೆಗಳ ಸಮುದಾಯವು. ಇದು ಈ ಕರ್ಮಗಳ ಐದನೆಯ ಕಾರಣವಾಗಿರುವುದು. ಅರ್ಜುನಾ, ಇದನ್ನು ತಿಳಿದುಕೊಂಡೆಯಾ? ಎಂದು ದೇವನು ಹೇಳಿದನು ।೩೫೧॥

ಈ ಪ್ರಕಾರವಾಗಿ ನಿನ್ನ ಬುದ್ಧಿಗೆ ತಿಳಿಯುವ ರೀತಿಯಲ್ಲಿ ಕರ್ಮದ ಐದು ಕಾರಣಗಳನ್ನು ನಿನಗೆ ಹೇಳಿದ್ದು ಸರಿಯಾಗಿ ಕೇಳಿದಿ ಯಾ? ।೩೫೨॥

ಈ ಯಾವ ಹೇತುಗಳಿಂದ ಈ ಐದು ಕರ್ಮಗಳು ಉದ್ಭವಿಸುವುವೋ, ಆ ಐದು ಉದ್ದೇಶಗಳನ್ನು ನಿನಗೆ ಸ್ಪಷ್ಟಮಾಡಿ ಹೇಳುವೆನು ।೩೫೩॥

ಶ್ಲೋಕಾರ್ಥ :- ಶರೀರದಿಂದ, ವಾಣಿಯಿಂದ, ಮನಸ್ಸಿನಿಂದ ಮನುಷ್ಯನು ಮಾಡುವ ಒಳ್ಳೆಯ ಹಾಗೂ ಕೆಟ್ಟ ಕರ್ಮಗಳಿಗೆಲ್ಲಾ, ಈ ಐದೇ ಕಾರಣಗಳು ।೧೫॥

ಅಕಸ್ಮಾತಾಗಿ ವಸಂತ ಋತು ಬರಲು ಗಿಡ ಬಳ್ಳಿಗಳಿಗೆ ಚಿಗುರು ಹುಟ್ಟಲು ಕಾರಣವಾಗುವುದು ಮತ್ತು ಚಿಗುರು, ಎಲೆಗಳಿಂದ ಹೂಗೊಂಚಲು, ಹೂವಿನಿಂದ ಫಲಗಳು ಉಂಟಾಗುವುವು ।೩೫೪॥

ಅಥವಾ ಮಳೆಗಾಲದಲ್ಲಿ ಮೋಡಗಳು ಹುಟ್ಟುವುವು, ಮೋಡಗಳಿಂದ ಮಳೆಯಾಗುವುದು ಮತ್ತು ಮಳೆಯಿಂದ ಧಾನ್ಯಗಳು ಹುಟ್ಟುವುವು ।೩೫೫॥

ಅಥವಾ ಪೂರ್ವಕ್ಕೆ ಅರುಣೋದಯವಾಗುವುದು. ಅರುಣೋದಯವಾದ ಮೇಲೆ ಸೂರ್ಯೋದಯವಾಗುವುದು ಮತ್ತು ಸೂರ್ಯೋದಯದಿಂದ ಹಗಲಾಗುವುದು ।೩೫೬॥

ಅದರಂತೆ ಪಾಂಡವಾ, ಮನವು ಕರ್ಮದ ಸಂಕಲ್ಪಕ್ಕೆ ಕಾರಣವಾಗಿದೆ. ಅದೇ ಸಂಕಲ್ಪವು ವಾಣಿಯಿಂದ ಹೊರಬೀಳುತ್ತದೆ ।೩೫೭॥

ಆಗ ವಾಣಿಯ ಬೆಳಕಿನಲ್ಲಿ ಕರ್ಮದ ದಾರಿಯು ಸ್ಪಷ್ಟವಾಗಿ ತೋರುತ್ತದೆ. ಆಗ ಕರ್ತನು ಕರ್ಮವನ್ನು ಮಾಡಹತ್ತುವನು ।೩೫೮॥

ತೇಥ ಶರೀರಾದಿಕ ದಳವಡೇ । ಶರೀರಾದಿಕಾ ಹೇತುಚಿ ಘಡೇ । ಲೋಹ ಕಾಮ ಲೋಖಂಡೇ । ನಿರ್ವಾಳಿಜೇ ಜೈಸೇ ।೩೫೯॥ ಕಾ ತಾಂಥುವಾಚಾ ತಾಣಾ । ತಾಂಥು ಘಾಲಿತಾ ವೈರಣಾ । ತೋ ತಂತುಚಿ ವಿಚಕ್ಷಣಾ । ಹೋಯ ಪಟು ।೩೬೦॥ ತೈಸೇ ಮನವಾಚಾದೇಹಾಚೇ । ಕರ್ಮ ಮನಾದಿ ಹೇತುಚಿ ರಚೇ । ರತ್ನೀ ಘಡೇ ರತ್ನಾಚೇ । ದಳವಾಡೇ ಜೇವಿ ।೩೬೧॥ ಯೇಥ ಶರೀರಾದಿಕೇ ಕಾರಣೇ । ತೇಂಚಿ ಹೇತು ಕೇವಿ ಹೇ ಕೋಣೇ । ಅಪೇಕ್ಷಿಜೇ ತರೀ ತೇಣೇ । ಅವಧಾರಿಜೋ ।೩೬೨॥ ಆಇಕಾ ಸೂರ್ಯಾಚಿಯಾ ಪ್ರಕಾಶಾ । ಹೇತು ಕಾರಣ ಸೂರ್ಯುಚಿ ಜೈಸಾ । ಕಾ ಉಂಸಾಚೇ ಕಾಂಡೇ ಉಂಸಾ । ವಾಢೀ ಹೇತು ।೩೬೩॥ ನಾನಾ ವಾಗ್ದೇವತಾ ವಾನಾವೀ । ತೈ ವಾಚಾಚಿ ಲಾಗೇ ಕಾಮಾವಾವೀ । ಕಾ ವೇದಾ ವೇದೇಂಚಿ ಬೋಲಾವೀ । ಪ್ರತಿಷ್ಠಾ ಜೇವಿ ।೩೬೪॥ ತೈಸೇ ಕರ್ಮ ಶರೀರಾದಿಕೇ । ಕಾರಣ ಹೇ ಕೀರ ಠಾಉಕೇ । ಪರೀ ಹೇಚಿ ಹೇತು ನ ಚುಕೇ । ಹೇಂಹೀ ಯೇಥ ।೩೬೫॥ ಆಣಿ ದೇಹಾದಿಕೀ ಕಾರಣೀ । ದೇಹಾದಿ ಹೇತು ಮಿಳಣೀ । ಹೋಯ ಜಯಾ ಉಭಾರಣೀ । ಕರ್ಮಜಾತಾ ।೩೬೬॥ ತೇ ಶಾಸ್ತ್ರಾರ್ಥೇ ಮಾನಿಲೇಯಾ । ಮಾರ್ಗಾ ಅನುಸರೇ ಧನಂಜಯಾ । ತರೀ ನ್ಯಾಯ ತೋ ನ್ಯಾಯಾ । ಹೇತು ಹೋಯ ।೩೬೭॥ ಜೈಸಾ ಪರ್ಜನ್ಯೋದಕಾಚಾ ಲೋಟು । ವಿಪಾಯೇ ಧರೀ ಸಾಳೀಚಾ ಪಾಟು । ತೋ ಜಿರೇ ಪರೀ ಅಚಾಟು । ಉಪಯೋಗು ಆಥೀ ।೩೬೮॥ ಕಾ ರೋಷೇ ನಿಘಾಲೇ ಅವಚಟೇ । ಪಡಿಲೇ ದ್ವಾರಕೇಚಿಯಾ ವಾಟೇ । ತೇ ಶಿಣೇ ಪರೀ ಸುನಾಟೇ । ನ ವಚಿತೀ ಪದೇ ।೩೬೯॥ ತೈಸೇ ಹೇತುಕಾರಣ ಮೇಳೇ । ಉಠೀ ಕರ್ಮ ಜೇ ಆಂಧಳೇ । ತೇ ಶಾಸ್ತ್ರಾಚೇ ಲಾಹೇ ಡೋಳೇ । ತೈ ನ್ಯಾಯ ಮ್ಹಣಿಪೇ ।೩೭೦॥ ನಾ ದೂಧ ವಾಢಿತಾ ಠಾವೋ ಪಾವೇ । ತಂವ ಉತೋನಿ ಜಾಯ ಸ್ವಭಾವೇ । ತೋಹೀ ವೇಂಚು ಪರೀ ನವ್ಹೇ । ವೇಂಚಿಲೇ ತೇ ।೩೭೧॥ ತೈಸೇ ಶಾಸ್ತ್ರಸಾಹ್ಯೇವೀಣ । ಕೇಲೇ ನೋಹೇ ಜರೀ ಅಕಾರಣ । ತರೀ ಲಾಗೋ ಕಾ ನಾಗವಣ । ದಾನಲೇಖೀ ।೩೭೨॥ ಅಗಾ ಬಾವನ್ನಾ ವರ್ಣಾಂಪರತಾ । ಕೋಣ ಮಂತ್ರು ಆಹೇ ಪಂಡುಸುತಾ । ಕಾ ಬಾವನ್ನಹೀ ನುಚ್ಚಾರಿತಾ । ಜೀವು ಆಥೀ ? ।೩೭೩॥ ಪರಿ ಮಂತ್ರಾಚೀ ಕಡಸಣೀ । ಜಂವ ನೇಣಿಜೇ ಕೋದಂಡಪಾಣೀ । ತಂವ ಉಚ್ಚಾರಫಳವಾಣೀ । ನ ಪವೇ ಜೇವಿ ।೩೭೪॥

ಆಗ ಶರೀರಾದಿಕ ಎಲ್ಲ ಇಂದ್ರಿಯಗಳು ಕರ್ಮಗಳಿಗೆ ಕಾರಣವಾಗುವುವು. ಕಬ್ಬಿಣದ ವಸ್ತುಗಳನ್ನು ತಯಾರಿಸಲು ಕಬ್ಬಿಣದ ಸಾಧನಗಳನ್ನೇ ಉಪಯೋಗಿಸಬೇಕಾಗುವುದು ।೩೫೯॥

ಎಲ್ಲೈ, ಕುಶಾಗ್ರ ಬುದ್ಧಿಯೇ, ನೂಲಿನ ಹಾಸಿನಲ್ಲಿ ನೂಲಿನ ಎಳೆಗಳನ್ನು ಸೇರಿಸಲು ನೂಲಿನಿಂದಲೇ ವಸ್ತ್ರವಾಗುವುದು ।೩೬೦॥

ರತ್ನದ ಸಾಣೆಯನ್ನು ರತ್ನದಿಂದಲೇ ಹಿಡಿಯಬೇಕಾಗುವುದು. ಅದರಂತೆ ಮನಸ್ಸು, ವಾಚಾ, ಹಾಗೂ ದೇಹ ಇವುಗಳ ಕರ್ಮಗಳಿಗೆ ಮನವೇ ಕಾರಣವಾಗಿರುವುದು ।೩೬೧॥

ಇಲ್ಲಿ ಕರ್ಮಗಳಿಗೆ ಶರೀರಾದಿಕಗಳೇ ಏಕೆ ಕಾರಣಗಳಾಗುವುವು ಎಂದು ಯಾರಾದರೂ ಶಂಕೆ ಮಾಡಿದರೆ, ಅದಕ್ಕಾಗಿ ಹೇಳುವೆನು ಕೇಳು ।೩೬೨॥

ಇಲ್ಲಿ ಕೇಳು, ಸೂರ್ಯನ ಪ್ರಕಾಶಕ್ಕೆ ಸೂರ್ಯನೇ ಕಾರಣನಾಗಿರುವನು. ಅಥವಾ ಕಬ್ಬಿನ ಕಾಂಡಗಳೇ ಕಬ್ಬುಗಳ ಬೆಳೆಗೆ ಕಾರಣವಾಗಿರುವುವು ।೩೬೩॥

ಅಥವಾ ಸರಸ್ವತಿಯ ಸ್ತುತಿಯನ್ನು ಮಾಡಲು ವಾಣಿಯೇ ಶ್ರಮಿಸಬೇಕಾಗುವುದು. ಅಥವಾ ವೇದದ ಪ್ರತಿಷ್ಠೆಯನ್ನು ವೇದವೇ ಮಾಡಬೇಕಾಗುವುದು ।೩೬೪॥

ಅದರಂತೆ ಕಾರ್ಯಗಳಿಗೆ ಶರೀರಾದಿಕಗಳು ಇವೇ ಕಾರಣವಾಗಿವೆ. ಇದು ಎಲ್ಲರಿಗೂ ತಿಳಿದಿದೆ. ಆದ್ದರಿಂದ ಇಲ್ಲಿ ಶರೀರಾದಿಕಗಳೇ ಕರ್ಮಗಳಿಗೆ ನಿಶ್ಚಿತವಾಗಿ ಕಾರಣವಾಗಿವೆ ।೩೬೫॥

ಮತ್ತು ದೇಹಾದಿಕ ಅಧಿಷ್ಠಾನಕ್ಕೆ ದೇಹಾದಿಗಳೇ ಕಾರಣವಾಗಿವೆ ಮತ್ತು ಇವುಗಳಿಂದಲೇ ಎಲ್ಲ ಕರ್ಮಗಳು ಸ್ಥಾಪಿಸಲ್ಪಡುವುವು ।೩೬೬॥

ಧನಂಜಯನೇ, ಈ ಕರ್ಮಗಳನ್ನು ಶಾಸ್ತ್ರಾನುಸಾರವಾಗಿ ಮಾಡಿದಲ್ಲಿ ಪುಣ್ಯ ಕರ್ಮವಾಗುವುದು ಹಾಗೂ ಇದಕ್ಕೆ ನ್ಯಾಯಕರ್ಮವೆಂದು ಹೇಳುವರು ಮತ್ತು ಅದರ ಉದ್ದೇಶ ಸಹ ನ್ಯಾಯವೇ ಆಗಿರುವುದು ।೩೬೭॥

ಮಳೆಯ ನೀರು ಒಂದುವೇಳೆ ಭತ್ತದ ಗದ್ದೆಯನ್ನು ಸೇರಿದರೆ ಅಲ್ಲಿಯೇ ಇಂಗುವುದು. ಆದರೆ ಅದರಿಂದ ಬಹಳ ಉಪಯೋಗವಾಗುವುದು ।೩೬೮॥

ಅಥವಾ ಒಬ್ಬನು ಕೋಪಿಸಿಕೊಂಡು ಮನೆಯ ಹೊರಗೆ ಹೊರಟು ಸಹಜವಾಗಿ ದ್ವಾರಕೆಯ ಮಾರ್ಗಕ್ಕೆ ಹತ್ತಿದಾಗ ಆತನಿಗೆ ನಡೆಯಲು ಶ್ರಮವಾಗುವುದು ನಿಜ. ಆದರೆ ಆತನ ಒಂದು ಹೆಜ್ಜೆಯೂ ವ್ಯರ್ಥವಾಗಲಾರದು ।೩೬೯॥

ಅದರಂತೆ ಉದ್ದೇಶ ಹಾಗೂ ಕಾರಣ ಇವುಗಳ ಯೋಗದಿಂದ ಕುರುಡು ಕರ್ಮಗಳು ನಡೆಯುವುವು. ಅವೇ ಒಂದುವೇಳೆ ಸಶಾಸ್ತ್ರವಾದರೆ ಅವುಗಳಿಗೆ ಪುಣ್ಯ ಕರ್ಮವೆನ್ನಬೇಕು ।೩೭೦॥

ಅಥವಾ ಅಗ್ನಿಯ ಮೇಲಿಟ್ಟ ಹಾಲು ಕಾಯ್ದು ಮೇಲೆರುತ್ತ ಏರುತ್ತ ಪಾತ್ರೆಯ ಅಂಚು ದಾಟಿ ಸಹಜವಾಗಿ ಉಕ್ಕಿ ಹೊರಚೆಲ್ಲುವುದು. ಅದು ವ್ಯಯವಾಗಿದ್ದರೂ (ಸತ್ಕಾರ್ಯದಂತೆ) ವ್ಯಯವಾಯಿತೆಂದು ಹೇಳಲು ಬರುವುದಿಲ್ಲ ।೩೭೧॥

ಅದರಂತೆ ಶಾಸ್ತ್ರದಲ್ಲಿ ಹೇಳಿದಂತೆ ಕರ್ಮಗಳನ್ನು ಮಾಡದಿದ್ದರೂ ಅವು ವ್ಯರ್ಥವಾಗುವುದಿಲ್ಲವೆಂದರೆ, ಲೂಟಿಯಾದ ಧನಕ್ಕೆ ದಾನ ಮಾಡಿದೆವು ಎಂದು ಏಕೆ ತಿಳಿಯಬಾರದು ? ।೩೭೨॥

ಪಂಡುಸುತನೇ, ಐವತ್ತೆರಡು ಅಕ್ಷರಗಳ ಹೊರತು ಯಾವ ಮಂತ್ರವಿದೆ ? ಅಥವಾ ಐವತ್ತೆರಡು ಅಕ್ಷರಗಳನ್ನು ಬಿಟ್ಟು ಉಚ್ಚರಿಸುವ ಯಾವ ಪ್ರಾಣಿವಿರುವುದು ? ।೩೭೩॥

ಆದರೆ ಕೋದಂಡಪಾಣಿಯೇ, ಎಲ್ಲಿಯವರೆಗೆ ಮಂತ್ರದ ಯುಕ್ತಿಯು ತಿಳಿಯುವುದಿಲ್ಲವೋ, ಅಲ್ಲಿಯವರೆಗೆ ಐವತ್ತೆರಡು ಅಕ್ಷರಗಳ ಉಚ್ಚಾರಕ್ಕೆ ಮಂತ್ರೋಚ್ಚಾರದ ಫಲಪ್ರಾಪ್ತಿಯಾಗುವುದಿಲ್ಲ ।೩೭೪॥

ತೇವಿ ಕಾರಣಹೇತುಯೋಗೇ । ಜೇ ಬಿಸಾಟ ಕರ್ಮ ನಿಗೇ । ತೇ ಶಾಸ್ತ್ರಾಚಿಯೇ ನ ಲಗೇ । ಕಾಂಸೇ ಜಂವ ।೩೭೫॥ ಕರ್ಮ ಹೋತಚಿ ಅಸೇ ತೇವ್ಹಾಂಹೀ । ಪರೀ ತೇ ಹೋಣೇ ನವ್ಹೇ ಪಾಹೀ । ತೋ ಅನ್ಯಾಯೋ ಗಾ ಅನ್ಯಾಯೀ । ಹೇತು ಹೋಯ ।೩೭೬॥

ತತ್ರೈವಂ ಸತಿ ಕರ್ತಾರಮ್ ಆತ್ಮಾನಂ ಕೇವಲಂ ತು ಯಃ।
ಪಶ್ಯತ್ಯಕೃತಬುದ್ಧಿತ್ವಾತ್ ನ ಸ ಪಶ್ಯತಿ ದುರ್ಮತಿಃ ।೧೬॥

ಏವಂ ಪಂಚಕಾರಣಾ ಕರ್ಮಾ । ಪಾಂಚಹೀ ಹೇತು ಹಾ ಸುಮಹಿಮಾ । ಆತಾ ಯೇಥೇ ಪಾಹೇ ಪಾ ಆತ್ಮಾ । ಸಾಂಪಡಲಾ ಅಸೇ ?।೩೭೭॥ ಭಾನು ನ ಹೋನಿ ರೂಪೇ ಜೈಸೀ । ಚಕ್ಷು ರೂಪಾತೇ ಪ್ರಕಾಶೀ । ಆತ್ಮಾ ನ ಹೋನಿ ಕರ್ಮೇ ತೈಸೀ । ಪ್ರಕಟಿತ ಅಸೇ ಗಾ ।೩೭೮॥ ಪೈ ಪ್ರತಿಬಿಂಬ ಆರಿಸಾ । ದೋನ್ಹೀ ನ ಹೋನಿ ವೀರೇಶಾ । ದೋಹೀಂತೇ ಪ್ರಕಾಶೀ ಜೈಸಾ । ನ್ಯಾಹಾಳಿತಾ ತೋ ।೩೭೯॥ ಕಾ ಅಹೋರಾತ್ರ ಸವಿತಾ । ನ ಹೋನೀ ಕರೀ ಪಂಡುಸುತಾ । ತೈಸಾ ಆತ್ಮಾ ಕರ್ಮಕರ್ತಾ । ನ ಹೋನಿ ದಾವೀ ।೩೮೦॥ ಪರೀ ದೇಹಾ ಅಭಿಮಾನ ಭುಲೀ । ಜಯಾಚೀ ಬುದ್ಧೀ ದೇಹೀಂಚ ಆತಲೀ । ತಯಾ ಆತ್ಮವಿಷಯೀ ಜಾಲೀ । ಮಧ್ಯ ರಾತ್ರೀ ಗಾ ।೩೮೧॥ ಜೇಣೇ ಚೈತನ್ಯಾ ಈಶ್ವರಾ ಬ್ರಹ್ಮಾ । ದೇಹಚಿ ಕೇಲೇ ಪರಮ ಸೀಮಾ । ತಯಾ ಆತ್ಮಾ ಕರ್ತಾ ಹೇ ಪ್ರಮಾ । ಅಲೋಟ ಉಪಜೇ ।೩೮೨॥ ಆತ್ಮಾ ಚಿ ಕರ್ಮಕರ್ತಾ । ಹಾಹೀ ನಿಶ್ಚಯೋ ನಾಹೀ ತತ್ತ್ವತಾ । ದೇಹೋಚಿ ಮೀ ಕರ್ಮಕರ್ತಾ । ಮಾನಿತೋ ಸಾಚ ।೩೮೩॥ ಜೇ ಆತ್ಮಾ ಮೀ ಕರ್ಮಾತೀತು । ಸರ್ವಕರ್ಮಾಸಾಕ್ಷಿಭೂತು । ಹೇ ಆಪಲೀ ಕಹೀ ಮಾತು । ನಾಯಕೇಚಿ ಕಾನೀ ।೩೮೪॥ ಮ್ಹಣೌನಿ ಉಮಾಪ ಆತ್ಮಯಾತೇ । ದೇಹಚಿವರೀ ಮವಿಜೇ ಯೇಥೇ । ವಿಚಿತ್ರ ಕಾಈ ರಾತ್ರಿ ದಿವಸಾತೇ । ಡುಡುಳ ನ ಕರೀ ?।೩೮೫॥ ಪೈ ಜೇಣೇ ಆಕಾಶೀಂಚಾ ಕಹೀ । ಸತ್ಯ ಸೂರ್ಯ ದೇಖಿಲಾ ನಾಹೀ । ತೋ ಥಿಲ್ಲರೀಂಚೇ ಬಿಂಬ ಕಾಈ । ಮಾನೂ ನ ಲಾಹೆ ?।೩೮೬॥ ಥಿಲ್ಲರಾಚೇನಿ ಜಾಲೇಪಣೇ । ಸೂರ್ಯಾಸಿ ಆಣಿ ಹೋಣೇ । ತ್ಯಾಚ್ಯಾ ನಾಶೀ ನಾಶಣೇ । ಕಂಪೇ ಕಂಪೂ ।೩೮೭॥ ಆಣಿ ನಿದ್ರಿಸ್ತಾ ಚೇವೋ ನಯೇ । ತಂವ ಸ್ವಪ್ನ ಸಾಚ ಹೋ ಲಾಹೇ । ರಜ್ಜು ನೇಣತಾ ಸಾಪಾ ಬಿಹೇ । ವಿಸ್ಮೋ ಕವಣ ?।೩೮೮॥ ಜಂವ ಕವಳ ಆಥಿ ಡೋಳಾ । ತಂವ ಚಂದ್ರು ದೇಖಾವಾ ಕೀ ಪಿಂವಳಾ । ಕಾಯ ಮೃಗೀಂಹೀ ಮೃಗಜಳಾ । ಭಾಳಾವೇ ನಾಹೀ ?।೩೮೯॥

ಅದರಂತೆ ಕಾರಣ ಮತ್ತು ಉದ್ದೇಶ ಇವುಗಳ ಯೋಗದಿಂದ ಸಾಮಾನ್ಯ ಕರ್ಮಗಳು ನಡೆಯುವುವು. ಆದರೆ ಅದು ಯಥಾಶಾಸ್ತ್ರವಾಗಿ ಇರದಿದ್ದರೆ ।೩.೭೫॥

ಆಗಲೂ ಕರ್ಮಗಳು ಆಗುತ್ತಲೇ ಇರುವುವು. ಆದರೆ ಅಪ್ಪಾ, ಅದು ಆಗುವುದು ಅಲ್ಲ, ಅದು ಅನ್ಯಾಯ ಕರ್ಮಗಳಾಗಿದ್ದು, ಅನ್ಯಾಯ ಕರ್ಮಗಳಿಗೆ ಕಾರಣವಾಗುವುವು ।೩.೭೬॥

ಶ್ಲೋಕಾರ್ಥ :- ವಿಷಯವು ಹೀಗಿರುವಾಗ ಸಂಸ್ಕಾರ ಬುದ್ಧಿಯಿಲ್ಲದ ಮೂಢರು ಕೇವಲ ಸ್ವರೂಪನಾದ ಆತ್ಮನನ್ನೇ ಕರ್ತ ಎಂದು ಭಾವಿಸುತ್ತಾರೆ. ಅವರಿಗೆ ವಾಸ್ತವ ಜ್ಞಾನವಿಲ್ಲ ।೦೬॥

ಹೇ ಸುಮಹಿಮನೇ, ಈ ಪ್ರಕಾರವಾಗಿ ಕರ್ಮದ ಐದು ಕಾರಣಗಳಿಗೆ ಐದು ಹೇತುಗಳಿರುವುವು. ಹಾಗಾದರೆ ಈಗ ಆತ್ಮವು ಕರ್ಮಕ್ಕೆ ಕಾರಣವಾಗಿದೆಯೇ? ಹೇಳು ನೋಡೋಣ ।೩.೭೭॥

ಸೂರ್ಯನು ಸ್ವತಃ ವಿಷಯನಾಗಿರದೆ, ನೇತ್ರಾದಿ ಐದು ಇಂದ್ರಿಯಗಳ ವಿಷಯಗಳನ್ನು ಪ್ರಕಟಿಸುವನು. ಅದರಂತೆ ಆತ್ಮನು ಕರ್ಮನಾಗಿರದೇ, ಮಾಡುವುದರಿಂದ ಅವುಗಳನ್ನು ಪ್ರಕಾಶಿತಗೊಳಿಸುವನು ।೩.೭೮॥

ಇಲ್ಲಿ ನೋಡು ವೀರೇಶಾ, ಕನ್ನಡಿ ಹಾಗೂ ಪ್ರತಿಬಿಂಬ ಈ ಎರಡೂ ತಾನಿರದೇ ನೋಡುವವನು ಈ ಎರಡನ್ನು ಪ್ರಕಾಶಿತಗೊಳಿಸುವನು ।೩.೭೯॥

ಅಥವಾ ಹೇ ಪಂಡುಸುತನೇ, ಸೂರ್ಯನು ಹಗಲು ಹಾಗೂ ರಾತ್ರಿಗೆ ಕಾರಣೀಭೂತನಾಗಿದ್ದು, ಅವುಗಳಿಂದ ಅಲಿಪ್ತನಾಗಿರುವಂತೆ ಆತ್ಮನು ಕರ್ಮಕರ್ತನಾಗಿರದೇ ತೋರುವನು ।೩.೮೦॥

ಆದರೆ ನಾನೆಂಬ ಭ್ರಮೆಯಿಂದ ಯಾವನ ಬುದ್ಧಿಯು ದೇಹವೇ ನಾನು ಎಂದು ನಿಶ್ಚಿತವಾಗಿ ತಿಳಿದಿರುವುದೋ, ಆತನಿಗೆ ತನ್ನ ಸ್ವರೂಪದ ಮಧ್ಯರಾತ್ರಿಯಾಗಿರುವುದು ।೩.೮೧॥

ಇವನು ಚೈತನ್ಯ, ಈಶ್ವರ ಹಾಗೂ ಬ್ರಹ್ಮ ಇವೆಲ್ಲವನ್ನು ದೇಹಕ್ಕೆನೇ ತಿಳಿದಿರುವನು. ಆತನಿಗೆ ಆತ್ಮನು ಕರ್ತನಿರುವನೆಂದು ಬುದ್ಧಿಯಾಗುವುದು ಸಹಜವಾಗಿದೆ ।೩.೮೨॥

ಆತ್ಮವೇ ಕರ್ಮಕರ್ತನಿರುವನೆಂದು ಹೀಗೂ ಯಾವನು ನಿಶ್ಚಯ ಮಾಡುವುದಿಲ್ಲವೋ, ಅವನು ನಿಜವಾಗಿಯೂ ದೇಹಕ್ಕೆನೇ ಕರ್ಮಕರ್ತನೆಂದು ತಿಳಿಯುವನು ।೩.೮೩॥

ಕಾರಣ ನಾನು ಆತ್ಮನು, ಕರ್ಮಾತೀತನಿದ್ದು, ಎಲ್ಲ ಕರ್ಮಗಳಿಗೆ ಸಾಕ್ಷಿಭೂತನಾಗಿರುವೆನು ಎಂಬ ಸ್ವರೂಪದ ಮಾತನ್ನು ಅವನು ಎಂದೂ ಕೇಳುವುದಿಲ್ಲ ।೩.೮೪॥

ಆದ್ದರಿಂದ ಸರ್ವವ್ಯಾಪಕನಾದ ಆತ್ಮನಿಗೆ ದೇಹವೇ ಹೌದೆಂದು ತಿಳಿಯುವನು. ಎಷ್ಟು ವಿಚಿತ್ರವಿದೆ! ಗೂಬೆಯು ಹಗಲಿಗೆ ರಾತ್ರಿ ಎನ್ನುವುದಿಲ್ಲವೇ? ।೩.೮೫॥

ಇಲ್ಲಿ ನೋಡು, ಯಾವನು ಆಕಾಶದಲ್ಲಿ ಸೂರ್ಯನನ್ನೇ ನೋಡಲಾರದವನು, ಗುಂಡಿಯಲ್ಲಿ ಬಿದ್ದ ನೀರಲ್ಲಿಯ ಅದರ ಪ್ರತಿಬಿಂಬಕ್ಕೆ ಸೂರ್ಯನೆಂದು ತಿಳಿಯುವುದಿಲ್ಲವೆ? ।೩.೮೬॥

ಗುಂಡಿಯಲ್ಲಿ ನೀರು ಕೂಡಿದಾಗ ಸೂರ್ಯನು ಹುಟ್ಟಿದನು ಎನ್ನುವನು, ನೀರು ಅಳುಗಾಡಿದಾಗ, ಸೂರ್ಯನಿಗೆ ನಡುಕು ಹುಟ್ಟಿತೆನ್ನುವನು ಮತ್ತು ನೀರು ಬತ್ತಿ ಹೋದಾಗ ಸೂರ್ಯನು ನಾಶನಾದನೆಂದು ತಿಳಿಯುವನು ।೩.೮೭॥

ಮಲಗಿದವನು ಎಚ್ಚರಾಗದವರೆಗೆ ಸ್ವಪ್ನವನ್ನು ನಿಜವೆಂದು ತಿಳಿಯುವನು. ಹಗ್ಗವನ್ನು ಅರಿಯದೇ ಸರ್ಪವೆಂದು ಭಯಪಡುವನು, ಇದರಲ್ಲೇನು ಆಶ್ಚರ್ಯ? ।೩.೮೮॥

ಕಾಮಣಿರೋಗವಿರುವವರೆಗೂ ಚಂದ್ರನು ಹಳದಿಯಾಗಿ ಕಾಣುವನು. ಅರೇ, ಮೃಗವು ಮೃಗಜಲಕ್ಕೆ ಮರುಳಾಗದಿದ್ದರೆ ಮತ್ತಾರು ಮರುಳಾಗಬೇಕು? ।೩.೮೯॥

ತೈಸಾ ಶಾಸ್ತ್ರಗುರುಚೇನಿ ನಾಂವೇ । ಜೋ ವಾರಾಹೀ ಟೇಂಕೋ ನೇದೀ ಸಿವೇ । ಕೇವಳ ಮೌಢ್ಯಾಚೇನಿಚಿ ಜೀವೇ । ಜಿಯಾಲಾ ಜೋ ।೩೯೦॥ ತೇಣೇ ದೇಹಾತ್ಮ ದೃಷ್ಟೀಮುಳೇ । ಆತ್ಮ ಯಾ ಘಾಪೇ ದೇಹಾಚೇ ಜಾಳೇ । ಜೈಸಾ ಅಭ್ರಾಚಾ ವೇಗು ಕೋಲ್ಹೇ । ಚಂದ್ರೀ ಮಾನೀ ।೩೯೧॥ ಮಗ ತಯಾ ಮಾನಣ ಯಾಸಾಠೀ । ದೇಹಬಂದಿಶಾಳೇ ಕಿರೀಟೀ । ಕರ್ಮಾಚ್ಯಾ ವಜ್ರಗಾಂಠೀ । ಕಳಾಸೇ ತೋ ।೩೯೨॥ ಪಾಹೇ ಪಾ ಬದ್ಧ ಭಾವನಾ ದೃಢಾ । ನಳಿಯೇವರೀ ತೋ ಬಾಪುಡಾ । ಕಾಯ ಮೋಕಳೇಯಾಹಿ ಪಾಯಾಚಾಚೀ ಚವಡಾ । ನ ಠಕೇಚಿ ಪೂಂಸಾ ।೩೯೩॥ ಮ್ಹಣೌನಿ ನಿರ್ಮಳಾ ಆತ್ಮಸ್ವರೂಪೀ । ಜೋ ಪ್ರಕೃತೀಚೇ ಕೇಲೇ ಆರೋಪೀ । ತೋ ಕಲ್ಪಕೋಡೀಚ್ಯಾ ಮಾಪೀ । ಮವೀಚಿ ಕರ್ಮೇ ।೩೯೪॥ ಆತಾ ಕರ್ಮಾಮಾಜೀ ಅಸೇ । ಪರೀ ತಯಾತೇ ಕರ್ಮ ನ ಸ್ಪರ್ಶೇ । ವಡವಾನಳಾತೇ ಜೈಸೇ । ಸಮುದ್ರೋದಕ ।೩೯೫॥ ತೈಸೇನಿ ವೇಗಳೇಪಣೇ । ಜಯಾಚೇ ಕರ್ಮೀ ಅಸಣೇ । ತೋ ಕೀರ ವೋಳಖಾವಾ ಕವಣೇ । ತರೀ ಸಾಂಗೋ ।೩೯೬॥ ಜೇ ಮುಕ್ತಾತೇ ನಿರ್ಧಾರಿತಾ । ಲಾಭೇ ಆಪಲೀಚ ಮುಕ್ತತಾ । ಜೈಸೀ ದೀಪೇ ದಿಸೇ ಪಾಹತಾ । ಆಪಲೀ ವಸ್ತು ।೩೯೭॥ ನಾತರೀ ದರ್ಪಣು ಜಂವ ಉಟಿಜೇ । ತಂವ ಆಪಣಪಯಾ ಆಪಣ ಭೇಟಿಜೇ । ಕಾ ತೋಯ ಪಾವತಾ ತೋಯ ಹೋಈಜೇ । ಲವಣೇ ಜೇವೀ ।೩೯೮॥ ಹೇ ಅಸೋ ಪರತೋನಿ ಮಾಗುತೇ । ಪ್ರತಿಬಿಂಬ ಪಾಹೇ ಬಿಂಬಾತೇ । ತಂವ ಪಾಹಣೇ ಜಾಉನೀ ಆಯಿತೇ । ಬಿಂಬಚಿ ಹೋಯ ।೩೯೯॥ ತೈಸೇ ಹಾರಪಲೇ ಆಪಣಪೇ ಪಾವೇ । ತೈ ಸಂತಾಂತೇ ಪಾಹಾತಾ ಗಿಂವಸಾವೇ । ಮ್ಹಣೌನಿ ವಾನಾವೇ ಐಕಾವೇ । ತೇಚಿ ಸದಾ ।೪೦೦॥ ಪರೀ ಕರ್ಮೀ ಅಸೋನಿ ಕರ್ಮೇ । ಜೋ ನಾವರೇ ಸಮೇ ವಿಷಮೇ । ಚರ್ಮ ಚಕ್ಷುಂಚೇನಿ ಚಾಮೇ । ದೃಷ್ಟಿ ಜೈಸೀ ।೪೦೧॥ ತೈಸಾ ಸೋಡವಲಾ ಜೋ ಆಹೇ । ತಯಾಚೇ ರೂಪ ಆತಾ ಪಾಹೇ । ಉಪಪತ್ತೀಚೇ ಬಾಹೇ । ಉಭಊನಿ ಸಾಂಗೋ ।೪೦೨॥

ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।
ಹತ್ವಾಽಪಿ ಸ ಇಮಾನ್ ಲೋಕಾನ್ ನ ಹಂತಿ ನ ನಿಬಧ್ಯತೇ ।೧೭॥

ತರೀ ಅವಿದ್ಯೇಚಿಯೇ ನಿದ್ರಾ । ವಿಶ್ವಸ್ವಪ್ನಾಚಾ ಹಾ ಧಾಂದಾ । ಭೋಗೀತ ಹೋತಾ ಪ್ರಬುದ್ಧಾ । ಅನಾದಿ ಜೋ ।೪೦೩॥

ಆದರಂತೆ ಯಾವನು ಶಾಸ್ತ್ರ ಹಾಗೂ ಗುರುಗಳ ಹೆಸರಿನ ಗಾಳಿಯೂ ಬಡಿಸಿಕೊಳ್ಳುವುದಿಲ್ಲವೋ, ಅವನು ತನ್ನ ಮೂರ್ಖತನದ ಬಲದಿಂದಲೇ ಬದುಕಿರುವನು ।೯೯೦॥

ಮೋಡಗಳು ಚಲಿಸುವಾಗ ಚಂದ್ರನೇ ಚಲಿಸುವನೆಂದು ನರಿಯು ತಿಳಿಯುವಂತೆ, ಆತನು ದೇಹವೇ ಆತ್ಮನೆಂಬ ದೃಷ್ಟಿಯಿಂದ ಆತ್ಮಕ್ಕೆ ದೇಹರೂಪ ಬಲೆಯನ್ನು ಹಾಕಿರುವನು ।೯೯೧॥

ಆಗ ಕಿರೀಟಿಯೇ, ಆತನ ಈ ತಿಳುವಳಿಕೆಯಿಂದ ದೇಹರೂಪ ಕಾರಾಗೃಹದಲ್ಲಿ ಕರ್ಮದ ಬಲವಾದ ಗಂಟಿನಿಂದ ಕಟ್ಟಲ್ಪಡುವನು ।೯೯೨॥

ಇಲ್ಲಿ ನೋಡು, ಪಾಪ ಆ ಗಿಳಿಯು ನಳಿಕೆಯ ಮೇಲೆ ಕುಳಿತಿರುವಾಗ ನಾನು ಕಟ್ಟಬಿದ್ದೆ ಎಂಬ ದೃಢ ಕಲ್ಪನೆಯಿಂದ ತನ್ನ ಕಾಲುಗಳು ಗಟ್ಟಿಯಾಗಿ ಬಿಡುವುದೇ ಇಲ್ಲ ।೯೯೩॥

ಆದ್ದರಿಂದ ನಿರ್ಮಲವಾದ ಆತ್ಮಸ್ವರೂಪಕ್ಕೆ ದೇಹದಿಂದ ಮಾಡಿದ ಕರ್ಮಗಳ ಆರೋಪ ಮಾಡುವವನು, ಕಲ್ಪಕೋಟಿಯವರೆಗೂ ಕರ್ಮದಲ್ಲಿಯೇ ಸಿಲುಕಿಕೊಳ್ಳುವನು ।೯೯೪॥

ಈಗ ಕರ್ಮಗಳನ್ನು ಮಾಡುತ್ತಿದ್ದರೂ ಆತನಿಗೆ ಕರ್ಮಗಳ ಸ್ಪರ್ಶವಾಗುವುದಿಲ್ಲ. ವಡವಾನಲವು ಸಮುದ್ರದಲ್ಲಿದ್ದರೂ ಅದಕ್ಕೆ ಸ್ಪರ್ಶ ಮಾಡುವುದಿಲ್ಲ ।೯೯೫॥

ಆದರಂತೆ ಯಾವನು ಅಲಿಪ್ತತೆಯಿಂದ ಕರ್ಮಗಳನ್ನು ಮಾಡುತ್ತಿರುವನೋ, ಅವನನ್ನು ಹೇಗೆ ತಿಳಿಯಬೇಕೆಂಬುದನ್ನು ಹೇಳುವೆ ।೯೯೬॥

ದೀಪದಿಂದ ತನ್ನ ವಸ್ತುವು ತನಗೆ ಕಾಣಿಸುವಂತೆ ಮುಕ್ತನ ಸ್ವರೂಪದಿಂದ ವಿಚಾರದಿಂದ ತನ್ನ ಸ್ವಾಭಾವಿಕವಾದ ಮುಕ್ತತೆಯು ತನಗೆ ಲಭಿಸುವುದು ।೯೯೭॥

ಅಥವಾ ಕನ್ನಡಿಯನ್ನು ಸ್ವಚ್ಛಗೊಳಿಸಲು ಆದರಲ್ಲಿ ತನ್ನ ಸ್ವರೂಪವು ತನಗೆ ತೋರುವುದು ಅಥವಾ ಉಪ್ಪನ್ನು ನೀರಿನಲ್ಲಿ ಹಾಕಿದಾಗ ಅದು ನೀರಾಗುವುದು ।೯೯೮॥

ಇದು ಇರಲಿ, ಕನ್ನಡಿಯಲ್ಲಿನ ಪ್ರತಿಬಿಂಬವನ್ನು ಬಿಟ್ಟು ತನ್ನ ಬಿಂಬವನ್ನು ನೋಡುತ್ತಿರುವಾಗ ಬಿಂಬವೇ ಪ್ರತಿಬಿಂಬವೆಂಬ ಭಾವವು ಮೂಡುವುದು ।೯೯೯॥

ಆದರಂತೆ ಸಂತರ ಸ್ಥಿತಿಯ ವಿಚಾರವನ್ನು ಮಾಡಿದಾಗ ತನ್ನ ಕಳೆದಿರುವ ಸ್ವರೂಪವು ತನಗೆ ದೊರೆಯುವುದು. ಆದ್ದರಿಂದ (ಸಂತರ ವರ್ಣನೆಯನ್ನು ಯಾವಾಗಲೂ ಕೇಳಬೇಕು, ಮಾಡಬೇಕು) ।೧೦೦೦॥

ಆದರೆ, ಕರ್ಮಗಳನ್ನು ಮಾಡುತ್ತಿದ್ದರೂ ಕರ್ಮಗಳ ಉತ್ತಮ ಕೆಟ್ಟ ಪರಿಣಾಮಗಳಿಗೆ ಲಿಪ್ತನಾಗುವುದಿಲ್ಲ. ಚರ್ಮ ಚಕ್ಷುವಿನ ಚರ್ಮದಿಂದ ನಿಜವಾದ ದೃಷ್ಟಿಯು ಲೋಪವಾಗುವುದಿಲ್ಲ ।೧೦೦೧॥

ಆದರಂತೆ ಯಾವನು ಕರ್ಮಾತೀತನಾಗಿರುವನೋ, ಆತನ ಲಕ್ಷಣಗಳನ್ನು ಯುಕ್ತಿಯಿಂದ ಕೈಎತ್ತಿ ನಿನಗೆ ಹೇಳುವೆನು ।೧೦೦೨॥

ಶ್ಲೋಕಾರ್ಥ :- ದೇಹಾದಿಗಳು ತಾನೆಂಬ ಅಭಿಮಾನ ಕಲ್ಪನೆ ಯಾವನಿಗೆ ನಿತ್ಯ ನಿವೃತ್ತವಾಗಿ ಹೋಗಿರುವುದೋ, ಯಾವನ ಬುದ್ಧಿಗೆ ಕರ್ಮಫಲದಲ್ಲಿ ಅಂಟು ಇರುವುದಿಲ್ಲವೋ, ಅಂಥವನು (ಪರದೃಷ್ಟಿಯಲ್ಲಿ) ಈ ಲೋಕನನ್ನು ಕೊಂದರೂ, ವಾಸ್ತವವಾಗಿ ಅಂದರೆ ಸ್ವದೃಷ್ಟಿಯಲ್ಲಿ ಕೊಂದವನಲ್ಲ ; ಅವನಿಗೆ ಕರ್ಮಬಂಧವಿಲ್ಲ ।೧೭॥

ಹೇ ಪ್ರಬುದ್ಧನೇ, ಯಾವನು ಅಜ್ಞಾನದ ನಿದ್ರೆಯಲ್ಲಿ ವಿಶ್ವರೂಪ ಸ್ವಪ್ನದ ಅನುಭವವನ್ನು ಅನೇಕ ವರ್ಷಗಳಿಂದ ಪಡೆಯುತ್ತಿದ್ದನೋ ।೧೦೦೩॥

ತೋ ಮಹಾವಾಕ್ಯಾಚೇನಿ ನಾಂವೇ । ಗುರು ಕೃಪೇಚೇನಿ ಥಾಂವೇ । ಮಾಥಾ ಹಾತು ಠೇವಿಲಾ ನವ್ಹೇ । ಥಾಪಟಿಲಾ ಜೈಸಾ ॥೯೦೪॥ ತೈಸಾ ವಿಶ್ವಸ್ವಪ್ನೇಂಸೀ ಮಾಯಾ । ನೀದ ಸಾಂಡೂನಿ ಧನಂಜಯಾ । ಸಹಸಾ ಚೇಇಲಾ ಅದ್ವಯಾ । ನಂದಪಣೇ ಜೋ ॥೯೦೫॥ ತೇವ್ಹಾ ಮೃಗಜಳಾಚೇ ಪೂರ । ದಿಸತ ಏಕ ನಿರಂತರ । ಹಾರಪತೀ ಕಾ ಚಂದ್ರಕರ । ಫಾಂಕತಾ ಜೈಸೇ ॥೯೦೬॥ ಕಾ ಬಾಳತ್ವ ನಿಘೋನಿ ಜಾಯ । ತೈ ಬಾಗುಲಾ ನಾಹೀ ತ್ರಾಯ । ಪೈ ಜಳಾಲಿಯಾ ಇಂಧನ ನ ಹೋಯ । ಇಂಧನ ಜೇವೀ ॥೯೦೭॥ ನಾನಾ ಚೇವೋ ಆಲಿಯಾ ಪಾಠೀ । ತೈ ಸ್ವಪ್ನ ನ ದಿಸೇ ದಿಠೀ । ತೈಸೀ ಅಹಂ ಮಮತಾ ಕಿರೀಟೀ । ನುರೇಚಿ ತಯಾ ॥೯೦೮॥ ಮಗ ಸೂರ್ಯು ಆಂಧಾರಾಲಾಗೀ । ರಿಘೋ ಕಾ ಭಲತೇ ಸುರಂಗೀ । ಪರೀ ತೋ ತಯಾಚ್ಯಾ ಭಾಗೀ । ನಾಹೀಂಚಿ ಜೈಸಾ ॥೯೦೯॥ ತೈಸಾ ಆತ್ಮತ್ವೇ ವೇಷ್ಟಿಲಾ ಹೋಯೇ । ತೋ ಜಯಾ ತಯಾ ದೃಶ್ಯಾತೇ ಪಾಹೇ । ತೇ ದೃಶ್ಯ ದ್ರಷ್ಟೇಪಣೇಂಸೀ ಹೋತ ಜಾಯೇ । ತಯಾಚೇಂಚಿ ರೂಪ ॥೯೧೦॥ ಜೈಸಾ ವನ್ಹಿ ಜಯಾ ಲಾಗೇ । ತೇ ವನ್ಹಿಚಿ ಜಾಲಿಯಾ ಆಂಗೇ । ದಾಹ್ಯದಾಹಕವಿಭಾಗೇ । ಸಾಂಡಿಜೇ ತೇ ॥೯೧೧॥ ತೈಸಾ ಕರ್ಮಾಕಾರಾ ದುಜೇಯಾ । ತೋ ಕರ್ತೇಪಣಾಚಾ ಆತ್ಮಯಾ । ಆಳು ಆಲಾ ತೋ ಗೇಲಿಯಾ । ಕಾಂಹೀ ಬಾಹೀ ಜೇ ಉರೇ ॥೯೧೨॥ ತಿಯೇ ಆತ್ಮಸ್ಥಿತೀಚಾ ಜೋ ರಾವೋ । ಮಗ ತೋ ದೇಹೀ ಇಯೇ ಜಾಣೇಲ ಠಾವೋ ? । ಕಾಯ ಪ್ರಲಯಾಂಬೂಚಾ ಉನ್ನಾ ಹೋ । ವೋಘು ಮಾನೀ ? ॥೯೧೩॥ ತೈಸೀ ತೇ ಪೂರ್ಣ ಅಹಂತಾ । ಕಾಈ ದೇಹಪಣೇ ಪಂಡುಸುತಾ । ಆವರೇ ಕಾಈ ಸವಿತಾ । ಬಿಂಬೇ ಧರಿಲಾ ? ॥೯೧೪॥ ಪೈ ಮಂಥೂನಿ ಲೋಣೀ ಘೇಪೇ । ತೇ ಮಾಗುತೀ ತಾಕೀ ಘಾಪೇ । ತರೀ ತೇ ಅಲಿಪ್ತಪಣೇ ಸಿಂಪೇ । ತೇಣೇಂಸೀ ಕಾಈ ? ॥೯೧೫॥ ನಾನಾ ಕಾಷ್ಠೌನಿ ವೀರೇಶಾ । ವೇಗಳಾ ಕೇಲಿಯಾ ಹುತಾಶಾ । ರಾಹೇಕಾಷ್ಠಾಚಿಯಾ ಮಾಂದುಸಾ । ಕೋಂಡಲೇಪಣೇ ? ॥೯೧೬॥ ಕಾ ರಾತ್ರೀಚಿಯಾ ಉದಾರಾ ಆಂತು । ನಿಘಾಲಾ ಜೋ ಹಾ ಭಾಸ್ವತು । ತೋ ರಾತ್ರೀ ಐಸೀ ಮಾತು । ಐಕೇ ಕಾಈ ? ॥೯೧೭॥ ತೈಸೇ ವೇದ್ಯ ವೇದಕಪಣೇಂಸೀ । ಪಡಿಲೇ ಕಾ ಜಯಾಚೇ ಗ್ರಾಸೀ । ತಯಾದೇಹ ಮೀ ಐಸೀ । ಅಹಂತಾ ಕೈಂಚೀ ? ॥೯೧೮॥ ಆಣಿ ಆಕಾಶೇ ಜೇಥೇ ಜೇಥುನೀ । ಜಾಇಜೇ ತೇಥ ಅಸೇ ಭರೋನೀ । ಮ್ಹಣೌನಿ ಠೇಲೇ ಕೋಂದೋನೀ । ಆಪೇಆಪ ॥೯೧೯॥

ಅವನು "ತತ್ತ್ವಮಸಿ" ಎಂಬುವ ಮಹಾವಾಕ್ಯವು ಕಿವಿಯಲ್ಲಿ ಬಿದ್ದು ಗುರುಕೃಪೆಯ ಬಲದಿಂದ ಕೇವಲ ಮಸ್ತಕದ ಮೇಲೆ ಕೈ ಇಡದೇ ಚಪ್ಪರಿಸಿ ಎಚ್ಚರ ಮಾಡಿರುವನು ॥೫೦೪॥

ಅದರಂತೆ ಧನಂಜಯನೇ, ಜಗದ್ರೂಪ ಸ್ವಪ್ನವನ್ನು ಹಾಗೂ ಅಜ್ಞಾನರೂಪ ನಿದ್ರೆಯನ್ನು ಬದಿಗೊತ್ತಿ ಸಹಜವಾಗಿ ನಿಜಸ್ವರೂಪದ ದರ್ಶನದಿಂದ ಎಚ್ಚರಾದನು ॥೫೦೫॥

ಆಗ ಚಂದ್ರೋದಯದಿಂದ ಮೃಗಜಲದ ಕಾಣುವ ಪೂರವು ತನ್ನಷ್ಟಕ್ಕೆ ತಾನೇ ಇಲ್ಲದಂತಾಗುವುದು ॥೫೦೬॥

ಅಥವಾ ಬಾಲ್ಯವು ಕಳೆದು ಹೋದಾಗ ಬೆದರುಗೊಂಬೆಗೆ ಯಾರೂ ಹೆದರುವುದಿಲ್ಲ. ಅಥವಾ ಕಟ್ಟಿಗೆಯು ಸುಟ್ಟ ನಂತರ ಪುನಃ ಕಟ್ಟಿಗೆಯಾಗದು ॥೫೦೭॥

ಅಥವಾ ಎಚ್ಚರಾದ ಮೇಲೆ ಸ್ವಪ್ನವು ದೃಷ್ಟಿಗೆ ಬೀಳುವುದಿಲ್ಲ. ಅದರಂತೆ ಕಿರೀಟಿಯೇ, ಈತನಿಗೆ ನಾನು ಹಾಗೂ ನನ್ನದೆಂಬ ಅಭಿಮಾನವು ಇರುವುದಿಲ್ಲ ॥೫೦೮॥

ಅಂದಮೇಲೆ ಕತ್ತಲೆಯನ್ನು ನೋಡುವುದಕ್ಕಾಗಿ ಸೂರ್ಯನು ಯಾವುದೇ ಗುಹೆಯಲ್ಲಿ ಹೊಕ್ಕರೂ ಅಲ್ಲಿ ಕತ್ತಲು ಇರುವುದೇ ಇಲ್ಲ ॥೫೦೯॥

ಅದರಂತೆ ನಾನು ಆತ್ಮನಾಗಿರುವೆನೆಂಬ ಯಾವನಿಗೆ ಪೂರ್ಣವಾಗಿ ತಿಳುವಳಿಕೆಯಾಗಿರುವುದೋ, ಆತನಿಗೆ ನೋಡಿದ ವಸ್ತುಗಳು, ನೋಡುವ ದೃಷ್ಟಿ ಎಲ್ಲವೂ ಆತ್ಮಸ್ವರೂಪವಾಗಿಯೇ ಕಾಣುವುವು ॥೫೧೦॥

ಅಗ್ನಿಯು ಹತ್ತಿದ ಪದಾರ್ಥಗಳೆಲ್ಲವೂ ಅಗ್ನಿರೂಪವಾಗುವುವು. ಆಗ ದಾಹ್ಯ, ದಾಹಕ ಭೇದವು ಉಳಿಯುವುದೇ ಇಲ್ಲ ॥೫೧೧॥

ಅದರಂತೆ ಕರ್ಮದಲ್ಲಿ ದ್ವೈತವನ್ನಿಟ್ಟು ಕರ್ಮವನ್ನು ಮಾಡುವುದು ಆತ್ಮನ ಮೇಲಿನ ಆರೋಪವು ಇಲ್ಲದಾಗಲು ಯಾವುದು ಉಳಿಯುವುದೋ ॥೫೧೨॥

ಆ ಆತ್ಮಸ್ಥಿತಿಯಲ್ಲಿ ಇರುವ ಶ್ರೇಷ್ಠ ಪುರುಷನು ಈ ದೇಹವು ನನ್ನದು ಹಾಗೂ ನಾನು ದೇಹದಿಂದ ಭಿನ್ನನು ಎಂದು ತಿಳಿಯುವನೇ? ಪ್ರಳಯಕಾಲದ ಜಲವು ಚಿಕ್ಕ ದೊಡ್ಡ ಪ್ರವಾಹಗಳನ್ನು ತನ್ನಿಂದ ಬೇರೆ ಮಾಡುವುದಿಲ್ಲವೋ? ॥೫೧೩॥

ಅದರಂತೆ ಪಂಡುಸುತನೇ, ಬ್ರಹ್ಮವೇ ನಾನು ಎಂಬ ಅಗಾಧ ಬೋಧೆಯಾಗಲು ಬ್ರಹ್ಮರೂಪವಾದ ಅಹಂಕಾರವು ದೇಹವಷ್ಟೇ ಹೇಗೆ ಆವರಿಸೀತು? ಸೂರ್ಯನ ಪ್ರತಿಬಿಂಬ ಹಿಡಿದರೆ ಸೂರ್ಯನು ಕೈಗೆ ಸಿಗುವನೇ? ॥೫೧೪॥

ಮಂಥಿಸಿ ಬೆಣ್ಣೆ ತೆಗೆದ ನಂತರ ಆ ಬೆಣ್ಣೆಯನ್ನು ಪುನಃ ಮಜ್ಜಿಗೆಯಲ್ಲಿ ಹಾಕಿದಾಗ ಅದು ಮೊದಲಿನಂತೆ ಒಂದೇ ರೂಪವಾದೀತೆ? ॥೫೧೫॥

ಅಥವಾ ವೀರೇಶನೇ, ಕಟ್ಟಿಗೆಯಲ್ಲಿ ಗುಪ್ತವಾಗಿರುವ ಅಗ್ನಿಯು ಪ್ರಗಟವಾದಾಗ ಅದನ್ನು ಕಟ್ಟಿಗೆಯ ಪೆಟ್ಟಿಗೆಯಲ್ಲಿಡಲು, ಅದು ಹಾಗೆಯೇ ಉಳಿದೀತೆ? ॥೫೧೬॥

ಅಥವಾ ರಾತ್ರಿಯ ಉದರದಿಂದ ಹೊರಬಂದ ಸೂರ್ಯನಿಗೆ ರಾತ್ರಿ ಎಂಬ ಶಬ್ದವನ್ನಾದರೂ ಕಿವಿಯಲ್ಲಿ ಬೀಳಬಹುದೇ? ॥೫೧೭॥

ಅದರಂತೆ ತಿಳಿಯುವ ವಸ್ತು ಹಾಗೂ ತಿಳಿಯುವವನು ಇವು ಯಾವಾತನ ಬೋಧೆಯಲ್ಲಿ ಇಲ್ಲದಾಗಲು ಆತನಿಗೆ ನಾನು ದೇಹನು ಅಥವಾ ದೇಹವೇ ಆತ್ಮನು ಎಂಬ ಗರ್ವವು ಎಲ್ಲಿಂದ ಉಳಿಯಬೇಕು? ॥೫೧೮॥

ಮತ್ತು ಎಲ್ಲಿಯೇ ಹೋಗಲಿ, ಆಕಾಶವು ಎಲ್ಲೆಲ್ಲಿಯೂ ತುಂಬಿಕೊಂಡಿರುವುದು. ಆದ್ದರಿಂದ ಸಹಜವಾಗಿಯೇ ಅದು ಎಲ್ಲ ಕಡೆಯಲ್ಲಿಯೂ ವ್ಯಾಪಿಸಿರುವುದು ॥೫೧೯॥

ತೈಸೇ ಜೇ ತೇಣೇ ಕರಾವೇ । ತೋ ತೇಂಚಿ ಆಹೇ ಸ್ವಭಾವೇ । ಮಾ ಕೋಣೇ ಕರ್ಮಿ ವೇಷ್ಟಾವೇ । ಕರ್ತೇಪಣೇ ?॥೪೨೦॥ ನುರೇಚಿ ಗಗನಾವೀಣ ಠಾವೋ । ನೋಹೇಚಿ ಸಮುದ್ರಾ ಪ್ರವಾಹೋ । ನುರೀಚಿ ಧ್ರುವಾ ಜಾವೋ । ತೈಸೇ ಜಾಹಾಲೇ ॥೪೨೧॥ ಐಸೇನಿ ಅಹಂಕೃತಿಭಾವೋ । ಜಯಾಚಾ ಬೋಧೀ ಜಾಹಲಾ ವಾವೋ । ತರ್ಹಿ ದೇಹಾ ಜಂವ ನಿರ್ವಾಹೋ । ತಂವ ಆಥೀ ಕರ್ಮೇ ॥೪೨೨॥ ವಾರಾ ಜರೀ ವಾಜೋನಿ ವೋಸರೇ । ತರೀ ತೋ ಡೋಲ ರುಖೀ ಉರೇ । ಕಾ ಸೇಂದೇ ದ್ರುತಿ ರಾಹೇ ಕಾಪುರೇ । ವೇಂಚಲೇನೀ ॥೪೨೩॥ ಕಾ ಸರಲೇಯಾ ಗೀತಾಚಾ ಸಮಾರಂಭು । ನ ವಚೇ ರಾಹವಲೇಪಣಾಚಾ ಕ್ಷೋಭು । ಭೂಮೀ ಲೋಳೋನಿ ಗೇಲಿಯಾ ಅಂಬು । ವೋಲ ಥಾರೇ ॥೪೨೪॥ ಅಗಾ ಮಾವಳಲೇನಿ ಅರ್ಕೇ । ಸಂಧ್ಯೇಚಿಯೇ ಭೂಮಿಕೇ । ಜ್ಯೋತಿದೀಪ್ತಿ ಕೌತುಕೇ । ದಿಸೇ ಜೈಸೀ ॥೪೨೫॥ ಪೈ ಲಕ್ಷ ಭೇದಿಲಿಯಾಹೀವರೀ । ಬಾಣ ಧಾಂವೇಚಿ ತಂವವರೀ । ಜಂವ ಭರಲೀ ಆಥೀ ಉರೀ । ಬಳಾಚೀ ತೇ ॥೪೨೬॥ ನಾನಾ ಚಕ್ರೀ ಭಾಂಡೇ ಜಾಲೇ । ತೇ ಕುಲಾಲೇ ಪರತೇ ನೇಲೇ । ಪರೀ ಭ್ರಮೇಂಚಿ ತೇ ಮಾಗಿಲೇ । ಭೋವಂಡಿಲೇಪಣೆ ॥೪೨೭॥ ತೈಸಾ ದೇಹಾಭಿಮಾನು ಗೇಲಿಯಾ । ದೇಹ ಜೇಣೇ ಸ್ವಭಾವೇ ಧನಂಜಯಾ । ಜಾಲೇ ತೇ ಆಪೈಸಯಾ । ಚೇಷ್ಟವೀಚ ತೇ ॥೪೨೮॥ ಸಂಕಲ್ಪೇವೀಣ ಸ್ವಪ್ನ । ನ ಲಾವಿತಾ ದಾಂಗೀಚೇ ಬನ । ನ ರಚಿತಾ ಗಂಧರ್ವಭುವನ । ಉಠೀ ಜೈಸೇ ॥೪೨೯॥ ಆತ್ಮ ಯಾಚೇನಿ ಉದ್ಯಮೇವೀಣ । ತೈಸೇ ದೇಹಾದಿಪಂಚಕಾರಣ । ಹೋಯ ಆಪಣಯಾ ಆಪಣ । ಕ್ರಿಯಾಜಾತ ॥೪೩೦॥ ಪೈ ಪ್ರಾಚೀನಸಂಸ್ಕಾರವಶೇ । ಪಾಂಚಹೀ ಕಾರಣೇ ಸಹೇತುಕೇ । ಕಾಮವೀಜತೀ ಗಾ ಅನೇಕೇ । ಕರ್ಮಾಕಾರೇ ॥೪೩೧॥ ತಯಾ ಕರ್ಮಾಮಾಜೀ ಮಗ । ಸಂಹರೋ ಆಘವೇ ಜಗ । ಅಥವಾ ನವೇ ಚಾಂಗ । ಅನುಕರೋ ॥೪೩೨॥ ಪರೀ ಕುಮುದ ಕೈಸೇನಿ ಸುಕೇ । ಕೈಸೇ ತೇ ಕಮಳ ಫಾಂಕೇ । ಹೀ ದೋನ್ಹೀ ರವೀ ನ ದೇಖಾ । ಜಯಾಪರೀ ॥೪೩೩॥ ಕಾ ವೀಜು ವರ್ಷೋನಿ ಆಭಾಳ । ಠಿಕರಿಯಾ ಆತೋ ಭೂತಳ । ಅಥವಾ ಕರೂ ಶಾಡ್ವಳ । ಪ್ರಸನ್ನಾವೃಷ್ಟೀ ॥೪೩೪॥ ತರೀ ತಯಾ ದೋಹೀಂತೇ ಜೈಸೇ । ನೇಣೆಜೇಚಿ ಕಾ ಆಕಾಶೇ । ತೈಸಾ ದೇಹೀಂಚ ಜೋ ಅಸೇ । ವಿದೇಹದೃಷ್ಟೀ ॥೪೩೫॥ ತೋ ದೇಹಾದಿಕೀ ಚೇಷ್ಟೀ । ಘಡತಾ ಮೋಡತಾ ಹೇ ಸೃಷ್ಟೀ । ನ ದೇಖೇ ಸ್ವಪ್ನ ದೃಷ್ಟೀ । ಚೇಇಲಾ ಜೈಸಾ ॥೪೩೬॥

ಅದರಂತೆ ಆತನು ಏನೇನು ಮಾಡುವನೋ, ಅವು ಆತ್ಮಸ್ವರೂಪವೇ ಆಗಿರುವುವು. ಅಂದಮೇಲೆ ಯಾವ ಕರ್ಮದಿಂದ ಆತನು ತನ್ನ ಕಡೆ ಕರ್ತೃತ್ವ ಪಡೆದಾನು? ।೪೨೦॥

ಆಕಾಶದ ಹೊರತಾಗಿ ಯಾವ ಸ್ಥಳವೂ ಇಲ್ಲ. ಸಮುದ್ರಕ್ಕೆ ಪ್ರವಾಹವು ಇಲ್ಲ, ಹಾಗೂ ಧ್ರುವನಕ್ಷತ್ರಕ್ಕೆ ಎಲ್ಲಿಯೂ ಹೋಗಬರುವುದು ಇಲ್ಲ. ಹಾಗೆ ಆತನ ಸ್ಥಿತಿಯಾಗಿರುವುದು ।೪೨೧॥

ಈ ಪ್ರಕಾರವಾಗಿ ಆತ್ಮಜ್ಞಾನದಿಂದ ಕರ್ತೃತ್ವದ ಅಭಿಮಾನವು ವ್ಯರ್ಥವಾಗುವುದು. ಆದಾಗ್ಯೂ, ಆತನ ದೇಹವಿರುವವರೆಗೂ ಆತನಿಂದ ಕರ್ಮಗಳು ಆಗುತ್ತಿರುವುವು ।೪೨೨॥

ಗಾಳಿ ಬೀಸುವುದು ನಿಂತಾಗಲೂ ಗಿಡವು ಅಲುಗಾಡುವುದು ನಿಲ್ಲುವುದಿಲ್ಲ. ಅಥವಾ ಕರ್ಪೂರವು ಮುಗಿದರೂ ಭರಣಿಯಲ್ಲಿನ ವಾಸನೆಯು ಉಳಿದಿರುವುದು ।೪೨೩॥

ಅಥವಾ ಗಾನ ಸಮಾರಂಭವು ಮುಗಿದರೂ, ಗಾನ ಕೇಳಿ ಆದ ಮನಸ್ಸಿನ ಆನಂದವು ಕಡಿಮೆಯಾಗುವುದಿಲ್ಲ. ನೀರಿನಿಂದ ಭೂಮಿಯು ತೋಯ್ದಾಗ ನೀರಿಲ್ಲದಿದ್ದರೂ ಹಸಿ ಹಾಗೆಯೇ ಇರುವುದು ।೪೨೪॥

ಅರೇ, ಸೂರ್ಯನು ಮುಳುಗಿದರೂ, ಸಾಯಂಕಾಲದಲ್ಲಿ ಪಶ್ಚಿಮ ಕಡೆ ಆಕಾಶದಲ್ಲಿ ಸೂರ್ಯನ ಪ್ರಭೆಯು ಕೌತುಕವಾಗಿ ಕಾಣಿಸುವುದು ।೪೨೫॥

ಹಾಗೆಯೇ ಗುರಿಯನ್ನು ಹೊಡೆದಾಗಲೂ ಬಾಣವು ತನ್ನಲ್ಲಿದ್ದ ಶಕ್ತಿಯು ಮುಗಿಯುವವರೆಗೂ ಮುಂದೆ ಧಾವಿಸುವುದು ।೪೨೬॥

ಅಥವಾ ಕುಂಬಾರನ ತಿಗುರಿಯ ಮೇಲೆ ತಯಾರಾದ ಮಡಿಕೆಯನ್ನು ತೆಗೆದಾಗಲೂ ಮೊದಲಿನ ಗತಿಯಂತೆ ಆ ತಿಗುರಿಯು ತಿರುಗುತ್ತಲೇ ಇರುವುದು ।೪೨೭॥

ಅದರಂತೆ ಧನಂಜಯನೇ, ದೇಹದ ಅಭಿಮಾನವು ಇಲ್ಲದಂತಾಗಲೂ ಸಹ ಯಾವ ಕರ್ಮದಿಂದ ದೇಹವು ಉತ್ಪನ್ನವಾಗಿರುವುದೋ, ಆ ಕರ್ಮಗಳು ನಿರಿಚ್ಛೆಯಾಗಿ ದೇಹದಿಂದ ಆಗುತ್ತಲಿರುತ್ತವೆ ।೪೨೮॥

ಸಂಕಲ್ಪಗಳಿಲ್ಲದೇ ಸ್ವಪ್ನಗಳಾಗುವುವು. ಹಚ್ಚದೇ ಅರಣ್ಯದಲ್ಲಿ ಗಿಡಗಳು ಹುಟ್ಟುವುವು. ರಚಿಸದೇ ಆಕಾಶದಲ್ಲಿ ಗಂಧರ್ವನಗರ ಕಾಣುವುದು ।೪೨೯॥

ಅದರಂತೆ ಆತ್ಮದ ಸಂಕಲ್ಪ ಹೊರತಾಗಿಯೇ ದೇಹಾದಿ ಐದು ಕಾರಣಗಳು (ಹಿಂದೆ ಹೇಳಿದಂತೆ) ಕ್ರಿಯೆಗಳನ್ನು ಮಾಡಲು ಕಾರಣೀಭೂತಗಳಾಗುವುವು ।೪೩೦॥

ಆದರೆ ಪೂರ್ವ ಜನ್ಮದ ಸಂಸ್ಕಾರದಿಂದ ಐದು ಕಾರಣಗಳು ಮತ್ತು ಐದು ಉದ್ದೇಶಗಳು ಅನೇಕ ಕ್ರಿಯೆಗಳನ್ನು ಮಾಡಿಸುವುವು ।೪೩೧॥

ಆಗ ಆ ಕರ್ಮಗಳಿಂದ ಎಲ್ಲ ಜಗದ ಸಂಹಾರವಾಗಲಿ, ಅಥವಾ ಹೊಸ ಜಗವು ಉತ್ಪನ್ನವಾಗಲಿ ।೪೩೨॥

ಕುಮುದವು (ಚಂದ್ರವಿಕಾಸಿ ಕಮಲವು) ಹೇಗೆ ಒಣಗುವುದು, ಹಾಗೂ ಕಮಲಗಳ ಪ್ರಭೆಯು ಹೇಗೆ ಅರಳುವುದು ಎಂಬ ಈ ಎರಡು ತನ್ನಿಂದಾಗುವ ಪರಿಣಾಮಗಳನ್ನು ಸೂರ್ಯನಿಗೆ ಗೊತ್ತಿರುವುದಿಲ್ಲ ।೪೩೩॥

ಅಥವಾ ಆಕಾಶದಿಂದ ಸಿಡಿಲು ಬಿದ್ದು ಭೂಮಿಯು ತುಂಡು ತುಂಡಾಗಲಿ ಅಥವಾ ಮಳೆಯಾಗಿ ಭೂಮಿಯು ಹಚ್ಚಹಸಿರಾಗಲಿ ।೪೩೪॥

ಆದಾಗ್ಯೂ, ಈ ಎರಡನ್ನೂ ಆಕಾಶವು ಅರಿಯುವುದಿಲ್ಲ. ಅದರಂತೆ ಆತನು ದೇಹಾಭಿಮಾನ ರಹಿತನಾಗಿ ದೇಹದಲ್ಲಿಯೇ ವಾಸ ಮಾಡುವನು ।೪೩೫॥

ಸ್ವಪ್ನದಿಂದ ಎಚ್ಚೆತ್ತ ಮೇಲೆ ಮನುಷ್ಯನು ಸ್ವಪ್ನವನ್ನು ಹೇಗೆ ನೋಡುವುದಿಲ್ಲವೋ, ಅದರಂತೆ ಅವನು ದೇಹಾದಿಕರಿಂದ ಸೃಷ್ಟಿಯ ಉದ್ಭವವಾಯಿತು ಅಥವಾ ಲಯವಾಯಿತು ಎಂಬುವುದು ತಿಳಿಯಲಾರನು ।೪೩೬॥

ಯೇರ್ಥ್ವೀ ಚಾಮಾಚೇ ಡೋಳೇವರೀ । ಜೇ ದೇಖತೀ ದೇಹಚಿವರೀ । ತೇ ಕೀರ ತೋ ವ್ಯಾಪಾರೀ । ಐಸೇಂಚಿ ಮಾನಿತೀ ।।೪೩೭।। ಕಾ ತಣಾಚಾ ಬಾಹುಲಾ । ಜೋ ಆಗರಾಮೇರೆ ಠೇವಿಲಾ । ತೋ ಸಾಚಚಿ ರಾಖತಾ ಕೋಲ್ಹಾ । ಮಾನಿಜೇ ನಾ ?।।೪೩೮।। ಪಿಸೇ ನೇಸಲೇ ಕಾ ನಾಗವೇ । ಹೇ ಲೋಕೀ ಯೇಊನಿ ಜಾಣಾವೇ । ಠಾಣೋರಿಯಾಂಚೇ ಮವಾವೇ । ಆಣಿಕೀ ಘಾಯ ।।೪೩೯।। ಕಾ ಮಹಾಸತೀಚೇ ಭೋಗ । ದೇಖೇ ಕೀರ ಸಕಳ ಜಗ । ಪರೀ ತೇ ಆಗೀ ನಾ ಆಂಗ । ನಾ ಲೋಕು ದೇಖೇ ।।೪೪೦।। ತೈಸಾ ಸ್ವಸ್ವರೂಪೇ ಉಠಿಲಾ । ಜೋ ದ್ರಶ್ಯೇಂಸೀ ದೃಷ್ಟಾ ಆಟಲಾ । ತೋ ನೇಣೇ ಕಾಯ ರಾಹಟಲಾ । ಇಂದ್ರಿಯಗ್ರಾಮು ।।೪೪೧।। ಅಗಾ ಥೋರೀ ಕಲ್ಲೋಳೀ ಕಲ್ಲೋಳ ಸಾನೇ । ಲೋಪತಾ ತಿರೀಂಚೇನಿ ಜನೇ । ಏಕೀ ಏಕ ಗಿಳಿಲೇ ಹೇ ಮನೇ । ಮಾನಿಜೇ ಜರ್‍ಹಿ ।।೪೪೨।। ತರೀ ಉದಕಾಪ್ರತಿ ಪಾಹೀ । ಕೋಣ ಗ್ರಾಸಿತಸೇ ಕಾಈ । ತೈಸೇ ಪೂರ್ಣಾ ದುಜೇ ನಾಹೀ । ಜೇ ತೋ ಮಾರೀ ।।೪೪೩।। ಸುವರ್ಣಾಚಿಯಾ ಚಂಡಿಕಾ । ಸುವರ್ಣಶೂಳೇಂಚಿ ದೇಖಾ । ಸುವರ್ಣಾಚಿಯಾ ಮಹಿಖಾ । ನಾಶು ಕೇಲಾ ।।೪೪೪।। ತೋ ದೇವಲವಸಿಯಾ ಕಡಾ । ವ್ಯವಹಾರು ಗಮಲಾ ಪುಡಾ । ವಾಂಚೂನಿ ಶೂಳ ಮಹಿಷ ಚಾಮುಂಡಾ । ಸುವರ್ಣಚಿ ತೇ ।।೪೪೫।। ಪೈ ಚಿತ್ರೀಂಚೇ ಜಳ ಹುತಾಂಶು । ತೋ ದೃಷ್ಟೀಚಾಚೀ ಆಭಾಸು । ಪಟೀ ಆಗೀ ವೋಲಾಂಶು । ದೋನ್ಹೀ ನಾಹೀ ।।೪೪೬।। ಮುಕ್ತಾಚೇ ದೇಹ ತೈಸೇ । ಹಾಲತ ಸಂಸ್ಕಾರವಶೇ । ತೇ ದೇಖೋನಿ ಲೋಕ ಪಿಸೇ । ಕರ್ತಾ ಮ್ಹಣತೀ ।।೪೪೭।। ಆಣಿ ತಯಾ ಕರಣೇಯಾಆಂತು । ಘಡೋ ತಿಹೀ ಲೋಕಾ ಘಾತು । ಪರೀ ತೇಣೇ ಕೇಲಾ ಹೇ ಮಾತು । ಬೋಲೋ ನಯೇ ।।೪೪೮।। ಅಗಾ ಅಂಧಾರುಚಿ ದೇಖಾವಾ ತೇಜೇ । ಮಗ ತೋ ಫೇಡೀ ಹೇ ಬೋಲಿಜೇ । ತೈಸೇ ಜ್ಞಾನಿಯಾ ನಾಹೀ ದುಜೇ । ಜೇ ತೋ ಮಾರೀ ! ।।೪೪೯।। ಮ್ಹಣೌನಿ ತಯಾಚೀ ಬುದ್ಧೀ । ನೇಣೇ ಪಾಪಪುಣ್ಯಾಚೇ ಗಂಧೀ । ಗಂಗಾ ಮಿನಲಿಯಾ ನದೀ । ವಿಟಾಳು ಜೈಸಾ ।।೪೫೦।। ಆಗೀಸೀ ಆಗೀ ಝುಗಟಲಿಯಾ । ಕಾಯ ಪೋಳೇ ಧನಂಜಯಾ । ಕೀ ಶಸ್ತ್ರ ರುಪೇ ಆಪಣಯಾ । ಆಪಣಚೀ ।।೪೫೧।। ತೈಸೇ ಆಪಣಪಯಾಪರತೇ । ಜೋ ನೇಣೇ ಕ್ರಿಯಾಜಾತಾತೇ । ತೇಥ ಕಾಯ ಲಿಂಪವೀ ಬುದ್ಧೀತೇ । ತಯಾಚಿಯೇ ।।೪೫೨।।

ಹೀಗಿದ್ದರೂ, ಈತನು ದೇಹಿಯಾಗಿರುವನು ಎಂದು ಚರ್ಮ ಚಕ್ಷುವಿನಿಂದ ಕಾಣುವರು. ಈತನನ್ನು ಕರ್ಮ ಮಾಡುವವನು ಎಂದು ತಿಳಿಯುವರು ।।೫೩೭।।

ಹುಲ್ಲಿನ ಗೊಂಬೆಯನ್ನು ಮಾಡಿ ಹೊಲದ ದಂಡೆಗೆ ನಿಲ್ಲಿಸಿದಾಗ ನರಿಯು ಅದಕ್ಕೆ ಹೊಲ ಕಾಯುವವನು ಎಂದು ತಿಳಿಯುವುದಿಲ್ಲವೇ ? ।।೫೩೮।।

ಹುಚ್ಚ ಮನುಷ್ಯನು ಬಟ್ಟೆ ಧರಿಸಿರುವನೋ ಅಥವಾ ಬತ್ತಲೆ ಇರುವನೋ ಇದನ್ನು ಜನರೇ ತಿಳಿಯಬೇಕು. ಅಥವಾ ರಣದಲ್ಲಿ ಬಿದ್ದ ಮನುಷ್ಯನ ಗಾಯಗಳನ್ನು ಬೇರೆಯವರೇ ಎಣಿಸಬೇಕಾಗುವುದು ।।೫೩೯।।

ಅಥವಾ ಮಹಾಸತಿಯು ಸತಿ ಹೋಗುವ ಕಾಲಕ್ಕೆ ಆಕೆಯ ಸೌಭಾಗ್ಯ ಶೃಂಗಾರವನ್ನು ಬೇರೆ ಜನರೇ ನೋಡಬೇಕು. ಆಕೆಗೆ ಅಗ್ನಿ, ಜನ ಕಾಣಿಸುವುದಿಲ್ಲ. ( ಆಕೆಯು ಪತಿ ಸ್ವರೂಪದಲ್ಲಿ ತಲ್ಲೀನರಾಗಿರುವಳು) ।।೫೪೦।।

ಅದರಂತೆ ಆತ್ಮಸ್ವರೂಪದ ಪ್ರಾಪ್ತಿಯಿಂದ ನೋಡುವವ ಹಾಗೂ ನೋಡುವ ವಸ್ತು ಈ ಭಾವವು ಇಲ್ಲದಾಗಿರುವುದು. ಆತನು ಇಂದ್ರಿಯ ಸಮುದಾಯಗಳು ಯಾವ ಕಾರ್ಯ ಮಾಡಿದವು ಎಂಬುದನ್ನು ಅರಿಯನು ।।೫೪೧।।

ಅರೇ, ಸಮುದ್ರದ ದಂಡೆಯ ಮೇಲೆ ಇದ್ದ ಜನರಿಗೆ ದೊಡ್ಡ ತೆರೆಗಳು, ಸಣ್ಣ ತೆರೆಗಳನ್ನು ನುಂಗಿದಂತೆ ಕಾಣುವುವು ।।೫೪೨।।

ಆದರೆ ಉದಕದ ದೃಷ್ಟಿಯಿಂದ ನೋಡಲು ಹೋದರೆ ಯಾವ ತೆರೆಗಳು ಯಾವ ತೆರೆಗಳಿಗೆ ನುಂಗುವುವು? ಅದರಂತೆ ಪೂರ್ಣನಿಗೆ ಕರ್ಮಕ್ಕಾಗಿ ಬೇರೆ ಭಾವವಿರುವುದಿಲ್ಲ ।।೫೪೩।।

ಬಂಗಾರದ ದೇವಿಯು ಬಂಗಾರದ ತ್ರಿಶೂಲದಿಂದ ಬಂಗಾರದ ಮಹಿಷಾಸುರನನ್ನು ಸಂಹಾರ ಮಾಡಿದಳು ।।೫೪೪।।

ಈ ಎಲ್ಲ ಪ್ರಕಾರಗಳು ಭಕ್ತರ ದೃಷ್ಟಿಯಿಂದ ನಿಜ ಕಾಣಿಸುವುದು. ಆದರೆ ಬಂಗಾರದ ದೃಷ್ಟಿಯಿಂದ ನೋಡಲು ದೇವಿ, ತ್ರಿಶೂಲ, ಮಹಿಷಾಸುರ ಎಲ್ಲವೂ ಬಂಗಾರವೇ ಆಗಿವೆ ।।೫೪೫।।

ಹಾಗೆಯೇ ಗೋಡೆಯ ಮೇಲೆ ಬರೆದ ಚಿತ್ರದಲ್ಲಿ ಒಂದು ಕೆರೆ, ಇನ್ನೊಂದು ಉರಿಯುವ ಅಗ್ನಿ ಇವು ದೃಷ್ಟಿಯಿಂದ ಭೇದವಾಗಿ ಕಾಣಿಸುತ್ತವೆ. ಆದರೆ ಅವುಗಳಿಗೆ ವಸ್ತ್ರ ಮುಟ್ಟಿಸಿದರೆ ಸುಡುವುದೂ ಇಲ್ಲ. ತೋಯುವುದೂ ಇಲ್ಲ ।।೫೪೬।।

ಅದರಂತೆ ಜ್ಞಾನಿ ಪುರುಷನ ಕರ್ಮಗಳು ಪೂರ್ವ ಕರ್ಮಾನುಸಾರವಾಗಿ ನಡೆಯುತ್ತಿರುತ್ತವೆ. ಆದರೆ ಇದನ್ನು ತಿಳಿಯದೆ ಮೂರ್ಖ ಜನರು ಆತನಿಗೆ ಕರ್ಮ ಕರ್ತನೆನ್ನುವರು ।।೫೪೭।।

ಮತ್ತು ಆತನು ಕರ್ಮ ಮಾಡುತ್ತಿರುವಾಗ ಮೂರು ಲೋಕಗಳ ಘಾತವಾದರೂ ಆತನು ಅದನ್ನು ಮಾಡಿದನು, ಎಂದು ಹೇಳಬಾರದು ।।೫೪೮।।

ಅರೇ, ಸೂರ್ಯನು ಕತ್ತಲನ್ನು ನೋಡಬೇಕು ಮತ್ತು ಆಗ ಆತನನ್ನು ದೂರ ಮಾಡಬೇಕು ಎಂಬ ಹೇಳಿಕೆಯಂತೆ, ಜ್ಞಾನಿಗೆ ಇನ್ನೊಂದು ವಸ್ತುವೇ ಇರದಾಗ ಬೇರೆ ಏನನ್ನು ನಾಶ ಮಾಡುವನು ? ।।೫೪೯।।

ಆದ್ದರಿಂದ ಆತನ ಬುದ್ಧಿಗೆ ಪಾಪ ಹಾಗೂ ಪುಣ್ಯಗಳ ಗಂಧವೂ ಇರುವುದಿಲ್ಲ. ಯಾವುದೋ ನದಿಯು ಗಂಗಾ ನದಿಯನ್ನು ಕೂಡಿಕೊಂಡಾಗ ಅದರ ಅಪವಿತ್ರತೆಯು ಇಲ್ಲದಾಗುವುದು ।।೫೫೦।।

ಧನಂಜಯನೇ, ಅಗ್ನಿಯ ಮೇಲೆ ಅಗ್ನಿ ಬೀಳಲು ಅದು ಸುಟ್ಟುಕೊಳ್ಳುವುದೇ ? ಅಥವಾ ಶಸ್ತ್ರವು ತನ್ನನ್ನು ತಾನೇ ಇರಿದುಕೊಳ್ಳಬಹುದೇ ? ।।೫೫೧।।

ಅದರಂತೆ ತನ್ನ ಸ್ವರೂಪದಿಂದ ಯಾವ ಕರ್ಮವೂ ಭಿನ್ನವಿಲ್ಲವೆಂದು ತಿಳಿದವನಿಗೆ ಯಾವ ಪದಾರ್ಥದಿಂದ ಆತನ ಬುದ್ಧಿಯು ಲಿಪ್ತವಾದೀತು ? ।।೫೫೨।।

ಮ್ಹಣೌನಿ ಕಾರ್ಯ ಕರ್ತಾ ಕ್ರಿಯಾ । ಹೇ ಸ್ವರೂಪಚಿ ಜಾಹಾಲೇ ಜಯಾ । ನಾಹೀ ಶರೀರಾದಿಕೀ ತಯಾ । ಕರ್ಮೀ ಬಂಧು ।೪೫೩॥ ಜೇ ಕರ್ತಾ ಜೀವ ವಿಂದಾಣೇ । ಕಾಢೂನಿ ಪಾಂಚಹೀ ಖಾಣೇ । ಘಡಿತ ಆಹೇ ಕರಣೇ । ಆಉತೀ ದಾಹೇ ।೪೫೪॥ ತೇಥ ನ್ಯಾವೋ ಆಣೇ ಅನ್ಯಾವೋ । ಹಾ ದ್ವಿವಿಧು ಸಾಧೂನಿ ಆವೋ । ಉಭವಿತಾ ನ ಲವೀ ಖೇಂವೋ । ಕರ್ಮಭುವನೇ ।೪೫೫॥ ಯಾ ಥೋರಾಡಾ ಕೀರ ಕಾಮಾ । ವಿರಜಾ ನೋಹೇ ಆತ್ಮಾ । ಪರೀ ಮ್ಹಣಸೀ ಹನ ಉಪಕ್ರಮಾ । ಹಾತು ಲಾವೀ ।೪೫೬॥ ತೋ ಸಾಕ್ಷೀ ಚಿದ್ರುಪು । ಕರ್ಮ ಪ್ರವೃತ್ತೀಚಾ ಸಂಕಲ್ಪು । ಉಠೀ ತೋ ಕಾ ನಿರೋಪು । ಆಪಣಚಿ ದೇ ? ।೪೫೭॥ ತರೀ ಕರ್ಮಪ್ರವೃತ್ತೀಹೀಲಾಗೀ । ತಯಾ ಆಯಾಸು ನಾಹೀ ಆಂಗೀ । ಜೇ ಪ್ರವೃತ್ತೀಚೇಹೀ ಉಳಿಗೀ । ಲೋಕುಚಿ ಆಥೀ ।೪೫೮॥ ಮ್ಹಣೌನಿ ಆತ್ಮ ಯಾಚೇ ಕೇವಳ । ಜೋ ರೂಪಚಿ ಜಾಹಲಾ ನಿಖಿಳ । ತಯಾ ನಾಹೀ ಬಂದಿಶಾಳ । ಕರ್ಮಾಚೀ ಹೇ ।೪೫೯॥ ಪರೀ ಅಜ್ಞಾನಾಚ್ಯಾ ಪಟೀ । ಅನ್ಯಥಾ ಜ್ಞಾನಾಜೇ ಚಿತ್ರ ಉಠೀ । ತೇಥ ಚಿತಾರಣೇ ಹೇ ತ್ರಿಪುಟೀ । ಪ್ರಸಿದ್ಧ ಜೇ ಕಾ ।೪೬೦॥

ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ ।
ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ।೧೮॥

ಜೇ ಜ್ಞಾನ ಜ್ಞಾತಾ ಜ್ಞೇಯ । ಹೇ ಜಗಾಚೇ ಬೀಜ ತ್ರಯ । ತೇ ಕರ್ಮಾಚೇ ನಿಃಸಂದೇಹ । ಪ್ರವೃತ್ತಿ ಜಾಣ ।೪೬೧॥ ಆತಾ ಯಯಾಚಿ ಗಾ ತ್ರಯಾ । ವ್ಯಕ್ತೀ ವೇಗಳಾಲಿಯಾ । ಆಇಕೇ ಧನಂಜಯಾ । ಕರೂ ರೂಪ ।೪೬೨॥ ತರೀ ಜೀವ ಸೂರ್ಯಬಿಂಬಾಚೇ । ರಶ್ಮೀ ಶ್ರೋತ್ರಾದಿಕೇ ಪಾಂಚೇ । ಧಾಂವೋನಿ ವಿಷಯ ಪದ್ಮಾಚೇ । ಫೋಡಿತೀ ಮಢ ।೪೬೩॥ ಕೀ ಜೀವನೃಪಾಚಿ ವಾರೂ ಉಗಲಾಣೇ । ಘೇಊನಿ ಇಂದ್ರಿಯಾಂಚೀ ಕೇಂಕಾಣೇ । ವಿಷಯದೇಶೀಂಚೇ ನಾಗವಣೇ । ಆಣೀತ ಜೇ ।೪೬೪॥ ಹೇ ಅಸೋ ಇಹೀ ಇಂದ್ರಿಯೀ ರಾಹಾಟೇ । ಜೇ ಸುಖದುಃಖೇಂಸೀ ಜೀವಾ ಭೇಟೇ । ತೇ ಸುಷುಪ್ತಿ ಕಾಲೀ ವೋಹಟೇ । ಜೇಥ ಜ್ಞಾನ ।೪೬೫॥ ತಯಾ ಜೀವಾ ನಾಂವ ಜ್ಞಾತಾ । ಆಣಿ ಜೇ ಹೇ ಸಾಂಗಿತಲೇ ಆತಾ । ತೇಂಚಿ ಏಥ ಪಂಡುಸುತಾ । ಜ್ಞಾನ ಜಾಣ ।೪೬೬॥ ಜೇ ಅವಿದ್ಯೇಚಿಯೇ ಪೋಟೀ । ಉಪಜತ ಖೇಂವೋ ಕಿರೀಟೀ । ಆಪಣಯಾತೇ ವಾಂಟೀ । ತಿಹೀ ಠಾಯೀ ।೪೬೭॥

ಆದ್ದರಿಂದ ಯಾವ ಕಾರ್ಯ, ಕರ್ತಾ ಹಾಗೂ ಕ್ರಿಯಾ ಈ ತ್ರಿಪುಟಿಯನ್ನು ತಾನೇ ಆಗಿರುವನು. ಆತನು ಶರೀರಾದಿಕದಿಂದ ಆಗುವ ಕರ್ಮಗಳಿಂದ ಬದ್ಧನಾಗುವುದಿಲ್ಲ ।।೫೫೩।।

ಕಾರಣ ಜೀವಾತ್ಮನು ದೊಡ್ಡಸ್ಥಿತಿಯಿಂದ ತನ್ನನ್ನು ಕರ್ತನು ಎಂದು ತಿಳಿದು ಹತ್ತು ಇಂದ್ರಿಯಗಳ ಸಾಧನೆಗಳಿಂದ ಐದು ಉದ್ದೇಶಗಳನ್ನು ಧರಿಸುವನು ।।೫೫೪।।

ಮತ್ತು ಅಲ್ಲಿ ನ್ಯಾಯ ಮತ್ತು ಅನ್ಯಾಯ ಹೀಗೆ ಎರಡು ಪ್ರಕಾರದ ಕರ್ಮಗಳನ್ನು ಮಾಡಿ ಕ್ಷಣದಲ್ಲಿಯೇ ಕರ್ಮದ ಭುವನಗಳನ್ನು ತಯಾರಿಸುವನು ।।೫೫೫।।

ಆದರೆ, ಈ ದೊಡ್ಡ ಕಾರ್ಯಕ್ಕೆ ಆತ್ಮನು ಸಹಾಯ ಕರ್ತನು ಅಲ್ಲ ಹಾಗೂ ಆತನು ಆರಂಭಿಸುವನು ಎಂದು ಹೇಳಲು ಬೇಡ ।।೫೫೬।।

ಆತನು ಸಾಕ್ಷಿಭೂತನು ಹಾಗೂ ಜ್ಞಾನಸ್ವರೂಪನಿರುವನು. ಅಂದಮೇಲೆ ಕರ್ಮಪ್ರವೃತ್ತಿಯ ಯಾವ ಹುಟ್ಟುವ ಸಂಕಲ್ಪಕ್ಕೆ ಆತನು ಏಕೆ ಅಜ್ಞಾಪಿಸುವನು? ।।೫೫೭।।

ಅಂತೆಯೇ ಕರ್ಮ ಪ್ರವೃತ್ತಿಯ ವಿಷಯದಲ್ಲಿ ದೇಹಬುದ್ಧಿಯ ಜನರಿಗೆ ಶ್ರಮವಾಗುವಂತೆ ಈತನ ಶರೀರಕ್ಕೆ ಶ್ರಮವಾಗುವುದಿಲ್ಲ ।।೫೫೮।।

ಆದ್ದರಿಂದ ಯಾವನು ಕೇವಲ ಶುದ್ಧ ಆತ್ಮಸ್ವರೂಪನಾಗಿರುವನೋ, ಆತನಿಗೆ ಈ ಕರ್ಮದ ಸೆರೆ ಮನೆ ಇರುವುದಿಲ್ಲ ।।೫೫೯।।

ಆದಾಗ್ಯೂ, ಅಜ್ಞಾನದ ವಸ್ತ್ರದ ಮೇಲೆ ದ್ವೈತಜ್ಞಾನದ ಚಿತ್ರವನ್ನು ಮೂಡಿಸಿದ್ದು, ಅಲ್ಲಿ ಚಿತ್ರ, ಚಿತ್ರ ಮೂಡಿಸುವವ ಹಾಗೂ ಚಿತ್ರಪಟ ಈ ತ್ರಿಪುಟ ಸ್ಪಷ್ಟವಾಗಿದೆ. ಅದನ್ನು ಹೇಳುವೆ ।।೫೬೦।।

ಶ್ಲೋಕಾರ್ಥ :- ಜ್ಞಾನ, ಜ್ಞೇಯ, ಪರಿಜ್ಞಾತಾ; ಈ ಮೂರು ಮನುಷ್ಯನನ್ನು ಕರ್ಮದಲ್ಲಿ ಪ್ರೇರೆಪಿಸುವ ವಸ್ತುಗಳು (ಇದೇ ಕರ್ತೃಕೂಟ) ಕಾರಣ, ಕರ್ಮ, ಕರ್ತೃ; ಈ ಮೂರು ಕರ್ಮ ನಿರ್ವಹಣಕ್ಕೆ ಆಶ್ರಯಗಳು (ಇದು ಭೋಕ್ತೃಕೂಟ) ।।೧೮।।

ಜ್ಞಾನ, ಜ್ಞಾತಾ ಹಾಗೂ ಜ್ಞೇಯ ಈ ತ್ರಿಪುಟಿಯು ಜಗತ್ತಿಗೆ ಕಾರಣೀಭೂತವಾಗಿದ್ದು, ಇದರಿಂದ ನಿಃಸಂಶಯವಾಗಿ ಕರ್ಮದ ಪ್ರವೃತ್ತಿಯಾಗುವುದು. ಹೀಗೆ ತಿಳಿ ।।೫೬೧।।

ಹೇ ಧನಂಜಯನೇ, ಈಗ ಈ ತ್ರಿಪುಟಿಗಳ ಬೇರೆ ಬೇರೆ ರೂಪಗಳನ್ನು ಸ್ಪಷ್ಟ ಮಾಡಿ ಹೇಳುವೆನು, ಅದನ್ನು ಕೇಳು ।।೫೬೨।।

ಅದೇನೆಂದರೆ, ಜೀವರೂಪ ಸೂರ್ಯಬಿಂಬದ ಜ್ಞಾನೇಂದ್ರಿಯಾದಿ ಪಂಚೇಂದ್ರಿಯರೂಪ ಕಿರಣಗಳು ವಿಷಯರೂಪ ಕಮಲದ ಮೊಗ್ಗಿಯ ಮೇಲೆ ಬಿದ್ದು ಅರಳಿಸುವುವು ।।೫೬೩।।

ಅಥವಾ ಜೀವರೂಪ ಅರಸನು ಶರೀರರೂಪ ಬತ್ತಲೆ ಕುದುರೆಯನ್ನೇರಿ ಇಂದ್ರಿಯರೂಪ ಶಸ್ತ್ರಗಳೊಂದಿಗೆ ವಿಷಯರೂಪ ದೇಶದಿಂದ ಸುಲಿಗೆ ಮಾಡುವನು ।।೫೬೪।।

ಇದು ಇರಲಿ, ಇಂದ್ರಿಯ ದ್ವಾರಗಳಿಂದ ವ್ಯವಹರಿಸಿ, ಜೀವಕ್ಕೆ ಸುಖ, ದುಃಖಗಳ ಅನುಭವವನ್ನುಂಟು ಮಾಡುವ ಜ್ಞಾನವು ಗಾಢನಿದ್ರೆಯಲ್ಲಿ ಲಯ ಹೊಂದುವುದು ।।೫೬೫।।

ಪಂಡುಸುತನೇ, ಆ ಜೀವಕ್ಕೆ ಜ್ಞಾತಾ ಎಂದು ಹೇಳುವರು ಮತ್ತು ಯಾವುದನ್ನು ಈಗ ಹೇಳಿದೆಯೋ ಅದಕ್ಕೆ ಜ್ಞಾನವೆಂದು ಹೇಳುವರು. ಹೀಗೆ ನೀನು ತಿಳಿ ।।೫೬೬।।

ಕಿರೀಟಿಯೇ, ಯಾವುದು ಅಜ್ಞಾನದ ಉದರದಲ್ಲಿ ಹುಟ್ಟಿದಾಕ್ಷಣಕ್ಕೆ ತನ್ನನ್ನು ಮೂರುಸ್ಥಳಗಳಲ್ಲಿ ಭಾಗವನ್ನಾಗಿ ಮಾಡಿಕೊಳ್ಳುವುದು ।।೫೬೭।।

ಆಪುಲಿಯೇ ಧಾಂವೇ ಪುಢಾ । ಘಾಲೂನಿ ಜ್ಞೇಯಾಚಾ ಗುಂಡಾ । ಉಭಾರೀ ಮಾಗಿಲೀ ಕಡಾ । ಜ್ಞಾತೃತ್ವಾತೇ ।।೪೬೮।। ಮಗ ಜ್ಞಾತಯಾ ಜ್ಞೇಯಾ ದೋಘಾ । ತೋ ನಾಂದಣುಕೇಚಾ ಬಗಾ । ಮಾಜೀ ಜಾಲೇನಿ ಪೈಗಾ । ವಾಹೇ ಜೇಣೇ ।।೪೬೯।। ಠಾಕೂನಿ ಜ್ಞೇಯಾಚೀ ಶಿಂವ । ಪುರೇ ಜಯಾಚೀ ಧಾಂವ । ಸಕಳ ಪದಾರ್ಥಾ ನಾಂವ । ಸೂತಸೇ ಜೇ ।।೪೭೦।। ತೇ ಗಾ ಸಾಮಾನ್ಯ ಜ್ಞಾನ । ಯಾ ಬೋಲಾ ನಾಹೀ ಆನ । ಜ್ಞೇಯಾಚೇಂಹೀ ಚಿನ್ಹ । ಆಇಕ ಆತಾ ।।೪೭೧।। ತರೀ ಶಬ್ದ ಸ್ಪರ್ಶು । ರೂಪ ಗಂಧ ರಸು । ಹಾ ಪಂಚವಿಧ ಆಭಾಸು । ಜ್ಞೇಯಾಚಾ ತೋ ।।೪೭೨।। ಜೈಸೇ ಏಕೇಚಿ ಚೂತಫಳೇ । ಇಂದ್ರಿಯಾ ವೇಗಳವೇಗಳೇ । ರಸೇ ವರ್ಣೇ ಪರಿಮಳೇ । ಭೇಟಿಜೇ ಸ್ಪರ್ಶೇ ।।೪೭೩।। ತೈಸೇ ಜ್ಞೇಯ ತರೀ ಏಕಸರೇ । ಪರೀ ಜ್ಞಾನ ಇಂದ್ರಿಯದ್ವಾರೇ । ಘೇ ಮ್ಹಣೌನಿ ಪ್ರಕಾರೇ । ಪಾಂಚೇ ಜಾಲೇ ।।೪೭೪।। ಆಣಿ ಸಮುದ್ರೀ ವೋಘಾಚೇ ಜಾಣೇ । ಸರೇ ಲಾಣೇಪಾಸೀ ಧಾಂವಣೇ । ಕಾ ಫಳೀ ಸರೇ ವಾಢಣೇ । ಸಸ್ಯಾಚೇ ಜೇವೀ ।।೪೭೫।। ತೈಸೇ ಇಂದ್ರಿಯಾಂಚ್ಯಾ ವಾಹವಟೀ । ಧಾಂವತಯಾ ಜ್ಞಾನಾ ಜೇಥ ಠೀ । ಹೋಯ ತೇ ಗಾ ಕಿರೀಟೀ । ವಿಷಯ ಜ್ಞೇಯ ।।೪೭೬।। ಏವಂ ಜ್ಞಾತಯಾ ಜ್ಞಾನಾ ಜ್ಞೇಯಾ । ತೀಹೀ ರೂಪ ಕೇಲೇ ಧನಂಜಯಾ । ಹೇ ತ್ರಿವಿಧಿ ಸರ್ವ ಕ್ರಿಯಾ । ಪ್ರವೃತ್ತಿ ಜಾಣ ।।೪೭೭।। ಜೇ ಶಬ್ದಾದಿ ವಿಷಯ । ಹೇ ಪಂಚವಿಧ ಜೇ ಜ್ಞೇಯ । ತೇಂಚಿ ಪ್ರಿಯ ಕಾ ಅಪ್ರಿಯ । ಏಕೇಪರೀಚೇ ।।೪೭೮।। ಜ್ಞಾನ ಮೋಟಕೇ ಜ್ಞಾತಯಾ । ದಾವೀ ನಾ ಜಂವ ಧನಂಜಯಾ । ತಂವ ಸ್ವೀಕಾರಾ ಕೀ ತ್ಯಜಾವಯಾ । ಪ್ರವರ್ತೇಚಿ ತೋ ।।೪೭೯।। ಪರೀ ಮೀನಾತೇ ದೇಖೋನಿ ಬಕು । ಜೈಸಾ ನಿಧಾನಾತೇ ರಂಕು । ಕಾ ಸ್ತ್ರೀ ದೇಖೋನಿ ಕಾಮುಕು । ಪ್ರವೃತ್ತಿ ಧರೀ ।।೪೮೦।। ಜೈಸೇ ಖಾಲಾಂಬಾ ಧಾಂವೇ ಪಾಣೀ । ಭ್ರಮರ ಪುಷ್ಪಾಚಿಯೇ ಘಾಣೀ । ನಾನಾ ಸುಟಲಾ ಸಾಂಜವಣೀ । ವತ್ಸುಚಿ ಪಾ ।।೪೮೧।। ಅಗಾ ಸ್ವರ್ಗೀಚೀ ಉರ್ವಶೀ । ಐಕೋನಿ ಜೇವೀ ಮಾಣುಸೀ । ವಾರತ್ಯಾ ಲಾವೀಜತೀ ಆಕಾಶೀ । ಯಾಗಾಂಚಿಯಾ ।।೪೮೨।। ಪೈ ಪಾರಿವಾ ಜೈಸಾ ಕಿರೀಟೀ । ಚಢಲಾ ನಭಾಚಿಯೇ ಪೋಟೀ । ಪಾರವೀ ದೇಖೋನಿ ಲೋಟೀ । ಅಂಗಚಿ ಸಗಳೇ ।।೪೮೩।। ಹೇ ನಾ ಘನಗರ್ಜನಾ ಸರಿಸಾ । ಮಯೂರ ವೋವಾಂಡೇ ಆಕಾಶಾ । ಜ್ಞಾತಾ ಜ್ಞೇಯ ದೇಖೋನಿ ತೈಸಾ । ಧಾಂವಚಿ ಘೇ ।।೪೮೪।।

ತನ್ನ ವೃತ್ತಿ ಮುಂದೆ ತಿಳಿಯುವ ವಿಷಯರೂಪ ಜ್ಞೇಯದ ಕಲ್ಲನ್ನು ಹಾಕಿ ತನ್ನ ಹಿಂದಿನ ಭಾಗದಲ್ಲಿ ಜ್ಞಾತಾನಿಗೆ ನಿಲ್ಲಿಸುವುದು ।೫೬೮॥

ಆಗ ಜ್ಞಾತಾ ಹಾಗೂ ಜ್ಞೇಯ ಈ ಎರಡರ ಮಧ್ಯದಲ್ಲಿ ವ್ಯವಹಾರವಾಗುತ್ತಿದ್ದಾಗ ಜ್ಞಾನವು ಮಧ್ಯದಲ್ಲಿರುವುದು ।೫೬೯॥

ಜ್ಞೇಯಕ್ಕೆ ಹೋಗಿ ಮುಟ್ಟಿಕೊಂಡಾಗ ಅದರ ಧಾವಿಸುವಿಕೆಯು ನಿಲ್ಲುವುದು, ಹಾಗೂ ಎಲ್ಲ ಪದಾರ್ಥ ಗಳಿಗೆ ಹೆಸರಿಡುವುದು ।೫೭೦॥

ಅದಕ್ಕೆ ಸಾಮಾನ್ಯ ಜ್ಞಾನವೆಂದು ಹೇಳುವರು, ಇದರಲ್ಲಿ ಸಂಶಯವಿಲ್ಲ. ಈಗ ಜ್ಞೇಯದ ಲಕ್ಷಣಗಳನ್ನು ಹೇಳುವೆನು ಕೇಳು ।೫೭೧॥

ಏನೆಂದರೆ, ಶಬ್ದ, ಸ್ಪರ್ಶ, ರೂಪ, ರಸ ಹಾಗೂ ಗಂಧ ಇವು ಜ್ಞೇಯದ ಐದು ಪ್ರಕಾರದ ಧರ್ಮವಾಗಿರುವುವು ।೫೭೨॥

ಒಂದೇ ಮಾವಿನ ಹಣ್ಣು ದೃಷ್ಟಿಗೆ ಬಿದ್ದಾಗ ಐದು ಇಂದ್ರಿಯಗಳಿಗೆ ಬೇರೆ ಬೇರೆಯಾಗಿ ಭಾಸವಾಗುವುದು. ಹಣ್ಣು ಈ ಶಬ್ದ ಕಿವಿಗೆ ತಿಳಿಯುವುದು, ರಸದಿಂದ ನಾಲಿಗೆಗೆ, ಬಣ್ಣದಿಂದ ಕಣ್ಣಿಗೆ, ವಾಸನೆಯಿಂದ ಮೂಗಿಗೆ, ಸ್ಪರ್ಶದಿಂದ ಚರ್ಮಕ್ಕೆ ತಿಳಿಯುವುದು ।೫೭೩॥

ಇದರಂತೆ ಜ್ಞೇಯವು ಒಂದೇಯಾಗಿರುವುದು. ಆದರೆ ತನ್ನ ಇಂದ್ರಿಯಗಳಿಂದ ಅವುಗಳ ವಿಷಯದಲ್ಲಿ ಬೇರೆ ಬೇರೆ ಜ್ಞಾನವು ಉತ್ಪನ್ನವಾಗುವುದು. ಆದ್ದರಿಂದ ಐದು ಪ್ರಕಾರಗಳಾಗಿದೆ ।೫೭೪॥

ಸಮುದ್ರಕ್ಕೆ ಕೂಡಿದಾಗ ನದಿಯ ಪ್ರವಾಹವು ಮುಗಿಯುವುದು, ಮುಕ್ಕಾಮಕ್ಕೆ ಮುಟ್ಟಿದಾಗ ನಡೆಯುವುದು ನಿಲ್ಲುವುದು, ಅಥವಾ ಫಲಬಂದಾಗ ಸಸ್ಯಗಳ ಬೆಳೆ ನಿಲ್ಲುವುದು ।೫೭೫॥

ಇದರಂತೆಯೇ ಕಿರೀಟಿಯೇ, ಇಂದ್ರಿಯಗಳ ಮಾರ್ಗ ದಲ್ಲಿ ಧಾವಿಸುತ್ತಿರುವ ಜ್ಞಾನದ ಕೊನೆಯು ಎಲ್ಲಾಗು ವುದೋ, ಆ ವಿಷಯಕ್ಕೆ ಜ್ಞೇಯವೆಂದು ಹೇಳುವರು ।೫೭೬॥

ಈ ಪ್ರಕಾರವಾಗಿ ಧನಂಜಯನೇ, ಜ್ಞಾತಾ, ಜ್ಞಾನ ಹಾಗೂ ಜ್ಞೇಯಗಳ ಲಕ್ಷಣಗಳನ್ನು ನಿನಗೆ ಹೇಳಿದೆನು. ಈ ತ್ರಿಪುಟಿಯು ಮೂರು ಪ್ರಕಾರದ ಎಲ್ಲ ಕರ್ಮಗಳಿಗೆ ಕಾರಣೀಭೂತವಾಗಿದೆ ।೫೭೭॥

ಕಾರಣ ಶಬ್ದಾದಿ ಐದು ವಿಷಯಗಳು ಇವೇ ಜ್ಞೇಯ ವಾಗಿದೆ ಮತ್ತು ಅದೇ ಪ್ರಿಯ ಇಲ್ಲವೇ ಅಪ್ರಿಯಗಳಲ್ಲಿ ಯಾವುದಾದರೂ ಒಂದು ಇರುವುದು ।೫೭೮॥

ಧನಂಜಯನೇ, ಜ್ಞಾನವು ಜ್ಞಾತಾನಿಗೆ ಜ್ಞೇಯ ಪದಾರ್ಥಗಳನ್ನು ಕಿಂಚಿತವಾಗಿ ತೋರಿಸುವುದು. ಅದನ್ನು ಸ್ವೀಕರಿಸುವುದು ಅಥವಾ ಬಿಡುವುದು ಜ್ಞಾತಾನು ಪ್ರವರ್ತನಾಗುವನು ।೫೭೯॥

ಆದರೆ ಮೀನನ್ನು ನೋಡಿದಾಕ್ಷಣವೇ ಅದನ್ನು ಹಿಡಿಯಲು ಬಕಪಕ್ಷಿಯು ಧಾವಿಸುವುದು, ಅಥವಾ ದ್ರವ್ಯದ ನಿಧಿ ನೋಡಿದಾಕ್ಷಣ ದರಿದ್ರನು ದಾವಿಸುವನು, ಸ್ತ್ರೀ ಕಂಡಾಕ್ಷಣಕ್ಕೆ ಕಾಮುಕನು ಆಕೆಯ ಪ್ರಾಪ್ತಿಗಾಗಿ ಪ್ರವೃತ್ತನಾಗುವನು ।೫೮೦॥

ನೀರು ಇಳಿಜಾರಿನಲ್ಲಿ ಧಾವಿಸುವುದು, ಭ್ರಮರವು ಹೂವಿನ ವಾಸನೆಗೆ ಧಾವಿಸುವುದು, ಅಥವಾ ಹಿಂಡುವಾಗ ಕರುವು ಆಕಳದತ್ತ ಧಾವಿಸುವುದು ।೫೮೧॥

ಅರೇ, ಸ್ವರ್ಗದಲ್ಲಿನ ಊರ್ವಶಿ ಅಪ್ಸರೆಯ ವರ್ಣನೆ ಯನ್ನು ಕೇಳಿ ಆಕೆಯನ್ನು ಉಪಭೋಗಿಸಲು ಜನರು ಆಕಾಶಕ್ಕೆ ಯಜ್ಞರೂಪ ನಿಚ್ಚಣಿಕೆಯನ್ನು ಹಚ್ಚುವರು ।೫೮೨॥

ಕಿರೀಟಿಯೇ, ಗಂಡು ಪಾರಿವಾಳ ಪಕ್ಷಿಯು ಆಕಾಶ ದಲ್ಲಿ ಹಾರಾಡುತ್ತಿರುವಾಗ ಹೆಣ್ಣು ಪಾರಿವಾಳವನ್ನು ನೋಡಿದಾಕ್ಷಣವೇ ಒಮ್ಮೆಲೇ ಅದರತ್ತ ಹಾರಿ ಬರುವುದು ।೫೮೩॥

ಇಷ್ಟೇ ಅಲ್ಲ, ಮೇಘದ ಗರ್ಜನೆಯಾದಾಕ್ಷಣವೇ ನವಿಲು ತನ್ನನ್ನು ಆಕಾಶದ ಮೇಲಿಂದ ನಿವಾಳಿಸಿ ಒಗೆಯು ವುದು. ಅದರಂತೆ ಜ್ಞಾತಾನು ಜ್ಞೇಯಕ್ಕೆ (ವಿಷಯಕ್ಕೆ) ನೋಡಿ ಜಗಿಯುವನು ।೫೮೪॥

ಮ್ಹಣೌನಿ ಜ್ಞಾನ ಜ್ಞೇಯ ಜ್ಞಾತಾ । ಹೇ ತ್ರಿವಿಧ ಗಾ ಪಂಡುಸುತಾ । ಹೋಯಚಿ ಕರ್ಮಾ ಸಮಸ್ತಾ । ಪ್ರವೃತ್ತಿ ಯೇಥ ।।೪೮೫।। ಪರೀ ತೇಂಚಿ ಜ್ಞೇಯ ವಿಷಾಯೇ । ಜರೀ ಜ್ಞಾತಯಾತೇ ಪ್ರಿಯ ಹೋಯೇ । ತರೀ ಭೋಗಾವಯಾ ನ ಸಾಹೇ । ಕ್ಷಣಹೀ ವಿಲಂಬು ।।೪೮೬।। ನಾತರೀ ಅವಚಟೇ । ತೇಂಚಿ ವಿರುದ್ಧ ಹೋಊನಿ ಭೇಟೇ । ತರೀ ಯುಗಾಂತ ವಾಟೇ । ಸಾಂಡಾವಯಾ ।।೪೮೭।। ವ್ಯಾಳಾ ಕಾ ಹಾರಾ । ವರಪಡಾ ಜಾಲೇಯಾ ನರಾ । ಹರಿಖು ಆಣಿ ದರಾರಾ । ಸರಸಾಚಿ ಉಠೀ ।।೪೮೮।। ತೈಸೇ ಜ್ಞೇಯ ಪ್ರಿಯಾಪ್ರಿಯೇ । ದೇಖಿಲೇನಿ ಜ್ಞಾತಯಾ ಹೋಯೇ । ಮಗ ತ್ಯಾಗ ಸ್ವೀಕಾರೀ ವಾಹೇ । ವ್ಯಾಪಾರಾತೇ ।।೪೮೯।।ತೇಥ ರಾಗೀ ಪ್ರತಿಮಲ್ಲಾ ಚಾ । ಗೋಸಾಂವೀ ಸರ್ವದಳಾಚಾ । ರಥು ಸಾಂಡೂನಿ ಪಾಯಾಂಚಾ । ಹೋಯ ಜೈಸಾ ।।೪೯೦।। ತೈಸೇ ಜ್ಞಾತೇಪಣೇ ಜೇ ಅಸೇ । ತೇ ಯೇ ಕರ್ತಾ ಐಸಿಯೇ ದಶೇ । ಜೇವಿತೇ ಬೈಸಲೇ ಜೈಸೇ । ರಂಧನ ಕರೂ ।।೪೯೧।। ಕಾ ಭವರೇಂಚಿ ಕೇಲಾ ಮಳಾ । ವರಕಲುಚಿ ಝಾಲಾ ಅಂಕಸಳಾ । ನಾನಾ ದೇವೋ ರಿಗಾಲಾ ದೇಉಳಾ । ಚಿಯಾ ಕಾಮಾ ।।೪೯೨।। ತೈಸಾ ಜ್ಞೇಯಾಚಿಯಾ ಹಾಂವಾ । ಜ್ಞಾತಾ ಇಂದ್ರಿಯಾಂಚಾ ಮೇಳಾವಾ । ರಾಹಾಟವೀ ತೇಥ ಪಾಂಡವಾ । ಕರ್ತಾ ಹೋಯ ।।೪೯೩।। ಆಣಿ ಆಪಣ ಹೋಉನಿ ಕರ್ತಾ । ಜ್ಞಾನಾ ಆಣಿ ಕರಣತಾ । ತೇಥೇ ಜ್ಞೇಯಚಿ ಸ್ವಭಾವತಾ । ಕಾರ್ಯ ಹೋಯ ।।೪೯೪।। ಐಸಾ ಜ್ಞಾನಾಚಿಯೇ ನಿಜಗತೀ । ಪಾಲಟು ಪಡೇ ಗಾ ಸುಮತೀ । ಡೋಳ್ಯಾಚೀ ಶೋಭಾ ರಾತೀ । ಪಾಲಟೇ ಜೈಸೀ ।।೪೯೫।। ಕಾ ಅದೃಷ್ಟ ಜಾಲಿಯಾ ಉದಾಸು । ಪಾಲಟೇ ಶ್ರೀಮಂತಾಚಾ ವಿಲಾಸು । ಪುನಿವೇಪಾಠೀ ಶೀತಾಂಸು । ಪಾಲಟೇ ಜೈಸಾ ।।೪೯೬।। ತೈಸಾ ಚಾಳಿತಾ ಕರಣೇ । ಜ್ಞಾತಾ ವೇಷ್ಟಿಜೇ ಕರ್ತೇಪಣೇ । ತೇಥೀಂಚೀ ತಿಯೇ ಲಕ್ಷಣೇ । ಐಕ ಆತಾ ।।೪೯೭।। ತರೀ ಬುದ್ಧಿ ಆಣಿ ಮನ । ಚಿತ್ತ ಅಹಂಕಾರ ಹನ । ಹೇ ಚತುರ್ವಿಧ ಚಿನ್ಹ । ಅಂತಃಕರಣಾಚೇ ।।೪೯೮।। ಬಾಹ್ಯ ತ್ವಚಾ ಶ್ರವಣ ।ಚಕ್ಷು ರಸನಾ ಘ್ರಾಣ । ಹೇ ಪಂಚವಿಧ ಜಾಣ । ಇಂದ್ರಿಯೇ ಗಾ ।।೪೯೯।। ತೇಥ ಆಂತುಲೇ ತಂವ ಕರಣೇ । ಕರ್ತಾ ಕರ್ತವ್ಯಾ ಘೇ ಉಮಾಣೇ । ಮಗ ತೈ ಜರೀ ಜಾಣೇ । ಸುಖಾ ಯೇತೇ ।೫೦೦।।

ಆದ್ದರಿಂದ ಹೇ ಪಂಡುಸುತನೇ, ಜ್ಞಾನ, ಜ್ಞೇಯ ಹಾಗೂ ಜ್ಞಾತಾ ಈ ತ್ರಿಪುಟಿಯು ಎಲ್ಲ ಕರ್ಮಗಳನ್ನು ಮಾಡುವುದಕ್ಕೆ ಕಾರಣೀಭೂತವಾಗುವುದು ।೮೮೫॥

ಮತ್ತು ಕದಾಚಿತ್ ಅದೇ ವಿಷಯವು ಜ್ಞಾತಾನಿಗೆ ಪ್ರಿಯವಾದರೆ ಆಗ ಆತನು ಅದನ್ನು ಭೋಗಿಸಲು ಕ್ಷಣವಾದರೂ ತಡಮಾಡುವುದಿಲ್ಲ ।೮೮೬॥

ಅಥವಾ ಅದೇ ವಿಷಯವು ಕದಾಚಿತ್ ಅಪ್ರಿಯ ವಾಗಿದ್ದರೆ ಅದನ್ನು ತ್ಯಾಗ ಮಾಡುವ ವಿಷಯದಲ್ಲಿ ಒಂದೊಂದು ಕ್ಷಣವು ಆತನಿಗೆ ಯುಗದಂತೆ ಭಾಸವಾಗುವುದು ।೮೮೭॥

ಸರ್ಪಕ್ಕೆ ನೀಲಮಣಿ ಎಂದು ಭಾವಿಸಿದಾಗ ಹರ್ಷವಾಗುವುದು. ಆಗ ಅದಕ್ಕೆ ಕೈಯಿಂದ ಮುಟ್ಟಿದಾಕ್ಷಣ ಸರ್ಪವೆಂದು ತಿಳಿದು ಭಯವಾಗುವುದು ।೮೮೮॥

ಅದರಂತೆ ಪ್ರಿಯ ಅಥವಾ ಅಪ್ರಿಯ ವಿಷಯಗಳನ್ನು ನೋಡಿದಾಗ ಜ್ಞಾತಾನ ಸ್ಥಿತಿಯಾಗುವುದು ಮತ್ತು ಆಗ ಅದರ ತ್ಯಾಗ, ಸ್ವೀಕಾರಕ್ಕಾಗಿ ಕರ್ಮವು ಉತ್ಪನ್ನವಾಗುವುದು ।೮೮೯॥

ಕುಸ್ತಿಯಾಡುವ ಆಸ್ತೆವುಳ್ಳವನಿಗೆ ಇನ್ನೊಬ್ಬ ಮಲ್ಲನು (ಪೈಲವಾನನು) ಎದುರಿಗೆ ಕಂಡಾಗ ತಾನು ಸೇನಾಪತಿ ಯಾಗಿದ್ದರೂ ರಥಬಿಟ್ಟು ಪಾದಚಾರಿಯಾಗುವನು ।೮೯೦॥

ಅದರಂತೆ ಜ್ಞಾತಾನು ವಿಷಯಾಸಕ್ತದಿಂದ ಕರ್ತಾ ಸ್ಥಿತಿ ಹೊಂದುವನು. ಎಲೆಯ ಮೇಲೆ ಕುಳಿತು ಸುಖವಾಗಿ ಊಟ ಮಾಡುವವನು ಅಡಿಗೆ ಮಾಡುವ ಕಷ್ಟಕ್ಕೆ ಗುರಿಯಾದಂತೆ ಆಗುವುದು ।೮೯೧॥

ಅಥವಾ ಭೃಂಗವು ಹೂದೋಟ ಮಾಡುವಂತೆ, (ಸರಾಫನು) ಚಿನಿವಾಲನು ತಾನೇ ಒರೆಗಲ್ಲಾದಂತೆ, ದೇವರೇ ದೇವಾಲಯವನ್ನು ಕಟ್ಟುವಂತೆ ।೮೯೨॥

ಪಾಂಡವಾ, ಅದರಂತೆ ವಿಷಯದ ಲೋಭದಿಂದ ಜ್ಞಾತಾ (ಜೀವನು) ಇಂದ್ರಿಯ ಸಮುದಾಯಗಳಿಗೆ ಕಾರ್ಯ ಮಾಡಲು ಹಚ್ಚುವನು, ಆಗ ಆತನು ಕರ್ತಾ ಆಗುವನು ।೮೯೩॥

ಮತ್ತು ಜ್ಞಾತಾ ಸ್ವತಃ ಕರ್ತನಾಗಿ, ಜ್ಞಾನಕ್ಕೆ ಸಾಧನೆ ತನವನ್ನು ತರುವನು. ಆಗ ಜ್ಞೇಯವು ಸ್ವಭಾವತಃವೇ ಕ್ರಿಯೆ ಫಲವಾಗುವುದು ।೮೯೪॥

ಹೇ ಸುಮತಿಯೇ, ಜ್ಞಾನದ ಸ್ವರೂಪ ಗತಿಗೆ ಈ ಪ್ರಕಾರವಾಗಿ ಬದಲಾಗುವುದು. ಕಣ್ಣಿನ ತೇಜವು ರಾತ್ರಿಯಲ್ಲಿ ಉಪಯೋಗವಾಗುವುದಿಲ್ಲ ।೮೯೫॥

ಅಥವಾ ದೈವವು ಪ್ರತಿಕೂಲವಾದಾಗ ಶ್ರೀಮಂತನ ವಿಲಾಸವು ಬದಲಾಗುವುದು. ಅಥವಾ ಪೌರ್ಣಿಮೆಯಾದ ನಂತರ ಚಂದ್ರನು ಬದಲಾಗುತ್ತ ಹೋಗುವನು ।೮೯೬॥

ಅದರಂತೆ ಇಂದ್ರಿಯಗಳ ಇಚ್ಛೆಯನ್ನು ಪೂರೈಸಲು ಜ್ಞಾತಾ ಕರ್ತಾದ ಅಭಿಮಾನದಲ್ಲಿ ಸಿಲುಕುವನು. ಆಗ ಆತನ ಲಕ್ಷಣಗಳನ್ನು ಹೇಳುವೆನು, ಕೇಳು ।೮೯೭॥

ಮನ, ಬುದ್ಧಿ, ಚಿತ್ತ ಹಾಗೂ ಅಹಂಕಾರ ಇವು ಅಂತಃಕರಣದ ಚತುರ್ವಿಧ ಚಿನ್ಹೆಗಳಾಗಿವೆ ।೮೯೮॥

ಮತ್ತು ತ್ವಚಾ, ಕಿವಿ, ಕಣ್ಣು, ನಾಲಿಗೆ ಹಾಗೂ ಮೂಗು ಹೀಗೆ ಐದು ಪ್ರಕಾರದ ಇಂದ್ರಿಯಗಳು ಇವೆ ।೮೯೯॥

ಅಲ್ಲಿ ಅಂತಃಕರಣದ ವೃತ್ತಿಯ ಯೋಗದಿಂದ ಜೀವಕ್ಕೆ ಕರ್ಮ ಮಾಡಲು ಸ್ಫುರಣ ಉಂಟಾಗುವುದು. ಆಗ ಈ ಕರ್ಮಗಳಿಂದ ಸುಖ ಪ್ರಾಪ್ತವಾದೀತೆಂದು ಅನಿಸುತ್ತದೆ ।೯೦೦॥

ತರೀ ಬಾಹೇರಿಲೇ ತಿಯೇಂಹೀ । ಚಕ್ಷುರಾದಿಕೇ ದಾಹಾಹೀ । ಉಠೌನಿ ಲವಲಾಹೀ । ವ್ಯಾಪಾರಾ ಸೂಯೇ ।೫೦೧॥ ಮಗ ತೋ ಇಂದ್ರಿಯಕದಂಬು । ಕರವಿಜೇ ತಂವ ರಾಬು । ಜಂವ ಕರ್ತವ್ಯಾಚಾ ಲಾಭು । ಹಾತಾಸಿ ಯೇ ।೫೦೨॥ ನಾ ತೇ ಕರ್ತವ್ಯ ಜರೀದುಃಖೇ । ಫಳೇಲ ಐಸೇ ದೇಖೇ । ತೋ ಲಾವೀ ತ್ಯಾಗ ಮುಖೇ । ತಿಯೇ ದಾಹಾಹೀ ।೫೦೩॥ ಮಗ ಫಿಟೆ ದುಃಖಾಚಾ ಠಾವೋ । ತಂವ ರಾಹಾಟವೀ ರಾತ್ರಿದಿವೋ । ಏಕಣವಾತೇ ಕಾ ರಾವೋ । ಜಯಾಪರೀ ।೫೦೪॥ ತೈಸೇನಿ ತ್ಯಾಗ ಸ್ವೀಕಾರಿ । ವಾಹಾತಾ ಇಂದ್ರಿಯಾಂಚೀ ಧುರೀ । ಜ್ಞಾತಯಾತೇ ಅವಧಾರೀ । ಕರ್ತಾ ಮ್ಹಣಿಪೇ ।೫೦೫॥ ಆಣಿ ಕರ್ತಯಾಚ್ಯಾ ಸರ್ವ ಕರ್ಮೀ । ಆಲುತಾಂಚಿಯಾ ಪರೀಕ್ಷಮೀ । ಮ್ಹಣೌನಿ ಇಂದ್ರಿಯಾಂತೇ ಆಮ್ಹೀ । ಕರಣೇ ಮ್ಹಣೋ ।೫೦೬॥ ಆಣಿ ಹೇಚಿ ಕರಣೇವರೀ । ಕರ್ತಾ ಕ್ರಿಯಾ ಜ್ಯಾ ಉಭಾರಿ । ತಿಯಾ ವ್ಯಾಪೇ ತೇ ಅವಧಾರೀ । ಕರ್ಮ ಯೇಥ ।೫೦೭॥ ಸೋನಾರಾಚಿಯಾ ಬುದ್ಧೀ ಲೇಣೇ । ವ್ಯಾಪೇ ಚಂದ್ರ ಕರೀ ಚಾಂದಣೇ । ಕ್ಯಾ ವ್ಯಾಪೇ ವೇಲ್ಹಾಳಪಣೇ । ವೇಲೀ ಜೈಸೀ ।೫೦೮॥ ನಾನಾ ಪ್ರಭಾ ವ್ಯಾಪೇ ಪ್ರಕಾಶು । ಗೋಡಿಯಾ ಇಕ್ಷುರಸು । ಹೇ ಅಸೋ ಅವಕಾಶು । ಆಕಾಶೀ ಜೈಸಾ ।೫೦೯॥ ತೈಸೇ ಕರ್ತಯಾಚಿಯಾ ಕ್ರಿಯಾ । ವ್ಯಾಪಲೇ ಜೇ ಧನಂಜಯಾ । ತೇ ಕರ್ಮ ಗಾ ಬೋಲಾವಯಾ । ಆನ ನಾಹೀ ।೫೧೦॥ ಏವಂ ಕರ್ತಾ ಕರ್ಮ ಕರಣ । ಯಾ ತಿಹೀಂಚೇಂಹೀ ಲಕ್ಷಣ । ಸಾಂಗಿತಲೇ ತುಜ ವಿಚಕ್ಷಣ । ಶಿರೋಮಣೀ ।೫೧೧॥ ಯೇಥ ಜ್ಞಾತಾ ಜ್ಞಾನ ಜ್ಞೇಯ । ಹೇ ಕರ್ಮಾಚೇ ಪ್ರವೃತ್ತಿತ್ರಯ । ತೈಸೇಂಚಿ ಕರ್ತಾ ಕರಣ ಕಾರ್ಯ । ಹಾ ಕರ್ಮಸಂಚಯೋ ।೫೧೨॥ ವನ್ಹೀ ಠೇವಿಲಾ ಅಸೇ ಧೂಮು । ಆಥೀ ಬೀಜೀ ಜೇವೀ ದ್ರುಮು । ಕಾ ಮನೀ ಜೋಡೇ ಕಾಮು । ಸದಾ ಜೈಸಾ ।೫೧೩॥ ತೈಸಾ ಕರ್ತಾ ಕ್ರಿಯಾ ಕರಣೆ । ಕರ್ಮಾಚೇ ಆಹೇ ಜಿಂತವಣೇ । ಸೋನೇ ಜೈಸೇ ಖಾಣೀ । ಸುವರ್ಣಾಚಿಯೇ ।೫೧೪॥ ಮ್ಹಣೌನಿ ಹೇ ಕಾರ್ಯ ಮೀ ಕರ್ತಾ । ಐಸೇ ಆಥಿ ಜೇಥ ಪಂಡುಸುತಾ । ತೇಥ ಆತ್ಮಾ ದೂರೀ ಸಮಸ್ತಾ । ಕ್ರಿಯಾಂಪಾಸೀ ।೫೧೫॥ ಯಾಲಾಗೀ ಪುಢತಪುಢತೀ । ಆತ್ಮಾ ವೇಗಳಾಚಿ ಸುಮತೀ । ಆತಾ ಅಸೋ ಹೇ ಕಿತೀ । ಜಾಣತಾಸಿ ತೂ ।೫೧೬॥

ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ ।
ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ ।೧೯॥

ಅದಕ್ಕಾಗಿ ನೇತ್ರಾದಿ ಹತ್ತು ಬಾಹ್ಯ ಇಂದ್ರಿಯಗಳಿಗೆ ಎಬ್ಬಿಸಿ ಅವುಗಳಿಗೆ ಆತನು ವ್ಯವಹರಿಸಲಿಕ್ಕೆ ಹಚ್ಚುವನು ।೫೦೧॥

ತದನಂತರ ಕರ್ಮದ ಫಲವು ದೊರೆಯುವವರೆಗೂ ಇಂದ್ರಿಯ ಸಮುದಾಯಗಳಿಗೆ ದಂಡಿಸುವನು ।೫೦೨॥

ಅಥವಾ ಒಂದುವೇಳೆ ಆ ಕರ್ಮಗಳಿಂದ ದುಃಖ ವಾದೀತೆಂದು ತಿಳಿದರೆ, ಆಗ ಆ ಕರ್ಮಗಳ ತ್ಯಾಗ ಮಾಡಲು ಹತ್ತು ಇಂದ್ರಿಯಗಳನ್ನು ಯೋಜಿಸುವನು ।೫೦೩॥

ಆಗ ರಾಜನು ಕರವಸೂಲಿಗಾಗಿ ತನ್ನ ಸೇವಕರನ್ನು ಹಗಲು ರಾತ್ರಿ ದುಡಿಸುವಂತೆ, ಆತನು ತನ್ನ ದುಃಖ ಇಲ್ಲದಂತೆ ಆಗುವವರೆಗೂ ಹಗಲು ರಾತ್ರಿ ಶ್ರಮಿಸುವನು ।೫೦೪॥

ಈ ಪ್ರಕಾರವಾಗಿ ಕರ್ಮದ ತ್ಯಾಗ ಅಥವಾ ಸ್ವೀಕಾರಕ್ಕಾಗಿ ಇಂದ್ರಿಯಗಳ ಮುಂದಾಳತ್ವವನ್ನು ಜ್ಞಾತಾ ಸ್ವೀಕರಿಸಿದನು. ಅದಕ್ಕಾಗಿ ಆತನನ್ನೇ ಕರ್ತಾನೆಂದು ಹೇಳುವರು ।೫೦೫॥

ಒಕ್ಕಲುತನಕ್ಕೆ ರಂಟೆ, ಕುಂಟೆ ಇತ್ಯಾದಿ ಗಳೆಯ ಸಾಮಾನುಗಳಂತೆ ಕರ್ತಾನ ಎಲ್ಲ ಕೆಲಸಗಳಲ್ಲಿ ಈ ಇಂದ್ರಿಯಗಳ ಉಪಯೋಗವಾಗುವುದು. ಅದಕ್ಕಾಗಿ ನಾವು ಅವುಗಳಿಗೆ ಕರಣವೆಂದು ಹೇಳುತ್ತೇವೆ ।೫೦೬॥

ಮತ್ತು ಇದನ್ನು ಮಾಡುವುದಕ್ಕಾಗಿ ಕರ್ತಾ ಯಾವ ಯಾವ ಕ್ರಿಯೆಗಳನ್ನು ಮಾಡುವನೋ, ಅದಕ್ಕೆ ಸಾಧ್ಯವೆಂದೆನಿಸಿದ ಕರ್ಮವು ಎಂದು ಹೇಳುವೆವು ।೫೦೭॥

ಪತ್ತಾರನ ಬುದ್ಧಿಯಿಂದ ಆಭರಣಗಳು ವ್ಯಾಪಕವಾಗು ವಂತೆ ಅಥವಾ ಬಳ್ಳಿಯು ವಿಸ್ತಾರವಾಗಿ ವ್ಯಾಪಕವಾಗುವಂತೆ ।೫೦೮॥

ಅಥವಾ ಸೂರ್ಯನ ಪ್ರಭೆಯಿಂದ ಸೂರ್ಯ ಪ್ರಕಾಶವು ವ್ಯಾಪಕವಾಗುವಂತೆ ಹಾಗೂ ಸಿಹಿಯಿಂದ ಕಬ್ಬಿನ ರಸವು ವ್ಯಾಪಕವಾಗುವಂತೆ, ಇದು ಇರಲಿ, ಅವಕಾಶವು ಆಕಾಶವನ್ನು ವ್ಯಾಪಿಸಿಕೊಂಡಂತೆ ।೫೦೯॥

ಅದರಂತೆ ಧನಂಜಯನೇ, ಕರ್ತನ ಕ್ರಿಯೆಯಿಂದ ವ್ಯಾಪಿಸಿಕೊಂಡಿರುವುದೇ ಕರ್ಮವಾಗಿರುವುದು. ಇದರಲ್ಲಿ ಸಂಶಯವೇ ಇಲ್ಲ ।೫೧೦॥

ಈ ಪ್ರಕಾರವಾಗಿ ಅರ್ಜುನಾ, ನಿನಗೆ ಕರ್ಮ, ಕರ್ತಾ ಹಾಗೂ ಕರಣ ಈ ಮೂರರ ಲಕ್ಷಣಗಳನ್ನು ಹೇಳಿದೆನು ।೫೧೧॥

ಈಗ ಜ್ಞಾತಾ, ಜ್ಞಾನ ಹಾಗೂ ಜ್ಞೇಯ ಈ ತ್ರಿಪುಟಿಯು ಕರ್ಮ ಪ್ರವೃತ್ತಿ ಕಾರಕವಾಗಿದೆ. ಹಾಗೆಯೇ ಕರ್ತಾ, ಕರಣ ಹಾಗೂ ಕಾರ್ಯ ಈ ತ್ರಿಪುಟಿಯು ಕರ್ಮ ಸಂಚಯವಾಗಿದೆ ।೫೧೨॥

ಅಗ್ನಿಯಲ್ಲಿ ಹೊಗೆಯು ಇದ್ದೇ ಇರುವುದು, ಬೀಜದಲ್ಲಿ ವೃಕ್ಷವಿರುವುದು, ಅಥವಾ ಮನದಲ್ಲಿ ಯಾವಾಗಲೂ ಇಚ್ಛೆ ಇರುವುದು ।೫೧೩॥

ಬಂಗಾರವು ಬಂಗಾರದ ಖಣಿಯಲ್ಲಿಯೇ ದೊರಕು ವುದು. ಅದರಂತೆ ಕರ್ತಾ, ಕ್ರಿಯೆ ಹಾಗೂ ಕರಣ ಈ ತ್ರಿಪುಟಿಯು ಕರ್ಮದ ಜೀವಾಳವೇ ಆಗಿರುವುದು ।೫೧೪॥

ಆದ್ದರಿಂದ ಪಂಡುಸುತನೇ, ಈ ಕಾರ್ಯದ ಕರ್ತನು ನಾನು ಎಂದು ಹೀಗೆ ಜೀವನು ಕರ್ತೃತ್ವವನ್ನು ಹೊಂದಿರು ವನು. ಅಲ್ಲಿಯಾದರೂ ಆತ್ಮವು ಎಲ್ಲ ಕರ್ಮಗಳಿಂದ ಅಲಿಪ್ತವಾಗಿರುವುದು ।೫೧೫॥

ಅದಕ್ಕಾಗಿ ಸುಮತಿಯೇ, ಆತ್ಮವು ಕರ್ಮದಿಂದ ಭಿನ್ನವಾಗಿರುವುದು ಎಂದು ಮೇಲಿಂದಮೇಲೆ ಹೇಳಬೇಕೆ? ಕಾರಣ ಇದು ನಿನಗೆ ತಿಳಿದೇ ಇದೆ ।೫೧೬॥

**ಶ್ಲೋಕಾರ್ಥ** :- ಗುಣಭೇದದಿಂದ ೧.ಜ್ಞಾನ, ೨. ಕರ್ಮ, ೩.ಕರ್ತಾ ಎಂಬುವುಗಳು ಮೂರು ವಿಧಾನ ಗಳವಾಗಿವೆ ಎಂದು ಸಾಂಖ್ಯಶಾಸ್ತ್ರವು ಹೇಳುತ್ತದೆ. ಅವುಗಳನ್ನು ಕೇಳು ।೧೯॥

ಪರೀ ಸಾಂಗಿತಲೇ ಜೇ ಜ್ಞಾನ । ಕರ್ಮ ಕರ್ತಾ ಹನ । ತೇ ತೀನ್ಹೀ ತಿಹೀ ಠಾಯೀ ಭಿನ್ನ । ಗುಣೇ ಆಹಾತೀ ॥೫೧೭॥ ಮ್ಹಣೌನಿ ಜ್ಞಾನಾ ಕರ್ಮಾ ಕರ್ತಯಾ । ಪಾತೇ ಜೋ ನಯೇ ಧನಂಜಯಾ । ಜೇ ದೋನೀ ಬಾಂಧತೀ ಸೋಡಾವಯಾ । ಏಕಚೀ ಪ್ರೌಢ ॥೫೧೮॥ ತೇ ಸಾತ್ತ್ವಿಕ ಠಾಉವೇ ಹೋಯೇ । ತೋ ಗುಣ ಭೇದು ಸಾಂಗೋ ಪಾಹೇ । ಜೋ ಸಾಂಖ್ಯಶಾಸ್ತ್ರೀ ಆಹೇ । ಉವಾಇಲಾ ॥೫೧೯॥ ಜೇ ವಿಚಾರಕ್ಷೀರಸಮುದ್ರ । ಸ್ವಬೋಧಕುಮುದಿನೀಚಂದ್ರ । ಜ್ಞಾನಡೋಳಸಾ ನರೇಂದ್ರ । ಶಾಸ್ತ್ರಾಂಚಾ ಜೇ ॥೫೨೦॥ ಕೀ ಪ್ರಕೃತಿಪುರುಷ ದೋನೀ । ಮಿಸಳಲೀ ದಿವೋರಜನೀ । ತಿಯೇ ನಿವಡಿತಾ ತ್ರಿಭುವನೀ । ಮಾರ್ತಂಡು ಜೇ ॥೫೨೧॥ ಜೇಥ ಅಪಾರಾ ಮೋಹರಾಶೀ । ತತ್ತ್ವಾಚ್ಯಾ ಮಾಪೀ ಚೋವಿಸೀ । ಉಗಾಣಾ ಘೇಊನಿ ಪರೇಶೀ । ಸುರವಾಡಿಜೇ ॥೫೨೨॥ ಅರ್ಜುನಾ ತೇ ಸಾಂಖ್ಯಶಾಸ್ತ್ರ । ಪಢೇ ಜಯಾಚೇ ಸ್ತೋತ್ರ । ತೇ ಗುಣಭೇದಚರಿತ್ರ । ಐಸೇ ಆಹೇ ॥೫೨೩॥ ಜೇ ಆಪುಲೇನಿ ಆಂಗಿಕೇ । ತ್ರಿವಿಧಪಣಾಚೇನಿ ಅಂಕೇ । ದೃಶ್ಯಜಾತ ತಿತುಕೇ । ಅಂಕಿತ ಕೇಲೇ ॥೫೨೪॥ ಏವಂ ಸತ್ತ್ವರಜತಮಾ । ತಿಹೀಂಚೀ ಯೇವಢೀ ಅಸೇ ಮಹಿಮಾ । ಜೇ ತ್ರೈವಿಧ್ಯ ಆದಿ ಬ್ರಹ್ಮಾ । ಅಂತೀ ಕೃಮೀ ॥೫೨೫॥ ಪರೀ ವಿಶ್ವೀಂಚೀ ಆಘವೀ ಮಾಂದೀ । ಜೇಣೇ ಭೇದಲೇನಿ ಗುಣಭೇದೀ । ಪಡಿಲೀ ತೇ ತಂವ ಆದೀ । ಜ್ಞಾನ ಸಾಂಗೋ ॥೫೨೬॥ ಜೇ ದಿಠೀ ಜರೀ ಚೋಖ ಕೀಜೇ । ತರೀ ಭಲತೇಂಹೀ ಚೋಖ ಸುಜೇ । ತೈಸೇ ಜ್ಞಾನೇ ಶುದ್ಧೇ ಲಾಹಿಜೇ । ಸರ್ವಹೀ ಶುದ್ಧ ॥೫೨೭॥ ಮ್ಹಣೌನಿ ತೇ ಸಾತ್ತ್ವಿಕ ಜ್ಞಾನ । ಆತಾ ಸಾಂಗೋ ದೇ ಅವಧಾನ । ಕೈವಲ್ಯಗುಣನಿಧಾನ । ಶ್ರೀಕೃಷ್ಣ ಮ್ಹಣೇ ॥೫೨೮॥

ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।
ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥೨೦॥

ತರೀ ಅರ್ಜುನಾ ಗಾ ತೇ ಫುಡೇ । ಸಾತ್ತ್ವಿಕ ಜ್ಞಾನ ಚೋಖಡೇ । ಜಯಾಚ್ಯಾ ಉದಯೀ ಜ್ಞೇಯ ಬುಡೇ । ಜ್ಞಾತೇನಿಸೀ ॥೫೨೯॥ ಜೈಸಾ ಸೂರ್ಯ ನ ದೇಖೇ ಅಂಧಾರೇ । ಸರಿತಾ ನೇಣೆಜತೀ ಸಾಗರೇ । ಕಾ ಕವಳಿಲಿಯಾ ನ ಧರೇ । ಆತ್ಮ ಛಾಯಾ ॥೫೩೦॥ ತಯಾಪರೀ ಜಯಾ ಜ್ಞಾನಾ । ಶಿವಾದಿ ತೃಣಾವಸಾನಾ । ಇಯಾ ಭೂತವ್ಯಕ್ತಿ ಭಿನ್ನಾ । ನಾಡಳತೀ ॥೫೩೧॥

ಆದರೆ ನಿನಗೆ ಹೇಳಿದ ಜ್ಞಾನ, ಕರ್ಮ ಹಾಗೂ ಕರ್ತಾ ಈ ಮೂರು, ಮೂರುಗುಣಗಳಿಂದ ಬೇರೆ ಬೇರೆಯಾಗಿ ರುವುವು ।೫೧೭॥

ಅದಕ್ಕಾಗಿ ಧನಂಜಯಾ, ಜ್ಞಾನ, ಕರ್ಮ ಹಾಗೂ ಕರ್ತಾದ ಮೇಲೆ ವಿಶ್ವಾಸವಿಡಬೇಡ. ಕಾರಣ ಇವುಗಳಲ್ಲಿ ರಜ ಹಾಗೂ ತಮ ಗುಣಗಳಿಂದ ಮನುಷ್ಯನು ಬದ್ಧನಾಗುವನು ಮತ್ತು ಕೇವಲ ಸತ್ತ್ವಗುಣವು ಬಿಡಿಸಲು ಸಮರ್ಥವಾಗಿದೆ ।೫೧೮॥

ಈ ಸಾತ್ತ್ವಿಕ ಗುಣದ ಭೇದವನ್ನು ಸಾಂಖ್ಯಶಾಸ್ತ್ರದಲ್ಲಿ ವಿವೇಚನೆಯನ್ನು ಮಾಡಲಾಗಿದೆ. ಅದನ್ನು ನಿನಗೆ ತಿಳಿಯುವಂತೆ ಹೇಳುವೆನು ।೫೧೯॥

ಯಾವ ಸಾಂಖ್ಯಶಾಸ್ತ್ರವು ವಿಚಾರರೂಪ ಕ್ಷೀರ ಸಾಗರವೇ ಆಗಿದೆ. ಆತ್ಮಬೋಧರೂಪ ಕಮಲಕ್ಕೆ ಪ್ರಫುಲ್ಲಿತಗೊಳಿಸುವ ಚಂದ್ರನಾಗಿದೆ ಮತ್ತು ಜ್ಞಾನೋತ್ಪತ್ತಿಯ ಶ್ರೇಷ್ಠ ಶಾಸ್ತ್ರವಾಗಿದೆ ।೫೨೦॥

ಅಥವಾ ಪ್ರಕೃತಿ, ಪುರುಷ ಈ ಎರಡು ಹಗಲು ರಾತ್ರಿಯಂತೆ ಒಂದಕ್ಕೊಂದು ಕೂಡಿಕೊಂಡಿವೆ. ಅವುಗಳನ್ನು ವಿಂಗಡಿಸಿ ತೋರಿಸುವ ಈ ತ್ರಿಭುವನದಲ್ಲಿ ಸೂರ್ಯನಾಗಿದೆ ।೫೨೧॥

ಮತ್ತು ಅಪಾರವಾದ ಮೋಹರಾಶಿಯನ್ನು ಇಪ್ಪತ್ನಾಲ್ಕು ತತ್ತ್ವಗಳ ಅಳತೆಯಿಂದ ಅಳತೆ ಮಾಡಿ, ಜೀವನಿಗೆ ಪರತತ್ತ್ವವನ್ನು ದೊರಕಿಸಿಕೊಟ್ಟು ಸುಖಿಯನ್ನಾಗಿ ಮಾಡುವುದು ।೫೨೨॥

ಅರ್ಜುನಾ, ಹೀಗಿರುವ ಸಾಂಖ್ಯ ಶಾಸ್ತ್ರವು ಯಾವ ಗುಣದ ವರ್ಣನೆಯನ್ನು ಮಾಡುವುದೋ, ಆ ಮೂರು ಗುಣಗಳ ವರ್ಣನೆಯು ಈ ರೀತಿಯಲ್ಲಿ ಇದೆ ।೫೨೩॥

ಯಾವ ಗುಣಗಳು ತಮ್ಮ ಸಾಮರ್ಥ್ಯದಿಂದ ಮೂರು ಪ್ರಕಾರಗಳ ಮುದ್ರೆ, ಒತ್ತಿ ಎಲ್ಲ ದೃಶ್ಯ ಪದಾರ್ಥಗಳನ್ನು ಸ್ವಾಧೀನವಾಗಿ ಮಾಡಿಕೊಂಡಿವೆ ।೫೨೪॥

ಈ ಪ್ರಕಾರವಾಗಿ ಸತ್ತ್ವ, ರಜ ಹಾಗೂ ತಮ ಈ ಮೂರು ಗುಣಗಳ ಸಾಮರ್ಥ್ಯವು ಎಷ್ಟಿದೆ ಎಂದರೆ ಬ್ರಹ್ಮದೇವನಿಂದ ಹಿಡಿದು ಕ್ರಿಮಿಯವರೆಗೆ ಮೂರು ಭೇದಗಳಾಗಿ ಮಾಡಿದೆ ।೫೨೫॥

ಆದರೆ ಈ ಎಲ್ಲ ವಿಶ್ವವು ಯಾವುದರಿಂದ ಈ ಮೂರು ಗುಣಗಳಲ್ಲಿ ಸಿಲುಕಿಕೊಳ್ಳುವುದೋ, ಆ ಜ್ಞಾನವನ್ನು ನಿನಗೆ ಮೊದಲು ಹೇಳುವೆನು ।೫೨೬॥

ಕಾರಣ, ದೃಷ್ಟಿಯು ಶುದ್ಧವಾಯಿತೆಂದರೆ ಎಲ್ಲವೂ ಸರಿಯಾಗಿಯೇ ಕಾಣುವುವು. ಅದರಂತೆ ಶುದ್ಧ ಜ್ಞಾನವು ಪ್ರಾಪ್ತವಾದರೆ ಎಲ್ಲ ಪದಾರ್ಥಗಳ ಶುದ್ಧ ಸ್ವರೂಪವು ತಿಳಿಯುವುದು ।೫೨೭॥

ಆದ್ದರಿಂದ ಸಾತ್ತ್ವಿಕ ಜ್ಞಾನವನ್ನು ಈಗ ನಿನಗೆ ಹೇಳುವೆನು. ಲಕ್ಷವನ್ನು ಕೊಡು ಎಂದು ಕೈವಲ್ಯ ಗುಣನಿಧಾನನಾದ ಪರಮಾತ್ಮ ಶ್ರೀಕೃಷ್ಣನು ಹೇಳಿದನು ।೫೨೮॥

ಶ್ಲೋಕಾರ್ಥ :- ಭಿನ್ನ ಭಿನ್ನವಾಗಿ ತೋರುವ ಈ ಯಾವತ್ತು ಪದಾರ್ಥಗಳಲ್ಲಿಯೂ ನಾಶವಾಗದ ಒಂದೇ ಒಂದು ವಸ್ತುವು ಅಖಂಡವಾಗಿ ಇರುವುದೆಂದು ಗ್ರಹಿಸುವ ಜ್ಞಾನವು ಸಾತ್ತ್ವಿಕ ಜ್ಞಾನವು ।೨೦॥

ಅರ್ಜುನಾ, ಯಾವ ಜ್ಞಾನದ ಉದಯವಾದೊಡನೆಯೇ ಜ್ಞೇಯವು ಜ್ಞಾತಾನೊಂದಿಗೆ ಅದರಲ್ಲಿ ಲೀನವಾಗುವುದೋ, ಅದೇ ನಿಜವಾಗಿಯೂ ಶುದ್ಧ ಸಾತ್ತ್ವಿಕ ಜ್ಞಾನವಾಗಿರುವುದು ।೫೨೯॥

ಸೂರ್ಯನು ಕತ್ತಲೆಯನ್ನು ನೋಡಲು ಸಾಧ್ಯವಿಲ್ಲ. ಅಥವಾ ಸಮುದ್ರಕ್ಕೆ ನದಿಗಳ ಅರಿವು ಇರುವುದಿಲ್ಲ, ಹಾಗೂ ತನ್ನ ನೆರಳನ್ನು ಹಿಡಿಯುವುದು ಆಗುವುದಿಲ್ಲ ।೫೩೦॥

ಅದರಂತೆ ಈ ಜ್ಞಾನಕ್ಕೆ ಶಿವನಿಂದ ಹಿಡಿದು ಹುಲ್ಲಿನವರೆಗೆ ಎಲ್ಲ ವ್ಯಕ್ತಿಗಳಲ್ಲಿ ವಿಭಿನ್ನ ಕಾಣಿಸುವುದಿಲ್ಲ ।೫೩೧॥

ಜೈಸೇ ಹಾತೇ ಚಿತ್ರ ಪಾಹಾತಾ । ಹೋಯ ಪಾಣಿಯೇ ಮೀಠ ಧುತಾ ।ಕಾ ಚೇವೋನಿ ಸ್ವಪ್ನಾ ಯೇತಾ । ಜೈಸೇ ಹೋಯ ।೫೩೨॥ ತೈಸೇ ಜ್ಞಾನೇ ಜೇಣೇ । ಕರಿತಾ ಜ್ಞಾತವ್ಯಾತೇ ಪಾಹಾಣೇ । ಜಾಣತಾ ನಾ ಜಾಣಣೇ । ಜಾಣಾವೇ ಉರೇ ।೫೩೩॥ ಪೈ ಸೋನೇ ಆಟೂನಿ ಲೇಣೇ । ನ ಕಾಢಿತೀ ಆಪುಲಿಯಾ ಆಯಣೀ । ಕಾ ತರಂಗ ನ ಘೇಪತೀ ಪಾಣೀ । ಗಾಳೂನಿ ಜೈಸೇ ।೫೩೪॥ ತೈಸೀ ಜಯಾ ಜ್ಞಾನಾಚಿಯಾ ಹಾತಾ । ನ ಲಗೇಚಿ ದೃಶ್ಯಪಥಾ । ತೇ ಜ್ಞಾನ ಜಾಣ ಸರ್ವಥಾ । ಸಾತ್ತ್ವಿಕ ಗಾ ।೫೩೫॥ ಆರಿಸಾ ಪಾಹೇ ಜಾತಾ ಕೋಡೇ । ಜೈಸೇ ಪಾಹಾತೇಂಚಿ ಕಾ ರಿಗೇ ಪುಢೇ । ತೈಸೇ ಜ್ಞೇಯ ಲೋಟೋನಿ ಪಡೇ । ಜ್ಞಾತಾಚಿ ಜೇ ।೫೩೬॥ ಪುಢತೀ ತೇಂಚಿ ಸಾತ್ತ್ವಿಕ ಜ್ಞಾನ । ಜೇ ಮೋಕ್ಷಲಕ್ಷ್ಮೀಚೇ ಭುವನ । ಹೇ ಅಸೋ ಐಕ ಚಿನ್ಹ । ರಾಜಸಾಚೇ ।೫೩೭॥

ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾಭಾವಾನ್ ಪೃಥಗ್ವಿಧಾನ್ ।
ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಮ್ ।೨೧॥

ತರೀ ಪಾರ್ಥಾ ಪರಿಯೇಸ । ತೇ ಜ್ಞಾನ ಗಾ ರಾಜಸ । ಜೇ ಭೇದಾಚೇ ಕಾಂಸ । ಧರೂನಿ ಚಾಲೇ ।೫೩೮॥ ವಿಚಿತ್ರತಾ ಭೂತಾಂಚಿಯಾ । ಆಪಣ ಆಂತೋನಿ ಠಿಕರಿಯಾ । ಬಹು ಚಕ್ಕೈ ಜ್ಞಾತಯಾ । ಆಣಿಲೀ ಜೇಣೇ ।೫೩೯॥ ಜೈಸೇ ಸಾಚಾ ರೂಪಾ ಆಡ । ಘಾಲೂನಿ ವಿಸರಾಚೇ ಕವಾಡ । ಮಗ ಸ್ವಪ್ನಾಚೇ ಕಾಬಾಡ । ಓಪೀ ನಿದ್ರಾ ।೫೪೦॥ ತೈಸೇ ಸ್ವಜ್ಞಾನಾಚಿಯೇ ಪೌಳೀ । ಬಾಹೇರಿ ಮಿಥ್ಯಾ ಮಹೀ ಖಳೀ । ತಿಹೀ ಅವಸ್ಥಾಂಚಿಯಾ ಬಾಹ್ಯಾಳೀ । ದಾವೀ ಜೇ ಜೀವಾ ।೫೪೧॥ ಅಲಂಕಾರಪಣೇ ಝಾಂಕಲೇ । ಬಾಳಾ ಸೋನೇ ಕಾ ವಾಯಾ ಗೇಲೇ । ತೈಸೇ ನಾಮೀ ರೂಪೀ ದುರಾವಲೇ । ಅದ್ವೈತ ಜಯಾ ।೫೪೨॥
ಅವತರಲೀ ಗಾಡಗ್ಯಾಘಡಾ । ಪೃಥ್ವೀ ಅನೋಳಖ ಜಾಲೀ ಮೂಢಾ । ವನ್ಹಿ ಜಾಲಾ ಕಾನಡಾ । ದೀಪತ್ವಾಸಾಠೀ ।೫೪೩॥ ಕಾ ವಸ್ತ್ರಪಣಾಚೇನಿ ಆರೋಪೇ । ಮೂರ್ಖಾಪ್ರತಿ ತಂತು ಹಾರಪೇ । ನಾನಾ ಮುಗ್ಧಾ ಪಟು ಲೋಪೇ । ದಾಊನಿ ಚಿತ್ರ ।೫೪೪॥ ತೈಸೀ ಜಯಾ ಜ್ಞಾನಾ । ಜಾಣೋನಿ ಭೂತವ್ಯಕ್ತೀ ಭಿನ್ನಾ । ಐಕ್ಯಬೋಧಾಚೀ ಭಾವನಾ । ನಿಮೋನಿ ಗೇಲೀ ।೫೪೫॥ ಮಗ ಇಂಧನೀ ಭೇದಲಾ ಅನಳು । ಫುಲಾಂವರೀ ಪರಿಮಳು । ಕಾ ಜಳಭೇದೇ ಶಕಲು । ಚಂದ್ರು ಜೈಸಾ ।೫೪೬॥

ಗೋಡೆಯ ಮೇಲಿನ ಚಿತ್ರವನ್ನು ಕೈಮುಟ್ಟಿ ನೋಡಲು ಗೋಡೆಯೊಂದೇ ಅನುಭವಕ್ಕೆ ಬರುವುದು, ಉಪ್ಪನ್ನು ತೊಳೆದರೆ ನೀರೇ ಆಗುವುದು, ಅಥವಾ ಎಚ್ಚರಾದ ಮೇಲೆ ಸ್ವಪ್ನವು ಹೇಗಾಗುವುದೋ ।೫೩೨॥

ಅದರಂತೆ, ಆ ಜ್ಞಾನದ ಪ್ರಕಾಶದಿಂದ ಜ್ಞೇಯವನ್ನು ನೋಡಲು ಹೋದರೆ, ಜ್ಞಾನ ಹಾಗೂ ಜ್ಞೇಯ ಈ ತ್ರಿಪುಟಿಯು ಇಲ್ಲದಾಗುವುದು ।೫೩೩॥

ಆದರೆ ಜ್ಞಾತಾನಿಗೆ ಬಂಗಾರದ ಪರೀಕ್ಷೆಗಾಗಿ ಅಲಂಕಾರಗಳನ್ನು ಕರಗಿಸಬೇಕಾಗುವುದಿಲ್ಲ, ನೀರನ್ನು ತೆಗೆದುಕೊಳ್ಳಬೇಕಾದರೆ ಅದರ ಮೇಲಿನ ತೆರೆಗಳನ್ನು ಸೋಸಬೇಕಾಗುವುದಿಲ್ಲ ।೫೩೪॥

ಅದರಂತೆ ಎಲ್ಲ ದೃಶ್ಯ ಪದಾರ್ಥಗಳಲ್ಲಿ ಯಾವ ಜ್ಞಾನಕ್ಕೆ ಭೇದ ಕಾಣಿಸುವುದಿಲ್ಲವೋ, ಅದೇ ಜ್ಞಾನಕ್ಕೆ ಸಾತ್ತ್ವಿಕ ಜ್ಞಾನವೆಂದು ಹೇಳುವರು ।೫೩೫॥

ಕನ್ನಡಿಯನ್ನು ಪ್ರೀತಿಯಿಂದ ನೋಡುವಾಗ, ನೋಡುವವನ ಪ್ರತಿಬಿಂಬವೇ ಕಾಣುವುದು. ಅದರಂತೆ ಜ್ಞೇಯವನ್ನು ಸರಿಸಿ ಪ್ರತಿಯೊಂದು ವಸ್ತುವಿನಲ್ಲಿ ಜ್ಞಾತಾನು ತನ್ನ ಸ್ವರೂಪವನ್ನೇ ನೋಡುವನು ।೫೩೬॥

ಇದೇ ಸಾತ್ತ್ವಿಕ ಜ್ಞಾನವು ಮೋಕ್ಷಲಕ್ಷ್ಮಿಯ ಮಂದಿರವಾಗಿದೆ. ಇದು ಇರಲಿ, ಈಗ ನಿನಗೆ ರಾಜಸ ಜ್ಞಾನದ ಲಕ್ಷಣಗಳನ್ನು ಹೇಳುವೆನು. ಅದನ್ನು ಕೇಳು ।೫೩೭॥

**ಶ್ಲೋಕಾರ್ಥ** :- ಭಾವ ಭೇದಗಳನ್ನು ಅನುಸರಿಸಿ ಆ ವಿಧವಾಗಿ ಸಮಸ್ತ ಚರಾಚಾರ ಭೂತಗಳಲ್ಲಿಯೂ ಭಿನ್ನ ಭಿನ್ನ ಆತ್ಮವಾಗಿರುವುದೆಂದು ಭಾವಿಸುವುದು ರಾಜಸ ಜ್ಞಾನವು ।೨೧॥

ಪಾರ್ಥಾ, ಯಾವ ಭೂತ ಮಾತ್ರರಲ್ಲಿ ಭೇದಭಾವವನ್ನು ಹಿಡಿದು ನಡೆಯುವುದೇ ರಾಜಸ ಜ್ಞಾನವಾಗಿರುವುದು. ಕೇಳಿದಿಯಾ ? ।೫೩೮॥

ಭೂತಗಳ ಭಿನ್ನತ್ವದಿಂದ ಅಂದರೆ ವೈಚಿತ್ರ್ಯತೆಯಿಂದ ಆ ಜ್ಞಾನವು ತನ್ನನ್ನು ಚೂರುಚೂರಾಗಿ ಮಾಡಿಕೊಂಡಿದೆ ಮತ್ತು ಜ್ಞಾತಾನನ್ನು ಚಕಿತಗೊಳಿಸಿದೆ ।೫೩೯॥

ಯಾವ ಪ್ರಕಾರವಾಗಿ ನಿದ್ರೆಯ ಸ್ವರೂಪರೂಪಕ್ಕೆ ಅಡ್ಡವಾಗಿ ಅಜ್ಞಾನದ ಪರದೆಯನ್ನು ಹಾಕಿ ಸ್ವಪ್ನದ ಕಷ್ಟ ಸ್ಥಿತಿಯನ್ನು ಒಡ್ಡುವುದೋ ।೫೪೦॥

ಅದರಂತೆ ಆತ್ಮಜ್ಞಾನದ ಮಂದಿರದ ಸುತ್ತಲೂ ಮಾಯೆಯ ಪ್ರಸಾರವನ್ನು ಹಾಕಿ ಜಾಗೃತ, ಸ್ವಪ್ನ ಹಾಗೂ ಸುಷುಪ್ತಿ ಎಂಬ ಮೂರು ಅವಸ್ಥೆಗಳಿಂದ ಜೀವಕ್ಕೆ ಮೋಸಮಾಡುವುದು ।೫೪೧॥

ಚಿಕ್ಕ ಮಗುವಿಗೆ ಅಲಂಕಾರ ರೂಪದಿಂದ ಬಂಗಾರವನ್ನು ತೊಡಿಸಿದರೂ, ಅದಕ್ಕೆ ಬಂಗಾರದ ಅರಿವು ಇರುವುದಿಲ್ಲ. ಅದರಂತೆ ನಾಮರೂಪದ ಭೇದದಿಂದ ಆ ಜ್ಞಾನಕ್ಕೆ ಅದ್ವೈತವು ದೂರಾಗುವುದು ।೫೪೨॥

ಅಜ್ಞಾನಿಗೆ ಮಣ್ಣಿನಿಂದ ಮಾಡಿದ ಮಡಿಕೆಗಳನ್ನು ತೋರಿಸಲು ಆತನಿಗೆ ಅದರಲ್ಲಿಯ ಮೂಲವಾದ ಮಣ್ಣು ಕಾಣಿಸುವುದಿಲ್ಲ. ಅಥವಾ ದೀಪ ಕಂಡಾಗ ಅಗ್ನಿಯಂತೆ ತಿಳಿಯುವುದಿಲ್ಲ ।೫೪೩॥

ಅಥವಾ ಮೂರ್ಖನಿಗೆ ವಸ್ತ್ರವನ್ನು ತೋರಿಸಿದಾಗ ಆತನಿಗೆ ನೂಲುಗಳು ಕಾಣಿಸುವುದಿಲ್ಲ. ಚಿತ್ರಗಳನ್ನು ತೋರಿಸಿದಾಗ ಅದರಲ್ಲಿನ ಪರದೆಯು ಕಾಣಿಸುವುದಿಲ್ಲ ।೫೪೪॥

ಅದರಂತೆ ಭೂತ ಮಾತ್ರರು ಭಿನ್ನ ಭಿನ್ನವಾಗಿದೆ ಎಂಬ ತಿಳುವಳಿಕೆಯಿಂದ ಆ ಜ್ಞಾನದ ಐಕ್ಯ ಬೋಧದ ಭಾವನೆಯು ನಾಶವಾಗಿರುವುದು ।೫೪೫॥

ಆಗ ಕಟ್ಟಿಗೆಗಳು ಹೊತ್ತಿಕೊಂಡಾಗ ಅವುಗಳ ಆಕಾರದಂತೆ ಅಗ್ನಿಯು ಬೇರೆ ಬೇರೆಯಾಗಿದೆ. ಅಥವಾ ಹೂವುಗಳ ಸುಗಂಧವು ಬೇರೆ ಬೇರೆಯಾಗಿದೆ. ಅಥವಾ ಚಂದ್ರನ ಪ್ರಕಾಶವು ನೀರಿನಲ್ಲಿ ಅಲುಗಾಡಲು ಚಂದ್ರನು ತುಂಡು ತುಂಡಾಗಿರುವನು ।೫೪೬॥

ತೈಸೇ ಪದಾರ್ಥಭೇದ ಬಹುವಸ । ಜಾಣೋನಿ ಲಹಾನ ಥೋರ ವೇಷ । ಆಂತಲೇ ತೇ ರಾಜಸ । ಜ್ಞಾನ ಯೇಥ ।೮೪೭॥ ಆತಾ ತಾಮಸಾಚೇಂಹಿ ಲಿಂಗ । ಸಾಂಗೇನ ತೇ ವೋಳಖ ಚಾಂಗ । ಡಾವಲಾವಯಾ ಮಾತಂಗ । ಸದನ ಜೈಸೇ ।೮೪೮॥

ಯತ್ತು ಕೃತ್ಸ್ನವದೇಕಸ್ಮಿನ್ ಕಾರ್ಯೇ ಸಕ್ತಮಹೈತುಕಮ್ ।
ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಮ್ ।೨೨॥

ತರೀ ಕಿರೀಟೀ ಜೇ ಜ್ಞಾನ । ಹಿಂಡೇ ವಿಧಿಚೇನಿ ವಸ್ತ್ರೇಹೀನ । ಶ್ರುತಿಪಾಠಮೋರೀ ನಗ್ನ । ಮ್ಹಣೌನಿ ತಯಾ ।೮೪೯॥ ಯೇರೀಂಹೀ ಶಾಸ್ತ್ರ ಬಟಿಕರೀ । ಜೇ ನಿಂದೇಚೇ ವಿಟಾಳವರೀ । ಬೋಳವಿಲೇಸೇ ಡೋಂಗರೀ । ಮ್ಲೇಂಚ್ಛಧರ್ಮಾಚ್ಯಾ ।೮೫೦॥ ಜೇ ಗಾ ಜ್ಞಾನ ಐಸೇ । ಗುಣಗ್ರಹೇ ತಾಮಸೇ । ಘೇತಲೇ ಭವೇ ಪಿಸೇ। ಹೋಊನಿಯಾ ।೮೫೧॥ ಜೇ ಸೋಯರಿಕೇ ಬಾಧು ನೇಣೇ । ಪದಾರ್ಥೀ ನಿಷೇಧು ನ ಮ್ಹಣೇ । ನಿರೋವಿಲೇ ಜೈಸೇ ಸುಣೇ । ಶೂನ್ಯಗ್ರಾಮೀ ।೮೫೨॥ ತಯಾ ತೋಂಡೀ ಜೇ ನಾಡಳೇ । ಕಾ ಖಾತಾ ಜೇಣೇ ಪೋಳೇ । ತೇಂಚಿ ಏಕ ವಾಳೇ । ಯೇರ ಘೇಣೇಚೀ ।೮೫೩॥ ಪೈ ಸೋನೇ ಚೋರಿತಾ ಉಂದಿರು । ನ ಮ್ಹಣೇ ಥರುವಿಥರು । ನೇಣೇ ಮಾಂಸಖಾಯಿರು । ಕಾಳೇ ಗೋರೇ ।೮೫೪॥ ನಾನಾ ವನಾಮಾಜೀ ಬೋಹರೀ । ಕಡಸಣೇ ಜೇವೀ ನ ಕರೀ । ಕಾ ಜೀತ ಮೇಲೇ ನ ವಿಚಾರೀ । ಬೈಸತಾ ಮಾಶೀ ।೮೫೫॥ ಅಗಾ ವಾಂತಾ ಕಾ ವಾಢಿಲೇಯಾ । ಸಾಜುಕ ಕಾ ಸಡಲಿಯಾ । ವಿವೇಕು ಕಾವಳಿಯಾ । ನಾಹೀ ಜೈಸಾ ।೮೫೬॥ ತೈಸೇ ನಿಷಿದ್ಧ ಸಾಂಡೂನಿ ಜಾವೇ । ಕಾ ವಿಹಿತ ಆದರೇ ಘ್ಯಾವೇ । ಹೇ ವಿಷಯಾಂಚೇನಿ ನಾಂವೇ । ನೇಣೇಂಚಿ ಜೇ ।೮೫೭॥ ಜೇತುಲೇ ಆಡ ಪಡೇ ದಿಠೀ । ತೇತುಲೇ ಘೇಚಿ ವಿಷಯಾಸಾಠೀ । ಮಗ ತೇ ದ್ರವ್ಯವಾಟೀ । ಶಿಶ್ನೋದರಾ ।೮೫೮॥ ತೀರ್ಥಾತೀರ್ಥ ಹೇ ಭಾಖ । ಉದಕೀ ನಾಹೀ ಸನೋಳಖ । ತೃಷಾ ವೋಳೇ ತೇಂಚಿ ಸುಖ । ವಾಂಚೂನಿಯಾ ।೮೫೯॥ ತಯಾಚಿಪರೀ ಖಾದ್ಯಾಖಾದ್ಯ । ನ ಮ್ಹಣೇ ನಿಂದ್ಯಾನಿಂದ್ಯ । ತೋಂಡಾ ಆವಡೇ ತೇ ಮೇಧ್ಯ । ಐಸಾಚಿ ಬೋಧು ।೮೬೦॥ ಆಣಿ ಸ್ತ್ರೀಜಾತ ತಿತುಕೇ । ತ್ವಚೇಂದ್ರಿಯೇಂಚಿ ವೋಳಖೇ । ತಿಯೇವಿಷಯೀ ಸೋಯರಿಕೇ । ಏಕಚಿ ಬೋಧು ।೮೬೧॥ ಪೈ ಸ್ವಾರ್ಥೀ ಜೇ ಉಪಕರೇ । ತಯಾಚಿ ನಾಮ ಸೋಇರೇ । ದೇಹಸಂಬಂಧು ನ ಸರೇ । ಜಿಯೇ ಜ್ಞಾನೀ ।೮೬೨॥

ಹೀಗೆ ನಾನಾ ಪ್ರಕಾರದ ಪದಾರ್ಥಗಳಲ್ಲಿ ಅನೇಕ ಭಿನ್ನತೆಗಳು ಇವೆ. ಅಥವಾ ವೇಶದ ಮೇಲಿಂದ ಸಣ್ಣ ದೊಡ್ಡ ಭೇದವು ಇದೆ. ಈ ತಿಳುವಳಿಕೆಯಿಂದ ತುಂಬಿದ ಜ್ಞಾನವು ರಾಜಸ ಜ್ಞಾನವಾಗಿದೆ ।೫೪೭॥

ಈಗ ಮಾದಿಗನ ಮನೆಯನ್ನು ತ್ಯಜಿಸಲು ದಾರಿಕಾರನಿಗೆ ಒತ್ತಿ ಹೇಳುವಂತೆ, ತಾಮಸ ಜ್ಞಾನದ ಲಕ್ಷಣಗಳನ್ನು ನಿನಗೆ ಹೇಳುವೆ, ಚೆನ್ನಾಗಿ ತಿಳಿದುಕೊ ।೫೪೮॥

ಶ್ಲೋಕಾರ್ಥ :- ಅಂಧ ಗಜನ್ಯಾಯ ಕೂಪ ಮಂಡೂಕ ನ್ಯಾಯವನ್ನು ಅನುಸರಿಸಿ ತನ್ನ ವಸ್ತುವೇ ಸಮಸ್ತವೆಂದು ಕೊಳ್ಳುವ, ಯುಕ್ತಿ ವಿರುದ್ಧವಾಗಿ ಅಸಂಬದ್ಧವಾಗಿ ಸಂಕುಚಿತವಾಗಿರುವ ಜ್ಞಾನವು ತಾಮಸ ಜ್ಞಾನವು ।೨೨॥

ಕಿರೀಟಿಯೇ, ಈ ಜ್ಞಾನವು ವಿಧಿರೂಪ ವಸ್ತ್ರಹೀನವಾಗಿ ಸಂಚರಿಸುವುದು ಮತ್ತು ಅದು ಬತ್ತಲೆಯಾಗಿರುವುದರಿಂದ ಎಲ್ಲ ಶಾಸ್ತ್ರಗಳ ತಾಯಿಯಾದ ಶ್ರುತಿಯು ಮುಖ ತಿರುಗಿಸಿರುವಳು ।೫೪೯॥

ಉಳಿದ ಆಸ್ತಿಕ ಶಾಸ್ತ್ರಗಳಾದರೂ ಈ ತಾಮಸ ಜ್ಞಾನವು ನಿಂದ್ಯವಾದುದೆಂದು ಬಹಿಷ್ಕರಿಸಿವೆ, ಅಲ್ಲದೇ ಮ್ಲೇಂಛ ಧರ್ಮವು ಪ್ರಚಲಿತವಾಗಿರುವ ಪ್ರದೇಶಕ್ಕೆ ದಬ್ಬಿವೆ ।೫೫೦॥

ಯಾವ ಜ್ಞಾನಕ್ಕೆ ತಮೋಗುಣರೂಪ ಬ್ರಹ್ಮ ರಾಕ್ಷಸದ ಸಂಚಾರವಾಗಿರುವುದರಿಂದ ಹುಚ್ಚನಂತೆ ತಿರುಗುತ್ತಿರುತ್ತದೆ ।೫೫೧॥

ಇದಕ್ಕೆ ಶರೀರ ಸಂಬಂಧದ ಅಡಚಣೆಯಾಗುವುದಿಲ್ಲ, ಹಾಗೂ ಪದಾರ್ಥಗಳಲ್ಲಿ ನಿಷೇಧಗಳನ್ನು ತಿಳಿಯುವುದಿಲ್ಲ. ಹಾಳೂರಿನಲ್ಲಿಯ ನಾಯಿಗಳಂತೆ ಸ್ವೇಚ್ಛೆಯಾಗಿರುವುದು ।೫೫೨॥

ಯಾವ ಪದಾರ್ಥವು ಬಾಯಿಯಲ್ಲಿ ಹಿಡಿಸುವುದಿಲ್ಲ ಅಥವಾ ಬಾಯಿಯಲ್ಲಿ ಹಾಕಿದಾಗ ಸುಡುವ ಪದಾರ್ಥ ಗಳಷ್ಟೇ ಈತನಿಗೆ ತ್ಯಾಜ್ಯವಾಗಿವೆ, ಉಳಿದ ಎಲ್ಲವೂ ನಡೆಯುವುವು ।೫೫೩॥

ಇಲಿಯು ಬಂಗಾರವನ್ನು ಕದ್ದೊಯ್ಯುವಾಗ (ಉಪಭೋಗ, ನಿರುಪಯೋಗ) ಒಳಿತು,ಹೀನ ವಿಚಾರ ಮಾಡುವುದಿಲ್ಲ. ಮಾಂಸಹಾರಿಯು ಅದು ಕರಿದೊ, ಬಿಳಿದೊ ಎಂಬ ವಿಚಾರ ಮಾಡುವುದಿಲ್ಲ ।೫೫೪॥

ಅರಣ್ಯದಲ್ಲಿ ಅಗ್ನಿ ಹತ್ತಿದಾಗ ಅದಕ್ಕೆ ಯಾವ ವಿಚಾರವೇ ಇರುವುದಿಲ್ಲ. ಜೀವಂತ ಅಥವಾ ಸತ್ತ ವಿಚಾರ ಮಾಡದೇ ನೊಣವು ಎಲ್ಲಿ ಬೇಕಾದರೂ ಕುಳಿತುಕೊಳ್ಳುವುದು ।೫೫೫॥

ಅರೇ, ಈ ಅನ್ನವು ವಾಂತಿ ಮಾಡಿಕೊಂಡಿದ್ದೊ, ಅಥವಾ ಬಡಿಸಿದ್ದೊ, ಒಳ್ಳೆಯದೊ ಅಥವಾ ಹಳಸಿದ್ದೊ ಎಂಬುವುದನ್ನು ಕಾಗೆಯು ವಿಚಾರಿಸುವುದಿಲ್ಲ ।೫೫೬॥

ಅದರಂತೆ ಅಪವಿತ್ರ ವಸ್ತುಗಳ ತ್ಯಾಗ ಮಾಡಬೇಕು, ಅಥವಾ ಶಾಸ್ತ್ರದಲ್ಲಿ ಹೇಳಿದ್ದನ್ನು ಆದರದಿಂದ ಸ್ವೀಕರಿಸಬೇಕು ಎಂಬ ವಿಷಯದ ಜ್ಞಾನವನ್ನು ಅರಿಯುವುದಿಲ್ಲ ।೫೫೭॥

ಯಾವ ಯಾವ ಪದಾರ್ಥಗಳು ದೃಷ್ಟಿಗೆ ಬೀಳುತ್ತ ವೆಯೋ, ಆ ಎಲ್ಲ ವಸ್ತುಗಳನ್ನು ಉಪಭೋಗಿಸುವನು. ಸ್ತ್ರೀ ಸಿಕ್ಕರೆ ಶಿಶ್ನಕ್ಕೆ, ದ್ರವ್ಯ ಸಿಕ್ಕರೆ ಉದರಕ್ಕೆ ಹಂಚಿಬಿಡುವನು ।೫೫೮॥

ನೀರಡಿಸಿದವನು ನೀರನ್ನು ಕಂಡಾಗ ಇದು ತೀರ್ಥವೋ, ಅಪವಿತ್ರವೋ ಎಂಬುವುದನ್ನು ತಿಳಿಯಲಾರನು. ಆದರೆ ಅದರಿಂದ ನೀರಡಿಕೆ ದೂರಾಗುವುದೊಂದೇ ಸುಖವನ್ನು ಅರಿಯುವನು ।೫೫೯॥

ಅದರಂತೆ ಭಕ್ಷ್ಯ, ಅಭಕ್ಷ್ಯ ಹಾಗೂ ನಿಂದ್ಯಾ ನಿಂದ್ಯ ಇವುಗಳ ವಿಚಾರವನ್ನು ಮಾಡುವುದಿಲ್ಲ. ಆದರೆ ತನಗೆ ಹಿಡಿಸಿದ್ದೆ ಪವಿತ್ರವೆಂದು ಆತನ ನಿಶ್ಚಯವಾಗಿರುವುದು ।೫೬೦॥

ಮತ್ತು ಸ್ತ್ರೀ ಜಾತಿಯ ಎಲ್ಲವನ್ನೂ ಆಕೆಯ ವಿಷಯಕ್ಕೆ ಚರ್ಮೇಂದ್ರಿಯ ಭೋಗ ವಿಷಯವಷ್ಟೇ ತಿಳಿದು ಕೊಂಡಿರುವನು. ಹಾಗೂ ಆಕೆಯಲ್ಲಿ ಸಂಬಂಧಿಸಲು ತತ್ಪರನಾಗಿರುವನು ।೫೬೧॥

ಯಾವ ಜನರು ಹಣ ಗಳಿಕೆಗೆ ಉಪಯೋಗವಾಗು ವರೋ, ಅವರೇ ಆಪ್ತ-ಬಳಗದವರು, ದೇಹ ಸಂಬಂಧ ವಾದವರು ಆ ಜ್ಞಾನಕ್ಕೆ ಮಾನ್ಯವಾಗಿರುವುದಿಲ್ಲ ।೫೬೨॥

ಮೃತ್ಯೂಚೇ ಆಘವೇಂಚಿ ಅನ್ನ । ಆಘವೇಂಚಿ ಆಗೀ ಇಂಧನ । ತೈಸೇ ಜಗಚಿ ಆಪಲೇ ಧನ । ತಾಮಸಜ್ಞಾನಾ ।೫೬೩॥ ಐಸೇನಿ ವಿಶ್ವ ಸಕಳ । ಜೇಣೇ ವಿಷಯೋಚಿ ಮಾನಿಲೇ ಕೇವಳ । ತಯಾ ಏಕ ಜಾಣ ಫಳ । ದೇಹಭರಣ ।೫೬೪॥ ಆಕಾಶಪತಿತಾ ನೀರಾ । ಜೈಸಾ ಸಿಂಧೂಚಿ ಏಕ ಥಾರಾ । ತೈಸೇ ಕೃತ್ಯಜಾತ ಉದರಾ । ಲಾಗೀಂಚಿ ಬುಝೇ ।೫೬೫॥ ವಾಂಚೂನಿ ಸ್ವರ್ಗು ನರಕು ಆಥೀ । ತಯಾ ಹೇತು ಪ್ರವೃತ್ತಿ ನಿವೃತ್ತೀ । ಇಯೇ ಆಘವಿಯೇಚಿ ರಾತೀ । ಜಾಣಿವೇಚಿ ಜೇ ।೫೬೬॥ ಜೇ ದೇಹಖಂಡಾ ನಾಮ ಆತ್ಮಾ । ಈಶ್ವರ ಪಾಷಾಣಪ್ರತಿಮಾ । ಯಯಾಪರೌತೀ ಪ್ರಮಾ । ಢಳೋ ನೇಣೇ ।೫೬೭॥ ಮ್ಹಣೇ ಪಡಿಲೇನಿ ಶರೀರೇ । ಕೀಲೇನಿಸೀ ಆತ್ಮಾ ಸರೇ । ಮಾ ಭೋಗಾವಯಾ ಉರೇ । ಕೋಣ ವೇಷೇ ।೫೬೮॥ ನಾ ಈಶ್ವರು ಪಾಹಾತಾ ಆಹೇ । ತೋ ಭೋಗವೀ ಹೇ ಜರೀ ಹೋಯೇ । ತರೀ ದೇವಚಿ ಖಾಯೇ । ವಿಕೂನಿಯಾ ।೫೬೯॥ ಗಾಂವೀಂಚೇ ದೇವಳೇಶ್ವರ । ನಿಯಾಮಕಚಿ ಹೋತೀ ಸಾಚಾರ । ತರೀ ದೇಶೀಂಚೇ ಡೋಂಗರ । ಉಗೇ ಕಾ ಅಸತೀ ? ।೫೭೦॥ ಐಸಾ ವಿಪಾಯೇ ದೇವೋ ಮಾನಿಜೇ । ತರೀ ಪಾಷಾಣ ಮಾತ್ರಚಿ ಜಾಣಿಜೇ । ಆಣಿ ಆತ್ಮಾ ತವ ಮ್ಹಣಿಜೇ । ದೇಹಾತೇಂಚಿ ।೫೭೧॥ ಯೇರೇ ಪಾಪಾಪುಣ್ಯಾದಿಕೇ । ತೇ ಆಘವೇಂಚಿ ಕರೋನಿ ಲಟಿಕೇ । ಹಿತ ಮಾನೀ ಅಗ್ನಿಮುಖೇ । ಚರಣೇ ಜೇ ಕಾ ।೫೭೨॥ ಜೇ ಚಾಮಾಚೇ ಡೋಳೇ ದಾವಿತೀ । ಜೇ ಇಂದ್ರಿಯೇ ಗೋಡೀ ಲಾವಿತೀ । ತೇಂಚಿ ಸಾಚ ಹೇ ಪ್ರತೀತೀ । ಪುಡೀ ಜಯಾ ।೫೭೩॥ ಕಿಂಬಹುನಾ ಐಸೀ ಪ್ರಥಾ । ವಾಢತೀ ದೇಖಸೀ ಪಾರ್ಥಾ । ಧೂಮಾಚೀ ವೇಲೀ ವೃಥಾ । ಆಕಾಶೀ ಜೈಸೀ ।೫೭೪॥ ಕೋರಡಾ ನಾ ವೋಲಾ । ಉಪೇಗಾ ಆಥೀ ಗೇಲಾ । ತೋ ವಾಢೋನಿ ಮೋಡಲಾ । ಭೇಂಡು ಜೈಸಾ ।೫೭೫॥ ನಾನಾ ಉಂಸಾಂಚೀ ಕಣಸೇ । ಕಾ ನಪುಂಸಕೇ ಮಾಣುಸೇ । ವನ ಲಾಗಲೇ ಜೈಸೇ । ಸಾಬರೀಚೇ ।೫೭೬॥ ನಾತರೀ ಬಾಳಕಾಚೇ ಮನ । ಕಾ ಚೋರಾಘರೀಂಚೇ ಧನ । ಅಥವಾ ಗಳಾಸ್ತನ । ಶೇಳಿಯೇಚೇ ।೫೭೭॥ ತೈಸೇ ಜೇ ವಾಯಾಣೇ । ವೋಸಾಳ ದಿಸೇ ಜಾಣಣೇ । ತಯಾತೇ ಮೀ ಮ್ಹಣೇ । ತಾಮಸಜ್ಞಾನ ।೫೭೮॥ ತೇಂಹೀ ಜ್ಞಾನ ಇಯಾ ಭಾಷಾ । ಬೋಲಿಜೇ ತೋ ಭಾವೋ ಐಸಾ । ಜಾತ್ಯಂಧಾಚಾ ಕಾ ಜೈಸಾ । ಡೋಳಾ ವಾಡು ।೫೭೯॥

ಮೃತ್ಯುವಿಗೆ ಎಲ್ಲವೂ ತನ್ನ ಖಾದ್ಯ ಎಂದು ಅನಿಸುವುದು. ಅಗ್ನಿಗೆ ಎಲ್ಲವೂ ಬೆಂಕಿಯಾಗಿ ತೋರುವುದು. ಅದರಂತೆ ತಾಮಸ ಜ್ಞಾನಕ್ಕೆ ಎಲ್ಲ ಜಗತ್ತು ತನ್ನದೇ ಧನವೆಂದು ಅನಿಸುವುದು ।೮೬೩॥

ಈ ಪ್ರಕಾರವಾಗಿ ಸರ್ವ ಜಗವು ಉಪಭೋಗಕ್ಕಾಗಿಯೇ ನಿರ್ಮಾಣವಾಗಿದೆ ಎಂದು ತಾಮಸ ಜ್ಞಾನದ ತಿಳುವಳಿಕೆ ಯಾಗಿರುವುದು. ಅವರಿಗೆ ದೇಹಭರಣ ಹೊರತಾದ ಬೇರೆ ಪುರುಷಾರ್ಥವೇ ಇರುವುದಿಲ್ಲ ।೮೬೪॥

ಆಕಾಶದಿಂದ ಬಿದ್ದ ನೀರಿಗೆ ಸಮುದ್ರ ಒಂದೇ ನಿಲ್ಲಲು ಸ್ಥಾನವಾಗಿರುವಂತೆ ಈ ಜ್ಞಾನವು ಯಾವ ಕಾರ್ಯ ಮಾಡಿದರೂ ಅದು ಹೊಟ್ಟೆಗಾಗಿಯೇ ಎಂದು ತಿಳಿಯುವುದು ।೮೬೫॥

ಸ್ವರ್ಗ ಅಥವಾ ನರಕ ಇವುಗಳ ಪ್ರಾಪ್ತಿಗಾಗಿ ವಿಹಿತ ಹಾಗೂ ನಿಷಿದ್ಧ ಕರ್ಮಗಳ ಆಚರಣೆಯೇ ಕಾರಣವಾಗು ವುದು. ಆದರೆ ಇದರ ತಿಳುವಳಿಕೆಯು ಈ ಜ್ಞಾನಕ್ಕೆ ಗೊತ್ತೇ ಇರುವುದಿಲ್ಲ ।೮೬೬॥

ದೇಹವೆಂಬ ಈ ಸಣ್ಣ ತುಕಡಿಗೆ ಆತ್ಮವೆಂದು ಮತ್ತು ಈಶ್ವರನು ಕಲ್ಲಿನ ಮೂರ್ತಿಯಾಗಿರುವನು ಎಂದು ತಿಳಿದು ಇದರ ಹೊರತಾಗಿ ಇವರ ಬುದ್ಧಿಯು ಓಡುವುದೇ ಇಲ್ಲ ।೮೬೭॥

ಈ ಶರೀರವು ಬಿದ್ದು ಹೋದ ಮೇಲೆ ಆತ್ಮನು ಮಾಡಿದ ಕರ್ಮದೊಂದಿಗೆ ನಾಶವಾಗುವನು. ಆಗ ಕರ್ಮಗಳ ಫಲ ಭೋಗಿಸಲು ಇಲ್ಲಿ ಯಾವ ರೂಪದಿಂದ ಆತ್ಮನಿರುವನು ? ಎಂದು ಹೇಳುವರು ।೮೬೮॥

ಅಥವಾ ವಿಚಾರಿಸಿ ನೋಡಿದರೆ ಈಶ್ವರನು ಇದ್ದಾನೆಂಬುದು ಕಾಣುವುದಿಲ್ಲ. ಆದಾಗ್ಯೂ, ಕರ್ಮದ ಭೋಗಗಳನ್ನು ಭೋಗಿಸುವನು ಎಂದು ತಿಳಿದುಕೊಂಡರೆ ಬೆಳ್ಳಿ ಬಂಗಾರದ ದೇವರ ಮೂರ್ತಿಗಳನ್ನೇ ಮಾರಿ ತಿನ್ನುವರಲ್ಲಾ, ಇದರ ಗತಿ ಏನು ? ।೮೬೯॥

ಊರಿನಲ್ಲಿಯ ಪ್ರಮುಖ ದೇವರು ಕರ್ಮಗಳಿಗೆ ಶಾಸನ ಮಾಡುವುವು ಎಂದು ಹೇಳಿದರೆ, ಗುಡ್ಡದ ಮೇಲಿನ ದೇವರುಗಳು ಸುಮ್ಮನೇ ಏಕೆ ಕೂಡುವುವು ? ।೮೭೦॥

ಈ ಪ್ರಕಾರವಾಗಿ ಕದಾಚಿತ್ ದೇವರು ಇದ್ದಾನೆ ಎಂದು ತಿಳಿದರೂ ಆತನು ಕಲ್ಲಿನ ಮೂರ್ತಿಯಾಗಿರುವನು ಎಂದು ತಿಳಿಯುತ್ತಾರೆ ಮತ್ತು ಆತ್ಮವೆಂದರೆ ದೇಹವೇ ಎಂದು ತಿಳಿಯುವರು ।೮೭೧॥

ಇದರ ಹೊರತಾಗಿ ಪಾಪ ಮತ್ತು ಪುಣ್ಯ ಇವು ಎಲ್ಲವೂ ಸುಳ್ಳಾಗಿರುವುವು ಎನ್ನುವನು ಮತ್ತು ಅಗ್ನಿಯು ಸಿಕ್ಕಿದ ಎಲ್ಲವನ್ನೂ ಭಕ್ಷಿಸುವಂತೆ ಈತನು ಸಿಕ್ಕಿದ ಎಲ್ಲ ಭೋಗಗಳಲ್ಲಿಯೂ ಸುಖವಿದೆ ಎಂದು ತಿಳಿಯುವನು ।೮೭೨॥

ಚರ್ಮದ ಕಣ್ಣಿಗೆ ಕಾಣಿಸುವುದೆಲ್ಲವನ್ನೂ ಮತ್ತು ಇಂದ್ರಿಯಗಳು ಯಾವ ವಿಷಯಗಳ ರುಚಿ ಕಾಣುವುವೋ, ಅವೆಲ್ಲವೂ ನಿಜವಿದೆ ಎಂದು ನಿಶ್ಚಿತವಾಗಿ ತಿಳಿದಿರುವನು ।೮೭೩॥

ಹೆಚ್ಚಿಗೇನು ಹೇಳಬೇಕು ಪಾರ್ಥಾ, ಆಕಾಶದಲ್ಲಿ ಹೊಗೆಯ ಪ್ರವಾಹಗಳು ವ್ಯರ್ಥವಾಗಿ ಹೋಗುವುವು. ಅದರಂತೆ ಈತನ ಬುದ್ಧಿಯು ಬೆಳೆಯುತ್ತಿರುವುದು ।೮೭೪॥

ಬೆಂಡಿಯ ಗಿಡವು ಹಸಿಯಾಗಿರಲಿ, ಒಣಗಿರಲಿ ಕೆಲಸಕ್ಕೆ ಬರುವುದಿಲ್ಲ. ಅದು ವ್ಯರ್ಥವಾಗಿ ಉದ್ದುದ್ದಾಗಿ ಬೆಳೆದು ಮುರಿದ್ಹೋಗುವುದು ।೮೭೫॥

ಕಬ್ಬಿನ ತೆನೆ (ಸೂಲಂಗಿ), ನಪುಂಸಕ ಮನುಷ್ಯ, ಅಥವಾ ಮುಳ್ಳುಗಳ್ಳಿಯ ಅರಣ್ಯವು ಇವೆಲ್ಲವೂ ನಿರುಪಯೋಗಿ ಯಾಗಿರುವುವು ।೮೭೬॥

ಅಥವಾ ಬಾಲಕನ ಮನಸ್ಸು, ಅಥವಾ ಕಳ್ಳನ ಮನೆಯ ಧನವು, ಅಥವಾ ಆಡಿನ ಕೊರಳೊಳಗಿನ ಮೊಲೆ, ಇವೆಲ್ಲವೂ ನಿರುಪಯೋಗಿಯಾಗಿರುವುವು ।೮೭೭॥

ಇಂಥ ಯಾವ ನಿರರ್ಥಕ ಹಾಗೂ ಶೂನ್ಯ ಕೆಡುಕಾಗಿರುವ ತಿಳುವಳಿಕೆಗೆ ನಾನು ತಾಮಸ ಜ್ಞಾನವೆಂದು ಹೇಳುವೆನು ।೮೭೮॥

ಇದಕ್ಕೂ ಜ್ಞಾನವೆಂದು ಹೇಳುವ ಉದ್ದೇಶವೇನೆಂದರೆ, ಹುಟ್ಟು ಕುರುಡನ ಕಣ್ಣಿನ ಬಗ್ಗೆ ಹೇಳುವಾಗ ಆತನ ಕಣ್ಣುಗಳು ಬಹಳ ದೊಡ್ಡದಾಗಿವೆ ಎಂದು ಹೇಳಬೇಕಾಗು ವುದು ।೮೭೯॥

ಕಾ ಬಧಿರಾಚೇ ನೀಟ ಕಾನ । ಅಪೇಯಾ ನಾಮ ಪಾನ । ತೈಸೇ ಅಡನಾಂವ ಜ್ಞಾನ । ತಾಮಸಾ ತಯಾ ।೮೮೦॥ ಹೇ ಅಸೋ ಕಿತೀ ಬೋಲಾವೇ । ತರೀ ಐಸೇ ಜೇ ದೇಖಾವೇ । ತೇ ಜ್ಞಾನ ನೋಹೇ ಜಾಣಾವೇ । ಡೋಳಸ ತಮ ।೮೮೧॥ ಏವಂ ತಿಹೀ ಗುಣೀ । ಭೇದಲೇ ಯಥಾಲಕ್ಷಣೀ । ಜ್ಞಾನ ಶ್ರೋತೇ ಶಿರೋಮಣೀ । ದಾವಿಲೇ ತುಜ ।೮೮೨॥ ಆತಾ ಯಾಚಿ ತ್ರಿಪ್ರಕಾರಾ । ಜ್ಞಾನಾಚೇನಿ ಧನುರ್ಧರಾ । ಪ್ರಕಾಶೇ ಹೋತೀ ಗೋಚರಾ । ಕರ್ತಯಾಂಚ್ಯಾ ಕ್ರಿಯಾ ।೮೮೩॥ ಮ್ಹಣೌನಿ ಕರ್ಮ ಪೈ ಗಾ । ಅನುಸರೇ ತಿಹೀ ಭಾಗಾ । ಮೋಹರೇ ಜಾಲಿಯಾ ವೋಘಾ । ತೋಯ ಜೈಸೇ ।೮೮೪॥ ತೇಂಚಿ ಜ್ಞಾನತ್ರಯವಶೇ । ತ್ರಿವಿಧ ಕರ್ಮ ಜೇ ಅಸೇ । ತೇಥ ಸಾತ್ವಿಕ ತಂವ ಐಸೇ । ಪರಿಸ ಆಧೀ ।೮೮೫॥

ನಿಯತಂ ಸಂಗರಹಿತಮ್ ಅರಾಗದ್ವೇಷತಃ ಕೃತಮ್ ।
ಅಫಲಪ್ರೇಪ್ಸುನಾ ಕರ್ಮ ಯತ್ತತ್ ಸಾತ್ತ್ವಿಕಮುಚ್ಯತೇ ।೨೩॥

ತರೀ ಸ್ವಾಧಿಕಾರಾಚೇನ ಮಾರ್ಗೇ । ಆಲೇ ಜೇ ಮಾನಿಲೇ ಆಂಗೇ । ಪ್ರತಿವ್ರತೇಚೇನಿ ಪರಿಷ್ವಂಗೇ । ಪ್ರಿಯಾತೇ ಜೈಸೇ ।೮೮೬॥ ಸಾಂವಳ್ಯಾ ಆಂಗಾ ಚಂದನ । ಪ್ರಮದಾಲೋಚನೀ ಅಂಜನ । ತೈಸೇ ಅಧಿಕಾರಾಸೀ ಮಂಡಣ । ನಿತ್ಯಪಣೇ ಜೇ ।೮೮೭॥ ತೇ ನಿತ್ಯ ಕರ್ಮ ಭಲೇ । ಹೋಯ ನೈಮಿತ್ತಿಕೀ ಸಾವಾಇಲೇ । ಸೋನಯಾಸಿ ಜೋಡಲೇ । ಸೌರಭ್ಯ ಜೈಸೇ ।೮೮೮॥ ಆಣಿ ಆಂಗಾ ಜೀವಾಚೀ ಸಂಪತ್ತೀ । ವೇಂಚೂನಿ ಬಾಳಾಚೀ ಕರೀ ಪಾಳತೀ । ಪರೀ ಜೀವೇ ಉಬಗಣೇ ಹೇ ಸ್ಥಿತೀ । ನ ಪಾಹೇ ಮಾಯ ।೮೮೯॥ ತೈಸೇ ಸರ್ವಸ್ವೇ ಕರ್ಮ ಅನುಷ್ಠೀ । ಪರೀ ಫಳ ನ ಸೂಯೇ ದಿಠೀ । ಉಖಿತೀ ಕ್ರಿಯಾ ಪೈಠೀ । ಬ್ರಹ್ಮೀಂಚಿ ಕರೀ ।೮೯೦॥ ಆಣಿ ಪ್ರಿಯ ಆಲಿಯಾ ಸ್ವಭಾವೇ । ಶಂಬಳ ಉರೇ ವೇಚೇ ಠಾಉವೇ । ನವ್ಹೇ ತೈಸೇ ಸತ್ರಸಂಗೇ ಕರಾವೇ । ಪಾರುಷೇ ಜರೀ ।೮೯೧॥ ತರೀ ಅಕರಣಾಚೇನಿ ಖೇದೇ । ದ್ವೇಷಾತೇ ಜಿವೀ ನ ಬಾಂಧೇ । ಜಾಲಿಯಾಚೇನಿ ಆನಂದೇ । ಫುಂಜೋ ನೇಣೇ ।೮೯೨॥ ಐಸ ಐಸಿಯಾ ಹಾತವಟಿಯಾ । ಕರ್ಮ ನಿಫಜೇ ಜೇ ಧನಂಜಯಾ । ಜಾಣ ಸಾತ್ತ್ವಿಕ ಹೇ ತಯಾ । ಗುಣನಾಮ ಗಾ ।೮೯೩॥ ಯಯಾವರೀ ರಾಜಸಾಚೇ । ಲಕ್ಷಣ ಸಾಂಗಿಜೇಲ ಸಾಚೇ । ನ ಕರೀ ಅವಧಾನಾಚೇ । ವಾಣೇಪಣ ।೮೯೪॥

ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ ।
ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಮ್ ।೨೪॥

ಕಿವುಡನ ಕಿವಿಗಳು ಬಹಳ ದೊಡ್ಡದಾಗಿವೆ ಎಂದು ಹೇಳಬೇಕಷ್ಟೇ ಅಥವಾ ಅಪೇಯವಾದ ಮದ್ಯಾದಿಕಗಳಿಗೆ ಪಾನವೆಂದು ಹೆಸರಿರುವಂತೆ ಆ ತಾಮಸಕ್ಕೆ ಜ್ಞಾನವು ಅಡ್ಡ ಹೆಸರಾಗಿದೆ ।೫೮೦॥

ಇದು ಇರಲಿ, ಇನ್ನು ಏನೆಂದು ವರ್ಣಿಸಬೇಕು ? ಅದಕ್ಕಾಗಿ ಇಂಥ ಜ್ಞಾನಕ್ಕೆ ಜ್ಞಾನವೆಂದು ತಿಳಿಯದೇ ಪ್ರತ್ಯಕ್ಷವಾಗಿ ಕಾಣುವ ತಮೋಗುಣವೆಂದೇ ತಿಳಿಯಬೇಕು ।೫೮೧॥

ಹೇ ಶ್ರೋತೃಶ್ರೇಷ್ಠನೇ, ಈ ಪ್ರಕಾರವಾಗಿ ಮೂರು ಗುಣಗಳಿಂದ ಭೇದವಾಗಿರುವ ಯಾವ ಜ್ಞಾನದ ಯಥಾರ್ಥ ಲಕ್ಷಣಗಳನ್ನು ನಿನಗೆ ಹೇಳಿದೆನು ।೫೮೨॥

ಹೇ ಧನುರ್ಧರನೇ, ಈಗ ಇದೇ ಮೂರು ಪ್ರಕಾರಗಳ ಜ್ಞಾನದ ಪ್ರಕಾಶದಿಂದ ಕರ್ತನ ಕ್ರಿಯೆಗಳು ಸ್ಪಷ್ಟವಾಗಿ ತೋರುವುವು ।೫೮೩॥

ಆದ್ದರಿಂದ ನೀರು ಬಿಟ್ಟಲ್ಲೆ ಹೋಗುವಂತೆ, ಕರ್ಮಗಳು ಈ ಜ್ಞಾನದ ಮೂರು ಭಾಗಗಳಿಂದ ಬೇರೆ ಬೇರೆಯಾಗಿ ನಡೆಯುವುವು ।೫೮೪॥

ಇದೇ ಜ್ಞಾನದಿಂದ ಯಾವ ಮೂರು ಪ್ರಕಾರಗಳ ಕರ್ಮವಾಗುವುದೋ, ಅದರಲ್ಲಿ ಸಾತ್ತ್ವಿಕ ಕರ್ಮದ ಲಕ್ಷಣಗಳನ್ನು ಪ್ರಥಮವಾಗಿ ಕೇಳು ।೫೮೫॥

ಶ್ಲೋಕಾರ್ಥ :- ಫಲದ ಮೇಲೆ ಆಸೆಯಿಲ್ಲದೆ, ಕರ್ತೃತ್ವಾಭಿಮಾನವಿಲ್ಲದೆ, ರಾಗದ್ವೇಷಗಳಿಗೆ ಒಳ ಪಡದೆ ಮಾಡುವ ವಿಹಿತ ಕರ್ಮವು ಸಾತ್ತ್ವಿಕ ಕರ್ಮವೆಂದು ಹೇಳಲ್ಪಡುತ್ತದೆ ।೨೩॥

ಪತಿವ್ರತೆ ಸ್ತ್ರೀಯು ತನ್ನ ಪ್ರಿಯ ಪತಿಗೆ ಆಲಿಂಗಿಸುವಂತೆ, ತಮ್ಮ ಅಧಿಕಾರ ತಕ್ಕಂತೆ ತಮಗೆ ಯೋಗ್ಯವೆನಿಸಿದ ಕರ್ಮಗಳನ್ನು ಆಚರಿಸುವರು ।೫೮೬॥

ಶ್ಯಾಮವರ್ಣ ಶರೀರಕ್ಕೆ ಚಂದನವು ಶೋಭಿಸುವಂತೆ ಹಾಗೂ ಸ್ತ್ರೀಯರ ಕಣ್ಣುಗಳಿಗೆ ಅಂಜನವು ಶೋಭಿಸುವಂತೆ, ನಿತ್ಯದಲ್ಲಿ ಅಧಿಕಾರಾನುರೂಪ ಕರ್ಮಾಚರಣೆಗಳು ಶೋಭಿಸುವುವು ।೫೮೭॥

ಅವರು ನಿತ್ಯ ಕರ್ಮಗಳನ್ನು ಮಾಡುತ್ತಿರುವಾಗ್ಗೆ ನೈಮಿತ್ತಿಕ ಕರ್ಮಗಳ ಪ್ರಸಂಗ ಬಂದರೆ ಬಂಗಾರದ ಒಡವೆಗಳಿಗೆ ಸುಗಂಧದಿಂದ ಶೋಭಿಸುವಂತೆ ಆಗುವುದು ।೫೮೮॥

ಶರೀರದಿಂದ, ಜೀವದಿಂದ ಹಾಗೂ ಸಂಪತ್ತಿನಿಂದ ತಾಯಿಯು ತನ್ನ ಬಾಲಕನ ರಕ್ಷಣೆ ಮಾಡುವಳು. ಆದರೆ ಆಕೆಗೆ ಇದಕ್ಕಾಗಿ ಬೇಸರ ಎಂದೂ ಆಗುವುದಿಲ್ಲ ।೫೮೯॥

ಅದರಂತೆ ಎಲ್ಲ ಕರ್ಮಗಳನ್ನು ಸರ್ವ ಪರಿಯಿಂದ ಆಚರಿಸಿ ಯಾವ ಫಲದ ಇಚ್ಛೆಯನ್ನು ಮಾಡದೇ ಬ್ರಹ್ಮಾರ್ಪಣವನ್ನು ಮಾಡುವನು ।೫೯೦॥

ತನ್ನ ಪ್ರಿಯ ಪತಿಯು ಮನೆಗೆ ಬಂದಾಗ ಊಟದ ಸಮಯದಲ್ಲಿ ತನಗೆ ಪದಾರ್ಥಗಳು ಉಳಿಯುವುವೋ, ಮುಗಿಯುವುವೋ ಎಂದು ಪತಿವ್ರತೆ ಸ್ತ್ರೀಯ ಲಕ್ಷದಲ್ಲಿ ಬರುವುದಿಲ್ಲ. ಅದರಂತೆ ಸಂತರು ಮನೆಗೆ ಬಂದಾಗ ಅವರ ಆದರಾತಿಥ್ಯದಲ್ಲಿ ತನ್ನ ಕರ್ಮಗಳು ಉಳಿದುಕೊಂಡರೆ ।೫೯೧॥

ಆ ಕರ್ಮಗಳನ್ನು ಆಚರಿಸುವುದು ಆಗಲಿಲ್ಲದ್ದಕ್ಕೆ ಮನಸ್ಸಿಗೆ ಖೇದವನ್ನುಂಟು ಮಾಡಿಕೊಳ್ಳುವುದಿಲ್ಲ ಮತ್ತು ಕರ್ಮವು ಪೂರ್ಣಗೊಂಡರೂ ಆನಂದದಿಂದ ಗರ್ವ ಪಡುವುದಿಲ್ಲ ।೫೯೨॥

ಹೇ ಧನಂಜಯನೇ, ಈ ಯುಕ್ತಿಯಿಂದ ಕರ್ಮಗಳು ಆಗುತ್ತಿದರೆ ಅದಕ್ಕೆ ಸಾತ್ತ್ವಿಕ ಕರ್ಮವೆಂದು ಹೇಳುವರು. ಇದು ಅವರ ಗುಣಗಳಿಂದ ಪ್ರಾಪ್ತವಾಗುವುದು, ಹೀಗೆ ತಿಳಿ ।೫೯೩॥

ಇನ್ನು ಮುಂದೆ ರಾಜಸ ಕರ್ಮದ ನಿಜ ಸ್ವರೂಪವನ್ನು ನಿನಗೆ ಹೇಳುವೆನು, ಅದನ್ನು ಕೇಳುವುದಕ್ಕೆ ಅಲಕ್ಷ ಮಾಡಬೇಡ ।೫೯೪॥

ಶ್ಲೋಕಾರ್ಥ :- ಫಲಾಶೆಯಿಂದಲೂ ; ಅಹಂಕಾರದಿಂದಲೂ, ಮಾಡುವ ಕರ್ಮ ರಾಜಸ ಕರ್ಮ. ಅದರಿಂದ ಪ್ರಯಾಸ ಜಾಸ್ತಿ ।೨೪॥

ತರೀ ಘರೀ ಮಾತಾಪಿತರಾ । ಧಡ ಬೋಲೀ ನಾಹೀ ಸಂಸಾರಾ । ಯೇರ ವಿಶ್ವ ಭರೀ ಆದರಾ । ಮೂರ್ಖು ಜೈಸಾ ।೪೯೫॥ ಕಾ ತುಳಶೀಚಿಯಾ ಝಾಡಾ । ದುರೂನಿ ನ ಘಾಪೇ ಸಿಂತೋಡಾ । ದ್ರಾಕ್ಷೀಚಿಯಾ ತರೀ ಬುಡಾ । ಧೂಧಚಿ ಲಾವಿಜೇ ।೪೯೬॥ ತೈಸೀ ನಿತ್ಯನೈಮಿತ್ತಿಕೇ । ಕರ್ಮೇ ಜಿಯೇ ಅವಶ್ಯಕೇ । ತಯಾಂಚೇವಿಷೀ ನ ಶಕೇ । ಬೈಸಲಾ ಉಠೂ ।೪೯೭॥ ಯೇರಾ ಕಾಮ್ಯಾಚೇನಿ ತರೀ ನಾಂವೇ । ದೇಹ ಸರ್ವಸ್ವ ಆಘವೇ । ವೇಂಚಿತಾಂಹೀ ನ ಮನವೇ । ಬಹು ಐಸೇ ।೪೯೮॥ ಅಗಾ ದೇವಢೀ ವಾಢೀ ಲಾಹಿಜೇ । ತೇಥ ಮೋಲ ದೇತಾ ನ ಧಾಇಜೇ । ಪೇರಿತಾ ಪುರೇ ನ ಮ್ಹಣಿಜೇ । ಬೀಜ ಜೇವೀ ।೪೯೯॥ ಕಾ ಪರಿಸು ಜಾಲಿಯಾ ಹಾತೀ । ಲೋಹಾಲಾಗೀ ಸರ್ವಸಂಪತ್ತೀ । ವೇಂಚಿತಾ ಯೇ ಉನ್ನತೀ । ಸಾಧಕು ಜೈಸಾ ।೫೦೦॥ ತೈಸೀ ಫಳೇ ದೇಖೋನಿ ಪುಢೇ । ಕಾಮ್ಯಕರ್ಮೇ ದುವಾಡೇ । ಕರೀ ಪರೀ ತೇ ಥೋಕಡೇ । ಕೇಲೇಂಹೀ ಮಾನೀ ।೫೦೧॥ ತೇಣೇ ಫಳಕಾಮುಕೇ । ಯಥಾವಿಧಿ ನೇಟಕೇ । ಕಾಮ್ಯ ಕೀಜೇ ತಿತುಕೇ । ಕ್ರಿಯಾಜಾತ ।೫೦೨॥ ಆಣಿ ತಯಾಹೀ ಕೇಲಿಯಾಚೇ । ತೋಂಡೀ ಲಾವೀ ದೌಂಡೀಚೇ । ಕರ್ಮೀ ಯಾ ನಾಂವ ಪಾತಾಚೇ । ವಾಣೇ ಸಾರೀ ।೫೦೩॥ ತೈಸಾ ಭರೇ ಕರ್ಮಾಹಂಕಾರು । ಮಗ ಪಿತಾ ಅಥವಾ ಗುರು । ತೇ ನ ಮನೀ ಕಾಳಜ್ವರು । ಔಷಧ ಜೈಸೇ ।೫೦೪॥ ತೈಸೇನಿ ಸಾಹಂಕಾರೇ । ಫಳಾಭಿಲಾಷಿಯೇ ನರೇ । ಕೀಜೇ ಗಾ ಆದರೇ । ಜೇ ಜೇ ಕಾಂಹೀ ।೫೦೫॥ ಪರೀ ತೇಂಹೀ ಕರಣೇ ಬಹುವಸಾ । ವಳಘೋನಿ ಕರೀ ಸಾಯಾಸಾ । ಜೀವನೋಪಾವೋ ಕಾ ಜೈಸಾ । ಕೋಲ್ಹಾಟಿ ಯಾಂಚಾ ।೫೦೬॥ ಏಕಾ ಕಣಾಲಾಗೀ ಉಂದಿರು । ಆಸಕಾ ಉಪಸೇ ಡೋಂಗರು । ಕಾ ಶೇವಳೋದ್ದೇಶೇ ದರ್ದುರು । ಸಮುದ್ರು ಡಹುಳೀ ।೫೦೭॥ ಪೈ ಭಿಕೇ ಪರತೇ ನ ಲಾಹೇ । ತರ್ಹೀ ಗಾರುಡೀ ಸಾಪು ವಾಹೇ । ಕಾಯ ಕೀಜೇ ಶೀಣುಚಿ ಹೋಯೇ । ಗೋಡು ಐಕಾ ।೫೦೮॥ ಹೇ ಅಸೋ ಪರಮಾಣೂಚೇನಿ ಲಾಭೇ । ಪಾತಾಳ ಲಂಘಿತೀ ವೋಳಂಬೇ । ತೈಸೇ ಸ್ವರ್ಗಸುಖಲೋಭೇ । ವಿಚಂಬಣೇ ಜೇ ।೫೦೯॥ ತೇ ಕಾಮ್ಯ ಕರ್ಮ ಸಕ್ಲೇಶ । ಜಾಣಾವೇ ಯೇಥ ರಾಜಸ । ಆತಾ ಚಿನ್ಹ ಪರಿಸ । ತಾಮಸಾಚೇ ।೫೧೦॥

ಅನುಬಂಧಂ ಕ್ಷಯಂ ಹಿಂಸಾಂ ಅನಪೇಕ್ಷ್ಯ ಚ ಪೌರುಷಮ್ ।
ಮೋಹಾದಾರಭ್ಯತೇ ಕರ್ಮ ಯತ್ತಾತ್ತಾಮಸಮುಚ್ಯತೇ ।೨೫॥

ಮನೆಯಲ್ಲಿ ತಂದೆ ತಾಯಿಗಳಿದ್ದು, ಸಂಸಾರದಲ್ಲಿ ಅವರೊಂದಿಗೆ ಸರಿಯಾಗಿ ಮಾತನಾಡದವನು ಮೂರ್ಖತನ ದಿಂದ ಜಗತ್ತಿನ ಎಲ್ಲ ಜನರ ಆದರಾತಿಥ್ಯ ಮಾಡುವನು ।೯೫೫॥

ಅಥವಾ ತುಳಸೀ ಗಿಡಕ್ಕೆ (ಅದರಿಂದ ಫಲ ಪುಷ್ಪಗಳು ದೊರಕದ್ದಕ್ಕೆ) ದೂರದಿಂದಲೂ ಸಹ ನೀರನ್ನು ಸಿಂಪಡಿಸುವುದಿಲ್ಲ. ಆದರೆ ದ್ರಾಕ್ಷಿ ಗಿಡಕ್ಕೆ ಮಾತ್ರ ಹಾಲನ್ನು ಹಾಕುವನು ।೯೯೬॥

ಅದರಂತೆ ಆವಶ್ಯಕವಾಗಿರುವ ನಿತ್ಯ ನೈಮಿತ್ತಿಕ ಕರ್ಮಗಳ ಆಚರಣೆಯ ವಿಷಯದಲ್ಲಿ ಕುಳಿತುಕೊಂಡವನು ಏಳುವುದೂ ಸಹ ಇಲ್ಲ ।೯೯೭॥

ಅದಲ್ಲದೇ, ಕಾಮ್ಯ ಕರ್ಮಗಳಲ್ಲಿ ತನ್ನ ಎಲ್ಲ ದೇಹವು ಸವೆದು ಹೋದರೂ ಆತನಿಗೆ ವಿಶೇಷವೆನಿಸುವುದಿಲ್ಲ ।೯೯೮॥

ಇಮ್ಮಡಿ ಮುಮ್ಮಡಿ ಲಾಭವಾಗುವ ವ್ಯವಹಾರದಲ್ಲಿ ಎಷ್ಟು ಹಣ ಹಾಕಿದರೂ ತೃಪ್ತಿಯಾಗದು, ಹೊಲದಲ್ಲಿ ಬೀಜ ಬಿತ್ತುವಾಗ ಸಾಕು ಎಂದು ಯಾರೂ ಹೇಳುವುದಿಲ್ಲ ।೯೯೯॥

ಅಥವಾ ಪರಿಸವು ಕೈಗೆ ಸಿಕ್ಕರೆ ಕಬ್ಬಿಣವನ್ನು ಬಂಗಾರವನ್ನಾಗಿ ಮಾಡಲು, ಬಂಗಾರವನ್ನು ಮಾರಿ ಕಬ್ಬಿಣವನ್ನು ಖರೀದಿಸುವನು ।೬೦೦॥

ಅದರಂತೆ ಫಲದ ಮೇಲೆ ಆಶೆಯಿಟ್ಟು ಕಠಿಣವಾದ ಕರ್ಮಗಳನ್ನು ಬಹಳಷ್ಟು ಮಾಡುವನು. ಆದರೆ ಅವುಗಳಿಗೆ ಸ್ವಲ್ಪವೆಂದು ತಿಳಿಯುವನು ।೬೦೧॥

ಅದರಂತೆ ಫಲದ ಇಚ್ಛೆಯನ್ನು ಧರಿಸಿ ಇರುವ ಕಾಮ್ಯ ಕರ್ಮಗಳೆಲ್ಲವನ್ನೂ ಯಥಾವಿಧಿಯಾಗಿ ಆಚರಿಸುವನು ।೬೦೨॥

ಮತ್ತು ಮಾಡಿದ ಕರ್ಮಗಳನ್ನು ತನ್ನ ಮುಖದಿಂದಲೇ ವರ್ಣಿಸುವನು ಮತ್ತು ನಾನು ದೊಡ್ಡ ಕರ್ಮಠನು ಎಂದು ತನ್ನ ಹೆಸರನ್ನು ನಾಲ್ಕೂ ಕಡೆ ಹಬ್ಬಿಸುವನು ।೬೦೩॥

ಕಾಳಜ್ವರವು ಯಾವ ಔಷಧಕ್ಕೂ ಜುಮ್ಮೆನ್ನದಂತೆ ಆ ಪುರುಷನಲ್ಲಿ ಕರ್ಮಾಹಂಕಾರವು ತುಂಬಿಕೊಂಡು ತನ್ನ ತಂದೆ, ಗುರುಗಳಿಗೂ ಸಹ ಲಕ್ಷಿಸುವುದಿಲ್ಲ ।೬೦೪॥

ಇಂಥ ಕರ್ಮಾಭಿಮಾನಿ ಹಾಗೂ ಫಲಾಭಿಲಾಷಿ ಪುರುಷನಿಂದ ನಡೆಯುವ ಯಾವತ್ತೂ ಕರ್ಮಗಳು ಬಹಳ ಆದರದಿಂದ ಆಗುತ್ತವೆ ।೬೦೫॥

ಆದರೆ ಇವರು ಮಾಡಿದ ಪ್ರತಿಯೊಂದು ಕರ್ಮಗಳು ಡೊಂಬರ ಆಟದವನು ತನ್ನ ಹೊಟ್ಟೆಪಾಡಿಗೆ ಶ್ರಮ ಪಡುವಂತೆ ಕೇವಲ ಕಷ್ಟಕ್ಕೆ ಕಾರಣವಾಗುತ್ತವೆ ।೬೦೬॥

ಒಂದು ಕಣಕ್ಕಾಗಿ ಇಲಿಯು ಗುಡ್ಡವನ್ನು ಕೊರೆಯುವುದು. ಅಥವಾ ಅಂತರ್‌ಗಂಗೆಗಾಗಿ ಕಪ್ಪೆಯು ಸಮುದ್ರವನ್ನೇ ಕದಡುವುದು ।೬೦೭॥

ಭಿಕ್ಷೆಯ ಹೊರತು ಬೇರೆ ಏನೂ ಪ್ರಾಪ್ತವಾಗದಿದ್ದರೂ ಗಾರುಡಿಯು ಸರ್ಪಗಳ ಭಾರವನ್ನು ಹೊರುವನು. ಏನು ಮಾಡಬೇಕು ! ಈ ಜನರಿಗೆ ಪರಿಶ್ರಮವೇ ಪ್ರಿಯವಾಗಿದೆ ।೬೦೮॥

ಇದು ಇರಲಿ, ಒಂದು ಕಣದ ಆಶೆ ಹಿಡಿದು ಗೆದ್ದಲ ಹುಳವು ಪಾತಾಳದವರೆಗೂ ಅಗೆಯುವುದು. ಅದರಂತೆ ಸ್ವರ್ಗಸುಖದ ಪ್ರಾಪ್ತಿಗಾಗಿ ಶ್ರಮ ಮಾಡುವುದು ।೬೦೯॥

ಇದೇ ಕ್ಲೇಶಯುಕ್ತ ಕಾಮ್ಯ ಕರ್ಮವು ರಾಜಸವಾಗಿದೆ, ಹೀಗೆ ತಿಳಿ. ಈಗ ತಾಮಸ ಕರ್ಮದ ಲಕ್ಷಣಗಳನ್ನು ಹೇಳುವೆನು, ಅದನ್ನು ಕೇಳು ।೬೧೦॥

ಶ್ಲೋಕಾರ್ಥ :- ಹಿಂದು ಮುಂದು ನೋಡದೇ, ಕಷ್ಟ ನಿಷ್ಠುರಗಳನ್ನು ಗಮನಿಸದೆ, ತನ್ನಿಂದ ಆಗಬಹುದೋ ಇಲ್ಲವೋ ಎಂಬುದನ್ನು ಗಮನಿಸದೆ, ಅವಿವೇಕದಿಂದ ಮಾಡುವ ಕರ್ಮವು ತಾಮಸವೆನಿಸುತ್ತದೆ ।೨೫॥

ತರೀ ತೇ ಗಾ ತಾಮಸ ಕರ್ಮ । ಜೇ ನಿಂದೇಚೇ ಕಾಳೇ ಧಾಮ । ನಿಷೇಧಾಚೇ ಜನ್ಮ । ಸಾಚ ಜೇಣೇ ।೬೧೧॥ ಜೇ ನಿಪಜವಿಲ್ಯಾಪಾಠೀ । ಕಾಂಹೀಂಚ ನ ದಿಸೇ ದಿಠೀ । ರೇಘ ಕಾಢಿಲಿಯಾ ಪೋಟೀ । ತೋಯಾಚೇ ಜೇವೀ ।೬೧೨॥ ಕಾ ಕಾಜೀ ಘುಸಳಲಿಯಾ । ಕಾ ರಾಖೋಂಡಿ ಫುಂಕಲಿಯಾ । ಕಾಂಹೀ ನ ದಿಸೇ ಗಾಳಿಲಿಯಾ । ವಾಳುಘಾಣಾ ।೬೧೩॥ ನಾನಾ ಉಪಣಿಲಿಯಾ ಭೂಂಸ । ಕಾ ವಿಂಧಿಲಿಯಾ ಆಕಾಶ । ನಾನಾ ಮಾಂಡಿಲಿಯಾ ಪಾಶ । ವಾರಯಾಸೀ ।೬೧೪॥ ಹೇ ಅವಘೇಂಚಿ ಜೈಸೇ । ವಾಂಝೋ ಹೋಊನಿ ನಾಸೇ । ಜೇ ಕೇಲಿಯಾ ಪಾಠೀ ತೈಸೇ । ವಾಯಾಂಚಿ ಜಾಯ ।೬೧೫॥ ಯೇರ್ಹವೀ ನರದೇಹಾಹೀ ಯೆವಢೇ । ಧನ ಆಟಣಿಯೇ ಪಡೇ । ಜೇ ಕರ್ಮ ನಿಫಜವಿತಾ ಮೋಡೇ । ಜಗಾಚೇ ಸುಖ ।೬೧೬॥ ಜೈಸಾ ಕಮಳವನೀ ಫಾಂಸು । ಕಾಢಿಲಿಯಾ ಕಾಂಟಸು । ಆಪಣ ಝಿಜೇ ನಾಶು । ಕಮಳಾ ಕರೀ ।೬೧೭॥ ಕಾ ಆಪಣ ಆಂಗೇ ಜಳೇ । ಆಣಿ ನಾಗವೀ ಜಗಾಚೇ ಡೋಳೇ । ಪತಂಗು ಜೈಸಾ ಸಳೇ । ದೀಪಾಚೇನಿ ।೬೧೮॥ ತೈಸೇ ಸರ್ವಸ್ವ ವಾಯಾ ಜಾವೋ । ವರೀ ದೇಹಾಹೀ ಹೋಯ ಘಾಂವೋ । ಪರೀ ಪುಢಿಲಾ ಅಪಾವೋ । ನಿಫಜವಿಜೇ ಜೇಣೇ ।೬೧೯॥ ಮಾಸೀ ಆಪಣಯಾತೇ ಗಿಳವೀ । ಪರೀ ಪುಢಿಲಾ ವಾಂತೀ ಶಿಣವೀ । ತೇ ಕಶ್ಮಳೇ ಆಠವೀ । ಆಚರಣ ಜೇ ।೬೨೦॥ ತೇಂಹೀ ಕರಾವಯಾ ದೋಷೇ । ಮಜ ಸಾಮರ್ಥ್ಯ ಅಸೇ ಕೀ ನಸೇ । ಹೇಂಹೀ ಪುಢೀಲ ತೈಸೇ । ನ ಪಾಹತಾ ಕರೀ ।೬೨೧॥ ಕೇವಢಾ ಮಾಝಾ ಉಪಾವೋ । ಕರಿತಾ ಕೋಣ ಪ್ರಸ್ತಾವೋ । ಕೇಲಿಯಾಹೀ ಆವೋ । ಕಾಯ ಯೇಥ ।೬೨೨॥ ಇಯೇ ಜಾಣಿವೇಚೀ ಸೋಯೇ । ಅವಿವೇಕಾಚೇನಿ ಪಾಯೇ । ಪುಸೋನಿಯಾ ಹೋಯೇ । ಸಾಟೋಪ ಕರ್ಮೀ ।೬೨೩॥ ಆಪುಲಾ ವಸೌಟಾ ಜಾಳುನೀ । ಬಿಸಾಟೇ ಜೈಸಾ ವನ್ಹಿ । ಕಾ ಸ್ವಮರ್ಯಾದಾ ಗಿಳೋನೀ । ಸಿಂಧು ಉಠೀ ।೬೨೪॥ ಮಗ ನೇಣೇ ಬಹು ಥೋಡೇ । ನ ಪಾಹೇ ಮಾಗೇ ಪುಢೇ । ಮಾರ್ಗಾಮಾರ್ಗ ಯೇಕವಢೇ । ಕರೀತ ಚಾಲೇ ।೬೨೫॥ ತೈಸೇ ಕೃತ್ಯಾಕೃತ್ಯ ಸರಕಟಿತ । ಆಪಪರ ನುರವಿತ । ಕರ್ಮ ಹೋಯ ತೇ ನಿಶ್ಚಿತ । ತಾಮಸ ಜಾಣ ।೬೨೬॥ ಐಸೀ ಗುಣತ್ರಯಭಿನ್ನಾ । ಕರ್ಮಾಚೀ ಗಾ ಅರ್ಜುನಾ । ಹೇ ಕೇಲೀ ವಿವಂಚನಾ । ಉಪಪತ್ತಿಲಂಸೀ ।೬೨೭॥ ಆತಾ ಯಯಾಚಿ ಕರ್ಮಾ ಭಜತಾ । ಕರ್ಮಾಭಿಮಾನಿಯಾ ಕರ್ತಾ । ತೋ ಜೀವುಹೀ ತ್ರಿವಿಧತಾ । ಪಾತಲಾ ಅಸೇ ।೬೨೮॥

ಯಾವುದು ನಿಂದೆಯ ಕಪ್ಪು (ಪಾಪಮಯ) ಮನೆಯಾಗಿರುವುದು ಮತ್ತು ಇದರಿಂದ ನಿಷೇಧದ ಜನ್ಮದ ಸಾರ್ಥಕವಾಗಿರುವುದು. ಇದು ತಾಮಸ ಕರ್ಮವಾಗಿರುವುದು ।೬೧೧॥

ನೀರಿನ ಮೇಲೆ ಎಳೆದ ರೇಖೆಯು ತಕ್ಷಣವೇ ಕಾಣಲಾರದಂತೆ ಯಾವ ಕರ್ಮವನ್ನು ಮಾಡಿದಾಗ ಮರುಕ್ಷಣವೇ ಯಾವ ಸ್ವರೂಪವೂ ಕಾಣುವುದಿಲ್ಲ ।೬೧೨॥

ಮಜ್ಜಿಗೆಯನ್ನು ಕಡಿದರೆ, ಬೂದಿಯನ್ನು ಊದಿದರೆ, ಅಥವಾ ಉಸುಕನ್ನು ಗಾಣದಲ್ಲಿ ಹಾಕಿದರೆ ಏನೂ ಸಿಗುವುದಿಲ್ಲ ।೬೧೩॥

ಅಥವಾ ತೌಡು ಕುಟ್ಟಿದರೆ, ಆಕಾಶಕ್ಕೆ ಬಾಣ ಬಿಡುತ್ತಿದ್ದರೆ, ಅಥವಾ ಗಾಳಿಯನ್ನು ಹಿಡಿಯುವುದಕ್ಕಾಗಿ ಬಲೆಯನ್ನು ಒಡ್ಡಿದರೆ ।೬೧೪॥

ಇವುಗಳೆಲ್ಲವನ್ನೂ ಯಾವ ಪ್ರಕಾರವಾಗಿ ಮಾಡಿಯೂ ನಿಷ್ಫಲವಾಗಿರುವುವೋ, ಅದರಂತೆ ಈ ಕರ್ಮಗಳನ್ನು ಮಾಡಿಯೂ ವ್ಯರ್ಥವಾಗುವುದು ।೬೧೫॥

ಇದಲ್ಲದೇ ನರದೇಹದಂತಹ ಅಮೂಲ್ಯ ಧನವನ್ನು ಖರ್ಚಿಸಿ ಮಾಡುವ ಕರ್ಮದಿಂದ ಜಗತ್ತಿಗೆ ಸುಖವಾಗದೇ ದುಃಖಮಾತ್ರ ಆಗುವುದು ।೬೧೬॥

ಯಾವ ಪ್ರಕಾರವಾಗಿ ಕಮಲದ ಹೂವುಗಳನ್ನು ತೆಗೆದುಕೊಳ್ಳಲು ಅವುಗಳ ಮೇಲೆ ಮುಳ್ಳಿನ ಬಲೆಯನ್ನು ಹಾಕಿ ಜಗ್ಗಿದರೆ ತನಗೂ ಶ್ರಮವಾಗಿ ಕಮಲಗಳು ನಾಶವಾಗುವುವು ।೬೧೭॥

ಪತಂಗದ ಹುಳವು ಸಂತಾಪದಿಂದ ದೀಪಕ್ಕೆ ಬಡೆಯಲು ಹೋಗಿ ತಾನು ಸಾಯುವುದಲ್ಲದೇ ಜನರಿಗೆ ಕತ್ತಲೆ ಯನ್ನುಂಟು ಮಾಡುತ್ತದೆ ।೬೧೮॥

ಅದರಂತೆ ತನ್ನ ಸರ್ವಸ್ವವೂ ವ್ಯರ್ಥವಾಗಿ ಹೋಗುವುದಲ್ಲದೇ ಶ್ರಮವೂ ಆಗಿ ಬೇರೆಯವರಿಗೂ ಆ ಕರ್ಮದಿಂದ ಅಪಾಯವಾಗುವುದು ।೬೧೯॥

ನೊಣವು ತಾನು ಸ್ವತಃ ನುಂಗಿಸಿಕೊಂಡು ಸಾಯು ವುದಲ್ಲದೇ ಅವರಿಂದ ವಾಂತಿಯನ್ನು ಮಾಡಿಸಿ ಪೀಡೆಯನ್ನು ಕೊಡುವುದು. ಅದರಂತೆ ಈ ಕರ್ಮಗಳು ಸದೋಷವಾಗಿವೆ, ನೆನಪಿನಲ್ಲಿಡು ।೬೨೦॥

ಆ ಕರ್ಮಗಳನ್ನಾದರೂ ಮಾಡುವ ಸಾಮರ್ಥ್ಯವು ತನ್ನಲ್ಲಿದೆಯೋ ಇಲ್ಲವೋ ಎಂಬುವ ಮುಂದಿನ ವಿಚಾರವನ್ನು ಸಹ ಮಾಡದೆಯೇ, ಕರ್ಮಗಳನ್ನು ಮಾಡಹತ್ತುವನು ।೬೨೧॥

ನನ್ನ ಪ್ರಯತ್ನವೆಷ್ಟು ಹಾಗೂ ನಾನು ಎಷ್ಟೊಂದು ಉದ್ದಗಲ ಹರಡಿರುವೆ ಮತ್ತು ಇದನ್ನು ಮಾಡಿರುವುದರಿಂದ ನನಗೇನು ಪ್ರಾಪ್ತಿಯಾದೀತು ।೬೨೨॥

ಈ ವಿಚಾರವನ್ನು ಅವಿವೇಕದ ಕಾಲು ಕೆಳಗೆ ತುಳಿದು ಬಿಡುವನು ಮತ್ತು ಆ ಕರ್ಮಕ್ಕಾಗಿ ಅಭಿಮಾನ ಪಡುವನು ।೬೨೩॥

ತನ್ನ ಜನ್ಮಸ್ಥಾನವನ್ನು ಹಾಗೂ ಆಶ್ರಯಸ್ಥಾನವನ್ನು ಸುಟ್ಟು ಅಗ್ನಿಯು ಪಸರಿಸುವುದು. ಮೇರೆ ಮೀರಿ ಸಮುದ್ರವು ಉಕ್ಕೇರುವುದು ।೬೨೪॥

ಹಾಗಾದ ಮೇಲೆ ಸಣ್ಣ ಅಥವಾ ದೊಡ್ಡ ವಸ್ತುಗಳ ವಿಚಾರವನ್ನು ಮಾಡದೇ ಹಾಗೂ ಹಿಂದು ಮುಂದು ನೋಡದೇ ಪವಿತ್ರ ಅಪವಿತ್ರ ಒಂದೇ ಮಾಡಿ ನಡೆಯುವುದು ।೬೨೫॥

ಅದರಂತೆ ಯೋಗ್ಯಾಯೋಗ್ಯವನ್ನು ಒಂದರಲ್ಲಿಯೇ ಕೂಡಿಸಿ ತನ್ನ ಹಾಗೂ ಬೇರೆಯವರ ಈ ಭೇದವನ್ನೇ ಉಳಿಸಲಾರದ್ದು ತಾಮಸ ಕರ್ಮವೆಂದು ತಿಳಿ ।೬೨೬॥

ಈ ಪ್ರಕಾರವಾಗಿ ಅರ್ಜುನಾ, ಗುಣಗಳ ಭಿನ್ನತ್ವದಿಂದ ಕರ್ಮವು ಮೂರು ಪ್ರಕಾರಗಳಾಗಿ ಹೇಗೆ ಆದವು ಎನ್ನುವು ದನ್ನು ನಿನಗೆ ದೃಷ್ಟಾಂತ ಪೂರ್ವಕವಾಗಿ ತಿಳಿಸಲಾಯಿತು ।೬೨೭॥

ಈಗ ಈ ಕರ್ಮಗಳ ಅಭಿಮಾನವನ್ನು ಹಿಡಿದು ಅವುಗಳ ಆಚರಣೆ ಮಾಡುವ ಜೀವನು ಇವುಗಳಿಂದ ಮೂರು ಪ್ರಕಾರದವನಾಗಿದ್ದಾನೆ ।೬೨೮॥

ಚತುರಾಶ್ರಮವಶೇ । ಏಕು ಪುರುಷು ಚತುರ್ಧಾ ದಿಸೇ । ಕರ್ತಯಾ ತ್ರೈವಿಧ್ಯ ತೈಸೇ । ಕರ್ಮಭೇದೇ ॥೯೨೯॥ ತರೀ ತಯಾ ತಿಹೀ ಆಂತು । ಸಾತ್ತ್ವಿಕ ತಂವ ಪ್ರಸ್ತುತು । ಸಾಂಗೇನ ದತ್ತಚಿತ್ತು । ಆಕರ್ಣೀ ತೂ ॥೯೩೦॥

ಮುಕ್ತಸಂಗೋಽನಹಂವಾದೀ ಧೃತ್ಯುತ್ಸಾಹಸಮನ್ವಿತಃ ।
ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ ॥೨೬॥

ತರೀ ಫಳೋದ್ದೇಶೇ ಸಾಂಡಿಲಿಯಾ । ವಾಢತೀ ಜೇವೀ ಸರಳಿಯಾ । ಶಾಖಾ ಕಾ ಚಂದನಾಚಿಯಾ । ಬಾವನ್ನಯಾ ॥೯೩೧॥ ಕಾ ನ ಫಳತಾಂಹೀ ಸಾರ್ಥಕಾ । ಜೈಸಿಯಾ ನಾಗಲತಿಕಾ । ತೈಸಿಯಾ ಕರೀ ನಿತ್ಯಾದಿಕಾ । ಕ್ರಿಯಾ ಜೋ ಕಾ ॥೯೩೨॥ ಪರೀ ಫಲಶೂನ್ಯತಾ । ನಾಹೀ ತಯಾ ವಿಫಳತಾ । ಪೈ ಫಳಾಸೀಚಿ ಪಂಡುಸುತಾ । ಫಳೇ ಕಾಯಿಸೀ ॥೯೩೩॥ ಆಣಿ ಆದರೇ ಕರೀ ಬಹುವಸೇ । ಪರೀ ಕರ್ತಾ ಮೀ ಹೇ ನುಮಸೇ । ವರ್ಷಾಕಾಳೀಂಚೇ ಜೈಸೇ । ಮೇಘವೃಂದ ॥೯೩೪॥ ತೇವೀಂಚಿ ಪರಮಾತ್ಮಲಿಂಗಾ । ಸಮರ್ಪಾವಯಾಜೋಗಾ । ಕರ್ಮಕಲಾಪು ಪೈ ಗಾ । ನಿಪಜಾವಯಾ ॥೯೩೫॥ ತಯಾ ಕಾಳಾತೇ ನುಲಂಘಣೇ । ದೇಶಶುದ್ಧಿಹೀ ಸಾಧಣೇ । ಕಾ ಶಾಸ್ತ್ರಾಂಚ್ಯಾ ವಾತೀ ಪಾಹಣೇ । ಕ್ರಿಯಾನಿರ್ಣಯೋ ॥೯೩೬॥ ವೃತ್ತೀ ಕರಣೇ ಏಕವಳಾ । ಚಿತ್ತ ಜಾವೋ ನ ದೇಣೇ ಫಳಾ । ನಿಯಮಾಂಚಿಯಾ ಸಾಂಖಳಾ । ವಾಹಣೇ ಸದಾ ॥೯೩೭॥ ಹಾ ನಿರೋಧು ಸಾಹಾವಯಾಲಾಗೀ । ಧೈರ್ಯಾಚಿಯಾ ಚಾಂಗಚಾಂಗೀ । ಚಿಂತವಣೇ ಜಿತೀ ಆಂಗೀ । ವಾಹೇ ಜೋ ಕಾ ॥೯೩೮॥ ಆಣಿ ಆತ್ಮಯಾಚಿಯೇ ಆವಡೀ । ಕರ್ಮೇ ಕರಿತಾ ವರಪಡೀ । ದೇಹ ಸುಖಾಚಿಯೇ ಪರವಡೀ । ಯೇವೋ ನ ಲಾಹೇ ॥೯೩೯॥ ಆಳಸ ನಿದ್ರಾ ದುರ್ಹಾವೇ । ಕ್ಷುಧಾ ನ ಬಾಣವೇ । ಸುರವಾಡು ನ ಪಾವೇ । ಆಂಗಾಚಾ ಠಾವೋ ॥೯೪೦॥ ತಂವ ಅಧಿಕಾಧಿಕ । ಉತ್ಸಾಹೋ ಧರೀ ಆಗಳೀಕ । ಸೋನೇ ಜೈಸೇ ಪುಟೀ ತುಕ । ತುಟಲಿಯಾ ಕಸೀ ॥೯೪೧॥ ಜರೀ ಆವಢೀ ಆಥೀ ಸಾಚ । ತರೀ ಜೀವಿತಹೀ ಸಲಂಚ । ಆಗೀ ಘಾಲಿತಾ ರೋಮಾಂಚ । ದೇಖಿಜತೀ ಸತಿಯೇ ॥೯೪೨॥ ಮಾ ಆತ್ಮಯಾ ಯೇವಢಿಯಾ ಪ್ರಿಯಾ । ವಾಲಭೇಲಾ ಜೋ ಧನಂಜಯಾ । ದೇಹಹೀ ಸಿದತಾ ತಯಾ । ಕಾಯ ಖೇದು ಹೋಈಲ ? ॥೯೪೩॥ ಮ್ಹಣೌನಿ ವಿಷಯ ಸುರವಾಡು ತುಟೇ । ಜಂವ ಜಂವ ದೇಹಬುದ್ಧಿ ಆಟೇ । ತಂವ ತಂವ ಆನಂದು ದುಣವಟೇ । ಕರ್ಮೀ ಜಯಾ ॥೯೪೪॥

ಒಬ್ಬನಲ್ಲಿಯೇ (ಬ್ರಹ್ಮಚರ್ಯ, ಗ್ರಹಸ್ಥ, ವಾನಪ್ರಸ್ಥ ಹಾಗೂ ಸಂನ್ಯಾಸಗಳೆಂಬ) ನಾಲ್ಕು ಆಶ್ರಮಗಳಿಂದ ನಾಲ್ಕು ಅವಸ್ಥೆಗಳು ಕಾಣುವಂತೆ ಕರ್ಮಗಳ ಭೇದದಿಂದ ಕರ್ತನಿಗೆ ಮೂರು ಅವಸ್ಥೆಗಳು ಬರುವುವು ।।೬೨೯।।

ಹಾಗಾದರೆ ಈ ಮೂವರಲ್ಲಿ ಸಾತ್ತ್ವಿಕ ಅವಸ್ಥೆಯನ್ನು ಪ್ರಥಮವಾಗಿ ವರ್ಣನೆಯನ್ನು ಮಾಡುವೆನು. ಅದನ್ನು ನೀನು ಪೂರ್ಣವಾಗಿ ಲಕ್ಷಕೊಟ್ಟು ಕೇಳು ।।೬೩೦।।

ಶ್ಲೋಕಾರ್ಥ :- ಫಲಾಪೇಕ್ಷೆಯಿಲ್ಲದೇ, ಕರ್ತೃತ್ವ ಭಾವ ರಹಿತವಾಗಿ, ಧೃತಿ ಉತ್ಸಾಹಗಳಿಂದ ಕೂಡಿ, ಫಲಾಫಲಗಳಲ್ಲಿ ಸಮವಾಗಿಯೂ, ಕರ್ಮ ಮಾಡುವವನು ಸಾತ್ತ್ವಿಕ ಕರ್ತನೆನಿಸುತ್ತಾನೆ ।।೨೬।।

ಯಾವ ಪ್ರಕಾರವಾಗಿ ಮಲಯ ಪರ್ವತದಲ್ಲಿ ಚಂದನ ಗಿಡದ ಟೊಂಗೆಗಳು ಫಲಗಳ ಇಚ್ಛೆಯನ್ನು ಮಾಡದೆ ಸರಳವಾಗಿ ಬೆಳೆಯುವುವು. (ಆದಾಗ್ಯೂ, ಆ ಗಿಡದ ಎಲ್ಲ ಭಾಗಗಳಿಗೂ ಸುವಾಸನೆಯೇ ಇರುವುದು) ।।೬೩೧।।

ಅಥವಾ (ನಾಗಲತಿಕಾ) ಎಲೆ ಬಳ್ಳಿಯು ಫಲ ಕೊಡದಿದ್ದರೂ ಸಾರ್ಥಕವಾಗಿರುವುದು. (ತಾಂಬೂಲಾದಿಗಳಿಗೆ ಉಪಯೋಗವಾಗುವುದು) ಅದರಂತೆ ಉತ್ತಮರು ನಿತ್ಯ ನೈಮಿತ್ತಿಕ ಕರ್ಮಗಳನ್ನು ಫಲದ ಇಚ್ಛೆಯನ್ನು ಮಾಡದೇ ಆಚರಿಸುವರು ।।೬೩೨।।

ಆದರೆ ಅವುಗಳಿಗೆ ಫಲ ಶೂನ್ಯವೆಂದು ಹೇಳಬಾರದು. ಆ ಕರ್ಮಗಳಿಗೆ ವಿಫಲತೆ ಇಲ್ಲವೇ ಇಲ್ಲ. ಪಂಡುಸುತನೇ, ಫಲಕ್ಕೆ ಫಲ ಬರುವುದೇ ? ।।೬೩೩।।

ಮತ್ತು ಆ ಕರ್ಮಗಳನ್ನು ಆದರದಿಂದ ಮಾಡುವನು. ಆದರೆ ಕರ್ತೃತ್ವದ ಅಭಿಮಾನವನ್ನು ಹಿಡಿಯುವುದಿಲ್ಲ, ಮಳೆಗಾಲದಲ್ಲಿ ಯಾವ ಪ್ರಕಾರವಾಗಿ ಮೋಡಗಳು ಗರ್ಜಿಸದೇ ಮಳೆಗರೆಯುವುವೋ ।।೬೩೪।।

ಅದರಂತೆ ಪರಮಾತ್ಮನಿಗೆ ಅರ್ಪಿಸಲು ಯೋಗ್ಯವಾಗಿರುವಂತಹ ಕರ್ಮಗಳನ್ನು ಆಚರಿಸುವುದಕ್ಕಾಗಿ ।।೬೩೫।।

ಕಾಲದ ಮರ್ಯಾದೆಯನ್ನು ಬಿಡದೆ, ದೇಶ ಶುದ್ಧಿಯನ್ನು ಸಾಧಿಸಿ, ಕರ್ಮಗಳ ಯೋಗ್ಯಾಯೋಗ್ಯ ನಿರ್ಣಯವನ್ನು ಶಾಸ್ತ್ರಾನುಸಾರವಾಗಿ ಮಾಡುವನು ।।೬೩೬।।

ಇಂದ್ರಿಯಗಳನ್ನು ಮತ್ತು ವೃತ್ತಿಯನ್ನು ಐಕ್ಯಗೊಳಿಸಿ ಫಲದತ್ತ ಚಿತ್ತಕ್ಕೆ ಹೋಗಗೊಡದೆ ಯಾವ ನಿಯಮದ ಬೇಡಿಯನ್ನು ಕಾಲುಗಳಿಗೆ ಹಾಕಿಕೊಳ್ಳುವನು ।।೬೩೭।।

ಈ ನಿರೋಧವನ್ನು ಸಹಿಸಿಕೊಳ್ಳಲು ಉತ್ತಮವಾದ ಧೈರ್ಯವು ತನ್ನಲ್ಲಿರಬೇಕಾಗುವುದು. ಇಂಥ ವಿಷಯಕ್ಕೆ ಯಾವನು ತನ್ನ ಮನದಲ್ಲಿ ಚಿಂತೆಯನ್ನು ಜೀವಂತವಾಗಿ ಇಡುವನು ।।೬೩೮।।

ಮತ್ತು ಆತ್ಮದ ಪ್ರಾಪ್ತಿ ವಿಷಯಕ್ಕೆ ಕರ್ಮಗಳನ್ನು ಮಾಡುತ್ತಿರಲು ದೇಹಸುಖದ ನಾಶದ ಪರಿವೆ ಮಾಡುವುದಿಲ್ಲ ।।೬೩೯।।

ಅವನು ಆಲಸ್ಯ ಹಾಗೂ ನಿದ್ರೆಯನ್ನು ದೂರ ಮಾಡುವನು. ಹಾಗೂ ಆತನಿಗೆ ಹಸಿವೆಯ ನೆನಪು ಆಗುವುದಿಲ್ಲ ಮತ್ತು ಇದರಿಂದ ಸುಖಾವಸ್ಥೆಗಳು ಈತನಿಂದ ದೂರ ಓಡುವುವು ।।೬೪೦।।

ಬಂಗಾರವನ್ನು ಪುಟಕೊಟ್ಟಂತೆ ತೂಕದಲ್ಲಿ ಕಡಿಮೆಯಾದರೂ ಒರೆಯಲ್ಲಿ ಹೆಚ್ಚಾಗುವುದು. ಅದರಂತೆ ಕರ್ಮಗಳನ್ನು ಮಾಡಲು ನಾನಾ ಪ್ರಕಾರವಾಗಿ ಅಧಿಕಾಧಿಕ ಉತ್ಸಾಹವನ್ನು ಧರಿಸುವನು ।।೬೪೧।।

ಎಲ್ಲಿ ನಿಜವಾದ ಪ್ರೀತಿ ಇರುವುದೋ, ಅಲ್ಲಿ ಜೀವಿತವು ತುಚ್ಛವಾಗಿರುವುದು. ಪತಿವ್ರತೆ ಸ್ತ್ರೀಯು ಸಹಗಮನ ಕಾಲಕ್ಕೆ ಅಗ್ನಿಯಲ್ಲಿ ಬೀಳುವಾಗ (ಭಯದಿಂದ) ರೋಮಾಂಚನವಾದೀತೆ? ।।೬೪೨।।

ಅಂದಮೇಲೆ ಧನಂಜಯಾ, ಆತ್ಮಪ್ರಾಪ್ತಿಯಂಥ ಪ್ರಿಯ ವಸ್ತು ಪ್ರಾಪ್ತವಾಗುವ ವಿಷಯಕ್ಕೆ ಇಚ್ಛೆ ಇದ್ದವರಿಗೆ ಶರೀರಕ್ಕೆ ಕಷ್ಟಗಳಾದರೂ ಅವರಿಗೆ ಖೇದವಾದೀತೆ? ।।೬೪೩।।

ಆದ್ದರಿಂದ ವಿಷಯ ಸುಖಗಳ ಇಚ್ಛೆಯು ಇಲ್ಲದಂತಾಗಿ ಯಾವ ಪ್ರಕಾರವಾಗಿ ದೇಹ ವಿಷಯಕ್ಕೆ ಅಭಿಮಾನವು ಕಡಿಮೆಯಾದಂತೆ ಆ ಯಾವ ಕರ್ಮಗಳನ್ನು ಆಚರಿಸಲು ಈತನಿಗೆ ಇಮ್ಮಡಿ ಆನಂದವಾಗುವುದು ।।೬೪೪।।

ಐಸೇನಿ ಜೋ ಕರ್ಮ ಕರೀ । ಆಣಿ ಕೋಣೇ ಏಕೇ ಅವಸರೀ । ತೇ ಠಾಕೇ ಐಸೀ ಪರೀ । ವಾಹೇ ಜರೀ ।೬೪೫॥ ತರೀ ಕಡಾಡೀ ಲೋಟಲಾ ಗಾಡಾ । ತೋ ಆಪಣಪೇ ನ ಮನೀ ಅವಘಡಾ । ತೈಸಾ ಠಾಕಲೇನಿಹೀ ಥೋಡಾ । ನೋಹೇ ಜೋ ಕಾ ।೬೪೬॥ ನಾತರೀ ಆದರಿಲೇ । ಅವ್ಯಂಗ ಸಿದ್ಧೀ ಗೇಲೇ । ತರೀ ತೇಂಹೀ ಜಿಂತಿಲೇ । ಮಿರವೂ ನೇಣೇ ।೬೪೭॥ ಇಯಾ ಖುಣಾ ಕರ್ಮ ಕರಿತಾ । ದೇಖಿಜೇ ಜೋ ಪಂಡುಸುತಾ । ತಯಾತೇ ಮ್ಹಣಿಪೇ ತತ್ತ್ವತಾ । ಸಾತ್ತ್ವಿಕು ಕರ್ತಾ ।೬೪೮॥ ಆತಾ ರಾಜಸಾ ಕರ್ತೇಯಾ । ವೋಳಖಣೇ ಹೇ ಧನಂಜಯಾ । ಜೇ ಅಭಿಲಾಷಾ ಜಗಾಚಿಯಾ । ವಸೌಟಾ ತೋ ।೬೪೯॥

ರಾಗೀ ಕರ್ಮಫಲಪ್ರೇಪ್ಸುಃ ಲುಬ್ಧೋ ಹಿಂಸಾತ್ಮಕೋಽಶುಚಿಃ ।<br>ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ।೨೭॥

ಜೈಸಾ ಗಾಂವೀಂಚಿಯಾ ಕಶ್ಮಳಾ । ಉಕರಡಾ ಹೋಯ ಯೇಕವಳಾ । ಕಾ ಸ್ಮಶಾನೀ ಅಮಂಗಳಾ । ಆಘವಯಾಂಚೀ ।೬೫೦॥ ತಯಾಪರೀ ಜೋ ಅಶೇಷಾ । ವಿಶ್ವಾಚಿಯಾ ಅಭಿಲಾಷಾ । ಪಾಯಖಾಳಣಿಯಾ ದೋಷಾ । ಘರಟಾ ಜಾಲಾ ।೬೫೧॥ ಮ್ಹಣೌನಿ ಫಳಾಚಾ ಲಾಗು । ದೇಖೇ ಜಿಯೇ ಅಸಲಗು । ತಿಯೇ ಕರ್ಮಿ ಚಾಂಗು । ರೋಹೋ ಮಾಂಡೀ ।೬೫೨॥ ಆಣಿ ಆಪಣ ಜಾಲಿಯೇ ಜೋಡೀ । ಉಪಖೋ ನೇದೀ ಕವಡೀ । ಕ್ಷಣಕ್ಷಣಾ ಕುರೋಂಡೀ । ಜೀವಾಚೀ ಕರೀ ।೬೫೩॥ ಕೃಪಣು ಚಿತ್ತೀ ಠೇವಾ ಆಪುಲಾ । ತೈಸಾ ದಕ್ಷು ಪರಾವಿಯಾ ಮಾಲಾ । ಬಕು ಜೈಸಾ ಖುತಲಾ । ಮಾಸೇಯಾಸೀ ।೬೫೪॥ ಆಣಿ ಗೋವೀ ಗೇಲಿಯಾ ಜವಳೀ । ಝುಗಟಲಿಯಾ ಅಂಗ ಫಾಳೀ । ಫಳೇ ತರೀ ಆಂತು ಪೋಳೀ । ಬೋರಾಂಟೀ ಜೈಸೀ ।೬೫೫॥ ತೈಸೇ ಮನೇ ವಾಚಾ ಕಾಯೇ । ಭಲತಯಾ ದುಃಖ ದೇತು ಜಾಯೇ । ಸ್ವಾರ್ಥು ಸಾಧಿತಾ ನ ಪಾಹೇ । ಪರಾಚೇ ಹಿತ ।೬೫೬॥ ತೇವೀಂಚಿ ಆಂಗೇ ಕರ್ಮೀ । ಆಚರಣೇ ನೋಹೇ ಕ್ಷಮೀ । ನ ನಿಫೇ ಮನೋಧರ್ಮೀ । ಅರೋಚಕು ।೬೫೭॥ ಕನಕಾಚಿಯಾ ಫಳಾ । ಆಂತು ಮಾಜ ಬಾಹೇರಿ ಮೌಳಾ । ತೈಸಾ ಸಬಾಹ್ಯ ದುಬಳಾ । ಶುಚಿತ್ವೇ ಜೋ ।೬೫೮॥ ಆಣಿ ಕರ್ಮ ಜಾತ ಕೇಲಿಯಾ । ಫಳ ಲಾಹೇ ಜರೀ ಧನಂಜಯಾ । ತರೀ ಹರಿಖೇ ಜಗಾ ಯಯಾ । ವಾಂಕುಲಿಯಾ ವಾಯೇ ।೬೫೯॥ ಅಥವಾ ಜೇ ಆದರಿಲೇ । ಹೀನಫಳ ಹೋಯ ಕೇಲೇ । ತರೀ ಶೋಕೇ ತೇಣೇ ಜಿಂತಲೇ । ಧಿಕ್ಕಾರೋ ಲಾಗೆ ।೬೬೦॥

ಈ ರೀತಿಯಲ್ಲಿ ಕರ್ಮಗಳನ್ನು ಆಚರಿಸುತ್ತಿರುವಾಗ ಯಾವುದೇ ಕಾರಣದಿಂದ ಕರ್ಮವು ನಿಂತುಕೊಂಡರೆ ।೬೪೫॥

ಗುಡ್ಡದ ಇಳಿಜಾರಿನಲ್ಲಿ ಬಂಡಿಯು ಉರುಳಿ ಬಿದ್ದು ಚೂರುಚೂರಾದರೂ ಅದು ಅದಕ್ಕಾಗಿ ಏನೂ ಚಿಂತಿಸುವುದಿಲ್ಲ. ಅದರಂತೆ ಕರ್ಮವು ಉಳಿಯಿತೆಂದರೆ ಕಿಂಚಿತವೂ ಖೇದಪಡುವುದಿಲ್ಲ ।೬೪೬॥

ಅಥವಾ ಆರಂಭಿಸಿದ ಕರ್ಮವು ಪೂರ್ಣವಾಗಿ ಸಿದ್ಧಿಯಾದರೆ ಅದಕ್ಕಾಗಿ ಗೆದ್ದೆನೆಂದು ಪ್ರತಿಷ್ಠೆಯಿಂದ ಮೆರೆಯುವುದಿಲ್ಲ ।೬೪೭॥

ಹೇ ಪಂಡುಸುತನೇ, ಕರ್ಮದ ಆಚರಣೆಯನ್ನು ಮಾಡುತ್ತಿರುವಾಗ್ಗೆ ಈ ಲಕ್ಷಣಗಳು ಎಲ್ಲಿ ಕಾಣುವುವೋ, ಆತನಿಗೆ ನಿಶ್ಚಯವಾಗಿ ಸಾತ್ತ್ವಿಕ ಕರ್ತನು ಎನ್ನಬೇಕು ।೬೪೮॥

ಧನಂಜಯನೇ, ಈಗ ರಾಜಸ ಕರ್ತನ ಚಿನ್ಹೆಗಳನ್ನು ನಿನಗೆ ಹೇಳುವೆನು. ಕಾರಣ ಜಗತ್ತಿನ ಎಲ್ಲ ಅಭಿಮಾನಗಳ ಇದು ತವರುಮನೆಯಾಗಿರುವುದು ।೬೪೯॥

ಶ್ಲೋಕಾರ್ಥ :- ಸುಖದ ಮೇಲೆ ಪ್ರೀತಿಯನ್ನಿಟ್ಟುಕೊಂಡು ಕರ್ಮದ ಫಲವನ್ನು ಬಯಸುವವನಾಗಿ ಕೆಟ್ಟ ಆಶೆಯಿಂದ ಮತ್ತೊಬ್ಬರ ಬಾಳನ್ನು ಕೆಡಿಸುವವನಾಗಿ ಮನಸ್ಸಿನ ಶುಚಿ ಇಲ್ಲದೆ ಉಬ್ಬುತ್ತ ಕುಗ್ಗುತ್ತ ಮಾಡುವವನು ರಜೋಗುಣದವನೆನಿಸುವನು ।೨೭॥

ಯಾವ ಪ್ರಕಾರವಾಗಿ ಊರಿನ ಎಲ್ಲ ಹೊಲಸು ಪದಾರ್ಥಗಳನ್ನು ಒಗೆಯುವ ಸ್ಥಾನವು ತಿಪ್ಪೆಯಾಗಿರುವುದು. ಅಥವಾ ಎಲ್ಲ ಅಮಂಗಲ ಪದಾರ್ಥಗಳನ್ನು ಸ್ಮಶಾನದಲ್ಲಿ ಒಗೆಯುವರೋ ।೬೫೦॥

ಅದರಂತೆ ವಸ್ತುತಃ ನೋಡಿದರೆ ಇದು ಜಗತ್ತಿನ ಎಲ್ಲ ಕಾಮಗಳ ಕಾಲು ತೊಳೆಯುವ ಸ್ಥಳವಾಗಿರುವುದು ।೬೫೧॥

ಆದ್ದರಿಂದ ಯಾವ ಕರ್ಮದಿಂದ ಇಚ್ಛಿತ ಫಲಪ್ರಾಪ್ತಿಯಾಗುವುದೋ, ಆ ಕರ್ಮವನ್ನು ಮಾಡುವುದಕ್ಕೆ ಪ್ರವೃತ್ತನಾಗುವನು ।೬೫೨॥

ಮತ್ತು ತಾನು ಸಂಪಾದನೆಯನ್ನು ಮಾಡಿದ ಪದಾರ್ಥಗಳಲ್ಲಿ ಒಂದು ಕವಡಿಯಷ್ಟಾದರೂ ಖರ್ಚು ಮಾಡುವುದಿಲ್ಲ ಮತ್ತು ಕ್ಷಣ ಕ್ಷಣಕ್ಕೆ ಆ ಪದಾರ್ಥಗಳ ಮೇಲಿಂದ ತನ್ನ ಜೀವವನ್ನು ನಿವಾಳಿಸಿ ಒಗೆಯುವನು ।೬೫೩॥

ಕೃಪಣನು ತನ್ನ ದ್ರವ್ಯದ ಮೇಲೆ ಯಾವಾಗಲೂ ಲಕ್ಷ ವಿಡುವಂತೆ ಇವನು ಬೇರೆಯವರ ಪದಾರ್ಥಗಳನ್ನು ಕೂಡಿಸಲು ದಕ್ಷನಾಗಿರುವನು. ಬಕಪಕ್ಷಿಯು ಮೀನು ಹಿಡಿಯಲಿಕ್ಕೆ ತತ್ಪರವಾಗುವಂತೆ ।೬೫೪॥

ಮತ್ತು ಬಾರಿಯಗಿಡವು ಸಮೀಪ ಬಂದವರ ವಸ್ತ್ರವನ್ನು ಹರಿದು ಸಿಲುಕಿಸುವುದು, ಅಂಗ ಸ್ಪರ್ಶದಿಂದ ಚರ್ಮವು ಹರಿಯುವುದು. ಅದರ ಹಣ್ಣು ಬಾಯಿಯಲ್ಲಿ ಹಾಕಿದರೆ ಹುಳಿಯಾಗಿ ರುಚಿಸುವುದಿಲ್ಲ ।೬೫೫॥

ಅದರಂತೆ ಕಾಯಾ, ವಾಚಾ, ಮನದಿಂದ ಯಾವನು ಬೇರೆಯವರಿಗೆ ದುಃಖವನ್ನು ಕೊಟ್ಟು ಮತ್ತು ತನ್ನ ಹಿತ ಸಾಧಿಸಲು ಇತರರ ಹಿತದ ಕಡೆ ಲಕ್ಷಿಸುವುದಿಲ್ಲ ।೬೫೬॥

ಹಾಗೆಯೇ ಸ್ವತಃ ಯಾವ ಕರ್ಮವನ್ನು ಆರಂಭಿಸುವನೋ, ಅದು ನಿರಂತರವಾಗಿ ನಡೆಯುವ ನಿಯಮವಿರುವುದಿಲ್ಲ. ಹಾಗೂ ಆ ಕರ್ಮ ವಿಷಯಕ್ಕೆ ಆತನ ಮನಸ್ಸಿಗೆ ಬೇಸರವಾಗುವುದಿಲ್ಲ ।೬೫೭॥

ಮದುಗುಣಿಕೆಯು ಫಲಕ್ಕೆ ಒಳಗೆ ಮುಬ್ಬು ಬರುವ ಬೀಜಗಳು ಹೊರಗೆ ಮುಳ್ಳುಗಳು ಇರುವುವು. ಅದರಂತೆ ಇವನು ಶುಚಿತ್ವ ವಿಷಯದಲ್ಲಿ ಒಳ ಹೊರಗೆ ದರಿದ್ರನಿರುವನು ।೬೫೮॥

ಮತ್ತು ಧನಂಜಯನೇ, ಮಾಡಿದ ಕರ್ಮದ ಫಲ ಪ್ರಾಪ್ತಿಯಾಯಿತೆಂದರೆ, ಆ ಆನಂದದ ಭರದಲ್ಲಿ ಬೇರೆಯವರಿಗೆ ಅಣಕಿಸಿ ತೋರಿಸುವನು ।೬೫೯॥

ಅಥವಾ ಆರಂಭಿಸಿದ ಕರ್ಮವು ಫಲದ್ರೂಪವಾಗದಿದ್ದಲ್ಲಿ ಶೋಕಾಗ್ರಸ್ಥನಾಗಿ ಆ ಕರ್ಮವನ್ನು ನಿಂದಿಸುವನು ।೬೬೦॥

ಕರ್ಮೀ ರಾಹಾಟೀ ಐಸೀ । ಜಯಾತೇ ಹೋತೀ ದೇಖಿಸೀ । ತೋಚಿ ಜಾಣ ತ್ರಿಶುದ್ಧಿ ಸೀ । ರಾಜಸ ಕರ್ತಾ ॥೬೬೧॥ ಆತಾ ಯಯಾ ಪಾಠೀ ಯೇರು । ಜೋ ಕುಕರ್ಮಾಚಾ ಆಗರು । ತೋಹೀ ಕರೂ ಗೋಚರು । ತಾಮಸ ಕರ್ತಾ ॥೬೬೨॥

ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಷ್ಕೃತಿಕೋಽಲಸಃ ।
ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥೨೮॥

ತರೀ ಮಿಯಾ ಲಾಗಲಿಯಾ ಕೈಸೇ । ಪುಢೀಲ ಜಳತ ಅಸೇ । ಹೇ ನೇಣಿಜೇ ಹುತಾಶೇ । ಜಿಯಾಪರೀ ॥೬೬೩॥ ಪೈ ಶಸ್ತ್ರೇ ಮಿಯಾ ತಿಖಟೇ । ನೇಣಿಜೇ ಕೈಸೇನಿ ನಿವಟೇ । ಕಾ ನೇಣಿಜೇ ಕಾಳಕೂಟೇ । ಆಪುಲೇ ಕೇಲೇ ॥೬೬೪॥ ತೈಸಾ ಪುಢೀಲಯಾ ಆಪುಲಯಾ । ಘಾತು ಕರೀತ ಧನಂಜಯಾ । ಆದರೀ ವೋಖಟಿಯಾ । ಕ್ರಿಯಾ ಜೋ ಕಾ ॥೬೬೫॥ ತಿಯಾ ಕರಿತಾಂಹೀ ವೇಳೀ । ಕಾಯ ಜಾಲೇ ಹೇ ನ ಸಾಂಭಾಳೀ । ಚಳಲಾ ವಾಯೂ ವಾಹಟುಳೀ । ಚೇಷ್ಟೇ ತೈಸಾ ॥೬೬೬॥ ಪೈ ಕರಣಿಯಾ ಆಣಿ ಜಯಾ । ಮೇಳು ನಾಹೀ ಧನಂಜಯಾ । ತೋ ಪಾಹುನೀ ಪಿಸೇಯಾ । ಕೈಂಚೀ ತ್ರಾಯ ? ॥೬೬೭॥ ಆಣಿ ಇಂದ್ರಿಯಾಂಚೇ ವೋಗರಿಲೇ । ಚರೋನಿ ರಾಖೇ ಜೋ ಜಿಯಾಲೇ । ಬೈಲಾತಳೀ ಲಾಗಲೇ । ಗೋಚಿಡ ಜೈಸೇ ॥೬೬೮॥ ಹಾಂಸಯಾ ರುದನಾ ವೇಳು । ನೇಣತಾ ಆದರೀ ಬಾಳು । ರಾಹಾಟೀ ಉಚ್ಛೃಂಖಳು । ತಯಾಪರೀ ॥೬೬೯॥ ಜೋ ಪ್ರಕೃತೀ ಆಂತಲೇಪಣೇ । ಕೃತ್ಯಾಕೃತ್ಯಸ್ವಾದು ನೇಣೇ । ಫುಗೇ ಕೇರೇ ಧಾಲೇಪಣೇ । ಉಕರಡಾ ಜೈಸಾ ॥೬೭೦॥ ಮ್ಹಣೌನಿ ಮಾನ್ಯಾಚೇನಿ ನಾಂವೇ । ಈಶ್ವರಾಹೀ ಪರೀ ನ ಖಾಲವೇ । ಸ್ತಬ್ಧಪಣೇ ನ ಮನವೇ । ಡೋಂಗರಾಸೀ ॥೬೭೧॥ ಆಣಿ ಮನ ಜಯಾಚೇ ವಿಷಕಲ್ಲೋಳೀ । ರಾಹಾಟೀ ಫುಡೀ ಚೋರಿಲೀ । ದಿಠೀ ಕೀರ ತೇ ವೋಲೀ । ಪಣ್ಯಾಂಗನೇಚೀ ॥೬೭೨॥ ಕಿಂಬಹುನಾ ಕಪಟಾಚೇ । ದೇಹಚಿ ವಳಿಲೇ ತಯಾಚೇ । ತೇ ಜಿಣೇ ಕೀ ಜುಂವಾರಾಚೇ । ಟಿಟೇಘರ ॥೬೭೩॥ ನೋಹೇ ತಯಾಚಾ ಪ್ರಾದುರ್ಭಾವೋ । ತೋ ಸಾಭಿಲಾಷ ಭಿಲ್ಲಾಂಚಾ ಗಾಂವೋ । ಮ್ಹಣೌನಿ ನಯೇ ಯೇವೋ ಜಾವೋ । ತಯಾ ವಾಟಾ ॥೬೭೪॥ ಆಣಿ ಆಣಿಕಾಂಚೇ ನಿಕೇ ಕೇಲೇ । ವಿರು ಹೋಯ ಜಯಾ ಆಲೇ । ಜೈಸೇ ಅಪೇಯ ಪಯಾ ಮಿನಲೇ । ಲವಣ ಕರಿ ॥೬೭೫॥ ಕಾ ಹೀಂವ ಐಸಾ ಪದಾರ್ಥು । ಘಾತಲಿಯಾ ಆಗೀಆಂತು । ತೇಚಿ ಕ್ಷಣೀ ಧಡಾಡಿತು । ಅಗ್ನಿ ಹೋಯ ॥೬೭೬॥

ಈ ರೀತಿಯಲ್ಲಿ ಕರ್ಮ ವಿಷಯಕ್ಕೆ ಯಾರ ಆಚರಣೆ ಇರುವುದನ್ನು ದೃಷ್ಟಿಗೆ ಬೀಳುವುದೋ, ಆತನು ರಾಜಸ ಕರ್ತನಾಗಿರುವನು. ಇದನ್ನು ಪರಿಪೂರ್ಣ ನಿಶ್ಚಯವಾಗಿ ತಿಳಿ ॥೬೬೧॥

ಈಗ ಇನ್ನು ಮೇಲೆ ಕೆಟ್ಟ ಕರ್ಮಗಳ ಆಗರವೇ ಆಗಿರುವ ತಾಮಸ ಕರ್ತನ ಲಕ್ಷಣಗಳನ್ನು ನಿನಗೆ ತಿಳಿಯುವಂತೆ ಹೇಳುವೆನು ॥೬೬೨॥

**ಶ್ಲೋಕಾರ್ಥ** :- ಸ್ಥಿರಚಿತ್ತವಿಲ್ಲದವನು, ಶಾಸ್ತ್ರ ಸಂಸ್ಕಾರವಿಲ್ಲದವನು, ದುರಭಿಮಾನಿ, ಮೋಸಗಾರ, ಪರರ ಕಾರ್ಯಕ್ರಮಗಳನ್ನು ಭಂಗ ಮಾಡುವವನು, ಸೋಮಾರಿ, ದೀನವದನನಾದವನು, ವ್ಯರ್ಥವಾಗಿ ಕಾಲವನ್ನು ಕಳೆಯುವವನು ತಾಮಸ ಕರ್ತನೆನಿಸುವನು ॥೨೮॥

ತನ್ನ ಸ್ಪರ್ಶದಿಂದ ಎದುರಿಗೆ ಬರುವ ಪದಾರ್ಥಗಳು ಹೇಗೆ ಸುಡುತ್ತವೆ ಎಂಬುದು ಅಗ್ನಿಗೆ ತಿಳಿಯುವುದಿಲ್ಲ ॥೬೬೩॥

ಅಥವಾ ತನ್ನ ಹರಿತದಿಂದ ಬೇರೆಯವರ ಜೀವವು ಹೇಗೆ ಹೋಗುವುದು ಎಂದು ಶಸ್ತ್ರಕ್ಕೆ ತಿಳಿಯುವುದಿಲ್ಲ. ಅಥವಾ ತನ್ನಿಂದ ಇತರರ ನಾಶವು ಹೇಗಾಗುವುದೆಂಬುದು ಕಾಳಕೂಟ ವಿಷಕ್ಕೆ ತಿಳಿಯುವುದಿಲ್ಲ ॥೬೬೪॥

ಅದರಂತೆ ಹೇ ಧನಂಜಯನೇ, ಯಾವ ಕ್ರಿಯೆಯಿಂದ ತನ್ನ ಹಾಗೂ ಬೇರೆಯವರ ನಾಶವಾಗುವಂತಹ ಕ್ರಿಯೆಯನ್ನು ಮಾಡಲು ಪ್ರವೃತ್ತನಾಗುವನು ॥೬೬೫॥

ಬಿರುಗಾಳಿಯು ಬಿಟ್ಟಾಗ ಗಾಳಿಯು ಬೀಸುತ್ತಲೇ ಇರುವುದು. ಅದರಂತೆ ಕರ್ಮಗಳನ್ನು ಮಾಡುತ್ತಿರುವಾಗ್ಗೆ ಇದರಿಂದ ಯಾವ ಲಾಭವಾಯಿತೆಂಬುದಕ್ಕೆ ಕಾಳಜಿ ವಹಿಸುವುದಿಲ್ಲ ॥೬೬೬॥

ಇಲ್ಲಿ ನೋಡು ಧನಂಜಯಾ, ಇವನ ಕೃತಿಗೂ ಹಾಗೂ ಇಚ್ಛೆಗೂ ಯಾವ ತಾಳಮೇಳವೇ ಇರುವುದಿಲ್ಲ. ಇಂಥ ತಾಮಸ ಕರ್ತನ ಮುಂದೆ ಹುಚ್ಚನ ಯಾವ ಬೆಲೆ? ॥೬೬೭॥

ಮತ್ತು ಎತ್ತಿನ ಕೆಳಭಾಗದಲ್ಲಿ ಉಣ್ಣೆಗಳು ಅಂಟಿಕೊಂಡಿರುವಂತೆ ಇಂದ್ರಿಯಗಳಿಂದ ಕೆಟ್ಟ ಭೋಗಗಳನ್ನು ಭೋಗಿಸುತ್ತ ತನ್ನ ಜೀವವನ್ನು ರಕ್ಷಿಸುವನು ॥೬೬೮॥

ಯಾವ ಪ್ರಕಾರವಾಗಿ ಚಿಕ್ಕ ಬಾಲಕನಿಗೆ ಅಳಲು, ನಗಲು ತಡವಾಗುವುದೇ ಇಲ್ಲ. ಅದರಂತೆ ಯಾವ ಇವನ ಕೃತಿಗಳಿಗೆ ಸ್ಥಿರತೆವಿರದೆ ಸ್ವೈರವಾಗಿರುವುದು ॥೬೬೯॥

ಪ್ರಕೃತಿಯು ಆಧೀನವಾಗಿ ಏನು ಮಾಡಬೇಕು ಹಾಗೂ ಏನು ಮಾಡಬಾರದು, ಈ ವಿಷಯಕ್ಕೆ ಜ್ಞಾನವಿರುವುದಿಲ್ಲ. ಊರ ಹೊಲಸಿನಿಂದ ತಿಪ್ಪೆಯು ಉಬ್ಬಿಕೊಂಡಂತೆ ಕೆಟ್ಟ ಕರ್ಮಗಳಿಂದ ತೃಪ್ತನಾಗಿ ಉಬ್ಬಿಕೊಂಡಿರುವನು ॥೬೭೦॥

ಆದ್ದರಿಂದ ಗರ್ವದ ಭರದಿಂದ ಈಶ್ವರನಿಗೂ ನಮ್ರನಾಗುವುದಿಲ್ಲ ಮತ್ತು ಕಠೋರತೆಯಿಂದ ಸೆಟೆಯುತ್ತ ಗುಡ್ಡವನ್ನು ತುಚ್ಛ ಮಾಡುವನು ॥೬೭೧॥

ಮತ್ತು ಆತನ ಮನಸ್ಸು ವಿಷಯಗಳ ತೆರೆಗಳಾಗಿರುವುವು. ಆಚರಣೆಗಳು ಕಪಟ, ಕಳ್ಳತನದ್ದಾಗಿರುವುವು, ವೇಶ್ಯೆಯಂತೆ ನೋಡಲು ಒಳ್ಳೆಯವನಾಗಿ, ಒಳಗೆ ಇತರರನ್ನು ಸರ್ವಸ್ವ ಹರಣ ಮಾಡುವವನಾಗಿರುವನು ॥೬೭೨॥

ಒಟ್ಟಿನಲ್ಲಿ ಆತನ ದೇಹವು ಕೇವಲ ಕಪಟದಿಂದಲೇ ತಯಾರಾಗಿರುವುದು ಮತ್ತು ಆತನ ಆಯುಷ್ಯವು ಜೂಜಿನಂತಹ ಕೆಟ್ಟ ಕರ್ಮಗಳ ತವರುಮನೆಯಾಗಿರುವುದು ॥೬೭೩॥

ಆತನ ಪ್ರಸನ್ನತೆ ಎಂದರೆ ಕೇವಲ ಅಭಿಲಾಷೆರೂಪ ಭಿಲ್ಲರ ಊರೇ ಆಗಿರುವುದು. ಆದ್ದರಿಂದ ಆ ದಾರಿಯಿಂದ ಯಾರೂ ಹೋಗಬಾರದು ॥೬೭೪॥

ಮತ್ತು ಬೇರೆಯವರ ಹಿತವಾದದ್ದು ಕಂಡು ಆತನಿಗೆ ವೈರಭಾವವು ಹುಟ್ಟುವುದು. ಹಾಲಿನಲ್ಲಿ ಉಪ್ಪು ಹಾಕಿದಾಗ ಅದು ಕುಡಿಯಲಿಕ್ಕೆ ಅಯೋಗ್ಯವಾಗುವುದು ॥೬೭೫॥

ಅಥವಾ ಎಷ್ಟೇ ತಂಪಾದ ಪದಾರ್ಥಗಳನ್ನು ಅಗ್ನಿಯಲ್ಲಿ ಹಾಕಿದರೂ ಅದು ಪ್ರತಿಯಾಗಿ ತಕ್ಷಣವೇ ಚಡಪಡಿಸುತ್ತ ಸುಟ್ಟು ಹೋಗುವುದು ॥೬೭೬॥

ನಾನಾ ಸುದ್ರವ್ಯೇ ಗೋಮಟೀ । ಜಾಲಿಯಾ ಶರೀರೀ ಪೈ ಠೀ । ಹೋಊನಿ ಠಾತೀ ಕಿರೀಟೀ । ಮಳುಚಿ ಜೇವೀ ॥೬೭೭॥ ತೈಸೇ ಪುಢಿಲಾಚೇ ಬರವೇ । ಜಯಾಚ್ಯಾ ಭೀತರೀ ಪಾವೇ । ಆಣಿ ವಿರುದ್ಧಚಿ ಆಘವೇ । ಹೋಊನಿ ನಿಗೇ ॥೬೭೮॥ ಜೋ ಗುಣ ಘೇ ದೇ ದೋಖ । ಅಮೃತಾಚೇ ಕರೀ ವಿಖ । ದೂಧ ಪಾಜಿಲಿಯಾ ದೇಖ । ವ್ಯಾಳು ಜೈಸಾ ॥೬೭೯॥ ಆಣಿ ಐಹಿಕೀ ಜಿಯಾವೇ । ಜೇಣೇ ಪರತ್ರಾ ಸಾಚ ಯಾವೇ । ತೇ ಉಚಿತ ಕೃತ್ಯ ಪಾವೇ । ಅವಸರೀ ಜಿಯೇ ॥೬೮೦॥ ತೇವ್ಹಾ ಜಯಾ ಆಪೈಸೀ । ನಿದ್ರಾ ಯೇ ಠೇವಿಲೀ ಐಸೀ । ದುರ್ವ್ಯವಹಾರೀ ಜೈಸೀ । ವಿಟಾಳೇ ಲೋಟೇ ॥೬೮೧॥ ಪೈ ದ್ರಾಕ್ಷರಸಾ ಆಮ್ರರಸಾ । ವೇಳೇ ತೋಂಡ ಸಡೇ ವಾಯಸಾ । ಕಾ ಡೋಳೇ ಫುಟತೀ ದಿವಸಾ । ಡುಡುಳಾಚೇ ॥೬೮೨॥ ತೈಸಾ ಕಲ್ಯಾಣಕಾಳು ಪಾಹೇ । ತೈ ತಯಾತೇ ಆಳಸು ಖಾಯೇ । ನಾ ಪ್ರಮಾದೀ ತರೀ ಹೋಯೇ । ತೋ ಮ್ಹಣೇ ತೈಸೇ ॥೬೮೩॥ ಜೇವೀಂಚಿ ಸಾಗರಾಚ್ಯಾ ಪೋಟೀ । ಜಳೇ ಅಖಂಡ ಆಗಿಠೀ । ತೈಸಾ ವಿಷಾದು ವಾಹೇ ಗಾಂಠೀ । ಜಿವಾಚಿಯೇ ಜೋ ॥೬೮೪॥ ಲೇಂಡೋರಾ ಆಗೀ ಧೂಮಾವಧಿ । ಕಾ ಅಪಾನಾ ಆಂಗೀ ದುರ್ಗಂಧಿ । ತೈಸಾ ಜೋ ಜೀವಿತಾವಧಿ । ವಿಷಾದೇ ಕೇಲಾ ॥೬೮೫॥ ಆಣಿ ಕಲ್ಪಾಂತಾಚಿಯಾ ಪಾರಾ । ವೇಗಳೇಂಹೀ ಜೋ ವೀರಾ । ಸೂತ್ರ ಧರೀ ವ್ಯಾಪಾರಾ । ಸಾಭಿಲಾಷಾ ॥೬೮೬॥ ಅಗಾ ಜಗಾಹೀ ಪರೌತೀ । ಶುಚಾ ವಾಹೇ ಪೈ ಚಿತ್ತೀ । ಕರಿತಾ ವಿಷೀ ಹಾತೀ । ತೃಣಹೀ ನ ಲಗೇ ॥೬೮೭॥ ಐಸಾ ಜೋ ಲೋಕಾಆಂತು । ಪಾಪಪುಂಜು ಮೂರ್ತು । ದೇಖಸೀ ತೋ ಅವ್ಯಾಹತು । ತಾಮಸು ಕರ್ತಾ ॥೬೮೮॥ ಏವಂ ಕರ್ಮ ಕರ್ತಾ ಜ್ಞಾನ । ಯಾ ತಿಹೀಂಚೇ ತ್ರಿಧಾ ಚಿನ್ಹ । ದಾವಿಲೇ ತುಜ ಸುಜನ । ಚಕ್ರವರ್ತೀ ॥೬೮೯॥

ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು ।
ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ ॥೨೯॥

ಆತಾ ಅವಿದ್ಯೇಚಿಯಾ ಗಾಂವೀ । ಮೋಹಾಚೀ ವೇಢೂನಿ ಮದವೀ । ಸಂದೇಹಾಚೀ ಆಘವೀ । ಲೇಊನಿ ಲೇಣೇ ॥೬೯೦॥ ಆತ್ಮ ನಿಶ್ಚಯಾಚೀ ಬರವ । ಜಯಾ ಆರಿಸಾ ಪಾಹೇ ಸಾವಯವ । ತಿಯೇ ಬುದ್ಧೀಚೇಹೀ ಥಾಂವ । ತ್ರಿಧಾ ಅಸೇ ॥೬೯೧॥ ಅಗಾ ಸತ್ತ್ವಾದಿ ಗುಣೀ ಇಹೀ । ಕಾಯೀ ಏಕ ತಿಹೀ ಠಾಯೀ । ನ ಕೀಜೇಚಿ ಯೇಥ ಪಾಹೀ । ಜಗಾಮಾಜಿ ॥೬೯೨॥

ಅಥವಾ ಕಿರೀಟಿಯೇ, ಎಷ್ಟೇ ಉತ್ತಮವಾದ ಘಮಘಮಿಸುವ ಪದಾರ್ಥಗಳನ್ನು ಹೊಟ್ಟೆಗೆ ಹಾಕಿದರೂ ಅದು ಅಲ್ಲಿ ಮಲವಾಗಿ ಪರಿವರ್ತಿಸುವುದು ॥೬೭೭॥

ಅದರಂತೆ ಬೇರೆಯವರ ಒಳಿತಿಗಾಗಿರುವುದನ್ನು ಇವನು ಕೇಳಲು ಅಥವಾ ನೋಡಲು ಯಾವ ಸಹನೆಯಾಗದೇ ಪ್ರತಿಯಾಗಿ ನಿಂದಿಸಲು ನಿಲ್ಲುವನು ॥೬೭೮॥

ಸರ್ಪಕ್ಕೆ ಹಾಲನ್ನು ಕುಡಿಸಿದರೂ ಅದರಿಂದ ವಿಷವೇ ಆಗುತ್ತದೆ. ಅದರಂತೆ ಬೇರೆಯವರ ಸದ್ಗುಣಗಳನ್ನು ಕೇಳಿದಾಕ್ಷಣ ಅವನಿಗೆ ದುರ್ಗುಣ ಎನ್ನುವನು ॥೬೭೯॥

ಮತ್ತು ಇಹಲೋಕದಲ್ಲಿ ಕೀರ್ತಿಯಾಗಿ ಹಾಗೂ ಇದರ ಯೋಗದಿಂದ ಪರಲೋಕವು ಪ್ರಾಪ್ತವಾಗುವಂತಹ ಕರ್ಮಯೋಗವು ಕೂಡಿ ಬಂದಾಗ ॥೬೮೦॥

ಆಗ ಆತನಿಗೆ ಗುರಿಯಿಟ್ಟಂತೆ ನಿದ್ದೆಯು ತಪ್ಪದೇ ಬಂದುಬಿಡುವುದು ಮತ್ತು ಕೆಟ್ಟ ಕರ್ಮದ ವೇಳೆಯಲ್ಲಿ ಅದೇ ನಿದ್ದೆಯು ಮುಟ್ಟಾದವರಂತೆ ದೂರ ಸರಿದು ನಿಲ್ಲುವುದು ॥೬೮೧॥

ಇಲ್ಲಿ ನೋಡು, ದ್ರಾಕ್ಷಿಯ ಅಥವಾ ಮಾವಿನ ಸುಗ್ಗಿಯಲ್ಲಿ ಕಾಗೆಗೆ ಮುಖ ರೋಗವಾಗುವುದು. ಅಥವಾ ಗೂಬೆಗೆ ಹಗಲಿನಲ್ಲಿಯೂ ಕಣ್ಣುಗಳು ಒಡೆಯುವುವು ॥೬೮೨॥

ಅದರಂತೆ ಕಲ್ಯಾಣವಾಗುವ (ಸತ್ಸಂಗ-ಸತ್ ಶಾಸ್ತ್ರಗಳ ಶ್ರವಣ) ವೇಳೆ ಬಂದಾಗ ಆಲಸ್ಯವು ಬಂದೊದಗುವುದು ಮತ್ತು ಅನ್ಯಾಯದ, ಪಾಪದ ಕರ್ಮ ಮಾಡುವ ವೇಳೆ ಬಂದಾಗ ಅದೇ ಆಲಸ್ಯವು ಆತನ ಆಜ್ಞೆಯಂತೆ ನಡೆಯುವುದು ॥೬೮೩॥

ಸಮುದ್ರದ ಹೊಟ್ಟೆಯಲ್ಲಿ ಅಖಂಡವಾಗಿ ವಡವಾನಳ ಅಗ್ನಿಯು ಉರಿಯುತ್ತಿರುವಂತೆ, ಇವರ ಅಂತಃಕರಣದಲ್ಲಿ ಇನ್ನೊಬ್ಬರ ಏಳಿಗೆ ಕಂಡು ಸಹಿಸದೇ ವಿಷಾದಿಸುತ್ತಿರುವುದು ॥೬೮೪॥

ಲದ್ದೆಯ ಬೆಂಕಿಯಲ್ಲಿ ಕೇವಲ ಹೊಗೆಯೇ ಇರುವುದು. ಅಥವಾ ಗುದದ್ವಾರದಿಂದ ಹೊರಡುವ ಅಪಾನ ವಾಯುವು ದುರ್ಗಂಧಯುಕ್ತವಾಗಿರುವಂತೆ ಇವನು ಬದುಕಿರುವವರೆಗೂ ದೋಷಗಳನ್ನೇ ಮಾಡುವನು ॥೬೮೫॥

ವೀರನೇ, ಕಲ್ಪಾಂತದ ಆಚೆಗೆ ಲಾಭವಾದೀತೆಂದು ಈ ಪ್ರಕಾರದ ಕಲ್ಪನೆಗಳನ್ನು ಮಾಡಿ ವ್ಯಾಪಾರವನ್ನು ಆರಂಭಿಸುವನು ॥೬೮೬॥

ಅರೇ, ಜಗತ್ತಿನ ಜನರು ಮಾಡದೇ ಇರುವ ವ್ಯಾಪಾರವನ್ನು ಮನದಲ್ಲಿ ಇಚ್ಛಿಸಿ ಮಾಡುವನು. ಆದರೆ ಅದರಿಂದ ತೃಣದಷ್ಟೂ ಆತನಿಗೆ ಲಾಭವಾಗುವುದಿಲ್ಲ ॥೬೮೭॥

ಹೀಗೆ ಯಾವನು ಜನರಲ್ಲಿ ಮೂರ್ತಿಮಂತ ಪಾಪದ ರಾಶಿಯೇ ಆಗಿರುವನು. ಅವನು ತಾಮಸ ಕರ್ತಾನೆಂದು ನಿಃಸಂಶಯವಾಗಿ ತಿಳಿ ॥೬೮೮॥

ಈ ಪ್ರಕಾರವಾಗಿ ಹೇ ಸಜ್ಜನ ಚಕ್ರವರ್ತಿ ಅರ್ಜುನನೇ, ನಿನಗೆ ಕರ್ಮ, ಕರ್ತಾ ಹಾಗೂ ಜ್ಞಾನ ಈ ಮೂರರ ಮೂರು ವಿಧವಾದ ಲಕ್ಷಣಗಳನ್ನು ಹೇಳಿದೆನು ॥೬೮೯॥

ಶ್ಲೋಕಾರ್ಥ :- ಧನಂಜಯ ! ಮೇಲಿನಂತೆ ಗುಣಭೇದಗಳನ್ನನುಸರಿಸಿ, ಬುದ್ಧಿ, ಭೇದ, ಧೃತಿ, ಇವು ತ್ರಿವಿಧವಾಗಿರುವುವು. ಅವುಗಳನ್ನು ಕೇಳು ॥೨೯॥

ಈಗ ಅಜ್ಞಾನರೂಪ ಊರಿನಲ್ಲಿ ಮೋಹರೂಪ ವಸ್ತ್ರವನ್ನು ಉಟ್ಟುಕೊಂಡು ಸಂಶಯರೂಪ ಸರ್ವ ಅಲಂಕಾರಗಳನ್ನು ಧರಿಸಿ ॥೬೯೦॥

ಆತ್ಮ ನಿಶ್ಚಯದ ಉತ್ತಮತ್ವವು ಯಾವ ಬುದ್ಧಿರೂಪ ಕನ್ನಡಿಯಲ್ಲಿ ಸ್ಪಷ್ಟವಾಗಿ ತೋರುವುದು. ಆ ಬುದ್ಧಿಯ ಮೂರು ಪ್ರಕಾರಗಳಿವೆ ॥೬೯೧॥

ಅರೇ, ಈ ಸತ್ತ್ವ, ರಜ, ತಮೋಗುಣಗಳು ಜಗತ್ತಿನಲ್ಲಿಯೇ ಯಾವ ವಸ್ತ್ರವನ್ನು ಮೂರು ಭಾಗವಾಗಿ ಮಾಡಿರುವುದಿಲ್ಲ ? ॥೬೯೨॥

ಆಗೀ ನ ವಸತಾ ಪೋಟೀ । ಕವಣ ಕಾಷ್ಠ ಸೃಷ್ಟೀ । ತೈಸೇ ತೇ ಕೈಂಚೇ ದೃಶ್ಯಕೋಟೀ । ತ್ರಿವಿಧ ಜೇ ನೋಹೇ ॥೧೯೩॥ ಮ್ಹಣೌನಿ ತಿಹೀ ಗುಣೀ । ಬುದ್ಧೀ ಕೇಲೀ ತ್ರಿಗುಣೀ । ಧೃತೀಸಿಹೀ ವಾಂಟಣೀ । ತೈಸೀಚಿ ಅಸೇ ॥೧೯೪॥ ತೇಂಚಿ ಏಕ ವೇಗಳಾಲೇ । ಯಥಾ ಚಿನ್ಹೀ ಅಳಂಕಾರಲೇ । ಸಾಂಗಿಜೈಲ ಉಪಾಇಲೇ । ಭೇದಲೇಪಣೇ ॥೧೯೫॥ ಪರೀ ಬುದ್ಧಿ ಧೃತಿ ಇಯಾ । ದೋಹೀ ಭಾಗಾ ಮಾಜೀ ಧನಂಜಯಾ । ಆಧೀ ರೂಪ ಬುದ್ಧೀಚಿಯಾ । ಭೇದಾಸಿ ಕರೂ ॥೧೯೬॥ ತರೀ ಉತ್ತಮಾ ಮಧ್ಯಮಾ ನಿಕೃಷ್ಟಾ । ಸಂಸಾರಾಸಿ ಗಾ ಸುಭಟಾ । ಪ್ರಾಣಿಯಾ ಯೇತಿಯಾ ವಾಟಾ । ತಿನ್ಹೀ ಆಥೀ ॥೧೯೭॥ ಜೇ ಅಕರಣೀಯ ಕಾಮ್ಯ ನಿಷಿದ್ಧ । ತೇ ಹೇ ಮಾರ್ಗ ತಿನ್ಹೀ ಪ್ರಸಿದ್ಧ । ಸಂಸಾರಭಯೇ ಸಬಾಧ । ಜೀವಾ ಯಯಾ ॥೧೯೮॥

ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ ।
ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ ॥೩೦॥

ಮ್ಹಣೌನಿ ಅಧಿಕಾರೇ ಮಾನಿಲೇ । ಜೇ ವಿಧೀಚೇನಿ ಪೋಫೇ ಆಲೇ । ತೇ ಏಕಚಿ ಯೇಥ ಭಲೇ । ನಿತ್ಯ ಕರ್ಮ ॥೧೯೯॥ ತೇಂಚಿ ಆತ್ಮಪ್ರಾಪ್ತಿ ಫಳ । ದಿಠೀಸೂನಿ ಕೇವಳ । ಕೀಜೇ ಜೈಸೇ ಕಾ ಜಳ । ಸೇವಿಜೇ ತಾಹಾನೇ ॥೨೦೦॥ ಯೇತುಲೇನಿ ತೇ ಕರ್ಮ । ಸಾಂಡೀ ಜನ್ಮಭಯ ವಿಷಮ । ಕರೂನಿ ದೇ ಸುಗಮ । ಮೋಕ್ಷಸಿದ್ಧಿ ॥೨೦೧॥ ಐಸೇ ಕರೀ ತೋ ಭಲಾ । ಸಂಸಾರಾಭಯೇ ಸಾಂಡಿಲಾ । ಕರಣೀಯತ್ವೇ ಆಲಾ । ಮುಮುಕ್ಷುಭಾಗಾ ॥೨೦೨॥ ತೇಥ ಜೇ ಬುದ್ಧೀ ಐಸಾ । ಬಳಿಯಾ ಬಾಂಧೇ ಭರಂವಸಾ । ಮೋಕ್ಷು ಠೇವಿಲಾ ಐಸಾ । ಜೋಡೇಲ ಯೇಥ ॥೨೦೩॥ ಮ್ಹಣೌನಿ ನಿವೃತ್ತೀಚೇ ಮಾಂಡಿಲೀ । ಸೂನಿ ಪ್ರವೃತ್ತಿ ತಳೀ । ಇಯೇ ಕರ್ಮೀ ಬುಡಕುಳೀ । ದ್ಯಾವೀ ಕೀ ನಾ ? ॥೨೦೪॥ ತೃಷಾರ್ತಾ ಉದಕೇ ಜಿಣೇ । ಕಾ ಪುರೀ ಪಡಲಿಯಾ ಪೋಹಣೇ । ಅಂಧಕೂಪೀ ಗತೀ ಕಿರಣೇ । ಸೂರ್ಯಾಚೇನಿ ॥೨೦೫॥ ನಾನಾ ಪಥ್ಯೇಂಸೀ ಔಷಧ ಲಾಹೇ । ತರೀ ರೋಗೇ ದಾಟಲಾಹೀ ಜಿಯೇ । ಕಾ ಮೀನಾ ಜಿವ್ಹಾಳಾ ಹೋಯೇ । ಜಳಾಚಾ ಜರೀ ॥೨೦೬॥ ತರೀ ತಯಾಚ್ಯಾ ಜೀವಿತಾ । ನಾಹೀ ಜೇವಿ ಅನ್ಯಥಾ । ತೈಸೇ ಕರ್ಮೀ ಇಯೇ ವರ್ತತಾ । ಜೋಡೇಚಿ ಮೋಕ್ಷು ॥೨೦೭॥ ಹೇ ಕರಣೀಯಾಚಿಯಾ ಕಡೇ । ಜೇ ಜ್ಞಾನ ಆಥೀ ಚೋಖಡೇ । ಆಣಿ ಅಕರಣೀಯ ಹೇ ಪುಡೇ । ಐಸೇ ಜಾಣ ॥೨೦೮॥

ಹೊಟ್ಟೆಯಲ್ಲಿ ಅಗ್ನಿ ಇಲ್ಲದಿರುವ ಈ ಸೃಷ್ಟಿಯಲ್ಲಿ ಯಾವ ಕಟ್ಟಿಗೆ ಇರುವುದು? ಅದರಂತೆ ಮೂರು ಪ್ರಕಾರ ಗಳಾಗಿಲ್ಲದ ಅಂಥ ದೃಶ್ಯ ಪದಾರ್ಥವು ಯಾವುದಿದೆ ? ।।೯೩।।

ಆದ್ದರಿಂದ ಈ ಗುಣಗಳು ಬುದ್ಧಿಯ ಮೂರು ಪ್ರಕಾರಗಳನ್ನಾಗಿ ಮಾಡಿದೆ. ಹಾಗೆಯೇ ಧೃತಿಯು ಕೂಡ ಮೂರು ಗುಣಗಳಿಂದ ಮೂರು ಭೇದವಾಗಿದೆ ।।೯೪।।

ಅದೇ ಬೇರೆ ಬೇರೆ ಭೇದಗಳನ್ನು ಅವುಗಳ ಚಿನ್ಹದೊಂದಿಗೆ ವಿಸ್ತಾರಪೂರ್ವಕವಾಗಿ ಹೇಳುವೆನು ।।೯೫।।

ಆದರೆ ಬುದ್ಧಿ ಹಾಗೂ ಧೃತಿ ಈ ಎರಡರಲ್ಲಿ ಪ್ರಥಮ ವಾಗಿ ಬುದ್ಧಿಯ ಭೇದದ ಕಾರಣಗಳನ್ನು ಹೇಳುವೆನು ।।೯೬।।

ಅದೇನೆಂದರೆ ಹೇ ಸುಭಟನೇ, ಮನುಷ್ಯನಿಗೆ ಈ ಸಂಸಾರದಲ್ಲಿ ಬರಲು ಉತ್ತಮ, ಮಧ್ಯಮ ಹಾಗೂ ಕನಿಷ್ಠ ಹೀಗೆ ಮೂರು ಮಾರ್ಗಗಳು ಇರುವುವು ।।೯೭।।

ಆ ಮೂರು ಮಾರ್ಗಗಳಾವುವು ಎಂದರೆ ಅಕರಣೀಯ, ಕಾಮ್ಯ ಹಾಗೂ ನಿಷಿದ್ಧ ಕರ್ಮಗಳು ಪ್ರಸಿದ್ಧವಾಗಿರುವುವು ಮತ್ತು ಪ್ರಾಣಿ ಮಾತ್ರರಿಗೆ ಇವುಗಳಿಂದ ಸಂಸಾರವು ಪ್ರಾಪ್ತವಾಗುತ್ತಿರುತ್ತದೆ ।।೯೮।।

ಶ್ಲೋಕಾರ್ಥ :- ಇದು ಧರ್ಮ, ಇದು ಅಧರ್ಮ, ಇದು ಕಾರ್ಯ, ಇದು ಅಕಾರ್ಯ, ಇದರಿಂದ ಭಯ, ಇದರಿಂದ ನಿರ್ಭಯ, ಇದು ಬಂಧ, ಇದು ಮೋಕ್ಷ ಎಂದು ತಿಳಿದುಕೊಳ್ಳಬಲ್ಲ ಬುದ್ಧಿ ಸಾತ್ತ್ವಿಕವೆನಿಸುತ್ತದೆ ।।೩೦।।

ಆದ್ದರಿಂದ ಈ ಲೋಕದಲ್ಲಿ ಅಧಿಕಾರ ತಕ್ಕಂತೆ ಹಾಗೂ ವಿಧಿಯ ಓಘದಿಂದ ಪ್ರಾಪ್ತವಾದ ಯಾವ ನಿತ್ಯ ಕರ್ಮ ಒಂದೇ ಉತ್ತಮವಾದದ್ದು ।।೯೯।।

ನೀರಡಿಸಿದ ಮನುಷ್ಯನು ಅತ್ಯಂತ ಆದರದಿಂದ ನೀರನ್ನು ಕುಡಿಯುವಂತೆ, ಅದೇ ನಿತ್ಯ ಕರ್ಮವನ್ನು ಆತ್ಮಪ್ರಾಪ್ತಿರೂಪ ಫಲದ ಮೇಲೆ ದೃಷ್ಟಿ ಇಟ್ಟು ಮಾಡಬೇಕು ।।೨೦೦।।

ಈ ರೀತಿಯ ಯುಕ್ತಿಯಿಂದ ನಿತ್ಯ ಕರ್ಮವನ್ನು ಮಾಡಿದಲ್ಲಿ ಅದು ದುಸ್ತರವಾದ ಜನ್ಮಭಯದಿಂದ ಬಿಡಿಸುವುದು ಮತ್ತು ಮೋಕ್ಷ ಪ್ರಾಪ್ತಿಯನ್ನು ಸುಲಭಗೊಳಿಸುವುದು ।।೨೦೧।।

ಈ ಪ್ರಕಾರವಾಗಿ ಯಾವ ಸೂಜ್ಞ ಮನುಷ್ಯನು ಕರ್ಮವನ್ನು ಮಾಡುವನೋ, ಆತನು ಸಂಸಾರ ಭಯದಿಂದ ಮುಕ್ತನಾಗಿ ಮುಮುಕ್ಷತ್ವದ ಪಾವುಟಣಿಗೆಗೆ ಬಂದು ಮುಟ್ಟುವನು ।।೨೦೨।।

ಈ ನಿತ್ಯ ಕರ್ಮದ ಮೇಲೆ ವಿಶ್ವಾಸವನ್ನಿಟ್ಟು ಯಾವ ಬುದ್ಧಿಯು ಅದರ ಆಚರಣೆಯ ವಿಷಯಕ್ಕೆ ನಿಶ್ಚಯಿಸು ವುದೋ, ಅಲ್ಲಿ ಮೋಕ್ಷ ಪ್ರಾಪ್ತಿಯು ಸಿಕ್ಕೇ ಸಿಗುವುದು ।।೨೦೩।।

ಆದ್ದರಿಂದ ಯಾವ ನಿವೃತ್ತಿಯ ಬುನಾದಿಯ ಮೇಲೆ ಪ್ರವೃತ್ತಿಯ ಕಟ್ಟಡವಿರುವುದು. ಇಂಥ ಈ ಕರ್ಮದಲ್ಲಿ ಏಕೆ ಮುಳುಗಬಾರದು ? ।।೨೦೪।।

ನೀರಡಿಸಿದವನಿಗೆ ನೀರು ಇದ್ದರೆ, ನದಿಯಲ್ಲಿ ಬಿದ್ದವನಿಗೆ ಈಸಲು ಬರುತ್ತಿದ್ದರೆ, ಕತ್ತಲೆಯಲ್ಲಿ ಸೂರ್ಯನ ಸಹಕಾರವಾದರೆ ।।೨೦೫।।

ಅಥವಾ ಪಥ್ಯದೊಂದಿಗೆ ಔಷಧವನ್ನು ಸೇವಿಸಿದರೆ, ರೋಗಗ್ರಸ್ತನಾದ ಮನುಷ್ಯನು ಬದುಕುವನು. ಅಥವಾ ಮೀನಿಗೆ ನೀರಿನ ಆಶ್ರಯ ದೊರೆತರೆ ।।೨೦೬।।

ಹೀಗಾದ ಮೇಲೆ ಆ ಜೀವಕ್ಕೆ ಹೇಗೆ ಭಯವಿಲ್ಲವೋ, ಅದರಂತೆ ಈ ನಿತ್ಯ ಕರ್ಮದ ಆಚರಣೆಯನ್ನು ಮಾಡಿದಲ್ಲಿ ಮೋಕ್ಷಪ್ರಾಪ್ತಿಯು ಆಗೇ ಆಗುತ್ತದೆ ।।೨೦೭।।

ಈ ನಿತ್ಯ ಕರ್ಮವನ್ನು ಮಾಡುವುದರಲ್ಲಿ ಜ್ಞಾನದ ಪ್ರವೃತ್ತಿ ಇರುವುದು ಮತ್ತು ಇಲ್ಲಿ ನೋಡು, ನಿಜವಾಗಿಯೂ ಆಚರಿಸಲು ಯೋಗ್ಯವಲ್ಲದ ।।೨೦೮।।

ಜೇ ತಿಯೇ ಕಾಮ್ಯಾದಿಕೇ । ಸಂಸಾರಭಯದಾಯಕೇ । ಅಕೃತ್ಯಪಣಾಚೇ ಆಂಬುಖೇ । ಪಡಿಲೇ ಜಯಾ ॥೭೯೯॥ ತಿಯೇ ಕರ್ಮಿ ಅಕಾರ್ಯಿ । ಜನ್ಮಮರಣ ಸಮಯೀ । ಪ್ರವೃತ್ತಿ ಪಳವೀ ಪಾಯೀ । ಮಾಗಿಲೀಂಚಿ ॥೮೦೦॥ ಪೈ ಆಗೀ ಮಾಜೀ ನ ರಿಘವೇ । ಅಥಾವೀ ನ ಘಲವೇ । ಧಗಧಗೀತ ನಾಗವೇ । ಶೂಳ ಜೇವೀ ॥೮೦೧॥ ಕಾ ಕಾಳಿಯಾನಾಗ ಧುಂಧುವಾತು । ದೇಖೋನಿ ನ ಘಾಲವೇ ಹಾತು । ನ ವಚವೇ ಖೋಪೇ ಆಂತು । ವಾಘಾಚಿಯೇ ॥೮೦೨॥ ತೈಸೇ ಕರ್ಮ ಅಕರಣೀಯ । ದೇಖೋನಿ ಮಹಾಭಯ । ಉಪಜೇ ನಿಃಸಂದೇಹ । ಬುದ್ಧೀ ಜಿಯೇ ॥೮೦೩॥ ವಾಢಿಲೇ ರಾಂಧೂನಿ ವಿಖೇ । ತೇಥೇ ಜಾಣಿಜೇ ಮೃತ್ಯು ನ ಚುಕೇ । ತೇವೀ ನಿಷೇಧೀ ಕಾ ದೇಖೇ । ಬಂಧಾತೇ ಜೇ ॥೮೦೪॥ ಮಗ ಬಂಧಭಯಭರಿತೀ । ತಿಯೇ ನಿಷಿದ್ಧೀ ಪ್ರಾಪ್ತೀ । ವಿನಿಯೋಗು ಜಾಣೇ ನಿವೃತ್ತೀ । ಕರ್ಮಾಚಿಯೇ ॥೮೦೫॥ ಐಸೇನಿ ಕಾರ್ಯಕಾರ್ಯಾವಿವೇಕೀ । ಜೇ ಪ್ರವೃತ್ತಿ ನಿವೃತ್ತಿ ಮಾಪಕೀ । ಖರಾ ಕುಡಾ ಪಾರಖೀ । ಜಿಯಾ ಪರೀ ॥೮೦೬॥ ತೈಸೀ ಕೃತ್ಯಾಕೃತ್ಯಶುದ್ಧೀ । ಬುಝೇ ಜೇ ನಿರವಧೀ । ಸಾತ್ತ್ವಿಕ ಮ್ಹಣಿಪೇ ಬುದ್ಧೀ । ತೇಂಚಿ ತೂ ಜಾಣ ॥೮೦೭॥

ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ ।
ಅಯಥಾವತ್ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸಿ ॥೩೧॥

ಆಣಿ ಬಕಾಚ್ಯಾ ಗಾಂವೀ । ಘೇಪೇ ಕ್ಷೀರನೀರ ಸಕಲವೀ । ಕಾ ಆಹೋ ರಾತ್ರೀಂಚೀ ಗೋಂವೀ । ಆಂಧಳೇ ನೇಣೇ ॥೮೦೮॥ ಜಯಾ ಫುಲಾಚಾ ಮಕರಂದು ಫಾವೇ । ತೋ ಕಾಷ್ಠೇ ಕೋರೂ ಧಾಂವೇ । ಪರೀ ಭ್ರಮರಪಣಾ ನವ್ಹೇ । ಅವ್ಹಾಂಟಾ ಜೇವೀ ॥೮೦೯॥ ತೈಸೀ ಇಯೇ ಕಾರ್ಯಾಕಾರ್ಯೆ । ಧರ್ಮಾಧರ್ಮರೂಪೇ ಜಿಯೇ । ತಿಯೇ ನ ಚೋಜವಿತಾ ಜಾಯೇ । ಜಾಣತೀ ಜೇ ಕಾ ॥೮೧೦॥ ಅಗಾ ಡೋಳಾವೀಣ ಮೋತಿಯೇ । ಘೇತಾ ಪಾಡು ಮಿಳೇ ವಿಪಾಯೇ । ನ ಮಿಳಣೇ ತೇ ಆಹೇ । ಠೇವಿಲೇ ತೇಥೇ ॥೮೧೧॥ ತೈಸೇ ಅಕರಣೀಯ ಅವಚಟೇ । ನೋಡವೇ ತರೀಚ ಲೋಟೇ । ಯೇರ್ಹವೀ ಜಾಣೇ ಏಕವಟೇ । ದೋನ್ಹೀ ಜೇ ಕಾ ॥೮೧೨॥ ತೇ ಗಾ ಬುದ್ಧಿ ಚೋಖವಿಷೀ । ಜಾಣ ಯೇಥ ರಾಜಸೀ । ಅಕ್ಷತ ಟಾಕಿಲೀ ಜೈಸೀ । ಮಾಂದಿಯೇವರೀ ॥೮೧೩॥

ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾವೃತಾ ।
ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ॥೩೨॥

ಅಂಥ ಯಾವ ಕಾಮ್ಯಾದಿಕ ಕರ್ಮಗಳು ಸಂಸಾರ ಭಯವನ್ನು ಉತ್ಪನ್ನಗೊಳಿಸುವುವು. ಹಾಗೂ ಅವುಗಳ ಮೇಲೆ ನಿಷಿದ್ಧವೆಂಬ ಮುದ್ರೆ ಒತ್ತಿರುವುದು ॥೭೦೯॥

ಅನಾಚರಣೀಯ ಹಾಗೂ ಜನ್ಮಮರಣದಾಯಕವಾದ ಇಂಥ ಕೆಟ್ಟ ಕರ್ಮಗಳಿಂದ ಯಾವನು ತನ್ನ ವೃತ್ತಿಯನ್ನು ಹಿಂದಿನ ಕಾಲಿನಿಂದಲೇ ಓಡಿಸುವನು ॥೭೧೦॥

ಅಗ್ನಿಯಲ್ಲಿ ಪ್ರವೇಶ ಮಾಡುವುದಾಗುವುದಿಲ್ಲ. ಆಳವಾದ ನೀರಿನಲ್ಲಿ ಜಿಗಿಯಲು ಬರುವುದಿಲ್ಲ. ಹಾಗೂ ಕೆಂಪಗೆ ಕಾಸಿದ ಶೂಲವನ್ನು ಕೈಯಲ್ಲಿ ಹಿಡಿಯುವುದಾಗುವುದಿಲ್ಲ ॥೭೧೧॥

ಅಥವಾ ಬುಸುಗುಡುವ ಕರಿನಾಗರಹಾವನ್ನು ಕಾಣುತ್ತಿದ್ದರೆ ಅದಕ್ಕೆ ಕೈ ಹಚ್ಚುವುದಾಗುವುದಿಲ್ಲ. ಹಾಗೂ ಹುಲಿಯ ಗವಿಯಲ್ಲಿ ಯಾರೂ ಹೋಗುವುದಿಲ್ಲ ॥೭೧೨॥

ಅದರಂತೆ ನಿಷಿದ್ಧ ಕರ್ಮಗಳನ್ನು ನೋಡಿಕೊಂಡಾಗಲೇ ಯಾವ ಬುದ್ಧಿಯಲ್ಲಿ ನಿಶ್ಚಯದಿಂದ ಭಯವು ಹುಟ್ಟುವುದು ॥೭೧೩॥

ವಿಷ ಹಾಕಿ ಸಿದ್ಧಗೊಳಿಸಿದ ಅನ್ನವನ್ನು ತಿಂದರೆ ಮರಣವು ತಪ್ಪುವುದಿಲ್ಲ. ಅದರಂತೆ ನಿಷಿದ್ಧ ಕರ್ಮಗಳ ಆಚರಣೆಯಿಂದ ಜನ್ಮ ಮರಣವು ತಪ್ಪುವುದಿಲ್ಲ ॥೭೧೪॥

ಆಗ ನಿಷಿದ್ಧ ಕರ್ಮಗಳ ಆಚರಣೆಯಿಂದ ಜನ್ಮ ಮರಣದ ಭಯವು ಪ್ರಾಪ್ತವಾಗುವುದೆಂದು ತಿಳಿದು ಯಾವ ಬುದ್ಧಿಯು ಅವುಗಳನ್ನು ತ್ಯಾಗ ಮಾಡುವುದು ॥೭೧೫॥

ರತ್ನ ಪರೀಕ್ಷಕನು ಯಾವ ರೀತಿಯಲ್ಲಿ ಖರೇ ಖೊಟ್ಟಿಯ ನಿರ್ಣಯ ಮಾಡುವಂತೆ ಕಾರ್ಯ, ಅಕಾರ್ಯ ವಿಷಯಕ್ಕೆ ಪ್ರವೃತ್ತಿ ನಿವೃತ್ತಿ ರೂಪ ಅಳತೆಯಿಂದ ಯಾವುದು ನಿರ್ಣಯಿಸುವುದೋ ॥೭೧೬॥

ಹಾಗೆಯೇ ಯಾವ ಬುದ್ಧಿಗೆ ಒಳಿತು ಹಾಗೂ ಹೀನ ಇವು ಸ್ಪಷ್ಟವಾಗಿ ತಿಳಿಯುವುದೋ, ಅದು ಸಾತ್ತ್ವಿಕ ಬುದ್ಧಿಯಾಗಿರುವುದು ॥೭೧೭॥

ಶ್ಲೋಕಾರ್ಥ :- ಅರ್ಜುನಾ! ಧರ್ಮವನ್ನು, ಅಧರ್ಮವನ್ನು, ಕಾರ್ಯವನ್ನು, ಅಕಾರ್ಯವನ್ನು, ಇದ್ದದ್ದನ್ನು ಇದ್ದಂತೆ ಸ್ಪಷ್ಟವಾಗಿ ತಿಳಿದುಕೊಳ್ಳಲಾರದ ಬುದ್ಧಿ ರಾಜಸ ಬುದ್ಧಿ ॥೩೧॥

ಮತ್ತು ಬಕಪಕ್ಷಿಯು ಊರಿನಲ್ಲಿ ನೀರು ಕೂಡಿಸಿದ ಹಾಲು ಒಂದೇ ಎಂದು ತಿಳಿಯಲ್ಪಡುವುದು. ಅಥವಾ ಹುಟ್ಟು ಕುರುಡನು ಹಗಲು ರಾತ್ರಿಯ ಭೇದವನ್ನು ಅರಿಯುವುದಿಲ್ಲ ॥೭೧೮॥

ಭ್ರಮರಕ್ಕೆ ಅತಿಶಯ ಕೋಮಲವಾದ ಹೂವುಗಳ ಮಕರಂದವನ್ನು ಸೇವಿಸಲು ಬರುವುದು. ಅದೇ ಭ್ರಮರವು ಕಟ್ಟಿಗೆಯನ್ನು ಕೊರೆಯಲು ಪ್ರವೃತ್ತವಾಗುವುದು. ಆದಾಗ್ಯೂ ಅದರ ಭ್ರಮರತ್ವಕ್ಕೆ ನಷ್ಟವಾಗುವುದಿಲ್ಲ ॥೭೧೯॥

ಅದರಂತೆ ಧರ್ಮಾಧರ್ಮ ರೂಪದಿಂದಿರುವ ಕಾರ್ಯಾಕಾರ್ಯಗಳನ್ನು ವಿಂಗಡಿಸದೇ ಯಾವ ಬುದ್ಧಿಯು ಅವುಗಳ ಆಚರಣೆಯನ್ನು ಮಾಡುವುದೋ ॥೭೨೦॥

ಅರೇ, ಪರೀಕ್ಷೆ ಮಾಡದೇ ಮುತ್ತುಗಳನ್ನು ತೆಗೆದುಕೊಂಡರೆ ಕ್ವಚಿತವಾಗಿ ಉತ್ತಮ ಸಿಗಬಹುದು ಎಂಬುದು ನೇಮವಿಲ್ಲ. ಆದರೆ ಉತ್ತಮ ಸಿಗುವುದಿಲ್ಲವೆಂಬುವುದು ಮಾತ್ರ ನಿಶ್ಚಿತವಾಗಿದೆ ॥೭೨೧॥

ಅದರಂತೆ ನಿಷಿದ್ಧ ಕರ್ಮವು ಸಹಜವಾಗಿ ಪ್ರಾಪ್ತವಾಗದಿದ್ದರೆ ಮಾತ್ರ ಉಳಿದೀತು, ಇಲ್ಲದಿದ್ದಲ್ಲಿ ಅಲ್ಲಿ ಉತ್ತಮ ಹೀನ ಎರಡನ್ನು ಸರಿಸಮಾನವಾಗಿ ಮನ್ನಿಸಲ್ಪಡುವುದು ॥೭೨೨॥

ಯಾವ ಪ್ರಕಾರವಾಗಿ ಎಲ್ಲ ಸಮಾಜದವರಿಗೆ ಆಮಂತ್ರಿಸುವಾಗ ಯೋಗ್ಯಾಯೋಗ್ಯದ ವಿಚಾರವನ್ನು ಮಾಡಲು ಬಾರದಂತೆ, ಉತ್ತಮ ಕೆಟ್ಟ ಕರ್ಮಗಳಲ್ಲಿ ಅಂಥ ಬುದ್ಧಿಯು ಅದು ರಾಜಸ ಬುದ್ಧಿಯು ॥೭೨೩॥

ಶ್ಲೋ॰ ಅರ್ಥ :- ಪಾರ್ಥಾ! ಅಜ್ಞಾನದಿಂದ ಆವರಿಸಲ್ಪಟ್ಟು, ಅಧರ್ಮವನ್ನು ಧರ್ಮವಾಗಿಯೂ, ಸರ್ವ ವಿಷಯಗಳನ್ನೂ ತಲೆ ಕೆಳಕಾಗಿ ಭಾವಿಸುವ ಬುದ್ಧಿ ತಾಮಸ ಬುದ್ಧಿಯೆನಿಸುತ್ತದೆ ॥೩೨॥

ಆಣಿ ರಾಜಾ ಜಿಯಾ ವಾಟಾ ಜಾಯೇ । ತೇ ಚೋರಾಂಸಿ ಆಡವ ಹೋಯೇ । ಕಾ ರಾಕ್ಷಸಾ ದಿವೋ ಪಾಹೇ । ರಾತಿ ಹೋಊನಿ ॥೭೨೪॥ ನಾನಾ ನಿಧಾನಚಿ ನಿದೈವಾ । ಹೋಯೇ ಕೋಳಸಯಾಚಾ ಉಡವಾ । ಪೈ ಅಸತೇ ಆಪಣಪೇ ಜೀವಾ । ನಾಹೀ ಜಾಳೇ ॥೭೨೫॥ ತೈಸೇ ಧರ್ಮಜಾತ ತಿತುಕೇ । ಜಿಯೇ ಬುದ್ಧೀಸೀ ಪಾತಕೇ । ಸಾಚ ತೇ ಲಟಿಕೇ । ಐಸೇಂಚಿ ಬುಝೇ ॥೭೨೬॥ ತೇ ಆಘವೇಚಿ ಅರ್ಥ । ಕರೂನಿ ಘಾಲೀ ಅನರ್ಥ । ಗುಣ ತೇ ತೇ ವ್ಯವಸ್ಥಿತ । ದೋಷಚಿ ಮಾನೀ ॥೭೨೭॥ ಕಿಂಬಹುನಾ ಶ್ರುತಿಜಾತೇ । ಅಧಿಷ್ಠೂನಿ ಕೇಲೇ ಸರತೇ । ತೇತುಲೇಂಹೀ ಉಪರತೇ । ಜಾಣೇ ಜೇ ಬುದ್ಧೀ ॥೭೨೮॥ ತೇ ಕೋಣಾತೇಂಹೀ ನ ಪುಸತಾ । ತಾಮಸೀ ಜಾಣಾವೀ ಪಂಡುಸುತಾ । ರಾತ್ರೀ ಕಾಯ ಧರ್ಮಾರ್ಥಾ । ಸಾಚ ಕರಾವೀ ॥೭೨೯॥ ಏವಂ ಬುದ್ಧೀಚೇ ಭೇದ । ತಿನ್ಹೀ ತುಜ ವಿಶದ । ಸಾಂಗಿತಲೇ ಸ್ವಭೋಧ । ಕುಮುದಚಂದ್ರಾ ॥೭೩೦॥ ಆತಾ ಯಯಾಚೀ ಬುದ್ಧಿವೃತ್ತೀ । ನಿಷ್ಟಂಕಿಲಾ ಕರ್ಮಜಾತೀ । ಖಾಂದು ಮಾಂಡಿಜೇ ಧೃತೀ । ತ್ರಿವಿಧಾ ಜಯಾ ॥೭೩೧॥ ತಿಯೇ ಧೃತೀಚೇಹೀ ವಿಭಾಗ । ತಿನ್ಹೀ ಯಥಾಲಿಂಗ । ಸಾಂಗಿಜತೀ ಚಾಂಗ । ಅವಧಾನ ದೇಈ ॥೭೩೨॥

ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇಂದ್ರಿಯಕ್ರಿಯಾಃ ।
ಯೋಗೇನಾವ್ಯಭಿಚಾರಿಣ್ಯಾ ಧೃತಿಃ ಸಾ ಪಾರ್ಥ ಸಾತ್ತ್ವಿಕೀ ॥೩೩॥

ತರೀ ಉದೇಲಿಯಾ ದಿನಕರು । ಚೋರೀಸಿ ಥೋಕೇ ಅಂಧಾರು । ಕಾ ರಾಜಾಜ್ಞಾ ಅವ್ಯವಹಾರು । ಕುಂಠವೀ ಜೇವೀ ॥೭೩೩॥ ನಾನಾ ಪವನಾಚಾ ಸಾಟು । ವಾಜೇನಲಿಯಾ ನೀಟು । ಆಂಗೇಸೀ ಬೊಭಾಟು । ಸಾಂಡಿತೀ ಮೇಘ ॥೭೩೪॥ ಕಾ ಅಗಸ್ತೀಚೇನಿ ದರ್ಶನೇ । ಸಿಂಧು ಘೇಊನಿ ಠಾತೀ ಮೌನೇ । ಚಂದ್ರೋದಯೀ ಕಮಳವನೇ । ಮಿಠೀ ದೇತೀ ॥೭೩೫॥ ಹೇ ಅಸೋ ಪಾವೋ ಉಚಲಿಲಾ । ಮದಮುಖ ನ ಠೇವಿತೀ ಖಾಲಾ । ಗರ್ಜೋನಿ ಪುಢಾ ಜಾಲಾ । ಸಿಂಹು ಜರೀ ॥೭೩೬॥ ತೈಸಾ ಜೋ ಧೀರು । ಉಠಲಿಯಾ ಅಂತರು । ಮನಾದಿಕೇ ವ್ಯಾಪಾರು । ಸಾಂಡಿತೀ ಉಭೀ ॥೭೩೭॥ ಇಂದ್ರಿಯಾ ವಿಷಯಾಂಚಿಯಾ ಗಾಂಠೀ । ಆಪೈಸಯಾ ಸುಟತೀ ಕಿರೀಟೀ । ಮನ ಮಾಯೇಚ್ಯಾ ಪೋಟೀ । ರಿಗತೀ ದಾಹೀ ॥೭೩೮॥ ಅಧೋರ್ಧ್ವ ಗೂಢೇ ಕಾಢೀ । ಪ್ರಾಣ ನವಾಂಚೀ ಪೇಂಡೀ । ಬಾಂಧೋನಿ ಘಾಲೀ ಉಡೀ । ಮಧ್ಯಮೇಮಾಜೀ ॥೭೩೯॥

ಮತ್ತು ರಾಜನು ಯಾವ ಮಾರ್ಗದಿಂದ ಹೋಗುವನೋ, ಅದು ಕಳ್ಳರಿಗೆ ಅಡ್ಡ ಮಾರ್ಗವಾಗುವುದು. ಅಥವಾ ರಾಕ್ಷಸರಿಗೆ ರಾತ್ರಿಯು ಹಗಲಾಗುತ್ತದೆ ||೭೨೪||

ಅಥವಾ ಧನದ ನಿಧಿಯು ಭಾಗ್ಯಹೀನನಿಗೆ ಇದ್ದಲಿಯ ರಾಶಿಯಾಗಿ ಕಾಣುವುದು. ಆದ್ದರಿಂದ ಧನವು ಹತ್ತಿರವಿದ್ದರೂ ಆತನಿಗೆ ಇದ್ದೂ ಇಲ್ಲದಂತೆ ||೭೨೫||

ಅದರಂತೆ ಶಾಸ್ತ್ರದಲ್ಲಿ ಹೇಳಿರುವ ಎಲ್ಲ ಮಾರ್ಗಗಳನ್ನು ಆಚರಿಸುವುದು ಈ ಯಾವ ಬುದ್ಧಿಗೆ ಘಾತಕವಾಗಿ ಕಾಣುವುದು. ನಿಜವಾದದ್ದು ಸುಳ್ಳಾಗಿ ಭಾಸವಾಗುವುದು ||೭೨೬||

ಯಾವ ಶಾಸ್ತ್ರದ ನಿಜವಾದ ಅರ್ಥವನ್ನು ಬಿಟ್ಟು ಪ್ರತಿಯಾಗಿ ತಪ್ಪು ಅರ್ಥವನ್ನು ಮಾಡುವುದು. ಹಾಗೂ ಗುಣವಾಗಿ ಇರುವುದೆಲ್ಲವನ್ನೂ ದೋಷವೆಂದು ತಿಳಿಯುವುದು ||೭೨೭||

ಹೆಚ್ಚಿಗೇನು ಹೇಳಬೇಕು ? ಶ್ರುತಿಗೆ ಮಾನ್ಯವಾಗಿರುವ ಎಲ್ಲ ವಿಷಯಗಳು ಆ ಬುದ್ಧಿಗೆ ವಿಪರೀತವಾಗಿ ಭಾಸವಾಗುವುವು ||೭೨೮||

ಪಂಡುಸುತನೇ, ಆ ಬುದ್ಧಿಗೆ ಯಾರನ್ನೂ ಕೇಳದೇ, ಅನುಮಾನವಿಲ್ಲದೆ ತಾಮಸ ಬುದ್ಧಿ ಎನ್ನಬೇಕು. ಇಲ್ಲಿ ನೋಡು, ಆ ಬುದ್ಧಿಗೆ ಧರ್ಮ ಹಾಗೂ ಅರ್ಥಗಳ ಅಜ್ಞಾನವಿದೆ. ಏನು ಮಾಡಬೇಕು ? ||೭೨೯||

ಆತ್ಮಜ್ಞಾನರೂಪ ಕಮಲಕ್ಕೆ ವಿಕಾಸಗೊಳಿಸುವ ಚಂದ್ರನಾದ ಅರ್ಜುನನೇ, ನಿನಗೆ ಬುದ್ಧಿಯ ಮೂರು ಭೇದಗಳನ್ನು ಸ್ಪಷ್ಟಮಾಡಿ ಹೇಳಿದೆನು ||೭೩೦||

ಈಗ ಇದೇ ಬುದ್ಧಿಗೆ ಕರ್ಮ ಮಾಡುವ ವಿಷಯದಲ್ಲಿ ಯಾವ ನಿಶ್ಚಯವಾಗುವುದೋ, ಅದಕ್ಕೆ ಧೃತಿ ಎಂದು ಸಂಜ್ಞೆಯು ಪ್ರಾಪ್ತವಾಗುವುದು. ಹಾಗೂ ಅದು ಸಹ ಮೂರು ಪ್ರಕಾರದ್ದಾಗಿದೆ ||೭೩೧||

ಯಾವ ಈ ಧೃತಿಯ ಮೂರು ಪ್ರಕಾರಗಳ ಲಕ್ಷಣಗಳನ್ನು ನಿನಗೆ ಸ್ಪಷ್ಟವಾಗಿ ಹೇಳುವೆನು. ಅದರ ಕಡೆ ಸರಿಯಾಗಿ ಲಕ್ಷ ಕೊಡು ||೭೩೨||

**ಶ್ಲೋಕಾರ್ಥ :-** ಪಾರ್ಥಾ ! ಇಂದ್ರಿಯ ಪ್ರಾಣ ಮನೋ ವ್ಯಾಪಾರಗಳನ್ನು ಚೆಲ್ಲಾಪಿಲ್ಲಿಯಾಗದಂತೆ, ಒಂದೇ ಕಟ್ಟಿನಲ್ಲಿ ಇಟ್ಟುಕೊಳ್ಳಬಲ್ಲ ಧೃತಿಯನ್ನು ಸಾತ್ತ್ವಿಕ ಧೃತಿಯೆನ್ನುತ್ತಾರೆ ||೩೩||

ಸೂರ್ಯೋದಯವಾದಾಕ್ಷಣವೇ ಕಳ್ಳತನದೊಂದಿಗೆ ಕತ್ತಲೆಯೂ ಇಲ್ಲದಾಗುವುದು. ಅಥವಾ ರಾಜಾಜ್ಞೆಯಿಂದ ಅವ್ಯವಹಾರಗಳು ನಿಲ್ಲುವುವು ||೭೩೩||

ಅಥವಾ ಗಾಳಿಯು ಒಂದೇಸವನೆ ಜೋರಾಗಿ ಬೀಸಹತ್ತಲು ಗರ್ಜನೆಯೊಂದಿಗೆ ಮೋಡಗಳು ಇಲ್ಲದಾಗುವುವು ||೭೩೪||

ಅಥವಾ ಅಗಸ್ತ್ಯ ಋಷಿಯ ದರ್ಶನದಿಂದ ಸಮುದ್ರದ ಗರ್ಜನೆಯು ನಿಲ್ಲುವುದು. ಅಥವಾ ಚಂದ್ರೋದಯದಿಂದ ಸೂರ್ಯ ವಿಕಾಸಿನಿ ಕಮಲಗಳು ಮುದುಡಿಕೊಳ್ಳುವುವು ||೭೩೫||

ಇದು ಇರಲಿ, ಸಿಂಹವು ಗರ್ಜಿಸುತ್ತ ಮುಂದೆ ಬರಲು ಮದೋನ್ಮತ್ತ ಆನೆಗೆ ಎತ್ತಿದಕಾಲು ಕೆಳಗೆ ಬಿಡಲು ಬರುವುದಿಲ್ಲ ||೭೩೬||

ಅದರಂತೆ ಸಾತ್ತ್ವಿಕ ಧೈರ್ಯವು ಉತ್ಪನ್ನವಾದಾಗ ಮನ, ಪ್ರಾಣ ಹಾಗೂ ಇಂದ್ರಿಯಗಳ ವ್ಯಾಪಾರಗಳು ನಿಂತಲ್ಲಿಯೇ ನಿಲ್ಲುವುವು ||೭೩೭||

ಕಿರೀಟಿಯೇ, ಇಂದ್ರಿಯ ಮತ್ತು ವಿಷಯಗಳ ಸ್ನೇಹವು ತನ್ನಷ್ಟಕ್ಕೆ ತಾನೇ ಬಿಡುಗಡೆಯಾಗುವುದು ಮತ್ತು ಅವರು ಹೆದರಿಕೊಂಡು ತಮ್ಮ ತಾಯಿಯಾದ ಮನದ ಹೊಟ್ಟೆಯಲ್ಲಿ ಹತ್ತೂ ಸೇರಿಕೊಳ್ಳುವುವು ||೭೩೮||

ಪ್ರಾಣದ ಒಂಬತ್ತು ಪ್ರಕಾರಗಳು ಎಲ್ಲವನ್ನೂ ಮುರಿದು ಮತ್ತು ಒಂದುಗೂಡಿಸಿ ಅವುಗಳಿಗೆ ಸುಷುಮ್ನಾ ನಾಡಿಯ ಕೊಠಡಿಯಲ್ಲಿ ಬಂಧಿಸಿ ಬಿಡುವುದು ||೭೩೯||

ಸಂಕಲ್ಪವಿಕಲ್ಪಾಂಚೀ ಲುಗಡೇ । ಸಾಂಡೂನಿ ಮನ ಉಘಡೇ । ಬುದ್ಧಿ ಮಾಗಿಲೇಕಡೇ । ಉಗೀಚಿ ಬೈಸೇ ॥೭೪೦॥ ಐಸೀ ಧೈರ್ಯರಾಜೇ ಜೇಣೇ । ಮನ ಪ್ರಾಣ ಕರಣೇ । ಸ್ವಚೇಷ್ಟಾಂಚೀ ಸಂಭಾಷಣೇ । ಸಾಂಡವಿಜತೀ ॥೭೪೧॥ ಮಗ ಆಘವೀಚಿ ಸಡೀ । ಧ್ಯಾನಾಚ್ಯಾ ಆಂತುಲ್ಯಾ ಮಢೀ । ಕೋಂಡಿಜತೀ ನಿರವಢೀ । ಯೋಗಾಚಿಯೆ ॥೭೪೨॥ ಪರೀ ಪರಮಾತ್ಮಯಾ ಚಕ್ರವರ್ತೀ । ಉಗಾಣಿತೀ ಜಂವ ಹಾತೀ । ತಂವ ಲಾಂಚು ನ ಘೇತಾ ಧೃತೀ । ಧರಿಜತೀ ಜಿಯಾ ॥೭೪೩॥ ತೇ ಗಾ ಧೃತೀ ಯೇಥೇ । ಸಾತ್ತ್ವಿಕ ಹೇ ನಿರುತೇ । ಆಈಕ ಅರ್ಜುನಾತೇ । ಶ್ರೀಕಾಂತು ಮ್ಹಣೇ ॥೭೪೪॥

ಯಯಾ ತು ಧರ್ಮಕಾಮಾರ್ಥಾನ್ ಧೃತ್ಯಾ ಧಾರಯೇತೇಽರ್ಜುನ ।
ಪ್ರಸಂಗೇನ ಫಲಕಾಂಕ್ಷಿ ಧೃತಿಃ ಸಾ ಪಾರ್ಥ ರಾಜಸೀ ॥೩೪ ॥

ಆಣಿ ಹೋಊನಿಯಾ ಶರೀರೀ । ಸ್ವರ್ಗಸಂಸಾರಾಚ್ಯಾ ದೋಹೀ ಘರೀ । ನಾಂದೇ ಜೋ ಪೋಟಭರೀ । ತ್ರಿವರ್ಗೋಪಾಯೇ ॥೭೪೫॥ ತೋ ಮನೋರಥಾಂಚ್ಯಾ ಸಾಗರೀ । ಧರ್ಮಾರ್ಥಕಾಮಾಂಚ್ಯಾ ತಾರುವಾವರೀ । ಜೇಣೇ ಧೈರ್ಯ ಬಳೇ ಕರೀ । ಕ್ರಿಯಾ ವಣಿಜ ॥೭೪೬॥ ಜೇ ಕರ್ಮ ಭಾಂಡವಲಾ ಸೂಯೇ । ತಯಾಚೀ ಚೌಗುಣೇ ಯೇತೀ ಪಾಹೇ । ಯೇವಢೇ ಸಾಯಾಸ ಸಾಹೇ । ಜಯಾ ಧೃತೀ ॥೭೪೭॥ ತೇ ಗಾ ಧೃತೀ ರಾಜಸ । ಪಾರ್ಥಾ ಯೇಥ ಪರಿಯೇಸ । ಆತಾ ಆಇಕ ತಾಮಸ । ತಿಸರೀ ಜೇ ಕಾ ॥೭೪೮॥

ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ ।
ನ ವಿಮುಂಚತಿ ದುರ್ಮೇಧಾಃ ಧೃತಿಃ ಸಾ ಪಾರ್ಥ ತಾಮಸೀ ॥೩೫॥

ತರೀ ಸರ್ವಾಧಮೇ ಗುಣೇ । ಜಯಾಚೇ ಕಾ ರೂಪಾ ಯೇಣೇ । ಕೋಳಸಾ ಕಾಳೇಪಣೇ । ಘಡಲಾ ಜೈಸಾ ॥೭೪೯॥ ಅಹೋ ಪ್ರಾಕೃತ ಆಣಿ ಹೀನು । ತಯಾಹೀ ಕೀ ಗುಣತ್ವಾಚಾ ಮಾನು । ತರೀ ನ ಮ್ಹಣಿಜೇ ಪುಣ್ಯಜನು । ರಾಕ್ಷಸು ಕಾಈ ? ॥೭೫೦॥ ಪೈ ಗ್ರಹಾಂಮಾಜೀ ಇಂಗುಳು । ತಯಾತೇ ಮ್ಹಣಿಜೇ ಮಂಗಳು । ತೈಸಾ ತಮೀ ಧಸಾಳು । ಗುಣಶಬ್ದು ಹಾ ॥೭೫೧॥ ಜೇ ಸರ್ವದೋಷಾಂಚಾ ವಸೌಟಾ । ತಮಚಿ ಕಾಮಊನಿ ಸುಭಟಾ । ಉಭಾರಿಲಾ ಆಂಗವಟಾ । ಜಯಾ ನರಾಚಾ ॥೭೫೨॥

ಮನಸ್ಸಿನ ಸಂಕಲ್ಪ ವಿಕಲ್ಪ ಸೀರೆಯನ್ನು ಬಿಚ್ಚಿ ಬತ್ತಲಾಗಿ ಮಾಡುವುದು. ಆಗ ಮನವು ಬುದ್ಧಿಯ ಹಿಂದೆ ಸುಮ್ಮನೇ ಕುಳಿತುಕೊಳ್ಳುವುದು ॥೨೪೦॥

ಈ ಪ್ರಕಾರವಾಗಿ ಯಾವ ಧೈರ್ಯ ರಾಜನು ಮನಸ್ಸು, ಪ್ರಾಣ ಮತ್ತು ಇಂದ್ರಿಯಗಳ ತಮ್ಮ ತಮ್ಮ ಮತಗಳ ಚೇಷ್ಟೆಗಳ ಭಾಷಣಗಳನ್ನು ಸ್ಥಗಿತಗೊಳಿಸುವನು ॥೨೪೧॥

ಆಗ ಎಲ್ಲರನ್ನೂ ಪರಿಶೋಧಿಸಿ ಅವರಿಗೆ ವ್ಯಾನದ ಒಳಗಿನ ಕೊಠಡಿಯಲ್ಲಿ ಯುಕ್ತಿಯಿಂದ ಬಂಧಿಸಿ ಇಡುವನು ॥೨೪೨॥

ಆದಾಗ್ಯೂ, ಚಕ್ರವರ್ತಿಯಾದ ಪರಮಾತ್ಮನಲ್ಲಿ ಒಪ್ಪಿಸುವವರೆಗೂ ಅವರಿಂದ ಲಂಚ ವಗೈರೆ ಸ್ವೀಕರಿಸದೇ ಧೈರ್ಯ ರಾಜನು ಅವುಗಳಿಗೆ ಬಿಡುವುದೇ ಇಲ್ಲ ॥೨೪೩॥

ಲಕ್ಷ್ಮೀಪತಿಯಾದ ಪರಮಾತ್ಮ ಶ್ರೀಕೃಷ್ಣನು ಅರ್ಜುನನಿಗೆ ಹೇಳಿದನು :- ಹೀಗಿರುವ ಧೈರ್ಯವು ಅದು ಕೇವಲ ಸಾತ್ತ್ವಿಕ ಧೈರ್ಯವಾಗಿರುವುದು. ಹೀಗೆ ತಿಳಿ ॥೨೪೪॥

ಶ್ಲೋಕಾರ್ಥ :- ಅರ್ಜುನಾ ! ಅತಿಯಾದ ಫಲಾಸಕ್ತಿಯಿಂದ ಕೂಡಿ, ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗದಲ್ಲಿಯೇ ಸಿಕ್ಕಿಕೊಂಡಿರುವ ಧೃತಿಯು ರಾಜಸ ಧೃತಿಯೆನಿಸುತ್ತದೆ ॥೩೪॥

ಮತ್ತು ಶರೀರವೇ ನನ್ನ ಸ್ವರೂಪವೆಂದು ತಿಳಿದು ಯಾವನು ಸ್ವರ್ಗ ಮತ್ತು ಸಂಸಾರ ಈ ಎರಡರಲ್ಲಿಯೇ ಧರ್ಮ, ಅರ್ಥ ಮತ್ತು ಕಾಮ ಈ ಮೂರನ್ನು ಉಪಾಯದಿಂದ ಆನಂದವಾಗಿ ವಾಸ ಮಾಡುವನು ॥೨೪೫॥

ಆತನು ಮನೋರಥ ಸಾಗರದಲ್ಲಿನ ಧರ್ಮಾರ್ಥ ಕಾಮರೂಪ ಹಡಗದಲ್ಲಿ ಯಾವ ಧೈರ್ಯ ಬಲದಿಂದ ಕರ್ಮಗಳ ವ್ಯಾಪಾರವನ್ನು ಮಾಡುವನು ॥೨೪೬॥

ಯಾವ ಕರ್ಮರೂಪ ಬಂಡವಾಳ ಹಾಕಿದಲ್ಲಿ ನಾಲ್ಕು ಪಟ್ಟು ಲಾಭವಾಗುವುದೆಂದು ತಿಳಿದು ಆ ಧೈರ್ಯವು ಸಾಹಸಮಯ ಕರ್ಮಗಳನ್ನು ಮಾಡುವುದು ॥೨೪೭॥

ಪಾರ್ಥಾ, ಆ ಧೈರ್ಯಕ್ಕೆ ರಾಜಸ ಧೈರ್ಯವೆಂದು ಹೇಳುವರು. ಈಗ ಮೂರನೆಯದಾದ ತಾಮಸ ಧೈರ್ಯದ ಲಕ್ಷಣಗಳನ್ನು ಹೇಳುವೆ, ಅದನ್ನು ಕೇಳು ॥೨೪೮॥

ಶ್ಲೋಕಾರ್ಥ :- ಪೃಥಾಪುತ್ರಾ ! ಪುನಃ ಪುನಃ ಸ್ವಪ್ನ, ಭಯ, ಶೋಕವಿಷಾದ, ಉನ್ಮತ್ತತೆಗೆ ಗುರಿಯಾಗುತ್ತಿದ್ದರೂ, ದೌರ್ಭಾಗ್ಯಶಾಲಿ ಮಾನವನು ಯಾವ ಧೃತಿಯನ್ನು ಬಿಡಲಾಗುವುದಿಲ್ಲವೋ ಅದನ್ನು ತಾಮಸ ಧೃತಿಯೆನ್ನುತ್ತಾರೆ ॥೩೫॥

ಯಾವ ಪ್ರಕಾರವಾಗಿ ಇದ್ದಲಿಯು ಕಪ್ಪು ಬಣ್ಣದ್ದಾಗಿರುವುದೋ, ಅದರಂತೆ ಯಾವನ ಸ್ವರೂಪವು ಎಲ್ಲವೂ ಅಧಮ ಗುಣಗಳಿಂದ ತುಂಬಿಕೊಂಡಿರುವುದು ॥೨೪೯॥

ಅಹೋ, ವಿಶೇಷವಾಗಿ ಪ್ರಾಕೃತ ಮತ್ತು ಹೀನ ಯೋಗ್ಯತೆಯ ತಾಮಸ ಧರ್ಮಕ್ಕೆ ''ಗುಣ''ವೆಂಬ ದೊಡ್ಡ ಶಬ್ದ ಹೇಗೆ ಬಂದಿತೆಂದು ಅನುಮಾನಿಸಲು ಕಾರಣವೇನು ? ರಾಕ್ಷಸರಿಗೂ ''ಪುಣ್ಯಜನ''ವೆಂಬ ಹೆಸರಿಲ್ಲವೇ ? ॥೨೫೦॥

ಎಲ್ಲ ಗ್ರಹಗಳಲ್ಲಿ ಬೆಂಕಿಯಂತೆ ತೊಂದರೆಕೊಡುವ ಗ್ರಹಕ್ಕೆ ಮಂಗಳ ಗ್ರಹವೆಂದು ಕರೆಯುವುದಿಲ್ಲವೇ ? ಅದರಂತೆ ತಾಮಸಕ್ಕೆ ಗುಣವೆಂಬುವುದು ಸಾಧಾರಣ ಶಬ್ದವಾಗಿದೆ ॥೨೫೧॥

ಹೇ ಸುಭಟನೇ, ಎಲ್ಲ ದೋಷಗಳ ವಸತಿಸ್ಥಾನವಾಗಿರುವ ಯಾವ ತಮೋಗುಣವು ಎಲ್ಲವನ್ನೂ ಒಂದೆಡೆ ಕೂಡಿಸಿ ತಮೋಗುಣಯುಕ್ತ ಮನುಷ್ಯನ ಮೂರ್ತಿಯನ್ನು ಸಿದ್ಧಗೊಳಿಸಿದೆ ॥೨೫೨॥

ತೋ ಆಳಸು ಸೂನಿ ಅಸೇ ಕಾಂಖೇ । ಮ್ಹಣೌನಿ ನಿದ್ರೇ ಕಹೀ ನ ಮುಕೇ । ಪಾಪೇ ಪೋಷಿತಾ ದುಃಖೇ । ನ ಸಾಂಡಿಜೇ ಜೇವೀ ॥೭೫೩॥ ಆಣಿ ದೇಹಧನಾಚಿಯಾ ಆವಡೀ । ಸದಾ ಭಯ ತಯಾತೇ ನ ಸಾಂಡೀ । ವಿಸಂಬು ನ ಸಕೇ ಥೋಂಡೀ । ಕಾಠಿಣ್ಯ ಜೈಸೇ ॥೭೫೪॥ ಆಣಿ ಪದಾರ್ಥಜಾತೀ ಸ್ನೇಹೋ । ಬಾಂಧೇ ಮ್ಹಣೌನಿ ತೋ ಶೋಕೇ ಠಾವೋ । ಕೇಲಾ ನ ಶಕೇ ಪಾಪ ಜಾವೋ । ಕೃತಘ್ನಾನಿ ಜೈಸೇ ॥೭೫೫॥ ಆಣಿ ಅಸಂತೋಷ ಜೀವೇಂಸೀ । ಧರೂನಿ ಠೇಲಾ ಅಹರ್ನಿಶೀ । ಮ್ಹಣೌನಿ ಮೈತ್ರೀ ತೇಣೇಂಸೀ । ವಿಷಾದೇ ಕೇಲಿ ॥೭೫೬॥ ಲಸಣಾತೇ ನ ಸಾಂಡೀ ಗಂಧೀ । ಕಾ ಅಪಥ್ಯಶೀಳಾತೇ ವ್ಯಾಧೀ । ತೈಸೇ ಕೇಲೀ ಮರಣಾವಧೀ । ವಿಷಾದೇ ತಯಾ ॥೭೫೭॥ ಆಣಿ ವಯಸಾ ವಿತ್ತಕಾಮು । ಯಯಾಂಚಾ ವಾಢವೀ ಸಂಭ್ರಮು । ಮ್ಹಣೌನಿ ಮದೇ ಆಶ್ರಮು । ತೋಚಿ ಕೇಲಾ ॥೭೫೮॥ ಆಗೀತೇ ನ ಸಾಂಡೀ ತಾಪು । ಸಳಾತೇ ಜಾತೀಚಾ ಸಾಪು । ಕಾ ಜಗಾಚಾ ವೈರೀ ವಾಸಿಪು । ಅಖಂಡು ಜೈಸಾ ॥೭೫೯॥ ನಾತರೀ ಶರೀರಾತೇ ಕಾಳು । ನ ವಿಸಂಬೇ ಕವಣೇ ವೇಳು । ತೈಸಾ ಆಥೀ ಅಢಳು । ತಾಮಸೀ ಮೃದು ॥೭೬೦॥ ಏವಂ ಪಾಂಚಹೀ ಹೇ ನಿದ್ರಾದಿಕ । ತಾಮಸಾಚ್ಯಾ ಠಾಈ ದೋಖ । ಜಿಯಾ ಧೃತೀ ದೇಖ । ಧರಿಲೇ ಆಹಾತೀ ॥೭೬೧॥ ತಿಯೇ ಗಾ ಧೃತೀ ನಾಂವೇ । ತಾಮಸೀ ಯೇಥ ಹೇ ಜಾಣಾವೇ । ಮ್ಹಣಿತಲೇ ತೇಣೇ ದೇವೇ । ಜಗಾಚೇನೀ ॥೭೬೨॥ ಏವಂ ತ್ರಿವಿಧ ಜೇ ಬುದ್ಧಿ । ಕೀಜೇ ಕರ್ಮನಿಶ್ಚಯೋ ಆಧಿ । ತೋ ಧೃತೀ ಯಾ ಸಿದ್ಧಿ । ನೇಇಜೋ ಯೇಥ ॥೭೬೩॥ ಸೂರ್ಯೇ ಮಾರ್ಗು ಗೋಚರು ಹೋಯೇ । ಆಣಿ ತೋ ಚಾಲತೀ ಕೀರ ಪಾಯೇ । ಪರೀ ಚಾಲಣೇ ತೇ ಆಹೇ । ಧೈರ್ಯೇ ಜೇವೀ ॥೭೬೪॥ ತೈಸೀ ಬುದ್ಧಿ ಕರ್ಮಾತೇ ದಾವೀ । ತೇ ಕರಣಸಾಮುಗ್ರಿ ನಿಫಜವೀ । ಪರೀ ನಿಫಜಾವಯಾ ಹೋಆವೀ । ಧೀರತಾ ಜೇ ॥೭೬೫॥ ತೇ ಹೇ ಗಾ ತುಜಪ್ರತೀ । ಸಾಂಗಿತಲೀ ತ್ರಿವಿಧ ಧೃತೀ । ಯಯಾ ಕರ್ಮತ್ರಯಾ ನಿಷ್ಪತ್ತೀ । ಜಾಲಿಯಾ ಮಗ ॥೭೬೬॥ ಯೇಥ ಫಳ ಜೇ ಏಕ ನಿಫಜೇ । ಸುಖ ಜಯಾತೇ ಮ್ಹಣಿಜೇ । ತೇಂಹೀ ತ್ರಿವಿಧ ಜಾಣಿಜೇ । ಕರ್ಮವಶೇ ॥೭೬೭॥ ತರೀ ಫಳರೂಪ ತೇ ಸುಖ । ತ್ರಿಗುಣೇ ಭೇದಲೇ ದೇಖ । ವಿವಂಚೂ ಆತಾ ಚೋಖ । ಚೋಖೀ ಬೋಲೀ ॥೭೬೮॥ ಪರೀ ಚೋಖೀ ತೇ ಕೈಸೀ ಸಾಂಗೇ । ಪೈ ಘೇವೋ ಜಾತಾ ಬೋಲಬಗೇ । ಕಾನೀಂಚಿಯೇಹೀ ಲಾಗೇ । ಹಾತೀಂಚಾ ಮಳು ॥೭೬೯॥

ಪಾಪಗಳನ್ನು ಪೋಷಿಸಿದಂತೆ ದುಃಖವು ಬಿಡುವುದಿಲ್ಲ. ಅದರಂತೆ ಅದು ತನ್ನ ಬಗಲದಲ್ಲಿ ಆಲಸ್ಯವನ್ನು ಧರಿಸಿರುವುದರಿಂದ ನಿದ್ರೆಯು ಆತನನ್ನು ಎಂದೂ ಬಿಡುವುದಿಲ್ಲ ॥೭೫೩॥

ಮತ್ತು ಕಲ್ಲಿನಿಂದ ಕಠಿಣತ್ವವೂ ಎಂದೂ ದೂರಾಗದಂತೆ ಅದಕ್ಕೆ ದೇಹರೂಪ ಧನದ ಮೇಲೆ ಯಾವಾಗಲೂ ಅತಿಶಯ ಪ್ರೀತಿ ಇರುವುದರಿಂದ ಅದಕ್ಕೆ ಭಯವು ಬಿಡುವುದಿಲ್ಲ ॥೭೫೪॥

ಕೃತಘ್ನ ಮನುಷ್ಯನ ಪಾಪವು ಏನು ಮಾಡಿದರೂ ಹೋಗದಂತೆ ಪದಾರ್ಥ ಮಾತ್ರಗಳಲ್ಲಿ ಪ್ರೀತಿ ಇಟ್ಟಿರುವುದರಿಂದ ಅವನು ಶೋಕದ ವಸತಿ ಸ್ಥಾನನಾಗುವನು ॥೭೫೫॥

ಮತ್ತು ಹಗಲು ರಾತ್ರಿ ಅಸಂತೋಷವನ್ನು ತನ್ನ ಜೀವಕ್ಕೆ ಕಟ್ಟಿಕೊಂಡಿರುವುದಕ್ಕಾಗಿ ವಿಷಾದವು ಆತನಲ್ಲಿ ಗೆಳೆತನ ಮಾಡಿರುವುದು ॥೭೫೬॥

ಬಳ್ಳೊಳ್ಳಿಯಲ್ಲಿನ ದುರ್ಗಂಧವು ಅದನ್ನು ಬಿಟ್ಟು ಹೊರಡದು, ಕುಪಥ್ಯ ಮಾಡುವ ಮನುಷ್ಯನಿಂದ ರೋಗವು ಬಿಡದು. ಅದರಂತೆ ವಿಷಾದವು ಆತನ ಸ್ನೇಹ ಆಜನ್ಮ ಬಿಡದು ॥೭೫೭॥

ಮತ್ತು ತಾರುಣ್ಯ, ಧನ ಹಾಗೂ ಕಾಮ, ಇವುಗಳ ಸಂಭ್ರಮವಾದ ಗರ್ವ ಇರುವುದರಿಂದ ಅಲ್ಲಿ ಮದವೂ ವಾಸ ಮಾಡಿಕೊಂಡಿರುವುದು ॥೭೫೮॥

ಅಗ್ನಿಯನ್ನು ತಾಪವು ಬಿಡುವುದಿಲ್ಲ, ಜಾತಿಯ ಹಾವಿಗೆ ಸೇಡಿನ ಭಾವನೆಯು ಬಿಡುವುದಿಲ್ಲ. ಭಯವು ಇಡೀ ಜಗದ ವೈರಿಯಾಗಿದ್ದು, ಈತನನ್ನು ಬಿಡುವುದಿಲ್ಲ ॥೭೫೯॥

ಅಥವಾ ಕಾಲನು ಶರೀರವನ್ನು ಎಂದೂ ಮರೆಯುವುದಿಲ್ಲ. ಅದರಂತೆ ತಮೋಗುಣದಲ್ಲಿ ಮದವು ಅಖಂಡವಾಗಿ ವಾಸ ಮಾಡಿರುವುದು ॥೭೬೦॥

ಈ ಪ್ರಕಾರವಾಗಿ ನಿದ್ರೆ, ಭಯ, ಶೋಕ, ವಿಷಾದ ಮತ್ತು ಮದ ಈ ಐದು ದೋಷಗಳನ್ನು ಯಾವ ಧೈರ್ಯವು ಧರಿಸಿಕೊಂಡಿರುವುದು ॥೭೬೧॥

ಯಾವ ಈ ಧೈರ್ಯಕ್ಕೆ ತಾಮಸ ಧೈರ್ಯವೆಂದು ಹೇಳುವರು. ಹೀಗೆ ಜಗನ್ನಾಯಕನಾದ ಭಗವಾನ ಶ್ರೀಕೃಷ್ಣನು ಹೇಳಿದನು ॥೭೬೨॥

ಈ ಪ್ರಕಾರವಾಗಿ ಮೂರು ವಿಧಗಳ ಬುದ್ಧಿಯು ಯಾವ ಕರ್ಮದ ನಿಶ್ಚಯ ಮಾಡಿದ ಯಾವ ಧೈರ್ಯವು ಸಿದ್ಧಿಗೊಳಿಸುವುದು ॥೭೬೩॥

ಸೂರ್ಯನು ಉದಯಿಸಿದಾಗ ಮಾರ್ಗಗಳು ಕಾಣುತ್ತಿರಲು ಆಗ ಮನುಷ್ಯರು ಕಾಲಿನಿಂದ ನಡೆಯುವರು. ಆದಾಗ್ಯೂ ನಡೆಯುವವನು ಧೈರ್ಯ ಧಾರಣೆ ಮಾಡುವವರೆಗೂ ನಡೆಯುವುದಾಗುವುದಿಲ್ಲ ॥೭೬೪॥

ಅದರಂತೆ ಬುದ್ಧಿಯು ಕರ್ಮಗಳನ್ನು ತೋರಿಸುವುದು. ಆ ಕರ್ಮಗಳನ್ನು ಇಂದ್ರಿಯಗಳು ಉತ್ಪನ್ನ ಮಾಡುವುವು. ಆದಾಗ್ಯೂ, ಉತ್ಪನ್ನ ಮಾಡಲು ಧೈರ್ಯ ಬೇಕಾಗುವುದು ॥೭೬೫॥

ಆ ಧೈರ್ಯವನ್ನು ನಿನಗೆ ಮೂರು ಪ್ರಕಾರಗಳಿಂದ ಹೇಳಿದೆನು ಮತ್ತು ಅದೇ ಧೈರ್ಯದಿಂದ ಮೂರು ಪ್ರಕಾರದ ಕರ್ಮಗಳು ಉತ್ಪನ್ನವಾದವು ॥೭೬೬॥

ತದನಂತರ ಅದಕ್ಕೆ ಯಾವ ಫಲ ಬರುವುದೋ, ಅದಕ್ಕೆ ಸುಖವೆಂದು ಹೆಸರಿದೆ. ಅದು ಸಹ ಕರ್ಮದಂತೆ ಮೂರು ಪ್ರಕಾರ'ಳಾಗಿದೆ ॥೭೬೭॥

ಆದ್ದರಿಂದ ಫಲರೂಪವಾದ ಸುಖವನ್ನು ಮೂರುಗುಣಗಳಿಂದ ಬೇರೆ ಬೇರೆಯಾಗಿ ಮಾಡಲ್ಪಟ್ಟಿದೆ. ಈಗ ಅದರ ವಿಚಾರವನ್ನು ಸ್ಪಷ್ಟವಾದ ಮಾತಿನಿಂದ ಮಾಡುವೆ ॥೭೬೮॥

ಅದನ್ನು ಹೇಗೆ ಸ್ಪಷ್ಟೀಕರಣ ಮಾಡುವೆನೆಂದರೆ ಶಬ್ದಗಳ ಮಾರ್ಗದಿಂದ ಹೇಳಿದರೆ ಶಬ್ದಗಳ ಮಲಿನತೆ ಬರುವುದು. ಕಿವಿಯಿಂದ ಕೇಳಿದರೆ ಕಿವಿರೂಪ ಕೈಗೆ ಮಲಿನತೆ ಹತ್ತುವುದು ॥೭೬೯॥

ಮ್ಹಣೌನಿ ಜಯಾಚೇನಿ ಅವ್ಹೇರೇ । ಅವಧಾನಹೀ ಹೋಯ ಬಾಹಿರೇ । ತೇಣೇ ಆಇಕ ಹೋ ಅಂತರೇ । ಜೀವಾಚೇನೀ ಜೀವೇ ॥೭೭೦॥ ಐಸೇ ಮ್ಹಣೌನಿ ದೇವೋ । ತ್ರಿವಿಧಾ ಸುಖಾಚಾ ಪ್ರಸ್ತಾವೋ । ಮಾಂಡಲಾ ತೋ ನಿರ್ವಾಹೋ । ನಿರೂಪಿತ ಅಸೇ ॥೭೭೧॥

ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ ।
ಅಭ್ಯಾಸಾದ್ರಮತೇ ಯತ್ರ ದುಃಖಾಂತಂ ಚ ನಿಗಚ್ಛತಿ ॥೩೬॥

ಮ್ಹಣೇ ಸುಖತ್ರಯಸಂಜ್ಞಾ । ಸಾಂಗೋ ಮ್ಹಣೌನಿ ಪ್ರತಿಜ್ಞಾ । ಬೋಲಿಲೋ ತೇ ಪ್ರಾಜ್ಞಾ । ಐಕ ಆತಾ ॥೭೭೨॥ ತರೀ ಸುಖ ತೇ ಗಾ ಕಿರೀಟೀ । ದಾವಿಜೇಲ ತುಜ ದಿಠೀ । ಜೇ ಆತ್ಮ ಯಾಚಿಯಾ ಭೇಟೀ । ಜೀವಾಸಿ ಹೋಯ ॥೭೭೩॥ ಪರೀ ಮಾತ್ರೇಚೇನಿ ಮಾಪೇ । ದಿವ್ಯೌಷಧ ಜೈಸೇ ಘೇಪೇ । ಕಾ ಕಥಿಲಾಚೇ ಕೀಜೆ ರೂಪೇ । ರಸಭಾವನೀ ॥೭೭೪॥ ನಾನಾ ಲವಣಾಚೇ ಜಳು । ಹೋಆವಯಾ ದೋನಿ ಚಾರ ವೇಳು । ದೇಊನಿ ಸಾಂಡಿಜತೀ ಢಾಳು । ತೋಯಾಚೇ ಜೇವೀ ॥೭೭೫॥ ತೇವಿ ಜಾಲೇನಿ ಸುಖಲೇಶೇ । ಜೀವು ಭಾವಿಲಿಯಾ ಅಭ್ಯಾಸೇ । ಜೀವ ಪಣಾಚೇ ನಾಸೇ । ದುಃಖ ಜೇಥೇ ॥೭೭೬॥ ತೇ ಯೇಥ ಆತ್ಮಸುಖ । ಜಾಲೇ ಅಸೇ ತ್ರಿಗುಣಾತ್ಮಕ । ತೇಂಹೀ ಸಾಂಗೋ ಏಕೈಕ । ರೂಪ ಆತಾ ॥೭೭೭॥

ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ ।
ತತ್ಸುಖಂ ಸಾತ್ತ್ವಿಕಂ ಪ್ರೋಕ್ತಂ ಆತ್ಮಬುದ್ಧಿಪ್ರಸಾದಜಮ್ ॥೩೭॥

ಆತಾ ಚಂದನಾಚೇ ಬುಡ । ಸರ್ಪೀ ಜೈಸೇ ದುವಾಡ । ಕಾ ನಿಧಾನಾಚೇ ತೋಂಡ । ವಿವಸಿಯಾ ಜೇವೀ ॥೭೭೮॥ ಅಗಾ ಸ್ವರ್ಗೀಚೇ ಗೋಮಟೇ । ಆಡವ ಯಾಗ ಸಂಕಟೇ । ಕಾ ಬಾಳಪಣ ದಾಸಟೇ । ತ್ರಾಸಕಾಳೇ ॥೭೭೯॥ ಹೇ ಅಸೋ ದೀಪಾಚಿಯೇ ಸಿದ್ಧೀ । ಅವಘಡ ಧೂ ಆಧೀ । ನಾತರೀ ತೋ ಔಷಧೀ । ಜಿಭೇಚಾ ಠಾವೋ ॥೭೮೦॥ ತಯಾಪರೀ ಪಾಂಡವಾ । ಜಯಾ ಸುಖಾಚಾ ರಿಗಾವಾ । ವಿಷಮ ತೇಥ ಮೇಳಾವಾ । ಯಮದಮಾಂಚಾ ॥೭೮೧॥ ದೇತ ಸರ್ವಸ್ನೇಹಾ ಮಿಠೀ । ಆಗೀ ಐಸೇ ವೈರಾಗ್ಯ ಉಠೀ । ಸ್ವರ್ಗ ಸಂಸಾರಾ ಕಾಂಟೀ । ಕಾಢಿತಚೀ ॥೭೮೨॥ ವಿವೇಕ ಶ್ರವಣೇ ಖರಪುಸೇ । ಜೇಥ ವ್ರತಾಚರಣೇ ಕರ್ಕಶೇ । ಕರಿತಾ ಜಾತೀ ಭೋಕಸೇ । ಬುದ್ಧ್ಯಾದಿಕಾಂಚೇ ॥೭೮೩॥ ಸುಷಮ್ನೇಚೇನಿ ತೋಂಡೇ । ಗಿಳಿಜೇ ಪ್ರಾಣಾಪಾನಾಚೇ ಲೋಂಢೇ । ಬೋಹಣಿಯೆಸೀಚಿ ಯೆವಢೇ । ಭಾರೀ ಜೇಥ ॥೭೮೪॥

ಆದ್ದರಿಂದ ಶಬ್ದಗಳ ಮತ್ತು ಅವಧಾನಗಳ ತ್ಯಾಗವನ್ನು ಮಾಡಿ ಕೇವಲ ಅಂತಃಕರಣದಿಂದ ಶ್ರವಣ ಮಾಡು ॥೭೭೦॥

ಹೀಗೆ ಹೇಳಿ ದೇವನು ತ್ರಿವಿಧ ಸುಖದ ವರ್ಣನೆ ಮಾಡಲು ಪ್ರಸ್ತಾವನೆಯನ್ನು ಮಾಡಿದನು. ಅದೇ ವ್ಯವಸ್ಥೆಯನ್ನು ನಾನು ಹೇಳುವೆನು ॥೭೭೧॥

ಶ್ಲೋಕಾರ್ಥ :- ಭರತಕುಲದೀಪಕಾ ! ಗುಣ, ಬೇದಕ್ಕನುಸಾರವಾಗಿ ಮೂರು ವಿಧಗಳಾಗಿರುವ ಸುಖವನ್ನು ವಿವರಿಸುತ್ತೇನೆ ಕೇಳು. ಬಿಡದೆ ಸಾಧಿಸಿದರೆ ಸುಖವನ್ನು ಉಂಟು ಮಾಡಿ, ಸಂಕಟವನ್ನು ನಿವಾರಿಸುವುದಾಗಿಯೂ ॥೩೬॥

ದೇವನು ಹೇಳಿದನು:- ಹೇ ಬುದ್ಧಿವಂತ ಅರ್ಜುನನೇ, ಸುಖದ ಮೂರು ರೂಪಗಳು ಗುಣಗಳ ಯೋಗದಿಂದ ಇರುವುವೆಂದು ನಿನಗೆ ಹೇಳಿದ್ದನ್ನು ಈಗ ಹೇಳುವೆ ಕೇಳು ॥೭೭೨॥

ಹೇ ಕಿರೀಟಿಯೇ, ಜೀವಕ್ಕೆ ಆತ್ಮದ ದರ್ಶನವಾಗುವ ಕಾಲಕ್ಕೆ ಯಾವ ಆನಂದವಾಗುವುದೋ, ಅದಕ್ಕೆ ಸುಖವೆಂದು ಹೇಳುವರು. ಈ ಸುಖವನ್ನು ನಿನಗೆ ತಿಳಿಯುವಂತೆ ಹೇಳುವೆನು ॥೭೭೩॥

ದಿವ್ಯ ಔಷಧಗಳನ್ನು ಮಾತ್ರೆಯ ಪ್ರಮಾಣದಲ್ಲಿ ಸೇವಿಸಬೇಕು. ಅಥವಾ ಕಿಮಿಯಾ ಬಲ್ಲವನಿಂದ ರಸದ ಪುಟವಿಕ್ಕಿ ತವರನ್ನು ಬೆಳ್ಳಿಯಾಗಿ ಮಾಡಬೇಕು ॥೭೭೪॥

ಉಪ್ಪನ್ನು ನೀರನ್ನಾಗಿ ಮಾಡಬೇಕಾದರೆ ಅದರ ಮೇಲೆ ಎರಡು ನಾಲ್ಕು ಸಲ ನೀರನ್ನು ಚಿಮ್ಮಿಸಬೇಕು, ಅಂದರೆ ಅದರಿಂದ ನೀರಾಗುವುದು ॥೭೭೫॥

ಅದರಂತೆ ಸುಖದ ಯತ್ ಕಿಂಚಿತ್ ಲಾಭವಾದರೂ ಅದೇ ಅಭ್ಯಾಸವು ಮುಂದೆ ಬೆಳೆದು ಜೀವದಶೆಯ ದುಃಖವು ಅಲ್ಲಿ ಇಲ್ಲದಾಗುವುದು ॥೭೭೬॥

ಆ ಆತ್ಮ ಸುಖವು ಸಹ ಗುಣಗಳ ಯೋಗದಿಂದ ಮೂರು ಪ್ರಕಾರಗಳಾಗಿವೆ. ಅವುಗಳ ಒಂದೊಂದರ ಲಕ್ಷಣಗಳನ್ನು ನಿನಗೆ ಹೇಳುವೆನು ॥೭೭೭॥

ಶ್ಲೋಕಾರ್ಥ :- ಆರಂಭದಲ್ಲಿ ವಿಷದಂತೆ ತೋರಿ ಅಂತ್ಯದಲ್ಲಿ ಅಮೃತ ಪ್ರಾಯವಾಗಿರುವುದಾಗಿಯೂ, ತಿಳಿಯಾದ ಬುದ್ಧಿಯಲ್ಲಿ ಆವಿರ್ಭವಿಸುವುದಾಗಿಯೂ ಇರುವ ಸುಖವು ಸಾತ್ತ್ವಿಕ ಸುಖ ॥೩೭॥

ಈಗ, ಚಂದನಗಿಡದ ಬೊಡ್ಡೆಯು ಸರ್ಪಗಳಿಂದ ಭಯಂಕರವಾಗಿ ಕಾಣಿಸುವುದು, ಅಥವಾ ದ್ರವ್ಯದ ನಿಧಿಗಳ ಮೇಲೆ ಬ್ರಹ್ಮರಾಕ್ಷಸಾದಿಗಳ ಪ್ರತಿಬಂಧವಿರುವುದು ॥೭೭೮॥

ಅರೇ, ಸ್ವರ್ಗದ ಉತ್ತಮ ಭೋಗವನ್ನು ಪಡೆಯಲು ಮೊದಲು ಯಜ್ಞಗಳನ್ನು ಮಾಡುವ ಸಂಕಟಗಳನ್ನು ಅಥವಾ ಬಾಲದಶೆಯಲ್ಲಿನ ಬಾಲಕರ ಎಲ್ಲ ರೀತಿಯಿಂದಲೂ ತೊಂದರೆಗಳನ್ನು ಸಹಿಸಬೇಕಾಗುವುದು ॥೭೭೯॥

ಇದು ಇರಲಿ, ದೀಪವನ್ನು ಹಚ್ಚಬೇಕಾದರೆ ಮೊದಲು ಅಗ್ನಿಯನ್ನು ಹೊತ್ತಿಸಲು ಹೊಗೆಯ ತ್ರಾಸವನ್ನು ಸೋಸಬೇಕಾಗುವುದು. ಅಥವಾ ಔಷಧದ ಕಹಿಯನ್ನು ನಾಲಿಗೆಯು ಸೋಸಬೇಕಾಗುವುದು ॥೭೮೦॥

ಅದರಂತೆ ಪಾಂಡವಾ, ಆತ್ಮ ಸುಖದ ಪ್ರಾಪ್ತಿಯನ್ನು ಮಾಡಿಕೊಳ್ಳುವುದಕ್ಕಾಗಿ ಯಮದಮಾದಿಕ ಸಾಧನೆಗಳ ದುಃಖವನ್ನು ಸೋಸಬೇಕಾಗುವುದು ॥೭೮೧॥

ದೇಹಾದಿಕ ಮೇಲಿನ ಪ್ರೀತಿಯನ್ನು ನುಂಗಿಬಿಡುವಂತಹ ಅಗ್ನಿಯಂತಿರುವ ವೈರಾಗ್ಯವು ಉತ್ಪನ್ನವಾದಾಗ್ಗೆ ಸ್ವರ್ಗ ಹಾಗೂ ಸಂಸಾರವೆಂಬ ಮುಳ್ಳು ಬೇಲಿಯನ್ನು ಕಿತ್ತೊಗೆಯುವನು ॥೭೮೨॥

ಈ ಪ್ರಕಾರದ ತೀವ್ರವಾದ ಜ್ಞಾನದ ಶ್ರವಣದಿಂದ ಹಾಗೂ ಕಠೋರವಾದ ವ್ರತಾಚರಣೆಗಳಿಂದ ಅಲ್ಲಿ ಮನ, ಬುದ್ಧಿ, ಶರೀರಾದಿಗಳಿಗೆ ಗುದ್ದುಗಳುಂಟಾಗುವುವು ॥೭೮೩॥

ಸುಷುಮ್ನಾ ನಾಡಿಯ ಮುಖದಿಂದ ಪ್ರಾಣವನ್ನು ಹಾಗೂ ಅಪಾನವಾಯುವನ್ನು ನಿರೋಧಿಸಬೇಕಾಗುವುದು. ಹೀಗೆ ಅಲ್ಲಿ ಆರಂಭದಲ್ಲಿ ಮಹಾಕಷ್ಟಗಳಿರುವುವು ॥೭೮೪॥

ಜೇ ಸಾರಸಾಂಹೀ ವಿಘಡತಾ । ಹೋಯ ವೋಹಾಹೂನಿ ವತ್ಸ ಕಾಢಿತಾ । ನಾ ಭಣಂಗು ದವಡಿತಾ । ಭಾಣಯಾವರುನೀ ॥೭೮೫॥ ಪೈ ಮಾಯೇಪುಢೌನಿ ಬಾಳಕ । ಕಾಳೇ ನೇತಾ ಏಕುಲತೇ ಏಕ । ಹೋಯ ಕಾ ಉದಕ । ತುಟತಾ ಮೀನಾ ॥೭೮೬॥ ತೈಸೇ ವಿಷಯಾಂಚೇ ಘರ । ಇಂದ್ರಿಯಾ ಸಾಂಡಿತಾ ಥೋರ । ಯುಗಾಂತು ಹೋಯ ತೇ ವೀರ । ವಿರಾಗ ಸಾಹಾತೀ ॥೭೮೭॥ ಐಸಾ ಜಯಾ ಸುಖಾಚಾ ಆರಂಭು । ದಾವೀ ಕಾಠಿಣ್ಯಾಚಾ ಕ್ಷೋಭು । ಮಗ ಕ್ಷೀರಾಬ್ಧೀ ಲಾಭು । ಅಮೃತಾಚಾ ಜೈಸಾ ॥೭೮೮॥ ಪಹಿಲಯಾ ವೈರಾಗ್ಯಗರಳಾ । ಧೈರ್ಯಶಂಭು ವೋಡವೀ ಗಳಾ । ತರೀ ಜ್ಞಾನಾಮೃತೇ ಸೋಹಳಾ । ಪಾಹೇ ಜೇಥೇ ॥೭೮೯॥ ಪೈ ಕೋಲಿತಾಹೀ ಕೋಪೇ ಐಸೇ । ದ್ರಾಕ್ಷಾಂಚೇ ಹಿರವೇಪಣ ಅಸೇ । ತೇ ಪರಿಪಾಕೀ ಕಾ ಜೈಸೇ । ಮಾಧುರ್ಯ ಆತೇ ॥೭೯೦॥ ತೇ ವೈರಾಗ್ಯಾದಿಕ ತೈಸೇ । ಪಿಕಲಿಯಾ ಆತ್ಮಪ್ರಕಾಶೇ । ಮಗ ವೈರಾಗ್ಯೇಸೀಂಹೀ ನಾಶೇ । ಅವಿದ್ಯಾಜಾತ ॥೭೯೧॥ ತೇವ್ಹಾ ಸಾಗರೀ ಗಂಗಾ ಜೈಸೀ । ಆತ್ಮೀ ಮೀನಲ್ಯಾ ಬುದ್ಧಿ ತೈಸೀ । ಅದ್ವಯಾನಂದಾಚೀ ಆಪೈಸೀ । ಖಾಣೀ ಉಘಡೇ ॥೭೯೨॥ ಐಸೇ ಸ್ವಾನುಭವವಿಶ್ರಾಮೇ । ವೈರಾಗ್ಯ ಮೂಳ ಜೇ ಪರಿಣಮೇ । ತೇ ಸಾತ್ತ್ವಿಕ ಯೇಣೇ ನಾಮೇ । ಬೋಲಿಜೇ ಸುಖ ॥೭೯೩॥

ವಿಷಯೇಂದ್ರಿಯಸಂಯೋಗಾತ್ ಯತ್ತದಗ್ರೇಽಮೃತೋಪಮಮ್ ।
ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಮ್ ॥೩೮॥

ಆಣಿ ವಿಷಯೇಂದ್ರಿಯಾ । ಮೇಳು ಹೋತಾ ಧನಂಜಯಾ । ಜೇ ಸುಖ ಜಾಯ ಥಡಿಯಾ । ಸಾಂಡೂನಿ ದೋನ್ಹೀ ॥೭೯೪॥ ಅಧಿಕಾರಿಯಾ ರಿಗತಾ ಗಾಂವೋ । ಹೋಯ ಜೈಸಾ ಉತ್ಸಾಹೋ । ಕಾ ರಿಣಾವರೀ ವಿವಾಹೋ । ವಿಸ್ತಾರಿಲಾ ॥೭೯೫॥ ನಾನಾ ರೋಗಿಯಾ ಜಿಭೇಪಾಸೀ । ಕೇಳೇ ಗೋಢ ಸಾಖರೇಂಸೀ । ಕಾ ಬಚನಾಗಾಚೀ ಜೈಸೀ । ಮಧುರತಾ ಪಹಿಲೀ ॥೭೯೬॥ ಪಹಿಲೇ ಸಂವಚೋರಾಚೇ ಮೈತ್ರ । ಹಾಟಭೇಟೀಚೇ ಕಲತ್ರ । ಕಾ ಲಾಘವಿಯಾಚೇ ವಿಚಿತ್ರ । ವಿನೋದ ತೇ ॥೭೯೭॥ ತೈಸೇ ವಿಷಯೇಂದ್ರಿಯದೋಖೀ । ಜೇ ಸುಖ ಜೀವಾತೇ ಪೋಖೀ । ಮಗ ಉಪಡಿಲಾ ಖಡಕೀ । ಹಂಸು ಜೈಸಾ ॥೭೯೮॥ ತೈಸೀ ಜೋಡಿ ಆಘವೀ ಆಟೇ । ಜೀವಿತಾಚಾ ಠಾಯ ಫಿಟೇ । ಸುಕೃತಾಚಿಯಾಹೀ ಸುಟೇ । ಧನಾಚೀ ಗಾಂಠೀ ॥೭೯೯॥

ಚಕ್ರವಾಕ ಪಕ್ಷಿಗಳ ಜೋಡಿಯ ವಿಯೋಗವಾದಾಗ, ಅಥವಾ ಆಕಳಿಗೆ ತೊರೆ ಬರಹತ್ತಲು ಆಗ ಕರುವಿಗೆ ಮೊಲೆಯಿಂದ ದೂರ ಜಗ್ಗಿದಾಗ, ಅಥವಾ ಹಸಿದವನಿಗೆ ಬಡಿಸಿದ ಎಲೆಯಿಂದ ಎಬ್ಬಿಸಿದಾಗ ॥೭೮೫॥

ಅಥವಾ ತಾಯಿಯ ಎದುರಿನಲ್ಲಿ ಒಬ್ಬನೇ ಒಬ್ಬ ಇರುವ ಮಗನನ್ನು ಮೃತ್ಯು ಎಳೆದೊಯ್ಯುತ್ತಿರುವಾಗ, ಅಥವಾ ಮೀನನ್ನು ನೀರಿನಿಂದ ತೆಗೆದಾಗ ಹೇಗೆ ದುಃಖವಾಗುವುದೋ ॥೭೮೬॥

ಅದರಂತೆ ವಿಷಯದ ಮನೆಯನ್ನು ಇಂದ್ರಿಯಗಳಿಗೆ ಬಿಡುವಾಗ ಯುಗಾಂತವಾದಂತೆ ದುಃಖವಾಗುವುದು. ಆದಾಗ್ಯೂ, ವೈರಾಗ್ಯಸಂಪನ್ನನಾದ ಶೂರನು ಆ ಎಲ್ಲ ದುಃಖಗಳನ್ನು ಸಹಿಸುವನು ॥೭೮೭॥

ಹೀಗೆ ಯಾವ ಈ ಸುಖಕ್ಕಾಗಿ ಆರಂಭವು ಕಷ್ಟಮಯವಾಗಿರುವುದು. ಕ್ಷೀರಸಮುದ್ರವನ್ನು ಮಂಥಿಸುವಾಗ್ಗೆ ದುಃಖವನ್ನು ಭೋಗಿಸಿದ ಮೇಲೆಯೇ ಅಮೃತದ ಲಾಭವಾಯಿತು. ಅದರಂತೆ ಇರುವುದು ॥೭೮೮॥

ಪ್ರಥಮದಲ್ಲಿ ವೈರಾಗ್ಯರೂಪ ವಿಷವು ಅದರಲ್ಲಿ ಹೊರಡುವುದು. ಅದನ್ನು ಪ್ರಾಶನ ಮಾಡಲು ಸಾತ್ತ್ವಿಕ ಧೈರ್ಯರೂಪ ಶಂಭು "ಆ" ಎಂದು ಬಾಯಿ ತೆರೆಯಲು ಜ್ಞಾನಾಮೃತ ಸುಖವನ್ನು ಭೋಗಿಸಲು ದೊರಕುವುದು ॥೭೮೯॥

ಇಲ್ಲಿ ನೋಡು, ದ್ರಾಕ್ಷಿಯ ಹಸಿರು ಕಾಯಿಯಾಗಿರುವಾಗ ನಾಲಿಗೆಯ ಮೇಲಿಟ್ಟರೆ ಉರಿ ಮುಟ್ಟಿದಂತಾಗಿ ಕೊರೆದು ಬಿಡುವುದು. ಆದರೆ ಅದೇ ದ್ರಾಕ್ಷಿಯು ಪಕ್ವವಾದಾಗ ಮಧುರವಾಗುವುದು ॥೭೯೦॥

ಅದರಂತೆ ವೈರಾಗ್ಯವು ಆತ್ಮಪ್ರಕಾಶದಿಂದ ಪೂರ್ಣತೆಗೆ ಬಂದನಂತರ ವೈರಾಗ್ಯಾದಿಕ ಸರ್ವ ದುಃಖಗಳು ನಾಶವಾಗುವುವು ॥೭೯೧॥

ಗಂಗೆಯು ಸಮುದ್ರಕ್ಕೆ ಕೂಡಿಕೊಂಡಾಗ ಹೇಗೆ ಸುಖರೂಪವಾಗುವುದೋ, ಅದರಂತೆ ಬುದ್ಧಿಯು ಆತ್ಮನಲ್ಲಿ ಕೂಡಿಕೊಂಡಾಗ ಅದಕ್ಕೆ ಅದ್ವಯಾನಂದರೂಪ ಸುಖದ ಆಗರವೇ ದೊರಕುವುದು ॥೭೯೨॥

ಈ ಪ್ರಕಾರವಾಗಿ ಯಾವ ಸುಖಕ್ಕೆ ವೈರಾಗ್ಯವು ಇದು ಮೂಲವಾಗಿದ್ದು ಆತ್ಮಾನಂದ ಪ್ರಾಪ್ತಿಯು ಅದರ ಪರಿಣಾಮವಾಗಿರುವುದು. ಈ ಸುಖಕ್ಕೆ ಸಾತ್ತ್ವಿಕ ಸುಖವೆಂದು ಹೇಳುವರು ॥೭೯೩॥

ಶ್ಲೋಕಾರ್ಥ :- ಇಂದ್ರಿಯಗಳು ವಿಷಯದಲ್ಲಿ ಸೇರಿದಾಗ ಆರಂಭದಲ್ಲಿ ಅಮೃತದಂತೆ ಇದ್ದೂ, ಪರಿಣಾಮದಲ್ಲಿ ವಿಷವಾದ ಸುಖವು ರಾಜಸ ಸುಖವೆನಿಸುತ್ತದೆ ॥೩೮॥

ಮತ್ತು ಧನಂಜಯಾ, ವಿಷಯ ಹಾಗೂ ಇಂದ್ರಿಯಗಳ ಸಂಬಂಧವಾಯಿತೆಂದರೆ ಎರಡೂ ದಂಡೆಗಳು ತುಂಬಿ ಸುಖದ ಪೂರವೇ ಬರುವುದು ॥೭೯೪॥

ಅಧಿಕಾರಿಯು ತನ್ನ ಅಧಿಕಾರದ ಊರಿಗೆ ಹೋದಾಗ ಅಲ್ಲಿ ಉತ್ಸವವೇ ಆಗುವುದು. ಅಥವಾ ಸಾಲಮಾಡಿ ಲಗ್ನದ ಸಮಾರಂಭವನ್ನು ವಿಸ್ತಾರ ಮಾಡಿದಂತೆ ॥೭೯೫॥

ಅಥವಾ ರೋಗಿಗೆ ಬಾಳೆಹಣ್ಣು ಸಕ್ಕರೆಯು ಕುಪಥ್ಯವಾದರೂ ಸಿಹಿ ಹತ್ತುವುದು. ಅಥವಾ ಬಚನಾಗವು ತಿನ್ನುವಾಗ ಮೊದಲು ಸಿಹಿ ಎನಿಸುವುದು ॥೭೯೬॥

ಸಂಭಾವಿತರಂತೆ ಕಾಣುವ ಕಳ್ಳರ ಗೆಳೆತನವು ಆರಂಭದಲ್ಲಿ ಸುಖವೆನಿಸುವುದು. ಬಜಾರದಲ್ಲಿನ (ವೇಶ್ಯಾದಿಕ) ಸ್ತ್ರೀಯರ ವರ್ತನೆಯು ಆರಂಭದಲ್ಲಿ ಸುಖವೆನಿಸುವುದು. ಅಥವಾ ನಟನ ನಟನೆಯು ಆಹ್ಲಾದಕಾರಕವೆನಿಸುವುದು ॥೭೯೭॥

ಅದರಂತೆ ವಿಷಯ ಇಂದ್ರಿಯಗಳ ಸಂಬಂಧದಿಂದ ಜೀವಕ್ಕೆ ಸುಖವಾಗಿ ಪರಿಣಾಮವು ದುಃಖದಾಯಕವಾಗುವುದು. ಕಲ್ಲಿನ ಮೇಲೆ ನಿಂತ ನೀರಿನಲ್ಲಿ ನಕ್ಷತ್ರಗಳ ಪ್ರತಿಬಿಂಬ ಕಂಡು ರತ್ನ ಬುದ್ಧಿಯಿಂದ ಅದರ ಮೇಲೆ ಎರಗುವ ಹಂಸಕ್ಕೆ ಚುಂಚು ಭಂಗವಾಗಿ ಸಾಯುವುದು ॥೭೯೮॥

ಅದರಂತೆ ಸುಕೃತದಿಂದ ಕೂಡಿಸಿರುವ ಸುಖದ ಸಂಗವು ಇಲ್ಲದಂತಾಗುವುದು. ಜೀವದ ನಾಶವೂ ಆಗುವುದು ಮತ್ತು ವಿಷಯಸುಖಕ್ಕಾಗಿ ಸಂಪಾದಿಸಿದ ಎಲ್ಲ ಪುಣ್ಯ, ಧನದ ನಾಶವಾಗುವುದು ॥೭೯೯॥

ಆಣಿಕ ಭೋಗಿಲೇ ಜೇ ಕಾಂಹೀ । ತೇ ಸ್ವಪ್ನ ತೈಸೇ ಹೋಯ ನಾಹೀ । ಮಗ ಹಾನೀಚ್ಯಾ ಚಿ ಘಾಈ । ಲೋಳಾವೇ ಉರೇ ।।೮೦೦।। ಐಸೇ ಆಪತ್ತೀ ಜೇ ಸುಖ । ಐಹಿಕೀ ಪರಿಣಮೇ ದೇಖ । ಪರತ್ರೀ ಕೀರ ವಿಖ । ಹೋಊನಿ ಪರತೇ ।।೮೦೧।। ಜೇ ಇಂದ್ರಿಯಜಾತಾ ಲಳಾ । ದಿಧಲಿಯಾ ಧರ್ಮಾಚಾ ಮಳಾ । ಜಾಳೂನಿ ಭೋಗಿಜೇ ಸೋಹಳಾ । ವಿಷಯಾಂಚಾ ಜೇಥ ।।೮೦೨।। ತೇಥ ಪಾತಕೇ ಬಾಂಧಿತೀ ಥಾವೋ । ತಿಯೇ ನರಕೀ ದೇತೀ ಠಾವೋ । ಜೇಣೇ ಸುಖೇ ಹಾ ಅಪಾವೋ । ಪರತ್ರೀ ಐಸಾ ।।೮೦೩।। ಪೈ ನಾಮೇ ವಿಷ ಮಹುರೇ । ಪರೀ ಮಾರೂನಿ ಅಂತೀ ಖರೇ । ತೈಸೇ ಆದೀ ಜೇ ಗೋಡಿರೇ । ಅಂತೀ ಕಡೂ ।।೮೦೪।। ಪಾರ್ಥಾ ತೇ ಸುಖ ಸಾಚೇ । ವಳಿಲೇ ಆಹೇ ರಜಾಚೇ । ಮ್ಹಣೌನಿ ಶಿವೇ ತಯಾಚೇ । ಆಂಗ ಕಹೀ ।।೮೦೫।।

ಯದಗ್ರೇ ಚಾನುಬಂಧೇ ಚ ಸುಖಂ ಮೋಹನಮಾತ್ಮನಃ ।
ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಮ್ ।।೩೯।।

ಆಣಿ ಅಪೇಯಾಚೇನಿ ಪಾನೇ । ಅಖಾದ್ಯಾಚೇನಿ ಭೋಜನೇ । ಸ್ವೈರಸ್ತ್ರೀಸನ್ನಿಧಾನೇ । ಹೋಯ ಜೇ ಸುಖ ।।೮೦೬।। ಕಾ ಪುಢಿಲಾಂಚೇನಿ ಮಾರೇ । ನಾತರೀ ಪರಸ್ವಾಪಹಾರೇ । ಜೇ ಸುಖ ಅವತರೇ । ಭಾಟಾಚ್ಯಾ ಬೋಲೀ ।।೮೦೭।। ಜೇ ಆಲಸ್ಯಾವರೀ ಪೋಖಿಜೇ । ನಿದ್ರೇಮಾಜೀ ಜೇ ದೇಖಿಜೇ । ಜಯಾಚ್ಯಾ ಆದ್ಯಂತೀ ಭುಲಿಜೇ । ಆಪುಲೀ ವಾಟ ।।೮೦೮।। ತೇ ಗಾ ಸುಖ ಪಾರ್ಥಾ । ತಾಮಸ ಜಾಣ ಸರ್ವಥಾ । ಹೇ ಬಹು ನ ಸಾಂಗೋಂಚಿ ಜೇ ಕಥಾ । ಅಸಂಭಾವ್ಯ ಕೀ ।।೮೦೯।। ಐಸೇ ಕರ್ಮಭೇದೇ ಮುದಲೇ । ಫಳಸುಖಹೀ ತ್ರಿಧಾ ಜಾಲೇ । ತೇ ಹೇ ಯಥಾಗಮೇ ಕೇಲೇ । ಗೋಚರ ತುಜ ।।೮೧೦।। ತೇ ಕರ್ತಾ ಕರ್ಮ ಕರ್ಮಫಳ । ಯೇ ತ್ರಿಪುಟೀ ಏಕೀ ಕೇವಳ । ವಾಂಚೂನಿ ಕಾಂಹೀಂಚಿ ನಸೇ ಸ್ಥೂಲ । ಸೂಕ್ಷ್ಮೀ ಇಯೇ ।।೮೧೧।। ಆಣಿ ಹೇ ತಂವ ತ್ರಿಪುಟೀ । ತಿಹೀ ಗುಣೇ ಇಹೀ ಕಿರೀಟೀ । ಗುಂಫಿಲೀ ಅಸೇ ಪಟೀ । ತಾಂತುವೀ ಜೈಸೀ ।।೮೧೨।।

ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।
ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ತ್ರಿಭಿರ್ಗುಣೈಃ ।।೪೦।।

ಮತ್ತು ಭೋಗಿಸಿದ ವಿಷಯಗಳಾದರೂ ಅವು ಸಹ ಸ್ವಪ್ನದಂತೆ ಇಲ್ಲದಾಗುವುವು. ತದನಂತರ ದುಃಖದ ರಾಶಿಯಲ್ಲಿ ಉರುಳಾಡುವುದು. ಇದೇ ಅವನ ಭಾಗಕ್ಕೆ ಉಳಿಯುವುದು ॥೮೦೦॥

ಇಹಲೋಕದಲ್ಲಿ ಪ್ರಾಪ್ತವಾದ ಯಾವ ಈ ಸುಖದ ಪರಿಣಾಮವು ಇದರಂತೆ ಇರುವುದು ಮತ್ತು ಪರಲೋಕದಲ್ಲಿಯೂ ಸಹ ನಿಜವಾಗಿಯೂ ವಿಷರೂಪದಿಂದಲೇ ಫಲಪ್ರದವಾಗುವುದು ॥೮೦೧॥

ಯಾವ ಇಂದ್ರಿಯಗಳ ಬಯಕೆ ಪೂರೈಸಲು ಧರ್ಮರೂಪ ಹೊಲವನ್ನು ಅವರ ಸ್ವಾಧೀನ ಮಾಡುವರು. ಇವರು ಧರ್ಮವನ್ನು ಸುಟ್ಟು ಇಂದ್ರಿಯಗಳಿಂದ ವಿಷಯದ ಆನಂದ ಭೋಗಿಸುವರು ॥೮೦೨॥

ಆಗ ಪಾಪಗಳಿಗೆ ಆಶ್ರಯ ದೊರೆತು ಅವು ಬಲಿಷ್ಠವಾಗಿ ನರಕ ಪ್ರಾಪ್ತಿಯನ್ನುಂಟು ಮಾಡುವುವು. ಯಾವ ಇಹಲೋಕದ ಸುಖದಿಂದ ಪರಲೋಕದಲ್ಲಿ ಹೀಗೆ ಘಾತಕವು ಇರುವುದು ॥೮೦೩॥

ಇಲ್ಲಿ ನೋಡು, ವಿಷವು ಶಬ್ದದಿಂದ ಮಾತ್ರ ಮಧುರವಾಗಿದೆ. ಪರಿಣಾಮವು ಪ್ರಾಣ ನಾಶ ಮಾಡುವುದಾಗಿದೆ. ಹೀಗೆ ಇಹಲೋಕದ ಸುಖವು ಆರಂಭಕ್ಕೆ ಸಿಹಿಯಾಗಿದ್ದು, ಪರಿಣಾಮದಲ್ಲಿ ವಿಷವಾಗಿದೆ ॥೮೦೪॥

ಪಾರ್ಥಾ, ಈ ಸುಖವು ಕೇವಲ ರಜೋಗುಣದಿಂದ ತಯಾರಿಸಲ್ಪಟ್ಟಿದೆ. ಆದ್ದರಿಂದ ಅದಕ್ಕೆ ನೀನು ಎಂದೂ ಸ್ಪರ್ಶ ಮಾಡಬೇಡ ॥೮೦೫॥

ಶ್ಲೋಕಾರ್ಥ :- ಆದಿಯಲ್ಲಿಯೂ, ಅಂತ್ಯದಲ್ಲಿಯೂ ಆತ್ಮನಿಗೆ ವ್ಯಾಮೋಹಕರವಾಗಿದ್ದು ನಿದ್ರೆಯಿಂದ, ಸೋಮಾರಿತನದಿಂದ, ಭ್ರಾಂತಿಯಿಂದ ತೋರಿ ಬರುವ ಸುಖವು ತಾಮಸವೆನಿಸುತ್ತದೆ ॥೩೯॥

ಮತ್ತು ಅಪೇಯ (ಸೆರೆ ಇತ್ಯಾದಿ) ಪಾನದಿಂದ, ಅಭಕ್ಷ್ಯ (ತತ್ತಿ ಮಾಂಸಾದಿ) ಭೋಜನದಿಂದ, ಜಾರಿಣಿ ಸ್ತ್ರೀಯರ ಸಂಪರ್ಕದಿಂದ ಆಗುವ ಸುಖಕ್ಕೆ ॥೮೦೬॥

ಅಥವಾ ಶತ್ರುವನ್ನು ಕೊಲ್ಲುವುದರಿಂದ, ಬೇರೆಯವರ ಹಣ ಕದಿಯುವುದರಿಂದ, ಇಲ್ಲವೇ ಕಪಟತನದಿಂದ ಅಪಹರಿಸುವುದರಿಂದ ಹೊಗಳುಭಟ್ಟರಿಂದ ತನ್ನ ಸ್ತುತಿ ಕೇಳುವುದರಿಂದ ಆಗುವ ಸುಖಕ್ಕೆ ॥೮೦೭॥

ಯಾವ ಸುಖವು ಆಲಸ್ಯದಿಂದ ಪುಷ್ಟವಾಗುವುದು, ನಿದ್ರೆಯಲ್ಲಿ ಅನುಭವಿಸಲ್ಪಡುವುದು, ಯಾವುದರ ಆರಂಭದಲ್ಲಿ ಮತ್ತು ಕೊನೆಯಲ್ಲಿ ಆತ್ಮಪ್ರಾಪ್ತಿಯ ಮಾರ್ಗವನ್ನು ಮರೆಯಲ್ಪಡುವುದು ॥೮೦೮॥

ಪಾರ್ಥಾ, ಆ ಸುಖವು ಎಲ್ಲ ದೃಷ್ಟಿಯಿಂದ ತಾಮಸವಾಗಿರುವುದೆಂದು ತಿಳಿ. ಈ ತಾಮಸ ಸುಖಕ್ಕಾಗಿ ನಾನು ಹೆಚ್ಚಿಗೆ ಹೇಳುವುದೇ ಇಲ್ಲ. ಕಾರಣ ಇದರ ಕಥೆಯಲ್ಲಿ ಸುಖವಿರುವ ಸಂಭವವೇ ಇಲ್ಲ ॥೮೦೯॥

ಈ ಪ್ರಕಾರವಾಗಿ ಮೂಲ ಕರ್ಮದ ಭೇದದಿಂದ ಫಲರೂಪದ ಸುಖವು ಮೂರು ಪ್ರಕಾರಗಳಾಗಿದೆ, ಅದನ್ನು ನಿನಗೆ ಯಥಾ ಶಾಸ್ತ್ರವಾಗಿ ಹೇಳಿದೆನು ॥೮೧೦॥

ಎಲ್ಲ ಜಗತ್ತಿನಲ್ಲಿ ಇರುವ ಸಣ್ಣ ದೊಡ್ಡ ವಸ್ತುವಿನಲ್ಲಿ ಕರ್ತಾ, ಕರ್ಮ ಹಾಗೂ ಫಲ ಈ ತ್ರಿಪುಟಿಯ ಹೊರತಾಗಿ ಒಂದೂ ಸಿಗುವುದಿಲ್ಲ ॥೮೧೧॥

ಮತ್ತು ಕಿರೀಟಿಯೇ, ವಸ್ತ್ರವು ನೂಲಿನಿಂದ ಸಿದ್ಧಗೊಳಿಸಿದೆ. ಅದರಂತೆ ಈ ತ್ರಿಪುಟಿಯು ಮೂರು ಗುಣಗಳಿಂದಲೇ ತುಂಬಿಕೊಂಡಿರುವುದು ॥೮೧೨॥

ಶ್ಲೋಕಾರ್ಥ :- ಪ್ರಕೃತಿ ಜನ್ಯಗಳಾದ ಈ ತ್ರಿಗುಣಗಳಿಗೆ ಸಂಬಂಧಪಡದ ಪ್ರಾಣಿಯು ಭೂಲೋಕದಲ್ಲಿ ಯಾವುದೂ ಇಲ್ಲ. ಸ್ವರ್ಗ ಲೋಕದಲ್ಲಿಯೂ ಇಲ್ಲ ॥೪೦॥

ಮ್ಹಣೌನಿ ಪ್ರಕೃತೀಚಾ ಅವಲೋಕೀ । ನ ಬಂಧಿಜೇ ಇಹೀ ಸತ್ತ್ವಾದಿಕೀ । ತೈಸೀ ಸ್ವರ್ಗೀ ನಾ ಮೃತ್ಯುಲೋಕೀ । ಆಥೀ ವಸ್ತು ।೮೧೩॥ ಕೈಂಚಾ ಲೋವೇವೀಣ ಕಾಂಬಳಾ । ಮಾತಿಯೇವೀಣ ಮೋದಳಾ । ಕಾ ಜಳೇವೀಣ ಕಲ್ಲೋಳಾ । ಹೋಣೇ ಆಹೇ ? ।೮೧೪॥ ತೈಸೇ ನ ಹೋನಿ ಗುಣಾಚೇ । ಸೃಷ್ಟೀಚೇ ರಚನಾ ರಚೇ । ಐಸೇ ನಾಹೀಂಚ ಗಾ ಸಾಚೇ । ಪ್ರಾಣಿಜಾತ ।೮೧೫॥ ಯಾಲಾಗೀ ಹೇ ಸಕಳ । ತಿಹೀ ಗುಣಾಚೇಂಚಿ ಕೇವಳ । ಘಡಲೇ ಆಹೇ ನಿಖಿಳ । ಐಸೇ ಜಾಣ ।೮೧೬॥ ಗುಣೇ ದೇವಾ ತ್ರಯೀ ಲಾವಿಲೀ । ಗುಣೇ ಲೋಕೀ ತ್ರಿಪುಟೀ ಪಾಡಿಲೀ । ಚತುರ್ವರ್ಣಾ ಘಾತಲೀ । ಸಿನಾನೀ ಉಳಿಗೇ ।೮೧೭॥

ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ ।
ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ ।೪೧॥

ತೇಚಿ ಚಾರೀ ವರ್ಣ । ಪುಸಸೀ ಜರೀ ಕೋಣ ಕೋಣ । ತರೀ ಜಯಾ ಮುಖ್ಯ ಬ್ರಾಹ್ಮಣ । ಧುರೇಚೇ ಕಾ ।೮೧೮॥ ಯೇರ ಕ್ಷತ್ರಿಯ ವೈಶ್ಯ ದೋನ್ಹೀ । ತೇಹೀ ಬ್ರಾಹ್ಮಣಾಚ್ಯಾಚಿ ಮಾನಿಜೇ ಮಾನೀ । ಜೇ ತೇ ವೈದಿಕವಿಧಾನೀ । ಯೋಗ್ಯ ಮ್ಹಣೌನಿ ।೮೧೯॥ ಚೌಥಾ ಶೂದ್ರು ಜೋ ಧನಂಜಯಾ । ವೇದೀ ಲಾಗು ಕೀರ ನಾಹೀ ತಯಾ । ತರ್ಹೀ ವೃತ್ತಿ ವರ್ಣತ್ರಯಾ । ಆಧೀನ ತಯಾಚೀ ।೮೨೦॥ ತಿಯೇ ವೃತ್ತೀಚಿಯಾ ಜವಳಿಕಾ । ವರ್ಣಾ ಬ್ರಾಹ್ಮಣಾದಿಕಾ । ಶೂದ್ರಹೀ ಕೀ ದೇಖಾ । ಚೌಥಾ ಜಾಲಾ ।೮೨೧॥ ಜೈಸಾ ಫುಲಾಚೇನಿ ಸಾಂಗಾತೇ । ತಾಂತು ತುರಂಬಿಜೆ ಶ್ರೀಮಂತೇ । ತೈಸೇ ದ್ವಿಜಸಂಗೇ ಶೂದ್ರಾತೇ । ಸ್ವಿಕಾರೀ ಶ್ರುತೀ ।೮೨೨॥ ಐಸೈಸೀ ಗಾ ಪಾರ್ಥಾ । ಹೇ ಚತುರ್ವರ್ಣ್ಯವ್ಯವಸ್ಥಾ । ಕರೂ ಆತಾ ಕರ್ಮಪಥಾ । ಯಾಂಚಿಯಾ ರೂಪಾ ।೮೨೩॥ ಜಿಹೀ ಗುಣೇ ತೇ ವರ್ಣ ಚಾರೀ । ಜನ್ಮ ಮೃತ್ಯೂಂಚಿಯೇ ಕಾತರೀ । ಚುಕೋನಿಯಾ ಈಶ್ವರೀ । ಪೈಠೇ ಹೋತೀ ।೮೨೪॥ ಜಿಯೇ ಆತ್ಮಪ್ರಕೃತೀಚೇ ಇಹೀ । ಗುಣೇ ಸತ್ತ್ವಾದಿಕೀ ತಿಹೀ । ಕರ್ಮೇ ಚೌಘಾ ಚಹೂ ಠಾಈ । ವಾಂಟಿಲೀ ವರ್ಣಾ ।೮೨೫॥ ಜೈಸೇ ಬಾಪೇ ಜೋಡಿಲೇ ಲೇಕಾ । ವಾಂಟಿಲೇ ಸೂರ್ಯೇ ಮಾರ್ಗ ಪಾಂಥಿಕಾ । ನಾನಾ ವ್ಯಾಪಾರ ಸೇವಕಾ । ಸ್ವಾಮೀ ಜೈಸೇ ।೮೨೬॥ ತೈಸೀ ಪ್ರಕೃತೀಚ್ಯಾ ಗುಣೇ । ಜಯಾ ಕರ್ಮಾಚೇ ವೇಲ್ಹಾವಣೇ । ಕೇಲೀ ಆಹೇ ವರ್ಣೇ । ಚಹೂ ಇಹೀ ।೮೨೭॥

ಆದ್ದರಿಂದ ಪ್ರಕೃತಿಯಲ್ಲಿ ಈ ಸತ್ತ್ವಾದಿಕ ಗುಣಗಳಿಂದ ಬದ್ಧವಾಗದ ಯಾವ ವಸ್ತುವೂ ಈ ಲೋಕ ಅಥವಾ ಸ್ವರ್ಗದಲ್ಲಿರುವುದಿಲ್ಲ. ಇದನ್ನು ನೀನು ಲಕ್ಷದಲ್ಲಿಡು ।೮೧೩॥

ಉಣ್ಣೆಯಿಲ್ಲದೇ ಕಂಬಳಿಯು, ಮಣ್ಣಿಲ್ಲದೇ ಅರಲಿನ ಉಂಡಿಯು ಹೇಗೆ ಸಿದ್ಧವಾಗುವುವು? ಅಥವಾ ನೀರಿಲ್ಲದೇ ತೆರೆಗಳು ಹೇಗಾಗುವುವು? ।೮೧೪॥

ಅದರಂತೆ ಜೀವ ಮಾತ್ರರು ಗುಣಗಳ ರಚನೆ ಹೊರತಾಗಿ ಈ ಸೃಷ್ಟಿಯಲ್ಲಿ ಯಾರೂ ಇರುವುದಿಲ್ಲ ।೮೧೫॥

ಆದ್ದರಿಂದಲೇ, ಈ ಎಲ್ಲ ಜಗತ್ತಿನ ವಸ್ತುಗಳು ಕೇವಲ ಮೂರುಗುಣಗಳಿಂದಲೇ ರಚಿಸಲ್ಪಟ್ಟಿವೆ ಎಂದು ತಿಳಿದುಕೊ ।೮೧೬॥

ಈ ಮೂರು ಗುಣಗಳ ಶಕ್ತಿಯು ಎಷ್ಟೊಂದು ಬಲಾಢ್ಯವಿದೆ ಎಂದರೆ, ಅವು ಒಬ್ಬ ದೇವರನ್ನು ಮೂರು ದೇವರಾಗಿ ಮಾಡಿದವು ಮತ್ತು ಲೋಕದ ಮೂರು ಲೋಕಗಳಾಗಿ ಮಾಡಿರುವುವು ಮತ್ತು ನಾಲ್ಕು ವರ್ಣಗಳನ್ನು, ಅವರ ಕರ್ಮಗಳನ್ನು ಬೇರೆಯಾಗಿ ಮಾಡಿರುವುವು ।೮೧೭॥

ಶ್ಲೋಕಾರ್ಥ :- ಅವರವರ ಸ್ವಭಾವದಿಂದ ಹುಟ್ಟಿದ ಗುಣಗಳನ್ನು ಅನುಸರಿಸಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಿಗೆ ಕರ್ಮಗಳು ವಿಭಜಿಸಲ್ಪಟ್ಟಿವೆ ।೪೧॥

ಈ ನಾಲ್ಕು ವರ್ಣಗಳು ಯಾವುವು ಎಂದು ನೀನು ಕೇಳಿದರೆ ಅವುಗಳಲ್ಲಿ ಅಗ್ರಭಾಗದಲ್ಲಿ ಬ್ರಾಹ್ಮಣ ಇರುವುದು ।೮೧೮॥

ಇದಲ್ಲದೇ ಕ್ಷತ್ರಿಯ ಮತ್ತು ವೈಶ್ಯ ಈ ಎರಡು ವರ್ಣಗಳಿಗೆ ವೈದಿಕ ಕರ್ಮಗಳನ್ನು ಮಾಡುವ ಅಧಿಕಾರ ಇರುವುದರಿಂದ ಅವು ಬ್ರಾಹ್ಮಣರ ಸರಿಸಮಾನವೆಂದು ತಿಳಿಯಬೇಕು ।೮೧೯॥

ಧನಂಜಯನೇ, ನಾಲ್ಕನೆಯದಾದ ಶೂದ್ರ ವರ್ಣಕ್ಕೆ ವೇದದ ಅಧಿಕಾರವಿರುವುದಿಲ್ಲ. ಆದರೆ ಅವರ ಸೇವೆ ವೃತ್ತಿಯು ಮೂರು ವರ್ಣಗಳ ಆಧೀನವಾಗಿದೆ ।೮೨೦॥

ಆ ಬ್ರಾಹ್ಮಣಾದಿ ಮೂರು ವರ್ಣಗಳ ಸೇವೆ ವೃತ್ತಿಯ ಸಾನಿಧ್ಯದಿಂದ ಶೂದ್ರನಿಗೂ ನಾಲ್ಕನೆಯ ವರ್ಣದ ಗಣನೆಯಲ್ಲಿ ತಂದಿದೆ ।೮೨೧॥

ಹೂವುಗಳ ಸಂಗತಿಯಿಂದ ದಾರಕ್ಕೂ ಶ್ರೀಮಂತರು ಧರಿಸುವರು. ಅದರಂತೆ ಶ್ರುತಿಯು ದ್ವಿಜರ ಸಂಗತಿಯಿಂದ ಶೂದ್ರರ ಸ್ವೀಕಾರವನ್ನು ಮಾಡಿದೆ ।೮೨೨॥

ಪಾರ್ಥ, ಈಗ ನಾಲ್ಕು ಪ್ರಕಾರಗಳಿಂದ ಈ ನಾಲ್ಕೂ ವರ್ಣಗಳ ವ್ಯವಸ್ಥೆಯು ಆಗಿರುವುದು. ಆದರೆ ಆಯಾ ವರ್ಣಗಳ ಕರ್ಮಗಳು ಯಾವ ಭೇದಗಳಾಗಿವೆ ಎಂಬುದನ್ನು ನಿನಗೆ ಹೇಳುವೆನು ।೮೨೩॥

ಯಾವ ಗುಣಗಳಿಂದ ಈ ನಾಲ್ಕು ವರ್ಣಗಳು ಜನ್ಮ ಮರಣದ ಸಂಕಟವನ್ನು ಬಿಡಿಸಿಕೊಂಡು ಈಶ್ವರನ ಪ್ರಾಪ್ತಿಯನ್ನು ಮಾಡಿಕೊಳ್ಳುವುವು ।೮೨೪॥

ಆತ್ಮನ ಪ್ರಕೃತಿಯಲ್ಲಿ ಸತ್ತ್ವಾದಿ ಮೂರು ಗುಣಗಳಿರುವುವು. ಇವುಗಳ ಮೂಲಕ ನಾಲ್ಕು ವರ್ಣಗಳಿಗೆ ನಾಲ್ಕು ಪ್ರಕಾರದ ಕರ್ಮಗಳನ್ನು ಹಂಚಿಕೊಡಲಾಗಿದೆ ।೮೨೫॥

ತಂದೆಯು ತಾನು ಗಳಿಸಿದ ಸಂಪತ್ತನ್ನು ಮಕ್ಕಳಿಗೆ ಹಂಚಿಕೊಡುವಂತೆ, ಸೂರ್ಯನು ಪ್ರವಾಸಿಕರಿಗೆ ಅವರವರ ದಾರಿ ತೋರಿಸುವಂತೆ, ಒಡೆಯನು ಸೇವಕರಿಗೆ ಬೇರೆ ಬೇರೆ ಕೆಲಸಗಳನ್ನು ಹೇಳುವಂತೆ ।೮೨೬॥

ಈ ಪ್ರಕಾರವಾಗಿ ಪ್ರಕೃತಿಯ ಗುಣಗಳು ಈ ನಾಲ್ಕು ವರ್ಣಗಳಲ್ಲಿ ಕರ್ಮಗಳನ್ನು ಹಂಚಿಕೊಡಲಾಗಿದೆ ।೮೨೭॥

ತೇಥ ಸತ್ತ್ವೇ ಆಪಾಲ್ಯಾ ಆಂಗೀ । ಸಮೀನನಿಮೀನ ಭಾಗೀ । ದೋಘೇ ಕೇಲೇ ನಿಯೋಗೀ । ಬ್ರಾಹ್ಮಣ ಕ್ಷತ್ರಿಯ ।೮೨೮॥ ಆಣಿ ರಜ ಪರೀ ಸಾತ್ತ್ವಿಕ । ತೇಥ ಠೇವಿಲೇ ವೈಶ್ಯ ಲೋಕ । ರಜಚಿ ತಮಭೇಸಕ । ತೇಥ ಶೂದ್ರ ತೇ ಗಾ ।೮೨೯॥ ಐಸಾ ಏಕಾಚಿ ಪ್ರಾಣಿವೃಂದಾ । ಭೇದು ಚತುರ್ವರ್ಣಧಾ । ಗುಣೇಂಚಿ ಪ್ರಬುದ್ಧಾ । ಕೇಲಾ ಜಾಣ ।೮೩೦॥ ಮಗ ಆಪುಲೇ ಠೇವಿಲೇ ಜೈಸೇ । ಆಯಿತೇಂಚಿ ದೀಪೇ ದಿಸೇ । ಗುಣಭಿನ್ನ ಕರ್ಮ ತೈಸೇ । ಶಾಸ್ತ್ರ ದಾವೀ ।೮೩೧॥ ತೇಂಚಿ ಆತಾ ಕೋಣ ಕೋಣ । ವರ್ಣವಿಹಿತಾಚೇ ಲಕ್ಷಣ । ಹೇ ಸಾಂಗೋ ಐಕ ಶ್ರವಣ । ಸೌಭಾಗ್ಯನಿಧೀ ।೮೩೨॥

ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ ।
ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ।೪೨॥

ತರೀ ಸರ್ವೇಂದ್ರಿಯಾಂಚಿಯಾ ವೃತ್ತೀ । ಘೇಊನಿ ಆಪುಲ್ಯಾ ಹಾತೀ । ಬುದ್ಧಿ ಆತ್ಮಯಾ ಮಿಳೇ ಏಕಾಂತೀ । ಪ್ರಿಯಾ ಜೈಸೀ ।೮೩೩॥ ಐಸಾ ಬುದ್ಧೀಚಾ ಉಪರಮು ।ತಯಾ ನಾಮ ಮ್ಹಣಿಪೇ ಶಮು । ತೋ ಗುಣ ಗಾ ಉಪಕ್ರಮು । ಜಯಾ ಕರ್ಮಾಚಾ ।೮೩೪॥ ಆಣಿ ಬಾಹ್ಯೇಂದ್ರಿಯಾಂಚೇ ಧೇಂಡೇ । ಪಿಟೂನಿ ವಿಧೀಚೇನಿ ದಂಡೇ । ನೇದಿಜೇ ಅಧರ್ಮಾಕಡೇ । ಕಹೀಂಚಿ ಜಾವೋ ।೮೩೫॥ ತೋ ಪೈ ಗಾ ಶಮಾ ವಿರಜಾ । ದಮು ಗುಣ ಜೇಥ ದುಜಾ । ಆಣಿ ಸ್ವಧರ್ಮಾಚಿಯಾ ವೋಜಾ । ಜಿಣೇ ಜೇ ಕಾ ।೮೩೬॥ ಸಟವೀಚಿಯೇ ರಾತೀ । ನ ವಿಸಂಬಿಜೆ ಜೇವೀ ವಾತೀ । ತೈಸಾ ಈಶ್ವರನಿರ್ಣಯೋ ಚಿತ್ತೀ । ವಾಹಣೇ ಸದಾ ।೮೩೭॥ ತಯಾ ನಾಮ ತಪ । ತೇ ತಿಜಯಾ ಗುಣಾಚೇ ರೂಪ । ಆಣಿ ಶೌಚಹೀ ನಿಷ್ಪಾಪ । ದ್ವಿವಿಧ ಜೇಥ ।೮೩೮॥ ಮನ ಭಾವಶುದ್ಧೀ ಭರಲೇ । ಆಂಗ ಕ್ರಿಯಾ ಅಳಂಕಾರಿಲೇ । ಐಸೇ ಸಬಾಹ್ಯ ಜಿಯಾಲೇ । ಸಾಜಿರೇ ಜೇ ಕಾ ।೮೩೯॥ ತಯಾ ನಾಮ ಶೌಚ ಪಾರ್ಥಾ । ತೋ ಕರ್ಮೀ ಗುಣ ಜಯೇ ಚೌಥಾ । ಆಣಿ ಪೃಥ್ವೀಚಿಯಾ ಪರೀ ಸರ್ವಥಾ । ಸರ್ವ ಜೇ ಸಾಹಾಣೇ ।೮೪೦॥ ತೇ ಗಾ ಕ್ಷಮಾ ಪಾಂಡವಾ । ಗುಣ ಜೇಥ ಪಾಂಚವಾ । ಸ್ವರಾಮಾಜೀ ಸುಹಾವಾ । ಪಂಚಮು ಜೈಸಾ ।೮೪೧॥ ಆಣಿ ವಾಂಕಡೇನಿ ವೋಘೇಂಸೀ । ಗಂಗಾ ವಾಹೇ ಉಜೂಚಿ ಜೈಸೀ । ಕಾ ಪುಟೀ ವಳಲಾ ಉಂಸೀ । ಗೋಡೀ ಜೈಸೀ ।೮೪೨॥ ತೈಸಾ ವಿಷಮಾಂಹೀ ಜೇವಾ । ಲಾಗೀ ಉಜುಕಾರು ಬರವಾ । ತೇ ಆರ್ಜವ ಗಾ ಸಾಹಾವಾ । ಜೇಥೀಂಚಾ ಗುಣ ।೮೪೩॥

ಅಲ್ಲಿ ಸತ್ತ್ವಗುಣವು ತನ್ನ ಸಮವಿಷಮ ಮಾರ್ಗದಿಂದ ಬ್ರಾಹ್ಮಣ ಮತ್ತು ಕ್ಷತ್ರಿಯ ಈ ಎರಡು ವರ್ಣಗಳನ್ನು ಉತ್ಪನ್ನ ಮಾಡಿತು ॥೮೨೮॥

ಮತ್ತು ರಜೋಗುಣವು ಮತ್ತು ಸತ್ತ್ವಗುಣ ಇವುಗಳ ಮಿಶ್ರಣದಿಂದ ವೈಶ್ಯವರ್ಣವು ಉತ್ಪನ್ನವಾಯಿತು ಮತ್ತು ರಜ, ತಮ ಮಿಶ್ರಣದಿಂದ ಶೂದ್ರ ವರ್ಣವು ಉತ್ಪನ್ನವಾಯಿತು ॥೮೨೯॥

ಪ್ರಬುದ್ಧನೇ, ಈ ಪ್ರಕಾರವಾಗಿ ಒಂದೇ ರೂಪವು ಪ್ರಾಣಿಮಾತ್ರರ ಗುಣಗಳಿಂದ ನಾಲ್ಕು ಪ್ರಕಾರದ ಭೇದವನ್ನು ಮಾಡಲಾಗಿದೆ ಎಂದು ತಿಳಿ ॥೮೩೦॥

ಆಗ ತಾನಿಟ್ಟ ವಸ್ತು ದೀಪದ ಬೆಳಕಿನಿಂದ ಸಹಜವಾಗಿ ಕಾಣುವಂತೆ ಗುಣಗಳಿಂದ ಬೇರೆ ಬೇರೆಯಾಗಿರುವ ಕರ್ಮಗಳನ್ನು ಶಾಸ್ತ್ರದಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ ॥೮೩೧॥

ಹೇ ಭಾಗ್ಯನಿಧಿಯೇ, ಯಾವ ವರ್ಣಕ್ಕೆ ಯಾವ ಕರ್ಮವು ವಿಹಿತವೆಂಬುವುದನ್ನು ಅದನ್ನೇ ನಿನಗೆ ಈಗ ಹೇಳುವೆನು, ಕೇಳು ॥೮೩೨॥

ಶ್ಲೋಕಾರ್ಥ :- ಶಮ, ದಮ, ತಪಸ್ಸು, ಶೌಚ, ಸಹನೆ, ಋಜುತ್ವ, ಜ್ಞಾನ ವಿಜ್ಞಾನ, ಆಸ್ತಿಕತ್ವ ಇವು ಜನ್ಮದಿಂದಲೇ ಬ್ರಾಹ್ಮಣರಿಗೆ ಏರ್ಪಟ್ಟ ಕರ್ಮಗಳು ॥೪೨॥

ಪತಿವ್ರತೆಯು ಏಕಾಂತದಲ್ಲಿ ತನ್ನ ಪತಿಯನ್ನು ಕೂಡುವಳು. ಅದರಂತೆ ಸರ್ವ ಇಂದ್ರಿ ವೃತ್ತಿಗಳನ್ನು ವಶಪಡಿಸಿಕೊಂಡು ಬುದ್ಧಿಯು ಆತ್ಮ ಸ್ವರೂಪದಲ್ಲಿ ಕೂಡುವುದು ॥೮೩೩॥

ಈ ಪ್ರಕಾರದ ಬುದ್ಧಿಯ ಸ್ವರೂಪಲೀನತೆಗೆ ''ಶಮ'' ವೆಂದು ಕರೆಯುವರು. ಇದು ಎಲ್ಲ ಗುಣಗಳಲ್ಲಿ ಮೊದಲನೆಯದು. ಇಲ್ಲಿಂದಲೇ ಎಲ್ಲ ಕರ್ಮಗಳ ಆರಂಭ ವಾಗುವುದು ॥೮೩೪॥

ಮತ್ತು ಬಾಹ್ಯ ಇಂದ್ರಿಯಗಳಿಗೆ ವಿಧಿಯ ಶಾಸನೆಯನ್ನು ಮಾಡಿ ಅಧರ್ಮದ ಮಾರ್ಗಕ್ಕೆ ಎಂದೂ ಹೋಗಗೊಡು ವುದಿಲ್ಲ ॥೮೩೫॥

ಇದು ''ಶಮ'' ಕ್ಕೆ ಸಹಾಯಕರ್ತವಾದ ''ದಮ'' ಗುಣವಾಗಿರುವುದು. ಇದು ಇಂದ್ರಿಯಗಳಿಗೆ ಸ್ವಧರ್ಮದಿಂದ ನಡೆಯಲು ಹಚ್ಚುವುದು ॥೮೩೬॥

ಷಷ್ಠೀ ಪೂಜನ (ಶಟವೀ ಪೂಜನ) ದ ರಾತ್ರಿಯಲ್ಲಿ ದೀಪವನ್ನು ಹಚ್ಚಲು ಯಾರೂ ಮರೆಯುವುದಿಲ್ಲ. ಆದರಂತೆ ಸರ್ವಕಾಲದಲ್ಲಿಯೂ ಚಿತ್ತದಲ್ಲಿ ಈಶ್ವರಸ್ವರೂಪದ ವಿಚಾರ ಮಾಡುವರು ॥೮೩೭॥

ಇದಕ್ಕೆ ''ತಪ''ವೆಂದು ಹೇಳುವರು ಮತ್ತು ಇದು ಬ್ರಾಹ್ಮಣ ಕರ್ಮದ ಮೂರನೆಯ ಗುಣವಾಗಿದೆ ಮತ್ತು ಶೌಚವೆಂದರೆ ಪವಿತ್ರತೆಯು. ಇದು ನಿಷ್ಪಾಪವಿದ್ದು ಎರಡು ಪ್ರಕಾರಗಳಾಗಿರುವುದು ॥೮೩೮॥

ಮನವು ಶುದ್ಧ ಭಾವದಿಂದ ತುಂಬಿಕೊಂಡಿದ್ದು, ಸರ್ವ ಶರೀರವು ಸತ್ಕರ್ಮದಿಂದ ಸುಶೋಭಿತವಾಗಿರುವುದು. ಇಂಥ ಅಂತರ್ಬಾಹ್ಯ ಶುಚಿತ್ವದಿಂದ ತುಂಬಿಕೊಂಡಿರುವುದು ॥೮೩೯॥

ಪಾರ್ಥಾ, ಅದಕ್ಕೆ ''ಶೌಚ''ವೆಂದು ಹೇಳುವರು. ಹಾಗೂ ಅದು ಬ್ರಹ್ಮಕರ್ಮಗಳಲ್ಲಿ ನಾಲ್ಕನೆಯ ಗುಣವಾಗಿದೆ ಮತ್ತು ಪೃಥ್ವಿಯಂತೆ ಯಾವಾಗಲೂ ಎಲ್ಲ ದುಃಖಗಳನ್ನು ಸಹಿಸುವುದು ॥೮೪೦॥

ಅದಕ್ಕೆ ಪಾಂಡವಾ, ''ಕ್ಷಾಂತಿ, ಕ್ಷಮಾ'' ಎಂದು ಹೇಳುವರು. ಹಾಗೂ ಸಪ್ತಸ್ವರದಲ್ಲಿ ಪಂಚಮಸ್ವರವು ಹೇಗೆ ಅತಿ ಮಧುರವಾಗಿರುವಂತೆ ಬ್ರಹ್ಮಕರ್ಮಗಳಲ್ಲಿ ಈ ಐದನೆಯ ಗುಣವಾಗಿರುವುದು ॥೮೪೧॥

ಗಂಗೆಯ ಪ್ರವಾಹವು ಡೊಂಕಾಗಿದ್ದರೂ ಅದು ಸರಳವಾಗಿಯೇ ಇರುವುದು. ಅಥವಾ ಕಬ್ಬು ಡೊಂಕಾಗಿದ್ದರೂ ಅದರ ಸಿಹಿಯು ಸರಳವಾಗಿಯೇ ಇರುವುದು ॥೮೪೨॥

ಅದರಂತೆ ತನಗೆ ತೊಂದರೆ ಕೊಡುವವರ ಮೇಲೆಯೂ ಪ್ರೀತಿಯಿಂದ ಇರುವಿಕೆಗೆ ''ಆರ್ಜವ''ವೆಂದು ಹೇಳುವರು. ಇದು ಬ್ರಾಹ್ಮಣರ ಕರ್ಮಗಳಲ್ಲಿನ ಆರನೆಯ ಗುಣವಾಗಿರುವುದು ॥೮೪೩॥

ಆಣಿ ಪಾಣಿಯೇ ಪ್ರಯತ್ನೇ ಮಾಳೀ । ಅಖಂಡ ಜಚೇ ಝಾಡಾಮುಳೀ । ಪರೀ ತೇ ಆಘವೇಂಚಿ ಫಳೀ । ಜಾಣೇ ಜೇವೀ ॥೮೪೪॥ ತೈಸೇ ಶಾಸ್ತ್ರಾಚಾರೇ ತೇಣೇ । ಈಶ್ವರುಚಿ ಏಕ ಪಾವಣೇ । ಹೇ ಫುಡೇ ಜೇ ಕಾ ಜಾಣಣೇ । ತೇ ಯೇಥ ಜ್ಞಾನ ॥೮೪೫॥ ತೇ ಗಾ ಕರ್ಮೀ ಜಿಯೇ । ಸಾತವಾ ಗುಣ ಹೋಯೇ । ಆಣಿ ವಿಜ್ಞಾನ ಹೇ ಪಾಹೇ । ಏವಂರೂಪ ॥೮೪೬॥ ತರೀ ಸತ್ತ್ವಶುದ್ಧೀಚಿಯೇ ವೇಳೇ । ಶಾಸ್ತ್ರೇ ಕಾ ಧ್ಯಾನಬಳೇ । ಈಶ್ವರತತ್ತ್ವೀಂಚಿ ಮಿಳೇ । ನಿಷ್ಟಂಕಬುದ್ಧೀ ॥೮೪೭॥ ಹೇ ವಿಜ್ಞಾನ ಬರವೇ । ಗುಣರತ್ನ ಜೇಥ ಆಠವೇ । ಆಣಿ ಆಸ್ತಿಕ್ಯ ಜಾಣಾವೇ । ನವವಾ ಗುಣ ॥೮೪೮॥ ಪೈ ರಾಜಮುದ್ರಾ ಆಥಿಲಿಯಾ । ಪ್ರಜಾ ಭಜೇ ಭಲತಯಾ । ತೇವೀ ಶಾಸ್ತ್ರೇ ಸ್ವೀಕಾರಿಲಿಯಾ । ಮಾರ್ಗಮಾತ್ರಾತೇ ॥೮೪೯॥ ಆದರೇ ಜೇ ಕಾ ಮಾನಣೇ । ತೇ ಆಸ್ತಿಕ್ಯ ಮೀ ಮ್ಹಣೇ । ತೋ ನವವಾ ಗುಣ ಜೇಣೇ । ಕರ್ಮ ತೇ ಸಾಚ ॥೮೫೦॥ ಏವಂ ನವಹೀ ಶಮಾದಿಕ । ಗುಣ ಜೇಥ ನಿರ್ದೋಖ । ತೇ ಕರ್ಮ ಜಾಣ ಸ್ವಾಭಾವಿಕ । ಬ್ರಾಹ್ಮಣಾಚೇ ॥೮೫೧॥ ತೋ ನವಗುಣರತ್ನಾಕರು । ಯಯಾ ನವರತ್ನಾಂಚಾ ಹಾರು । ನ ಫೇಡಿತ ಲೇ ದಿನಕರು । ಪ್ರಕಾಶು ಜೈಸಾ ॥೮೫೨॥ ನಾನಾ ಚಾಂಪಾ ಚಾಂಪೌಳೀ ಪೂಜಿಲಾ । ಚಂದ್ರು ಚಂದ್ರಿಕಾ ಧವಳಲಾ । ಕಾ ಚಂದನು ನಿಜೇ ಚರ್ಚಿಲಾ । ಸೌರಭ್ಯೇ ಜೇವಿ ॥೮೫೩॥ ತೇವೀ ನವಗುಣಟಿಕಲಗ । ಲೇಣೇ ಬ್ರಾಹ್ಮಣಾಚೇ ಅವ್ಯಂಗ । ಕಹೀಂಚಿ ನ ಸಂಡೀ ಆಂಗ । ಬ್ರಾಹ್ಮಣಾಚೇ ॥೮೫೪॥ ಆತಾ ಉಚಿತ ತೇ ಕ್ಷತ್ರಿಯಾ । ತೇಂಹೀ ಕರ್ಮ ಧನಂಜಯಾ । ಸಾಂಗೋ ಐಕ ಪ್ರಜ್ಞೇಚಿಯಾ । ಭರೋವರೀ ॥೮೫೫॥

ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್ ।
ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ॥೪೩॥

ತರೀ ಭಾನು ಹಾ ತೇಜೇ । ನಾಪೇಕ್ಷೀ ಜೇವೀ ವಿರಜೇ । ಕಾ ಸಿಂಹೇ ನ ಪಾಹಿಜೇ । ಜಾವಳಿಯಾ ॥೮೫೬॥ ಐಸಾ ಸ್ವಯಂಭ ಜೋ ಜೀವೇ ಲಾಠು । ಸಾವಾಯೇಂವೀಣ ಉದ್ಭಟು । ತೇ ಶೌರ್ಯ ಗಾ ಜೇಥ ಶ್ರೇಷ್ಠು । ಪಹಿಲಾ ಗುಣ ॥೮೫೭॥ ಆಣಿ ಸೂರ್ಯಾಚೇನಿ ಪ್ರತಾಪೇ । ಕೋಡಿಹೀ ನಕ್ಷತ್ರ ಹಾರಪೇ । ನಾ ತೋ ತರೀ ನ ಲೋಪೇ । ಸಚಂದ್ರೀ ತಿಹೀ ॥೮೫೮॥

ತೋಟಗಾರನು ಪ್ರಯತ್ನಪಟ್ಟು ಗಿಡಗಳ ಬೇರುಗಳಿಗೆ ನೀರು ಹಾಕುವುದರಲ್ಲಿ ಅಖಂಡವಾಗಿ ದಕ್ಷತೆಯನ್ನು ವಹಿಸುವನು. ಆದರೆ ಆ ತನ್ನ ಕಷ್ಟದ ಕೃತಾರ್ಥತೆಯನ್ನು ಗಿಡಗಳಿಗೆ ಬಿಟ್ಟ ಫಲಗಳಲ್ಲಿ ಕಾಣುವನು ।೮೪೪॥

ಅದರಂತೆ ಶಾಸ್ತ್ರೋಕ್ತ ಆಚರಣೆಗಳಿಂದ ಈಶ್ವರ ಪ್ರಾಪ್ತಿಯು ನಿಶ್ಚಯವಾಗಿ ಆಗುವುದೆಂದು ತಿಳಿಯುವುದು ಅದು ''ಜ್ಞಾನ''ವಾಗಿರುವುದು ।೮೪೫॥

ಈ ಜ್ಞಾನವು ಬ್ರಹ್ಮಕರ್ಮಗಳಲ್ಲಿ ಏಳನೆಯ ಗುಣವಾಗಿರುವುದು ಮತ್ತು ಅದರಂತೆ ವಿಜ್ಞಾನದ ಲಕ್ಷಣವು ಹೇಗಿರುವುದೆಂದರೆ ।೮೪೬॥

ಅದು ಶಾಸ್ತ್ರ ವಿಚಾರದಿಂದ ಹಾಗೂ ಧ್ಯಾನದ ಅಭ್ಯಾಸದಿಂದ ಈಶ್ವರರೂಪವಾದ ಬುದ್ಧಿಯು ಸತ್ತ್ವಶುದ್ಧಿಯ ವೇಳೆಯಲ್ಲಿ ನಿಶ್ಚಯದಿಂದ ಸಿಗುವುದು ।೮೪೭॥

ಅದಕ್ಕೆ ''ವಿಜ್ಞಾನ''ವೆಂದು ಹೇಳುವರು. ಹಾಗೂ ಅದು ಬ್ರಹ್ಮಕರ್ಮಗಳಲ್ಲಿ ಎಂಟನೆಯ ಗುಣರತ್ನವಾಗಿರುವುದು ಮತ್ತು ''ಆಸ್ತಿಕ್ಯ'' ಎಂಬುವ ಗುಣವು ಒಂಬತ್ತನೆಯದಾಗಿದೆ ಎಂದು ತಿಳಿ ।೮೪೮॥

ಇಲ್ಲಿ ನೋಡು, ರಾಜ ಮುದ್ರಾಂಕಿತ ಮನುಷ್ಯನು ಯಾರೇ ಇರಲಿ, ಆತನನ್ನು ಸರ್ವ ಜನರು ಸೇವೆಯನ್ನು ಮಾಡುವರು. ಅದರಂತೆ ಶಾಸ್ತ್ರಗಳು ಯಾವ ಮಾರ್ಗವನ್ನು ಸ್ವೀಕರಿಸಿರುವುವೋ ।೮೪೯॥

ಆ ಮಾರ್ಗವನ್ನು ಆದರದಿಂದ ಮನ್ನಿಸಿ, ಅದರಂತೆ ಆಚರಿಸುವುದಕ್ಕೆ ''ಆಸ್ತಿಕ್ಯ''ವೆಂದು ನಾನು ಹೇಳುವೆನು. ಇದು ಬ್ರಹ್ಮಕರ್ಮಗಳಲ್ಲಿ ಒಂಬತ್ತನೆಯದಾಗಿದ್ದು, ಈ ಗುಣದಿಂದ ಎಲ್ಲ ಬ್ರಹ್ಮಕರ್ಮಗಳು ನಿಜವಾಗುವುವು ।೮೫೦॥

ಈ ಪ್ರಕಾರವಾಗಿ ಶಮಾದಿಕ ಒಂಬತ್ತು ಗುಣಗಳು ಎಲ್ಲಿ ನಿರ್ದೋಷವಾಗಿ ಗೋಚರಿಸುವುವೋ, ಅವು ಬ್ರಾಹ್ಮಣರ ಸ್ವಾಭಾವಿಕ ಕರ್ಮಗಳೆಂದು ತಿಳಿ ।೮೫೧॥

ಯಾವ ಪ್ರಕಾರವಾಗಿ ಸೂರ್ಯನ ಪ್ರಕಾಶವು ಸ್ವಭಾವತಃ ಇರುವಂತೆ, ಬ್ರಾಹ್ಮಣರ ಈ ಒಂಬತ್ತು ಗುಣರೂಪ ರತ್ನದ ಹಾರವು ಸ್ವಾಭಾವಿಕವಾಗಿದೆ ।೮೫೨॥

ಸಂಪಿಗೆಯ ಗಿಡಕ್ಕೆ ಅದರದೇ ಹೂವುಗಳಿಂದ ಶೋಭೆಯು ಬರುವುದು. ಅಥವಾ ಚಂದ್ರನು ತನ್ನ ಪ್ರಭೆಯಿಂದಲೇ ಪ್ರಕಾಶಿತನಾಗುವನು. ಅಥವಾ ಚಂದನವು ತನ್ನ ಪರಿಮಳವನ್ನೇ ಲೇಪಿಸಿಕೊಳ್ಳುತ್ತಿರುವುದು ।೮೫೩॥

ಅದರಂತೆ ನವಗುಣರೂಪ ಆಭರಣಗಳು ಬ್ರಾಹ್ಮಣರ ಅವ್ಯಂಗವಾದ ಅಲಂಕಾರಗಳಾಗಿವೆ ಹಾಗೂ ಇವು ಬ್ರಾಹ್ಮಣರ ಅಂಗವನ್ನು ಬಿಟ್ಟು ಎಂದೂ ಇರಲಾರವು ।೮೫೪॥

ಧನಂಜಯನೇ, ಈಗ ಕ್ಷತ್ರಿಯರಿಗೆ ಉಚಿತವಾದ ಕರ್ಮಗಳ ಬಗ್ಗೆ ನಾನದನ್ನು ಹೇಳುವೆನು, ನೀನದನ್ನು ನಿನ್ನ ಪೂರ್ಣ ಬುದ್ಧಿಯೊಂದಿಗೆ ಕೇಳು ।೮೫೫॥

**ಶ್ಲೋಕಾರ್ಥ :-** ಶೌರ್ಯ, ತೇಜಸ್ಸು, ಹಿಡಿದ ಕೆಲಸವನ್ನು ಮಾಡುವುದು, ಯುದ್ಧದಲ್ಲಿ ಓಡಿ ಹೋಗದೆ ಇರುವುದು, ದಾನ ಮಾಡುವುದು, ಎಲ್ಲರಿಗೂ ರಕ್ಷಣೆ ಕೊಡುವುದು, ಈಶ್ವರಭಾವವು, ಕ್ಷತ್ರಿಯನ ಸ್ವಭಾವ ಕರ್ಮಗಳಾಗಿವೆ ।೪೩॥

ಸೂರ್ಯನು ಪ್ರಕಾಶವನ್ನು ಬೀರಲು ಬೇರೆಯವರ ಸಹಾಯದ ಅಪೇಕ್ಷೆಯನ್ನು ಮಾಡುವುದಿಲ್ಲ. ಸಿಂಹವು ತನ್ನ ಪರಾಕ್ರಮಕ್ಕಾಗಿ ಇನ್ನೊಂದರ ಸಹಕಾರ ಕೇಳುವುದಿಲ್ಲ ।೮೫೬॥

ಹೀಗೆ ಸಹಾಯ ಹೊರತಾಗಿ ಯಾವ ಸ್ವಯಂಭೂ, ಬಲಿಷ್ಠ ಹಾಗೂ ಶೂರತನ ಇದು ಕ್ಷಾತ್ರ ಪ್ರಕೃತಿಯ ಮೊದಲನೆಯ ಗುಣವಾದ ''ಶೌರ್ಯ''ವಾಗಿರುವುದು ।೮೫೭॥

ಮತ್ತು ಸೂರ್ಯನ ಪ್ರಕಾಶದಿಂದ ಕೋಟಿಗಟ್ಟಲೆ ನಕ್ಷತ್ರಗಳು ಇಲ್ಲದಂತಾಗುವುವು. ಆದರೆ ಚಂದ್ರ ಸಮೇತವಾಗಿ ಎಲ್ಲ ನಕ್ಷತ್ರಗಳು ಸೂರ್ಯನನ್ನು ಲೋಪಗೊಳಿಸಲು ಸಮರ್ಥರಾಗುವುದಿಲ್ಲ ।೮೫೮॥

ತೈಸೇನಿ ಆಪುಲೇ ಪ್ರೌಢಿಗುಣೇ । ಜಗಾ ಯಾ ವಿಸ್ಮಯೋ ದೇಣೇ । ಆಪಣ ತರೀ ನ ಕ್ಷೋಭಣೇ । ಕಾಯಸೇನಹೀ ।।೮೫೯।। ತೇ ಪ್ರಾಗಲ್ಭ್ಯರೂಪ ತೇಜಾ । ಜಿಯೇ ಕರ್ಮೀ ಗುಣ ದುಜಾ । ಆಣಿ ಧೀರು ತೋ ತಿಜಾ । ಜೇಥೀಂಚಾ ಗುಣ ।।೮೬೦।। ವರಿಪಡಲಿಯಾ ಆಕಾಶ । ಬುದ್ಧೀಚೇ ಡೋಳೇ ಮಾನಸ । ಝಾಂಕೀ ನಾ ತೇ ಪರಿಯೇಸ । ಧೈರ್ಯ ಜೇಥೇ ।।೮೬೧।। ಆಣಿ ಪಾನೀ ಹೋ ಕಾ ಭಲತೇತುಕೇ । ಪರೀ ತೇ ಜಿಣೌನಿ ಪದ್ಮ ಫಾಂಕೇ । ಕಾ ಆಕಾಶ ಉಂಚಿಯಾ ಜಿಂಕೇ । ಆವಡೇ ತಯಾತೇ ।।೮೬೨।। ತೇವೀ ವಿವಿಧಾ ಅವಸ್ಥಾ । ಪಾತಲಿಯಾ ಜಿಣೌನಿ ಪಾರ್ಥಾ । ಪ್ರಜ್ಞಾಫಳ ತಯಾ ಅರ್ಥಾ । ವೇಝು ದೇಣೇ ಜೇ ।।೮೬೩।। ತೇ ದಕ್ಷತ್ವ ಗಾ ಚೋಖ । ಜೇಥ ಚೌಥಾ ಗುಣ ದೇಖ । ಆಣಿ ಝುಂಜ ಅಲೌಕಿಕ । ತೋ ಪಾಂಚವಾ ಗುಣ ।।೮೬೪।। ಆದಿತ್ಯಾಚೇ ಝಾಡೇ । ಸದಾ ಸನ್ಮುಖ ಸೂರ್ಯಾ ಕಡೇ । ತೇವೀ ಸಮೋರ ಶತ್ರುಪುಢೇ । ಹೋಣೇ ಜೇ ಕಾ ।।೮೬೫।। ಮಾಹೇವಣೇ ಪ್ರಯತ್ನೇಂಸಿ । ಚುಕವಿಜೇ ಸೇಜೇ ಜೈಸಿ । ರಿಪೂ ಪಾಠೀ ನೇದಿಜೇ ತೈಸೀ । ಸಮರಾಂಗಣೇ ।।೮೬೬।। ಹಾ ಕ್ಷತ್ರಿಯಾಚೀಯಾ ಆಚಾರೀ । ಪಾಂಚವಾ ಗುಣೇಂದ್ರು ಅವಧಾರೀ । ಚಹೂ ಪುರುಷಾರ್ಥಾ ಶಿರೀ । ಭಕ್ತಿ ಜೈಸಿ ।।೮೬೭।। ಆಣಿ ಜಾಲೇನಿ ಫುಲೇ ಫಳೇ । ಶಾಖಿಯಾ ಜೈಸೀ ಮೋಕಳೇ । ಕಾ ಉದಾರ ಪರಿಮಳೇ । ಪದ್ಮಾಕರು ।।೮೬೮।। ನಾನಾ ಆವಡಿಚೇನಿ ಮಾಪೇ । ಚಾಂದಿಣೇ ಭಲತೇಣೇ ಘೇಪೇ । ಪುಢಿಲಾಂಚೇನಿ ಸಂಕಲ್ಪೇ । ತೈಸೇ ಜೇ ದೇಣೇ ।।೮೬೯।। ತೇ ಉಮಪ ಗಾ ದಾನ । ಜೇಥ ಸಹಾವೇ ಗುಣರತ್ನ । ಆಣಿ ಆಜ್ಞೇ ಏಕಾಯತನ । ಹೋಣೇ ಜೇ ಕಾ ।।೮೭೦।। ಪೋಷೂನಿ ಅವಯವ ಆಪುಲೇ । ಕರವಿಜತೀ ಮಾನವಿಲೇ । ತೇವೀ ಪಾಲಣೇ ಲೋಭವಿಲೇ । ಜಗ ಜೇ ಭೋಗಣೇ ।।೮೭೧।। ತಯಾ ನಾಮ ಈಶ್ವರ ಭಾವೋ । ಜೋ ಸರ್ವಸಾಮರ್ಥ್ಯಾಚಾ ಠಾವೋ । ತೋ ಗುಣಾಂಮಾಜೀ ರಾವೋ । ಸಾತವಾ ಜೇಥ ।।೮೭೨।। ಐಸೇ ಜೇ ಶೌರ್ಯಾದಿಕೀ । ಇಹೀ ಸಾತ ಗುಣವಿಶೇಖೀ । ಅಳಂಕೃತ ಸಪ್ತಋಖೀ । ಆಕಾಶ ಜೈಸೇ ।।೮೭೩।। ತೈಸೇ ಸಪ್ತಗುಣೀ ವಿಚಿತ್ರ । ಕರ್ಮ ಜೇ ಜಗೀ ಪವಿತ್ರ । ತೇ ಸಹಜ ಜಾಣ ಕ್ಷಾತ್ರ । ಕ್ಷತ್ರಿಯಾಚೇ ।।೮೭೪।। ನಾನಾ ಕ್ಷತ್ರಿಯ ನವ್ಹೇ ನರು । ತೋ ಸತ್ತ್ವಸೋನಯಾಚಾ ಮೇರು । ಮ್ಹಣೌನಿ ಗುಣ ಸ್ವರ್ಗಾ ಆಧಾರು । ಸಾತಾ ಇಯಾ ।।೮೭೫।।

ಅದರಂತೆ ತನ್ನ ಮಹತ್ವದ ಗುಣಗಳಿಂದ ಎಲ್ಲ ಜಗಕ್ಕೆ ಆಶ್ಚರ್ಯ ಪಡುವಂತೆ ಮಾಡುವರು ಮತ್ತು ಯಾವುದೇ ಪ್ರಸಂಗದಿಂದಲೂ ಅವರು ಹೆದರುವುದಿಲ್ಲ ।।೮೫೯।।

ಇಂಥ ಯಾವ ಪ್ರಶಂಸನೀಯವಾದ ಗುಣವು ''ತೇಜ''ವು ಈ ಕ್ಷತ್ರಿಯ ಪ್ರಕೃತಿಗೆ ಎರಡನೆಯ ಗುಣವಾಗಿರುವುದು. ಹಾಗೂ ''ಧೀರ''ವು ಅವರ ಮೂರನೆಯ ಗುಣವಾಗಿರುವುದು ।।೮೬೦।।

ಆಕಾಶವು ಕಳಚಿಬಿದ್ದರೂ ಅವರ ಬುದ್ಧಿಯ ದೃಷ್ಟಿಯು, ಮನಸ್ಸು ಮುಚ್ಚಲಾರವು. ಇದರ ಹೆಸರು ''ಧೈರ್ಯ''ವಾಗಿರುವುದು ।।೮೬೧।।

ಮತ್ತು ನೀರು ಎಷ್ಟೇ ಆಳವಾಗಿರಲಿ ಅದನ್ನು ದಾಟಿ ಕಮಲವು ಮೇಲಕ್ಕೆ ಬರುವುದು. ಅಥವಾ ಆಕಾಶವು ಎತ್ತರದ ವಿಷಯಕ್ಕೆ ಎಲ್ಲ ವಸ್ತುಗಳನ್ನು ಗೆಲ್ಲುವುದು ।।೮೬೨।।

ಪಾರ್ಥಾ, ಅದರಂತೆ ನಾನಾ ಪ್ರಕಾರದ ಪ್ರಸಂಗಗಳು ಒದಗಿದರೂ, ಬುದ್ಧಿಯಲ್ಲಿ ಹುಟ್ಟುವ ಅನೇಕ ವಿಕಾರಗಳನ್ನು ಜಯಿಸುವುದು ।।೮೬೩।।

ಈ ಪ್ರಕಾರವಾಗಿ ದಕ್ಷತೆಯನ್ನು ಒಹಿಸುವುದಕ್ಕೆ ''ದಕ್ಷತೆ'' ಎನ್ನುವರು. ಹಾಗೂ ಇದು ಕ್ಷಾತ್ರ ಪ್ರಕೃತಿಯ ನಾಲ್ಕನೆಯ ಗುಣವಾಗಿರುವುದು ಮತ್ತು ಅಲೌಕಿಕ ಯುದ್ಧ ಪರಾಕ್ರಮವು ಇದು ಐದನೆಯ ಗುಣವಾಗಿರುವುದು ।।೮೬೪।।

ಸೂರ್ಯ ಕಮಲಗಳು ಯಾವಾಗಲೂ ಸೂರ್ಯನ ಸಮ್ಮುಖನಾಗಿಯೇ ಇರುವುವು. ಅದರಂತೆ ಶತ್ರುಗಳ ಎದುರಿನಲ್ಲಿ ಯಾವಾಗಲೂ ಇರುವರು ।।೮೬೫।।

ಗರ್ಭಿಣಿ ಸ್ತ್ರೀಯು ಪತಿಸಮಾಗಮಕ್ಕೆ ಹೇಗೆ ಪ್ರಯತ್ನಪಟ್ಟು ತಪ್ಪಿಸುವಳೋ, ಅದರಂತೆ ಶತ್ರುವಿಗೆ ರಣರಂಗದಲ್ಲಿ ಬೆನ್ನನ್ನು ತೋರಿಸುವುದನ್ನು ತಪ್ಪಿಸುವರು ।।೮೬೬।।

ನಾಲ್ಕು ಪುರುಷಾರ್ಥಗಳಲ್ಲಿ ಭಕ್ತಿಯು ಹೇಗೆ ಶ್ರೇಷ್ಠವಿರುವುದೋ, ಅದರಂತೆ ಕ್ಷತ್ರಿಯರ ಗುಣಗಳಲ್ಲಿ ಈ ಐದನೆಯ ಗುಣವು ಇಂದ್ರನಂತೆ ಶ್ರೇಷ್ಠವಾಗಿರುವುದೆಂದು ತಿಳಿ ।।೮೬೭।।

ಮತ್ತು ಗಿಡವು ತನ್ನ ಎಲೆ, ಹೂವು ಹಾಗೂ ಫಲಗಳನ್ನು ಯಾವ ಪ್ರಕಾರವಾಗಿ ಯಾಚಕರಿಗೆ ಅರ್ಪಿಸಲು ಸದಾ ಸಿದ್ಧವಾಗಿರುವುದು, ಅಥವಾ ಪರಿಮಳವನ್ನು ಕೊಡಲು ಕಮಲವು ಉದಾರವಾಗಿರುವುದು ।।೮೬೮।।

ಅಥವಾ ತಮ್ಮ ಪ್ರೀತಿಯಂತೆ ಯಾರು ಎಷ್ಟಾದರೂ ಬೆಳದಿಂಗಳ ಸುಖವನ್ನು ಭೋಗಿಸಲು ಬರುವಂತೆ ಯಾಚಕರ ಇಚ್ಛೆಯಂತೆ ಕೊಡುವುದು ।।೮೬೯।।

ಇದಕ್ಕೆ ಅಮರ್ಯಾದ ''ದಾನ''ವೆಂದು ಹೇಳುವರು, ಇದು ಕ್ಷತ್ರಿಯರ ಆರನೆಯ ಗುಣವಾಗಿರುವುದು ಮತ್ತು ಆಜ್ಞೆಯ ಇರುವ ಒಂದೇ ಒಂದು ಸ್ಥಾನವೆಂದರೆ, ಕ್ಷತ್ರಿಯ ವರ್ಣವಾಗಿರುವುದು ।।೮೭೦।।

ತಮ್ಮ ಹಸ್ತಪಾದಿಕ ಅವಯವಗಳನ್ನು ಚೆನ್ನಾಗಿ ಪೋಷಣೆಯನ್ನು ಮಾಡಿದರೆ, ಅವುಗಳಿಂದ ಬೇಕಾದ ಕಾರ್ಯಗಳನ್ನು ಮಾಡಿಸಿಕೊಳ್ಳಲು ಬರುವುದು. ಅದರಂತೆ ಪ್ರಜೆಗಳ ಪಾಲನೆ ಮಾಡಿದರೆ, ಅವರ ಉಪಭೋಗ ರಾಜನಿಗೆ ದೊರೆಯುವುದು ।।೮೭೧।।

ಯಾವ ಸರ್ವ ಸಾಮರ್ಥ್ಯದ ಆಧಾರಕ್ಕೆ ''ಈಶ್ವರಭಾವ''ವೆಂದು ಹೇಳುವರು. ಇದು ಕ್ಷತ್ರಿಯರ ಸರ್ವ ಗುಣಗಳಲ್ಲಿ ರಾಜವೆನಿಸುವ ಏಳನೆಯ ಗುಣವಾಗಿದೆ ।।೮೭೨।।

ಹೀಗೆ ಶೌರ್ಯ ಮೊದಲು ಮಾಡಿ, ಏಳು ಗುಣಗಳಿಂದ ಯಾವ ಪುರುಷನು ವಿಶೇಷ ಅಲಂಕೃತನಾಗಿರುವನೋ, ಅವನು ಸಪ್ತ ಋಷಿಗಳು ಆಕಾಶದಲ್ಲಿ ಶೋಭಿಸುವಂತೆ ಶೋಭಿಸುವನು ।।೮೭೩।।

ಈ ಪ್ರಕಾರವಾಗಿ ಈ ಏಳು ಪವಿತ್ರ ಗುಣಗಳಿಂದ ಈ ಜಗತ್ತಿನಲ್ಲಿ ಯಾವ ಕರ್ಮಗಳು ಪವಿತ್ರವಾಗಿರುವುವೋ, ಅವು ಕ್ಷಾತ್ರ ಪ್ರಕೃತಿಯ ಸ್ವಾಭಾವಿಕ ಕರ್ಮಗಳಿರುವುವು ।।೮೭೪।।

ಅಥವಾ ಇಂಥ ಪುರುಷನು ಕ್ಷತ್ರಿಯನಿರದೇ ಸತ್ತ್ವರೂಪ ಬಂಗಾರದ ಮೇರು ಪರ್ವತನಾಗಿರುವನು. ಆದ್ದರಿಂದ ಆತನು ಸಪ್ತಗುಣರೂಪ ಸಮುದ್ರಗಳಿಂದ ಸ್ವರ್ಗವನ್ನು ಧರಿಸುವನು ।।೮೭೫।।

ನಾತರೀ ಸಪ್ತ ಗುಣಾರ್ಣವೀ । ಪರಿವಾರಲೀ ಬರವೀ । ಹೇ ಕ್ರಿಯಾ ನವ್ಹೇ ಪೃಥ್ವೀ । ಭೋಗಿತಸೇ ತೋ ।೮೭೬॥ ಕಾ ಗುಣಾಂಚೇ ಸಾತಾಂಹೀ ಓಘೀ । ಹೇ ಕ್ರಿಯಾ ತೇ ಗಂಗಾ ಜಗೀ । ತಯಾ ಮಹೋದಧೀಚಿಯಾ ಆಂಗೀ । ವಿಲಸೇ ಜೈಸಿ ।೮೭೭॥ ಪರೀ ಹೇ ಬಹು ಅಸೋ ದೇಖ ।ಶೌರ್ಯಾದಿ ಗುಣಾತ್ಮಕ । ಕರ್ಮ ಗಾ ನೈಸರ್ಗಿಕ । ಕ್ಷತ್ರಜಾತೀಸಿ ।೮೭೮॥ ಆತಾ ವೈಶ್ಯಾಚಿಯೇ ಜಾತೀ । ಉಚಿತ ಜೇ ಮಹಾಮತೀ । ತೇ ಐಕೇ ಗಾ ನಿರುತೀ । ಕ್ರಿಯಾ ಸಾಂಗೋ ।೮೭೯॥

ಕೃಷಿ ಗೌರಕ್ಷ್ಯವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಮ್ ।
ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ।೪೪॥

ತರೀ ಭೂಮಿ ಬೀಜ ನಾಂಗರು । ಯಯಾ ಭಾಂಡವಲಾಚಾ ಆಧಾರು । ಘೇಊನಿ ಲಾಭು ಅಪಾರು । ಮೇಳವಣೇ ಜೇ ।೮೮೦॥ ಕಿಂಬಹುನಾ ಕೃಷೀ ಜಿಣೇ । ಗೋಧನೇ ರಾಖೋನಿ ವರ್ತಣೇ । ಕಾ ಸಮರ್ಘೀಚೇ ವಿಕಣೇ । ಮಹರ್ಘೀವಸ್ತು ।೮೮೧॥ ಯೇತುಲಾಚಿ ಪಾಂಡವಾ । ವೈಶ್ಯಾತೇ ಕರ್ಮಾಚಾ ಮೇಳಾವಾ । ಹಾ ವೈಶ್ಯಜಾತಿಸ್ವಭಾವಾ । ಆಂತುಲಾ ಜಾಣ ।೮೮೨॥ ಆಣಿ ವೈಶ್ಯ ಕ್ಷತ್ರಿಯ ಬ್ರಾಹ್ಮಣ । ಹೇ ದ್ವಿಜನ್ಮೇ ತೀನ್ಹೀ ವರ್ಣ । ಯಯಾಂಚೇ ಜೇ ಶುಶ್ರೂಷಣ । ತೇ ಶೂದ್ರಕರ್ಮ ।೮೮೩॥ ಪೈ ದ್ವಿಜಸೇವೇಪರೌತೇ । ಧಾಂವಣೇ ನಾಹೀ ಶೂದ್ರಾತೇ । ಏವಂ ಚತುರ್ವರ್ಣೋಚಿತೇ । ದಾವಿಲೀ ಕರ್ಮೇ ।೮೮೪॥

ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।
ಸ್ವಕರ್ಮನಿರತಃ ಸಿದ್ಧಿಂ ಯಥಾ ವಿಂದತಿ ತಚ್ಛೃಣು ।೪೫॥

ಆತಾ ಇಯೇಚಿ ವಿಚಕ್ಷಣಾ । ವೇಗಳಾಲಿಯಾ ವರ್ಣಾ । ಉಚಿತ ಜೈಸೇ ಕರಣಾ । ಶಬ್ದಾದಿಕ ।೮೮೫॥ ನಾತರೀ ಜಳದಚ್ಯುತಾ । ಪಾಣಿಯಾ ಉಚಿತ ಸರಿತಾ । ಸರಿತೇಸಿ ಪಂಡುಸುತಾ । ಸಿಂಧು ಉಚಿತು ।೮೮೬॥ ತೈಸೇ ವರ್ಣಾಶ್ರಮ ವಶೇ । ಜೇ ಕರಣೀಯ ಆಲೇ ಅಸೇ । ಗೋರೆಯಾ ಆಂಗಾ ಜೈಸೇ । ಗೋರೇಪಣ ।೮೮೭॥ ತಯಾ ಸ್ವಭಾವವಿಹಿತಾ ಕರ್ಮಾ । ಶಾಸ್ತ್ರಾಚೇನಿ ಮುಖೇ ವೀರೋತ್ತಮಾ । ಪ್ರವರ್ತಾವಯಾಲಾಗೀ ಪ್ರಮಾ । ಅಢಳ ಕೀಜೇ ।೮೮೮॥ ಪೈ ಆಪುಲೇಂಚಿ ರತ್ನ ಥಿತೇ । ಘೇಪೇ ಪಾರಖಿಯಾಚೇನಿ ಹಾತೇ । ತೈಸೇ ಸ್ವಕರ್ಮ ಆಪೈತೇ । ಶಾಸ್ತ್ರೇ ಕರಾವೀ ।೮೮೯॥

ಅಥವಾ ಇದು ಕ್ಷಾತ್ರ ಕರ್ಮವಾಗಿರದೆ, ಸಪ್ತಗುಣ ರೂಪಸಮುದ್ರದಿಂದ ಸುತ್ತುವರೆದ ಪೃಥ್ವಿಯೇ ಇದಾಗಿರುವುದು. ಕ್ಷತ್ರಿಯನು ಇದನ್ನು ಭೋಗಿಸುವನು ।೮೭೬॥

ಅಥವಾ ಸಪ್ತಗುಣರೂಪ ಪ್ರವಾಹದಿಂದ ಕ್ಷತ್ರಿಯ ಕ್ರಿಯಾರೂಪ ಗಂಗೆಯು ಈ ಕ್ಷಾತ್ರ ಪ್ರಕೃತಿಯನ್ನು ಧರಿಸಲು ಸಮುದ್ರವನ್ನು ಕೂಡಿ ಶೋಭಿಸುವಳು ।೮೭೭॥

ಈ ಎಲ್ಲ ಮಾತುಗಳು ಇರಲಿ, ಶೌರ್ಯಾದಿ ಗುಣಾತ್ಮಕ ಕರ್ಮಗಳು ಕ್ಷತ್ರಿಯರ ಸ್ವಾಭಾವಿಕ ಗುಣಗಳಾಗಿವೆ ।೮೭೮॥

ಹೇ ಮಹಾಮತಿಯೇ, ಈಗ ವೈಶ್ಯ ಜಾತಿಗೆ ಯಾವ ಯೋಗ್ಯ ಕರ್ಮಗಳಿವೆ, ಎಂಬುದನ್ನು ನಿನಗೆ ಹೇಳುವೆನು, ಕೇಳು ।೮೭೯॥

ಶ್ಲೋಕಾರ್ಥ :- ವ್ಯವಸಾಯ, ಪಶುಸಂರಕ್ಷಣೆ, ವ್ಯಾಪಾರ, ಇವು ವೈಶ್ಯರಿಗೆ ಸ್ವಭಾವ ಕರ್ಮಗಳು. ಸೇವೆಯನ್ನು ಮಾಡುವುದು, ಶೂದ್ರರಿಗೆ ಸ್ವಭಾವ ಕರ್ಮವಾಗಿದೆ ।೪೪॥

ಹೊಲ, ಬೀಜ, ನೇಗಿಲು ಇತ್ಯಾದಿ ಸಾಹಿತ್ಯಗಳನ್ನು ಕೂಡಿಸಿಕೊಂಡು ಅಪಾರ ಲಾಭವನ್ನು ಗಳಿಸುವುದು ।೮೮೦॥

ಒಟ್ಟಿನಲ್ಲಿ ಒಕ್ಕಲುತನವನ್ನು ಮಾಡಿ ಅಥವಾ ಗೋರಕ್ಷಣೆಯನ್ನು ಮಾಡಿ ಇಲ್ಲವೇ ಸೋವಿ ದರದಲ್ಲಿ ವಸ್ತುಗಳನ್ನು ಖರೀದಿಸಿ ದುಬಾರಿ ದರದಲ್ಲಿ ಮಾರುವುದು ।೮೮೧॥

ಹೇ ಪಾಂಡವನೇ, ವೈಶ್ಯ ಜಾತಿಯವರು ಈ ಪ್ರಕಾರಗಳ ಕರ್ಮಗಳನ್ನು ಮಾಡಿ ಜೀವಿಸಬೇಕು. ಇದೇ ಅವರ ಸ್ವಾಭಾವಿಕ ಧರ್ಮವಾಗಿರುವುದು ।೮೮೨॥

ಮತ್ತು ವೈಶ್ಯ, ಕ್ಷತ್ರಿಯ ಹಾಗೂ ಬ್ರಾಹ್ಮಣ ಈ ಮೂರು ವರ್ಣಗಳಿಗೆ ದ್ವಿಜವೆಂದು ಹೆಸರಿರುವುದು. ಇವರ ಸೇವೆಯನ್ನು ಮಾಡುವುದೇ ಶೂದ್ರ ವರ್ಣದ ಸ್ವಾಭಾವಿಕ ಧರ್ಮವಾಗಿರುವುದು ।೮೮೩॥

ಆದ್ದರಿಂದ ದ್ವಿಜರ ಸೇವೆಯ ಹೊರತಾಗಿ ಶೂದ್ರರಿಗೆ ಬೇರೆ ಕರ್ಮವೇ ಇರುವುದಿಲ್ಲ. ಈ ಪ್ರಕಾರವಾಗಿ ನಿನಗೆ ನಾಲ್ಕೂ ವರ್ಣದ ಕರ್ಮಗಳನ್ನು ಹೇಳಿದೆನು ।೮೮೪॥

ಶ್ಲೋಕಾರ್ಥ :- ಸ್ವಭಾವದಿಂದ ಅವರವರಿಗೆ ನಿಯಮಿತವಾಗಿರುವ ಕರ್ಮಗಳನ್ನು ನಿರ್ವಹಿಸುತ್ತ ಮನುಷ್ಯನು ಉತ್ತಮಸಿದ್ಧಿಯನ್ನು ಪಡೆಯಬಲ್ಲನು. ಆ ವಿಧಾನವನ್ನು ಹೇಳುತ್ತೇನೆ ಕೇಳು ।೪೫॥

ಈಗ ಈ ನಾಲ್ಕು ವರ್ಣಗಳ ಬೇರೆ ಬೇರೆ ಉಚಿತ ಕರ್ಮಗಳನ್ನು ನಿನಗೆ ಸ್ಪಷ್ಟಮಾಡಿ ಹೇಳುವೆನು. ಯಾವ ಪ್ರಕಾರವಾಗಿ ಕರ್ಣಾದಿ ಇಂದ್ರಿಯಗಳಿಗೆ ಶಬ್ದಾದಿಕ ವಿಷಯಗಳು ಯೋಗ್ಯವಾಗುವಂತೆ ।೮೮೫॥

ಅಥವಾ ಮೇಘದಿಂದ ಬಿದ್ದ ಉದಕಕ್ಕೆ ನದಿಯೇ ಯೋಗ್ಯ ಸ್ಥಾನವಾಗಿರುವುದು. ಪಂಡುಸುತನೇ, ನದಿಗೆ ಸಮುದ್ರವೇ ಉಚಿತ ಸ್ಥಾನವಾಗಿರುವುದು ।೮೮೬॥

ವರ್ಣಾಶ್ರಮ ಧರ್ಮದಂತೆ ಯಾವ ಅವಶ್ಯಕ ಕರ್ಮಗಳನ್ನು ಅವರು ಮಾಡಿದರೆ, ಗೌರವರ್ಣವು ಶರೀರಕ್ಕೆ ಶೋಭೆಯನ್ನು ಮಾಡುವಂತೆ, ಆಯಾ ವರ್ಣಗಳಿಗೆ ಅತ್ಯಂತ ಶೋಭೆಯು ಬರುವುದು ।೮೮೭॥

ಹೇ ವೀರೋತ್ತಮನೇ, ಆ ಸ್ವಭಾವಜನ್ಯ ಕರ್ಮಗಳನ್ನು ಶಾಸ್ತ್ರಗಳಲ್ಲಿ ಹೇಳಿದಂತೆ ಆಚರಣೆಯನ್ನು ಮಾಡುವುದರಲ್ಲಿ ತನ್ನ ಬುದ್ಧಿಯನ್ನು ನಿಶ್ಚಯಗೊಳಿಸಬೇಕು ।೮೮೮॥

ಆದಾಗ್ಯೂ, ತನ್ನಲ್ಲಿರುವ ರತ್ನವನ್ನು ರತ್ನ ಪರೀಕ್ಷಕನಿಂದ ಪರೀಕ್ಷಿಸಿಕೊಳ್ಳುವಂತೆ, ತನ್ನ ಎಲ್ಲ ಕರ್ಮಗಳನ್ನು ಶಾಸ್ತ್ರಗಳ ಆಧಾರದಿಂದ ತಿಳಿದುಕೊಳ್ಳಬೇಕು ।೮೮೯॥

ಜೈಸೀ ದಿಠೀ ಅಸೇ ಆಪುಲಿಯಾ ಠಾಯೀ । ಪರೀ ದೀಪೇವೀಣ ಭೋಗ ನಾಹೀ । ಮಾರ್ಗು ನ ಲಾಹತಾ ಕಾಈ । ಪಾಯ ಅಸತಾ ಹೋಯ ?।।೮೯೦।। ಮ್ಹಣೌನಿ ಜ್ಞಾತಿವಶೇ ಸಾಚಾರು । ಸಹಜ ಅಸೇ ಜೋ ಅಧಿಕಾರು । ತೋ ಆಪುಲಾಲಿಯಾ ಶಾಸ್ತ್ರೇ ಗೋಚರು । ಆಪಣ ಕೀಜೇ ।।೮೯೧।। ಮಗ ಘರೀಂಚಾಚಿ ಠೇವಾ । ಜೇವೀ ಡೋಳ್ಯಾ ದಾವೀ ದಿವಾ । ತರೀ ಘೇತಾ ಕಾಯ ಪಾಂಡವಾ । ಆಡಳು ಅಸೇ ?।।೮೯೨।। ತೈಸೇ ಸ್ವಭಾವೇ ಭಾಗಾ ಆಲೇ । ವರೀ ಶಾಸ್ತ್ರೇ ಖರೇ ಕೇಲೇ । ತೇ ವಿಹಿತ ಜೋ ಆಪುಲೇ । ಆಚರೇ ಗಾ ।।೮೯೩।। ಪರೀ ಆಳಸು ಸಾಂಡುನೀ । ಫಳಕಾಮ ದವಡುನೀ । ಆಂಗೇ ಜೀವೇ ಮಾಂಡುನೀ । ತೇಥೇಂಚಿ ಭರು ।।೮೯೪।। ವೋಘೀ ಪಡಿಲೇ ಪಾಣೀ । ನೇಣೇ ಆನಾನೀ ವಾಹಣೀ । ತೈಸಾ ಜಾಯ ಆಚರಣೀ । ವ್ಯವಸ್ಥೌನೀ ।।೮೯೫।। ಅರ್ಜುನಾ ಜೋ ಯಾಪರೀ । ತೇ ವಿಹಿತ ಕರ್ಮ ಸ್ವಯೇ ಕರೀ । ತೇ ಮೋಕ್ಷಾಚ್ಯಾ ಐಲದ್ವಾರೀ । ಪೈಠಾ ಹೋಯ ।।೮೯೬।। ಜೇ ಅಕರಣಾ ಆಣಿ ನಿಷಿದ್ಧಾ । ನ ವಚೇಚಿ ಕಾಂಹೀ ಸಂಬಂಧಾ । ಮ್ಹಣೌನಿ ಭವಾ ವಿರುದ್ಧಾ । ಮುಕಲಾ ತೋ ।।೮೯೭।। ಆಣಿ ಕಾಮ್ಯ ಕರ್ಮಾಕಡೇ । ನ ಪರತೇಚಿ ಜೇಥ ಕೋಡೇ । ತೇಥ ಚಂದನಾಚೇಹೀ ಖೋಡೇ । ನ ಲೇಚಿ ತೋ ।।೮೯೮।। ಯೇರ ನಿತ್ಯ ಕರ್ಮ ತಂವ । ಫಲತ್ಯಾಗೇ ವೇಂಚಿಲೇ ಸರ್ವ । ಮ್ಹಣೌನಿ ಮೋಕ್ಷಾಚಿ ಶೀಂವ । ಠಾಕೂ ಲಾಹೇ ।।೮೯೯।। ಐಸೇನಿ ಶುಭಾಶುಭೀ ಸಂಸಾರೀ । ಸಾಂಡಿಲಾ ತೋ ಅವಧಾರೀ । ವೈರಾಗ್ಯಮೋಕ್ಷದ್ವಾರೀ । ಉಭಾ ಠಾಕೇ ।।೯೦೦।। ಜೇ ಸಕಳ ಭಾಗ್ಯಾಚೀ ಸೀಮಾ । ಮೋಕ್ಷಲಾಭಾಚೀ ಜೇ ಪ್ರಮಾ । ನಾನಾ ಕರ್ಮಮಾರ್ಗಶ್ರಮಾ । ಶೇವಟು ಜೇಥ ।।೯೦೧।। ಮೋಕ್ಷಫಳೇ ದಿಧಲೀ ವೋಲ । ಜೇ ಸುಕೃತತರೂಚೇ ಫೂಲ । ತಯೇ ವೈರಾಗ್ಯೀ ಠೇವೀ ಪಾಊಲ । ಭಂವರು ಜೈಸಾ ।।೯೦೨।। ಪಾಹೀ ಆತ್ಮಜ್ಞಾನಸುದಿನಾಚಾ । ವಾಧಾವಾ ಸಾಂಗತಯಾ ಅರುಣಾಚಾ । ಉದಯೋ ತ್ಯಾ ವೈರಾಗ್ಯಾಚಾ । ಠಾವೋ ಪಾವೇ ।।೯೦೩।। ಕಿಂಬಹುನಾ ಆತ್ಮಜ್ಞಾನ । ಜೇಣೇ ಹಾತಾ ಯೇ ನಿಧಾನ । ತೇ ವೈರಾಗ್ಯ ದಿವ್ಯಾಂಜನ । ಜೀವೇ ಲೇ ತೋ ।।೯೦೪।। ಐಸೀ ಮೋಕ್ಷಾಚೀ ಯೋಗ್ಯತಾ । ಸಿದ್ಧೀ ಜಾಯ ತಯಾ ಪಂಡುಸುತಾ । ಅನುಸರೋನಿ ವಿಹಿತಾ । ಕರ್ಮಾ ಯಯಾ ।।೯೦೫।।

ತನ್ನಲ್ಲಿ ದೃಷ್ಟಿಯಿದ್ದರೂ ಬೆಳಕಿಲ್ಲದೇ, ಅದರ ಉಪಯೋಗವಾಗುವುದಿಲ್ಲ ಮತ್ತು ಮಾರ್ಗವು ಸಿಗದಿದ್ದಾಗ ಕಾಲುಗಳಿದ್ದರೂ, ಅದರ ಉಪಯೋಗವಾಗುವುದೇ ? ।೯೦॥

ಆದ್ದರಿಂದ ಜಾತಿ ಪ್ರಕಾರವಾಗಿ ಯಾವ ಯಾವ ಯೋಗ್ಯ ಅಧಿಕಾರವಿರುವಂತೆ ಅವನು ತನ್ನ ಕಾರ್ಯಗಳನ್ನು ಶಾಸ್ತ್ರಪ್ರಮಾಣದಿಂದ ತಿಳಿದುಕೊಳ್ಳಬೇಕು ।೯೧॥

ಆಗ ಪಾಂಡವನೇ, ದೀಪವು ತನ್ನ ಮನೆಯಲ್ಲಿನ ನಿಧಿಯನ್ನು ತನ್ನ ಕಣ್ಣಿಗೆ ತೋರಿಸಿದಾಗ ಅದನ್ನು ಸ್ವೀಕರಿಸಲು ಪ್ರತಿಬಂಧವಿರುವುದೇ ? ।೯೨॥

ಅದರಂತೆ ಸಹಜವಾಗಿ ತನ್ನ ಭಾಗಕ್ಕೆ ಬಂದದ್ದನ್ನು ಮತ್ತು ಶಾಸ್ತ್ರವು ಸಿದ್ಧಮಾಡಿದ ಯಾವ ವಿಹಿತ ಕರ್ಮಗಳ ಆಚರಣೆಯನ್ನು ಮಾಡುವವನು ।೯೩॥

ಆದರೆ ಆಲಸ್ಯವನ್ನು ಬಿಟ್ಟು ಹಾಗೂ ಫಲದ ಇಚ್ಛೆಯನ್ನು ತ್ಯಜಿಸಿ ಬಹಳ ಹರುಷಯುಕ್ತನಾಗಿ ಶರೀರದಿಂದ ಜೀವದಿಂದ ಅಲ್ಲಿ ತನ್ನ ಎಲ್ಲ ವೇಳೆಯನ್ನು ಕಳೆಯುವನು ।೯೪॥

ನೀರು ಪ್ರವಾಹದಲ್ಲಿ ಬಿದ್ದಾಗ ಸಿಕ್ಕಸಿಕ್ಕಲ್ಲಿ ಹೋಗುವುದಿಲ್ಲ. ಅದರಂತೆ ಆತನ ಆಚರಣೆಯು ಯಥಾ ಶಾಸ್ತ್ರವಾಗಿರುವುದು ।೯೫॥

ಪಾಂಡವನೇ, ಈ ಪ್ರಕಾರವಾಗಿ ಯಾವನು ವಿಹಿತ ಕರ್ಮಗಳನ್ನು ಸ್ವತಃ ಆಚರಿಸುವನೋ, ಆ ಪುರುಷನಿಗೆ ಮೋಕ್ಷದ ಈಚೆಗೆ ಇರುವ ವೈರಾಗ್ಯದ ದ್ವಾರವು ಸಿಗುವುದು ।೯೬॥

ಯಾವ ಅಕರಣ ಹಾಗೂ ನಿಷಿದ್ಧ ಈ ಕರ್ಮಗಳ ಸಂಬಂಧ ಬೆಳೆಸುವುದಿಲ್ಲ. ಆದ್ದರಿಂದ ಆತ್ಮಪ್ರಾಪ್ತಿಯ ವಿರುದ್ಧವಾಗಿರುವ ಸಂಸಾರದ ಭಯದಿಂದ ಮುಕ್ತನಾಗು ವನು ।೯೭॥

ಮತ್ತು ಬೇಡಿಯು ಚಂದನ ಕಟ್ಟಿಗೆಯದ್ದಾದರೂ, ಅದನ್ನು ಯಾರೂ ಕಾಲಲ್ಲಿ ತೊಡಗಿಸುವುದಿಲ್ಲ. ಅದರಂತೆ ಕಾಮ್ಯ ಕರ್ಮದತ್ತ ಕೌತುಕದಿಂದಲಾದರೂ ನೋಡಲಾರನು ।೯೮॥

ಹಾಗೆಯೇ ಎರಡನೆಯದಾದ ನಿತ್ಯ ಕರ್ಮದ ಫಲತ್ಯಾಗವನ್ನು ಮಾಡಿ ಅದನ್ನು ಮುಗಿಸುವನು. ಆದರಿಂದ ಅವನು ಮೋಕ್ಷದ ಸೀಮೆಗೆ ಬಂದು ಮುಟ್ಟುವನು ।೯೯॥

ಈ ರೀತಿಯಲ್ಲಿ ಯುಕ್ತಿಯಿಂದ ಕರ್ಮಗಳ ನಿರಶನ ಮಾಡಿ ಶುಭಾಶುಭ ಸಂಸಾರದಿಂದ ಆತನು ಬಿಡುಗಡೆಯಾಗಿ ಮೋಕ್ಷದ ದ್ವಾರವಾದ ವೈರಾಗ್ಯದಲ್ಲಿ ಬಂದು ನಿಲ್ಲುವನು ।೯೦೦॥

ಯಾವ ವೈರಾಗ್ಯವು ಇದು ಎಲ್ಲ ಭಾಗ್ಯಗಳ ಸೀಮೆಯಾಗಿರುವುದು. ಹಾಗೂ ಮೋಕ್ಷ ಲಾಭದ ನಿಶ್ಚಯ ಅಥವಾ ಕರ್ಮ ಮಾರ್ಗದ ಶ್ರಮ ಪರಿಹಾರವಾಗುವ ಸ್ಥಾನವಾಗಿರುವುದು ।೯೦೧॥

ಯಾವುದಕ್ಕೆ ಮೋಕ್ಷಫಲವು ಜಾಮೀನವಾಗಿರುವುದು. ಅಥವಾ ಅದು ಸತ್ಕರ್ಮರೂಪ ವೃಕ್ಷದ ಹೂವಾಗಿರುವುದು. ಇಂಥ ವೈರಾಗ್ಯದಲ್ಲಿ ಸಾಧಕನು ಭ್ರಮರನಂತೆ ಮೆಲ್ಲನೇ ಹೆಜ್ಜೆ ಇಡುವನು ।೯೦೨॥

ಇಲ್ಲಿ ನೋಡು, ಸೂರ್ಯೋದಯದ ವಾರ್ತೆಯನ್ನು ಹೇಳಲು ಅರುಣೋದಯವಾಗಿರುವುದು. ಅದರಂತೆ ಆತ್ಮಜ್ಞಾನರೂಪ ಸುದಿನದ ಉದಯ ಸೂಚಿಸುವ ಈ ವೈರಾಗ್ಯವಾಗಿರುವುದು ।೯೦೩॥

ಹೆಚ್ಚಿಗೇನು ಹೇಳಬೇಕು ? ಆತ್ಮಜ್ಞಾನರೂಪ ನಿಧಿಯು ಕೈಗೆ ಸಿಗಲು ಈ ವೈರಾಗ್ಯವೆಂಬುದು ದಿವ್ಯಾಂಜನವಾಗಿದೆ. ಸಾಧಕರು ಜೀವಭಾವದಿಂದ ಬುದ್ಧಿರೂಪ ಕಣ್ಣಿನಲ್ಲಿ ಹಾಕುವರು ।೯೦೪॥

ಪಂಡುಸುತನೇ, ಈ ಪ್ರಕಾರವಾಗಿ ವಿಹಿತ ಕರ್ಮಗಳಿಗೆ ಅನುಸರಿಸಿ ಆಚರಿಸಿದರೆ ಆತನಿಗೆ ಮೋಕ್ಷಪ್ರಾಪ್ತಿಯ ಯೋಗ್ಯತೆ ಬರುವುದು ।೯೦೫॥

ಹೇ ವಿಹಿತ ಕರ್ಮ ಪಾಂಡವಾ । ಆಪುಲಾ ಅನನ್ಯ ವೋಲಾವಾ । ಆಣಿ ಹೇಚಿ ಪರಮ ಸೇವಾ । ಮಜ ಸರ್ವಾತ್ಮಕಾಚೀ ॥೯೦೬॥ ಪೈ ಆಘವಾಚಿ ಭೋಗೇಂಸೀ । ಪತಿವ್ರತಾ ಕ್ರೀಡೇ ಪ್ರಿಯೇಂಸೀ । ಕೀ ತಯಾಚೀ ನಾಮೇ ಜೈಸೀ । ತಪೇ ತಿಯಾ ಕೇಲೀ ॥೯೦೭॥ ಕಾ ಬಾಳಕಾ ಏಕೀ ಮಾಯೇ । ವಾಂಚೋನಿ ಜಿಣೇ ಕಾಯ ಆಹೇ । ಮ್ಹಣೌನಿ ಸೇವಿಜೇ ಕೀ ತೋ ಹೋಯೇ । ಪಾಟಾಚಾ ಧರ್ಮು ॥೯೦೮॥ ನಾನಾ ಪಾಣೀ ಮ್ಹಣೌನಿ ಮಾಸಾ । ಗಂಗಾ ನ ಸಾಂಡಿತಾ ಜೈಸಾ । ಸರ್ವ ತೀರ್ಥ ಸಹವಾಸಾ । ವರಪಡಾ ಜಾಲಾ ॥೯೦೯॥ ತೈಸೇ ಆಪುಲಿಯಾ ವಿಹಿತಾ । ಉಪಾವೋ ಅಸೇ ನ ವಿಸಂಬಿತಾ । ಐಸಾ ಕೀಜೇ ಕೀ ಜಗನ್ನಾಥಾ । ಆಭಾರು ಪಡೇ ॥೯೧೦॥ ಅಗಾ ಜಯಾ ಜೇ ವಿಹಿತ । ತೇ ಈಶ್ವರಾಚೇ ಮನೋಗತ । ಮ್ಹಣೌನಿ ಕೇಲಿಯಾ ನಿಭ್ರಾಂತ । ಸಾಂಪಡೇಚಿ ತೋ ॥೯೧೧॥ ಪೈ ಜೀವಾಚೇ ಕಸೀ ಉತರಲೀ । ತೇ ದಾಸೀ ಕೀ ಗೋಸಾಂವಿಣ ಜಾಲೀ । ಸಿಸೇ ವೇಂಚಿ ತಯಾ ಮವಿಲೀ । ವಹೀ ಜೇವೀ ॥೯೧೨॥ ತೈಸೇ ಸ್ವಾಮೀಚಿಯಾ ಮನೋಭಾವಾ । ನ ಚುಕಿಜೇ ಹೇಚಿ ಪರಮಸೇವಾ । ಯೇರ ತೇ ಗಾ ಪಾಂಡವಾ । ವಣಿಜ್ಯ ಕರಣೇ ॥೯೧೩॥

ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥೪೬॥

ಮ್ಹಣೌನಿ ವಿಹಿತ ಕ್ರಿಯಾ ಕೇಲೀ । ನವ್ಹೇ ತಯಾಚೀ ಖೂಣ ಪಾಳಿಲೀ । ಜಯಾ ಪಾಸೂನಿ ಕಾ ಆಲೀ । ಆಕಾರಾ ಭೂತೇ ॥೯೧೪॥ ಜೋ ಅವಿದ್ಯೇಚಿಯಾ ಚಿಂಧಿಯಾ । ಗುಂಡೂನಿ ಜೀವ ಬಾಹುಲಿಯಾ । ಖೇಳವಿತಸೇ ತಿಗುಣಿಯಾ । ಅಹಂಕಾರರಜ್ಜೂ ॥೯೧೫॥ ಜೇಣೇ ಜಗ ಹೇ ಸಮಸ್ತ । ಆಂತ ಬಾಹೇರೀ ಪೂರ್ಣಭರಿತ । ಜಾಲೇ ಆಹೇ ದೀಪಜಾತ । ತೇಜೇ ಜೈಸೇ ॥೯೧೬॥ ತಯಾ ಸರ್ವಾತ್ಮಕಾ ಈಶ್ವರಾ । ಸ್ವಕರ್ಮಕುಸುಮಾಂಚೀ ವೀರಾ । ಪೂಜಾ ಕೇಲೀ ಹೋಯ ಅಪಾರಾ । ತೋಷಾಲಾಗೀ ॥೯೧೭॥ ಮ್ಹಣೌನಿ ತಿಯೇ ಪೂಜೇ । ರಿಝಲೇನಿ ಆತ್ಮರಾಜೇ । ವೈರಾಗ್ಯಸಿದ್ಧೀ ದೇಈಜೇ । ಪಸಾಯ ತಯಾ ॥೯೧೮॥ ಜಿಯೇ ವೈರಾಗ್ಯದಶೇ । ಈಶ್ವರಾಚೇನಿ ವೇಧವಶೇ । ಹೇ ಸರ್ವಹೀ ನಾವಡೇ ಜೈಸೇ । ವಾಂತ ಹೋಯ ॥೯೧೯॥ ಪ್ರಾಣನಾಥಾಚಿಯಾ ಆಧೀ । ವಿರಹಿಣೀತೇ ಜಿಣೇಂಹೀ ಬಾಧೀ । ತೈಸೇ ಸುಖಜಾತ ತ್ರಿಶುದ್ಧೀ । ದುಃಖಚಿ ಲಾಗೇ ॥೯೨೦॥

ಹೇ ಪಾಂಡವನೇ, ವಿಹಿತ ಕರ್ಮವು ಇದು ನಮ್ಮ ಕಲ್ಯಾಣದ ಜೀವ್ಹಾಳವೇ ಆಗಿರುವುದು. ಅದನ್ನೇ ಆಚರಿಸುವುದು, ಇದು ನನ್ನ ಸರ್ವಾತ್ಮಕ ಈಶ್ವರನ ಪರಮ ಸೇವೆಯಾಗಿರುವುದು ॥೯೦೬॥

ಸಂಪೂರ್ಣ ಭೋಗಗಳನ್ನು ಪತಿವ್ರತೆ ಸ್ತ್ರೀಯು ತನ್ನ ಪ್ರೀಯ ಪತಿಯಲ್ಲಿಯೇ ಕ್ರೀಡಿಸುವಳು. ಇದೇ ಆಕೆಯ ತಪಸ್ಸಾಗಿರುವುದು ॥೯೦೭॥

ಅಥವಾ ಕೂಸಿಗೆ ತನ್ನ ತಾಯಿ ಹೊರತಾಗಿ ಬದುಕಲು ಬೇರೆ ಸಾಧನವೇ ಇಲ್ಲ. ಆದ್ದರಿಂದ ಆಕೆಯ ಸೇವೆಯನ್ನು ಮಾಡಿದಾಗ, ಅದರ ಕಲ್ಯಾಣವಾಗುವುದು. ಅದರಂತೆ ಸ್ವಧರ್ಮ ಆಚರಣೆಯು ಮುಖ್ಯ ಧರ್ಮವಾಗಿದೆ ॥೯೦೮॥

ಅಥವಾ ಕೇವಲ ನೀರೆಂದು ತಿಳಿದು ಗಂಗೆಯಲ್ಲಿರುವ ಮೀನಕ್ಕೆ ಅಲ್ಲಿರುವುದರಿಂದ ಎಲ್ಲ ತೀರ್ಥಗಳ ಸಹಜವಾಗಿ ಲಾಭವಾಗುತ್ತದೆ ॥೯೦೯॥

ಅದರಂತೆ ತನ್ನ ವಿಹಿತ ಕರ್ಮದ ಆಚರಣೆಯನ್ನು ಮಾಡದ ಹೊರತಾಗಿ ಬೇರೆ ಉಪಾಯವೇ ಇರುವುದಿಲ್ಲ. ಹಾಗೂ ಈ ನಿಶ್ಚಯದಿಂದ ಇದರ ಆರಾಧನೆ ಮಾಡುವುದರಿಂದ ಜಗನ್ನಾಥ ಈಶ್ವರನ ಮೇಲೆ ನಮ್ಮ ಭಾರ ಬೀಳುವುದು ॥೯೧೦॥

ಅರೇ, ಯಾರಿಗೆ ಯಾವ ವಿಹಿತ ಕರ್ಮವನ್ನು ನೇಮಿಸಿರುವುದೋ, ಅದನ್ನು ಅವನು ಮಾಡುವುದೇ ಈಶ್ವರನ ಮನೋಗತವಾಗಿದೆ. ಆದ್ದರಿಂದಲೇ ಆ ಕರ್ಮಗಳನ್ನು ಮಾಡುವುದರಿಂದ ನಿಃಸಂಶಯವಾಗಿ ಈಶ್ವರ ಪ್ರಾಪ್ತಿಯಾಗುವುದು ॥೯೧೧॥

ದಾಸಿಯಾಗಿದ್ದರೂ ಸಹ ರಾಜನ ಪರೀಕ್ಷೆಯಲ್ಲಿ ತೇರ್ಗಡೆಯಾದರೆ, ಆಕೆಯೇ ಎಲ್ಲರ ಸ್ವಾಮಿನಿಯಾಗುವಳು. ಅಥವಾ ಸ್ವಾಮಿ ಕಾರ್ಯಾರ್ಥವಾಗಿ ಯಾವನು ತನ್ನ ಶಿರವನ್ನು ಕೊಡುವನೋ, ಆತನಿಗೆ ಸ್ವಾಮಿಯು ಇನಾಮ ಪತ್ರಕೊಟ್ಟು ದಾಖಲೆಯಲ್ಲಿಡುವನು ॥೯೧೨॥

ಅದರಂತೆ ಸ್ವಾಮಿಯ ಮನೋಭಾವದಂತೆ ನಡೆಯುವುದೇ ಪರಮಸೇವೆಯಾಗಿರುವುದು ಮತ್ತು ಇದರ ಹೊರತಾದ ಕಾರ್ಯವು ಹೇ ಪಾಂಡವನೇ, ಅದು ಕೇವಲ ವ್ಯಾಪಾರವಾಗಿರುವುದು ॥೯೧೩॥

ಶ್ಲೋಕಾರ್ಥ :- ಈ ಚರಾಚರಭೂತಗಳಿಗೆ ಯಾವನು ಪ್ರಧಾನ ಸಂಚಾಲಕನೋ, ಯಾವನು ಈ ಸರ್ವದರಲ್ಲಿ ತುಂಬಿ ತುಳುಕುತ್ತಿರುವನೋ, ಆ ಪರಮೇಶ್ವರನನ್ನು ಅವನವನ ವಿಹಿತಕರ್ಮಗಳಿಂದ ಆರಾಧಿಸಿ ಮನುಷ್ಯನು ಸಿದ್ಧಿಯನ್ನು ಪಡೆಯುತ್ತಾನೆ ॥೪೬॥

ಆದ್ದರಿಂದ ವಿಹಿತ ಕರ್ಮ ಮಾಡುವುದರಿಂದ ಕರ್ಮ ಮಾಡಿದಂತಾಗುವುದಿಲ್ಲ. ಆದರೆ ಅದು ಸರ್ವಭೂತಗಳನ್ನು ಉತ್ಪನ್ನ ಮಾಡಿರುವ ಪರಮಾತ್ಮನ ಮನೋಗತವನ್ನು ಪಾಲಿಸಿದಂತಾಗುವುದು ॥೯೧೪॥

ಪರಮಾತ್ಮನು ಅಜ್ಞಾನರೂಪ ಚಿಂದಿಗಳನ್ನು ಸುತ್ತಿ ಜೀವರೂಪ ಗೊಂಬೆಗಳನ್ನು ತಯಾರಿಸುವನು ಮತ್ತು ಮೂರು ಗುಣರೂಪ ಮೂರು ಪದರಿನ ಅಹಂಕಾರರೂಪ ಸೂತ್ರದಿಂದ ಆಡಿಸುವನು ॥೯೧೫॥

ದೀಪವು ಪ್ರಕಾಶದಿಂದ ಒಳಹೊರಗೆ ತುಂಬಿಕೊಂಡಂತೆ ಪರಮಾತ್ಮನು ಈ ಜಗತ್ತಿನ ಒಳ ಹೊರಗೆ ಓತಪ್ರೋತವಾಗಿ ತುಂಬಿಕೊಂಡಿರುವನು ॥೯೧೬॥

ಹೇ ವೀರನೇ, ಆ ಸರ್ವಾತ್ಮಕ ಈಶ್ವರನ ಸ್ವಕರ್ಮರೂಪ ಪುಷ್ಪದಿಂದ ಪೂಜಿಸಿದರೆ, ಆ ಪೂಜೆಯಿಂದ ಪರಮಾತ್ಮನು ಸಂತೋಷಪಡುವನು ॥೯೧೭॥

ಆದ್ದರಿಂದ ಈ ಪೂಜೆಯಿಂದ ಆತ್ಮ ರಾಜನು ಪ್ರಸನ್ನನಾಗಿ ಭಕ್ತನಿಗೆ ವೈರಾಗ್ಯವನ್ನು ದಯಪಾಲಿಸುವನು. ಇದೇ ಆತನ ಭಕ್ತನಿಗೆ ಕೊಡುವ ನಿಜವಾದ ಪ್ರಸಾದವಾಗಿದೆ ॥೯೧೮॥

ಈ ವೈರಾಗ್ಯ ದಶೆಯು ಪ್ರಾಪ್ತವಾದ ಮೇಲೆ ಆತನಿಗೆ ಈಶ್ವರನ ಮೇಲೆ ಅತ್ಯಂತ ಪ್ರೇಮ ಉಂಟಾಗಿ ಆತನು ಎಲ್ಲ ಸಂಸಾರವನ್ನು ವಾಂತಿಯಂತೆ ತಿಳಿಯುವನು ॥೯೧೯॥

ತನ್ನ ಪ್ರೀತಿಯ ಪತಿಯ ವಿಯೋಗದಿಂದ ವಿರಹಿಣಿ ಸ್ತ್ರೀಯಳಿಗೆ ಜೀವಂತವಾಗಿ ಇರಲು ಸಹ ಬೇಡವಾಗುವಂತೆ, ಸಂಸಾರದ ಎಲ್ಲ ಸುಖಗಳು ಆತನಿಗೆ ನಿಜವಾಗಿಯೂ ದುಃಖವಾಗಿ ಕಾಣುವುವು ॥೯೨೦॥

ಸಮ್ಯಕ್‌ಜ್ಞಾನ ನುದ್ಯೆಜತಾ । ವೇಧೇಂಚಿ ತನ್ಮಯತಾ । ಉಪಜೇ ಐಸೀ ಯೋಗ್ಯತಾ । ಬೋಧಾಚಿ ಲಾಹೇ ।೯೨೧॥ ಮ್ಹಣೌನಿ ಮೋಕ್ಷಲಾಭಾಲಾಗೀ । ಜೋ ವ್ರತೇ ವಾಹಾತಸೇ ಆಂಗೀ । ತೇಣೇ ಸ್ವಧರ್ಮು ಆಸ್ಥಾ ಚಾಂಗೀ । ಅನುಷ್ಠಾವಾ ।೯೨೨॥

ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।
ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ।೪೭॥

ಅಗಾ ಆಪಲಾ ಹಾ ಸ್ವಧರ್ಮು । ಆಚರಣೇ ಜರೀ ವಿಷಮು । ತರೀ ಪಾಹಾವಾ ತೋ ಪರಿಣಾಮು । ಫಳೇಲ ಜೇಣೇ ।೯೨೩॥ ಜೈ ಸುಖಾಲಾಗಿ ಆಪಣಪಯಾ । ನಿಂಬಚಿ ಆಥೀ ಧನಂಜಯಾ । ತೈ ಕಡೂವಟಪಣಾ ತಯಾಚಿಯಾ । ಉಬಗಿಜೇನಾ ।೯೨೪॥ ಫಳಣಯಾ ಐಲೀಕಡೇ । ಕೇಳೀತೇ ಪಾಹತಾ ಆಸ ಮೋಡೇ । ಐಸೀ ತ್ಯಜೀಲೀ ತರೀ ಜೋಡೇ । ತೈಸೇ ಕೇ ಗೋಮಟೇ ।೯೨೫॥ ತೇವೀ ಸ್ವಧರ್ಮು ಸಾಂಕಡು । ದೇಖೋನಿ ಕೇಲಾ ಜರೀ ಕಡು । ತರೀ ಮೋಕ್ಷಸುರವಾಡು । ಅಂತರಲಾ ಕೀ ।೯೨೬॥ ಆಣಿ ಆಪುಲೀ ಮಾಯೇ । ಕುಬ್ಜ ಜರೀ ಆಹೇ । ತರೀ ಜಿಯೇ ತೇ ನೋಹೇ । ಸ್ನೇಹ ಕುರ್ಢೀ ಕೀ ।೯೨೭॥ ಯೇರಿ ಜಿಯಾ ಪರಾವಿಯಾ । ರಂಭೇಹೂನಿ ಬರವಿಯಾ । ತಿಯಾ ಕಾಯಾ ಕರಾವಿಯಾ । ಬಾಳಕೇ ತೇಣೇ ? ।೯೨೮॥ ಅಗಾ ಪಾಣಿಯಾಹೂನಿ ಬಹುವೇ । ತುಪೀ ಗುಣ ಕೀರ ಆಹೇ । ಪರೀ ಮೀನಾ ಕಾಯ ಹೋಯೇ । ಅಸಣೇ ತೇಥ ।೯೨೯॥ ಪೈ ಆಘವಿಯಾ ಜಗಾ ಜೇ ವಿಖ । ತೇ ವಿಖ ಕೀಡಿಯಾ ಪೀಯೂಖ । ಆಣಿ ಜಗಾ ಗುಳ ತೇ ದೇಖ । ಮರಣ ತಯಾ ।೯೩೦॥ ಮ್ಹಣೌನಿ ಜೇ ವಿಹಿತಿ ಜಯಾ ಜೇಣೇ । ಫಿಟೇ ಸಂಸಾರಾಚೇ ಧರಣೇ । ಕ್ರಿಯಾ ಕಠೋರ ತರ್ಹಿ ತೇಣೇ । ತೇಚಿ ಕರಾವೀ ।೯೩೧॥ ಯೇರಾ ಪರಾಚಾರಾ ಬರವಿಯಾ । ಐಸೇ ಹೋಈಲ ಟೇಂಕಲೇಯಾ । ಪಾಯಾಂಚೇ ಚಾಲಣೇ ಡೋಇಯಾ । ಕೇಲೇ ಜೈಸೇ ।೯೩೨॥ ಯಾಲಾಗೀ ಕರ್ಮ ಆಪುಲೇ । ಜೇ ಜಾತಿಸ್ವಭಾವೇ ಅಸೇ ಆಲೇ । ತೇ ಕರೀ ತೇಣೇ ಜಿಂತಿಲೇ । ಕರ್ಮಬಂಧಾತೇ ।೯೩೩॥ ಆಣಿ ಸ್ವಧರ್ಮುಚಿ ಪಾಳಾವಾ । ಪರಧರ್ಮು ತೋ ಗಾಳಾವಾ । ಹಾ ನೇಮುಹೀ ಪಾಂಡವಾ । ನ ಕೀಜೇಚಿ ಪೈ ಗಾ ? ।೯೩೪॥ ತರೀ ಆತ್ಮಾ ದೃಷ್ಟ ನೋಹೇ । ತಂವ ಕರ್ಮ ಕರಣೇ ಕಾ ಠಾಯೇ ? । ಆಣಿ ಕರಣೇ ತೇಥ ಆಹೇ । ಆಯಾಸು ಆಧೀ ।೯೩೫॥

ಅಪರೋಕ್ಷ ಜ್ಞಾನವಾಗುವ ಮೊದಲು ಆತನಿಗೆ ಧ್ಯಾನದಿಂದಲೇ ತನ್ಮಯತೆಯುಂಟಾಗುವುದು. ಇಷ್ಟೊಂದು ಬೋಧೆಯಲ್ಲಿ ಶ್ರೇಷ್ಠತೆ ಇರುವುದು ||೯೨೧||

ಆದಕಾರಣ, ಯಾರ ಮನದಲ್ಲಿ ಮೋಕ್ಷ ಪ್ರಾಪ್ತಿಯಾಗಬೇಕೆಂಬ ಅಪೇಕ್ಷೆ ಇದೆಯೋ, ಅವನು ಸ್ವಧರ್ಮವನ್ನು ಪ್ರೇಮದಿಂದ ಆಚರಿಸಬೇಕು ||೯೨೨||

ಶ್ಲೋಕಾರ್ಥ :- ಪರಧರ್ಮಾನುಷ್ಠಾನಕ್ಕಿಂತ, ಎಂಥದ್ದಾದರೂ ಸ್ವಧರ್ಮಾನುಷ್ಠಾನ ಮೇಲು, ತನ್ನ ಸ್ವಭಾವಕ್ಕೆ ಯೋಗ್ಯವಾದ ಕರ್ಮವನ್ನು ಮಾಡುವವನು ಪಾಪವನ್ನು ಪಡೆಯುವುದಿಲ್ಲ ||೪೭||

ಅರೇ, ತನ್ನ ಧರ್ಮವು ಆಚರಿಸಲು ಕಠಿಣವಾಗಿದ್ದರೂ, ಅದರಿಂದ ಪರಿಣಾಮದ ಫಲಪ್ರಾಪ್ತಿಯ ಕಡೆಗೆ ಲಕ್ಷ್ಯವಿಡಬೇಕು ||೯೨೩||

ಹೇ ಧನಂಜಯನೇ, ಕಹಿಯಾದ ಬೇವಿನತಪ್ಪಲು ಸೇವಿಸುವುದರಿಂದ ತನಗೆ ಸುಖವಾಗುವುದಿದ್ದರೆ, ಆ ಕಹಿಯಿಂದ ಬೇಸರಪಡಬಾರದು ||೯೨೪||

ಈಯದ ಮೊದಲು ಬಾಳೆಗಿಡವನ್ನು ಕಂಡಾಗ ನಿರಾಶೆ ಆಗುವುದು. ಅದನ್ನು ಕಡಿದು ಒಗೆದರೆ ಅದರಿಂದ ಉತ್ತಮ ಫಲಗಳು ಎಲ್ಲಿಂದ ಸಿಗಬೇಕು ? ||೯೨೫||

ಅದರಂತೆ ಸ್ವದರ್ಮವು ಆಚರಿಸಲಿಕ್ಕೆ ಕಠಿಣವಾಗಿದೆ ಎಂದು, ಅದರ ತ್ಯಾಗವನ್ನು ಮಾಡಿದರೆ ಅವನು ಮೋಕ್ಷಸುಖದಿಂದ ದೂರಾಗುವನು ||೯೨೬||

ಮತ್ತು ತಾಯಿಯು ಕುರೂಪಳಾಗಿದ್ದರೂ, ಆಕೆಯ ಪ್ರೇಮದಿಂದ ನಾವು ಬದುಕುತ್ತೇವೆ. ಆಕೆಯ ಪ್ರೇಮವು ಡೊಂಕಾಗಿರುವುದಿಲ್ಲ ||೯೨೭||

ಇದಲ್ಲದೇ (ತಾಯಿಯ ಹೊರತಾದ) ಬೇರೆ ಸ್ತ್ರೀಯು ರಂಭೆಗಿಂತಲೂ ಸುಂದರಳಾಗಿದ್ದರೆ, ಬಾಲಕನಿಗೆ ಆಕೆಯಿಂದ ಏನು ಮಾಡಬೇಕಾಗಿದೆ ? ||೯೨೮||

ಅರೇ, ನೀರಿಗಿಂತ ತುಪ್ಪವು ಎಷ್ಟೋ ಗುಣವುಳ್ಳದ್ದಾಗಿದೆ, ಇದು ನಿಜ. ಆದರೆ ಮೀನಿಗೆ ತುಪ್ಪದಲ್ಲಿ ಇಟ್ಟರೆ ಅದು ಬದುಕಿ ಉಳಿದೀತೆ ? ||೯೨೯||

ಇಲ್ಲಿ ನೋಡು, ಬಚನಾಗವು ಎಲ್ಲ ಜಗತ್ತಿಗೆ ವಿಷವಾಗಿದೆ, ಅದೇ ಅದರಲ್ಲಿಯ ಹುಳಕ್ಕೆ ಅಮೃತವಾಗಿದೆ ಮತ್ತು ಬೆಲ್ಲವು ಎಲ್ಲ ಜಗತ್ತಿಗೆ ಸಿಹಿಯಾಗಿದೆ, ಅದೇ ಆ ಹುಳಕ್ಕೆ ಮೃತ್ಯುವಿದೆ ||೯೩೦||

ಆದ್ದರಿಂದ ಯಾರಿಗೆ ಯಾವ ವಿಹಿತ ಕರ್ಮ ಹೇಳಿದ್ದನ್ನು ಆಚರಿಸುವುದರಿಂದ ಸಂಸಾರದ ಬಂಧನವು ಮುರಿಯುವುದು. ಅದು ಎಷ್ಟೇ ಕಷ್ಟಸಾಧ್ಯವಾಗದಿದ್ದರೂ ಅವನು ಅದನ್ನೇ ಆಚರಿಸಬೇಕು ||೯೩೧||

ಆದರೆ ಅದೇ ಬೇರೆಯವರ ಧರ್ಮವು ಉತ್ತಮವೆಂದು ಆಚರಿಸಿದರೆ, ಕಾಲಿನಿಂದ ನಡೆಯುವುದನ್ನು ಬಿಟ್ಟು ತಲೆಯಿಂದ ನಡೆದಂತೆ ಆಗಿ ದುಃಖಕ್ಕೆ ಮಾತ್ರ ಕಾರಣವಾಗುವುದು ||೯೩೨||

ಆದಕಾರಣ, ತನ್ನ ಜಾತಿ ಸ್ವಭಾವಕ್ಕನುಸಾರವಾಗಿ ತನ್ನ ಭಾಗಕ್ಕೆ ಯಾವ ಕರ್ಮವು ಬಂದಿದೆಯೋ, ಅದನ್ನು ಯಾರು ಆಚರಿಸುವರೋ, ಆತನು ಕರ್ಮ ಬಂಧನವನ್ನು ಜಯಿಸುವನು ||೯೩೩||

ಮತ್ತು ಅದಕ್ಕಾಗಿಯೇ ಪಾಂಡವನೇ, ಪರಧರ್ಮದ ತ್ಯಾಗ ಮಾಡಿ, ಸ್ವಧರ್ಮವನ್ನೇ ಆಚರಿಸಬೇಕೆಂಬ ನಿಯಮವು ಮಾಡಲು ಬೇಡವೇ ? ||೯೩೪||

ಹಾಗಾದರೆ ಆತ್ಮದರ್ಶನವಾಗುವವರೆಗೆ ಕರ್ಮ ಮಾಡುವುದು ತಪ್ಪುವುದೆ ? ಇಲ್ಲ. ಅದನ್ನು ಅವಶ್ಯವಾಗಿ ಮಾಡಲೇಬೇಕು ಮತ್ತು ಕರ್ಮ ಮಾಡಬೇಕಾದಲ್ಲಿ ಆರಂಭಕ್ಕೆ ಕಷ್ಟವು ಇದ್ದೇ ಇದೆ ||೯೩೫||

ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।
ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥೪೮॥

ಮ್ಹಣೌನಿ ಭಲತಿಯೇ ಕರ್ಮೀ । ಆಯಾಸು ಜರ್ಹೀ ಉಪಕ್ರಮೀ । ತರೀ ಕಾಯ ಸ್ವಧರ್ಮೀ । ದೋಷು ಸಾಂಗೇ ? ॥೧೪೩೬॥ ಅಗಾ ಉಜೂ ವಾಟಾ ಚಾಲಾವೇ । ತರ್ಹೀ ಪಾಯಚಿ ಶಿಣವಾವೇ । ನಾ ಆಡರಾನೇ ಧಾಂವಾವೇ । ತರ್ಹೀ ತೇಂಚಿ ॥೧೪೩೭॥ ಪೈ ಶಿಳಾ ಕಾ ಸಿದೋರಿಯಾ । ದಾಟಣೇ ಏಕ ಧನಂಜಯಾ । ಪರೀ ಜೇ ವಾಹತಾ ವಿಸಾಂವಯಾ । ಮಿಳಿಜೇ ತೇ ಘೇಪೇ ॥೧೪೩೮॥ ಯೇರ್ಹವೀ ಕಣಾ ಆಣಿ ಭೂಸಾ । ಕಾಂಡಿತಾಹೀ ಸೋಸು ಸರಿಸಾ । ಜೇಂಚಿ ರಂಧನ ಶ್ವಾನ ಮಾಂಸಾ । ತೇಂಚಿ ಹವೀ ॥೧೪೩೯॥ ದಧೀ ಜಳಾಚಿಯಾ ಘುಸಳಣಾ । ವ್ಯಾಪಾರ ಸಾರಿಖೇಚಿ ವಿಚಕ್ಷಣಾ । ವಾಳುವೇ ತಿಳಾ ಘಾಣಾ । ಗಾಳಣೇ ಏಕ ॥೧೪೪೦॥ ಪೈ ನಿತ್ಯ ಹೋಮ ದೇಯಾವಯಾ । ಕಾ ಸೈರಾ ಆಗೀ ಸುವಾವಯಾ । ಫುಂಕಿತಾ ಧೂ ಧನಂಜಯಾ । ಸಾಹಣೇ ತೇಂಚಿ ॥೧೪೪೧॥ ಪರೀ ಧರ್ಮಪತ್ನೀ ಧಾಂಗಡೀ । ಪೋಸಿತಾ ಜರೀ ಏಕೀ ವೋಢೀ । ತರೀ ಕಾ ಅಪರವಡೀ । ಆಣಾವೀ ಅಂಗಾ ? ॥೧೪೪೨॥ ಹಾ ಗಾ ಪಾಠೀ ಲಾಗಲಾ ಘಾಈ । ಮರಣ ನ ಚುಕೇಚಿ ಪಾಹೀ । ತರೀ ಸಮೋರಲಾ ಕಾಈ । ಆಗಳೇ ನ ಕೀಜೇ ? ॥೧೪೪೩॥ ಕುಲಸ್ತ್ರೀ ದಾಂಡ್ಯಾಚೇ ಘಾಯೇ । ಪರಘರ ರಿಗಾಲೀಹೀ ಜರೀ ಸಾಹೇ । ತರೀ ಸ್ವಪತೀತೇ ವಾಯೇ । ಸಾಂಡಿಲೇ ಕೀ ? ॥೧೪೪೪॥ ತೈಸೇ ಆವಡತೇಂಹೀ ಕರಣೇ । ನ ನಿಪಜೇ ಶಿಣಲ್ಯಾವಿಣೇ । ತರೀ ವಿಹಿತ ಬಾ ರೇ ಕೋಣೇ । ಬೋಲೇ ಭಾರೀ ? ॥೧೪೪೫॥ ವರೀ ಥೋಡೇಂಚಿ ಅಮೃತ ಘೇತಾ । ಸರ್ವಸ್ವ ವೇಂಚೋ ಕಾ ಪಂಡುಸುತಾ । ಜೇಣೇ ಜೋಡೇ ಜೀವಿತಾ । ಅಕ್ಷಯತ್ವ ॥೧೪೪೬॥ ಯೇರ ಕಾಂಹ್ಯಾ ಮೋಲೇ ವೇಂಚೂನಿ । ವಿಷ ಪಿಯಾವೇ ಘೇಊನಿ । ಆತ್ಮಹತ್ಯೇಸಿ ನಿಮೋನಿ । ಜಾಇಜೇ ಜೇಣೇ ॥೧೪೪೭॥ ತೈಸೇ ಜಾಚೂನಿಯಾ ಇಂದ್ರಿಯೇ । ವೇಚೂನಿ ಆಯುಷ್ಯಾಚೇನಿ ದಿಯೇ । ಸಾಂಚಲೇ ಪಾಪೀ ಆನ ಆಹೇ । ದುಃಖವಾಂಚೂನಿ ? ॥೧೪೪೮॥ ಮ್ಹಣೌನಿ ಕರಾವಾ ಸ್ವಧರ್ಮು । ಜೋ ಕರಿತಾ ಹಿರೋನಿ ಘೇ ಶ್ರಮು । ಉಚಿತ ದೇಈಲ ಪರಮು । ಪುರುಷಾರ್ಥರಾಜು ॥೧೪೪೯॥ ಯಾ ಕಾರಣೇ ಕಿರೀಟೀ । ಸ್ವಧರ್ಮಾಚಿಯೇ ರಾಹಾಟೀ । ನ ವಿಸಂಬಿಜೇ ಸಂಕಟೀ । ಸಿದ್ಧಮಂತ್ರ ಜೈಸಾ ॥೧೪೫೦॥

ಶ್ಲೋಕಾರ್ಥ :- ಕೌಂತೇಯಾ ! ಸಹಜ ಕರ್ಮವು ದೋಷಯುಕ್ತವಾಗಿದ್ದರೂ ಅದನ್ನು ತ್ಯಜಿಸಬಾರದು. ಅಗ್ನಿಯಲ್ಲಿ ಹೊಗೆಯಂತೆ ಪ್ರತಿಕರ್ಮದಲ್ಲಿ ಒಂದಿಲ್ಲಾದರೊಂದು ದೋಷವು ಇದ್ದೇ ಇರುತ್ತದೆ ॥೪೮॥

ಅದಕ್ಕಾಗಿಯೇ, ಯಾವುದೇ ಕರ್ಮ ಮಾಡಿದರೂ ಪ್ರಾರಂಭಕ್ಕೆ ಆಯಾಸವಾಗುವುದು. ಹಾಗಾದರೆ ಸ್ವಧರ್ಮದ ಆಚರಣೆಯನ್ನು ಮಾಡಿದರೆ ಯಾವ ದೋಷವಾದೀತು ? ಹೇಳು ನೋಡೋಣ ॥೩೬॥

ಅರೇ, ಸರಿಯಾದ ಮಾರ್ಗದಲ್ಲಿ ನಡೆಯಬೇಕಾದರೂ ಕಾಲುಗಳಿಗೆ ಶ್ರಮವನ್ನು ಕೊಡಲೇಬೇಕು ಮತ್ತು ಅಡ್ಡರಸ್ತೆಯಲ್ಲಿ ತಿರುಗುತ್ತಿದ್ದರೂ ಅದೇ ಗತಿ ಅಲ್ಲವೆ ? ॥೩೭॥

ಧನಂಜಯಾ, ಇಲ್ಲಿ ನೋಡು, ದಾರಿ ಹೋಗುವಾಗ ಬಟ್ಟೆಯಲ್ಲಿ ಕಲ್ಲು ಅಥವಾ ಬುತ್ತಿ ಈ ಎರಡೂ ಭಾರದಲ್ಲಿ ಸಮವಾಗಿದ್ದಾಗ, ವಿಶ್ರಾಂತಿ ವೇಳೆಯಲ್ಲಿ ಸುಖಕರವಾಗಿರುವ ಯಾವುದನ್ನು ಸ್ವೀಕರಿಸಬೇಕು? ॥೩೮॥

ಅಲ್ಲದೇ, ತೌಡು ಮತ್ತು ಧಾನ್ಯಗಳನ್ನು ಕುಟ್ಟಲು ಸಮವಾಗಿಯೇ ಶ್ರಮವಾಗುವುದು. ನಾಯಿಯ ಮಾಂಸವನ್ನು ಕುದಿಸಲು ಆಗುವ ಶ್ರಮವು ಯಜ್ಞದ ಪುರೋಡಾಶೆ ಕುದಿಸಲು ಅಷ್ಟೇ ಆಗುವುದು ॥೩೯॥

ಹೇ ವಿಚಕ್ಷಣನೇ, ಮೊಸರು ಅಥವಾ ನೀರು ಇವುಗಳನ್ನು ಕಡೆಯಲು ಸಮವಾಗಿಯೇ ಶ್ರಮವಾಗುವುದು ಮತ್ತು ಉಸುಕು ಅಥವಾ ಎಳ್ಳು ಗಾಣದಲ್ಲಿ ಹಾಕಿ ತಿರುಗಿಸುವ ಶ್ರಮವು ಒಂದೇಯಾಗಿರುವುದು ॥೪೦॥

ಇಲ್ಲಿ ನೋಡು ಧನಂಜಯನೇ, ನಿತ್ಯದಲ್ಲಿ ಹೋಮಕ್ಕೆ ಕೊಡಲು ಅಥವಾ ಇತರ ಕಾರ್ಯಗಳಿಗೆ ಬೆಂಕಿಯನ್ನು ಮಾಡುವಾಗ್ಗೆ, ಊದುತ್ತ ಹೊಗೆಯನ್ನು ಸೋಸಲೇಬೇಕಾಗುವುದು ॥೪೧॥

ಅಥವಾ ಧರ್ಮಪತ್ನಿ ಇಲ್ಲವೇ ಇಟ್ಟುಕೊಂಡ ವ್ಯಭಿಚಾರ ಸ್ತ್ರೀ, ಈ ಇಬ್ಬರನ್ನು ಪೋಷಿಸಲು ಒಂದೇ ಶ್ರಮವಾಗುವುದು. ಅಂದಮೇಲೆ ವ್ಯಭಿಚಾರ ಸ್ತ್ರೀಯಳನ್ನಿಟ್ಟುಕೊಂಡು ಅಪವಾದವನ್ನು ಏಕೆ ಹೊರಬೇಕು ? ॥೪೨॥

ಯುದ್ಧದಲ್ಲಿ ಓಡಿ ಹೋಗುವಾಗ ಬೆನ್ನಿಗೆ ಹೊಡೆದ ಘಾಯದಿಂದ ಮರಣವು ತಪ್ಪುವುದಿಲ್ಲ. ಅಂದಮೇಲೆ ಎದುರಾಗಿ ನಿಂತು ತನ್ನ ಕೈಯನ್ನು ಏಕೆ ತೋರಿಸಬಾರದು ? ॥೪೩॥

ಕುಲಸ್ತ್ರೀಯು ಬಡಿಗೆಯ ಹೊಡೆತಕ್ಕೆ ತಾಳದೇ ಇನ್ನೊಬ್ಬರ ಮನೆ ಸೇರಿದಾಗ, ಅಲ್ಲಿಯೂ ಅದೇ ಗತಿಯಾದಾಗ, ತನ್ನ ಪತಿಯನ್ನು ವ್ಯರ್ಥವಾಗಿ ಬಿಟ್ಟಂತಾಗುವುದಿಲ್ಲವೇ ? ॥೪೪॥

ಅದರಂತೆ ಯಾವುದೇ ಕರ್ಮ ಮಾಡಿದರೂ ದುಃಖವನ್ನು ಸೋಸಲೇಬೇಕಾಗುವುದು. ಅಪ್ಪಾ, ಸ್ವಧರ್ಮಾಚರಣೆಯು ಕಠಿಣವು ಎಂದು ಯಾವ ಮುಖದಿಂದ ಹೇಳಲು ಬರುವುದು ? ॥೪೫॥

ಹೇ ಪಂಡುಸುತನೇ, ಅಮೃತದ ಸೇವನೆಯಿಂದ ಅಮರತ್ವವು ಪ್ರಾಪ್ತಿಯಾಗುತ್ತಿರುವಾಗ ಅದರ ಅಲ್ಪ ಪ್ರಾಪ್ತಿಗಾಗಿ ಸರ್ವಸ್ವವನ್ನು ಏಕೆ ವಿನಿಯೋಗಿಸಬಾರದು ? ॥೪೬॥

ಮತ್ತು ವಿಷದ ಸೇವನೆಯಿಂದ ಎಲ್ಲ ಸುಖದ ನಾಶವಾಗಿ ಆತ್ಮಹತ್ಯೆಯ ಪಾತಕವು ಹತ್ತುವುದು. ಅಂದಮೇಲೆ ಅದನ್ನು ದುಡ್ಡುಕೊಟ್ಟು ಏಕೆ ಕುಡಿಯಬೇಕು ? ॥೪೭॥

ಅದರಂತೆ ಇಂದ್ರಿಯಗಳಿಗೆ ಶ್ರಮವನ್ನು ಕೊಟ್ಟು ಆಯುಷ್ಯವನ್ನು ಖರ್ಚು ಮಾಡಿ ಪಾಪವನ್ನು ಸಂಚಯ ಮಾಡಿಕೊಂಡರೆ ದುಃಖದ ಹೊರತಾದ ಬೇರೆ ಫಲ ಇದೆಯೇ? ॥೪೮॥

ಆದ್ದರಿಂದ ಸ್ವಧರ್ಮದ ಆಚರಣೆಯನ್ನು ಮಾಡಬೇಕು. ಅದು ತನ್ನ ಶ್ರಮದ ಪರಿಹಾರನ್ನು ಮಾಡಿ ಉಚಿತವಾದ ಪರಮ ಪುರುಷಾರ್ಥದ, ಸರ್ವಶ್ರೇಷ್ಠವಾದ ಮೋಕ್ಷದ ಪ್ರಾಪ್ತಿಯನ್ನು ಮಾಡಿ ಕೊಡುವುದು ॥೪೯॥

ಅದಕ್ಕಾಗಿ ಸಂಕಟ ಸಮಯದಲ್ಲಿ ಸಿದ್ಧಮಂತ್ರವನ್ನು ಮರೆಯದಂತೆ ಸ್ವಧರ್ಮಾಚರಣೆಯನ್ನು ಬಿಡಬಾರದು ॥೫೦॥

ಕಾ ನಾಂವ ಜೈಸಿ ಉದಧೀ । ಮಹಾರೋಗೀ ದಿವ್ಯೌಷಧೀ । ನ ವಿಸಂಬಿಜೇ ತಯಾ ಬುದ್ಧೀ । ಸ್ವಕರ್ಮ ಯೇಥ ।।೯೫೧।। ಮಗ ಯಯಾಚಿ ಗಾ ಕಪಿಧ್ವಜಾ । ಸ್ವಕರ್ಮಾಚಿಯಾ ಮಹಾಪೂಜಾ । ತೋಷಲಾ ಈಶು ತಮರಜಾ । ಝಾಡಾ ಕರುನೀ ।।೯೫೨।। ಶುದ್ಧ ಸತ್ತ್ವಾಚಿಯಾ ವಾಟಾ । ಆಣಿ ಆಪುಲೀ ಉತ್ಕಂಠಾ । ಭವ ಸ್ವರ್ಗ ಕಾಳಕೂಟಾ । ಐಸೇ ದಾವೀ ।।೯೫೩।। ಜಿಯೇ ವೈರಾಗ್ಯ ಯೇಣೇ ಬೋಲೇ । ಮಾಗಾ ಸಂಸಿದ್ಧೀ ರೂಪ ಕೇಲೇ । ಕಿಂಬಹುನಾ ತೇ ಆಪುಲೇ । ಮೇಳವೀ ಖಾಗೇ ।।೯೫೪।। ಮಗ ಜಿಂತಿಲಿಯಾ ಹೇ ಭೋಯೇ । ಪುರುಷ ಸರ್ವತ್ರ ಜೈಸಾ ಹೋಯೇ । ಕಾ ಜಾಲಾಹೀ ಜೇ ಲಾಹೇ । ತೇ ಆತಾ ಸಾಂಗೋ ।।೯೫೫।।

ಆಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।
ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ।।೪೯।।

ತರೀ ದೇಹಾದಿಕ ಹೇ ಸಂಸಾರೇ । ಸರ್ವಹೀ ಮಾಂಡಲೇಸೇ ಜೇ ಗುಂಫಿರೇ । ತೇಥ ನಾತುಡೇ ತೋ ವಾಗುರೇ । ವಾರಾ ಜೈಸಾ ।।೯೫೬।। ಪೈ ಪರಿಪಾಕಾಚಿಯೇ ವೇಳೇ । ಫಳ ದೇಠೇ ನಾ ದೇಠು ಫಳೇ । ನ ಧರೇ ತೈಸೇ ಸ್ನೇಹ ಖಿಳೇ । ಸರ್ವತ್ರ ಹೋಯ ।।೯೫೭।। ಪುತ್ರ ವಿತ್ತ ಕಲತ್ರ । ಹೇ ಜಾಲಿಯಾಹೀ ಸ್ವತಂತ್ರ । ಮಾಝೇ ನ ಮ್ಹಣೇ ಪಾತ್ರ । ವಿಷಾಚೇ ಜೈಸೇ ।।೯೫೮।। ಹೇ ಅಸೋ ವಿಷಯಾಜಾತೀ । ಬುದ್ಧೀ ಪೋಳಲೀ ಐಸೀ ಮಾಘೌತೀ । ಪಾಉಲೇ ಫೇಊನಿ ಏಕಾಂತೀ । ಹೃದಯಾಚ್ಯಾ ರಿಗೇ ।।೯೫೯।। ಐಸಯಾ ಅಂತಃಕರಣ । ಬಾಹ್ಯ ಯೇತಾ ತಯಾಚೀ ಆಣ । ನ ಮೋಡೀ ಸಮರ್ಥಾ ಭೇಣ । ದಾಸೀ ಜೈಸೀ ।।೯೬೦।। ತೈಸೇ ಐಕ್ಯಾಚಿಯೇ ಮುಠೀ । ಮಾಜಿವಡೇ ಚಿತ್ತ ಕಿರೀಟೀ । ಕರೂನಿ ವೇಧೀ ನೇಹಟೀ । ಆತ್ಮಯಾಚ್ಯಾ ।।೯೬೧।। ತೇವ್ಹಾ ದೃಷ್ಟಾದೃಷ್ಟ ಸ್ಪೃಹೇ । ನಿಮಣೇ ಜಾಲೇಂಚಿ ಆಹೇ । ಆಗೀ ದಡಪಲಿಯಾ ಧುಯೇ । ರಾಹಿಜೇ ಜೈಸೇ ।।೯೬೨।। ಮ್ಹಣೌನಿ ನಿಯಮಿಲಿಯಾ ಮಾನಸೀ । ಸ್ಪೃಹಾ ನಾಸೌನಿ ಜಾಯ ಆಪೈಸೀ । ಕಿಂಬಹುನಾ ತೋ ಐಸೀ । ಭೂಮಿಕಾ ಪಾವೇ ।।೯೬೩।। ಪೈ ಅನ್ಯಥಾ ಬೋಧು ಆಘವಾ । ಮಾವಳೋನಿ ತಯಾ ಪಾಂಡವಾ । ಬೋಧಮಾತ್ರೇಂಚಿ ಜೀವಾ । ಠಾವೋ ಹೋಯ ।।೯೬೪।। ಧರವಣೀ ವೇಂಚೇ ಸರೇ । ತೈಸೇ ಭೋಗೇ ಪ್ರಾಚೀನ ಪುರೇ । ನವೇ ತಂವ ನುಪಕರೇ । ಕಾಂಹೀಂಚಿ ಕರೂ ।।೯೬೫।।

ಅಥವಾ ಸಮುದ್ರದಲ್ಲಿ ಹಡಗವನ್ನು ತ್ಯಜಿಸಬಾರದು. ಅಥವಾ ಮಹಾರೋಗಿಯು ಔಷಧವನ್ನು ತ್ಯಾಗ ಮಾಡಬಾರದು. ಅದರಂತೆ ಸ್ವಕರ್ಮದ ಆಚರಣೆಯನ್ನು ಬಿಡಬಾರದು ।೯೫೧॥

ಆಗ ಕಪಿಧ್ವಜನೇ, ಇದೇ ಕರ್ಮರೂಪ ಮಹಾಪೂಜೆಯಿಂದ ಸಂತುಷ್ಟನಾದ ಈಶ್ವರನು ತಮ ಮತ್ತು ರಜ ಈ ಗುಣಗಳನ್ನು ನಾಶ ಮಾಡಿ ।೯೫೨॥

ತನ್ನ ಆತುರತೆಗೆ ಶುದ್ಧ ಸತ್ತ್ವಗುಣದ ಮಾರ್ಗಕ್ಕೆ ಹಚ್ಚುವನು ಮತ್ತು ಸಂಸಾರ ಮತ್ತು ಸ್ವರ್ಗ ಇವುಗಳು ಕಾಳಕೂಟ ವಿಷದಂತೆ ಇವೆ ಎಂದು ಅನಿಸುವಂತೆ ಮಾಡುವನು ।೯೫೩॥

ಮೊದಲು ವೈರಾಗ್ಯ ಈ ಶಬ್ದದಿಂದ ಸಂಸಿದ್ಧಿ ಈ ಶಬ್ದದ ಮಾಡಿದ ವರ್ಣನೆಯನ್ನು ಆತನ್ನ ವೈರಾಗ್ಯರೂಪ ಸ್ಥಾನವನ್ನು ಆತನು ಕೂಡಿಸಿ ಕೊಡುವನು ।೯೫೪॥

ಆಗ ಈ ವೈರಾಗ್ಯ ಭೂಮಿಕೆಯನ್ನು ಜಯಿಸಿದಾಗ ಆಗುವ ಆತನ ಯೋಗ್ಯತೆಯನ್ನು ಅಥವಾ ಪೂರ್ಣತ್ವಕ್ಕೆ ಮುಟ್ಟಿಕೊಂಡ ಆ ಪುರುಷನಿಗೆ ಯಾವುದರ ಲಾಭವಾಗುವುದನ್ನು ಈಗ ಹೇಳುವೆನು ।೯೫೫॥

ಶ್ಲೋಕಾರ್ಥ :- ಯಾವ ವಿಷಯದಲ್ಲಿಯೂ ಅಂಟದವನು, ಅಂತಃಕರಣವನ್ನು ಜಯಿಸಿದವನು, ಕೋರಿಕೆಗಳಿಲ್ಲದವನು, ಕರ್ಮಫಲವನ್ನೂ, ಕರ್ತೃ ಭಾವವನ್ನು ಬಿಟ್ಟು ಉತ್ತಮವಾದ ಕರ್ಮಾತೀತ ಸ್ಥಿತಿಯನ್ನು ಪಡೆಯುತ್ತಾನೆ ।೪೯॥

ಗಾಳಿಯು ಬೇಡರ ಬಲೆಯಲ್ಲಿ ಓಡಾಡುತ್ತಿದ್ದರೂ ಅದರಲ್ಲಿ ಸಿಕ್ಕಿಕೊಳ್ಳುವುದಿಲ್ಲ. ಅದರಂತೆ ದೇಹಾದಿ ಸಂಸಾರ ಪಾಶದಲ್ಲಿ ಇದ್ದೂ, ಅದರಲ್ಲಿ ಸಿಕ್ಕಿಕೊಳ್ಳುವುದಿಲ್ಲ ।೯೫೬॥

ಇಲ್ಲಿ ನೋಡು, ಮಾಗಿದ ಹಣ್ಣು ತುಂಬನ್ನು ಹಿಡಿಯುವುದಿಲ್ಲ. ಅಥವಾ ತುಂಬುವೂ ಅದಕ್ಕೆ ಹಿಡಿಯುವುದಿಲ್ಲ. ಅದರಂತೆ ಸಂಸಾರಾದಿಕ ಮೇಲೆ ಇರುವ ಪ್ರೇಮವು ಕುಂಠಿತವಾಗುವುದು ।೯೫೭॥

ವಿಷದ ಪಾತ್ರೆಯನ್ನು ನನ್ನದೆಂದು ಯಾರೂ ಹೇಳಲಾರರು. ಅದರಂತೆ ಹೆಂಡರು, ಮಕ್ಕಳು, ಧನವು ತನ್ನಂತೆ ಇದ್ದರೂ, ಇವು ನನ್ನವು ಎಂದು ಹೇಳುವುದಿಲ್ಲ ।೯೫೮॥

ಇದು ಇರಲಿ, ಅತಿ ಸುಡುವ ಪದಾರ್ಥದಲ್ಲಿ ಕೈಯಿಟ್ಟಾಗ ಅದರಿಂದ ಹೇಗೆ ಕೈ ರಭಾಡಿಸುವನೋ, ಅದರಂತೆ ಅವನ ಬುದ್ಧಿಯು ವಿಷಯಗಳಿಂದ ಹಿಂದಕ್ಕೆ ಸರಿದು ಆತ್ಮ ವಿಚಾರದತ್ತ ಹತ್ತಿರುವುದು ।೯೫೯॥

ದಾಸಿಯು ಸ್ವಾಮಿಯ ಭಯದಿಂದ ಆತನ ಆಜ್ಞೆಯನ್ನು ಮೀರದಂತೆ ಅಂತಃಕರಣವು ವಿಷಯದ ಕಡೆಗೆ ಬಂದು ಆತ್ಮದ ಆಣೆಯನ್ನು ಮುರಿಯುವುದಿಲ್ಲ ।೯೬೦॥

ಅದರಂತೆ ಕಿರೀಟಿಯೇ, ಐಕ್ಯದ ಮುಷ್ಠಿಯಲ್ಲಿ ಚಿತ್ತವನ್ನು ಹಿಡಿದು ಅದಕ್ಕೆ ಆತ್ಮದ ಪ್ರೇಮದಲ್ಲಿ ತೊಡಗಿಸುವನು ।೯೬೧॥

ಆಗ ಅಗ್ನಿ ಕೆಂಡವನ್ನು ಬೂದಿಯಲ್ಲಿ ಮುಚ್ಚಿದಾಗ ಹೊಗೆಯು ನಿಲ್ಲುವಂತೆ, ಇಹಪರ ಇಚ್ಛೆಯು ಸಹಜವಾಗಿ ನಷ್ಟಗೊಳ್ಳುವುದು ।೯೬೨॥

ಆದ್ದರಿಂದ ಮನಸ್ಸಿನ ನಿಗ್ರಹವಾಯಿತೆಂದರೆ, ಇಚ್ಛೆಯು ತಾನೇ ಇಲ್ಲದಾಗುವುದು. ಹೆಚ್ಚಿಗೇನು ಹೇಳಬೇಕು ? ಇಂಥ ಭೂಮಿಕೆಯು ಸಾಧಕನಿಗೆ ಲಭಿಸುವುದು ।೯೬೩॥

ಇಲ್ಲಿ ನೋಡು ಪಾಂಡವನೇ, ವಿಪರೀತ ಬೋಧಗಳು ಎಲ್ಲವೂ ಅಸ್ತವಾಗಿ ಆತನಿಗೆ ನಿಜ ಬೋಧವು ಪ್ರಾಪ್ತವಾಗುವುದು ।೯೬೪॥

ಕೂಡಿಸಿಟ್ಟ ನೀರನ್ನು ದಿನಾಲೂ ಬಳಸಿದಾಗ ಅದು ಮುಗಿದು ಬಿಡುವುದು. ಅದರಂತೆ ಪ್ರಾರಬ್ಧ ಕರ್ಮಗಳು ಭೋಗಾಂತದಲ್ಲಿ ಮುಗಿಯುವುವು ಮತ್ತು ನಾನು ಮಾಡುವವನಲ್ಲ ಎಂಬ ಭಾವದಿಂದ ಹೊಸ ಕರ್ಮಫಲಗಳು ಹುಟ್ಟುವುದಿಲ್ಲ ।೯೬೫॥

ಐಸೀ ಕರ್ಮಸಾಮ್ಯದಶಾ । ಹೋಯ ತೇಥ ವೀರೇಶಾ । ಮಗ ಶ್ರೀಗುರು ಆಪೈಸಾ । ಭೇಟೇಚಿ ಗಾ ।।೯೬೬।। ರಾತ್ರೀಚೇ ಚೌಪಾಹರೀ । ವೇಂಚಲಿಯಾ ಅವಧಾರೀ । ಡೋಳ್ಯಾ ತಮಾರೀ । ಮಿಳೇ ಜೈಸಾ ।।೯೬೭।। ಕಾ ಯೇಊನಿ ಫಳಾಚಾ ಘಡು । ಪಾರುಷವೀ ಕೇಳೀಚೇ ವಾಢು । ಶ್ರೀಗುರು ಭೇಟೋನಿ ಕರೀ ಪಾಡು । ಬುಭುತ್ಸು ತೈಸಾ ।।೯೬೮।। ಮಗ ಆಲಿಂಗಿಲಾ ಪೂರ್ಣಿಮಾ । ಜೈಸಾ ಉಣೇವ ಸಾಂಡೀ ಚಂದ್ರಮಾ । ತೈಸೇ ಹೋಯ ವೀರೋತ್ತಮಾ । ಗುರುಕೃಪಾ ತಯಾ ।।೯೬೯।। ತೇವ್ಹಾ ಅಬೋಧುಮಾತ್ರ ಅಸೇ । ತೋ ತಂವ ತಯಾ ಕೃಪಾ ನಾಸೇ । ತೇಥ ನಿಶೀಸವೇ ಜೈಸೇ । ಆಂಧಾರೇ ಜಾಯ ।।೯೭೦।। ತೈಸೀ ಅಬೋಧಾಚಿಯೇ ಕುಶೀ । ಕರ್ಮ ಕರ್ತಾ ಕಾರ್ಯ ಐಸೀ । ತ್ರಿಪುಟೀ ಅಸೇ ತೇ ಜೈಸೀ । ಗಾಭಿಣೀ ಮಾರಿಲೀ ।।೯೭೧।। ತೈಸೇಂಚೀ ಅಬೋಧನಾಶಾಸವೇ । ನಾಶೇ ಕ್ರಿಯಾಜಾತ ಆಘವೇ । ಐಸಾ ಸಮೂಳ ಸಂಭವೇ । ಸಂನ್ಯಾಸು ಹಾ ।।೯೭೨।। ಯೇಣೇ ಮೂಳಜ್ಞಾನಸಂನ್ಯಾಸೇ । ದೃಶ್ಯಾಚಾ ಜೇಥ ಠಾವೋ ಪುಸೇ । ತೇಥ ಬುಝಾವೇ ತೇ ಆಪೈಸೇ । ತೋಚಿ ಆಹೇ ।।೯೭೩।। ಚೇಇಲಿಯಾವರೀ ಪಾಹೀ । ಸ್ವಪ್ನೀಂಚಿಯಾ ತಿಯೇ ಡೋಹೀ । ಆಪಣಯಾತೇ ಕಾಈ । ಕಾಢೂ ಜಾ ಇಜೇ ?।।೯೭೪।। ತೈ ಮೀ ನೇಣೇ ಆತಾ ಜಾಣೇನ । ಹೇ ಸರಲೇ ತಯಾ ದುಃಸ್ವಪ್ನ । ಜಾಲಾ ಜ್ಞಾತೃಜ್ಞೇಯಾ ವಿಹೀನ । ಚಿದಾಕಾಶ ।।೯೭೫।। ಮುಖಾಭಾಸೇಂಸೀ ಆರಿಸಾ । ಪರೌತಾ ನೇಲಿಯಾ ವೀರೇಶಾ । ಪಾಹಾತೇಪಣೇಂವೀಣ ಜೈಸಾ । ಪಾಹತಾ ಠಾಕೇ ।।೯೭೬।। ತೈಸೇ ನೇಣಣೇ ಜೇ ಗೇಲೇ । ತೇಣೇ ಜಾಣಣೇಂಹೀ ನೇಲೇ । ಮಗ ನಿಷ್ಕ್ರಿಯ ಉರಲೇ । ಚಿನ್ಮಾತ್ರಚಿ ।।೯೭೭।। ತೇಥ ಸ್ವಭಾವೇ ಧನಂಜಯಾ । ನಾಹೀ ಕೋಣೇಚಿ ಕ್ರಿಯಾ । ಮ್ಹಣೌನಿ ಪ್ರವಾದು ತಯಾ । ನೈಷ್ಕರ್ಮ್ಯ ಐಸಾ ।।೯೭೮।। ತೇ ಆಪುಲೇ ಆಪಣಪೇ । ಅಸೇ ತೇಂಚಿ ಹೋಊನಿ ಹಾರಪೇ । ತರಂಗು ಕಾ ವಾಯುಲೋಪೇ । ಸಮುದ್ರು ಜೈಸಾ ।।೯೭೯।। ತೈಸೇ ನ ಹೋಣೇ ನಿಫಜೇ । ತೇ ನೈಷ್ಕರ್ಮ್ಯಸಿದ್ಧಿ ಜಾಣಿಜೇ । ಸರ್ವಸಿದ್ಧೀಂತ ಸಹಜೇ । ಪರಮ ಹೇಚಿ ।।೯೮೦।। ದೇಊಳಾಚಿಯಾ ಕಾಮಾ ಕಳಸು । ಉಪರಮ ಗಂಗೇಸೀ ಸಿಂಧು ಪ್ರವೇಶು । ಕಾ ಸುವರ್ಣಶುದ್ಧೀ ಕಸು । ಸೋಳಾವಾ ಜೈಸಾ ।।೯೮೧।। ತೈಸೇ ಆಪುಲೇ ನೇಣಣೇ । ಫೇಡಿಜೇ ಕಾ ಜಾಣಣೇ । ತೇಂಹೀ ಗಿಳೂನಿ ಅಸಣೇ । ಐಸೀ ಜೇ ದಶಾ ।।೯೮೨।।

ವೀರೇಶನೇ, ಈ ಪ್ರಕಾರವಾಗಿ ಎಲ್ಲ ಕರ್ಮಗಳು ಕ್ಷೀಣದಶೆ ಹೊಂದಿದಾಗ, ಶ್ರೀಗುರುಗಳ ದರ್ಶನವು ತಾನೇ ಆಗುವುದು ।೯೬೬॥

ಇಲ್ಲಿ ನೋಡು, ರಾತ್ರಿಯ ನಾಲ್ಕು ಪ್ರಹರಗಳು ಮುಗಿದ ನಂತರ ಕತ್ತಲೆಯನ್ನು ನಾಶಮಾಡುವ ಸೂರ್ಯನು ದೃಷ್ಟಿಗೆ ತೋರುವನು ।೯೬೭॥

ಅಥವಾ ಬಾಳೆಯ ಗೊನೆಯು ಬಂದಾಗ ಆ ಗಿಡದ ಬೆಳವಣಿಗೆ ನಿಲ್ಲುವುದು. ಅದರಂತೆ ಶ್ರೀಗುರುಗಳ ದರ್ಶನದಿಂದ ಜಿಜ್ಞಾಸುವಿನ ಕರ್ಮ ಕರ್ತೃತ್ವದ ಪರಿಶ್ರಮಗಳು ನಿಲ್ಲುವುವು ।೯೬೮॥

ಆಗ ಪೌರ್ಣಿಮೆಯು ಪ್ರಾಪ್ತವಾದಾಗ ಚಂದ್ರನಿಗೆ ಕಲೆಯ ಕಡಿಮೆಯು ಇರುವುದೇ ಇಲ್ಲ. ಅದರಂತೆ ವೀರೋತ್ತಮನೇ, ಗುರುಕೃಪೆಯಾಯಿತೆಂದರೆ ಜಿಜ್ಞಾಸುಗೆ ಏನೂ ಕೊರತೆ ಬೀಳುವುದಿಲ್ಲ ।೯೬೯॥

ಆಗ ಅಜ್ಞಾನವೆಂದು ಇರುವುದೆಲ್ಲವೂ ಅವರ ಕೃಪೆಯಿಂದಲೇ ಇಲ್ಲದಾಗುವುದು. ಮತ್ತು ರಾತ್ರಿಯು ಮುಗಿದ ಮೇಲೆ ಕತ್ತಲೆಯೂ ಇಲ್ಲದಾಗುವುದೋ ।೯೭೦॥

ಅದರಂತೆ ಅಜ್ಞಾನದ ನಾಶ ಅಂದರೆ, ಹೊಟ್ಟೆಯಲ್ಲಿರುವ ಕರ್ತಾ. ಕರ್ಮ ಮತ್ತು ಕಾರ್ಯ ಈ ತ್ರಿಪುಟಿಯು ನಾಶವಾಗುವುದು. ಗರ್ಭಿಣಿಗೆ ಕೊಂದ ಮೇಲೆ ಹೊಟ್ಟೆಯಲ್ಲಿಯ ಕೂಸಿಗೆ ಬೇರೆ ಕೊಲ್ಲಬೇಕಾಗಿಲ್ಲ ।೯೭೧॥

ಅದರಂತೆ ಅಜ್ಞಾನದ ನಾಶವಾದ ಮೇಲೆ ಎಲ್ಲ ಕರ್ಮಗಳ ನಾಶವಾಗುವುದು, ಹೀಗೆ ಎಲ್ಲ ಕರ್ಮಗಳ ಸಮೂಲ ನಾಶವಾಗುವುದಕ್ಕೆ ಸಂನ್ಯಾಸವೆಂದು ಹೇಳುವರು ।೯೭೨॥

ಅದಕ್ಕಾಗಿ ಜ್ಞಾನಸಂನ್ಯಾಸದಿಂದ ಎಲ್ಲ ದೃಶ್ಯ ಪದಾರ್ಥಗಳು ನಷ್ಟವಾದ ಮೇಲೆ ತಿಳಿಯಬೇಕಾದುದೆಂದರೆ, ಸ್ವತಃದ ಸ್ವರೂಪವು ಎರಡನೆಯದೇನೂ ಇರುವುದಿಲ್ಲ ।೯೭೩॥

ಇಲ್ಲಿ ನೋಡು, ಸ್ವಪ್ನದಲ್ಲಿ ಮಡುವಿನಲ್ಲಿ ಮುಳುಗಿದಂತೆ ಆದಾಗ ಎಚ್ಚೆತ್ತ ಮೇಲೆ ಆ ನೀರಿನಿಂದ ಪಾರಾಗಲು ಪ್ರಯತ್ನಿಸುವನೇ? ।೯೭೪॥

ಅದರಂತೆ ನನಗೆ ತಿಳಿಯುವುದಿಲ್ಲ, ನಾನು ಈಗ ತಿಳಿದುಕೊಳ್ಳುವೆನು, ಈ ಯಾವ ಅವನ ದುಃಸ್ವಪ್ನವು ನಷ್ಟವಾಗುವುದು ಮತ್ತು ಜ್ಞೇಯ ಹಾಗೂ ಜ್ಞಾತಾ ಇವು ಹೋಗಿ ಅವನು ಕೇವಲ ಜ್ಞಾನಮಾತ್ರನಾಗುವನು ।೯೭೫॥

ವೀರೇಶನೇ, ಪ್ರತಿಬಿಂಬದೊಡನೆ ಕನ್ನಡಿಯನ್ನು ದೂರ ಮಾಡಿದಾಗ ನೋಡುವವನು ನೋಡುವ ಹೊರತಾಗಿ ತಾನೇ ಸ್ಥಿರವಾಗಿ ಇರುವನು ।೯೭೬॥

ಅದರಂತೆ ಅಜ್ಞಾನವು ಹೋಗುವಾಗ ತಾನೊಂದೇ ಹೋಗದೇ ಜೊತೆಯಲ್ಲಿ ಜ್ಞಾನವನ್ನು ಒಯ್ಯುವುದು. ಆಗ ಕೇವಲ ನಿಷ್ಕ್ರಿಯವಾದ ಜ್ಞಾನ ಮಾತ್ರ ಉಳಿಯುವುದು ।೯೭೭॥

ಧನಂಜಯಾ, ಈ ನೈಷ್ಕರ್ಮ್ಯ ಭೂಮಿಕೆಯಲ್ಲಿ ಸ್ವಭಾವತಃ ಯಾವುದೇ ಕ್ರಿಯೆಯು ಇರುವುದಿಲ್ಲ. ಆದ್ದರಿಂದ ಆ ಸ್ಥಿತಿಗೆ ನೈಷ್ಕರ್ಮ್ಯ ಸಿದ್ಧಿ ಎನ್ನುವರು ।೯೭೮॥

ಗಾಳಿಯು ನಿಂತಾಗ ತೆರೆಗಳು ಸಮುದ್ರರೂಪವಾಗುವುವು. ಅದರಂತೆ ಆತ್ಮಜ್ಞಾನವಾದ ಮೇಲೆ ಎಲ್ಲ ಉಪಾಧಿಗಳು ಲಯಗೊಳ್ಳುವುವು. ಜ್ಞಾನವೂ ಸ್ವರೂಪ ಜ್ಞಾನದಲ್ಲಿ ಲಯಗೊಳ್ಳುವುದು ।೯೭೯॥

ಈ ಪ್ರಕಾರವಾಗಿ ಯಾವುದೇ ಕರ್ಮವಾಗದಿರುವುದಕ್ಕೆ ನೈಷ್ಕರ್ಮ್ಯ ಸಿದ್ಧಿ ಎಂದು ಹೇಳುವರು ಮತ್ತು ಇದುವೇ ಸಹಜವಾದ ಎಲ್ಲ ಸಿದ್ಧಿಗಳಲ್ಲಿ ಮುಖ್ಯವಾಗಿದೆ ।೯೮೦॥

ಕಳಸವು ಕುಳಿತುಕೊಂಡಾಗ ದೇವಾಲಯದ ಕಾರ್ಯವು ಕೊನೆಯದಾಗುವುದು. ಅಥವಾ ಗಂಗೆಯು ಸಮುದ್ರವನ್ನು ಸೇರಿದ ಮೇಲೆ ಆಕೆಯ ಹೆಸರು ಇಲ್ಲದಾಗುವುದು. ಪೂರ್ಣ ಒರಿ ಹತ್ತಿದ ಮೇಲೆ ಬಂಗಾರಕ್ಕೆ ಪುಟ ಕೊಡುವುದು ನಿಲ್ಲುವುದು ।೯೮೧॥

ಅದರಂತೆ ತನ್ನ ಅಜ್ಞಾನವನ್ನು ಯಾವ ಜ್ಞಾನದಿಂದ ಇಲ್ಲದಾಗಿ ಮಾಡಿದೆಯೋ, ಆ ಜ್ಞಾನವು ಸಹ ಇಲ್ಲದಾಗಲು ಅದೇ ಈ ಸ್ಥಿತಿಯಾಗಿದೆ ।೯೮೨॥

ತಿಯೇಪರತೇ ಕಾಂಹೀ । ನಿಪಜಣೇ ಆನ ನಾಹೀ । ಮ್ಹಣೌನಿ ಮ್ಹಣಿಪೇ ಪಾಹೀ । ಪರಮಸಿದ್ಧಿತೇ ।।೯೮೩।।

ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಪ್ನೋತಿ ನಿಬೋಧ ಮೇ ।
ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ।।೫೦।।

ಪರೀ ಹೇಚಿ ಆತ್ಮಸಿದ್ಧಿ । ಜೋ ಕೋಣೀ ಭಾಗ್ಯನಿಧಿ । ಶ್ರೀಗುರುಕೃಪಾ ಲಬ್ಧಿ । ಕಾಳೀ ಪಾವೇ ।।೯೮೪।। ಉದಯಜತಾಂಚಿ ದಿನಕರು । ಪ್ರಕಾಶುಚಿ ಆತೇ ಅಂಧಾರು । ಕಾ ದೀಪಸಂಗೇ ಕಾಪುರು । ದೀಪುಚಿ ಹೋಯ ।।೯೮೫।। ತಯಾ ಲವಣಾಚೀ ಕಣಿಕಾ । ಮಿಳತಖೇಂವ್ರೋ ಉದಕಾ । ಉದಕಚಿ ಹೋಊನಿ ದೇಖಾ । ಠಾಕೇ ಜೇವೀ ।।೯೮೬।। ಕಾ ನಿದ್ರಿತು ಚೇವವಿಲಿಯಾ । ಸ್ವಪ್ನೇಂಸಿ ನಿದವಾಯಾ । ಜಾಊನಿ ಆಪಣಪಯಾ । ಮಿಳೇ ಜೈಸಾ ।।೯೮೭।। ತೈಸೇ ಜಯಾ ಕೋಣ್ಹಾಸೀ ದೈವೇ । ಗುರುವಾಕ್ಯ ಶ್ರವಣಾಚಿ ಸವೇ । ದ್ವೈತ ಗಿಳೋನಿ ವಿಸಂವೇ । ಆಪಣಯಾ ವೃತ್ತೀ ।।೯೮೮।। ತಯಾಸೀ ಮಗ ಕರ್ಮ ಕರಣೇ । ಹೇ ಬೋಲಿ ಜೈಲಚಿ ಕವಣೇ । ಆಕಾಶಾ ಯೇಣೇ ಜಾಣೇ । ಆಹೇ ಕಾಈ ? ।।೯೮೯।। ಮ್ಹಣೌನಿ ತಯಾಸಿ ಕಾಂಹೀ । ತ್ರಿಶುದ್ಧಿ ಕರಣೇ ನಾಹೀ । ಪರೀ ಐಸೇ ಜರೀ ಹೇ ಕಾಂಹೀ । ನವ್ಹೇ ಜಯಾ ।।೯೯೦।। ಕಾನಾವಚನಾಚಿಯೇ ಭೇಟೀ । ಸರಿಸಾಚಿ ಪೈ ಕಿರೀಟೀ । ವಸ್ತು ಹೋಊನಿ ಉಠೀ । ಕವಣಿ ಏಕು ಜೋ ।।೯೯೧।। ಯೇರ್ಹವೀ ಸ್ವಕರ್ಮಾಚೇನಿ ವನ್ಹೀ । ಕಾಮ್ಯನಿಷಿದ್ಧಾಚಿಯಾ ಇಂಧನೀ । ರಜತಮೇ ಕೀರ ದೋನ್ಹೀ । ಜಾಳಿಲೀ ಆಧೀ ।।೯೯೨।। ಪುತ್ರ ವಿತ್ತ ಪರಲೋಕು । ಯಯಾ ತಿಹೀಂಚಾ ಅಭಿಲಾಖು । ಘರೀ ಹೋಯ ಪಾಇಕು । ಹೇಹೀ ಜಾಲೇ ।।೯೯೩।। ಇಂದ್ರಿಯೇ ಸ್ವೈರಾ ಪದಾರ್ಥೀ । ರಿಗತಾ ವಿಟಾಳಲೀ ಹೋತೀ । ತಿಯೇ ಪ್ರತ್ಯಾಹಾರ ತೀರ್ಥೀ । ನ್ಹಾಣಿಲೀ ಕೀರ ।।೯೯೪।। ಆಣಿ ಸ್ವಧರ್ಮಾಚೇ ಫಳ । ಈಶ್ವರೀ ಅರ್ಪೂನಿ ಸಕಳ । ಘೇಊನಿ ಕೇಲೇ ಅಢಳ । ವೈರಾಗ್ಯಪದ ।।೯೯೫।। ಐಸೀ ಆತ್ಮಸಾಕ್ಷಾತ್ಕಾರೀ । ಲಾಭೇ ಜ್ಞಾನಾಚೀ ಉಜರೀ । ತೇ ಸಾಮುಗ್ರೀ ಕೀರ ಪುರೀ । ಮೇಳವಿಲೀ ।।೯೯೬।। ಆಣಿ ತೇಚಿ ಸಮಯೀ । ಸದ್ಗುರು ಭೇಟಲೇ ಪಾಹೀ । ತೇವಿಂಚಿ ತಿಹೀ ಕಾಂಹೀ । ವಂಚಿಜೇನಾ ।।೯೯೭।। ಪರೀ ವೋಖದ ಘೇತ ಖೇಂವ್ರೋ । ಕಾಯ ಲಾಭೇ ಆಪುಲಾ ಠಾವೋ ? । ಕಾ ಉದಯಜತಾಂಚಿ ದಿವೋ । ಮಧ್ಯಾಹ್ನ ಹೋಯ ? ।।೯೯೮।।

ಇದಕ್ಕಿಂತಲೂ ಬೇರೆ ಏನನ್ನೂ ಪ್ರಾಪ್ತವಾಗುವುದು ಉಳಿಯುವುದಿಲ್ಲ. ಆದ್ದರಿಂದ ಇದಕ್ಕೆ ಪರಮಸಿದ್ಧಿ ಎಂದು ಹೇಳುವರು ॥೯೮೩॥

ಶ್ಲೋಕಾರ್ಥ :- ಸಿದ್ಧಿಯನ್ನು ಪಡೆದವನು ಬ್ರಹ್ಮವನ್ನು ಯಾವ ವಿಧವಾಗಿ ಪಡೆದುಕೊಳ್ಳುತ್ತಾನೋ, ಆ ಶ್ರೇಷ್ಠವಾದ ಜ್ಞಾನ ನಿಷ್ಠೆಯನ್ನು ಅರ್ಜುನಾ! ಸಂಕ್ಷಿಪ್ತವಾಗಿ ಹೇಳುತ್ತೇನೆ, ಕೇಳು ॥೫೦॥

ಆದರೆ ಯಾರೋ ಒಬ್ಬರಾದ ಮಹಾಭಾಗ್ಯಶಾಲಿಗೆ ಶ್ರೀಗುರುಗಳ ಕೃಪೆಯಾದಾಗ ಇದೇ ಆತ್ಮಸಿದ್ಧಿಯು ಪ್ರಾಪ್ತವಾಗುವುದು ॥೯೮೪॥

ಸೂರ್ಯನು ಉದಯವಾಗುತ್ತಲೇ ಅಂಧಕಾರದ ಪ್ರಕಾಶವಾಗುವುದು. ಅಥವಾ ದೀಪದ ಜ್ಯೋತಿಗೆ ಕರ್ಪೂರವು ಹಚ್ಚಿದಾಕ್ಷಣವೇ ದೀಪವಾಗುವುದು ॥೯೮೫॥

ಅಥವಾ ಉಪ್ಪಿನ ಹರಳನ್ನು ನೀರಿನಲ್ಲಿ ಕೂಡಿಸಿದಾಗಲೇ ಅದು ಜಲರೂಪವಾಗಿ ಬಿಡುವುದು ॥೯೮೬॥

ಅಥವಾ ಮಲಗಿದವನಿಗೆ ಎಚ್ಚರ ಮಾಡಲು ಆತನಿಗೆ ಮಿಥ್ಯವಾದ ಸ್ವಪ್ನ ಸಹ ನಿದ್ರೆಯು ಹೋಗಿ, ಆತನು ತನ್ನ ಮೂಲ ಸ್ವರೂಪಕ್ಕೆ ಪ್ರಾಪ್ತನಾಗುವನು ॥೯೮೭॥

ಅದರಂತೆ, ದೈವ ಯೋಗದಿಂದ ಯಾವನ ವೃತ್ತಿಯು ಗುರುವಾಕ್ಯ ಶ್ರವಣವಾದೊಡನೆ ಭೇದದ ನಾಶವಾಗಿ ಸ್ವರೂಪದಲ್ಲಿ ಸ್ಥಿರವಾಗುವುದೋ ॥೯೮೮॥

ಆಗ ಆತನಿಗೆ ಯಾವುದೇ ಒಂದು ಕರ್ಮ ಮಾಡುವುದು ಉಳಿಯುವುದು, ಎಂದು ಯಾರು ಹೇಳುವರು ? ಆಕಾಶವು ಸರ್ವತ್ರ ತುಂಬಿರುವುದರಿಂದ ಆಕಾಶಕ್ಕೆ ಹೋಗುವ, ಬರುವ ಕ್ರಿಯೆಯು ಇರುವುದೇ? ॥೯೮೯॥

ಆದ್ದರಿಂದ ಯಾರಿಗೆ ಆತ್ಮಸಿದ್ಧಿಯಾಗಿದೆಯೋ, ಆತನಿಗೆ ನಿಜವಾಗಿಯೂ ಯಾವುದೊಂದೂ ಕರ್ತವ್ಯವು ಉಳಿಯುವುದಿಲ್ಲ ॥೯೯೦॥

ಆದರೆ ಯಾವನೋ ಒಬ್ಬ ಭಾಗ್ಯವಾನನಿಗೆ ಗುರುಗಳ ವಚನವು ಕಿವಿಗೆ ಬಿದ್ದಾಕ್ಷಣವೇ ಆತ್ಮ ಸಾಕ್ಷಾತ್ಕಾರವಾಗುವುದು ॥೯೯೧॥

ಇಂಥ ಅಧಿಕಾರಿ ಹೊರತಾದ ಮಂದಾಧಿಕಾರಿಯು ಸ್ವಕರ್ಮರೂಪ ಅಗ್ನಿಯಲ್ಲಿ ಕಾಮ್ಯ ಕರ್ಮ ಹಾಗೂ ನಿಷಿದ್ಧ ಕರ್ಮವೆಂಬ ಅಗ್ನಿಯಲ್ಲಿ ರಜ, ತಮ ಗುಣಗಳನ್ನು ಮೊದಲು ಸುಟ್ಟು ಬಿಡುವನು ॥೯೯೨॥

ತದನಂತರ ಪುತ್ರ, ವಿತ್ತ, ಸ್ವರ್ಗಾದಿ ಲೋಕ ಈ ಮೂರರ ಅಭಿಲಾಷೆಯು ಇವನ ಸ್ವಾಧೀನವಾಗಿ ಮನೆಯಲ್ಲಿ ಸೇವಕರಾದವು ॥೯೯೩॥

ಬೇರೆ ಬೇರೆ ನಿಷಿದ್ಧ ವಿಷಯಗಳಲ್ಲಿ ಪ್ರವೇಶಿಸಿದ್ದಕ್ಕೆ ಇಂದ್ರಿಯಗಳು ಮೈಲಿಗೆ ಹೊಂದಿದ್ದನ್ನು ಅಷ್ಟಾಂಗ ಯೋಗದಲ್ಲಿನ ಪ್ರತ್ಯಾಹಾರರೂಪ ತೀರ್ಥದಲ್ಲಿ ಸ್ನಾನ ಮಾಡಿಸಿ ಪವಿತ್ರ ಮಾಡಲಾಯಿತು ॥೯೯೪॥

ಮತ್ತು ಸ್ವಧರ್ಮದ ಆಚರಣೆಯಿಂದ ಪ್ರಾಪ್ತವಾಗುವ ಫಲವನ್ನು ಈಶ್ವರಾರ್ಪಣ ಮಾಡಿ ಆತನ ಪ್ರಸಾದದಿಂದ ನಾಶವಾಗದ ವೈರಾಗ್ಯವನ್ನು ಪಡೆಯಲಾಯಿತು ॥೯೯೫॥

ಈ ಪ್ರಕಾರವಾಗಿ ಆತ್ಮ ಸಾಕ್ಷಾತ್ಕಾರರೂಪವಾದ ಜ್ಞಾನವಾಗಲು ಬೇಕಾಗುವ ಸಾಧನೆಗಳ ಸಾಮಗ್ರಿಗಳನ್ನು ಕೂಡಿಸಲಾಯಿತು ॥೯೯೬॥

ಮತ್ತು ಆ ಪ್ರಸಂಗದಲ್ಲಿ ಸದ್ಗುರುವಿನ ದರ್ಶನವಾಗಿ ಮತ್ತು ಅವರು ಸರಳ ಹೃದಯದಿಂದ ಸಮ್ಯಕ್ ಜ್ಞಾನದ ಉಪದೇಶವನ್ನು ಮಾಡಿದರು ॥೯೯೭॥

ಆದರೆ ಔಷಧವನ್ನು ತೆಗೆದುಕೊಂಡಾಕ್ಷಣವೇ ತತ್ಕಾಲದಲ್ಲಿ ರೋಗದ ನಿವೃತ್ತಿಯಾಗಿ ತನ್ನ ಮೂಲದ ಸ್ಥಿತಿಗೆ ಪ್ರಕೃತಿ ಬರುವುದೇ ? ಅಥವಾ ಸೂರ್ಯನು ಉದಯವಾದಾಕ್ಷಣವೇ ಮಧ್ಯಾಹ್ನವಾಗುವುದೇ ? ॥೯೯೮॥

ಸುಕ್ಷೇತ್ರೀ ಆಣಿ ವೊಲಟೇ । ಬೀಜಹೀ ಪೇರಿಲೇ ಗೋಮಟೇ । ತರೀ ಆಲೋಟ ಫಳ ಭೇಟೇ । ಪರೀ ವೇಳೇ ಕೀ ಗಾ ।೯೯೯॥ ಜೋಡಲಾ ಮಾರ್ಗು ಪ್ರಾಂಜಳು । ಮಿನಲಾ ಸುಸಂಗಾಚಾಹೀ ಮೇಳು । ತರೀ ಪಾವಿಜೇ ವಾಂಚೂನಿ ವೇಳು । ಲಾಗೇಚಿ ಕೀ ।೧೦೦೦॥ ತೈಸಾ ವೈರಾಗ್ಯಲಾಭು ಜಾಲಾ । ವರೀ ಸದ್ಗುರುಹೀ ಭೇಟಲಾ । ಜೀವಿ ಅಂಕುರು ಫುಟಲಾ । ವಿವೇಕಾಚಾ ।೧೦೦೧॥ ತೇಣೇ ಬ್ರಹ್ಮ ಏಕ ಆಥೀ । ಯೇರ ಆಘವೀಚಿ ಭ್ರಾಂತೀ । ಹೇಂಹೀ ಕೀರ ಪ್ರತೀತೀ । ಗಾಢ ಕೇಲೀ ।೧೦೦೨॥ ಪರೀ ತೇಂಚಿ ಜೇ ಪರಬ್ರಹ್ಮ । ಸರ್ವಾತ್ಮಕ ಸರ್ವೋತ್ತಮ । ಮೋಕ್ಷಾಂಚೇಹೀ ಕಾಮ । ಸರೇ ಜೇಥ ।೧೦೦೩॥ ಯಯಾ ತಿನ್ಹೀ ಅವಸ್ಥಾ ಪೋಟೀ । ಜಿರವೀ ಜೇ ಗಾ ಕಿರೀಟೀ । ತಯಾ ಜ್ಞಾನಾಸಿಹೀ ಮಿಠೀ । ದೇ ಜೇ ವಸ್ತು ।೧೦೦೪॥ ಐಕ್ಯಾಚೇ ಏಕಪಣ ಸರೇ । ಜೇಥ ಆನಂದ ಕಣುಹೀ ವಿರೇ । ಕಾಂಹೀಂಚಿ ನುರೋನಿ ಉರೇ । ಜೇ ಕಾಂಹೀ ಗಾ ।೧೦೦೫॥ ತಿಯೇ ಬ್ರಹ್ಮೀ ಐಕ್ಯಪಣೇ । ಬ್ರಹ್ಮಚಿ ಹೋಊನಿ ಅಸಣೇ । ತೇ ಕ್ರಮೇಂಚಿ ಕರೂನಿ ತೇಣೇ । ಪಾವಿಜೇ ಪೈ ।೧೦೦೬॥ ಭುಕೇಲಿಯಾಪಾಸೀ । ವೋಗರಿಲೇ ಷಡ್ರಸೀ । ತೋ ತೃಪ್ತಿ ಪ್ರತಿಗ್ರಾಸೀ । ಲಾಹೇ ಜೇವೀ ।೧೦೦೭॥ ತೈಸಾ ವೈರಾಗ್ಯಾಚಾ ವೋಲಾವಾ । ವಿವೇಕಾಚಾ ತೋ ದಿವಾ । ಆಂಬುಥಿತಾ ಆತ್ಮ ಠೇವಾ । ಕಾಢೀಚಿ ತೋ ।೧೦೦೮॥ ತರೀ ಭೋಗಿಜೇ ಆತ್ಮ ಋದ್ಧೀ । ಯೇವಢೀ ಯೋಗ್ಯತೇಚೀ ಸಿದ್ಧೀ । ಜಯಾಚ್ಯಾ ಆಂಗೀ ನಿರವಧೀ । ಲೇಣೇ ಜಾಲೀ ।೧೦೦೯॥ ತೋ ಜೇಣೇ ಕ್ರಮೇ ಬ್ರಹ್ಮ । ಹೋಣೇ ಕರೀ ಗಾ ಸುಗಮ । ತಯಾ ಕ್ರಮಾಚೇ ಆತಾ ವರ್ಮ । ಆಈಕ ಸಾಂಗೋ ।೧೦೧೦॥

ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ ।
ಶಬ್ದಾದೀನ್ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ।೫೧॥

ತರೀ ಗುರು ದಾವಿಲಿಯಾ ವಾಟಾ । ಯೇಊನ ವಿವೇಕತೀರ್ಥತಟಾ । ಧುಊನಿಯಾ ಮಳಕಟಾ । ಬುದ್ಧೀಚಾ ತೇಣೇ ।೧೦೧೧॥ ಮಗ ರಾಹೂನೇ ಉಗಳಿಲೀ । ಪ್ರಭಾ ಚಂದ್ರೇ ಆಲಿಂಗಿಲೀ । ತೈಸೀ ಶುದ್ಧತ್ವೇ ಜಡಲೀ । ಆಪಣಯಾ ಬುದ್ಧಿ ।೧೦೧೨॥ ಸಾಂಡೂನಿ ಕುಳೇ ದೋನ್ಹೀ । ಪ್ರಿಯಾಸೀ ಅನುಸರೇ ಕಾಮಿನೀ । ದ್ವಂದ್ವತ್ಯಾಗೇ ಸ್ವಚಿಂತನೀ । ಪಡಲೀ ತೈಸೀ ।೧೦೧೩॥ ಆಣಿ ಜ್ಞಾನಾ ಐಸೇ ಜಿವ್ಹಾರ । ನೇವೋ ನೇವೋ ನಿರಂತರ । ಇಂದ್ರಿಯೀ ಕೇಲೇ ಥೋರ । ಶಬ್ದಾದಿಕ ಜೇ ।೧೦೧೪॥

ಉತ್ತಮ ಭೂಮಿಗೆ ಮಳೆಯಾದಾಗ ಉತ್ತಮ ಬೀಜವನ್ನು ಬಿತ್ತಿದ ಮೇಲೆ ಬಹಳಷ್ಟು ಪೀಕು ಬರುವುದು. ಆದರೆ ಅರ್ಜುನಾ, ಅದಕ್ಕೆ ವೇಳೆ ಹಿಡಿಯುವುದಿಲ್ಲವೇ ? ।೯೯೯।।

ಮಾರ್ಗವು ಉತ್ತಮವಾಗಿದ್ದು, ಅದರಲ್ಲಿ ಹೋಗುವಾಗ ಸಂಗಡಿಗರು ಉತ್ತಮವಾಗಿದ್ದರೂ, ಸ್ಥಳವನ್ನು ಮುಟ್ಟಲು ವೇಳೆಯು ಬೇಕಾಗುವುದಿಲ್ಲವೆ ? ।೧೦೦೦।।

ಆದರಂತೆ ವೈರಾಗ್ಯವು ಪ್ರಾಪ್ತವಾಯಿತು, ಅದರಲ್ಲಿ ಸದ್ಗುರುಗಳ ದರ್ಶನವೂ ಆಯಿತು ಮತ್ತು ಜ್ಞಾನ ಪ್ರಾಪ್ತಿ ಮಾಡಿಕೊಳ್ಳುವ ಇಚ್ಛೆಯು ಅಂತಃಕರಣದಲ್ಲಿ ಉಂಟಾಯಿತು ।೧೦೦೧।।

ಆಗ ಅವರ ಉಪದೇಶದಿಂದ ಬ್ರಹ್ಮವೊಂದೇ ಸತ್ಯವಾಗಿದೆ ಮತ್ತು ಇದರ ಹೊರತಾಗಿ ಇತರ ಎಲ್ಲ ಪ್ರಪಂಚವು ಭ್ರಾಂತಿರೂಪವಾಗಿದೆ ಎಂಬುದನ್ನು ಸಾಧಕನು ಕೇಳಿ ಅದರಂತೆ ದೃಢ ನಿಶ್ಚಯವಾಯಿತು ।೧೦೦೨।।

ಆದರೆ ಹೀಗಿರುವ ಯಾವ ಸರ್ವವ್ಯಾಪಕವಾದ ಮತ್ತು ಸರ್ವೋತ್ತಮವಾದ ಪರಬ್ರಹ್ಮನಲ್ಲಿ ಮೋಕ್ಷವೆಂಬ ಶಬ್ದವು ಸಹ ಇಲ್ಲದಂತಾಗುವುದು ।೧೦೦೩।।

ಕಿರೀಟಿಯೇ, ಸಾಧ್ಯ, ಸಾಧಕ ಹಾಗೂ ಸಾಧನ ಈ ತ್ರಿಪುಟಿಯು ಯಾವ ಜ್ಞಾನದಿಂದ ಇಲ್ಲದಾಗುವುದೋ, ಆ ಜ್ಞಾನವು ಈ ಬ್ರಹ್ಮನಲ್ಲಿ ಲಯವಾಗುವುದು ।೧೦೦೪।।

ಅಲ್ಲಿ ಐಕ್ಯದಲ್ಲಿನ ಒಂದೆಂಬುದು ಸಹ ಉಳಿಯುವುದಿಲ್ಲ. ಹಾಗೂ ಅಲ್ಲಿ ಆನಂದ ಸುಖದ ಲೇಶ ಮಾತ್ರವೂ ಉಳಿಯುವುದಿಲ್ಲ. ಅಲ್ಲಿ ಯಾವುದು ಉಳಿಯದೇ, ಯಾವುದು ಉಳಿಯುವುದೋ ।೧೦೦೫।।

ಹೀಗಿರುವ ಬ್ರಹ್ಮವು, ಆ ಬ್ರಹ್ಮನಲ್ಲಿ ಐಕ್ಯನಾಗಿ ಇರುವುದೆಂದರೆ ಅದಕ್ಕೆ ಮಂದಾಧಿಕ್ಯದಿಂದ ಕ್ರಮದಿಂದಲೇ ಪ್ರಾಪ್ತವಾಗುವುದು ।೧೦೦೬।।

ಹಸಿದವನಿಗೆ ಎದುರಿಗೆ ಷಡ್ರಸ ಪಕ್ವಾನ್ನದ ತಾಟನ್ನು ಬಡಿಸಿದಾಗ ಆತನು ಒಂದೇ ಸಲ ತೃಪ್ತನಾಗದೇ, ಪ್ರತಿಯೊಂದು ತುತ್ತಿನಿಂದ ತೃಪ್ತಿಯು ಬೆಳೆಯುತ್ತ, ಬೆಳೆಯುತ್ತ ಕೊನೆಯ ತುತ್ತಿಗೆ ಪೂರ್ಣ ತೃಪ್ತನಾಗುವನು ।೧೦೦೭।।

ಆದರಂತೆ ಯಾವ ಸಾಧಕನು ವೈರಾಗ್ಯದ ಆಶ್ರಯದಿಂದ ಹಾಗೂ ವಿವೇಕರೂಪ ದೀಪದ ಪ್ರಕಾಶದಿಂದ ಆತ್ಮ ರೂಪ ನಿಧಿಯನ್ನು ಪ್ರಾಪ್ತಿ ಮಾಡಿಕೊಳ್ಳುವನು ।೧೦೦೮।।

ಆದಕ್ಕಾಗಿ ಆತ್ಮ ರೂಪ ಐಶ್ವರ್ಯವನ್ನು ಭೋಗಿಸುವ ಯಾವ ಸಾಧಕನ ಅಂಗದಲ್ಲಿ ನಿಜವಾಗಿಯೂ ಯೋಗ್ಯತೆಯು ಪ್ರಾಪ್ತವಾದಲ್ಲಿ ।೧೦೦೯।।

ಆತನು ಯಾವ ಕ್ರಮದಿಂದ ಬ್ರಹ್ಮಪ್ರಾಪ್ತಿಯನ್ನು ಸುಲಭವನ್ನಾಗಿ ಮಾಡಿಕೊಳ್ಳುವ ಆ ಕ್ರಮದ ಮರ್ಮವನ್ನು ನಿನಗೆ ಹೇಳುವೆನು, ಕೇಳು ।೧೦೧೦।।

ಶ್ಲೋಕಾರ್ಥ :- ಪರಿಶುದ್ಧವಾದ ಬುದ್ಧಿಯುಳ್ಳವನಾಗಿ ಮನಸ್ಸನ್ನು ನಿಗ್ರಹಿಸಿ, ಶಬ್ದಾದಿ ವಿಷಯಗಳನ್ನು ಬಿಟ್ಟು ರಾಗದ್ವೇಷಗಳನ್ನು ಶೂನ್ಯ ಮಾಡಿ ।೫೧।।

ಶ್ರೀಗುರುಗಳು ತೋರಿಸಿದ ಮಾರ್ಗದಿಂದ ವಿವೇಕ ತೀರ್ಥದ ದಂಡೆಗೆ ಬಂದು ಬುದ್ಧಿಯ ಹೊಲಸನ್ನು ಆತನು ತೊಳೆದು ಬಿಡುವನು ।೧೦೧೧।।

ಆಗ ರಾಹುಗ್ರಸ್ತನಾದ ಚಂದ್ರನ ಪ್ರಭೆಯು ಅದರಿಂದ ಮುಕ್ತವಾದಾಗ ಅದು ಚಂದ್ರನಲ್ಲಿ ಆಲಂಗಿಸುವಂತೆ, ದುರ್ವಾಸನೆಯಿಂದ ಭ್ರಷ್ಟಗೊಂಡ ಬುದ್ಧಿಯು ಶುದ್ಧವಾಗಿ ಮೂಲಸ್ಥಿತಿಯನ್ನು ಹೊಂದುವುದು ।೧೦೧೨।।

ಕುಲಸ್ತ್ರೀಯು ತನ್ನ ಎರಡೂ ಕುಲದ ಅಭಿಮಾನವನ್ನು ಬಿಟ್ಟು ಕೇವಲ ತನ್ನ ಪತಿಗೆ ಅನುಕೂಲಳಾಗುವಂತೆ, ಬುದ್ಧಿಯು ದ್ವೈತಭಾವನೆಯನ್ನು ಬಿಟ್ಟು ಆತ್ಮ ಚಿಂತನದಲ್ಲಿಯೇ ಮುಳುಗುವುದು ।೧೦೧೩।।

ಜ್ಞಾನದಂತಹ ಪ್ರಿಯ ವಸ್ತುವು ನಿರಂತರವಾಗಿ ವಿಷಯದತ್ತ ಒಯ್ದು ಇಂದ್ರಿಯಗಳು ಶಬ್ದ ವಿಷಯಗಳ ಮಹತ್ವವನ್ನು ಬೆಳೆಸಿರುವುವು ।೧೦೧೪।।

ತೇ ರಶ್ಮಿ ಜಾಳ ಕಾಢಲೇಯಾ । ಮೃಗಜಳ ಜಾಯ ಲಯಾ । ತೈಸೇ ಧೃತಿರೋಧೇ ತಯಾ । ಪಾಂಚಾಂಹೀ ಕೇಲೇ ॥೧೦೧೫॥ ನೇಣತಾ ಅಧಮಾಚಿಯಾ ಅನ್ನಾ । ಖಾದಲಿಯಾ ಕೀಜೇ ವಮನಾ । ತೈಸೀ ವೋಕವಿಲೇ ಸವಾಸನಾ । ಇಂದ್ರಿಯೇ ವಿಷಯೀ ॥೧೦೧೬॥ ಮಗ ಪ್ರತ್ಯಗಾವೃತ್ತೀ ಚೋಖಟೇ । ಲಾವಿಲೀ ಗಂಗೇಚೇನಿ ತಟೇ । ಐಸೀ ಪ್ರಾಯಶ್ಚಿತ್ತೇ ಧುವಟೇ । ಕೇಲೀ ಯೇಣೇ ॥೧೦೧೭॥ ಪಾಠೀ ಸಾತ್ವಿಕೇ ಧೀರೇ ತೇಣೇ । ಶೋಧಾರಿಲೀ ತಿಯೇ ಕರಣೇ । ಮಗ ಮನೇಂಸೀ ಯೋಗಧಾರಣೇ । ಮೇಳವಿಲೀ ॥೧೦೧೮॥ ತೇವೀಂಚಿ ಪ್ರಾಚೀನೇ ಇಷ್ಟಾನಿಷ್ಟೇ । ಭೋಗೇಂಸೀ ಯೇಉನೀ ಭೇಟೇ । ತೇಥ ದೇಖಲಿಯಾಹೀ ವೋಖಟೇ । ದ್ವೇಷು ನ ಕರೀ ॥೧೦೧೯॥ ನಾ ಗೋಮಟೇಂಚಿ ವಿಪಾಯೇ । ತೇ ಆಣೂನಿ ಪುಢಾ ಸೂಯೇ । ತಯಾಲಾಗೀ ನ ಹೋಯೇ । ಸಾಭಿಲಾಷು ॥೧೦೨೦॥ ಯಾಪರೀ ಇಷ್ಟಾನಿಷ್ಟೀ । ರಾಗದ್ವೇಷ ಕಿರೀಟೀ । ತ್ಯಜೂನಿ ಗಿರಿಕಪಾಟೀ । ನಿಕುಂಜೀ ವಸೇ ॥೧೦೨೧॥

ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ ।
ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥೫೨॥

ಗಜಬಜಾ ಸಾಂಡಿಲಿಯಾ । ವಸವೀ ವನಸ್ಥಳಿಯಾ । ಅಂಗಾಚಿಯಾಚಿ ಮಾಂದಿಯಾ । ಏಕಲೇಯಾ ॥೧೦೨೨॥ ಶಮದಮಾದಿಕೀ ಖೇಳೇ । ನ ಬೋಲಣೇಚಿ ಚಾವಳೇ । ಗುರುವಾಕ್ಯಾಚೇನಿ ಮೇಳೇ । ನೇಣೇ ವೇಳು ॥೧೦೨೩॥ ಆಣಿ ಆಂಗಾಬಳ ಯಾವೇ । ನಾತರೀ ಕ್ಷುಧಾ ಜಾವೇ । ಕಾ ಜೀಭೇಚೇ ಪುರವಾವೇ । ಮನೋರಥ ॥೧೦೨೪॥ ಭೋಜನ ಕರಿತಾಂವಿಖೀ । ಯಯಾ ತಿಹೀಂತೇ ನ ಲೇಖೀ । ಆಹಾರೀ ಮಿತೀ ಸಂತೋಷೀ । ಮಾಪ ನ ಸೂಯೇ ॥೧೦೨೫॥ ಅಶನಾಚೇನಿ ಪಾವಕೇ । ಹಾರಪತಾ ಪ್ರಾಣು ಪೋಖೇ । ಇತುಕಿಯಾಚಿ ಭಾಗು ಮೋಟಕೇ । ಅಶನ ಕರೀ ॥೧೦೨೬॥ ಆಣಿ ಪರಪುರುಷೇ ಕಾಮಿಲೀ । ಕುಳವಧು ಆಂಗ ನ ಘಾಲೀ । ನಿದ್ರಾಲಸ್ಯಾ ನ ಮೋಕಲೀ । ಆಸನ ತೈಸೇ ॥೧೦೨೭॥ ದಂಡವತಾಚೇನಿ ಪ್ರಸಂಗೇ । ಭುಯೀ ಹನ ಅಂಗ ಲಾಗೇ । ವಾಂಚೂನಿ ಯೇರ ನೇಘೇ । ರಾಭಸ್ಯ ತೇಥ ॥೧೦೨೮॥ ದೇಹನಿರ್ವಾಹಾಪುರತೇ । ರಾಹಾಟವೀ ಹಾತಾಂಪಾಯಾಂತೇ । ಕಿಂಬಹುನಾ ಆಪೈತೇ । ಸಬಾಹ್ಯ ಕೇಲೇ ॥೧೦೨೯॥ ಆಣಿ ಮನಾಚಾ ಉಂಬರಾ । ವೃತ್ತೀಸೀ ದೇಖೋ ನೇದೀ ವೀರಾ । ತೇಥ ಕೇ ವಾಗ್ವ್ಯಾಪಾರಾ । ಅವಕಾಶು ಅಸೇ ॥೧೦೩೦॥

ಆದರೆ ಸೂರ್ಯನ ಕಿರಣಗಳು ಇಲ್ಲದಾಗಲು ಮೃಗ ಜಲವು ತಾನೇ ಇಲ್ಲದಾಗುವಂತೆ, ಧೈರ್ಯದಿಂದ ವೃತ್ತಿಯ ನಿರೋಧ ಮಾಡಿದಲ್ಲಿ, ಐದೂ ವಿಷಯಗಳು ತಾವೇ ಇಲ್ಲದಾಗುವುವು ।।೧೦೧೫।।

ಭ್ರಷ್ಟ ಅಧಮನ ಅನ್ನವನ್ನು ತಿಳಿಯದೇ ತಿಂದಾಗ ಅದನ್ನು ವಾಂತಿಮಾಡಿಕೊಂಡು ಬಿಡುವಂತೆ, ಈತನು ವಾಸನೆಗಳೊಂದಿಗೆ ಇಂದ್ರಿಯಗಳಿಂದ ವಾಂತಿಯನ್ನು ಮಾಡಿಸಿದನು ।।೧೦೧೬।।

ತದನಂತರ ಪ್ರತ್ಯಗಾತ್ಮನಲ್ಲಿ ಅವುಗಳನ್ನು ಹಚ್ಚಿ ಆತ್ಮರೂಪ ಗಂಗೆಯ ದಂಡೆಯಲ್ಲಿ ಅವುಗಳಿಂದ ಉತ್ತಮವಾದ ಪ್ರಾಯಶ್ಚಿತ್ತವನ್ನು ಮಾಡಿಸಿದನು ।।೧೦೧೭।।

ಆಮೇಲೆ ಸಾತ್ತ್ವಿಕ ಧೈರ್ಯದಿಂದ ಆ ಎಲ್ಲ ಇಂದ್ರಿಯಗಳನ್ನು ಶುದ್ಧ ಮಾಡಿ ಮತ್ತು ಮನಸ್ಸಿಗೆ ಯೋಗಾಭ್ಯಾಸವನ್ನು ಮಾಡಲು ಹಚ್ಚಿದನು ।।೧೦೧೮।।

ಹಾಗೆಯೇ, ಪೂರ್ವ ಕರ್ಮಗಳ ಯೋಗದಿಂದ ಉತ್ತಮ, ಅಥವಾ ಹೀನ ಭೋಗಗಳು ಪ್ರಾಪ್ತವಾದಾಗ ಅವುಗಳಲ್ಲಿ ಹೀನ ಭೋಗಕ್ಕಾಗಿ ದ್ವೇಷ ಮಾಡುವುದಿಲ್ಲ ।।೧೦೧೯।।

ಅಥವಾ ಸಹಜವಾಗಿ ಉತ್ತಮ ಭೋಗಗಳನ್ನು ಭೋಗಿಸುವ ಸಮಯ ಒದಗಿದರೂ, ಆ ವಿಷಯಕ್ಕೆ ಅಭಿಲಾಷೆಯನ್ನು ಹಿಡಿಯುವುದಿಲ್ಲ ।।೧೦೨೦।।

ಈ ಪ್ರಕಾರವಾಗಿ ಕಿರೀಟಿಯೇ, ಇಷ್ಟ ಅಥವಾ ಅನಿಷ್ಟ ಭೋಗಗಳ ವಿಷಯದಲ್ಲಿ ಹರ್ಷ ಅಥವಾ ಶೋಕವನ್ನು ಬಿಟ್ಟು ಪರ್ವತದ ಗುಹೆಗಳಲ್ಲಿ ಅಥವಾ ನಿರ್ಜನವಾದ ಅರಣ್ಯದಲ್ಲಿ ವಾಸ ಮಾಡುವನು ।।೧೦೨೧।।

ಶ್ಲೋಕಾರ್ಥ :- ಏಕಾಂತವಾಗಿಯೂ, ಮಿತಾಹಾರಿಯೂ, ಮನೋವಾಕ್ಕಾಯಗಳನ್ನು ನಿಯಮಿಸುವವನೂ, ವೈರಾಗ್ಯಶೀಲನೂ ।।೫೨।।

ಯಾವ ಸ್ಥಳದಲ್ಲಿ ಜನರ ಗಡಿಬಿಡಿ ಇರುವುದಿಲ್ಲವೋ, ಅಂಥ ಅರಣ್ಯದಲ್ಲಿ ತಾನೊಬ್ಬನೇ, ಅವಯವಗಳ ಸಮುದಾಯದೊಂದಿಗೆ ವಸತಿ ಮಾಡುವನು ।।೧೦೨೨।।

ಇಂದ್ರಿಯಗಳನ್ನು ಹಾಗೂ ಮನಸ್ಸನ್ನು ನಿಗ್ರಹಿಸುವುದೇ ಆತನ ಕ್ರೀಡೆಯಾಗಿರುವುದು. ಮಾತನಾಡದೇ ಇರುವುದು ಆತನ ಮಾತಾಗಿರುವುದು. ಗುರುವಾಕ್ಯದ ಮನನದಿಂದ ಬೇರೆ ಯಾವ ಚಿಂತನೆಯನ್ನು ಮಾಡಲು ಆತನಿಗೆ ವೇಳೆಯೇ ದೊರಕುವುದಿಲ್ಲ ।।೧೦೨೩।।

ಮತ್ತು ತನ್ನ ಶರೀರದಲ್ಲಿ ಶಕ್ತಿಯು ಬರಬೇಕು, ಹಸಿವೆಯು ಇಲ್ಲದಾಗಬೇಕು ಹಾಗೂ ನಾಲಿಗೆಯ ಬಯಕೆಯು ತೀರಬೇಕು ।।೧೦೨೪।।

ಈ ಮೂರು ಮಾತುಗಳನ್ನು ಭೋಜನ ಪ್ರಸಂಗದಲ್ಲಿ ಪರಿವೆ ಮಾಡುವುದಿಲ್ಲ ಮತ್ತು ಆತನ ಆಹಾರಕ್ಕೆ ಪ್ರಮಾಣ ಪತ್ರ ಇರುವುದು. ಆದರೆ ಸಂತೋಷದ ಅಳತೆಯನ್ನು ಮಾಡಲು ಬರುವುದಿಲ್ಲ ।।೧೦೨೫।।

ಅನ್ನ ಪಚನ ಮಾಡುವ ಜಠರಾಗ್ನಿಗೆ ಯಾವ ಆಹಾರವನ್ನು ಕೊಡದಿದ್ದರೆ, ಅದು ಪ್ರಾಣವನ್ನು ನಾಶ ಮಾಡೀತು ಎಂದು ಪ್ರಾಣ ರಕ್ಷಣೆಯಾಗುವಷ್ಟು ಆಹಾರವನ್ನು ಸೇವಿಸುವನು ।।೧೦೨೬।।

ಮತ್ತು ಪರ ಪುರುಷನು ಇಚ್ಛಿಸಿದರೂ ಕುಲಸ್ತ್ರೀಯು ಆತನ ವಶವಾಗುವುದಿಲ್ಲ. ಅದರಂತೆ ನಿದ್ರೆ ಅಥವಾ ಆಲಸ್ಯಕ್ಕೆ ವಶನಾಗಿ ತನ್ನ ಆಸನವನ್ನು ಕದಲಿಸಲಾರನು ।।೧೦೨೭।।

ಯಾರಿಗಾದರೂ ದಂಡವತ ಮಾಡುವ ಪ್ರಸಂಗ ಬಂದಾಗ ಯಾವುದೇ ವೇಳೆಯಲ್ಲಿ ತನ್ನ ಶರೀರವನ್ನು ಭೂಮಿಗೆ ಹಚ್ಚುವನು. ಆದರೆ ನಿದ್ರೆಗಾಗಿ ಅವಿಚಾರದಿಂದ ಬೇಕೆನಿಸಿದಾಗ ಭೂಮಿಗೆ ಶರೀರವನ್ನು ಹಚ್ಚುವುದಿಲ್ಲ ।।೧೦೨೮।।

ಶರೀರ ನಿರ್ವಾಹಕ್ಕೆ ಬೇಕಾಗುವಷ್ಟೇ ಕೈ ಕಾಲುಗಳ ಉಪಯೋಗವನ್ನು ಪಡೆಯುವನು. ಹೆಚ್ಚಿಗೇನು ಹೇಳಬೇಕು ? ಈತನು ಅಂತಃಕರಣ ಹಾಗೂ ಬಾಹ್ಯೇಂದ್ರಿಯಗಳನ್ನು ಸ್ವಾಧೀನದಲ್ಲಿ ಇಟ್ಟಿರುವನು ।।೧೦೨೯।।

ಮತ್ತು ವೀರನೇ, ತನ್ನ ವೃತ್ತಿಯನ್ನು ಮನದ ಹೊಸ್ತಿಲದವರೆಗೂ ಬರಗೊಡುವುದಿಲ್ಲ. ಆತನಲ್ಲಿ ಹೇಳುವ, ನಡೆಯುವ ಇತ್ಯಾದಿ ವ್ಯವಹಾರಕ್ಕೆ ಎಲ್ಲಿಂದ ಆಸ್ಪದವು ದೊರೆಯಬೇಕು ।।೧೦೩೦।।

ಐಸೇನಿ ದೇಹ ವಾಚಾ ಮಾನಸ । ಹೇ ಜಿಣೌನಿ ಬಾಹ್ಯ ಪ್ರದೇಶ । ಆಕಳಿಲೇ ಆಕಾಶ । ಧ್ಯಾನಾಚೇ ತೇಣೇ ।।೧೦೩೧।। ಗುರುವಾಕ್ಯೆ ಉತವಿಲಾ । ಬೋಧೀ ನಿಶ್ಚಯೋ ಆಪುಲಾ । ನ್ಯಾಹಾಲೀ ಹಾತೀ ಘೇತಲಾ । ಆರಿಸಾ ಜೈಸಾ ।।೧೦೩೨।। ಪೈ ಧ್ಯಾತಾ ಆಪಣಚಿ ಪರೀ। ಧ್ಯಾನರೂಪ ವೃತ್ತಿಮಾಝಾರೀ । ಧ್ಯೇಯತ್ವೇ ಘೇ ಹೇ ಅವಧಾರೀ । ಧ್ಯಾನ ರೂಢೀ ಗಾ ।।೧೦೩೩।। ತೇಥ ಧ್ಯೇಯ ಧ್ಯಾನ ಧ್ಯಾತಾ । ಯಯಾ ತಿಹೀ ಏಕರೂಪತಾ । ಹೋಯ ತಂವ ಪಂಡುಸುತಾ । ಕೀಜೆ ತೇಗಾ ।।೧೦೩೪।। ಮ್ಹಣೌನಿ ತೋ ಮುಮುಕ್ಷು । ಆತ್ಮಜ್ಞಾನೀ ಜಾಲಾ ದಕ್ಷು । ಪರೀ ಪುಢಾಸೂನಿ ಪಕ್ಷು । ಯೋಗಾಭ್ಯಾಸಾಚಾ ।।೧೦೩೫।। ಅಪಾನ ರಂಧ್ರದ್ವಯಾ । ಮಾಝಾರೀ ಧನಂಜಯಾ । ಪಾರ್ಷ್ಣೀ ಪಿಡೂನಿಯಾ । ಕಾಂವರುಮೂಳ ।।೧೦೩೬।। ಆಕುಂಚೂನಿ ಅಧ । ದೇಊನಿ ತಿನ್ಹೀ ಬಂಧ । ಕರೂನಿ ಏಕವದ । ವಾಯುಭೇದೀ ।।೧೦೩೭।। ಕುಂಡಲಿನೀ ಜಾಗವೂನೀ । ಮಧ್ಯಮಾ ವಿಕಾಶೂನೀ । ಆಧಾರಾದಿ ಭೇದೂನಿ । ಆಜ್ಞಾವರೀ ।।೧೦೩೮।। ಸಹಸ್ರದಳಾಚಾ ಮೇಘು । ಪೀಯೂಷೇ ವರ್ಷೋನಿ ಚಾಂಗು । ತೋ ಮೂಳವರೀ ವೋಘು । ಆಣೂನಿಯಾ ।।೧೦೩೯।। ನಾಚತಯಾ ಪುಣ್ಯಗಿರೀ । ಚಿದ್ಭೈರವಾಚ್ಯಾ ಖಾಪರೀ । ಮನಪವನಾಚೀ ಖೀಚ ಪುರೀ । ವಾಢೂನಿಯಾ ।।೧೦೪೦।। ಜಾಲಿಯಾ ಯೋಗಾಚಾ ಗಾಢಾ । ಮೇಳಾವಾ ಸೂನಿ ಹಾ ಪುಢಾ । ಧ್ಯಾನ ಮಾಗಿಲೀಕಡಾ । ಸ್ವಯಂಭ ಕೇಲೇ ।।೧೦೪೧।। ಆಣಿ ಧ್ಯಾನ ಯೋಗ ದೋನ್ಹೀ । ಇಯೇ ಆತ್ಮತತ್ತ್ವಜ್ಞಾನೀ । ಪೈರೀ ಹೋಆವಯಾ ನಿರ್ವಿಘ್ನೀ । ಆಧೀಂಚಿ ತೇಣೇ ।।೧೦೪೨।। ವೀತರಾಗತೇಸಾರಿಖಾ । ಜೋಡೂನಿ ಠೇವಿಲಾ ಸಖಾ । ತೋ ಆಘವಿಯಾಚಿ ಭೂಮಿಕಾ । ಸವೇ ಚಾಲೇ ।।೧೦೪೩।। ಪಹಾವೇ ದಿಸೇ ತಂವವರೀ । ದಿಠೀತೇ ನ ಸಂಡೀ ದೀಪ ಜರೀ । ತರೀ ಕೇ ಆಹೇ ಅವಸರೀ । ದೇಖಾವಯಾ ।।೧೦೪೪।। ತೈಸೇ ಮೋಕ್ಷೀ ಪ್ರವರ್ತಲಯಾ । ವೃತ್ತೀ ಬ್ರಹ್ಮೀ ಜಾಯ ಲಯಾ । ತಂವ ವೈರಾಗ್ಯ ಆಥೀ ತಯಾ । ಭಂಗು ಕೈಚಾ ।।೧೦೪೫।। ಮ್ಹಣೌನಿ ಸವೈರಾಗ್ಯ । ಜ್ಞಾನಾಭ್ಯಾಸು ತೋ ಸಭಾಗ್ಯ । ಕರೂನಿ ಜಾಲಾ ಯೋಗ್ಯ । ಆತ್ಮಲಾಭಾ ।।೧೦೪೬।। ಐಸೀ ವೈರಾಗ್ಯಾಚೀ ಅಂಗೀ । ಬಾಣೂನಿಯಾ ವಜ್ರಾಂಗೀ । ರಾಜಯೋಗತುರಂಗೀ । ಆರೂಢಲಾ ।।೧೦೪೭।। ವರೀ ಆಡ ಪಡಿಲೇ ದಿಠೀ । ಸಾನೇ ಥೋರ ನಿವಟೀ । ತೇ ಬಳೀ ವಿವೇಕಮುಷ್ಟೀ । ಧ್ಯಾನಾಚೇ ಖಾಂಡೇ ।।೧೦೪೮।।

ಈ ಪ್ರಕಾರವಾಗಿ ಶರೀರ, ವಾಣಿ ಹಾಗೂ ಮನಸ್ಸು ಈ ಎಲ್ಲವನ್ನೂ ಜಯಿಸಿ ಈತನು ಧ್ಯಾನಾಕಾಶವನ್ನು ಸ್ವಾಧೀನಪಡಿಸಿಕೊಂಡಿರುವನು ।।೧೦೩೧।।

ಕನ್ನಡಿಯನ್ನು ಕೈಯಲ್ಲಿ ತೆಗೆದುಕೊಂಡಾಗ ತನ್ನ ಸ್ವರೂಪವು ಸ್ಪಷ್ಟವಾಗಿ ಕಾಣುವಂತೆ, ಗುರುವಾಕ್ಯದ ಬೋಧದಿಂದ ತನ್ನ ಬೋಧದ ನಿಶ್ಚಯವನ್ನು ಮಾಡಿರುವನು ।।೧೦೩೨।।

ಧ್ಯಾನವನ್ನು ಮಾಡುವ ಧ್ಯಾತಾ, ಆತನ ವೃತ್ತಿಯಾದ ಧ್ಯಾನರೂಪ ವೃತ್ತಿಯು, ಹಾಗೂ ಆ ವೃತ್ತಿಯು ಯಾವುದರ ಧ್ಯಾನ ಮಾಡುವ ಧ್ಯೇಯ, ಈ ಮೂರು ತ್ರಿಪುಟಿಗಳನ್ನು ತನ್ನಲ್ಲಿ ಕಾಣುವನು ।।೧೦೩೩।।

ಹೇ ಪಂಡುಸುತನೇ, ಅಲ್ಲಿ ಧ್ಯೇಯ, ಧ್ಯಾನ ಹಾಗೂ ಧ್ಯಾತಾ ಈ ತ್ರಿಪುಟಿಗಳನ್ನು ಮರೆತು ಕೇವಲ ಒಂದೇ ರೂಪವಾಗುವವರೆಗೂ ಧ್ಯಾನವನ್ನು ಮಾಡಬೇಕಾಗುವುದು ।।೧೦೩೪।।

ಆದ್ದರಿಂದ ಈ ಮೋಕ್ಷೇಚ್ಛು ಪುರುಷನು ಆತ್ಮಜ್ಞಾನ ವಿಷಯದಲ್ಲಿ ದಕ್ಷನಾಗುವನು, ಯೋಗಾಭ್ಯಾಸದ ಪಕ್ಷವನ್ನು ಮುಂದು ಮಾಡುವನು ।।೧೦೩೫।।

ಧನಂಜಯನೇ, ಗುದ ಹಾಗೂ ಶಿಶ್ನ ಈ ಎರಡರ ಮಧ್ಯಭಾಗದಲ್ಲಿ ಕಾಲಿನ ಹಿಮ್ಮಡದಿಂದ ಒತ್ತಿ ಮೂಲಬಂಧ ಮಾಡುವನು ।।೧೦೩೬।।

ಅಧೋಭಾಗವನ್ನು ಸಂಕುಚಗೊಳಿಸಿ ಮೂಳಬಂಧ, ಓಡಿಯಾಣ ಬಂಧ ಹಾಗೂ ಜಲಂಧರ ಬಂಧ ಈ ಮೂರು ಬಂಧಗಳಿಂದ ವಾಯುವಿನ ಭೇದವನ್ನು ಮುರಿದು ಒಂದೇ ವಿಧವಾಗಿ ಮಾಡುವನು ।।೧೦೩೭।।

ಈ ಪ್ರಕಾರವಾಗಿ ಪ್ರಾಣಗಳ ರೋಧವಾಯಿತೆಂದರೆ ಕುಂಡಲಿನಿಯು ಜಾಗ್ರತವಾಗಿ ಮಧ್ಯಮಾ ಎಂದರೆ ಸುಷುಮ್ನಾ ಮಾರ್ಗವು ಸರಳವಾಗುವುದು ಮತ್ತು ಆಧಾರ ಚಕ್ರದಿಂದ ಆಜ್ಞಾ ಚಕ್ರದವರೆಗೆ ಪ್ರಾಣಭೇದವನ್ನು ಮಾಡಿ ಮೇಲಕ್ಕೆ ಹೋಗುವುದು ।।೧೦೩೮।।

ಆಗ ಬ್ರಹ್ಮರಂಧ್ರದ ಸಹಸ್ರ ಕಮಲರೂಪ ಮೇಘದಿಂದ ಅಮೃತದ ವೃಷ್ಟಿಯಾಗುವುದು. ಅದರ ಓಘವು ಸುಷುಮ್ನಾ ನಾಡಿಯಿಂದ ಮೂಲಬಂಧದವರೆಗೆ ಬರುವುದು ।।೧೦೩೯।।

ಆಗ ಮೂರ್ಧ್ನಿ ಆಕಾಶದಲ್ಲಿ ಚೈತನ್ಯರೂಪ ಭೈರವನ ಪಾತ್ರೆಯಲ್ಲಿನ ಮನ ಹಾಗೂ ವಾಯುವಿನ ಖಿಚಡಿಯನ್ನು ಬಡಿಸುವನು ।।೧೦೪೦।।

ಈ ಪ್ರಕಾರವಾಗಿ ಈತನು ಯೋಗ ಸಾಧನೆಯ ಬಲವಾದ ಕೂಡಿಕೆಯನ್ನು ಮುಂದುಮಾಡಿ ಅದರ ಹಿಂದೆ ಧ್ಯಾನವನ್ನು ನಿಶ್ಚಿತಗೊಳಿಸುವನು ।।೧೦೪೧।।

ಮತ್ತು ಧ್ಯಾನ ಹಾಗೂ ಯೋಗ ಈ ಎರಡು ನಿರ್ವಿಘ್ನದಿಂದ ಆತ್ಮಜ್ಞಾನದಲ್ಲಿ ಪ್ರಾಪ್ತವಾಗುವ ಪೂರ್ವದಲ್ಲಿಯೇ ।।೧೦೪೨।।

ಈತನು ವೈರಾಗ್ಯದಂತಹ ಪರಮ ಮಿತ್ರನ ಸಂಗತಿಯನ್ನು ಕೂಡಿಸಿ ಇಟ್ಟಿರುವನು. ಆ ವೈರಾಗ್ಯವು ಸಾಧಕನ ಭೂಮಿಕೆಯ ತಕ್ಕಂತೆ ಆತನ ಸಂಗಡವೇ ಇರುವುದು ।।೧೦೪೩।।

ತನಗೆ ಏನನ್ನು ಕಾಣಬೇಕಾಗಿದೆಯೋ, ಅದು ಕಾಣದಿದ್ದಾಗ, ದೀಪದ ಸಂಗಾತಿ ಇರಲು ನೋಡಲಿಕ್ಕೆ ತಡವೇಕೆ ? ।।೧೦೪೪।।

ಅದರಂತೆ ಮೋಕ್ಷ ಪ್ರಾಪ್ತಿಯಾಗಬೇಕೆಂದು ಪ್ರವೃತ್ತನಾದ ಸಾಧಕನಿಗೆ ಆತನ ಬುದ್ಧಿಯು ಬ್ರಹ್ಮ ಸ್ವರೂಪದಲ್ಲಿ ಲಯವಾಗುವವರೆಗೂ ವೈರಾಗ್ಯದ ಸಂಗಾತಿ ಇದ್ದಮೇಲೆ ಮೋಕ್ಷಪ್ರಾಪ್ತಿಗೆ ಎಲ್ಲಿಯ ಭಂಗ ? ।।೧೦೪೫।।

ಆದ್ದರಿಂದ ವೈರಾಗ್ಯಯುಕ್ತ ಜ್ಞಾನದ ಅಭ್ಯಾಸವನ್ನು ಮಾಡುವ ಭಾಗ್ಯವಂತ ಪುರುಷನು ಆತ್ಮಲಾಭಕ್ಕೆ ಯೋಗ್ಯನಾಗುವನು ।।೧೦೪೬।।

ಹೀಗೆ ವೈರಾಗ್ಯದ ವಜ್ರಕವಚವನ್ನು ದೇಹದಲ್ಲಿ ಧರಿಸಿ ಇವನು ರಾಜಯೋಗರೂಪ ಕುದುರೆಯ ಮೇಲೆ ಸವಾರಿಯಾಗುವನು ।।೧೦೪೭।।

ಆಗ ತಾನು ಕಂಡ ದೃಶ್ಯಗಳಲ್ಲಿಯ ಚಿಕ್ಕ ದೊಡ್ಡ ಅಡೆತಡೆಗಳನ್ನು ನಿವಾರಿಸಲು ವಿವೇಕರೂಪ ಮುಷ್ಠಿಯಲ್ಲಿ ಧ್ಯಾನವೆಂಬ ಹದವಾದ ಖಡ್ಗವನ್ನು ಧರಿಸುವನು ।।೧೦೪೮।।

ಐಸೇನಿ ಸಂಸಾರರಣಾಆಂತು । ಆಂಧಾರೀ ಸೂರ್ಯು ತೈಸಾ ಅಸೇ ಜಾತು । ಮೋಕ್ಷವಿಜಯಶ್ರೀಯೇ ವರೈತು । ಹೋ ಆವಯಾಲಾಗೀ ॥೧೦೪೯॥

ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ ।
ವಿಮುಚ್ಯ ನಿರ್ಮಮಃ ಶಾಂತೋ ಬ್ರಹ್ಮ ಭೂಯಾಯ ಕಲ್ಪತೇ ॥೫೩॥

ತೇಥ ಆಡವಾವಯಾ ಆಲೇ । ದೋಷವೈರೀ ಜೇ ಧೋಪಟಿಲೇ । ತಯಾಂಮಾಜೀ ಪಹಿಲೇ । ದೇಹಾಹಂಕಾರು ॥೧೦೫೦॥ ಜೋ ನ ಮೋಕಲೀ ಮಾರುನೀ । ಜೀವೋ ನೇದೀ ಉಪಜವೋನೀ । ವಿಚಂಬವೀ ಖೋಢಾ ಘಾಲುನೀ । ಹಾಡಾಂಚಿಯಾ ॥೧೦೫೧॥ ತಯಾಚಾ ದೇಹದುರ್ಗ ಹಾ ಥಾರಾ। ಮೋಡೂನಿ ಘೇತಲಾ ತೋ ವೀರಾ । ಆಣಿ ಬಳ ಹಾ ದುಸರಾ ।ಮಾರಿಲಾ ವೈರೀ ॥೧೦೫೨॥ ಜೋ ವಿಷಯಾಚೇನಿ ನಾಂವೇ । ಚೌಗುಣೇಂಹೀ ವರೀ ಥಾಂವೇ । ಜೇಣೇ ಮೃತಾವಸ್ಥಾ ಧಾಂವೇ । ಸರ್ವತ್ರ ಜಗಾ ॥೧೦೫೩॥ ತೋ ವಿಷಯ ವಿಷಾಚಾ ಅಥಾವೋ । ಆಘವಿಯಾ ಧೋಷಾಂಚಾ ರಾವೋ । ಪರೀ ಧ್ಯಾನಖಡ್ಗಾ ಚಾ ಘಾವೋ । ಸಾಹೇಲ ಕೈಚಾ ? ॥೧೦೫೪॥ ಆಣಿ ಪ್ರಿಯ ವಿಷಯಪ್ರಾಪ್ತೀ । ಕರೀ ಜಯಾ ಸುಖಾಚೀ ವ್ಯಕ್ತೀ । ತೇಚಿ ಘಾಲೂನಿ ಬುಂಥೀ । ಆಂಗೀ ಜೋ ವಾಜೇ ॥೧೦೫೫॥ ಜೋ ಸನ್ಮಾರ್ಗಾ ಭುಲವೀ । ಮಗ ಅಧರ್ಮಾಚ್ಯಾ ಆಡವೀ । ಸೂನಿ ವಾಘಾ ಸಾಂಪಡವೀ । ನರಕಾದಿಕಾ ॥೧೦೫೬॥ ತೋ ವಿಶ್ವಾಸೇ ಮಾರಿತಾ ರಿಪು । ನಿವಟೂನಿ ಘಾತಲಾ ದರ್ಪು । ಆಣಿ ಜಯಾಚಾ ಅಹಾ ಕಂಪು । ತಾಪಸಾಂಸೀ ॥೧೦೫೭॥ ಕ್ರೋಧಾ ಐಸಾ ಮಹಾದೋಖು । ಜಯಾಚಾ ದೇಖಾ ಪರಿಪಾಕು । ಭರಿಜೇ ತಂವ ಅಧಿಕು । ರಿತಾ ಹೋಯ ಜೋ ॥೧೦೫೮॥ ತೋ ಕಾಮು ಕೋಣೇಚ ಠಾಯೀ । ನಸೇ ಐಸೇ ಕೇಲೇ ಪಾಹೀ । ಕೀ ತೇಂಚಿ ಕ್ರೋಧಾಹೀ । ಸಹಜೇ ಆಲೇ ॥೧೦೫೯॥ ಮುಳಾಚೇ ತೋಡಣೇ ಜೈಸೇ । ಹೋಯ ಕಾ ಶಾಖೋದ್ದೇಶೇ । ಕಾಮು ನಾಶಲೇನಿ ನಾಶೇ । ತೈಸಾ ಕ್ರೋಧು ॥೧೦೬೦॥ ಮ್ಹಣೌನಿ ಕಾಮ ವೈರೀ । ಜಾಲಾ ಜೇಥ ಠಾಣೋರೀ । ತೇಥ ಸರಲೀ ವಾರೀ । ಕ್ರೋಧಾಚೀಹೀ ॥೧೦೬೧॥ ಆಣಿ ಸಮರ್ಥು ಆಪುಲಾ ಖೋಡಾ । ಶಿಸೇ ವಾಹವೀ ಜೈಸಾ ಹೋಡಾ । ತೈಸಾ ಭುಂಜೌನಿ ಜೋ ಗಾಢಾ । ಪರಿಗ್ರಹೋ ॥೧೦೬೨॥ ಜೋ ಮಾಥಾಂಚಿ ಪಾಲಾಣವೀ । ಅಂಗಾ ಅವಗುಣ ಘಾಲವೀ । ಜೀವೇ ದಾಂಡೀ ಘೇವವೀ । ಮಮತ್ವಾಚೀ ॥೧೦೬೩॥

ಸೂರ್ಯನು ಕತ್ತಲೆಯಲ್ಲಿ ಅನುಮಾನವಿಲ್ಲದೇ ಪ್ರವೇಶಿಸುವಂತೆ ಈತನು ಮೋಕ್ಷರೂಪ ವಿಜಯ ಲಕ್ಷ್ಮಿಯನ್ನು ಒರೆಸಲು ಸಂಸಾರವೆಂಬ ರಣರಂಗದಲ್ಲಿ ಅನುಮಾನವಿಲ್ಲದೇ ಪ್ರವೇಶಿಸುವನು ॥೧೦೪೯॥

ಶ್ಲೋಕಾರ್ಥ :- ಅಹಂಕಾರ, ಅಭಿಮಾನ, ಡಂಭ, ಕಾಮ, ಕ್ರೋಧ, ವಸ್ತುಸಂಗ್ರಹ, ಇವುಗಳನ್ನು ತ್ಯಜಿಸಿದವನೂ, ಮಮಕಾರರಹಿತನೂ, ಶಾಂತನೂ, ಆದ ಪುರುಷನು ಬ್ರಹ್ಮಸ್ವರೂಪವನ್ನು ಪಡೆಯಲು ಸಮರ್ಥನಾಗುತ್ತಾನೆ ॥೫೩॥

ಅಲ್ಲಿ ಆತನಿಗೆ ಅಡ್ಡಿ ಮಾಡಲು ಬಂದಿರುವ ದೋಷರೂಪ ವೈರಿಗಳನ್ನು ಅವನು ಕೊಲ್ಲುವನು. ಅವುಗಳ ಪೈಕಿ ಮೊದಲನೆಯ ವೈರಿಯು ''ದೇಹಾಂಕಾರ''ವಾಗಿರುವುದು ॥೧೦೫೦॥

ಯಾವ ಈ ದೇಹಾಂಕಾರವು ಮನುಷ್ಯನನ್ನು ಕೊಲ್ಲುವುದೂ ಇಲ್ಲ, ಸುಖವಾಗಿ ಜೀವಿಸಲೂ ಕೊಡುವುದಿಲ್ಲ. ದೇಹದ ಪಂಜರದಲ್ಲಿ ಸಿಲುಕಿಸಿ ತೊಂದರೆಯನ್ನು ಕೊಡುವುದು ॥೧೦೫೧॥

ಆ ಅಹಂಕಾರ ಇರುವ ಸ್ಥಾನವಾದ ದೇಹರೂಪ ದುರ್ಗವನ್ನು ಒಡೆದು ಹಸ್ತಗತ ಮಾಡಿಕೊಳ್ಳುವನು ಮತ್ತು ಅದರಂತೆಯೇ ವೀರನೇ ''ಬಲ''ವೆಂಬ ಎರಡನೆಯ ವೈರಿಯನ್ನೂ ನಾಶ ಮಾಡುವನು ॥೧೦೫೨॥

ಯಾವ ಬಲವೆಂಬ ವೈರಿಯು ವಿಷಯದ ಹೆಸರು ಕೇಳಿದಾಕ್ಷಣವೇ ನಾಲ್ಕುಪಟ್ಟು ಬೆಳೆದು ಇಡೀ ಜಗಕ್ಕೆ ವಿಷಯದ ಹೊರತಾಗಿ ಬೇರೆ ವಸ್ತುವಿನ ಪ್ರಜ್ಞೆ ಇರದಂತೆ ಮಾಡಿ ಎಲ್ಲ ಜಗಕ್ಕೆ ಮೃತಾವಸ್ಥೆಗೆ ತರುವುದು ॥೧೦೫೩॥

ಯಾವ ಬಲವೆಂಬ ವೈರಿಯು ವಿಷಯರೂಪದ ಕೇವಲ ಮಡುವು ಆಗಿದ್ದು, ಎಲ್ಲ ದೋಷಗಳ ರಾಜನಾಗಿರುವುದು. ಆದಾಗ್ಯೂ, ಅದಕ್ಕೆ ಧ್ಯಾನರೂಪ ಖಡ್ಗದ ಹೊಡೆತವನ್ನು ಸಹಿಸುವುದು ಹೇಗೆ ಸಾಧ್ಯ ? ॥೧೦೫೪॥

ಮತ್ತು ಪ್ರಿಯ ವಿಷಯಗಳ ಪ್ರಾಪ್ತಿಯಾದಾಗ ಅದಕ್ಕೆ ಪರಮಾನಂದವು ಆಗುವುದು ಮತ್ತು ಅದೇ ಆನಂದದಿಂದ ಜೀವಕ್ಕೆ ಆಚ್ಛಾದಿಸುವುದು ॥೧೦೫೫॥

ಇದು ಸನ್ಮಾರ್ಗ ವಿಷಯಕ್ಕೆ ಮರೆವು ತಂದು ಹಾಗೂ ಅಧರ್ಮದ ಅರಣ್ಯದಲ್ಲಿ ನೂಕಿ ನರಕಾದಿರೂಪ ಹುಲಿಯ ದವಡೆಗೆ ಕೊಡುವುದು ॥೧೦೫೬॥

ಇಂಥ ಯಾವ ವಿಶ್ವಾಸಘಾತವಾದ ಗರ್ವ ಶತ್ರುವನ್ನು ಅವನು ಕೊಂದು ಬಿಡುವನು ಮತ್ತು ಯಾವ ಕಾಮನನ್ನು ಹೆದರಿ ತಪಸ್ವಿಗಳು ಗಡಗಡನೇ ನಡುಗುವರು ॥೧೦೫೭॥

ಭಯಂಕರವಾದ ಕ್ರೋಧವು ಕಾಮದ ಪರಿಣಾಮವಾಗಿರುವುದು ಮತ್ತು ಈ ಕಾಮದ ಬಯಕೆಗಳನ್ನು ಪೂರೈಸಿದಂತೆಲ್ಲ ಇನ್ನೂ ಅಧಿಕವಾಗಿ ಬೆಳೆಯುವುದು ॥೧೦೫೮॥

ಇಂಥ ಕಾಮವನ್ನು ಅದನ್ನು ಎಲ್ಲಿಯೂ ಇರದಂತೆ ಮಾಡಿದ ಮೇಲೆ ಕ್ರೋಧದ ಅದೇ ಮಾರ್ಗವು ಸಹಜವಾಗಿ ಆಗುವುದು ॥೧೦೫೯॥

ಗಿಡದ ಬೇರನ್ನು ಕಿತ್ತೊಗೆದರೆ ಟೊಂಗೆಗಳ ನಾಶವು ಸಹಜವಾಗಿಯೇ ಆಗುವಂತೆ, ಕಾಮದ ನಾಶವಾದಾಗ ಕ್ರೋಧದ ನಾಶವು ಸಹಜವಾಗಿಯೇ ಆಗುವುದು ॥೧೦೬೦॥

ಆದ್ದರಿಂದ ''ಕಾಮ''ವೈರಿಯನ್ನು ಕೊಂದು ಹಾಕಲು ಕ್ರೋಧದ ಬರುಹೋಗುವುದು ಸಹಜವಾಗಿ ತಪ್ಪುವುದು ॥೧೦೬೧॥

ಮತ್ತು ಯಾವ ಪ್ರಕಾರವಾಗಿ ರಾಜನು ಯಾವ ಅಪರಾಧಿಗೆ ಕಾಲಿನಲ್ಲಿ ಬೇಡಿಯನ್ನು ಹಾಕಬೇಕಾಗಿದೆಯೋ, ಆತನ ತಲೆಯ ಮೇಲೆ ಅದನ್ನು ಪ್ರತಿಜ್ಞೆಯೊಂದಿಗೆ ಹೊರಲು ಹಚ್ಚುವಂತೆ, ಪರಿಗ್ರಹವು ಭೋಗವನ್ನು ಕೊಟ್ಟು ಬಲಾಢ್ಯವಾಗಿದೆ ॥೧೦೬೨॥

ಯಾವ ಪರಿಗ್ರಹವು ತನ್ನ ಅಧಿಕಾರವನ್ನು ಜೀವದ ತಲೆಯ ಮೇಲೆ ಇಡುವುದು, ಶರೀರದಲ್ಲಿ ಅವಗುಣವನ್ನು ಹಾಕುವುದು ಮತ್ತು ಜೀವನ ಕಡೆಯಿಂದ ಮಮತ್ವದ ಊರುಗೋಲು ಹಿಡಿಸುವುದು ॥೧೦೬೩॥

ಶಿಷ್ಯಶಾಸ್ತ್ರಾದಿವಿಲಾಸೇ । ಮಠಾದಿಮುದ್ರೇಚೇನಿ ಮಿಸೇ । ಘಾತಲೇ ಆಹಾತೀ ಫಾಂಸೇ । ನಿಸಂಗಾ ಜೇಣೇ ॥೧೦೬೪॥ ಘರೀ ಕುಟುಂಬಪಣೇ ಸರೇ । ತರೀ ವನೀ ವನ್ಯ ಹೋಊನಿ ಅವತರೇ । ನಾಗವೀಯಾಹೀ ಶರೀರೇ । ಲಾಗಲಾ ಆಹೇ ॥೧೦೬೫॥ ಐಸಾ ದುರ್ಜಯೋ ಜೋ ಪರಿಗ್ರಹೋ । ತಯಾಚಾ ಫೇಡೂನಿ ಠಾವೋ । ಭವವಿಜಯಾಚಾ ಉತ್ಸಾಹೋ । ಭೋಗೀತಸೇ ಜೋ ॥೧೦೬೬॥ ತೇಥ ಅಮಾನಿತ್ವಾದಿ ಆಘವೇ । ಜ್ಞಾನಗುಣಾಚೇ ಜೇ ಮೇಳಾವೇ । ತೇ ಕೈವಲ್ಯ ದೇಶೀಂಚೇ ಆಘವೇ । ರಾವೋ ಜೈಸೇ ಆಲೇ ॥೧೦೬೭॥ ತೇವ್ಹಾ ಸಮ್ಯಕ್‌ಜ್ಞಾನಾಚಿಯಾ । ರಾಣಿವಾ ಉಗಾಣೂನಿ ತಯಾ । ಪರಿವಾರು ಹೋ ಊನಿಯಾ । ರಾಹತ ಆಂಗೇ ॥೧೦೬೮॥ ಪ್ರವೃತ್ತೀಚಿಯೇ ರಾಜಬಿದೀ । ಅವಸ್ಥಾ ಭೇದಪ್ರಮದೀ । ಕೀಜತ ಆಹೇ ಪ್ರತಿಪದೀ । ಸುಖಾಚೇ ಲೋಣ ॥೧೦೬೯॥ ಪುಢಾ ಬೋಧಾಚಿಯೆ ಕಾಂಬೀವರೀ । ವಿವೇಕುದೃಶ್ಯಾಚೀ ಮಾಂದೀ ಸಾರೀ । ಯೋಗಭೂಮಿಕಾ ಆರತೀ ಕರೀ । ಯೇತೀ ಜೈಸಿಯಾ ॥೧೦೭೦॥ ತೇಥ ಋದ್ಧಿಸಿದ್ಧೀಂಚೀ ಅನೇಗೇ । ವೃಂದೇ ಮಿಳತೀ ಪ್ರಸಂಗೇ । ತಿಯೇ ಪುಷ್ಪವರ್ಷೀ ಆಂಗೇ । ನಾಹಾತಸೇ ತೋ ॥೧೦೭೧॥ ಐಸೇನಿ ಬ್ರಹ್ಮೈಕ್ಯಾಸಾರಿಖೇ । ಸ್ವರಾಜ್ಯ ಯೇತಾ ಜವಳಿಕೇ । ಝಳಂಬಿತ ಆಹೇ ಹರಿಖೇ । ತಿನ್ಹೀ ಲೋಕ ॥೧೦೭೨॥ ತೇವ್ಹಾ ವೈರಿಯಾ ಕಾ ಮೈತ್ರಿಯಾ । ತಯಾಸಿ ಮಾರೆಂಥೀ ಮ್ಹಣಾವಯಾ । ಸಮಾನತಾ ಧನಂಜಯಾ । ಉರೇಚಿಹೀ ನಾ ॥೧೦೭೩॥ ಹೇ ನಾ ಭಲತೇಣೇ ವ್ಯಾಜೇ । ತೋ ಜಯಾತೇ ಮ್ಹಣೇ ಮಾರೆಂಝೀ । ತೇ ನೋಡವೇಚಿ ಕಾ ದುಜೇ । ಅದ್ವಿತೀಯ ಜಾಲಾ ॥೧೦೭೪॥ ಪೈ ಆಪುಲಿಯಾ ಏಕೀ ಸತ್ತಾ । ಸರ್ವಹೀ ಕವಳೂನಿಯಾ ಪಂಡುಸುತಾ । ಕಹೀ ನ ಲಗತೀ ಮಮತಾ । ಧಾಡಿಲೀ ತೇಣೇ ॥೧೦೭೫॥ ಐಸಾ ಜಿಂತಿಲಿಯಾ ರಿಪುವರ್ಗು । ಅಪಮಾನಿಲಿಯಾ ಹೇ ಜಗು । ಅಪೈಸಾ ಯೋಗತುರಂಗು । ಸ್ಥಿರ ಜಾಲಾ ॥೧೦೭೬॥ ವೈರ್ರಾಗ್ಯಾಚೇ ಗಾಢಲೇ । ಅಂಗೀ ತ್ರಾಣ ಹೋತೇ ಭಲೇ । ತೇಂಹೀ ನಾವೇಕ ಢಿಲೇ । ತೇವ್ಹಾ ಕರೀ ॥೧೦೭೭॥ ಆಣಿ ನಿವಟೀ ಧ್ಯಾನಾಚೇ ಖಾಂಡೇ । ತೇ ದುಜೇ ನಾಹೀಂಚಿ ಪುಡೇ । ಮ್ಹಣೌನಿ ಹಾತು ಆಸುಡೇ । ವೃತ್ತಿ ಚಾಹೀ ॥೧೦೭೮॥ ಜೈಸೇ ರಸೌಷಧ ಖರೇ । ಆಪುಲೇ ಕಾಜ ಕರೂನಿ ಪುರೇ । ಆಪಣಹೀ ನುರೇ । ತೈಸೇ ಹೋತಸೇ ॥೧೦೭೯॥ ದೇಖೋನಿ ಠಾಕೀತಾ ಠಾವೋ । ಧಾಂವತಾ ಥಿರಾವೇ ಪಾವೋ । ತೈಸಾ ಬ್ರಹ್ಮ ಸಾಮಿಪ್ಯೇ ಥಾವೋ । ಅಭ್ಯಾಸು ಸಾಂಡೀ ॥೧೦೮೦॥

ಈ ಪರಿಗ್ರಹವು ಶಿಷ್ಯ ಶಾಸ್ತ್ರಾದಿಕಗಳನ್ನು ಕೂಡಿಸುವ ಕ್ರೀಡೆಯಿಂದ ಹಾಗೂ ಮಠ ಕಟ್ಟಿಸುವುದು, ಖೇಚರೀ ವಗೈರೆ ಮುದ್ರೆಗಳನ್ನು ತೋರಿಸುವುದು ಇತ್ಯಾದಿನಿಮಿತ್ತದಿಂದ ನಿಸಂಗ ಪುರುಷನಿಗೆ (ಸಂಗದ) ಬಲೆಯಲ್ಲಿ ಹಾಕುವುದು ।।೧೦೬೪।।

ವೈರಾಗ್ಯಶೀಲ ಪುರುಷನು ಕುಟುಂಬಾದಿ ಸಂಸಾರದ ತ್ಯಾಗ ಮಾಡಿ ಅರಣ್ಯಕ್ಕೆ ಹೋದರೂ, ಆತನಿಂದ ಪರಿಗ್ರಹವು ವನದಲ್ಲಿರುವ ಪದಾರ್ಥಗಳ ಮೇಲೆ ಮಮತ್ವವನ್ನು ಇಡಿಸುವುದು ।।೧೦೬೫।।

ಇಂಥ ಅಂಜಿಕ್ಯವಾದ ಪರಿಗ್ರಹ ವೈರಿಯನ್ನು ಹೇಳ ಹೆಸರಿಲ್ಲದಂತೆ ಮಾಡಿ, ಯಾವ ಪುರುಷನು ಸಂಸಾರವನ್ನು ಜಯಿಸಿದ ಆನಂದವನ್ನು ಭೋಗಿಸುವನು ।।೧೦೬೬।।

ಆತನ ಭೇಟಿಗೆ ಜ್ಞಾನಗುಣದ ಅಮಾನಿತ್ವಾದಿ ಎಲ್ಲ ಸಮುದಾಯವು ಮೋಕ್ಷರೂಪ ದೇಶದ ಮಾಂಡಲಿಕ ರಾಜರು ಬರುವರು ।।೧೦೬೭।।

ಆಗ ಯಥಾರ್ಥ ಜ್ಞಾನವು ಇದೇ ಸಾರ್ವಭೌಮ ರಾಜ್ಯವನ್ನು ಆ ಸಾಧಕನಿಗೆ ಅರ್ಪಿಸಿ ತಾವು ಆತನ ಪರಿವಾರರಾಗಿ ಇರುವರು ।।೧೦೬೮।।

ಪ್ರವೃತ್ತಿರೂಪ ರಾಜಮಾರ್ಗದಿಂದ ಆತನು ಹೊರಟನೆಂದರೆ, ಮೂರು ಅವಸ್ಥೆರೂಪ ಸ್ತ್ರೀಯರು ಬಂದು ಆತನ ಮೇಲಿಂದ, ಮೇಲಿಂದ ಮೇಲೆ ತಮ್ಮ ಸುಖದ ನಿವಾಳಿಯನ್ನು ತೆಗೆದು ಒಗೆಯುವರು ।।೧೦೬೯।।

ಮುಂದೆ ವಿವೇಕರೂಪ ಚೋಪದಾರನು ಬಂಗಾರದ ಕಾಠಿಯನ್ನು ಕೈಯಲ್ಲಿ ಹಿಡಿದು ದೃಶ್ಯ ಪದಾರ್ಥಗಳ ದಟ್ಟಣೆಯನ್ನು ಸರಿಸುತ್ತ ನಡೆಯುವನು ಮತ್ತು ಯೋಗ ಭೂಮಿಕೆಯು ಆತನಿಗೆ ಆರತಿಯನ್ನು ಬೆಳಗಲು ಬರುವುದು ।।೧೦೭೦।।

ಆಗ ಋದ್ಧಿ ಸಿದ್ಧಿಗಳ ಅನೇಕ ಸಮುದಾಯಗಳು ಕೂಡಿಕೊಂಡು ಆ ಪ್ರಸಂಗದಲ್ಲಿ ಇವರು ಮಾಡುವ ಪುಷ್ಪ ವೃಷ್ಟಿಯಿಂದ ಈತನು ಎರೆಯಲ್ಪಡುವನು ।।೧೦೭೧।।

ಈ ಪ್ರಕಾರವಾಗಿ ಬಹ್ಮೈಕರೂಪ ಸ್ವರಾಜ್ಯವು ಪ್ರಾಪ್ತವಾಗುವ ವೇಳೆಯು ಹೇಗೆ ಹೇಗೆ ಸಮೀಪ ಬರುತ್ತಿದ್ದಂತೆ ಆತನಿಗೆ ಮೂರುಲೋಕಗಳು ಹರ್ಷದಿಂದ ತುಂಬಿರುವುದು ಕಾಣುವುದು ।।೧೦೭೨।।

ಆಗ ಧನಂಜಯನೇ, ಇವನು ನನ್ನ ವೈರಿಯು ಅಥವಾ ಇವನು ನನ್ನ ಮಿತ್ರನು ಎಂದು, ಇವನು ನನ್ನವನೇ ಇರುವನು ಎಂದು, ಹೇಳಲಿಕ್ಕೆ ಆತನಿಗೆ ಸಮಾನತೆಯು ಉಳಿಯುವುದೇ ಇಲ್ಲ ।।೧೦೭೩।।

ಇಷ್ಟೇ ಅಲ್ಲ, ಆತನು ಯಾರಿಗಾದರು ''ನನ್ನವನು'' ಎಂದು ಹೀಗೆ ಹೇಳಲು ಆತನಿಗೆ ಬೇರೆ ಯಾರೂ ಇರುವುದಿಲ್ಲ. ಕಾರಣ ಆತನು ಅದ್ವಿತೀಯನಾಗಿರುವನು ।।೧೦೭೪।।

ಪಂಡುಸುತನೇ ಇಲ್ಲಿ ನೋಡು, ತನ್ನ ಯಾವ ಸತ್ತೆಯಿಂದ ಎಲ್ಲ ವಿಶ್ವವನ್ನು ವ್ಯಾಪಿಸಿಕೊಂಡಿರುವಾಗ ''ನನ್ನದು'' ಎಂದು ಹೀಗೆ ಹೇಳಲು ಅವಕಾಶವೇ ಇಲ್ಲದಿರುವಾಗ ಮಮತೆಯ ತ್ಯಾಗವಾಗುವುದು ।।೧೦೭೫।।

ಈ ಪ್ರಕಾರವಾಗಿ ಯಾವತ್ತೂ ಅಹಂಕಾರಾದಿ ರಿಪು ವರ್ಗವನ್ನು ಜಯಿಸಿ ಎಲ್ಲ ಜಗತ್ತು ನಾನೇ ಇರುವೆನು ಎಂದು ತಿಳಿದುಕೊಂಡಿರುವುದರಿಂದ ಯೋಗರೂಪ ಕುದುರೆಯ ಓಟವು ತಾನೇ ನಿಲ್ಲುವುದು ।।೧೦೭೬।।

ಮತ್ತು ದೇಹದಲ್ಲಿ ವೈರಾಗ್ಯದ ಬಲವಾದ ಕವಚವನ್ನು ಧರಿಸುವುದನ್ನು ಆ ವೇಳೆಯಲ್ಲಿ ಕ್ಷಣಹೊತ್ತು ಸಡಲಿಸುವನು ।।೧೦೭೭।।

ಮತ್ತೆ ಜ್ಞಾನಖಡ್ಗದಿಂದ ನಾಶವಾಗುವಂತಹದ್ದೂ ಯಾವುದೂ ಉಳಿಯದ್ದಕ್ಕೆ, ಅದನ್ನು ಧರಿಸುವ ವೃತ್ತಿಯೂ ಕೈಯಿಂದ ಜಾರಿ ಬೀಳವುದು ।।೧೦೭೮।।

ನಿಜವಾದ ರಸಾಯನ ಔಷಧವು, ಅದು ರೋಗದ ನಾಶವನ್ನು ಮಾಡಿ ತಾನೂ ನಾಶವಾಗುವುದು. ಹೀಗೆ ಈತನ ಸ್ಥಿತಿಯಾಗುವುದು ।।೧೦೭೯।।

ಅಥವಾ ಮುಕ್ಕಾಮದ ಸ್ಥಳ ನೋಡಿದಾಕ್ಷಣ ಧಾವಿಸುವುದು ನಿಲ್ಲುವುದು. ಅದರಂತೆ ಬ್ರಹ್ಮಪ್ರಾಪ್ತಿಯು ಆದ ನಂತರ ಅಭ್ಯಾಸವು ತಾನೇ ನಿಲ್ಲುವುದು ।।೧೦೮೦।।

ಫುಡತಾ ಮಹೋದಧೀಸೀ । ಗಂಗಾ ವೇಗು ಸಾಂಡೀ ಜೈಸೀ । ಕಾ ಕಾಮಿನೀ ಕಾಂತಾಪಾಸೀ । ಸ್ಥಿರ ಹೋಯ ।।೧೦೮೧।। ನಾನಾ ಫಳತಿಯೇ ವೇಳೇ । ಕೇಳೀಚೀ ವಾಢೀ ಮಾಂಟುಳೇ । ಕಾ ಗಾಂವಾಪುಢೇ ವಳೇ । ಮಾರ್ಗು ಜೈಸಾ ।।೧೦೮೨।। ತೈಸಾ ಆತ್ಮಸಾಕ್ಷಾತ್ಕಾರು । ಹೋಈಲ ದೇಖೋನಿ ಗೋಚರು । ಐಸಾ ಸಾಧನಹತಿ ಯೇರು । ಹಳೂಚಿ ಠೇವೀ ।।೧೦೮೩।। ಮ್ಹಣೌನಿ ಬ್ರಹ್ಮೇಂಸೀ ತಯಾ । ಐಕ್ಯಾಚಾ ಸಮೋ ಧನಂಜಯಾ । ಹೋತಸೇ ತೈ ಉಪಾಯಾ । ವೋಹಟು ಪಡೇ ।।೧೦೮೪।। ಮಗ ವೈರಾಗ್ಯಾಚೀ ಗೋಂಧಳುಕ । ಜೇ ಜ್ಞಾನಾಭ್ಯಾಸಾಚೇ ವಾರ್ಧಕ್ಯ । ಯೋಗಫಳಾಚಾಹೀ ಪರಿಪಾಕ । ದಶಾ ಜೇ ಕಾ ।।೧೦೮೫।। ತೇ ಶಾಂತಿ ಪೈ ಗಾ ಸುಭಗಾ । ಸಂಪೂರ್ಣ ಯೇ ತಯಾಚಿಯಾ ಆಂಗಾ । ತೈ ಬ್ರಹ್ಮ ಹೋಆವಯಾ ಜೋಗಾ । ಹೋಯ ತೋ ಪುರುಷು ।।೧೦೮೬।। ಪುನವೇಹುನಿ ಚತುರ್ದಶೀ । ಜೇತುಲೇ ಉಣೇಪಣ ಶಶೀ । ಕಾ ಸೋಳೇ ಪಾಊನಿ ಜೈಸೀ । ಪಂಧರಾವೀ ವಾನೀ ।।೧೦೮೭।। ಸಾಗರೀಂಹೀ ಪಾಣೀ ವೇಗೇ । ಸಂಚರೇ ತೇ ರೂಪ ಗಂಗೇ । ಯೇರ ನಿಶ್ಚಳ ಜೇ ಉಗೇ । ತೇ ಸಮುದ್ರು ಜೈಸಾ ।।೧೦೮೮।। ಬ್ರಹ್ಮಾ ಆಣಿ ಬ್ರಹ್ಮ ಹೋತಿಯೇ । ಯೋಗ್ಯತೇ ತೈಸಾ ಪಾಡು ಆಹೇ । ತೇಂಚಿ ಶಾಂತಿಚೇನಿ ಲವಲಾಹೇ । ಹೋಯ ತೋಗಾ ।।೧೦೮೯।। ಪೈ ತೇಂಚಿ ಹೋಣೇನವೀಣ । ಪ್ರತೀತೀ ಆಲೇ ಜೇ ಬ್ರಹ್ಮಪಣ । ತೇ ಬ್ರಹ್ಮ ಹೋತೀ ಜಾಣ । ಯೋಗ್ಯತಾ ಯೇಥ ।।೧೦೯೦।।

ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ ।
ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ।।೫೪।।

ತೇ ಬ್ರಹ್ಮಭಾವಯೋಗ್ಯತಾ । ಪುರುಷು ತೋ ಮಗ ಪಂಡುಸುತಾ । ಆತ್ಮಬೋಧ ಪ್ರಸನ್ನತಾ । ಪದೀ ಬೈಸೇ ।।೧೦೯೧।। ಜೇಣೇ ನಿಪಜೇ ರಸಸೋಯ । ತೋ ತಾಪುಹೀ ಜೈ ಜಾಯ । ತೈ ತೇ ಕಾ ಹೋಯ । ಪ್ರಸನ್ನ ಜೈಸೀ ।।೧೦೯೨।। ನಾನಾ ಭರತಿಯಾ ಲಗಬಗಾ । ಶರತ್ಕಾಳೀ ಸಾಂಡಿಜೇ ಗಂಗಾ । ಕಾ ಗೀತ ರಾಹತಾ ಉಪಾಂಗಾ । ವೋಹಟುಪಡೇ ।।೧೦೯೩।। ತೈಸಾ ಆತ್ಮಬೋಧೀ ಉದ್ಯಮು । ಕರಿತಾ ಹೋಯ ಜೋ ಶ್ರಮು । ತೋಹೀ ಜೇಥೇ ಸಮು । ಹೋಊನಿ ಜಾಯ ।।೧೦೯೪।। ಆತ್ಮಬೋಧಪ್ರಶಸ್ತೀ । ಹೇ ತಿಯೇ ದಶೇಚೀ ಖ್ಯಾತೀ । ತೇ ಭೋಗೀತಸೇ ಮಹಾಮತೀ । ಯೋಗ್ಯು ತೋ ಗಾ ।।೧೦೯೫।।

ಗಂಗೆಯು ಸಮುದ್ರವನ್ನು ಸೇರಿದಾಗ ತನ್ನ ವೇಗವನ್ನು ಹೇಗೆ ಬಿಡುವುದೋ, ಅಥವಾ ಕಾಮಿನಿ ಸ್ತ್ರೀಯು ತನ್ನ ಪತಿ ಸಿಕ್ಕಾಗ ಹೇಗೆ ಶಾಂತಳಾಗುವಳೋ ।।೧೦೮೧।।

ಅಥವಾ ಬಾಳೆಯು ಫಲಕೊಟ್ಟಾಗ ಅದರ ಬೆಳವಣಿಗೆ ನಿಲ್ಲುವುದೋ, ಅಥವಾ ಊರು ಬಂದಾಗ ದಾರಿಯು ಹೇಗೆ ಮುಗಿಯುವುದೋ ।।೧೦೮೨।।

ಅದರಂತೆ ತನಗೆ ಆತ್ಮಸಾಕ್ಷಾತ್ಕಾರವಾದೀತೆಂಬುದು ದೃಷ್ಟಿಗೆ ಗೋಚರಿಸಿದಾಗಲೇ, ಸಾಧನರೂಪ ಶಸ್ತ್ರಗಳನ್ನು ಮೆಲ್ಲನೇ ಕೆಳಗೆ ಇಡುವನು ।।೧೦೮೩।।

ಆದ್ದರಿಂದ ಧನಂಜಯನೇ, ಬ್ರಹ್ಮನಲ್ಲಿ ಐಕ್ಯವಾಗುವ ವೇಳೆಯಲ್ಲಿ ಎಲ್ಲ ಉಪಾಯಗಳು ಹಿಂದಕ್ಕೆ ಸರಿಯುವುವು ।।೧೦೮೪।।

ವೈರಾಗ್ಯರೂಪ ಗೋಧಳಿ ಲಗ್ನದ ವೇಳೆ, ಅಥವಾ ಜ್ಞಾನರೂಪ ಅಭ್ಯಾಸದ ವೃದ್ಧತನವು, ಅಥವಾ ಯೋಗರೂಪ ಫಲದ ಪರಿಪಕ್ವದಶೆಯು ।।೧೦೮೫।।

ಹೀಗಿರುವ ಶಾಂತಿಯು, ಅರ್ಜುನನೇ, ಆತನಿಗೆ ಸಂಪೂರ್ಣವಾಗಿ ಪ್ರಾಪ್ತವಾಗುವುದು. ಆಗ ಆ ಪುರುಷನು ಬ್ರಹ್ಮಸ್ವರೂಪನಾಗಲು ಯೋಗ್ಯನಾಗುವನು ।।೧೦೮೬।।

ಪೌರ್ಣಿಮೆಕ್ಕಿಂತಲೂ ಚತುರ್ದಶಿ ದಿನದಂದು ಚಂದ್ರನ ಕಲೆಯಲ್ಲಿ ಎಷ್ಟು ಕಡಿಮೆ ಇರುವುದೋ, ಅಥವಾ ಹದಿನಾರಾಣೆ ಒರಿಯ ಬಂಗಾರಕ್ಕಿಂತಲೂ, ಹದಿನೈದಾಣೆ ಒರಿಯ ಬಂಗಾರದ ಎಷ್ಟು ಕಡಿಮೆ ಇರುವುದೋ ।।೧೦೮೭।।

ಯಾವ ಪ್ರಕಾರವಾಗಿ ಸಾಗರದಲ್ಲಿ ಗಂಗೆಯು ಪ್ರವೇಶ ವನ್ನು ಮಾಡಿದಾಗ್ಯೂ, ಅದರ ವೇಗ ಕಾಣಿಸುವ ಸ್ಥಳವು ಗಂಗೆಯಾಗಿದ್ದು, ವೇಗ ಕಾಣಿಸದ ಸ್ಥಳವು ಸಾಗರ ವಾಗಿರುವುದೋ ।।೧೦೮೮।।

ಅದರಂತೆ ಬ್ರಹ್ಮ ಮತ್ತು ಬ್ರಹ್ಮರೂಪವಾಗುವವನ ಅಂತರವಿರುವುದು. ಆ ಅಂತರವು ಶಾಂತಿಯ ಯೋಗದಿಂದ ಕೂಡಲೇ ಇಲ್ಲದಾಗುವುದು ।।೧೦೮೯।।

ಆ ಬ್ರಹ್ಮವು ತಾನು ಆಗುವ ಹೊರತಾಗಿ ಮೂಲ ದಲ್ಲಿಯೇ ಇರುವೆನು, ಹೀಗೆ ಯಾರ ಪ್ರತೀತಿಗೆ ಬಂದಿರುವುದೋ, ಅದೇ ಬ್ರಹ್ಮನಾಗುವ ಯೋಗ್ಯತೆ ಇರುವುದೆಂದು ತಿಳಿ ।।೧೦೯೦।।

ಶ್ಲೋಕಾರ್ಥ :- ಪ್ರಸನ್ನಚಿತ್ತನಾದ ಬ್ರಹ್ಮ ನಿಷ್ಠನು ಏನನ್ನೂ ಕೋರನು ; ಯಾವುದಕ್ಕೂ ದುಃಖಿಸುವುದಿಲ್ಲ, ಇಂಥವನು ಸರ್ವಭೂತಗಳಲ್ಲಿ ಸಮಭಾವವುಳ್ಳವನಾಗಿ ಉತ್ಕೃಷ್ಟವಾದ ನನ್ನ ಭಕ್ತಿಯನ್ನು ಪಡೆದುಕೊಳ್ಳುತ್ತಾನೆ ।।೫೪।।

ಪಂಡುಸುತನೇ, ಈ ಬ್ರಹ್ಮಭಾವದ ಯೋಗ್ಯತೆ ಇರುವ ಪುರುಷನು ಆಗ ಆತ್ಮಬೋಧ ಪ್ರಸನ್ನತೆಯ ಅಧಿಕಾರದ ಮೇಲೆ ಕುಳಿತುಕೊಳ್ಳುವನು ।।೧೦೯೧।।

ಅಗ್ನಿಯಿಂದ ಅಡುಗೆ ತಯಾರಾಗುವುದು. ಅಡುಗೆಯ ಪದಾರ್ಥಗಳಲ್ಲಿ ಅಗ್ನಿಯ ಉಷ್ಣತೆಯು ಇಲ್ಲದಂತಾಗಲು, ಆಗ ಅನ್ನವು ಸಮಾಧಾನಕರವಾಗುವುದು ।।೧೦೯೨।।

ಅಥವಾ ಶರದ್ ಋತುವಿನಲ್ಲಿ ಮಳೆಗಾಲದಿಂದ ದಿನಾಲೂ ಬರುವ ಗಂಗೆಯ ಏರಿಳಿತಗಳು ನಿಲ್ಲುವುವು. ಗಾಯನವು ಮುಗಿದ ಮೇಲೆ ವಾದ್ಯಗಳ ಉಪಕರಣಗಳು ಸಹಜವಾಗಿಯೇ ಬದಿಗೆ ಇರಿಸಲ್ಪಡುವುವು ।।೧೦೯೩।।

ಅದರಂತೆ ಆತ್ಮಜ್ಞಾನ ಪ್ರಾಪ್ತಿಗಾಗಿ ಯಾವ ಶ್ರಮವನ್ನು ಮಾಡಿರುವುದು, ಅದು ಸಹ ಆ ಪ್ರಸನ್ನ ಸ್ಥಿತಿಯಲ್ಲಿ ಐಕ್ಯವಾಗುವುದು ।।೧೦೯೪।।

ಎಲ್ಲಿ ಶ್ರಮದ ನೆನಪು ಸಹ ಇರುವುದಿಲ್ಲವೋ, ಆ ಸ್ಥಿತಿಗೆ ಆತ್ಮಜ್ಞಾನದ ಪ್ರಸನ್ನತೆ ಎಂದು ಹೇಳುವರು. ಅರ್ಜುನಾ, ಈ ಸ್ಥಿತಿಯನ್ನು ಭೋಗಿಸಲು ಆ ಪುರುಷನೇ ಯೋಗ್ಯನು ।।೧೦೯೫।।

ತೇವ್ಹಾ ಆತ್ಮತ್ವೇ ಶೋಚಾವೇ । ಕಾಂಹೀ ಪಾವಾವಯಾ ಕಾಮಾವೇ । ಹೇ ಸರಲೇ ಸಮಭಾವೇ । ಭರಿತೇ ತಯಾ ॥೧೦೯೬॥ ಉದಯಾ ಯೇತಾ ಗಭಸ್ತೀ । ನಾನಾ ನಕ್ಷತ್ರವ್ಯಕ್ತೀ । ಹಾರವಿಜತೀ ದೀಪ್ತೀ । ಆಂಗಿಕಾ ಜೇವೀ ॥೧೦೯೭॥ ತೇವೀ ಉಠತಿಯಾ ಆತ್ಮಪ್ರಥಾ । ಹೇ ಭೂತಭೇದವ್ಯವಸ್ಥಾ । ಮೋಡೀತ ಮೋಡೀತ ಪಾರ್ಥಾ । ವಾಸ ಪಾಹೇ ತೋ ॥೧೦೯೮॥ ಪಾಟಿಯೇವರೀಲ ಅಕ್ಷರೇ । ಜೈಸೀ ಪುಸತಾ ಯೇತೀ ಕರೇ । ತೈಸೀ ಹಾರಪತೀ ಭೇದಾಂತರೇ । ತಯಾಂಚಿಯೇ ದೃಷ್ಟೀ ॥೧೦೯೯॥ ತೈಸೇನಿ ಅನ್ಯಥಾಜ್ಞಾನೇ । ಜಿಯೇ ಘೇಪತೀ ಜಾಗರಸ್ವಪ್ನೇ । ತಿಯೇ ದೋನ್ಹೀ ಕೇಲೀ ಲೀನೇ । ಅವ್ಯಕ್ತಾ ಮಾಜೀ ॥೧೧೦೦॥ ಮಗ ತೇಂಹೀ ಅವ್ಯಕ್ತ । ಬೋಧ ವಾಢತಾ ಝಿಜತ । ಪುರಲಾ ಬೋಧೀ ಸಮಸ್ತ । ಬುಡೋನಿ ಜಾಯ ॥೧೧೦೧॥ ಜೈಸೀ ಭೋಜನಾಚ್ಯಾ ವ್ಯಾಪಾರೀ । ಕ್ಷುಧಾ ಜಿರತ ಜಾಯ ಅವಧಾರೀ । ಮಗ ತೃಪ್ತೀಚ್ಯಾ ಅವಸರೀ । ನಾಹೀಂಚ ಹೋಯ ॥೧೧೦೨॥ ನಾನಾ ಚಾಲೀಚಿಯಾ ವಾಢೀ । ವಾಟ ಹೋತ ಜಾಯ ಥೋಡೀ । ಮಗ ಪಾತಲಾ ಠಾಯೀ ಬುಡೀ । ದೇಊನಿ ನಿಮೇ ॥೧೧೦೩॥ ಕಾ ಜಾಗೃತೀ ಜಂವ ಜಂವ ಉದ್ದಿಪೇ । ತಂವ ತಂವ ನಿದ್ರಾ ಹಾರಪೇ । ಮಗ ಜಾಗೀನಲಿಯಾ ಸ್ವರೂಪೇ । ನಾಹೀಂಚ ಹೋಯ ॥೧೧೦೪॥ ಹೇ ನಾ ಆಪುಲೇ ಪೂರ್ಣತ್ವ ಭೇಟೇ । ಜೇಥ ಚಂದ್ರಾಸೀ ವಾಢೀ ಖುಂಟೇ । ತೇಥ ಶುಕ್ಷಪಕ್ಷು ಆಟೇ । ನಿಃಶೇಷು ಜೈಸಾ ॥೧೧೦೫॥ ತೈಸಾ ಬೋಧ್ಯಜಾತ ಗಿಳಿತು । ಬೋಧು ಬೋಧೇ ಯೇ ಮಜ ಆಂತು । ಮಿಸಳಲಾ ತೇಥ ಸಾದ್ಯಂತು । ಅಬೋಧು ಗೇಲಾ ॥೧೧೦೬॥ ತೇವ್ಹಾ ಕಲ್ಪಾಂತಾಚಿಯೇ ವೇಳೇ । ನದೀ ಸಿಂಧೂಚೇ ಪೇಂಡವಳೇ । ಮೋಡೂನಿ ಭರಲೇ ಜಳೇ । ಆಬ್ರಹ್ಮ ಜೈಸೇ ॥೧೧೦೭॥ ನಾನಾ ಗೇಲಿಯಾ ಘಟ ಮಠ । ಆಕಾಶ ಠಾಕೇ ಏಕವಟ । ಕಾ ಜಳೋನಿ ಕಾಷ್ಠೇ ಕಾಷ್ಠ । ವನ್ಹೀಚಿ ಹೋಯ ॥೧೧೦೮॥ ನಾತರೀ ಲೇಣಿಯಾಂಚೇ ಠಸೇ । ಆಟೋನಿ ಗೇಲಿಯಾ ಮುಸೇ । ನಾಮರೂಪಭೇದೇ ಜೈಸೇ । ಸಾಂಡಿಜೇ ಸೋನೇ ॥೧೧೦೯॥ ಹೇಂಹೀ ಅಸೋ ಚೇಇಲಯಾ । ತೇ ಸ್ವಪ್ನ ನಾಹೀ ಜಾಲಿಯಾ । ಮಗ ಆಪಣಚಿ ಆಪಣಯಾ । ಉರಿಜೇ ಜೈಸೇ ॥೧೧೧೦॥ ತೈಸಾ ಮೀ ಏಕವಾಂಚೂನಿ ಕಾಂಹೀ । ತಯಾ ತಯಾಹೀಸಕಟ ನಾಹೀ । ಹೇ ಚೌಥೀ ಭಕ್ತಿ ಪಾಹೀ । ಮಾಝೀ ತೋ ಲಾಹೇ ॥೧೧೧೧॥

ಆಗ ಐಕ್ಯಭಾವದ ಭರತಿಯು ಬಂದಿರುವುದರಿಂದ ಇಂಥ ವಸ್ತು ನನ್ನದಿದೆ ಎಂದು ಅದಕ್ಕಾಗಿ ಶೋಕಿಸುವುದು, ಅಥವಾ ಏನಾದರೂ ಪ್ರಾಪ್ತಿ ಮಾಡಿಕೊಳ್ಳಬೇಕೆಂದು ಇಚ್ಛಿಸುವುದು, ಇವೆರಡೂ ತಾವೇ ನಿಲ್ಲುವುವು ॥೧೦೯೬॥

ಸೂರ್ಯನು ಉದಯಿಸಿದಾಗ ಯಾವ ಪ್ರಕಾರವಾಗಿ ಎಲ್ಲ ನಕ್ಷತ್ರಗಳು ತಮ್ಮ ಅಂಗದ ತೇಜವನ್ನು ಹೇಗೆ ಕಳೆದುಕೊಳ್ಳುವುವೋ ॥೧೦೯೭॥

ಅದರಂತೆಯೇ ಪಾರ್ಥಾ, ಆತ್ಮಾನುಭಾವವು ಪ್ರಾಪ್ತವಾಯಿತೆಂದರೆ, ಭೂತಗಳಲ್ಲಿ ನೋಡಿದಲ್ಲೆಲ್ಲ ಭೇದಭಾವವು ಮುರಿಯುತ್ತ ಹೋಗಿ, ಆಗ ಅಭೇದ ದೃಷ್ಟಿಯಾಗುವುದು ॥೧೦೯೮॥

ಫಲಕದ ಮೇಲೆ ಬರೆದ ಅಕ್ಷರಗಳನ್ನು ಕೈಯಿಂದ ಒರೆಸಲು ಬರುವಂತೆ, ಆತನ ದೃಷ್ಟಿಯಿಂದ ಎಲ್ಲ ಭೇದ ಹಾಗೂ ದ್ವೈತವು ಇಲ್ಲದಂತಾಗುವುದು ॥೧೦೯೯॥

ಹೀಗೆ ಜಾಗೃತ ಹಾಗೂ ಸ್ವಪ್ನ ಈ ಎರಡು ಅವಸ್ಥೆಗಳಲ್ಲಿನ ವಿಪರೀತ ಜ್ಞಾನಗಳು ಸುಷುಪ್ತರೂಪ ಅಜ್ಞಾನದಲ್ಲಿ ಲೀನವಾಗುವುವು ॥೧೧೦೦॥

ಆಗ ಅನ್ಯಥಾ ಜ್ಞಾನಕ್ಕೆ ಕಾರಣವಾದ ಯಾವ ಅಜ್ಞಾನವು ಅದು ಸಹ ಆತ್ಮಬೋಧವು ಬೆಳೆದಂತೆ ಸವೆಯುತ್ತ ಪೂರ್ಣ ಬೋಧೆಯಲ್ಲಿ ಎಲ್ಲವೂ ಇಲ್ಲದಂತಾಗುವುದು ॥೧೧೦೧॥

ಭೋಜನವನ್ನು ಆರಂಭಿಸಿದಾಗ ಪ್ರತಿಯೊಂದು ತುತ್ತಿನಿಂದ ಹಸಿವು ಕಡಿಮೆಯಾಗುತ್ತ, ಕೊನೆಯ ತುತ್ತಿನಿಂದ ತೃಪ್ತಿಯಾದಾಗ ಹಸಿವು ಪೂರ್ಣವಾಗಿ ಇಲ್ಲದಾಗುವುದು ॥೧೧೦೨॥

ಅಥವಾ ನಡೆಯುವ ಕ್ರಮದಿಂದ ದಾರಿಯು ಕಡಿಮೆಯಾಗುತ್ತ, ಮುಕ್ಕಾಮಕ್ಕೆ ಮುಟ್ಟಿದ ಮೇಲೆ ದಾರಿ ನಡೆಯುವುದೆಲ್ಲವೂ ನಿಲ್ಲವುದು ॥೧೧೦೩॥

ಅಥವಾ ಮನುಷ್ಯನು ಹೇಗೆ ಹೇಗೆ ಮೆಲ್ಲ ಮೆಲ್ಲನೆ ಎಚ್ಚರಾಗುತ್ತ ಹೋಗುವನೋ, ಅದರಂತೆ ನಿದ್ರೆಯು ಕಡಿಮೆಯಾಗುತ್ತ ಹೋಗಿ. ಪೂರ್ಣ ಎಚ್ಚರವಾದಾಗ ನಿದ್ರೆಯು ಸಂಪೂರ್ಣವಾಗಿ ಇಲ್ಲದಾಗುವುದು ॥೧೧೦೪॥

ಅಥವಾ ಪೌರ್ಣಿಮೆಯ ದಿನದಂದು ಪೂರ್ಣ ಕಲೆಗಳು ಪ್ರಾಪ್ತವಾಯಿತೆಂದರೆ, ಚಂದ್ರನ ಬೆಳೆಯುವುದು ನಿಂತು, ಶುಕ್ಲಪಕ್ಷವು ಮುಗಿಯುವುದು ॥೧೧೦೫॥

ಅದರಂತೆ ಬೋಧ್ಯವು ಇಲ್ಲದಂತಾಗಿ, ಪೂರ್ಣ ಬೋಧದಲ್ಲಿ ಬೋಧತನವೂ ಸಮಭಾವದಲ್ಲಿ ಐಕ್ಯ ಹೊಂದಿದಾಗ, ಆ ವೇಳೆಯಲ್ಲಿ ಎಲ್ಲ ಅಜ್ಞಾನವು ಇಲ್ಲದಂತಾಗುವುದು ॥೧೧೦೬॥

ಕಲ್ಪಾಂತದ ವೇಳೆಯಲ್ಲಿ ಎಲ್ಲವೂ ಜಲಮಯ ವಾಗುವುದು. ಆಗ ಸಮುದ್ರ, ನದಿ ಈ ಭೇದವು ಮುರಿದು ಎಲ್ಲವೂ ಜಲಮಯವಾಗುವುದು ॥೧೧೦೭॥

ಅಥವಾ ಘಟ ಮಠಗಳೆಂಬ ಉಪಾಧಿಗಳು ಹೋದ ವೆಂದರೆ ಆಗ ಒಮ್ಮೆಲೆ ಆಕಾಶವೇ ಉಳಿಯುವುದು, ಅಥವಾ ಕಟ್ಟಿಗೆಯು ಇಲ್ಲದಾಗಲು ಅಗ್ನಿಯು ಉಳಿಯುವುದು ॥೧೧೦೮॥

ಅಥವಾ ಎಲ್ಲ ಒಡವೆಗಳನ್ನು ಮುಸಿಯಲ್ಲಿ ಹಾಕಿ ಕರಗಿಸಿದರೆ, ಆಗ ಒಡವೆಗಳ ಹೆಸರು ಮತ್ತು ಆಕಾರ ಯಾವುವೂ ಇಲ್ಲದಾಗಿ, ಕೇವಲ ಬಂಗಾರವಾಗುವುದು ॥೧೧೦೯॥

ಇದು ಇರಲಿ, ಮನುಷ್ಯನು ಎಚ್ಚರನಾದಾಗ ಸ್ವಪ್ನವು ಇಲ್ಲದಾಗುವುದು ಮತ್ತು ಆಗ ಕೇವಲ ತಾನು ಮಾತ್ರ ಉಳಿಯುವನು ॥೧೧೧೦॥

ಅದರಂತೆ ಒಂದು ನನ್ನ ಹೊರತಾಗಿ ಆತನೂ ಸಹ ಆ ಪುರುಷನಿಗೆ ಭೇದವು ಉಳಿಯುವುದಿಲ್ಲ, ಈ ಸ್ಥಿತಿಗೆ ನಾಲ್ಕನೆಯ ಭಕ್ತಿ (ಜ್ಞಾನಿ) ಎನ್ನುವುದು ಆತನಿಗೆ ಪ್ರಾಪ್ತ ವಾಗುವುದು ॥೧೧೧೧॥

ಯೇರ ಆರ್ತು ಜಿಜ್ಞಾಸು ಅರ್ಥಾರ್ಥೀ । ಹೇ ಭಜತೀ ಜಿಯೇ ಪಂಥೀ । ತೇ ತಿನ್ಹೀ ಪಾವೋನಿ ಚೌಥೀ । ಮ್ಹಣಿಪತ ಆಹೇ ॥೧೧೧೨॥ ಯೇರ್ಹವೀ ತಿಜೀ ನಾ ಚೌಥೀ । ಹೇ ಪಹಿಲೀ ನಾ ಸರತೀ । ಪೈ ಮಾಝಿಯೇ ಸಹಜಸ್ಥಿತೀ । ಭಕ್ತಿ ನಾಮ ॥೧೧೧೩॥ ಜೇ ನೇಣಣೇ ಮಾಝೇ ಪ್ರಕಾಶೂನಿ । ಅನ್ಯಥಾತ್ವೇ ಮಾತೇ ದಾಊನಿ । ಸರ್ವಹೀ ಸರ್ವೀ ಭಜೌನಿ । ಬುಝಾವೀತಸೇ ಜೇ ॥೧೧೧೪॥ ಜೋ ಜೇಥ ಜೈಸೇ ಪಾಹೋ ಬೈಸೇ । ತಯಾ ತೇಥ ತೈಸೇಂಚಿ ಅಸೇ । ಹೇ ಉಜಿಯೇಡೇ ಕಾ ದಿಸೇ । ಅಖಂಡೇ ಜೇಣೇ ॥೧೧೧೫॥ ಸ್ವಪ್ನಾಚೇ ದಿಸಣೇ ನ ದಿಸಣೇ । ಜೈಸೇ ಆಪಲೇನಿ ಅಸಲೇಪಣೇ । ವಿಶ್ವಾಚೇ ಆಹೇ ನಾಹೀ ಜೇಣೇ । ಪ್ರಕಾಶೇ ತೈಸೇ ॥೧೧೧೬॥ ಐಸಾ ಹಾ ಸಹಜ ಮಾಝಾ । ಪ್ರಕಾಶು ಜೋ ಕಪಿಧ್ವಜಾ । ತೋ ಭಕ್ತಿ ಯಾ ವೋಜಾ । ಬೋಲಿಜೇ ಗಾ ॥೧೧೧೭॥ ಮ್ಹಣೌನಿ ಆರ್ತಾಚ್ಯಾ ಠಾಯೀ । ಹೇ ಆರ್ತಿ ಹೋಊನಿ ಪಾಹೀ । ಅಪೇಕ್ಷಣೀಯ ಜೇ ಕಾಂಹೀ । ತೇ ಮೀಚಿ ಕೇಲಾ ॥೧೧೧೮॥ ಜಿಜ್ಞಾಸುಪುಢಾ ವೀರೇಶಾ । ಹೇಚಿ ಹೋಊನಿ ಜಿಜ್ಞಾಸಾ । ಮೀ ಕಾ ಜಿಜ್ಞಾಸು ಐಸಾ । ದಾಖವಿಲಾ ॥೧೧೧೯॥ ಹೇಚಿ ಹೋಊನಿ ಅರ್ಥನಾ । ಮೀಚಿ ಮಾಝ್ಯಾ ಅರ್ಥೀ ಅರ್ಜುನಾ । ಕರೂನಿ ಅರ್ಥಾಭಿಧಾನಾ । ಆಣೀ ಮಾತೇ ॥೧೧೨೦॥ ಏವಂ ಘೇಊನಿ ಅಜ್ಞಾನಾತೇ । ಮಾಝೀ ಭಕ್ತಿ ಜೇ ಹೇ ವರ್ತೇ । ತೇ ದಾವೀ ಮಜ ದ್ರಷ್ಟಯಾತೇ । ದೃಶ್ಯ ಕರೂನಿ ॥೧೧೨೧॥ ಯೇಥೇ ಮುಖಚಿ ದಿಸೇ ಮುಖೇ । ಯಾ ಬೋಲಾ ಕಾಂಹೀ ನ ಚುಕೇ । ಪರೀ ದುಜೇಪಣ ಹೇ ಲಟಿಕೇ । ಆರಿಸಾ ಕರೀ ॥೧೧೨೨॥ ದಿಠೀ ಚಂದ್ರಚಿ ಘೇ ಸಾಚೇ । ಪರೀ ಯೇತುಲೇ ಹೇ ತಿಮಿರಾಚೇ । ಜೇ ಏಕಚಿ ಅಸೇ ತಯಾಚೇ । ದೋನೀ ದಾವೀ ॥೧೧೨೩॥ ತೈಸಾ ಸರ್ವತ್ರ ಮೀಚಿ ಮಿಯಾ । ಘೇಪತಸೇ ಭಕ್ತಿ ಇಯಾ । ಪರೀ ದೃಶ್ಯತ್ವ ಹೇ ವಾಯಾ । ಅಜ್ಞಾನವಶೇ ॥೧೧೨೪॥ ತೇ ಅಜ್ಞಾನ ಆತಾ ಫಿಟಲೇ । ಮಾಝೇ ದ್ರಷ್ಟತ್ವ ಮಜ ಭೇಟಲೇ । ನಿಜಬಿಂಬೀ ಏಕವಟಲೇ । ಪ್ರತಿಬಿಂಬ ಜೈಸೇ ॥೧೧೨೫॥ ಪೈ ಜೇವ್ಹಾಂಹೀ ಅಸೇ ಕಿಡಾಳ । ತೇವ್ಹಾಂಹೀ ಸೋನೇಂಚಿ ಅಢಳ । ಪರೀ ತೇ ಕೀಡ ಗೇಲಿಯಾ ಕೇವಳ । ಉರೇ ಜೈಸೇ ॥೧೧೨೬॥ ಹಾ ಗಾ ಪೂರ್ಣಿಮೇ ಆಧೀ ಕಾಯೀ । ಚಂದ್ರು ಸಾವಯವು ನಾಹೀ ? । ಪರೀ ತಿಯೇ ದಿವಶೀ ಭೇಟೇ ಪಾಹೀ । ಪೂರ್ಣತಾ ತಯಾ ॥೧೧೨೭॥

ಉಳಿದ ಆರ್ತ, ಜಿಜ್ಞಾಸು ಮತ್ತು ಅರ್ಥಾರ್ಥಿ ಈ ಭಕ್ತರು ಯಾವ ಮಾರ್ಗದಿಂದ ನನ್ನ ಭಜನೆಯನ್ನು ಮಾಡುವರೋ, ಆ ಮೂರು ಮಾರ್ಗದ ಅಪೇಕ್ಷೆಯಿಂದ ಇದಕ್ಕೆ ನಾಲ್ಕನೆಯ ಭಕ್ತಿ ಎಂದಿರುವುದು ।।೧೧೧೨।।

ಇಲ್ಲದಿದ್ದರೆ, ಮೊದಲನೆಯ, ಎರಡನೆಯ, ಮೂರನೆಯ ಹಾಗೂ ನಾಲ್ಕನೆಯ ಎಂದು ಇದಕ್ಕೆ ಹೇಳಲು ಬರುವುದಿಲ್ಲ. ಆದರೆ ಕೇವಲ ನನ್ನ ಸಹಜಸ್ಥಿತಿಗೆ ಮಾತ್ರ ಭಕ್ತಿ ಎಂದು ಹೇಳುವರು ।।೧೧೧೩।।

ಯಾವ ಭಕ್ತಿಯು ಅಜ್ಞಾನಕ್ಕೆ ಪ್ರಕಾಶಗೊಳಿಸಿ ನನಗೂ ಸಹ ವಿಪರೀತ ಭಾವದಿಂದ (ಜಗದ್ರೂಪ) ತೋರಿಸಿ, ಎಲ್ಲ ಲೋಕಗಳಿಂದ ನನ್ನ ಭಕ್ತಿಯನ್ನು ಮಾಡಿ, ಎಲ್ಲರನ್ನೂ ತಿಳುವಳಿಕೆ ಕೊಡುವುದು ।।೧೧೧೪।।

ಯಾವ ಭಕ್ತನು ಎಲ್ಲಿ ಯಾವ ಕಲ್ಪನೆಯನ್ನು ಮಾಡಿ ನೋಡುವನೋ, ಆತನಿಗೆ ಅಲ್ಲಿ ಹಾಗೆಯೇ ಕಾಣುವುದು ।।೧೧೧೫।।

ಯಾವ ಪ್ರಕಾರವಾಗಿ ತಾನಿರುವುದರಿಂದ ಸ್ವಪ್ನದ ಆಗು ಹೋಗುಗಳು ಹೇಗೆ ಆಗುವುವೋ, ಅದರಂತೆ ವಿಶ್ವದ ಉದಯ ಲೋಪಗಳು ಆ ಪ್ರಕಾಶದಿಂದ ಆಗುವುದು ।।೧೧೧೬।।

ಹೇ ಕಪಿಧ್ವಜನೇ, ಇಂಥ ಯಾವ ನನ್ನ ಸಹಜವಾದ ಪ್ರಕಾಶಕ್ಕೆ ಮಾತ್ರ ಉತ್ತಮ ಭಕ್ತಿ ಎಂದು ಹೇಳುವರು ।।೧೧೧೭।।

ಆದ್ದರಿಂದ ಆರ್ತ ಭಕ್ತನಲ್ಲಿ "ಆರ್ತಿ" ತಾನೇ ಆಗಿ, ಆ ಅಪೇಕ್ಷೆ ಮಾಡಿದ ಪದಾರ್ಥವು ಅದು ಭಕ್ತಿಯೇ ಆಗುವುದು ।।೧೧೧೮।।

ಅದರಂತೆಯೇ, ವೀರೇಶನೇ, ಜಿಜ್ಞಾಸು ಭಕ್ತನಲ್ಲಿ ತಿಳಿದುಕೊಳ್ಳುವ ಇಚ್ಛೆ ಮತ್ತು ತಿಳಿಯುವಿಕೆ ಈ ಎರಡನ್ನು ತಾನೇ ಆಗುವುದು ।।೧೧೧೯।।

ಅರ್ಜುನಾ, ಇದೇ ಭಕ್ತಿಯು ತಾನೇ ಅರ್ಥ, ಅರ್ಥ ಪ್ರಾಪ್ತಿಯ ಸಾಧನೆ ಮತ್ತು ಅರ್ಥಪ್ರಾಪ್ತಿಯ ಇಚ್ಛೆಯನ್ನು ಮಾಡುವವ ಈ ತ್ರಿಪುಟಿಯಾಗಿ ನನಗೇನೇ ಅರ್ಥವೆಂಬ ಹೆಸರಿಗೆ ತರುವನು ।।೧೧೨೦।।

ಈ ಪ್ರಕಾರವಾಗಿ ಅಜ್ಞಾನವನ್ನು ಸ್ವೀಕರಿಸಿ, ಯಾವ ನನ್ನ ಭಕ್ತಿಯು ನಡೆಯುವುದು, ಯಾವುದನ್ನು ನಾನು ನೋಡುವವನೋ. ಅದೇ ನನಗೆ ನೋಡುವ ವಸ್ತುವನ್ನಾಗಿ ಮಾಡುವುದು ।।೧೧೨೧।।

ಕನ್ನಡಿಯಲ್ಲಿ ತನ್ನ ಸ್ವರೂಪವು ನೋಡಿದ ಮೇಲೆಯೇ ಅದರ ಪ್ರತಿಬಿಂಬವು ಕಾಣುವುದು. ಇದರಲ್ಲಿ ಸಂಶಯವಿಲ್ಲ. ಆದರೆ ಮಿಥ್ಯವಾಗಿರುವ ಭಿನ್ನತ್ವವನ್ನು ಈ ಕನ್ನಡಿಯು ಮಾಡುವುದು ।।೧೧೨೨।।

ದೃಷ್ಟಿಯಿಂದ ಚಂದ್ರನು ಕಾಣುವುದು ನಿಜ, ಆದರೆ ಒಂದೇ ಚಂದ್ರನನ್ನು ಎರಡನ್ನಾಗಿ ಕಾಣುವುದು. ಇದು ಕಣ್ಣಿನಲ್ಲಿಯ ತಿಮಿರ ರೋಗದ ಪರಿಣಾಮವಾಗಿರುವುದು ।।೧೧೨೩।।

ಅದರಂತೆ ಈ ಭಕ್ತಿಯ ಯೋಗದಿಂದ ನಾನೇ ನನ್ನನ್ನು ಪಡೆದುಕೊಳ್ಳುತ್ತಿರುವೆನು. ಆದರೆ ದೃಶ್ಯತ್ವವು ಮಿಥ್ಯೆಯಾಗಿದ್ದು, ಅಜ್ಞಾನದ ಉಪಾಧಿಯಿಂದ ಆಗುವುದು ।।೧೧೨೪।।

ಆ ಭೇದವನ್ನು ಕಲ್ಪಿಸಿಕೊಡುವ ಅಜ್ಞಾನವು ಈ ಭಕ್ತಿಯೋಗದಿಂದ ಇಲ್ಲದಾಗಿ, ಉಪಾಧಿಯ ನಾಶವಾದ ಮೇಲೆ ಪ್ರತಿಬಿಂಬವು ತನ್ನ ಸ್ವರೂಪದಲ್ಲಿ ಐಕ್ಯವಾಗುವಂತೆ, ನನ್ನಲ್ಲಿಯೇ ಲೀನವಾಗುವುದು ।।೧೧೨೫।।

ಇಲ್ಲಿ ನೋಡು, ಮಿಶ್ರಿತ ಸುವರ್ಣವು ಸುವರ್ಣವಾಗಿಯೇ ಇರುವುದು. ಆದರೆ ಅದರಲ್ಲಿಯ ಹೀನ ಧಾತುಗಳು ಹೋದಾಗ ಶುದ್ಧ ಸುವರ್ಣವು ಉಳಿಯುವುದು ।।೧೧೨೬।।

ಅರೇ, ಪೂರ್ಣಿಮೆಯ ಹೊರತಾಗಿ ಚಂದ್ರನು ಸಂಪೂರ್ಣ ಅಲ್ಲವೇ? ಆದರೆ ಆ ದಿನ ಆತನ ಪೂರ್ಣತೆಯು ಆತನಿಗೆ ಹೇಗೆ ಭೇಟಿಯಾಗುವುದೋ ।।೧೧೨೭।।

ತೈಸಾ ಮೀಚಿ ಜ್ಞಾನದ್ವಾರೇ । ದಿಸೇ ಪರೀ ಹಸ್ತಾಂತರೇ । ಮಗ ದೃಷ್ಟ್ರತ್ವ ತೇ ಸರೇ । ಮಿಯಾಂಚಿ ಮೀ ಲಾಭೇ ।।೧೧೨೮।। ಮ್ಹಣೌನಿ ದೃಶ್ಯಪಥಾ । ಅತೀತು ಮಾಝೂ ಪಾರ್ಥಾ । ಭಕ್ತಿಯೋಗು ಚವಥಾ । ಮ್ಹಣಿತಲಾ ಗಾ ।।೧೧೨೯।।

ಭಕ್ತ್ಯಾ ಮಾಮಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ತ್ವತಃ ।
ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಮ್ ।।೫೫।।

ಯಾ ಜ್ಞಾನ ಭಕ್ತಿ ಸಹಜ । ಭಕ್ತು ಏಕವಟಲಾ ಮಜ । ತೋ ಮೀಚಿ ಕೇವಳ ಹೇ ತುಜ । ಶ್ರುತಹೀ ಆಹೇ ।।೧೧೩೦।। ಜೇ ಉಭಊನಿಯಾ ಭುಜಾ । ಜ್ಞಾನಿಯಾ ಆತ್ಮಾ ಮಾಝಾ । ಹೇ ಬೋಲಿಲೋ ಕಪಿಧ್ವಜಾ । ಸಪ್ತಮಾಧ್ಯಾಯೀ ।।೧೧೩೧।। ತೇ ಹೇ ಕಲ್ಪಾದೀ ಭಕ್ತಿ ಮಿಯಾ । ಭಾಗವತಮಿಷೇ ಬ್ರಹ್ಮಯಾ । ಉತ್ತಮ ಮ್ಹಣೌನಿ ಧನಂಜಯಾ । ಉಪದೇಶಿಲೀ ।।೧೧೩೨।। ಜ್ಞಾನೀ ಇಯೇತೇ ಸ್ವಸಂವಿತೀ । ಶೈವ ಮ್ಹಣತೀ ಶಕ್ತೀ । ಆಮ್ಹೀ ಪರಮ ಭಕ್ತೀ । ಆಪುಲೀ ಮ್ಹಣೋ ।।೧೧೩೩।। ಹೇ ಮಜ ಮಿಳತಿಯೇ ವೇಳೇ । ತಯಾ ಕ್ರಮಯೋಗಿಯಾ ಫಳೇ । ಮಗ ಸಮಸ್ತ ಹೀ ನಿಖಿಳೇ । ಮಿಯಾಂಚಿ ಭರೇ ।।೧೧೩೪।। ತೇಥ ವೈರಾಗ್ಯ ವಿವೇಕೇಂಸೀ । ಆಟೇ ಬಂಧ ಮೋಕ್ಷೇಂಸೀ । ವೃತ್ತೀ ತಿಯೇ ಆವೃತ್ತೀಸೀ । ಬುಡೋನಿ ಜಾಯ ।।೧೧೩೫।। ಘೇಊನಿ ಐಲಪಣಾತೇ । ಪರತ್ವ ಹಾರಪೇ ಜೇಥೇ । ಗಿಳೂನಿ ಚಾರ್ಹೀ ಭೂತೇ । ಆಕಾಶ ಜೈಸೇ ।।೧೧೩೬।। ತಯಾ ಪರೀ ಥಡಥಾದ । ಸಾಧ್ಯಸಾಧನಾತೀತ ಶುದ್ಧ । ತೇ ಮೀ ಹೋಊನಿ ಏಕವದ । ಭೋಗಿತೋ ಮಾತೇ ।।೧೧೩೭।। ಘುಡೋನಿ ಸಿಂಧೂಚಿಯಾ ಆಂಗಾ । ಸಿಂಧೂವರೀ ತಳಪೇ ಗಂಗಾ । ತೈಸಾ ಪಾಡೂ ತಯಾ ಭೋಗಾ । ಅವಧಾರೀ ಜೋ ।।೧೧೩೮।। ಕಾ ಆರಿಸಯಾಸಿ ಆರಿಸಾ । ಉಟೂನಿ ದಾವಿಲಿಯಾ ಜೈಸಾ । ದೇಖಣಾ ಅತಿಶಯೋ ತೈಸಾ । ಬೋಗಣಾ ತಿಯೇ ।।೧೧೩೯।। ಹೇ ಅಸೋ ದುರ್ಪಣು ನೇಲಿಯಾ । ತೋ ಮುಖಭೋಧುಹೀ ಗೇಲಿಯಾ । ದೇಖಲೇಪಣ ಏಕಲೇಯಾ । ಆಸ್ವಾದಿಜೇ ಜೇವೀ ।।೧೧೪೦।। ಚೇಇಲಿಯಾ ಸ್ವಪ್ನ ನಾಶೇ । ಆಪಲೇ ಐಕ್ಯಚಿ ದಿಸೇ । ತೇ ದುಜೇನವೀಣ ಜೈಸೇ । ಭೋಗಿಜೇ ಕಾ ।।೧೧೪೧।। ತೋಚಿ ಜಾಲಿಯಾ ಭೋಗು ತಯಾಚಾ । ನ ಘಡೇ ಹಾ ಭಾವೋ ಜಯಾಂಚಾ । ತಿಹೀ ಬೋಲೇ ಕೇವೀ ಬೋಲಾಚಾ । ಉಚ್ಚಾರು ಕೀಜೇ ।।೧೧೪೨।। ತಯಾಂಚ್ಯಾ ನೇಣೋ ಗಾಂವೀ । ರವೀ ಪ್ರಕಾಶೀ ಹನ ದಿವೀ । ಕೀ ವ್ಯೋಮಾಲಾಗೀ ಮಾಂಡವೀ । ಉಭಿಲೀತಿಹೀ ।।೧೧೪೩।।

ಅದರಂತೆ ನಾನೇ ವೃತ್ತಿ ಜ್ಞಾನದಿಂದ ಕಾಣುವೆನು. ಆದರೆ, ಅದರಲ್ಲಿ ದೃಷ್ಟತ್ವರೂಪವು ಭೇದವಾಗಿರುವುದು. ಅದೇ ದೃಷ್ಟತ್ವವು ಇಲ್ಲದಾಗಲು ನನ್ನದು ನಾನೇ ನನಗೆ ಪ್ರಾಪ್ತನಾಗುವೆನು ॥೧೧೨೮॥

ಆದ್ದರಿಂದ ಪಾರ್ಥನೇ, ಈ ಭಕ್ತಿಯೋಗವು ದೃಶ್ಯ ಮಾರ್ಗದಿಂದ ಭಿನ್ನವಾಗಿದೆ. ಆದ್ದರಿಂದ ಇದಕ್ಕೆ ನಾಲ್ಕನೆಯ ಭಕ್ತಿಯೋಗ (ಜ್ಞಾನಯೋಗ) ವೆಂದು ನಾನು ಹೇಳಿರುವೆನು ॥೧೧೨೯॥

ಶ್ಲೋಕಾರ್ಥ :- ಅವನು ಆ ಭಕ್ತಿಯಿಂದ ನನ್ನ ಸ್ವರೂಪ ಪ್ರಭಾವವನ್ನು ವಾಸ್ತವವಾಗಿ ತಿಳಿದು ಕೊಳ್ಳುತ್ತಾನೆ. ಆ ನನ್ನ ವಾಸ್ತವಜ್ಞಾನದಿಂದ ಅನಂತರ ನನ್ನನ್ನೇ ಸೇರುತ್ತಾನೆ ॥೫೫॥

ಈ ಜ್ಞಾನ ಭಕ್ತಿಯ ಯೋಗದಿಂದ ಯಾವನು ನನ್ನಲ್ಲಿ ಐಕ್ಯನಾಗುವನೋ, ಅವನು ಕೇವಲ ನಾನೇ ಆಗಿರುವೆನು. ಇದನ್ನು ನೀನಾಗಲೇ ಕೇಳಿರುವಿ ॥೧೧೩೦॥

ಕಾರಣ, ಕಪಿಧ್ವಜನೇ, ''ಜ್ಞಾನಿಯು ನನ್ನ ಆತ್ಮನಿರುವನು'' ಹೀಗೆ ಏಳನೆಯ ಅಧ್ಯಾಯದಲ್ಲಿ ಕೈ ಎತ್ತಿ ಪ್ರತಿಜ್ಞೆಯೊಂದಿಗೆ ನಾನು ಹೇಳಿರುವೆನು ॥೧೧೩೧॥

ಧನಂಜಯಾ, ಯಾವ ಈ ಭಕ್ತಿಯು ಉತ್ತಮವಾಗಿ ಇರುವುದರಿಂದಲೇ ನಾನು ಆ ಕಲ್ಪದ ಆರಂಭದಲ್ಲಿ ಭಾಗವತದ ನಿಮಿತ್ತದಿಂದ ಬ್ರಹ್ಮದೇವನಿಗೆ ಉಪದೇಶಿಸಿದೆನು ॥೧೧೩೨॥

ಜ್ಞಾನಿಯು ಇದೇ ಭಕ್ತಿಗೆ ಸ್ವಸಂವಿತಿ ಎನ್ನುವರು. ಶೈವರು ಶಕ್ತಿ ಎನ್ನುವರು, ಹಾಗೂ ನಾವು ನಮ್ಮ ಪರಮಭಕ್ತಿ ಎಂದು ಹೇಳುವೆವು ॥೧೧೩೩॥

ಈ ಭಕ್ತಿಯು ಆ ಕರ್ಮಯೋಗಿಗೆ ನನ್ನಲ್ಲಿ ಐಕ್ಯವಾಗುವಾಗ ಫಲದ್ರೂಪವಾಗುವುದು ಮತ್ತು ತದನಂತರ ಈ ಎಲ್ಲವೂ ಕೇವಲ ನನ್ನ ಯೋಗದಿಂದಲೇ ಓತಪ್ರೋತವಾಗಿ ತುಂಬಿದೆ ಎಂದು ಜ್ಞಾನ ಮಾಡಿಕೊಡುವುದು ॥೧೧೩೪॥

ಆಗ ವೈರಾಗ್ಯವು ವಿಚಾರದೊಂದಿಗೆ ನಷ್ಟವಾಗುವುದು. ಬಂಧ ಮೋಕ್ಷಗಳು ಸಹ ಇಲ್ಲದಾಗುವುವು, ಮತ್ತು ಬ್ರಹ್ಮಾಕಾರ ವೃತ್ತಿಯು ಹೇಳ ಹೆಸರಿಲ್ಲದಂತಾಗುವುದು ॥೧೧೩೫॥

ಯಾವ ಭಕ್ತಿಯ ಯೋಗದಿಂದ ಈ ಕಡೆಯ ಹಾಗೂ ಆ ಕಡೆಯ (ಶ್ರೇಷ್ಠ-ಕನಿಷ್ಠ) ಎಂಬ ಭೇದವು ಇಲ್ಲದಾಗುವುದು. ಆಕಾಶವು ಪೃಥ್ವಿ, ಆಪ, ತೇಜ ಹಾಗೂ ವಾಯು ಈ ಭೂತಗಳನ್ನು ವ್ಯಾಪಿಸಿಕೊಂಡು ಶೇಷವಾಗಿ ಉಳಿಯುವುದು ॥೧೧೩೬॥

ಅದರಂತೆ ಈ ಕಡೆಯ ದಂಡೆ, ಮಧ್ಯಭಾಗ ಹಾಗೂ ಆ ಕಡೆಯ ದಂಡೆ, ಈ ಪ್ರಕಾರವಾಗಿ ಸಾಧ್ಯ, ಸಾಧನೆ ಹಾಗೂ ಸಾಧಕ ಈ ತ್ರಿಪುಟಿಗಿಂತಲೂ ಆಚೆಗಿರುವ ನನ್ನ ಶುದ್ಧ ಸ್ವರೂಪದಲ್ಲಿ ಐಕ್ಯನಾಗಿ ನನ್ನ ಭಜನೆಯನ್ನು ಮಾಡುವನು ॥೧೧೩೭॥

ಸಮುದ್ರವನ್ನು ಸೇರಿದಾಗ ಗಂಗೆಯು ಸಮುದ್ರ ರೂಪವಾಗಿ ಹೇಗೆ ಶೋಭಿಸುವಳೋ, ಅದರಂತೆ ಯಾವನು ನನ್ನಲ್ಲಿ ಐಕ್ಯಹೊಂದಿ ನನ್ನ ಭಕ್ತಿಯ ಉಪಭೋಗವನ್ನು ದ್ವೈತವಿಲ್ಲದೇ ಪಡೆಯುವನು ॥೧೧೩೮॥

ಎರಡು ಕನ್ನಡಿಗಳನ್ನು ಸ್ವಚ್ಛಗೊಳಿಸಿ ಒಂದು ಕನ್ನಡಿಗೆ ಇನ್ನೊಂದು ತೋರಿಸಿದಾಗ, ಅವು ಎರಡರ ನೋಡುವಿಕೆಯು ವಿಶೇಷವಾಗಿರುವುದು. ಅದರಂತೆ ನನ್ನ ಆ ಭೋಗದಲ್ಲಿ ಅಭೇದದ ಅತಿಶಯತ್ವವು ಇರುವುದು ॥೧೧೩೯॥

ಇಷ್ಟೇ ಅಲ್ಲ, ಕನ್ನಡಿಯನ್ನು ಮಗ್ಗಲು ಮಾಡಿದಾಗ ಅದರಲ್ಲಿಯ ಪ್ರತಿಬಿಂಬವು ಕಾಣದಂತಾದರೂ ನೋಡುವವನು ತನ್ನಲ್ಲಿಯೇ ತನ್ನ ಸ್ವರೂಪದ ಆನಂದವನ್ನು ಭೋಗಿಸುವನು ॥೧೧೪೦॥

ಎಚ್ಚರಾದ ಮೇಲೆ ಸ್ವಪ್ನವು ಇಲ್ಲದಂತಾಗಿ ತನ್ನ ಸ್ವರೂಪದಲ್ಲಿ ಕೂಡಿಕೊಂಡಾಗ ತನ್ನ ಐಕ್ಯವನ್ನು ದ್ವೈತವಿಲ್ಲದೇ ಭೋಗಿಸುವನು ॥೧೧೪೧॥

ಐಕ್ಯವಾದ ಮೇಲೆ ಅದರ ಭೋಗವನ್ನು ಹೇಗೆ ಪಡೆಯಲು ಸಾಧ್ಯ ? ವೆಂದು ಶಂಕೆಯನ್ನು ಮಾಡಿದರೆ, ಶಬ್ದದಿಂದ ಶಬ್ದವನ್ನು ಉಚ್ಚಾರ ಮಾಡಲು ಹೇಗೆ ಸಾಧ್ಯ ? ಎಂದಂತಾಗುವುದು ॥೧೧೪೨॥

ಇದರ ಮೇಲಿಂದ ಶಂಕೆಯನ್ನು ಮಾಡುವವರ ಊರಿನಲ್ಲಿ ಕದಾಚಿತ್ ಸೂರ್ಯನಿಗೆ ದೀಪದಿಂದ ನೋಡುವ ಪರಿಪಾಠ ಇದೆಯೋ ಏನೋ ? ತಿಳಿಯದು. ಅಥವಾ ಆಕಾಶಕ್ಕೆ ಹಂದರ ಹಾಕುವ ಪರಿಪಾಠವು ಇದ್ದರೂ ಇರಬಹುದು ! ॥೧೧೪೩॥

ಹಾ ಗಾ ರಾಜನ್ಯತ್ವ ನವ್ಹತಾ ಅಂಗೀ । ರಾವೋ ರಾಯಪಣ ಕಾಯ ಭೋಗೀ ?। ಕಾ
ಅಂಧಾರು ಹನ ಆಲಿಂಗೀ । ದಿನಕರಾತೇ ?॥೧೧೪೪॥ ಆಣಿ ಆಕಾಶ ಜೇ ನವ್ಹೇ । ತಯಾ
ಆಕಾಶ ಕಾಯ ಜಾಣವೇ ?। ರತ್ನಾಚ್ಯಾ ರೂಪೀ ಮಿರವೇ । ಗುಂಜಾಂಚೇ ಲೇಣೇ ?
॥೧೧೪೫॥ ಮ್ಹಣೌನಿ ಮೀ ಹೋಣೇ ನಾಹೀ । ತಯಾ ಮೀಚಿ ಆಹೇ ಕೇಹೀ । ಮಗ
ಭಜೇಲ ಹೇ ಕಾಯೀ । ಬೋಲೋ ಕೀರ ॥೧೧೪೬॥ ಯಾಲಾಗೀ ತೋ ಕ್ರಮಯೋಗೀ ।
ಮೀ ಜಾಲಾಚಿ ಮಾತೇ ಭೋಗೀ । ತಾರುಣ್ಯ ಕಾ ತರುಣಾಂಗೀ । ಜಿಯಾಪರೀ ॥೧೧೪೭॥
ತರಂಗ ಸರ್ವಾಂಗೀ ತೋಯ ಚುಂಬೀ । ಪ್ರಭಾ ಸರ್ವತ್ರ ವಿಲಸೇ ಬಿಂಬೀ । ನಾನಾ
ಅವಕಾಶ ನಭೀ । ಲುಂಠತು ಜೈಸಾ ॥೧೧೪೮॥ ತೈಸಾ ರೂಪ ಹೋಊನಿ ಮಾರ್ಝೀ ।
ಮಾತೇ ಕ್ರಿಯಾವೀಣ ತೋ ಭಜೇ । ಅಲಂಕಾರು ಕಾ ಸಹಜೇ । ಸೋನಯಾತೇ ಜೇವೀ
॥೧೧೪೯॥ ಕಾ ಚಂದನಾಚೀ ದ್ರುತೀ ಜೈಸೀ । ಚಂದನೀ ಭಜೇ ಅಪೈಸೀ । ಕಾ ಅಕೃತ್ರಿಮ
ಶಶೀ । ಚಂದ್ರಿಕಾ ತೇ ॥೧೧೫೦॥ ತೈಸೀ ಕ್ರಿಯಾ ಕೀರ ನ ಸಾಹೇ । ತರ್ಹೀ ಅದ್ವೈತೀ ಭಕ್ತಿ
ಆಹೇ । ಹೇ ಅನುಭವಾಚಿ ಜೋಗೇ ನವ್ಹೇ । ಬೋಲಾಐಸೇ ॥೧೧೫೧॥ ತೇವ್ಹಾ
ಪೂರ್ವಸಂಸ್ಕಾರ ಛಂದೇ । ಜೇ ಕಾಂಹೀ ತೋ ಅನುವಾದೇ । ತೇಣೇ ಆಳವಿಲೇನಿ ವೋ
ದೇ । ಬೋಲತಾ ಮೀಚೀ ॥೧೧೫೨॥ ಬೋಲತಯಾ ಬೋಲತಾಚಿ ಭೇಟೇ । ತೇಥೇ
ಬೋಲಿಲೇ ಹೇ ನ ಘಟೇ । ತೇ ಮೌನ ತಂವ ಗೋಮಟೇ । ಸ್ತವನ ಮಾರ್ಝೇ ॥೧೧೫೩॥
ಮ್ಹಣೌನಿ ತಯಾ ಬೋಲತಾ । ಬೋಲಿ ಬೋಲತಾ ಮೀ ಭೆಟತಾ । ಮೌನ ಹೋಯ
ತೇಣೇ ತತ್ತ್ವತಾ । ಸ್ತವಿತೋ ಮಾತೇ ॥೧೧೫೪॥ ತೈಸೇಂಚಿ ಬುದ್ಧೀ ಕಾ ದಿಠೀ । ಜೇ
ತೋ ದೇಖೋ ಜಾಯ ಕಿರೀಟೀ । ತೇ ದೇಖಣೇ ದೃಶ್ಯ ಲೋಟೀ । ದೇಖತೇಂಚಿ ದಾವೀ
॥೧೧೫೫॥ ಆರಿಸಯಾ ಆಧೀ ಜೈಸೇ । ದೇಖತೇಂಚಿ ಮುಖದಿಸೇ । ತಯಾಚೇ ದೇಖಣೇ
ತೈಸೇ । ಮೇಳವೀ ದ್ರಷ್ಟೇ ॥೧೧೫೬॥ ದೃಶ್ಯ ಜಾಉನಿಯಾ ದ್ರಷ್ಟೇ । ದೃಷ್ಟಯಾಸೀಚಿ ಜೈ
ಭೇಟೇ । ತೈ ಏಕಲೇಪಣೇನ ಫುಟೇ । ದ್ರಷ್ಟೇಪಣಹೀ ॥೧೧೫೭॥ ತೇಥ ಸ್ವಪ್ನೀಂಚಿಯಾ
ಪ್ರಿಯಾ । ಚೇವೋನಿ ಝೋಂಬೋ ಗೇಲಿಯಾ । ಠಾಯೀಚೇ ದೋನ್ಹೀ ನ ಹೋನಿಯಾ
। ಆಪಣಚಿ ಜೈಸೇ ॥೧೧೫೮॥ ಕಾ ದೋಹೀ ಕಾಷ್ಠಾಂಚಿಯೇ ಘೃಷ್ಟೀ । ಮಾಜೀ ವನ್ಹೀ
ಏಕ ಉಠೀ । ತೋ ದೋನ್ಹೀ ಹೇ ಭಾಷ ಆಟೀ । ಆಪಣಚಿ ಹೋಯ ॥೧೧೫೯॥

ಅರೇ, ಯಾರ ಅಂಗದಲ್ಲಿ ಕ್ಷತ್ರಿಯತ್ವವಿಲ್ಲದೇ ರಾಜಾ, ರಾಜಭೋಗದ ಸುಖವು ಆತನಿಗೆ ಹೇಗೆ ತಿಳಿಯಬೇಕು ? ಅಥವಾ ಸೂರ್ಯನಿಗೆ ಕತ್ತಲೆಯು ಎಂದಾದರೂ ಆಲಂಗಿಸಬಹುದೇ ? ।।೧೧೪೪।।

ಮತ್ತು ಯಾವನು ಸ್ವತಃ ಆಕಾಶನಾಗದೇ, ಆಕಾಶದ ವ್ಯಾಪ್ತಿಯು ಹೇಗೆ ತಿಳಿದೀತು ? ಗುಂಜಿ ತೂಕದ ಬಂಗಾರದ ಒಡವೆಯು ರತ್ನಾದಾಭರಣದ ಸರಿಸಮಾನ ಹೇಗಾಗಬೇಕು ? ।।೧೧೪೫।।

ಆದ್ದರಿಂದ ಯಾರು ಮದ್ರೂಪರಾಗಿಲ್ಲವೋ, ಅವರಿಗೆ ನಾನು ಎಲ್ಲಿರುವೆ ಎಂಬುದು ಹೇಗೆ ತಿಳಿಯಬೇಕು? ।।೧೧೪೬।।

ತರುಣಾವಸ್ಥೆಯು ಬಂದಾಗಲೇ ತನ್ನ ತಾರುಣ್ಯದ ಅನುಭವವನ್ನು ಪಡೆಯಲು ಸಾಧ್ಯ. ಅದರಂತೆ ಆ ಕರ್ಮಯೋಗಿಯು ನನ್ನ ಸ್ವರೂಪನಾಗಿ ನನ್ನ ಸ್ವರೂಪದ ಉಪಭೋಗ ಪಡೆಯುವನು ।।೧೧೪೭।।

ನೀರಿನ ತೆರೆಗಳು ಎಲ್ಲ ಭಾಗದಿಂದಲೂ ನೀರನ್ನೇ ಸೇವಿಸುವುವು. ಪ್ರಕಾಶವು ಎಲ್ಲ ಪ್ರಕಾರಗಳಿಂದ ಸೂರ್ಯನ ಬಿಂಬದಲ್ಲಿಯೇ ಇರುವುದು. ಪೊಳ್ಳು ಎಲ್ಲ ಕಡೆಯಲ್ಲಿ ಆಕಾಶವನ್ನು ವ್ಯಾಪಿಸಿಕೊಂಡಿರುವುದು ।।೧೧೪೮।।

ಅದರಂತೆ ನನ್ನ ಸ್ವರೂಪನಾಗಿ ನನ್ನ ಭಜನೆಯನ್ನು ಕ್ರಿಯೆ ಇಲ್ಲದೇ ಮಾಡುವನು. ಅಲಂಕಾರವು ಬಂಗಾರಕ್ಕೆ ಸಹಜವಾಗಿ ಭಜಿಸುವುದು ।।೧೧೪೯।

ಚಂದನದ ಸುಗಂಧವು ಚಂದನವೇ ಸೇವಿಸುವುದು, ಅಥವಾ ಚಂದ್ರನ ಪ್ರಭೆಯು ಚಂದ್ರನಲ್ಲಿಯೇ ಸಹಜವಾಗಿ ಇರುವುದು ।।೧೧೫೦।।

ಅದರಂತೆ ಅದ್ವೈತಕ್ಕೆ ಕ್ರಿಯೆಯು ಸಹನವಾಗುವುದಿಲ್ಲ. ಆದಾಗ್ಯೂ, ಅದ್ವೈತದಲ್ಲಿ ಭಕ್ತಿ ಇದೆ ಎಂಬುವುದು ಅನುಭವದಿಂದಲೇ ತಿಳಿಯಬೇಕು, ಹೇಳಿ ತೋರಿಸಲು ಬರುವಂತಹದ್ದಲ್ಲ ।।೧೧೫೧।।

ಇಂಥ ಪುರುಷನು ಪೂರ್ವ ಸಂಸ್ಕಾರದಿಂದ ಏನಾದರೂ ಗುಣಾನುವಾದ ಮಾಡಬಹುದು, ಆತನು ನನಗೆ ಕರೆದರೆ ಆ ಕ್ಷಣವೇ "ಓ" ಎನ್ನುವೆನು. ಆದರೆ ಕರೆಯುವವನೂ ನಾನೇ ಇರುವೆನು ।।೧೧೫೨।।

ನನ್ನನ್ನು ಸ್ತುತಿಪರ ಶಬ್ದದಿಂದ ನನ್ನಲ್ಲಿ ಹೇಳುವವನಿಗೆ ಕೂಡಲೇ ಭೆಟ್ಟಿಯಾಗುವೆನು. ಆಗ ಆತನು ಮೊದಲಿನಂತೆ ಕರೆಯುವುದು, ಸ್ತುತಿಸುವುದು ಶಕ್ಯವಿಲ್ಲ, ಮೌನವೇ ನನ್ನ ಉತ್ತಮ ಸ್ತುತಿಯಾಗಿರುವುದು ।।೧೧೫೩।।

ಆದ್ದರಿಂದ ಆತನು ಹೇಳುವಾಗ್ಗೆ ಆತನ ಮಾತಿನಲ್ಲಿ ಮಾತನಾಡಿಸುವವನು ನಾನು. ಆತನು, ನಾನು ಹೀಗೆ ಕೂಡುವುದರಿಂದ ಮಾತನಾಡುವುದು ಮೌನವಾಗುವುದು. ಆ ಮೌನವೇ ನಿಜವಾದ ನನ್ನ ಸ್ತುತಿಯಾಗಿರುವುದು ।।೧೧೫೪।।

ಅದರಂತೆ ಅರ್ಜುನಾ, ಬುದ್ಧಿಯಿಂದ, ಕಣ್ಣಿನಿಂದ ಆತನು ನೋಡಲು ಹೋದರೆ, ಆತನ ನೋಟವು ದೃಶ್ಯಕ್ಕೆ ಸರಿಸಿ ನೋಡುವವನನ್ನೇ ತೋರಿಸುವುದು ।।೧೧೫೫।।

ಕನ್ನಡಿಯಲ್ಲಿ ನೋಡುವುದಕ್ಕಿಂತ ಮುಂಚಿತವಾಗಿ ಇದ್ದ ಮುಖವು ಅದನ್ನೇ ಕನ್ನಡಿಯಲ್ಲಿ ನೋಡಿದಾಕ್ಷಣವೇ ಕನ್ನಡಿಯನ್ನು ನೋಡದೇ ಮುಖವನ್ನೇ ನೋಡುವುದು. ಅದರಂತೆ ಆತನ ನೋಡುವಿಕೆಯು ನೋಡುವವನನ್ನೇ ತೋರಿಸುವುದು ।।೧೧೫೬।।

ನೋಡುವ ವಸ್ತುವು ಹೋಗಿ ನೋಡುವವನೇ ನೋಡುವವನ ಸ್ವರೂಪಕ್ಕೆ ಹೋಗಿ ಕೂಡುವನೋ. ಆಗ ಏಕತ್ವದಿಂದ ಆತನ ನೋಡುವತನದ ಧರ್ಮವೂ ಉಳಿಯುವುದಿಲ್ಲ ।।೧೧೫೭।।

ಸ್ವಪ್ನದಲ್ಲಿ ಕಂಡ ಸ್ತ್ರೀಯನ್ನು ಎಚ್ಚರಾಗಿ ಬಹಳ ಪ್ರೇಮದಿಂದ ಆಲಿಂಗನಕೊಡಲು ಹೋದಾಗ, ಆಲಿಂಗನ ಕೊಡುವವ ಹಾಗೂ ಆಲಿಂಗನ ಕೊಡುವ ವಸ್ತು, ಈ ಎರಡೂ ಇರದೇ ಒಬ್ಬನೇ ಪುರುಷನಿರುವಂತೆ ।।೧೧೫೮।।

ಅಥವಾ ಎರಡು ಕಟ್ಟಿಗೆಯ ಘರ್ಷಣೆಯಿಂದ ಉತ್ಪನ್ನವಾಗುವ ಅಗ್ನಿಯು ಎರಡೂ ಕಟ್ಟಿಗೆಗಳನ್ನು ಸುಟ್ಟು, ಕಟ್ಟಿಗೆಯ ಹೆಸರು ಇಲ್ಲದಂತೆ ಮಾಡಿ ತಾನೇ ಆಗುವುದು

ನಾನಾ ಪ್ರತಿಬಿಂಬ ಹಾತೀ । ಘೇಊನ ಗೇಲಿಯಾ ಗಭಸ್ತೀ । ಬಿಂಬತಾಹೀ ಅಸತೀ । ಜಾಯ ಜೈಸೀ ॥೧೧೬೦॥ ತೈಸಾ ಮೀ ಹೋಊನಿ ದೇಖತೇ । ತೋ ಘೇಊನ ಜಾಯ ದೃಶ್ಯಾತೇ । ತೇಥ ದೃಶ್ಯ ನೇ ಥಿತೇ । ದೃಷ್ಟತ್ವೇಂಸಿ ॥೧೧೬೧॥ ರವಿ ಆಂಧಾರು ಪ್ರಕಾಶಿತಾ । ನುರೇಚಿ ಜೇವೀ ಪ್ರಕಾಶ್ಯತಾ । ತೇವೀ ದೃಶ್ಯೀ ನಾಹೀ ದೃಷ್ಟತಾ । ಮೀ ಜಾಲಿಯಾ ॥೧೧೬೨॥ ಮಗ ದೇಖಿಜೇ ನಾ ನ ದೇಖಿಜೇ । ಐಸೀ ಜೇ ದಶಾ ನಿಪಜೇ । ತೇ ತೇ ದರ್ಶನ ಮಾಝೇ । ಸಾಚೋಕಾರೇ ॥೧೧೬೩॥ ತೇ ಭಲತಯಾಹೀ ಕಿರೀಟೀ । ಪದಾರ್ಥಾಚಿಯಾ ಭೇಟೀ । ದೃಷ್ಟೃದೃಶ್ಯಾತೀತಾ ದೃಷ್ಟೀ । ಭೋಗಿತೋ ಸದಾ ॥೧೧೬೪॥ ಆಣಿ ಆಕಾಶ ಹೇ ಆಕಾಶೇ । ದಾಟಿಲೇ ನ ಢಳೇ ಜೈಸೇ । ಮಿಯಾ ಆತ್ಮೇನ ಆಪಣಪೇ ತೈಸೇ । ಜಾಲೇ ತಯಾ ॥೧೧೬೫॥ ಕಲ್ಪಾಂತೀ ಉದಕ ಉದಕೇ । ರುಂಧಿಲಿಯಾ ವಾಹೋ ಠಾಕೇ । ತೈಸಾ ಆತ್ಮೇನಿ ಮಿಯಾ ಏಕೇ । ಕೋಂದಲಾ ತೋ ॥೧೧೬೬॥ ಪಾವೋ ಆಪಣಪಯಾ ವೋಳಘೇ ?। ಕೇವೀ ವನ್ಹಿ ಆಪಣಪಯಾ ಲಾಗೇ ?। ಆಪಣಪಾ ಪಾಣೀ ರಿಘೇ । ಸ್ನಾನಾ ಕೈಸೇ ?॥೧೧೬೭॥ ಮ್ಹಣೌನಿ ಸರ್ವ ಮೀ ಜಾಲೇಪಣೇ । ಠೇಲೇ ತಯಾ ಯೇಣೇ ಜಾಣೇ । ತೇಂಚಿ ಗಾ ಯಾತ್ರಾ ಕರಣೇ । ಅದ್ವಯಾ ಮಜ ॥೧೧೬೮॥ ಪೈ ಜಳಾವರೀಲ ತರಂಗು । ಜರೀ ಧಾವಿನ್ನಲಾ ಸವೇಗು । ತರೀ ನಾಹೀ ಭೂಮಿಭಾಗು । ಕ್ರಮಿಲಾ ತೇಣೇ ॥೧೧೬೯॥ ಜೇ ಸಾಂಡಾವೇ ಕಾ ಮಾಂಡಾವೇ । ಜೇ ಚಾಲಣೇ ಜೇಣೇ ಚಾಲಾವೇ । ತೇ ತೋಯಚಿ ಏಕ ಆಘವೇ । ಮ್ಹಣೌನಿಯಾ ॥೧೧೭೦॥ ಗೇಲಿಯಾಹೀ ಭಲತೇಉತಾ । ಉದಕಪಣೇ ಪಂಡುಸುತಾ । ತರಂಗಾಚೀ ಏಕಾತ್ಮತಾ । ನ ಮೋಡೇಚಿ ಜೇವೀ ॥೧೧೭೧॥ ತೈಸಾ ಮೀಪಣೇ ಹಾ ಲೋಟಲಾ । ತೋ ಆಘವೇಂಯಾಚಿ ಮಜಆಂತು ಆಲಾ । ಯಾ ಯಾತ್ರಾ ಹೋಯ ಭಲಾ । ಕಾಪಡೀ ಮಾಝಾ ॥೧೧೭೨॥ ಆಣಿ ಶರೀರ ಸ್ವಭಾವವಶೇ । ಕಾಂಹೀ ಏಕ ಕರೂ ಜರೀ ಬೈಸೇ । ತರೀ ಮೀಚಿ ತೋ ತೇಣೇ ಮಿಷೇ । ಭೇಟೇ ತಯಾ ॥೧೧೭೩॥ ತೇಥ ಕರ್ಮ ಆಣಿ ಕರ್ತಾ । ಹೇ ಜಾಊನಿ ಪಂಡುಸುತಾ । ಮಿಯಾ ಆತ್ಮೇನಿ ಮಜ ಪಾಹತಾ । ಮೀಚಿ ಹೋಯ ॥೧೧೭೪॥ ಪೈ ದರ್ಪಣಾತೇ ದರ್ಪಣೇ । ಪಾಹಿಲಿಯಾ ಹೋಯ ನ ಪಾಹಣೇ । ಸೋನೇ ಝಾಂಕಿಲಿಯಾ ಸುವರ್ಣೇ । ನ ಝಾಂಕೇ ಜೇವೀ ॥೧೧೭೫॥ ದೀಪಾತೇ ದೀಪೇ ಪ್ರಕಾಶಿಜೇ । ತೇ ನ ಪ್ರಕಾಶಣೇಂಚಿ ನಿಪಜೇ । ತೈಸೇ ಕರ್ಮ ಮಿಯಾ ಕೀಜೇ । ತೇ ಕರಣೇ ಕೈಂಚೇ ?॥೧೧೭೬॥

ನಿಂತ ನೀರಿನಲ್ಲಿ ಸೂರ್ಯನು ತನ್ನ ಪ್ರತಿಬಿಂಬವನ್ನು ಕೈಹಾಕಿ ತೆಗೆದುಕೊಳ್ಳುವಾಗ, ನೀರು ರಾಡಿಯಾಗಿ ಇದ್ದ ಪ್ರತಿಬಿಂಬವೂ ಹೋಗಿ, ತನ್ನ ಬಿಂಬತ್ವವೂ ಹೋಗುವುದು ॥೧೧೬೦॥

ಅದರಂತೆ ಮದ್ರೂಪನಾಗಿ ದೃಶ್ಯವಸ್ತುವನ್ನು ನೋಡಲು ಹೋದಾಗ, ಆತನಿಗೆ ಆ ಬೇರೆ ದೃಶ್ಯ ವಸ್ತುವು ಉಳಿಯದೇ, ತನ್ನಲ್ಲಿರುವ ದೃಷ್ಟತ್ವವೂ ಇಲ್ಲದಾಗುವುದು ॥೧೧೬೧॥

ಸೂರ್ಯನು ಕತ್ತಲೆಯನ್ನು ಬೆಳಕಾಗಿ ಮಾಡಲು ಹೋದಾಗ ಪ್ರಕಾಶ್ಯವಾದ ಕತ್ತಲೆಯು ಉಳಿಯುವುದಿಲ್ಲ. ಆಗ ಸೂರ್ಯನ ಪ್ರಕಾಶಕ ಧರ್ಮವೂ ಉಳಿಯುವುದಿಲ್ಲ. ಅದರಂತೆ ದೃಶ್ಯ ನಾನಾಗಿದ್ದಕ್ಕೆ, ದೃಷ್ಟನು ಉಳಿಯುವುದಿಲ್ಲ ॥೧೧೬೨॥

ಅಂದಮೇಲೆ, ನೋಡುವುದು ಅಥವಾ ನೋಡದೇ ಇರುವುದು ಎರಡನ್ನೂ ವರ್ಜಿತ ಸ್ಥಿತಿಯು, ಅದು ನಿಜವಾದ ನನ್ನ ದರ್ಶನವಾಗಿದೆ ॥೧೧೬೩॥

ಹೇ ಕಿರೀಟಿಯೇ, ಈ ದರ್ಶನವು ಯಾವುದೇ ಪದಾರ್ಥದ ಭೇಟಿಯಲ್ಲಿ ಆತನಿಗಾಗುವುದು. ನಂತರ ದೃಶ್ಯ ಹಾಗೂ ದೃಷ್ಟ ಈ ದ್ವೈತದ ಆಚೆಗಿರುವ ದೃಷ್ಟಿಯನ್ನು ಯಾವಾಗಲೂ ಭೋಗಿಸುವನು ॥೧೧೬೪॥

ಮತ್ತು ಆಕಾಶದಿಂದಲೇ ಆಕಾಶವು ದಟ್ಟವಾಗಿ ತುಂಬಿಕೊಂಡಿರುವುದರಿಂದ ಅದು ಅಲುಗಾಡುವುದೇ ಇಲ್ಲ. ಅದರಂತೆ ನಾನು ಆತ್ಮನು ಸರ್ವವ್ಯಾಪ್ತಿಯಾಗಿರುವೆನು ॥೧೧೬೫॥

ಕಲ್ಪಾಂತ ಕಾಲದಲ್ಲಿ ಓತಪ್ರೋತವಾಗಿ ಉದಕವೇ ತುಂಬಿಕೊಂಡಿರುವುದರಿಂದ ಉದಕದ ಹರಿಯುವಿಕೆಯು ನಿಲ್ಲುವುದು. ಅದರಂತೆ ಎಲ್ಲ ವಿಶ್ವವು ಆತ್ಮನಿಂದ ತುಂಬಿರುವುದರಿಂದ ಆತನಿಗೆ ಆತ್ಮದ ಹೊರತಾದ ಬೇರೆ ಪದಾರ್ಥವೇ ಉಳಿಯುವುದಿಲ್ಲ ॥೧೧೬೬॥

ಕಾಲು ಕಾಲಿನ ಮೇಲೆ ಹತ್ತಬಹುದೇ ? ಅಗ್ನಿಯು ಅಗ್ನಿಯನ್ನೇ ಸುಡಬಹುದೇ ? ನೀರು ನೀರಿನಲ್ಲಿ ಸ್ನಾನವನ್ನು ಹೇಗೆ ಮಾಡೀತು? ॥೧೧೬೭॥

ಆದ್ದರಿಂದ ಸರ್ವತ್ರವೂ ನನ್ನ ವ್ಯಾಪ್ತಿಯಾಗಿರುವುದರಿಂದ, ಆತನ ಬರುವ ಹೋಗುವುದು ನಿಲ್ಲುವುದು, ಇದುವೇ ಅದ್ವೈತಸ್ವರೂಪವಾದ ನನ್ನ ಯಾತ್ರೆ ಮಾಡುವುದಾಗಿದೆ ॥೧೧೬೮॥

ನೀರಿನ ಮೇಲಿನ ತೆರೆಗಳು ವೇಗದಿಂದ ಮುಂದೆ ಧಾವಿಸಿದರೂ, ಅವು ಸಮುದ್ರವನ್ನು ಬಿಟ್ಟು ಕೇವಲ ಭೂಮಿಯ ಭಾಗದ ಮೇಲೆ ಗಮನ ಮಾಡಿದಂತಾಗುವುದಿಲ್ಲ ॥೧೧೬೯॥

ಆದ್ದರಿಂದ ಯಾವ ಸ್ಥಳವನ್ನು ಬಿಡುವುದು ಹಾಗೂ ಆ ಸ್ಥಳವನ್ನು ಸೇರುವುದು ಹಾಗೂ ನಡೆಯುವವ ಹಾಗೂ ನಡೆಯುವವನ ಕಾಲು ಇವೆಲ್ಲವೂ ಉದಕವಾಗಿರುವುದರಿಂದ ॥೧೧೭೦॥

ಆ ತೆರೆಯು ಬೇಕಾದಷ್ಟು ಧಾವಿಸುತ್ತಿದ್ದರೂ, ಪಂಡುಸುತನೇ, ಅದು ಉದಕವೇ ಇರುವುದರಿಂದ ಅದರ ಏಕಾತ್ಮತೆಯು ಮುರಿಯುವುದಿಲ್ಲ ॥೧೧೭೧॥

ಅದರಂತೆ ಮದ್ರೂಪನಾದ ಮೇಲೆ ಆತನಿಗೆ ನಾನು ಎಂಬುವುದು ಸ್ಫುರಣವಾದ ಮೇಲೆ ಆತನು ಸಂಪೂರ್ಣವಾಗಿ ನನ್ನ ಕಡೆಗೆಯೇ ಬಂದನು. ಇಂತಹ ಯಾತ್ರೆಯಿಂದ ಆತನು ನನ್ನ ಯಾತ್ರಿಕನಾದನು ॥೧೧೭೨॥

ಮತ್ತು ಆತನ ಶರೀರದ ಸ್ವಭಾವದಿಂದ ಆತನು ಯಾವ ಕಾರ್ಯವನ್ನು ಆರಂಭಿಸಿದರೂ, ಆ ಕಾರ್ಯದ ನಿಮಿತ್ತದಿಂದ ನಾನೇ ಆತನಿಗೆ ಕೂಡುವೆನು ॥೧೧೭೩॥

ಹೇ ಪಂಡುಸುತನೇ, ಇಂಥ ಸ್ಥಿತಿಯಲ್ಲಿ ಇದು ಕರ್ಮವು ಹಾಗೂ ಇವನು ಕರ್ತನು ಎಂಬ ಭೇದವು ಹೋಗಿ, ಆತ್ಮತ್ವದಿಂದ ನನ್ನನ್ನು ನೋಡುವುದರಿಂದ ಮದ್ರೂಪನಾಗುವನು ॥೧೧೭೪॥

ಇಲ್ಲಿ ನೋಡು, ಕನ್ನಡಿಯು ಕನ್ನಡಿಯನ್ನು ನೋಡಿದಾಗ, ಅದು ನೋಡುವುದು ಅಲ್ಲದಾಗುವುದು, ಅಥವಾ ಬಂಗಾರದಿಂದ ಬಂಗಾರವನ್ನು ಮುಚ್ಚಲು ಅದು ಮುಚ್ಚಿದಂತಾಗುವುದಿಲ್ಲ ॥೧೧೭೫॥

ದೀಪವು ದೀಪಕ್ಕೆ ಪ್ರಕಾಶಿಸಿದರೆ, ಅದು ಪ್ರಕಾಶಿಸಿದಂತೆಯೇ ಅಲ್ಲ. ಅದರಂತೆ ಮದ್ರೂಪನಾಗಿ ಕರ್ಮ ಮಾಡಿದಾಗ ಅದಕ್ಕೆ ಕರ್ಮವೆಂದು ಹೇಗೆ ಹೇಳಬೇಕು ? ॥೧೧೭೬॥

ಕರ್ಮಹೀ ಕರಿತಚಿ ಆಹೇ । ಜೈ ಕರಾವೇ ಹೇ ಭಾಷ ಜಾಯೇ । ತೈ ನ ಕರಣೇಂಚಿ ಹೋಯೇ । ತಯಾಚೇ ಕೇಲೇ ।।೧೧೭೭।। ಕ್ರಿಯಾಜಾತ ಮೀ ಜಾಲೇಪಣೇ । ಘಡೇ ಕಾಂಹೀಂಚಿ ನ ಕರಣೇ । ತಯಾಚಿ ನಾಂವ ಪೂಜಣೇ । ಖುಣೇಚೇ ಮಾರ್ಝೇ ।।೧೧೭೮।। ಮ್ಹಣೌನಿ ಕರೀ ತಯಾಹೀ ವೋಜಾ । ತೇ ನ ಕರಣೇ ಹೇಂಚಿ ಕಪಿಧ್ವಜಾ । ನಿಫಜೇ ತಿಯಾ ಮಹಾಪೂಜಾ । ಪೂಜೀ ತೋ ಮಾತೇ ।।೧೧೭೯।। ಏವಂ ತೋ ಬೋಲೇ ತೇ ಸ್ತವನ । ತೋ ದೇಖೇ ತೇ ದರ್ಶನ । ಅದ್ವಯಾ ಮಜ ಗಮನ । ತೋ ಚಾಲೇ ತೇಚಿ ।।೧೧೮೦।। ತೋ ಕರೀ ತೇತುಲೀ ಪೂಜಾ । ತೋ ಕಲ್ಪೀ ತೋ ಜಪು ಮಾರ್ಝಾ । ತೋ ಅಸೇ ತೇಚಿ ಕಪಿಧ್ವಜಾ । ಸಮಾಧೀ ಮಾಜೀ ।।೧೧೮೧।। ಜೈಸೇ ಕನಕೇಂಸೀ ಕಾಂಕಣೇ । ಅಸಿಜೇ ಅನನ್ಯಪಣೇ । ತೋ ಭಕ್ತಿಯೋಗೇ ಯೇಣೇ । ಮಜಸೀ ತೈಸಾ ।।೧೧೮೨।। ಉದಕೀ ಕಲ್ಲೋಳು । ಕಾಪುರೀ ಪರಿಮಳು । ರತ್ನೀ ಉಜಾಳು । ಅನನ್ಯ ಜೈಸಾ ।।೧೧೮೩।। ಕಿಂಬಹುನಾ ತಂತೂಸೀ ಪಟು । ಕಾ ಮೃತ್ತಿಕೇಸೀ ಘಟು । ತೈಸಾ ತೋ ಏಕವಟು । ಮಜಸೀ ಮಾರ್ಝಾ ।।೧೧೮೪।। ಇಯಾ ಅನನ್ಯಸಿದ್ಧಾ ಭಕ್ತೀ । ಯಾ ಆಘವಾಚಿ ದೃಶ್ಯಜಾತೀ । ಮಜ ಆಪಣಪೇಯಾ ಸುಮತೀ । ದ್ರಷ್ಟಯಾತೇ ಜಾಣೇ ।।೧೧೮೫।। ತಿನ್ಹೀ ಅವಸ್ಥಾಂಚೇನಿ ದ್ವಾರೇ । ಉಪಾಧ್ಯುಪಹಿತಾಕಾರೇ । ಭಾವಾಭಾವರೂಪ ಸ್ಫುರೇ । ದೃಶ್ಯ ಜೇ ಹೇ ।।೧೧೮೬।। ತೇ ಹೇ ಆಘವೇಂಚಿ ಮೀ ದ್ರಷ್ಟಾ । ಐಸಿಯಾ ಬೋಧಾಚಾ ಮಾಜಿವಟಾ । ಅನುಭವಾಚಾ ಸುಭಟಾ । ಧೇಂಡಾ ತೋ ನಾಚೇ ।।೧೧೮೭।। ರಜ್ಜು ಜಾಲಿಯಾ ಗೋಚರು । ಆಭಾಸತಾ ತೋ ವ್ಯಾಳಾಕಾರು । ರಜ್ಜುಚ ಐಸಾ ನಿರ್ಧಾರು । ಹೋಯ ಜೇವೀ ।।೧೧೮೮।। ಭಾಂಗಾರಾಪರತೇ ಕಾಂಹೀ । ಲೇಣೇ ಗುಂಜಹೀಭರೀ ನಾಹೀ । ಹೇ ಆಟುನಿಯಾ ಠಾಯೀ । ಕೀಜೇ ಜೈಸೇ ।।೧೧೮೯।। ಉದಕಾ ಏಕಾಪರತೇ । ತರಂಗ ನಾಹೀಂಚಿ ಹೇ ನಿರುತೇ । ಜಾಣೋನಿ ತಯಾ ಆಕಾರಾತೇ । ನ ಘೇಪೇ ಜೇವೀ ।।೧೧೯೦।। ನಾತರೀ ಸ್ವಪ್ನ ವಿಕಾರಾ ಸಮಸ್ತಾ । ಚೇಊನಿಯಾ ಉಮಾಣೇ ಘೇತಾ । ತೋ ಆಪಣಯಾ ಪರೌತಾ । ನ ದಿಸೇ ಜೈಸಾ ।।೧೧೯೧।। ತೈಸೇ ಜೇ ಕಾಂಹೀ ಆಥೀ ನಾಥೀ । ಯೇಣೇ ಹೋಯ ಜ್ಞೇಯಸ್ಫೂರ್ತೀ । ತೇ ಜ್ಞಾತಾಚಿ ಮೀ ಹೇ ಪ್ರತೀತೀ । ಹೋಊನಿ ಭೋಗೀ ।।೧೧೯೨।। ಜಾಣೇ ಅಜು ಮೀ ಅಜರು । ಅಕ್ಷಯೋ ಮೀ ಅಕ್ಷರು । ಅಪೂರ್ವ ಮೀ ಅಪಾರು । ಆನಂದು ಮೀ ।।೧೧೯೩।।

ಕರ್ಮ ಮಾಡುತ್ತಿರುವಾಗ್ಗೆ, ನಾನು ಕರ್ತನು ಎಂಬ ಅಭಿಮಾನವನ್ನು ಇಲ್ಲದಂತಾದರೆ ಸಾಕು, ಆತನು ಮಾಡಿದ ಎಲ್ಲ ಕರ್ಮಗಳು ಮಾಡದಂತೆಯೇ ಆಗುವುದು ।।೧೧೭೭।।

ಆತನಿಗೆ ಎಲ್ಲ ಕ್ರಿಯೆಗಳು ಆತ್ಮ ಸ್ವರೂಪವಾಗಿರುವುದರಿಂದ ಆ ಎಲ್ಲ ಕ್ರಿಯೆಗಳಿಗೆ ಏನೂ ಮಾಡಿಲ್ಲವೆನ್ನಬೇಕು ಹಾಗೂ ಅದು ನನ್ನ ಗುರುತಿನ ಪೂಜೆಯಾಗಿರುವುದು ।।೧೧೭೮।।

ಆದ್ದರಿಂದ ಹೇ ಕಪಿಧ್ವಜನೇ, ಆತನು ಯಾವ ಯಾವ ಯಥಾಸಾಂಗ ಕ್ರಿಯೆಗಳನ್ನು ಮಾಡುವನೋ, ಅವು ಮಾಡದಂತೆ ಆಗಿ ಅದೇ ನನ್ನ ಮಹಾಪೂಜೆಯಾಗುವುದು ।।೧೧೭೯।।

ಅದರಂತೆ ಆತನು ಏನೇನು ಹೇಳುವನೋ, ಅವು ನನ್ನ ಸ್ತುತಿಯಾಗುವುದು, ಆತನು ಏನನ್ನು ನೋಡುವನೋ, ಅದು ನನ್ನ ದರ್ಶನವು, ಆತನು ನಡೆದದ್ದು ಅದ್ವಯನಾದ ನನ್ನ ಯಾತ್ರೆಯಾಗಿರುವುದು ।।೧೧೮೦।।

ಹೇ ಕಪಿಧ್ವಜನೇ, ಆತನು ಏನನ್ನು ಮಾಡುವನೋ, ಅದು ನನ್ನ ಪೂಜೆಯು, ಆತನು ಏನನ್ನು ಕಲ್ಪಿಸುವನೋ, ಅದು ನನ್ನ ಜಪವು ಹಾಗೂ ಆತನು ಇರುವ ಸ್ಥಿತಿಯೇ ನನ್ನ ಸಮಾಧಿಯಾಗಿರುವುದು ।।೧೧೮೧।।

ಬಂಗಾರಕ್ಕೆ ಬಂಗಾರದ ಬಳೆಯು ಅಭಿನ್ನವಾಗಿರುವಂತೆ, ಭಕ್ತಿಯೋಗದಿಂದ ಆತನು ನನ್ನಲ್ಲಿ ಅನನ್ಯನಾಗಿರುವನು ।।೧೧೮೨।।

ನೀರಿನಲ್ಲಿ ತೆರೆಯು, ಕರ್ಪೂರದಲ್ಲಿ ಪರಿಮಳವು ಹಾಗೂ ರತ್ನದಲ್ಲಿ ತೇಜವು ಬಿನ್ನವಿರದೇ ಅನನ್ಯವಾಗಿರುವುವು ।।೧೧೮೩।।

ಹೆಚ್ಚಿಗೇನು ಹೇಳಬೇಕು ? ನೂಲಿನೊಂದಿಗೆ ವಸ್ತ್ರವು, ಅಥವಾ ಮಣ್ಣಿನೊಂದಿಗೆ ಮಡಿಕೆಯು ಐಕ್ಯವಾಗಿರುವಂತೆ, ಆ ಭಕ್ತನು ನನ್ನಲ್ಲಿ ಐಕ್ಯನಾಗಿರುವನು ।।೧೧೮೪।।

ಸುಮತಿಯೇ, ಈ ಯಾವ ಏಕನಿಷ್ಠ ಭಕ್ತಿಯ ಯೋಗದಿಂದ, ಯಾವತ್ತೂ ದೃಶ್ಯಗಳಲ್ಲಿ ನಾಮರೂಪಾತ್ಮಕ ದೃಶ್ಯತ್ವದ ಪರದೆಯನ್ನು ಬದಿಗೆ ಸರಿಸಿ, ಆತ್ಮನಾದ ನನ್ನನ್ನು (ದೃಷ್ಟಾನನ್ನು) ಅವನು ತಿಳಿಯುವನು ।।೧೧೮೫।।

ಜಾಗೃತ, ಸ್ವಪ್ನ ಹಾಗೂ ಸುಷುಪ್ತಿ ಈ ಮೂರು ಅವಸ್ಥೆಗಳಿಂದ ಮತ್ತು ಶರೀರ ಮತ್ತು ಶರೀರದ ಚಾಲಕದಿಂದ, ವ್ಯಕ್ತ, ಅವ್ಯಕ್ತ ಏತದ್ರೂಪದಿಂದ ಎಲ್ಲ ದೃಶ್ಯ ಪದಾರ್ಥಗಳ ಸ್ಫುರಣವಾಗುವುದು ।।೧೧೮೬।।

ಈ ಎಲ್ಲ ದೃಶ್ಯವು ನಾನೇ ಇರುವೆನು. ಈ ಪ್ರಕಾರದ ಬೋಧೆಯ ಭರದಲ್ಲಿ ಅನುಭವದ ಪತಾಕೆಯು ಕುಣಿಯುತ್ತಿರುವುದು ।।೧೧೮೭।।

ಹಗ್ಗವು ದೃಷ್ಟಿಗೆ ಗೋಚರಿಸಿದಾಗ ಅದರ ಮೇಲೆ ಆಗಿದ್ದ ಸರ್ಪದ ಭಾಸವು ಇಲ್ಲದಾಗಿ ಹಗ್ಗವೇ ಎಂದು ನಿಶ್ಚಯವಾಗುವುದು ।।೧೧೮೮।।

ಬಂಗಾರದ ಹೊರತಾಗಿ ಒಂದು ಗುಂಜಿಯಷ್ಟೂ ಅಲಂಕಾರವು ಇರುವುದಿಲ್ಲ. ಹೀಗೆ ದೃಢ ನಿಶ್ಚಯಕ್ಕಾಗಿ ಎಲ್ಲ ಅಲಂಕಾರಗಳನ್ನು ಕರಗಿಸಲ್ಪಡುವುವು ।।೧೧೮೯।।

ನೀರಿನ ಮೇಲೆ ಬರುತ್ತಿರುವ ತೆರೆಗಳು ನೀರಿನ ಹೊರತಾಗಿ ಇರುವುದಿಲ್ಲ. ಹೀಗೆ ಗಟ್ಟಿಯಾಗಿ ತಿಳಿದು ಅವುಗಳ ಆಕಾರಕ್ಕೆ ಯಾವನು ಮರುಳಾಗುವುದಿಲ್ಲ ।।೧೧೯೦।।

ಅಥವಾ ಸ್ವಪ್ನದಲ್ಲಿ ಕಂಡ ಯಾವತ್ತು ವಿಕಾರಗಳನ್ನು ಎಚ್ಚರಾದ ಮೇಲೆ ನೋಡಲು ಹೋದಾಗ, ತನ್ನ ಹೊರತಾಗಿ ಏನೂ ಇಲ್ಲವೆಂಬುದು ತಿಳಿಯುವುದು ।।೧೧೯೧।।

ಅದರಂತೆ ಯಾವುದೇ ವಸ್ತುವು ಇರಲಿ, ಅಥವಾ ಇಲ್ಲದಿರಲಿ. ಅದರಿಂದ ತಿಳಿಯುವ ಯಾವ ಸ್ಫೂರ್ತಿಯಾಗುವುದು ಹಾಗೂ ಈ ಎಲ್ಲ ಪದಾರ್ಥಗಳು ನಾನೇ ಇರುವೆನು ಎಂಬ ಅನುಭವದ ಉಪಭೋಗವನ್ನು ಪಡೆಯುವನು ।।೧೧೯೨।।

ನಾನು ಹುಟ್ಟಲಾರದವನು, ಜರಾರಹಿತನು, ನಾಶರಹಿತನು ಮತ್ತು ಅವ್ಯಯ, ಅಪೂರ್ವನು, ಅಪಾರನು ಹಾಗೂ ಆನಂದಮಯನು ಹೀಗೆ ಇರುವೆನೆಂದು ತಿಳಿದಿರುವನು ।।೧೧೯೩।।

ಅಚಳು ಮೀ ಅಚ್ಯುತು । ಅನಂತು ಮೀ ಅದ್ವೈತು । ಆದ್ಯು ಮೀ ಅವ್ಯಕ್ತು । ವ್ಯಕ್ತುಹೀ ಮೀ ।।೧೧೯೪।। ಈಶ್ಯ ಮೀ ಈಶ್ವರು । ಅನಾದಿ ಮೀ ಅಮರು । ಅಭಯ ಮೀ ಆಧಾರು । ಆಧೇಯ ಮೀ ।।೧೧೯೫।। ಸ್ವಾಮೀ ಮೀ ಸದೋದಿತು । ಸಹಜು ಮೀ ಸತತು । ಸರ್ವ ಮೀ ಸರ್ವಗತು । ಸರ್ವಾತೀತು ಮೀ ।।೧೧೯೬।। ನವಾ ಮೀ ಪುರಾಣು । ಶೂನ್ಯು ಮೀ ಸಂಪೂರ್ಣು । ಸ್ಥೂಲು ಮೀ ಅಣು । ಜೇ ಕಾಂಹೀ ತೇ ಮೀ ।।೧೧೯೭।। ಅಕ್ರಿಯು ಮೀ ಏಕು । ಅಸಂಗು ಮೀ ಅಶೋಕು । ವ್ಯಾಪ್ಯ ಮೀ ವ್ಯಾಪಕು । ಪುರುಷೋತ್ತಮು ಮೀ ।।೧೧೯೮।। ಅಶಬ್ದು ಮೀ ಅಶ್ರೋತ್ರು । ಅರುಪು ಮೀ ಅಗೋತ್ರು । ಸಮು ಮೀ ಸ್ವತಂತ್ರು । ಬ್ರಹ್ಮ ಮೀ ಪರು ।।೧೧೯೯।। ಐಸೇ ಆತ್ಮತ್ವೇ ಮಜ ಏಕಾತೇ । ಇಯಾ ಅದ್ವಯ ಭಕ್ತೀ ಜಾಣೋನಿ ನಿರುತೇ । ಆಣಿ ಯಾಹೀ ಬೋಧಾ ಜಾಣತೇ । ತೇಂಹೀ ಮೀಚಿ ಜಾಣೇ ।।೧೨೦೦।। ಪೈ ಚೇಇಲೆಯಾನಂತರೇ । ಆಪುಲೇ ಏಕಪಣ ಉರೇ । ತೇಂಹೀ ತೋಂವರೀ ಸ್ಫುರೇ । ತಯಾಶೀಂಚಿ ಜೈಸೇ ।।೧೨೦೧।। ಕಾ ಪ್ರಕಾಶತಾ ಅರ್ಕು । ತೋಚಿ ಹೋಯ ಪ್ರಕಾಶಕು । ತಯಾಹೀ ಅಭೇದಾ ದ್ಯೋತಕು । ತೋಚಿ ಜೈಸಾ ।।೧೨೦೨।। ತೈಸಾ ವೇದಾಂಚ್ಯಾ ವಿಲಯೀ । ಕೇವಳ ವೇದಕು ಉರೇ ಪಾಹೀ । ತೇಣೇ ಜಾಣವೇ ತಯಾ ತೇಂಹೀ । ಹೇಂಹೀ ಜೋ ಜಾಣೇ ।।೧೨೦೩।। ತಯಾ ಅದ್ವಯಪಣ ಆಪುಲಿಯಾ । ಜಾಣತೀ ಜ್ಞಪ್ತೀ ಜೇ ಧನಂಜಯಾ । ತೇ ಈಶ್ವರಚಿ ಮೀ ಹೇ ತಯಾ । ಬೋಧಾಸಿ ಯೇ ।।೧೨೦೪।। ಮಗ ದ್ವೈತಾದ್ವೈತಾತೀತ । ಮೀಚಿ ಆತ್ಮಾ ಏಕು ನಿಭ್ರಾಂತ । ಹೇ ಜಾಣೋನಿ ಜಾಣಣೇ ಜೇಥ । ಅನುಭವೀ ರಿಘೇ ।।೧೨೦೫।। ತೇಥ ಚೇಇಲಿಯಾ ಏಕಪಣ । ದಿಸೇ ಜೇ ಆಪುಲಯಾ ಆಪಣ । ತೇಂಹೀ ಜಾತಾ ನೇಣೋ ಕೋಣ । ಹೋಇಜೇ ಜೇವೀ ।।೧೨೦೬।। ಕಾ ಡೋಳಾ ದೇಖತಿಯೇ ಕ್ಷಣೇ । ಸುವರ್ಣಪಣ ಸುವರ್ಣೇ । ನಾಟತಾ ಹೋಯ ಆಟಣೇ । ಅಳಂಕಾರಾಚೇಹೀ ।।೧೨೦೭।। ನಾನಾ ಲವಣ ತೋಯ ಹೋಯೇ । ಮಗ ಕ್ಷಾರತಾ ತೋಯತ್ವೇ ರಾಹೇ । ತೇಹೀ ಜಿರತಾ ಜೇವಿ ಜಾಯೇ । ಜಾಲೇಪಣ ತೇ ।।೧೨೦೮।। ತೈಸಾ ಮೀ ತೋ ಹೇ ಜೇ ಅಸೇ । ತೇ ಸ್ವಾನಂದಾನುಭವಸಮರಸೇ । ಕಾಲವೂನಿಯಾ ಪ್ರವೇಶೇ । ಮಜಚಿಮಾಜೀ ।।೧೨೦೯।।

ಅಚಲನು, ಅಚ್ಯುತನು, ಅನಂತನು, ಅದ್ವೈತನು, ಆದ್ಯನು, ಅವ್ಯಕ್ತನು ಮತ್ತು ವ್ಯಕ್ತನೂ ನಾನೇ ಇರುವೆನು ॥೧೧೯೪॥

ನಿಯಮನ ಮಾಡುವ ಈಶ್ಯನು, ಈಶ್ವರನು, ಅನಾದಿಯು, ಅಮರನು, ಅಭಯನು, ಆಧಾರ ಹಾಗೂ ಅದರ ಮೇಲಿನ ಅಧೇಯ ಈ ಎಲ್ಲವೂ ನಾನೇ ಇರುವೆನು ॥೧೧೯೫॥

ಎಲ್ಲರ ಸ್ವಾಮಿಯು ಹಾಗೂ ಯಾವಾಗಲೂ ಇರುವವನು, ಸಹಜನು, ಹಾಗೂ ಯಾವಾಗಲೂ ಸರ್ವ ವ್ಯಾಪ್ತಿಯು, ಸರ್ವಗತನು ಹಾಗೂ ಸರ್ವಾತೀತನು ನಾನೇ ಇರುವೆನು ॥೧೧೯೬॥

ಎಲ್ಲರಲ್ಲಿ ಹೊಸದು ನಾನು, ಹಾಗೂ ಎಲ್ಲರಲ್ಲಿ ಹಳಬ ನಾನು, ಅಭಾವರೂಪನು, ಹಾಗೂ ಸಂಪೂರ್ಣನು, ಎಲ್ಲರಕ್ಕಿಂತಲೂ ದೊಡ್ಡವನು, ಮತ್ತು ಅಣುರೇಣುವಿನ ಕ್ಕಿಂತಲೂ ಸಣ್ಣವನು, ಹೀಗೆ ಇರುವುದೆಲ್ಲವೂ ನಾನೇ ಇರುವೆನು ॥೧೧೯೭॥

ಕ್ರಿಯಾರಹಿತನು, ಒಬ್ಬನೇ ಒಬ್ಬನು, ಸಂಗರಹಿತನು, ಶೋಕರಹಿತನು, ನಾನು ಎಲ್ಲ ವಸ್ತುಗಳಲ್ಲಿದ್ದು, ಎಲ್ಲ ವಸ್ತುಗಳು ನನ್ನಲ್ಲಿರುವುವು, ಹೀಗೆ ಎಲ್ಲರಲ್ಲಿ ಉತ್ತಮ ಪುರುಷನು ನಾನು ॥೧೧೯೮॥

ಶಬ್ದಾತೀತನು, ಕರ್ಣರಹಿತನು, ರೂಪರಹಿತನು, ಗೋತ್ರರಹಿತನು, ಸಮನು, ಸ್ವತಂತ್ರನು, ಬ್ರಹ್ಮ ಹಾಗೂ ಪರಬ್ರಹ್ಮನು ನಾನೇ ಇರುವೆನು ॥೧೧೯೯॥

ಹೀಗೆ ಆತ್ಮರೂಪದಲ್ಲಿ ಐಕ್ಯಪಡೆದು, ನಿಜವಾದ ನನ್ನ ಅದ್ವೈತ ಭಕ್ತಿಯನ್ನು ಮಾಡಿ, ನನ್ನನ್ನು ತಿಳಿಯುವನು. ಹಾಗೂ ಹೀಗೆ ತಿಳಿಯುವ ನಾನು ಪರಮಾತ್ಮನೆಂದೂ, ಹೀಗೆ ತಿಳಿದಿರುವನು ॥೧೨೦೦॥

ಹೀಗೆ ಎಚ್ಚರಾದ ಮೇಲೆ ತನ್ನ ಏಕತ್ವವು ಉಳಿಯುವುದು ಹಾಗೂ ಅದು ಸಹ ಆತನದ್ದು, ಆತನಿಗೆಯೇ ತಿಳಿಯುವುದು ॥೧೨೦೧॥

ಸೂರ್ಯನು ಸ್ವತಃ ಪ್ರಕಾಶರೂಪನಿದ್ದು, ಅವನೇ ಪ್ರಕಾಶನಾಗಿ ಮತ್ತು ಪ್ರಕಾಶಕ ಪ್ರಕಾಶ್ಯ ಈ ಎರಡರ ಮಧ್ಯ ದಲ್ಲಿನ ಅಭೇದವನ್ನು ಆತನೇ ತಿಳಿಯುವನು ॥೧೨೦೨॥

ಅದರಂತೆ ತಿಳಿಯಲು ಯೋಗ್ಯವಾದ ಪದಾರ್ಥಗಳ ನಾಶದ ನಂತರ ಕೇವಲ ತಿಳಿಯುವನೇ ಉಳಿಯುವನು. ಇದನ್ನು ಸಹ ಯಾರಿಗೆ ತಿಳಿಯುವುದೋ, ಅದು ನಾನೇ ಇರುವೆ ಎಂದು ಯಾವನು ತಿಳಿಯುವನೋ ॥೧೨೦೩॥

ಧನಂಜಯಾ, ಯಾವ ತನ್ನ ಅಖಂಡವಾದ ಸ್ವರೂಪಕ್ಕೆ ಪ್ರಕಾಶಗೊಳಿಸುವ ಸಾಮಾನ್ಯ ಜ್ಞಾನವು ಅದು ಈಶ್ವರವೇ ಅಂದರೆ, ಬ್ರಹ್ಮವೇ ಇರುವುದು ಮತ್ತು ಆ ''ಬ್ರಹ್ಮವು ನಾನಿದ್ದೇನೆ'' ಹೀಗೆ ಆ ಕ್ರಮಯೋಗಿಯು ಅನುಭವಕ್ಕೆ ಬರುವುದು ॥೧೨೦೪॥

ನಂತರ ದ್ವೈತ ಹಾಗೂ ಅದ್ವೈತ ಇವುಗಳ ಆಚೆಗಿರುವ ಯಾವ ಆತ್ಮನು, ಅದುವೇ ನಾನು ನಿಃಸಂಶಯವಾಗಿ ಇರುವೆನು ಎಂದು ತಿಳಿದು ಅಲ್ಲಿ ಆ ಜ್ಞಾನವೂ ಲಯಗೊಳ್ಳು ವುದು ॥೧೨೦೫॥

ಅಂದಮೇಲೆ, ಎಚ್ಚರಾದ ಮೇಲೆ ತನಗೆ ತನ್ನ ಸ್ವರೂಪವು ಕಾಣುವುದು, ಮುಂದೆ ಅದು ಸಹ ಇಲ್ಲದಾಗಿ ಯಾವ ಸ್ಥಿತಿಯು ಪ್ರಾಪ್ತವಾಗುವುದೆಂಬುವುದನ್ನು ಹೇಳಲು ಬರುವುದಿಲ್ಲ ॥೧೨೦೬॥

ಅಥವಾ ಬಂಗಾರವನ್ನು ಬಂಗಾರದ ದೃಷ್ಟಿಯಿಂದ ನೋಡುತ್ತಿರುವಾಗ, ಆ ಕ್ಷಣಕ್ಕೆ ಅಲಂಕಾರವನ್ನು ಕರಗಿಸದೇ ಕರಗಿಸಿದಂತೆಯೇ ಆಗುವುದು ॥೧೨೦೭॥

ಅಥವಾ ಉಪ್ಪಿನಿಂದ ನೀರಾಗುವುದು, ಆದರೆ ಆ ನೀರಿನಲ್ಲಿ ಕ್ಷಾರತ್ವವು ಇರುವುದು, ಅದು ಸಹ ಕರಗಿ ಹೋದಮೇಲೆ ಉಪ್ಪು ಸಹ ಇಲ್ಲದಾಗುವುದು ॥೧೨೦೮॥

ಅದರಂತೆ ನಾನು ಹಾಗೂ ಆತನು ಈ ಭೇದವಿರುವುದು, ಅದು ಸಹ ಪೂರ್ಣಾನಂದದ ಭರದಲ್ಲಿ ಒಂದೇಯಾಗಿ ಮದ್ರೂಪದಲ್ಲಿ ಲಯಗೊಳ್ಳುವುದು ॥೧೨೦೯॥

ಆಣಿ ತೋ ಹೇ ಭಾಷ ಜೇಥ ಜಾಯೇ । ತೇಥೇ ಮೀ ಹೇ ಕೋಣ್ಹಾ ಸೀ ಆಹೇ । ಐಸಾ ಮೀ ನಾ ತೋ ತಿಯೇ ಸಾಮಾಯೇ । ಮಾಝ್ಯಾಚಿ ರೂಪೀ ।೧೨೧೦॥ ಜೇವ್ಹಾ ಕಾಪುರ ಜಳೋ ಸರೇ । ತಯಾಚಿ ನಾಮ ಅಗ್ನಿ ಪುರೇ । ಮಗ ಉಭಯಾತೀತ ಉರೇ । ಆಕಾಶ ಜೇವೀ ।೧೨೧೧॥ ಕಾ ಧಾಡಲಿಯಾ ಏಕಾ ಏಕು । ವಾಢೇ ತೋ ಶೂನ್ಯ ವಿಶೇಖು । ತೈಸಾ ಆಹೇ ನಾಹೀಂಚಾ ಶೇಖು । ಮೀಚಿ ಮಗ ಅಥೀ ।೧೨೧೨॥ ತೇಥ ಬ್ರಹ್ಮ ಆತ್ಮಾ ಈಶು । ಯಯಾ ಬೋಲಾ ಮೋಡೆ ಸೌರಸು ?। ನ ಬೋಲಣೇ ಯಾಹೀ ಪೈಸು । ನಾಹೀ ತೇಥ ।೧೨೧೩॥ ನ ಬೋಲಣೇಂಹೀ ನ ಬೋಲೋನೀ । ತೇ ಬೋಲಿಜೇ ತೋಂಡ ಭರುನಿ । ಜಾಣಿವ ನೇಣಿವ ನೇಣೋನೀ । ಜಾಣಿಜೇ ತೇ ।೧೨೧೪॥ ತೇಥ ಬುಝಿಜೇ ಬೋಧು ಬೋಧೇ । ಆನಂದು ಘೇಪೇ ಆನಂದೇ । ಸುಖಾವರೀ ನುಸಧೇ । ಸುಖಚಿ ಭೋಗಿಜೇ ।೧೨೧೫॥ ತೇಥ ಲಾಭು ಜೋಡಲಾ ಲಾಭಾ । ಪ್ರಭಾ ಆಲಿಂಗಿಲೀ ಪ್ರಭಾ । ವಿಸ್ಮಯೋ ಬುಡಾಲಾ ಉಭಾ । ವಿಸ್ಮಯಾಮಾಜೀ ।೧೨೧೬॥ ಶಮು ತೇಥ ಸಾಮಾವಲಾ । ವಿಶ್ರಾಮು ವಿಶ್ರಾಂತಿ ಆಲಾ । ಅನುಭವು ವೇಡಾವಲಾ । ಅನುಭೂತಿಪಣೇ ।೧೨೧೭॥ ಕಿಂಬಹುನಾ ಐಸೇ ನಿಖಳ । ಮೀಪಣ ಜೋಡೇ ತಯಾ ಫಳ । ಸೇವೂನಿ ವೇಲೀ ವೇಲ್ಹಾಳ । ಕ್ರಮಯೋಗಾಚೀ ತೇ ।೧೨೧೮॥ ಪೈ ಕ್ರಮಯೋಗಿಯಾ ಕಿರೀಟೀ । ಚಕ್ರವರ್ತೀಚ್ಯಾ ಮುಕುಟೀ । ಮೀ ಚಿದ್ರತ್ನ ತೇ ಸಾಟೋವಾಟೀ । ಹೋಯ ತೋ ಮಾಝಾ ।೧೨೧೯॥ ಕೀ ಕ್ರಮಯೋಗ ಪ್ರಾಸಾದಾಚಾ । ಕಳಸು ಜೋ ಹಾ ಮೋಕ್ಷಾಚಾ । ತಯಾವರೀಲ ಅವಕಾಶಾಚಾ । ಉವಾವೋ ಜಾಲಾ ತೋ ।೧೨೨೦॥ ನಾನಾ ಸಂಸಾರ ಆಡವೀ । ಕ್ರಮಯೋಗ ವಾಟ ಬರವೀ । ಜೋಡಿಲೀ ತೇ ಮದ್ಯೈಕ್ಯಗಾಂವೀ । ಪೈಠೀ ಜಾಲೀಸೇ ।೧೨೨೧॥ ಹೇ ಅಸೋ ಕ್ರಮಯೋಗ ವೋಘೇ । ತೇಣೇ ಭಕ್ತಿಚಿದ್ಗಾಂಗೇ । ಮೀ ಸ್ವಾನಂದೋದಧೀ ವೇಗೇ । ಠಾಕಿಲಾ ಕೀ ಗಾ ।೧೨೨೨॥ ಹಾ ಠಾಯವರೀ ಸುವರ್ಮಾ । ಕ್ರಮಯೋಗಿ ಆಹೇ ಮಹಿಮಾ । ಮ್ಹಣೌನಿ ವೇಳೋವೇಳಾ ತುಮ್ಹಾ । ಸಾಂಗತೋ ಆಮ್ಹೀ ।೧೨೨೩॥ ಪೈ ದೇಶೇ ಕಾಳೇ ಪದಾರ್ಥೇ । ಸಾಧೂನಿ ಘೇಈಜೇ ಮಾತೇ । ತೈಸಾ ನವ್ಹೇ ಮೀ ಆಯತೇ । ಸರ್ವಾಂಚೇ ಸರ್ವಹೀ ।೧೨೨೪॥

ಮತ್ತು ಬೇರೆ ಎಂಬ ಭಾಸವು ಅಲ್ಲಿ ಇಲ್ಲದಾಗಲು ನಾನು ಎಂಬ ಈ ಶಬ್ದವು ಎಲ್ಲಿ ಉಳಿಯಬೇಕು ? ಹೀಗೆ ನಾನೂ ಇಲ್ಲ, ಅವನೂ ಇಲ್ಲ. ಹೀಗಿರುವ ನನ್ನ ರೂಪದಲ್ಲಿ ಐಕ್ಯನಾಗುವನು ॥೧೨೧೦॥

ಕರ್ಪೂರವು ಸುಟ್ಟಾಕ್ಷಣಕ್ಕೆ ಅಗ್ನಿಯ ಹೆಸರೂ ಸಹ ಇಲ್ಲದಾಗುವುದು. ಹಾಗೂ ಕರ್ಪೂರ ಮತ್ತು ಅಗ್ನಿ ಇವುಗಳಿಂದ ಭಿನ್ನವಾಗಿರುವ ಆಕಾಶ ಮಾತ್ರ ಉಳಿಯುವುದು ॥೧೨೧೧॥

ಒಂದರಲ್ಲಿ ಒಂದನ್ನು ಕಳೆದಾಗ ಶೂನ್ಯವು ಉಳಿಯುವುದು. ಅದರಂತೆ ಇಲ್ಲಿ ಈ ಎರಡನ್ನು ಒಂದರಲ್ಲಿ ಒಂದನ್ನು ಕಳೆದಾಗ ಉಳಿಯುವ ಅಭಾವದ ಶೇಷವೇ ನಾನು ॥೧೨೧೨॥

ಅಲ್ಲಿ ಬ್ರಹ್ಮ, ಆತ್ಮ, ಈಶ್ವರ ಹೀಗೆ ಹೇಳಲೂ ಸಹ ಅವಕಾಶವು ಉಳಿಯುವುದಿಲ್ಲ. ಏನೂ ಹೇಳದೇ ಇರಲು ಅಲ್ಲಿ ಸ್ಥಳವಿರುವುದಿಲ್ಲ ॥೧೨೧೩॥

( ಈ ಬ್ರಹ್ಮ ಸಂಬಂಧದಲ್ಲಿ) ಹೇಳುವುದು, ಹೇಳದೇ ಇರುವುದು, ಈ ಎರಡನ್ನೂ ವೈಖರೀ ವಾಣಿಯಿಂದ ಹೇಳದೇ, ಅದ್ವೈತಭಾವದಿಂದ ತಾನೇ ತನ್ನಲ್ಲಿ ಸ್ವಾನುಭವವನ್ನು ಬಾಯಿತುಂಬ ಹೇಳಬೇಕಾಗುವುದು ಮತ್ತು ಜ್ಞಾನ, ಅಜ್ಞಾನ ಈ ಎರಡನ್ನು ತಿಳಿದುಕೊಂಡೇ ಕೇವಲ ಸ್ವಾನುಭವದಿಂದ ತಿಳಿಯಬೇಕಾಗುವುದು ॥೧೨೧೪॥

ಇಂಥ ಸ್ಥಿತಿಯಲ್ಲಿ ಬೋಧವನ್ನು ಬೋಧದಿಂದ ತಿಳಿದು, ಆನಂದದಿಂದ ಆನಂದವನ್ನು ಭೋಗಿಸಿ, ಸುಖದಿಂದ ಸುಖದ ಅನುಭವವನ್ನು ಪಡೆಯುವನು ॥೧೨೧೫॥

ಆಗ ಲಾಭದಲ್ಲಿ ಲಾಭ ಮಾಡಿ, ಪ್ರಕಾಶದಿಂದ ಪ್ರಕಾಶಕ್ಕೆ ಆಲಿಂಗಿಸಿ, ಆಶ್ಚರ್ಯವು ಆಶ್ಚರ್ಯದಲ್ಲಿ ಸ್ಪಷ್ಟವಾಗಿ ಮುಳುಗಿ ಹೋಗುವುದು ॥೧೨೧೬॥

ಶಮವು ವಿಶ್ರಾಂತಿಯನ್ನು ಹೊಂದಿ, ವಿಶ್ರಾಮವೂ ವಿಶ್ರಾಂತಿಯಲ್ಲಿ ಬರುವುದು, ಹಾಗೂ ಅನುಭವವು ಅನುಭವದಿಂದಲೇ ಸಂಕೋಚಗೊಳ್ಳುವುದು ॥೧೨೧೭॥

ಹೆಚ್ಚಿಗೇನು ಹೇಳಬೇಕು ? ಕ್ರಮ ಯೋಗದ ಸುಂದರವಾದ ಬಳ್ಳಿಯ ಸೇವನೆಯನ್ನು ಮಾಡಿರುವುದರಿಂದ ಆತನಿಗೆ ಮದ್ರೂಪ ಪ್ರಾಪ್ತಿಯ ಸುಂದರವಾದ ಫಲವು ದೊರೆಯುವುದು ॥೧೨೧೮॥

ಕಿರೀಟಿಯೇ, ಕ್ರಮಯೋಗಿರೂಪ ಚಕ್ರವರ್ತಿಯ ಕಿರೀಟದ ಜ್ಞಾನರೂಪ ರತ್ನವು ನಾನಾಗುವೆನು. ಹಾಗೂ ಅದರ ಪ್ರತಿಯಾಗಿ ಆತನು ನನ್ನ ಭಕ್ತನಾಗುವನು ॥೧೨೧೯॥

ಅಥವಾ ಕ್ರಮಯೋಗರೂಪ ದೇವಮಂದಿರದ ಮೇಲೆ ಮೋಕ್ಷದ ಎತ್ತರವಾಗಿರುವ ಸುವರ್ಣ ಕಳಸವಿರುವುದು, ಅದರ ಮೇಲೆಯೂ ಆ ಕ್ರಮ ಯೋಗಿಯು ಪೊಳ್ಳಿನ ವಿಸ್ತಾರವಾಗಿರುವನು ॥೧೨೨೦॥

ಅಥವಾ ಸಂಸಾರರೂಪ ಅರಣ್ಯದಲ್ಲಿ ಕ್ರಮಯೋಗರೂಪ ರಾಜಮಾರ್ಗದಿಂದ ನನ್ನ ಐಕ್ಯರೂಪ ಊರಿನಲ್ಲಿ ಬಂದು ಕೂಡುವನು ॥೧೨೨೧॥

ಕ್ರಮಯೋಗದ ಪ್ರವಾಹದಿಂದ ಹರಿಯುತ್ತ ಹರಿಯುತ್ತ ಸ್ವಯಂ ಪ್ರಕಾಶ ಭಕ್ತಿರೂಪ ಗಂಗೆಯ ನೀರಿನಿಂದ, ನಾನು ಸ್ವಾನಂದರೂಪ ಸಮುದ್ರವು ವೇಗದಿಂದ ಪ್ರಾಪ್ತಿ ಮಾಡಿಕೊಂಡಿರುವೆನು. ಈಗ ಈ ರೂಪಕವಿರಲಿ ॥೧೨೨೨॥

ಸುವರ್ಮನೇ, ಇಂಥ ಕ್ರಮಯೋಗದ ಮಹಿಮೆಯಾಗಿದೆ. ಆದ್ದರಿಂದ ನಾನು ಮೇಲಿಂದ ಮೇಲೆ ಅದರ ವರ್ಣನೆಯನ್ನು ನಿನ್ನಲ್ಲಿ ಮಾಡುವೆನು ॥೧೨೨೩॥

ಆದರೆ ದೇಶ, ಕಾಲ, ವಸ್ತು ಇವುಗಳ ಅನುಕೂಲಗಳಿಂದ ನನ್ನನ್ನು ಸಾಧ್ಯ ಮಾಡಿಕೊಳ್ಳಬೇಕೆಂಬಂತೆ ನಾನು ಇರುವುದಿಲ್ಲ, ನಾನೇ ಎಲ್ಲರ ಆತ್ಮನಿರುವುದರಿಂದ ಸರ್ವರಿಗೂ ಸಹಜವಾಗಿ ಪ್ರಾಪ್ತನಿದ್ದೇನೆ ॥೧೨೨೪॥

ಮ್ಹಣೌನಿ ಮಾಝ್ಯಾ ಠಾಯೀ । ಜಾಚಾವೇ ನ ಲಗೇ ಕಾಂಹೀ । ಮೀ ಲಾಭೇ ಇಯೇ ಉಪಾಯೀ । ಸಾಚಚಿ ಗಾ ॥೧೨೨೫॥ ಏಕ ಶಿಷ್ಯ ಏಕ ಗುರು । ಹಾ ರೂಢಲಾ ಸಾಚ ವ್ಯವಹಾರು । ತೋ ಮತ್ಪ್ರಾಪ್ತಿಪ್ರಕಾರು । ಜಾಣಾವಯಾ ॥೧೨೨೬॥ ಅಗಾ ವಸುಧೇಚ್ಯಾ ಪೋಟೀ । ನಿಧಾನ ಸಿದ್ಧ ಕಿರೀಟೀ । ವನ್ಹಿ ಸಿದ್ಧ ಕಾಷ್ಠೀ । ಪೋಹಾ ದೂಧ ॥೧೨೨೭॥ ಪರೀ ಲಾಭೇ ತೇ ಅಸತೇ । ತಯಾ ಕೀಜೇ ಉಪಾಯಾತೇ । ಯೇರ ಸಿದ್ಧಚಿ ತೈಸಾ ಯೇಥೇ । ಉಪಾಯೀ ಮೀ ॥೧೨೨೮॥ ಹಾ ಫಳಹೀವರೀ ಉಪಾವೋ । ಕಾ ಪಾ ಪ್ರಸ್ತಾವೀತಸೇ ದೇವೋ । ಹೇಪುಸತಾ ತರೀ ಅಭಿಪ್ರಾವೋ । ಯೇಥಿಂಚಾ ಐಸಾ ॥೧೨೨೯॥ ಜೇ ಗೀತಾರ್ಥಾಚೇ ಚಾಂಗಾವೇ । ಮೋಕ್ಷೋಪಾಯಪರ ಆಘವೇ । ಆನ ಶಾಸ್ತ್ರೋಪಾಯ ಕೀ ನವ್ಹೇ । ಪ್ರಮಾಣ ಸಿದ್ಧ ॥೧೨೩೦॥ ವಾರಾ ಆಭಾಳಚಿ ಫೇಡೀ । ವಾಂಚೂನಿ ಸೂರ್ಯಾತೇ ನ ಘಡೀ । ಕಾ ಹಾತು ಬಾಬುಳೀ ಧಾಡೀ । ತೋಯ ನ ಕರೀ ॥೧೨೩೧॥ ತೈಸಾ ಆತ್ಮದರ್ಶನೀ ಆಡಳು । ಅಸೇ ಅವಿದ್ಯೇಚಾ ಜೋ ಮಳು । ತೋ ಶಾಸ್ತ್ರ ನಾಶೀ ಯೇರು ನಿರ್ಮಳು । ಮೀ ಪ್ರಕಾಶೇ ಸ್ವಯೇ ॥೧೨೩೨॥ ಮ್ಹಣೌನಿ ಆಘವೀಂಚಿ ಶಾಸ್ತ್ರೇ । ಅವಿದ್ಯಾವಿನಾಶಾಚೀ ಪಾತ್ರೇ । ವಾಂಚೋನಿ ನ ಹೋತೀ ಸ್ವತಂತ್ರೇ । ಆತ್ಮಭೋಧೀ ॥೧೨೩೩॥ ತಯಾ ಆಧ್ಯಾತ್ಮ ಶಾಸ್ತ್ರಾಂಸೀ । ಜೈ ಸಾಚಪಣಾಚೀಯೇ ಪುಸೀ । ತೈ ಯೇಇಜೇ ಜಯಾ ಠಾಯಾಸೀ । ತೇ ಹೇ ಗೀತಾ ॥೧೨೩೪॥ ಭಾನು ಭೂಷಿತಾ ಪ್ರಾಚಿಯಾ । ಸತೇಜಾ ದಿಶಾ ಆಘವಿಯಾ । ತೈಸೀ ಶಾಸ್ತ್ರೇಶ್ವರಾ ಗೀತಾ ಯಾ । ಸನಾಥೇ ಶಾಸ್ತ್ರೇ ॥೧೨೩೫॥ ಹೇ ಅಸೋ ಯೇಣೇ ಶಾಸ್ತ್ರೇಶ್ವರೇ । ಮಾಗಾ ಉಪಾಯ ಬಹುವೇ ವಿಸ್ತಾರೇ । ಸಾಂಗಿತಲಾ ಜೈಸಾ ಕರೇ । ಘೇವೋ ಯೇ ಆತ್ಮಾ ॥೧೨೩೬॥ ಪರೀ ಪ್ರಥಮ ಶ್ರವಣಾಸವೇ । ಅರ್ಜುನಾ ವಿಪಾಯೇ ಹೇ ಫಾವೇ । ಹಾ ಭಾವೋ ಸಕಣವೇ । ಧರೂನಿ ಶ್ರೀಹರೀ ॥೧೨೩೭॥ ತೇಂಚಿ ಪ್ರಮೇಯ ಏಕ ಮೇಳ । ಶಿಷ್ಯೀ ಹೋಆವಯಾ ಅಢಳ । ಸಾಂಗತಸೇ ಮುಕುಳ । ಮುದ್ರಾ ಆತಾ ॥೧೨೩೮॥ ಆಣಿ ಪ್ರಸಂಗೇ ಗೀತಾ । ಠಾವೋಹೀ ಹಾ ಸಂಪತಾ । ಮ್ಹಣೌನಿ ದಾವೀ ಆದ್ಯಂತಾ । ಏಕಾರ್ಥತ್ವ ॥೧೨೩೯॥ ಜೇ ಗ್ರಂಥಾಚ್ಯಾ ಮಧ್ಯಭಾಗೀ । ನಾನಾ ಅಧಿಕಾರಪ್ರಸಂಗೀ । ನಿರೂಪಣ ಅನೇಗೀ । ಸಿದ್ಧಾಂತೀ ಕೇಲೇ ॥೧೨೪೦॥

ಆದ್ದರಿಂದ ನನ್ನ ಪ್ರಾಪ್ತಿಗಾಗಿ ಶ್ರಮ ಪಡೆಯದೇ, ನಾನು ಈ ಕ್ರಮಯೋಗದ ಉಪಾಯದಿಂದ ನಿಜವಾಗಿಯೂ ಸಹಜವಾಗಿ ಪ್ರಾಪ್ತನಾಗುವೆನು ॥೧೨೨೫॥

ನನ್ನ ಪ್ರಾಪ್ತಿಯ ಉಪಾಯವನ್ನು ತಿಳಿದು ಕೊಳ್ಳುವುದಕ್ಕಾಗಿ ಗುರು ಹಾಗೂ ಶಿಷ್ಯ ಈ ಸಾಂಪ್ರದಾಯವು ನಿಜವಾಗಿಯೂ ಅನಾದಿಸಿದ್ಧವಾಗಿರುವುದು ॥೧೨೨೬॥

ಅರೇ, ಕಿರೀಟಿಯೇ, ಪೃಥ್ವಿಯ ಉದರದಲ್ಲಿ ದ್ರವ್ಯವು ಸಿದ್ಧವಾಗಿರುವುದು. ಹಾಗೆಯೇ ಕಟ್ಟಿಗೆಯಲ್ಲಿ ಅಗ್ನಿಯು, ಕೆಚ್ಚಲದಲ್ಲಿ ಹಾಲು ಇವು ಸಿದ್ಧವಾಗಿರುವುವು ॥೧೨೨೭॥

ಆದಾಗ್ಯೂ, ಈ ಎಲ್ಲವೂ ಸಿದ್ಧವಾಗಿದ್ದರೂ ಅದರ ಲಾಭವನ್ನು ಪಡೆಯಲು ಉಪಾಯವನ್ನು ಮಾಡಬೇಕಾಗುವುದು. ನಾನು ಸ್ವತಃ ಸಿದ್ಧನಿದ್ದರೂ, ನನ್ನ ಅಡ್ಡ ಬರುವ ಪದಾರ್ಥಗಳನ್ನು ದೂರಿಕರಿಸಲು ಉಪಾಯಗಳನ್ನು ಮಾಡಬೇಕಾಗುವುದು॥೧೨೨೮॥

ಈ ಫಲ ಪ್ರಾಪ್ತಿಯಾದ ಮೇಲೆ ಪುನಃ ಉಪಾಯಗಳ ಪ್ರಸ್ತಾವನೆಯನ್ನು ದೇವನು ಏಕೆ ಮಾಡಿದನೆಂದು ಯಾರಾದರೂ ಶಂಕೆ ಮಾಡಿದರೆ, ಅದರ ಅಭಿಪ್ರಾಯವು ಹೀಗಿರುವುದು ॥೧೨೨೯॥

ಗೀತಾರ್ಥದ ಸಾಮರ್ಥ್ಯವು ಮೋಕ್ಷದ ಸಾಧನೆಗಳನ್ನು ಪ್ರಾಪ್ತಿ ಮಾಡಿಕೊಡುವುದು. ಇದು ಅದರಲ್ಲಿನ ಉತ್ತಮತ್ವವಾಗಿದೆ. ಬೇರೆ ಶಾಸ್ತ್ರಗಳಲ್ಲಿ ಪ್ರಮಾಣ ಸಿದ್ಧ ಮೋಕ್ಷೋಪಾಯಗಳಿಲ್ಲ ॥೧೨೩೦॥

ಗಾಳಿಯಿಂದ ಸೂರ್ಯನಿಗೆ ಅಡ್ಡ ಬಂದಿರುವ ಮೋಡಗಳು ದೂರಾಗುವುವು. ಆದರೆ ಆ ಗಾಳಿಯಿಂದ ಸೂರ್ಯನನ್ನು ಹುಟ್ಟಿಸಲು ಬರುವುದಿಲ್ಲ. ಅಥವಾ ಕೈಯಿಂದ ನೀರಿನ ಮೇಲಿನ ಜೊಂಡನ್ನು ತೆಗೆಯಲು ಬರುವುದು. ಆದರೆ ನೀರನ್ನು ಮಾಡಲು ಬರುವುದಿಲ್ಲ ॥೧೨೩೧॥

ಅದರಂತೆ ಆತ್ಮದರ್ಶನಕ್ಕೆ ಅಡ್ಡವಾದ ಅಜ್ಞಾನದ ಪ್ರತಿಬಂಧವು ಇತರ ಶಾಸ್ತ್ರಗಳಿಂದ ಇಲ್ಲದಾಗುವುದು. ಅದರಿಂದ ನನ್ನ ನಿರ್ಮಲವಾದ ಆತ್ಮಸ್ವರೂಪವು ದೊರೆಯುವುದು ॥೧೨೩೨॥

ಆದ್ದರಿಂದ ಎಲ್ಲ ಶಾಸ್ತ್ರಗಳು ಅಜ್ಞಾನದ ನಾಶ ಮಾಡಲು ಮಾತ್ರ ಯೋಗ್ಯವಾಗಿವೆ. ಇದರ ಹೊರತಾಗಿ ಅವು ಸ್ವತಃ ಸಿದ್ಧ ಆತ್ಮಸ್ವರೂಪದ ಬೋಧವನ್ನು ಮಾಡುವುದಿಲ್ಲ ॥೧೨೩೩॥

ಆ ಆಧ್ಯಾತ್ಮ ಶಾಸ್ತ್ರಗಳಿಗೆ ಸತ್ಯತ್ವ ವಿಷಯಕ್ಕೆ ಒತ್ತಡದಿಂದ ಕೇಳಿದಾಗ ತಮ್ಮ ನಿಜ ಸ್ಥಿತಿ ತೋರಿಸಲು ಅವು ಗೀತಾಶಾಸ್ತ್ರಕ್ಕೆ ಶರಣಾಗುವುವು ॥೧೨೩೪॥

ಸೂರ್ಯನು ಪೂರ್ವದಿಕ್ಕಿನಲ್ಲಿ ಉದಯಿಸಿದರೆ ಎಲ್ಲ ದಿಕ್ಕುಗಳು ಪ್ರಕಾಶಿತಗೊಳ್ಳುವುವು. ಅದರಂತೆ ಸರ್ವಶಾಸ್ತ್ರಗಳಿಗೆ ಆಧಾರಭೂತವಾದ ಗೀತೆಯು ಇದರಿಂದ ಎಲ್ಲ ಶಾಸ್ತ್ರಗಳು ಸನಾಥವಾಗಿರುವುವು ॥೧೨೩೫॥

ಇದು ಇರಲಿ, ಈ ಗೀತೆರೂಪ ಶ್ರೇಷ್ಠ ಶಾಸ್ತ್ರವು ಹಿಂದಿನ ಅಧ್ಯಾಯಗಳಲ್ಲಿ ಆತ್ಮವು ಹಸ್ತಗತವಾಗುವಂತೆ ಬೇಕಾದಷ್ಟು ಉಪಾಯಗಳನ್ನು ಹೇಳಿದೆ ॥೧೨೩೬॥

ಆದರೆ ಪ್ರಥಮವಾಗಿ ಒಂದೇ ವೇಳೆಯಲ್ಲಿ ಕೇಳುವುದರಿಂದ ಅರ್ಜುನನಿಗೆ ಇದು ತಿಳಿದೀತೋ ಇಲ್ಲವೋ ಎಂಬ ಭಾವವನ್ನು ಶ್ರೀಹರಿಯು ಕಳಕಳಿಯಿಂದ ಮನದಲ್ಲಿ ಹಿಡಿದು ॥೧೨೩೭॥

ಅದೇ ಅರ್ಥವು ಶಿಷ್ಯನಲ್ಲಿ ದೃಢವಾಗುವುದಕ್ಕಾಗಿ ಬಚ್ಚು ಮನಸ್ಸಿನಿಂದ ಒಂದು ಸಾರೆ ಪುನಃ ಹೇಳುವನು ॥೧೨೩೮॥

ಮತ್ತು ಗೀತೆಯು ಮುಗಿಯುವ ಪ್ರಸಂಗ ಬಂದಿರುವುದರಿಂದ ಆರಂಭದಿಂದ ಕೊನೆಯವರೆಗೂ ಒಂದೇ ಅರ್ಥವನ್ನು ಪ್ರತಿಪಾದಿಸಲ್ಪಟ್ಟಿದೆ ಎಂದು ತೋರಿಸುವನು ॥೧೨೩೯॥

ಅಥವಾ ಗ್ರಂಥದ ಮಧ್ಯಂತರದಲ್ಲಿ ನಾನಾ ಪ್ರಕಾರದ ಅಧಿಕಾರ ಪ್ರಸಂಗದಿಂದ ಅನೇಕ ಸಿದ್ಧಾಂತಗಳನ್ನು ಹೇಳಿರುವುದು ॥೧೨೪೦॥

ತರೀ ತೇತುಲೇಹೀ ಸಿದ್ಧಾಂತ । ಇಯೇ ಶಾಸ್ತ್ರೀ ಪ್ರಸ್ತುತ । ಹೇ ಪೂರ್ವಾಪರ ನೇಣತ । ಕೋಣ್ಹೀ ಜೈ ಮಾನೀ ।೧೨೪೧॥ ತೈ ಮಹಾಸಿದ್ಧಾಂತಾಚಾ ಆವಾಂಕಾ । ಸಿದ್ಧಾಂತಕಕ್ಷಾ ಅನೇಕಾ । ಭಿಡಲೂನಿ ಆರಂಭು ದೇಖಾ । ಸಂಪವಿತು ಅಸೇ ।೧೨೪೨॥ ಯೇಥ ಅವಿದ್ಯಾನಾಶು ಹೇ ಸ್ಥಳ । ತೇಣೇ ಮೋಕ್ಷೋಪಾದಾನ ಫಳ । ಯಾ ದೋಹೀ ಕೇವಳ । ಸಾಧನ ಜ್ಞಾನ ।೧೨೪೩॥ ಹೇ ಇತುಲೇಂಚಿ ನಾನಾಪರೀ । ನಿರೂಪಿಲೇ ಗ್ರಂಥವಿಸ್ತಾರೀ । ತೇ ಆತಾ ದೋಹೀ ಅಕ್ಷರೀ । ಅನುವಾದಾವೇ ।೧೨೪೪॥ ಮ್ಹಣೌನಿ ಉಪೇಯಹೀ ಹಾತೀ । ಜಾಲಯಾ ಉಪಾಯಸ್ಥಿತೀ । ದೇವ ಪ್ರವರ್ತಲೇ ತೇ ಪುಢತೀ । ಯೇಣೇಂಚಿ ಭಾವೇ ।೧೨೪೫॥

ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ।
ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಮ್ ।೫೬॥

ಮಗ ಮ್ಹಣೇ ಗಾ ಸುಭಟಾ । ತೋ ಕ್ರಮಯೋಗಿಯಾ ನಿಷ್ಠಾ । ಮೀ ಹೋಊನೀ ಹೋಯ ಪೈಠಾ । ಮಾಝ್ಯಾ ರೂಪೀ ।೧೨೪೬॥ ಸ್ವಕರ್ಮಾಚ್ಯಾ ಚೊಖೌಳೀ । ಮಜ ಪೂಜಾ ಕರೂನಿ ಭಲೀ । ತೇಣೇ ಪ್ರಸಾದೇ ಆಕಳೀ । ಜ್ಞಾನ ನಿಷ್ಠೇತೇ ।೧೨೪೭॥ ತೇ ಜ್ಞಾನನಿಷ್ಠಾ ಜೇಥ ಹಾತವಸೇ । ತೇಥ ಭಕ್ತಿ ಮಾಝೀ ಉಲ್ಲಾಸೇ । ತಿಯಾ ಭಜನ ಸಮರಸೇ । ಸುಖಿಯಾ ಹೋಯ ।೧೨೪೮॥ ಆಣಿ ವಿಶ್ವಪ್ರಕಾಶಿತಯಾ । ಆತ್ಮ ಯಾ ಮಜ ಆಪುಲಿಯಾ । ಅನುಸರೇ ಜೋ ಕರೂನಿಯಾ । ಸರ್ವತ್ರತಾ ಹೇ ।೧೨೪೯॥ ಸಾಂಡೂನಿ ಆಪುಲಾ ಆಡಳ । ಲವಣ ಆಶ್ರಯೀ ಜಳ । ಕಾ ಹಿಂಡೋನಿ ರಾಹೇ ನಿಶ್ಚಳ । ವಾಯು ವ್ಯೋಮೀ ।೧೨೫೦॥ ತೈಸಾ ಬುದ್ಧೀ ವಾಚಾ ಕಾಯೇ । ಜೋ ಮಾತೇ ಆಶ್ರಊನಿ ಠಾಯೇ । ತೋ ನಿಷಿದ್ಧೇಂಹೀ ವಿಪಾಯೇ । ಕರ್ಮೇ ಕರೂ ।೧೨೫೧॥ ಪರೀ ಗಂಗೇಚ್ಯಾ ಸಂಬಂಧೀ । ಬಿದೀ ಆಣಿ ಮಹಾನದೀ । ಏಕ ತೇವಿ ಮಾಝ್ಯಾ ಬೋಧೀ । ಶುಭಾಶುಭಾಂಸೀ ।೧೨೫೨॥ ಕಾ ಬಾವನೇ ಆಣಿ ಧುರೇ । ಹಾ ನಿವಾಡು ತಂವಚಿ ಸರೇ । ಜಂವ ನ ಘೇಪತೀ ವೈಶ್ವಾನರೇ । ಕವಳೂನಿ ದೋನ್ಹೀ ।೧೨೫೩॥ ನಾನಾ ಪಾಂಚಿಕೇ ಆಣಿ ಸೋಳೇ । ಹೇ ಸೋನಯಾ ತಂವಚಿ ಆಲೇ । ಜಂವ ಪರಿಸು ಆಂಗಮೇಳೇ । ಏಕವಟೀನಾ ।೧೨೫೪॥ ತೈಸೇ ಶುಭಾಶುಭ ಐಸೇ । ಹೇ ತಂವಚಿವರೀ ಆಭಾಸೇ । ಜಂವ ಏಕು ನ ಪ್ರಕಾಶೇ । ಸರ್ವತ್ರ ಮೀ ।೧೨೫೫॥

ಆದರೆ ಪೂರ್ವಾಪರ ಸಂಬಂಧವನ್ನು ಮನದಲ್ಲಿ ತಾರದೇ ಗೀತೆಯಲ್ಲಿ ಅನೇಕ ಸಿದ್ಧಾಂತಗಳು ಇವೆ ಎಂದು ಯಾರಾದರೂ ತಿಳಿದುಕೊಂಡಿದ್ದರೆ ।೧೨೪೧॥

ಮಹಾ ಸಿದ್ಧಾಂತಗಳನ್ನು ಒಂದೆಡೆ ಐಕ್ಯವನ್ನು ಮಾಡಿ ಅದರ ಉದರದಲ್ಲಿ ಅನೇಕ ಸಿದ್ಧಾಂತಗಳ ಯುಕ್ತಿಯನ್ನು ಕೂಡಿಸಿ ಆರಂಭಿಸಿದ ಗೀತೆಯನ್ನು ಮುಗಿಸುವನು ।೧೨೪೨॥

ಈ ಗೀತಾಶಾಸ್ತ್ರದಲ್ಲಿ ಅವಿದ್ಯೆಯ ನಾಶವು ಮುಖ್ಯ ಭೂಮಿಕೆಯು ಹಾಗೂ ಮೋಕ್ಷದ ಲಾಭವು ಅದರ ಫಲವಾಗಿರುವುದು. ಈ ಎರಡೂ ಕಾರ್ಯ ಸಾಧಿಸಲು ಜ್ಞಾನವೇ ಸಾಧನವಾಗಿರುವುದು ।೧೨೪೩॥

ಅದೇ ಜ್ಞಾನವನ್ನು ನಾನಾ ಪ್ರಕಾರಗಳಿಂದ ಗ್ರಂಥದಲ್ಲಿ ಹೇಳಿ, ಗ್ರಂಥದ ವಿಸ್ತಾರವಾಗಿರುವುದು. ಈ ಜ್ಞಾನವನ್ನು ಈಗ ಸ್ವಲ್ಪದರಲ್ಲಿಯೇ ಹೇಳಬೇಕಾಗಿದೆ ।೧೨೪೪॥

ಆದ್ದರಿಂದ, ಉಪಾಯದಿಂದ ಸಿಗುವ ವಸ್ತುವು ಕೈಯಲ್ಲಿ ಬಂದಾಗ್ಯೂ, ಕೇವಲ ಅನುವಾದವನ್ನು ಮಾಡುವುದಕ್ಕಾಗಿಯೇ ದೇವನು ಪ್ರವೃತ್ತನಾದನು ।೧೨೪೫॥

ಶ್ಲೋಕಾರ್ಥ :- ನನ್ನನ್ನೇ ದಿಕ್ಕೆಂದು ನಂಬಿ ಎಲ್ಲ ವ್ಯವಹಾರಗಳನ್ನು ಮಾಡುತ್ತ ಅವನು ನನ್ನ ಅನುಗ್ರಹದಿಂದ ಪುನರಾವೃತ್ತಿರಹಿತವಾದ ಮೋಕ್ಷವನ್ನು ಪಡೆಯುತ್ತಾನೆ ।೬೬॥

ಆಗ ದೇವನು ಹೇಳಿದನು, ಹೇ ಸುಭಟಾ, ಆ ಕರ್ಮಯೋಗಿಯು ಈ ರೀತಿಯ ನಿಷ್ಠೆಯಿಂದ ಮದ್ರೂಪನಾಗಿ ನನ್ನ ಸ್ವರೂಪದಲ್ಲಿ ಕೂಡುವನು ।೧೨೪೬॥

ಸ್ವಕರ್ಮಾನುಷ್ಠಾನರೂಪ ಸುಂದರವಾದ ಹೂವಿನಿಂದ ನನ್ನ ಉತ್ತಮ ಪೂಜೆಯನ್ನು ಮಾಡಿ ನನ್ನನ್ನು ಪ್ರಸನ್ನಗೊಳಿಸಿ ಜ್ಞಾನನಿಷ್ಠೆಯ ಪ್ರಸಾದವನ್ನು ಪಡೆಯುತ್ತಾನೆ ।೧೨೪೭॥

ಈ ಯಾವ ಜ್ಞಾನನಿಷ್ಠೆಯು ಯಾರ ಕೈಯಲ್ಲಿ ಬಂದಿದೆಯೋ, ಅಲ್ಲಿ ನನ್ನ ಪರಮ ಭಕ್ತಿಯು ಉಲ್ಲಾಸ ಹೊಂದುವುದು ಮತ್ತು ಆ ಭಕ್ತಿಯ ಭಜನೆಯಿಂದ ನನ್ನಲ್ಲಿ ಐಕ್ಯನಾಗಿ ಅವನು ಸುಖವನ್ನು ಭೋಗಿಸುವನು ।೧೨೪೮॥

ಮತ್ತು ವಿಶ್ವಕ್ಕೆ ಪ್ರಕಾಶಿತಗೊಳಿಸುವ ನಾನು ಯಾವ ಆತ್ಮನು, ಆತನಲ್ಲಿ ಯಾವನು ಸರ್ವಭಾವದಿಂದ ಅನುಸರಿಸಿದವನು ।೧೨೪೯॥

ಉಪ್ಪು ತನ್ನ ಪ್ರೀತಿಯನ್ನು ಬಿಟ್ಟು, ನೀರಿನ ಆಶ್ರಯ ಹೊಂದಲು ಅದು ಜಲರೂಪವೇ ಆಗುವುದು. ಅಥವಾ ಆಕಾಶದಲ್ಲಿ ವಾಯುವು ಚಲಿಸಿ ಪುನಃ ಆಕಾಶದಲ್ಲಿಯೇ ಐಕ್ಯವಾಗುವುದು ।೧೨೫೦॥

ಅಂಥಬುದ್ಧಿಯಿಂದ ಹಾಗೂ ಕಾಯಾ ವಾಚಾ ಮನದಿಂದ ಯಾವನು ನನ್ನ ಆಶ್ರಯವನ್ನು ಮಾಡುವನೋ, ಆತನಿಂದ ಒಂದು ವೇಳೆ ಆಕಸ್ಮಿಕವಾಗಿ ನಿಷಿದ್ಧ ಕರ್ಮವು ಆದರೆ ।೧೨೫೧॥

ಆಗ ಮಹಾನದಿ ಅಥವಾ ರಸ್ತೆಯಲ್ಲಿನ ಹೊಲಸಾದ ನೀರು ಇವುಗಳಿಗೆ ಗಂಗೆಯ ಸಂಬಂಧವಾಯಿತೆಂದರೆ, ಅವು ಗಂಗಾರೂಪವೇ ಆಗುವುವು. ಅದರಂತೆ ನನ್ನಾಶ್ರಿತ ಭಕ್ತನಿಗೆ ಶುಭಾಶುಭಗಳ ದೋಷ ಹತ್ತುವುದಿಲ್ಲ ।೧೨೫೨॥

ಅಥವಾ ಮೈಲಾಗಿರಿ ಚಂದನ ಮತ್ತು ಬೇರೆ ಸಾಮಾನ್ಯ ಕಟ್ಟಿಗೆ ಇವುಗಳ ಭೇದವು ಅಗ್ನಿಯಲ್ಲಿ ಸಂಬಂಧ ಬರುವವರೆಗೆ ಮಾತ್ರ ಇರುವುದು ।೧೨೫೩॥

ಹದಿನಾರು ರೂಪಾಯಿಯ ಬಂಗಾರ ಹಾಗೂ ಮಿಶ್ರಿತ ಬಂಗಾರ ಇವುಗಳ ಭೇದವು ಪರಿಸಮಣಿಯ ಸಂಬಂಧ ಆಗದವರೆಗೆ ಇರುವುದು ।೧೨೫೪॥

ಅದರಂತೆ ಶುಭ ಹಾಗೂ ಅಶುಭ ಈ ಭೇದವು ಎಲ್ಲಿಯವರೆಗೆ ನನ್ನ ಸರ್ವತ್ರ ಪ್ರಕಾಶವಾಗಿಲ್ಲವೋ, ಅಲ್ಲಿಯವರೆಗೆ ಇರುವುದು ।೧೨೫೫॥

ಅಗಾ ರಾತ್ರೀ ಆಣಿ ದಿವೋ । ಹಾ ತಂವಚಿ ದ್ವೈತಭಾವೋ । ಜಂವ ನ ರಿಗಿಜೇ ಗಾಂವೋ । ಗಭಸ್ತೀಚಾ ।೧೨೫೬॥ ಮ್ಹಣೌನಿ ಮಾಝಿಯಾ ಭೇಟೀ । ತಯಾಚೀ ಸರ್ವ ಕರ್ಮೇ ಕಿರೀಟೀ । ಜಾಊನೀ ಬೈಸೇ ತೋ ಪಾಟೀ । ಸಾಯುಜ್ಯಾಚ್ಯಾ ।೧೨೫೭॥ ದೇಶೇ ಕಾಳೇ ಸ್ವಭಾವೇ । ವೇಂಚು ಜಯಾ ನ ಸಂಭವೇ । ತೇ ಪದ ಮಾಝೇ ಪಾವೇ । ಅವಿನಾಶ ತೋ ।೧೨೫೮॥ ಕಿಂಬಹುನಾ ಪಂಡುಸುತಾ । ಮಜ ಆತ್ಮಯಾಚೀ ಪ್ರಸನ್ನತಾ । ಲಾಹೇ ತೇಣೇ ನ ಪವಿಜತಾ । ಲಾಭು ಕವಣು ಅಸೇ ।೧೨೫೯॥

ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ ।
ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ ।೫೭॥

ಯಾಕಾರಣೇ ಗಾ ತುವಾ ಇಯಾ । ಸರ್ವ ಕರ್ಮಾ ಆಪುಲಿಯಾ । ಮಾಝ್ಯಾ ಸ್ವರೂಪೀ ಧನಂಜಯಾ । ಸಂನ್ಯಾಸು ಕೀಜೇ ।೧೨೬೦॥ ಪರೀ ತೋಚಿ ಸಂನ್ಯಾಸು ವೀರಾ । ಕರಣೀಯೇಚಾ ಝಣೇ ಕರಾ । ಆತ್ಮವಿವೇಕೀ ಧರಾ । ಚಿತ್ತವೃತ್ತಿ ಹೇ ।೧೨೬೧॥ ಮಗ ತೇಣೇ ವಿವೇಕಬಳೇ । ಆಪಣಪೇ ಕರ್ಮಾವೇಗಳೇ । ಮಾಝ್ಯಾ ಸ್ವರೂಪೀ ನಿರ್ಮಳೇ । ದೇಖಿಜೇಲ ।೧೨೬೨॥ ಆಣಿ ಕರ್ಮಾಚೀ ಜನ್ಮಭೋಯೇ । ಪ್ರಕೃತಿ ಜೇ ಕಾ ಆಹೇ । ತೇ ಆಪಣಯಾಹೂನಿ ಬಹುವೇ । ದೇಖಸೀ ದೂರೀ ।೧೨೬೩॥ ತೇಥ ಪ್ರಕೃತಿ ಆಪಣಯಾ । ವೇಗಳೀ ನುರೇ ಧನಂಜಯಾ । ರೂಪೇವೀಣ ಕಾ ಛಾಯಾ । ಜಯಾಪರೀ ।೧೨೬೪॥ ಐಸೇನಿ ಪ್ರಕೃತಿನಾಶು । ಜಾಲಯಾ ಕರ್ಮಸಂನ್ಯಾಸು । ನಿಫಜೇಲ ಅನಾಯಾಸು । ಸಕಾರಣು ।೧೨೬೫॥ ಮಗ ಕರ್ಮಜಾತ ಗೇಲಯಾ । ಮೀ ಆತ್ಮಾ ಉರೇ ಆಪಣಪಯಾ । ತೇಥ ಬುದ್ಧೀ ಘಾಪೇ ಕರೂನಿಯಾ । ಪತಿವ್ರತಾ ।೧೨೬೬॥ ಬುದ್ಧಿ ಅನನ್ಯ ಯೇಣೇ ಯೋಗೇ । ಮಜಮಾಜೀ ಜೈ ರಿಗೇ । ತೈ ಚಿತ್ತ ಚೈತ್ಯ ತ್ಯಾಗೇ । ಮಾತೇಂಚಿ ಭಜೇ ।೧೨೬೭॥ ಐಸೇ ಚೈತ್ಯಜಾತೇ ಸಾಂಡಿಲೇ । ಚಿತ್ತ ಮಾಝ್ಯಾ ಠಾಯೀ ಜಡಲೇ । ಠಾಕೇ ತೈಸೇ ವಹಿಲೇ । ಸರ್ವದಾ ಕರೀ ।೧೨೬೮॥

ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।
ಅಥ ಚೇತ್ತ್ವಮಹಂಕಾರಾತ್ ನ ಶ್ರೋಷ್ಯಸಿ ವಿನಂಕ್ಷ್ಯಸಿ ।೫೮॥

ಮಗ ಅಭಿನ್ನಾ ಇಯಾ ಸೇವಾ । ಚಿತ್ತ ಮಿಯಾಂಚಿ ಭರೇಲ ಜೇಧವಾ । ಮಾಝ್ಯಾ ಪ್ರಸಾದು ಜಾಣ ತೇಧವಾ । ಸಂಪೂರ್ಣ ಜಾಹಲಾ ।೧೨೬೯॥

ಅರೇ, ಎಲ್ಲಿಯವರೆಗೆ ಸೂರ್ಯನ ಊರಲ್ಲಿ ಪ್ರವೇಶವಾಗಿಲ್ಲವೋ, ಅಲ್ಲಿಯವರೆಗೆ ಹಗಲು ರಾತ್ರಿಗಳ ಭೇದವು ಇರುವುದು ।।೧೨೫೬।।

ಆದ್ದರಿಂದ ಕಿರೀಟಿಯೇ, ನನ್ನ ಭೆಟ್ಟಿಯಾಯಿತೆಂದರೆ ಅವನ ಎಲ್ಲ ಕರ್ಮಗಳು ಇಲ್ಲದಂತಾಗಿ ಅವನು ಸಾಯುಜ್ಯ ಪದದಲ್ಲಿ ಕುಳಿತುಕೊಳ್ಳುವನು ।।೧೨೫೭।।

ಯಾವ ಪದವು ದೇಶದಿಂದ, ಕಾಲದಿಂದ ಹಾಗೂ ಸ್ವಭಾವತಃ ಎಂದೂ ನಾಶವಾಗುವುದಿಲ್ಲವೋ, ಅಂಥ ಅವಿನಾಶ ಪದವು ಆತನಿಗೆ ಪ್ರಾಪ್ತವಾಗುವುದು ।।೧೨೫೮।।

ಹೆಚ್ಚಿಗೇನು ಹೇಳಬೇಕು ? ಪಂಡುಸುತನೇ, ನಾನು ಯಾವ ಆತ್ಮನು, ಆ ನನ್ನ ಪ್ರಸನ್ನತೆಯು ಯಾರಿಗೆ ಪ್ರಾಪ್ತವಾಗಿದೆಯೋ, ಅದಕ್ಕಿಂತಲೂ ದೊಡ್ಡ ಲಾಭವು ಈ ಜಗತ್ತಿನಲ್ಲಿ ಯಾವುದಿದೆ ? ।।೧೨೫೯।।

ಶ್ಲೋಕಾರ್ಥ :- ಅರ್ಜುನಾ ! ಹೃದಯ ಪೂರ್ವಕವಾಗಿ ಸರ್ವಕರ್ಮಗಳನ್ನು ನನಗೆ ಅರ್ಪಿಸಿ, ಬುದ್ಧಿಯೋಗವನ್ನು ಅವಲಂಬಿಸಿದವನಾಗಿ ನನ್ನನ್ನು ಶರಣು ಹೊಂದು ।।೫೭।।

ಈ ಕಾರಣದಿಂದ ಧನಂಜಯನೇ, ನೀನು ನಿನ್ನ ಎಲ್ಲ ಕರ್ಮಗಳನ್ನು ನನ್ನಲ್ಲಿ ಸಂನ್ಯಾಸ (ಸಮರ್ಪಣೆ) ಮಾಡು ।।೧೨೬೦।।

ಆದರೆ ಹೇ ವೀರನೇ, ಅದೇ ಕರ್ಮದ ಸಂನ್ಯಾಸವನ್ನು ಮಾಡಬೇಕಾಗಿದೆ ಎಂದು ಮಾಡದೇ, ವಿವೇಕದಲ್ಲಿ ಚಿತ್ತವನ್ನಿಟ್ಟು ಮನಃಪೂರ್ವಕವಾಗಿ ಮಾಡು ।।೧೨೬೧।।

ಆಗ ಆ ವಿವೇಕದ ಬಲದಿಂದ ನಿನ್ನ ಕರ್ಮದಿಂದ ಬಿನ್ನವಾಗಿರುವ ನಿರ್ಮಲಸ್ವರೂಪವನ್ನು ನನ್ನ ಸ್ವರೂಪದಲ್ಲಿ ಕಾಣುವಿ ।।೧೨೬೨।।

ಮತ್ತು ಎಲ್ಲ ಕರ್ಮಗಳ ಜನ್ಮಭೂಮಿಯಾಗಿರುವ ಅಜ್ಞಾನವು (ಮಾಯೆ) ಇದು ನನ್ನಿಂದ ಬಹಳ ದೂರವಿರುವುದನ್ನು ನಿನ್ನ ದೃಷ್ಟಿಗೆ ಗೋಚರಿಸೀತು ।।೧೨೬೩।।

ಆಗ ಧನಂಜಯಾ, ರೂಪವಿಲ್ಲದೇ ನೆರಳು ದೃಷ್ಟಿಗೆ ಬೀಳುವುದಿಲ್ಲವೋ, ಅದರಂತೆ ಅಜ್ಞಾನವು ತನ್ನಿಂದ ಭಿನ್ನವಿಲ್ಲ ಎಂದು ನಿನ್ನ ದೃಷ್ಟಿಗೆ ಗೋಚರಿಸೀತು ।।೧೨೬೪।।

ಹೀಗೆ ಜ್ಞಾನದಿಂದ ಅಜ್ಞಾನದ ನಾಶವಾಯಿತೆಂದರೆ, ಸಮೂಲವಾಗಿ ಕರ್ಮದ ಸಂನ್ಯಾಸವು ಅನಾಯಾಸವಾಗಿ ಆದಂತೆ ಆಗುವುದು ।।೧೨೬೫।।

ಆಗ ಆತ್ಮನ ಮೇಲೆ ಭ್ರಮದಿಂದ ಕರ್ಮದ ಭಾಸ ಕಾಣುವುದು. ವಿಚಾರದಿಂದ ಹೋಯಿತೆಂದರೆ, ಆತ್ಮವೇ ಸ್ವರೂಪದಿಂದ ಉಳಿಯುವುದು, ಆತ್ಮನಲ್ಲಿ ಬುದ್ಧಿಯನ್ನು ಪತಿವ್ರತೆಯನ್ನಾಗಿ ಸ್ಥಾಪಿಸು (ಸ್ಥಿರಪಡಿಸು) ।।೧೨೬೬।।

ಹೀಗೆ ಅನನ್ಯಯೋಗದಿಂದ ಬುದ್ಧಿಯು ನನ್ನಲ್ಲಿ ಪ್ರವೇಶ ಗೊಂಡಿತೆಂದರೆ, ಆಗ ಚಿತ್ತವು ಚಿಂತನ ಮಾಡುವ ಪದಾರ್ಥಗಳ ತ್ಯಾಗ ಮಾಡಿ, ನನ್ನ ಭಜನೆಯನ್ನೇ ಮಾಡುವುದು ।।೧೨೬೭।।

ಈ ಪ್ರಕಾರವಾಗಿ ಚಿಂತನೆಮಾಡುವ ವಿಷಯವನ್ನು ಬಿಟ್ಟು ಯಾವಾಗಲೂ ಚಿತ್ತವು ನನ್ನಲ್ಲಿ ಅಂಟಿಕೊಂಡು ಸರ್ವದಾ ಇರುವುದು. ಹೀಗೆ ಬೇಗನೇ ಮಾಡು ।।೧೨೬೮।।

ಶ್ಲೋಕಾರ್ಥ :- ನನ್ನನ್ನು ಶರಣುಹೊಂದಿದರೆ ನನ್ನ ದಯೆಯಿಂದ ಸಮಸ್ತ ಸಂಕಟಗಳಿಂದ ಪಾರಾಗುವೆ. ಇಲ್ಲದಿದ್ದರೆ ಅಹಂಕಾರದಿಂದ ಇದನ್ನು ಬಿಟ್ಟರೆ ಕೆಟ್ಟು ಹೋಗುವೆ ।।೫೮।।

ತದನಂತರ ಈ ಪ್ರಕಾರವಾಗಿ ಅಭೇದರೂಪ ಸೇವೆಯಿಂದ ನಿನ್ನ ಚಿತ್ತವು ಮದ್ರೂಪವಾದಾಗ ನಿನ್ನ ಮೇಲೆ ನನ್ನ ಪೂರ್ಣ ಪ್ರಸಾದವು ಆದೀತು, ಹೀಗೆ ತಿಳಿ ।।೧೨೬೯।।

ತೇಥ ಸಕಳ ದುಃಖಧಾಮೇ । ಭುಂಜೀಜತೀ ಜಿಯೇ ಮೃತ್ಯುಜನ್ಮೇ । ತಿಯೇ ದುರ್ಗಮೇಂಚಿ ಸುಗಮೇ । ಹೋತೀ ತುಜ ।।೧೨೭೦।। ಸೂರ್ಯಾಚೇನಿ ಸಾವಾಯೇ । ಡೋಳಾ ಸಾವಾಇಲಾ ಹೋಯೇ । ತೈ ಅಂಧಾರಾಚಾ ಆಹೇ । ಪಾಡು ತಯಾ ? ।।೧೨೭೧।। ತೈಸಾ ಮಾಝೇನಿ ಪ್ರಸಾದೇ । ಜೀವಕಣು ಜಯಾಚಾ ಉಪಮರ್ದೇ । ತೋ ಸಂಸಾರಾಚೇನಿ ಬಾಧೇ । ಬಾಗುಲೇ ಕೇವೀ ? ।।೧೨೭೨।। ಮ್ಹಣೌನಿ ಧನಂಜಯಾ । ತೂ ಸಂಸಾರದುರ್ಗತೀ ಯಯಾ । ತರಸೀಲ ಮಾಝಿಯಾ । ಪ್ರಸಾದಾಸ್ತವ ।।೧೨೭೩।। ಅಥವಾ ಹನ ಅಹಂಭಾವೇ । ಮಾಝೇ ಬೋಲಣೇ ಹೇ ಆಘವೇ । ಕಾನಾಮನಾಚಿಯೇ ಶಿಂವೇ । ನೇದಿಸೀ ಟೇಂಕೋ ।।೧೨೭೪।। ತರೀ ನಿತ್ಯ ಮುಕ್ತ ಅವ್ಯಯೋ । ತೂ ಆಹಾಸಿ ತೇ ಹೋಊನಿ ವಾವೋ । ದೇಹಸಂಬಂಧಾಚಾ ಘಾವೋ । ವಾಜೇಲ ಆಂಗೀ ।।೧೨೭೫।। ಜಯಾ ದೇಹ ಸಂಬಂಧಾಆಂತು । ಪ್ರತಿಪ್ರದೀ ಆತ್ಮಘಾತು । ಭುಂಜತಾ ಉಸಂತು । ಕಹೀಂಚಿ ನಾಹೀ ।।೧೨೭೬।। ಯೇವಢೇನಿ ದಾರುಣೇ । ನಿಮಣೇನವೀಣ ನಿಮಣೇ । ಪಡೇಲ ಜರೀ ಬೋಲಣೇ । ನೇಘಸೀ ಮಾಝೇ ।।೧೨೭೭।।

ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।
ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ।।೫೯।।

ಪಥ್ಯದ್ವೇಷಿಯಾ ಪೋಷೀ ಜ್ವರು ।ಕಾ ದೀಪದ್ವೇಷಿಯಾ ಅಂಧಕಾರು । ವಿವೇಕದ್ವೇಷೇ ಅಹಂಕಾರು । ಪೋಷೂನಿ ತೈಸಾ ।।೧೨೭೮।। ಸ್ವದೇಹಾ ನಾಮ ಅರ್ಜುನು । ಪರದೇಹಾ ನಾಮ ಸ್ವಜನು । ಸಂಗ್ರಾಮಾ ನಾಮ ಮಲಿನು । ಪಾಪಾಚಾರು ।।೧೨೭೯।। ಇಯಾ ಮತೀ ಆಪುಲಿಯಾ । ತಿಘಾ ತೀನ ನಾಮೇ ಯಯಾ । ಠೇಊನಿಯಾ ಧನಂಜಯಾ । ನ ಝುಂಜೇ ಐಸಾ ।।೧೨೮೦।। ಜೀವಾಮಾಜೀ ನಿಷ್ಟಂಕು । ಕರಿಸೀ ಜೋ ಆತ್ಯಂತಿಕು । ತೋ ವಾಯಾ ಧಾಡೀಲ ನೈಸರ್ಗಿಕು । ಸ್ವಭಾವೋಚಿ ತುಝಾ ।।೧೨೮೧।। ಆಣಿ ಮೀ ಅರ್ಜುನ ಹೇ ಆತ್ಮಿಕ । ಯಯಾ ವಧು ಕರಣೇ ಹೇ ಪಾತಕ । ಹೇ ಮಾಯಾವಾಂಚೂನಿ ತಾತ್ತ್ವಿಕ । ಕಾಂಹೀ ಆಹೇ ? ।।೧೨೮೨।। ಆಧೀ ಜುಂಝಾರ ತುವಾ ಹೋಆವೇ । ಮಗ ಜುಂಝಾವಯಾ ಶಸ್ತ್ರ ಘೇಯಾವೇ । ಕಾ ನ ಜುಂಝಾವಯಾ ಕರಾವೇ । ದೇವಾಂಗಣ ।।೧೨೮೩।। ಮ್ಹಣೌನಿ ಝುಂಜಣೇ । ಮ್ಹಣಸೀ ತೇ ವಾಯಾಣೇ । ನಾ ಮಾನೂ ಲೋಕಪಣೇ । ಲೋಕದೃಷ್ಟೀಹೀ ।।೧೨೮೪।।

ಆಗ ಜೀವಮಾತ್ರರು ಎಲ್ಲ ದುಃಖಗಳ ಮನೆಗಳಾದ ಯಾವ ಜನ್ಮ ಮರಣವನ್ನು ಭೋಗಿಸುತ್ತಿರುವುದು ಹಾಗೂ ಅತಿ ದುರ್ಗಮವಾದದ್ದು, ಅದೇ ನಿನಗೆ ಸುಖಕರವಾಗುವುದು ॥೧೨೭೦॥

ಸೂರ್ಯಪ್ರಕಾಶದ ಸಹಾಯವು ಕಣ್ಣಿಗೆ ದೊರಕಿ ತೆಂದರೆ, ಆಗ ಕತ್ತಲೆಯ ಯಾವ ಬೆಲೆ? ॥೧೨೭೧॥

ಈ ಪ್ರಕಾರವಾಗಿ ನನ್ನ ಪ್ರಸಾದದಿಂದ ಯಾವನ ಜೀವತನವು ನಷ್ಟವಾಗಿದೆಯೋ, ಅವನು ಸಂಸಾರರೂಪ ಬೆದರುಗೊಂಬೆಗೆ ಭಯಪಡುವನೇ? ॥೧೨೭೨॥

ಆದ್ದರಿಂದ ಧನಂಜಯನೇ, ನನ್ನ ಪ್ರಸಾದದಿಂದ ಈ ಸಂಸಾರ ದುರ್ಗತಿಯಿಂದ ನೀನು ಉದ್ಧರಿಸುವಿ ॥೧೨೭೩॥

ಅಥವಾ ಅಹಂಭಾವದಿಂದ ಈ ಎಲ್ಲ ನನ್ನ ಮಾತುಗಳನ್ನು ಕಿವಿಯಿಂದ ಕೇಳದೇ, ಮನಸ್ಸಿನಿಂದ ವಿಚಾರವನ್ನು ಮಾಡದೇ ಇದ್ದರೆ ॥೧೨೭೪॥

ಆಗ ನೀನು ನಿತ್ಯಮುಕ್ತ ಅವ್ಯಯನಿದ್ದರೂ, ಅದೆಲ್ಲವೂ ವ್ಯರ್ಥವಾಗಿ ದೇಹಬಂಧದ ದುಃಖವನ್ನು ನಿನಗೆ ಸೋಸಬೇಕಾಗುವುದು! ॥೧೨೭೫॥

ಈ ದೇಹ ಸಂಬಂಧದಲ್ಲಿ ಮೇಲಿಂದ ಮೇಲೆ ನಮ್ಮ ಆತ್ಮಘಾತವಿದೆ. ಇದರ ಭೋಗಗಳಿಂದ ಎಂದೂ ವಿಶ್ರಾಂತಿಯು ಸಿಗುವುದೇ ಇಲ್ಲ! ॥೧೨೭೬॥

ಒಂದುವೇಳೆ ನೀನು ನನ್ನ ಮಾತುಗಳನ್ನು ಕೇಳದಿದ್ದರೆ, ಇಷ್ಟೊಂದು ಭಯಂಕರವಾದ ಮೃತ್ಯುವನ್ನು ವಾಸ್ತವಿಕವಾಗಿ ಸಾಯದೇ, ನಿನಗೆ ಭೋಗಿಸಬೇಕಾಗುವುದು ॥೧೨೭೭॥

ಶ್ಲೋಕಾರ್ಥ :- ದುರಭಿಮಾನವಶದಿಂದ ಯುದ್ಧವನ್ನು ಮಾಡುವುದಿಲ್ಲವೆಂದುಕೊಂಡರೆ, ಅರ್ಜುನಾ! ನಿನ್ನ ನಿಶ್ಚಯವು ವೃಥಾ ಆಗುವುದು. ರಜ ಪ್ರಧಾನವಾದ ನಿನ್ನ ಕ್ಷತ್ರಿಯ ಸ್ವಭಾವವು ನಿನ್ನಿಂದ ಯುದ್ಧವನ್ನು ಮಾಡಿಸುವುದು ॥೫೯॥

ಪಥ್ಯದ ದ್ವೇಷದಿಂದ ಜ್ವರವು ಬೆಳೆಯುವುದು, ಅಥವಾ ದೀಪದ ದ್ವೇಷದಿಂದ ಕತ್ತಲೆಯು ಬೆಳೆಯುವುದು. ಅದರಂತೆ ವಿವೇಕದ ದ್ವೇಷದಿಂದ ಅಹಂಕಾರವು ಬೆಳೆಯುವುದು ॥೧೨೭೮॥

ಆಗ ತನ್ನ ದೇಹಕ್ಕೆ ಅರ್ಜುನನು, ಬೇರೆ ದೇಹಗಳಿಗೆ ನನ್ನ ಆಪ್ತರು, ಹಾಗೂ ಇವರಲ್ಲಿ ಯುದ್ಧ ಮಾಡುವುದು ಇದೇ ಪಾತಕವು ॥೧೨೭೯॥

ಈ ಪ್ರಕಾರವಾಗಿ ನಿನ್ನ ಬುದ್ಧಿಯಿಂದ ಮೂವರಿಗೆ ಮೂರು ಹೆಸರುಗಳನ್ನಿಟ್ಟು, ಅರ್ಜುನಾ, ನಾನು ಯುದ್ಧವನ್ನು ಮಾಡಲಾರೆ ಎಂದು ॥೧೨೮೦॥

ನಿನ್ನ ಅಂತಃಕರಣದಲ್ಲಿ ಪೂರ್ಣವಾಗಿ ನಿಶ್ಚಯ ಮಾಡಿದರೆ, ಆಗ ನಿನ್ನ ಯಾವ ನೈಸರ್ಗಿಕ ಸ್ವಭಾವವು ನಿನ್ನ ನಿಶ್ಚಯವನ್ನು ಉಳಿಸಿಕೊಡಲಾರದು ॥೧೨೮೧॥

ವಾಸ್ತವಿಕವಾಗಿ ವಿಚಾರಿಸಿ ನೋಡಿದರೆ, ನಾನು ಅರ್ಜುನನು ಹಾಗೂ ಇವರು ನನ್ನ ಆಪ್ತರು ಹಾಗೂ ಇವರನ್ನು ಕೊಲ್ಲುವುದು ಪಾಪವು. ಇವೆಲ್ಲವೂ ಕಲ್ಪನೆ ಮಾಯೆಯ ಹೊರತಾಗಿ ನಿಜವಿದೆಯೇ? ॥೧೨೮೨॥

ಅರೇ, ಮೊದಲು ನೀನು ಯುದ್ಧಕ್ಕೆ ಸಿದ್ಧನಾದೆ, ಹಾಗೂ ಯುದ್ಧಕ್ಕಾಗಿ ಶಸ್ತ್ರಗಳನ್ನು ಧರಿಸಿದೆ, ಈಗ ಯುದ್ಧವನ್ನು ಮಾಡಲಾರದ ಶಪಥ ಮಾಡುವೆ, ಇದು ಯೋಗ್ಯವೇ? ॥೧೨೮೩॥

ಇದಕ್ಕಾಗಿ ನಾನು ಯುದ್ಧವನ್ನು ಮಾಡಲಾರೆ, ಎನ್ನುವುದು ವ್ಯರ್ಥವಾದದ್ದು. ಅಲ್ಲದೆ ಲೋಕದೃಷ್ಟಿಯಿಂದ ನಿನ್ನ ಹೇಳಿಕೆಯನ್ನು ಯಾರೂ ಮಾನ್ಯ ಮಾಡಲಾರರು ॥೧೨೮೪॥

ತರೀ ನ ಝುಂಜೇ ಐಸೇ । ನಿಷ್ಟಂಕಿಸೀ ಜೇ ಮಾನಸೇ । ತೇ ಪ್ರಕೃತಿ ಅನಾರಿಸೇ । ಕರಿವೀಲಚೀ ॥೧೨೮೫॥

ಸ್ವಭಾವಜೇನ ಕೌಂತೇಯ ನಿಬದ್ಧಃ ಸ್ವೇನ ಕರ್ಮಣಾ ।
ಕರ್ತುಂ ನೇಚ್ಛಸಿ ಯನ್ಮೋಹಾತ್ ಕರಿಷ್ಯಸ್ಯವಶೋಽಪಿ ತತ್ ॥೬೦॥

ಪೈ ಪೂರ್ವೇ ವಾಹತಾ ಪಾಣೀ । ಪವ್ಹಿಜೇ ಪಶ್ಚಿಮೇಚಿ ವಾಹಣೀ । ತರೀ ಆಗ್ರಹೋಚಿ ಉರೇ ತೇ ಆಣೀ । ಆಪುಲಿಯಾ ಲೇಖಾ ॥೧೨೮೬॥ ಕಾ ಸಾಳೀಚಾ ಕಣು ಮ್ಹಣೇ । ಮೀ ನುಗವೇ ಸಾಳೀಪಣೇ । ತರೀ ಆಹೇ ಆನ ಕರಣೇ । ಸ್ವಭಾವಾಸೀ ? ॥೧೨೮೭॥ ತೈಸಾ ಕ್ಷಾತ್ರಸಂಸ್ಕಾರಸಿದ್ಧಾ । ಪ್ರಕೃತೀ ಘಡಿಲಾಸೀ ಪ್ರಬುದ್ಧಾ । ಆತಾ ನುರೀ ಮ್ಹಣಸೀ ಹಾ ಧಾಂದಾ । ಪರೀ ಉಠವಿಜಸೀಚಿ ತೂ ॥೧೨೮೮॥ ಪೈ ಶೌರ್ಯ ತೇಜ ದಕ್ಷತಾ । ಏವಮಾದಿಕ ಪಂಡುಸುತಾ । ಗುಣ ದಿಧಲೇ ಜನ್ಮತಾ । ಪ್ರಕೃತೀ ತುಜ ॥೧೨೮೯॥ ತರೀ ತಯಾಚಿಯಾ ಸಮವಾಯಾ । ಅನುರೂಪ ಧನಂಜಯಾ । ನ ಕರಿತಾ ಉಗಲಿಯಾ । ನಯೇಲ ಅಸೋ ॥೧೨೯೦॥ ಮ್ಹಣೌನಿಯಾ ತಿಹೀ ಗುಣೀ । ಬಾಂಧಿಲಾಸಿ ತೂ ಕೋದಂಡಪಾಣೀ । ತ್ರಿಶುದ್ಧೀ ನಿಘಸೀ ವಾಹಣೀ । ಕ್ಷಾತ್ರಾಚಿಯಾ ॥೧೨೯೧॥ ನಾ ಹೇ ಆಪುಲೇ ಜನ್ಮಮೂಳ । ನ ವಿಚಾರೀತಚಿ ಕೇವಳ । ನ ಝುಂಜೇ ಐಸೇ ಅಢಳ । ವ್ರತ ಜರೀ ಘೇಸೀ ॥೧೨೯೨॥ ತರೀ ಬಾಂಧೋನಿ ಹಾತ ಪಾಯೇ । ಜೋ ರಥೀ ಘಾತಲಾ ಹೋಯೇ । ತೋ ನ ಚಲೇ ತರೀ ಜಾಯೇ । ದಿಗಂತಾ ಜೇವೀ ॥೧೨೯೩॥ ತೈಸಾ ತೂ ಆಪುಲೀಯಾಕಡುನೀ । ಮೀ ಕಾಂಹೀಂಚ ನ ಕರೀ ಮ್ಹಣೌನೀ । ಠಾಸೀ ಪರೀ ಭರಂವಸೇನೀ । ತೂಂಚಿ ಕರಿಸೀ ॥೧೨೯೪॥ ಉತ್ತರು ವೈರಾಟೀಂಚಾ ರಾಜಾ । ಪಳತಾ ತೂ ಕಾ ನಿಘಾಲಾಸಿ ಝುಂಜಾ ?। ಹಾ ಕ್ಷಾತ್ರಸ್ವಭಾವೋ ತುಝಾ । ಝುಂಜವೀಲ ತುಜ ॥೧೨೯೫॥ ಮಹಾವೀರ ಅಕರಾ ಅಕ್ಷೌಹಿಣೀ । ತುವಾ ಯೇಕೇ ನಾಗವಿಲೇ ರಣಾಂಗಣೀ । ತೋ ಸ್ವಭಾವೋ ಕೋದಂಡಪಾಣೀ । ಝುಂಜವೀಲ ತೂಂತೇ ॥೧೨೯೬॥ ಹಾ ಗಾ ರೋಗು ಕಾಯೀ ರೋಗಿಯಾ । ಆವಡೇ ದರಿದ್ರ ದರಿದ್ರಿಯಾ ?। ಪರೀ ಭೋಗವಿಜೇ ಬಳಿಯಾ । ಅದೃಷ್ಟೇ ಜೇಣೇ ॥೧೨೯೭॥ ತೇ ಅದೃಷ್ಟ ಅನಾರಿಸೇ । ನ ಕರೀಲ ಈಶ್ವರವಶೇ । ತೋ ಈಶ್ವರುಹೀ ಅಸೇ । ಹೃದಯೀ ತುಝ್ಯಾ ॥೧೨೯೮॥

ಅದಲ್ಲದೇ ನಾನು ಯುದ್ಧವನ್ನು ಮಾಡಲಾರೆ ಎಂದು ನಿನ್ನ ಮನಸ್ಸಿನಿಂದ ನಿಶ್ಚಯ ಮಾಡುತ್ತಿರುವೆ. ಅದೆಲ್ಲವೂ ವ್ಯರ್ಥವಾಗಿ ನಿನ್ನ ಕ್ಷಾತ್ರ ಪ್ರಕೃತಿಯು ನಿನ್ನ ನಿಶ್ಚಯಕ್ಕೆ ತಿರುಗಿ ಬಿದ್ದು ನಿನ್ನಿಂದ ಯುದ್ಧವನ್ನು ಮಾಡೇ ಮಾಡಿಸುವುದು ! ।೧೨೮೫॥

ಶ್ಲೋಕಾರ್ಥ :- ಕೌಂತೇಯಾ ! ನೀನು ಮಾಡುವುದಿಲ್ಲವೆಂದು ಅವಿವೇಕವಶದಿಂದ ಅಂದು ಕೊಂಡರೂ, ಜನ್ಮದಿಂದ ಬಂದ ಸಂಸ್ಕಾರಕ್ಕೆ ವಶನಾಗಿ ನಿರ್ಬಂಧವಾಗಿ ಯಾದರೂ ಮಾಡುವೆ ।೬೦॥

ಇಲ್ಲಿ ನೋಡು, ಪೂರ್ವದಿಕ್ಕಿಗೆ ನೀರಿನ ಪ್ರವಾಹವು ಬಿರುಸಿನಿಂದ ನಡೆದಾಗ ಈಸುವವನು ನಾನು ಪಶ್ಚಿಮ ದಿಕ್ಕಿಗೆ ಹೋಗುವೆನೆಂದರೆ, ಆತನ ಮಾತು ವ್ಯರ್ಥವಾಗಿ ಆ ನೀರು ಆತನಿಗೆ ಪೂರ್ವಕ್ಕೆ ಎಳೆದು ತರುವುದು ।೧೨೮೬॥

ಅಥವಾ ಭತ್ತದ ಕಾಳು ನಾನು ಭತ್ತದಂತೆ ಹುಟ್ಟಲಾರೆ ಎಂದು ಹೇಳಿದರೆ, ಅದರ ಮಾತು ವ್ಯರ್ಥವಾಗುವುದು. ಏಕೆಂದರೆ ಅದಕ್ಕೆ ಅದರ ಸ್ವಭಾವದ ವಿರುದ್ಧವಾಗಿ ಆಗಲು ಸಾಧ್ಯವೇ? ।೧೨೮೭॥

ಅದರಂತೆ ಪ್ರಬುದ್ಧನೇ, ನಿನ್ನ ಪ್ರಕೃತಿಯು ಕ್ಷಾತ್ರಗುಣದಿಂದ ಸಿದ್ಧವಾಗಿದ್ದು, ನಾನು ಯುದ್ಧ ಮಾಡಲು ಏಳಲಾರೆ ಎಂದು ಹೇಳಿದರೆ ವ್ಯರ್ಥವಾಗುವುದು. ನಿನ್ನ ಕ್ಷಾತ್ರಧರ್ಮವು ನಿನಗೆ ಯುದ್ಧ ಮಾಡಲು ಎಬ್ಬಿಸುವುದು ।೧೨೮೮॥

ಇಲ್ಲಿ ನೋಡು, ಪಂಡುಸುತನೇ, ನಿನ್ನ ಕ್ಷತ್ರಿಯ ಪ್ರಕೃತಿಯು ನಿನಗೆ ಶೌರ್ಯ, ತೇಜ, ದಕ್ಷತೆ ಇತ್ಯಾದಿ ಗುಣಗಳನ್ನು ಜನ್ಮತಃ ಕೊಟ್ಟಿದೆ ।೧೨೮೯॥

ಅದಕ್ಕಾಗಿ ಧನಂಜಯನೇ, ಈ ಪ್ರಕೃತಿಯ ಗುಣಾನುರೋಧದಿಂದ ಯುದ್ಧವನ್ನು ಮಾಡದೇ ಸ್ವಸ್ಥವಾಗಿ ಕುಳಿತುಕೊಳ್ಳಲಾಗಲಾರದು ।೧೨೯೦॥

ಆದ್ದರಿಂದಲೇ ಕೋಂದಡಪಾಣಿಯೇ, ಈ ಕ್ಷಾತ್ರ ಗುಣಗಳಿಂದ ನೀನು ಬದ್ಧನಾಗಿರುವುದರಿಂದ ನಿನಗೆನಿನ್ನ ಸ್ವಭಾವದ ವಿರುದ್ಧವಾಗಿ ನಿಜವಾಗಿಯೂ ಹೋಗಲು ಬರುವುದಿಲ್ಲ ।೧೨೯೧॥

ಅಥವಾ ನಿನ್ನ ಜನ್ಮದ ಮೂಲದ ವಿಚಾರವನ್ನು ಮಾಡದೇ ನಾನು ಯುದ್ಧವನ್ನು ಮಾಡಲಾರೆ ಎಂದು ಹೀಗೆಯೇ ದೃಢವಾದ ವ್ರತವನ್ನು ಹಿಡಿದರೆ ।೧೨೯೨॥

ಆಗ ಕೈಕಾಲುಗಳನ್ನು ಕಟ್ಟಿ ರಥದಲ್ಲಿ ಹಾಕಿದ ಮನುಷ್ಯನು ನಾನು ನಡೆಯಲಾರೆ ಎಂದು ಹೇಳಿದರೂ ಅವನು ರಥದೊಂದಿಗೆ ದೇಶಾಂತರ ಸೇರುವನು ।೧೨೯೩॥

ಅದರಂತೆ ನೀನು ಏನನ್ನೂ ಮಾಡಲಾರೆ ಎಂದು ಸ್ವಸ್ಥವಾಗಿ ಕುಳಿತುಕೊಂಡರೂ, ಭರವಸೆಯಿಂದ ಹೇಳುವೆ, ನೀನೇ ಯುದ್ಧವನ್ನು ಮಾಡುವಿ, ಇದರಲ್ಲಿ ಸಂಶಯವೇ ಇಲ್ಲ ।೧೨೯೪॥

ವಿರಾಟರಾಜನ ಪುತ್ರನು ಯುದ್ಧದಲ್ಲಿ ಹಿಂದಕ್ಕೆ ಓಡುತ್ತಿರುವಾಗ, ಬೃಹನ್ನಳೆಯಾಗಿರುವ ನೀನು ಸಾರಥಿಯಾಗಿ ಯುದ್ಧವನ್ನೇಕೆ ಮಾಡಿದೆ ? ಅದೇ ಕ್ಷಾತ್ರ ಸ್ವಭಾವವು ನಿನ್ನಿಂದ ಯುದ್ಧವನ್ನು ಮಾಡಿಸುವುದು ! ।೧೨೯೫॥

ಮಹಾವೀರರಾದ ಹನ್ನೊಂದು ಅಕ್ಷೋಹಿಣಿ ಸೈನ್ಯವನ್ನು ನೀನೊಬ್ಬನೇ ಮೋಹನಾಸ್ತ್ರದಿಂದ ಅವರನ್ನು ಬತ್ತಲೆ ಮಾಡಿದೆ, ಈ ಕ್ಷಾತ್ರ ಸ್ವಭಾವವು ನಿನ್ನಿಂದ ಯುದ್ಧ ಮಾಡಿಸುವುದು ।೧೨೯೬॥

ಅರೇ, ಇಲ್ಲಿ ನೋಡು, ರೋಗಿಗೆ ರೋಗವು ಬೇಕೆನ್ನಿಸುವುದೇ ? ದರಿದ್ರನಿಗೆ ದಾರಿದ್ರ್ಯವು ಹಿಡಿಸೀತೆ ? ಆದರೆ ಬಲಾಢ್ಯವಾದ ಪ್ರಾರಬ್ಧವು ಅವನಿಂದ ಭೋಗಿಸಲು ಹಚ್ಚುವುದು ।೧೨೯೭॥

ಈ ಅದೃಷ್ಟವು ಈಶ್ವರನ ಆಧೀನವಾಗಿದೆ. ಅದು ಬೇರೆ ಏನೂ ಮಾಡಲಾರದು, ಅಥವಾ ಆ ಈಶ್ವರನಾದರೂ ನಿನ್ನ ಹೃದಯದಲ್ಲಿಯೇ ಇರುವನು ।೧೨೯೮॥

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥೬೧॥

ಸರ್ವ ಭೂತಾಂಚ್ಯಾ ಅಂತರೀ । ಹೃದಯ ಮಹಾಅಂಬರೀ । ಚಿದ್‌ವೃತ್ತೀಚ್ಯಾ ಸಹಸ್ರಕರೀ । ಉದಯಲಾ ಅಸೇ ಜೋ ॥೧೨೯೯॥ ಅವಸ್ಥಾತ್ರಯ ತಿನ್ಹೀ ಲೋಕ । ಪ್ರಕಾಶೂನಿ ಅಶೇಖ । ಅನ್ಯಥಾದೃಷ್ಟೀ ಪಾಂಥಿಕ । ಚೇವವಿಲೇ ॥೧೩೦೦॥ ವೇದ್ಯೋದಕಾಚ್ಯಾ ಸರೋವರೀ । ಫಾಂಕತಾ ವಿಷಯಕಲ್ಹಾರೀ । ಇಂದ್ರಿಯಷಟ್‌ಪದಾ ಚಾರೀ । ಜೀವಭ್ರಮರಾತೇ ॥೧೩೦೧॥ ಅಸೋ ರೂಪಕ ಹೇ ತೋ ಈಶ್ವರು । ಸಕಲ ಭೂತಾಂಚಾ ಅಹಂಕಾರು । ಪಾಂಘುರೋನಿ ನಿರಂತರು । ಉಲ್ಹಾಸತ ಅಸೇ ॥೧೩೦೨॥ ಸ್ವಮಾಯೇಚೇ ಆಡವಸ್ತ್ರ । ಲಾವೂನಿ ಏಕಲಾ ಖೇಳವೀ ಸೂತ್ರ । ಬಾಹೇರೀ ನಟೀ ಛಾಯಾಚಿತ್ರ । ಚೌರ್ಯಾಂಶೀ ಲಕ್ಷ ॥೧೩೦೩॥ ತಯಾ ಬ್ರಹ್ಮಾದಿಕೀಟಾಂತಾ । ಅಶೇಷಾಂಹೀ ಭೂತಜಾತಾ । ದೇಹಾಕಾರ ಯೋಗ್ಯತಾ । ಪಾವೋನಿ ದಾವೀ ॥೧೩೦೪॥ ತೇಥ ಜೇ ದೇಹ ಜಯಾಪುಢೇ । ಅನುರೂಪಪಣೇ ಮಾಂಡೇ । ತೇ ಭೂತ ತಯಾ ಆರೂಢೇ । ಹೇ ಮೀ ಮ್ಹಣೌನಿ ॥೧೩೦೫॥ ಸೂತ ಸೂತೇ ಗುಂತಲೇ । ತೃಣ ತೃಣೇಂಚಿ ಬಾಂಧಲೇ । ಕಾ ಆತ್ಮಬಿಂಬಾ ಘೇತಲೇ । ಬಾಳಕೇ ಜಳೀ ॥೧೩೦೬॥ ತಯಾಪರೀ ದೇಹಾಕಾರೇ । ಆಪಣಪೇಂಚಿ ದುಸರೇ । ದೇಖೋನಿ ಜೀವ ಆವಿಷ್ಕರೇ । ಆತ್ಮಬುದ್ಧಿ ॥೧೩೦೭॥ ಐಸೇನಿ ಶರೀರಾಕಾರೀ । ಯಂತ್ರೀ ಭೂತೇ ಅವಧಾರೀ । ವಾಹೂನಿ ಹಾಲವೀ ದೋರೀ । ಪ್ರಾಚೀನಾಚೀ ॥೧೩೦೮॥ ತೇಥ ಜಯಾ ಜೇ ಕರ್ಮಸೂತ್ರ । ಮಾಂಡೂನಿ ಠೇವಿಲೇ ಸ್ವತಂತ್ರ । ತೇ ತಿಯೇ ಗತೀ ಪಾತ್ರ । ಹೋಂಚಿ ಲಾಗೇ ॥೧೩೦೯॥ ಕಿಂಬಹುನಾ ಧನುರ್ಧರಾ । ಭೂತಾಂತೇ ಸ್ವರ್ಗಸಂಸಾರಾ । ಮಾಜೀ ಭೋವಂಡೀ ತೃಣೇ ವಾರಾ । ಆಕಾಶೀ ಜೈಸಾ ॥೧೩೧೦॥ ಭ್ರಾಮಕಾಂಚೇನಿ ಸಂಗೇ । ಜೈಸೇ ಲೋಹೋ ವೇಢಾ ರಿಗೇ । ತೈಸೀ ಈಶ್ವರ ಸತ್ತಾಯೋಗೇ । ಚೇಷ್ಟತೀ ಭೂತೇ ॥೧೩೧೧॥ ಜೈಸೇ ಚೇಷ್ಟಾ ಆಪುಲಿಯಾ । ಸಮುದ್ರಾದಿಕ ಧನಂಜಯಾ । ಚೇಷ್ಟತೀ ಚಂದ್ರಾಚಿಯಾ । ಸನ್ನಿಧೀ ಏಕೀ ॥೧೩೧೨॥ ತಯಾ ಸಿಂಧು ಭರಿತೇ ದಾಟೇ । ಸೋಮಕಾಂತಾ ಪಾಝುರು ಫುಟೇ । ಕುಮುದಾ ಚಕೋರಾಂಚಾ ಫಿಟೇ । ಸಂಕೋಚು ತೋ ॥೧೩೧೩॥ ತೈಸೀ ಬೀಜಪ್ರಕೃತಿವಶೇ । ಅನೇಕೆ ಭೂತೇ ಏಕೇ ಈಶೇ । ಚೇಷ್ಟವಿಜತೀ ತೋ ಅಸೇ । ತುಝ್ಯಾ ಹೃದಯೀ ॥೧೩೧೪॥

ಶ್ಲೋಕಾರ್ಥ :- ಅರ್ಜುನಾ! ಸಂಸಾರ ಯಂತ್ರದಲ್ಲಿ ಸಿಕ್ಕಿರುವ ಈ ಚರಾಚರ ಭೂತಗಳನ್ನು ತನ್ನ ಮಾಯಾಶಕ್ತಿಯಿಂದ ಆಡಿಸುತ್ತ ಪರಮೇಶ್ವರನು ಸರ್ವರ ಹೃದಯದಲ್ಲಿ ಸ್ಥಿತನಾಗಿರುತ್ತಾನೆ ॥೬೧॥

ಯಾವ ಈಶ್ವರನು ಎಲ್ಲ ಭೂತಗಳ ಅಂತಃಕರಣದಲ್ಲಿ ಹೃದಯರೂಪ ಮಹಾಕಾಶದಲ್ಲಿ ಜ್ಞಾನರೂಪ ಬುದ್ಧಿ ವೃತ್ತಿಯ ಸಹಸ್ರಾರು ಕಿರಣಗಳಿಂದ ಉದಯಕ್ಕೆ ಬಂದಿರುವನು ॥೧೨೯೯॥

ಈ ಈಶ್ವರ ಸೂರ್ಯನು, ಜಾಗೃತ, ಸ್ವಪ್ನ ಹಾಗೂ ಸುಷುಪ್ತಿ ಈ ಮೂರು ಲೋಕಗಳನ್ನು ಪ್ರಕಾಶಗೊಳಿಸಿ ವಿಪರೀತ ಜ್ಞಾನದಿಂದ ಮರುಳಾಗಿರುವ ದಾರಿ ನಡೆಯುವ ಜೀವನಿಗೆ ಜಾಗೃತ ಮಾಡಿದನು ॥೧೩೦೦॥

ವೇದ್ಯೋದಕದ ಸರೋವರದಲ್ಲಿ ವಿಷಯರೂಪ ಕಮಲಗಳನ್ನು ಪ್ರಫುಲ್ಲಿತಗೊಳಿಸಿ, ಪಂಚ ಜ್ಞಾನೇಂದ್ರಿಯ ಹಾಗೂ ಆರನೆಯದಾದ ಮನಸ್ಸು ಈ ಆರು ಕಾಲುಗಳುಳ್ಳ ಜೀವರೂಪ ಭ್ರಮರದಿಂದ ಆ ಕಮಲದ ಸೇವನೆ ಮಾಡಿಸುವುದು ॥೧೩೦೧॥

ಈ ಸೂರ್ಯನ ರೂಪಕ ಇರಲಿ, ಸರ್ವರ ಹೃದಯದಲ್ಲಿ ವಾಸ ಮಾಡುವ ಈಶ್ವರನು ಆತನೇ ಅಹಂಕಾರರೂಪ ಹೊದಿಕೆಯನ್ನು ತನ್ನ ಮೈಮೇಲೆ ಹಾಕಿಕೊಂಡು ಪ್ರಕಟನಾಗುವನು ॥೧೩೦೨॥

ಯಾವ ತನ್ನ ಮಾಯೆಯ ಅಡ್ಡ ಪರದೆಯನ್ನು ಹಾಕಿ ಒಳಗಿಂದ ಒಬ್ಬನೇ ಸೂತ್ರವನ್ನು ಅಲುಗಾಡಿಸುತ್ತ, ಹೊರಗೆ ಎಂಬತ್ನಾಲ್ಕು ಲಕ್ಷ ಛಾಯಾ ಚಿತ್ರಗಳನ್ನು ಕುಣಿಸುವನು ॥೧೩೦೩॥

ಆ ಬ್ರಹ್ಮದೇವನಿಂದ ಹಿಡಿದು ಕೀಟಗಳವರೆಗೆ ಎಲ್ಲ ಭೂತಮಾತ್ರರಿಗೆ ಯೋಗ್ಯತೆಯನುಸಾರವಾಗಿ ದೇಹದ ಆಕಾರಕ್ಕೆ ತರುವನು ॥೧೩೦೪॥

ಯಾವ ಭೂತದ ಮುಂದೆ ಅದರ ಯೋಗ್ಯತೆಗೆ ತಕ್ಕಂತೆ ಯಾವ ದೇಹವನ್ನು ಮಂಡಿಸಿ, ಆ ದೇಹವು ನಾನೇ ಇರುವೆ ಎಂಬ ಬುದ್ಧಿಯಿಂದ ದೇಹರೂಪ ಯಂತ್ರರೂಢನಾಗುವನು ॥೧೩೦೫॥

ಹಗ್ಗಗಳನ್ನು ಹಗ್ಗದಿಂದಲೇ ಕಟ್ಟಬೇಕು, ಹುಲ್ಲನ್ನು ಹುಲ್ಲಿನಿಂದಲೇ ಕಟ್ಟಬೇಕು, ಅಥವಾ ತನ್ನ ಪ್ರತಿಬಿಂಬವನ್ನು ನೋಡಿ ಮಗು ಭ್ರಮದಿಂದ ಅದನ್ನು ತೆಗೆದುಕೊಳ್ಳಲು ಧಾವಿಸುವುದೋ ॥೧೩೦೬॥

ಅದರಂತೆ ದೇಹರೂಪದ ಆಕಾರದಿಂದ ಇರುವ ತನ್ನಿಂದ ಬೇರೆಯಾಗಿರುವ ಅದಕ್ಕೆ ನಾನು ಇರುವೆ ಎಂದು ಭ್ರಮೆಯಿಂದ ಗ್ರಹಿಸುವನು. (ಅಭಿಮಾನ ಹಿಡಿಯುವನು) ॥೧೩೦೭॥

ಈ ಪ್ರಕಾರವಾಗಿ ಶರೀರದ ಆಕಾರದ ಯಂತ್ರದ ಮೇಲೆ ಭೂತಗಳನ್ನು ಕುಳ್ಳಿರಿಸಿ, ಪೂರ್ವ ಕರ್ಮದಂತೆ ಸೂತ್ರವನ್ನು ಆಡಿಸುವನು ॥೧೩೦೮॥

ಅವರಿಗಾಗಿಯಾವ ಕರ್ಮರೂಪ ಸೂತ್ರವನ್ನು ಸ್ವತಂತ್ರವಾಗಿ ತಯಾರಿಸಿ ಇಡಲಾಗಿದೆ. ಅದನ್ನು ಆಡಿಸಿದಂತೆ ಆಯಾ ಪ್ರಾಣಿಗಳು ತಮ್ಮ ತಮ್ಮ ಗತಿಯನ್ನು ಹೊಂದುವುವು ॥೧೩೦೯॥

ಹೆಚ್ಚಿಗೇನು ಹೇಳಬೇಕು ? ಧನುರ್ಧರಾ, ಚಕ್ರಗಾಳಿಯು ಹುಲ್ಲನ್ನು ಆಕಾಶದಲ್ಲಿ ತಿರುಗಿಸುವಂತೆ, ಈ ಈಶ್ವರನು ಭೂತಗಳನ್ನು ಸ್ವರ್ಗ ಹಾಗೂ ಸಂಸಾರಗಳಲ್ಲಿ ಅವರವರ ಕರ್ಮಗಳಂತೆ ತಿರುಗಿಸುವನು ॥೧೩೧೦॥

ಲೋಹ ಚುಂಬಕದ ಸತ್ತೆಯಿಂದ ಕಬ್ಬಿಣವು ಚಲಿಸುವಂತೆ, ಈಶ್ವರ ಸತ್ತೆಯಿಂದ ಎಲ್ಲ ಭೂತಗಳು ವ್ಯವಹರಿಸುವುವು ॥೧೩೧೧॥

ಹೇ ಧನಂಜಯನೇ, ಚಂದ್ರನ ಸಾನಿಧ್ಯ ದೊರಕಿತೆಂದರೆ ಸಮುದ್ರಾದಿಕಗಳ ಚೇಷ್ಟೆಗಳು ಆರಂಭಿಸುವುವು ॥೧೩೧೨॥

ಸಮುದ್ರಕ್ಕೆ ಭರತಿ ಬರುವುದು, ಸೋಮಕಾಂತ ಶಿಲೆಯು ಒಸರುವುದು, ಚಂದ್ರವಿಕಾಸಿನಿ ಕಮಲಗಳು ಅರಳುವುವು, ಚಕೋರಪಕ್ಷಿಗಳು ಆನಂದ ಪಡುವುವು ॥೧೩೧೩॥

ಅದರಂತೆ ಪರಾಪ್ರಕೃತಿಯ ಯೋಗದಿಂದ ಅನೇಕ ಭೂತಗಳನ್ನು ಯಾವ ಒಬ್ಬನೇ ಈಶ್ವರನು ಚೇಷ್ಟಿಸುವನು. ಆತನು ನಿನ್ನ ಹೃದಯದಲ್ಲಿ ವಾಸ ಮಾಡಿರುವನು ॥೧೩೧೪॥

ಅರ್ಜುನಪಣ ನ ಘೇತಾ । ಮೀ ಐಸೇ ಜೇ ಪಂಡುಸುತಾ । ಉಠತಸೇ ತೇ ತತ್ತ್ವತಾ । ತಯಾಚೇ ರೂಪ ॥೧೩೧೫॥ ಯಾಲಾಗೀ ತೋ ಪ್ರಕೃತೀತೇ । ಪ್ರವರ್ತವೀಲ ಹೇ ನಿರುತೇ । ಆಣಿ ತೇ ಝುಂಜವೀಲ ತೂಂತೇ । ನ ಝುಂಜಶೀ ಜರ್ಹೀ ॥೧೩೧೬॥ ಮ್ಹಣೌನಿ ಈಶ್ವರು ಗೋಸಾವೀ । ತೇಣೇ ಪ್ರಕೃತೀ ಹೇ ನೇಮಾವೀ । ತಿಯಾ ಸುಖೇ ರಾಬವಾವೀ । ಇಂದ್ರಿಯೇ ಆಪುಲೀ ॥೧೩೧೭॥ ತೂ ಕರಣೇ ನ ಕರಣೇ ದೋನ್ಹೀ । ಲಾಊನೀ ಪ್ರಕೃತೀಚ್ಯಾ ಮಾನೀ । ಪ್ರಕೃತೀಹೀ ಕಾ ಅಧೀನೀ । ಹೃದಯಸ್ಥಾ ಜಯಾ ॥೧೩೧೮॥

ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।
ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥೬೨॥

ತಯಾ ಅಹಂ ವಾಚಾ ಚಿತ್ತ ಆಂಗ । ದೇಊನಿಯಾ ಶರಣ ರಿಗ । ಮಹೋದಧೀ ಕಾ ಗಾಂಗ । ರಿಗಾಲೇ ಜೈಸೇ ॥೧೩೧೯॥ ಮಗ ತಯಾಚೇನಿ ಪ್ರಸಾದೇ । ಸರ್ವೋಪಶಾಂತಿಪ್ರಮದೇ । ಕಾಂತು ಹೋಊನಿಯಾ ಸ್ವಾನಂದೇ । ಸ್ವರೂಪೀಂಚಿ ರಮಸೀ ॥೧೩೨೦॥ ಸಂಭೂತಿ ಜೇಣೇ ಸಂಭವೇ । ವಿಶ್ರಾಂತಿ ಜೇಥೇ ವಿಸಂವೇ । ಅನುಭೂತಿಹೀ ಅನುಭವೇ । ಅನುಭವಾ ಜಯಾ ॥೧೩೨೧॥ ತಿಯೇ ನಿಜಾತ್ಮ ಪದೀಂಚಾ ರಾವೋ । ಹೋಊನಿ ಠಾಕಸೀ ಅವ್ಯವೋ । ಮ್ಹಣೇ ಲಕ್ಷ್ಮೀನಾಹೋ । ಪಾರ್ಥಾ ತೂ ಗಾ ॥೧೩೨೨॥

ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ ।
ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥೬೩॥

ಹೇ ಗೀತಾನಾಮ ವಿಖ್ಯಾತ । ಸರ್ವವಾಙ್ಮಯಾಚೇ ಮಥಿತ । ಆತ್ಮಾ ಜೇಣೇ ಹಸ್ತಗತ । ರತ್ನ ಹೋಯ ॥೧೩೨೩॥ ಜ್ಞಾನ ಐಸಿಯಾ ರೂಢೀ । ವೇದಾಂತೀ ಜಯಾಚೀ ಪ್ರೌಢೀ । ವಾನಿತಾ ಕೀರ್ತಿ ಚೋಖಡೀ । ಪಾತಲೀ ಜಗೀ ॥೧೩೨೪॥ ಬುದ್ಧ್ಯಾದಿಕೇ ಡೋಳಸೇ । ಹೇ ಜಯಾಚೇ ಕಾ ಕಡವಸೇ । ಮೀ ಸರ್ವದ್ರಷ್ಟಾಹೀ ದಿಸೇ । ಪಾಹಲಾ ಜಯಾ ॥೧೩೨೫॥ ತೇ ಹೇ ಗಾ ಆತ್ಮಜ್ಞಾನ । ಮಜ ಗೌಪ್ಯಾಚೇಂಹೀ ಗುಪ್ತ ಧನ । ಪರೀ ತೂ ಮ್ಹಣೌನಿ ಆನ । ಕೇವೀ ಕರೂ ? ॥೧೩೨೬॥

ಹೇ ಪಂಡುಸುತನೇ, ಅರ್ಜುನತ್ವದ ಅಭಿಮಾನವನ್ನು ಹಿಡಿಯದೇ, ಯಾವುದು ನಾನು ಎನ್ನುವುದು ನಿನ್ನಲ್ಲಿ ಉದ್ಭವವಾಗುವುದೋ, ಅದು ಈಶ್ವರನ ನಿಜವಾದ ರೂಪವಿರುವುದು ॥೧೩೧೫॥

ಆದ್ದರಿಂದ ಆ ಈಶ್ವರನು ಪ್ರಕೃತಿಯನ್ನು ಪ್ರವೃತ್ತಗೊಳಿಸಿ, ನೀನು ಒಂದು ವೇಳೆ ಯುದ್ಧ ಮಾಡದಿದ್ದರೂ, ನಿನ್ನ ಕಡೆಯಿಂದಲೇ ಯುದ್ಧವನ್ನು ಮಾಡಿಸುವನು ॥೧೩೧೬॥

ಅದಕ್ಕಾಗಿ ಎಲ್ಲರ ಒಡೆಯನು ಈಶ್ವರನಿರುವನು. ಆತನು ಎಲ್ಲ ಭೂತಗಳಿಗೆ ಯಾವ ಪ್ರಕಾರದ ಪ್ರಕೃತಿಯನ್ನು ಕೊಡುವನೋ, ಆ ಪ್ರಕೃತಿಯಂತೆ ಇಂದ್ರಿಯಗಳು ತಮ್ಮ ತಮ್ಮ ಕಾರ್ಯಗಳನ್ನು ಮಾಡುವುವು ॥೧೩೧೭॥

ನೀನು ಯಾವುದೇ ಕರ್ಮವನ್ನು ಮಾಡುವುದನ್ನೂ, ಬಿಡುವುದನ್ನೂ ಪ್ರಕೃತಿಗೆ ಒಪ್ಪಿಸು, ಆ ಪ್ರಕೃತಿಯಾದರೂ ಹೃದಯಸ್ಥ ಈಶ್ವರನ ಆಧೀನವಾಗಿರುವುದು ॥೧೩೧೮॥

ಶ್ಲೋಕಾರ್ಥ :- ಭಾರತಾ! ಸರ್ವ ವಿಧದಿಂದಲೂ ಆ ಈಶ್ವರನನ್ನೇ ಶರಣು ಹೊಂದು, ಅವನ ಅನುಗ್ರಹದಿಂದ ಪರಮ ಶಾಂತಿಯನ್ನೂ ಶಾಶ್ವತ ಸ್ಥಾನವನ್ನೂ ಪಡೆಯುವೆ ॥೬೨॥

ಗಂಗೆಯು ಸಮುದ್ರಕ್ಕೆ ಶರಣು ಹೋಗಿ ಸಮುದ್ರರೂಪವಾಗುವಂತೆ, ನೀನು ಈಶ್ವರನಿಗೆ ಅಹಂಕಾರ, ವಾಚಾ, ಚಿತ್ತ ಹಾಗೂ ಶರೀರ ಈ ಎಲ್ಲವನ್ನೂ ಅರ್ಪಿಸಿ ಶರಣು ಹೋಗು ॥೧೩೧೯॥

ಆಗ ಆ ಈಶ್ವರನ ಪ್ರಸಾದದಿಂದ ಶಾಂತಿರೂಪ ಸ್ತ್ರೀಯ ಪತಿಯಾಗಿ ನೀನು ಆನಂದವಾಗಿ ಆತ್ಮ ಸ್ವರೂಪದಲ್ಲಿ ರಮಿಸುವೆ ॥೧೩೨೦॥

ಆ ಪದವು ಉತ್ಪತ್ತಿ, ಸ್ಥಿತಿ, ಲಯಗಳಿಗೆ ಆದಿಕಾರಣವು, ವಿಶ್ರಾಂತಿಗೆ ವಿಶ್ರಾಂತಿ ಸ್ಥಾನವು, ಅನುಭವಕ್ಕೆ ಅನುಭವವಾಗಿದೆ ॥೧೩೨೧॥

ಆ ನಿನ್ನ ಆತ್ಮ ಪದಕ್ಕೆ ನೀನು ರಾಜನಾಗು, ಆಗ ನೀನು ಅಕ್ಷಯ ಸುಖವನ್ನು ಭೋಗಿಸುವಿ ಮಹಾರಾಯಾ! ಎಂದು ಲಕ್ಷ್ಮೀಪತಿ ಶ್ರೀಕೃಷ್ಣನು ಪಾರ್ಥನಿಗೆ ಹೇಳಿದನು ॥೧೩೨೨॥

ಶ್ಲೋಕಾರ್ಥ :- ಈ ಪ್ರಕಾರವಾಗಿ ಪರಮ ರಹಸ್ಯವಾದ ಜ್ಞಾನವನ್ನು ನಿನಗೆ ಹೇಳಿದೆನು. ಸರಿಯಾಗಿ ವಿಮರ್ಶೆ ಮಾಡಿ ನಿನ್ನ ಇಚ್ಛೆ ಬಂದಂತೆ ಮಾಡು ॥೬೩॥

ಈ ಜ್ಞಾನವು ಗೀತೆ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಹಾಗೂ ಎಲ್ಲ ವೇದಗಳ ಸಾರವಾಗಿದೆ ಮತ್ತು ಯಾವ ಈ ಜ್ಞಾನದಿಂದ ಆತ್ಮರೂಪ ರತ್ನವು ಸ್ವಾಧೀನವಾಗುವುದು ॥೧೩೨೩॥

ವೇದಾಂತ ಶಾಸ್ತ್ರದಲ್ಲಿನ ಜ್ಞಾನ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಹಾಗೂ ಇದರ ವರ್ಣನೆಯನ್ನು ಮಾಡಿ ಜಗತ್ತಿನ ಎಲ್ಲ ಶಾಸ್ತ್ರಗಳಿಗೆ ಕೀರ್ತಿ ಪ್ರಾಪ್ತವಾಗಿದೆ ॥೧೩೨೪॥

ಬುದ್ಧ್ಯಾದಿಕ ಜ್ಞಾನಗಳು ಈ ಜ್ಞಾನದ ಮುಂದೆ ಅಲ್ಪವಾಗಿರುವುವು. ಹಾಗೂ ಯಾವ ಈ ಜ್ಞಾನದ ಉದಯವಾದ ಮೇಲೆ ನಾನು ಎಲ್ಲ ದೃಷ್ಟಿಯಿಂದಲೂ ಕಾಣಿಸುವೆನು ॥೧೩೨೫॥

ಇಂಥ ಈ ಆತ್ಮಜ್ಞಾನವು ಸರ್ವದರಲ್ಲಿಯೂ ಗುಪ್ತನಾಗಿರುವ ನನ್ನ ಗುಪ್ತಧನವಾಗಿರುವುದು. ಈ ಜ್ಞಾನವು ಇಷ್ಟೊಂದು ಯೋಗ್ಯತೆಯದ್ದಾಗಿದ್ದರೂ, ಭಕ್ತನಾದ ನಿನಗಾಗಿ ಗುಪ್ತವಾಗಿ ಹೇಗೆ ಇಡಲು ಸಾಧ್ಯ? ॥೧೩೨೬॥

ಯಾಕಾರಣೇ ಗಾ ಪಾಂಡವಾ । ಆಮ್ಹೀ ಆಪುಲಾ ಹಾ ಗುಹ್ಯ ಠೇವಾ । ತುಜ ದಿಧಲಾ ಕಣವಾ । ಜಾಕಳಿಲೇಪಣೇ ॥೧೩೨೭॥ ಜೈಸಿ ಭುಲಲೀ ಪ್ರೋರಸೇ । ಮಾಯ ಬೋಲೇ ಬಾಳಾ ದೋಷೇ । ಪ್ರೀತಿ ಹೀ ಪರೀ ತೈಸೇ । ನ ಕರೂಂಚಿ ಹೋ ॥೧೩೨೮॥ ಯೇಥ ಆಕಾಶ ಆಣಿ ಗಾಳಿಜೇ । ಅಮೃತಾಹೀ ಸಾಲಿ ಫೇಡಿಜೇ । ಕಾ ದಿವ್ಯಾಕರವೀ ಕರವಿಜೇ ।ದಿವ್ಯ ಜೈಸೇ ॥೧೩೨೯॥ ಜಯಾಚೇನಿ ಅಂಗಪ್ರಕಾಶೇ । ಪಾತಾಳೀಂಚಾ ಪರಮಾಣು ದಿಸೇ । ತಯಾ ಸೂರ್ಯಾಹೀ ಕಾ ಜೈಸೇ । ಅಂಜನ ಸೂದಲೇ ॥೧೩೩೦॥ ತೈಸೇ ಸರ್ವಜ್ಞೇಹೀ ಮಿಯಾ । ಸರ್ವಹೀ ನಿರ್ಧಾರೂನಿಯಾ । ನಿಕೇ ಹೋಯ ತೇ ಧನಂಜಯಾ । ಸಾಂಗಿತಲೇ ತುಜ ॥೧೩೩೧॥ ಆತಾ ತೂ ಯಯಾವರೀ । ನಿಕೇ ಹೇ ನಿರ್ಧಾರೀ । ನಿರ್ಧಾರೂನಿ ಕರೀ । ಆವಡೇ ತೈಸೇ ॥೧೩೩೨॥ ಯಯಾ ದೇವಾಚಿಯಾ ಬೋಲಾ । ಅರ್ಜುನು ಉಗಾಚಿ ಠೇಲಾ । ತೇಥ ದೇವೋ ಮ್ಹಣತೀ ಭಲಾ । ಅವಂಚಕು ಹೋಸೀ ॥೧೩೩೩॥ ವಾಢತಯಾ ಪುಢೇ ಭುಕೇಲಾ । ಉಪರೋಧೇ ಮ್ಹಣೇ ಮೀ ಧಾಲಾ । ತೈ ತೋಚಿ ಪೀಡೇ ಆಪುಲಾ । ಆಣಿ ದೋಷುಹೀ ತಯಾ ॥೧೩೩೪॥ ತೈಸಾ ಸರ್ವಜ್ಞು ಶ್ರೀಗುರು । ಭೇಟಲಿಯಾ ಆತ್ಮ ನಿರ್ಧಾರು । ನ ಪುಸಿಜೇ ಜೈ ಆಭಾರು । ಧರೂನಿಯಾ ॥೧೩೩೫॥ ತೈ ಆಪಣಪೇಂಚಿ ವಂಚೇ । ಆಣಿ ಪಾಪಹೀ ವಂಚನಾಚೇ । ಆಪಣಯಾಚಿ ಸಾಚೇ । ಚುಕವಿಲೇ ತೇಣೇ ॥೧೩೩೬॥ ಪೈ ಉಗೇಪಣಾ ತುಝಿಯಾ । ಹಾ ಅಭಿಪ್ರಾವೋ ಕೀ ಧನಂಜಯಾ । ಜೇ ಏಕವೇಳ ಆವಾಂಕುನಿಯಾ । ಸಾಂಗಾವೇ ಜ್ಞಾನ ॥೧೩೩೭॥ ತೇಥ ಪಾರ್ಥು ಮ್ಹಣೇ ದಾತಾರಾ । ಭಲೇ ಜಾಣಸೀ ಮಾಝಿಯಾ ಅಂತರಾ । ಹೇ ಮ್ಹಣೋ ತರೀ ದುಸರಾ । ಜಾಣತಾ ಅಸೇ ಕಾಈ ? ॥೧೩೩೮॥ ಯೇರ ಜ್ಞೇಯ ಹೇ ಜೇ ಆಘವೇ । ತೂ ಜ್ಞಾತಾ ಏಕಚಿ ಸ್ವಭಾವೇ । ಮಾ ಸೂರ್ಯು ಮ್ಹಣೌನಿ ವಾನಾವೇ । ಸೂರ್ಯಾತೇ ಕಾಈ ? ॥೧೩೩೯॥ ಯಾ ಬೋಲಾ ಶ್ರೀಕೃಷ್ಣೇ । ಮ್ಹಣೆತಲೇ ಕಾಯ ಯೇಣೇ । ಹೇಂಚಿ ಥೋಡೇ ಗಾ ವಾನಣೇ । ಜೇ ಬುಝುತಾಸಿ ತೂ ॥೧೩೪೦॥

ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ ।
ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ ॥೬೪॥

ತರೀ ಅವಧಾನ ಪಘಳ । ಕರೂನಿಯಾ ಆಣಿಕ ಏಕ ವೇಳ । ವಾಕ್ಯ ಮಾಝೇ ನಿರ್ಮಳ । ಅವಧಾರೀ ಪಾ ॥೧೩೪೧॥

ಅದಕ್ಕಾಗಿ ಹೇ ಪಾಂಡವನೇ, ನಿನ್ನ ಪ್ರೇಮಭರದಲ್ಲಿ ಸಂತುಷ್ಟನಾಗಿ ನಾನು ನನ್ನ ಗುಪ್ತಧನವನ್ನು ನಿನಗೆ ಕೊಟ್ಟಿರುವೆನು ॥೧೩೨೭॥

ಯಾವ ಪ್ರಕಾರವಾಗಿ ಬಾಲಕನ ಪ್ರೇಮದಿಂದ ತಾಯಿಯು ಮರುಳಾಗುವಳು ಮತ್ತು ಆತನಿಗಾಗಿ ಪ್ರೇಮಭರಿತ ಮಾತುಗಳನ್ನು ಆಡುವಳು. ಅದರಂತೆ ನಮ್ಮ ಪ್ರೇಮವು ನಿನ್ನ ಮೇಲೆ ಮಾಡಲಿಕ್ಕಿಲ್ಲವೆ? ॥೧೩೨೮॥

ಅತ್ಯಂತ ಸೂಕ್ಷ್ಮವಾದ ಆಕಾಶವನ್ನು ಸೋಸಬೇಕು, ಒಳಹೊರಗೂ ಸಿಹಿಯಾಗಿರುವ ಅಮೃತದ ಸಿಪ್ಪೆಯನ್ನು ಸುಲಿಯಬೇಕು. ಅಥವಾ ದೀಪದಿಂದ ದಿವ್ಯವನ್ನು ಮಾಡಬೇಕು ॥೧೩೨೯॥

ಯಾವ ಸೂರ್ಯನ ಅಂಗ ಪ್ರಕಾಶದಿಂದ ಪಾತಾಳದಲ್ಲಿನ ಪರಮಾಣವೂ ಕಾಣುವುದು, ಅಂಥ ಸೂರ್ಯನ ಕಣ್ಣಿನಲ್ಲಿ ಅಂಜನವನ್ನು ಹಾಕಬೇಕು ॥೧೩೩೦॥

ಅದರಂತೆ ನಾನು ಸರ್ವಜ್ಞನಿದ್ದರೂ ಎಲ್ಲವನ್ನು ವಿಚಾರಿಸಿ, ಯಾವುದು ಯೋಗ್ಯವೆನಿಸಿದ್ದು, ಧನಂಜಯನೇ, ಅದನ್ನು ನಿನಗೆ ಹೇಳಿರುವೆನು ॥೧೩೩೧॥

ಈಗ ಇನ್ನು ಮುಂದೆ ನೀನು ಈ ಜ್ಞಾನದ ವಿಚಾರವನ್ನು ಸರಿಯಾಗಿ ಮಾಡು ಮತ್ತು ನಿಶ್ಚಯವಾದ ಮೇಲೆ ನಿನಗೆ ಬೇಕಾದದ್ದನ್ನು ಮಾಡು ॥೧೩೩೨॥

ದೇವನ ಈ ಮಾತುಗಳನ್ನು ಕೇಳಿ ಅರ್ಜುನನು ಸುಮ್ಮನೇ ಕುಳಿತನು. ( ಹೇಳಿದ ಜ್ಞಾನವನ್ನು ಪುನಃ ಸ್ವಲ್ಪದರಲ್ಲಿಯೇ ಕೇಳಬೇಕೆಂಬ ಅಪೇಕ್ಷೆಯಿಂದ ಹೀಗೆ ಕುಳಿತಿರಬೇಕೆಂದು ದೇವನು ತಿಳಿದು) ಅರ್ಜುನನಿಗೆ ಹೇಳಿದನು :- ಭಲೇ ! ನಿಜವಾಗಿಯೂ ನೀನು ನಿನ್ನನ್ನೇ ವಂಚಿಸುತ್ತಿರುವೆ ॥೧೩೩೩॥

ಬಡಿಸುವವನು ಬಡಿಸುತ್ತಿರಲು ಹಸಿದ ಮನುಷ್ಯನು ನಾಚಿಕೆಯಿಂದ "ಸಾಕು ಸಾಕು" ಎಂದು ಹೇಳಿದರೆ ಹಸಿವೆಯ ಪೀಡೆಯನ್ನು ಸೋಸುವುದಲ್ಲದೇ, ಸಂಕೋಚಪಟ್ಟ ದೋಷವೂ ತಟ್ಟುವುದು ॥೧೩೩೪॥

ಅದರಂತೆ ಸರ್ವಜ್ಞರಾಗಿರುವ ಶ್ರೀಗುರುಗಳು ಸಿಕ್ಕಿರುವಾಗ ಭಿಡೆ ಹಿಡಿದು ಆತ್ಮಸ್ವರೂಪದ ನಿರ್ಣಯವನ್ನು ವಿಚಾರಿಸದಿದ್ದರೆ ॥೧೩೩೫॥

ಅದರಿಂದ ತನ್ನ ಲಾಭವನ್ನು ಕಳೆದುಕೊಂಡು ತಾನೇ ವಂಚನೆಯನ್ನು ಮಾಡಿದ ಪಾಪವೂ ಆತನಿಗೆ ಹತ್ತುವದು. ಹಾಗೂ ಆತನು ತನ್ನ ನಿಜವಾದ ಲಾಭಕ್ಕೆ ಅಂತರನಾಗುವನು ॥೧೩೩೬॥

ಆದರೆ ಅರ್ಜುನಾ, ನಿನ್ನ ಸ್ವಸ್ಥವಾಗಿ ಕುಳಿತುಕೊಂಡ ಅಭಿಪ್ರಾಯವು, ನಿನಗೆ ಇನ್ನೊಂದು ಸಲ ಜ್ಞಾನವನ್ನು ಪೂರ್ಣವಾಗಿ ಹೇಳಬೇಕೆಂದು ಕಾಣಿಸುತ್ತದೆ ॥೧೩೩೭॥

ಆಗ ಪಾರ್ಥನು ಹೇಳಿದನು :- ಹೇ ಪ್ರಭೋ, ನೀವು ನನ್ನ ಮನದ ಇಂಗಿತವನ್ನು ನಿಜವಾಗಿಯೂ ತಿಳಿದುಕೊಂಡಿರಿ. ಇದನ್ನು ಏಕೆ ಹೇಳಿ ತೋರಿಸಬೇಕು? ಕಾರಣ ನಿಮ್ಮ ಹೊರತು ಬೇರೆ ತಿಳಿದವರು ಯಾರಿದ್ದಾರೆ? ॥೧೩೩೮॥

ನಿಮ್ಮ ಹೊರತಾಗಿ ಎಲ್ಲ ಜಗವು ನಿಮ್ಮ ಜ್ಞೇಯ (ತಿಳಿಯುವ ವಸ್ತು) ಇದ್ದು, ಅದನ್ನೆಲ್ಲ ತಿಳಿಯುವವರು, ನೀವೊಬ್ಬರೇ ಇರುವಿರಿ. ಅಂದಮೇಲೆ ಸೂರ್ಯನಿಗೆ ಸೂರ್ಯನೆಂದು ಏನು ವರ್ಣಿಸಬೇಕು? ॥೧೩೩೯॥

ಈ ಅರ್ಜುನನ ಮಾತುಗಳನ್ನು ಕೇಳಿ, ಶ್ರೀಕೃಷ್ಣನು ಹೇಳಿದನು:- ಈ ನಿನ್ನ ಮಾತಿನಿಂದ ನನ್ನ ವರ್ಣನೆಯು ಸ್ವಲ್ಪೇ ಆಯಿತೆಂದು ನೀನು ತಿಳಿದಿರುವಿಯಾ? ಇರಲಿ ॥೧೩೪೦॥

ಶ್ಲೋಕಾರ್ಥ :- ನನಗೆ ನೀನು ಪ್ರಿಯತಮನಾಗಿರುವುದರಿಂದ ನಿನ್ನ ಹಿತವನ್ನು ಬಯಸಿ, ರಹಸ್ಯಾತಿ ರಹಸ್ಯವಾದ ಮತ್ತೊಂದು ವಿಷಯವನ್ನು ಹೇಳುತ್ತೇನೆ, ಕೇಳು ॥೧೩೪೦॥

ಇನ್ನೊಂದು ಸಲ ಲಕ್ಷವನ್ನು ಉತ್ತಮವಾಗಿ ವಿಸ್ತೀರ್ಣ ಮಾಡಿ ನನ್ನ ನಿರ್ಮಲವಾದ ವಚನಗಳನ್ನು ಕೇಳು ॥೧೩೪೧॥

ಹೇ ವಾಚ್ಯ ಮ್ಹಣೌನಿ ಬೋಲಿಜೇ । ಕಾ ಶ್ರಾವ್ಯ ಮಗ ಆಯಿಕಿಜೇ । ತೈಸೇ ನವ್ಹೇ ಪರೀ ತುರ್ಝೇ । ಭಾಗ್ಯ ಬರವೇ ।।೧೩೪೨।। ಕೂರ್ಮೀಚಿಯಾ ಪಿಲಿಯಾ । ದಿಠೀ ಪಾನ್ಹಾ ಯೇ ಧನಂಜಯಾ । ಕಾ ಆಕಾಶ ವಾಹೇ ಬಾಪಿಯಾ । ಘರೀಂಚೇ ಪಾಣೀ ।।೧೩೪೩।। ಜೋ ವ್ಯವಹಾರು ಜೇಥ ನ ಘಡೇ । ತಯಾಚೇ ಫಳಚಿ ತೇಥ ಜೋಡೇ । ಕಾಯ ದೈವೇ ನ ಸಾಂಪಡೇ । ಸಾನುಕೂಳೇ? ।।೧೩೪೪।। ಯೇರ್ಹವೀ ದ್ವೈತಾಚೇ ವಾರೀ । ಸಾರೂನಿ ಐಕ್ಯಾಚ್ಯಾ ಪರಿವರೀ । ಭೋಗಿಜೇ ತೇ ಅವಧಾರೀ । ರಹಸ್ಯ ಹೇ ।।೧೩೪೫।। ಆಣಿ ನಿರುಪಚಾರಾ ಪ್ರೇಮಾ । ವಿಷಯ ಹೋಯ ಜೇ ಪ್ರಿಯೋತ್ತಮಾ । ತೇ ದುಜೇ ನವ್ಹೇ ಕೀ ಆತ್ಮಾ । ಐಸೇಂಚಿ ಜಾಣಾವೇ ।।೧೩೪೬।। ಆರಿಸಾಚಿಯಾ ದೇಖಿಲಿಯಾ । ಗೋಮಟೇ ಕೀಜೆ ಧನಂಜಯಾ । ತೇ ತಯಾ ನೋಹೇ ಆಪಣಯಾ । ಲಾಗೀ ಜೈಸೆ ।।೧೩೪೭।। ತೈಸೇ ಪಾರ್ಥಾ ತುರ್ಝೇನಿ ಮಿಷೇ । ಮೀ ಬೋಲೆ ಆಪಣಯಾಚಿ ಉದ್ದೇಶೇ । ಮಾರ್ಝ್ಯಾ ತುರ್ಝ್ಯಾ ಠಾಯೀ ಅಸೇ । ಮೀತೂಪಣ ಗಾ ? ।।೧೩೪೮।। ಮ್ಹಣೌನಿ ಜಿವ್ಹಾರೀಂಚೇ ಗುಜ । ಸಾಂಗತಸೇ ಜೇವಾಸೀ ತುಜ । ಹೇ ಅನನ್ಯಗತೀಚೇ ಮಜ । ಆಥೀ ವ್ಯಸನ ।।೧೩೪೯।। ಪೈ ಜಳಾ ಆಪಣಪೇ ದೇತಾ । ಲವಣ ಭುಲಲೇ ಪಂಡುಸುತಾ । ಕೀ ಆಘವೇ ತಯಾಚೇ ಹೋತಾ । ನ ಲಜೇಚಿ ತೇ ।।೧೩೫೦।। ತೈಸಾ ತೂ ಮಾರ್ಝ್ಯಾ ಠಾಈ । ರಾಖೋ ನೇಣಸೀಚಿ ಕಾಂಹೀ । ತರೀ ಆತಾ ತುಜ ಕಾಈ । ಗೋಪ್ಯ ಮೀ ಕರೂ ? ।।೧೩೫೧।। ಮ್ಹಣೌನಿ ಆಘವೀಂಚಿ ಗೂಢೇ । ಜೇ ಪಾಲೂನಿ ಅತಿ ಉಘಡೇ । ತೇ ಗೋಪ್ಯ ಮಾರ್ಝೇ ಚೋಖಡೇ । ವಾಕ್ಯ ಆಇಕ ।।೧೩೫೨।।

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ।।೬೫।।

ತರೀ ಬಾಹ್ಯ ಆಣಿ ಅಂತರಾ । ಆಪುಲಿಯಾ ಸರ್ವ ವ್ಯಾಪಾರಾ । ಮಜ ವ್ಯಾಪಕಾತೇ ವೀರಾ । ವಿಷಯೋ ಕರೀ।।೧೩೫೩।। ಆಘವಾ ಆಂಗೀ ಜೈಸಾ । ವಾಯು ಮಿಳೋನಿ ಆಹೇ ಆಕಾಶಾ । ತೂ ಸರ್ವ ಕರ್ಮೀ ತೈಸಾ । ಮಜಸೀಂಚಿ ಆಸ ।।೧೩೫೪।। ಕಿಂಬಹುನಾ ಆಪುಲೇ ಮನ । ಕರೀ ಮಾರ್ಝೇ ಏಕಾಯತನ । ಮಾರ್ಝೇನಿ ಶ್ರವಣೇ ಕಾನ । ಭರೂನಿ ಘಾಲೀ ।।೧೩೫೫।। ಆತ್ಮಜ್ಞಾನೇ ಚೋಖಡೀ । ಸಂತ ಜೇ ಮಾರ್ಝೀ ರೂಪಡೀ । ತೇಥ ದೃಷ್ಟೀ ಪಡೋ ಆವಡೀ । ಕಾಮಿನೀ ಜೈಸೀ ।।೧೩೫೬।।

ಈ ವಚನಗಳು ವಾಚ್ಯವೆಂದು ಹೇಳಬೇಕೋ, ಅಥವಾ ಶ್ರವ್ಯವೆಂದು ಕೇಳಬೇಕೋ, ಹೀಗೆ ಇರದೇ ಇದು ಕೇವಲ ಬ್ರಹ್ಮಸ್ವರೂಪವೇ ಇರುವುದು. ಆದರೆ ನೀನು ಭಾಗ್ಯವಂತ ನಿರುವುದರಿಂದ ನಿನಗಿದು ದೊರೆಯಿತು ।।೧೩೪೨।।

ಧನಂಜಯಾ, ಆಮೆಯ ದೃಷ್ಟಿಗೆ ಮರಿಗಳನ್ನು ಕಂಡಾಕ್ಷಣಕ್ಕೆ ದ್ರವ ಬಿಡುವುದು ಮತ್ತು ಅವು ತೃಪ್ತಿಯಾಗುವುವು, ಅಥವಾ ಆಕಾಶವು ಚಾತಕ ಪಕ್ಷಿಗಾಗಿಯೇ ಯಾವಾಗಲೂ ಹೊಟ್ಟೆಯಲ್ಲಿ ನೀರನ್ನು ಇಟ್ಟುಕೊಂಡಿದೆ ।।೧೩೪೩।।

ಆದ್ದರಿಂದ ಯಾವ ವ್ಯವಹಾರವು ಎಲ್ಲಿ ಆಗುವು ದಿಲ್ಲವೋ ಅಲ್ಲಿಯೇ ಅದರ ಫಲವು ಇರುವುದು. ಇದರ ಕಾರಣವೇನೆಂದು ಕೇಳಿದರೆ, ದೈವವು ಅನುಕೂಲವಾಗಿದ್ದರೆ ಯಾವ ಲಾಭವಾಗುವುದಿಲ್ಲ ।।೧೩೪೪।।

ಇನ್ನು ಈ ರಹಸ್ಯ ಎಷ್ಟು ದುರ್ಲಭವೆಂದು ಹೇಳಲು ಬರುವುದಿಲ್ಲ. ಕಾರಣ ದ್ವೈತದ ಭಾವವನ್ನು ಬಿಟ್ಟು ಐಕ್ಯದ ಮನೆಯಲ್ಲಿ ಭೋಗಿಸುವಂತಹ ರಹಸ್ಯವಾಗಿದೆ ।।೧೩೪೫।।

ಪ್ರಿಯೋತ್ತಮನೇ, ಉಪಚಾರರಹಿತವಾದ ನನ್ನ ಪ್ರೇಮಕ್ಕೆ ನೀನು ವಿಷಯವಾಗಿರುವಿ, ನೀನು ಬೇರೆ ಯಾರೂ ಇರದೇ ನನ್ನ ಆತ್ಮವೇ ಆಗಿರುವಿ, ಹೀಗೆ ತಿಳಿ ।।೧೩೪೬।।

ಧನಂಜಯಾ, ಕನ್ನಡಿಯನ್ನು ಮೇಲಿಂದ ಮೇಲೆ ಸ್ವಚ್ಛಗೊಳಿಸುವುದು ಅದು ಕನ್ನಡಿಗಾಗಿ ಇರದೇ ಸ್ವರೂಪ ಸೌಖ್ಯವನ್ನು ಭೋಗಿಸುವುದಕ್ಕಾಗಿ ಇರುವುದು ।।೧೩೪೭।।

ಅದರಂತೆ ಪಾರ್ಥಾ ಸುಮ್ಮನೇ ನಿನ್ನನ್ನು ನಿಮಿತ್ತ ಮಾಡಿ ನನಗಾಗಿಯೇ ಹೇಳುತ್ತಿರುವೆನು, ನಿನ್ನ ನನ್ನಲ್ಲಿ ಏನಾದರೂ ಭಿನ್ನವಿದೆಯೇ? ।।೧೩೪೮।।

ಅದಕ್ಕಾಗಿ ನಮ್ಮ ಪೂರ್ಣವಾದ ಜೀವದ ಗುಹ್ಯವನ್ನು ಜೀವರೂಪನಾದ ನಿನಗೆ ನಾನು ಹೇಳುವೆನು. ಕಾರಣ ಏಕನಿಷ್ಠ ಭಕ್ತನ ವ್ಯಸನವು ನನಗೆ ಹತ್ತಿರುವುದು ।।೧೩೪೯।।

ಹೇ ಪಂಡುಸುತನೇ, ಉಪ್ಪು ಯಾವ ಪ್ರಕಾರವಾಗಿ ನೀರಿಗೆ ತನ್ನ ಸರ್ವಸ್ವವನ್ನು ಕೊಡುವುದು ಮತ್ತು ಅದರ ಸ್ವರೂಪವಾಗಲು ನಾಚುವುದಿಲ್ಲ ।।೧೩೫೦।।

ಅದರಂತೆ ನೀನು ನನ್ನಲ್ಲಿ ಭೇದವನ್ನು ಇಡುತ್ತಿಲ್ಲ, ಅಂದಮೇಲೆ ನಾನಾದರೂ ನಿನ್ನಿಂದ ಗುಪ್ತವನ್ನು ಹೇಗೆ ಕದ್ದು ಇಡಲಿ? ।।೧೩೫೧।।

ಆದ್ದರಿಂದ ಇರುವ ಎಲ್ಲ ಗುಹ್ಯಗಳು, ಅವೆಲ್ಲವೂ ನಮ್ಮ ಗುಹ್ಯ ವಚನಗಳಲ್ಲಿ ಬಯಲಾಗುವುವು, ಈಗ ನನ್ನ ನಿರ್ಮಲವಾದ ಗುಹ್ಯ ವಚನವನ್ನು ಕೇಳು ।।೧೩೫೨।।

ಶ್ಲೋಕಾರ್ಥ :- ನನ್ನಲ್ಲಿ ಮನಸ್ಸಿಡು, ನನ್ನ ಭಕ್ತನಾಗು, ನನ್ನನ್ನು ಪೂಜಿಸು, ನನಗೆ ನಮಸ್ಕಾರ ಮಾಡು. ಪ್ರೇಮಾಸ್ಪದನಾದ ನಿನಗೆ ಪ್ರತಿಜ್ಞೆ ಮಾಡಿ ಹೇಳುತ್ತೇನೆ, ಸತ್ಯವಾಗಿ ನೀನು ನನ್ನನ್ನೇ ಹೊಂದುವೆ ।।೬೫।।

ಹೇ ವೀರನೇ, ನಿನ್ನ ಮಾನಸಿಕ ಹಾಗೂ ಶಾರೀರಿಕ ಹೀಗೆ ಯಾವ ಯಾವ ವ್ಯಾಪಾರಗಳಾಗುವುವೋ, ಅವುಗಳನ್ನು ನನ್ನ ಸರ್ವ ವ್ಯಾಪಕಕ್ಕೆ ವಿಷಯವನ್ನಾಗಿ ಮಾಡು ।।೧೩೫೩।।

ಗಾಳಿಯು ಎಲ್ಲ ಭಾಗದಿಂದಲೂ ಆಕಾಶವನ್ನು ಕೂಡಿ ರುವುದು. ಅದರಂತೆ ನೀನು ಮಾಡುವ ಕರ್ಮಗಳೆಲ್ಲವನ್ನೂ ನನ್ನ ಪ್ರಿತ್ಯರ್ಥಕ್ಕಾಗಿಯೇ ಮಾಡು ।।೧೩೫೪।।

ಹೆಚ್ಚಿಗೇನು ಹೇಳಬೇಕು ? ನೀನು ನಿನ್ನ ಮನಸ್ಸನ್ನು ನಾನಿರುವ ಸ್ಥಾನವನ್ನಾಗಿ ಮಾಡು, ಮತ್ತು ನೀನು ನಿನ್ನ ಕಿವಿಯಿಂದ ನನ್ನ ಗುಣಗಾನವನ್ನು ಶ್ರವಣ ಮಾಡು ।।೧೩೫೫।।

ಆತ್ಮಜ್ಞಾನದಿಂದ ಯುಕ್ತರಾದ ಸಂತರು ನನ್ನ ರೂಪವೇ ಆಗಿರುವರು, ಅವರಲ್ಲಿ ನಿನ್ನ ದೃಷ್ಟಿಯು ಕಾಮಿನಿಯ ಮೇಲೆ ಇರುವಂತೆ ಇರಲಿ ।।೧೩೫೬।।

ಮೀ ಸರ್ವ ವಸ್ತೀಚೇ ವಸೌಟೇ । ಮಾಝೀ ನಾಮೇ ಜಿಯೇ ಚೋಖಟೇ । ತಿಯೇ ಜಿಯಾವಯಾ ವಾಟೇ । ವಾಚೇಚಿಯೇ ಲಾವೀ ।।೧೩೫೭।। ಹಾತಾಂಚೇ ಕರಣೇ । ಕಾ ಪಾಯಾಂಚೇ ಚಾಲಣೇ । ತೇ ಹೋಯ ಮಜಕಾರಣೇ । ತೈಸೇ ಕರೀ ।।೧೩೫೮।। ಆಪುಲಾ ಅಥವಾ ಪರಾವಾ । ಠಾಯೀ ಉಪಕರಸೀ ಪಾಂಡವಾ । ತೇಣೇ ಯಜ್ಞೇ ಹೋಈ ಬರವಾ । ಯಾಜ್ಞಿಕು ಮಾಝಾ ।।೧೩೫೯।। ಹೇ ಏಕೈಕ ಶಿಕವೂ ಕಾಈ । ಪೈ ಸೇವಕೇ ಆಪುಲ್ಯಾ ಠಾಈ । ಉರೂನಿ ಯೇರ ಸರ್ವಹೀ । ಮೀ ಸೇವ್ಯಚಿ ಕರೀ ।।೧೩೬೦।। ತೇಥ ಜಾಊನಿಯಾ ಭೂತದ್ವೇಷು । ಸರ್ವತ್ರ ನಮವೈನ ಮೀಚಿ ಏಕು । ಐಸೇನಿ ಆಶ್ರಯೋ ಆತ್ಯಂತಿಕು । ಲಾಹಸೀ ತೂ ಮಾಝಾ ।।೧೩೬೧।। ಮಗ ಭರಲೇಯಾ ಜಗಾ ಆಂತು । ಜಾಊನಿ ತಿಜಯಾಚೀ ಮಾತು । ಹೋಊನಿ ಠಾಯೀಲ ಏಕಾಂತು । ಆಮ್ಹಾ ತುಮ್ಹಾ ।।೧೩೬೨।। ತೇವ್ಹಾ ಭಲತಿಯೇ ಆವಸ್ಥೇ । ಮೀ ತೂಂತೇ ತೂ ಮಾತೇ । ಭೋಗಿಸೀ ಐಸೇ ಆಇತೇ । ವಾಢೇಲ ಸುಖ ।।೧೩೬೩।। ಆಣಿ ತಿಜೇ ಆಡಳ ಕರಿತೇ । ನಿಮಾಲೇ ಅರ್ಜುನಾ ಜೇಥೇ । ತೇ ಮೀಚಿ ಮ್ಹಣೌನಿ ತೂ ಮಾತೇ । ಪಾವಸೀ ಶೇಖೀ ।।೧೩೬೪।। ಜೈಸೀ ಜಳೀಂಚೀ ಪ್ರತಿಭಾ । ಜಳನಾಶೀ ಬಿಂಬಾ । ಯೇತಾ ಗಾಭಾಗೋಭಾ । ಕಾಂಹೀ ಆಹೇ ? ।।೧೩೬೫।। ಪೈ ಪವನು ಅಂಬರಾ । ಕಾ ಕಲ್ಲೋಳು ಸಾಗರಾ । ಮಿಳತಾ ಆಡವಾರಾ । ಕೋಣಾಚಾ ಗಾ ? ।।೧೩೬೬।। ಮ್ಹಣೌನಿ ತೂ ಆಣಿ ಆಮ್ಹೀ । ಹೇ ದಿಸತಾಹೇ ದೇಹಧರ್ಮೀ । ಮಗ ಯಯಾಚ್ಯಾ ವಿರಾಮೀ । ಮೀಚಿ ಹೋಸೀ ।।೧೩೬೭।। ಯಯಾ ಬೋಲಾಮಾಝಾರೀ । ಹೋಯ ನವ್ಹೇ ಝಣೇ ಕರೀ । ಯೇಥ ಆನ ಆಥೀ ತರೀ । ತುಝೀಚಿ ಆಣ ।।೧೩೬೮।। ಪೈ ತುಝೀ ಆಣ ವಾಹಣೇ । ಹೇ ಆತ್ಮಲಿಂಗಾತೇ ಶಿವಣೇ । ಪ್ರೀತೀಚೀ ಜಾತಿ ಲಾಜಣೇ । ಆಠವೋ ನೇದೀ ।।೧೩೬೯।। ಯೇರ್ಹವೀ ವೇದ್ಯು ನಿಷ್ಪ್ರಪಂಚು । ಜೇಣೇ ವಿಶ್ವಾಭಾಸು ಹಾ ಸಾಚು । ಆಜ್ಞೇಚಾ ನಟನಾಚು । ಕಾಳಾತೇ ಜಿಣೇ ।।೧೩೭೦।। ತೋ ದೇವೋ ಮೀ ಸತ್ಯಸಂಕಲ್ಪು । ಆಣೀ ಜಗಾಚ್ಯಾ ಹಿತೀ ಬಾಪು । ಮಾ ಆಣೇಚಾ ಆಕ್ಷೇಪು । ಕಾ ಕರಾವಾ ? ।।೧೩೭೧।। ಪರೀ ಅರ್ಜುನಾ ತುಝೇನಿ ವೇಧೇ । ಮಿಯಾ ದೇವಪಣಾಚೀ ಬಿರುದೇ । ಸಾಂಡಿಲೀ ಗಾ ಮೀ ಹೇ ಆಧೇ । ಸಗಳೇನಿ ತುವಾ ।।೧೩೭೨।। ಪೈ ಕಾಜಾ ಆಪುಲಿಯಾ । ರಾವೋ ಆಪುಲೀ ಆಪಣಯಾ । ಆಣ ವಾಹೇ ಧನಂಜಯಾ । ತೈಸೇ ಹೇ ಕೀ ।।೧೩೭೩।।

ವಸ್ತು ಮಾತ್ರಗಳ ವಸತಿಸ್ಥಾನವಾದ ನಾನು, ಆ ನನ್ನ ನಿರ್ಮಲವಾದ ನಾಮುಗಳನ್ನು ಅಂತಃಕರಣದಿಂದ ನಿನ್ನ ವಾಣಿಯ ಮಾರ್ಗಕ್ಕೆ ಹಚ್ಚು ॥೧೩೫೭॥

ಕೈಯಿಂದ ಮಾಡುವುದೆಲ್ಲವನ್ನು ಅಥವಾ ಕಾಲಿನಿಂದ ನಡೆಯುವುದೆಲ್ಲವನ್ನೂ ಇತ್ಯಾದಿ ಎಲ್ಲ ಕ್ರಿಯೆಗಳು ನನಗಾಗಿಯೇ ಮಾಡು ॥೧೩೫೮॥

ನಿನಗೆ ಅಥವಾ ಇತರರಿಗೆ ಉಪಯೋಗವಾಗುವ ಯಾವ ಯಾವ ಕ್ರಿಯೆಗಳನ್ನು ಮಾಡುವಿಯೋ, ಪಾಂಡವನೇ, ನನ್ನಲ್ಲಿ ಅರ್ಪಿಸಿ ನನ್ನ ಯಾಜ್ಞಿಕನಾಗು ॥೧೩೫೯॥

ಈಗ ಒಂದೊಂದಾಗಿ ಹೀಗೆ ಎಷ್ಟೆಂದು ನಿನಗೆ ಕಲಿಸಲಿ? ನನ್ನಲ್ಲಿ ಸೇವಕಭಾವವನ್ನು ಇಟ್ಟು ಎಲ್ಲ ಕಡೆಯಲ್ಲಿಯೂ ನಿನಗೆ ದೃಷ್ಟಿಗೆ ಕಾಣುವುದೆಲ್ಲವನ್ನು ಮದ್ರೂಪವಾಗಿವೆ ಎಂದು ತಿಳಿದು ಅವುಗಳ ಸೇವೆಯನ್ನು ಮಾಡು ॥೧೩೬೦॥

ಆಗ ಪ್ರಾಣಿಮಾತ್ರರಲ್ಲಿ ದ್ವೈತಭಾವವು ಇಲ್ಲದಾಗಿ ಎಲ್ಲೆಲ್ಲಿಯೂ ನಾನೇ ಇರುವೆನೆಂಬ ಅನುಭವವು ಬಂದು ಎಲ್ಲವನ್ನು ನಮ್ರನಾಗಿ ವಂದಿಸು, ಇಷ್ಟರಿಂದ ನನ್ನ ಮಹತ್ವದ ಆಶ್ರಯವು ನಿನಗೆ ದೊರಕೀತು ॥೧೩೬೧॥

ಆಗ ಚರಾಚರ ಪದಾರ್ಥಗಳಿಂದ ತುಂಬಿದ ಈ ಜಗತ್ತಿನಲ್ಲಿ ನಿನ್ನ ನನ್ನ ಹೊರತಾಗಿ ಮೂರನೆಯ ಪದಾರ್ಥದ ಮಾತೇ ಇರದೆ, ನಿನಗೆ ಹಾಗೂ ನನಗೆ ಏಕಾಂತವಾಗಿರುವುದು ॥೧೩೬೨॥

ನಂತರ ಯಾವುದೇ ಸ್ಥಿತಿಯಲ್ಲಿ, ಯಾವುದೇ ವೇಳೆಯಲ್ಲಿ ನಿನಗೆ ನನ್ನ, ನನಗೆ ನಿನ್ನ ಏಕಾಂತ ಭೋಗವು ಲಭಿಸುವುದು. ಆದರಿಂದ ಅತ್ಯಂತ ಸುಖವು ಸಹಜವಾಗಿ ಬೆಳೆದೀತು ॥೧೩೬೩॥

ಮತ್ತು ಅರ್ಜುನಾ, ಮೂರನೆಯ ಜಗತ್ತಿನ ಭಾಸವು ಅಡ್ಡವಾಗಿ ಬಂದದ್ದನ್ನು ದೂರ ಮಾಡಿದಲ್ಲಿ ನೀನು ನನ್ನವನಾಗುವೆ, ಆದ್ದರಿಂದ ನನಗೆ ಪ್ರಾಪ್ತನಾಗುವೆ ॥೧೩೬೪॥

ನೀರಿನ ನಾಶವಾದ ಮೇಲೆ ನೀರಿನಲ್ಲಿಯ ಪ್ರತಿಬಿಂಬಕ್ಕೆ, ಮೂಲಬಿಂಬಕ್ಕೆ ಬಂದು ಕೂಡಲು ಏನಾದರೂ ಅಡ್ಡವಾಗುವುದೇ? ॥೧೩೬೫॥

ಅದರಂತೆಯೇ ಗಾಳಿಯು ಆಕಾಶವನ್ನು ಅಥವಾ ತೆರೆಗಳು ಸಮುದ್ರದಲ್ಲಿ ಕೂಡಲು ಯಾರ ಅಡಚಣೆ ಇರುವುದು ॥೧೩೬೬॥

ಆದ್ದರಿಂದ ದೇಹಭೇದದಿಂದ ನೀನು ಮತ್ತು ನಾನು ಎಂಬ ಭೇದವು ಕಾಣಿಸುವುದು. ಈ ಭೇದವು ಇಲ್ಲದಾಗಲು ನೀನು ಮದ್ರೂಪನಾಗುವೆ ॥೧೩೬೭॥

ಈ ನನ್ನ ಮಾತಿನಲ್ಲಿ ನಿಜವೋ, ಸುಳ್ಳೋ ಎಂದು ಅನುಮಾನ ಪಡಬೇಡ; ನಿನ್ನಾಣೆಯಾಗಿ ಹೇಳುವೆನು, ಇದರಲ್ಲಿ ಏನೂ ಭಿನ್ನತೆಯಿಲ್ಲ ॥೧೩೬೮॥

ನಿನ್ನಾಣೆ ಎನ್ನುವುದು ಎಂದರೆ ಕೇವಲ ನನ್ನ ಆತ್ಮಲಿಂಗಕ್ಕೆ ಕೈ ಹಚ್ಚಿದಂತೆಯೇ ಇದೆ. ಆದರೆ ಪ್ರೀತಿಯ ಜಾತಿಯು ಹೇಗಿದೆ ಎಂದರೆ ಅದಕ್ಕೆ ಯಾವ ನಾಚಿಕೆಯೂ ಇರುವುದಿಲ್ಲ ॥೧೩೬೯॥

ವೇದವು ನಿಷ್ಪ್ರಪಂಚವೆಂದು ಯಾವುದನ್ನು ವರ್ಣಿಸಿರುವುದು ಹಾಗೂ ಯಾವುದರ ಆಧಾರದಿಂದ ಈ ವಿಶ್ವಭಾಸವು ನಿಜವೆನಿಸುವುದು, ಅಲ್ಲದೇ ಯಾವುದರ ಆಜ್ಞೆಯ ಪ್ರತಾಪವು ಕಾಲನನ್ನು ಜಯಿಸಿರುವುದು ॥೧೩೭೦॥

ಅಂಥ ನಾನು ಸತ್ಯ ಸಂಕಲ್ಪ ದೇವನಿದ್ದು, ಜಗತ್ತಿನ ಕಲ್ಯಾಣ ಮಾಡುವ ತಂದೆಯಾಗಿರುವೆನು. ಅಂದಮೇಲೆ ಆಣೆಯನ್ನು ಮಾಡುವ ಆಗ್ರಹ ಏಕೆ ಮಾಡಿದೆನೆಂದರೆ ॥೧೩೭೧॥

ಅರ್ಜುನಾ, ನಾನು ನಿನಗೆ ಮರುಳಾಗಿ ನನ್ನ ದೇವತ್ವವನ್ನು ಬಿಟ್ಟು ಕೊಟ್ಟಿದ್ದೇನೆ, ನಿನ್ನ ಮೋಹದಿಂದ ನಾನು ಈಗ ಅರ್ಧನಾಗಿರುವೆ, ನೀನು ಮಾತ್ರ ಪೂರ್ಣನಾಗಿರುವೆ ॥೧೩೭೨॥

ಹೇ ಧನಂಜಯನೇ, ರಾಜನೂ ಸಹ ತನ್ನ ಕಾರ್ಯಕ್ಕಾಗಿ ಆಣೆಯನ್ನು ಮಾಡುವನು, ಅದೇ ಪ್ರಕಾರ ಇದಾಗಿರುವುದು ॥೧೩೭೩॥

ತೇಥ ಅರ್ಜುನು ಮ್ಹಣೇ ದೇವೇ । ಅಚಾಟ ಹೇ ನ ಬೋಲಾವೇ । ಜೇ ಆಮುಚೇ ಕಾಜ ನಾಂವೇ । ತುಝೇನಿ ಏಕೇ ॥೧೩೬೭॥ ಯಾವರೀ ಸಾಂಗೋ ಬೈಸಸೀ । ಕಾ ಸಾಂಗತಾ ಭಾಷಹೀ ದೇಸೀ । ಯಾ ತುಝಿಯಾ ವಿನೋದಾಸೀ । ಪಾರು ಆಹೇ ಜೀ ?॥೧೩೭೫॥ ಕಮಳವನಾ ವಿಕಾಶು । ಕರೀ ರವೀಚಾ ಏಕ ಅಂಶು । ತೇಥ ಆಘವಾಚಿ ಪ್ರಕಾಶು । ನಿತ್ಯ ದೇತೋ ॥೧೩೭೬॥ ಪೃಥ್ವೀ ನಿವಊನಿ ಸಾಗರ । ಭರೀಜತೀ ಯೇವಢೇ ಥೋರ । ವರ್ಷೇ ತೇಥ ಮಿಷಾಂತರ । ಚಾತಕು ಕೀ ॥೧೩೭೭॥ ಮ್ಹಣೌನಿ ಔದಾರ್ಯಾ ತುಝೇಯಾ । ಮಜ ನಿಮಿತ್ತ ನಾ ಮ್ಹಣಾವಯಾ । ಪ್ರಾಪ್ತಿ ಅಸೇ ದಾನೀರಾಯಾ । ಕೃಪಾನಿಧೀ ॥೧೩೭೮॥ ತಂವ ದೇವೋ ಮ್ಹಣತೀ ರಾಹೇ । ಯಾ ಬೋಲಾಚಾ ಪ್ರಾಸ್ತಾವೋ ನೋಹೇ । ಪೈ ಮಾತೇ ಪಾವಸೀ ಉಪಾಯೇ । ಸಾಚಚಿ ಯೇಣೇ ॥೧೩೭೯॥ ಸೈಂಧವ ಸಿಂಧೂ ಪಡಲಿಯಾ । ಜೋ ಕ್ಷಣು ಧನಂಜಯಾ । ತೇಣೇ ವಿರೇಚಿ ಕೀ ಉರಾವಯಾ । ಕಾರಣ ಕಾಯೀ ? ॥೧೩೮೦॥ ತೈಸೇ ಸರ್ವತ್ರ ಮಾತೇ ಭಜತಾ । ಸರ್ವ ಮೀ ಹೋತಾ ಅಹಂತಾ । ನಿಃಶೇಷ ಜಾಊನಿ ತತ್ತ್ವತಾ । ಮೀಚಿ ಹೋಸೀ ॥೧೩೮೧॥ ಏವಂ ಮಾಝಿಯೇ ಪ್ರಾಪ್ತೀವರೀ । ಕರ್ಮಾ ಲಾಗೋನಿ ಅವಧಾರೀ । ದಾವಿಲೀ ತುಜ ಉಜರೀ । ಉಪಾಯಾಂಚೀ ॥೧೩೮೨॥ ಜೇ ಆಧೀ ತಂವ ಪಂಡುಸುತಾ । ಸರ್ವ ಕರ್ಮೇ ಮಜ ಅರ್ಪಿತಾ । ಸರ್ವತ್ರ ಪ್ರಸನ್ನತಾ । ಲಾಹಿಜೇ ಮಾಝೀ ॥೧೩೮೩॥ ಪಾಠೀ ಮಾಝ್ಯಾ ಇಯೇ ಪ್ರಸಾದೀ । ಮಾಝೇ ಜ್ಞಾನ ಜಾಯ ಸಿದ್ಧೀ । ತೇಣೇ ಮಿಸಳಿಜೇ ತ್ರಿಶುದ್ಧೀ । ಸ್ವರೂಪೀ ಮಾಝ್ಯಾ ॥೧೩೮೪॥ ಮಗ ಪಾರ್ಥಾ ತಿಯೇ ಠಾಯೀ । ಸಾಧ್ಯ ಸಾಧನ ಹೋಯ ನಾಹೀ । ಕಿಂಬಹುನಾ ತುಜ ಕಾಂಹೀ । ಉರೇಚಿ ನಾ ॥೧೩೮೫॥ ತರೀ ಸರ್ವ ಕರ್ಮೇ ಆಪುಲೀ । ತುವಾ ಸರ್ವದಾ ಮಜ ಅರ್ಪಿಲೀ । ತೇಣೇ ಪ್ರಸನ್ನತಾ ಲಾಧಲೀ । ಆಜಿ ಹೇ ಮಾಝೀ ॥೧೩೮೬॥ ಮ್ಹಣೌನಿ ಯೇಣೇ ಪ್ರಸಾದ ಬಳೇ । ನವ್ಹೇ ಝುಂಜಾಚೇನಿ ಆಡಳೇ । ನ ಠಾಕೇಚಿ ಏಕವೇಳೇ । ಭಾಳಲೋ ತುಜ ॥೧೩೮೭॥ ಜೇಣೇ ಸಪ್ರಪಂಚ ಅಜ್ಞಾನ ಜಾಯೇ । ಏಕು ಮೀ ಗೋಚರು ಹೋಯೇ । ತೇ ಉಪಪತ್ತೀಚೇನಿ ಉಪಾಯೇ । ಗೀತಾರೂಪ ಹೇ ॥೧೩೮೮॥ ಮಿಯಾ ಜ್ಞಾನ ತುಜ ಆಪುಲೇ । ನಾನಾಪರೀ ಉಪದೇಶಿಲೇ । ಯೇಣೇ ಅಜ್ಞಾನಜಾತ ಸಾಂಡಿವಿಯಾಲೇ । ಧರ್ಮಾ ಧರ್ಮ ಜೇ ॥೧೩೮೯॥

ಆಗ ಅರ್ಜುನನು ಹೇಳಿದನು :- ದೇವಾ ಈ ಮಹತ್ತರವಾದ ಮಾತುಗಳ ಪ್ರಯೋಜವಿಲ್ಲ. ಕೇವಲ ನಿಮ್ಮ ನಾಮಸ್ಮರಣೆಯಿಂದಲೇ ನಮ್ಮ ಎಲ್ಲ ಕಾರ್ಯಗಳು ಸಿದ್ಧಿಗೊಳ್ಳುವುವು ।।೧೩೭೪।।

ಹೀಗಿರುವಾಗ ಮೇಲಾಗಿ ನಿಮ್ಮ ಸಂಗತಿ ಮತ್ತು ಅದರಲ್ಲಿ ಆಣೆಯನ್ನು ಮಾಡುವುದು, ಈ ನಿಮ್ಮ ವಿನೋದಕ್ಕೆ ಏನಾದರೂ ಅಂತವಿದೆಯೇ ? ।।೧೩೭೫।।

ಕಮಲ ವನಕ್ಕೆ ಸೂರ್ಯನ ಸ್ವಲ್ಪ ಪ್ರಕಾಶವಾದರೂ ಅದು ಒಮ್ಮೆಲೆ ಅರಳುವುದು. ಆದರೆ ಸೂರ್ಯನು ತನ್ನ ಉದಾರತನದಿಂದ ನಿತ್ಯವೂ ಎಲ್ಲ ಪ್ರಕಾಶವನ್ನು ಕೊಡುವನು ।।೧೩೭೬।।

ಚಾತಕದ ನಿಮಿತ್ತ ಆಗುವ ಮಳೆಯಿಂದ ಪೃಥ್ವಿಯು ಜಲಮಯವಾಗಿ, ಸಮುದ್ರಕ್ಕೂ ಪ್ರವಾಹವೂ ಬರುವುದು, ಇಷ್ಟೊಂದು ಔದಾರ್ಯದ ಸಾಮರ್ಥ್ಯವಿದೆ ।।೧೩೭೭।।

ಆದ್ದರಿಂದ ಕೃಪಾನಿಧಿಯೇ, ನಿಮ್ಮ ಔದಾರ್ಯಕ್ಕೆ ಇತಿಮಿತಿ ಇಲ್ಲ. ನನಗೆ ನಿಮಿತ್ತ ಮಾತ್ರ ಮಾಡಿ ಜಗದೋದ್ಧಾರಕ್ಕಾಗಿ ನೀವು ಇಷ್ಟೊಂದು ಜ್ಞಾನವನ್ನು ಹೇಳಿರುವಿರಿ ।।೧೩೭೮।।

ಆಗ ದೇವನು ಹೇಳಿದನು, ಈಗ ನನ್ನ ಸ್ತುತಿ ಸಾಕು ಮಾಡು. ಆದರೆ ನಿನಗೆ ನಾನು ಹೇಳಿದ ಉಪಾಯದಿಂದ ನಿಜವಾಗಿಯೂ ನೀನು ಮದ್ರೂಪನಾಗುವೆ ।।೧೩೭೯।।

ಹೇ ಧನಂಜಯನೇ, ಉಪ್ಪು ಸಮುದ್ರದಲ್ಲಿ ಬಿದ್ದಾಗ ಪ್ರತಿಕ್ಷಣಕ್ಕೂ ಕರಗುತ್ತ ಹೋಗುವುದು, ಅದು ಕರಗದೇ ಉಳಿಯಲು ಏನಾದರೂ ಕಾರಣವಿದೆಯೇ ? ।।೧೩೮೦।।

ಅದರಂತೆ ಸರ್ವ ಪ್ರಕಾರದಿಂದ ಸರ್ವತ್ರ ನನ್ನ ಭಜನೆಯನ್ನು ಮಾಡುತ್ತ ಸರ್ವತ್ರವೂ ನಾನೇ ಇರುವೆ ಎಂದು ನಿನ್ನ ಬುದ್ಧಿಯಾಯಿತೆಂದರೆ ಅಹಂಕಾರವು ಇಲ್ಲದಾಗಿ ನೀನು ಮದ್ರೂಪನಾಗುವೆ ।।೧೩೮೧।।

ಈ ಪ್ರಕಾರದಿಂದ ಕರ್ಮಗಳಿಂದ ಆಗುವ ಜ್ಞಾನದಲ್ಲಿ ನನ್ನ ಪ್ರಾಪ್ತಿಯಾಗುವವರೆಗೂ, ಉಪಾಯಗಳ ಪ್ರಕಾರಗಳನ್ನು ಸ್ಪಷ್ಟವಾಗಿ ನಿನಗೆ ಹೇಳಿರುವೆನು ।।೧೩೮೨।।

ಹೇ ಪಂಡುಸುತನೇ, ಮೊದಲು ಎಲ್ಲ ಕರ್ಮಗಳನ್ನು ಈಶ್ವರಾರ್ಪಣ ಮಾಡಬೇಕು, ಅಂದರೆ ಎಲ್ಲ ಸ್ಥಾನಗಳಲ್ಲಿಯೂ ನನ್ನ ಪ್ರಸನ್ನತೆಯು ಪ್ರಾಪ್ತವಾಗುವುದು ।।೧೩೮೩।।

ಆಗ ನನ್ನ ಪ್ರಸಾದದಿಂದ ನನ್ನ ಜ್ಞಾನವು ಆತನಿಗೆ ಪ್ರಾಪ್ತವಾಗಿ ನನ್ನ ಜ್ಞಾನದಿಂದ ನನ್ನ ಶುದ್ಧರೂಪದಲ್ಲಿ ಆತನು ತ್ರಿವಾರ ಸತ್ಯವಾಗಿ ಕೂಡಿಕೊಳ್ಳುವನು ।।೧೩೮೪।।

ಆಗ ಪಾರ್ಥಾ, ನನ್ನ ಸ್ವರೂಪದಲ್ಲಿ ಕೂಡಿದ ನಂತರ ಸಾಧ್ಯ ಸಾಧನೆಗಳು ಲಯಗೊಳ್ಳುವುವು. ಹೀಗಾದ ಮೇಲೆ ನಿನಗೆ ಏನೂ ಮಾಡುವುದು ಉಳಿಯುವುದಿಲ್ಲ ।।೧೩೮೫।।

ನೀನು ಯಾವಾಗಲೂ ಎಲ್ಲ ಕರ್ಮಗಳನ್ನು ನನಗೆ ಅರ್ಪಿಸಿರುವುದರಿಂದ ನನ್ನ ಪ್ರಸನ್ನತೆಯು ಇಂದು ನಿನಗೆ ಲಭಿಸಿದೆ ।।೧೩೮೬।।

ಆದ್ದರಿಂದ ಈ ಪ್ರಸನ್ನತೆಯ ಬಲದಿಂದ ಯುದ್ಧದ ಅಡಚಣೆ ಪ್ರಸಂಗವನ್ನು ಲೆಕ್ಕಿಸದೇ ನಾನು ನಿನಗೆ ಒಮ್ಮೆಲೆ ಸ್ವಾಧೀನನಾದೆ ।।೧೩೮೭।।

ಗೀತೆ ಎಂಬ ಹೆಸರಿನಿಂದ ದೃಷ್ಟಾಂತ ಯುಕ್ತಿಗಳಿಂದ ನಿನಗೆ ಹೇಳಿದ ಜ್ಞಾನದಿಂದ ಪ್ರಪಂಚ ಭೇದ ಸಹ ಅಜ್ಞಾನವು ಇಲ್ಲದಾಗಿ ನಾನು ಏಕತ್ವದಿಂದ ನಿನಗೆ ಪ್ರಾಪ್ತನಾದೆನು ।।೧೩೮೮।।

ನಿನಗೆ ನಾನು ನನ್ನ ಜ್ಞಾನವನ್ನು ನಾನಾ ಪ್ರಕಾರವಾಗಿ ಹೇಳಿದ್ದು, ಆ ಜ್ಞಾನದಿಂದ ಧರ್ಮಾಧರ್ಮಗಳ ಸಂಜ್ಞೆಯ ಅಜ್ಞಾನ ಜಾತವು ಇಲ್ಲದಾಗುವುದು ।।೧೩೮೯।।

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ।
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ।೬೬॥

ಆಶಾ ಜೈಶೀ ದುಃಖಾತೇ । ವ್ಯಾಲೀ ನಿಂದಾ ದುರಿತೇ । ಹೇ ಅಸೋ ಜೈಸೇ ದೈನ್ಯಾತೇ । ದುರ್ಭಗತ್ವ ।೧೩೯೦॥ ತೈಸೇ ಸ್ವರ್ಗನರಕಸೂಚಕ । ಅಜ್ಞಾನ ವ್ಯಾಲೇ ಧರ್ಮಾದಿಕ । ತೇ ಸಾಂಡೂನಿ ಘಾಲೀ ಅಶೇಖ । ಜ್ಞಾನೇ ಯೇಣೇ ।೧೩೯೧॥ ಹಾತೀ ಘೇಊನಿ ತೋ ದೋರು । ಸಾಂಡಿಜೇ ಜೈಸಾ ಸರ್ಪಾಕಾರು । ಕಾ ನಿದ್ರಾ ತ್ಯಾಗೇ ಘರಾಚಾರು । ಸ್ವಪ್ನೀಂಚಾ ಜೈಸಾ ।೧೩೯೨॥ ನಾನಾ ಸಾಂಡಿಲೇನಿ ಕವಳೇ । ಚಂದ್ರೀಂಚೇ ಧುಯೇ ಪಿಂವಳೇ । ವ್ಯಾಧಿತ್ಯಾಗೇ ಕಡುವಾಳೇ । ಪಣ ಮುಖಾಚೇ ।೧೩೯೩॥ ಅಗಾ ದಿವಸಾ ಪಾಠೀ ದೇಊನೀ । ಮೃಗಜಳ ಘಾಪೇ ತ್ಯಜುನೀ । ಕಾ ಕಾಷ್ಠತ್ಯಾಗೇ ವನ್ಹೀ । ತ್ಯಜಿಜೇ ಜೈಸಾ ।೧೩೯೪॥ ತೈಸೇ ಧರ್ಮಾಧರ್ಮಾಚೇ ಟವಾಳ । ದಾವೀ ಅಜ್ಞಾನ ಜೇ ಕಾ ಮೂಳ । ತೇ ತ್ಯಜೂನಿ ತ್ಯಜೀ ಸಕಳ । ಧರ್ಮಜಾತ ।೧೩೯೫॥ ಮಗ ಅಜ್ಞಾನ ನಿಮಾಲಿಯಾ । ಮೀಚಿ ಏಕು ಅಸೇ ಅಪೈಸಯಾ । ಸನಿದ್ರ ಸ್ವಪ್ನ ಗೇಲಯಾ । ಆಪಣಪೇ ಜೈಸೇ ।೧೩೯೬॥ ತೈಸಾ ಮೀ ಏಕವಾಂಚೂನಿ ಕಾಂಹೀ । ಮಗ ಭಿನ್ನಾಭಿನ್ನ ಆನ ನಾಹೀ । ಸೋಽಹಂ ಬೋಧೇ ತಯಾಚ್ಯಾ ಠಾಯೀ । ಅನನ್ಯ ಹೋಯ ।೧೩೯೭॥ ಪೈ ಆಪಲೇನಿ ಭೇದೇವಿಣ । ಮಾರ್ಝೇ ಜಾಣಿಜೇ ಜೇ ಏಕಪಣ । ತಯಾಚಿ ನಾಂವ ಶರಣ । ಮಜ ಯೇಣೇ ಗಾ ।೧೩೯೮॥ ಜೈಸೇ ಘಟಾಚೇನಿ ನಾಶೇ । ಗಗನೀ ಗಗನ ಪ್ರವೇಶೇ । ಮಜ ಶರಣ ಯೇಣೇ ತೈಸೇ । ಐಕ್ಯ ಕರೀ ।೧೩೯೯॥ ಸುವರ್ಣಮಣಿ ಸೋನಯಾ । ಯೇ ಕಲ್ಲೋಳು ಜೈಸಾ ಪಾಣಿಯಾ । ತೈಸಾ ಮಜ ಧನಂಜಯಾ । ಶರಣ ಯೇ ತೂ ।೧೪೦೦॥ ವಾಂಚೂನಿ ಸಾಗರಾಚ್ಯಾ ಪೋಟೀ । ವಡವಾನಳು ಶರಣು ಆಲಾ ಕಿರೀಟೀ । ಜಾಳೂನಿ ಠಾಕೇ ತಯಾ ಗೋಠೀ । ವಾಳೂನಿ ದೇ ಪಾ।೧೪೦೧॥ ಮಜಹೀ ಶರಣ ರಿಘಿಜೇ । ಆಣಿ ಜೀವತ್ವೇಂಚಿ ಅಸಿಜೇ । ಧಿಗ್ ಬೋಲೀ ಯಿಯಾ ನ ಲಜೇ । ಪ್ರಜ್ಞಾ ಕೇವೀ ।೧೪೦೨॥ ಅಗಾ ಪ್ರಾಕೃತಾಹೀ ರಾಯಾ । ಆಂಗೀ ಪಡೇ ಜೇ ಧನಂಜಯಾ । ತೇ ದಾಸಿರೂಂಹೀ ಕೀ ತಯಾ । ಸಮಾನ ಹೋಯ ।೧೪೦೩॥ ಮಾ ಮೀ ವಿಶ್ವೇಶ್ವರು ಭೇಟೇ । ಆಣಿ ಜೀವಗ್ರಂಥೀ ನ ಸುಟೇ । ಹೇ ಬೋಲ ನಕೋ ವೋಖಟೇ । ಕಾನೀ ಲಾಊ ।೧೪೦೪॥

ಶ್ಲೋಕಾರ್ಥ :- ಸರ್ವಧರ್ಮಗಳನ್ನೂ ತ್ಯಜಿಸಿ ನನ್ನೊಬ್ಬನನ್ನೇ ಶರಣು ಹೊಂದು. ನಿನ್ನನ್ನು ಎಲ್ಲಾ ಪಾಪಗಳಿಂದ ಉದ್ಧಾರ ಮಾಡುತ್ತೇನೆ, ದುಃಖಿಸಬೇಡ ||೬೬||

ಆಶೆಯಿಂದ ಎಲ್ಲಾ ದುಃಖಗಳು ಪ್ರಾಪ್ತವಾಗುವುವು, ನಿಂದೆಯಿಂದ ಎಲ್ಲ ಪಾಪಗಳು ಹುಟ್ಟುವುವು, ಹಾಗೂ ದುರ್ದೈವದಿಂದ ದಾರಿದ್ರ್ಯವು ಪ್ರಾಪ್ತವಾಗುವುದು ||೧೩೯೦||

ಅದರಂತೆ ಸ್ವರ್ಗ ನರಕಗಳು ಅಜ್ಞಾನದ ಧರ್ಮಾಧರ್ಮಗಳಿಂದ ಪ್ರಾಪ್ತವಾಗುವುವು. ಆ ಅಜ್ಞಾನವನ್ನು ಈ ಜ್ಞಾನದಿಂದ ಸಮೂಲವಾಗಿ ನಾಶ ಮಾಡು ||೧೩೯೧||

ಕೈಯಲ್ಲಿ ಹಗ್ಗವನ್ನು ಹಿಡಿದಾಗ ಆದ ಸರ್ಪಭಾಸವು ಇಲ್ಲದಾಗುವುದು, ಅಥವಾ ನಿದ್ದೆ ಮುಗಿದ ಮೇಲೆ ಸ್ವಪ್ನದ ಮನೆ ಮಾರು ಪ್ರಪಂಚವು ಇಲ್ಲದಾಗುವುದು ||೧೩೯೨||

ಅಥವಾ ಕಾಮಣೆರೋಗವು ಇಲ್ಲದಾಗಲು ಚಂದ್ರನು ಹಳದಿಯಾಗಿ ಕಾಣುವುದಿಲ್ಲ, ಅಥವಾ ರೋಗವು ದೂರಾದ ಮೇಲೆ ಬಾಯಿಗೆ ವಿಷವಾಗುವುದು ಹೋಗುವುದು ||೧೩೯೩||

ಅರೇ, ಹಗಲು ಮುಗಿದ ಮೇಲೆ ಮೃಗಜಲವು ತಾನೇ ಇಲ್ಲದಾಗುವುದು. ಅಥವಾ ಕಟ್ಟಿಗೆಗಳ ತ್ಯಾಗ ಮಾಡಿದಾಗ ಅಗ್ನಿಯ ತ್ಯಾಗವಾಗುವುದು ||೧೩೯೪||

ಅದರಂತೆ ಧರ್ಮಾಧರ್ಮಗಳನ್ನು ಭಾಸಗೊಳಿಸುವ ಅಜ್ಞಾನವನ್ನು ಬಿಡುವುದರಿಂದ ಎಲ್ಲ ಧರ್ಮಗಳು ತಮಷ್ಟಕ್ಕೆ ತಾನೇ ಹೋಗುವುವು ||೧೩೯೫||

ಆಗ ಆ ಅಜ್ಞಾನವು ಇಲ್ಲದಾಗಲು ನಾನೊಬ್ಬನೇ ಸಹಜವಾಗಿ ಉಳಿಯುವೆನು. ನಿದ್ರೆ, ಸ್ವಪ್ನಗಳು ಎರಡೂ ಹೋದಾಗ ಮನುಷ್ಯನು ತಾನೊಬ್ಬನೇ ಉಳಿಯುವನು ||೧೩೯೬||

ಅದರಂತೆ ನನ್ನ ಹೊರತಾಗಿ ಆತನಿಗೆ ಭಿನ್ನಾಭಿನ್ನ ಬೇರೆ ಯಾವ ಭಾವವೂ ಉಳಿಯುವುದಿಲ್ಲ, ಆಗ ಆತನು ನಾನೇ ಇರುವೆ ಎಂಬ ಬುದ್ಧಿಯಿಂದ ನನ್ನ ಸ್ವರೂಪದಲ್ಲಿ ಐಕ್ಯನಾಗುವನು ||೧೩೯೭||

ನನ್ನದೆಂಬ ಭೇದವನ್ನು ಇಡದೇ ನನ್ನ ಏಕತ್ವವನ್ನು ತಿಳಿಯುವುದು, ಅದಕ್ಕೇನೇ ಶರಣು ಬಂದನು ಎಂದು ಹೇಳಬೇಕು ||೧೩೯೮||

ಘಟೋಪಾದಿಯಿಂದ ಘಟಾಕಾಶವು ಬೇರೆಯಾಗಿ ಕಾಣುವುದು, ಘಟವು ನಾಶವಾದಾಗ ಮಹದಾಕಾಶದಲ್ಲಿ ಐಕ್ಯವಾಗುವುದು. ಅದರಂತೆ ನೀನು ನನಗೆ ಶರಣು ಬರುವುದರಿಂದ ನನ್ನ ಹಾಗೂ ನಿನ್ನ ಐಕ್ಯವಾಗುವುದು ||೧೩೯೯||

ಬಂಗಾರದ ಮಣಿಯು ಬಂಗಾರದಲ್ಲಿ ಐಕ್ಯವಾಗಿರುವುದು, ಅಥವಾ ನೀರಿನ ತೆರೆಗಳು ನೀರಿನಲ್ಲಿ ಐಕ್ಯವಾಗಿರುವುವು. ಅದರಂತೆ ಧನಂಜಯನೇ, ನೀನು ನನಗೆ ಐಕ್ಯತ್ವದಿಂದ ಶರಣು ಬಾ ||೧೪೦೦||

ಇದನ್ನು ಬಿಟ್ಟು, ವಡವಾನಳವು ಸಮುದ್ರಕ್ಕೆ ಶರಣು ಹೋಗಿಯೂ ಅದರ ನಾಶ ಮಾಡುವುದು. ಅದರಂತೆ ನನಗೆ ಶರಣು ಬಂದು ನನ್ನಲ್ಲಿ ದ್ವೈತಭಾವದಿಂದ ನಡೆಯುವ ವಿರುದ್ಧ ಮಾರ್ಗ ಬಿಡು ||೧೪೦೧||

ನನಗೆ ಶರಣು ಬಂದು ಜೀವಭಾವದಿಂದ ಬೇರೆಯಾಗಿರುವೆ ಎಂದು ಹೇಳಲು ಆತನ ಬುದ್ಧಿಗೆ ಹೇಗೆ ನಾಚಿಕೆಯಾಗುವುದಿಲ್ಲ ? ||೧೪೦೨||

ಧನಂಜಯಾ, ರಾಜನೊಡನೆ ಇದ್ದ ಯಕಃಶ್ಚಿತ್ತ ದಾಸಿಯ ಸಂಬಂಧ ಆತನಲ್ಲಿ ಆದರೆ ಆಕೆಯು ಆತನ ಸಮಾನಳಾಗುವಳು ||೧೪೦೩||

ಅಂದಮೇಲೆ ವಿಶ್ವದ ಈಶ್ವರನಾದ ನನ್ನ ಭೇಟಿಯಾದ ಮೇಲೆ ಜೀವದಶೆಯ ಬಂಧನವು ಬಿಡುವುದಿಲ್ಲ ಎಂಬ ಹೊಲಸು ಮಾತನ್ನು ಕಿವಿಯಿಂದ ಕೇಳಲೂ ಬೇಡ ||೧೪೦೪||

ಮ್ಹಣೌನಿ ಮೀ ಹೋಊನಿ ಮಾತೇ । ಸೇವಣೇ ಆಹೇ ಆಯಿತೇ । ತೇ ಕರೀ ಹಾತಾ ಯೇತೇ । ಜ್ಞಾನೇ ಯೇಣೇ ॥೧೪೦೫॥ ಮಗ ತಾಕೌನಿಯಾ ಕಾಢಿಲೇ । ಲೋಣೇ ಮಾಗೌತೇ ತಾಕೀ ಘಾತಲೇ । ಪರೀ ನ ಘೇಪೇಚಿ ಕಾಂಹೀ ಕೇಲೇ । ತೇಣೇ ಜೇವೀ ॥೧೪೦೬॥ ತೈಸೇ ಅದ್ವಯತ್ವೇ ಮಜ । ಶರಣ ರಿಘಾಲಿಯಾ ತುಜ । ಧರ್ಮಾಧರ್ಮ ಹೇ ಸಹಜ । ಲಾಗತೀಲ ನಾ ॥೧೪೦೭॥ ಲೋಹ ಉಭೇ ಖಾಯಮಾತೀ । ತೇ ಪರಿಸಾಚಿಯೇ ಸಂಗತೀ । ಸೋನೇ ಜಾಲಯಾ ಪುಢತೀ । ನ ಶಿವಿಜೇ ಮಳೇ ॥೧೪೦೮॥ ಹೇ ಅಸೋ ಕಾಷ್ಠಾ ಪಾಸೋನಿ । ಮಂಥೂನಿ ಘೇತಲಿಯಾ ವನ್ಹೀ । ಮಗ ಕಾಷ್ಠೇಂಹೀ ಕೋಂಡೋನೀ । ನ ಠಕೇ ಜೈಸಾ ॥೧೪೦೯॥ ಅರ್ಜುನಾ ಕಾಯ ದಿನಕರು । ದೇಖತ ಆಹೇ ಅಂಧಾರು । ಕೀ ಪ್ರಬೋಧೀ ಹೋಯ ಗೋಚರು । ಸ್ವಪ್ನಭ್ರಮು ॥೧೪೧೦॥ ತೈಸೇ ಮಜಸೀ ಏಕವಟಲೇಯಾ । ಮೀ ಸರ್ವರೂಪ ವಾಂಚೂನಿಯಾ । ಆನಕಾಂಹೀ ಉರಾವಯಾ । ಕಾರಣ ಅಸೇ ? ॥೧೪೧೧॥ ಮ್ಹಣೌನಿ ತಯಾಚೇ ಕಾಂಹೀ । ಚಿಂತೀನಾ ಆಪುಲ್ಯಾ ಠಾಯೀ । ತುಝೇ ಪಾಪ ಪುಣ್ಯ ಪಾಹೀ । ಮೀಚಿ ಹೋಈನ ॥೧೪೧೨॥ ತೇಥ ಸರ್ವಬಂಧಲಕ್ಷಣೇ । ಪಾಪೇ ಉರಾವೇ ದುಜೇಪಣೇ । ತೇ ಮಾಝ್ಯಾ ಬೋಧೀ ವಾಯಾಣೇ । ಹೋಊನಿ ಜಾಈಲ ॥೧೪೧೩॥ ಜಳೀ ಪಡಿಲಿಯಾ ಲವಣಾ । ಸರ್ವಹೀ ಜಳ ಹೋಯ ವಿಚಕ್ಷಣಾ । ತುಜ ಮೀಅನನ್ಯ ಶರಣಾ । ಹೋಈನ ತೈಸಾ ॥೧೪೧೪॥ ಯೇತುಲೇನಿ ಆಪೈಸಯಾ । ಸುಟಲಾಚಿ ಆಹಾಸೀ ಧನಂಜಯಾ । ಘೇಈ ಮಜ ಪ್ರಕಾಶೋನಿಯಾ । ಸೋಡವೀನ ತೂತೇ ॥೧೪೧೫॥ ಯಾಕಾರಣೇ ಪುಢತೀ । ಹೇ ಆಧೀ ನ ವಾಹೇ ಚಿತ್ತೀ । ಮಜ ಏಕಾಸಿ ಯೇ ಸುಮತೀ । ಜಾಣೋನಿ ಶರಣ ॥೧೪೧೬॥ ಐಸೇ ಸರ್ವರೂಪರೂಪಸೇ । ಸರ್ವ ದೃಷ್ಟೀ ಡೋಳಸೇ । ಸರ್ವದೇಶನಿವಾಸೇ । ಬೋಲಿಲೇ ಶ್ರೀಕೃಷ್ಣೇ ॥೧೪೧೭॥ ಮಗ ಸಾಂವಳಾ ಸಕಂಕಣು । ಬಾಹು ಪಸರೋನಿ ದಕ್ಷಿಣು । ಆಲಿಂಗಿಲಾ ಸ್ವಶರಣು । ಭಕ್ತರಾಜು ತೋ ॥೧೪೧೮॥ ನ ಪವತಾ ಜಯಾತೇ । ಕಾಖೇ ಸೂನಿ ಬುದ್ಧೀತೇ । ಬೋಲಣೇ ಮಾಗೌತೇ । ವೋಸರಲೇ ॥೧೪೧೯॥ ಐಸೇ ಜೇ ಕಾಂಹೀ ಏಕ । ಬೋಲಾ ಬುದ್ಧೀಸಿಹೀ ಅಟಕ । ತೇ ದ್ಯಾವಯಾ ಮಿಖ । ಖೇವಾಚೇ ಕೇಲೇ ॥೧೪೨೦॥ ಹೃದಯಾ ಹೃದಯ ಏಕ ಜಾಲೇ । ಯೇ ಹೃದಯೀಂಚೇ ತೇ ಹೃದಯೀ ಘಾತಲೇ । ದ್ವೈತ ನ ಮೋಡಿತಾ ಕೇಲೇ । ಆಪಣಾಐಸೇ ಅರ್ಜುನಾ ॥೧೪೨೧॥

ಅದಕ್ಕಾಗಿ ನಾನಾಗಿ, ಆಮೇಲೆ ನನ್ನ ಭಕ್ತಿಯನ್ನು ಸಹಜವಾಗಿ ಆಗುವಂತಹ ಭಕ್ತಿಯನ್ನು ಈ ಜ್ಞಾನದಿಂದ ಪ್ರಾಪ್ತಮಾಡಿಕೊ ।।೧೪೦೫।।

ಮಂಥಿಸಿ ಮಜ್ಜಿಗೆಯಿಂದ ಬೆಣ್ಣೆಯನ್ನು ಬೇರೆ ತೆಗೆದಾಗ ಪುನಃ ಅದನ್ನು ಮಜ್ಜಿಗೆಯಲ್ಲಿ ಹಾಕಲು ಅದು ಏನು ಮಾಡಿದರೂ ಅದರಲ್ಲಿ ಒಂದಾಗುವುದಿಲ್ಲ ।।೧೪೦೬।।

ಅದರಂತೆ ಅದ್ವಿತೀಯ ಬೋಧದಿಂದ ನೀನು ನನಗೆ ಶರಣು ಬಂದಾಗ ನಿನಗೆ ಧರ್ಮಾಧರ್ಮದ ಸ್ಪರ್ಶವಾಗಲಾರದು ।।೧೪೦೭।।

ಕಬ್ಬಿಣವು ಮಣ್ಣಿನಲ್ಲಿದ್ದಾಗ ಮಣ್ಣು ಅದನ್ನು ತಿನ್ನುವುದು, ಆದರೆ ಅದೇ ಕಬ್ಬಿಣವು ಪರಿಸಮಣಿಯಿಂದ ಬಂಗಾರವಾಗಲು ಅದಕ್ಕೆ ಮಣ್ಣಿನ ಉಪದ್ರವ ಆಗುವುದೇ ಇಲ್ಲ ।।೧೪೦೮।।

ಇದು ಇರಲಿ, ಕಟ್ಟಿಗೆಯಿಂದ ಮಂಥಿಸಿ ಹುಟ್ಟಿದ ಅಗ್ನಿಯನ್ನು ಪುನಃ ಕಟ್ಟಿಗೆಯ ಪೆಟ್ಟಿಗೆಯಲ್ಲಿ ಮುಚ್ಚಿಡಲು ಬರುವುದಿಲ್ಲ ।।೧೪೦೯।।

ಅರ್ಜುನಾ, ಸೂರ್ಯನು ಕತ್ತಲೆಯನ್ನು ನೋಡಬಹುದೇ ? ಅಥವಾ ಎಚ್ಚರಾದ ಮೇಲೆ ಸ್ವಪ್ನವು ದೃಷ್ಟಿಗೆ ಗೋಚರಿಸುವುದೇ ? ।।೧೪೧೦।।

ಅದರಂತೆ ನನ್ನಲ್ಲಿ ಐಕ್ಯವನ್ನು ಹೊಂದಿದಾಗ ನನ್ನ ಸ್ವರೂಪದ ಹೊರತಾಗಿ ಬೇರೆಯಾವುದಾದರೂ ಉಳಿಯಲು ಕಾರಣವಿದೆಯೇ ? ।।೧೪೧೧।।

ಅದಕ್ಕಾಗಿ ಪಾಪ, ಪುಣ್ಯದ, ಧರ್ಮಾಧರ್ಮದ ಚಿಂತೆಯನ್ನು ಮಾಡಬೇಡ. ನಿನ್ನ ಪಾಪ, ಪುಣ್ಯ ನಾನೇ ಆಗುವೆನು. ತಿಳಿದುಕೊಂಡೆಯಾ ? ।।೧೪೧೨।।

ಯಾವತ್ತು ಬಂಧನಕ್ಕೆ ಕಾರಣವಾದಪಾಪದ ಲಕ್ಷಣವೇನೆಂದರೆ, ನನ್ನಿಂದ ಭಿನ್ನವಾಗಿರುವುದು. ಈ ಪಾಪವು ನನ್ನ ಜ್ಞಾನದಿಂದ ನಾಶವಾಗುವುದು ।।೧೪೧೩।।

ಹೇ ವಿಚಕ್ಷಣನೇ, ನೀರಿನಲ್ಲಿ ಉಪ್ಪು ಬಿದ್ದಾಗ ತಾನು ಇಲ್ಲದಂತಾಗಿ ಎಲ್ಲವೂ ಜಲರೂಪವಾಗುವುದು. ಅದರಂತೆ ನೀನು ಅನನ್ಯಭಾವದಿಂದ ನನಗೆ ಶರಣು ಬಂದರೆ ಮದ್ರೂಪನಾಗುವೆ ।।೧೪೧೪।।

ಧನಂಜಯಾ, ಇದರಿಂದ ನೀನು ಸಹಜವಾಗಿ ಎಲ್ಲ ಬಂಧನಗಳಿಂದ ಬಿಡುಗಡೆಯಾಗುವೆ. ಅದಕ್ಕಾಗಿ ನನ್ನನ್ನು ಅರಿತು ನೀನು ನನ್ನ ಪ್ರಾಪ್ತಿಮಾಡಿಕೊಂಡರೆ ಎಲ್ಲ ಬಂಧನಗಳಿಂದ ನಿನಗೆ ಮುಕ್ತ ಮಾಡುವೆ ।।೧೪೧೫।।

ಆದ್ದರಿಂದ ಸುಮತಿಯೇ, ಧರ್ಮಾಧರ್ಮದ ಚಿಂತೆಯನ್ನು ಮನದಲ್ಲಿಟ್ಟುಕೊಳ್ಳಬೇಡ. ಅದ್ವಿತೀಯನಾದ ನನಗೆ ಮಾತ್ರ ತಿಳಿದು ಶರಣು ಬಂದರೆ ಎಲ್ಲದೂ ಮುಗಿಯುವುದು ।।೧೪೧೬।।

ಈ ಪ್ರಕಾರವಾಗಿ ಎಲ್ಲ ರೂಪದ ರೂಪನು, ಎಲ್ಲ ದೃಷ್ಟಿಯ, ಹಾಗೂ ಎಲ್ಲ ದೇಶಗಳ ವಸತಿ ಸ್ಥಾನನಾದ ಶ್ರೀಕೃಷ್ಣನು ಹೇಳಿದನು ।।೧೪೧೭।।

ತದನಂತರ ಶ್ಯಾಮಸುಂದರನು ತನ್ನ ಬಲಗೈಯನ್ನು ಮುಂದೆ ಮಾಡಿ ತನಗೆ ಶರಣು ಬಂದಿರುವ ಭಕ್ತರಾಜ ಅರ್ಜುನನಿಗೆ ಆಲಿಂಗನವನ್ನು ಕೊಟ್ಟನು ।।೧೪೧೮।।

ಆ ಸ್ವರೂಪಕ್ಕೆ ಪ್ರಾಪ್ತನಾಗದೇ ಶಬ್ದ ಹಾಗೂ ಬುದ್ಧಿ ಇವುಗಳಿಗೆ ಹಿಂದಕ್ಕೆ ಜಗ್ಗಿ ಮಾತನಾಡುವುದು ಹಿಂದಕ್ಕೆ ಸರಿಯಿತು ।।೧೪೧೯।।

ಹೀಗೆ ಬುದ್ಧಿಗೂ, ಶಬ್ದಕ್ಕೂ ನಿಲುಕದ ಸ್ವರೂಪವನ್ನು ಕೊಡುವುದಕ್ಕಾಗಿ ದೇವನು ಆಲಿಂಗದ ನಿಮಿತ್ತವನ್ನು ಮಾಡಿಕೊಂಡನು ।।೧೪೨೦।।

ಅರ್ಜುನನ ಮತ್ತು ತನ್ನ ಹೃದಯಗಳನ್ನು ದೇವನು ಕೂಡಿಸಿ ತನ್ನ ಹೃದಯದ ಜ್ಞಾನವನ್ನು ಆತನ ಹೃದಯದಲ್ಲಿ ಹಾಕಿದನು ಮತ್ತು ದೇವ ಭಕ್ತನ ದ್ವೈತವನ್ನು ಮುರಿಯದೇ ಅರ್ಜುನನಿಗೆ ಆತ್ಮರೂಪನನ್ನಾಗಿ ಮಾಡಿದನು ।।೧೪೨೧।।

ದೀಪೇ ದೀಪು ಲಾವಿಲಾ । ತೈಸಾ ಪರಿಷ್ವಂಗು ತೋ ಜಾಲಾ । ದ್ವೈತ ನ ಮೋಡಿತಾ ಕೇಲಾ । ಆಪಣಪೇ ಪಾರ್ಥು ॥೧೪೨೨॥ ತೇವ್ಹಾ ಸುಖಾಚಾ ಮಗ ತಯಾ । ಪೂರು ಆಲಾ ಜೋ ಧನಂಜಯಾ । ತೇಥ ವಾಡು ತರ್ಹೀ ಬುಡೋನಿಯಾ । ಠೇಲಾ ದೇವೋ ॥೧೪೨೩॥ ಸಿಂಧು ಸಿಂಧೂತೇ ಪಾವೋ ಜಾಯೇ । ತೇ ಪಾವಣೇ ಠಾಕೇ ದುಣಾ ಹೋಯೇ । ವರೀ ರಿಗೇ ಪುರವಣಿಯೇ । ಆಕಾಶಹೀ ॥೧೪೨೪॥ ತೈಸೇ ತಯಾ ದೋಘಾಂಚೇ ಮಿಳಣೇ । ದೋಘಾ ನಾವರೇ ಜಾಣಾವೇ ಕವಣೇ । ಕಿಂಬಹುನಾ ಶ್ರೀನಾರಾಯಣೇ । ವಿಶ್ವ ಕೋಂದಲೇ ॥೧೪೨೫॥ ಏವಂ ವೇದಾಚೇ ಮೂಳಸೂತ್ರ । ಸರ್ವಾಧಿಕಾರೈಕಪವಿತ್ರ । ಶ್ರೀಕೃಷ್ಣೇ ಗೀತಾಶಾಸ್ತ್ರ । ಪ್ರಕಟ ಕೇಲೇ ॥೧೪೨೬॥ ಯೇಥ ಗೀತಾ ಮೂಳ ವೇದಾ । ಐಸೇ ಕೇವೀ ಪಾ ಆಲೇ ಬೋಧಾ । ಹೇ ಮ್ಹಣಾಲ ತರೀ ಪ್ರಸಿದ್ಧಾ । ಉಪಪತ್ತಿ ಸಾಂಗೋ ॥೧೪೨೭॥ ತರೀ ಜಯಾಚ್ಯಾ ನಿಃಶ್ವಾಸೀ । ಜನ್ಮ ಝಾಲೇ ವೇದರಾಸೀ । ತೋ ಸತ್ಯಪ್ರತಿಜ್ಞ ಐಸೀ । ಬೋಲಿಲಾ ಸ್ವಮುಖೇ ॥೧೪೨೮॥ ಮ್ಹಣೌನಿ ವೇದಾ ಮೂಳಭೂತ । ಗೀತಾ ಮ್ಹಣೋ ಹೇ ಹೋಯ ಉಚಿತ । ಆಣಿಕಹೀ ಏಕೀ ಯೇಥ । ಉಪಪತ್ತಿ ಅಸೇ ॥೧೪೨೯॥ ಜೇ ನ ನಶತು ಸ್ವರೂಪೇ । ಜಯಾಚಾ ವಿಸ್ತಾರು ಜೇಥ ಲಪೇ । ತೇ ತಯಾಚೇ ಮ್ಹಣಿಪೇ । ಬೀಜ ಜಗೀ ॥೧೪೩೦॥ ತರೀ ಕಾಂಡತ್ರಯಾತ್ಮಕು । ಶಬ್ದರಾಶೀ ಅಶೇಖು । ಗೀತೇಮಾಜೀ ಅಸೇ ರುಖು । ಬೀಜೀ ಜೈಸಾ ॥೧೪೩೧॥ ಮ್ಹಣೌನಿ ವೇದಾಂಚೇ ಬೀಜ । ಶ್ರೀಗೀತಾ ಹೋಯ ಹೇ ಮಜ । ಗಮೇ ಆಣಿ ಸಹಜ । ದಿಸತಹೀ ಆಹೇ ॥೧೪೩೨॥ ಜೇ ವೇದಾಂಚೇ ತಿನ್ಹೀ ಭಾಗ । ಗೀತೇ ಉಮಟಲೇ ಅಸತೀ ಚಾಂಗ । ಭೂಷಣರತ್ನೀ ಸರ್ವಾಂಗ । ಶೋಭಲೇ ಜೈಸೇ ॥೧೪೩೩॥ ತಿಯೇಂಚಿ ಕರ್ಮಾದಿಕೇ ತೀನ್ಹೀ । ಕಾಂಡೇ ಕೋಣಕೋಣೇ ಸ್ಥಾನೀ । ಗೀತೇ ಆಹಾತಿ ತೇ ನಯನೀ । ದಾಖಊ ಆಈಕ ॥೧೪೩೪॥ ತರೀ ಪಹಿಲಾ ಜೋ ಅಧ್ಯಾವೋ । ತೋ ಶಾಸ್ತ್ರಪ್ರವೃತ್ತಿಪ್ರಸ್ತಾವೋ । ದ್ವಿತೀಯೀ ಸಾಂಖ್ಯ ಸದ್ಭಾವೋ । ಪ್ರಕಾಶಿಲಾ ॥೧೪೩೫॥ ಮೋಕ್ಷದಾನೀ ಸ್ವತಂತ್ರ । ಜ್ಞಾನಪ್ರಧಾನ ಹೇ ಶಾಸ್ತ್ರ । ಯೇತುಲಾಲೇ ದುಜೀ ಸೂತ್ರ । ಉಭಾರಿಲೇ ॥೧೪೩೬॥ ಮಗ ಅಜ್ಞಾನೇ ಬಾಂಧಲೇಯಾ । ಮೋಕ್ಷ ಪದೀ ಬೈಸಾವಯಾ । ಸಾಧನಾರಂಭು ತೋ ತೃತೀಯಾ । ಧ್ಯಾಯೀ ಬೋಲಿಲಾ ॥೧೪೩೭॥ ಜೇ ದೇಹಾಭಿಮಾನ ಬಂಧೇ । ಸಾಂಡೂನಿ ಕಾಮ್ಯನಿಷಿದ್ಧೇ । ವಿಹಿತ ಪರೀ ಅಪ್ರಮಾದೇ । ಅನುಷ್ಠಾವೇ ॥೧೪೩೮॥

ಒಂದು ದೀಪದಿಂದ ಇನ್ನೊಂದು ದೀಪವನ್ನು ಹಚ್ಚಿದಾಗ ದ್ವೈತವು ಸ್ಥಿರವಾಗಿ ಉಳಿದು ಐಕ್ಯವು ಮುರಿಯುವುದಿಲ್ಲ. ಅದರಂತೆ ದ್ವೈತವನ್ನು ಮುರಿಯದೇ ಪಾರ್ಥನಿಗೆ ತನ್ನಂತೆ ಮಾಡಿದನು ॥೧೪೨೨॥

ಆಗ ಅರ್ಜುನನಿಗೆ ಉಕ್ಕೇರಿದ ಆನಂದದ ಸುಖದಲ್ಲಿ ಸರ್ವವ್ಯಾಪಕನಾದ ಪರಮಾತ್ಮನು ಸಹ ಮುಳುಗಿ ಹೋದನು ॥೧೪೨೩॥

ಸಮುದ್ರಕ್ಕೆ ಸಮುದ್ರವು ಕೂಡಲು ನೀರು ದುಪ್ಪಟ್ಟು ಬೆಳೆದು ಅದರ ಸಹಾಯಕ್ಕೆ ಆಕಾಶವನ್ನು ತೆಗೆದುಕೊಳ್ಳ ಬೇಕಾಗುವುದು ॥೧೪೨೪॥

ಅದರಂತೆ ಕೃಷ್ಣಾರ್ಜುನರ ಆಲಿಂಗನದ ಪ್ರೇಮವು ಇಬ್ಬರಿಗೂ ಆವರಿಸದಂತಾಯಿತು. ಇದು ಯಾರು ತಿಳಿದಾರು? ಹೆಚ್ಚಿಗೇನು ಹೇಳಬೇಕು ? ವಿಶ್ವವೆಲ್ಲ ನಾರಾಯಣ ಸ್ವರೂಪವಾಯಿತು !! ॥೧೪೨೫॥

ಈ ಪ್ರಕಾರವಾಗಿ ವೇದದ ಮೂಲಸೂತ್ರವಾಗಿರುವ ಮತ್ತು ಶ್ರವಣ ಪಠಣದ ಸರ್ವರಿಗೂ ಅಧಿಕಾರವಿರುವ ಇಂಥ ಪವಿತ್ರವಾದ ಗೀತಾಶಾಸ್ತ್ರವನ್ನು ಶ್ರೀಕೃಷ್ಣನು ಪ್ರಕಟಿಸಿದನು ॥೧೪೨೬॥

ಇಲ್ಲಿ ಗೀತಾಶಾಸ್ತ್ರವು ವೇದದ ಮೂಲವಾಗಿದೆ ಎಂದು ನಿಮ್ಮ ಬೋಧೆಗೆ ಹೇಗೆ ಬಂದಿತು ಎಂದು ಕೇಳಿದರೆ, ಅದರ ಯೋಗ್ಯ ಕಾರಣಗಳನ್ನು ಹೇಳುತ್ತೇನೆ ॥೧೪೨೭॥

ಯಾವ ಈಶ್ವರನ ಶ್ವಾಸೋಚ್ಛ್ವಾಸದಿಂದ ವೇದವು ಹುಟ್ಟಿತೋ, ಆ ಸತ್ಯ ಪ್ರತಿಜ್ಞ ಈಶ್ವರನು ಸ್ವಮುಖದಿಂದ ಪ್ರತಿಜ್ಞೆ ಪೂರ್ವಕವಾಗಿ ಗೀತಾಶಾಸ್ತ್ರವನ್ನು ಹೇಳಿದನು ॥೧೪೨೮॥

ಈ ಕಾರಣದಿಂದ ಗೀತಾಶಾಸ್ತ್ರವು ವೇದದ ಮೂಲವಿರುವುದೆಂದು ಹೇಳಲು ಯೋಗ್ಯವಾಗಿದೆ. ಹಾಗೂ ಇದರ ವಿಷಯಕ್ಕೆ ಇನ್ನೊಂದು ಕಾರಣವಿದೆ ॥೧೪೨೯॥

ಯಾವುದು ವೃಕ್ಷರೂಪದಿಂದ ಇರದೇ ಅದರ ವಿಸ್ತಾರವು ಎಲ್ಲಿ ಅಂತರ್ಗತವಿರುವುದೋ, ಅದು ಆ ವೃಕ್ಷದ ಬೀಜವೆಂದು ಜಗವು ಹೇಳುವುದು ॥೧೪೩೦॥

ಯಾವ ಪ್ರಕಾರವಾಗಿ ಗಿಡವು ಬೀಜದಲ್ಲಿ ಗುಪ್ತರೂಪವಾಗಿ ಇರುವಂತೆ, ತ್ರಿಕಾಂಡವೇದವು (ಕರ್ಮ ಉಪಾಸನಾ ಹಾಗೂ ಜ್ಞಾನ) ಗೀತೆಯಲ್ಲಿ ಗುಪ್ತ ರೂಪವಾಗಿ ಇದೆ ॥೧೪೩೧॥

ಆದ್ದರಿಂದ ವೇದದ ಬೀಜವು ಗೀತೆಯಾಗಿದೆ ಎಂದು ನನ್ನ ಅನಿಸಿಕೆಯಾಗಿರುವುದು, ಅಲ್ಲದೇ ಅದು ಸ್ಪಷ್ಟವಾಗಿಯೇ ತೋರುತ್ತಿರುವುದು ॥೧೪೩೨॥

ಶರೀರವು ರತ್ನಗಳಿಂದ ಸುಶೋಭಿತವಾಗಿ ಕಾಣಿಸುವುದು. ಅದರಂತೆ ವೇದದ ಮೂರು ಕಾಂಡಗಳು ಗೀತೆಯಲ್ಲಿ ಸ್ಪಷ್ಟವಾಗಿ ತೋರುವುವು ॥೧೪೩೩॥

ಆ ವೇದದ ಮೂರು ಕಾಂಡಗಳನ್ನು ಗೀತೆಯಲ್ಲಿ ಯಾವ ಯಾವ ಸ್ಥಳದಲ್ಲಿ ವರ್ಣಿಸಿರುವುದು ಎಂಬುದು ಕಣ್ಣಿಗೆ ಕಾಣಿಸುವಂತೆ ತೋರಿಸುವೆನು, ಕೇಳಿರಿ ॥೧೪೩೪॥

ಮೊದಲನೆಯ ಅಧ್ಯಾಯವು ಎಂದು ಹಾಗೂ ಏಕೆ ಪ್ರವೃತ್ತವಾಯಿತೆಂಬುದರ ಪ್ರಸ್ತಾವನೆಗಾಗಿ ಇರುವುದು. ಎರಡನೆಯ ಅಧ್ಯಾಯದಲ್ಲಿ ಸಾಂಖ್ಯ (ಜ್ಞಾನ) ವಿಚಾರವನ್ನು ಪ್ರಕಟಿಸಿರುವುದು ॥೧೪೩೫॥

ಯಾವ ಜ್ಞಾನ ಮೋಕ್ಷ ಪ್ರಾಪ್ತಿ ಮಾಡಿಕೊಡಲು ಬೇರೆ ಅಂದರೆ ಕರ್ಮಾದಿಕರ ಅಪೇಕ್ಷೆ ಮಾಡದೇ ಮಾಡದ ಸ್ವತಂತ್ರವಾಗಿರುವುದು. ಇಷ್ಟೇ ವಿಷಯಕ್ಕೆ ಎರಡನೆಯ ಅಧ್ಯಾಯದಲ್ಲಿ ಸೂತ್ರರೂಪದಲ್ಲಿ ಆರಂಭಿಸಿದೆ ॥೧೪೩೬॥

ನಂತರ ಸ್ವರೂಪ ಅಜ್ಞಾನದಿಂದ ಬಂಧನದಲ್ಲಿ ಬಿದ್ದಿರುವ ಪುರುಷನಿಗೆ ಮೋಕ್ಷ ಪದದ ಮೇಲೆ ಕೂಡ್ರಿಸಲು ಧರ್ಮರೂಪ ಸಾಧನೆಗಳ ಆರಂಭ ಉಪಾಯಗಳ ವಿಸ್ತಾರವನ್ನು ಮೂರನೆಯ ಅಧ್ಯಾಯದಲ್ಲಿ ಹೇಳಿದೆ ॥೧೪೩೭॥

ಯಾರು ದೇಹಾಭಿಮಾನದಿಂದ ಬದ್ಧರಾಗಿರುವರೋ, ಅವರು ನಿಷಿದ್ಧ ಹಾಗೂ ಕಾಮ್ಯ ಕರ್ಮಗಳನ್ನು ಬಿಟ್ಟು ವಿಹಿತ ಕರ್ಮಗಳನ್ನು ನಿರಾಭಿಮಾನ ಬುದ್ಧಿಯಿಂದ ಮಾಡಬೇಕು ॥೧೪೩೮॥

ಐಸೇನಿ ಸದ್ಭಾವೇ ಕರ್ಮ ಕರಾವೇ । ಹಾ ತಿಜಾ ಅಧ್ಯಾವೋ ಜೋ ದೇವೇ । ನಿರ್ಣಯ ಕೇಲಾ ತೇ ಜಾಣಾವೇ । ಕರ್ಮಕಾಂಡ ಯೇಥ ।।೧೪೩೯।। ಆಣಿ ತೇಂಚಿ ನಿತ್ಯಾದಿಕ । ಅಜ್ಞಾನಾಚೇ ಆವಶ್ಯಕ । ಆಚರತಾ ಮೋಚಕ । ಕೇವೀ ಹೋಯ ಪಾ ।।೧೪೪೦।। ಐಸಿಸೇ ಅಪೇಕ್ಷಾ ಜಾಲಿಯಾ । ಬದ್ಧ ಮುಮುಕ್ಷು ತೇ ಆಲಿಯಾ । ದೇವೇ ಬ್ರಹ್ಮಾರ್ಪಣತ್ವೇ ಕ್ರಿಯಾ । ಸಾಂಗಿತಲೀ ।।೧೪೪೧।। ಜೇ ದೇಹವಾಚಾಮಾನಸೇ । ವಿಹಿತ ನಿಪಜೇ ಜೇ ಜೈಸೇ । ತೇ ಏಕ ಈಶ್ವರೋದ್ದೇಶೇ । ಕೀಜೇ ಮ್ಹಣಿತಲೇ ।।೧೪೪೨।। ಹೇಂಚಿ ಈಶ್ವರೀ ಕರ್ಮಯೋಗೇ । ಭಜನಕಥನಾಚೇಖಾಗೇ । ಆದರಿಲೇ ಶೇಷಭಾಗೇ । ಚತುರ್ಥಾಚೇನಿ ।।೧೪೪೩।। ತೇ ವಿಶ್ವರೂಪ ಅಕರಾವಾ । ಅಧ್ಯಾವೋ ಸಂಪೇ ಜಂವ ಆಘವಾ । ತಂವ ಕರ್ಮೇ ಈಶು ಭಜಾವಾ । ಹೇ ಜೇ ಬೋಲಿಲೇ ।।೧೪೪೪।। ತೇ ಅಷ್ಟಾಧ್ಯಾಯೀ ಉಘಡ । ಜಾಣ ಯೇಥೇ ದೇವತಾ ಕಾಂಡ । ಶಾಸ್ತ್ರ ಸಾಂಗತಸೇ ಆಡ । ಮೋಡೂನಿ ಬೋಲೇ ।।೧೪೪೫।। ಆಣಿ ತೇಣೇಂಚಿ ಈಶಪ್ರಸಾದೇ । ಶ್ರೀಗುರುಸಂಪ್ರದಾಯಲಬ್ಧೇ । ಸಾಚ ಜ್ಞಾನ ಉದ್ಬೋಧೇ । ಕೋವಳೇ ಜೇ ।।೧೪೪೬।। ತೇ ಅದ್ವೇಷ್ಟಾದಿಪ್ರಭೃತಿಕೀ । ಅಥವಾ ಅಮಾನಿತ್ವಾದಿಕೀ । ವಾಢವಿಜೇ ಮ್ಹಣೌನಿ ಲೇಖೀ । ಬಾರಾವಾ ಗಣೂ ।।೧೪೪೭।। ತೋ ಬಾರಾವಾ ಅಧ್ಯಾಯ ಆದೀ । ಆಣಿ ಪಂಧರಾವಾ ಅವಧೀ । ಜ್ಞಾನಫಳಪಾಕ ಸಿದ್ಧೀ । ನಿರೂಪಣಾಸೀ ।।೧೪೪೮।। ಮ್ಹಣೌನಿ ಚಹೂಂಹೀ ಇಹೀ । ಊರ್ಧ್ವಮೂಳಾಂತೀ ಅಧ್ಯಾಯೀ । ಜ್ಞಾನಕಾಂಡ ಯೇ ಠಾಯೀ । ನಿರೂಪಿಜೇ ।।೧೪೪೯।। ಏವಂ ಕಾಂಡತ್ರಯ ನಿರೂಪಣೀ । ಶ್ರುತೀಚಿ ಹೇ ಕೋಡಿಸವಾಣೀ । ಗೀತಾಪದ್ಯ ರತ್ನಾಂಚೀ ಲೇಣೀ । ಲೇಯಿಲೀ ಆಹೇ ।।೧೪೫೦।। ಹೇ ಅಸೋ ಕಾಂಡತ್ರಯಾತ್ಮಕ । ಶ್ರುತಿ ಮೋಕ್ಷರೂಪ ಫಳ ಏಕ । ಬೋಭಾವೇ ಜೇ ಆವಶ್ಯಕ । ಠಾಕಾವೇ ಮ್ಹಣೌನಿ ।।೧೪೫೧।। ತಯಾಚೇನಿ ಸಾಧನ ಜ್ಞಾನೇಸೀ । ವೈರ ಕರೀ ಜೋ ಪ್ರತಿದಿವಶೀ । ತೋ ಅಜ್ಞಾನವರ್ಗ ಷೋಡಶೀ । ಪ್ರತಿಪಾದಿಜೇ ।।೧೪೫೨।। ತೋಚಿ ಶಾಸ್ತ್ರಾಚಾ ಬೋಳಾವಾ । ಘೇವೋನಿ ವೈರೀ ಜಿಣಾವಾ । ಹಾ ನಿರೋಪು ತೋ ಸತರಾವಾ । ಅಧ್ಯಾಯ ಯೇಥ ।।೧೪೫೩।। ಐಸಾ ಪ್ರಥಮಾಲಾಗೋನೀ । ಸತರಾವಾ ಲಾಣೀ ಕರೂನೀ । ಆತ್ಮನಿಶ್ವಾಸ ವಿವರೂನೀ । ದಾವಿಲಾ ದೇವೇ ।।೧೪೫೪।। ತಯಾ ಅರ್ಥಜಾತಾ ಅಶೇಷಾ । ಕೇಲಾ ತಾತ್ಪರ್ಯಾಚಾ ಆವಾಂಕಾ । ತೋ ಹಾ ಅಠರಾವಾ ದೇಖಾ । ಕಲಶಧ್ಯಾಯೋ ।।೧೪೫೫।।

ಈ ರೀತಿಯಲ್ಲಿ ಸದ್ಭಾವದಿಂದ ಕರ್ಮದ ಆಚರಣೆಯನ್ನು ಮಾಡಬೇಕು ಎಂದು ದೇವನು ಮೂರನೆಯ ಅಧ್ಯಾಯದಲ್ಲಿ ನಿರ್ಣಯಿಸಿರುವುದರಿಂದ ಈ ಅಧ್ಯಾಯಕ್ಕೆ ಕರ್ಮಕಾಂಡವೆಂದು ಹೇಳಬೇಕು ।೧೪೩೯॥

ಯಾವ ನಿತ್ಯ ನೈಮಿತ್ತಿಕ ಕರ್ಮಗಳ ಆಚರಣೆಗಳನ್ನು ಮಾಡಿದಾಗ ಅಜ್ಞಾನದ ನಾಶವು ಹೇಗಾದೀತು ।೧೪೪೦॥

ಈ ಅಪೇಕ್ಷೆಯನ್ನು ಮಾಡಿ ಬದ್ಧನು ಮುಮುಕ್ಷತ್ವದ ಪಾವುಟಿಗೆಗೆ ಬಂದನು. ಆದರೆ ಆತನಿಗಾಗಿ ಅದೇ ಎಲ್ಲ ಕರ್ಮಗಳನ್ನು ಬ್ರಹ್ಮಾರ್ಪಣ ಬುದ್ಧಿಯಿಂದ ಮಾಡಬೇಕೆಂದು ದೇವನು ಹೇಳಿದನು ।೧೪೪೧॥

ಕಾಯಿಕ, ವಾಚಿಕ ಹಾಗೂ ಮಾನಸಿಕವಾಗಿ ಮಾಡುವ ಎಲ್ಲ ವಿಹಿತ ಕರ್ಮಗಳನ್ನು ಈಶ್ವರ ಪ್ರಸನ್ನತೆಗಾಗಿ ಮಾಡಿ ಈಶ್ವರಾರ್ಪಣೆಯನ್ನು ಮಾಡಬೇಕೆಂದು ಹೇಳಿದೆ ।೧೪೪೨॥

ಈಶ್ವರನಲ್ಲಿ ಕರ್ಮಯೋಗದ ಭಜನೆ, ಕಥನವನ್ನು ಮಾಡುವ ಪ್ರಕಾರಗಳನ್ನು ನಾಲ್ಕನೆಯ ಅಧ್ಯಾಯದ ಕೊನೆಗೆ ಹೇಳಲು ಆರಂಭವನ್ನು ಮಾಡಲಾಗಿದೆ ।೧೪೪೩॥

ಈ ಪ್ರಕಾರಗಳನ್ನು ಹನ್ನೊಂದನೆಯ ಅಧ್ಯಾಯವು ಮುಗಿಯುವವರೆಗೂ ಕರ್ಮಗಳನ್ನು ಈಶ್ವರನಿಗೆ ಅರ್ಪಿಸಿ ಈಶ್ವರನ ಭಜನೆಯನ್ನು ಹೇಗೆ ಮಾಡಬೇಕೆಂಬುವುದನ್ನು ಹೇಳಿರುವುದು ।೧೪೪೪॥

ಇದನ್ನೇ ನಾಲ್ಕನೆಯ ಅಧ್ಯಾಯದಿಂದ ಹನ್ನೊಂದನೆಯ ಅಧ್ಯಾಯದವರೆಗೆ ಎಂಟು ಅಧ್ಯಾಯಗಳಲ್ಲಿ ಉಪಾಸನಾ ಕಾಂಡವನ್ನು ಎಲ್ಲ ಅಡಚಣೆಗಳನ್ನು ದೂರ ಮಾಡಿ ಹೇಳಿರುವುದು ।೧೪೪೫॥

ಮತ್ತು ಈಶ್ವರ ಪ್ರಸಾದದಿಂದ ಮತ್ತು ಶ್ರೀಗುರು ಸಾಂಪ್ರದಾಯದಿಂದ ಕೋಮಲವಾದ ನಿಜಜ್ಞಾನವು ಉತ್ಪನ್ನವಾಗುವುದು ।೧೪೪೬॥

ಆ ಜ್ಞಾನವನ್ನು ಹನ್ನೆರಡನೆಯ ಅಧ್ಯಾಯದಲ್ಲಿ "ಅದ್ವೇಷ್ಟಾ ಸರ್ವಭೂತಾನಾಂ" ಈ ಶ್ಲೋಕದಿಂದ ಅಥವಾ ಹದಿಮೂರನೆಯ ಅಧ್ಯಾಯದ "ಅಮಾನಿತ್ವಮ್" ಇತ್ಯಾದಿ ಶ್ಲೋಕದಿಂದ ವಿಸ್ತಾರವಾಗಿ ಹೇಳಿದೆ. ಆದ್ದರಿಂದ ಹನ್ನೆರಡನೆಯ ಅಧ್ಯಾಯವನ್ನು ಜ್ಞಾನಕಾಂಡದಲ್ಲಿ ಹಿಡಿದಿದೆ ।೧೪೪೭॥

ಈ ಹನ್ನೆರಡನೆಯ ಅಧ್ಯಾಯದಿಂದ ಹದಿನೈದನೆಯ ಅಧಾಯಯದ ಕೊನೆಯವರೆಗೆ ನಾಲ್ಕು ಅಧ್ಯಾಯಗಳಲ್ಲಿ ಜ್ಞಾನಫಲ ಮತ್ತು ಅದರ ಸಿದ್ಧಿಯ ನಿರೂಪಣೆಯಾಗಿದೆ ।೧೪೪೮॥

ಆದ್ದರಿಂದ ಹದಿನೈದನೆಯ ಅಧ್ಯಾಯದ ಕೊನೆಯವರೆಗೆ ಈ ನಾಲ್ಕು ಅಧ್ಯಾಯಗಳಲ್ಲಿ ಜ್ಞಾನಕಾಂಡವನ್ನು ಹೇಳಿದೆ ।೧೪೪೯॥

ಈ ಪ್ರಕಾರವಾಗಿ ಕಾಂಡತ್ರಯದ ನಿರೂಪಣೆ ಮಾಡುವ ಈ ಗೀತೆಯು ಚಿಕ್ಕದಾದ, ಸುಂದರವಾದ ಶ್ರುತಿಯ ಮೂರ್ತಿಯಾಗಿದೆ ಮತ್ತು ಗೀತೆ ಪದ್ಯರೂಪ ರತ್ನದ ಅಲಂಕಾರವನ್ನು ಧರಿಸಿದೆ ।೧೪೫೦॥

ಇದು ಇರಲಿ, ಹೀಗಿರುವ ಕಾಂಡತ್ರಯಾತ್ಮಕ ಶ್ರುತಿಯ ಮೋಕ್ಷರೂಪವಾದ ಒಂದೇ ಫಲವನ್ನು ಅವಶ್ಯವಾಗಿ ಪಡೆಯಿರಿ ಎಂದು ಡಂಗುರಸಾರಿ ಹೇಳುತ್ತಿರುವುದು ।೧೪೫೧॥

ಈ ಜ್ಞಾನದ ಸಾಧನೆಯನ್ನು ಅಖಂಡವಾಗಿ ವಿರೋಧ ಮಾಡುವ ಅಜ್ಞಾನ ಮಾರ್ಗವನ್ನು ಹದಿನಾರನೆಯ ಅಧ್ಯಾಯದಲ್ಲಿ ಹೇಳಿದೆ ।೧೪೫೨॥

ಅದೇ ಶತ್ರುಗಳನ್ನು ಶಾಸ್ತ್ರದ ಸಹಾಯದಿಂದ ಜಯಿಸಬೇಕು ಹೀಗೆ ಆಜ್ಞೆ ಮಾಡಿರುವ ಅಧ್ಯಾಯವು ಹದಿನೇಳನೆಯದಾಗಿದೆ ।೧೪೫೩॥

ಈ ಪ್ರಕಾರವಾಗಿ ಮೊದಲನೆಯ ಅಧ್ಯಾಯದಿಂದ ಹದಿನೇಳನೆಯ ಅಧ್ಯಾಯದ ಕೊನೆಯವರೆಗೆ ತನ್ನ ಶ್ವಾಸದಿಂದ ಹುಟ್ಟಿದ ವೇದವನ್ನು ದೇವನು ನಿರೂಪಣೆ ಮಾಡಿರುವನು ।೧೪೫೪॥

ಈ ಎಲ್ಲ ಅಧ್ಯಾಯಗಳಲ್ಲಿ ತಾತ್ಪರ್ಯಗಳು ಯಾವ ಹದಿನೆಂಟನೆಯ ಅಧ್ಯಾಯದಲ್ಲಿ ಇರುವುದು. ಇದು ಕೊನೆಯ ಅಧ್ಯಾಯವು, ಎಲ್ಲ ಅಧ್ಯಾಯಗಳ ಕಳಸವಾಗಿರುವುದು ।೧೪೫೫॥

ಏವಂ ಸಕಳಸಂಖ್ಯಾಸಿದ್ದು । ಶ್ರೀಭಗವದ್ಗೀತಾ ಪ್ರಬಂಧು । ಹಾ ಔದಾರ್ಯೇ ಆಗಳಾ ವೇದು । ಮೂರ್ತು ಜಾಣ ।।೧೪೫೬।। ವೇದು ಸಂಪನ್ನು ಹೋಯ ಠಾಈ । ಪರೀ ಕೃಪಣು ಐಸಾ ಆನು ನಾಹೀ । ಜೇ ಕಾನೀ ಲಾಗಲಾ ತಿಹೀ । ವರ್ಣಾಂಚ್ಯಾಚೀ ।।೧೪೫೭।। ಯೇರಾ ಭವವ್ಯಥಾ ಠೇಲಿಯಾ । ಸ್ತ್ರೀಶೂದ್ರಾದಿಕಾ ಪ್ರಾಣಿಯಾ । ಅನವಸರೂ ಮಾಂಡೂನಿಯಾ । ರಾಹಿಲಾ ಆಹೇ ।।೧೪೫೮।। ತರೀ ಮಜ ಪಾಹತಾ ತೇ ಮಾಗೀಲ ಉಣೇ । ಫೇಡಾವಯಾ ಗೀತಾಪಣೇ । ವೇದು ವೇಠಲಾ ಭಲತೇಣೇ । ಸೇವ್ಯ ಹೋಆವಯಾ ।।೧೪೫೯।। ನಾ ಹೇ ಅರ್ಥು ರಿಗೋನಿ ಮನೀ । ಶ್ರವಣೇ ಲಾಗೋನಿ ಕಾನೀ । ಜಪಮಿಷೇ ವದನೀ । ವಸೋನಿಯಾ ।।೧೪೬೦।। ಯೇ ಗೀತೇಚಾ ಪಾಠು ಜೋ ಜಾಣೇ । ತಯಾಚೇನಿ ಸಾಂಗಾತೀಪಣೇ । ಗೀತಾಲಿಹೋನಿ ವಾಹಾಣೇ । ಪುಸ್ತಕಮಿಷೇ ।।೧೪೬೧।। ಐಸೈಸಾ ಮಿಸಕಟಾ । ಸಂಸಾರಾಚಾ ಚೋಹಟಾ । ಗವಾದೀ ಘಾಲೀತ ಚೋಖಟಾ । ಮೋಕ್ಷಸುಖಾಚೀ ।।೧೪೬೨।। ಪರಿ ಆಕಾಶೀ ವಸಾವಯಾ । ಪೃಥ್ವೀವರೀ ಬೈಸಾವಯಾ । ರವಿದೀಪ್ತೀ ರಾಹಾಟಾವಯಾ । ಆವಾರು ನಭ ।।೧೪೬೩।। ತೇವೀ ಉತ್ತಮ ಅಧಮ ಐಸೇ । ಸೇವಿತಾ ಕವಣಾತೇಂಹೀ ನ ಪುಸೇ । ಕೈವಲ್ಯದಾನೇ ಸರಿಸೇ । ನಿವವೀತ ಜಗಾ ।।೧೪೬೪।। ಯಾಲಾಗೀ ಮಾಗಿಲೀ ಕುಟೀ । ಭ್ಯಾಲಾ ವೇದು ಗೀತೇಚ್ಯಾ ಪೋಟೀ । ರಿಗಾಲಾ ಆತಾ ಗೋಮಟೀ । ಕೀರ್ತಿ ಪಾತಲಾ ।।೧೪೬೫।। ಮ್ಹಣೌನಿ ವೇದಾಚೀ ಸುಸೇವ್ಯತಾ । ತೇ ಹೇ ಮೂರ್ತ ಜಾಣ ಶ್ರೀಗೀತಾ । ಶ್ರೀಕೃಷ್ಣೇ ಪಂಡುಸುತಾ । ಉಪದೇಶಿಲೀ ।।೧೪೬೬।। ಪರೀ ವತ್ಸಾಚೇನಿ ವೋರಸೇ । ದುಭ ತೇ ಹೋಯ ಘರೋದ್ದೇಶೇ । ಜಾಲೇ ಪಾಂಡವಾಚೇನಿ ಮಿಷೇ । ಜಗದುದ್ಧರಣ ।।೧೪೬೭।। ಚಾತಕಾಚಿಯೆ ಕಣವೇ । ಮೇಘು ಪಾಣಿಯೇಂಸಿ ಧಾಂವೇ । ತೇಥ ಚರಾಚರ ಆಘವೇ । ನಿವಾಲೇ ಜೇವೀ ।।೧೪೬೮।। ಕಾ ಅನನ್ಯಗತೀಕಮಳಾ । ಲಾಗೀ ಸೂರ್ಯ ಯೇ ವೇಳೋವೇಳಾ । ಕೀ ಸುಖಿಯಾ ಹೋಇಜೇ ಡೋಳಾ । ತ್ರಿಭುವನೀಂಚಾ ।।೧೪೬೯।। ತೈಸೇ ಅರ್ಜುನಾಚೇನಿ ವ್ಯಾಜೇ । ಗೀತಾ ಪ್ರಕಾಶೂನಿ ಶ್ರೀರಾಜೇ । ಸಂಸಾರಾಯೇವಢೇ ಥೋರ ಓಝೇ । ಫೇಡಿಲೇ ಜಗಾಚೇ ।।೧೪೭೦।। ಸರ್ವಶಾಸ್ತ್ರರತ್ನದೀಪ್ತೀ । ಉಜಾಳಿತಾ ಹಾ ತ್ರಿಜಗತೀ । ಸೂರ್ಯ ನವ್ಹೇ ಲಕ್ಷ್ಮೀಪತೀ । ವಕ್ತ್ರಾಕಾಶೀಚಾ ।।೧೪೭೧।।

ಈ ಪ್ರಕಾರವಾಗಿ ಏಳುನೂರು ಸಂಖ್ಯೆಗಳಿಂದ ಸಿದ್ಧವಾದ ಈ ಶ್ರೀಮದ್ಭಗವದ್ಗೀತೆಯ ಪ್ರಬಂಧವು ಮೂರ್ತಿಮಂತ ವೇದವಾಗಿದ್ದು, ಔದಾರ್ಯದಿಂದ ವೇದಕ್ಕಿಂತಲೂ ಶ್ರೇಷ್ಠವಾಗಿರುವುದು ॥೧೪೫೬॥

ವೇದವು ಸಂಪನ್ನವಾಗಿರುವುದು ನಿಜ. ಆದರೆ ಅದರಂತಹ ಕೃಪಣವು ಬೇರೆ ಯಾವುದೂ ಇಲ್ಲ, ಕಾರಣ ಅದು ಬ್ರಾಹ್ಮಣ, ಕ್ಷತ್ರಿಯ ಹಾಗೂ ವೈಶ್ಯ ಈ ಮೂರು ವರ್ಣಗಳ ಕಿವಿಗಳಿಗೆ ಮಾತ್ರ ಮುಟ್ಟಿದೆ ॥೧೪೫೭॥

ಇವರ ಹೊರತಾಗಿರುವ ಸ್ತ್ರೀ, ಶೂದ್ರಾದಿಕ ಜೀವಗಳು ಸಂಸಾರ ವ್ಯಥೆಯಿಂದ ಪೀಡಿತರಾಗಿರುವರು. ಅವರನ್ನು ವರ್ಜಿಸಿ ಸುಮ್ಮನೇ ಕುಳಿತಿರುವುದು ॥೧೪೫೮॥

ಅದಕ್ಕಾಗಿ (ಜ್ಞಾನೇಶ್ವರರು ಹೇಳುವರು) ನನಗೆ ಹೇಗೆ ಅನಿಸುವುದೆಂದರೆ, ತನ್ನ ಹಿಂದಿನ ಕೊರತೆಯನ್ನು ನೀಗಿ ತನಗೆ ಸತ್ಕೀರ್ತಿಯು ದೊರೆಯಬೇಕೆಂದು, ಯಾರಾದರೂ ತನ್ನ ಸೇವನೆ ಮಾಡಲಿ ಎಂಬ ಭಾವನೆಯಿಂದ ಈ ವೇದವೇ ಗೀತೆಯ ರೂಪದಿಂದ ಪ್ರಕಟವಾಗಿರುತ್ತದೆ ॥೧೪೫೯॥

ಕೇವಲ ಸ್ತ್ರೀ ಶೂದ್ರರಿಗೆ ಅಲ್ಲ, ಪ್ರತಿಯೊಬ್ಬರ ಮನದಲ್ಲಿ ಅರ್ಥರೂಪದಿಂದ ಪ್ರವೇಶ ಮಾಡಿ, ಶ್ರವಣದ ರೂಪದಿಂದ ಕಿವಿಗೆ ಮುಟ್ಟಿ, ಪಾಠದ ನಿಮಿತ್ತದಿಂದ ಮುಖದಲ್ಲಿ ಕುಳಿತು, ಈ ವೇದವು ಎಲ್ಲ ಇಂದ್ರಿಯಗಳಿಗೆ ಸೇವ್ಯವಾಗಿದೆ ॥೧೪೬೦॥

ಗೀತೆಯ ಶುದ್ಧಪಾಠ ಮಾಡುವುದನ್ನು ಯಾರು ಬಲ್ಲರೋ, ಅವರ ಸಂಗತಿಯಲ್ಲಿದ್ದು ಗೀತೆಯನ್ನು ಬರೆದು ಪುಸ್ತಕವನ್ನು ಜನರಿಗೆ ಕೊಡುವುದು ॥೧೪೬೧॥

ಈ ರೀತಿಯ ಚಿಕ್ಕಪುಟ್ಟ ನಿಮಿತ್ತಗಳಿಂದ ಗೀತೆಯ ರೂಪದಿಂದ ಸಂಸಾರ ಬಜಾರದಲ್ಲಿ ಮೋಕ್ಷಸುಖದ ಅನ್ನಛತ್ರವನ್ನು ಇಡುವುದು ॥೧೪೬೨॥

ಆಕಾಶದಲ್ಲಿ ವಾಸಮಾಡಲು, ಪೃಥ್ವಿ ಮೇಲೆ ಕುಳಿತು ಕೊಳ್ಳಲು ಅಥವಾ ಸೂರ್ಯನ ಪ್ರಕಾಶವು ವ್ಯವಹಾರವಾಗಲು, ಆಕಾಶವು ಎಲ್ಲರಿಗೂ ಅವಕಾಶವಾಗಿರುವುದು ॥೧೪೬೩॥

ಈ ಪ್ರಕಾರವಾಗಿ ಗೀತೆಯ ಸೇವನೆ ಮಾಡಲು ಉತ್ತಮ, ಅಧಮಗಳನ್ನು ವಿಂಗಡಿಸದೇ ಸಾರಾಸಗಟವಾಗಿ ಆ ಎಲ್ಲರನ್ನೂ ಮೋಕ್ಷಪದವನ್ನು ನೀಡಿ ಎಲ್ಲ ಜಗಕ್ಕೂ ಸುಖಿಯನ್ನಾಗಿ ಮಾಡುವುದು ॥೧೪೬೪॥

ಅದಕ್ಕಾಗಿ ತನ್ನ ಹಿಂದಿನ ನಿಂದೆಗೆ ಹೆದರಿದ ವೇದವು ಗೀತೆಯ ಹೊಟ್ಟೆಯಲ್ಲಿ ಹೊಕ್ಕು ಉತ್ತಮವಾದ ಕೀರ್ತಿಗೆ ಪಾತ್ರವಾಯಿತು ॥೧೪೬೫॥

ಆದ್ದರಿಂದ ವೇದಗಳ ಸುಸೇವ್ಯತಾವಾಗಿರುವ ಯೋಗ್ಯವಾದ ಈ ಮೂರ್ತಿಮಂತ ಗೀತೆಯನ್ನು ಸ್ವತಃ ಶ್ರೀಕೃಷ್ಣನು ಪಂಡುಸುತ ಅರ್ಜುನನಿಗೆ ಹೇಳಿದನು ॥೧೪೬೬॥

ಆಕಳವು ಕರುವಿಗಾಗಿ ಬಿಟ್ಟ (ತೊರೆ) ಪ್ರೀತಿಯ ಹಾಲಿನಿಂದ ಮನೆಯವರೆಲ್ಲರಿಗೂ ಸುಖ ದೊರೆಯುವುದು. ಅದರಂತೆ ಅರ್ಜುನನ ನಿಮಿತ್ತದಿಂದ ಎಲ್ಲ ಜಗದ ಉದ್ಧಾರವಾಯಿತು ॥೧೪೬೭॥

ಚಾತಕದ ಕಳಕಳಿಯನ್ನು ಮನದಲ್ಲಿ ಧರಿಸಿ ಮೇಘವು ಮಳೆಗರೆಯುವುದು. ಆ ವೃಷ್ಟಿಯಿಂದ ಸಹಜವಾಗಿ ಎಲ್ಲ ಜಗತ್ತಿನ ಸಾಂತ್ವನವಾಗುವುದು ॥೧೪೬೮॥

ಅಥವಾ ಏಕನಿಷ್ಠ ಕಮಲಕ್ಕಾಗಿ ಸೂರ್ಯನು ದಿನಾಲೂ ಉದಯಿಸುವನು. ಇದರಿಂದ ತ್ರಿಭುವನದ ಎಲ್ಲ ಪ್ರಾಣಿಗಳ ಕಣ್ಣಿಗೆ ಪ್ರಕಾಶವು ದೊರೆತು ಸುಖಿಗಳಾಗುವುವು ॥೧೪೬೯॥

ಈ ನ್ಯಾಯದಿಂದ ಶ್ರೀಕೃಷ್ಣನು ಅರ್ಜುನನ ನಿಮಿತ್ತದಿಂದ ಗೀತೆಯನ್ನು ಪ್ರಕಾಶ ಮಾಡಿ ಜಗತ್ತಿನ ಸಂಸಾರದಂತಹ ದೊಡ್ಡ ಭಾರವನ್ನು ಇಳಿಸಿದನು ॥೧೪೭೦॥

ತ್ರೈಲೋಕ್ಯದಲ್ಲಿ ಎಲ್ಲ ಶಾಸ್ತ್ರಗಳ ರೂಪ ರತ್ನದ ಪ್ರಕಾಶಕ್ಕೆ ಪ್ರಕಾಶಿತಗೊಳಿಸುವ ಈ ಗೀತಾ ಗ್ರಂಥವು ಲಕ್ಷ್ಮೀಪತಿ ಶ್ರೀಕೃಷ್ಣನ ವದನರೂಪ ಗಗನದಲ್ಲಿನ ಸೂರ್ಯನಲ್ಲವೇ? ॥೧೪೭೧॥

ಬಾಪ ಕುಳ ತೇ ಪವಿತ್ರ । ಜೇಥಿಂಚಾ ಪಾರ್ಥು ಯಾ ಜ್ಞಾನಾ ಪಾತ್ರ । ಜೇಣೇ ಗೀತಾ ಕೇಲೇ ಶಾಸ್ತ್ರ । ಆವಾರು ಜಗಾ ॥೧೪೭೨॥ ಹೇ ಅಸೋ ಮಗ ತೇಣೇ । ಸದ್ಗುರು ಶ್ರೀಕೃಷ್ಣೇ । ಪಾರ್ಥಾಚೇ ಮಿಸಳಣೇ । ಆಣಿಲೇ ದ್ವೈತಾ ॥೧೪೭೩॥ ಪಾಠೀ ಮ್ಹಣತಸೇ ಪಾಂಡವಾ । ಶಾಸ್ತ್ರ ಹೇ ಮಾನಲೇ ಕೀ ಜೀವಾ । ತೇಥ ಏರು ಮ್ಹಣೇ ದೇವಾ । ಆಪುಲಿಯಾ ಕೃಪಾ ॥೧೪೭೪॥ ತರೀ ನಿಧಾನ ಜೋಡಾವಯಾ । ಭಾಗ್ಯ ಘಡೇ ಗಾ ಧನಂಜಯಾ । ಪರೀ ಜೋಡಲೇ ಭೋಗಾವಯಾ । ವಿಪಾಯೇ ಹೋಯ ॥೧೪೭೫॥ ಪೈ ಕ್ಷೀರಸಾಗರಾಯೇವಢೇ । ಅವಿರಜೇ ದುಧಾಚೇ ಭಾಂಡೇ । ಸುರಾ ಅಸುರಾ ಕೇವಢೇ । ಮಥಿತಾ ಜಾಲೇ ॥೧೪೭೬॥ ತೇ ಸಾಯಾಸಹೀ ಫಳಾ ಆಲೇ । ಜೇ ಅಮೃತಹೀ ಡೋಳಾ ದೇಖಿಲೇ । ಪರೀ ವರಿಚಿಲೀ ಚುಕಲೇ । ಜತನೇತೇ॥೧೪೭೭॥ ತೇಥ ಅಮರತ್ವಾ ವೋಗರಿಲೇ । ತೇ ಮರಣಾಚಿಲಾಗೀ ಜಾಲೇ । ಭೋಗೋ ನೇಣತಾ ಜೋಡಲೇ । ಐಸೇ ಆಹೇ ॥೧೪೭೮॥ ನಹುಷು ಸ್ವರ್ಗಾಧಿಪತಿ ಜಾಹಲಾ । ಪರೀ ರಾಹಾಟೀ ಭಾಂಬಾವಲಾ । ತೋ ಭುಜಂಗತ್ವ ಪಾವಲಾ । ನೇಣಸೀ ಕಾಈ ?॥೧೪೭೯॥ ಮ್ಹಣೌನಿ ಬಹುತ ಪುಣ್ಯ ತುವಾ । ಕೇಲೇ ತೇಣೇ ಧನಂಜಯಾ । ಆಣಿ ಶಾಸ್ತ್ರರಾಜಾ ಇಯಾ । ಜಾಲಾಸಿ ವಿಷಯೋ ॥೧೪೮೦॥ ತರೀ ಯಯಾಚಿ ಶಾಸ್ತ್ರಾಚೇನಿ । ಸಂಪ್ರದಾಯೇ ಪಾಂಘುರೌನಿ । ಶಾಸ್ತ್ರಾರ್ಥು ಹಾ ನಿಕೇನೀ । ಅನುಷ್ಠೀ ಹೋ! ॥೧೪೮೧॥ ಏರ್ಹವೀ ಅಮೃತಮಥನಾ । ಸಾರಿಖೇ ಹೋಈಲ ಅರ್ಜುನಾ । ಜರೀ ರಿಘಸೀ ಅನುಷ್ಠಾನಾ । ಸಂಪ್ರದಾಯೇವೀಣ ॥೧೪೮೨॥ ಗಾಯ ಧಡ ಜೋಡೇ ಗೋಮಟೀ । ತೇ ತೈಚಿ ಪಿವೋಯೇ ಕಿರೀಟೀ । ಜೈ ಜಾಣಿಜೇ ಹಾತವಟೀ । ಸಾಂಜವಣೇಚೀ ॥೧೪೮೩॥ ತೈಸಾ ಶ್ರೀಗುರು ಪ್ರಸನ್ನು ಹೋಯೇ । ಶಿಷ್ಯ ವಿದ್ಯಾಹೀ ಕೀರ ಲಾಹೇ । ಪರೀ ತೇ ಫಳೇ ಸಂಪ್ರದಾಯೇ । ಉಪಾಸಿಲಿಯಾ ॥೧೪೮೪॥ ಮ್ಹಣೌನಿ ಶಾಸ್ತ್ರೀ ಜೋ ಇಯೇ । ಉಚಿತು ಸಂಪ್ರದಾಯೋ ಆಹೇ । ತೋ ಐಕ ಆತಾ ಬಹುವೇ ಆದರೇಂಸೀ ॥೧೪೮೫॥

ಇದಂ ತೇ ನಾತಪಸ್ಕಾಯ ನಾ ಭಕ್ತಾಯ ಕದಾಚನ ।
ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥೬೭॥

ತರೀ ತುವಾ ಹೇ ಜೇ ಪಾರ್ಥಾ । ಗೀತಾಶಾಸ್ತ್ರ ಲಾಧಲೇ ಆಸ್ಥಾ । ತೇ ತಪೋಹೀನಾ ಸರ್ವಥಾ । ಸಾಂಗಾವೇ ನಾ ಹೋ! ॥೧೪೮೬॥

ಯಾವ ಕುಲದಲ್ಲಿ ಅರ್ಜುನನು ಹುಟ್ಟಿ ಯಾವ ಈ ಗೀತಾಜ್ಞಾನಕ್ಕೆ ಪಾತ್ರನಾಗಿ ಎಲ್ಲ ಜಗತ್ತಿಗೆ ಗೀತಾಶಾಸ್ತ್ರದ ಸ್ವತಂತ್ರವಾಗಿ ಆವರಣ ಹಾಕಿದನು. ಈ ಕುಲವು ಧನ್ಯವಾಗಿದೆ ।।೧೪೭೨।।

ಇದು ಇರಲಿ, ಪಾರ್ಥನು ತನ್ನ ಸ್ವರೂಪದಲ್ಲಿ ತಲ್ಲೀನನಾಗಿರುವುದರಿಂದ ಸದ್ಗುರು ಶ್ರೀಕೃಷ್ಣನು ಆತನಿಗೆ ದ್ವೈತಭಾವದಲ್ಲಿ ತಂದನು ।।೧೪೭೩।।

ತದನಂತರ ಅರ್ಜುನನಿಗೆ ಭಗವಂತನು ಹೇಳಿದನು :- ಈ ಗೀತೆಯನ್ನು ಯಥಾರ್ಥವಾಗಿ ತಿಳಿದುಕೊಂಡೆಯಾ? ಆಗ ಅರ್ಜುನನು ಹೇಳಿದನು :- ದೇವಾ, ನಿನ್ನ ಕೃಪೆಯಿಂದ ತಿಳಿದುಕೊಂಡೆನು ।।೧೪೭೪।।

ಧನಂಜಯಾ, ಭಾಗ್ಯದಿಂದ ಅಕಸ್ಮಾತಾಗಿ ಐಶ್ವರ್ಯವು ದೊರೆಯುವುದು, ಆದರೆ ದೊರೆತ ಐಶ್ವರ್ಯವನ್ನು ಹೇಗೆ ಉಪಭೋಗಿಸಬೇಕೆಂಬುದು ತಿಳಿಯುವುದು ಯಾರೋ ಒಬ್ಬರಿಗೆ ।।೧೪೭೫।।

ಕ್ಷೀರಸಾಗರದಂತಹ ಹೆಪ್ಪುಗಟ್ಟಿದ ಹಾಲಿನ ಪಾತ್ರೆಯಲ್ಲಿ ಮಂದರಾಚಲದ ಕಡುಗೋಲ ಹಾಕಿ ದೇವತೆಗಳಿಗೆ ಹಾಗೂ ದೈತ್ಯರಿಗೆ ಎಷ್ಟೊಂದು ಕಷ್ಟವಾಯಿತು ? ।।೧೪೭೬।।

ಆ ಶ್ರಮದ ಫಲವಾದ ಅಮೃತವೂ ಪ್ರಾಪ್ತವಾಗಿ ಕಣ್ಣಿನಿಂದ ನೋಡಿದರು, ಆದರೆ ಅದನ್ನು ರಕ್ಷಿಸುವ ಅದರ ವಿಧಾನದಲ್ಲಿ ತಪ್ಪಿದರು ।।೧೪೭೭।।

ಅಮರರಾಗಬೇಕೆಂದು ಅಮೃತವನ್ನು ಪ್ರಾಪ್ತಮಾಡಿಕೊಂಡರು. ಆದರೆ ಅದೇ ರಾಹು ದೈತ್ಯನಿಗೆ ಮರಣಕ್ಕೆ ಕಾರಣವಾಯಿತು. ಹೇಗೆ ಭೋಗಿಸಬೇಕೆಂಬ ಯುಕ್ತಿ ಇರದಿದ್ದರೆ ಹೀಗಾಗುವುದು ।।೧೪೭೮।।

ನಹುಶರಾಜನು ಯಾಜ್ಞಾದಿಕ ಕಷ್ಟಮಯ ಆಚರಣೆಯನ್ನು ಮಾಡಿ ಸ್ವರ್ಗದ ಅಧಿಪತಿ ಇಂದ್ರನಾದನು. ಆದರೆ ಅಲ್ಲಿಯ ಪದ್ಧತಿಯನ್ನು ತಪ್ಪಿ, ಗೊಂದಲದಲ್ಲಿ ಬಿದ್ದು ಸರ್ಪನಾದದ್ದು ನಿನಗೆ ಗೊತ್ತಿಲ್ಲವೆ? ।।೧೪೭೯।।

ಅದಕ್ಕಾಗಿ ಧನಂಜಯನೇ, ನೀನು ಬಹಳ ಪುಣ್ಯ ಮಾಡಿದ್ದಕ್ಕೆ ಎಲ್ಲ ಶಾಸ್ತ್ರಗಳ ರಾಜನಾದ ಗೀತಾಶಾಸ್ತ್ರವನ್ನು ನಿನಗೆ ಹೇಳಲು ಕಾರಣನಾದೆ ।।೧೪೮೦।।

ಹಾಗಾದರೆ ಈ ಶಾಸ್ತ್ರದ ಆಚರಣೆಯ ಸಾಂಪ್ರದಾಯವನ್ನು ತಿಳಿದುಕೊಂಡು ನಂತರ ಶಾಸ್ತ್ರಾನುಸಾರವಾಗಿ ಅದರ ಅನುಷ್ಠಾನವನ್ನು ಮಾಡಬೇಕು, ಅಪ್ಪಾ ! ।।೧೪೮೧।।

ಇಲ್ಲದಿದ್ದರೆ ಅರ್ಜುನಾ, ಸಾಂಪ್ರದಾಯವನ್ನು ಬಿಟ್ಟು ಅದರ ಆಚರಣೆಯನ್ನು ಮಾಡಲು ಹೋದರೆ, ಅಮೃತ ಮಂಥನದ ಪರಿಣಾಮವಾದೀತು ।।೧೪೮೨।।

ಹೇ ಕಿರೀಟಿಯೇ, ಆಕಳವೇನೋ ಉತ್ತಮವಾದದ್ದು ಸಿಕ್ಕಿತು. ಆದರೆ ಅದರ ಹಾಲು ತೆಗೆಯುವ ಯುಕ್ತಿಯು ಗೊತ್ತಿದ್ದರೆ ಮಾತ್ರ ಹಾಲು ದೊರಕೀತು ।।೧೪೮೩।।

ಅದರಂತೆ ಸದ್ಗುರುಗಳು ಪ್ರಸನ್ನರಾಗಬಹುದು, ಹಾಗೂ ಅವರಿಂದ ಶಿಷ್ಯನಿಗೆ ವಿದ್ಯೆಯೂ ಪ್ರಾಪ್ತವಾಗಬಹುದು, ಆದರೆ ಸಾಂಪ್ರದಾಯದಿಂದ ಗುರುಗಳ ಸೇವೆಯನ್ನು ಮಾಡಿದಾಗಲೇ ಅದು ಫಲಕ್ಕೆ ಬರುವುದು ।।೧೪೮೪।।

ಆದ್ದರಿಂದ ಈ ಗೀತಾಶಾಸ್ತ್ರವನ್ನು ಪ್ರಾಪ್ತ ಮಾಡಿಕೊಳ್ಳಲು ಇರುವ ಯೋಗ್ಯ ಸಾಂಪ್ರದಾಯವನ್ನು ನಾನುನಿನಗೆ ಹೇಳುವೆನು, ಆದರದಿಂದ ಕೇಳು ।।೧೪೮೫।।

ಶ್ಲೋಕಾರ್ಥ :- ತಪಸ್ಸು ಮಾಡದವನಿಗೆ, ಭಕ್ತಿಭಾವವಿಲ್ಲದವನಿಗೆ, ಕೇಳಲು ಇಚ್ಛೆ ಇಲ್ಲದವನಿಗೆ, ನನ್ನಲ್ಲಿ ಅಸೂಯೆ ಇರುವವನಿಗೆ, ಈ ಗೀತಾ ಜ್ಞಾನವನ್ನು ಹೇಳಕೂಡದು ।।೬೭।।

ಹೇ ಪಾರ್ಥನೇ, ನಿನಗೆ ಈ ಗೀತಾಶಾಸ್ತ್ರವು ಆಸ್ಥೆಪೂರ್ವಕವಾಗಿ ದೊರೆತಿರುವುದು. ಅಪ್ಪಾ ! ಇದನ್ನು ತಪೋಹೀನ ಮನುಷ್ಯನಿಗೆ ಎಂದೂ ಹೇಳಬೇಡ ।।೧೪೮೬।।

ಅಥವಾ ತಾಪಸುಹೀ ಜಾಲಾ । ಪರೀ ಗುರುಭಕ್ತೀ ಜೋ ಢಿಲಾ । ತೋ ವೇದೀ ಅಂತ್ಯಜು ವಾಳಿಲಾ । ತೈಸಾ ವಾಳೀ॥೧೪೮೭॥ ನಾತರೀ ಪುರೋಡಾಶು ಜೈಸಾ । ನ ಘಾಪೇ ವೃದ್ಧ ತರೀ ವಾಯಸಾ । ಗೀತಾನೇದೀ ತೈಸೀ ತಾಪಸಾ । ಗುರುಭಕ್ತಿಹೀನಾ ॥೧೪೮೮॥ ಕಾ ತಪಹೀ ಜೋಡೇ ದೇಹೀ । ಭಜೇ ಗುರುದೇವಾಂಚ್ಯಾ ಠಾಯೀ । ಪರೀ ಅಕರ್ಣನೀ ನಾಹೀ । ಚಾಡ ಜರೀ॥೧೪೮೯॥ ತರೀ ಮಾಗೀಲ ದೋಹಿಆಂಗೀ । ಉತ್ತಮ ಹೋಯ ಕೀರ ಜಗೀ । ಪರೀ ಯಾ ಶ್ರವಣಾಲಾಗೀ । ಯೋಗ್ಯು ನೋಹೇ॥೧೪೯೦॥ ಮುಕ್ತಾಫಳ ಭಲತೈಸೇ । ಹೋ ಪರೀ ಮುಖ ನಸೇ । ತಂವ ಗುಣಪ್ರವೇಶೇ । ತೇಥ ಕಾಈ ?॥೧೪೯೧॥ ಸಾಗರು ಗಂಭೀರು ಹೋಯೇ । ಹೇ ಕೋಣ ನಾ ಮ್ಹಣತ ಆಹೇ । ಪರೀ ವೃಷ್ಟಿ ವಾಯಾ ಜಾಯೇ । ಜಾಲೀ ತೇಥ ॥೧೪೯೨॥ ಧಾಲಿಯಾ ದಿವ್ಯಾನ್ನ ಸುವಾವೇ ।ಮಗ ಜೇ ವಾಯಾ ಧಾಡಾವೇ । ತೇ ಆರ್ತೀ ಕಾ ನ ಕರಾವೇ । ಉದಾರಪಣ ?॥೧೪೯೩॥ ಮ್ಹಣೌನಿ ಯೋಗ್ಯ ಭಲತೈಸೇ । ಹೇತು ಪರೀ ಚಾಡ ನಸೇ । ತರೀ ಝಣೇ ವಾನಿವಸೇ । ದೇಸೀ ಹೇ ತಯಾ ॥೧೪೯೪॥ ರೂಪಾಚಾ ಸುಜಾಣು ಡೋಳಾ । ವೋಢವೂ ಯೇ ಕಾಯೀ ಪರಿಮಳಾ ?। ಜೇಥ ಜೇ ಮಾನೇ ತೇ ಫಳಾ । ತೇಥಚಿ ಯೇ ಗಾ ॥೧೪೯೫॥ ಮ್ಹಣೌನಿ ತಪೀ ಭಕ್ತೀ । ಪಾಹಾವೇ ತೇ ಸುಭದ್ರಾಪತೀ । ಪರೀ ಶಾಸ್ತ್ರಶ್ರವಣೀ ಅನಾಸಕ್ತೀ । ವಾಳಾವೇಚಿ ತೇ ॥೧೪೯೬॥ ನಾತರೀ ತಪಭಕ್ತೀ । ಹೋಊನಿ ಶ್ರವಣೀ ಆರ್ತೀ । ಆಥೀ ಐಸೀಹೀ ಆಯತೀ । ದೇಖಸೀ ಜರೀ ॥೧೪೯೭॥ ತರೀ ಗೀತಾಶಾಸ್ತ್ರನಿರ್ಮಿತಾ । ಜೋ ಮೀ ಸಕಳಲೋಕಶಾಸ್ತಾ । ತಯಾ ಮಾತೇ ಸಾಮಾನ್ಯತಾ । ಬೋಲೇಲ ಜೋ ॥೧೪೯೮॥ ಮಾಝ್ಯಾ ಸಜ್ಜನೇಂಸಿ ಮಾತೇ । ಪೈ ಶೂನ್ಯಾಚೇನಿ ಹಾತೇ । ಏಕ ಆಹಾತೀ ತಯಾಂತೇ । ಯೋಗ್ಯ ನ ಮ್ಹಣ ॥೧೪೯೯॥ ತಯಾಂಚೇ ಏರ ಆಘವೀ । ಸಾಮಗ್ರೀ ಐಸೀ ಜಾಣಾವೀ । ದೀಪೇವೀಣ ಠಾಣದಿವೀ । ರಾತ್ರೀಚೀ ಜೈಸೀ ॥೧೫೦೦॥ ಅಂಗ ಗೋರೇ ಆಣೀ ತರುಣೇ । ವರೀ ಲೇಯಿಲೇ ಆಹೇ ಲೇಣೇ । ಪರೀ ಏಕಲೇನಿ ಪ್ರಾಣೇ । ಸಾಂಡಿಲೇ ಜೇವೀ ॥೧೫೦೧॥ ಸೋನಯಾಚೇ ಸುಂದರ । ನಿರ್ವಾಳಿಲೇ ಹೋಯ ಘರ । ಪರೀ ಸರ್ಪಾಂಗನಾ ದ್ವಾರ । ರುಂಧಲೇ ಆಹೇ ॥೧೫೦೨॥ ನಿಪಜೇ ದಿವ್ಯಾನ್ನ ಚೋಖಟ । ಪರೀ ಮಾಜೀ ಕಾಳಕೂಟ । ಅಸೋ ಮೈತ್ರೀ ಕಪಟ । ಗರ್ಭಿಣೀ ಜೈಸೀ ॥೧೫೦೩॥

ಅಥವಾ ಮನುಷ್ಯನು ತಪಸ್ವಿ ಇರಬಹುದು, ಆದರೆ ಗುರುಭಕ್ತಿಯನ್ನು ಮಾಡದಿದ್ದರೆ, ವೇದವು ಅಂತ್ಯಜನಿಗೆ ದೂರವಿಟ್ಟಂತೆ ಆತನಿಗೆ ನೀನು ದೂರವಿಡು ।।೧೪೮೭।।

ಅಥವಾ ಯಜ್ಞ ಅವಶಿಷ್ಟ ಭಾಗ (ಪುರೋಡಶ) ವನ್ನು ಕಾಗೆಯು ವೃದ್ಧವಾಗಿದ್ದರೂ, ಅದಕ್ಕೆ ಹಾಕುವುದಿಲ್ಲ. ಅದರಂತೆ ಗುರುಭಕ್ತಿ ಇಲ್ಲದ ತಪಸ್ವಿಗೂ ಹೇಳಬೇಡ ।।೧೪೮೮।।

ಅಥವಾ ಶರೀರದಿಂದ ತಪಸ್ಸನ್ನು ಮಾಡುತ್ತಿದ್ದು, ಗುರು,ದೇವರ ಭಕ್ತಿಯನ್ನು ಮಾಡುತ್ತಿದ್ದು, ಆದರೆ ಶ್ರವಣದ ಇಚ್ಛೆಯು ಇರುವುದಿಲ್ಲ ।।೧೪೮೯।।

ತಪ ಹಾಗೂ ಗುರುಭಕ್ತಿ ಈ ಎರಡೂ ಅಂಗಗಳಿಂದ ಯೋಗ್ಯನಿದ್ದರೂ, ಶ್ರವಣದ ಇಚ್ಛೆಯು ಇಲ್ಲದ್ದಕ್ಕೆ ಆತನು ಗೀತಾಶಾಸ್ತ್ರವನ್ನು ಕೇಳಲು ಯೋಗ್ಯನಲ್ಲ ।।೧೪೯೦।।

ಉತ್ತಮವಾದ ಮುತ್ತುಗಳಿಗೆ ರಂಧ್ರಗಳನ್ನು ಹಾಕದಿದ್ದರೆ, ಅವುಗಳಲ್ಲಿ ಬಂಗಾರದ ತಂತಿಯನ್ನು ಹಾಕಿ ಅಲಂಕಾರಗಳನ್ನು ಮಾಡಲು ಬರಬಹುದೆ ? ।।೧೪೯೧।।

ಸಮುದ್ರವು ಗಂಭೀರವಾಗಿರುವುದು, ಇದಕ್ಕೆ ಯಾರು ಇಲ್ಲವೆನ್ನುವರು ? ಆದರೆ ಅದರ ಮೇಲೆ ಬಿದ್ದ ಮಳೆಯು ವ್ಯರ್ಥವಾಗುವುದು ।।೧೪೯೨।।

ತೃಪ್ತನಾಗಿರುವ ಮನುಷ್ಯನ ಎಲೆಯಲ್ಲಿ ಪಕ್ವಾನ್ನಗಳನ್ನು ಬಡಿಸಿ ಏಕೆ ಕೆಡಿಸಬೇಕು ? ಅದಕ್ಕಿಂತಲೂ ಅದೇ ಪಕ್ವಾನ್ನವನ್ನು ಹಸಿದ ಮನುಷ್ಯನಿಗೆ ಬಡಿಸಿ ತನ್ನ ಔದಾರ್ಯವನ್ನು ಪ್ರಕಟಿಸಬಾರದೆ ? ।।೧೪೯೩।।

ಆದ್ದರಿಂದ ಸರ್ವದೃಷ್ಟಿಯಿಂದ ಯೋಗ್ಯನಿದ್ದು, ಶ್ರವಣದ ಇಚ್ಛೆಯು ಇಲ್ಲದಿರುವಾಗ ಕೌತುಕದಿಂದಲಾದರೂ ಆತನಿಗೆ ಗೀತಾಶಾಸ್ತ್ರವನ್ನು ಹೇಳಬೇಡ ।।೧೪೯೪।।

ರೂಪವನ್ನು ಅರಿಯಲು ಜಾಣರಾಗಿರುವ ಕಣ್ಣುಗಳಿಗೆ ಹೂವಿನ ಸುಗಂಧ ಸೇವಿಸಲು ಯೋಗ್ಯವೆ ? ಯಾರಿಗೆ ಯಾವ ಯೋಗ್ಯತೆವಿರುವುದೋ, ಅದೇ ಅವರಿಗೆ ಉಪಯೋಗವಾಗುವುದು ।।೧೪೯೫।।

ಆದ್ದರಿಂದ ಸುಭದ್ರಾಪತಿಯೇ, ತಪಸ್ವಿ, ಗುರು, ದೇವರ ಭಕ್ತಿಯನ್ನು ಮಾಡುವವನಿದ್ದರೂ, ಶಾಸ್ತ್ರ ಶ್ರವಣದಲ್ಲಿ ಇಚ್ಛೆಯು ಇರದಿದ್ದರೆ, ಆತನನ್ನು ತ್ಯಜಿಸಬೇಕು ।।೧೪೯೬।।

ಅಥವಾ ತಪಸ್ವಿಯಾಗಿ ಗುರು, ದೇವರಲ್ಲಿ ಭಕ್ತಿ ಇದ್ದು, ಶಾಸ್ತ್ರ ಶ್ರವಣದ ಇಚ್ಛೆ ಇರುವ ಎಲ್ಲ ಪ್ರಕಾರಗಳಿಂದ ಯುಕ್ತನಾಗಿರುವ ಮನುಷ್ಯನು ನಿನಗೆ ಸಿಕ್ಕರೆ ।।೧೪೯೭।।

ಆದರೆ ಸಕಲ ಲೋಕಗಳನ್ನು ಶಾಸನ ಮಾಡುವವ ಹಾಗೂ ಗೀತಾಶಾಸ್ತ್ರವನ್ನು ನಿರ್ಮಾಣ ಮಾಡುವವ ನನಗೆ ಸಾಧಾರಣ ಮನುಷ್ಯನಂತೆ ತಿಳಿದರೆ ।।೧೪೯೮।।

ಹಾಗೆಯೇ ನನ್ನ ಹಾಗೂ ನನ್ನ ಸಜ್ಜನರ ದುಷ್ಟ ಗುಣಗಳಿಂದ ಛಿದ್ರಗಳನ್ನು ಹೊರಗೆ ತೆಗೆದು ನಿಂದೆ ಮಾಡುವವರು ಈ ಗೀತಾಶಾಸ್ತ್ರವನ್ನು ಕೇಳಲು ಯೋಗ್ಯರಲ್ಲ, ಹೀಗೆ ತಿಳಿ ।।೧೪೯೯।।

ರಾತ್ರಿಯಲ್ಲಿ ದೀಪದ ಜ್ಯೋತಿ ಹೊರತಾಗಿ ಎಣ್ಣೆ ಬತ್ತಿಗಳಿಂದ ತುಂಬಿದ ದೀವಟಿಗೆಯು ವ್ಯರ್ಥವಾಗಿರುವಂತೆ ಇವರ ಸಾಮಗ್ರಿಗಳಾಗಿವೆ ।।೧೫೦೦।।

ಒಬ್ಬ ತರುಣನು ಬೆಳ್ಳಗೆ ಸುಂದರನಾಗಿದ್ದು, ಆತನ ಮೈಮೇಲೆ ಅನೇಕ ಆಭರಣಗಳೂ ಇವೆ, ಆದರೆ ಜೀವವೇ ಇರದಿದ್ದರೆ ।।೧೫೦೧।।

ಬಂಗಾರದ ಸುಂದರವಾದ ಹಾಗೂ ಪ್ರಕಾಶಿತ ಮನೆಯಿದ್ದು, ಅದರಲ್ಲಿ ನಾಗಸರ್ಪವು ಸೇರಿ ಬಾಗಿಲದಲ್ಲಿಯೇ ಇರುತ್ತಿದ್ದರೆ ।।೧೫೦೨।।

ಉತ್ತಮವಾದ ಮೃಷ್ಟಾನ್ನದ ಸಿದ್ಧಗೊಳಿಸಿ ಅದರಲ್ಲಿ ಕಾಳಕೂಟ ವಿಷವನ್ನು ಕೂಡಿಸಿದರೆ, ಅಥವಾ ಕಪಟದಿಂದ ತುಂಬಿಕೊಂಡಿರುವ ಮಿತ್ರತ್ವವು ವ್ಯರ್ಥವು ।।೧೫೦೩।।

ತೈಸೀ ತಪಭಕ್ತಿ ಮೇಧಾ । ತಯಾಚೀ ಜಾಣ ಪ್ರಬುದ್ಧಾ । ಜೋ ಮಾಝ್ಯಾಂಚೀ ಕಾ ನಿಂದಾ । ಮಾಝೀಚಿ ಕರೀ ॥೧೫೦೪॥ ಯಾಕಾರಣೇ ಧನಂಜಯಾ । ತೋ ಭಕ್ತ ಮೇಧಾವೀ ತಪಿಯಾ । ತರೀ ನಕೋ ಬಾಪಾ ಇಯಾ । ಶಾಸ್ತ್ರಾ ಆತಳೋ ದೇವೋ ॥೧೫೦೫॥ ಕಾಯ ಬಹು ಬೋಲೋ ನಿಂದಕಾ । ಯೋಗ್ಯ ಸೃಷ್ಟಯಾಹೀಸಾರಿಖಾ । ಗೀತಾ ಹೇ ಕವತಿಕಾ । ಲಾಗೀಹೀ ನೇದೀ ॥೧೫೦೬॥ ಮ್ಹಣೌನಿ ತಪಾಚಾ ಧನುರ್ಧರಾ । ತಳೀ ದಾಟೋನಿ ಗಾಡೋರಾ । ವರೀ ಗುರುಭಕ್ತೀಚಾ ಪುರಾ । ಪ್ರಸಾದು ಜೋ ಜಾಲಾ ॥೧೫೦೭॥ ಆಣಿ ಶ್ರವಣೇಚ್ಛೆಚಾ ಪುಢಾ । ದಾರವಂಟಾ ಸದಾ ಉಘಡಾ । ವರೀ ಕಲಶು ಚೋಖಡಾ । ಅನಿಂದಾರತ್ನಾಂಚಾ ॥೧೫೦೮॥

ಯ ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।
ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥೬೮॥

ಐಶಾ ಭಕ್ತಾಲಯೀ ಚೋಖಟೀ । ಗೀತಾರತ್ನೇಶ್ವರು ಹಾ ಪ್ರತಿಷ್ಠೀ । ಮಗ ಮಾಝಿಯಾ ಸಂವಸಾಟೀ । ತುಕಸೀ ಜಗೀ ॥೧೫೦೯॥ ಕಾ ಜೇ ಏಕಾಕ್ಷರಪಣೇಸೀ । ತ್ರಿಮಾತ್ರಕೇಚಿಯೇ ಕುಶೀ । ಪ್ರಣವು ಹೋತಾ ಗರ್ಭವಾಸೀ । ಸಾಂಕಡಲಾ ॥೧೫೧೦॥ ತೋ ಗೀತೇಚಿಯಾ ಬಾಹಾಳೀ । ವೇದಬೀಜ ಗೇಲೇ ಪಾಹಾಳೀ । ಕೀ ಗಾಯತ್ರೀ ಫುಲೀಫಳೀ । ಶ್ಲೋಕಾಂಚ್ಯಾ ಆಲೀ ॥೧೫೧೧॥ ತೇ ಹೇ ಮಂತ್ರರಹಸ್ಯ ಗೀತಾ । ಮೇಳವೀ ಜೋ ಮಾಝಿಯಾ ಭಕ್ತಾ । ಅನನ್ಯಜೀವನಾ ಮಾತಾ । ಬಾಳಕಾ ಜೈಸೀ ॥೧೫೧೨॥ ತೈಸೀ ಭಕ್ತಾ ಗೀತೇಸೀ । ಭೇಟೀ ಕರೀ ಜೋ ಆದರೇಂಸೀ । ತೋ ದೇಹಾಪಾಠೀ ಮಜಸೀ । ಏಕಚಿ ಹೋಯ ॥೧೫೧೩॥

ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।
ಭವಿತಾ ನ ಚ ಮೇ ತಸ್ಮಾತ್ ಅನ್ಯಃ ಪ್ರಿಯತರೋ ಭುವಿ ॥೬೯॥

ಆಣಿ ದೇಹಾಚೇಹೀ ಲೇಣೇ । ಲೇಊನಿ ವೇಗಳೇಪಣೇ । ಅಸೇ ತಂವ ಜೀವೇ ಪ್ರಾಣೇ । ತೋಚಿ ಪಢಿಯೇ ॥೧೫೧೪॥ ಜ್ಞಾನಿಯಾ ಕರ್ಮಠಾ ತಾಪಸಾ । ಯಯಾ ಖುಣೇಚಿಯಾ ಮಾಣುಸಾ । ಮಾಜೀ ತೋ ಏಕು ಗಾ ಜೈಸಾ । ಪಢಿಯೇ ಮಜ ॥೧೫೧೫॥ ತೈಸಾ ಭೂತಳೀ ಆಘವಾ । ಆನ ನ ದೇಖೇ ಪಾಂಡವಾ । ಜೋ ಗೀತಾ ಸಾಂಗೇ ಮೇಳಾವಾ । ಭಕ್ತಜನಾಂಚಾ ॥೧೫೧೬॥

ಅದರಂತೆ, ಬುದ್ಧಿವಂತನೇ, ಯಾವನು ನನ್ನ ಹಾಗೂ ನನ್ನ ಭಕ್ತರ ನಿಂದೆಯನ್ನು ಮಾಡುವನೋ, ಆತನ ತಪವು, ಭಕ್ತಿಯು ಹಾಗೂ ಬುದ್ಧಿಯು, ಇವೆಲ್ಲವೂ ವ್ಯರ್ಥವೆಂದು ತಿಳಿ ।೧೫೦೪॥

ಅದಕ್ಕಾಗಿ ಧನಂಜಯನೇ, ಆ ಭಕ್ತನು ಬುದ್ಧಿವಂತನಿದ್ದರೂ ತಪಸ್ವಿಯು ಆಗಿದ್ದರೂ ನನ್ನ ಹಾಗೂ ನನ್ನ ಭಕ್ತರ ನಿಂದೆಯನ್ನು ಮಾಡುತ್ತಿದ್ದರೆ, ಅಪ್ಪಾ! ಆತನಿಗೆ ಈ ಗೀತಾಶಾಸ್ತ್ರದ ಸ್ಪರ್ಶವನ್ನು ಮಾಡಿಕೊಡಬೇಡ ।೧೫೦೫॥

ನಿಂದಕನ ವಿಷಯಕ್ಕೆ ಹೆಚ್ಚಿಗೇನು ಹೇಳಲಿ ? ಅವನು ಬ್ರಹ್ಮದೇವನಂತೆ ಪ್ರತಿಸೃಷ್ಟಿಯನ್ನು ಮಾಡುವವನಿದ್ದರೂ ಆತನಿಗೆ ಕೌತುಕದಿಂದಲಾದರೂ ಗೀತಾ ಶಾಸ್ತ್ರವನ್ನು ಹೇಳಬೇಡ ।೧೫೦೬॥

ಆದ್ದರಿಂದ ಧನುರ್ಧರಾ ! ಯಾವನು ತಪರೂಪ ಕಲ್ಲಿನಿಂದ ಬುನಾದಿ ಕಟ್ಟಿ ಮೇಲೆ ಗುರುಭಕ್ತಿ ಎಂಬ ದೇವಾಲಯವನ್ನು ಕಟ್ಟಿರುವನು ।೧೫೦೭॥

ಮತ್ತು ಶ್ರವಣೇಚ್ಛಾರೂಪ ಮುಂದಿನ ಬಾಗಿಲವನ್ನು ಯಾವಾಗಲೂ ತೆರೆದಿಟ್ಟು, ಮೇಲೆ ಅನಿಂದೆ ರೂಪ ರತ್ನದ ಉತ್ತಮ ಕಳಸವನ್ನು ಹಚ್ಚಿರುವನು ।೧೫೦೮॥

ಶ್ಲೋಕಾರ್ಥ :- ಪರಮ ಗೋಪ್ಯವಾದ ಈ ಗೀತಾಜ್ಞಾನವನ್ನು ನನ್ನ ಭಕ್ತರಿಗೆ ಬೋಧಿಸುವವನು, ನನಗೆ ಪರಮ ಭಕ್ತನಾಗಿ ಪ್ರಕಾಶಿಸಿ ನಿಶ್ಚಯವಾಗಿ ನನ್ನನ್ನೇ ಸೇರುತ್ತಾನೆ ।೬೮॥

ಇಂಥ ಉತ್ತಮ ಭಕ್ತರೂಪ ದೇವಾಲಯದಲ್ಲಿ ಗೀತಾರೂಪ ರತ್ನೇಶ್ವರನ ಸ್ಥಾಪನೆಯನ್ನು ಮಾಡಿದರೆ ನಿನಗೆ ಈ ಜಗತ್ತಿನಲ್ಲಿ ನನ್ನ ಯೋಗ್ಯತೆಯು ಪ್ರಾಪ್ತವಾಗುವುದು ।೧೫೦೯॥

ಕಾರಣ, ಒಂದೇ ಅಕ್ಷರದಿಂದ ಅಕಾರ, ಉಕಾರ, ಹಾಗೂ ಮಕಾರ ಈ ಮೂರು ಮಾತ್ರೆಯ ಹೊಟ್ಟೆಯಲ್ಲಿ ಓಂಕಾರವು ಗರ್ಭವಾಸದಂತೆ ಸಿಲುಕಿಕೊಂಡಿತ್ತು ।೧೫೧೦॥

ಆ ವೇದದ ಬೀಜಾಕ್ಷರವಾದ ಓಂಕಾರವು ಗೀತಾರೂಪ ವೃಕ್ಷದ ವಿಸ್ತಾರವನ್ನು ಕಂಡು, ಅದರಲ್ಲಿನ ಶ್ಲೋಕಗಳು ಗಾಯತ್ರಿರೂಪ ಫಲಪುಷ್ಪಗಳಾದವು ।೧೫೧೧॥

ಇಂಥ ಮಂತ್ರಯುಕ್ತ ರಹಸ್ಯವಾದ ಗೀತೆಯನ್ನು ತಾಯಿಯ ಸ್ತನಪಾನ ಹೊರತು ಅನ್ಯ ಜೀವನವಿರದ ಕೂಸಿಗೆ ತಾಯಿಯ ಭೇಟಿಯನ್ನು ಮಾಡಿಸಿದಂತೆ, ನನ್ನ ಭಕ್ತರಿಗೆ ಹೇಳುವನೋ ।೧೫೧೨॥

ಈ ರೀತಿಯಾಗಿ ನನ್ನ ಭಕ್ತರಿಗೆ ಆದರದಿಂದ ಗೀತೆಯ ಭೇಟಿಯನ್ನು ಮಾಡಿಸುವವನು, ಮರಣದ ನಂತರ ಮದ್ರೂಪನಾಗುವನು ।೧೫೧೩॥

ಶ್ಲೋಕಾರ್ಥ :- ಅವನಿಗಿಂತ ಪ್ರಿಯ ಕಾರ್ಯವನ್ನು ಮಾಡುವವರು ಲೋಕದ ಮಾನವರಲ್ಲಿ ನನಗೆ ಯಾರೂ ಇಲ್ಲ ; ಇರಲಾರರು ; ಎಂದರೆ ಮುಂದೆ ಹುಟ್ಟುವುದಿಲ್ಲವೆಂದರ್ಥ ।೬೯॥

ಮತ್ತು ದೇಹಧಾರಣೆಯನ್ನು ಮಾಡಿಯೂ ಜೀವದಿಂದ, ಪ್ರಾಣದಿಂದ ದೇಹದೊಂದಿಗೆ ಅಲಿಪ್ತನಾಗಿರುವವನೇ, ನನಗೆ ಅತ್ಯಂತ ಪ್ರಿಯನಾಗಿರುವನು ।೧೫೧೪॥

ಜ್ಞಾನಿಯು, ಕರ್ಮಠನು ಹಾಗೂ ತಪಸ್ವಿಯು, ಇವರು ನನ್ನನ್ನು ತಿಳಿಯುವರು ನಿಜ, ಆದರೆ ಅವರೆಲ್ಲರಲ್ಲಿ ಗೀತಾರ್ಥವನ್ನು ತಿಳಿದವನು ನನಗೆ ಅತ್ಯಂತ ಪ್ರಿಯನು ।೧೫೧೫॥

ಹೇ ಪಾಂಡವನೇ, ಯಾವನು ನನ್ನ ಭಕ್ತ ಜನರ ಸಮುದಾಯಕ್ಕೆ ಗೀತಾಶಾಸ್ತ್ರವನ್ನು ಹೇಳುವನೋ, ಆತನಂತೆ ಈ ಪೃಥ್ವಿಯಲ್ಲಿ ನನಗೆ ಬೇರೆ ಯಾರೂ ಪ್ರಿಯರಲ್ಲ ।೧೫೧೬॥

ಮಜ ಈಶ್ವರಾಚೇನಿ ಲೋಭೇ । ಹೇ ಗೀತಾ ಪಢತಾ ಅಕ್ಷೋಭೇ । ಜೋ ಮಂಡನ ಹೋಯ ಸಭೇ । ಸಂತಾಚಿಯೆ ।।೧೫೧೭।। ನವಪಲ್ಲವಿ ರೋಮಾಂಚಿತು । ಮಂದಾನಿಳೇ ಕಾಂಪವಿತು । ಆಮೋದಜಳೇ ವೋಲವಿತು । ಫುಲಾಂಚೇ ಡೋಳೇ ।।೧೫೧೮।। ಕೋಕಿಳಾ ಕಲರವಾಚೇನಿ ಮಿಷೇ । ಸದ್ಗದ ಬೋಲವೀತ ಜೈಸೇ । ವಸಂತ ಕಾ ಪ್ರವೇಶೇ । ಮದ್ಭಕ್ತ ಆರಾಮೀ ।।೧೫೧೯।। ಕಾ ಜನ್ಮಾ ಚೇ ಫಳ ಚಕೋರಾ । ಹೋತ ಜೈ ಚಂದ್ರ ಯೇ ಅಂಬರಾ । ನಾನಾ ನವಘನ ಮಯೂರಾ । ವೋ ದೇತ ಪಾವೇ ।।೧೫೨೦।। ತೈಸಾ ಸಜ್ಜನಾಂಚ್ಯಾ ಮೇಳಾಪೀ । ಗೀತಾಪದ್ಯ ರತ್ನೀ ಉಮಪೀ । ವರ್ಷೇ ಜೋ ಮಾಝ್ಯಾ ರೂಪೀ । ಹೇತು ಠೇಊನೀ ।।೧೫೨೧।। ಮಗ ತಯಾಚೇನಿ ಪಾಡೇ । ಪಢಿಯಂತೇ ಮಜ ಪುಡೇ । ನಾಹೀಚಿ ಗಾ ಮಾಗೇಪುಢೇ । ನ್ಯಾಹಾಳಿತಾ ।।೧೫೨।। ಅರ್ಜುನಾ ಹಾ ಠಾಯವರೀ । ಮೀ ತಯಾತೇ ಸೂಯೇ ಜಿವ್ಹಾರೀ । ಜೋ ಗೀತಾರ್ಥಾಚೇ ಕರೀ । ಪರಗುಣೇ ಸಂತಾ ।।೧೫೨೩।।

ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।
ಜ್ಞಾನಯಜ್ಞೇನ ತೇನಾಹಂ ಮಿಷ್ಟಃ ಸ್ಯಾಮಿತಿ ಮೇ ಮತಿಃ ।।೭೦।।

ಪೈ ಮಾಝಿಯಾ ತುಝಿಯಾ ಮಿಳಣೀ । ವಾಢೀನಲೀ ಜೇ ಹೇ ಕಹಾಣೀ । ಮೋಕ್ಷಧರ್ಮ ಕಾ ಜಿಣೀ । ಆಲಾಸೇ ಜೇಥೇ ।।೧೫೨೪।। ತೋ ಹಾ ಸಕಳಾರ್ಥ ಪ್ರಬೋಧು । ಆಮ್ಹಾ ದೋಘಾಂಚಾ ಸಂವಾದು । ನ ಕರಿತಾ ಪದಭೇದು । ಪಾಠೇಚಿ ಜೋ ಪಢೇ ।।೧೫೨೫।। ತೇಣೇ ಜ್ಞಾನಾನಳೀ ಪ್ರದೀಪ್ತೀ । ಮೂಳ ಅವಿದ್ಯೇಚಿಯಾ ಆಹುತೀ । ತೋಷವಿಲಾ ಹೋಯಸುಮತೀ । ಪರಮಾತ್ಮಾ ಮೀ ।।೧೫೨೬।। ಫೇಊನಿ ಗೀತಾರ್ಥ ಉಗಾಣಾ । ಜ್ಞಾನಿಯೇ ಜೇ ವಿಚಕ್ಷಣಾ । ಠಾಕಿತೀ ತೇ ಗಾಣಾವಾಣಾ । ಗೀತೇಚಾ ತೋ ಲಾಹೇ ।।೧೫೨೭।। ಗೀತಾ ಪಾಠ ಕಾಸಿ ಅಸೇ । ಫಳ ಅರ್ಥಜ್ಞಾಚಿ ಸರಿಸೇ । ಗೀತಾ ಮಾಉಲಿಯೇಸೀ ನಸೇ । ಜಾಣೇ ತಾನ್ಹೇ ।।೧೫೨೮।।

ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।
ಸೋऽಪಿಮುಕ್ತಃ ಶುಭಾನ್ ಲೋಕಾನ್ ಪ್ರಾಪ್ನುಯಾತ್ಪುಣ್ಯಕರ್ಮಣಾಮ್ ।।೭೧।।

ಆಣಿ ಸರ್ವಮಾರ್ಗೀ ನಿಂದಾ । ಸಾಂಡೂನಿ ಆಸ್ಥಾ ಪೈ ಶುದ್ಧಾ । ಗೀತಾ ಶ್ರವಣೀ ಶ್ರದ್ಧಾ । ಉಭಾರೀ ಜೋ ।।೧೫೨೯।।

ಈ ಶ್ವರನಾದ ನನ್ನ ಪ್ರೀತಿಗಾಗಿ ತನ್ನ ಮನವನ್ನು ಸ್ಥಿರಗೊಳಿಸಿ ಯಾವನು ನನ್ನ ಭಕ್ತರಿಗೆ ಗೀತಾಶಾಸ್ತ್ರವನ್ನು ಹೇಳುವನೋ, ಆತನು ಸಂತ ಜನರ ಮುಕುಟಮಣಿಯೇ ಆಗಿರುವನು ॥೧೫೧೭॥

ನೂತನ ಪಲ್ಲವದಂತೆ ಅಂತಃಕರಣವನ್ನು ರೋಮಾಂಚಗೊಳಿಸುವ, ಮಂದ ವಾಯುವಿನಿಂದ ಗಿಡವು ಅಲುಗಾಡುವಂತೆ, ಶ್ರೋತೃಗಳು ಆನಂದದಿಂದ ಅಲುಗಾಡುವಂತೆ, ಭಕ್ತಿ ಪ್ರೇಮ ಸುಗಂಧರೂಪ ನೀರಿನಿಂದ ಹೂವಿನಂತಿರುವ ಕಣ್ಣುಗಳಿಂದ ಆನಂದಾಶ್ರುಗಳು ತುಂಬಿ ಹರಿಯುವಂತೆ ॥೧೫೧೮॥

ಕೋಗಿಲೆಯಂತೆ ಮಧುರತೆಯಿಂದ ಸದ್ಗದಿತ ವಾಣಿಯಿಂದ ಹೇಳುವವನ ಕಂಠವನ್ನು ಗೀತೆ ಬಿಗಿದು, ಶ್ರವಣವನ್ನು ಮಾಡುವ ನನ್ನ ಭಕ್ತ ರೂಪ ಉದ್ಯಾನದಲ್ಲಿ ಗೀತಾ ವಾಕ್ಯರೂಪ ವಸಂತ ಋತು ಪ್ರವೇಶಿಸಿದಂತೆ ॥೧೫೧೯॥

ಅಥವಾ ಚಂದ್ರನು ಆಕಾಶದಲ್ಲಿ ಉದಯವಾದಾಗಲೇ ಚಕೋರಕ್ಕೆ ಜನ್ಮ ಸಾರ್ಥಕವಾಗುವುದು. ಅಥವಾ ಹೊಸ ಮೋಡಗಳು ನವಿಲಿನ ಕೂಗಿಗೆ "ವೋ" ಎನ್ನುತ್ತ ಬರುವುವೋ ಏನೋ ॥೧೫೨೦॥

ಅದರಂತೆ ನನ್ನ ಪ್ರಾಪ್ತಿಯ ಮೇಲೆ ದೃಷ್ಟಿಯನ್ನಿಟ್ಟು ಯಾವನು ಸಂತರ ಸಭೆಯಲ್ಲಿ ಗೀತಾ ಪದ್ಯರೂಪ ರತ್ನದ ವೃಷ್ಟಿಯನ್ನು ಮಾಡುವನೋ ॥೧೫೨೧॥

ಆಗ ಆ ಯೋಗ್ಯತೆಯ ಪ್ರೇಮದ ಭಕ್ತನು, ವಿಚಾರ ಮಾಡಿ ನೋಡಿದರೆ, ಹಿಂದಕ್ಕೆ ಅಂಥವನು ಸಿಕ್ಕಿರುವುದಿಲ್ಲ. ಮುಂದೆಯೂ ನನಗೆ ಸಿಗಲಾರನು ! ॥೧೫೨೨॥

ಅರ್ಜುನಾ, ಈ ಪ್ರಕಾರವಾಗಿ ಯಾವನು ಗೀತೆಯ ಅರ್ಥದ ಭೋಜನ ಕೂಟವನ್ನು ಸಂತಜನರಲ್ಲಿ ಮಾಡುವನೋ, ಆತನನ್ನು ನಾನು ನನ್ನ ಹೃದಯದಲ್ಲಿ ಧರಿಸುವೆನು ॥೧೫೨೩॥

ಶ್ಲೋಕಾರ್ಥ :- ನಮ್ಮ ಈ ಧಾರ್ಮಿಕ ಸಂವಾದವನ್ನು ಪಠಿಸುವ ಪುರುಷನು ಯಜ್ಞದಿಂದ ನನ್ನನ್ನು ಪೂಜಿಸಿದವನಾಗುತ್ತಾನೆ, ಇದು ನನ್ನ ಮತ ॥೭೦॥

ನನ್ನ ಹಾಗೂ ನಿನ್ನ ಸಮಾಗಮದಲ್ಲಿ ಯಾವ ಈ ಆದ ಸಂವಾದವು ಇದು ಈ ಪೃಥ್ವಿಯ ಮೇಲೆ ಮೋಕ್ಷವನ್ನು ಗೆಲ್ಲಲು ಬಂದಿರುವುದು ॥೧೫೨೪॥

ಯಾವ ಸಕಲಾರ್ಥವನ್ನು ಪ್ರಾಪ್ತ ಮಾಡಿಕೊಡುವ ಈ ನಮ್ಮಿಬ್ಬರ ಸಂವಾದವು, ಅದರಲ್ಲಿನ ಪದಗಳ ವಿಚಾರವನ್ನು ಮಾಡದೇ ಯಾವನು ಕೇವಲ ಪಠಣ ಮಾಡುವನೋ ॥೧೫೨೫॥

ಸುಮತಿಯೇ, ಆತನು ಜ್ಞಾನರೂಪ ಪ್ರಜ್ವಲಿತವಾದ ಅಗ್ನಿಯಲ್ಲಿ ಅಜ್ಞಾನದ ಆಹುತಿಯನ್ನು ಕೊಟ್ಟು ಪರಮಾತ್ಮನಾದ ನನಗೆ ಸಂತೋಷಪಡಿಸುವಂತೆ ಆಗುವುದು ॥೧೫೨೬॥

ಗೀತೆಯ ಅರ್ಥದ ಅನುಭವ ಪಡೆದು ಯಾವ ಶೋಧಕ ಜ್ಞಾನಿಯು ಯಾವ ಯೋಗ್ಯತೆಯನ್ನು ಪಡೆಯುವನೋ, ಅದೇ ಯೋಗ್ಯತೆಯನ್ನು ಗೀತೆಯನ್ನು ಹಾಡುವವರು, ವರ್ಣಿಸುವವರು ಪಡೆಯುವರು ॥೧೫೨೭॥

ಗೀತೆಯ ಪಾಠವನ್ನು ಮಾಡುವವನಿಗೆ ಗೀತೆಯ ಅರ್ಥವನ್ನು ತಿಳಿದವನಷ್ಟೇ ಫಲ ಪ್ರಾಪ್ತಿಯಾಗುವುದು. ಕಾರಣ ಗೀತಾತಾಯಿಯಲ್ಲಿ ಜ್ಞಾನಿ, ಅಜ್ಞಾನಿ ಬಾಲಕ ಎಂಬ ಭೇದವಿರುವುದಿಲ್ಲ ॥೧೫೨೮॥

ಶ್ಲೋಕಾರ್ಥ :- ಶ್ರದ್ಧೆಯಿಂದ ಅಸೂಯಾ ರಹಿತನಾಗಿ ಈ ಗೀತಾಶಾಸ್ತ್ರವನ್ನು ಶ್ರವಣ ಮಾಡುವ ಮಾನವನು ಪಾಪರಹಿತನಾಗಿ ಪುಣ್ಯವಂತರಿಗೆ ಯೋಗ್ಯವಾದ ಊರ್ಧ್ವ ಲೋಕವನ್ನು ಪಡೆಯಬಲ್ಲನು ॥೭೧॥

ಮತ್ತು ಎಲ್ಲ ಪ್ರಕಾರಗಳ ನಿಂದೆಯನ್ನು ಬಿಟ್ಟು ಶುದ್ಧವಾದ ಆಸ್ಥೆಯಿಂದ ಯಾವನು ಗೀತೆಯ ಶ್ರವಣದಲ್ಲಿ ಶ್ರದ್ಧೆಯನ್ನಿಡುವನೋ ॥೧೫೨೯॥

ತಯಾಚ್ಯಾ ಶ್ರವಣಪುಟೀ । ಗೀತೇಚೀ ಅಕ್ಷರೇ ಜಂವ ಪೈಠೀ । ಹೋತೀನಾ ತಂವ ಉಠಾಉಠೀ । ಪಳೇಚಿ ಪಾಪ ॥೧೫೩೦॥ ಅಟವಿಯೇಮಾಜೀ ಜೈಸಾ । ವನ್ಹಿ ರಿಘತಾ ಸಹಸಾ । ಲಂಘಿತೀ ಕಾ ದಿಶಾ । ವನೌಕೇ ತಿಯೇ ॥೧೫೩೧॥ ಕಾ ಉದಯಾಚಳಕುಳೀ । ಝಳಕತಾ ಅಂಶುಮಾಳೀ । ತಿಮಿರೇ ಅಂತರಾಳೀ । ಹಾರಪತೀ ॥೧೫೩೨॥ ತೈಸಾ ಕಾನಾಚ್ಯಾ ಮಹಾದ್ವಾರೀ । ಗೀತಾ ಗಜರ ಜೇಥ ಕರೀ । ತೇಥ ಸೃಷ್ಟೀಚಿಯೇ ಆದೀವರೀ । ಜಾಯಚಿ ಪಾಪ ॥೧೫೩೩॥ ಐಸೀ ಜನ್ಮವೇಲೀ ಧುವಟ । ಹೋಯ ಪುಣ್ಯರೂಪ ಚೋಖಟ । ಯಾಹೀವರೀ ಅಚಾಟ । ಲಾಹೇ ಫಳ ॥೧೫೩೪॥ ಜೇ ಇಯೆ ಗೀತೇಚೀ ಅಕ್ಷರೇ । ಜೇತುಲೀ ಕಾ ಕರ್ಣದ್ವಾರೇ । ರಿಘತೀ ತೇತುಲೇ ಹೋತೀ ಪುರೇ । ಅಶ್ವಮೇಧ ಕೀ ॥೧೫೩೫॥ ಮ್ಹಣೌನಿ ಶ್ರವಣೇ ಪಾಪೇ ಜಾತೀ । ಆಣಿ ಧರ್ಮ ಧರೀ ಉನ್ನತೀ । ತೇಣೇ ಸ್ವರ್ಗರಾಜ ಸಂಪತ್ತೀ । ಲಾಹೇಚಿ ಶೇಖೀ ॥೧೫೩೬॥ ತೋ ಪೈ ಮಜ ಯಾವಯಾ ಲಾಗೀ । ಪಹಿಲೇ ಪೆಣೇ ಕರೀ ಸ್ವರ್ಗೀ । ಮಗ ಆವಡೇ ತಂವ ಭೋಗೀ । ಪಾಠೀ ಮಜಚಿ ಮಿಳೇ ॥೧೫೩೭॥ ಐಸೀ ಗೀತಾ ಧನಂಜಯಾ । ಐಕತಯಾ ಆಣಿ ಪಢತಯಾ । ಫಳೇ ಮಹಾನಂದೇ ಮಿಯಾ । ಬಹು ಕಾಯ ಬೋಲೋ ॥೧೫೩೮॥ ಯಾ ಕಾರಣೇ ಹೇ ಅಸೋ । ಪರೀ ಜಯಾಲಾಗೀ ಶಾಸ್ತ್ರಾತಿಸೋ । ಕೇಲಾ ತೇ ತಂವ ತುಜ ಪುಸೋ । ಕಾಜ ತುಝೋ ॥೧೫೩೯॥

ಕಚ್ಚಿದೇತುಚ್ಛ್ರುತಂ ಪಾರ್ಥ ತ್ವಯ್ಯೈಕಾಗ್ರೇಣ ಚೇತಸಾ ।
ಕಚ್ಚಿದಜ್ಞಾನಸಂಮೋಹಃ ಪ್ರನಷ್ಟಸ್ತೇ ಧನಂಜಯ ॥೭೨॥

ತರೀ ಸಾಂಗ ಪಾಂಡವಾ । ಹಾ ಶಾಸ್ತ್ರಸಿದ್ಧಾಂತು ಆಘವಾ । ತುಜ ಏಕ ಚಿತ್ತೀ ಠಾವಾ । ಗೇಲಾ ಆಹೇ ? ॥೧೫೪೦॥ ಆಮ್ಹೀ ಜೈಸೇ ಜಯಾ ರೀತೀ । ಉಗಾಣಿಲೇ ಕಾನಾಂಚ್ಯಾ ಹಾತೀ । ಯೇರೀ ತೈಸೇಚಿ ತುಝ್ಯಾ ಚಿತ್ತೀ । ಪೈಠೇ ಕೇಲೇ ಕೀ ? ॥೧೫೪೧॥ ಅಥವಾ ಮಾಝಾರೀ । ಗೇಲೇ ಸಾಂಡಿವಿಖುರೀ । ಕಿಂವಾ ಉಪೇಕ್ಷೇವರೀ । ವಾಳೂನಿ ಸಾಂಡಿಲೇ ॥೧೫೪೨॥ ಜೈಸೇ ಆಮ್ಹೀ ಸಾಂಗಿತಲೇ । ತೈಸೇಚಿ ಹೃದಯೀ ಠಾವಲೇ । ತರೀ ಸಾಂಗ ಪಾ ವಹಿಲೇ । ಪುಸೇನ ತೇ ಮೀ ॥೧೫೪೩॥ ತರೀ ಸ್ವಾಜ್ಞಾನಜನಿತೇ । ಮಾಗಿಲೇ ಮೋಹೇ ತೂತೇ । ಭುಲವಿಲೇ ತೋ ಯೇಥೇ । ಅಸೇ ಕೀ ನಾಹೀ ? ॥೧೫೪೪॥

ಆತನ ಕಿವಿಗಳಿಗೆ ಗೀತೆಯ ಅಕ್ಷರಗಳು ಬಿದ್ದೊಡನೆಯೇ ಪಾತಕಗಳು ದಿಕ್ಕೆಟ್ಟು ಓಡಿ ಹೋಗುವುವು ।।೧೫೩೦।।

ಅರಣ್ಯದಲ್ಲಿ ಸಹಜವಾಗಿ ಅಗ್ನಿಯು ಪ್ರವೇಶವಾಯಿತೆಂದರೆ, ಅಲ್ಲಿನ ವನಚರಗಳು ಹಾಗೂ ಪಶುಪಕ್ಷಿ ಇತ್ಯಾದಿ ಎಲ್ಲವೂ ದಶದಿಕ್ಕುಗಳಿಗೆಓಡಿ ಹೋಗುವುವು ।।೧೫೩೧।।

ಅಥವಾ ಪೂರ್ವದಿಕ್ಕಿನಲ್ಲಿ ಸೂರ್ಯನು ಉದಯವಾದನೆಂದರೆ ಆಕಾಶದಲ್ಲಿನ ಕತ್ತಲೆಯು ಇಲ್ಲದಾಗುವುದು ।।೧೫೩೨।।

ಅದರಂತೆ ಗೀತೆಯ ಘೋಷವು ಕಿವಿಯ ಮಹಾದ್ವಾರದಿಂದ ಅಂತಃಕರಣದಲ್ಲಿ ಹೋಯಿತೆಂದರೆ ಸೃಷ್ಟಿ ಉತ್ಪನ್ನವಾಗುವುದಕ್ಕಿಂತ ಮುಂಚಿತದ ಪಾಪಗಳು ಸಹ ಇಲ್ಲದಾಗುವುವು ।।೧೫೩೩।।

ಈ ರೀತಿಯಲ್ಲಿ ಸರ್ವಕಾಲದಲ್ಲಿ ಪವಿತ್ರನಾಗಿ ಆ ಪುರುಷನು ಕೇವಲ ಪುಣ್ಯ ಪುರುಷನಾಗುವನು. ಈ ಪ್ರಕಾರವಾಗಿ ಆತನಿಗೆ ಅಲಭ್ಯ ಲಾಭವಾಗುವುದು ।।೧೫೩೪।।

ಈ ಗೀತೆಯ ಎಷ್ಟು ಅಕ್ಷರಗಳು ಅಂತಃಕರಣದಲ್ಲಿ ಪ್ರವೇಶವಾಗುವುವೋ, ಅಷ್ಟೇ ಅಶ್ವಮೇಧಯಾಗವನ್ನು ಮಾಡಿದ ಪುಣ್ಯವು ಲಭಿಸುವುದು ।।೧೫೩೫।।

ಆದ್ದರಿಂದ ಗೀತೆಯ ಶ್ರವಣದಿಂದ ಪಾಪವು ಇಲ್ಲದಾಗಿ ಧರ್ಮದ ವೃದ್ಧಿಯಾಗುವುದು, ಹಾಗೂ ಇದರಿಂದ ಕೊನೆಗೆ ಸ್ವರ್ಗದ ರಾಜ್ಯವನ್ನು ಉಪಭೋಗಿಸಲು ದೊರೆಯುವುದು ।।೧೫೩೬।।

ಇಂಥ ಯಾವ ಪುರುಷನು ಯಾವ ನನ್ನ ಪ್ರಾಪ್ತಿಯ ಮೊದಲನೆಯ ಮುಕ್ಕಾಮವಾದ ಸ್ವರ್ಗ ಲೋಕವನ್ನು ಸೇರಿ ಅಲ್ಲಿ ಯಥೇಚ್ಛ ಸುಖವನ್ನು ಭೋಗಿಸಿ ನಂತರ ನನ್ನನ್ನೇ ಕೂಡುವನು ।।೧೫೩೭।।

ಧನಂಜಯನೇ, ಹೆಚ್ಚಿಗೇನು ಹೇಳಬೇಕು ? ಗೀತೆಯನ್ನು ಕೇಳುವವರಿಗೆ ಹಾಗೂ ಪಾಠವನ್ನು ಮಾಡುವವರಿಗೆ ಆನಂದರೂಪನಾದ ನನ್ನ ಪ್ರಾಪ್ತಿಯು ದೊರೆಯುವುದು ।।೧೫೩೮।।

ಈಗ ಆದಿರಲಿ, ಆದರೆ ಯಾವ ಕಾರಣಕ್ಕಾಗಿ ಈ ಗೀತಾಶಾಸ್ತ್ರವನ್ನು ಹೇಳಲು ನಾನು ಆರಂಭಿಸಿರುವ, ಆ ನಿನ್ನ ಕಾರ್ಯವಾಯಿತೆ ? ।।೧೫೩೯।।

ಶ್ಲೋಕಾರ್ಥ :- ಪಾರ್ಥಾ ! ಇದೆಲ್ಲವನ್ನು ಏಕಾಗ್ರ ಚಿತ್ತದಿಂದ ಕೇಳಿದೆಯಲ್ಲವೇ ! ಅರ್ಜುನಾ ! ನಿನ್ನ ಅಜ್ಞಾನ ಜನ್ಯವಾದ ಮೋಹವು ಈಗಲಾದರೂ ತೊಲಗಿತಲ್ಲವೇ ? ।।೭೨।।

ಹಾಗಾದರೆ ಪಾಂಡವನೇ, ಹೇಳು ನೋಡೋಣ, ಈ ಗೀತೆಯಲ್ಲಿನ ಎಲ್ಲ ಸಿದ್ಧಾಂತಗಳು ನಿನ್ನ ಮನದಲ್ಲಿ ಪೂರ್ಣವಾಗಿ ನೆಟ್ಟಿದೆಯೇ ? ।।೧೫೪೦।।

ನಾವು ಯಾವ ರೀತಿಯಿಂದ ಈ ಸಿದ್ಧಾಂತಗಳನ್ನು ನಿನ್ನ ಕಿವಿಗಳ ಸ್ವಾಧೀನ ಮಾಡಿದಂತೆ, ಅವು ನಿನ್ನ ಚಿತ್ತದ ಸ್ವಾಧೀನ ಮಾಡಿರುವೆಯೇ ? ।।೧೫೪೧।।

ಅಥವಾ ನಡುವೆಯೇ ಲಕ್ಷವಿಲ್ಲದೇ ವ್ಯರ್ಥ ಹೋಯಿತೋ ಹೇಗೆ ? ಅಥವಾ ಕೇಳಿದ್ದನ್ನು ಹೊರ ದೂಡಿರುವಿಯಾ ? ।।೧೫೪೨।।

ನಾವು ಹೇಳಿದಂತೆಯೇ ನಿನ್ನ ಹೃದಯಕ್ಕೆ ಮುಟ್ಟಿದ್ದರೆ, ಈಗ ನಾನೇನು ಕೇಳುವೆನೋ ಅದಕ್ಕೆ ಬೇಗನೇ ಉತ್ತರಿಸು ನೋಡೋಣ ? ।।೧೫೪೩।।

ಅರೇ, ನಿನ್ನ ಅಜ್ಞಾನದಿಂದ ಈ ಹಿಂದೆ ನಿನಗೆ ಉತ್ಪನ್ನವಾಗಿರುವ ಹಾಗೂ ನಿನಗೆ ಮರುವು ಮಾಡಿದ ಆ ಮೋಹವು ನಿನ್ನಲ್ಲಿ ಇನ್ನೂ ಇದೆಯೇ ? ಅಥವಾ ಇಲ್ಲದಾಗಿದೆಯೇ ? ।।೧೫೪೪।।

ಹೇ ಬಹು ಪುಸೋ ಕಾಈ । ಸಾಂಗೇ ತೂ ಆಪುಲ್ಯಾ ಠಾಈ । ಕರ್ಮಾಕರ್ಮ ಕಾಂಹೀ । ದೇಖತಾಸೀ ? ।।೧೫೪೫।। ಪಾರ್ಥು ಸ್ವಾನಂದೈಕರಸೇ । ವಿರೇಲ ಐಸಾ ಭೇದದಶೇ । ಆಣಿಲಾ ಯೇಣೇ ಮಿಷೇ । ಪ್ರಶ್ನಾ ಚೇನಿ ।।೧೫೪೬।। ಪೂರ್ಣ ಬ್ರಹ್ಮ ಜಾಲಾ ಪಾರ್ಥು । ತರೀ ಪುಢೀಲ ಸಾಧಾವಯಾ ಕಾರ್ಯಾರ್ಥು । ಮರ್ಯಾದಾ ಶ್ರೀಕೃಷ್ಣನಾಥು । ಉಲ್ಲಂಘೋ ನೇದೀ ।।೧೫೪೭।। ಯೇರ್ಹವೀ ಆಪುಲೇ ಕರಣೇ । ಸರ್ವಜ್ಞ ಕಾಯ ತೋ ನೇಣೇ ? । ಪರೀ ಕೇಲೇ ಪುಸಣೇ । ಯಾಚಿಲಾಗೀ ।।೧೫೪೮।। ಏವಂ ಕರೋನಿಯಾ ಪ್ರಶ್ನ । ನಸತೇಂಚಿ ಅರ್ಜುನಪಣ । ಆಣೂನಿಯಾ ಜಾಲೇ ಪೂರ್ಣಪಣ । ತೇ ಬೋಲವೀ ಸ್ವಯೇ ।।೧೫೪೯।। ಮಗ ಕ್ಷೀರಾಬ್ಧೀತೇ ಸಾಂಡಿತು । ಗಗನೀ ಪುಂಜು ಮಂಡಿತು । ನಿವಡೇ ಜೈಸಾ ನ ನಿವಡಿತು । ಪೂರ್ಣಚಂದ್ರು ।।೧೫೫೦।। ತೈಸಾ ಬ್ರಹ್ಮ ಮೀ ಹೇ ವಿಸರೇ । ತೇಥ ಜಗಚಿ ಬ್ರಹ್ಮತ್ವೇ ಭರೇ । ಹೇಂಹೀ ಸಾಂಡೀ ತರೀ ವಿರೇ । ಬ್ರಹ್ಮಪಣಹೀ ।।೧೫೫೧।। ಐಸಾ ಮೋಡತು ಮಾಂಡತು ಬ್ರಹ್ಮೇ । ತೋ ದುಃಖೇ ದೇಹಾಚಿಯೆ ಸೀಮೇ । ಮೀ ಅರ್ಜುನ ಯೇಣೇ ನಾಮೇ । ಉಭಾ ಠೇಲಾ ।।೧೫೫೨।। ಮಗ ಕಾಂಪತಾ ಕರತಳೀ । ದಡಪೂನಿ ರೋಮಾವಳೀ । ಪುಲಿಕಾ ಸ್ವೇದವಳೀ । ಜಿರಊನಿಯಾ ।।೧೫೫೩।। ಪ್ರಾಣ ಕ್ಷೋಭೇ ಡೋಲತಯಾ । ಆಂಗಾ ಆಂಗಚಿ ಟೇಕಯಾ । ಸೂನಿ ಸ್ತಂಭು ಚಾಳಯಾ । ಭುಲೌನಿಯಾ ।।೧೫೫೪।। ನೇತ್ರಯುಗಳಾಚೇನಿ ವೋತೇ । ಆನಂದಾಮೃತಾಚೇ ಭರಿತೇ । ವೋಸಂಡತ ತೇ ಮಾಗುತೇ । ಕಾಢೂನಿಯಾ ।।೧೫೫೫।। ವಿವಿಧಾ ಔತ್ಸುಕ್ಯಾಂಚೇ ದಾಟೇ । ಚೇಪ ದಾಟತ ಹೋತೀ ಕಂಠೀ । ತೇ ಕರೂನಿಯಾ ಪೈಠೀ । ಹೃದಯಾಮಾಜೀ ।।೧೫೫೬।। ವಾಚೇಚೇ ವಿತುಳಣೇ । ಸಾಂವರೂನಿ ಪ್ರಾಣೇ । ಅಕ್ರಮಾಚೇ ಶ್ವಸಣೇ । ಠೇಊನಿ ಠಾಈ ।।೧೫೫೭।।

ಅರ್ಜುನ ಉವಾಚ :-

ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ ।
ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ।।೭೩।।

ಮಗ ಅರ್ಜುನ ಮ್ಹಣೇ ಕಾಯ ದೇವೋ । ಪುಸತಾತಿ ಆವಡೇ ಮೋಹೋ । ತರೀ ತೋ ಸಕುಟುಂಬ ಗೇಲಾ ಜೀ ಠಾವೋ । ಘೇಊನಿ ಆಪುಲಾ ।।೧೫೫೮।। ಪಾಸೀ ಯೇಊನಿ ದಿನಕರೇ । ಡೋಳ್ಯಾಂತೇ ಅಂಧಾರೇ । ಪುಸಿಜೇ ಹೇ ಕಾಯಿ ಸರೇ । ಕೋಣೆ ಗಾಂವೀ ? ।।೧೫೫೯।।

ಹೆಚ್ಚಿಗೇನು ಕೇಳುತ್ತ ಸಾಗಲಿ? ನೀನು ಆತ್ಮ ಸ್ವರೂಪದಲ್ಲಿ ಪಾಪ ಪುಣ್ಯವನ್ನು ತಿಳಿಯುತ್ತಿರುವಿಯಾ? ಇಷ್ಟೊಂದು ಹೇಳಿದರೆ ಸಾಕು ।೧೫೪೫॥

ಪಾರ್ಥಾ, ನಿಜಾನಂದೈಕ್ಯ ರೂಪದಲ್ಲಿ ಮಗ್ನನಾಗಿ ಹೋಗುವಿ ಎಂದು ತಿಳಿದು ಈ ಪ್ರಶ್ನೆಯ ನಿಮಿತ್ತದಿಂದ ನಿನಗೆ ದೇಹಬುದ್ಧಿಯ ಮೇಲೆ ತಂದಿರುವೆನು ।೧೫೪೬॥

ಪಾರ್ಥನು ಪೂರ್ಣ ಬ್ರಹ್ಮಸ್ವರೂಪನಾದರೆ ತನ್ನ ಮುಂದಿನ ಕಾರ್ಯವು ಸಾಧಿಸಲಾರದೆಂದು ಶ್ರೀಕೃಷ್ಣನಾಥನು ಆತನಿಗೆ ಭೇದದಶೆಯ ಮರ್ಯಾದೆಯನ್ನು ಉಲ್ಲಂಘಿಸಲಿಲ್ಲ ।೧೫೪೭॥

ಇಲ್ಲದಿದ್ದರೆ, ಸರ್ವಜ್ಞನಾದ ಶ್ರೀಕೃಷ್ಣನಿಗೆ ತನ್ನ ಕಾರ್ಯದ ಬಗ್ಗೆ ತಿಳಿದಿರಲಿಲ್ಲವೇ? ಆದರೆ ಆತನು ಇದೇ ಕಾರಣದಿಂದ ಅರ್ಜುನನಿಗೆ ಪ್ರಶ್ನೆ ಮಾಡಿದನು ।೧೫೪೮॥

ಈ ಪ್ರಕಾರದ ಪ್ರಶ್ನೆಯನ್ನು ಮಾಡಿ ಇಲ್ಲದಾಗಿದ್ದ ಅರ್ಜುನತ್ವವನ್ನು ತಂದು ಅರ್ಜುನನು ಪೂರ್ಣದಶೆಗೆ ಬಂದದ್ದು ಆತನಿಂದಲೇ ದೇವನು ನುಡಿಸಿದನು ।೧೫೪೯॥

ಉದಯದ ವೇಳೆಯಲ್ಲಿ ಕ್ಷೀರಸಮುದ್ರದಿಂದ ಮೇಲೆ ಬರುವ, ಆಕಾಶದಲ್ಲಿ ರಶ್ಮೀ ಪುಂಜದಿಂದ ಮಂಡಿತನಾದ ಪೂರ್ಣಚಂದ್ರನು ಕ್ಷೀರಸಾಗರದಿಂದ ವಸ್ತುತಃ ಭಿನ್ನನಾಗದೇ ಭಿನ್ನನಾದಂತೆ ಆಗುವನು ।೧೫೫೦॥

ಅದರಂತೆ ನಾನು ಬ್ರಹ್ಮನಾಗಿದ್ದೇನೆಂಬುವುದನ್ನು ಮರೆತು, ಎಲ್ಲ ಜಗವು ಬ್ರಹ್ಮರೂಪವಿದೆ ಎಂಬುವುದನ್ನು ಸಹ ಮರೆತು, ಬ್ರಹ್ಮತ್ವವು ತಾನೇ ಕರಗಿತು ।೧೫೫೧॥

ಹೀಗೆ ಬ್ರಹ್ಮದ ಸ್ಮೃತಿಯಿಂದ ನಡೆಯುವ ಹಾಗೂ ಬ್ರಹ್ಮದ ವಿಸ್ಮೃತಿಯಿಂದ ಬ್ರಹ್ಮರೂಪವೇ ಆಗಿರುವ ಅತಿ ಕಷ್ಟದಿಂದ ನಾನು ಅರ್ಜುನನು ಎಂದು ತಿಳಿದು ದೇಹಸ್ಥಿತಿಗೆ ಬರಬೇಕಾಯಿತು ।೧೫೫೨॥

ಆಗ ಕೈಕಾಲುಗಳು ನಡುಗಹತ್ತಿ ಶರೀರದ ಮೇಲೆ ನಿಂತಿರುವ ರೋಮಾಂಚಗಳನ್ನು ಸವರಿಸಿ, ಬೆವರಿನ ಹನಿಗಳನ್ನು ಒರೆಸಿ ।೧೫೫೩॥

ಪ್ರಾಣವಾಯುವಿನ ಹೆಚ್ಚಳದಿಂದ ತೂಗುತ್ತಿರುವ ಅಂಗಕ್ಕೆ ಅಂಗವನ್ನೇ ಆಸರೆ ಕೊಟ್ಟು ಹಾಗೂ ಸದ್ಗದಿತವಾದ ಕಂಠವನ್ನು ಆತನು ಒಳಗಿಂದೊಳಗೆಯೇ ಕರಗಿಸಿದನು ।೧೫೫೪॥

ಎರಡೂ ಕಣ್ಣುಗಳ ಕಡೆಗಳಿಂದ ಆನಂದಾಮೃತದ ಅಶ್ರುಗಳ ರೂಪದಿಂದ ಬಂದ ಪ್ರವಾಹವು ಹೊರಗೆ ಹರಿಯುತ್ತಿತ್ತು, ಅದನ್ನು ಆಮೇಲೆ ಒರೆಸಿದನು ।೧೫೫೫॥

ಅನೇಕಾನೇಕ ಉತ್ಸುಕತೆಗಳ ಭರದಿಂದ ಕಂಠವು ಬಿಗಿಯುತ್ತಿರುವದರಿಂದ ಆ ಎಲ್ಲ ಉತ್ಸುಕತೆಗಳನ್ನು ಹೃದಯದಲ್ಲಿ ಒತ್ತಿಟ್ಟು ।೧೫೫೬॥

ವಾಣಿಯ ವಿಸ್ಖಳಿತವನ್ನು ಹಾಗೂ ಪ್ರಾಣ ಕ್ಷೋಭೆಯನ್ನು ಸಾವರಿಸಿಕೊಂಡು ಮತ್ತು ಶ್ವಾಸೋಚ್ಛ್ವಾಸದ ಗತಿಯು ವಿಪರೀತವಾದದ್ದನ್ನು ಪೂರ್ವದಂತೆ ಸಾವರಿಸಿಕೊಂಡನು ।೧೫೫೭॥

ಶ್ಲೋಕಾರ್ಥ :- ಅರ್ಜುನನು ಹೇಳಿದ್ದು :- ಹೇ ಅಚ್ಯುತಾ! ನಿನ್ನ ದಯೆಯಿಂದ ನನ್ನ ಮೋಹವು ತೊಲಗಿತು; ಜ್ಞಾನವುಂಟಾಯಿತು, ಸಂದೇಹವು ನಿವೃತ್ತಿಯಾಯಿತು, ನೀನು ಹೇಳಿದ ಪ್ರಕಾರ ನಡೆಯಲು ಸಿದ್ಧನಾಗಿದ್ದೇನೆ ।೭೩॥

ಆಗ ಅರ್ಜುನನು ದೇವನಿಗೆ ಹೇಳಿದನು :- ನೀವು ನನಗೆ ಇನ್ನೂ ಮೋಹದ ಮೇಲೆ ಪ್ರೀತಿ ಇದೆಯೇ? ಎಂದು ಕೇಳಿರುವಿರಿ, ಆದರೆ ಅದು ನನ್ನಿಂದ ತನ್ನ ಕುಟುಂಬ ಸಮೇತವಾಗಿ ಸ್ಥಾನ ಬಿಟ್ಟು ತೊಲಗಿದೆ ।೧೫೫೮॥

ಸೂರ್ಯನು ಸಮೀಪ ಬಂದಿರುವಾಗ ಕಣ್ಣಿಗೆ ಕತ್ತಲೆಯು ಕಾಣಿಸುವುದೇ? ಕಾಣಿಸುವುದು ಎಂದು ಹೇಳಲು ಯಾವ ಊರಿನಲ್ಲಿ ಶೋಭೆಯಾದೀತು? ।೧೫೫೯॥

ತೈಸಾ ತೂ ಶ್ರೀಕೃಷ್ಣರಾಯಾ । ಆಮುಚಿಯಾ ಡೋಳಯಾ । ಗೋಚರ ಹೇಂಚಿ ಕಾಯಿಸಯಾ । ನ ಪುರೇ ತಂವ ।।೧೫೭೦।। ವರೀ ಲೋಭೇ ಮಾಯೇ ಪಾಸುನೀ । ತೇ ಸಾಂಗಸೀ ತೋಂಡ ಭರುನೀ । ಜೇ ಕಾಯಿಸೇನಿಹೀ ಕರೂನೀ । ಜಾಣೂ ನಯೇ ।।೧೫೭೧।। ಆತಾ ಮೋಹ ಅಸೇ ಕೀ ನಾಹೀ । ಹೇ ಐಸೇ ಜೇ ಪುಸಸೀ ಕಾಹೀ । ಕೃತಕೃತ್ಯ ಜಾಹಲೋ ಪಾಹೀ । ತುರ್ಝೇಪಣೇ ।।೧೫೭೨।। ಗುಂತಲೋ ಹೋತೋ ಅರ್ಜುನ ಗುಣೇ । ತೋ ಮುಕ್ತ ಜಾಲೋ ತುರ್ಝೇಪಣೇ । ಆತಾ ಪುಸಣೇ ಸಾಂಗಣೇ । ದೋನ್ಹೀ ನಾಹೀ ।।೧೫೭೩।। ಮೀ ತುರ್ಝೇನಿ ಪ್ರಸಾದೇ । ಲಾಧಲೇನಿ ಆತ್ಮಬೋಧೇ । ಮೋಹಾಚೇ ತಯಾ ಕಾಂದೇ । ನೇದೀಚ ಉರೋ ।।೧೫೭೪।। ಆತಾ ಕರಣೇ ಕಾ ನ ಕರಣೇ । ಹೇ ಜೇಣೇ ಉಠೀ ದುಜೇಪಣೇ । ತೇ ತೂ ವಾಂಚೂನಿ ನೇಣೇ । ಸರ್ವತ್ರ ಗಾ ।।೧೫೭೫।। ಯೇವಿಷಯೀ ಮಾರ್ಝ್ಯಾ ಠಾಯೀ । ಸಂದೇಹಾಚೇ ನುರೇಚಿ ಕಾಂಹೀ । ತ್ರಿಶುದ್ಧೀ ಕರ್ಮ ಜೇಥ ನಾಹೀ । ತೇ ಮೀ ಜಾಲೋ ।।೧೫೭೬।। ತುರ್ಝೇನಿ ಮಜ ಮೀ ಪಾವೋನೀ । ಕರ್ತವ್ಯ ಗೇಲೇ ನಿಪಟೂನೀ । ಪರೀ ಆಜ್ಞಾ ತುರ್ಝೀ ವಾಂಚೋನೀ । ಆನ ನಾಹೀ ಪ್ರಭೋ ।।೧೫೭೭।। ಕಾ ಜೇ ದೃಶ್ಯ ದೃಶ್ಯಾತೇ ನಾಶೀ । ಜೇ ದುಜೇ ದ್ವೈತಾತೇ ಗ್ರಾಸೀ । ಜೇ ಏಕ ಪರೀ ಸರ್ವದೇಶೀ । ವಸವೀ ಸದಾ ।।೧೫೭೮।। ಜಯಾಚೇನಿ ಸಂಬಂಧೇ ಬಂಧು ಫಿಟೇ । ಜಯಾಚಿಯಾ ಆಶಾ ಆಸ ತುಟೇ । ಜೇ ಭೇಟಲೇಯಾ ಸರ್ವ ಭೇಟೇ । ಆಪಣಪಾಂಚಿ ।।೧೫೭೯।। ತೇ ತೂ ಗುರುಲಿಂಗ ಜೇ ಮಾರ್ಝೇ । ಏಕಲೇಪಣೇಂಚೇ ವಿರಜೇ । ಜಯಾಲಾಗೀ ವೋಲಾಂಡಿಜೇ । ಅದ್ವೈತ ಬೋಧು ।।೧೫೮೦।। ಆಪಣಚಿ ಹೋಊನಿ ಬ್ರಹ್ಮ । ಸಾರಿಜೇ ಕೃತ್ಯಾಕೃತ್ಯಾಂಚೇ ಕಾಮ । ಮಗ ಕೀಜೇ ಕಾ ನಿಃಸೀಮ । ಸೇವಾ ಜಯಾಚೀ ।।೧೫೮೧।। ಗಂಗಾ ಸಿಂಧು ಸೇವೂ ಗೇಲೀ । ಪಾವತಾಂಚಿ ಸಮುದ್ರ ಜಾಲೀ । ತೇವೀ ಭಕ್ತಾ ಸೇಲ ದಿಧಲೀ । ನಿಜಪದಾಚೀ ।।೧೫೮೨।। ತೋ ತೂ ಮಾರ್ಝಾ ಜೇ ನಿರುಪಚಾರು । ಶ್ರೀಕೃಷ್ಣಾ ಸೇವ್ಯ ಸದ್ಗುರು । ಮಾ ಬ್ರಹ್ಮತೇಚಾ ಉಪಕಾರು । ಹಾಚಿ ಮಾನೀ ।।೧೫೮೩।। ಜೇ ಮಜ ತುಮ್ಹಾ ಆಡ । ಹೋತೇ ಭೇದಾಚೇ ಕವಾಡ । ತೇ ಫೇಡೋನಿ ಕೇಲೇ ಗೋಡ । ಸೇವಾಸುಖ ।।೧೫೮೪।। ತರೀ ಆತಾ ತುರ್ಝೀ ಆಜ್ಞಾ । ಸಕಳ ದೇವಾಧಿದೇವರಾಜ್ಞಾ । ಕರೀನ ದೇಈ ಅನುಜ್ಞಾ । ಭಲತಿಯೇವಿಷಯೀ ।।೧೫೮೫।।

ಅದರಂತೆ ಹೇ ಕೃಷ್ಣರಾಯನೇ, ನೀವು ನಮ್ಮ ಕಣ್ಣಿಗೆ ಪ್ರತ್ಯಕ್ಷವಾಗಿ ದರ್ಶನ ನೀಡಿದ ಮೇಲೆ ಮೋಹಕ್ಕೆ ನಾಶವಾಗಲು ಸಾಕಾಗಲಿಕ್ಕಿಲ್ಲವೆ? ।।೧೫೬೦।।

ಅದರಲ್ಲಿ ನೀವು ತಾಯಿಗಿಂತಲೂ ಅತಿ ಪ್ರೇಮದಿಂದ ಯಾವುದೇ ಸಾಯಾಸದಿಂದಲೂ ಯಾರಿಗೂ ತಿಳಿಯಲಾರದ ಜ್ಞಾನವನ್ನು ಸವಿಸ್ತಾರವಾಗಿ ಹೇಳಿರುವಿರಿ ।।೧೫೬೧।।

ಈಗ ಮೋಹವು ಇನ್ನೂ ಇದೆ ಅಥವಾ ಇಲ್ಲವೆನ್ನುವುದಕ್ಕೆ ನೀವು ಏಕೆ ಕೇಳುವಿರಿ? ಏಕೆಂದರೆ ನಿಮ್ಮ ಸ್ವರೂಪದಲ್ಲಿ ಕೂಡಿಕೊಂಡು ನಾನು ಇಂದು ಕೃತಾರ್ಥನಾಗಿರುವೆನು ।।೧೫೬೨।।

ನಾನು ಅರ್ಜುನನು ಎಂದು ಅಭಿಮಾನದ ಮೋಹದಲ್ಲಿ ಸಿಲುಕಿಕೊಂಡಿದ್ದೆನು, ನಿಮ್ಮ ಐಕ್ಯದಿಂದ ಮುಕ್ತನಾಗಿರುವೆನು, ಈಗ ಕೇಳುವುದು, ಹೇಳುವುದು ಎರಡೂ ಇಲ್ಲದಾಗಿದೆ ।।೧೫೬೩।।

ನನಗೆ ನಿಮ್ಮ ಪ್ರಸಾದದಿಂದ ಆತ್ಮಬೋಧೆಯು ಪ್ರಾಪ್ತವಾಗಿರುವುದರಿಂದ ನನ್ನ ಮೋಹವು ಸಮೂಲವಾಗಿ ನಷ್ಟಗೊಂಡಿರುವುದು ।।೧೫೬೪।।

ಅದ್ವೈತದಿಂದ ಕ್ರಿಯೆಯನ್ನು ಮಾಡುವುದು ಅಥವಾ ಮಾಡದಿರುವುದು ಎಂಬ ಭಾವವು ಹುಟ್ಟುತ್ತಿತ್ತು, ಈಗ ಆ ದ್ವೈತವು ನಷ್ಟವಾಗಿ ಈ ಜಗತ್ತಿನಲ್ಲಿ ನಿಮ್ಮ ಹೊರತಾಗಿ ಬೇರೆ ಏನೂ ಅರಿಯುವುದಿಲ್ಲ ।।೧೫೬೫।।

ಈ ವಿಷಯವಾಗಿ ನನ್ನಲ್ಲಿ ಸಂಶಯವು ಎಷ್ಟೂ ಉಳಿದಿರುವುದಿಲ್ಲ. ಅಂದಮೇಲೆ ನಿಜವಾಗಿಯೂ ಎಲ್ಲಿ ಕರ್ಮಗಳು ಉಳಿಯುವುದಿಲ್ಲವೋ, ಆ ಬ್ರಹ್ಮಸ್ಥಿತಿಯನ್ನು ನಾನು ಪಡೆದಿರುವೆನು ।।೧೫೬೬।।

ನಿಮ್ಮ ಯೋಗದಿಂದ ನನಗೆ ನನ್ನ ಸ್ವರೂಪವು ಪ್ರಾಪ್ತವಾಗಿ ನನ್ನ ಕರ್ತವ್ಯವು ಸಮೂಲವಾಗಿ ಇಲ್ಲದಾಗಿದೆ. ಆದರೆ ಪ್ರಭುವೇ, ನಿಮ್ಮ ಆಜ್ಞೆ ಹೊರತಾಗಿ ನನಗೆ ಬೇರೆ ಏನೂ ಮಾಡುವುದು ಉಳಿದಿರುವುದಿಲ್ಲ ।।೧೫೬೭।।

ಕಾರಣ, ದೃಶ್ಯವು ಪ್ರಾಪ್ತವಾದಾಗ, ದೃಶ್ಯಭಾವವು ನಾಶವಾಗುವುದು. ದ್ವೈತವು ಗುರುಶಿಷ್ಯ ಭಾವವನ್ನು ನಾಶಗೊಳಿಸುವುದು, ಯಾವುದು ಒಂದೇ ಇದ್ದು ಎಲ್ಲ ಜಗವನ್ನು ವ್ಯಾಪಿಸಿರುವುದು ।।೧೫೬೮।।

ಯಾವುದರ ಸಂಬಂಧದಿಂದ ಎಲ್ಲ ಬಂಧನಗಳು ಇಲ್ಲದಾಗುವುವು, ಯಾವುದರ ಆಶೆಯಿಂದ ಎಲ್ಲ ಆಶೆಗಳು ಕುಂಠಿತವಾಗುವುವು ಮತ್ತು ಯಾವುದರ ಭೇಟಿಯಿಂದ ಎಲ್ಲ ಕಡೆಯಲ್ಲಿಯೂ ಆತ್ಮಸ್ವರೂಪವೇ ಕಾಣಿಸುವುದು ।।೧೫೬೯।।

ನೀವು ನನಗೆ ಏಕತ್ವಭಾವಕ್ಕೆ ಸಹಾಯ ಮಾಡಿರುವ ಸದ್ಗುರು ಮೂರ್ತಿಯಾಗಿರುವಿರಿ. ಅದ್ವೈತದ ಬೋಧೆಯನ್ನು ಸಹ ನಿಮ್ಮಿಂದ ನಿವಾಳಿಸಿ ಒಗೆಯಬೇಕು ।।೧೫೭೦।।

ಮತ್ತು ತಾನೇ ಬ್ರಹ್ಮನಾಗಿ ಉತ್ತಮ ಹಾಗೂ ಹೀನ ಕರ್ಮಗಳನ್ನು ಇಲ್ಲದಾಗಿ ಮಾಡುವಿರಿ, ಮತ್ತು ಅದರ ನಿಃಸ್ಸೀಮ ಸೇವೆಯನ್ನು ಮಾಡಬೇಕೆಂದರೆ ।।೧೫೭೧।।

ಗಂಗೆಯು ಸಮುದ್ರಕ್ಕೆ ಸೇವೆಯನ್ನು ಮಾಡಲು ಹೋದಾಗ ಅಲ್ಲಿ ಸಮುದ್ರರೂಪವೇ ತಾನಾಗುವಳು. ಅದರಂತೆ ನೀನು ನಿನ್ನ ಭಕ್ತನಿಗೆ ನಿನ್ನ ನಿಜಪದದ ಜೊತೆಯನ್ನು ದೊರಕಿಸಿ ಕೊಡುವೆ ।।೧೫೭೨।।

ಹೇ ಶ್ರೀಕೃಷ್ಣನೇ, ಭೇದರಹಿತವಾದ ಹಾಗೂ ಸೇವೆ ಮಾಡಲು ಯೋಗ್ಯರಾದ ನೀವು ನನ್ನ ಸದ್ಗುರುಗಳಾಗಿರುವಿರಿ. ಆದ್ದರಿಂದ ನಾನು ಬ್ರಹ್ಮಮಯವಾಗುವ ಉಪಕಾರವು ನನ್ನ ಮೇಲೆ ಇದೆ ಎಂದು ತಿಳಿಯಿರಿ ।।೧೫೭೩।।

ಯಾವ ನನ್ನ ಮತ್ತು ನಿಮ್ಮ ಏಕರೂಪತ್ವದ ಅಡ್ಡ ಭೇದದ ಪ್ರತಿಬಂಧಕವಾದ ಬಾಗಿಲವಿತ್ತು, ಅದನ್ನು ನೀವು ನಿವಾರಣೆಯನ್ನು ಮಾಡಿ ಉತ್ತಮವಾದ ಸೇವೆ ಸುಖವನ್ನು ಕೊಟ್ಟಿರುವಿರಿ ।।೧೫೭೪।।

ಅಂದಮೇಲೆ ಎಲ್ಲ ದೇವರ ರಾಜರಾಗಿರುವ ನೀವು, ಈಗ ನನಗೆ ಯಾವ ಆಜ್ಞೆಯನ್ನು ಮಾಡುವಿರೋ, ಅದನ್ನು ಪಾಲಿಸುವೆನು. ಇಷ್ಟೇ ಅಲ್ಲ, ಯಾವುದೇ ವಿಷಯಕ್ಕಾಗಲೂ ಆಜ್ಞೆ ಮಾಡಿರಿ ।।೧೫೭೫।।

ಯಯಾ ಅರ್ಜುನಾಚಿಯಾ ಬೋಲಾ । ದೇವೋ ನಾಚೇ ಸುಖೇ ಭುಲಲಾ । ಮ್ಹಣೇ ವಿಶ್ವಫಳಾ ಜಾಲಾ । ಫಳ ಹಾ ಮಜ ।।೧೫೭೬।। ಉಣೇನಿ ಉಮಚಲಾ ಸುಧಾಕರು । ದೇಖುನೀ ಆಪಲಾ ಕುಮರು । ಮರ್ಯಾದಾ ಕ್ಷೀರಸಾಗರು । ವಿಸರೇಚಿನಾ ? ।।೧೫೭೭।। ಐಸೇ ಸಂವಾದಾಚಿಯಾ ಬಹುಲಾ । ಲಗ್ನ ದೋಘಾಂಚಿಯಾ ಆಂತುಲಾ । ಲಾಗಲೇ ದೇಖೋನಿ ಜಾಲಾ । ನಿರ್ಭರು ಸಂಜಯೋ।।೧೫೭೮।। ತೇಣೇ ಉಚಂಬಳಲೇಪಣೇ । ಸಂಜಯ ಧೃತರಾಷ್ಟ್ರಾತೇ ಮ್ಹಣೇ । ಜೇ ಕೈಸೆ ಬಾದರಾಯಣೇ । ರಕ್ಷಿಲೋ ದೋಘೇ ।।೧೫೭೯।। ಆಜಿ ತುಮತೇ ಅವಧಾರಾ । ನಾಹೀ ಚರ್ಮಚಕ್ಷೂ ಹೀ ಸಂಸಾರಾ । ಕೀ ಜ್ಞಾನದೃಷ್ಟಿ ವ್ಯವಹಾರಾ । ಆಣಿಲೇತಿ ।।೧೫೮೦।। ಆಣಿ ರಥೀಂಚಿಯೇ ರಾಹಾಟೀ । ಘೇಈ ಜೋ ಘೋಡೇ ಯಾಸಾರೀ । ತಯಾ ಆಮ್ಹಾ ಯಾ ಗೋಷ್ಟೀ । ಗೋಚರಾ ಹೋತೀ ।।೧೫೮೧।। ವರೀ ಜುಂಝಾಚೇ ನಿರ್ವಾಣ । ಮಾಂಡಲೇ ಅಸೇ ದಾರುಣ । ದೋಹೀ ಹಾರೀ ಆಪಣ । ಹಾರಪಿಜೇ ಜೈಸೇ ।।೧೫೮೨।। ಯೇವಢಾ ಜಿಯೆ ಸಾಂಕಡಾ । ಕೈಸಾ ಅನುಗ್ರಹೋ ಪೈ ಗಾಢಾ । ಜೇ ಬ್ರಹ್ಮಾನಂದು ಉಘಡಾ । ಭೋಗವಿತಸೇ ।।೧೫೮೩।। ಐಸೇ ಸಂಜಯ ಬೋಲಿಲಾ । ಪರೀ ನ ದ್ರವೇಚಿ ಯೇರು ಉಗಲಾ । ಚಂದ್ರಕಿರಣೇ ಶಿವತಲಾ । ಪಾಷಾಣು ಜೈಸಾ ।।೧೫೮೪।। ಹೇ ದೇಖೋನಿ ತಯಾಚೀ ದಶಾ । ಮಗ ಕರೀಚಿನಾ ಸರಿಸಾ । ಪರೀ ಸುಖೇ ಜಾಲಾ ಪಿಸಾ । ಬೋಲತಸೇ ।।೧೫೮೫।। ಭುಲವಿಲಾ ಹರ್ಷವೇಗೇ । ಮ್ಹಣೌನಿ ಧೃತರಾಷ್ಟ್ರಾ ಸಾಂಗೇ । ಯೇರ್ಹವೀ ನವ್ಹೇ ತಯಾಜೋಗೇ । ಹೇ ಕೀರ ಜಾಣೇ ।।೧೫೮೬।।

ಸಂಜಯ ಉವಾಚ: -

ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ।
ಸಂವಾದಮಿಮಮಶ್ರೌಷಮ್ ಅದ್ಭುತಂ ರೋಮಹರ್ಷಣಮ್ ।।೭೪।।

ಮಗ ಮ್ಹಣೇ ಪೈ ಕುರುರಾಜಾ । ಐಸಾ ಬಂಧುಪುತ್ರ ತೋ ತುಝಾ । ಬೋಲಿಲಾ ತೇ ಅಧೋಕ್ಷಜಾ । ಗೋಡ ಜಾಲೇ ।।೧೫೮೭।। ಅಗಾ ಪೂರ್ವಾಪರ ಸಾಗರ । ಯಯಾ ನಾಮಾಸೀಚಿ ಸಿನಾರ । ಯೇರ ಆಘವೇ ತೇ ನೀರ । ಏಕ ಜೈಸೇ ।।೧೫೮೮।।

ಈ ಅರ್ಜುನನ ಮಾತುಗಳನ್ನು ಕೇಳಿ ದೇವನು ಹರ್ಷನಾಗಿ, ಸುಖದಿಂದ ಕುಣಿಯಹತ್ತಿದನು. ಈ ವಿಶ್ವರೂಪವು ಫಲಿಸಿತು ಮತ್ತು ಅರ್ಜುನನು ಒಂದು ಫಲನಾದನು ಎಂದು ಹೇಳಿದನು ॥೧೫೭೬॥

ಪೂರ್ಣ ಫಲಕ್ಕೆ ಯುಕ್ತನಾದಾಗ ಆತನ್ನ ಮಗನಾದ ಚಂದ್ರನನ್ನು ನೋಡಿ ಕ್ಷೀರಸಾಗರವು ತನ್ನ ಮರ್ಯಾದೆಯನ್ನು ಮರೆಯುವುದಿಲ್ಲವೇ ? ॥೧೫೭೭॥

ಹೀಗೆ ಸಂವಾದರೂಪ ಗೊಂಬೆಯ ಮೇಲೆ ಶ್ರೀಕೃಷ್ಣ ಹಾಗೂ ಅರ್ಜುನನ ಐಕ್ಯರೂಪ ಲಗ್ನವಾದದ್ದು ಕಂಡು, ಸಂಜಯನು ಆನಂದದಿಂದ ಪರಿಪೂರ್ಣನಾದನು ॥೧೫೭೮॥

ಆ ಆನಂದದ ಉತ್ಕರ್ಷದಿಂದ ಸಂಜಯನು ಧೃತರಾಷ್ಟ್ರನಿಗೆ ಹೇಳಿದನು :- ಮಹಾರಾಜರೇ, ನಮ್ಮಿಬ್ಬರ ಭಾಗ್ಯವು ಎಷ್ಟು ದೊಡ್ಡದಾಗಿದೆ ! ಶ್ರೀ ವ್ಯಾಸರು ಇಂಥ ಸಮಯದಲ್ಲಿ ನಮ್ಮಿಬ್ಬರ ರಕ್ಷಣೆಯನ್ನು ಮಾಡಿದರು ॥೧೫೭೯॥

ಇಂದು ನೋಡಿರಿ, ನಿಮಗೆ ವ್ಯವಹಾರಿಕ ದೃಷ್ಟಿಯು ಸಹ ಇಲ್ಲದಿದ್ದರೂ, ಜ್ಞಾನದೃಷ್ಟಿಯು ಸಹಜವಾಗಿ ಪ್ರಾಪ್ತವಾಗಿರುವುದು ! ॥೧೫೮೦॥

ನಾನು ರಥದ ಕುದುರೆಗಳನ್ನು ಪರೀಕ್ಷಿಸಲು ನೇಮಿಸಲ್ಪಟ್ಟವನು. ಆದರೆ ನನಗೆ ವ್ಯಾಸರ ಕೃಪೆಯಿಂದ ಶ್ರೀಕೃಷ್ಣಾರ್ಜುನರ ಸಂವಾದವು ಪ್ರತ್ಯಕ್ಷವಾಗಿ ಲಾಭವಾಯಿತು ॥೧೫೮೧॥

ಯುದ್ಧದ ಘೋರ ಪ್ರಸಂಗವಿದ್ದು, ಎರಡೂ ಪಕ್ಷಗಳಲ್ಲಿ ಯೋಧರಿಗೆ ತಾನಾಗಿಯೇ ಆದ ಜಯ ಅಪಜಯಗಳು, ಅದು ನಮ್ಮದಾಗಿವೆ ॥೧೫೮೨॥

ಇಷ್ಟೊಂದು ಸಂಕಟ ಪ್ರಸಂಗದಲ್ಲಿ ಎಂಥಹ ಮಹಾನ್ ಅನುಗ್ರಹವು ! ಇದರಿಂದ ಪ್ರತ್ಯಕ್ಷವಾಗಿ ಬ್ರಹ್ಮಾನಂದದ ಉಪಭೋಗವು ಲಭಿಸುವುದು ॥೧೫೮೩॥

ಈ ಸಂಜಯನ ಮಾತುಗಳನ್ನು ಕೇಳಿ, ಕಲ್ಲಿನ ಮೇಲೆ ಚಂದ್ರನ ಕಿರಣಗಳು ಬಿದ್ದರೂ ಅದು ದ್ರವಿಸದಂತೆ, ಅಂತಃಕರಣದಲ್ಲಿ ಯಾವ ಪರಿಣಾಮವಾಗದೇ ಸುಮ್ಮನೇ ಕುಳಿತನು ॥೧೫೮೪॥

ಹೀಗಿರುವ ರಾಜನ ಸ್ಥಿತಿಯನ್ನು ಕಂಡು ಸಂಜಯನು ಆತನಲ್ಲಿ ಮಾತನಾಡುವುದನ್ನು ಬಿಟ್ಟನು, ಆದರೆ ಸುಖದ ಭರದಲ್ಲಿ ಹುಚ್ಚನಾಗಿ ಮಾತನಾಡಹತ್ತಿದನು ॥೧೫೮೫॥

ಹರ್ಷದ ಭರದಲ್ಲಿ ಭುಲಾಯಿಸಿ ಧೃತರಾಷ್ಟ್ರನಿಗೆ ಸಂಜಯನು ಮಾತನಾಡಿಸಿದನಷ್ಟೇ. ಇಲ್ಲದಿದ್ದರೆ ಇದನ್ನು ಕೇಳಲು ರಾಜನಿಗೆ ಯೋಗ್ಯತೆ ಇಲ್ಲವೆನ್ನುವುದು ತಿಳಿದಿದ್ದನು ॥೧೫೮೬॥

**ಶ್ಲೋಕಾರ್ಥ** :- ಸಂಜಯನು ಹೇಳಿದ್ದು :- ಹೇ ಧೃತರಾಷ್ಟ್ರ ಮಹಾರಾಜ ! ಈ ರೀತಿ ಮಹಾನುಭಾವರಾದ ಶ್ರೀಕೃಷ್ಣಾರ್ಜುನರ ಅದ್ಭುತ ಸಂವಾದವನ್ನು ರೋಮಾಂಚನವಾಗುವಂತೆ ಕೇಳಿದೆನು ॥೭೪॥

ತದನಂತರ ಹೇಳಿದನು :- ಧೃತರಾಷ್ಟ್ರರಾಜನೇ, ನಿನ್ನ ತಮ್ಮನ ಮಗನಾದ ಅರ್ಜುನನು ಈ ರೀತಿಯಾಗಿ ಹೇಳಿದ ಮೇಲೆ ಶ್ರೀಕೃಷ್ಣನಿಗೆ ಪರಮಾನಂದವಾಯಿತು ॥೧೫೮೭॥

ರಾಜನೇ, ಪೂರ್ವ ಸಮುದ್ರ ಹಾಗೂ ಪಶ್ಚಿಮ ಸಮುದ್ರ ಈ ಹೆಸರುಗಳು ಮಾತ್ರ ಭಿನ್ನ ಇವೆ, ಆದರೆ ಉದಕದ ದೃಷ್ಟಿಯಿಂದ ಎರಡೂ ಒಂದೇ ಇರುವುವು ॥೧೫೮೮॥

ತೈಸಾ ಶ್ರೀಕೃಷ್ಣ ಪಾರ್ಥ ಐಸೇ । ಹೇ ಆಂಗಾಚಿಪಾಸೀ ದಿಸೇ । ಮಗ ಸಂವಾದೀ ಜೇ ನಸೇ । ಕಾಂಹೀಂಚಿ ಭೇದು ।।೧೫೮೮।। ಪೈ ದರ್ಪಣಾಹೂನಿ ಚೋಖೇ । ದೋನ್ಹೀ ಹೋತೀ ಸನ್ಮುಖೇ । ತೇಥ ಯೇರೀ ಯೇರ ದೇಖೇ । ಆಪಣಪೇ ಜೈಸೇ ।।೧೫೯೦।। ತೈಸಾ ದೇವೇಸೀ ಪಂಡುಸುತು । ಆಪಣಪೇ ದೇವೀ ದೇಖತು । ಪಾಂಡವೇಂಸೀ ದೇಖೇ ಅನಂತು । ಆಪಣಪೇ ಪಾರ್ಥೀ ।।೧೫೯೧।। ದೇವ ದೇವೋ ಭಕ್ತಾ ಲಾಗೀ । ಜಿಯೇ ವಿವರೂನಿ ದೇಖೇ ಆಂಗೀ । ಯೇರು ತಿಯೇಚೇಹೀ ಭಾಗೀ । ದೋನ್ಹೀ ದೇಖೇ ।।೧೫೯೨।। ಆಣಿಕ ಕಾಂಹೀಂಚ ನಾಹೀ । ಮ್ಹಣೌನಿ ಕರಿತೀ ಕಾಈ । ದೋಘೇ ಏಕಪಣೇ ಪಾಹೀ । ನಾಂದತಾತೀ ।।೧೫೯೩।। ಆತಾ ಭೇದು ಜರೀ ಮೋಡೇ । ತರೀ ಪ್ರಶ್ನೋತ್ತರ ಕಾ ಘಡೇ ? । ನಾ ಭೇದುಚಿ ತರೀ ಜೋಡೇ । ಸಂವಾದಸುಖ ಕಾ ।।೧೫೯೪।। ಐಸೇ ಬೋಲತಾ ದುಜೇಪಣೇ । ಸಂವಾದೀ ದ್ವೈತ ಗಿಳಣೇ । ತೇ ಐಕಿಲೇ ಬೋಲಣೇ । ದೋಘಾಂಚೇ ಮಿಯಾ ।।೧೫೯೫।। ಉಟೂನಿ ದೋನ್ಹೀ ಆರಸೇ । ವೋಡವಿಲೀಯಾ ಸರಿಸೇ । ಕೋಣ ಕೋಣಾ ಪಾಹಾತಸೇ । ಕಲ್ಪಾವೇ ಪಾ ? ।।೧೫೯೬।। ಕಾ ದೀಪಾಸನ್ಮುಖ । ಠೇವಿಲಯಾ ದೀಪಕು । ಕೋಣ ಕೋಣಾ ಆರ್ಥಿಕು । ಕೋಣ ಜಾಣೇ ।।೧೫೯೭।। ನಾನಾ ಅರ್ಕಾಪುಢೇ ಅರ್ಕು । ಉದಯಲಿಯಾ ಆಣಿಕು । ಕೋಣ ಮ್ಹಣೇ ಪ್ರಕಾಶಕು । ಪ್ರಕಾಶ್ಯ ಕವಣ ? ।।೧೫೯೮।। ಹೇ ನಿರ್ಧಾರೂ ಜಾತಾ ಫುಡೇ । ನಿರ್ಧಾರಾಸಿ ಠಕ ಪಡೇ । ತೇ ದೋಘೇ ಜಾಲೇ ಯೇವಢೇ । ಸಂವಾದೇ ಸರಿಸೇ ।।೧೫೯೯।।ಜೇ ಮಿಳತಾ ದೋನ್ಹೀ ಉದಕೇ । ಮಾಜೀ ಲವಣ ವಾರೂ ಠಾಕೇ । ಕೀ ತಯಾಸೀಂಹೀ ನಿಮಿಖೇ । ತೇಂಚಿ ಹೋಯ ।।೧೬೦೦।। ತೈಸೇ ಶ್ರೀಕೃಷ್ಣ ಅರ್ಜುನ ದೋನ್ಹೀ । ಸಂವಾದಲೇ ತೇ ಮನೀ । ಧರಿತಾ ಮಜಹೀ ವಾನೀ । ತೇಚಿ ಹೋತಸೇ ।।೧೬೦೧।। ಐಸೇ ಮ್ಹಣೇ ನಾ ಮೋಟಕೇ । ತಂವ ಹಿರೋನಿ ಸಾತ್ತ್ವಿಕೇ । ಆಠವ ನೇಲಾ ನೇಣೋ ಕೇ । ಸಂಜಯಪಣಾಚಾ ।।೧೬೦೨।। ರೋಮಾಂಚ ಜಂವ ಫರಕೇ । ತಂವ ತಂವ ಆಂಗ ಸುರಕೇ । ಸ್ತಂಭ ಸ್ವೇದಾಂತೇ ಜಿಂಕೇ । ಏಕಲಾ ಕಂಪು ।।೧೬೦೩।। ಅದ್ವಯನಾಂದಸ್ಪರ್ಶೇ । ದಿಠೀ ರಸಮಯ ಜಾಲೀ ಅಸೇ । ತೇ ಅಶ್ರು ನವ್ಹತೀ ಜೈಸೇ । ದ್ರವತ್ವಚಿ ।।೧೬೦೪।। ನೇಣೋ ಕಾಯ ನ ಮಾಯ ಪೋಟೀ । ಕಾಯ ನೇಣೋ ಗುಂಫೇ ಕಂಠೀ । ವಾಗರ್ಥಾ ಪಡತ ಮಿಠೀ । ಉಸಸಾಂಚಿಯಾ ।।೧೬೦೫।।

ಅದರಂತೆ ಶ್ರೀಕೃಷ್ಣನು ಹಾಗೂ ಅರ್ಜುನನು ಇವರು ಶರೀರದಿಂದ ಭಿನ್ನರಿರುವರು, ಆದರೆ ಅವರ ಸಂವಾದದಲ್ಲಿ ಆ ಭೇದವು ಉಳಿದಿರುವುದಿಲ್ಲ ।।೧೫೮೯।।

ಎರಡು ಕನ್ನಡಿಗಳನ್ನು ಸ್ವಚ್ಛಮಾಡಿ ಎದುರುಬದರಾಗಿ ಇಟ್ಟಾಗ ಒಂದರಿಂದ ಇನ್ನೊಂದಕ್ಕೆ ಯಾವ ಪ್ರಕಾರವಾಗಿ ರೂಪವು ಕಾಣುವುದೋ ।।೧೫೯೦।।

ಅದರಂತೆ ಶ್ರೀಕೃಷ್ಣ ಸಹ ಅರ್ಜುನನನ್ನು ಸ್ವತ: ಶ್ರೀಕೃಷ್ಣನಸ್ವರೂಪದಲ್ಲಿ ನೋಡುತ್ತಿದ್ದನು, ಅದರಂತೆಯೇ ಅರ್ಜುನ ಸಹ ಶ್ರೀಕೃಷ್ಣನನ್ನು ಅರ್ಜುನನ ಸ್ವರೂಪದಲ್ಲಿ ನೋಡುತ್ತಿದ್ದನು ।।೧೫೯೧।।

ಆ ಯಾವ ದೇವರ ದೇವನು ಭಕ್ತನಿಗಾಗಿ ವಿಚಾರ ಮಾಡಿ ತನ್ನ ಸ್ವರೂಪದ ಕಡೆಗೆ ನೋಡುತ್ತಿರುವಾಗ್ಗೆ, ಅದರಲ್ಲಿ ಭಕ್ತನಸ್ವರೂಪವು ಕಾಣಿಸಹತ್ತಿತು ।।೧೫೯೨।।

ದ್ವೈತಭಾವವು ಏನೂ ಉಳಿಯಲಿಲ್ಲ, ಆದ್ದರಿಂದ ಶ್ರೀಕೃಷ್ಣ ಪರಮಾತ್ಮನು ಹಾಗೂ ಅರ್ಜುನನು ಐಕ್ಯದ ಭರದಲ್ಲಿ ನಿಮಗ್ನರಾಗಿದ್ದರು ।।೧೫೯೩।।

ಈಗ ಇಬ್ಬರಲ್ಲಿಯ ಭೇದವು ಇಲ್ಲದಾದರೆ ಇಬ್ಬರ ಪ್ರಶ್ನೆಗಳು ಹಾಗೂ ಉತ್ತರಗಳು ಆಗುವುದಿಲ್ಲ ಹಾಗೂ ಅದೇ ಭೇದವು ಇಲ್ಲದಂತಾಗದಿದ್ದರೆ, ಸಂವಾದದ ಸುಖವು ಎಲ್ಲಿಂದ ದೊರಕುವುದು ?।।೧೫೯೪।।

ಹೀಗೆ ದ್ವೈತದ ಮಾತುಗಳು ನಡೆಯುತ್ತಿರುವಾಗ ಅದರಲ್ಲಿ ದ್ವೈತವು ನಷ್ಟವಾಯಿತು, ಆ ಕೃಷ್ಣ ಮತ್ತು ಅರ್ಜುನರ ವಚನಗಳನ್ನು ನಾನು ಕೇಳಿದೆನು ।।೧೫೯೫।।

ಎರಡು ಕನ್ನಡಿಗಳನ್ನು ಸ್ವಚ್ಛಗೊಳಿಸಿ ಎದುರುಬದುರು ಇಟ್ಟಾಗ ಯಾವುದು ಯಾವುದನ್ನು ನೋಡುವುದು ಎಂಬುವುದನ್ನು ಹೇಗೆ ಕಲ್ಪಿಸಬೇಕು ।।೧೫೯೬।।

ಅಥವಾ ದೀಪದ ಎದುರಿನಲ್ಲಿ ಇನ್ನೊಂದು ದೀಪ ವನ್ನಿಟ್ಟಾಗ ಯಾವುದು ಪ್ರಕಾಶವು ಯಾವುದು ಪ್ರಕಾಶ್ಯವು ಎಂಬುದನ್ನು ಯಾರು ತಿಳಿಯಬೇಕು ? ।।೧೫೯೭।।

ಅಥವಾ ಸೂರ್ಯನ ಎದುರಿಗೆ ಇನ್ನೊಬ್ಬ ಸೂರ್ಯನು ಉದಯನಾದರೆ ಈತನು ಪ್ರಕಾಶನು, ಇನ್ನೊಬ್ಬನು ಪ್ರಕಾಶ್ಯನು ಎಂದು ಯಾರು ಹೇಳುವರು ? ।।೧೫೯೮।।

ಶ್ರೀಕೃಷ್ಣನು ಮತ್ತು ಅರ್ಜುನನು ಸಂವಾದದ ಭರದಲ್ಲಿ ಎಷ್ಟೊಂದು ಐಕ್ಯವನ್ನು ಹೊಂದಿರುವರೆಂಬುದುನ್ನು ವಿಚಾರ ಮಾಡಲು ಹೋದರೆ, ವಿಚಾರವೆಲ್ಲ ಅಲ್ಲೇ ನಿಲ್ಲುವುದು ।।೧೫೯೯।।

ಎರಡು ನದಿಗಳ ಪ್ರವಾಹಗಳು ಕೂಡುತ್ತಿರುವಾಗ ಎರಡನ್ನೂ ಬದಿಗೆ ಸರಿಸಲು ಉಪ್ಪನ್ನು ನಡುವೆ ಇಡಲು, ಆಗ ಉಪ್ಪಿಗೆಒಂದೇಕ್ಷಣದಲ್ಲಿ ನೀರೆ ಆಗಬೇಕಾಗುವುದು ।।೧೬೦೦।।

ಅದರಂತೆ ಶ್ರೀಕೃಷ್ಣ ಹಾಗೂ ಅರ್ಜುನರಲ್ಲಿ ಆದ ಭಾಷಣವನ್ನು ನಾನುಮನದಲ್ಲಿ ಧರಿಸಿದಾಗ ನನ್ನ ಸ್ಥಿತಿಯು ಅದರಂತೆಯೇ ಆಯಿತು ।।೧೬೦೧।।

ಇಷ್ಟು ಮಾತ್ರ ಸಂಜಯನು ಹೇಳುತ್ತಿರುವಾಗ ಅಷ್ಟಸಾತ್ತ್ವಿಕ ಭಾವಗಳು ಸಂಜಯನ ದೇಹಸ್ಮೃತಿಯನ್ನು ಹೀರಿಕೊಂಡವು ।।೧೬೦೨।।

ರೋಮಾಂಚಗಳು ಎದ್ದು ನಿಂತವು, ಸ್ತಬ್ಧನಾಗಿ ಬೆವರ ಹತ್ತಿದನು. ಅದಕ್ಕಿಂತಲೂ ಹೆಚ್ಚಾಗಿ ನಡುಗ ಹತ್ತಿದನು ।।೧೬೦೩।।

ಅದ್ವಯಾನಂದದ ಭರದಲ್ಲಿ ದೃಷ್ಟಿಯು ಬ್ರಹ್ಮಾನಂದ ಮಯವಾಗಿ ಪ್ರೇಮಾಶ್ರುಗಳು ಝರಿಯಾಗಿ ಹರಿಯ ತೊಡಗಿದವು ।।೧೬೦೪।।

ಆತನ ಹೊಟ್ಟೆಯಲ್ಲಿ ಏನೂ ಹಿಡಿಸದಂತಾಗಿ, ಕಂಠವು ಬಿಗಿಯಿತು. ಹಾಗೂ ಶ್ವಾಸೋಚ್ಛ್ವಾಸ ಬೆಳೆದು ಬಾಯಿಯಿಂದ ಶಬ್ದಗಳು ಹೊರಬಾರದಂತಾಯಿತು ।।೧೬೦೫।।

ಕಿಂಬಹುನಾ ಸಾತ್ತ್ವಿಕಾ ಆಠಾ । ಚಾಚರು ಮಾಂಡತಾ ಉಮೇಠಾ । ಸಂಜಯೋ ಜಾಲಾಸೇ ಚೋಹಟಾ । ಸಂವಾದಸುಖಾಚಾ ॥೧೬೦೬॥ ತಯಾ ಸುಖಾಚೀ ಐಸೀ ಜಾತೀ । ಜೇ ಆಪಣಚಿ ಧರೀ ಶಾಂತೀ । ಮಗ ಪುಢತೀ ದೇಹ ಸ್ಮೃತೀ । ಲಾಧಲೀ ತೇಣೇ ॥೧೬೦೭॥

ವ್ಯಾಸಪ್ರಸಾದಾಚ್ಛ್ರುತವಾನ್ ಏತದ್ಗುಹ್ಯಮಹಂ ಪರಮ್ ।
ಯೋಗಂ ಯೋಗೇಶ್ವರಾತ್ ಕೃಷ್ಣಾತ್ ಸಾಕ್ಷಾತ್ಕಥಯತಃ ಸ್ವಯಮ್ ॥೭೫॥

ತೇವ್ಹಾ ಬೈಸತೇನಿ ಆನಂದೇ । ಮ್ಹಣೇ ಜೇ ಜೇ ಉಪನಿಷದೇ । ನೇಣತೀ ತೇ ವ್ಯಾಸಪ್ರಸಾದೇ । ಐಕಿಲೇ ಮಿಯಾ ॥೧೬೦೮॥ ಐಕತಾಂಚಿ ತೇ ಗೋಠೀ । ಬ್ರಹ್ಮತ್ವಾಚೀ ಪಡಿಲೀ ಮಿಠೀ । ಮಿತೂಪಣೇಂಸೀ ದೃಷ್ಟೀ । ವಿರೋನಿ ಗೇಲೀ ॥೧೬೦೯॥ ಹೇ ಆಘವೇಚಿ ಕಾ ಯೋಗ । ಜಯಾ ಠಾಯಾ ಯೇತೀ ಮಾರ್ಗ । ತಯಾಚೇ ವಾಕ್ಯ ಸವಂಗ । ಕೇಲೇ ಮಜ ವ್ಯಾಸೇ ॥೧೬೧೦॥ ಅಹೋ ಅರ್ಜುನಾಚೇನಿ ಮಿಷೇ । ಆಪಣಪೇಂಚಿ ದುಜೇ ಐಸೇ । ನಟೋನಿ ಆಪಣಯಾ ಉದ್ದೇಶೇ । ಬೋಲಿಲೇ ಜೇ ದೇವ ॥೧೬೧೧॥ ತೇಥ ಕೀ ಮಾಝೇ ಶ್ರೋತ್ರ । ಪಾಟಾಚೇ ಜಾಲೇ ಜೀ ಪಾತ್ರ । ಕಾಯ ವಾನೂ ಸ್ವತಂತ್ರ । ಸಾಮರ್ಥ್ಯ ಶ್ರೀಗುರೂಚೇ ॥೧೬೧೨॥

ರಾಜನ್ ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಮ್ ।
ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ ॥೭೬॥

ರಾಹಾ ಹೇ ಬೋಲತಾ ವಿಸ್ಮಿತ ಹೋಯೇ । ತೇಣೇಂಚಿ ಮೋಡಾವಲಾ ಠಾಯೇ । ರತ್ನೀ ಕೀ ರತ್ನಕಿಳಾ ಯೇ । ಝಾಂಕೋಳಿತ ಜೈಸೀ ॥೧೬೧೩॥ ಹಿಮವಂತೀಂಚೀ ಸರೋವರೇ । ಚಂದ್ರೋದಯೀ ಹೋತೀ ಕಾಶ್ಮೀರೇ । ಮಗ ಸೂರ್ಯಾಗಮೀ ಮಾಘಾರೇ । ದ್ರವತ್ವ ಯೇ ॥೧೬೧೪॥ ತೈಸಾ ಶರೀರಾಚಿಯಾ ಸ್ಮೃತೀ । ತೋ ಸಂವಾದು ಸಂಜಯ ಚಿತ್ತೀ । ಧರೀ ಆಣಿ ಪುಢತೀ । ತೇಂಚಿ ಹೋಯ ॥೧೬೧೫॥

ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ ।
ವಿಸ್ಮಯೋ ಮೇ ಮಹಾನ್ ರಾಜನ್ ಹೃಷ್ಯಾಮಿ ಚ ಪುನಃ ಪುನಃ ॥೭೭॥

ಮಗ ಉಠೋನಿ ಮ್ಹಣೇ ನೃಪಾ । ಶ್ರೀಹರೀಚಿಯಾ ವಿಶ್ವರೂಪಾ । ದೇಖಿಲಯಾ ಉಗಾ ಕಾ ಪಾ । ಅಸೋ ಲಾಹಸೀ ? ॥೧೬೧೬॥ ನ ದೇಖಣೇನಿ ಜೇ ದಿಸೇ । ನಾಹೀಪಣೇಚಿ ಜೇ ಅಸೇ । ವಿಸರೇ ಆಠವೇ ತೇ ಕೈಸೇ । ಚುಕಲೂ ಆತಾ ॥೧೬೧೭॥

ಹೆಚ್ಚಿಗೇನು ಹೇಳಬೇಕು ? ಅಷ್ಟಸಾತ್ತ್ವಿಕ ಭಾವದಿಂದ ವಾಣಿಯು ತೊದಲಾಯಿತು. ಆಗ ಆತನು ಕೃಷ್ಣಾರ್ಜುನರ ಸಂವಾದದ ಪ್ರಸಾರಕನಾದನು ।।೧೬೦೬।।

ಆ ಸುಖದ ಭರತಿಯು ತನ್ನಿಂದ ತಾನೇ ಇಳಿಯುವುದು. ಅದರ ಜಾತಿಯ ಸ್ವಭಾವವೇ ಅಂತಹದ್ದು. ಆದ್ದರಿಂದ ಸಂಜಯನು ಸಹಜವಾಗಿ ಮುಂದೆ ದೇಹದಿಂದ ಎಚ್ಚರಗೊಂಡನು ।।೧೬೦೭।।

ಶ್ಲೋಕಾರ್ಥ :- ಯೋಗೇಶ್ವರನಾದ ಶ್ರೀಕೃಷ್ಣನು ಸಾಕ್ಷಾತ್ತಾಗಿ ಹೇಳುವ ಈ ಪರಮರಹಸ್ಯವಾದ ಈ ಯೋಗಶಾಸ್ತ್ರವನ್ನು ವ್ಯಾಸದೇವನ ದಯೆಯಿಂದ ಸ್ವಯಂ ಕೇಳಿದೆನು ।।೭೫।।

ಆಗ ಆನಂದದ ಭರತಿಯು ಇಳಿದ ಮೇಲೆ ಸಂಜಯನು ಹೇಳಿದನು :- ಉಪನಿಷತ್‌ಗಳಿಗೂ ತಿಳಿಯದ ರಹಸ್ಯವು ನನಗೆ ಶ್ರೀವ್ಯಾಸರ ಪ್ರಸಾದದಿಂದ ಕೇಳಲು ದೊರೆಯಿತು ।।೧೬೦೮।।

ಈ ರಹಸ್ಯವನ್ನು ಕೇಳಿದಾಕ್ಷಣವೇ ಬ್ರಹ್ಮಭಾವವು ಆಲಂಗಿಸಿ ನಾನು ಹಾಗೂ ನೀನು ಎಂಬ ಭಾವದ ದೃಷ್ಟಿಯು ಮುಳುಗಿ ಹೋಯಿತು ।।೧೬೦೯।।

ಯಾವ ಎಲ್ಲ ಯೋಗಮಾರ್ಗಗಳು ಎಲ್ಲಿ ಬಂದು ಕೂಡುವುವೋ, ಅಂತಹ ಶ್ರೀಕೃಷ್ಣ ಪರಮಾತ್ಮನ ವಾಕ್ಯಗಳು ಶ್ರೀವ್ಯಾಸರ ಕೃಪೆಯಿಂದ ನನಗೆ ಸೋವಿಯಾದವು ।।೧೬೧೦।।

ಅಹೋ, ಅರ್ಜುನನ ನಿಮಿತ್ತದಿಂದ ಶ್ರೀಕೃಷ್ಣ ಪರಮಾತ್ಮನು ತಾನೇ ಅರ್ಜುನ ರೂಪವಾಗಿ ತನ್ನನ್ನೇ ಉದ್ದೆಶಿಸಿ ಹೇಳಿರುವುದನ್ನು ।।೧೬೧೧।।

ಆ ಮಾತುಗಳನ್ನು ಕೇಳಲು ನನ್ನ ಕಿವಿಗಳು ಯೋಗ್ಯವಾದವು. ಅದಕ್ಕಾಗಿ ಶ್ರೀಗುರುಗಳ ಅದ್ಭುತ ಸಾಮರ್ಥ್ಯದ ವರ್ಣನೆಯನ್ನು ಏನೆಂದು ಮಾಡಬೇಕು ? ।।೧೬೧೨।।

ಶ್ಲೋಕಾರ್ಥ :- ಮಹಾರಾಜ ! ಆ ಕೃಷ್ಣಾರ್ಜುನರ ಅದ್ಭುತ ಸಂವಾದವನ್ನು ಸ್ಮರಿಸಿ ಸ್ಮರಿಸಿ ಪುನಃ ಪುನಃ ಹರ್ಷವನ್ನು ಹೊಂದುತ್ತಿರುವೆನು ।।೭೬।।

ಇದನ್ನು ಹೇಳುವಾಗ ಸಂಜಯನು ಆಶ್ಚರ್ಯಚಕಿತನಾಗಿ ಆತನ ದೇಹಸ್ಮೃತಿಯು ಹೋಯಿತು. ರತ್ನದಲ್ಲಿ ರತ್ನದ ತೇಜವು ತನ್ನ ಮೂಲಸ್ವರೂಪವನ್ನು ಮುಚ್ಚುವಂತಾಯಿತು ।।೧೬೧೩।।

ಹಿಮಾಲಯ ಪರ್ವತದ ಮೇಲಿನ ಸರೋವರಗಳು ಚಂದ್ರೋದಯದಿಂದ ಸ್ಪಟಿಕದಂತೆ ಗಟ್ಟಿಯಾಗುವುವು. ನಂತರ ಸುರ್ಯೋದಯವಾಗಲು ಅವುಗಳು ದ್ರವಿಸಹತ್ತುವುವು ।।೧೬೧೪।।

ಅದರಂತೆ ದೇಹಸ್ಮೃತಿಯ ಮೇಲೆ ಬಂದಾಗ ಆತನು ಸಂವಾದವನ್ನು ಚಿತ್ತದಲ್ಲಿ ತರುವುದು ಮತ್ತು ಪುನಃ ಆತನ (ದೇಹವಿಸ್ಮೃತಿ)ಅವಸ್ಥೆಯಾಗುತ್ತಿತ್ತು ।।೧೬೧೫।।

ಶ್ಲೋಕಾರ್ಥ :- ಧೃತರಾಷ್ಟ್ರ ಮಹಾರಾಜ ! ಅತ್ಯದ್ಭುತವಾದ ಭಗವಂತನ ಆ ವಿಶ್ವರೂಪವನ್ನು ನೆನೆದು, ನೆನೆದು, ಪುನಃ ಪುನಃ ಆನಂದಪರವಶನಾಗುತ್ತೇನೆ ।।೭೭।।

ಆಗ ಆ ಆನಂದದ ಭರದಲ್ಲಿ ಎದ್ದು ನಿಂತು ಸಂಜಯನು ಧೃತರಾಷ್ಟ್ರನಿಗೆ ಹೇಳಿದನು :- ಹೇ ರಾಜಾ, ಶ್ರೀಹರಿಯ ವಿಶ್ವರೂಪವನ್ನು ನೋಡಿಯೂ ಸಹ ನಿನಗೆ ಆನಂದವಾಗದೇ ಸುಮ್ಮನೇ ಏಕೆ ಕುಳಿತಿರುವಿ ? ।।೧೬೧೬।।

ಈ ವಿಶ್ವರೂಪವು ನೋಡದಿದ್ದರೂ ಕಾಣುವುದು, ಇಲ್ಲವೆಂದರೂ ಅದರ ಅಸ್ತಿತ್ವವು ಮುಳುಗುವುದಿಲ್ಲ, ಮರೆಯಬೇಕೆಂದರೂ ಸ್ಮರಿಸುವುದು. ಇದನ್ನು ಹೇಗೆ ತಪ್ಪಿಸಲು ಬರುವುದು ? ।।೧೬೧೭।।

ದೇಖೋನಿ ಚಮತ್ಕಾರು । ಕೀಜೇ ತೋ ನಾಹೀ ಪೈಸಾರು । ಮಜಹೀ ಸಕಟ ಮಹಾಪೂರು । ನೇತ ಆಹೇ ॥೧೬೧೮॥ ಐಸಾ ಶ್ರೀಕೃಷ್ಣಾರ್ಜುನ । ಸಂವಾದ ಸಂಗಮೀ ಸ್ನಾನ । ಕರೂನಿ ದೇತಸೇ ತಿಳದಾನ । ಅಹಂತೇಚೇ ॥೧೬೧೯॥ ತೇಥ ಅಸಂವರೇ ಆನಂದೇ । ಅಲೌಕಿಕಹೀ ಕಾಂಹೀ ಸ್ಫುಂದೇ । ಶ್ರೀಕೃಷ್ಣ ಮ್ಹಣೇ ಸದ್ಗದೇ । ವೇಳೋವೇಳಾ ॥೧೬೨೦॥ ಯಾ ಅವಸ್ಥಾಂಚೀ ಕಾಂಹೀ । ಕೌರವಾಂತೇ ಪರೀ ನಾಹೀ । ಮ್ಹಣೌನಿ ರಾಯೇ ತೇ ಕಾಂಹೀ । ಕಲ್ಪಾವೇ ಜಂವ ॥೧೬೨೧॥ ತಂವ ಜಾಲಾ ಸುಖಲಾಭು । ಆಪಣಪಾ ಕರೂನಿ ಸ್ವಯಂಭು । ಬುರ್ಝಾವಿಲಾ ಅವಷ್ಟಂಭು । ಸಂಜಯೇ ತೇಣೇ ॥೧೬೨೨॥ ತೇಥ ಕೋಣೇ ಯೇಕೀ ಅವಸರೀ । ಹೋಆವೀ ತೇ ಕರೂನಿ ದುರೀ । ರಾವೋ ಮ್ಹಣೇ ಸಂಜಯಾ ಪರಿ । ಕೈಶೀ ತುಝೀ ಗಾ ? ॥೧೬೨೩॥ ತೇಣೇ ತೂಂತೇ ಯೇಥೇ ವ್ಯಾಸೇ । ಬೈಸವಿಲೇ ಕಾಸಯಾ ಉದ್ದೇಶೇ । ಅಪ್ರಸಂಗಾಮಾಜೀ ಐಸೇ । ಬೋಲಸೀ ಕಾಈ ? ॥೧೬೨೪॥ ರಾನೀಂಚೇ ರಾಉಳಾ ನೇಲಿಯಾ । ದಾಹೀ ದಿಶಾ ಮಾನೀ ಸುನಿಯಾ । ಕಾ ರಾತ್ರೀ ಹೋಯ ಪಾಹಲಯಾ । ನಿಶಾಚರಾ ॥೧೬೨೫॥ ಜೋ ಜೇಥೀಂಚೇ ಗೌರವ ನೇಣೇ । ತಯಾಸಿ ತೇ ಭಿಂಗುಳವಾಣೇ । ಮ್ಹಣೌನಿ ಅಪ್ರಸಂಗು ತೇಣೇ । ಮ್ಹಣಾವಾ ಕೀ ತೋ ॥೧೬೨೬॥ ಮಗ ಮ್ಹಣೇ ಸಾಂಗೇ ಪ್ರಸ್ತುತ । ಉದಯಲೇಸೇ ಜೇ ಉತ್ಕಳಿತ । ತೇ ಕೋಣಾಸಿ ಬಾ ರೇ ಜೈತ । ದೇಈಲ ಶೇಖೀ ? ॥೧೬೨೭॥ ಯೇರ್ಹವೀ ವಿಶೇಷೇ ಬಹುತೇಕ । ಆಮುಚೇ ಐಸೇ ಮಾನಸಿಕ । ಜೇ ದುರ್ಯೋಧನಾಚೇ ಅಧಿಕ । ಪ್ರತಾಪ ಸದಾ ॥೧೬೨೮॥ ಆಣಿ ಯೇರಾಂಚೇನಿ ಪಾಡೇ । ದಳಹೀ ಯಾಚೇ ದೇವ್ಹಡೇ । ಮ್ಹಣೌನಿ ಜೈತ ಪುಡೇ । ಆಣೇಲ ನಾ ತೆ ? ॥೧೬೨೯॥ ಆಮ್ಹಾ ತಂವ ಗಮೇ ಐಸೇ । ಮಾ ತುಝೇ ಜೋತೀಷ ಕೈಸೇ । ತೇ ನೇಣೋ ಸಂಜಯಾ ಅಸೇ । ತೈಸೇ ಸಾಂಗ ಪಾ ॥೧೬೩೦॥

ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।<br>
ತತ್ರ ಶ್ರೀರ್ವಿಜಯೋ ಭೂತಿಃ ಧ್ರುವಾ ನೀತಿರ್ಮತಿರ್ಮಮ ॥೭೮॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ<br>
ಮೋಕ್ಷಸಂನ್ಯಾಸಯೋಗೋ ನಾಮ ಅಷ್ಟಾದಶೋಽಧ್ಯಾಯಃ ।

ಯಯಾ ಬೋಲಾ ಸಂಜಯೋ ಮ್ಹಣೇ । ಜೇ ಯೇರಯೇರಾಂಚೇ ಮೀ ನೇಣೇ । ಪರೀ ಆಯುಷ್ಯ ತೇಥೇ ಜಿಣೇ । ಹೇ ಪುಡೆ ಕೀ ಗಾ ॥೧೬೩೧॥

ಈ ಆನಂದದ ಪೂರವು ಬಂದದ್ದನ್ನು ನೋಡಿ, ಏನು ಚಮತ್ಕಾರವು ಎಂದು ಹೇಳಲೂ ಅವಕಾಶವು ಉಳಿಯಲಿಲ್ಲ. ಆ ಮಹಾಪೂರವು ನಾನು ಎಂಬ ಸ್ಮರಣೆಯನ್ನೇ ಕೊಂಡೊಯ್ಯುತ್ತಿದೆ ।।೧೬೧೮।।

ಈ ಪ್ರಕಾರವಾಗಿ ಶ್ರೀಕೃಷ್ಣಾರ್ಜುನ ಸಂವಾದ ರೂಪ ಸಂಗಮದಲ್ಲಿ ಆತನು ಸ್ನಾನವನ್ನು ಮಾಡಿ ಅಹಂತೆಗೆ ತಿಲಾಂಜನವನ್ನು ಕೊಟ್ಟು ಅದರ ಸಂಬಂಧವನ್ನು ಬಿಟ್ಟನು ।।೧೬೧೯।।

ಆ ಅನಿವಾರ ಆನಂದದಲ್ಲಿ ದೊಡ್ಡದಾಗಿ ಉಸಿರುಬಿಟ್ಟು ಸದ್ಗದಿತ ಕಂಠದಿಂದ ಮೇಲಿಂದ ಮೇಲೆ ''ಶ್ರೀಕೃಷ್ಣ, ಶ್ರೀಕೃಷ್ಣ'' ಹೀಗೆ ಸಂಜಯನು ಹೇಳಹತ್ತಿದನು!! ।।೧೬೨೦।।

ಈ ಸಂಜಯನ ಅವಸ್ಥೆಯನ್ನು ಕಂಡು, ಅದರಲ್ಲಿ ಒಂದು ಮಾತಿನ ಗಂಧವೂ ಧೃತರಾಷ್ಟ್ರರಾಜನಲ್ಲಿ ಇದ್ದಿಲ್ಲ, ಆದ್ದರಿಂದ ಆ ಆನಂದದ ಕಲ್ಪನೆಯೂ ಸಹ ರಾಜನಿಗೆ ಬರಲಿಲ್ಲ ।।೧೬೨೧।।

ಇಷ್ಟರಲ್ಲಿ ಆಗಿರುವ ಸುಖದ ಲಾಭವನ್ನು ಆತನು ತನ್ನಲ್ಲಿ ಹತ್ತಿಕ್ಕಿ ಸಂಜಯನು ದೇಹಸ್ಮೃತಿಯ ಮೇಲೆ ಬಂದನು ।।೧೬೨೨।।

ಆಗ ರಾಜನು ಹೇಳುವನು :- ಸಂಜಯನೇ, ನನ್ನ ವೇಳೆಯನ್ನು ಕಳೆಯುವುದಕ್ಕಾಗಿಯೇ ವ್ಯಾಸನುನಿನಗೆ ಇಲ್ಲಿ ಕುಳ್ಳಿರಿಸಿರುವನು. ಯುದ್ಧದ ಪ್ರಸಂಗಗಳನ್ನು ಹೇಳುವುದನ್ನು ಬಿಟ್ಟುನೀನೇನೋ ಮಾಡುತ್ತಿರುವಿಯಲ್ಲಾ ? ।।೧೬೨೩।।

ಆ ವ್ಯಾಸಮುನಿಯು ನಿನಗೆ ಯಾವ ಉದ್ದೇಶಕ್ಕಾಗಿ ಇಲ್ಲಿ ಕುಳ್ಳಿರಿಸಿರುವನು ? ಮತ್ತು ಇಲ್ಲಿ ನೀನು ಯಾವುದೇ ಮಾತುಗಳನ್ನು ಏಕೆ ಆಡುತ್ತಿರುವಿ ? ।।೧೬೨೪।।

ಕಾಡು ಮನುಷ್ಯನಿಗೆ ದೊಡ್ಡ ಮಹಲಿನಲ್ಲಿ ಒಯ್ಯಲು ಆತನಿಗೆ ಹತ್ತು ದಿಕ್ಕುಗಳೂ ಉದಾಸ ಕಾಣುವುವು, ಅಥವಾ ಬೆಳಗಾಯಿತೆಂದರೆ ನಿಶಾಚರರಿಗೆ ಕತ್ತಲೆಯಾಗುವುದು ।।೧೬೨೫।।

ಯಾವನಿಗೆ ಯಾವ ಮಾತಿನ ಅನುಭವವಿರುವುದಿಲ್ಲವೋ, ಆತನು ಅದನ್ನು ಭಯಂಕರವಾಗಿ ತಿಳಿಯುವುದು ಯೋಗ್ಯವೇ ಆಗಿರುವುದು. ಆದ್ದರಿಂದ ಒಳ್ಳೆಯ ಮಾತಿಗೆ ಕೆಟ್ಟದ್ದು ಎನ್ನವುದೂ ಯೋಗ್ಯವೇ ಆಗಿರುವುದು ।।೧೬೨೬।।

ಆಗ ಧೃತರಾಷ್ಟ್ರನು ಹೇಳಿದನು :- ಈಗ ಯಾವ ಯುದ್ಧವು ನಡೆದಿರುವುದೋ, ಅದರಲ್ಲಿ ಅಪ್ಪಾ ! ಸಂಜಯನೇ ಕೊನೆಯದಾಗಿ ಜಯವು ಯಾರಿಗೆ ಲಭಿಸುವುದು ? ।।೧೬೨೭।।

ಏಕೆಂದರೆ, ಬಹಳ ಮಾಡಿ ನನ್ನ ಮನಸ್ಸಿನಲ್ಲಿ ಯಾವ ವಿಚಾರವು ಧಾವಿಸುತ್ತಿದೆ ಎಂದರೆ ದುರ್ಯೋಧನನ ಪ್ರತಾಪವು ಯಾವಾಗಲೂ ಹೆಚ್ಚಾಗಿರುತ್ತದೆ ।।೧೬೨೮।।

ಮತ್ತು ಪಾಂಡವರ ದೃಷ್ಟಿಯಿಂದ ನೋಡಿದರೆ, ನಮ್ಮ ಸೈನ್ಯವು ದೀಡಪಟ್ಟು ಹೆಚ್ಚಾಗಿರುವುದು, ಆದ್ದರಿಂದ ನಿಜವಾಗಿಯೂ ದುರ್ಯೋಧನನಿಗೆ ಮಾತ್ರ ಜಯವು ಸಿಗಬಹುದು ।।೧೬೨೯।।

ನಮಗಂತೂ ಹೀಗೆ ಅನಿಸಿಕೆಯಾಗಿರುವುದು, ಆದರೆ ನಿನಗೆ ಏನೂ ಅನಿಸುವುದೋ ಅನಿಸಲಿ. ಆದಾಗ್ಯೂ ಸಂಜಯನೇ, ನಿನ್ನ ಗಣಿತವು ಏನಿದೆ ಎಂಬುವುದನ್ನು ನಮಗೆ ತಿಳಿಸು ।।೧೬೩೦।।

ಶ್ಲೋಕಾರ್ಥ :- ಯೋಗೇಶ್ವರನಾದ ಶ್ರೀಕೃಷ್ಣ ಭಗವಂತನು, ಗಾಂಡೀವಧರನಾದ ಅರ್ಜುನನು ಎಲ್ಲಿ ನೆಲೆಸಿರುವರೋ ಅಲ್ಲಿಯೇ ಲಕ್ಷ್ಮೀ, ವಿಜಯ, ಐಶ್ವರ್ಯವೂ, ಸ್ಥಿರನೀತಿಯೂ ನೆಲೆಸಿರುವುದೆಂದು ನನ್ನ ನಿಶ್ಚಯ ।।೭೮।।

ಇಲ್ಲಿಗೆ ಉಪನಿಷತ್ತೂ, ಬ್ರಹ್ಮವಿದ್ಯೆಯೂ, ಯೋಗ ಶಾಸ್ತ್ರವೂ ಶ್ರೀಕೃಷ್ಣಾರ್ಜುನ ಸಂವಾದವೂ ಆದ ಶ್ರೀಮದ್ಭಗವದ್ಗೀತೆಯಲ್ಲಿ ಮೋಕ್ಷ ಸಂನ್ಯಾಸ ಯೋಗವೆಂಬ ಹೆಸರಿನ ಹದಿನೆಂಟನೆಯ ಅಧ್ಯಾಯವು ಮುಗಿದುದು.

ಈ ಧೃತರಾಷ್ಟ್ರನ ಮಾತಿಗೆ ಸಂಜಯನು ಹೇಳಿದನು :- ಮಹಾರಾಜರೇ ! ಜಯವು ದುರ್ಯೋಧನನಿಗೋ ಅಥವಾ ಧರ್ಮರಾಜನಿಗೋ ಇದನ್ನು ನಾನು ಅರಿಯೆನು. ಆದರೆ ಎಲ್ಲಿ ಆಯುಷ್ಯವಿದೆಯೋ, ಅಲ್ಲಿ ಬದುಕು ಇರುವುದು, ಇದು ನಿಶ್ಚಿತವು ।।೧೬೩೧।।

ಚಂದ್ರ ತೇಥೇ ಚಂದ್ರಿಕಾ । ಶಂಭು ತೇಥೇ ಅಂಬಿಕಾ । ಸಂತ ತೇಥೇ ವಿವೇಕಾ । ಅಸಣೇ ಕೀ ಜೇ ।।೧೬೩೨।। ರಾವೋ ತೇಥೇ ಕಟಕ । ಸೌಜನ್ಯ ತೇಥೇ ಸೋಯರೀಕ । ವನ್ಹೀ ತೇಥೇ ದಾಹಕ । ಸಾಮರ್ಥ್ಯ ಕೀ ।।೧೬೩೩।। ದಯಾ ತೇಥೇ ಧರ್ಮು । ಧರ್ಮು ತೇಥೇ ಸುಖಾಗಮು । ಸುಖೀ ಪುರುಷೋತ್ತಮು । ಅಸೇ ಜೈಸಾ ।।೧೬೩೪।। ವಸಂತು ತೇಥೇ ವನೇ । ವನ ತೇಥೇ ಸುಮನೇ । ಸುಮನೀ ಪಾಲಿಂಗನೇ । ಸಾರಂಗಾಂಚೀ ।।೧೬೩೫।। ಗುರು ತೇಥ ಜ್ಞಾನ । ಜ್ಞಾನೀ ಆತ್ಮದರ್ಶನ । ದರ್ಶನೀ ಸಮಾಧಾನ। ಆಥೀ ಜೈಸೇ।।೧೬೩೬।। ಭಾಗ್ಯ ತೇಥ ವಿಲಾಸು । ಸುಖ ತೇಥ ಉಲ್ಲಾಸು । ಹೇ ಅಸೋ ತೇಥ ಪ್ರಕಾಶು । ಸೂರ್ಯ ಜೇಥೇ ।।೧೬೩೭।। ತೈಸೇ ಸಕಳ ಪುರುಷಾರ್ಥ । ಜೇಣೇ ಸ್ವಾಮೀ ಕಾ ಸನಾಥ । ತೋ ಶ್ರೀಕೃಷ್ಣರಾವೋ ಜೇಥ । ತೇಥ ಲಕ್ಷ್ಮೀ ।।೧೬೩೮।। ಆಣಿ ಆಪುಲೇನಿ ಕಾಂತೇಸೀ । ತೇ ಜಗದಂಬಾ ಜಯಾಪಾಸೀ । ಆಣಿಮಾದಿಕೀ ಕಾಯ ದಾಸೀ । ನವ್ಹತೀ ತಯಾತೆ ? ।।೧೬೩೯।। ಕೃಷ್ಣ ವಿಜಯಸ್ವರೂಪ ನಿಜಾಂಗೇ । ತೋ ರಾಹಿಲಾ ಅಸೇ ಜೇಣೇ ಭಾಗೇ । ತೈ ಜಯೋ ಲಾಗವೇಗೇ । ತೇಥೇಂಚಿ ಆಹೇ ।।೧೬೪೦।। ವಿಜಯೀ ನಾಮೇ ಅರ್ಜುನ ವಿಖ್ಯಾತು । ವಿಜಯಸ್ವರೂಪ ಶ್ರೀಕೃಷ್ಣನಾಥು । ಶ್ರಿಯೇಸೀ ವಿಜಯ ನಿಶ್ಚಿತು । ತೇಥೇಂಚಿ ಅಸೇ ।।೧೬೪೧।। ತಯಾಚಿಯೇ ದೇಶೀಂಚಾ ಝಾಡೀ । ಕಲ್ಪತರೂತೇ ಹೊಡೀ । ನ ಜಿಣಾವೇ ಕಾ ಯೇವಢೀ । ಮಾಯಬಾಪೇ ಅಸತಾ ? ।।೧೬೪೨।। ತೇ ಪಾಷಾಣಹೀ ಆಘವೇ । ಚಿಂತಾರತ್ನೇ ಕಾ ನೋಹಾವೇ ? । ತಿಯೇ ಭೂಮಿಕೇ ಕಾ ನ ಯಾವೇ । ಸುವರ್ಣತ್ವ ? ।।೧೬೪೩।। ತಯಾಚಿಯಾ ಗಾಂವೀಂಚಿಯಾ । ನದೀ ಅಮೃತೇ ವಾಹಾವಿಯಾ । ನವಲ ಕಾಯಿ ರಾಯಾ । ವಿಚಾರೀ ಪಾ ।।೧೬೪೪।। ತಯಾಚೇ ಬಿಸಾಟ ಶಬ್ದ । ಸುಖೇ ಮ್ಹಣೋ ಯೇತೀ ವೇದ । ಸದೇಹ ಸಚ್ಚಿದಾನಂದ । ಕಾ ನ ವ್ಹಾವೇ ತೇ ? ।।೧೬೪೫।। ಪೈ ಸ್ವರ್ಗಾಪವರ್ಗ ದೋನ್ಹೀ । ಇಯೇ ಪದೇ ಜಯಾ ಅಧೀನೀ । ತೋ ಶ್ರೀಕೃಷ್ಣ ಬಾಪ ಜನನೀ । ಕಮಳಾ ಜಯಾ ।।೧೬೪೬।। ಮ್ಹಣೌನಿ ಜಿಯಾ ಬಾಹೀ ಉಭಾ । ತೋ ಲಕ್ಷ್ಮೀಯೇಚಾ ವಲ್ಲಭಾ । ತೇಥ ಸರ್ವಸಿದ್ಧೀ ಸ್ವಯಂಭಾ । ಯೇರ ಮೀ ನೇಣೇ ।।೧೬೪೭।। ಆಣಿ ಸಮುದ್ರಾಚಾ ಮೇಘು । ಉಪಯೋಗೇ ತಯಾಹೂನಿ ಚಾಂಗು । ತೈಸಾ ಪಾರ್ಥೀ ಆಜೀ ಲಾಗು । ಆಹೇ ತಯೇ ।।೧೬೪೮।।

ಚಂದ್ರನಿದ್ದಲ್ಲಿ ಬೆಳದಿಂಗಳು, ಶಂಕರನು ಇದ್ದಲ್ಲಿ ಪಾರ್ವತಿಯು, ಸಂತರಲ್ಲಿ ವಿವೇಕವು ಇರಬೇಕಲ್ಲವೇ ಮಹಾರಾಜರೇ! ॥೧೮.೩೨॥

ರಾಜನಿದ್ದಲ್ಲಿ ಸೈನ್ಯವು, ಸೌಜನ್ಯವಿದ್ದಲ್ಲಿ ಮೈತ್ರವು, ಅಗ್ನಿ ಇದ್ದಲ್ಲಿ ದಾಹಕದ ಸಾಮರ್ಥ್ಯವು ॥೧೮.೩೩॥

ದಯೆ ಇದ್ದಲ್ಲಿ ಧರ್ಮವು, ಧರ್ಮವಿದ್ದಲ್ಲಿ ಸುಖದ ಸ್ಥಾನವು, ಹಾಗೂ ಎಲ್ಲಿ ಸುಖವಿದೆಯೋ, ಅಲ್ಲಿ ಪುರುಷೋತ್ತಮನು ಇರುವುದು ಸಹಜವಾಗಿರುವುದು ॥೧೮.೩೪॥

ವಸಂತವಿದ್ದಲ್ಲಿ ವನವು, ವನವಿದ್ದಲ್ಲಿ ಪುಷ್ಪಗಳು, ಮತ್ತು ಪುಷ್ಪಗಳಿದ್ದಲ್ಲಿ ಭ್ರಮರಗಳ ಸಮುದಾಯವು ॥೧೮.೩೫॥

ಗುರುಗಳಿದ್ದಲ್ಲಿ ಜ್ಞಾನವು, ಜ್ಞಾನವಿದ್ದಲ್ಲಿ ಆತ್ಮಾನುಭವವು ಮತ್ತು ಆತ್ಮಾನುಭವವಾದ ಮೇಲೆ ಸಮಾಧಾನವು ಇರಬೇಕಾದದ್ದೇ ॥೧೮.೩೬॥

ಭಾಗ್ಯವಿದ್ದಲ್ಲಿ ವಿಲಾಸವು, ಸುಖವಿದ್ದಲ್ಲಿ ಉಲ್ಲಾಸವು. ಹೆಚ್ಚಿಗೇನು ಹೇಳಬೇಕು ? ಎಲ್ಲಿ ಸೂರ್ಯನೋ, ಅಲ್ಲಿ ಪ್ರಕಾಶವು ಇದ್ದೇ ಇರುವುದು ॥೧೮.೩೭॥

ಈ ಪ್ರಕಾರವಾಗಿ ಧರ್ಮ, ಅರ್ಥ, ಕಾಮ ಹಾಗೂ ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳು ಯಾರಿಂದ ಸನಾಥವಾಗಿರುವುವೋ, ಅಂಥ ಜಗನ್ನಾಥ ಶ್ರೀಕೃಷ್ಣನು ಇರುವಲ್ಲಿ ಲಕ್ಷ್ಮೀಯು ಇದ್ದೇ ಇರುವಳು ॥೧೮.೩೮॥

ಮತ್ತು ತನ್ನ ಪತಿಯೊಂದಿಗೆ ಜಗದಂಬೆಯು ಯಾರಲ್ಲಿರುವಳೋ, ಅವನಲ್ಲಿ ಜಗದಂಬೆಯ ದಾಸಿಯರಾದ ಅಷ್ಟ ಸಿದ್ಧಿಗಳು ಇರುವುದಿಲ್ಲವೇ ? ॥೧೮.೩೯॥

ಶ್ರೀಕೃಷ್ಣನು ಸ್ವಭಾವತಃವೇ ವಿಜಯಸ್ವರೂಪನಿರುವನು. ಜಯವು ಯವಾಗಲೂ ಶ್ರೀಕೃಷ್ಣನ ಸಂಬಂಧದಲ್ಲಿರುವುದು. ಆತನು ಯಾವ ಪಕ್ಷದಲ್ಲಿರುವನೋ, ಅಲ್ಲಿ ಜಯವು ಇದ್ದೇ ಇರುವುದು ॥೧೮.೪೦॥

ಆ ಅರ್ಜುನನು ವಿಜಯ ಹೆಸರಿನಿಂದ ಪ್ರಖ್ಯಾತ ನಿರುವನು ಮತ್ತು ವಿಜಯಸ್ವರೂಪನಾದ ಶ್ರೀಕೃಷ್ಣ ಪರಮಾತ್ಮನು ಲಕ್ಷ್ಮೀಸಹಿತನಾಗಿ ಯಾವ ಪಕ್ಷದಲ್ಲಿರುವನೋ, ಅಲ್ಲಿಯೇ ವಿಜಯವು ನಿಶ್ಚಿತವಾಗಿರುವುದು ॥೧೮.೪೧॥

ಯಾವ ಭಕ್ತನಿಗೆ ಶ್ರೀಕೃಷ್ಣ ಪರಮಾತ್ಮನು ಹಾಗೂ ಲಕ್ಷ್ಮೀ ಇವರು ತಂದೆ ತಾಯಿಗಳಿರುವಾಗ ಆತನ ದೇಶದ ಗಿಡಗಳು ಕಲ್ಪವೃಕ್ಷದ ಸರಿಸಮಾನ ಏಕಾಗಬಾರದು ? ॥೧೮.೪೨॥

ಅಲ್ಲಿಯ ಎಲ್ಲ ಕಲ್ಲುಗಳು ಚಿಂತಾಮಣಿಯಾಗಿ ಏಕಾಗುವುದಿಲ್ಲ ? ಹಾಗೂ ಅಲ್ಲಿಯ ಭೂಮಿಯು ಸುವರ್ಣಮಯವಾಗಿ ಏಕಾಗುವುದಿಲ್ಲ ? ॥೧೮.೪೩॥

ಆತನ ಗ್ರಾಮದ ನದಿಗಳು ಅಮೃತದಿಂದ ತುಂಬಿ ಏಕೆ ಹರಿಯುವುದಿಲ್ಲ ? ಇದರಲ್ಲೇನು ಆಶ್ಚರ್ಯ ? ರಾಜನೇ, ಇದರ ವಿಚಾರವನ್ನು ನೀನೇ ಮಾಡು ॥೧೮.೪೪॥

ಯಾರ ಮುಖದಿಂದ ಹೊರಡುವ ಶಬ್ದಗಳಿಗೆ ಸುಖವಾಗಿ ವೇದವಾಕ್ಯಗಳೆಂದು ಹೇಳಬಹುದು. ಅಂದಮೇಲೆ ಆ ಪುರುಷನು ದೇಹಸಹಿತವಾಗಿ ಸಚ್ಚಿದಾನಂದ ಬ್ರಹ್ಮನು ಏಕಾಗುವುದಿಲ್ಲ ? ॥೧೮.೪೫॥

ಸ್ವರ್ಗ ಹಾಗೂ ಮೋಕ್ಷವು ಈ ಎರಡೂ ಪದಗಳು ಯಾರ ಆಧೀನವಾಗಿರುವುವೋ, ಆ ಶ್ರೀಕೃಷ್ಣನು ಯಾರ ತಂದೆ ಮತ್ತು ಲಕ್ಷ್ಮೀಯು ಯಾರ ತಾಯಿಯಾಗಿರುವಳೋ, ಆತನ ಕೊನೆಯಲ್ಲಿ ವಿಜಯವು ಇದೆ ॥೧೮.೪೬॥

ಆದ್ದರಿಂದ ಯಾವ ಪಕ್ಷದಲ್ಲಿ ಲಕ್ಷ್ಮೀವಲ್ಲಭನಾದ ಶ್ರೀಕೃಷ್ಣನು ನಿಂತಿರುವನೋ, ಅಲ್ಲಿ ಎಲ್ಲ ಸಿದ್ಧಿಗಳು ತಾವಾಗಿಯೇ ಸಿದ್ಧವಾಗಿರುವುವು. ರಾಜಾ, ಇದಕ್ಕಿಂತಲೂ ಹೆಚ್ಚಿಗೆ ನಾನು ಏನೂ ತಿಳಿಯಲಾರೆ ॥೧೮.೪೭॥

ಮತ್ತು ಮೋಡವು ಸಮುದ್ರದಿಂದಲೇ ಉತ್ಪನ್ನವಾಗುವುದು, ಆದರೆ ಅದರ ಉಪಯೋಗವು ಜಗತ್ತಿಗೆ ಸಮುದ್ರಕ್ಕಿಂತಲೂ ಹೆಚ್ಚಿಗೆ ಆಗುವುದು. ಅದರಂತೆ ಶ್ರೀಕೃಷ್ಣನಿಗಿಂತಲೂ ಪಾರ್ಥನ ಭಾಗ್ಯವು ಇಂದು ವಿಶೇಷವಾಗಿರುವುದು ॥೧೮.೪೮॥

ಕನಕತ್ವದೀಕ್ಷಾಗುರು । ಲೋಹಾ ಪರಿಸು ಹೋಯ ಕಿರೂ । ಪರೀ ಜಗಾ ಪೋಸಿತಾ ವ್ಯವಹಾರೂ । ತೇಂಚಿ ಜಾಣೇ ।೧೮೪೯॥ ಯೇಥ ಗುರುತ್ವಾ ಯೇತಸೇ ಉಣೇ । ಐಸೇ ಝಣೇ ಕೋಣ್ಹೀ ಮ್ಹಣೇ । ವನ್ಹಿ ಪ್ರಕಾಶ ದೀಪಪಣೇ । ಪ್ರಕಾಶೀ ಆಪುಲಾ ।೧೮೫೦॥ ತೈಸಾ ದೇವಾಚಿಯಾ ಶಕ್ತೀ । ಪಾರ್ಥು ದೇವಾಸೀಚಿ ಬಹುತೀ । ಪರೀ ಮಾನೇ ಇಯೆ ಸ್ತುತೀ । ಗೌರವ ಅಸೇ ।೧೮೫೧॥ ಆಣಿ ಪುತ್ರೇ ಮೀ ಸರ್ವ ಗುಣೇ । ಜಿಣಾವಾ ತೇ ಬಾಪಾ ಶಿರಾಣೇ । ತರೀ ತೇ ಶಾರ್ಙ್ಗಪಾಣೇ । ಫಳಾ ಆಲೀ ।೧೮೫೨॥ ಕಿಂಬಹುನಾ ಐಸಾ ನೃಪಾ । ಪಾರ್ಥು ಝಾಲಾಸೇ ಕೃಷ್ಣ ಕೃಪಾ । ತೋ ಜಯಾಕಡೇ ಸಾಕ್ಷೇಪಾ । ರೀತೀ ಆಹೇ ।೧೮೫೩॥ ತೋಚಿ ಗಾ ವಿಜಯಾಸಿ ಠಾವೋ । ಯೇಥ ತುಜ ಕೋಣ ಸಂದೇಹೋ ?। ತೇಥ ನಯೇ ತರೀ ವಾವೋ । ವಿಜಯೋಚಿ ಹೋಯ ।೧೮೫೪॥ ಮ್ಹಣೌನಿ ಜೇಥ ಶ್ರೀ ತೇಥೇ ಶ್ರೀಮಂತು । ಜೇಥ ತೋ ಪಂಡೂಚಾ ಸುತು । ತೇಥ ವಿಜಯ ಸಮಸ್ತು । ಅಭ್ಯುದಯೋ ತೇಥ ।೧೮೫೫॥ ಜರೀ ವ್ಯಾಸಾಚೇನಿ ಸಾಚೇ । ಧಿರೇ ಮನ ತುಮಚೇ । ತರೀ ಯಾ ಬೋಲಾಚೇ । ಧ್ರುವಚಿ ಮಾನಾ ।೧೮೫೬॥ ಜೇಥ ತೋ ಶ್ರೀವಲ್ಲಭು । ಜೇಥ ಭಕ್ತಕದಂಬು । ತೇಥ ಸುಖ ಆಣಿ ಲಾಭು । ಮಂಗಳಾಚಾ ।೧೮೫೭॥ ಯಾ ಬೋಲಾ ಆನ ಹೋಯೇ । ತರೀ ವ್ಯಾಸಾಚಾ ಅಂಕು ನ ವಾಹೇ । ಐಸೇ ಗಾಜೋನಿ ಬಾಹೇ । ಉಭಿಲೀ ತೇಣೇ ।೧೮೫೮॥ ಏವಂ ಭಾರತಾಚಾ ಆವಾಂಕಾ । ಆಣೂನಿ ಶ್ಲೋಕಾ ಏಕಾ । ಸಂಜಯೇ ಕುರುನಾಯಕಾ । ದಿಧಲಾ ಹಾತೀ ।೧೮೫೯॥ ಜೈಸಾ ನೇಣೋ ಕೇವಢಾ ವನ್ಹೀ । ಪರೀ ಗುಣಾಗ್ರೀ ಠೇಲೂನೀ । ಆಣಿಜೇ ಸೂರ್ಯಾಚೇ ಹಾನೀ । ನಿಸ್ವರಾವಯಾ ।೧೮೬೦॥ ತೈಸೇ ಶಬ್ದ ಬ್ರಹ್ಮ ಅನಂತ । ಜಾಲೇ ಸವಾಲಕ್ಷ ಭಾರತ । ಭಾರತಾಚೇ ಶತೇ ಸಾತ । ಸರ್ವಸ್ವ ಗೀತಾ ।೧೮೬೧॥ ತಯಾಹೀ ಸಾತಾ ಶತಾಂಚಾ । ಇತ್ಯರ್ಥು ಹಾ ಶ್ಲೋಕ ಶೇಷೀಂಚಾ । ವ್ಯಾಸಶಿಷ್ಯ ಸಂಜಯಾಚಾ । ಪೂರ್ಣೋದ್ಗಾರು ಜೋ ।೧೮೬೨॥ ಯೇಣೇ ಯೇಕೇಂಚಿ ಶ್ಲೋಕೇ । ರಾಹೇ ತೇಣೇ ಅಸಕೇ । ವಿದ್ಯಾಜಾತಾಚೇ ನಿಕೇ । ಜಿಂತಲೇ ಹೋಯ ।೧೮೬೩॥ ಐಸೇ ಶ್ಲೋಕ ಶತೇ ಸಾತ । ಗೀತೇಚೇ ಪದೇ ಆಂಗೇವಾಹತ । ಪದೇ ಮ್ಹಣೋ ಕೀ ಪರಮಾಮೃತ । ಗೀತಾಕಾಶೀಂಚೆ ।೧೮೬೪॥ ಕೀ ಆತ್ಮರಾಜಾಚಿಯೆ ಸಭೇ । ಗೀತ ವೋಡವಲೇ ಹೇ ಖಾಂಬೇ । ಮಜ ಶ್ಲೋಕ ಪ್ರತಿಭೇ । ಐಸೇ ಯೇತ ।೧೮೬೫॥

ಕಬ್ಬಿಣಕ್ಕೆ ಬಂಗಾರದ ದೀಕ್ಷೆಯನ್ನು ಕೊಡುವ ಪರಿಸವು ಗುರುವಾಗಿರುವುದು ನಿಜ, ಆದರೆ ಜಗತ್ತಿನ ವ್ಯವಹಾರದಲ್ಲಿ ಬಂಗಾರದ ಉಪಯೋಗವೇ ಆಗಿ ಅದರ ಯೋಗ್ಯತೆಯು ವಿಶೇಷವೆನಿಸುವುದು ॥೧೬೪೯॥

ಹೀಗೆ ಹೇಳಿದರೆ ಗುರುತ್ವಕ್ಕೆ ಧಕ್ಕೆ ಬಂದೀತೆಂದು ಯಾರಾದರೂ ಹೇಳಬಹುದು, ಆದರೆ ಅಗ್ನಿಯ ಪ್ರಕಾಶವಾದ ದೀಪದ ವರ್ಣನೆ ಮಾಡಿದರೆ, ಅದು ಅಗ್ನಿಯದ್ದೇ ಆಗಿರುವುದು ॥೧೬೫೦॥

ಅದರಂತೆ, ದೇವನ ಪ್ರಸಾದದಿಂದಲೇ ಪಾರ್ಥನ ಶಕ್ತಿಯು ಜೀವನಕ್ಕಿಂತಲೂ ವಿಶೇಷವಾಗಿರುವುದು. ಅದಕ್ಕಾಗಿ ಪಾರ್ಥನ ಸ್ತುತಿ ಮಾಡುವುದರಿಂದ ದೇವನಿಗೆ ವಿಶೇಷವಾಗಿ ಗೌರವವಾಗುವುದು ॥೧೬೫೧॥

ಮತ್ತು ಮಗನು ನನ್ನನ್ನು ಎಲ್ಲ ಗುಣಗಳಿಂದ ಜಯಿಸಬೇಕೆಂದು ತಂದೆಗೆ ಇಚ್ಛೆ ಇರುವುದು. ಇದೇ ಶ್ರೀಕೃಷ್ಣನ ಇಚ್ಛೆಯು ಪರಿಪೂರ್ಣವಾಗಿರುವುದು ॥೧೬೫೨॥

ರಾಜಾ, ಹೆಚ್ಚಿಗೇನು ಹೇಳಲಿ? ಶ್ರೀಕೃಷ್ಣ ಕೃಪೆಯಿಂದ ಯುಕ್ತನಾಗಿರುವ ಪಾರ್ಥನು ಯಾವ ಭಾಗದಲ್ಲಿರುವನೋ ॥೧೬೫೩॥

ಅದುವೇ ವಿಜಯದ ಸ್ಥಾನವಾಗಿರುವುದು, ಇದಕ್ಕೇಕೆ ಸಂಶಯವು? ಅಲ್ಲಿ ಒಂದು ವೇಳೆ ವಿಜಯವು ಬಾರದಿದ್ದರೆ ವಿಜಯದ ವಿಜಯತನವು ವ್ಯರ್ಥವಾದೀತು? ॥೧೬೫೪॥

ಅದಕ್ಕಾಗಿ ಎಲ್ಲಿ ಲಕ್ಷ್ಮಿಯೋ, ಅಲ್ಲಿ ಆಕೆಯ ಪತಿ ಶ್ರೀಕೃಷ್ಣ ಪರಮಾತ್ಮನು. ಹಾಗೂ ಎಲ್ಲಿ ಪಂಡುಪುತ್ರ ಅರ್ಜುನನೋ, ಅಲ್ಲಿ ವಿಜಯವು ಇದ್ದು, ಭಾಗ್ಯೋದಯವು ಸಹ ಅಲ್ಲಿಯೇ ಇರುವುದು ॥೧೬೫೫॥

ಒಂದು ವೇಳೆ ಶ್ರೀವ್ಯಾಸರ ಮಾತಿನ ಮೇಲೆ ನಿಮ್ಮ ವಿಶ್ವಾಸವು ಇದ್ದರೆ, ನಾನು ಈಗ ಹೇಳಿರುವುದು ಖಚಿತವಾಗಿದೆ, ಹೀಗೆ ತಿಳಿಯಿರಿ ॥೧೬೫೬॥

ಎಲ್ಲಿ ಲಕ್ಷ್ಮೀಪತಿಯಾದ ಶ್ರೀಕೃಷ್ಣನು ಹಾಗೂ ಭಕ್ತಕದಂಬ ಅರ್ಜುನನು ಇರುವರೋ, ಅಲ್ಲಿ ಮಂಗಲದ ಲಾಭವು ಮತ್ತು ಸೌಖ್ಯವು ಇರುವುವು ॥೧೬೫೭॥

ಈ ನನ್ನ ಮಾತುಗಳು ಅಸತ್ಯವಾದರೆ, ನಾನು ವ್ಯಾಸರ ಶಿಷ್ಯನೇ ಅಲ್ಲ. ಹೀಗೆ ಕೈಯನ್ನು ಮೇಲಕ್ಕೆತ್ತಿ ದೊಡ್ಡದಾದ ಗರ್ಜನೆಯಿಂದ ಸಂಜಯನು ಹೇಳಿದನು ॥೧೬೫೮॥

ಈ ಪ್ರಕಾರವಾಗಿ ಎಲ್ಲ ಮಹಾಭಾರತದ ಸಾರವನ್ನು ಗೀತೆಯ ಈ ಒಂದೇ ಶ್ಲೋಕದಲ್ಲಿ ತಂದು ಕುರು ನಾಯಕನಾದ ಧೃತರಾಷ್ಟ್ರನ ಕೈಯಲ್ಲಿ ಕೊಟ್ಟನು ॥೧೬೫೯॥

ಅಗ್ನಿಯು ಎಷ್ಟೊಂದು ದೊಡ್ಡದಾಗಿದೆ! ಆದಾಗ್ಯೂ, ಬತ್ತಿಯ ತುದಿಗೆ ಹಚ್ಚುವುದರಿಂದ ಸೂರ್ಯನು ಮುಳುಗಿದಾಗ ಬಿದ್ದ ಕತ್ತಲೆಯನ್ನು ನಿವಾರಿಸುವುದು ॥೧೬೬೦॥

ಅದರಂತೆ ವೇದವು ಅನಂತವಾಗಿದ್ದು, ಅದರ ಸಾರವನ್ನು ಮಹಾಭಾರತದ ಒಂದು ಕಾಲು ಲಕ್ಷ ಶ್ಲೋಕದಲ್ಲಿ ತಂದು, ಹಾಗೂ ಆ ಮಹಾಭಾರತದ ಸಾರವನ್ನು ಗೀತೆಯ ಏಳುನೂರು ಶ್ಲೋಕದಲ್ಲಿ ತರಲಾಯಿತು ॥೧೬೬೧॥

ಆ ಯಾವ ಏಳುನೂರು ಶ್ಲೋಕದಲ್ಲಿನ ಈ ಕೊನೆಯ ಶ್ಲೋಕವು ಸಾರಭೂತವಾಗಿದ್ದು, ವ್ಯಾಸ ಶಿಷ್ಯನಾದ ಸಂಜಯನ ಇದು ಪೂರ್ಣ ಉದ್ಗಾರವಾಗಿರುವುದು ॥೧೬೬೨॥

ಈ ಒಂದೇ ಶ್ಲೋಕವು ಅಜ್ಞಾನದ ಮೂಲವನ್ನು ಸಮೂಲವಾಗಿ ಜಯಿಸಿಬಿಟ್ಟಿದೆ ॥೧೬೬೩॥

ಹೀಗೆ ಗೀತೆಯ ಏಳುನೂರು ಶ್ಲೋಕಗಳು ಇವು ಗೀತೆಯ ಪಾದಗಳಾಗಿದ್ದು, ಗೀತೆಯನ್ನು ಹೊತ್ತು ಕೊಂಡಿರುವುವು ಅಥವಾ ಪಾದಗಳಲ್ಲದೇ ಈ ಶ್ಲೋಕಗಳು ಗೀತಕಾಶಿಯ ಅಮೃತ ವೃಷ್ಟಿಯೇ ಇರಬಹುದೇನೋ !! ॥೧೬೬೪॥

ಅಥವಾ ಇವು ಶ್ಲೋಕಗಳಾಗಿರದೇ ಆತ್ಮರಾಜನ ಸಭೆಯಾಗಿರುವ ಗೀತೆಯು, ಆ ಗೀತೆರೂಪ ಸಭೆಯು ಈ ಏಳುನೂರು ಶ್ಲೋಕರೂಪ ಕಂಬಗಳೇ ಆಗಿರುವುವು ಎಂದು ನನಗೆ ಅನಿಸುತ್ತದೆ ॥೧೬೬೫॥

ಕೀ ಗೀತಾ ಹೇ ಸಪ್ತಶತೀ । ಮಂತ್ರಪ್ರತಿಪಾದ್ಯ ಭಗವತೀ । ಮೋಹಮಹಿಷಾ ಮುಕ್ತೀ । ಆನಂದಲೀ ಅಸೇ ॥೧೬೬೬॥ ಮ್ಹಣೌನಿ ಮನೇ ಕಾಯೇ ವಾಚಾ । ಜೋ ಸೇವಕ ಹೋಈಲ ಇಯೇಚಾ । ತೋ ಸ್ವಾನಂದ ಸಾಮ್ರಾಜ್ಯಾಚಾ । ಚಕ್ರವರ್ತೀ ಕರೀ ॥೧೬೬೭॥ ಕೀ ಅವಿದ್ಯಾತಿಮಿರರೋಖೇ । ಶ್ಲೋಕ ಸೂರ್ಯಾತೇ ಪೈಜಾ ಜಿಂಕೇ । ಐಸೇ ಪ್ರಕಾಶಿಲೇ ಗೀತಾಮಿಖೇ । ರಾಯೇ ಶ್ರೀಕೃಷ್ಣೇ ॥೧೬೬೮॥ ಕೀ ಶ್ಲೋಕಾಕ್ಷರದ್ರಾಕ್ಷಲತಾ । ಮಾಂಡವ ಜಾಲೀ ಆಹೇ ಗೀತಾ । ಸಂಸಾರಪಥ ಶ್ರಾಂತಾ । ವಿಸಂವಾವಯಾ ॥೧೬೬೯॥ ಕೀ ಸಭಾಗ್ಯಸಂತೀ ಭ್ರಮರೀ । ಕೇಲೇ ತೇ ಶ್ಲೋಕಕಲ್ಹಾರೀ । ಶ್ರೀಕೃಷ್ಣಾಖ್ಯಸರೋವರೀ । ಸಾಸಿನ್ನಲೀ ಹೇ ॥೧೬೭೦॥ ಕೀ ಶ್ಲೋಕನವ್ಹತೀ ಆನ । ಗಮೇ ಗೀತೇಚೇ ಮಹಿಮಾನ । ವಾಖಾಣಿತೇ ಬಂದಿಜನ । ಉದಂಡ ಜೈಸೇ ॥೧೬೭೧॥ ಕೀ ಶ್ಲೋಕಾಂಚಿಯಾ ಆವಾರಾ । ಸಾತ ಶತೇ ಕರೂನಿ ಸುಂದರಾ । ಸರ್ವಾಗಮ ಗೀತಾಪುರಾ । ವಸೋ ಆಲೇ ॥೧೬೭೨॥ ಕೀ ನಿಜಕಾಂತಾ ಆತ್ಮಯಾ । ಆವಡೀ ಗೀತಾ ಮಿಳಾವಯಾ । ಶ್ಲೋಕ ನವ್ಹತೀ ಬಾಹ್ಯಾ । ಪಸರು ಕಾ ಜೋ ॥೧೬೭೩॥ ಕೀ ಗೀತಾಕಮಳೀಂಚೆ ಭೃಂಗ । ಕೀ ಹೇ ಗೀತಾ ಸಾಗರ ತರಂಗ । ಕೀ ಹರೀಚೇ ಹೇ ತುರಂಗ । ಗೀತಾರಥೀಂಚೇ ॥೧೬೭೪॥ ಕೀ ಶ್ಲೋಕ ಸರ್ವತೀರ್ಥ ಸಂಘಾತು । ಆಲಾ ಶ್ರೀಗೀತೆಗಂಗೇ ಆಂತು । ಜೇ ಅರ್ಜುನ ನರಸಿಂಹಸ್ಥು । ಜಾಲಾ ಮ್ಹಣೌನಿ॥೧೬೭೫॥ ಕೀ ನೋಹೇ ಹೇ ಶ್ಲೋಕಶ್ರೇಣೀ । ಅಚಿಂತ್ಯಚಿತ್ತ ಚಿಂತಾಮಣೀ । ಕೀ ನಿರ್ವಿಕಲ್ಪಾ ಲಾವಣೀ । ಕಲ್ಪತರೂಂಚೀ ॥೧೬೭೬॥ ಐಸಿಯಾ ಶತೇ ಸಾತ ಶ್ಲೋಕಾ । ಪರೀ ಆಗಳಾ ಏಕಏಕಾ । ಆತಾ ಕೋಣ ವೇಗಳಿಕಾ । ವಾನಾವಾ ಪಾ ॥೧೬೭೭॥ ತಾನ್ಹೀ ಆಣಿ ಪಾರಠೀ । ಇಯಾ ಕಾಮಧೇನೂತೇ ದಿಠೀ । ಸೂನಿ ಜೈಸಿಯಾ ಗೋಠೀ । ಕೀಜತೀನಾ ॥೧೬೭೮॥ ದೀಪಾ ಆಗಿಲು ಮಾಗಿಲು । ಸೂರ್ಯ ಧಾಕುಟಾ ವಡೀಲು । ಅಮೃತಸಿಂಧು ಖೋಲು । ಉಥಳು ಕಾಯಸಾ ॥೧೬೭೯॥ ತೈಸೇ ಪಹಿಲೇ ಸರತೇ । ಶ್ಲೋಕ ನ ಮ್ಹಣಾವೇ ಗೀತೇ । ಜುನೀ ನವೀ ಪಾರಿಜಾತೇ । ಆಹಾತೀ ಕಾಈ ? ॥೧೬೮೦॥ ಆಣಿ ಶ್ಲೋಕಾ ಪಾಡು ನಾಹೀ । ಹೇ ಕೀರ ಸಮರ್ಥು ಕಾಈ । ಯೇಥ ವಾಚ್ಯ ವಾಚಕಹೀ । ಭಾಗು ನ ಧರೀ ॥೧೬೮೧॥ ಜೇ ಇಯೇ ಶಾಸ್ತ್ರೀಏಕು । ಶ್ರೀಕೃಷ್ಣಚಿ ವಾಚ್ಯ ವಾಚಕು । ಹೇ ಪ್ರಸಿದ್ಧ ಜಾಣೇ ಲೋಕು । ಭಲತಾಹೀ ॥೧೬೮೨॥

ಅಥವಾ ಗೀತೆಯು ಏಳುನೂರು ಶ್ಲೋಕಗಳಿಂದ ಪ್ರತಿಪಾದಿಸಲ್ಪಟ್ಟ ಸಾಕ್ಷಾತ್ ಭಗವತಿದೇವಿಯೇ ಆಗಿದೆ. ಈ ದೇವಿಯು ಮೋಹರೂಪ ಮಹಿಷಾಸುರನನ್ನು ಕೊಂದು ಆನಂದ ಪ್ರಾಪ್ತಳಾಗಿರುವಳು ।।೧೬೬।।

ಆದ್ದರಿಂದ ಯಾವನು ಈ ಗೀತಾರೂಪ ದೇವಿಯ ಕಾಯಾ, ವಾಚಾ, ಮನದಿಂದ ಸೇವಕನಾಗುವನೋ, ಆತನು ಆನಂದರೂಪ ಸಾಮ್ರಾಜ್ಯಪಟ್ಟದ ಸಾರ್ವಭೌಮ ರಾಜನೇ ಆಗುವನು ।।೧೬೭।।

ಅಥವಾ ಅಜ್ಞಾನರೂಪವಾದ ಕತ್ತಲೆಯನ್ನು, ಅದನ್ನು ಪ್ರತಿಜ್ಞೆಯೊಂದಿಗೆ ಜಯಿಸಲು ಇವು ಕೇವಲ ಏಳುನೂರು ಶ್ಲೋಕಗಳಾಗಿರದೇ, ಏಳುನೂರು ಸೂರ್ಯಗಳನ್ನೇ ಶ್ರೀಕೃಷ್ಣನು ಗೀತೆಯರೂಪದಿಂದ ಪ್ರಕಾಶಿತಗೊಳಿಸಿರುವನು ।।೧೬೮।।

ಅಥವಾ ಸಂಸಾರ ಮಾರ್ಗದಲ್ಲಿ ನಡೆಯುವಾಗ ಆದ ಶ್ರಮದ ಪರಿಹಾರಕ್ಕಾಗಿ ಈ ಏಳುನೂರು ಶ್ಲೋಕಗಳು ದಾಕ್ಷಿಯ ಬಳ್ಳಿಗಳಾಗಿ ಗೀತಾರೂಪ ಮಂಟಪದ ಮೇಲೆ ಹಬ್ಬಿರುವುವು ।।೧೬೯।।

ಅಥವಾ ಶ್ರೀಕೃಷ್ಣವ್ಯಾಖ್ಯಾನರೂಪ ಗೀತಾಸರೋವರದಲ್ಲಿ ಏಳುನೂರು ಶ್ಲೋಕಗಳು ಕಮಲಗಳಾಗಿದ್ದು, ಇದರ ಗಂಧ ಪಡೆಯುವವರು ಭಾಗ್ಯವಂತ ಸಂತರು ಭ್ರಮರಗಳಾಗಿರುವರು ।।೧೭೦।।

ಅಥವಾ ಇವು ಬರೀ ಶ್ಲೋಕಗಳಾಗಿರದೇ ಗೀತೆಯ ಮಹಿಮೆಯನ್ನು ವರ್ಣಿಸುವ ಏಳುನೂರು ಸ್ತುತಿಪಾಠಕರೇ ಆಗಿರುವುವು ।।೧೭೧।।

ಅಥವಾ ಗೀತಾರೂಪ ಪಟ್ಟಣಕ್ಕೆ ಸುತ್ತಲೂ ಏಳುನೂರು ಶ್ಲೋಕಗಳು ಕೋಟೆಯಾಗಿರುವುವು. ಆದ್ದರಿಂದ ಸರ್ವ ಶಾಸ್ತ್ರಗಳು ಗೀತೆಪುರದಲ್ಲಿ ವಾಸ ಮಾಡಲು ಬಂದಿರುವುವು ।।೧೭೨।।

ಅಥವಾ ತನ್ನ ಪತಿಯಾದ ಆತ್ಮನಿಗೆ ಪ್ರೇಮದಿಂದ ಆಲಂಗಿಸಲು ಈ ಗೀತೆಯು ತನ್ನ ಶ್ಲೋಕರೂಪ ಬಾಹುಗಳನ್ನು ಪಸರಿಸಿ ಬಂದಿರುವಳಂತೆ ಕಾಣಿಸುತ್ತಿದೆ ।।೧೭೩।।

ಅಥವಾ ಗೀತಾರೂಪ ಕಮಲದ ಭ್ರಮಗಳಾಗಿ, ಅಥವಾ ಗೀತಾರೂಪ ಸಾಗರದ ತೆರೆಗಳಾಗಿ ಇಲ್ಲವೇ ಗೀತಾರೂಪ ಶ್ರೀಹರಿಯ ರಥವನ್ನು ಎಳೆಯುವ ಇವು ಕುದುರೆಗಳೇ ಆಗಿರುವುವು ।।೧೭೪।।

ಅಥವಾ ಗೀತೆಯು ಗಂಗೆಯಾಗಿದ್ದು, ಇಲ್ಲಿಗೆ ಎಲ್ಲ ಶ್ಲೋಕ ರೂಪ ತೀರ್ಥಗಳು ನರಾವತಾರನಾದ ಅರ್ಜುನರೂಪ ಸಿಂಹಸ್ಥ ಪರ್ವಣಿಯಲ್ಲಿ ಕೂಡಲು ಬಂದಿರುವುವು ।।೧೭೫।।

ಅಥವಾ ಈ ಶ್ಲೋಕಗಳು ಶ್ರೇಣಿಗಳಾಗಿರದೇ ಚಿತ್ತಕ್ಕೆ ಅಚಿಂತ್ಯ ಬ್ರಹ್ಮವನ್ನು ಪ್ರಾಪ್ತಿಮಾಡಿಕೊಡುವ ಚಿಂತಾಮಣಿಯೇ ಆಗಿರುವುವು ಅಥವಾ ಕಲ್ಪನಾತೀತನಾದ ಬ್ರಹ್ಮಪ್ರಾಪ್ತಿಯ ಕಲ್ಪತರುವೇ ಆಗಿರುವುವು ।।೧೭೬।।

ಹೀಗೆ ಈ ಏಳುನೂರು ಶ್ಲೋಕಗಳು ಒಂದಕ್ಕಿಂತ ಒಂದು ಮಿಗಿಲಾಗಿವೆ. ಅಂದಮೇಲೆ ಇವುಗಳಲ್ಲಿ ಸಣ್ಣ ದೊಡ್ಡ ಭೇದಗಳನ್ನು ಯಾವ ಶ್ಲೋಕದಿಂದ ವರ್ಣಿಸಬೇಕು? ।।೧೭೭।।

ಕಾಮಧೇನುವಿನಲ್ಲಿ ದೃಷ್ಟಿ ಇಡಲು ಅಲ್ಲಿ ಹಿಂಡುವ ಹಾಗೂ ಹಿಂಡಲಾರದ ಮಾತುಗಳು ಸಂಭವಿಸುವುದಿಲ್ಲ ।।೧೭೮।।

ದೀಪಗಳಲ್ಲಿ ಮೊದಲಿನದು, ಆ ಮೇಲಿನದು ಯಾವುದು, ಅಥವಾ ಸೂರ್ಯನು ಸಣ್ಣವನೋ ದೊಡ್ಡವನೋ ಎಂಬುವುದು ತಿಳಿಯುವುದಿಲ್ಲ ಮತ್ತು ಅಮೃತ ಸಮುದ್ರಕ್ಕೆ ಇದು ಆಳವಾಗಿದೆ, ಅಥವಾ ಆಳವಿಲ್ಲದ್ದಾಗಿದೆ ಎಂದು ಹೇಳಲು ಬರುವುದೇ? ।।೧೭೯।।

ಅದರಂತೆ ಗೀತೆಯ ಶ್ಲೋಕಗಳಲ್ಲಿ ಮೊದಲನೆಯದು, ಕೊನೆಯದು ಎಂದು ಹೇಳಲು ಬರುವುದಿಲ್ಲ. ಸ್ವರ್ಗದ ಪಾರಿಜಾತದ ಹೂವುಗಳಲ್ಲಿ ತಾಜಾ ಹಾಗೂ ತಂಗಳವೆಂಬ ಭೇದ ಮಾಡಲಾದೀತೆ? ।।೧೮೦।।

ಮತ್ತು ಶ್ಲೋಕಗಳಲ್ಲಿ ಹೆಚ್ಚು ಕಡಿಮೆ ಏನೂ ಇಲ್ಲದ್ದರಿಂದ ಹೇಗೆ ಸಿದ್ಧ ಮಾಡಲಿ? ಅಲ್ಲದೆ ಈ ಗೀತಾ ಶಾಸ್ತ್ರದಲ್ಲಿ ಹೇಳುವವನಿಗೂ ಕೇಳುವವನಿಗೂ ಭೇದವಿರದೆ ಅವರು ಏಕಸ್ವರೂಪವೇ ಆಗಿರುವರು ।।೧೮೧।।

ಕಾರಣ ಈ ಗೀತಾಶಾಸ್ತ್ರವನ್ನು ಶ್ರೀಕೃಷ್ಣನು ಹೇಳುವವನು ಮತ್ತು ಅರ್ಜುನನು ಕೃಷ್ಣರೂಪನಾಗಿ ಕೇಳುವವನು ಎಂಬುವುದು ಎಲ್ಲರಿಗೂ ತಿಳಿದೇ ಇದೆ ।।೧೮೨।।

ಯೇಥೇ ಅರ್ಥೇ ತೇಂಚಿ ಪಾಠೇ । ಜೋಡೆ ಯೇವಢೇನಿ ಧಟೇ । ವಾಚ್ಯವಾಚಕ ಏಕವಟೇ । ಸಾಧಿತೇ ಶಾಸ್ತ್ರ ।೧೬೮೩।। ಮ್ಹಣೌನಿ ಮಜ ಕಾಂಹೀ । ಸಮರ್ಥನೀ ಆತಾ ವಿಷಯ ನಾಹೀ । ಗೀತಾ ಜಾಣಾ ಹೇ ವಾಙ್ಮಈ । ಶ್ರೀಮೂರ್ತೀ ಪ್ರಭೂಚೀ ।೧೬೮೪।। ಶಾಸ್ತ್ರ ವಾಚ್ಯೇ ಅರ್ಥೇ ಫಳೇ । ಮಗ ಆಪಣ ಮಾವಳೇ । ತೈಸೇ ನವ್ಹೇ ಹೇ ಸಗಳೇ । ಪರಬ್ರಹ್ಮ ಚಿ ।೧೬೮೫।। ಕೈಸಾ ವಿಶ್ವಾಚಿಯಾ ಕೃಪಾ । ಕರೂನಿ ಮಹಾನಂದ ಸೋಪಾ । ಅರ್ಜುನವ್ಯಾಜೇ ರೂಪಾ । ಆಣಿಲಾ ದೇವೇ ।೧೬೮೬।। ಚಕೋರಾಚೇನಿ ನಿಮಿತ್ತೇ । ತಿನ್ಹೀ ಭುವನೇ ಸಂತಪ್ತೇ । ನಿವವಿಲೀ ಕಳಾವಂತೇ । ಚಂದ್ರೇ ಜೇವೀ ।೧೬೮೭।। ಕಾ ಗೌತಮಾಚೇನಿ ಮಿಷೇ । ಕಳಿಕಾಳ ಜ್ವರಿತೋದ್ದೇಶೇ । ಪಾಣಿಢಾಳು ಗಿರೀಶೇ । ಗಂಗೇಚಾ ಕೇಲಾ ।೧೬೮೮।। ತೈಸೇ ಗೀತೇಚೇ ಹೇ ದುಭತೇ । ವತ್ಸ ಕರೂನಿ ಪಾರ್ಥಾತೇ । ದುಭಿನಲೀ ಜಗಾ ಪುರತೇ । ಶ್ರೀಕೃಷ್ಣ ಗಾಯ ।೧೬೮೯।। ಯೇಥ ಜೀವೇ ಜರೀ ನಾಹಾಲ । ತರೀ ಹೇಂಚಿ ಕೀರ ಹೋಆಲ । ನಾತರೀ ಪಾಠಮಿಷೇ ತಿಂಬಾಲ । ಜೀಭಚಿ ಜರೀ ।೧೬೯೦।। ತರೀ ಲೋಹ ಏಕೇ ಅಂಶೇ । ಝುಗಟಲಿಯಾ ಪರಿಸೇ । ಯೇರೀಕಡೆ ಅಪೈಸೇ । ಸುವರ್ಣ ಹೋಯ ।೧೬೯೧।। ತೈಸೀ ಪಾಠಾಚೀ ತೇ ವಾಟೀ । ಶ್ಲೋಕಪಾದ ಲಾವಾ ನಾ ಜಂವ ವೋಠೀ । ತಂವ ಬ್ರಹ್ಮತೇಚೀ ಪುಷ್ಟೀ । ಯೇಈಲ ಆಂಗಾ ।೧೬೯೨।। ನಾ ಯೇಣೇಸೀ ಮುಖ ವಾಂಕಡೇ । ಕರೂನಿ ಠಾಕಾಲ ಕಾನವಡೇ । ತರೀ ಕಾನೀಂಹಿ ಘೇತಾ ಪಡೇ । ತೇಚಿ ಲೇಖ ।೧೬೯೩।। ಜೇ ಹೇ ಶ್ರವಣೇ ಪಾಠೇ ಅರ್ಥೇ । ಗೀತಾ ನೇದೀ ಮೋಕ್ಷಾ ಆರೌತೇ । ಜೈಸಾ ಸಮರ್ಥು ದಾತಾ ಕೋಣ್ಹಾತೇ । ನಾಸ್ತಿ ನ ಮ್ಹಣೇ ।೧೬೯೪।। ಮ್ಹಣೌನಿ ಜಾಣತಯಾ ಸವಾ । ಗೀತಾಚಿ ಏಕೀ ಸೇವಾ । ಕಾಯ ಕರಾಲ ಆಘವಾ । ಶಾಸ್ತ್ರೀ ಯೇರೀ ।೧೬೯೫।। ಆಣಿ ಕೃಷ್ಣಾರ್ಜುನೀ ಮೋಕಳೀ । ಗೋಠೀ ಚಾವಳಿಲೀ ಜೇ ನಿರಾಳೀ । ತೇ ಶ್ರೀವ್ಯಾಸೇ ಕೇಲೀ ಕರತಳೀ । ಘೇವೋ ಯೇ ಐಸೀ ।೧೬೯೬।। ಬಾಳಕಾತೇ ವೋರಸೇ । ಮಾಯ ಜೈ ಜೇವಊ ಬೈಸೇ । ತೈ ತಯಾ ಠಾಕತೀ ತೈಸೇ । ಘಾಸ ಕರೀ।೧೬೯೭।। ಕಾ ಅಫಾಟಾ ಸಮೀರಣಾ । ಆಪೈತೇಪಣ ಶಹಾಣಾ । ಕೇಲೇ ಜೈಸೇ ವಿಂಜಣಾ। ನಿರ್ಮೂನಿಯಾ ।೧೬೯೮।। ತೈಸೇ ಶಬ್ದೇ ಜೇ ನ ಲಭೇ । ತೇ ಘಡೂನಿಯಾ ಅನುಷ್ಟುಭೇ । ಸ್ತ್ರೀಶೂದ್ರಾದಿ ಪ್ರತಿಭೇ । ಸಾಮಾವಿಲೇ।೧೬೯೯।।

ಈ ಗೀತೆಯಲ್ಲಿ ಅರ್ಥದಿಂದ ದೊರಕುವ ಫಲವು ಪಾಠ ಮಾಡುವುರಿಂದಲು ನಿಶ್ಚಯವಾಗಿ ದೊರಕುವುದು. ಆದ್ದರಿಂದ ವಾಚ್ಯ ವಾಚಕರಿಗೆ ಸರಿಸಮಾನ ಯೋಗ್ಯತೆ ಕೊಡುವ ಶಾಸ್ತ್ರವು ಇದಾಗಿದೆ ॥೧೬೮೩॥

ಆದ್ದರಿಂದ ಗೀತೆಯ ವಿಷಯಕ್ಕೆ ಹೆಚ್ಚಿಗೆ ಸಮರ್ಥಿಸಲು ಯಾವ ವಿಷಯವೇ ಉಳಿಯಲಿಲ್ಲ. ಕಾರಣ ಗೀತೆಯು ಭಗವಂತನ ಶಬ್ದಮಯ ಮೂರ್ತಿಯೇ ಆಗಿರುವುದು ॥೧೬೮೪॥

ಇತರ ಶಾಸ್ತ್ರಗಳ ವಾಚನ ಮಾಡಿದಾಗ ಅದರ ಅರ್ಥವಾಗಿ ಫಲಪ್ರಾಪ್ತಿಯಾಗಲು ಆ ಶಾಸ್ತ್ರಗಳು ಇಲ್ಲದಾಗುವುವು. ಅದರಂತೆ ಈ ಗೀತಾಶಾಸ್ತ್ರವಿರದೆ, ಓತಪ್ರೋತವಾಗಿ ಬ್ರಹ್ಮಸ್ವರೂಪವೇ ಆಗಿದೆ ॥೧೬೮೫॥

ಏನೆಂದು ಹೇಳಬೇಕು ! ಅರ್ಜುನನ ನಿಮಿತ್ತ ಮಾಡಿ ಎಲ್ಲ ಜಗತ್ತಿನ ಮೇಲೆ ಕೃಪೆ ಮಾಡುವುದಕ್ಕಾಗಿ ಶ್ರೀಕೃಷ್ಣನು ದುರ್ಲಭವಾದ ಬ್ರಹ್ಮಾನಂದವನ್ನು ಸುಲಭವನ್ನಾಗಿ ಮಾಡಿದನು ॥೧೬೮೬॥

ಪೂರ್ಣ ಕಲೆಯುಕ್ತ ಚಂದ್ರನು ಚಕೋರದ ನಿಮಿತ್ತದಿಂದ ಪ್ರಕಾಶಿತನಾಗಿ ಮೂರುಲೋಕಗಳ ತಾಪವನ್ನು ನಿವೃತ್ತಗೊಳಿಸುವನು ॥೧೬೮೭॥

ಅಥವಾ ಗೌತಮನ ನಿಮಿತ್ತದಿಂದ ಕಳಿಕಾಳರೂಪ ಜ್ವರದಿಂದ ಪೀಡಿತರಾದ ಜೀವಿಗಳವರ ದೋಷದ ನಿವೃತ್ತಿಗಾಗಿ ಶ್ರೀಶಂಕರನು ಗಂಗೆಯನ್ನು ಈ ಮೃತ್ಯುಲೋಕಕ್ಕೆ ಕಳಿಸಿಕೊಟ್ಟನು ॥೧೬೮೮॥

ಅದರಂತೆ ಪಾರ್ಥರೂಪ ಕರುವಿನ ನಿಮಿತ್ತ ಮಾಡಿ ಕೃಷ್ಣರೂಪ ಆಕಳವು ಗೀತಾರೂಪ ಹಾಲನ್ನು ಕೊಟ್ಟು ಎಲ್ಲ ಜಗತ್ತಿಗೆ ಸಂತೋಷವನ್ನುಂಟು ಮಾಡಿತು ॥೧೬೮೯॥

ಈ ಗೀತಾಶಾಸ್ತ್ರದಲ್ಲಿ ಜೀವಭಾವದಿಂದ ಮುಳಿಗೆದ್ದು ಸ್ನಾನ ಮಾಡಿದರೆ ಗೀತಾರೂಪವೇ ಆಗುವಿರಿ. ಅಥವಾ ಪಾಠರೂಪದಿಂದ ನಾಲಿಗೆಗೆ ಶ್ರಮಕೊಟ್ಟರೂ, ಗೀತಾರೂಪವೇ ಆಗುವಿರಿ ॥೧೬೯೦॥

ಪರಿಸವು ಕಬ್ಬಿಣದ ಒಂದು ಭಾಗವನ್ನು ಸ್ಪರ್ಶಿಸಿದರೂ ಅದೆಲ್ಲವೂ ಬಂಗಾರವಾಗುವ ಸಾಮರ್ಥ್ಯ ಹೊಂದಿರುವುದು ॥೧೬೯೧॥

ಅದರಂತೆ ಗೀತಾಪಾಠರೂಪ ಬಟ್ಟಲದಲ್ಲಿನ ಒಂದು ಶ್ಲೋಕದ ಪದವನ್ನು ಮುಖಕ್ಕೆ ಹಚ್ಚುವುದೊಂದೇ ತಡ, ಅದೇ ಬ್ರಹ್ಮತ್ವದ ಪುಷ್ಟಿಯು ಅಂಗದಲ್ಲಿ ಬರುವುದು ॥೧೬೯೨॥

ಅಥವಾ ಗೀತಾಪಾಠ ಮಾಡಬಾರದೆಂದು ಮುಖವನ್ನು ಹೊರಳಿಸಿ ಮಗ್ಗುಲಾಗಿ ಮಲಗಿದಾಗ ಗೀತೆಯ ಅಕ್ಷರಗಳು ಕಿವಿಗಳಲ್ಲಿ ಸೇರಿದರೆ ಅದರ ಫಲವೂ ಅದೇ ಪರಿಸಿದ ಫಲ ಆಗಿರುವುದು ॥೧೬೯೩॥

ಸಮರ್ಥದಾನಿಯು ಯಾರನ್ನೂ ವಿಮುಖ ಮಾಡದಂತೆ ಈ ಗೀತೆಯ ಔದಾರ್ಯವೇನೆಂದು ಹೇಳಬೇಕು ? ಪಾಠದಿಂದ, ಅರ್ಥದಿಂದ ಮೋಕ್ಷದ ಹೊರತಾದ ಬೇರೆ ಫಲವೇ ಕೊಡುವುದಿಲ್ಲ ॥೧೬೯೪॥

ಆದ್ದರಿಂದ ಇದ್ದ ಬುದ್ಧಿವಂತರು ಈ ಒಂದೇ ಗೀತೆಯ ಸೇವೆ ಮಾಡಬೇಕು, ಇತರ ಶಾಸ್ತ್ರದ ಸೇವೆಯಿಂದ ಯಾವ ಪ್ರಾಪ್ತಿಯಾಗುವುದಿದೆ ? ॥೧೬೯೫॥

ಮತ್ತು ಶ್ರೀಕೃಷ್ಣ ಹಾಗೂ ಅರ್ಜುನ ಇವರು ಕೇವಲ ಸಂಭಾಷಣೆಯನ್ನು ಮಾಡಿದ್ದನ್ನು ಶ್ರೀವ್ಯಾಸರು ಕೈಯಲ್ಲಿ ತೆಗೆದುಕೊಳ್ಳುವಷ್ಟು ಸುಲಭವನ್ನಾಗಿ ಮಾಡಿರುವರು ॥೧೬೯೬॥

ಚಿಕ್ಕ ಬಾಲಕನಿಗೆ ತಾಯಿಯು ಊಟ ಮಾಡಿಸಲು ಕುಳಿತಾಗ ಆತನಿಗೆ ನುಂಗಲು ಬರುವಷ್ಟೇ ಚಿಕ್ಕ ತುತ್ತುಗಳನ್ನು ಮಾಡುವಳು ॥೧೬೯೭॥

ಅಥವಾ ಅಘಾಟವಾದ ವಾಯುವು ತನ್ನ ಕೈಯಲ್ಲಿ ಬರುವುದಕ್ಕಾಗಿ ಬುದ್ಧಿವಂತನು ಬೀಸಣಿಕೆಯ ಯೋಜನೆಯನ್ನು ಮಾಡಿದನು ॥೧೬೯೮॥

ಅದರಂತೆ ಶಬ್ದಗಳಿಂದ ತಿಳಿಯಲಿಕ್ಕಿಲ್ಲವೆಂದು ಅದರ ಅನುಷ್ಟುಭ ಛಂದವನ್ನು ಮಾಡಿ, ಸ್ತ್ರೀ, ಶೂದ್ರ, ಮೊದಲು ಮಾಡಿ ಎಲ್ಲರ ಬುದ್ಧಿಗೂ ಸುಲಭ ಮಾಡಿ ಇಟ್ಟಿರುವರು ॥೧೬೯೯॥

ಸ್ವಾತೀಚೇನಿ ಪಾಣಿಯೇ । ನ ಹೋತೀ ಜರೀ ಮೋತಿಯೇ । ತರೀ ಅಂಗೀ ಸುಂದರಾಂಚಿಯೇ । ಕಾ ಶೋಭಿತೀ ತಿಯೇ ? ।।೧೭೦೦।। ನಾದು ವಾದ್ಯಾ ನ ಯೇತಾ । ತರೀ ಕಾ ಗೋಚರು ಹೋತಾ । ಫುಲೇ ನ ಹೋತಾ ಘೇಪತಾ । ಆಮೋದು ಕೇವೀ ? ।।೧೭೦೧।। ಗೋಡೀ ನ ಹೋತೀ ಪಕ್ವಾನ್ನೀ । ತರೀ ಕಾ ಘಾವತೀ ರಸನೇ ? । ದರ್ಪಣಾವೀಣ ನಯನೇ । ನಯನು ಕಾ ದಿಸೇ ? ।।೧೭೦೨।। ದ್ರಷ್ಟಾ ಶ್ರೀಗುರುಮೂರ್ತೀ । ನ ರಿಗತಾ ದೃಶ್ಯಪಂಥೀ । ತರೀ ಕಾಹ್ಯಾ ಉಪಾಸ್ತೀ । ಆಕಳತಾ ತೋ ? ।।೧೭೦೩।। ತೈಸೇ ವಸ್ತು ಜೇ ಅಸಂಖ್ಯಾತ । ತಯಾ ಸಂಖ್ಯಾ ಶತೇ ಸಾತ । ನ ಹೋತೀ ತರೀ ಕೋಣಾ ಯೇಥ । ಫಾವೋ ಶಕತೇ ? ।।೧೭೦೪।। ಮೇಘು ಸಿಂಧೂಚೇ ಪಾಣೀ ವಾಹೇ । ತರೀ ಜಗ ತಯಾತೇಂಚಿ ಪಾಹೇ । ಕಾ ಜೇ ಉಮಪ ತೇ ನೋಹೇ । ಠಾಕತೇ ಕೋಣ್ಹಾ ।।೧೭೦೫।। ಆಣಿ ವಾಚಾ ಜೇ ನ ಪವೇ । ತೇ ಹೇ ಶ್ಲೋಕ ನ ಹೋತೆ ಬರವೇ । ತರೀ ಕಾನೇ ಮುಖೇ ಫಾವೇ । ಐಸೇ ಕಾ ಹೋತೇ ? ।।೧೭೦೬।। ಮ್ಹಣೌನಿ ಶ್ರೀವ್ಯಾಸಾಚಾ ಹಾ ಥೋರು । ವಿಶ್ವಾ ಜಾಲಾ ಉಪಕಾರು । ಜೇ ಶ್ರೀಕೃಷ್ಣ ಉಕ್ತೀ ಆಕಾರು । ಗ್ರಂಥಾಚಾ ಕೇಲಾ ।।೧೭೦೭।। ಆಣಿ ತೋಚಿ ಹಾ ಮೀ ಆತಾ । ಶ್ರೀವ್ಯಾಸಾಚೀ ಪದೇ ಪಾಹತಾ ಪಾಹತಾ । ಆಣಿಲಾ ಶ್ರವಣಪಥಾ । ಮರ್ಹಾಠಿಯಾ ।।೧೭೦೮।। ವ್ಯಾಸಾದಿಕಾಂಚೇ ಉನ್ಮೇಖ । ರಾಹಾಟತೀ ಜೇಥ ಸಾಶಂಕ । ತೇಥ ಮೀಹೀ ರಂಕ ಏಕ । ಚಾವಳೀ ಕರೀ ।।೧೭೦೯।। ಪರೀ ಗೀತಾ ಈಶ್ವರು ಭೋಳಾ । ಲೇ ವ್ಯಾಸೋಕ್ತಿ ಕುಸುಮಮಾಳಾ । ತರೀ ಮಾಝಿಯಾ ದೂರ್ವಾದಳಾ । ನಾ ನ ಮ್ಹಣೇ ಕೀ ।।೧೭೧೦।। ಆಣಿ ಕ್ಷೀರಸಿಂಧೂಚಿಯಾ ತಟಾ । ಪಾಣಿಯಾ ಯೇತೀ ಗಜಘಟಾ । ತೇಥ ಕಾಯ ಮುರಕುಟಾ । ವಾರಿಜತ ಅಸೇ ? ।।೧೭೧೧।। ಪಾಂಖ ಫುಟೇ ಪಾಖಿರೂ । ನುಡೆ ತರೀ ನಭೀಂಚ ಸ್ಥಿರೂ । ಗಗನ ಆಕ್ರಮೀ ಸತ್ವರೂ । ತೋ ಗರುಡಹೀ ತೇಥ ।।೧೭೧೨।। ರಾಜಹಂಸಾಚೇ ಚಾಲಣೇ । ಭೂತಳೀ ಜಾಲಿಯಾ ಶಾಹಾಣೇ । ಆಣಿಕೇ ಕಾಯ ಕೋಣೇ । ಚಾಲಾವೇಚಿನಾ ? ।।೧೭೧೩।। ಜೀ ಆಪುಲೇನಿ ಅವಕಾಶೇ । ಅಗಾಧ ಜಳ ಘೇಪೇ ಕಲಶೇ । ಚುಳೀ ಚೂಳಪಣಾ ಐಸೇ । ಭರೂನಿ ನ ನಿಘೇ ? ।।೧೭೧೪।।ದಿವಟೀಚ್ಯಾ ಆಂಗೀ ಥೋರೀ । ತರೀ ಬಹು ತೇಜ ಧರೀ । ವಾತೀ ಆಪುಲಿಯಾ ಪರೀ । ಆಣೇಚ ಕೀ ನಾ ? ।।೧೭೧೫।। ಜೇ ಸಮುದ್ರಾಚೇನಿ ಪೈಸೇ । ಸಮುದ್ರೀ ಆಕಾಶ ಆಭಾಸೇ । ಥಿಲ್ಲರೀ ಥಿಲ್ಲರಾ ಐಸೇ । ಬಿಂಬೇಚಿ ಪೈ ।।೧೭೧೬।।

ಸ್ವಾತಿ ನಕ್ಷತ್ರದ ಮಳೆಯ ನೀರಿನಿಂದ ಮುತ್ತುಗಳು ಉತ್ಪನ್ನವಾಗದಿದ್ದರೆ ಸ್ತ್ರೀಯರ ಶರೀರವು ಯಾವುದರಿಂದ ಶೋಭೆಗೊಳ್ಳುತ್ತಿತ್ತು ? ।।೧೭೦೦।।

ನಾದಬ್ರಹ್ಮವು ವಾದ್ಯಗಳಲ್ಲಿ ಬಾರದಿದ್ದರೆ ನಾದವು ನಮಗೆ ಹೇಗೆ ತಿಳಿಯುತ್ತಿತ್ತು ? ಹೂವುಗಳೇ ಇರದಿದ್ದರೆ ಸುಗಂಧ ಸೇವಿಸುವುದೆಂತು ? ।।೧೭೦೧।।

ಪಕ್ವಾನ್ನಗಳಲ್ಲಿ ರುಚಿಯು ಇರದಿದ್ದರೆ ನಾಲಿಗೆಗೆ ಹೇಗೆ ಪ್ರಾಪ್ತವಾಗುತ್ತಿತ್ತು ? ಕನ್ನಡಿಯೇ ಇಲ್ಲದಿದ್ದರೆ ಕಣ್ಣುಗಳಿಗೆ ತನ್ನ ರೂಪವನ್ನು ನೋಡಲು ಹೇಗೆ ಬರುತ್ತಿತ್ತು ? ।।೧೭೦೨।।

ನಿರಾಕಾರನಾದ ಶ್ರೀಗುರು ಆಕಾರಕ್ಕೆ ಬಾರದಿದ್ದರೆ ಉಪಾಸಕರಿಗೆ ಹೇಗೆ ಸೇವೆಯನ್ನು ಮಾಡಲು ಬರುತ್ತಿತ್ತು ? ।।೧೭೦೩।।

ಅದರಂತೆ ಅಗಣಿತವಾಗಿರುವ ಬ್ರಹ್ಮವು ಗೀತೆಯ ಏಳುನೂರು ಶ್ಲೋಕಗಳ ರೂಪದಿಂದ ಪ್ರಕಟವಾಗದಿದ್ದರೆ, ಯಾರಿಗಾದರೂ ತಿಳುವಳಿಕೆಯು ಬರುತ್ತಿತ್ತೆ ? ।।೧೭೦೪।।

ಮೇಘವು ಸಮುದ್ರದ ನೀರು ಮೇಲೆ ತಂದು ಮಳೆಗರೆದು ಎಲ್ಲರಿಗೂ ಉಪಯೋಗವಾಗುವುದು. ಜನರು ಮೇಘದ ಆಶೆ ಮಾಡುವರು, ಮಹತ್ತರ ಸಮುದ್ರದ ಉಪಯೋಗ ಯಾರಿಗೂ ಆಗುವುದಿಲ್ಲ ।।೧೭೦೫।।

ಆದ್ದರಿಂದ ಯಾವುದು ವಾಣಿಗೂ ಸಹ ಪ್ರಾಪ್ತವಾಗ ದಂತಹದ್ದನ್ನು ಶ್ರೀವ್ಯಾಸರು ಈ ಉತ್ತಮ ಶ್ಲೋಕಗಳನ್ನು ರಚಿಸದಿದ್ದರೆ, ಕೇಳಲು ಹೇಳಲು ಬರುತ್ತಿತ್ತೆ ? ।।೧೭೦೬।।

ಅದಕ್ಕಾಗಿ ಶ್ರೀಕೃಷ್ಣನ ಸಂಭಾಷಣೆಯನ್ನು ಗೀತೆಯ ರೂಪದಲ್ಲಿ ವ್ಯಾಸರು ರಚಿಸಿರುವುದರಿಂದ ಜಗತ್ತಿಗೆ ದೊಡ್ಡದಾದ ಉಪಕಾರವಾಗಿರುವುದು ।।೧೭೦೭।।

ಮತ್ತು ಈಗ ಅದೇ ಗೀತಾರ್ಥವನ್ನು ಶ್ರೀವ್ಯಾಸರ ಪದಗಳನ್ನು ನೋಡುತ್ತ, ನೋಡುತ್ತ ಶುದ್ಧವಾಗಿ ಮರಾಠಿ ಭಾಷೆಯಲ್ಲಿ ಕೇಳುವಂತೆ ಮಾಡಿರುವೆನು ।।೧೭೦೮।।

ಈ ಗೀತಾರ್ಥದ ವರ್ಣನೆಯನ್ನು ಯಥಾರ್ಥವಾಗಿ ಮಾಡಲು ವ್ಯಾಸಾದಿಕರ ಜ್ಞಾನವು ಅನುಮಾನಾಸ್ಪದ ವಾಗುವುದು. ಅಂಥ ಗೀತೆಯ ವ್ಯಾಖ್ಯಾನವನ್ನು ನಾನು ಬಡವರೀತಿಯಲ್ಲಿ ಮಾಡಿರುವೆನು ।।೧೭೦೯।।

ಆದರೆ ಗೀತಾರೂಪ ಈಶ್ವರನು ಅತ್ಯಂತ ಭೋಳಾನಾಗಿರುವನು. ಆದ್ದರಿಂದ ವ್ಯಾಸರ ಭಾಷಣರೂಪ ಹೂಮಾಲೆಯನ್ನು ಧರಿಸುವಂತೆ, ಬಡವನಾದ ನನ್ನ ಕರ್ಕದಳವನ್ನು ತಿರಸ್ಕರಿಸಲಾರನು ।।೧೭೧೦।।

ಕ್ಷೀರಸಿಂಧು ದಂಡೆಗೆ ಆನೆಗಳ ಹಿಂಡು ನೀರು ಕುಡಿಯಲು ಬರುವುವು. ಅಲ್ಲಿ ಅವುಗಳಿಗೆ ಮಾತ್ರ ಒಪ್ಪಿಗೆ ಇದ್ದು, ನೊಣಗಳಿಗೆ ಹಿಂದಕ್ಕೆ ಕಳಿಸುವುದೇ ? ।।೧೭೧೧।।

ಹೊಸದಾಗಿ ರೆಕ್ಕೆ ಬಂದ ಪಕ್ಷಿಗೆ ಎತ್ತರ ಹಾರಲು ಬಾರದಿದ್ದರೂ, ಅದಕ್ಕೆ ಆಕಾಶವೇ ಆಶ್ರಯ ಸ್ಥಾನವಾಗಿದೆ. ಆಕಾಶ ತುಂಬ ಗರುಡನು ಸಹ ವೇಗದಲ್ಲಿ ಹಾರುತ್ತಿದ್ದರೂ ಆಶ್ರಯ ಸ್ಥಾನವು ಅದೇ ಆಗಿದೆ ।।೧೭೧೨।।

ರಾಜಹಂಸದ ಮುಂದಗತಿಯು ಎಲ್ಲ ಜಗತ್ತಿನಲ್ಲಿ ಉತ್ತಮವಾಗಿದೆ. ಹಾಗಾದರೆ ಬೇರೆ ಯಾರೂ ನಡೆಯಬಾರದೇ ? ।।೧೭೧೩।।

ಕೊಡವು ದೊಡ್ಡದಾಗಿರುವುದರಿಂದ ಬಹಳಷ್ಟು ನೀರು ಹಿಡಿಸುವುದು. ಆದರೆ ನೀರನ್ನು ಮುಕ್ಕಳಿಸಲು ನೀರು ಬಾಯಿಯಲ್ಲಿ ತುಂಬಿ ಬರುವುದಿಲ್ಲವೇ ? ।।೧೭೧೪।।

ದೀವಟಿಗೆಯು ದೊಡ್ಡದಿರುವುದರಿಂದ ಅದರ ದೊಡ್ಡ ಪ್ರಕಾಶವು ಬೀಳುವುದು. ಆದರೆ ಬತ್ತಿಯ ದೀಪವು ಸಣ್ಣದಿದ್ದರೂ ಅದರಿಂದ ಅದರ ತಕ್ಕಂತೆ ಪ್ರಕಾಶವು ಬೀಳುವುದಿಲ್ಲವೆ ? ।।೧೭೧೫।।

ಸಮುದ್ರವು ವಿಸ್ತಾರ ಪ್ರಮಾಣದಿಂದ ಅದರಲ್ಲಿ ಆಕಾಶದ ಪ್ರತಿಬಿಂಬವು ದೊಡ್ಡದಾಗಿ ಕಾಣಿಸುವುದು. ಆದೇ ಆಕಾಶವು ಮಡುವಿನ ವ್ಯಾಪ್ತಿಯಲ್ಲಾದರೂ ಪ್ರತಿಬಿಂಬಿತ ವಾಗುವುದು ।।೧೭೧೬।।

ತೇವೀ ವ್ಯಾಸಾದಿಕ ಮಹಾಮತೀ । ವಾವರೋ ಯೇತೀ ಇಯೇ ಗ್ರಂಥೀ । ಮಾ ಆಮ್ಹೀ ಠಾಕೋ ಹೇ ಯುಕ್ತೀ । ನ ಮಿಳೇ ಕೀರ ?।।೧೭೧೭।। ಜಿಯೇ ಸಾಗರೀ ಜಳಚರೇ । ಸಂಚರತೀ ಮಂದರಾಕಾರೇ । ತೇಥ ದೇಖೋನಿ ಶಫರೇ ಯೇರೇ । ಪೋಹೋ ನ ಲಾಹತಿ ?।।೧೭೧೮।। ಅರುಣ ಆಂಗಾ ಜವಳಿಕೇ । ಮ್ಹಣೌನಿ ಸೂರ್ಯಾತೇ ದೇಖೇ । ಮಾ ಭೂತಳೀಂಚೀ ನ ದೇಖೇ । ಮುಂಗೀ ಕಾಈ ?।।೧೭೧೯।। ಯಾಲಾಗೀ ಆಮ್ಹಾ ಪ್ರಾಕೃತಾ । ದೇಶಿಕಾರೇ ಬಂಧೇ ಗೀತಾ । ಮ್ಹಣಣೇ ಹೇ ಅನುಚಿತಾ । ಕಾರಣ ನೋಹೇ ?।।೧೭೨೦।। ಆಣಿ ಬಾಪು ಪುಢಾ ಜಾಯೇ । ತೇ ಘೇತ ಪಾಉಲಾಚಿ ಸೋಯೇ । ಬಾಳ ಯೇ ತರೀ ನ ಲಾಹೇ । ಪಾವೋ ಕಾಯೀ ?।।೧೭೨೧।। ತೈಸಾ ವ್ಯಾಸಾಚಾ ಮಾಗೋವಾ ಘೇತು । ಭಾಷ್ಯಕಾರಾತೇ ವಾಟ ಪುಸತು । ಅಯೋಗ್ಯಹೀ ಮೀ ನ ಪವತು । ಕೇ ಜಾಈನ ?।।೧೭೨೨।। ಆಣಿ ಪೃಥ್ವೀ ಜಯಾಚಿಯಾ ಕ್ಷಮಾ । ನುಬಗೆ ಸ್ಥಾವರಜಂಗಮಾ । ಜಯಾಚೇನಿ ಅಮೃತೇ ಚಂದ್ರಮಾ । ನಿವವೀ ಜಗ ।।೧೭೨೩।। ಜಯಾಚೇ ಆಂಗಿಕ ಅಸಿಕೇ । ತೇಜ ಲಾಹೋನಿ ಅರ್ಕೇ । ಅಂಧಾರಾಚೇ ಸಾವಾಇಕೇ । ಲೋಟಿಜತ ಆಹೇ ।।೧೭೨೪।। ಸಮುದ್ರಾ ಜಯಾಚೇ ತೋಯ । ತೋಯಾ ಜಯಾಚೇ ಮಾಧುರ್ಯ । ಮಾಧುರ್ಯಾ ಸೌಂದರ್ಯ । ಜಯಾಚೇನಿ ।।೧೭೨೫।। ಪವನಾ ಜಯಾಚೇ ಬಳ । ಆಕಾಶ ಜೇಣೇ ಪಘಳ । ಜ್ಞಾನ ಜೇಣೇ ಉಜ್ಜ್ವಳ । ಚಕ್ರವರ್ತೀ ।।೧೭೨೬।। ವೇದ ಜೇಣೇ ಸುಭಾಷ । ಸುಖ ಜೇಣೇ ಸೋಲ್ಲಾಸ । ಹೇ ಅಸೋ ರೂಪಸ । ವಿಶ್ವ ಜೇಣೇ ।।೧೭೨೭।। ತೋ ಸರ್ವೋಪಕಾರೀ ಸಮರ್ಥು । ಸದ್ಗುರು ಶ್ರೀನಿವೃತ್ತಿನಾಥು । ರಾಹಾಟತ ಅಸೇ ಮಜಹೀ ಆಂತು । ರಿಘೋನಿಯಾ ।।೧೭೨೮।। ಆತಾ ಆಯತೀ ಗೀತಾ ಜಗೀ । ಮೀ ಸಾಂಗೇ ಮರ್ಹಾಠಿಯಾ ಭಂಗೀ । ಯೇಥ ಕೇ ವಿಸ್ಮಯಾಲಾಗೀ । ಠಾವೋ ಆಹೇ ।।೧೭೨೯।। ಶ್ರೀಗುರೂಚೇನಿ ನಾಂವೇ ಮಾತೀ । ಡೋಂಗರೀ ಜಯಾಪಾಸೀ ಹೋತೀ । ತೇಣೇ ಕೋಳಿಯೇ ತ್ರಿಜಗತೀ । ಯೇಕವದ ಕೇಲೀ ।।೧೭೩೦।। ಚಂದನೇ ವೇಧಲೀ ಝಾಡೇ । ಜಾಲೀ ಚಂದನಾಚೇನಿ ಪಾಡೇ । ವಸಿಷ್ಠೇ ಮಾನಿಲೀ ಕೀ ಭಾಂಡೇ । ಭಾನೂಸಿ ಶಾಟಿ ।।೧೭೩೧।। ಮಾ ಮೀ ತಂವ ಚಿತ್ತಾಥಿಲಾ । ಆಣಿ ಶ್ರೀಗುರು ಐಸಾ ದಾದುಲಾ । ಜೋ ದಿಠೀವೇನಿ ಆಪುಲಾ । ಬೈಸವೀ ಪದೀ ।।೧೭೩೨।।

ಅದರಂತೆ ವ್ಯಾಸಾದಿಕರ ಮಹಾಮತಿಗಳು ಈ ಗ್ರಂಥದ ವಿಚಾರವನ್ನು ಮಾಡಬೇಕು ಹಾಗೂ ನಾವು ಸುಮ್ಮನೇ ಕುಳಿತುಕೊಳ್ಳಬೇಕೆಂಬುವುದು ಯುಕ್ತಿಗೆ ಕೂಡುವುದಿಲ್ಲ ।।೧೭೧೭।।

ಯಾವ ಸಮುದ್ರದಲ್ಲಿ ಪರ್ವತಪ್ರಾಯಗಳಾದ ದೊಡ್ಡ ದೊಡ್ಡ ಜಲಚರಗಳು ವಾಸ ಮಾಡುವುವು. ಇವುಗಳನ್ನು ನೋಡಿ ಚಿಕ್ಕ ಚಿಕ್ಕ ಮೀನುಗಳು ಅಲ್ಲಿರಬಾರದೆ? ।।೧೭೧೮।।

ಸೂರ್ಯನ ಸಾರಥಿಯಾದ ಅರುಣನು ಸಮೀಪವಿರುವುದರಿಂದ ಸೂರ್ಯನನ್ನು ನೋಡುವನು, ಪೃಥ್ವಿಯ ಮೇಲಿರುವ ಚಿಕ್ಕದಾದ ಇರುವೆಯು ಸೂರ್ಯನನ್ನು ನೋಡುವುದಿಲ್ಲವೆ? ।।೧೭೧೯।।

ಅದಕ್ಕಾಗಿ ನಾವು ಸಾಮಾನ್ಯರು ಗೀತೆಯನ್ನು ದೇಶಭಾಷೆಯಲ್ಲಿ ವರ್ಣಿಸಿರುವುದು ಇದು ಅಯೋಗ್ಯವು ಎಂದು ಹೇಳುವ ಕಾರಣವೇ ಇಲ್ಲ ।।೧೭೨೦।।

ಮತ್ತು ತಂದೆಯು ಮುಂದೆ ನಡೆಯುತ್ತಿದ್ದಾನೆ ಮತ್ತು ಮಗನು ಅದೇ ಮಾರ್ಗದಿಂದ ಹಿಂದೆ ನಡೆಯುತ್ತಿರುವನು. ಇದರಿಂದ ತಂದೆ ಮುಟ್ಟಿದ ಸ್ಥಾನವನ್ನು ಮಗನು ಮುಟ್ಟಲಿಕ್ಕಿಲ್ಲವೆ? ।।೧೭೨೧।।

ಇದರಂತೆ ನಾನು ವ್ಯಾಸರ ಹಿಂದೆಯೇ ಭಾಷ್ಯಕಾರರಿಗೆ ದಾರಿಯನ್ನು ಕೇಳುತ್ತ ನಡೆಯುತ್ತಿರುವಾಗ, ನಾನು ಅಯೋಗ್ಯನಿದ್ದರೂ ವ್ಯಾಸರು ಮುಟ್ಟಿದ ಸ್ಥಳಕ್ಕೆ ಹೋಗದೇ ಇನ್ನಾವ ಸ್ಥಳಕ್ಕೆ ಹೋದೇನು? ।।೧೭೨೨।।

ಮತ್ತು ಯಾರ ಕ್ಷಮೆಯಿಂದ ಪೃಥ್ವಿಯು ಸ್ಥಾವರ ಜಂಗಮ ವಿಶ್ವದ ಉಪದ್ರವವನ್ನು ಸಹಿಸುವುದು ಹಾಗೂ ಯಾರ ಅಮೃತದಿಂದ ಚಂದ್ರನು ಎಲ್ಲ ಜಗತ್ತಿನ ತಾಪಹರಣ ಮಾಡಿ ಶಾಂತ ಮಾಡುವನು ।।೧೭೨೩।।

ಯಾರ ಅಂಗದ ತೇಜದಿಂದ ಸೂರ್ಯನಿಗೆ ತೇಜವು ಪ್ರಾಪ್ತವಾಗಿರುವುದು, ಆದ್ದರಿಂದ ಆತನು ಎಲ್ಲ ಜಗಕ್ಕೆ ಕತ್ತಲೆಯಿಂದ ಆಗುವ ಸಂಕಟಗಳನ್ನು ದೂರ ಮಾಡುವನು ।।೧೭೨೪।।

ಯಾರ ಸತ್ತೆಯಿಂದ ಸಮುದ್ರಕ್ಕೆ ಉದಕವು ದೊರೆಯಿತು ಮತ್ತು ಜಲಕ್ಕೆ ಮಾಧುರ್ಯವು ಹಾಗೂ ಮಾಧುರ್ಯಕ್ಕೆ ಸೌಂದರ್ಯವು ಪ್ರಾಪ್ತವಾಗಿರುವುದು ।।೧೭೨೫।।

ಯಾರ ಸತ್ತೆಯಿಂದ ವಾಯುವಿಗೆ ಗತಿರೂಪ ಬಲವು, ಆಕಾಶಕ್ಕೆ ವಿಸ್ತಾರತೆಯು, ಹಾಗೂ ಜ್ಞಾನಕ್ಕೆ ಉಜ್ವಲ ಸಾರ್ವಭೌಮತ್ವವು ಪ್ರಾಪ್ತವಾಗಿರುವುದು ।।೧೭೨೬।।

ಆತನ ಸತ್ತೆಯಿಂದ ವೇದಕ್ಕೆ ಹೇಳುವ ಶಕ್ತಿಯು, ಸುಖಕ್ಕೆ ಆನಂದತ್ವವು, ಇದು ಇರಲಿ, ಈತನ ಯೋಗದಿಂದಲೇ ಇಡೀ ವಿಶ್ವಕ್ಕೆ ರೂಪವು ದೊರಕಿರುವುದು ।।೧೭೨೭।।

ಅವರು ವಸ್ತು ಮಾತ್ರದ ಮೇಲೆ ಉಪಕಾರವನ್ನು ಮಾಡುವ ಸಮರ್ಥ ಸದ್ಗುರು ಶ್ರೀನಿವೃತ್ತಿನಾಥರು ನನ್ನ ಅಂತಃಕರಣದಲ್ಲಿ ಪ್ರವೇಶಿಸಿ ವಾಸ ಮಾಡುತ್ತಿರುವರು ।।೧೭೨೮।।

ಅಂದಮೇಲೆ ಸಿದ್ಧಗೊಂಡಿರುವ ಗೀತೆಯನ್ನು ಜಗತ್ತಿಗಾಗಿ ಮರಾಠಿ ಭಾಷೆಯಲ್ಲಿ ಹೇಳಲು ಸಮರ್ಥನಾಗಿರುವೆನು, ಇದರಲ್ಲೇನು ಆಶ್ಚರ್ಯಪಡಬೇಕಾಗಿದೆ! ।।೧೭೨೯।।

ಶ್ರೀಗುರುಗಳ ಹೆಸರಿನಿಂದ ಪರ್ವತದ ಮೇಲೆ ಮಣ್ಣಿನ ದ್ರೋಣಾಚಾರ್ಯರ ಮೂರ್ತಿ ಸ್ಥಾಪಿಸಿ ಅದರ ಸೇವೆಯನ್ನು ಮಾಡಿ ಏಕಲವ್ಯನು ತನ್ನ ವಿದ್ಯೆಯ ಕೀರ್ತಿಯನ್ನು ತ್ರೈಲೋಕ್ಯದೊಳಗೆ ಸನ್ಮಾನಿಸಿಕೊಂಡನು ।।೧೭೩೦।।

ಚಂದನದ ಸುತ್ತಲೂ ಬೆಳೆದ ಗಿಡಗಳು ಅದರ ಅಂಗದ ಸುಗಂಧದಿಂದ ಎಲ್ಲವೂ ಚಂದನವಾಗುವುವು ಹಾಗೂ ವಸಿಷ್ಠ ಮುನಿಯ ಶ್ಯಾಟಿ ವಸ್ತ್ರವು ತೇಜದಿಂದ ಸೂರ್ಯನೊಂದಿಗೆ ಹೋರಾಡಿತು ।।೧೭೩೧।।

ಅಂದಮೇಲೆ ನಾನಾದರೂ ಗೀತೆಯ ವ್ಯಾಖ್ಯಾನ ಮಾಡುವ ವಿಷಯದಲ್ಲಿ ಉತ್ಸುಕತನಾಗಿರುವವನು, ಮೇಲಾಗಿ ದೃಷ್ಟಿ ಮಾತ್ರದಿಂದ ತನ್ನ ಸ್ವರೂಪವನ್ನು ಕೊಡುವಂತಹ ಸದ್ಗುರು ಸಹಾಯ ಮಾಡುವವರು ।।೧೭೩೨।।

ಆಧೀಂಚಿ ದೇಖಣೀ ದಿಠೀ । ವರೀ ಸೂರ್ಯ ಪುರವೀ ಪಾಠೀ । ತೈ ನ ದಿಸೇ ಐಸೀ ಗೋಠೀ । ಕೇಂಹೀ ಆಹೆ ? ।।೧೭೩೩।। ಮ್ಹಣೌನಿ ಮಾಝೀ ನಿತ್ಯ ನವೇ । ಶ್ವಾಸೋಚ್ಛ್ವಾಸಹೀ ಪ್ರಬಂಧ ಹೋಆವೇ । ಶ್ರೀಗುರುಕೃಪಾ ಕಾಯ ನೋಹೇ । ಜ್ಞಾನದೇವೋ ಮ್ಹಣೇ ? ।।೧೭೩೪।। ಯಾಕಾರಣೇ ಮಿಯಾ । ಶ್ರೀಗೀತಾರ್ಥ ಮರ್ಹಾಠಿಯಾ । ಕೇಲಾ ಲೋಕಾಯಯಾ । ದಿಠೀಚಾ ವಿಷೋ ।।೧೭೩೫।। ಪರೀ ಮರ್ಹಾಠೇ ಬೋಲರಂಗೇ । ಕವಳಿತಾ ಪೈ ಗೀತಾಂಗೇ । ತೈ ಗಾತಯಾಚೇನಿ ಪಾಂಗೇ । ಹೇಕಾಢತಾ ನೋಹೇ ।।೧೭೩೬।। ಮ್ಹಣೌನಿ ಗೀತಾ ಗಾವೋ ಮ್ಹಣೇ । ತೈ ಗಾಣಿವೇ ಹೋತೀ ಲೇಣೇ । ನಾ ಮೋಕಳೇ ತರೀ ಉಣೇ । ಗೀತಾಹೀ ಆಣಿತ ।।೧೭೩೭।। ಸುಂದರ ಆಂಗೀ ಲೇಣೇ ನ ಸೂಯೇ । ತೈ ತೋ ಮೋಕಳಾ ಶೃಂಗಾರು ಹೋಯೇ । ನಾ ಲೇಇಲೇ ತರೀ ಆಹೇ । ತೈಸೇ ಕೇ ಉಚಿತ ? ।।೧೭೩೮।। ಕಾ ಮೋತಿಯಾಂಚೀ ಜೈಸೀ ಜಾತೀ । ಸೋನಯಾಹೀ ಮಾನ ದೇತೀ । ನಾತರೀ ಮಾನವಿತೀ । ಅಂಗೇಂಚಿ ಸಡೀ ।।೧೭೩೯।। ನಾನಾ ಗುಂಫಿಲೀ ಕಾ ಮೋಕಳೀ । ಉಣೇ ನ ಹೋತೀ ಪರಿಮಳೀ । ವಸಂತಾಗಮೀಂಚೀ ವಾಟೋಳೀ । ಮೋಗರೀ ಜೈಸೀ ।।೧೭೪೦।। ತೈಸಾ ಗಾಣಿವೇತೇ ಮಿರವೀ । ಗೀತೇವೀಣಹೀ ರಂಗು ದಾವೀ । ತೋ ಲೋಭಾಚಾ ಪ್ರಬಂಧು ಓವೀ । ಕೇಲಾ ಮಿಯಾ ।।೧೭೪೧।। ತೇಣೇ ಆಬಾಲಸುಬೋಧೇ । ಓವೀಯೇಚೇನಿ ಪ್ರಬಂಧೇ । ಬ್ರಹ್ಮರಸಸುಸ್ವಾದೇ । ಅಕ್ಷರೇ ಗುಂಥಿಲೀ ।।೧೭೪೨।। ಆತಾ ಚಂದನಾಚ್ಯಾ ತರುವರೀ । ಪರಿಮಳಾಲಾಗೀ ಫುಲ ವರೀ । ಪಾರೂಖಣೇ ಜಿಯಾಪರೀ । ಲಾಗೇನಾ ಕೀ ।।೧೭೪೩।। ತೈಸಾ ಪ್ರಬಂಧು ಹಾ ಶ್ರವಣೇ । ಲಾಗತಖೇಂವೋ ಸಮಾಧಿ ಆಣೇ । ಐಕಿಲಿಯಾಹೀ ವಾಖಾಣೇ । ಕಾಯ ವ್ಯಸನ ನ ಲವೀ ? ।।೧೭೪೪।। ಪಾಠ ಕರಿತಾ ವ್ಯಾಜೇ । ಪಾಂಡಿತ್ಯೇ ಯೇತೀ ವೇಷಜೇ । ತೈ ಅಮೃತಾತೇ ನೇಣಿಜೇ । ಫಾವಲಿಯಾ ।।೧೭೪೫।। ತೈಸೇನಿ ಆಇತೇ ಪಣೇ । ಕವಿತ್ವ ಜಾಲೇ ಹೇ ಉಪೇಣೇ । ಮನನ ನಿದಿಧ್ಯಾಸ ಶ್ರವಣೇ । ಜಿಂತಿಲೇ ಆತಾ ।।೧೭೪೬।। ಹೇ ಸ್ವಾನಂದಭೋಗಾಚೀ ಸೇಲ । ಭಲತಯಾಸೀಚಿ ದೇಈಲ । ಸರ್ವೇಂದ್ರಿಯಾ ಪೋಷವೀಲ । ಶ್ರವಣಾಕರವೀ ।।೧೭೪೭।। ಚಂದ್ರಾತೇ ಆಂಗವಣೇ । ಭೋಗೂನಿ ಚಕೋರ ಶಾಹಾಣೇ । ಪರೀ ಫಾವೇ ಜೈಸೇ ಚಾಂದಿಣೇ । ಭಲತಯಾಹೀ ।।೧೭೪೮।।

ಮೊದಲೇ ಉತ್ತಮ ದೃಷ್ಟಿ ಇರುವಾಗ ಅದರಲ್ಲಿ ಸೂರ್ಯನ ರಕ್ಷಣೆ ಸಿಕ್ಕರೆ, ಆಗ ಕಾಣಿಸದ ಪದಾರ್ಥವು ಯಾವುದಿರುವುದು ? ।೧೭೩೩॥

ಅದಕ್ಕಾಗಿ ಜ್ಞಾನೇಶ್ವರರು ಹೇಳುವರು :- ನನ್ನ ಮುಖದಿಂದೇಕೆ ? ಶ್ವಾಸೋಚ್ಛ್ವಾಸವೂ ಸಹ ಪ್ರಬಂಧವಾದೀತು, ಕಾರಣ ಶ್ರೀಗುರುಗಳ ಕೃಪೆಯಿಂದ ಯಾವುದು ಏನಾಗುವುದಿಲ್ಲ ? ।೧೭೩೪॥

ಈ ಕಾರಣವಾಗಿ ನಾನು ಗೀತೆಯ ಅರ್ಥವನ್ನು ಮರಾಠಿಯಲ್ಲಿ ಜನರ ದೃಷ್ಟಿಯಲ್ಲಿ ನೋಡಲು ಯೋಗ್ಯವಾಗುವ ರೀತಿಯಲ್ಲಿ ಸುಲಭವನ್ನಾಗಿ ಮಾಡಿರುವೆನು ।೧೭೩೫॥

ಅದಕ್ಕಾಗಿ ಮರಾಠಿ ಭಾಷೆಯಲ್ಲಿ ಗೀತೆಯ ಅರ್ಥವನ್ನು ಸ್ಪಷ್ಟ ಮಾಡಿದ್ದನ್ನು ಹೇಳಲು ಯಾವ ವಕ್ತಾನು ಇಲ್ಲದಿದ್ದರೂ, ವಾಕ್ಯಗಳನ್ನೇ ಓದಿದರೂ ಉದಾಸೀನ ಕಾಣದೇ ಸ್ಪಷ್ಟವಾಗಿ ತಿಳಿಯುವುದು ।೧೩೭೬॥

ಆದ್ದರಿಂದ ಗೀತೆಯ ವ್ಯಾಖ್ಯಾನ ಮಾಡುವವನ ಹೇಳುವಿಕೆಗೆ ನನ್ನ ಅರ್ಥವು ಭೂಷಣವಾಗುವುದು. ಹಾಡುವವನಿರದಿದ್ದರೆ, ಕೇವಲ ಓದಿದರೂ, ವಕ್ತಾ ಇರದಿದ್ದರೂ, ಯಾವ ಕೊರತೆಯು ಬೀಳದು ।೧೭೩೭॥

ಸುಂದರವಾದ ಶರೀರಕ್ಕೆ ಅಲಂಕಾರಗಳನ್ನು ಹಾಕಿದರೆ ಅವನು ಬಹಳ ಸುಂದರನಾಗಿ ಕಾಣುವನು, ಆದರೆ ಅವನು ಅದನ್ನು ಹಾಕದಿದ್ದರೂ ಅಲಂಕಾರಗಳ ಶೋಭೆಯು ಕಡಿಮೆಯಾಗುವುದೇ ? ।೧೭೩೮॥

ಅಥವಾ ಮುತ್ತಿನ ಜಾತಿ ಹೇಗಿದೆ ಎಂದರೆ, ಅವು ಬಂಗಾರಕ್ಕೆ ಅನುಕೂಲವಾಗಿ ಶೋಭೆಯನ್ನು ಕೊಡುವುವು, ಕದಾಚಿತ್ ಬಂಗಾರವಿಲ್ಲದಿದ್ದರೂ ಅವು ಶೋಭೆಯನ್ನು ಕೊಡುವುವು ।೧೭೩೯॥

ಅಥವಾ ವಸಂತ ಋತುವಿನಲ್ಲಿ ದುಂಡು ಮಲ್ಲಿಗೆಯ ಹೂವುಗಳನ್ನು, ಮಾಲೆ ಮಾಡಲಿ ಅಥವಾ ಬಿಡಿಯಾಗಿರಲಿ ಅವುಗಳ ಸುಗಂಧವು ಕಡಿಮೆಯಾಗುವುದಿಲ್ಲ ।೧೭೪೦॥

ಅದರಂತೆ ಹಾಡುವವನು ಸಿಕ್ಕರೆ ಅದಕ್ಕೆ ಶೋಭೆಯನ್ನು ಕೊಡುವುದು. ಹಾಡುವವನು ಸಿಗದಿದ್ದರೂ ರಂಗವು ಮುರಿಯುವುದಿಲ್ಲ. ಹೀಗೆ ಸರ್ವ ಲಾಭದಾಯಕವಾದ ಓವೀ ಪ್ರಬಂಧದಿಂದ ಗ್ರಂಥವನ್ನು ರಚಿಸಿರುವುದು ।೧೭೪೧॥

ಈ ಗ್ರಂಥದಲ್ಲಿ ಅಬಾಲ ವೃದ್ಧರಿಗೆ ತಿಳಿಯುವಂತೆ ಓವೀಗಳ ಪ್ರಬಂಧದಿಂದ ಎಲ್ಲವೂ ಬ್ರಹ್ಮರಸದಿಂದ ತುಂಬಿಕೊಳ್ಳುವಂತೆ ಯೋಜನೆ ಮಾಡಿದೆ ।೧೭೪೨॥

ಚಂದನಗಿಡದ ಹತ್ತಿರ ಹೋದಾಗ ಪರಿಮಳಕ್ಕಾಗಿ ಅದಕ್ಕೆ ಹೂವುಗಳಿಲ್ಲವೆಂದು ಖಿನ್ನನಾಗುವ ಕಾರಣವಿಲ್ಲ. ಏಕೆಂದರೆ ಅದರ ಸರ್ವಾಂಗವೂ ಸುಗಂಧಮಯವಾಗಿದೆ ।೧೭೪೩॥

ಅದರಂತೆ ಈ ನನ್ನ ಗ್ರಂಥವು ಶ್ರವಣದಲ್ಲಿ ಬಿದ್ದಾಕ್ಷಣವೇ ಸಮಾಧಿಯನ್ನು ತರುವುದು. ಅಂದಮೇಲೆ ಅದರ ವ್ಯಾಖ್ಯಾನವನ್ನು ಕೇಳಿದ ಮೇಲೆ ಪುನಃ ಕೇಳಬೇಕೆಂಬ ನಾದವು ಹತ್ತಲಿಕ್ಕಿಲ್ಲವೆ ? ।೧೭೪೪॥

ಈ ಓವೀ ಪ್ರಬಂಧದ ಪಾಠ ಮಾಡುವಾಗ್ಗೆ ಆ ನಿಮಿತ್ತದಿಂದ ವಾಚಕನಲ್ಲಿ ಎಲ್ಲ ಪಾಂಡಿತ್ಯವು ಪ್ರಕಾಶಕ್ಕೆ ಬರುವುದು ಆಗ ಆ ವಾಚಕನು ಸಹಜವಾಗಿ ಸಿಕ್ಕಿರುವ ಅಮೃತಕ್ಕೂ ಲೆಕ್ಕಿಸುವುದಿಲ್ಲ ।೧೭೪೫॥

ಹೀಗೆ ಇದು ಅಮೃತಕ್ಕಿಂತಲೂ ಸುರಸವಾದ ಸಹಜವಾದ ಕವಿತ್ವವು ಶ್ರೀಗುರು ಪ್ರಸಾದದಿಂದ ಉತ್ಪನ್ನವಾಗಿದ್ದು, ಇದರ ಶ್ರವಣದಿಂದ ಮನನ ಹಾಗೂ ನಿದಿಧ್ಯಾಸಗಳಿಗೆ ಜಯಿಸಿರುವುದು ।೧೭೪೬॥

ಯಾರೇ ಇರಲಿ, ಅವರಿಗೆ ಆತ್ಮಸ್ವರೂಪದ ಆನಂದದ ಭಾಗಿಗಳಾಗಿ ಮಾಡುವುದು. ಹಾಗೂ ಶ್ರವಣದಿಂದ ಎಲ್ಲ ಇಂದ್ರಿಯಗಳ ತೃಪ್ತಿ ಮಾಡುವುದು ।೧೭೪೭॥

ತಮ್ಮ ಶಕ್ತಿಯಿಂದ ಚತುರ ಚಕೋರ ಪಕ್ಷಿಗಳು ಚಂದ್ರನ ಅಮೃತದ ಸೇವನೆ ಮಾಡುವುವು. ಹಾಗೆ ಎಲ್ಲರಿಗೂ ಬರುವುದಿಲ್ಲ. ಆದರೆ ಬೆಳದಿಂಗಳ ಉಪಭೋಗವು ಎಲ್ಲರಿಗೂ ಆಗುವುದು ।೧೭೪೮॥

ತೈಸೇ ಅಧ್ಯಾತ್ಮಶಾಸ್ತ್ರೀಯಿಯೇ । ಅಂತರಂಗಚಿ ಅಧಿಕಾರಿಯೇ । ಪರೀ ಲೋಕು ವಾಕ್‌ಚಾತುರ್ಯೆ । ಹೋಈಲ ಸುಖಿಯಾ ॥೧೭೪೯॥ ಐಸೇ ಶ್ರೀನಿವೃತ್ತಿನಾಥಾಚೇ । ಗೌರವ ಆಹೇ ಜೇ ಸಾಚೇ । ಗ್ರಂಥು ನೋಹೇ ಹೇ ಕೃಪೇಚೇ । ವೈಭವ ತಿಯೇ ॥೧೭೫೦॥ ಕ್ಷೀರಸಿಂಧು ಪರಸರೀ । ಶಕ್ತೀಚ್ಯಾ ಕರ್ಣಕುಹರೀ । ನೇಣೋ ಕೈ ಶ್ರೀತ್ರಿಪುರಾರೀ । ಸಾಂಗಿತಲೇ ಜೇ ॥೧೭೫೧॥ ತೇ ಕ್ಷೀರಕಲ್ಲೋಳಾಆಂತು । ಮಕರೋದರೀ ಗುಪ್ತು । ಹೋತಾ ತಯಾಚಾ ಹಾತು । ಪೈಠೇ ಜಾಲೇ ॥೧೭೫೨॥ ತೋ ಮತ್ಸ್ಯೇಂದ್ರ ಸಪ್ತಶೃಂಗೀ । ಭಗ್ನಾವಯವಾ ಚೌರಂಗೀ । ಭೇಟಲಾ ಕೀ ತೋ ಸರ್ವಾಂಗೀ । ಸಂಪೂರ್ಣ ಜಾಲಾ ॥೧೭೫೩॥ ಮಗ ಸಮಾಧಿ ಅವ್ಯತ್ಯಯಾ । ಭೋಗಾವೀ ವಾಸನಾ ಯಯಾ । ತೇ ಮುದ್ರಾ ಶ್ರೀಗೋರಕ್ಷರಾಯಾ । ದಿಧಲೀ ಮೀನೀ ॥೧೭೫೪॥ ತೇಣೇ ಯೋಗಾಬ್ಜಿನೀ ಸರೋವರು । ವಿಷಯವಿಧ್ವಂಸೈಕವೀರು । ತಿಯೇ ಪದೀ ಕಾ ಸರ್ವೇಶ್ವರು । ಅಭಿಷೇಕಿಲಾ ॥೧೭೫೫॥ ಮಗ ತಿಹೀ ತೇ ಶಾಂಭವ । ಅದ್ವಯಾನಂದವೈಭವ । ಸಂಪಾದಿಲೇ ಸಪ್ರಭವ । ಶ್ರೀಗಹಿನೀನಾಥಾ ॥೧೭೫೬॥ ತೇಣೇ ಕಳಿಕಳಿತು ಭೂತಾ । ಆಲಾ ದೇಖೋನಿ ನಿರುತಾ । ತೇ ಆಜ್ಞಾ ಶ್ರೀನಿವೃತ್ತಿನಾಥಾ । ದಿಧಲೀ ಐಸೀ ॥೧೭೫೭॥ ನಾ ಆದಿಗುರು ಶಂಕರಾ । ಲಾಗೋನಿ ಶಿಷ್ಯಪರಂಪರಾ । ಬೋಧಾಚಾ ಹಾ ಸಂಸಾರಾ । ಜಾಲಾ ಜೋ ಆಮುತೇ ॥೧೭೫೮॥ ತೋ ಹಾ ತೂ ಘೇಊನಿ ಆಘವಾ । ಕಳೀ ಗಿಳಿತಯಾ ಜೀವಾ । ಸರ್ವ ಪ್ರಕಾರೀ ಧಾಂವಾ । ಕರೀ ಪಾ ವೇಗೀ ॥೧೭೫೯॥ ಆಧೀಂಚ ತಂವ ತೋ ಕೃಪಾಳೂ । ವರೀ ಗುರು ಆಜ್ಞೇಚಾ ಬೋಲೂ । ಜಾಲಾ ಜೈಸಾ ವರ್ಷಾಕಾಳೂ । ಖವಳಣೇ ಮೇಘಾ ॥೧೭೬೦॥ ಮಗ ಆರ್ತಾಚೇನಿ ವೋರಸೇ । ಗೀತಾರ್ಥಗ್ರಂಥನಮಿಸೇ । ವರ್ಷಲಾ ಶಾಂತರಸೇ । ತೋ ಹಾ ಗ್ರಂಥು ॥೧೭೬೧॥ ತೇಥ ಪುಢಾ ಮೀ ಬಾಪಿಯಾ । ಮಾಂಡಲಾ ಆರ್ತೀ ಆಪುಲಿಯಾ । ಕೀ ಯಾಸಾಠೀ ಯೇವಢಿಯಾ । ಆಣಿಲೋ ಯಶಾ ॥೧೭೬೨॥ ಏವಂ ಗುರುಕ್ರಮೇ ಲಾಧಲೇ । ಸಮಾಧಿಧನ ಜೇ ಆಪುಲೇ । ತೇ ಗ್ರಂಥೇ ಬಾಂಧೌನಿ ದಿಧಲೇ । ಗೋಸಾವೀ ಮಜ ॥೧೭೬೩॥ ವಾಂಚೂನಿ ಪಢೇ ನಾ ವಾಚೇ । ನಾ ಸೇವಾಹೀ ಜಾಣೇ ಸ್ವಾಮೀಚೇ । ಐಶಿಯಾ ಮಜ ಗ್ರಂಥಾಚೇ । ಯೋಗ್ಯತಾ ಕೇ ಅಸೆ ? ॥೧೭೬೪॥

ಅದರಂತೆ ಈ ಅಧ್ಯಾತ್ಮ ಶಾಸ್ತ್ರದಿಂದ ಜಿತೇಂದ್ರಿಯ ಪುರುಷರಾದ ಅಧಿಕಾರಿಗಳು, ಅವರಿಗೆ ಮಾತ್ರ ನಿಜವಾದ ಆನಂದವು ಪ್ರಾಪ್ತವಾಗುವುದು. ಆದಾಗ್ಯೂ ಇತರ ಜನರಿಗೆ ವಾಣಿಯ ಸೌಂದರ್ಯದಿಂದ ಸುಖವಾಗುವುದು ।।೧೭೪೯।।

ಈ ಪ್ರಕಾರದ ಶ್ರೀಗುರು ನಿವೃತ್ತಿನಾಥರ ನಿಜ ಐಶ್ವರ್ಯವಾಗಿದೆ. ಆದ್ದರಿಂದ ಇದು ನನ್ನ ಗ್ರಂಥವಿರದೇ ಅವರ ಕೃಪೆಯ ವೈಭವವಾಗಿರುವುದು ।।೧೭೫೦।।

ಕ್ಷೀರ ಸಿಂಧುವಿನ ದಡದ ಮೇಲೆ ಪಾರ್ವತಿಯ ಕಿವಿಯಲ್ಲಿ ಶ್ರೀಶಂಕರನು ಯಾವ ಜ್ಞಾನವನ್ನು ಹೇಳಿದನು. ಆದರೆ ಅದು ಎಂದು ಹೇಳಿದನೆಂಬುವುದು ಗೊತ್ತಿಲ್ಲ ।।೧೭೫೧।।

ಆ ಜ್ಞಾನವು ಕ್ಷೀರಸಮುದ್ರದಲ್ಲಿ ಮೀನಿನ ಹೊಟ್ಟೆಯಲ್ಲಿ ಯಾವ ಮತ್ಸ್ಯೇಂದ್ರನಾಥರು ಗುಪ್ತ ರೂಪದಿಂದ ಇದ್ದು, ಅವರಿಗೆ ಪ್ರಾಪ್ತವಾಯಿತು ।।೧೭೫೨।।

ಆ ಮತ್ಸ್ಯೇಂದ್ರನಾಥರು ಸಹಜವಾಗಿ ಸಂಚಾರವನ್ನು ಮಾಡುತ್ತ, ಮಾಡುತ್ತ ಸಪ್ತಶೃಂಗದ ಮೇಲೆ ಬಂದರು. ಅಲ್ಲಿ ಅವಯವ ಭಗ್ನಗೊಂಡ ಚೌರಂಗಿನಾಥರಿಗೆ ಇವರ ದರ್ಶನದಿಂದ ಎಲ್ಲ ಅವಯವಗಳು ಪರಿಪೂರ್ಣವಾದವು ।।೧೭೫೩।।

ತದನಂತರ ಯಾವ ಅಚಲ ಸಮಾಧಿಯ ಉಪಭೋಗ ಪಡೆಯುವ ಇಚ್ಛೆಯಿಂದ ತನ್ನ ಎಲ್ಲ ಐಶ್ವರ್ಯವನ್ನು ಮತ್ಸ್ಯೇಂದ್ರನಾಥರು ಗೋರಕ್ಷನಾಥರಿಗೆ ಕೊಟ್ಟರು ।।೧೭೫೪।।

ಯೋಗರೂಪ ಕಮಲಗಳನ್ನು ಧರಿಸುವ ಸರೋವರವರ ರಾದ ಹಾಗೂ ವಿಷಯ ವಿಧ್ವಂಸ ಮಾಡುವಲ್ಲಿ ಮಹಾಶೂರ ರಾದ ಗೋರಕ್ಷನಾಥರಿಗೆ ಮತ್ಸ್ಯೇಂದ್ರನಾಥರು ತಮ್ಮ ಯೋಗೈಶ್ವರ್ಯದ ಪಟ್ಟಕ್ಕೆ ಕೂಡ್ರಿಸಿ ರಾಜ್ಯಾಭಿಷೇಕವನ್ನು ಮಾಡಿದರು ।।೧೭೫೫।।

ತದನಂತರ ಶಂಕರನಿಂದ ಪರಂಪರೆಯಾಗಿ ಬಂದಿರುವ ಅದ್ವಯಾನಂದ ಸುಖವನ್ನು ಆ ಗಹಿನೀನಾಥರು ಗೋರಕ್ಷನಾಥರಿಂದ ಸಂಪೂರ್ಣವಾಗಿ ಸಂಪಾದಿಸಿದರು ।।೧೭೫೬।।

ಆಗ ಕಲಿಯು ಸರ್ವ ಭೂತಗಳ ಗ್ರಾಸ ಮಾಡಿರು ವುದನ್ನು ಕಂಡು ಶ್ರೀಗಹಿನೀನಾಥರು ಶ್ರೀನಿವೃತ್ತಿನಾಥರಿಗೆ ಹೀಗೆ ಆಜ್ಞಾಪಿಸಿದರು ।।೧೭೫೭।।

ಅದೇನೆಂದರೆ, ಆದಿಗುರು ಶಂಕರನಿಂದ ಶಿಷ್ಯಪರಂಪರೆ ಯಾಗಿ ಯಾವ ಈ ಬೋಧದ ಐಶ್ವರ್ಯವು ನಮ್ಮ ಕುಲದಲ್ಲಿ ಪ್ರಾಪ್ತವಾಗಿರುವುದು ।।೧೭೫೮।।

ಅದನ್ನು ನೀನು ಪಡೆದುಕೊಂಡು ಕಲಿಯು ತ್ರಸ್ತ ಮಾಡಿ ರುವ ಜೀವಿಗಳಿಗೆ ಎಲ್ಲ ಪ್ರಕಾರವಾಗಿ ದುಃಖದಿಂದ ಮುಕ್ತಮಾಡು ।।೧೭೫೯।।

ಮೊದಲೇ ನಿವೃತ್ತಿನಾಥರು ಕೃಪಾಳುವಂತರು, ಅದರಲ್ಲಿ ಶ್ರೀಗುರುಗಳ ಆಜ್ಞೆಯಾಯಿತು, ಇನ್ನು ಕೇಳುವು ದೇನು ? ಗರ್ಜಿಸುವ ಮೋಡಗಳಿಗೆ ಮಳೆಗಾಲವು ಕೂಡಿ ದಂತಾಯಿತು ।।೧೭೬೦।।

ಆಗ ಪೀಡಿತರಾದ ಜನರಿಗೆ ದುಃಖದಿಂದ ಬಿಡಿಸ ಬೇಕೆಂಬ ಕಳಕಳಿಯಿಂದ ಗೀತೆಯ ಅರ್ಥ ಮಾಡುವ ನಿಮಿತ್ತದಿಂದ ಬ್ರಹ್ಮರಸದ ವೃಷ್ಟಿಯನ್ನು ಮಾಡಿರುವುದೇ ಈ ಗ್ರಂಥವಾಗಿದೆ ।।೧೭೬೧।।

ಅಲ್ಲಿ ನಾನು ಚಾತಕದಂತೆ ಗುರುಗಳ ಪ್ರಸಾದ ಸಿಗಬೇಕೆಂಬ ಇಚ್ಛೆಯಿಂದ ಕುಳಿತಿರುವ ಅನನ್ಯಶಿಷ್ಯನನ್ನು ಕಂಡು ನನ್ನ ಮೇಲೆ ಕೃಪೆ ಮಾಡಿದರು. ಅದರಿಂದ ನಾನು ಯಶಕ್ಕೆ ಪಾತ್ರನಾದೆನು ।।೧೭೬೨।।

ಈ ಪ್ರಕಾರವಾಗಿ ಗುರುಪರಂಪರೆಯಿಂದ ಪ್ರಾಪ್ತನಾಗಿರುವ ಸಮಾಧಿಧನವನ್ನು ಒಂದರಲ್ಲಿ ಗಂಟು ಕಟ್ಟಿ ನನಗೆ ಕೊಟ್ಟರು ।।೧೭೬೩।।

ಸಾಮಾನ್ಯವಾಗಿ ನಾನು ಅಧ್ಯಯನವನ್ನು ಮಾಡಿ ರುವುದಿಲ್ಲ, ಹಾಗೂ ಏನೂ ಕೇಳಿರುವುದಿಲ್ಲ. ಹಾಗೆಯೇ ಸ್ವಾಮಿಯ ಸೇವೆಯನ್ನು ಮಾಡುವ ಜ್ಞಾನವೂ ಇಲ್ಲ, ಅಂದಮೇಲೆ ಗ್ರಂಥ ಮಾಡುವ ಯೋಗ್ಯತೆಯು ಎಲ್ಲಿಂದ ಬರಬೇಕು ? ।।೧೭೬೪।।

ಪರೀ ಸಾಚಚಿ ಗುರುನಾಥೇ । ನಿಮಿತ್ತ ಕರೂನಿ ಮಾತೇ । ಪ್ರಬಂಧವ್ಯಾಜೇ ಜಗಾತೇ । ರಕ್ಷಿಲೇ ಜಾಣಾ ॥೧೭೬೫॥ ತರ್ಹಿ ಪುರೋಹಿತಗುಣೇ । ಮೀ ಬೋಲಿಲೋ ಪುರೇ ಉಣೇ । ತೇ ತುಮ್ಹೀ ಮಾಉಲೀಪಣೇ । ಉಪಸಾಹಿಜೋ ಜೀ ॥೧೭೬೬॥ ಶಬ್ದ ಕೈಸಾ ಘಡಿಜೇ। ಪ್ರಮೇಯಿ ಕೈಸೇ ಪಾ ಚಢಿಜೇ । ಅಳಂಕಾರು ಮ್ಹಣಿಜೇ । ಕಾಯ ತೇ ನೇಣೇ॥೧೭೬೭॥ ಸಾಯಿಖಡೇಯಾಚೇ ಬಾಹುಲೇ । ಚಾಲವಿತ್ಯಾ ಸೂತ್ರಾಚೇನಿ ಚಾಲೇ । ತೈಸಾ ಮಾತೇ ದಾವೀತ ಬೋಲೇ । ಸ್ವಾಮೀ ತೋ ಮಾಝಾ ॥೧೭೬೮॥ ಯಾಲಾಗೀ ಮೀ ಗುಣದೋಷ । ವಿಷೀ ಕ್ಷಮಾವಿನಾ ವಿಶೇಷ । ಜೇ ಮೀ ಸಂಜಾತ ಗ್ರಂಥಲೋ ದೇಖ । ಆಚಾರ್ಯೇ ಕೀ ॥೧೭೬೯॥ ಆಣಿ ತುಮ್ಹಾ ಸಂತಾಂಚಿಯೇ ಸಭೇ । ಜೇ ಉಣಿವೇಸಿ ಠಾಕೇ ಉಭೇ । ತೇ ಪೂರ್ಣ ನೋಹೇ ತೈ ಲೋಭೇ । ತುಮ್ಹಾ ಸೀಚಿ ಕೋಪೇ ॥೧೭೭೦॥ ಸಿವತಲಿಯಾಹೀ ಪರಿಸೇ । ಲೋಹತ್ವಾಚಿಯೇ ಅವದಸೇ । ನ ಮುಕಿಜೇ ಆಯಸೇ । ತೈ ಕವಣಾ ಬೋಲು ॥೧೭೭೧॥ ವೋಹಳೇ ಹೇಂಚಿ ಕರಾವೇ । ಜೇ ಗಂಗೇಚೇ ಆಂಗ ಠಾಕಾವೇ । ಮಗಹೀ ಗಂಗಾ ಜರೀ ನೋಹಾವೇ । ತೈ ತೋ ಕಾಯ ಕರೀ ? ॥೧೭೭೨॥ ಮ್ಹಣೌನಿ ಭಾಗ್ಯಯೋಗೇ ಬಹುವೇ । ತುಮ್ಹಾ ಸಂತಾಂಚೇ ಮೀಪಾಯೇ । ಪಾತಲೋ ಆತಾ ಕೇ ಲಾಹೇ । ಉಣೇ ಜಗೀ ॥೧೭೭೩॥ ಅಹೋ ಜೀ ಮಾಝೇನಿ ಸ್ವಾಮೀ । ಮಜ ಸಂತ ಜೋಡುನಿ ತುಮ್ಹೀ । ದಿಧಲೇತಿ ತೇಣೇ ಸರ್ವಕಾಮೀ । ಪರಿಪೂರ್ಣ ಜಾಲೋ ॥೧೭೭೪॥ ಪಾಹಾ ಪಾ ಮಾತೇ ತುಮ್ಹಾ ಸಾಂಗಡೇ । ಮಾಹೇರ ತೇಣೇ ಸುರವಾಡೇ । ಗ್ರಂಥಾಚೇ ಆಳಿಯಾಡೇ । ಸಿದ್ಧೀ ಗೇಲೇ ॥೧೭೭೫॥ ಜೇ ಕನಕಾಚೇ ನಿಖಳ । ವೋತು ಯೇಈಲ ಭೂಮಂಡಳ । ಚಿಂತಾರತ್ನೀ ಕುಳಾಚಳ । ನಿರ್ಮೂ ಯೇತೀ ॥೧೭೭೬॥ ಸಾತಾಂಹೀ ಹೋ ಸಾಗರಾತೇ । ಸೋಪೇ ಭರಿತಾ ಅಮೃತೇ । ದುವಾಡ ನೋಹೇ ತಾರಾತೇ । ಚಂದ್ರ ಕರಿತಾ ॥೧೭೭೭॥ ಕಲ್ಪತರೂಚೇ ಆರಾಮು । ಲಾವಿತಾ ನಾಹೀ ವಿಷಮು । ಪರೀ ಗೀತಾರ್ಥಾಚೇ ವರ್ಮ । ನಿವಡೂ ನ ಯೇ ॥೧೭೭೮॥ ತೋ ಮೀ ಏಕು ಸರ್ವಮುಕಾ । ಬೋಲೋನಿ ಮರ್ಹಾಠಿಯಾ ಭಾಖಾ । ಕರೀ ಡೋಳೇವರೀ ಲೋಕಾ । ಘೇವೋ ಯೇ ಐಸೇ ಜೇ ॥೧೭೭೯॥ ಹಾ ಗ್ರಂಥಸಾಗರು ಯೇವ್ಹಢಾ । ಉತರೋನಿ ಪೈಲೀಕಡಾ । ಕೀರ್ತಿವಿಜಯಾಚಾ ಧೇಂಡಾ । ನಾಚೇ ಜೋ ಕಾ ॥೧೭೮೦॥

ಆದಾಗ್ಯೂ ವಾಸ್ತವಿಕವಾಗಿ ನೋಡಿದರೆ, ಶ್ರೀಗುರುಗಳು ನನ್ನನ್ನು ನಿಮಿತ್ತನನ್ನಾಗಿ ಮಾಡಿ ಗ್ರಂಥವನ್ನು ಸಿದ್ಧಗೊಳಿಸಿರುವುದರಿಂದ ಎಲ್ಲ ಜಗತ್ತಿನ ಸಂರಕ್ಷಣೆಯಾಗಿರುವುದು ।।೧೭೬೫।।

ಅದಕ್ಕಾಗಿ ನಾನು ಪುರೋಹಿತನಂತೆ ಆಗಿದ್ದು, ಏನಾದರೂ ಹೆಚ್ಚು ಕಡಿಮೆ ಹೇಳಿರಬಹುದು ಅದನ್ನು ನೀವು ತಾಯಿಯಂತೆ ಸಹಿಸಿಕೊಳ್ಳಿರಿ ।।೧೭೬೬।।

ಶಬ್ದದ ರಚನೆಯನ್ನು ಹೇಗೆ ಮಾಡಬೇಕು ಹಾಗೂ ಅರ್ಥವನ್ನು ಹೇಗೆ ಸಿದ್ಧಗೊಳಿಸಬೇಕು ಹಾಗೂ ಅಲಂಕಾರವನ್ನು ಯಾವುದಕ್ಕೆ ಹೇಳಬೇಕು, ಇದಾವುದೂ ನನಗೆ ಗೊತ್ತಿರುವುದಿಲ್ಲ ।।೧೭೬೭।।

ಸೂತ್ರಗೊಂಬೆಯು ಸೂತ್ರಧಾರಿಯು ನಡೆಸಿದಂತೆ ನಡೆಯುವುದು. ಅದರಂತೆ ನನ್ನ ಸ್ವಾಮಿಯು ಏನೇನು ನನ್ನ ಅಂತಃಕರಣದಲ್ಲಿ ಪ್ರಕಾಶಗೊಳಿಸಿದ್ದನ್ನು ನಾನು ಅವುಗಳನ್ನು ಹೇಳಿರುವೆನು ।।೧೭೬೮।।

ಆದ್ದರಿಂದ ನನ್ನ ಗ್ರಂಥದೊಳಗಿನ ಗುಣದೋಷಗಳಿಗೆ ನಾನು ಕ್ಷಮೆಯನ್ನು ಕೇಳುವುದಿಲ್ಲ. ಕಾರಣ ನನ್ನ ಗುರುಗಳೇ ಉತ್ಪನ್ನ ಮಾಡಿರುವ ಗ್ರಂಥವನ್ನು ನಾನು ರಚಿಸಿರುವೆನು ।।೧೭೬೯।।

ಮತ್ತು ತಮ್ಮಂಥ ಸಂತರ ಸಭೆಯಲ್ಲಿ ಏನಾದರೂ ಕಡಿಮೆ ಎನಿಸಿರುವುದು ಇಲ್ಲದಾಗದಿದ್ದರೆ, ಸಲಿಗೆಯಿಂದ ನಾನು ನಿಮ್ಮ ಮೇಲೆ ಕೋಪಿಸುವೆನು ।।೧೭೭೦।।

ಕಬ್ಬಿಣದ ಕಡಿಮೆತನವು ಪರಿಸದ ಸ್ಪರ್ಶದಿಂದ ಸಹಜವಾಗಿ ಇಲ್ಲದಾಗದಿದ್ದರೆ ಅದರ ದೋಷವು ಯಾರ ಮೇಲೆ ಆಗುವುದು ? ।।೧೭೭೧।।

ಹಳ್ಳವು ಗಂಗೆಯನ್ನು ಕೂಡಿಕೊಳ್ಳುವುದಷ್ಟೇ ಮಾಡಬೇಕು, ಆಗ ಆ ಗಂಗೆಯು ಹಳ್ಳಕ್ಕೆ ಸ್ವೀಕರಿಸದೇ (ಪವಿತ್ರಗೊಳಿಸದೆ) ಇದ್ದರೆ, ಆ ಹಳ್ಳದ ಕಡೆ ಏನು ದೋಷವಿರುವುದು ? ।।೧೭೭೨।।

ಆದ್ದರಿಂದ ಮಹಾಭಾಗ್ಯದಿಂದ ನಾನುನಿಮ್ಮ ಸಂತರ ಜನರ ಪಾದದಡಿಯಲ್ಲಿ ಬಂದಿರುವೆನು, ಅಂದಮೇಲೆ ಈ ಜಗತ್ತಿನಲ್ಲಿ ನನಗೇನು ಕಡಿಮೆ ಇರುವುದು ? ।।೧೭೭೩।।

ಅಹೋ, ಏನು ಹೇಳಬೇಕು ! ನನ್ನ ಸ್ವಾಮೀ ಗುರುಗಳು ನಿಮ್ಮ ಸಂತ ಜನರ ಭೇಟಿಯನ್ನು ಮಾಡಿಸಿರುವರು, ಆದ್ದರಿಂದ ನನ್ನ ಇಚ್ಛೆಗಳು ಪರಿಪೂರ್ಣಗಳಾಗಿವೆ ।।೧೭೭೪।।

ಇಲ್ಲಿ ನೋಡಿರಿ, ತಮ್ಮಂಥ ಅನುಕೂಲವಾದ ತವರು ಮನೆಯು ನನಗೆ ದೊರಕಿರುವುದರಿಂದ ಈ ಗ್ರಂಥ ಮಾಡುವ ನನ್ನ ಹುಮ್ಮಸ್ಸು ಸಿದ್ಧಿಗೊಂಡಿತು ।।೧೭೭೫।।

ಇಲ್ಲದಿದ್ದಲ್ಲಿ, ಎಲ್ಲ ಪೃಥ್ವಿಯನ್ನು ಪೂರ್ಣವಾಗಿ ಬಂಗಾರವನ್ನಾಗಿ ಮಾಡಬಹುದು, ಹಾಗೂ ಎಲ್ಲ ಪರ್ವತಗಳನ್ನು ಚಿಂತಾಮಣಿಗಳನ್ನಾಗಿ ಮಾಡಬಹುದು ।।೧೭೭೬।।

ಏಳು ಸಮುದ್ರಗಳನ್ನು ಅಮೃತದಿಂದ ತುಂಬಿಸುವುದು ಸುಲಭವಿದೆ, ನಕ್ಷತ್ರಗಳಿಗೆ ಚಂದ್ರನನ್ನಾಗಿ ಮಾಡುವುದು ಸಹ ಕಠಿಣವಿಲ್ಲ ।।೧೭೭೭।।

ಕಲ್ಪವೃಕ್ಷದ ತೋಟಗಳನ್ನು ಮಾಡುವುದಕ್ಕೆ ಏನೂ ತೊಂದರೆ ಪಡಬೇಕಾಗಿಲ್ಲ. ಆದರೆ ಗೀತೆಯ ಅರ್ಥದ ಮರ್ಮವು ಗುರುಪ್ರಸಾದದ ಹೊರತಾಗಿ ತಿಳಿಯಲು ಸಾಧ್ಯವಿಲ್ಲ ।।೧೭೭೮।।

ನಾನು ಎಲ್ಲ ರೀತಿಯಲ್ಲಿ ಮೂಕನಾಗಿರುವೆನು. ಆದರೆ ಶ್ರೀಗುರುಗಳ ಕೃಪೆಯಿಂದ ಗೀತೆಯ ಅರ್ಥವನ್ನು ಎಲ್ಲರಿಗೂ ಪ್ರತ್ಯಕ್ಷವಾಗಿ ಕಣ್ಣಿಗೆ ಕಾಣಿಸುವಂತೆ ಮಾಡಿರುವೆನು ।।೧೭೭೯।।

ಹಾಗೂ ಅವರದೇ ಕೃಪೆಯಿಂದ ಇಂಥ ಗ್ರಂಥ ರೂಪ ಸಾಗರವನ್ನು ದಾಟಿ ಕೀರ್ತಿರೂಪ ವಿಜಯದ ಧ್ವಜವನ್ನು ಕುಣಿಸಿರುವೆನು ।।೧೭೮೦।।

ಗೀತಾರ್ಥಾಚಾ ಆವಾರು । ಕಲಶೇಂಸೀ ಮಹಾಮೇರು । ರಚೂನಿ ಮಾಜೇ ಶ್ರೀಗುರು । ಲಿಂಗ ಜೇ ಪೂಜೀ ॥೧೭೮೧॥ ಗೀತಾ ನಿಷ್ಕಪಟ ಮಾಯ । ಚುಕೋನಿ ತಾನ್ಹೇ ಹಿಂಡೇಜೇ ವಾಯ । ತೇ ಮಾಯಪೂತಾ ಭೇಟೀ ಹೋಯ । ಹಾ ಧರ್ಮ ತುಮಚಾ ॥೧೭೮೨॥ ತುಮ್ಹಾ ಸಜ್ಜನಾಂಚೇ ಕೇಲೇ । ಆಕಳುನೀ ಜೇ ಮೀ ಬೋಲೇ । ಜ್ಞಾನದೇವ ಮ್ಹಣೇ ಥೇಂಕುಲೇ । ತೈಸೇ ನೋಹೇ ॥೧೭೮೩॥ ಕಾಯ ಬಹು ಬೋಲೋ ಸಕಳಾ । ಮೇಳವಿಲೋ ಜನ್ಮಫಳಾ । ಗ್ರಂಥಸಿದ್ಧೀಚಾ ಸೋಹಳಾ । ದಾವಿಲಾ ಜೋ ಹಾ ॥೧೭೮೪॥ ಮಿಯಾ ಜೈಸಜೈಸಿಯಾ ಆಶಾ । ಕೇಲಾ ತುಮಚಾ ಭರಂವಸಾ । ತೇ ಪುರವೂನಿ ಜೀ ಬಹುವಸಾ । ಆಣಿಲೋ ಸುಖಾ ॥೧೭೮೫॥ ಮಜಲಾಗೀ ಗ್ರಂಥಾಚೀ ಸ್ವಾಮೀ । ದುಜೀ ಸೃಷ್ಟೀ ಜೇ ಹೇ ಕೇಲೀ ತುಮ್ಹೀ । ತೇ ಪಾಹೋನಿ ಹಾಂಸೋ ಆಮ್ಹೀ । ವಿಶ್ವಾಮಿತ್ರಾತೇಂಹೀ ॥೧೭೮೬॥ ಜೇ ಅಸೋನಿ ತ್ರಿಶಂಕುದೋಷೇ । ಧಾತಯಾಹೀ ಆಣಾವೇ ವೋಸೇ । ತೇ ನಾಸತೇ ಕೀಜೆ ಕೀ ಐಸೇ । ನಿರ್ಮಾವೇ ನಾಹೀ ॥೧೭೮೭॥ ಶಂಭೂ ಉಪಮನ್ಯೂಚೇನಿ ಮೋಹೇ । ಕ್ಷೀರಸಾಗರೂಹೀ ಕೇಲಾ ಆಹೇ । ಯೇಥ ತೋಹೀ ಉಪಮೇಸರೀ ನೋಹೇ । ಜೇ ವಿಷಗರ್ಭ ಕೀ ॥೧೭೮೮॥ ಅಂಧಕಾರು ನಿಶಾಚರಾ । ಗಿಳಿತಾ ಸೂರ್ಯೇ ಚರಾಚರಾ । ಧಾಂವಾ ಕೇಲಾ ತರೀ ಖರಾ । ತಾಉನೀ ಕೀ ತೋ ॥೧೭೮೯॥ ತಾತಲಿಯಾಹೀ ಜಗಾಕಾರಣೇ । ಚಂದ್ರೇ ವೇಂಚಿಲೇ ಚಾಂದಣೇ । ತಯಾ ಸದೋಷಾ ಕೇವೀ ಮ್ಹಣೇ । ಸಾರಿಖೇ ಹೇ ॥೧೭೯೦॥ ಮ್ಹಣೌನಿ ತುಮ್ಹೀ ಮಜ ಸಂತೀ । ಗ್ರಂಥರೂಪ ಜೋ ಹಾ ತ್ರಿಜಗತೀ । ಉಪಯೋಗ ಕೇಲಾ ತೋ ಪುಢತೀ । ನಿರೂಪಮ ಜೀ ॥೧೭೯೧॥ ಕಿಂಬಹುನಾ ತುಮಚೇ ಕೇಲೇ । ಧರ್ಮ ಕೀರ್ತನ ಹೇ ಸಿದ್ಧೀ ನೇಲೇ । ಯೇಥ ಮಾಝೇ ಜೀ ಉರಲೇ । ಪಾಈಕಪಣ ॥೧೭೯೨॥ ಆತಾ ವಿಶ್ವಾತ್ಮಕೇ ದೇವೇ । ಯೇಣೇ ವಾಗ್ಯಜ್ಞೇ ತೋಷಾವೇ । ತೋಷೋನಿ ಮಜ ದ್ಯಾವೇ । ಪಸಾಯದಾನ ಹೇ ॥೧೭೯೩॥ ಜೇ ಖಳಾಂಚೀ ವ್ಯಂಕಟೀ ಸಾಂಡೋ । ತಯಾ ಸತ್ಕರ್ಮೀ ರತೀ ವಾಢೋ । ಭೂತಾ ಪರಸ್ಪರೇ ಪಡೋ । ಮೈತ್ರ ಜೀವಾಚೇ ॥೧೭೯೪॥ ದುರಿತಾಚೇ ತಿಮಿರ ಜಾವೋ । ವಿಶ್ವ ಸ್ವಧರ್ಮಸೂರ್ಯೇ ಪಾಹೋ । ಜೋ ಜೇ ವಾಂಛೀಲ ತೋ ತೇ ಲಾಹೋ । ಪ್ರಾಣಿಜಾತ ॥೧೭೯೫॥ ವರ್ಷತ ಸಕಳಮಂಗಳೀ । ಈಶ್ವರನಿಷ್ಠಾಂಚೀ ಮಾಂದಿಯಾಳೀ । ಅನವರತ ಭೂಮಂಡಳೀ । ಭೇಟತು ಯಾ ಭೂತಾ ॥೧೭೯೬॥

ಗೀತೆಯ ಅರ್ಥವೆಂಬ ದೇವಾಲಯವನ್ನು ಕಟ್ಟಿ ಹದಿನೆಂಟನೆಯ ಅಧ್ಯಾಯವೆಂಬ ಕಳಸವನ್ನು ರಚಿಸಿ, ಆದರಲ್ಲಿ ಶ್ರೀಗುರುಗಳ ಲಿಂಗವನ್ನು ಸ್ಥಾಪಿಸಿ ಪೂಜೆಯನ್ನು ಮಾಡಿದೆನು ।।೧೭೮೧।।

ಗೀತೆಯು ನಿಷ್ಕಪಟ ತಾಯಿಯಾಗಿರುವಳು, ಆಕೆಯ ಚಿಕ್ಕ ಮಕ್ಕಳಾದ ಮುಮುಕ್ಷುಗಳು ಆಕೆಯನ್ನು ತಪ್ಪಿಸಿ ಕೊಂಡು ಸಿಕ್ಕ ಸಿಕ್ಕಲ್ಲೇ ತಿರುಗುತ್ತಿರುವ, ಆ ತಾಯಿ ಮಕ್ಕಳನ್ನು ಕೂಡಿಸುವುದು ನಿಮ್ಮ ಸಂತರ ಧರ್ಮವಾಗಿದೆ ।।೧೭೮೨।।

ಜ್ಞಾನೇಶ್ವರರು ಹೇಳುವರು :- ನೀವು ಸಂತ ಜನರು ಕೃಪೆ ಮಾಡಿರುವುದರಿಂದ ನಾನಿದನ್ನು ಹೇಳಿದೆನು, ಇದು ಅಲ್ಪವಾಗಿರುವುದು. ಆದರೆ ನಿಮ್ಮ ಕೃಪೆಯು ಹಾಗಿಲ್ಲ ।।೧೭೮೩।।

ಹೆಚ್ಚಿಗೇನು ಹೇಳಲಿ ? ಈ ಗ್ರಂಥವು ಪೂರ್ಣ ಗೊಂಡಿದ್ದಕ್ಕೆ ನನ್ನ ಪೂರ್ವ ಜನ್ಮಗಳ ಫಲವನ್ನು ನೀವು ಪ್ರಾಪ್ತಮಾಡಿ ಕೊಟ್ಟಿರುವಿರಿ ।।೧೭೮೪।।

ನಾನು ನಿಮ್ಮ ಮೇಲೆ ಭರವಸೆಯನ್ನಿಟ್ಟು ಯಾವ ಯಾವ ಇಚ್ಛೆಗಳನ್ನು ಮಾಡಿದೆನೋ, ಅವುಗಳನ್ನೆಲ್ಲ ನೀವು ಪೂರ್ಣ ಗೊಳಿಸಿ ನನಗೆ ಸುಖಿಯನ್ನಾಗಿ ಮಾಡಿರುವಿರಿ ।।೧೭೮೫।।

ಹೇ ಸ್ವಾಮೀ, ಗುರುಗಳೇ, ನೀವು ನನಗಾಗಿ ಯಾವ ಗೀತಾರೂಪ ಗ್ರಂಥದ ಹೊಸ ಸೃಷ್ಟಿಯನ್ನು ಮಾಡಿದ್ದನ್ನು ನೋಡಿನಾನು ವಿಶ್ವಾಮಿತ್ರನ ಸೃಷ್ಟಿಗೆ ನಗುವೆನು ।।೧೭೮೬।।

ಕಾರಣ, ತ್ರಿಶಂಕು ರಾಜನ ಉದ್ದೇಶದಿಂದ ಬ್ರಹ್ಮ ದೇವನಿಗೆ ಕಡಿಮೆತನಕ್ಕೆ ತರುವ ಉದ್ದೇಶಕ್ಕಾಗಿ ವಿಶ್ವಾ ಮಿತ್ರನು ನಾಶವಂತ ಸೃಷ್ಟಿಯನ್ನು ಮಾಡಿದನು, ಆದರೆ ನೀವು ಮಾಡಿದ ಸೃಷ್ಟಿಯು ಶಾಶ್ವತವಾಗಿದೆ ।।೧೭೮೭।।

ಶಂಕರನು ಭಕ್ತನಾದ ಉಪಮನ್ಯುವಿಗಾಗಿ ಕ್ಷೀರ ಸಾಗರವನ್ನು ಮಮತೆಯಿಂದ ಉತ್ಪನ್ನ ಮಾಡಿದನು. ಅದು ಈ ಗ್ರಂಥದ ಸಮಾನವೆಂದರೆ ಅದರಲ್ಲಿ ವಿಷವಿದೆ ।।೧೭೮೮।।

ಪ್ರಾಣಿಮಾತ್ರರಿಗೆ ಕತ್ತಲೆಯ ಹಾಗೂ ನಿಶಾಚರರ ತೊಂದರೆಯಾಗಬಾರದೆಂದು ಸೂರ್ಯನು ಧಾವಿಸಿ ಬಂದನು ನಿಜ, ಆದರೆ ಆತನ ಬಿಸಿಲಿನಿಂದ ಜನರಿಗೆ ತೊಂದರೆ ಯಾಗುವುದು ।।೧೭೮೯।।

ತೊಂದರೆಗೊಂಡ ಜಗತ್ತಿಗೆ ಜನರಿಗೆ ಚಂದ್ರನು ತನ್ನ ಬೆಳದಿಂಗಳದಿಂದ ಶಾಂತಿಗೊಳಿಸುವನು, ಆದರೆ ಚಂದ್ರನು ಕಲಂಕದಿಂದ ಕೂಡಿದನಾಗಿರುವುದರಿಂದ ಈ ಗ್ರಂಥದ ಸಮಾನವೆಂದುಹೇಗೆ ಹೇಳಬೇಕು ? ।।೧೭೯೦।।

ಆದಕ್ಕಾಗಿ ಸಂತರಾದ ನೀವು ನನ್ನಿಂದ ಮೂರು ಲೋಕಗಳಿಗೂ ಉಪಯೋಗವಾಗಬೇಕೆಂದು ಈ ಗ್ರಂಥ ವನ್ನು ಮಾಡಿಸಿರುವುದು ಅನುಪಮ್ಯವಾಗಿರುವುದು ।।೧೭೯೧।।

ಹೆಚ್ಚಿಗೇನು ಹೇಳಬೇಕು ? ನಿಮ್ಮ ಕೃಪೆಯಿಂದ ಧರ್ಮರೂಪ ಕೀರ್ತನೆಯು ಪೂರ್ಣಗೊಂಡಿತು. ಆದಕ್ಕಾಗಿ ಈಗ ನನಗೆ ನಿಮ್ಮ ಸೇವೆಯನ್ನು ಮಾಡುವುದೊಂದೇ ಉಳಿದಿದೆ ।।೧೭೯೨।।

ಈಗ ಎಲ್ಲರ ವಿಶ್ವದ ಆತ್ಮನಾಗಿರುವ ಪರಮಾತ್ಮನು ನನ್ನ ವಾಗ್ ಯಜ್ಞದಿಂದ ಸಂತುಷ್ಟನಾಗಿ ನನಗೆ ಈ ಪ್ರಸಾದವನ್ನು ನೀಡಬೇಕು ।।೧೭೯೩।।

ದುಷ್ಟರ ಕುಟಿಲತೆಯು ದೂರಾಗಿ ಅವರಿಗೆ ಸತ್ಕರ್ಮಗಳ ಮೇಲೆ ಪ್ರೀತಿಯು ಉತ್ಪನ್ನವಾಗಲಿ ಹಾಗೂ ಜೀವ ಮಾತ್ರರ ಪರಸ್ಪರರಲ್ಲಿ ಮಿತ್ರತ್ವವು ಬೆಳೆಯಲಿ ।।೧೭೯೪।।

ಈ ಎಲ್ಲ ವಿಶ್ವದಲ್ಲಿ ಪಾಪರೂಪ ಕತ್ತಲೆಯು ಇಲ್ಲದಾಗಿ ಸ್ವಧರ್ಮರೂಪ ಸೂರ್ಯನು ಉದಯಿಸಿ ಆತನ ಪ್ರಕಾಶವು ಬೆಳಗಲಿ ಮತ್ತು ಪ್ರಾಣಿಮಾತ್ರರಲ್ಲಿ ಯಾವ ಯಾವ ಇಚ್ಛೆಗಳು ಇರುವುವೋ, ಅವುಗಳೆಲ್ಲವೂ ಪೂರ್ಣ ವಾಗಲಿ ।।೧೭೯೫।।

ಈ ಭೂಮಿಯ ಮೇಲೆ ಅಖಿಲ ಮಂಗಲದ ವೃಷ್ಟಿಯನ್ನು ಮಾಡುವ ಭಗವದ್ಭಕ್ತರ ವೃಂದಗಳು ಎಲ್ಲರಿಗೂ ಸದಾವಕಾಲದಲ್ಲಿ ಭೇಟಿಯಾಗುತ್ತಿರಲಿ ।।೧೭೯೬।।

ಚಲಾ ಕಲ್ಪತರೂಂಚೇ ಆರವ । ಚೇತನಾಚಿಂತಾಮಣೀಚೇ ಗಾಂವ । ಬೋಲತೇ ಜೇ ಅರ್ಣವ । ಪೀಯೂಷಾಚೇ ॥೧೭೯೭॥ ಚಂದ್ರಮೇ ಜೇ ಅಲಾಂಛನ । ಮಾರ್ತಂಡ ಜೇ ತಾಪಹೀನ । ತೇ ಸರ್ವಾಂಹೀ ಸದಾ ಸಜ್ಜನ । ಸೋಯರೇ ಹೋತು ॥೧೭೯೮॥ ಕಿಂಬಹುನಾ ಸರ್ವ ಸುಖೀ । ಪೂರ್ಣ ಹೋಊನಿ ತಿಹೀ ಲೋಕೀ । ಭಜಿಜೋ ಆದಿಪುರುಖೀ । ಅಖಂಡಿತ ॥೧೭೯೯॥ ಆಣಿ ಗ್ರಂಥೋಪಜೀವಿಯೇ । ವಿಶೇಷೀ ಲೋಕೀ ಇಯೇ । ದೃಷ್ಟಾದೃಷ್ಟವಿಜಯೇ । ಹೋಆವೇ ಜೀ ॥೧೮೦೦॥ ತೇಥ ಮ್ಹಣೇ ಶ್ರೀವಿಶ್ವೇಶರಾವೋ । ಹಾ ಹೋಈಲ ದಾನ ಪಸಾವೋ । ಯೇಣೇವರೇ ಜ್ಞಾನದೇವೋ । ಸುಖಿಯಾ ಜಾಲಾ ॥೧೮೦೧॥ ಐಸೇ ಯುಗೀ ಪರೀ ಕಳೀ । ಆಣಿ ಮಹಾರಾಷ್ಟ್ರಮಂಡಳೀ । ಶ್ರೀಗೋದಾವರೀಚ್ಯಾ ಕೂಲೀ । ದಕ್ಷಿಣಲಿಂಗೀ ॥೧೮೦೨॥ ತ್ರಿಭುವನೈಕ ಪವಿತ್ರ । ಅನಾದಿ ಪಂಚಕ್ರೋಶ ಕ್ಷೇತ್ರ । ಜೇಥ ಜಗಾಚೇ ಜೀವನಸೂತ್ರ । ಶ್ರೀಮಹಾಲಯಾ ಅಸೇ ॥೧೮೦೩॥ ತೇಥ ಯದುವಂಶವಿಲಾಸು । ಜೋ ಸಕಳಕಳಾನಿವಾಸು । ನ್ಯಾಯಾತೇ ಪೋಷೀ ಕ್ಷಿತೀಶು । ಶ್ರೀರಾಮಚಂದ್ರು ॥೧೮೦೪॥ ತೇಥ ಮಹೇಶಾನ್ವಯಸಂಭೂತೇ । ಶ್ರೀನಿವೃತ್ತಿನಾಥಸುತೇ । ಕೇಲೇ ಜ್ಞಾನದೇವೇ ಗೀತೇ । ದೇಶೀಕಾರ ಲೇಣೇ ॥೧೮೦೫॥ ಏವಂ ಭಾರತಾಚ್ಯಾ ಗಾಂವೀ । ಭೀಷ್ಮನಾಮ ಪ್ರಸಿದ್ಧ ಪರ್ವೀ । ಶ್ರೀಕೃಷ್ಣಾರ್ಜುನೀ ಬರವೀ । ಗೋಠಿ ಜೇ ಕೇಲೀ ॥೧೮೦೬॥ ಜೇ ಉಪನಿಷದಾಂಚೇ ಸಾರ । ಸರ್ವ ಶಾಸ್ತ್ರಾಂಚೇ ಮಾಹೇರ । ಪರಮಹಂಸೀ ಸರೋವರ । ಸೇವಿಜೇ ಜೇ ॥೧೮೦೭॥ ತಿಯೇ ಗೀತೇಚಾ ಕಲಶು । ಸಂಪೂರ್ಣ ಹಾ ಅಷ್ಟಾದಶು । ಮ್ಹಣೇ ನಿವೃತ್ತಿದಾಸು । ಜ್ಞಾನದೇವೋ ॥೧೮೦೮॥ ಪುಢತೀ ಪುಢತೀ ಪುಢತೀ । ಇಯಾ ಗ್ರಂಥಪುಣ್ಯಸಂಪತ್ತೀ । ಸರ್ವಸುಖೀ ಸರ್ವಭೂತೀ । ಸಂಪೂರ್ಣ ಹೋಈಜೇ ॥೧೮೦೯॥ ಶಕೆ ಬಾರಾಶತೇ ಬಾರೋತ್ತರೇ । ತೈ ಟೀಕಾ ಕೇಲೀ ಜ್ಞಾನೇಶ್ವರೇ । ಸಚ್ಚಿದಾನಂದಬಾಬಾ ಆದರೇ । ಲೇಖಕು ಜಾಹಲಾ ॥೧೮೧೦॥

---

ಇತಿ ಶ್ರೀ ಜ್ಞಾನದೇವ ವಿರಚಿತಾಯಾಂ ಭಾವಾರ್ಥದೀಪಿಕಾಯಾಂ ಅಷ್ಟಾದಶೋಽಧ್ಯಾಯಃ ॥೧೮॥

ಶ್ಲೋಕ : ೭೮ ಓವೀ :೧೮೧೦

ಈ ಸಂತ ಮಂಡಳಿಯವರು ನಡೆಯುವ, ಹೇಳುವ ಕಲ್ಪತರುವಿನ ತೋಟವಾಗಿರುವರು, ಜೀವಂತ ಚಿಂತಾಮಣಿಯ ಊರಾಗಿರುವರು, ಅಥವಾ ಮಾತನಾಡುವ ಅಮೃತದ ಸಮುದ್ರವೇ ಆಗಿರುವರು ।೧೭೯೭॥

ಇವರು ಕಲಂಕರಹಿತ ಪ್ರತಿಚಂದ್ರರು, ಸಂಸಾರರೂಪ ಅಂಧಕಾರವನ್ನು ದೂರ ಮಾಡಿ ಶಾಂತಿಸುಖವನ್ನು ಕೊಡುವ ಪ್ರತಿ ಸೂರ್ಯನಂಥವರು, ಇವರು ಎಲ್ಲರಿಗೂ ಪ್ರಿಯರಾಗಲಿ ।೧೭೯೮॥

ಹೆಚ್ಚಿಗೇನು ಬೇಡಲಿ ? ಎಲ್ಲ ಮೂರುಲೋಕಗಳು ಸುಖದಿಂದ ಪರಿಪೂರ್ಣವಾಗಿ ಪ್ರಾಣಿಮಾತ್ರರಿಗೆ ಹರಿಭಜನೆಯನ್ನು ಅಖಂಡವಾಗಿ ಮಾಡುವ ಇಚ್ಛೆಯಾಗಲಿ ।೧೭೯೯॥

ಮತ್ತು ಈ ಗ್ರಂಥದಿಂದಲೇ ಯಾರ ಉಪಜೀವನವಿದೆಯೋ, ಅವರಿಗೆ ಇಹಲೋಕದ ಹಾಗೂ ಪರಲೋಕದ ಸುಖವು ಪ್ರಾಪ್ತವಾಗಲಿ ।೧೮೦೦॥

ಆಗ ವಿಶ್ವದ ಪ್ರಭುಗಳಾದ ಶ್ರೀನಿವೃತ್ತಿನಾಥರು "ನಿನ್ನ ಬೇಡಿಕೆಗಳಂತೆ ಎಲ್ಲವೂ ಪೂರ್ಣಗೊಳ್ಳುವುವು" ಎಂದು ವರವನ್ನು ಕೊಟ್ಟರು. ಆಗ ಜ್ಞಾನೇಶ್ವರರು ಅಂತಃಕರಣದಲ್ಲಿ ಬಹಳ ಸುಖಿಯಾದರು ।೧೮೦೧॥

ಈ ಪ್ರಕಾರವಾಗಿ ಕಲಿಯುಗದಲ್ಲಿ, ಮಹಾರಾಷ್ಟ್ರ ದೇಶದಲ್ಲಿ, ಶ್ರೀ ಗೋದಾವರಿಯ ದಕ್ಷಿಣ ತೀರದಲ್ಲಿ ।೧೮೦೨॥

ತ್ರೈಲೋಕ್ಯದಲ್ಲಿ ಪವಿತ್ರವಾಗಿರುವ ಹಾಗೂ ಅನಾದಿ ಪಂಚಕ್ರೋಶ ಕ್ಷೇತ್ರ (ನೇವಾಸಿ)ದಲ್ಲಿ ಎಲ್ಲ ಜಗತ್ತಿನ ಜೀವನಸೂತ್ರನಾದ ಶ್ರೀಮೋಹನೀರಾಜನಿರುವನು ।೧೮೦೩॥

ಆ ಕ್ಷೇತ್ರದಲ್ಲಿ ಸಕಲಕಲಾಸಂಪನ್ನ, ಪೃಥ್ವಿಯ ಒಡೆಯ ಹಾಗೂ ನ್ಯಾಯದಿಂದ ಪ್ರಜೆಗಳನ್ನು ಪಾಲಿಸುವ ಯದುಕುಲ ಭೂಷಣನಾದ ರಾಮರಾಜನು ರಾಜ್ಯವಾಳುತ್ತಿದ್ದನು ।೧೮೦೪॥

ಅಲ್ಲಿ ಶ್ರೀಶಂಕರನಿಂದ ಪರಂಪರೆಯಲ್ಲಿ ಬಂದ ಶ್ರೀನಿವೃತ್ತಿನಾಥ ಮಹಾರಾಜರ ಶಿಷ್ಯರಾದ ಜ್ಞಾನೇಶ್ವರರು ಶ್ರೀಮದ್ಭಗವದ್ಗೀತೆಗೆ ಮರಾಠಿ ಭಾಷೆಯ ಅಲಂಕಾರವನ್ನು ಮಾಡಿದರು ।೧೮೦೫॥

ಈ ಪ್ರಕಾರವಾಗಿ ಮಹಾಭಾರತದಲ್ಲಿನ ಪ್ರಸಿದ್ಧ ಭೀಷ್ಮ ಪರ್ವದಲ್ಲಿ ಶ್ರೀಕೃಷ್ಣಾರ್ಜುನರ ಉತ್ತಮವಾದ ಸಂವಾದವಾಯಿತು ।೧೮೦೬॥

ಅದು ಉಪನಿಷತ್‌ಗಳ ಸಾರವಾಗಿದ್ದು, ಎಲ್ಲ ಶಾಸ್ತ್ರಗಳ ತವರುಮನೆ ಹಾಗೂ ಪರಮಹಂಸ ಸಾಧುಗಳು ಕ್ರೀಡಿಸುವ ಸರೋವರವೇ ಆಗಿರುವುದು ।೧೮೦೭॥

ಆ ಗೀತೆಯ ಈ ಹದಿನೆಂಟನೆಯ ಅಧ್ಯಾಯವು ಕಳಸವಾಗಿರುವುದು. ಹೀಗೆ ಶ್ರೀನಿವೃತ್ತಿನಾಥ ಮಹಾರಾಜರ ಶಿಷ್ಯರಾದ ಜ್ಞಾನೇಶ್ವರರು ಹೇಳುವರು ।೧೮೦೮॥

ಈ ಗ್ರಂಥದ ಪಠಣ, ಶ್ರವಣ, ಪಾರಾಯಣಾದಿ ಪುಣ್ಯಸಂಪತ್ತಿನಿಂದ ಉತ್ತರೋತ್ತರವಾಗಿ ಜೀವಮಾತ್ರರಿಗೆ ಸರ್ವಸುಖದ ಪೂರ್ಣಲಾಭವಾಗಲಿ ।೧೮೦೯॥

ಶಾಲಿವಾಹನಶಕೆ ಹನ್ನೆರಡುನೂರಾ ಹನ್ನೆರಡರಲ್ಲಿ ಈ ಟೀಕೆಯನ್ನು (ಅರ್ಥವನ್ನು) ಶ್ರೀ ಜ್ಞಾನೇಶ್ವರರು ಮಾಡಿದರು. (ನೇವಾಸಿಯ ಥಾವರೆ ಮನೆತನದ) ಶ್ರೀಸಚ್ಚಿದಾನಂದಬಾಬಾ ಇವರು ಇದನ್ನು ಅತ್ಯಂತ ಆದರದಿಂದ ಲೇಖಕರಾದರು (ಬರೆದರು) ।೧೮೧೦॥

---

ಶ್ರೀ ಜ್ಞಾನೇಶ್ವರ ಮಹಾರಾಜರಿಂದ ರಚಿತವಾದ ಭಾವಾರ್ಥ ದೀಪಿಕೆಯ ಹದಿನೆಂಟನೆಯ ಅಧ್ಯಾಯದ ವಿವರಣೆ ಸಮಾಪ್ತವು.

ಶ್ರೀ ಸಂತಏಕನಾಥ ಮಹಾರಾಜರು ಶ್ರೀಜ್ಞಾನೇಶ್ವರೀ ಗ್ರಂಥವನ್ನು ಸಂಶೋಧನೆ ಮಾಡಿದ ನಂತರ

-: ಶ್ರೀ ಜ್ಞಾನೇಶ್ವರೀ ಕುರಿತು ಬರೆದ ಓವೀಗಳು :-

ಶ್ರೀ ಶಕೇ ಪಂಧರಾಶೇ ಸಾಹೋತ್ತರೀ । ತಾರಣನಾಮಸಂವತ್ಸರೀ । ಏಕಾಜನಾರ್ದನೇ ಅತ್ಯಾದರೀ । ಗೀತಾ ಜ್ಞಾನೇಶ್ವರೀ ಪ್ರತಿಶುದ್ಧ ಕೇಲೀ ॥೧॥ ಗ್ರಂಥ ಪೂರ್ವೀಂಚ ಅತಿಶುದ್ಧ । ಪರೀ ಪಾಠಾಂತರೀ ಶುದ್ಧ ಅಬದ್ಧ । ತೋ ಶೋಧೂನಿಯಾ ಏವಂವಿಧ । ಪ್ರತಿಶುದ್ಧ ಸಿದ್ಧಜ್ಞಾನೇಶ್ವರೀ ॥೨॥ ನಮೋ ಜ್ಞಾನೇಶ್ವರಾ ನಿಷ್ಕಲಂಕಾ । ಜಯಾಚೀ ಗೀತೇಚೀ ವಾಚಿತಾ ಟೀಕಾ । ಜ್ಞಾನ ಹೋಯ ಲೋಕಾ । ಅತಿಭಾವಿಕಾ ಗ್ರಂಥಾರ್ಥಿಯಾ ॥೩॥ ಬಹುಕಾಳಪರ್ವಣೀ ಗೋಮಟೀ । ಭಾದ್ರಪದ ಮಾಸ ಕಪಿಲಾಷಷ್ಠೀ । ಪ್ರತಿಷ್ಠಾನೀ ಗೋದಾತಟೀ । ಲೇಖನಕಾಮಾರೀ ಸಂಪೂರ್ಣ ಜಾಹಲೀ ॥೪॥ ಜ್ಞಾನೇಶ್ವರೀಪಾಠೀ । ಜೋ ಓವೀ ಕರೀಲ ಮರ್ಹಾಟೀ । ತೇಣೇ ಅಮೃತಾಚೇ ತಾಟೀ । ಜಾಣ ನರೋಟೀ ಠೇವಿಲೇ ॥೫॥

---

-: ಅರ್ಥ :-

ಶಕೆ ೧೫೦೬ ನೆಯ ತಾರಣನಾಮ ಸಂವತ್ಸರದಲ್ಲಿ ಜನಾರ್ದನ ಮಹಾರಾಜರ ಶಿಷ್ಯರಾದ ಏಕನಾಥ ಮಹಾರಾಜರು ಗೀತಾ, ಜ್ಞಾನೇಶ್ವರೀಯ ಪ್ರತಿಯನ್ನು ಶುದ್ಧ ಮಾಡಿದರು ॥೧॥ ಗ್ರಂಥವು ಮೂಲದಲ್ಲಿ ಅತಿಶುದ್ಧವಾಗಿತ್ತು. ಆದರೆ ಪಾಠಭೇದದಿಂದ ಅಲ್ಲಲ್ಲಿ ಅಬದ್ಧವಾಗಿದ್ದನ್ನು ನೋಡಿ ಜ್ಞಾನೇಶ್ವರೀಯ ಪ್ರತಿಯನ್ನು ಶುದ್ಧ ಮಾಡಲಾಯಿತು ॥೨॥ ಯಾರ ಗೀತೆಯ ಅರ್ಥವನ್ನು ಓದುವುದರಿಂದ ಭಾವಿಕ ವಾಚಕನಿಗೆ ಗೀತೆಯ ಸಂಪೂರ್ಣ ಜ್ಞಾನವಾಗುವುದೋ, ಅಂಥ ಆ ನಿಷ್ಕಲಂಕ ಶ್ರೀಜ್ಞಾನೇಶ್ವರ ಮಹಾರಾಜರಿಗೆ ನನ್ನ ನಮಸ್ಕಾರವು ॥೩॥ ಬಹಳ ಕಾಲದಿಂದ ಪ್ರಾಪ್ತವಾಗುವ ಉತ್ತಮವಾದ ಕಪಿಲಾ ಷಷ್ಠಿಯ ಯೋಗದಲ್ಲಿ ಭಾದ್ರಪದ ಬಹುಳ ಷಷ್ಠಿಯ ದಿನದಂದು ಗೋದಾವರಿ ತೀರದ ಪೈಠಣ ಕ್ಷೇತ್ರದಲ್ಲಿ ಜ್ಞಾನೇಶ್ವರೀ ಪ್ರತಿಯನ್ನು ಶುದ್ಧ ಮಾಡುವ ಕಾರ್ಯವು ಸಮಾಪ್ತವಾಯಿತು ॥೪॥ ಜ್ಞಾನೇಶ್ವರಿಯ ಮೂಲಪಾಠವಾದ ಮರಾಠಿ ಓವೀಯಲ್ಲಿ ಯಾರಾದರೂ ತಮ್ಮದೇ ಆದ ಓವೀಯನ್ನು ಕೂಡಿಸಿದರೆ ಅದು ಅಮೃತದ ತಾಟಿನಲ್ಲಿ ತೆಂಗಿನಪರಟಿ (ಚಿಪ್ಪು) ಇಟ್ಟಂತಾದೀತು ॥೫॥




ಪುಂಡಲೀಕ ವರದ ಹರಿ ವಿಠ್ಠಲ ಶ್ರೀ ಜ್ಞಾನದೇವ ತುಕಾರಾಮ



## ಶ್ರೀ ಸಂತ ವಾಙ್ಮಯ ಸೇವಾ ಸಮಿತಿ, ಕೊಪ್ಪಳ

ಶ್ರೀ ಪಾಂಡುರಂಗ ದೇವಸ್ಥಾನ, ಗವಿಮಠ ರಸ್ತೆ, ಕೊಪ್ಪಳ - ೫೮೩ ೨೩೧.




ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್, ಗದಗ - ೨೩೭೫೬೬